# ಶ್ರೀಮದ್ಭಗವದ್ಗೀತೆಯು

## ಪ್ರಥಮ ಷಟ್ಕವು

[illegible]. ಯಂ. ಎಂಜಯರಾ[illegible]

 [ಬೆಲೆ ರೂ. [illegible]

1939

ಶ್ರೀಮದ್ವಿಶಿಷ್ಟಾದ್ವೈತಸಿದ್ಧಾನ್ತರತ್ನಮಾಲಾ

---

ಆರನೆಯ ರತ್ನವು

ಸಮಸ್ತಾಽಜ್ಞಾನಾಂಧಕಾರನಿವಾರಕದಿನಮಣಿಯಾದ

# ಶ್ರೀಮದ್ಭಗವದ್ಗೀತೆಯೂ,
# ಶ್ರೀ ರಾಮಾನುಜ ಭಾಷ್ಯವೂ,
# ಶ್ರೀ ಯಾಮುನೇಯರ ಗೀತಾರ್ಥಸಾರವೂ ಸಹ.

ಪ್ರಥಮ ಷಟ್ಕವು.

---

ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್ಪೆಕ್ಟರು
ಸಿ. ಯಂ. ವಿಜಯರಾಘವಾಚಾರ್ಯರಿಂದ
ರಚಿಸಲ್ಪಟ್ಟ

## ಆಚಾರ್ಯಹೃದಯಾನ್ವೇಷಿಣೀ

ಎಂಬ ಕನ್ನಡ ಪ್ರತಿಪದಾರ್ಥ ತಾತ್ಪರ್ಯಚಂದ್ರಿಕಾರ್ಥಗಳೂ
ಶ್ರುತಿ ಸ್ಮೃತೀತಿಹಾಸ ಪುರಾಣ ಪ್ರಮಾಣಗಳೊಂದಿಗೆ
ಉಪಪಾದನೆಯೂ ಸಹ.



೧೯೩೪

ಕ್ರಯ ಮೂರು ರೂಪಾಯಿಗಳು

# ನಮ್ಮಲ್ಲಿ ದೊರೆಯುವ ಗ್ರಂಥಗಳು.

ಆಚಾರ್ಯಹೃದಯಾನ್ವೇಷಿಣೀ
ಎಂಬ ಕನ್ನಡ ಪ್ರತಿಪದಾರ್ಥ ತಾತ್ಪರ್ಯಗಳೊಡನೆ
ಶ್ರೀಮನ್ನಿಗಮಾನ್ತ ಮಹಾದೇಶಿಕರವರ

೧. ಅಭೀತಿಸ್ತವವೆಂಬ ಶ್ರೀರಂಗನಾಥಸ್ತೋತ್ರವು ೦ ೧೨ ೦
೨. ಶ್ರೀಸ್ತುತಿ ಎಂಬ ಶ್ರೀ ರಂಗನಾಯಕೀಸ್ತೋತ್ರವು ೦ ೧೨ ೦
೩. ಶ್ರೀಮದ್ರಹಸ್ಯತ್ರಯಸಾರವು :—
 (೧) ಗುರುಪರಂಪರಾಸಾರವು ೦ ೧೨ ೦
 (೨) ಉಪೋದ್ಘಾತಾಧಿಕಾರವು ಮತ್ತು ಸಾರನಿಷ್ಕರ್ಷಾಧಿಕಾರವು ೦ ೯ ೦
 (೩) ಪ್ರಧಾನ ಪ್ರತಿತಂತ್ರಾಧಿಕಾರವು ಮತ್ತು ಅರ್ಥಪಞ್ಚಕಾಧಿಕಾರವು ೦ ೧೨ ೦
 (೪) ತತ್ವತ್ರಯಾಧಿಕಾರವು ೦ ೧೨ ೦
 (೫) ಪರದೇವತಾ ಪಾರಮಾರ್ಥ್ಯಾಧಿಕಾರವು ಮತ್ತು ಮುಮುಕ್ಷುತ್ವಾಧಿಕಾರವು ೦ ೧೦ ೦
 (೬) ಅಧಿಕಾರಿವಿಭಾಗಾಧಿಕಾರವು ಉಪಾಯವಿಭಾಗಾಧಿಕಾರವು ಮತ್ತು ಪ್ರಪತ್ತಿಯೋಗ್ಯಾಧಿಕಾರವು ೦ ೯ ೦
 (೭) ಪರಿಕರವಿಭಾಗಾಧಿಕಾರವು ಮತ್ತು ಸಾಙ್ಗಪ್ರಪದನಾಧಿಕಾರವು ೦ ೧೧ ೦
 (೮) ಕೃತಕೃತ್ಯಾಧಿಕಾರವು, ಸ್ವನಿಷ್ಠಾಭಿಜ್ಞಾನಾಧಿಕಾರವು ಮತ್ತು ಉತ್ತರಕೃತ್ಯಾಧಿಕಾರವು ೦ ೧೨ ೦
 (೯) ಪುರುಷಾರ್ಥಕಾಷ್ಠಾಧಿಕಾರವು, ಶಾಸ್ತ್ರೀಯ ನಿಯಮನಾಧಿಕಾರವು ಮತ್ತು ಅಪರಾಧಪರಿಹಾರಾಧಿಕಾರವು ೧ ೦ ೦
 (೧೦) ಸ್ಥಾನವಿಶೇಷಾಧಿಕಾರವು, ನಿರ್ಯಾಣಾಧಿಕಾರವು ೦ ೧೦ ೦
 (೧೧) ಗತಿಚಿಂತನಾಧಿಕಾರವು ಪರಿಪೂರ್ಣಬ್ರಹ್ಮಾನುಭವಾಧಿಕಾರವು ೦ ೧೨ ೦
 (೧೨) ಸಿದ್ಧೋಪಾಯ ಶೋಧನಾಧಿಕಾರವು ೦ ೧೪ ೦
 (೧೩) ಸಾಧ್ಯೋಪಾಯ ಶೋಧನಾಧಿಕಾರವು ೧ ೦ ೦
 (೧೪) ಪ್ರಭಾವವ್ಯವಸ್ಥಾಧಿಕಾರ, ಪ್ರಭಾವರಕ್ಷಾಧಿಕಾರಗಳು ಅಚ್ಚಾಗುತ್ತಲಿವೆ
೪. ಶ್ರೀ ಯಾಮುನೇಯರವರ ಚತುಶ್ಲೋಕೀ ೨ ೮ ೦
೫. ಶ್ರೀ ವಿಷ್ಣುಸಹಸ್ರನಾಮಾವಳಿ (ಅರ್ಥ ಸಹಿತ) ೦ ೧೪ ೦
೬. ಶ್ರೀಮದ್ಭಗವದ್ಗೀತಾ ಭಾಷ್ಯ ಆರು ಅಧ್ಯಾಯಗಳು
 ೮೦೦ ಪುಟ ಮೂಲಕ್ಕೂ ಭಾಷ್ಯಕ್ಕೂ ಪ್ರತಿಪದಾರ್ಥ,
 ತಾತ್ಪರ್ಯಚಂದ್ರಿಕೆಯ ಅರ್ಥಗಳೂ ಗೀತಾರ್ಥಸಙ್ಗ್ರಹ ಸಹ ೩—೦—೦

ಸಿ. ಯಂ. ವಿಜಯರಾಘವಾಚಾರ್,
ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್ಪೆಕ್ಟರ್,
ಬಸವನಗುಡಿ, ಬೆಂಗಳೂರು ಸಿಟಿ.

ಬೆಂಗಳೂರು ಸಿಟಿ ಅವೆನ್ಯೂರೋಡಿನಲ್ಲಿರುವ ಗಿರಿಜಾವಿಲಾಸ ಪ್ರೆಸ್ಸಿನಲ್ಲಿ, ಪ್ರೊಪ್ರೈಟರಾದ ಹೆಚ್. ವೆಂಕಟರಮಣಯ್ಯನವರಿಂದ ಮುದ್ರಿಸಲ್ಪಟ್ಟಿತು.

# FOREWORD

Mr. Vijayaraghavachar has done great service to the Kannada language as well as to the thinking public by the publication of his work 'Acharya Hrudayanveshini' (ಆಚಾರ್ಯ ಹೃದಯಾನ್ವೇಷಿಣೀ) which is an exposition of the Bhagavad Gita from the Visishtadwaita point of view. Bhagavad Gita, it is scarcely necessary to state, is one of the world's great classics, and it is no exaggeration if we say that it will continue to be so as long as the world lasts. Sri Krishna not merely teaches that one's duty is greater than other virtues, but also bases it on the truths of life which arrest attention and awaken a desire in the human heart for clearer understanding. There have been, as we know, many commentaries on the Bhagavad Gita, and to understand the basic truths, it seems to be necessary to approach the text from every point of view available to us. To fulfil this task, the commentaries of the great Acharyas are to be regarded as invaluable.

These commentaries are, however, written in the Sanskrit language, the votaries of which are becoming more and more restricted in number on account of the modern conditions of life. Sanskrit in itself is a difficult language to learn and in these days, the time devoted to its study in educational institutions, is very meagre. It is only a very small percentage of the students that retain traces of it in after-life. It is essential therefore that expositions of all the great classics of India should be made available in the languages of the country, so that not merely the languages may be enriched, but also the great lessons of life embodied in them, may reach masses of men.

Mr. Vijayaraghavachar's work is both expository as well as critical. Those who do not know enough of Sanskrit to follow the original texts can profit greatly by the word-for-word meaning, he gives of them. His critical remarks are also illuminating. There is no such work in the Kannada language at present, and I strongly commend it to the Kannada-reading public. The

Visishtadwaita view which Mr. Vijayaraghavachar expounds I find, will be very helpful to those holding other points of view.

Mr. Vijayaraghavachar has been known to me for nearly half a century, and his life all along has been one of devotion to study and contemplation, though he spent several years of his life in active official work. Even at the advanced age which he has now reached, almost the whole of his time is devoted to the worship of the Goddess of learning without seeking any material benefit for himself. He is content if his labours bring enlightenment to his readers. He has also written copious annotations in Kannada on several philosophical works of Vedanta Desikar, especially on a popular classic, by name "Srimat Rahasya Thrayasaram".

BANGALORE CITY,
13th March 1939.

M. SHAMA RAO,
Retired Director of Public Instruction
in Mysore.

ಶ್ರೀಃ

## ಶ್ರೀಮತೇ ಭಗವದ್ರಾಮಾನುಜಾಯನಮಃ

## ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

ಶ್ರೀಮದುಭಯವೇದಾನ್ತ ಪ್ರವರ್ತಕ ವಿಮರ್ಶಕರತ್ನ ಬಸವನ್ಗುಡಿ ವಿಜಯರಾಘವಾಚಾರ್ಯವಿಷಯೇ ಸಾದರಮರ್ಪ್ಯಮಾಣಂ ಪ್ರಶಂಸಾಪತ್ರಮ್—

೧. ಯಾನಪ್ಯೇದಾನ್ತತತ್ತ್ವಂ ವಿಶದಮಿಹ ಜನೋಽನ್ಯೈವ ವೇದ್ಯೈಷತಾವ ।
ತ್ಸಂಸಾರೇಬಂಭ್ರಮೀತಿಸ್ಫುಟಮವಿದಿತ ಮಿದಂ ತತ್ರ ತತ್ತತ್ತ್ವಬೋಧಃ ।
ಲೋಕೈರ್ವೇದ್ಯೈಶ್ಚ ಮಾನ್ಯೇ ಮಹತಿ ಹಿ ಭಗವಲ್ಲಕ್ಷ್ಮಣಾಚಾರ್ಯದೃಷ್ಟೇ ।
ಪ್ರಾಜ್ಯೇ ಪಥ್ಯೇವ ತಸ್ಮಾತ್ಕಿಮಿತಿ ಬಹುಮುಖೈಸ್ಸಂಭ್ರಮೈಶ್ಚ ಭ್ರಮೈಶ್ಚ ॥

೨. ಆಪ್ರಾಜ್ಞ ಪಾಮರ ಮಶೇಷ ಜನಾಭಿನಂದ್ಯಾ। ಯಾನಾಮುಸರ್ವ ಫಲದಾ ಭಗವತ್ಪ್ರಸಾದಃ।
ಗೀತಾತದರ್ಥವಿಶದಾವಗತೌ ತ್ವರಾಚೇತ್। ಭಾಷ್ಯಂಕಿಮನ್ಯದಿಹ ಲಕ್ಷ್ಮಣಯೋಗಿಭಾಷ್ಯಾತ್॥

೩. ನವ್ಯಾರ್ಥಪ್ರತಿಪದ ಪೂರಿತಂ ತಥೈತತ್ । ಸತ್ಯಕ್ತಾನ್ವಯ ವಿಭವಂ ನಚಾತಿಗೂಢಂ ।
ತ್ರಯ್ಯನ್ತ ಪ್ರಥಿತ ಮತೈಕ ಕಂಠ ಮಿಂಥೇ । ಶ್ರೀರಾಮಾನುಜ ಯಶಿರಾಜ ಭಾಷ್ಯರತ್ನಂ॥

೪. ಶ್ರೀ ಬೆಂಗಳೂರು ಬಸವನ್ಗುಡಿ ವಾಸಭೂಮಿಃ। ಶ್ರೀಮಾನಯಂ ವಿಜಯರಾಘವಇತ್ಯಭಿಖ್ಯಃ।
ಭಾಷಾನ್ತರೇಽಪಿ ನಿಪುಣೋ ಭಗವತ್ಪರಶ್ಚ । ಶ್ರೀ ವೈಷ್ಣವ ಪ್ರವಣ ಶುದ್ಧಮನಾಶ್ಚ ಸೂರಿಃ॥

೫. ಏಷ ಸಮ್ಯಕ್ಪರಿಶ್ರಮ್ಯ ವಿಶಿಷ್ಟಾದ್ವೈತವರ್ತ್ಮನಿ।
ಸತತಂ ವಿಶೇಷ ಮಾತ್ಮೀಯೈರ್ವಾಕ್ಯೈರ್ವಿವೃಣುತೇಽದ್ಭುತಮ್ ॥

೬. ಅಜ್ಞಾತ ಸಂಸ್ಕೃತ ವಚಸ್ಯಪಿ ದೇಶಭಾಷಾ। ಬದ್ಧಾದರೇ ಜಗತಿ ತತ್ತ್ವ ಬುಭುತ್ಸುಸಾಂದ್ರೇ।
ಕರ್ಣಾಟದೇಶ ಮನುಕಮ್ಪಿತುಮೇಷ ಭಾಷ್ಯಂ। ಗೀತಾಂಚ ದೇಶ ವಚಸಾ ಪರಿವರ್ತ್ಯ ಭಾತಿ॥

೭. ಸ್ವಾರಸ್ಯ ಮಾಶಯಮನೇಕವಿಧಂ ಸ್ವಬುದ್ಧ್ಯಾ। ಶ್ರೀಮಾನಯಂ ವಿಜಯರಾಘವಸೂರಿವರ್ಯಃ।
ವಿಸ್ಪಷ್ಟಯನ್ನ್ಯವೃಣುತೇತಿವಿಧಾನಯಂತ। ಸ್ಸಂಭಾವಯನ್ತ್ಯನಘಧೀನಿಧಿಮೇನಮಾರ್ಯಾಃ॥

೮. ಉಪಯುಕ್ತಾನಿ ತಾತ್ಪರ್ಯ ಚಂದ್ರಿಕೋಕ್ತಾನ್ಯಸುದ್ಧೃತಾ ।
ಅನೇನ ಗೀತಾಸಾರಸ್ಯ ರಾಸಿಕ್ಯಂ ವಿಸ್ತೃತಂ ಭುವಿ ॥

೯. ಶ್ರೀಮದ್ರಹಸ್ಯತ್ರಯಸಾರಮೇಷ । ಕರ್ಣಾಟಭಾಷಾಪರಿಣಾಮರಮ್ಯಮ್ ।
ವಿಧಾಯ ಸದ್ದೇಶಿಕ ಸಂಪ್ರದಾಯ । ಪ್ರಚಾರಮಾಧತ್ತ ಮಹಾನುಭಾವಃ ॥

೧೦. ಇತ್ಥಂ ಶ್ರೀ ಯತಿರಾಜ ವೇದ ಶಿಖರಾಚಾರ್ಯಾನುಕಂಪಾರಸ।
ಸ್ನಿಗ್ಧಾಪಾಂಗಿತಭಾಜನಸ್ಯ ಸುಧಿಯೋ ವೃದ್ಧಸ್ಯ ವಾಚಶ್ಶುಭಾಃ ।
ಕರ್ಣಾಟೇಷು ವಿಶಿಷ್ಯ ಸರ್ವಜನತಾ ಪ್ರೀತಿಂ ದಧತ್ಯೋ ಭೃಶಂ ।
ಜೀಯಾಸುರ್ಭುವಿ ಸರ್ವತೇತಿ ದಮುತಾಂ ದೇವಃಪರಶ್ರೀನಿಧಿಃ ॥

ಇತಿ ತರ್ಕಾರ್ಣವ ಪಂಡಿತ ರತ್ನ ಶಿರೋಮಣಿ,

ತಿ. ವೀರರಾಘವಾಚಾರ್ಯಃ

ಪ್ರಫೆಸರ್ ಎಸ್. ವಿ. ಎಸ್. ಕಾಲೇಜು

೬—೯—೩೮ ತಿರುಪತಿ.

ಶ್ರೀ

ಶ್ರೀಮನ್ಮಹಿಸೂರು ಗವರ್ನ್ಮೆಂಟು ಎಜ್ಯುಕೇಷನ್ ಡಿಪಾರ್ಟ್‌ಮೆಂಟಿನ ರಿಟೈರ್ಡ್ ಸರ್ಕಲ್ ಇನ್‌ಸ್ಪೆಕ್ಟರು ಶ್ರೀಮಾನ್ ವಿಜಯರಾಘವಾಚಾರ್ಯರು ಶ್ರೀಮದ್ಭಗವದ್ಗೀತೆಗೆ ಕರ್ಣಾಟಕ ವ್ಯಾಖ್ಯಾನವನ್ನು ಬರೆದಿರುವುದು ವಿಶೇಷಾಭಿರಂಜನೀಯವಾಗಿರುತ್ತದೆ. ಇವರ ಗ್ರಂಥವು, ವಿಶಿಷ್ಟಾದ್ವೈತ ಸಂಪ್ರದಾಯಪ್ರವರ್ತಕರಾದ ಶ್ರೀ ರಾಮಾನುಜಾಚಾರ್ಯರ ಭಾಷ್ಯಾನುಸಾರವಾದಾಗ್ಯೂ ಶ್ರೀ ಗೀತೆಯಲ್ಲಿ ಅಡಗಿರುವ ಗೂಢ ತತ್ವಾರ್ಥಗಳನ್ನು ಹೊರಪಡಿಸುವದಕ್ಕಾಗಿ ಉದಾಹರಿಸಲ್ಪಟ್ಟ ಶ್ರುತಿ, ಸ್ಮೃತಿ, ಪುರಾಣೇತಿಹಾಸ ವಚನಗಳಿಂದ ಅನೇಕ ಪಂಡಿತ ಮಂಡಲಿಗೆ ನೂತನ ವಿಮರ್ಶೆಯನ್ನು ಮಾಡಲು ಅವಕಾಶವನ್ನು ಕೊಡುತ್ತದೆ. ಅದ್ಯತನ ಪರಿಸ್ಥಿತಿಯಿಂದ ವಿವಶರಾಗಿ ಸಾವಕಾಶದಿಂದ ಮೂಲಗ್ರಂಥಗಳನ್ನು ಅವಲೋಕಿಸದೇ ಇರುವ ಲೌಕಿಕ ಜನರಿಗೂ ಕೂಡ ಈ ಗ್ರಂಥವು ಮತಿವಿಕಾಸದಾಯಿಕವೆಂಬುದರಲ್ಲಿ ಈಷತಪಿ ಸಂದೇಹವಿಲ್ಲವು. ಶ್ರೀ ಭಾಗವತ ಜನ ಭಕ್ತಿಯಿಂದ ಕೂಡಿದ ಇವರ ಅವಿಚ್ಛಿನ್ನ ಪ್ರಯತ್ನವು, ಕೈಕೊಂಡ ಈ ಅಗಾಧ ಕಾರ್ಯವನ್ನು ಸಾಂಗಗೊಳಿಸಿ, ವೇದಾಂತಿ ಜನತೆಯನ್ನು ಋಣಿಯಾಗಿ ಮಾಡಿರುತ್ತದೆಂಬುದು ನಮ್ಮ ನಿಶ್ಚಿತವಾದ ಅಭಿಪ್ರಾಯವು.

ಶ್ರೀ ಆಚಾರ್ಯಹೃದಯಾನ್ವೇಷಿಣೀ ಎಂಬ ಈ ಅಮೋಘ ವ್ಯಾಖ್ಯಾನವನ್ನು ಸಂಪೂರ್ಣವಾಗಿ ವಿಮರ್ಶಿಸಲು ಅವಕಾಶವು ದೊರೆಯದೇ ಇದ್ದುದರಿಂದ ಮೂರನೆಯ ಅಧ್ಯಾಯವನ್ನು ಕೂಲಂಕಷವಾಗಿ ಪರಿಲೋಕಿಸಿ ಕರ್ಮಯೋಗದ ರಹಸ್ಯವಿಚಾರವನ್ನು ಶ್ರೀ ಕೃಷ್ಣದೇವರಿಗೆ ಸಮ್ಮತವಾದ ಭಾವವಿದು ಎಂದು ಗುರ್ತಿಸಿ ತೋರಿಸುವ ಶೈಲಿಯಿಂದ ವಾಚಕರ ಮನಸ್ಸಿನಮೇಲೆ ಬಿಂಬಿಸುವಂತೆ ಗ್ರಂಥಕಾರರು ಮಾಡಿರುವದನ್ನು ಕಂಡು ವಿಸ್ಮಯಪೂರ್ವಕವಾಗಿ ಇವರಿಗೆ ನಾವು ಅಭಿನಂದನವನ್ನು ಪ್ರದರ್ಶಿಸದೇ ಇರಲು ಸಾಧ್ಯವಿಲ್ಲದುದರಿಂದ ಈ ಅಭಿನಂದನಪತ್ರವನ್ನು ಬರೆದಿರುತ್ತೇನೆ.

U. KRISHNACHARYA,
N. Vaikar.

Pandit, General Secretary,

SRI MADHVA MAHAMANDALA

Raghavendrapuram
BANGALORE CITY
1st, April 1939

# ಉಪೋದ್ಘಾತವು

ಶ್ರಿಯಃಪತಿಯಾಗಿ ಹೇಯಪ್ರತ್ಯನೀಕನಾಗಿ ಕಲ್ಯಾಣ ಮಹೋದಧಿಯಾಗಿರುವ ಪರಮ ಪುರುಷನಾದ, ಸಾಕ್ಷನ್ನಾರಾಯಣೋದೇವಃ ಕೃತ್ವಾಮರ್ತ್ಯಮಯೀಂತನುಂ । ಮಗ್ನಾನುದ್ಧರತೇ ಲೋಕಾಕಾರುಣ್ಯಾಚ್ಛಾಸ್ತ್ರಪಾಣಿನಾ" ಎಂದು ಹೇಳಿರುವಹಾಗೆ ಸಂಸಾರ ಸಾಗರದಲ್ಲಿ ಮುಳುಗಿ ಒದ್ದಾಡುತ್ತಿರುವ ಜನರನ್ನು ಶಾಸ್ತ್ರವೆಂಬ ಹಸ್ತವನ್ನು ಕೊಟ್ಟು ಮೇಲಕ್ಕೆ ಎತ್ತುವದಕ್ಕಾಗಿ ಪರವಾಸುದೇವನು ವಸುದೇವಪುತ್ರನಾಗಿ ವಾಸುದೇವನೆಂಬ ನಾಮವನ್ನುಧರಿಸಿ ತನ್ನ ಮಿತ್ರನಾದ ಪಾರ್ಥನಿಗೆ ಉಪದೇಶಿಸುವ ನೆಪದಿಂದ ಲೋಕೋಜ್ಜೀವನಾರ್ಥವಾಗಿ ವೇದಾಂತಗಳ ಸಾರಭೂತಾರ್ಥವನ್ನು ಕಡೆದು ಅವುಗಳಲ್ಲಿ ಸಾರತಮ ಭಾಗವಾದ ಈ ಗೀತಾಮೃತವನ್ನು ದಯಪಾಲಿಸಿರುತ್ತಾನೆ. ಹೀಗೆ "ವೇದೋತ್ತಂಸಸಾರಥಿ"ಯ ವಾಕ್ಕುಗಳಾದ ಪ್ರಯುಕ್ತ ಇದಕ್ಕೆ ಮಾಹಾತ್ಮ್ಯೆಯು ಇಷ್ಟೆಂದು ಹೇಳಲು ಸಾಧ್ಯವಿಲ್ಲವು. ಅದನ್ನು ಉಪದೇಶಿಸುವ ವಕ್ತಾ ಯಾರೆಂದರೆ— "ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ । ಕೋಹ್ಯನ್ಯೋಭುವಿ ಮೈತ್ರೇಯ ಮಹಾಭಾರತ ಕೃದ್ಭವೇತ್" ಇಂತಹ ಪಂಚಮ ವೇದವೆನಿಸುವ ಮಹಾ ಭಾರತವನ್ನು ರಚಿಸಿರುವದರಿಂದ ಶ್ರೀ ವ್ಯಾಸ ಮಹರ್ಷಿಯೂ ಸಾಮಾನ್ಯರಲ್ಲವು. ಅವರೂ ಶ್ರೀವಿಷ್ಣುವಿನ ಅವತಾರವೇ ಆಗಿರಬೇಕೆಂದು ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ ಎಂದು ಹೇಳಲ್ಪಟ್ಟಿತು. ಅಂತಹ ಪಂಚಮ ವೇದದಲ್ಲಿ ಸಾರತಮ ಭೂತವಾದುದು ಯಾವುದು ಎಂದರೆ.—

"ಭಾರತೇ ಭಗವದ್ಗೀತಾ ಧರ್ಮಶಾಸ್ತ್ರೇಷು ಮಾನವಂ ।
ವೇದೇಷು ಪೌರುಷಂ ಸೂಕ್ತಂ ಪುರಾಣೇಷು ಚ ವೈಷ್ಣವಂ ॥

ಎಂದು ಹೇಳಿರುವಹಾಗೆ ಉಪನಿಷತ್ತಿನ ಸಾರತಮೋಪದೇಶವಾಗಿರುವದರಿಂದ, ಭಗವದ್ಗೀತೆಗೆ ಪರಮ ಮಾಹಾತ್ಮ್ಯೆಯು. ತನಗೆ ವಿಹಿತ ಕರ್ಮಗಳಾಗಿ ಇತಿ ಕರ್ತವ್ಯಗಳು ಯಾವುವು ಎಂದು ಚನ್ನಾಗಿ ಅರಿತು ಅವುಗಳನ್ನು ಭಗವನ್ಮುಖೋಲ್ಲಾಸಕ್ಕಾಗಿ ಮಾಡಿದರೆ, ಸರ್ವೇಶ್ವರನು ಅದರಿಂದ ಪ್ರೀತನಾಗಿ ತನ್ನನ್ನು ಹೊಂದುವ ಉಪಾಯಾನುಷ್ಠಾನಕ್ಕೆ ಬೇಕಾದ ಬುದ್ಧಿಯೋಗವನ್ನು ಕೊಟ್ಟು ರಕ್ಷಿಸುವನೆಂಬ ಮಹತ್ತಾದ ತತ್ವವನ್ನು ಬೋಧಿಸುವದರಿಂದಲೂ ಇದಕ್ಕೆ ಹೆಚ್ಚಾದ ಮಾಹಾತ್ಮ್ಯೆಯು. ಇಂತಹ ಗ್ರಂಥದ ರಸಾಸ್ವಾದನವನ್ನು ಮಾಡಿ ಮನಸ್ಸು ತೃಪ್ತಿಯನ್ನು ಹೊಂದಬೇಕೆಂಬ ಆಶೆಯಿಂದ ಈ ಗ್ರಂಥದ ಉಪಬ್ರಹ್ಮಣ ರೂಪವಾಗಿ ವ್ಯಾಖ್ಯಾನವನ್ನು ಆಚಾರ್ಯ ಹೃದಯಾನ್ವೇಷಿಣೀ ಎಂಬ ಹೆಸರಿನಿಂದ ಪ್ರಚುರಪಡಿಸುವ ಸಂದರ್ಭದಲ್ಲಿ ನನಗೆ ಉಪದೇಶಿಕರಾಗಿ ಪರಮೋಪಕಾರವನ್ನೆಸಗಿದ ಮಹಾಗುರುಗಳಾದ ಯತಿವರ್ಯರಾದ ಶ್ರೀ ಶ್ರೀನಿವಾಸ ಮಹಾಮುನಿಗಳಿಗೆ ಈ ಗ್ರಂಥವನ್ನು ಸಮರ್ಪಿಸಿರುತ್ತೇನೆ.

ಈ ಭಗವದ್ಗೀತೆಗೆ ಮತೋದ್ಧಾರಕರು ಮೊದಲಾಗಿ ಅನೇಕರು ಭಾಷ್ಯವನ್ನು ಬರೆದಿರುವದಲ್ಲದೆ. ಇದರ ಮಾಹಾತ್ಮ್ಯೆಯನ್ನು ಅರಿತ ಮಹನೀಯರು ಇತರ ಭಾಷೆಗಳಲ್ಲೂ ಕೊಂಡಾಡಿರುತ್ತಾರೆ. ಹೀಗಿರುವಾಗ ಹೊಸದಾಗಿ ಈಗ ದಾಸನು ಶ್ರೀನಿವಾಸ ಕೃಪಯಾ ಬರೆದಿರುವ ವ್ಯಾಖ್ಯಾನವು ಏತಕ್ಕೆ ಎಂದು ಕೆಲವರು ದಾಸನನ್ನೇ ಪ್ರಶ್ನಿಸಿರುತ್ತಾರೆ. ಪರಪುತ್ರರನ್ನು ಮಾತ್ರವೇ ಈಕ್ಷಿಸಿದರೆ ಕೆಲವರಿಗೆ ತೃಪ್ತಿಯು. ದಾಸನಿಗೆ ಹಾಗಲ್ಲದೆ ಪುತ್ರನನ್ನು ನಾನೇ ಹೊಂದಬೇಕೆಂಬ ಆಶೆಯೆಂದು ಉತ್ತರವನ್ನಿತ್ತೆನು. ಎರಡನೆಯ ಸಮಾಧಾನವೇನೆಂದರೆ.—ದಾಸನು ಬರೆದಿರುವ ವಿಷ

ಯಿಗಳನ್ನೆಲ್ಲಾ ಒಳಗೊಂಡು ಇದುವರೆಗೂ ಯಾರೂ ಬರೆಯಲಿಲ್ಲವಾದುದರಿಂದ ಬರೆಯಬೇಕಾಗಿ ಬಂತು. ಮೂರನೆಯ ವಿಷಯವೇನೆಂದರೆ—ಇದು ಉಪದೇಶ ಗ್ರಂಥವು; ಮಹನೀಯರಾದ ಪ್ರಾಜ್ಞರಾದ ಉಪದೇಶಕರು ಎಲ್ಲರಿಗೂ ಎಲ್ಲಾ ಸ್ಥಳದಲ್ಲೂ ದೊರೆಯುವದಿಲ್ಲವು; ಅಂತವರು ತಮ್ಮ ಆಚಾರ್ಯರಲ್ಲಿ ಹೋಗಿ ಗ್ರಂಥಾರಂಭವನ್ನೂ ಶಾಂತಿಯನ್ನೂ ಮಾಡಿಬಿಟ್ಟು ಬಂದ ಬಳಿಕ, ಅಂತವರಿಗೆ ಸ್ವತಃ ಗ್ರಂಥಕಾಲಕ್ಷೇಪವನ್ನು ಮಾಡಲು ಸಹಾಯವಾಗಿರಲೆಂದು ಉಪದೇಶಕರು ಯಾವರೀತಿಯಲ್ಲಿ ತೋರುವ ರಹಸ್ಯಾರ್ಥಗಳೊಂದಿಗೆ ಹೇಗೆ ಉಪದೇಶಿಸುವರೋ ಹಾಗೆ ಉಪನ್ಯಾಸರೂಪದಲ್ಲಿರಬೇಕೆಂಬ ಆಶಯದಿಂದಲೂ ಬರೆದಿರುತ್ತೇನೆ. ಆದುದರಿಂದ ಪುನರುಕ್ತಿದೋಷಕ್ಕೆ ಸ್ವಲ್ಪಮಟ್ಟಿಗೆ ಗುರಿಯಾಗಿರುತ್ತೇನೆ. ಆದರೆ ಉಪದೇಶ್ಯನ ಮನಸ್ಸಿನ ಆಕರ್ಷಣೆಗೆ ಪುನರುಕ್ತಿಯು ಆವಶ್ಯಕವು. ದಾಸನು ದೋಷಿಯಾದರೆ ವೇದವೂ ದೋಷವುಳ್ಳದ್ದಾಗುತ್ತದೆ. ಅದರ ಉಪಬ್ರಹ್ಮಣ ಗ್ರಂಥಗಳೂ ಈ ಪುನರುಕ್ತಿದೋಷ ಉಳ್ಳವುಗಳೇ ಎಂದು ಹೇಳಬೇಕಾಗುತ್ತದೆ. ದಾಸನು ಬರೆದಿರುವದೂ ಪ್ರತಿಶ್ಲೋಕದ ಉಪಬ್ರಹ್ಮಣವೇ; ಆದುದರಿಂದ ಪುನರುಕ್ತಿಯು ಕ್ಷಂತವ್ಯವು. ಅಚ್ಚುತಪ್ಪುಗಳಿಲ್ಲದೆ ಮುದ್ರಿಸುವದು ತುಂಬಾ ದುಸ್ತರವಾದುದರಿಂದ ಉದಾರಮತಿಗಳು ತಿದ್ದಿಕೊಂಡು ಮನ್ನಿಸಬೇಕೆಂಬ ಪ್ರಾರ್ಥನೆಯು. ಬಹಳ ಗೂಢವಾಗಿರುವ "ಗುಹ್ಯತಮ"ವಾದ ಶಾಸ್ತ್ರವಾದುದರಿಂದ ಅನೇಕ ಮಹನೀಯರಿಗೆ ಅನೇಕ ವಿಶೇಷಾರ್ಥಗಳು ತೋರಿ ಅವುಗಳನ್ನು ಇತರರಿಗೆ ಪ್ರದರ್ಶಿಸಿ ಆನಂದಿಸಬೇಕೆಂದು ಭಾಷ್ಯಗಳನ್ನು ಬರೆದಿರುತ್ತಾರೆ. ಆದರೆ ದಾಸನಿಗೆ ಇತರರಹಾಗೆ ವಿಶೇಷ ಪ್ರಾಜ್ಞತೆ ಇಲ್ಲದಿದ್ದರೂ, ಸ್ವಾಮಿ ಶ್ರೀನಿವಾಸನು ಕರುಣಿಸಿ ನೀನೂ ಒಂದು ವ್ಯಾಖ್ಯಾನವನ್ನು ರಚಿಸಬಹುದೆಂದು ಪ್ರೇರಿಸಿದುದರಿಂದ ಬರೆದಿರುತ್ತೇನೆ. "ಸಂತೋಷಾರ್ಥಂ ವಿಮೃಶತಿ" ಎಂದು ಹೇಳಿರುವಹಾಗೆ, ದಾಸನು ಪ್ರಸನ್ನನಾಗಿ ಅಂತಹ ಪ್ರಸನ್ನನ ಇತಿ ಕರ್ತವ್ಯವು ಆಚಾರ್ಯರಿಂದ ಗ್ರಹಿಸಿದ ಅರ್ಥವನ್ನು ಸಂತೋಷಾರ್ಥವಾಗಿ ವಿಮರ್ಶೆಮಾಡಿ ತಿಳಿಯದವರಿಗೆ ತಿಳಿಯಪಡಿಸಬೇಕಾದುದು ಆದುದರಿಂದ, ಲೀಲಾ ಸಾರಥಿಯ "ಮಧುರಾದಪಿ ತನ್ಮಧುರಂ" ಎಂದು ಹೇಳಿರುವಹಾಗೆ ವಾಕ್ಕಿನ ಪರಮ ಮಾಧುರ್ಯವನ್ನು ಆಸ್ವಾದನೆ ಮಾಡಿ "ಏಕಸ್ವಾದು ನಭುಂಜೀತ" ಎಂದು ಹೇಳಿರುವಹಾಗೆ ಒಬ್ಬನೇ ಅನುಭವಿಸುವದು ಸರಿಯಲ್ಲವಾಗಿ, ಸಹಪಙ್ತಿ ಭೋಜನಕ್ಕೆ ಕೆಲವರಾದರೂ ಸಿಕ್ಕಬಹುದು ಎಂಬ ಆಶೆಯಿಂದ ಬರೆದಿರುತ್ತೇನೆ. ಮಧುರಾಪತಿಯ ವಾಕ್ಕೇನೋ ಮಧುರವು, ನಿನ್ನ ವ್ಯಾಖ್ಯಾನವು ಹೇಗೆ ಮಧುರವು? ಎಂದು ಕೆಲವರು ಪ್ರಶ್ನಿಸಬಹುದು. ಇದಕ್ಕೆ ಉತ್ತರವು; ಮಧುರಾಪತಿಯ ವಾಕ್ಕು ಮಧುರವಾದನಂತರ, ಅದನ್ನು ಪ್ರದರ್ಶಿಸುವ ಪ್ರಯತ್ನವು ದಾಸನ ವ್ಯಾಖ್ಯಾನಕ್ಕೂ ಶ್ರೀನಿವಾಸ ಪ್ರೇರಣೆಯೂ ಇರುವದರಿಂದ ಮಧುರವೇ. ಹೇಗೆಂದರೆ ಶ್ರೀ ನಿಗಮಾಂತ ದೇಶಿಕರವರು ಒಂದು ದೃಷ್ಟಾಂತ ಮೂಲಕ ವ್ಯಕ್ತಪಡಿಸಿರುತ್ತಾರೆ. ಪರಮಪವಿತ್ರವಾದ ಗಂಗಾನದಿಗೆ ಯಮುನಾ ನದಿಯ ನೀರೂ ಚಿರಂಡಿಯಿಂದ ಬಂದ ಮಳೆಯ ನೀರೂ ಸೇರಿ ಮುಂದಕ್ಕೆ ಸ್ವಲ್ಪ ದೂರ ಪ್ರವಹಿಸಿದನಂತರ, ಯಮುನಾನದಿಯ ನೀರು, ಚಿರಂಡಿಯ ನೀರೂ ಎಂಬ ಹೆಸರು ವ್ಯತ್ಯಾಸಗಳೂ ಇಲ್ಲದೆ ಪವಿತ್ರವಾದ ಗಂಗಾನದಿಯ ನೀರು ಎಂಬದಾಗಿ ಹೇಗೆ ಹೇಳಿಸಿಕೊಳ್ಳುತ್ತಯೋ, ಹಾಗೆಯೇ ದಾಸನ ಆಚಾರ್ಯ ಹೃದಯಾನ್ವೇಷಿಣೀ ಎಂಬ ವ್ಯಾಖ್ಯಾನವು ಎಂದು ಭಾವಿಸತಕ್ಕದ್ದು. ಶ್ರೀ ವ್ಯಾಸ ಮಹರ್ಷಿಯ ಹೃದಯವನ್ನರಿಯುವದು ಕಷ್ಟವೆಂದೇ, ಗುಹ್ಯಾತ್ ಗುಹ್ಯತರಂ, ಗುಹ್ಯತಮಂ, ರಾಜಗುಹ್ಯಂ ಇತ್ಯಾದಿ ಪ್ರಯೋಗಗಳಿಂದ ಅವರೇ ವ್ಯಕ್ತಪಡಿಸಿರುತ್ತಾರೆ. ಆದುದರಿಂದಲೇ ಇನ್ನೂ ಅವರುಗಳ ಹೃದಯವು ದಾಸನಿಗೆ ವ್ಯಕ್ತವಿಲ್ಲವೆಂದಲ್ಲವೇ ಆಚಾರ್ಯಹೃದಯಾನ್ವೇಷಣೀ ಎಂಬ ದಾಸನ ವ್ಯಾಖ್ಯಾನದ ನಾಮಧೇಯವು? ದಾಸನಿಗೇನೇ ಶ್ರೀ ಶ್ರೀನಿವಾಸನು ಅನುಗ್ರಹಿಸಿ ವ್ಯಕ್ತಗೊಳಿಸಿರುವ ವಿಶೇಷಾಭಿಪ್ರಾಯಗಳು ಬಹುವಾಗಿ ಅಂತಹ ವಿಶೇಷಾಭಿಪ್ರಾಯ

ಗಳು ಇತರ ಭಾಷ್ಯಗಳಿಲ್ಲವಾದುದರಿಂದ, ದಾಸನು ಅವುಗಳನ್ನು ಪ್ರಕಾಶಗೊಳಿಸುವದು ಇತಿ ಕರ್ತವ್ಯವೆಂದು ಭಾವಿಸಿ ಪ್ರಚುರಗೊಳಿಸಿರುತ್ತೇನೆ. ಪ್ರಾಜ್ಞರಾದ ದಯಾಳುಗಳಾದ ಶ್ರೀ ಪುರುಷರು ಇದರಲ್ಲೇನಿದೆ ಎಂಬ ಔದಾಸೀನ್ಯವನ್ನು ದೂರೀಕರಿಸಿ, ಲೇಖಕನಿಗೆ ಉತ್ತೇಜನವನ್ನು ಕೊಟ್ಟು ಪ್ರೋತ್ಸಾಹಿಸಬೇಕೆಂಬ ಪ್ರಾರ್ಥನೆಯು.

ಈ ವ್ಯಾಖ್ಯಾನವನ್ನು ಬರೆಯುವದರಲ್ಲಿ ಮುಖ್ಯೋದ್ದೇಶವು ಏನೆಂದರೆ—ಶ್ರೀ ಕೃಷ್ಣ ಭಗವಾನರ ಉಪದೇಶಕ್ಕೆ ವಿಶಿಷ್ಟಾದ್ವೈತ ಸಿದ್ಧಾಂತರೀತ್ಯಾ ಸರ್ವಸಾಮಂಜಸ್ಯ ಉಂಟೆಂಬುದನ್ನು ತೋರಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಇದರಲ್ಲಿ (೧) ಮೂಲಕ್ಕೆ ಪ್ರತಿಪದಾರ್ಥವೂ, (೨) ಶ್ರುತಿ ಸ್ಮೃತಿ ಇತಿಹಾಸ ಪುರಾಣಾದಿ ವಾಕ್ಯಗಳ ಮೂಲಕ ಉಪಪಾದನೆಯೂ, (೩) ಶ್ರೀ ಯತಿವರ್ಯರ ಶ್ರೀ ಭಾಷ್ಯಕ್ಕೆ ಪ್ರತಿಪದಾರ್ಥವೂ, (೪) ಶ್ರೀ ನಿಗಮಾಂತ ದೇಶಿಕರವರ ತಾತ್ಪರ್ಯ ಚಂದ್ರಿಕಾ ವಿಶೇಷಾರ್ಥಗಳನ್ನನುಸರಿಸಿ ಉಪಪಾದನೆಯೂ, (೫) ವಿಶಿಷ್ಟಾದ್ವೈತಾರ್ಥಸ್ಥಾಪನೆಗಾಗಿ ಪ್ರಾಸಙ್ಗಿಕವಾಗಿ ಇತರರು ಮಾಡಿರುವ ಅರ್ಥಗಳು ಸರಿಹೋಗುತ್ತವೆಯೋ ಇಲ್ಲವೇ ಎಂಬ ಚರ್ಚೆಯೂ (೬) ಶ್ರೀ ಯಾಮುನೇಯರವರ ಗೀತಾರ್ಥ ಸಙ್ಗ್ರಹವೂ, (೭) ಅದರ ಪ್ರತಿಪದಾರ್ಥವೂ, (೮) ಶ್ರೀ ನಿಗಮಾಂತದೇಶಿಕರವರ ವ್ಯಾಖ್ಯಾನವನ್ನನುಸರಿಸಿ ಉಪಪಾದನೆಯೂ, (೯) ಅಧ್ಯಾಯಗಳ ಪ್ರತಿಶ್ಲೋಕದ ಸಙ್ಗ್ರಹಾರ್ಥವೂ, (೧೦) ಶ್ಲೋಕಗಳ ಅಕಾರಾದಿಯೂ, ಎಲ್ಲವೂ ಅಡಗಿವೆ. ಮೂರು ಷಟ್ಕಗಳಾಗಿ ವಿಭಾಗಿಸಲ್ಪಟ್ಟು, ಪ್ರಥಮ ಷಟ್ಕವು ಈಗ ಪ್ರಕಟಿಸಲ್ಪಟ್ಟಿರುತ್ತದೆ. ಪ್ರಾಜ್ಞರಾದ ಮಹಿಳೆಯರೂ ಮಹಾ ಭಾಗವತರೂ ಸಹ ಈ ಪುಸ್ತಕವನ್ನು ಪರಿಗ್ರಹಿಸಿ ಮೋಕ್ಷೋಪಾಯವನ್ನನುಷ್ಠಿಸಿ ನಿರತಿಶಯಾನಂದವನ್ನು ಹೊಂದಲಿ ಎಂಬುದು ದಾಸನ ಮುಖ್ಯಾಶಯವು.

ಸಙ್ಗ್ರಹವಾಗಿ ಲೀಲಾಸಾರಥಿಯ ಉಪದೇಶವೇನೆಂದರೆ—ಐಹಿಕಾಮುಷ್ಮಿಕ ಪುರುಷಾರ್ಥಗಳಿಗೆ ಉಪಾಯಗಳು ಭಕ್ತಿಯೋಗ, ಪ್ರಪದನಗಳೆಂಬ ಎರಡೇ ಸಾಕ್ಷಾದುಪಾಯಗಳು. ಶ್ರವಣ, ಕೀರ್ತನ, ನಾಮಸಙ್ಕೀರ್ತನಾದಿಗಳು ಇವುಗಳಿಗೆ ಸಹಕಾರಿಗಳು. ಭಕ್ತಿಯೋಗದಲ್ಲಿ ಅಧಿಕಾರವು ತ್ರಿವರ್ಣದ ಮುಮುಕ್ಷುವಿಗೆ ಮಾತ್ರವೇ. ಇದಕ್ಕೆ ಶಕ್ತಿ ಇಲ್ಲದ ತ್ರಿವರ್ಣದವರಿಗೂ ಶೂದ್ರಾದಿ ಮಿಕ್ಕ ಮೋಕ್ಷಾರ್ಥಿಗಳೆಲ್ಲರಿಗೂ ಪ್ರಪದನದಲ್ಲಿ ಅಧಿಕಾರವು. ಭಕ್ತಿಯೋಗಕ್ಕೆ ಸಾಧನಗಳು ಕರ್ಮಯೋಗವೂ ಜ್ಞಾನಯೋಗವೂ. ಇವೆರಡೂ ಭಕ್ತಿಯೋಗವಿಲ್ಲದೆ ಮೋಕ್ಷವನ್ನು ಸಾಧಿಸಲಾರವು. ಕರ್ಮಯೋಗವೆಂದರೆ ತನಗೆ ವಿಹಿತಗಳಾಗಿರುವ ನಿತ್ಯನೈಮಿತ್ತಿಕಕರ್ಮಗಳೊಂದಿಗೆ ನಾಲ್ಕನೆಯ ಅಧ್ಯಾಯದಲ್ಲಿ "ದೈವಮೇವಾಪರೇ" ಎಂದಾರಂಭಿಸಿ ಹೇಳಿರುವ ೧೦ ವಿಧ ಪ್ರಭೇದಗಳಾದ ದೇವತಾರ್ಚನೆ, ಯಜ್ಞ, ದಾನ, ತಪಸ್ಸುಗಳಲ್ಲಿ ಒಂದನ್ನು ಶಾಸ್ತ್ರರೀತ್ಯಾ ಪರಮಪುರುಷಾರಾಧನರೂಪದಲ್ಲಿ ಕರ್ತೃತ್ವಫಲಮಮತಾತ್ಯಾಗಪೂರ್ವಕವಾಗಿ ಅನುಷ್ಠಿಸೋಣವು. ಇವುಗಳನ್ನು ಅನುಷ್ಠಿಸುವಾಗ ಜೀವಾತ್ಮನ ಯಥಾರ್ಥಾನುಸಂಧಾನವೂ ಜೀವಾತ್ಮರುಗಳಲ್ಲಿ ನಾಲ್ಕು ವಿಧ ಸಮತ್ವಜ್ಞಾನವೂ ಆವಶ್ಯಕವು. ಈ ಕರ್ಮಯೋಗದಿಂದುಂಟಾಗುವ ಫಲವು ಭಕ್ತಿಯೋಗಾನುಷ್ಠಾನಕ್ಕೆ ಪ್ರತಿಬಂಧಕ ಪಾಪನಿವಾರಣೆಯು. ಈ ಕರ್ಮಯೋಗದಿಂದ ಇಂದ್ರಿಯಗಳನ್ನೂ ಮನಸ್ಸನ್ನೂ ಜಯಿಸಿ ಸಂಪೂರ್ಣವೈರಾಗ್ಯ ಉಂಟಾದರೆ ಅಂತಹ ಕರ್ಮಯೋಗಿಗೆ ಜ್ಞಾನಯೋಗವು ಲಭಿಸಿ ನಾಲ್ಕು ವಿಧವಾದ ಸ್ಥಿತಪ್ರಜ್ಞತಾವಸ್ಥೆಯು ಕ್ರಮೇಣ ಪ್ರಾಪ್ತವಾಗುತ್ತದೆ. ಇಂತಹ ವೈರಾಗ್ಯವು ಸಾಧ್ಯವಿಲ್ಲದವನಿಗೆ ಜ್ಞಾನಯೋಗವು ಬೇಕಿಲ್ಲವು. ಕರ್ಮಯೋಗದಿಂದಲೇ ತನ್ನ ಆತ್ಮಸ್ವರೂಪದ ಸಾಕ್ಷಾತ್ಕಾರವು ಲಭಿಸಿ ಕ್ರಮೇಣ ವೈರಾಗ್ಯವೂ ಉಂಟಾಗಿ ಭಕ್ತಿಯೋಗಕ್ಕೆ ಅಧಿಕಾರವುಜನಕಾದಿಗಳಹಾಗೆ ಉಂಟಾಗುತ್ತದೆ. ಭಕ್ತಿಯೋಗವೆಂದರೆ ಕಲ್ಯಾಣಮಹೋದಧಿಯಾದ ಶ್ರಿಯಃಪತಿಯ ದಿವ್ಯಮಙ್ಗಳವಿಗ್ರಹವನ್ನು ಅನನ್ಯಭಕ್ತಿಯಿಂದ ತೈಲಧಾರೆಯ ಹಾಗೆ ಅವಿಚ್ಛಿನ್ನಸ್ಮೃತಿಸಂತತಿರೂಪದಲ್ಲಿ ಉಪಾಸಿಸೋ

ಣವು. ಈ ಉಪಾಸನವು ಶಾಸ್ತ್ರಗಳಲ್ಲಿ ವೇದನ, ಧ್ಯಾನ, ಧ್ರುವಾಸ್ಮೃತಿ, ಜ್ಞಾನ, ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟಿರುತ್ತದೆ. ಈ ಭಕ್ತಿಯೋಗಕ್ಕೂ, ಕರ್ಮಯೋಗಜ್ಞಾನಯೋಗಗಳಿಗೆ ಹೇಗೋ ಹಾಗೆ, ನಿತ್ಯನೈಮಿತ್ತಿಕಗಳು ಅಙ್ಗವಾಗಿ ಆವಶ್ಯಕವು. ಪಾಪನಿಬರ್ಹಣಕ್ಕಾಗಿ ಶರಣಾಗತಿಯೂ ಆವಶ್ಯಕವು. ಯಾವಜ್ಜೀವವೂ ಹೀಗೆ ಉಪಾಸಿಸುವದರಿಂದ ಪರಜ್ಞಾನವೆಂದು ಹೇಳಲ್ಪಡುವ ಪರಮಾತ್ಮಸಾಕ್ಷಾತ್ಕಾರವೂ, ಅನಂತರ ಪರಮಭಕ್ತಿ ಎಂದು ಹೇಳಲ್ಪಡುವ ಕ್ಷಣಮಾತ್ರವೂ ಪರಮಪುರುಷನನ್ನಗಲಿ ಇರಲಾರನೆಂಬ ಉತ್ಕಟೇಚ್ಛೆಯೂ, ಹೀಗೆ ಕ್ರಮೇಣ ಉಂಟಾಗುತ್ತವೆ. ಇಂತಹ ಉಪಾಸಕನಿಗೆ ಅನ್ತಿಮಸ್ಮರಣೆಯೊಂದಿಗೆ ದೇಹವಿಯೋಗ ಉಂಟಾಗಿ, ಪರಮಾತ್ಮಕೃಪೆಯಿಂದ ಸುಷುಮ್ನಾನಾಡಿಯಮೂಲಕ ನಿರ್ಯಾಣವೂ, ಅರ್ಚಿರಾದಿಗತಿಯೂ ಉಂಟಾಗುತ್ತವೆ. ಅರ್ಚಿರಾದಿಗತಿಗಾಗಿ ಪ್ರಾಪ್ತವಾಗಿದ್ದ ಸೂಕ್ಷ್ಮಶರೀರವು, ವಿರಜಾವಗಾಹನ ಅಮಾನವಕರಸ್ಪರ್ಶದಿಂದ ತೊಲಗಿ, ಅಪ್ರಾಕೃತಶರೀರಪ್ರಾಪ್ತಿಯೊಂದಿಗೆ ದಿವ್ಯವೈಕುಂಠವನ್ನು ಸೇರಿ ಶ್ರೀ ಪರವಾಸುದೇವ ಸಾಯುಜ್ಯವನ್ನು ಅತನು ಹೊಂದುವನು. ಈ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಾನುಷ್ಠಾನಗಳ ಯಾವ ಪರ್ವದಲ್ಲಾಗಲಿ, ಮೋಕ್ಷಾರ್ಥಿಯು ಐಹಿಕ ಲಿಪ್ತನಾಗಿ ಸ್ಖಾಲಿತ್ಯವನ್ನು ಹೊಂದುವವರ ಮೂಲಕ ಜನ್ಮಾಂತರಪ್ರಾಪ್ತಿಯಾದರೂ, ಸ್ವಲ್ಪಮಟ್ಟಿಗೆ ಸುಕೃತಾನುಷ್ಠಾನವನ್ನು ಮಾಡಿದುದರಿಂದ, ಕರುಣಾಸಾಗರನು ಆತನ ಕೈಯಲ್ಲಿ ಹೇಗಾದರೂ, ಮಾಡಿ ಉಪಾಯಾನುಷ್ಠಾನವನ್ನು ಮಾಡಿಸಿ ವೈಕುಂಠವನ್ನು ಸೇರುವಹಾಗೆ ಮಾಡುವನು. ಇದೀಗ ಉಪದೇಶವು.

ಅನೇನ ಪ್ರಿಯತಾಂ ಭಗವಾನ್ ವಾಸುದೇವಃ

ತಿರುನಾರಾಯಣಪುರಂ ಸಿ. ಯಂ. ವಿಜಯರಾಘವಾಚಾರ್,
ಮೈಸೂರು ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್ಪೆಕ್ಟರು.

---

## ಶ್ರೀ ಭಗವದ್ಗೀತೆಯ ಪ್ರಥಮಾಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು.

೧. ಧೃತರಾಷ್ಟ್ರನು ಸಂಜಯನನ್ನು ಕುರಿತು ಪ್ರಶ್ನಿಸುತ್ತಾನೆ:—ಅನೇಕ ಯಜ್ಞಗಳು ನಡೆದು ತುಂಬಾ ಪುಣ್ಯಕ್ಷೇತ್ರವೆನಿಸಿದ ಕುರುಕ್ಷೇತ್ರದಲ್ಲಿ ಯುದ್ಧಕ್ಕಾಗಿ ಸೈನ್ಯದೊಂದಿಗೆ ನೆರೆದಿರುವ ನಮ್ಮ ಸಂಗಡದವರಾದ ದುರ್ಯೋಧನಾದಿಗಳೂ ಪಾಂಡವರೂ ಆ ಯುದ್ಧರಂಗದಲ್ಲಿ ಏನು ಮಾಡಿದರು? ಕ್ಷೇತ್ರಮಾಹಾತ್ಮ್ಯೆಯಿಂದ ಯುದ್ಧವು ನಡೆಯದೆ ಹೋದರೆ ಕ್ಷೇಮವೇ ಎಂಬುದೂ, ಅಥವಾ ಒಂದುವೇಳೆ ಯುದ್ಧವಾಗಿದ್ದರೆ ಯಾರಿಗೆ ಜಯವು ಎಂಬುದೂ ಪ್ರಶ್ನೆಯ ಆಶಯವು.

೨. ಸಂಜಯರ ಉತ್ತರವು. ಯುದ್ಧರಂಗದಲ್ಲಿ ಪಾಂಡವರ ಸೇನೆಯನ್ನು ದುರ್ಯೋಧನನು ನೋಡಿ ಭೀಷ್ಮ ಕರ್ಣಾದಿಗಳಲ್ಲಿ ನಂಬಿಕೆ ಸಾಲದೆ, ಆಚಾರ್ಯರಾದ ದ್ರೋಣಾಚಾರ್ಯರಲ್ಲಿಗೆ ಬಂದು ಹೇಳುತ್ತಾನೇನೆಂದರೆ?—

೩. ನಿಮ್ಮಿಂದ ಧನುರ್ವಿದ್ಯೆಯನ್ನು ಅಧಿಕರಿಸಿದ ದ್ರುಪದ ಪುತ್ರನಾಗಿ ಮಹಾ ಬುದ್ಧಿಶಾಲಿಯಾದ ಧೃಷ್ಟದ್ಯುಮ್ನನಿಂದ ರಚಿಸಲ್ಪಟ್ಟ ಮಹತ್ತಾದ ಶತ್ರುವ್ಯೂಹವನ್ನು ಅವಲೋಕಿಸಿದಿರಾ?

೪, ೫, ೬. ಈ ಮಹತ್ತಾದ ಸೇನೆಯಲ್ಲಿ ಪಾಂಡವರ ಸಹಾಯಕ್ಕಾಗಿ ಬಂದಿರುವವರು ಯಾರೆಂದರೆ—ಶೂರರಾಗಿ ಮಹತ್ತಾದ ಧನುರ್ವಿದ್ಯಾ ವಿಶಾರದರಾಗಿ ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನರಾಗಿರುವವರು—ಮಹಾರಥರಾದ ಸಾತ್ಯಕಿಯೂ, ವಿರಾಟನೂ, ದ್ರುಪದನೂ, ಧೃಷ್ಟಕೇತುವೂ, ಚೇಕಿತಾನನೂ, ಮಹಾಪರಾಕ್ರಮಶಾಲಿಯಾದ ಕಾಶೀ ರಾಜನೂ, ಪುರುಜಿತ್ತೂ, ಕುಂತೀಭೋಜನೂ, ಶ್ರೇಷ್ಠನಾದ ಶೈಬ್ಯನೂ, ಶೂರನಾದ ಯುಧಾಮನ್ಯುವೂ, ಪರಾಕ್ರಮಶಾಲಿಯಾದ ಉತ್ತಮೌಜಸ್ಸೂ, ಸುಭದ್ರಾಕುವರನಾದ ಅಭಿಮನ್ಯುವೂ, ದ್ರೌಪದಿಯ ಮಕ್ಕಳಾದ ಪ್ರತಿವಿಂಧ್ಯ ಸುತಸೋಮ ಶ್ರುತವರ್ಮ, ಶತಾನೀಕರೂ; ಇವರೆಲ್ಲರೂ ಮಹಾ ರಥರು.

೭. ೮ ೯. ನಮ್ಮಕಡೆಯಲ್ಲಾದರೋ ಸೇನಾನಾಯಕರಾಗಿ ಅಂತಹ ಪರಾಕ್ರಮದಿಂದಕೂಡಿ ಯುದ್ಧಕ್ಕಾಗಿ ಬಂದಿರುವವರು ಯಾರು ಎಂಬುದನ್ನು ತಮ್ಮ ಅವಗಾಹನೆಗಾಗಿ ತಿಳಿಸುವೆನು, ಲಾಲಿಸಿ; ತಾವೂ, ಭೀಷ್ಮರೂ, ಕರ್ಣನೂ, ಯುದ್ಧದಲ್ಲಿ ಜಯಶೀಲರಾದ ಕೃಪಾಚಾರ್ಯರೂ, ತಮ್ಮ ಮಕ್ಕಳಾದ ಅಶ್ವತ್ಥಾಮರೂ, ವಿಕರ್ಣನೂ, ಸೋಮದತ್ತನ ಮಗನಾದ ಭೂರಿಶ್ರವಸ್ಸೂ, ಇನ್ನೂ ಅನೇಕ ಶೂರರೂ ನನಗಾಗಿ ಯುದ್ಧದಲ್ಲಿ ಪ್ರಾಣತ್ಯಾಗಮಾಡಲೂ ಕೂಡ ಸಿದ್ಧರಾಗಿರುವವರು: ನಾನಾವಿಧವಾದ ಆಯುಧ ಶಸ್ತ್ರಗಳನ್ನು ಹಿಡಿದು ಯುದ್ಧಮಾಡುವ ಚಾತುರ್ಯವುಳ್ಳವರು.

೧೦. ಶ್ರೀ ಭೀಷ್ಮರಿಂದ ರಕ್ಷಿಸಲ್ಪಟ್ಟಿರುವ ಈ ನಮ್ಮ ಸೇನೆಯಲ್ಲಾ ಜಯಹೊಂದಲು ಸಾಲದಾಗಿ ತೋರುತ್ತದೆ. ಅವರುಗಳ ಸೈನ್ಯವಾದರೋ ಭೀಮನಿಂದ ರಕ್ಷಿಸಲ್ಪಟ್ಟದುದಾಗಿ ಸಾಕಾಗಿರುವಹಾಗೆ ತೋರುತ್ತದೆ.

೧೧. ಆದುದರಿಂದ ದುರ್ಯೋಧನನು ಸ್ವಲ್ಪಧೈರ್ಯಗುಂದಿ ದ್ರೋಣರನ್ನು ಕುರಿತು ಪ್ರಾರ್ಥಿಸುತ್ತಾನೆ. ಭೀಷ್ಮರು ಯದ್ಯಪಿ ಬಲಿಷ್ಠರೆಂದು ಭಾವಿಸಿ ತಟಸ್ಥರಾಗಿರದೆ ಭೀಷ್ಮರಿಗೆ ಬೆಂಬಲವಾಗಿದ್ದುಕೊಂಡು ನಮ್ಮವ್ಯೂಹಗಳು ಯುದ್ಧಮಾಡುವ ಸಂದರ್ಭದಲ್ಲೆಲ್ಲಾ ಅವರನ್ನು ರಕ್ಷಿಸಲಿ.

೧೨. ದುರ್ಯೋಧನನು ಹೀಗೆ ಧೈರ್ಯಗುಂದಿರುವನೆಂಬುದನ್ನು ತಿಳಿದು, ಆತನಿಗೆ ಹರ್ಷವನ್ನುಂಟುಮಾಡುವವಕ್ಕಾಗಿ ಕುರುವೃದ್ಧರಾಗಿಯೂ ಪಿತಾಮಹರಾಗಿಯೂ ಇರುವ ಶ್ರೀ ಭೀಷ್ಮರು ಘಟ್ಟಿಯಾಗಿ ಸಿಂಹನಾದವನ್ನು ಮಾಡಿ ಶಂಖವನ್ನು ಊದಿದರು.

೧೩. ಅನಂತರ ಆ ಸೇನೆಯಲ್ಲೇ ಅನೇಕ ವೀರರು ಶಂಖಗಳನ್ನೂದಿದರು. ಹಾಗೆಯೇ ಅನೇಕ ಶಂಖಭೇರಿ ಪಣವ ಶಬ್ದಾದಿಗಳ ಕೋಲಾಹಲವು ಉಂಟಾಯಿತು.

೧೪..೧೫. ಶತ್ರು ಸೇನೆಯಲ್ಲಿ ಶಂಖ ಭೇರಿ ನಿನಾದವನ್ನು ಕೇಳಿ, ಲಕ್ಷ್ಮೀ ಪತಿಯಾದ ಲೀಲಾ ಸಾರಥಿಯಾದ ಶ್ರೀಕೃಷ್ಣನೂ ಅರ್ಜುನನೂ ಸಹ, ಬಿಳೀ ಕುದುರೆಗಳು ಕಟ್ಟಿರುವ ಮಹತ್ತಾದ ರಥದಲ್ಲಿ ಬಿಜಮಾಡಿಸಿ, ಪಾಂಚಜನ್ಯವೆಂಬ ಶಂಖವನ್ನು ಶ್ರೀಕೃಷ್ಣನೂ, ದೇವದತ್ತವೆಂಬ ಶಂಖವನ್ನು ಅರ್ಜುನನೂ ಊದಿದರು. ಭಯಂಕರವಾದ ವ್ಯಾಪಾರವುಳ್ಳ ಭೀಮನು ಪೌಂಡ್ರವೆಂಬ ಮಹಾ ಶಂಖವನ್ನು ಊದಿದನು.

೧೬. ಅನಂತರ ಕುನ್ತೀಪುತ್ರನಾಗಿ ರಾಜನಾದ ಧರ್ಮರಾಯನು ಅನನ್ತವಿಜಯವೆಂಬ ಶಂಖವನ್ನೂ, ನಕುಲ ಸಹದೇವರು ಸುಘೋಷ ಮಣಿಪುಷ್ಪಕಗಳೆಂಬ ಶಂಖಗಳನ್ನೂ ಊದಿದರು.

೧೭. ೧೮. ಇನ್ನೂ ಕೇಳು, ಓ ಧೃತರಾಷ್ಟ್ರನಾದ ರಾಜನೇ, ಶ್ರೇಷ್ಠವಾದ ಧನುಸ್ಸನ್ನು ಧರಿಸಿದ ಕಾಶೀರಾಜನೂ, ಮಹಾರಥನಾದ ಶಿಖಂಡಿಯೂ, ಯುದ್ಧದಲ್ಲಿ ಜಯಿಸಲಸಾಧ್ಯನಾದ ಸಾತ್ಯಕಿಯೂ, ದೃಷ್ಟದ್ಯುಮ್ನನೂ, ವಿರಾಟನೂ, ದ್ರುಪದನೂ, ದ್ರೌಪದೇಯರಾದ ಪ್ರತಿವಿಂಧ್ಯ ಮೊದಲಾದವರೂ, ಮಹಾ ಪರಾಕ್ರಮಶಾಲಿಯಾದ ಸುಭದ್ರಾ ಪುತ್ರನಾದ ಅಭಿಮನ್ಯುವೂ, ಇವರೆಲ್ಲರೂ ಎಲ್ಲಾಕಡೆಯಿಂದಲೂ ಬೇರೆಬೇರೆಯಾಗಿ ಶಂಖವನ್ನೂದಿದರು.

೧೯. ಆ ಶಂಖನಾದಗಳ ಘೋಷವು ಧೃತರಾಷ್ಟ್ರಪುತ್ರರಾದ ದುರ್ಯೋಧನಾದಿಗಳ ಹೃದಯವನ್ನು ಭೇದಿಸಿತು. ಪೃಥಿವಿಯನ್ನೂ ಆಕಾಶವನ್ನೂ ಆ ನಾದವು ಅಲ್ಲೋಲ ಕಲ್ಲೋಲವಾಗುವಹಾಗೆ ಪ್ರತಿಧ್ವನಿಕೊಡುವಹಾಗೆ ಮಾಡಿತು.

೨೦. ಅನಂತರದಲ್ಲಿ ಓ ರಾಜನಾದ ಧೃತರಾಷ್ಟ್ರನೇ ಕೇಳು. ಆ ಆಂಜನೇಯನನ್ನೇ ಧ್ವಜದಲ್ಲಿವುಳ್ಳ ಅರ್ಜುನನು, ಯುದ್ಧ ಸನ್ನದ್ಧರಾಗಿರುವ ದುರ್ಯೋಧನನ ಕಡೆಯವರನ್ನೆಲ್ಲಾ ನೋಡಿ, ಶತ್ರುಕಡೆಯಿಂದ ಬಾಣಮೊದಲಾದ ಆಯುಧಗಳು ಬರುತ್ತಿರುವ ಸಮಯದಲ್ಲಿ ತನ್ನ ಧನುಸ್ಸಾದ ಗಾಂಡೀವವನ್ನೆತ್ತಿದವನಾಗಿ, ತನ್ನ ಸಾರಥಿಯಾಗಿ ಸರ್ವೇಂದ್ರಿಯಗಳ ಪ್ರವರ್ತನೆಗೂ ಕಾರಣಭೂತನಾಗಿರುವ ಶ್ರೀಕೃಷ್ಣನನ್ನು ಕುರಿತು ಮುಂದಿನವಾಕ್ಯವನ್ನು ಹೇಳುತ್ತಾನೆ.

೨೧. ೨೨. ೨೩. ಅರ್ಜುನನು ಹೇಳುತ್ತಾನೆ.—ಓ ಅಚ್ಯುತನೇ, ಎರಡು ಸೇನೆಗೂ ಮಧ್ಯದಲ್ಲಿ ನಮ್ಮ ರಥವನ್ನು ಸ್ಥಾಪಿಸು; ನಮ್ಮೊಂದಿಗೆ ಯುದ್ಧಮಾಡಬೇಕೆಂಬ ಅಪೇಕ್ಷೆಯಿಂದ ಬಂದು ನಿಂತಿರುವವರು ಯಾರು? ಈಗ ಪ್ರಾಪ್ತವಾಗಿರುವ ಯುದ್ಧಾರಂಭದಿಂದ ಯಾರೊಂದಿಗೆ ನಾನು ಈಗ ಯುದ್ಧಮಾಡತಕ್ಕದ್ದು? ಅಧರ್ಮಿಯಾಗಿ ದುರ್ಬುದ್ಧಿಯುಕ್ತನಾದ ದುರ್ಯೋಧನನಿಗೆ ಹಿತ ಮಾಡುವದಕ್ಕಾಗಿ ಬಂದು ಯುದ್ಧಕ್ಕಾಗಿ ನಿಂತಿರುವವರು ಯಾರು? ಇದನ್ನೆಲ್ಲಾ ಚನ್ನಾಗಿ ತಿಳಿಯಲು ಯೋಗ್ಯವಾಗಿರುವ ಸ್ಥಳದಲ್ಲಿ ರಥವನ್ನು ನಿಲ್ಲಿಸು.

೨೪. ೨೫. ಸಂಜಯರು ಇದನ್ನೆಲ್ಲಾ ಧೃತರಾಷ್ಟ್ರನಿಗೆ ತಿಳಿಸುವವರಾಗಿ ಮುಂದೆಯೂ ಹೇಳುತ್ತಾರೇನೆಂದರೆ.—ಓ ಭರತಕುಲೋತ್ಪನ್ನನಾದ ಧೃತರಾಷ್ಟ್ರನೇ, ಅರ್ಜುನನಿಂದ ಹೀಗೆ ಹೇಳಲ್ಪಡಲಾಗಿ ಶ್ರೀಕೃಷ್ಣನು ಆ ಶ್ರೇಷ್ಠವಾದ ರಥವನ್ನು ಎರಡು ಸೇನೆಯ ಮಧ್ಯೆ ನಿಲ್ಲಿಸಿದವನಾಗಿ, ಭೀಷ್ಮ ದ್ರೋಣರಿಗೂ ಮತ್ತು ಇತರ ರಾಜರುಗಳಿಗೂ ಅಭಿಮುಖವಾಗಿ ರಥವನ್ನು ಸ್ಥಾಪಿಸಿ, ಯುದ್ಧಕ್ಕಾಗಿ ಬಂದಿರುವ ಆ ಕುರು ಸೈನ್ಯದವರ ವಿಷಯವಾಗಿ ಶ್ರೀ ಕೃಷ್ಣನನ್ನು ಕುರಿತು ಅರ್ಜುನನು ಹೇಳುತ್ತಾನೇನೆಂದರೆ—

೨೬, ೨೭, ೨೮. ಶತ್ರು ಸೈನ್ಯದವರೆಲ್ಲಾ ಕಾಣುವಹಾಗೆ ಯಾವಾಗ ಶ್ರೀಕೃಷ್ಣನು ರಥವನ್ನು ನಿಲ್ಲಿಸಿದನೋ, ಆಗ ಅಲ್ಲಿ ಅರ್ಜುನನು ಎದುರಿಗೆ ಸೈನ್ಯದಲ್ಲಿರುವ ಪಿತೃಗಳನ್ನೂ ಪಿತಾಮಹರುಗಳನ್ನೂ, ಆಚಾರ್ಯರನ್ನೂ, ಸೋದರಮಾವಂದಿರನ್ನೂ, ಅಣ್ಣತಮ್ಮಂದಿರನ್ನೂ, ಮಕ್ಕಳನ್ನೂ, ಮೊಮ್ಮಕ್ಕಳನ್ನೂ, ಸ್ನೇಹಿತರನ್ನೂ ಕಂಡನು. ಹೀಗೆ ಸೇನೆಗಳಲ್ಲಿರುವ ಸಮಸ್ತ ಬಂಧುಗಳನ್ನೂ ನೋಡಿ, ಈ ಯುದ್ಧದಲ್ಲಿ ಎಷ್ಟುಜನ ಇಂತವರೆಲ್ಲಾ ಮಡಿಯುವರೋ ಎಂದು ಶೋಕಾಕುಲ

ನಾಗಿ ತುಂಬಾ ಕೃಪೆಯಿಂದ ಪ್ರೇರಿತನಾಗಿ ಶ್ರೀ ಕೃಷ್ಣನನ್ನು ಕುರಿತು ಹೇಳುತ್ತಾನೇನೆಂದರೆ.

೨೮॥. ೨೮. ೨೯. ಹೇ ಕೃಷ್ಣನೇ, ಯುದ್ಧಮಾಡಬೇಕೆಂದು ಎದುರಿಗೆ ಬಂದಿರುವ ಈ ನನ್ನ ಸಂಬಂಧಿಗಳನ್ನು ನೋಡಿ ನನ್ನ ಶರೀರಾವಯವಗಳೆಲ್ಲಾ ಸಂಕುಚಿತವಾದವು; ಮುಖವು ಒಣಿಗಿ ಹೋಯಿತು- ನನ್ನ ಶರೀರದಲ್ಲಿ ಕಂಪನವೂ, ಅದರಿಂದ ರೋಮಾಂಚವೂ ಉಂಟಾಗಿವೆ.

೩೦. ನನ್ನ ಕೈಯಿಂದ ಗಾಂಡೀವ ಧನಸ್ಸುಜಾರಿಬೀಳುತ್ತದೆ; ಚರ್ಮವೆಲ್ಲಾ ದಹಿಸಿ ಹೋಗುತ್ತದೆ; ನಿಲ್ಲುವದಕ್ಕೂ ಕೂಡ ನನಗೆ ಶಕ್ತಿಯಿಲ್ಲವು; ನನ್ನ ಮನಸ್ಸು ಚಂಚಲವಾಗಿ ಸುತ್ತುತ್ತದೆ.

೩೧. ಬ್ರಹ್ಮ ರುದ್ರರಿಗೂ ಸ್ವಾಮಿಯಾದ ಕೇಶವನೇ, ಅನರ್ಥಸೂಚಕಗಳಾದ ಶಕುನಗಳನ್ನು ಕಾಣುತ್ತಿದ್ದೇನೆ. ಸ್ವಕೀಯರಾದವರನ್ನೆಲ್ಲಾ ಯುದ್ಧದಲ್ಲಿ ಕೊಲ್ಲುವದರಿಂದ ಉಂಟಾಗುವ ಶ್ರೇಯಸ್ಸನ್ನು ಕಾಣಲಾರೆನು.

೩೨. ಓ ಕೃಷ್ಣನೇ, ನನಗೆ ಜಯವು ಬೇಕಾಗಿಲ್ಲವು. ನನಗೆ ರಾಜ್ಯವೂ ಬೇಡ, ಸುಖಗಳೂ ಬೇಕಿಲ್ಲವು; ಓ ಗೋವಿಂದನೇ, ಹೀಗೆ ಸ್ವಜನವನ್ನು ಕೊಂದು ಬರುವ ರಾಜ್ಯದಿಂದಾಗತಕ್ಕದ್ದೇನು? ಭೋಗಗಳೇತಕ್ಕೆ? ನಾವು ಬದುಕಿರುವದು ತಾನೇ ಏತಕ್ಕೆ?

೩೩. ಯಾರಿಗೋಸ್ಕರವಾಗಿ ರಾಜ್ಯವೂ, ಭೋಗಗಳೂ ಸುಖಗಳೂ ಸಹ ನಮಗೆ ಅಪೇಕ್ಷಿತಗಳಾದವೋ ಅಂತವರೆಲ್ಲರೂ ಈಗ ಪ್ರಾಣಗಳನ್ನೂ ಧನವನ್ನೂ ತ್ಯಾಗಮಾಡುವದಕ್ಕಾಗಿ ಯುದ್ಧರಂಗಕ್ಕೆ ಬಂದಿರುತ್ತಾರೆ.

೩೪, ೩೫. ಆಚಾರ್ಯರೂ, ದೊಡ್ಡಪ್ಪ ಚಿಕ್ಕಪ್ಪರೂ, ಪುತ್ರರೂ, ತಾತಂದಿರೂ, ಸೋದರಮಾವಂದಿರೂ, ಮಾವಂದಿರೂ, ಪೌತ್ರರೂ, ಭಾವಮೈದಂದಿರೂ, ಇತರ ಸಂಬಂಧೀಕರೂ ಇವರೆಲ್ಲರೂ ನಮ್ಮನ್ನು ಹೊಡೆದರೂ, ತ್ರಿಲೋಕಾಧಿಪತ್ಯದ ಉದ್ದಿಶ್ಯವಾಗಿಯೂ ಕೂಡ, ಪ್ರತಿಯಾಗಿ ಹೊಡೆಯಲು ಅಪೇಕ್ಷಿಸುವುದಿಲ್ಲವು; ಹೀಗಿರುವಾಗ ಏನೋ ಸ್ವಲ್ಪ ರಾಜ್ಯಕ್ಕಾಗಿ ಅವರನ್ನು ಹೊಡೆಯಲೇ?

೩೬. ಓ ಜನಾರ್ದನನೇ, ಈ ದುರ್ಯೋಧನಾದಿಗಳನ್ನು ಕೊಲ್ಲುವದರಲ್ಲಿ ನಮಗೆ ಏನು ಪ್ರೀತಿಯುಂಟು? ಆದರೆ ಅವರು ಆತತಾಯಿಗಳಾಗಿ ವಧ್ಯರಲ್ಲವೇ? ಎಂದರೆ, ಅವರುಗಳೆಲ್ಲಾ ಬಾಂಧವರಾದುದರಿಂದ ಆಗಲೂ ಪಾಪವು ತಪ್ಪಿದ್ದಲ್ಲವು.

೩೭. ಆದುದರಿಂದ ಬಂಧುಗಳಿಂದ ಸೇರಿರುವ ಈ ನಮ್ಮ ದೊಡ್ಡಪ್ಪನ ಮಕ್ಕಳನ್ನೂ ಅವರ ಸಂಬಂಧಿಗಳನ್ನೂ ಕೊಲ್ಲುವದು ನಮಗೆ ಉಚಿತವಲ್ಲವು. ಸ್ವಜನರನ್ನು ಕೊಂದು ಹೇಗೆ ಸುಖಿಗಳಾದೇವು?

೩೮, ೩೯. ಪ್ರತಿಕಕ್ಷಿಯವರು ಯುದ್ಧಕ್ಕೆ ಬಂದಿರುವಾಗ ನೀನು ಏತಕ್ಕೆ ಯುದ್ಧ ಮಾಡಕೂಡದೆಂದು ನೀನು ಕೇಳಬಹುದು. ಈ ದುರ್ಯೋಧನಾದಿಗಳಾದರೋ ದುರಾಶೆಯಿಂದ ಹೊಡೆಯಲ್ಪಟ್ಟ ಮನಸ್ಸನ್ನುಳ್ಳವರು; ಕುಲನಾಶದಿಂದುಂಟಾಗುವ ದೋಷವನ್ನೂ ಮಿತ್ರರನ್ನು ಕೊಲ್ಲುವದರಿಂದುಂಟಾಗುವ ಪಾತಕವನ್ನೂ ಕಣ್ಣುಬಿಟ್ಟು ನೋಡುವರಲ್ಲವು. ನಮಗಾದರೋ ಆಚಾರ್ಯಕೃಪೆಯೂ ಪರಮಪುರುಷನಾದ ನಿನ್ನ ಅನುಗ್ರಹವೂ ಇರುವದರಿಂದ ಇಂತಹ ಪಾಪಗಳಿಂದ ನಾವು ನಿವೃತ್ತಿಯನ್ನು ಹೊಂದಬೇಕೆಂಬುದು ನಮಗೆ ಹೇಗೆ ತಿಳಿಯದೇ ಇದ್ದೀತು?

ಕುಲಕ್ಷಯದಿಂದುಂಟಾಗುವ ದೋಷಗಳನ್ನು ಕಣ್ಣಿನಿಂದಲೇ ನೋಡುತ್ತಿರುವ ನಮಗೆ ಹೇಗೆ ವೇದ್ಯವಾಗದೆ ಇದ್ದೀತು?

೪೦. ಕುಲಕ್ಷಯ ಉಂಟಾದರೆ, ಸತ್ಸಂಪ್ರದಾಯದಿಂದ ಮಹನೀಯರಿಂದುಂಟಾದ ಶಾಶ್ವತಗಳಾದ ಕುಲಧರ್ಮಗಳೆಲ್ಲಾ ಕೆಟ್ಟುಹೋಗುವುವು. ಕುಲಧರ್ಮಗಳೆಲ್ಲಾ ನಷ್ಟವಾಗಲಾಗಿ, ಅಧರ್ಮವು ತಲೆ ಎತ್ತಿ ಸಮಸ್ತ ಕುಲವೂ ನಾಶವಾಗುತ್ತದೆ.

೪೧. ಹೀಗೆ ಅಧರ್ಮವು ಹೆಚ್ಚಿ ಕುಲಧರ್ಮಗಳನ್ನೆಲ್ಲಾ ಹಾಳುಮಾಡುವದರಿಂದ ಕುಲಸ್ತ್ರೀಯರೆಲ್ಲಾ ದುಷ್ಟರಾಗುವರು ; ಯಾವಾಗ ಸ್ತ್ರೀಯರು ದುಷ್ಟರಾದರೋ ಆಗ ವರ್ಣಸಙ್ಕರವು ಉತ್ಪನ್ನವಾಗುತ್ತದೆ.

೪೨. ಈ ವರ್ಣಸಾಙ್ಕರ್ಯದಿಂದುಂಟಾಗುವ ಅನರ್ಥವು ಯಾವುದೆಂದರೆ, ಅಂತಹ ಕುಲಘ್ನರನ್ನು ನರಕಕ್ಕೆ ಗುರಿಮಾಡುತ್ತದೆ. ಅಂತವರ ಪಿತೃಗಳಿಗೆ ಪಿಂಡಪ್ರದಾನತರ್ಪಣಾದಿಗಳಿಲ್ಲದೆ ಅವರು ನಷ್ಟರಾಗುವರು.

೪೩. ಹೀಗೆ ವರ್ಣಸಾಂಕರ್ಯವನ್ನುಂಟುಮಾಡುವವರ ಇಂತಹ ಅನರ್ಥಗಳನ್ನುಂಟುಮಾಡುವ ದೋಷಗಳಿಂದ, ಶಾಶ್ವತಗಳಾದ ಕುಲಧರ್ಮಗಳೂ ಜಾತಿಧರ್ಮಗಳೂ ಎಲ್ಲವೂ ನಾಶವಾಗುತ್ತವೆ.

೪೪. ಹೀಗೆ ಕುಲಧರ್ಮಗಳನ್ನೆಲ್ಲಾ ನಾಶಮಾಡಿಕೊಂಡವರಿಗೆ ನಿಯತವಾಗಿ ನರಕವಾಸವೇ ಎಂದು ಜ್ಞಾನಿಗಳು ಹೇಳಿರುವದನ್ನು ಕೇಳಿರುವೆವು.

೪೫. ಅಯ್ಯೋ, ಇಂತಹ ಮಹತ್ತಾದ ಪಾಪವನ್ನು ಮಾಡಬೇಕೆಂದು ನಿಶ್ಚಯಿಸಿ ಬಂದೆವಲ್ಲಾ ಎಂದು ಶೋಕಿಸುವೆನು. ಯಾವ ಅಲ್ಪವಾದ ಅನಿತ್ಯವಾದ ರಾಜ್ಯಸುಖಕ್ಕಾಗಿ ಸ್ವಜನವನ್ನು ಕೊಲ್ಲಬೇಕೆಂದು ಬಂದವರಲ್ಲವೇ ?

೪೬. ಈಗ ಬಂದಿರುವ ದುರ್ಯೋಧನಾದಿಗಳು ಶಸ್ತ್ರಪಾಣಿಗಳಾಗಿ ಬಂದು ಶಸ್ತ್ರವನ್ನು ಕೈಯಲ್ಲಿ ಹಿಡಿಯದೆ, ಹೊಡಿದುದಕ್ಕೆ ಪ್ರತಿಯಾಗಿ ಹೊಡಿಯದೇ ತಟಸ್ಥನಾಗಿ ನಿಂತಿರುವ ನನ್ನನ್ನು ಕೊಂದುಹಾಕಿದರೂ, ಅದೂ ನನಗೆ ಕ್ಷೇಮವೇ ಆಗುವದು.

೪೭. ಧೃತರಾಷ್ಟ್ರನಿಗೆ ಸಂಜಯನು ಪುನಃ ಹೇಳುತ್ತಾನೆ—ಹೀಗೆ ಅರ್ಜುನನು ರಣರಂಗದಲ್ಲಿ ವಿಷಾದದಿಂದ ವಿಕಾರ ಹೊಂದಿದ ಮನಸ್ಸುಳ್ಳವನಾಗಿ ಬಾಣದೊಂದಿಗೆ ಧನುಸ್ಸನ್ನೂ ಬಿಸಾಡಿ, ರಥದ ಒಂದು ಭಾಗದಲ್ಲಿ ತಟಸ್ಥನಾಗಿ ಕುಳಿತನು.

ಇಂತು ಪ್ರಥಮೋಽಧ್ಯಾಯವು.



## ದ್ವಿತೀಯಾಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು.

೧. ಸಂಜಯರು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾರೆ. ಹಾಗೆ ಉಚಿತವಲ್ಲದ ಸಂದರ್ಭದಲ್ಲಿ ತುಂಬಾ ಕೃಪೆಯಿಂದ ಪ್ರೇರಿತನಾಗಿ ಕಣ್ಣುತುಂಬ ನೀರನ್ನು ಹೊಂದಿ, ಶೋಕಾಕ್ರಾಂತನಾಗಿ, ರಥದ ಒಂದು ಕಡೆಯಲ್ಲಿ ಕೂತಿರುವ ಅರ್ಜುನನನ್ನು ಕುರಿತು ಭಕ್ತನ ಶೋಕವನ್ನು ಹೋಗಲಾಡಿಸುವವಕ್ಕಾಗಿ ಮುಂದಿನ ವಾಕ್ಯವನ್ನು ಶ್ರೀಕೃಷ್ಣಭಗವಾನರವರು ಹೇಳುತ್ತಾರೇನೆಂದರೆ–

೨. ಓ ಅರ್ಜುನನೇ, ಪ್ರಾಜ್ಞನಾದ ನಿನಗೆ ಯೋಗ್ಯವಲ್ಲದ, ನಿನ್ನ ಯಶಸ್ಸಿಗೆ ಕುಂದಕವಾದ ಈ ಮನೋವ್ಯಾಕುಲತೆಯು ಇಂತಹ ಅಯುಕ್ತವಾದ ಸಂದರ್ಭದಲ್ಲಿ ಧೀರನಾದ ನಿನಗೆ ಹೇಗೆ ಪ್ರಾಪ್ತವಾಯಿತು ?

೩. ಇಂತಹ ದೌರ್ಬಲ್ಯವನ್ನು ಅಥವಾ ದೈನ್ಯವನ್ನು ನೀನು ಹೊಂದತಕ್ಕದ್ದಲ್ಲವು. ಇಂತಹ ದೈನ್ಯವು ನಿನಗೆ ಯೋಗ್ಯವೂ ಅಲ್ಲವು. ಓ ಶತ್ರುನಾಶಕನೇ ಇಂತಹ ತುಚ್ಛವಾದ ಹೃದಯ ದೌರ್ಬಲ್ಯವನ್ನು ತ್ಯಜಿಸಿ ಯುದ್ಧಕ್ಕೆ ಏಳು.

೪. ಇದಕ್ಕೆ ಅರ್ಜುನನು ಪ್ರತಿಯಾಗಿ ಹೇಳುತ್ತಾನೆ.—ಪಿತಾಮಹರಾದ ಭೀಷ್ಮರನ್ನೂ ವಿದ್ಯಾಗುರುಗಳಾದ ದ್ರೋಣರನ್ನೂ ಯುದ್ಧದಲ್ಲಿ ಬಾಣಗಳಿಂದ ಹೊಡೆದು ಹೇಗೆ ಯುದ್ಧಮಾಡಲಿ? ಓ ಶತ್ರು ಸಂಹಾರಕನಾದ ಶ್ರೀಕೃಷ್ಣನೇ ಅಂತವರು ಪೂಜಿಸಲ್ಪಡಲು ಅರ್ಹರು.

೫. ಇಂತಹ ಮಹಾನುಭಾವರಾದ ಗುರುಗಳನ್ನು ಕೊಲ್ಲದೆ, ಈ ಲೋಕದಲ್ಲಿ ಕ್ಷತ್ರಿಯನಿಗೆ ನಿಂದಿತವಾದ ಭಿಕ್ಷಾಟನವನ್ನಾದರೂ ಮಾಡುವದು ಶ್ರೇಯಸ್ಕರವು. ಅವರು ಅಧರ್ಮಿಗಳೊಂದಿಗೆ ಇದ್ದುಕೊಂಡಿರುವದರಿಂದ ವಧ್ಯರು ಎಂದು ಸಮಾಧಾನ ಮಾಡಿಕೊಂಡರೂ, ಅಂತಹ ಗುರುಜನ ವನ್ನು ಕೊಂದು ಅವರ ರಕ್ತದಿಂದ ತೋಯಿಸಲ್ಪಟ್ಟ ಸ್ಥಳದಲ್ಲೇ ಇದ್ದು ಅವರ ಭೋಗಗಳನ್ನು ನಾವು ಅನುಭವಿಸುವದು ಹೇಗೆ ಯುಕ್ತವು ?

೬. ನಾವೇ ನಮ್ಮ ಪ್ರತಿಕಕ್ಷಿಯನ್ನು ಜಯಿಸಲಿ, ಅಥವಾ ಅವರೇ ನಮ್ಮನ್ನು ಜಯಿಸಲಿ; ಇವುಗಳಲ್ಲಿ ಯಾವುದು ಪಾಂಡವರಾದ ನಮಗೆ ಶ್ರೇಯಸ್ಕರವೆಂಬುದು ನನಗೆ ತಿಳಿಯದು. ಏಕೆಂದರೆ—ಯಾವ ಪೂಜ್ಯರಾದವರನ್ನೂ ಗುರುಗಳನ್ನೂ ಕೊಲ್ಲಲು ನಮಗೆ ಇಷ್ಟವಿಲ್ಲವೋ, ಅಂತವರೇ ಈಗ ನಮ್ಮೊಂದಿಗೆ ಯುದ್ಧಮಾಡಲು ಎದುರಾಳಿಯಾಗಿ ನಿಂತಿರುತ್ತಾರೆ.

೭. ಸರಿಯಾದ ಜ್ಞಾನವಿಲ್ಲದೆ ಯುದ್ಧವು ಅಧರ್ಮವೆಂದು ದೈನ್ಯಭಾವದಿಂದ, ಕುಗ್ಗಿದ ಸ್ವಭಾವವುಳ್ಳ ನಾನು, ಧರ್ಮದ ವಿಷಯದಲ್ಲಿ ಸಂಶಯಾವಿಷ್ಟಮನಸ್ಕನಾಗಿ ನಿನ್ನನ್ನು ಕೇಳುತ್ತೇನೆ, ಏನೆಂದರೆ.—ಯುದ್ಧಮಾಡುವದು ಶ್ರೇಯಸ್ಕರವೋ ? ಯುದ್ಧಮಾಡದಿರುವದು ಶ್ರೇಯಸ್ಕರವೋ ? ಸರ್ವಜ್ಞನಾಗಿ ಶರಣಾಗತವತ್ಸಲನಾದ ನೀನು ನಿಶ್ಚಯಿಸಿರುವದನ್ನು ಶರಣಾಗತನಾಗಿರುವ ನನಗೆ ನೀನು ಉಪದೇಶಿಸಿ ಕಾಪಾಡತಕ್ಕದ್ದು. ಇಷ್ಟಾರ್ಥಸಿದ್ಧಿಗೆ ಶರಣಾಗತಿಯೂ ಉಪಾಯವು.

೮. ಒಂದುವೇಳೆ ಯುದ್ಧಮಾಡಿ ಈಗ ನೆರೆದಿರುವರೆಲ್ಲಾ ಮಡಿದು ನಿಷ್ಕಂಟಕವಾದ ರಾಜ್ಯ ಭೋಗವಾಗಲಿ ಅಥವಾ ದೇವತೆಗಳ ಅಧಿಪತ್ಯವಾಗಲಿ ಪ್ರಾಪ್ತವಾದರೂ, ಈಗ ನನಗೆ ಇಂದ್ರಿಯಗಳನ್ನೆಲ್ಲಾ ಶೋಷಿಸಿ ಬಿಡುವಹಾಗೆ ಪ್ರಾಪ್ತವಾಗಿರುವ ಶೋಕವನ್ನು ಹೋಗಲಾಡಿಸುವ ಉಪಾಯವು ನನಗೆ ಕಂಡುಬರುವದಿಲ್ಲವು ಎಂದು ಅರ್ಜುನನು ಹೇಳಿ ಸುಮ್ಮನಾದನು.

೯. ಈ ವಿಷಯವನ್ನು ಸಂಜಯರು ಧೃತರಾಷ್ಟ್ರರಲ್ಲಿ ಅರಿಕೆಮಾಡಿ ತಿಳಿಸುತ್ತಾರೆ.–ಏನೆಂದರೆ ಹೀಗೆ ಅರ್ಜುನನು ಶತ್ರುನಾಶಕನಾಗಿದ್ದರೂ, ಸರ್ವಪ್ರೇರಕನಾದ ಶ್ರೀಕೃಷ್ಣ ಭಗವಾನರವರನ್ನು ಕುರಿತು ಹೇಳಿ, ನಾನು ಯುದ್ಧಮಾಡಲಾರನೆಂದು ಹೇಳಿ ಸುಮ್ಮನಾದನು.

೧೦. ಆಗ ಶ್ರೀಕೃಷ್ಣಭಗವಾನರವರು ಎರಡು ಸೈನ್ಯದ ಮಧ್ಯದಲ್ಲಿ ನಿಂತು ದುಃಖದಿಂದ ತಪಿಸುತ್ತಿರುವ ಅರ್ಜುನನನ್ನು ಕಂಡು, ಅಂತವನಿಗೆ ಇಂತಹ ದುರ್ದಶೆಯೇ ಎಂದು ಯೋಚಿಸಿ ಆತನಿಗೆ ಹರ್ಷವನ್ನಿತ್ತು, ಯುದ್ಧ ಪ್ರೋತ್ಸಾಹನಕ್ಕಾಗಿ ನಕ್ಕವರಾಗಿ, ಈ ಮುಂದೆ ಹೇಳುವ ಗೀತಾಶಾಸ್ತ್ರವನ್ನೆಲ್ಲಾ ಉಪದೇಶಿಸಲು ಆರಂಭಿಸುತ್ತಾರೆ.

೧೧ ಓ ಅರ್ಜುನನೇ, ಕುಂತೀ ಯುಧಿಷ್ಠಿರಾದಿಗಳೂ ದ್ರೌಪದೀ, ಇವರಿಗೆಲ್ಲಾ ಪ್ರಾಪ್ತವಾದ ದುರ್ದಶೆಗೆಲ್ಲಾ ಶೋಕಿಸದೇ, ಈಗ ಯಾವುದಕ್ಕಾಗಿ ಶೋಕಿಸಬಾರದೋ ಅದಕ್ಕಾಗಿ ಶೋಚಿಸುತ್ತೀಯೇ. ನೋಡಿದರೆ ತುಂಬಾ ಪ್ರಜ್ಞೆ ಇರುವವರ ಹಾಗೆ ಮಾತಾಡುತ್ತೀಯೇ. ಪ್ರಾಣವಿಲ್ಲದ ಜಡದೇಹಕ್ಕೂ ನಿತ್ಯನಾದ ಆತ್ಮರುಗಳಿಗೂ ಇರುವ ವಿವೇಕವನ್ನು ತಿಳಿದವರು ಎಂದಿಗೂ ಹೀಗೆ ಶೋಕಿಸುವದಿಲ್ಲವು.

೧೨. ಸರ್ವೇಶ್ವರನಾಗಿರುವ ನಾನೂ, ನೀನೂ, ಮತ್ತು ಇಲ್ಲಿ ನೆರೆದಿರುವ ರಾಜರೇ ಮೊದಲಾದವರೂ, ಹಿಂದೆ ಇರಲಿಲ್ಲವೆಂಬುದೂ ಇಲ್ಲವು. ಈ ವರ್ತಮಾನಕಾಲದಲ್ಲಂತೂ ಇದ್ದೇ ಇದ್ದೇವೆ. ಮುಂದೆಯೂ ಇರುವದಿಲ್ಲವೆಂಬುದೂ ಇಲ್ಲವು. ಆದುದರಿಂದ ನಾವೆಲ್ಲರೂ ಅನಾದಿಯಾಗಿ ನಿತ್ಯರಾಗಿರುವೆವು. "ನಿತ್ಯೋ ನಿತ್ಯಾನಾಂ" ಎಂಬ ಶ್ರುತ್ಯರ್ಥವು ಇಲ್ಲಿ ಉಪದೇಶಿಸಲ್ಪಟ್ಟು ಜೀವ ಪರಮಾತ್ಮ ಭೇದವೂ ಜೀವಾತ್ಮರ ಪರಸ್ಪರಭೇದವೂ ಬೋಧಿಸಲ್ಪಟ್ಟಿತು.

೧೩. ಈ ನಿತ್ಯನಾದ ಆತ್ಮನಿಗೆ ಅನಿತ್ಯಸಂಬಂಧವುಂಟೆಂದು ಹೇಳುತ್ತಾರೆ. ಈ ಆತ್ಮನಿಗೆ ದೇಹಪ್ರಾಪ್ತಿಯುಂಟಾಗಿ ಒಂದು ದೇಹದಲ್ಲೇ ಶೈಶವವೂ ಯೌವನವೂ ಮುಪ್ಪೂ ಹೇಗೆ ಉಂಟೋ, ಹಾಗೆಯೇ ಆತ್ಮನಿಗೆ ದೇಹಾಂತರಪ್ರಾಪ್ತಿಯೂ ಉಂಟು. ಆ ಸಂದರ್ಭದಲ್ಲಿ ದೇಹಮಾತ್ರ ನಷ್ಟವಾಗಿ ಪುನಃ ದೇಹಪ್ರಾಪ್ತಿಯುಂಟಾಗುವದರಿಂದ ವಿವೇಕಜ್ಞಾನಯುಕ್ತನು ಭ್ರಮಜ್ಞಾನದಿಂದ ಶೋಕಿಸುವದಕ್ಕೆ ಕಾರಣವಿಲ್ಲವು.

೧೪. ಹೀಗೆ ಆತ್ಮನಿಗೆ ದೇಹಸಂಬಂಧವಿರುವದರಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವುಗಳಿಗೆ ಆಶ್ರಯವಾಗಿರುವ ವಿಷಯಗಳಿಗೂ, ಇಂದ್ರಿಯಗಳಿಗೂ ಸಂಬಂಧಉಂಟಾಗುವದರ ಮೂಲಕ ಶೀತೋಷ್ಣ ಸುಖದುಃಖಗಳ ಅನುಭವ ಉಂಟಾಗುವುವು. ಆದರೆ ಅವು ಅನಿತ್ಯಗಳಾಗಿ ಬರುತ್ತವೆ, ಹೋಗುತ್ತವೆ. ಅವುಗಳನ್ನು ಓ ಅರ್ಜುನನೇ ನೀನು ಸಹಿಸಲೇ ಬೇಕು.

೧೫. ಹಾಗೆ ಅವುಗಳನ್ನು ಸಹಿಸತಕ್ಕದ್ದು ಯಾವ ಪ್ರಯೋಜನಕ್ಕಾಗಿ ಎನ್ನುತ್ತೀಯೋ ? ಹೇಳುತ್ತೇನೆ ಕೇಳು.—ಯಾವ ಪುರುಷಶ್ರೇಷ್ಠನಿಗೆ ಇವುಗಳನ್ನು ಸಹಿಸಿಕೊಳ್ಳುವದರ ಮೂಲಕ ಅವು ಖೇದವನ್ನುಂಟುಮಾಡುವದಿಲ್ಲವೋ, ಅಂತಹ ಸುಖದುಃಖಗಳನ್ನು ಸಮವಾಗಿ ಕಾಣುವ ಧೀರನಾದ ಪ್ರಾಜ್ಞನು, ಮುಂದಕ್ಕೆ ಇಂತಹ ಕ್ಲೇಶಾದಿಗಳ ಗಂಧವು ಎಂದಿಗೂ ಇಲ್ಲದಿರುವ ನಿರತಿಶಯ ಸುಖವಾದ ಮೋಕ್ಷಪ್ರಾಪ್ತಿಗೆ ಅರ್ಹನಾಗುವನು.

೧೬. ದೇಹಕ್ಕೆ ಅಸ್ಥಿರತ್ವವನ್ನೂ ಎಂದರೆ ಸ್ವರೂಪವಿಕಾರವನ್ನೂ, ಆತ್ಮನಿಗೆ ನಿತ್ಯತ್ವವನ್ನೂ ಎಂದರೆ ಸ್ವರೂಪವಿಕಾರವಿಲ್ಲದಿರುವ ಭಾವವನ್ನೂ, ಉಪಪಾದಿಸಿ ಹೇಳುತ್ತಾರೆ— ಸತತ ಪರಿಣಾಮಿಯಾದ ದೇಹಕ್ಕೆ ಸ್ಥಿರತ್ವವಿಲ್ಲವು. ಚೇತನರೂಪನಾದ ಆತ್ಮನಾದರೋ ಹಾಗಲ್ಲವು, ಪರಿಣಾಮರೂಪ ಅಸ್ಥಿರತ್ವವು ಆತ್ಮನಿಗಿಲ್ಲವು. ತತ್ವಸ್ವರೂಪನಿರ್ಣಯದ ಯಥಾರ್ಥಜ್ಞಾನವುಳ್ಳ ಪರಾಶರ ವ್ಯಾಸಾದಿಗಳಾದರೋ ಇವುಗಳೆರಡಕ್ಕೂ ಇರುವ ವೈಲಕ್ಷಣ್ಯವನ್ನು ತಿಳಿದವರಾಗಿರುತ್ತಾರೆ.

೧೭. ಜೀವಾತ್ಮತತ್ವವು, ಅತಿ ಸೂಕ್ಷ್ಮವಾಗಿ ಎಲ್ಲಾ ಅಚಿತ್ತನ್ನೂ ವ್ಯಾಪಿಸಿರುವದರಿಂದಲೂ, ಜೀವಾತ್ಮತತ್ವವು ಕಣ್ಣಿಗೆ ಕಾಣದ ಹಾಗೆ ಅಣುವಾಗಿರುವದರಿಂದ ಯಾವ ವಸ್ತುವೂ ಅದನ್ನು ವ್ಯಾಪಿಸುವ ಶಕ್ತಿಯಿಲ್ಲನುದರಿಂದಲೂ, ನಾಶಹೊಂದುವದಿಲ್ಲವು. ನಾಶಮಾಡುವ ವಸ್ತುವು

ನಾಶಪಡಿಸುವ ವಸ್ತುವನ್ನು ವ್ಯಾಪಿಸಿದರೇನೇ ಇವಕ್ಕೆ ನಾಶವು. ಅಣುವಾದ ಆತ್ಮನನ್ನು ವ್ಯಾಪಿಸುವ ಶಕ್ತಿಯು ಯಾವ ವಸ್ತುವಿಗೂ ಇಲ್ಲದುದರಿಂದ ಆತ್ಮತತ್ವಕ್ಕೆ ಎಂದಿಗೂ ನಾಶವಿಲ್ಲವು.

೧೮. ಆದರೆ ನಿತ್ಯರಾದ ಆತ್ಮರ ದೇಹಗಳಾದರೋ ಹಾಗಲ್ಲವು, ಅವು ಕಣ್ಣಿಗೆ ಕಾಣುವವುಗಳಾಗಿ ಸ್ಥೂಲವಾಗಿರುವದರಿಂದ ಅವುಗಳಿಗೆ ನಾಶವುಂಟು. ಆದುದರಿಂದ ಶರೀರಗಳಿಗೆ ನಾಶವು ಸಿದ್ಧವು. ಆತ್ಮರುಗಳಾದರೋ ನಾಶರಹಿತವಾದವು, ಏಕೆಂದರೆ ಪ್ರಮಾಣದಿಂದ ಗುರ್ತಿಸಲು ಸಾಧ್ಯವಿಲ್ಲವು, ಅಹಂ ಎಂದು ಮಾತ್ರ ತಿಳಿಯಲು ಸಾಧ್ಯವು. ಆದುದರಿಂದ ಓ ಅರ್ಜುನನೇ ಯುದ್ಧವನ್ನು ಮಾಡು.

೧೯. ಆದುದರಿಂದ ಈ ಆತ್ಮನೇ ಕೊಲ್ಲುತ್ತಾನೆಂದು ಯಾವನು ತಿಳಿಯುತ್ತಾನೋ ಅಥವಾ ಯಾವನು ಈ ಆತ್ಮನೇ ಕೊಲ್ಲಲ್ಪಡುವನೆಂದು ತಿಳಿಯುವನೋ, ಇವರಿಬ್ಬರೂ ತಿಳಿಯದ ಮೂಢರು. ಏಕೆಂದರೆ ಈ ಅಣುವಾದ ಜೀವಾತ್ಮನು ಕೊಲ್ಲಲೂ ಶಕ್ತಿಯಿಲ್ಲದವನು; ಕೊಲ್ಲಲ್ಪಡಲೂ ಸಾಧ್ಯನಲ್ಲವು.

೨೦. ಈ ಜೀವಾತ್ಮನು ಎಂದಿಗೂ ಹುಟ್ಟುವುದೂ ಇಲ್ಲವು, ಸಾಯುವುದೂ ಇಲ್ಲವು. ಹಿಂದೆ, ಇದ್ದು ಈಗಲಾಗಲಿ ಮುಂದೆಯಾಗಲಿ ಇಲ್ಲದೇ ಹೋಗುವುದಿಲ್ಲವು. ಆ ಕಾರಣದಿಂದ ಆತನು ಉತ್ಪತ್ತಿಯಿಲ್ಲದವನು, ನಿತ್ಯನು, ಶಾಶ್ವತವಾಗಿ ಏಕರೂಪದಲ್ಲಿ ಜ್ಞಾನೈಕಾಕಾರನಾಗಿರುವವನು ಅನಾದಿಯಾಗಿ ಬಂದವನು; ಶರೀರವು ನಷ್ಟವಾದರೂ ಆತನು ನಷ್ಟವಾಗುವದಿಲ್ಲವು.

೨೧. ಜೀವಾತ್ಮನು ಅಣುವಾದುದರಿಂದ ಅವಯವವಿಲ್ಲದವನು; ಆದುದರಿಂದಲೇ ಉತ್ಪತ್ತಿನಾಶವಿಲ್ಲದವನು; ದೇಹಕ್ಕಿರುವ ಪರಿಣಾಮಗಳು ಯಾವವೂ ಆತನಿಗಿಲ್ಲವು; ಹೀಗೆ ಜೀವಾತ್ಮನನ್ನು ಯಾವನು ತಿಳಿಯುತ್ತಾನೋ, ಅಂತಹ ಪುರುಷನು ಯಾವ ಜೀವಾತ್ಮನನ್ನು ಹೇಗೆ ಕೊಲ್ಲಿಸುವನು ಮತ್ತು ಹೇಗೆ ಕೊಲ್ಲುವನು ? ಆತ್ಮನು ಕೊಲ್ಲಲ್ಪಟ್ಟನೆಂದು ಎಂದಿಗೂ ಆತನು ಶೋಕಿಸುವದಿಲ್ಲವೆಂಬ ಭಾವವು.

೨೨. ಮನುಷ್ಯನು ಹೇಗೆ ಹರದುಹೋದ] ಬಟ್ಟೆಗಳನ್ನು ತ್ಯಜಿಸಿ, ಬೇರೆ ಹೊಸಬಟ್ಟೆಗಳನ್ನು ತೊಡುವನೋ, ಹಾಗೆಯೇ ಈ ಬದ್ಧಾತ್ಮನು ದೇಹಾವಸಾನದಲ್ಲಿ ಜೀರ್ಣಗಳಾದ ಶರೀರಗಳನ್ನು ಬಿಟ್ಟು ಬೇರೆ ಹೊಸ ಶರೀರಗಳನ್ನು ಧರಿಸುವನು.

೨೩, ೨೪. ಈ ಜೀವಾತ್ಮನನ್ನು ಶಸ್ತ್ರಗಳು ಪ್ರವೇಶಿಸಲಾರವಾದುದರಿಂದ ಕತ್ತರಿಸಲಾರವು; ಅಗ್ನಿಯು ಈತನನ್ನು ಸುಡಲಾರದು; ಜಲವು ತೋಯಿಸಲಾರದು; ವಾಯುವು ಶೋಷಿಸಲಾರದು; ಆದುದರಿಂದ ಈತನು ಕತ್ತರಿಸಲೂ ದಹಿಸಲೂ ತೋಯಿಸಲೂ ಶೋಷಿಸಲೂ ಸಾಧ್ಯವಿಲ್ಲದವನು; ನಿತ್ಯನು; ಸರ್ವವನ್ನೂ ಪ್ರವೇಶಿಸುವ ಶಕ್ತಿಯುಳ್ಳವನು; ಸ್ಥಿರವಾಗಿರುವವನು; ಅಲ್ಲಾಡಿಸಲು ಸಾಧ್ಯವಿಲ್ಲದವನು; ಅನಾದಿಯು.

೨೫. ಈ ಜೀವಾತ್ಮನು ಪ್ರತ್ಯಕ್ಷಪ್ರಮಾಣಕ್ಕೆ ಗೋಚರನಲ್ಲವು. ಅನುಮಾನಪ್ರಮಾಣದಿಂದಲೂ ತಿಳಿಯಲು ಸಾಧ್ಯನಲ್ಲವು ಆದುದರಿಂದ ಶಾಸ್ತ್ರದಿಂದಲೇ ತಿಳಿಯತಕ್ಕವನು. ಶಾಸ್ತ್ರವು ಈತನ ಸ್ವರೂಪಕ್ಕೆ ವಿಕಾರವಿಲ್ಲವೆಂದು ಹೇಳುತ್ತದೆ. ಆದುದರಿಂದ ಶಾಸ್ತ್ರಮೂಲಕ ಆತನ ಯಾಥಾತ್ಮ್ಯವನ್ನರಿತು, ಆತನನ್ನು ಕುರಿತು ಶೋಕಿಸುವದು ಯುಕ್ತವಲ್ಲವು.

೨೬. ಶಾಸ್ತ್ರಮೂಲಕ ನೋಡಿದರೂ ಶೋಕಕ್ಕೆ ಕಾರಣವಿಲ್ಲವೆಂದು ಹೇಳಿದರು. ಯುಕ್ತಿವಾದಮೂಲಕವಾಗಿಯೂ ಶೋಕಕ್ಕೆ ಕಾರಣವಿಲ್ಲವೆನ್ನುತ್ತಾರೆ. ಹೇಗೆಂದರೆ—ದೇಹವೇ ಆತ್ಮಾ ಎಂದು ಭಾವಿಸಿ, ಆತ್ಮನಿಗೆ ಜನನಮರಣಗಳು ನಿಯತವಾದವು ತಪ್ಪಿದ್ದಲ್ಲವೆಂದು ನೀನು ಒಪ್ಪಿದರೂ ಆಗಲೂ ಶೋಕಕ್ಕೆ ಕಾರಣವಿಲ್ಲವು.

೨೭. ಉತ್ಪನ್ನವಾದುದಕ್ಕೆ ಅಪರ ಅವಸ್ಥಾ ವಿನಾಶವೆಂಬುದು ತಪ್ಪಿದ್ದಲ್ಲವು. ಹಾಗೆಯೇ

ನಷ್ಟಾವಸ್ಥೆಯನ್ನು ಹೊಂದಿದುದಕ್ಕೆ ಉತ್ಪತ್ತಿಯು ತಪ್ಪಿದ್ದಲ್ಲವು. ಹೀಗಿರುವಾಗ ಪರಿಹಾರವಿಲ್ಲದ ವಿಷಯದಲ್ಲಿ ನೀನು ಶೋಕಿಸುವದು ನ್ಯಾಯವಲ್ಲವು. ೧) ಇದರಿಂದ ಸತ್ಕಾರ್ಯವಾದವು ಸ್ಥಾಪಿಸಲ್ಪಟ್ಟಿತು.

೨೮. ಮನುಷ್ಯಾದಿ ಶರೀರಗಳು ಪೂರ್ವಾವಸ್ಥೆಯಲ್ಲಿ ಹುಟ್ಟುವದಕ್ಕೆ ಮುಂಚೆ ಕಣ್ಣಿಗೆ ಕಾಣವೇ ಇದ್ದು, ಮಧ್ಯೆ ಸ್ವಲ್ಪ ಕಾಲ ಸ್ಥೂಲವಾಗಿ ಕಣ್ಣಿಗೆ ಕಾಣುತ್ತವೆ. ಪುನಃ ಕಡೆಗೆ ಮರಣವಾದ ನಂತರ ಕಣ್ಣಿಗೆ ಕಾಣದೇ ಹೋಗುವವು ; ಇಂತಹ ಸಂದರ್ಭದಲ್ಲೂ ಶೋಕಕ್ಕೆ ಕಾರಣವೆಲ್ಲಿಯದು ?

೨೯. ಹೀಗೆ ದೇಹಾತ್ಮಭ್ರಮವಿದ್ದರೂ ಶೋಕಕ್ಕೆ ಕಾರಣವಿಲ್ಲವೆಂದು ಹೇಳಿದರು. ಸುಕೃತಿಗಳಲ್ಲಿ ಯಾವನೋ ಒಬ್ಬನು, ಈ ಜೀವಾತ್ಮನು ಆಶ್ಚರ್ಯಕರವಾದುದೆಂದು ಕಾಣುವನು; ಇನ್ನೊಬ್ಬ ಸುಕೃತಿಯು ಈ ಜೀವಾತ್ಮನು ಆಶ್ಚರ್ಯಕರವಾದ ವಸ್ತುವೆಂದು ಹೇಳುವನು ; ಹಾಗೆಯೇ ಇನ್ನೊಬ್ಬನು ಆಶ್ಚರ್ಯಕರವಾದುದೆಂದು ಕೇಳಿ ತಿಳಿಯುವನು ; ಹೀಗೆಲ್ಲಾ ಇದ್ದರೂ ಯಾವನೊಬ್ಬನು ಸರಿಯಾಗಿ ತಿಳಿಯಲಿಲ್ಲವು.

೩೦. ಆದುದರಿಂದ ಈ ದೇಹವನ್ನು ಧರಿಸಿರುವ ಆತ್ಮನು, ದೇಹವು ವಧಿಸಲ್ಪಟ್ಟರೂ ಎಂದಿಗೂ ವಧ್ಯನಲ್ಲವು. ಆದುದರಿಂದ ಈ ದೇಹವಿಯೋಗ ಹೊಂದಿದ ಸರ್ವ ಪ್ರಾಣಿಗಳನ್ನು ಕುರಿತು ನೀನು ಶೋಕಿಸುವದು ಸರಿಯಲ್ಲವು.

೩೧. ದುಷ್ಟರನ್ನು ನಿಗ್ರಹಿಸುವದು ಕ್ಷತ್ರಿಯ ಧರ್ಮವು ಎಂಬ ನಿನ್ನ ಧರ್ಮವನ್ನಾದರೋ ಪರ್ಯಾಲೋಚಿಸಿ, ನೀನು ಯುದ್ಧದಿಂದ ನಿವೃತ್ತನಾಗಲು ಸಾಧ್ಯವಲ್ಲವು ; ಇಂತಹ ದುಷ್ಟನಿಗ್ರಹ ರೂಪ ಧರ್ಮ ಯುದ್ಧಕ್ಕಿಂತ ಶ್ರೇಯಸ್ಕರವಾದುದು ಇನ್ನು ಯಾವುದು ಇರುತ್ತದೆ ?

೩೨. ಧರ್ಮ ಯುದ್ಧದಲ್ಲಿ ಮಡಿದವರಿಗೆ ಅತಿಶಯ ಸುಖ ಕೊಡುವ ಸ್ವರ್ಗಲೋಕದ ದ್ವಾರವು ತೆರೆದಿರುತ್ತದೆ ; ಅಂತಹ, ಧರ್ಮಯುದ್ಧವು ನಿನಗೆ ಯಾದೃಚ್ಛಿಕವಾಗಿ ಲಭಿಸಿರುತ್ತದೆ. ಓ ಅರ್ಜುನನೇ ಇಂತಹ ಯುದ್ಧವು ದೊರೆಯಬೇಕಾದರೆ ಮಹಾ ಪುಣ್ಯಶಾಲಿಗಳಾದ ಕ್ಷತ್ರಿಯರಾಗಿರಬೇಕು.

೩೩. ಇಷ್ಟೇ ಅಲ್ಲವು, ಇಂತಹ ಧರ್ಮಯುದ್ಧವನ್ನೂ ಕೂಡ ಮಾಡದೇ ಹೋದರೆ, ಕ್ಷತ್ರಿಯ ಧರ್ಮವನ್ನೂ ಯಶಸ್ಸನ್ನೂ ನೀಗಿಕೊಂಡು ಪಾಪವನ್ನೂ ಹೊಂದುವಿ.

೩೪. ನಿನಗೆ ನಿರತಿಶಯವಾದ ಸುಖಕೀರ್ತಿಗಳಿಲ್ಲದೆ ಹೋಗೋಣ ಮಾತ್ರವೇ ಅಲ್ಲದೆ, ಎಲ್ಲರೂ, ಅರ್ಜುನನು ಎಂತಹ ಹೇಡಿಯು? ಯುದ್ಧ ಪ್ರಾರಂಭವಾಯಿತೋ ಇಲ್ಲವೋ ಫಲಾಯನ ಸೂಕ್ತವನ್ನು ಜಪಿಸಿದನೆಂದು ಹೇಳುವರು. ಇಂತಹ ಅಪಯಶಸ್ಸೂ ನಿನಗುಂಟಾಗುವದು ; ಅದು ಮರಣಕ್ಕಿಂತ ಕೇಡಾದುದು.

೩೫. ಬಂಧು ಸ್ನೇಹದಿಂದಲೂ ಅವರಲ್ಲಿ ತೋರುವ ಕಾರುಣ್ಯಾತಿಶಯದಿಂದಲೂ ಯುದ್ಧದಿಂದ ನಿವೃತ್ತನಾದವನಿಗೆ ಅಪಯಶಸ್ಸು ಎಲ್ಲಿಯದು ಎನ್ನುತ್ತೀಯೋ ? ನೀನು ಕರುಣೆಯಿಂದ ಯುದ್ಧವನ್ನು ತ್ಯಜಿಸಿದರೂ, ಶತ್ರುಸೇನೆಯಲ್ಲಿರುವ ಮಹಾರಥರಾದ ಕರ್ಣ, ದುರ್ಯೋಧನಾದಿಗಳು ಭಯದಿಂದ ನಿವೃತ್ತನಾದಿ ಎಂದೇ ತಿಳಿಯುವರು. ಆದುದರಿಂದ ನೀನು ತುಂಬಾ ಲಾಘವವನ್ನೇ ಹೊಂದುವಿ.

೩೬. ಅಷ್ಟು ಮಾತ್ರವೇ ಅಲ್ಲವು. ನಿನ್ನ ಶತ್ರುಗಳು ಹೇಳಬಾರದ ಮಾತನ್ನೆಲ್ಲಾ ಆಡುವರು; ಪರಮ ಹೇಡಿಯಾದ ಅರ್ಜುನನಿಗೆ ನಮ್ಮ ಎದುರಿಗೆ ನಿಲ್ಲಲು ಸಾಮರ್ಥ್ಯವೆಲ್ಲಿಯದು? ಅದಕ್ಕಾಗಿಯೇ ಬೆನ್ನು ತೋರಿಸಿ ಓಡಿಹೋದನು ; ಹೀಗೆಲ್ಲಾ ನಿನ್ನನ್ನು ಹೀಯಾಳಿಸುವರು. ಕ್ಷತ್ರಿಯನಾದ ನಿನಗೆ ಇದಕ್ಕಿಂತ ಹೆಚ್ಚು ದುಃಖಕರವಾದುದು ಯಾವುದಿರುತ್ತದೆ ?

೩೭. ಕ್ಷತ್ರಿಯನಾದ ನೀನು ಈ ಧರ್ಮಯುದ್ಧವನ್ನು ಮಾಡಲೇಬೇಕು. ಯುದ್ಧದಲ್ಲಿ

ಮಡಿದರೂ ವೀರಸ್ವರ್ಗವುಂಟು ; ಗೆದ್ದರೋ ನಿಷ್ಕಂಟಕವಾಗಿ ರಾಜ್ಯವನ್ನು ಅನುಭವಿಸುತ್ತೀಯೇ; ಹೀಗೆ ಜಯಾಪಜಯಗಳೆರಡೂ ಶ್ರೇಯಸ್ಕರಗಳೇ. ಆದುದರಿಂದ ಯುದ್ಧ ಮಾಡಬೇಕೆಂಬ ಸ್ಥಿರ ಸಙ್ಕಲ್ಪಯುಕ್ತನಾಗಿ ಯುದ್ಧಕ್ಕಾಗಿ ಏಳು.

೩೮. ಮೋಕ್ಷಾರ್ಥಿಯಾದ ನೀನು ಯುದ್ಧವನ್ನು ಹೇಗೆ ಮಾಡತಕ್ಕದ್ದೆಂದರೆ—ಯುದ್ಧ ದಲ್ಲಿ ಸುಖದುಃಖಗಳನ್ನೂ ಲಾಭಾಲಾಭಗಳನ್ನೂ ಜಯಾಪಜಯಗಳನ್ನೂ ಸಮವಾಗಿ ಭಾವಿಸಿ ಮನೋವಿಕಾರವನ್ನು ಹೊಂದದೆ ಫಲಾಪೇಕ್ಷೆ ಇಲ್ಲದೆ ನೀನು ಯುದ್ಧಕ್ಕೆ ಸನ್ನದ್ಧನಾಗತಕ್ಕದ್ದು. ಇದರಿಂದ ನೀನು ಬಂಧಕರೂಪ ಪಾಪವನ್ನು ಹೊಂದುವದಿಲ್ಲವು.

೩೯. ಹೀಗೆ ನಿನಗೆ ಜೀವಾತ್ಮ ತತ್ವಯಾಥಾತ್ಮ್ಯಜ್ಞಾನವನ್ನು ನಿನ್ನಲ್ಲಿ ನನಗಿರುವ ಪ್ರೀತ್ಯ ತಿಶಯದಿಂದ ಶರಣಾಗತನಾದ ನಿನಗೆ ತಿಳಿಸಿದ್ದಾಯಿತು. ಓ ಅರ್ಜುನನೇ, ಈ ಸಂಸಾರ ಬಂಧ ವನ್ನು ಯಾವ ಜ್ಞಾನದಿಂದ ಕೂಡಿದವನಾಗಿ ಕಳೆದುಕೊಳ್ಳುವದಕ್ಕೆ ಸಾಧ್ಯವೋ, ಅಂತಾದ್ದನ್ನು ನಿನಗೆ ಉಪದೇಶಿಸುವೆನು ಕೇಳು ; ಕರ್ಮಯೋಗವನ್ನು ಅನುಷ್ಠಿಸಿ ತನ್ಮೂಲಕ ಉಂಟಾಗುವ ಯಾವ ಜ್ಞಾನರೂಪೋಪಾಯಾನುಷ್ಠಾನದಿಂದ ಮೋಕ್ಷವೋ, ಅದನ್ನು ಕ್ರಮವಾಗಿ ಹೇಳುವೆನು ಕೇಳು ಎಂಬ ಭಾವವು.

೪೦. ಈಗ ನಾನು ಹೇಳುವ ಕರ್ಮಯೋಗದ ಮಾಹಾತ್ಮ್ಯೆಯು ಎಂತಾದ್ದೆಂದರೆ—ಅದ ನ್ನಾರಂಭಿಸಿ ಬಿಟ್ಟರೂ ಕೂಡ, ಪ್ರತ್ಯವಾಯವೂ ಇಲ್ಲವು ; ಶ್ರೇಯಸ್ಕರವಾದ ಫಲವಿಲ್ಲದೆಯೂ ಇಲ್ಲವು. ಅಂತಹ ಸ್ವಲ್ಪವಾದ ಅನುಷ್ಠಾನವೂ ಕೂಡ ಮಹತ್ತಾದ ಭಯವಾದ ಸಂಸಾರತಾಪ ತ್ರಯಗಳಿಂದ ರಕ್ಷಿಸುತ್ತದೆ.

೪೧. ಐಹಿಕ ಫಲಾಪೇಕ್ಷೆಯಿಂದ ಮಾಡುವ ಕರ್ಮಾನುಷ್ಠಾನಕ್ಕೂ ಮೋಕ್ಷಫಲಕ್ಕಾಗಿ ಮಾಡುವ ಕರ್ಮಾನುಷ್ಠಾನಕ್ಕೂ ವ್ಯತ್ಯಾಸವುಂಟು ; ಓ ಅರ್ಜುನನೇ, ಶಾಸ್ತ್ರದಲ್ಲಿ ಹೇಳಲ್ಪಟ್ಟ ರುವ ನಿಷ್ಕಾಮ ಕರ್ಮಾನುಷ್ಠಾನದಲ್ಲಿ ಮೋಕ್ಷಾರ್ಥಿಗೆ ಆತ್ಮಯಾಥಾತ್ಮ್ಯ ನಿಶ್ಚಯರೂಪ ಬುದ್ಧಿಯು ಯಾವಾಗಲೂ ಒಂದೇ ; ಫಲಾಭಿಸಂಧಿರಹಿತವಾಗಿ ಭಗವತ್ಪ್ರೀತ್ಯರ್ಥವಾಗಿರುವ ಭಾವವು ಒಂದೇ. ಅಂತಹ ಜ್ಞಾನವಿಲ್ಲದೆ ಕಾಮ್ಯಕರ್ಮಿಗಳಿಗೆ ಬುದ್ಧಿಯು ನಾನಾ ವಿಧವಾಗಿ ನಾನಾ ವಿಧ ಫಲಗಳ ಕಾಮನೆಯುಳ್ಳವು.

೪೨, ೪೩, ೪೪. ಆದುದರಿಂದ ಮೋಕ್ಷಾರ್ಥಿಗೆ ಕಾಮ್ಯಕರ್ಮಗಳು ಅಲ್ಪಾಸ್ಥಿರ ಫಲಪ್ರದ ಗಳಾದುದರಿಂದ ನಿಂದಿತವಾದವು ಎಂದು ಹೇಳುತ್ತಾರೆ—ಅಲ್ಪಜ್ಞರು ವೇದಗಳಲ್ಲಿ ಕಾಮ್ಯಕರ್ಮ ಗಳಿಗೆ ಸ್ವರ್ಗಾದಿ ಫಲಗಳು ಹೇಳಿರುವದರಿಂದ, ಅದೇ ಸರ್ವೋತ್ಕೃಷ್ಟಫಲವೆಂದೂ,ಅದಕ್ಕಿಂತಲೂ ಶ್ರೇಷ್ಠ ಫಲವು ಬೇರೆ ಇಲ್ಲವೆಂದೂ, ವಾದಿಸುವವರಾಗಿ, ಕಾಮಭೋಗಗಳಲ್ಲೇ ಸಕ್ತವಾದ ಮನಸ್ಸ ನ್ನುಳ್ಳವರಾಗಿ, ಅಂತಹ ಸ್ವರ್ಗವನ್ನೇ ಹೊಂದಬೇಕೆಂಬ ಅಭಿಲಾಷೆಯುಳ್ಳವರಾಗಿ, ಜನ್ಮಕರ್ಮ ಫಲವನ್ನು ಕೊಡುವ, ಮತ್ತು ವಿವೇಕಿಸುವ ಜ್ಞಾನವಿಲ್ಲದೆ ಕಾರ್ಯಕಲಾಪ ತುಂಬಾ ಇರುವ ಯಜ್ಞಯಾಗಾದ್ಯನುಷ್ಠಾನಗಳನ್ನು ಭೋಗೈಶ್ವರ್ಯಪ್ರದಗಳೆಂದು ಶ್ಲಾಘಿಸಿ, ಕಾಯಿ ಫಲಗಳನ್ನು ಕೊಡದ ಬರೀ ರಮಣೀಯ ಪುಷ್ಪದಂತಿರುವ, ಮೋಹವನ್ನುಂಟುಮಾಡುವ, ಯಾವ ಉಪದೇಶ ವನ್ನು ಮಾಡುವರೋ, ಅಂತಹ ಮಾತಿನಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವರಾಗಿ, ಅಂತಹ ಭೋಗೈಶ್ವರ್ಯಗಳಲ್ಲೇ ಶ್ರದ್ಧೆಯುಳ್ಳವವರಿಗೆ, ಆತ್ಮಸ್ವರೂಪ ಯಾಥಾತ್ಮ್ಯ ರೂಪ ನಿಶ್ಚಯಜ್ಞಾನವು ಅವರ ಮನಸ್ಸಿನಲ್ಲಿ ಉಂಟಾಗುವದೇ ಇಲ್ಲವು.

೪೫, ೪೬. ಆದುದರಿಂದ ವೇದದಲ್ಲಿ, ಇಂತಹ ಅಲ್ಪಜ್ಞರಾಗಿ ಸ್ವರ್ಗಾದಿ ಭೋಗಾಸಕ್ತರಾಗಿ ರುವವರಿಗೆ ಸತ್ವರಜಸ್ತಮೋಗುಣಯುಕ್ತವಾದ ವಿಷಯಗಳೆಲ್ಲಾ ಉಂಟು. ವೇದಪ್ರೋಕ್ತವೆಂದು ಅವೆಲ್ಲವೂ ಗ್ರಾಹ್ಯವಲ್ಲವು. ಓ ಅರ್ಜುನನೇ ನೀನು ಈ ಮೂರು ಗುಣಗಳ ಸಮ್ಮೇಳನವುಳ್ಳವ

ನಾಗಬಾರದು. ನೀನು ಹೇಗಿರಬೇಕೆಂದರೆ—ರಜಸ್ತಮೋಗುಣಗಳಿಗೆ ವಶನಾಗದೆ ಸಾತ್ವಿಕಗುಣ ಯುಕ್ತನಾಗಿ, ಪ್ರಾಪ್ತವಾಗುವ ಸುಖದುಃಖಾದಿ ದ್ವಂದ್ವವನ್ನು ಸಹಿಸುವವನಾಗಿ, ಐಹಿಕ ವಸ್ತುಗಳ ಯೋಗಕ್ಷೇಮಗಳಲ್ಲಿ ಮಮತಾಶೂನ್ಯನಾಗಿ, ಜೀವಾತ್ಮನ ಯಾಥಾತ್ಮ್ಯಸ್ವರೂಪವನ್ನು ಚೆನ್ನಾಗಿ ತಿಳಿಯುವನಾಗಿರಬೇಕು. ಹೇಗೆಂದರೆ—ವಿವೇಕಜ್ಞಾನದಿಂದ ತನ್ನ ಸ್ವರೂಪದ ಯಾಥಾತ್ಮ್ಯವನ್ನು ತಿಳಿದು ಪರಬ್ರಹ್ಮವನ್ನು ಸಾಕ್ಷಾತ್ಕರಿಸುವವನು ಎಷ್ಟರಮಟ್ಟಿಗೆ ವೇದದಲ್ಲಿ ಸರ್ವೋತ್ಕೃಷ್ಟಭಾಗವೋ ಅಷ್ಟನ್ನು ಮಾತ್ರ ಸ್ವೀಕರಿಸತಕ್ಕದ್ದು. ಹೇಗೆಂದರೆ ದಾಹದಿಂದಿರುವವನಿಗೆ ದಾಹಶಾಂತಿಗೆ ಯೋಗ್ಯವಾದ ಶ್ರೇಷ್ಠವಾದ ಉದಕವೆಷ್ಟೋ ಅಷ್ಟು ಮಾತ್ರವೇ ಪರಿಗ್ರಾಹ್ಯವು. ಜಲಾಶಯದಲ್ಲಿರುವ ಮಿಕ್ಕವೆಲ್ಲಾ ಬೇಕಿಲ್ಲವಷ್ಟೇ. ಹಾಗೆಯೇ ಇಲ್ಲಿಯೂ.

೪೭. ಆದುದರಿಂದ ಸತ್ವಗುಣಾಭಿವೃದ್ಧಿಯನ್ನು ಹೊಂದಿ ಮೋಕ್ಷಾರ್ಥಿಗೆ ಯೋಗ್ಯವಾದುದು ಇಷ್ಟೇ. ಶಾಸ್ತ್ರವಿಹಿತಗಳಾಗಿರುವ ನಿತ್ಯನೈಮಿತ್ತಿಕ ಕಾಮ್ಯ ಕರ್ಮಗಳಲ್ಲಿ ಮಾತ್ರವೇ ನಿನಗೆ ಅಧಿಕಾರವು; ಅದರ ಫಲಗಳಲ್ಲಿ ಎಂದಿಗೂ ಇಲ್ಲವು. ಕರ್ಮಾನುಷ್ಠಾನಕ್ಕೂ ಅವರ ಫಲಕ್ಕೂ ನೀನೇ ಕಾರಣನೆಂದು ಭಾವಿಸತಕ್ಕದ್ದಲ್ಲವು. ವಿಹಿತಕರ್ಮಗಳನ್ನು ಮಾಡುವದಿಲ್ಲವೆಂದು ಹೇಳುವದಕ್ಕೆ ನಿನಗೆ ಅಧಿಕಾರವಿಲ್ಲವು.

೪೮. ಓ! ಅರ್ಜುನನೇ ನಿನಗೆ ಧನಂಜಯನೆಂಬ ಹೆಸರಿರುವದರಿಂದ ನೀನು ಐಹಿಕಗಳಾದ ರಾಜ್ಯ, ಧನ, ಬಂಧು ಮೊದಲಾದವುಗಳಲ್ಲಿ ಸಂಗವನ್ನು ಜಯಿಸಿ, ಯೋಗಬುದ್ಧಿಯಲ್ಲಿರುವವನಾಗಿ ಮೇಲೆ ಹೇಳಿದ ನಿತ್ಯನೈಮಿತ್ತಿಕ ಕಾಮ್ಯಕರ್ಮಗಳಿಂದ ಕೂಡಿದ ಕರ್ಮಯೋಗವನ್ನನುಷ್ಠಿಸು. ಧರ್ಮಯುದ್ಧವೂ ವಿಹಿತಕರ್ಮವಾದುದರಿಂದ ಫಲಕಾಮನೆಯಿಲ್ಲದೆ ಅನುಷ್ಠಿಸತಕ್ಕದ್ದು. ಫಲಸಿದ್ಧಿಯುಂಟಾಗಲಿ, ಸಿದ್ಧಿಯಿಲ್ಲದೇ ಇರಲಿ, ಸಮಚಿತ್ತನಾಗಿರತಕ್ಕದ್ದು. ಇಂತಹ ಸಮ ಚಿತ್ತತೆಯೇ ಯೋಗವೆಂದು ಹೇಳಲ್ಪಡುತ್ತದೆ.

೪೯. ಅದೇನು ಈ ಸಮ ಚಿತ್ತತೆಗೆ ಅಷ್ಟು ಪ್ರಾಧಾನ್ಯವೆಂದರೆ—ಹಿಂದೆ ಹೇಳಿದ ಫಲಾಭಿಸಂಧಿ ರಹಿತವಾಗಿಯೂ ಅವಾಂತರ ಫಲಗಳ ಸಿದ್ಧ್ಯಸಿದ್ಧಿಗಳಲ್ಲಿ ಸಮಚಿತ್ತನಾಗಿಯೂ ಇರುವ ಬುದ್ಧಿಯೋಗದಿಂದ ಮಾಡುವ ಕರ್ಮಕ್ಕಿಂತಲೂ, ಕಾಮ್ಯಫಲಕ್ಕಾಗಿ ಮಾಡುವ ಕರ್ಮವು ತುಂಬಾ ನಿಕೃಷ್ಟವಾದುದು. ಆದುದರಿಂದ ಇಂತಹ ಫಲಾಭಿಸಂಧಿರಹಿತ ಬುದ್ಧಿಯೋಗದಲ್ಲಿ ನಿನಗೆ ಆಶ್ರಯವಿರಲಿ. ಹಾಗಲ್ಲದೆ ಕಾಮ್ಯಕರ್ಮಮಾಡುವವರು ಪುನಃಪುನಃ ಸಂಸಾರ ಬಂಧಕ್ಕೆ ಸಿಕ್ಕಿ ನರಳುವರು.

೫೦. ಹೀಗೆ ಬುದ್ಧಿಯೋಗಯುಕ್ತನಾಗಿ ಕರ್ಮವನ್ನು ಆಚರಿಸುವವನು ಈ ಜನ್ಮದಲ್ಲೇ ತನ್ನ ಹಿಂದಿನ ಎಲ್ಲಾ ಸುಕೃತ ದುಷ್ಕೃತಗಳಿಂದ ಬಿಡಲ್ಪಡುವನು ಎಂದರೆ ಸಂಸಾರ ಬಂಧವನ್ನು ನೀಗಿಕೊಳ್ಳುವನು. ಆದುದರಿಂದ ಇಂತಹ ಬುದ್ಧಿಯೋಗದಿಂದ ಕೂಡಿದ ಕರ್ಮಯೋಗಾನುಷ್ಠಾನಕ್ಕಾಗಿ ಪ್ರಯತ್ನಿಸು. ಅಂತಹ ಕರ್ಮಯೋಗಾನುಷ್ಠಾನಕ್ಕೆ ಬಂಧವನ್ನು ಹೋಗಲಾಡಿಸಿ ಕ್ಷೇಮವನ್ನುಂಟುಮಾಡುವ ಶೋಭನರೂಪವಾದ ಸಾಮರ್ಥ್ಯವುಂಟು.

೫೧. ಹೀಗೆ ಬುದ್ಧಿಯೋಗಯುಕ್ತರಾದ ಪ್ರಾಜ್ಞರು ಕರ್ಮದಿಂದುಂಟಾಗುವ ಫಲವನ್ನು ತ್ಯಾಗಮಾಡಿ, ಜನ್ಮಬಂಧದಿಂದ ಬಿಡಲ್ಪಟ್ಟವರಾಗಿ ಕ್ಲೇಶದ ಗಂಧವೇ ಇಲ್ಲದಿರುವ ಶಾಶ್ವತವಾದ ಸ್ಥಾನವನ್ನು ಹೊಂದುವರು. ಇದು ಉಪನಿಷತ್ತುಗಳಲ್ಲಿ ಪ್ರಸಿದ್ಧವಾದ ವಿಷಯವು.

೫೨. ಇಂತಹ ನಿಷ್ಕಾಮ ಕರ್ಮಾನುಷ್ಠಾನದಲ್ಲಿ ಪ್ರವರ್ತಿಸಿದ ಇಂತಹ ನಿನ್ನ ಬುದ್ಧಿಯು, ಅಲ್ಪಾಸ್ಥಿರ ಫಲ ಸಙ್ಗದಲ್ಲಿ, ಮೋಹರೂಪ ಕಾಲುಷ್ಯವನ್ನು ಯಾವಾಗ ಅತಿಕ್ರಮಿಸುತ್ತದೋ, ಆಗ, ನಾನು ನಿನಗೆ ಹಿಂದೆ ತ್ಯಾಗಮಾಡಬೇಕೆಂದು ಹೇಳಿದ ವಿಷಯದಲ್ಲೂ ಹಾಗೆಯೇ ಮುಂದೆಯೂ ಫಲಕಾಮನೆ ಕೂಡದೆಂದು ಹೇಳುವದರ ವಿಷಯದಲ್ಲೂ ಅಭಿರುಚಿಯುಂಟಾಗಿ ನಿನಗೇನೇ ಸ್ವತಃ ವೈರಾಗ್ಯವುಂಟಾದೀತು.

೫೩. ಹೀಗೆ ತನ್ನ ಆತ್ಮಸ್ವರೂಪವನ್ನು ತಿಳಿದು ಫಲಾಭಿಸಂಧಿಯಿಲ್ಲದೆ ಕರ್ಮಯೋಗಾನುಷ್ಠಾನ ಮಾಡುವವನಿಗೆ ಫಲವನ್ನು ಹೇಳುತ್ತಾರೆ—ಈ ಪರಮ ಹಿತೈಷಿಯಾದ ನನ್ನಿಂದ ನಿನಗೆ ಉಪದೇಶಿಸಲ್ಪಟ್ಟ, ಈ ಆತ್ಮಯಾಥಾತ್ಮ್ಯಜ್ಞಾನದಿಂದಲೂ ಅಸಙ್ಗಕರ್ಮಾನುಷ್ಠಾನದಿಂದಲೂ ಪವಿತ್ರೀಕರಿಸಲ್ಪಟ್ಟ ಮನಸ್ಸಿನಲ್ಲಿ, ಭಗವದರ್ಪಣರೂಪವಾದ ಒಂದೇ ಪ್ರಯೋಜನವುಳ್ಳದೆಂಬ ಬುದ್ಧಿಯು ಯಾವಾಗ ಸ್ಥಿರವಾಗಿ ನಿಂತಿತೋ, ಆಗ ಆತ್ಮಾವಲೋಕನಕ್ಕೆ ಸಾಧಕವಾದ ಜ್ಞಾನನಿಷ್ಠೆಯನ್ನು ಹೊಂದುವಿ.

೫೪. ಯಾವಾಗ ಜ್ಞಾನನಿಷ್ಠೆಯುಂಟಾಗುತ್ತದೆ ಎಂದು ಹೇಳಲ್ಪಟ್ಟಿತೋ, ಆಗ ಅರ್ಜುನನು ಕೇಳುತ್ತಾನೇನೆಂದರೆ—ಅಂತಹ ಆತ್ಮಯಾಥಾತ್ಮ್ಯಜ್ಞಾನದಲ್ಲಿದ್ದುಕೊಂಡು ಜ್ಞಾನಯೋಗನಿಷ್ಠೆಯುಳ್ಳ ಸ್ಥಿತಪ್ರಜ್ಞನೆಂದು ಹೇಳಿಸಿಕೊಳ್ಳುವ ಜ್ಞಾನಯೋಗನಿಷ್ಠನ ಸ್ವರೂಪವ [illegible] ಷ್ಟು? ಆತನ ವಾಗ್ವ್ಯವಹಾರವೆಂತಹುದು ? ಆತನು ಹೇಗಿರುವನು ? ಆತನ ಪ್ರವೃತ್ತಿ ಎಂ[illegible] ?

೫೫. ಆತನು ಹೀಗಿರುವನು, ಆತನ ಪ್ರವೃತ್ತಿ ಇಂತಾದ್ದೆಂದು ಉಪದೇಶಿ[illegible] ಆತನ ಸ್ವರೂಪವೂ ವೇದ್ಯವಾಗುತ್ತದೆಂದು ಭಾವಿಸಿ ಶ್ರೀ ಕೃಷ್ಣಭಗವಾನವರು ಜ್ಞಾನನಿಷ[illegible] ಳ್ಳ ತಾರತಮ್ಯದಿಂದ ನಾಲ್ಕು ಅವಸ್ಥೆಗಳುಂಟೆಂದು ಹೇಳಲುಪಕ್ರಮಿಸಿ ನಾಲ್ಕನೆಯ ಪರ[illegible] ದೆಶೆಯನ್ನು ಮೊದಲು ತಿಳಿಸುತ್ತಾರೆ.—ಓ ಅರ್ಜುನನೇ ಯಾವನು ತನ್ನ [illegible] ಆತ್ಮಚಿನ್ತನದಲ್ಲೇ ಮಗ್ನನಾಗಿ ಯಾವಾಗ ತದಿತರಗಳಾದ ಮನಸ್ಸ[illegible] ಮಸ್ತ ಅಶಾಶ್ವತಾಭಿಲಾಷೆಗಳನ್ನು ಸಮೂಲವಾಗಿ ತ್ಯಜಿಸುತ್ತಾನೋ, ಆತನ [illegible] ಜ್ಞಾವಸ್ಥೆಯಲ್ಲಿರುವ ಸ್ಥಿತಪ್ರಜ್ಞನೆಂದು ಹೇಳಲ್ಪಡುವನು.

೫೬. ಅದರ ಹಿಂದಿನ ದಶೆಯಾದ ಮೂರನೆಯ ಏಕೇಂದ್ರಿಯಾವಸ್ಥೆಯ [illegible] ಪದೇಶಿಸುತ್ತಾರೆ—ಪ್ರಿಯವಾದುದು ಹೋಯಿತೇ ಎಂಬಿವೇ ಮೊದಲಾದ [illegible] ದುಃಖ [illegible] ಕಾರವನ್ನು ಹೊಂದದೆ, ಪ್ರಿಯವಾದುದು ಪ್ರಾಪ್ತವಾಯಿತೆಂದು [illegible] ಕಾದಿಗಳುಂಟಾಗುತ್ತವೆಂಬ ಭಯವಾಗಲಿ ಕ್ರೋಧವಾಗಲಿ ಇಲ್ಲ [illegible] ಇಂತಹ [illegible] ತ್ಮಚಿ [illegible] ಹೀಗ ಏಕೇನ್ದ್ರಿಯಾವಸ್ಥೆಯಲ್ಲಿರುವ ಸ್ಥಿತಪ್ರಜ್ಞನೆಂದು ಹೇಳಿಸಿಕೊಳ್ಳುವನು

೫೭. ಇದರ ಹಿಂದಿನ ದಶೆಯಾದ ವ್ಯತಿರೇಕ ಸಂ[illegible] ದಶೆ [illegible] ಹೆ [illegible]— ಯಾವನು ಸಮಸ್ತ ಪ್ರಿಯವಸ್ತುಗಳಲ್ಲೂ ಅನುರಾಗವಿಲ್ಲದೆ [illegible] ಯಾ ಪ್ರಿಯಗಳು ಪ್ರಾಪ್ತವಾದರೆ, ಆಗ ಹಿಗ್ಗದೆಯೂ ದ್ವೇಷಿಸದೆಯೂ [illegible] ರೇಕ ಸಂಜ್ಞಾವಸ್ಥೆಯಲ್ಲಿರುವ ಸ್ಥಿತಪ್ರಜ್ಞನೆನಿಸುವನು.

೫೮. ಇದಕ್ಕೂ ಹಿಂದಿನ ದಶೆಯಾದ ಪ್ರಥಮಾವಸ್ಥೆ [illegible] ವಾಗ ಈ ಜ್ಞಾನಯೋಗಿಯು ಸುತ್ತಲೂ ಇರುವ ವಿಷಯಗಳಲ್ಲಿ ಇಂದ್ರಿಯಗ[illegible] ಸಿದರೆ, ಮನಸ್ಸಿನಿಂದ ನಿರೋಧಿಸಿ, ಕೂರ್ಮವು ಭಯಪಾ[illegible] ವಾದ ಲಾದ ಅವಯವಗಳನ್ನು ಒಳಕ್ಕೆ ಹೇಗೆ ಸೆಳೆದುಕೊಳ್ಳುತ್ತದೋ [illegible] ಗಳ ದೆಸೆಯಿಂದ ಸೆಳೆದುಕೊಳ್ಳುತ್ತಾನೋ, ಆಗ ಆತನು [illegible] ದು ಹೇಳಿಸಿಕೊಳ್ಳುವನು.

೫೯. ಹೀಗೆ ಕ್ರಮವಾಗಿ ಜ್ಞಾನಯೋಗಿಯು [illegible] ರು ವವರಿಂದ ಇಂತಹ ಜ್ಞಾನಯೋಗಿಯು ಪರಾಕಾಷ್ಠೆಯನ್ನು [illegible] ವ ರಿಂದ ಅದನ್ನು ಹೇಗೆ ಸಾಧಿಸತಕ್ಕದ್ದೆಂದರೆ ಹೇಳುತ್ತಾ[illegible] ರ ವಾದ ವಿಷಯ ಸಂಸರ್ಗವನ್ನು ತಪ್ಪಿಸಿದ ಜ್ಞಾ[illegible] ದ ಅನುಭವವಿಲ್ಲದೆ, ವಿಷಯಗಳಲ್ಲಿ ಆಶೆಯೂ ಸಹ ತ[illegible] ವ

ಕ್ಕಿಂತಲೂ ಆತ್ಮಾನುಭವರೂಪಾಸಂಪವು ಉತ್ಕೃಷ್ಟವಾದುವೆಂಬ ಜ್ಞಾನದಿಂವಲೂ, ವಿಷಯೇಚ್ಛೆಯು ತೊಲಗುತ್ತದೆ.

೬೦ ಹೀಗೆ ವಿಷಯಗಳಿಂದ ಮನಸ್ಸನ್ನು ಸೆಳೆದು ಆತ್ಮಚಿನ್ತನದಲ್ಲಿ ನಿಲ್ಲಿಸಬೇಕೆಂದು ಪ್ರಯತ್ನಿಸುವ ಪ್ರಾಜ್ಞನಿಗೂ ಕೂಡ, ಈ ಇಂದ್ರಿಯಗಳು ಬಹಳ ಬಲಿಷ್ಠವಾದುದರಿಂದ ಅಂತವನ ಮನಸ್ಸನ್ನೂ ಕೂಡ ಅಪಹರಿಸಿಬಿಡುತ್ತವೆ. ಆದುದರಿಂದ ಇಂತಹ ಜ್ಞಾನನಿಷ್ಠೆಯನ್ನು ಹೊಂದುವದು ತುಂಬಾ ಕಷ್ಟವಾದುದು.

೬೧. ಹೀಗೆ ಜ್ಞಾನಯೋಗ ನಿಷ್ಠೆಯನ್ನು ಹೊಂದುವದು ತುಂಬಾ ಕಷ್ಟವಾದರೂ ವಿಷಯಗಳಲ್ಲೇ ಪ್ರವೃತ್ತಿ ಇರುವ ಇಂತಹ ದುಷ್ಟೇಂದ್ರಿಯಗಳನ್ನು ಚನ್ನಾಗಿ ನಿಗ್ರಹಿಸಿ, ತನ್ನ ಜ್ಞಾನನಿಷ್ಠಾಸಿದ್ಧಿಗಾಗಿ ನನ್ನನ್ನು ಆರಾಧಿಸಿ, ನನ್ನ ಕೃಪಾಪ್ರಭಾವದಿಂದ ಇಂದ್ರಿಯಗಳು ಯಾವ ಜ್ಞಾನಯೋಗಿಗೆ ವಶವೋ, ಅಂತವನು ಆತ್ಮಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸಿದರೆ ಆತ್ಮಾವಲೋಕನರೂಪಸಿದ್ಧಿಯುಂಟಾಗುತ್ತದೆ.

೬೨, ೬೩. ಹಾಗೆ ನನ್ನನ್ನಾರಾಧಿಸದೆ, ನನ್ನ ಕೃಪೆಯನ್ನು ಹೊಂದದೆ, ತಾನೇ ಸ್ವತಃ ಪ್ರಯತ್ನಿಸುವವನಿಗಾದರೋ, ವಿಷಯಗಳಲ್ಲೇ ಅನುರಾಗವು ಪ್ರಾಚೀನ ಕರ್ಮವಶಾತ್ ಉಂಟಾಗುತ್ತದೆ. ಆ ಸಙ್ಗವು ಯಾವಾಗ ಉಂಟಾಯಿತೋ, ಆಗ ಅನುಭವಿಸಬೇಕೆಂಬ ಉತ್ಕಟೇಚ್ಛೆಯುಂಟಾಗುತ್ತದೆ. ಆ ಅನುಭವಿಸಬೇಕೆಂಬ ಉತ್ಕಟೇಚ್ಛೆಗೆ ವಿಘ್ನವುಂಟಾದರೆ ಕ್ರೋಧ ಉಂಟಾಗುತ್ತದೆ. ಕ್ರೋಧದಿಂದ ಇದನ್ನು ಮಾಡಬಹುದು, ಮಾಡಕೂಡದು ಎಂಬ ವಿವೇಕಶೂನ್ಯತೆಯು ಪ್ರಾಪ್ತವಾಗುತ್ತದೆ. ಈ ವಿವೇಕಶೂನ್ಯತೆಯಿಂದ ಇಂದ್ರಿಯಗಳನ್ನು ಜಯಿಸಬೇಕೆಂಬ ಸಙ್ಕಲ್ಪವೇ ಹೊರಟುಹೋಗುತ್ತದೆ. ಯಾವಾಗ ಸಙ್ಕಲ್ಪವೇ ಹೋಯಿತೋ ಆಗ ಆತ್ಮದರ್ಶನ ಮಾಡಬೇಕೆಂಬ ಬುದ್ಧಿಯು ತೊಲಗುತ್ತದೆ. ಹೀಗೆ ಬುದ್ಧಿಯು ತೊಲಗುವದರಿಂದ ಆತ್ಮನಾಶ ಮಾಡಿಕೊಂಡು ಸಂಸಾರಿಯಾಗುವನು.

೬೪, ೬೫. ತನ್ನನ್ನು ಆಶ್ರಯಿಸಿ ಜ್ಞಾನಯೋಗನಿಷ್ಠೆಯನ್ನವಲಂಬಿಸಿದುದಾದರೆ ಉಂಟಾಗುವ ಶ್ರೇಯಸ್ಸುಗಳನ್ನು ತಿಳಿಸುತ್ತಾರೆ. ತನ್ನ ಅನುಗ್ರಹದಿಂದ ಮನಸ್ಸಿನಲ್ಲಿ ರಾಗದ್ವೇಷಗಳಿಲ್ಲದೆ ಆ ಕಾರಣದಿಂದ ಮನಸ್ಸಿಗೆ ಅಧೀನವಾಗಿರುವ ಎಂದರೆ ಮನಸ್ಸಿನಿಂದ ನಿಗ್ರಹಿಸಲ್ಪಟ್ಟ ಇಂದ್ರಿಯಗಳಿಂದ, ವಿಷಯಗಳ ಮಧ್ಯೆ ಇದ್ದರೂ, ಅವುಗಳಿಗೆ ವಶನಾಗದೆ ಮನಸ್ಸನ್ನು ಬಿಗಿ ಹಿಡಿವಿಡುವವನಾಗಿ ಮನಶ್ಶಾನ್ತಿಯನ್ನು ಹೊಂದುವನು. ಮನಸ್ಸು ಪವಿತ್ರವಾಗುವದೆಂಬ ಭಾವವು. ಹೀಗೆ ಮನಸ್ಸು ಪರಿಶುದ್ಧವಾಗಿ ಶಾಂತತೆಯನ್ನು ಹೊಂದಲಾಗಿ, ಆತನಿಗೆ ಕ್ಷಿಪ್ರದಲ್ಲೇ ಆತ್ಮಯಾಥಾತ್ಮ್ಯ ವಿಷಯವಾದ ವಿವೇಕಜ್ಞಾನವು ಎದ್ದು ಕೂತುಕೊಳ್ಳುತ್ತದೆ ಎಂದರೆ ಸ್ಥಿರವಾಗಿ ನಿಲ್ಲುತ್ತದೆ.

೬೬. ಹಾಗೆ ಪರಮಾತ್ಮನನ್ನಾಶ್ರಯಿಸದೇ ಪ್ರಯತ್ನಿಸುವವನಿಗೆ ಇಂತಹ ಆತ್ಮಯಾಥಾತ್ಮ್ಯರೂಪವಿವೇಕಜ್ಞಾನವು ಉಂಟಾಗುವದಿಲ್ಲವು; ಯಾವಾಗ ಇಂತಹ ವಿವೇಕ ಜ್ಞಾನವೇ ಇಲ್ಲವೋ ಆಗ ಆತ್ಮ ಚಿನ್ತನವೂ ಇಲ್ಲವು. ಮನಸ್ಸಿಗೆ ವಿಷಯೋಪಭೋಗದಿಂದ ಉಪರತಿರೂಪಶಾನ್ತಿಯೂ ಇಲ್ಲವು. ಹೀಗಿರುವಾಗ ಆತ್ಮಸಾಕ್ಷಾತ್ಕಾರರೂಪವಾದ ಆನಂದವಾಗಲಿ ನಿರತಿಶಯಸುಖವಾಗಲಿ ಎಲ್ಲಿಯದು ?

೬೭. ಹೀಗೆ ಭಗವದನುಗ್ರಹದಿಂದ ಮನಸ್ಸಿನ ಮೂಲಕ ಯಾವ ಜ್ಞಾನಯೋಗಿಗೆ ಇಂದ್ರಿಯಗಳ ಜಯವುಂಟೋ ಅಂತವನಿಗೆ ನಿರತಿಶಯಸುಖವುಂಟು. ಹಾಗೆ ಮಾಡದೆ ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸುವಾಗ ಮನಸ್ಸನ್ನೂ ಸಹಕಾರಿಯಾಗಿ ಬಿಟ್ಟುಬಿಟ್ಟರೆ, ಪ್ರಚಂಡ ವಾಯುವು ಸಮುದ್ರದಲ್ಲಿರುವ ನಾವೆಯನ್ನು ಹೇಗೆ ಹೊಡೆದುಕೊಂಡು ಹೋಗುತ್ತದೋ, ಹಾಗೆ ಈತನ ವಿವೇಕರೂಪ ಪ್ರಜ್ಞೆಯನ್ನು ಮನಸ್ಸು ಅಪಹರಿಸಿಕೊಂಡು ಹೋಗುತ್ತದೆ.

೬೮. ಆದುದರಿಂದ ಮಹಾಬಾಹು-ಪರಾಕ್ರಮವುಳ್ಳ ಅರ್ಜುನನೇ, ಪರಮಾತ್ಮನನ್ನು ಆಶ್ರಯಿಸಿದ ಯಾವ ಜ್ಞಾನಯೋಗಿಯು ತನ್ನ ಮನಸ್ಸಿನ ಮೂಲಕ ಇಂದ್ರಿಯಗಳನ್ನು ವಿಷಯಗಳಿಂದ ಸೆಳೆದು ನಿಗ್ರಹಿಸುವನೋ, ಆತನೀಗ ಜ್ಞಾನಯೋಗದಲ್ಲಿ ಪ್ರತಿಷ್ಠಿತನಾಗುವನು. ಈ ಶತ್ರುಗಳನ್ನು ನಿಗ್ರಹಿಸಿದರೆ ನೀನು ಸರಿಯಾದ ಮಹಾಬಾಹುವೇ ವಿನಾ, ಕೇವಲ ಬಾಹ್ಯಶತ್ರುನಿಗ್ರಹದಿಂದಲ್ಲವು.

೬೯. ಸಮಸ್ತ ಪ್ರಾಣಿಗಳಿಗೂ ಯಾವ ಆತ್ಮಸಾಕ್ಷಾತ್ಕಾರರೂಪ ಬುದ್ಧಿಯು ವಿಷಯವು ರಾತ್ರಿಯಹಾಗೆ ಅಪ್ರಕಾಶವೋ, ಅಂತಹ ಆತ್ಮಸಾಕ್ಷಾತ್ಕಾರವಿಷಯದಲ್ಲಿ ಸರ್ವೇಂದ್ರಿಯಗಳನ್ನೂ ಜಯಿಸಿದ ಯೋಗಿಯು ಎಚ್ಚೆತ್ತು ಜಾಗರೂಕನಾಗಿರುವನು. ಯಾವ ಸರ್ವೇಂದ್ರಿಯೋಪಭೋಗಗಳಲ್ಲಿ ಸರ್ವಪ್ರಾಣಿಗಳೂ ಜಾಗರೂಕರಾಗಿ ಎಚ್ಚೆತ್ತಿರುವರೋ, ಅವುಗಳಲ್ಲಿ ಈ ಯೋಗಿಗೆ ರಾತ್ರಿಯ ಹಾಗೆ ಅಪ್ರಕಾಶವು.

೭೦. ಹೀಗೆ ಯೋಗನಿಷ್ಠನಿಗೆ ಸರ್ವೇಂದ್ರಿಯಗಳ ಉಪರತಿಯು ಆವಶ್ಯಕವೆಂದು ಹೇಳಲ್ಪಟ್ಟಿತು. ಹೀಗಿರುವದರಿಂದ ಶಬ್ದಾದಿಗಳ ಮಧ್ಯೆ ಇದ್ದರೂ ಆತನಿಗೆ ವಿಕಾರವಿಲ್ಲವು. ಸಮುದ್ರವು ಉದಕದಿಂದ ಪೂರ್ಣವಾಗಿದ್ದುಕೊಂಡು ಅನೇಕ ನದಿಗಳು ಬಂದು ಸೇರಿದ್ದರೂ ವೃದ್ಧಿಹೊಂದಿ ಭೂಮಿಯಮೇಲೆ ಬರುವಂತಹ ವಿಕಾರವನ್ನು ಹೇಗೆ ಹೊಂದುವದಿಲ್ಲವೋ, ಹಾಗೆಯೇ ಈ ಜ್ಞಾನಯೋಗನಿಷ್ಠನನ್ನೂ ಅನೇಕ ಕಾಮಗಳು ಪ್ರವೇಶಮಾಡಬಹುದು. ಅವುಗಳಿಂದ ಈತನು ಈಷದಪಿ ವಿಕಾರಹೊಂದುವದಿಲ್ಲವು. ಆತ್ಮಾವಲೋಕನ ಶೀಲನಿಗೆ ಸರ್ವಮನಶ್ಶಾಂತಿಯೂ ಉಂಟು.

೭೧. ಯಾವ ಮನುಷ್ಯನು ಶಬ್ದಾದಿ ವಿಷಯೋಪಭೋಗಗಳನ್ನೆಲ್ಲಾ ತ್ಯಜಿಸಿ, ಅವುಗಳಲ್ಲಿ ಮಮತಾರಹಿತನಾಗಿ, ಅನಾತ್ಮವಾದ ದೇಹದಲ್ಲಿ ಆತ್ಮಾವೆಂಬ ಅಭಿಮಾನವನ್ನು ತ್ಯಾಗಮಾಡಿದವನಾಗಿ, ವಿಹಿತಕರ್ಮಗಳನ್ನು ಫಲಾಭಿಸಂಧಿಯಿಲ್ಲದೆ ಅನುಷ್ಠಿಸುವನೋ, ಅವನು ಮನಶ್ಶಾಂತಿಯನ್ನು ಹೊಂದುವನು.

೭೨. ಈ ಕೊನೆಯ ಶ್ಲೋಕದಲ್ಲಿ ಇಂತಹ ಕರ್ಮಯೋಗನಿಷ್ಠೆಯು ಎಂದಿಗಿದ್ದರೂ ಆತ್ಮಸ್ವರೂಪಪ್ರಾಪ್ತಿಗೆ ಸಾಧನವೆನ್ನುತ್ತಾರೆ—ಇಂತಹ ನಿತ್ಯನಾದ ಆತ್ಮನ ಯಾಥಾತ್ಮ್ಯಜ್ಞಾನಪೂರ್ವಕವಾದ ನಿಷ್ಕಾಮಕರ್ಮಾನುಷ್ಠಾನವು ಜ್ಞಾನನಿಷ್ಠೆಗೆ ಸಾಧನಭೂತವಾಗಿರುವಂತಹದ್ದಾಗಿ ಪ್ರಕೃತಿವಿಯುಕ್ತ ನೈಜ ಆತ್ಮಸ್ವರೂಪಪ್ರಾಪ್ತಿಯನ್ನುಂಟುಮಾಡುವಂಥಾದ್ದು. ಇಂತಹ ಕರ್ಮಾನುಷ್ಠಾನವನ್ನು ಹೊಂದಿದನಂತರ ಪುನಃಸಂಸಾರವನ್ನು ಹೊಂದಿ ಮೋಹಗೊಳ್ಳುವದಿಲ್ಲವು. ಇದನ್ನನುಷ್ಠಿಸಿದರೆ ಕೊನೆಯ ಕಾಲದಲ್ಲಾದರೂ ನಿರತಿಶಯ ಆನಂದ ರೂಪವಾದ ತನ್ನ ಆತ್ಮವನ್ನುಹೊಂದವನು.

ಇಂತು ದ್ವಿತೀಯಾಧ್ಯಾಯವು.



## ಮೂರನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು.

---

೧, ೨. ಹಿಂದೆ ಆತ್ಮಯಾಥಾತ್ಮ್ಯಸ್ವರೂಪಜ್ಞಾನದೊಂದಿಗೆ ಫಲಾಭಿಸಂಧಿ ರಹಿತವಾದ ಕರ್ಮಯೋಗಾನುಷ್ಠಾನವನ್ನು ಶ್ಲಾಘಿಸಿ ಹೇಳಿ, ಅನಂತರ ಅದು ಜ್ಞಾನಯೋಗಕ್ಕೆ ಸಾಧನವಾಗಿ, ಅದರಲ್ಲಿ ಸರ್ವೇಂದ್ರಿಯೋಪರತಿಯೊಂದಿಗೆ ಆತ್ಮಚಿನ್ತನವೂ ಇರುವದರಿಂದ ಇನ್ನೂ ಹೆಚ್ಚಾಗಿ ಶ್ಲಾಘಿಸಲ್ಪಟ್ಟದುದರಿಂದ, ಅರ್ಜುನನು ಪ್ರಶ್ನಿಸುತ್ತಾನೇನೆಂದರೆ—ನೀನು ಹೇಳಿರುವದನ್ನು ಪರಿಶೀಲಿಸುವದರಿಂದ ಜ್ಞಾನನಿಷ್ಠೆಯೇ ಕರ್ಮನಿಷ್ಠೆಗಿಂತ ಉತ್ಕೃಷ್ಟವೆಂದು ತೋರುತ್ತದೆ; ಹಾಗಾದರೆ ಓ ಕೇಶವನೇ ನನ್ನನ್ನು ಏಕೆ ಈ ಘೋರಯುದ್ಧದಲ್ಲಿ ನಿಯಮಿಸಿರುವಿ? ಎಂದರೆ ಯುದ್ಧಮಾಡು ಎಂದು ನಿರ್ಬಂಧಿಸುವಿ? ಕರ್ಮಯೋಗವು ಇಂದ್ರಿಯಗಳ ಪ್ರವೃತ್ತಿರೂಪವು. ಜ್ಞಾನಯೋಗವು ಸರ್ವೇಂದ್ರಿಯ ನಿವೃತ್ತಿರೂಪವು. ಹೀಗಿರುವಾಗ ಕರ್ಮಯೋಗವು ಜ್ಞಾನಯೋಗಕ್ಕೆ ಸಾಧನವು, ಕರ್ಮಯೋಗವನ್ನೇ ಮಾಡು ಎಂದು ಹೇಳುವ ಮಾತು ವಿರುದ್ಧವಾದುದಾಗಿ ಮೋಹವನ್ನುಂಟುಮಾಡುವಹಾಗೆ ಇದೆ. ಯಾವುದರಿಂದ ನನಗೆ ಪರಮ ಶ್ರೇಯಸ್ಸುಂಟಾಗುತ್ತದೆಂಬುದನ್ನು ನಿಶ್ಚಯಿಸಿಕೊಳ್ಳಬಹುದೋ ಅಂತಹ ಒಂದು ಮಾರ್ಗವನ್ನು ಮಾತ್ರ ಹೇಳು.

೩. ಶ್ರಿಯಃಪತಿಯಾದ ಕೃಷ್ಣನು ಉತ್ತರವನ್ನು ಹೇಳುತ್ತಾನೆ. ನಾನು ಹೇಳಿದುದನ್ನು ನೀನು ಚೆನ್ನಾಗಿ ಗ್ರಹಿಸಲಿಲ್ಲವು. ಲೋಕದಲ್ಲಿ ಕರ್ಮನಿಷ್ಠೆ ಜ್ಞಾನನಿಷ್ಠೆ ಎಂದು ಮೋಕ್ಷಾರ್ಥಿಗೆ ಎರಡುವಿಧ ನಿಷ್ಠೆಗಳುಂಟೆಂದು ಹಿಂದೆ ನನ್ನಿಂದ ಹೇಳಲ್ಪಟ್ಟವು. ಕರ್ಮಯೋಗದಿಂದ ನಿರ್ಮಲಾಂತಃಕರಣರಾಗಿ ಪರಮ ವೈರಾಗ್ಯದಿಂದ ಜ್ಞಾನನಿಷ್ಠೆಗೆ ಸಮರ್ಥರಾಗಿರುವ ಸಾಂಖ್ಯರಿಗೆ ಜ್ಞಾನಯೋಗನಿಷ್ಠೆಯು. ಇದಕ್ಕೆ ಸಾಮರ್ಥ್ಯವಿಲ್ಲದ ಯೋಗಿಗಳಿಗೆ ಕರ್ಮಯೋಗಾನುಷ್ಠಾನವು. ಹೀಗೆ ಇವೆರಡೂ ಹೇಳಲ್ಪಟ್ಟವು.

೪. ಮೋಕ್ಷೇಚ್ಛೆಯುಂಟಾದ ಒಡನೆಯೇ ಜ್ಞಾನಯೋಗವನ್ನಾರಂಭಿಸಲು ಸಾಧ್ಯವಿಲ್ಲವು. ಕರ್ಮಯೋಗಾನುಷ್ಠಾನವನ್ನು ಮಾಡದೇನೆ ಜ್ಞಾನಯೋಗಕ್ಕೆ ಅಧಿಕಾರಿಯಾಗುವದಿಲ್ಲವು. ಕರ್ಮಯೋಗವನ್ನು ಆರಂಭಿಸಿ ಅನಂತರ ಬಿಟ್ಟರೂ ಕರ್ಮಯೋಗಸಿದ್ಧಿಯಾದ ಜ್ಞಾನಯೋಗಕ್ಕೆ ಯೋಗ್ಯತೆಯು ಉಂಟಾಗಲಾರದು. ಕರ್ಮಗಳಿಂದ ಪರಮ ಪುರುಷನನ್ನಾರಾಧಿಸಿ ಪಾಪಸಂಚಯಗಳು ತೊಲಗಿದನಂತರವೇ ಜ್ಞಾನನಿಷ್ಠಾಸಿದ್ಧಿಯು.

೫. ಕರ್ಮಯೋಗವೇ ಸುಕರವು; ಏತಕ್ಕೆಂದರೆ, ಯಾವ ಮನುಷ್ಯನಿಗೆ ಕರ್ಮಗಳನ್ನು ಮಾಡದೆ ಒಂದು ಕ್ಷಣಕಾಲವಾಗಲಿ ಇರಲು ಸಾಧ್ಯವಿಲ್ಲವು; ಈತನಿಗೆ ಸಂಬಂಧಿಸಿಕೊಂಡಿರುವ ಪ್ರಕೃತಿಯ ಸ್ವಭಾವವೇ ಕಾರ್ಯಮಾಡುವದು. ಸಮಸ್ತರೂ ಅವರವರ ಸತ್ವರಜಸ್ತಮೋಗುಣಗಳಿಗೆ ಅಧೀನರಾಗಿ ಕೆಲಸವನ್ನು ಮಾಡುತ್ತಾರೆ.

೬. ಕರ್ಮೇಂದ್ರಿಯಗಳನ್ನು ಕಷ್ಟದಿಂದ ಸ್ವಲ್ಪಮಟ್ಟಿಗೆ ನಿಗ್ರಹಿಸಿ, ಮನಸ್ಸಿನಲ್ಲಿ ಮಾತ್ರ ಇಂದ್ರಿಯಗಳ ಮೂಲಕ ವಿಷಯಗಳನ್ನು ಸ್ಮರಿಸುತ್ತಲಿರುವವನು ವಿವೇಕಶೂನ್ಯನು; ಅಂತವನು ಇಂದ್ರಿಯಗಳಿಗೆ ವಶನಾಗುವನಾದುದರಿಂದ ಮಿಥ್ಯಾಚಾರನೆಂದು ಹೇಳಲ್ಪಡುವನು. ಕರ್ಮಯೋಗಾನುಷ್ಠಾನದಿಂದ ನಿರ್ಮಲಾಂತಃಕರಣನಾಗಿರುವವನಿಗೆ ಇಂತಹ ಭಯವಿರುವದಿಲ್ಲವು.

೭. ಹೀಗೆ ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗದಲ್ಲಿ ಪ್ರವೃತ್ತಿಯು ಸಾಧ್ಯವಿಲ್ಲದುದರಿಂದ ಯಾವನು ಮನಸ್ಸಿನಿಂದ ಇಂದ್ರಿಯಗಳನ್ನು ನಿಗ್ರಹಿಸಿ ಕರ್ಮೇಂದ್ರಿಯಗಳ ಮೂಲಕ ಅವುಗಳಲ್ಲಿ ಸಙ್ಗವಿಲ್ಲದೆ ಕರ್ಮ ಮಾಡುವನೋ ಅವನೇ ಶ್ಲಾಘ್ಯನು.

೮. ಆದುದರಿಂದ ನಿನಗೆ ಶಾಸ್ತ್ರಗಳಲ್ಲಿ ವಿಹಿತವಾದ ಕರ್ಮಗಳನ್ನೇ ನೀನು ಮಾಡು. ಇಂತಹ ಕರ್ಮಾನುಷ್ಠಾನವೇ ಜ್ಞಾನ ನಿಷ್ಠೆಗಿಂತ ಶ್ರೇಷ್ಠವಾದುದು. ಹಾಗಲ್ಲದೆ ಕರ್ಮಯೋಗ ವನ್ನು ತ್ಯಜಿಸಿ ಜ್ಞಾನಯೋಗವನ್ನವಲಂಬಿಸಿದರೆ ಶರೀರ ಯಾತ್ರೆಯೂ ಕೂಡ ಲಭಿಸುವದಿಲ್ಲವು.

೯. ಶರೀರಯಾತ್ರೆಗೆ ಬೇಕಾದ ಧನಾರ್ಜನಾದಿಗಳಲ್ಲಿ ಲಿಪ್ತನಾದರೆ ಬಂಧಕವಾಗುವದಿ ಲ್ಲವೋ ? ಎಂದರೆ, ಭಗವದಾರಾಧನರೂಪ ,ಯಜ್ಞಯಾಗಾದಿ ಕರ್ಮಗಳಿಗಾಗಿ ಅಲ್ಲದೆ, ಐಹಿಕ ಕರ್ಮಗಳಲ್ಲಿ ಸಕ್ತನಾಗಿ ಮಾಡುವ ಧನಾರ್ಜನಾದಿಗಳು ಬಂಧಕವು. ಆದುದರಿಂದ ಇಂತಹ ವಿಹಿತ ಕರ್ಮಗಳಾದ ಯಜ್ಞ ಯಾಗಾದಿ ಕರ್ಮಗಳ ಮೂಲಕ ಭಗವದ್ಭಾಗವತಾರಾಧನಕ್ಕಾಗಿ ಸಙ್ಗವರ್ಜಿತನಾಗಿ ಧನಾರ್ಜನೆ ಮೊದಲಾದವನ್ನು ನೀನು ಮಾಡಬಹುದು.

೧೦. ಈ ಯಜ್ಞ ಯಾಗಾದಿಗಳನ್ನು ಏತಕ್ಕೆ ಮಾಡಬೇಕು? ಇದರಿಂದ ಭಗವತ್ಪ್ರೀತಿ ಯುಂಟಾಗಲು ಕಾರಣವೇನು? ಎನ್ನುತ್ತೀಯೋ ಹೇಳುವೆನು ಕೇಳು ; ಬ್ರಹ್ಮರುದ್ರಾದಿ ಸಮಸ್ತ ಪ್ರಜೆಗಳಿಗೂ ಸ್ವಾಮಿಯಾದ ಸರ್ವೇಶ್ವರನು ಹಿಂದೆ ಚತುರ್ಮುಖ ಮೊದಲಾದ ಪ್ರಜೆಗಳನ್ನು ಈ ಯಜ್ಞಗಳೊಂದಿಗೆ ಸೃಷ್ಟಿಸಿ, ಇವುಗಳನ್ನು ನೀವು ಅನುಷ್ಠಿಸಿದರೆ ನಿಮಗೆ ಸರ್ವಶ್ರೇಯ ಸ್ಸುಂಟೆಂದೂ ಈ ಯಜ್ಞಾದಿಗಳೇ ನಿಮಗೆ ಸರ್ವಾಭೀಷ್ಟವನ್ನೂ ವರ್ಷಿಸುವ ಕಾಮಧೇನು ವೆಂದೂ ಹೇಳಿದನು.

೧೧. ಅದು ಹೇಗೆ ಕಾಮಧೇನುವು ಎಂದರೆ, ನೀವು ಈ ಯಜ್ಞಗಳ ಮೂಲಕ ದೇವತೆಗ ಳನ್ನು ಭಾವಿಸಿರಿ ಎಂದರೆ ಆರಾಧಿಸಿರಿ, ಇದರಿಂದ ಅವರೂ ನಿಮ್ಮನ್ನು ಭಾವಿಸುವರು ಎಂದರೆ ಪ್ರೀತಿ ಸುವರು. ಇಂತಹ ಪರಸ್ಪರ ಪ್ರೀತಿಯಿಂದ ನೀವು ಉತ್ತಮ ಶ್ರೇಯಸ್ಸನ್ನು ಹೊಂದುವಿರಿ.

೧೨. ಯಜ್ಞಗಳಿಂದ ಆರಾಧಿಸಿ ಪ್ರೀತಿಸಲ್ಪಟ್ಟ ದೇವತೆಗಳು ನಿಮಗೆ ಬೇಕಾದ ದ್ರವ್ಯಾನ್ನ ವಸನಾದಿಗಳನ್ನು ಕೊಡುವರು. ನನ್ನ ಆಜ್ಞಾ ಪ್ರಕಾರವಾಗಿ ಹೀಗೆ ನಿಮಗೆ ಕೊಡುವವರಿಗೆ ಯಜ್ಞಾದಿಗಳ ಮೂಲಕ ಹವಿಸ್ಸನ್ನು ಪ್ರತಿಯಾಗಿ ಕೊಡದೆ ಯಾವನು ಊಟಮಾಡುವವನೋ ಅವನು ಕಳ್ಳನೇ ಸರಿ.

೧೩. ಹೀಗೆ ಭಗವದಾರಾಧನೆ ವೈಶ್ವದೇವ ಮೊದಲಾದ ಯಜ್ಞಗಳನ್ನನುಷ್ಠಿಸಿ, ಅಂತಹ ಯಜ್ಞಶೇಷವನ್ನು ಭುಜಿಸುವವರು ಉಪಾಯಾನುಷ್ಠಾನಕ್ಕೆ ವಿರೋಧವಾದ ಸಮಸ್ತ ಪಾಪ ಗಳಿಂದಲೂ ಬಿಡಲ್ಪಡುವರು. ಹಾಗೆಮಾಡದೆ ತನ್ನ ಶರೀರಧಾರಣಕ್ಕಾಗಿ ಮಾತ್ರ ಮಾಡಿದ ಅನ್ನವನ್ನು ಎಂದರೆ ಯಜ್ಞ ಶೇಷವಲ್ಲದ ಅನ್ನವನ್ನು ಭುಜಿಸುವವರು ಪಾಪಿಗಳು; ಅವರು ಪಾಪ ವನ್ನೇ ಭುಜಿಸುವವರು.

೧೪, ೧೫, ೧೬. ಪರಮ ಪುರುಷಾರಾಧನರೂಪವಾದ ಯಜ್ಞವೇ ಶ್ರೇಯಸ್ಕರವೆಂದೂ, ಹಾಗೆ ಮಾಡದವನು ವ್ಯರ್ಥವಾಗಿ ಜೀವಿಸುವನೆಂದು ಹೇಳುತ್ತಾರೆ. ಅನ್ನದಿಂದಲೇ ಪ್ರಾಣಿಗಳು ಜೀವಿಸುವರು. ಮಳೆಯಿಂದಲೇ ಅನ್ನಪ್ರಾಪ್ತಿಯು. ಯಜ್ಞದಿಂದ ಮಳೆಯುಂಟಾಗುತ್ತದೆ. ಯಜ್ಞವು ಧರ್ಮದಿಂದ ಗಳಿಸಿದ ದ್ರವ್ಯಾರ್ಜನಾದಿಗಳಿಂದ ಉಂಟಾಗುತ್ತದೆ. ಇಂತಹ ಕರ್ಮವು ಮನುಷ್ಯನ ಶರೀರಮೂಲಕ ಉಂಟಾಗುತ್ತದೆ. ಆ ಶರೀರ ಸಂಬಂಧವು ಜೀವಾತ್ಮನ ಕರ್ಮ ವಾಸನಾಮೂಲಕ ಉಂಟಾದುದು. ಆದುದರಿಂದ ಇಂತಹ ಶರೀರವು ಯಜ್ಞಮೂಲಕವಾಗಿಯೇ ಪ್ರತಿಷ್ಠಿತವಾದುದು. ಯಾವನು ಈ ಚಕ್ರರೂಪದಲ್ಲಿ ನಡೆಯುವದನ್ನೆಲ್ಲಾ ಅರಿತು ಯಜ್ಞಾದಿ ವಿಹಿತ ಕರ್ಮಾನುಷ್ಠಾನವನ್ನು ಅನುಸರಿಸಿ ನಡೆಯುವದಿಲ್ಲವೋ ಆತನ ಆಯುಸ್ಸು ಪಾಪಾ ರಂಭಕ್ಕಾಗಿಯೇ ; ಆತನು ಇಂದ್ರಿಯಗಳೆಂಬ ಉದ್ಯಾನವನದಲ್ಲಿ ರಮಿಸುವವನಾದುದರಿಂದ ಆತನ ಜನ್ಮವೇ ವ್ಯರ್ಥವು;

೧೭, ೧೮. ಹೀಗೆ ಯಜ್ಞಯಾಗಾದಿ ಕರ್ಮಗಳನ್ನು ಮಾಡದಿರುವವನ ಜನ್ಮವು ವ್ಯರ್ಥವೆಂದಬಳಿಕ ಎಂದಿಗೂ ಬಿಡತಕ್ಕದ್ದಲ್ಲವೋ ಎಂದರೆ ಶರೀರವಿರುವತನಕ ತಪ್ಪಿದ್ದೇ ಅಲ್ಲವು. ಶರೀರ ವಿಯೋಗ ಉಂಟಾಗಿ ಮುಕ್ತನಾದಾಗ ಅವುಗಳು ಬೇಕಿಲ್ಲವೆನ್ನುತ್ತಾರೆ. ಯಾವ ಮನುಷ್ಯನು ಜೀವತತ್ವ ಯಾಥಾತ್ಮ್ಯ ದರ್ಶನದಲ್ಲೇ ನಿರತನಾಗಿ ಅಂತಹ ಆತ್ಮದರ್ಶನದಿಂದ ತೃಪ್ತನಾಗುವ ಅವಸ್ಥೆಯನ್ನು ಹೊಂದುವನೋ, ಅಂತವನೀಗ ಮುಕ್ತದೆಶೆಯನ್ನು ಹೊಂದುವನಾಗಿ ಕರ್ಮಯೋಗಾದಿಗಳನ್ನು ಅನುಷ್ಠಿಸಬೇಕಾದುದು ಯಾವುದೂ ಆಗ ಇರುವದಿಲ್ಲವು. ಹಾಗೆ ಮುಕ್ತದೆಶೆಯಲ್ಲಿ ಅಂತಹ ಕರ್ಮದಿಂದ ಆಗತಕ್ಕ ಪುರುಷಾರ್ಥವೇನೂ ಇರುವದಿಲ್ಲವು; ಮಾಡದೇ ಇದ್ದರೂ ಪ್ರತ್ಯವಾಯವೇನೂ ಇರುವದಿಲ್ಲವು. ಈ ಲೋಕದ ಯಾವ ವಸ್ತುಗಳಲ್ಲೂ ಅಂತವನಿಗೆ ಆಶೆ ಇರುವದಿಲ್ಲವು.

೧೯. ಆದುದರಿಂದ ಕರ್ಮದಲ್ಲಿಯೂ ಅದರ ಫಲದಲ್ಲಿಯೂ ಯಾವಾಗಲೂ ಸಙ್ಗವರ್ಜಿತನಾಗಿ ವಿಹಿತಕರ್ಮಗಳನ್ನಾಚರಿಸು. ಹೀಗೆ ಅಸಕ್ತನಾಗಿ ಆಚರಿಸಿದರೆ ಪರಮಾತ್ಮಪ್ರಾಪ್ತಿಗೆ ಆವಶ್ಯಕವಾದ ಉಪಾಯಾನುಷ್ಠಾನವನ್ನು ಮಾಡಲು ಅರ್ಹವಾದ ಉತ್ಕೃಷ್ಟದೆಶೆಯನ್ನು ಹೊಂದುವನು, ಎಂದರೆ ಆತ್ಮಾವಲೋಕನಸಿದ್ಧಿಯನ್ನು ಹೊಂದುವನು.

೧೯॥ ಜ್ಞಾನಯೋಗ ನಿರಪೇಕ್ಷವಾಗಿ ಕರ್ಮಯೋಗದಿಂದಲೇ ಆತ್ಮಾವಲೋಕನವನ್ನು ಹೊಂದಿ ಉಪಾಯಾನುಷ್ಠಾನವನ್ನು ಮಾಡಿ ಮುಕ್ತಿಹೊಂದಿದುಕ್ಕೆ ನಿದರ್ಶನ ಉಂಟೋ ಎಂದರೆ ಜನಕಾದಿಗಳು ಜ್ಞಾನಯೋಗಾಧಿಕಾರಿಗಳಾಗಿದ್ದರೂ, ಅದರಪೇಕ್ಷೆಯಿಲ್ಲದೆ ಕರ್ಮಯೋಗದಿಂದಲೇ ಆತ್ಮಾವಲೋಕನವನ್ನು ಹೊಂದಿ ಉಪಾಯಾನುಷ್ಠಾನವನ್ನು ಮಾಡಿ ಮುಕ್ತಿಯನ್ನು ಹೊಂದಿರುತ್ತಾರೆ.

೨೦. ಹೀಗೆ ಜನಕಾದಿಗಳ ಶಿಷ್ಟಾಚಾರದಿಂದ ಇನ್ನೊಂದು ಮಹತ್ತಾದ ಪ್ರಯೋಜನವೇನೆಂದರೆ—ಲೋಕದ ಜನರನ್ನೂ ಸರಿಯಾದ ನಮ್ಮ ಮಾರ್ಗಕ್ಕೇ ಬರುವಹಾಗೆ ಮಾಡುವದಕ್ಕೂ ಸಹ ವಿಹಿತ ಕರ್ಮಗಳನ್ನು ನಾವು ಮಾಡಲೇಬೇಕು..

೨೧. ಏಕೆಂದರೆ ಶ್ರೇಷ್ಠನಾದವನು ಹೇಗೆ ಆಚರಿಸುವನೋ, ಹಾಗೆಯೇ ಇತರರೂ ಆತನನ್ನು ನೋಡಿ ವಿಹಿತ ಕರ್ಮಗಳನ್ನು ಅನುಷ್ಠಿಸುವರು. ಅಂತಹ ಶ್ರೇಷ್ಠನು ಯಾವುದನ್ನು ಪ್ರಮಾಣವೆಂದು ಭಾವಿಸಿ ಅನುಷ್ಠಿಸುವನೋ, ಅದನ್ನೇ ಇತರ ಜನರೂ ಅನುಸರಿಸಿನಡೆಯುವರು.

೨೨. ನಿನಗಾದರೋ ಶಾಸ್ತ್ರವಶ್ಯತೆಯೂ ಕರ್ಮವಶ್ಯತೆಯೂ ಇರುವದರಿಂದ ನೀನು ಕರ್ಮಗಳನ್ನು ಮಾಡಲೇಬೇಕು. ಇವೆರಡೂ ಇಲ್ಲದೆ, ನಿರ್ಬಂಧವೂ ಇಲ್ಲದೆ, ಇರುವದರಿಂದ ಪರಿಪೂರ್ಣ ಕಾಮನಾದ ನನಗೆ ಈ ಮೂರು ಲೋಕದಲ್ಲೂ ಆಗತಕದ್ದೇನೂ ಇಲ್ಲವು. ತನಗೆ ಈಗ ಇಲ್ಲದೆ ಮುಂದೆ ಹೊಂದಬೇಕಾದುದೂ ಯಾವುದೂ ಇಲ್ಲವು. ಆದರೂ ಲೋಕರಕ್ಷಣಾರ್ಥವಾಗಿ ಯಾವಾಗಲೂ ಕರ್ಮಗಳನ್ನು ಮಾಡುತ್ತಲೇ ಇರುವೆನು.

೨೩. ೨೪. ಜಗದ್ರಕ್ಷಕನಾದ ತಾನು ಹಾಗೆ ಕರ್ಮಗಳನ್ನು ಮಾಡದೇ ಇದ್ದರೆ ಅನರ್ಥವುಂಟಾಗುತ್ತದೆಂದು ಹೇಳುತ್ತಾರೆ. ಜನಕಾದಿಗಳಿಗಿಂತಲೂ ಹೆಚ್ಚಾಗಿ ನಾನು ಸರ್ವಶ್ರೇಷ್ಠನಾದುದರಿಂದ, ಎಲ್ಲರೂ ನನ್ನನ್ನು ಅನುವರ್ತಿಸಿ ನಡೆಯುವರು. ಈಗ ಮನುಷ್ಯಾವತಾರಿಯಾಗಿ ನನಗೆ ವಿಹಿತವಾದ ಸ್ವವರ್ಣೋಚಿತ ಕರ್ಮಗಳನ್ನೆಸಗಿದ್ದರೆ ಈ ಪ್ರಜೆಗಳನ್ನೆಲ್ಲಾ ಕೆಡಿಸಿ ವರ್ಣಸಂಕರವನ್ನುಂಟುಮಾಡಿದ ದೋಷಕ್ಕೆ ಗುರಿಯಾಗುವೆನು. ಆದುದರಿಂದ ದೊಡ್ಡವನು ಇತರರಿಗೆ ಮೇಲುಪಙ್ಕ್ತಿಯನ್ನು ಹಾಕಿಕೊಡಬೇಕೆಂಬ ಭಾವವು.

೨೫. ೨೬. ಈ ಕರ್ಮಯೋಗವು ಆತ್ಮಜ್ಞಾನಶೂನ್ಯನಿಗೀಗ ಬೇಕೇವಿನಾ ಆತ್ಮಜ್ಞಾನವುಳ್ಳವನಿಗಲ್ಲವೆಂದು ಭಾವಿಸತಕ್ಕದ್ದಲ್ಲವು. ಆತ್ಮಜ್ಞಾನಶೂನ್ಯನು ಅನುಷ್ಠಿಸುವಹಾಗೆಯೇ

ಜ್ಞಾನಿಯೂ ಸಹ ಅನುಷ್ಠಿಸತಕ್ಕದ್ದು, ಏತಕ್ಕೆಂದರೆ ಲೋಕದವರನ್ನು ಒಳ್ಳೇ ಮಾರ್ಗಕ್ಕೆ ಎಳೆಯುವದಕ್ಕಾಗಿಯೂ ಅನುಷ್ಠಿಸತಕ್ಕದ್ದಾಗಿರುತ್ತದೆ. ಕರ್ಮವಶ್ಯರಾಗಿ ಅಜ್ಞರಾದವರಿಗೆ ಕರ್ಮಯೋಗಕ್ಕಿಂತ ಹೆಚ್ಚಾದ ಬೇರೇಮಾರ್ಗ ಉಂಟೆಂಬ ಭ್ರಮಬುದ್ಧಿಯನ್ನು ಆತ್ಮಜ್ಞಾನ ಉಳ್ಳವನಾದ ಜ್ಞಾನಯೋಗಾರ್ಹನು ಉಂಟುಮಾಡತಕ್ಕದ್ದಲ್ಲವು. ಆದುದರಿಂದ ಇತರರು ಕರ್ಮಯೋಗಾನುಷ್ಠಾನವನ್ನೇ ಪ್ರೀತಿಸುವಹಾಗೆ ಆತನು ಮಾಡತಕ್ಕದ್ದು.

೨೭. ೨೮. ಹೀಗೆ ಕರ್ಮಯೋಗವು ಪ್ರಾಜ್ಞನಿಗೂ ಅಪ್ರಪ್ರಾಜ್ಞನಲ್ಲದವನಿಗೂ ಆವಶ್ಯಕವೆಂದು ಹೇಳಿ, ಕರ್ಮಯೋಗದಲ್ಲಿ ಅಕರ್ತೃತ್ವಾನುಸಂಧಾನವಿರಬೇಕೆಂದು ಹೇಳುತ್ತಾರೆ. ದೇಹಾತ್ಮಭ್ರಮವಿರುವ ಅಜ್ಞಾನಿಯು ದೇಹಮೂಲಕ ಪೂರ್ವಕರ್ಮಾನುಸಾರವಾಗಿ ನಡೆಯುವ ಕರ್ಮಗಳನ್ನೂ ನಾನೇಮಾಡಿದೆನು ಎಂದು ತಿಳಿಯುವನು. ಆತ್ಮಾ ಅಣುವಾದುದರಿಂದ ದೇಹಸಂಬಂಧವಿಲ್ಲದೆ ಕರ್ಮವನ್ನು ಮಾಡಲಾರನು; ದೇಹಮೂಲಕ ನಡೆಯುವಾಗ ನಾನೇ ಮಾಡಿದೆನೆಂದು ಭಾವಿಸುವನು. ಆದರೆ ತತ್ವತ್ರಯಗಳ ಸ್ವರೂಪ ಸ್ವಭಾವವನ್ನು ತಿಳಿದವನಾದರೋ ಸತ್ವರಜಸ್ತಮೋಗುಣಗಳಿರುವ ತನ್ನ ಶರೀರಮೂಲಕ ಪೂರ್ವಕರ್ಮಾನುಸಾರ ಪ್ರವೃತ್ತಿಗಳು ನಡೆಯುತ್ತವೆಂದು ತಿಳಿದವನಾಗಿ, ಆ ಕರ್ಮಗಳಲ್ಲಿ ತನಗೆ ಸಂಬಂಧ ಉಂಟೆಂದು ಭಾವಿಸುವದಿಲ್ಲವು, ನಿರ್ಲಿಪ್ತನಾಗಿರುವನು.

೨೯. ಜ್ಞಾನಯೋಗಾಧಿಕಾರಿಗೂ ಒಂದು ಇತಿಕರ್ತವ್ಯತೆಯುಂಟು. ಅದೇನೆಂದರೆ ಹೇಳುತ್ತಾರೆ. ಶರೀರದ ಗುಣಗಳಾದ ರಜಸ್ತಮೋಗುಣಗಳ ಆಧಿಕ್ಯದಿಂದುಂಟಾದ ದೇಹಾತ್ಮ ಭ್ರಮಯುಕ್ತರು ಆತ್ಮವಿಷಯವಾದ ಜ್ಞಾನವಿಲ್ಲದೆ ಆ ದೇಹದಿಂದುಂಟಾಗುವ ಕರ್ಮಗಳಲ್ಲಿ ಅಭಿಮಾನವುಳ್ಳವರಾಗಿರುತ್ತಾರೆ; ಅಂತವರು ಜ್ಞಾನಯೋಗಕ್ಕೆ ಅನರ್ಹರಾದುದರಿಂದ ಕರ್ಮಯೋಗವೇ ಅವರಿಗೆ ಸರಿಯಾದುದು. ಈ ಆತ್ಮಜ್ಞಾನವನ್ನು ಹೊಂದಿ ಜ್ಞಾನಯೋಗಕ್ಕೆ ಅಧಿಕಾರಿಯಾದವನು ಅಂತವರಿಗೆ ಕರ್ಮಯೋಗಕ್ಕಿಂತ ಹೆಚ್ಚಾದುದು ಜ್ಞಾನಯೋಗವೆಂಬ ಭ್ರಮೆಯನ್ನುಂಟುಮಾಡಿ ಕರ್ಮಯೋಗವನ್ನು ತ್ಯಜಿಸುವಹಾಗೆ ಮಾಡಕೂಡದು

೩೦. ಜೀವಾತ್ಮನಿಗೆ ಕರ್ತೃತ್ವವಿಲ್ಲವು; ಜಡವಾದ ದೇಹಕ್ಕೇ ಕರ್ತೃತ್ವವು,ಎಂದರೆ ಆ ಜಡವಾದ ದೇಹವು ಮಾಡುವದು ಯಾರಿಂದ ಎಂದರೆ ದೇಹಕ್ಕೂ ಆತ್ಮನಿಗೂ ನಿಯನ್ತಾವಾದ ಸರ್ವೇಶ್ವರನಿಂದ ಎಂದು ಭಾವಿಸತಕ್ಕದ್ದು; ಹೀಗೆ ಆತ್ಮಯಾಥಾತ್ಮ್ಯಜ್ಞಾನವನ್ನು ಹೊಂದಿ, ಎಲ್ಲಾ ಕರ್ಮವನ್ನೂ ನಿಯನ್ತಾವಾಗಿ ಸರ್ವರಕ್ಷಕ ದೀಕ್ಷೆಯನ್ನು ಧರಿಸಿದ ನನ್ನಲ್ಲಿ ಸಮರ್ಪಿಸಿ, ನಾನು ಮಾಡಿದೆನೆಂಬ ಕರ್ತೃತ್ವವನ್ನೂ ಅದರ ಫಲವನ್ನೂ ತ್ಯಾಗಮಾಡಿದವನಾಗಿಸರ್ವಕ್ಲೇಶ ರಹಿತನಾಗಿ ನಿನ್ನ ವಿಹಿತಕರ್ಮವಾದ ಧರ್ಮಯುದ್ಧಕ್ಕೆ ಸನ್ನದ್ಧನಾಗು.

೩೧. ಈಗ ನಿನಗೆ ಹೇಳಿದುದು ಸರ್ವೋಪನಿಷತ್ತಿನ ಸಾರಭೂತಾರ್ಥವಾಗಿರುವ ನನ್ನ ಅಭಿಪ್ರಾಯವೆಂದು ವಿಮರ್ಶಿಸಿ ತಿಳಿದು, ಯಾರು ಪ್ರತಿದಿನವೂ ವಿಹಿತಕರ್ಮಗಳನ್ನನುಷ್ಠಿಸುವರೋ, ಯಾರು ನನ್ನ ಉಪದೇಶದಲ್ಲಿ ಶ್ರದ್ಧಾಯುಕ್ತರಾಗಿರುತ್ತಾರೋ, ಯಾರು ಈ ನಿರ್ದುಷ್ಟವಾದ ಶಾಸ್ತ್ರಾರ್ಥದಲ್ಲಿ ದೋಷವನ್ನೆಣಿಸದೇ ಇರುತ್ತಾರೋ, ಅವರೆಲ್ಲರೂ ಬಂಧಕಗಳಾದ ಪುಣ್ಯಪಾಪರೂಪ ಕರ್ಮಗಳಿಂದ ಬಿಡಲ್ಪಡುವರು.

೩೨. ಇಂತಹ ಸಾರವತ್ತಾದ ಉಪನಿಷತ್ತಿನ ಅಭಿಪ್ರಾಯವನ್ನು ಗ್ರಹಿಸದೆ ಶ್ರದ್ಧಾಶೂನ್ಯರಾಗಿ ಶಾಸ್ತ್ರಾರ್ಥಗಳನ್ನು ದೂಷಿಸಿ, ಅಥವಾ ನನ್ನ ಪ್ರಜೆಯನ್ನು ದ್ವೇಷಿಸುವವರಾಗಿ ಕರ್ಮಗಳನ್ನು ಯಾರು ಎಸಗುವರೋ, ಅಂತವರನ್ನು ತತ್ವಜ್ಞಾನದಲ್ಲಿ ವಿಶೇಷ ಮೌಢ್ಯಯುಕ್ತರನ್ನಾಗಿ

ಯೂ ಈ ಕಾರಣದಿಂದ ವಸ್ತು ಯಾಥಾತ್ಮ್ಯವನ್ನು ತಿಳಿಯುವ ಚೈತನ್ಯವಿಲ್ಲದವರನ್ನಾಗಿಯೂ ನಷ್ಟರನ್ನಾಗಿಯೂ ತಿಳಿ.

೩೩. ಇಂತಹ ಉಪನಿಷತ್ಸಾರಭೂತವಾಗಿರುವ ಅಮೋಘೋಪದೇಶವಿದ್ದರೂ ಮೌಢ್ಯವು ಏತರಿಂದ ಎಂದರೆ, ಎಷ್ಟೇ ಜ್ಞಾನಯುಕ್ತನಾಗಿದ್ದರೂ ಮನುಷ್ಯನು ತನ್ನ ಹಿಂದಿನ ಕರ್ಮ ವಾಸನಾನುಗುಣವಾಗಿ ಕರ್ಮಗಳನ್ನು ಮಾಡುತ್ತಾನೆ. ಅದಕ್ಕಾಗಿ ಪ್ರಾಪ್ತವಾದ ಶರೀರದ ಸ್ವಭಾವಾನುಗುಣವಾಗಿ ಕರ್ಮಗಳು ನಡೆದು ಹೋಗುತ್ತವೆ. ಶಾಸ್ತ್ರಮೂಲಕ ಈತನು ಗ್ರಹಿಸಿದ ವಿಧಿ ನಿಷೇಧರೂಪ ಶಾಸನವು ಅಂತಹ ಸಂದರ್ಭದಲ್ಲಿ ಏನನ್ನು ಮಾಡೀತು? ಕರ್ಮ ವಾಸನಾ ಮುಂದೆ ಶಾಸ್ತ್ರಜ್ಞಾನವು ದುರ್ಬಲವೆಂಬ ಭಾವವು.

೩೪. ಕರ್ಮವಾಸನೆಯು ಬಲಿಷ್ಠವಾದರೂ ವಿವೇಕಜ್ಞಾನದಿಂದ ಅದನ್ನು ತಡೆಯತಕ್ಕದ್ದು ಎನ್ನುತ್ತಾರೆ. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಪ್ರಯೋಜನವಾದ ಶಬ್ದಸ್ಪರ್ಶಾದಿ ವಿಷಯಗಳಲ್ಲಿ ಅವುಗಳನ್ನು ಅನುಭವಿಸಬೇಕೆಂಬ ಕಾಮವೂ, ಅದಕ್ಕೆ ವಿಘ್ನವುಂಟಾದರೆ ದ್ವೇಷವೂ ಇವೆರಡೂ ತಪ್ಪಿದ್ದಲ್ಲವು. ಇವುಗಳಿಗೆ ಮಾತ್ರ ವಿವೇಕಿಯು ವಶವಾಗಕೂಡದು. ಏಕೆಂದರೆ ಈ ಕಾಮ ಕ್ರೋಧಗಳಿಗಿಂತ ಪ್ರಬಲವಾದ ಶತ್ರುಗಳಿಲ್ಲವಷ್ಟೇ.

೩೫. ಈಗ ಹೇಳಿದ ಕಾಮಕ್ರೋಧಗಳ ಹಾವಳಿಯು ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗ ಪ್ರವೃತ್ತನಿಗುಂಟಾಗುವದರಿಂದ ಅನು ಭಯಾವಹವೆಂದೂ ಕರ್ಮಯೋಗವೇ ಅಪ್ರಮಾದವೆಂದೂ ಹೇಳುತ್ತಾರೆ. ಶರೀರೇಂದ್ರಿಯಗಳನ್ನು ಧರಿಸಿರುವ ತನಗೆ ಯೋಗ್ಯವಾದ ಕರ್ಮಯೋಗವು ವಿಗುಣಃ - ಜ್ಞಾನಯೋಗದಷ್ಟು ಶ್ಲಾಘ್ಯವಲ್ಲದಿದ್ದರೂ, ಅಥವಾ ಮೇಲೆ ನಾನು ಉಪಪಾದಿಸಿದ ರೀತಿಯಲ್ಲಿ ವಿಶೇಷ ಗುಣವುಳ್ಳದಾದುದರಿಂದ, ಶ್ರೇಷ್ಠವಾದುದು. ಒಂದುವೇಳೆ ಕರ್ಮಯೋಗ ಮಾಡುತ್ತಿರುವಾಗಲೇ ದೇಹಾವಸಾನ ಉಂಟಾದರೆ, ಮುಂದಿನ ಜನ್ಮದಲ್ಲಾದರೂ ಶ್ರೇಯಸ್ಸುಂಟು. ಇದನ್ನು ತ್ಯಜಿಸಿದ ಜ್ಞಾನಯೋಗ ನಿಷ್ಠನಾದರೋ ರಾಗದ್ವೇಷಗಳ ವಶನಾಗುವದರಿಂದ ಜ್ಞಾನಯೋಗವು ಭಯಾವಹವು.

೩೬. ಹೀಗೆ ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗಾನುಷ್ಠಾನವು ಹೇಗೆ ಭಯಾವಹವು? ಯಾವುದರಿಂದ ಪ್ರೇರಿತನಾಗಿ, ತನಗೆ ಪಾಪವನ್ನು ಮಾಡುವದು ಸರಿಯಲ್ಲವೆಂದು ತಿಳಿದು ಅದರಲ್ಲಿ ಇಷ್ಟವಿಲ್ಲದಿದ್ದರೂ ಬಲಾತ್ಕಾರದಿಂದ ಪ್ರವೃತ್ತನಾಗಿ ಪಾಪವನ್ನು ಮಾಡುವನು? ಎಂದು ಅರ್ಜುನನು ಶ್ರೀ ಕೃಷ್ಣಭಗವಾನರನ್ನು ಕುರಿತು ಪ್ರಶ್ನಿಸುತ್ತಾನೆ-

೩೭. ಶ್ರಿಯಃಪತಿಯು ಆತನ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ. ಏಕಾ ಏಕಿ ಸರ್ವೇಂದ್ರಿಯ ಉಪರತಿಯ ಮೂಲಕ ಇಂದ್ರಿಯಗಳನ್ನು ನಿಗ್ರಹಿಸಿ ಜ್ಞಾನಯೋಗಪ್ರವೃತ್ತನಾದವನಿಗೆ ಇಂದ್ರಿಯಚಾಪಲ್ಯವು ಇದ್ದೇ ಇರುವದರಿಂದ ರಜೋಗುಣದಿಂದ ಕಾಮ ಒಂದೂ ಅದರ ತಮ್ಮನಾದ ಕ್ರೋಧ ಒಂದೂ ಇವು ಉಂಟಾಗುತ್ತವೆ ಕಾಮಕ್ಕೆ ಎಷ್ಟಾದರೂ ಹೊಟ್ಟೆತುಂಬದು. ಮಹಾ ಪಾಪಿಯು; ಆದುದರಿಂದ ಈ ಕಾಮವನ್ನು ಪ್ರಬಲ ವೈರಿ ಎಂದು ತಿಳಿ.

೩೮. ಇಂತಹ ಒಳ್ಳೇ ಸ್ವರೂಪವುಳ್ಳ ಪುರುಷನಿಗೆ ಕಾಮವು ಹೇಗೆ ಅಂಟಿದುದು, ಎಂಬುದಕ್ಕೆ ನಿದರ್ಶನಗಳನ್ನು ಹೇಳುತ್ತಾರೆ. ಅಗ್ನಿಯ ತೇಜಸ್ಸಿಗೆ ಧೂಮವು ಹೇಗೆ ಆಚ್ಛಾದಕವೋ, ನಿರ್ಮಲವಾದ ಕನ್ನಡಿಗೆ ಕೊಳೆಯು ಹೇಗೆ ಆಚ್ಛಾದಕವೋ, ಗರ್ಭಸ್ಥ ಶಿಶುವಿಗೆ ಗರ್ಭಚೀಲವು (ಮಾಸು) ಹೇಗೆ ಆಚ್ಛಾದಕವೋ, ಹಾಗೆ ಈ ಕಾಮವು ಕ್ಷೇತ್ರಜ್ಞನನ್ನು ಆವರಿಸಿರುತ್ತದೆ.

೩೯. ಇದರಂತೆಯೇ ಕರ್ಮವನ್ನು ತ್ಯಜಿಸಿ ಜ್ಞಾನಯೋಗನಿಷ್ಠನಾದವನ ಜ್ಞಾನವೂ ಕೂಡ ಅನುಭವಿಸದೇ ಇರುವದರಿಂದುಂಟಾದ, ಅನಂತರ ಎಷ್ಟು ಅನುಭವಿಸಿದರೂ ಸಾಕು ಎನಿಸ

ದಿರುವ, ತನಗೆ ಹೊಂದಲು ಅಸಾಧ್ಯವಾಗಿರುವ, ನಿತ್ಯವೈರಿಯಾದ ಕಾಮದಿಂದ ಆವರಿಸಲ್ಪಟ್ಟಿರುತ್ತಾನೆ.

೪೦. ಕಾಮಕ್ಕೆ ಅಧಿಷ್ಠಾನವು ಯಾವುವು ಎಂಬುದು ಹೇಳಲ್ಪಡುತ್ತದೆ. ವಿಷಯಗಳ ಸಂಬಂಧವು ಇಂದ್ರಿಯಗಳಿಗುಂಟಾಗುತ್ತನೆ. ಅಲ್ಲಿಂದ ಮನಸ್ಸು ಅವುಗಳಲ್ಲಿ ಪ್ರವರ್ತಿಸುತ್ತದೆ. ಅಲ್ಲಿಂದ ಬುದ್ಧಿಯು ಮೂಲಕ ಪ್ರಬಲವಾದ ಕಾಮನೆಯುಂಟಾಗುತ್ತದೆ. ಆದುದರಿಂದ ಈತನ ಇಂದ್ರಿಯಗಳೂ ಮನಸ್ಸೂ ಬುದ್ಧಿಯೂ ಕಾಮಕ್ಕೆ ಅಧಿಷ್ಠಾನಗಳು. ಈ ಕಾಮನೆಯು ಈ ಇಂದ್ರಿಯ ಮನೋಬುದ್ಧಿಗಳ ಮೂಲಕ ಈ ಕ್ಷೇತ್ರಜ್ಞನ ಜ್ಞಾನವನ್ನು ಆಕ್ರಮಿಸಿ ಮೋಹಗೊಳಿಸುತ್ತದೆ ಎಂದು ಆತ್ಮಜ್ಞಾನವನ್ನು ಜ್ಞಾನಯೋಗಿಗೆ ತಪ್ಪಿಸಿ ವಿಷಯಾನುಭವದಲ್ಲಿ ಸಕ್ತನಾಗುವಹಾಗೆ ಮಾಡುತ್ತದೆ.

೪೧. ಆದುದರಿಂದ ಓ ಭರತಶ್ರೇಷ್ಠನಾದ ಅರ್ಜುನನೇ ಮೋಕ್ಷಾಧಿಕಾರಿಯಾದ ನೀನು ಪ್ರಥಮತಃ ಮಾಡಬೇಕಾದ ಕರ್ಮಯೋಗ ನಿಷ್ಠೆಯಲ್ಲೇ ಇದ್ದುಕೊಂಡು ಈ ಜ್ಞಾನವಿಜ್ಞಾನಗಳಿಗೆ ನಾಶಕವಾಗಿ ಮಹಾ ಪಾಪಿಯಾದ ಕಾಮವನ್ನು ಕ್ರಮೇಣ ಚನ್ನಾಗಿ ಜಯಿಸು.

೪೨. ಈ ಕಾಮಕ್ಕೆ ಅಧಿಷ್ಠಾನವಾಗಿರುವ, ಇಂದ್ರಿಯಗಳೇ ಆತ್ಮಜ್ಞಾನಕ್ಕೆ ವಿರೋಧಿಗಳು. ಅವುಗಳಿಗಿಂತ ಮನಸ್ಸು ಪ್ರಬಲ ವಿರೋಧಿಯು, ಏಕೆಂದರೆ ಇಂದ್ರಿಯಗಳು ಸುಮ್ಮನಿದ್ದರೂ ಮನಸ್ಸು ವಿಷಯಾಸಕ್ತಿಯುಳ್ಳದ್ದಾಗಿರುತ್ತದೆ. ಅದಕ್ಕಿಂತ ಪ್ರಬಲವಿರೋಧಿಯು ಬುದ್ಧಿಯು: ಅದಕ್ಕಿಂತ ಪ್ರಬಲವು ಕಾಮವು.

೪೩. ಆದುದರಿಂದ ಬುದ್ಧಿಗಿಂತ ಕಾಮವು ಜ್ಞಾನಯೋಗಕ್ಕೆ ಪ್ರಬಲವೈರಿ ಎಂದು ತಿಳಿದವನಾಗಿ ವಿವೇಕಜ್ಞಾನದಿಂದ ಮನಸ್ಸನ್ನು ನಿರೋಧಿಸಿ, ನಿಗ್ರಹಿಸಲಸಾಧ್ಯವಾದ ಈ ಕಾಮವೆಂಬ ಅತ್ಯಂತ ಪ್ರಬಲವೈರಿಯನ್ನು ಜಯಿಸು.

ಇಂತು ಮೂರನೆಯ ಅಧ್ಯಾಯವು.

---

## ನಾಲ್ಕನೆಯ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು.

೧. ಎಲ್ಲಾ ಮುಮುಕ್ಷುಗಳೂ ಜ್ಞಾನಯೋಗಕ್ಕೆ ಅರ್ಹರಲ್ಲವಾದುದರಿಂದ ಕರ್ಮಯೋಗ ವನ್ನೇ ಮಾಡತಕ್ಕದ್ದೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿ, ಈ ಅಧ್ಯಾಯದಲ್ಲಿ ಹಿಂದೆ ಸೂರ್ಯನಿಗೆ ನಾನೇ ಇದನ್ನು ಉಪದೇಶಿಸಿದುದರಿಂದ ಈ ಕರ್ಮಯೋಗಕ್ಕೆ ಮಾಹಾತ್ಮ್ಯಯುಂಟೆಂದೂ, ಇದ ರಲ್ಲೂ ಜ್ಞಾನಾಂಶ ಉಂಟೆಂದೂ, ಕರ್ಮಯೋಗಸ್ವರೂಪ ಮತ್ತು ಭೇದಗಳು ಯಾವುವೆಂಬುದೂ ಹೇಳಲ್ಪಡುವುವು. ಏನೊಂದೂ ಚ್ಯುತಿಯಿಲ್ಲದೆ ಮೋಕ್ಷವನ್ನು ಸಾಧಿಸಿಕೊಡುವ ಈ ಕರ್ಮ ಯೋಗವನ್ನು ಸೂರ್ಯನಿಗೆ ನಾನೇ ಉಪದೇಶಿಸಿದೆನು; ಸೂರ್ಯನು ಮನುವಿಗೂ, ಮನುವು ಇಕ್ಷ್ವಾಕು ಮಹಾರಾಯನಿಗೂ ಹೇಳಿದನು, ಹೀಗೆ ಸತ್ಸಂಪ್ರದಾಯವಾಗಿ ಬಂದಿರುವದರಿಂದ ಮಹಿಮೆಯುಳ್ಳದುದು.

೨. ಹೀಗೆ ಸಂಪ್ರದಾಯ ಪರಂಪರೆಯಾಗಿ ಬಂದ ಕರ್ಮಯೋಗ ಮಾಹಾತ್ಮ್ಯೆಯನ್ನು ಮಹನೀಯರಾಗ ಋಷಿಗಳಹಾಗೆ ಇದ್ದ ರಾಜರುಗಳು ಅರಿತು ಅನುಷ್ಠಿಸಿದರು. ತುಂಬಾ ಕಾಲವು ಕಳೆದನಂತರ ಈ ಕರ್ಮಯೋಗವು ನಷ್ಟವಾಯಿತು; ಎಂದರೆ ಅನುಷ್ಠಾನಕ್ಕೆ ಬರದೆ ಖಿಲವಾಯಿತು.

೩. ನೀನು ನನಗೆ ಪರಮಭಕ್ತನೂ ಸಖನೂ ಆಗಿರುವದರಿಂದ ಆ ರಹಸ್ಯವಾಗಿ ಶ್ರೇಷ್ಠವಾದ ಕರ್ಮಯೋಗಾನುಷ್ಠಾನವನ್ನು ನಿನಗೆ ಉಪದೇಶಿಸಿರುವೆನು.

೪. ಆಗ ಅರ್ಜುನನು ಶಂಕಾಯುಕ್ತನಾಗಿ ಪ್ರಶ್ನಿಸುತ್ತಾನೆ, ಏನೆಂದರೆ ನೀವು ನನ್ನ ಹಾಗೆ ಈಚೆಗೆ ಜನ್ಮವೆತ್ತಿದಹಾಗೆ ತೋರುತ್ತದೆ. ಸೂರ್ಯನ ಜನ್ಮವು ಬಹಳ ಮುಂದಿನ ಕಾಲದಲ್ಲ ಆದದ್ದು. ಹೀಗಿರುವಾಗ ನೀನೇ ಆತನಿಗೆ ಇದನ್ನು ಉಪದೇಶಿಸಿರಿ ಎಂಬುದನ್ನು ಹೇಗೆ ತಿಳಿ ಯಲು ಸಾಧ್ಯವು?

೫ ಯಾವಾಗ ಅರ್ಜುನನು ಹೀಗೆ ಪ್ರಶ್ನಿಸಿದನೋ ಆಗ ಐದು ಶ್ಲೋಕಗಳಿಂದ ತಾನು ಪದೇ ಪದೇ ಅವತರಿಸುವದನ್ನೂ, ಅವತಾರ ರಹಸ್ಯವನ್ನೂ ಉಪದೇಶಿಸುತ್ತಾರೆ. ಓ ಅರ್ಜು ನನೇ, ನಿನಗೆ ಹೇಗೆ ಅನೇಕ ಜನ್ಮಗಳು ಕಳೆದು ಹೋಗಿವೆಯೋ ಹಾಗೆಯೇ ನನಗೂ ಅನೇಕ ಅವ ತಾರಗಳು ಕಳೆದುಹೋಗಿವೆ. ಆದರೆ ನೀನು ಕರ್ಮವಶ್ಯನಾದುದರಿಂದ ನಿನಗೆ ಹಿಂದಿನ ಜನ್ಮಗಳ ಜ್ಞಾನವಿಲ್ಲವು. ನಾನಾದರೋ ಸರ್ವಜ್ಞನಾದುದರಿಂದ ನಾನು ಮಾಡಿದ ಅವತಾರಗಳ ಜ್ಞಾನ ವೆಲ್ಲಾ ನನಗುಂಟು. ಇದರಿಂದ ಅವತಾರಸತ್ಯತ್ವವು ಹೇಳಲ್ಪಟ್ಟಿತು.

೬. ನಾನು ಕರ್ಮವಶ್ಯನಲ್ಲದುದರಿಂದ ಉತ್ಪತ್ತಿ ಇಲ್ಲದಿದ್ದರೂ ಕೂಡ, ಪ್ರಕೃತಿಗೂ ವಿಲ ಕ್ಷಣವಾಗಿ ದಿವ್ಯಮಙ್ಗಳವಿಗ್ರಹಯುಕ್ತನಾಗಿಯೇ ಸರ್ವ ಚಿದಚಿತ್ತಿಗೂ ನಿಯಾಮಕನಾಗಿಯೇ ನನ್ನ ಸ್ವರೂಪರೂಪಗುಣ ವಿಭವೈಶ್ವರ್ಯಾದಿಗಳೊಂದನ್ನೂ ಬಿಡದೇನೇ ನನ್ನ ಸ್ವಸಙ್ಕಲ್ಪಮಾತ್ರದಿಂದಲೇ ಅವತಾರಗಳನ್ನೆತ್ತುವೆನು.

೭. ನನಗೆ ಅವತಾರಕಾಲವು ಯಾವಾಗ ಎಂದರೆ—ಓ ಅರ್ಜುನನೇ, ಯಾವಾಗ ಯಾ ವಾಗ ಧರ್ಮಕ್ಕೆ ತುಂಬಾ ಹಾನಿಯುಂಟಾಗಿ ಅಧರ್ಮವು ಹೆಚ್ಚಾಗಿ ತಲೆ ಎತ್ತುತ್ತದೋ ಆಗ ನಾನು ಅವತರಿಸುವೆನು.

೮. ನಾನು ಅವತರಿಸುವದು ಏತಕ್ಕೆಂದರೆ—ಸಾಧು ಜನರನ್ನು ಲೋಕಕಂಟಕರ ದೆಶ್ಯೆ ಯಿಂದ ರಕ್ಷಿಸುವದಕ್ಕಾಗಿಯೂ, ಆ ಕಾರಣದಿಂದ ಲೋಕಕಂಟಕರನ್ನು ನಾಶಮಾಡುವದಕಾ ಗಿಯೂ, ಉಪದೇಶಾದಿಗಳ ಮೂಲಕ ಧರ್ಮಸಂಸ್ಥಾಪನೆಗಾಗಿಯೂ ಯಾವ ಯುಗದಲ್ಲಾದರೂ ಅವತರಿಸುವೆನು.

೯. ಈ ಅವತಾರ ರಹಸ್ಯ ಜ್ಞಾನದಿಂದುಂಟಾಗುವ ಫಲವನ್ನು ಹೇಳುತ್ತಾರೆ. ಕರ್ಮ ಮೂಲಕವಾದ ಹೇಯಪ್ರಕೃತಿ ಸಂಬಂಧವಿಲ್ಲದಿರುವ ನನ್ನ ಅವತಾರವೂ ನನ್ನ ಚೇಷ್ಟಿತಗಳೂ ವಿಲಕ್ಷಣವಾಗಿ ದಿವ್ಯವಾದವು. ಹೀಗೆ ಯಥಾರ್ಥವಾಗಿ ಯಾವ ಮೋಕ್ಷಾರ್ಥಿಯು ತಿಳಿಯು ವನೋ, ಆತನು ಈ ದೇಹವನ್ನು ತ್ಯಜಿಸಿದನಂತರ ಪುನಃ ಜನ್ಮವನ್ನು ಎತ್ತುವದಿಲ್ಲವು; ಆತನು ನನ್ನ ಆಶ್ರಯಕ್ಕೆ ಪ್ರತಿಬಂಧಕ ಪಾಪಗಳನ್ನು ಕಳೆದುಕೊಂಡು ನನ್ನನ್ನೇ ಕುರಿತು ಬರುವನು ಎಂದರೆ ಮೋಕ್ಷವನ್ನು ಹೊಂದುವನು.

೧೦. ಬರೀ ಅವತಾರ ಜ್ಞಾನದಿಂದಲೇ ಮೋಕ್ಷ ಉಂಟಾಗುವದಿಲ್ಲವು. ಅದು ಹೇಗೆ ಮೋಕ್ಷಕ್ಕೆ ಸಹಕಾರಿಯು ಎಂದರೆ—ಅಂತವರು ಐಹಿಕೇಚ್ಛಾಭಯಕ್ರೋಧವಿಲ್ಲದವರಾಗಿ, ನನ್ನನ್ನೇ ಯಾವಾಗಲೂ ಮನಸ್ಸಿನಲ್ಲುಳ್ಳವರಾಗಿ, ನನ್ನನ್ನೇ ಉಪಾಯಾನುಷ್ಠಾನದ ಮೂಲಕ ಆಶ್ರಯಿಸುವರಾಗಿ, ಈ ಅವತಾರ ರಹಸ್ಯಜ್ಞಾನದಿಂದ ಪಾಪಗಳನ್ನು ಕಳೆದುಕೊಂಡು ಪರಿಶುದ್ಧ ರಾಗಿ, ನನ್ನ ಸ್ವಭಾವಕ್ಕೆ ಸಮವಾದ ಸ್ವಭಾವವನ್ನು ಹೊಂದಿದವರನೇಕರುಂಟು.

೧೧. ತಾನು ಶರಣಾಗತ ವತ್ಸಲನೆಂದು ಹೇಳಿಕೊಳ್ಳುತ್ತಾರೆ. ಯಾರು ಆಶ್ರಿತ ವತ್ಸಲನಾದ ನನ್ನನ್ನು ಮೋಕ್ಷಮಾತ್ರವೇ ಅಲ್ಲದೆ ಇನ್ನು ಯಾವ ಇಷ್ಟಾರ್ಥಗಳಿಗಾಗಿ, ಶರಣಾಗತಿಯಮೂಲಕ ಆಶ್ರಯಿಸುತ್ತಾರೋ, ಅಂತವರಿಗೆ ಅವರುಗಳ ಕೋರಿಕೆಗಳನ್ನು ಸಲ್ಲಿಸುವೆನು. ಅವರುಗಳು ನನ್ನ ಮಾರ್ಗವನ್ನೇ ಸರ್ವ ಪ್ರಕಾರದಲ್ಲೂ ಅನುಸರಿಸಿ ನಡೆಯುವರು.

೧೨. ಅವತಾರರಹಸ್ಯಜ್ಞಾನದ ಮಾಹಾತ್ಮ್ಯೆಯನ್ನು ತಿಳಿಸಿ,ಮುಂದೆ ಪುನಃ ಪ್ರಕೃತವಾದ ಕರ್ಮಯೋಗದ ಜ್ಞಾನಾಕಾರವನ್ನು ತಿಳಿಸಿ, ಅಂತಹ ಅಧಿಕಾರಿಯ ದುರ್ಲಭತ್ವವನ್ನು ಹೇಳುತ್ತಾರೆ. ಮೋಕ್ಷಕ್ಕೆ ಮಾರ್ಗವನ್ನು ತೋರಿಸುವ ಮಾಹಾತ್ಮ್ಯೆಯುಳ್ಳ ಇಂತಹ ಕರ್ಮಯೋಗವನ್ನನುಷ್ಠಿ ಸದೆ, ಕೆಲವರು ತಮ್ಮ ಕರ್ಮಗಳಿಂದ ಐಹಿಕ ಸಿದ್ಧಿಯನ್ನು ಕೋರುವವರಾಗಿ ದೇವತೆಗಳನ್ನು ಆರಾ ಧಿಸುವರು. ಏಕೆಂದರೆ ಈ ಮನುಷ್ಯಲೋಕದಲ್ಲೇ ಅವರಿಗೆ ಶೀಘ್ರದಲ್ಲಿ ಫಲವು ದೊರಕುವದ ರಿಂದ ಹಾಗೆ ಅನುಷ್ಠಿಸುವರು.

೧೩. ಹೀಗೆ ಅಸಾರಫಲವನ್ನಪೇಕ್ಷಿಸಲು ಅವರ ಕರ್ಮಗಳೇ ಕಾರಣವೆಂದೂ ತದನು ಗುಣವಾಗಿ ನಾಲ್ಕುವರ್ಣಗಳಲ್ಲಿ ಅವರಿಗೆ ಜನ್ಮಪ್ರಾಪ್ತಿಯು ಎಂದು ಹೇಳುತ್ತಾರೆ. ಅವರವರು ಗಳ ಸತ್ವರಜಸ್ತಮೋಗುಣಗಳ ಮತ್ತು ಅವರುಗಳುಮಾಡಿದ ಕರ್ಮಗಳ ಅನುಸಾರವಾಗಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣವು ನನ್ನಿಂದ ಸೃಷ್ಟಿಸಲ್ಪಟ್ಟಿತು. ಹೀಗೆ ಸೃಷ್ಟಿಸಿದರೂ, ಅವರವರುಗಳು ಹೀಗೆ ಜನ್ಮವೆತ್ತುವದಕ್ಕೆ ನಾನು ಕಾರಣನಲ್ಲವು. ಅವರ ಪ್ರಾಚೀನ ಕರ್ಮಗಳೂ ಸ್ವಭಾವಗಳೂ ಕಾರಣವು.

೧೪. ಅದು ಹೇಗೆ ಎಂದರೆ ತಿಳಿಸುತ್ತಾರ:—ಕರ್ಮಗಳು ಮನುಷ್ಯರಾದ ನಿಮ್ಮನ್ನು ಲೇಪಿಸಿ ಬಂಧಿಸುವಹಾಗೆ ನನ್ನನ್ನು ಈ ಸೃಷ್ಟಿಸ್ಥಿತಲಯಾದಿ ಕರ್ಮಗಳು ಬಂಧಿಸುವದಿಲ್ಲವು. ನಿಮಗೆಲ್ಲಾ ಕರ್ಮ ಫಲದಲ್ಲಿ ಆಶೆಯಿರುವಹಾಗೆ ನನಗೆ ಇಲ್ಲವು. ಹೀಗೆ ಯಾರು ಚನ್ನಾಗಿ ತಿಳಿದಿರುತ್ತಾರೋ, ಅವರು ತಾವು ಮಾಡುವ ವಿಹಿತ ಕರ್ಮಗಳಿಂದ ಬಂಧಿಸಲ್ಪಡುವದಿಲ್ಲವು.

೧೫. ಇಂತಹ ವಿವೇಕ ಜ್ಞಾನವನ್ನು ಹೊಂದಿ ಹಿಂದಿನ ಮೋಕ್ಷಾರ್ಥಿಗಳಿಂದ ವಿಹಿತ ಕರ್ಮ ಗಳು ಅನುಷ್ಠಿಸಲ್ಪಟ್ಟವು, ಆದುದರಿಂದ ನೀನೂ ಹಿಂದಿ ನ ವಿವಸ್ವಾ ಮೊದಲಾದವರುಗಳಿಂದ ಮಾಡಲ್ಪಟ್ಟ ಕರ್ಮಯೋಗವನ್ನೇ ಅನುಷ್ಠಿಸು.

೧೬. ಈ ಕರ್ಮಯೋಗದಲ್ಲಿ ತಿಳಿಯಲಸಾಧ್ಯವಾದ ರಹಸ್ಯಗಳುಂಟು. ಕರ್ಮಯೋಗದ ಸ್ವರೂಪವೆಂತಾದ್ದು ? ಅಕರ್ಮವೆಂದರೇನು ? ಎಂದರೆ ಅದಕ್ಕೆ ಸಂಬಂಧಿಸಿದ ಜ್ಞಾನವೆಂತಾದ್ದು ? ಈ ಸಂದರ್ಭಗಳಲ್ಲಿ ಪಂಡಿತರೂ ಸಹ ಮೋಹ ಜ್ಞಾನವನ್ನು ಹೊಂದಿರುತ್ತಾರೆ. ಆ ಕಾರಣದಿಂದ

ಅಂತಹ ಜ್ಞಾನದಿಂದ ಕೂಡಿದ ಕರ್ಮಯೋಗದ ಸ್ವರೂಪವನ್ನು ನಿನಗೆ ತಿಳಿಸುವೆನು ಕೇಳು. ಅದನ್ನು ಕೇಳಿ ತಿಳಿದರೆ ನೀನು ಈ ಅಶುಭವಾದ ಬಂಧದಿಂದ ಬಿಡುಗಡೆಯನ್ನು ಹೊಂದುವಿ.

೧೭. ಕರ್ಮಯೋಗಸ್ವರೂಪ ಜ್ಞಾನವನ್ನು ಹೊಂದುವದು ತುಂಬಾ ಕಷ್ಟವು, ಏತರಿಂದೆಂದರೆ, ಕರ್ಮಯೋಗದ ಸ್ವರೂಪದಲ್ಲೂ ತಿಳಿಯತಕ್ಕ ಅಂಶಗಳುಂಟು; ಅದಕ್ಕೆ ಸಂಬಂಧಿಸಿದ ವಿಕರ್ಮವೆಂದರೆ ವಿವಿಧವಾದ ನಿತ್ಯನೈಮಿತ್ತಿಕಗಳ ವಿಷಯದಲ್ಲೂ ತಿಳಿಯತಕ್ಕದ್ದುಂಟು; ಅಕರ್ಮವೆಂದರೆ:- ಕರ್ಮವಲ್ಲದುದು ಜ್ಞಾನವು, ಕರ್ಮಯೋಗಕ್ಕೆ ಸಂಬಂಧಿಸಿದ ಜ್ಞಾನಾಂಶವಲ್ಲೂ ತಿಳಿಯತಕದ್ದುಂಟು; ಹೀಗಿರುವದರಿಂದ ಕರ್ಮಯೋಗಾನುಷ್ಠಾನದ ಮಾರ್ಗವು ತಿಳಿಯಲು ಕಷ್ಟವು.

೧೮. ಕರ್ಮಸ್ವರೂಪವನ್ನು ಕುರಿತು ಮತ್ತು ಅದಕ್ಕೆ ಸಂಬಂಧಿಸಿದ ಜ್ಞಾನವನ್ನೂ ಕುರಿತು ತಿಳಿಯತಕ್ಕದ್ದನ್ನು ಹೇಳುವೆನು ಕೇಳು. ಕರ್ಮಾನುಷ್ಠಾನ ಮಾಡುವಾಗಲೇ ಆತ್ಮಯಾಥಾತ್ಮ್ಯಾನುಸಂಧಾನವನ್ನು ಯಾವನು ಮಾಡುತ್ತಾನೋ, ಮತ್ತು ಆತ್ಮಯಾಥಾತ್ಮ್ಯಾನುಸಂಧಾನವನ್ನು ಮಾಡುತ್ತಾ ಕರ್ಮಯೋಗವನ್ನು ಯಾವನು ಅನುಷ್ಠಿಸುತ್ತಾನೋ, ಅವನೀಗ ಮನುಷ್ಯರಲ್ಲಿ ಪ್ರಾಜ್ಞನು,ಮೋಕ್ಷಕ್ಕೆ ಅರ್ಹನು,ಸಕಲ ಶಾಸ್ತ್ರಾನುಗುಣವಾಗಿ ಅನುಷ್ಠಿಸುವವನು.

೧೯. ಪ್ರತ್ಯಕ್ಷದಲ್ಲಿ ನಡೆಸುವ ಕರ್ಮಯೋಗಾನುಷ್ಠಾನಕ್ಕೆ ಜ್ಞಾನಾಕಾರತೆಯು ಹೇಗೆ ಎಂದರೆ ಹೇಳುತ್ತಾರೆ. ಯಾವ ಮೋಕ್ಷಾರ್ಥಿಗೆ ಸಮಸ್ತ ಕರ್ಮರೂಪ ಪ್ರವೃತ್ತಿಗಳೂ, ನಿತ್ಯನೈಮಿತ್ತಿಕಗಳಿಂದ ಕೂಡಿದ ಕರ್ಮಯೋಗಪ್ರವೃತ್ತಿಯೂ, ಹಾಗೆಯೇ ದೇಹಯಾತ್ರೆಯೇ ಮೊದಲಾದ ಸಮಸ್ತ ಲೌಕಿಕ ಪ್ರವೃತ್ತಿಗಳೂ ಕಾಮ ಸಙ್ಕಲ್ಪವಿಲ್ಲದವುಗಳಾಗವೆಯೋ, ಅಂತಹ ವಿಲಕ್ಷಣ ಕರ್ಮಯೋಗಿಯನ್ನು ಆತ್ಮಯಾಥಾತ್ಮ್ಯಜ್ಞಾನಾಗ್ನಿಯಿಂದ ಸುಟ್ಟುಹೋದ ಪಾಪಗಳನ್ನುಳ್ಳವನಾಗಿ ಶಾಸ್ತ್ರವಿತ್ತುಗಳು ಹೇಳುವರು. ಹೀಗೆ ಪ್ರಾಚೀನಕರ್ಮಗಳು ತೊಲಗುವವು.

೨೦. ಪುನಃ ಕರ್ಮಯೋಗಕ್ಕೆ ಜ್ಞಾನಾಕಾರತೆಯನ್ನು ಉಪಪಾದಿಸುತ್ತಾರೆ. ಕರ್ಮಫಲದಲ್ಲಿ ಸಂಪೂರ್ಣ ಮಮತೆಯನ್ನು ತೊರೆದು, ನಿತ್ಯನಾದ ಆತ್ಮನ ಅನುಸಂಧಾನದಿಂದ ತೃಪ್ತನಾಗಿ, ಅಸ್ಥಿರವಾದ ದೇಹದಲ್ಲಿ ನಂಬಿಕೆ ಇಲ್ಲದವನಾಗಿ, ಕರ್ಮಗಳಲ್ಲಿ ಪ್ರವೃತ್ತನಾದರೂಕೂಡ, ಅಂತವನು ಆ ಕರ್ಮಗಳನ್ನು ಸ್ವಲ್ಪವೂ ಮಾಡಲಿಲ್ಲವೆಂದೇ ಹೇಳಬಹುದು. ಏಕೆಂದರೆ ಆತನಿಗೆ ಅವುಗಳ ಕರ್ತೃತ್ವದಲ್ಲೂ ಫಲದಲ್ಲಿಯೂ ಸಙ್ಗವಿಲ್ಲವಾದುದರಿಂದ ಅಂತವನೇ ಕರ್ಮಯೋಗದ ಜ್ಞಾನಾಕಾರವನ್ನು ತಿಳಿದವನೆಂಬ ಭಾವವು. ಇದರಿಂದ ಮುಂದೆ ಮಾಡುವ ಕರ್ಮವೂ ಲೇಪಿಸುವದಿಲ್ಲವೆಂದು ಹೇಳಲ್ಪಟ್ಟಿತು.

೨೧. ಪುನಃ ಕರ್ಮಯೋಗದ ಜ್ಞಾನಾಕಾರತೆಯ ವಿವೇಕವನ್ನೇ ಹೇಳುತ್ತಾರೆ :—ಈ ಮೇಲಿನ ಕರ್ಮಗಳನ್ನೆಲ್ಲಾ ತಾನೇ ಮಾಡುವಾಗ ತಾನು ಏನನ್ನೂ ಮಾಡಲಿಲ್ಲವೆಂಬುದು ಹೇಗೆ ? ಎಂದರೆ, ಹೌದು, ಕರ್ಮವನ್ನು ಆತನು ಮಾಡುವದೇನೋ ನಿಜವು ; ಆದರೆ ಕರ್ಮಫಲದಲ್ಲಿ ಆಶೆ ಇಲ್ಲದೆ ಮಾಡುತ್ತಾನೆ ; ಮತ್ತು ಇಂದ್ರಿಯ ಮನಸ್ಸೇ ಮೊದಲಾದವುಗಳನ್ನೆಲ್ಲಾ ವಶದಲ್ಲಿಟ್ಟಿರುತ್ತಾನೆ ; ಸಮಸ್ತ ಐಹಿಕಭೋಗಸಾಮಗ್ರಿಯನ್ನೆಲ್ಲಾ ತೊರೆದಿರುತ್ತಾನೆ ; ಆದುದರಿಂದ ಕೇವಲ ಶರೀರಸಂಬಂಧಗಳಾದವುಗಳನ್ನು ಮಾಡುತ್ತಿದ್ದರೂ, ಬಂಧಕನಾಗುವಹಾಗೆ ಪಾಪಸಂಘಟನೆಯು ಇಲ್ಲವು.

೨೨. ಅದು ಹೇಗೆ? ಎಂದರೆ ಹೇಳುತ್ತಾರೆ—ಐಹಿಕದಲ್ಲಿ ಆಶೆಯಿಲ್ಲದೆ,ದೇವರು ದಯಪಾಲಿಸಿದುವರಲ್ಲಿ ಸಂತುಷ್ಟನಾಗಿ, ಶೀತೋಷ್ಣ ದುಃಖ ಸುಖಗಳನ್ನು ಪರಿಗಣಿಸದೆ, ಅಥವಾ ಹಸಿವು ನೀರಡಿಕೆ ಶೋಕ ಮೋಹ ಜರಾ ಮೃತ್ಯುಗಳನ್ನು ಸಹಿಸಿಕ್ಕೊಂಡು, ಮಾತ್ಸರ್ಯವಿಲ್ಲದವನಾಗಿ, ತಾನುಮಾಡುವ ಪ್ರವೃತ್ತಿಗಳಲ್ಲಿ ಫಲವುಂಟಾಗಲಿ, ಫಲ ಉಂಟಾಗದೇ ಇರಲಿ, ಸಮಚಿತ್ತತೆಯನ್ನು ಕಾಪಾಡಿಕೊಂಡರೆ, ಪ್ರವೃತ್ತಿರೂಪಧರ್ಮಾನುಷ್ಠಾನವಿದ್ದರೂ ಬಂಧಿಸಲ್ಪಡುವದಿಲ್ಲವು.

೨೩. ಬಂಧಕವಾಗದಿರುವದಕ್ಕೆ ಕಾರಣವೇನೆಂದರೆ, ಎಲ್ಲಾ ಪಾಪಗಳೂ ಈ ಜ್ಞಾನಾಕಾರವಿರುವ ಕರ್ಮಯೋಗಿಗೆ ತೊಲಗುತ್ತವೆ ಎಂದು ಹೇಳುತ್ತಾರೆ. ಜೀವಾತ್ಮಯಾಥಾತ್ಮ್ಯಾನುಸಂಧಾನದಲ್ಲೇ ಚಿತ್ತವೃತ್ತಿಯುಳ್ಳವನಾದುದರಿಂದ, ಆಕಾರಣದಿಂದ ಮಿಕ್ಕ ಎಲ್ಲಾ ಐಹಿಕಗಳೂ ತುಚ್ಛವಾದುವೆಂದು ಭಾವಿಸಿ, ಸಙ್ಗವಿಲ್ಲದವನಾಗಿ, ಹೀಗೆ ಐಹಿಕವನ್ನೆಲ್ಲಾ ತೊರೆದು, ಪರಮ ಪುರುಷಾರಾಧನರೂಪವು ಎಂದು ಕರ್ಮಯೋಗದ ಯಜ್ಞಾದಿಗಳನ್ನಾಚರಿಸುವನಿಗೆ ಹಿಂದಿನ ಪ್ರಾಚೀನ ಕರ್ಮವೆಲ್ಲವೂ ಸಂಪೂರ್ಣವಾಗಿ ಕ್ಷಯ ಹೊಂದುತ್ತದೆ.

೨೪. ಕರ್ಮಯೋಗವಲ್ಲಿ ಜ್ಞಾನಾಕಾರತೆಯು ಎರಡುವಿಧವು. ಹಿಂದೆ ಆತ್ಮಯಾಥಾತ್ಮ್ಯಾನುಸಂಧಾನ ಮತ್ತು ಐಹಿಕ ವೈರಾಗ್ಯದ ಮೂಲಕ ಜ್ಞಾನಾಕಾರತೆಯು ಹೇಳಲ್ಪಟ್ಟಿತು. ಈಗ ತಾನುಮಾಡುವ ಸಕಲ ಕರ್ಮ ಪರಿಕರಗಳೂ ಪರಬ್ರಹ್ಮಾತ್ಮಕವಾದುದರಿಂದ ಪರಮ ಪುರುಷಾರಾಧನಾರೂಪವಾದುದು ಎಂಬ ಎರಡನೆಯ ವಿಧವಾದ ಜ್ಞಾನಕಾರತೆಯನ್ನು ಹೇಳುತ್ತಾರೆ. ಯಜ್ಞಕ್ಕೆ ಬೇಕಾದ ಸ್ರುಗಾದಿ (ಸೌಟು), ಹವಿಸ್ಸು, ಅಗ್ನಿ, ಯಜ್ಞಮಾಡುವ ಕರ್ತೃ, ಎಲ್ಲಾ ಪರಬ್ರಹ್ಮಾತ್ಮಕವಾದುವು; ಹೀಗೆ ಸರ್ವವೂ ಪರಬ್ರಹ್ಮಮಯವು, ಎಂದು ಯಾವನು ತಿಳಿದು ಯಜ್ಞಮಾಡುವನೋ, ಅವನು ತನ್ನ ನೈಜಸ್ವರೂಪವನ್ನು ಸಾಕ್ಷಾತ್ಕರಿಸತಕ್ಕದ್ದಾಗಿರುತ್ತದೆ. ಎಂದರೆ ಜ್ಞಾನಯೋಗ ನಿರಪೇಕ್ಷನಾಗಿ, ಆತ್ಮಾವಲೋಕನವನ್ನು ಹೊಂದತಕ್ಕದ್ದೆಂಬ ಭಾವವು.

೨೫. ಹೀಗೆ ಕರ್ಮಯೋಗದ ಜ್ಞಾನಾಕಾರತೆಯು ಉಪದೇಶಿಸಲ್ಪಟ್ಟಿತು. ಕರ್ಮಯೋಗದಲ್ಲಿ ನಿತ್ಯನೈಮಿತ್ತಿಕಗಳೊಂದಿಗೆ ಒಂದು ಐಚ್ಛಿಕವಾದ ಕರ್ಮವನ್ನು ಯಜ್ಞರೂಪದಲ್ಲಿ ಅನುಷ್ಠಿಸತಕ್ಕದ್ದೆಂದು ಹಿಂದೆ ಹೇಳಲ್ಪಟ್ಟಿತ್ತು. ಐಚ್ಛಿಕವಾಗಿ ಅನುಷ್ಠಿಸಬೇಕಾದವುಗಳ ಪ್ರಭೇದಗಳನ್ನು ಈಗ ಹೇಳಿ ಅವುಗಳಲ್ಲಿ ಯಾವುದಾದರೂ ಒಂದನ್ನು ಅನುಷ್ಠಿಸತಕ್ಕದ್ದೆಂದು ತಿಳಿಸುತ್ತಾರೆ. (೧) ಕೆಲವು ಕರ್ಮಯೋಗಿಗಳು, ದೇವತಾರ್ಚನಾರೂಪಯಜ್ಞವನ್ನೇ ಶ್ರದ್ಧೆಯಿಂದ ಅನುಷ್ಠಿಸುವರು. (೨) ಇನ್ನು ಕೆಲವರು ಯಜ್ಞಗಳನ್ನನುಷ್ಠಿಸಿ ಹವಿಸ್ಸಮರ್ಪಣೆಯನ್ನು ಪರಬ್ರಹ್ಮ ಕಾರ್ಯರೂಪವಾದ ಅಗ್ನಿಯಲ್ಲಿ ಸಮರ್ಪಿಸುವರು.

೨೬. (೩) ಇನ್ನು ಕೆಲವರು ಶ್ರೋತ್ರವೇ ಮೊದಲಾದ ಇಂದ್ರಿಯಗಳ ನಿಗ್ರಹದಲ್ಲಿರುವರು. (೪)ಇನ್ನೂ ಕೆಲವರು ವಿಷಯಗಳು ಇಂದ್ರಿಯಗಳನ್ನು ಬಂಧಿಸದ ಹಾಗೆ ಅವುಗಳನ್ನು ತ್ಯಾಗಮಾಡುವರು.

೨೭. (೫) ಇನ್ನು ಕೆಲವರು ಜ್ಞಾನದಿಂದ ಪ್ರಕಾಶ ಹೊಂದಿದ ಮನಸ್ಸಿನ ನಿಗ್ರಹರೂಪ ಅಗ್ನಿಯಲ್ಲಿ ಸಮಸ್ತ ಇಂದ್ರಿಯಕರ್ಮಗಳಾದ ದರ್ಶನ, ಸ್ಪರ್ಶನ ಮೊದಲಾದವುಗಳನ್ನೂ, ಪ್ರಾಣಕರ್ಮಗಳಾದ ಶ್ವಾಸೋಚ್ಛ್ವಾಸಾದಿಗಳನ್ನೂ, ಹೋಮಮಾಡುವರು; ಎಂದರೆ ಇಂದ್ರಿಯ ಪ್ರಾಣಕರ್ಮಗಳಲ್ಲಿ ಆಶೆಯು ಮನಸ್ಸಿಗೆ ಉಂಟಾಗದಹಾಗೆ ಮಾಡುತ್ತಾರೆಂಬ ಭಾವವು.

೨೮. ಇನ್ನು ಕೆಲವು ಕರ್ಮಯೋಗಿಗಳು (೬) ಧರ್ಮದಿಂದ ಆರ್ಜಿಸಿದ ದ್ರವ್ಯದಿಂದ ಭಗವದ್ಭಾಗವತ ಕೈಙ್ಕರ್ಯ ಯಜ್ಞದಾನ ಮೊದಲಾದವುಗಳನ್ನು ಅನುಷ್ಠಿಸುವರು. (೭) ಇನ್ನು ಕೆಲವರು ಕೃಚ್ಛ್ರ ಚಾಂದ್ರಾಯಣ ಉಪವಾಸ ಮೊದಲಾದವುಗಳನ್ನು ಕೈಕೊಳ್ಳುವರು. (೮) ಪುಣ್ಯಕ್ಷೇತ್ರಗಳಲ್ಲಿರುವ ಪರಮ ಪುರುಷನ ದಿವ್ಯ ಮಙ್ಗಳ ವಿಗ್ರಹದಲ್ಲೇ ಸಕ್ತವಾದ ಮನಸ್ಸನ್ನುಳ್ಳವರಾಗುವರು. (೯) ಇನ್ನು ಕೆಲವರು ವೇದಾಧ್ಯಯನವನ್ನೂ, ಇತರರು ಅದರ ಅರ್ಥವನ್ನೂ ಪರಿಶೀಲಿಸಿ ಅಭ್ಯಾಸವನ್ನು ಮಾಡುವವರು; ಹೀಗೆ ಇವರೆಲ್ಲರೂ ಯತನಶೀಲರಾಗಿಯೂ ದೃಢಸಙ್ಕಲ್ಪವುಳ್ಳವರಾಗಿಯೂ ಇರುವ ಕರ್ಮಯೋಗಿಗಳು.

೨೯॥. (೧೦) ಇನ್ನು ಕೆಲವರು ಪ್ರಾಣಾಯಾಮಗಳಲ್ಲಿ ನಿರತರಾಗಿರುವವರು; ಅವರು ಮೂರು ವಿಧವು ; ಹೇಗೆಂದರೆ ಪೂರಕ ರೇಚಕ ಕುಂಭಕ ಭೇದದಿಂದ. ನಿಶ್ವಾಸ ವಾಯುವನ್ನು

ಉಚ್ಛ್ವಾಸದಲ್ಲಿ ಅಡಗಿಸಿ ಎಂದರೆ ವಾಯುವನ್ನು ಸೆಳೆದುಕೊಂಡು ಪೂರಕರೂಪ ಅಭ್ಯಾಸವನ್ನು ಮಾಡುತ್ತಾರೆ. ಹಾಗೆಯೇ ಇನ್ನು ಕೆಲವರು ನಿಶ್ವಾಸವಾಯುವಿನಲ್ಲಿ ಉಚ್ಛ್ವಾಸ ವಾಯುವನ್ನು ಹೋಮಮಾಡುತ್ತಾರೆ, ಎಂದರೆ ವಾಯುವನ್ನು ಮೇಲಕ್ಕೆ ಕಳುಹಿಸುವ ಅಭ್ಯಾಸವನ್ನು ಮಾಡುತ್ತಾರೆ, ರೇಚಕಪ್ರಾಣಾಯಾಮ ಪರರಾಗುತ್ತಾರೆ ಇನ್ನು ಕೆಲವರು ಉಚ್ಛ್ವಾಸ ನಿಶ್ವಾಸವಾಯುಗಳನ್ನೂ ತಡೆದು ಕುಂಭಕಾವಸ್ಥೆಯುಳ್ಳವರಾಗುತ್ತಾರೆ.

೩೦॥. ಹೀಗೆ ಮೇಲೆಹೇಳಿದ ಹತ್ತುವಿಧಕರ್ಮಯೋಗಿಗಳೆಲ್ಲಾ ನಿತ್ಯ ನೈಮಿತ್ತಿಕ ಮತ್ತು ಅವರುಗಳು ಐಚ್ಛಿಕವಾಗಿ ಅನುಷ್ಠಿಸುತ್ತಿರುವ ಕರ್ಮಗಳ ಮಾಹಾತ್ಮ್ಯೆಯನ್ನು ಅರಿತವರು; ದೇವತಾರ್ಚನೆಯನ್ನು ಮಾಡಿ ಪರಮ ಪುರುಷನಿಗೆ ನಿವೇದಿತವಾಗಿ, ವೈಶ್ವದೇವದ ಮೂಲಕ ಸಂಸ್ಕಾರ ಹೊಂದಿದ, ಪವಿತ್ರವಾದ ಅನ್ನವನ್ನು ಪರಿಗ್ರಹಿಸುವವರು; ಇದರಿಂದ ನಿವರ್ತಿಸಲ್ಪಟ್ಟ ಪಾಪವುಳ್ಳವರಾಗಿ ಆತ್ಮಾವಲೋಕನ ಸಿದ್ಧಿಯನ್ನು ಹೊಂದುವವರು; ಅಥವಾ ಕ್ರಮೇಣ ಪರಬ್ರಹ್ಮಪ್ರಾಪ್ತಿಯನ್ನು ಹೊಂದುವವರು;

೩೧. ಇಂತಹ ಎರಡುವಿಧ ಜ್ಞಾನಾಕಾರತೆಯುಳ್ಳ ಕರ್ಮಯೋಗಾನುಷ್ಠಾನ ಮಾಡದವನ ಗತಿಯು ಎಂತಾದ್ದೆಂದರೆ—ಇಹಲೋಕದ ಪುರುಷಾರ್ಥಗಳು ಯಾವುವೂ ಇಲ್ಲವು. ಇವೇ ಇಲ್ಲದ ನಂತರ ಇದಕ್ಕೂ ಮೇಲಾದ ವೈಕುಂಠಲೋಕ ಸುಖವೆಲ್ಲಿಯದು?

೩೨. ಆದುದರಿಂದ ಹೀಗೆ ಅನೇಕವಿಧಗಳಾದ ಕರ್ಮಯೋಗ ಪ್ರಭೇದಗಳು ಆತ್ಮಾವಲೋಕನ ಸಾಧನದಲ್ಲಿ, ವಿಸ್ತರಿಸಲ್ಪಟ್ಟಿವೆ. ಈ ಮೇಲೆಹೇಳಿದ ಕರ್ಮಯೋಗಪ್ರಭೇದಗಳೆಲ್ಲಾ ನಿತ್ಯನೈಮಿತ್ತಿಕ ಕರ್ಮಾನುಷ್ಠಾನವನ್ನೇ ಅಙ್ಗವಾಗಿ ಉಳ್ಳವು ಎಂದು ತಿಳಿ; ಹೀಗೆ ಜ್ಞಾನಾಕಾರತೆಯೊಂದಿಗೆ ಈ ಕರ್ಮಯೋಗವು ಅನುಷ್ಠಿಸಲ್ಪಟ್ಟರೆ ನಿನಗೆ ಜ್ಞಾನಯೋಗ ನಿರಪೇಕ್ಷವಾಗಿ ಆತ್ಮಾವಲೋಕನ ಸಿದ್ಧಿಯುಂಟಾಗಿ ಭಕ್ತಿಯೋಗದ್ವಾರಾ ಮೋಕ್ಷವನ್ನು ಹೊಂದುವಿ.

೩೩. ಹೀಗೆ ಕರ್ಮಯೋಗಾನುಷ್ಠಾನವನ್ನು ಎಸಗುವದರಲ್ಲಿ ನಾನು ಹಿಂದೆ ಬೋಧಿಸಿದಹಾಗೆ ಜ್ಞಾನಾಂಶವೂ ಕರ್ಮಾಂಶವೂ ಎರಡು ಉಂಟು. (೧) ಕರ್ತೃವಾದ ಆತ್ಮಾ, ದೇಹಾದ್ವಿಲಕ್ಷಣನು, ಆತನು ಮಾಡುವ ಕರ್ಮಪರಿಕರಗಳೆಲ್ಲವೂ ಪರಬ್ರಹ್ಮಾತ್ಮಕವಾಗಿ ಪರಮ ಪುರುಷಾರಾಧನಾರೂಪವಾದವು;ಇದು ಜ್ಞಾನಾಂಶವು.(೨) ಯಜ್ಞಾನುಷ್ಠಾನಕ್ಕೆ ಬೇಕಾದ ಪರಿಕರಗಳಾದ ಹವಿಸ್ಸು, ಆಜ್ಯ, ಅಗ್ನಿ ಮೊದಲಾದವುಗಳ ಮೂಲಕ ನಡೆಯಬೇಕಾದ ಕರ್ಮಾಂಶವೂ; ಇವೆರಡರಲ್ಲಿ ಓ ಅರ್ಜುನನೇ ಜ್ಞಾನಾಂಶಕ್ಕೇ ಪ್ರಾಧಾನ್ಯವು. ಆದುದರಿಂದ ಸಮಸ್ತ ಕರ್ಮಯೋಗಾನುಷ್ಠಾನವೂ ಆತ್ಮಾವಲೋಕನರೂಪ ಜ್ಞಾನದಲ್ಲೇ ಪರಿಸಮಾಪ್ತಿಯನ್ನು ಹೊಂದಿವೆ.

೩೪. ಇಂತಹ ಗುಹ್ಯವಾದ ಜ್ಞಾನವನ್ನು ಸಂಪಾದಿಸುವದು ಮುಖ್ಯವಾದುದರಿಂದ ಅದನ್ನು ಹೊಂದುವ ಬಗೆ ಹೇಗೆ ಎಂದರೆ ? ನೀನು ಪರಮಾಚಾರ್ಯರುಗಳನ್ನು ವಿಮರ್ಶೆಯಿಂದ ಆಶ್ರಯಿಸಿ ಅವರಿಗೆ ಪ್ರಣಾಮ ಶುಶ್ರೂಷಾದಿಗಳನ್ನು ಮಾಡಿ ಪರಿಪ್ರಶ್ನೆಯನ್ನು ಮಾಡತಕ್ಕದ್ದು. ತತ್ವಯಾಥಾತ್ಮ್ಯವನ್ನು ತಿಳಿದ ಆ ಜ್ಞಾನಿಗಳು ಇಂತಹ ಜ್ಞಾನವನ್ನು ಉಪದೇಶಿಸುವರು.

೩೫. ಹೀಗೆ ಗುರೂಪಸದನವನ್ನು ಮಾಡಿ, ಸಂಸ್ಕಾರಹೊಂದಿದ ಸತ್ಸಂಪ್ರದಾಯರೀತ್ಯಾ ಬಂದ ಆತ್ಮಯಾಥಾತ್ಮ್ಯ ಜ್ಞಾನವನ್ನು ಹೊಂದಿದರೆ, ಓ ಅರ್ಜುನನೇ ನಿನಗೆ ಈಗ ಪ್ರಾಪ್ತವಾಗಿರುವಹಾಗೆ ಭ್ರಮಜ್ಞಾನವಿಲ್ಲದೇ ಇರುವಿ. ಇದರಿಂದ ನೀನು ಸಮಸ್ತ ಚೇತನವರ್ಗವನ್ನೂ ನಿನಗೆ ಸಮಾನವಾಗಿಯೂ, ಅನಂತರ ನನಗೂ ಸಹ ಸಮಾನವಾಗಿಯೂ ಕಾಣುವಿ.

೩೬. ಹೀಗೆ ಮಹಾಗುರುಗಳಿಂದ ಇಂತಹ ಅಮೋಘ ಜ್ಞಾನವನ್ನು ಸಂಪಾದಿಸಿದುದಾದರೆ ಮಹಾಪಾಪಿಗಳಿಗಿಂತಲೂ ಹೆಚ್ಚಾದ ಪಾಪಿಯಾಗಿದ್ದರೂ, ಆ ಸಮಸ್ತ ಪಾಪಸಮುದ್ರವನ್ನೆಲ್ಲಾ ಈ ಜ್ಞಾನವೆಂಬ ನಾವೆಯಿಂದಲೇ ಸುಕರವಾಗಿ ದಾಟುವಿ.

೩೭. ಹಿಂದೆ ಪಾಪಸಮುದ್ರವನ್ನು ದಾಟುವಿ ಎಂದು ಹೇಳಿದರು; ಪಾಪ ಸಮೂಹವು ನಾಶವಾಯಿತು ಎಂದು ಹೇಳಿದಹಾಗೆ ಆಗಲಿಲ್ಲವು. ಆದುದರಿಂದ ಅಗ್ನಿಯಲ್ಲಿ ಭಸ್ಮಮಾಡಿದ ಹಾಗೆ ನಾಶವಾಗುತ್ತದೆಂದು ಇಲ್ಲಿ ಹೇಳುತ್ತಾರೆ. ಓ ಅರ್ಜುನನೇ, ಚನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯು ಕಟ್ಟಿಗೆಯ ಸಮೂಹವನ್ನೆಲ್ಲಾ ಹೇಗೆ ಸುಟ್ಟುಬಿಡುತ್ತದೋ, ಹಾಗೆಯೇ, ಈ ಕರ್ಮಯೋಗವನ್ನು ಜ್ಞಾನಾಕಾರತೆಯಿಂದ ಅನುಷ್ಠಿಸೋಣವು, ಪ್ರಾಚೀನ ಸರ್ವಕರ್ಮಗಳನ್ನೂ ಭಸ್ಮಮಾಡಿಬಿಡುತ್ತದೆ.

೩೮. ತನ್ನ ಆತ್ಮಜ್ಞಾನಕ್ಕೆ ಸಮಾನವಾಗಿ ಪವಿತ್ರವಾದುದು ಎಂದರೆ ಪಾಪನಿವೃತ್ತಿ ಮೂಲಕ ಮಙ್ಗಳವನ್ನುಂಟುಮಾಡುವ ಬೇರೇ ಯಾವುದೂ ಜಗತ್ತಿನಲ್ಲಿ ದೊರೆಯುವದಿಲ್ಲವು. ಆದುದರಿಂದ ತನ್ನ ಆತ್ಮಜ್ಞಾನ ಒಂದೇ ಪರಮಾತ್ಮೋಪಾಸನಕ್ಕೆ ವಿರೋಧಿಯಾದ ಸರ್ವ ಪಾಪ ವನ್ನೂ ಹೋಗಲಾಡಿಸುವ ಶಕ್ತಿಯುಳ್ಳದು, ಅಂತಹ ಆತ್ಮಜ್ಞಾನವನ್ನು, ಈಗ ನಿನಗೆ ಉಪದೇಶಿ ಸಿದ ಕರ್ಮಯೋಗದ ಅಹರಹರನುಷ್ಠಾನದಿಂದ ಕರ್ಮಯೋಗಿಯು ಕಾಲಕ್ರಮದಿಂದ ಹೊಂದುವನು.

೩೯. ಮೇಲೆ ಹೇಳಿದ ಅಭಿಪ್ರಾಯವನ್ನೇ ಸ್ಪಷ್ಟವಾಗುವಹಾಗೆ ತಿಳಿಸುತ್ತಾರೆ. ಹೀಗೆ ಉಪದೇಶವನ್ನು ಹೊಂದಿ ಉಪದೇಶಿಸಿದ ಜ್ಞಾನವೃದ್ಧರಲ್ಲಿ ಶ್ರದ್ಧೆಯುಳ್ಳವನಾಗಿ, ಆತ್ಮಜ್ಞಾನದಲ್ಲಿ ಆಸಕ್ತಿಯುಳ್ಳವನಾಗಿ, ಅದಕ್ಕಿಂತ ಇತರವಾದುವುಗಳಲ್ಲಿ ಇಂದ್ರಿಯಗಳು ಪ್ರವರ್ತಿಸದಹಾಗೆ ಅವುಗಳನ್ನು ನಿಗ್ರಹಿಸುವವನು ಇಂತಹ ಆತ್ಮಯಾಥಾತ್ಮ್ಯಜ್ಞಾನವನ್ನು ಹೊಂದಿ, ಶೀಘ್ರದಲ್ಲೇ ಉಪಾಯನಿಷ್ಪತ್ತಿಯಮೂಲಕ ನಿರತಿಶಯ ಸುಖವನ್ನು ಹೊಂದುವನು.

೪೦. ಹೀಗೆ ಸದ್ಗುರುವಿನಿಂದ ಆತ್ಮಜ್ಞಾನವನ್ನು ಹೊಂದದೆಯೂ, ಉಪದೇಶಿಸಿದ ಜ್ಞಾನಾಭಿವೃದ್ಧಿಯಲ್ಲಿ ತ್ವರೆಯಿಲ್ಲದವನಾಗಿಯೂ, ಉಪದೇಶಿಸಿದ ಜ್ಞಾನದಲ್ಲಿ ಸಂಶಯವುಳ್ಳವ ನಾಗಿಯೂ, ಇದ್ದರೆ ಅಂತವನು ನಷ್ಟನಾಗುವನು; ಹೀಗೆ ಸಂಶಯವಿರುವವನಿಗೆ ಯಾವ ಸುಖವೂ ಇಲ್ಲವು ; ಧರ್ಮಾರ್ಥಕಾಮರೂಪ ಇಹಲೋಕ ಪುರುಷಾರ್ಥಗಳೇ ಇಲ್ಲವು; ಹೀಗಿರುವಾಗ ಇನ್ನೂ ಮೋಕ್ಷವೆಲ್ಲಿಯದು ? ಶಾಸ್ತ್ರೀಯಕರ್ಮಾನುಷ್ಠಾನದಿಂದಲೇ ಚತುರ್ವಿಧ ಪುರುಷಾರ್ಥಗಳು ; ಸಂಶಯವಿರುವನಿಗೆ ಯಾವ ಕರ್ಮವೂ ಇಲ್ಲವು, ಫಲವೂ ಇಲ್ಲವೆಂಬ ಭಾವವು.

೪೧. ಓ ಅರ್ಜುನನೇ, ಹೀಗೆ ಉಪದೇಶಿಸಲ್ಪಟ್ಟ ಕರ್ಮಯೋಗದಿಂದ ಜ್ಞಾನಾಕಾರತೆ ಯನ್ನು ಹೊಂದಿ ಕರ್ಮಾನುಷ್ಠಾನವನ್ನು ಮಾಡುವವನಾಗಿ, ಆತ್ಮಯಾಥಾತ್ಮ್ಯಜ್ಞಾನದಿಂದ ಸಂಶಯವೆಲ್ಲಾ ಕತ್ತರಿಸಿ ಹೋಗಿರುವವನಿಗಾಗಿ, ಆತ್ಮವಂತಂ ಮನಸ್ವಿಯಾಗಿ ಎಂದರೆ ದೃಢ ವಾದ ಮನಸ್ಸುಳ್ಳವನಾದವನನ್ನು, ಈ ಕರ್ಮಗಳು ಬಂಧಿಸುವದಿಲ್ಲವು.

೪೨. ಉಪಸಂಹಾರಮಾಡಿ ಹೇಳುತ್ತಾರೆ—ಆದುದರಿಂದ ಅನಾದಿಯಾಗಿ ಬಂದಿರುವ ಅಜ್ಞಾನದಿಂದುತ್ಪನ್ನವಾಗಿ, ಮನಸ್ಸಿನಲ್ಲಿ ನೆಲಗೊಂಡಿರುವ ಆತ್ಮ ವಿಷಯದಲ್ಲಿ ಸಂಶಯವನ್ನು ನನ್ನಿಂದೀಗ ಉಪದೇಶಿಸಲ್ಪಟ್ಟ ಆತ್ಮಜ್ಞಾನವೆಂಬ ಕತ್ತಿಯಿಂದ ಕತ್ತರಿಸಿ, ನಾನು ಉಪದೇಶಿಸಿದ ಕರ್ಮಯೋಗಾನುಷ್ಠಾನವನ್ನವಲಂಬಿಸು ; ಆದಕ್ಕಾಗಿ ಯುದ್ಧಕ್ಕೆ ಏಳು.

ಇಂತು ನಾಲ್ಕನೆಯ ಅಧ್ಯಾಯವು.



# ಶ್ರೀ ಭಗವದ್ಗೀತಾ ಪ್ರಥಮಷಟ್ಕದ ಅಕಾರಾದಿ ಕ್ರಮವು.

ಶ್ರಿಯೈ ನಮಃ
ಶ್ರೀನಿವಾಸಾಯ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

    

# ಶ್ರೀಮದ್ಭಗವದ್ಗೀತಾ

---

## ಶ್ರೀ ಭಗವದ್ರಾಮಾನುಜ ಭಾಷ್ಯಮ್

ಯತ್ಪದಾಂಭೋರುಹ ಧ್ಯಾನವಿಧ್ವಸ್ತಾಶೇಷ ಕಲ್ಮಷಃ ।
ವಸ್ತುತಾ ಮುಪಯಾತೋಽಹಂ ಯಾಮುನೇಯಂ ನಮಾಮಿ ತಂ ॥

---

ಶ್ರೀ ನಾರಾಯಣ ಯೋಗೀನ್ದ್ರ ವರದಾರ್ಯ ಕೃಪಾಶ್ರಯಮ್ ।
ರಙ್ಗೇಶ ಪಾದ ವಿನತಂ ಶ್ರೀನಿವಾಸ ಮುನಿಂ ಭಜೇ ॥

ಶ್ರೀಮದ್ಭಗವದ್ಗೀತಾ ಶಾಸ್ತ್ರವು "ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲ ನಂದನಃ । ಪಾರ್ಥೋ ವತ್ಸ ಸ್ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥" ಎಂದು ಹೇಳಿರುವ ಹಾಗೆ ಉಪನಿಷತ್ತಿನ ಸಾರಭೂತಾಂಶವನ್ನು ಕರೆದು ತೆಗೆದು ಸರ್ವೇಶ್ವರನು ತಾನೇ ತನಗೆ "ಮಮ ಪ್ರಾಣಾಹಿ ಪಾಂಡವಾಃ" ಎಂಬಲ್ಲಿ ತೋರಿಬರುವ ಅತ್ಯರ್ಥಪ್ರಿಯನಾದ ಅರ್ಜುನನಿಗೆ ಉಪದೇಶಿಸಿರುವುದರಿಂದ ಅಮೃತಪ್ರಾಯವಾದುದು. ಇಲ್ಲಿ ಉಪನಿಷತ್ತುಗಳೇ ಕಾಮಧೇನುಗಳು, ಅರ್ಜುನನೇ ಕರುವು, ಈತನನ್ನೇ ನೆಪ ಮಾಡಿಕೊಂಡು ಶ್ರೀಕೃಷ್ಣನು ಗೋಪಾಲ ಬಾಲನಾದುದರಿಂದ ಸ್ವಯಂ ಅಮೃತರೂಪ ಹಾಲನ್ನು ಹಿಂಡಿ, ಮೊದಲು ಈತನಿಗೆ ಕುಡಿಸಿ, ಅನಂತರ ಜ್ಞಾನಿಗಳೆಂಬ ಭೋಕ್ತೃಗಳಿಗೆ ಕುಡಿಸಿರುತ್ತಾನೆಂಬುದು ಈ ಶ್ಲೋಕತಾತ್ಪರ್ಯವು. ಅಥವಾ ಗೋಪಾಲ - ಈ ಜಗತ್ತನ್ನು ಪಾಲಿಸುವ, ನಂದನ - ಆಲದೆಲೆಯಲ್ಲಿ ಬಾಲನಾದವನೇ ಶ್ರೀಕೃಷ್ಣನಾಗಿ ಅವತರಿಸಿ, ಸಮಸ್ತ ಉಪನಿಷತ್ತಿನ ಸಾರಭೂತಾಂಶವನ್ನು ಹಿಂಡಿ ಮೋಕ್ಷದಾಯಕವಾದ ಈ ಗೀತಾಮೃತವನ್ನು ಜ್ಞಾನಿಗಳಿಗೆ ಕುಡಿಸಿದನೆಂದಾಗಲಿ ಅರ್ಥ ಹೇಳಬಹುದು. ಅಂತಹ ದಿವ್ಯ ಗ್ರಂಥಕ್ಕೆ ಸರ್ವಶಾಸ್ತ್ರ ಸಾಮಂಜಸ್ಯದೊಂದಿಗೆ ಭಾಷ್ಯ ಬರೆಯುವದು ಅತ್ಯಾವಶ್ಯಕವೆಂದು ಶ್ರೀ ಯತಿರಾಜರು ಸಂಕಲ್ಪಿಸಿ, ಪ್ರಾರಂಭಿಸಿದ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯನ್ನು ಹೊಂದುವದಕ್ಕಾಗಿ ತಮ್ಮ ಪ್ರಾಚಾರ್ಯರನ್ನು ಆರಂಭದಲ್ಲಿ ಈ ಶ್ಲೋಕಮೂಲಕ ಕೊಂಡಾಡಿ, ಮಂಗಳಾಚರಣೆಯನ್ನು ಮಾಡುತ್ತಾರೆ. ಆದರೆ ಸ್ವಂತ ಆಚಾರ್ಯರನ್ನು ಭಜಿಸುವದು ಮುಖ್ಯವಾಗಿರುವಾಗ, ಅದನ್ನು ಬಿಟ್ಟು ಪ್ರಾಚಾರ್ಯರ ಭಜನೆಯು ಹೇಗೆ? ಎಂದರೆ, ಪ್ರಾಚಾರ್ಯ ಭಜನೆಯು ತಮ್ಮ ಆಚಾರ್ಯರಿಗೂ ತುಂಬಾ ಇಷ್ಟವಾದುದರಿಂದಲೂ, ಮತ್ತು ತಮ್ಮ ಪ್ರಾಚಾರ್ಯರು ರಚಿಸಿದ ಸಿದ್ಧಿತ್ರಯಗಳು ಇವರು ರಚಿಸಿದ ಗ್ರಂಥಗಳಿಗೆ

ತುಂಬಾ ಉಪಯುಕ್ತವಾದುದರಿಂದಲೂ, ಕೃತಜ್ಞತಾ ಸೂಚಕವಾದ ಈ ಮಂಗಳ ಶ್ಲೋಕವು ಪ್ರಥಮತಃ ರಚಿಸಲ್ಪಟ್ಟಿತು.

**ಅರ್ಥ :—ಯತ್** - ಶರಣಾಗತರನ್ನು ರಕ್ಷಿಸಲು ಉಪಯುಕ್ತವಾದ, ದಯಾ ವಾತ್ಸಲ್ಯ ಸೌಲಭ್ಯ ಸೌಶೀಲ್ಯಾದಿ ಮಹಾಗುಣಗಳಿಂದ ಪ್ರಸಿದ್ಧರಾದ ಯಾವ ಶ್ರೀ ಯಾಮುನೇಯರ, **ಪದಾಂಭೋರುಹ-ಚರಣಕಮಲದ**, ಹೀಗೆ ಹೇಳಿರುವದರಿಂದ ಆಚಾರ್ಯರಲ್ಲಿ ನಿರತಿಶಯಭಕ್ತಿಯು ದ್ಯೋತಿತವು, **ಧ್ಯಾನ** - ಧ್ಯಾನದಿಂದ, **ವಿಧ್ವಸ್ತಾಶೇಷಕಲ್ಮಷಃ** - ನಾಶಗೊಳಿಸಲ್ಪಟ್ಟ ಸಮಸ್ತ ಪಾಪಗಳುಳ್ಳ, ಹೀಗೆ ಉಪದೇಶವಿಲ್ಲದೆ ಬರೀ ಧ್ಯಾನದಿಂದ ಸರ್ವಾಪರಾಧಗಳ ನಾಶ ಉಂಟೋ ಎಂದರೆ ಏಕಲವ್ಯರು ದ್ರೋಣಾಚಾರ್ಯರ ಸಾಕ್ಷಾತ್ ಉಪದೇಶವಿಲ್ಲದೇ ಬರೀ ಧ್ಯಾನದಿಂದಲೇ ಸರ್ವವನ್ನೂ ಸಾಧಿಸಿದ ಹಾಗೆ, ಶ್ರೀ ಯತಿವರ್ಯರೂ ಸಹ, ರಜಸ್ತಮೋಗುಣಗಳ ವಿಜೃಂಭಣೆಯಾದ ಅಶೇಷ ಕಲ್ಮಷಗಳನ್ನು ಕಳೆದುಕೊಂಡವರಾಗಿ, (ಶುದ್ಧ ಸತ್ವ ಮಯರಿಗೆ ಇದು ವಿಡಂಬನವು) ಆ ಕಾರಣದಿಂದ ಸತ್ವಗುಣಪ್ರಾಚುರ್ಯ ಮೂಲಕ ಈ ಸಾರಭೂತವಾದ ಶಾಸ್ತ್ರಕ್ಕೆ ಸರ್ವಸಮಂಜಸವಾದ ಅರ್ಥವನ್ನು ಪ್ರಕಟಿಸಲು ಶ್ರಿಯಃಪತಿಯಿಂದ ತಾವು ಆಗಮೋತ್ಥಜ್ಞಾನ, ವಿವೇಕೋತ್ಥಜ್ಞಾನ ವೆರಡನ್ನೂ ಹೊಂದಿದವರೆಂಬ ಭಾವವು, ಇಂತಹ **ಅಹಂ**-ನಾನು, **ವಸ್ತುತಾಂ**-ಯೋಗ್ಯವಾದ ಒಬ್ಬ ಚೇತನರೂಪ ವಸ್ತುವೆಂಬ ಭಾವವನ್ನು ಎಂದರೆ ಸತ್ತೆಯನ್ನು, **ಉಪಯಾತಃ**-ಹೊಂದಿದೆನೋ ; ತಮ್ಮ ಪರಮಗುರುವಾದ ಯಾಮುನೇಯರ ಸಂದರ್ಶನಧ್ಯಾನಗಳ ಮೂಲಕವೇ ತಮಗೆ ಯೋಗ್ಯವಾದ ಸ್ವರೂಪ ಸತ್ತಾ ಪ್ರಾಪ್ತಿಯೆಂದು ಹೇಳಿಕೊಂಡಿರುತ್ತಾರೆ. **"ವಸ್ತುತಾಂ ಉಪಯಾತಃ"** ಎಂಬುದರಿಂದ **"ಅಸ್ತಿ ಬ್ರಹ್ಮೇತಿಚೇ ದ್ವೇದಸಂತಮೇನಂತತೋ ವಿದುಃ"** ಎಂದು ಹೇಳಿರುವ ಹಾಗೆ ಇಂತಹ ಪರಮಲಾಭವು ತಮಗೆ ಪ್ರಾಪ್ತವಾದುದು ಪರಮಾಶ್ಚರ್ಯವು ಎಂಬ ಭಾವವು ; **ತಂ**-ಅಂತಹ ಮಹಾ ಪ್ರಸಿದ್ಧರಾದ ರಾಜ್ಯಶ್ರೀಯನ್ನೂ ಕೂಡ ತೃಣವಾಗಿ ಎಣಿಸಿದ ಮಹಾ ವಿರಕ್ತ ಶಿಖಾಮಣಿಗಳಾದ ಯಾಮುನೇಯರನು **ನಮಾಮಿ**-ಅನಿಷ್ಟ ನಿವೃತ್ತಿ ಪೂರ್ವಕ ಇಷ್ಟಪೂರ್ತಿಗಾಗಿ ನಮಸ್ಕರಿಸುವೆನು. ಮನಸಾ ವಾಚಾಕರ್ಮಣಾ ತಾವೇ ಈ ಗ್ರಂಥಾವಶ್ಯಕತೆಯಿಲ್ಲದೆ ಪ್ರಣಾಮ ಮಾಡಬಹುದಲ್ಲಾ ಎಂದರೆ, ಇಲ್ಲಿ ಪ್ರಣಾಮವು ಗ್ರಂಥಕ್ಕೆ ಮಂಗಳರೂಪವಲ್ಲ ಮಾತ್ರವೇ ಅಲ್ಲದೆ ಶಿಷ್ಯ ಶಿಕ್ಷಣಾರ್ಥವಾಗಿಯೂ ಶ್ರೋತೃಗಳಿಗೆ ಫಲಸಿದ್ಧಿಗಾಗಿಯೂ ಮಾಡಲ್ಪಟ್ಟಿತೆಂದು ಭಾವಿಸತಕ್ಕದ್ದು.

ಆಚಾರ್ಯ ಪ್ರಣಾಮವಾದ ನಂತರ ಪರತತ್ವವನ್ನು ಕುರಿತು ಸ್ಮರಿಸುವದು ಪರಮ ಮಂಗಳಾವಹವೆಂದೂ, ತಮ್ಮ ಸಿದ್ಧಾಂತರೀತ್ಯಾ ಪರತತ್ವವು ಯಾವುದೆಂದೂ, ಇತರ ಸಿದ್ಧಾಂತಗಳಿಗೂ ತಮ್ಮ ಸಿದ್ಧಾಂತಕ್ಕೂ ಇರುವ ವೈಲಕ್ಷಣ್ಯ ಯಾವುದೆಂದೂ, ಶಾಸ್ತ್ರಗಳ ಸ್ವರೂಪಶೋಧಕ ವಾಕ್ಯಗಳಿಗೂ, ಅದ್ವೈತ ಬೋಧಕ ವಾಕ್ಯಗಳಿಗೂ, ಭೇದ ಪ್ರತಿಪಾದಕ ಶ್ರುತಿಗಳಿಗೂ, ಪರಸ್ಪರ ವಿರೋಧವಿಲ್ಲದೆ ಎಲ್ಲಾ ವಾಕ್ಯಗಳಿಗೂ ಮುಖ್ಯಾರ್ಥಗಳನ್ನೇ ಹೇಳಿ ಪರಮ ಸಾಮಂಜಸ್ಯವನ್ನು ಕಲ್ಪಿಸಬಹುದೆಂದೂ, ಇತರ ಸಿದ್ಧಾಂತಿಗಳು ಹೇಳುವ ಹಾಗೆ ಪರಬ್ರಹ್ಮಕ್ಕೆ ಹೇಯ ಸಂಬಂಧವನ್ನು ಕಲ್ಪಿಸದೆ ಸ್ವಲ್ಪವೂ ಹೇಯಗಂಧದ ಸಂಬಂಧವಿಲ್ಲವೆಂದೂ, ಕಲ್ಯಾಣಗುಣಾಕರ ಮಹೋದಧಿಯಾದುದರಿಂದ ನಿರ್ಗುಣನಲ್ಲವೆಂದೂ, ದಿವ್ಯಮಂಗಳವಿಗ್ರಹಯುಕ್ತನೆಂದೂ, ಉಭಯ ವಿಭೂತಿನಾಯಕನೆಂದೂ, ಅವಾಪ್ತ ಸಮಸ್ತ ಕಾಮನಾದುದರಿಂದ ಈ ವಿಭೂತಿಯು ಆತನಿಗೆ ಲೀಲಾರೂಪವಾದುದೆಂದೂ, ಇಲ್ಲಿನ ಜೀವರಾಶಿಯೆಲ್ಲಾ ಆತನಿಗೆ ತುಂಬಾ ಪ್ರಿಯವಾದುದೆಂದೂ, ಅವರುಗಳಿಂದಾರಾಧಿತನಾಗಿ ಅವರುಗಳಿಗುಚಿತವಾದ ಚತುರ್ವಿಧ ಪುರುಷಾರ್ಥಗಳನ್ನು ಕೊಡಲು ಯೋಗ್ಯವಾದ ಕೃಪಾದಿ ಕಲ್ಯಾಣಗುಣಗಳಿಂದ ಯುಕ್ತನೆಂದೂ, ಎಲ್ಲರೂ ತನ್ನನ್ನು ಆಶ್ರಯಿಸಿ ಪರಮ ಪುರುಷಾರ್ಥವನ್ನು ಹೊಂದಲಿ ಎಂಬ ಔದಾರ್ಯದಿಂದ ವಿಭವಾವತಾರಗಳನ್ನೆತ್ತಿ ಸಾಧು ಪರಿತ್ರಾಣ, ದುಷ್ಟನಿಗ್ರಹ,

**ರಾಮಾ. ಭಾಷ್ಯ—**

**ಶ್ರಿಯಃಪತಿ ರ್ನಿಖಿಲ ಹೇಯ ಪ್ರತ್ಯನೀಕ ಕಲ್ಯಾಣೈಕತಾನಃ,**

---

ಧರ್ಮಸಂಸ್ಥಾಪನಾದಿಗಳನ್ನು ಮಾಡುವನೆಂದೂ, ಹೇಳಲು ಹೊರಟು, ಸ್ವಧರ್ಮವಾದ ಕ್ಷತ್ರಿಯ ಧರ್ಮವನ್ನು ತ್ಯಾಗಮಾಡಿದ ಅರ್ಜುನನಿಗೆ, ಸ್ವಧರ್ಮವಾದ ದುಷ್ಟನಿಗ್ರಹಕ್ಕಾಗಿ ಯುದ್ಧ ಪ್ರೋತ್ಸಾಹದ ನೆಪದಿಂದ ಮೋಕ್ಷಸಾಧನವಾದ ವೇದಾಂತ ವಿದ್ಯೆಯನ್ನೆಲ್ಲಾ ತನ್ನ ಮಿತ್ರನಿಗೆ ಉಪ ದೇಶಿಸಿದನು ಎಂಬದಾಗಿ ಒಂದು ಅಮೋಘ ವಾಕ್ಯವನ್ನು ತಮ್ಮ ಭಾಷ್ಯಕ್ಕೆ ಅವತಾರಿಕೆಯಾಗಿ ಶ್ರೀ ಯತಿವರ್ಯರು ದಯಪಾಲಿಸಿರುತ್ತಾರೆ. ಆ ವಾಕ್ಯದಲ್ಲಿ ವಿಶಿಷ್ಟಾದ್ವೈತ ಪ್ರಕ್ರಿಯೆಯೆಲ್ಲಾ ಸಂಗ್ರಹವಾಗಿ ವೇದ್ಯವು. ಹೇಗೆಂದರೆ:—

**ಶ್ರಿಯಃಪತಿಃ** - ಈ ಸಿದ್ಧಾಂತಕ್ಕೆ ಪರತತ್ತ್ವವು ಯಾವುದೆಂದರೆ, **ಶ್ರಿಯಃಪತಿ** ಎಂದು ಹೇಳು ತ್ತಾರೆ. ಪುರುಷೋತ್ತಮನಿಗೆ ಶ್ರಿಯಃಪತಿತ್ವವು ಸ್ವರೂಪನಿರೂಪಕ ಧರ್ಮವು. ಶ್ರುತಿಯು ಹೇಳಿರುವ ಹಾಗೆ ಪರತತ್ತ್ವವು **"ಸ್ವಧಯಾತಪೇಕಂ"** - ಲಕ್ಷ್ಮಿಯೊಂದಿಗೆ ಆತನು ಒಬ್ಬನೇ (ಋಗ್. ೮.೭.೧೦) ಎಂದು ಹೇಳುತ್ತದೆ. ಹಾಗೆಯೇ ವ್ಯಾಸಮಹರ್ಷಿಯೂ ಆತನು **"ಏಕಾಕೀ ವಿದ್ಯಯಾಸಾರ್ಧಂ"** (ಭಾರ.ಮೋಕ್ಷ) ಲಕ್ಷ್ಮಿಯೊಂದಿಗೆ ಒಬ್ಬನೇ ಎಂದುಪದೇಶಿಸಿರುತ್ತಾರೆ. ಹೀಗೆ ಲೋಕದಂಪತಿಗಳಿ ಬ್ಬರೂ ಸೇರಿ ಪರತತ್ತ್ವವು. ಶ್ರೀಸಹಾಯಕನಾಗಿಯೇ ನಾರಾಯಣನು ಸರ್ವಲೋಕವ್ಯಾಪಾರವನ್ನೂ ನಡೆಸುತ್ತಾನೆಂಬ ಭಾವವು. ಕಿರಣವು ಹೇಗೆ ಆದಿತ್ಯನನ್ನೂ, ರತ್ನದೀಪ್ತಿಯು ಹೇಗೆ ರತ್ನವನ್ನೂ, ಪರಿಮಳವು ಹೇಗೆ ಪುಷ್ಪವನ್ನೂ ಬಿಟ್ಟಿರುವದಿಲ್ಲವೋ, ಹಾಗೆಯೇ ಲಕ್ಷ್ಮಿಯು ನಾರಾಯಣನನ್ನು ಎಂದಿಗೂ ಬಿಟ್ಟಿರುವದಿಲ್ಲವು. ಸರ್ವೇಶ್ವರನ ಸ್ವರೂಪರೂಪ ಗುಣ ವಿಭವೈಶ್ವರ್ಯಕ್ಕೆ ಅನುಗುಣವಾದ ಸ್ವರೂಪ ರೂಪ ಗುಣ ವಿಭವೈಶ್ವರ್ಯಗಳನ್ನುಳ್ಳವಳು. **"ಲೋಕನಾಥದಯಿತೆ"** ಯಾದುದರಿಂದ **ಲೋಕೈಕೇಶ್ವರಿಯು.** ಆದುದರಿಂದ ಪರತತ್ತ್ವವು ಶ್ರಿಯಃಪತಿಯು ಎಂದು ಹೇಳಲ್ಪಟ್ಟಿತು.

**ನಿಖಿಲ ಹೇಯಪ್ರತ್ಯನೀಕ ಕಲ್ಯಾಣೈಕತಾನಃ** - ಆತನು ಗುಣರಹಿತನಲ್ಲವು. ಸಮಸ್ತ ಹೇಯಗಂಧದ ಸಂಬಂಧವೇ ಇಲ್ಲದಿರುವವನೂ ಅಲ್ಲದೆ ನಿತ್ಯ ನಿರವದ್ಯ ನಿರತಿಶಯ ಕಲ್ಯಾಣಗುಣ ಗಣ ಮಹೋದಧಿಯು. ಇತರರು ಹೇಳುವ ಹಾಗೆ ನಿರ್ವಿಶೇಷನಲ್ಲವು, ಹಾಗೆ ನಿರ್ವಿಶೇಷನಾದರೆ ಶ್ರುತಿಯೂ ಕೂಡ ಬೋಧಿಸಲಸಾಧ್ಯವಾಗುವದು. ಆಚಾರ್ಯರೂ ತನ್ನ ಶಿಷ್ಯನಿಗೆ ಆಗ ಪರಬ್ರಹ್ಮ ಸ್ವರೂಪವನ್ನು ಬೋಧಿಸಲಾರರು. ಹೇಯಪ್ರತ್ಯನೀಕತ್ವವೂ ಕಲ್ಯಾಣಗುಣಾಕರತ್ವವೂ ಪರತತ್ತ್ವಕ್ಕೆ ಉಂಟೆಂದು, **"ನಸ್ಥಾನತೋಽಪಿ ಪರಸ್ಯೋಭಯಲಿಙ್ಗಮ್ ಸರ್ವತ್ರಹಿ"** (ಶಾ. ಸೂ. ೩. ೨. ೧೧) ಎಂಬ ವ್ಯಾಸಸೂತ್ರದಲ್ಲಿ ಉಪಪಾದಿತವು. ಅಂತರ್ಯಾಮಿಯಾಗಿ ಪ್ರಾಕೃತ ಶರೀ ರಾದಿ ಸಂಬಂಧವಿದ್ದರೂ ಈತನಿಗೆ ಏನೊಂದೂ ದೋಷಗಂಧವಿಲ್ಲವು; ಅನೇಕ ಶ್ರುತಿ ಸ್ಮೃತಿಗಳ ಲ್ಲೆಲ್ಲಾ ನಿರಸ್ತ ನಿಖಿಲದೋಷ ಸಂಬಂಧವೂ ಸಮಸ್ತ ಕಲ್ಯಾಣಗುಣಾಕರತ್ವವೂ ಹೀಗೆ ಉಭಯ ಲಕ್ಷಣವುಳ್ಳದ್ದು ಪರಬ್ರಹ್ಮವೆಂದು ಹೇಳಲ್ಪಟ್ಟಿರುತ್ತದೆ. **"ಸಕಲಾ ನ ಯತ್ರ ಕ್ಲೇಶಾದಯಃ"** ಎಂದೂ, "ಸಮಸ್ತ ಕಲ್ಯಾಣ ಗುಣಾತ್ಮಕೋಽಸೌ" ಎಂದೂ ವಿಷ್ಣುಪುರಾಣವು ಬೋಧಿಸುತ್ತದೆ. **"ಪ್ರಕೃತಿಸ್ಥೋಽಪಿ ಪುರುಷಃ ನಾಜ್ಯತೇ ಪ್ರಾಕೃತೈರ್ಗುಣೈಃ। ಅವಿಕಾರಾ ದಕರ್ತೃತ್ವಾ ನ್ನಿರ್ಗು ಣತ್ವಾಜ್ಜಲಾರ್ಕವತ್ ॥"** ಎಂದು ಜೀವಾತ್ಮಸ್ವರೂಪವೇ ಪ್ರಕೃತಿ ಸಂಬಂಧವಿದ್ದರೂ ಹೇಯ ಗುಣರಹಿತವಾದುದು ಎಂದು ಶ್ರೀ ವ್ಯಾಸರೇ (೩.೨೭.೧) ಭಾಗವತದಲ್ಲಿ ಹೇಳಿರುವಾಗ, ಪರಮಾತ್ಮ ನಿಗೆ ಹೇಯಸಂಬಂಧವಿಲ್ಲವೆಂಬುದು ಕೈಮುತಿಕ ನ್ಯಾಯಸಿದ್ಧವು. **ಕಲ್ಯಾಣೈಕತಾನ** ನೆಂದರೆ

**ಸ್ವೇತರ ಸಮಸ್ತ ವಸ್ತು ವಿಲಕ್ಷಣಾನನ್ತ ಜ್ಞಾನಾನಂದೈಕ ಸ್ವರೂಪಃ, ಸ್ವಾಭಾವಿಕಾ ನವಧಿಕಾತಿಶಯ ಜ್ಞಾನ ಬಲೈಶ್ವರ್ಯ ವೀರ್ಯಶಕ್ತಿ ತೇಜಃ**

ಕಲ್ಯಾಣಗುಣಗಳ ಅನನ್ಯವೃತ್ತಿಯು, ಅವ್ಯಭಿಚರಿತವಾದ ಕಲ್ಯಾಣಗುಣಗಳುಳ್ಳವನು. ಇದರಿಂದ ಅಕಲ್ಯಾಣ ಸ್ಪರ್ಶರೂಪವಾದ ಅವಿದ್ಯಾಗೃಹೀತತ್ವವು ನಿರಾಕರಿಸಲ್ಪಟ್ಟಿತು; "ಮಙ್ಗಳಾನಾಂ ಚ ಮಙ್ಗಳ"ನೆಂದು ಬೋಧಿಸಲ್ಪಟ್ಟಿತು.

ಸ್ವೇತರ ಮುಂತಾದುದು. **ಸ್ವೇತರಸಮಸ್ತವಸ್ತು** - ಎಲ್ಲಾ ವಸ್ತುಗಳಲ್ಲಿ ಅಂತರ್ಯಾಮಿಯಾಗಿದ್ದರೂ ಅವುಗಳ ದೋಷಗಳು ತನ್ನಲ್ಲಿ ಸಂಬಂಧಿಸದೇ ಇರುವದರಿಂದ, ತನಗಿಂತಲೂ ಇತರವಾದ ಚಿದಚಿತ್ತುಗಳಿಗಿಂತಲೂ ವಿಲಕ್ಷಣವಾಗಿ, ಅನಂತವಾದ ಜ್ಞಾನಾನಂದಗಳೇ ಮುಖ್ಯ ಸ್ವರೂಪವಾಗಿ ಉಳ್ಳವನು. ಸ್ವರೂಪ ಸ್ವಭಾವ ವಿಕಾರವಿಲ್ಲದುದರಿಂದ ಅಚಿತ್ತಿಗಿಂತಲೂ ವಿಲಕ್ಷಣನು. ಚಿತ್ತಿನ ಹಾಗೆ ಸ್ವಭಾವವಿಕಾರವೂ ಇಲ್ಲದುದರಿಂದ ಅದಕ್ಕಿಂತಲೂ ವಿಲಕ್ಷಣನು. ಇನ್ನೂ ಹೇಗೆ ವಿಲಕ್ಷಣನು ಎಂದರೆ ಅನಂತ ಜ್ಞಾನಾನಂದೈಕ ಸ್ವರೂಪನಾದುದರಿಂದ. ಅನಂತವೆಂದರೆ ದೇಶ ಕಾಲ ವಸ್ತುಪರಿಚ್ಛೇದವಿಲ್ಲದವನು. ಈ ದೇಶದಲ್ಲಿದ್ದಾನೆ ಅಲ್ಲಿಲ್ಲವೆಂಬುದು ಇಲ್ಲ, ಮತ್ತು ಹಿಂದಿನ ಕಾಲದಲ್ಲಿರಲಿಲ್ಲ, ಈಗ ಇದ್ದಾನೆಂದಿಲ್ಲವು; ಈ ವಸ್ತುವಿನಲ್ಲಿದ್ದಾನೆ, ಬೇರೊಂದರಲ್ಲಿಲ್ಲವೆಂಬದಾಗಿ ಅಲ್ಲವು; ಸರ್ವದೇಶ ಸರ್ವಕಾಲ ಸರ್ವವಸ್ತುಗಳಲ್ಲೂ ಇದ್ದಾನೆಂಬ ಭಾವವು. ವಸ್ತುಪರಿಚ್ಛೇದವಿಲ್ಲವೆಂದು ಹೇಳುವದರಿಂದ ಸಮಸ್ತ ವಸ್ತು ಸಾಮಾನಾಧಿಕರಣ್ಯ ಯೋಗ್ಯತ್ವವು "**ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುಃ**" (ವಿ. ಪು. ೨.೧೨.೩೮) ಎಂದು ಹೇಳಿರುವ ಹಾಗೆ ಉಂಟೆಂದು ಹೇಳಿದಂತಾಯಿತು. ಇದರಿಂದ, ತನಗಿಂತಲೂ ಇತರವಾದ ವಸ್ತುವೆಲ್ಲಾ ಮಿಥ್ಯೆ ಎಂಬ ವಾದವು ನಿರಸ್ತವು. ಆನಂದವೂ ಒಂದು ಜ್ಞಾನವಿಶೇಷವಾದುದರಿಂದ ಜ್ಞಾನಾನಂದಶಬ್ದಗಳಿಗೆ ಸಾಮಾನಾಧಿಕರಣ್ಯವೂ ಕೂಡುತ್ತದೆ.

ಸರ್ವೇಶ್ವರನ ಸ್ವರೂಪವನ್ನು ನಿರೂಪಿಸಿದ ನಂತರ, ಆತನ ರೂಪವನ್ನು ಎಂದರೆ ದಿವ್ಯ ಮಂಗಳವಿಗ್ರಹವನ್ನು ಕುರಿತು ಹೇಳಬೇಕಾದ ಆವಶ್ಯಕತೆಯಿದ್ದರೂ, ಅದನ್ನು ಬಿಟ್ಟು, ಈ ಮುಂದಿನ ವಾಕ್ಯದಿಂದ ಸರ್ವೇಶ್ವರನ ಕಲ್ಯಾಣಗುಣಗಳನ್ನು ಕೊಂಡಾಡುತ್ತಾರೆ. ಇದಕ್ಕೆ ಕಾರಣವೇನೆಂದರೆ ದಿವ್ಯಮಂಗಳ ವಿಗ್ರಹವನ್ನು ಧರಿಸುವದಕ್ಕೂ ಮತ್ತು ನಿಯಮನಾದಿಗಳಿಗೂ ಜ್ಞಾನಾದಿ ಗುಣಗಳಾವಶ್ಯಕವಾದುದರಿಂದ ಈಗ ಆತನ ಕಲ್ಯಾಣಗುಣಗಳನ್ನು ಕುರಿತು ಕೊಂಡಾಡುತ್ತಾರೆ. **ಸ್ವಾಭಾವಿಕ** - ಇನ್ನು ಯಾರಿಗೂ ಅಧೀನವಲ್ಲದೆ ತನಗೇನೇ ಸ್ವಾಭಾವಿಕವಾದ, **ಅನವಧಿಕ** - ಅವಧಿಯಿಲ್ಲದ, **ಅತಿಶಯ** - ಉತ್ಕೃಷ್ಟತೆಯುಳ್ಳ; ಇವು ಜ್ಞಾನಾದಿ ಸರ್ವ ಗುಣಗಳಿಗೂ ವಿಶೇಷಣಗಳು, **ಜ್ಞಾನ**-"**ಯೋವೇತ್ತಿ ಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾಸ್ವತಃ**" ಎಂದು ಶ್ರೀ ಯಾಮುನೇಯರವರು ಹೇಳಿರುವ ಹಾಗೆ ಸಮಸ್ತವನ್ನೂ ಯಾವಾಗಲೂ ಏಕಕಾಲದಲ್ಲೇ ತಾನಾಗಿಯೇ ಸಾಕ್ಷಾತ್ಕರಿಸುವ ಶಕ್ತಿಯುಳ್ಳೋಣವು. **ಬಲ** ವೆಂದರೆ ಶ್ರಮವೆಂಬುದರ ಪ್ರಸಕ್ತಿಯೇ ಇಲ್ಲದೆ ಸಮಸ್ತವನ್ನೂ ಧರಿಸುವ ಸಾಮರ್ಥ್ಯವು, ಈ ಗೀತೆಯಲ್ಲೇ ಮುಂದೆ "**ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ**" ಎಂಬಲ್ಲಿ ಇದು ಉಪಪಾದಿತವಾಗಿದೆ; **ಪರಮಾತ್ಮಾ ಚ ಸರ್ವೇಷಾ ಮಾಧಾರಃ ಪರಮೇಶ್ವರಃ**" ಸಮಸ್ತಕ್ಕೂ ಪರಮಾತ್ಮನು ಆಧಾರವೆಂಬ ಪ್ರಮಾಣದಿಂದಲೂ ಸಿದ್ಧವು. **ಐಶ್ವರ್ಯ**- "**ಏಷ ಸರ್ವೇಶ್ವರಃ**" ಮತ್ತು "**ಸರ್ವೇಶ್ವರಃ ಕೃಷ್ಣಃ**" ಇತ್ಯಾದಿ ಪ್ರಮಾಣಗಳಲ್ಲಿ ಹೇಳಿರುವ ಹಾಗೆ ತನ್ನ ಸಂಕಲ್ಪಕ್ಕೆ ಪ್ರತಿಬಂಧವಿಲ್ಲದ ಹಾಗೆ ಸಮಸ್ತವನ್ನೂ ನಿಯಮಿಸೋಣವು, **ವೀರ್ಯ** - ಸಮ

**ಪ್ರಭೃತ್ಯ ಸಂಖ್ಯೇಯ ಕಲ್ಯಾಣಗುಣಗಣಮಹೋದಧಿಃ,**

---

ಸ್ತ್ರಕ್ಕೂ ಉಪಾದಾನ ಕಾರಣನಾಗಿರುವದರಿಂದಲೂ, ಸಮಸ್ತವನ್ನೂ ಧರಿಸುವದರಿಂದಲೂ, ಸಮಸ್ತವನ್ನೂ ನಿಯಮಿಸುವದರಿಂದಲೂ ಸ್ವಲ್ಪವಾಗಲಿ ವಿಕಾರ ಉಂಟಾಗದಿರುವಿಕೆಯು. **ಶಕ್ತಿ** - ಇತರರಿಂದ ಘಟನ ಮಾಡಲು ಅಶಕ್ಯವಾದುದನ್ನೂ ಘಟನೆ ಮಾಡುವ ಸಾಮರ್ಥ್ಯವಾದ ಅಘಟಿತ ಘಟನಾಶಕ್ತಿಯು, **ತೇಜಃ** - ಯಾರಿಗೂ ಸ್ವಾಧೀನನಾಗದೇ ಯಾವ ಸಹಕಾರಿಯಪೇಕ್ಷೆಯಿಲ್ಲದಿರೋಣವು. ಈ ಗುಣಕ್ರಮವನ್ನು ಬೋಧಿಸುವ ಅಭಿಪ್ರಾಯವೇನೆಂದರೆ :—ನಮ್ಮಗಳಿಗಾದರೋ ನಮಗೆ ಸೇರಿದ ವಿಭೂತಿಯ ಸರ್ವ ಜ್ಞಾನವೂ ಏಕಕಾಲದಲ್ಲಿ ಉಂಟಾಗುವದಿಲ್ಲವು; ಒಂದುವೇಳೆ ಉಂಟಾದರೂ ಅದೆಲ್ಲವನ್ನೂ ಧರಿಸಲು ಯೋಗ್ಯತೆಯಿರುವದಿಲ್ಲವು; ಒಂದುವೇಳೆ ಧರಿಸಿದರೂ ಎಲ್ಲವನ್ನೂ ತನ್ನ ಇಷ್ಟಾನುಗುಣ ನಿಯಮಿಸಲು ಯೋಗ್ಯತೆಯಿಲ್ಲವು; ಒಂದುವೇಳೆ ಇದಕ್ಕೂ ಯೋಗ್ಯತೆಯಿದ್ದರೂ ಶೀಘ್ರವಾಗಿ ಆಯಾಸಹೊಂದಿ ಶಿಥಿಲತೆಯನ್ನು ಹೊಂದುವೆವು; ಒಂದುವೇಳೆ ಇದಕ್ಕೂ ಯೋಗ್ಯತೆಯಿದ್ದರೂ, ಎಲ್ಲಾದಕ್ಕೂ ಸತ್ತಾ ಸ್ಥಿತ್ಯಾದಿಗಳಿಗೆ ಕಾರಣವಾಗಲು ಇತರ ಸಹಾಯ ಬೇಕು. ಹೀಗೆ ಇಲ್ಲದೆ ವಿಲಕ್ಷಣನಾಗಿರುವವನು ಸರ್ವೇಶ್ವರನು. ಹೀಗೆಯೇ ಶ್ರುತಿಯೂ ಕೊಂಡಾಡಿರುತ್ತದೆ:—**"ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ । ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾಚ ॥"** (ಶ್ವೇತ. ೬. ೮) ಇಲ್ಲಿ **ಕ್ರಿಯಾ** ಎಂದರೆ ಸರ್ವವನ್ನೂ ನಿಯಮಿಸೋಣವು. **ಪ್ರಭೃತಿ** - ಇವೇ ಮೊದಲಾದ ಅಸಂಖ್ಯೇಯ ಕಲ್ಯಾಣಗುಣಗಳಿಗೆ ಅಪಾರ ಸಾಗರರೂಪನು. ಈ ಸಂದರ್ಭದಲ್ಲಿ ವಾಮನಪುರಾಣ ಶ್ಲೋಕವು ಅನುಸಂಧೇಯವು :—**"ಯಥಾ ರತ್ನಾನಿ ಜಲಧೇರಸಂಖ್ಯೇಯಾನಿ ಪುತ್ರಕ । ತಥಾ ಗುಣಾಹ್ಯನಂತಸ್ಯ ಅಸಂಖ್ಯೇಯಾ ಮಹಾತ್ಮನಃ ॥"** "ಸಮುದ್ರದಲ್ಲಿರುವ ರತ್ನಗಳು ಹೇಗೆ ಅಸಂಖ್ಯೇಯಗಳೋ ಹಾಗೆ ಈ ಮಹಾತ್ಮನ ಅನಂತಕಲ್ಯಾಣ ಗುಣಗಳೂ ಅಸಂಖ್ಯೇಯಗಳು." ಯಾವಾಗ ಕಲ್ಯಾಣಗುಣಗಳಿಂದ ಪರಿಪೂರ್ಣನೆಂದು ಹೇಳಲ್ಪಟ್ಟಿತೋ ಆಗ ಹೇಯಗುಣಗಳಿಗೆ ಅವಕಾಶವಿಲ್ಲವೆಂಬುದು ಸ್ವತಃ ಏರ್ಪಟ್ಟಿತು. **"ಸಮಸ್ತಹೇಯರಹಿತಂ ವಿಷ್ಣ್ವಾಖ್ಯಂ ಪರಮಂ ಪದಂ"** (ವಿ. ಪು. ೧. ೨೨. ೫೩) ವಿಷ್ಣುವೆಂದು ಹೆಸರುಳ್ಳ ಪರಮಪ್ರಾಪ್ಯವು ಸಮಸ್ತ ಹೇಯಗುಣರಹಿತವು, ಎಂಬ **"ಪರಃ ಪರಾಣಾಂ ಸಕಲಾ ನ ಯತ್ರ ಕ್ಲೇಶಾದಯ ಸ್ಸಂತಿ ಪರಾವರೇಶೇ"** (ವಿ. ಪು. ೬. ೫. ೮೫) **"ಪರಾಣಾಂ** - ಶ್ರೇಷ್ಠರಾದ ಬ್ರಹ್ಮರುದ್ರಾದಿಗಳಿಗೂ, **ಪರಃ**-ಶ್ರೇಷ್ಠನಾದವನು ಸರ್ವೇಶ್ವರನು. ಅದು ಹೇಗೆಂದರೆ, **ಯತ್ರ** - ಯಾವ, **ಈಶೇ** - ಸರ್ವ ನಿಯಾಮಕನಾದ ಪರಮಾತ್ಮನಲ್ಲಿ, **ಸಕಲಾಃ ಕ್ಲೇಶಾದಯಃ** - ಕರ್ಮವಾಸನಾದಿಗಳಿಂದುಂಟಾಗುವ ಸಮಸ್ತ ದುಃಖಗಳು, **ನಸಂತಿ**-ಇರುವದಿಲ್ಲವೋ, ಇಂತಹ ಜ್ಞಾನ ಬಲೈಶ್ವರ್ಯ ವೀರ್ಯಶಕ್ತಿ **ತೇಜಃ ಪ್ರಭೃತಿ** - ಈ ಷಡ್ಗುಣಗಳೇ ಮೊದಲಾದ, **ಅಸಂಖ್ಯೇಯ ಕಲ್ಯಾಣಗುಣಗಣ ಮಹೋದಧಿಃ** - ಎಣಿಸಲಸಾಧ್ಯವಾದ ಕಲ್ಯಾಣಗುಣಗಳಿಗೆ ಅಪಾರಸಾಗರ ರೂಪನಾಗಿರುವ ಶ್ರೀಕೃಷ್ಣನು. ಶ್ರೀಮದ್ರಾಮಾಯಣದಲ್ಲಿ ಮಹರ್ಷಿಯು **"ಬಹವೋ ನೃಪ ಕಲ್ಯಾಣಗುಣಾಃ ಪುತ್ರಸ್ಯ ಸಂತಿತೇ"** ಎಂದೂ, **"ಗುಣೈರ್ವಿರುರುಚೇ ರಾಮೋ ದೀಪ್ತಸ್ಸೂರ್ಯ ಇವಾಂಶುಭಿಃ"** ಎಂದೂ, **ಏವಂ ಶ್ರೇಷ್ಠಗುಣೈರ್ಯುಕ್ತಃ ಪ್ರಜಾನಾಂ ಪಾರ್ಥಿವಾತ್ಮಜಃ । ಬಹಿಶ್ಚರ ಇವ ಪ್ರಾಣೋ ಬಭೂವ ಗುಣವತ್ತರಃ ॥"** ಹೀಗೆ ಕಲ್ಯಾಣಗುಣಗಳನ್ನು ಎಷ್ಟು ವರ್ಣಿಸಿದರೂ ತೃಪ್ತಿ ಇಲ್ಲದ ಹಾಗೆ ತೋರಿಸಿರುತ್ತಾರೆ. ಇಂತಹ ಕಲ್ಯಾಣಗುಣಮಹೋದಧಿಯನ್ನು ನಿರ್ಗುಣನೆಂದು ಹೇಳುವದು ಸರಿಯಲ್ಲವೆಂದು ಸೂಚಿಸುವದಕ್ಕಾಗಿ ಹಾಗೆ ಪ್ರಯೋಗವು. ಶ್ರೀ ಕೃಷ್ಣನೇ ಪರತತ್ವವಾದುದರಿಂದ ಸಗುಣನೇ.

**ಸ್ವಾಭಿಮತಾ ನುರೂಪೈಕರೂಪಾ ಚಿನ್ತ್ಯದಿವ್ಯಾದ್ಭುತ ನಿತ್ಯ ನಿರವದ್ಯ ನಿರತಿಶಯೌಜ್ಜ್ವಲ್ಯ ಸೌಂದರ್ಯ ಸೌಗನ್ಧ್ಯ ಸೌಕುಮಾರ್ಯ ಲಾವಣ್ಯ ಯೌವನಾದ್ಯನನ್ತಗುಣನಿಧಿ ದಿವ್ಯರೂಪಃ**

"ಯದಸೌತ್ರಿಷೀ ಗುರ್ಣಮಯಂ ನಿರ್ಗುಣಂ ಮಾzನುಪರ್ಣರ್ಯ" ಎಂದು ಶ್ರೀ ವ್ಯಾಸರೇ ಭಾಗವತದಲ್ಲಿ (೩.೯.೩) ಚತುರ್ಮುಖ ಬ್ರಹ್ಮನನ್ನು ಕುರಿತ ಸರ್ವೇಶ್ವರನ ವಾಕ್ಯಾಗಿ ಉಪದೇಶಿ ಸಿರುವದರಿಂದ, ಗುಣಮಯನು - ಕಲ್ಯಾಣಗುಣ ಪ್ರಾಚುರ್ಯವುಳ್ಳವನೆಂದು ಹೇಳಿ, ನಿರ್ಗುಣನೆಂದು ಪ್ರಯೋಗವಿರುವದರಿಂದ ನಿರ್ಗುಣನೆಂದರೆ ಪ್ರಾಕೃತವಾದ ಹೇಯಗುಣರಹಿತನೆಂದು ಅರ್ಥವನ್ನೇ ಹೇಳಬೇಕೆಂಬುದು ಏರ್ಪಟ್ಟಿತು.

**ಸ್ವಾಭಿಮತೇತಿ** - ಸ್ವಾಭಿಮತ - ತನಗೆ ಇಷ್ಟವಾದುದಾಗಿಯೂ ಅನುರೂಪವಾಗಿಯೂ, **ಏಕ ರೂಪ** - ಸದಾ ತನ್ನ ಸ್ವಾಭಾವಿಕವಾದ ಹೇಯಪ್ರತ್ಯನೀಕತ್ವಾದಿ ಒಂದೇ ವಿಧವಾದ, **ಅಚಿಂತ್ಯ** - ಯೋಚಿಸಲಸಾಧ್ಯವಾದ, **ದಿವ್ಯ** - ಪರಮಪದದಲ್ಲಿರುವದರಿಂದ ವಿಲಕ್ಷಣವಾದ, **ಅದ್ಭುತ** - ಆಶ್ಚರ್ಯ ಕರವಾದ, **ನಿತ್ಯ** - ನಿತ್ಯವಾದ, **ನಿರವದ್ಯ** - ನಿರ್ದುಷ್ಟವಾದ, **ನಿರತಿಶಯ** - ಅದಕ್ಕಿಂತಲೂ ಉತ್ಕೃಷ್ಟವಾದುದಿಲ್ಲದಿರುವ, ನಿರುಪಮವಾದ, **ಔಜ್ಜ್ವಲ್ಯ** - ಪ್ರಕಾಶ, **ಸೌಂದರ್ಯ** - ಅವಯವ ಶೋಭೆ, **ಸೌಗನ್ಧ್ಯ** - **"ಸರ್ವಗಂಧಃ"** ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಅನುಕೂಲ ಗಂಧವು, **ಸೌಕುಮಾರ್ಯ** - **"ಸುಕುಮಾರೌ ಮಹಾಬಲೌ"** ಎಂದು ಮಹರ್ಷಿಯು ಹೇಳಿರುವ ಹಾಗೆ ಮಹಾಬಲ ವಿದ್ದರೂ ತುಂಬಾ ಮೃದುಸ್ವಭಾವವು, **ಲಾವಣ್ಯ** - ಕಣ್ಣಿಗೆ ಆನಂದವನ್ನುಂಟುಮಾಡುವ ಅವಯವ ಸಮುದಾಯ ಶೋಭೆಯು, **ಯೌವನ** - ಯೌವನದೆಶೆಯಲ್ಲಿರುವ ಮನೋಹರತ್ವವು, **ಆದಿ** - ಇವೇ ಮೊದಲಾದ, ಅನಂತ ಗುಣಗಳಿಗೆ ನಿಧಿರೂಪವಾದ ವಿಲಕ್ಷಣವಾದ ದಿವ್ಯಮಂಗಳ ವಿಗ್ರಹ ಯುಕ್ತನು. ಇಲ್ಲಿ **ಸ್ವಾಭಿಮತಾನುರೂಪ** ವೆಂದು ಹೇಳಿದುದರಿಂದ ಲೋಕದಲ್ಲಿ ತನಗೆ ಅಭಿಮತ ವಾದುದಾಗಿರಬಹುದು ಅನುರೂಪವಾಗಿರುವುದಿಲ್ಲವು, ಅನುರೂಪವಾಗಿರಬಹುದು ಅಭಿಮತವಲ್ಲದಿರ ಬಹುದು, ಈ ಸಂದರ್ಭದಲ್ಲಿ ಹಾಗಲ್ಲವೆಂದು ತೋರಿಸುವದಕ್ಕಾಗಿ ಹಾಗೆ ಪ್ರಯೋಗವು. **ಏಕ ರೂಪ** ಶಬ್ದದಿಂದ ಸರ್ವೇಶ್ವರನು ಅನೇಕ ಅವತಾರಗಳಲ್ಲಿ ಅನೇಕ ಶರೀರಗಳನ್ನೆತ್ತಿದರೂ, ತನ್ನ ದಿವ್ಯ ಸ್ವರೂಪಗಳಾದ ಹೇಯಪ್ರತ್ಯನೀಕತ್ವ, ಆನಂದಾವಹತ್ವ, ಮುಮುಕ್ಷೂಪಾಸ್ಯತ್ವ, ಪ್ರಾಪ್ಯತ್ವ, ಶುಭಾಶ್ರಯತ್ವ, ಲಕ್ಷ್ಮಿಯೊಂದಿಗೆ ನಿತ್ಯಯೋಗಿತ್ವ ಇವೇ ಮೊದಲಾದವುಗಳಿಂದ ಅಜಹತ್ಸ್ವಸ್ವ ಭಾವನಾಗಿ ನಿತ್ಯವಾದ ಒಂದಾದ ಸ್ವರೂಪಸ್ವಭಾವಸಂಬಂಧವುಳ್ಳ ಭಾವವು ಸೂಚಿಸಲ್ಪಟ್ಟಿತು. ಶರೀ ರವು ಯಾವಾಗ ಧರಿಸಲ್ಪಟ್ಟಿತೋ, ಆಗ ಅದು ಸಾಧಾರಣವಾಗಿ ಅನಿತ್ಯತ್ವವು ಪ್ರಾಪ್ತವಾಗಬೇಕು, ಹಾಗಲ್ಲದೆ ನಿತ್ಯವಾದುದರಿಂದ ನಿತ್ಯ ವೆಂದು ಹೇಳಲ್ಪಟ್ಟಿತು. ಮುಂದಿನ ದಿವ್ಯ ಶಬ್ದವೂ ಇಂತಹ ವೈಲಕ್ಷಣ್ಯವನ್ನೇ ಸೂಚಿಸುತ್ತದೆ. ಪೌಷ್ಕರಸಂಹಿತೆಯಲ್ಲಿ "ನಿತ್ಯಸಿದ್ಧೇ ತದಾಕಾರೇ ತತ್ಪರತ್ವೇಚ **ಪೌಷ್ಕರ । ಯಸ್ಯಾಸ್ತಿ ಸತ್ತಾ ಹೃದಯೇ ತಸ್ಯಾಸೌ ಸನ್ನಿಧಿಂ ವ್ರಜೇತ್ ॥**" ತಚ್ಛಬ್ದವಾಚ್ಯನಾದ ಸರ್ವೇಶ್ವರನ ದಿವ್ಯಮಙ್ಗಳವಿಗ್ರಹವು ನಿತ್ಯಸಿದ್ಧವು ಎಂದರೆ ಕಾಲಪರಿಚ್ಛೇದವಿಲ್ಲದಹಾಗೆ ಭಗವಂತನ ಸಂಕಲ್ಪದಿಂದ ಅಂಗೀಕರಿಸಲ್ಪಟ್ಟದುದಾಗಿರುತ್ತದೆ. ಈ ಶ್ಲೋಕದ ಅರ್ಥತಾತ್ಪರ್ಯಗಳಿಗೆ ದಾಸನು ಪ್ರಕಟಿಸಿರುವ ಶ್ರೀಮದ್ರಹಸ್ಯತ್ರಯಸಾರದ ೩೬೧ ಮತ್ತು ೧೪೭ನೆಯ ಪುಟಗಳನ್ನು ನೋಡಿ. **ನಿರವದ್ಯ** ಶಬ್ದದಿಂದ ನಿರ್ದುಷ್ಟವಾದುದು ಹೇಗೆ ಎಂದರೆ ಅದು ಅಪ್ರಾಕೃತವಾದುದರಿಂದ, ಜರಾ ಮರಣಾದಿಪರಿಣಾಮಗಳಿಲ್ಲದುದೆಂಬ ಭಾವವು. ಈ ಅಭಿಪ್ರಾಯವು ಮುಂದೆ ಅವತಾರ ರಹಸ್ಯವನ್ನು ಉಪದೇಶಿಸುವ ಸಂದರ್ಭದಲ್ಲಿ ಸುವ್ಯಕ್ತವು. ಅವತಾರ ಕಾಲದಲ್ಲೂ ಅಜಹತ್ಸ್ವಸ್ವಭಾವನಾಗಿಯೇ

**ಸ್ವೋಚಿತ ವಿವಿಧ ವಿಚಿತ್ರಾನನ್ತಾಶ್ಚರ್ಯ ನಿತ್ಯನಿರವದ್ಯಾ ಪರಿಮಿತ ದಿವ್ಯ ಭೂಷಣಃ,**
**ಸ್ವಾನುರೂಪಾಸಂಖ್ಯೇಯಾ ಚಿನ್ತ್ಯ ಶಕ್ತಿ ನಿರವದ್ಯ ನಿರತಿಶಯ ಕಲ್ಯಾಣ ದಿವ್ಯಾಯುಧಃ,**

---

ಇರುತ್ತಾನೆಂದು ಮುಂದೆ ೪ನೆಯ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ. ಕೆಲವು ಮಹನೀಯರು ಇಂತಹ ದಿವ್ಯಮಂಗಳವಿಗ್ರಹವನ್ನು ಧರಿಸಿ, ಪರಮ ನಿರ್ಹೇತುಕ ಕೃಪೆಯಿಂದ ಶಿಷ್ಟಪರಿಪಾಲನ, ದುಷ್ಟ ನಿಗ್ರಹ, ಧರ್ಮಸಂಸ್ಥಾಪನಕ್ಕಾಗಿ "ಸಂಭವಾಮಿ" ಎಂದು ಹೇಳಿಕೊಂಡಿದ್ದರೂ, ಅವತಾರಗಳೆಲ್ಲಾ ಸುಳ್ಳು ಎಂದು ಕರ್ಮವಾಸನಾ ಬಲದಿಂದ ಹೇಳುವರು. ದಿವ್ಯಮಂಗಳ ವಿಗ್ರಹವು ಶುಭಾಶ್ರಯವಾದುದರಿಂದ ಭೋಗ್ಯತ್ವಾದಿಗಳುಂಟೆಂದು ಸೌಂದರ್ಯಾದಿ ಗುಣಗಳು ಹೇಳಲ್ಪಟ್ಟವು. ಅಹಿರ್ಬುಧ್ನ್ಯ ಸಂಹಿತೆಯಲ್ಲಿ **"ಭೂಯಿಷ್ಠಂ ತೇಜ ಏವಾದ್ಭಿಃ ಬಹುಳಾಭಿ ರ್ಮೃದೂಕೃತಮ್ । ಚಕ್ಷುರಾನನ್ದ ಜನನಂ ಲಾವಣ್ಯಮಿತಿ ಕಥ್ಯತೇ ॥"** ಎಂದು ಲಾವಣ್ಯವು ಹೇಳಲ್ಪಟ್ಟಿರುತ್ತದೆ.

ಹೀಗೆ ಸ್ವರೂಪ ಗುಣಗಳನ್ನೂ, ದಿವ್ಯಮಂಗಳವಿಗ್ರಹ ಸಂಬಂಧವಾದ ಗುಣಗಳನ್ನೂ ಹೇಳಿ ಮುಂದೆ ವಿಗ್ರಹ ವಿಶೇಷಣಗಳಾದ ದಿವ್ಯಾಭರಣಾಯುಧಗಳನ್ನು ವರ್ಣಿಸುತ್ತಾರೆ:—**ಸ್ವೋಚಿತ** - ಇಂತಹ ವಿಲಕ್ಷಣವಾದ ವಿಗ್ರಹವುಳ್ಳ, ಸ್ವರೂಪಕ್ಕೆ ಯೋಗ್ಯವಾದ, **ವಿವಿಧ** - ಕಿರೀಟ ಹಾರಾದಿ ರೂಪದಿಂದ ನಾನಾ ವಿಧವಾದ, (**ವಿಚಿತ್ರ** - ರತ್ನಾದಿಗಳೇನು, ಕಾಂಚನ ಮೊದಲಾದವುಗಳೇನು ಇವುಗಳ ಸಮ್ಮೇಳನದಿಂದ ವಿಚಿತ್ರವಾಗಿರುವ, ಸುವರ್ಣ ಒಂದೇ ನಾನಾವಿಧ ಆಭರಣವಾಗಿ ಪರಿಣಮಿಸಿ ವಿಚಿತ್ರತೆಯನ್ನು ಹೊಂದಿತೆಂಬವಾಗಿಯೂ ಆಗಬಹುದು;) **ಅನನ್ತಾಶ್ಚರ್ಯ** - ಕೊನೆಯಿಲ್ಲದ ಆಶ್ಚರ್ಯವುಳ್ಳ, **ನಿತ್ಯ** - ಶಾಶ್ವತಗಳಾದ, **ನಿರವದ್ಯ** - ದೋಷರಹಿತಗಳಾದ, **ಅಪರಿಮಿತ** - ಅಸಂಖ್ಯೇಯಗಳಾದ, **ದಿವ್ಯಭೂಷಣಃ** - ಅಪ್ರಾಕೃತಾಭರಣಗಳುಳ್ಳವನು; ಸ್ವೋಚಿತವಾದವು ಈ ಆಭರಣಗಳೆಂಬ ವಿಷಯದಲ್ಲಿ ಆಂಜನೇಯನು ಶ್ರೀರಾಮ ಲಕ್ಷ್ಮಣರ ದಿವ್ಯಬಾಹುಗಳನ್ನು ಭೋಗ್ಯತ್ವೇನ ವರ್ಣಿಸಿರುವದು ಇಲ್ಲಿ ಅನುಸಂಧೇಯವು:—**"ಆಯತಾಶ್ಚ ಸುವೃತ್ತಾಶ್ಚ ಬಾಹವಃ ಪರಿಘೋಪಮಾಃ । ಸರ್ವಭೂಷಣ ಭೂಷಾರ್ಹಾಃ ಕಿಮರ್ಥಂ ನ ವಿಭೂಷಿತಾಃ ॥"** (ಕಿಷ್ಕಿಂಧಾ. ೩. ೫) ಬಾಹುಗಳು ಆಜಾನುಲಂಬವಾಗಿರುವದರಿಂದ **ಆಯತಾಶ್ಚ**; **ಸುವೃತ್ತಾಶ್ಚ** - ತುಂಬಾ ದುಂಡಗೆ ಇರುವವು, **ಪರಿಘೋಪಮಾಃ** - ಗದೆಗೆ ಸಮಾನವಾದವುಗಳು ಎಂದರೆ ಅವುಗಳ ಸೌಂದರ್ಯಾನುಭವ ಮಾಡುವವರಿಗೆ ಸಮಸ್ತ ವಿರೋಧಿ ವರ್ಗವನ್ನು ನಿರ್ಮೂಲ ಮಾಡುವವು, **ಸರ್ವ ಭೂಷಣ ಭೂಷಾರ್ಹಾಃ** - ಭೂಷಣಗಳಿಗೆಲ್ಲಾ ಭೂಷಣಗಳೆಂದು ಹೇಳಿರುವ ಹಾಗೆ ಭೂಷಣಗಳನ್ನೂ ಅಲಂಕಾರ ಮಾಡಲು ಯೋಗ್ಯವಾದವು, ಅಥವಾ ಭೂಷಣಗಳಭಿಪ್ರಾಯವು ಸರ್ವೇಶ್ವರನ ಅವಯವ ಶೋಭೆಗೆ ದೃಷ್ಟಿದೋಷ ಬಾರದಹಾಗೆ ಮಾಡುವಿಕೆಯು, ಹಾಗೆ, **ಭೂಷಾರ್ಹಾಃ** - ಆಚ್ಛಾದಿಸಲು ಯೋಗ್ಯವಾದವು, ಇಂತಹ ಬಾಹುಗಳು, **ಕಿಮರ್ಥಂ ನ ವಿಭೂಷಿತಾಃ** - ಈಗ ಏಕೆ ಆಭರಣಗಳಿಂದ ಅಲಂಕರಿಸಲ್ಪಡಲಿಲ್ಲವು; ಸ್ವಭಾವಕ್ಕೆ ವ್ಯತಿರಿಕ್ತವಾಗಿ ತೋರೋಣವು ಏನೋ ಶತ್ರುವಿಗೆ ಅರಿಷ್ಟ ರೂಪ ಉತ್ಪಾತ ಸೂಚಕವೆಂಬ ಭಾವವೂ ತೋರಿಬರುತ್ತದೆ.

ಸರ್ವೇಶ್ವರನಾದ ಶ್ರೀಕೃಷ್ಣನು ಇನ್ನೂ ಎಂತಹನೆಂದರೆ ಹೇಳುತ್ತಾರೆ:—**ಸ್ವಾನುರೂಪ** - ತನಗೆ ಅನುರೂಪವಾದ, ಅಸಂಖ್ಯೇಯಗಳಾದ, **ಅಚಿನ್ತ್ಯಶಕ್ತಿ** - ಚಿಂತಿಸಲು ಕೂಡ ಅಸಾಧ್ಯವಾದ ಶಕ್ತಿಯುಳ್ಳ, **ನಿರವದ್ಯ** - ದೋಷರಹಿತಗಳಾದ, **ನಿರತಿಶಯ** - ಅತಿಶಯದಲ್ಲಿ ತನಗೆ ಸಮಾನವಿಲ್ಲದಿರುವ, **ಕಲ್ಯಾಣ** - ಮಂಗಳಕರಗಳಾದ, ಶತ್ರುಪಕ್ಷಕ್ಕೆ ಕ್ಷೋಭೆಯನ್ನೂ ಮಿತ್ರಪಕ್ಷಕ್ಕೆ ಸರ್ವವಿಧ ಮಂಗಳವನ್ನೂ ಉಂಟುಮಾಡುವ, **ದಿವ್ಯಾಯುಧಃ** - ಅಪ್ರಾಕೃತಗಳಾದ ಆಯುಧಗಳ

**ಸ್ವಾಭಿಮತಾನುರೂಪ ನಿತ್ಯ ನಿರವದ್ಯ ಸ್ವರೂಪ ರೂಪ ಗುಣ ವಿಭವೈಶ್ವರ್ಯ ಶೀಲಾದ್ಯ ನವಧಿಕಾ ತಿಶಯಾ ಸಂಖ್ಯೇಯ ಕಲ್ಯಾಣಗುಣಗಣ ಶ್ರೀವಲ್ಲಭಃ,**

---

ನ್ನುಳ್ಳವನು ; ಇಲ್ಲಿ ಸರ್ವೇಶ್ವರನ ದಿವ್ಯಾಯುಧಗಳು ಅಸಂಖ್ಯೇಯಗಳೆಂದು ಹೇಳಲ್ಪಟ್ಟವು; ಆದರೆ ಪಂಚಾಯುಧವೆಂದು ಹೇಳಲ್ಪಟ್ಟಿದೆಯಲ್ಲಾ ಎಂದರೆ, ಅವು ಮುಖ್ಯವಾದವುಗಳೆಂಬ ಭಾವವು. ಶಂಖ, ಚಕ್ರ, ಗದಾ, ಶಾರ್ಙ್ಗ, ನಂದಕಗಳು ಪಂಚಾಯುಧಗಳು. ಈ ಭೂಷಣಗಳನ್ನೂ ಈ ಆಯುಧಗಳನ್ನೂ ಸರ್ವೇಶ್ವರನು ದಿವ್ಯಮಙ್ಗಳ ವಿಗ್ರಹಯುಕ್ತನಾಗಿ ಧರಿಸಿರುವದು ಏತಕ್ಕೆಂದರೆ, ಶ್ರೀ ಪರಾಶರರು ಹೇಳುತ್ತಾರೆ:—"**ಅಸ್ತ್ರಭೂಷಣ ಸಂಸ್ಥಾನ ಸ್ವರೂಪಂ ರೂಪ ವರ್ಜಿತಃ । ಬಿಭರ್ತಿ ಮಾಯಾರೂಪೋಸೌ ಪ್ರಾಣಿನಾಂ ಶ್ರೇಯಸೇ ಹರಿಃ ॥**" (ವಿ. ಪು. ೧. ೨೨. ೭೬) **ರೂಪವರ್ಜಿತಃ** - ಕರ್ಮನಿಮಿತ್ತವಾದ ಪ್ರಾಕೃತರೂಪ ರಹಿತನಾಗಿರುವ, **ಮಾಯಾ ರೂಪಃ** - ಅನಂತಾಶ್ಚರ್ಯವಾದ ದಿವ್ಯಮಙ್ಗಳ ವಿಗ್ರಹಯುಕ್ತನಾದ, **ಅಸೌ ಹರಿಃ** - ಈ ಶ್ರೀ ಮಹಾ ವಿಷ್ಣುವು, **ಅಸ್ತ್ರಭೂಷಣ ಸಂಸ್ಥಾನ ಸ್ವರೂಪಂ** - ದಿವ್ಯಾಯುಧ ದಿವ್ಯಭೂಷಣಗಳಿಗೆ ಆಸ್ಪದ ವಾದ ತನ್ನ ದಿವ್ಯಮಙ್ಗಳ ವಿಗ್ರಹವನ್ನು, **ಪ್ರಾಣಿನಾಂ ಶ್ರೇಯಸೇ**-ಶ್ರೇಯಸ್ಸ್ವಾಮಿಗಳಾದ ಸಮಸ್ತ ಚೇತನರ ಶ್ರೇಯಸ್ಸಿಗಾಗಿಯೇ, **ಬಿಭರ್ತಿ** - ಧರಿಸುವನು ಎಂದು ಹೇಳಲ್ಪಟ್ಟಿರುತ್ತದೆ.

ಹಿಂದೆ ಪರತತ್ವವು ಶ್ರಿಯಃಪತಿಯು ಎಂದು ಹೇಳಲ್ಪಟ್ಟಿತು. ಆ ಲಕ್ಷ್ಮಿಯ ಸ್ವರೂಪರೂಪ ಗುಣ ವಿಭವೈಶ್ವರ್ಯಾದಿಗಳು ತಮ್ಮ ಸಿದ್ಧಾಂತ ರೀತ್ಯಾ ಎಂತವು ಎಂದರೆ ಈ ಮುಂದಿನ ವಾಕ್ಯ ದಿಂದ ಸಂಗ್ರಹವಾಗಿಯಿದ್ದರೂ ಸಂಪೂರ್ಣ ಅರ್ಥಗರ್ಭಿತವಾಗಿಯೇ ತಿಳಿಸುತ್ತಾರೆ:—**ಸ್ವ** - ತನಗೆ ಎಂದರೆ ಸರ್ವೇಶ್ವರನಿಗೆ, **ಅಭಿಮತ** - ಇಷ್ಟವಾದ, **ಅನುರೂಪ** - ಯೋಗ್ಯವಾದ, ಸ್ವರೂಪ ವೇನು, **ರೂಪ** - ದಿವ್ಯಮಙ್ಗಳ ವಿಗ್ರಹವೇನು, **ಗುಣ** - ಇಲ್ಲಿ ಗುಣ ವೆಂದರೆ ಆ ದಿವ್ಯಮಙ್ಗಳ ವಿಗ್ರಹವನ್ನು ಹೊಂದಿದ ನಿರತಿಶಯೌಜ್ಜ್ವಲ್ಯ ಸೌಂದರ್ಯವನ್ನು ಸೂಚಿಸುತ್ತದೆ, ಮುಂದೆ ಕಲ್ಯಾಣಗುಣಗಳನ್ನು ಕುರಿತು ಹೇಳಿರುವವರಿಂದ ಇಲ್ಲಿ ಗುಣವೆಂದರೆ ಅವಯವ ಶೋಭಾ ಗುಣ ವೆಂದು ಅನ್ವಯಿಸತಕ್ಕದ್ದು, **ವಿಭವ** - ನಿಯಾಮ್ಯ ವರ್ಗವೇನು, ಮತ್ತು **ಐಶ್ವರ್ಯ** - ನಿಯಾಮ್ಯ ವರ್ಗದ ನಿಯಮನವೇನು, **ಶೀಲ** - ತನಗಿಂತ ಬಹಳ ಕೀಳಾದವರೊಂದಿಗೂ ಸೇರಿ ಅವರಲ್ಲಿ ಪ್ರೀತಿ ತೋರಿಸುವದು, **ಆದಿ** - ಈ ಐಶ್ವರ್ಯಶೀಲವೇ ಮೊದಲಾದ, **ಅನವಧಿಕ** - ಅವಧಿ ಇಲ್ಲದಿರುವ, ಅತಿಶಯವುಳ್ಳ, ಅಸಂಖ್ಯೇಯ ಕಲ್ಯಾಣಗುಣಗಳ ಸಮೂಹವುಳ್ಳ, ಲಕ್ಷ್ಮಿಗೆ ವಲ್ಲಭನು ; ಲಕ್ಷ್ಮಿಯ ಸ್ವರೂಪ ರೂಪಗುಣಾದಿಗಳು ಶ್ರೀಹರಿಯ ಸ್ವರೂಪ ರೂಪಗುಣಗಳಿಗೆ ಅನುರೂಪಗಳಾಗಿ ಶ್ರೀಹರಿಗೆ ಅಭಿಮತವಾದವು. ಹೀಗೆ ಎಲ್ಲವೂ ಅನುರೂಪವಾದವುಗಳೆಂದು ಮಹರ್ಷಿಯು "**ತುಲ್ಯಶೀಲವ ಯೋವೃತ್ತಾಂ ತುಲ್ಯಾಭಿ ಜನಲಕ್ಷಣಾಂ । ರಾಘವೋರ್ಹತಿ ವೈದೇಹೀಂ ತಂ ಚೇಯಮಸಿತೇ ಕ್ಷಣಾ ॥**" ಎಂಬ ಆಂಜನೇಯೋಕ್ತಿಯಿಂದ ಸ್ಥಾಪಿಸಿರುತ್ತಾರೆ; ಮತ್ತು ಇಂತಹ ಆನುರೂಪ್ಯ ವಿರುವದರಿಂದಲೇ, "**ಅತೀವ ರಾಮಶ್ಶುಶುಭೇತಿ ಕಾಮಯಾ**" ( ರಾ. ಬಾ. ಕೊನೆಯ ಶ್ಲೋಕ) ಎಂದೂ, "**ಅಪ್ರಮೇಯಂ ಹಿ ತತ್ತೇಜಃ ಯಸ್ಯಸಾ ಜನಕಾತ್ಮಜಾ**" (ರಾ. ಆರ. ೩೭-೧೮) ಎಂದೂ ಹೀಗೆ ಒಬ್ಬರಿಂದೊಬ್ಬರಿಗೆ ಪರಸ್ಪರಾತಿಶಯವುಂಟೆಂದೂ ಹೇಳಿರುತ್ತಾರೆ. ಸ್ವರೂಪದಲ್ಲಿ ಇಬ್ಬರೂ ಸಮರೆಂಬುದು "**ಯಥಾಸರ್ವಗತೋವಿಷ್ಣುಃ ತಥೈವೇಯಂ ದ್ವಿಜೋತ್ತಮ**" ಎಂಬ ಶ್ರೀ ಪರಾಶ ರೋಕ್ತಿಗಳಿಂದಲೂ, "**ತ್ವಯೈ ತದ್ವಿಷ್ಣುನಾಚಾಂಬ ಜಗದ್ವ್ಯಾಪ್ತಂ ಚರಾಚರಂ**" (ವಿ.ಪು.) ಎಂಬ ಇಂದ್ರಸ್ತುತಿಯ ವಾಕ್ಯದಿಂದಲೂ, **ಯಥಾಮಯಾ ಜಗದ್ವ್ಯಾಪ್ತಂ ಸ್ವರೂಪೇಣಸ್ವಭಾವತಃ ।**

**ತಥಾವ್ಯಾಪ್ತಂ ತಯಾಸರ್ವಂ ನಿಯನ್ತ್ರೀಚ ತಥೇಶ್ವರೀ ॥ ಮಚ್ಛೇಷಭೂತಾ ಸರ್ವೇಷಾಮೀಶ್ವರೀ ವಲ್ಲಭಾ ಮಮ । ಅಸ್ಯಾಮಮ ಚ ಶೇಷಂಹಿ ವಿಭೂತಿರುಭಯಾತ್ಮಿಕಾ ॥** ಎಂಬ ವಿಷ್ವಕ್ಸೇನ ಸಂಹಿತಾವಾಕ್ಯದಿಂದಲೂ, ವ್ಯಕ್ತವು; ಇದರಿಂದ ಲಕ್ಷ್ಮಿಯು ಸಮವಾದ ಅನುರೂಪವಾದ ಸ್ವರೂಪವುಳ್ಳವಳಲ್ಲವು, ಜೀವಕೋಟಿಗೆ ಸೇರಿ ಅಣುಪ್ರಾಯಳಾಗಿ ವಿಭುತ್ವವಿಲ್ಲದವಳು ಎಂಬ ವಾದವು ನಿರಸ್ತವು.

ರೂಪವಲ್ಲೂ ಸರ್ವೇಶ್ವರನಿಗೆ ಅಭಿಮತವಾಗಿ ಅನುರೂಪವಾದ ದಿವ್ಯಮಂಗಳ ವಿಗ್ರಹಯುಕ್ತಳೆಂದು ಶ್ರೀ ಪರಾಶರರು "**ದೇವತ್ವೇ ದೇವದೇಹೇಯಂ ಮನುಷ್ಯತ್ವೇ ಚ ಮಾನುಷೀ । ವಿಷ್ಣೋರ್ದೇಹಾನುರೂಪಾಂವೈ ಕರೋತ್ಯೇಷಾತ್ಮನಸ್ತನುಮ್॥**" (ವಿ. ಪು. ೧.೧೦.೧೪೫) ಸರ್ವೇಶ್ವರನು ಅವತಾರ ಮೊದಲಾದ ಕಾಲಗಳಲ್ಲಿ ದೇವ ಮನುಷ್ಯಾದಿ ರೂಪ ದಿವ್ಯಮಂಗಳ ವಿಗ್ರಹಗಳನ್ನು ಧರಿಸಿದರೆ, ತಾನೂ ಆತನಿಗೆ "**ಸಹಧರ್ಮ ಚರೀತವ**" ಎಂದು ಹೇಳಿರುವ ಹಾಗೆ ಸಹಾಯಕಳಾಗಿ ಅನುರೂಪವಾದ ದೇವ ಮನುಷ್ಯಾದಿ ದಿವ್ಯಮಂಗಳವಿಗ್ರಹಗಳನ್ನು ಧರಿಸುವಳೆಂದು ಉಪದೇಶಿಸಿರುತ್ತಾರೆ. ಇಂತಹ ಅಭಿಮತವಾದ ದಿವ್ಯಮಂಗಳ ವಿಗ್ರಹಗಳಿಂದ "**ಅವತಾರಂ ಕರೋತ್ಯೇಷಾ ತದಾ ಶ್ರೀಸ್ತತ್ಸಹಾಯಿನೀ**" (ವಿ. ಪು. ೧.೧೦. ೧೪೨) ಎಂದೂ, "**ವಿಷ್ಣೋರೇಷಾನಪಾಯಿನೀ**" (ವಿ. ಪು. ೧. ೧೦. ೧೪೪) ಎಂದೂ ಹೇಳಲ್ಪಟ್ಟಿರುತ್ತದೆ. ಈ ಲಕ್ಷ್ಮಿಯೂ ಸರ್ವೇಶ್ವರನ ಹಾಗೆ ಚೇತನರಿಗೆ ಅನುಗ್ರಹ ಮಯಳೆಂಬುದೂ, "**ನ ತೇ ವರ್ಣಯಿತುಂ ಶಕ್ತಾ ಗುಣಾನ್ ಜಿಹ್ವಾಪಿ ವೇಧಸಃ**" (ವಿ. ಪು. ೧. ೯. ೧೩೩) ಎಂದು ಹೇಳಿರುವದರಿಂದ, ಆಕೆಯು ಅನವಧಿಕಾತಿಶಯಾ ಸಂಖ್ಯೇಯ ಕಲ್ಯಾಣಗುಣಮಹೋದಧಿಯೆಂಬುದೂ ಸಹ ವ್ಯಕ್ತವು. ಆಕೆಗೆ ಅಧಿಕಾರವು ಪುರುಷಕಾರತ್ವರೂಪದಲ್ಲಿ ಮಾತ್ರವೇ ವಿನಾ ಆಕೆಗೆ ಉಪಾಯತ್ವದಲ್ಲಿ ಅಧಿಕಾರವಿಲ್ಲವೆಂಬ ಕೆಲವರ ಅಭಿಪ್ರಾಯವು ಸರಿಯಲ್ಲವೆಂಬುದು, ಅದೇ ಪ್ರಕರಣದಲ್ಲೇ ಸಿದ್ಧವು. "**ಶರೀರಾರೋಗ್ಯ ಮೈಶ್ವರ್ಯ ಮರಿಪಕ್ಷ ಕ್ಷಯಂ ಸುಖಂ । ದೇವಿ ತ್ವದ್ದೃಷ್ಟಿ ದೃಷ್ಟಾನಾಂ ಪುರುಷಾಣಾಂ ನ ದುರ್ಲಭಮ್**" ಎಂದೂ, "**ಧನ್ಯೈಸ್ತೈರ್ಲಕ್ಷ್ಮಿ ಯುಜ್ಯಂತೇ**" ಎಂದೂ, ಹೀಗೆಲ್ಲಾ ಹೇಳಿರುವದರಿಂದಲೂ ದ್ವಯಮಂತ್ರದ ಪೂರ್ವಖಂಡದ ಶ್ರೀಮಚ್ಛಬ್ದವು ಉಪಾಯವನ್ನು ಬೋಧಿಸುವ ರೀತಿಯಲ್ಲಿ ಈಕೆಗೆ ಉಪಾಯತ್ವವೂ ಉಂಟೆಂಬುದು ಸುವ್ಯಕ್ತವು. ಇದರಿಂದ ಐಹಿಕೈಶ್ವರ್ಯಪ್ರಾಪ್ತಿ ಮಾತ್ರದಲ್ಲೇ ಉಪಾಯತ್ವವೆಂದು ಭಾವಿಸತಕ್ಕದ್ದಲ್ಲವು. ನಷ್ಟವಾದ ಸರ್ವಲೋಕಾಧಿಪತ್ಯದ ಪ್ರಾಪ್ತಿಯೂ ಅವಳ ದಿವ್ಯಕಟಾಕ್ಷದಿಂದಲೇ ಇಂದ್ರನಿಗೆ ಉಂಟಾಯಿತು ಎಂದು ಹೇಳಲ್ಪಟ್ಟಿರುತ್ತದೆ. ಇಷ್ಟೇ ಅಲ್ಲವು, ಪರಮಾತ್ಮನ ಹಾಗೆ ಮೋಕ್ಷಪ್ರದತ್ವವೂ ಆಕೆಗೆ ಉಂಟೆಂದು "**ಆತ್ಮವಿದ್ಯಾ ಚ ದೇವಿತ್ವಂ ವಿಮುಕ್ತಿಫಲದಾಯಿನೀ**" ಎಂದೂ ಉಪಾಯತ್ವೋಪೇಯತ್ವವೆರಡೂ ಅಲ್ಲೇ ಹೇಳಲ್ಪಟ್ಟಿರುತ್ತದೆ. ಇಲ್ಲಿ ವಿಭವ ವೆಂದರೆ ನಿಯಾಮ್ಯವರ್ಗವು. ಇದು ಇಬ್ಬರಿಗೂ ಅನುರೂಪವಾದುವೆಂದು ಶ್ರೀ ಪರಾಶರರು ಬಹು ನಿಪುಣತರವಾಗಿ "**ಅರ್ಥೋ ವಿಷ್ಣುರಿಯಂ ವಾಣೀ,**" (ವಿ.ಪು. ೧.೮.೧೭) "ಅರ್ಥವು ವಿಷ್ಣುವು, ಲಕ್ಷ್ಮಿಯು ವಾಕ್ಕು" ಎಂದು ಪ್ರಥಮಾಂಶ ೮ನೆಯ ಅಧ್ಯಾಯದಲ್ಲಿ ಪ್ರಾರಂಭಿಸಿ ಹೇಳುತ್ತಾ ಹೋಗಿ, ಕೊನೆಗೆ "**ದೇವ ತಿರ್ಯಙ್ಮನುಷ್ಯೇಷು ಪುನ್ನಾಮಾ ಭಗವಾನ್ ಹರಿಃ । ಸ್ತ್ರೀನಾಮ್ನೀ ಶ್ರೀಶ್ಚ ವಿಜ್ಞೇಯಾ ನಾನಯೋರ್ವಿದ್ಯತೇ ಪರಂ ॥**" ಎಂದು ಅರ್ಥ ವಿಭೂತಿಯೆಲ್ಲಾ ಪರಮಾತ್ಮನಿಗೆ ಅಭಿಮತವಾದುದೆಂದೂ, ಮಿಕ್ಕ ಅರ್ಥವೆಲ್ಲಾ ಲಕ್ಷ್ಮಿಗೆ ಅಭಿಮತವಾದುದೆಂದೂ, ಇವರಿಬ್ಬರಿಗೆ ಇಷ್ಟವಾಗಿರುವದಲ್ಲದೆ ಬೇರೆ ಇನ್ನು ಯಾವುದೂ ಇಲ್ಲವೆಂದೂ ಚನ್ನಾಗಿ ಉಪಪಾದಿಸಿರುತ್ತಾರೆ. ಶೀಲವೆಂದರೆ ಮಹತ್ತಾದ ಪದವಿಯಲ್ಲಿರುವ ತಾನು ತನ್ನನ್ನಾಶ್ರಯಿಸಿದ ನಿಕೃಷ್ಟದೆಶೆಯಲ್ಲಿರುವಚೇತನರೊಂದಿಗೆ ಸೇರಿರುವ ಘನವಾದ ವೃತ್ತಿಯು. ತ್ರಿಜಟೆಯು ತನ್ನ ಪರಿವಾರವಾದ ರಾಕ್ಷಸಿಯರೊಂದಿಗೆ ಯಾವಾಗ ಶರಣಾಗತಿಯನ್ನು ಅನುಷ್ಠಿಸಿ

ದಳೋ, ಆಗ ಅವರು ಮಾಡಿದ ಅಪರಾಧಗಳನ್ನೊಂದನ್ನೂ ಎಣಿಸದೆ, ಅವರನ್ನು ಆಂಜನೇಯನ ಕೋಪದಿಂದ ರಕ್ಷಿಸಿದವಳು. ಸರ್ವೇಶ್ವರನೂ ಗುಹ, ಶಬರಿ, ವಾನರ ಮುಂತಾದ ನಿಕೃಷ್ಟ ಜಾತಿಯ ವರೊಂದಿಗೆಲ್ಲಾ ಸ್ನೇಹವನ್ನು ಬಯಸಿದವನು. ಹೀಗೆ ಲಕ್ಷ್ಮಿಯು ಸ್ವರೂಪ ರೂಪ ಗುಣ ವಿಭವೈಶ್ವರ್ಯಾದಿಗಳಲ್ಲಿ ನಾರಾಯಣನಿಗೆ ಸಮವಾಗಿ, ಅಭಿಮತವಾಗಿ, ಅನುರೂಪವಾಗಿ, ನಿತ್ಯವಾಗಿ, ನಿರವದ್ಯವಾಗಿ ಇದ್ದಾಳೆಂದೂ, ಸರ್ವೇಶ್ವರನು ಹೇಗೆ ಸರ್ವವನ್ನೂ ವ್ಯಾಪಿಸಿ ಸರ್ವನಿಯಾಮಕನೋ, ಹಾಗೆಯೇ ಲಕ್ಷ್ಮಿಯೂ ಎಲ್ಲವನ್ನೂ ವ್ಯಾಪಿಸಿ, ಸರ್ವನಿಯಾಮಕಳು. ಹಾಗಾದರೆ, ಲಕ್ಷ್ಮಿಯೂ ಪರಮಾತ್ಮನೂ ಸಮರು ಎಂದು ತೋರಿ, **"ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ"** (ಶ್ವೇ. ೬.೮.೭) ಎಂದು ನಾರಾಯಣನಿಗೆ ಸಮರೂ ಇಲ್ಲವು, ಅಧಿಕರೂ ಇಲ್ಲವೆಂದು ಹೇಳುವ ಶ್ರುತಿಗೆ ವಿರೋಧ ವಾಗುವದಿಲ್ಲವೇ? ಎಂದರೆ ವಿರೋಧವೇನೂ ಇಲ್ಲವು. ವಿಷ್ವಕ್ಸೇನ ಸಂಹಿತೆಯು **"ಮಚ್ಛೇಷ ಭೂತಾ ಸರ್ವೇಷಾಂ ಈಶ್ವರೀ ವಲ್ಲಭಾಮಮ"** ಎಂಬ, ಲಕ್ಷ್ಮಿಯು ತನಗೆ ಶೇಷಭೂತಳು, ಅಧೀನಳು, ಎಂಬ ಸರ್ವೇಶ್ವರೋಕ್ತಿಯಿಂದ ವಿರೋಧವಿಲ್ಲವು; ಮತ್ತು **"ಭರ್ತಾಹಿ ಮಮದೈವತಮ್"** ಎಂದು (ರಾಮಾ. ಅಯೋಧ್ಯಾ. ೨೯. ೧೬) ಸೀತೆಯೇ ಹೇಳಿಕೊಂಡಿರುತ್ತಾಳೆ. ಲಕ್ಷ್ಮಿಯು ತನ್ನ ವಲ್ಲಭನಿಗೆ ಹೀಗೆ ಶೇಷಭೂತಳಾಗಿ, ಅಧೀನಳಾಗಿ, ಸರ್ವಜ್ಞಳಾಗಿ ಆತನ ಇಂಗಿತವನ್ನು ತಿಳಿದು ವರ್ತಿಸುವುದರಿಂದ ಈ ನಿಸ್ಸಮಾಭ್ಯಧಿಕ ಶ್ರುತಿಗೆ ಏನೊಂದೂ ವಿರೋಧವಿಲ್ಲವು.) ಹೀಗೆ ಸರ್ವೇಶ್ವರನ ಸಮಸ್ತ ಪ್ರವೃತ್ತಿಗಳಲ್ಲೂ ತಾನೂ ಸಹಾಯಕಳಾಗಿಯೇ ಇರುವವಳು. ಇಬ್ಬರೂ ಪರಿಪೂರ್ಣಕಾಮರಾದುದರಿಂದ **"ಸಹರಂಸ್ಯೇ ತ್ವಯಾವೀರ ವನೇಷು ಮಧುಗಂಧಿಷು"** (ರಾಮಾ. ಅಯೋಧ್ಯಾ ೧೨.) ಎಂದೂ, **"ಸಹತ್ವಯಾ ವಿಶಾಲಾಕ್ಷ ರಂಸ್ಯೇ ಪರಮ ನಂದಿನೀ"** (ರಾಮಾ. ಅಯೋಧ್ಯಾ೧೮.) ನಿನ್ನೊಂದಿಗೇ ಯಾವಾಗಲೂ ಇದ್ದು ಪರಮಾನಂದಭರಿತಳಾಗಿ ವಿಹರಿಸುವೆನು ಎಂದು ಹೇಳಿರುವದರಿಂದ, ಪತಿಪರಾಧೀನಳಾಗಿ ಆತನ ಈ ಲೀಲಾವಿಭೂತಿಯ ಸರ್ಗ ಸ್ಥಿತಿ ಲಯಾದಿರೂಪ ಕ್ರೀಡೆಗಳಲ್ಲಿ ತಾನೂ ಭಾಗಿಯಾಗಿ ರಮಿಸಿ, ತದಭಿಮತ ವ್ಯಾಪಾರಗಳಲ್ಲಿ ನಿರತಳಾಗಿರುವಳು ಎಂದು ತಿಳಿಸುವದಕ್ಕಾಗಿ ಅಂತಹ ಲಕ್ಷ್ಮಿಯ ವಲ್ಲಭನು ಎಂದು **"ಶ್ರೀವಲ್ಲಭಃ"** ಎಂಬ ಪ್ರಯೋಗವು.)

ಹೀಗೆ ಇತರರ ನಾನಾವಿಧ ಅಭಿಪ್ರಾಯಗಳೆಲ್ಲಾ ಶಾಸ್ತ್ರಸಮ್ಮತವಲ್ಲದ ಅಭಿಪ್ರಾಯಗಳೆಂದು ಹೇಳಿದಂತಾಯಿತು. ಇನ್ನೊಂದು ಶಂಕಾ ಈ ಸಂದರ್ಭದಲ್ಲಿ ಉಂಟಾಗಬಹುದು; ಏನೆಂದರೆ, ಶ್ರೀ ಹರಿಯೂ ಈಶ್ವರನಾಗಿ ಇವಳೂ ಈಶ್ವರಳಾದರೆ ಜಗದ್ವ್ಯಾಪಾರಕ್ಕೆ ವಿಘಾತವಲ್ಲವೇ? ಎಂದರೆ, ಅಲ್ಲವು. ಏಕೆಂದರೆ ಇಬ್ಬರೂ ಸರ್ವಜ್ಞರಾಗಿ, **"ಅಸ್ಯಾ ದೇವ್ಯಾ ಮನಸ್ತಸ್ಮಿನ್ ತಸ್ಯ ಚಾಸ್ಯಾಂ ಪ್ರತಿಷ್ಠಿತಂ"** (ರಾ. ಸುಂ.) ಪರಸ್ಪರ ಇಂಗಿತಜ್ಞರಾದುದರಿಂದ, ಇಬ್ಬರೂ ಪರಸ್ಪರಾನುರಾಗದಿಂದ ಕೆಲಸ ಮಾಡುವವರಾಗಿ, (ಈಕೆಯು ಪತಿಗೆ **"ಸಹಧರ್ಮಚರೀ"** ಯಾದುದರಿಂದ, ವೈಮನಸ್ಯಕ್ಕೆ ಕಾರಣವೇ ಇಲ್ಲವು. ವೈಮನಸ್ಯವೆಲ್ಲಾ ಲೋಕದಂಪತಿಗಳಲ್ಲಿ; ಸರ್ವಲೋಕದಂಪತಿಗಳಲ್ಲಿಲ್ಲವು.) ಈಶ್ವರೀ ಎಂಬುದಕ್ಕೆ ಈಶ್ವರಪತ್ನೀ ಎಂಬಿಷ್ಟು ಮಾತ್ರವೇ ಅರ್ಥವಲ್ಲವು. ಶ್ರುತಿಯು ಸುಮ್ಮನೆ ಈಶ್ವರೀ ಎಂದು ಹೇಳದೆ **"ಈಶ್ವರೀಗ್ಂ ಸರ್ವಭೂತಾನಾಂ"** ಸರ್ವ ದೇಹಿಗಳಿಗೂ ನಿಯಾಮಕಳು ಎಂದು ಹೇಳಿರುತ್ತದೆ.(ಈ ಈಶತ್ವವು ಹೇಗೆ ಎಂದರೆ **"ವ್ಯಾಪನಾತ್ ಭರಣಾತ್ಸ್ವಾಮ್ಯಾತ್"** ಎಂದು ಯಾಮುನೇಯರು ಗೀತಾರ್ಥಸಂಗ್ರಹದಲ್ಲಿ ಹೇಳಿರುವ ಹಾಗೆ ಮೂರು ಧರ್ಮಗಳಿರಬೇಕು:—(೧) ಎಲ್ಲವನ್ನೂ ವ್ಯಾಪಿಸುವ ಶಕ್ತಿಯೂ, (೨) ಎಲ್ಲವನ್ನೂ ಭರಿಸುವ ಶಕ್ತಿಯೂ, (೩) ಎಲ್ಲವನ್ನೂ ನಿಯಮಿಸುವ ಶಕ್ತಿಯೂ ಇರಬೇಕು. ಮೇಲೆ ಉದಾಹರಿಸಿರುವ ವಿಷ್ಣುಪುರಾಣ ಮತ್ತು ವಿಷ್ವಕ್ಸೇನ ಸಂಹಿತಾ ವಾಕ್ಯಗಳಿಂದ ಈ ಮೂರು ಶಕ್ತಿಗಳೂ ಲಕ್ಷ್ಮಿಗೆ ಇರುವದರಿಂದ, ಈಶ್ವರೀ ಎಂದರೆ ಬರೀ

**ಲೋಕನಾಥದಯಿತೆ** ಮಾತ್ರವೇ ಅಲ್ಲವು, ಲೋಕೈಕೇಶ್ವರನ ಪತ್ನಿಯಾದುದರಿಂದ **ಲೋಕೈಕೇಶ್ವರಿಯು.** ಇದು ಈ ಲೋಕದಂಪತಿಗಳಲ್ಲೂ ವ್ಯಕ್ತವು. ಪತಿಗೆ ಗೃಹದಲ್ಲಿ ವಶ್ಯವಾದ ನಿಯಾಮ್ಯವರ್ಗವೆಲ್ಲಾ ಪತ್ನಿಗೂ ನಿಯಾಮ್ಯವರ್ಗವೇ. )ಈ ಈಶತ್ವಕ್ಕೆ ನಿರವದ್ಯತ್ವ ಹೇಗೆ ಎಂದರೆ ಪತಿಪಾರಾರ್ಥ್ಯದಿಂದ ಪತಿಗೆ ಅಭಿಮತವಾಗಿಯೇ ಪತಿಯ ಆಜ್ಞೆಗನುಸಾರವಾಗಿ ನಡೆಯುವವಳು; ಇದು **"ಅಸಂದೇಶಾತ್ತು ರಾಮಸ್ಯ ತಪಸಶ್ಚಾನುಪಾಲನಾತ್।ನತ್ವಾಂಕುರ್ಮಿ ದಶಗ್ರೀವ ಭಸ್ಮಭಸ್ಮಾರ್ಹ ತೇಜಸಾ॥"** (ರಾ. ಸುಂ.) ಇದು ರಾವಣನಿಗೆ ಹೇಳುವ ಸೀತಾವಾಕ್ಯವು, ಓ ರಾವಣನೇ, ನೀನು ಮಾಡಿರುವ ದುಷ್ಕರ್ಮಕ್ಕಾಗಿ ನೀನು ನನ್ನ ಕಣ್ಣಿನಿಂದ ಭಸ್ಮ ಮಾಡಲ್ಪಡಲು ಅರ್ಹನು. ಆದರೂ ಪತಿಯ ಆಜ್ಞೆಯಿಲ್ಲದುದರಿಂದಲೂ, ನನ್ನ ತಪಸ್ಸನ್ನು ವ್ಯಯಮಾಡಿಕೊಳ್ಳದೆ ಕಾಪಾಡಿಕೊಳ್ಳಬೇಕಾಗಿರುವದರಿಂದಲೂ, ನನ್ನ ಪಾತಿವ್ರತ್ಯ ಬಲದಿಂದ ಭಸ್ಮ ಮಾಡುವ ಶಕ್ತಿ ನನಗಿದ್ದರೂ, ನಾನು ನಿನ್ನನ್ನು ಭಸ್ಮ ಮಾಡುವದಿಲ್ಲವೆಂದು ತನ್ನ ಪತಿಪಾರಾರ್ಥ್ಯವನ್ನು ವ್ಯಕ್ತಪಡಿಸಿರುತ್ತಾಳೆ. ಅಥವಾ ಚೇತನರನ್ನು ನಿಗ್ರಹಿಸಲು ಇಷ್ಟವಿಲ್ಲದೆ ಅನುಗ್ರಹಮಯಳಾಗಿರುವದರಿಂದಲೂ ನಿರವದ್ಯತ್ವವು. **"ಪಾಪಾನಾಂ ವಾ ಶುಭಾನಾಂವಾ ವಧಾರ್ಹಾಣಾಂ ಪ್ಲವಂಗಮ। ಕಾರ್ಯಂ ಕರುಣಮಾರ್ಯೇಣ ನಕಶ್ಚಿನ್ನಾಪರಾಧ್ಯತಿ"** (ರಾ. ಯುದ್ಧ.) ಎಂಬ ಶ್ಲೋಕವು ಲಕ್ಷ್ಮಿಯ ಅನುಗ್ರಹಮಯತ್ವವನ್ನು ಬೋಧಿಸುತ್ತದೆ. ಇದು ರಾಕ್ಷಸ ಸ್ತ್ರೀಯರು ಬಹುವಾಗಿ ತೊಂದರೆ ಮಾಡಿದ್ದನ್ನು ಪ್ರತ್ಯಕ್ಷವಾಗಿ ನೋಡಿದ್ದ ಆಂಜನೇಯನು ರಾವಣವಧಾನಂತರ ಆ ರಾಕ್ಷಸ ಸ್ತ್ರೀಯರನ್ನು ವಧಿಸಲು ಅನುಜ್ಞೆಯನ್ನು ಬೇಡುವ ಪ್ರಕರಣವು. ಅದಕ್ಕೆ ಸೀತೆಯು ಪ್ರತ್ಯುತ್ತರವನ್ನು ಹೇಳುತ್ತಾಳೆ:—**ಪಾಪಾನಾಂವಾ** - ಈ ಸ್ತ್ರೀಯರು ನಿನ್ನ ಅಭಿಪ್ರಾಯ ರೀತ್ಯಾ ನನ್ನನ್ನು ಹಿಂಸಿಸಿದುದರಿಂದ, ಪಾಪಿಗಳೇ ಆಗಲಿ, **ಶುಭಾನಾಂವಾ** - ಸ್ವಾಮಿಯ ಆಜ್ಞೆಯ ಪ್ರಕಾರ ನಡೆಯುವವರು ಅಪರಾಧಿಗಳಲ್ಲವಾದುದರಿಂದ, ನನ್ನ ಅಭಿಪ್ರಾಯ ರೀತ್ಯಾ ಶುಭರೇ ಆಗಲಿ, **ವಧಾರ್ಹಾಣಾಂ** - ಒಟ್ಟಿನಲ್ಲಿ ನೀನು ವಾದಿಸಿ ಅವರು ವಧಿಸಲು ಅರ್ಹರೇ ಎಂದು ಸ್ಥಾಪಿಸಲ್ಪಟ್ಟವರೇಯಾದರೂ, **ಆರ್ಯೇಣ** - ಪೂಜ್ಯನಿಂದ, **ಕರುಣಂ ಕಾರ್ಯಂ** - ಕರುಣೆಯನ್ನು ತೋರಿಸುವದು ಯೋಗ್ಯವು. ಹಾಗೆ ನೋಡಿದರೆ, **ನ ಕಶ್ಚಿನ್ನಾಪರಾಧ್ಯತಿ** - ನಿರಪರಾಧಿಗಳಾಗಿ ಯಾವನು ತಾನೇ ಈ ಲೋಕದಲ್ಲಿರುತ್ತಾನೆ? ಪಾಪಗಳ ಸಂಬಂಧವಿಲ್ಲದೆ ಯಾವನೊಬ್ಬನೂ ಈ ಲೋಕದಲ್ಲಿ ಜನ್ಮವನ್ನೆತ್ತನು, ಎಂಬುದು ಶ್ಲೋಕಾರ್ಥವು. ಹೀಗೆ ಲಕ್ಷ್ಮಿಯು ನಾರಾಯಣನೊಂದಿಗೆ ನಿತ್ಯಯೋಗವನ್ನು ಹೊಂದಿಯೇ, ಎಂದರೆ ಸದಾ ಸೇರಿ ಇದ್ದೇ, ಬೇರೆಯಾದ ಸ್ವರೂಪ, ರೂಪ, ಗುಣ, ವಿಭವ, ಐಶ್ವರ್ಯ, ಶೀಲಾದಿಗಳೆಲ್ಲಾ ಉಂಟೆಂದು ಹೇಳಿರುವದರಿಂದ,(ಸರ್ವೇಶ್ವರನಿಗೆ ಜ್ಞಾನಾದಿ ಗುಣಗಳು ಹೇಗೆ ಅಪೃಥಕ್ಸಿದ್ಧ ವಿಶೇಷಣಗಳೋ, ಹಾಗೆಯೇ ಈಕೆಯೂ ಸಹ ಅಪೃಥಕ್ಸಿದ್ಧ ವಿಶೇಷಣವು;) ಆದುದರಿಂದ ಅವರಿಬ್ಬರಿಗೂ ವಿಶ್ಲೇಷವೆಂಬುದು ಎಂದಿಗೂ ಇಲ್ಲವು; ಇದರಿಂದ **"ಓಮಿತ್ಯಾತ್ಮಾನಂ ಯುಂಜೀತ"** ಎಂದು ಶ್ರುತಿಯಲ್ಲಿ ವಿಧಿಸಿರುವ, ಈ ನಮ್ಮ ಆತ್ಮವೆಂಬ ಹವಿಸ್ಸಮರ್ಪಣೆಗೆ ಇಬ್ಬರೂ ಉದ್ದೇಶ್ಯರು. (ಭಗವಚ್ಛಾಸ್ತ್ರದಲ್ಲಿ ಇಬ್ಬರೂ ವ್ಯಾಪನಶೀಲರಾಗಿ, ಯಾವಾಗಲೂ ಒಟ್ಟಿಗೇ ಇರುತ್ತಾರೆಂದು ಹೇಳಿರುವದರಿಂದ ಲಕ್ಷ್ಮೀ ನಾರಾಯಣರಿಬ್ಬರೂ ಸೇರಿ, ಒಂದೇ ದ್ರವ್ಯವೋ ಎಂಬುವ ಹಾಗೆ, ಇರುವ ಒಂದೇ ತತ್ವವು. ಇದನ್ನೇ **"ಉಭಯಾಧಿಷ್ಠಾನಂಚೈಕಂ ಶೇಷಿತ್ವಂ,"** ಸಮಸ್ತಕ್ಕೂ ಇವರಿಬ್ಬರೂ ಒಟ್ಟಿಗೆ ಸೇರಿರುವದರಿಂದ ಒಂದೇ ಶೇಷಿಭಾವವು, ಎಂದೂ **"ಅನನ್ಯ ಸಾಧಾರಣ ಮಾಶ್ರಿತತ್ವಂ ದ್ವಾಭ್ಯಾಂಚಸದ್ಯೈಕ ಶೇಷೀ"** (ಅಹಿ. ಸಂ.) ಎಂದೂ, ವ್ಯಕ್ತಪಡಿಸಿರುತ್ತಾರೆ. )

(ಈ ವಾಕ್ಯದಿಂದ ಹೀಗೆ ಲಕ್ಷ್ಮೀ ತತ್ವ ನಿರೂಪಣೆಯನ್ನು ಮಾಡಿರುವದರಿಂದ ಇತರ ಸಿದ್ಧಾಂತಿಗಳು ಹೇಳುವ ಅಭಿಪ್ರಾಯಗಳೆಲ್ಲಾ ಸರಿಯಲ್ಲವೆಂದು ಹೇಳಿದಂತಾಯಿತು. ಕೆಲವರು

**ಸ್ವಸಙ್ಕಲ್ಪಾನು ವಿಧಾಯಿ ಸ್ವರೂಪ ಸ್ಥಿತಿ ಪ್ರವೃತ್ತಿ ಭೇದಾಶೇಷ ಶೇಷತೈಕರತಿರೂಪ ನಿತ್ಯ ನಿರವದ್ಯ ನಿರತಿಶಯ ಜ್ಞಾನಕ್ರಿಯೈಶ್ವರ್ಯಾದ್ಯನನ್ತ ಗುಣಗಣಾ ಪರಿಮಿತ ಸೂರಿಭಿ ರನ ವರತಾಭಿಷ್ಟುತ ಚರಣಯುಗಳಃ,**

---

ಲಕ್ಷ್ಮಿಯು ಪರಮಾತ್ಮನ ಅರ್ಧಭಾಗವೆಂದೂ, ಪರಮಾತ್ಮನ ಶಕ್ತಿಯೆಂದೂ, ಪರಮಾತ್ಮನ ದಯೆಯೆಂದೂ, ನಿತ್ಯಸೂರಿಗಳಲ್ಲಿ ಪ್ರಥಮಳೆಂದೂ, ಜೀವಕೋಟಿಗೆ ಸೇರಿದವಳೆಂದೂ ಹೀಗೆ ನಾನಾ ವಿಧ ಅಭಿಪ್ರಾಯಗಳೆಲ್ಲಾ ಶಾಸ್ತ್ರಸಮ್ಮತವಲ್ಲದ ಅಭಿಪ್ರಾಯಗಳೆಂದು ಹೇಳಿದಂತಾಯಿತು.)

ಶ್ರೀ ವಲ್ಲಭಃ ಎಂಬಲ್ಲಿ ಇಂತಹ ಲಕ್ಷ್ಮಿಗೆ ವಲ್ಲಭನು ಎಂದು ತತ್ಪುರುಷವಾಗಲಿ, ಇಂತಹ ಲಕ್ಷ್ಮಿಯು ವಲ್ಲಭಳು ಯಾರಿಗೋ ಅವನು ಎಂದು ಬಹುವ್ರೀಹಿಯಾದರೂ ಆಗಬಹುದು. ಇದ ರಿಂದ ಪರಸ್ಪರವಾಲ್ಲಭ್ಯಾತಿಶಯದ ಮಾಹಾತ್ಮ್ಯೆಯೂ, ಇಂತಹ ವಾಲ್ಲಭ್ಯಾತಿಶಯದಿಂದ ಲಕ್ಷ್ಮಿಯು ಪುರುಷಕಾರರೂಪದಿಂದ ಚೇತನಾನುಗ್ರಹ ನಿರತಳು ಎಂಬುದೂ ವ್ಯಕ್ತಪಡುತ್ತವೆ.

ಶ್ರಿಯಃಪತಿ ಎಂದು ಏಕೆ ಈ ಸಂದರ್ಭದಲ್ಲಿ ಪ್ರಯೋಗಿಸದೆ, ಶ್ರೀವಲ್ಲಭಃ ಎಂದು ಸಮಾಸ ಪದವನ್ನು ಉಪಯೋಗಿಸಿರುವದೆಂದರೆ, ಸಮಾಸಪದದಿಂದ ಅಪೃಥಕ್ಸಿದ್ಧ ವಿಶೇಷಣ ಮತ್ತು ನಿತ್ಯ ಯೋಗಾಭಿಪ್ರಾಯಗಳು ವ್ಯಕ್ತಪಡುತ್ತವೆ ಎಂಬ ಅಭಿಪ್ರಾಯದಿಂದ ಎಂದು ಭಾವಿಸತಕ್ಕದ್ದು, ವಲ್ಲಭ ಶಬ್ದದಿಂದ ತೋರುವ ವಾಲ್ಲಭ್ಯಾತಿಶಯವೂ ಈ ನಿತ್ಯ ಯೋಗವನ್ನು ಸಮರ್ಥಿಸುತ್ತದೆ.

(ಮುಂದಿನ ವಾಕ್ಯದಿಂದ ದಿವ್ಯ ವೈಕುಂಠದಲ್ಲಿ ಶ್ರೀಮನ್ನಾರಾಯಣನು ನಿತ್ಯ ಸೂರಿಗಳಾದ ಪರಿಜನರಿಂದ ಪರಿವೃತನಾಗಿ ಅವರಿಂದ ಸ್ತುತಿಸಲ್ಪಡುವನೆಂದು ತಿಳಿಸುತ್ತಾರೆ.) **ಸ್ವಸಙ್ಕಲ್ಪಾನು ವಿಧಾಯಿ - ಸ್ವ** - ತನ್ನ ಎಂದರೆ ಸರ್ವೇಶ್ವರನ, **ಸಙ್ಕಲ್ಪಾನು ವಿಧಾಯಿ** - ಸಙ್ಕಲ್ಪಕ್ಕನುಗುಣ ವಾಗಿರುವ, **ಸ್ವರೂಪ** - ಪರಸ್ಪರವಾಗಿ ಧರ್ಮ್ಯಂಶವೇನು, **ಸ್ಥಿತಿ** - ಪರಸ್ಪರವಾಗಿ ಸ್ವಲ್ಪವೂ ಚ್ಯುತಿ ಯಿಲ್ಲದೆ ಒಂದೇ ವಿಧವಾಗಿರುವಿಕೆಯೇನು, **ಪ್ರವೃತ್ತಿ** - ಪರಸ್ಪರ ವ್ಯಾಪಾರಗಳೇನು ಇವುಗಳ ಭೇದ ವುಳ್ಳ, **ಅಶೇಷ ಶೇಷತೈಕರತಿರೂಪ** - (ಸರ್ವೇಶ್ವರನ) ತನ್ನ ಅಭಿಮತಕ್ಕನುಸಾರವಾದ ಶೇಷ ವೃತ್ತಿಯೇ ಮುಖ್ಯಾನುಭವವಾಗಿವುಳ್ಳ, **ನಿತ್ಯ**ವಾದ, **ನಿರವದ್ಯ** - ನಿರ್ದುಷ್ಟವಾದ, **ನಿರತಿಶಯ** - ಅತಿಶಯ ಶೂನ್ಯವಾದ, **ಜ್ಞಾನ** - ಹೀಗೆ(?)ಯಾವಾಗಲೂ ಸಂಕುಚಿತವಾಗದ, ಜ್ಞಾನ, **ಕ್ರಿಯಾ** - ಕೈಂಕರ್ಯ, **ಐಶ್ವರ್ಯ** - ಜ್ಞಾನಕ್ರಿಯೆಗಳನ್ನು ನಿಯಮಿಸುವ ಶಕ್ತಿ, **ಆದಿ** - ಇವೇ ಮೊದಲಾದ, **ಅನನ್ತಗುಣಗಣ** - ಅನಂತಗಳಾದ ಕಲ್ಯಾಣಗುಣಗಳ ಸಮೂಹಗಳುಳ್ಳ, **ಅಪರಿಮಿತ** - ಅಸಂಖ್ಯೇ ಯರಾದ, **ಸೂರಿಭಿಃ** - ನಿತ್ಯರುಗಳಿಂದ, **ಅನವರತ** - ಯಾವಾಗಲೂ, **ಅಭಿಷ್ಟುತ** - ಸ್ತೋತ್ರ ಮಾಡಲ್ಪಟ್ಟ, **ಚರಣಯುಗಳಃ** - ಪಾದದ್ವಂದ್ವಗಳನ್ನುಳ್ಳವನು. ನಿತ್ಯಸೂರಿಗಳಿಂದ ಸೇವಿಸಲ್ಪಟ್ಟ ಪಾದದ್ವಂದ್ವವುಳ್ಳವನೆಂದು ಹೇಳಿದರು. ಆ ನಿತ್ಯಸೂರಿಗಳೆಂತವರೆಂದರೆ ಹೇಳುತ್ತಾರೆ:—ಅವರು ಗಳ ಸ್ವರೂಪ ಸ್ಥಿತಿಗಳೆಲ್ಲಾ ಸರ್ವೇಶ್ವರನ ನಿತ್ಯೇಚ್ಛೆಯಿಂದ ಸಿದ್ಧವಾದವುಗಳು. ಆದುದರಿಂದ ಅವರುಗಳ ಸ್ವರೂಪ ಸ್ಥಿತಿಗಳು ಪರಿಣಾಮವನ್ನು ಹೊಂದುವದಿಲ್ಲವು. ಅನಿತ್ಯವಾದವುಗಳು ಅನಿತ್ಯ ವಾಗಿರಲೆಂಬ ಪರಮಾತ್ಮನ ಸಂಕಲ್ಪಕ್ಕೆ ಅಧೀನವಾದವುಗಳಾಗಿ ಉತ್ಪನ್ನಗಳು. ಈ ನಿತ್ಯಸೂರಿ ಗಳು ಮಾಡುವ **ಶೇಷತಾ** - ಶೇಷವೃತ್ತಿಯು ಅಶೇಷವಾದುದು. ಎಲ್ಲರೂ ಎಲ್ಲಾ ವಿಧ ಕೈಙ್ಕರ್ಯ ಗಳನ್ನು ಯಾವಾಗಲೂ ಮಾಡುತ್ತಾರೆಯೇ ಎಂದರೆ, ಅನೇಕರು ಗುಂಪುಕೂಡಿ ತದೇಕ ಮನಸ್ಕ ರಾಗಿ ಒಂದೊಂದು ವಿಧ ಕೈಂಕರ್ಯದಲ್ಲೇ ಮಗ್ನರಾಗಿ ನಿರತಿಶಯಪ್ರೀತಿಯನ್ನು ಅದರಲ್ಲಿ ಪ್ರದರ್ಶಿಸು ವದರಿಂದ **ಏಕರತಿರೂಪ** ವೆಂದು ಹೇಳಲ್ಪಟ್ಟಿತು. ಇವರುಗಳ ಜ್ಞಾನವು ನಿತ್ಯವೆಂದು ಹೇಳಿ,

ವಾಙ್ಮನಸಾ ಪರಿಚ್ಛೇದ್ಯ ಸ್ವರೂಪಸ್ವಭಾವಃ,

ಬದ್ಧರ ಜ್ಞಾನವು ನಿತ್ಯವಲ್ಲದೆಯೂ, ಮುಕ್ತರ ಜ್ಞಾನವೂ ಮುಕ್ತಿದೆಶೆಗೆ ಮೊದಲು ನಿತ್ಯವಲ್ಲದೆಯೂ ಇರುವವರಿಂದ ಆ ಬದ್ಧಮುಕ್ತರ ಜ್ಞಾನಕ್ಕಿಂತ ವಿಲಕ್ಷಣವಾಗಿ ನಿತ್ಯವಾದುದೆಂದು ಹೇಳಲ್ಪಟ್ಟಿತು. ಆದುದರಿಂದಲೇ, ಅವರ ಜ್ಞಾನವು ನಿರವದ್ಯವಾದುದು; ಕ್ಲೇಶ, ಕರ್ಮ, ಸ್ವಾತಂತ್ರ್ಯ, ಅಭಿಮಾನ ಮೊದಲಾದ ದೋಷಗಳ ಗಂಧವೂ ಕೂಡ ಯಾವಾಗಲೂ ಇಲ್ಲದುದು. ಈ ಜ್ಞಾನವು ನಿರತಿಶಯ ವಾದುದು ಹೇಗೆ ಎಂದರೆ, ಪರಮಾತ್ಮನ ಜ್ಞಾನಕ್ಕೆ ಸಮಾನವಾದುದು. ಇವರುಗಳ ಕ್ರಿಯೆಗೆ ನಿರತಿಶಯತ್ವ ಹೇಗೆ ಎಂದರೆ, ಸ್ವಚ್ಛಂದವಾದ ಅನಂತಕೈಂಕರ್ಯಗಳನ್ನು ಮಾಡೋಣವೇ. ಐಶ್ವರ್ಯಕ್ಕೆ ನಿರತಿಶಯತ್ವವು ಹೇಗೆ ಎಂದರೆ, ಪರಮಾತ್ಮನ ಕೈಂಕರ್ಯಕ್ಕುಪಯುಕ್ತವಾದ ಇಚ್ಛೆಯಿಂದ ಸ್ವೀಕರಿಸಲ್ಪಟ್ಟ ಶರೀರಾದಿಗಳನ್ನು ನಿಯಮಿಸೋಣದರಲ್ಲಿ ವಿಘಾತವಿಲ್ಲದಿರೋಣವು. (ಇಲ್ಲಿ ಐಶ್ವರ್ಯಶಬ್ದಕ್ಕೆ ಪರಮಾತ್ಮನಿಗೆ ಅನ್ವಯಿಸಿದ ಐಶ್ವರ್ಯಶಬ್ದದ ಹಾಗೆ ಸರ್ವವಸ್ತುನಿಯಮನ ವಲ್ಲವು; ಏಕೆಂದರೆ ಜೀವಾತ್ಮನಿಗೆ "ಜಗದ್ವ್ಯಾಪಾರ ವರ್ಜಂ" ಎಂದು, ಜಗತ್ತಿನ ಸೃಷ್ಟಿ ಸ್ಥಿತಿ ನಿಯ ಮನಲಯ ವ್ಯಾಪಾರಗಳು ನಿಷೇಧಿಸಲ್ಪಟ್ಟಿವೆ. "ಸದಾಪಶ್ಯಂತಿ ಸೂರಯಃ, ತದ್ವಿಪ್ರಾಸೋ ವಿಪನ್ಯ ವೋ ಜಾಗ್ರವಾಂಸಃ ಸಮಿಂಧತೇ" ನಿತ್ಯಸೂರಿಗಳು ಭಗವದ್ಗುಣ ಪೂರ್ಣಾಂತರಂಗರಾಗಿಯೂ, ವಿಶೇಷ ಸ್ತುತಿಶೀಲರಾಗಿ, ಜಾಗರೂಕರಾಗಿ ಪ್ರಕಾಶಿಸುತ್ತಿರುತ್ತಾರೆಂದು, ಬಹುವಚನ ಪ್ರಯೋಗ ವಿರುವವರಿಂದ ಅಪರಿಮಿತ ಸೂರಿಭಿಃ ಎಂದು ನಿತ್ಯರು ಅಸಂಖ್ಯೇಯರೆಂದು ಹೇಳಲ್ಪಟ್ಟಿರುತ್ತದೆ.) ಇಲ್ಲಿರುವ ಬಹುವಚನಗಳಿಂದ ಶ್ರುತಿಯು, ಅದ್ವೈತಾಭಿಪ್ರಾಯವು ಸರ್ವಾತ್ಮನಾ ಸರಿಯಲ್ಲವೆಂದು ಪ್ರಕಟಿಸುತ್ತದೆ. ಈ ಮೇಲಿನ ಶ್ರುತಿಯಲ್ಲಿ ಭಗವಂತನನ್ನು ಯಾವಾಗಲೂ ಸ್ತುತಿಸುತ್ತಾರೆಂದು ಹೇಳಿರುವವರಿಂದ, ಅನವರತಾಭಿಷ್ಟುತ ಚರಣಯುಗಳನೆಂದು ಪ್ರಯೋಗಿಸಿರುತ್ತಾರೆ. ವಿಪನ್ಯವಃ ಎಂದರೆ ವಿಶೇಷೇಣ ಸ್ತುತಿಯಲ್ಲಿ ಆಸಕ್ತರೆಂಬರ್ಥವು. ವಿ ಎಂಬ ಉಪಸರ್ಗಾರ್ಥವನ್ನೇ ಅಭಿಷ್ಟುತ ಎಂಬಲ್ಲಿ ಅಭಿ ಎಂಬ ಉಪಸರ್ಗದಿಂದ ವಿವರಿಸಿರುತ್ತಾರೆ.)

ಹೀಗೆ ನಿತ್ಯಸೂರಿಗಳು ಶ್ರೀಪತಿಯ ಐಶ್ವರ್ಯವನ್ನು ಹೊಗಳಲು ಸದಾ ಉದ್ಯುಕ್ತರಾಗಿದ್ದಾ ರಲ್ಲಾ, ಅವರಿಗೆ ಆ ಐಶ್ವರ್ಯದ ಇಯತ್ತಾ ಇಷ್ಟೆಂದು ತಿಳಿಯಿತೋ ಎಂದರೆ, ಯಾವಾಗಲೂ ಶ್ರಿಯಃ ಪತಿಯೊಂದಿಗೇನೇ ಇದ್ದರೂ, ಸರ್ವಜ್ಞರಾದ ಅವರಿಗೂ ಸಹ ತಿಳಿಯದು ಎಂದು ಮುಂದೆ ಹೇಳು ತ್ತಾರೆ:— ವಾಙ್ಮನಸಾ ಪರಿಚ್ಛೇದ್ಯ ಸ್ವರೂಪ ಸ್ವಭಾವಃ - ವಾಕ್ಕಿನಿಂದಲೂ ಮನಸ್ಸಿನಿಂದಲೂ ಇಷ್ಟೆಂದು ಹೇಳುವದಕ್ಕಾಗಲಿ ಚಿಂತಿಸುವದಕ್ಕಾಗಲಿ ಸಾಧ್ಯವಿಲ್ಲದೇ ಇರುವ ಆನಂದಾದಿ ಸ್ವರೂಪ ಸ್ವಭಾವಗಳುಳ್ಳವನಾಗಿ ಎಂಬರ್ಥವು. (ಈ ಅಭಿಪ್ರಾಯವನ್ನೇ ಶ್ರುತಿಯು, ಆನಂದಗುಣದ ಮೀಮಾಂಸೆಯನ್ನು ಮಾಡಲು ಹೊರಟು, ತನ್ನ ಅಶಕ್ತತೆಯನ್ನು ವ್ಯಕ್ತಪಡಿಸಿ, "ಯತೋ ವಾಚೋ ನಿವರ್ತನ್ತೇ ಅಪ್ರಾಪ್ಯಮನಸಾ ಸಹ" ಎಂದು ವಿರಾಮವನ್ನು ಹೊಂದಿತು ಎಂದು ಹೇಳಿತು.) (ಇದರ ಅಭಿಪ್ರಾಯವೇನೆಂದರೆ, ಅಪರಿಚ್ಛೇದ್ಯವೆಂದು ತಿಳಿದು ಸುಮ್ಮನಾಯಿತು ಎಂದು ಅರ್ಥ ಹೇಳುವುದೇ ನ್ಯಾಯವಾದುದರಿಂದ, ವಾಙ್ಮನಸಾಪರಿಚ್ಛೇದ್ಯ ಸ್ವರೂಪ ಸ್ವಭಾವನು ಎಂದು ಅರ್ಥ ಹೇಳುವದೇ ಯುಕ್ತವು. ಆದುದರಿಂದ ಕೆಲವರು ವಾಕ್ಕಿಗೂ ಮನಸ್ಸಿಗೂ ಪರ ಬ್ರಹ್ಮನು ಅಗೋಚರನು, ಆತನು ಜ್ಞಾನವಿಷಯನಲ್ಲವು ಎಂದು ಹೇಳುವ ಅಭಿಪ್ರಾಯವು ಸರಿ ಯಲ್ಲವೆಂದೂ, ಅದಕ್ಕಾಗಿಯೇ ಶ್ರೀ ಯತಿವರ್ಯರು ವಾಙ್ಮನಸಾಽಪರಿಚ್ಛೇದ್ಯ ಎಂದು ಪ್ರಯೋಗಿ ಸಿರುತ್ತಾರೆ.) (ಪರಮಾತ್ಮನು ಭಕ್ತನ ಯೋಗ್ಯತಾನುಸಾರ ವಾಕ್ಕಿಗೆ ಗೋಚರನು, ಹಾಗೆಯೇ

ಸ್ವೋಚಿತ ವಿವಿಧ ವಿಚಿತ್ರಾನನ್ತ ಭೋಗ್ಯಭೋಗೋಪಕರಣ ಭೋಗಸ್ಥಾನ .ಸಮೃದ್ಧಾ

ಧ್ಯಾನಮಾಡುವ ಯೋಗಿಯ ಜ್ಞಾನಕ್ಕೂ ವಿಷಯನು. ಈ ಅಭಿಪ್ರಾಯಗಳನ್ನೇ ಶ್ರುತಿಗಳು ಬೋಧಿಸುತ್ತವೆ. **"ಯಸ್ಯಾಮತಂ ತಸ್ಯಮತಂ, ಮತಂ ಯಸ್ಯ ನವೇದಸಃ"** (ಕೇನ. ೨. ೩)) ಯಾವ ಮನುಷ್ಯನಿಗೆ ಪರಬ್ರಹ್ಮ ಸ್ವರೂಪಾದಿಗಳು ಅಪರಿಚ್ಛೇದ್ಯವಾದುದರಿಂದ ಚನ್ನಾಗಿ ತಿಳಿಯ ಲಿಲ್ಲವೆಂದು ಯಾವನು ಹೇಳುವನೋ ಅವನೀಗ ತಿಳಿದವನು, ಯಾವನಿಗೆ ಹಾಗಲ್ಲದೆ ಪರಿಚ್ಛಿತ್ತಿ ಯಿಂದ ಇಷ್ಟೇ ಎಂದು ಯಾವನು ತಿಳಿಯುವನೋ, ಆತನು ಪರಬ್ರಹ್ಮವನ್ನು ತಿಳಿದವನಲ್ಲನು, ಎಂಬುದು ಈ ವಾಕ್ಯ ತಾತ್ಪರ್ಯವು; )ಹಾಗಲ್ಲದೆ ವಾಙ್ಮನಸ್ಸುಗಳಿಗೆ ವಿಷಯನೇ ಅಲ್ಲವು ಎಂಬರ್ಥ ವಲ್ಲವು; ಏಕೆಂದರೆ **"ಮತಂ"** ಎಂಬ ಶಬ್ದವೇ ಆ ಅಭಿಪ್ರಾಯಕ್ಕೆ ವಿರುದ್ಧವಾದುದು. ಹಾಗೆಯೇ ಋಗ್ವೇದದಲ್ಲೂ ಮತ್ತು ಯಜುರ್ವೇದದಲ್ಲೂ, **"ಸೋ ಅಙ್ಗ ವೇದ ಯದಿವಾ ನವೇದ"** ಆ ಪರ ಮಾತ್ಮನೇ ತನ್ನ ಮಾಹಾತ್ಮ್ಯೆಯನ್ನು ಚನ್ನಾಗಿ ತಿಳಿದಿದ್ದಾನೋ ಇಲ್ಲವೋ, ಎಂದು ಹೇಳಿರುವದ ರಿಂದ ಪಾಮರರಾದ ನಾವುಗಳು ತಿಳಿಯಲಸಾಧ್ಯವೆಂದು ಹೇಳತಕ್ಕದ್ದೇನಿರುತ್ತದೆ ಎಂಬ ಭಾವವು. **"ಮನಸಾತು ವಿಶುದ್ಧೇನ"** ಪರಿಶುದ್ಧವಾದ ಮನಸ್ಸಿನಿಂದ ಆತನನ್ನರಿಯಬಹುದೆಂದೂ, **"ಬ್ರಹ್ಮ ವಿದಾಪ್ನೋತಿ ಪರಮ್"** ಪರಬ್ರಹ್ಮವಾದ ಶ್ರೀಮನ್ನಾರಾಯಣನನ್ನು ಉಪಾಸನೆ ಮಾಡಿ ತಿಳಿದ ವನು, **ಪರಂ** - ಬ್ರಹ್ಮರುದ್ರೇಂದ್ರಾದಿಗಳಿಗಿಂತಲೂ ಶ್ರೇಷ್ಠನಾದ, ಅಥವಾ ಚೇತನಾಚೇತನಗಳಿ ಗಿಂತಲೂ ವಿಲಕ್ಷಣನಾದ, ಪರಮಾತ್ಮನನ್ನು ಹೊಂದುವನು, ಎಂದೂ, **"ಆನಂದಂ ಬ್ರಹ್ಮಣೋ ವಿದ್ವಾನ್ ನಬಿಭೇತಿ ಕುತಶ್ಚನ"** (ಆನಂದವಲ್ಲಿ ೪. ೧) ಪರಬ್ರಹ್ಮಸಂಬಂಧವಾದ ಆನಂದವನ್ನು ಉಪಾಸನಾ ಮೂಲಕ ಸಾಕ್ಷಾತ್ಕರಿಸಿದವನು ಸಾಂಸಾರಿಕವೇ ಮೊದಲಾದ ದುಃಖಗಳನ್ನು ಕುರಿತು ಎಂದಿಗೂ ಭಯಪಡುವದಿಲ್ಲವು ಎಂದೂ, ಪ್ರಮಾಣಗಳಿರುವವರಿಂದ ಪರಬ್ರಹ್ಮವು ಜ್ಞಾನ ವಿಷಯವೇ ಅಲ್ಲವೆಂಬ ವಾದವು ನಿರಸ್ತವಾಯಿತು. ಹೀಗೆ ಅರ್ಥವನ್ನು ಹೇಳದೇ ಇದ್ದರೆ, **"ಯತೋ ವಾಚೋ ನಿವರ್ತಂತೇ"** ಎಂಬ ಶ್ರುತಿಗೂ, **"ಬ್ರಹ್ಮವಿದಾಪ್ನೋತಿ ಪರಮ್"** ಇತ್ಯಾದಿ ಶ್ರುತಿಗಳಿಗೂ ಪರಸ್ಪರ ವಿರೋಧವನ್ನು ಕಲ್ಪಿಸಿದಹಾಗಾಗುತ್ತದೆ. )

ಕೆಲವರು **ಈ ವಾಙ್ಮನಸಾ ಪರಿಚ್ಛೇದ್ಯ** ಎಂಬುದನ್ನು ಮುಂದೆ ಇರುವ **ಪರಮ ವ್ಯೋಮ** ವೆಂಬುದಕ್ಕೆ ವಿಶೇಷಣವಾಗಿ ಅನ್ವಯಿಸುತ್ತಾರೆ. ಏಕೆಂದರೆ, ವೈಕುಂಠ ಗದ್ಯದಲ್ಲಿ ಹಾಗೆಯೇ ಹೇಳ ಲ್ಪಟ್ಟಿರುತ್ತದೆ. ಆದರೆ ಹೀಗೆ ಪರಮಾತ್ಮನಿಗೆ ವಿಶೇಷವಾಗಿ ಹೇಳುವದರಿಂದ ಪರಮತ ನಿರಾಸವು ದೊರೆಯುವದರಿಂದಲೂ, ಹಾಗೆಯೇ ಈ ಗೀತೆಯಲ್ಲೇ ಆರನೆಯ ಅಧ್ಯಾಯದ ಕೊನೆಯ ಶ್ಲೋಕ ದಲ್ಲಿ ಪರಮಾತ್ಮನಿಗೆ ಅನ್ವಯಿಸಿರುವದರಿಂದ, ಹೀಗೆ ಅನ್ವಯಿಸುವದೇ ಸರಸವಾದ ಪ್ರಯೋಗವು.

(ಹಿಂದೆ ದಿವ್ಯ ವೈಕುಂಠದಲ್ಲಿ ನಿತ್ಯಸೂರಿಗಳಿಂದ ಸ್ತುತಿಸಲ್ಪಡುವವನೆಂದು ಹೇಳಲ್ಪಟ್ಟಿತು. ಆ ದಿವ್ಯ ವೈಕುಂಠವೆಂತಾದ್ದೆಂಬುದನ್ನು ಈ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ:)—**ಸ್ವೋಚಿತ** - ತನಗೆ ಯೋಗ್ಯವಾದ, ವಿವಿಧವಾದ, ವಿಚಿತ್ರವಾದ, **ಅನನ್ತ ಭೋಗ್ಯ ಭೋಗೋಪಕರಣ ಭೋಗ ಸ್ಥಾನ** - ಅಂತ್ಯವಿಲ್ಲದೇ ಇರುವ ಅಪ್ರಾಕೃತವಾದ ಭೋಗ್ಯವಸ್ತುವೇನು, ಅವಕ್ಕೆ ಸಹಕಾರಿಯಾದ ವುಗಳೇನು, ಕ್ರೀಡಾಸ್ಥಾನಗಳೇನು, ಇವುಗಳಿಂದ, **ಸಮೃದ್ಧ** - **ಪೂರ್ಣವಾದ**, **ಅನನ್ತಾಶ್ಚರ್ಯ** - ಹಿಂದೆ ಹೇಳಿದ ವೈವಿಧ್ಯ ವೈಚಿತ್ರ್ಯಾತಿಶಯದಿಂದ ಅತ್ಯಂತಾಶ್ಚರ್ಯಕರವಾದ, **ಅನನ್ತ ಮಹಾ ವಿಭವ** - ಅಸಂಖ್ಯಾತವಾದ ರತ್ನಭೂಷಣ ಭದ್ರಾಸನಾದಿಗಳಿರುವದರಿಂದ ಮಹಾ ವಿಭವವುಳ್ಳ, **ಅನನ್ತ ಪರಿಮಾಣ** - "ತ್ರಿಪಾದಸ್ಯಾಮೃತಂ ದಿವಿ" ಎಂದು ಹೇಳಿರುವ ಹಾಗೆ, ಪ್ರಕೃತಿಮಂಡಲಕ್ಕೆ

**ನನ್ತಾಶ್ಚರ್ಯಾ ನನ್ತ ಮಹಾ ವಿಭವಾನನ್ತ ಪರಿಮಾಣ ನಿತ್ಯನಿರವದ್ಯಾಕ್ಷರ ಪರಮವ್ಯೋಮ ನಿಲಯಃ,**

**ವಿವಿಧ ವಿಚಿತ್ರಾನಂತ ಭೋಗ್ಯ ಭೋಕ್ತೃವರ್ಗ ಪರಿಪೂರ್ಣ ನಿಖಿಲ ಜಗದುದಯ ವಿಭವ ಲಯಲೀಲಃ,**

---

ಮೇಲಕ್ಕೂ ಅಡ್ಡ ಡ್ಡ ಲಾಗಿಯೂ ಅನಂತವಾಗಿ ವ್ಯಾಪಿಸಿರುವದರಿಂದ, ಅಪರಿಚ್ಛೇದ್ಯವಾದ ಪ್ರಮಾಣ ವುಳ್ಳ, **ನಿತ್ಯ** - ಪ್ರಾಕೃತವಾದ ಆಕಾಶದ ಹಾಗೆ ಲಯವಿಲ್ಲದೆ ನಿತ್ಯವಾದ, **ನಿರವದ್ಯ** - ರಜಸ್ತಮೋ ಗುಣ ಸಂಬಂಧವಿಲ್ಲದೆ ಶುದ್ಧ ಸತ್ವಮಯವಾದುವರಿಂದ ದೋಷರಹಿತವಾದ, **ಅಕ್ಷರ** - ಸೃಷ್ಟಿ ಲಯಗಳಿಗೆ ಸಿಕ್ಕದೇ ಇರುವವರಿಂದ ಅಕ್ಷರಶಬ್ದ ದಿಂದಲೂ, **ಪರಮ ವ್ಯೋಮ** ಶಬ್ದ ದಿಂದಲೂ, (**"ತದಕ್ಷರೇ ಪರಮೇ ವ್ಯೋಮ್ನ"** ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ, ಇಂತಹ ದಿವ್ಯವೈಕುಂಠ ವನ್ನೇ,) **ನಿಲಯಃ** - ಆವಾಸವಾಗಿ ಉಳ್ಳವನು. ಇದರಿಂದ ಪರವಾಸುದೇವ ರೂಪನಾಗಿರುವ ಪ್ರದೇಶವು ವರ್ಣಿಸಲ್ಪಟ್ಟಿತು. ಇದಕ್ಕೆ ತ್ರಿಪಾದ್ವಿಭೂತಿ ಎಂದೂ, ನಿತ್ಯವಿಭೂತಿ ಎಂದೂ, ಹೆಸರು. ಇದು ಅಪ್ರಾಕೃತವಾದುದಾಗಿ ಏಕಪಾದ್ವಿಭೂತಿಯಾದ ಲೀಲಾವಿಭೂತಿಯ ಹಾಗೆ ಸೃಷ್ಟಿಲಯಾದಿ ಗಳಿಗೆ ಸಿಕ್ಕಿದುವಲ್ಲವು.) ಹೀಗೆ ಸರ್ವೇಶ್ವರನು ಉಭಯವಿಭೂತಿನಾಯಕನು. (ಇದರಿಂದ ನಿತ್ಯ ವಿಭೂತಿಯೆಂಬುದು ಯಾವುದೂ ಇಲ್ಲವೆಂದೂ, ಲೀಲಾವಿಭೂತಿಯೆಲ್ಲಾ ಮಿಥ್ಯೆಯೆಂದೂ ಹೇಳು ವದು ಸರಿಯಲ್ಲವೆಂದೂ ಹೇಳಿದಂತಾಯಿತು.)

ಮುಂದೆ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ವಶವಾದ ಲೀಲಾವಿಭೂತಿನಾಯಕತ್ವವನ್ನು ಉಪ ಪಾದಿಸುತ್ತಾರೆ. (ಚತುರ್ಮುಖಬ್ರಹ್ಮನ ಸತ್ಯಲೋಕ, ರುದ್ರನ ಕೈಲಾಸಲೋಕ, ಇಂದ್ರನ ಸ್ವರ್ಗ ಲೋಕಾದಿಗಳೆಲ್ಲಾ ಈ ಲೀಲಾವಿಭೂತಿಗೆ ಸೇರಿದವಾದುದರಿಂದ **ವಿವಿಧ ವಿಚಿತ್ರ** ವೆಂದು ಆರಂಭಿಸಿ ಹೇಳುತ್ತಾರೆ:)—**ವಿವಿಧ** - ನಾನಾವಿಧವಾಗಿರುವ, **ವಿಚಿತ್ರ** - ಆಶ್ಚರ್ಯಕರವಾದ, **ಅನಂತ** - ಅಂತ್ಯವಿಲ್ಲದ, ಅಸಂಖ್ಯೇಯವಾದ, **ಭೋಗ್ಯವರ್ಗ** - ಅಚಿದ್ವಸ್ತು ಸಮೂಹವೇನು, **ಭೋಕ್ತೃ ವರ್ಗ** - ಈ ಭೋಗ್ಯವಸ್ತುವನ್ನೆಲ್ಲಾ ಸುಖದುಃಖಾದಿ ರೂಪದಲ್ಲಿ ಕರ್ಮಾನುಸಾರ ಅನುಭವಿಸುವ ಜೀವರಾಶಿಗಳೇನು ಇವುಗಳಿಂದ, **ಪರಿಪೂರ್ಣ** - ತುಂಬಿರುವ, **ನಿಖಿಲ ಜಗತ್** - ಸಮಸ್ತ ಲೋಕ ಗಳ ಎಂದರೆ, ಮೇಲಿನ, ಮಧ್ಯದ, ಕೆಳಗಿನ ಲೋಕಗಳ, **ಉದಯ** - ಸೃಷ್ಟಿ, **ವಿಭವ** - ಸ್ಥಿತಿ, **ಲಯ** - ನಾಶಗಳೇ, **ಲೀಲಃ** - ಲೀಲೆಯಾಗಿರುವ ಸರ್ವೇಶ್ವರನು; (ಇಲ್ಲಿ **"ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾ"** (ಶ್ವೇತಾ. ೧. ೧೨) ಎಂಬ ಶ್ರುತಿಯಲ್ಲಿ ಉಪಪಾದಿಸಲ್ಪಟ್ಟ ರೀತಿಯಲ್ಲಿ, **ಚಿತ್, ಅಚಿತ್** ಇವುಗಳಿಂದ ಸೇರಿರುವ ಜಗತ್ತನ್ನು ವ್ಯಾಪಿಸಿ ನಿಯಾಮಕನಾಗಿ ಈಶ್ವರನಿದ್ದಾ ನೆಂದೂ, ಹೀಗೆ ನಿತ್ಯವಾಗಿ ತತ್ವತ್ರಯವುಂಟೆಂದು ಉಪದೇಶಿಸಲ್ಪಟ್ಟಿತು. ಜಗತ್ತು ಮಿಥ್ಯಾ ಎಂಬುದಕ್ಕೆ ಈ ಶ್ರುತಿಯು ಅವಕಾಶವನ್ನು ಕೊಡುವದಿಲ್ಲವು.) ನಿತ್ಯವಿಭೂತಿಯ ಹಾಗೆ ಅಲ್ಲದೆ, ಈ ಲೀಲಾವಿಭೂತಿಯು ಸೃಷ್ಟಿ ಲಯಾದಿಗಳಿಗೆ ಅಧೀನವಾಗಿರುತ್ತದೆ. **"ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿ ಸಂವಿಶಂತಿ, ತದ್ವಿಜಿಜ್ಞಾ ಸಸ್ವ ತದ್ಬ್ರಹ್ಮೇತಿ"** (ಭೃಗುವಲ್ಲೀ) ಎಂದರೆ ಯಾವನಿಂದ ಈ ಚಿದಚಿತ್ತುಗಳು ಸೃಷ್ಟಿಸಲ್ಪಡು ತ್ತವೋ, ಯಾವನು ಇದಕ್ಕೆಲ್ಲಾ ಆತ್ಮಾವಾಗಿರುವದರಿಂದ ಅವು ಸತ್ತೆಯನ್ನು ಹೊಂದಿರುತ್ತವೆಯೋ, ಯಾವನಿಂದ ಎಲ್ಲವೂ ಲಯವನ್ನು ಹೊಂದುತ್ತವೆಯೋ ಅದೇ ಬ್ರಹ್ಮವು, ಎಂದು ಶ್ರುತಿಯಲ್ಲೂ, **ಜನ್ಮಾದ್ಯಸ್ಯ ಯತಃ** ಎಂಬ ಸೂತ್ರದಲ್ಲೂ, ಹೇಳಿರುವ ಅಭಿಪ್ರಾಯವನ್ನು ಈ ವಾಕ್ಯದಲ್ಲಿ ಸಂಗ್ರ

ಹಿಸಿರುತ್ತಾರೆ. ಯಾವನು ಜಗತ್ಕಾರಣನೋ ಅವನೇ ಜಿಜ್ಞಾಸ್ಯ ಬ್ರಹ್ಮನು ಎಂಬಭಿಪ್ರಾಯವು. ಸಮಸ್ತ ಜಗತ್ತಿನಲ್ಲೂ ಇರುವ ಭೋಗ್ಯ ಭೋಕ್ತೃವರ್ಗವೂ ವಿವಿಧವಾದುದು, ವಿಚಿತ್ರವಾದುದು, ಅನಂತವಾದುದು. ಶಬ್ದಸ್ಪರ್ಶಾದಿ ರೂಪದಿಂದ ದಿವ್ಯವಾದ ಮತ್ತು ದಿವ್ಯವಲ್ಲದ ಭೇದದಿಂದ ಭೋಗ್ಯವಸ್ತುವೆಲ್ಲಾ ವಿವಿಧವಾದುವು ಮತ್ತು ವಿಚಿತ್ರವಾದುವು; ಅಥವಾ ಶ್ರುತಿಯಲ್ಲಿ **ಇಮಾನಿ ಭೂತಾನಿ** ಎಂಬ ಕೈಯಿಂದ ನಿರ್ದೇಶಿಸಿ ಹೇಳಿರುವದರಿಂದ, ಸಮಸ್ತ ಕಾರ್ಯವರ್ಗದಲ್ಲಿ ಸೇರಿದ ಅಸಂಖ್ಯಾತವಾದ ಭೋಕ್ತೃಗಳಲ್ಲಿ ದೇವಮನುಷ್ಯಾದಿ ವೈವಿಧ್ಯವು ಹೇಳಲ್ಪಟ್ಟಿತು. ಆ ಭೋಕ್ತೃವರ್ಗದಲ್ಲೇ ಸೇರಿದ ಬ್ರಾಹ್ಮಣಾದಿ ಭೇದಗಳಿಂದ ವೈಚಿತ್ರ್ಯವು ಹೇಳಲ್ಪಟ್ಟಿತು. ಭೋಗ್ಯವರ್ಗದಲ್ಲೂ ಕೂಡ ಅನಂತಗಳಾದ ವಿವಿಧಗಳಾದ ವಿಚಿತ್ರಗಳಾದ ಸೃಷ್ಟಿಯೂ ಕೂಡ ಪ್ರತ್ಯಕ್ಷಕ್ಕೇ ವೇದ್ಯವು. ಸೃಷ್ಟಿಯಲ್ಲಿ ವೈವಿಧ್ಯವೂ ವೈಚಿತ್ರ್ಯವೂ ಇರಬೇಕೆಂಬುದೇ ಸರ್ವೇಶ್ವರ ಸಂಕಲ್ಪವು; ಅದೇ ಈ ಮುಂದಿನ ಶ್ಲೋಕದಲ್ಲಿ ಉದಾಹರಿಸಲ್ಪಟ್ಟಿರುತ್ತದೆ:— **"ಮೇಘೋದಯಃ ಸಾಗರ ಸನ್ನಿವೃತ್ತಿ ರಿಂದೋರ್ವಿಭಾಗಃ ಸ್ಫುರಿತಾನಿ ವಾಯೋಃ । ವಿದ್ಯುದ್ವಿಭಂಗೋ ಗತಿರುಷ್ಣರಶ್ಮೇ ರ್ವಿಷ್ಣೋರ್ವಿಚಿತ್ರಾಃ ಪ್ರಭವಂತಿ ಮಾಯಾಃ ॥"** ಆಕಾಶದಲ್ಲಿ ಮೇಘಗಳ ಪ್ರಾದುರ್ಭಾವವೂ, ಸಮುದ್ರವು ಎಲ್ಲೆಯನ್ನು ಮೀರದಿರುವಿಕೆಯೂ, ಚಂದ್ರನು ದಿನದಿನಕ್ಕೆ ವೃದ್ಧಿಹ್ರಾಸವನ್ನು ಹೊಂದೋಣವೂ, ವಾಯುವಿನ ಬೀಸುವ ಶಬ್ದವೂ, ಸಿಡಲು ಹೊಡೆಯೋಣವೂ, ಸೂರ್ಯನ ಗಮನವೂ, ಶ್ರೀ ಮಹಾವಿಷ್ಣುವಿನ ಸಂಕಲ್ಪದ ವೈಚಿತ್ರ್ಯಗಳು. ಶ್ರೀ ಯತಿವರ್ಯರು ಈ ಶ್ಲೋಕವನ್ನೇ ಮುಂದೆ ಉದಾಹರಿಸಿರುತ್ತಾರೆ. ಶ್ರೀ ಪರಾಶರಭಟ್ಟರೂ ಸಹಸ್ರನಾಮದಲ್ಲಿ ಈ ಶ್ಲೋಕವನ್ನು ಉದಾಹರಿಸಿರುತ್ತಾರೆ. ಚೇತನರ ಪರಸ್ಪರ ವಿವಿಧ ವೈಚಿತ್ರ್ಯವು ಹೇಳಲ್ಪಟ್ಟಿರುವದರಿಂದ ರೂಪ, ಗುಣ, ವಿಭವ, ಐಶ್ವರ್ಯಗಳಿಂದ ಎಲ್ಲರೂ ಭಿನ್ನರೆಂದು ಹೇಳಿರುವದರಿಂದ, ಆಧುನಿಕರ ಎಲ್ಲರೂ ಸಮವೆಂಬ ಕೂಗು ಮೂರು ಪ್ರಮಾಣಗಳಿಗೂ ವಿರೋಧವಾದುದೆಂಬುದು ಏರ್ಪಡುತ್ತದೆ.

ಹಿಂದೆ ನಿತ್ಯವಿಭೂತಿಗೆ ಈಶ್ವರನೆಂದು ಹೇಳುವ ಸಂದರ್ಭದಲ್ಲಿ **ಭೋಗ್ಯ ಭೋಗೋಪಕರಣ ಭೋಗಸ್ಥಾನದ** ವೈವಿಧ್ಯ ವೈಚಿತ್ರ್ಯಗಳು ಹೇಳಲ್ಪಟ್ಟವು; ಲೀಲಾವಿಭೂತಿಯ ಸಂದರ್ಭದಲ್ಲಿ ಭೋಗ್ಯ ಭೋಕ್ತೃವರ್ಗಗಳ ವೈವಿಧ್ಯ ವೈಚಿತ್ರ್ಯಗಳು ಮಾತ್ರ ಹೇಳಲ್ಪಟ್ಟವು. ನಿತ್ಯವಿಭೂತಿಯಲ್ಲಿ ಭೋಕ್ತೃವರ್ಗದ ವೈವಿಧ್ಯಾದಿಗಳು ಇಲ್ಲವಾದುದರಿಂದ ಹೇಳಲಿಲ್ಲವು. ಅಲ್ಲಿ ಜ್ಞಾನ ಸುಖ ತಾರತಮ್ಯಗಳು ಯಾವುವೂ ಇಲ್ಲದುದರಿಂದಲೂ ನಿತ್ಯಸೂರಿಗಳನ್ನೇ ಕುರಿತು ಬೇರೆಯೇ ಹೇಳಿರುವದರಿಂದಲೂ ಅಲ್ಲಿ ವೈವಿಧ್ಯವಿಲ್ಲವು. (ಅಲ್ಲೀಗ ಎಲ್ಲರೂ ಸಮರು. ಆದುದರಿಂದ ನಿತ್ಯವಿಭೂತಿಯಲ್ಲಿ ಆನಂದ ತಾರತಮ್ಯಕ್ಕೆ ಅವಕಾಶವಿಲ್ಲವು.) ಆದರೆ ಭೋಗೋಪಕರಣ ಭೋಗಸ್ಥಾನಾದಿ ಅರ್ಥಾತ್ ಸಿದ್ಧವಾದವುಗಳಿಂದ ಇಲ್ಲಿ ಅವುಗಳು ಹೇಳಲ್ಪಡಲಿಲ್ಲವು. (ಹೀಗೆ ವಿವಿಧವಾಗಿಯೂ ವಿಚಿತ್ರವಾಗಿಯೂ ಸೃಷ್ಟಿಸುವದರಿಂದ ವೈಷಮ್ಯಾದಿ ದೋಷವು ಸರ್ವೇಶ್ವರನಿಗಿಲ್ಲವೇ ಎಂದರೆ, ಚೇತನನ ಕರ್ಮಾನುಸಾರ ಸೃಷ್ಟಿಯಾದುದರಿಂದ ಅಂತಹ ದೋಷಕ್ಕೆ ಕಾರಣವಿಲ್ಲವು.) **ನಿಖಿಲ ಜಗತ್** ಎಂಬದಾಗಿ ನಿಖಿಲಶಬ್ದದಿಂದ, ಸಮಸ್ತಕ್ಕೂ ಎಲ್ಲಾ ವಿಧವಾದ ಉಪಾದಾನ ನಿಮಿತ್ತ ಕಾರಣನೂ ಸರ್ವೇಶ್ವರನೇ ಎಂಬುದು ಸೂಚಿಸಲ್ಪಟ್ಟಿತು. **ಉದಯ** ಶಬ್ದದಿಂದ ತಾನಾಗಿ ಮಾಡುವ ಸಮಷ್ಟಿಸೃಷ್ಟಿ, ಚತುರ್ಮುಖನ ಮೂಲಕ ನಡೆಯುವ ವ್ಯಷ್ಟಿಸೃಷ್ಟಿ ಇವೆರಡಕ್ಕೂ ತಾನೇ ಕಾರಣನೆಂದು ಹೇಳಲ್ಪಟ್ಟಿತು. **ವಿಭವ** ಶಬ್ದದಿಂದ ಅವತಾರ ಅಂತರ್ಯಾಮಿತ್ವಾದಿಗಳ ಮೂಲಕವಾಗಿ ನಡೆಯುವ ಜಗದ್ರಕ್ಷಣೆಯೂ ತನ್ಮೂಲಕ ಅದರ ಸ್ಥಿತಿಯೂ ಹೇಳಲ್ಪಟ್ಟವು. **ಲಯ** ಶಬ್ದದಿಂದ ನಿತ್ಯನೈಮಿತ್ತಿಕಾದಿ ಪ್ರಳಯಗಳು ಹೇಳಲ್ಪಟ್ಟವು. ಇಲ್ಲಿ ಸೃಷ್ಟ್ಯಾದಿಗಳಲ್ಲಿ ಯಾವುದಾದರೂ ಒಂದಕ್ಕೇ ಕಾರಣತ್ವವು ಪರಬ್ರಹ್ಮಲಕ್ಷಣಕ್ಕೆ ಸಾಕಾಗಿದ್ದರೂ, ಮಿಕ್ಕವುಗಳಿಗೆ ಕಾರಣವು ಇನ್ನ್ಯಾರೂ ಅಲ್ಲವೆಂದು

**ಪರಂಬ್ರಹ್ಮ ಪುರುಷೋತ್ತಮೋ ನಾರಾಯಣಃ,**

ತೋರಿಸುವದಕ್ಕಾಗಿ ಸಾಧಾರಣವಾಗಿ ಶಾಸ್ತ್ರಗಳಲ್ಲೆಲ್ಲಾ ಸೃಷ್ಟಿಸ್ಥಿತಿಲಯಗಳಿಗೆ ಕಾರಣನೆಂದು ಹೇಳಲ್ಪಟ್ಟಿದೆ. ಇವುಗಳನ್ನೇ ಲೀಲೆಯಾಗಿ ಉಳ್ಳವನೆಂದು ಹೇಳಿರುವದರಿಂದ, ಸಮಸ್ತ ಕಾರಣನೂ, ಉಪಾದಾನ ನಿಮಿತ್ತಾದಿ ಕಾರಣನೂ ಅವನೇ ಎಂದು ಊಹಿಸಬಹುದು. "ಬಹುಸ್ಯಾಂ" ಎಂದು ಸಂಕಲ್ಪಿಸಿರುವದರಿಂದ, ಸೂಕ್ಷ್ಮಚಿದಚಿಚ್ಛರೀರಕನಾಗುವದರಿಂದ ಸರ್ವೇಶ್ವರನು ನಿರ್ವಿಕಾರನೆಂದು ಹೇಳುವ ಶ್ರುತಿಗೆ ವಿರೋಧವಿಲ್ಲವು, ಪರಮಾತ್ಮನು ಪರಿಪೂರ್ಣ ಕಾಮನು. ಹೀಗಿರುವಾಗ ಜಗತ್ಸಂಬಂಧವು ಆತನಿಗೆ ಏಕೆ ಎಂದರೆ, ಆತನಿಗೆ ಲೀಲೆಯೇ ಪ್ರಯೋಜನನವೆಂದು, **ಲೋಕವತ್ತು ಲೀಲಾ ಕೈವಲ್ಯಂ** (ಬ್ರ. ಸೂ. ೨. ೧. ೩೩), **"ಲೀಲಾಜಗತ್ಪತೇ ಸ್ತಸ್ಯ ಛಂದತಸ್ಸಂ ಪ್ರವರ್ತತೇ" "ಮೋದತೇ ಭಗವಾನ್ ಭೂತ್ಯೈ ಬಾಲಃ ಕ್ರೀಡನ ಕೈರಿವ"** (ಭಾರ. ಸಭಾ.) **"ಕ್ರೀಡಾ ಹರೇ ರಿದಂ ಸರ್ವಂ"** (ಭಾರ. ಶಾಂತಿ. ೨೦೬, ೫೮) **"ಕ್ರೀಡತೋ ಬಾಲಕಸ್ಯೇವ ಚೇಷ್ಟಾಂ ತಸ್ಯ ನಿಶಾಮಯ"** (ವಿ. ಪು. ೧. ೨. ೧೮) **"ಹರೇ ರ್ವಿಹರಿಸಿ ಕ್ರೀಡಾ ಕನ್ತುಕೈರಿವ ಜನ್ತುಭಿಃ"** ಇತ್ಯಾದ್ಯನೇಕ ಪ್ರಮಾಣಗಳ ಅರ್ಥವು ಉಪಪಾದಿಸಲ್ಪಟ್ಟಿತು. ಹೀಗೆ ಸರ್ವಕಾರಣವೂ ಆತನೇ ಆಗಿರುವಾಗ ನಿಮಿತ್ತಕಾರಣನು ಈಶ್ವರನು, ಉಪಾದಾನ ಕಾರಣವು ಬೇರೆ ಎಂದು ಹೇಳುವ ಸಿದ್ಧಾಂತವು ನಿರಾಕರಿಸಲ್ಪಟ್ಟಿತು. ಅನೇಕ ಸಂದರ್ಭಗಳಲ್ಲಿ ಲೋಕದಲ್ಲಿ ನಿಮಿತ್ತೋಪಾದಾನ ಕಾರಣಗಳು ಭಿನ್ನವಸ್ತುಗಳಲ್ಲಿ ಕಂಡಿರುವೆವೆಂಬಾಕ್ಷೇಪವನ್ನು ಸರ್ವಶಕ್ತನಾದ್ದಪರಬ್ರಹ್ಮನಲ್ಲಿ ಆರೋಪಿಸುವದು ಯುಕ್ತವಲ್ಲವು. ಶ್ರುತಿಯು **"ಯಥೋರ್ಣನಾಭಿಸ್ಸೃಜತೇ ಗೃಹ್ಣತೇಚ"** (ಮುಂ. ೧. ೧. ೭) ಎಂಬುವ ವಾಕ್ಯದಿಂದ "ಜೇಡರ ಹುಳವು ಹೇಗೆ ತಂತುವಿಗೆ ಉಪಾದಾನ ನಿಮಿತ್ತಕಾರಣವೋ ಹಾಗೆಯೇ ಸರ್ವೇಶ್ವರನು" ಎಂದು ಹೇಳಿರುವದರಿಂದ ಒಂದು ಹುಳುವಿಗೆ ತಾನೇ ಕೊಟ್ಟಿರುವ ಈ ಶಕ್ತಿಯು, ಸರ್ವೇಶ್ವರನಾದ ತನಗೇ ಇಲ್ಲವೇ ? ಎಂದು ಕೇಳಬೇಕಾಗುತ್ತದೆ. ಶ್ರುತಿಯೇ, ಜಗತ್ತಿಗೆ ಉಪಾದಾನ ನಿಮಿತ್ತಕಾರಣನು ಯಾರೆಂದು **"ಕಿಂಸಿದ್ವನಂ ಕಉ ಸವೃಕ್ಷ ಆಸೀತ್"** ಎಂದು ಪ್ರಶ್ನಿಸಿ ಅದಕ್ಕೆ ಉತ್ತರವಾಗಿ **"ಬ್ರಹ್ಮವನಂ ಬ್ರಹ್ಮ ಸವೃಕ್ಷ ಆಸೀತ್"** ಬ್ರಹ್ಮವೇ ಉಪಾದಾನ ಕಾರಣನೂ, ಉಪಕರಣಗಳೂ ಎಂದು ಹೇಳಿರುವದರಿಂದ ನಿಮಿತ್ತಕಾರಣ ಮಾತ್ರವೇ ಎಂಬ ವಾದವು ಶ್ರುತಿಸಮ್ಮತವಲ್ಲವು. ಮುಂಡಕೋಪನಿಷತ್ತೂ **"ಯದ್ಭೂತ ಯೋನಿಂ"** ಎಂದು ಪರಬ್ರಹ್ಮನು ಭೂತಯೋನಿ ಎಂದು ಹೇಳಿರುವದರಿಂದ ಉಪಾದಾನತ್ವವನ್ನು ಪ್ರಕಟಿಸುತ್ತದೆ. ಗೀತೆಯಲ್ಲೂ ಉಪಾದಾನತ್ವವು **"ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ"** (ಗೀ. ೧೦. ೩೯.) ಎಂಬಲ್ಲಿ ಸ್ಥಾಪಿಸಲ್ಪಟ್ಟಿರುತ್ತದೆ. ಪ್ರಳಯದಲ್ಲಿ ಸೂಕ್ಷ್ಮ ಚಿದಚಿದ್ವಿಶಿಷ್ಟನಾಗಿರುವ ಸರ್ವೇಶ್ವರನೇ, ಸೃಷ್ಟಿಕಾಲದಲ್ಲಿ ಸ್ಥೂಲ ಚಿದಚಿದ್ವಿಶಿಷ್ಟನಾಗುವದರಿಂದ ಉಪಾದಾನ ಕಾರಣನೂ, ಸಂಕಲ್ಪವಿಶೇಷ ಮೂಲಕವಾಗಿ ನಿಮಿತ್ತಕಾರಣನೂ ಅವನೇ. ಹೀಗೆ ಜಗತ್ಸೃಷ್ಟ್ಯಾದಿಗಳಿಗೆ ಕಾರಣಭೂತನು ಯಾರೆಂದರೆ, **"ಪರಂಬ್ರಹ್ಮನಾರಾಯಣಃ"** ಎಂಬ **"ನಾರಾಯಣ ಪರಂ ಬ್ರಹ್ಮ"** ಎಂಬ ಪುರುಷಸೂಕ್ತವಾಕ್ಯಗಳನ್ನನುಸರಿಸಿ ಹೇಳಿರುತ್ತಾರೆ. ಶ್ರೀ ಯಾಮುನೇಯರೂ ಗೀತಾರ್ಥ ಸಂಗ್ರಹದಲ್ಲಿ **"ನಾರಾಯಣಃ ಪರಂಬ್ರಹ್ಮ ಗೀತಾಶಾಸ್ತ್ರೇ ಸಮೀರಿತಃ"** ಎಂದು ಹಾಗೆಯೇ ಹೇಳಿರುತ್ತಾರೆ. ಪರತತ್ವವು ಯಾವುದು ಎಂಬ ನಿರ್ಣಯವನ್ನು ತಿಳಿಯಲಪೇಕ್ಷಿಸಿದ ಯುಧಿಷ್ಠಿರಾದಿಗಳು ಶ್ರೀ ಭೀಷ್ಮರನ್ನು ಶರತಲ್ಪದಲ್ಲಿರುವಾಗ ಪ್ರಶ್ನಿಸುತ್ತಾರೇನೆಂದರೆ :—

**ಬ್ರಹ್ಮಾದಿ ಸ್ಥಾವರಾಂತ ಮಖಿಲಂ ಜಗತ್ಸೃಷ್ಟ್ವಾ ಸ್ವೇನರೂಪೇಣಾವಸ್ಥಿತಃ, ಬ್ರಹ್ಮಾದಿ ದೇವಮನುಷ್ಯಾಣಾಂ ಧ್ಯಾನಾರಾಧನಾದ್ಯ ಗೋಚರೋಽಪಾರಕಾರುಣ್ಯ ಸೌಶೀಲ್ಯ ವಾತ್ಸಲ್ಯೌದಾರ್ಯ ಮಹೋದಧಿಃ,**

---

**"ಕುತಸ್ಸೃಷ್ಟಮಿದಂ ಸರ್ವಂ ಜಗತ್ಸ್ಥಾವರ ಜಗಮಂ |**
**ಪ್ರಳಯೇ ಚ ಕಮಭ್ಯೇತಿ ತನ್ಮೇ ಬ್ರೂಹಿ ಪಿತಾಮಹ ||** (ಭಾರ. ಶಾನ್ತಿ ೧೪೦. ೧)

ಯಾರಿಂದ ಈ ಸ್ಥಾವರ ಜಂಗಮಾತ್ಮಕವಾದ ಜಗತ್ತೆಲ್ಲವೂ ಸೃಷ್ಟಿಸಲ್ಪಟ್ಟವು? ಪ್ರಳಯದಲ್ಲಿ ಯಾರನ್ನು ಕುರಿತು ಇವೆಲ್ಲವೂ ಹೋಗುತ್ತವೆ? ಎಂಬುದು ಯುಧಿಷ್ಠಿರ ಪ್ರಶ್ನೆಯು:—ಅದಕ್ಕೆ ಉತ್ತರವಾಗಿ**ನಾರಾಯಣೋ ಜಗನ್ಮೂರ್ತಿ ರಂತರಾತ್ಮಾ ಸನಾತನಃ**" (ಭಾರ. ಶಾಂತಿ ೧೪೦. ೧೧.) ಎಂದಾರಂಭಿಸಿ ನಾರಾಯಣನೇ ಜಗತ್ಸೃಷ್ಟಿ ಲಯಾದಿ ಕಾರಣನಾಗಿ ಪರತತ್ವನೆಂದು ಶ್ರೀ ಭೀಷ್ಮರು ಉಪದೇಶಿಸಿದರು. (ಶ್ರೀ ವ್ಯಾಸರೂ, ಶ್ರೀ ಪರಾಶರರೂ, ಶ್ರೀ ಶುಕರೂ, ಶ್ರೀ ವಾಲ್ಮೀಕಿ ಮಹರ್ಷಿಯೂ, ಮನುವೇ ಮೊದಲಾದವರುಗಳೆಲ್ಲರೂ ಶ್ರೀಮನ್ನಾರಾಯಣನೇ ಪರತತ್ವನೆಂದು ಹೇಳಿರುತ್ತಾರೆ.) ಈತನೇ ಕ್ಷರ ಶಬ್ದದಿಂದ ಹೇಳಿಸಿಕೊಳ್ಳುವ ಬದ್ಧಜೀವರಿಗಿಂತಲೂ ವಿಲಕ್ಷಣನಾಗಿ, ಮುಕ್ತ ನಿತ್ಯರಿಗಿಂತಲೂ ಶ್ರೇಷ್ಠನಾಗಿರುವದರಿಂದ "**ಉತ್ತಮಃ ಪುರುಷಸ್ತ್ವನ್ಯಃ**" ಎಂದು(ಗೀತಾ೧೫-೧೭) ಹೇಳಿರುವದರಿಂದ ಇಲ್ಲಿ **ಪುರುಷೋತ್ತಮ**ನೆಂದು ಹೇಳಲ್ಪಟ್ಟಿತು. (ಹೀಗೆ ನಾರಾಯಣನೇ ಪರಬ್ರಹ್ಮವೆಂದು ಹೇಳುವದರಿಂದ ಅಭೇದ, ಭೇದ, ಘಟಕ, ಕಾರಣ, ಶೋಧಕ, ಉಪಾಸನ ಶ್ರುತಿಗಳೆಲ್ಲವುಗಳಿಗೂ ಸಾಮಂಜಸ್ಯವನ್ನು ಕಲ್ಪಿಸಬಹುದು. ವಿಶಿಷ್ಟಾದ್ವೈತಿಗಳಿಗೆ ಹೀಗೆ ಸರ್ವಶ್ರುತಿ ಸಾಮಂಜಸ್ಯವು ಉಂಟು. ಬಾಧ್ಯ ಬಾಧಕ ಶ್ರುತಿಗಳಿಲ್ಲವು.) (**ಸರ್ವಸಾಮಾನಾಧಿಕರಣ್ಯವೂ, ಸರ್ವ ವೈಲಕ್ಷಣ್ಯವೂ, ಸರ್ವಾಂತರ್ಯಾಮಿತ್ವವೂ** ಸಹ ಶ್ರೀ ಯತಿವರ್ಯರು ಉಪಯೋಗಿಸಿರುವ ಈ ಮೂರು ಪದಗಳಾದ **ಪರಂಬ್ರಹ್ಮ, ಪುರುಷೋತ್ತಮ, ನಾರಾಯಣ** ಶಬ್ದಗಳಿಂದ ಉಪಪಾದಿಸಲ್ಪಟ್ಟವು)

ಮುಂದೆ ಅಂಡಾದಿ ಸೃಷ್ಟಿಕ್ರಮದಲ್ಲಿ "**ಯೋ ಬ್ರಹ್ಮಾಣಂ ವಿಧಧಾತಿ ಪೂರ್ವಂ ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ**" (ಶ್ವೇ. ೬.೧೮) ಯಃ-ಯಾವ ಪರಬ್ರಹ್ಮವು, ಪೂರ್ವಂ-ವ್ಯಷ್ಟಿ ಸೃಷ್ಟಿಗೆ ಮೊದಲು, ಬ್ರಹ್ಮಾಣಂ-ಚತುರ್ಮುಖ ಬ್ರಹ್ಮನನ್ನು, ವಿದಧಾತಿ-ಕರಣ ಕಳೇಬರಾದಿಗಳನ್ನು ಕೊಟ್ಟು ಸೃಷ್ಟಿಸುತ್ತಾನೋ, **ತಸ್ಮೈ** - ಆ ಚತುರ್ಮುಖನಿಗೆ, **ಯಃ** - ಯಾವ ಪರಬ್ರಹ್ಮನು, **ವೇದಾಂಶ್ಚ ಪ್ರಹಿಣೋತಿ** - ವೇದಗಳನ್ನು ಕಳುಹಿಸುತ್ತಾನೋ ಎಂದರೆ ಉಪದೇಶಿಸುತ್ತಾನೋ, "**ತಂಹ ದೇವ ಮಾತ್ಮಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ**" ಎಂದು ಮುಂದಿರುತ್ತದೆ. ಅಂತಹ ಆತ್ಮರುಗಳ ವಿಶುದ್ಧಮನಸ್ಸಿನಿಂದ ಮಾತ್ರ ತಿಳಿಯಲು ಶಕ್ಯನಾದ ದೇವನನ್ನು, ಮೋಕ್ಷಾರ್ಥಿಯಾದ ನಾನು ಉಪಾಯವನ್ನಾಗಿ ಆಶ್ರಯಿಸುತ್ತೇನೆ ಎಂಬರ್ಥವು. ಇದು ಚತುರ್ಮುಖನ ವಾಕ್ಯವು. ಮತ್ತು "**ತತ್ರ ಬ್ರಹ್ಮಾ ಚತುರ್ಮುಖೋಽಜಾಯತ**" (ಮಹೋ. ೧.೨.೧) ಎಂದೂ ಹೇಳಿರುವ ಹಾಗೆ ಕರಣಕಳೇಬರಯೋಗ, ಶಾಸ್ತ್ರಪ್ರದಾನ ಮುಂತಾದ ನಿರ್ಹೇತುಕ ಕೃಪಾಪ್ರಭಾವವನ್ನು "**ಬ್ರಹ್ಮಾದಿ ಸ್ಥಾವರಾಂತಂ**" ಎಂದು ಪ್ರಾರಂಭಿಸಿ ಪ್ರದರ್ಶಿಸುತ್ತಾರೆ. **ಬ್ರಹ್ಮಾದಿ ಸ್ಥಾವರಾಂತಂ** - ಚತುರ್ಮುಖನು ದೇವತೆಗಳಲ್ಲಿ ಪ್ರಥಮನು, ಆದುದರಿಂದ ಬ್ರಹ್ಮ ಮೊದಲುಗೊಂಡು ದೇವ, ಮನುಷ್ಯ, ತಿರ್ಯಕ್, ಸ್ಥಾವರದ ಕೊನೆಯವರೆಗೂ, **ಅಖಿಲಂ** - ಸಮಸ್ತ, **ಜಗತ್** - ಜಗತ್ತುಗಳನ್ನು, **ಸೃಷ್ಟ್ವಾ** - ಸೃಷ್ಟಿಸಿ, ಆದರೆ ಚತುರ್ಮುಖ ಸೃಷ್ಟಿಯಾದ

ನಂತರ ಸರ್ವಸೃಷ್ಟಿಯನ್ನೂ ಚತುರ್ಮುಖನು ನಡಿಸುವನೆಂಬ ಪ್ರಮಾಣವಿರುವಾಗ ಸರ್ವೇಶ್ವರನೇ
ಇವೆಲ್ಲವನ್ನೂ ಸೃಷ್ಟಿಸಿದುದು ಹೇಗೆಂದರೆ, ಚತುರ್ಮುಖನೂ ಕೂಡ ಆತನಿಗೆ ಶರೀರವಾದುದ
ರಿಂದ, ಚತುರ್ಮುಖನು ಮಾಡುವದೂ ಕೂಡ ಸರ್ವೇಶ್ವರನು ದಯಪಾಲಿಸಿದ ಸತ್ತಾ ಮೂಲಕ
ವಾಗಿ ಆಗುವದರಿಂದ ಸರ್ವೇಶ್ವರನೇ ಸೃಷ್ಟಿಕರ್ತಾ ಎಂಬ ಭಾವವು. ಮುಂದೆ ಸ್ವಸಂಕಲ್ಪದಿಂದ
ಅವತಾರವನ್ನೂ ಅದರಿಂದಾಗುವ ಪ್ರಯೋಜನಗಳನ್ನೂ ತಿಳಿಸುತ್ತಾರೆ:— **ಸ್ವೇನ** - ಸ್ವಕೀಯ
ವಾದ, **ರೂಪೇಣ** - ಸ್ವರೂಪತಃ ಎಂದರೆ ಸಮಸ್ತವನ್ನೂ ಅಂತರ್ಬಹಿಃ ವ್ಯಾಪಿಸಿ, **ಅವಸ್ಥಿತಃ** -
ಇರುವವನಾಗಿರುವದರಿಂದಲೇ, **ಬ್ರಹ್ಮಾದಿ ದೇವಮನುಷ್ಯಾಣಾಂ** - ಚತುರ್ಮುಖಬ್ರಹ್ಮನೇ ಮೊದ
ಲಾದ ದೇವತೆಗಳ ಮತ್ತು ಮನುಷ್ಯರ, **ಧ್ಯಾನಾರಾಧನಾದ್ಯಗೋಚರಃ** - ಉಪಾಸನೆಗೂ, ಆರಾ
ಧನೆಗೂ ಮತ್ತು ಇವೇ ಮೊದಲಾದವುಗಳಿಗೆಲ್ಲಾ, **"ತತ್ಸೃಷ್ಟ್ವಾ ತದೇವಾನುಪ್ರಾವಿಶತ್"**
(ತೈ. ಆ. ೬. ೨) ಎಂಬ ಶ್ರುತಿಯಲ್ಲಿ ಹೇಳಿರುವ ಹಾಗೆ ಸ್ವರೂಪತಃ ವ್ಯಾಪ್ತಿ ಮಾತ್ರಯಿದ್ದರೆ,
**ಅಗೋಚರಃ** - ಅಗೋಚರನಾಗಿರುವವನಾಗಿ, ಹೀಗೆ ಅಗೋಚರನಾಗಿದ್ದೇನೆಯೇ ಆದುದರಿಂದ
ಗೋಚರನಾಗಬೇಕೆಂಬದಾಗಿ, **ಅಪಾರ**-ಅವಧಿಯಿಲ್ಲದಿರುವ, **ಕಾರುಣ್ಯ**-ಚೇತನರ ಸಂಸಾರನಿಮಿತ್ತ
ವಾದ ದುಃಖಗಳನ್ನು ಸಹಿಸದೇ ಇರುವಿಕೆಯೇನು, **ಸೌಶೀಲ್ಯ**-ತನ್ನ ಮಹತ್ವ ಮೂಲಕ ಉಂಟಾದ
ಉನ್ನತಪದವಿಯಲ್ಲಿದ್ದರೂ ತುಂಬಾ ಕೀಳಾದವರೊಂದಿಗೆ ಸೇರಿರೋಣವೇನು, **ವಾತ್ಸಲ್ಯ** - ಇತರರಲ್ಲಿ
ದೋಷವಿದ್ದರೂ ಅದನ್ನು ಪರಿಗಣಿಸದಿರುವಿಕೆ ಏನು, **ಔದಾರ್ಯ** - ತನ್ನನ್ನು ಎಲ್ಲರೂ ಆಶ್ರಯಿಸಲಿ
ಎಂದು ಅವರಿಗೆ ಕರಣಕಳೇಬರಗಳ ಪ್ರದಾನವೇನು, ಅವರಿಗೆ ಜ್ಞಾನಸಂಪತ್ತನ್ನು ಸುಕೃತಾನುಗುಣ
ವಾಗಿ ಒದಗಿಸುವದೇನು, ತನ್ನ ಭಕ್ತರನ್ನು ಕೊಂಡಾಡುವದೇನು, ಅವರಿಗೆ ಬುದ್ಧಿಯೋಗವನ್ನು
ಕೊಟ್ಟು ಕೊನೆಗೆ ತನಗೆ ಸಮವಾದ ಪದವಿಯನ್ನು ಕೊಡುವದೇನು ಇಂತಹ ಉದಾರ ಸ್ವಭಾವವೇ
ನು, ಇಂತಹ ಗುಣಗಳಿಗೆಲ್ಲಾ, **ಮಹೋದಧಿಃ**-ಸಮುದ್ರಪ್ರಾಯನು. ಈ ವಾಕ್ಯದಲ್ಲಿ **"ಯತೋವಾ
ಇಮಾನಿ ಭೂತಾನಿ ಜಾಯಂತೇ"** ಎಂಬ ಶ್ರುತ್ಯನುಸಾರ ಶ್ರೀಕೃಷ್ಣನು ಪರಬ್ರಹ್ಮಾವತಾರವೆಂದು
ತಿಳಿಸಲ್ಪಟ್ಟಿತು. ಇದು ಗೀತಾ ನಾಲ್ಕನೆಯ ಅಧ್ಯಾಯದಲ್ಲಿ ವಿಸ್ತರವಾಗಿ ಹೇಳಲ್ಪಡುತ್ತದೆ.
ಸ್ವರೂಪತಃ ಅಗೋಚರನಾದ ಪ್ರಯುಕ್ತ ಸರ್ವೇಶ್ವರನು ತನ್ನ ಅಪಾರವಾದ ಕಾರುಣ್ಯಾ ಸೌಶೀ
ಲ್ಯಾದಿ ಗುಣಗಳಿಂದ ಪ್ರೇರಿತನಾಗಿ ಸಕಲ ಚೇತನರಿಗೂ ಸರ್ವ ಶ್ರೇಯಸ್ಸನ್ನೂ ಉಂಟುಮಾಡು
ವದಕ್ಕಾಗಿ ದಿವ್ಯಮಂಗಳ ವಿಗ್ರಹಗಳನ್ನು ಎತ್ತಿರುವನು. ಈ ವಿಗ್ರಹಗಳು ಪರ, ವ್ಯೂಹ, ವಿಭವ,
ಹಾರ್ದ, ಅರ್ಚಾವತಾರವೆಂಬದಾಗಿ ಐದು ವಿಧಗಳು. **ಪರರೂಪವಾದ** ಶ್ರೀ ವಾಸುದೇವರೂಪ
ದಿವ್ಯಮಂಗಳ ವಿಗ್ರಹವು, ನಿತ್ಯಮುಕ್ತರುಗಳಿಗೆ ಮಾತ್ರವೇ ಸಾಕ್ಷಾತ್ತಾಗಿ ಗೋಚರವು; ಉಪಾಸಕ
ರಿಗೆ ಶಾಸ್ತ್ರಮುಖೇನ ಊಹಿಸತಕ್ಕದ್ದಾಗಿರುತ್ತದೆ. ಆರು ಗುಣಗಳಲ್ಲಿ ಎಲ್ಲವನ್ನಾಗಲಿ, ಎರಡೆರಡ
ನ್ನಾಗಲಿ ಹೊಂದಿರುವನೆಂದು, ಭಾವಿಸಿ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧವೆಂಬ
**ನಾಲ್ಕು ವ್ಯೂಹರೂಪಗಳೂ** ಸರ್ವೇಶ್ವರನನ್ನು ಉಪಾಸಿಸುವ ರೂಪಗಳು. **ವಿಭವವಾದರೋ** ಆ
ಕಾಲದ ಸುಕೃತಿಗಳಿಗೆ ದೃಗ್ಗೋಚರವಾಗುವದರಿಂದ ಪರಮಪ್ರಯೋಜನವಾದ ರೂಪವು.
ಆದರೂ ಕರ್ಮವಾಸನೆಯು ಬಲಿಷ್ಠವಾದ ಅನೇಕರಿಗೆ **"ಅವಜಾನಂತಿ ಮಾಂ ಮೂಢಾಃ ಮಾನು
ಷೀಂ ತನುಮಾಶ್ರಿತಂ"** (ಗೀ. ೯. ೧೧) ಎಂದು ಹೇಳಿರುವ ಹಾಗೆ, ಶ್ರೀಕೃಷ್ಣನು ಮನುಷ್ಯನೆಂದೇ
ಭಾವನೆಯು. ಶ್ರೀ ಭಾಗವತದ **"ಮಲ್ಲಾನಾಮಶನಿಃ"** (ಭಾಗ. ೧೦. ೪೩. ೧೭) ಎಂಬ ಶ್ಲೋಕ
ದಲ್ಲೂ ಈ ಅಭಿಪ್ರಾಯವು ಉಪಪಾದಿತವಾಗಿರುತ್ತದೆ. ಹೀಗೆ ಸರ್ವೇಶ್ವರನು ಸರ್ವರಿಗೂ ದೃಗ್ಗೋ
ಚರವಾಗುವದು ಆಯಾಕಾಲದ ಜನಗಳಿಗೆ ಮಾತ್ರವೇ. **ಹಾರ್ದಾವತಾರವು** ಎಲ್ಲರ ಹೃದಯದಲ್ಲೂ
ಇರುವ **"ಅಙ್ಗುಷ್ಠಮಾತ್ರಃ ಪುರುಷಃ"** ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಒಂದು ರೂಪ ವಿಶೇ

ಷವು. ಇದೂ ಉಪಾಸಕನ ಅನುಗ್ರಹಾರ್ಥವಾದ ರೂಪವು. ಪರವ್ಯೂಹ ಹಾರ್ದರೂಪಗಳು ಸ್ವಾಮಿ ದತ್ತ ಬುದ್ಧಿಯೋಗದಿಂದಲೂ ಶಾಸ್ತ್ರಜನ್ಯಜ್ಞಾನದಿಂದಲೂ ಗ್ರಾಹ್ಯಗಳು. ಇವೆಲ್ಲಕ್ಕಿಂತಲೂ ಪರಮಾನುಗ್ರಹದಿಂದ ದಯಪಾಲಿಸಿದ ರೂಪವು **ಅರ್ಚಾವತಾರವು.** ಇದು ಎಲ್ಲಾ ಕಾಲದಲ್ಲೂ ಸಕಲ ಮನುಜ ನಯನಕ್ಕೆ ಗೋಚರವಾದ ರೂಪವು. ಆದುದರಿಂದಲೇ ಈ ರೂಪವು ಯೋಗಿಗಳು ಮೊದಲುಗೊಂಡು ಸಕಲ ಪಾಮರ ಜನಗಳಿಗೂ ಕೂಡ ಉಪಯುಕ್ತವಾದುದು. ಆದುದರಿಂದಲೇ ನಮ್ಮ ಪೂರ್ವಾಚಾರ್ಯರುಗಳು ಈ ರೂಪದಲ್ಲಿ ವಿಶೇಷ ಮಮತೆಯನ್ನು ತೋರಿಸಿರುತ್ತಾರೆ. ಶಾಸ್ತ್ರ ಜ್ಞಾನಶೂನ್ಯರೀಗ ವಿಗ್ರಹಾರಾಧನೆಯನ್ನು ನಿಂದಿಸುವರು. ದೇವತಾರ್ಚನೆ, ದೇವಸ್ತುತಿ ಮೊದಲಾದವುಗಳನ್ನು ಮಾಡಿದರೆ ಪ್ರತ್ಯವಾಯವೇನು? ಮಹೋಪನಿಷತ್ತಿನಲ್ಲಿ **"ಧೃತೋರ್ಧ್ವಪುಂಡ್ರಃ ಪರಮೇಶಿತಾರಂ ನಾರಾಯಣಂ ಪೂಜಯತಿಸ್ಮ ಭಕ್ತ್ಯಾ। ಅರ್ಘ್ಯಾದಿಭಿಃ ಪೌರುಷಸೂಕ್ತ ಮಂತ್ರೈಃ ಸಮಾಪ್ನುಯಾದ್ವಿಷ್ಣುಪದಂ ಮಹಾತ್ಮಾ ॥"** ಎಂದೂ, ಪ್ರಾತಸ್ಸಂಧ್ಯಾವಂದನದ ಋಗ್ವೇದ ಮಂತ್ರದಲ್ಲಿ **"ಸತ್ಯಾಯ ಹವ್ಯಂ ಘೃತವದ್ವಿಧೇಮ"** ಎಂದೂ ಹೇಳಿರುತ್ತದೆ. ಅರ್ಘ್ಯ ಪುಷ್ಪ ಫಲಾದಿಗಳಿಂದ ಪೂಜೆಯು, ಘೃತಮಿಶ್ರ ಅನ್ನನಿವೇದನವೂ ರೂಪವಿಲ್ಲದ ಆಕಾಶಕ್ಕೆ ಸಮರ್ಪಣೆಯೇ ಅಥವಾ ದಿವ್ಯಮಂಗಳ ವಿಗ್ರಹಯುಕ್ತ ಪರಮಪುರುಷನಿಗೆ ಸಮರ್ಪಣೆಯೇ, ಎಂಬ ಶಂಕಾವಿಷಯದಲ್ಲಿ ಭಗವಚ್ಛಾಸ್ತ್ರವು ಸದುತ್ತರವನ್ನೀಯುತ್ತದೆ. ತುಂಬಾ ಜ್ಞಾನವಿಶಾರದರಾದ ನಾರದಾದಿಗಳು ಇದನ್ನೇ ಕೊಂಡಾಡಿರುತ್ತಾರೆ:—

**ನಾರದರು—ಸರ್ವೇಷಾಮೇವ ಲೋಕಾನಾಂ ಗುರುರ್ನಾರಾಯಣೋ ಹರಿಃ।**
**ತಸ್ಯ ಸಂಪೂಜನಂ ಕಾರ್ಯಂ ಸರ್ವಪಾಪಹರಂ ಹಿತತ್ ॥** (ಭಾರ.ಆರ.೧೯೨.೫೬)

**ಶ್ರೀ ವ್ಯಾಸರು—ನಿಷ್ಪೀಡ್ಯ ಸ್ನಾನವಸ್ತ್ರಂವೈ ದ್ವಿರಾಚಮ್ಯಾರ್ಚಯೇದ್ಧರಿಂ।**
**ನವಿಷ್ಣ್ವಾರಾಧನಾತ್ಪುಣ್ಯಂ ವಿದ್ಯತೇ ಕರ್ಮವೈದಿಕಂ ॥**

ಹೇಗೆ ಆರಾಧಿಸತಕ್ಕದ್ದೆಂಬ ವಿಷಯದಲ್ಲಿ ೧೬ ಪುರುಷಸೂಕ್ತ ಋಕ್ಕುಗಳಿಂದ ಶ್ರೀಹರಿ ರೂಪನಿಗೆ ಷೋಡಶೋಪಚಾರಗಳನ್ನು ನಡೆಸತಕ್ಕದ್ದೆಂದು, **"ಆದ್ಯಯಾ ವಾಹಯೇದ್ದೇವಂ"** ಎಂದಾರಂಭಿಸಿ **"ಷೋಡಶ್ಯೋದ್ವಾಹನಂ ಹರೇಃ"** ಎಂದು ಮುಗಿಸಿ ಉಪದೇಶಿಸಿರುತ್ತಾರೆ.

**ಶಾಂಡಿಲ್ಯರು—"ತ್ರಿಸಂಧ್ಯಂ ಕಾರಯೇದ್ವಾಲ್ ಪ್ರಣಾಮಂ ದೇವಪಾದಯೋಃ"** ಎಂದು ಹೇಳಿರುವದರಿಂದ ಪಾದಗಳಿರುವ ದಿವ್ಯಮಂಗಳವಿಗ್ರಹವೆಂಬುದು ವ್ಯಕ್ತವು.

**ಶೌನಕ ಮಹರ್ಷಿಯು—**

**"ಸುರೂಪಾಂ ಪ್ರತಿಮಾಂ ವಿಷ್ಣೋಃ ಪ್ರಸನ್ನ ವದನೇಕ್ಷಣಾಂ।**
**ಕೃತ್ವಾತ್ಮನಃ ಪ್ರೀತಿಕರೀಂ ಸುವರ್ಣರಜತಾದಿಭಿಃ।**
**ತಾಮರ್ಚಯೇತ್ತಾಂಪ್ರಣಮೇತ್ತಾಂ ಯಜೇತ್ತಾಂ ವಿಚಿನ್ತಯೇತ್।**
**ವಿಶತ್ಯಪಾಸ್ತದೋಷಸ್ತು ತಾಮೇವ ಬ್ರಹ್ಮರೂಪಿಣೀಂ ॥"** (ವಿಷ್ಣು ಧರ್ಮಂ. ೧೩. ೧೬)

ಎಂದು ಭಗವಚ್ಛಾಸ್ತ್ರದಲ್ಲಿ ಹೇಳಿರುವದನ್ನು ಸಂಗ್ರಹಿಸಿ ಹೇಳಿರುತ್ತಾರೆ. ಈ ಪಾಂಚರಾತ್ರಶಾಸ್ತ್ರವು ಶ್ರೀ ವ್ಯಾಸರವರು ಮೋಕ್ಷಧರ್ಮದಲ್ಲಿ ಎಲ್ಲಾ ಶಾಸ್ತ್ರಗಳಿಗಿಂತ ಹೆಚ್ಚು ಮಹಿಮೆಯುಳ್ಳದ್ದೆಂದು ಉಪದೇಶಿಸಿರುತ್ತಾರೆ. ಈ ಶ್ಲೋಕಗಳ ಅರ್ಥತಾತ್ಪರ್ಯಗಳಿಗೆ ದಾಸನು ಬರೆದಿರುವ ತತ್ತ್ವತ್ರಯಾಧಿಕಾರಾರ್ಥದಲ್ಲಿ ೫೮೧—೨ನೇ ಪುಟಗಳನ್ನು ಪರಾಂಬರಿಸಿ. ಇಂತಹ ವಿಷ್ಣ್ವಂಶವಿರುವ ಜ್ಞಾನಾಧಿಕರ ಅಭಿಪ್ರಾಯಕ್ಕಿಂತ ತಮ್ಮ ಜ್ಞಾನವೇ ಹೆಚ್ಚು ಎಂದು ಭ್ರಮಿಸಿ ಕೆಲವರು ಪರಮಾತ್ಮನು ದಿವ್ಯಮಂಗಳವಿಗ್ರಹಯುಕ್ತನಲ್ಲವೆಂದು ಹೇಳುವರು. ತಮಗೇನೇ ಶರೀರ ಉಂಟೆಂದು ಒಪ್ಪುವವರು ಸರ್ವೇಶ್ವರನಿಗೆ ಏಕೆ ಕೂಡದೆನ್ನುವರೋ ತಿಳಿಯದು. ಆತನ ಶರೀರವು ನಮ್ಮ

ಹಾಗೆ ಪ್ರಾಕೃತವಾದುದಲ್ಲವು. ಅದು ಅಪ್ರಾಕೃತವಾದುದೆಂದೂ, ಶ್ರೀ ಪರಾಶರರು (೧) **"ಸದೈಕ ರೂಪರೂಪಾಯ"** ಎಂದೂ, **"ತದ್ವಿಶ್ವರೂಪ ವೈರೂಪ್ಯಂ ರೂಪಮನ್ಯದ್ಧರೇರ್ಮಹತ್"** ಎಂದೂ ಶ್ರೀ ವ್ಯಾಸರು **"ನತಸ್ಯ ಪ್ರಾಕೃತಾಮೂರ್ತಿಃ"** ಎಂದೂ, ಶ್ರೀ ವಾಲ್ಮೀಕಿಯು **"ತಮಸಃ ಪರಮೋ ಧಾತಾ ಶಂಖ ಚಕ್ರ ಗದಾಧರಃ"** ಎಂದೂ ವರ್ಣಿಸಿರುತ್ತಾರೆ.

ಇಲ್ಲಿ ದೇವಮನುಷ್ಯಾದಿಗಳಿಗೆ ಧ್ಯಾನಕ್ಕೆ ಅಗೋಚರವೆಂದು ಹೇಳಿರುವದರಿಂದ ದೇವತೆಗಳಿಗೂ ಉಪಾಸನದಲ್ಲಿ ಅಧಿಕಾರ ಉಂಟೇ ಇಲ್ಲವೇ ಎಂಬ ಸಂದೇಹದಲ್ಲಿ (೨) **"ತದುಪರ್ಯಪಿ ಬಾದರಾಯಣಃ ಸಂಭವಾತ್"** ಎಂಬ ಸೂತ್ರದಲ್ಲಿ ಸ್ಥಾಪಿಸಲ್ಪಟ್ಟಹಾಗೆ ಚತುರ್ಮುಖ ರುದ್ರೇಂದ್ರಾದಿ ಸಮಸ್ತ ದೇವತೆಗಳಿಗೂ ಅರ್ಥಿತ್ವ ಸಾಮರ್ಥ್ಯವೆರಡೂ ಇರುವದರಿಂದ ಪರಮಾತ್ಮೋಪಾಸನದಲ್ಲಿ ಅಧಿಕಾರ ಉಂಟೆಂಬುವದೂ ಸೂಚಿಸಲ್ಪಟ್ಟಿತು.

ಇಲ್ಲಿ ಅಪಾರಕಾರುಣ್ಯ ಸೌಶೀಲ್ಯಾದಿಗಳನ್ನು ಹೇಳುವದರಲ್ಲಿ ಕಾರುಣ್ಯವು ಏತಕ್ಕೆ ಪ್ರಥಮತಃ ಹೇಳಲ್ಪಟ್ಟಿತೆಂದರೆ **"ವೃಷಗಿರಿ ಗೃಹಮೇಧಿಗುಣಾ ಬೋಧ ಬಲೈಶ್ವರ್ಯ ವೀರ್ಯಶಕ್ತಿ ಮುಖಾಃ। ದೋಷಾಭವೇಯುರೇತೇ ಯದಿನಾಮದಯೇ ತ್ವಯಾವಿನಾ ಭೂತಾಃ॥"** (ದಯಾ. ೧೫) ಎಂದು ಹೇಳಿರುವ ಹಾಗೆ ದಯೆ ಎಂಬುದೊಂದು ಗುಣವಿಲ್ಲದಿದ್ದರೆ ಮಿಕ್ಕ ಷಾಡ್ಗುಣ್ಯಾದಿ ಗುಣಗಳೆಲ್ಲಾ ದೋಷಯುಕ್ತವಾಗುವುವು ಎಂದು ಹೇಳಿರುವುದರಿಂದ, ಇದು ಪ್ರಧಾನಗುಣವೆಂಬ ಭಾವವು. ಅದೂ ಅಲ್ಲದೆ, ಸೌಲಭ್ಯ ಸೌಶೀಲ್ಯ ವಾತ್ಸಲ್ಯ ಔದಾರ್ಯಾದಿಗಳೆಲ್ಲಾ ಆ ಕಾರುಣ್ಯದಿಂದುಂಟಾದ ಗುಣಗಳಾದುದರಿಂದಲೂ ಅದು ಮೊದಲು ಹೇಳಲ್ಪಟ್ಟಿತು. (೩) **"ಶಿರಸಾಯಾಚಿತೋ ಯಸ್ಯ ವಚನಂ ನ ಕೃತಂ ಮಯಾ"** "ತಲೆಬಗ್ಗಿ ನಮಸ್ಕರಿಸಿ ಪ್ರಾರ್ಥಿಸಿದ ಭರತನ ವಾಕ್ಕನ್ನು ನಾನು ನಡಿಸಿಕೊಡಲಿಲ್ಲವೇ" ಎಂಬ ಶ್ರೀರಾಮೋಕ್ತಿಯೂ, **"ಗೋವಿಂದೇತಿ ಯದಾಕ್ರಂದತ್ಕೃಷ್ಣಾಮಾಂ ದೂರವಾಸಿನಂ । ಋಣಂ ಪ್ರವೃದ್ಧಮಿವಮೇ ಹೃದಯಾನ್ನಾಪಸರ್ಪತಿ ॥"** "ಆ ದುರುಳ ದುರ್ಯೋಧನನ ಸಭೆಯಲ್ಲಿ ದುಶ್ಶಾಸನನಿಂದ ಅವಮಾನ ಹೊಂದಿ "ಗೋವಿಂದಾ" ಎಂದು ನಾನು ದೂರದಲ್ಲಿರುವಾಗ ಯಾವ ದ್ರೌಪದಿಯು ರೋದನಮಾಡಿದಳೋ, ಅದು ಒಂದು ಪ್ರವೃದ್ಧವಾದ ಋಣ ರೂಪದಲ್ಲಿ ನನ್ನ ಹೃದಯವನ್ನು ಬಾಧಿಸುತ್ತಾ ಅದನ್ನು ಬಿಟ್ಟು ಹೋಗಲೇ ಇಲ್ಲವು" ಎಂಬ ಶ್ರೀಕೃಷ್ಣೋಕ್ತಿಯೂ, ಕಾರುಣ್ಯಕ್ಕೆ ನಿದರ್ಶನಗಳು. ಸೌಶೀಲ್ಯಕ್ಕೆ ಅನೇಕ ನಿದರ್ಶನಗಳುಂಟು. ಅವುಗಳಲ್ಲಿ ಕೆಲವನ್ನು ಸಂಗ್ರಹಿಸಿರುವ ದಯಾಶತಕ ಶ್ಲೋಕ ಉಂಟು:— (೪)**"ನಿಷಾದಾನಾಂ ನೇತಾ ಕಪಿಕುಲಪತಿಃ ಕಾಪಿ ಶಬರೀ ಕುಚೇಲಃ ಕುಬ್ಜಾ ಸಾವ್ರಜಯುವತಯೋ ಮಾಲ್ಯಕೃದಿತಿ । ಅಮೀಷಾಂ ನಿಮ್ನತ್ವಂ ವೃಷಗಿರಿಪತೇ ರುನ್ನತಿಮಪಿ ಪ್ರಭೂತೈಸ್ಸ್ರೋತೋಭಿಃ ಪ್ರಸಭಮನುಕಂಪೇ ಸಮಯಸಿ॥"** **"ಹೇ ಅನುಕಂಪೇ** - ಓ ಶ್ರೀನಿವಾಸನ ದಯೆಯೇ, ನಿನ್ನ ಸೌಶೀಲ್ಯವೆಂತಾದ್ದೆಂದರೆ:—ವ್ಯಾಧರುಗಳಿಗೆಲ್ಲಾ ನಿಯಾಮಕನಾದ ಗುಹನು, ಕಪಿಕುಲಕ್ಕೆ ಶ್ರೇಷ್ಠನಾದ ಸುಗ್ರೀವನು, ಯಾವಳೋ ಒಬ್ಬ ತಾಪಸಿಯಾದ ಶಬರಿಯು, ಶರೀರದ ಮೂರು ವಕ್ರತೆಯಿಂದ ಪ್ರಸಿದ್ಧಳಾದ ಕಂಸನಿಗೆ ಅಂಗರಾಗಗಳನ್ನು ತೆಗೆದುಕೊಂಡು ಹೋಗುವ ಕುಬ್ಜೆಯು, ಗೋಕುಲ ಸ್ತ್ರೀಯರು, ಮಾಲಾಕಾರನು ಇವರುಗಳ ನೈಚ್ಯವನ್ನೂ, ಶ್ರೀ ವೇಙ್ಕಟೇಶನ ಉನ್ನತಿಯನ್ನೂ ಸಹ ದಯೆಯಾದ ನಿನ್ನ ಅಧಿಕವಾದ ಪ್ರವಾಹಗಳಿಂದ ಬಲಾತ್ಕಾರದಿಂದ ಸಮಮಾಡಿರುತ್ತೀಯೆ."

(೧) ವಿ. ಪು. ೧. ೨. ೧. (೨) ಬ್ರ. ಸೂ. ೧. ೩. ೨೬.
(೩) ರಾಮಾ. ಯುದ್ಧ ೧೨೫. ೧೯. (೪) ದಯಾ ಶತಕ.

**ಸ್ವಮೇವರೂಪಂ ತತ್ತತ್ಸಜಾತೀಯ ಸಂಸ್ಥಾನ ಸ್ವಭಾವ ಮಜಹದೇವ ಕುರ್ವಂ ಸ್ತೇಷು**

---

ವಾತ್ಸಲ್ಯಕ್ಕೆ ದೋಷಯುಕ್ತನಾದ ಕಾಕನನ್ನು ಪರಿಪಾಲಿಸಿದುದೂ, ರಾಕ್ಷಸಯೋನಿಯಲ್ಲಿ ಹುಟ್ಟಿದ ಪ್ರಹ್ಲಾದನನ್ನು ರಕ್ಷಿಸಿದುದೂ, ಕಾಳಿಯ ಸರ್ಪವನ್ನು ರಕ್ಷಿಸಿದುದೂ, ಕ್ಷತ್ರಬಂಧುವಿಗೂ ಮುಕ್ತಿಯನ್ನು ಕೊಟ್ಟದುದೂ, ತನಗೆ ಲೋಕರೀತ್ಯಾ ನೋಡಿದರೆ ಅಪಕಾರ ಮಾಡಿದ ಕೈಕೇಯಿಯನ್ನು ಕಾಪಾಡಿದುದೂ, ಇವೇ ಮೊದಲಾದ ಅನೇಕ ನಿದರ್ಶನಗಳುಂಟು. ಔದಾರ್ಯಕ್ಕೆ ಪೃಥುಕ ತಂಡುಲವನ್ನು ಕೊಟ್ಟ ಕುಚೇಲನಿಗೆ ಕೃಪೆಗೈದುದೂ, ದ್ರೌಪದಿಯನ್ನು ಸಲಹಿದುದೂ, ನಿದರ್ಶನಗಳಾಗುತ್ತವೆ. ನಾಲ್ಕು ಜನ ಭಕ್ತರುಗಳೂ "ಉದಾರಾಸ್ಸರ್ವ ಏವೈತೇ" (ಗೀ. ೭. ೧೭) ಎಂದು ಹೇಳಿದುದೂ ಸರ್ವೇಶ್ವರನ ಉದಾರಭಾವವನ್ನು ಪ್ರಕಟಿಸುತ್ತದೆ.

ಮುಂದೆ ಶ್ರೀ ಪರಾಶರರು ವಿಷ್ಣುಪುರಾಣದ ಅಸ್ತ್ರಭೂಷಣಾಧ್ಯಾಯದಲ್ಲಿ (ವಿ. ಪು.) ಅರ್ಚಾವತಾರದ ದಿವ್ಯಮಂಗಳ ವಿಗ್ರಹದ ಸ್ವರೂಪವನ್ನುಪದೇಶಿಸಿದ ರೀತಿಯಲ್ಲಿ, ಸರ್ವೇಶ್ವರನ ದಿವ್ಯ ಮಂಗಳವಿಗ್ರಹ ವಿಭವ ಮೊದಲಾದ ಎಲ್ಲಾ ರೂಪದಲ್ಲೂ ಪ್ರಾಕೃತವಲ್ಲವೆಂದೂ, ಅಪ್ರಾಕೃತವಾದುದೆಂದೂ, ದಿವ್ಯಾಯುಧ ದಿವ್ಯಭೂಷಣಗಳನ್ನು ಧರಿಸಿರುವ ಅಭಿಪ್ರಾಯವೇನೆಂಬುದನ್ನೂ ತಿಳಿಸಿರುತ್ತಾರೆ. ಆ ದಿವ್ಯಮಂಗಳ ವಿಗ್ರಹವೇಥಾದ್ದೆಂದರೆ :—"ಸಮಸ್ತಾಶ್ಶಕ್ತಯಶ್ಚೈ[illegible]ತಾ ನೃಪಯತ್ರ ಪ್ರತಿಷ್ಠಿತಾಃ । ತದ್ವಿಶ್ವರೂಪ ವೈರೂಪ್ಯಂ ರೂಪಮನ್ಯದ್ಧರೇರ್ಮಹತ್ ||" (ವಿ. ಪು. ೬.೭.೭೦) ಏತಾಃ - ಈ ಕಾರ್ಯರೂಪವಾದ ಜಗತ್ತನ್ನು ಹೊಂದಿದ, ಸಮಸ್ತವಾದ ಶಕ್ತಿಗಳೂ, ಯತ್ರ - ಯಾವ ಸರ್ವಕಾರಣಭೂತನಾದ ಈಶ್ವರನಲ್ಲಿ ಪ್ರತಿಷ್ಠಿತಗಳಾಗಿವೆಯೋ, ಆದುದರಿಂದ, ವಿಶ್ವರೂಪ ವೈರೂಪ್ಯಂ - ಮೇಲೆ ಹೇಳಿದ ವಿಶ್ವರೂಪಕ್ಕಿಂತಲೂ ವಿಲಕ್ಷಣವಾದುದು, ಹರೇಃ ರೂಪಂ - ಶ್ರೀಹರಿಯ ದಿವ್ಯಮಂಗಳ ವಿಗ್ರಹವು, ಅನ್ಯತ್ - ಅವುಗಳಿಗಿಂತಲೂ ಬೇರೆಯಾದ ದ್ರವ್ಯವು, ಆದುದರಿಂದ, ಮಹತ್ - ನಿತ್ಯವಾಗಿ, ಅಪ್ರಾಕೃತವಾಗಿ, ಶುಭಾಶ್ರಯವಾದುದಾಗಿ ಸರ್ವೋತ್ಕೃಷ್ಟವಾದುದು. ಮತ್ತು, "ಸಮಸ್ತಶಕ್ತಿ ರೂಪಾಣಿ ತತ್ಕರೋತಿ ಜನೇಶ್ವರ । ದೇವತಿರ್ಯಙ್ಮನುಷ್ಯಾಖ್ಯಾ ಚೇಷ್ಟಾವನ್ತಿ ಸ್ವಲೀಲಯಾ ||" (ವಿ. ಪು. ೬.೭.೭೧) ಸಮಸ್ತಶಕ್ತಿ - ಮೇಲೆ ಹೇಳಿದ ರೀತಿಯಲ್ಲಿ ಸಮಸ್ತ ಶಕ್ತಿಗಳುಳ್ಳ, ತತ್ - ಆ ಪರಬ್ರಹ್ಮನು, ರೂಪಾಣಿ - ಮೇಲೆ ಹೇಳಿದ ಅಪ್ರಾಕೃತವಾದ ದಿವ್ಯಮಂಗಳ ವಿಗ್ರಹಗಳನ್ನು, ಕರೋತಿ - ಉಂಟುಮಾಡುವನು. ಆ ರೂಪಗಳು ಎಂತಹವೆಂದರೆ :—ದೇವತೆಗಳ ಆಕಾರದಲ್ಲೂ, ತಿರ್ಯಕ್ಕಾದ ಮತ್ಸ್ಯ ಕೂರ್ಮಾದಿ ರೂಪದಲ್ಲೂ, ರಾಮಕೃಷ್ಣಾದಿ ಮನುಷ್ಯರೂಪದಲ್ಲೂ, ತನಗೆ ಲೀಲೆಯೇ ಪ್ರಯೋಜನವಾಗಿ ದಿವ್ಯ ಚೇಷ್ಟಿತಗಳನ್ನು ಮಾಡುತ್ತವೆ. ಸರ್ವೇಶ್ವರನು ಭಗವಚ್ಛಾಸ್ತ್ರಗಳಲ್ಲಿ ಬೋಧಿಸಿರುವ ಸಂಸ್ಕಾರಗಳನ್ನು ಕೈಕೊಂಡು ಸಂಸ್ಕಾರ ಹೊಂದಿದ ಮೂರ್ತಿಯನ್ನು ಪ್ರವೇಶಿಸಿ, ಅದರ ರೂಪದ ಹಾಗೆಯೇ ರೂಪವನ್ನು ತಾಳಿರುವನೆಂದು ಪಾಂಚರಾತ್ರಾದಿ ಆಗಮಗಳು ಬೋಧಿಸುತ್ತವೆ. ಇಂತಹ ದಿವ್ಯಮಂಗಳ ವಿಗ್ರಹವು, ಪರಮಪದದಲ್ಲಿ ವ್ಯಕ್ತವಾಗಿರುವ ದಿವ್ಯಮಂಗಳ ವಿಗ್ರಹದ ಹಾಗೆಯೇ ಅಪ್ರಾಕೃತವಾಗಿ ಏಕರೂಪವಾದರೂ, ಯಾವ ಯಾವ ಜಾತಿಯಲ್ಲಿ ಅವತರಿಸಿದರೆ ಆಯಾಯ ಜಾತಿಯ ರೂಪ ಅವಯವಗಳನ್ನು ಧರಿಸುತ್ತಾ ಹಾಗೆಯೇ ತನ್ನ ದಿವ್ಯಮಂಗಳ ವಿಗ್ರಹರೂಪ ಸ್ವಭಾವವನ್ನು ತ್ಯಜಿಸದೆ, ದಿವ್ಯಚೇಷ್ಟಿತಗಳನ್ನು ನಡೆಸಿ ಚೇತನರಿಗೆ ಸರ್ವ ಶ್ರೇಯಸ್ಸನ್ನೂ ಈ ಅವತಾರ ರೂಪಗಳಲ್ಲುಂಟುಮಾಡಿರುತ್ತಾನೆಂದು ಹೇಳುತ್ತಾರೆ :—

**ಸ್ವಮೇವ ಇತಿ :—ಸ್ವಮೇವ ರೂಪಂ** - ತನ್ನ ದಿವ್ಯಮಂಗಳ ವಿಗ್ರಹವನ್ನೇ, ತತ್ತ

**ತೇಷು ಲೋಕೇಷ್ವವತೀರ್ಯಾ ವತೀರ್ಯ ತೈಸ್ತೈರಾರಾಧಿತ ಸ್ತತ್ತದಿಷ್ಟಾನುರೂಪಂ ಧರ್ಮಾರ್ಥ ಕಾಮ ಮೋಕ್ಷಾಖ್ಯಂ ಫಲಂ ಪ್ರಯಚ್ಛನ್,**

---

**ತ್ಸಜಾತೀಯ ಸಂಸ್ಥಾನಂ** - ಆಯಾ ಜಾತಿಗೆ ಸಂಬಂಧಪಟ್ಟ ಅವಯವಗಳ ಸೇರಿರುವಿಕೆಯನ್ನೂ, ಮೀನು, ಕೂರ್ಮವು, ವರಾಹಾದಿಗಳು ಹೇಗಿರಬೇಕೋ ಅದನ್ನೂ, ಮತ್ತು **ಸ್ವಸ್ವಭಾವ** - ತನ್ನ ದಿವ್ಯ ಶುಭಾಶ್ರಯತ್ವಕ್ಕೆ ಸಂಬಂಧಪಟ್ಟ ನಿತ್ಯತ್ವ, ಅಪ್ರಾಕೃತತ್ವ, ಪ್ರಾಪಕತ್ವ, ಮೊದಲಾದವು ಗಳನ್ನೂ, ಹೀಗೆ ಇವೆರಡನ್ನೂ, **ಅಜಹದೇವ** - ಬಿಡದೆ ಹಾಗೆಯೇ, **ಕುರ್ವನ್** - ಮಾಡುವವನಾಗಿ, **ತೇಷು ತೇಷು ಲೋಕೇಷು** - ಆಯಾಯಾ ಲೋಕಗಳಲ್ಲಿ, **ಅವತೀರ್ಯಾವತೀರ್ಯ** - ಅವತರಿಸಿ ಅವತರಿಸಿ, **ತೈಸ್ತೈ ರಾರಾಧಿತಃ** - ಆಯಾ ದೇವ ಮನುಷ್ಯಾದಿಗಳಿಂದ ಆರಾಧಿಸಲ್ಪಟ್ಟವನಾಗಿ, **ತತ್ತದಿಷ್ಟಾನುರೂಪಂ** - ಅವರವರುಗಳಿಷ್ಟಾನುಸಾರ, ಇಂದ್ರನಿಗೆ ಸ್ವರ್ಗಲೋಕ ಸಾಮ್ರಾಜ್ಯ ಪ್ರಾಪ್ತಿಯೋ, ಋಷಿಗಳಿಗೆ ರಾಕ್ಷಸರ ಬಾಧೆಯ ನಿವಾರಣವೋ, ಹೀಗೆ ಧರ್ಮಾರ್ಥ ಕಾಮಮೋಕ್ಷ ವೆಂಬ ಚತುರ್ವಿಧ ಪುರುಷಾರ್ಥರೂಪ ಫಲವನ್ನು, **ಪ್ರಯಚ್ಛನ್** - ದಯಪಾಲಿಸುವವನಾಗಿ; ಈ ವಾಕ್ಯದ ಮೂಲಕ ಶ್ರೀ ಗೀತೆಯಲ್ಲಿ ಉಪಪಾದಿತವಾದ ಅವತಾರ ರಹಸ್ಯಗಳನ್ನು ಸಙ್ಗ್ರಹವಾಗಿ ಪ್ರಕಟಿಸಿರುತ್ತಾರೆ:—ದೇವಮನುಷ್ಯಾವತಾರಗಳನ್ನೂ ತಿರ್ಯಗಾದಿ ಅವತಾರಗಳನ್ನೂ ಇಲ್ಲಿಯೂ ಇತರ ಲೋಕಗಳಲ್ಲೂ ಸರ್ವೇಶ್ವರನು ಎತ್ತಿರುತ್ತಾನೆ. ಸರ್ವೇಶ್ವರನು ಮಾಯಾಚೇಷ್ಟಿತಗಳನ್ನು ಮಾಡುವ ಅವತಾರಗಳನ್ನೆಂದಿಗಾದರೂ ಎತ್ತುವನೇ ಎಂಬದಾಗಿ ಕೆಲವರು ಸಂದೇಹಪಡುವರು. ಇದು ಲೀಲಾವಿಭೂತಿಯಾದ ನಂತರ, ಲೀಲಾರೂಪದಲ್ಲಿ ಅವತಾರಗಳು ಏಕೆ ಕೂಡದು ? ಸ್ವಾಮಿ ಯಾದವನು ಸರ್ವಜ್ಞನಾಗಿ ಸತ್ಯಸಙ್ಕಲ್ಪನಾಗಿ, ತನ್ನ ಧರ್ಮಗಳನ್ನು ಪ್ರತಿಷ್ಠೆ ಮಾಡುವದಕ್ಕಾಗಿ, ಅಧರ್ಮವನ್ನು ನಾಶಮಾಡುವದಕ್ಕಾಗಿಯೂ ಏಕೆ ಅವತರಿಸಕೂಡದು ? ಶಾಸ್ತ್ರಗಳಲ್ಲಿ ನಿಶ್ಚಯ ವಾದ ಬುದ್ಧಿಯು ಬೇಕು. ಅವರಲ್ಲಿ ನಂಬಿಕೆ ಇಲ್ಲದುದರ ವಿಜೃಂಭಣೆಯು, ಇಂತಹ ಸಂದೇಹ ಗಳಿಗೆ ಕಾರಣವು. ಗೀತೆಯು ಅವತಾರ ರಹಸ್ಯವನ್ನು ಮುಂದೆ ಐದು ಶ್ಲೋಕಗಳಿಂದ ಉಪಪಾದಿ ಸುತ್ತದೆ. (ಗೀ. ೪, ೫.೯) **"ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾ ಮೀಶ್ವರೋಽಪಿಸನ್ । ಪ್ರಕೃತಿಂ ಸ್ವಾಮಧಿಷ್ಠಾಯ ಸಮ್ಭವಾಮ್ಯಾತ್ಮಮಾಯಯಾ"** ಉತ್ಪತ್ತಿ ನಾಶರಹಿತನಾಗಿದ್ದರೂ ಸರ್ವಭೂತಿಗಳಿಗೂ ನಿಯಾಮಕನಾಗಿದ್ದರೂ ಸ್ವಸಙ್ಕಲ್ಪದಿಂದಲೇ ನನ್ನ ಸ್ವಭಾವದಿಂದ ಕೂಡಿದವ ನಾಗಿಯೇ ಅವತರಿಸುವೆನು ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರೀ ವರಾಹ ಪುರಾಣದಲ್ಲೂ **"ನತಸ್ಯ ಪ್ರಾಕೃತಾಮೂರ್ತಿ ರ್ಮಾಂಸ ಮೇದೋಽಸ್ಥಿ ಸಂಭವಾ"** ಸರ್ವೇಶ್ವರನ ಅವತಾರ ಕಾಲದ ರೂಪವು ಮಾಂಸ ಮೇದಸ್ಸು, ಎಲಬು ಇವುಗಳಿಂದ ಉಂಟಾಗಿ ಪ್ರಾಕೃತವಾದುದಲ್ಲವು." ಎಂದೂ, ಭಾರತದಲ್ಲೂ **"ನಭೂತ ಸಂಘ ಸಂಸ್ಥಾನೋ ದೇಹೋಽಸ್ಯ ಪರಮಾತ್ಮನಃ"** (ಭಾರ) "ಈ ಪರ ಮಾತ್ಮನ ರೂಪವು ಪಾಂಚಭೌತಿಕ ಸಮ್ಮೇಳನದಿಂದುಂಟಾದ ಶರೀರವಲ್ಲವು," ಎಂದೂ ಹೇಳಲ್ಪ ಟ್ಟಿವೆ. ಅವತೀರ್ಯಾವತೀರ್ಯ ಎಂದು ಎರಡು ಸಾರಿ ಹೇಳಿರುವವರಭಿಪ್ರಾಯವು, ಮುಂದೆ ಗೀತೆಯಲ್ಲೇ ಅವತಾರಕಾಲವು ಯಾವುದೆಂದು ಹೇಳುವ ಸಂದರ್ಭದಲ್ಲಿ **"ಸಂಭವಾಮಿ ಯುಗೇ ಯುಗೇ"** ಎಂದು ಹೇಳುವದನ್ನನುಸರಿಸಿ ಹೇಳಿರುತ್ತಾರೆಂದು ಊಹಿಸತಕ್ಕದ್ದು. ಅವತಾರಗಳು ಆ ಕಾರಣದಿಂದ **"ಬಹೂನಿ ಮೇವ್ಯತೀತಾನಿ ಜನ್ಮಾನಿ"** ಎಂದು ಹೇಳಿರುವ ಹಾಗೆ, ಅನೇಕವೆಂದು ತಿಳಿಸುವದೆಂದು ತಿಳಿಸುವದಕ್ಕಾಗಿ **"ತೇಷು ತೇಷು ಲೋಕೇಷು"** ಎಂಬ ಪ್ರಯೋಗವು. **ಸಾಧುಪರಿತ್ರಾಣವು "ಪರಿತ್ರಾಣಾಯ ಸಾಧೂನಾಂ"** (ಗೀ. ೪. ೮) ಎಂಬ ಗೀತಾ ಶ್ಲೋಕಪ್ರಕಾರ ಆತನ ಅವ

**ಭೂಭಾರಾವತರಣಾಪದೇಶೇನಾಸ್ಮದಾದೀನಾಮಪಿ ಸಮಾಶ್ರಯಣೀಯತ್ವಾಯಾವ ತೀರ್ಣ್ಯೋರ್ವ್ಯಾಂ ಸಕಲಮನುಜನಯನ ವಿಷಯತಾಂಗತಃ, ಪರಾವರ ನಿಖಿಲಜನ ಮನೋ**

ತಾರದ ಮುಖ್ಯೋದ್ದೇಶವಾದುದರಿಂದ, ಮಹರ್ಷಿಗಳ ಪರಿತ್ರಾಣಕ್ಕಾಗಿ ರಾಮಾವತಾರಿಯಾಗಿ ಅನೇಕ ಮಹರ್ಷಿಗಳಿಂದ ಆರಾಧಿತನಾಗಿದ್ದಾನೆ. ಹಾಗೆಯೇ ವಿಭೀಷಣ, ಶಬರಿ, ಶರಭಂಗ ಜಟಾಯು ಮೊದಲಾದವರಿಗೂ, ಶ್ರೀ ಕೃಷ್ಣಾವತಾರಿಯಾಗಿ ಅಕ್ರೂರ, ವಿದುರ, ಪಾಂಡವರು, ಉದ್ಧವರೇ ಮೊದಲಾದವರುಗಳಿಗೂ ಹಾಗೆಯೇ ಇತರ ಅವತಾರಗಳಲ್ಲೂ ಇತರ ಭಕ್ತರಿಂದ ಪೂಜಿಸಲ್ಪಟ್ಟವನಾಗಿ ಅವರವರುಗಳ ಇಷ್ಟಾರ್ಥಗಳನ್ನು ದಯಪಾಲಿಸಿರುತ್ತಾನೆಂಬ ಭಾವವು. ಫಲವನ್ನು ಕೊಡುವದು ಸರ್ವೇಶ್ವರನ ಇಷ್ಟಾನುಸಾರ ನಡೆದರೆ ಭಕ್ತರಿಗೆ ಹಿತಕರವಾಗಲಾರದು, ಮತ್ತು ಲೋಕಜನಗಳು ಆತನಿಗೆ ವೈಷಮ್ಯದೋಷವನ್ನು ಆರೋಪಿಸಿ ಬಿಡುವರು. ಆದುದರಿಂದ ಆತನನ್ನು ಆಶ್ರಯಿಸಿ ಏನು ಬೇಕೋ ಅದನ್ನು ಪ್ರಾರ್ಥಿಸದೇ ಕೊಡನು. ಪ್ರಾರ್ಥಿಸಿದುದನ್ನು ಕೊಟ್ಟರೆ ಭಕ್ತನಿಗೆ ಇಷ್ಟಾರ್ಥಸಿದ್ಧಿಯುಂಟಾಗಿ ಸರ್ವೇಶ್ವರನು ಉದಾರನೆಂದು ಕೊಂಡಾಡುವರು. ಆದುದರಿಂದ **"ತತ್ತದಿಷ್ಟಾನುರೂಪಂ"** ವೆಂಬ ಪ್ರಯೋಗವು. ಎಲ್ಲರಿಗೂ ಮೋಕ್ಷದಲ್ಲೇ ಇಷ್ಟ ವಿರುವದಿಲ್ಲವು. ಐಹಿಕ ಪುರುಷಾರ್ಥಗಳಲ್ಲೇ ಆಶೆಯುಳ್ಳವರೇ ಅನೇಕರು. ಆದುದರಿಂದ ಅವರ ವರ ಇಷ್ಟಾನುಸಾರ ಫಲವನ್ನು ಕೊಡತಕ್ಕದ್ದೇ ನ್ಯಾಯವು.

ಹಿಂದೆ ಅವತಾರದ ಸಾಮಾನ್ಯ ಧರ್ಮಗಳೂ ಪ್ರಯೋಜನವೂ ಹೇಳಲ್ಪಟ್ಟವು. ಮುಂದಿನ ವಾಕ್ಯದಿಂದ ವಿಶೇಷ ಧರ್ಮಗಳನ್ನೂ ಮತ್ತು ಪ್ರಕೃತ ಕೃಷ್ಣಾವತಾರ ಮಾಡಲು ಉದ್ದೇಶವೇನೆಂ ಬುವದನ್ನೂ ತಿಳಿಸುತ್ತಾರೆ:— **ಭೂಭಾರಾವತರಣಾಪದೇಶೇನ** - ಭೂಮಿಯ ಭಾರವನ್ನು ಎಂದರೆ ಭೂಮಿಗೆ ದುಷ್ಟರಿಂದುಂಟಾದ ವಿಪತ್ತನ್ನು, **ಅವತರಣ** - ಇಳಿಸುವ, **ಅಪದೇಶೇನ** - ವ್ಯಾಜದಿಂದ **ಅಸ್ಮದಾದೀನಾಮಪಿ** - ನಮ್ಮಂತವರೇ ಮೊದಲಾದವರಿಗೂ ಕೂಡ, **ಸಮಾಶ್ರಯಣೀಯತ್ವಾಯ** - **"ಶ್ರವಣಂ ಕೀರ್ತನಂ"** ಎಂಬ ಶ್ಲೋಕದಲ್ಲಿ ಹೇಳಿರುವ ಹಾಗೆ ನವವಿಧ ಭಕ್ತಿಯಿಂದಲೂ ಚನ್ನಾಗಿ ಆಶ್ರಯಿಸುವದಕ್ಕಾಗಿ, **ಉರ್ವ್ಯಾಂ** - ಈ ಭೂಲೋಕದಲ್ಲಿ **ಅವತೀರ್ಯ** - ಅವತರಿಸಿ, **ಸಕಲ ಮನುಜ ನಯನ ವಿಷಯತಾಂಗತಃ** - ತನಗೆ ದ್ವೇಷಿಗಳೂ ಮಿತ್ರರೂ, ಯೋಗಿಗಳೂ, ಪಾಮರರೂ, ಪಾಪಿ ಗಳೂ ಪುಣ್ಯವಂತರೂ ಎಂಬ ಭೇದಗಳಿಲ್ಲದೆ ಎಲ್ಲಾ ಮನುಷ್ಯರ ಕಣ್ಣಿಗೂ ಗೋಚರವನ್ನು ಹೊಂದಿದವನಾಗಿ; ಇಲ್ಲಿ ಭೂಭಾರವನ್ನಿಳಿಸುವದು ವ್ಯಾಜಮಾತ್ರವೆಂದು ಹೇಳಲ್ಪಟ್ಟಿತು. ಆದು ದರಿಂದ ಇದೇನು ಅಷ್ಟು ಮುಖ್ಯವಾದ ಉದ್ದೇಶವಲ್ಲವೆಂದು ಹೇಳಲ್ಪಟ್ಟಿತು. ಹಾಗಾದರೆ ಮುಖ್ಯೋದ್ದೇಶವು ಯಾವುದೆಂದರೆ, ಭಕ್ತರ ಸಮಾಶ್ರಯಣೀಯತ್ವಕ್ಕೆ ಅನುಕೂಲ ಮಾಡಿ ಕೊಡುವದಕ್ಕಾಗಿ ಅವರ ನಯನಂಗಳಿಗೆ ವಿಷಯವಾಗೋಣವು **ಪರಿತ್ರಾಣಾಯ ಸಾಧೂನಾಂ ವಿನಾಶಾಯಚದುಷ್ಕೃತಾಂ । ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ** ಎಂದು ಮುಂದೆ ಅವತಾರ ಪ್ರಯೋಜನಗಳನ್ನು ಉದ್ದೇಶಿಸಿ ಹೇಳುವದರಲ್ಲಿ **ಸಾಧುಪರಿತ್ರಾಣವೇ** ಸರ್ವೇಶ್ವರನ ಕೃಪಾಪ್ರಭಾವಕ್ಕೆ ಮುಖ್ಯೋದ್ದೇಶವು, ಆ ಸಾಧು ಪರಿತ್ರಾಣವು ದುಷ್ಟನಿಗ್ರಹ ವಿಲ್ಲದೇ ಸರಿಯಾಗಿ ನಡೆಯಲಾರದಾದುದರಿಂದ, ದುಷ್ಟ ನಿಗ್ರಹವೂ ಕೂಡ ನಡೆಯಬೇಕಾಗುತ್ತದೆ ಆದುದರಿಂದ ಭೂಭಾರಾವತರಣವು ಒಂದು ವ್ಯಾಜವೆಂದು ಹೇಳಲ್ಪಟ್ಟಿತು, **ಸಕಲ ಮನುಜ ನಯನ ವಿಷಯತಾಂಗತಃ** ಎಂಬುದರಿಂದ ಸಕಲರೂ ತನ್ನನ್ನು ಆಶ್ರಯಿಸಲಿ, ಸಕಲರೂ ಒಳ್ಳೇ ಪದವಿಯನ್ನು ಹೊಂದಲಿ ಎಂಬ ಉದಾರ ಭಾವವೂ, ಎಲ್ಲರ ಕಣ್ಣಿಗೂ ಗೋಚರನಾಗುವ ದರಿಂದ ಸೌಲಭ್ಯಸೌಶೀಲ್ಯಾದಿ ಆಶ್ರಿತೋಪಯುಕ್ತ ಮಹಾಗುಣಗಳೂ ವ್ಯಕ್ತಪಟ್ಟವು.

**ನಯನಹಾರಿ ದಿವ್ಯ ಚೇಷ್ಟಿತಾನಿ ಕುರ್ವನ್, ಪೂತನಾ ಶಕಟ ಯಮಳಾರ್ಜುನಾರಿಷ್ಟ ಪ್ರಲಂಬ ಧೇನುಕ ಕಾಳಿಯ ಕೇಶಿ ಕುವಲಯಾಪೀಡ ಚಾಣೂರ ಮುಷ್ಟಿಕ ತೋಸಲ ಕಂಸಾದೀ**

ಈ ಅವತಾರವು, ಸಕಲರಿಗೂ ದೃಗ್ಗೋಚರವಾಗಿರೋಣವೂ, ಕೇವಲ ಭಕ್ತರು ಆರಾಧಿಸೋಣವೂ ಇವುಗಳಿಗೆ ಮಾತ್ರವೇ ಅಲ್ಲವು. ತುಂಬಾ ಭೋಗ್ಯಭೂತನಾಗಿ ಅವರುಗಳು ತನ್ನನ್ನನುಭವಿಸಬೇಕೆಂಬ ಆಶಯದಿಂದಲೂ ಅವತಾರವೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ :-**ಪರಾವರ........ಚೇಷ್ಟಿತಾನಿ**, **ಪರ**-ಶ್ರೇಷ್ಠರಾದವರು, ಉಪಾಸನೆ ಮಾಡಲು ಶಕ್ತರಾಗಿ ಭಕ್ತಿಮಾರ್ಗವನ್ನವಲಂಬಿಸಿದ ಬ್ರಹ್ಮ ರುದ್ರಾದಿಗಳೂ, ಯೋಗಿಗಳೂ, **ಅವರ** - ಅಂತಹ ಶ್ರೇಷ್ಠರಲ್ಲದ ಉಪಾಸನೆಗೆ ಯೋಗ್ಯರಲ್ಲದ ಗೋಪಾಲರೇ ಮೊದಲಾದವರೂ ಶೂದ್ರರೂ ಸಹ, ಹೀಗೆ **ನಿಖಿಲಜನ** - ಸಮಸ್ತ ಜನಗಳ, **ಮನೋನಯನ**-ಮನಸ್ಸು ಕಣ್ಣುಗಳನ್ನು **ಹಾರಿ** - **"ದೃಷ್ಟಿಚಿತ್ತಾಪಹಾರಿಣಂ"** ಎಂದು ಹೇಳಿರುವ ಹಾಗೆ ಸ್ತ್ರೀಪುರುಷ ವ್ಯತ್ಯಾಸವೇನೂ ಇಲ್ಲದೆ ಎಲ್ಲರ ದೃಷ್ಟಿ ಚಿತ್ತಗಳನ್ನು ಅಪಹರಿಸುವ ಎಂದು ಹೇಳಿರುವ ಹಾಗೆ, ಅಪಹರಿಸುವ, **ದಿವ್ಯಚೇಷ್ಟಿತಾನಿ** - ಅದ್ಭುತವಾದ ಆಶ್ಚರ್ಯವಾದ ಚೇಷ್ಟಿತಗಳನ್ನು, **ಕುರ್ವನ್** - ಮಾಡುವವನಾಗಿ, ನವನೀತನಾಟ್ಯ, ಯಮಳಾರ್ಜುನ ಭಂಜನ, ಕಾಳಿಯಮರ್ದನಾದಿ ದಿವ್ಯಚೇಷ್ಟಿತಗಳನ್ನು ಮಾಡುವವನಾಗಿ, **ಸಾಧುಪರಿತ್ರಾಣಕ್ಕಾಗಿ** ಯಾವ ಯಾವ ದುಷ್ಟರನ್ನುನಿಗ್ರಹಿಸಿದನು ಎಂಬುದನ್ನು ಮುಂದೆ ಸಙ್ಗ್ರಹವಾಗಿ ತಿಳಿಸುತ್ತಾರೆ:—**ಪೂತನಾ** - ಕಂಸನಿಂದ ಕಳುಹಿಸಲ್ಪಟ್ಟ ಶ್ರೀ ಕೃಷ್ಣನಿಗೆ ಸ್ತನ್ಯವನ್ನು ಕೊಟ್ಟು ಪ್ರಾಣ ಕಳಕೊಂಡ ರಾಕ್ಷಸಿಯು, **ಶಕಟ** -ಕಂಸನಿಂದ ಕಳುಹಿಸಲ್ಪಟ್ಟ ಗಾಡಿಯ ರೂಪದಲ್ಲಿ ಬಂದು ಶ್ರೀ ಕೃಷ್ಣನಿಂದ ಒದೆಯಲ್ಪಟ್ಟು ಮೃತಿಹೊಂದಿದ ಮುರನೆಂಬ ರಾಕ್ಷಸನು, **ಯಮಳಾರ್ಜುನ** - ನಾರದ ಶಾಪದಿಂದ ಅರ್ಜುನ ವೃಕ್ಷರೂಪವನ್ನು ತಾಳಿದವರಾಗಿ, ಶ್ರೀ ಕೃಷ್ಣನು ಒರಳಕಲ್ಲನ್ನು ಎಳೆದುಕೊಂಡು ಹೋಗಿ ಆ ಮರಗಳನ್ನುರಳಿಸಿದುದರಿಂದ ನಿಜರೂಪವನ್ನು ಹೊಂದಿದ ನಳಕೂಬರ ಮಣಿಗ್ರೀವರು, **ಅರಿಷ್ಟ**-ವೃಷಭಾಕಾರವನ್ನುತಾಳಿ, ಗೋವುಗಳನ್ನೂ, ಋಷಿಗಳನ್ನೂ ಹಿಂಸಿಸುತ್ತಿದ್ದುದರಿಂದ, ಶ್ರೀ ಕೃಷ್ಣನಿಂದ ಕೊಲ್ಲಲ್ಪಟ್ಟ ದೈತ್ಯನು, **ಪ್ರಲಂಬ**-ಕ್ರೀಡನಕವೆಂಬ ಆಟದಲ್ಲಿ ಸೋತು, ಬಲರಾಮನನ್ನು ಬೆನ್ನಿನಮೇಲೆ ಕೂರಿಸಿಕೊಂಡು ಅಂತರಿಕ್ಷಕ್ಕೆ ಹಾರಿಹೋಗಿ ಬಲರಾಮನ ಮುಷ್ಟಿಪ್ರಹಾರದಿಂದ ಹತನಾದ ರಾಕ್ಷಸನು, **ಧೇನುಕ** - ರಾಮಕೃಷ್ಣರು ಆಡುತ್ತಿದ್ದ ರಮ್ಯವಾದ ತಾಳೇ ವನದಲ್ಲಿ ಕಂಸನಿಂದ ಪ್ರೇಷಿತನಾಗಿ ಬಂದ, ಕತ್ತೆಯರೂಪದಲ್ಲಿದ್ದ ರಾಕ್ಷಸನು, ಬಲರಾಮನಿಂದ ಹತನಾದವನು, **ಕಾಳಿಯ**-ರಮ್ಯವಾದ ಕಾಳಿಂದೀ ಮಡುವನ್ನು ಆಕ್ರಮಿಸಿ, ಅದನ್ನೆಲ್ಲಾ ವಿಷಪ್ರಾಯಮಾಡಿದುದರಿಂದ ಶ್ರೀ ಕೃಷ್ಣನಿಂದ ಮರ್ದಿಸಲ್ಪಟ್ಟವನಾಗಿ ಅನಂತರ ಶ್ರೀ ಕೃಷ್ಣನ ಆಜ್ಞೆಯಿಂದ ಸಮುದ್ರವನ್ನು ಹೋಗಿ ಸೇರಿದ ಕೃಷ್ಣಸರ್ಪವು, **ಕೇಶಿ** - ಕಂಸನಿಂದ ಕಳುಹಿಸಲ್ಪಟ್ಟ ದೈತ್ಯನು, ಕೃಷ್ಣನಿಂದ ಸಂಹರಿಸಲ್ಪಟ್ಟವನು, **ಕುವಲಯಾಪೀಡ** - ಕಂಸನು ಅಕ್ರೂರರನ್ನು ಕಳುಹಿಸಿ ಬಲರಾಮಕೃಷ್ಣರನ್ನು ಮಲ್ಲಯುದ್ಧಕ್ಕಾಗಿ ಕರೆಸಿಕೊಂಡು ಬಾಗಿಲಲ್ಲೇ ಇವರುಗಳನ್ನು ವಧಿಸಬೇಕೆಂಬಾಶೆಯಿಂದ ಸ್ಥಾಪಿಸಲ್ಪಟ್ಟ ಪಟ್ಟದಾನೆಯು, ರಾಮಕೃಷ್ಣರಿಂದ ಕೊಲ್ಲಲ್ಪಟ್ಟದುದು, **ಚಾಣೂರ** - ಮಲ್ಲಯುದ್ಧದಲ್ಲಿ ಕೃಷ್ಣನಿಂದ ಹತನಾದ ಮಲ್ಲನು, **ಮುಷ್ಟಿಕ** - ಮಲ್ಲಯುದ್ಧದಲ್ಲಿ ಬಲರಾಮನಿಂದ ಹತನಾದ ಮಲ್ಲನು, **ತೋಸಲಕ** - ಇಲ್ಲಿ ತೋಸಲವೆಂದಿರುತ್ತದೆ, ಚಾಣೂರ ಮುಷ್ಟಿಕರು ಹತವಾದನಂತರ ಶ್ರೀ ಕೃಷ್ಣನೊಂದಿಗೆ ಮಲ್ಲಯುದ್ಧಕ್ಕಾಗಿ ಬಂದು ಹತನಾದವನು, **ಕಂಸ** - ಶ್ರೀ ಕೃಷ್ಣನ

**ನ್ನಿಹತ್ಯ, ಅನವಧಿಕ ದಯಾ ಸೌಹಾರ್ದಾನುರಾಗ ಗರ್ಭಾವಲೋಕನಾಲಾಪಾಮೃತೈ ರ್ವಿಶ್ವಮಾಪ್ಯಾಯಯನ್,**

ಮಾವನು, ಕೃಷ್ಣನಿಂದ ಹತನಾದವನು, ಆದೀನ್ - ಇವೇ ಮೊದಲಾದವರುಗಳನ್ನೆಲ್ಲಾ, **ನಿಹತ್ಯ**- ಕೊಂದು, **ಅನವಧಿಕ** - ಅಪರಿಮಿತವಾದ, **ದಯಾ** - ತನಗೆ ಏನೊಂದೂ ಪ್ರಯೋಜನದಲ್ಲಿ ಆಶೆ ಇಲ್ಲದೆ ಇತರರ ದುಃಖವನ್ನು ಹೋಗಲಾಡಿಸಬೇಕೆಂಬಪೇಕ್ಷೆಯೇನು, **ಸೌಹಾರ್ದ** - ಹಿತೈಷಿಯಾಗಿ ರೋಣವೇನು, **ಅನುರಾಗ** - ಪ್ರೀತಿಯೇನು, **ಗರ್ಭಾವಲೋಕನ** - ಇವುಗಳಿಂದ ಕೂಡಿರುವ ತನ್ನ ಕೃಪಾಕಟಾಕ್ಷದಿಂದ ನೋಡೋಣವೇನು, ಆಲಾಪ-ಧರ್ಮಸಂಸ್ಥಾಪನೆ ಮಾಡುವ ಮೃದುವಾದ ಸರಸ ವಾದ ದಿವ್ಯಸೂಕ್ತಿಗಳೇನು ಇಂತಹ **ಅಮೃತೈಃ** - ಅಮೃತಗಳಿಂದ **ವಿಶ್ವಮಾಪ್ಯಾಯಯನ್** - ಲೋಕಕ್ಕೆಲ್ಲಾ ಸತ್ತೆಯಿಂದ ಕೂಡಿದ ಶಾಂತಿಯನ್ನುಂಟುಮಾಡುವವನಾಗಿ; ಇಲ್ಲಿ ಯಾವ ಯಾವ ದುಷ್ಟರನ್ನು ನಿಗ್ರಹಿಸಿದನೆಂದು ಹೇಳುವ ಸಂದರ್ಭದಲ್ಲಿ, **ಪ್ರಲಂಬ ಮುಷ್ಟಿಕ ಧೇನುಕರು** ಬಲ ರಾಮನಿಂದ ನಿಗ್ರಹಿಸಲ್ಪಟ್ಟಿರುವಾಗ ಇಲ್ಲಿ ಶ್ರೀ ಕೃಷ್ಣನಿಂದ ಹತರಾಗಿರುವದು ಹೇಗೆ ಎಂದರೆ, ಬಲರಾಮನೂ ಶ್ರೀ ಕೃಷ್ಣನ ಅಂಶನಾಗಿ ಹೇಳಲ್ಪಟ್ಟು ದಶಾವತಾರಗಳಲ್ಲಿ ಒಂದಾಗಿ ಅನೇಕ ಕಡೆ ಗಳಲ್ಲಿ ಹೇಳಲ್ಪಟ್ಟಿವೆ. ಶ್ರೀ ನಿಗಮಾಂತ ದೇಶಿಕರು ಬರೆದ ದಶಾವತಾರಸ್ತೋತ್ರದಲ್ಲಿ **"ಇಚ್ಛಾ ಮೀನ ವಿಹಾರ ಕಚ್ಛಪ ಮಹಾಪೋತ್ರಿನ್ ಯದೃಚ್ಛಾಹರೇರಕ್ಷಾ ವಾಮನ ರೋಷರಾಮ ಕರುಣಾ ಕಾಕುತ್ಸ್ಥ ಹೇಲಾಹಲಿನ್"** ಎಂಬಲ್ಲಿ ಹೇಲಾಹಲಿಯಾದ ಬಲರಾಮನು ಒಂದು ಅವತಾರ ವಾಗಿ ಭಾವಿಸಲ್ಪಟ್ಟಿರುತ್ತದೆ. ವಿಷ್ಣುಪುರಾಣದಲ್ಲಿ (೫. ೯) ಪ್ರಬಲನಾದ ಬಲರಾಮನು ಒಯ್ಯಲ್ಪ ಟ್ಟಾಗ ಶ್ರೀ ಕೃಷ್ಣನೇ ರಕ್ಷಿಸು ಎಂದು ಕೂಗಿಕೊಂಡಾಗ, **"ಭವಾನಹಂಚ ವಿಶ್ವಾತ್ಮನ್ ಏಕ ಏವಹಿ ಕಾರಣಂ। ಜಗತೋಸ್ಯ ಜಗತ್ಯರ್ಥೇ ಭೇದೇನಾವಾಂ ವ್ಯವಸ್ಥಿತೌ"** "ನಾವಿಬ್ಬರೂ ಸೇರಿ ಒಂದೇ ಯಾಗಿ ಜಗತ್ತಿಗೆ ಕಾರಣವು, ಜಗತ್ತಿಗೆ ಹಿತಮಾಡುವದಕ್ಕಾಗಿ ಬೇರೆ ಬೇರೆ ರೂಪಗಳನ್ನು ಧರಿ ಸಿರುತ್ತೇವೆ" ಎಂದು ಜ್ಞಾಪಿಸಿ, ಪ್ರಲಂಬನನ್ನು ವಧಿಸು ಎನ್ನಲು, ಆಗ ಮುಷ್ಟಿ ಪ್ರಹಾರದಿಂದ ಆತನನ್ನು ಬಲರಾಮನು ಕೊಂದುಹಾಕಿದನು ಎಂಬ ವೃತ್ತಾಂತವಿರುತ್ತದೆ. ಸರ್ವೇಶ್ವರನ ದಯಾದಿ ಆಲಾಪಗಳು ಅಮೃತಪ್ರಾಯವಾದವುಗಳು. ಅಮೃತವು ಸತ್ತೆಯನ್ನಿತ್ತು ಸುಖರೂಪ ಶ್ರೇಯಸ್ಸನ್ನು ಕೊಡುತ್ತದೆ. ಹೀಗಿರುವಲ್ಲಿ ಸರ್ವೇಶ್ವರನ ಅವಲೋಕಾಲಾಪಗಳ ವಿಷಯದಲ್ಲಿ ಹೇಳತಕ್ಕದ್ದೇನಿದೆ ಎಂಬ ಭಾವವು. ಇಲ್ಲಿ ತನ್ನ ಕೃಪಾಕಟಾಕ್ಷದಿಂದ ಅವಲೋಕನವು ವಿಶ್ವಕ್ಕೆ ಧಾರಕವು, ಅಂತಹ ದಿವ್ಯಚೇಷ್ಟಿತಗಳ ಪ್ರದರ್ಶನವು ಪೋಷಕವು, ಆಲಾಪಾದಿಗಳು ಭೋಗರೂಪ ವಾದವು. ಆದುದರಿಂದ ಇವೆಲ್ಲವೂ ಧಾರಕಪೋಷಕ ಭೋಗ್ಯವೆಂದು ಹೇಳುವದಕ್ಕಾಗಿ **ವಿಶ್ವ ಮಾಪ್ಯಾಯಯನ್** ಎಂದು ಪ್ರಯೋಗಿಸಿರುತ್ತಾರೆ.

ಮುಂದಿನ ವಾಕ್ಯದಿಂದ, ಪುನಃ ಸಾಧುಪರಿತ್ರಾಣದಿಂದ ಸರ್ವೇಶ್ವರನಿಗುಂಟಾಗುವ ಭೋಗ್ಯ ತ್ವವನ್ನು ಪ್ರದರ್ಶಿಸುತ್ತಾರೆ:—**ನಿರತಿಶಯ** - ಇದಕ್ಕಿಂತ ಅತಿಶಯವಿಲ್ಲದ, **ಸೌಂದರ್ಯ**ವೇನು, **ಸೌಶೀಲ್ಯ** - ತನಗಿಂತ ತುಂಬಾ ಹೀನರಾದವರೊಂದಿಗೆ ಸೇರಿರೋಣವೇನು, **ಆದಿ** - ಇವೇ ಮೊದ ಲಾದ, **ಗುಣಗಣ**-ಕಲ್ಯಾಣಗುಣ ಸಮೂಹದ **ಆವಿಷ್ಕಾರೇಣ** - ಪ್ರಕಟನೆಯಿಂದ, **ಅಕ್ರೂರ ಮಾಲಾಕಾರ** ಮೊದಲಾದವರುಗಳನ್ನು, **ಆದಿ** ಶಬ್ದದಿಂದ ವಿದುರ, **ಉದ್ಧವ**ರೇ ಮೊದಲಾದವರು ಹೇಳಲ್ಪಟ್ಟಿರು. ಇವರುಗಳನ್ನು ಪರಮ ಭಾಗವತರನ್ನಾಗಿ ಮಾಡಿ ಎಂದರೆ ಇವರು ಪರಮ ಭಾಗ ವತರೆಂದು ಲೋಕಕ್ಕೆಲ್ಲಾ ಪ್ರಸಿದ್ಧಪಡಿಸಿ, ಎಂಬ ಭಾವವು. **ಅಕ್ರೂರಮಾಲಾಕಾರರನ್ನೇ ಮುಖ್ಯ**

**ನಿರತಿಶಯ ಸೌನ್ದರ್ಯ ಸೌಶೀಲ್ಯಾದಿ ಗುಣಗಣಾ ವಿಷ್ಕಾರೇಣಾ ಕ್ರೂರಮಾಲಾಕಾರಾದೀನ್ ಪರಮ ಭಾಗವತಾನ್ ಕೃತ್ವಾ, ಪಾಂಡುತನಯ ಯುದ್ಧ ಪ್ರೋತ್ಸಾಹನ ವ್ಯಾಜೇನ ಪರಮ ಪುರುಷಾರ್ಥ ಲಕ್ಷಣ ಮೋಕ್ಷಸಾಧನ ತಯಾ ವೇದಾನ್ತೋದಿತಂ ಸ್ವವಿಷಯಂ ಜ್ಞಾನಕರ್ಮಾನು ಗೃಹೀತಂ ಭಕ್ತಿಯೋಗ ಮವತಾರಯಾಮಾಸ.**

---

ವಾಗಿ ಇಲ್ಲಿ ಏಕೆ ಹೇಳಿದರು ಎಂದರೆ ಇವರು ಶ್ರೀ ಕೃಷ್ಣನಿಗೆ ಶತ್ರುವಾದ ಕಂಸನ ಪಕ್ಷಕ್ಕೆ ಸೇರಿದವರಾಗಿ ನಿಗ್ರಹಕ್ಕೆ ಯೋಗ್ಯರಾಗಿದ್ದರೂ, ಶ್ರೀ ಕೃಷ್ಣನು ಅವರಿಗೆ ತನ್ನಲ್ಲಿರುವ ಪ್ರೀತ್ಯತಿಶಯವನ್ನು ತಿಳಿದವನಾದ ಪ್ರಯುಕ್ತ ಅವರಿಬ್ಬರಿಗೂ ಅನುಗ್ರಹಿಸಿದನು. ಅಕ್ರೂರನಿಗೆ ಯಮುನಾ ನದಿಯಲ್ಲಿ ಮಾಧ್ಯಾಹ್ನಿಕಸ್ನಾನಸಮಯದಲ್ಲಿ ನೀರಿನಲ್ಲಿ ಶ್ರೀ ಕೃಷ್ಣನು ತನ್ನ ಸೇವೆಯನ್ನಿತ್ತನು. ಕಂಸನ ಮಾಲಾಕಾರನು ಶ್ರೀ ಕೃಷ್ಣನಿಗೆ ದಿವ್ಯ ಪುಷ್ಪಮಾಲೆಗಳನ್ನು ಕೊಟ್ಟದುದರಿಂದ ಅನುಗ್ರಹಿಸಲ್ಪಟ್ಟನು.

(ಪರಮಪುರುಷನಾದ ಶ್ರೀ ಕೃಷ್ಣನು ಈ ಗೀತಾಶಾಸ್ತ್ರೋಪದೇಶ ಮಾಡಲು ಕಾರಣವೇನೆಂಬುದನ್ನು ತಿಳಿಸುತ್ತಾರೆ:—**ಪಾಂಡುತನಯ** - ಪಾಂಡುಪುತ್ರನಾದ ಅರ್ಜುನನಿಗೆ, ಅರ್ಜುನನನ್ನು ಹೇಳಿದುದು ಪಂಚಪಾಂಡವರನ್ನು ಕುರಿತು ಹೇಳಿದಂತಾಯಿತು, **ಯುದ್ಧಪ್ರೋತ್ಸಾಹನ ವ್ಯಾಜೇನ**- ತನ್ನ ದಾಯಾದರೊಂದಿಗೆ ಯುದ್ಧ ಮಾಡಲು ಮನಸ್ಸಿಲ್ಲವೆಂದು ಧನಸ್ಸನ್ನು ಕೆಳಗಿಟ್ಟುದನ್ನು ಕಂಡು, ಯುದ್ಧ ಮಾಡಲು ಪ್ರೋತ್ಸಾಹಿಸಬೇಕೆಂಬ ನೆಪದಿಂದ, **ಪರಮಪುರುಷಾರ್ಥ ಲಕ್ಷಣ** - ಚತುರ್ವಿಧ ಪುರುಷಾರ್ಥಗಳಲ್ಲಿ ಸರ್ವೋತ್ಕೃಷ್ಟವೆಂಬ ಲಕ್ಷಣವುಳ್ಳ, **ಮೋಕ್ಷಸಾಧನತಯಾ** - ಮೋಕ್ಷವನ್ನು ಸಾಧಿಸಿಕೊಡುವಂಥಾದ್ದಾಗಿ, **ವೇದಾನ್ತೋದಿತಂ** - ವೇದಾನ್ತದಲ್ಲಿ ಹೇಳಲ್ಪಟ್ಟ ಎಂದರೆ ಉಪನಿಷತ್ತುಗಳಲ್ಲಿ ವಿಧಿಸಲ್ಪಟ್ಟ, **ಸ್ವವಿಷಯಂ** - ಸರ್ವೇಶ್ವರನಾದ ತನ್ನ ವಿಷಯವಾದ, **ಜ್ಞಾನಕರ್ಮಾನುಗೃಹೀತಂ** - ಕರ್ಮಜ್ಞಾನಯೋಗಗಳಿಂದಾಗಲಿ, ಕರ್ಮಯೋಗದಿಂದಲಾಗಲಿ, ಸಾಧಿಸಲ್ಪಟ್ಟ ಭಕ್ತಿಯೋಗವನ್ನು, **ಅವತಾರಯಾಮಾಸ**- ಇಳಿಸಿದನು ಎಂದರೆ ಉಪಪಾದಿಸಿ ಹೇಳಿದನು.

ಯಾವ ಸಂದರ್ಭದಲ್ಲಿ ಈ ಗೀತೋಪದೇಶವು ಎಂಬ ಪ್ರಶ್ನೆಗೆ ಭಾರತ ಕಥಾ ಸಂಗತಿಯನ್ನು ತಿಳಿಸುತ್ತಾರೆ:—ತನ್ನ ಗುರುಗಳು, ಬಂಧುಗಳು ಜ್ಞಾತಿಗಳು ಮೊದಲಾದವರನ್ನು ಸ್ವಲ್ಪ ರಾಜ್ಯಕ್ಕಾಗಿ ಕೊಲ್ಲಬೇಕೇ, ಅಧರ್ಮವಲ್ಲವೇ ಎಂದು ಅರ್ಜುನನು ಶಙ್ಕಾಕುಲನಾಗಿರುವಾಗ ಕ್ಷತ್ರಿಯರಿಗೆ ಅಧರ್ಮಿಗಳನ್ನು ಕೊಲ್ಲುವದೇ ಧರ್ಮವಾಗಿರುವಾಗ, ಧರ್ಮವನ್ನು ಅಧರ್ಮವಾಗಿ ತಿಳಿದ ಅರ್ಜುನನಿಗೆ ಧರ್ಮೋಪದೇಶಮಾಡಬೇಕೆಂದು ಸಙ್ಕಲ್ಪಿಸಿ ಗೀತಾಶಾಸ್ತ್ರವನ್ನು ಶ್ರೀ ಕೃಷ್ಣನು ಉಪದೇಶಿಸಿದನು. ಆದರೆ ಹೀಗೆ ಆತನಿಗೆ ಉಪದೇಶಿಸಿದುದು ಒಂದು ನೆಪಮಾತ್ರವೇ. ಲೋಕಹಿತಾರ್ಥವಾಗಿ ಈ ಅಮೋಘೋಪದೇಶವೆಂದು ("ನಿಮಿತ್ತ ಮಾತ್ರಂ ಭವಸವ್ಯ ಸಾಚಿನ್") ಎಂದು ಮುಂದೆ ಶ್ರೀ ಕೃಷ್ಣನೇ ಹೇಳುವ ಹಾಗೆ, ತಿಳಿಸುವದಕ್ಕಾಗಿ "ಯುದ್ಧ ಪ್ರೋತ್ಸಾಹನ ವ್ಯಾಜೇನ" ಎಂದು ಪ್ರಯೋಗಿಸಿರುತ್ತಾರೆ. ಧರ್ಮಸಂಸ್ಥಾಪನವೂ ಒಂದು ಅವತಾರೋದ್ದೇಶ್ಯವಾದುದರಿಂದ ಅದೂ ತಮ್ಮ ಕರ್ತವ್ಯವೆಂದು ಭಾವಿಸಿ ನಡೆಸಿರುತ್ತಾರೆ. ಈ ಶಾಸ್ತ್ರವು ಹೇಗೆ ಅಮೋಘವಾದುದೆಂದರೆ ತಿಳಿಸುತ್ತಾರೆ:—**ಪರಮಪುರುಷಾರ್ಥಲಕ್ಷಣ ಮೋಕ್ಷಸಾಧನತಯಾ** ಮಿಕ್ಕ ಎಲ್ಲಾ ಪುರುಷಾರ್ಥಗಳು ಅಲ್ಪಾಸ್ಥಿರವಾದವುಗಳು, ಮೋಕ್ಷವಾದರೋ ಮಹತ್ತಾಗಿಯೂ, ನಿರತಿಶಯ ನಿತ್ಯಸುಖರೂಪವಾಗಿಯೂ ಪರಿಪೂರ್ಣ ಬ್ರಹ್ಮಾನುಭವವೇನು, ನಿತ್ಯಕೈಙ್ಕರ್ಯವನ್ನು ಮಾಡುವ ಸುಕೃತವೇನು, ಇವುಗಳಿಂದ ಪರಮ ಪುರುಷಾರ್ಥವೆನಿಸಿರುವಂಥಾದ್ದು. ಈ ಉಪದೇಶವೆಲ್ಲಾ ಎಲ್ಲಿ ಕಂಡು ಬರು

ವಂಥಾದ್ದು, ಎಂದರೆ **ವೇದಾಂತೋದಿತಂ** - ಸರ್ವೇಶ್ವರನು ತಾನೇ ಉಪನಿಷತ್ತುಗಳ ಮೂಲಕ ಅನುಗ್ರಹಿಸಿದಂತಾದ್ದು. ಇದರಿಂದ ಉಪನಿಷಚ್ಛಾಸ್ತ್ರಕ್ಕೆ ಮಾಹಾತ್ಮ್ಯೆಯೂ ಪರಮ ಪ್ರಯೋಜನವೂ ಪ್ರದರ್ಶಿಸಲ್ಪಟ್ಟಿತು. 'ಇಲ್ಲಿ ಭಕ್ತಿಯೋಗವು ಮೋಕ್ಷವನ್ನು ಸಾಧಿಸಿಕೊಡುವಂಥಾದ್ದು ಎಂದು ಹೇಳಿದುದರಭಿಪ್ರಾಯವೇನೆಂದರೆ, (ಸಂಸಾರ ದೆಶೆಯಲ್ಲಿಯೇ ಜೀವನ್ಮುಕ್ತಿಯುಂಟೆಂದು ಹೇಳುವಭಿಪ್ರಾಯವು ಸರಿಯಲ್ಲವು ಎಂದು ತೋರಿಸುವವದಕ್ಕಾಗಿ ಎಂದು ಭಾವಿಸತಕ್ಕದ್ದು.) ಅಸುರರನ್ನೂ ಮತ್ತು ದುಷ್ಕರ್ಮಿಗಳನ್ನೂ ವಂಚಿಸಿ ಶಿಕ್ಷಿಸುವದಕ್ಕಾಗಿ ಹೇಳಿದ ಅಸಚ್ಛಾಸ್ತ್ರದ ಹಾಗೆ ಈ ಉಪದೇಶವಲ್ಲವು, ಪರಮ ಪುರುಷಾರ್ಥವನ್ನೂ ಸಾಧಿಸಿಕೊಡುವಂಥಾದ್ದಾಗಿಯೂ, ವೇದಾಂತ ಶಾಸ್ತ್ರದಲ್ಲಿ ಪ್ರತಿಪಾದಿತವಾಗಿಯೂ ಇರುವದರಿಂದ ಇದಕ್ಕಿಂತಲೂ ಪರಮಹಿತವಾದ ಪರಮಾರ್ಥವಾದ ಉಪದೇಶವು ಎಲ್ಲಿಯೂ ದೊರೆಯಲಾರದೆಂಬ ತಾತ್ಪರ್ಯವು. ಸಾಧ್ಯೋಪಾಯವಾದ ಈ ಭಕ್ತಿಯೋಗವು ಯಾರನ್ನು ಕುರಿತದ್ದೆಂದರೆ, **ಸ್ವವಿಷಯಂ**-ಅನ್ಯದೇವತಾವಿಷಯವಲ್ಲದೆ, ತನ್ನನ್ನುದ್ದೇಶಿಸಿನಡೆಸಿದ ಉಪಾಸನವೇ ಎಂಬ ಭಾವವು. ಈ ಭಕ್ತಿಯೋಗಕ್ಕೆ ಸಹಕಾರಿಗಳಾವುವು ಎಂದರೆ ಕರ್ಮಯೋಗವಾಗಲಿ ಜ್ಞಾನಯೋಗವಾಗಲಿ ಎಂದು ತಿಳಿಸಿರುತ್ತಾರೆ. **"ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ"** ಎಂಬ ಶ್ಲೋಕದಲ್ಲಿ ಉಪಪಾದಿಸಿದ ರೀತಿಯಲ್ಲಿ ಕರ್ಮಯೋಗದಿಂದಲೂ ಭಕ್ತಿಯೋಗವು ಸಾಧ್ಯವೆಂಬಭಿಪ್ರಾಯವನ್ನು ತಿಳಿಸುವದಕ್ಕಾಗಿ **ಜ್ಞಾನಕರ್ಮಾನುಗೃಹೀತಂ** ಎಂಬಲ್ಲಿ ಕರ್ಮಶಬ್ದವು ಜ್ಞಾನಾನಂತರ ಉಪಯೋಗಿಸಲ್ಪಟ್ಟಿರುತ್ತದೆ. ಕರ್ಮಯೋಗವು, ಜ್ಞಾನಯೋಗಕ್ಕೆ ಅಙ್ಗವಾಗಿಯಾಗಲಿ, ಸಾಕ್ಷಾತ್ತಾಗಿಯಾಗಲಿ, ಇಲ್ಲಿ ಮುಖ್ಯವಾಗಿ ಹೇಳಬೇಕಾಗಿರುವ ಭಕ್ತಿಯೋಗಕ್ಕೆ ಉಪಕಾರಕವಾಗಿ ಪ್ರಧಾನವಾದುದರಿಂದ **ಕರ್ಮಚ ಜ್ಞಾನಂಚ** ಎಂದು ದ್ವಂದ್ವ ಮಾಡಿದರೂ **ಜ್ಞಾನಕರ್ಮಾನುಗ್ರಹೀತಮ್** ಎಂದಾಗುತ್ತದೆ. ಅಥವಾ ಅರ್ಜುನನಿಗೆ ಮುಖ್ಯವಾಗಿ ಕರ್ಮಯೋಗವೇ ಉಪದೇಶಿಸಲ್ಪಟ್ಟು ಅದಕ್ಕೆ ಜ್ಞಾನಾಂಶವೂ ಕೂಡ ಮುಖ್ಯವಾಗಿ ಬೇಕಾಗಿರುವದರಿಂದ, ಹಾಗೆ ಪ್ರಯೋಗವೆಂದಾದರೂ ಭಾವಿಸಬಹುದು. ಇದರಿಂದ ಕರ್ಮಯೋಗ ಜ್ಞಾನಯೋಗಗಳೆರಡೂ ಭಕ್ತಿಯೋಗಕ್ಕೆ ಬೇಕೆಂಬ ಪಕ್ಷವು ಸಿರಾಕರಿಸಲ್ಪಟ್ಟಿತು. (ಹೀಗೆ ಉಪಾಸನವೇ ಸಾಧ್ಯೋಪಾಯವೆಂದು ಇಲ್ಲಿ ಹೇಳಿರುವದರಿಂದ, ವಾಕ್ಯಜನ್ಯಜ್ಞಾನದಿಂದಲೇ ಮೋಕ್ಷವೆಂದು ಹೇಳುವ ಪಕ್ಷವು ನಿರಾಕರಿಸಲ್ಪಟ್ಟಿತು.) 'ಇಲ್ಲಿ **ಮೋಕ್ಷಸಾಧನತಯಾ** ಎಂದು ಹೇಳಿರುವದರಿಂದ ಭಕ್ತಿಯೋಗವು ಸಾಧನವೆಂದೂ ಮೋಕ್ಷವು ಸಾಧ್ಯವೆಂದೂ ತೋರಿಬರುವದರಿಂದ ಈ ಸಂಸಾರದೆಶೆಯಲ್ಲೇ ಜೀವನ್ಮುಕ್ತಿಯುಂಟೆಂದು ಹೇಳುವ ಪಕ್ಷವು ಅಸಾಧುವೆಂಬುವದು ಇಲ್ಲಿಯೂ) ಸೂಚಿಸಲ್ಪಟ್ಟಿತು.' ಇಲ್ಲಿ **ವೇದಾಂತೋದಿತವೆಂದರೆ** ವೇದಾಂತದಲ್ಲಿ ವಿಧಿಸಲ್ಪಟ್ಟಿರುವದು, ವೇದಾಂತದಿಂದ ಉತ್ಪನ್ನವಾದುದಲ್ಲವು. ಇದರಿಂದ ಜ್ಞಾನವು ವಿಧೇಯವಾದುದಲ್ಲವು ಎಂದು ಹೇಳುವ ಪಕ್ಷವನ್ನು ಅಙ್ಗೀಕರಿಸುವದಿಲ್ಲವೆಂಬುದೂ ತೋರಿಬರುತ್ತದೆ. ವೇದಾಂತದಲ್ಲಿ ವಿಧಿಸಲ್ಪಟ್ಟದ್ದು ಇಲ್ಲಿ ಉಪಬೃಂಹಣಮಾಡಲ್ಪಡುತ್ತದೆಂಬ ಭಾವವು. ಈ ಭಕ್ತಿಯೋಗವು ಇನ್ನೆಂಥಾದ್ದೆಂದರೆ, **ಸ್ವವಿಷಯಂ** ಎಂದು ಹೇಳಿದರು, ಪರಮಪುರುಷನಾದ ಶ್ರೀ ಕೃಷ್ಣನ ಆರಾಧನರೂಪವಾದುದು. ಪ್ರತರ್ದನ ವಿದ್ಯಾದಿಗಳಲ್ಲಿ ರುದ್ರೇಂದ್ರಾದಿಗಳಿಂದ, ಮುಮುಕ್ಷುಗಳು ತಮ್ಮನ್ನೇ ಉಪಾಸನಮಾಡತಕ್ಕದ್ದೆಂದು ಶ್ರುತಿಯಲ್ಲಿ ಕಂಡುಬರುತ್ತದೆಯಲ್ಲಾ ಎಂದರೆ, **"ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್"** ಎಂಬ ಸೂತ್ರದಲ್ಲಿ ರುದ್ರೇಂದ್ರಾದಿಗಳಿಗೆ ಅಂತರ್ಯಾಮಿಯಾದ ಪರಮಾತ್ಮನೇ ಅಲ್ಲಿಯೂ ಉಪಾಸ್ಯನು ಎಂದು ಉಪಪಾದಿಸಲ್ಪಟ್ಟಿತು. (ಬ್ರ. ಸೂ. ೧. ಅಧಿ. ೧೧.೩೧) ಇಂದ್ರನೇ ಮೊದಲಾದವರು ನನ್ನನ್ನೇ ಉಪಾಸನ ಮಾಡು ಎಂದು ಹೇಳಿರುವದು ತಮ್ಮನ್ನು ಕುರಿತೇ ಅಲ್ಲವು, **ಶಾಸ್ತ್ರದೃಷ್ಟ್ಯಾ** - ಶರೀರವನ್ನು ಕುರಿತು ಹೇಳಿದುದು ಶರೀರಕ್ಕೆ ಆತ್ಮವಾದ

**ತತ್ರ ಪಾಂಡವಾನಾಂ ಕುರೂಣಾಂಚ ಯುದ್ಧೇ ಪ್ರಾರಬ್ಧೇ, ಸ ಭಗವಾನ್ ಪುರುಷೋತ್ತಮಃ ಸರ್ವೇಶ್ವರೇಶ್ವರೋ ಜಗದುಪಕೃತಿಮರ್ತ್ಯ ಆಶ್ರಿತ ವಾತ್ಸಲ್ಯ ವಿವಶಃ, ಪಾರ್ಥಂ ರಥಿನಮಾತ್ಮಾನಂಚ ಸಾರಥಿಂ ಸರ್ವಲೋಕ ಸಾಕ್ಷಿಕಂ ಚಕಾರ.**

---

ಪರಮಪುರುಷನನ್ನು ಕುರಿತದ್ದು ಎಂದು ಹೇಳುವ ಶಾಸ್ತ್ರದೃಷ್ಟಿಯಿಂದ ಹಾಗೆ ಉಪದೇಶವು. ಹೇಗೆಂದರೆ ವಾಮದೇವರು ಹೇಳಿದಹಾಗೆ, **"ಅಹಂ ಮನುರಭವಂ, ಸೂರ್ಯಶ್ಚಾಹಂ, ಕಕ್ಷೀವಾನೃಷಿರಸ್ಮಿ"** ನಾನೇಮನುವು, ನಾನೇ ಸೂರ್ಯನು ಹೀಗೆಲ್ಲಾ ಸಾಮಾನಾಧಿಕರಣ್ಯದಿಂದ ಹೇಳಿಕೊಂಡಿದುದು, ಪ್ರತಿಯೊಂದು ಶರೀರದಲ್ಲೂ ಅಂತರ್ಯಾಮಿಯಾಗಿ ಪರಮಾತ್ಮನೇ ಇರುವದರಿಂದ ; ನಾನು, ಮನು, ಸೂರ್ಯ ಎಂಬ ಸಾಮಾನಾಧಿಕರಣ್ಯದಿಂದ ಭಗವಂತನೇ ಹೇಗೆ ಹೇಳಲ್ಪಟ್ಟನೋ ಹಾಗೆಂಬ ಭಾವವು. ಆದರೆ ಶ್ರೀ ಕೃಷ್ಣನು, ಭಕ್ತಿಯೋಗವು **ಸ್ವವಿಷಯಂ** - ತನ್ನ ವಿಷಯಕವಾಗಿ ಮಾಡತಕ್ಕದ್ದೆಂದು ಮಾಡಿದ ಉಪದೇಶವು,(ಸ್ವೋತ್ಕರ್ಷವನ್ನು ಮಾಡಿಕೊಂಡ ದೋಷ ಯುಕ್ತವಾಗುವದಿಲ್ಲವೇ? ಆತ್ಮಪ್ರಶಂಸೆಯು ಕೂಡದಷ್ಟೆ ? ಎಂದರೆ, ಸತ್ಯವಾದುದನ್ನು ಹೇಳಿ, ಹಿತೋಪದೇಶವನ್ನು ಮಾಡುವದು ಎಂದಿಗೂ ಆತ್ಮ ಪ್ರಶಂಸೆಯಾಗದು.) ಸಿದ್ಧೋಪಾಯನಾದ ತನ್ನ ಸಂಬಂಧವು ಈ ಸಾಧ್ಯೋಪಾಯಕ್ಕೆ ಅತ್ಯಾವಶ್ಯಕವೆಂದೂ **ಸ್ವವಿಷಯಂ** ಎಂಬುದರಿಂದ ಹೇಳಲ್ಪಟ್ಟಿತು. ಆದುದರಿಂದ ಆತನೇ ಉಪಾಯವೂ, ಆತನೇ ಉಪೇಯವು ಎಂಬಂಶವನ್ನು ಇದರಿಂದ ಗ್ರಹಿಸಬಹುದು. ಈ **"ಮೋಕ್ಷಸಾಧನತಯಾ ವೇದಾನ್ತೋದಿತಂ ಭಕ್ತಿಯೋಗಮ್"** ಎಂಬ ಪ್ರಯೋಗದಿಂದ ಮುಖ್ಯವಾಗಿ ತೋರಿಬರುವದೇನೆಂದರೆ, ಬರೀ ವಾಕ್ಯಾರ್ಥಜ್ಞಾನದಿಂದ ಮಾತ್ರವೇ ಮೋಕ್ಷವನ್ನು ಸಾಧಿಸಬಹುದೆಂದು ಹೇಳುವ ವಾದವು ಎತ್ತರವಾದ ಪರ್ವತಾಗ್ರಕ್ಕೆ ಹೋಗಬೇಕೆಂದಿರುವವನು ಯಾವ ಸಾಧನವನ್ನೂ ಅವಲಂಬಿಸದೇ, ಮನಸ್ಸಿನಿಂದಲೇ ಅಲ್ಲಿಗೆ ಹಾರಿದೆನೆಂದು ಭಾವಿಸದಂತೆ ಆಗುವದೆಂದು ಹೇಳಿದಂತಾಯಿತು.

ಹೀಗೆ ಪಾರ್ಥನಿಗೆ ಮೋಕ್ಷಸಾಧನ ರೂಪವಾದ ಈ ಭಕ್ತಿಯೋಗರೂಪ ಶಾಸ್ತ್ರವನ್ನು ಏತಕ್ಕಾಗಿ ಶ್ರೀ ಕೃಷ್ಣಭಗವಾನ್ ಉಪದೇಶಿಸಿದರು ಎಂದರೆ ಸಙ್ಗ್ರಹವಾಗಿ **"ಯುದ್ಧ ಪ್ರೋತ್ಸಾಹನ ವ್ಯಾಜೇನ"** ಎಂದು ಹೇಳಿದುದನ್ನೇ ವಿಶದೀಕರಿಸಿ ಆ ಸಂದರ್ಭವು ಯಾವುದೆಂಬುದನ್ನು ಚನ್ನಾಗಿ ಮುಂದಿನ ವಾಕ್ಯದಿಂದ ವಿವರಿಸುತ್ತಾರೆ :—**ತತ್ರ** - ಆ ಸಂದರ್ಭದಲ್ಲಿ, ಪಾಂಡವರ, ಮತ್ತು ಕೌರವರ, **ಯುದ್ಧೇ ಪ್ರಾರಬ್ಧೇ** - ಯುದ್ಧವು ಪ್ರಾರಂಭವಾಗಲಾಗಿ, ಆ ಷಾಡ್ಗುಣ್ಯ ಪರಿಪೂರ್ಣನಾದ ಪುರುಷೋತ್ತಮನಾದ, **ಸರ್ವೇಶ್ವರೇಶ್ವರಃ** - ಸಮಸ್ತ ಈಶ್ವರರುಗಳಾದ ಬ್ರಹ್ಮರುದ್ರಾದಿಗಳಿಗೂ, **ಈಶ್ವರಃ** - ಸ್ವಾಮಿಯಾದ ಶ್ರೀ ಕೃಷ್ಣನು, **ಜಗದುಪಕೃತಿಮರ್ತ್ಯಃ** - ಜಗತ್ತಿಗೆ ಉಪಕಾರ ಮಾಡುವದಕ್ಕಾಗಿಯೇ ಮಾನುಷವೇಷವನ್ನು ಧರಿಸಿದವನಾಗಿ, **ಆಶ್ರಿತವಾತ್ಸಲ್ಯ ವಿವಶಃ** - ತನ್ನನ್ನು ಆಶ್ರಯಿಸಿರುವ ಭಕ್ತರಲ್ಲಿರುವ ವಾತ್ಸಲ್ಯದಿಂದ ಪರವಶನಾಗಿ, ಪಾರ್ಥನನ್ನು ರಥದಲ್ಲಿ ಕೂತಿರುವ ಯಜಮಾನನಹಾಗೂ, **ಆತ್ಮಾನಂಚ**-ತನ್ನನ್ನಾದರೋ, ಸಾರಥಿಯನ್ನಾಗಿಯೂ, **ಸರ್ವಲೋಕಸಾಕ್ಷಿಕಂ**-ಸಮಸ್ತ ಜನಗಳು ಈ ಐತಿಹ್ಯವನ್ನು ಕಣ್ಣಾರ ನೋಡುತ್ತಿರುವ ಹಾಗೆಯೇ, **ಚಕಾರ**-ಮಾಡಿದನು. ಶ್ರೀ ಕೃಷ್ಣನು ಇಂತಹ ಅಲ್ಪವಾದ ದಾಸವೃತ್ತಿ ಸೂಚಕವಾದ ಸಾರಥ್ಯವನ್ನು ಮಾಡಿದನು ಎಂದರೆ ಮಹಿಮೆಗೇನೂ ಕುಂದಕವಿಲ್ಲವೆಂದು ತಿಳಿಸುವದಕ್ಕಾಗಿ, **ಸಃ**-ಎಂದಾರಂಭಿಸಿ ನಾಲ್ಕು ವಿಶೇಷಣಗಳನ್ನು ಕೊಟ್ಟು, ಸರ್ವೇಶ್ವರನಿಗೆ ಇದೊಂದು ಲೀಲೆಯಾಗಿ ಲೀಲಾ ಸಾರಥಿಯಾದನು ಎಂದು ತಿಳಿಸಿರುತ್ತಾರೆ. ಲೀಲಾ ಸಾರಥಿಯಾಗಿ ಸರ್ವರನ್ನೂ ಯುದ್ಧದಲ್ಲಿ ವಂಚನೆ

ವಮಾಡಿದವನ ಶಾಸ್ತ್ರವು ಹೇಗೆ ಹಿತೋಪದೇಶವಾದೀತೆಂಬ ಸಂದೇಹ ಬಂದೀತೆಂದು ಭಾವಿಸಿ, **ಜಗದುಪಕೃತಿ ಮರ್ತ್ಯಃ** ಎಂದು ಹೇಳಿರುತ್ತಾರೆ. ಮಾನುಷ ವೇಷ ಮೊದಲಾದವುಗಳಿಂದ ತನ್ನನ್ನು ಮರೆಸಿಕೊಳ್ಳುವದೂ ಜಗತ್ತಿಗೆ ಉಪಕಾರಮಾಡಬೇಕೆಂಬಭಿಪ್ರಾಯದಿಂದವಾದುದರಿಂದ ಶ್ರೀ ಕೃಷ್ಣನ ಉಪದೇಶದಲ್ಲಿ ಪೂರ್ಣನಂಬಿಕೆಯನ್ನಿಡಬಹುದೆಂಬ ಭಾವವು. ಹಾಗೆ ಮಾನುಷ ವೇಷದಲ್ಲಿರುವದನ್ನು **"ಅವಜಾನನ್ತಿಮಾಂ ಮೂಢಾ ಮಾನುಷೀಂ ತನುಮಾಶ್ರಿತಂ। ಪರಂ ಭಾವ ಮಜಾನನ್ತಃ"** (ಗೀ. ೯. ೧೧) ಎಂದು ಹೇಳಿರುವ ಹಾಗೆ ಮೂಢರು ತಿಳಿಯಲಾರರು, **"ಮಹಾತ್ಮಾನಸ್ತು"** ಮಹರ್ಷಿಗಳೂ ಯೋಗಿಗಳಾದರೋ ತಿಳಿಯುವರು, ಇದರಿಂದ ಸೌಲಭ್ಯ ಸೌಶೀಲ್ಯಾದಿಗಳಾದ ತನ್ನ ಕಲ್ಯಾಣ ಗುಣಗಳು ಇವರುಗಳಿಂದ ವ್ಯಕ್ತವಾಗುತ್ತೆಂದು **ಜಗದುಪ ಕೃತಿ ಮರ್ತ್ಯ**ನಾಗಿರುತ್ತಾನೆಂದು ಹೇಳಲ್ಪಟ್ಟಿತು. ಈ ನಾಲ್ಕು ವಿಶೇಷಣಗಳಿಂದ ಸರ್ವೇಶ್ವರನ ಸ್ವರೂಪ ರೂಪಗುಣ ವಿಭೂತ್ಯಾದಿಗಳ ವೈಲಕ್ಷಣ್ಯವನ್ನು ಕೊಂಡಾಡಿ ಶ್ರೀ ಕೃಷ್ಣನಿಗೆ ಪರತ್ವವನ್ನು ತೋರಿಸಿರುತ್ತಾರೆ. ಇಷ್ಟು ಕಷ್ಟಪಟ್ಟು ಈ ಅಲ್ಪನಾದ ಅರ್ಜುನನಿಗೆ ಸಾರಥಿರೂಪ ದೌತ್ಯವನ್ನು ಅದೇನು ಮಾಡಿಪುದು ಎಂದರೆ, ಸರ್ವೇಶ್ವರನು **ಆಶ್ರಿತ ವಾತ್ಸಲ್ಯ ವಿವಶಃ** ಎಂದು ಹೇಳಿದರು. ಪಾರ್ಥನು ಅಲ್ಪನಲ್ಲವು, ನರನಾರಾಯಣರಲ್ಲಿ ನರನು, ಪರಮ ಭಕ್ತಿಯಿಂದ ತನ್ನನ್ನು ಆಶ್ರಯಿ ಸಿದವನು. ಆದುದರಿಂದ ಆತನಲ್ಲಿ ಅಪರಿಮಿತ ವಾತ್ಸಲ್ಯದಿಂದ ಪರವಶನಾಗಿ ಆತನಿಗೆ ಲೀಲಾ ಸಾರಥಿಯಾಗಿರುತ್ತಾನೆ. ಆದುದರಿಂದ ಇದೇನೂ ಆತನಿಗೆ ಶ್ರಮಸಾಧ್ಯವಾದುದಲ್ಲವು. ಆಶ್ರಿತ ರನ್ನು ಕಷ್ಟದಿಂದ ಬಿಡಿಸಿ ಉದ್ಧಾರಮಾಡುವದೇ ತನ್ನ ವ್ರತವೆಂದು ಎಲ್ಲರೂ ತಿಳಿಯಲೆಂದೇ **ಲೋಕಸಾಕ್ಷಿಕಂ ಚಕಾರ** ಎಂದು ಹೇಳಲ್ಪಟ್ಟಿತು. ತಾನು ಭಕ್ತ ಪರಾಧೀನನೆಂಬುವದನ್ನು ಎಲ್ಲರೂ ತಿಳಿಯತಕ್ಕದ್ದು, ತಾನು ಭಕ್ತನನ್ನು ಜೆನ್ನಿನಲ್ಲಿಟ್ಟು ಮುಂದಾಳಾಗಿ ನಿಂತು ಕಾಪಾಡ ತಕ್ಕವನೆಂಬುದನ್ನು ತಿಳಿಸುವದಕ್ಕಾಗಿಯೂ ಹಾಗೆ ಮಾಡಿದನೆಂಬ ಭಾವವೂ ತೋರಿಬರುತ್ತದೆ. ಲೋಕದಲ್ಲೂ ಕೂಡ ಪೂಜ್ಯರಿಗೆ ಸ್ವಜನದಲ್ಲಿ ಅಭಿಮಾನವುಂಟು. ಅದರಿಂದ ಕಷ್ಟಕಾಲದಲ್ಲಿ ಸಹಾಯಮಾಡುವದು ನ್ಯಾಯವೆಂದು ತಿಳಿಸುವದಕ್ಕಾಗಿ ತನ್ನ ಅತ್ತೆಯಮಗನಾಗಿ, ಪೃಥಾ ಪುತ್ರ ನಾದ ಪಾರ್ಥನನ್ನು ರಥಿಯನ್ನಾಗಿ ಮಾಡಿದನು ಎಂಬಲ್ಲಿ ಪಾರ್ಥಶಬ್ದಪ್ರಯೋಗವು. **ಲೋಕ ಸಾಕ್ಷಿಕಂ** ಎಂಬುದರಿಂದ ಈ ಹಿತೋಪದೇಶವೂ, ಈ ಸಹಾಯವೂ ಮೋಸಕಾರ್ಯಗಳಲ್ಲವೆಂದು ತೋರಿಸುವದಕ್ಕಾಗಿಯೂ ಬಹಿರಂಗವಾಗಿ ನಡಿಸಿದನೆಂಬ ಭಾವವೂ ತೋರಿಬರುತ್ತದೆ; ಅಥವಾ ತನ್ನನ್ನಾಶ್ರಯಿಸಿದರೆ ಸಕಲ ಪುರುಷಾರ್ಥಾವಾಪ್ತಿಯುಂಟೆಂದು ಸರ್ವರೂ ತಿಳಿದು ತನ್ನನ್ನಾಶ್ರ ಯಿಸಲಿ ಎಂಬ ಉದಾರಭಾವದಿಂದಲೂ **ಲೋಕಸಾಕ್ಷಿಕಂ ಚಕಾರ** ಬಹಿರಂಗವಾಗಿ ಎಲ್ಲರೂ ತಿಳಿ ಯಲೆಂದು ಲೀಲಾ ಸಾರಥಿಯಾದನು ಎಂಬ ತಾತ್ಪರ್ಯವೂ ತೋರಿಬರುತ್ತದೆ. ಹೀಗೆ ಆಶ್ರಿತರಲ್ಲಿ ವಾತ್ಸಲ್ಯ ಮೊದಲಾದವುಗಳನ್ನು ತೋರಿಸುವದರಿಂದ ತನಗೆ ಏನೊಂದೂ ಪ್ರತಿಫಲವೂ ಇಲ್ಲದೇ ಸರ್ವೇಶ್ವರನು ಉಪಕರಿಸುವನು ಎಂಬ ಶಾಸ್ತ್ರದಿಂದ ಮಾತ್ರ ತಿಳಿಯಬಹುದಾದ ವಿಷಯವನ್ನು ಬಹಿರಂಗಮಾಡಿದನು ಎಂಬುದೂ ಸೂಚಿಸಲ್ಪಟ್ಟಿತು.

ಮುಂದಿನ ವಾಕ್ಯದಿಂದ ಈ ಗೀತೋಪನಿಷತ್ತಿನ ಪ್ರಥಮಶ್ಲೋಕಕ್ಕೆ ಅವತಾರಿಕೆಯನ್ನನು ಗ್ರಹಿಸುವರಾಗಿ, ಹಾಗೆಯೇ **"ತ್ವಾಂ ಶೀಲರೂಪ ಚರಿತೈಃ"** ಎಂಬ ಶ್ರೀ ಯಾಮುನೇಯರ ಸ್ತೋತ್ರ ರತ್ನದ ೨೫ನೆಯ ಶ್ಲೋಕದಲ್ಲಿ ಉಪಪಾದಿಸಿರುವ ಹಾಗೆ ಸೌಶೀಲ್ಯ ದಿವ್ಯಮಙ್ಗಳ ವಿಗ್ರಹ, ದಿವ್ಯಾ ದ್ಭುತ ಚೇಷ್ಟೆ, ಇವುಗಳಿಂದ ಸತ್ವೋದ್ರೇಕವನ್ನುಂಟುಮಾಡುವ ಪುರಾಣೇತಿಹಾಸಗಳಾದ ಸಚ್ಛಾ ಸ್ತ್ರಗಳಿಂದ, ಮಹಾ ವಿರಕ್ತಭಾಗವತಶ್ರೋತ್ರ ಮರಾದ ಮಹರ್ಷಿಗಳ ದಿವ್ಯ ಸೂಕ್ತಿಗಳಿಂದಲೂ ದೈವ ಸ್ವಭಾವವುಳ್ಳವರಾದ ಭೀಷ್ಮ, ಸಂಜಯ, ಉದ್ಧವ, ವಿದುರಾದಿಗಳು ಸ್ವಾಮಿಯ ಮಾಹಾತ್ಮ್ಯ

**ಏವಂ ಜ್ಞಾತ್ವಾಪಿ ಸರ್ವಾತ್ಮನಾಂಧೋ ಧೃತರಾಷ್ಟ್ರ ಸ್ಸುಯೋಧನ ವಿಜಯ ಬುಭುತ್ಸಯಾ ಸಂಜಯಂ ಪಪ್ರಚ್ಛ—**

ಯನ್ನು ತಿಳಿಯುವರು, ಆಸುರಸ್ವಭಾವಯುಕ್ತರಾದ ಧೃತರಾಷ್ಟ್ರ ಧಾರ್ತರಾಷ್ಟ್ರಾದಿಗಳು ತಿಳಿಯಲಾರರು ಎಂಬುದನ್ನು ಉಪದೇಶಿಸುತ್ತಾರೆ.

**ಏವಂ ಜ್ಞಾತ್ವಾಪಿ** - ಹಿಂಪೆ ವಿವರಿಸಿದ ರೀತಿಯಲ್ಲಿ ಸಂಜಯ ಭೀಷ್ಮಾದಿಗಳಿಂದ ಶ್ರೀ ಕೃಷ್ಣನು ಪರತತ್ವವೆಂದು ತಿಳಿದಿದ್ದರೂ ಕೂಡ, ಪ್ರಾರಬ್ಧ ಕರ್ಮವು ಮಹಾ ಬಲಿಷ್ಠವಾದುದರಿಂದ **ಸರ್ವಾತ್ಮನಾನ್ಧೋ ಧೃತರಾಷ್ಟ್ರಃ** - ಬರೀ ಕಣ್ಣು ಮೂಲಕವಾಗಿ ಕುರುಡನಾಗಿರುವದೂ ಅಲ್ಲದೆ, ಐಹಿಕಾಮುಷ್ಮಿಕ ಸುಖಗಳಿಗೆ ಹಿತವಾದುದು ಯಾವುದೆಂದು ತಿಳಿಯದೇ ಇರುವದರಿಂದ ಮನಸ್ಸಿನಿಂದಲೂ ಕೂಡ ಕುರುಡನೆಂದು ಹೇಳಿಸಿಕೊಳ್ಳುವ ವಿವೇಕ ಜ್ಞಾನಶೂನ್ಯನಾದ ಧೃತರಾಷ್ಟ್ರನು, ಎಂದರೆ ಬಾಹ್ಯ ಚಕ್ಷುಸ್ಸು ಮತ್ತು ಜ್ಞಾನಚಕ್ಷುಸ್ಸು ಎರಡೂ ಇಲ್ಲದಿರುವ ಧೃತರಾಷ್ಟ್ರನು, ಆದುದರಿಂದಲೇ, **ಸುಯೋಧನ ವಿಜಯ ಬುಭುತ್ಸಯಾ**-ದುರ್ಯೋಧನನಿಗೆ ಜಯವಾದೀತೇ ಎಂಬ ಆಶೆಯಿಂದ, ಇಲ್ಲಿ ಧೃತರಾಷ್ಟ್ರನಿಗೆ ತನ್ನ ಮಗನು ಚೆನ್ನಾಗಿ ಯುದ್ಧಮಾಡುವವನು, ಶೂರನು ಆದುದರಿಂದ ಜಯವಾದರೂ ಆಗಬಹುದು ಎಂಬ ಆಶೆಯು ಬಾಧಿಸುತ್ತಾ ಇತ್ತೆಂಬುದನ್ನು ಸೂಚಿಸುವದಕ್ಕಾಗಿ ಇಲ್ಲಿ ದುರ್ಯೋಧನ ಎಂದು ಹೇಳದೆ **ಸುಯೋಧನ** ವೆಂಬ ಶಬ್ದಪ್ರಯೋಗವು, **ಸಂಜಯಂ ಪಪ್ರಚ್ಛ** - ಸಂಜಯನನ್ನು ಕೇಳಿದನು. ಅದೇನು ಸಂಜಯನನ್ನು ಕೇಳಿದುದು ಎಂದರೆ, ಆತನು ಪರಮಾತ್ಮನನ್ನು ಚನ್ನಾಗಿ ತಿಳಿದವನು, ಆತನಿಗೆ ಜ್ಞಾನ, ಭಕ್ತಿ ವೈರಾಗ್ಯಗಳುಂಟೆಂದೂ, ಆ ಕಾರಣದಿಂದ ಎಲ್ಲವನ್ನೂ ಯಥಾರ್ಥವಾಗಿ ಸಾಕ್ಷಾತ್ಕರಿಸುವ ಶಕ್ತಿಯುಂಟೆಂದೂ ಮತ್ತು ಯಥಾರ್ಥವಾಗಿ ಗ್ರಹಿಸಿದರೂ, ಅದನ್ನೇ ಯಥಾರ್ಥವಾಗಿ ತಿಳಿಸುವ ಧೈರ್ಯಶಕ್ತಿಗಳು ಇತರರಿಗಿಲ್ಲದಿರುವದರಿಂದ, ಸಂಜಯನು ಯಥಾರ್ಥವಾದುದನ್ನು ಧೈರ್ಯವಾಗಿ ತಿಳಿಸುವನೆಂಬ ನಂಬಿಕೆಯಿಂದ ಸಂಜಯನನ್ನು ಕುರಿತು ಪ್ರಶ್ನೆ ಮಾಡಿದನು ಎಂಬ ತಾತ್ಪರ್ಯವು.

ಧೃತರಾಷ್ಟ್ರನು ಸಂಜಯನನ್ನು ಕುರಿತು ಕೇಳುತ್ತಾನೇನೆಂದರೆ, ಹೇ **ಸಂಜಯ,** ಓ ಸಂಜಯನೇ, **ಧರ್ಮಕ್ಷೇತ್ರೇ** - ಯುದ್ಧವೇ ಒಂದು ಯಜ್ಞರೂಪವಾದ ಧರ್ಮವು, ಆದುದರಿಂದ, ಅದಕ್ಕೆ ಸ್ಥಾನಭೂತವಾದ, ಅಥವಾ ಅನೇಕ ಯಜ್ಞಗಳು ನಡೆದ, **ಕುರುಕ್ಷೇತ್ರೇ** - ಎರಡು ಪಂಗಡದವರು ಕುರುವಂಶದವರಾಗಿ ಆದುದರಿಂದ ಬಹುಮಾನಾರ್ಹವಾದ ಈ ಯುದ್ಧರಂಗವಲ್ಲಿ, ಅಥವಾ ಕುರುರಾಜನಿಂದ ಪುಣ್ಯಕ್ಷೇತ್ರವಾಗಿ ಮಾಡಲ್ಪಟ್ಟ, ಯುದ್ಧರಂಗದಲ್ಲಿ, **ಯುಯುತ್ಸವಃ** - ಯುದ್ಧ ಮಾಡಬೇಕೆಂಬ ಅಪೇಕ್ಷೆಯುಳ್ಳವರಾಗಿ **ಸಮವೇತಾಃ** - ಬಂದು ಸೇರಿರುವ, **ಮಾಮಕಾಃ** - ನಮ್ಮ ಪಂಗಡದವರಾದ ದುರ್ಯೋಧನಾದಿಗಳೂ ಅವರ ಸೈನ್ಯವೂ **ಪಾಂಡವಾಶ್ಚೈವ** ಪಾಂಡವರೂ ಸಹ, **ಕಿಂ ಅಕುರ್ವತ** - ಏನನ್ನು ಮಾಡಿದರು ?

ಧೃತರಾಷ್ಟ್ರನಿಗೆ ಯುದ್ಧಾರಂಭವು ಇಷ್ಟವಲ್ಲವು. ಯುದ್ಧ ನಡೆಯುವ ಪ್ರದೇಶವು ಮಹಾ ಮಹಿಮೆಯುಳ್ಳದ್ದಾಗಿ ಮನುವಿನಿಂದ ಧರ್ಮಕ್ಷೇತ್ರವೆಂದು ಕೊಂಡಾಡಲ್ಪಟ್ಟಿರುತ್ತದೆ. ಅದೂ ಅಲ್ಲದೆ ತಮ್ಮ ವಂಶದಲ್ಲಿ ಪೂರ್ವದಲ್ಲಿ ಮಹಾ ಪ್ರಖ್ಯಾತಿ ಹೊಂದಿದ ಕುರುಮಹಾರಾಯನು ಆ ಪ್ರದೇಶಕ್ಕೆ, ತನ್ನ ತಪೋಬಲದಿಂದ ವರವನ್ನು ಹೊಂದಿ, ಮಹಾತ್ಮ್ಯೆಯನ್ನು ಸಂಪಾದಿಸಿರುತ್ತಾನೆ. ಈ ಕುರುಕ್ಷೇತ್ರ ಮಾಹಾತ್ಮ್ಯೆಯನ್ನು ಪುಲಸ್ತ್ಯರು ಯುಧಿಷ್ಠಿರನಿಗೆ ಉಪದೇಶಿಸಿರುತ್ತಾರೆ. ಹೇಗೆಂದರೆ—

ಪ್ರಥಮೋಧ್ಯಾಯವು (ಶ್ಲೋಕ ೧)

ಗೀ—ಧೃತರಾಷ್ಟ್ರ ಉವಾಚ,

" ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಞ್ಜಯ? " ॥ ೧ ॥

---

"ಪಾಪೇಭ್ಯೋ ವಿಪ್ರಮುಚ್ಯಂತೇ ತದ್ಗತಾಃ ಸರ್ವಜನ್ತವಃ ।
ಪಾಂಸವೋಪಿ ಕುರುಕ್ಷೇತ್ರೇ ವಾಯುನಾ ಸಮುದೀರಿತಾಃ
ಅಪಿ ದುಷ್ಕೃತಕರ್ಮಾಣಂ ನಯನ್ತಿ ಪರಮಾಂಗತಿಮ್ ।
ಯೇ ವಸನ್ತಿ ಕುರುಕ್ಷೇತ್ರೇ ತೇವಸನ್ತಿ ತ್ರಿವಿಷ್ಟಪೇ ॥ (ಭಾರ. ವನ. ೮೧.)

ಅಲ್ಲಿಗೆ ಹೋದ ಪಶುಪಕ್ಷಿಗಳು ಮೊದಲುಗೊಂಡು ಸಮಸ್ತರೂ ಪಾಪಗಳಿಂದ ಬಿಡುಗಡೆಯನ್ನು ಹೊಂದುವರೆಂದೂ, ವಾಯುವಿನಿಂದ ಎಬ್ಬಿಸಲ್ಪಟ್ಟ ಧೂಳು ಮಹಾ ಪಾಪಿಯನ್ನೂ ಕೂಡ ಸದ್ಗತಿಯನ್ನು ಹೊಂದಿಸುತ್ತದೆ; ಕುರುಕ್ಷೇತ್ರವಾಸವು ಸ್ವರ್ಗವಾಸವೇ ಎಂದೂ ಶ್ಲಾಘಿಸಲ್ಪಟ್ಟಿರುತ್ತದೆ. ಇಂತಹ ಪುಣ್ಯಕ್ಷೇತ್ರವು ಈಗ ಯುದ್ಧರಂಗವಾಗಿ ಪರಿಣಮಿಸಿರುವದರಿಂದ ಆ ಪುಣ್ಯಕ್ಷೇತ್ರದ ಮಹಿಮೆಯಿಂದಲಾದರೂ ಯುದ್ಧ ನಡೆಯದೇ ಇದ್ದರೆ ತನ್ನಮಕ್ಕಳಿಗೆ ಕ್ಷೇಮ ಉಂಟಾದೀತೆಂಬ ಆಶಯದಿಂದ **ಕಿಮಕುರ್ವತ** - ಏನು ಮಾಡಿದರು ಎಂದು ಪ್ರಶ್ನಿಸಿದನೇ ವಿನಾ ಹೇಗೆ ಯುದ್ಧ ನಡೆಯಿತು ಎಂದು ಕೇಳಲಿಲ್ಲವು. **ಮಾಮಕಾಃ ಪಾಂಡವಾಶ್ಚೈವ** - ಎಂದು ಹೇಳಿರುವದರಿಂದ ಈಗಲೂ ಕೂಡ ಜ್ಞಾನಾಂಧನಾದ ಧೃತರಾಷ್ಟ್ರನಿಗೆ ತನ್ನವರ ವಿಷಯದಲ್ಲಿ ಮಮಕಾರವು ಇನ್ನೂ ತಪ್ಪಲಿಲ್ಲವಾಗಿ, ಮಾಮಕಾಃ ಎಂಬ ಪ್ರಯೋಗವು. ತನ್ನಿಂದ ಪೋಷಿಸಲ್ಪಟ್ಟವರಾದುದರಿಂದ ಪುತ್ರಭಾವನೆ ಇರಬೇಕಾದವರನ್ನು ಯಾರೋ ಪರಪಕ್ಷದವರ ಹಾಗೆ **ಪಾಂಡವಾಶ್ಚೈವ** ಎಂದು ಹೇಳಿರುತ್ತಾನೆ. ಇದರಿಂದ ಎಷ್ಟು ಶಾಸ್ತ್ರಜ್ಞಾನೋಪದೇಶವಿದ್ದರೂ ಅಹಂಕಾರ ಮಮಕಾರಗಳನ್ನು ತೊಲಗಿಸಿ ವಿವೇಕವನ್ನು ಹೊಂದುವದು ತುಂಬಾ ಕಷ್ಟವೆಂಬುದುತೋರಿಬರುತ್ತದೆ. ಈ ದೇಹವೂ ಸಹ ಪರಮಾತ್ಮನಿಗೆ ಆಯತನವಾಗಿ ದಿವ್ಯ ಕ್ಷೇತ್ರವು. ಅಲ್ಲಿ ಅರಿಷಡ್ವರ್ಗಗಳಿಗೂ ವಿವೇಕಾದಿಗಳಿಗೂ ಪ್ರಬಲ ಯುದ್ಧವು. ಮಮಕಾರವನ್ನು ಜಯಿಸುವದು ಸುಲಭ ಸಾಧ್ಯವಲ್ಲವು. ಪಾಂಡವರಿಗೆ ಇದ್ದ ಹಾಗೆ ಶ್ರೀ ಕೃಷ್ಣನ ಕೃಪೆ ಇಲ್ಲದೆ ಸಾಧ್ಯವಿಲ್ಲವೆಂಬುದೂ, **ಯಮೈವೇಷ ವೃಣುತೇ** ಎಂಬ ಶ್ರುತ್ಯರ್ಥಾನುಸಾರ ತಾನೇ ಪಾಂಡವರಿಗೆ ಸಹಾಯಮಾಡಿದ ಹಾಗೆ, ಸತ್ವವೃದ್ಧಿಯಿಂದ ವಿವೇಕಬುದ್ಧಿಯೋಗಾದಿಗಳನ್ನು ಕೊಟ್ಟು ಅವುಗಳು ಅರಿಷಡ್ವರ್ಗಗಳನ್ನು ಜಯಿಸುವ ಹಾಗೆ ತಾನೇ ಮಾಡುವನೆಂಬಭಿಪ್ರಾಯವು, ಶಾಸ್ತ್ರಾರ್ಥವಾಗಿ ಈ ಮಙ್ಗಳ ಶ್ಲೋಕದಲ್ಲಿ ಸೂಚಿಸಲ್ಪಟ್ಟಿರುತ್ತದೆ. ಈ ವಿಷಯದಲ್ಲಿ ಯಾರಿಗೆ ಜಯವೆಂಬುದನ್ನು ಕುರಿತು ಯಾರನ್ನು ಕೇಳಬೇಕು ಎಂದರೆ, **ಸಂಜಯ** - ಎಂದರೆ ಅರಿಷಡ್ವರ್ಗಗಳನ್ನು ಚನ್ನಾಗಿ ಜಯಿಸಿದ ಗುರುರೂಪದಲ್ಲಿರುವವನನ್ನು ಕೇಳತಕ್ಕದ್ದೆಂಬ ಭಾವವು. ಇಷ್ಟೆಲ್ಲಾ ಅರ್ಥಗರ್ಭಿತವಾಗಿದೆಯೇ ಈ ಶ್ಲೋಕದಲ್ಲಿ ಎಂಬ ಸಂದೇಹವು ಕೆಲವರಿಗೆ ಉಂಟಾಗಬಹುದು. ಸಾಧಾರಣವಾಗಿ ಮಙ್ಗಳ ಶ್ಲೋಕಗಳಲ್ಲಿ ವಿಶೇಷಾರ್ಥಗಳನ್ನು ಗರ್ಭೀಕರಿಸಿ ಮಹಾ ಕವಿಗಳು ರಚಿಸುವ ಪದ್ಧತಿಯುಂಟು. ಈ ಸಂದರ್ಭದಲ್ಲಿ ಕವಿಯು ಮಹಾ ಬ್ರಹ್ಮವಿತ್ತಾಗಿ, ಮಹರ್ಷಿಗಳಲ್ಲಿ ಅಗ್ರೇಸರರಾಗಿರುವದರಿಂದ ವಿಶೇಷಾರ್ಥಗಳನ್ನೂ ಈ ಶ್ಲೋಕವಲ್ಲಿ ಅನುಗ್ರಹಿಸಿರುತ್ತಾರೆಂದು ಊಹಿಸಬಹುದು. **ಧರ್ಮಕ್ಷೇತ್ರೇ ಕುರುಕ್ಷೇತ್ರೇ** ಎಂಬ ಪ್ರಯೋಗದಿಂದ ಧರ್ಮಾಚರಣೆಯನ್ನು

**ಮೂ. ಸಂಜಯ ಉವಾಚ:—**

**"ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥** ೨

---

ಮಾಡಲು ಕ್ಷೇತ್ರಶಬ್ದ ವಾಚ್ಯವಾದ ಮನುಷ್ಯನ ಶರೀರವು ಬೋಧಿಸಲ್ಪಟ್ಟಿರುತ್ತದೆ. ದೇಹವನ್ನು ಧರಿಸಿರುವವನಾಗಿ ಅಲ್ಲಿ ರಾಜನಾಗಿ ಸರ್ವ ವಿಧ ಭೋಗಗಳನ್ನು ಅನುಭವಿಸುವ ಕ್ಷೇತ್ರಜ್ಞನು ಹೇಳಲ್ಪಟ್ಟನೆಂಬುದು ಧೃತರಾಷ್ಟ್ರ ಶಬ್ದದಿಂದ ತೋರಿಬರುತ್ತದೆ. ಈ ದೇಹದಲ್ಲಿ ಅಹಂಕಾರ ಮಮಕಾರಗಳಿಗೆ ವಶನಾಗಿ ಅಜ್ಞಾನದಿಂದ ಅಂಧನಾಗಿ ಇಂತಹ ಅನುಭವವನ್ನು ಹೊಂದುವ ನೆಂಬುದು **ಮಾಮಕಾಃ** ಎಂಬ ಪ್ರಯೋಗದಿಂದಲೂ ತೋರಿಬರುತ್ತದೆ; ಈ ದೇಹದಲ್ಲಿ ಇಂತಹ ಅಹಂಕಾರ ಮಮಕಾರಗಳಿಗೂ ವಿವೇಕಕ್ಕೂ ಪರಸ್ಪರ ಯುದ್ಧವೆಂಬುದು **ಮಾಮಕಾಃ ಪಾಂಡವಾಶ್ಚೈವ** ಎಂಬ ಪ್ರಯೋಗದಿಂದ ಬೋಧಿತವು. ಇವೆರಡರಲ್ಲಿ ಕೊನೆಗೆ ವಿವೇಕಾದಿಗಳಿಗೆ ಜಯವೆಂಬುದು, ಈ ಅಹಂಕಾರ ಮಮಕಾರಗಳನ್ನು ಸಮ್ಯಕ್ ಜಯಿಸಿರುವ, ಸಂಜಯನಾದ ಸದ್ಗುರುವಿನಿಂದಲೇ ತಿಳಿಯತಕ್ಕದ್ದೆಂಬುದು ವ್ಯಕ್ತಪಡುತ್ತದೆ. ಸದ್ಗುರು ಕಟಾಕ್ಷ ಮೂಲಕ ಲಬ್ಧವಾದ ಸುಜ್ಞಾನ ವಿವೇಕಗಳ ಮೂಲಕ ಅಂತಹ ಜಯವು ಸರ್ವೇಶ್ವರನ ಕಟಾಕ್ಷವಿರುವವರಿಗೆ ಪಾಂಡವರ ಹಾಗೆ ಉಂಟಾಗುತ್ತದೆಯೇ ವಿನಾ, ಹಾಗೆ ಸರ್ವೇಶ್ವರನ ಕೃಪೆಯನ್ನು ಸಂಪಾದಿಸದೇ ಇರುವ ದೇಹಾಭಿಮಾನಿಗಳಾದ ಧೃತರಾಷ್ಟ್ರಾದಿಗಳಿಗಿಲ್ಲವೆಂಬುದು ಸಂಜಯನ ಉತ್ತರದ ನಿಗಮನವಾಕ್ಯದಲ್ಲಿ ತೋರಿಬರುವ **"ಯತ್ರಯೋಗೇಶ್ವರಃಕೃಷ್ಣಃ"** ಎಂಬುದರಿಂದ ಸುವ್ಯಕ್ತವು. ಸರ್ವೇಶ್ವರ ಕೃಪೆಯನ್ನು ಉಪಾಯಗಳಾದ ಭಕ್ತಿಯೋಗಾದಿಗಳಿಂದ ಸಂಪಾದಿಸಿಕೊಳ್ಳುವವನಿಗೆ ಜಯವೇ ವಿನಾ, ಹಾಗೆ ಸಂಪಾದಿಸದೇ ಇರುವವನಿಗೆ ಎಂದಿಗೂ ಇಲ್ಲವೆಂಬುದು ಸ್ಫುಟವಾಗಿ ತೋರಿ ಬರುತ್ತದೆ.

ಈ ಅಭಿಪ್ರಾಯಗಳನ್ನೇ ತುಂಬಾ ವಿಸ್ತರಿಸಿ ಪುರಂಜನೋಪಾಖ್ಯಾನವೆಂಬ ಹೆಸರಿನಿಂದ ಈ ವ್ಯಾಸ ಮಹರ್ಷಿಯೇ ಶ್ರೀಮದ್ಭಾಗವತದಲ್ಲಿ ಉಪಪಾದಿಸಿರುತ್ತಾರೆ. ಶ್ರೀ ನಿಗಮಾಂತ ದೇಶಿಕ ರವರು **"ಸಙ್ಕಲ್ಪಸೂರ್ಯೋದಯ"** ವೆಂಬ ಉತ್ಕೃಷ್ಟ ಗ್ರಂಥದಲ್ಲಿ ಈ ವಿವೇಕನಿಗೂ ಕಾಮ ಅಹಂಕಾರ ಮಮಕಾರಗಳಿಗೂ ಪರಸ್ಪರ ಕಲಹವನ್ನು ವರ್ಣಿಸಿ, ವಿವೇಕನಿಗೆ ಉಂಟಾದ ಜಯ ವನ್ನೂ ಪ್ರಕಟಿಸಿರುತ್ತಾರೆ.

ಇದಕ್ಕೆ ಸಂಜಯರು ಉತ್ತರವನ್ನು ೧೮ನೆಯ ಅಧ್ಯಾಯದ ಕೊನೆಯಲ್ಲಿರುವ **"ಯತ್ರ ಯೋಗೇಶ್ವರಃ ಕೃಷ್ಣೋ ಯತ್ರಪಾರ್ಥೋ ಧನುರ್ಧರಃ"** "ಯಾವ ಕಡೆಯಲ್ಲಿ ಶ್ರೀ ಕೃಷ್ಣನಿ ದ್ದಾನೋ ಮತ್ತು ಯಾವ ಕಡೆಯಲ್ಲಿ ಅರ್ಜುನನು ಧನುರ್ಧಾರಿಯಾಗಿದ್ದಾನೋ, ಆ ಕಡೆಗೇನೆ ವಿಜ ಯವು" ಎಂದು ಹೇಳಿರುತ್ತಾರೆ. ಅವರೂ ಆ ವಾಕ್ಯದಲ್ಲಿ ಧೃತರಾಷ್ಟ್ರನಿಗೆ ನಂಬಿಕೆಯುಂಟಾಗುವದ ಕ್ಕಾಗಿ ಮಿಕ್ಕ ನಡೆದ ಸಂಗತಿಗಳನ್ನೆಲ್ಲಾ ತಿಳಿಸಿ ಕಡೆಗೆ ಸಾಕ್ಷಾತ್ತಾದ ಉತ್ತರವನ್ನು ತಿಳಿಸುತ್ತಾರೆ.

**ಮೂಲಕ್ಕೆ ಅರ್ಥವು**—ತದಾ-ಆ ಎರಡು ಸೇನೆಗಳ ವ್ಯೂಹ ರಚನೆಯಾಗಿರುವ ಕಾಲದಲ್ಲಿ, **ರಾಜಾ**-ಅರಸಾದ, **ದುರ್ಯೋಧನಃ**-ನಿನ್ನ ಮಗನಾದ ದುರ್ಯೋಧನನು, **ಪಾಂಡವಾನೀಕಂ ವ್ಯೂಢಂ ತು** - ಪಾಂಡವರ ಸೈನ್ಯದ ವ್ಯೂಹರಚನೆಯನ್ನಾದರೋ, **ದೃಷ್ಟ್ವಾ** - ಕಂಡವನಾಗಿ. ಇಲ್ಲಿ **ತು** - ಶಬ್ದವು ತನ್ನ ಸೈನ್ಯಕ್ಕೂ ಪಾಂಡವ ಸೈನ್ಯಕ್ಕೂ ಇರುವ ವೈಲಕ್ಷಣ್ಯವನ್ನು ಸೂಚಿಸುತ್ತದೆ. ಪಾಂಡವ ಸೇನೆಯೊಡನೆ ಹೋಲಿಸಿದರೆ, ತನ್ನದು ಸ್ವಲ್ಪ ದುರ್ಬಲವೆಂದು ತೋರಿ ಅದರಿಂದ ಅಧೈರ್ಯವನ್ನು

**ಮೂ. ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯಮಹತೀಂ ಚಮೂಮ್ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩**

---

ಹೊಂದಿದನೆಂಬ ಭಾವವು ವ್ಯಕ್ತಪಡುತ್ತದೆ. ಆದುದರಿಂದಲೇ, **ಆಚಾರ್ಯಮುಪಸಂಗ್ರಮ್ಯ** - ಆಚಾರ್ಯರಾದ ದ್ರೋಣಾಚಾರ್ಯರನ್ನು ಮಂತ್ರಾಲೋಚನೆಗಾಗಿ ಹೊಂದಿ, **ವಚನಮಬ್ರವೀತ್**-ಅವರನ್ನು ಕುರಿತು ಹೇಳಿದನೇನೆಂದರೆ:—

**ಹೇ ಆಚಾರ್ಯ** - ಆಚರತೀತಿ ಆಚಾರ್ಯಃ ಎಂದು ಹೇಳಿರುವ ಹಾಗೆ, ಉಪದೇಶಮಾತ್ರವೇ ಅಲ್ಲದೆ ಆಚಾರವೂ ಇರುವ ಪರಮ ಗುರುಗಳೇ, **ತವ** - ನಿಮ್ಮ, **ಶಿಷ್ಯೇಣ** - ಶಿಷ್ಯನಾಗಿ ಧನುರ್ವಿದ್ಯೆಯನ್ನು ನಿಮ್ಮಿಂದ ಅಧಿಕರಿಸಿದ, **ಧೀಮತಾ** - ಮಹಾಬುದ್ಧಿವಂತನಾದ, **ದ್ರುಪದಪುತ್ರೇಣ** - ದ್ರುಪದ ಮಹಾರಾಯನ ಮಗನಾದ ಸೇನಾನಾಯಕನಾದ ಧೃಷ್ಟದ್ಯುಮ್ನನಿಂದ, **ವ್ಯೂಢಾಂ** - ಸೇನಾವ್ಯೂಹವಾಗಿ ರಚಿಸಲ್ಪಟ್ಟ, **ಪಾಂಡುಪುತ್ರಾಣಾಂ** - ಪಾಂಡುವಿನ ಮಕ್ಕಳಾದ ಪಂಚಪಾಂಡವರ, **ಏತಾಂ ಚಮೂಂ ಪಶ್ಯ** - ಈ ಸೇನೆಯನ್ನು ದಯಮಾಡಿ ಅವಲೋಕಿಸಬೇಕು. ವ್ಯೂಹ ರಚನೆಯನ್ನು ಮಹಾಬುದ್ಧಿವಂತನಾದ ಧೃಷ್ಟದ್ಯುಮ್ನನು ತುಂಬಾ ಚಾತುರ್ಯದಿಂದ ಮಾಡಿದುದರಿಂದ, ತಮ್ಮ ಅಕ್ಷೌಹಿಣಿಯು ಹನ್ನೊಂದಾಗಿ, ಪಾಂಡವರ ಸೈನ್ಯವು ಏಳೇ ಅಕ್ಷೌಹಿಣಿಯಾದರೂ ದುರ್ಯೋಧನನ ಮನಸ್ಸಿಗೆ ತುಂಬಾ ಅಧೈರ್ಯವನ್ನುಂಟುಮಾಡಿತೆಂಬುದು ವ್ಯಂಜಿತವು. ॥ ೩ ॥

ಹೀಗೆ ಸೇನೆಯನ್ನು ನೋಡಿದ ಕೂಡಲೇ ಭಯೋತ್ಪಾದನೆಯುಂಟಾಯಿತೆಂದು ಸೂಚಿಸುವದಕ್ಕಾಗಿಯೇ **ದೃಷ್ಟ್ವಾ** ಎಂಬ ಪದವು ಮೊದಲು ಹೇಳಿ, ಅನಂತರ **ಪಾಂಡವಾನೀಕಂ** ಎಂದು ಇದೆ. **ಆಚಾರ್ಯ ಮುಪಸಂಗಮ್ಯ** - ಎಂಬ ಪ್ರಯೋಗವಿರುವದರಿಂದ ಆಚಾರ್ಯರನ್ನು ಕಂಡು ನಮಸ್ಕರಿಸಿ ವಿಜ್ಞಾಪಿಸಿಕೊಳ್ಳಲಿಲ್ಲವೆಂಬುದೂ, ತಾನು ರಾಜಾ ಎಂಬ ಹೆಮ್ಮೆಯಿಂದ ಹಾಗೆ ಮಾಡಿದನೆಂದೂ, ಹೀಗೆ ದುರ್ಯೋಧನನು ದುಷ್ಟ ಸ್ವಭಾವವುಳ್ಳವನೆಂಬುದೂ, ವ್ಯಕ್ತವು. ಈ ಶತ್ರು ಸೇನೆಯನ್ನು ಅವಲೋಕಿಸಿದಿರಾ ಎಂದು ವಿಜ್ಞಾಪಿಸಿಕೊಳ್ಳದೆ, **ಪಶ್ಯೈತಾಂ** ಎಂದು ಹೇಳಿದುದರಿಂದ ಈತನ ಔದ್ಧತ್ಯವು ತೋರಿಬರುತ್ತದೆ. ಮುಂದೆಯೂ **ತಾನ್ನಿಬೋಧ**-ಅವರುಗಳನ್ನು ನೀವು ಗಮನಿಸತಕ್ಕದ್ದು ಎಂದು ಹೇಳಿರುವದರಿಂದಲೂ, ದುರ್ಯೋಧನನು ದುರಹಂಕಾರಿ ಎಂಬುದು ಸ್ಪಷ್ಟವು. ಆದರೆ ಭೀಷ್ಮಕೃಪಕರ್ಣಾದಿಗಳಿರುವಾಗಲೂ, ದ್ರೋಣರಲ್ಲಿಗೆ ಬಂದು ತನಗುಂಟಾದ ಭಯವನ್ನು ಹೇಳಿಕೊಂಡು ಮಂತ್ರಾಲೋಚಿಸಿದನು ಎಂದರೆ ಅವರುಗಳಲ್ಲಿ ಆತನಿಗೆ ಪೂರ್ಣ ನಂಬಿಕೆ ಇಲ್ಲವೆಂಬುದು ಪೂರ್ವಚರಿತ್ರೆಗಳಿಂದ ತೋರಿಬರುತ್ತದೆ. ಭೀಷ್ಮರು ಮಹಾ ಧರ್ಮಿಷ್ಠರಾಗಿ ಮಹಾ ಭಾಗವತೋತ್ತಮರಾದುದರಿಂದ, ತಾನು ಮಾಡುತ್ತಿರುವ ಅಧರ್ಮಗಳಿಂದ ಅವರಿಗೆ ತಾನು ತುಂಬಾ ಪ್ರೀತಿಪಾತ್ರನಲ್ಲವೆಂದು ತಿಳಿದು ಅವರು ಪಾಂಡವಪಕ್ಷಪಾತಿಯೇ ಎಂಬ ಅಪನಂಬಿಕೆ ಆತನಲ್ಲಿತ್ತು. ಕರ್ಣನು ಭೀಷ್ಮರಿರುವವರೆಗೂ ಶಸ್ತ್ರವನ್ನೆತ್ತುವದಿಲ್ಲವೆಂಬ ಪ್ರತಿಜ್ಞೆ ಮಾಡಿರುವದರಿಂದ ಆತನು ಅನುಪಯುಕ್ತನು. ಆದುದರಿಂದ ದ್ರೋಣರಲ್ಲಿ ಮಂತ್ರಾಲೋಚನೆ ಮಾಡಿದುದಾಗಿ ತೋರಿಬರುತ್ತದೆ. **ತವಶಿಷ್ಯೇಣ ಧೀಮತಾ** ಎಂಬುದರಿಂದ ದ್ರೋಣರನ್ನು ಕುರಿತು ಧಿಕ್ಕರಿಸುವ ಹಾಗೆ ತೋರುತ್ತದೆ. ಶತ್ರುಪಕ್ಷದವರಿಗೆ ಶಸ್ತ್ರಾಭ್ಯಾಸವನ್ನು ಕಲಿಸಬಹುದೋ ? ಈಗ ನೋಡಿ, ನಿಮ್ಮ ಶಿಷ್ಯನೇ ನಿಮ್ಮನ್ನು ಕೊಲ್ಲಲು ಸೇನಾಧಿಪತಿಯಾಗಿ ಬಂದಿದ್ದಾನೆ ಎಂದು ಹೇಳಿ ಮೂದಲಿಸಿದಂತಾಯಿತು. ನಿಮ್ಮಶಿಷ್ಯರಾದುದರಿಂದಲೇ ಅವನು ಈಗ ಧೀಮಾನ್ ಆಗಿರುವದು ಎಂಬುದೂ ಸೂಚಿತವು.

ಮೂ. ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನ ಸಮಾಯುಧಿ ।
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪
ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ ।
ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಙ್ಗವಃ ॥ ೫
ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬

ಜಯಾಪಜಯಗಳು ಹೇಗೆ ಎಂದು ಪರಿಶೀಲನೆ ಮಾಡುವದಕ್ಕಾಗಿ ಶತ್ರುಸೈನ್ಯದಲ್ಲಿ ಮಹಾ ವೀರರೆಲ್ಲಾ ಯಾರು? ತನ್ನ ಸೈನ್ಯದಲ್ಲಿ ಯಾರು? ಯಾರ ಬಲವು ಬಲವತ್ತರವಾದುದು? ಎಂದು ತಮ್ಮ 'ಆಚಾರ್ಯರಭಿಪ್ರಾಯವನ್ನು ತಿಳಿಯಬೇಕೆಂಬ ಆಶಯದಿಂದ ಉಭಯ ಸೈನ್ಯ ಮಹಾ ರಥರು ಯಾರು ಯಾರು ಎಂದು ಯೋಚಿಸಿ, ಅವರುಗಳ ಹೆಸರುಗಳನ್ನೆಲ್ಲಾ ದುರ್ಯೋಧನನು ಹೇಳುತ್ತಾನೆ:—**ಅತ್ರ** - ಈ ಮಹತ್ತಾದ ಸೇನೆಯಲ್ಲಿ, **ಶೂರಾಃ** - ಸೇನೆಯಲ್ಲಿ ನುಗ್ಗಿ ಹಿಂತಿರುಗದೆ, ಧೈರ್ಯದಿಂದ ಯುದ್ಧ ಮಾಡುವ ಪರಾಕ್ರಮವುಳ್ಳ, **ಮಹೇಷ್ವಾಸಾಃ** - ದೊಡ್ಡ ದೊಡ್ಡ ಧನುಸ್ಸು ಗಳನ್ನು ಧರಿಸಿರುವ, **ಯುಧಿಭೀಮಾರ್ಜುನ ಸಮಾಃ** - ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನ ರಾದವರು ಯಾರೆಂದರೆ—**ಯುಯುಧಾನಃ** - ಸಾತ್ಯಕಿಯು, **ವಿರಾಟಶ್ಚ** - ವಿರಾಟರಾಯನೂ, **ಮಹಾರಥಃ** - "**ಆತ್ಮಾನಂ ಸಾರಥಿಂಚಾಶ್ವಾನ್ ರಕ್ಷನ್ ಯುಧ್ಯೇತ ಯೋ ನರಃ । ಸಮಹಾರಥ ಸಂಜ್ಞಸ್ಸ್ಯಾತ್**" ಎಂದು ಹೇಳಿರುವಹಾಗೆ ತನ್ನನ್ನೂ, ಸಾರಥಿಯನ್ನೂ, ರಥದ ಕುದುರೆಗಳನ್ನೂ ರಕ್ಷಿಸಿಕೊಂಡು ಯಾವನು ಯುದ್ಧಮಾಡುವನೋ ಅವನಿಗೆ ಮಹಾರಥನೆಂಬ ಹೆಸರು, ಅಂತವನು ದ್ರುಪದನು ಎಂಬರ್ಥವು. ಆದುದರಿಂದ ಅನೇಕ ಧನುರ್ಧಾರಿಗಳೊಂದಿಗೆ ಯುದ್ಧಮಾಡಲು ಸಮ ರ್ಥನಾದ, **ದ್ರುಪದಶ್ಚ** -ದ್ರುಪದರಾಯನೂ, ಇಲ್ಲಿ ಮಹಾರಥಃ ಎಂದು ಏಕವಚನವಿದ್ದರೂ,ಸಾತ್ಯಕಿ, ವಿರಾಟರಿಗೂ ಇದು ಅನ್ವಯಿಸುತ್ತದೆ. ಏಕೆಂದರೆ ಮುಂದೆ ೬ನೆಯ ಶ್ಲೋಕದಲ್ಲಿ **ಸರ್ವ ಏವ ಮಹಾರಥಾಃ** ಎಂದಿರುವದರಿಂದ ಇವರೆಲ್ಲರೂ ಮಹಾರಥರೇ ಎಂಬಭಿಪ್ರಾಯವು. ॥ ೪ ॥

ಧೃಷ್ಟಕೇತುವೂ, ಚೇಕಿತಾನನೂ, **ವೀರ್ಯವಾನ್** - ಪರಾಕ್ರಮಶಾಲಿಯಾದ, ಕಾಶೀರಾಜ ನೂ, ಪುರುಜಿತ್ತೂ, ಕುಂತೀಭೋಜನೂ, ನರಶ್ರೇಷ್ಠನಾದ ಶೈಬ್ಯನೆಂಬ ರಾಜನೂ, **ವಿಕ್ರಾಂತಃ** - ಶೂರನಾದ ಯುಧಾಮನ್ಯುವೂ, ಪರಾಕ್ರಮಶಾಲಿಯಾದ ಉತ್ತಮೌಜಸ್ಸೆಂಬ ರಾಜನೂ, **ಸೌಭದ್ರಃ** - ಕೃಷ್ಣನ ತಂಗಿಯಾದ ಸುಭದ್ರೆಯ ಮಗನಾದ ಅಭಿಮನ್ಯುವೂ, **ದ್ರೌಪದೇಯಾಶ್ಚ** - ದ್ರೌಪದಿಯಿಂದ ಪಂಚಪಾಂಡವರಿಗೆ ಮಕ್ಕಳಾಗಿ ಜನಿಸಿದ ಪ್ರತಿವಿಂಧ್ಯ ಸುತಸೋಮ, ಶ್ರುತ ವರ್ಮ, ಶ್ರುತವೀರ್ಯ ಶತಾನೀಕರೂ, **ಸರ್ವೇ ಏವ** - ಇವರೆಲ್ಲರೂ, **ಮಹಾರಥಾಃ** - ಮಹಾ ರಥಿ ಕರು. ಇವರೆಲ್ಲರೂ ಪಾಂಡವರ ಕಡೆಯ ಮಹಾ ಶೂರರು ಎಂಬ ಭಾವವು. ಇವರೆಲ್ಲರೂ ಭೀಮಾರ್ಜುನ ಸಮರೆಂದು ಹೇಳಿರುವದರಿಂದ, ಎಲ್ಲರಿಗಿಂತಲೂ ಭೀಮಾರ್ಜುನರೇ ಮಹಾ ಪರಾ ಕ್ರಮಿಗಳೂ, ಅವರುಗಳನ್ನು ಜಯಿಸುವದು ಸುಲಭವಲ್ಲವೆಂದೂ, ಹೇಳಿದಂತಾಯಿತು. ಇದರಿಂದ ದುರ್ಯೋಧನನಿಗೆ ಅಧೈರ್ಯ ಉಂಟಾಯಿತೆಂಬುದು ವ್ಯಕ್ತಪಡುತ್ತದೆ. ॥ ೬ ॥

ಮುಂದೆ ತನ್ನ ಸೇನೆಯ ಮಹಾರಥರಾದ ಶೂರರು ಯಾರೆಂಬುದನ್ನು ತಿಳಿಸಿ, ದುರ್ಯೋ ಧನನು ತನ್ನ ಮತ್ತು ಶತ್ರುಸೇನೆಗಳ ವಿಷಯದಲ್ಲಿ ತನ್ನಭಿಪ್ರಾಯವೇನೆಂಬುದನ್ನು ತಮ್ಮ ಆಚಾ ರ್ಯರಾದ ದ್ರೋಣರಲ್ಲಿ ಹೇಳಿಕೊಳ್ಳುತ್ತಾನೆ:—**ಹೇ ದ್ವಿಜೋತ್ತಮ** - ಓ ವಿಪ್ರವರ್ಯರಾದ

ಮೂ. ಅಸ್ಮಾಕಂ ತು ವಿಶಿಷ್ಟಾಯೇತನ್ನಿಬೋಧ ದ್ವಿಜೋತ್ತಮ ।
ನಾಯಕಾ ಮಮಸೈನ್ಯಸ್ಯ ಸಂಜ್ಞಾರ್ಥಂ ತಾನ್ಬ್ರವೀಮಿ ತೇ ॥ ೭
ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।
ಅಶ್ವತ್ಥಾಮಾ ವಿಕರ್ಣಶ್ಚ ಸೋಮದತ್ತಿಸ್ತಥೈವ ಚ ॥ ೮
ಅನ್ಯೇ ಚ ಬಹವಶ್ಶೂರಾ ಮದರ್ಥೇ ತ್ಯಕ್ತ ಜೀವಿತಾಃ ।
ನಾನಾಶಸ್ತ್ರಪ್ರಹರಣಾಸ್ಸರ್ವೇ ಯುದ್ಧ ವಿಶಾರದಾಃ ॥ ೯
ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಂ ।
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಂ ॥ ೧೦

---

ದ್ರೋಣಾಚಾರ್ಯರೇ **ಅಸ್ಮಾಕಂತು** - ನಮ್ಮಕಡೆಯಲ್ಲಾದರೋ, **ಯೇ** - ಯಾರು, **ವಿಶಿಷ್ಟಾಃ** - ಧೈರ್ಯಪರಾಕ್ರಮಾದಿಗಳಿಂದ ಯುಕ್ತರಾಗಿ ಶೂರರಾಗಿರುವ, **ಮಮ ಸೈನ್ಯಸ್ಯ** - ನನ್ನ ಸೇನೆಗೆ ನಾಯಕರಾಗಿ, ಸೇನಾನಾಯಕರಾಗಿದ್ದಾರೆಯೋ, **ತಾನ್** - ಅಂತಹ ಮಹಾರಥರನ್ನು, **ತೇ** - ನಿನ್ನ, **ಸಂಜ್ಞಾರ್ಥಂ** - ಗುರ್ತಿಸಿ ತಿಳುವಳಿಕೆಗಾಗಿ ಅಥವಾ, **ಸಮ್ಯಕ್ ಜ್ಞಾನಾರ್ಥಮ್** - ಚೆನ್ನಾಗಿ ತಿಳಿಯುವದಕ್ಕಾಗಿ, **ಬ್ರವೀಮಿ**-ಹೇಳುವೆನು, **ತಾನ್ನಿಬೋಧ** - ಅವರುಗಳನ್ನು ತಾವು ಗಮನಿಸ ತಕ್ಕದ್ದು. ॥೭॥ **ಭವಾನ್** - ತಾವೂ, ಭೀಷ್ಮರೂ, ಕರ್ಣನೂ, **ಸಮಿತಿಂಜಯಃ** - ಯುದ್ಧದಲ್ಲಿ ಜಯಶೀಲರಾದ ಕೃಪಾಚಾರ್ಯರೂ ತಮ್ಮ ಮಕ್ಕಳಾದ ಅಶ್ವತ್ಥಾಮರೂ, ವಿಕರ್ಣನೂ, ಹಾಗೆಯೇ ಸೋಮದತ್ತನ ಮಗನಾದ ಭೂರಿಶ್ರವಸ್ಸೂ ॥ ೮ ॥ ಇನ್ನೂ **ಅನ್ಯೇಚ** - ಇತರರಾದ, **ಬಹವ ಶ್ಶೂರಾಃ** - ಬಹುಮಂದಿ ಶೂರರಾದ, ಅವರುಗಳೆಲ್ಲಾ ಎಂಥಾವರೆಂದರೆ :—**ಮದರ್ಥೇ**-ನನಗಾಗಿ **ತ್ಯಕ್ತಜೀವಿತಾಃ** - ಜೀವವನ್ನು ಬಿಡಲು ಸಿದ್ಧರಾಗಿರುವವರು, **ನಾನಾ ಶಸ್ತ್ರ ಪ್ರಹರಣಾಃ** - ನಾನಾ ವಿಧವಾದ ಶಸ್ತ್ರಗಳ ಹೊಡತವನ್ನುಳ್ಳವರಾಗಿರುವವರು, ಎಂದರೆ ಅವುಗಳಿಂದ ಪ್ರಹರಿಸುವವರು, ಹೊಡೆಯುವವರು, **ಸರ್ವೇ** - ಸಮಸ್ತರೂ, **ಯುದ್ಧವಿಶಾರದಾಃ** - ಯುದ್ಧದಲ್ಲಿ ಪ್ರವೀಣರಾಗಿ ರುವವರು, ಇಲ್ಲಿ **ನಾನಾಶಸ್ತ್ರಪ್ರಹರಣಾಃ ಮದರ್ಥೇತ್ಯಕ್ತ ಜೀವಿತಾಃ** ಎಂದು ಇರುವದರಿಂದ ಯುದ್ಧದಲ್ಲಿ ಕೊನೆಗೆ ಶತ್ರುಗಳ ನಾನಾ ಶಸ್ತ್ರಪ್ರಹಾರದಿಂದ, ತನ್ನದ್ವಿಶ್ಯವಾಗಿ ಪ್ರಾಣವನ್ನು ಬಿಡುತ್ತಾರೆಂಬ ಭಾವವೂ ಸೂಚಿತವಾಯಿತು. ಯುದ್ಧದಲ್ಲೇನೋ ವಿಶಾರದರೇ ಸರಿ, ಆದರೆ ಪರಿಣಾಮದಲ್ಲಿ ಎಲ್ಲರೂ ಪ್ರಾಣ ಬಿಡುವರೇ ಎಂಬ ಭಾವವು. ॥ ೯ ॥

**ತತ್** - ಆ ಕಾರಣದ ದೆಶೆಯಿಂದ, **ಭೀಷ್ಮಾಭಿರಕ್ಷಿತಂ** - ಶ್ರೀ ಭೀಷ್ಮರಿಂದ ರಕ್ಷಿಸಲ್ಪಟ್ಟ, **ಅಸ್ಮಾಕಂ ಬಲಂ** - ನಮ್ಮ ಸೈನ್ಯವು, **ಅಪರ್ಯಾಪ್ತಂ** - ಸಾಲದೇ ಇರುವದು, ಎಂದರೆ ಶತ್ರುಬಲ ವನ್ನು ಜಯಿಸಲು ಸಾಕಾಗದೇ ಇರುವದು, **ಭೀಮಾಭಿರಕ್ಷಿತಂ** - ಭೀಮಸೇನನಿಂದ ರಕ್ಷಿಸ ಲ್ಪಟ್ಟ, **ಏತೇಷಾಂ** - ಈ ಪಾಂಡವರ, **ಇದಂ ತು ಬಲಂ** - ಈ ಸೈನ್ಯವಾದರೋ, **ಪರ್ಯಾಪ್ತಂ**, ಜಯವನ್ನು ಹೊಂದಲು ಸಾಕಾದುದು. ಈ ಶ್ಲೋಕದಲ್ಲಿರುವ **ಅಪರ್ಯಾಪ್ತಂ, ಪರ್ಯಾಪ್ತಂ** ಎಂಬ ಪದಗಳಿಗೆ ಬೇರೇ ವಿಧವಾಗಿ ಅರ್ಥ ಹೇಳುತ್ತಾರೆ ಹೇಗೆಂದರೆ :—ಪ್ರತಿಯೊಂದು ಪಾದದಲ್ಲೂ ಎರಡೆರಡು ವಾಕ್ಯಗಳಾಗಿ ಅರ್ಥ ಮಾಡಿದರೆ **ಅಪರ್ಯಾಪ್ತಂ ತತ್**-ಅವರ ಸೇನೆಯು ಜಯ ವಿಷಯ ದಲ್ಲಿ ಸಾಲದೇ ಇರುವದು. **ಅಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಂ** ನಮ್ಮ ಬಲವು ಮಹಾ ಬಲಿ ಷ್ಠರಾದ ಭೀಷ್ಮರಿಂದ ಕಾಪಾಡಲ್ಪಟ್ಟದುದು . **ಪರ್ಯಾಪ್ತಂ ತ್ವಿದಂ** - ಈ ನಮ್ಮ ಬಲವಾದರೋ ಜಯಕ್ಕೆ ಸಾಕಾದುದು. **ಏತೇಷಾಂ ಬಲಂ ಭೀಮಾಭಿರಕ್ಷಿತಂ** - ಇವರುಗಳ ಬಲವಾದರೋ

ಭೀಮನಿಂದ ರಕ್ಷಿಸಲ್ಪಟ್ಟದುದು. ಆದುದರಿಂದ ಭೀಷ್ಮರಸೇನೆಗೆ ಸಮನಾಗದು ಎಂಬ ಭಾವವು. ಅಥವಾ ಒಂದೇ ವಾಕ್ಯವಾದರೆ, ಭೀಷ್ಮ ಭೀಮ ಶಬ್ದಗಳು ಎಲ್ಲೋ ವ್ಯತ್ಯಸ್ತವಾಗಿ ಬಿದ್ದಿವೆ ಎಂದು ಭಾವಿಸಬಹುದು; ಅಥವಾ ಹೀಗಿರುವ ಹಾಗೆಯೇ ಇದ್ದರೆ **ಅಪರ್ಯಾಪ್ತಂ** - ನಾಶಪಡಿಸುವದಕ್ಕೆ ಯೋಗ್ಯವಾದುದಲ್ಲವು ನಮ್ಮ ಭೀಷ್ಮರಿಂದ ಕಾಪಾಡಲ್ಪಟ್ಟ ಸೈನ್ಯವು; ಭೀಮನಿಂದ ಕಾಪಾಡಲ್ಪಟ್ಟ ಸೈನ್ಯವಾದರೋ **ಪರ್ಯಾಪ್ತಂ** - ನಾಶಪಡಿಸುವದಕ್ಕೆ ಯೋಗ್ಯವಾದುದು ಎಂದರೆ ಭೀಷ್ಮರಿಂದ ರಕ್ಷಿಸಲ್ಪಟ್ಟ ಸೈನ್ಯವನ್ನು ನಾಶಮಾಡಲು ಸಾಧ್ಯವಲ್ಲವು, ಭೀಮನಿಂದ ರಕ್ಷಿಸಲ್ಪಟ್ಟ ಸೈನ್ಯವನ್ನು ನಾಶಮಾಡಲು ಸಾಧ್ಯವೆಂಬದಾಗಿಯೂ" ಹೀಗೆಲ್ಲಾ ಅರ್ಥಮಾಡುತ್ತಾರೆ. ಈ ಅಭಿಪ್ರಾಯಗಳು ಶ್ರೀ ಭಾಷ್ಯಕಾರರಿಗೂ ಶ್ರೀ ನಿಗಮಾಂತ ದೇಶಿಕರಿಗೂ ಗ್ರಾಹ್ಯವಲ್ಲವು. ಯದ್ಯಪಿ ಉದ್ಯೋಗಪರ್ವದಲ್ಲಿ ಪರಿಣಾಮವು ಹೇಗೋ ಎಂಬದಾಗಿ ಭಯಪಡುತ್ತಿದ್ದ ತನ್ನ ತಂದೆಯಾದ ಧೃತರಾಷ್ಟ್ರನಿಗೆ ಸಮಾಧಾನಾರ್ಥವಾಗಿ, **"ನಭೇತವ್ಯಂ ಮಹಾರಾಜ ನಶೋಚ್ಯಾ ಭವತಾ ವಯಂ। ಸಮರ್ಥಾಃ ಸ್ಮ ಪರಾನ್ಜೇತುಂ ಬಲಿನಃ ಸಮರೇ ವಿಭೋ"॥** "ಮಹಾರಾಜನಾದ ತಂದೆಯೇ ನೀವು ಭಯಪಡತಕ್ಕದ್ದಲ್ಲವು. ನಾವು ಯುದ್ಧದಲ್ಲಿ ಶತ್ರುಗಳನ್ನು ಜಯಿಸಲು ಸಮರ್ಥರಾಗಿದ್ದೇವೆ" ಎಂಬದಾಗಿ ದುರ್ಯೋಧನನು ಹೇಳಿರುತ್ತಾನೆ; ಅದೂ ಅಲ್ಲದೆ, ಉದ್ಯೋಗಪರ್ವ (೫೧-೬) ದಲ್ಲಿ **"ಅಪರ್ಯಾಪ್ತಂ ತದಸ್ಮಾಕಂ ಬಲಂ ಪಾರ್ಥಾಭಿರಕ್ಷಿತಂ। ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಪಾರ್ಥಿವ ಸತ್ತಮಾಃ"** ಎಂದು ದುರ್ಯೋಧನನು ತನ್ನ ಸಂಗಡದವರನ್ನು ಕುರಿತು ಹೇಳುತ್ತಾನೆ; "ಅರ್ಜುನನಿಂದ ರಕ್ಷಿಸಲ್ಪಟ್ಟ **ತದ್ಬಲಂ** - ಆ ಬಲವು, **ಅಸ್ಮಾಕಂ ಅಪರ್ಯಾಪ್ತಂ**-ನಮ್ಮನ್ನು ಜಯಿಸಲು ಸಾಲದು, **ಇದಂತು ಬಲಂ** - ಈ ನಮ್ಮ ಬಲವಾದರೋ, **ಏತೇಷಾಂ ಪರ್ಯಾಪ್ತಂ** - ಈ ಶತ್ರುಪಕ್ಷದವರನ್ನು ಜಯಿಸಲು ಸಾಕೆಂದು ಹೇಳಿಕೊಂಡಿರುತ್ತಾನೆ. ಆದರೂ ಆಗ, ಸೇನೆಯ ವ್ಯೂಹ ರಚನೆಯೂ ಯುದ್ಧಾರಂಭವೂ ಇಲ್ಲದೇ ಇರುವ ಕಾಲದಲ್ಲಿ ಹಾಗೆ ಹೇಳಿರಬಹುದು. ವ್ಯೂಹ ರಚನೆಯಿಂದ ಯುದ್ಧಾರಂಭಕಾಲದಲ್ಲಿ, ಅಧರ್ಮಪ್ರವರ್ತಕನಾಗಿ ಯುದ್ಧಕ್ಕೆ ಬಂದಿರುವ ಕಾಲದಲ್ಲಿ, ದೈವಬಲವಿಲ್ಲದೆ ಅಧೈರ್ಯವೂ ಭಯವೂ ಉದ್ವೇಗವೂ ಉಂಟಾಗುವದೇನೂ ಅಸಮಂಜಸವಾದುದಲ್ಲವು. ರಣರಂಗದಲ್ಲಿ ಭೀಮನು ಎದುರಿಗೆ ನಿಂತಿರುವದನ್ನು ನೋಡಿ ಧೈರ್ಯವನ್ನು ಬಿಟ್ಟು ಹೇಳುವ ಸಂದರ್ಭವಾಗಿರುತ್ತದೆ. ಭೀಮನೇನೂ ದ್ರೋಣರಹಾಗೆ ಸೇನಾನಾಯಕನಲ್ಲವು, ಸರ್ವ ಯಾಜಮಾನ್ಯವನ್ನೂ ವಹಿಸಿದವನೂ ಅಲ್ಲವು. ಆತನ ಹೆಸರನ್ನು ಎತ್ತಿರುವದು ತನ್ನ ಕಡೆಯಲ್ಲಿ ಆತನಿಗೆ ಸರಿಯಾದವರು ಯಾರೂ ಇಲ್ಲವೇ, ಭೀಷ್ಮರೂ ಯದ್ಯಪಿ ಸರ್ವಶಕ್ತರಾದರೂ, ಭೀಮನ ಮೂಲಕ ಏನು ತೊಂದರೆ ಬಂದೀತೋ ಎಂಬದಾಗಿ, ಭೀಷ್ಮರು ಮೊದಲು ಯುದ್ಧ ಮಾಡುವಾಗ ನೀವೆಲ್ಲಾ ಸುಮ್ಮನಿರಬಾರದು, ಜಾಗರೂಕರಾಗಿ **"ಭೀಷ್ಮಮೇವಾಭಿರಕ್ಷಂತು ಭವಂತ ಸ್ಸರ್ವ ಏವಹಿ"** ಭೀಷ್ಮರಿಗೆ ನೀವೆಲ್ಲರೂ ಬೆಂಬಲವಾಗಿರತಕ್ಕದ್ದೆಂದು ದುರ್ಯೋಧನನು ಕೇಳಿಕೊಳ್ಳುತ್ತಾನೆ. ಅತಿರಥರನ್ನು ಗಣನೆ ಮಾಡುವದರಲ್ಲಿ ಸುಮಾರು ಇಪ್ಪತ್ತು ಮಂದಿಗಳ ಹೆಸರನ್ನು ಶತ್ರುಪಕ್ಷದಲ್ಲಿ ಹೇಳಿ, ತನ್ನ ಪಕ್ಷದಲ್ಲಿ ಏಳು ಜನ ಮಾತ್ರ ಹೇಳಿರುವದರಿಂದಲೂ, ಭೀಮಾರ್ಜುನರು ಮಹಾ ಸಮರ್ಥರೆಂಬಭಿಪ್ರಾಯವು **ಭೀಮಾರ್ಜುನ ಸಮಾಯುಧಿ** ಎಂಬ ಪ್ರಯೋಗದಿಂದ ತೋರಿಬರುವದರಿಂದಲೂ, ಶತ್ರುಪಕ್ಷದಲ್ಲಿ ಈ ಇಪ್ಪತ್ತು ಮಂದಿಯೂ ಮಹಾ ರಥರೆಂದು ಹೇಳಿ, ತನ್ನ ಕಡೆಯಲ್ಲಿ **ಬಹವಶ್ಶೂರಾಃ** ಎಂದಿಷ್ಟುಮಾತ್ರವೇ ಹೇಳಿರುವದರಿಂದಲೂ, ಮುಂದೆ ೧೨ನೆಯ ಶ್ಲೋಕದಲ್ಲಿ, **"ತಸ್ಯ ಸಂಜನಯನ್ ಹರ್ಷಂ"** ಆ ದುರ್ಯೋಧನನಿಗೆ ಹರ್ಷವನ್ನು **ಸಂಜನಯನ್** ಹುಟ್ಟಿಸುವದಕ್ಕಾಗಿ ಎಂದು ಹೇಳಿರುವದರಿಂದ ಹರ್ಷವು ನಷ್ಟವಾಗಿ ವಿಷಾದವು ಪ್ರಾಪ್ತವಾಗಿತ್ತೆಂಬಭಿಪ್ರಾಯವೂ ತೋರಿಬರುವದರಿಂದಲೂ, ಶ್ರೀ ಭಾಷ್ಯಾ

**ಮೂ.** ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।
ಭೀಷ್ಮಮೇವಾಭಿರಕ್ಷಂತು ಭವಂತಸ್ಸರ್ವ ಏವ ಹಿ ॥ ೧೧

**ಭಾ.** ದುರ್ಯೋಧನಃ ಸ್ವಯಮೇವ ಭೀಮಾಭಿರಕ್ಷಿತಂ ಪಾಣ್ಡವಾನಾಂ ಬಲಂ, ಆತ್ಮೀಯಂ ಚ ಭೀಷ್ಮಾಭಿರಕ್ಷಿತಂ ಬಲಮವಲೋಕ್ಯ, ಆತ್ಮವಿಜಯೇ ತಸ್ಯ ಬಲಸ್ಯ ಪರ್ಯಾ

---

ಕಾರಾದಿಗಳಭಿಪ್ರಾಯವೇ ಯುಕ್ತವೇ ವಿನಾ ಭಿನ್ನಾಭಿಪ್ರಾಯಗಳು ಸರಿಯಲ್ಲವು. ಅವುಗಳನ್ನೆಲ್ಲಾ ಮನಸ್ಸಿನಲ್ಲಿಟ್ಟೇ ಶ್ರೀ ಯತಿವರ್ಯರು ಅಂತರ್ವಿಷಣ್ಣೋ ಭವತ್ ಎಂದು ಮುಂದೆ ಪ್ರಯೋಗಿಸಿರುತ್ತಾರೆ. ೧೨ನೆಯ ಶ್ಲೋಕದಲ್ಲಿ ಧೈರ್ಯವನ್ನು ನೀಗಿದ ಈ ದುರ್ಯೋಧನನಿಗೆ ಉತ್ಸಾಹವನ್ನೂ ಹರ್ಷವನ್ನೂ ಉಂಟುಮಾಡುವದಕ್ಕಾಗಿ ಮಾಡಿದ ಸಿಂಹನಾದವೂ, ಶಂಖಧ್ವನಿಯೂ, ಹಾಗೆಯೇ ಪ್ರತಿಯಾಗಿ, ಶತ್ರುಪಕ್ಷದಲ್ಲಿ ಶ್ರೀ ಕೃಷ್ಣನು ಮೊದಲುಗೊಂಡು ಸರ್ವ ಪಾಂಡವರೂ ಸಿಂಹನಾದ ಶಂಖನಾದಗಳನ್ನೂ ಏಕಕಾಲದಲ್ಲಿ ಮಾಡಿದುದೂ, ಇನ್ನೂ ದುರ್ಯೋಧನಾದಿಗಳಿಗೆ ಹೆಚ್ಚು ಅಧೈರ್ಯಕ್ಕೆ ಕಾರಣವಾಯಿತೆಂದು ೧೯ನೆಯ ಶ್ಲೋಕದಲ್ಲಿ ವ್ಯಕ್ತಪಡುವದರಿಂದ, ಈಗಲೂ ದುರ್ಯೋಧನನು ನಷ್ಟ ಧೈರ್ಯನಾಗಿಯೇ ತನ್ನ ಸೈನ್ಯವು ಜಯಕ್ಕೆ **ಅಪರ್ಯಾಪ್ತವು** ಎಂದರೆ ಸಾಲದೆಂದೂ, ಶತ್ರು ಸೈನ್ಯವು ಜಯಕ್ಕೆ **ಪರ್ಯಾಪ್ತವು** ಎಂದರೆ ಸಾಕೆಂದೂ ಅಭಿಪ್ರಾಯಪಟ್ಟು ಹೇಳಿದನೆಂದು ಅರ್ಥ ಮಾಡುವದೇ ಯುಕ್ತವು.

**ಮೂಲಕ್ಕೆ ಅರ್ಥವು**—ಈ ಶ್ಲೋಕದಲ್ಲಿ ಶ್ರೀ ಭೀಷ್ಮರು ಮಹಾಶಕ್ತರು, ಹೇಗೋ ನಿರ್ವಾಹ ಮಾಡಿಬಿಡುತ್ತಾರೆಂದು ನೀವು ತಟಸ್ಥರಾಗಿರದೆ ಅವರಿಗೆ ಸರ್ವವಿಧ ಸಹಾಯವನ್ನೂ ಮಾಡತಕ್ಕದ್ದೆಂದು ದುರ್ಯೋಧನನು ತಮ್ಮ ಗುರುಗಳಾದ ದ್ರೋಣಾಚಾರ್ಯರನ್ನು ಪ್ರಾರ್ಥಿಸುತ್ತಾನೆ:— **ಭವಂತಸ್ಸರ್ವ ಏವಹಿ** - ನೀವೆಲ್ಲರೂ ಕೂಡ ಶ್ರೀ ಭೀಷ್ಮರಿಗೆ ಬೆಂಬಲವಾಗಿ, **ಅಯನೇಷು ಚ ಸರ್ವೇಷು** - ಸೇನೆಯ ವ್ಯೂಹಗಳು ಸಂಚರಿಸುವ ಸಮಸ್ತ ಮಾರ್ಗ್ಗಗಳಲ್ಲೂ, **ಯಥಾಭಾಗಮವಸ್ಥಿತಾಃ** - ಹೇಗೆ ಹೇಗೆ ವ್ಯವಸ್ಥೆ ಮಾಡಲ್ಪಟ್ಟಿರುತ್ತದೋ ಹಾಗೆಯೇ ಇರುವವರಾಗಿ, **ಭೀಷ್ಮಮೇವಾಭಿರಕ್ಷಂತು** - ಭೀಷ್ಮರನ್ನೇ ಎಲ್ಲರೂ ಕಾಪಾಡತಕ್ಕದ್ದು. ಹೀಗೆ ದುರ್ಯೋಧನನು ಮುಖ್ಯವಾಗಿ ಹೇಳಿದುದರಿಂದ ಮಹಾ ಪರಾಕ್ರಮಿಯಾದ ಭೀಮನನ್ನು ಸೇನಾಮುಖದಲ್ಲಿ ನೋಡಿ ಅಧೈರ್ಯಪಟ್ಟನೆಂಬುದು ಸುವ್ಯಕ್ತವು.

**ಭಾಷ್ಯಾರ್ಥವು**—"ದೃಷ್ಟ್ವಾತು ಪಾಂಡವಾನೀಕಂ ಎಂದು ಆರಂಭಿಸಿ, "ಭವನ್ತ ಸರ್ವ ಏವಹಿ" ಎಂಬ ೧೧ನೆಯ ಶ್ಲೋಕಾಂತ್ಯದವರೆಗೂ ಮುಖ್ಯಾಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ: "ದುರ್ಯೋಧನನು ಸ್ವಯಮೇವ-ತಾನೇಪ್ರತ್ಯಕ್ಷದಲ್ಲಿ, ಭೀಮಾಭಿರಕ್ಷಿತವಾದ ಪಾಂಡವರ ಬಲವನ್ನೂ ಮತ್ತು **ಆತ್ಮೀಯಂ ಚ** - ತನ್ನದಾದ, ಭೀಷ್ಮರಿಂದ ರಕ್ಷಿತವಾದ ಬಲವನ್ನೂ, **ಅವಲೋಕ್ಯ** - ನೋಡಿ, **ತಸ್ಯ ಬಲಸ್ಯ** - ಆ ಭೀಮನಿಂದ ರಕ್ಷಿತವಾದ ಬಲಕ್ಕೆ, **ಆತ್ಮ ವಿಜಯೇ** - ಆತ್ಮಕರ್ಮಕ ವಿಜಯೇ - ತನ್ನನ್ನು ಜಯಿಸುವ ವಿಷಯದಲ್ಲಿ, **ಪರ್ಯಾಪ್ತತಾಂ** - ಎಂದರೆ ಸಾಕಾಗಿರುವ ಸಂಪೂರ್ಣತೆಯನ್ನೂ, **ಆತ್ಮೀಯಸ್ಯ ಬಲಸ್ಯ** - ತನ್ನ ಸ್ವಂತವಾದ (ದುರ್ಯೋಧನನ) ಬಲಕ್ಕೆ ತದ್ವಿಜಯೇ-ಆ ಪಾಂಡವ ಬಲವನ್ನು ಜಯಿಸುವ ವಿಷಯದಲ್ಲಿ, **ಅಪರ್ಯಾಪ್ತತಾಂ** - ನ್ಯೂನತೆಯನ್ನು **ಆಚಾರ್ಯಾಯ ನಿವೇದ್ಯ** . ತನ್ನ ಆಚಾರ್ಯರಾದ ದ್ರೋಣರಲ್ಲಿ ಒದಗಿರುವ ಕಷ್ಟವನ್ನು ವಿಜ್ಞಾಪಿಸಿಕೊಂಡು, **ಅನ್ತರ್ವಿಷಣ್ಣೋಽಭವತ್** . ಅಂತಃ ವಿಷಾದಯುಕ್ತನಾದನು." ಆದರೆ, ಉದ್ಯೋಗಪರ್ವದಲ್ಲಿ ೫೫ನೆಯ ಅಧ್ಯಾಯದಲ್ಲಿ ದುರ್ಯೋಧನನೇ ಅಧೈರ್ಯದಿಂದಿರುವ ತನ್ನ ತಂದೆಯನ್ನು

ಪ್ತತಾಂ ಆತ್ಮೀಯಸ್ಯ ಬಲಸ್ಯ ತದ್ವಿಜಯೇ ಚಾ ಪರ್ಯಾಪ್ತತಾಮಾಚಾರ್ಯಾಯ ನಿವೇದ್ಯ ಅನ್ತರ್ವಿಷಣ್ಣೋऽಭವತ್.

ಮೂ. ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥ ೧೨

ಕುರಿತು "ನಭೇತವ್ಯಂ ಮಹಾರಾಜ ನ ಶೋಚ್ಯಾ ಭವತಾವಯಂ। ಸಮರ್ಥಾಃ ಸ್ಮಪರಾಞ್ಜೇತುಂ ಬಲಿನಃ ಸಮರೇ ವಿಭೋ ॥" "ಓ ಮಹಾರಾಜನೇ ನೀವು ಭಯಪಡಕೆಲಸವಿಲ್ಲವು, ನಮ್ಮನ್ನು ಕುರಿತು ನೀವು ವಿಷಾದಿಸುವ ಕೆಲಸವಿಲ್ಲವು; ಯುದ್ಧದಲ್ಲಿ ಶತ್ರುಗಳನ್ನು ಜಯಿಸಲು ನಾವು ಬಲಿಷ್ಠರಾಗಿಯೂ ಸಮರ್ಥರಾಗಿಯೂ ಇರುವೆವು" ಎಂದು ಪ್ರಾರಂಭಿಸಿ, ಶತ್ರುಗಳ ಕಡೆ ಯೋಧರು ಏಳು ಜನ ಮಾತ್ರವೇ ಎಂದೂ, ತಮ್ಮ ಕಡೆ ತುಂಬಾ ಯೋಧರಿದ್ದಾರೆಂದೂ, ಶತ್ರು ಕಡೆ ಏಳೇ ಅಕ್ಷೌಹಣೀ ಎಂದೂ, ತಮ್ಮಕಡೆಯಾದರೋ ಹನ್ನೊಂದಕ್ಷೌಹಿಣೀ ಇರುವಾಗ "ಕೆಸ್ಮಾನ್ಮೇ ಸ್ಯಾತ್ಪರಾಜಯಃ" ನನಗೆ ಅಪಜಯವೆಲ್ಲಿಯದು ? ಆದುದರಿಂದ "ನನೋಹಂ ಗನ್ತುಮರ್ಹಸಿ" ನನಗೆ ಅಪಜಯವಾಗುತ್ತೆಂಬ ಶಂಕೆಯು ನಿನಗೆ ಯೋಗ್ಯವಲ್ಲವು, ಎಂದು ಹೇಳಿದ ದುರ್ಯೋಧನೋಕ್ತಿಗೆ ಇದು ವಿರುದ್ಧವಲ್ಲವೇ ? ಎಂದರೆ, ಆಗ ಪರೋಕ್ಷದಲ್ಲಿ ತಂದೆಯ ಭಯೋಪಶಮನಾರ್ಥವಾಗಿ ಹೇಳಿದ ಮಾತಾಗಿದೆ. ಈಗಲಾದರೋ ಪ್ರತ್ಯಕ್ಷದಲ್ಲಿ ಸೇನೆಯನ್ನೂ ಯೋಧರನ್ನೂ ನೋಡಿದವನಾಗಿ, ಅಧರ್ಮಿಯಾಗಿ ದೈವ ಸಹಾಯವಿಲ್ಲದುದರಿಂದ, ಭಯವೂ ತನ್ಮೂಲಕವಾಗಿ ವಿಷಾದವೂ ಉಂಟಾಗಿರುವದರಲ್ಲಿ ಸಂದೇಹವಿಲ್ಲವು. ಹೀಗೆ ವ್ಯತ್ಯಸ್ತಾಭಿಪ್ರಾಯವು ಪ್ರತ್ಯಕ್ಷವಾಗಿ ಸೇನೆಯನ್ನು ನೋಡಿದಾಗ ಉಂಟಾಯಿತೆಂದು ಹೇಳುವದಕ್ಕಾಗಿಯೇ ದೃಷ್ಟ್ವಾತು - ಎಂಬಲ್ಲಿ ತು ಶಬ್ದ ಪ್ರಯೋಗವು. ಹಿಂದೆಯೂ ಸ್ವಪೌರುಷವನ್ನು ಹೇಳಿಕೊಂಡ ಸಮಯದಲ್ಲೂ ಸಂಜಯರು ಇದ್ದುದರಿಂದ, ದೃಷ್ಟ್ವಾತು ಎಂದು ಪ್ರತ್ಯಕ್ಷವಾದಭಿಪ್ರಾಯವು ಭಿನ್ನವಾಯಿತೆಂದು ತೋರಿಸುವದಕ್ಕಾಗಿ, ತು ಶಬ್ದವು, ಎಂದೂ ಹೇಳಬಹುದು. ಆದುದರಿಂದಲೇ "ಅಪರ್ಯಾಪ್ತಂ ತದಸ್ಮಾಕಂ" ಎಂದೂ "ಪರ್ಯಾಪ್ತಂತ್ವಿದಮೇ ತೇಷಾಂ" ಎಂದೂ, ಇರುವದರಿಂದ, ಅಂತರ್ವಿಷಣ್ಣೋऽಭವತ್ ಎಂಬ ಭಾಷ್ಯವು.

**ಮೂಲಕ್ಕೆ ಅರ್ಥವು**—ಯಾವಾಗ ದುರ್ಯೋಧನನು ಧೈರ್ಯಗುಂದಿ ದ್ರೋಣರಲ್ಲಿ ಅಂಕೆ ಮಾಡಿಕೊಂಡಿರುವದನ್ನು ಶ್ರೀ ಭೀಷ್ಮರು ಕಂಡರೋ,ಆಗ ಯುದ್ಧಾರಂಭಕಾಲದಲ್ಲಿ ಅಂತಹ ವಿಷಾದವು ಯುಕ್ತವಲ್ಲವೆಂದು ಊಹಿಸಿ,ದುರ್ಯೋಧನನಿಗೆ ಹರ್ಷೋತ್ಸಾಹಗಳನ್ನುಂಟುಮಾಡುವದಕ್ಕಾಗಿ ಸಿಂಹನಾದ ಶಂಖನಾದಗಳನ್ನು ಮಾಡಿದರೆಂದು ಸಂಜಯರು ತಿಳಿಸುತ್ತಾರೆ:—**ತಸ್ಯ** - ಆ ವಿಷಾದಯುಕ್ತನಾದ ದುರ್ಯೋಧನನಿಗೆ, **ಹರ್ಷಂ ಸಂಜನಯನ್**-ಹರ್ಷವನ್ನು ಹುಟ್ಟಿಸುವರಾಗಿ, **ಪ್ರತಾಪವಾನ್**-ಬ್ರಹ್ಮರ್ಷಿ ಸದೃಶ ಪರಾಕ್ರಮವನ್ನು ಹೊಂದಿರುವ, ಅಥವಾ-ದುರ್ಯೋಧನನಿಗೆ ಪ್ರಾಪ್ತವಾಗಿರುವ ದುರವಸ್ಥೆಯನ್ನೂ, ಮುಂದೆ ಆತನಿಗೆ ಪ್ರಾಪ್ತವಾಗುವ ಅನಿಷ್ಟವನ್ನೂ ತಮ್ಮ ಜ್ಞಾನ ಚಕ್ಷುಸ್ಸಿನಿಂದ ಕಂಡು, ತುಂಬಾ ಪರಿತಾಪವನ್ನು ಹೊಂದಿರುವ, **ಕುರುವೃದ್ಧಃ ಪಿತಾಮಹಃ** - ಕುರುವಂಶದಲ್ಲಿ ತುಂಬಾ ಜ್ಞಾನವೃದ್ಧರಾಗಿಯೂ ವಯೋವೃದ್ಧರಾಗಿಯೂ ಶೀಲವೃದ್ಧರಾಗಿಯೂ ತಾತಂದರಾದ ಶ್ರೀ ಭೀಷ್ಮರು, **ಉಚ್ಚೈಃ** - ತುಂಬಾ ಗಟ್ಟಿಯಾಗಿ, **ಸಿಂಹನಾದಂ ವಿನದ್ಯ** - ಸಿಂಹನಾದವನ್ನು ಮಾಡಿ, **ನಾದಂ ವಿನದ್ಯ** - ಎಂಬ ಪ್ರಯೋಗವು **ಪಾಕಂ ಪಚತಿ** ಎಂಬ ಹಾಗೆಯಾದುದರಿಂದ ವಿನದ್ಯ ಎಂಬ ಶಬ್ದಕ್ಕೆ ಮಾಡಿ ಎಂದು ಅರ್ಥ ಮಾಡಿರುತ್ತಾರೆ. **ಶಂಖಂ ದಧ್ಮೌ**. ಶಂಖ

ಮೂ. **ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕ ಗೋಮುಖಾಃ ।**
**ಸಹಸೈವಾಭ್ಯಹನ್ಯನ್ತ ಸ ಶಬ್ದಸ್ತು ಮುಲೋಽಭವತ್ ॥** ೧೩

ಭಾ. **ತಸ್ಯವಿಷಾದಮಾಲಕ್ಷ್ಯ ಭೀಷ್ಮಸ್ತಸ್ಯ ಹರ್ಷಂ ಜನಯಿತುಂ ಸಿಂಹನಾದಂ ಶಂಖಧ್ಮಾನಂ ಚಕೃತ್ವಾ ಶಂಖ ಭೇರೀನಿನಾದೈಶ್ಚ ವಿಜಯಾಭಿಶಂಸಿನಂ ಘೋಷಂಚಾಕಾರಯತ್.**

ಮೂ. **ತತಃಶ್ವೇತೈರ್ಹಯೈರ್ಯುಕ್ತೇ ಮಹತಿಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥** ೧೪

ವನ್ನೂದಿದರು. ಇಲ್ಲಿ ದುರ್ಯೋಧನನು ದ್ರೋಣರನ್ನು ಕಂಡು ತನಗೆ ಉಂಟಾಗಿರುವ ಕಷ್ಟವನ್ನು ತಿಳಿಸಿದರೂ ದ್ರೋಣರು ಇವನ ನಡತೆಯಿಂದ ಅತೃಪ್ತರಾಗಿ ಸುಮ್ಮನಿದ್ದರೆಂದು ತೋರಿಬರುತ್ತದೆ. ದ್ರೋಣರಲ್ಲಿ ಹೇಳಿಕೊಂಡರೂ, ಭೀಷ್ಮರೇ ಈ ಸಂದರ್ಭದಲ್ಲಿ ರಾಜನು ಧೈರ್ಯಗುಂದುವದು ಸರಿಯಲ್ಲವೆಂದು ಭಾವಿಸಿ, ಆತನಿಗೆ ಧೈರ್ಯ ಉಂಟಾಗುವ ಹಾಗೆ ಮಾಡುತ್ತಾರೆಂದು ಭಾವಿಸಬೇಕಾಗಿದೆ. **ಹರ್ಷಂ ಸಂಜನಯ್ರ್ಯ** - ಎಂಬ ಪ್ರಯೋಗವಿರುವದರಿಂದ ಅಧೈರ್ಯದಿಂದ ಹರ್ಷವು ದೂರೀಕೃತವಾಗಿತ್ತೆಂಬುದೂ,ಅದನ್ನು ಸಿಂಹನಾದದಿಂದ ಉಂಟುಮಾಡಿದರು ಎಂಬುದೂ, ವ್ಯಕ್ತವು **ತತಃ** - ಅವರು ಶಂಖನಾದ ಮಾಡಿದ ನಂತರ, **ಶಂಖಾಶ್ಚ** - ಆ ಸೇನೆಯಲ್ಲೇ ಶಂಖಗಳೂ, ಭೇರಿ. ಗಳೂ, **ಪಣವಾನಕ ಗೋಮುಖಾಃ** - ಪಣವ, ಆನಕ, ಗೋಮುಖಗಳೆಂಬ ವಾದ್ಯ ವಿಶೇಷಗಳೂ ಸಹ, **ಸಹಸೈವ** - ಬೇಗನೇ, **ಅಭ್ಯಹನ್ಯನ್ತ** - ಹೊಡೆಯಲ್ಪಟ್ಟವು, **ಸ ಶಬ್ದಃ** - ಆ ಎಲ್ಲಾ ಸೇರಿದ ಶಬ್ದವು, **ತುಮುಲಃ** - ಸೇನೆಯಲ್ಲಿ ಅಲ್ಲೋಲಕಲ್ಲೋಲವಾದುದು, **ಅಭವತ್** - ಆಯಿತು.

**ಭಾಷ್ಯಾರ್ಥವು**—"**ತಸ್ಯ ವಿಷಾದ ಮಾಲಕ್ಷ್ಯ** . ಆ ದುರ್ಯೋಧನನ ವ್ಯಸನವನ್ನು ಕಂಡು, ಭೀಷ್ಮರು, **ತಸ್ಯ ಹರ್ಷಂ ಜನಯಿತುಂ**-ಆ ದುರ್ಯೋಧನನಿಗೆ ಭಯವು ತೊಲಗಿ ಹರ್ಷವನ್ನುಂಟು ಮಾಡುವದಕ್ಕಾಗಿ; ಸಿಂಹನಾದವನ್ನೂ ಶಂಖಧ್ವನಿಯನ್ನೂ ಮಾಡಿ, **ಶಂಖಭೇರೀ ನಿನಾದೈಶ್ಚ** - ಶಂಖಭೇರೀ ಇವುಗಳ ಎಂದು ಹೇಳಿದುದರಿಂದ ಮೂಲದಲ್ಲಿ ಹೇಳಲ್ಪಟ್ಟ ಪಣವಾದಿಗಳಿಗೂ ಉಪಲಕ್ಷಣವಾಗಿ ಭಾವಿಸತಕ್ಕದ್ದು, **ವಿಜಯಾಭಿಶಂಸಿನಂ**-ಜಯಹೊಂದಬೇಕೆಂಬಪೇಕ್ಷಾಸೂಚಕವಾದ **ಘೋಷಂಚ** - ಘೋಷವನ್ನೂ ಕೂಡ, **ಅಕಾರಯತ್** - ಮಾಡಿಸಿದರು." ಮೂಲದಲ್ಲಿ **ಹರ್ಷಂ ಸಂಜನಯ್ರ್ಯ** ಎಂಬಲ್ಲಿ ಹೇತ್ವರ್ಥಸೂಚಕವೆಂದು ತಿಳಿಸುವದಕ್ಕಾಗಿ **ಹರ್ಷಂ ಜನಯಿತುಂ** - ಎಂದು ವ್ಯಾಖ್ಯಾನಮಾಡಿರುತ್ತಾರೆ.

ಸೇನಾಪತಿಗಳಾದ ಶ್ರೀ ಭೀಷ್ಮರ ಸೇನೆಯಲ್ಲಿ ಹೀಗೆ ಶಂಖ ಬೇರೀ ಮೊದಲಾದವುಗಳ ಶಬ್ದಗಳ ಕೋಲಾಹಲವುಂಟಾದ ನಂತರ, ಆ ಘೋಷವನ್ನು ಆಕರ್ಣಿಸಿ ಲಕ್ಷ್ಮೀಪತಿಯಾದ ಶ್ರೀ ಕೃಷ್ಣನೂ ಅರ್ಜುನನೂ ಸಹ ತಮ್ಮತಮ್ಮ ಶಂಖಗಳಾದ ಪಾಂಚಜನ್ಯ ದೇವದತ್ತಗಳ ಘೋಷವನ್ನುಂಟುಮಾಡಿದರೆಂದು ಹೇಳುತ್ತಾರೆ :—

**ಮೂಲಕ್ಕೆ ಅರ್ಥವು :—ತತಃ** - ಆ ದುರ್ಯೋಧನನ ಸೇನೆಯಲ್ಲಿ ಶಂಖ ಭೇರೀ ಘೋಷಗಳುಂಟಾದ ನಂತರ, **ಶ್ವೇತೈರ್ಹಯೈಃ**-ಬಿಳೀ ಕುದುರೆಗಳಿಂದ, **ಯುಕ್ತೇ** - ಕಟ್ಟಿರುವ, **ಮಹತಿ ಸ್ಯಂದನೇ** - ಮಹಾ ಪ್ರಖ್ಯಾತಿಯನ್ನು ಹೊಂದಿದ ರಥದಲ್ಲಿ, **ಸ್ಥಿತೌ** - ಬಿಜಮಾಡಿರುವ, **ಮಾಧವಃ** - ಲಕ್ಷ್ಮೀಪತಿಯಾದ ಶ್ರೀ ಕೃಷ್ಣನೂ, **ಪಾಂಡವಶ್ಚೈವ** - ಪಾಂಡುವಿನ ಪುತ್ರನಾದ ಅರ್ಜುನನೂ ಸಹ; ದಿವ್ಯವಾದ ಶಂಖಗಳನ್ನು, **ಪ್ರದಧ್ಮತುಃ**-ಊದಿದರು. **ಹೃಷೀಕೇಶಃ** - ಸಮಸ್ತರ

ಮೂ. ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ।
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ॥ ೧೫

ಭಾ. ತತಸ್ತಂ ಘೋಷಮಾಕರ್ಣ್ಯ ಸರ್ವೇಶ್ವರೇಶ್ವರಃ ಪಾರ್ಥಸಾರಥೀರಥೀಚ ಪಾಂಡುತನಯ ಸ್ತ್ರೈಲೋಕ್ಯವಿಜಯೋಪಕರಣಭೂತೇ ಮಹತಿಸ್ಯಂದನೇ ಸ್ಥಿತೌ ತ್ರೈಲೋಕ್ಯಂ ಕಂಪಯಂತೌ ಶ್ರೀಮತ್ಪಾಂಚಜನ್ಯ ದೇವದತ್ತೌ ದಿವ್ಯೌ ಶಂಖೌ ಪ್ರದಧ್ಮತುಃ.

ಇಂದ್ರಿಯಗಳಿಗೂ ನಿಯಾಮಕನಾದ ಶ್ರೀ ಕೃಷ್ಣನು, ಪಾಂಚಜನ್ಯವೆಂಬ ಶಂಖವನ್ನೂ, ಧನಂ ಜಯಃ - ರಾಜಸೂಯಕ್ಕಾಗಿ ಧನವನ್ನು ಜಯಿಸಿ ತಂದ ಅರ್ಜುನನು, ದೇವದತ್ತವೆಂಬ ಶಂಖ ವನ್ನೂ, ಊದಿದರು.

ಭಾಷ್ಯಾರ್ಥವು—ತತಃ ಎಂಬಾರಂಭಿಸಿ, ದೇವದತ್ತಃ ಎಂಬುವವರೆಗೂ ಭಾಷ್ಯವನ್ನು ಬರೆ ಯುತ್ತಾರೆ:—ತತಃ - ಅನಂತರವಲ್ಲಿ, ತಂ ಘೋಷಮಾಕರ್ಣ್ಯ - ಆ ಧಾರ್ತರಾಷ್ಟ್ರರ ಸೇನೆಯ ಘೋಷವನ್ನು ಕೇಳಿ, ಸರ್ವೇಶ್ವರೇಶ್ವರಃ-ಇದು ಮಾಧವ ಶಬ್ದಕ್ಕೆ ವ್ಯಾಖ್ಯಾನವು, ಬ್ರಹ್ಮರುದ್ರಾದಿ ಸಮಸ್ತರಾದ ಈಶ್ವರರಿಗೂ ಸ್ವಾಮಿಯಾದ, ಪುರುಷಸೂಕ್ತದಲ್ಲಿ ಪರತತ್ವವು ನಾರಾಯಣನೆಂದು ಹೇಳಿ,ಆತನು ಯಾರೆಂಬ ವ್ರಶ್ನೆಯಲ್ಲಿ "ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ" ಎಂದು ಹೇಳಿ ಶ್ರಿಯಃ ಪತಿತ್ವವು ಸ್ವರೂಪ ನಿರೂಪಕ ಧರ್ಮವಾದುದರಿಂದ, ಆ ಮಾಧವನು ಸರ್ವೇಶ್ವರೇಶ್ವರನೆಂದು ವ್ಯಾಖ್ಯಾನಮಾಡಿದರು. ಆತನೀಗ ಪಾರ್ಥಸಾರಥಿಃ - ಅರ್ಜುನನಿಗೆ ಲೀಲಾಸಾರಥಿಯಾಗಿರುವ ಶ್ರೀಕೃಷ್ಣನು; ಆತನೂ ಮತ್ತು ರಥೀಚ- ರಥವಲ್ಲಿ ಕೂತಿರುವ, ಪಾಂಡುತನಯಃ - ಪಾಂಡುವಿನ ಮಗನಾದ ಅರ್ಜುನನೂ, ತ್ರೈಲೋಕ್ಯ ವಿಜಯೋಪಕರಣಭೂತೇ- ಇದು ಮಹತಿ ಎಂಬುದರ ವ್ಯಾಖ್ಯಾನವು, ಬರೀ ಗಾತ್ರದಲ್ಲಿ ದೊಡ್ಡದೆಂಬ ಅರ್ಥಮಾತ್ರವಲ್ಲವು, ಮಹಿಮೆಯಲ್ಲಿ ದೊಡ್ಡದೆಂದು ಹೇಳುವದಕ್ಕಾಗಿ ಮೂರು ಲೋಕದ ವಿಜಯಕ್ಕೂ ಕೂಡ ಕಾರಣಭೂತವಾದ, ಮಹತಿಸ್ಯಂದನೇ- ಮಹತ್ತಾದ ರಥದಲ್ಲಿ, ಸ್ಥಿತೌ - ಇರುವರಾಗಿ, ತ್ರೈಲೋಕ್ಯಂಕಂಪಯಂತೌ- ಮೂರು ಲೋಕ ವನ್ನೂ ಶಂಖಧ್ವನಿಯಿಂದ ನಡುಗಿಸುವವರಾಗಿ,ಇದರಿಂದ ಶತ್ರುಪಕ್ಷದವರೂ ನಡುಗಿದರೆಂದು ಹೇಳ ಬೇಕಾದುದಿಲ್ಲವೆಂಬ ಭಾವವು- ಶ್ರೀಮತ್ಪಾಂಚಜನ್ಯವೆಂಬ ಮತ್ತು ದೇವದತ್ತವೆಂಬ, ದಿವ್ಯಗಳಾದ ತಮ್ಮತಮ್ಮ ಶಂಖಗಳನ್ನು, ಪ್ರದಧ್ಮತುಃ-ಊದಿದರು. ಇಲ್ಲಿ ದಿವ್ಯವಾದ ಅಗ್ನಿದತ್ತವಾದ ರಥವೂ, ಅದರಲ್ಲಿ ಅಗ್ರಸ್ಥಾನದಲ್ಲಿ ಸರ್ವೇಶ್ವರನು ಕುಳಿತು ದಿವ್ಯ ಶಂಖವನ್ನು ಊದೋಣವೂ, ಅರ್ಜುನಾದಿ ಗಳೂ ದಿವ್ಯ ಶಂಖಗಳನ್ನು ಊದೋಣವೂ, ಅರ್ಜುನನಿಗೆ ಕಪಿರೂಪ ಧ್ವಜವೂ, ಹೀಗೆ ಎಲ್ಲವೂ ದಿವ್ಯವಾದುದಾಗಿ ಶತ್ರುಪಕ್ಷಕ್ಕಿಂತ ವೈಲಕ್ಷಣ್ಯ ಹೇಳಿದುದರಿಂದ, ಸಂಜಯನು ಹೇಳುವ ಉತ್ತರ ವಾದ " ಯತ್ರಯೋಗೇಶ್ವರಃಕೃಷ್ಣೋ ಯತ್ರಪಾರ್ಥೋ ಧನುರ್ಧರಃ " ಎಂಬ ಜಯಸೂಚ ಕದ ಅಭಿಪ್ರಾಯವು ಇಲ್ಲಿಯೂ ತೋರಿಬರುತ್ತದೆ.

ಮೂಲಕ್ಕೆ ಅರ್ಥವು—ಭೀಮಕರ್ಮಾ - ಭಯಂಕರವಾದ ವ್ಯಾಪಾರಗಳುಳ್ಳ, ವೃಕೋ ದರಃ - ಪ್ರಬಲ ಜಾಠರಾಗ್ನಿಯನ್ನು ಉದರದಲ್ಲಿವುಳ್ಳ ಭೀಮನು ಅಥವ ತೋಳನ ಹಾಗೆ ಹೊಟ್ಟೆ ಯುಳ್ಳವನು ಪೌಂಡ್ರ ವೆಂಬ ಮಹಾ ಶಂಖವನ್ನು ದಧ್ಮೌ - ಊದಿದನು ॥೧೫॥

ರಾಜನಾದ ಕುಂತೀಪುತ್ರನಾದ ಯುಧಿಷ್ಠಿರನು(ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವವನು) ಅನಂತ ವಿಜಯವೆಂಬ ಶಂಖವನ್ನೂ, ನಕುಲ ಸಹದೇವರು ಸುಘೋಷ ಮಣಿಪುಷ್ಪಕಗಳೆಂಬ ಶಂಖಗ ಳನ್ನೂ ಊದಿದರು ॥ ೧೬ ॥ ಪರಮೇಷ್ವಾಸಃ - ಶ್ರೇಷ್ಠವಾದ ಧನುಸ್ಸುಳ್ಳ, ಕಾಶ್ಯಶ್ಚ - ಕಾಶೀ

ಮೂ. ಅನನ್ತವಿಜಯಂ ರಾಜಾ ಕುನ್ತೀಪುತ್ರೋ ಯುಧಿಷ್ಠಿರಃ ।
ನಕುಲಃ ಸಹದೇವಶ್ಚ ಸುಘೋಷ ಮಣಿಪುಷ್ಪಕೌ ॥ ೧೬
ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।
ದೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭
ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ಪೃಥಕ್ ॥ ೧೮
ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂಚೈವ ತುಮುಲೋ ವ್ಯನುನಾದಯನ್ ॥ ೧೯

---

ಭಾ. ತತೋ ಯುಧಿಷ್ಠಿರೋ ವೃಕೋದರಾದಯಶ್ಚ ಸ್ವಕೀಯಾನ್ ಶಂಖಾನ್ ಪೃಥಕ್ಪೃಥಕ್ ಪ್ರದಧ್ಮುಃ. ಸಘೋಷೋ ದುರ್ಯೋಧನ ಪ್ರಮುಖಾನಾಂ ಸರ್ವೇಷಾಮೇವ ಭವತ್ಪುತ್ರಾಣಾಂ ಹೃದಯಾನಿ ಬಿಭೇದ. "ಅದ್ಯೈವ ನಷ್ಟಂ ಕುರೂಣಾಂ ಬಲಂ" ಇತಿ

---

ರಾಜನೂ, ಮಹಾರಥನಾದ ಶಿಖಂಡಿಯೂ, ದೃಷ್ಟದ್ಯುಮ್ನನೂ, ವಿರಾಟರಾಜನೂ, ಅಪರಾಜಿತಃ- ಯುದ್ಧದಲ್ಲಿ ಜಯಿಸಲಸಾಧ್ಯನಾದ ಸಾತ್ಯಕಿಯೂ ದ್ರುಪದನೂ ದ್ರೌಪದೇಯಾಶ್ಚ - ಉಪಪಾಂಡವರಾದ ಪ್ರತಿವಿಂಧ್ಯ ಮೊದಲಾದವರೂ, ಮಹಾಬಾಹುಃ - ಮಹಾಬಾಹುಪರಾಕ್ರಮಶಾಲಿಯಾದ, ಸೌಭದ್ರಶ್ಚ-ಕೃಷ್ಣನ ತಂಗಿಯಾದ ಸುಭದ್ರೆಯ ಮಗನಾದ ಅಭಿಮನ್ಯುವೂ,ಇವರೆಲ್ಲರೂ, ಸರ್ವತಃ - ಎಲ್ಲಾ ಕಡೆಯಿಂದಲೂ, ಹೇ ಪೃಥಿವೀಪತೇ - ಓ ಧೃತರಾಷ್ಟ್ರನೇ, ಪೃಥಕ್ಪೃಥಕ್- ಬೇರೆಬೇರೆಯಾಗಿ, ಶಂಖಾನ್ ದಧ್ಮುಃ - ತಮ್ಮ ತಮ್ಮ ಶಂಖಗಳನ್ನು ಊದಿದರು. ॥೧೬. ೧೮॥

ಸಘೋಷಃ - ಆ ಎಲ್ಲಾ ಶಂಖಗಳ ನಾದವು, ಧಾರ್ತರಾಷ್ಟ್ರಾಣಾಂ - ಧೃತರಾಷ್ಟ್ರನಾದ ನಿನ್ನ ಮಕ್ಕಳುಗಳಾದ ದುರ್ಯೋಧನಾದಿಗಳ, ಹೃದಯಗಳನ್ನು, ವ್ಯದಾರಯತ್ - ಬೇಧಿಸಿತು. ಹೀಗೆ ದುರ್ಯೋಧನಾದಿಗಳ ಹೃದಯಗಳನ್ನು ಬೇಧಿಸಿತು ಎಂದು ಸಂಜಯರು ಹೇಳಿರುವದರಿಂದ ಮೊದಲೇ ಚಮೂವನ್ನವಲೋಕಿಸಿದ ಮಾತ್ರದಿಂದಲೇ ದುರ್ಯೋಧನಾದಿಗಳಿಗೆ ಅಧೈರ್ಯ ವಿಷಾದಗಳನ್ನು ಉಂಟುಮಾಡಿದುದು, ಈಗ ಇನ್ನೂ ಅಧೈರ್ಯಕ್ಕೆ ಕಾರಣವಾಗಿ ಹೃದಯವನ್ನೇ ಶೀಳಿತು ಎಂದು ಹೇಳಿರುತ್ತಾರೆ. ಹೃದಯವನ್ನು ಶೀಳಿದುದೇನೂ ಆಶ್ಚರ್ಯವಲ್ಲವು ಏಕೆಂದರೆ, ನಭಶ್ಚ-ಆಕಾಶವನ್ನೂ, ಪೃಥಿವೀಂಚೈವ - ಈ ಜಗತ್ತನ್ನೂ ಸಹ, ಆ ಶಂಖಗಳ ಘೋಷವು, ತುಮುಲಃ - ಅಲ್ಲೋಲಕಲ್ಲೋಲವಾಗುವುದಾಗಿ, ಅನುನಾದಯನ್ - ಪ್ರತಿಧ್ವನಿ ಕೊಟ್ಟಿದುದರಿಂದಲೇ ಎಂಬ ಭಾವವು.

ಭಾಷ್ಯಕ್ಕೆ ಅರ್ಥವು—ತತಃ - ಅನಂತರದಲ್ಲಿ, ಯುಧಿಷ್ಠಿರ ಭೀಮಸೇನಾದಿಗಳು, ಸ್ವಕೀಯಾನ್ - ತಮ್ಮ ತಮ್ಮ ಶಂಖಗಳನ್ನು, ಪೃಥಕ್ ಪೃಥಕ್ ಪ್ರದಧ್ಮುಃ-ಬೇರೆಬೇರೆಯಾಗಿ ಊದಿದರು. ಧಾರ್ತರಾಷ್ಟ್ರರಾದರೋ ಭೀಷ್ಮರು ಊದಿದ ಒಡನೆಯೇ ಎಲ್ಲರೂ ಒಟ್ಟಿಗೆ ಸಹಸೈವಾಭ್ಯಹನ್ಯನ್ತ ವೆಂದು ಹೇಳಿರುವದರಿಂದ ಶತ್ರು ಹೃದಯಕ್ಕೆ ಅಷ್ಟು ಭಯೋತ್ಪಾದನವಾಗಲಿಲ್ಲವು. ಪಾಂಡವರ ಸೈನ್ಯದಲ್ಲಿಯಾದರೋ ಶಂಖಗಳೂ ಬಹು ಪ್ರಖ್ಯಾತಿಯುಳ್ಳವುಗಳಾಗಿರುವದರಿಂದ ಅವುಗಳಿಗೆಲ್ಲಾ ಹೆಸರುಗಳಿದ್ದುದರಿಂದಲೂ, ಬೇರೆಬೇರೆಯಾಗಿ ತುಂಬಾ ಕಾಲವು ಘೋಷವಿದ್ದುದರಿಂದಲೂ ಭವತ್ಪುತ್ರಾಣಾಂ ಹೃದಯಾನಿ ಬಿಭೇದ - ಓ ಧೃತರಾಷ್ಟ್ರನೇ ನಿನ್ನ ಮಕ್ಕಳಾದ ದುರ್ಯೋಧನಾದಿಗಳ ಹೃದಯಗಳನ್ನು ಆ ಘೋಷವು ಬೇಧಿಸಿತು ; "ಕುರೂಣಾಂ ಬಲಂ - ಕೌರ

ಮೂ. ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦
ಹೃಷೀಕೇಶಂ ತದಾ ವಾಕ್ಯ ಮಿದ ಮಾಹ ಮಹೀಪತೇ ।
ಅರ್ಜುನ ಉವಾಚ—
ಸೇನಯೋ ರುಭಯೋ ರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥ ೨೧

---

ಭಾ. ಧಾರ್ತರಾಷ್ಟ್ರಾ ಮೇನಿರೇ. ಏವಂ ತದ್ವಿಜಯಾಭಿಕಾಂಕ್ಷಿಣೇ ಧೃತರಾಷ್ಟ್ರಾಯ ಸಂಜಯೋಽಕಥಯತ್.

---

ವರ ಬಲವೆಲ್ಲಾ, ಅದ್ಯೈವ ನಷ್ಟಂ-ಈಗಲೇ ನಷ್ಟ ಹೊಂದಿತು". ಇತಿ - ಎಂಬದಾಗಿ, ಧಾರ್ತರಾಷ್ಟ್ರಾಃ - ದುರ್ಯೋಧನಾದಿ ಕೌರವರೆಲ್ಲರೂ, ಮೇನಿರೆ - ತಿಳಿದರು ; ಏವಂ - ಈ ಪರಿಯಲ್ಲಿ, ತದ್ವಿಜಯಾಭಿಕಾಂಕ್ಷಿಣೇ - ಆ ದುರ್ಯೋಧನಾದಿಗಳಿಗೆ ಜಯವನ್ನಪೇಕ್ಷಿಸುತ್ತಿದ್ದ, ಧೃತರಾಷ್ಟ್ರನಿಗೆ, ಸಂಜಯರು, ಅಕಥಯತ್ - ಹೇಳಿದರು, ಈ ಮೇಲಿನ ಸಂಜಯ ವಾಕ್ಯಗಳಲ್ಲಿ ಪಾಂಡವರ ಪ್ರಖ್ಯಾತವಾದ ಶಂಖಗಳ ಹೆಸರುಗಳನ್ನು ಹೇಳಿದ್ದಲ್ಲದೆ, ಭೀಮಕರ್ಮಾವೃಕೋದರಃ ಎಂದೂ ಕಾಶ್ಯಶ್ಚ ಪರಮೇಷ್ವಾಸಃ ಎಂದೂ, ಶಿಖಂಡೀ ಚ ಮಹಾರಥಃ ಎಂದೂ ಸಾತ್ಯಕಿಶ್ಚಾಪರಾಜಿತಃ ಎಂದೂ, ಹೀಗೆಲ್ಲಾ ಯುದ್ಧವಿಶಾರದರಿಗೆ ಕೊಟ್ಟಿರುವ ವಿಶೇಷಣಗಳಿಂದಲೂ, ತನ್ನವರಿಗೆ ವಿಜಯವನ್ನಪೇಕ್ಷಿಸುತ್ತಿದ್ದ ಧೃತರಾಷ್ಟ್ರನಿಗೆ ಅಪಜಯ ಸೂಚಕವಾದ ವೃತ್ತಾಂತವೇ ತೋರಿಬರುತ್ತದೆ. ಇದೂ ಅಲ್ಲದೆ ಮಾಧವಃ ಪಾಂಡವಶ್ಚೈವ ಎಂದಾರಂಭಿಸಿ ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ಎಂದು ಇಬ್ಬರನ್ನು ಮಾತ್ರವೇ ಪ್ರಥಮದಲ್ಲಿ ಹೇಳಿರುವದು "ಯತ್ರಯೋಗೇಶ್ವರಃ ಕೃಷ್ಣೋ ಯತ್ರಪಾರ್ಥೋಧನುರ್ಧರಃ" ಎಂದು ಕೊನೆಯಲ್ಲಿ ಹೇಳಿರುವಹಾಗೆ, ವಿಜಯಸೂಚಕವೂ ಅಲ್ಲದೆ ಧಾರ್ತರಾಷ್ಟ್ರಾದಿಗಳಿಗೆ ಅತೀವ ಭಯಸೂಚಕವೆಂದೂ ತೋರಿಬರುತ್ತದೆ. ಆದುದರಿಂದಲೇ ಅದ್ಯೈವ ನಷ್ಟಂ ಕುರೂಣಾಂಬಲಂ ಎಂದು ಕೌರವರು ತಿಳಿದರು ಎಂದು ಅರ್ಥಬೋಧವುಂಟಾಗುವಹಾಗೆ ಸಂಜಯರು ನುಡಿದರು ಎಂದು ವ್ಯಾಖ್ಯಾನಮಾಡಿರುತ್ತಾರೆ-

**ಮೂಲಕ್ಕೆ ಅರ್ಥವು—ಅಥ** - ಅನಂತರದಲ್ಲಿ, **ಹೇ ಮಹೀಪತೇ** - ಓ ರಾಜನಾದ ಧೃತರಾಷ್ಟ್ರನೇ, **ಧಾರ್ತರಾಷ್ಟ್ರಾನ್** - ನಿನ್ನಕಡೆಯವರಾದ ಕೌರವ ಸೇನೆಯನ್ನು, **ವ್ಯವಸ್ಥಿತಾನ್** . ಯುದ್ಧಮಾಡಲು ನಿಶ್ಚಯಬುದ್ಧಿಯುಳ್ಳವರಾಗಿರುವವರನ್ನಾಗಿ, **ದೃಷ್ಟ್ವಾ** - ಕಂಡು, **ಕಪಿಧ್ವಜಃ** - ರಾಕ್ಷಸರನ್ನೆಲ್ಲಾ ನಿರ್ಮೂಲಮಾಡಿ ಲಂಕಾದಹನಮಾಡಿದ ಹನುಮಂತನನ್ನೇ ಧ್ವಜದಲ್ಲಿಯುಳ್ಳ, **ಪಾಂಡವಃ** - ಅರ್ಜುನನು, **ಶಸ್ತ್ರಸಂಪಾತೇ** – ಬಾಣಮೊದಲಾದ ಆಯುಧಗಳ ಬೀಳೋಣವು, **ಪ್ರವೃತ್ತೇ** – ಉಂಟಾಗುತಿರಲಿಕ್ಕಾಗಿ, **ಧನುಃ** – ತನ್ನ ಧನುಸ್ಸಾದ ಗಾಂಡೀವವನ್ನು, **ಉದ್ಯಮ್ಯ** – ಮೇಲಕ್ಕೆ ಎತ್ತಿದವನಾಗಿ, **ತದಾ** – ಆಗ, **ಹೃಷೀಕೇಶಂ** – ಸರ್ವರ ಇಂದ್ರಿಯಗಳಿಗೂ ಅವರವರ ಕರ್ಮಾನುಸಾರ ನಿಯಾಮಕನಾದ ಶ್ರೀಕೃಷ್ಣನನ್ನು ಕುರಿತು, **ಇದಂ** – ಈ ಮುಂದಿನ ವಾಕ್ಯವನ್ನು, ಆಹ- ಹೇಳಿದನು. ॥ ೨೦ ॥

ಅರ್ಜುನನು ಹೇಳುತ್ತಾನೇನೆಂದರೆ:—

"**ಹೇ ಅಚ್ಯುತ** – ಆಶ್ರಿತರನ್ನು ಎಂದಿಗೂ ಜಾರಿಬೀಳದಹಾಗೆ ಮಾಡುವವನು, ಅಥವಾ ಆಶ್ರಿತರಲ್ಲಿ ಜಾರಿಬಿದ್ದವರ್‍ಯಾರೂ ಇಲ್ಲದವನು, ಇಂತಹ ಓ ಶ್ರೀಕೃಷ್ಣನೇ, **ಉಭಯೋಃ** - ಎರಡು,

ಮೂ. ಯಾವದೇತಾ‍ನ್ ನಿರೀಕ್ಷೇಽಹಂ ಯೋದ್ಧುಕಾಮಾ ನವಸ್ಥಿ ತಾನ್ ।
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥ ೨೨
ಯೋತ್ಸ್ಯಮಾನಾ ನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇ ರ್ಯುದ್ಧೇ ಪ್ರಿಯಚಿಕೀರ್ಷವಃ ॥ ೨೩

ಭಾ. ಅಥ ಯುಯುತ್ಸೂ ನವಸ್ಥಿತಾನ್ಧಾರ್ತರಾಷ್ಟ್ರಾನ್ ದೃಷ್ಟ್ವಾ. ಲಂಕಾದಹನ ವಾನರ ಧ್ವಜಃ ಪಾಂಡುತನಯೋ, ಜ್ಞಾನಶಕ್ತಿ ಬಲೈಶ್ವರ್ಯ ವೀರ್ಯತೇಜಸಾಂ ನಿಧಿಂ ಸ್ವಸಙ್ಕಲ್ಪ ಕೃತ ಜಗದುದಯ ವಿಭವ ಲಯಲೀಲಂ, ಹೃಷೀಕೇಶಂ, ಪರಾವರನಿಖಿಲಜನಾ ನ್ತರ

ಸೇನೆಗಳ, ಮಧ್ಯದಲ್ಲಿ, ಮೇ ರಥಂ - ನನ್ನ ರಥವನ್ನು, ಸ್ಥಾಪಯ - ನಿಲ್ಲಿಸು, ಎಲ್ಲಿಯವರೆಗೆ ಏತ ಕ್ಕಾಗಿ ಹಾಗೆ ನಿಲ್ಲಿಸತಕ್ಕದ್ದೆಂದರೆ ಹೇಳುತ್ತಾನೆ:—ಯಾವತ್ - ಎಷ್ಟು ಕಾಲದಲ್ಲಿ, ಯೋದ್ಧು ಕಾಮಾನ್ - ಯುದ್ಧಮಾಡಲಪೇಕ್ಷೆಯುಳ್ಳವರಾಗಿ, ಅವಸ್ಥಿತಾನ್ - ನಿಂತಿರುವ, ಏತಾನ್-ಈ ಕೌರವ ರನ್ನು, ಅಹಂ - ನಾನು, ನಿರೀಕ್ಷೇ- ಚನ್ನಾಗಿ ನೋಡುವೆನೋ, ಮತ್ತು ಅಸ್ಮಿನ್ ರಣಸಮುದ್ಯಮೇ ಈ ಯುದ್ಧ ಸಮಾರಂಭದಲ್ಲಿ, ಕೈಸ್ಸಹ - ಯಾವ ಶತ್ರುಪಕ್ಷದವರೊಂದಿಗೆ, ಮಯಾ - ನನ್ನಿಂದ, ಯೋದ್ಧವ್ಯಂ - ಯುದ್ಧಮಾಡತಕ್ಕದ್ದೋ, ದುರ್ಬುದ್ಧೇಃ - ಅಧರ್ಮಬುದ್ಧಿಯುಳ್ಳ, ಧಾರ್ತ ರಾಷ್ಟ್ರಸ್ಯ – ದುರ್ಯೋಧನನಿಗೆ, ಯುದ್ಧೇ – ಯುದ್ಧದಲ್ಲಿ, ಪ್ರಿಯಚಿಕೀರ್ಷವಃ – ಹಿತವನ್ನು ಮಾಡುವ, ಯೇ ಏತೇ – ಯಾವ ಈ ಪರಾಕ್ರಮಿಗಳು, ಅತ್ರ ಸಮಾಗತಾಃ – ಈ ರಣರಂಗ ದಲ್ಲಿ ಬಂದಿರುತ್ತಾರೋ, ಯೋತ್ಸ್ಯಮಾನಾನ್ – ಇಂತಹ ಯುದ್ಧಮಾಡತಕ್ಕಂಥಾ, ತಾನ್ – ಅವ ರನ್ನು, ಅವೇಕ್ಷೇ – ನೋಡುತ್ತೇನೋ, ಅಷ್ಟರೊಳಗೆ ರಥವನ್ನು ನಿಲ್ಲಿಸು ಎಂದು ಅನ್ವಯವು. ॥ ೨೧, ೨೨, ೨೩ ॥

ಅರ್ಜುನನು ಶ್ರೀಕೃಷ್ಣನನ್ನು ಕುರಿತು ಎರಡು ಸೇನೆಗೂ ಮಧ್ಯದಲ್ಲಿ ರಥವನ್ನು ನಿಲ್ಲಿಸು ಎಂದು ಏತಕ್ಕಾಗಿ ಪ್ರಾರ್ಥಿಸಿದನೆಂದರೆ:—ಎರಡು ಸೇನೆಯೂ ಏಕಕಾಲದಲ್ಲಿ ಕಣ್ಣಿಗೆ ಬೀಳುವದರಿಂದ ಜಯವಿಷಯ ಹೇಗೆ ಎಂದು ತಿಳಿಯುವ ಅಪೇಕ್ಷೆಯೂ ಅಲ್ಲದೆ ಶತ್ರುಪಕ್ಷದಲ್ಲಿ ಯಾವಯಾವ ವೀರ ರೊಂದಿಗೆ ತಾನು ಯುದ್ಧಮಾಡಬೇಕಾಗುತ್ತದೆಂದು ತಿಳಿದುಕೊಳ್ಳುವದಕ್ಕಾಗಿಯೂ, ಹಾಗೆ ಕೌರ ವರಿಗೆ ಸಹಾಯಮಾಡುವವರಾಗಿ ಉತ್ಸಾಹದಿಂದ ಯುದ್ಧಮಾಡಲು ನಿಂತಿರುವ ಪರಾಕ್ರಮಿಗಳು ಯಾರಿದ್ದಾರೆಂದು ತಿಳಿಯುವದಕ್ಕಾಗಿಯೂ ಹಾಗೆ ಪ್ರಾರ್ಥಿಸಿದನೆಂಬ ಭಾವವು.

ಭಾಷ್ಯಾರ್ಥವು—ಅಥ-ಅನಂತರದಲ್ಲಿ, ಯುಯುತ್ಸೂನವಸ್ಥಿತಾನ್-ಇದು ಮೂಲದ ವ್ಯವ ಸ್ಥಿತಾನ್ ಎಂಬುವದರರ್ಥವು, ಯುದ್ಧಮಾಡಬೇಕೆಂದು ನಿಂತಿರುವ, ಧಾರ್ತರಾಷ್ಟ್ರಾನ್ - ದುರ್ಯೋ ಧನಾದಿ ಕೌರವರನ್ನು, ದೃಷ್ಟ್ವಾ - ಕಂಡು, ಲಂಕಾದಹನವಾನರಧ್ವಜಃ - ಇದು ಕಪಿಧ್ವಜ ವೆಂಬ ಪದದ ವ್ಯಾಖ್ಯಾನವು, ಈ ಅರ್ಜುನನ ಧ್ವಜವು, ಬರೀ ಗುರುತಿಗಾಗಿ ಒಂದು ವಾನರಾಕೃತಿ ಯನ್ನು ಧ್ವಜದಲ್ಲಿಟ್ಟಿದ್ದವಲ್ಲವು, ರಾಕ್ಷಸರನೆಲ್ಲಾ ನಿರ್ಮೂಲವಾದಿ ಲಂಕೆಗೆ ಬೆಂಕಿಯನ್ನಿಟ್ಟ ವಾಯುಪುತ್ರನನ್ನೇ ಧ್ವಜದಲ್ಲಿ ಉಳ್ಳವನು, ಈ ಧ್ವಜವು ಸೌಗಂಧಿಕಯಾತ್ರೆಯಲ್ಲಿ ಆಂಜನೇಯ ನಿಂದ ಕೊಡಲ್ಪಟ್ಟದ್ದುದಾದುದರಿಂದ ಕೌರವನಾಶವೂ ಪಾರ್ಥಾದಿಗಳಿಗೆ ಜಯವೂ ಸೂಚಿಸಲ್ಪಟ್ಟ ವೆಂದು ತಿಳಿಸುವದಕ್ಕಾಗಿ ಲಂಕಾದಹನವಾನರಧ್ವಜನೆಂದು ಇಲ್ಲಿ ಹೇಳಲ್ಪಟ್ಟಿತು. ಇಂತಹ ಪಾಂಡುವಿನ ಮಗನಾದ ಅರ್ಜುನನು, ಮುಖ್ಯವಾದ ಜ್ಞಾನಶಕ್ತಿ ಮೊದಲಾದ ಆರು ಗುಣಗಳಿಂದ ಯುಕ್ತನಾದ, ಸ್ವಸಙ್ಕಲ್ಪಕೃತ ಜಗದುದಯ ವಿಭವ ಲಯಲೀಲಂ - ತನ್ನ ಸಙ್ಕಲ್ಪಮಾತ್ರ

ಸಂಜಯ ಉವಾಚ—

ಮೂ. ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥ ೨೪
ಭೀಷ್ಮದ್ರೋಣ ಪ್ರಮುಖತ ಸ್ಸರ್ವೇಷಾಂ ಚ ಮಹೀಕ್ಷಿತಾಂ ।
ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥ ೨೫

ಭಾ. ಬಾಹ್ಯಕರಣಾನಾಂ ಸರ್ವಪ್ರಕಾರ ನಿಯಮನೇಽವಸ್ಥಿತ, ಮಾಶ್ರಿತ ವಾತ್ಸಲ್ಯವಿವಶತಯಾ ಸ್ವಸಾರಥ್ಯೇಽವಸ್ಥಿತಂ, ಯುಯುತ್ಸೂನ್ ಯಥಾವದವೇಕ್ಷಿತುಂ ತದೀಕ್ಷಣಕ್ಷಮೇ ಸ್ಥಾನೇ ರಥಂ ಸ್ಥಾಪಯೇತ್ಯಚೋದಯತ್.

ದಿಂದಲೇ ಜಗತ್ತುಗಳ ಸೃಷ್ಟಿಸ್ಥಿತಿ ಲಯಗಳನ್ನೇ ಲೀಲೆಯಾಗಿವುಳ್ಳ, ಪರಾವರ ನಿಖಿಲಜನ-ಬ್ರಹ್ಮ ರುದ್ರಾದಿಗಳಾದ ಪರರು - ಶ್ರೇಷ್ಠರು ಮತ್ತು ಇತರರಾದ, ಅವರರು - ಶ್ರೇಷ್ಠರಲ್ಲದವರು ಹೀಗೆ; ನಿಖಿಲಜನ - ಸಮಸ್ತ ಜನರ, ಅನ್ತರಬಾಹ್ಯಕರಣಾನಾಂ - ಅಂತರಿಂದ್ರಿಯವಾದ ಮನಸ್ಸು, ಬಹಿರಿಂದ್ರಿಯಗಳಾದ ದರ್ಶೇಂದ್ರಿಯಗಳು, ಇವುಗಳ, ಸರ್ವಪ್ರಕಾರ ನಿಯಮನೇಽವಸ್ಥಿತಂ-ಸಮಸ್ತ ವಿಧವಾದ ನಿಯಮಿಸೋಣದರಲ್ಲಿರುವ, ಆದುದರಿಂದಲೇ ಹೃಷೀಕೇಶನೆಂದು ಹೇಳಿಸಿಕೊಳ್ಳುವ, ಆಶ್ರಿತವಾತ್ಸಲ್ಯ ವಿವಶತಯಾ - ಆಶ್ರಿತರಲ್ಲಿ ತನಗಿರುವ ವಾತ್ಸಲ್ಯಕ್ಕೆ ಪರವಶನಾಗಿ, ಸ್ವಸಾರಥ್ಯೇವಸ್ಥಿತಂ - ತನಗೆ ಈಗ ಸಾರಥಿಯಾಗಿ ಕೂತಿರುವ, ಶ್ರೀ ಕೃಷ್ಣನನ್ನು, ಇದರಿಂದ ಶ್ರೀ ಕೃಷ್ಣನೇನೂ ಕರ್ಮಬಲದಿಂದ ಸಾರಥಿಯಲ್ಲವು, ಷಾಡ್ಗುಣ್ಯ ಪರಿಪೂರ್ಣನಾಗಿ ಆದಿಕಾರಣನಾದ ಭಗವಂತನೇ ಆಶ್ರಿತ ವಾತ್ಸಲ್ಯಕ್ಕೆ ಅಧೀನನಾಗಿ ತನ್ನ ಸಙ್ಕಲ್ಪದಿಂದಲೇ ಅರ್ಜುನನಿಗೆ ಲೀಲಾಸಾರಥಿಯಾಗಿರುತ್ತಾನೆಂದು ಹೇಳಲ್ಪಟ್ಟಿತು; ಯುಯುತ್ಸೂನ್ - ಶತ್ರುಪಕ್ಷದಲ್ಲಿ ಯುದ್ಧಕಾಮರಾಗಿರುವವರನ್ನು, ಯಥಾವದವೇಕ್ಷಿತುಂ - ಹೇಗಿದ್ದಾರೋ ಅವರನ್ನು ತಿಳಿಯುವದಕ್ಕಾಗಿ, ತದೀಕ್ಷಣಕ್ಷಮೇ-ಹಾಗೆ ಅವರುಗಳನ್ನೆಲ್ಲಾ ಚನ್ನಾಗಿ ನೋಡಲು ಯೋಗ್ಯವಾದ ಸ್ಥಾನದಲ್ಲಿ, ರಥಂ ಸ್ಥಾಪಯ – ರಥವನ್ನು ನಿಲ್ಲಿಸು ಎಂದು, ಅಚೋದಯತ್ - ಪ್ರೇರಿಸಿದನು. ಇಲ್ಲಿ ಆಶ್ಚರ್ಯವೇನೆಂದರೆ, ಸರ್ವರಿಗೂ ನಿಯಾಮಕನಾದ ಹೃಷೀಕೇಶ ನಾಗಿದ್ದರೂ ಈಗ ಭಕ್ತವಾತ್ಸಲ್ಯಕ್ಕೆ ವಶನಾಗಿ ರಥ ನಡಿಸುವವನಾಗಿ ಅತನಿಂದ ರಥಂಸ್ಥಾಪಯ - ಎಂದು ಆಜ್ಞಾಪಿಸಲ್ಪಟ್ಟಿರುವದು ಲೋಕನಾಯಕನ ದಿವ್ಯ ಚೇಷ್ಟಿತವು. ಹಾಗೆಯೇ ರಾಮಾಯಣದಲ್ಲಿ "ಲೋಕನಾಥಃ ಪುರಾಭೂತ್ವಾ ಸುಗ್ರೀವಂ ನಾಥಮಿಚ್ಛತಿ" ಮೊದಲೆಲ್ಲಾ ಸರ್ವಲೋಕಗಳಿಗೂ ಸ್ವಾಮಿಯಾಗಿರುವ ಈ ಶ್ರೀರಾಮನು ಸೀತಾನ್ವೇಷಣಾದಿಗಳಾದ ಮಹತ್ತಾದ ಕಾರ್ಯಗಳಲ್ಲಿ ಸುಗ್ರೀವನನ್ನು ಸ್ವಾಮಿಯಾಗಿರಬೇಕೆಂದು ಪ್ರಾರ್ಥಿಸಿದನೆಂಬುದು ಹೇಗೆ ಲೋಕವಿಡಂಬನವೋ ಹಾಗೆಯೇ ಇಲ್ಲಿಯೂ ಎಂಬ ಭಾವವು. ॥ ೨೩ ॥

ಧೃತರಾಷ್ಟ್ರನನ್ನು ಕುರಿತು ಸಂಜಯರು ಹೇಳುತ್ತಾರೆ:—

ಮೂಲಕ್ಕೆ ಅರ್ಥವು :—ಓ ಭಾರತ - ಓ ಭರತವಂಶದವನಾದ ಧೃತರಾಷ್ಟ್ರನೇ, ಹೃಷೀಕೇಶಃ - ಶ್ರೀಕೃಷ್ಣನು, ಗುಡಾಕೇಶೇನ-ನಿದ್ರೆಯನ್ನು ಜಯಿಸಿದವನಾಗಿ ಅಜ್ಞಾನವಿಲ್ಲದ ಅರ್ಜುನನಿಂದ, ಏವ ಮುಕ್ತಃ-ಹೀಗೆ ಹೇಳಲ್ಪಟ್ಟವನಾಗಿ, ಉಭಯಸೇನೆಗಳ ಮಧ್ಯದಲ್ಲಿ, ಭೀಷ್ಮದ್ರೋಣ ಪ್ರಮುಖತಃ - ಮುಖ್ಯರಾದ ಭೀಷ್ಮದ್ರೋಣರ ಎದುರಿಗೂ ಸರ್ವೇಷಾಂ ಮಹೀಕ್ಷಿತಾಂ ಚ-ಮತ್ತು ಸಮಸ್ತ ರಾಜರುಗಳ ಎದುರಿಗೆ ಎಂದರೆ ನೋಡುತ್ತಿರುವಾಗಲೇ, ರಥೋತ್ತಮಮ್-ಅಗ್ನಿಯಿಂದ ಕೊಡಲ್ಪಟ್ಟ ಆ ಶ್ರೇಷ್ಠವಾದ ರಥವನ್ನು, ಸ್ಥಾಪಯಿತ್ವಾ-ನಿಲ್ಲಿಸಿದವನಾಗಿ, ಹೇ ಪಾರ್ಥ-ಓ ಕುಂತೀ

ಮೂ. ತತ್ರಾಪಶ್ಯತ್ಸ್ಥಿತಾನ್ಪಾರ್ಥಃ ಪಿತೄನಥ ಪಿತಾಮಹಾನ್ ।
ಆಚಾರ್ಯಾನ್ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥ ೨೬
ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।
ತಾನ್ ಸಮೀಕ್ಷ್ಯ ಸಕೌನ್ತೇಯಃ ಸರ್ವಾನ್ ಬಂಧೂನವಸ್ಥಿತಾನ್ ॥ ೨೭

ಭಾ. ಸ ಚ ತೇನ ಚೋದಿತಸ್ತತ್ಕ್ಷಣಾದೇವ ಭೀಷ್ಮದ್ರೋಣಾದೀನಾಂ ಸರ್ವೇಷಾಮೇವ ಮಹೀಕ್ಷಿತಾಂ ಪಶ್ಯತಾಂ ಯಥಾಚೋದಿತಮಕರೋತ್. ಈದೃಶೀ ಭವದೀಯಾನಾಂ ವಿಜಯಸ್ಥಿತಿರಿತಿ ಚಾವೋಚತ್.

ಮಗನಾದ ಅರ್ಜುನನೇ, **ಸಮವೇತಾನ್** - ಯುದ್ಧಕ್ಕಾಗಿ ಬಂದಿರುವ, **ಏತಾನ್** - ಈ, **ಕುರೂನ್** - ಕುರುಸೈನ್ಯದವರನ್ನೆಲ್ಲಾ **ಪಶ್ಯ** - ನೋಡು ಎಂದು ಹೇಳಿದನು ; **ಇತಿ** - ಹೀಗೆಂಬದಾಗಿ, **ಸಂಜಯ ಉವಾಚ**–ಎಂಬುದರೊಂದಿಗೆ ಅನ್ವಯವು. ಇಲ್ಲಿ **ಹೃಷೀಕೇಶೋ ಗುಡಾಕೇಶೇನ** ಎಂದು ಈ ಶ್ಲೋಕದಲ್ಲಿ ಹೇಳಿರುವವರ ಸ್ವಾರಸ್ಯವೇನೆಂದರೆ, ಸರ್ವೇಶ್ವರನು ಹೃಷೀಕೇಶನಾದರೆ, ಜೀವಾತ್ಮ ಸ್ಥಾನದಲ್ಲಿರುವ ಅರ್ಜುನನು ಗುಡಾಕೇಶನೆಂದು ಹೇಳಿದುದರಿಂದ, ಪರಾವರತತ್ತ್ವಗಳೆರಡೂ ಎಂದು ಬೋಧಿಸಿದುದಲ್ಲದೆ, ಅವರ ತತ್ತ್ವವು ಜೀವನಾದರೂ ಆತನು ಭಕ್ತನಾದ ನಂತರ ಆತನಲ್ಲಿ ಸೌಶೀಲ್ಯವೂ ವಾತ್ಸಲ್ಯಾತಿಶಯವೂ ನಿರತಿಶಯವಾದುವೆಂದೂ ಹೇಳಿದಂತಾಯಿತು. ಗುಡಾಕೇಶನೆಂಬುದರಿಂದ ತಮಸ್ಸನ್ನು ಜಯಿಸಿ ಸ್ವಸ್ವರೂಪಾವಿರ್ಭಾವ ದೆಶೆಯಲ್ಲಿ ಆತ್ಮನು ಮಹಾಜ್ಞಾನ ಸ್ವರೂಪನೆಂಬುದೂ ವ್ಯಕ್ತಪಡುತ್ತದೆ. ಆದುದರಿಂದ ಹೃಷೀಕೇಶನು ಸರ್ವನಿಯಾಮಕನಾಗಿ ಪರತತ್ತ್ವವು. ಜೀವಾತ್ಮನು ಮೊದಲು ಜ್ಞಾನತಿರೋಹಿತನಾಗಿ ಅನಂತರ ಜ್ಞಾನವಿಕಾಸವುಳ್ಳವನಾಗುವನೆಂಬ ಭಾವಗಳು ಸೂಚಿಸಲ್ಪಟ್ಟವು.

ಅರ್ಜುನನು ಯಾವಾಗ ಎಲ್ಲಾ ಯೋಧರನ್ನೂ ನೋಡಲು ಯೋಗ್ಯವಾದ ಸ್ಥಳವನ್ನು ನೋಡಿ ಎರಡು ಸೇನೆಯ ಮಧ್ಯದಲ್ಲಿ ನಿಲ್ಲಿಸು ಎಂದು ಕೇಳಿಕೊಂಡನೋ, ಒಡನೆಯೇ, ಭೀಷ್ಮದ್ರೋಣಾದಿಗಳೆಲ್ಲಾ ನೋಡುತ್ತಾ ಇದ್ದಹಾಗೆಯೇ ಶ್ರೀಕೃಷ್ಣನು ಅಂತಹ ಸ್ಥಳದಲ್ಲಿ ನಿಲ್ಲಿಸಿ, ಎಲ್ಲಾ ಶತ್ರುರಾಜರನ್ನೂ ನೋಡು ಎಂದು ಹೇಳಿದನೆಂದು ಸಂಜಯರು ಧೃತರಾಷ್ಟ್ರನಲ್ಲಿ ಅರಿಕೆ ಮಾಡಿಕೊಂಡರು. ॥೨೪, ೨೫॥

**ಭಾಷ್ಯಾರ್ಥವು—ಸ ಚ** - ಆ ಶ್ರೀ ಕೃಷ್ಣನಾದರೋ, **ತೇನ ಚೋದಿತಃ**-ಆ ಅರ್ಜುನನಿಂದ ಪ್ರೇರಿಸಲ್ಪಟ್ಟವನಾಗಿ, **ತತ್ಕ್ಷಣಾದೇವ** - ಒಡನೆಯೇ, ಭೀಷ್ಮ ದ್ರೋಣಾದಿಗಳೂ, **ಸರ್ವೇಷಾಮೇವ ಮಹೀಕ್ಷಿತಾಂ ಪಶ್ಯತಾಂ** - ಎಲ್ಲಾ ಶತ್ರುರಾಜರೂ ಸಹ ನೋಡುತ್ತಿರುವಾಗಲೇ, **ಯಥಾಚೋದಿತ ಮಕರೋತ್** - ಹೇಗೆ ಪ್ರೇರಿಸಲ್ಪಟ್ಟನೋ ಹಾಗೆಯೇ ಮಾಡಿದನು. ಓ ಧೃತರಾಷ್ಟ್ರನೇ, **ಭವದೀಯಾನಾಂ** – ನಿನ್ನ ಕಡೆಯವರ, **ವಿಜಯಸ್ಥಿತಿಃ**–ಜಯವಿಷಯವಾದ ಸ್ಥಿತಿಯು ಎಂದರೆ ಜಯವಿಷಯದಲ್ಲಿ ಅಸ್ವಾರಸ್ಯಸ್ಥಿತಿಯು ಎಂಬ ಭಾವವು, **ಇತಿಚಾವೋಚತ್** - ಎಂಬದಾಗಿಯೂ ಸಂಜಯರು ಹೇಳಿದರು. ॥ ೨೪ ॥ ೨೫ ॥

**ಮೂಲಕ್ಕೆ ಅರ್ಥವು—ಪಾರ್ಥಃ**-ಅರ್ಜುನನು, **ತತ್ರ** - ಆ ಯುದ್ಧರಂಗದಲ್ಲಿ, **ಸೇನಯೋರುಭಯೋರಪಿ** - ಎರಡು ಸೈನ್ಯಗಳಲ್ಲೂ ಕೂಡ, **ಸ್ಥಿತಾನ್** - ಇರುವ, ಪಿತೃಗಳನ್ನೂ, ಪಿತಾಮಹರುಗಳನ್ನೂ, ಆಚಾರ್ಯರನ್ನೂ, ಸೋದರಮಾವಂದಿರನ್ನೂ, **ಭ್ರಾತೄನ್** - ಅಣ್ಣತಮ್ಮಂದಿರನ್ನೂ, ಮಕ್ಕಳನ್ನೂ, ಮೊಮ್ಮಕ್ಕಳನ್ನೂ ಹಾಗೆಯೇ ಮಿತ್ರರನ್ನೂ, **ಶ್ವಶುರಾನ್** – ಮಾವಂದಿರನ್ನೂ, **ಸುಹೃದ**

ಮೂ.　ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।

ಅರ್ಜುನ ಉವಾಚ—

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ॥ ೨೮
ಸೀದಂತಿ ಮಮಗಾತ್ರಾಣಿ ಮುಖಂಚ ಪರಿಶುಷ್ಯತಿ ।
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥ ೨೯
ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ।
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವಚ ಮೇಮನಃ ॥ ೩೦
ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನ ಮಾಹವೇ ॥ ೩೧
ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನವಾ ॥ ೩೨

---

ಶ್ಚೈವ - ಹಿತೈಷಿಗಳಾದ ಸಮವಯಸ್ಕರಾದ ಸ್ನೇಹಿತರನ್ನೂ ಕೂಡ, ಅಪಶ್ಯತ್ - ಕಂಡನು ; ಸ ಕೌಂತೇಯಃ - ಆ ಕುಂತೀಮಗನಾದ ಅರ್ಜುನನು, ತಾನ್ - ಆ, ಅವಸ್ಥಿತಾನ್ - ಸೇನೆಯಲ್ಲಿ ನಿಂತಿರುವ, ಸರ್ವಾನ್ ಬಂಧೂನ್-ಸಮಸ್ತ ಪರಸ್ಪರ ಬಂಧು ಜನಗಳನ್ನು, ಸಮೀಕ್ಷ್ಯ-ಚನ್ನಾಗಿ ನೋಡಿ, ಹೇಗೆ ಎಂದರೆ, ಪರಯಾ ಕೃಪಯಾ ವಿಷ್ಟಃ-ನಿರತಿಶಯ ದಯೆಯಿಂದ ವ್ಯಾಪ್ತನಾಗಿ, ವಿಷೀದನ್-ವಿಷಾದವನ್ನು ಹೊಂದಿದವನಾಗಿ, ಇದಂ - ಈ ಮುಂದೆ ಹೇಳುವ ಮಾತನ್ನು, ಅಬ್ರವೀತ್ – ಹೇಳಿದನು. ಇಲ್ಲಿ " ಸಖೀನ್ " " ಸುಹೃದಃ " ಎಂಬ ಪ್ರಯೋಗಗಳಿಂದ ಪುನರುಕ್ತಿ ದೋಷವಲ್ಲವೇ ಎಂದರೆ, ಅಲ್ಲವು, ಸಖೀನ್ ಎಂಬುವದರಿಂದ ಸಮವಯಸ್ಕರಾದವರು ಹೇಳಲ್ಪಟ್ಟರು, ಸುಹೃದಃ ಎಂಬಲ್ಲಿ ವಯೋನಿಯಮವಿಲ್ಲವು. ॥ ೨೭ ॥

ಅರ್ಜುನನು ಹೇಳುತ್ತಾನೆ:—

ಹೇ ಕೃಷ್ಣ - ಓ ಕೃಷ್ಣನೇ, ಯುಯುತ್ಸುಂ ಸಮುಪಸ್ಥಿತಂ - ಯುದ್ಧಮಾಡಬೇಕೆಂಬಭಿಲಾಷೆಯಿಂದ ಯುಕ್ತರಾಗಿ ಎದುರಿಗೆ ಬಂದುನಿಂತಿರುವ, ಇಮಂ ಸ್ವಜನಂ - ಈ ಸ್ವಜನವನ್ನು, ದೃಷ್ಟ್ವಾ – ಕಂಡು, ಮಮಗಾತ್ರಾಣಿ – ನನ್ನ ಶರೀರದ ಅವಯವಗಳು, ಸೀದಂತಿ - ಸಂಕುಚಿತವಾಗುತ್ತಿವೆ. ಮುಖಂಚ - ಮುಖವೂ ಕೂಡ, ಪರಿಶುಷ್ಯತಿ - ಬಾಡಿಹೋಗುತ್ತದೆ, ಮೇ – ನನ್ನ, ಶರೀರೆ - ಶರೀರದಲ್ಲಿ, ವೇಪಥುಶ್ಚ - ಕಂಪನವೂ ಕೂಡ, ರೋಮಹರ್ಷಶ್ಚ - ಅದರಿಂದುಂಟಾದ ರೋಮಾಂಚವೂ ಸಹ, ಜಾಯತೇ-ಉಂಟಾಗಿರುತ್ತದೆ. ॥೨೯॥ ಗಾಂಡೀವಂ-ಗಾಂಡೀವವೆಂಬ ನನ್ನ ಧನುಸ್ಸು, ಹಸ್ತಾತ್ - ನನ್ನ ಕೈಯಿಂದ, ಸ್ರಂಸತೇ-ಜಾರಿ ಬೀಳುತ್ತದೆ. ತ್ವಕ್ಚೈವ-ಮೈ ಚರ್ಮವೂ, ಪರಿದಹ್ಯತೇ-ಸುಟ್ಟುಹೋದಹಾಗಿರುತ್ತದೆ. ಅವಸ್ಥಾತುಂ–ನಿಲ್ಲುವದಕ್ಕೂ ಕೂಡ, ನ ಶಕ್ನೋಮಿ - ಶಕ್ತನಲ್ಲವು, ಮೇ - ನನ್ನ, ಮನಃ - ಮನಸ್ಸು, ಭ್ರಮತೀವ - ಚಾಂಚಲ್ಯದಿಂದ, ಸುತ್ತುತ್ತದೋ ಎನ್ನುವಹಾಗೆ ಇದೆ. ॥೩೦॥

ಹೇ ಕೇಶವ - ಬ್ರಹ್ಮರುದ್ರರಿಗೂ ಸಹ ಸ್ವಾಮಿಯಾದ ಶ್ರೀ ಕೃಷ್ಣನೇ, ವಿಪರೀತಾನಿ-ಅನರ್ಥ ಸೂಚಕಗಳಾದ, ನಿಮಿತ್ತಾನಿ ಚ-ಶಕುನಗಳನ್ನೂ ಕೂಡ, ಪಶ್ಯಾಮಿ-ನೋಡುತ್ತಿದ್ದೇನೆ, ಆಹವೇ-ಯುದ್ಧದಲ್ಲಿ, ಸ್ವಜನಂ-ಸ್ವಕೀಯರಾದ ಜನವಾದ ಕೌರವರನ್ನು, ಹತ್ವಾ - ಕೊಂದು, ಶ್ರೇಯಃ-

ಮೂ. ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।
ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩೩
ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।
ಮಾತುಲಾಃ ಶ್ವಶುರಾಃ ಪೌತ್ರಾಃ ಸ್ಯಾಲಾಃ ಸಂಬಂಧಿನಸ್ತಥಾ ॥ ೩೪
ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂಧನ ।
ಅಪಿ ತ್ರೈಲೋಕ್ಯ ರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥ ೩೫
ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಸ್ಸ್ಯಾಜ್ಜನಾರ್ದನ ।
ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬

---

ನನಗೆ ಶ್ರೇಯಸ್ಸನ್ನು, ನಾನುಪಶ್ಯಾಮಿ - ಕಾಣಲಾರೆನು. ಸ್ವಜನಂ ಹತ್ವಾ ಎಂದಿರೋಣದರಿಂದ, ದುರ್ನಿಮಿತ್ತಗಳು ಕೌರವರಿಗೆ ವಿಪರೀತಾನಿ ನಿಮಿತ್ತಾನಿ ಎಂಬುದು ವ್ಯಕ್ತವು. ||೩೧||

**ಹೇ ಕೃಷ್ಣ** - ಓ ಕೃಷ್ಣನೇ, **ವಿಜಯಂ ನ ಕಾಂಕ್ಷೇ** - ಜಯವನ್ನಪೇಕ್ಷಿಸುವದಿಲ್ಲವು. **ನ ಚ ರಾಜ್ಯಂ ಸುಖಾನಿ ಚ** - ರಾಜ್ಯವನ್ನೂ ಸುಖವನ್ನೂ ಸಹ ಅಪೇಕ್ಷಿಸುವದಿಲ್ಲವು. ಹೀಗಿರುವದರಿಂದ, **ಹೇ ಗೋವಿಂದ** - (ಭೂಮಿಯನ್ನು ಸ್ವಾಧೀನ ಮಾಡಿಕೊಂಡಿರುವ, ಅಥವಾ ಗೋವುಗಳನ್ನು ಹೊಂದಿರುವ,) ಓ ಶ್ರೀ ಕೃಷ್ಣನೇ, **ನಃ** - ನಮಗೆ, **ರಾಜ್ಯೇನ ಕಿಂ** - ಹಾಗೆ ಎಲ್ಲರನ್ನೂ ಕೊಂದು ಪಡೆದ ರಾಜ್ಯದಿಂದೇನು? **ಕಿಂ ಭೋಗೈರ್ಜೀವಿತೇನ ವಾ**-ನಮಗುಂಟಾಗುವ ಭೋಗಗಳಿಂದೇನು, ಮತ್ತು ಜೀವನದಿಂದೇನು? ಎಂದರೆ ಏನುಪ್ರಯೋಜನವು? ವಾ ಎಂಬುವದು ಸಮುಚ್ಚಯಾರ್ಥಕವು.

**ಯೇಷಾಮರ್ಥೇ**—ಯಾರಿಗೋಸ್ಕರವಾಗಿ, ರಾಜ್ಯವೂ, ಭೋಗಗಳೂ ಸುಖಗಳೂ ಸಹ, **ನಃ- ಕಾಂಕ್ಷಿತಂ** - ನಮಗೆ ಅಪೇಕ್ಷಿತಗಳಾದವೋ, **ತೇ ಇಮೇ** - ಅಂತಹ ಇವರೇ, **ಪ್ರಾಣಾನ್**--ಪ್ರಾಣಗಳನ್ನೂ, ಧನವನ್ನೂ ಕೂಡ, **ತ್ಯಕ್ತ್ವಾ** - ಬಿಡಲು ಸಿದ್ಧರಾಗಿ, **ಯುದ್ಧೇ** - ಯುದ್ಧರಂಗದಲ್ಲಿ, **ಅವಸ್ಥಿತಾಃ** - ಇರುತ್ತಾರೆ. || ೩೩ ||

**ಆಚಾರ್ಯರೂ**, ದೊಡ್ಡಪ್ಪ ಚಿಕ್ಕಪ್ಪರೂ, ಪುತ್ರರೂ ಹಾಗೆಯೇ, ತಾತಂದಿರೂ, **ಮಾತುಲಾಃ** – ಸೋದರಮಾವಂದಿರೂ, **ಶ್ವಶುರಾಃ** - ಹೆಣ್ಣು ಕೊಟ್ಟ ಮಾವಂದಿರೂ, **ಪೌತ್ರಾಃ**– ಪುತ್ರರ ಮಕ್ಕಳೂ, **ಸ್ಯಾಲಾಃ** - ಭಾವಮೈದಂದಿರೂ, **ಏತಾನ್** - ಇವರನ್ನು, **ಹೇ ಮಧುಸೂಧನ**- ಓ ಮಧುವೆಂಬ ರಾಕ್ಷಸನನ್ನು ಕೊಂದ ವಿಷ್ಣುವಿನ ಅವತಾರಿಯಾದ ಶ್ರೀ ಕೃಷ್ಣನೇ, **ಘ್ನತೋಽಪಿ**– ನಮ್ಮನ್ನು ಹೊಡಿಯುವವರನ್ನಾಗಿದ್ದರೂ, **ತ್ರೈಲೋಕ್ಯರಾಜ್ಯಸ್ಯ**-ತ್ರಿಲೋಕಾಧಿಪತ್ಯದ, **ಹೇತೋರಪಿ** - ಉದ್ದಿಶ್ಯವಾಗಿಯೂ ಕೂಡ, **ನ ಹಂತುಮಿಚ್ಛಾಮಿ** – ಕೊಲ್ಲಲಪೇಕ್ಷಿಸುವದಿಲ್ಲವು ; ಎಂದರೆ ಎರಡುಕಾರಣಗಳಿಂದಲೂ ಕೌರವರನ್ನು ಕೊಲ್ಲಲಪೇಕ್ಷಿಸುವದಿಲ್ಲವು. ನಮ್ಮನ್ನು ಹೊಡದರಲ್ಲಾ ಎಂಬ ಕೋಪದಿಂದಲೂ ಕೊಲ್ಲಲಪೇಕ್ಷೆಯಿಲ್ಲವು,ಮೂರು ಲೋಕದ ಆಧಿಪತ್ಯವು ಸಿಕ್ಕುತ್ತೆಂಬ ಆಶೆಯಿಂದಲೂ ಕೊಲ್ಲಲಭಿಲಾಷೆಯಿಲ್ಲವೆಂದು ಭಾವವು. ಹೀಗಿರುವಾಗ, **ಕಿಂ ನು ಮಹೀಕೃತೇ**- ಈ ಸ್ವಲ್ಪವಾದ ಭೂಮಿಯ ಉದ್ದಿಶ್ಯವಾಗಿ ಹೇಳತಕ್ಕದ್ದೇನಿರುತ್ತದೆ ? || ೩೪, ೩೫ ||

**ಹೇ ಜನಾರ್ದನ** - ಆಶ್ರಿತರಿಂದ ಅಪೇಕ್ಷಿಸಲ್ಪಡದೇನೇ ತಾನಾಗಿಯೇ ಅವರ ಶತ್ರುಗಳನ್ನು ಪೀಡಿಸುವನಾದ ಓ ಶ್ರೀಕೃಷ್ಣನೇ, (ಇದರಿಂದ ಅರ್ಜುನನು ಒಲ್ಲೆನೆಂದರೂ ಬಿಡದೆ ಶತ್ರುಗಳಾದ ಆತನಿಗೆ ಕೌರವರನ್ನು ನಾಶಮಾಡುವನೆಂಬರ್ಥವು ಸೂಚಿತವಾಯಿತು.) **ಧಾರ್ತರಾಷ್ಟ್ರಾನ್**–ಕೌರವರನ್ನು, **ನಿಹತ್ಯ**–ಕೊಂದು, **ಕಾಪ್ರೀತಿಸ್ಸ್ಯಾತ್**-ನಮಗೇನು ಪ್ರಿಯವಾದೀತು? ಆದರೆ ದುರ್ಯೋಧನಾದಿಗಳು

ಮೂ. ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ ಬಾಂಧವಾನ್ ।
ಸ್ವಜನಂ ಹಿ ಕಥಂ ಹತ್ವಾ ಸುಖಿನಸ್ಸ್ಯಾಮ ಮಾಧವ ॥ ೩೭
ಯದ್ಯಪ್ಯೇತೇ ನಪಶ್ಯಂತಿ ಲೋಭೋಪಹತ ಚೇತಸಃ ।
ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ ॥ ೩೮

ಆತತಾಯಿಗಳಲ್ಲವೇ ? ಅಂತವರನ್ನು ಕೊಲ್ಲುವದು ಹೇಗೆ ದೋಷವು ? ಎಂದಾಕ್ಷೇಪಿಸಿದರೂ ಆಗಲೂ ಪಾಪವೇ ಎಂದು ಹೇಳುತ್ತಾನೆ, ಏಕೆಂದರೆ, ಬಂಧುಗಳಾದ ಉದ್ದಿಶ್ಯ, ಆತತಾಯಿಗಳಾದರೂ ಅಂತವರನ್ನು ಕೊಲ್ಲುವದು ಪಾಪವೆಂಬುದು ಅರ್ಜುನನ ಅಭಿಪ್ರಾಯವು. ಆತತಾಯಿಗಳು ಯಾರೆಂದರೆ:—"ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ । ಕ್ಷೇತ್ರದಾರ ಹರಶ್ಚೈವ ಷಡೈತೇ ಹ್ಯಾತತಾಯಿನಃ" ಅವರು ಆರು ವಿಧವು ; ಬೆಂಕಿಯನ್ನು ಇಡುವವನು, ವಿಷವನು, ಹಾಕುವವನು ; ಶಸ್ತ್ರವನ್ನು ಹಿಡಿದು ಕೊಲ್ಲಲು ಬಂದಿರುವವನು ; ತನ್ನ ಕ್ಷೇತ್ರವನ್ನು ಅಪಹರಿಸಿದವನು ; ಹೆಂಡತಿಯನ್ನು ಅಪಹರಿಸಿದವನು, ಇವರು ಆರು ಮಂದಿಗಳೂ ಆತತಾಯಿಗಳು. ದುರ್ಯೋಧನಾದಿಗಳು ಈ ಆರು ವಿಷಯದಲ್ಲೂ ಆತತಾಯಿಗಳು. ಹೇಗೆಂದರೆ:—ಲಾಕ್ಷಾಗೃಹಮಾಡಿ ಬೆಂಕಿ ಹಚ್ಚಿದವರು, ಭೀಮನಿಗೆ ವಿಷವನ್ನು ಕೊಟ್ಟವರು, ಈಗ ಶಸ್ತ್ರಪಾಣಿಗಳಾಗಿ ಯುದ್ಧಕ್ಕೆ ಬಂದಿರುವವರು, ಇವರ ಧನವನ್ನೆಲ್ಲಾ ದ್ಯೂತದಲ್ಲಿ ಅಪಹರಿಸಿದವರು, ಹಾಗೆಯೇ ರಾಜ್ಯವನ್ನೂ ಅಪಹರಿಸಿದವರು, ಇವರ ಹೆಂಡತಿಯಾದ ದ್ರೌಪದಿಯನ್ನು ದ್ಯೂತದಲ್ಲಿ ಗೆದ್ದು ಸಭೆಯಲ್ಲಿ ಮಾನಭಂಗ ಮಾಡಿದವರು. ಆದುದರಿಂದ ಇಂತವರನ್ನು ಕೊಲ್ಲುವದು ಅಧರ್ಮವಲ್ಲವೆಂದು ಮನುಸ್ಮೃತಿಯು ಬೋಧಿಸುತ್ತದೆ. "ಆತತಾಯಿನ ಮಾಯಾಂತಂ ಹನ್ಯಾದೇವಾ ವಿಚಾರಯನ್ ನಾತಿತಾಯಿ ವಧೇ ದೋಷೋ ಹಂತುರ್ಭವತಿ ಕಶ್ಚನ" ಅಂತವನನ್ನು ವಿಚಾರಮಾಡದೆ ಕೊಲ್ಲಬಹುದೆಂದೂ, ಹಾಗೆ ಕೊಂದವನಿಗೆ ಏನೊಂದೂ ದೋಷವಿಲ್ಲವೆಂದೂ, ಹೇಳಿರುತ್ತದೆ. **ಏತಾನ್ ಆತತಾಯಿನಃ** - ಈ ದುರ್ಯೋಧನಾದಿ ಆತತಾಯಿಗಳನ್ನು, **ಹತ್ವಾ** - ಕೊಂದು, ಆ ಕಾರಣದಿಂದ, **ಅಸ್ಮಾನ್** - ನಮ್ಮಗಳನ್ನು ಎಂದರೆ ತನ್ನನ್ನೂ ತನ್ನ ಭ್ರಾತೃ ಮೊದಲಾದವರುಗಳನ್ನೂ, **ಪಾಪಮೇವ**-ಪಾಪವೇನೇ, **ಆಶ್ರಯೇತ್** - ಆಶ್ರಯಿಸುತ್ತದೆ, ಎಂದರೆ ತನುಗೆಲ್ಲಾ ಪಾಪ ಉಂಟಾಗುತ್ತದೆಂಬ ಭಾವವು, **ತಸ್ಮಾತ್** - ಆ ಕಾರಣದಿಂದ, **ಸಬಾಂಧವಾನ್** - ಬಂಧುಗಳಿಂದ ಯುಕ್ತರಾದ, **ಧಾರ್ತರಾಷ್ಟ್ರಾನ್**-ದುರ್ಯೋಧನಾದಿ ಕೌರವರನ್ನು, **ಹಂತುಂ**-ಕೊಲ್ಲಲು, **ವಯಂ ನಾರ್ಹಾಃ**-ನಾವು ಯೋಗ್ಯರಲ್ಲವು, ಎಂದರೆ ನಮಗೆ ಯೋಗ್ಯವಾದುದಲ್ಲವು, **ಹೇ ಮಾಧವ**-ಹೇ ಅನುಗ್ರಹಮಯಳಾದಲಕ್ಷ್ಮಿಗೆ ಪತಿಯಾಗಿರುವದರಿಂದ ಕೃಪಾಸಾಗರನೇ, **ಸ್ವಜನಂ ಹತ್ವಾ**-ಸ್ವಂತ ಜನವನ್ನು ಕೊಂದು, **ಕಥಂ**-ಹೇಗೆ, **ಸುಖಿನಸ್ಸ್ಯಾಮ** - ಸುಖಿಗಳಾದೇವು ? ಎಂದಿಗೂ ಸಾಧ್ಯವಿಲ್ಲವೆಂಬ ಭಾವವು ॥ ೩೭ ॥

ಆದರೆ ಶತ್ರು ಪಕ್ಷದವರಿಗೆ ಈ ಅಭಿಪ್ರಾಯವಿಲ್ಲವೋ ? ಅವರು ಯುದ್ಧಕ್ಕೆ ಬಂದಿರುವದಿಲ್ಲವೋ ? ನೀನೂ ಕೂಡ ಏಕೆ ಯುದ್ಧ ಮಾಡಕೂಡದು ? ಎಂದೇನಾದರೂ ಕೇಳುವಿಯೋ ? ಎಂದರೆ ಅದಕ್ಕೆ ಅರ್ಜುನನು ಸಮಾಧಾನವನ್ನು ಹೇಳುತ್ತಾನೆ. ಅವರಾದರೋ ತಿಳುವಳಿಕೆ ಇಲ್ಲದವರು, ಲೋಭಾವಿಷ್ಟಹೃದಯರು, ಪಾಪಭೀತಿಯಿಲ್ಲದವರು, ಕುಲಕ್ಷಯ ಮಾಡಿಕೊಳ್ಳುವವರು ನಾವಾದರೋ ಹಾಗಲ್ಲವೆಂದು ಹೇಳುತ್ತಾನೆ.

**ಹೇ ಜನಾರ್ದನ** – ಓ ಆಶ್ರಿತ ವಿಪಕ್ಷರನ್ನು ಮರ್ದಿಸುವ ಶ್ರೀ ಕೃಷ್ಣನೇ, **ಲೋಭೋಪಹತ ಚೇತಸಃ** - ದುರಾಶೆಯಿಂದ ಹೊಡೆಯಲ್ಪಟ್ಟ ಮನಸ್ಸುಳ್ಳ, **ಏತೇ** - ಈ ಕೌರವರು, ಕುಲ

ಮೂ. ಕಥಂ ನ ಜ್ಞೇಯ ಮಸ್ಮಾಭಿಃ ಪಾಪಾದಸ್ಮಾ ನ್ನಿವರ್ತಿತುಮ್ ।
ಕುಲಕ್ಷಯ ಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯
ಕುಲಕ್ಷಯೇ ಪ್ರಣಶ್ಯನ್ತಿ ಕುಲಧರ್ಮಾಃ ಸನಾತನಾಃ ।
ಧರ್ಮೇ ನಷ್ಟೇ ಕುಲಂ ಕೃತ್ಸ್ನ ಮಧರ್ಮೋಽಭಿ ಭವತ್ಯುತ ॥ ೪೦
ಅಧರ್ಮಾಭಿ ಭವಾತ್ಕೃಷ್ಣ ಪ್ರದುಷ್ಯನ್ತಿ ಕುಲಸ್ತ್ರಿಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಙ್ಕರಃ ॥ ೪೧

---

ಕ್ಷಯಕೃತಂ – ಕುಲನಾಶವನ್ನುಂಟುಮಾಡುವ, ದೋಷಂ - ದೋಷವನ್ನೂ, ಮತ್ತು ಮಿತ್ರ ದ್ರೋಹದಲ್ಲಿ, ಪಾತಕಂ ಚ - ಇನ್ನೂ ಹೆಚ್ಚಾದ ದೋಷವನ್ನೂ ಸಹ.(ಎಂದರೆ ಬರೀ ಕುಲನಾಶ ಮಾತ್ರವೇ ಅಲ್ಲವು, ನರಕಪ್ರಾಪ್ತಿಯೂ ಉಂಟೆಂಬ ಭಾವವು.) ನ ಪಶ್ಯಂತಿ-ಅವರು ನೋಡುವದಿ ಲ್ಲವು. (ಏಕೆಂದರೆ ಅವರುಗಳಿಗೆ ದೈವಾನುಗ್ರಹವೂ ಆಚಾರ್ಯರುಗಳ ಕೃಪೆಯೂ ಇಲ್ಲವೆಂಬ ಭಾವವು.) ಆದರೆ ನಾವುಗಳು ಹಾಗಲ್ಲವೆಂದು ಅರ್ಜುನನು ಹೇಳುತ್ತಾನೆ. ಕುಲಕ್ಷಯವನ್ನುಂಟು ಮಾಡುವ ದೋಷವನ್ನೂ, ಪ್ರಪಶ್ಯದ್ಭಿಃ - ನಿನ್ನ ಕೃಪೆಯಿಂದಲೂ ಆಚಾರ್ಯಾನುಗ್ರಹದಿಂದಲೂ ಚನ್ನಾಗಿ ವಿಮರ್ಶಿಸಿ ತಿಳಿದಿರುವ ಅಥವಾ ನೀನು ಕೊಟ್ಟಿರುವ ಶಾಸ್ತ್ರಚಕ್ಷುಸ್ಸಿನಿಂದ ಚನ್ನಾಗಿ ತಿಳಿ ಯಲು ಶಕ್ತಿಯಿರುವ, ಅಸ್ಮಾಭಿಃ - ಸಭ್ರಾತೃಕರಾಗಿರುವ ನಮ್ಮಿಂದ, ಅಸ್ಮಾತ್ಪಾಪಾತ್ - ಈಗ ಯುದ್ಧರೂಪದಲ್ಲಿ ಪ್ರಾಪ್ತವಾಗುವ ಪಾಪದಿಂದ, ನಿವರ್ತಿತುಂ – ಹಿಂತಿರುಗುವದಕ್ಕೆ, ಎಂದರೆ ನಿವರ್ತನಂ-ಹಿಂತಿರುಗೋಣವು, ಕಥಂ ನ ಜ್ಞೇಯಂ–ಹೇಗೆ ತಿಳಿಯಲ್ಪಡದೇ ಇದ್ದೀತು ? ಎಂದರೆ ಸ್ವಾಮಿದತ್ತ ಶಾಸ್ತ್ರಜ್ಞಾನವಿರುವದರಿಂದ ಈ ಯುದ್ಧವು ಮಹಾ ಪಾಪಕರವಾದುದರಿಂದ ಯುದ್ಧ ದಿಂದ ನಿವೃತ್ತರಾಗತಕ್ಕದ್ದೆಂಬ ಜ್ಞಾನವು ನಮಗಾದರೋ ಉಂಟು ಎಂಬ ಭಾವವು. ॥೩೮॥೩೯॥

ನಮಗೆ ಮಾತ್ರವೇ ದೋಷವೂ ನರಕವೂ, ಉಂಟಾದರೂ ಆಗಲಿ, ಆದರೆ ನಮಗೆ ಬಹಳ ತೊಂದರೆಯನ್ನು ಕೊಟ್ಟ ಆತತಾಯಿಗಳಾದುದರಿಂದ, ಕ್ಷತ್ರಿಯನಿಗೆ ಅಂತವರನ್ನು ಕೊಲ್ಲುವದು ನ್ಯಾಯವೆಂದು ಭಾವಿಸೋಣವೆಂದರೆ, ಅನರ್ಥಗಳು ನಮಗೆ ಮಾತ್ರವೇ ಅಲ್ಲವೆ ಸರ್ವಲೋಕಕ್ಕೂ ಇದು ಅನರ್ಥಪರಂಪರೆಯನ್ನುಂಟುಮಾಡತಕ್ಕದ್ದಾದುದರಿಂದ ಸರ್ವಥಾ ಯುದ್ಧಮಾಡುವದು ಯುಕ್ತವಲ್ಲವೆಂದು ಹೇಳಿ ಗಾಂಡೀವ ಧನಸ್ಸನ್ನು ಬಿಸಾಡಿ ರಥಿಗೆ ಯೋಗ್ಯವಾದ ಸ್ಥಳವನ್ನು ಬಿಟ್ಟು ರಥದ ಒಂದು ಮೂಲೆಯನ್ನು ಅರ್ಜುನನು ಆಶ್ರಯಿಸಿದನೆಂದು ಹೇಳಿ ಈ ಅಧ್ಯಾಯವನ್ನು ಸಂಜಯರು ಮುಗಿಸುತ್ತಾರೆ.

ಕುಲಕ್ಷಯೇ - ಕುಲಕ್ಷಯವು ಪ್ರಾಪ್ತವಾಗಲಾಗಿ, ಸನಾತನಾಃ - ಮಹಾನುಭಾವರುಗಳನು ಷ್ಠಾನಮೂಲಕ ಪ್ರಾಚೀನಗಳಾದ, ಕುಲಧರ್ಮಾಃ - ಕುಲಧರ್ಮಗಳು, ಪ್ರಣಶ್ಯಂತಿ – ನಾಶವಾ ಗುವುವು, ಧರ್ಮೇ ನಷ್ಟೇ - ಹಾಗೆ ಕುಲಧರ್ಮವೆಲ್ಲಾ ನಷ್ಟವಾಗಲಾಗಿ, ಕೃತ್ಸ್ನಂ ಕುಲಂ – ಸಮಸ್ತ ಕುಲಗಳನ್ನೂ (ಒಂದೇ ಕುಲವಲ್ಲವು, ಎಲ್ಲಾ ಕುಲಗಳು ಎಂಬ ಭಾವವು.) ಅಧರ್ಮಃ – ಅಧರ್ಮವು, ಅಭಿಭವತ್ಯುತ - ತಿರಸ್ಕರಿಸುತ್ತದೆಯಷ್ಟೇ, ಧರ್ಮವು ನಷ್ಟವಾದುದು ಅಷ್ಟು ಕೇಡ ಲ್ಲವು, ಅಧರ್ಮವು ತಲೆಯೆತ್ತುವದೀಗ ತುಂಬಾ ಹಾನಿಕರವೆಂಬ ಭಾವವು. ॥ ೪೦ ॥

ಹೇ ವಾರ್ಷ್ಣೇಯ, ಹೇ ಕೃಷ್ಣ – ಓ ವೃಷ್ಣಿಕುಲದಲ್ಲಿ ಹುಟ್ಟಿದ ಶ್ರೀಕೃಷ್ಣನೇ, ಅಧರ್ಮಾ ಭಿಭವಾತ್ – ಹೀಗೆ ಅಧರ್ಮವು ಕುಲಗಳನ್ನಾಕ್ರಮಿಸಿ ಅವುಗಳನ್ನು ತಿರಸ್ಕರಿಸುವದರಿಂದ, ಕುಲ ಸ್ತ್ರಿಯಃ - ಕುಲದ ಉತ್ತಮ ಸ್ತ್ರೀಗಳೂ ಸಹ, ಪ್ರದುಷ್ಯಂತಿ - ದೋಷಯುಕ್ತರಾಗುವರು, ಪುರು

ಮೂ. ಸಙ್ಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।
ಪತನ್ತಿ ಪಿತರೋ ಹ್ಯೇಷಾಂ ಲುಪ್ತ ಪಿಣ್ಡೋದಕ ಕ್ರಿಯಾಃ ॥ ೪೨

ಷರು ಅಧರ್ಮಿಗಳಾಗಿ ಹೆಂಗಸರನ್ನೂ ಬಲಾತ್ಕರಿಸಿ ಅಧರ್ಮ ಪ್ರವರ್ತನೆಗೆ ಶೆಳೆಯುವರು; ಅದರಿಂದ ಅವರೂ ಕೆಟ್ಟುಹೋಗುವರೆಂಬ ಭಾವವು. ಸ್ತ್ರೀಯರಲ್ಲಿ ಧರ್ಮಪ್ರವರ್ತನೆಯೂ ಸನಾತನ ಧರ್ಮದಲ್ಲಿ ಆಶೆಯೂ ಉಂಟು, ಅಧರ್ಮಿಗಳಾದ ಪುರುಷರು ಅವರನ್ನು ತಮ್ಮ ಮಾರ್ಗಕ್ಕೆ ಸೆಳೆಯದೆ ಇದ್ದರೆ ತುಂಬಾ ಕೇಡಿಲ್ಲವು. ಅವರನ್ನು ಬಲಾತ್ಕರಿಸಿ ತಮ್ಮ ಮಾರ್ಗಕ್ಕೇನೆ ಎಳಕೊಂಡರೆ ಕೇಡು ಶೀಘ್ರವಾಗಿ ಆಗುತ್ತದೆಂಬ ಭಾವವು. ಈಗ ಅವರ ಭರ್ತೃಗಳು ಯುದ್ಧದಲ್ಲಿ ಮಡಿದರೆ, ಇನ್ನೂ ಪೂರ್ವವಯಸ್ಸಿನಲ್ಲಿರುವವರಿಗೆಲ್ಲಾ ಪತಿಗಳಿಲ್ಲದೇ ಹೋಗುವದರಿಂದ ಕೆಟ್ಟುಹೋಗುವರೆಂಬ ಭಾವವು. ಅಧರ್ಮವು ಬಲುಬೇಗನೆ ವ್ಯಾಪಿಸುತ್ತದೆಂದು ಮುಂದೆ ಹೇಳುತ್ತಾನೆ. **ಸ್ತ್ರೀಷು ದುಷ್ಟಾಸು**–ಯಾವಾಗ ಸ್ತ್ರೀಯರು ದುಷ್ಟರಾದರೋ ಆಗ ಶೀಘ್ರವಾಗಿ, **ಜಾಯತೇ ವರ್ಣ ಸಂಕರಃ** - ಬ್ರಾಹ್ಮಣ ಕ್ಷತ್ರಿಯಾದಿ ವರ್ಣಗಳ ಸಾಂಕರ್ಯವು ಪ್ರಾಪ್ತವಾಗುತ್ತದೆ. ॥ ೪೧ ॥

ವರ್ಣಸಾಂಕರ್ಯದಿಂದುಂಟಾಗುವ ಅನರ್ಥವೇನೆಂಬುದನ್ನು ಅರಿಕೆ ಮಾಡಿಕೊಳ್ಳುತ್ತಾನೆ:— **ಸಂಕರಃ** - ಹೀಗುಂಟಾಗುವ ವರ್ಣಸಂಕರವು, **ಕುಲಘ್ನಾನಾಂ** - ಹೀಗೆ ಅಧರ್ಮಪ್ರವರ್ತನೆಯಿಂದ ಕುಲವನ್ನು ನಾಶಮಾಡುವವರಿಗೂ, **ಕುಲಸ್ಯ ಚ** - ತಮ್ಮ ಇತರರ ಕುಲಕ್ಕೂ ಕೂಡ, **ನರಕಾಯೈವ** - ನರಕಪ್ರಾಪ್ತಿಯುಂಟಾಗುವುದಕ್ಕಾಗಿ ಆಗುತ್ತದೆ. ಇಷ್ಟೇ ಅಲ್ಲವು, **ಏಷಾಂ**– ಇವರುಗಳ, **ಪಿತರಃ** – ತಂದೆ, ತಾತ, ಮುತ್ತಾತಂದರೂ ಹೀಗೆ ಪಿತೃಗಳು, **ಲುಪ್ತಪಿಂಡೋದಕ ಕ್ರಿಯಾಃ** - ತರ್ಪಣ ಪಿಂಡಪ್ರದಾನ ಮುಂತಾದ ಉತ್ತರಕ್ರಿಯೆಗಳಿಲ್ಲದವರಾಗಿ, **ಪತಂತಿ** - ನಷ್ಟರಾಗುವರು. ಆದರೆ ಪಾಂಡವರಲ್ಲೇ ಉತ್ಪತ್ತಿಯ ಸಂಕರದೋಷವಿರುವಾಗ, ಅರ್ಜುನನು ಸಂಕರ ಉಂಟಾಗುತ್ತದೆಂದು ಹೇಗೆ ಶೋಕಿಸಿದನು ಎಂದು ಕೇಳಬಹುದು. ತಾವೆಲ್ಲಾ ಉತ್ತಮ ಕುಲದವರಾದ ದೇವತೆಗಳ ಮೂಲಕ ಜನಿಸಿದುದು... ಅನುಲೋಮರು. ಹೀಗೆ ಸಂಕರವು ತುಂಬಾ ದೋಷಾವಹವಾದುದಲ್ಲವು. ಆದರೆ ಉತ್ತಮಸ್ತ್ರೀಯರು ನೀಚಕುಲದವರೊಂದಿಗೆ ಸೇರಿ ಜನಿಸುವವರು ಪ್ರತಿಲೋಮರೆಂದೆನಿಸುವರು. ಇಂತಹ ಸಂಕರವೀಗ ತುಂಬಾ ದೋಷಾವಹವೆಂಬ ಭಾವವು. ॥ ೪೨ ॥

ಮುಂದೆ ನಿಗಮನ ಮಾಡಿ ಹೇಳಿ, ಯುದ್ಧಮಾಡುವುದಿಲ್ಲವೆಂಬ ತನ್ನ ನಿಷ್ಕರ್ಷೆಯನ್ನು ತಿಳಿಸುತ್ತಾನೆ. **ಕುಲಘ್ನಾನಾಂ** - ಕುಲಗಳನ್ನು ನಾಶಮಾಡುವ, **ವರ್ಣಸಂಕರಕಾರಕೈಃ** – ಈ ಬ್ರಹ್ಮ ಕ್ಷತ್ರಿಯಾದಿ ವರ್ಣಗಳ ಸಾಂಕರ್ಯವನ್ನುಂಟುಮಾಡುವ, **ದೋಷೈ ರೇತೈಃ** - ಈ ಮೇಲೆ ವಿವರಿಸಿದ ದೋಷಪರಂಪರೆಗಳಿಂದ, ಶಾಶ್ವತಗಳಾದ ಜಾತಿ ಧರ್ಮಗಳೂ ಕುಲಧರ್ಮಗಳೂ ಸಹ, **ಉತ್ಸಾದ್ಯನ್ತೇ**- ನಾಶಮಾಡಲ್ಪಡುತ್ತವೆ. ಈ ಶ್ಲೋಕದಲ್ಲಿ ಅರ್ಜುನನು ವರ್ಣ ಸಾಂಕರ್ಯವನ್ನುಂಟುಮಾಡುವ ಮತ್ತು ಜಾತಿಧರ್ಮ ಕುಲಧರ್ಮಗಳನ್ನು ಕೆಡಿಸುವ ಪ್ರವೃತ್ತಿಗಳು ಕೂಡದೆಂದು ಹೇಳಿರುತ್ತಾನೆ. ಈ ಅಭಿಪ್ರಾಯವು ಶ್ರೀಕೃಷ್ಣನಿಗೆ ಅಭಿಮತವಲ್ಲವಾಗಿದ್ದರೆ, ಅರ್ಜುನನೆಂದಿಗೂ ಹಾಗೆ ಹೇಳುತ್ತಿರಲಿಲ್ಲವು, ವರ್ಣಸಾಂಕರ್ಯ ಮತ್ತು ಜಾತಿ ಕುಲಧರ್ಮಗಳತ್ಯಾಗವನ್ನು ಗೀತೆಯು ನಿರೋಧಿಸುತ್ತದೆಂಬುದು ಇದರಿಂದ ಸುವ್ಯಕ್ತವು. ಹೀಗಿದ್ದರೂ ಕೆಲವರು ಗೀತೆಯನ್ನು ಶ್ಲಾಘಿಸುವವರಾಗಿ ಗೀತೆಯು ವರ್ಣಭೇದವನ್ನೂ, ವರ್ಣ ತರತಮಭಾವವನ್ನೂ ಜಾತಿ ಧರ್ಮವನ್ನೂ ಬೋಧಿಸುವದಿಲ್ಲವೆಂದು ಹೇಳುವದು ಅತಿಸಾಹಸವೇ ಸರಿ. ಶ್ರೀಕೃಷ್ಣನು ಅರ್ಜು

ಮೂ. ದೋಷೈ ರೇತೈಃ ಕುಲಘ್ನಾನಾಂ ವರ್ಣಸಂಕರ ಕಾರಕೈಃ।
ಉತ್ಸಾದ್ಯಂತೇ ಜಾತಿ ಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ॥ ೪೩
ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ।
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ॥ ೪೪

---

ನನ ಈ ಅಭಿಪ್ರಾಯಗಳೊಂದನ್ನೂ ಖಂಡಿಸುವದಿಲ್ಲವು, ಆದರೆ ಕ್ಷತ್ರಿಯನ ಧರ್ಮವಾದ ದುಷ್ಟ ನಿಗ್ರಹವನ್ನು ಅಧರ್ಮವೆಂದು ಭಾವಿಸಿದುದನ್ನು ಮಾತ್ರ ಖಂಡಿಸಿ, ವರ್ಣಾಶ್ರಮಧರ್ಮಾನುಷ್ಠಾನವು ಅತ್ಯಾವಶ್ಯಕವೆಂದು ತೋರಿಸಿ ಯುದ್ಧಾಭಿಮುಖನನ್ನಾಗಿ ಮಾಡಿದನು. ಮುಂದೆ ೩. ೨೪ ನೆಯ ಶ್ಲೋಕದಲ್ಲಿ ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ। ಸಙ್ಕರಸ್ಯ ಕರ್ತಾ ಸ್ಯಾ ಮುಪಹನ್ಯಾ ಮಿಮಾಃ ಪ್ರಜಾಃ॥ ಶಾಸ್ತ್ರೋಕ್ತವಾದ ಕರ್ಮಗಳನ್ನಾಚರಿಸದಿದ್ದರೆ ವರ್ಣಸಾಂಕರ್ಯವನ್ನುಂಟುಮಾಡಿದವನಾಗಿ, ಈ ಪ್ರಜೆಗಳನ್ನೂ ನಾಶಮಾಡಿದವನಾಗುವೆನು ಎಂದು ಶ್ರೀ ಕೃಷ್ಣನೇ ಹೇಳಿರುವದರಿಂದ, ವರ್ಣಸಾಂಕರ್ಯವು ಗೀತೆಯಲ್ಲಿ ನಿಂದಿಸಲ್ಪಟ್ಟಿರುತ್ತದೆ. ಅದೂ ಅಲ್ಲದೆ ಚಾತುರ್ವರ್ಣ್ಯಂ ಮಯಾಸೃಷ್ಟಂ ಎಂದೂ, (ಗೀ. ೪. ೩) "ಸ್ವೇ ಸ್ವೇ ಕರ್ಮಣ್ಯಭಿರತಃಸಂಸಿದ್ಧಿಂ ಲಭತೇ ನರಃ" (ಗೀ. ೧೮. ೪೫) ಎಂದು ಮುಂದೆ ಹೇಳಿರುವದರಿಂದ ವರ್ಣಾಶ್ರಮಧರ್ಮಗಳು ಅತ್ಯಾವಶ್ಯಕವೆಂಬುದೇ ಗೀತೆಯ ಮುಖ್ಯ ತಾತ್ಪರ್ಯವಾಗಿರುತ್ತದೆ. ಕ್ಷತ್ರಿಯ ಧರ್ಮವನ್ನು ತ್ಯಾಗ ಮಾಡಿದುದು ಅಧರ್ಮವೆಂದು ಬೋಧಿಸುವದಕ್ಕಾಗಿಯೇ ಗೀತೋಪದೇಶವು. ॥೪೩॥

**ಜನಾರ್ದನ** - ಶ್ರೀಕೃಷ್ಣನೇ, **ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ** - ಮೇಲೆಹೇಳಿದ ರೀತಿಯಲ್ಲಿ ನಷ್ಟವಾದ ಕುಲಧರ್ಮಗಳನ್ನುಳ್ಳ ಮನುಷ್ಯರಿಗೆ, **ನರಕೇ ನಿಯತಂ ವಾಸೋಭವತಿ** - ನರಕದಲ್ಲಿ ನಿಯತವಾಗಿ ವಾಸವು ಉಂಟಾಗುತ್ತದೆಂದು, **ಅನುಶುಶ್ರುಮ**-ಕೇಳಿರುವೆವು. ಇಲ್ಲಿ **ನಿಯತಂ** ಎಂದು ಹೇಳಿದುದರಿಂದ ಇನ್ನು ಮುಂದಕ್ಕೆಲ್ಲಾ ಅವರಿಗೆ ಯಾವಾಗಲೂ ನರಕವಾಸವೇ ವಿನಾ ಬೇರೆಯಿಲ್ಲ ಎಂಬರ್ಥವಲ್ಲವು. ಆದರೆ ಕೆಲವರು ಹಾಗೆ ಅಭಿಪ್ರಾಯಪಡುವರು. ನಿರ್ಹೇತುಕ ಕೃಪಾಪರಿಪೂರ್ಣನು ಹಾಗೆ ಕೆಲವರು ನರಕ ಭಾಕ್ಕುಗಳಾಗಿಯೇ ಇರಲಿ ಎಂದು ಸಂಕಲ್ಪಿಸಿ ಇಲ್ಲವು. ಹಾಗೆ ನರಕವಾಸವು **ನಿಯತಂ** - ಶಾಸ್ತ್ರದಲ್ಲಿ ನಿಯತವಾದುದಾಗಿ ಏರ್ಪಟ್ಟಿದೆ ಎಂಬರ್ಥವು. **ಇತಿಶುಶ್ರುಮ**—ಹೀಗೆ ಕೇಳಿರುವೆವು ಎಂದು ಮುಂದೆ ಇರುವದರಿಂದ ಇದೇ ಸಮಂಜಸವಾದ ಅರ್ಥವಾಗಿ ತೋರುತ್ತದೆ.

**ಅಹೋಬತ** - ಹಾಹಾ ಕಷ್ಟವೇ! **ವಯಂ** - ನಾವು, ಮಹತ್ಪಾದ ಪಾಪವನ್ನು, **ಕರ್ತುಂ**-ಮಾಡಲು, **ವ್ಯವಸಿತಾಃ** - ನಿಶ್ಚಯಿಸಿದ್ದೇವೆ. ಹೀಗೆ ಯುದ್ಧದಲ್ಲಿ ಸ್ವಜನವನ್ನು ಕೊಲ್ಲಬೇಕೆಂದು ನಾವು ಉದ್ಯುಕ್ತರಾಗಿರುವದು ಸುಮ್ಮನೆ ಪಾಪಂ ಎಂದು ಹೇಳದೆ ಮಹತ್ಪಾಪಂ ಎಂದು ಹೇಳಲ್ಪಟ್ಟಿರುತ್ತದೆ.ಮನುಷ್ಯನು ತನ್ನ ಹೊಟ್ಟೆಗಾಗಲಿ, ಭೋಗಕ್ಕಾಗಲಿ ಯಾವ ಚೇತನನಿಗೂ ತೊಂದರೆ ಇಲ್ಲದೆ ಸಂಪಾದಿಸುವದು ಧರ್ಮಯುಕ್ತವಾಗಿದ್ದರೆ ಸರಿಯು. ಹಾಗಿಲ್ಲವೆ ಇತರರಿಗೆ ತಪ್ಪಿಸಿ ತಾನು ಅನುಭವಿಸುವದು ಪಾಪವು. ಅವರನ್ನು ಕೊಂದೇಬಿಟ್ಟು ಅನುಭವಿಸುವದು ಮಹತ್ಪಾಪವೆಂಬ ಭಾವವು. ಇದೂ ಅಲ್ಲದೆ ನಾವು ಕೊಲ್ಲಬೇಕೆಂದಿರುವವರು ಸ್ವಜನರು. ದುರ್ಯೋಧನಾದಿಗಳು ಸಹೋದರರು, ಅದು ಹಾಗಿರಲಿ, ಭೀಷ್ಮರು ನಮ್ಮನ್ನು ಪೋಷಿಸಿದವರು, ದ್ರೋಣರು ಆಚಾರ್ಯರು, ಇಂತವರನ್ನು ಕೊಲ್ಲುವದು ಮಹಾಪಾಪವಲ್ಲವೇ ಎಂದು ತೋರಿಸುವದಕ್ಕಾಗಿ

ಮೂ. ಅಹೋಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ।
ಯದ್ರಾಜ್ಯ ಸುಖಲೋಭೇನ ಹಂತುಂ ಸ್ವಜನ ಮುದ್ಯತಾಃ॥ ೪೫
ಯದಿ ಮಾಮ ಪ್ರತೀಕಾರ ಮಶಸ್ತ್ರಂ ಶಸ್ತ್ರಪಾಣಯಃ।
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇಕ್ಷೇಮತರಂ ಭವೇತ್॥ ೪೬

ಸಂಜಯ ಉವಾಚ :—

ಏವ ಮುಕ್ತ್ವಾರ್ಜುನ ಸ್ಸಂಖ್ಯೇ ರಥೋ ಪಸ್ಥ ಉಪಾವಿಶತ್।
ವಿಸೃಜ್ಯ ಸಶರಂ ಚಾಪಂ ಶೋಕ ಸಂವಿಗ್ನ ಮಾನಸಃ॥ ೪೭

ಇತಿ ಶ್ರೀ ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಅರ್ಜುನವಿಷಾದಯೋಗೋನಾಮ ಪ್ರಥಮೋಧ್ಯಾಯಃ

---

ಹನ್ತುಂ ಸ್ವಜನ ಮುದ್ಯತಾಃ ಎಂದು ಪ್ರಯೋಗವು. ಏಕೆಂದರೆ, ಯತ್ - ಯಾವಕಾರಣದಿಂದ ರಾಜ್ಯಸುಖದ ದುರಾಶೆಯಿಂದ, ಸ್ವಜನವನ್ನು, ಹನ್ತುಂ – ಕೊಲ್ಲಲು, ಉದ್ಯತಾಃ - ಪ್ರಯತ್ನಿಸಿದೆವೋ, ತತ್ - ಆ ಕಾರಣದಿಂದ ಮಹತ್ತಾದ ಪಾಪವನ್ನು ಮಾಡಲು ಯತ್ನಿಸಿದ್ದೆವು ಎಂದು ಅನ್ವಯವು. ಇಲ್ಲಿ ವಯಂ ಎಂಬುದರಿಂದ ತಾನೊಬ್ಬನೇಯಲ್ಲದೆ ಮಹಾ ಧಾರ್ಮಿಕನಾದ ತನ್ನ ಅಣ್ಣನಾದ ಧರ್ಮರಾಯ ಮೊದಲಾದವರೆಂದು ಅರ್ಥಮಾಡಬಹುದು. ರಾಜ್ಯಲೋಭದಿಂದ ನಾನೇನೋ ಯತ್ನಿಸುವದು ನ್ಯಾಯವು; ಇಂತಹ ಅಧರ್ಮಯುದ್ಧಕ್ಕೆ ಸಹಕಾರಿಯಾಗಿ ಸರ್ವೇಶ್ವರನೆಂದು ಹೇಳಿಸಿಕೊಳ್ಳುವ ನೀನು ಸೇರಬಹುದೇ ಎಂಬ ತಾತ್ಪರ್ಯವೂ ದ್ಯೋತಿತವು. ಸ್ವಜನವನ್ನು ಕೊಲ್ಲಲು ಪ್ರಯತ್ನಿಸುವದು ಅಧರ್ಮವೆಂದು ನೀನು ಹೇಳಿದರೆ, ಕೌರವರು ಯುದ್ಧಕ್ಕೆ ಸನ್ನದ್ಧರಾಗಿಬಂದು ಸ್ವಜನವನ್ನು ಕೊಲ್ಲಲು ಯತ್ನಿಸಿರುವರಲ್ಲಾ, ನೀನು ಶಸ್ತ್ರವನ್ನು ಕೆಳಗೆ ಹಾಕಿದರೆ, ಸುಲಭವಾಗಿ ಕೊಂದುಬಿಡುವರಲ್ಲಾ ಎಂದು ಹೇಳಿವೆಯೋ ಎಂದರೆ ಅದಕ್ಕೆ ಅರ್ಜುನನು ಸಮಾಧಾನವನ್ನು ಹೇಳುತ್ತಾನೆ. ॥ ೪೫ ॥

ಶಸ್ತ್ರಪಾಣಯಃ – ಶಸ್ತ್ರಗಳನ್ನು ಕೈಯಲ್ಲಿ ಹಿಡಿದಿರುವ, ಧಾರ್ತರಾಷ್ಟ್ರಾಃ - ದುರ್ಯೋಧನ ಪ್ರಭೃತಿಗಳು ಅಪ್ರತೀಕಾರಂ - ಕೆಟ್ಟದ್ದು ಮಾಡಿದರೂ ಪ್ರತಿಯಾಗಿ ಏನನ್ನೂ ಮಾಡದಿರುವ, ಅಶಸ್ತ್ರಂ - ಕೈಯಲ್ಲಿ ಶಸ್ತ್ರವನ್ನು ಹಿಡಿಯದಿರುವ, ಮಾಂ - ನನ್ನನ್ನು, ದುರ್ಯೋಧನಾದಿಗಳು ಪುನಃಪುನಃ ರಾಜಸೂಯದ ಮೊದಲು ಇದುವರೆಗೂ ಅನೇಕ ದುಷ್ಕೃತ್ಯಗಳನ್ನು ಮಾಡಿ ತಮಗೆ ಸಂಕಟವನ್ನುಂಟುಮಾಡಿದ್ದರೂ ಅವೊಂದನ್ನೂ ಸ್ಮರಿಸದೇ ಇರುವ ಮಾಂ - ನನ್ನನ್ನು ಎಂಬರ್ಥವು. ಶ್ರೀಕೃಷ್ಣನೇನಾದರೂ ಅಷ್ಟು ನಿನಗೆ ಅಪಕಾರಮಾಡಿದವರೊಂದಿಗೆ ಯುದ್ಧ ಕೂಡ ಬೇಡವೋ ಎಂದು ಕೇಳಿಯಾನು ಎಂದು ಭಾವಿಸಿ ತಾನೇ ಅಷ್ಟು ತೊಂದರೆಯನ್ನು ನಾವು ಅನುಭವಿಸಿದ್ದರೂ ತಾನು ಎಂದಿಗೂ ಪ್ರತಿಯಾಗಿ ಅಪಕಾರ ಮಾಡುವವನಲ್ಲವು ಎಂದು ಅಪ್ರತೀಕಾರಂ ಎಂದು ಹೇಳಿಕೊಂಡಿರುತ್ತಾನೆ. ಹನ್ಯುಃ ಯದಿ - ಹೀಗೆ ಅಧರ್ಮದಿಂದ ನನ್ನನ್ನು ಕೊಂದರೂ, ಆಗಲೂ, ತತ್ - ಹಾಗೆ ಕೊಲ್ಲಿಸಿಕೊಳ್ಳೋಣವು, ಮೇ - ನನಗೆ, ಕ್ಷೇಮತರಂ ಭವೇತ್ – ಅತ್ಯಂತ ಹಿತವಾದುದೇ ಆದೀತು. ಅದು ಹೇಗೆಂದರೆ ಅಧರ್ಮ ಮತ್ತು ಪಾಪಗಳುಂಟಾಗದಿರುವದರಿಂದ ಕ್ಷೇಮತರವೆಂಬ ಭಾವವು. ಅಥವಾ ಯುದ್ಧದಲ್ಲಿ ಮಡಿದವರಿಗೆ ವೀರಸ್ವರ್ಗಪ್ರಾಪ್ತವಾಗುವದು. ಆದುದರಿಂದ ಅತ್ಯಂತ ಕ್ಷೇಮವು. ಲೋಕದಲ್ಲಿ ಬಂಧುಗಳನ್ನು ಕೊಂದು ರಾಜ್ಯವನ್ನು ಪಡೆದು ರಾಜ್ಯಾನುಭವ ಮಾಡುತ್ತಾ ಹೊಟ್ಟೆ ಹೊರಕೊಳ್ಳುತ್ತಾರೆಂಬ ಅಪಖ್ಯಾತಿ ತಪ್ಪಿದುದು ಕ್ಷೇಮವು. ವೀರಸ್ವರ್ಗ ಉಂಟಾಗುವದು ಕ್ಷೇಮತರವು.

ಭಾ. **ಸತುಪಾರ್ಥೋ ಮಹಾಮನಾಃ ಪರಮ ಕಾರುಣಿಕೋ ದೀರ್ಘಬಂಧುಃ ಪರಮ ಧಾರ್ಮಿಕ ಸ್ಸಭ್ರಾತೃಕೋ ಭವದ್ಭಿರತಿಘೋರೈ ರ್ಮಾರಣೈ ರ್ಜತುಗೃಹದಾಹಾದಿಭಿ ರಸಕೃದ್ವಂಚಿ ತೋಽಪಿ ಪರಮಪುರುಷ ಸಹಾಯೇನಾತ್ಮನಾ ಹನಿಷ್ಯಮಾಣಾ೯ ಭವದೀಯಾ೯ ವಿಲೋಕ್ಯ ಬಂಧುಸ್ನೇಹೇನ ಪರಯಾ ಕೃಪಯಾ ಧರ್ಮಾಧರ್ಮ ಭಯೇನ ಚಾತಿಮಾತ್ರ ಸನ್ನ ಸರ್ವ ಗಾತ್ರಃ ಸರ್ವಥಾ ಹಂ ನಯೋತ್ಸ್ಯಾಮೀತ್ಯುಕ್ತ್ವಾ ಬಂಧುವಿಶ್ಲೇಷ ಜನಿತ ಶೋಕ ಸಂವಿಗ್ನ ಮಾನಸ ಸ್ಸಶರಂ ಚಾಪಂ ವಿಸೃಜ್ಯ ರಥೋಪಸ್ಥ ಉಪಾವಿಶತ್.**

**ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ**

**ಪ್ರಥಮೋಧ್ಯಾಯಃ**

॥ ಶ್ರೀಮತೇ ರಾಮಾನುಜಾಯ ನಮಃ ॥

---

ಅರ್ಜುನನು, **ಏವಂ ಉಕ್ತ್ವಾ** - ಹೀಗೆ ಹೇಳಿದವನಾಗಿ, **ಶೋಕಸಂವಿಗ್ನ ಮಾನಸಃ** – ದುಃಖದಿಂದ ಚಾಂಚಲ್ಯಹೊಂದಿದ ಮನಸ್ಸುಳ್ಳವನಾಗಿ, **ಸಂಖ್ಯೇ**-ಯುದ್ಧದಲ್ಲಿ, **ಸಶರಂ ಚಾಪಂ**-ಬಾಣದಿಂದ ಕೂಡಿದ ಧನುಸ್ಸನ್ನು, **ವಿಸೃಜ್ಯ** - ಬಿಸಾಡಿ, **ರಥೋಪಸ್ಥೇ** - ರಥದ ಒಂದು ಭಾಗ ದಲ್ಲಿ ಎಂದರೆ ರಥಿಯು ಅಲಂಕರಿಸುವ ಉನ್ನತಾಸನವನ್ನು ತ್ಯಜಿಸಿ ರಥದಮೇಲೆಯೇ ಕೆಳಗಡೆ ಯಲ್ಲಿ ಕೂತುಕೊಂಡನು. ಯುದ್ಧಮಾಡುವದಿಲ್ಲವೆಂದು ನಿಶ್ಚಯಮಾಡಿಕೊಂಡು ಸ್ವಲ್ಪ ಕೆಳಗೆ ಕೂತನೆಂಬ ಭಾವವು.

**ಭಾಷ್ಯಾರ್ಥ**—೨೭ನೆಯ ಶ್ಲೋಕದಿಂದ ಅಧ್ಯಾಯದ ಕೊನೆಯವರಿಗಿನ ಸಂಗ್ರಹ ತಾತ್ಪರ್ಯವನ್ನ ನುಗ್ರಹಿಸುತ್ತಾರೆ. **ಸತು ಪಾರ್ಥಃ**-ಆ ಅರ್ಜುನನಾದರೋ, **ಮಹಾಮನಾಃ**- ಬಹಳ ಕ್ಲೇಶಗಳನ್ನು ಕೊಟ್ಟ ವಾಸ್ತವ ಶತ್ರುಗಳಾದರೂ ಬಂಧುಗಳಾದುದರಿಂದ ಅವಧ್ಯರು, ತ್ರೈಲೋಕ್ಯಾಧಿಪತ್ಯಕ್ಕಾ ಗಿಯೂ ಅವರನ್ನು ಕೊಲ್ಲೆನು ಎಂದು ಹೇಳಿದುದರಿಂದ ಮಹತ್ತಾದ ಉದಾರ ಮನಸ್ಕನಾದ, **ಪರಮ ಕಾರುಣಿಕಃ**—ತನ್ನ ಶತ್ರುಗಳೆಂದು ಚನ್ನಾಗಿ ತಿಳಿದರೂ, ಮೂಲದಲ್ಲಿ **ಅಪ್ರತೀಕಾರಂ**—ಎಂಬುದರಿಂದ ತೋರಿಬರುವ ಅರ್ಥವು. ಅರ್ಜುನ ಮಾತ್ರವೇ ಅಲ್ಲದೆ ಆತನ ಸಹೋದರರೂ ಸಹ ಪರಮ ಕಾರು ಣಿಕರೇ, ಭೀಮನೂ ಪರಮ ಕಾರುಣಿಕನೋ ಎಂದರೆ ಅಧರ್ಮಿಗಳಿಂದ ತೊಂದರೆ ಪಟ್ಟವರ ವಿಷಯದಲ್ಲಿ ಪರಮ ಕಾರುಣಿಕನೇ ಸರಿ;ಬಕಾಸುರ ವೃತ್ತಾಂತದಲ್ಲಿ ಬ್ರಾಹ್ಮಣ ಪುತ್ರನಿಗೆ ಬದಲಾಗಿ ತಾನು ಸಾಯಲು ಯತ್ನಿಸಿದವನು, ದ್ರೌಪದಿಯ ಅವಮಾನಕ್ಕೆ ಮರುಗಿ ದುರ್ಯೋಧನ ದುಶ್ಶಾ ಸನರ ನಾಶವನ್ನು ಸಂಕಲ್ಪಿಸಿದವನು, ಆಕೆಯ ಕಷ್ಟಕ್ಕೆ ಮರುಗಿ ಕೀಚಕನನ್ನು ವಧಿಸಿದವನು. **ದೀರ್ಘ ಬಂಧುಃ** - ಇವರು ಪಿತೃಗಳು, ಇವರು ಪಿತಾಮಹರು, ಇವರು ಆಚಾರ್ಯರು ಇವರು ಬಾಲ್ಯದಲ್ಲಿ ಸಾಕಿದವರು ಹೀಗೆಲ್ಲಾ ಭಾವಿಸುವ ದೀರ್ಘಬಂಧುವಾದ, ಅಥವಾ ಇವರುಗಳೆಲ್ಲಾ ಎಷ್ಟು ಅಪಕಾರಮಾಡಿದರೂ ತನಗೆ ಅವರಲ್ಲಿರುವ ಬಂಧುಭಾವವೂ ಸ್ನೇಹವೂ ಎಂದಿಗೂ ಹೋಗದೇ ಇರುವವನು, **ಪರಮಧಾರ್ಮಿಕಃ** - ಆತತಾಯಿಗಳಾಗಿದ್ದರೂ ಇವರುಗಳನ್ನು ಕೊಂದರೆ ಅಧರ್ಮವೂ, ಪಾಪವೂ, ನರಕವೂ, ಕುಲನಾಶವೂ, ವರ್ಣಸಂಕರವೂ ಇತ್ಯಾದಿ ಅನರ್ಥಗಳುಂ ಟಾಗುತ್ತವೆ ಎಂದು ಭಾವಿಸಿದುದರಿಂದ ಪರಮಧಾರ್ಮಿಕನಾದ, **ಸಭ್ರಾತೃಕಃ** - ಹೀಗೆ ತನ್ನ ಹಾಗೆಯೇ ಗುಣಾಢ್ಯರಾಗಿರುವ ಭ್ರಾತೃಗಳನ್ನು ಹೊಂದಿರುವ, ಏಕೆಂದರೆ, **"ಅಸ್ಮಾ೯" "ನಃ" "ವಯಂ" "ಅಸ್ಮಾಭಿಃ"** ಇತ್ಯಾದಿ ಪದಗಳನ್ನೇ ಅರ್ಜುನನು ಉಪಯೋಗಿಸಿ ಹೀಗೆ ಬಂಧು

ಹನನರೂಪ ವಿಷಾದವು ತನಗೊಬ್ಬನಿಗೆ ಮಾತ್ರವೇ ಅಲ್ಲವು, ತನ್ನಭ್ರಾತೃಗಳಿಗೂ ಕೂಡ ಅಂತಹ ವಿಷಾದವುಂಟೆಂದು ಸೂಚಿಸುವದಕ್ಕಾಗಿ **ಸಭ್ರಾತೃಕಃ** ಎಂಬ ಪ್ರಯೋಗವು. ಇಂತಹ ಅರ್ಜುನನು, **ಭವದ್ಭಿಃ** - ಇದು ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುವ ವಾಕ್ಯವಾದುದರಿಂದ ನಿಮ್ಮ ಗಳಿಂದ, ಭವದೀಯೈಃ ಎಂದು ಹೇಳದೆ ಭವದ್ಭಿಃ ಎಂದು ಏಕೆ ಹೇಳಲ್ಪಟ್ಟಿತೆಂದರೆ :—ಧೃತರಾಷ್ಟ್ರನ ಅಭಿಪ್ರಾಯವೂ ಸ್ವಲ್ಪಮಟ್ಟಿಗೆ ದುರ್ಯೋಧನಾದಿಗಳ ಹಾಗೆಯೇ ಆದುದರಿಂದ ನಿಮ್ಮಕಡೆಯವ ರಿಂದ ಎಂದು ಹೇಳದೆ ನಿಮ್ಮಿಂದ ಎಂದು ಹೇಳಲ್ಪಟ್ಟಿತು ; **ಅತಿಘೋರೈಃ**-ಅತಿ ಕ್ರೂರಗಳಾದ, **ಮಾರಣೈಃ**-ಮರಣವನ್ನುಂಟುಮಾಡತಕ್ಕ, **ಜತುಗೃಹದಾಹಾದಿಭಿಃ**—ಅರಗಿನ ಮನೆಯನ್ನು ಸುಡೋಣವೇ ಮೊದಲಾದವುಗಳಿಂದ, **ಅಸಕೃದ್ವಂಚಿತೋಽಪಿ** – ಅನೇಕಸಲ ವಂಚಿಸಲ್ಪಟ್ಟರೂ ಕೂಡ, **ಪರಮಪುರುಷ ಸಹಾಯೇನ**—ಪರಮಪುರುಷನಾದ ಶ್ರೀಕೃಷ್ಣನನ್ನೇ ಸಹಾಯವಾಗಿ ವುಳ್ಳ, **ಆತ್ಮನಾ** - ತನ್ನಿಂದ (ಅರ್ಜುನನಿಂದ) **ಹನಿಷ್ಯಮಾಣಾ**-ಕೊಲ್ಲಲು ಯೋಗ್ಯರಾದ, **ಭವದೀಯಾ**—ನಿನ್ನ ಕಡೆಯವರಾದವರನ್ನು, ಇಲ್ಲಾದರೋ ಧೃತರಾಷ್ಟ್ರನು ಸೇರಲಿಲ್ಲವಾದುದರಿಂದ ಭವದೀಯಾ ಎಂಬುದೇ ಸರಿಯಾದ ಪ್ರಯೋಗವು. **ವಿಲೋಕ್ಯ**-ನೋಡಿ, **ಬಂಧುಸ್ನೇಹೇನ**—ಬಂಧುಗಳಲ್ಲಿರುವ ಸ್ನೇಹದಿಂದಲೂ, **ಪರಯಾ ಕೃಪಯಾ**—ಶ್ರೇಷ್ಠವಾದ ಎಂದರೆ ಅತ್ಯಂತ ಕೃಪೆಯಿಂದಲೂ, **ಧರ್ಮಾಧರ್ಮ ಭಯೇನ ಚ**-ಧರ್ಮವನ್ನು ಅಧರ್ಮವೆಂದು ಭಾವಿಸಿದುದರಿಂದುಂಟಾದ ಭಯದಿಂದಲೂಸಹ **ಅತಿಮಾತ್ರ ಸನ್ನಸರ್ವಗಾತ್ರಃ** - ಹೆಚ್ಚಾಗಿ ಕುಂದಿವ ಶರೀರವುಳ್ಳವನಾಗಿ, **ಸರ್ವಥಾಹಂ-ನಯೋತ್ಸ್ಯಾಮಿ**-ಖಂಡಿತವಾಗಿಯೂ, ನಾನು ಯುದ್ಧಮಾಡುವದಿಲ್ಲವು, **ಇತ್ಯುಕ್ತ್ವಾ** - ಎಂಬದಾಗಿ ಹೇಳಿ, **ಬಂಧು ವಿಶ್ಲೇಷ ಜನಿತ ಶೋಕಸಂವಿಗ್ನ ಮಾನಸಃ** - ಯುದ್ಧದಲ್ಲಿ ಬಂಧುಗಳ ಅಗಲುವಿಕೆಯಿಂದುಂಟಾದ ಶೋಕದಿಂದ ಪೀಡಿತವಾದ ಮನಸ್ಸುಳ್ಳವನಾಗಿ, ಬಾಣದಿಂದ ಸೇರಿದ ಗಾಂಡೀವ ಧನಸ್ಸನ್ನು ಬಿಸಾಡಿ, ರಥದ ಮುಂಭಾಗದಲ್ಲಿ ಕೂತುಕೊಂಡನು.

ಇಂತು ತಿರುನಾರಾಯಣಪುರಂ ವಿಜಯರಾಘವ ಶರ್ಮನಿಂದ ರಚಿಸಲ್ಪಟ್ಟ

**ಆಚಾರ್ಯ ಹೃದಯಾನ್ವೇಷಿಣೀ**

ಎಂಬ ಶ್ರೀ ಭಗವದ್ಗೀತೆ, ಗೀತಾಭಾಷ್ಯಗಳ ಅರ್ಥ ತಾತ್ಪರ್ಯಗಳಲ್ಲಿ

**ಪ್ರಥಮಾಧ್ಯಾಯವು ಸಮಾಪ್ತವಾದುದು.**

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

ಶ್ರೀಮತೇ ರಾಮಾನುಜಾಯ ನಮಃ
ಶ್ರೀಮದ್ಯಾಮುನ ಮುನಿ ಪ್ರಣೀತಃ

# ಶ್ರೀಮದ್ಗೀತಾರ್ಥ ಸಂಗ್ರಹಃ

ಯತ್ಪದಾಂಭೋರುಹ ಧ್ಯಾನ ವಿಧ್ವಸ್ತಾ ಶೇಷಕಲ್ಮಷಃ ।
ವಸ್ತುತಾ ಮುಪಯಾತೋಹಂ ಯಾಮುನೇಯಂ ನಮಾಮಿ ತಂ ॥

---

ಸ್ವಧರ್ಮಜ್ಞಾನವೈರಾಗ್ಯ ಸಾಧ್ಯಭಕ್ತ್ಯೈಕ ಗೋಚರಃ ।
ನಾರಾಯಣಃ ಪರಂಬ್ರಹ್ಮ ಗೀತಾಶಾಸ್ತ್ರೇ ಸಮೀರಿತಃ ॥ ೧

---

ಅರ್ಥ—ಸ್ವಧರ್ಮ - ತನ್ನ ವರ್ಣಾಶ್ರಮಧರ್ಮವೇನು, ಎಂದರೆ ಕರ್ಮಯೋಗವೇನು, ಜ್ಞಾನವೈರಾಗ್ಯ—ಜ್ಞಾನವೇನು; ವೈರಾಗ್ಯವೇನು, ಎಂದರೆ ವೈರಾಗ್ಯದಿಂದಕೂಡಿದ ಜ್ಞಾನಯೋಗ ವೇನು ಇವುಗಳಿಂದ, ಸಾಧ್ಯ - ಸಾಧಿಸಲ್ಪಟ್ಟ, ಭಕ್ತ್ಯೈಕ ಗೋಚರಃ - ಭಕ್ತಿಯೋಗದಿಂದಲೇ ಮುಖ್ಯವಾಗಿ ಸಾಕ್ಷಾತ್ಕರಿಸಲ್ಪಟ್ಟ, ನಾರಾಯಣನೇ ಪರಬ್ರಹ್ಮವೆಂದು ಗೀತಾ ಶಾಸ್ತ್ರದಲ್ಲಿ, ಸಮೀರಿತಃ - ಚನ್ನಾಗಿ ವಿಶದವಾಗಿ ಹೇಳಲ್ಪಟ್ಟಿರುತ್ತದೆ ॥೧॥

ತಾತ್ಪರ್ಯ—ಪ್ರಥಮತಃ ಗೀತಾಶಾಸ್ತ್ರದಲ್ಲಿ ಹೇಳಿರುವ ಪರತತ್ವವು ಯಾವುದೆಂಬುದನ್ನು ತಿಳಿಸುತ್ತಾರೆ. ಭಾರತಮೋಕ್ಷಧರ್ಮದಲ್ಲಿ ಪರತತ್ವವು ಯಾವುದು ಎಂಬ ಜಿಜ್ಞಾಸೆಯಲ್ಲಿ,

"ತತ್ವಂ ಜಿಜ್ಞಾಸಮಾನಾನಾಂ ಹೇತುಭಿಸ್ಸರ್ವತೋಮುಖೈಃ ।
ತತ್ತ್ವಮೇಕೋ ಮಹಾಯೋಗೀ ಹರಿರ್ನಾರಾಯಣಃ ಪರಃ" ॥

ಸಮಸ್ತ ಹೇತುಗಳಿಂದಲೂ ನಾರಾಯಣನೇ ಪರತತ್ವವೆಂದೂ, ಹಾಗೆಯೇ ಅಲ್ಲೇ,

ಏಕಾಕೀ ವಿದ್ಯಯಾಸಾರ್ಧಂ ವಿಹರಿಷ್ಯೇ ಜಗತ್ಪುನಃ ।
ತತೋಭೂಯೋ ಜಗತ್ಸರ್ವಂ ಕರಿಷ್ಯಾಮಿಹ ವಿದ್ಯಯಾ ॥

ಎಂದು ಭಗವಂತನೇ ತಾನು ಸೃಷ್ಟಿಸ್ಥಿತಿಲಯಾದಿಗಳನ್ನು ಲಕ್ಷ್ಮಿಯೊಂದಿಗೆ ಮಾಡುವೆನೆಂದು ಹೇಳಿರುವದರಿಂದ ಲಕ್ಷ್ಮೀಯುಕ್ತನಾದರೂ, ಏಕಃ ಎಂದು ವಿಶಿಷ್ಟತೆಯಿಂದ ವ್ಯವಹಾರ ವಿರುವದರಿಂದ ಲಕ್ಷ್ಮೀನಾರಾಯಣನೇ ಪರತತ್ವವೆಂದರಿಯತಕ್ಕದ್ದು. ಅದರ ಮುಂದಿನ ಅಧ್ಯಾಯ ದಲ್ಲಿ (೩೪೮) ಕೃಷ್ಣಾವತಾರವು ಲಕ್ಷ್ಮೀನಾರಾಯಣನಾದ ತನ್ನ ಅವತಾರವೆಂದು ಭಗವಂತನೇ ನಾರದರಿಗೆ ಉಪದೇಶಿಸುವದರಿಂದ ಶ್ರೀಕೃಷ್ಣನೇ ಪರತತ್ವವೆಂದು ಏರ್ಪಟ್ಟಿತು. ನಾರಸಿಂಹ ಪುರಾಣದಲ್ಲಿ "ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃಪುನಃ । ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ ॥" ಎಲ್ಲಾ ಶಾಸ್ತ್ರಗಳನ್ನೂ ಅವಲೋಕಿಸಿ ಪುನಃಪುನಃ ವಿಚಾರ ಮಾಡಿನೋಡಿದರೂ ಧ್ಯೇಯವಾದುದು ನಾರಾಯಣನು, ಆತನೇ ಪರತತ್ವವೆಂದೂ ವ್ಯಕ್ತಪಡುತ್ತದೆ. ಈ ವಿಷಯದಲ್ಲಿ ಶ್ರುತಿ ಸ್ಮೃತಿ ಇತಿಹಾಸಗಳೇನು, ಇನ್ನೂ ಋಷಿವಾಕ್ಯಗಳೇನು ಹೀಗೆ ನೂರಾರು ಪ್ರಮಾಣಗಳನ್ನು ಉದಾಹರಿಸಬಹುದು. ನಾವು ಪ್ರಥಮತಃ ತತ್ವವು ಯಾವುದು ಎಂಬ ಜ್ಞಾನವನ್ನು ಸಂಪಾದಿಸತಕ್ಕದ್ದು. ಅನಂತರ ನಮಗೆ ಹಿತವಾದುದು ಯಾವುದೆಂದರಿತು ಅದನ್ನು ಅನುಷ್ಠಿಸತಕ್ಕದ್ದು. ಈ ತತ್ವಹಿತಗಳಿಂದ ಮೂರನೆಯದಾದ ಪುರುಷಾರ್ಥವು ಸ್ವಾಮಿ

ಕೃಪೆಯಿಂದ ಲಭ್ಯವು. ಈ ಅಂಶವನ್ನೆಲ್ಲಾ ಈ ಶ್ಲೋಕದಲ್ಲಿ ಹೇಳಿರುತ್ತಾರೆ. **ನಾರಾಯಣಃ ಪರಂಬ್ರಹ್ಮ**ವೆಂಬುದರಿಂದ ತತ್ವವೂ, ಪೂರ್ವಾರ್ಧದಿಂದ ಹಿತವೂ ಬೋಧಿಸಲ್ಪಟ್ಟಿತು; **ಸಾಧ್ಯ ಭಕ್ತ್ಯೈಕ ಗೋಚರಃ** ಎಂದು ಹೇಳಿರುವದರ ಫಲವಾಗಿ ಪುರುಷಾರ್ಥವನ್ನು ಊಹಿಸಬಹುದು. **ಸ್ವಧರ್ಮ**ವೆಂದರೆ ತನ್ನ ಧರ್ಮವು, ಅದು ಯಾವುದೆಂದರೆ, **ಸ್ವೇಸ್ವೇ ಕರ್ಮಣ್ಯಭಿರತಃ** ಎಂಬ ೧೮ನೆಯ ಅಧ್ಯಾಯದ ಶ್ಲೋಕದಲ್ಲಿ ತೋರಿಬರುವ ಹಾಗೆ ತನಗೆ ಶಾಸ್ತ್ರದಲ್ಲಿ ವಿಧಿಸಿರುವ ಧರ್ಮವು, ಇದರಿಂದ ಕರ್ಮಯೋಗವು ಹೇಳಲ್ಪಟ್ಟಿತು. ಜ್ಞಾನವೆಂದರೆ ತಾನು ಸರ್ವೇಶ್ವರನಿಗೇ ಶೇಷಭೂತನು ಎಂಬ ಯಥಾವತ್ತಾದ ತನ್ನ ವಿಷಯವಾದ ಜ್ಞಾನವು. **"ಪರಮಾತ್ಮನಿಯೋ ರಕ್ತಃ ವಿರಕ್ತೋಽಪರ ಮಾತ್ಮನಿ"** (ನಾರದ ಪರಿವ್ರಾಜಕೋಪನಿಷತ್ತು) ಎಂದು ಹೇಳಿರುವ ಹಾಗೆ ಪರಮಾತ್ಮ ವ್ಯತಿರಿಕ್ತ ವಾದ ಐಹಿಕಾದಿಗಳಲ್ಲಿ ಆಶೆ ಇಲ್ಲದಿರೋಣವೇ ವೈರಾಗ್ಯವು. ಇದು ಕರ್ಮಯೋಗಕ್ಕೂ ಕೂಡ ಆವಶ್ಯಕವು. ಹೀಗಿರುವಾಗ, ಕರ್ಮಯೋಗದಲ್ಲೇ ಅಂತರ್ಗತವಾಗಿದ್ದರೂ ಬೇರೆ ಏತಕ್ಕೆ ಹೇಳ ಲ್ಪಟ್ಟಿತೆಂದರೆ, ಮೋಕ್ಷಾರ್ಥಿಗೆ ಅದು ಅತ್ಯಾವಶ್ಯಕವೆಂದೂ, ವೈರಾಗ್ಯವಿದ್ದವನಿಗೇನೇ ಮೋಕ್ಷವೂ, ವೈರಾಗ್ಯವಿಲ್ಲದವನಿಗೆ ಮೋಕ್ಷವಿಲ್ಲವೆಂಬಭಿಪ್ರಾಯವನ್ನು ಚೆನ್ನಾಗಿ ತಿಳಿಸುವದಕ್ಕಾಗಿ ಅಂತಹ ಪ್ರಯೋಗವು. ಈ ಕರ್ಮಯೋಗ ಜ್ಞಾನಯೋಗಗಳ ಅಙ್ಗವಾಗಿ ಅವುಗಳಿಂದ ಭಕ್ತಿಯೋಗ ವನ್ನು ಸಾಧಿಸಬಹುದೆಂಬ ಅಭಿಪ್ರಾಯವು ವ್ಯಕ್ತವಾಗುವದಕ್ಕಾಗಿ, **ಸ್ವಧರ್ಮ ಜ್ಞಾನ ವೈರಾಗ್ಯ ಸಾಧ್ಯ ಭಕ್ತಿ** ಎಂದು ಹೇಳಲ್ಪಟ್ಟಿತು. ಈ ಅಭಿಪ್ರಾಯವನ್ನೇ ಶ್ರೀ ಯಾಮುನೇಯರು ತಾವು ರಚಿಸಿದ "ಆತ್ಮಸಿದ್ಧಿ"ಯಲ್ಲಿ, **"ಉಭಯಪರಿಕರ್ಮಿತ ಸ್ವಾಂತಸ್ಯೈಕಾನ್ತಿಕಾತ್ಯನ್ತಿಕಭಕ್ತಿಯೋಗ ಲಭ್ಯಃ"** ಎಂದು ಹೇಳಿರುತ್ತಾರೆ. ಕರ್ಮಯೋಗ ಜ್ಞಾನಯೋಗ ಎರಡರಿಂದಲೂ ಪರಿಶುದ್ಧವಾದ ಮನಸ್ಸುಳ್ಳವನ ಸದಾ ನನ್ನಲ್ಲೇ ಇಟ್ಟ ಮನೋಬುದ್ಧಿಯುಳ್ಳ ಏಕಾಂತ ಭಕ್ತಿಯೋಗದಿಂದ ಸರ್ವೇ ಶ್ವರನು ಲಭ್ಯನು ಎಂಬುದು ಅಭಿಪ್ರಾಯವು. ಇದರಿಂದ ಗೀತೆಯಲ್ಲಿ ಹೇಳಲ್ಪಟ್ಟ ಭಕ್ತಿಯೋಗವು ಸಙ್ಗ್ರಹಿಸಲ್ಪಟ್ಟಿತು. ಆದರೆ ಈ ಗುರೂಪಾಯವೂ ಅಲ್ಲದೆ ೧೮ನೆಯ ಅಧ್ಯಾಯದ ಚರಮ ಶ್ಲೋಕದಲ್ಲಿ ಭರನ್ಯಾಸರೂಪ ಲಘೂಪಾಯವೂ ಹೇಳಲ್ಪಟ್ಟಿರುವದರಿಂದ ಲಘೂಪಾಯವೂ ಸಹ ಈ ಶ್ಲೋಕದ ಪೂರ್ವಾರ್ಧದಿಂದಲೇ ಹೇಳಲ್ಪಟ್ಟಿತೆಂದು ಊಹಿಸಬೇಕಾಗಿರುತ್ತದೆ. ಇಲ್ಲದಿದ್ದರೆ, **ಗೀತಾಶಾಸ್ತ್ರೇ ಸಮೀರಿತಃ** ಎಂದು ಹೇಳಿರುವದರಿಂದ, ಗೀತಾಶಾಸ್ತ್ರದಲ್ಲಿ ಈ ಲಘೂಪಾಯವು ಸೂಚಿಸಲ್ಪಡಲಿಲ್ಲವು, ಬಿಟ್ಟುಹೋಯಿತು ಎಂಬ ನ್ಯೂನತೆಯುಂಟಾಗುತ್ತದೆ. ಆದುದರಿಂದಲೇ ಮಹಾಪ್ರಾಜ್ಞರಾದ ಯಾಮುನೇಯರು, ಕರ್ಮಯೋಗ, ಜ್ಞಾನಯೋಗಗಳಿಂದ ಕೂಡಿದ ಭಕ್ತಿ ಯೋಗವೆಂದು ಅರ್ಥ ಮಾಡಬೇಕಾಗಿದ್ದರೂ, ಯೋಗಶಬ್ದವನ್ನುಪಯೋಗಿಸದೆ, **"ಸ್ವಧರ್ಮ ಜ್ಞಾನ ವೈರಾಗ್ಯ ಸಾಧ್ಯಭಕ್ತಿ"** ಯೆಂದು ಪ್ರಯೋಗಿಸಿ, **"ಸಾಧ್ಯಭಕ್ತಿ"** ಎಂಬ ಪದವೇ ಪ್ರಪದ ನಕ್ಕೂ ಅರ್ಥವಾಗಬೇಕೆಂಬ ಆಶಯದಿಂದ ಹಾಗೆ ಪ್ರಯೋಗಿಸಿರುತ್ತಾರೆ.

ಆಗ ಅರ್ಥ ಹೇಗೆಂದರೆ:—**ಸ್ವಧರ್ಮ** - ತನ್ನ ತನ್ನ ವರ್ಣಾಶ್ರಮಾನುಗುಣವಾದ ಆಜ್ಞಾ ಕೈಂಕರ್ಯಗಳಾದ ನಿತ್ಯ ನೈಮಿತ್ತಿಕ ಕರ್ಮಗಳನುಷ್ಠಾನವೇನು, **ಜ್ಞಾನ** - ಮಹಾ ವಿಶ್ವಾಸ ಅನನ್ಯಶರಣತ್ವ ತದೇಕಶೇಷತ್ವಾದಿ ಜ್ಞಾನಗಳೇನು, **ವೈರಾಗ್ಯ** - **"ಪರಿತ್ಯಕ್ತಾ ಮಯಲಂಕಾ"** ಎಂದೂ, **"ನೈಷಾ ಪಶ್ಯತಿ ರಾಕ್ಷಸ್ಯೋ ನೇಮಾಃಪುಷ್ಪ ಫಲದ್ರುಮಾಃ"** ಎಂದೂ ಹೇಳಿರುವ ಹಾಗೆ ಅನುಕೂಲ ಪ್ರತಿಕೂಲಗಳಾದ ಐಹಿಕಗಳನ್ನು ತೊರೆಯು ವಿಕೆ, ಇವುಗಳಿಂದ ಕೂಡಿದ, **ಸಾಧ್ಯಭಕ್ತಿ** - **"ಸಾಧ್ಯಭಕ್ತಿಸ್ತು ಸಾಹಂತ್ರೀ ಪ್ರಾರಬ್ಧ ಸ್ಯಾಪಿ ಭೂಯಸೀ"** (ಹಿಂದೆ ಅಪರಾಧಪರಿಹಾರಾಧಿಕಾರದಲ್ಲಿ ಶ್ರೀ ದೇಶಿಕರು ಇದನ್ನು ಉದಾಹರಿ ಸಿರುತ್ತಾರೆ. ೧೫೫ನೆಯ ಪುಟ ನೋಡಿ) ಎಂಬಲ್ಲಿಯೂ **"ಸಾಧನಂ ಭಗವತ್ಪ್ರಾಪ್ತೌ ಸ**

**ಏವೇತಿ ಸ್ಥಿರಾಮತಿಃ । ಸಾಧ್ಯಭಕ್ತಿ ಸ್ಥಿತಾಸ್ಯೈವ ಪ್ರಪತ್ತಿರಿತಿ ಗೀಯತೇ ॥"** ಎಂಬಲ್ಲಿಯೂ, ಸಾಧ್ಯಭಕ್ತಿ ಶಬ್ದದಿಂದ ಭರನ್ಯಾಸರೂಪ ಪ್ರಪತ್ತಿಯು ಹೇಳಲ್ಪಟ್ಟಿತು; **ಸಾಧ್ಯಾಭಕ್ತಿರ್ಯಯಾಸಾ** - ಭಕ್ತಿಯೋಗವು ಯಾವುದರಿಂದ ಸಾಧಿಸಲ್ಪಟ್ಟಿತೋ, ಅದು ಎಂಬ ಬಹುವ್ರೀಹ್ಯರ್ಥದಿಂದ ಪ್ರಪತ್ತಿಯು. ಇಂತಹ ಪ್ರಪತ್ತಿಯಿಂದ, **ಏಕಗೋಚರಃ** - ಮುಖ್ಯವಾಗಿ ಪ್ರಾಪ್ಯದೆಶೆಯಲ್ಲಿ ಗೋಚರನಾಗುವವನು ಎಂಬರ್ಥವು. **ಸಾಧ್ಯಭಕ್ತಿಃ** ಎಂದು ಹೇಳಿರುವದರಿಂದ ಈ ಎರಡು ವಿಧ ಉಪಾಯಗಳಾದ ಭಕ್ತಿಪ್ರಪತ್ತಿಗಳು ಸ್ವಾರಸ್ಯವಾಗಿ ತೋರಿಬರುತ್ತವೆ. ಆದುದರಿಂದ ಈ ಎರಡು ವಿಧಗಳಾದ ಭಕ್ತಿಪ್ರಪತ್ತಿಗಳಿಂದ ಮಾತ್ರವೇ ಗೋಚರನಾದುದರಿಂದ ಏಕ ಶಬ್ದ ಪ್ರಯೋಗವು, ಅಥವಾ ಐಕಾಂತ್ಯವೂ ಆವಶ್ಯಕವಾದುದರಿಂದ ಹಾಗೆ ಪ್ರಯೋಗವೆಂದಾಗಲಿ ಭಾವಿಸಬಹುದು. ಸರ್ವೇಶ್ವರನೇ ಸರ್ವಶ್ರೇಷ್ಠನು, ಮುಕ್ತಿದಾಯಕನು ಇತರರಲ್ಲವು ಎಂಬ ಜ್ಞಾನದಿಂದ ಅನನ್ಯ ವಿಷಯತ್ವವು ಐಕಾಂತ್ಯವು. ನಾರಾಯಣಾನುವಾಕದಲ್ಲೂ ಸರ್ವೋಪನಿಷತ್ಸಾರಭೂತವಾದ ಪುರುಷಸೂಕ್ತದಲ್ಲೂ ಪರತತ್ವವು ನಾರಾಯಣನೆಂದು ಹೇಳಿರುವದರಿಂದ, ಬ್ರಹ್ಮರುದ್ರೇಂದ್ರಾದಿಗಳು ಆತನ ವಿಭೂತಿಯಾಗಿರುವದರಿಂದಲೂ, ಶರೀರವಾಗಿರುವದರಿಂದಲೂ ಸಾಮಾನಾಧಿಕರಣ್ಯದಿಂದ **ಸ ಬ್ರಹ್ಮಾ ಸ ಶಿವಸ್ಸೇಂದ್ರಃ** ಎಂದೂ ಹೇಳಲ್ಪಟ್ಟಿರುವದೂ ನಾರಾಯಣಶಬ್ದದಲ್ಲೇ ತೋರಿಬರುವದರಿಂದಲೂ, **ನಾರಾಯಣಃ ಪರಂಬ್ರಹ್ಮ**ವೆಂದು ಹೇಳಲ್ಪಟ್ಟಿತು. ಅಪರರಾದ ಬ್ರಹ್ಮರುದ್ರಾದಿಗಳಿಗೂ **ಪರಾವರೇಶ**ನಾದ ನಾರಾಯಣನಿಗೂ ಅಜಗಜನ್ಯಾಯವೆಂದು ಶ್ರೀಯಾಮುನೇಯರವರೇ ಸ್ತೋತ್ರರತ್ನದಲ್ಲಿ **"ಸ್ವಾಭಾವಿಕಾನವಧಿಕಾ"** ಎಂಬ ಶ್ಲೋಕದ ಮೂಲಕ ಸರ್ವೇಶ್ವರನು ಮಹಾಸಮುದ್ರವಾದರೆ, ಇವರುಗಳೆಲ್ಲಾ ಜಲಕಣಗಳೆಂದು ವರ್ಣಿಸಿರುತ್ತಾರೆ. ಬ್ರಹ್ಮ ಶಬ್ದಕ್ಕೆ ವೇದ, ಪ್ರಕೃತಿ, ಜೀವ, ಇತ್ಯಾದಿ ಅರ್ಥಗಳೂ ಇರುವದರಿಂದ ಅವುಗಳನ್ನೆಲ್ಲಾ ವ್ಯಾವರ್ತಿಸಿ ಹೇಳುವದಕ್ಕಾಗಿ **ಪರಂಬ್ರಹ್ಮ**ವೆಂದು ಹೇಳಲ್ಪಟ್ಟಿತು.

**ಗೀತಾಶಾಸ್ತ್ರೇ** - ಭಾರತವು ಐದನೇ ವೇದವೆಂದು ಹೇಳಲ್ಪಟ್ಟಿರುತ್ತದೆ. ಸಕಲ ವೇದಗಳ ಉಪದೇಶವೂ ಅದರಲ್ಲಿ ಉಂಟು. ಉಪನಿಷತ್ತುಗಳ ಅರ್ಥವೆಲ್ಲಾ ಶಾಂತಿಪರ್ವದ ಮೋಕ್ಷಧರ್ಮದಲ್ಲಿ ಸೇರಿರುತ್ತದೆ. ಅಂತಹ ಭಾರತದ ಸರ್ವಸಾರಭೂತಾಂಶವು ಗೀತೆಯಲ್ಲಿರುತ್ತದೆ. ಉಪನಿಷತ್ತುಗಳ ಸಾರವಾದುದರಿಂದ **ಗೀತಾಶಾಸ್ತ್ರೇ** ಎಂಬ ಪ್ರಯೋಗವು. **ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ** ಎಂದೇ ಗೀತಾ ಅಧ್ಯಾಯಗಳ ಕೊನೆಯಲ್ಲಿರುತ್ತದೆ. ಇದೊಂದು ಮುಖ್ಯ ಶಾಸ್ತ್ರವು ಏತರಿಂದೆಂದರೆ, ಮಹರ್ಷಿಗಳೂ ಇತರರೂ ಹೇಳದೆ ಸರ್ವೇಶ್ವರನು ತಾನೇ ಉಪದೇಶಿಸಿರುವದರಿಂದ ಈ ಶಾಸ್ತ್ರಕ್ಕೆ ಹೆಚ್ಚು ಮಾಹಾತ್ಮ್ಯೆಯು. **"ಭಾರತೇ ಭಗವದ್ಗೀತಾ ಧರ್ಮಶಾಸ್ತ್ರೇಷು ಮಾನವಂ । ವೇದೇಷು ಪೌರುಷಂ ಸೂಕ್ತಂ ಪುರಾಣೇಷು ಚ ವೈಷ್ಣವಮ್ ॥"** ಎಂಬ ಪ್ರಮಾಣವು ಇಲ್ಲಿ ಅನುಸಂಧೇಯವು. **ಸಮೀರಿತಃ – ಸಮ್ಯಕ್ ಈರಿತಃ** - ಚನ್ನಾಗಿ ಹೇಳಲ್ಪಟ್ಟನು. ಅಜ್ಞಾನ ಸಂಶಯ ವಿಪರ್ಯಯಗಳೆಲ್ಲಾ ಹೋಗುವ ಹಾಗೆ ಚೆನ್ನಾಗಿ ಹೇಳಲ್ಪಟ್ಟನು. ನಾರಾಯಣನ ಸ್ವರೂಪರೂಪ ವಿಭವೈಶ್ವರ್ಯಾದಿಗಳೆಲ್ಲಾ ಚನ್ನಾಗಿ ಪ್ರದರ್ಶಿಸಲ್ಪಟ್ಟು ಪ್ರಾಪಕನೂ ಪ್ರಾಪ್ಯನೂ ಅವನೇ ಎಂದು ಚನ್ನಾಗಿ ಹೇಳಲ್ಪಟ್ಟನು; ಸರ್ವ ಪುರುಷಾರ್ಥದಾಯಕನೂ ಅವನೇ ಎಂದೂ, ಚನ್ನಾಗಿ ಹೇಳಲ್ಪಟ್ಟನು. ॥ ೧ ॥

ಹೀಗೆ ಸಂಗ್ರಹವಾಗಿ ಗೀತೆಯಲ್ಲಿ ಹೇಳಿದುದನ್ನು ತಿಳಿಸಿ, ಗೀತೆಯ ೧೮ ಅಧ್ಯಾಯಗಳಲ್ಲಿ ಆರಾರು ಅಧ್ಯಾಯಗಳಿಗೆ ಒಂದು ಷಟ್ಕವೆಂದು ಭಾವಿಸಿ, ಪ್ರಥಮಷಟ್ಕ, ಮಧ್ಯಮಷಟ್ಕ, ಅಂತಿಮಷಟ್ಕ, ಇವುಗಳ ಸಂಗ್ರಹಾರ್ಥಗಳನ್ನು ಕ್ರಮವಾಗಿ ಮುಂದಿನ ಮೂರು ಶ್ಲೋಕಗಳಿಂದ ಉಪದೇಶಿಸುತ್ತಾರೆ:—**ಜ್ಞಾನಕರ್ಮಾತ್ಮಿಕೇ**–ಕರ್ಮಯೋಗ ಜ್ಞಾನಯೋಗ ರೂಪವಾದ, **ನಿಷ್ಠೇ** -

ಮೂ. ಜ್ಞಾನಕರ್ಮಾತ್ಮಿಕೇ ನಿಷ್ಠೇ ಯೋಗಲಕ್ಷ್ಯೇ ಸುಸಂಸ್ಕೃತೇ ।
ಆತ್ಮಾನುಭೂತಿ ಸಿದ್ಧ್ಯರ್ಥೇ ಪೂರ್ವಷಟ್ಕೇನ ಚೋದಿತೇ ॥ ೨
ಮಧ್ಯಮೇ ಭಗವತ್ತತ್ವ ಯಾಥಾತ್ಮ್ಯಾವಾಪ್ತಿ ಸಿದ್ಧಯೇ ।
ಜ್ಞಾನ ಕರ್ಮಾಭಿ ನಿರ್ವರ್ತ್ಯೋ ಭಕ್ತಿಯೋಗಃ ಪ್ರಕೀರ್ತಿತಃ ॥ ೩

---

ಎರಡು ನಿಷ್ಠೆಗಳುಳ್ಳ; ಫಲಸಿದ್ಧಿಯಾಗುವ ತನಕ ನಿಯತವಾದ ಸ್ಥಿತಿಯು ನಿಷ್ಠೆ ಎಂದು ಹೇಳಿಸಿಕೊಳ್ಳುತ್ತದೆ, ಇದು ಭಕ್ತಿಯೋಗನಿಷ್ಪತ್ತಿಗೆ ಅಂಗವು, ಕರ್ಮಾತ್ಮಿಕೇ ನಿಷ್ಠೇ - ಇವು ಎಂತವುಗಳೆಂದರೆ, ಯೋಗಲಕ್ಷ್ಯೇ - ಭಕ್ತಿಯೋಗವನ್ನೇ ಉದ್ದೇಶ್ಯವಾಗಿವುಳ್ಳವು, ಹೀಗೆ ಹೇಳಿದುದರಿಂದ ಎರಡೂ ಸೇರಿ ಭಕ್ತಿಯೋಗನಿಷ್ಪತ್ತಿಯನ್ನುಂಟುಮಾಡಬಹುದು, ಅಥವಾ ಒಂದೊಂದೇ ಎಂದರೆ ಕರ್ಮಯೋಗವೇ ಸಾಕ್ಷಾತ್ತಾಗಿ ಭಕ್ತಿಯೋಗನಿಷ್ಪತ್ತಿಯನ್ನುಂಟುಮಾಡಬಹುದು ಎಂಬ "ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ" ಎಂಬಲ್ಲಿ ಹೇಳಿರುವಭಿಪ್ರಾಯವು ಪ್ರದರ್ಶಿಸಲ್ಪಟ್ಟಿತು. ಇಲ್ಲಿ ಯೋಗ ವೆಂದರೆ ಶಾಸ್ತ್ರಕ್ರಮಾನುಸಾರವಾಗಿ ಆಸನಾದಿಗಳನ್ನು ಮಾಡಿಕೊಂಡು, ತನ್ನ ಆತ್ಮಸಾಕ್ಷಾತ್ಕಾರಾರ್ಥವಾಗಿ ಚಿತ್ತಸಮಾಧಾನ ಮಾಡಿಕೊಂಡಿರುವಿಕೆಯು, ಅಥವಾ ಹಾಗಿರೋಣದರಿಂದ ಉಂಟಾಗುವ ಸಾಕ್ಷಾತ್ಕಾರವೆಂದಾಗಲಿ ಹೇಳಬಹುದು; ಇವಕ್ಕೆ ಆತ್ಮಾವಲೋಕನವೆಂದೂ ಹೆಸರು. ಜೀವಾತ್ಮನ ಸ್ವರೂಪವು ಅಮೋಘವಾದುದೆಂಬ ಜ್ಞಾನದಿಂದ ಅದನ್ನು ಸಾಕ್ಷಾತ್ಕರಿಸೋಣವು. ಇದು ಪರಮಾತ್ಮ ಸಾಕ್ಷಾತ್ಕಾರವೆಂದು ತಿಳಿಯಕೂಡದು. ಕೆಲವರು ಭ್ರಮಿಸಿ ಹಾಗೆ ಅರ್ಥ ಮಾಡಿರುತ್ತಾರೆ. ಈ ಆತ್ಮಾವಲೋಕನದಿಂದ ಸ್ಮೃತಿಸಂತತಿ ರೂಪವಾದ ಪರಮಾತ್ಮ ಸಾಕ್ಷಾತ್ಕಾರವೂ ಅದರಿಂದುಂಟಾಗುವ ಅನುಭವವೂ ಪ್ರಾಪ್ತವಾಗುತ್ತದೆ. ಈ ಯೋಗನಿಷ್ಠೆಯನ್ನು ಯುಕ್ತತಮವೆಂದು ೬ನೆಯ ಅಧ್ಯಾಯದಲ್ಲಿ ಹೇಳಿ ಭಕ್ತಿಯೋಗ ನಿಷ್ಠನು ಕೊಂಡಾಡಲ್ಪಟ್ಟಿರುತ್ತಾನೆ. ಈ ಜ್ಞಾನಕರ್ಮಾತ್ಮಕವಾದ ನಿಷ್ಠೆಯು ಇನ್ನೂ ಎಂಥಾದ್ದೆಂದರೆ, ಸುಸಂಸ್ಕೃತೇ-ಬಹು ಸ್ವಾರಸ್ಯವಾಗಿ ಸಂಸ್ಕಾರವನ್ನು ಹೊಂದಿರುವುದು, ಹೇಗೆಂದರೆ, ಪರಮಾತ್ಮನಿಗೆ ಅಧೀನವಾಗಿಯೂ, ಆತನ ಪ್ರೀತ್ಯರ್ಥವಾಗಿಯೂ, ಫಲಸಂಗರಹಿತವಾಗಿಯೂ ಆಚರಿಸುತ್ತೇನೆಂಬ ಜ್ಞಾನದಿಂದ ಪರಿಶುದ್ಧವಾದುದೆಂಬ ಭಾವವು. ಇನ್ನೂ ಎಂತವು ಎಂದರೆ:—ಆತ್ಮಾನುಭೂತಿ ಸಿದ್ಧ್ಯರ್ಥೇ - ಆ ಕರ್ಮಯೋಗ ಜ್ಞಾನಯೋಗಗಳ ಉಪಯೋಗವೇನೆಂಬುದು ಈ ವಿಶೇಷಣದಿಂದ ಹೇಳಲ್ಪಡುತ್ತದೆ; ವಿಷಯಸುಖಾನುಭವಗಳೆಲ್ಲಾ ಈ ಜೀವಾತ್ಮನು ಕರಣ ಕಳೇಬರಾದಿಗಳಿಂದ ಕೂಡಿರುವುದರಿಂದ ಎಂದು ಗ್ರಹಿಸಿ, ಈ ಪ್ರಕೃತಿ ವಿಯುಕ್ತ ಆತ್ಮನ ಸುಖಸ್ವಭಾವಗಳು ವಿಲಕ್ಷಣವಾದವೆಂದೂ ತಿಳಿದು, ಜೀವಾತ್ಮ ಸಾಕ್ಷಾತ್ಕಾರಸಿದ್ಧಿಯನ್ನೇ ಪ್ರಯೋಜನವಾಗಿವುಳ್ಳವು, ಇವೀಗ ಪೂರ್ವಷಟ್ಕದಿಂದ ಚೋದಿತೇ-ಕರ್ತವ್ಯಗಳೆಂದು ಹೇಳಲ್ಪಟ್ಟವು. ಆದುದರಿಂದ ಭಕ್ತಿಯೋಗಕ್ಕೆ ಸಹಾಯಭೂತವಾದ ಜೀವಾತ್ಮ ಸಾಕ್ಷಾತ್ಕಾರವು ಹೇಳಲ್ಪಟ್ಟಿತು. ಇದಕ್ಕೆ ಆತ್ಮಾವಲೋಕನವೆಂಬ ಹೆಸರು.

ಮಧ್ಯಮದ ಆರು ಅಧ್ಯಾಯಗಳಲ್ಲಿ ಹೇಳಲ್ಪಡುವದನ್ನು ಸಂಗ್ರಹಿಸಿ ಹೇಳುತ್ತಾರೆ. ಮಧ್ಯಮೇ - ಏಳನೇ ಅಧ್ಯಾಯದ ಮೊದಲು ಹನ್ನೆರಡರ ಅಂತ್ಯದವರೆಗೂ ಇರುವ ಮಧ್ಯಮ ಷಟ್ಕದಲ್ಲಿ, ಭಗವತ್ತತ್ವ - ಹೇಯಪ್ರತ್ಯನೀಕವಾಗಿ ಜ್ಞಾನ ಶಕ್ತ್ಯಾದಿ ಷಾಡ್ಗುಣ್ಯಪರಿಪೂರ್ಣನಾದ ಸರ್ವೇಶ್ವರನ ಸ್ವರೂಪದ, ಯಾಥಾತ್ಮ್ಯ - ಹೇಗೆ ಇದೆಯೋ ಅದೇ ಪ್ರಕಾರವಾಗಿ ತಿಳಿಯುವಿಕೆಯು, ಅದರ, ಅವಾಪ್ತಿ ಸಿದ್ಧಯೇ - ಪ್ರಾಪ್ತಿಯುಂಟಾಗುವದಕ್ಕಾಗಿ, ಜ್ಞಾನಕರ್ಮಾಭಿ

**ಪ್ರಧಾನ ಪುರುಷ ವ್ಯಕ್ತ ಸರ್ವೇಶ್ವರ ವಿವೇಚನಮ್ ।**
**ಕರ್ಮಧೀ ರ್ಭಕ್ತಿ ರಿತ್ಯಾದಿಃ ಪೂರ್ವಶೇಷೋಽನ್ತಿ ಮೋದಿತಃ ॥** ೪
**ಅಸ್ಥಾನ ಸ್ನೇಹ ಕಾರುಣ್ಯ ಧರ್ಮಾಧರ್ಮ ಧಿಯಾಕುಲಮ್ ।**
**ಪಾರ್ಥಂ ಪ್ರಪನ್ನ ಮುದ್ದಿಶ್ಯ ಶಾಸ್ತ್ರಾವತರಣಂ ಕೃತಮ್ ॥** ೫

---

**ನಿಷ್ಪತ್ತ್ಯರ್ಥಃ** - ಕರ್ಮಯೋಗ ಜ್ಞಾನಯೋಗಗಳಿಂದ ಸಿದ್ಧಿಸುವ, **ಭಕ್ತಿ ಯೋಗವು** ಎಂದರೆ ಭಕ್ತಿ ನಿಷ್ಠೆಯೇ ಯೋಗವು ಎಂಬ ಭಾವವು, ಇಲ್ಲಿ ಯೋಗಶಬ್ದಕ್ಕೆ ಉಪಾಯವೆಂಬರ್ಥವು; **"ಯೋಗ ಸ್ಸನ್ನಹನೋಪಾಯ ಧ್ಯಾನಸಙ್ಗತಿ ಯುಕ್ತಿಷು"** ಎಂಬದಾಗಿ ಅಮರಶ್ಲೋಕವು, **ಪ್ರಕೀರ್ತಿತಃ**- ಪ್ರಕೃಷ್ಟಭಾವದಿಂದ ಹೇಳಲ್ಪಟ್ಟಿರುತ್ತದೆ ಎಂದರೆ ಬಹು ವಿಶದವಾಗಿ, ಚೆನ್ನಾಗಿ ಉಪಪಾದಿಸಲ್ಪಟ್ಟಿರುತ್ತದೆ; ಹೇಗೆಂದರೆ:—ಆ ಉಪಾಯದ ಸ್ವರೂಪ, ಇತಿಕರ್ತವ್ಯತಾ ಮೊದಲಾದವುಗಳೆಲ್ಲಾ ಉಪಪಾದಿಸಲ್ಪಟ್ಟಿರುತ್ತದೆ ಎಂಬ ತಾತ್ಪರ್ಯವು.

ಕೊನೆಯ ಆರು ಅಧ್ಯಾಯಗಳಿಂದ ಸೇರಿದ ಷಟ್ಕದಲ್ಲಿ ಹೇಳಲ್ಪಡುವದನ್ನು ಸಙ್ಗ್ರಹಿಸುತ್ತಾರೆ. **ಪ್ರಧಾನ** - ಕಾರಣಾವಸ್ಥೆಯಲ್ಲಿರುವ ಅಚಿದ್ದ್ರವ್ಯವು, **ಪುರುಷ** - ಪ್ರಕೃತಿಯಿಂದ ಸೇರಿದ, ಮತ್ತು ಸೇರದಿರುವ ಜೀವಾತ್ಮನು (ಜಾತ್ಯೇಕವಚನವು) ಇದರಿಂದ ಬದ್ಧಸ್ಥಿತಿಯಲ್ಲಿ ಮುಕ್ತಸ್ಥಿತಿಯಲ್ಲಿರುವ ಜೀವಾತ್ಮರು ಹೇಳಲ್ಪಟ್ಟರು, **ವ್ಯಕ್ತ** - ಮಹದಾದಿಗಳಿಂದ ಸೇರಿದ ದೇವತಿರ್ಯಙ್ಮನುಷ್ಯಾದಿ. ರೂಪದಲ್ಲಿರುವ ಕಾರ್ಯಸಮೂಹವೂ, **ಸರ್ವೇಶ್ವರನೂ** - ಇವರುಗಳ, **ವಿವೇಚನಂ** - ಪರಸ್ಪರ ವೈಲಕ್ಷಣ್ಯವೂ, **ಕರ್ಮಧೀರ್ಭಕ್ತಿಃ** - ಕರ್ಮಯೋಗ ಜ್ಞಾನಯೋಗಯುಕ್ತವಾದ ಭಕ್ತಿ ಯೋಗವೂ, **ಇತಿ** - ಎಂಬುದನ್ನೇ, **ಆದಿಃ** - ಮೊದಲಾಗಿ ಉಳ್ಳ, **ಪೂರ್ವಶೇಷಃ**-ಮೊದಲು ಹೇಳಿದುದರಲ್ಲಿ ಮಿಕ್ಕಿದುದು, **ಅನ್ತಿಮೋದಿತಃ** – ಕೊನೆಯ ಷಟ್ಕದಲ್ಲಿ ಹೇಳಲ್ಪಟ್ಟಿತು. ಈ ಶ್ಲೋಕ ತಾತ್ಪರ್ಯಾರ್ಥವನ್ನು ಶ್ರೀ ಭಾಷ್ಯಕಾರರು ೧೩ನೆಯ ಅಧ್ಯಾಯದ ಅವತಾರಿಕೆಯಲ್ಲಿ ವಿಶದೀಕರಿಸಿರುತ್ತಾರೆ. ಪುನಃ ೧೬ನೆಯ ಅಧ್ಯಾಯದ ಅವತಾರಿಕೆಯಲ್ಲಿ ಈ ಷಟ್ಕವನ್ನು ಎರಡು ತ್ರಿಕಗಳಾಗಿ ವಿಭಾಗಿಸಿ ಮೂರು ಮೂರು ಅಧ್ಯಾಯಗಳ ಸಙ್ಗ್ರಹ ತಾತ್ಪರ್ಯವನ್ನೂ ಅನುಗ್ರಹಿಸಿರುತ್ತಾರೆ. ಅವುಗಳನ್ನು ಪರಾಂಬರಿಸಬಹುದು. ಹಿಂದಿನ ಎರಡು ಷಟ್ಕಗಳಲ್ಲಿ ಪ್ರಕೃತಿ ಪುರುಷರೇನು, ಅವುಗಳ ಸಮ್ಮೇಳನದಿಂದುಂಟಾದ ಪ್ರಪಂಚವೇನು, ಈಶ್ವರನೇನು, ಹೀಗೆ ತತ್ವತ್ರಯಗಳ ಯಾಥಾತ್ಮ್ಯಸ್ವರೂಪವೂ, ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳ ಸ್ವರೂಪವೂ, ಅವುಗಳನ್ನು ಸ್ವೀಕರಿಸುವ ಪ್ರಕಾರವೂ ಶೋಧನಮಾಡಲ್ಪಡುತ್ತದೆ. ಶೋಧನೆ ಮಾಡಲ್ಪಡುತ್ತದೆಂದು ಹೇಳಿರುವದರಿಂದ ಪುನರುಕ್ತಿ ದೋಷವಿಲ್ಲವೆಂಬ ಭಾವವು. ಇವುಗಳಲ್ಲಿ ಮೂರು ತತ್ವಗಳ ಶೋಧನವು ಮೊದಲಿನ ಮೂರು ಅಧ್ಯಾಯಗಳಲ್ಲೂ, ಕೊನೆಯ ಮೂರು ಅಧ್ಯಾಯಗಳಲ್ಲಿ ಈ ಮೂರು ಯೋಗಗಳ ಅನುಷ್ಠಾನವೂ ವಿಶೋಧಿಸಲ್ಪಡುತ್ತವೆಂಬ ತಾತ್ಪರ್ಯವು.

ಹೀಗೆ ಮೂರು ಷಟ್ಕಗಳಲ್ಲೂ ಉಪಪಾದಿತಾರ್ಥಗಳನ್ನು ಸಂಗ್ರಹಶ್ಲೋಕಗಳಿಂದ ತಿಳಿಸಿ, ಅನಂತರ ೧೮ ಶ್ಲೋಕಗಳಿಂದ ೧೮ ಅಧ್ಯಾಯದ ಅರ್ಥಗಳನ್ನು ಸಂಗ್ರಹಿಸಿ ಹೇಳುತ್ತಾರೆ. ಅವುಗಳಲ್ಲಿ ಮೊದಲನೆಯ ಶ್ಲೋಕವು ಪ್ರಥಮಾಧ್ಯಾಯಾರ್ಥವನ್ನು ಸೂಚಿಸುವಂಥಾದ್ದಾಗಿ ಉಪೋದ್ಘಾತವಾಗಿರುತ್ತದೆ. ಪ್ರಥಮಾಧ್ಯಾಯದ ಅರ್ಥ ಮಾತ್ರವೇ ಅಲ್ಲದೆ ದ್ವಿತೀಯಾಧ್ಯಾಯದ ಪೂರ್ವಭಾಗದರ್ಥವನ್ನೂ ಈ ಐದನೆಯ ಶ್ಲೋಕವು ಒಳಗೊಂಡಿರುತ್ತದೆ. ಆದುದರಿಂದಲೇ ಈ ಶ್ಲೋಕದಲ್ಲಿ ಪ್ರಥಮಾಧ್ಯಾಯದ ಸಂಗ್ರಹಾಭಿಪ್ರಾಯವೆಂದು ಹೇಳಲಿಲ್ಲವು. ಮಿಕ್ಕ ಮುಂದಿನ ೧೭ ಶ್ಲೋಕಗಳಲ್ಲೂ ಆಯಾಯಾ ಅಧ್ಯಾಯದಭಿಪ್ರಾಯವೆಂದು ಹೇಳಲ್ಪಟ್ಟಿರುತ್ತದೆ.

**ಅಸ್ಥಾನ ...ಧಿಯಾಕುಲಮ್**—**ಅಸ್ಥಾನೇ** – ಅಯೋಗ್ಯಸ್ಥಳದಲ್ಲಿ, **ಸ್ನೇಹ** – ಪ್ರೀತಿ ಏನು, **ಕಾರುಣ್ಯ** - ಕರುಣೆಯೇನು, ಇವುಗಳಿಂದುಂಟಾದ, **ಧರ್ಮಾಧರ್ಮಧಿಯಾ** – ದುಷ್ಟ ಕ್ಷತ್ರಿಯರನ್ನು ನಿಗ್ರಹಿಸಬೇಕೆಂಬ ಕ್ಷತ್ರಿಯಧರ್ಮದಲ್ಲಿ ಅಧರ್ಮವೆಂಬ ಬುದ್ಧಿಯಿಂದ, **ಧರ್ಮಾಧರ್ಮ ಭಯಾ** ಅಥವಾ **ಭಿಯಾ** ಎಂಬ ಪಾಠಾಂತರವು, ಆಗ ಧರ್ಮವೇನು, ಅಧರ್ಮವೇನು ಭಯವೇನು ಇವುಗಳಿಂದ ಆಕುಲಂ ಮೋಹಿತನಾದ ಎಂಬರ್ಥವಾಗಲಿ, ಅಥವಾ ಕ್ಷತ್ರಿಯಧರ್ಮವಾದ ಲೋಕಕಂಟಕರನ್ನು ದಂಡಿಸುವವನ್ನು ಅಧರ್ಮವೆಂಬ ಭಯದಿಂದ ಆಕುಲಂ ಎಂಬರ್ಥವಾಗಲಿ ಆಗಬಹುದು; ಇಂತಹ ಧರ್ಮವಿಷಯದಲ್ಲಿ ಅಧರ್ಮಬುದ್ಧಿಯಿಂದ ವ್ಯಾಕುಲಿತನಾದ, **ಪ್ರಪನ್ನಂ** - ಶರಣಾಗತನಾದ, **ಪಾರ್ಥಮ್** - ಅರ್ಜುನನನ್ನು, **ಉದ್ದಿಶ್ಯ** - ನಿಮಿತ್ತೀಕರಿಸಿ, ವ್ಯಾಜಮಾಡಿಕೊಂಡು, ಶ್ರೀಭಾಷ್ಯಕಾರರೂ "ಪಾಂಡುತನಯ ಯುದ್ಧ ಪ್ರೋತ್ಸಾಹನ ವ್ಯಾಜೇನ" ಎಂದು ಹಾಗೆಯೇ ಹೇಳಿರುತ್ತಾರೆ; ಮುಂದೆ ಶ್ರೀಕೃಷ್ಣನೂ ಹಾಗೆಯೇ "ನಿಮಿತ್ತಮಾತ್ರಂ ಭವಸವ್ಯಸಾಚಿನ್ (ಗೀ ೧೧. ೩೩.)" ಎಂದು ಹೇಳಿರುತ್ತಾರೆ; **ಶಾಸ್ತ್ರಾವತರಣಂ ಕೃತಂ** - ಶಾಸ್ತ್ರೋಪಪಾದನವು ಮಾಡಲ್ಪಟ್ಟಿತು.

ಶ್ರೀಮದ್ಯಾಮುನ ಮುನಯೇ ನಮಃ

## ಶ್ರೀ ಭಗವದ್ಗೀತಾಯಾಂ

# ದ್ವಿತೀಯಾಧ್ಯಾಯಃ.

**ಸಂಜಯ ಉವಾಚ :—**

**ಮೂ. ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದನ್ತ ಮಿದಂ ವಾಕ್ಯಮುವಾಚ ಮಧುಸೂದನಃ ॥ ೧**

**ಶ್ರೀ ಭಗವಾನುವಾಚ :—**

**ಮೂ. ಕುತ ಸ್ತ್ವಾ ಕಶ್ಮಲ ಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨**

---

**ಮೂಲಕ್ಕೆ ಅರ್ಥ**—ಸಂಜಯರು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾರೆ :—ಇವೆಲ್ಲಾ ಸಂಜಯವಾಕ್ಯವೇ ಆಗಿದ್ದರೂ ಇಲ್ಲಿ ಪುನಃ **ಸಂಜಯ ಉವಾಚ** ಎಂದು ಹೇಳುವದರಲ್ಲಿ ಆಶಯ ವೇನೆಂದರೆ, ಮಧ್ಯೆ ಕೃಷ್ಣಾರ್ಜುನ ಸಂವಾದವಿರುವದರಿಂದ ಇದು ಯಾರು ಹೇಳಿದ ವಾಕ್ಯವೋ ಎಂಬ ಸಂಶಯ ಬಂದೀತೆಂದು ಭಾವಿಸಿ, ಇನ್ನೊಂದು ಸಲ "**ಸಂಜಯ ಉವಾಚ**"ವೆಂದು ಹೇಳಲ್ಪಟ್ಟಿತು. ಹೀಗೆಯೇ ಸಂದಿಗ್ಧಸ್ಥಳಗಳಲ್ಲಿ **ಸಂಜಯ ಉವಾಚ** ಎಂಬ ಪ್ರಯೋಗವನ್ನು ಕಾಣಬಹುದು. **ತಥಾ** - ಹಾಗೆ, ಎಂದರೆ ಅಸ್ಥಾನದಲ್ಲಿ ಉಚಿತವಲ್ಲದ ಸಂದರ್ಭದಲ್ಲಿ ಎಂಬರ್ಥವು, **ಕೃಪಯಾವಿಷ್ಟಮ್** - ಅಂತಃ ವಿಷಾದದಿಂದುಟಾವ ಕೃಪೆಯಿಂದ ಕೂಡಿದ, **ಅಶ್ರುಪೂರ್ಣಾಕುಲೇಕ್ಷಣಮ್** - ಅದರಿಂದ ಕಣ್ಣೀರು ತುಂಬಿರುವದರಿಂದ ವ್ಯಾಕುಲಗಳಾದ ಕಣ್ಣುಗಳುಳ್ಳ, **ವಿಷೀದನ್ತಂ** – ಹೀಗೆ ವಿಷಾದದಿಂದ ಒಂದುಕಡೆ ಕೂತಿರುವ, **ತಂ** – ಅಂತಹ ಶೂರನಾಗಿದ್ದರೂ ಇಂತಹ ದುರವಸ್ಥೆಯನ್ನು ಹೊಂದಿರುವ ಅರ್ಜುನನನ್ನು ಕುರಿತು, **ಮಧುಸೂದನಃ** – ಮಧುವೆಂಬ ರಾಕ್ಷಸನನ್ನು ಕೊಂದ ಇಂತಹ ಶ್ರೀಕೃಷ್ಣನು, **ಇದಂ ವಾಕ್ಯಂ** – ಈ ಮುಂದೆ ಹೇಳುವ ವಾಕ್ಯವನ್ನು **ಉವಾಚ** – ಹೇಳಿದನು. ಮಧುವನ್ನೇ ನಾಶಮಾಡಿದವನಿಗೆ ಅರ್ಜುನವಿಷಾದ ನಾಶಮಾಡುವದೊಂದು ಕಷ್ಟವೇ, ಅದನ್ನೂ ಸುಲಭವಾಗಿ ಮಾಡಬಲ್ಲನೆಂಬ ಭಾವವು **ಮಧುಸೂದನ** ಶಬ್ದದಿಂದ ತೋರಿಬರುತ್ತದೆ. **ಇದಂ ವಾಕ್ಯಂ** – ಆ ವಾಕ್ಯವು ಭಕ್ತಶೋಕವನ್ನು ಹೋಗಲಾಡಿಸುವದೂ ಅಲ್ಲದೆ, ಪರಮ ಹಿತವಾದುದಾಗಿಯೂ, ಪರಮ ನಿಶ್ಶ್ರೇಯಸ್ಸಿಗೂ ಸಹಕಾರಿಯಾಗಿಯೂ ಇದ್ದುದರಿಂದ, **ಇದಂ ವಾಕ್ಯಂ** - ಈ ಅಮೋಘವಾಕ್ಯವನ್ನು ಎಂದು ನಿರ್ದೇಶಿಸುವದಕ್ಕಾಗಿ, **ಇದಂ** - ಇಂತಹ ಎಂಬ ಪದವು. ॥೧॥

**ಶ್ರೀ ಭಗವಾನ್ ಉವಾಚ** – ಲಕ್ಷ್ಮಿಯೊಂದಿಗೆ ಸದಾ ಇರುವವನಾಗಿಯೂ, ಹೇಯ ಪ್ರತ್ಯನೀಕನಾಗಿಯೂ, ಷಾಡ್ಗುಣ್ಯಪರಿಪೂರ್ಣನಾಗಿಯೂ ಇರುವ ಶ್ರೀ ಭಗವಚ್ಛಬ್ದವಾಚ್ಯನಾದ ಶ್ರೀ ಕೃಷ್ಣನು ಹೇಳುತ್ತಾನೇನೆಂದರೆ :—ಹೇ **ಅರ್ಜುನ** – ಓ ಅರ್ಜುನನೇ, ಮಹಾ ಪರಾಕ್ರಮಿಯು ಎಂಬ ಖ್ಯಾತಿ ಉಳ್ಳವನೇ ಎಂಬ ಭಾವವು, **ಅನಾರ್ಯ ಜುಷ್ಟಮ್** - ಅವಿದ್ವಾಂಸರಿಂದ ಹೊಂದಲು ಯೋಗ್ಯವಾದ, ಅಥವಾ ವಿದ್ವಾಂಸರಿಂದ ಹೊಂದಲು ಯೋಗ್ಯವಲ್ಲದ, ನೀನು ಆರ್ಯನಲ್ಲದೇ ಇಲ್ಲವು, ಇಂತಹ ನಿನಗೆ ಯೋಗ್ಯವಲ್ಲದುದು ಎಂಬ ಭಾವವು. **ಅಸ್ವರ್ಗ್ಯಂ** – ಸ್ವರ್ಗಾದಿ ಶ್ರೇಯಸ್ಸಿಗೆ ವಿರೋಧವಾದ, **ಅಕೀರ್ತಿಕರಂ** - ಅಪಯಶಸ್ಸನ್ನುಂಟುಮಾಡುವ, **ಇದಂ ಕಶ್ಮಲಂ** – ಈ ಮನಸ್ಸಿನ ದೋಷರೂಪವಾದ ವ್ಯಾಕುಲತೆಯು, **ವಿಷಮೇ**- ವ್ಯತ್ಯಸ್ತವಾದ ಸಮಯದಲ್ಲಿ, ಸಂದರ್ಭದಲ್ಲಿ, ಇದು **ಅಸ್ಥಾನೇ** ಎಂದು ಹೇಳಿದರ್ಥದ ವಿವರಣವು, **ಕುತಃ**-ಯಾವ

ಮೂ. ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।
ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩

ಕಾರಣದಿಂದ, ತ್ವಾ – ನಿನ್ನಂತಹ ಧೀರನನ್ನು ಎಂಬ ಭಾವವು, ಸಮುಪಸ್ಥಿತಂ–ಬಂದು ಸೇರಿತು? ಹೊಂದಿತು ? ನಿನ್ನಂತಹ ಪ್ರಾಜ್ಞನಿಗೆ ಉಂಟಾಗತಕ್ಕದ್ದಲ್ಲವು, ನಿನ್ನಂತಹ ಪಾರಲೌಕಿಕಶ್ರೇಯಸ್ಸಿನಲ್ಲಿ ಅಭಿಪ್ರಾಯವುಳ್ಳವನಿಗೆ ಉಂಟಾಗತಕ್ಕದ್ದಲ್ಲವು, ನಿನ್ನಂತಹ ಲೋಕವನ್ನೆಲ್ಲಾ ತುಂಬಿರುವ ಯಶಸ್ಸುಳ್ಳವನಿಗೆ ಉಂಟಾಗತಕ್ಕದ್ದಲ್ಲವು ಎಂದರ್ಥವು. ಹೀಗಿದ್ದರೂ ಇಂತಹ ನಿನಗೆ ಇಂತಹ ಮನಃಕಶ್ಮಲವು ಏತರಿಂದುಂಟಾಯಿತೆಂದು ಆಕ್ಷೇಪಿಸುತ್ತಾರೆ. ಅರ್ಜುನನು ತಾನು ಧರ್ಮ ಬುದ್ಧಿಯುಕ್ತನಾದುದರಿಂದ ತನ್ನ ಈ ಅವಸ್ಥೆಯನ್ನು ಸ್ವಾಮಿಯು ಬಹುಮಾನಿಸಬಹುದೆಂದು ಭಾವಿಸಿದ್ದನು. ಅದನ್ನು ಕಶ್ಮಲವೆಂದು ಶ್ರೀಕೃಷ್ಣನು ಭಾವಿಸಿದನು. ಹಿಂದೆ ಅರ್ಜುನನು ಈ ಯುದ್ಧದಲ್ಲಿ ಪ್ರವರ್ತಿಸಿದರೆ ನರಕವೆಂದೂ ಪರಿತ್ಯಾಗದಲ್ಲಿ ವೀರಸ್ವರ್ಗಪ್ರಾಪ್ತಿಯೆಂದೂ ಹೇಳಿದ್ದನು. ರಾಜ್ಯ ಸುಖ ಲೋಭದಿಂದ ಅಧರ್ಮಪ್ರವರ್ತನೆ ಮಾಡಿದನೆಂಬಪಕೀರ್ತಿಯುಂಟಾಗುವದೆಂದೂ ಹೇಳಿದ್ದನು. ಈಗ ಯುದ್ಧಪರಿತ್ಯಾಗವೇ, ಅಸಾಧುಗಳು ಮಾಡುವ ಕೆಲಸವೆಂದೂ, ಅಸ್ವರ್ಗ್ಯವಾದುದೆಂದೂ, ಅಕೀರ್ತಿಕರವೆಂದೂ, ಅರ್ಜುನಾಭಿಪ್ರಾಯಕ್ಕೆ ಸರ್ವಾತ್ಮನಾ ವಿರುದ್ಧವಾದಭಿಪ್ರಾಯವನ್ನು ಹೇಳುತ್ತಾರೆ. ಈ ಶ್ಲೋಕದಲ್ಲಿ ವಿಷಮೇ ಎಂಬದಾಗಿ ಅರ್ಜುನನು ಶೋಕಿಸುವದು ಸರಿಯಾದ ಕಾಲವಲ್ಲವೆಂಬದಾಗಿ ಹೇಳಲ್ಪಟ್ಟಿತು. ಯಾವಾಗ ಶೋಕಿಸಬೇಕಾಗಿತ್ತೋ ಆ ಸಮಯವನ್ನು ಬಿಟ್ಟು ಈಗ ಶೋಕಿಸಕೂಡದ ಕಾಲದಲ್ಲಿ ಶೋಕಿಸುತ್ತೀಯೇ ಎಂಬ ಭಾವವು. ದುಶ್ಶಾಸನ ದುರ್ಯೋಧನಾದಿಗಳು ಮಹಾ ಪತಿವ್ರತೆಯಾದ ನಿನ್ನ ಪತ್ನಿಯನ್ನು, ಬಹಿಷ್ಟೆಯಾಗಿ ಹೊರಗೆ ಬರುವದೂ ಕೂಡ ಅನುಚಿತವಾದ ಕಾಲದಲ್ಲಿ ಕೂದಲನ್ನು ಹಿಡಿದೆಳದು, ಸಭೆಗೆ ತಂದಕಾಲದಲ್ಲಿ ಅವಳು ಎಲ್ಲರ ಹೃದಯವು ಕರಗುವಹಾಗೆ ಶೋಕಿಸುತ್ತಿದ್ದರೂ, ನೀನು ಆಗ ಶೋಕಿಸಲಿಲ್ಲವು, ಈಗ ಶೋಕಿಸಬಹುದೇ ಎಂದು ಮೂದಲಿಸಿದಹಾಗೆ ಅರ್ಥಗರ್ಭವು ವಿಷಮೇ ಎಂಬ ಪದದಿಂದ ತೋರಿಬರುತ್ತದೆ. ಇದೂ ಅಲ್ಲದೆ ಯುದ್ಧಮಾಡುತ್ತೇನೆಂದು ಸಂಕಲ್ಪಿಸಿ ತನ್ನನ್ನು ಸಾರಥಿಯಾಗಿರು ಎಂದು ಹೇಳಿ, ಯುದ್ಧಕ್ಕೆ ಕರದುಕೊಂಡುಬಂದು, ಈಗ ಹಿಂತಿರಿಗಿದರೆ, ಅರ್ಜುನ ಸ್ವರೂಪಕ್ಕೂ ಅಲ್ಲದೆ ತನ್ನ ಸ್ವರೂಪಕ್ಕೂ ಹಾನಿ ಎಂಬದಾಗಿ ವಿಷಮೇ ಎಂದು ಪ್ರಯೋಗಿಸಿರಬಹುದು. ॥೨॥

ಹಿಂದಿನ ಶ್ಲೋಕದಿಂದ ಸ್ವಲ್ಪ ಹೇಳನಮಾಡಿ, ಆತನು ಮಾಡಿದುದು ಯೋಗ್ಯವಲ್ಲವೆಂದು ಹೇಳಿ, ಆತನಿಗೆ ಸದುಪದೇಶವನ್ನು ಈ ಶ್ಲೋಕದಲ್ಲಿ ಮಾಡುತ್ತಾರೆ:— **ಹೇ ಪಾರ್ಥ** - ಓ ಅರ್ಜುನನೇ, **ಕ್ಲೈಬ್ಯಂ** - ಇಂತಹ ನಪುಂಸಕ ಭಾವವನ್ನು ಅಥವಾ ಭಯವನ್ನು, ಭಯ ಯಾವುದೆಂದರೆ ಅಧರ್ಮವೆಂಬ ಭಯವನ್ನು, **ಮಾಸ್ಮಗಮಃ** – ಹೊಂದಬೇಡ, **ಏತತ್** - ಇಂತಹ ಕಶ್ಮಲವು **ತ್ವಯಿ** – ನಿನ್ನಲ್ಲಿ, **ನೋಪಪದ್ಯತೇ** - ಉಂಟಾಗತಕ್ಕದ್ದಲ್ಲವು, **ಹೇ ಪರಂತಪ**–ಓ ಶತ್ರುಸಂಹಾರಕನಾದ ಅರ್ಜುನನೇ, ಈಗ ನಮ್ಮೆದುರಿಗೆ ಇರುವವರೂ ಕೂಡ ಲೋಕ ಶತ್ರುಗಳಾದುದರಿಂದ, **ಕ್ಷುದ್ರಂ** - ಅಂತಹ ಪರಂತಪನಿಗೆ ಯೋಗ್ಯವಲ್ಲದೆ ಅತಿಕ್ಷುದ್ರವಾಗಿರುವ, **ಹೃದಯದೌರ್ಬಲ್ಯವನ್ನು**, **ತ್ಯಕ್ತ್ವಾ** - ಬಿಟ್ಟು, **ಉತ್ತಿಷ್ಠ** - ಈಗ ಕೂತಿರುವ ಸ್ಥಳವನ್ನು ಬಿಟ್ಟು ಯುದ್ಧಕ್ಕಾಗಿ ಏಳು.

**ಭಾಷ್ಯಾರ್ಥವು**—ಅರ್ಜುನನ ಶೋಕವನ್ನು ಹೋಗಲಾಡಿಸುವುದಕ್ಕಾಗಿ ಪ್ರಾರಂಭಿಸಿದುದು ಈ ದ್ವಿತೀಯಾಧ್ಯಾಯವು. ಅದರ ಮೊದಲು ಮೂರು ಶ್ಲೋಕಗಳಭಿಪ್ರಾಯವನ್ನು ತಿಳಿಸುತ್ತಾರೆ.

**ಭಾ. ಏವಮುಪವಿಷ್ಟೇ ಪಾರ್ಥೇ ಕುತೋಽಯ ಮಸ್ಥಾನೇ ಸಮುಪಸ್ಥಿತಃ ಶೋಕ ಇತ್ಯಾಕ್ಷಿಪ್ಯ ತ ಮಿಮಂ ವಿಷಮಸ್ಥಂ ಶೋಕಮವಿದ್ವತ್ಸೇವಿತಂ ಪರಲೋಕ ವಿರೋಧಿನಮಕೀರ್ತಿಕರ ಮತಿ ಕ್ಷುದ್ರಂ ಹೃದಯ ದೌರ್ಬಲ್ಯಕೃತಂ ಪರಿತ್ಯಜ್ಯ ಯುದ್ಧಾಯೋತ್ತಿಷ್ಠೇತಿ ಶ್ರೀ ಭಗವಾನುವಾಚ.**

---

**ಏವಮುಪವಿಷ್ಟೇ ಪಾರ್ಥೇ**—ಎಂಬುದರಿಂದ ಹಿಂದಿನ ಅಧ್ಯಾಯಾರ್ಥವು ಅನುವದಿಸಲ್ಪಟ್ಟಿತು, ಅರ್ಜುನನು ಹೀಗೆ ಶೋಕಾಕುಲನಾಗಿ ಒಂದುಕಡೆ ಸುಮ್ಮನೆ ಕೂತುಬಿಡಲಾಗಿ, **ಅಸ್ಥಾನೇ** – ಯೋಗ್ಯವಲ್ಲದ ಸಂದರ್ಭದಲ್ಲಿ, ಶ್ರೀ ಯಾಮುನೇಯರ ಶ್ಲೋಕವನ್ನು ಮನಸ್ಸಿನಲ್ಲಿಟ್ಟು ಹೇಳಿರುತ್ತಾರೆ. ಇದು **ತಂ ತಥಾ** ಎಂಬಲ್ಲಿರುವ ತಥಾ ಶಬ್ದಾರ್ಥವು, **ಸಮುಪಸ್ಥಿತಃ** - ಪ್ರಾಪ್ತವಾದ, **ಅಯಂ ಶೋಕಃ** - ಈ ಶೋಕವು, **ಕುತಃ** - ಯಾವ ಕಾರಣದಿಂದುಂಟಾದುದು ? **ಇತ್ಯಾಕ್ಷಿಪ್ಯ**- ಎಂದು ಆಕ್ಷೇಪಿಸಿ, (ಇದು ಮೂಲದ ಎರಡನೆಯ ಶ್ಲೋಕದ ಪೂರ್ವಾರ್ಧ ತಾತ್ಪರ್ಯವು) **ತಮಿಮಂ** - ಅಂತಹ ಈ, **ವಿಷಮಸ್ಥಂ** - ವ್ಯತ್ಯಸ್ತವಾದ ವಿಷಯದಲ್ಲುಂಟಾದ, **ಅವಿದ್ವತ್ಸೇವಿತಂ**- ತಿಳಿವಳಿಕೆಯಿಲ್ಲದವರಿಗುಂಟಾಗಬಹುದಾದ, ಇದು **ಅನಾರ್ಯ ಜುಷ್ಟಂ** ಎಂಬುದರ ತಾತ್ಪರ್ಯವು, ಅತತ್ವವಾದವುಗಳಿಂದ **ಆರಾತ್ ಯಾತಾಃ** ದೂರವಾಗಿ ಹೋಗಿರುವವರು ಆರ್ಯರು, ಹಾಗಲ್ಲದವರು ಅನಾರ್ಯರು, ಅವರುಗಳಿಂದ ಹೊಂದಲು ಯೋಗ್ಯವಾದುದು ಈ ಶೋಕವು. **ಪರಲೋಕವಿರೋಧಿನಂ**-ಪರಲೋಕದ ಶ್ರೇಯಸ್ಸುಗಳಿಗೆ ಪ್ರತಿಬಂಧಕವಾದುದಾಗಿಯೂ, (ಅಸ್ವರ್ಗ್ಯಂ ಎಂಬುದರ ವ್ಯಾಖ್ಯಾನವು) **ಅಕೀರ್ತಿಕರಂ** - ನಿನ್ನ ಯಶಸ್ಸಿಗೆ ವಿರೋಧವಾದುದಾಗಿಯೂ, **ಅತಿಕ್ಷುದ್ರಂ**- ತುಂಬಾ ನೀಚವಾಗಿಯೂ, ಹೃದಯದ ದೌರ್ಬಲ್ಯದಿಂದುಂಟಾದುದಾಗಿಯೂ ಇರುವ, ಶೋಕವನ್ನು, **ಪರಿತ್ಯಜ್ಯ** – ಸಂಪೂರ್ಣವಾಗಿ ಬಿಟ್ಟು, **ಯುದ್ಧಾಯೋತ್ತಿಷ್ಠ** – ಯುದ್ಧಕ್ಕಾಗಿ ಏಳು. **ಇತಿ ಶ್ರೀ ಭಗವಾನುವಾಚ** - ಎಂದು ಲಕ್ಷ್ಮೀಪ್ರಿಯುಕ್ತನಾದ ಭಗವಂತನು ಹೇಳಿದನು. ಇಲ್ಲಿ ಶೋಕಕ್ಕೇ ಕಾರಣವಿಲ್ಲವು ಎಂಬಭಿಪ್ರಾಯದಿಂದ ವಿಷಮವಾದ ವಿಷಯವೆಂದು **ವಿಷಮೇ ಸಮುಪಸ್ಥಿತಂ** ಎಂದು ಪ್ರಯೋಗವು. ದುಷ್ಟರಾಜರ ನಿಗ್ರಹವು ಕ್ಷತ್ರಿಯಧರ್ಮವು, ಅಂತಹ ತನ್ನ ಉಚಿತವಾದ ಧರ್ಮತ್ಯಾಗಮಾಡಿದುದರಿಂದ ಹಾಗೆ ಪ್ರಯೋಗವು. ಅರ್ಜುನನೇನೂ ಅಜ್ಞಾನಿಯಲ್ಲವು, ಗುರುಗಳಿಂದ ಶಿಕ್ಷಿತನಾಗಿ ಜ್ಞಾನಿಯು, ಅಂತವನಿಗೆ **ಅನಾರ್ಯಜುಷ್ಟ**ವಾದ ಶೋಕವು ಯುಕ್ತವಲ್ಲವು. ಹಾಗೆ ಶಿಕ್ಷಿತನಾಗಿರುವದರಿಂದ ಪಾರಲೌಕಿಕ ಶ್ರೇಯಸ್ಸಿನಲ್ಲಿ ಮಮತೆಯಿರಬೇಕು, ಅಂಥಾದ್ದನ್ನು ಬಿಟ್ಟು ಇಂತಹ ಅಸ್ವರ್ಗ್ಯವಾದ ಶೋಕದಲ್ಲಿ ಮಗ್ನನಾಗಿರುವದುಚಿತವಲ್ಲವು, ಮತ್ತು ಮಹಾವೀರರ ಕುಲದಲ್ಲಿ ಜನಿಸಿ, ಮಹಾಪರಾಕ್ರಮಿ ಎಂದೂ, ಪರಂತಪನೆಂದೂ ಹೇಳಿಸಿಕೊಂಡು, ಹೀಗೆ ಶೋಕಲಾಲಸನಾದರೆ ಅದು ಅಕೀರ್ತಿಕರವಾದುದು, ಇಂತಹ ಅತಿ ಕ್ಷುದ್ರವಾದ ಹೃದಯದೌರ್ಬಲ್ಯದಿಂದುಂಟಾದ ವಿಷಾದವು ನಿನಗೆ ಎಲ್ಲಿಂದಯ್ಯಾ ಬಂತು ಎಂದು ಧಿಕ್ಕರಿಸಿ, ಇಂತಹ ಶೋಕವನ್ನು ದೂರ ತೊಲಗಿಸಿ ಯುದ್ಧಕ್ಕೆ ಸನ್ನದ್ಧನಾಗೆಂದು ಶ್ರೀಕೃಷ್ಣನು ಹೇಳಿದನು.

**ಮೂಲಕ್ಕೆ ಅರ್ಥ**—ಸರ್ವೇಶ್ವರನು ತನಗೆ ಐಹಿಕಕ್ಕೆ ಪರಮಹಿತವಾದುದಾಗಿಯೂ ಪಾರಲೌಕಿಕವಾದ ಪರಮ ನಿಶ್ರೇಯಸಕ್ಕೂ ಸಾಧನಭೂತವಾದುದಾಗಿಯೂ ಇರುವ ಸದುಪದೇಶವನ್ನು ಮಾಡಿದರೂ, ಅದರಲ್ಲೂ ಕೂಡ ತನ್ನ ಮಿತಜ್ಞಾನದಿಂದ ದೋಷವನ್ನಾರೋಪಿಸಿ ಪುನಃ ಮುಂದಿನ ಎರಡು ಶ್ಲೋಕಗಳಿಂದ ಪ್ರಶ್ನಿಸುತ್ತಾನೆ:—ಅನೇಕರಿಗೆ, ತಾನೇ ತುಂಬಾ ತಿಳುವಳಿಕೆಯುಳ್ಳವನೆಂದಿರುವ ಭ್ರಮೆಯು ಎಂತಹ ಉಪದೇಶದಿಂದಲೂ ತೊಲಗುವದು ಕಷ್ಟವು. ಆದುದರಿಂದ ಪುನಃ

**ಮೂ.** **ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ? ॥** ೪
**ಗುರೂನಹತ್ವಾಹಿ ಮಹಾನುಭಾವಾನ್ ಶ್ರೇಯಶ್ಚರ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ ಭುಂಜೀಯಭೋಗಾನ್ ರುಧಿರಪ್ರದಿಗ್ಧಾನ್ ?** ೫

---

ಪ್ರಶ್ನಿಸುತ್ತಾನೆ. **ಹೇ ಮಧುಸೂದನ** - ಮಧುವೆಂಬ ದುಷ್ಟರಾಕ್ಷಸನನ್ನು ಕೊಂದ ಶ್ರೀಕೃಷ್ಣನೇ, **ಸಂಖ್ಯೇ** - ಯುದ್ಧದಲ್ಲಿ, **ಭೀಷ್ಮಂ**- ಪಿತಾಮಹರಾಗಿ ಗುರುವಿಗೆ ಸಮಾನರಾದ ಭೀಷ್ಮರನ್ನೂ, ಚಕಾರದಿಂದ ಆ ಭೀಷ್ಮ, ದ್ರೋಣರಹಾಗೆ ಪೂಜಾರ್ಹರಾದ ಕೃಪಾಶ್ವತ್ಥಾಮರುಗಳು ಹೇಳಲ್ಪಟ್ಟರು, ಏಕೆಂದರೆ ಮುಂದಿನಶ್ಲೋಕವಲ್ಲಿ ದ್ವಿವಚನವಿಲ್ಲದೆ ಬಹುವಚನವಿರುವದರಿಂದ, **ದ್ರೋಣಂ**– ಆಚಾರ್ಯರಾಗಿ ಧನುರ್ವಿದ್ಯೆಯನ್ನು ಕಲಿಸಿದ ದ್ರೋಣರನ್ನೂ, **ಪೂಜಾರ್ಹೌ** - ನಾವು ಪೂಜಿಸಲು ಯೋಗ್ಯರಾದ ಈ ಇಬ್ಬರನ್ನು, **ಹೇ ಅರಿಸೂದನ** - ಓ ಶತ್ರುಸಂಹಾರಕನೇ, **ಕಥಂ** - ಹೇಗೆ, **ಇಷುಭಿಃ** - ಬಾಣಗಳಿಂದ, **ಪ್ರತಿಯೋತ್ಸ್ಯಾಮಿ** – ಎದುರಿಸಿ ಯುದ್ಧ ಮಾಡುವೆನು ? ॥ ೪ ॥

**ಮಹಾನುಭಾವಾನ್ ಗುರೂನ್** - ವಿಶೇಷ ಮರ್ಯಾದೆಗೆ ಅರ್ಹರಾದ ಗುರುಗಳನ್ನು, **ಅಹತ್ವಾ**-ಕೊಲ್ಲದೆ, **ಇಹಲೋಕೇ**- ಈ ಭೂಲೋಕದಲ್ಲಿ, **ಭೈಕ್ಷ್ಯಂಚರ್ತುಮಪಿ** - ಭಿಕ್ಷಾಚರಣೆಯೂ ಕೂಡ, **ಶ್ರೇಯಃ** - ಶ್ರೇಯಸ್ಕರವಾದುದು. ಪ್ರಶಸ್ಯತರವಾದುದು, **ಶ್ರೇಯೋಭೋಕ್ತುಮ್ ಭೈಕ್ಷ್ಯಂ**, ಎಂದು ಪಾಠಾಂತರವು, ಭೈಕ್ಷ್ಯವೃತ್ತಿಯನ್ನು ಅನುಭವಿಸುವದು ಶ್ರೇಯಸ್ಕರವು ಎಂದರ್ಥವು. ಭಿಕ್ಷಾಟನೆಯು ಬ್ರಾಹ್ಮಣರ ಕರ್ಮವು, ಕ್ಷತ್ರಿಯನು ಮಾಡುವದು ಶಾಸ್ತ್ರರೀತ್ಯಾ ಅನರ್ಥಾವಹವು, ಆದರೂ ಅದನ್ನಾದರೂ ಮಾಡಬಹುದು; ಪೂಜಾರ್ಹರಾದ ಗುರುಗಳನ್ನು ಕೊಲ್ಲುವದು ಪರಮ ದೋಷಾವಹವು. ಅಲ್ಪದೋಷವನ್ನಾಶ್ರಯಿಸಿ ಮಹಾ ದೋಷದಿಂದ ನಿವೃತ್ತರಾಗಬಹುದೆಂಬ ಭಾವವು. ಇಂತಹ ವಿರುದ್ಧ ಕೃತ್ಯವಾದ ಭಿಕ್ಷಾಟನೆಯನ್ನೇನೋ ಕಷ್ಟ ದೆಶೆಯಲ್ಲಿ ಹಿಂದೆಯೂ ಮಾಡಿರುವೆವು. ಅದನ್ನೇ ಈಗಲೂ ಮಾಡಿದರೂ ಚಿಂತೆಯಿಲ್ಲವೆಂಬ ಭಾವವು. **ಗುರೂನ್ ಅರ್ಥಕಾಮಾಂಸ್ತು**–ಗುರುಗಳು ಐಹಿಕ ಪ್ರಯೋಜನಾಪೇಕ್ಷೆಯುಳ್ಳವರಾದರೋ, ಅಂತವರನ್ನೂ ಕೂಡ, **ಹತ್ವಾ**-ಕೊಂದು, **ರುಧಿರಪ್ರದಿಗ್ಧಾನ್**-ಅಂಥಾವರ ರಕ್ತದಿಂದ ತೋಯಿಸಲ್ಪಟ್ಟ, **ಭೋಗಾನ್**-ಸುಖಗಳನ್ನು, **ಇಹೈವ** - ಇಲ್ಲಿಯೇ, ಇವರುಗಳಿದ್ದ ಸ್ಥಳದಲ್ಲೇ, **ಭುಂಜೀಯ** - ಹಿಂದಿನ ಶ್ಲೋಕದಲ್ಲಿರುವ ಕಥಂ ಎಂದು ಇಟ್ಟುಕೊಳ್ಳತಕ್ಕದ್ದು, ಹೇಗೆ ಅನುಭವಿಸುವೆನು ? ಅಂತಹ ಭೋಗವನ್ನನುಭವಿಸುವದಸಾಧ್ಯವೆಂಬ ಭಾವವು. ಭೀಷ್ಮರು ಪಿತಾಮಹರು, ದ್ರೋಣರು ಶಸ್ತ್ರವಿದ್ಯಾ ಗುರುಗಳು, ಇವರುಗಳು ಪೂಜಾರ್ಹರು, ಇವರ ಹಾಗೆ ಪೂಜಾರ್ಹರು ಇತರರೂ ಉಂಟು. ಇಂಥಾವರನ್ನು ಯುದ್ಧಮಾಡು, ಕೊಲ್ಲು, ಎಂದು ಆಜ್ಞಾಪಿಸುತ್ತೀಯೆ. ನೀನಾದರೋ ಮಧುಸೂದನನು, ಅರಿಸೂದನನು, ದುಷ್ಟರನ್ನು ಕೊಂದಿರುವಿ, ಶತ್ರುಗಳನ್ನು ಕೊಂದಿರುವಿ. ಇಲ್ಲಿ ಅರಿಸೂದನನೇ ಎಂಬ ಸಂಬೋಧನೆಯಿಂದ ನೀನೀಗ ನಿನಗೆ ಬೇಕಾದವರ ವಿರೋಧಿಗಳನ್ನು ಅರಿಗಳಾಗಿ ಭಾವಿಸಿಕೊಳ್ಳುತ್ತೀಯೆ, ನಿನ್ನ ಹಾಗೆ ನಾನು ಇತರರನ್ನು ಶತ್ರುವೆಂದು ಭಾವಿಸಲಾದೀತೋ ಎಂಬ ಭಾವವು. ಆದರೆ ನೀನೂ ಕೂಡ ಗುರುಜನದ ವಿಷಯದಲ್ಲಿ ತುಂಬಾ ಅಭಿಮಾನವನ್ನು ತೋರಿಸಿರುತ್ತೀಯೆ. ಸಾಂದೀಪಿನ್ಯಾಚಾರ್ಯರಾದ ನಿನ್ನ ಗುರುಗಳು ಸತ್ತುಹೋದ ಮಕ್ಕಳನ್ನು ಬದುಕಿಸಿಕೊಡು ಎಂದು ಇಹಲೋಕಕ್ಕೆ ಉಚಿತವಲ್ಲದುದನ್ನು ಕೇಳಿಕೊಂಡರೂ ಅದನ್ನು ನಡೆಸಿರುವವನು ನೀನು, ಹೀಗಿರುವಾಗ ನನ್ನ ಗುರುಗಳನ್ನು ನಾನು ಬಾಣಗಳಿಂದ ಹೇಗೆ ಹೊಡೆಯಲಿ,

ಭಾ. ಪುನರಪಿ ಪಾರ್ಥಃ ಸ್ನೇಹಕಾರುಣ್ಯ ಧರ್ಮಾಧರ್ಮಭಯಾಕುಲೋ ಭಗವದುಕ್ತಂ ಹಿತತಮ ಮಜಾನನ್ನಿದ ಮುವಾಚ—ಭೀಷ್ಮದ್ರೋಣಾದಿಕಾನ್ ಗುರೂನ್ ಬಹುಮನ್ತವ್ಯಾನ್ ಕಥ ಮಹಂ ಹನಿಷ್ಯಾಮಿ ? ಕಥಂತರಾಂ ಭೋಗೇಷ್ವತಿ ಮಾತ್ರ ಪ್ರಸಕ್ತಾನ್ ತಾನ್ ಹತ್ವಾ ತೈರ್ಭುಜ್ಯಮಾನಾಂ ಸ್ತಾನೇವ ಭೋಗಾಂ ಸ್ತದ್ರುಧಿರೇಣೋ ಪಸಿಚ್ಯ ತೇಷ್ವಾ ಸನೇಷೂ ಪವಿಶ್ಯ ಭುಂಜೀಯ ?" ॥ ೪ ॥ ೫ ॥

---

ಎಂದು ಪುನಃ ಪ್ರಶ್ನಿಸಿದನು. ಆದರೆ ಈ ಗುರುಗಳು ಸ್ವಾರ್ಥಪರರು, ಆದುದರಿಂದಲ್ಲವೇ ಯುದ್ಧಕ್ಕೆ ಬಂದಿರುತ್ತಾರೆ, ಆದುದರಿಂದ ಅಂತವರನ್ನು ಕೊಲ್ಲಬಹುದಲ್ಲಾ ಎಂದು ಒಂದುವೇಳೆ ಶ್ರೀಕೃಷ್ಣನು ಹೇಳಬಹುದೆಂದು ಭಾವಿಸಿ, ಆ ಆಕ್ಷೇಪಕ್ಕೂ ಸಮಾಧಾನ ಹೇಳಿ ಪುನಃ ಪ್ರಶ್ನಿಸುತ್ತಾನೆ; ಹೇಗೆಂದರೆ, ಒಂದು ವೇಳೆ ಈ ಗುರುಗಳು ಅರ್ಥಕಾಮರು, ಐಹಿಕಪ್ರಯೋಜನಾಭಿಲಾಷಿಗಳೇ ಎಂದು ಒಪ್ಪಿದರೂ, ಅಂತವರನ್ನು ಕೊಂದು, ಅವರ ರಕ್ತಗಳಿಂದ ತೋಯಿಸಲ್ಪಟ್ಟ ಸ್ಥಳದಲ್ಲೇ ಇರುವದು, ಮಲಗುವದು, ಓಡಾಡುವದು, ಹೀಗೆ ಅವರನುಭವಿಸುತ್ತಿದ್ದ ಭೋಗಗಳನ್ನೇ ನಾವು ಹೇಗೆ ಅನುಭವಿಸಲಾದೀತು ಎಂದು ಅರ್ಜುನನು ಪುನಃ ಪ್ರಶ್ನಿಸುತ್ತಾನೆ. ಅಂತಹ ಭೋಗವೂ ದುಃಖವೇ ಎಂಬ ಭಾವವು.

**ಭಾಷ್ಯಾರ್ಥವು :—ಪುನರಪಿ** - ಪುನಃ ಕೂಡ, ಶ್ರೀಕೃಷ್ಣನು ಹೇಳಿದ ನಂತರ ಯುಕ್ತವೆಂದು ಭಾವಿಸಿ ಬದಲುತ್ತರವನ್ನು ಹೇಳದೆ ಆತನು ಆಜ್ಞಾಪಿಸಿದ ಹಾಗೆ ನಡೆಯಬೇಕಾಗಿತ್ತು, ಹಾಗಿಲ್ಲದೆ ಪುನಃ ಕೂಡ, ಎಂಬ ಪ್ರಯೋಗವು. ಪಾರ್ಥನು ಸ್ನೇಹ ಮತ್ತು ಕಾರುಣ್ಯ ಇವುಗಳಿಂದ ಧರ್ಮವನ್ನೇ ಅಧರ್ಮವೆಂಬ ಭಯದಿಂದ ವ್ಯಾಪ್ತವಾದ ಮನಸ್ಸುಳ್ಳವನಾಗಿ, **ಭಗವದುಕ್ತಂ** - ಶ್ರೀಕೃಷ್ಣನಿಂದ ಹೇಳಲ್ಪಟ್ಟ, **ಹಿತತಮಂ** – ಐಹಿಕಕ್ಕೂ ಪಾರಲೌಕಿಕಕ್ಕೂ ಅತ್ಯಂತ ಶ್ರೇಯಸ್ಕರವಾದುದೆಂದು, **ಅಜಾನನ್** - ತಿಳಿಯದವನಾಗಿ, **ಇದಮುವಾಚ** – ಮುಂದೆ ವಿವರಿಸಿರುವಹಾಗೆ ಹೇಳುತ್ತಾನೇನೆಂದರೆ :—**ಭೀಷ್ಮದ್ರೋಣಾದಿಕಾನ್**-ಭೀಷ್ಮದ್ರೋಣರೇ ಮೊದಲಾಗಿ ಉಳ್ಳ, ಮೂಲದ ಚಕಾರಕ್ಕೆ ಆದಿಕಾನ್ ಎಂದರ್ಥಮಾಡಿರುತ್ತಾರೆ, **ಗುರೂನ್** – ಗುರುಗಳನ್ನು, ಇಲ್ಲಿ ಬಹುವಚನವಿರುವದರಿಂದ ಭೀಷ್ಮದ್ರೋಣರು ಮಾತ್ರವೇ ಅಲ್ಲದೆ ಅರ್ಜುನನಿಂದ ಇತರ ಪೂಜ್ಯರೂ ಹೇಳಲ್ಪಟ್ಟರೆಂಬುದು ವ್ಯಕ್ತವು, **ಬಹುಮಂತವ್ಯಾನ್** - ವಿಶೇಷವಾಗಿ ಮರ್ಯಾದೆಮಾಡಲು ಯೋಗ್ಯರಾಗಿರುವವರನ್ನು **ಅಹಂ** - ಸತ್ಕುಲಪ್ರಸೂತನಾಗಿ ಗುರುಕುಲವಾಸಾದಿಗಳನ್ನು ಮಾಡಿ ನಿರ್ಮಲವಾದ ಯಶಸ್ಸುಳ್ಳ ನಾನು, **ಕಥಂ ಹನಿಷ್ಯಾಮಿ** - ಹೇಗೆ ಕೊಲ್ಲಲಿ ? **ಭೋಗೇಷು** - ಐಹಿಕ ಭೋಗಗಳಲ್ಲಿ, **ಅತಿಮಾತ್ರಪ್ರಸಕ್ತಾನ್** - ಹೆಚ್ಚಾಗಿ ಆಸಕ್ತರಾಗಿರುವವರ, **ತಾನ್** - ಅಂತಹ ಪೂಜ್ಯರನ್ನು, **ಹತ್ವಾ** – ಕೊಂದು, **ತೈರ್ಭುಜ್ಯಮಾನಾನ್** - ಅವರುಗಳಿಂದ ಅನುಭವಿಸಲ್ಪಡುತ್ತಾ ಇರುವಾಗಲೇ, **ತಾನೇವ ಭೋಗಾನ್** - ಅಂತಹ ಭೋಗಗಳನ್ನೇ, ಅವರುಗಳ ರಕ್ತದಿಂದಲೇ, ತೋಯಿಸಿ, **ತೇಷ್ವಾಸನೇಷು**- ಅವರುಗಳು ಕೂತುಕೊಳ್ಳುವ ಆಸನಗಳಲ್ಲೇ ಕುಳಿತು, **ಕಥನ್ತರಾಂ ಭುಂಜೀಯ?**–ಹೇಗೆ ತಾನೇ ಅನುಭವಿಸಲು ಸಾಧ್ಯವು ? ಊಟಕ್ಕೆ ಕೂತಿರುವವರನ್ನು ಓಡಿಸಿ, ಆ ಊಟವನ್ನು ಊಟ ಮಾಡಲು ಮನಸ್ಸಾದೀತೇ ? ಎಂಬ ತಾತ್ಪರ್ಯವು.

**ಮೂಲಕ್ಕೆ ಅರ್ಥ**—ಈ ಶ್ಲೋಕದಲ್ಲಿ ತನಗಿರುವ ಸಂದೇಹವನ್ನು ತಿಳಿಸುತ್ತಾನೆ. ಯುದ್ಧಕ್ಕೆ ಬಂದು ನಿಂತು ಶಸ್ತ್ರವನ್ನು ತ್ಯಜಿಸಿದುದಾದರೆ, ಅವರುಗಳೂ ಯುದ್ಧಕ್ಕೆ ಸಿದ್ಧರಾಗಿ ಬಂದಿರುವದರಿಂದ ನಿನಗಪಜಯವೆಂಬುದು ಸಿದ್ಧವಲ್ಲವೋ? ಎಂದರೆ, ಅವರನ್ನು ಕೊಂದು ಅಧರ್ಮ

**ಮೂ. ನಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ ಯದಿವಾ ನೋ ಜಯೇಯುಃ।**
**ಯಾನೇವ ಹತ್ವಾ ನಜಿಜೀವಿಷಾಮ ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ೬.**

---

ದಿಂದ ರಾಜ್ಯಭೋಗಾದಿಗಳನ್ನು ಹೊಂದುವದಕ್ಕಿಂತ ಅವರು ನಮ್ಮನ್ನು ಕೊಲ್ಲುವದೇ ಶ್ರೇಯಸ್ಕರ
ವಲ್ಲವೋ ? ನಿಮ್ಮಭಿಪ್ರಾಯವೇನೆಂದು ಪ್ರಾರ್ಥಿಸುತ್ತಾನೆ :—**ಯದ್ವಾ ಜಯೇಮ** - ನಾವೇ ಜಯಿ
ಸಲಿ, **ಯದಿವಾ ನಃ ಜಯೇಯುಃ** – ಅಥವಾ ನಮ್ಮನ್ನೇ ಅವರು ಜಯಿಸಲಿ, ಇವೆರಡರಲ್ಲಿ, **ನಃ**–
ನಮಗೆ ಎಂದರೆ ತನಗೂ ತನ್ನ ಭ್ರಾತೃಗಳಾದ ಯುಧಿಷ್ಠಿರಾದಿಗಳಿಗೂ, **ಕತರತ್ ಗರೀಯಃ** –
ಯಾವುದು ಶ್ರೇಷ್ಠವಾದುದೋ, **ಏತತ್** – ಇದನ್ನು, **ನ ಚ ವಿದ್ಮಃ**-ನಮಗೆ ತಿಳಿಯದು, ತನಗೂ
ಯುಧಿಷ್ಠಿರಾದಿಗಳಿಗೂ ತಿಳಿಯದು ; ಹೀಗೆ ಶಙ್ಕಾವಿದ್ದರೂ ನಿನ್ನಭಿಪ್ರಾಯವೇನು ಎಂದು ಕೇಳು
ವೆಯೋ ? ಹೇಳುತ್ತೇನೆ ಕೇಳೆಂದು ಉತ್ತರಾರ್ಧದಿಂದ ತಿಳಿಸುತ್ತಾನೆ:—**ಯಾನೇವ**–ಯಾವ ಗುರು
ಗಳೂ ಆಚಾರ್ಯರುಗಳಾದ ಭೀಷ್ಮದ್ರೋಣಾದಿಗಳನ್ನೇ, **ಹತ್ವಾ**–ಕೊಂದು, **ನಜಿಜೀವಿಷಾಮಃ** -
ಜೀವಿಸಿರಲು ಇಷ್ಟವಿಲ್ಲವೋ (ಇದೀಗ ಅರ್ಜುನಾಭಿಪ್ರಾಯವು.) **ತೇ ಧಾರ್ತರಾಷ್ಟ್ರಾಃ**–ಅಂತಹ
ಧೃತರಾಷ್ಟ್ರನ ಕಡೆಯವರೇ, **ಪ್ರಮುಖೇ** - ಸೇನೆಯ ಮುಂಭಾಗದಲ್ಲಿ, **ಅವಸ್ಥಿತಾಃ**–ಇರುತ್ತಾರೆ.
ಇಲ್ಲಿ ಧಾರ್ತರಾಷ್ಟ್ರರೆಂದರೆ ದುರ್ಯೋಧನ ದುಶ್ಶಾಸನಾದಿ ಆತನ ಮಕ್ಕಳು ಮಾತ್ರವೇ ಅಲ್ಲವು.
ಏಕೆಂದರೆ ಇವರು ದುಷ್ಟರಾಗಿರುವದರಿಂದ ಪೂಜಾರ್ಹರಲ್ಲವು. ಈಗ ಯುದ್ಧಕ್ಕೇನೋ ಆರಂಭ
ವಾಗಿಬಿಟ್ಟಿತು, ಈಗ ಯುದ್ಧಮಾಡುವುದಿಲ್ಲವೆಂದರೆ ಶತ್ರುಪಕ್ಷದವರು ನಿಮ್ಮನ್ನು ಕೊಂದುಬಿಡುವ
ರಲ್ಲವೋ ? "**ಆತ್ಮಾನಂ ಸರ್ವಥಾ ರಕ್ಷೇತ್**" ಎಂಬ ನ್ಯಾಯವಿರುವಾಗ ಯುದ್ಧಮಾಡುವದಿಲ್ಲವೆಂದು
ಹೇಳಬಹುದೋ ? ಎಂಬಾಕ್ಷೇಪ ಬಂದೀತೆಂದು ಭಾವಿಸಿ, ಅವರನ್ನು ಜಯಿಸಿ, ಅಧರ್ಮಭೋಗಗಳ
ನ್ನನುಭವಿಸುವದು ಯುಕ್ತವೇ ? ಇಲ್ಲವೇ, ಅವರಿಂದ ಜಯಿಸಲ್ಪಡುವದು ಯುಕ್ತವೇ ? ಎಂಬುವ
ಶಙ್ಕಾ ನಮ್ಮನ್ನು ಬಾಧಿಸುತ್ತದೆ. ತನ್ನ ಜ್ಯೇಷ್ಠ ಭ್ರಾತಾವಾದ ಯುಧಿಷ್ಠಿರನಿಗೂ ಆತನನ್ನನು
ಸರಿಸಿರುವವರಿಗೂ ಅದೇ ಅಭಿಪ್ರಾಯವೆಂದು ಇಲ್ಲಿ ನಃ ಎಂದು ಬಹುವಚನವನ್ನು ಉಪಯೋಗಿ
ಸಿರುತ್ತಾರೆ. ನಮ್ಮಭಿಪ್ರಾಯವಾದರೋ ಅವರೇ ನಮ್ಮನ್ನು ಜಯಿಸುವದೇ ಶ್ರೇಯಸ್ಕರವು, ಆಗ
ಅಧರ್ಮವಿಲ್ಲದೆ ವೀರಸ್ವರ್ಗವಾದರೂ ಉಂಟು ಎಂಬ ಭಾವವು ಎಂದು ಹೇಳಿ, ಶ್ರೀಕೃಷ್ಣನಭಿಪ್ರಾ
ಯವನ್ನು ಪ್ರಾರ್ಥಿಸುತ್ತಾನೆ.

ಮುಂದಿನ ಶ್ಲೋಕದಲ್ಲಿ ಅರ್ಜುನನು ತನಗೆ ಧರ್ಮವು ಯಾವುದು, ಅಧರ್ಮವು ಯಾವುದು
ಎಂಬುವದು ತಿಳಿಯದೆ ಶೋಕಾಕುಲನಾಗಿ ತುಂಬಾ ಕಾರ್ಪಣ್ಯದಿಂದಲೂ, ಲೋಕಗುರುವಾದ ಶ್ರೀ
ಕೃಷ್ಣನನ್ನು ಆಶ್ರಯಿಸಿದರೆ ತನ್ನ ಅಜ್ಞಾನವು ತೊಲಗಿ ಬುದ್ಧಿಯೋಗವು ಲಭಿಸುವದೆಂಬ ಮಹಾ
ವಿಶ್ವಾಸದಿಂದಲೂ, ಇನ್ನು ಯಾರಿಂದಲೂ ತನ್ನ ಮನೋರಥವು ಕೂಡದೆಂದು ಅಜ್ಞಾನ ನಿವೃತ್ತಿ
ಗಾಗಿ ಹೀಗೆ ಪರಿಕರಗಳಿಂದ ಯುಕ್ತವಾದ ಶರಣಾಗತಿಯನ್ನು ಮಾಡುತ್ತಾನೆ :— ಹೀಗೆ ಆತನು
ಶರಣಾಗತಿ ಮಾಡಿದ ನಂತರ ಅಜ್ಞಾನ ನಿವೃತ್ತಿಯನ್ನು ಮಾಡಲೇಬೇಕಾಯಿತಾದುದರಿಂದ
"**ಶಾಸ್ತ್ರಾವತರಣಂ ಕೃತಂ**" ಎಂದು ಹಿಂದೆಯೇ ಹೇಳಲ್ಪಟ್ಟಿತು. **ಕಾರ್ಪಣ್ಯ ದೋಷೋಪಹತ
ಸ್ವಭಾವಃ** – ಕಾರ್ಪಣ್ಯವೆಂಬ ದೋಷದಿಂದ ಹೊಡೆಯಲ್ಪಟ್ಟ ತನ್ನ ಸ್ವಭಾವವಾದ ಧೈರ್ಯ
ವುಳ್ಳವನು, ಕಾರ್ಪಣ್ಯಶಬ್ದಕ್ಕೆ ದೈನ್ಯವೆಂಬರ್ಥವು, ಇದು ಎರಡು ವಿಧವಾಗಿ ಅರ್ಜುನನಿಗೆ ಪ್ರಾಪ್ತ
ವಾಗಿರಬಹುದು ; ಈಗ ಯುದ್ಧವು ಅಧರ್ಮವೆಂದು ಮನಸ್ಸಿಗೆ ಚನ್ನಾಗಿ ತೋರಿರುವದರಿಂದ
ಮಹಾಪರಾಕ್ರಮಿಯಾದ ತನಗೆ ಧೈರ್ಯವು ತೊಲಗಿ ದೈನ್ಯವು ಪ್ರಾಪ್ತವಾಗಿದೆ ಎಂಬದಾಗಿ

ಮೂ. ಕಾರ್ಪಣ್ಯದೋಷೋಪಹತ ಸ್ವಭಾವಃ ಪೃಚ್ಛಾಮಿತ್ವಾ ಧರ್ಮಸಂಮೂಢ ಚೇತಾಃ ।
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ ೭.

---

ಒಂದರ್ಥವು. ತನಗೆ ಈಗ ಸರಿಯಾದ ಜ್ಞಾನವಿಲ್ಲವೇ, ಜ್ಞಾನವು ಎರಡು ತೆರನಾಗಿ ಮೋಹ ಶಙ್ಕಾಗಳಿಗೆ ಆಸ್ಪದವಾಯಿತೇ ? ತನಗೆ ಯಥಾರ್ಥವಾದ ಜ್ಞಾನವಿಲ್ಲವೇ ಎಂಬದಾಗಿ ಕಾರ್ಪಣ್ಯವು. ಈ ಅರ್ಥವು ಸ್ವಾರಸ್ಯವು. ಏಕೆಂದರೆ, ಶರಣಾಗತಿಗೆ ಕಾರ್ಪಣ್ಯವು ಒಂದು ಅಙ್ಗವು, ಅದನ್ನುಪ ಪಾದಿಸಿದ ಹಾಗೆ ಆಗುತ್ತದೆ. ಹೀಗೆ ಕಾರ್ಪಣ್ಯವುಳ್ಳವನಾದುದರಿಂದಲೇ, **ಅಹಂ** - ನಾನು, **ಧರ್ಮಸಂಮೂಢಚೇತಾಃ** – ಧರ್ಮ ವಿಷಯದಲ್ಲಿ ಸಂದೇಹಯುಕ್ತವಾದ ಮನಸ್ಸುಳ್ಳವನಾಗಿ, **ತ್ವಾ ಪೃಚ್ಛಾಮಿ** - ಸರ್ವಜ್ಞನಾಗಿ, ಲೋಕಗುರುವಾದ ನಿನ್ನನ್ನು ಕುರಿತು ನನ್ನ ಸಂದೇಹವು ತೊಲಗುವದೆಂಬ ಮಹಾವಿಶ್ವಾಸದಿಂದ ಪ್ರಶ್ನಿಸುವೆನು. **ಅಹಂ** - ನಾನು, **ತೇ ಶಿಷ್ಯಃ** - ನಿನಗೆ ಶಿಷ್ಯನು, ಶಿಕ್ಷಿಸಲ್ಪಡಲು ಯೋಗ್ಯನು, ಶಿಷ್ಯನಾಗಲು ಯಾವ ಗುಣಗಳಾವಶ್ಯಕವೋ ಹಾಗೆ ನಡೆಯಲುಳ್ಳವನು. ಅಂತಹ ಶಿಷ್ಯನಲ್ಲಿ ನಿನಗೆ ನಿರತಿಶಯ ಪ್ರೀತಿಯಿರುವದರಿಂದ, **ಯತ್** – ಯಾವುದು, **ಮೇ** - ನನಗೆ, **ಶ್ರೇಯಃ** - ಶ್ರೇಯಸ್ಕರವಾದುದು, **ಸ್ಯಾತ್** - ಆಗುವದೋ, **ತತ್** – ಅದನ್ನು, **ಮೇ** - ನನಗೆ, ದಯಮಾಡಿ, **ನಿಶ್ಚಿತಂ** - ನಿರ್ಣೀತವಾದ ಧರ್ಮವನ್ನು, **ಬ್ರೂಹಿ** - ಹೇಳಯ್ಯಾ, **ತ್ವಾಂ**-ನಿನ್ನನ್ನು, ಕುರಿತು, **ಪ್ರಪನ್ನಂ**-ಶರಣಾಗತನಾದ, **ಮಾಂ**-ನನ್ನನ್ನು, **ಶಾಧಿ** - ಶಿಕ್ಷಿಸು, ಎಂದರೆ ಶಾಸ್ತ್ರೋಪದೇಶವನ್ನು ಮಾಡು ಎಂಬರ್ಥವು. ಅರ್ಜುನನು ಶ್ರೀಕೃಷ್ಣನಲ್ಲಿ ಶಾಸ್ತ್ರಜ್ಞಾನಕ್ಕಾಗಿ ಸಪರಿಕರ ಶರಣಾಗತಿಯನ್ನು ಮಾಡಿರುತ್ತಾನೆ. ಕಾರ್ಪಣ್ಯ ಶಬ್ದದಿಂದಲೇ ಕಾರ್ಪಣ್ಯವೂ, **ಶಿಷ್ಯಸ್ತೇಽಹಂ** ಎಂಬಲ್ಲಿ ಮಹಾವಿಶ್ವಾಸವೂ, **ಶಾಧಿಮಾಂ** ಎಂಬುದರಿಂದ ಗೋಪ್ತೃತ್ವವರಣರೂಪ ಮನೋಭಿಪ್ರಾಯವೂ, ಆನುಕೂಲ್ಯ ಸಙ್ಕಲ್ಪ ಪ್ರಾತಿಕೂಲ್ಯ ವರ್ಜನಗಳೂ ಕೂಡ ಅರ್ಥಾತ್ ತೋರಿಬರುತ್ತವೆ. ಪ್ರಪನ್ನ ಶಬ್ದದಲ್ಲಿ ಅಙ್ಗಿಯು ತೋರಿಬರುತ್ತದೆ. ಯಾವಾಗ ಅರ್ಜುನನು ಶರಣಾಗತನಾದನೋ, ಆಗ ಸರ್ವೇಶ್ವರನು ಶರಣಾಗತನ ಇಷ್ಟದಂತೆ ಶಾಸ್ತ್ರೋಪದೇಶ ಮಾಡಲೇಬೇಕಾಯಿತು. ಆದುದರಿಂದಲೇ ಶಾಸ್ತ್ರಾವತರಣಂ ಕೃತಂ ಎಂದು ಹಿಂದೆಯೇ ಹೇಳಲ್ಪಟ್ಟಿತು. ಆದರೆ ಯುದ್ಧಕಾಲದಲ್ಲಿ ಶಾಸ್ತ್ರಾಭ್ಯಾಸವೇ ಎಂದಾಕ್ಷೇಪಿಸಿದರೆ, ಭರದ್ವಾಜ ಸಂಹಿತೆಯಲ್ಲಿ,

> **ನ ಜಾತಿಭೇದಂ ನ ಕುಲಂ ನ ಲಿಂಗಂ ನ ಗುಣ ಕ್ರಿಯಾಃ ।**
> **ನ ದೇಶಕಾಲೌ ನಾವಸ್ಥಾಂ ಯೋಗೋಹ್ಯಯ ಮಪೇಕ್ಷತೇ ॥**

ಎಂದಿರುವದರಿಂದ ದೇಶಕಾಲಾವಸ್ಥೆಗಳ ನಿಯಮವು ಶರಣಾಗತಿಗೆ ಇಲ್ಲವೆಂದು ಸಮಾಧಾನವು ಉಂಟು. ಹೀಗೆ ಈ **ಕಾರ್ಪಣ್ಯ ದೋಷ**ವೆಂಬ ಶ್ಲೋಕವು ಅಮೋಘವಾದುದರಿಂದ, ಗುರುಗಳನ್ನು ಆಶ್ರಯಿಸತಕ್ಕವರು ಈಗಲೂ ಈ ಶ್ಲೋಕವನ್ನುಚ್ಚರಿಸಿ ಆಶ್ರಯಿಸತಕ್ಕ ಪದ್ಧತಿಯು ನೆಲಗೊಂಡಿದೆ. ಆದರೆ ಆಚಾರ್ಯನು ಸಚ್ಛಿಷ್ಯನಿಗೇನೇ ಉಪದೇಶಿಸತಕ್ಕದ್ದೆಂದಿರುವಾಗ, ಹಾಗೆ ಅರ್ಜುನನು ಸತ್ಪಾತ್ರನೋ ಎಂದರೆ ಜಾನಶ್ರುತಿಯು ಕಾರ್ಪಣ್ಯ ಶೋಕಾದಿಗಳಿಂದ ಕೂಡಿದವನಾಗಿ ರೈಕ್ವರನ್ನಾಶ್ರಯಿಸಿದ ಹಾಗೆ **ಶಿಷ್ಯಸ್ತೇಽಹಂ** ಎಂದು ಯಾವಾಗ ಶರಣಾಗತನಾದನೋ, ಆಗ ಶಿಷ್ಯಗುಣ ಪೂರ್ತಿಯುಂಟೆಂದೂ, ಆದುದರಿಂದಲೇ ಸರ್ವೇಶ್ವರನು ಆತನಿಗೆ ಬೋಧಿಸಿದನೆಂದೂ ತೋರಿಬರುತ್ತದೆ.

**ಭಾ. ಏವಂ ಯುದ್ಧಮಾರಭ್ಯ ನಿವೃತ್ತವ್ಯಾಪಾರಾ್ ಭವತೋ ಧಾರ್ತರಾಷ್ಟ್ರಾಃ ಪ್ರಸಹ್ಯ ಹನ್ಯುರಿತಿ ಚೇತ್—ಅಸ್ತು. ತದ್ವಧ ಲಬ್ಧ ವಿಜಯಾ ದಧರ್ಮ್ಯಾ ದಸ್ಮಾಕಂ ಧರ್ಮಾ ಧರ್ಮಾ ವಜಾನದ್ಭಿಸ್ತೈ ರ್ಹನನಮೇವ ಗರೀಯ ಇತಿ ಮೇ ಪ್ರತಿಭಾತೀ ತ್ಯುಕ್ತ್ವಾ ಯನ್ಮಹ್ಯಂ ಶ್ರೇಯ ಇತಿ ನಿಶ್ಚಿತಂ ತತ್ ಶರಣಾಗತಾಯ ತವ ಶಿಷ್ಯಾಯ ಮೇ ಬ್ರೂಹೀತ್ಯತಿ ಮಾತ್ರ ಕೃಪಣೋ ಭಗವತ್ಪಾದಾ ವುಪಸಸಾದ.**

---

**ಭಾಷ್ಯಾರ್ಥವು**—ಆರು ಏಳು ಈ ಎರಡು ಶ್ಲೋಕಗಳ ತಾತ್ಪರ್ಯವನ್ನನುಗ್ರಹಿಸುತ್ತಾರೆ:— **ಏವಂ** - ಈ ವಿಧವಾಗಿ, **ಯುದ್ಧಮಾರಭ್ಯ** - ಯುದ್ಧವನ್ನು ಪ್ರಾರಂಭಿಸಿಬಿಟ್ಟು, **ನಿವೃತ್ತ ವ್ಯಾಪಾರಾ್** – ಯುದ್ಧದಿಂದ ಹಿಂತೆಗೆದ ವ್ಯಾಪಾರಗಳುಳ್ಳ, **ಭವತಃ** – ಯುಧಿಷ್ಠಿರಾದಿ ನಿಮ್ಮನ್ನು, ಧಾರ್ತರಾಷ್ಟ್ರರು, **ಪ್ರಸಹ್ಯ** - ಬಲಾತ್ಕರಿಸಿ, **ಹನ್ಯುಃ** - ಕೊಲ್ಲುವರು, **ಇತಿ ಚೇತ್** - ಎಂದು ಆಕ್ಷೇಪ ತಂದರೂ, **ಅಸ್ತು** - ಹಾಗೇ ಆಗಲಿ, **ತದ್ವಧ ಲಬ್ಧ** – ಆ ಭೀಷ್ಮದ್ರೋಣರಿಂದ ಸೇರಿದ ಧಾರ್ತರಾಷ್ಟ್ರರ ವಧದಿಂದುಂಟಾದ, **ಅಧರ್ಮ್ಯಾತ್ ವಿಜಯಾತ್** - ಅಧರ್ಮಯುಕ್ತವಾದ ಜಯಕ್ಕಿಂತ, ಧರ್ಮಾಧರ್ಮಗಳನ್ನು, **ಅಜಾನದ್ಭಿಃ** - ತಿಳಿಯದೇ ಇರುವ, **ತೈಃ**-ಅವರುಗಳಿಂದ, **ಅಸ್ಮಾಕಂ** - ನಮಗೆ, **ಹನನಮೇವ** - ಕೊಲ್ಲಲ್ಪಡೋಣವೇ, **ಗರೀಯ ಇತಿ** - ಪರಮ ಶ್ರೇಯಸ್ಕರವೆಂದು, **ಮೇ** - ನನಗೆ, **ಪ್ರತಿಭಾತಿ** - ತೋರಿಬರುತ್ತದೆ, **ಇತ್ಯುಕ್ತ್ವಾ** - ಎಂದು ಹೇಳಿ (ಇಲ್ಲಿಯವರೆಗೆ ೬ನೆಯ ಶ್ಲೋಕಾರ್ಥವು) **ಯನ್ಮಹ್ಯಂ ಶ್ರೇಯ ಇತಿ ನಿಶ್ಚಿತಂ** - ಯಾವುದು ನಿನ್ನಿಂದ ನಮಗೆ ಶ್ರೇಯಸ್ಕರವೆಂದು ನಿಶ್ಚಯಿಸಲ್ಪಟ್ಟಿರುತ್ತದೋ, **ತತ್**-ಅದನ್ನು ಶರಣಾಗತನಾದ ನಿನ್ನ ಶಿಷ್ಯನಾದ ನನಗೆ, **ಬ್ರೂಹಿ** - ಹೇಳು, **ಇತಿ ಅತಿಮಾತ್ರ ಕೃಪಣಃ** - ಎಂದು ವಿಶೇಷ ದೈನ್ಯವುಳ್ಳವನಾಗಿ, **ಭಗವತ್ಪಾದೌ** - ಕೃಷ್ಣನ ಪಾದಕಮಲ ದ್ವಂದ್ವವನ್ನು, **ಉಪಸಸಾದ** – ಶರಣು ಹೊಂದಿದನು. ಇಲ್ಲಿ **ನಿಶ್ಚಿತಂ ಬ್ರೂಹಿ** ಎಂದರೆ ನಿಶ್ಚಯವಾದುದನ್ನು ಹೇಳು ಎಂಬರ್ಥವಲ್ಲವು. ಹಾಗೆ ಹೇಳಿದರೆ ಶ್ರೀ ಕೃಷ್ಣನು ಸುಳ್ಳು ಹೇಳುವದೂ ಉಂಟು ಎಂದಾಗುತ್ತದೆ. ಪ್ರಪನ್ನನಿಗೆ **ಅನೃತಂ ನೋಕ್ತಂ ಪೂರ್ವಂ** ಎಂದು ಹೇಳಿರುವ ಹಾಗೆ ಎಂದಿಗೂ ಅನೃತವನ್ನು ನೀನು ಹೇಳುವದಿಲ್ಲವು, ಆದುದರಿಂದ ನನಗೆ ಯಾವುದು ಶ್ರೇಯಸ್ಸೆಂದು ನಿಶ್ಚಯಿಸಿದ್ದೀಯೋ, ಅದನ್ನು ಹೇಳು ಎಂಬ ಭಾವವು. ಈ ಶ್ಲೋಕದಲ್ಲೇ ಅರ್ಜುನನು ಶರಣಾಗತಿಯನ್ನು ಮಾಡಿದನೆಂದು ಶ್ರೀ ಭಾಷ್ಯಕಾರರು ಹೇಳಿರುವದರಿಂದ, ಶ್ರೀ ಭಾಷ್ಯಕಾರರು ಶರಣಾಗತಿಯನ್ನು ಉಪಾಯವಾಗಿ ವಿಧಿಸಲೇ ಇಲ್ಲವೆಂದೂ, ಶರಣಾಗತಿಯು ಉಪಾಯವೇ ಅಲ್ಲವೆಂದೂ, ಹೇಳುವ ಅಭಿಪ್ರಾಯಗಳೆಲ್ಲಾ ನಿರಸ್ತವಾದವು. ಗೀತೆಯಲ್ಲಿ ಭರನ್ಯಾಸರೂಪ ಉಪಾಯವೇ ಹೇಳಲ್ಪಡಲಿಲ್ಲವೆಂಬ ಅಭಿಪ್ರಾಯವೂ ಹಾಗೆಯೇ ನಿರಸ್ತವು. ಆದರೆ ಶ್ರೀ ಕೃಷ್ಣನ ಕಾಲನ್ನು ಹಿಡಕೊಂಡನೆಂದು ಮೂಲದಲ್ಲಿಲ್ಲದೆ **ಭಗವತ್ಪಾದಾ ವುಪಸಸಾದ** ಎಂದು ಹೇಗೆ ಅರ್ಥ ಮಾಡಿದರೆಂದರೆ, ಇದು ಪ್ರಪನ್ನ ಶಬ್ದಾರ್ಥವು, **ಶಿಷ್ಯಸ್ತೇಹಂ ಶಾಧಿಮಾಂ ಪ್ರಪನ್ನಂ** ಎಂದು ಹೇಳಿ ಒಬ್ಬ ಗುರುವನ್ನಾಶ್ರಯಿಸಿದರೆ **ಪ್ರಣಿಪತ್ಯಾಭಿವಾದ್ಯಚ** (ವಿ. ಪು. ೧) ಎಂದು ಹೇಳಿರುವ ಹಾಗೆ ದಂಡವತ್ಪ್ರಣಾಮವಿಲ್ಲದೆ ಎಂದಿಗೂ ಪ್ರಪನ್ನನಾಗುವದಿಲ್ಲವಾದುದರಿಂದ ಶಿಷ್ಯವೃತ್ತಿಯನ್ನು ಶ್ರೀ ಭಾಷ್ಯಕಾರರು ವ್ಯಕ್ತಗೊಳಿಸಿದರೆಂದು ಗ್ರಹಿಸತಕ್ಕದ್ದು. ಅರ್ಜುನನು ಉಪದೇಶ ಹೊಂದುತ್ತಾ ಹೊಂದುತ್ತಾ, **“ನಮೋಸ್ತುತೇ ದೇವವರ ಪ್ರಸೀದ”** ಎಂದೂ, **“ನಮಸ್ಕೃತ್ವಾ ಭೂಯ ಏವಾಹ”**, **“ನಮೋ ನಮಸ್ತೇಸ್ತು ಸಹಸ್ರಕೃತ್ವಃ”** ಎಂದೂ ಅನೇಕ ಸಲ ನಮಸ್ಕರಿಸಿರುತ್ತಾನೆ.

ಮೂ. ನಹಿ ಪ್ರಪಶ್ಯಾಮಿ ಮಮಾಪನುದ್ಯಾದ್ಯಚ್ಛೋಕ ಮುಚ್ಛೋಷಣ ಮಿನ್ದ್ರಿಯಾಣಾಂ।
ಅವಾಪ್ಯಭೂಮಾ ವಸಪತ್ನ ಮೃದ್ಧಂ ರಾಜ್ಯಂ ಸುರಾಣಾ ಮಪಿ ಚಾಧಿಪತ್ಯಮ್ ॥ ೮.

**ಸಞ್ಜಯ ಉವಾಚ—**

ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರನ್ತಪಃ ।
ನಯೋತ್ಸ್ಯ ಇತಿ ಗೋವಿಂದ ಮುಕ್ತ್ವಾ ತೂಷ್ಣೀಂ ಬಭೂವಹ ॥ ೯.

---

**ಮೂಲಕ್ಕೆ ಅರ್ಥವು**—ತನಗೆ ಈಗ ಪ್ರಾಪ್ತವಾಗಿರುವ ವಿಷಾದವು, ರಾಜ್ಯಪ್ರಾಪ್ತಿಯೊಂದಿಗೆ ಸೇರಿದ ಸರ್ವಸಮೃದ್ಧಿಯಿಂದಲೂ ಹೋಗಲಾರದೆಂದು ಅರ್ಜುನನು ತಿಳಿಸುತ್ತಾನೆ:—**ಭೂಮೌ** - ಈ ಭೂಮಿಯಲ್ಲಿ, **ಅಸಪತ್ನಮ್** – ಶತ್ರುಗಳಿಲ್ಲದ, **ಋದ್ಧಂ** - ಸಮೃದ್ಧಿಯುಳ್ಳ, **ರಾಜ್ಯವನ್ನೂ**, **ಸುರಾಣಾಂ** - ದೇವತೆಗಳ, **ಅಧಿಪತ್ಯಂಚ** - ಒಡೆತನವನ್ನೂ ಸಹ, **ಅವಾಪ್ಯಾಪಿ** - ಹೊಂದಿದರೂ ಕೂಡ, **ಇಂದ್ರಿಯಾಣಾಂ** – ಏಕಾದಶೇಂದ್ರಿಯಗಳಿಗೂ, **ಉಚ್ಛೋಷಣಂ** - ವಿಶೇಷ ತಾಪಕರವಾದ, **ಮಮಶೋಕಂ** – ನನ್ನ ವಿಷಾದವನ್ನು, **ಯತ್** - ಯಾವುದು, **ಅಪನುದ್ಯಾತ್** – ಹೋಗಲಾಡಿಸುವದೋ, **ಯತ್** ಎಂದಿರುವದರಿಂದ **ತತ್** ಎಂದಿಟ್ಟುಕೊಳ್ಳತಕ್ಕದ್ದು, **ತತ್**-ಅದನ್ನು, **ನ ಪ್ರಪಶ್ಯಾಮಿ** - ನಾನು ಕಾಣೆನು, ಹಿ–ನಿಶ್ಚಯವು, ಸರ್ವಸಂಪತ್ಸಮೃದ್ಧಿಯುಳ್ಳ, ನಿಷ್ಕಂಟಕವಾದ, ರಾಜ್ಯಪ್ರಾಪ್ತಿ ಮೂಲಕ ಸುಖ ಭೋಗಗಳನ್ನನುಭವಿಸಿದರೂ ಸರಿಯೇ, ಅಥವಾ ಇಂದ್ರಪದವಿ ಸ್ವರ್ಗಲೋಕ ಭೋಗಗಳೂ ಸಹ ಉಂಟಾದರೂ ಸರಿಯೇ, ಗುರುಗಳನ್ನೂ ಆಚಾರ್ಯರನ್ನೂ ದೇಹಾನುಬಂಧಿಗಳನ್ನೂ ಕೊಂದ ಅಧರ್ಮದಿಂದುಂಟಾದ ವಿಷಾದವು ಸರ್ವೇಂದ್ರಿಯಗಳನ್ನು ಶೋಷಿಸುತ್ತಿರುವಾಗ, ಅಂತಹ ಶೋಕಕ್ಕೆ ಏನೊಂದು ಭೇಷಜವೇ ತೋರುವದಿಲ್ಲವು ಎಂದು ಅರ್ಜುನನು ಹೇಳಿದನು ಎಂಬ ತಾತ್ಪರ್ಯವು.

ಸಂಜಯರು ಹೇಳುತ್ತಾರೇನೆಂದರೆ :—

**ಏವಮುಕ್ತ್ವಾ** - ಈ ಮೇಲಿನ ಐದು ಶ್ಲೋಕಗಳಲ್ಲಿ ತೋರುವ ಅಭಿಪ್ರಾಯಗಳನ್ನು ಅರಿಕೆ ಮಾಡಿಕೊಂಡು, **ಪರಂತಪಃ** - ಶತ್ರುಗಳಿಗೆ ತಾಪವನ್ನುಂಟುಮಾಡುವನಾದ, **ಗುಡಾಕೇಶಃ** - (ನಿದ್ರೆಯನ್ನು ನಿಗ್ರಹಿಸಿದವನು) ಅರ್ಜುನನು, **ಹೃಷೀಕೇಶಂ**-(ಇಂದ್ರಿಯಗಳಿಗೆ ನಿಯಾಮಕನು) ಶ್ರೀ ಕೃಷ್ಣನನ್ನು ಕುರಿತು, **ಏವಮುಕ್ತ್ವಾ** - ಹೀಗೆ ಹೇಳಿ, **ನಯೋತ್ಸ್ಯೇ** - ನಾನು ಯುದ್ಧ ಮಾಡುವದಿಲ್ಲವು. **ಇತಿ** - ಎಂದು, **ಗೋವಿಂದಂ** - (ಭಕ್ತರ ಸ್ತುತಿಗಳನ್ನು ಹೊಂದುವವನು, ಅಥವಾ ಬಲಿಚಕ್ರವರ್ತಿಯಿಂದ ಭೂಮಿಯನ್ನು ಪಡೆದವನು,) ಶ್ರೀ ಕೃಷ್ಣನನ್ನು ಕುರಿತು **ಉಕ್ತ್ವಾ** - ಹೇಳಿ, **ತೂಷ್ಣೀಂಬಭೂವ** – ಸುಮ್ಮನಾದನು, **ಹ** - ಆಶ್ಚರ್ಯವು. ಆಶ್ಚರ್ಯ ಹೇಗೆ ಎಂದರೆ ಮಹತ್ತಾದ ಕ್ಲೇಶಗಳು ದುರ್ಯೋಧನಾದಿಗಳಿಂದುಂಟಾಗಿದ್ದರೂ, **ನಯೋತ್ಸ್ಯೇ** ಎಂದು ಹೇಳಿದುದು ಆಶ್ಚರ್ಯವು; ಶ್ರೀ ಕೃಷ್ಣ ಸಹಾಯದಿಂದ ರಾಜ್ಯಪ್ರಾಪ್ತಿಯು ಕರಗತವಾಗಿದ್ದರೂ ಅದನ್ನು ತ್ಯಜಿಸಿ, **ನಯೋತ್ಸ್ಯೇ** ಎಂದು ಹೇಳಿದುದು ಆಶ್ಚರ್ಯವು; ಅಥವಾ ಯುದ್ಧ ಮಾಡುವೆನೆಂದು ಪರಮೋತ್ಸಾಹದಿಂದ ಬಂದ ಅರ್ಜುನನ ಮನಸ್ಸನ್ನು ಶಾಸ್ತ್ರಾವತರಣಕ್ಕೆ ಒಂದು ವ್ಯಾಜರೂಪದಲ್ಲಿ ಬದಲಾಯಿಸುವ ಹಾಗೆ ಶ್ರೀ ಕೃಷ್ಣನೇ ಪ್ರೇರಿಸಿ, **ನಯೋತ್ಸ್ಯೇ** ಎಂದು ಹೇಳಿಸಿದುದೂ ಆಶ್ಚರ್ಯವೇ ಇತ್ಯಾದ್ಯರ್ಥಗಳು ಸೂಚಿತವು. ಇಲ್ಲಿಗೆ ಪೂರ್ವ ಪೀಠಿಕೆಯು ಮುಗಿಯಿತು. ಇಲ್ಲಿ **ನಯೋತ್ಸ್ಯೇ** ಎಂದು, ಚೇತನನ ಪಾರತಂತ್ರ್ಯವನ್ನು ಮರೆತು ಸ್ವಾತಂತ್ರ್ಯವನ್ನು ವಹಿಸಿ, ಭ್ರಮಯುಕ್ತನಾಗಿ ಹೇಳಿದ ಮಾತಾಗಿರುತ್ತದೆ. ತಾನು **"ನಿಮಿತ್ತಮಾತ್ರವು"** ಸರ್ವವೂ ಈಶ್ವರ

**ಭಾ.** ಏವಮಸ್ಥಾನ ಸಮುಪಸ್ಥಿತ ಸ್ನೇಹ ಕಾರುಣ್ಯಾಭ್ಯಾಂ ಅಪ್ರಕೃತಿಂಗತಂ ಕ್ಷತ್ರಿಯಾಣಾಂ ಯುದ್ಧಂ ಪರಮಧರ್ಮಮಧರ್ಮಂ ಮನ್ವಾನಂ, ಧರ್ಮಬುಭುತ್ಸಯಾಚ ಶರಣಾಗತಂ, ಪಾರ್ಥ ಮುದ್ದಿಶ್ಯಾ ತ್ಮಯಾಥಾತ್ಮ್ಯ ಜ್ಞಾನೇನ, ಯುದ್ಧಸ್ಯ ಫಲಾಭಿ ಸನ್ಧಿ ರಹಿತಸ್ಯಾತ್ಮಪ್ರಾಪ್ತ್ಯು ಪಾಯತಾ ಜ್ಞಾನೇನ ಚ ವಿನಾ ಅಸ್ಯ ಮೋಹೋ ನ ಶಾಮ್ಯತೀತಿ ಮತ್ವಾ, ಭಗವತಾ ಪರಮಪುರುಷೇಣ ಅಧ್ಯಾತ್ಮ ಶಾಸ್ತ್ರಾವತರಣಂ ಕೃತಂ. ತದುಕ್ತಮ್ ; "ಅಸ್ಥಾನಸ್ನೇಹ ಕಾರುಣ್ಯಧರ್ಮಾಧರ್ಮ ಧಿಯಾ ಕುಲಮ್ । ಪಾರ್ಥಂ ಪ್ರಪನ್ನ ಮುದ್ದಿಶ್ಯ ಶಾಸ್ತ್ರಾವತರಣಂ ಕೃತಮ್" ಇತಿ.

---

ಸಙ್ಕಲ್ಪಾನುಗುಣವಾಗಿ ನಡೆಯುತ್ತದೆ ಎಂಬ ಜ್ಞಾನವಿಲ್ಲದ ಮಾತಾಗಿರುತ್ತದೆ. ಆದುದರಿಂದ ನಯೋತ್ಸ್ಯೇ ಎಂಬ ಅರ್ಜುನ ಸಙ್ಕಲ್ಪವು ಕಾರ್ಯಕಾರಿಯಾಗಲಿಲ್ಲವು.

ಭಾಷ್ಯಾರ್ಥವು—ಈ ಮೇಲಿನ ಎರಡು ಶ್ಲೋಕಗಳಭಿಪ್ರಾಯವನ್ನು ತಿಳಿಸುತ್ತಾರೆ. ಇಲ್ಲಿಗೆ ಉಪೋದ್ಘಾತವು ಪೂರೈಸುವದರಿಂದ, ಅನುವಾದ ರೀತ್ಯಾ ಅದನ್ನೇ ಸಙ್ಗ್ರಹಿಸುವವರಾಗಿ, ಹಾಗೆ ಸಙ್ಗ್ರಹಿಸುವಾಗ, ಶ್ರೀ ಯಾಮುನೇಯರವರ ಗೀತಾರ್ಥಸಙ್ಗ್ರಹದ ಪ್ರಥಮ ಶ್ಲೋಕವನ್ನು ಸ್ಮರಿಸಿದವರಾಗಿ ಅದರ ತಾತ್ಪರ್ಯವನ್ನು ತಿಳಿಸಿ, ಆ ಶ್ಲೋಕವನ್ನೂ ಉದಾಹರಿಸುತ್ತಾರೆ. **ಏವಂ**-ಈ ಪರಿಯಾಗಿ, **ಅಸ್ಥಾನ ಸಮುಪಸ್ಥಿತ** - ವ್ಯತ್ಯಸ್ತವಾದ ಕಾಲದಲ್ಲಿ, ಅಕಾಲದಲ್ಲಿ ಪ್ರಾಪ್ತವಾದ, **ಸ್ನೇಹಕಾರುಣ್ಯಾಭ್ಯಾಂ** - ಸ್ನೇಹಕಾರುಣ್ಯಗಳಿಂದ, (ಇದು **ವಿಷಮೇ ಸಮುಪಸ್ಥಿತಂ** ಎಂದಿರುವ ಮೂಲದಭಿಪ್ರಾಯವು.) **ಅಪ್ರಕೃತಿಂ ಗತಂ** - ತನ್ನ ನೈಜ ಸ್ವಭಾವವಾದ ಧೈರ್ಯವನ್ನು ಕಳೆದುಕೊಂಡ, (ಇದು **ಉಪಹತ ಸ್ವಭಾವಃ** ಎಂಬುವದರರ್ಥವು), ಇದು ಪಾರ್ಥನಿಗೆ ವಿಶೇಷಣವು, ಮತ್ತು **ಕ್ಷತ್ರಿಯಾಣಾಂ** - ಕ್ಷತ್ರಿಯರಿಗೆ, **ಯುದ್ಧಮ್** - ಧರ್ಮವಾದ ಯುದ್ಧವು, **ಪರಮ ಧರ್ಮಂ**–ಸ್ವವರ್ಣೋಚಿತವಾಗಿ ಶಾಸ್ತ್ರದಲ್ಲಿ ವಿಹಿತವಾದುದರಿಂದ ಸರ್ವೋತ್ಕೃಷ್ಟ ಧರ್ಮವನ್ನು, **ಅಧರ್ಮಂ ಮನ್ವಾನಂ** - ಅಧರ್ಮವೆಂದು ತಿಳಿದುಕೊಂಡಂಥಾ, ಆದುದರಿಂದಲೇ, **ಧರ್ಮ ಬುಭುತ್ಸಯಾಚ** - ಧರ್ಮವನ್ನು ತಿಳಿಯಬೇಕೆಂಬಪೇಕ್ಷೆಯಿಂದಲೇ, **ಶರಣಾಗತಂ** - ಶರಣಾಗತಿಯನ್ನು ಮಾಡಿದ, ಪಾರ್ಥನನ್ನು ಕುರಿತು, **ಆತ್ಮಯಾಥಾತ್ಮ್ಯಜ್ಞಾನೇನ ವಿನಾ** - ತನ್ನ ಆತ್ಮನ ಯಥಾರ್ಥವಾದ ಸ್ವರೂಪಜ್ಞಾನವಿಲ್ಲದೆಯೂ, ಎಂದರೆ ಆತ್ಮನು ನಿತ್ಯನು, ಭಗವಂತನಿಗೆ ದಾಸಭೂತನು ಇತ್ಯಾದಿ ಸ್ವರೂಪಜ್ಞಾನವಿಲ್ಲದೆ, ಮತ್ತು **ಯುದ್ಧಸ್ಯ ಫಲಾಭಿ ಸನ್ಧಿರಹಿತಸ್ಯ** - ಫಲದಲ್ಲಿ ಮಮತೆ ಇಲ್ಲದೆ ಭಗವತ್ಪ್ರೀತಿಗಾಗಿ ಯುದ್ಧಮಾಡುವದಕ್ಕೆ, **ಆತ್ಮಪ್ರಾಪ್ತ್ಯುಪಾಯತಾಜ್ಞಾನೇನ ಚ ವಿನಾ**-ಭಗವತ್ಪ್ರಾಪ್ತಿಗೆ ಉಪಾಯಭೂತವಾದ ಜ್ಞಾನವಿಲ್ಲದೆಯೂ, ಹೀಗೆ ಈ ಎರಡು ವಿಧ ಜ್ಞಾನವಿಲ್ಲದೆಯೂ, **ಅಸ್ಯಮೋಹಃ** - ಈ ಅರ್ಜುನನ ಭ್ರಮೆಯು, **ನಶಾಮ್ಯತೀತಿ ಮತ್ವಾ** - ಶಮನವನ್ನು ಹೊಂದುವದಿಲ್ಲವೆಂದು ತಿಳಿದವನಾಗಿ, ಪರಮಪುರುಷನಾದ ಭಗವಂತನಿಂದ, **ಅಧ್ಯಾತ್ಮಶಾಸ್ತ್ರಾವತರಣಂ** - ಮೋಕ್ಷಶಾಸ್ತ್ರಾರಂಭವು, **ಕೃತಂ** - ಮಾಡಲ್ಪಟ್ಟಿತು. **ತದುಕ್ತಂ**–ಹಾಗೆಯೇ ಶ್ರೀ ಯಾಮುನೇಯರವರ ಗೀತಾರ್ಥ ಸಙ್ಗ್ರಹದಲ್ಲಿ, **"ಅಸ್ಥಾನಸ್ನೇಹಕಾರುಣ್ಯ"** ವೆಂಬ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಈ ಶ್ಲೋಕಾರ್ಥವು ಹಿಂದೆಯೇ ಉಪಪಾದಿತವಾಗಿರುತ್ತದೆ. ೫೭ನೆಯ ಪುಟವನ್ನು ಪರಾಂಬರಿಸಿ. ಇಲ್ಲಿ ಶ್ರೀ ಯಾಮುನೇಯರು ಸುಮ್ಮನೆ ಶಾಸ್ತ್ರಾವತರಣಂ ಎಂದು ಹೇಳಿದ್ದರೂ, ಶ್ರೀ ಭಾಷ್ಯಕಾರರು ಅಧ್ಯಾತ್ಮ ಶಾಸ್ತ್ರಾವತರಣಂ ಎಂದು ವ್ಯಾಖ್ಯಾನಮಾಡಿದರು. ಏಕೆಂದರೆ **ಶ್ರೀಮದ್ಗೀತಾ ಸೂಪನಿಷತ್ಸು** ಎಂದು ಪ್ರತಿಯೊಂದಧ್ಯಾಯದ ಕೊನೆಯಲ್ಲಿ ಹೇಳಿರು

ಮೂ. ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।
ಸೇನಯೋ ರುಭಯೋರ್ಮಧ್ಯೇ ಸೀದಮಾನ ಮಿದಂ ವಚಃ ॥ ೧೦.

ವದರಿಂದ, ಶ್ರೀ ಭಗವದ್ಗೀತೆಯು ಪರಮಕೃಪೆಯಿಂದ, ಪರಮಪುರುಷನಿಂದಲೇ ಉಪದೇಶಿಸಲ್ಪಟ್ಟ ಮೋಕ್ಷೋಪಾಯ ಶಾಸ್ತ್ರವೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. **"ನವೇದಾಂತಾ ಚ್ಛಾಸ್ತ್ರಂ"** ಎಂದು ಹೇಳಿರುವ ಹಾಗೆ ವೇದಾಂತಶಾಸ್ತ್ರಕ್ಕೇನೇ ಶಾಸ್ತ್ರವೆಂದು ಹೇಳಿಸಿಕೊಳ್ಳಲು ಅರ್ಹತೆಯಾದುದರಿಂದ ಶ್ರೀ ಯಾಮುನೇಯರೂ ಸುಮ್ಮನೆ **ಶಾಸ್ತ್ರಾವತರಣಂ** ಎಂದು ಹೇಳಿರುವದು ಅಧ್ಯಾತ್ಮಶಾಸ್ತ್ರವೆಂಬಭಿಪ್ರಾಯದಿಂದಲೇ ಎಂದು ತಿಳಿಸುವದಕ್ಕಾಗಿಯೂ ಹಾಗೆ ಪ್ರಯೋಗವು. ಆದರೆ ಅರ್ಜುನನು ಅಧ್ಯಾತ್ಮಶಾಸ್ತ್ರವನ್ನುಪದೇಶಿಸಬೇಕೆಂದು ಶೋಕಿಸಲಿಲ್ಲವು, ತಾನು ಸತ್ಪಾತ್ರನೋ ಅಲ್ಲವೋ ಎಂದು ಆಲೋಚಿಸದೇ ಪರಮಗುಹ್ಯವಾದ ಅಧ್ಯಾತ್ಮಶಾಸ್ತ್ರವನ್ನುಪದೇಶಿಸಬೇಕೆಂದು ಶೋಕಿಸಲಿಲ್ಲವು, ಆದುದರಿಂದ ಅಂತವನಿಗೆ ಪರಮಗುಹ್ಯವಾದ ಅಧ್ಯಾತ್ಮಶಾಸ್ತ್ರವನ್ನುಪದೇಶಿಸಬಹುದೇ ಎಂಬಾಕ್ಷೇಪವು ಯುಕ್ತವಾದುದು. ಇಂತಹ ಆಕ್ಷೇಪಕ್ಕೆ ಸಮಾಧಾನವಾಗಿ **ಆತ್ಮಯಾಥಾತ್ಮ್ಯಜ್ಞಾನೇನ ವಿನಾ** ಮತ್ತು **ಯುದ್ಧಸ್ಯ ಫಲಾಭಿಸಂಧಿರಹಿತಸ್ಯ ಆತ್ಮಪ್ರಾಪ್ತ್ಯುಪಾಯತಾಜ್ಞಾನೇನ ಚ ವಿನಾ ಮೋಹೋ ನಶಾಮ್ಯತೀತಿ ಮತ್ವಾ** ಎಂದು ಹೇಳಿರುತ್ತಾರೆ. ಅರ್ಜುನನೂ ತಾನೂ ನರನಾರಾಯಣಾವತಾರಿಗಳಾಗಿ-ಅರ್ಜುನನಲ್ಲಿ ವಿಷ್ಣ್ವಂಶವಿರುವದರಿಂದ ಅಂತಹ ಉಪದೇಶಕ್ಕೆ ಸತ್ಪಾತ್ರನೆಂಬುದನ್ನು ತಿಳಿಸುವದಕ್ಕಾಗಿ **ಧರ್ಮಬುಭುತ್ಸಯಾ ಶರಣಾಗತಂ** ಎಂದು ಪ್ರಯೋಗವು. ಆತ್ಮಪ್ರಾಪ್ತಿ ಉಪಾಯತಾಜ್ಞಾನವಿದ್ದರೇನೇ ತಾನು ಮಾಡುವದೆಲ್ಲಾ ಭಗವತ್ಪ್ರೀಣನಾರ್ಥವಾಗಿ ಎಂದರಿತು ಫಲಾಭಿಸಂಧಿರಹಿತನಾಗಿ ಯುದ್ಧಾದಿ ಸ್ವಧರ್ಮಗಳಾದ ಕಾರ್ಯಗಳನ್ನು ಮಾಡುವನು. ಹಾಗೆ ಮಾಡುವದಕ್ಕೆ ಆತ್ಮಯಾಥಾತ್ಮ್ಯಜ್ಞಾನವೂ ಬೇಕು, ಹೀಗೆ ಎರಡು ವಿಧ ಜ್ಞಾನವೂ ಆವಶ್ಯಕವೆಂದು ತಿಳಿದು, ಅಧ್ಯಾತ್ಮಶಾಸ್ತ್ರಾವತರಣವನ್ನು ಶ್ರೀ ಕೃಷ್ಣನು ಮಾಡಿದನೆಂದು ಹೇಳಿರುತ್ತಾರೆ. ಅವತಾರ ಮಾಡಿದುದರ ಉದ್ದೇಶ್ಯವಾದ ಧರ್ಮಸಂಸ್ಥಾಪನೆಯು ಹೇಗಾದರೂ ನಡೆಯಬೇಕು, ಅದಕ್ಕೊಂದು ವ್ಯಾಜವು ಆವಶ್ಯಕವಾಗಿ, ಪಾರ್ಥನನ್ನು ವ್ಯಾಜೀಕರಿಸಿ ಅಧ್ಯಾತ್ಮವಿದ್ಯಾವತರಣವನ್ನು ಮಾಡಿದನು. ಈ ಅಧ್ಯಾತ್ಮ ಶಾಸ್ತ್ರವನ್ನುಪದೇಶಿಸಿದವನು ಲೋಕಗುರುವಾದ ಶ್ರೀಕೃಷ್ಣನಾದುದರಿಂದ ಈ ಶಾಸ್ತ್ರದಲ್ಲಿ ಪರಮವಿಶ್ವಾಸವೂ ಪರಿಗ್ರಹಿಸುವದರಲ್ಲಿ ತ್ವರೆಯೂ ಇರಬೇಕೆಂದು ಸೂಚಿಸುವದಕ್ಕಾಗಿ **ಭಗವತಾ ಪರಮಪುರುಷೇಣ** ಎಂಬ ಪ್ರಯೋಗವು. ಶಾಸ್ತ್ರಾವತರಣಕ್ಕೆ ಇದೀಗ ಕಾರಣವೆಂದು ಸೂಚಿಸಿರುವದು ತಮ್ಮ ಅಭಿಪ್ರಾಯ ಮಾತ್ರವೇ ಅಲ್ಲವು. ತಮಗೆ ಗುರುಗಳಾಗಿ ಮಹತ್ತಾದ ವೈರಾಗ್ಯ ಜ್ಞಾನನಿಧಿಗಳಾದ ಯಾಮುನೇಯರ ಅಭಿಪ್ರಾಯವೂ ಹಾಗೆಯೇ ಎಂದು ಸಮರ್ಥನೆ ಮಾಡುವದಕ್ಕಾಗಿ ಅವರ ಗೀತಾರ್ಥ ಸಂಗ್ರಹದ ಪ್ರಥಮ ಶ್ಲೋಕವನ್ನು ಉದಾಹರಿಸಿರುತ್ತಾರೆ.

**ಮೂಲಕ್ಕೆ ಅರ್ಥ:—ಹೇ ಭಾರತ** - ಓ ಧೃತರಾಷ್ಟ್ರನೇ, ಎಂದು ಸಂಜಯನು ಸಂಬೋಧಿಸಿ ಹೇಳುವ ವಾಕ್ಯವು, **ಉಭಯೋಸ್ಸೇನಯೋಃ** – ಯುದ್ಧಕ್ಕಾಗಿ ಉದ್ಯುಕ್ತರಾಗಿರುವ ಎರಡು ಸೇನೆಗಳ, **ಮಧ್ಯೇ** - ಮಧ್ಯದಲ್ಲಿ ಎಂದರೆ ಮಧ್ಯದಲ್ಲಿರುವವನಾಗಿ, **ಸೀದಮಾನಂ**-ದುಃಖದಿಂದ ತಪಿಸುತ್ತಿರುವ ಶರೀರವುಳ್ಳವನಾಗಿ, **ವಿಷೀದಂತಂ** ಎಂದು ಪಾಠಾಂತರವು, **ತಂ**–ಹಾಗೆ ನಿಶ್ಚೇಷ್ಟನಾಗಿ ಕುಳಿತ ಅರ್ಜುನನನ್ನು ಕುರಿತು, **ಹೃಷೀಕೇಶಃ** - ಸರ್ವರ ಇಂದ್ರಿಯಗಳಿಗೂ ನಿಯಾಮಕನಾದುದರಿಂದ ಈಗ ಅರ್ಜುನ ವಿಷಾದ ಯೋಗಕ್ಕೂ ಕಾರಣಭೂತನಾದ ಶ್ರೀ ಕೃಷ್ಣನು

ಭಾ. ಏವಂ ದೇಹಾತ್ಮನೋರ್ಯಾಥಾತ್ಮ್ಯಾಜ್ಞಾನ ನಿಮಿತ್ತ ಶೋಕಾವಿಷ್ಟಂ, ದೇಹಾತಿರಿಕ್ತಾತ್ಮಜ್ಞಾನ ನಿಮಿತ್ತಂಚ ಧರ್ಮಂ ಭಾಷಮಾಣಂ, ಪರಸ್ಪರ ವಿರುದ್ಧಗುಣಾನ್ವಿತಮ್ ಉಭಯೋಃ ಸೇನಯೋಃ ಯುದ್ಧಾಯೋದ್ಯುಕ್ತಯೋಃ ಮಧ್ಯೇ, ಅಕಸ್ಮಾನ್ನಿರುದ್ಯೋಗಂ ಪಾರ್ಥಮಾಲೋಕ್ಯ, ಪರಮಪುರುಷಃ ಪ್ರಹಸನ್ನಿವೇದ ಮುವಾಚ – ಪರಿಹಾಸ ವಾಕ್ಯಂ ವದನ್ನಿವ ಆತ್ಮ ಪರಮಾತ್ಮ ಯಾಥಾತ್ಮ್ಯ ತತ್ಪ್ರಾಪ್ತ್ಯುಪಾಯಭೂತ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ಗೋಚರಂ "ನತ್ವೇವಾಹಂ ಜಾತುನಾಸಂ" ಇತ್ಯಾರಭ್ಯ, "ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" (ಗೀ. ೧೮–೬೬) ಇತ್ಯೇತದನ್ತ ಮುವಾಚೇತ್ಯರ್ಥಃ　　೧೦.

---

**ಪ್ರಹಸನ್ನಿವ** - ನಗುತ್ತಾನೆಯೋ ಎನ್ನುವಹಾಗೆ ಸೇವೆಯನ್ನಿತ್ತವನಾಗಿ, **ಇದಂ ವಚಃ** - ಈ ಮುಂದೆ ಹೇಳುವ ಪ್ರಕಾರ ಮಾತನ್ನು, ಆ ಮಾತು ಅಮೋಘವಾದುದೆಂಬಭಿಪ್ರಾಯದಿಂದ ಇದಂ ವಚಃ ಎಂಬ ಪ್ರಯೋಗವು. ಪ್ರಹಸನ್ನಿವ ಎಂಬ ಪ್ರಯೋಗದಿಂದ, ಶ್ರೀ ಕೃಷ್ಣನೇ ಈ ಅರ್ಜುನ ವಿಷಾದಕ್ಕೆ ಕಾರಣನಾಗಿರುವದರಿಂದ, ತಾನೇ ಈಗ ಸಮಾಧಾನವನ್ನೂ ಮಾಡಲು ಹೊರಟಿರುವದರಿಂದ ನಗುವಹಾಗೆ ತೋರುತ್ತಿದ್ದನೆಂದೂ ಹೇಳಬಹುದು. ಅಥವಾ ಇಂತಹ ಯುದ್ಧರಂಗದಲ್ಲಿ ವೀರಾವೇಶವನ್ನು ಹೊಂದಿರುವದಕ್ಕೆ ಬದಲಾಗಿ ಕ್ಲೈಬ್ಯಸೂಚಕ ಖೇದವು ಇಂತಹ ಪರಾಕ್ರಮಿಗೆ ಉಂಟಾಗಿದೆಯೇ ಎಂದು ಪ್ರಹಸನ್ನಿವ ಎಂದೂ ಊಹಿಸಬಹುದು, **ಉವಾಚ** - ಹೇಳಿದನು.

**ಭಾಷ್ಯಾರ್ಥವು—ಏವಂ** - ಈ ಪ್ರಕಾರವಾಗಿ, **ದೇಹಾತ್ಮನೋಃ** – ಶರೀರ ಮತ್ತು ಅದರಲ್ಲಿರುವ ಶರೀರಿಯಾದ ಜೀವಾತ್ಮನು ಇವೆರಡರ, **ಯಾಥಾತ್ಮ್ಯ** - ಯಥಾರ್ಥವಾದ ಸ್ವರೂಪದ, **ಅಜ್ಞಾನನಿಮಿತ್ತ** - ಅಜ್ಞಾನದ ಮೂಲಕವಾಗಿ ಉಂಟಾದ, **ಶೋಕಾವಿಷ್ಟಂ** - ಶೋಕದಿಂದ ಕೂಡಿದ, (ಇದು ಸೀದನ್ನಾಸಂ ಎಂಬುದರ ಉಪಪಾದನವು,) ಅರ್ಜುನನು ಇನ್ನೂ ಎಂತವನೆಂದರೆ, **ದೇಹಾತಿರಿಕ್ತಾತ್ಮ ಜ್ಞಾನ ನಿಮಿತ್ತಂಚ** - ದೇಹವೇ ಬೇರೆ, ಆತ್ಮನೇ ಬೇರೆ ಎಂಬ ಜ್ಞಾನದ ಮೂಲಕವಾಗಿಯೂ ಕೂಡ, **ಧರ್ಮಂ ಭಾಷಮಾಣಂ** - ಧರ್ಮವನ್ನು ಕುರಿತು ಮಾತನಾಡುವವನಾದ, ಹೀಗೆ ಪರಸ್ಪರ ವಿರುದ್ಧ ಗುಣಗಳಿಂದ, **ಅನ್ವಿತಂ** - ಕೂಡಿದವನಾದ, ಈ ಮೇಲೆ ಹೇಳಿದ ಅಭಿಪ್ರಾಯವೆಲ್ಲಾ ತಂ ಎಂಬ ಪದದಿಂದ ತೋರಿಬರುವ ಅಭಿಪ್ರಾಯವು. ಇನ್ನೂ ಎಂತವನೆಂದರೆ:—**ಯುದ್ಧಾಯೋದ್ಯುಕ್ತಯೋಃ** – ಯುದ್ಧಕ್ಕಾಗಿ ಉದ್ಯುಕ್ತರಾಗಿರುವ ಎರಡು ಸೇನೆಗಳ ಮಧ್ಯದಲ್ಲಿ, **ಅಕಸ್ಮಾನ್ನಿರುದ್ಯೋಗಂ** - ಇದ್ದಕ್ಕಿದ್ದಹಾಗೆ ನಿರುದ್ಯೋಗನಾದ, **ಪಾರ್ಥಂ**- ವೀರಮಾತಾವಾದ ಪೃಥಾವಿನ ಮಗನಾದ ಅರ್ಜುನನನ್ನು, **ಆಲೋಕ್ಯ** - ಕಂಡು, ಪರಮ ಪುರುಷನಾದ ಶ್ರೀಕೃಷ್ಣನು **ಪ್ರಹಸನ್ನಿವೇದ ಮುವಾಚ** - ಪರಿಹಾಸ ವಾಕ್ಯವನ್ನು ಹೇಳುವವನ ಹಾಗೆ, **ಆತ್ಮ ಪರಮಾತ್ಮಯಾಥಾತ್ಮ್ಯ** - ಜೀವಾತ್ಮ ಪರಮಾತ್ಮರುಗಳ ನಿಜವಾದ ಸ್ವರೂಪವನ್ನೂ ಮತ್ತು **ತತ್ಪ್ರಾಪ್ತಿ** – ಆ ಪರಮಾತ್ಮನನ್ನು ಹೊಂದಲು, **ಉಪಾಯಭೂತ** - ಉಪಾಯರೂಪವಾದ, ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನೂ, **ಗೋಚರಂ** - ತಿಳಿಸುವ, **"ನತ್ವೇವಾಹಂ ಜಾತುನಾಸಂ"** (ಗೀ. ೨. ೧೨) ಎಂಬದಾಗಿ ಪ್ರಾರಂಭಿಸಿ, **"ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಇತ್ಯೇತದಂತಂ** ಎಂಬ ವಾಕ್ಯದ ಕೊನೆಯವರೆಗೂ, ಶ್ರೀ ಕೃಷ್ಣನು ಹೇಳಿದನು ಎಂಬಭಿಪ್ರಾಯವು. ಗೀತೋಪದೇಶವು **"ನತ್ವೇವಾಹಂ"** ಎಂದಾರಂಭಿಸಿ,

**ಮೋಕ್ಷಯಿಷ್ಯಾಮಿ** ಎಂದು ಪೂರ್ಣಮಾಡಲ್ಪಟ್ಟಿರುತ್ತದೆಂದು ಇದರಿಂದ ಹೇಳಿದಂತಾಯಿತು. ಹಿಂದೆ **ಅಸ್ಯಮೋಹೋ ನ** ಶಾಮ್ಯತಿ ಎಂದು ಹೇಳಿದರು. ಆ ಮೋಹವೆಂಥಾದ್ದೆಂದು ತಿಳಿಸುತ್ತಾರೆ. ಮೋಹ ಹೇಗೆಂದರೆ, ಒಂದುಸಲ ದೇಹವೇ ಆತ್ಮಾ ಎಂಬ ಭ್ರಾನ್ತಿಯಿರುವ ಹಾಗೆ ಪ್ರಕಟಿಸುತ್ತಾನೆ; ನಮ್ಮ ಗುರುಗಳಾದ ಆಚಾರ್ಯರಾದವರನ್ನು ನಾನು ಕೊಲ್ಲಲಾರೆನೆನ್ನುವದರಿಂದ, ಅವರಲ್ಲಿರುವ ಆತ್ಮರುಗಳು ಯಾವಾಗಲೂ ಗುರುಗಳೇ ಆಚಾರ್ಯರೇ, ಸಂಬಂಧೀಕರೇ ಎಂದು ಹೇಳುವದರಿಂದ ದೇಹಾತ್ಮಭ್ರಾಂತಿಯನ್ನು ಪ್ರಕಟಿಸಿದನು; ನಾನು ರಾಜ್ಯವನ್ನನುಭವಿಸಿದರೇನು, ಅವರು ಅನುಭವಿಸಿದರೇನು ಎಂದೂ, ಮತ್ತು ಅವರು ನಮ್ಮನ್ನು ಕೊಲ್ಲುವದಕ್ಕಿಂತ ನಾವು ಸಾಯುವದೇ ಪರಮ ಶ್ರೇಯಸ್ಸು ಎಂದೂ ಹೇಳುವಾಗ ದೇಹಾತಿರಿಕ್ತ ಆತ್ಮಜ್ಞಾನ ಉಂಟೆಂದು ತೋರ್ಪಡಿಸಿರುತ್ತಾನೆ. ಹೀಗೆ ಭ್ರಾಂತಿ ಜ್ಞಾನವೂ, ವಿಲಕ್ಷಣಜ್ಞಾನವೂ ಎರಡು ಪರಸ್ಪರ ವಿರುದ್ಧವಾದವು ಅರ್ಜುನನಲ್ಲಿತ್ತು ಎಂದು ಹೇಳುವದಕ್ಕಾಗಿಯೇ **"ಏನಂ"** ಎಂದಾರಂಭಿಸಿ **"ಗುಣಾನ್ವಿತಂ"** ಎಂಬುವವರೆಗೂ ಪ್ರಯೋಗವು, ಇಷ್ಟು ವಿಶೇಷಣಗಳೂ ಮೂಲದ **"ತಮುವಾಚ"** ಎಂಬಲ್ಲಿ ತಂ ಎಂಬುದರ ವಿವರಣವು. **ಪ್ರಹಸನ್ನಿವ**–ಸರ್ವೇಶ್ವರನ ಪರಿಹಾಸಯುಕ್ತವಾದ ನಗೆಗೆ ಕಾರಣವೇನೆಂದರೆ, ವಿಷಾದಕ್ಕೆ ಸಮಯಾಸಮಯಗಳುಂಟು, **ಉಭಯೋಸ್ಸೇನಯೋರ್ಮಧ್ಯೆ** ನಿಂತು **ಯುದ್ಧೋದ್ಯುಕ್ತ**ನಾಗಿರುವಾಗ ಏಕಾ ಏಕೀ ಸರಿಯಾದ ಕಾರಣವಿಲ್ಲದೇನೆ ವಿಷಾದದಿಂದ ತಟಸ್ಥನಾಗಬಹುದೇ ಎಂದಾಗಲಿ ಪರಿಹಾಸವು; ಆದುದರಿಂದಲೇ **ಅಕಸ್ಮಾನ್ನಿರುದ್ಯೋಗಂ** ಎಂಬ ಪ್ರಯೋಗವು. ಅಥವಾ ಈತನ ಮಾತು ಒಂದು ಸಲ ತಿಳುವಳಿಕೆಯುಳ್ಳದು, ಇನ್ನೊಂದುಸಲ ತಿಳುವಳಿಕೆ ಇಲ್ಲದುದು, ಹೀಗೆಲ್ಲಾದರೂ ಉಂಟೇ ಎಂದು ಪರಿಹಾಸೋಕ್ತಿಯು. ಈ ಅಭಿಪ್ರಾಯವು ಮುಂದಿನ ಶ್ಲೋಕದಲ್ಲಿ ವ್ಯಕ್ತವು. ಅಥವಾ ಅರ್ಜುನನು ಯುದ್ಧ ಮಾಡಬೇಕೆಂಬ ಸರ್ವ ಕುತೂಹಲದಿಂದಲೇ ಬಂದಿದ್ದಾನೆ, ಅಂತವನನ್ನು ತಾನೇ **ಹೃಷೀಕೇಶ**ನಾಗಿ ಶಾಸ್ತ್ರಾವತರಣಕ್ಕೆ ಒಂದು ವ್ಯಾಜ ಬೇಕೆಂಬಭಿಲಾಷೆಯಿಂದ ಅರ್ಜುನನಿಗೆ ವಿಷಾದವುಂಟಾಗುವಹಾಗೆ ಮಾಡಿಬಿಟ್ಟು, ಅದರಿಂದ ಅವನು ವಿಷಾದಿಸುತ್ತಿದ್ದುದನ್ನು ನೋಡಿ, **ಪ್ರಹರ್ಸ** - ನಕ್ಕು, ಮಾತಾಡಬಹುದು; ಆದರೆ ಹಾಗೆ ಅರ್ಜುನನ ಇಂದ್ರಿಯಗಳನ್ನು ನಿಯಮಿಸುವ ಶಕ್ತಿಯುಳ್ಳ ಶ್ರೀಕೃಷ್ಣನು, ಅರ್ಜುನನಿಗೆ ಧೈರ್ಯಸಾಹಸಗಳನ್ನೇ ಉಂಟುಮಾಡಿ ಯುದ್ಧ ಮಾಡಿಸಿ ದುಷ್ಟ ನಿಗ್ರಹವನ್ನುಂಟುಮಾಡಬಹುದಲ್ಲಾ, ಇಷ್ಟೆಲ್ಲಾ ಕಷ್ಟವೇಕೆ ಎಂದರೆ ಲೋಕ ಸಙ್ಗ್ರಹಾರ್ಥವಾಗಿ ಆತನನ್ನು ವ್ಯಾಜೀಕರಿಸಿ ಧರ್ಮ ಸಂಸ್ಥಾಪನೆಯನ್ನೂ ವರ್ಣಾಶ್ರಮಧರ್ಮಗಳಲ್ಲಿ ನ್ಯೂನತೆಯಿಲ್ಲದಿರುವವನ್ನೂ ಮಾಡಬೇಕಾದುದರಿಂದ ತನ್ನ ಸಙ್ಕಲ್ಪಮಾತ್ರದಿಂದ ಆತನಿಗೆ ಧರ್ಮ ಶಙ್ಕಾಪ್ರಯುಕ್ತ ವಿಷಾದ ಬರುವಹಾಗೆ ಮಾಡಿ, ವಿಷಾದದಿಂದ **ಸೀದಮಾನ**ನಾಗಿರುವವನನ್ನು ನೋಡಿ, **ಪ್ರಹರ್ಸ**–ನಕ್ಕು ಮಾತಾಡುತ್ತಾನೆಂದು ಹೇಳಬಹುದು. ಅಥವಾ ಧರ್ಮೋಪದೇಶ ಕಾಲದಲ್ಲಿ ಗುರುವಾದವನು ಶಿಷ್ಯನಲ್ಲಿ ಅಜ್ಞಾನ ವಿಜೃಂಭಣೆಯುಂಟಾದರೂ, ಅದಕ್ಕಾಗಿ ಕೋಪಿಸದೆಯೂ ನಿರ್ವೇದವಿಲ್ಲದೆಯೂ ಪರಮ ಕೃಪೆಯೂ ಕಷ್ಟವಾದ ಉಪದೇಶವನ್ನೆಲ್ಲಾ **ಪ್ರಹರ್ಸ** - ನಗುತ್ತಾ ಮಾಡಬೇಕೆಂಬುದನ್ನು ಲೋಕದಲ್ಲಿ ಶಿಕ್ಷಿಸುವದಕ್ಕಾಗಿ ಎಂದಾದರೂ ಭಾವಿಸಬಹುದು. ಅಥವಾ ಭಕ್ತರ ವಿಷಯದಲ್ಲಿ ಪರಮ ಕೃಪಾಳುವಾದುದರಿಂದ ಅರ್ಜುನನ ಮನೋವಿಷಾದವನ್ನು ಸಹಿಸದೆ ಆತನಿಗೆ ಹರ್ಷವನ್ನುಂಟುಮಾಡಬೇಕೆಂಬಭಿಪ್ರಾಯದಿಂದ ತಾನು ನಕ್ಕರೆ ಅವನೂ ಸಹವಾಸದಿಂದ ನಗುವನೆಂದು ಭಾವಿಸಿಯಾದರೂ **ಪ್ರಹರ್ಸ** ಎಂದು ಪ್ರಯೋಗಿಸಿರಬಹುದು, ಅಥವಾ ಯುದ್ಧರೂಪವಾದ ಕಷ್ಟವು ಅರ್ಜುನನಿಗೆ ಪ್ರಾಪ್ತವಾಗಿ ಧರ್ಮಸಂಕಟದಿಂದ ತಪಿಸುತ್ತಿರುವಾಗ ಶ್ರೀ ಕೃಷ್ಣನು ನಗಬಹುದೇ ಎಂಬಾಕ್ಷೇಪ ತಂದರೆ ಆಗಲೂ

**ಶ್ರೀ ಭಗವಾನುವಾಚ—**

**ಮೂ. ಅಶೋಚ್ಯಾ ನನ್ವಶೋಚಸ್ತ್ವಂ ಪ್ರಜ್ಞಾ ವಾದಾಂಶ್ಚ ಭಾಷಸೇ ।**
**ಗತಾಸೂ ನಗತಾಸೂಂಶ್ಚ ನಾನುಶೋಚನ್ತಿ ಪಂಡಿತಾಃ ॥ ೧೧.**

---

ಅರ್ಜುನನು ಸೋದರತ್ತೆಯ ಮಗನಾಗಿ ಇಬ್ಬರೂ ಸ್ನೇಹಿತರಾದುದರಿಂದ ಪರಿಹಾಸಾದಿಗಳು ಯುಕ್ತವಾದುದರಿಂದ ಶ್ರೀಕೃಷ್ಣನು **ಪ್ರಹರ್ಸ** - ನಕ್ಕು ಮಾತಾಡುತ್ತಾನೆಂದಾಗಲಿ ಸಮಾಧಾನ ಹೇಳಬಹುದು. ಅಥವಾ **ನಯೋತ್ಸ್ಯೇ** ಎಂದಲ್ಲವೇ ನಿನ್ನ ಸಙ್ಕಲ್ಪವು, ಆ ಸಙ್ಕಲ್ಪವು ಸುತರಾಂ ನಡೆಸುವದಿಲ್ಲವು; ನಿನ್ನ ಕೈಯಲ್ಲೇ ಯುದ್ಧವನ್ನು ಮಾಡಿಸುತ್ತೇನೆಂದಾಗಲಿ ನಕ್ಕಿರಬಹುದು. ಶಾಸ್ತ್ರ ಬೋಧವು ಎಲ್ಲಿಂದ ಎಲ್ಲಿಯವರೆಗೆ ಎಂದರೆ ಎರಡನೆಯ ಅಧ್ಯಾಯದ ೧೧ನೆಯ ಶ್ಲೋಕವಾದ **ನತ್ವೇವಾಹಂ** ಎಂಬುದರ ಮೊದಲು **"ಮಾಶುಚಃ"** ಎಂಬ ಹದಿನೆಂಟನೆಯ ಅಧ್ಯಾಯದ ೬೬ ನೆಯ ಶ್ಲೋಕಾಂತ್ಯದವರೆಗೂ ಎಂದು ಹೇಳಿದರು. ಅಲ್ಲಿ ಏನು ಹೇಳಲ್ಪಟ್ಟಿತು ಎಂದರೆ ಕರ್ಮ ಯೋಗ ಜ್ಞಾನ ಯೋಗ ಭಕ್ತಿಯೋಗಗಳ ವಿಷಯವೆಂದು ಹೇಳಿರುತ್ತಾರೆ. ಇಲ್ಲಿ ಭರನ್ಯಾಸವು ಹೇಳಲ್ಪಡಲಿಲ್ಲವೋ ಎಂದರೆ **"ಸರ್ವಧರ್ಮಾ"** ಎಂಬ ೬೬ನೆಯ ಶ್ಲೋಕವು ಪ್ರಕೃತ ಇಲ್ಲಿ ಹೇಳ ಲ್ಪಡುವ ಭಕ್ತಿಯೋಗಾಙ್ಗಕವಾದ ಶರಣಾಗತಿಯನ್ನು ಉಪಪಾದಿಸಿದರೂ, ಮಿಕ್ಕ ಶ್ರುತಿ, ಸ್ಮೃತಿಗಳಿಂದಲೂ, ರಾಮಾಯಣಾದಿ ಇತಿಹಾಸಗಳಿಂದಲೂ, ಭಗವಚ್ಛಾಸ್ತ್ರ, ಪಾದ್ಮಪುರಾ ಣಾದಿ ಅನೇಕ ಶಾಸ್ತ್ರಪ್ರಮಾಣಗಳಿಂದಲೂ ಮಂತ್ರ ರತ್ನಗಳಿಂದಲೂ, ಸಂಧ್ಯಾವಂದನಾದಿ ಮಂತ್ರಗಳಿಂದಲೂ ಉಪಪಾದಿತವಾದ ಭರನ್ಯಾಸವನ್ನೂ ಪ್ರಕಾಶಪಡಿಸುತ್ತದೆ. ಈ ವಿಷಯವು ವಿಸ್ತರವಾಗಿ **"ಸರ್ವಧರ್ಮಾ"** ಎಂಬ ಶ್ಲೋಕ ವ್ಯಾಖ್ಯಾನದಲ್ಲಿ ಉಪಪಾದಿಸಲ್ಪಡುವದು.

**ಮೂಲಕ್ಕೆ ಅರ್ಥವು:**—ಲಕ್ಷ್ಮೀಯುಕ್ತನಾಗಿ ಹೇಯ ಪ್ರತ್ಯನೀಕನಾಗಿ ಕಲ್ಯಾಣ ಗುಣಾ ಕರನಾದ ಶ್ರೀಕೃಷ್ಣನು ಅರ್ಜುನನನ್ನು ಕುರಿತು, ಹೇಳುತ್ತಾನೇನೆಂದರೆ:—ಅರ್ಜುನನಿಗೆ ಭ್ರಮವು ಹೇಗೆ ಎಂಬುವದನ್ನು ತೋರಿಸುತ್ತಾರೆ. **ಅಶೋಚ್ಯಾ** – ಶೋಕಿಸಬಾರದವರನ್ನು ಕುರಿತು, **ತ್ವಂ**- ನೀನು, **ಅನ್ವಶೋಚಃ** – ಶೋಕಿಸುತ್ತೀಯೇ, ಭೂತ ಕ್ರಿಯೆಯಾದರೂ ವರ್ತಮಾನಾರ್ಥವು. ದುಶ್ಶಾಸನ ದುರ್ಯೋಧನಾದಿಗಳು ದುಷ್ಟರು, ಲೋಕ ಕಂಟಕರು, ತುಂಬಾ ಅಧರ್ಮಿಗಳು, ಭೀಷ್ಮದ್ರೋಣಾದಿಗಳು ಅಂತಹ ದುಷ್ಟರಿಗೆ ಸಹಾಯಕರು, ಅಂತವರನ್ನು ಕುರಿತು ಶೋಕಿಸ ಬಹುದೋ ? ಕುಂತೀ ದ್ರೌಪದೀ ಯುಧಿಷ್ಠಿರರಿಗೆ ಪ್ರಾಪ್ತವಾದ ದುರ್ದಶೆಗಾಗಿ ಶೋಕಿಸತಕ್ಕದ್ದು, ನ್ಯಾಯವು. ಅವರನ್ನು ಕುರಿತು ಶೋಕಿಸುವದಿಲ್ಲವು. ಆದುದರಿಂದ, **ಅಶೋಚ್ಯಾ ಅನ್ವಶೋ ಚಸ್ತ್ವಂ**-ಯಾವಾಗ ಶೋಕಿಸಬಾರದುದನ್ನು ಕುರಿತು ಶೋಕಿಸುತ್ತೀ ಎಂದು ಹೇಳಲ್ಪಟ್ಟಿತೋ, ಆಗ ಶೋಕಿಸಬೇಕಾದುದನ್ನು ನೀನು ಶೋಕಿಸುವದಿಲ್ಲವೆಂಬ ಭಾವವೂ ಸೂಚಿತವು. ಅಧರ್ಮವು ಲೋಕ ದಲ್ಲಿ ಹೆಚ್ಚಿಹೋಯಿತೇ; ಕ್ಷತ್ರಿಯನಾದ ನನ್ನ ಇತಿ ಕರ್ತವ್ಯತೆಯನ್ನು ಪರಿತ್ಯಾಗಮಾಡಿದೆನೇ ಎಂಬಿವೇ ಮೊದಲಾದವುಗಳಲ್ಲಿ ನಿನಗೆ ಶೋಕವಿಲ್ಲವು. ಹಾಗೆ ಕ್ಷತ್ರಿಯನು ತನ್ನ ಕರ್ತವ್ಯವನ್ನು ಸರಿಯಾಗಿ ಮಾಡದಿರುವವರಿಂದಲ್ಲವೇ ತಾನು ಅನತಾಪಿಸಬೇಕಾಗಿ ಬಂತು. ಇವನ್ನು ಬಿಟ್ಟು ಅಧರ್ಮಿಗಳು ಸಾಯುತ್ತಾರಲ್ಲಾ ಎಂದು ಶೋಕಿಸುತ್ತೀಯೇ ಎಂಬ ಭಾವವೂ ದ್ಯೋತಿತವು. ಮತ್ತು **ಪ್ರಜ್ಞಾವಾದಾಂಶ್ಚ** - ವಿಶೇಷ ಜ್ಞಾನವುಳ್ಳವರ ಹಾಗೆ ವಾದಗಳನ್ನೂ ಕೂಡ, **ಭಾಷಸೇ**— ಹೇಳುತ್ತೀಯೇ; ಅದನ್ನೇ ವ್ಯಕ್ತಪಡಿಸುತ್ತಾರೆ :—**ಪಂಡಿತಾಃ** - ತಿಳಿದವರು, **ಗತಾಸೂನ್** - ಪ್ರಾಣ ವಿಲ್ಲದವುಗಳನ್ನೂ ವೆಂದರೆ ದೇಹಗಳನ್ನೂ, **ಅಗತಾಸೂಂಶ್ಚ** - ದೇಹಗಳಲ್ಲದ ಆತ್ಮರುಗಳನ್ನೂ

**ಭಾ.** ಅಶೋಚ್ಯಾನ್ಪ್ರತಿ ಅನುಶೋಚಸಿ. "ಪತನ್ತಿ ಪಿತರೋಹ್ಯೇಷಾಂ ಲುಪ್ತಪಿಂಡೋದಕ ಕ್ರಿಯಾಃ" (ಗೀ. ೧.೪೨) ಇತ್ಯಾದಿಕಾನ್ ದೇಹಾತ್ಮ ಸ್ವಭಾವ ಪ್ರಜ್ಞಾ ನಿಮಿತ್ತ ವಾದಾಂಶ್ಚ ಭಾಷಸೇ. ದೇಹಾತ್ಮಸ್ವಭಾವ ಜ್ಞಾನವತಾಂ ನಾತ್ರಕಿಂಚಿ ಚ್ಛೋಕ ನಿಮಿತ್ತ ಮಸ್ತಿ. ಗತಾಸೂನ್-ದೇಹಾನ್, ಅಗತಾಸೂನ್-ಆತ್ಮನಶ್ಚ ಪ್ರತಿ, ತತ್ಸ್ವಭಾವ ಯಾಥಾತ್ಮ್ಯ ವಿದೋ ನ ಶೋಚನ್ತಿ. ಅತಸ್ತ್ವಯಿ ವಿಪ್ರತಿಷಿದ್ಧ ಮಿದ ಮುಪಲಭ್ಯತೇ ; ಯದೇತಾನ್ ಹನಿ ಷ್ಯಾಮೀತ್ಯನುಶೋಚನಮ್, ಯಚ್ಚ ದೇಹಾತಿ ರಿಕ್ತಾತ್ಮಜ್ಞಾನ ಕೃತಂ ಧರ್ಮಾಧರ್ಮ ಭಾಷಣಮ್, ಅತಃ ದೇಹ ಸ್ವಭಾವಂಚ ನಜಾನಾಸಿ, ತದತಿರಿಕ್ತ ಮಾತ್ಮಾನಂಚ ನಿತ್ಯಂ, ತತ್ಪ್ರಾಪ್ತ್ಯುಪಾಯ ಭೂತಂ ಯುದ್ಧಾದಿಕಂ ಧರ್ಮಂಚ. ಇದಂಚ ಯುದ್ಧಂ ಫಲಾಭಿ ಸನ್ಧಿರಹಿತಮಾತ್ಮ ಯಾಥಾತ್ಮ್ಯ ಪ್ರಾಪ್ತ್ಯುಪಾಯ ಭೂತಂ. ಆತ್ಮಾಹಿ ನ

---

ಕುರಿತು, ಹೀಗೆ ದೇಹವೇನು, ಆತ್ಮರುಗಳೇನು, ಇವೆರಡನ್ನೂ ಕುರಿತು, ಗತಾಸೂನ್ ಅಗತಾಸೂನ್ - ಎಂಬುದಕ್ಕೆ ನಿಷ್ಪ್ರಾಣವಾದುದು ಸಪ್ರಾಣವಾದದು ಎಂಬದಾಗಿ ಅರ್ಥಮಾಡಿರು ತ್ತಾರೆ. ಇದು ಸರಿಯಾದುದಲ್ಲವು, ಇಲ್ಲಿ ದೇಹ ಮತ್ತು ಆತ್ಮಾ ಎಂಬರ್ಥವೇ ಸರಿಯಾದುದು. **ಪಂಡಿತಾಃ** - ಜ್ಞಾನಿಗಳು, **ನಾನು ಶೋಚನ್ತಿ** - ಎಂದಿಗೂ ಶೋಕಿಸುವದಿಲ್ಲವು. ನಶ್ವರವಾದ ದೇಹವನ್ನೆ ಕುರಿತಾಗಲಿ, ಶಾಶ್ವತವಾದ ಆತ್ಮನನ್ನಾಗಲಿ ಕುರಿತು ಶೋಕಿಸುವದಿಲ್ಲವು.

**ಭಾಷ್ಯಾರ್ಥವು:—ಅಶೋಚ್ಯಾನ್ ಪ್ರತಿ**-ಯಾವುಗಳನ್ನು ಕುರಿತು ಶೋಕಿಸಲು ಕಾರಣವಿಲ್ಲವೋ ಅವುಗಳನ್ನು ಕುರಿತು ನೀನು ಶೋಕಿಸುತ್ತೀಯೇ, **"ಪತನ್ತಿ ಪಿತರೋ ಹ್ಯೇಷಾಂ"** ಎಂದು "ಇವರು ಗಳು ಪಿತೃಗಳು ಪಿಂಡೋದಕ ಕ್ರಿಯೆಗಳಿಲ್ಲದೆ ನಷ್ಟರಾಗುವರು" ಎಂಬಿವೇ ಮೊದಲಾದ ದೇಹದ ಮತ್ತು ಆತ್ಮಾವಿನ ಸ್ವಭಾವಗಳ ಸರಿಯಾದ ಜ್ಞಾನ ಮೂಲಕವಾದ ವಾದಗಳನ್ನು ಹೇಳುತ್ತೀಯೇ (ಇದು **ಪ್ರಜ್ಞಾ ವಾದಾಂಶ್ಚ ಭಾಷಸೇ** ಎಂಬುದರರ್ಥವು) ಹಾಗಾದರೆ ದೇಹಾತ್ಮಸ್ವಭಾವಗಳ ಸರಿ ಯಾದ ಜ್ಞಾನವುಳ್ಳವರಿಗೆ (ಪಂಡಿತ ಶಬ್ದ ವಿವರಣವು) **ಅತ್ರ**—ಈ ಸಂದರ್ಭದಲ್ಲಿ **ಕಿಂಚಿ ಚ್ಛೋಕ ನಿಮಿತ್ತಂ** – ಸ್ವಲ್ಪವಾಗಲಿ ಶೋಕಕ್ಕೆ ಕಾರಣವು, **ನಾಸ್ತಿ** - ಇರುವದಿಲ್ಲವು ; **ಗತಾಸೂನ್** – ಎಂದರೆ ದೇಹಗಳನ್ನೂ ಕುರಿತು ಮತ್ತು **ಅಗತಾಸೂನ್ ಪ್ರತಿ** ಎಂದರೆಆತ್ಮರುಗಳನ್ನು ಕುರಿತು, **ತತ್ಸ್ವಭಾವಯಾಥಾತ್ಮ್ಯ ವಿದಃ** – ಅವುಗಳ ಸ್ವಭಾವಗಳ ನಿಜಸ್ಥಿತಿಯನ್ನು ತಿಳಿದ ಪಂಡಿತರ, **ನಶೋಚನ್ತಿ** - ಶೋಕಿಸುವದಿಲ್ಲವು, **ಅತಃ** - ಆ ಕಾರಣದಿಂದ, **ಏತಾನ್** - ಈ ಧಾರ್ತರಾಷ್ಟ್ರಾದಿ ಗಳನ್ನು, **ಹನಿಷ್ಯಾಮಿ** - ಕೊಲ್ಲುತ್ತೇನೆಂಬ, **ಯತ್ ಅನುಶೋಚನಂ** - ಯಾವ ಶೋಕಿಸುವದು ಎಂಬುದುಂಟೋ, ಮತ್ತು **ದೇಹಾತಿರಿಕ್ತಾತ್ಮಜ್ಞಾನಕೃತಂ** – ದೇಹಕ್ಕಿಂತ ಆತ್ಮನು ಬೇರೆ ಎಂಬ ಜ್ಞಾನದಿಂದುಂಟಾದ, ಧರ್ಮಾಧರ್ಮಗಳ ಭಾಷಣವೂ, ಇವೆರಡೂ, **ತ್ವಯಿ** – ನಿನ್ನಲ್ಲಿ, **ವಿಪ್ರತಿ ಷಿದ್ಧಮ್** - ವಿಶೇಷ ಪರಸ್ಪರ ವಿರುದ್ಧವಾದವು, **ಅತಃ**-ಆ ಕಾರಣದಿಂದ, ದೇಹಸ್ವಭಾವವನ್ನೂ, **ನಜಾನಾಸಿ** - ನೀನು ತಿಳಿದಿಲ್ಲವು, **ತದತಿರಿಕ್ತಂ** - ಆ ದೇಹಕ್ಕಿಂತ ಬೇರೆಯಾದ, **ಆತ್ಮಾನಂಚ ನಿತ್ಯಂ** – ಆತ್ಮವು ನಿತ್ಯವೆಂಬುದನ್ನೂ, **ತತ್ಪ್ರಾಪ್ತ್ಯುಪಾಯ ಭೂತಂ** - ಆ ಆತ್ಮ ಸಾಕ್ಷಾತ್ಕಾರಕ್ಕೆ ಸಾಧನಭೂತವಾದ, ಯುದ್ಧಮಾಡುವದೇ ಮೊದಲಾದವು ಧರ್ಮವೆಂಬುದನ್ನೂ ಸಹ, **ನಜಾ ನಾಸಿ** - ನೀನು ತಿಳಿದಿಲ್ಲವು, ಈ ಯುದ್ಧವು ಫಲಾಭಿಸಂಧಿ ಇಲ್ಲದೆ ನಡಿಸಿದುದಾದರೆ, **ಆತ್ಮಯಾಥಾತ್ಮ್ಯ ಪ್ರಾಪ್ತ್ಯುಪಾಯಭೂತಂ** - ನಿನ್ನ ಆತ್ಮಾವಿನ ನಿಜವಾದ ಸ್ವರೂಪವನ್ನು ತಿಳಿಯುವದಕ್ಕೆ ಸಾಧನಭೂತವಾದುದಾಗುತ್ತದೆ, **ಆತ್ಮಾಹಿ** – ಜೀವಾತ್ಮನಾದರೋ, ಜನ್ಮಾ

ಜನ್ಮಾಧೀನ ಸದ್ಭಾವೋ ನಮರಣಾಧೀನ ವಿನಾಶಶ್ಚ, ತಸ್ಯ ಜನ್ಮ ಮರಣಯೋರಭಾವಾತ್. ಅತಃ ಸನ ಶೋಕಸ್ಥಾನಂ. ದೇಹಸ್ತ್ವ ಚೇತನಃ ಪರಿಣಾಮ ಸ್ವಭಾವಃ ತಸ್ಯೋತ್ಪತ್ತಿ ವಿನಾಶಯೋಃಗಃ ಸ್ವಾಭಾವಿಕ ಇತಿ ಸೋಪಿನಶೋಕಸ್ಥಾನ ಮಿತ್ಯಭಿಪ್ರಾಯಃ. ೧೧.

ಭಾ. ಪ್ರಥಮಂ ತಾವತ್ ಆತ್ಮನಾಂ ಸ್ವಭಾವಂ ಶೃಣು—

---

ಧೀನ ಸದ್ಭಾವಃ – ಜನ್ಮಕ್ಕೆ ಅಧೀನವಾದ ಸ್ಥಿತಿಯನ್ನುಳ್ಳದ್ದೂ, ನ - ಅಲ್ಲವು, ಮರಣಾಧೀನ ವಿನಾಶಶ್ಚ - ಮರಣಕ್ಕೆ ಅಧೀನವಾದ ನಾಶವುಳ್ಳದ್ದೂ, ನ - ಅಲ್ಲವು, ಅತಃ - ಆ ಕಾರಣದ ವೆಶಿಯಿಂದ, ಸಃ - ಆ ಆತ್ಮನು, ನಶೋಕಸ್ಥಾನಂ - ಶೋಕಿಸತಕ್ಕದುದಲ್ಲವು, ದೇಹಸ್ತು - ದೇಹವಾದರೋ ಅಚೇತನವು, ಪರಿಣಾಮ ಹೊಂದುವ ಸ್ವಭಾವವುಳ್ಳದ್ದು, ತಸ್ಯ - ಆ ದೇಹಕ್ಕೆ ಉತ್ಪತ್ತಿ ವಿನಾಶಗಳುಂಟಾಗುವದು ಸ್ವಾಭಾವಿಕವಾದುದು, ಇತಿ-ಎಂದು, ಸೋಪಿ - ಆ ದೇಹವೂ ಕೂಡ, ನಶೋಕಸ್ಥಾನಂ - ಶೋಕಿಸತಕ್ಕದ್ದಲ್ಲವು, ಇತ್ಯಭಿಪ್ರಾಯಃ - ಎಂಬಭಿಪ್ರಾಯವು, ಪಂಡಿತಾಃ – ಊಹಾಪೋಹಗಳಿಗೆ ಯೋಗ್ಯವಾದ ಬುದ್ಧಿವಿಶೇಷವುಳ್ಳವರು, ಇಂತವರು ಆತ್ಮನನ್ನು ಕುರಿತು ದುಃಖಿಸಲೂ ಕಾರಣವಿಲ್ಲವು. ಏಕೆಂದರೆ ಆತ್ಮಾ ನಿತ್ಯನು, ಆತನಿಗೆ ಜನನ ಮರಣಾದಿಗಳಿಲ್ಲವು. ದೇಹವಾದರೋ ಅಚೇತನವು, ವಿಕಾರಹೊಂದುವ ಸ್ವಭಾವವುಳ್ಳದ್ದು, ಜನ್ಮವೃದ್ಧಿ ಜರಾಮರಣಗಳೆಂಬ ಪರಿಣಾಮಗಳುಳ್ಳದ್ದಾಗಿ ನಶ್ವರವು, ಅದರ ವಿಷಯದಲ್ಲೂ ಶೋಕಿಸಲು ಕಾರಣವಿಲ್ಲವು. ಅವನು ಹುಟ್ಟಿದನು, ಸತ್ತನು ಎಂಬ ಪ್ರಯೋಗಗಳುಂಟಲ್ಲಾ ಎಂದರೆ ಆತ್ಮನಿಗೆ ಸ್ಥೂಲದೇಹ ಪ್ರಾಪ್ತಿ, ಸ್ಥೂಲದೇಹವಿಯೋಗ ಉಂಟಾಯಿತೆಂಬ ಭಾವವೇ ವಿನಾ, ಆತ್ಮನಿಗೆ ಉತ್ಪತ್ತಿ ವಿನಾಶಗಳಿಲ್ಲವೆಂಬ ತಾತ್ಪರ್ಯವು. ಹೀಗಿದ್ದರೂ, ಕಾರಣ ರಹಿತವಾದ ಶೋಕವು ನೆಲಗೊಂಡಿರುತ್ತದೆ. ಆದರೆ ನೀನು ಮಾತಾಡುವದು ನೋಡಿದರೆ, ದೇಹಾತ್ಮ ವಿವೇಕರೂಪ ಪ್ರಜ್ಞೆ ಇರುವವರಹಾಗೆ ತೋರಿಸಿಕೊಳ್ಳುತ್ತೀಯೇ, ಮೂರು ವಿಷಯದಲ್ಲಿ ನಿನಗೆ ಸರಿಯಾದ ಜ್ಞಾನವಿಲ್ಲವೆಂದು ಶ್ರೀ ಕೃಷ್ಣನು ಹೇಳುತ್ತಾನೆ:—ದೇಹಸ್ವಭಾವವೂ ತಿಳಿಯದು, ಅದಕ್ಕಿಂತಲೂ ವಿಲಕ್ಷಣವಾಗಿ ಬೇರೆಯಾಗಿ ನಿತ್ಯವಾದುದು ಆತ್ಮಾ ಎಂಬುದೂ ತಿಳಿಯದು, ಮತ್ತು ಯುದ್ಧವು ನಿನಗೆ ಧರ್ಮವು ಅದು ಫಲಾಭಿಸಂಧಿರಹಿತವಾಗಿ ಮಾಡಿದರೆ ಆತ್ಮಸಾಕ್ಷಾತ್ಕಾರಕ್ಕೆ ಸಾಧನವಾಗುತ್ತದೆಂಬುದೂ ತಿಳಿಯದು ಎಂದು ಹೇಳಲ್ಪಟ್ಟಿತು.

ಭಾ. ಅವ. ಅರ್ಥವು—ಪ್ರಥಮಂ ತಾವತ್ - ಮೊದಲಾದರೋ, ಆತ್ಮರುಗಳ ಸ್ವಭಾವವನ್ನು, ಶೃಣು - ಕೇಳು, ಪರಮ ಪುರುಷಾರ್ಥವು ಯಾವುದು? ಅದನ್ನು ಹೊಂದುವ ಬಗೆ ಹೇಗೆ? ಇವೆಲ್ಲಾ ತಿಳಿಯತಕ್ಕ ವಿಷಯಗಳೇ, ಅವೆಲ್ಲಾ ಹಾಗಿರಲಿ ಮೊದಲು ಮನುಷ್ಯನಿಗೆ ಜ್ಞಾತವ್ಯಾಂಶವು ಆತ್ಮ ಯಾಥಾತ್ಮ್ಯಜ್ಞಾನವು, ಅದನ್ನು ಹೇಳುತ್ತೇನೆ ಕೇಳು ಎಂಬುಪದೇಶವಾದುದರಿಂದ, ಪ್ರಥಮಂ ತಾವತ್ ಎಂಬ ಪ್ರಯೋಗವು. ಕೇಳುತ್ತಾ ಇರುವವನಿಗೆ ಶೃಣು ಎಂಬವತಾರಿಕೆಯಿಂದ ಸಿದ್ಧಾಂತದ ಯಾಥಾತ್ಮ್ಯವನ್ನು ಬೋಧಿಸುವ ಶ್ಲೋಕವೆಂಬಭಿಪ್ರಾಯದಿಂದ ಸಾವಧಾನವಾಗಿ ವಿಮರ್ಶಿಸಿ ಕೇಳತಕ್ಕದ್ದೆಂಬುದನ್ನು ಸೂಚಿಸುವದಕ್ಕಾಗಿ ಶೃಣು ಎಂಬ ಪ್ರಯೋಗವು.

ಮೂಲಕ್ಕೆ ಅರ್ಥವು:—ಅಹಂ - ಸರ್ವೇಶ್ವರನಾದ ನಾನು, ಜಾತು - ಯಾವ ಕಾಲದಲ್ಲಿಯೂ, ನಾಸಂ – ಇರಲಿಲ್ಲವು, ಇತಿ - ಎಂಬುದು, ನ – ಇಲ್ಲವು, ಎಂದರೆ ನಾನು

ಮೂ. ನತ್ವೇ ವಾಹಂ ಜಾತುನಾಸಂ ನತ್ವಂ ನೇಮೇ ಜನಾಧಿಪಾಃ।
ನ ಚೈವ ನಭವಿಷ್ಯಾಮಃ ಸರ್ವೇವಯ ಮತಃಪರಂ॥ ೧೨.

ಭಾ. ಅಹಂ ಸರ್ವೇಶ್ವರಸ್ತಾವತ್ ; ಅತಃ ವರ್ತಮಾನಾತ್ಪೂರ್ವಸ್ಮಿನ್ ಅನಾದೌ ಕಾಲೇ ನನಾಸಂ ಅಪಿತ್ವಾಸಮ್. ತ್ವನ್ಮುಖಾಶ್ಚೈತೇ ಈಶಿತವ್ಯಾಃ ಕ್ಷೇತ್ರಜ್ಞಾಃ ನನಾಸನ್, ಅಪಿತ್ವಾಸನ್. ಅಹಂ ಯೂಯಂಚ ಸರ್ವೇ ವಯಂ, ಅತಃಪರಂ - ಅಸ್ಮಾದನನ್ತರೇ ಕಾಲೇ ನ ಚೈವ ನಭವಿಷ್ಯಾಮಃ, ಅಪಿತು ಭವಿಷ್ಯಾಮ ಏವ. ಯಥಾಹಂ ಸರ್ವೇಶ್ವರಃ ಪರಮಾತ್ಮಾ

ಯಾವಾಗಲೂ ನಿತ್ಯನಾಗಿದ್ದೇನು ಎಂಬ ಭಾವವು. ನತ್ವಂ ಜಾತು ನಾಸೀಃ ಇತಿ ನ ಎಂದು ಇಟ್ಟು ಕೊಳ್ಳಬೇಕಾಗುತ್ತದೆ, ನೀನೂ ಯಾವಾಗಲೂ ಇರಲಿಲ್ಲವೆಂಬುದಿಲ್ಲವು ಎಂದರೆ ನೀನೂ ಅನಾದಿ ಯಾಗಿ ನಿತ್ಯನಾಗಿ ಇದ್ದೀ, ನೇಮೇ ಜನಾಧಿಪಾಃ ನಾಸನ್ ಇತಿ ನ–ಈ ರಾಜರುಗಳೂ ಇಲ್ಲವೆಂಬು ದಿಲ್ಲವು, ಸರ್ವೇವಯಂ - ಈ ನಾವುಗಳೆಲ್ಲರೂ, ಅತಃಪುರಂ - ಮುಂದೆ, ನಭವಿಷ್ಯಾಮಃ - ಇರುವದಿಲ್ಲವು, ಇತಿ ನ ಎಂಬುದು ಇಲ್ಲವು, ಎಂದರೆ ಎಲ್ಲರೂ, ನಾವೆಲ್ಲರೂ ನಿತ್ಯವಾಗಿ ಭೂತ ವರ್ತಮಾನಭವಿಷ್ಯತ್ಕಾಲದಲ್ಲೂ ಸಹ ಯಾವಾಗಲೂ ಇರುವೆವು ಎಂಬ ಭಾವವು, ಆತ್ಮರುಗಳೆಲ್ಲಾ ನಿತ್ಯರೇ ವಿನಾ ಅವರುಗಳಿಗೆ ಉತ್ಪತ್ತಿ ವಿನಾಶಗಳಿಲ್ಲವೆಂದು ಅರ್ಜುನನಿಗೆ ಉಪದೇಶಿಸಿದರು.

ಭಾಷ್ಯಾರ್ಥವು—ಅಹಂ ಸರ್ವೇಶ್ವರಸ್ತಾವತ್ - ನಾನಾದರೋ ಸರ್ವೇಶ್ವರನು, ಇಲ್ಲಿ ಅಹಂ ತ್ವಂ ಇಮೇ ಎಂದು ಮೂರಾಗಿ ವಿಭಾಗಿಸಿ ಹೇಳಿರುವದರಿಂದಲೇ ಪರಸ್ಪರ ವೈಲಕ್ಷಣ್ಯ ವುಂಟೆಂಬುದು ತೋರಿಬರುತ್ತದೆ, ವಿಭುವಾಗಿ ಸರ್ವವ್ಯಾಪಿಯಾದ ಸರ್ವೇಶ್ವರನು, ಅಣುವಾಗಿ ರುವ ತ್ವಂಇಮೇ-ಇವರುಗಳಿಗಿಂತ ವಿಲಕ್ಷಣನು ; ತ್ವಂ ಇಮೇ ಎಂಬ ಜೀವಾತ್ಮರೆಲ್ಲಾ ಪರಸ್ಪರ ಭಿನ್ನರೆಂಬುದೂ, ತ್ವಂ ಶಬ್ದದಿಂದ ನಿರ್ದೇಶಿಸಲ್ಪಟ್ಟ ಆತ್ಮನು ಪ್ರಪನ್ನನಾಗಿ ಪರಮಾತ್ಮನಿಗೆ ಭಕ್ತನು, ಇಮೇ ಶಬ್ದದಿಂದ ಹೇಳಲ್ಪಟ್ಟವರೆಲ್ಲಾ ಅಪ್ರಪನ್ನರೆಂಬುದೂ ದ್ಯೋತಿತವು,) ಅತಃ–ಆ ಕಾರಣದ್ದೆಶೆಯಿಂದ, ವರ್ತಮಾನಾತ್ಪೂರ್ವಸ್ಮಿನ್ ಅನಾದೌ ಕಾಲೇ - ಈಗಿರುವದಕ್ಕಿಂತ ಅನಾದಿ ಯಾದ ಹಿಂದಿನ ಕಾಲದಲ್ಲಿ, ಇದು ಮೂಲದಲ್ಲಿಲ್ಲವಲ್ಲಾ ಎಂದರೆ, ಜಾತುನಾಸಂ ಎಂಬುದರಿಂದ ಈ ಅಭಿಪ್ರಾಯವು ತೋರಿಬರುತ್ತದೆ, ನನಾಸಂ - ಇರಲಿಲ್ಲವೆಂಬುದಿಲ್ಲವು, ಅಪಿತ್ವಾಸಮ್ – ಮತ್ತೇನೆಂದರೆ, ಅನಾದಿಯಾದ ಹಿಂದಿನ ಎಲ್ಲಾ ಕಾಲದಲ್ಲೂ ಇದ್ದೇನು, ತ್ವನ್ಮುಖಾಶ್ಚೈತೇ ಈಶಿ ತವ್ಯಾಃ - ತ್ವಂ, ಇಮೇ ಶಬ್ದಗಳಿಂದ ಹೇಳಲ್ಪಟ್ಟ ನೀನೇ ಮೊದಲಾದ ನಿಯಾಮ್ಯ ವರ್ಗಕ್ಕೆ ಸೇರಿದ ಶರೀರಹೊಂದಿರುವವರೆಲ್ಲಾ, ಬ್ರಹ್ಮಾದಿ ಸಕಲ ಕ್ಷೇತ್ರಜ್ಞರೂ ಇಲ್ಲಿ ಹೇಳಲ್ಪಟ್ಟರೆಂಬ ಭಾವ ದಿಂದ ತ್ವನ್ಮುಖಾಃ ಎಂಬ ಪ್ರಯೋಗವು ; ಹಿಂದಿನ ಅನಾದಿಕಾಲದಲ್ಲಿ, ನನಾಸನ್-ಇರಲಿಲ್ಲವೆಂಬು ದಿಲ್ಲವು, ಅಪಿತು ಆಸನ್ - ಮತ್ತೇನೆಂದರೆ ನೀವೆಲ್ಲರೂ ಸಹ ಹಿಂದಿನ ಅನಾದಿಕಾಲದಿಂದಿದ್ದೀರಿ ಎಂಬ ಭಾವವು, ನಾನೂ ನೀನೂ ಹಾಗೆಯೇ ಸರ್ವೇವಯಂ - ನಾವೆಲ್ಲರೂ, ಅತಃಪರಂ-ಎಂದರೆ, ಅಸ್ಮಾದನನ್ತರೇ ಕಾಲೇ - ಈ ವರ್ತಮಾನ ಕಾಲಾನಂತರಕಾಲದಲ್ಲಿ ಎಂದರೆ ಮುಂದಕ್ಕೆ, ನಚೈವ ನಭವಿಷ್ಯಾಮಃ - ಇರುವದಿಲ್ಲವೆಂಬುದು ಇಲ್ಲವೇ ಇಲ್ಲವು, ಅಪಿತು ಭವಿಷ್ಯಾಮ ಏವ - ಮತ್ತೇ ನೆಂದರೆ ಇದ್ದೇ ಇರುತ್ತೇವೆಯಷ್ಟೇ, ಸರ್ವೇಶ್ವರನಾಗಿ ಪರಮಾತ್ಮನಾದ ನಾನು, ನಿತ್ಯ ಇತಿ–ನಿತ್ಯ ನೆಂಬದಾಗಿ, ಯಥಾನಾತ್ರ ಸಂಶಯಃ – ಹೇಗೆ ಸಂದೇಹವಿಲ್ಲವೋ, ತಥೈವ - ಹಾಗೆಯೇ,

ನಿತ್ಯ ಇತಿ ನಾತ್ರ ಸಂಶಯಃ, ತಥೈವ ಭವಂತಃ ಕ್ಷೇತ್ರಜ್ಞಾ ಆತ್ಮಾನೋಽಪಿ ನಿತ್ಯಾ ಏವೇತಿ ಮಂತವ್ಯಾಃ. ಏವಂ ಭಗವತಃ ಸರ್ವೇಶ್ವರಾತ್ ಆತ್ಮನಾಂ ಪರಸ್ಪರಂ ಚ ಭೇದಃ ಪಾರಮಾರ್ಥಿಕ ಇತಿ ಭಗವತೈವೋಕ್ತ ಮಿತಿ ಪ್ರತೀಯತೇ ; ಅಜ್ಞಾನ ಮೋಹಿತಂ ಪ್ರತಿ ತನ್ನಿವೃತ್ತಯೇ ಪಾರಮಾರ್ಥಿಕ ನಿತ್ಯತತ್ತ್ವೋಪದೇಶ ಸಮಯೇ

---

ಭವಂತಃ ಕ್ಷೇತ್ರಜ್ಞಾ ಆತ್ಮಾನೋಽಪಿ - ಬದ್ಧ ಜೀವರುಗಳಾಗಿರುವ ದೇಹದಲ್ಲಿರುವ ಜ್ಞಾನ ಸ್ವರೂಪರಾದ ಆತ್ಮರೂ ಕೂಡ, ನಿತ್ಯಾ ಏವೇತಿ ಮಂತವ್ಯಾಃ - ನಿತ್ಯರೆಂದೇ ತಿಳಿಯಲ್ಪಡತಕ್ಕವರು, ಏವಂ - ಈ ಪ್ರಕಾರವಾಗಿ, ಭಗವಂತನಾದ ಸರ್ವೇಶ್ವರನಿಗಿಂತಲೂ, ಜೀವಾತ್ಮರುಗಳಿಗೆ ಪರಸ್ಪರ ಭೇದವಾದರೋ, ಅಹಂ ತ್ವಂ ಎಂಬ ಪ್ರಯೋಗಗಳಿಂದ, ಪಾರಮಾರ್ಥಿಕ ಇತಿ – ಸತ್ಯವಾದುದೆಂದು, ಭಗವತೈವೋಕ್ತಮಿತಿ ಪ್ರತೀಯತೇ - ಇನ್ಯಾರೂ ಬೀದಿಯಲ್ಲಿ ಹೋಗುವ ನಿಂದಲ್ಲದೆ ಭಗವಂತನಿಂದಲೇ ಹೇಳಲ್ಪಟ್ಟಿತೆಂದು ವ್ಯಕ್ತಪಡುತ್ತದೆ, ಮುಂದೆ ಅದಕ್ಕೆ ಹೇತುವನ್ನು ತಿಳಿಸುತ್ತಾರೆ, ಅಜ್ಞಾನಮೋಹಿತಂ ಪ್ರತಿ - ಅಜ್ಞಾನದಿಂದ ಸಂಶಯಾವಿಷ್ಟನಾದವನನ್ನು (ಅರ್ಜುನನನ್ನು) ಕುರಿತು ಹಿಂದೆ ತಾನು "ಧರ್ಮ ಸಂಮೂಢ ಚೇತಾಃ" ಎಂದು ಹೇಳಿಕೊಂಡಿರುವದರಿಂದ ಹಾಗೆ ಪ್ರಯೋಗವು ; ಅರ್ಜುನನ ಮೋಹ ನಿವೃತ್ತಿಗಾಗಿಯೇ ಈ ಗೀತೋಪದೇಶವು ಉಂಟಾಯಿತು ಎಂಬುದು ನಿರ್ವಿವಾದವಿಷಯವು, ಇತರರೂ ನಾವೂ ಸಹ, ಒಪ್ಪತಕ್ಕ ವಿಷಯವೆಂಬುದು ಇದರಿಂದ ಸೂಚಿತವು ; ತನ್ನಿವೃತ್ತಯೇ – ಆ ಅಜ್ಞಾನದ ನಿವೃತ್ತಿಗಾಗಿ, ಪಾರಮಾರ್ಥಿಕ ನಿತ್ಯತತ್ತ್ವೋಪದೇಶ ಸಮಯೇ – ಯಥಾರ್ಥವಾದ ನಿತ್ಯತತ್ತ್ವವನ್ನುಪದೇಶಿಸುವ ಕಾಲದಲ್ಲೇ, ಅಹಂ ತ್ವಂ ಇಮೇ ಸರ್ವೇವಯಂ ಎಂದು ವ್ಯಪದೇಶಾತ್ - ಹೇಳಿರುವದರಿಂದ ಮೊದಲೇ ಅಜ್ಞಾನದಿಂದ ಭ್ರಮಿಸುತ್ತಿರುವವನಿಗೆ ಯಥಾರ್ಥವನ್ನು ಹೇಳಬೇಕೇ ವಿನಾ, ಇಲ್ಲದಿರುವ ಭೇದಗಳನ್ನು ಹೇಳಿ ಇನ್ನೂ ಭ್ರಮವನ್ನು ಹೆಚ್ಚಿಸಬಹುದೋ ? ಭ್ರಮವನ್ನು ಹೋಗಲಾಡಿಸುವ ಕಾಲದಲ್ಲೇ ಆತ್ಮಭೇದಗಳನ್ನು ಹೇಳಿರುವದರಿಂದ ಆತ್ಮಭೇದವು ಸತ್ಯವೆಂಬುದರಲ್ಲಿ ಸಂದೇಹವಿಲ್ಲವೆಂಬ ಭಾವವು. ಪರಮಾತ್ಮ ಜೀವಾತ್ಮ ಭೇದ ಹೇಳದಿದ್ದರೆ, ಪರಮಾತ್ಮನಿಗೆ ದುಃಖಿತ್ವ ಪಾಪಾಚರಣೆ ಮೊದಲಾದವುಗಳನ್ನು ಆರೋಪಿಸಬೇಕಾಗುತ್ತದೆ. ಜೀವಾತ್ಮರುಗಳಿಗೆ ಪರಸ್ಪರ ಭೇದವಿಲ್ಲವೆಂದರೆ ಬದ್ಧಮುಕ್ತರೂ ಶಿಷ್ಯಾಚಾರ್ಯರೂ ಪಿತಾ ಪುತ್ರ ಮೊದಲಾದ ವ್ಯವಸ್ಥೆಗಳಿಲ್ಲದೆ ಹೋಗುತ್ತದೆಂಬ ಭಾವವೂ ಸೂಚಿತವು. ಇಲ್ಲಿ ಭಗವತೈವ ಉಕ್ತಮ್ ಎಂದು ಹೇಳಿರುವದರ ಅಭಿಪ್ರಾಯವು "ತ್ವಮೇವ ತ್ವಾಂ ವೇತ್ಥ ಯೋಽಸಿ ಸೋಽಸಿ" (ಯಜುಷಿ ಕಾಠಕೇ ೧.೬) ಎಂದು ಹೇಳಿರುವಹಾಗೆ, ಸರ್ವೇಶ್ವರನೇ ಸ್ವತಃ ಉಪದೇಶಿಸಿದನಂತರ ಆತ್ಮಭೇದಾಭಿಪ್ರಾಯವು ತನುಗೆ ಸತ್ಯವು, ತಮಗೆ ಆ ವಿಷಯದಲ್ಲಿ ಇತರ ಸಿದ್ಧಾಂತಿಗಳಹಾಗೆ ಈಷದಪಿ ಶಙ್ಕಾ ತಮಗಿಲ್ಲವೆಂಬುದು ಸೂಚಿತವು.) ಇದರಿಂದ ಶ್ರೀ ಶಂಕರಾಭಿಪ್ರಾಯವು ಸರಿಯಲ್ಲವೆಂದು ಹೇಳಲ್ಪಟ್ಟಿತು. ಇಲ್ಲಿ ಅಹಂ ಸರ್ವೇಶ್ವರಸ್ತಾವತ್ ಎಂದು ಏತಕ್ಕೆ ಹೇಳಲ್ಪಟ್ಟಿತೆಂದರೆ ಇವನ್ನು ಶಾಂಕರಾದಿಗಳೂ ನಾವುಗಳೂ ಎಲ್ಲರೂ ಒಪ್ಪತಕ್ಕ ವಿಷಯವಾಗಿದೆ ಎಂದು ಹಾಗೆ ಹೇಳಲ್ಪಟ್ಟಿತು. ಆದರೆ ಅದ್ವೈತಿಗಳು ಒಪ್ಪದಿರುವ ವಿಷಯ ಯಾವುದೆಂದರೆ, ಆತನು ಈಶ್ವರನೆಂದು ಒಪ್ಪಿಕೊಂಡು ಪಾರಮಾರ್ಥಿಕವಾಗಿ ನೋಡಿದರೆ ಆತನಿಗೆ 'ಯಾವುದೊಂದು ಈಶಿತವ್ಯವೂ ಇಲ್ಲವೆಂದು ಹೇಳುವರು. ಸ್ವಂ ಇಲ್ಲವ ಸ್ವಾಮಿ ಎಂದು ಹೇಳುವರು, ಏಕೆಂದರೆ ಈ ಜಗತ್ತಿನಲ್ಲೆಲ್ಲಾ ಸತ್ಯವಾಗಿರುವದು ಪರಬ್ರಹ್ಮ ಒಂದಲ್ಲದೆ ಮಿಕ್ಕ ಎಲ್ಲಾ ಅಪರಮಾರ್ಥವು. ಹಾಗೆ ನಮ್ಮ ಅಭಿಪ್ರಾಯವಲ್ಲವೆಂದು

**ಅಹಂ ತ್ವಂ ಇಮೇ ಸರ್ವೇವಯ ಮಿತಿ ವ್ಯಪದೇಶಾತ್. ಔಪಾಧಿಕಾತ್ಮ ಭೇದವಾದೇ ಹಿ ಆತ್ಮಭೇದಸ್ಯ ತಾತ್ತ್ವಿಕತ್ವೇನ ತತ್ತ್ವೋಪದೇಶ ಸಮಯೇ ಭೇದ ನಿರ್ದೇಶೋ ನ ಸಙ್ಗಚ್ಛತೇ.**

---

ಹೇಳುವದಕ್ಕಾಗಿ "ತ್ವನ್ಮುಖಾಶ್ಚೈತೇ ಕ್ಷೇತ್ರಜ್ಞಾಃ ಈಶಿತವ್ಯಾಃ" ಎಂಬ ಪ್ರಯೋಗವು, ಅವನು ನಿಯಾಮಕನು, ನಾವೆಲ್ಲರೂ ನಿಯಾಮ್ಯರು. ಈಶ್ವರನೂ, ಈಶಿತವ್ಯರಾಗಿ ಪರಸ್ಪರ ಭಿನ್ನರಾದ ನಾವುಗಳೂ, ಹೀಗೆ ಎಲ್ಲರೂ ಸತ್ಯವೂ ನಿತ್ಯರೂ ಎಂದು ಹೇಳಲ್ಪಟ್ಟಿತು. ಅಹಂ, ತ್ವಂ, ಇಮೇ ಸರ್ವೇ ಎಂದು ಹೀಗೆಲ್ಲಾ ಹೇಳಿರುವದರಿಂದ ಪರಸ್ಪರ ಭೇದವನ್ನೇ ಉಪದೇಶಿಸಿದರೇ ವಿನಾ ಅಭೇದವನ್ನು ಉಪದೇಶಿಸಲಿಲ್ಲವು. ಇಲ್ಲಿಂದ ಮುಂದಕ್ಕೂ ನಾವೆಲ್ಲರೂ ನಿತ್ಯರಾಗಿರುತ್ತೇವೆ, ನಚೈವ ನಭವಿಷ್ಯಾಮಃ ಎಂಬುದರಿಂದ ಮುಕ್ತದೆಶೆಯಲ್ಲೂ ಎಂದಿಗೂ ಸ್ವರೂಪೈಕ್ಯವಿಲ್ಲವೆಂಬುದು ವ್ಯಕ್ತಪಡುತ್ತದೆ. ಜೀವರೆಲ್ಲಾ ಅವಿದ್ಯಾಗ್ರಹೀತರಾದ ಪರಮಾತ್ಮಾಂಶರಾಗಿ, ವಾಕ್ಯಜನ್ಯ ಜ್ಞಾನದಿಂದ ಅವಿದ್ಯಾ ನಿವೃತ್ತಿಸಿ, ಪರಮಾತ್ಮನೊಂದಿಗೆ ಐಕ್ಯ ಉಂಟಾದರೆ, ನಚೈವ ನಭವಿಷ್ಯಾಮಃ ಎಂದು ಹೇಳಲು ಹೇಗಾಗುತ್ತದೆ? ಎಂಬುದು ತಾತ್ಪರ್ಯವು. ಆದುದರಿಂದ ಸರ್ವೇಶ್ವರನು ಎಲ್ಲಾ ಈಶಿತವ್ಯಗಳಿಗಿಂತಲೂ ವಿಲಕ್ಷಣನೆಂದೂ, ಈಶಿತವ್ಯರಾದ ಜೀವಾತ್ಮರೆಲ್ಲಾ ಜ್ಞಾನೈಕಾ ಕಾರತೆಯಿಂದ ಸಮರಾದರೂ ಭಿನ್ನರೇ ಸರಿ ಎಂಬುದೂ ಇದರಿಂದ ಸಿದ್ಧವು. ಈ ಸಂದರ್ಭದಲ್ಲಿ ಶ್ರೀಮಚ್ಛಂಕರಾಭಿಪ್ರಾಯವೇನೆಂದರೆ :—ದೇಹಭೇದಾನುವೃತ್ತ್ಯಾ ಬಹುವಚನಂ, ನಾತ್ಮಭೇದಾಭಿಪ್ರಾಯೇಣ ಎಂದು, ಇಲ್ಲಿ ಬಹುವಚನವು ದೇಹಭೇದದಿಂದಲೇ ವಿನಾ ಆತ್ಮ ಭೇದದಿಂದಲ್ಲವೆಂದು ತಿಳಿಸಿರುತ್ತಾರೆ. ಅರ್ಜುನನಿಗೆ ಆತ್ಮವಿಷಯಕ ಸರಿಯಾದ ಜ್ಞಾನವಿಲ್ಲದಿರುವಾಗ ಸರಿಯಾದ ಜ್ಞಾನವನ್ನುಂಟುಮಾಡಬೇಕೆಂಬ ಸಙ್ಕಲ್ಪದಿಂದ ಭೇದವನ್ನೇ ಹೇಳಬಹುದೇ? ಸರ್ವೇಶ್ವರನು ದೇಹಾತ್ಮಭ್ರಮದಿಂದ ಹಾಗೆ ಹೇಳಿದನೆಂದರೆ ಕೃಷ್ಣನ ಉಪದೇಶವು ಭ್ರಮರೂಪವಾದುದಾಗಿ ಅಪಾರಮಾರ್ಥವಾದುದು ಕೊಂಚಭಾಗವು, ಭ್ರಮವಿಲ್ಲದೆ ಪರಮಾರ್ಥವಾದುದು ಕೊಂಚ ಭಾಗವು, ಎಂದರೆ ಹಾಗೆ ಗೀತಾಶಾಸ್ತ್ರವನ್ನು ಸ್ವಲ್ಪಭಾಗ ಅಪಾರಮಾರ್ಥವೆಂದು ವಿಭಾಗಿಸಬಹುದೋ ? ಅಥವಾ ಅಸುರಮೋಹನಾರ್ಥವಾಗಿ ಸರ್ವೇಶ್ವರನು ವಂಚಿಸಿರುವದೂ ಉಂಟೆಂದರೆ, ಗೀತಾಶಾಸ್ತ್ರಕ್ಕೆ ಮಾಹಾತ್ಮ್ಯ ಹೋಗುವದೂ ಅಲ್ಲದೆ, ಧರ್ಮದೇವತೆಯಾದ ಅರ್ಜುನನನ್ನು ಅಸುರ ಪಂಗಡಕ್ಕೆ ಸೇರಿಸಿದಂತಾಗುತ್ತದೆ. ಆದುದರಿಂದ ದೇಹಭೇದದಿಂದ ಬಹುವಚನ ಹೇಳಲ್ಪಟ್ಟಿತೆಂದಾಗುವದಿಲ್ಲವು. ಯಾವಾಗ ಬಹುವಾಗಿ ವ್ಯವಹರಿಸಲ್ಪಟ್ಟಿತೋ, ಆಗ ಶ್ರೀಕೃಷ್ಣನು ವ್ಯಾವಹಾರಿಕ ದೆಶೆಯ ವಿಷಯವಾಗಿ ಉಪದೇಶಿಸಿದನೆಂದು ಒಂದು ವೇಳೆ ಹೇಳಿದರೆ ಆಗಲೂ ಧರ್ಮಾಧರ್ಮಗಳ ವಿವೇಚನೆಯಿಲ್ಲದೆ, ಅತ್ಯಂತ ದುಃಖದಿಂದ ಪೀಡಿತನಾದವನನ್ನು ಕುರಿತು ಇಂತಹ ಅಪರಮಾರ್ಥವಾದ ವ್ಯಾವಹಾರಿಕ ದೆಶೆಯ ವಿಷಯದ ಉಪದೇಶವು ಸರಿಯೇ ? ಆದುದರಿಂದ ಕೃಷ್ಣನು ಯಥಾರ್ಥವನ್ನೇ ಬೋಧಿಸಿ, ಆತ್ಮಭೇದವನ್ನೇ "ದ್ವಾಸುಪರ್ಣಾ", "ನಿತ್ಯೋನಿತ್ಯಾನಾಂ" "ಈಶನೀಶೌ" ಇತ್ಯಾದಿ ಶ್ರುತಿವಾಕ್ಯಗಳಿಗನುಸಾರವಾಗಿ ಉಪದೇಶಿಸಿದನೆಂದು ಒಪ್ಪತಕ್ಕದ್ದು. ಮುಂದಿನ ವಾಕ್ಯದಿಂದ ಭಾಸ್ಕರಮತವನ್ನು ಖಂಡಿಸುತ್ತಾರೆ—ಔಪಾಧಿಕಾತ್ಮ ಭೇದವಾದೇಹಿ - ಸತ್ಯವಾದ ಉಪಾಧಿಯಿಂದ ಆತ್ಮರುಗಳು ಭಿನ್ನವಾಗಿ ತೋರುತ್ತಾರೆಂದೂ, ವಾಸ್ತವಿಕವಾಗಿಯೂ ಆತ್ಮರೆಲ್ಲಾ ಒಂದೇ ಎಂದೂ ಹೇಳುವ ಭಾಸ್ಕರ ವಾದದಲ್ಲಿಯಾದರೋ, ಆತ್ಮ ಭೇದಸ್ಯಾ ತಾತ್ತ್ವಿಕತ್ವೇನ – ಆತ್ಮರುಗಳಿಗೆ ಭೇದವೆಂಬುದು ಅವರಿಗೆ ಯಥಾರ್ಥವಲ್ಲದುದರಿಂದ, ತತ್ತ್ವೋಪದೇಶ

ಭಾ. ಭಗವದುಕ್ತಾತ್ಮಭೇದಃ ಸ್ವಾಭಾವಿಕ ಇತಿ ಶ್ರುತಿರಪ್ಯಾಹ–"ನಿತ್ಯೋ ನಿತ್ಯಾನಾಂ ಚೇತನ ಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್" ಇತಿ. ನಿತ್ಯಾನಾಂ ಬಹೂನಾಂ ಚೇತನಾನಾಂ ಯ ಏಕೋ ನಿತ್ಯ ಶ್ಚೇತನಃ, ಸಕಾಮಾನ್ ವಿದಧಾತೀತ್ಯರ್ಥಃ.

---

**ಸಮಯೇ** - ಯಥಾರ್ಥವಾದುದನ್ನು ಉಪದೇಶಮಾಡುವ ಸಂದರ್ಭದಲ್ಲಿ, **ಭೇದ ನಿರ್ದೇಶವು**-ನಾನು, ನೀನು, ಇವರೆಲ್ಲರೂ ಎಂಬದಾಗಿ ಭೇದವನ್ನು ಹೇಳುವದು, **ನ ಸಂಗಚ್ಛತೇ** – ಯುಕ್ತವಾದುದು ಆಗುವದಿಲ್ಲವು. ಈ ಭಾಸ್ಕರಾಭಿಪ್ರಾಯಪ್ರಕಾರ ಆತ್ಮತತ್ವವು ಒಂದೇ, ಅದು ಒಂದೇ ವಸ್ತುವು ಸತ್ಯೋಪಾಧಿಗಳಾದ ಕನ್ನಡಿ, ಮಣಿ, ಕತ್ತಿ, ನೀರು ಮೊದಲಾದವುಗಳಲ್ಲಿ ಪ್ರತಿಫಲಿಸಿ ಬಹುವಾಗಿ ತೋರುವಹಾಗೆ, ಬಹುವಾಗಿ ತೋರುತ್ತದೆಂದು ಹೇಳುವರು.) ಈಗ ಅರ್ಜುನನಿಗೆ ಯಥಾರ್ಥ ಜ್ಞಾನೋಪದೇಶಕಾಲದಲ್ಲಿ ಸತ್ಯೋಪಾಧಿಯಿಂದ ಬಹುವಾಗಿ ಕಾಣುವ ಆತ್ಮಾವಸ್ಥೆಯನ್ನು ಮಾತ್ರ ಹೇಳಬಹುದೋ? ಸತ್ಯವಾದುದು ಪರಮಾತ್ಮನೊಬ್ಬನೇ, ಭೇದವಿಲ್ಲವು ಎಂದು ಉಪದೇಶಿಸಬೇಡವೋ? ಆದುದರಿಂದ ಮೇಲೆ ಶಾಙ್ಕರ ಮತದ ವಿಷಯದಲ್ಲಿ ಹೇಳಿದ ಅನುಪಪತ್ತಿಗಳೆಲ್ಲಾ ಸಾಮಾನ್ಯವಾಗಿ ಈ ಭಾಸ್ಕರಸಿದ್ಧಾನ್ತಕ್ಕೂ ಅನ್ವಯಿಸುತ್ತದೆ ಎಂಬ ಭಾವವು. ಈ ಭಾಸ್ಕರ ಸಿದ್ಧಾನ್ತ ನಿರಾಸವು ಶಾಙ್ಕರ ಸಿದ್ಧಾನ್ತ ನಿರಾಸಕ್ಕಿಂತ ಸುಲಭವೆಂದು ಸೂಚಿಸುವದಕ್ಕಾಗಿ "ಹಿ" ಶಬ್ದದ ಪ್ರಯೋಗವು. ತನಗೆ ತುಂಬಾ ಪ್ರಿಯನಾದ ಶಿಷ್ಯನಿಗೆ ಭೇದವು ಭ್ರಮವೆಂದು ತಿಳಿಸದೆ, ಅಂತಹ ಭ್ರಮವನ್ನುಂಟುಮಾಡುವ ಭೇದೋಪದೇಶವೇ ಯುಕ್ತವೇ ಎಂಬ ವಿಷಯವನ್ನು ಪರಿಶೀಲಿಸತಕ್ಕದ್ದಾಗಿರುತ್ತದೆ ಎಂಬ ಭಾವವು. ನಿರವಯವನಾಗಿ ಸರ್ವತ್ರ ಪರಿಪೂರ್ಣನಾಗಿರುವ ಪರಬ್ರಹ್ಮಕ್ಕೆ ಛೇದನ ಭೇದನಾದಿಗಳಿಲ್ಲದಿರುವದರಿಂದ, ಅಂಶಿತ್ವವು ಹೇಗೆ ಕೂಡುತ್ತದೆ? ಈಗ ಸರ್ವೇಶ್ವರನು ತಾನೇ ಉಪದೇಶಿಸುವದರಿಂದ ಅಜ್ಞಾನರೂಪ ತಮಸ್ಸನ್ನು ಹೋಗಲಾಡಿಸುವದಾಗಿಯಲ್ಲವೇ ಉಪದೇಶಿಸತಕ್ಕದ್ದು? ಆದುದರಿಂದ ಪರಮಾತ್ಮನೊಬ್ಬನು ಮಾತ್ರವೇ ಇರುವದಿಲ್ಲವು. ಜೀವಾತ್ಮರ ಆನಂತ್ಯವೂ ಉಂಟೆಂದು ಜೀವಾತ್ಮಾನಂತ್ಯವನ್ನು ಬೋಧಿಸುವ ಶ್ರುತಿಯನ್ನು ಉದಾಹರಿಸುತ್ತಾರೆ:—ಈ ಶ್ರುತ್ಯರ್ಥವು ಮೇಲಿನ ಎರಡು ಪಕ್ಷದವರ ಅಭಿಪ್ರಾಯಕ್ಕೂ ವಿರುದ್ಧವೆಂದು ತೋರಿಸುತ್ತಾರೆ. **ಭಗವದುಕ್ತಾತ್ಮಭೇದಃ** – ಭಗವಂತನಾದ ಶ್ರೀಕೃಷ್ಣನಿಂದುಪದೇಶಿಸಲ್ಪಟ್ಟ ಆತ್ಮರುಗಳ ಭೇದವು, ಭಗವಂತನೇ, ಉಪದೇಶಿಸುವ ಗುರುವಾದನಂತರ, ಆತನ ಉಪದೇಶವನ್ನು ಗೌಣವಾಗಿ ಭಾವಿಸತಕ್ಕದ್ದಲ್ಲವು; ದೇಹಭೇದದಿಂದ ಭೇದವನ್ನುಪದೇಶಿಸಿದನೆಂದು ಔಪಚಾರಿಕಾಭಿಪ್ರಾಯವನ್ನು ಪ್ರದರ್ಶಿಸುವದು ಸರಿಯಲ್ಲವೆಂಬ ಭಾವವು. **ಸ್ವಾಭಾವಿಕ ಇತಿ**-ಔಪಾಧಿಕವಲ್ಲದೇ ನೈಜವಾದುದೇ ಎಂದು ಶ್ರುತಿಯೂ ಕೂಡ ಹೇಳುತ್ತದೆ.) ಇಲ್ಲಿ ಶ್ರುತಿರಪ್ಯಾಹ ಎಂಬಲ್ಲಿ ಅಪಿ ಶಬ್ದದಿಂದ ಹೀಗೆ ಶ್ರುತಿ ಪ್ರಮಾಣವು ವ್ಯಕ್ತವಾಗಿ ಜೀವಾತ್ಮ ಭೇದವನ್ನು ಪ್ರಕಟಿಸಿದರೂ, ಅದನ್ನೂ ಪರಿಗಣಿಸದೆ, ಶಾಸ್ತ್ರಾಭಿಮಾನಿಗಳಾಗಿದ್ದರೂ, ಈ ಉಭಯ ಪಕ್ಷದವರೂ ಆತ್ಮೈಕ್ಯವನ್ನು ಹೇಳುತ್ತಿರುವದು ಆಶ್ಚರ್ಯವೆಂಬ ಭಾವವು. ನಾವುಗಳು ಜೀವ ಬಹುತ್ವವನ್ನು ಹೇಳುವದರಿಂದ ನಮಗೆ ಈ ಶ್ರುತಿಯು ತುಂಬಾ ಉಪಪನ್ನವಾದುದೆಂಬುದೂ ಸೂಚಿತವು. ಈ ಶ್ರುತಿಗೆ ಇತರರು ಅಪಾರ್ಥವನ್ನು ಹೇಳುವರೆಂದು ಭಾವಿಸಿ ತಾವೇ ಸಮಂಜಸವಾದ ಅರ್ಥವನ್ನು ದಯಪಾಲಿಸುತ್ತಾರೆ.) **ನಿತ್ಯಾನಾಂ ನಿತ್ಯಃ** - ನಿತ್ಯರುಗಳಲ್ಲೂ ನಿತ್ಯನೆಂದೂ, ಚೇತನರಲ್ಲೂ ಚೇತನನು ಎಂದೂ ಹೀಗೆ ಅರ್ಥ ಹೇಳಕೂಡದು; ನಿತ್ಯರುಗಳಲ್ಲಿ ನಿತ್ಯನು, ಎಂದರೆ ಈ ಸರ್ವೇಶ್ವರನ ನಿತ್ಯತ್ವವೇ ವಿಲಕ್ಷಣ

ಭಾ. ಅಜ್ಞಾನಕೃತ ಭೇದದೃಷ್ಟಿವಾದೇತು ಪರಮಪುರುಷಸ್ಯ ಪರಮಾರ್ಥದೃಷ್ಟೇರ್ನಿರ್ವಿಶೇಷ ಕೂಟಸ್ಥನಿತ್ಯ ಚೈತನ್ಯಾತ್ಮಯಾಥಾತ್ಮ್ಯಸಾಕ್ಷಾತ್ಕಾರಾನ್ನಿವೃತ್ತಾ ಜ್ಞಾನತತ್ಕಾರ್ಯತಯಾ ಅಜ್ಞಾನಕೃತಭೇದದರ್ಶನಮ್, ತನ್ಮೂಲೋಪದೇಶಾದಿ ವ್ಯವಹಾರಾಶ್ಚ ನ ಸಂಗಚ್ಛತೇ.

---

ವಾಗಿ ಸರಿ, ಮಿಶ್ಯದ್ದಲ್ಲವೆಂದು ಎರಡುವಿಧ ನಿತ್ಯತ್ವ ಒಪ್ಪಬೇಕಾಗುತ್ತದೆ. ಇದಕ್ಕೆ ಅರ್ಥ ಹೇಗೆಂದರೆ ಹೇಳುತ್ತಾರೆ, ನಿತ್ಯಾನಾಂ ಬಹೂನಾಂ ಚೇತನಾನಾಂ - ನಿತ್ಯರಾದ ಅಸಂಖ್ಯೇಯರಾದ ಚೇತನರುಗಳಿಗೆ, ಯಃ - ಯಾವನಾದ, ವಿಲಕ್ಷಣನಾದ, ಏಕೋ ನಿತ್ಯಶ್ಚೇತನಃ - ಒಬ್ಬನಾದ ನಿತ್ಯನಾಗಿ ಚೇತನನಾದ ಪರಮೇಶ್ವರನೋ, ಸಃ - ಅವನೇ, ಕಾಮಾನ್ - ಸರ್ವಾಭೀಷ್ಟಗಳನ್ನೂ, ವಿದಧಾತಿ - ಉಂಟುಮಾಡುವನು. ಈ ಶ್ರುತಿಯಲ್ಲಿ ವಿದಧಾತಿ ಕಾಮಾನ್ ಎಂದು ಇಲ್ಲಿಯೂ ಬಹುವಚನವಿರುವದರಿಂದ ಪುರುಷಾರ್ಥಗಳನ್ನು ಹೊಂದುವರನೇಕರೆಂದೂ ಕೊಡುವನೊಬ್ಬನೆಂದೂ ತೋರುವದರಿಂದ ಅದ್ವೈತಮತದ ಅದ್ವಿತೀಯಾತ್ಮೋಪದೇಶಕ್ಕೆ ಮಾರ್ಗವೇ ಇಲ್ಲವು, ಚೇತನಾನಾಂ - ಎಂಬಲ್ಲಿ ದೇಹಪ್ರಯುಕ್ತವಾಗಿಯೇ ಬಹುವಚನವೆಂದು ಹೇಳಿದರೂ, ಪುರುಷಾರ್ಥವನ್ನುಂಟುಮಾಡುವನೊಬ್ಬ, ಪಡೆಯುವನು ಇನ್ನೊಬ್ಬನಾಗಿ, ಆಗಲೂ ಅದ್ವೈತ ಹಾನಿಯು.)

ಅದ್ವೈತಮತದಲ್ಲಿ ಭೇದಜ್ಞಾನಕ್ಕೆ ಅವಿದ್ಯಾಗೃಹೀತತ್ವದಿಂದ ಉಂಟಾದ ಅಜ್ಞಾನ ಭ್ರಮಗಳೇ ಕಾರಣವೆಂದು ಹೇಳಲ್ಪಟ್ಟಿರುತ್ತದೆ. ಆ ವಾದದ ಪ್ರಕಾರ ಇಲ್ಲಿನ ಭೇದೋಪದೇಶವೆಂದರೆ ಆವಾಗಲೂ ಸರಿಹೋಗುವದಿಲ್ಲವೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.

ಅಜ್ಞಾನಕೃತ ಭೇದ ದೃಷ್ಟಿವಾದೇತು - ಬಾಧಿತಾನುವೃತ್ತಿಯ ಮೂಲಕ ಅಜ್ಞಾನದಿಂದ ಭೇದದೃಷ್ಟಿಯುಂಟಾಗುತ್ತದೆಂಬ ವಾದವಲ್ಲಾದರೋ, ಪರಮಪುರುಷಸ್ಯ ಪರಮಾರ್ಥದೃಷ್ಟೇಃ – ಪರಮ ಪುರುಷನಿಗೆ ಯಾವಾಗಲೂ ಸತ್ಯವಾದ ದೃಷ್ಟಿ ಇರುವದರಿಂದ, ಅಂತವನಿಗೆ, ನಿರ್ವಿಶೇಷ ಕೂಟಸ್ಥ ನಿತ್ಯಚೈತನ್ಯಾತ್ಮ ಯಾಥಾತ್ಮ್ಯ ಸಾಕ್ಷಾತ್ಕಾರಾತ್ - ನಿಮ್ಮ ಅಭಿಪ್ರಾಯರೀತ್ಯಾ ವಿಶೇಷ ರಹಿತನಾಗಿಯೂ, ನಿರ್ವಿಕಾರನಾಗಿಯೂ, ನಿತ್ಯನಾಗಿಯೂ, ಚೈತನ್ಯಸ್ವರೂಪನಾಗಿಯೂ ಇರುವ ಆತ್ಮದ ನಿಜಸ್ಥಿತಿಯ ಸಾಕ್ಷಾತ್ಕಾರ ಉಂಟಾಗಿರುವದರ ದೆಶೆಯಿಂದ, ನಿವೃತ್ತಾ ಜ್ಞಾನ ಕಾರ್ಯತಯಾ – ಅವಿದ್ಯೆಯ ಕಾರ್ಯವಾದ ಭ್ರಮವೆಲ್ಲಾ ನಿವೃತ್ತಿಸಿ ಹೋಗಿರುವದರಿಂದ, ಅಜ್ಞಾನಕೃತ ಭೇದದರ್ಶನಂ - ಅವಿದ್ಯೆಯಿಂದುಂಟಾಗುವ ಭೇದಗಳು ತೋರೋಣವೂ, ತನ್ಮೂಲೋಪದೇಶಾದಿ ವ್ಯವಹಾರಾಶ್ಚ – ಭೇದದರ್ಶನವೇ ಮೂಲಕಾರಣವಾಗಿ ಉಳ್ಳ ಉಪದೇಶವೇ ಮೊದಲಾದ ವ್ಯವಹಾರಗಳೂ ಕೂಡ, ಇಲ್ಲಿ ಆದಿ ಪದದಿಂದ ಅನುಷ್ಠಾನವು ಹೇಳಲ್ಪಟ್ಟಿತು, ನ ಸಂಗಚ್ಛಂತೇ - ಯುಕ್ತವಾದವುಗಳಾಗುವದಿಲ್ಲವು, ಅಜ್ಞಾನಕೃತ ಭೇದದೃಷ್ಟಿಯನ್ನು ಯಾರಿಗೆ ಹೇಳಬಹುದು ಎಂದರೆ ಅವಿದ್ಯಾಗೃಹೀತರೆಂದು ಹೇಳುವ ನಮಗೆ ಹೇಳಬಹುದು. ಪರಮಾತ್ಮನಿಗೆ ಹೇಳಲಾಗುವದಿಲ್ಲವು. (ಶ್ರೀ ಕೃಷ್ಣನು ಮೊದಲು ಅವಿದ್ಯಾಗೃಹೀತನಾಗಿದ್ದನು ಎಂದು ಹೇಳಬೇಕಾಗುತ್ತದೆ. ಅದೂ ಸರಿಯಲ್ಲವು. ಸಾಂದೀಪನ್ಯಾಚಾರ್ಯರ ಮೂಲಕ ಅವಿದ್ಯಾ ನಿವೃತ್ತಿಯಾಯಿತು ಎಂದರೆ ಅವರೂ ಅವಿದ್ಯಾಗೃಹೀತರಲ್ಲವೋ ? ಎಂದು ಕೇಳಬೇಕಾಗುತ್ತದೆ. ಇಹಲೋಕದಲ್ಲಿರುವವರೆಲ್ಲಾ ಅವಿದ್ಯಾಗೃಹೀತರಾಗಿರುವವರು, ಅಂತವರು ಶ್ರೀ ಕೃಷ್ಣನಿಗೆ ಅವಿದ್ಯಾ ನಿವೃತ್ತಿಯನ್ನುಂಟುಮಾಡಬಲ್ಲರೇ? ಹಾಗೆ ಭೇದ ದರ್ಶನವು ಶ್ರೀಕೃಷ್ಣನಿಗೆ

ಭಾ. ಅಥ ಪರಮ ಪುರುಷಸ್ಯಾಧಿಗತಾದ್ವೈತಜ್ಞಾನಸ್ಯ ಬಾಧಿತಾನು ವೃತ್ತಿರೂಪಮಿದಂ ಭೇದ ಜ್ಞಾನಂ ದಗ್ಧ ಪಟಾದಿವತ್ ನಬಂಧಕ ಮಿತ್ಯುಚ್ಯತೇ-ನೈತದುಪಪದ್ಯತೇ ; ಮರೀಚಿಕಾ ಜಲಜ್ಞಾನಾದಿಕಂ ಹಿ ಬಾಧಿತ ಮನುವರ್ತಮಾನಂ ನಜಲಾಹರಣಾದಿ ಪ್ರವೃತ್ತಿ ಹೇತುಃ. ಏವ ಮತ್ರಾಪ್ಯ ದ್ವೈತಜ್ಞಾನೇನ ಬಾಧಿತಂ ಭೇದಜ್ಞಾನ ಮನುವರ್ತಮಾನ ಮಪಿ ಮಿಥ್ಯಾರ್ಥ ವಿಷಯತ್ವ ನಿಶ್ಚ ಯಾನ್ನೋಪದೇಶಾದಿ ಪ್ರವೃತ್ತಿ ಹೇತುರ್ಭವತಿ.

---

ಇತ್ತು ಎಂದರೆ ಆತನು ಉಪದೇಶಕ್ಕೆ ಅರ್ಹನೇ ಅಲ್ಲವೆಂಬ ದೋಷವುಂಟಾಗುತ್ತದೆ, ಆದುದ ರಿಂದ ಶ್ರೀಕೃಷ್ಣನು ಅದ್ವೈತ ಸಿದ್ಧಾಂತಾನುಸಾರ ನಿರ್ವಿಶೇಷ ಕೂಟಸ್ಥ ನಿತ್ಯ ಚೈತನ್ಯ ಆತ್ಮ ಯಾಥಾತ್ಮ್ಯಯುಳ್ಳವನು, ಎಂದು ಅಙ್ಗೀಕರಿಸಿದರೆ ಆತನಿಗೆ ಅವಿದ್ಯಾಸಂಬಂಧವೇ ಇಲ್ಲದುದ ರಿಂದ ಅಜ್ಞಾನವೂ ಇಲ್ಲವು, ಅದರ ಕಾರ್ಯವಾದ ಭ್ರಮವೂ ಇಲ್ಲವು ಎಂದೇ ಒಪ್ಪಬೇ ಕಾಗುತ್ತದೆ ; ಅಂತವನು ಹೀಗೆ ಆತ್ಮ ಬಹುತ್ವವನ್ನು ಹೇಳುವದರಿಂದ, ಅಜ್ಞಾನ ರೂಪಭೇದ ದರ್ಶನವೂ, ಅಂತಹ ಉಪದೇಶವೂ, ಭಗವಂತನಿಗೆ ಕೂಡುವದಿಲ್ಲವೆಂಬ ತಾತ್ಪರ್ಯವು. ಈಗ ಶ್ರೀಕೃಷ್ಣನು ಭೇದವನ್ನು ಉಪದೇಶಿಸಿರುತ್ತಾನೆ; ಅದ್ವೈತ ಮತಪ್ರಕಾರ ಭೇದ ದರ್ಶನವು ಅಜ್ಞಾನ ಮೂಲಕವಾಗಿ ಎಂದೇ ಹೇಳುವದರಿಂದ ಶ್ರೀಕೃಷ್ಣನಿಗೆ ಅಜ್ಞಾನವನ್ನು ಆರೋಪಿಸಿ ದಂತಾಗುವದು, ಅಜ್ಞಾನವಿಲ್ಲವೆಂದಲ್ಲವೇ ಹೇಳಿಯೇ ತೀರಬೇಕು. ಹಾಗಾದರೆ ಈ ಭೇದೋಪ ದೇಶವು ಹೇಗೆ ಎಂದು ಕೇಳಬೇಕಾಗುತ್ತದೆ?

ಆಗಲಿ, ಶ್ರೀಕೃಷ್ಣನಿಗೆ ಅವಿದ್ಯಾರೂಪ ಅಜ್ಞಾನ ಯಾವುದೂ ಇಲ್ಲವು; ಅವಿದ್ಯಾನಿವೃತ್ತಿಯಾಗಿ ದ್ದರೂ ಬಾಧಿತಾನುವೃತ್ತಿಯಿಂದ ಅಂತಹ ಭೇದ ಜ್ಞಾನ ಉಂಟಾಗಿರುತ್ತದೆ. ಭೇದಜ್ಞಾನ ಉಂಟಾ ದರೂ, ಬಂಧಕವಲ್ಲವು ಎಂದು ಹೇಳಿಯಾರೆಂದು ಭಾವಿಸಿ ಆ ಅಭಿಪ್ರಾಯವನ್ನು ಖಂಡಿಸುತ್ತಾರೆ.

**ಅಥ** – ಅನಂತರದಲ್ಲಿ, **ಅಧಿಗತಾದ್ವೈತಜ್ಞಾನಸ್ಯ** - ಹೊಂದಿದ ಅದ್ವೈತ ಜ್ಞಾನವುಳ್ಳ ವನಾದ, **ಪರಮ ಪುರುಷಸ್ಯ**, ಪರಮ ಪುರುಷನಿಗೆ, **ಬಾಧಿತಾನುವೃತ್ತಿ ರೂಪಮಿದಂ ಭೇದ ಜ್ಞಾನಂ** - ಅಜ್ಞಾನವು ಬಾಧಿಸಲ್ಪಟ್ಟಿದ್ದರೂ, ಅನುವರ್ತಿಸಿಕೊಂಡು ಬರುವ ಈ ಭೇದಜ್ಞಾನವು, **ದಗ್ಧ ಪಟಾದಿವತ್** - ಸುಟ್ಟಬಟ್ಟೆಯ ಹಾಗೆ, **ನ ಬಂಧಕಂ**-ಬಂಧಕರೂಪವಾದುದಲ್ಲವು, **ಇತ್ಯು ಚ್ಯತೇ** – ಎಂದೇನಾದರೂ ಹೇಳುತ್ತೀರೋ, **ನೈತದುಪಪದ್ಯತೇ** - ಅದೂ ಕೂಡ ಸಾಧ್ಯವಲ್ಲವು, ಹೇಗೆಂದರೆ ಒಂದು ದೃಷ್ಟಾಂತದಿಂದ ವ್ಯಕ್ತಪಡಿಸುತ್ತಾರೆ. **ಮರೀಚಿಕಾ ಜಲಜ್ಞಾನಾದಿಕಂ** – ಬಿಸಲು ಕುದುರೆಯೇ ನೀರು ಎಂಬ ಮಿಥ್ಯಾಜ್ಞಾನವೇ ಮೊದಲಾದವುಗಳುಳ್ಳವು, **ಬಾಧಿತಂ** – ಬಾಧಿಸಲ್ಪಟ್ಟು ಅದು ಜಲವಲ್ಲವು ಬಿಸಲು ಕುದುರೆಯೇ ಎಂಬ ಜ್ಞಾನದಿಂದ ಬಾಧಿಸಲ್ಪಟ್ಟಿ ದ್ದರೂ, **ಅನುವರ್ತಮಾನಂ** - ಅನುವರ್ತಿಸಿ ಬಂದರೂ ಕೂಡ, **ನಜಲಾಹರಣಾದಿ ಪ್ರವೃತ್ತಿ ಹೇತುಃ** - ನೀರು ತರುವವೇ, ಆದಿಪದದಿಂದ ನೀರಡಿಕೆಯನ್ನು ಹೋಗಲಾಡಿಸುವದೇ ಮೊದ ಲಾದ ವ್ಯಾಪಾರಗಳಿಗೆ ಕಾರಣವಾಗಲಾರದು. **ಏವಂ** - ಈ ಪ್ರಕಾರವಾಗಿಯೇ, **ಅತ್ರಾಪಿ** – ಈ ಉಪದೇಶ ಸಂದರ್ಭದಲ್ಲಿ, **ಅದ್ವೈತಜ್ಞಾನದಿಂದ**, **ಬಾಧಿತಂ** - ಬಾಧಿಸಲ್ಪಟ್ಟ, ನಾಶಗೊಳಿಸ ಲ್ಪಟ್ಟ, **ಭೇದಜ್ಞಾನವು**, **ಅನುವರ್ತಮಾನಮಪಿ** – ಅನುವರ್ತಿಸಿ ಬಂದರೂ ಕೂಡ, **ಮಿಥ್ಯಾ ರ್ಥ ವಿಷಯತ್ವನಿಶ್ಚಯಾತ್** - ಮಿಥ್ಯಾ ವಿಷಯವಾದುದು ಎಂದು ನಿಶ್ಚೈಸಿರುವದ ರಿಂದ, **ಉಪದೇಶಾದಿ ಪ್ರವೃತ್ತಿಹೇತುಃ** – ಉಪದೇಶವೇ ಮೊದಲಾದ ಪ್ರವೃತ್ತಿಗೆ ಕಾರಣ ಭೂತವಾದುದು, **ನ ಭವತಿ** - ಆಗುವದಿಲ್ಲವು. ಶ್ರೀಕೃಷ್ಣನಿಗೆ ಅವಿದ್ಯೆ ಯಾವುದೂ ಇಲ್ಲದುದ

ಭಾ. ನಚೇಶ್ವರಸ್ಯ ಪೂರ್ವಮಜ್ಞಸ್ಯ ಶಾಸ್ತ್ರಾಧಿಗತ ತತ್ತ್ವಜ್ಞಾನತಯಾ ಬಾಧಿತಾನುವೃತ್ತಿಃ ಶಕ್ಯತೇ ವಕ್ತುಮ್ (೧) "ಯಃ ಸರ್ವಜ್ಞಃ ಸರ್ವವಿತ್" (೨) "ಪರಾಸ್ಯಶಕ್ತಿ ರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾಚ" (೩) "ವೇದಾಹಂ ಸಮತೀತಾನಿ

---

ರಿಂದ ಅದ್ವೈತಜ್ಞಾನವು, ಅದ್ವಿತೀಯ ಬ್ರಹ್ಮಜ್ಞಾನವು ಎಂದರೆ ಇರುವವನು ಪರಮಾತ್ಮನೊಬ್ಬನೇ ಮಿಕ್ಕದ್ದೆಲ್ಲಾ ಮಿಥ್ಯಾ ಎಂಬ ಜ್ಞಾನ ಉಂಟಾಗಿದ್ದರೂ, ಬಾಧಿತಾನುವೃತ್ತಿಜ್ಞಾನ ಉಂಟಾಗಬಹುದು, ಆದರಿಂದ ಹಾಗೆ ದೇಹಬಹುತ್ವದಿಂದ ಆತ್ಮಬಹುತ್ವವನ್ನು ಉಪದೇಶಿಸಿದನು ಎಂದು ಅದ್ವೈತಿಗಳು ಹೇಳಬಹುದೆಂದು ಭಾವಿಸಿ, ಅದೂ ಕೂಡುವದಿಲ್ಲವೆಂದು ಹೇಳುತ್ತಾರೆ. ಮರೀಚಿಕೆ ಎಂದರೆ ಬಿಸಲು ಕುದುರೆ, ಅದನ್ನು ನೋಡಿದಾಗೆಲ್ಲಾ ಅದು ಜಲವೆಂದು ಭ್ರಾಂತಿಯುಂಟಾಗುತ್ತದೆ. ಮತ್ತು ಅದು ಮರೀಚಿಕೆಯೇ ಜಲವಲ್ಲವೆಂಬ ನಿಶ್ಚಯಜ್ಞಾನ ಉಂಟಾದರೂ, ಬಾಧಿತಾನುವೃತ್ತಿಯುಂಟಾಗಬಹುದು, ಅವನ್ನು ಪುನಃ ನೋಡಿದರೆ ಜಲವೆಂಬ ಜ್ಞಾನವೇ ಪುನಃ ಉಂಟಾಗುತ್ತದೆ. ಆದರೆ ಅದು ಜಲವಲ್ಲವೆಂಬ ನಿಶ್ಚಯಜ್ಞಾನ ಉಂಟಾಗಿರುವದರಿಂದ ಅಂತವನು ಕೊಡವನ್ನು ತೆಗೆದುಕೊಂಡು ನೀರು ತರುವದಕ್ಕಾಗಲಿ, ದಾಹಶಾಂತಿ ಮಾಡಿಕೊಳ್ಳುವದಕ್ಕಾಗಲಿ ಅಲ್ಲಿಗೆ ಹೋಗಲು ಪ್ರಯತ್ನಿಸುವದಿಲ್ಲವು. ಪರಮಾತ್ಮನಾದ ಶ್ರೀಕೃಷ್ಣನಿಗೆ ಬಾಧಿತಾನುವೃತ್ತಿಯುಂಟೆಂದು ಒಪ್ಪಿಕೊಳ್ಳುವದೇ ಅಸಂಗತವು. ಆ ವಾದವನ್ನು ಮುಂದೆ ಖಂಡಿಸುತ್ತಾರೆ. ಹಾಗೆ ಬಾಧಿತಾನುವೃತ್ತಿಯುಂಟೆಂದು ಒಪ್ಪಿದರೂ, ಅದ್ವೈತಜ್ಞಾನವುಳ್ಳವನು, ಅರ್ಜುನಾದಿಗಳೆಲ್ಲಾ ಮಿಥ್ಯಾಭೂತರಾದುದರಿಂದ, ಅಂತವರಿಗೆ ಉಪದೇಶ ಮೊದಲಾದವುಗಳನ್ನು ಎಂದಿಗೂ ಮಾಡನು ಎಂಬ ತಾತ್ಪರ್ಯವು. ಆ ಅನುವರ್ತಮಾನವಾದ ಭೇದ ದರ್ಶನವು ಏನೂ ಕಾರ್ಯಕಾರಿಯಾಗದೆ ಇರುವದರಿಂದ ಆದರಹಾಗೆ ಉಪದೇಶಾದಿಗಳು ಅನಾವಶ್ಯಕವೆಂದು ಹೇಳುವದಕ್ಕಾಗಿ **ದಗ್ಧಪಟಾದಿವತ್** ಎಂಬ ದೃಷ್ಟಾಂತವನ್ನು ಕೊಟ್ಟಿರುತ್ತಾರೆ. ದಗ್ಧಪಟ ದೃಷ್ಟಾಂತವನ್ನೇನೋ ಹೇಳಬಹುದು, ಅದು ಕೂಡುವದೇ ಇಲ್ಲವು. ಹೇಗೆ ಕೂಡುವದಿಲ್ಲವೆಂಬುದಕ್ಕೆ, ಮರೀಚಿಕಾ ಜಲಾಹರಣ ದೃಷ್ಟಾಂತವನ್ನು ಕೊಟ್ಟು ಉಪಪನ್ನವಲ್ಲವೆಂದು ತೋರಿಸುತ್ತಾರೆ. ಅದು ಬಂಧಕವಾಗಲಾರದು; ಆದುದರಿಂದ ಭ್ರಮವಾಗಲಿ, ತತ್ಪ್ರಯುಕ್ತವಾದ ಉಪದೇಶವಾಗಲಿ ಅಸಂಗತವೆಂಬ ಭಾವವು.

ಸರ್ವೇಶ್ವರನಾದ ಶ್ರೀಕೃಷ್ಣನಿಗೆ ಬಾಧಿತಾನುವೃತ್ತಿರೂಪ ಭ್ರಮವನ್ನಾರೋಪಿಸಲು ಸಾಧ್ಯವೇ ಇಲ್ಲವೆಂದುಪಪಾದಿಸುತ್ತಾರೆ. **ನಚೇಶ್ವರಸ್ಯ** ಇತ್ಯಾದಿ-ಸರ್ವೇಶ್ವರನು, **ಪೂರ್ವಮಜ್ಞಸ್ಯ**-ಪೂರ್ವದಲ್ಲಿ ಅಜ್ಞನಾಗಿ, **ಶಾಸ್ತ್ರಾಧಿಗತತತ್ತ್ವಜ್ಞಾನತಯಾ**-ಶಾಸ್ತ್ರಾಧಿಗತ ತತ್ತ್ವಜ್ಞಾನದಿಂದ ಎಂದರೆ ಸಾಂದೀಪನ್ಯಾಚಾರ್ಯರಿಂದ ಶಾಸ್ತ್ರಾಭ್ಯಾಸ ಮಾಡಿ ತತ್ತ್ವಜ್ಞಾನ ಅದ್ವೈತಜ್ಞಾನ ಉಂಟಾಗಿದ್ದರೂ, **ಬಾಧಿತಾನುವೃತ್ತಿಃ**-ನಾಶಗೊಳಿಸಲ್ಪಟ್ಟ ಭೇದ ಜ್ಞಾನವು ಅನುವರ್ತಿಸಿಕೊಂಡು ಸರ್ವೇಶ್ವರನಿಗೆ ಬರುತ್ತದೆಂದು, **ನ ಶಕ್ಯತೇ ವಕ್ತುಮ್**-ಹೇಳಲು ಸಾಧ್ಯವಿಲ್ಲವು. ಏಕೆಂದರೆ ಹಾಗೆ ಹೇಳಿದರೆ ಶ್ರುತಿ ಸ್ಮೃತಿಗಳಿಗೆ ವಿರೋಧ ಉಂಟಾಗುತ್ತದೆಂದು ಸಪ್ರಮಾಣವಾಗಿ ಹೇಳುತ್ತಾರೆ. ಅವಕ್ಕೆ, (೧) **"ಯಃ**-ಯಾವ ಪ್ರಸಿದ್ಧನಾದ ಸರ್ವೇಶ್ವರನು **ಸರ್ವಜ್ಞನು**, **ಸ್ವರೂಪತಃ**-ಎಲ್ಲವನ್ನೂ ತಿಳಿಯುವನೋ, **ಸ್ವರ್ವವಿತ್**-ಪ್ರಕಾರತಃ ಎಲ್ಲವನ್ನೂ ತಿಳಿಯುವನೋ, ಅಥವಾ ಸರ್ವವನ್ನೂ, ವಿಂದತಿ-ಹೊಂದಿರುವವನೋ; **"ಸರ್ವಜ್ಞಸ್ಸರ್ವವಿತ್"** ಎಂಬ ವಿಶೇಷಣಗಳು (ಸರ್ವೇಶ್ವರನಿಗೆ ಅಜ್ಞಾನ ಪ್ರಾಪ್ತಿ

---

(೧) ಮು. ಉಪ. ೧. ೨. ೯; ೨. ೨. ೭. (೨) ಶ್ವೇ. ಉ. ಪ. ೬.೮. (೩) ಗೀ. ೭. ೨೬.

ಭಾ. **ವರ್ತಮಾನಾನಿ ಚಾರ್ಜುನ। ಭವಿಷ್ಯಾಣಿಚ ಭೂತಾನಿ ಮಾಂತು ವೇದ ನ ಕಶ್ಚನ" ಇತಿ ಶ್ರುತಿ ಸ್ಮೃತಿ ವಿರೋಧಾತ್. ಕಿಂಚ, ಪರಮಪುರುಷಶ್ಚೇ ದಾನೀಂತನ ಗುರುಪರಂಪ ರಾಚ, ಅದ್ವಿತೀಯಾತ್ಮ ಸ್ವರೂಪ ನಿಶ್ಚಯೇ ಸತಿ, ಅನುವರ್ತಮಾನೇಽಪಿ ಭೇದಜ್ಞಾನೇ, ಸ್ವನಿಶ್ಚಯಾನುರೂಪ ಮದ್ವಿತೀಯಾತ್ಮಜ್ಞಾನಂ ಕಸ್ಮಾ ಉಪದಿಶತೀತಿ ವಕ್ತವ್ಯಮ್.**

---

ಯನ್ನೂ ಅಜ್ಞಾನ ನಿವೃತ್ತಿಯಾದನಂತರ ಬಾಧಿತಾನುವೃತ್ತಿಯನ್ನೂ ನಿಷೇಧಿಸುತ್ತವೆ ಎಂಬ ಭಾವ ದಿಂದ ಇವನ್ನು ಉದಾಹರಿಸಿರುತ್ತಾರೆ.) ನಿವೃತ್ತಿತಾನೆ ಹೇಗೆ? ಅವನಿಗಿಂತ ಅಧಿಕ ಜ್ಞಾನವುಳ್ಳ ಗುರುವು ಯಾರಿದ್ದಾರೆ? ಬೇರೇ ಯಾರೂ ಇಲ್ಲವೇ ಇಲ್ಲವಷ್ಟೇ ಎಂಬೀ ತಾತ್ಪರ್ಯಗಳೆಲ್ಲಾ ಈ ಪ್ರಮಾಣದಿಂದ ಸೂಚಿತವು. ಲೋಕದಲ್ಲಿ ಗುರುಗಳು ಅಜ್ಞಾನವನ್ನು ಹೋಗಲಾಡಿಸಿರುವದನ್ನು ಕಂಡಿರುವೆವು. ಹಾಗೆಯೇ ಶ್ರೀಕೃಷ್ಣನ ಅಜ್ಞಾನವನ್ನೆಲ್ಲಾ ಸಾಂದೀಪಿನ್ಯಾಚಾರ್ಯರು ಹೋಗಲಾಡಿಸಿವರು ಎಂದರೆ, ಸಾಂದೀಪಿನ್ಯಾಚಾರ್ಯರಿಗೂ ಮೊದಲು ಅಜ್ಞಾನವಿತ್ತು ಇನ್ನೊಬ್ಬರು ಹೋಗಲಾಡಿಸಿದರೆಂದು ಹೀಗೆಯೇ ಪರಂಪರೆಯಾಗಿ ಹೇಳುತ್ತಾ ಹೋಗಬೇಕಾಗಿ ಬರುವವರಿಂದ ಅನವಸ್ಥಾ ದೋಷಯುಕ್ತವಾದ ವಾದವಾಗುತ್ತದೆ. ಮತ್ತು (೨) **"ಅಸ್ಯ"**-ಈ ಪರಮಾತ್ಮನ, ಶಕ್ತಿಯು, **ವಿವಿಧೈವ ಶ್ರೂಯತೇ**-ವಿವಿಧವಾದುದಾಗಿ ತುಂಬಾ ವಿಚಿತ್ರವಾದುದಾಗಿ ಶ್ರುತಿಗಳಲ್ಲಿ ಹೇಳಲ್ಪಟ್ಟಿರುತ್ತದೆ, ಆ ಶಕ್ತಿಯಾದರೋ ಆತನಿಗೆ ಸ್ವರೂಪವಾದುದಾಗಿ ನೈಜವಾದುದು, ಜ್ಞಾನ ಮತ್ತು ಬಲಗಳ ದಿವ್ಯಚೇಷ್ಟಿತಗಳುಳ್ಳದ್ದು" ಮತ್ತು (೩) **"ಸಮತೀತಾನಿ**–ಹಿಂದಿನಕಾಲದಲ್ಲಿದ್ದು ಹೊರಟುಹೋದ ಜೀವಾತ್ಮರನ್ನೂ, **ವರ್ತಮಾನಾನಿ**-ಈಗಿರುವವರನ್ನೂ, **ಭವಿಷ್ಯಾಣಿಚ ಭೂತಾನಿ**-ಮುಂದೆ ಈ ಲೋಕಕ್ಕೆ ಬರುವವರನ್ನೂ, **ಹೇ ಅರ್ಜುನ** - ಓ ಅರ್ಜುನನೇ, **ಅಹಂವೇದ** – ನಾನು ತಿಳಿದಿರುವೆನು, **ಮಾಂತು** - ಕೃಷ್ಣಾವತಾರಿಯಾಗಿ ಅವತರಿಸಿರುವ ನನ್ನನ್ನಾದರೋ, **ನ ಕಶ್ಚನವೇದ** - ಯಾರೊಬ್ಬನೂ ತಿಳಿದವನಲ್ಲವು, (ಆತ್ಮಾ ಒಬ್ಬನೇ ಸತ್ಯವು, ಮಿಕ್ಕಿದ್ದೆಲ್ಲಾ ಮಿಥ್ಯೆ ಎಂದರೆ ಇತರರು ಈತನನ್ನು ತಿಳಿಯಲಿಲ್ಲವೆಂದು ಹೇಳಲೇ ಅವಕಾಶವಿಲ್ಲವು,") **ಇತಿ ಶ್ರುತಿ, ಸ್ಮೃತಿ ವಿರೋಧಾತ್** – ಹೀಗೆ ಶ್ರುತಿ ಸ್ಮೃತಿ ಪ್ರಮಾಣಗಳಿಗೆ ವಿರೋಧ ಉಂಟಾಗುವದರಿಂದ ಇಂತಹ ಸರ್ವಜ್ಞನಿಗೆ ಅಜ್ಞಾನವೆಂಬುದೂ, ಅಜ್ಞಾನ ನಿವೃತ್ತಿಯಾಗಿದ್ದರೂ ಬಾಧಿತಾನುವೃತ್ತಿ ಯುಂಟೆಂದು ಹೇಳುವದೂ, ಸರ್ವೇಶ್ವರನ ಸರ್ವಜ್ಞತೆಗೆ ತುಂಬಾ ಕುಂದಕವೆಂಬ ಭಾವವು. **ಕಿಂಚ** - ಇಷ್ಟೇ ಅಲ್ಲವು. **ಪರಮಪುರುಷನೂ, ಇದಾನೀಂತನ ಗುರುಪರಂಪರಾಚ**-ಇದುವರೆ ಗಿರುವ ಗುರುಪರಂಪರೆಯೂ ಸಹ, **ಅದ್ವಿತೀಯಾತ್ಮಸ್ವರೂಪ ನಿಶ್ಚಯೇ ಸತಿ** - ಪರಮಾತ್ಮ ನೊಬ್ಬನೇ, ಆತನೊಬ್ಬನಿಲ್ಲದೆ ಇನ್ನಾವದೂ ಇಲ್ಲವೆಂಬ ಸ್ವರೂಪ ನಿಶ್ಚಯ ಉಂಟಾಗಲಾಗಿ, ಒಂದುವೇಳೆ ಭೇದಜ್ಞಾನವು ಅನುವರ್ತಿಸಿ ಬರುತ್ತದೆಂದು ನೀವು ಹೇಳಿದರೂ, **ಸ್ವನಿಶ್ಚಯಾ ನುರೂಪಂ ಅದ್ವಿತೀಯಜ್ಞಾನಮ್** - ತನಗುಂಟಾಗಿರುವ ನಿಶ್ಚಯಜ್ಞಾನಕ್ಕೆ ಅನುಗುಣವಾದ ಪರಮಾತ್ಮನೊಬ್ಬನೇ ಇರುವನು ಇನ್ನು ಯಾವುದೂ ಇಲ್ಲವು ಎಂಬ ಜ್ಞಾನವನ್ನು, **ಕಸ್ಮೈ ಉಪದಿಶತಿ** - ಯಾರಿಗೆ ಉಪದೇಶಿಸುತ್ತಾನೆ, **ಇತಿ ವಕ್ತವ್ಯಮ್** – ಎಂದು ಹೇಳಬೇಕಾಗುತ್ತದೆ, ಪರಮಾತ್ಮನೊಬ್ಬನಿಲ್ಲದೆ ಬೇರೆ ಇನ್ನು ಯಾರೂ ಇಲ್ಲವೆಂಬ ನಿಶ್ಚಯಜ್ಞಾನ ಉಂಟಾದನಂತರ ಸರ್ವೇಶ್ವರನು ಯಾರಿಗೆ ಉಪದೇಶಿಸುತ್ತಾನೆಂಬುದನ್ನು ನೀವೇ ಹೇಳತಕ್ಕದ್ದು. ಇನ್ನು ಯಾರೂ ಇಲ್ಲವಾದುದರಿಂದ ಹೇಳಲುಸಾಧ್ಯವಲ್ಲವೆಂಬ ಭಾವವು. ಆದುದರಿಂದ ಸರ್ವೇಶ್ವರನ ಉಪದೇ ಶವೂ, ಇನ್ನೂ ಇತರ ಈಗಿನ ಆಚಾರ್ಯರುಗಳು ಮಾಡಿದುಪದೇಶವೂ ಕೂಡುವದಿಲ್ಲವು. ಭಗ

**ಭಾ. ಪ್ರತಿಬಿಂಬವತ್ಪ್ರತೀಯಮಾನೇಭ್ಯೋಽರ್ಜುನಾದಿಭ್ಯ ಇತಿಚೇತ್, ನೈತದುಪಪದ್ಯತೇ; ನಹ್ಯನುನ್ಮತ್ತಃ ಕೋಽಪಿ ಮಣಿ ಕೃಪಾಣ ದರ್ಪಣಾದಿಷು ಪ್ರತೀಯಮಾನೇಷು ಸ್ವಾತ್ಮ ಪ್ರತಿಬಿಂಬೇಷು, ತೇಷಾಂ ಸ್ವಾತ್ಮನೋಽನನ್ಯತ್ವಂ ಜಾನನ್, ತೇಭ್ಯಃ ಕಿಮಪ್ಯುಪದಿಶತಿ.**

ವಂತಸಲ್ಲದೆ ಇನ್ನು ಯಾರೂ ಇಲ್ಲವು ಎಂದು ತಿಳಿದೂ ಉಪದೇಶವು ಹೇಗೆ ಸಮಂಜಸ ವೆಂಬ ಭಾವವು.

ನಿಶ್ಚಯವಾಗಿಯೂ ಪರಮಾತ್ಮನೊಬ್ಬನೇಯಾದರೂ, ಭ್ರಾನ್ತಿಯಿಂದ ಭಿನ್ನವಾಗಿ ತೋರಿ ಬಂದು, ಬಾಧಕ ಜ್ಞಾನದ ಬಲದಿಂದ, ಅಭಿನ್ನವಾಗಿ ನಿಶ್ಚಯಿಸಲ್ಪಟ್ಟವನಿಗೆ ಉಪದೇಶವೆಂದು ಹೇಳಬಹುದೆಂದು ಶಙ್ಕಿಸಿ, ಆ ಪಕ್ಷದಲ್ಲಿ ತೋರಿಬರುವ ದೋಷವನ್ನು ವ್ಯಕ್ತಗೊಳಿಸುತ್ತಾರೆ. ಯಾರಿಗೆ ಉಪದೇಶವೆಂದು ಕೇಳಿದುದಕ್ಕೆ, ಅದ್ವೈತಿಯು ಹೇಳಬಹುದೇನೆಂದರೆ:—ಉಪದೇಶವು **ಪ್ರತಿಬಿಂಬದ** ಹಾಗೆ, **ಪ್ರತೀಯ ಮಾನೇಭ್ಯಃ** - ತೋರುತ್ತಿರುವ, ಅರ್ಜುನಾದಿಗಳಿಗೆ, **ಇತಿ ಚೇತ್** - ಎಂದು ಹೇಳಿದರೆ, **ನೈತದುಪಪದ್ಯತೇ** - ಅದೂ ಸರಿಹೋಗುವದಿಲ್ಲವು. ಕಾರಣ ವನ್ನು ಹೇಳುತ್ತಾರೆ:— **ಅನುನ್ಮತ್ತಃ ಕೋಽಪಿ** - ಹುಚ್ಚನಲ್ಲದ ಯಾರೇಯಾಗಲಿ, **ಮಣಿ ಕೃಪಾಣ ದರ್ಪಣಾದಿಷು**-ರತ್ನ, ಕತ್ತಿ, ಕನ್ನಡಿಗಳಲ್ಲಿ, **ಪ್ರತೀಯಮಾನೇಷು** - ತೋರಿಬರುವ, **ಸ್ವಾತ್ಮಪ್ರತಿಬಿಂಬೇಷು** - ತನ್ನ ಆತ್ಮನಪ್ರತಿಬಿಂಬಗಳಲ್ಲಿ, **ತೇಷಾಂ ಸ್ವಾತ್ಮನೋಽನನ್ಯತ್ವಂ ಜಾನನ್** - ಆ ಪ್ರತಿಬಿಂಬಗಳಿಗೂ ತನಗೂ ಏನೊಂದೂ ವ್ಯತ್ಯಾಸವಿಲ್ಲವು, ಎಲ್ಲವೂ ಒಂದೇ ಆತ್ಮಾ, ಎಂದು ತಿಳಿದನಂತರವೂ, **ತೇಭ್ಯಃ** - ಆ ಪ್ರತಿಬಿಂಬಗಳಿಗೆ, **ಕಿಮಪಿನೋಪದಿಶತಿ**—ಯಾವ ಉಪದೇಶವನ್ನೂ ಮಾಡುವದಿಲ್ಲವು. ಬಾಲರು, ಹುಚ್ಚರು, ಇಂತವರೀಗ ಕನ್ನಡಿ ಮೊದಲಾದವುಗ ಳಲ್ಲಿ ತಮ್ಮ ಪ್ರತಿಬಿಂಬ ಕಂಡರೆ, ಅದರೊಂದಿಗೆ ಏನಾದರೂ ಅನ್ಯವಸ್ಥೆಯಿಂದ ಮಾತಾಡ ಬಹುದು. ಈ ಲೋಕದಲ್ಲೇ ತಿಳವಳಿಕೆಯುಳ್ಳವರು ಯಾರೂ ಕನ್ನಡಿಯಲ್ಲಿ ತೋರುವ ತಮ್ಮ ಪ್ರತಿಬಿಂಬಗಳೊಂದಿಗೆ ಮಾತಾಡುವದಿಲ್ಲವು. ಇನ್ನು ಸರ್ವಜ್ಞನಾದ ಸರ್ವೇಶ್ವರನು ಮಾಡುತ್ತಾನೋ? ಇಲ್ಲವೆಂಬುದು ಕೈಮುತಿಕನ್ಯಾಯ ಸಿದ್ಧವೆಂಬ ಭಾವವು. ನಿಮ್ಮ ಸಿದ್ಧಾನ್ತ ಪ್ರಕಾರ, ಸರ್ವಜ್ಞ ನಾದ ಸರ್ವೇಶ್ವರನು ತನಗಿಂತಲೂ ಬೇರೆಯಾದುದು ಯಾವುದೂ ಇಲ್ಲವೆಂದು ತಿಳಿದವನಾಗಿ, ತನ್ನ ಪ್ರತಿಬಿಂಬವು ಮಿಥ್ಯಾರೂಪದಲ್ಲಿ ಕಂಡರೆ, ಅದಕ್ಕೆ ಉಪದೇಶಿಸುವನೋ ? ಎಂದಿಗೂ ಇಲ್ಲ ವೆಂಬ ಭಾವವು. ಲೌಕಿಕವಾದುದನ್ನೂ ಕೂಡ ಉಪದೇಶಿಸಲು ಸಾಧ್ಯವಿಲ್ಲವು. ಹೀಗಿರುವಲ್ಲಿ ಮೋಕ್ಷಶಾಸ್ತ್ರೋಪದೇಶವನ್ನು ಎಂದಿಗಾದರೂ ಪ್ರತಿಬಿಂಬಕ್ಕೆ ಸರ್ವೇಶ್ವರನು ಉಪದೇಶಿಸಿದನೆಂದರೆ ಶುದ್ಧ ಹಾಸ್ಯಾಲಾಪವಾಗುತ್ತದೆ.)

ಬಾಧಿತಾನುವೃತ್ತಿಜ್ಞಾನ ಬಂದರೂ ಕೂಡ ಭೇದದರ್ಶನಕ್ಕೆ ಕಾರಣವಿಲ್ಲವೆಂದು ಹಿಂದೆ ಹೇಳಲ್ಪಟ್ಟಿತು. ಈಗ ಬಾಧಿತಾನುವೃತ್ತಿಯೇ ಕೂಡುವದಿಲ್ಲವೆಂದು ಹೇಳುತ್ತಾರೆ. ಸರ್ವೇ ಶ್ವರನು ಸರ್ವಜ್ಞನು, ಅಂತವನಿಗೆ ಅವಿದ್ಯಾ ಮೂಲಕವಾಗಿ ಭ್ರಮವೂ, ಅದ್ವಿತೀಯ ಆತ್ಮ ಜ್ಞಾನವುಂಟಾದ ನಂತರವೂ, ಭ್ರಮದ ಅನುವರ್ತನವೂ ಉಂಟಾಗುತ್ತದೆಂದು ಹೇಳುವದು ಶಾಸ್ತ್ರಾ ನುಗುಣವಾದ ವಾದವಾಗುವದಿಲ್ಲವಾದುದರಿಂದ ಬಾಧಿತಾನುವೃತ್ತಿಯನ್ನು ಹೇಳಲು ಸಾಧ್ಯವೇ ಇಲ್ಲವೆಂದು ಹೇಳುತ್ತಾರೆ.

**ಬಾಧಿತಾನುವೃತ್ತಿರಪಿ** - ಬಾಧಿತವಾದ ಜ್ಞಾನವು ಪುನಃ ಅನುವರ್ತಿಸಿ ಬರುತ್ತದೆಂದು, **ತೈಃ** - ಆ ಅದ್ವೈತ ಸಿದ್ಧಾನ್ತಿಗಳಿಂದ, **ನಶಕ್ಯತೇ ವಕ್ತುಮ್** - ಹೇಳುವದಕ್ಕೇ ಆಗುವದಿಲ್ಲವು.

ಭಾ. ಬಾಧಿತಾನುವೃತ್ತಿರಪಿ ತೈರ್ನಶಕ್ಯತೇ ವಕ್ತುಮ್ :—ಬಾಧಕೇನಾದ್ವಿತೀಯಾತ್ಮಜ್ಞಾನೇನಾತ್ಮವ್ಯತಿರಿಕ್ತಭೇದಜ್ಞಾನಕಾರಣಸ್ಯಾನಾದೇರ್ವಿನಷ್ಟತ್ವಾತ್. ದ್ವಿಚಂದ್ರಜ್ಞಾನಾದೌ ತು ಚಂದ್ರೈಕತ್ವಜ್ಞಾನೇನ ಪಾರಮಾರ್ಥಿಕತಿಮಿರದೋಷಸ್ಯ ದ್ವಿಚಂದ್ರಜ್ಞಾನಹೇತೋರವಿನಷ್ಟತ್ವಾತ್ ಬಾಧಿತಾನುವೃತ್ತಿರ್ಯುಕ್ತಾ ; ಅನುವರ್ತಮಾನಮಪಿ ಪ್ರಬಲಪ್ರಮಾಣಬಾಧಿತತ್ವೇನಾಕಿಂಚಿತ್ಕರಮ್.

---

ಏಕೆಂದರೆ, ಕಾರಣವನ್ನು ತಿಳಿಸುತ್ತಾರೆ. ಇಲ್ಲಿ ಬಾಧಕ ಜ್ಞಾನವಾದರೋ ಅದ್ವಿತೀಯಾತ್ಮಜ್ಞಾನವು, ಪರಮಾತ್ಮನಲ್ಲದೆ ಬೇರೆ ಯಾವ ಆತ್ಮನೂ ಇಲ್ಲವು ಎಂಬ ಜ್ಞಾನವು; ಇದರಿಂದ ಅನಾದೇಃ ಆತ್ಮವ್ಯತಿರಿಕ್ತಭೇದಜ್ಞಾನಕಾರಣಸ್ಯ-ಆತ್ಮನಿಗಿಂತಲೂ ಬೇರೆಯಾದ ಭೇದಜ್ಞಾನಕ್ಕೆ ಕಾರಣವಾಗಿರುವ, ಅನಾದಿಯಾಗಿರುವ ಅಜ್ಞಾನವು, ವಿನಷ್ಟತ್ವಾತ್-ನಷ್ಟವಾಗಿ ಹೋಗಿರುವದರಿಂದ, ಸರ್ವೇಶ್ವರನಿಗೆ ಅನಾದಿಯಾಗಿರುವ ಅಜ್ಞಾನವು ನಷ್ಟವಾಗಿದೆ ಎಂದು ಒಪ್ಪಿಕೊಳ್ಳಬೇಕಾದುದರಿಂದ, ಯಾವಾಗ ಕಾರಣವಿಲ್ಲವೋ ಅದರ ಕಾರ್ಯವಾದ ಬಾಧಿತಾನುವೃತ್ತಿಯೂ ಇರಲು ಅವಕಾಶವಿಲ್ಲವು ಎಂಬ ಭಾವವು. ಇಲ್ಲಿ ಅನಾದಿಯಾಗಿರುವ ಭೇದಜ್ಞಾನವು ನಷ್ಟವಾಗಿದೆ ಎಂದೇ ಒಪ್ಪಿಕೊಳ್ಳಬೇಕು ಎಂದು ನಿರ್ಬಂಧಿಸುವಹಾಗೆ ಇದೆ, ಅದೇತಕ್ಕೆ ಹಾಗೆ ನಿರ್ಬಂಧವೆಂದೇನಾದರೂ ಕೇಳಿದರೆ, ಆಗ ಅನಾದಿಯಾಗಿರುವ ಭೇದಜ್ಞಾನವು ಇನ್ನೂ ಹೋಗಲಿಲ್ಲವೆಂದು ಒಪ್ಪಬೇಕಾಗುತ್ತದೆ. ಇದುವರೆಗೂ ಹೋಗದ ಭೇದಜ್ಞಾನವು ಇನ್ನೂ ಯಾವಾಗ ಹೋಗಬಹುದೆಂದು ಹೇಳಲು ಸಾಧ್ಯವು? ಆಗ ಈಶ್ವರನು ನಿತ್ಯ ಸಂಸಾರಿಯಾಗಿ ಯಾವಾಗಲೂ ಭೇದಜ್ಞಾನವುಳ್ಳವನೇ ಆಗಿರುತ್ತಾನೆಂದು ಹೇಳಬೇಕಾಗುತ್ತದೆ.

ಮುಂದೆ ಪೂರ್ವಪಕ್ಷಿಗಳು ಅಜ್ಞಾನನಿವೃತ್ತಿಯಾಗಿದ್ದರೂ ಬಾಧಿತಾನುವೃತ್ತಿಯುಂಟಾಗುವದನ್ನು ಕಂಡಿರುವೆವು ಅಲ್ಲವೇ ಎಂದು ಹೇಳಬಹುದೆಂದು ಭಾವಿಸಿ, ಅವರು ಕೊಡುವ ದೃಷ್ಟಾಂತವನ್ನೂ ಖಂಡಿಸುತ್ತಾರೆ. ದೃಷ್ಟಾಂತವು ಯಾವುದೆಂದರೆ, ಚಂದ್ರನು ಒಬ್ಬನೇ ಎಂದು ತಿಳಿದಿದ್ದರೂ, ಕೆಲವರಿಗೆ ಕಣ್ಣಿನ ದೋಷದಮೂಲಕ, ಚಂದ್ರನನ್ನು ನೋಡಿದಾಗೆಲ್ಲಾ ದ್ವಿಚಂದ್ರಜ್ಞಾನವುಂಟಾಗುವವನ್ನು ಕಂಡಿರುವೆವು ಅಲ್ಲವೇ ? ಅದು ಹೇಗೋ ಹಾಗೆಯೇ ಇಲ್ಲೂ ಎಂದರೆ, ಆ ವಾದವನ್ನು ಮುಂದೆ ಖಂಡಿಸುತ್ತಾರೆ:—ದ್ವಿಚಂದ್ರ ಜ್ಞಾನಾದೌ ತು-ಇಬ್ಬರು ಚಂದ್ರರೆಂಬ ಜ್ಞಾನವೇ ಮೊದಲಾದವುಗಳಲ್ಲಾದರೋ, ಚಂದ್ರೈಕತ್ವ ಜ್ಞಾನೇನ-ಚಂದ್ರನೊಬ್ಬನೆಂಬ ಬಾಧಕಜ್ಞಾನದಿಂದ, ದ್ವಿಚಂದ್ರಜ್ಞಾನಹೇತೋಃ-ಆ ದ್ವಿಚಂದ್ರಜ್ಞಾನಕ್ಕೆ ಕಾರಣಭೂತವಾದ, ಪಾರಮಾರ್ಥಿಕ ತಿಮಿರದೋಷಸ್ಯ—ನಿಶ್ಚಯವಾದ ಕಣ್ಣಿನಲ್ಲಿರುವ ದೋಷವು, ಅವಿನಷ್ಟತ್ವಾತ್-ನಷ್ಟವಾಗದೇ ಇರುವದರಿಂದ, ಬಾಧಿತಾನುವೃತ್ತಿಯು ಯುಕ್ತವಾದುದು, ಸರಿಯಾದುದು. ಅವರು ಕೊಟ್ಟಿರುವ ದೃಷ್ಟಾಂತವೇನೋ ಸರಿಯೇ, ದೃಷ್ಟಾಂತಕ್ಕೂ ದಾರ್ಷ್ಟಾಂತಿಕಕ್ಕೂ, ಅನುರೂಪ್ಯ - ಸಂಬಂಧವಿಲ್ಲವೆಂದು ತೋರ್ಪಡಿಸುತ್ತಾರೆ.) ಚಂದ್ರನು ಒಬ್ಬನೇ ಎಂಬ ಸರಿಯಾದ ತಿಳುವಳಿಕೆಯಿದ್ದರೂ, ಸತ್ಯವಾದ ತಿಮಿರದೋಷವು ಕಣ್ಣಿನಲ್ಲಿರುವವನಿಗೆ ಚಂದ್ರನನ್ನು ನೋಡಿದಾಗೆಲ್ಲಾ ಚಂದ್ರನು ಎರಡಾಗಿ ತೋರುವನು, ಹೀಗೆ ಭೇದಜ್ಞಾನ ನಿವೃತ್ತಿಸಿದ್ದರೂ ಬಾಧಿತಾನುವೃತ್ತಿಯುಂಟಲ್ಲಾ ಎಂದರೆ, ದ್ವಿಚಂದ್ರನಾಗಿ ತೋರುವದಕ್ಕೆ ಕಾರಣವು ಸತ್ಯವಾದ ಕಣ್ಣಿನ ತಿಮಿರ ದೋಷವು. (ಚಂದ್ರೈಕತ್ವಜ್ಞಾನವು ಈ ದೋಷವನ್ನು ನಾಶಮಾಡಲಾರದಾದುದರಿಂದ ಬಾಧಿತಾನುವೃತ್ತಿಯೇನೋ ಸರಿಯೇ.) ಆದರೆ ಭೇದಜ್ಞಾನವೂ ಮಿಥ್ಯಾ, ಭೇದವೂ ಮಿಥ್ಯಾ, ಅದಕ್ಕೆ ಕಾರಣವೂ ಮಿಥ್ಯಾ, ಆದುದ

ಭಾ. ಇಹತು ಭೇದ ಜ್ಞಾನಸ್ಯ ಸವಿಷಯಸ್ಯ ಸಕಾರಣಸ್ಯಾಪಾರಮಾರ್ಥಿಕತ್ವೇನ ವಸ್ತು ಯಾಥಾತ್ಮ್ಯಜ್ಞಾನ ವಿನಷ್ಟತ್ವಾನ್ನಕಥಂಚಿದಪಿ ಬಾಧಿತಾನುವೃತ್ತಿಃ ಸಂಭವತಿ. ಅತಃ ಸರ್ವೇಶ್ವರಸ್ಯೇದಾನೀನ್ತನ ಗುರುಪರಂಪರಾಯಾಶ್ಚ ತತ್ತ್ವಜ್ಞಾನ ಮಸ್ತಿಚೇತ್, ಭೇದ ದರ್ಶನ ತತ್ಕಾರ್ಯೋಪದೇಶಾದ್ಯ ಸಂಭವಃ. ನಾಸ್ತಿಚೇತ್, ಅಜ್ಞಾನಸ್ಯ ತದ್ಧೇತೋಃ ಸ್ಥಿತತ್ವೇನಾಽಜ್ಞತ್ವಾದೇವ ಸುತರಾ ಮುಪದೇಶೋ ನಸಂಭವತಿ.

---

ರಿಂದ ಅದ್ವಿತೀಯಾತ್ಮಜ್ಞಾನದಿಂದ ಈ ಮಿಥ್ಯಾಭೂತವಾದುವೆಲ್ಲಾ ನಿವೃತ್ತಿ ಹೊಂದಿವೆ, ಹೀಗಿರುವಾಗ ಬಾಧಿತಾನುವೃತ್ತಿಗೆ ಕಾರಣವಿಲ್ಲವು, ಆದುದರಿಂದ ಈಶ್ವರನು ಬಾಧಿತಾನುವೃತ್ತಿಯಿಂದ, ಭೇದವನ್ನು ನೀನು, ನಾನು, ಇವರು ಎಂದು ಬೋಧಿಸಿದನೆಂದು ಹೇಳಲು ಸಾಧ್ಯವಿಲ್ಲವೆಂಬ ಭಾವವು. **ಅನುವರ್ತಮಾನ ಮಪಿ** - ಒಂದುವೇಳೆ ಅನುವರ್ತಿಸಿ ಬಂದರೂ, **ಪ್ರಬಲ ಪ್ರಮಾಣ ಬಾಧಿತತ್ವೇನ** - ಪ್ರಬಲ ಪ್ರಮಾಣದಿಂದ ಬಾಧಿಸಲ್ಪಟ್ಟಿರುವವರಿಂದ, ( **ಅಕಿಂಚಿತ್ಕರಮ್** – ಅದೇನೂ ಕಾರ್ಯಕಾರಿಯಲ್ಲವು) (ದ್ವಿಚಂದ್ರಜ್ಞಾನ ಉಂಟಾದರೂ, ಚಂದ್ರನೊಬ್ಬನೆಂಬ ಪ್ರಬಲ ಪ್ರಮಾಣ ಬಲದಿಂದ, ಚಂದ್ರರಿಬ್ಬರೆಂದು ಯಾರಿಗೂ ಆತನು ಹೇಗೆ ಉಪದೇಶಿಸಲಾರನೋ, ಹಾಗೆಯೇ ಆತ್ಮೈಕತ್ವ ಜ್ಞಾನವಿರುವ ಸರ್ವೇಶ್ವರನು ದೇಹಬಹುತ್ವದಿಂದ ಆತ್ಮ ಬಹುತ್ವರೂಪವಾದ ಭೇದವನ್ನು ಎಂದಿಗೂ ಉಪದೇಶಿಸಲಾರನೆಂಬಭಿಪ್ರಾಯವು. ಇದನ್ನೇ ಮುಂದಿನ ವಾಕ್ಯಗಳಿಂದ ವ್ಯಕ್ತಪಡಿಸುತ್ತಾರೆ.)

**ಇಹತು** – ಈ ಸಂದರ್ಭದಲ್ಲಾದರೋ, ಭೇದಜ್ಞಾನವು ಅದರವಿಷಯದೊಂದಿಗೂ, ಅದರ ಕಾರಣದೊಂದಿಗೂ, ಎಲ್ಲವೂ, **ಅಪಾರಮಾರ್ಥಿಕತ್ವೇನ** - ಸತ್ಯವಾದುವಲ್ಲದೆ ಮಿಥ್ಯಾಭೂತವಾದುದರಿಂದ, ಇಲ್ಲಿಯಾದರೋ ಭೇದಜ್ಞಾನವೂ ಪರಮಾರ್ಥವಲ್ಲವು, ಅದಕ್ಕೆ ವಿಷಯವಾದುದೂ ಪರಮಾರ್ಥವಲ್ಲವು, ಅದಕ್ಕೆ ಕಾರಣವೂ ಸತ್ಯವಲ್ಲವು, ಹೀಗಿರುವಾಗ ಎಂಬ ಭಾವವು. **ವಸ್ತುಯಾಥಾತ್ಮ್ಯಜ್ಞಾನ ವಿನಷ್ಟತ್ವಾತ್**-ಪರಮಾತ್ಮನೊಬ್ಬನಾದ ವಸ್ತುವಿನ ನಿಶ್ಚಯಜ್ಞಾನದಿಂದ ನಷ್ಟವಾದುದರಿಂದ, **ಕಥಂಚಿದಪಿ** - ಅಜ್ಞಾನವು ಅನಾದಿಯಾಗಿ ಬಂದುದಾಗಲಿ ಅಥವಾ ಭೇದಜ್ಞಾನ ವಾಸನೆಯಿಂದಲಾಗಲಿ, **ಬಾಧಿತಾನುವೃತ್ತಿಯು, ನ ಸಂಭವತಿ** – ಉಂಟಾಗಲಾರದು, **ಅತಃ** - ಆ ಕಾರಣದಿಂದ, **ಸರ್ವೇಶ್ವರಸ್ಯ** - ಸರ್ವೇಶ್ವರನಿಗೂ, **ಇದಾನೀಂತನ ಗುರು ಪರಂಪರಾಯಾಶ್ಚ** - ಇದುವರೆಗೂ ಇರುವ ಗುರುಪರಂಪರೆಗೂ ಸಹ, **ತತ್ವಜ್ಞಾನಮಸ್ತಿ ಚೇತ್** - ತತ್ವಜ್ಞಾನವುಂಟೆಂದೇ ಹೇಳಬೇಕಾಗುವದರಿಂದ ಹಾಗೆ ಒಪ್ಪಿಕೊಳ್ಳುವದಾದರೆ, **ಬೇದ ದರ್ಶನ ತತ್ಕಾರ್ಯೋಪ ದೇಶಾದ್ಯಸಂಭವಃ** - ಭೇದದರ್ಶನವೂ ಅದರ ಕಾರ್ಯರೂಪವಾದ ಉಪದೇಶ ಮೊದಲಾದವುಗಳೆಲ್ಲಾ ಕೂಡುವದಿಲ್ಲವು. **ನಾಸ್ತಿಚೇತ್** - ಹಾಗೆ ತತ್ವಜ್ಞಾನವಿಲ್ಲವು ಎಂದರೆ, **ಅಜ್ಞಾನಸ್ಯ ತದ್ಧೇತೋಃ ಸ್ಥಿರತ್ವೇನ** - ಅಜ್ಞಾನವೂ ಅದರ ಕಾರಣವೂ ಸಹ ನಿವರ್ತಿಸಿ ಹೋಗದೆ ನಿಂತಿರುವದರಿಂದ, **ಅಜ್ಞತ್ವಾ ದೇವ** ಇವರುಗಳಲ್ಲೆಲ್ಲಾ ಅವಿಜ್ಞತೆ ಯಿರುವದರಿಂದಲೇ, **ಸುತರಾಂ, ಉಪದೇಶವು, ನಸಂಭವತಿ** – ಉಂಟಾಗಲಾರದು. ಉಪದೇಶಕರಾದ, ಸರ್ವೇಶ್ವರನೂ ಮತ್ತು ಈಗಿನವರೆಗೂ, ಇದ್ದ ಗುರುಗಳು ಇವರಿಗೆ ತತ್ತ್ವಜ್ಞಾನವಿದ್ದು ಉಪದೇಶಿಸಿದರೇ ಎಂದೂ ಅಥವಾ ಇಲ್ಲದೆ ಉಪದೇಶಿಸಿದರೇ ಎಂದೂ, ವಿಕಲ್ಪಿಸಿ, ಇದ್ದು ಉಪದೇಶಿಸಿದರು ಎಂದರೆ, ನಿಮ್ಮ ಸಿದ್ಧಾನ್ತ ಪ್ರಕಾರ ಆತ್ಮಾ ಒಂದೇ ಸತ್ಯವು, ಮಿಕ್ಕದ್ದೆಲ್ಲಾ ಮಿಥ್ಯಾ ಎಂಬ ಜ್ಞಾನ ಉಂಟಾದ ನಂತರ ಉಪದೇಶ ಹೊಂದುವನೂ ಮಿಥ್ಯಾವಾಗಿ, ಅದಕ್ಕೆ ಕಾರಣವೂ ಮಿಥ್ಯಾವಾಗಿರು

ಭಾ. ಕಿಂಚ ಗುರೋಃ ರದ್ವಿತೀಯಾತ್ಮವಿಜ್ಞಾನಾದೇವ ಬ್ರಹ್ಮಾಜ್ಞಾನಸ್ಯ ಸಕಾರ್ಯಸ್ಯ ವಿನಷ್ಟತ್ವಾತ್, ಶಿಷ್ಯಂ ಪ್ರತ್ಯುಪದೇಶೋ ನಿಷ್ಪ್ರಯೋಜನಃ. ಗುರುಸ್ತಜ್ಜ್ಞಾನಂಚ ಕಲ್ಪಿತ ಮಿತಿಚೇತ್, ಶಿಷ್ಯ ತಜ್ಜ್ಞಾನಯೋಃ ರಪಿಕಲ್ಪಿತತ್ವಾತ್ತದಪ್ಯ ನಿವರ್ತಕಮ್.

ವಾಗ ಉಪದೇಶ ಎಲ್ಲಿಯದು?) ಅವರುಗಳಿಗೆ ತತ್ತ್ವಜ್ಞಾನವಿಲ್ಲವೆಂದರೆ ಅವರುಗಳು ಅಜ್ಞರಾಗುವದರಿಂದ ಆ ಸಂದರ್ಭದಲ್ಲಿ ಅಂತಹವರುಗಳ ಉಪದೇಶವು ಸುತರಾಂ ಕೂಡುವದಿಲ್ಲವೆಂಬ ಭಾವವು.

(ಇದುವರೆಗೂ ಅದ್ವೈತ ಸಿದ್ಧಾನ್ತ ಪ್ರಕಾರ, ಉಪದೇಶವೇ ಕೂಡುವದಿಲ್ಲವೆಂದು ಹೇಳಿದರು, ಮುಂದೆ ಉಪದೇಶವು ನಿರರ್ಥಕವಾದುದಾಗುತ್ತದೆಂದು ಹೇಳುತ್ತಾರೆ.) ಕಿಂಚ - ಇಷ್ಟೇ ಅಲ್ಲವು, ಇನ್ನೂ ದೋಷ ಉಂಟೆಂದು ತಿಳಿಸುತ್ತಾರೆ. ಗುರೋಃ – ಗುರುವಿಗೆ, ಅದ್ವಿತೀಯಾತ್ಮವಿಜ್ಞಾನಾದೇವ - ಯಥಾರ್ಥವಾಗಿ ಆತ್ಮನೊಬ್ಬನೇ ಇರುವನು, ಇನ್ನು ಯಾವನೂ ಇಲ್ಲವು ಎಂಬ ವಿಶೇಷ ಜ್ಞಾನದಿಂದಲೇನೇ, ಬ್ರಹ್ಮಾಜ್ಞಾನಸ್ಯ ಸಕಾರ್ಯಸ್ಯ ವಿನಷ್ಟತ್ವಾತ್ - ಪರಬ್ರಹ್ಮನ ಅಜ್ಞಾನವೂ, ಅದರ ಕಾರ್ಯರೂಪವಾದ ಪ್ರಪಂಚವೆಲ್ಲವೂ ಮಿಥ್ಯಾವೆಂದು ತಿಳಿದುದರಿಂದ ಎಲ್ಲವೂ ನಷ್ಟವಾಗುವದರಿಂದ, ಶಿಷ್ಯಂ ಪ್ರತ್ಯುಪದೇಶಃ - ಶಿಷ್ಯನು ಮಿಥ್ಯಾಭೂತನೆಂದು ತಿಳಿದುಬಂದ ನಂತರ ಆತನನ್ನು ಕುರಿತು ಉಪದೇಶವು ನಿಷ್ಪ್ರಯೋಜನರೂಪವಾದುದು. ಗುರುವು ಉಪದೇಶಕ್ಕೆ ಅರ್ಹನಾಗಬೇಕಾದರೆ ಅದ್ವೈತ ಸಿದ್ಧಾಂತ ಪ್ರಕಾರ ಆತ್ಮನೊಬ್ಬನೇ ಸತ್ಯವು, ಮಿಕ್ಕಿದ್ದೆಲ್ಲವೂ ಮಿಥ್ಯಾ ಎಂಬ ನಿಶ್ಚಯಜ್ಞಾನವು ಆತನಿಗೆ ಉಂಟಾಗಿರಬೇಕು. ಹಾಗಿರುವಾಗ ಶಿಷ್ಯನೂ ಕೂಡ ಮಿಥ್ಯಾ ಎಂದು ತಿಳಿದ ನಂತರ ಉಪದೇಶವು ನಿಷ್ಪ್ರಯೋಜನವು ಎಂಬ ಭಾವವು. ಪ್ರತಿಬಿಂಬ ವಾದದಲ್ಲೇ ಈ ದೂಷಣವನ್ನೂ ಹೇಳಬಹುದಾಗಿತ್ತು; ಆದರೆ ಆ ಸಂದರ್ಭದಲ್ಲಿ ಉಪದೇಶವೇ ಕೂಡುವದಿಲ್ಲವೆಂದು ಮಾತ್ರ ಉಪಪಾದಿಸಲ್ಪಟ್ಟಿತು.

ಅದ್ವೈತಿಗಳು ಇನ್ನೂ ಹೇಳುವದೇನೆಂದರೆ:—ಪರಮಾತ್ಮನೊಬ್ಬನೇ ಇರುವವನು, ಅವಿದ್ಯಾಗೃಹೀತನಾಗಿರುವಾಗ ಜೀವನೆಂಬ ವ್ಯವಹಾರವು. ಆತನೂ ಒಬ್ಬನೇ; ಸ್ವಪ್ನದಲ್ಲಿರುವಾಗ ಹೇಗೋ ಹಾಗೆ ಭ್ರಮೆಯಿಂದ ಅನೇಕರಾಗಿ ತೋರುವರು, ಮುಂದೆ ಜಾಗರಾವಸ್ಥೆಯು ಅನೇಕ ಕಾಲದ ಮೇಲೆ ಉಂಟಾಗಿ, ಸಮಸ್ತ ಪ್ರಪಂಚವೂ ಮಿಥ್ಯಾವಾಗಿ ತೋರಿ, ಭ್ರಮವು ನಷ್ಟವಾಗುತ್ತದೆ ಎಂದು ಹೇಳುವರು. ಈ ಅಭಿಪ್ರಾಯವನ್ನು ಖಂಡಿಸುವದಕ್ಕಾಗಿ ಕೇಳುತ್ತಾರೆ, ಏನೆಂದರೆ, ಗುರುವು ಸರ್ವೇಶ್ವರನೋ ಅಥವಾ ಸ್ವಪ್ನದಲ್ಲಿ ಕಲ್ಪಿತವಾದ ಗುರುವೋ, ಹಾಗೆಯೇ ಶಿಷ್ಯನು ಅವನೇಯೋ, ಅಥವಾ ಸ್ವಪ್ನದಲ್ಲಿ ಕಲ್ಪಿತನೋ ಎಂದು ವಿಕಲ್ಪಿಸಿ, ಖಂಡಿಸುತ್ತಾರೆ. ಗುರುವು ಆತನೇ ಎಂಬ ವಿಕಲ್ಪಕ್ಕೆ ಹಿಂದಿನ ವಾಕ್ಯದಲ್ಲಿ, ಶಿಷ್ಯಂ ಪ್ರತ್ಯುಪದೇಶೋ ನಿರರ್ಥಕಃ - ಉಪದೇಶವು ನಿರರ್ಥಕವೆಂದು ಹೇಳಿದರು. ಶಿಷ್ಯನಿಗೆ ಗುರುವು ಸ್ವಪ್ನಕಲ್ಪಿತನೆಂಬ ಪಕ್ಷದಲ್ಲಿ ತೋರುವ ದೂಷಣವನ್ನು ಮುಂದೆ ಹೇಳುತ್ತಾರೆ. ಗುರುಸ್ತಜ್ಜ್ಞಾನಂಚ ಕಲ್ಪಿತಮಿತಿಚೇತ್ - ಗುರುವೂ ಆತನ ಜ್ಞಾನವೂ ಸ್ವಪ್ನಕಲ್ಪಿತವೆಂದರೆ, ಶಿಷ್ಯತಜ್ಜ್ಞಾನಯೋರಪಿ-ಶಿಷ್ಯನೂ ಅವನ ಜ್ಞಾನವೂ ಸಹ, ಕಲ್ಪಿತತ್ವಾತ್-ಸ್ವಪ್ನಕಲ್ಪಿತವಾದುದರಿಂದ, ತದಪ್ಯನಿವರ್ತಕಮ್-ಅಂತಹ ಅಜ್ಞಾನವೂ ಕೂಡ ಎಂದರೆ ಭೇದಜ್ಞಾನವು ಹೋಗಲಾಡಿಸತಕ್ಕದ್ದಲ್ಲವು. (ಶಿಷ್ಯನಿಗೆ ಗುರುವೂ ಆತನ ಜ್ಞಾನವೂ ಸ್ವಪ್ನಕಲ್ಪಿತವೆಂಬಂಶ ತಿಳಿದರೆ ಆತನು ಗುರುವಿನುಪದೇಶವನ್ನು ಎಂದಿಗೂ ಕೇಳುವನಲ್ಲವು.) (ಇಬ್ಬರೂ ಸ್ವಪ್ನದೃಶ್ಯರಾದರೆ ಗುರುವಿನುಪದೇಶವೂ ಶಿಷ್ಯನು ತಿಳಿಯುವದೂ ಎರಡೂ ಭ್ರಮರೂಪವಾಗಿ, ಉಪದೇಶವು ನಿರರ್ಥಕವು.) ಎರಡೂ ಕಲ್ಪಿತವಾದರೂ ಪೂರ್ವಜ್ಞಾನಕ್ಕೆ ವಿರುದ್ಧ

ಭಾ. ಕಲ್ಪಿತತ್ವೇಽಪಿ, ಪೂರ್ವವಿರೋಧಿತ್ವೇನ ನಿವರ್ತಕ ಮಿತಿಚೇತ್, ।ತದಾಚಾರ್ಯಜ್ಞಾನೇಽಪಿ ಸಮಾನಮಿತಿ ತದೇವ ನಿವರ್ತಕಂ ಭವತೀತ್ಯುಪದೇಶಾನರ್ಥಕ್ಯಮೇವ, ಇತಿ ಕೃತಮಸಮೀಚೀನವಾದೈರ್ನಿರಸ್ತೈಃ. ೧೨.

ವಾಗಿರುವ ಜ್ಞಾನವೇ ನಿವರ್ತಕವಾಗುತ್ತದೆ ಎಂದು ಪೂರ್ವಪಕ್ಷಿಯು ಹೇಳಬಹುದೆಂದು ಯೋಚಿಸಿ, ಅದನ್ನೂ ಖಂಡಿಸುತ್ತಾರೆ. **ಕಲ್ಪಿತತ್ವೇಽಪಿ** - ಇಬ್ಬರೂ ಅವರ ಜ್ಞಾನವೂ ಸ್ವಪ್ನಕಲ್ಪಿತವಾದರೂ, **ಪೂರ್ವವಿರೋಧಿತ್ವೇನ** – ಪೂರ್ವದ ಭೇದಜ್ಞಾನಕ್ಕೆ ವಿರೋಧಿಯಾಗುವದರಿಂದ, **ನಿವರ್ತಕಮಿತಿ ಚೇತ್** - ಭೇದಜ್ಞಾನಕ್ಕೆ ನಿವರ್ತಕವೆಂದು ಹೇಳಿದರೆ, **ತತ್** - ಅದು ಎಂದರೆ ಭೇದಜ್ಞಾನಕ್ಕೆ ನಿವರ್ತಕವಾಗುವದು, **ಆಚಾರ್ಯಜ್ಞಾನೇಽಪಿ** - ಗುರುವಿನ ಜ್ಞಾನದಲ್ಲೂ ಸಹ, **ಸಮಾನಮಿತಿ** – ಸಮಾನವಾದುದರಿಂದ, **ತದೇವ ನಿವರ್ತಕಂ ಭವತೀತಿ** - ಆ ಆಚಾರ್ಯಭೇದಜ್ಞಾನವೂ ಸಹ, ನಿವರ್ತಿಸತಕ್ಕದ್ದಾಗುತ್ತದೆಯಾದುದರಿಂದ, **ಉಪದೇಶಾನರ್ಥಕ್ಯಮೇವ** – ಶಿಷ್ಯನಿಗುಪದೇಶದ ನಿರರ್ಥಕತ್ವವೇ ಉಂಟಾಗುತ್ತದೆ; ಎಂದರೆ ಗುರುಶಿಷ್ಯರ ಜ್ಞಾನವೆರಡೂ ಸ್ವಪ್ನಕಲ್ಪಿತವು, ಆದರೆ ಪೂರ್ವದ ಅಜ್ಞಾನಕ್ಕೆ ವಿರೋಧಿಯಾಗಿ ಶಿಷ್ಯೋಪದೇಶವು ಸಪ್ರಯೋಜನವೇ ಎಂದರೆ, ಆಚಾರ್ಯಜ್ಞಾನವೂ ಸಮಾನವಾಗಿ, ಪೂರ್ವ ವಿರೋಧಿತ್ವೇನ ನಿವರ್ತಕವಾಗಿರುವಾಗ ಇನ್ನು ಬೇರೆ ಶಿಷ್ಯನಿಗೆ ಏಕೆ ಉಪದೇಶವು? ಆಗಲೂ ನಿರರ್ಥಕವೆಂಬ ಭಾವವು. ಇಲ್ಲಿ ಮುಖ್ಯವಾಗಿ ನಾವು ಗ್ರಹಿಸತಕ್ಕದ್ದೇನೆಂದರೆ, ಜೀವಾತ್ಮನೂ ಅವಿದ್ಯಾಗೃಹೀತನಾದ ಪರಮಾತ್ಮನಾದರೆ, ಗುರುವೂ ಕೂಡ ಅವಿದ್ಯಾಗೃಹೀತನಾಗಿರುವಾಗ, ಆತನ ಉಪದೇಶವು ತಾನೇ ಹೇಗೆ ಪರಮಾರ್ಥವು? ಆಗ ಶಾಸ್ತ್ರಗಳೂ ಉಪಯೋಗವಿಲ್ಲವು. (ಸರ್ವಜ್ಞನಾದ ಸರ್ವೇಶ್ವರನಿಗೆ ಅಜ್ಞಾನರೂಪವಾದ ಅವಿದ್ಯಾಶ್ರಯತ್ವವು ಕೂಡುವದಿಲ್ಲವೆಂದು ಏಳು ವಿಧ ಅನುಪಪತ್ತಿಗಳನ್ನು ಶ್ರೀಭಾಷ್ಯದ ಪ್ರಥಮಸೂತ್ರ ಭಾಷ್ಯದಲ್ಲಿ ಬಹು ವಿಸ್ತರವಾಗಿ ತೋರಿಸಿರುತ್ತಾರೆ.) ಪ್ರಾಜ್ಞರು ಕಟಾಕ್ಷಿಸಬಹುದು. (ಈ ಅವಿದ್ಯೆಯು ಎಂತಾದ್ದು, ಇರುವದೇ ಇಲ್ಲವೇ ಎಂದು ವಿಕಲ್ಪಿಸಿದರೆ, ಇರುವದು ಎಂದರೆ ಅದ್ವೈತಾಭಿಪ್ರಾಯಕ್ಕೆ ವಿರೋಧವೂ, ಇಲ್ಲವೆಂದರೆ ಶಾಸ್ತ್ರಗಳ ಮತ್ತು ಗುರೂಪದೇಶ ವೈಯರ್ಥ್ಯವೂ ಉಂಟಾಗುವದರಿಂದ, **ಸದಸದನಿರ್ವಚನೀಯ** ಎಂದು ಅದ್ವೈತಿಗಳ ಉಕ್ತಿಗೆ ಯಾವ ಪ್ರಮಾಣಾಧಾರವೂ ಇಲ್ಲವೆಂದು ಅಲ್ಲಿ ಪ್ರದರ್ಶಿಸಿರುತ್ತಾರೆ. ಗುರುವಿನ ಉಪದೇಶವೂ ಶಾಸ್ತ್ರಜ್ಞಾನವೂ ಸಾರ್ಥಕ್ಯವನ್ನು ಹೊಂದಬೇಕಾದರೆ, ಜೀವಾತ್ಮ ಪರಮಾತ್ಮ ಭೇದವನ್ನಂಗೀಕರಿಸಲೇ ಬೇಕೆಂಬುದು ಸ್ಥಾಪಿತವು. ಸ್ವಾಮಿಯಾದ ಪರಮಾತ್ಮನು ತನ್ನ ದಾಸನಾದ ಅರ್ಜುನನಿಗೆ ಶಾಸ್ತ್ರೋಪದೇಶವನ್ನು ಮಾಡಿದನೆಂದರೆ ಸರ್ವಸಮಂಜಸವಾಗುತ್ತದೆ. ಹಾಗಲ್ಲದೆ ಆತ್ಮ ಒಂದೇ ಇರುವದೆಂದೂ ಇನ್ನು ಯಾವುದೂ ಇಲ್ಲವೆಂಬುವರಿಗೆ ಶಾಸ್ತ್ರಾರಂಭಕ್ಕೆ ಕಾರಣವೇ ಇರುವದಿಲ್ಲವು. **ಇತಿ** – ಎಂಬಲ್ಲಿಗೆ, **ನಿರಸ್ತೈಃ** - ಚನ್ನಾಗಿ ಶ್ರೀ ಭಾಷ್ಯದಲ್ಲಿ ಖಂಡಿಸಲ್ಪಟ್ಟ, **ಅಸಮೀಚೀನವಾದೈಃ** – ಇಂತಹ ಅಸಮಂಜಸವಾದ ವಾದಗಳಿಂದಲೂ, **ಕೃತಂ** – ಸಾಕು; ಅವುಗಳಿಂದ ಸಾಧಿಸತಕ್ಕದ್ದು ಏನೂ ಇಲ್ಲವು ಎಂದರೆ ಅವುಗಳಿಲ್ಲಿಗೆ ಸಾಕು ಎಂಬ ಭಾವವು.)

**ಮೂಲಕ್ಕೆ ಅರ್ಥವು:**—ಹಿಂದಿನ ಶ್ಲೋಕದಲ್ಲಿ ಈಶ್ವರನು ಹೇಗೆ ನಿತ್ಯನೋ, ಹಾಗೆಯೇ ಜೀವಾತ್ಮರೂ ನಿತ್ಯರೆಂದು ಹೇಳಲ್ಪಟ್ಟಿತು. ಆತ್ಮರು ನಿತ್ಯರೆಂದರೆ, ಮನುಷ್ಯರು ಹುಟ್ಟುತ್ತಾರೆ, ಬೆಳೆಯುತ್ತಾರೆ, ಸಾಯುತ್ತಾರೆ ಇತ್ಯಾದಿ ವ್ಯವಹಾರ ಹೇಗೆ ಎಂಬುವ ಶಙ್ಕಾವಿಗೆ ಒಂದು ದೃಷ್ಟಾಂತ ಮೂಲಕವಾಗಿ ಪರಿಹಾರವನ್ನು ಹೇಳುತ್ತಾರೆ. **ದೇಹಿನಃ** – ದೇಹಯುಕ್ತನಾದ ಈ ಆತ್ಮಾವಿಗೆ,

ಮೂ. ದೇಹಿನೋಽಸ್ಮಿನ್ಯಥಾದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರ ಪ್ರಾಪ್ತಿ ರ್ಧೀರ ಸ್ತತ್ರ ನ ಮುಹ್ಯತಿ ॥ ೧೩.

ಭಾ. ಏಕಸ್ಮಿನ್ ದೇಹೇ ವರ್ತಮಾನಸ್ಯ ದೇಹಿನಃ ಕೌಮಾರಾವಸ್ಥಾಂ ವಿಹಾಯ ಯೌವನಾದ್ಯವಸ್ಥಾ ಪ್ರಾಪ್ತೌ ಆತ್ಮನಃ ಸ್ಥಿರತ್ವ ಬುದ್ಧ್ಯಾ ಯಥಾತ್ಮಾ ನಷ್ಟ ಇತಿ ನ ಶೋಚತಿ, ದೇಹಾದ್ದೇಹಾನ್ತರ ಪ್ರಾಪ್ತಾವಪಿ ತಥೈವ ಸ್ಥಿರ ಆತ್ಮೇತಿ ಬುದ್ಧಿಮಾ ನ್ನಶೋಚತಿ. ಅತ ಆತ್ಮನಾಂ ನಿತ್ಯತ್ವಾ ದಾತ್ಮಾನೋ ನ ಶೋಕಸ್ಥಾನಂ.

ಅಸ್ಮಿನ್ ದೇಹೇ–ಈ ದೇಹದಲ್ಲೇ, ಕೌಮಾರಂ–ಶೈಶವವೂ, ಯೌವನವೂ, ಜರಾ–ಮುಪ್ಪೂ ಸಹ, ಯಥಾ – ಹೇಗೋ, ತಥಾ - ಹಾಗೆಯೇ, ದೇಹಾಂತರ ಪ್ರಾಪ್ತಿಃ - ಬೇರೆ ದೇಹದ ಪ್ರಾಪ್ತಿಯೂ ಉಂಟಾಗುತ್ತದೆ. ತತ್ರ - ಆ ಸಂದರ್ಭದಲ್ಲಿ, ಧೀರಃ–ಧಿಯಾ ರಮತೇ ಎಂಬ ವ್ಯುತ್ಪತ್ತಿಯಿಂದ ದೇಹ ಬೇರೆ, ಆತ್ಮಾ ಬೇರೆ ಎಂಬ ವಿವೇಕ ಜ್ಞಾನದಿಂದ ರಮಿಸುವ ಪಂಡಿತನು, ನಮುಹ್ಯತಿ - ಭ್ರಮಯುಕ್ತನಾಗುವದಿಲ್ಲವು; ಎಂದರೆ ಭ್ರಮದಿಂದ ಶೋಕಿಸುವದಿಲ್ಲವು ಎಂದರ್ಥವು. ಇಲ್ಲಿ ದೇಹೀ ಎಂದೂ ಆತ್ಮನನ್ನು ಹೇಳಿ, ಆತನಿಗೆ ಪ್ರಾಪ್ತವಾಗಿರುವ ದೇಹವೆಂದೂ ಹೇಳಿದುದರಿಂದ ದೇಹ ಬೇರೆ, ಆತ್ಮಾ ಬೇರೆ ಎಂದೂ ಉಪದೇಶಿಸಲ್ಪಟ್ಟಿತು. ಕೌಮಾರ, ಯೌವನ, ಜರಾ ಇವೆಲ್ಲಾ ದೇಹದ ಪರಿಣಾಮಗಳೇ ವಿನಾ ಆತ್ಮನಿಗೆ ಸೇರಿದ ವಿಕಾರವಲ್ಲವೆಂದೂ ಹೇಳಲ್ಪಟ್ಟಿತು. ಹಾಗೆಯೇ ಈ ಆತ್ಮನು, ಬೇರೆ ದೇಹವನ್ನೂ ಕೂಡ ಹೊಂದುವನು. ಈ ಆತ್ಮನಿಗೆ ಈ ವಿಕಾರಗಳು ಯಾವುವೂ ಸೇರಿದವಲ್ಲವೆಂದೂ ಬೋಧಿಸಲ್ಪಟ್ಟಿತು. ಆದುದರಿಂದ ಮನುಷ್ಯನು ಮರಣ ಹೊಂದಿದರೆ ನಷ್ಟನಾದನೆಂದು ಭ್ರಮಿಸುವದು ಯುಕ್ತವಲ್ಲವೆಂದುಪದೇಶಿಸಲ್ಪಟ್ಟಿತು.

ಭಾಷ್ಯಾರ್ಥವು:—ಆತ್ಮರುಗಳ ವಿಷಯದಲ್ಲಿ ಶೋಕಿಸಲು ನಿಮಿತ್ತವಿಲ್ಲವು ಎಂದು ಹೇಳಲು ಹೊರಟು ಆತ್ಮನಿತ್ಯತ್ವವನ್ನು ಉಪದೇಶಿಸುತ್ತಾರೆ. ಏಕಸ್ಮಿನ್ ದೇಹೇ ವರ್ತಮಾನಸ್ಯ ದೇಹಿನಃ - ಒಂದೇ ದೇಹದಲ್ಲೇ ಇರುವ ಮನುಷ್ಯನಿಗೆ, ಅಸ್ಮಿನ್ ದೇಹೇ ಎಂದು ಮೂಲದಲ್ಲಿರುವದರಿಂದ ಏಕಸ್ಮಿನ್ ದೇಹೇ ಎಂಬರ್ಥವು ತೋರಿಬರುತ್ತದೆ. ಕೌಮಾರಾವಸ್ಥಾಂ ವಿಹಾಯ – ಬಾಲ್ಯಾವಸ್ಥೆಯನ್ನು ಬಿಟ್ಟು, ಯೌವನಾದ್ಯವಸ್ಥಾ ಪ್ರಾಪ್ತೌ - ಯೌವನವೇ ಮೊದಲಾದ ಅವಸ್ಥೆಗಳು ಕ್ರಮವಾಗಿ ಉಂಟಾಗಲಾಗಿ, ಆತ್ಮನಃ ಸ್ಥಿರತ್ವ ಬುದ್ಧ್ಯಾ – ಆತ್ಮನು ನಿತ್ಯನಾಗಿ ನಿರ್ವಿಕಾರನು ಎಂಬ ಬುದ್ಧಿಯಿಂದ, ಆತ್ಮಾನಷ್ಟ ಇತಿ - ಆತ್ಮನು ಹೀಗೆ ನಷ್ಟನಾಗುತ್ತಾ ಬಂದನೆಂದು, ಯಥಾ ನಶೋಚತಿ - ಹೇಗೆ ಶೋಕಿಸುವದಿಲ್ಲವೋ, ದೇಹಾದ್ದೇಹಾಂತರ ಪ್ರಾಪ್ತಾವಪಿ - ಈ ದೇಹದಿಂದ ಬೇರೆ ದೇಹ ಉಂಟಾದರೂ ಕೂಡ, ತಥೈವ - ಹಾಗೆಯೇ, ಸ್ಥಿರ ಆತ್ಮೇತಿ - ಆತ್ಮನು ನಿತ್ಯನಾದುದರಿಂದ ಸ್ಥಿರನೆಂದು ತಿಳಿದು, ಬುದ್ಧಿಮಾನ್ - ಪ್ರಾಜ್ಞನು, (ಇದು ಧೀರ ಶಬ್ದಾರ್ಥವು), ನ ಶೋಚತಿ - ಶೋಕಿಸುವದಿಲ್ಲವು. ಅತಃ - ಆದುದರಿಂದ, ಆತ್ಮನಾಂ ನಿತ್ಯತ್ವಾತ್ – ಆತ್ಮರು ನಿತ್ಯರಾದುದರಿಂದ, ಆತ್ಮಾನಃ - ಆತ್ಮರುಗಳು, ನ ಶೋಕಸ್ಥಾನಂ - ಶೋಕಕ್ಕೆ ವಿಷಯರಲ್ಲವು. ಆದುದರಿಂದ ಈಗ ಮಾಡತಕ್ಕದ್ದೇನು ಎಂದರೆ ಮುಂದಿನ ಶ್ಲೋಕವು ತಿಳಿಸುತ್ತದೆ.

ಏತಾವದತ್ರ ಕರ್ತವ್ಯಂ - ಇಷ್ಟು ಮಾತ್ರವೇ ಈಗ ಮಾಡತಕ್ಕದ್ದಾಗಿರುತ್ತದೆ, ಏನೆಂದರೆ:— ಅನಾದಿ ಕರ್ಮವಶ್ಯ ಆತ್ಮನಾಂ ಇತ್ಯಾದಿ - ಜೀವಾತ್ಮರುಗಳೂ ಕೂಡ ನಿತ್ಯರೇಯಾದುದರಿಂದ, ಅವರಿಗುಂಟಾದ ಅನಾದಿಕರ್ಮಗಳಿಗೆ ಅವರು ವಶರಾಗಿರುವದರಿಂದ, ತತ್ತತ್ಕರ್ಮೋಚಿತ ತಯಾ – ಅವರವರುಗಳ ಕರ್ಮಗಳಿಗೆ ಯೋಗ್ಯವಾದ ದೇಹಯುಕ್ತರಾಗಿ ಜನಿಸಿ, ದೇಹಸಂಸೃಷ್ಟಾನಾಂ –

**ಭಾ.** ಏತಾವದತ್ರ ಕರ್ತವ್ಯಂ—ಆತ್ಮನಾಂ ನಿತ್ಯಾನಾಮೇವಾನಾದಿಕರ್ಮವಶ್ಯತಯಾ ತತ್ತತ್ಕರ್ಮೋಚಿತ ದೇಹ ಸಂಸೃಷ್ಟಾನಾಂ ತೈರೇವ ದೇಹೈರ್ಬಂಧ ನಿವೃತ್ತಯೇ ಶಾಸ್ತ್ರೀಯಂ ಸ್ವವರ್ಣೋಚಿತಂ ಯುದ್ಧಾದಿಕಮನಭಿ ಸಂಹಿತಫಲಂ ಕರ್ಮ ಕುರ್ವತಾಮವರ್ಜನೀಯತಯಾ ಇನ್ದ್ರಿಯೈರಿಂದ್ರಿಯಾರ್ಥ ಸ್ಪರ್ಶಾಶ್ಶೀತೋಷ್ಣಾದಿ ಪ್ರಯುಕ್ತ ಸುಖ ದುಃಖದಾ ಭವನ್ತಿ, ತಾಂಸ್ತು ಯಾವಚ್ಛಾಸ್ತ್ರೀಯ ಕರ್ಮ ಸಮಾಪ್ತಿ ಕ್ಷಂತವ್ಯಾ ಇತಿ.

---

**ತೈರೇವ ದೇಹೈಃ** - ಆ ದೇಹಗಳಿಂದಲೇ, **ಬಂಧನಿವೃತ್ತಯೇ** - ಆ ದೇಹಗಳಿಂದುಂಟಾದ ಬಂಧವು ನಿವೃತ್ತಿಸುವದಕ್ಕಾಗಿ, **ಶಾಸ್ತ್ರೀಯಂ** - ಶಾಸ್ತ್ರಸಮ್ಮತವಾದ, **ಸ್ವವರ್ಣೋಚಿತಂ** – ಕ್ಷತ್ರಿಯನಾದ ತನ್ನ ವರ್ಣಕ್ಕೆ ಯೋಗ್ಯವಾದ, **ಯುದ್ಧಾದಿಕಂ** - ಯುದ್ಧವೇ ಮೊದಲಾದವುಗಳನ್ನು, ಇಲ್ಲಿ **ಶಾಸ್ತ್ರೀಯಂ** ಕರ್ಮ ಎಂದು ಹೇಳಿದುದರಿಂದ ಅಂತಹ ಆಜ್ಞಾರೂಪ ಕರ್ಮಗಳನ್ನು ಮಾಡಿಯೇ ತೀರಬೇಕು, ಹಾಗೆ ಮಾಡದೇ ಇದ್ದರೆ ಭಗವಂತನ ಆಜ್ಞೆಯನ್ನು ಮೀರಿದವನಾಗಿ ಶಿಕ್ಷೆಗೆ ಗುರಿಯಾಗುವನೆಂಬುದು ಸೂಚಿಸಲ್ಪಟ್ಟಿತು. ಆದಿ ಶಬ್ದದಿಂದ, ಒಂದು ವೇಳೆ ಬ್ರಾಹ್ಮಣ ವೈಶ್ಯಾದಿಗಳಾಗಿದ್ದರೆ, ಅಂಥಾ ವರ್ಣೋಚಿತ ಕರ್ಮಗಳು ಹೇಳಲ್ಪಟ್ಟವು, **ಅನಭಿಸಂಹಿತ ಫಲಂ ಕರ್ಮ** – ಫಲಾಭಿಸಂಧಿಯಿಲ್ಲದೆ ಇರುವಹಾಗೆ ಕರ್ಮವನ್ನು, **ಕುರ್ವತಾಂ** - ಮಾಡುವವರಿಗೆ, **ಅವರ್ಜನೀಯತಯಾ** - ತಪ್ಪಿಸಲ್ಲವಾದುದರಿಂದ, **ಇಂದ್ರಿಯೈಃ**–ಇಂದ್ರಿಯಗಳ ಮೂಲಕವಾಗಿ, **ಇಂದ್ರಿಯಾರ್ಥ ಸ್ಪರ್ಶಾಃ** – ಶಬ್ದಾದಿ ವಿಷಯ ಸಂಬಂಧಗಳು, ಶೀತೋಷ್ಣಾದಿಗಳ ಪ್ರಯುಕ್ತವಾದ ಸುಖದುಃಖಗಳನ್ನೀಯುವುವು ಆಗುವವು. **ತಾಂಸ್ತು** - ಹಾಗೆ ಅವಶ್ಯಾನುಭವಗಳಾದ ವಿಷಯಸಂಬಂಧಗಳು **ಯಾವಚ್ಛಾಸ್ತ್ರೀಯ ಕರ್ಮಸಮಾಪ್ತಿ** - ಎಲ್ಲಿಯವರೆಗೂ ಅವರುಗಳ ಶಾಸ್ತ್ರಸಮ್ಮತವಾದ ಸ್ವವರ್ಣೋಚಿತ ಕರ್ಮಸಮಾಪ್ತಿಯಾಗಬೇಕೋ ಅವರೆಗೂ, **ಕ್ಷಂತವ್ಯಾ ಇತಿ** – ಸಹಿಸತಕ್ಕವುಗಳು, ಇದು **ತಿತಿಕ್ಷಸ್ವ** ಎಂದು ಮೂಲದಲ್ಲಿರುವ ಪ್ರಯೋಗದಿಂದಲೂ ಮತ್ತು ಮುಂದಿನ ಶ್ಲೋಕದಲ್ಲಿರುವ **ತಿತಿಕ್ಷಸ್ವ** ಎಂಬುದರಿಂದಲೂ ಉಂಟಾಗುವ ಅರ್ಥವು. ಇದೀಗ ಕರ್ತವ್ಯಾಂಶವೆಂಬ ಭಾವವು. ಈ ನಿತ್ಯರಾದ ಆತ್ಮರುಗಳಿಗೆ ಪ್ರಕೃತಿ ಸಂಬಂಧದಿಂದ ಕರ್ಮಗಳೂ ಅನಾದಿಯಾಗಿ ಸಂಬಂಧಿಸಿವೆ. ಈ ಕರ್ಮಗಳಿಗನುಸಾರವಾಗಿ ಈ ಆತ್ಮರುಗಳಿಗೆ ಇಂದ್ರಿಯಗಳಿಂದ ಸೇರಿದ ದೇಹ ಪ್ರಾಪ್ತಿಯು. ಮನುಷ್ಯಾದಿ ಜನ್ಮಗಳಲ್ಲಿ ಸರ್ವೇಶ್ವರನು ಕರ್ಮಾನುಗುಣವಾಗಿ ದಯಪಾಲಿಸಿದ ದೇಹಗಳಿಂದ ಎರಡು ಕೆಲಸಗಳಾಗತಕ್ಕದ್ದು. (೧) ಪ್ರಾರಬ್ಧಕರ್ಮಾನುಗುಣವಾಗಿ ಸುಖದುಃಖೋಪಭೋಗಗಳಗೆ ಈ ದೇಹಗಳು ಸಾಧಕಗಳು. ಇವುಗಳನ್ನು "**ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ**" ಎಂದು ಹೇಳಿರುವ ಮೇರೆಗೆ ಅನುಭವಿಸಿಯೇ ತೀರಬೇಕು. ಇದನ್ನೇ **ಅವರ್ಜನೀಯತಯಾ** ಎಂದೂ, **ತಾಂಸ್ತು ಕ್ಷಂತವ್ಯಾಃ** ಎಂದೂ ಹೇಳಿದರು. (೨) ಸ್ವಾಮಿಯು ತನ್ನ ನಿರ್ಹೇತುಕ ಕೃಪೆಯಿಂದ ಕೊಟ್ಟ ಶರೀರಗಳೇ ಇವರುಗಳಿಗೆ ಪರಮ ನಿಶ್ಶ್ರೇಯಸ್ಸಿಗೂ ಕೂಡ ಉಪಕಾರಕಗಳಾಗಿ ಮಾಡಿಕೊಳ್ಳಲೆಂಬಭಿಪ್ರಾಯದಿಂದ ಕೊಟ್ಟಿರುವನು. ಆದುದರಿಂದ ಸ್ವವರ್ಣೋಚಿತ ಕರ್ಮಗಳನ್ನು ಫಲಾಭಿಸಂಧಿರಹಿತವಾಗಿ ಮಾಡಲೇಬೇಕು. ·ಬಿಟ್ಟರೆ ಪ್ರತ್ಯವಾಯ ಉಂಟು. ಈ ಯುದ್ಧ ಮಾಡುವದಕ್ಕಿಂತ ಭಿಕ್ಷಾಟನೆಯನ್ನಾದರೂ ಮಾಡಬಹುದು ಎಂದು ಹೇಳಲು ಸಾಧ್ಯವಿಲ್ಲವು. ತನ್ನನ್ನು ಈ ಜೀವಾತ್ಮರೆಲ್ಲಾ ಹೊಂದಲೆಂಬುದೇ ಸರ್ವೇಶ್ವರನ ಆಶಯವು. ಇದನ್ನೂ ಮಾಡುವದಲ್ಲದೆ, ಅದುವರೆಗೂ ಉಂಟಾಗಬಹುದಾದ ಪ್ರಾರಬ್ಧಕರ್ಮ ಫಲಗಳಾದ ಸುಖದುಃಖಾದಿಗಳನ್ನು ಸಹಿಸಿಕೊಳ್ಳತಕ್ಕದ್ದು. ಇವೇ ಈಗ ಕರ್ತವ್ಯಾಂಶಗಳೆಂಬ ಭಾವವು.

**ಭಾ. ಅವ.** ಇಮಮರ್ಥ ಮನನ್ತರ ಮೇವಾಹ—

**ಮೂ.** ಮಾತ್ರಾ ಸ್ಪರ್ಶಾಸ್ತು ಕೌನ್ತೇಯ ಶೀತೋಷ್ಣ ಸುಖದುಃಖದಾಃ ।
ಆಗಮಾಪಾಯಿನೋ ನಿತ್ಯಾಸ್ತಾಂ ಸ್ತಿತಿಕ್ಷಸ್ವ ಭಾರತ ॥ ೧೪.

**ಭಾ.** ಶಬ್ದಸ್ಪರ್ಶರೂಪರಸಗನ್ಧಾ ಸ್ಸಾಶ್ರಯಾ ಸ್ತನ್ಮಾತ್ರಾಕಾರ್ಯತ್ವಾ ನ್ಮಾತ್ರಾ ಇತ್ಯುಚ್ಯನ್ತೇ. ಶ್ರೋತ್ರಾದಿಭಿಸ್ತೇಷಾಂ ಸ್ಪರ್ಶಾ ಶ್ಶೀತೋಷ್ಣಮೃದುಪರುಷಾದಿರೂಪಸುಖದುಃಖದಾ

---

**ಭಾಷ್ಯಾವತಾರಿಕೆಯ ಅರ್ಥವು :—ಇಮಮರ್ಥಂ** - ಈ ಅಭಿಪ್ರಾಯವನ್ನೇ ಎಂದರೆ ಪ್ರಾರಬ್ಧಕರ್ಮಾನುಗುಣವಾಗಿ ಪ್ರಾಪ್ತವಾಗುವದನ್ನು ಸಹಿಸತಕ್ಕದ್ದೆಂಬುದನ್ನು, **ಅನಂತರಮೇವಾಹ** - ಒಡನೆಯೇ ಎಂದರೆ ಈ ಮುಂದಿನ ಶ್ಲೋಕದ ಮೂಲಕವೇ, **ಆಹ** - ತಿಳಿಸುತ್ತಾರೆ.

**ಮೂಲಕ್ಕೆ ಅರ್ಥವು :—ಹೇ ಕೌಂತೇಯ** - ಓ ಕುಂತೀಪುತ್ರನೇ, **ಓ ಭಾರತ** - ಓ ಭರತಕುಲೋತ್ಪನ್ನನಾದ ಅರ್ಜುನನೇ, ಇದರಿಂದ ಧೀರ ಕ್ಷತ್ರಿಯಕುಲೋದ್ಭೂತನೆಂಬ ಭಾವವೂ ಅದರಿಂದ **ವಿಪದಿಧೈರ್ಯಂ** ಎಂದು ಹೇಳಿರುವ ಹಾಗೆ ವಿಪತ್ತುಂಟಾದ ಕಾಲದಲ್ಲಿ ಸಹಿಸಿಕೊಳ್ಳುವ ಧೈರ್ಯ ಉಂಟೆಂಬ ಭಾವವು; **ಮಾತ್ರಾ ಸ್ಪರ್ಶಾಸ್ತು – ಮಾತ್ರಾ** - ಪಂಚತನ್ಮಾತ್ರೆಗಳ ಕಾರ್ಯರೂಪವಾದ ಶಬ್ದ ಸ್ಪರ್ಶ ರೂಪ ರಸ ಗಂಧಗಳೂ, ಅವುಗಳಿಗೆ ಆಶ್ರಯಗಳಾದ ವಿಷಯಗಳೂ, ಇವುಗಳಿಗೆ, **ಸ್ಪರ್ಶಾಸ್ತು** - ಇಂದ್ರಿಯಗಳೊಂದಿಗೆ ಸಂಬಂಧಗಳಾದರೋ, **ಶೀತೋಷ್ಣಗಳ ಮೂಲಕ ಸುಖದುಃಖ**ಗಳನ್ನು ಕೊಡುವಂಥಾವುಗಳು, **ಆಗಮಾಪಾಯಿನಃ** - ಬರತಕ್ಕವು, ಹೋಗತಕ್ಕವು, ಆದುದರಿಂದಲೇ, ಅನಿತ್ಯವಾದವುಗಳು, ಇಲ್ಲಿ ನಿತ್ಯಾಃ ಎಂದೂ ಪದಚ್ಛೇದವಾಗುತ್ತದೆ. ಆಗ **ಪ್ರವಾಹತಃ ನಿತ್ಯಾಃ** ಎಂದೂ ಅರ್ಥ ಮಾಡಬೇಕಾಗುತ್ತದೆ, ಏಕೆಂದರೆ ಆ ಅನುಭವಗಳು ಅನಿತ್ಯವಾದುದರಿಂದ ಸದಾ ಸಂಬಂಧವುಳ್ಳವುಗಳು ಎಂದರ್ಥಮಾಡಿ, ಅವುಗಳು ಸಹಿಸತಕ್ಕವು ಎಂದೂ ಭಾವಿಸಬಹುದು, ಈ ಅರ್ಥಗಳು ಮುಂದವು ಎಂದು ಶ್ರೀ ದೇಶಿಕರಭಿಪ್ರಾಯವು. ಮುಕ್ತರಲ್ಲಿ ಇವುಗಳಿಲ್ಲವಾದುದರಿಂದ ಪ್ರವಾಹತಃ ನಿತ್ಯವೆಂದೂ ಹೇಳುವದೂ ಕೂಡ ಅಸಾಧ್ಯವು. ಆದುದರಿಂದ **ಅನಿತ್ಯಾಃ** ಎಂಬ ಪದಚ್ಛೇದವೇ ಶ್ರೀ ಭಾಷ್ಯಕಾರರಿಗೆ ಅಭಿಮತವೂ ಮತ್ತು ಯುಕ್ತವೂ, **ತಾನ್** – ಅವುಗಳನ್ನು, **ಶೀತೋಷ್ಣ** ಸುಖದುಃಖಗಳನ್ನು, **ತಿತಿಕ್ಷಸ್ವ** - ಸಹಿಸಿಕೊಳ್ಳತಕ್ಕದ್ದು. ಈ ಶೀತೋಷ್ಣಸುಖಗಳು ಪ್ರಾರಬ್ಧ ಕರ್ಮಫಲಗಳು, ಜನ್ಮಕಾಲದಲ್ಲೇ ಇವುಗಳು ಏರ್ಪಟ್ಟವು, ಅವುಗಳನ್ನು ಸಹಿಸಿಕೊಳ್ಳತಕ್ಕದ್ದು ಎಂದುಪದೇಶಿಸಿದರು, ಏಕೆಂದರೆ ಅವು ತಪ್ಪಿದ್ದಲ್ಲವು.

**ಭಾಷ್ಯಾರ್ಥವು :—ಶಬ್ದ ಸ್ಪರ್ಶ ರೂಪ ರಸ ಗಂಧಗಳೂ, ಸಾಶ್ರಯಾಃ** – ಅವುಗಳಿಗೆ ಆಶ್ರಯಗಳಾದ ವಿಷಯಗಳೂ, **ತನ್ಮಾತ್ರಾಕಾರ್ಯತ್ವಾತ್** – ತನ್ಮಾತ್ರೆಗಳ ಕಾರ್ಯಭೂತವಾದವುಗಳಾದುದರಿಂದ, **ಮಾತ್ರಾ ಇತ್ಯುಚ್ಯನ್ತೇ**–ಮಾತ್ರಾಃ ಎಂಬದಾಗಿ ಹೇಳಲ್ಪಡುತ್ತವೆ. **ತೇಷಾಂ**–ಅವುಗಳಿಗೆ, **ಶ್ರೋತ್ರಾದಿಭಿಃ** - ದೇಹೇಂದ್ರಿಯಗಳೊಂದಿಗೆ, **ಸ್ಪರ್ಶಾಃ** - ಸಂಬಂಧಗಳು, **ಶೀತೋಷ್ಣಾದಿ** - ಶೀತ, ಉಷ್ಣ, ಮೃದುವಾಗಿರುವಿಕೆ, ಕಠಿಣವಾಗಿರುವಿಕೆ, ಇವೇ ಮೊದಲಾದ ಸುಖದುಃಖಗಳನ್ನು ಕೊಡುವಂಥಾವುಗಳಾಗುತ್ತವೆ. **ಶೀತೋಷ್ಣ ಶಬ್ದವು, ಪ್ರದರ್ಶನಾರ್ಥಃ** – ಇತರ ಅನುಭವಗಳನ್ನು ಸೂಚಿಸುವ ಅರ್ಥವುಳ್ಳದುದು. ಶೀತೋಷ್ಣಾದಿಗಳು ಯುದ್ಧಪ್ರಕರಣದಲ್ಲಿಲ್ಲವಾದುದರಿಂದ, ಶಸ್ತ್ರಪಾತಾದಿಗಳು ಅಲ್ಲಿ ಮುಖ್ಯವಾಗಿರುವದರಿಂದ ಅವುಗಳಿಗೂ ಕೂಡ ಪ್ರದರ್ಶನಾರ್ಥವೆಂಬ ಭಾವವು. ಎಲ್ಲಾ ವರ್ಣಾಶ್ರಮಾದಿ ಕರ್ಮಾಚರಣೆಗಳಲ್ಲೂ ಉಂಟಾಗುವವುಗಳನ್ನು

ಭಾ. ಭವನ್ತಿ. ಶೀತೋಷ್ಣಶಬ್ದಃ ಪ್ರದರ್ಶನಾರ್ಥಃ. ತಾನ್ ಧೈರ್ಯೇಣ ಯಾವದ್ಯುದ್ಧಾದಿ ಶಾಸ್ತ್ರೀಯಕರ್ಮಸಮಾಪ್ತಿ ತಿತಿಕ್ಷಸ್ವ. ತೇ ಚಾಗಮಾಪಾಯಿತ್ವಾತ್ ಧೈರ್ಯವತಾಂ ಕ್ಷನ್ತುಂ ಯೋಗ್ಯಾಃ ಅನಿತ್ಯಾಶ್ಚ ತೇ, ಬಂಧಹೇತುಭೂತಕರ್ಮನಾಶೇ ಸತ್ಯಾಗಮಾಪಾಯಿತ್ವೇನಾಪಿ ನಿವರ್ತನ್ತ ಇತ್ಯರ್ಥಃ ||೧೪||

ಭಾ. ಅವ. ತತ್ಕ್ಷಮಣಂ ಕಿಮರ್ಥಮಿತ್ಯತ ಆಹ.

---

ಸಾಮಾನ್ಯೇನ ತಿಳಿಸುವದಕ್ಕಾಗಿ ಹಾಗೆ ಪ್ರಯೋಗವು. ಅಥವಾ ಬಿಸಿಲು ಮಳೆ ಮೂಲಕ ಶೀತೋಷ್ಣಗಳುಂಟಾಗಬಹುದು. ತಾನ್ - ಅವುಗಳನ್ನು ಎಂದರೆ ಸುಖದುಃಖಾದಿಗಳನ್ನು, ಧೈರ್ಯದಿಂದ, ಯಾವದಿತ್ಯಾದಿ - ಯುದ್ಧವೇ ಮೊದಲಾದ ಶಾಸ್ತ್ರಾನುಗುಣವಾದ ಕರ್ಮವು ಮುಗಿಯುವವರೆಗೂ, ತಿತಿಕ್ಷಸ್ವ - ಸಹಿಸಿಕೊಳ್ಳತಕ್ಕದ್ದು. ತೇಚ - ಅವುಗಳಾದರೋ, ಆಗಮಾಪಾಯಿತ್ವಾತ್-"ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ" (ಮೋಕ್ಷ. ೧೭೩. ೧೯) ಎಂದು ಹೇಳಿರುವ ಹಾಗೆ ಬಂದು ಹೋಗುವವುಗಳಾದುದರಿಂದ, ಧೈರ್ಯವತಾಂ – ಧೈರ್ಯವುಳ್ಳವರಿಂದ, ಕ್ಷನ್ತುಂ ಯೋಗ್ಯಾಃ - ಸಹಿಸತಕ್ಕವುಗಳಾಗಿವೆ. ಆದುದರಿಂದ, ಅನಿತ್ಯವಾದವುಗಳಾದ, ತೇ - ಅವುಗಳು, ಎಂದರೆ ಇಂತಹ ಸುಖದುಃಖಾನುಭವಗಳು, ಬನ್ಧಹೇತುಭೂತ ಕರ್ಮನಾಶೇ ಸತಿ - ಸಂಸಾರ ಬಂಧಕ್ಕೆ ಕಾರಣವಾದ ಕರ್ಮವು ನಾಶವಾಗಲಾಗಿ, ಆಗಮಾಪಾಯಿತ್ವೇನಾಪಿ - ಬಂದು ಹೋಗುವಂಥವುಗಳಾದಾಗ್ಯೂ, ನಿವರ್ತನ್ತೇ - ನಿವೃತ್ತಿಸಿಹೋಗುತ್ತವೆ. ಇಲ್ಲಿ ಧೈರ್ಯೇಣ ಧೈರ್ಯವತಾಂ ಎಂಬ ಪದಗಳಲ್ಲಿ ತೋರುವ ಅರ್ಥವು ಶ್ಲೋಕದಲ್ಲಿಲ್ಲವಲ್ಲಾ ಎಂದರೆ ಹಿಂದಿನ ಶ್ಲೋಕಗಳಲ್ಲಿ ಹೇಳಿದ "ಧೀರಂ", "ಧೀರಸ್ತತ್ರ ನಮುಹ್ಯತಿ" ಇತ್ಯಾದಿ ಪ್ರಯೋಗಗಳನ್ನೂ ಮುಂದಿನ ಶ್ಲೋಕದಲ್ಲಿರುವ ಧೀರಶಬ್ದವನ್ನೂ ಮನಸ್ಸಿನಲ್ಲಿಟ್ಟು ಹೇಳಿದಭಿಪ್ರಾಯವಾಗಿರುತ್ತದೆ. ಕೌನ್ತೇಯ, ಭಾರತ ಎಂಬೀ ಸಂಬೋಧನೆಗಳಲ್ಲೂ ಧೀರನಾದ ಕ್ಷತ್ರಿಯಕುಲದವನೆಂಬೀ ಅಭಿಪ್ರಾಯವು ಸೂಚಿತವು. ದುಃಖವನ್ನೇನೋ ಸಹಿಸಿಕೋ ಎಂದು ಹೇಳತಕ್ಕದ್ದು ನ್ಯಾಯವು. ಸುಖವನ್ನೂ ಸಹಿಸಿಕೋ ಎಂದು ಹೇಳಿದುದರಭಿಪ್ರಾಯವೇನೆಂದರೆ, ಅದನ್ನೂ ಉಪೇಕ್ಷಾಭಾವದಿಂದ ನೋಡತಕ್ಕದ್ದೆಂಬ ತಾತ್ಪರ್ಯವು. ಈ ಅಭಿಪ್ರಾಯವನ್ನು ಆತ್ಮನಿತ್ಯತ್ವವನ್ನು ಪಪಾದಿಸುವ ಪ್ರಕರಣವಾದಮೇಲೆ ಹೇಳತಕ್ಕ ವಿಷಯವಾದರೂ, ಮಧ್ಯದಲ್ಲಿ ಒಡನೆ ಹೇಳಿರುವದು ಇದರ ಪ್ರಾಮುಖ್ಯತೆಯನ್ನು ಮನಸ್ಸಿನಲ್ಲಿಟ್ಟು ಹೇಳಿದುದೆಂದು ಭಾವಿಸತಕ್ಕದ್ದು. ಆದುದರಿಂದಲೇ ಅವತಾರಿಕೆಯಲ್ಲಿ ಅನಂತರಮೇವಾಹ ಎಂಬ ಪ್ರಯೋಗವು. ಮಾತ್ರಾ ಶಬ್ದಕ್ಕೆ ಆಭಿರ್ಮೀಯಂತೇ ಎಂಬ ವ್ಯುತ್ಪತ್ತಿಯಿಂದ ಶ್ರೋತ್ರಾದಿ ಇಂದ್ರಿಯಗಳೆಂದು ಅರ್ಥ ಮಾಡಿರುತ್ತಾರೆ. ಇದು ಸರಿಯಲ್ಲವೆಂದು ಹೇಳುವದಕ್ಕಾಗಿ "ಶಬ್ದಸ್ಪರ್ಶರೂಪ" ಇತ್ಯಾದಿ ವ್ಯಾಖ್ಯಾನವು; ತನ್ಮಾತ್ರೆಗಳೂ ಕೂಡ ಮಾತ್ರಾ ಶಬ್ದದಲ್ಲೇ ಸೇರಿದವೆಂದು ಭಾವಿಸತಕ್ಕದ್ದು. ಶಾಸ್ತ್ರೀಯಗಳಾದ ಯಜ್ಞಯಾಗಾದಿ ಕರ್ಮಗಳು ಸಮಾಪ್ತಿಯಾಗುವವರೆಗೂ ಅದರಿಂದುಂಟಾಗುವ ಕ್ಲೇಶಗಳನ್ನೆಲ್ಲಾ ಸಹಿಸಿಕೊಂಡಿರುವದು ಹೇಗೆ ಆವಶ್ಯಕವೋ, ಹಾಗೆಯೇ ಕ್ಷತ್ರಿಯನಿಗೂ ಕೂಡ ದುಷ್ಟ ರಾಜರನ್ನು ಶಿಕ್ಷಿಸುವದಕ್ಕಾಗಿ ಯುದ್ಧವೂ ಕೂಡ ಶಾಸ್ತ್ರವಿಹಿತ ಕರ್ಮವಾದುದರಿಂದ ಅದರಿಂದುಂಟಾಗುವ ಶಸ್ತ್ರಪಾತ ಶತ್ರುವಧೆ ಮೊದಲಾದ ಕ್ಲೇಶಗಳನ್ನು ಸಹಿಸಿಕೊಳ್ಳತಕ್ಕದ್ದೆಂಬ ಭಾವವು. ಇಂತಹ ಕ್ಲೇಶಗಳುಂಟಾಗುತ್ತವೆ ಎಂಬ ಶೋಕವು ನಿರರ್ಥಕವಾದುದರಿಂದ ಸಹಿಸಿಕೊಳ್ಳುವದೇ ಯುಕ್ತವೆಂಬ ತಾತ್ಪರ್ಯವು.

**ಮೂ. ಯಂ ಹಿ ನ ವ್ಯಥಯನ್ತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥　　೧೫.**

---

**ಭಾ. ಯಂ ಪುರುಷಂ ಧೈರ್ಯಯುಕ್ತ ಮವರ್ಜನೀಯದುಃಖಂ ಸುಖವನ್ಮನ್ಯಮಾನ**

---

**ಭಾಷ್ಯಾವತಾರಿಕೆಯ ಅರ್ಥವು :—ತತ್ಕ್ಷಮಾ** - ಹಾಗೆ ಸಹಿಸಿಕೊಳ್ಳಬೇಕೆಂದು ಹೇಳಿ ದುದು, **ಕಿಮರ್ಥಾ** - ಯಾವ ಪ್ರಯೋಜನವುಳ್ಳದು, **ಇತಿ** – ಎಂದರೆ, **ಅತಃ** - ಆ ಕಾರಣದಿಂದ, **ಆಹ** - ಹೇಳುತ್ತಾರೆ. ಹಾಗೆ ಸಹಿಸಿಕೊಳ್ಳತಕ್ಕದ್ದೆಂದರೆ, ನ್ಯಾಯವಾಗಿ ಕೇಳತಕ್ಕ ಪ್ರಶ್ನೆಯು ಏತಕ್ಕಾಗಿ ಎಂಬುದು. ಏನು, ದೃಷ್ಟವಾದ ಇಹಲೋಕದ ಪ್ರಯೋಜನಕ್ಕಾಗಿಯೋ? ಅಥವಾ ಅದೃಷ್ಟವಾದ ಪಾರಲೌಕಿಕ ಪ್ರಯೋಜನಕ್ಕಾಗಿಯೋ ? ಅಥವಾ ಆ ಅನುಭವಗಳು ಅವರ್ಜನೀಯ ಗಳಾಗಿರುವದರಿಂದ ಸಹಿಸಿಕೊಳ್ಳಬೇಕೇ? ಎಂದು ವಿಕಲ್ಪಿಸಿ ವಿಚಾರ ಮಾಡಿದರೆ, ದುಃಖರೂಪ ವಾದುದರಿಂದ ದೃಷ್ಟಾರ್ಥಕ್ಕಾಗಿ ಅಲ್ಲವು; ಎರಡನೆಯದೂ ಅಲ್ಲವು, ಏಕೆಂದರೆ, ಗುರುವಧ ಕುಲ ಕ್ಷಯಾದಿರೂಪವಾದ ಅಧರ್ಮಬಾಹುಳ್ಯವಿರುವದರಿಂದ ಎಂದು ಆತನು ಭಾವಿಸುವದರಿಂದ; ಮೂರ ನೆಯದೂ ಅಲ್ಲವು, ಏಕೆಂದರೆ ಯುದ್ಧದಿಂದ ನಿವೃತ್ತಿ ಹೊಂದಿದರೆ ಶಸ್ತ್ರಪಾತಾದಿ ಕ್ಲೇಶಗಳಿಲ್ಲವು; ಆದುದರಿಂದ ಆ ಸಹಿಷ್ಣುತೆಯ ಫಲವೇನು ಎಂದರೆ ಮುಂದಿನ ಶ್ಲೋಕದಲ್ಲಿ **"ಅಮೃತತ್ವಾಯ ಕಲ್ಪತೇ"** ಎಂದು ಪ್ರಯೋಜನವು ಹೇಳಲ್ಪಡುತ್ತದೆ ಎಂಬ ಭಾವದಿಂದ ಅವತಾರಿಕೆಯು.

**ಮೂಲಕ್ಕೆ ಅರ್ಥವು :—ಹೇ ಪುರುಷರ್ಷಭ** - ಎಲೈ ಪುರುಷಶ್ರೇಷ್ಠನಾದ ಅರ್ಜುನನೇ, ಪುರುಷಶ್ರೇಷ್ಠನು, ದುಃಖವು ಪ್ರಾಪ್ತವಾದರೆ ಅದಕ್ಕೆ ವಶನಾಗಿ ದೀನನಾಗುವದಿಲ್ಲವು, ಪುರುಷ ಶ್ರೇಷ್ಠನಾಗಿಯೂ ಈ ದೈನ್ಯವನ್ನು ಪ್ರದರ್ಶಿಸುವದು ನಿನಗೆ ಯುಕ್ತವಲ್ಲವೆಂಬ ಭಾವಸೂಚಕವಾಗಿ ಹಾಗೆ ಸಂಬೋಧನೆಯು, **ಏತೇ** - ಈ ಸುಖದುಃಖಾದಿಗಳು, **ಸಮದುಃಖಸುಖಂ** - ದುಃಖವನ್ನೂ ಸುಖಕ್ಕೆ ಸಮನೆಂದು ಭಾವಿಸಿರುವ, ಅಥವಾ ಸುಖದುಃಖಗಳನ್ನೂ ಸಮವಾಗಿ ನೋಡುವ ಎಂದರೆ ಸುಖದಿಂದ ಹಿಗ್ಗದೆ ದುಃಖದಿಂದ ದೀನನಾಗದಿರುವ, **ಧೀರಂ** - ಅಂತಹ ಧೈರ್ಯಶಾಲಿಯಾದ ಅಥವಾ ಹಾಗೆ ಸ್ಥಿರಮನಸ್ಕನಾಗಿ ಸಹಿಸಿಕೊಳ್ಳುವ ಸ್ವಭಾವವುಳ್ಳ, ಅಥವಾ ಆಗಮ ವಿವೇಕ ಜ್ಞಾನ ಗಳಿಂದ ರಮಿಸುವ, **ಯಂ ಪುರುಷಂ ಹಿ**-ಯಾವ ಪುರುಷನನ್ನಾದರೆ, **ನ ವ್ಯಥಯಂತಿ**-ಪರಿತಾಪ ದಿಂದ ಮನಸ್ಸು ಚಾಂಚಲ್ಯ ಹೊಂದುವ ಹಾಗೆ ಮಾಡುವದಿಲ್ಲವೋ, **ಸಃ** - ಅಂತಹ ಪುರುಷನು, **ಅಮೃತತ್ವಾಯ ಕಲ್ಪತೇ**-ಮೋಕ್ಷಹೊಂದಲು ಯೋಗ್ಯನಾಗುತ್ತಾನೆ ಅಥವಾ ಸಮರ್ಥನಾಗುತ್ತಾನೆ. ಇಲ್ಲಿ **ಯಂ ಪುರುಷಂ** ಎಂಬ ಪ್ರಯೋಗದಿಂದ ಈ ದೇಹವೆಂಬ ಪುರಿಯಲ್ಲಿರುವವನಾಗಿರುವನು ಯಾವನೇಯಾಗಲಿ ಅವನಿಗೆ ಮಾತ್ರಾ ಸ್ಪರ್ಶಗಳ ಮೂಲಕ ಉಂಟಾಗುವ ಅನುಕೂಲ ಪ್ರತಿಕೂಲ ರೂಪಗಳಾದ ಅನುಭವಗಳು ತಪ್ಪಿದ್ದಲ್ಲವು. ಅವುಗಳಲ್ಲಿ ಸಮಭಾವವೂ, ಸಹನೆಯೂ ಉಳ್ಳವನೇ ಧೀರನು; ಏತಕ್ಕೆಂದರೆ ಅಂತವನು ಶಾಸ್ತ್ರವಿವೇಕಗಳಿಂದ ಉಂಟಾದ ಜ್ಞಾನದಿಂದ ಪ್ರಯತ್ನಮಾಡಿ ಇಂತಹ ಕ್ಲೇಶಗಳಿಂದ ತಪ್ಪಿಸುವ ಮಾರ್ಗವನ್ನು ತಿಳಿದು ಮೋಕ್ಷವನ್ನು ಹೊಂದುವನು ಎಂಬ ಭಾವವು. ಈ ದೇವ ಮನುಷ್ಯ ಜನ್ಮಗಳನ್ನು ಹೊಂದಿದವರಿಗೆ ಮಾತ್ರವೇ ಈ ಯೋಗ್ಯತೆ ಯುಂಟೇ ವಿನಾ ತಿರ್ಯಗಾದಿಗಳಿಗೆ ಸ್ವತಂತ್ರಿಸಿ ಪ್ರಯತ್ನಮಾಡಿ ಹಾಗೆ ತಪ್ಪಿಸಿಕೊಳ್ಳುವ ಯೋಗ್ಯ ತೆಯು ಇಲ್ಲವು ಎಂಬುದೂ, ಹಾಗೆ ಪುರುಷಜನ್ಮವಿರುವಾಗಲೇ ಆ ಮಾರ್ಗವನ್ನು ಅವಲಂಬಿಸತಕ್ಕ ದ್ದೆಂಬುದೂ ಸೂಚಿಸುವದಕ್ಕಾಗಿಯೂ **ಪುರುಷಂ ಪುರುಷರ್ಷಭ** ಎಂಬ ಪ್ರಯೋಗವು. ॥೧೫॥

**ಭಾಷ್ಯಾರ್ಥವು :—ಧೈರ್ಯಯುಕ್ತಂ** - ಧೈರ್ಯವನ್ನು ಹೊಂದಿರುವಂಥಾ (ಇದು ಧೀರಂ

ಮಮೃತತ್ವ ಸಾಧನತಯಾ ಸ್ವವರ್ಣೋಚಿತಂ ಯುದ್ಧಾದಿಕರ್ಮಾನಭಿಸಂಹಿತಫಲಂ ಕುರ್ವಾಣಂ ತದನ್ತರ್ಗತಾ ಶ್ಯಸ್ತ್ರಪಾತಾದಿ ಮೃದುಕ್ರೂರಸ್ಪರ್ಶಾ ನವ್ಯಥಯನ್ತಿ, ಸ ಏವ ಅಮೃತತ್ವಂ ಸಾಧಯತಿ. ನತ್ವಾದೃಶೋ ದುಃಖಾಸಹಿಷ್ಣು ರಿತ್ಯರ್ಥಃ. ಆತ್ಮನಾಂ ನಿತ್ಯತ್ವಾದೇ ತಾವದತ್ರ ಕರ್ತವ್ಯ ಮಿತ್ಯರ್ಥಃ ॥ ೧೫ ॥

ಎಂಬುದರರ್ಥವು) **ಅವರ್ಜನೀಯ ದುಃಖಂ ಸುಖವನ್ಮನ್ಯಮಾನಂ** - ತಪ್ಪಿದ್ದಲ್ಲವಾದ ದುಃಖವನ್ನು ಸುಖದಹಾಗೆಯೇ ತಿಳಿಯುವಂತಹ (ಇದು ಸಮದುಃಖಸುಖಂ ಎಂಬುದರರ್ಥವು) ಹೀಗೆ ಭಾವನೆಯು ಸಾಧ್ಯವೋ ಎಂದರೆ ಸಾಧ್ಯವು. ಹೇಗೆಂದರೆ, ವ್ಯಾಧಿಪೀಡಿತನು ಆರೋಗ್ಯಕಾಮನಾಗಿ, ಔಷಧ ಸೇವನೆ, ಶಸ್ತ್ರಯಾತನೆ ಮೊದಲಾದವುಗಳನ್ನು ಕ್ಲೇಶವಾಗಿ ಹೇಗೆ ಭಾವಿಸನೋ, ಅಥವಾ ಅರ್ಥಾರ್ಥಿಯಾದವನು ದ್ರವ್ಯಸಂಪಾದನೆಯಲ್ಲಿ ಪ್ರಾಪ್ತವಾಗುವ ಕ್ಲೇಶಗಳನ್ನು ಕ್ಲೇಶಗಳೆಂದು ಹೇಗೆ ಭಾವಿಸನೋ,ಹಾಗೆಯೇ, ತಾಪತ್ರಯಗಳಿಂದ ನಿವೃತ್ತಿಯನ್ನು-ಹೊಂದಿ ನಿರತಿಶಯವಾಗಿ ಶಾಶ್ವತವಾದ ಅನಂದವನ್ನು ಹೊಂದಬೇಕೆಂದಿರುವವನು ಕಾರ್ಯಾರ್ಥಿಯಾದುದರಿಂದ **ನ ಗಣಯತಿ ದುಃಖಂ ನ ಚ ಸುಖಂ** ಎಂದು ಹೇಳಿರುವ ಹಾಗೆ ಸುಖದುಃಖಗಳೆಂದು ಭಾವಿಸನು ಎಂಬ ಭಾವವು. **ಅಮೃತತ್ವ ಸಾಧನತಯಾ** - ಮೋಕ್ಷಸಾಧನೆಗಾಗಿ, **ಸ್ವವರ್ಣೋಚಿತಂ ಯುದ್ಧಾದಿ ಕರ್ಮ** - ತನ್ನ ವರ್ಣಕ್ಕೆ ಎಂದರೆ ಈ ಸಂದರ್ಭದಲ್ಲಿ ಕ್ಷತ್ರಿಯ ವರ್ಣಕ್ಕೆ ಯೋಗ್ಯವಾದ ಯುದ್ಧವೇ ಮೊದಲಾದ ಕರ್ಮವನ್ನು, **ಅನಭಿಸಂಹಿತ ಫಲಂ** - ಫಲಾಪೇಕ್ಷೆಯಿಲ್ಲದೆ, **ಕುರ್ವಾಣಂ** - ಮಾಡುವಂಥಾ, **ಯಂ ಪುರುಷಂ** - ಯಾವ ಪುರುಷನನ್ನಾದರೋ, **ತದನ್ತರ್ಗತ ಶಸ್ತ್ರಪಾತಾದಿ ಮೃದುಕ್ರೂರ ಸ್ಪರ್ಶಾಃ** - ಆ ಯುದ್ಧಕ್ಕೆ ಸೇರಿದ ಶಸ್ತ್ರಗಳ ಬೀಳೋಣವೇ ಮೊದಲಾದವುಗಳಿಂದ ಮೃದು ಕ್ರೂರ ಸಂಬಂಧವುಳ್ಳ ಅನುಭವಗಳು (ಇದು ಏತೇ ಎಂಬುದರಭಿಪ್ರಾಯವು) **ನವ್ಯಥಯನ್ತಿ** - ಚಿತ್ತಚಾಂಚಲ್ಯ ಉಂಟಾಗುವ ಹಾಗೆ ಬಾಧಿಸುವದಿಲ್ಲವೋ?, **ಸ ಏವ** - ಅಂತಹ ಪುರುಷನೇ, **ಅಮೃತತ್ವಂ ಸಾಧಯತಿ**-ಮೋಕ್ಷಪ್ರಾಪ್ತಿಯನ್ನು ಸಾಧಿಸಿಕೊಳ್ಳುವನು. **ತ್ವಾದೃಶಃ**-ಪುರುಷರ್ಷಭನಾದ ನಿನ್ನಂತವನು, **ನ ದುಃಖಾ ಸಹಿಷ್ಣು ರಿತ್ಯರ್ಥಃ**-ದುಃಖವನ್ನು ಸಹಿಸದಿರುವನಾಗತಕ್ಕದ್ದಲ್ಲವೆಂಬಭಿಪ್ರಾಯವು. **ಆತ್ಮನಾಂ ನಿತ್ಯತ್ವಾತ್** - ಜೀವಾತ್ಮರು ನಿತ್ಯರಾದುದರಿಂದ, **ಏತಾವತ್** - ಇಷ್ಟು ಮಾತ್ರ; **ಅತ್ರ** - ಈ ಸಂದರ್ಭದಲ್ಲಿ, **ಕರ್ತ್ರವ್ಯಮಿತ್ಯರ್ಥಃ** - ಮಾಡತಕ್ಕದ್ದೆಂಬ ಭಾವವು. ಸ್ವವರ್ಣೋಚಿತ ಕರ್ಮವನ್ನು ಫಲಾಭಿಸಂಧಿ ರಹಿತನಾಗಿ ಮಾಡುವದೂ, ಹಾಗೆ ಮಾಡುವ ಕಾಲದಲ್ಲಿ ಉಂಟಾಗಬಹುದಾದ ದುಃಖಗಳನ್ನು ಸಹಿಸಿಕೊಳ್ಳುವದೂ, ಇದೀಗ ಕರ್ತವ್ಯವು. ಹೀಗೆ ಮಾಡಿದುದಾದರೆ ಉತ್ತರೋತ್ತರ ಮೋಕ್ಷಪ್ರಾಪ್ತಿಗೆ ಅನುಕೂಲವಾಗುತ್ತದೆಂದು ಹೇಳಲ್ಪಟ್ಟಿತು. ಇದು ಕರ್ತವ್ಯವೆಂದು ಹೇಳಲ್ಪಟ್ಟಿತು. ಹಾಗೆ ಮಾಡದಿದ್ದರೆ ಬಾಧಕವೇನು ಎಂದರೆ, ಅಮೃತತ್ವ ಸಾಧನವಾಗದೆ ಯಾವಾಗಲೂ ಕ್ಲೇಶಾದಿಗಳನ್ನೇ ಅನುಭವಿಸುವನು. ಸ್ವಧರ್ಮವನ್ನು ಬಿಟ್ಟುದುದರಿಂದ ಭಗವನ್ನಿಗ್ರಹರೂಪ ಪ್ರತ್ಯವಾಯ ಉಂಟಾಗುವದು, ಧೈರ್ಯಾದಿಗಳಿಲ್ಲದೆ ದೀನನಾಗುವದರಿಂದ ಕ್ಷತ್ರಿಯನಿಗೆ ಇಹಲೋಕದಲ್ಲಿ ಅಪಯಶಸ್ಸಿಗೆ ಕಾರಣವಾಗುವದು ಎಂಬಭಿಪ್ರಾಯವು. ಶಾಸ್ತ್ರವಿಹಿತವಾದ ಆಜ್ಞಾರೂಪ ಕರ್ಮಗಳೂ ಮತ್ತು ಇತರ ಸಾಧುಕರ್ಮಗಳೂ ಅಲ್ಲದೆ, ಇತರ ದುಷ್ಕರ್ಮಗಳನ್ನೆಸಗುವಾಗಲೂ ಸುಖದುಃಖಗಳು ತಾತ್ಕಾಲಿಕವಾಗಿ ಪ್ರಾಪ್ತವಾಗಬಹುದು. ಇಂತಹ ಚೌರ್ಯ, ಪರದಾರಗಮನ ಮೊದಲಾದವುಗಳನ್ನು ಮಾಡುವಾಗ ಉಂಟಾಗಬಹುದಾದ ಕ್ಲೇಶಾದಿ ಸಹನದಿಂದ ಅಮೃತತ್ವವು ಲಭಿಸುತ್ತದೆ ಎಂಬ ಅಪಾರ್ಥವನ್ನು ತಪ್ಪಿಸು

ಭಾ. ಅ. ಯತ್ತ್ವಾತ್ಮನಾಂ ನಿತ್ಯತ್ವಂ, ದೇಹಾನಾಂ ಸ್ವಾಭಾವಿಕಂ ನಾಶಿತ್ವಂಚ ಶೋಕಾನಿಮಿತ್ತ ಮುಕ್ತಂ "ಗತಾಸೂನ ಗತಸೂಂಶ್ಚ ನಾನುಶೋಚನ್ತಿ ಪಂಡಿತಾಃ" ಇತಿ; ತದುಪಪಾದಯಿತು ಮಾರಭತೇ.

ಮೂ. ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽನ್ತ ಸ್ತ್ವನಯೋ ಸ್ತತ್ತ್ವದರ್ಶಿಭಿಃ ॥ ೧೬.

ವದಕ್ಕಾಗಿ ಸ್ವವರ್ಣೋಚಿತಂ ಯುದ್ಧಾದಿಕಂ ಕರ್ಮ ಎಂದು ಮೂಲದಲ್ಲಿಲ್ಲದಿದ್ದರೂ ಹಾಗೆ ವ್ಯಾಖ್ಯಾನ ಮಾಡಿರುತ್ತಾರೆ. ಅಮೃತತ್ವಾಯ ಕಲ್ಪತೇ ಎಂಬ ಪ್ರಯೋಗವೇ ಇದನ್ನು ಸೂಚಿಸುತ್ತದೆ. ದೇಹಿಯಾದ ಪುರುಷನಿಗೆ ಇವು ಅವರ್ಜನೀಯಗಳು ಎಂದು ಬೋಧಿಸುವದಕ್ಕಾಗಿ ತದಂತರ್ಗತಾಃ ಎಂದು ಭಾಷ್ಯವು. ಹೇ ಪುರುಷರ್ಷಭ ಎಂಬ ಸಂಬೋಧನೋಕ್ತಿಯಿಂದ, ನೀನು ಹೀಗೆ ಸುಖದುಃಖಗಳನ್ನು ಸಮವಾಗಿ ಭಾವಿಸಿ ಕ್ಲೇಶಾದಿಗಳನ್ನು ಸಹಿಸಿಕೊಳ್ಳುವದಕ್ಕೂ ಕ್ರಮೇಣ ಅಮೃತತ್ವವನ್ನು ಸಾಧಿಕೊಳ್ಳುವದಕ್ಕೂ ನಿನಗೆ ಯೋಗ್ಯತೆಯುಂಟೆಂಬುದೂ ಸೂಚಿತವು. ಅದುದರಿಂದಲೇ ತ್ವಾದೃಶಃ - ನಿನ್ನಂತವನು, ಎಂದರೆ ಮಹಾವೀರರಾದ ಕ್ಷತ್ರಿಯಕುಲದಲ್ಲಿ ಉತ್ಪನ್ನನಾಗಿರುವವನು ಎಂಬ ಪ್ರಯೋಗವು; ಅತ್ರಕರ್ತವ್ಯಂ ಎಂಬ ಪ್ರಯೋಗದಿಂದ ಈಗ ನಿನಗೆ ಪ್ರಾಪ್ತವಾಗಿರುವ ಸಂದರ್ಭವು ಅಂತಾದ್ದೇ. ಸುಖದುಃಖಾನುಭವಗಳು ಅವರ್ಜನೀಯವು. ಆದುದರಿಂದ ಶಸ್ತ್ರಪಾತಾದಿ ಕ್ಲೇಶಗಳನ್ನು ನೀನು ಸಹಿಸಲೇಬೇಕು. ಹಾಗೆ ಸಹಿಸಿದುದಾದರೆ ನಿನಗೆ ಪರಮ ನಿಶ್ರೇಯಸಪ್ರಾಪ್ತಿಗೆ ಹೇತುವಾಗುತ್ತದೆ, ಹಾಗೆ ಸಹಿಸದೆ ಯುದ್ಧಕಾರ್ಯವನ್ನು ತ್ಯಜಿಸಿದುದಾದರೆ ನಿಶ್ರೇಯಸ್ಸು ತಪ್ಪಿಹೋಗುವದು ಮಾತ್ರವೇ ಅಲ್ಲದೆ, ಪ್ರತ್ಯುತ ಪ್ರತ್ಯವಾಯಕ್ಕೂ ಗುರಿಯಾಗುವಿ ಎಂಬ ಭಾವವೂ ಸೂಚಿತವು; ಮೂಲದಲ್ಲಿ ಸೋಽಮೃತತ್ವಾಯಕಲ್ಪತೇ ಎಂದಿರುವದರಿಂದ, ಹಾಗೆ ಮಾಡದವನಿಗೆ ಅಮೃತತ್ವವಿಲ್ಲದೆ ಈ ಕ್ಲೇಶಗಳನ್ನೇ ಪದೇ ಪದೇ ಅನುಭವಿಸುತ್ತಲೇ ಇರುವನೆಂಬ ಭಾವವು ವ್ಯಕ್ತವು.

ಭಾಷ್ಯಾವತಾರಿಕೆಯ ಅರ್ಥವು :—ಆತ್ಮನಾಂ ನಿತ್ಯತ್ವಂ - ಜೀವಾತ್ಮರುಗಳೆಲ್ಲಾ ನಿತ್ಯರೆಂದೂ, ದೇಹಾನಾಂ ಸ್ವಾಭಾವಿಕಂ ನಾಶಿತ್ವಂ ಚ - ದೇಹಗಳೆಲ್ಲಾ ಸ್ವಾಭಾವಿಕವಾಗಿ ಪರಿಣಾಮ ಹೊಂದುವವುಗಳಾದುದರಿಂದ ಅಸ್ಥಿರವಾದವುಗಳೆಂದೂ, ಆ ಕಾರಣದಿಂದ, ಶೋಕಾನಿಮಿತ್ತಂ - ಎರಡರ ವಿಷಯದಲ್ಲೂ ಶೋಕಕ್ಕೆ ಕಾರಣವಿಲ್ಲವೆಂಬುದು, ಯತ್ತು - ಯಾವುದಾದರೆ, "ಗತಾಸೂನಗತಸೂಂಶ್ಚ" ಎಂಬ ಶ್ಲೋಕದಲ್ಲಿ, ಉಕ್ತಂ - ಹೇಳಲ್ಪಟ್ಟಿತೋ, ತತ್ - ಆ ಅಭಿಪ್ರಾಯವೇ ಉಪಪಾದಯಿತುಮಾರಭತೇ - ಮುಂದೆ ಉಪಪಾದಿಸಲು ಪ್ರಾರಂಭಿಸಲ್ಪಡುತ್ತದೆ. ಜೀವಾತ್ಮನು ನಿತ್ಯನೆಂದು ಹಿಂದೆ ೧೧ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು; ಇನ್ನು ಮುಂದೆ ಅದನ್ನೇ ಉಪಪಾದನೆ ಮಾಡಿ ಹೇಳಲುಪಕ್ರಮಿಸುತ್ತಾರೆಂಬ ಭಾವವು.

ಮೂಲಕ್ಕೆ ಅರ್ಥವು ;—ಅಸತ್ತು - ಅಸಚ್ಛಬ್ದ ವಾಚ್ಯವಾದ ಅಚೇತನರೂಪವಾದ ದೇಹಕ್ಕಾದರೋ; ಭಾವಃ-ಒಂದೇ ವಿಧವಾಗಿರುವ ಸ್ಥಿರತ್ವವು, ನ ವಿದ್ಯತೇ-ಇರುವದಿಲ್ಲವು, ಸತಃ- ಸಚ್ಛಬ್ದವಾದ ಚಿದ್ರೂಪವಾದ ಜೀವಾತ್ಮನಿಗೆ, ಅಭಾವಃ - ಪರಿಣಾಮರೂಪ ಅಸ್ಥಿರತ್ವವು, ನ ವಿದ್ಯತೇ - ಇಲ್ಲವು. ಅನಯೋಃ - ಈ, ಉಭಯೋರಪಿ - ಚಿದಚಿದ್ರೂಪಗಳಾದ ದೇಹಾತ್ಮಗಳೆರಡಕ್ಕೂ ಕೂಡ, ಅನ್ತಃ-ಕೊನೆಯ ತತ್ವ ನಿರ್ಣಯವು, ತತ್ತ್ವದರ್ಶಿಭಿಃ-ತತ್ತ್ವ ಯಾಥಾತ್ಮ್ಯ ಶ

**ಭಾ. ಅಸತೋ ದೇಹಸ್ಯ ಸದ್ಭಾವೋ ನವಿದ್ಯತೇ. ಸತಶ್ಚಾತ್ಮನೋ ನಾಸದ್ಭಾವಃ. ಉಭಯೋರ್ದೇಹಾತ್ಮನೋ ರುಪಲಭ್ಯಮಾನಯೋರ್ಯಥೋಪಲಬ್ಧಿ ತತ್ತ್ವದರ್ಶಿಭಿರನ್ತೋದೃಷ್ಟಃ. ನಿರ್ಣಯಾನ್ತತ್ತ್ವಾನ್ನಿರೂಪಣಸ್ಯ ನಿರ್ಣಯ ಇಹಾನ್ತಶಬ್ದೇನೋಚ್ಯತೇ. ದೇಹಸ್ಯಾ ಚಿದ್ವಸ್ತುನೋಽಸತ್ಯಮೇವ ಸ್ವರೂಪಮ್ ; ಆತ್ಮನಶ್ಚೇತನಸ್ಯ ಸತ್ತ್ವಮೇವ ಸ್ವರೂಪಮಿತಿ ನಿರ್ಣಯೋ ದೃಷ್ಟ ಇತ್ಯರ್ಥಃ. ವಿನಾಶ ಸ್ವಭಾವೋ ಹ್ಯಸತ್ತ್ವಮ್ ; ಅವಿನಾಶ ಸ್ವಭಾವಶ್ಚ ಸತ್ತ್ವಮ್.**

ವನ್ನು ತಿಳಿದವರುಗಳಿಂದ, **ದೃಷ್ಟಃ** - ಕಾಣಲ್ಪಟ್ಟಿರುತ್ತದೆ. ದೇಹವಾದ ಅಚಿದ್ದ್ರವ್ಯಕ್ಕೆ ಪರಿಣಾಮ ಹೊಂದುವದೇ ಸ್ವರೂಪವಾದುದರಿಂದ ಅದು ಅಸಚ್ಛಬ್ದವಾಚ್ಯವಾಗಿ ಅನಿತ್ಯವಾದುದು, ಆತ್ಮಾವಾದ ಚಿದ್ದ್ರವ್ಯಕ್ಕೆ ಅಂತಹ ಪರಿಣಾಮವಿಲ್ಲದಿರುವ ಸ್ವರೂಪವಾದುದರಿಂದ ಸಚ್ಛಬ್ದವಾಚ್ಯವಾಗಿ ಸದಾ ಅದು ಏಕರೂಪವಲ್ಲೇ ಇರುವವು. ತತ್ವಜ್ಞರಾದ ಪರಾಶರಾದಿಗಳು ಅವುಗಳ ಸ್ವರೂಪ ಹೀಗೆ ಎಂದು ನಿರ್ಣಯ ಮಾಡಿರುತ್ತಾರೆ. ಎಲ್ಲಿ ಎಂದರೆ ಭಾಷ್ಯದಲ್ಲಿ ಶ್ರೀ ಭಾಷ್ಯಕಾರರು ನಾಲ್ಕು ಶ್ಲೋಕಗಳನ್ನು ಉದಾಹರಿಸುತ್ತಾರೆ.

**ಭಾಷ್ಯಾರ್ಥವು** :—ಈ ಮುಂದಿನ ಉಪದೇಶವು ಸಾಮಾನ್ಯವಾಗಿ ಹೇಳಲ್ಪಟ್ಟಿದ್ದರೂ ಪ್ರಕರಣಾನುಗುಣವಾಗಿ ಅನ್ವಯಿಸಿ ಹೇಳುತ್ತಾರೆ. **ಅಸತಃ** - ಎಂದರೆ ದೇಹಕ್ಕೆ, **ಸದ್ಭಾವಃ**–ಸ್ಥಿರತ್ವವು, **ನವಿದ್ಯತೇ** – ಇಲ್ಲವು. **ಸತಶ್ಚ** - ಎಂದರೆ ಜೀವಾತ್ಮನಿಗೆ, **ನಾಸದ್ಭಾವಃ** (ನ ಅಸದ್ಭಾವಃ) - ಅಸ್ಥಿರತ್ವವು ಇಲ್ಲವು, ಎಂದರೆ ಸ್ಥಿರತ್ವ ಉಂಟು ಎಂಬ ಭಾವವು. ಹೀಗೆ, **ಉಭಯೋಃರ್ದೇಹಾತ್ಮನೋಃ** - ಈ ಎರಡಾದ ದೇಹಾತ್ಮಗಳು, **ಉಪಲಭ್ಯ ಮಾನಯೋಃ** - ಪ್ರಮಾಣಗಳಿಂದ ತಿಳಿಯತಕ್ಕವುಗಳಾಗಿ, **ಯಥೋಪಲಬ್ಧಿ** - ಪ್ರಮಾಣಗಳಿಂದ ಹೇಗೆ ತೋರಿಬಂದವೋ ಹಾಗೆ, ಅವುಗಳ, **ಅನ್ತಃ** - ಕೊನೆಯ ನಿರ್ಣಯವು, **ತತ್ತ್ವದರ್ಶಿಭಿಃ** - ತತ್ತ್ವಗಳನ್ನು ಹೀಗೆ ವಿಮರ್ಶಿಸಿ ತಿಳಿದವರಾದ ಮಹರ್ಷಿಗಳಿಂದ, **ದೃಷ್ಟಃ** - ಕಾಣಲ್ಪಟ್ಟಿತು. ಅನ್ತ ಶಬ್ದಕ್ಕೆ ಕೊನೆಯ ನಿರ್ಣಯವೆಂದು ಅರ್ಥ ಹೇಗೆ ಎಂದರೆ ಸಮರ್ಥಿಸುತ್ತಾರೆ. **ನಿರೂಪಣಸ್ಯ** - ತತ್ತ್ವಗಳ ಸ್ವರೂಪ ನಿರೂಪಣೆಗೆ, **ನಿರ್ಣಯಾನ್ತತ್ವಾತ್** - ಸ್ವರೂಪ ನಿರ್ಣಯವೇ ಅಂತವಾದುದರಿಂದ, **ಇಹ** - ಈ ಸಂದರ್ಭದಲ್ಲಿ, ಅನ್ತವೆಂಬ ಶಬ್ದದಿಂದ ನಿರ್ಣಯವು ಹೇಳಲ್ಪಟ್ಟಿರುತ್ತದೆ. ದೇಹಾತ್ಮವೆಂಬ ಎರಡು ತತ್ವಕ್ಕೂ ಹಾಗೆ ನಿರ್ಣಯ ಮಾಡಲ್ಪಟ್ಟ ಸ್ವರೂಪಗಳು ಯಾವುವೆಂಬುದನ್ನು ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ. **ಅಚಿದ್ವಸ್ತುನಃ ದೇಹಸ್ಯ** – ಅಚಿದ್ವಸ್ತುವಾದ ದೇಹಕ್ಕೆ, **ಅಸತ್ತ್ವಮೇವ ಸ್ವರೂಪಮ್** - ಅಸ್ಥಿರವಾಗಿರುವದೇ ಎಂದರೆ ಪರಿಣಾಮ ಹೊಂದುವದೇ ಸ್ವರೂಪವು. **ಚೇತನಸ್ಯ ಆತ್ಮನಃ** - ಚೇತನನಾದ ಜೀವಾತ್ಮನಿಗೆ, **ಸತ್ತ್ವಮೇವ ಸ್ವರೂಪಂ** - ಸ್ಥಿರವಾಗಿ ಪರಿಣಾಮಗಳಿಲ್ಲದೇ ಇರೋಣವೇ ಸ್ವರೂಪವು, ಇತಿ–ಎಂಬದಾಗಿ, **ನಿರ್ಣಯೋ ದೃಷ್ಟ ಇತ್ಯರ್ಥಃ**-ನಿರ್ಣಯವು ಕಾಣಲ್ಪಟ್ಟಿರುತ್ತದೆ ಎಂಬ ಭಾವವು. ಅಚಿತ್ತಿಗೆ ಅಸತ್ವವೇ ಸ್ವರೂಪವು, ಚಿತ್ತಿಗೆ ಸತ್ವವೇ ಸ್ವರೂಪವೆಂದು ಹೇಳಿದರು; ಅಸತ್ವ ಸತ್ವ ಶಬ್ದಗಳಿಂದ ತೋರುವ ಅರ್ಥಗಳನ್ನು ವ್ಯಕ್ತಪಡಿಸುತ್ತಾರೆ. **ವಿನಾಶ ಸ್ವಭಾವೋಹ್ಯಸತ್ತ್ವಮ್** – ಸ್ವರೂಪವಿನಾಶವನ್ನು ಹೊಂದೋಣವೇ ಅಸತ್ತ್ವವೆಂದು ಹೇಳಲ್ಪಡುವದು, **ಅವಿನಾಶ ಸ್ವಭಾವಶ್ಚ ಸತ್ತ್ವಂ** – ಸ್ವರೂಪ ನಾಶವಾಗದಿರೋಣವೇ ಸತ್ತ್ವವೆಂದು ಹೇಳಲ್ಪಡುವದು. ಹೀಗೆ ಎಲ್ಲಾದರೂ ಹೇಳಲ್ಪಟ್ಟಿರುತ್ತದೋ

- ಭಾ. ಯಥೋಕ್ತಂ ಭಗವತಾಪರಾಶರೇಣ :—

(೧) "ತಸ್ಮಾನ್ನ ವಿಜ್ಞಾನ ಮೃತೇಽಸ್ತಿ ಕಿಂಚಿತ್ಕ್ವಚಿತ್ಕದಾಚಿ ದ್ದ್ವಿಜ ವಸ್ತು ಜಾತಂ"।

(೨) "ಸದ್ಭಾವ ಏವಂ ಭವತೋ ಮಯೋಕ್ತೋ ಜ್ಞಾನಂ ಯಥಾ ಸತ್ಯ ಮಸತ್ಯ ಮನ್ಯತ್"॥

---

ಎಂದರೆ ಶ್ರೀ ಪರಾಶರರು ವಿಷ್ಣುಪುರಾಣದಲ್ಲಿ ಹಾಗೆ ಪ್ರಯೋಗಿಸಿರುತ್ತಾರೆಂದು ನಾಲ್ಕು ಶ್ಲೋಕಗಳನ್ನು ಮುಂದೆ ಉದಾಹರಿಸುತ್ತಾರೆ.

**ಯಥೋಕ್ತಮಿತ್ಯಾದಿ** - ಹಾಗೆಯೇ ಮಹಾ ಪೂಜ್ಯರಾದ ಪರಾಶರ ಮಹರ್ಷಿಗಳಿಂದ ಹೇಳಲ್ಪಟ್ಟಿರುತ್ತದೆ. ಇಲ್ಲಿ ಮಹಾ ಪೂಜ್ಯರೆಂದು ಭಗವಚ್ಛಬ್ದವನ್ನು ಪ್ರಯೋಗಿಸಿರುವದು, **"ತತ್ತ್ವೇನ ಯಶ್ಚಿದಚಿದೀಶ್ವರ ತತ್ಸ್ವಭಾವ ಭೋಗಾಪವರ್ಗ ತದುಪಾಯಗತೀರುದಾರಃ। ಸಂದರ್ಶಯನ್ನಿರಮಿಮೀತ ಪುರಾಣರತ್ನಂ ತಸ್ಮೈ ನಮೋ ಮುನಿವರಾಯ ಪರಾಶರಾಯ॥"** ಚಿತ್, ಅಚಿತ್, ಈಶ್ವರ ಈ ಮೂರು ತತ್ವಗಳ ಸ್ವರೂಪವನ್ನು ಬಹು ಚನ್ನಾಗಿ ನಿರ್ಣಯ ಮಾಡಿ, ಐಹಿಕಸುಖಗಳನ್ನೂ ಮೋಕ್ಷಸುಖವನ್ನೂ ಸಹ ಹೊಂದುವ ಉಪಾಯಗಳನ್ನು ನಿರ್ಣಯ ಮಾಡಿ ತಿಳಿಸುವದಕ್ಕಾಗಿ ವಿಷ್ಣುಪುರಾಣವೆಂಬ ಪುರಾಣರತ್ನವನ್ನು ನಿರ್ಮಿಸಿದ ಮಹರ್ಷಿ ಶ್ರೇಷ್ಠರೆಂದು ತಮ್ಮ ಗುರುಗಳಾದ ಯಾಮುನೇಯರವರು ಕೊಂಡಾಡಿರುವದನ್ನು ಅನುಮೋದನ ಮಾಡುವದಕ್ಕೆಂದು ಭಾವಿಸಬಹುದು.

(೧) **ಹೇ ದ್ವಿಜ**–ಓ ಬ್ರಾಹ್ಮಣರಾದ ಮೈತ್ರೇಯರೇ, **ತಸ್ಮಾತ್** - ಯಾವ ಕಾರಣದಿಂದ ಅಚಿದ್ವಸ್ತುವು ಪ್ರತಿ ಕ್ಷಣವೂ ಪರಿಣಾಮವನ್ನು ಹೊಂದುವದಾಗಿದೆಯೋ ಆ ಕಾರಣದಿಂದ, **ವಿಜ್ಞಾನಂ ಋತೇ**-ಜ್ಞಾನಸ್ವರೂಪನಾದ ಆತ್ಮ ವ್ಯತಿರಿಕ್ತವಾಗಿ, **ವಸ್ತುಜಾತಂ** - ವಸ್ತು ಸಮೂಹವು, **ಕಿಂಚಿತ್** - ಯಾವದಾದರೂ, **ಕ್ವಚಿತ್** - ಎಲ್ಲಿಯಾದರೂ, **ಕದಾಚಿತ್** – ಯಾವಾಗಲಾದರೂ, **ನಾಸ್ತಿ** - ಇಲ್ಲವು, ಎಂದರೆ ಜ್ಞಾನಸ್ವರೂಪನಾದ ಆತ್ಮನಿಗೆ ವ್ಯತಿರಿಕ್ತವಾದ ಅಚಿದ್ವಸ್ತು ಎಂದಿಗೂ ಕೇವಲ ಅಸ್ತಿ ಶಬ್ದವಾಚ್ಯವಾಗುವದಿಲ್ಲವು. ಇದರ ಉತ್ತರಾರ್ಧವು **"ವಿಜ್ಞಾನಮೇಕಂ ನಿಜಕರ್ಮ ಭೇದ ವಿಭಿನ್ನ ಚಿತ್ತೈರ್ಬಹುದಾಭ್ಯುಪೇತಂ"** ಎಂಬದಾಗಿ, ಆತ್ಮತತ್ವವೆಲ್ಲಾ ಜ್ಞಾನೈಕಾಕಾರತೆಯಿಂದ ಒಂದೇ ಸ್ವರೂಪ ಉಳ್ಳದ್ದಾಗಿದ್ದರೂ, ಆಯಾ ಆತ್ಮಗಳ ಸ್ವಕೀಯವಾದ ಕರ್ಮಭೇದದಿಂದ ವಿಭಿನ್ನವಾದ ಚಿತ್ತಗಳುಳ್ಳವರಿಂದ, ದೇವಮನುಷ್ಯಾದಿ ವಿಷಮ ರೂಪದಿಂದ ಬಹುವಾಗಿದೆ ಎಂದು ತಿಳಿಯಲ್ಪಟ್ಟಿರುತ್ತದೆ ಎಂಬ ಭಾವವು.

(೨) **ಸದ್ಭಾವಃ** - ಸಚ್ಛಬ್ದವಾಚ್ಯವಾದ ಆತ್ಮಸ್ವರೂಪವು, **ಏವಂ**–ಹೀಗೆ ಜ್ಞಾನಸ್ವರೂಪವಾದುದೆಂದೂ, ಪರಿಶುದ್ಧವಾದುದೆಂದೂ, ನಿತ್ಯವೆಂದೂ, ಕರ್ಮಸಂಬಂಧವಿಲ್ಲದ್ದೆಂದೂ, ಹೇಯ ಪ್ರತ್ಯನೀಕವಾದುದೆಂದೂ, **ಭವತಃ** - ನಿನಗಾಗಿ, **ಮಯಾ** - ನನ್ನಿಂದ, **ಉಕ್ತಃ**–ಹೇಳಲ್ಪಟ್ಟಿತು. ಆದುದರಿಂದ **ಯಥಾ** - ಹೇಗೆ, **ಜ್ಞಾನಂ** - ಜ್ಞಾನಸ್ವರೂಪವಾದ ಆತ್ಮಾ ಒಂದೇ **ಸತ್ಯಂ** - ಸತ್ಯ ಶಬ್ದವಾಚ್ಯವು, **ಅನ್ಯತ್** - ಅಚಿತ್ತಾದ ಇನ್ನೊಂದು, **ಅಸತ್ಯಂ** – ಅಸತ್ಯ ಶಬ್ದವಾಚ್ಯವು. **"ಏತತ್ತು ಯತ್ಸಂ ವ್ಯವಹಾರಭೂತಂ ತತ್ರಾಪಿ ಚೋಕ್ತಂ ಭುವನಾಶ್ರಿತಂತೇ"** ಎಂಬುದು ಉತ್ತರಾರ್ಧವು. **ಏತತ್ತು** - ಜ್ಞಾನೈಕಾಕಾರದಿಂದ ಸಮವಾಗಿರುವ ಈ ಆತ್ಮತತ್ತ್ವವಾದರೋ, ಅಚಿನ್ಮಿಶ್ರವಾಗಿ ಲೋಕವನ್ನೆಲ್ಲಾ ಆಶ್ರಯಿಸಿ, ದೇವಮನುಷ್ಯಾದಿ ರೂಪದಿಂದ ಸವ್ಯವಹಾರಕ್ಕೆ

---

(೧) ವಿ. ಪು. ೨. ೧೨. ೪೩. (೨) ವಿ. ಪು. ೨. ೧೨. ೪೫,

(೩) "ಅನಾಶೀ ಪರಮಾರ್ಥಶ್ಚ ಪ್ರಾಜ್ಞೈರಭ್ಯುಪಗಮ್ಯತೇ । ತತ್ತು ನಾಶಿನ ಸಂದೇಹೋ ನಾಶಿದ್ರವ್ಯೋಪಪಾದಿತ-"

(೪) ಯತ್ತು ಕಾಲಾನ್ತರೇಣಾಪಿ ನಾನ್ಯಸಂಜ್ಞಾ ಮುಪೈತಿ ವೈ । ಪರಿಣಾಮಾದಿ ಸಂಭೂತಾಂ ತದ್ವಸ್ತು ನೃಪತಚ್ಚ ಕಿಮ್ ॥"

---

ಯೋಗ್ಯವಾಗಿ ಯಾವದಿರುತ್ತದೆಯೋ ಅದಕ್ಕೂ ಕಾರಣವು ಈ ಜೀವಾತ್ಮನ ಕರ್ಮವೆಂದೂ ಸಹ ನಿನಗೆ ನನ್ನಿಂದ ಹೇಳಲ್ಪಟ್ಟಿತು.

(೩) **ಅನಾಶೀ** - ನಾಶರಹಿತವಾದ ನಿತ್ಯವಾದ ಆತ್ಮತತ್ವವೇ, **ಪರಮಾರ್ಥಶ್ಚ** – ಅಸ್ತಿ ಶಬ್ದ ವಾಚ್ಯವಾಗಿ ಸತ್ಯವಾದುದು, ಎಂದು, **ಪ್ರಾಜ್ಞೈಃ** - ಜ್ಞಾನಿಗಳಿಂದ, **ಅಭ್ಯುಪಗಮ್ಯತೇ** – ಅಂಗೀಕರಿಸಲ್ಪಟ್ಟಿರುತ್ತದೆ. **ನಾಶಿ ದ್ರವ್ಯೋಪಪಾದಿತಂ** - ಅಸ್ಥಿರವಾದ ಅಚಿದ್ದ್ರವ್ಯದಿಂದುಂಟಾದ, **ತತ್ತು** – ಅದಾದರೋ, **ನಾಶಿ** – ಅಸ್ಥಿರವಾಗಿ ನಾಸ್ತಿ ಶಬ್ದದಿಂದ ಹೇಳಿಸಿಕೊಳ್ಳುವಂತಾದ್ದು, **ನ ಸಂದೇಹಃ** - ಇದರಲ್ಲಿ ಸಂದೇಹವಿಲ್ಲವು.

(೪) **ಯತ್ತು** - ಯಾವುದಾದರೋ, **ಕಾಲಾನ್ತರೇಣಾಪಿ** - ಬೇರೇ ಮುಂದಿನ ಕಾಲದಲ್ಲಿ ಕೂಡ, **ಪರಿಣಾಮಾದಿ ಸಂಭೂತಾಂ** - ಪರಿಣಾಮಗಳೇ ಮೊದಲಾದವುಗಳಿಂದುಂಟಾದ, **ಅನ್ಯ ಸಂಜ್ಞಾಂ**-ಬೇರೇ ವ್ಯವಹಾರಗಳನ್ನು, **ನೋಪೈತಿ**-ಹೊಂದುವದಿಲ್ಲವೋ, ಅಚಿದ್ವಸ್ತುವು ಕಾಲಾಂತರದಲ್ಲಿ ಬೇರೆ ಬೇರೆ ಹೆಸರುಗಳನ್ನು ಹೊಂದುತ್ತದೆ, ಮೃತ್ತು ಘಟವೆಂದೂ, ಹಾಲು ಮೊಸರೆಂದೂ ಹೀಗೆಲ್ಲಾ ಬೇರೆ ಬೇರೆ ಹೆಸರುಗಳುಂಟು. ಆತ್ಮತತ್ವಕ್ಕೆ ಇಂತಹ ಪರಿಣಾಮಗಳಿಲ್ಲವಾದುದರಿಂದ ಬೇರೆ ಬೇರೆ ಹೆಸರುಗಳಿಲ್ಲವೆಂಬ ಭಾವವು, **ತದ್ವಸ್ತು** – ಅದಕ್ಕೇ ವಸ್ತುವೆಂದು ಹೆಸರು. ಆದುದರಿಂದ ಪರಿಣಾಮ ಹೊಂದುವ ಅಚಿದ್ವಸ್ತುವಿಗೆ ಅವಸ್ತು ಎಂದು ಹೆಸರು, ಏತಕ್ಕೆಂದರೆ ಮೊದಲಿನ ಅವಸ್ಥೆಯನ್ನು ತೊರೆದು ಇನ್ನೊಂದು ಹೊಸ ಅವಸ್ಥೆಯನ್ನು ಹೊಂದುವದರಿಂದ ಹಾಗೆ ವ್ಯವಹಾರವು. ಹೀಗೆ ಹೊಸ ಹೊಸ ಪರಿಣಾಮಗಳಿಲ್ಲದ ಚಿದ್ವಸ್ತುವಿಗೆ ವಸ್ತುವೆಂದು ಹೆಸರು. ಆದರೆ ಚಿದ್ವಸ್ತುವು ದೇವ ಮನುಷ್ಯ ತಿರ್ಯಗಾದಿಗಳಾಗಿ ಪರಿಣಾಮವನ್ನು ಹೊಂದುವದಿಲ್ಲವೋ? ಎಂದರೆ ಆತ್ಮಸ್ವರೂಪಕ್ಕೆ ಪರಿಣಾಮವಿಲ್ಲವು. ದೇಹಕ್ಕೆ ಮಾತ್ರ ಪರಿಣಾಮಗಳು. ವಿಶೇಷಣಗಳಲ್ಲಿ ವ್ಯತ್ಯಾಸವು, ವಿಶೇಷ್ಯದ ಸ್ವರೂಪದಲ್ಲಿಲ್ಲವು. **ಹೇ ನೃಪ**–ಹೇ ರಹೂಗಣ ಚಕ್ರವರ್ತಿಯೇ, **ತಚ್ಚ** - ಅಂತಹ ಆತ್ಮವಸ್ತುವು, **ಕಿಮ್** - ನಮಗೆ ಕಣ್ಣಿಗೆ ಕಾಣುವ ವಸ್ತುಗಳಲ್ಲಿ ಯಾವುದು? ಎಂದರೆ ಕಣ್ಣಿಗೆ ಕಾಣುವ ಸರ್ವ ವಸ್ತುವೂ ನಾಸ್ತಿ, ಅವಸ್ತು ಶಬ್ದಗಳಿಂದ ಹೇಳಿಸಿಕೊಳ್ಳುವಂತಾದ್ದು, ಆತ್ಮತತ್ವವು ಕಣ್ಣಿಗೆ ಕಾಣಿಸುವದಲ್ಲವು. ಅಚಿದ್ವಸ್ತುವು ಕಾಲಾಂತರದಲ್ಲಿ ಪರಿಣಾಮವನ್ನು ಹೊಂದುವಂಥಾದ್ದೆಂದು ಹೇಳಿದುದರಿಂದ ಅದಕ್ಕೆ ತುಚ್ಛತ್ವ ಮಿಥ್ಯಾತ್ವವು ಕೂಡುವದಿಲ್ಲವೆಂಬುದು ಸಿದ್ಧವು. ಇದು ಜಗತ್ಸತ್ಯತ್ವವನ್ನೇ ಉಪಪಾದಿಸುತ್ತದೆ. ಹಾಗೆಯೇ ಇನ್ನೊಂದು ಕಡೆಯಲ್ಲೂ ಸಮಸ್ತ ಚಿದಚಿದ್ವಸ್ತುಗಳೂ ಶ್ರೀ ಮಹಾವಿಷ್ಣುವಿಗೆ ಶರೀರವೆಂದೂ ಆತನೇ ಎಂದರೆ ವಿಷ್ಣುವೇ ಆತ್ಮಾವೆಂದು ಹೇಳಿ, ಆ ಕಾರಣದಿಂದ ಸಾಮಾನಾಧಿಕರಣ್ಯದಿಂದ ಶ್ರೀ ಮಹಾವಿಷ್ಣುವೇ ಎಂದು ಹೇಳುವದಕ್ಕಾಗಿ **"ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುಃ"** ಎಂದಾರಂಭಿಸಿ, ಕೊನೆಗೆ ಸರ್ವ ಚಿದಚಿತ್ತುಗಳೂ ಶ್ರೀ ಮಹಾವಿಷ್ಣುವೇ ಎಂದು ಹೇಳುವ ಪ್ರಕರಣದಲ್ಲಿ **"ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ"** ಹೇ ಮೈತ್ರೇಯರೇ, ಅಸ್ತಿ ಶಬ್ದವಾಚ್ಯರಾದ ಜೀವವರ್ಗವು ಯಾವ

---

(೩) ವಿ. ಪು. ೨. ೧೪. ೨೪. (೪) ವಿ. ಪು. ೨. ೧೩. ೧೦೦.

ಭಾ. ಅತ್ರಾಪಿ "ಅನ್ತವನ್ತ ಇಮೇ ದೇಹಾಃ" "ಅವಿನಾಶಿತು ತದ್ವಿದ್ಧಿ" ಇತಿ ಹ್ಯುಚ್ಯತೇ. ತದೇವ ಸತ್ತ್ವಾಸತ್ತ್ವವ್ಯಪದೇಶಹೇತು ರಿತಿ ಗಮ್ಯತೇ. ಅತ್ರತು ಸತ್ಕಾರ್ಯವಾದಸ್ಯಾ ಸಂಗತತ್ವಾನ್ನತತ್ಪರೋಽಯಂ ಶ್ಲೋಕಃ. ದೇಹಾತ್ಮ ಸ್ವಭಾವಾಜ್ಞಾನ ಮೋಹಿತಸ್ಯ

---

ದುಂಟೋ, ಸ್ವರೂಪ ಪರಿಣಾಮಿಗಾಗಿರುವದರಿಂದ ನಾಸ್ತಿ ಶಬ್ದವಾಚ್ಯವಾದ ಅಚಿದ್ವರ್ಗ ಯಾವ ದುಂಟೋ ಸರ್ವವೂ ಶ್ರೀ ಮಹಾವಿಷ್ಣುವೇ ಎಂದು ಉಪದೇಶಿಸಿರುತ್ತಾರೆ. (ವಿ. ಪು. ೨.೧೨.೩೮)

ಅತ್ರಾಪಿ - ಇದೇ ಸಂದರ್ಭದಲ್ಲೇನೆ ಎಂದರೆ ಮುಂದಿನ ಎರಡು ಶ್ಲೋಕಗಳಲ್ಲೇ "ಅನ್ತವನ್ತ ಇಮೇದೇಹಾಃ" "ಅವಿನಾಶಿತು ತದ್ವಿದ್ಧಿ" ಎಂಬ ೧೮ನೆಯ, ೧೭ನೆಯ ಶ್ಲೋಕಗಳಲ್ಲೇ ಹಾಗೆಯೇ ಈ ಅಭಿಪ್ರಾಯವೇ ಹೇಳಲ್ಪಟ್ಟಿರುತ್ತದೆ. ಮೊದಲು ೧೮ನೆಯ ಶ್ಲೋಕ ಹೇಳಿ ಅನಂತರ ೧೭ನೆಯ ಶ್ಲೋಕ ಹೇಳಲು ಕಾರಣವು "ನಾಸತೋ ವಿದ್ಯತೇ ಭಾವಃ" ಎಂಬ ಶ್ಲೋಕ ವನ್ನೇ ಅವಲಂಬಿಸುವದಕ್ಕಾಗೆಂದು ಭಾವಿಸತಕ್ಕದ್ದು. ಮೂಲದಲ್ಲಿ ವ್ಯತ್ಯಸ್ತಕ್ರಮವು ಆತ್ಮ ಪ್ರಾಧಾನ್ಯೇನ ಎಂದು ತಿಳಿಯತಕ್ಕದ್ದು. ತದೇವ - ಆ ಕಾರಣದಿಂದಲೇ, ಸತ್ತ್ವಾಸತ್ತ್ವ ಇತ್ಯಾದಿ - ಚಿತ್ತತ್ತ್ವಕ್ಕೆ ಸತ್ವ, ಅಚಿತ್ತತ್ತ್ವಕ್ಕೆ ಅಸತ್ವವೆಂಬದಾಗಿ ಹೇಳಿಕೆಗೆ ಕಾರಣವೆಂದು, ಗಮ್ಯತೇ - ತೋರಿಬರುತ್ತದೆ. ಆದುದರಿಂದ ಇಲ್ಲಿ ಅಸತ್ ಸತ್ ಎಂಬ ಪದಗಳಿಂದ ಈ ಶ್ಲೋಕದಲ್ಲಿ ಪ್ರಕರಣಾನುಗುಣವಾಗಿ ದೇಹ ಮತ್ತು ಆತ್ಮಗಳು ಹೇಳಲ್ಪಟ್ಟವು ಎಂದು ಸಪ್ರಮಾಣವಾಗಿ ತೋರ್ಪಡಿಸಿದರು.

ಮುಂದೆ ಇತರ ಸಿದ್ಧಾಂತಿಗಳು ಹೇಳುವ ಅರ್ಥಗಳು ಪ್ರಕರಣಕ್ಕೆ ಅನುಗುಣವಾದವುಗಳಲ್ಲ ವೆಂದೂ, ಅಪ್ರಸ್ತುತ ವಿಷಯಗಳೆಂದೂ ಹೇಳುತ್ತಾರೆ. ಶ್ರೀಮಚ್ಛಂಕರಾಚಾರ್ಯರು ಈ ಶ್ಲೋಕವು ಸತ್ಕಾರ್ಯವಾದ ವಿಷಯವೆಂದು ಹೇಳಿರುತ್ತಾರೆ. ಆ ಅಭಿಪ್ರಾಯವು ಸರಿಯಲ್ಲವೆಂದು ಮುಂದೆ ತೋರಿಸುತ್ತಾರೆ:— ಏಕೆಂದರೆ ಈಗ ಪ್ರತಿಜ್ಞಾತವಾದುದು ಆತ್ಮನಿತ್ಯತ್ವವು, ಪ್ರಕರಣಾನು ಗುಣವಾಗಿ ಉಪಪನ್ನವಾದ ಅರ್ಥವು ದೊರೆಯುವ ಸಂದರ್ಭದಲ್ಲಿ ಅದನ್ನು ಬಿಟ್ಟು ಸತ್ಕಾರ್ಯಪರ ವಾಗಿ ಅರ್ಥಮಾಡುತ್ತೀನೆಂಬುದು ಪ್ರಕರಣವಿರುದ್ಧವೆಂಬ ಭಾವವು. ಈಗ ಮುಖ್ಯವಾಗಿ ಅರ್ಜುನ ಶೋಕನಿವಾರಣೆಯೂ ಅದಕ್ಕಾಗಿ ದೇಹಾತ್ಮ ಭ್ರಮನಿವಾರಣೆಯೂ ಬೇಕಾದವು. ಇವುಗಳಿಗೆ ಸತ್ಕಾರ್ಯವಾದದಿಂದ ಏನು ಪ್ರಯೋಜನವು? ಈ ಅಭಿಪ್ರಾಯಗಳನ್ನೇ ಮುಂದೆ ಉಪಪಾದಿಸು ತ್ತಾರೆ. ಅತ್ರತು - ಈ ಸಂದರ್ಭದಲ್ಲಾದರೋ, ಸತ್ಕಾರ್ಯ ವಾದ ಇತ್ಯಾದಿ - ಸತ್ಕಾರ್ಯ ವಾದವು ಅಸಂಗತವಾದುದರಿಂದ, ನ ತತ್ಪರೋಽಯಂ ಶ್ಲೋಕಃ - ಈ "ನಾಸತೋ" ಎಂಬ ಶ್ಲೋಕವು ಅಂತಹ ವಾದದ ವಿಷಯವಲ್ಲವು. ಸತ್ಕಾರ್ಯ ವಾದವೆಂದರೆ, ಕಾರಣವೇ ಕಾರ್ಯರೂಪವನ್ನು ಹೊಂದುತ್ತದೇ ವಿನಾ ಬೇರೆ ಕಾರ್ಯವು ಉತ್ಪನ್ನವಾಗುವದಿಲ್ಲವೆಂಬುದು. ವೈಶೇಷಿಕನು ಕಾರಣವೇ ಬೇರೆ, ಕಾರ್ಯವೇ ಬೇರೆ ಎಂದು ಹತ್ತು ಕಾರಣಗಳಿಂದ ಉಪಪಾದಿಸುತ್ತಾನೆ. ಅದನ್ನೆಲ್ಲಾ ಶ್ರೀಮಚ್ಛಂಕರಾಚಾರ್ಯರವರು ಖಂಡಿಸಿರುತ್ತಾರೆ. ಕಾರಣವೇ ಕಾರ್ಯರೂಪವನ್ನು ಹೊಂದುತ್ತದೆಂಬುದು ಶಾಂಕರರ ಮತ್ತು ರಾಮಾನುಜೀಯರಭಿಪ್ರಾಯವು. ಹಿಂದಿನ ಎರಡು ಶ್ಲೋಕಗಳೂ ದೇಹದ ಅನಿತ್ಯತ್ವವನ್ನೂ ಆತ್ಮನಿತ್ಯತ್ವವನ್ನೂ ಸ್ಥಾಪಿಸುತ್ತವೆ. ಈ ಶ್ಲೋಕದ ಮುಂದಿನ ಎರಡು ಶ್ಲೋಕಗಳೂ ಇವುಗಳನ್ನೇ ಉಪಪಾದಿಸುತ್ತವೆ. ಹೀಗಿರುವಾಗ ಮಧ್ಯೆ ಇರುವ ಶ್ಲೋಕ ಒಂದು ಮಾತ್ರ ಸತ್ಕಾರ್ಯ ವಾದವನ್ನುಪಪಾದಿಸಲು ಕಾರಣವೇ ಇಲ್ಲವೆಂಬ ಭಾವವು. ವೈಶೇಷಿಕನು ಹೇಳುವದು ಕಾರಣವೇ ಬೇರೆ, ಕಾರ್ಯವೇ ಬೇರೆ ಎಂಬ ವಾದವನ್ನು

**ಭಾ.** ತನ್ಮೋಹ ಶಾನ್ತಯೇ ಹ್ಯುಭಯೋರ್ನಾಶಿತ್ವಾ ನಾಶಿತ್ವರೂಪಸ್ವಭಾವ ವಿವೇಕ ಏವ ವಕ್ತವ್ಯಃ. ಸ ಏವ "ಗತಾಸೂ ನಗತಾಸೂಂ" ಇತಿ ಚ ಪ್ರಸ್ತುತಃ. ಸ ಏವ ಚ "ಅವಿನಾಶಿತು ತದ್ವಿದ್ಧಿ" "ಅನ್ತವನ್ತ ಇಮೇದೇಹಾಃ" ಇತ್ಯನನ್ತರ ಮುಪಪಾದ್ಯತೇ. ಅತಃ ಯಥೋಕ್ತ ಏವಾರ್ಥಃ ॥ ೧೬ ॥

**ಭಾ. ಅ.** ಆತ್ಮನಸ್ತ್ವವಿನಾಶಿತ್ವಂ ಕಥಮವಗಮ್ಯತ ಇತ್ಯತ್ರಾಹ—

---

ಖಂಡಿಸಲು ಪ್ರಕರಣವೇ ಇಲ್ಲವು. ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಪ್ರತಿಪಾದಿಸುವ ಸಂದರ್ಭವಿಲ್ಲವು; ಅಥವಾ ಸಾಂಖ್ಯ ಸಿದ್ಧಾಂತವನ್ನುಪಪಾದಿಸುವ ಸಂದರ್ಭವಿಲ್ಲವು. ಹೀಗಿರುವಾಗ ಈ ಪ್ರಸಂಗಕ್ಕೆ ಕಾರಣವೇ ಇಲ್ಲವೆಂದು ಹೇಳಿ ಪ್ರಸ್ತುತಾಂಶವೇನು ಎಂಬುದನ್ನು ತಿಳಿಸುತ್ತಾರೆ. **ದೇಹಾತ್ಮೇತಿ** – ದೇಹವೇನು ಆತ್ಮಾವೇನು ಇವುಗಳ ಸ್ವಭಾವಗಳ ಅಜ್ಞಾನದಿಂದ ಮೋಹಿತನಾದ ಅರ್ಜುನನಿಗೆ, **ತನ್ಮೋಹಶಾನ್ತಯೇಹಿ**-ಆ ಮೋಹವು ಶಮನವಾಗುವದಕ್ಕಾಗಿಯಲ್ಲವೇ, **ಉಭಯೋಃ** - ಆ ಎರಡಾದ ದೇಹಾತ್ಮಗಳಿಗೆ, **ನಾಶಿತ್ವಾನಾಶಿತ್ವ ರೂಪ ಸ್ವಭಾವ ವಿವೇಕಃ**-ದೇಹಕ್ಕೆ ನಾಶವಾಗುವದರಿಂದ ಅಸ್ಥಿರತ್ವವು, ಆತ್ಮವು ನಾಶವಾಗದೇ ಇರುವದರಿಂದ ನಿತ್ಯತ್ವವು, ಹೀಗೆ ಇವುಗಳಿಗೆ ವಿವೇಕವನ್ನು ಹೇಳತಕ್ಕದ್ದೀಗ ಪ್ರಕರಣವು. **ಸ ಏವ** - ಆ ವಕ್ತವ್ಯಾಂಶವೇ, ಹೇಳತಕ್ಕ ಅಭಿಪ್ರಾಯವೇ, **ಗತಾಸೂನಗತಾಸೂಂ** ಎಂಬದಾಗಿ ಪ್ರಾರಂಭಿಸಲ್ಪಟ್ಟಿತು. **ಸ ಏವ ಚ** – ಆ ಅಭಿಪ್ರಾಯವೇ, ಮುಂದಿನ ಎರಡು ಶ್ಲೋಕಗಳಾದ **"ಅವಿನಾಶಿತು ತದ್ವಿದ್ಧಿ" "ಅನ್ತವನ್ತ ಇಮೇ ದೇಹಾಃ"** ಎಂಬ ಶ್ಲೋಕಗಳಲ್ಲಿ **ಅನನ್ತರಮೇವ**-ಒಡನೆಯೇ ಏನೊಂದು ವ್ಯವಧಾನವಿಲ್ಲದೆ, **ಉಪಪಾದ್ಯತೇ** - ಉಪಪಾದಿಸಲ್ಪಡುತ್ತದೆ. ಆ ಕಾರಣದಿಂದ ಈ ಮಧ್ಯದ ಶ್ಲೋಕವೂ ಆ ಅಭಿಪ್ರಾಯವನ್ನೇ ಒಳಗೊಂಡಿರಬೇಕೆಂಬ ತಾತ್ಪರ್ಯವು. **ಅತಃ** – ಆ ಕಾರಣದಿಂದ, **ಯಥೋಕ್ತ ಏವಾರ್ಥಃ** - ಈಗ ಹೇಗೆ ಹೇಳಲ್ಪಟ್ಟಿತೋ ಅದೇ ಸಮಂಜಸವಾದ ಅರ್ಥವು. ಪೂರ್ವಾಪರ ವಿರೋಧಗಳೇನೂ ಇಲ್ಲದೆ, ಪ್ರಕರಣ ಸಂಗತಿಗಳ ಆನುಗುಣ್ಯವೂ ಇರುವದರಿಂದ ತಾವು ಮೇಲೆ ಹೇಳಿದರ್ಥವೇ ಸಮಂಜಸವಾಗಿ ಅನ್ವಯಿಸುತ್ತದೆಂಬ ಅಭಿಪ್ರಾಯದಿಂದ ನಿಗಮನ ಮಾಡಿ ಹೇಳುತ್ತಾರೆ. **ಅತಃ ಯಥೋಕ್ತ ಏವಾರ್ಥಃ** - ಇಲ್ಲಿ ಏವಕಾರದಿಂದ ಇನ್ನು ಯಾವ ಅಭಿಪ್ರಾಯಗಳೂ ಸಮಂಜಸವಾಗುವದಿಲ್ಲವೆಂಬುದೂ ಸೂಚಿತವು. ಶ್ರೀ ಯಜ್ಞಸ್ವಾಮಿ ಎಂಬ ವ್ಯಾಖ್ಯಾತೃವು ಅಸಚ್ಛಬ್ದಕ್ಕೆ ರಜಸ್ತಮಸ್ಸುಗಳ ಕಾರ್ಯವಾಗಿ ದುಃಖಾದಿಗಳಾದ ಅಶುಭ ಕರ್ಮಗಳು ಎಂಬರ್ಥವನ್ನೂ, ಸಚ್ಛಬ್ದಕ್ಕೆ ಸತ್ವಕಾರ್ಯವಾಗಿ ಸುಖಾದಿಗಳಾದ ಶುಭ ಕರ್ಮಗಳೆಂಬರ್ಥವನ್ನೂ ಹೇಳಿರುತ್ತಾರೆ. ಈ ಅರ್ಥಗಳು ರೂಢಿಯಲ್ಲಾಗಲಿ ಪ್ರಮಾಣಗಳಲ್ಲಿಯಾಗಲಿ ತೋರಿಬರುವದಿಲ್ಲವೆಂದು ವಿಸ್ತರವಾಗಿ ತಾತ್ಪರ್ಯಚಂದ್ರಿಕೆಯಲ್ಲಿ ಖಂಡಿಸಿರುತ್ತಾರೆ.

**ಭಾಷ್ಯಾವತಾರಿಕೆಯ ಅರ್ಥವು:—ಆತ್ಮನಃ**-ಜೀವಾತ್ಮನ (ಜಾತ್ಯೇಕ ವಚನವು), **ಅವಿನಾಶಿತ್ವಂತು** – ನಾಶಶೂನ್ಯತೆಯಾದರೋ, **ಕಥಮವಗಮ್ಯತೇ** - ಹೇಗೆ ತಿಳಿಯಲ್ಪಡುತ್ತದೆ ಎಂದರೆ ಊಹಿಸಲ್ಪಡುತ್ತದೆ ಎಂಬ ಭಾವವು, **ಇತ್ಯತ್ರಾಹ** - ಎಂಬ ಸಂದರ್ಭದಲ್ಲಿ ಹೇಳುತ್ತಾರೆ. ಏನೆಂದರೆ, ಹಿಂದಿನ ಶ್ಲೋಕದಲ್ಲಿ ದೇಹದ ಅನಿತ್ಯತ್ವವು ಮೊದಲು ಹೇಳಲ್ಪಟ್ಟು ಆತ್ಮನ ನಿತ್ಯತ್ವವು ಅನಂತರ ಹೇಳಲ್ಪಟ್ಟಿದ್ದರೂ, ಅರ್ಜುನ ಶೋಕಶಮನಕ್ಕೆ ಆತ್ಮನಿತ್ಯತ್ವವು ಮುಖ್ಯವೆಂದು ಭಾವಿಸಿ ಅದನ್ನು ಉಪಪಾದಿಸುತ್ತಾರೆ.

**ಮೂಲಕ್ಕೆ ಅರ್ಥವು:—ತತ್ತು** – ಆ ಆತ್ಮತತ್ವವಾದರೋ, **ಅವಿನಾಶಿ** – ನಾಶರಹಿತ

ಮೂ. ಅವಿನಾಶಿತು ತದ್ವಿದ್ಧಿ ಯೇನ ಸರ್ವಮಿದಂ ತತಂ ।
ವಿನಾಶಮವ್ಯಯಸ್ಯಾಸ್ಯ ನಕಶ್ಚಿತ್ಕರ್ತುಮರ್ಹತಿ ॥ ೧೭.

ಭಾ. ತದಾತ್ಮತತ್ತ್ವಮವಿನಾಶೀತಿ ವಿದ್ಧಿ, ಯೇನಾತ್ಮತತ್ತ್ವೇನ ಚೇತನೇನ, ತದ್ವ್ಯತಿರಿಕ್ತ ಮಿದಮಚೇತನತತ್ತ್ವಮ್ ಸರ್ವಂ ತತಂ—ವ್ಯಾಪ್ತಮ್. ವ್ಯಾಪಕತ್ವೇನ ನಿರತಿಶಯ ಸೂಕ್ಷ್ಮತ್ವಾದಾತ್ಮನೋ ವಿನಾಶಾನರ್ಹಸ್ಯ ತದ್ವ್ಯತಿರಿಕ್ತೋ ನಕಶ್ಚಿತ್ಪದಾರ್ಥೋ ವಿನಾಶಂ ಕರ್ತುಮರ್ಹತಿ, ತದ್ವ್ಯಾಪ್ಯತಯಾ ತಸ್ಮಾತ್ಸ್ಥೂಲತ್ವಾತ್. ನಾಶಕಂಹಿ ಶಸ್ತ್ರಜಲಾಗ್ನಿ ವಾಯ್ವಾದಿಕಂ ನಾಶ್ಯಂ ವ್ಯಾಪ್ಯ ಶಿಥಿಲೀ ಕರೋತಿ. ಮುದ್ಗರಾದಯೋಽಪಿ ಹಿ ವೇಗವತ್ಸಂಯೋಗೇನ ವಾಯುಮುತ್ಪಾದ್ಯ ತದ್ದ್ವಾರೇಣ ನಾಶಯನ್ತಿ. ಅತ ಆತ್ಮತತ್ತ್ವಂ ಅವಿನಾಶಿ.

ವಾದುದೆಂದು, ವಿದ್ಧಿ - ತಿಳಿ, ಅದಕ್ಕೆ ಕಾರಣವನ್ನು ತಿಳಿಸುತ್ತಾರೆ. ಯೇನ - ಯಾವ ಆತ್ಮತತ್ತ್ವದಿಂದ, ಇದಂ ಸರ್ವಂ - ಈ ಕಣ್ಣಿಗೆ ಕಾಣುವದೆಲ್ಲಾ ಎಂದರೆ ಅಚಿದ್ದ್ರವ್ಯವೆಲ್ಲಾ, ತತಂ - "ಅನೇನ ಜೀವೇನಾತ್ಮನಾನುಪ್ರವಿಶ್ಯ" ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ, ವ್ಯಾಪ್ತವಾಗಿದೆಯೋ, ಆ ಕಾರಣದಿಂದ ಎಂಬ ಭಾವವು. ಬಹು ಸೂಕ್ಷ್ಮವಾಗಿ ಎಲ್ಲಾ ಅಚಿದ್ದ್ರವ್ಯವನ್ನೂ ವ್ಯಾಪಿಸಿರುವದರಿಂದ ಇದಕ್ಕೆ ಯಾವ ಅಚಿದ್ದ್ರವ್ಯದಿಂದಲೂ ನಾಶವಿಲ್ಲವೆಂಬ ಭಾವವು. ಅವ್ಯಯಸ್ಯ - ಹೀಗೆ ನಾಶರಹಿತನಾದ, ಅಸ್ಯ - ಈ ಜೀವಾತ್ಮನಿಗೆ, ವಿನಾಶವನ್ನು, ಕಶ್ಚಿತ್ – ಯಾವದೊಂದೂ, ಕರ್ತುಂ - ಉಂಟುಮಾಡಲು, ನಾರ್ಹತಿ– ಸಮರ್ಥವಾಗುವದಿಲ್ಲವು. ಈ ಶ್ಲೋಕವು ಜೀವಾತ್ಮನನ್ನು ಕುರಿತದ್ದೇ ವಿನಾ, ಈಶ್ವರ ತತ್ವ ವಿಷಯವಲ್ಲವು. ತತ್ ಎಂಬುದು ಜೀವಾತ್ಮ ತತ್ವವನ್ನು ಹೇಳುತ್ತದೆ.

ಭಾಷ್ಯಾರ್ಥವು :—ತತ್ ಎಂದರೆ ಆತ್ಮತತ್ತ್ವವು, ಅವಿನಾಶೀತಿ ವಿದ್ಧಿ - ನಾಶವಿಲ್ಲದ್ದೆಂದು ತಿಳಿ. ಯೇನ ಆತ್ಮತತ್ತ್ವೇನ - ಯಾವ ಈ ಆತ್ಮತತ್ತ್ವವಾದ, ಚೇತನೇನ - ಚೇತನದಿಂದ, ತದ್ವ್ಯತಿರಿಕ್ತಂ - ಆ ಚೇತನ ತತ್ವಕ್ಕಿಂತ ಬೇರೆಯಾದ, ಇದಮಚೇತನ ತತ್ತ್ವಂ ಸರ್ವಂ - ಈ ಅಚೇತನನ ತತ್ವವೆಲ್ಲವೂ, ವ್ಯಾಪ್ತಮ್ - ವ್ಯಾಪಿಸಲ್ಪಟ್ಟಿರುತ್ತದೋ, ವ್ಯಾಪಕತ್ವೇನ - ಅಚಿತ್ತನ್ನೆಲ್ಲಾ ವ್ಯಾಪಿಸಿರುವದರಿಂದ, ನಿರತಿಶಯ ಸೂಕ್ಷ್ಮತ್ವಾತ್ – ಅಣುವಾಗಿ ತುಂಬಾ ಸೂಕ್ಷ್ಮಭಾವವನ್ನು ಹೊಂದಿರುವದರಿಂದ, ವಿನಾಶಾನರ್ಹಸ್ಯ–ವಿನಾಶ ಹೊಂದಲು ಸಾಧ್ಯವಲ್ಲದ, ಆತ್ಮನಃ – ಆತ್ಮನಿಗೆ, ತದ್ವ್ಯತಿರಿಕ್ತಃ - ಅದಕ್ಕಿಂತ ಬೇರೆಯಾದ, ಕಶ್ಚಿತ್ - ಯಾವುದೊಂದು ಪದಾರ್ಥವೂ, ವಿನಾಶಂ ಕರ್ತುಂ ನಾರ್ಹತಿ – ನಾಶವನ್ನುಂಟುಮಾಡಲು ಯೋಗ್ಯವಾಗಲಾರದು, ಅದಕ್ಕೆ ಕಾರಣವನ್ನು ತಿಳಿಸುತ್ತಾರೆ. ತದ್ವ್ಯಾಪ್ಯತಯಾ - ಆ ಅತಿ ಸೂಕ್ಷ್ಮವಾಗಿ ಅಣುರೂಪವಾಗಿರುವ ಆತ್ಮನಿಂದ ವ್ಯಾಪಿಸಲ್ಪಟ್ಟಿರುವದರಿಂದ, ಈ ಅಚಿತ್ತೆಲ್ಲಾ, ತಸ್ಮಾತ್ - ಆ ಅಣುವಿಗಿಂತಲೂ, ಸ್ಥೂಲತ್ವಾತ್ - ಸ್ಥೂಲವಾಗಿರೋಣದರಿಂದ, ಹಾಗೆ ಆತ್ಮವು ಅವಿನಾಶಿಯಾಗಿರಲು ಇದೀಗ ಕಾರಣವು ಎಂಬ ಭಾವವು. ಶಸ್ತ್ರ, ಜಲ, ಅಗ್ನಿ, ವಾಯು ಮೊದಲಾದ, ನಾಶಕಂ ಹಿ - ನಾಶಕವಸ್ತುವಾದರೋ, ನಾಶ್ಯಂ ವ್ಯಾಪ್ಯ - ನಾಶಹೊಂದಲು ಯೋಗ್ಯವಾದ ಪದಾರ್ಥವನ್ನು ವ್ಯಾಪಿಸಿ, ಶಿಥಿಲೀ ಕರೋತಿ - ಶಿಥಿಲವಾಗುವ ಹಾಗೆ ಮಾಡುತ್ತದೆ. ಮುದ್ಗರಾದಯೋಽಪಿ - ಹಾರೆ ಮೊದಲಾದವುಗಳಾದರೋ, ವೇಗವನ್ನು ಹೊಂದಿದ ಸಂಯೋಗದಿಂದ, ವಾಯುಮುತ್ಪಾದ್ಯ - ವಾಯುವನ್ನುಂಟು

Funding: Tattva Heritage Foundation,Kolkata. Digitization: eGangotri.



**ಭಾ. ಅವ. ದೇಹಾನಾಂತು ವಿನಾಶಿತ್ವಮೇವ ಸ್ವಭಾವ ಇತ್ಯಾಹ.**

ಮಾಡಿ, **ತದ್ವಾರೇಣ** - ಆ ಮೂಲಕವಾಗಿ, **ನಾಶಯನ್ತಿ** - ನಾಶಮಾಡುತ್ತವೆ. **ಅತಃ** – ಆ ಕಾರಣದಿಂದ, ಆತ್ಮತತ್ತ್ವವು ನಾಶರಹಿತವಾದುದು.

ಈ ಶ್ಲೋಕದಲ್ಲಿ ಅನುಮಾನ ಪ್ರಮಾಣದ ಮೂಲಕ ಆತ್ಮತತ್ತ್ವವು ನಾಶರಹಿತವಾಗಿ ನಿತ್ಯವಾದುದೆಂದು ಸ್ಥಾಪಿಸಲ್ಪಡುತ್ತದೆ. ಜೀವಾತ್ಮರೆಲ್ಲಾ ಅಣುರೂಪರು. ಹಾಗೆ ಭಾವಿಸಲು ಶ್ರುತಿ ಪ್ರಮಾಣಗಳುಂಟು. ಈ ಸೂಕ್ಷ್ಮವಾದ ಜೀವತತ್ತ್ವವು ಅಚಿತ್ಸರ್ಗವನ್ನೆಲ್ಲಾ ವ್ಯಾಪಿಸುವದರಿಂದಲೇ ಅವು ನಾಮರೂಪವನ್ನು ಹೊಂದಲು ಯೋಗ್ಯವಾಗಿ ಸ್ಥೂಲತ್ವವನ್ನು ಹೊಂದುತ್ತವೆ. ಬಹು ಸೂಕ್ಷ್ಮವಾಗಿ ಅಣುರೂಪವಾಗಿರುವದು ಒಂದು ಹೇತುವು, ಈ ಪರಿದೃಶ್ಯವಾದ ಕಣ್ಣಿಗೆ ಕಾಣುವದನ್ನೆಲ್ಲಾ ಈ ಸೂಕ್ಷ್ಮವಾದ ಆತ್ಮತತ್ವವು ಅವಿನಾಶಿ ಎಂದು ಸಾಧಿಸಲ್ಪಟ್ಟಿರುತ್ತದೆ. ಅನುಮಾನ ಪ್ರಯೋಗಗಳು ಹೇಗೆ ಎಂದರೆ, (೧) ಆತ್ಮನು ಶಸ್ತ್ರಾದಿಗಳಿಗೆ ಅಧೀನವಾದ ವಿನಾಶವುಳ್ಳವನಾಗುವದಿಲ್ಲವು, ಏಕೆಂದರೆ ಅವುಗಳನ್ನು ಆತ್ಮನು ವ್ಯಾಪಿಸುವದರಿಂದಲೂ, ಅವುಗಳಿಗಿಂತ ತುಂಬಾ ಸೂಕ್ಷ್ಮವಾಗಿರುವದರಿಂದಲೂ, ಆಕಾಶದ ಹಾಗೆ. (೨) ಯಾವುದು ಯಾವುದಕ್ಕೆ ಅಧೀನವಾದ ವಿನಾಶವುಳ್ಳದ್ದೋ, ಅದು ಆ ಇನ್ನೊಂದಕ್ಕಿಂತ ಸೂಕ್ಷ್ಮವಾದುದಲ್ಲವು, ಹೇಗೆಂದರೆ ವಾಯುವಿನಿಂದ ವಿನಾಶ ಹೊಂದುವ ದೀಪದಹಾಗೆ. ಇದು ವ್ಯತಿರೇಕ ಪ್ರಯೋಗವು, ಮೊದಲನೆಯ ಪ್ರಯೋಗವು ಪೂರ್ವಾರ್ಧದಿಂದಲೂ ಎರಡನೆಯ ಪ್ರಯೋಗವು ಉತ್ತರಾರ್ಧದಿಂದಲೂ ವ್ಯಕ್ತವು. ಈ ಅಭಿಪ್ರಾಯಗಳನ್ನೇ ಶ್ರೀ ಭಾಷ್ಯಕಾರರು **"ವ್ಯಾಪಕತ್ವೇನ ನಿರತಿಶಯ ಸೂಕ್ಷ್ಮತ್ವಾದಾತ್ಮನಃ"** ಎಂಬುದರಿಂದ ತಿಳಿಸುತ್ತಾರೆ. ಈ ಆತ್ಮತತ್ವವು ಪರಿದೃಶ್ಯವಾದ ಜಗತ್ತನ್ನೆಲ್ಲಾ ವ್ಯಾಪಿಸಿರುತ್ತದೆ ಎಂದು ತಿಳಿಸುವದಕ್ಕಾಗಿ **"ಇದಂ ಸರ್ವಂ"** ಎಂಬ ಪ್ರಯೋಗವು. ಕಣ್ಣಿಗೆ ಕಾಣುವದೆಲ್ಲಾ ಅಚಿದ್ದ್ರವ್ಯವೇ ವಿನಾ, ಆತ್ಮತತ್ತ್ವವು ಕಣ್ಣಿಗೆ ಕಾಣಿಸುವದಿಲ್ಲವು. ಎಲ್ಲವನ್ನೂ ಆತ್ಮತತ್ವವು ವ್ಯಾಪಿಸಿರುತ್ತದೆಂಬುದಕ್ಕೆ ಶಾಸ್ತ್ರ ಪ್ರಮಾಣ ಉಂಟೋ? ಎಂದರೆ, **"ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ"** ಎಂಬ ಪ್ರಮಾಣವನ್ನನುಸರಿಸಿ, **"ಸರ್ವಮಿದಂ ತತಂ"** ಎಂದು ಇಲ್ಲಿ ಹೇಳಲ್ಪಟ್ಟಿರುತ್ತದೆ. ಉತ್ತರಾರ್ಧವಲ್ಲಿರುವ ಕಶ್ಚಿತ್ತೆಂಬುದಕ್ಕೆ **ಈಶ್ವರೋಪಿ** ಎಂದು ಹೇಳಲು ಸಾಧ್ಯವಿಲ್ಲವು. ಹಾಗೆ ಹೇಳಿದರೆ ಸ್ವಸಿದ್ಧಾಂತಕ್ಕೇ ವಿರೋಧವಾಗಿ ಅದ್ವೈತ ಹಾನಿಯುಂಟಾಗುತ್ತದೆ. ಈ ಅಭಿಪ್ರಾಯವನ್ನು ಸೂಚಿಸುವದಕ್ಕಾಗಿಯೇ **ತದ್ವ್ಯತಿರಿಕ್ತೋ ನಕಶ್ಚಿತ್ಪದಾರ್ಥಃ** ಎಂದು ಪ್ರಯೋಗಿಸಿರುತ್ತಾರೆ. **ಅತಃ** - ಈ ಮೇಲೆ ಹೇಳಿದ ಎರಡು ಕಾರಣಗಳಿಂದ ಶಸ್ತ್ರಾದಿಗಳಿಂದ ಆತ್ಮನಿಗೆ ನಾಶವಿಲ್ಲವು, ಈಶ್ವರನೂ ಈ ಜೀವಾತ್ಮರುಗಳಿಗೆ ನಾಶ ಉಂಟಾಗಲಿ ಎಂದು ಎಂದಿಗೂ ಸಂಕಲ್ಪಿಸುವದಿಲ್ಲವು, ಆದುದರಿಂದ ಆತ್ಮತತ್ತ್ವವು ಅವಿನಾಶಿಯು.

**ಭಾಷ್ಯಾವತಾರಿಕೆಯ ಅರ್ಥವು**:—ಮುಂದಿನ ಶ್ಲೋಕದಿಂದ ದೇಹಗಳಿಗೆ ವಿನಾಶ ಹೊಂದುವದೇ ಸ್ವಭಾವವೆಂದು ಹೇಳುತ್ತಾರೆ. **ದೇಹಾನಾಂತು** - ದೇಹಗಳಿಗಾದರೋ, **ವಿನಾಶಿತ್ವಮೇವ** - ಪರಿಣಾಮವನ್ನು ಹೊಂದುವದೇ, ಸ್ವಭಾವವು, **ಇತ್ಯಾಹ** - ಎಂದು ಹೇಳುತ್ತಾರೆ.

**ಮೂಲಕ್ಕೆ ಅರ್ಥವು**:—**ನಿತ್ಯಸ್ಯ** - ಶಾಶ್ವತನಾದ, **ಅನಾಶಿನಃ** - ನಾಶರಹಿತನಾದ, **ಅಪ್ರಮೇಯಸ್ಯ** - ಇಂದ್ರಿಯಗಳ ಮೂಲಕ ಗ್ರಹಿಸಲು ಸಾಧ್ಯವಲ್ಲದ, **ಶರೀರಿಣಃ** – ಅನಿತ್ಯವಾಗಿರುವ ಶರೀರವನ್ನು ಹೊಂದಿರುವ ಆತ್ಮನ, **ಇಮೇ ದೇಹಾಃ** - ಈ ಕಣ್ಣಿಗೆ ಕಾಣುತ್ತಿರುವ ದೇಹಗಳೆಲ್ಲವೂ, **ಅನ್ತವನ್ತಃ** - ನಾಶವುಳ್ಳವುಗಳಾಗಿ, **ಉಕ್ತಾಃ** - ಪ್ರತ್ಯಕ್ಷದಲ್ಲಿಯೂ ಶಾಸ್ತ್ರಗಳ

ಮೂ. ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಶ್ಶರೀರಿಣಃ ।
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮.

ಭಾ. ಮೂ. "ದಿಹ ಉಪಚಯೇ" ಇತ್ಯುಪಚಯ ರೂಪಾ ಇಮೇ ದೇಹಾ ಅನ್ತವನ್ತಃ – ವಿನಾಶಸ್ವಭಾವಾಃ. ಉಪಚಯಾತ್ಮಕಾಹಿ ಘಟಾದಯೋಽನ್ತವನ್ತೋ ದೃಷ್ಟಾಃ. ನಿತ್ಯಸ್ಯ ಶರೀರಿಣಃ ಕರ್ಮಫಲ ಭೋಗಾರ್ಥತಯಾ ಭೂತಸಂಘಾತರೂಪಾದೇಹಾಃ.

ಲ್ಲಿಯೂ ಹೇಳಲ್ಪಟ್ಟವು; ತಸ್ಮಾತ್ - ಆ ಕಾರಣದಿಂದ, ಓ ಭಾರತ – ಓ ಭರತವಂಶೋದ್ಭವನಾದ ಅರ್ಜುನನೇ, ಯುಧ್ಯಸ್ವ - ಯುದ್ಧಮಾಡು. ಇಲ್ಲಿ ಅನ್ತವನ್ತಃ ಎಂದು ಹೇಳಿರುವದರಿಂದ ದೇಹರಚನೆಗೆ ಅಂತವೇ ವಿನಾ ದೇಹದಲ್ಲಿರುವ ಅಚಿದ್ದ್ರವ್ಯಕ್ಕೆ ಅಂತವಿಲ್ಲವು. ಪ್ರವಾಹತಃ ಅದು ನಿತ್ಯವೇ ಆದುದರಿಂದ ಇಮೇ ದೇಹಾಃ ಅನ್ತವನ್ತಃ ಎಂದು ಹೇಳಲ್ಪಟ್ಟಿರುತ್ತದೆ.

ಭಾಷ್ಯಾರ್ಥವು :—ದಿಹ ಉಪಚಯೇ – ದಿಹ ಎಂಬ ಧಾತುವು ವೃದ್ಧಿ ಹೊಂದುವ ಅರ್ಥವುಳ್ಳದ್ದು, ಆದುದರಿಂದ, ಉಪಚಯರೂಪಾ ಇಮೇ ದೇಹಾಃ – ಭೂತಸಂಘಾತರೂಪವಾಗಿ ಒಟ್ಟಿಗೆ ಸೇರಿ ವೃದ್ಧಿ ಹೊಂದುವದರಿಂದ ದೇಹಗಳೆನಿಸುವ ಈ ಕಣ್ಣಿಗೆ ಕಾಣಿಸುವ ಶರೀರಗಳು, ಅನ್ತವನ್ತಃ - ಎಂದರೆ ವಿನಾಶ ಹೊಂದುವ ಸ್ವಭಾವವುಳ್ಳವುಗಳು. ಘಟಾದಯಃ - ಮಡಿಕೆ ಮೊದಲಾದವುಗಳು, ಉಪಚಯಾತ್ಮಕಾಹಿ - ವೃದ್ಧಿಯನ್ನು ಹೊಂದುವವುಗಳಾಗಿ, ಅನ್ತವನ್ತೋ ದೃಷ್ಟಾಃ - ನಾಶಹೊಂದುವವುಗಳಾಗಿ ಕಂಡಿರುವೆವು. ಯಾವುದಕ್ಕೆ ವೃದ್ಧಿಯುಂಟೋ ಅದಕ್ಕೆ ಲೋಕದಲ್ಲಿ ನಾಶವನ್ನು ಕಂಡಿರುವೆವು ಎಂಬ ಭಾವವು. ವೃದ್ಧಿಯನ್ನು ಹೇಳಿದುದು, ಉತ್ಪತ್ತಿಯಾಗಿ ಅನಂತರ ವೃದ್ಧಿಯಾಗುವದರಿಂದ ಉತ್ಪತ್ತಿ ಉಳ್ಳದ್ದು, ನಾಶವುಳ್ಳದ್ದು ಎಂದೂ ಹೇಳಿದಂತಾಯಿತು. ಇಮೇದೇಹಾಃ ಅನ್ತವನ್ತಗಳಾಗಲು ಹೇತುವೇನು ಎಂದರೆ ಉಪಚಯ ಸ್ವಭಾವಾಃ ಎಂದು ಹೇಳಿದರು. ಇಮೇ ದೇಹಾಃ ಅನ್ತವನ್ತಃ ಎಂದು ಹೇಳಿರುವದರಿಂದ ಸರ್ವೇಶ್ವರನ ದಿವ್ಯಮಙ್ಗಳ ವಿಗ್ರಹಗಳಾದರೋ ಅನ್ತವನ್ತಗಳಲ್ಲವು, ಎಂದು ಮುಂದೆ ಇದೇ ಗೀತೆಯಲ್ಲೇ ಅವತಾರ ರಹಸ್ಯವನ್ನು ಪವೇಶಿಸುವಾಗ ನಾಲ್ಕನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿರುತ್ತದೆ. ಇದರಿಂದ ಈ ದೇಹರೂಪವಿಗ್ರಹವನ್ನು ಹೊಂದಿರುವವನು ಜೀವಾತ್ಮನೇ ವಿನಾ ಪರಮಾತ್ಮನಾಗುವದಿಲ್ಲವು. ನಿತ್ಯಸ್ಯ ಶರೀರಿಣಃ - ನಿತ್ಯನಾಗಿ ಶರೀರವನ್ನು ಹೊಂದಿರುವ ಆತ್ಮನಿಗೆ, ಕರ್ಮಫಲ ಭೋಗಾರ್ಥತಯಾ-ಪ್ರಾರಬ್ಧ ಕರ್ಮಫಲವನ್ನು ಅನುಭವಿಸುವದಕ್ಕಾಗಿ, ಭೂತಸಂಘಾತರೂಪಾ ದೇಹಾಃ - ಪಂಚಭೂತಗಳ ಸಮ್ಮೇಳನ ರೂಪಗಳಾದ ದೇಹಗಳು, "ಪುಣ್ಯಃ ಪುಣ್ಯೇನ" ಎಂಬಿವೇ ಮೊದಲಾದ, ಶಾಸ್ತ್ರೈಃ - ಬೃಹದಾರಣ್ಯಕ ಶ್ರುತಿವಾಕ್ಯಗಳಿಂದ, ಕರ್ಮಾವಸಾನ ವಿನಾಶಿನಃ - ಕರ್ಮೋಪಭೋಗದ ಕೊನೆಯಲ್ಲಿ ವಿನಾಶವನ್ನು ಹೊಂದುವವುಗಳೆಂದು, ಉಕ್ತಾಃ - ಹೇಳಲ್ಪಟ್ಟವೆ. ಮೂಲದಲ್ಲಿ ನಿತ್ಯಸ್ಯೋಕ್ತಾಃ ಶರೀರಿಣಃ ಎಂಬಲ್ಲಿ ನಿತ್ಯನಾದ ಆತ್ಮನ ದೇಹಗಳು ನಾಶವುಳ್ಳವೆಂದು ಹೇಳಲ್ಪಟ್ಟವು, ಎಲ್ಲಿ ಹೇಳಲ್ಪಟ್ಟವು ಎಂಬ ಪ್ರಶ್ನೆಯ ಸಮಾಧಾನಕ್ಕಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿ ಎಂದು ಹೇಳಿ ಆ ವಾಕ್ಯವನ್ನು ಉದಾಹರಿಸಿರುತ್ತಾರೆ. ದೇಹಗಳು ಅನಿತ್ಯವಾಗಲು ಹೇತುವೇನು ಎಂದರೆ ಭೂತಸಂಘಾತರೂಪವೆಂದು ಹೇಳಿದರು. ಈ ಅರ್ಥವು ದೇಹ ಶಬ್ದದ ವ್ಯುತ್ಪತ್ತಿಯಿಂದಲೇ ತೋರಿಬರುತ್ತದೆ. ಭೂತಸಂಘಾತ ರೂಪದಲ್ಲಿ ಯಾವುದು ಅವಯವಿಯೋ, ಅದಕ್ಕೆ ನಾಶ ಉಂಟೆಂಬ ಭಾವದಿಂದಲೇ, ಹಾಗೆ ಪ್ರಯೋ

ಮೂ. (೧) "ಪುಣ್ಯಃ ಪುಣ್ಯೇನ" ಇತ್ಯಾದಿ ಶಾಸ್ತ್ರೈರುಕ್ತಾಃ ಕರ್ಮಾವಸಾನ ವಿನಾಶಿನಃ. ಆತ್ಮಾತ್ವವಿನಾಶೀ, ಕುತಃ, ಅಪ್ರಮೇಯತ್ವಾತ್. ನಹ್ಯಾತ್ಮಾ ಪ್ರಮೇಯತಯೋಪಲಭ್ಯತೇ, ಅಪಿತು ಪ್ರಮಾತೃತಯಾ. ತಥಾಚ ವಕ್ಷ್ಯತೇ :—

ಗವ. ಸರ್ವೇಶ್ವರನು "ನ ಭೂತಸಂಘ ಸಂಸ್ಥಾನೋ ದೇಹೋಸ್ಯ ಪರಮಾತ್ಮನಃ" (ಭಾರ. ಶಾನ್ತಿ. ೨೦೬. ೬೦) ಎಂದು ಭೂತಸಂಘ ಸಂಸ್ಥಾನವುಳ್ಳ ದೇಹವನ್ನು ಹೊಂದಿಲ್ಲದೇ ಇರುವದರಿಂದ, ಆತನ ದಿವ್ಯಮಙ್ಗಳ ವಿಗ್ರಹವು "ಸದೈಕರೂಪ ರೂಪಾಯ" (ವಿ. ಪು. ೧. ೨. ೧) ಎಂದು ಹೇಳಿರುವಹಾಗೆ ವೃದ್ಧಿಕ್ಷಯಾದಿ ಪರಿಣಾಮಗಳಿಲ್ಲದೆ ನಿತ್ಯವಾದುದು. ನಮ್ಮ ದೇಹವಾದರೋ "ಮಾಂಸಮೇದೋಸ್ಥಿ ಸಂಭವ" ವಾದುದರಿಂದ ವಿನಾಶ ಸ್ವಭಾವಗಳೆಂದು ಹೇಳಿರುತ್ತಾರೆ. ಈ ದೇಹಗಳು ಕರ್ಮಾವಸಾನ ವಿನಾಶಿನಃ ಎಂಬುದರಿಂದ, ಕರ್ಮಫಲಭೋಗಕ್ಕಾಗಿಯೇ ಉಂಟಾದುದರಿಂದ ಕರ್ಮಫಲೋಪಭೋಗವು ಯಾವಾಗ ಮುಗಿಯಿತೋ, ಆಗ ಹೋಗತಕ್ಕವು ಎಂದು ಹೇಳಿದುದರಿಂದ ಮೂಲದಲ್ಲಿ ಹೇಳಲ್ಪಟ್ಟ ಶರೀರಿಣಃ ಎಂಬ ಪದದ ನಿರ್ವಚನವು ಹೇಳಲ್ಪಟ್ಟಿತು. ವಿಶರಣಸ್ವಭಾವವುಳ್ಳದು ಶರೀರವು. ಈ ದೇಹವು, ಕರಣ ಕಳೇಬರ ರೂಪವಾಗಿ ನಮಗೆ ಎರಡು ವಿಧವಾಗಿ ಉಪಯೋಗವು. (೧) ಪ್ರಾರಬ್ಧ ಕರ್ಮಫಲದ ಉಪಭೋಗವು, ಇವನ್ನೇ ಇಲ್ಲಿ ಹೇಳಿರುತ್ತಾರೆ. (೨) ಈ ದೇಹವನ್ನು ಕಳೆದುಕೊಳ್ಳುವ ಪ್ರಯತ್ನ ಮಾಡುವವಕ್ಕೂ ಎಂದರೆ ಉಪಾಯಾನುಷ್ಠಾನ ಮೂಲಕ ಮೋಕ್ಷಪ್ರಾಪ್ತಿಗೂ ಸಹ ಉಪಯೋಗವಾದುದು. ಇವನ್ನು ಮುಂದೆ ಹೇಳುತ್ತಾರೆ, ಹಿಂದೆ ಸೂಕ್ಷ್ಮವಾಗಿ ಅಮೃತತ್ವಾಯ ಕಲ್ಪತೇ ಎಂದು ಹೇಳಿರುತ್ತಾರೆ. ಕೊನೆಗೆ ಕರ್ಮಾವಸಾನದಲ್ಲಿ ನಾಶಹೊಂದುವದು ಎಂಬರ್ಥವು ಶರೀರಿಣಃ ಎಂಬ ಪದದ ವ್ಯುತ್ಪತ್ತಿಯಿಂದ ತೋರಿಬರುತ್ತದೆ. ಈಗಿನ ಪ್ರಾರಬ್ಧಕರ್ಮವು ನಷ್ಟವಾಗುವದರಿಂದ ಈ ದೇಹವು ನಷ್ಟವಾಗಿ ಇನ್ನೊಂದು ದೇಹವು ಇತರ ಕರ್ಮಫಲೋಪಭೋಗಕ್ಕಾಗಿ ಉಂಟಾಗಬಹುದು. ಅಥವಾ ಈತನು ಮುಮುಕ್ಷುವಾಗಿ ಉಪಾಯಾನುಷ್ಠಾನ ಮಾಡಿದರೆ, ಸರ್ವಕರ್ಮಗಳೂ ನಾಶವಾಗಿ ಭೂತಸಂಘಾತ ಸಂಬಂಧವೇ ನಿಶ್ಶೇಷವಾಗಿ ತೊಲಗಬಹುದು ಎಂಬ ಭಾವವು. ಬೃಹದಾರಣ್ಯ ವಾಕ್ಯವು ಯಾವುದೆಂದರೆ, "ಸಾಧುಕಾರೀ ಸಾಧುರ್ಭವತಿ, ಪಾಪಕಾರೀ ಪಾಪೋಭವತಿ, ಪುಣ್ಯಃ ಪುಣ್ಯೇನ ಕರ್ಮಣಾಭವತಿ, ಪಾಪಃ ಪಾಪೇನ" ಎಂದರೆ ಸತ್ಕರ್ಮವನ್ನು ಮಾಡುವವನು ಬ್ರಾಹ್ಮಣಾದಿ ರಮಣೀಯವಾದ ಶರೀರವನ್ನು ಹೊಂದುವವನಾಗುವನು, ಪಾಪಕರ್ಮವನ್ನು ಮಾಡುವವನು ನಾಯಿ, ಶ್ವಪಾಕ ಮೊದಲಾದ ಕುತ್ಸಿತ ಶರೀರವನ್ನು ಹೊಂದುವವನಾಗುವನು. ಆದುದರಿಂದ ಪುಣ್ಯಕರ್ಮದಿಂದ ಪುಣ್ಯವಂತನಾಗುವನು, ಪಾಪಕರ್ಮದಿಂದ ಪಾಪಿಷ್ಠನಾಗುವನು. ಇದರಿಂದ ಆತ್ಮನು ನಿತ್ಯನೆಂದೂ ಊಹಿಸಬಹುದು. ಜೀವನು ಅನಿತ್ಯವಾದರೆ ಪುಣ್ಯಕರ್ಮದಿಂದ ಪುಣ್ಯವಂತನೂ ಪಾಪಕರ್ಮದಿಂದ ಪಾಪಿಷ್ಠನೂ ಆಗಲು ಸಾಧ್ಯವಿಲ್ಲವು. ಇದನ್ನೇ ಮಂಡೋದರಿಯು, ರಣದಲ್ಲಿ ಸತ್ತ ಗಂಡನನ್ನು ನೋಡಿ ಪ್ರಲಾಪಿಸುತ್ತಾ ಹೇಳುತ್ತಾಳೆ. "ಶುಭಕೃಚ್ಛುಭಮಾಪ್ನೋತಿ ಪಾಪಕೃತ್ಪಾಪಮಶ್ನುತೇ। ವಿಭೀಷಣಸ್ಸುಖಂ ಪ್ರಾಪ್ತಸ್ತ್ವಂಪ್ರಾಪ್ತಃ ಪಾಪಮೀದೃಶಂ" ಎಂಬದಾಗಿ. ಪ್ರಕೃತ ಶ್ಲೋಕದ ಪೂರ್ವಾರ್ಧದಲ್ಲಿ ಶರೀರದ ಅನಿತ್ಯತ್ವಕ್ಕೆ ಮೂರು ಹೇತುಗಳು ಹೇಳಲ್ಪಟ್ಟವು. (೧) ಇಮೇ ದೇಹಾಃ ಎಂಬುದರಿಂದ ಭೂತಸಂಘಾತ ರೂಪವು. (೨) ಸಾವಯವತ್ವವು. (೩) ಕರ್ಮಫಲಭೋಗಾರ್ಥತ್ವವು. ಉತ್ತರಾರ್ಧದಲ್ಲಿ ಎರಡು ಹೇತು

**ಭಾ. "ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ" ಇತಿ. ನಚಾನೇಕೋಪಚಯಾತ್ಮಕ ಆತ್ಮೋಪಲಭ್ಯತೇ, ಸರ್ವತ್ರದೇಹೇ "ಅಹ ಮಿದಂ ಜಾನಾಮಿ" ಇತಿ ದೇಹಸ್ಯ ಚಾನ್ಯಸ್ಯಚ ಪ್ರಮಾತೃತಯೈಕರೂಪೇಣೋಪಲಬ್ಧೇಃ.**

---

ಗಳಿಂದ ಆತ್ಮಾ ನಿತ್ಯವೆಂದು ಹೇಳಲ್ಪಟ್ಟಿತು. ಅವು **ಅನಾಶಿನೋಽಪ್ರಮೇಯಸ್ಯ** ಎಂಬ ಪದಗಳಿಂದ ತೋರಿಬರುತ್ತವೆ. ಇದನ್ನೇ ಶ್ರೀ ಭಾಷ್ಯಕಾರರು ಮುಂದೆ ತಿಳಿಸುತ್ತಾರೆ. **ಆತ್ಮಾತ್ವವಿನಾಶೀ** - ಆತ್ಮಾವಾದರೋ ನಾಶವಿಲ್ಲದುದು, **ಕುತಃ** - ಏಕೆಂದರೆ, **ಅಪ್ರಮೇಯತ್ವಾತ್** - ಘಟಾದಿಗಳ ಹಾಗೆ ವಿಷಯಿಾಕರಿಸಲು ಸಾಧ್ಯವಲ್ಲದುದರಿಂದ, ಎಂದರೆ ಘಟಾದಿಗಳಿಗಿಂತಲೂ ಭಿನ್ನನಾದುದರಿಂದ, **ನಹ್ಯಾತ್ಮಾಪ್ರಮೇಯತಯೋಪಲಭ್ಯತೇ** – ಆತ್ಮಾವನ್ನು ದೇಹದ ಹಾಗೆ, ಭೋಗ್ಯವಸ್ತುವಿನ ಹಾಗೆ ವಿಷಯಿಾಕರಿಸಲು ಸಾಧ್ಯವಲ್ಲವು, ಹಾಗಾದರೆ ಹೇಗೆ, ಅದು ತೋರಿಬರುತ್ತದೆಂದರೆ, **ಅಪಿತುಪ್ರಮಾತೃತಯಾ** - ದೇಹವ್ಯತಿರಿಕ್ತವಾಗಿ ಭೋಕ್ತಾವಾಗಿ **ಅಹಂ ಅಹಂ** ಎಂದು ತೋರಿಬರುತ್ತದೆ. **ಘಟಮಹಂ ಜಾನಾಮಿ** ಎಂಬ ವಾಕ್ಯದಲ್ಲಿ, ಘಟದ ಹಾಗೆ ತೋರಿಬರುವದಿಲ್ಲವು, ಅಹಂ ಎಂದು ತನಗೇನೇ ತೋರಿಬರುತ್ತದೆಂಬ ಭಾವವು. ಇದಕ್ಕೆ ಪ್ರತ್ಯಕ್ತ್ವವೆಂದು ಹೆಸರು. ಇದನ್ನೇ ಮುಂದೆ ವಿಸ್ತರಿಸುತ್ತಾರೆ. ಪ್ರಕೃತ ಮೊದಲು ಆತ್ಮನು ಭೋಕ್ತಾವಾಗಿಯೇ ತೋರುತ್ತಾನೆ ಎಂಬುದಕ್ಕೆ ಗೀತಾಪ್ರಮಾಣವನ್ನೇ ಉದಾಹರಿಸುತ್ತಾರೆ. **ತಥಾಚ ವಕ್ಷ್ಯತೇ** - ಹಾಗೆಯೇ ಎಂದರೆ ಆತ್ಮನು ಪ್ರಮಾತಾ ಎಂಬದಾಗಿಯೇ ಮುಂದೆ ಹೇಳಲ್ಪಡುತ್ತದೆ. **"ಏತತ್**- ಈ ಕ್ಷೇತ್ರವನ್ನು, ಪ್ರತ್ಯವಯವರೂಪದಿಂದಾಗಲಿ ಎಲ್ಲಾ ಒಟ್ಟಿಗೆ ಸೇರಿದ ರೂಪದಿಂದಾಗಲಿ, **ಯಃ**– ಯಾವನು, **ವೇತ್ತಿ** – ಇದನ್ನು ನಾನು ತಿಳಿಯುವೆನು ಎಂದು ತಿಳಿದಿರುವನೋ, **ತಂ** - ಅವನನ್ನು, **ತದ್ವಿದಃ** – ಶರೀರ ಯಾಥಾತ್ಮ್ಯ ಆತ್ಮಯಾಥಾತ್ಮ್ಯ ಸ್ವರೂಪಗಳನ್ನು ತಿಳಿದವರು, ಕ್ಷೇತ್ರಜ್ಞನೆಂಬದಾಗಿ, **ಪ್ರಾಹುಃ** - ಹೇಳುತ್ತಾರೆ. ಇದು ನನ್ನ ಕಣ್ಣು ಇದು ನನ್ನ ಶರೀರ ಎಂಬಲ್ಲಿ ಇದಮಹಂ ವೇದ್ಮಿ ಎಂಬ ಪ್ರತೀತಿಯುಂಟಾಗುತ್ತದೆ; ಇಲ್ಲಿ ಇದಂ ಎಂಬುದರಿಂದ ಈ ಕ್ಷೇತ್ರವೂ, ಅಹಂ ಎಂಬುದರಿಂದ ಕ್ಷೇತ್ರಕ್ಕಿಂತ ಬೇರೆಯಾಗಿ ತೋರಿಬರುವ ಒಬ್ಬ ಆತ್ಮನೂ ಉಂಟು ಎಂದು ಹೀಗೆ ಎರಡರ ಯಾಥಾತ್ಮ್ಯ ಸ್ವರೂಪವನ್ನು ತಿಳಿದವರು, ಆತನನ್ನು ಕ್ಷೇತ್ರಜ್ಞನೆಂದು ಹೇಳುತ್ತಾರೆ ಎಂಬ ಭಾವವು. ಆದರೆ ಆತ್ಮತತ್ವಕ್ಕೆ ಪ್ರಮೇಯತ್ವವೇ ಇಲ್ಲವೋ ಎಂದರೆ, ಸ್ವಸ್ವರೂಪವನ್ನು ತಾನೇ ಗ್ರಹಿಸುವದರಿಂದ ಒಂದು ವಿಧವಾಗಿ ಪ್ರಮೇಯತ್ವವೂ ಕೂಡುತ್ತದೆಂದು ಭಾವಿಸಬಹುದು.

ಮುಂದೆ ಆತ್ಮಾ ಅವಯವಿಯಲ್ಲವೆಂದು ಹೇಳುತ್ತಾರೆ. ಸಾವಯವವಾಗಿದ್ದ ಪಕ್ಷದಲ್ಲಿ ನಾಶ ಉಂಟು. ಇದು ಅಣುವಾದ ಪ್ರಯುಕ್ತ ನಿರವಯವು, ಆದುದರಿಂದ ನಿತ್ಯವಾದುದೆಂದು ಹೇಳುತ್ತಾರೆ. **ನಚ........ಉಪಲಭ್ಯತೇ** - ಆತ್ಮತತ್ವವು ಅನೇಕ ಭೂತಸಂಘಾತಗಳು ಸೇರಿ ವೃದ್ಧಿ ಹೊಂದಿರುವದಾಗಿ ತೋರಿಬರುವದಿಲ್ಲವು. ಏಕೆಂದರೆ, **ಸರ್ವತ್ರ ದೇಹೇ** - ದೇಹದ ಎಲ್ಲಾ ಭಾಗದಲ್ಲೂ ಅಥವಾ ದೇವಾದಿ ಎಲ್ಲಾ ದೇಹದಲ್ಲೂ, **"ಅಹಮಿದಂ ಜಾನಾಮಿ"** - ನಾನು ಇದನ್ನು ತಿಳಿಯುವೆನು, **ಇತಿ** – ಎಂದು, **ದೇಹಸ್ಯ ಚಾನ್ಯಸ್ಯ ಚ** - ದೇಹದ ಮತ್ತು ಇತರ ವಿಷಯದ, **ಪ್ರಮಾತೃತಯಾ** - ಪ್ರಮಾತಾ ಎಂಬದಾಗಿ, **ಉಪಲಬ್ಧೇಃ** - ತೋರಿಬರುವದರಿಂದ. ಯಾವಾಗ ದೇಹವನ್ನಾಗಲಿ ಇತರ ವಿಷಯವನ್ನಾಗಲಿ ಗ್ರಹಿಸುವನೋ ಆಗ ನಾನು ತಿಳಿದೆನು ಎಂದು ಅಹಂ ಅಹಂ ಎಂದು ಪ್ರಮಾತಾವಾಗಿ ತೋರಿಬರುತ್ತದೆ. ಹೇಗೆಂದರೆ, ನಾನು ಘಟವನ್ನು ತಿಳಿಯು

ಭಾ. ನಚ ದೇಹಾದೇರಿವ ಪ್ರದೇಶಭೇದೇ ಪ್ರಮಾತು ರಾಕಾರಭೇದ ಉಪಲಭ್ಯತೇ. ಅತ ಏಕರೂಪತ್ವೇನ ಅನುಪಚಯಾತ್ಮಕತ್ವಾತ್, ಪ್ರಮಾತೃತ್ವಾತ್, ವ್ಯಾಪಕತ್ವಾಚ್ಚ ಆತ್ಮಾ ನಿತ್ಯಃ; ದೇಹಸ್ತು ಉಪಚಯಾತ್ಮಕತ್ವಾತ್, ಶರೀರಿಣಃ ಕರ್ಮಫಲಭೋಗಾರ್ಥತ್ವಾತ್, ಅನೇಕ ರೂಪತ್ವಾತ್, ವ್ಯಾಪ್ಯತ್ವಾಚ್ಚ ವಿನಾಶೀ.

---

ತ್ತೇನೆ, ಇದು ನನ್ನ ಮನೆ, ಇದು ನನ್ನ ದೇಹ, ಇತ್ಯಾದಿ. ಆದರೆ ತನ್ನನ್ನೇ ತಾನು ತಿಳಿಯುತ್ತಾನಲ್ಲಾ ಎಂದರೆ ಆಗ ತನ್ನ ಆತ್ಮಾ ಎಂಬ ವ್ಯವಹಾರಾನುಗುಣವಾಗಿ ಪ್ರಮೇಯವಾಗಲಿಲ್ಲವೋ ಎಂದರೆ ಆಗಲೂ ತಿಳಿಯುವವನು ತಾನೇ ಆದುದರಿಂದ, ಪ್ರಮಾತೃತ್ವವೂ ಉಂಟು. ಆದುದರಿಂದಲೇ ಯಾವಾಗಲೂ ಪ್ರಮಾತೃತಯಾ ಏಕರೂಪೇಣೋಪಲಬ್ಧೇಃ ಎಂದು ಹೇಳಿರುತ್ತಾರೆ. ಅನೇಕಾವಯವಗಳಿದ್ದ ಪಕ್ಷದಲ್ಲಿ ಒಂದು ಪ್ರಮಾತಾವಾಗಿ ತೋರುವಾಗ ಇನ್ನೊಂದು ಹಾಗೆ ತೋರದೆ ಇರಬಹುದು. ಹೀಗೆ ಭೂತಸಂಘಾತವಿಲ್ಲದುದು ಅವಯುವವಿಲ್ಲದುದು ಆತ್ಮಾ ಎಂದು ಹೇಳಿದುದರಿಂದ ಆತ್ಮಾ ಅಣುವಾಗಿ ಅವಯವಗಳಿರುವ ದೇಹ, ಇಂದ್ರಿಯ, ಪ್ರಾಣ, ಮನಸ್ಸು ಯಾವುದೂ ಅಲ್ಲವೆಂದು ಹೇಳಿದಂತಾಯಿತು. ಇದು ನನ್ನ ದೇಹ, ನನ್ನ ಕಣ್ಣು, ನನ್ನ ಮನಸ್ಸು ಇತ್ಯಾದಿ ವ್ಯವಹಾರಗಳಿಂದ ಆತ್ಮನು ಇವುಗಳಿಗಿಂತ ಭಿನ್ನನೆಂಬುದನ್ನು ಊಹಿಸಬಹುದು. ಆದರೆ **ಸ್ಥೂಲೋಹಂ, ಕೃಶೋಹಂ** ಎಂಬ ವ್ಯವಹಾರಗಳು ಹೇಗೆ ಎಂದರೆ ಜ್ಞಾನಶೂನ್ಯನಾಗಿ ದೇಹಾತ್ಮ ಭ್ರಮೆಯಿಂದ ಹಾಗೆ ಹೇಳಬಹುದು. ಜ್ಞಾನವಿರುವವನಿಗೆ ದೇಹವು ಅಪೃಥಕ್ಸಿದ್ಧವಿಶೇಷಣವಾದುದರಿಂದ ವಿಶೇಷ್ಯವನ್ನು ಕುರಿತು ಹೇಳಿದುದು ವಿಶೇಷಣವನ್ನು ಮನಸ್ಸಿನಲ್ಲಿಟ್ಟು ಹಾಗೆ ವ್ಯವಹಾರವೆಂದು ತಿಳಿಯುವನು. **ಪ್ರದೇಶ ಭೇದೇ** – ಪ್ರದೇಶ ಭೇದವಿರುವದರಿಂದ, **ದೇಹಾದೇರಿವ**-ದೇಹಾದಿಗಳಿಗೆ ಆಕಾರಭೇದವಿರುವಹಾಗೆ, **ಪ್ರಮಾತುಃ**-ಪ್ರಮಾತಾವಾದ ಆತ್ಮಾವಿಗೆ, ಆಕಾರ ಭೇದವು, **ನೋಪಲಭ್ಯತೇ** – ತೋರಿಬರುವದಿಲ್ಲವು. ದೇಹಾದಿಗಳಲ್ಲಾದರೋ ಭೂತಸಂಘಾತ ಭೇದದಿಂದ, ಚರ್ಮ, ರಕ್ತ, ಮಾಂಸಾದಿ ರೂಪಭೇದದಿಂದ ಆಯಾ ಪ್ರದೇಶಗಳಲ್ಲಿ ಆ ಆಕಾರ ಭೇದವು ತೋರಿಬರುತ್ತದೆ. ಈ ಆತ್ಮನಾದರೋ ಹಾಗಲ್ಲದೆ ಅಹಂ ಎಂಬದಾಗಿ ಧರ್ಮಭೂತ ಜ್ಞಾನದ ಆವಶ್ಯಕತೆಯಿಲ್ಲದೆ ಏಕರೂಪವಾಗಿ ಜ್ಞಾನರೂಪನಾಗಿ ತೋರುತ್ತಾನೆ. ಇದೂ ಕೂಡ ಪ್ರಮಾತೃತ್ವವೇ. ಆತ್ಮಸ್ವರೂಪ ನಿರೂಪಣ ದಶೆಯಲ್ಲಿ **"ಅಹಂ ಮಾಂ ಜಾನಾಮಿ"** ಎಂಬಲ್ಲಿ ಆತ್ಮಾವಿಗೆ ಪ್ರಮೇಯತ್ವವೂ ಉಂಟು; ಆದರೆ **"ನಹ್ಯಾತ್ಮಾ ಪ್ರಮೇಯತಯಾ ಉಪಲಭ್ಯತೇ"** ಎಂದು ಹೇಳಿರುವ ಸಂದರ್ಭ ಯಾವುದೆಂದರೆ, ಘಟಪಟಾದಿ ವಿಷಯಗ್ರಹಣ ವೇಳೆಯ ಸ್ಫುರಣವನ್ನು ಕುರಿತು ಹೇಳುವ ಸಂದರ್ಭವು. ಅದು **ಪ್ರಮಾತೃತ್ವದಿಂದಲೇ** ವಿನಾ ಪ್ರಮೇಯತ್ವದಿಂದಲ್ಲವೆಂದು ಹೇಳಿದರು. ಹಾಗೆಯೇ ಶ್ರುತಿಯೂ ಹೇಳುತ್ತದೆ. **"ಕೃತ್ಸ್ನಃ ಪ್ರಜ್ಞಾನ ಘನ ಏವ"** (ಬೃ. ೬. ೫. ೧೩) ನಿಶ್ಶೇಷವಾಗಿ, ಸಂಪೂರ್ಣವಾಗಿ ಎಂದರೆ ಧರ್ಮಿಯೂ ಧರ್ಮವೂ ಸಹ ಜ್ಞಾನ ರೂಪವಾದುದೇ. ಇದಕ್ಕೆ ಶ್ರುತಿಯು ಒಂದು ದೃಷ್ಟಾಂತವನ್ನು ಕೊಟ್ಟಿರುತ್ತದೆ. **ಯಥಾಸೈನ್ಧವ ಘನಃ**–ಉಪ್ಪಿನಕಲ್ಲು ಹೇಗೆ ಎಲ್ಲಾ ಸಂಪೂರ್ಣವಾಗಿ ಉಪ್ಪೋ ಹಾಗೆ ಎಂದು ಹೇಳಿರುತ್ತದೆ. ನನ್ನ ಪಾದದಲ್ಲಿ ನೋವಿದೆ, ತಲೆಯಲ್ಲಿ ನೋವಿಲ್ಲ ಸುಖವಾಗಿದೆ ಎಂಬ ಹೇಳಿಕೆಗಳಿಂದಲೂ ಆತ್ಮಾವಿನ ನಿರವಯವತ್ವವನ್ನು ತಿಳಿಯಬಹುದು. ಅಥವಾ **ಸರ್ವತ್ರ ದೇಹೇ** - ಎಂಬುವಕ್ಕೆ ದೇವಮನುಷ್ಯಾದಿ ಸರ್ವದೇಹದಲ್ಲೂ ಎಂದರ್ಥವಾದರೆ, ಇಂತಹ ವ್ಯತ್ಯಸ್ತಗಳಾದ ಎಲ್ಲಾ ಶರೀರದಲ್ಲೂ ಇರುವ ಆತ್ಮನಾದುದರಿಂದಲೂ ನಿರವಯುವಿ ಆತ್ಮನು ಎಂದೂ ಭಾವಿಸಬಹುದು. ಅವಯವವು ಆತ್ಮಾವಿಗೆ ಇದ್ದು

**ಭಾ.** **ತಸ್ಮಾದ್ದೇಹಸ್ಯ ವಿನಾಶಸ್ವಭಾವತ್ವಾತ್, ಆತ್ಮನೋ ನಿತ್ಯ ಸ್ವಭಾವತ್ವಾಚ್ಚ ಉಭಾವಪಿ ನಶೋಕಸ್ಥಾನ ಮಿತಿ ಶಸ್ತ್ರಪಾತಾದಿ ಪರುಷಸ್ಪರ್ಶಾನ ವರ್ಜನೀಯಾನ್ ಸ್ವಗತಾ ನನ್ಯ ಗತಾಂಶ್ಚ ಧೈರ್ಯೇಣ ಸೋಢ್ವಾ ಅಮೃತತ್ವಪ್ರಾಪ್ತಯೇ ಅನಭಿಸಂಹಿತ ಫಲಂ ಯುದ್ಧಾಖ್ಯಂ ಕರ್ಮಾರಭಸ್ವ ॥ ೧೮ ॥**

---

ದಾದರೆ ಯಾವುದಾದರೂ ಒಂದು ಸಮಯದಲ್ಲಿ ಆತ್ಮನು ಹಾಗೆ ತೋರಬಹುದಾಗಿತ್ತು; ಅದೂ ಅಲ್ಲದೆ ಅಂತಹ ಅವಯವಕ್ಕೂ ಚೈತನ್ಯ ಉಂಟೆಂದು ಅಂಗೀಕರಿಸಬೇಕಾಗುತ್ತದೆ.

ಹಿಂದೆ ಎರಡು ಶ್ಲೋಕಗಳಲ್ಲೂ ಹೇಳಿರುವನ್ನು ಸಂಗ್ರಹಿಸುವರಾಗಿ ಆತ್ಮನ ನಿತ್ಯತ್ವವೂ ದೇಹದ ವಿನಾಶಿತ್ವವೂ ನಾಲ್ಕು ನಾಲ್ಕು ಹೇತುಗಳಿಂದ ಸಾಧಿಸಲ್ಪಟ್ಟವೆಂದು ತಿಳಿಸುತ್ತಾರೆ:— ಆತ್ಮನು ನಿತ್ಯನು, ಏಕೆಂದರೆ (೧) **ಏಕರೂಪತ್ವೇನ** – ಒಂದೇ ವಿಧವಾಗಿ ವಿಜ್ಞಾನಸ್ವರೂಪನಾಗಿರುವದರಿಂದ, (೨) **ಅನುಪಚಯಾತ್ಮಕತ್ವಾತ್** - ನಿರವಯವವಾಗಿರುವದರಿಂದಲೂ, (೩) **ಪ್ರಮಾತೃತ್ವಾತ್** - ವಿಷಯಗಳನ್ನು ತಿಳಿಯುವವನಾದುದರಿಂದಲೂ, (೪) **ವ್ಯಾಪಕತ್ವಾತ್** - ಎಲ್ಲಾ ಭೋಗ್ಯವಸ್ತುವನ್ನೂ ವ್ಯಾಪಿಸಿರುವದರಿಂದಲೂ.

ದೇಹವಾದರೋ ವಿನಾಶ ಹೊಂದುವಂಥಾದ್ದು, ಏಕೆಂದರೆ, (೧) **ಉಪಚಯಾತ್ಮಕತ್ವಾತ್**- ಭೂತಸಂಘಾತವನ್ನು ಹೊಂದಿ ಅವಯವಗಳನ್ನುಳ್ಳದ್ದಾದುದರಿಂದಲೂ, (೨) **ಶರೀರಿಣಃ** – ಶರೀರವನ್ನು ಹೊಂದಿದ ಆತ್ಮರುಗಳಿಗೆ, **ಕರ್ಮಫಲ ಭೋಗಾರ್ಥತ್ವಾತ್** – ಕರ್ಮಫಲವನ್ನು ಅನುಭವಿಸುವದಕ್ಕಾಗಿಯಾದುದರಿಂದಲೂ, (೩) **ಅನೇಕ ರೂಪತ್ವಾತ್** - ಪರಿಣಾಮ ಹೊಂದುವ ನಾನಾರೂಪಗಳನ್ನು ಹೊಂದಿರುವದರಿಂದಲೂ, (೪) **ವ್ಯಾಪ್ಯತ್ವಾಚ್ಚ**–ವೇಗವುಳ್ಳ ಸೂಕ್ಷ್ಮದ್ರವ್ಯದಿಂದ ವ್ಯಾಪಿಸಲ್ಪಡುವದರಿಂದಲೂ.

ಈ ಹೇತುಗಳಿಗೆಲ್ಲಾ ಪೂರ್ವಪಕ್ಷರೂಪದಲ್ಲಿ ಅನೇಕ ವ್ಯಭಿಚಾರಾದಿ ದೋಷಗಳನ್ನು ತರಬಹುದು. ಅವುಗಳಿಗೆಲ್ಲಾ ಶ್ರೀ ನಿಗಮಾಂತದೇಶಿಕರವರು ತಾತ್ಪರ್ಯಚಂದ್ರಿಕೆಯಲ್ಲಿ ಸಮಾಧಾನವನ್ನು ಹೇಳಿರುತ್ತಾರೆ. ತಾರ್ಕಿಕಶಿರೋಮಣಿಗಳು ಅವುಗಳನ್ನವಲೋಕಿಸಿ ಸಂತೋಷಪಡಬಹುದು. **ತಸ್ಮಾತ್** - ಆ ಕಾರಣದಿಂದ, **ದೇಹಸ್ಯ ವಿನಾಶಸ್ವಭಾವಾತ್** - ದೇಹಕ್ಕೆ ನಾಶ ಹೊಂದುವದೇ ಸ್ವಭಾವವಾದುದರಿಂದಲೂ, ಇಲ್ಲಿ ನಾಶವೆಂದರೆ ಪೂರ್ವಾವಸ್ಥೆಯನ್ನು ಬಿಟ್ಟು ನಾಮಾಂತರವನ್ನು ಹೊಂದುವ ಅವಸ್ಥೆಯನ್ನು ಹೊಂದೋಣವು ಎಂದು ತಿಳಿಯತಕ್ಕದ್ದು. **ಆತ್ಮನಃ ನಿತ್ಯಸ್ವಭಾವಾಚ್ಚ** – ಆತ್ಮನಿಗೆ ನಿತ್ಯವಾಗಿರೋಣವೇ ಸ್ವಭಾವವಾದುದರಿಂದಲೂ, **ಉಭಾವಪಿ** – ಎರಡೂ ಕೂಡ, **ನ ಶೋಕಸ್ಥಾನಮಿತಿ** - ಶೋಕಿಸತಕ್ಕ ವಿಷಯಗಳಲ್ಲವೆಂದು, **ಸ್ವಗತಾನ್** - ತನ್ನನ್ನು ಹೊಂದಿದ, ಮತ್ತು, **ಅನ್ಯಗತಾಂಶ್ಚ** – ಇತರರನ್ನು ಹೊಂದಿದ, **ಶಸ್ತ್ರಪಾತಾದಿ ಪರುಷಸ್ಪರ್ಶಾನ್** - ಶಸ್ತ್ರ ಬೀಳೋಣವೇ ಮೊದಲಾದ ಕಠಿಣವಾದವು ಬಂದು ದೇಹವನ್ನು ಸ್ಪರ್ಶಿಸೋಣವು, **ಅವರ್ಜನೀಯಾನ್** - ಧರ್ಮಯುದ್ಧದಲ್ಲಿ ತಪ್ಪಿಸಲ್ಲವೆಂದು, ಅವುಗಳನ್ನು **ಧೈರ್ಯೇಣ ಸೋಢ್ವಾ** - ಧೈರ್ಯದಿಂದ ಸಹಿಸಿಕೊಂಡವನಾಗಿ, **ಅಮೃತತ್ವ ಪ್ರಾಪ್ತಯೇ** - ಮೋಕ್ಷಪ್ರಾಪ್ತಿಗಾಗಿ, **ಅನಭಿಸಂಹಿತಫಲಂ** - ಫಲಾಪೇಕ್ಷೆಯಿಲ್ಲದಿರುವ, **ಯುದ್ಧಾಖ್ಯಂ ಕರ್ಮ** - ಯುದ್ಧವೆಂಬ ಕರ್ಮವನ್ನು, **ಆರಭಸ್ವ** - ಪ್ರಾರಂಭಿಸು. ಈ ವಾಕ್ಯವು **ತಸ್ಮಾದ್ಯುಧ್ಯಸ್ವಭಾರತ** ಎಂಬುವದರ ವ್ಯಾಖ್ಯಾನವು. ಮೊದಲು **ತಸ್ಮಾತ್ ದೇಹಸ್ಯ** ಎಂದಾರಂಭಿಸಿ **ನ ಶೋಕಸ್ಥಾನಮಿತಿ** ಎಂಬುವವರೆಗೂ ಅರ್ಥ ಹೇಳಿದರು; ಶಸ್ತ್ರಪಾತಾದಿಗಳು ನನಗೂ ಅವನಿಗೂ ಸಹ ಉಂಟಾಗು

**ಮೂ. ಯ ಏನಂ ವೇತ್ತಿ ಹನ್ತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನವಿಜಾನೀತೋ ನಾಯಂ ಹನ್ತಿ ನಹನ್ಯತೇ ॥ ೧೯.**

ತ್ತವೆಯಲ್ಲಾ ಎಂದರೆ ಅವುಗಳನ್ನೆಲ್ಲಾ ಧೈರ್ಯದಿಂದ ಸಹಿಸತಕ್ಕದ್ದು ಕ್ಷತ್ರಿಯನ ಧರ್ಮವೆಂದು ಹೇಳಿ, ಏತಕ್ಕೆ ಯುದ್ಧ ಮಾಡಬೇಕೆಂದರೆ ಅಮೃತತ್ವಪ್ರಾಪ್ತಿಯೇ ಎಂದೂ, ಹೇಳಿ, ಹಾಗೆ ಅಮೃತತ್ವ ಪ್ರಾಪ್ತಿಯಾಗಬೇಕಾದರೆ, ಯುದ್ಧಕರ್ಮವನ್ನು ಫಲಾಪೇಕ್ಷೆಯಿಲ್ಲದೆ ಮಾಡತಕ್ಕದ್ದೆಂದೂ, ಹಾಗೆ ಫಲಾ ಪೇಕ್ಷೆಯಿದ್ದರೆ ಸ್ವರ್ಗಾದಿಫಲಗಳೇ ವಿನಾ ಮೋಕ್ಷಪ್ರಾಪ್ತಿಯಿಲ್ಲವೆಂದು ಸೂಚಿತವಾಗುವಹಾಗೆ ವ್ಯಾ ಖ್ಯಾನಮಾಡಿರುತ್ತಾರೆ. ಆದರೆ ಹೇಳದಿರುವ ವಿಷಯವನ್ನೆಲ್ಲಾ ಹೇಳಿದರೆಂದು ಅಮೃತತ್ವಾಯ ಎಂದು ಹೇಗೆ ವ್ಯಾಖ್ಯಾನ ಮಾಡಿದರು ಎಂದಾಕ್ಷೇಪಿಸಿದರೆ, ಹಿಂದೆ ೧೫ನೆಯ ಶ್ಲೋಕದಲ್ಲಿ ಅಮೃತ ತ್ವಾಯ ಕಲ್ಪತೇ ಎಂದು ಹೇಳಿರುವಭಿಪ್ರಾಯವನ್ನೇ ಇಲ್ಲಿ ಅನುವಾದ ಮಾಡಿ ಹೇಳಿರುತ್ತಾರೆ. ರಾಜ್ಯಕ್ಕಾಗಿಯೂ ಯುದ್ಧ ಬೇಡವೆಂದೂ, ಭಿಕ್ಷವನ್ನಾದರೂ ಬೇಡಬಹುದೆಂದೂ ಅರ್ಜುನನು ಹೇಳಿ ದುದರಿಂದ, ನಿರತಿಶಯ ಪುರುಷಾರ್ಥಕ್ಕಾಗಿ ಯುಧ್ಯಸ್ವಭಾರತ ಎಂದುಪದೇಶಿಸುವದು ನ್ಯಾಯವು. ಆದರೆ ಆತ್ಮಾ ಕಣ್ಣಿಗೆ ಕಾಣದಿರುವದು; ಅದರ ನಿತ್ಯತ್ವವನ್ನೇನೋ ನಾಲ್ಕು ಹೇತುಗಳಿಂದ ಸಾಧಿಸ ಬಹುದು. ಶರೀರವು ಅನಿತ್ಯವೆಂಬುದು ಲೋಕಸಿದ್ಧವಾಗಿರುವಾಗ ಅದನ್ನು ನಾಲ್ಕು ಹೇತುಗಳಿಂದ ಸಮರ್ಥಿಸಿ ಹೇಳಬೇಕೇ ಎಂಬಾಕ್ಷೇಪವನ್ನು ತರಬಹುದು. ಇದಕ್ಕೆ ಸಮಾಧಾನ ಹೇಗೆಂದರೆ, (೧) ಆತ್ಮನಿತ್ಯತ್ವವನ್ನು ಸ್ಥಾಪಿಸುವಾಗ, ಯಾವುದು ಶಸ್ತ್ರಾದಿಗಳಿಂದ ವಿನಾಶ್ಯವೋ ಅದು ಸಾವಯವು, ಶರೀರದ ಹಾಗಲ್ಲದೆ, ಆತ್ಮನಾದರೋ ನಿರವಯವು ಎಂಬ, (೨) ಆತ್ಮಾ ಶರೀರ ಎರಡೂ ವಿರುದ್ಧ ಧರ್ಮಗಳುಳ್ಳವೆಂದು ವ್ಯಕ್ತವಾಗಿ ತಿಳಿಸುವದಕ್ಕಾಗಿಯೂ ಶರೀರಾನಿತ್ಯತ್ವ ಪ್ರಸಙ್ಗವಾವಶ್ಯಕವೆಂಬ, (೩) ಶಸ್ತ್ರಾದಿ ಪಾತಗಳೊಂದೂ ಇಲ್ಲದ ಪಕ್ಷದಲ್ಲಿ ದೇಹವು ನಿತ್ಯವೆಂಬ ಭ್ರಮನಿವಾರಣಕ್ಕಾಗಿ ಎಂಬ, (೪) ಹೀಗೆ ಅನಿತ್ಯತ್ವ ಪ್ರತಿಪಾದನದಿಂದ ಅರ್ಜುನನಿಗೆ ಸ್ವದೇಹ ವಿಷಯದಲ್ಲಿ ವೈರಾಗ್ಯೋತ್ಪಾದನೆಗಾಗಿ ಎಂಬ, (೫) **ಅನ್ತವನ್ತ ಇಮೇ ದೇಹಾಃ** ಎಂದು ಹೇಳಿರುವದರಿಂದ ಎಲ್ಲಾ ಶರೀರಗಳ ನಾಶವು ಹೇಗಾದರೂ ಆಗುತ್ತವೆಯಾದುದರಿಂದ ಅರ್ಜುನನಿಗೆ ಸ್ವತಂತ್ರಕರ್ತೃತ್ವ ಭ್ರಮನಿವಾರಣೆಗಾಗಿಯೂ ಎಂಬ, (೬) ಹೀಗೆ ದೇಹದಲ್ಲಿ ನಾಶಹೇತುಗ ಳಿರುವದರಿಂದ ಅವಶ್ಯಕವಾಗಿ ನಾಶಹೊಂದುವದರಿಂದ ಫಲಾಭಿಸಂಧಿರಹಿತವಾದ ಕರ್ಮಾನುಷ್ಠಾನ ದಿಂದ ದೇಹಸಾರ್ಥಕ್ಯವನ್ನು ಹೊಂದಬೇಕೆಂಬ, (೭) ನಶ್ವರ ಸ್ವಭಾವವಿರುವದರಿಂದ ಅದರ ವಿಷಯದಲ್ಲಿ ಶೋಕಕ್ಕೆ ಕಾರಣವಿಲ್ಲವೆಂಬ, (೮) ಆದುದರಿಂದ ನಿರತಿಶಯ ಸುಖಪ್ರದವಾದ ಮೋಕ್ಷಸಾಧನ ಮಾಡಿಕೊಳ್ಳತಕ್ಕದ್ದೆಂಬ, ಈ ಅಭಿಪ್ರಾಯಗಳೆಲ್ಲಾ "ತಸ್ಮಾತ್" ಎಂಬ ಶಬ್ದದಲ್ಲಿ ಅಡಗಿವೆ ಎಂದು ಭಾವಿಸಿ, ಹಾಗೆ ವ್ಯಾಖ್ಯಾನ ಮಾಡಿರುತ್ತಾರೆ.

**ಮೂಲಕ್ಕೆ ಅರ್ಥವು :—ಯಃ** - ಯಾವನು, **ಏನಂ** – ಈ ಮೇಲೆ ಹೇಳಿದ ಸ್ವಭಾವವುಳ್ಳ ಆತ್ಮನನ್ನು ಕುರಿತು, **ಹನ್ತಾರಂ** - ಕೊಲ್ಲುವವನೆಕ್ಕೆ ಒಂದು ಸಾಧನ ಉಂಟೆಂದು, **ವೇತ್ತಿ** - ತಿಳಿಯು ವನೋ, ಮತ್ತು, **ಯಃ**–ಯಾವನು, **ಏನಂ** - ಈ ಆತ್ಮನನ್ನು ಕುರಿತು, **ಹತಂ** - ಕೊಲ್ಲಲ್ಪಟ್ಟವನ ನ್ನಾಗಿ, **ವೇತ್ತಿ**–ತಿಳಿಯುತ್ತಾನೋ, **ಉಭೌ ತೌ**-ಆ ಇಬ್ಬರೂ, **ನವಿಜಾನೀತಃ**-ಸರಿಯಾದಭಿಪ್ರಾ ಯವನ್ನು ಎಂದರೆ ತತ್ವಾರ್ಥವನ್ನು ತಿಳಿದವರಲ್ಲವು. **ಅಯಂ ನಹನ್ತಿ**–ಇವನು ಕೊಲ್ಲಲೂ ಕಾರಣ ಭೂತನಾಗುವದಿಲ್ಲವು, **ನಹನ್ಯತೇ**-ಮತ್ತು ಕೊಲ್ಲಲ್ಪಡುವದಿಲ್ಲವು. ಕೊಲ್ಲುವದೂ ಇಲ್ಲವು, ಕೊಲ್ಲಿಸಿ ಕೊಳ್ಳುವದೂ ಇಲ್ಲವು. ಅಣುವಾದ ಪ್ರಯುಕ್ತ ಈ ಆತ್ಮನೊಳಕ್ಕೆ ಪ್ರವೇಶಿಸಿ ಕೊಲ್ಲಲು ಯಾವ

ಭಾ. ಏನಂ ಉಕ್ತಸ್ವಭಾವ ಮಾತ್ಮಾನಂ ಪ್ರತಿ, ಹನ್ತಾರಂ-ಹನನ ಹೇತುಂ ಕಮಪಿ, ಯೋ ಮನ್ಯತೇ, ಯಶ್ಚೈನಂ ಕೇನಾಪಿ ಹೇತುನಾ ಹತಂ ಮನ್ಯತೇ, ತಾ ವುಭೌ ನ ವಿಜಾನೀತಃ; ಉಕ್ತೈರ್ಹೇತುಭಿ ರಸ್ಯ ನಿತ್ಯತ್ವಾದೇವಾಯಂ ಹನನ ಹೇತುರ್ನಭವತಿ; ಅತ ಏವಚಾಯ ಮಾತ್ಮಾ ನಹನ್ಯತೇ. ಹನ್ತಿ ಧಾತು ರಪ್ಯಾತ್ಮಕರ್ಮಕಃ ಶರೀರವಿಯೋಗ ಕರವಾಚೀ. "ನ ಹಿಂಸ್ಯಾ ದ್ಭೂತಾನಿ." "ಬ್ರಾಹ್ಮಣೋ ನಹನ್ತವ್ಯಃ" ಇತ್ಯಾದೀನ್ಯಪಿ ಶಾಸ್ತ್ರಾಣಿ ಅವಿಹಿತ ಶರೀರ ವಿಯೋಗ ಕರಣ ವಿಷಯಾಣಿ ॥ ೧೯ ॥

---

ಆಯುಧಕ್ಕೂ ಸ್ಥಳವಿಲ್ಲವು. "ಏಷೋಣುರಾತ್ಮಾ" ಎಂಬ, "ವಾಲಾಗ್ರ ಶತಭಾಗಸ್ಯ ಶತಧಾಕಲ್ಪಿತಸ್ಯಚ। "ಆರಾಗ್ರ ಮಾತ್ರೋ ಹ್ಯವರೋಹಿ ದೃಷ್ಟಃ (ಶ್ವೇತ)॥" ಇತ್ಯಾದಿ ಶ್ರುತಿಗಳು ಅನುಸಂಧೇಯಗಳು.. ಹಿಂದೆ "ಅವಿನಾಶಿತು" (೧೭ನೆಯ ಶ್ಲೋಕ) ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ, "ನೈನಂ ಛಿನ್ದಂತಿ" ಎಂದು (೨೩ನೆಯ ಶ್ಲೋಕ) ಮುಂದೆ ಚನ್ನಾಗಿ ಉಪಪಾದಿಸಲ್ಪಡುವ ಹಾಗೆ ಶಸ್ತ್ರಗಳಿಗೆ ಕೊಲ್ಲುವ ಶಕ್ತಿಯೂ ಇಲ್ಲವು, ಆತ್ಮಾವಿಗೆ ಕೊಲ್ಲಿಸಿಕೊಳ್ಳುವ ಸಾಗ್ಯತೆಯೂ ಇಲ್ಲವೆಂದು ಇಲ್ಲಿ ಹೇಳಲ್ಪಡುತ್ತದೆ. ಅಣುರೂಪನಾಗಿರುವದರಿಂದ ಯಾವ ಆಯುಧಕ್ಕೂ ಸಿಕ್ಕುವದಿಲ್ಲವೆಂಬ ಭಾವವು. ಇದೂ ಮತ್ತು ಮುಂದಿನ ಶ್ಲೋಕಗಳು ಕಠಶ್ರುತಿಯ ಉಪಬ್ರಹ್ಮಣ.ಶ್ಲೋಕಗಳು. ಅಲ್ಲಿ ಹೇಳಿರುವದೇನೆಂದರೆ :—

"ಹಂತಾಚೇನ್ಮನ್ಯತೇ ಹಂತುಗ್ ಹತಶ್ಚೇನ್ಮನ್ಯತೇ ಹತಮ್ ।
ಉಭೌತೌ ನವಿಜಾನೀತೋ ನಾಯಂ ಹನ್ತಿ ನ ಹನ್ಯತೇ ॥" (ಕಠ. ೨.೧೯)

ಇಲ್ಲಿ ಉತ್ತರಾರ್ಧವು ಎರಡಕ್ಕೂ ಒಂದೇ, ಪೂರ್ವಾರ್ಧ ಮಾತ್ರ ವ್ಯತ್ಯಸ್ತವಾಗಿರುತ್ತದೆ. ಹಂತಾಚೇನ್ಮನ್ಯತೇ - ತಾನು ಕೊಲ್ಲುವವನೆಂದು ದೇಹಾತ್ಮದೃಷ್ಟ್ಯಾ ಯಾವನಾದರೂ ತಿಳಿದುದಾದರೆ, ಮತ್ತು, ಹತಶ್ಚೇನ್ಮನ್ಯತೇ ಹತಮ್ - ಹೊಡೆಯಲ್ಪಟ್ಟ ದೇಹಾವಯವುಳ್ಳವನಾಗಿ ದೇಹಾತ್ಮ ದೃಷ್ಟಿಯಿಂದ ನಾನು ಆತ್ಮಾವನ್ನು ಹೊಡೆದೆನೆಂದು ತಿಳಿದುದಾದರೂ, ಉಭೌತೌ ನವಜಾನೀತಃ- ಅವರಿಬ್ಬರೂ ತಿಳಿದವರಲ್ಲವು ಎಂಬರ್ಥವು. ಪೂರ್ವಾರ್ಧವು ಈ ಶ್ಲೋಕದಲ್ಲಿ ಬೇರೆಯಾಗಿ ಹೇಳಿದ್ದರೂ ಎರಡರ ತಾತ್ಪರ್ಯವೂ ಒಂದೇ ಎಂದೇ ಭಾವಿಸತಕ್ಕದ್ದು.

ಭಾಷ್ಯಾರ್ಥವು :—ಈ ಶ್ಲೋಕಕ್ಕೆ ಅರ್ಥವನ್ನು ಹೇಳುವಾಗ, ನೈನಂ ಛಿಂದಂತಿ ಎಂಬ ಶ್ಲೋಕಾಭಿಪ್ರಾಯವೂ ಸೇರಿರುವ ಹಾಗೆ ವ್ಯಾಖ್ಯಾನ ಮಾಡಿರುತ್ತಾರೆ. ಏನಂ - ಮೇಲೆ ಹೇಳಿದ ಸ್ವಭಾವವುಳ್ಳ ಆತ್ಮನನ್ನು ಕುರಿತು, ಹನ್ತಾರಂ - ಕೊಲ್ಲುವದಕ್ಕೆ ಕಾರಣಭೂತವಾದ ಯಾವುದನ್ನೇ ಆಗಲಿ ಎಂದರೆ ಶಸ್ತ್ರಾದಿಗಳನ್ನೇಯಾಗಲಿ, ಬೇರೆ ಮನುಷ್ಯಾದಿಗಳನ್ನೇಯಾಗಲಿ ಕೊಲೆಗೆ ಕಾರಣಭೂತನೆಂದು, ಯೋಮನ್ಯತೇ - ಯಾವನು ತಿಳಿಯುತ್ತಾನೋ; ಮತ್ತು, ಯಃ, ಯಾವನು, ಏನಂ - ಇಂತಹ ಸ್ವಭಾವವುಳ್ಳ ಆತ್ಮಾವನ್ನು, ಕೇನಾಪಿ ಹೇತುನಾ - ಯಾವ ಕಾರಣದಿಂದಲೇ ಯಾಗಲಿ, ಹತಂಮನ್ಯತೇ—ಕೊಲ್ಲಲ್ಪಟ್ಟವನಾಗಿ ತಿಳಿಯುತ್ತಾನೋ; ತಾವುಭೌ— ಆ ಇಬ್ಬರೂ, ನವಿಜಾನೀತಃ - ಆತ್ಮಸ್ವರೂಪದ ವಾಸ್ತವ ವಿಷಯವನ್ನು ತಿಳಿದವರಲ್ಲವು. ಉಕ್ತೈರ್ಹೇತುಭಿಃ - ಮೇಲೆ ಹೇಳಿದ ನಾಲ್ಕು ಹೇತುಗಳಿಂದಲೂ, ಅಸ್ಯ ನಿತ್ಯತ್ವಾತ್ - ಈ ಆತ್ಮನಿಗೆ ನಿತ್ಯತ್ವವಿರುವದರಿಂದ, ಅಯಂ ಹನನಹೇತುರ್ನಭವತಿ - ಈತನು ಕೊಲೆಗೆ ಕಾರಣ ಭೂತನಾಗುವದಿಲ್ಲವು. ಅತ ಏವಚ - ಆ ಕಾರಣದಿಂದಲೇ, ಅಯಮಾತ್ಮಾ – ಈ ಆತ್ಮನು ನಹನ್ಯತೇ - ಕೊಲ್ಲಲ್ಪಡುವದಿಲ್ಲವು. "ಹನ್ತಿ" ಧಾತುರಪಿ - ಹನ್ತಿ ಎಂಬ ಧಾತುವೂ ಕೂಡ,

ಮೂ. ನಜಾಯತೇ ಮ್ರಿಯತೇವಾ ಕದಾಚಿನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।
ಅಜೋನಿತ್ಯಃ ಶಾಶ್ವತೋಽಯಂ ಪುರಾಣೋ ನಹನ್ಯತೇ ಹನ್ಯಮಾನೇ ಶರೀರೇ ॥೨೦॥

---

ಆತ್ಮಕರ್ಮಕಃ - ಆತ್ಮನನ್ನೇ ಕರ್ಮವಾಗಿ ಉಳ್ಳದುದರಿಂದ ಶರೀರವಿಯೋಗವನ್ನುಂಟುಮಾಡುವ ಅರ್ಥವುಳ್ಳದ್ದು. ಕೊಲ್ಲುವದು ಎಂದರೆ ಮೃತಶರೀರವನ್ನು ಹೊಡೆಯುವ ಅರ್ಥವು ಎಂದಿಗೂ ಅಲ್ಲವು, ಆತ್ಮನನ್ನು ಹೊಡೆಯುವದು ಎಂಬರ್ಥವೂ ಅಲ್ಲವು. ಆತ್ಮಾವಿಗೆ ಶರೀರವಿಯೋಗ ಉಂಟಾಗುವ ಹಾಗೆ ಮಾಡುವದೆಂಬುದೀಗ ಹನ್ತಿ ಧಾತುವಿನರ್ಥವೆಂಬ ಭಾವವು. ಆದರೆ ಭೂತಗಳನ್ನು ಹಿಂಸಿಸಬೇಡ, ಬ್ರಾಹ್ಮಣನು ಕೊಲ್ಲಲ್ಪಡತಕ್ಕವನಲ್ಲವು, ಇತ್ಯಾದಿ ವಿಧಿವಾಕ್ಯಗಳಿದೆಯಲ್ಲಾ ಅವುಗಳಿಗೆ ಸರಿಯಾದ ಅಭಿಪ್ರಾಯವೇನೆಂಬುದನ್ನು ತಿಳಿಸುತ್ತಾರೆ. **"ನ ಹಿಂಸ್ಯಾದ್ಭೂತಾನಿ"** – ಚೇತನರನ್ನು ಕೊಲ್ಲತಕ್ಕದ್ದಲ್ಲವು, **"ಬ್ರಾಹ್ಮಣೋ ನಹನ್ತವ್ಯಃ"** – ಬ್ರಾಹ್ಮಣನು ಕೊಲ್ಲಲ್ಪಡತಕ್ಕವನಲ್ಲವು, **ಇತ್ಯಾದೀನ್ಯಪಿ** - ಇವೇ ಮೊದಲಾದವುಗಳೂ ಕೂಡ, ಶಾಸ್ತ್ರಗಳು, **ಅವಿಹಿತ ಶರೀರ ವಿಯೋಗ ಕರಣ ವಿಷಯಾಣಿ** - ವಿಧಿಸದೇ ಇರುವ ಶರೀರ ವಿಯೋಗಮಾಡುವ ವಿಷಯವನ್ನು ಕುರಿತವು. ಇಲ್ಲಿಯೂ ಹನನವನ್ನು ನಿಷೇಧಿಸಿರುವ ಅಭಿಪ್ರಾಯವೇನೆಂದರೆ, ದೇಹವಿಯೋಗವನ್ನುಂಟುಮಾಡಬೇಡ ಎಂಬರ್ಥವು ದೇಹವಿಯೋಗವನ್ನು ಶಾಸ್ತ್ರವು ಅನುಮೋದಿಸಿರುವದು ಉಂಟೋ ಎಂದರೆ, ಯಾಗದಲ್ಲಿ ಪಶುವಧವು ವಿಹಿತವು ಎಂಬ ಭಾವವು.

**ಮೂಲಕ್ಕೆ ಅರ್ಥವು :—ಅಯಂ** - ಈ ಜೀವಾತ್ಮನು, **ಕದಾಚಿತ್** – ಯಾವಾಗಲೂ, **ನಜಾಯತೇ** – ಹುಟ್ಟುವದಿಲ್ಲವು, **ಮ್ರಿಯತೇವಾ** . ಸಾಯುವದೂ ಇಲ್ಲವು. **ಅಯಂ** - ಈ ಆತ್ಮನು, **ಭೂತ್ವಾ** - ಹಿಂದೆ ಉಂಟಾಗಿ, **ಭೂಯಃ** - ಪುನಃ, **ಕದಾಚಿತ್** - ಯಾವಾಗಲೂ, **ನಭವಿತಾ** - ಇಲ್ಲದೆ ಹೋಗುತ್ತಾನೆಂಬುದೂ, **ನ** - ಇಲ್ಲವು. ಆ ಕಾರಣದಿಂದ ಈ ಆತ್ಮನು, **ಅಜಃ** - ಉತ್ಪತ್ತಿಯಿಲ್ಲದವನು, **ನಿತ್ಯಃ** – ಆದುದರಿಂದಲೇ ನಾಶರಹಿತನು, **ಶಾಶ್ವತಃ** - ಅವಸ್ಥೆಗಳನ್ನು ಹೊಂದಿದರೂ ಕೂಡ ಜ್ಞಾನಸ್ವರೂಪನಾಗಿ ಏಕರೂಪವಾಗಿಯೇ ಇರುವವನು, **ಪುರಾಣಃ**- ಅನಾದಿಯಾಗಿದ್ದರೂ ಹೊಸದಾಗಿಯೇ ತೋರುತ್ತಿರುವವನು. ಆದುದರಿಂದ,**ಶರೀರೇ ಹನ್ಯಮಾನೇ ಸತಿ**-ಶರೀರವು ಹೊಡೆಯಲ್ಪಟ್ಟರೂ ಕೂಡ, **ನಹನ್ಯತೇ** - ಜೀವಾತ್ಮನು ಕೊಲ್ಲಲ್ಪಡುವದಿಲ್ಲವು. ಈ ಶ್ಲೋಕವೂ ಸಹ ಕಠವಲ್ಲಿಯನ್ನನುಸರಿಸಿ ಹೇಳಲ್ಪಟ್ಟಿರುತ್ತದೆ. (ಕಠ. ೨. ೧೮) ಅದು ಯಾವುದೆಂದರೆ, **"ನಜಾಯತೇ ಮ್ರಿಯತೇವಾ ವಿಪಶ್ಚಿನ್ನಾಯಂ ಕುತಶ್ಚಿನ್ನಬಭೂವ ಕಶ್ಚಿತ್ । ಅಜೋನಿತ್ಯಶ್ಶಾಶ್ವತೋಽಯಂ ಪುರಾಣೋ ನಹನ್ಯತೇ ಹನ್ಯಮಾನೇ ಶರೀರೇ ॥"** ಆದರೆ ಅಲ್ಲಿರುವ ವಿಪಶ್ಚಿತ್ತೆಂಬ ಪದಕ್ಕೆ ಕದಾಚಿತ್ತೆಂಬ ಪ್ರಯೋಗದಿಂದ ಹೆಚ್ಚು ಅಭಿಪ್ರಾಯವು ಸೂಚಿತವಾಗಿರುತ್ತದೆ. ಈ ಶ್ಲೋಕದಿಂದ ಆತ್ಮಾವಿಗೆ ಅವಸ್ಥಾ ಭೇದಗಳು ಇದ್ದರೂ ದೇಹಗತ ಪರಿಣಾಮಾದಿಗಳಾದ ಜನನ ಮರಣಾದಿಗಳು ಆತನಿಗೆ ಇಲ್ಲವು, ದೇಹಾದಿ ಪ್ರಕೃತಿ ವರ್ಗವು ಸತತ ಪರಿಣಾಮಿಯು, ವಿಕಾರಗಳಿಂದ ಸ್ವರೂಪಭೇದವಿರುವಂಥಾದ್ದು. ಆತ್ಮನಿಗಾದರೋ ವಿವಿಧ ಶರೀರ ಗ್ರಹಣದಿಂದ ಜ್ಞಾನಸಙ್ಕೋಚ ವಿಕಾಸಗಳು ಉಂಟಾಗುತ್ತವೆಯೇ ವಿನಾ ಸ್ವರೂಪವಿಕಾರವಿಲ್ಲವು. ಪರಮಾತ್ಮನಿಗಾದರೋ ಅವತಾರಾದಿ ಕಾಲಗಳಲ್ಲಿ ದೇಹಪ್ರಾಪ್ತಿಯುಂಟಾದರೂ, ಮತ್ತು ಸರ್ವ ಚಿದಚಿತ್ತುಗಳು ಶರೀರವಾಗಿದ್ದರೂ ಸ್ವರೂಪಸಸ್ವಭಾವಗಳ ಯಾವ ವಿಧವಾದ ವಿಕಾರವೂ ಇಲ್ಲದೆ ಅಜಹತ್ಸ್ವಸ್ವಭಾವವಾದ ದಿವ್ಯಮಙ್ಗಳವಿಗ್ರಹಯುಕ್ತನೆಂದು (ಗೀ. ೪. ೯) ನೆಯ ಶ್ಲೋಕದಲ್ಲಿ

ಭಾ. ಉಕ್ತೈರೇವ ಹೇತುಭಿರ್ನಿತ್ಯತ್ವೇನಾ ಪರಿಣಾಮಿತ್ವಾ ದಾತ್ಮನೋ ಜನನ ಮರಣಾದಯಃ ಸರ್ವ್ವ ಏವಾ ಚೇತನ ಧರ್ಮ್ಮಾ ನಸನ್ತೀ ತ್ಯುಚ್ಯತೇ. ತತ್ರ "ನಜಾಯತೇ ಮ್ರಿಯತೇ" ಇತಿ ವರ್ತ್ತಮಾನತಯಾ ಸರ್ವ್ವೇಷು ದೇಹೇಷು ಸರ್ವ್ವೈ ರನುಭೂಯಮಾನೇ ಜನನ ಮರಣೇ ಕದಾಚಿದ ಪ್ಯಾತ್ಮಾನಂ ನಸ್ಪೃಶತಃ. "ನಾಯಂ ಭೂತ್ವಾ ಭವಿತಾವಾನ ಭೂಯಃ" : ಅಯಂ ಕಲ್ಪಾದೌ ಭೂತ್ವಾ ಭೂಯಃ ಕಲ್ಪಾಂತೇಚ ನ ನಭವಿತಾ ;

---

ಹೇಳಲ್ಪಟ್ಟಿರುತ್ತದೆ. ಜಡ ಪ್ರಕೃತಿಗೆ ಸ್ವರೂಪ ಸ್ವಭಾವಗಳೆರಡರಲ್ಲೂ ವಿಕಾರ ಉಂಟೆಂದೂ, ಜೀವಾತ್ಮನಿಗೆ ಶರೀರ ಸಂಬಂಧದಿಂದ ಸ್ವರೂಪದಲ್ಲಿ ವಿಕಾರವಿಲ್ಲವು, ಸ್ವಭಾವದಲ್ಲಿ ಮಾತ್ರ ವಿಕಾರವೆಂದೂ, ಪರಮಾತ್ಮನಿಗಾದರೋ ಶರೀರ ಶರೀರಿ ಭಾವದಿಂದ ಸ್ವರೂಪ ಸ್ವಭಾವವೆರಡರಲ್ಲೂ ವಿಕಾರವಿಲ್ಲವೆಂದೂ, ಹೀಗೆ ವೈಲಕ್ಷಣ್ಯವನ್ನು ಗ್ರಹಿಸತಕ್ಕದ್ದು. ಈ ಅಭಿಪ್ರಾಯಗಳು "ಪರಿಣಾಮಾತ್" ಎಂಬ (೧. ೪. ೨೭) ಶಾರೀರಕ ಸೂತ್ರಭಾಷ್ಯದಲ್ಲಿ ವ್ಯಕ್ತವು.

**ಭಾಷ್ಯಾರ್ಥವು :—ಉಕ್ತೈರೇವ ಹೇತುಭಿಃ** – ಮೇಲೆ ಹೇಳಿದ ಕಾರಣಗಳಿಂದ, ನಿತ್ಯನಾಗಿರುವದರಿಂದ ಪರಿಣಾಮಗಳೊಂದೂ ಇಲ್ಲದಿರುವದರಿಂದ, ಆತ್ಮನಃ-ಜೀವಾತ್ಮನಿಗೆ, **ಅಚೇತನ ಧರ್ಮ್ಮಾಃ** - ಅಚೇತನ ಧರ್ಮಗಳಾದ ಜನನಮರಣಾದಿಗಳೂ, **ಸರ್ವ್ವೇ ಏವ** - ಎಲ್ಲವೂ ಕೂಡ, **ನಸನ್ತೀತ್ಯುಚ್ಯತೇ** - ಇಲ್ಲವೆಂದು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಉಪನಿಷತ್ತಿನ "**ವಿಪಶ್ಚಿತ್**" ಎಂಬ ಶಬ್ದದ ಬದಲಾಗಿ "**ಕದಾಚಿತ್**" ಎಂಬ ಪ್ರಯೋಗದಿಂದ ತೋರಿಬರುವ ಅರ್ಥವನ್ನು ಉಪಪಾದಿಸಿ ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ. ಕದಾಚಿತ್ತೆಂಬುದು ಪೂರ್ವಾರ್ಧದ ಮಧ್ಯದಲ್ಲಿರುವದರಿಂದ ಕಾಕಾಕ್ಷಿನ್ಯಾಯ ಪ್ರಕಾರ ಎರಡು ವಾಕ್ಯಗಳಿಗೂ ಅನ್ವಯಿಸಿಕೊಳ್ಳಬಹುದು. **ತತ್ರ** - ಆ ಸಂದರ್ಭದಲ್ಲಿ, "**ನಜಾಯತೇ ಮ್ರಿಯತೇ**" ಎಂದು ವರ್ತಮಾನಕಾಲ ಸೂಚಕ ಕ್ರಿಯೆಗಳಿಂದ, **ಸರ್ವ್ವೇಷು ದೇಹೇಷು** - ಸಮಸ್ತ ದೇಹಗಳಲ್ಲೂ, ಸಮಸ್ತರಿಂದಲೂ, **ಅನುಭೂಯಮಾನೇ ಜನನ ಮರಣೇ** – ಅನುಭವಿಸಲ್ಪಡುತ್ತಿರುವ ಜನನ ಮರಣಗಳು, **ಕದಾಚಿದಪಿ** - ಯಾವಾಗಲೂ ಕೂಡ, **ಆತ್ಮಾನಂ ನಸ್ಪೃಶತಃ** - ಜೀವಾತ್ಮನನ್ನು ಮುಟ್ಟುವದಿಲ್ಲವು ಎಂದರೆ ಆತನಿಗೆ ಎಂದಿಗೂ ಸಂಬಂಧಿಸುವದಿಲ್ಲವೆಂಬ ಭಾವವು. ಇಲ್ಲಿ ಜನನ ಮರಣ ಶಬ್ದಗಳ ಅಭಿಪ್ರಾಯವೇನೆಂದರೆ, ಜೀವಾತ್ಮನಿಗೆ ಕರ್ಮಾನುಗುಣವಾಗಿ ದೇಹ ಸಂಯೋಗ ವಿಯೋಗಗಳುಂಟಾಗುತ್ತವೆಂಬ ಭಾವವು. ಆದರೆ ಈಗ ಅರ್ಜುನನಿಗೆ ತಿಳಿಸಬೇಕಾದುದು ಆತ್ಮನಿಗೆ ದೇಹಸಂಯೋಗ ವಿಯೋಗ ಉಂಟಾಗುತ್ತದೆಂಬ ಅಭಿಪ್ರಾಯವಲ್ಲವು. ಈಗ ಪ್ರತ್ಯಕ್ಷದಲ್ಲಿ ತೋರುವ ಜನನ ಮರಣಾದಿಗಳೆಲ್ಲಾ ದೇಹಕ್ಕೆ ಸೇರಿದವೇ ವಿನಾ, ಆತ್ಮಕ್ಕಲ್ಲವು; ಆತ್ಮವು ಉತ್ಪತ್ತಿಯಾಗುವದಿಲ್ಲವು, ಅಕಾರಾಂತರವನ್ನು ಹೊಂದುವದಿಲ್ಲವು ಎಂಬುದು. ಇಲ್ಲಿ "**ವರ್ತಮಾನತಯಾ**" ಎಂದು ಏಕೆ ಹೇಳಲ್ಪಟ್ಟಿತು ಎಂದರೆ ಜನನ ಮರಣಗಳ ಅನುಭವವು ವರ್ತಮಾನ ಕಾಲದಲ್ಲಿಯೇಯಾದುದರಿಂದ ಹಾಗೆ ವರ್ತಮಾನ ಕಾಲದಲ್ಲಿ ಹೇಳಲ್ಪಟ್ಟವು ಎಂದು ಭಾವಿಸತಕ್ಕದ್ದು. "**ನಾಯಂಭೂತ್ವಾ ಭವಿತಾವಾ ನಭೂಯಃ**" ಎಂದರೆ **ಅಯಂ**-ಈ ಜೀವಾತ್ಮನು, ಕಲ್ಪಾದಿಯಲ್ಲಿ, **ಭೂತ್ವಾ**-ಉತ್ಪನ್ನನಾಗಿ, **ಭೂಯಃ ಪುನಃ**-ಕಲ್ಪಾಂತದಲ್ಲಿ ಪುನಃ, **ನ ಭವತೀತಿನ**-ಇಲ್ಲದೇ ಹೋಗುವದಿಲ್ಲವು ಎಂದಲ್ಲವು. ಮೇಲಿನ ವಾಕ್ಯವಾದ **ನಜಾಯತೇ** ಎಂಬುದರ ಪುನರುಕ್ತಿಯು ಈ ವಾಕ್ಯವೆಂದು ಭಾವಿಸಕೂಡದು. ಹಿಂದೆ ಹೇಳಿದ ವಾಕ್ಯದಿಂದ ಕಲ್ಪಾದಿ ಮೊದಲುಗೊಂಡು ಕಲ್ಪಾಂತದವರೆಗೂ ಪ್ರಾಪ್ತವಾಗುವ ಜನನ ಮರಣಗಳು ಹೇಳಲ್ಪಟ್ಟವು. ಆದರೆ ಬ್ರಹ್ಮ ರುದ್ರರು ಕಲ್ಪಾದಿಯಲ್ಲಿ ಜನಿಸಿ

**ಕೇಷು ಚಿತ್ರ್ರಜಾಪತಿ ಪ್ರಭೃತಿ ದೇಹೇಷ್ವಾಗಮೇನೋಪಲಭ್ಯಮಾನಂ ಕಲ್ಪಾದೌ ಜನನಂ ಕಲ್ಪಾಂತೇಚ ಮರಣ ಮಾತ್ಮಾನಂ ನಸ್ಪೃಶತೀತ್ಯರ್ಥಃ. ಅತಸ್ಸರ್ವ ದೇಹಗತ ಆತ್ಮಾ ಅಜಃ, ಅತಏವ ನಿತ್ಯಃ, ಶಾಶ್ವತಃ ಪ್ರಕೃತಿವದ ವಿಶದ ಸತತ ಪರಿಣಾಮೈರಪಿ ನಾನ್ವೀಯತೇ, ಪುರಾಣಃ - ಪುರಾಪಿ ನವಃ, ಸರ್ವದಾ ಅಪೂರ್ವವದನುಭಾವ್ಯ ಇತ್ಯರ್ಥಃ. ಅತಶ್ಶರೀರೇ ಹನ್ಯಮಾನೇ ನಹನ್ಯತೇಯಂ ಆತ್ಮಾ ॥ ೨೦ ॥**

ಕಲ್ಪಾಂತದಲ್ಲಿ ಮರಣ ಹೊಂದುವರು. ಇವರುಗಳೂ ಜೀವಾತ್ಮರಾಗಿರುವದರಿಂದ ಬಿಟ್ಟುಹೋದರೋ ಎಂದರೆ ಅವರುಗಳಿಗೂ ಕೂಡ ಉತ್ಪತ್ತಿ ವಿನಾಶಗಳಿಲ್ಲವು ಎಂದು ಈ ವಾಕ್ಯದಿಂದ ಹೇಳಲ್ಪಟ್ಟವು. ಈ ಅರ್ಥವೂ ಕೂಡ "ಕದಾಚಿದಪಿ" ಎಂಬ ಶಬ್ದದ ಅನುವಾದವು. ಆದುದರಿಂದ ಶ್ರುತಿಯ "ವಿಪಶ್ಚಿತ್" ಎಂಬ ಶಬ್ದಕ್ಕಿಂತ ಈ ಭಗವದ್ವಾಕ್ಯದಲ್ಲಿನ "ಕದಾಚಿತ್" ಎಂಬ ಶಬ್ದವು ಹೆಚ್ಚು ಅರ್ಥಗರ್ಭಿತವಾದುದು. ಆದರೆ ಈ ಅರ್ಥವೂ ಮೊದಲಿನ ವಾಕ್ಯವಾದ "**ನ ಜಾಯತೇ**" ಎಂಬುದರಲ್ಲೇ ಸೂಚಿತವಲ್ಲವೋ? ಎಂದರೆ, ಹಾಗೆ ವಿಶದವಲ್ಲದುದರಿಂದ ವಿಶದವಾಗಿ ಉತ್ತರ ವಾಕ್ಯವಾದ "**ನಾಯಂ ಭೂತ್ವಾ**" ಎಂಬುದರಿಂದ ತಿಳಿಸಲ್ಪಟ್ಟಿತೆಂದು ಮುಂದಿನ ಭಾಷ್ಯವಾಕ್ಯವಾದ "**ಕೇಷುಚಿತ್**" ಎಂದಾರಂಭಿಸಿ ತಿಳಿಸುತ್ತಾರೆ. **ಕೇಷು ಚಿತ್ಪ್ರಜಾಪತಿ ಪ್ರಭೃತಿ ದೇಹೇಷು** - ಕೆಲವು ಚತುರ್ಮುಖ ಬ್ರಹ್ಮನೇ ಮೊದಲಾದ ದೇಹಗಳಲ್ಲಿ, ಪ್ರಭೃತಿ ಶಬ್ದದಿಂದ ರುದ್ರಾದಿಗಳು ಹೇಳಲ್ಪಟ್ಟರು, **ಆಗಮೇನೋಪಲಭ್ಯಮಾನಂ** - ವೇದಗಳಿಂದಲೇ ತೋರಿಬರುವ, ಕಲ್ಪಾದಿಯಲ್ಲಿ ಜನನವೂ, ಕಲ್ಪಾಂತ್ಯದಲ್ಲಿ ಮರಣವೂ, **ಆತ್ಮಾನಂ ನಸ್ಪೃಶತೀತ್ಯರ್ಥಃ** - ಆಯಾ ಜೀವಾತ್ಮರನ್ನು ಮುಟ್ಟುವದಿಲ್ಲವು ಎಂಬ ಭಾವವು. ಇದರಿಂದುಂಟಾದ ಫಲಿತಾರ್ಥವು ಹೇಳಲ್ಪಡುತ್ತದೆ. **ಅತಃ**– ಆ ಕಾರಣದಿಂದ, **ಸರ್ವದೇಹ ಗತಃ** - ಸಮಸ್ತದೇಹಗಳನ್ನೂ ಹೊಂದಿರುವ, **ಆತ್ಮಾ** - ಜೀವಾತ್ಮನು (ಜಾತ್ಯೇಕ ವಚನವು) **ಅಜಃ** – ಉತ್ಪತ್ತಿರಹಿತನು, **ಅತ ಏವ ನಿತ್ಯಃ** - ಆ ಉತ್ಪತ್ತಿ ಇಲ್ಲದಿರುವ ಕಾರಣದಿಂದಲೇ ನಾಶವೂ ಇಲ್ಲದವನಾಗಿ ನಿತ್ಯನು, **ಶಾಶ್ವತಃ** ಎಂದರೆ **ಪ್ರಕೃತಿವತ್** - ಪ್ರಕೃತಿಯ ಹಾಗೆ, **ಅವಿಶದ ಸತತ ಪರಿಣಾಮೈರಪಿ** – ಕಣ್ಣಿಗೆ ಕಾಣದಿರುವ ನಿರಂತರ ಪರಿಣಾಮಗಳಿಂದಲೂ ಕೂಡ, **ನಾನ್ವೀಯತೇ** - ಸಂಬಂಧಿಸಿರುವದಿಲ್ಲವೆಂಬರ್ಥವು. ಆತ್ಮನು ನಿತ್ಯನಾಗಿಯೇನೋ ಇರಬಹುದು. ಆದರೆ ಪ್ರಳಯದಲ್ಲಿ ಎಲ್ಲವೂ ಸೂಕ್ಷ್ಮದೆಶೆಯನ್ನು ಹೊಂದುವದರಿಂದ ಸೂಕ್ಷ್ಮವಾದ ಜೀವಾತ್ಮನು ಸೂಕ್ಷ್ಮತರನಾಗಿ ಪರಿಣಮಿಸುವನೋ ಎಂದರೆ, ಹಾಗಲ್ಲವು. ಶಾಶ್ವತನಾಗಿ ಏಕರೂಪನಾಗಿರುವವನೆಂಬ ಭಾವವು. ಕೆಲವರು ಭಾವಿಸುವ ಹಾಗೆ ಆನೆಯಲ್ಲಿ ಆತ್ಮನು ಆನೆಯ ಗಾತ್ರದಲ್ಲೂ, ಇರುವೆಯಲ್ಲಿ ಆತ್ಮನು ಇರುವೆಯ ಗಾತ್ರದಲ್ಲೂ ಇರುವನೆಂಬುದು ಈ ಶಾಶ್ವತ ಶಬ್ದದಿಂದ ನಿರಸನ ಮಾಡಲ್ಪಟ್ಟಿತು. **ಪುರಾಣಃ** ಎಂದರೆ **ಪುರಾಪಿ ನವಃ** - ಅನಾದಿ ಕಾಲದಿಂದಲೂ ಇದ್ದರೂ ಕೂಡ, **ನವಃ** – ಹೊಸಬನು, ಎಂದರೆ, **ಅಪೂರ್ವವತ್** – ಪೂರ್ವದಲ್ಲಿಲ್ಲದ ಹಾಗೆ ಅಪೂರ್ವವಾದುದಾಗಿ ಸದಾ, **ಅನುಭಾವ್ಯ ಇತ್ಯರ್ಥಃ** - ಆಶ್ಚರ್ಯಕರವಾಗಿ ಅನುಭವಿಸಲ್ಪಡುವವನು ಎಂಬರ್ಥವು. **ಅತಃ** - ಆ ಕಾರಣದಿಂದ, **ಶರೀರೇ ಹನ್ಯಮಾನೇ** - ಶರೀರವು ಹೊಡೆಯಲ್ಪಟ್ಟರೂ ಕೂಡ, **ಅಯಮಾತ್ಮಾ** - ಈ ಜೀವಾತ್ಮನು, **ನ ಹನ್ಯತೇ** – ಹೊಡೆಯಲ್ಪಡುವದಿಲ್ಲವು. ಇಲ್ಲಿ ಆತ್ಮನು "**ನಜಾಯತೇ**" ಎಂದು ಹೇಳಲ್ಪಟ್ಟಿರುವದು ಶ್ರುತ್ಯರ್ಥಗಳಿಗೆ ವಿರೋಧವಲ್ಲವೇ? "**ಸದೇವ ಸೋಮ್ಯೇದಮಗ್ರ ಆಸೀತ್**" (ಛಾಂ. ೬. ೨. ೧.) ಎಂಬಲ್ಲಿ ಆತ್ಮನೊಬ್ಬನೇ ಇರುವನೆಂದೂ, "**ತೋಯೇನ ಜೀವಾನ್ವ್ಯಸಸರ್ಜ ಭೂಮ್ಯಾಂ**" (ತೈ. ನಾರಾಯಣ ೧. ೪) ಎಂಬಲ್ಲಿ,

ಮೂ. ವೇದಾ ವಿನಾಶಿನಂ ನಿತ್ಯಂ ಯ ಏನ ಮಜ ಮವ್ಯಯಂ ।
ಕಥಂ ನ ಪುರುಷಃ ಪಾರ್ಥ ಕಂಘಾತಯತಿ ಹನ್ತಿ ಕಂ ॥ ೨೧.

ಜೀವಾತ್ಮರು ಉತ್ಪನ್ನರಾಗಿ ಭೂಮಿಯಲ್ಲಿ ಹಾಕಲ್ಪಟ್ಟರೆಂದು ಹೇಳಿರುವದರಿಂದ ಉತ್ಪನ್ನರೇ ವಿನಾ ನಿತ್ಯರಲ್ಲಾ ಎಂಬ ಪೂರ್ವಪಕ್ಷವನ್ನು ತರಬಹುದು. ಇಲ್ಲಿ ಸತ್ ಎಂಬ ಶಬ್ದವು ಪರಮಾತ್ಮ ನನ್ನು ಮಾತ್ರವೇ ಬೋಧಿಸದೆ ತನುಸ್ಸಿನೊಂದಿಗೆ ಏಕೀಭವಿಸಿದ ಪರಮಾತ್ಮನನ್ನು ಬೋಧಿಸುವದ ರಿಂದ ಸೂಕ್ಷ್ಮ ಚಿದಚಿದ್ವಿಶಿಷ್ಟ ಪರಮಾತ್ಮನು ಹೇಳಲ್ಪಟ್ಟನು. "ತೋಯೇನ ಜೀವಾ" ಎಂಬಲ್ಲಿ "ತೋಯೇನ ಸಹ ಜೀವಾ" ಎಂಬದಾಗಿ ಅರ್ಥವಾದುದರಿಂದ ಪ್ರಕೃತಿಯಿಂದ ಸೇರಿದ ಜೀವಾತ್ಮರನ್ನು ಎಂದರೆ ಶರೀರಗಳಿಂದ ಸೇರಿದ ಜೀವಾತ್ಮರನ್ನುಂಟುಮಾಡಿ ಭೂಮಿಗೆ ಕಳುಹಿಸಿದ ನೆಂಬರ್ಥವಾದುದರಿಂದ ಏನೊಂದೂ ವಿರೋಧವಿಲ್ಲವು. ಆದುದರಿಂದ ಜೀವರುಗಳಿಗೆ ದೇಹ ಸಂಯೋಗವೇ ಜನನರೂಪ ಸೃಷ್ಟಿ ಎಂದು ಹೇಳಿದಂತಾಯಿತು. ಇಲ್ಲಿ "ಜೀವಾ" ಎಂಬ ಬಹುವಚನವಿರುವದರಿಂದ ಜೀವಾತ್ಮರುಗಳ ಅಸಂಖ್ಯೇಯತ್ವವೂ, ಹೀಗೆ ಜೀವರೂ, "ತೋಯ" ಶಬ್ದದಿಂದ ಪ್ರಕೃತಿಯೂ, "ವ್ಯಸಸರ್ಜ ಭೂಮ್ಯಾಂ" ಎಂಬಲ್ಲಿ ಈಶ್ವರನೂ, ಈ ಪ್ರಕಾರ ತತ್ವತ್ರ ಯವೂ, ಈಶ್ವರನು ಈ ತೋಯ ಜೀವರುಗಳೊಂದಿಗೆ ಇರುವನೆಂದು ಮುಂದೆ ಹೇಳುವದರಿಂದ ವಿಶಿಷ್ಟಾದ್ವೈತ ಸಿದ್ಧಾಂತವೂ ಬೋಧಿಸಲ್ಪಟ್ಟಿತು. ಇದರಿಂದ ಪರಮಾತ್ಮನೊಬ್ಬನೇ ಸತ್ಯವಾದ ಆತ್ಮನೆಂದೂ, ಮಿಕ್ಕಿದ್ದೆಲ್ಲಾ ಮಿಥ್ಯೆ ಎಂದೂ ಹೇಳುವ ಸಿದ್ಧಾಂತವು ದೂರೀಕೃತವಾಯಿತು. ಆದುದರಿಂದ ಇಲ್ಲಿ ಈ ಜೀವಾತ್ಮರೆಲ್ಲಾ ಕಲ್ಪಾದಿಯಲ್ಲುಂಟಾಗಿ ಕಲ್ಪಾಂತ್ಯದಲ್ಲಿ ಲಯ ಹೊಂದುವ ರೆಂಬ ಸಿದ್ಧಾಂತವೂ ನಿರಸ್ತವು.

**ಅವತಾರಿಕೆ:**—ಹತ್ತೊಂಬತ್ತನೆಯ ಶ್ಲೋಕದಲ್ಲಿ ಆತ್ಮನು ಹೊಡೆಯಲ್ಪಟ್ಟನೆಂದು ತಿಳಿದ ವನು ಅಜ್ಞನೆಂದು ಹೇಳಿದರು. ಆ ಅಭಿಪ್ರಾಯವನ್ನೇ ಈಗ ಇನ್ನೊಂದು ವಿಧವಾಗಿ ಹೇಳು ತ್ತಾರೆ. ಆತ್ಮಾ ನಿತ್ಯನೆಂದು ತಿಳಿದವನು ಎಂದಿಗೂ ಆತ್ಮ ಹೊಡೆಯಲ್ಪಡುವನೆಂದು ಭಾವಿಸ ಲಾರನೆಂದು ತಿಳಿಸುತ್ತಾರೆ.

**ಮೂಲಕ್ಕೆ ಅರ್ಥವು :**—**ಯಃ** – ಯಾವನು, **ಅವಿನಾಶಿನಂ** - ಸಾವಯವಲ್ಲದುದರಿಂದ ನಾಶವಿಲ್ಲದೆಯೂ, ಆ ಕಾರಣದಿಂದಲೇ, **ಅಜಂ** - ಉತ್ಪತ್ತಿಯಿಲ್ಲದೆಯೂ, **ಅವ್ಯಯಂ** – ಜನನ ಮರಣಗಳಿಲ್ಲದೆ ಇತರ ಪರಿಣಾಮಗಳಾದ ವೃದ್ಧಿ ಹ್ರಾಸಾದಿಗಳೂ ಕೂಡ ಇಲ್ಲದೆಯೂ ಇರುವ, **ಏನಂ** - ಈ ಆತ್ಮನನ್ನು, **ನಿತ್ಯಂ** - ಹೀಗೆ ನಿತ್ಯನನ್ನಾಗಿ, **ವೇದ** – ತಿಳಿಯುತ್ತಾನೋ, **ಸಃ ಪುರುಷಃ** - ಅಂತಹ ದೇಹಿಯು, **ಕಂ** . ಯಾವ ಆತ್ಮನನ್ನು, **ಕಥಂ** – ಹೇಗೆ, **ಘಾತಯತಿ** – ನಾಶಪಡಿಸುವನು, ಮತ್ತು, **ಕಂ** - ಯಾವ ಆತ್ಮನನ್ನು, **ಕಥಂ** - ಹೇಗೆ, **ಹನ್ತಿ** - ಕೊಲ್ಲುವನು ? ಎಂದರೆ ಹಾಗೆ ಕೊಲ್ಲಿಸುವನು ಅಥವಾ ಕೊಲ್ಲುವನು ಎಂದು ಹೇಗೆ ಶೋಕಿಸುವನು? ಎಂಬ ಭಾವವು. ಆತ್ಮಸ್ವರೂಪವು ನಿತ್ಯವಾದುದು ಎಂದು ತಿಳಿದವನು ಆತ್ಮನು ಕೊಲ್ಲಲ್ಪಟ್ಟನೆಂದು ಭಾವಿಸಿ ಎಂದಿಗೂ ಶೋಕಿಸುವನಿಲ್ಲವೆಂಬ ತಾತ್ಪರ್ಯವು.

**ಭಾಷ್ಯಾರ್ಥವು :**—**ಏನಂ** - ಈ ಪ್ರಕಾರವಾಗಿ, **ಅವಿನಾಶಿತ್ವೇನ** - ನಿರವಯವಿಯಾದುದ ರಿಂದ ನಾಶವಿಲ್ಲದಿರುವದರಿಂದಲೂ, **ಅಜತ್ವೇನ** – ಉತ್ಪತ್ತಿ ಇಲ್ಲದುದರಿಂದಲೂ, **ವ್ಯಯಾನರ್ಹ ತ್ವೇನ ಚ** - ಕ್ಷೀಣವಾಗುವದೇ ಮೊದಲಾದ ಪರಿಣಾಮಗಳಿಗೆ ಅರ್ಹವಲ್ಲದುದರಿಂದಲೂ ಕೂಡ, **ನಿತ್ಯಮೇನಮಾತ್ಮಾನಂ** - ಈ ಆತ್ಮನನ್ನು ಹೀಗೆ ನಿತ್ಯನನ್ನಾಗಿ, **ಯಃ ಪುರುಷೋ ವೇದ** -

ಭಾ. ಏವಮವಿನಾಶಿತ್ವೇನಾ ಜತ್ವೇನ ವ್ಯಯಾನರ್ಹತ್ವೇನ ಚ ನಿತ್ಯ ಮೇನ ಮಾತ್ಮಾನಂ ಯಃ ಪುರುಷೋ ವೇದ, ಸ ಪುರುಷೋ ದೇವಮನುಷ್ಯ ತಿರ್ಯಕ್ಸ್ಥಾವರ ಶರೀರಾವಸ್ಥಿತೇಷ್ವಾತ್ಮಸು ಕಮಪ್ಯಾತ್ಮಾನಂ ಕಥಂ ಘಾತಯತಿ ? ಕಂವಾ ಕಥಂ ಹನ್ತಿ - ಕಥಂ ನಾಶಯತಿ? ಕಥಂ ವಾ ತತ್ಪ್ರಯೋಜಕೋ ಭವತೀತ್ಯರ್ಥಃ; ಏತಾನಾತ್ಮನೋ ಘಾತಯಾಮಿ ಹನ್ಮೀತ್ಯನು ಶೋಚನ ಮಾತ್ಮಸ್ವರೂಪ ಯಾಥಾತ್ಮ್ಯ ಜ್ಞಾನಮೂಲಮೇವೇ ತ್ಯಭಿಪ್ರಾಯಃ ॥೨೧॥

ಯಾವ ಪುರುಷನು ತಿಳಿಯುತ್ತಾನೋ, ಸಃ ಪುರುಷಃ - ಅಂತಹ ಪುರುಷನು, ದೇವ, ಮನುಷ್ಯ, **ತಿರ್ಯಕ್** - ಇತರ ಪ್ರಾಣಿವರ್ಗವು, ಸ್ಥಾವರ–ವೃಕ್ಷ ಮೊದಲಾದವು, ಇವುಗಳ, **ಶರೀರಾವಸ್ಥಿತೇಷು** - ಶರೀರಗಳಲ್ಲಿರುವ, **ಆತ್ಮಸು** - ಆತ್ಮರುಗಳಲ್ಲಿ, **ಕಮಪ್ಯಾತ್ಮಾನಂ** – ಯಾವ ಆತ್ಮನನ್ನೇಯಾಗಲಿ, **ಕಥಂ ಘಾತಯತಿ** – ಹೇಗೆ ಹೊಡಿಸುವನು ? **ಕಂ ವಾ** - ಯಾವ ಆತ್ಮನನ್ನೇಯಾಗಲಿ, **ಕಥಂ ಹನ್ತಿ** – ಹೇಗೆ ಕೊಲ್ಲುವನು ? ಎಂದರೆ, **ಕಥಂ ನಾಶಯತಿ** – ಹೇಗೆ ನಾಶಮಾಡುವನು? **ಕಥಂವಾ ತತ್ಪ್ರಯೋಜಕೋ ಭವತೀತ್ಯರ್ಥಃ** – ಹೇಗೆ ತಾನೇ ಹಾಗೆ ಕೊಲ್ಲುವದಕ್ಕೆ ಸಾಧಕವಾದವನಾಗುವನು ಎಂಬರ್ಥವು. ಈ ಶ್ಲೋಕದಲ್ಲಿ ಅವಿನಾಶಿನಂ, ನಿತ್ಯಂ, ಅಜಂ, ಅವ್ಯಯಂ ಎಂದು ನಾಲ್ಕು ವಿಶೇಷಣಗಳು ಆತ್ಮನಿಗೆ ಕೊಟ್ಟಿವೆ. ಇವೆಲ್ಲಾ ಸಾಧಾರಣವಾಗಿ ಒಂದೇ ತಾತ್ಪರ್ಯವುಳ್ಳವುಗಳಾದುದರಿಂದ ಪುನರುಕ್ತಿ ದೋಷ ಉಂಟೆಂದು ಕೆಲವರು ಭಾವಿಸಬಹುದು. ಅಂತಹ ದೋಷವೇನೂ ಇಲ್ಲವೆಂದು ಭಾಷ್ಯದಲ್ಲಿ ತೋರಿಸಿರುತ್ತಾರೆ. "ಆತ್ಮಾನಿತ್ಯಃ" ಎಂದು ನಿತ್ಯತ್ವವು ಸಾಧ್ಯವೆಂದೂ, ಇದನ್ನು ಸಾಧಿಸಲು ಅವಿನಾಶಿತ್ವೇನ, ಅಜತ್ವೇನ, ವ್ಯಯಾನರ್ಹತ್ವೇನ ಚ ಎಂದು ಈ ಮೂರು ಹೇತುಗಳು ಹೇಳಲ್ಪಟ್ಟವು. "ಕಂ ಘಾತಯತಿ" ಎಂಬ ಮೂಲದ ವ್ಯಾಖ್ಯಾನದಲ್ಲಿ "ಕಂ" ಎಂಬುದು ಆತ್ಮವನ್ನು ಬೋಧಿಸುತ್ತದೆಂದೂ, ಆ ಆತ್ಮವು ಯಾವುದು ಎಂಬ ನಿರ್ಧಾರಣದಲ್ಲಿ, ಆತ್ಮರುಗಳಲ್ಲಿ ಒಂದು ಎಂದು ಹೇಳುವದಕ್ಕಾಗಿ **"ದೇವ ಮನುಷ್ಯ ತಿರ್ಯಜ್ ಸ್ಥಾವರ ಶರೀರಾವಸ್ಥಿತೇಷು ಆತ್ಮಸು"** ಎಂದು ವಿವರಿಸಲ್ಪಟ್ಟಿತು. ಮೂಲದಲ್ಲಿರುವ **"ಕಥಂ"** ಎಂಬ ಪದವು ಎರಡು ವಾಕ್ಯಗಳಿಗೂ ಅನ್ವಯಿಸತಕ್ಕದ್ದೆಂದು ವ್ಯಾಖ್ಯಾನ ಮಾಡಿರುತ್ತಾರೆ. ಹೀಗೆ ಆತ್ಮಸ್ವರೂಪವನ್ನು ನಿತ್ಯವಾದುದಾಗಿ ತಿಳಿದವನು ಯಾವ ಆತ್ಮವನ್ನು ಹೇಗೆ ಕೊಲ್ಲಿಸುವನು? ಹೇಗೆ ಕೊಲ್ಲುವನು? ಎಂದು ಹೇಳಿದುದರಿಂದ, ಆತ್ಮಸ್ವರೂಪ ನಿತ್ಯವಲ್ಲವೆಂದು ತಿಳಿಯದವನು ಆತ್ಮನನ್ನು ಕೊಲ್ಲಿಸಲೂಬಹುದು, ಕೊಲ್ಲಲೂಬಹುದು ಎಂಬರ್ಥವುಂಟಾಗುವದಿಲ್ಲವು. ಹಾಗೆ ಅಭಿಪ್ರಾಯವಲ್ಲವೆಂದು ತಿಳಿಸುವದಕ್ಕಾಗಿ ಈ ಶ್ಲೋಕ ತಾತ್ಪರ್ಯವನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಏತಾನ್ ಆತ್ಮನಃ** – ಈ ಆತ್ಮರುಗಳನ್ನು, **ಘಾತಯಾಮಿ** – ಕೊಲ್ಲಿಸುವೆನು, **ಹನ್ಮಿ** - ಕೊಲ್ಲುವೆನು, **ಇತ್ಯನುಶೋಚನಂ** - ಎಂಬದಾಗಿ ಶೋಕಿಸೋಣವು, **ಆತ್ಮಸ್ವರೂಪದ, ಯಾಥಾತ್ಮ್ಯ** - ನಿಜಸ್ಥಿತಿಯ, **ಅಜ್ಞಾನ ಮೂಲಮೇವ** – ಅಜ್ಞಾನದ ಮೂಲಕವಾಗಿಯೇ ಉಂಟಾದುದು, **ಇತ್ಯಭಿಪ್ರಾಯಃ** - ಎಂಬಭಿಪ್ರಾಯವು. ಆತ್ಮಸ್ವರೂಪದ ಯಾಥಾತ್ಮ್ಯ ಜ್ಞಾನವುಳ್ಳವನು ಹೇಗೆ ಆತ್ಮನನ್ನು ಕೊಲ್ಲಿಸುವನು ಅಥವಾ ಕೊಲ್ಲುವನು? ಎಂದರೆ, ಹಾಗೆ ಕೊಲ್ಲಿಸುವನು ಅಥವಾ ಕೊಲ್ಲುವನೆಂದು ಶೋಕಿಸುವದಿಲ್ಲವೆಂಬ ಭಾವವು. ॥೨೧॥

**ಭಾಷ್ಯಾವತಾರಿಕೆಯ ಅರ್ಥವು** :—ಯದ್ಯಪಿ ಆತ್ಮರುಗಳು ನಿತ್ಯರೇ ಆದರೂ, ಯುದ್ಧದಲ್ಲಿ ಕೊಲ್ಲಲ್ಪಟ್ಟರೂ, ಶರೀರ ವಿಶ್ಲೇಷ ಮಾತ್ರ ಕ್ರಿಯಕೇ - ಈಗ ಪ್ರಾಪ್ತವಾಗಿರುವ ದೇಹದ

ಭಾ. ಅವ. ಯದ್ಯಪಿ ನಿತ್ಯಾನಾಮಾತ್ಮನಾಂ ಶರೀರ ವಿಶ್ಲೇಷ ಮಾತ್ರಂ ಕ್ರಿಯತೇ : ತಥಾಪಿ ರಮಣೀಯೇಷು ಭೋಗಸಾಧನೇಷು ಶರೀರೇಷು ನಶ್ಯತ್ಸು ತದ್ವಿಯೋಗರೂಪಂ ಶೋಕ ನಿಮಿತಮಸ್ತ್ಯೇವೇ ತ್ಯತ್ರಾಹ.

ಮೂ. ವಾಸಾಂಸಿ ಜೀರ್ಣಾನಿ ಯಥಾವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ ।
ತಥಾ ಶರೀರಾಣಿ ವಿಹಾಯಜೀರ್ಣಾ ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥೨೨॥

ವಿಶ್ಲೇಷ ಮಾತ್ರವೇ ಮಾಡಲ್ಪಡುತ್ತದೆ. ತಥಾಪಿ - ಹಾಗಾದರೂ ಕೂಡ, ರಮಣೀಯ ಭೋಗ ಸಾಧನೇಷು - ರಮಣೀಯಗಳಾದ ಭೋಗಗಳಿಗೆ ಸಾಧನಭೂತಗಳಾದ, ಶರೀರೇಷು ನಶ್ಯತ್ಸು – ಶರೀರಗಳು ನಾಶವಾಗಲಾಗಿ, ತದ್ವಿಯೋಗ ರೂಪಂ - ಆ ಶರೀರ ನಷ್ಟರೂಪವಾದ, ಶೋಕ ನಿಮಿತ್ತಂ - ಶೋಕಕ್ಕೆ ಕಾರಣಭೂತವಾದುದು, ಅಸ್ತ್ಯೇವ – ಇದ್ದೇ ಇರುತ್ತದೆ ಎಂಬ ಆಕ್ಷೇಪ ತಂದರೆ, ಇತ್ಯತ್ರಾಹ - ಆ ಸಂದರ್ಭವಲ್ಲಿ ಮುಂದಿನ ಶ್ಲೋಕವು ಸಮಾಧಾನವನ್ನು ಹೇಳುತ್ತದೆ. ಈಗ ಐಹಿಕ ಭೋಗಗಳನ್ನನುಭವಿಸುವದಕ್ಕೆ ಯೋಗ್ಯವಾದ ಶರೀರವು ನಷ್ಟವಾಯಿತಲ್ಲಾ ಎಂಬ ಶೋಕವು ಇದ್ದೇ ಇರುತ್ತದೆ ಎಂಬದಾಗಿ ಆಕ್ಷೇಪವು. ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ.

ಮೂಲಕ್ಕೆ ಅರ್ಥವು:—ನರಃ - ಮನುಷ್ಯನು, ಜೀರ್ಣಾನಿ - ಶಿಥಿಲಗಳಾದ, ವಾಸಾಂಸಿ - ಬಟ್ಟೆಗಳನ್ನು, ಯಥಾ - ಹೇಗೆ, ವಿಹಾಯ - ಬಿಟ್ಟುಬಿಟ್ಟು, ನವಾನಿ - ಅದಕ್ಕಿಂತಲೂ ಹೊಸದಾಗಿ ಉತ್ತಮವಾದ, ಅಪರಾಣಿ - ಜೇರೇ ಬಟ್ಟೆಗಳನ್ನು, ಗೃಹ್ಣಾತಿ - ಪರಿಗ್ರಹಿಸುವನೋ, ತಥಾ - ಹಾಗೆಯೇ, ದೇಹೀ – ದೇಹವನ್ನು ಹೊಂದಿರುವ ಆತ್ಮನು, ಜೀರ್ಣಾನಿ - ಗಳಿತವಾದ, ಶರೀರಾಣಿ- ಶರೀರಗಳನ್ನು, ವಿಹಾಯ - ತ್ಯಜಿಸಿ, ಅನ್ಯಾನಿ - ಬೇರೆಯಾದ, ನವಾನಿ – ಅದಕ್ಕೂ ಉತ್ತಮ ವಾಗಿ ಮಜ್ಗಳಕರವಾದ ದೇಹಗಳನ್ನು, ಸಂಯಾತಿ - ಹೊಂದುತ್ತಾನೆ. ಧರ್ಮಯುದ್ಧದಲ್ಲಿ ಮಡಿದವನಿಗೆ ವೀರಸ್ವರ್ಗ ಪ್ರಾಪ್ತವಾಗುವದರಿಂದ ಈಗಿರುವದಕ್ಕಿಂತ ಉತ್ತಮವಾದ ಸ್ವರ್ಗದಲ್ಲಿ ದೇವತಾ ಶರೀರವು ಉಂಟಾಗುತ್ತದೆಂಬ ಭಾವವು. ಇಲ್ಲಿ "ದೇಹೀ" ಎಂದರೆ "ದೇಹೋಽಸ್ಯಾಸ್ತಿ" ಎಂಬ ವ್ಯುತ್ಪತ್ತಿಯಿಂದ ದೇಹವುಳ್ಳವನು ಆತ್ಮಾವಾಗಿ ದೇಹಕ್ಕಿಂತಲೂ ಬೇರೆಯಾದವನೆಂಬ ಅರ್ಥವೂ ತೋರಿಬರುವದಕ್ಕಾಗಿ ಹಾಗೆ ಪ್ರಯೋಗವು. ರಿಜ್ ಕ್ಷಯೇ ಎಂಬ ಧಾತುವಿನಿಂದ ಉತ್ಪನ್ನವಾದ ನರ ಶಬ್ದವು ನಾಶವಿಲ್ಲದೆ ನಿತ್ಯನಾದ ಆತ್ಮನನ್ನೇ ಬೋಧಿಸುತ್ತದೆಂದೂ ಭಾವಿಸಬಹುದು; ಹೀಗೆ ನರಃ ದೇಹೀ ಎಂಬೆರಡು ಪ್ರಯೋಗದಿಂದಲೂ ಆತ್ಮ ನಿತ್ಯತ್ವವೂ ದೇಹಾನಿತ್ಯತ್ವವೂ ಸಹ ಬೋಧಿತವು. ಇಲ್ಲಿ ವಾಸಾಂಸಿ ಎಂದು ಉಪಮೆಯನ್ನು ಕೊಟ್ಟಿರುವದರಿಂದ ಬಟ್ಟೆಗಳು ದೇಹ ಕ್ಕಿಂತಲೂ ಹೇಗೆ ಪೃಥಕ್ಕಾಗಿ ಇರುತ್ತವೋ, ಹಾಗೆಯೇ ಈಗ ಅಪೃಥಕ್ಸಿದ್ಧ ವಿಶೇಷಣವಾದರೂ ಆತ್ಮಾವಿಗಿಂತ ಬೇರೆಯಾಗಿ ಪೃಥಕ್ಕರಿಸಲೂ ಸಾಧ್ಯವೆಂಬರ್ಥವೂ ಸೂಚಿತವು. ಈ ದೇಹದ ಬಂಧ ದಿಂದ ಬಿಡುಗಡೆಯನ್ನು ಹೊಂದುವದಕ್ಕಾಗಿಯೇ ಈ ಗೀತಾಶಾಸ್ತ್ರವು ಈಗ ಉಪದಿಷ್ಟವಾಗಿರುತ್ತದೆ. ಆದರೆ ಈ ದೇಹದಿಂದ ಆತ್ಮನು ಬಿಡುಗಡೆಯನ್ನು, ಬಟ್ಟೆಯನ್ನು ದೇಹದಿಂದ ತೆಗೆದಷ್ಟು ಸುಲಭ ವಾಗಿ, ಹೊಂದಲು ಸಾಧ್ಯವಿಲ್ಲವು. ಏಕೆಂದರೆ, ಅನಾದಿ ಕಾಲದಿಂದಲೂ ಅನುಸರಿಸಿಬಂದುದು. ಆದುದರಿಂದ ಈ ಲೀಲಾವಿಭೂತಿಯಲ್ಲಿ ಆತ್ಮನಿಗೆ ದೇಹವು ಅಪೃಥಕ್ಸಿದ್ಧ ವಿಶೇಷಣವೆಂದು ಹೇಳಲ್ಪ ಟ್ಟಿರುತ್ತದೆ. ಹಳೇ ಬಟ್ಟೆಗಳನ್ನು ತೆಗೆದುಹಾಕಿ ಅನಂತರ ಸ್ವಲ್ಪ ವ್ಯವಧಾನದಿಂದ ಹೊಸ ಬಟ್ಟೆ ಯನ್ನು ಹಾಕಿಕೊಳ್ಳುವದಾಗುತ್ತದೆ. ಇಲ್ಲಿ ಹಾಗಲ್ಲವು. ಸ್ಥೂಲದೇಹವು ಆತ್ಮನಿಗೆ ಹೋದರೂ ಪುನಃ ಸೂಕ್ಷ್ಮದೇಹವು ಇದ್ದೇ ಇರುತ್ತದೆ.

ಭಾ. ಧರ್ಮಯುದ್ಧೇ ಶರೀರಂ ತ್ಯಜತಾಂ ತ್ಯಕ್ತಾತ್ ಶರೀರಾ ದಧಿಕತರ ಕಲ್ಯಾಣ ಶರೀರಗ್ರಹಣಂ ಶಾಸ್ತ್ರಾದವಗಮ್ಯತ ಇತಿ, ಜೀರ್ಣಾನಿ ವಾಸಾಂಸಿ ವಿಹಾಯ ನವಾನಿ ಕಲ್ಯಾಣಾನಿ ವಾಸಾಂಸಿ ಗೃಹ್ಣತಾ ಮಿವ ಹರ್ಷನಿಮಿತ್ತ ಮೇವಾತ್ರೋಪಲಭ್ಯತೇ ॥ ೨೨ ॥

ಭಾ. ಅವ. ಪುನರಪಿ "ಅವಿನಾಶಿತು ತದ್ವಿದ್ಧಿ ಯೇನಸರ್ವಮಿದಂ ತತಮ್" ಇತಿ ಪೂರ್ವೋಕ್ತ ಮವಿನಾಶಿತ್ವಮ್ ಸುಖಗ್ರಹಣಾಯ ವ್ಯಂಜಯನ್ ದ್ರಢಯತಿ.

---

**ಭಾಷ್ಯಾರ್ಥವು** :—ಧರ್ಮಯುದ್ಧದಲ್ಲಿ ಶರೀರವನ್ನು ತ್ಯಜಿಸುವವರಿಗೆ, ತ್ಯಕ್ತಾ ಶರೀರಾತ್ - ಬಿಟ್ಟ ಶರೀರಕ್ಕಿಂತ, ಅಧಿಕತರ ಕಲ್ಯಾಣ ಶರೀರಗ್ರಹಣಂ - ಅದಕ್ಕಿಂತಲೂ ಹೆಚ್ಚಾಗಿ ಶುಭತರ ವಾದ ಶರೀರವನ್ನು ಸ್ವೀಕರಿಸೋಣವು, (ಇದು "ನವಾನಿ" ಎಂಬುದರರ್ಥವು), ಶಾಸ್ತ್ರಾತ್ - ಶಾಸ್ತ್ರ ದಿಂದ, ಅವಗಮ್ಯತೇ–ತೋರಿಬರುತ್ತದೆ. ಹೊಸ ಶರೀರ ಬಂದವರಿಗೆಲ್ಲಾ ಹಿಂದಿನ ಶರೀರಕ್ಕಿಂತ ಹೊಸದಾಗಿ ಕಲ್ಯಾಣತರವಾದ ಶರೀರವು ಬರುವದಿಲ್ಲವು. ಹಳೆಯ ಪೀತಾಂಬರವು ಹೋಗಿ ಹೊಸ ಗೋಣೀರೊಟ್ಟು ಬಂದರೆ ಹರ್ಷಕ್ಕೆ ಕಾರಣವಾಗುವದಿಲ್ಲವು. ಹಾಗೆಯೇ ರಾಜನಾಗಿರುವ ಹಳೆಯ ಶರೀರವು ಹೋಗಿ, ಹೊಸದಾದ ನಾಯಿಯ ಶರೀರವು ಪ್ರಾಪ್ತವಾದರೂ ಹರ್ಷವಿಲ್ಲವು. ಆದರೆ ಈ ಸಂದರ್ಭದಲ್ಲಾದರೋ ಹಾಗಲ್ಲವು. ಧರ್ಮಯುದ್ಧದಲ್ಲಿ ಮರಣ ಹೊಂದಿದವರಿಗೆ ಮಾತ್ರ ಕಲ್ಯಾಣತರ ಶರೀರ ಉಂಟಾಗುವದರಿಂದ, "**ಧರ್ಮಯುದ್ಧೇ ಶರೀರಂ ತ್ಯಜತಾಂ**" ಎಂದು ಪ್ರಯೋಗವು. ಈ ಅಭಿಪ್ರಾಯವು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ ಎಂದು ತಿಳಿಸುತ್ತಾರೆ. ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ ಎಂಬುದು ಮುಂದೆ ಇದೇ ಅಧ್ಯಾಯದ ೩೭ನೆಯ ಶ್ಲೋಕದಲ್ಲಿ "**ಹತೋವಾ ಪ್ರಾಪ್ಸ್ಯಸೇ ಸ್ವರ್ಗಮ್**" ಎಂದು ಹೇಳಲ್ಪಟ್ಟಿರುತ್ತದೆ. ಹಾಗೆ ಸ್ವರ್ಗಪ್ರಾಪ್ತಿಯು ಯುದ್ಧವು ಧರ್ಮಯುದ್ಧವಾಗಿದ್ದರೇನೇ ಲಭಿಸುತ್ತದೆ, ಇಲ್ಲದಿದ್ದರೆ ಇಲ್ಲವು. ಪಾಂಡವರ ಯುದ್ಧವು ಧರ್ಮ ಯುದ್ಧವಾದುದರಿಂದ "**ಹತೋವಾ ಪ್ರಾಪ್ಸ್ಯಸೇ ಸ್ವರ್ಗಮ್**" ಎಂದು ಅರ್ಜುನನಿಗೆ ಹೇಳಿದರು. ಕೌರವರು ಅಧರ್ಮಿಗಳಾಗಿ ಯುದ್ಧವು ಅಧರ್ಮ ಯುದ್ಧವಾದುದರಿಂದ ದುರ್ಯೋಧನಾದಿಗಳು ಸತ್ತರೂ ಸ್ವರ್ಗವಿಲ್ಲವು. ಭೀಷ್ಮಾದಿಗಳು ಮೋಕ್ಷವನ್ನು ಹೊಂದಿದರಲ್ಲಾ ಎಂದರೆ ಅವರು ಮೋಕ್ಷಕ್ಕಾಗಿ ಯೋಗರೂಪ ಉಪಾಯಾನುಷ್ಠಾನವನ್ನು ಮಾಡಿ ಸದ್ಗತಿಯನ್ನು ಹೊಂದಿದರು. ಆದುದರಿಂದ ಯುದ್ಧದಲ್ಲಿ ಮಡಿದು ಬರುವ ಶರೀರವು ಇದಕ್ಕಿಂತ ಉತ್ಕೃಷ್ಟವಾದುದೆಂದೂ, ಇದೀಗ "ನವಾನಿ" ಪದದ ಅಭಿಪ್ರಾಯವೆಂದೂ ತಿಳಿಸುವದಕ್ಕಾಗಿ "**ಅಧಿಕತರ ಕಲ್ಯಾಣ ಶರೀರ ಗ್ರಹಣಂ**" ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಆದುದರಿಂದ ರಮಣೀಯ ಭೋಗಸಾಧನಭೂತ ಶರೀರವು ಹೋಯಿತೆಂಬ ದುಃಖಕ್ಕೆ ಅವಕಾಶವೇ ಇಲ್ಲವು. ಇದಕ್ಕಿಂತಲೂ ಕಲ್ಯಾಣತರವಾದ ಭೋಗಸಾಧನಭೂತವಾದ ದೇವತೆಯ ಶರೀರ ಪ್ರಾಪ್ತಿಯುಂಟಾಗುವದರಿಂದ ಹರ್ಷಕ್ಕೆ ಕಾರಣ ವುಂಟೇ ವಿನಾ ಶೋಕಕ್ಕೆ ಕಾರಣವೇ ಇಲ್ಲವೆಂಬ ಭಾವವು.

**ಭಾಷ್ಯಾವತಾರಿಕೆಯ ಅರ್ಥವು** :—**ಪುನರಪಿ** - ಪುನಃ "**ಅವಿನಾಶಿತು**" ಎಂಬ ಶ್ಲೋಕದಲ್ಲಿ, **ಪೂರ್ವೋಕ್ತಮವಿನಾಶಿತ್ವಂ**-ಹಿಂದೆ ಹೇಳಿದ ಅವಿನಾಶಿತ್ವವನ್ನು, **ಸುಖಗ್ರಹಣಾಯ**-ಸುಲಭವಾಗಿ, ಚನ್ನಾಗಿ ತಿಳಿಸುವದಕ್ಕಾಗಿ, **ವ್ಯಂಜಯನ್** - ಅದನ್ನೇ ವ್ಯಕ್ತಪಡಿಸುವರಾಗಿ (ಮುಂದಿನ ಎರಡು ಶ್ಲೋಕಗಳ ಮೂಲಕ), **ದ್ರಢಯತಿ** - ಸಮರ್ಥನೆ ಮಾಡುತ್ತಾರೆ.

ಮೂ. ನೈನಂ ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕಃ |
ನಚೈನಂ ಕ್ಲೇದಯನ್ತ್ಯಾಪೋ ನಶೋಷಯತಿ ಮಾರುತಃ || ೨೩.
ಅಚ್ಛೇದ್ಯೋಽಯ ಮದಾಹ್ಯೋಽಯ ಮಕ್ಲೇದ್ಯೋಽಶೋಷ್ಯ ಏವಚ |
ನಿತ್ಯಸ್ಸರ್ವಗತಃ ಸ್ಥಾಣು ರಚಲೋಽಯಂ ಸನಾತನಃ || ೨೪.

ಮೂಲಕ್ಕೆ ಅರ್ಥವು:—ಏನಂ – ಈ ಆತ್ಮನನ್ನು, ಶಸ್ತ್ರಗಳು, ನ ಛಿನ್ದಂತಿ - ಕತ್ತರಿಸಲಾರವು, ಪಾವಕಃ - ಅಗ್ನಿಯು, ಏನಂ – ಈ ಆತ್ಮನನ್ನು, ನ ದಹತಿ - ಸುಡಲಾರದು, ಆಪಃ - ಉದಕವು, ಏನಂ - ಈ ಆತ್ಮನನ್ನು, ನ ಕ್ಲೇದಯನ್ತಿ - ತೊಯಿಸಲಾರದು, ಮಾರುತಃ - ವಾಯುವು, ನ ಶೋಷಯತಿ - ಶೋಷಿಸುವದಿಲ್ಲವು. ಆದುದರಿಂದ, ಅಯಂ - ಈ ಆತ್ಮನು, ಅಚ್ಛೇದ್ಯನು - ಕತ್ತರಿಸಲು ಸಾಧ್ಯವಿಲ್ಲದವನು, ಅದಾಹ್ಯಃ - ಸುಡಲೂ ಸಾಧ್ಯವಿಲ್ಲದವನು, ಅಕ್ಲೇದ್ಯಃ - ತೊಯಿಸಲು ಸಾಧ್ಯವಿಲ್ಲದವನು, ಅಶೋಷ್ಯ ಏವಚ – ಶೋಷಿಸಲ್ಪಡಲೂ ಸಾಧ್ಯನಲ್ಲವು. ಅಥವಾ ನೈನಂ ಛಿನ್ದಂತಿ ಶಸ್ತ್ರಾಣಿ - ಯಾವ ಶಸ್ತ್ರಗಳೂ ಈ ಆತ್ಮನನ್ನು ಛೇದಿಸಲಾರವು, ಏಕೆಂದರೆ, ಅಚ್ಛೇದ್ಯೋಽಯಂ - ಯಾವ ಛೇದನಕ್ಕೆ ಸಾಧನಭೂತವಾದ ಆಯುಧವು ಒಳಹೊಕ್ಕು ಛೇದಿಸಲು ಸಾಧ್ಯವಿಲ್ಲದವನು ಎಂಬರ್ಥವಾಗಲಿ ಆಗಬಹುದು. ಹಾಗೆಯೇ ವಾಕ್ಯವುಗಳಿಗೆ ಅನ್ವಯಿಸಬಹುದು. ಆತ್ಮಾ ತುಂಬಾ ಸೂಕ್ಷ್ಮವಾಗಿ, ಅಣುರೂಪನಾಗಿರುವದರಿಂದ ಛೇದನಾದಿಗಳಿಗೆ ಸಾಧ್ಯವಿಲ್ಲದವನೆಂಬ ಭಾವವು. ಹೀಗೆ ಯಾವ ವಿಧದಿಂದಲೂ ನಾಶರಹಿತನಾದ್ದುದರಿಂದ ಅಯಂ - ಈ ಆತ್ಮನು ನಿತ್ಯನು. ಅದನ್ನೇ ವಿವರಿಸಿ ಹೇಳುತ್ತಾರೆ. ಸರ್ವಗತಃ – ಸರ್ವವನ್ನೂ ಪ್ರವೇಶಿಸುವ ಸ್ವಭಾವವುಳ್ಳವನು, ಇತರರು ಮಾಡಿರುವ ಹಾಗೆ ವಿಭುವೆಂಬರ್ಥವಲ್ಲವು. ವಿಭುವೆಂದರ್ಥ ಹೇಳಿದರೆ ಜೀವನು ಅಣು ಎಂದು ಹೇಳುವ ಶ್ರುತಿಗಳಿಗೆಲ್ಲಾ ವಿರೋಧ ಉಂಟಾಗುತ್ತದೆ. ಸರ್ವಗತವೆಂದಿರುವುದರಿಂದ ಕೆಲವರು ಪರಮಾತ್ಮನನ್ನು ಕುರಿತು ಹೇಳಲ್ಪಟ್ಟಿತೆಂದೂ ಹೇಳುವರು, ಪ್ರಕರಣವು ಜೀವಾತ್ಮನನ್ನು ಕುರಿತದ್ದಾದುದರಿಂದ ಆತನು ಎಲ್ಲಾ ಅಚಿತ್ಪದಾರ್ಥವನ್ನೂ ಪ್ರವೇಶಿಸುವ ಸ್ವಭಾವವುಳ್ಳವನೆಂಬರ್ಥವು. ನಾನಾ ವಿಧವಾದ ದೇಹಗಳುಳ್ಳವನೆಂಬರ್ಥವು. ಅಥವಾ ಸರ್ವಗತತ್ವ ಇನ್ನೊಂದು ವಿಧವಾಗಿಯೂ ಉಪಪನ್ನವಾಗಬಹುದು, ಹೇಗೆಂದರೆ, ಈತನ ಧರ್ಮಭೂತಜ್ಞಾನವು ಈ ದೇಹಸಂಬಂಧವಿರುವಾಗ ವಿಭುವಾಗಿ ಇಲ್ಲದಿದ್ದರೂ, ಕೊನೆಗೆ ಪ್ರಕೃತಿವಿಮುಕ್ತಿಯಲ್ಲಿ ವಿಭುವಾಗಿ ಎಲ್ಲವನ್ನೂ ಪ್ರಕಾಶಪಡಿಸುವ ಶಕ್ತಿಯುಳ್ಳದಾದುದರಿಂದ ಸರ್ವಜ್ಞತೆಯಿಂದ ಸರ್ವಗತತ್ವವು. ಆದರೆ ಈ ಅರ್ಥವು ಆತ್ಮನಿತ್ಯತ್ವಕ್ಕೆ ಸಾಧಕವಾಗುವದಿಲ್ಲವು. ಈ ಆತ್ಮನು ಎಲ್ಲವನ್ನೂ ಪ್ರವೇಶಿಸುವ ಶಕ್ತಿಯುಳ್ಳವನು; ಆದರೆ ಈತನನ್ನು ಪ್ರವೇಶಿಸಿ ನಾಶಗೊಳಿಸುವನಕ್ಕೆ ಯಾವುನಕ್ಕೂ ಯೋಗ್ಯತೆ ಇಲ್ಲವೆಂಬುವನ್ನು ಈ ಸರ್ವಗತ ಶಬ್ದವು ಸೂಚಿಸುತ್ತದೆ. ಇದರಿಂದ ಜೀವಾತ್ಮನು ವಿಭುವು ಎಂಬ ನೈಯಾಯಿಕನ ಸಿದ್ಧಾನ್ತವು ಸರಿಯಲ್ಲವೆಂದು ಹೇಳಲ್ಪಟ್ಟಿತು. ಹಾಗೆ ವಿಭುವಾಗಿದ್ದ ಪಕ್ಷದಲ್ಲಿ ಇತರರ ಸುಖದುಃಖಗಳ ಅನುಭವವು ನಮಗೆ ಉಂಟಾಗಬೇಕಾಗಿತ್ತು. ಶ್ರೀಮಚ್ಛಂಕರಾಚಾರ್ಯರವರು ಆತ್ಮಾ ನಿತ್ಯನಾದುದರಿಂದ ಸರ್ವಗತನೆಂದೂ, ಸರ್ವಗತನಾದುದರಿಂದ ಸ್ಥಾಣುವೆಂದೂ, ಸ್ಥಾಣುವಾದುದರಿಂದ ಅಚಲನೆಂದೂ, ಅಚಲನಾದುದರಿಂದ ಸನಾತನನೆಂದೂ ಹೇತು ಹೇತುಮದ್ಭಾವಗಳನ್ನು ಹೇಳಿರುತ್ತಾರೆ. ನಿತ್ಯತ್ವವು ಸರ್ವಗತತ್ವಕ್ಕೆ ಹೇಗೆ ಹೇತುವೋ ತಿಳಿಯಲಿಲ್ಲವು. ನಿತ್ಯಸೂರಿಗಳು ನಿತ್ಯರು, ಅವರಿಗೆ ಸರ್ವಗತತ್ವವು ಹೇಗೆ? ಶ್ರುತಿಯಲ್ಲಿ ವಿರಜೆಯು ನಿತ್ಯವೆಂದು ಹೇಳುತ್ತದೆ. ಅದಕ್ಕೆ ಹೇಗೆ

**ಭಾ.** ಶಸ್ತ್ರಾಗ್ನ್ಯಮ್ಬುವಾಯವಃ ಛೇದನ ದಹನ ಕ್ಲೇದನ ಶೋಷಣಾನ್ಯಾತ್ಮಾನಂ ಪ್ರತಿ ಕರ್ತುಂ ನಶಕ್ನುವಂತಿ ಸರ್ವಗತತ್ವಾ ದಾತ್ಮನಃ – ಸರ್ವತತ್ತ್ವ ವ್ಯಾಪನಸ್ವಭಾವತಯಾ ಸರ್ವೇಭ್ಯ ಸ್ತತ್ತ್ವೇಭ್ಯ ಸ್ಸೂಕ್ಷ್ಮತ್ವಾದಸ್ಯ ತೈ ರ್ವ್ಯಾಪ್ತ್ಯನರ್ಹತ್ವಾತ್ ; ವ್ಯಾಪ್ಯಕರ್ತವ್ಯತ್ವಾಚ್ಚ ಛೇದನ ದಹನ ಕ್ಲೇದನ ಶೋಷಣಾನಾಂ.

---

ಸರ್ವಗತತ್ವವು ಕೂಡುತ್ತದೆ? ಕೌಷೀತಕೀ ಶ್ರುತಿಯಲ್ಲಿ ದಿವ್ಯವೈಕುಂಠಾದಿಗಳು ವರ್ಣಿಸಲ್ಪಟ್ಟಿವೆ ; ಇವುಗಳಿಗೆ ಸರ್ವಗತತ್ವವು ಹೇಗೆ? **ಸ್ಥಾಣುಃ** - ಸ್ಥಿರಸ್ವಭಾವವುಳ್ಳವನು ಎಂದರೆ ನಾಶಕ್ಕೆ ಅಯೋಗ್ಯನೆಂದಾಗಲಿ ಅಥವಾ ನಾಶಕ ಪದಾರ್ಥಕ್ಕೆ ಅವಿಷಯನೆಂದಾಗಲಿ ಅರ್ಥವು. **ಅಚಲಃ** - ಅಲ್ಲಾಡಿಸಲು ಸಾಧ್ಯವಿಲ್ಲದವನು, **ಸನಾತನಃ** - ಪೂರ್ವದಿಂದಲೂ ಇರುವವನು, ಅನಾದಿಯು.

**ಭಾಷ್ಯಾರ್ಥವು**:—ಶಸ್ತ್ರ, ಅಗ್ನಿ, ಉದಕ, ವಾಯುವುಗಳು ಕ್ರಮವಾಗಿ ಛೇದನ, ದಹನ, ತೊಯಿಸೋಣ, ಶೋಷಿಸೋಣ ಇವುಗಳನ್ನು, **ಆತ್ಮಾನಂ ಪ್ರತಿ** – ಆತ್ಮನನ್ನು ಕುರಿತು, **ಕರ್ತುಂ**—ಮಾಡಲು, **ನಶಕ್ನುವಂತಿ** - ಸಮರ್ಥವಾದವಲ್ಲವು; ಏಕೆಂದರೆ, **ಆತ್ಮನಃ ಸರ್ವಗತತ್ವಾತ್** - ಆತ್ಮನಿಗೆ ಸರ್ವಗತತ್ವವಿರುವದರಿಂದ ಎಂದರೆ, **ಸರ್ವ ತತ್ತ್ವವ್ಯಾಪನ ಸ್ವಭಾವತಯಾ** - ಸಮುಸ್ತ ಅಚಿತ್ತತ್ತ್ವವನ್ನೂ ವ್ಯಾಪಿಸುವ ಸ್ವಭಾವವಿರುವದರಿಂದ, **ಸರ್ವೇಭ್ಯಃ ತತ್ತ್ವೇಭ್ಯಃ ಸೂಕ್ಷ್ಮತ್ವಾತ್** - ಸಮುಸ್ತ ಆ ತತ್ವಗಳಿಗಿಂತಲೂ ಸೂಕ್ಷ್ಮವಾಗಿ ಅಣುವಾಗಿರುವದರಿಂದ, **ಅಸ್ಯ** - ಈ ಆತ್ಮನಿಗೆ, **ತೈಃ** - ಆ ತತ್ತ್ವಗಳಿಂದ, **ವ್ಯಾಪ್ತ್ಯನರ್ಹತ್ವಾತ್** - ವ್ಯಾಪ್ತಿಗೆ ಅನರ್ಹನಾದುದರಿಂದ, ಅವುಗಳೆಲ್ಲಾ ಆತ್ಮಾವಿನ ಮೇಲೆ ತಮ್ಮ ಕಾರ್ಯಭಾಗಗಳನ್ನು ಸಾಧಿಸಲಾರವೆಂಬ ಭಾವವು. ಶ್ರೀ ಯಾಮುನೇಯರು ಆತ್ಮಲಕ್ಷಣವನ್ನು ಹೇಳುವ ಸಂದರ್ಭದಲ್ಲಿ,

"**ದೇಹೇನ್ದ್ರಿಯ ಮನಃ ಪ್ರಾಣಧೀಭ್ಯೋಽನ್ಯೋಽನನ್ಯ ಸಾಧನಃ ।**
**ನಿತ್ಯೋ ವ್ಯಾಪೀ ಪ್ರತಿಕ್ಷೇತ್ರಂ ಆತ್ಮಾ ಭಿನ್ನಃ ಸ್ವತಸ್ಸುಖೀ ॥**" (ಆತ್ಮಸಿದ್ಧಿಯು)

ಎಂಬಲ್ಲಿ "**ವ್ಯಾಪೀ**" ಎಂದು ಹೇಳಿರುವದು ಇಲ್ಲಿ ಹೇಳಿರುವ "**ಸರ್ವಗತ**" ಪ್ರಯೋಗದಭಿಪ್ರಾಯವು. ಇದಕ್ಕೆ ಶ್ರೀ ಭಾಷ್ಯಕಾರರು ಶ್ರೀ ಭಾಷ್ಯದಲ್ಲಿ ಪ್ರಥಮಸೂತ್ರದಲ್ಲಿ ವ್ಯಾಖ್ಯಾನ ಮಾಡಿರುತ್ತಾರೇನೆಂದರೆ:—"**ಅನನ್ಯ ಸಾಧನಃ, ಸ್ವಪ್ರಕಾಶಃ, ವ್ಯಾಪೀ – ಅತಿ ಸೂಕ್ಷ್ಮತಯಾ ಸರ್ವಾಚೇತನಾನ್ತಃ ಪ್ರವೇಶನ ಸ್ವಭಾವಃ**" "ವ್ಯಾಪೀ ಎಂದರೆ ಅಣುರೂಪದಲ್ಲಿ ಅತಿ ಸೂಕ್ಷ್ಮವಾಗಿರುವದರಿಂದ ಸಮುಸ್ತಗಳಾದ ಅಚೇತನ ವಸ್ತುಗಳ ಅಂತಃ ಪ್ರವೇಶ ಮಾಡುವ ಸ್ವಭಾವವುಳ್ಳವನು" ಮಹಾನುಭಾವರಾದ ಜ್ಞಾನಿಗಳಾದ ಯಾಮುನೇಯರು, "**ಆತ್ಮಾಭಿನ್ನಃ ಪ್ರತಿಕ್ಷೇತ್ರಂ**" ಎಂದು ಬರೆದಿರುವದರಿಂದ ಜೀವಾತ್ಮನು ಅವಿದ್ಯಾಗೃಹೀತ ಪರಮಾತ್ಮನೆಂಬ ವಾದವು ಸರಿಯಲ್ಲವೆಂದು ತೋರಿಸಿರುತ್ತಾರೆ. ಆ **ಛೇದನದಹನಾದಿಗಳನ್ನಾ**ದರೋ, **ವ್ಯಾಪ್ಯಕರ್ತವ್ಯತ್ವಾಚ್ಚ** - ಆ ತತ್ವಗಳು ವ್ಯಾಪಿಸಿ ಮಾಡಬೇಕಾದುದರಿಂದ, ಶಸ್ತ್ರದಿಂದ ಛೇದನಕ್ಕೂ, ಅಗ್ನಿಯಿಂದ ದಹನಕ್ಕೂ, ಉದಕದಿಂದ ತೊಯಿಸಲ್ಪಡುವದಕ್ಕೂ, ವಾಯುವಿನಿಂದ ಶೋಷಣಕ್ಕೂ, (ಇವುಗಳು ಇನ್ನೂ ಇತರ ಸಾಧನಗಳಿಂದ ವಿನಾಶವನ್ನು ಹೊಂದಿಸುವದಕ್ಕೂ ಸಹ ಉಪಲಕ್ಷಣಗಳು) ಸಾಧ್ಯವಿಲ್ಲವೆಂಬುದಕ್ಕೆ ಇಲ್ಲಿ ಮೂರು ಹೇತುಗಳನ್ನು ಕೊಟ್ಟಿರುತ್ತಾರೆ. (೧) ಅಣುವಾಗಿ ಸೂಕ್ಷ್ಮವಾಗಿರುವದರಿಂದ, (೨) ಆ ಕಾರಣದಿಂದ ಸರ್ವ ಅಚಿತ್ತುಗಳನ್ನೂ ವ್ಯಾಪಿಸುವ ಶಕ್ತಿಯಿರುವದರಿಂದಲೂ, (೩) ಯಾವ ಅಚಿದ್ವಸ್ತುಗಳೂ ಇದನ್ನು ವ್ಯಾಪಿಸಿ ನಾಶಪಡಿಸಲಾರವಾದುದರಿಂದ ಎಂಬದಾಗಿ, **ಅತಃ** - ಆ ಕಾರಣದಿಂದ, **ಆತ್ಮಾನಿತ್ಯಃ** - ಆತ್ಮನು ನಿತ್ಯನು; ಅದನ್ನೇ ಉಪಪಾದಿಸುತ್ತಾರೆ.

ಭಾ. ಅತ ಆತ್ಮಾ ನಿತ್ಯಃ, ಸ್ಥಾಣುರಚಲೋಽಯಂ ಸನಾತನಃ - ಸ್ಥಿರಸ್ವಭಾವೋಽಪ್ರಕಂಪ್ಯಃ ಪುರಾತನಶ್ಚ ॥ ೨೩, ೨೪ ॥

ಮೂ. ಅವ್ಯಕ್ತೋಽಯ ಮಚಿನ್ತ್ಯೋಽಯ ಮವಿಕಾರ್ಯೋಽಯ ಮುಚ್ಯತೇ ।
ತಸ್ಮಾದೇವಂ ವಿದಿತ್ವೈನಂ ನಾನು ಶೋಚಿತು ಮರ್ಹಸಿ ॥ ೨೫.

"ಸ್ಥಾಣುಃ" ಎಂದರೆ ಸ್ಥಿರ ಸ್ವಭಾವಃ - ಯಾವುದರಿಂದಲೂ ನಾಶಹೊಂದದೆ ಸ್ಥಿರವಾಗಿರುವವನು. ಅಚಲಃ ಎಂದರೆ ಅಪ್ರಕಂಪ್ಯಃ - ಕದಲಿಸಲಸಾಧ್ಯನು; ಸನಾತನಃ ಎಂದರೆ ಪುರಾತನಶ್ಚ - ಹಿಂದಿನಿಂದಲೂ ಇರುವವನು. ಇಲ್ಲಿ ನಿತ್ಯ ಶಬ್ದದಿಂದಲೇ ಅಂತವಿಲ್ಲದವನೆಂಬರ್ಥ ಉಂಟಾಗುವದರಿಂದ ಅನಾದಿ ಎಂಬ ಅರ್ಥವನ್ನು ಮಾತ್ರವೇ ಸನಾತನ ಶಬ್ದಕ್ಕೆ ಹೇಳಬೇಕಾಗುತ್ತದೆ. ಇಲ್ಲಿ ಕೆಲವರು ಸನಾತನಃ ಎಂಬುದು ಛಾಂದಸ ಪ್ರಯೋಗವು, ಸನಾದನ ಎಂದಿರಬೇಕೆಂದು ಹೇಳಿ ಮಹರ್ಷಿ ಪ್ರಯೋಗಕ್ಕೆ ದೋಷ ಕಲ್ಪಿಸುವದಕ್ಕೆ, ಅಂತಹ ಪ್ರಬಲಕಾರಣವೇನೂ ತೋರಿಬರುವದಿಲ್ಲವು. ॥ ೨೪ ॥

**ಮೂಲಕ್ಕೆ ಅರ್ಥವು**:—ಹಿಂದಿನ ಶ್ಲೋಕದಲ್ಲಿ ಆತ್ಮನು ಅಚ್ಛೇದ್ಯನು, ಅದಾಹ್ಯನು, ಅಶೋಷ್ಯನು ಎಂದು ಹೇಳಿ ಆತ್ಮನ ನಿತ್ಯತ್ವವನ್ನು ಸ್ಥಾಪಿಸಿದರು; ಹಾಗಾದರೆ ಈ ಆತ್ಮನು ಇಂತಹವನೆಂದು ತಿಳಿಯುವ ಬಗೆ ಹೇಗೆ ಎಂಬುದು ಸರಿಯಾದ ಪ್ರಶ್ನೆಯು; ಹಿಂದೆ ಯಾವಾಗ ಇವೆಲ್ಲವೂ ಆತ್ಮನ ವಿಷಯದಲ್ಲಿ ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿತೋ, ಪ್ರತ್ಯಕ್ಷದಿಂದ ಈ ಬಾಹ್ಯೇಂದ್ರಿಯಗಳಿಂದ ತೋರುವ ಸರ್ವವಸ್ತುಗಳಲ್ಲಿ ಕೆಲವಲ್ಲಿ ಛೇದ್ಯತ್ವವೂ, ಕೆಲವಲ್ಲಿ ದಾಹ್ಯತ್ವವೂ, ಹೀಗೆಯೇ ಇತರ ಪರಿಣಾಮಗಳಿರುವದಾಗಿ ಪ್ರತ್ಯಕ್ಷ ಗೋಚರವು. ಯಾವಾಗ ಇವು ಇಲ್ಲವೆಂದು ಹೇಳಲ್ಪಟ್ಟಿತೋ ಅದರಿಂದಲೇ ಪ್ರತ್ಯಕ್ಷ ವೇದ್ಯತ್ವವೂ ಇಲ್ಲವು. ಹಾಗೆಯೇ ಅನುಮಾನದಿಂದ ಊಹಿಸಲೂ ಸಾಧ್ಯವಿಲ್ಲವು. ಇಂತಹ ಸಂದರ್ಭದಲ್ಲಿ ಶಾಸ್ತ್ರವೇ ಪ್ರಮಾಣವಾದುದರಿಂದ ಅವುಗಳಿಂದ ಈತನು ಅವ್ಯಕ್ತನೆಂದೂ, ಅಚಿಂತ್ಯನೆಂದೂ, ಅವಿಕಾರ್ಯನೆಂದೂ ತೋರಿಬರುವದರಿಂದ ಶಾಸ್ತ್ರಮುಖೇನ ಈ ಆತ್ಮನ ಸ್ವರೂಪ ಸ್ವಭಾವಗಳನ್ನು ತಿಳಿಯತಕ್ಕದ್ದೆಂದು ಉಪದೇಶಿಸುತ್ತಾರೆ. ಆದರೆ ಹಿಂದೆ ಕೆಲವು ಹೇತುಗಳ ಮೂಲಕ ಆತ್ಮಸ್ವರೂಪಾದಿಗಳು ಉಪಪಾದಿಸಲ್ಪಟ್ಟವಲ್ಲಾ ಎಂದರೆ ಆತ್ಮಾ ಅಣುವು, ಅತಿ ಸೂಕ್ಷ್ಮನು ಇತ್ಯಾದಿ ಶಾಸ್ತ್ರವನ್ನೇ ತಳಹದಿಯಾಗಿಟ್ಟುಕೊಂಡು ಮಾಡಿದ ತರ್ಕವಾದುದರಿಂದ ಅಂತಹ ತರ್ಕಗಳು ಸಾಧುವೆಂದು ಭಾವಿಸತಕ್ಕದ್ದು. "ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾ ವಿರೋಧಿನಾ । ಯಸ್ತರ್ಕೇಣಾನುಸಂಧತ್ತೇ ಸಧರ್ಮಂ ವೇದ ನೇತರಃ ॥" ಎಂಬ ಮಹರ್ಷ್ಯುಕ್ತಿಯು ಅನುಸಂಧೇಯವು. ಅಯಂ – ಈ ಆತ್ಮನು, ಅವ್ಯಕ್ತಃ - ವ್ಯಕ್ತವಸ್ತುಗಳಿಗಿಂತ ಭಿನ್ನನಾದುದರಿಂದ, ಛೇದನಾದಿಗಳನ್ನುಂಟುಮಾಡುವವ್ಯಕ್ತವಸ್ತುಗಳು ಯಾವ ಪ್ರಮಾಣಗಳಿಂದ ನಿಶ್ಚಯಿಸಲ್ಪಡುತ್ತವೋ ಹಾಗೆ ಅವುಗಳಿಂದೀತನು ನಿಶ್ಚಯಿಸಲ್ಪಡುವದಿಲ್ಲವೆಂಬ ಭಾವವು. ಆದರೆ ತೋರುವದು ಹೇಗೆಂದರೆ, ಅಹಂ, ಅಹಂ ಎಂದು ತೋರುತ್ತದೆ ಎಂಬುದು ತಾತ್ಪರ್ಯವು. ವ್ಯಕ್ತಾವ್ಯಕ್ತ ಶಬ್ದಗಳು ಮೋಕ್ಷಧರ್ಮದಲ್ಲಿ ನಿರೂಪಿತಗಳಾಗಿವೆ. ಹೇಗೆಂದರೆ,

ಇಂದ್ರಿಯೈರ್ಗೃಹ್ಯತೇ ಯದ್ಯತ್ತತ್ತ ದ್ವ್ಯಕ್ತ ಮಿತಿಸ್ಥಿತಿಃ ।
ಅವ್ಯಕ್ತಮಿತಿ ವಿಜ್ಞೇಯಂ ಲಿಙ್ಗಗ್ರಾಹ್ಯ ಮತೀಂದ್ರಿಯಂ ॥

೧೮

**ಭಾ.** **ಛೇದನಾದಿ ಯೋಗ್ಯಾನಿ ವಸ್ತೂನಿ ಯೈಃ ಪ್ರಮಾಣೈ ರ್ವ್ಯಜ್ಯನ್ತೇ, ತೈರಯಮಾತ್ಮಾ ನ ವ್ಯಜ್ಯತ ಇತ್ಯವ್ಯಕ್ತಃ ; ಅತಶ್ಛೇದ್ಯಾದಿ ವಿಸಜಾತೀಯಃ. ಅಚಿನ್ತ್ಯಶ್ಚ—ಸರ್ವ ವಸ್ತು ವಿಸಜಾತೀಯತ್ವೇನ ತತ್ತತ್ಸ್ವಭಾವ ಯುಕ್ತತಯಾ ಚಿನ್ತಯಿತುಮಪಿ ನಾರ್ಹಃ ; ಅತಶ್ಚಾ ವಿಕಾರ್ಯಃ—ವಿಕಾರಾನರ್ಹಃ ; ತಸ್ಮಾದುಕ್ತಲಕ್ಷಣಮೇನಮಾತ್ಮಾನಂ ವಿದಿತ್ವಾ ತತ್ಕೃತೇ ನಾನುಶೋಚಿತು ಮರ್ಹಸಿ ॥ ೨೫ ॥**

---

ಇಂದ್ರಿಯಗಳಿಂದ ಗ್ರಹಿಸಲ್ಪಡುವವಕ್ಕೆ ವ್ಯಕ್ತವೆಂದೂ, ಹಾಗೆ ಇಂದ್ರಿಯಗಳಿಂದ ಗ್ರಹಿಸಲ್ಪಡಪೆ ಅತೀಂದ್ರಿಯವಾಗಿ ಹೇತುಗಳಿಂದ ಗ್ರಹಿಸಲ್ಪಡುವಂಥಾದ್ದು ಅವ್ಯಕ್ತವೆಂದೂ ಹೇಳಿಸಿಕೊಳ್ಳುತ್ತದೆ. ಇದರಿಂದ ಪ್ರತ್ಯಕ್ಷಪ್ರಮಾಣದಿಂದ ಗ್ರಹಿಸಲು ಸಾಧ್ಯವಿಲ್ಲವು. **ಅಚಿನ್ತ್ಯಃ**— ಹೀಗೆ ಸರ್ವವಸ್ತುಗಳಿಗಿಂತಲೂ ಭಿನ್ನವಾಗಿರುವವರಿಂದ ಹೀಗೆಂದು ಊಹಿಸಲಸಾಧ್ಯನು ; ಎಂದರೆ ಇಂತವನೆಂದು ಅನುಮಾನ ಮೂಲಕನಾಗಿ ಸಾಧಿಸಲು ಸಾಧ್ಯನಲ್ಲವು. ಆದುದರಿಂದ ಇಂತಹ ಸಂದರ್ಭದಲ್ಲಿ ಶಾಸ್ತ್ರದಿಂದಲೇ ಗ್ರಹಿಸತಕ್ಕವನು; **ಅವಿಕಾರ್ಯಃ**—ವಿಕಾರ ಹೊಂದಲನರ್ಹನು ಎಂದು, **ಉಚ್ಯತೇ** - ಹೇಳಲ್ಪಟ್ಟಿರುತ್ತಾನೆ. **ತಸ್ಮಾತ್** - ಆ ಕಾರಣದಿಂದ, **ಏನಂ ವಿದಿತ್ವಾ** - ಈ ಆತ್ಮನು ಹೀಗೆಂದು ಶಾಸ್ತ್ರಮುಖೇನ ತಿಳಿದು, ತಮ್ಮ ಉಪದೇಶವೇ ಶಾಸ್ತ್ರವಾದುದರಿಂದ, ತಮ್ಮ ಉಪದೇಶ ಮೂಲಕ ತಿಳಿದವನಾಗಿ, **ನಾನುಶೋಚಿತು ಮರ್ಹಸಿ** – ಆತನನ್ನು ಕುರಿತು ದುಃಖಿಸಲು ಕಾರಣವಿಲ್ಲವು. ॥ ೨೫ ॥

**ಭಾಷ್ಯಾರ್ಥವು** :—ಛೇದನಾದಿ ಕರ್ಮಗಳಿಗೆ ಅರ್ಹವಾಗಿ ಪ್ರತ್ಯಕ್ಷದಲ್ಲಿ ಇಂದ್ರಿಯಗಳ ಮೂಲಕ ತಿಳಿಯುವ ವಸ್ತುಗಳ ಹಾಗೆ ಆತ್ಮಾವನ್ನು ತಿಳಿಯಲು ಸಾಧ್ಯವಿಲ್ಲವಾದುದರಿಂದ ಆತನು ವ್ಯಕ್ತನಲ್ಲವು, ಅವ್ಯಕ್ತನೆಂದು ಹೇಳಿ ಆ ಕಾರಣದಿಂದ ಪ್ರತ್ಯಕ್ಷ ಪ್ರಮಾಣದಿಂದ ಗೋಚರವಾದ ಆ ಛೇದ್ಯಾದಿ ಯೋಗ್ಯವಸ್ತುಗಳಿಗಿಂತಲೂ ವಿಲಕ್ಷಣನು ಎಂದು ಹೇಳುತ್ತಾರೆ. **ಛೇದನಾದಿ ಯೋಗ್ಯಾನಿ ವಸ್ತೂನಿ** - ಛೇದನಾದಿಗಳಿಗೆ ಯೋಗ್ಯಗಳಾದ ವಸ್ತುಗಳು, **ಯೈಃ ಪ್ರಮಾಣೈಃ** – ಯಾವ ಪ್ರಮಾಣಗಳಿಂದ, **ವ್ಯಜ್ಯನ್ತೇ**-ವ್ಯಕ್ತಪಡುತ್ತವೆಯೋ, **ತೈಃ**-ಆ ಪ್ರತ್ಯಕ್ಷಪ್ರಮಾಣಗಳಿಂದ, **ಅಯಮಾತ್ಮಾ**-ಈ ಆತ್ಮನು, **ನವ್ಯಜ್ಯತೇ**-ವ್ಯಕ್ತಪಡುವದಿಲ್ಲವು; **ಇತಿ**-ಆ ಕಾರಣದಿಂದ, **ಅವ್ಯಕ್ತಃ**- ಈ ಆತ್ಮನು ಅವ್ಯಕ್ತನೆಂದು ಹೇಳಿಸಿಕೊಳ್ಳುವನು; ಎಂದರೆ ನಮ್ಮ ಇಂದ್ರಿಯಗಳಮೂಲಕ ಗ್ರಾಹ್ಯನಲ್ಲವು. ಆದುದರಿಂದ ಈ ಆತ್ಮನು **ಛೇದ್ಯಾದಿ ವಿಸಜಾತೀಯಃ** - ಛೇದನ ಮೊದಲಾದುವನ್ನು ಹೊಂದಲು ಯೋಗ್ಯವಾದ ವಸ್ತುಗಳಿಗಿಂತ ವಿಲಕ್ಷಣನು ಎಂದು ಹೇಳಲ್ಪಟ್ಟಿತು. ಮತ್ತು ಆತನು ಅಚಿಂತ್ಯನು ಎಂದರೆ, **ಸರ್ವವಸ್ತು ವಿಜಾತೀಯತ್ವೇನ**-ಅಂತಹ ಛೇದ್ಯಾದಿ ಸರ್ವವಸ್ತುಗಳಿಗಿಂತಲೂ ಬೇರೆಯಾಗಿ ವಿಲಕ್ಷಣವಾಗಿರುವದರಿಂದ,**ತತ್ತತ್ಸ್ವಭಾವ ಯುಕ್ತತಯಾ**-ಅವವುಗಳ ಯಾವ ಸ್ವಭಾವದಿಂದಲೂ, **ಚಿನ್ತಯಿತುಮಪಿ** - ತಿಳಿಯಲೂ ಕೂಡ, **ನಾರ್ಹಃ**-ಯೋಗ್ಯನಲ್ಲವು. ಅಂತಹ ಯಾವ ಛೇದ್ಯ ಸ್ವಭಾವಗಳ ಮೂಲಕವಾಗಿಯೂ ಇಂತವನೆಂದು ಚಿಂತಿಸಲನರ್ಹನಾದುದರಿಂದ ಅಚಿಂತ್ಯನೆಂದು ಹೇಳಿಸಿಕೊಳ್ಳುವನು, **ಅತಶ್ಚಾ ವಿಕಾರ್ಯಃ** - ಆ ಕಾರಣದಿಂದಲೇ ಹಿಂದೆಯೂ ಮುಂದಕ್ಕೂ ಕೂಡ, ಅವಿಕಾರ್ಯನು ಎಂದರೆ, **ವಿಕಾರಾನರ್ಹಃ** - ಯಾವ ವಿಕಾರಗಳಿಗೂ ಅನರ್ಹನು, ವಿಕಾರ ಶೂನ್ಯನು, **ತಸ್ಮಾತ್** - ಆ ಕಾರಣಗಳಿಂದ, **ಉಕ್ತ ಲಕ್ಷಣಮೇನ ಮಾತ್ಮಾನಂ** - ಮೇಲೆ ಹೇಳಿದ ಲಕ್ಷಣಗಳನ್ನುಳ್ಳವನೆಂದು ಈ ಆತ್ಮನನ್ನು, **ವಿದಿತ್ವಾ** - ಶಾಸ್ತ್ರಮುಖದಿಂದಲೂ, ನನ್ನ ಉಪದೇಶದಿಂದಲೂ ತಿಳಿದವನಾಗಿ, **ತತ್ಕೃತೇ** - ಅವನಿಗಾಗಿ, ಎಂದರೆ ಆತ್ಮನ ವಿಷಯದಲ್ಲಿ, **ನಾನುಶೋಚಿತು ಮರ್ಹಸಿ** - ನೀನು ಶೋಕಿಸಲು ಯೋಗ್ಯನಲ್ಲವು. ॥ ೨೫ ॥

**ಮೂ. ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಂ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತು ಮರ್ಹಸಿ ॥ ೨೬.**

**ಮೂಲಕ್ಕೆ ಅರ್ಥವು** :—ಹೀಗೆ ಭೇದ್ಯ ವಸ್ತುಗಳಿಗಿಂತ ಆತ್ಮಾ ವಿಲಕ್ಷಣನೆಂದು ಉಪದೇಶಿಸಿ, ದೇಹವಿಯೋಗದಿಂದ ಆತ್ಮನಿಗೇನೂ ವಿಕಾರಗಳಾಗಲಿ ನಾಶವಾಗಲಿ ಪ್ರಾಪ್ತವಾಗುವದಿಲ್ಲವೆಂದೂ ದೇಹಾದ್ವಿಲಕ್ಷಣನೆಂದೂ ಉಪದೇಶಿಸಿದರು. ಆದರೆ ಕೆಲವು ಅಜ್ಞರು ಹಾಗೆ ಭಾವಿಸದೆ, ದೇಹವೇ ಆತ್ಮಾವೆಂದು ಭಾವಿಸಿ, ದೇಹವು ನಷ್ಟವಾದರೆ ಆತ್ಮನೂ ನಷ್ಟನಾಗುವನೆಂದು ಚಾರ್ವಾಕಾದಿಗಳಂತೆ ಭಾವಿಸುವರು. ಚಾರ್ವಾಕಾಭಿಪ್ರಾಯ ಪ್ರಕಾರವಾಗಿ ನಾಲ್ಕುಭೂತಗಳ ಸಮ್ಮೇಳನದಿಂದ ಮದ್ಯದಲ್ಲಿ ಮದಶಕ್ತಿಯು ಉತ್ಪನ್ನವಾದ ಹಾಗೆ, ಚೈತನ್ಯವು ಉತ್ಪನ್ನವಾಗುತ್ತದೆ, ಕೆಲವು ಕಾಲಾನಂತರ ಚೈತನ್ಯವು ನಾಶವಾಗುತ್ತದೆ, ಅದೇ ಮರಣವೆಂದು ಹೇಳುವರು. ಅಂತಹ ನಾಸ್ತಿಕಾಭಿಪ್ರಾಯವುಳ್ಳವರಿಗೂ ಕೂಡ ಒಂದು ಯುಕ್ತಿಯು ಮೂಲಕ ಮೂರು ಶ್ಲೋಕಗಳಿಂದ ಸಮಾಧಾನವನ್ನು ಹೇಳುತ್ತಾರೆ. ಇಷ್ಟು ದೂರ ಶಾಸ್ತ್ರವನ್ನು ಮೂಲ ಮಾಡಿಕೊಂಡು ಉಪದೇಶಿಸಿದ್ದಾಯಿತು. ಶಾಸ್ತ್ರವನ್ನು ಬಿಟ್ಟು ಯುಕ್ತಿವಾದದ ಮೂಲಕ ವಿಚಾರಮಾಡಿದರೂ, ಶೋಕಕ್ಕೆ ಕಾರಣವಿಲ್ಲವೆನ್ನುತ್ತಾರೆ. **ಅಥ ಚ** - ಅನಂತರ ಇನ್ನೊಂದು ರೀತಿಯಲ್ಲಾಗಲಿ, **ಏನಂ** - ಈ ಆತ್ಮನನ್ನು, **ನಿತ್ಯಜಾತಂ** - ನಿಯತವಾಗಿ ಉತ್ಪತ್ತಿಯುಳ್ಳ, ಮತ್ತು, **ನಿತ್ಯಂಮೃತಂ ವಾ** - ನಿಯತವಾಗಿ ಮರಣವನ್ನೂ ಉಳ್ಳ ದೇಹವೇ ಎಂಬದಾಗಿ, ಇಲ್ಲಿ ವಾ ಎಂಬುದು ಸಮುಚ್ಚಯಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ, ಜನ್ಮ ಮರಣವೆರಡನ್ನೂ ಉಳ್ಳದ್ದಾಗಿ, ಇಲ್ಲಿ ನಿತ್ಯ ಶಬ್ದವು ನಿತ್ಯವಾದ ಎಂಬರ್ಥವಲ್ಲವು, ಆಗ ಜನ್ಮ ಮರಣಗಳು ಕೂಡುವದಿಲ್ಲವು. ಆದುದರಿಂದ "ನಿತ್ಯಂ" ಎಂಬುದು ಅವ್ಯಯವು, ನಿಯತವಾದುದೆಂಬರ್ಥವು. **ಮನುಷೇ** - ಒಂದುವೇಳೆ ತಿಳಿಯುತ್ತೀಯೋ, **ತಥಾ**.—ಹಾಗೆ ಅಭಿಪ್ರಾಯವಾದರೂ ಕೂಡ, ಎಂದರೆ ಅದು ಸರಿಯಾದಭಿಪ್ರಾಯವೇ ಅಲ್ಲವು, ಆದರೂ ಹಾಗೆ ನೀನು ಒಂದುವೇಳೆ ಭಾವಿಸುವ ಪಕ್ಷದಲ್ಲೂ ಕೂಡ, ಹೇ **ಮಹಾಬಾಹೋ** - ಓ ಬಾಹು ಪರಾಕ್ರಮವನ್ನು ಹೆಚ್ಚಾಗಿ ಉಳ್ಳ ಶೂರನೇ, **ತ್ವಂ** - ನಿನ್ನಂತವನು, **ನೈವಂ ಶೋಚಿತು ಮರ್ಹಸಿ** - ಹೀಗೆ ದುಃಖಿಸಲು ಯೋಗ್ಯನಲ್ಲವು. ವೀರಕ್ಷತ್ರಿಯನಾಗಿ ಜನಿಸಿ ಮಹಾಬಾಹು ಪರಾಕ್ರಮವುಳ್ಳವನಾಗಿರುವವನಿಗೆ ಈ ದೈನ್ಯವೂ ಈ ಶೋಕವೂ ಸರ್ವಾತ್ಮನಾ ಸರಿಯಲ್ಲವೆಂಬ ದನ್ನು "ಮಹಾಬಾಹೋ" ಎಂಬ ಸಂಬೋಧನೆಯಿಂದ ಸೂಚಿಸುತ್ತಾರೆ.

**ಭಾಷ್ಯಾರ್ಥವು** :—ಆತ್ಮನು ದೇಹಾತಿರಿಕ್ತನೆಂಬುದನ್ನು ಅಙ್ಗೀಕರಿಸಿ ಶೋಕಕ್ಕೆ ಕಾರಣವಿಲ್ಲವೆಂದು ಉಪದೇಶಿಸಿದರು. ಈಗ ನಾಸ್ತಿಕನ ದೃಷ್ಟಿಯಿಂದ ದೇಹವೇ ಆತ್ಮಾವೆಂದು ಭಾವಿಸಿದರೂ, ದೇಹಕ್ಕೆ ಉತ್ಪತ್ತಿ ಮರಣಗಳು ಸಿದ್ಧವಾದುದರಿಂದಲೂ ಶೋಕಕ್ಕೆ ಕಾರಣವಿಲ್ಲವೆನ್ನುತ್ತಾರೆ. ಮುಂದಿನ ಮೂರು ಶ್ಲೋಕಗಳಿಂದಲೂ ಈ ಯುಕ್ತಿವಾದವೇ ಹೇಳಲ್ಪಡುತ್ತದೆ. "**ಅಥ**" ಎಂಬ ಶಬ್ದವು ಪಕ್ಷಾಂತರ ವಾದವನ್ನು ಸೂಚಿಸುತ್ತದೆಂದು ಭಾವಿಸಬಹುದು. ಅಥವಾ ಪ್ರಶ್ನಾರ್ಥವನ್ನಾಗಲಿ ಅಙ್ಗೀಕಾರಾರ್ಥವನ್ನಾಗಲಿ ಬೋಧಿಸುತ್ತದೆಂದೂ ಭಾವಿಸಬಹುದು. **ಅಥ** - ಒಂದುವೇಳೆ, **ಏನಮಾತ್ಮಾನಂ** - ಈ ಆತ್ಮನನ್ನು, **ನಿತ್ಯಜಾತಂ ನಿತ್ಯಮೃತಂ ವಾ** – ನಿಯತವಾಗಿ ಹುಟ್ಟುವದು ಸಾಯುವದು ಎಂಬದಾಗಿ ಎಂದರೆ ಹಾಗೆ ಹುಟ್ಟಿ ಸಾಯುವದೂ ಸಹ, ದೇಹಸ್ವಭಾವವೆಂದು ನಾವು ಕಂಡಿರುವದರಿಂದ, ಇಲ್ಲಿ "ವಾ" ಎಂಬುದು ಈ ಎರಡು ಅವಸ್ಥೆಗಳ ಸಮುಚ್ಚಯವನ್ನು ಬೋಧಿಸುತ್ತದೆ. ಇಲ್ಲಿ "ನಿತ್ಯಂ ವಾ ಮೃತಂ" ಎಂದು ಪ್ರತ್ಯೇಕಿಸಿ "ನಿತ್ಯಂ

**ಭಾ.** ಅಥನಿತ್ಯಜಾತಂ ನಿತ್ಯಮೃತಂ ದೇಹಮೇವೈನ ಮಾತ್ಮಾನಂ ಮನುಷೇ, ನದೇಹಾತಿರಿಕ್ತ ಮುಕ್ತಲಕ್ಷಣಂ, ತಥಾಪ್ಯೇವ ಮತಿಮಾತ್ರಂ ನಶೋಚಿತು ಮರ್ಹಸಿ ; ಪರಿಣಾಮ ಸ್ವಭಾವಸ್ಯ ದೇಹಸ್ಯೋತ್ಪತ್ತಿ ವಿನಾಶಯೋಃ ರವರ್ಜನೀಯತ್ವಾತ್ ॥ ೨೬ ॥

---

ಮೃತಂ" ಶಬ್ದಗಳನ್ನು ಹೇಳಿರುವದು, "ನಿತ್ಯಜಾತಂ" ಎಂಬಲ್ಲೂ "ನಿತ್ಯಂ ಜಾತಂ" ಎಂದು ಅರ್ಥ ಮಾಡತಕ್ಕದ್ದೆಂದು ಸೂಚಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು; ಆದುದರಿಂದ ಈ "ನಿತ್ಯಜಾತಂ" ಎಂಬುದು ಆತ್ಮನಿತ್ಯತ್ವವನ್ನು ಬೋಧಿಸುವದಿಲ್ಲವು. ಹೀಗೆ ಅನ್ವಯಿಸುವದೇ ಯುಕ್ತವೆಂದು ತೋರಿಸುವದಕ್ಕಾಗಿಯೇ, "ನಿತ್ಯ ಜಾತಂ" ಎಂಬುದರ ಹಾಗೆಯೇ "ನಿತ್ಯ ಮೃತಂ" ಎಂಬ ವ್ಯಾಖ್ಯಾನವು. ಹೀಗೆ ಜನನ ಮರಣಗಳುಳ್ಳ ದೇಹಮೇವ - ದೇಹವೆಂದೇ, ಮೂಲದ "ಚ" ಶಬ್ದವು ಅವಧಾರಣಾರ್ಥವುಳ್ಳದ್ದು ಎಂದು ಭಾವಿಸಿ "ದೇಹಮೇವ" ಎಂದು ಭಾಷ್ಯವನ್ನು ಬರೆದಿರುತ್ತಾರೆ. ಹಾಗೆ ಅವಧಾರಣಾರ್ಥದಿಂದ ಉಂಟಾಗುವ ಭಾವವೇನೆಂಬುದನ್ನು "ನದೇಹಾತಿರಿಕ್ತಂ ಉಕ್ತಲಕ್ಷಣಂ" ಎಂಬುದರಿಂದ ತೋರಿಸಿರುತ್ತಾರೆ. ಏನಂ ಆತ್ಮಾನಂ ಮನುಷೇ - ಈ ಆತ್ಮನು ದೇಹವೇ ಎಂದು ಏನಾದರೂ ತಿಳಿಯುವೆಯೋ, ಮೂಲದಲ್ಲಿ ದೇಹ ಶಬ್ದವಿಲ್ಲದಿರುವಾಗ ಆತ್ಮನನ್ನು ದೇಹವೆಂದೇನಾದರೂ ತಿಳಿದಿರುವೆಯೋ ಎಂದು ಹೇಗೆ ಅರ್ಥ ಮಾಡಿದಿರಿ ಎಂಬಾಕ್ಷೇಪ ಬಂದೀತೆಂದು ಭಾವಿಸಿ ಹೇಳುತ್ತಾರೆ :—**ನ ದೇಹಾತಿ ರಿಕ್ತ ಮುಕ್ತ ಲಕ್ಷಣಂ** - ಈಗ ನಿಯತವಾಗಿ ಹುಟ್ಟುವದು ಸಾಯುವದು ಎಂದು ಹೇಳಲ್ಪಟ್ಟ ಲಕ್ಷಣವುಳ್ಳದುದು ದೇಹವಲ್ಲದೆ ಮತ್ತ್ಯಾವುದೂ ಇರುವದಿಲ್ಲವು. **ತಥಾಪಿ** - ಹಾಗೆ ನೀನು ಭಾವಿಸಿದರೂ ಕೂಡ, **ಏವಂ** - ಈ ಪರಿಯಾಗಿ ಎಂದರೆ ಈಗ ನೀನು ಶೋಚಿಸುತ್ತಿರುವ ಹಾಗೆ, **ಅತಿಮಾತ್ರಂ** - ಹೆಚ್ಚಾಗಿ, **ನಶೋಚಿತು ಮರ್ಹಸಿ** - ನೀನು ದುಃಖಿಸಲು ಯೋಗ್ಯನಲ್ಲವು ; ಏಕೆಂದರೆ ಪರಿಣಾಮವನ್ನು ಹೊಂದುವ ಸ್ವಭಾವವುಳ್ಳ, **ದೇಹಸ್ಯ** - ದೇಹಕ್ಕೆ, ಉತ್ಪತ್ತಿ ವಿನಾಶಗಳು ತಪ್ಪಿದ್ದಲ್ಲವಾದುದರಿಂದ ಎಂಬ ಭಾವವು. ಈ ಅರ್ಥವು ಶ್ಲೋಕದಲ್ಲಿಲ್ಲವಲ್ಲಾ ಅದು ಹೇಗೆ ವ್ಯಾಖ್ಯಾನ ಮಾಡಿದರೆಂದರೆ, ಯಾವಾಗ ನಿತ್ಯಜಾತವಾದುದು ನಿತ್ಯಮೃತವಾದುದೋ, ಆಗ ಪರಿಣಾಮ ಉಂಟೆಂಬುದು ದೇಹಕ್ಕೆಸಿದ್ಧವು. ಅಂತಹ ಉತ್ಪತ್ತಿ ವಿನಾಶಗಳು ಅಂತಹ ಪರಿಣಾಮಿ ವಸ್ತುವಿಗೆ ತಪ್ಪಿದ್ದಲ್ಲವೆಂಬ ಭಾವವು. ಅಥವಾ ಪರಿಣಾಮಗಳು ದೇಹಕ್ಕೆ ಉಂಟೆಂದು ಮುಂದಿನ ಶ್ಲೋಕಗಳಲ್ಲಿ ಹೇಳುವದನ್ನು ಇಲ್ಲಿ ಅವತಾರಿಕೆಯ ರೂಪದಲ್ಲಿ ಸ್ವಲ್ಪಮಟ್ಟಿಗೆ ಸೂಚಿಸಿದರೆಂದಾಗಲಿ ಭಾವಿಸಬಹುದು. ಹಿಂದೆ ಆತ್ಮನಿಗೆ ನಾಶವಿಲ್ಲವಾದುದರಿಂದ ಶೋಕಕ್ಕೆ ಕಾರಣವಿಲ್ಲವೆಂದು ಹೇಳಿದರು. ಈ ಶ್ಲೋಕದಲ್ಲಾದರೋ ಆತ್ಮಾ ದೇಹವೇ ಆಗಿ ವಿನಾಶ ಉಳ್ಳದ್ದಾದರೆ ಆಗ ನಾಶ ತಪ್ಪಿದ್ದಲ್ಲವಾದುದರಿಂದಲೂ ಶೋಕಕ್ಕೆ ಕಾರಣವಿಲ್ಲವೆಂದು ಹೇಳಿದರು. ಅಥವಾ ಇನ್ನೊಂದು ವಿಧವಾಗಿಯೂ ಭಾವಿಸಬಹುದು. ದೇಹಕ್ಕಿಂತ ಆತ್ಮಾ ಬೇರೆ ಎಂದರೆ ದೇಹವಿಯೋಗದಿಂದ ಸ್ವರ್ಗಾದಿ ಪ್ರಾಪ್ತಿಯುಂಟಾಗುತ್ತದೆಂದು ಹೇಳಲ್ಪಟ್ಟಿತು. ನಾಸ್ತಿಕನಾಗಿ ಪರಲೋಕಾದಿಗಳಲ್ಲಿ ನಂಬಿಕೆಯಿಲ್ಲದಿದ್ದರೆ ದುಃಖರೂಪವಾದ ದೇಹ ಹೋದುದರಿಂದ ಶೋಕಕ್ಕೆ ಕಾರಣವಿಲ್ಲವೆಂದಾಗಲಿ ಭಾವಿಸಬಹುದು. ಚಾರ್ವಾಕನಿಗೆ ಪ್ರತ್ಯಕ್ಷವೇ ಪ್ರಮಾಣವಾದುದರಿಂದ ಕಣ್ಣಿಗೆ ಕಾಣದಿರುವ ಆತ್ಮಾ, ಪರಮಾತ್ಮಾ, ದಿವ್ಯವೈಕುಂಠ, ಮುಂತಾದವು ಯಾವುದನ್ನೂ ಆತನು ಅಙ್ಗೀಕರಿಸುವದಿಲ್ಲವು. ದೇಹಾತಿರಿಕ್ತ ಒಬ್ಬ ಆತ್ಮನುಂಟೆಂದು ಒಪ್ಪುವದಿಲ್ಲವು. ಹಾಗಾದರೆ ದೇಹದಲ್ಲಿ ಒಂದು ಕಾಲದಲ್ಲಿ ಚೈತನ್ಯವು ಇರುವದಕ್ಕೂ ಇನ್ನೊಂದು ಕಾಲದಲ್ಲಿ ಇಲ್ಲದಿರುವುದಕ್ಕೂ ಕಾರಣ

ಮೂ. ಜಾತಸ್ಯ ಹಿ ಧ್ರುವೋ ಮೃತ್ಯು ರ್ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ ನತ್ವಂ ಶೋಚಿತು ಮರ್ಹಸಿ ೨೭.

ಭಾ. ಉತ್ಪನ್ನಸ್ಯ ವಿನಾಶೋ ಧ್ರುವಃ—ಅವರ್ಜನೀಯ ಉಪಲಭ್ಯತೇ ; ತಥಾ ವಿನಷ್ಟಸ್ಯಾಪಿ ಜನ್ಮ ಅವರ್ಜನೀಯಂ. ಕಥ ಮಿದ ಮುಪಪದ್ಯತೇ ವಿನಷ್ಟಸ್ಯೈವ ಉತ್ಪತ್ತಿರಿತಿ, ಸತ

ವೇನೆಂದರೆ ಮದ್ಯದಲ್ಲಿ ಮದಶಕ್ತಿಯುಂಟಾಗುವಹಾಗೆ, ಪ್ರಕೃತಿಗಳಲ್ಲಿ ಭೂತಗಳ ಸಮ್ಮೇಳನ ದಿಂದಲೇ ಉತ್ಪನ್ನವಾಗಿ ಒಂದುವೇಳೆಯಲ್ಲಿ ನಶಿಸಿಹೋಗುತ್ತದೆಂದು ಹೇಳುವರು. ಆದುದರಿಂದ ದೇಹಮಾತ್ರವೇ ಇದ್ದು ಪರಿಣಾಮ ಹೊಂದಿ ಮರಣ ಉಂಟಾಗುತ್ತದೆಂದು ಹೇಳಿದರೂ, ಆಗಲೂ ಶೋಕಕ್ಕೆ ಕಾರಣವಿಲ್ಲವೆಂಬರ್ಥವು.

**ಮೂಲಕ್ಕೆ ಅರ್ಥವು** :—ಹಿಂದಿನ ಶ್ಲೋಕದಲ್ಲಿ ಶಾಸ್ತ್ರಪದ್ಧತಿಯನ್ನು ಬಿಟ್ಟು, ನಾಸ್ತಿಕನ ಯುಕ್ತಿವಾದದ ಮೂಲಕ ಹೇಳಿದುದನ್ನೇ ಚೆನ್ನಾಗಿ ವ್ಯಕ್ತಪಡಿಸಿ ಹೇಳುತ್ತಾರೆ. **ಜಾತಸ್ಯ** – ಉತ್ಪನ್ನವಾದುದಕ್ಕೆ, **ಮೃತ್ಯುಃ** - ಆ ಅವಸ್ಥಾನಾಶವು, **ಧ್ರುವೋಹಿ** - ನಿಶ್ಚಯವಷ್ಟೇ ಎಂದರೆ ತಪ್ಪಿದ್ದಲ್ಲವು ಎಂಬ ಭಾವವು, ಇದನ್ನು ಎಲ್ಲರೂ ಒಪ್ಪುತ್ತಾರಾದುದರಿಂದ "**ಹಿ**" ಶಬ್ದವು. ಹಾಗೆಯೇ, **ಮೃತಸ್ಯ ಚ** - ನಾಶವಾದುದಕ್ಕೇನೇ, **ಜನ್ಮ** - ಬೇರೇ ಅವಸ್ಥೆಯ ಉತ್ಪತ್ತಿಯು, **ಧ್ರುವಂ** - ನಿಶ್ಚಯವು. ಎಂದರೆ ಉತ್ಪತ್ತಿ ವಿನಾಶಗಳೆರಡೂ ಧರ್ಮಿಯ ಅವಸ್ಥಾಭೇದಗಳೆಂಬ ಭಾವವು. ಪರಿಣಾಮದ್ರವ್ಯವಾದುದರಿಂದ ಹಿಂದಿನ ಅವಸ್ಥೆಯ ನಾಶವೂ ಮುಂದಿನ ಅವಸ್ಥೆಯ ಉತ್ಪತ್ತಿಯೂ ಹೀಗೆ ಪರಂಪರೆಯಾಗಿ ನಡೆಯುತ್ತವೆ ಎಂಬ ಭಾವವು. **ತಸ್ಮಾತ್** - ಹೀಗೆ ಅವಸ್ಥಾ ಭೇದಗಳು ತಪ್ಪಿದ್ದಲ್ಲವಾದುದರಿಂದ, **ಅಪರಿಹಾರ್ಯೇ ಅರ್ಥೇ** - ತಪ್ಪಿಸಲಾಗದ ವಿಷಯ ದಲ್ಲಿ, **ತ್ವಂ** - ನಿನ್ನಂತಹ ವಿವೇಕಿಯು, **ಶೋಚಿತುಂ ನಾರ್ಹಸಿ** - ದುಃಖಿಸುವದು ಸರಿಯಲ್ಲವು. ಹಾಗಾದರೆ ಪರಿಹಾರವಿರುವ ಸಂದರ್ಭದಲ್ಲಿ ಶೋಕವು ಯುಕ್ತವೋ ಎಂದರೆ ಯುಕ್ತವು. ಏಕೆಂದರೆ ಹೀಗೆ ಉಂಟಾದ ಪರಿತಾಪದಿಂದ ಸರ್ವಪ್ರಯತ್ನ ಮಾಡಿ ಆ ಶೋಕನಿಮಿತ್ತದಿಂದ ತಪ್ಪಿಸಿಕೊಳ್ಳಬಹುದು.

**ಭಾಷ್ಯಾರ್ಥವು** :—ಸಾಧಾರಣವಾಗಿ ಲೋಕವಾಡಿಕೆಯ ವ್ಯವಹಾರಗಳಾದ ಜನ್ಮ ಮರಣ ನಾಶ ಮೊದಲಾದ ಶಬ್ದಗಳ ಸರಿಯಾದ ಅರ್ಥವು ಅನೇಕರಿಗೆ ತಿಳಿದಿಲ್ಲವೆಂಬ ಭಾವನೆಯಿಂದ ಈ ಶ್ಲೋಕಕ್ಕೆ ವ್ಯಾಖ್ಯಾನವನ್ನು ಬರೆಯುವ ವ್ಯಾಜದಿಂದ ಶಾಸ್ತ್ರಗಳಲ್ಲಿ ಬೋಧಿಸಲ್ಪಟ್ಟ ಅವುಗಳ ಸರಿಯಾದ ಅರ್ಥಗಳನ್ನು ಉಪದೇಶಿಸುತ್ತಾರೆ. ಹಿಂದಿನ ಶ್ಲೋಕದಲ್ಲಿ ಜನ್ಮ ಮರಣಗಳು ನಿಯತ ವಾಗಿರುವಾಗ ಶೋಕಕ್ಕೆ ಕಾರಣವಿಲ್ಲವೆಂದು ಹೇಳಿದರು. ಈ ಶ್ಲೋಕದಲ್ಲಿ ಆ ಜನ್ಮ ಮರಣಗಳು ಹಾಗೆ ನಿಯತವಾಗಿದ್ದರೂ, ಅದಕ್ಕೇನಾದರೂ ಪರಿಹಾರವುಂಟೋ ಎಂದರೆ ಪರಿಹಾರವೇ ಇಲ್ಲವು ; ಹೀಗಿರುವಾಗ ಶೋಕವು ಸರಿಯಲ್ಲವಷ್ಟೇ ಎಂದು ಉಪದೇಶಿಸುತ್ತಾರೆ. **ಉತ್ಪನ್ನಸ್ಯ ವಿನಾಶಃ** – ಉತ್ಪತ್ತಿ ಹೊಂದಿದುದಕ್ಕೇನೇ ವಿನಾಶವೆಂಬುದು, **ಧ್ರುವಃ–ಅವರ್ಜನೀಯ ಉಪಲಭ್ಯತೇ** – ಧ್ರುವ ಎಂದರೆ ತಪ್ಪಿದ್ದಲ್ಲವೆಂಬ ಭಾವವು "ಹಿ" ಶಬ್ದದಿಂದ ತೋರಿಬರುತ್ತದೆ. ಅಥವಾ "**ಹಿ**" ಶಬ್ದವು ಪ್ರಮಾಣಬಲವನ್ನು ಸೂಚಿಸುತ್ತದೆಂದು ಭಾವಿಸಬಹುದು. **ತಥಾ** - ಹಾಗೆಯೇ, **ವಿನಷ್ಟಸ್ಯಾಪಿ** - ನಷ್ಟಾವಸ್ಥೆಯನ್ನು ಹೊಂದಿದುದಕ್ಕೂ ಕೂಡ, **ಜನ್ಮ** - ಉತ್ಪತ್ತಿಯು, **ಅವರ್ಜ ನೀಯಂ** - ತಪ್ಪಿದ್ದಲ್ಲವು, ನಷ್ಟಾವಸ್ಥೆಯನ್ನು ಹೊಂದಿದುದೇ ಪುನಃ ಉತ್ಪತ್ತಿಯನ್ನು ಹೊಂದುತ್ತ

**ಭಾ. ಏವೋ ತ್ಪತ್ತ್ಯುಪಲಬ್ಧೇಃ, ಅಸತಶ್ಚಾನುಪಲಬ್ಧೇಃ ; ಉತ್ಪತ್ತಿ ವಿನಾಶಾದಯ ಸ್ಸತೋ ದ್ರವ್ಯಸ್ಯಾವಸ್ಥಾ ವಿಶೇಷಾಃ. ತನ್ತು ಪ್ರಭೃತೀನಿಹಿ ದ್ರವ್ಯಾಣಿ ಸನ್ತ್ಯೇವ ರಚನಾವಿಶೇಷ ಯುಕ್ತಾನಿ ಪಟಾದೀನ್ಯುಚ್ಯನ್ತೇ. ಅಸತ್ಕಾರ್ಯವಾದಿನಾಪ್ಯೇ ತಾವದೇವೋಪಲಭ್ಯತೇ. ನಹಿ ತತ್ರ ತನ್ತು ಸಂಸ್ಥಾನ ವಿಶೇಷಾತಿರೀಕ್ತೇಣ ದ್ರವ್ಯಾನ್ತರಂ ಪ್ರತೀಯತೇ.**

---

ದೆಂಬ ಭಾವವು. ಮೊದಲು ಹೇಳಿದುದನ್ನೇನೋ ಒಪ್ಪಬಹುದು. ಎರಡನೆಯದನ್ನು ಹೇಗೆ ನಂಬಲು ಸಾಧ್ಯವೆಂದು ಆಶಙ್ಕಿಸಿ **"ಸತ ಏವ"** ಎಂದು ಆರಂಭಿಸಿ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. **ವಿನಷ್ಟಸ್ಯ ಉತ್ಪತ್ತಿರಿತಿ** - ನಷ್ಟ ಹೊಂದಿದುದು ಉತ್ಪತ್ತಿಯಾಗುತ್ತದೆಂಬ, **ಇದಂ** - ಈ ಅಭಿಪ್ರಾಯವು, **ಕಥಮುಪಪದ್ಯತೇ** - ಹೇಗೆ ಸಮಂಜಸವಾದುದಾಗುತ್ತದೆ? ಎಂದರೆ ಸಮಾಧಾನ ಹೇಳುತ್ತಾರೆ. **ಸತ ಏವೋತ್ಪತ್ತ್ಯುಪಲಬ್ಧೇಃ** - ಇರುವ ವಸ್ತುವಿಗೇನೆ ಉತ್ಪತ್ತಿಯನ್ನು ಕಂಡಿರುವದರಿಂದಲೂ, **ಅಸತಶ್ಚ** - ಇಲ್ಲದಿರುವ ವಸ್ತುವಿಗೆ ಉತ್ಪತ್ತಿಯನ್ನು ಕಾಣದಿರುವದರಿಂದಲೂ, ಸಮಂಜಸವೆಂಬ ಭಾವವು. ಲೋಕದಲ್ಲಿ ಅಶಿಕ್ಷಿತನಿಗೆ ತೋರುವದು ಹೇಗೆಂದರೆ, ಮೊದಲು ಇಲ್ಲದೇ ಇರುವ ವಸ್ತುವು ಹೊಸದಾಗಿ ಉತ್ಪತ್ತಿಯುಂಟಾದಹಾಗಲ್ಲವೇ ತೋರುವುದು ? ಮೊದಲು ಘಟವಿರಲಿಲ್ಲ, ಈಗ ಘಟ ಉಂಟಾಗಿದೆ, ಹೀಗಲ್ಲವೇ ತೋರುವದು ? ಹಾಗೆಯೇ ನೈಯಾಯಿಕನು ಇರುವ ವಸ್ತುವಿಗೇನೇ ಉತ್ಪತ್ತಿ ವಿನಾಶಗಳನ್ನು ಹೇಳುವದಿಲ್ಲವು. ಘಟವು ಪೂರ್ವವಿಲ್ಲದುದು ಉತ್ಪನ್ನವಾಗುತ್ತದೆಂದು ಹೇಳುವನು. ಪೂರ್ವವೇ ಮೃತ್ತಿನಲ್ಲೇ ಘಟವಿದ್ದ ಪಕ್ಷದಲ್ಲಿ ಅದಕ್ಕೆ ಮೃತ್ತೆಂದೂ, ಇದಕ್ಕೆ ಘಟವೆಂದೂ ವ್ಯವಹಾರ ಏಕೆ ಎಂದು ಕೇಳುತ್ತಾನೆ. ಹೀಗೆ ಹತ್ತು ದೂಷಣೆಗಳನ್ನು ಹೇಳುತ್ತಾನೆ. ಶ್ರೀಮಚ್ಛಂಕರಾಚಾರ್ಯರವರು ಈ ಹತ್ತು ದೂಷಣೆಗಳನ್ನೂ ಖಂಡಿಸಿ ಕಾರಣಕಾರ್ಯಗಳಿಗೆ ಅನನ್ಯತ್ವವನ್ನು (ಸಮತ್ವವನ್ನು) ಸ್ಥಾಪಿಸಿರುತ್ತಾರೆ. ಇವುಗಳನ್ನೇ ನಾವೂ, ಮಾಯಾವಾದವನ್ನು ಮಾತ್ರ ತ್ಯಜಿಸಿ, ಅಙ್ಗೀಕರಿಸಿರುತ್ತೇವೆ. ಇವುಗಳನ್ನೆಲ್ಲಾ **"ತದನನ್ಯತ್ವಂ ಆರಂಭಣ ಶಬ್ದಾದಿಭ್ಯಃ"** ಎಂಬ ಸೂತ್ರಭಾಷ್ಯದಲ್ಲಿ ಕಾಣಬಹುದು. ಈ ಅಸತ್ಕಾರ್ಯವಾದವನ್ನು ಮುಂದಿನ ವಾಕ್ಯಗಳಿಂದ ಖಂಡಿಸುತ್ತಾರೆ. **ಉತ್ಪತ್ತಿ ವಿನಾಶಾದಯಃ**– ಉತ್ಪತ್ತಿ ವಿನಾಶವೇ ಮೊದಲಾದವುಗಳು, ಇಲ್ಲಿ ಆದಿ ಪದದಿಂದ ಇತರ ಪರಿಣಾಮಗಳಾದ ವೃದ್ಧಿ ಹ್ರಾಸವೆಶೆಗಳು ಹೇಳಲ್ಪಟ್ಟವು. **ಸತೋ ದ್ರವ್ಯಸ್ಯಾವಸ್ಥಾ ವಿಶೇಷಾಃ** - ಇರುವ ವಸ್ತುವಿನ ಅವಸ್ಥಾ ವಿಶೇಷಗಳು, ಹೊಸ ದ್ರವ್ಯ ಉಂಟಾಗೋಣ ನಾಶವಾಗೋಣ ಎಂದಲ್ಲವು. ಇದು ಹೇಗೆ ಎಂಬುದನ್ನು ಒಂದು ನಿದರ್ಶನ ಮೂಲಕ ಸಮರ್ಥನೆ ಮಾಡುತ್ತಾರೆ. **ತನ್ತು ಪ್ರಭೃತೀನಿ** – ತನ್ತುವೇ ಮೊದಲಾದ, **ದ್ರವ್ಯಾಣಿ ಹಿ** - ದ್ರವ್ಯಗಳು ತಾನೇ, **ಸನ್ತ್ಯೇವ** - ತಾವೇ ಇರುವವುಗಳಾಗಿ, **ರಚನಾ ವಿಶೇಷ**ವೆಂಬ ಅವಸ್ಥೆಯುಳ್ಳವುಗಳಾಗಿ, **ಪಟಾದೀನಿ** - ಪಟವೇ ಮೊದಲಾದವುಗಳೆಂದು, **ಉಚ್ಯನ್ತೇ** - ಹೇಳಲ್ಪಡುತ್ತವೆ, **"ಪ್ರಭೃತೀನಿ ಆದೀನಿ"** ಎಂಬುದರಿಂದ ಕಪಾಲಗಳು ಘಟಗಳೇ ಮೊದಲಾದವುಗಳು ಹೇಳಲ್ಪಟ್ಟವು. ಇಲ್ಲಿ ಪಟ ದೃಷ್ಟಾಂತ ಏಕೆಂದರೆ, ಒಂದೇ ದೀರ್ಘವಾದ ತಂತುವೇ ಬಟ್ಟೆಯ ರೂಪವನ್ನು ಹೊಂದುವದರಿಂದಲೂ, ಆ ರಚನೆಯಲ್ಲಿ ಇನ್ನು ಯಾವ ದ್ರವ್ಯವೂ ಸೇರದೇ ಇರುವದರಿಂದಲೂ ಇತರ ನಿದರ್ಶನಗಳನ್ನು ಬಿಟ್ಟು ತಂತು ಪಟ ನಿದರ್ಶನವನ್ನು ತಂದಿರುವದು ಎಂದು ಭಾವಿಸಬಹುದು. ರಚನಾ ವಿಶೇಷ ವಿಶಿಷ್ಟತೆಯು ಮೊದಲು ಇಲ್ಲದೆ ಈಗ ಪಟದಲ್ಲಿದ್ದರೂ ತನ್ತುವೇ ಪಟವಾಗಿರುತ್ತದೆಂದು ಹೇಳುವ ಸತ್ಕಾರ್ಯವಾದಕ್ಕೇನೂ ವಿರೋಧ ಉಂಟಾಗುವದಿಲ್ಲವು; ಆದರೆ ಕಾರಣವು ಕಾರ್ಯವಾಗುವಾಗ ಸಹಕಾರಿ

**ಭಾ. ಕಾರಕವ್ಯಾಪಾರ ನಾಮಾನ್ತರ ಭಜನ ವ್ಯವಹಾರ ವಿಶೇಷಾಣಾ ಮೇತಾವತ್ಯೈವೋಪಪತ್ತೇಃ, ನದ್ರವ್ಯಾನ್ತರ ಕಲ್ಪನಾಯುಕ್ತಾ.**

ವೈಯರ್ಥ್ಯ ಉಂಟಾಗುವದಿಲ್ಲವೇ ಎಂದರೆ, ಅಂತಹ ವೈಯರ್ಥ್ಯ ಪರಿಹಾರಕ್ಕಾಗಿ **"ರಚನಾ ವಿಶೇಷ ಯುಕ್ತಾನಿ"** ಎಂದು ಹೇಳಲ್ಪಟ್ಟಿತು. ಈ ರಚನಾ ವಿಶೇಷದಿಂದ ಒಂದು ಹೊಸ ದ್ರವ್ಯ ಉಂಟಾಗುತ್ತದೆ ಎಂದು ಅಸತ್ಕಾರ್ಯವಾದಿಗಳು ಏಕೆ ಅಂಗೀಕರಿಸಬೇಕು? ಹಾಗೆ ಅಂಗೀಕರಿಸ ತಕ್ಕ ಆವಶ್ಯಕತೆ ಏನು? ಎಂದು ಮುಂದೆ ಆಕ್ಷೇಪಿಸುತ್ತಾರೆ. ಹಾಗೆ ಆಕ್ಷೇಪಿಸುವವರಲ್ಲಿ ವಿಕಲ್ಪಿಸಿ ಕೇಳುತ್ತಾರೇನೆಂದರೆ, ಇಲ್ಲದುದು ಒಂದು ಉಂಟಾಗುತ್ತದೆಂದು ಹೇಳಿದುದೇನು ಕಣ್ಣಿಗೆ ಕಾಣಿಸುತ್ತದೆ ಎಂದು ಹೇಳುತ್ತೀರೋ, ಅಥವಾ ಕಲ್ಪಿಸಿ ಊಹಿಸಬೇಕೆಂದು ಹೇಳುತ್ತೀರೋ? ಕಣ್ಣಿಗೆ ಕಾಣುತ್ತದೆಂದು ಬೇರೆ ಹೇಳಲಾಗುವದಿಲ್ಲವು. ಏಕೆಂದರೆ, **ಅಸತ್ಕಾರ್ಯವಾದಿನಾಪಿ** - ಮೊದಲು ಇಲ್ಲದಿರುವ ಒಂದು ಹೊಸ ವಸ್ತು ಕಾರ್ಯದಲ್ಲಿ ಉಂಟಾಯಿತೆಂದು ಹೇಳುವವರಿಂದಲೂ ಕೂಡ, **ಏತಾವದೇವ**. ಇಷ್ಟು ಮಾತ್ರವೇ ಎಂದರೆ ತಂತುವೂ ಮತ್ತು ರಚನಾವಿಶೇಷವು ಇಷ್ಟು ಮಾತ್ರವೇ, **ಉಪಲಭ್ಯತೇ** - ಕಾಣಲ್ಪಡುತ್ತದೆ. ಕಣ್ಣಿಗೆ ಕಾಣುವ ಹಾಗೆ ಯಾವ ಹೊಸ ದ್ರವ್ಯವೂ ಕಾಣಬರುವದಿಲ್ಲವೆಂಬ ಭಾವವು. ಈ ಅಭಿಪ್ರಾಯವನ್ನೇ ಮುಂದೆ ವಿಶದೀಕರಿಸುತ್ತಾರೆ. **ತತ್ರ** - ತನ್ತುವು ಪಟವಾಗುವ ಸಂದರ್ಭದಲ್ಲಿ, **ತನ್ತು ಸಂಸ್ಥಾನ ವಿಶೇಷಾತಿರಿಕ್ತೇಣ** – ತನ್ತುವೂ ಅದರ ರಚನಾ ವಿಶೇಷ ಇವುಗಳಲ್ಲದೆ, **ದ್ರವ್ಯಾನ್ತರಂ** - ಬೇರೊಂದು ದ್ರವ್ಯವೂ, **ನ ಪ್ರತೀಯತೇ ಹಿ** - ತೋರಿಬರುವದಿಲ್ಲವಷ್ಟೇ. ಮುಂದೆ ಎರಡನೆಯ ವಿಕಲ್ಪವಾದ ಅನುಮಾನದಿಂದ **ದ್ರವ್ಯಾನ್ತರ** ಉಂಟಾಗುತ್ತದೆಂದು ಕಲ್ಪಿಸತಕ್ಕದ್ದೆಂಬ ಪಕ್ಷವನ್ನು ಖಂಡಿಸುತ್ತಾರೆ. ಅಸತ್ಕಾರ್ಯವಾದಿಯಾದ ನೈಯಾಯಿಕನು ಹೇಳುವದೇನೆಂದರೆ, ಮೃತ್ತೇ ಘಟವಾಗಲಾರದು, ತಂತುವೇ ಪಟವಾಗಲಾರದು, ಕಾರಕವ್ಯಾಪಾರನಾದ ಕುಂಬಾರನ ಮತ್ತು ನೇಯ್ಗೆಯವನ ವ್ಯಾಪಾರಗಳು ಆವಶ್ಯಕವು; ಮತ್ತು ಮೊದಲು ಮೃತ್ತು ತಂತು ಎಂದೂ ಅನಂತರ ಘಟ ಪಟವೆಂದೂ **ಪೃಥಕ್ಕಾದ** ವ್ಯವಹಾರ ಇರುತ್ತದೆ. ಹಾಗೆ ಬೇರೆ ವಸ್ತುಗಳೇ ಅಲ್ಲವಾದರೆ, ಘಟ ಪಟ ವ್ಯವಹಾರಗಳಿಲ್ಲದೆ ಮೃತ್ತು ತಂತು ಎಂಬ ವ್ಯವಹಾರಗಳೇ ಇರಲಿ. ಮೃತ್ತು ಘಟ ಎರಡೂ ಒಂದೇ ಪದಾರ್ಥವಾದರೆ ಮೃತ್ತಿನಿಂದ ನೀರು ತಂದು, ಘಟದಿಂದ ಗೋಡೆಯನ್ನು ಕಟ್ಟಿ ನೋಡೋಣವೆಂದು ಹೇಳಿದ್ದನು, ಹೀಗೆ ಕಾರಕವ್ಯಾಪಾರ, ವ್ಯವಹಾರಭೇದ, ಜಲಾಹರಣಾದಿ ಉಪಯೋಗ ಭೇದಗಳ ಉಪಪತ್ತಿಗಳಿಗಾಗಿ ಹೊಸ ದ್ರವ್ಯ ಕಲ್ಪನೆಯು ಯುಕ್ತವೆಂದು ಅಭಿಪ್ರಾಯಪಟ್ಟಿದ್ದನು. ಇದನ್ನು ಖಂಡಿಸುತ್ತಾರೆ. ಈ ಕಾರಕ ವ್ಯಾಪಾರಾದಿಗಳ ಉಪಪತ್ತಿಯು ನಾವು ಹೇಳುವ ಸತ್ಕಾರ್ಯವಾದದಿಂದಲೇ ಉಪಪನ್ನವಾಗುವಾಗ, ಏಕೆ ಹೊಸದಾಗಿ ಒಂದು ದ್ರವ್ಯ ಕಲ್ಪನೆಯು? ಹೊಸದಾಗಿ ಒಂದು ದ್ರವ್ಯ ಕಲ್ಪನೆಯು ಗೌರವ ವಿಷಯವು, ನಾವು ಹೇಳುವದು ಲಘುವಾದ ವಿಷಯವು. ಗೌರವವಾದುದನ್ನು ತ್ಯಜಿಸಿ ಲಘುವಾದುದನ್ನು ಅಂಗೀಕರಿಸೋಣವೇ ನ್ಯಾಯವಾದುದು ಎಂಬ ಭಾವವನ್ನು ಮುಂದಿನ ವಾಕ್ಯದಿಂದ ಸೂಚಿಸುತ್ತಾರೆ. **ಕಾರಕವ್ಯಾಪಾರ** - ಕಾರ್ಯವನ್ನುಂಟುಮಾಡುವ ವ್ಯಾಪಾರವೂ, **ನಾಮಾನ್ತರ ಭಜನ** - ಮೃತ್ತು, ಘಟ, ತಂತು, ಪಟ, ಇತ್ಯಾದಿ ಬೇರೇ ಹೆಸರನ್ನು ಹೊಂದೋಣವೂ, **ವ್ಯವಹಾರ ವಿಶೇಷಾಣಾಂ** - ನೀರನ್ನು ತರುವದು, ಗೋಡೆ ಕಟ್ಟುವದು, ಇವೇ ಮೊದಲಾದ ವ್ಯವಹಾರ ವಿಶೇಷಗಳೆಲ್ಲಾ, **ಏತಾವತ್ಯೈವ** - ಇಷ್ಟು ಮಾತ್ರದಿಂದಲೇ ಅವಸ್ಥಾ ಬೇಧವನ್ನು ಹೊಂದಿದ ಸತ್ಕಾರ್ಯ ವಾದಮಾತ್ರದಿಂದಲೇ, **ಉಪ**

**ಭಾ.** ಅತ ಉತ್ಪತ್ತಿ ವಿನಾಶಾದಯ ಸ್ಸತೋದ್ರವಸ್ಯಾವಸ್ಥಾ ವಿಶೇಷಾಃ. ಉತ್ಪತ್ತ್ಯಾಖ್ಯಾಮವಸ್ಥಾಮುಪಯಾತಸ್ಯ ದ್ರವ್ಯಸ್ಯ ತದ್ವಿರೋಧ್ಯಾವಸ್ಥಾನ್ತರ ಪ್ರಾಪ್ತಿರ್ವಿನಾಶ ಇತ್ಯುಚ್ಯತೇ.

---

**ಪತ್ತೇಃ** - ಎಲ್ಲವೂ ಸಮಂಜಸವಾಗುವಾಗ, **ನ ದ್ರವ್ಯಾನ್ತರ ಕಲ್ಪನಾಯುಕ್ತಾ** – ಬೇರೆ ದ್ರವ್ಯಾನ್ತರ ಉಂಟಾಯಿತೆಂಬ ಕಲ್ಪನೆಯು ಸರಿಯಲ್ಲವು. ನಾವುಗಳೂ ಕಾರಕವ್ಯಾಪಾರಕ್ಕೆ ಸಾರ್ಥಕ್ಯವನ್ನೇ ಹೇಳುವೆವು, ಸತ್ತಾದ ದ್ರವ್ಯಕ್ಕೆ ಅವಸ್ಥಾಂತರ ಪ್ರಾಪ್ತಿಯಿಂದಲೇ ಕಾರ್ಯವಾಗುತ್ತದೆಂದು ಹೇಳುವೆವು, ಆದುದರಿಂದ ಕಾರಕವ್ಯಾಪಾರವು ಕಾರ್ಯೋತ್ಪತ್ತಿಗೆ ಆವಶ್ಯಕವು. ನಮ್ಮ ಸಿದ್ಧಾನ್ತದಲ್ಲಿ ಆ ಕಾರಣದಿಂದ ಕಾರಕವ್ಯಾಪಾರ ವೈಯರ್ಥ್ಯವಿಲ್ಲವು. ಸಾಂಖ್ಯರಾದರೋ ಒಂದೂ ಕೂಡ ಉಂಟಾಗುನದಿಲ್ಲ, ಮುಂದೆ ಎಲ್ಲವೂ ಇದ್ದೇ ಇದ್ದವೆಂದು ಹೇಳುತ್ತಾರೆ, ಅವರುಗಳಿಗೆ ಕಾರಕವ್ಯಾಪಾರ ವೈಯರ್ಥ್ಯ ದೋಷವನ್ನು ಹೇಳಬಹುದು. ನಾವೂ ಕಾರಕವ್ಯಾಪಾರಕ್ಕೆ ಉಪಪತ್ತಿಯನ್ನು ಹೇಳುವೆವು. ನಮಗಾದರೋ ಮೊದಲಿನ ದ್ರವ್ಯವೇ ಕಾರ್ಯವಾಗುತ್ತದೆ, ಆದರೆ ಅವಸ್ಥಾ ಮಾತ್ರ ಹೊಸದಾಗಿ ಪ್ರಾಪ್ತವಾಗುತ್ತದೆ. ದ್ರವ್ಯಾನ್ತರವೇನೂ ಪ್ರಾಪ್ತವಾಗುವದಿಲ್ಲವೆಂದು ಹೇಳುವೆವು. ಅವಸ್ಥಾ ಭೇದಗಳಿಂದಲೇ ನಾಮಾನ್ತರ ಭಜನವೂ ಉಪಪನ್ನವು, ಮೃತ್ತೇ ಅವಸ್ಥಾಂತರವನ್ನು ಹೊಂದಿದುದರಿಂದಲೇ ಘಟನೆಂಬ ಬೇರೇ ಹೆಸರೆಂಬ ಭಾವವು. ಇದಕ್ಕಾಗಿ ಬೇರೆಯೊಂದು ದ್ರವ್ಯವು ಉತ್ಪನ್ನವಾಯಿತೆಂಬ ಕಲ್ಪನೆಯು ಅನಾವಶ್ಯಕವು. ಹಾಗೆಯೇ ಅವಸ್ಥಾಭೇದದಿಂದ ಪ್ರಯೋಜನ ಭೇದವೂ ಪ್ರಾಪ್ತವಾಗುತ್ತದೆ. ಮೃದವಸ್ಥೆಯು ಗೋಡೆಯನ್ನು ಕಟ್ಟುವದಕ್ಕೆ ಯೋಗ್ಯವು, ಘಟಾವಸ್ಥೆಯು ನೀರನ್ನು ತರುವದಕ್ಕೆ ಯೋಗ್ಯವು. ಆದುದರಿಂದ ಪ್ರಯೋಜನ ಭೇದವಿರುವದರಿಂದ ಬೇರೆಯೊಂದು ದ್ರವ್ಯವನ್ನು ಕಲ್ಪಿಸುವದು ಯುಕ್ತವಲ್ಲವು. ಹಾಗೆ ಬೇರೆ ದ್ರವ್ಯವೊಂದು ಉತ್ಪನ್ನವಾಯಿತೆಂದು ಹೇಳಿದರೆ, **"ಯದಿ ದ್ರವ್ಯಾನ್ತರಂ ಕಾರ್ಯಂ ಕಾರಣೇಭ್ಯೋ ಭವೇದಿಹ । ಗುರುತ್ವ ಮತಿರಿಚ್ಯೇತ ಕಾರ್ಯೇತಚ್ಚ ನದೃಶ್ಯತೇ"** ಎಂದು ಮೋಕ್ಷಧರ್ಮದಲ್ಲಿ ಹೇಳಿರುವ ಹಾಗೆ, ಮೊದಲು ಕಾರಣದ್ರವ್ಯದ ಭಾರಕ್ಕಿಂತ ಹೆಚ್ಚು ಭಾರವನ್ನು ಕಾರ್ಯವಾದ ದ್ರವ್ಯವು ಹೊಂದಿರಬೇಕಾಗುತ್ತದಲ್ಲಾ ಆದೇಕೆ ಹಾಗಿಲ್ಲವು ಎಂದರೆ ಅದಕ್ಕೆ ನೈಯಾಯಿಕನು ಕಾರ್ಯವಾದ ಅವಯವಿಯಲ್ಲಿರುವ ಹೆಚ್ಚು ಭಾರದ ಜ್ಞಾನಕ್ಕೆ ಅಯವಯವಾದ ಕಾರಣದ ಭಾರದ ಜ್ಞಾನವು ಪ್ರತಿಬಂಧಕವೆಂದು ಹೇಳುವನು. ಅಪರಮಾರ್ಥವಾದುದನ್ನು ಸಮರ್ಥಿಸತೊಡಗಿದರೆ ವಾದದಲ್ಲಿ ಎಲ್ಲಿಯಾದರೂ ಎಡನದೆ ಮುಂದುವರಿಯುವುದು ಕಷ್ಟವು. ಹಾಗೆ ಈ ಮೇಲೆ ಹೇಳಿದ ನೈಯಾಯಿಕನ ವಾದವು ಅಸಮಂಜಸವಾದುದು.

ಈಗ ಇಷ್ಟು ದೂರ ಹೇಳಿದುದರ ಸಾರಾಂಶವೇನೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಅತಃ** - ಆ ಕಾರಣದಿಂದ, ಎಂದರೆ, ಬೇರೇ ದ್ರವ್ಯ ಉಂಟಾಯಿತೆಂಬುದು ಕಾಣದೇ ಇರುವದರಿಂದಲೂ, ಮತ್ತು ಕಲ್ಪಿಸಲು ಆವಶ್ಯಕತೆಯಿಲ್ಲದುದರಿಂದಲೂ, **ಉತ್ಪತ್ತಿ ವಿನಾಶಾದಿಗಳು, ಸತೋದ್ರವಸ್ಯ** – ಇರುವ ದ್ರವ್ಯದ, **ಅವಸ್ಥಾ ವಿಶೇಷಗಳು.** ಹಾಗಾದರೆ ಉತ್ಪತ್ತಿ ಎಂದರೇನು, ವಿನಾಶವೆಂದರೇನು ಎಂದು ಕೇಳಿದರೆ ಹೇಳುತ್ತಾರೆ. **ಉತ್ಪತ್ತ್ಯಾಖ್ಯಾಂ ಅವಸ್ಥಾಂ**– ಉತ್ಪತ್ತಿ ಎಂದು ಹೇಳಿಸಿಕೊಳ್ಳುವ ಅವಸ್ಥೆಯನ್ನು, **ಉಪಯಾತಸ್ಯ ದ್ರವ್ಯಸ್ಯ** - ಹೊಂದಿದ ದ್ರವ್ಯಕ್ಕೇ, **ತದ್ವಿರೋಧ್ಯವಸ್ಥಾನ್ತರ ಪ್ರಾಪ್ತಿಃ** - ಆ ಅವಸ್ಥೆಗೆ ವಿರುದ್ಧವಾದ ಬೇರೆ ಅವಸ್ಥೆಯನ್ನು ಹೊಂದೋಣವೇ, **ವಿನಾಶ ಇತ್ಯುಚ್ಯತೇ** - ವಿನಾಶವೆಂದು ಹೇಳಿಸಿಕೊಳ್ಳುತ್ತದೆ. ವಿನಾಶವೆಂದರೆ ಆದರ **ಪೂರ್ವಾವಸ್ಥೆ** ಹೋಗಿ ಅದಕ್ಕೆ ವಿರುದ್ಧವಾದ ಅವಸ್ಥೆಯು ಪ್ರಾಪ್ತವಾಯಿತು ಎಂಬ

ಭಾ. ಮೃದ್ದ್ರವ್ಯಸ್ಯ ಪಿಂಡತ್ವ ಘಟತ್ವ ಕಪಾಲತ್ವ ಚೂರ್ಣತ್ವಾದಿವತ್ ಪರಿಣಾಮಿ ದ್ರವ್ಯಸ್ಯ ಪರಿಣಾಮಪರಂಪರಾ ಅವರ್ಜನೀಯಾ. ತತ್ರ ಪೂರ್ವಾವಸ್ಥಸ್ಯ ದ್ರವ್ಯಸ್ಯೋತ್ತರಾವಸ್ಥಾ

---

ಭಿಪ್ರಾಯವೇ ವಿನಾ, ದ್ರವ್ಯವೇ ನಷ್ಟವಾಯಿತು ಎಂಬಭಿಪ್ರಾಯವಲ್ಲವು. ದ್ರವ್ಯಕ್ಕೆ ಹಾನಿಯಿಲ್ಲವು, ದ್ರವ್ಯಕ್ಕೆ ಅವಸ್ಥಾ ಪರಂಪರೆಗಳುಂಟು ಎಂಬ ಭಾವವು. ಆದರೆ ಘಟವಿನಾಶವೆಂದರೆ ಘಟದ ಅಭಾವವಲ್ಲವೋ ಎಂದರೆ ಘಟತ್ವಾವಸ್ಥೆಗೆ ಹಾನಿಯೂ, ಕಪಾಲಾವಸ್ಥಾಪ್ರಾಪ್ತಿಯೂ ಉಂಟಾಯಿತೆಂಬ ಭಾವವು. ಆದುದರಿಂದ ನಾವುಗಳು ಅಭಾವವೆಂಬ ಬೇರೆ ಪದಾರ್ಥವನ್ನು ಅಙ್ಗೀಕರಿಸುವದಿಲ್ಲವು. ನೈಯಾಯಿಕರ ನಾಲ್ಕು ವಿಧ ಅಭಾವಗಳಿಗೂ ಈ ಅವಸ್ಥಾಭೇದದಿಂದಲೇ ನಿರ್ವಾಹ ಮಾಡಿ ಹೇಳಬಹುದು. ಈ ನಾಲ್ಕು ವಿಧ ಅಭಾವಗಳು ಯಾವುವೆಂದರೆ, (೧) ಪ್ರಾಗಭಾವ, (೨) ಪ್ರಧ್ವಂಸಾಭಾವ, (೩) ಅನ್ಯೋನ್ಯಾಭಾವ, (೪) ಅತ್ಯಂತಾಭಾವಗಳು; ನಮ್ಮ ಸಿದ್ಧಾಂತರೀತ್ಯಾ ಅಭಾವವು ದ್ರವ್ಯವಲ್ಲವು. ಅಭಾವವೆಂದರೆ ಅವಸ್ಥಾಂತರ ಪ್ರಾಪ್ತಿಯು. ಪ್ರಾಗಭಾವವು ದ್ರವ್ಯದ ಪೂರ್ವಾವಸ್ಥಾ ಪರಂಪರೆಗಳನ್ನು ಬೋಧಿಸುತ್ತದೆ. ಘಟಪ್ರಾಗಭಾವವೆಂದರೆ ಪಿಂಡತ್ವಾದಿ ರೂಪ ಅವಸ್ಥೆಗಳು; ಪ್ರಧ್ವಂಸಾಭಾವವು ದ್ರವ್ಯದ ಉತ್ತರಾವಸ್ಥೆಯ ಪರಂಪರೆಯನ್ನು ಬೋಧಿಸುತ್ತದೆ. ಘಟ ಪ್ರಧ್ವಂಸಾಭಾವವೆಂದರೆ ಚೂರುಗಳಾಗಿ ಚೂರ್ಣವಾಗಿರೋಣವು. ಆದುದರಿಂದಲೇ "ವಿರೋಧ್ಯವಸ್ಥಾ ಪರಂಪರೈವ ಪ್ರಾಗಭಾವ ಪ್ರಧ್ವಂಸಾಭಾವೌ" ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಅತ್ಯನ್ತಾಭಾವ ಅನ್ಯೋನ್ಯಾಭಾವಗಳೂ. ಭೂತಲದಲ್ಲಿ ಘಟದ ಅತ್ಯಂತಾಭಾವವೆಂದರೆ ಅದು ಭೂತಲವೇ ಆಗುವದರಿಂದ ಬೇರೆ ದ್ರವ್ಯಕ್ಕೆ ಕಾರಣವಿಲ್ಲದೆ ಭೂತಲದ್ರವ್ಯದ ಅವಸ್ಥಾವಿಶೇಷವೇ. ಹಾಗೆಯೇ ಅನ್ಯೋನ್ಯಾಭಾವ ವಾದ, ಘಟದಲ್ಲಿ ಪಟವಿಲ್ಲ, ಪಟದಲ್ಲಿ ಘಟವಿಲ್ಲವೆಂಬಲ್ಲಿ ಘಟಾಭಾವವು ಪಟವಾಗಿರುವ ಅವಸ್ಥೆಯೇ, ಪಟಾಭಾವವು ಘಟವಾಗಿರುವ ಅವಸ್ಥೆಯೇ. ಇವೆಲ್ಲಾ ಪ್ರತ್ಯಕ್ಷಸಿದ್ಧವಾದವುಗಳೇ. ಆದುದರಿಂದ ಈ ಸಂದರ್ಭಗಳಲ್ಲೆಲ್ಲಾ ಬೇರೇ ದ್ರವ್ಯಕಲ್ಪನೆಗೆ ಅವಕಾಶವಿಲ್ಲವು. ವಿನಾಶವೆಂದರೆ ವಿರುದ್ಧಾವಸ್ಥೆಯ ಪ್ರಾಪ್ತಿಯೇ ವಿನಾ ಬೇರೆಯಲ್ಲವೆಂಬುದನ್ನು ಒಂದು ದೃಷ್ಟಾಂತ ಮೂಲಕ ಸಮರ್ಥನೆ ಮಾಡಿ ಹೇಳುತ್ತಾರೆ. ಮೃದ್ದ್ರವ್ಯಸ್ಯ - ಮೃದ್ದ್ರವ್ಯಕ್ಕೇನೇ, ಪಿಂಡತ್ವ, ಘಟತ್ವ, ಕಪಾಲತ್ವ, ಚೂರ್ಣತ್ವಾದಿಗಳು ಹೇಗೋ ಹಾಗೆ, ಪರಿಣಾಮಿ ದ್ರವ್ಯಸ್ಯ - ಪರಿಣಾಮ ಹೊಂದುವ ದ್ರವ್ಯಕ್ಕೆ, ಪರಿಣಾಮ ಪರಂಪರೆಯು, ಅವರ್ಜನೀಯಾ - ತಪ್ಪಿದ್ದಲ್ಲವು. ದ್ರವ್ಯಕ್ಕೇನೆ ಉತ್ಪತ್ತಿ ವಿನಾಶಗಳಿಲ್ಲವೆಂದು, ದ್ರವ್ಯಕ್ಕೇನೆ ಅವಸ್ಥೆಗಳು ಪೂರ್ವಾವಸ್ಥಾಹಾನಿರೂಪವಿನಾಶ, ಉತ್ತರಾವಸ್ಥಾಪ್ರಾಪ್ತಿರೂಪೋತ್ಪತ್ತಿ, ಹೀಗೆ ಪರಂಪರಾ ರೂಪದಲ್ಲಿ ಉಂಟಾಗುವದು ತಪ್ಪಿದ್ದಲ್ಲವು. ಹೇಗೆಂದರೆ, ಮಣ್ಣಿಗೇನೇ, ಉಂಡೆಯಾಗಿರೋಣವೂ, ಘಟವಾಗಿರೋಣವೂ, ಕಪಾಲರೂಪದಲ್ಲಿರೋಣವೂ, ಚೂರ್ಣರೂಪದಲ್ಲಿರೋಣವೂ ಹೇಗೆ ತಪ್ಪಿದ್ದಲ್ಲವೋ ಹಾಗೆ ಎಂಬ ಭಾವವು. ಈ ದೃಷ್ಟಾಂತವನ್ನೇ ಶ್ರೀ ಪರಾಶರರೂ ಅಙ್ಗೀಕರಿಸಿ ಈ ಅಭಿಪ್ರಾಯವನ್ನೇ ಉಪಪಾದಿಸಿರುವದರಿಂದ ಅದನ್ನೇ ಇಲ್ಲಿ ಉದಾಹರಿಸಿರುತ್ತಾರೆ. "ಮಹೀಘಟತ್ವಂ ಘಟತಃ ಕಪಾಲಿಕಾ ಕಪಾಲಿಕಾ ಚೂರ್ಣ ರಜಸ್ತತೋಣುಃ। ಜನೈಃ ಸ್ವಕರ್ಮ ಸ್ತಿಮಿತಾತ್ಮ ನಿಶ್ಚಯೈರಾಲಕ್ಷ್ಯತೇ ಬ್ರೂಹಿ ಕಿಮತ್ರ ವಸ್ತು ॥" "ಮೃತ್ತಿನಿಂದ ಘಟಭಾವವೂ, ಘಟಭಾವದಿಂದ ಕಪಾಲತ್ವವೂ, ಅದರಿಂದ ಸೂಕ್ಷ್ಮವಾದ ಚೂರ್ಣತ್ವವೂ, ಅದರಿಂದ ಸೂಕ್ಷ್ಮತರವಾದ ಧೂಳಿಯಾಗಿರೋಣವೂ ಮತ್ತು ಅದರಿಂದ ಸೂಕ್ಷ್ಮತಮವಾದ ಅಣುವೂ, ಹೀಗೆ ಪರಿಣಾಮ ಪರಂಪರೆಗಳುಂಟಾಗುತ್ತವೆ. ತನ್ನ ತನ್ನ

**ಪ್ರಾಪ್ತಿರ್ವಿನಾಶಃ. ಸೈವತದವಸ್ಥಸ್ಯಚೋತ್ಪತ್ತಿಃ. ಏವಮುತ್ಪತ್ತಿ ವಿನಾಶಾಖ್ಯ ಪರಿಣಾಮಪರಂಪರಾ ಪರಿಣಾಮಿನೋ ದ್ರವಸ್ಯಾ ಪರಿಹಾರ್ಯೇತಿ ನತತ್ರ ಶೋಚಿತು ಮರ್ಹಸಿ॥**

ಕರ್ಮ್ಮಗಳಿಂದ ಪ್ರತಿಬದ್ಧವಾದ ಆತ್ಮನಿಶ್ಚಯಗಳನ್ನು ತಿಳಿದ ಜನರಿಂದ, **ಅಲಕ್ಷ್ಯತೇ** - ಕಾಣಲ್ಪಡುತ್ತದೆ, ಎಂದರೆ ಅನುಭವಿಸಲ್ಪಡುವದು, ಆದುದರಿಂದ ಇಲ್ಲಿ ಯಾವ ಸತತ ಪರಿಣಾಮಿಯಾದ ಅಚಿದ್ವಸ್ತುವನ್ನು ವಿಕಾರರಹಿತವಾದ ವಸ್ತುವೆಂದು ಹೇಗೆ ಹೇಳಲಾದೀತು?" ಎಂಬುದು ಶ್ಲೋಕಾಭಿಪ್ರಾಯವು. **ತತ್ರ** - ಆ ಸಂದರ್ಭದಲ್ಲಿ, **ಪೂರ್ವಾವಸ್ಥಸ್ಯ ದ್ರವ್ಯಸ್ಯ** – ಪೂರ್ವಾವಸ್ಥೆಯಲ್ಲಿರುವ ದ್ರವ್ಯಕ್ಕೆ, **ಉತ್ತರಾವಸ್ಥಾಪ್ರಾಪ್ತಿಃ** - ಉತ್ತರಾವಸ್ಥೆಯನ್ನು ಹೊಂದೋಣವೇ, **ವಿನಾಶಃ** – ವಿನಾಶವೆಂದು ಹೇಳಿಸಿಕೊಳ್ಳುತ್ತದೆ. **ಸೈವ** - ಆ ವಿನಾಶವೇ, **ತದವಸ್ಥಸ್ಯ** - ಆ ಉತ್ತರಾವಸ್ಥೆಯನ್ನು ಹೊಂದಿರುವದಕ್ಕೆ, **ಉತ್ಪತ್ತಿಃ** - ಬೇರೆ ಅವಸ್ಥೆಯ ಪ್ರಾಪ್ತಿರೂಪವಾದ ಉತ್ಪತ್ತಿ ಎನಿಸುತ್ತದೆ. ಪೂರ್ವಾವಸ್ಥೆಯ ವಿನಾಶವೆಂದರೂ ಒಂದೇ, ಉತ್ತರಾವಸ್ಥೆಯ ಪ್ರಾಪ್ತಿಯೆಂದರೂ ಒಂದೇ. ಘಟನಾಶವೆಂದರೂ ಒಂದೇ ಕಪಾಲೋತ್ಪತ್ತಿ ಎಂದರೂ ಒಂದೇ. ಒಂದರ ನಾಶವು ಇನ್ನೊಂದರ ಉತ್ಪತ್ತಿಗೆ ಕಾರಣವಾಗುತ್ತದೆ ಎಂಬ ಭಾವವು. ಆದುದರಿಂದ **"ಧ್ರುವಂ ಜನ್ಮ ಮೃತಸ್ಯ ಚ"** ಎಂಬುದಕ್ಕೆ ಸರಿಯಾದ ಅರ್ಥವೇನೆಂದರೆ ಒಂದು ವಸ್ತುವು ಉತ್ಪತ್ತಿಯಾಗಿರುವದಕ್ಕೆ ವಿನಾಶಾವಸ್ಥೆಯುಂಟಾಗುತ್ತದೆಂದೂ ಹಾಗೆ ವಿನಾಶವಾದುದಕ್ಕೆ ಪುನಃ ಇನ್ನೊಂದರ ಉತ್ಪತ್ತಿಯೂ, ಅದಕ್ಕೆ ಪುನಃ ನಾಶವೂ ಹೀಗೆ ಪರಿಣಾಮ ಪರಂಪರೆಗಳು ಉಂಟಾಗುತ್ತವೆಂಬ ಭಾವವು. ಹೇಗೆಂದರೆ, ಮೃತ್ಪಿಂಡದಿಂದ ಕಪಾಲತ್ವವೂ, ಅದು ನಾಶವಾಗಿ ಘಟವೂ, ಘಟ ನಾಶವಾಗಿ ಕಪಾಲ ಅಥವಾ ಚೂರುಗಳೂ, ಅವುಗಳು ನಾಶವಾಗಿ ಚೂರ್ಣವೂ, ಹೀಗೆ ಪರಿಣಾಮ ಪರಂಪರೆಗಳು ಉಂಟಾಗುತ್ತವೆ. ಹಾಗೆಯೇ ಶ್ರೀಮದ್ಭಾಗವತದಲ್ಲಿ ಉದ್ಧವರಿಗೆ ಶ್ರೀಕೃಷ್ಣರು ಉಪದೇಶಿಸುವ ಸಂದರ್ಭದಲ್ಲಿ ಒಂಭತ್ತು ಪರಿಣಾಮಗಳು ಈ ದೇಹಕ್ಕೆ ಉಂಟೆಂದು ಹೇಳಲ್ಪಟ್ಟಿರುತ್ತದೆ. **"ನಿಷೇಕ ಗರ್ಭಜನ್ಮಾನಿ ಬಾಲ್ಯ ಕೌಮಾರ ಯೌವನಂ। ವಯೋ ಮಧ್ಯಂ ಜರಾ ಮೃತ್ಯುರಿತ್ಯವಸ್ಥಾ ತನೋರ್ನವ॥"** (ಭಾಗ. ೧೧. ೨೨. ೪೭) ಎಂಬ ಶ್ಲೋಕವು ಅನುಸಂಧೇಯವು. ಇಲ್ಲಿ ಜನ್ಮದ ಪ್ರಾಗಭಾವಗಳು ಹೇಳಲ್ಪಡಲಿಲ್ಲವು; ಮಧ್ಯಾವಸ್ಥೆಗಳೂ ಹೇಳಲ್ಪಡಲಿಲ್ಲವು; ಜನ್ಮ ಮರಣಗಳು ಮಾತ್ರ ಹೇಳಲ್ಪಟ್ಟವು. ಮರಣಾವಸ್ಥೆಗೂ ಮುಂದೆ ಅವಸ್ಥೆಯುಂಟು; ಭೂತ ಸೂಕ್ಷ್ಮವನ್ನೂ ಸೂಕ್ಷ್ಮವಾದ ಇಂದ್ರಿಯಗಳಾಗಿರುವ ಅವಸ್ಥೆಯು; ಹಾಗೆಯೇ ಪರಿಣಾಮ ಪರಂಪರೆಗಳು. ಹಾಗೆಯೇ ತನ್ನ ದೇಹಕ್ಕೆ ಪರಿಣಾಮ ಪರಂಪರೆಗಳುಂಟೆಂಬುದು ಅನುಮಾನ ಪ್ರತ್ಯಕ್ಷಗಳಿಂದ ಸಿದ್ಧವು. ತನ್ನ ಪುತ್ರನಿಗೆ ದೇಹಪ್ರಾಪ್ತಿ ಹೇಗೆ ತನ್ನಿಂದ ಉಂಟಾಯಿತೋ ಹಾಗೆ ತನಗೂ ತನ್ನ ಪಿತಾವಿಂದ ಜನ್ಮವೆನಿಸುವ ದೇಹಪ್ರಾಪ್ತಿಯುಂಟಾಗಿರಬೇಕೆಂದೂ, ತನ್ನ ಪಿತಾವಿಗೆ ಹೇಗೆ ಮರಣವೆಂದರೆ ದೇಹವಿಯೋಗ ಹೇಗೆ ಉಂಟಾಯಿತೋ, ಹಾಗೆಯೇ ತನಗೂ ಉಂಟಾಗುತ್ತದೆಂಬುದನ್ನೂ ಊಹಿಸಬಹುದು; ಬಾಲ್ಯ, ಕೌಮಾರ, ಯೌವನ, ಜರಾದಿ ಅವಸ್ಥೆಗಳು ತನಗೇ ಪ್ರತ್ಯಕ್ಷಸಿದ್ಧವು. ಆದುದರಿಂದ **"ಜಾತಸ್ಯ ಹಿ ಧ್ರುವೋ ಮೃತ್ಯುಃ"** ಎಂದೂ, **"ಧ್ರುವಂ ಜನ್ಮ ಮೃತಸ್ಯ ಚ"** ಎಂದೂ ಹೇಳಲ್ಪಟ್ಟಿತು. **ಏವಂ** - ಈ ಪ್ರಕಾರವಾಗಿ, **ಉತ್ಪತ್ತಿ ವಿನಾಶಾಖ್ಯ ಪರಿಣಾಮ ಪರಂಪರಾ** – ಉತ್ಪತ್ತಿ ವಿನಾಶ ಶಬ್ದಗಳಿಂದ ಹೇಳಿಸಿಕೊಳ್ಳುವ ಪರಿಣಾಮ ಪರಂಪರೆಯು, **ಪರಿಣಾಮಿನೋ ದ್ರವ್ಯಸ್ಯ** - ಪರಿಣಾಮವನ್ನು ಹೊಂದುವ ದ್ರವ್ಯಕ್ಕೆ, **ಅಪರಿಹಾರ್ಯೇತಿ** – ತಪ್ಪಿಸಲ್ಲವಾದುದಾಗಿ, **ತತ್ರ** - ಆ ಸಂದರ್ಭದಲ್ಲಿ, **ನ ಶೋಚಿತು ಮರ್ಹಸಿ** – ನೀನು ದುಃಖಿಸಲು ಕಾರಣವಿಲ್ಲವು. ಮೂಲದಲ್ಲಿ **"ಧ್ರುವಂ ಜನ್ಮ ಮೃತಸ್ಯ ಚ"** ಎಂಬುವದರ ಅಭಿ

ಭಾ. ಅ. ಸತೋದ್ರವ್ಯಸ್ಯ ಪೂರ್ವಾವಸ್ಥಾವಿರೋಧ್ಯವಸ್ಥಾನ್ತರಪ್ರಾಪ್ತಿ ದರ್ಶನೇನ ಯೋಽಲ್ಪೀಯಾಞ್ಶೋಕಃ, ಸೋಽಪಿ ಮನುಷ್ಯಾದಿ ಭೂತೇಷು ನ ಸಂಭವತೀತ್ಯಾಹ.

ಮೂ. ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ
ಅವ್ಯಕ್ತನಿಧನಾನ್ಯೇವ ತತ್ರಕಾ ಪರಿದೇವನಾ ? ೨೮.

ಪ್ರಾಯವು ಒಂದು ಅವಸ್ಥಾ ನಾಶವಾದರೆ ಇನ್ನೊಂದು ಅವಸ್ಥೆಯ ಪ್ರಾಪ್ತಿಯುಂಟಾಗುತ್ತವೆ, ಎಂಬ ಭಾವವು. ನಾಶ ಉತ್ಪತ್ತಿಗಳೆರಡೂ ತಪ್ಪಿದ್ದಲ್ಲವು; ಘಟನಾಶವಾಯಿತು ಎಂದರೆ ಕಪಾಲೋತ್ಪತ್ತಿಯಾಯಿತು ಎಂಬ ಭಾವವು. ಕಪಾಲ ನಾಶದಿಂದ ಪುನಃ ಘಟೋತ್ಪತ್ತಿ ಎಂದು ಶ್ಲೋಕಾಭಿಪ್ರಾಯವಲ್ಲವು, ಕಪಾಲನಾಶದಿಂದ ಚೂರ್ಣವಾಗಬಹುದು, ಆದುದರಿಂದ ಕಪಾಲನಾಶವೆಂದರೆ ಚೂರ್ಣೋತ್ಪತ್ತಿಯು ಅವರ್ಜನೀಯವು. ಹೀಗೆ ದೇಹಕ್ಕೆ ಸತತಪರಿಣಾಮವು ತಪ್ಪಿದ್ದಲ್ಲವಾದುದರಿಂದ ನೀನು ಶೋಕಿಸುವದು ಯುಕ್ತವಲ್ಲವೆಂಬ ಭಾವವು. ಅಥವಾ ದೇಹವಿಯೋಗದಿಂದ ದ್ರವ್ಯನಾಶವಾಗುತ್ತದೆಂಬ ಶೋಕವೂ ಬೇಕಾಗಿಲ್ಲವು; ಏಕೆಂದರೆ, ಅದೇ ದ್ರವ್ಯವೇ ಇನ್ನೊಂದಾದ ಅವಸ್ಥೆಯನ್ನು ಹೊಂದಲೇಬೇಕೆಂಬ ಭಾವವೂ ಸೂಚಿತವು. ॥ ೨೭ ॥

ಭಾಷ್ಯಾವತಾರಿಕೆಯ ಅರ್ಥವು :—**ಸತೋ ದ್ರವ್ಯಸ್ಯ** - ನಿತ್ಯವಾಗಿ ಇರುವ ದ್ರವ್ಯಕ್ಕೇನೆ. **ಪೂರ್ವಾವಸ್ಥೇತ್ಯಾದಿ** - ಪೂರ್ವಾವಸ್ಥೆಗೆ ವಿರೋಧಿರೂಪವಾದ ಬೇರೇ ಅವಸ್ಥೆಯ ಪ್ರಾಪ್ತಿಯನ್ನು ಕಂಡಿರುವದರಿಂದ, **ಯಃ ಅಲ್ಪೀಯಾಞ್ಶೋಕಃ** - ಯಾವ ಸ್ವಲ್ಪವಾದ ಶೋಕವಿರಬಹುದೋ, **ಸೋಽಪಿ** - ಆ ಅಲ್ಪ ಶೋಕವೂ ಕೂಡ, **ಮನುಷ್ಯಾದಿ ಭೂತೇಷು** - ಮನುಷ್ಯ ಮೊದಲಾದ ಪ್ರಾಣಿಗಳಲ್ಲಿ, **ನ ಸಂಭವಂತಿ** - ಉಂಟಾಗಲು ಕಾರಣವಿಲ್ಲವು, **ಇತ್ಯಾಹ** - ಎಂಬದಾಗಿ ಹೇಳುತ್ತಾರೆ. ಹಿಂದೆ ಪರಿಹಾರವಿಲ್ಲದೇ ಇರುವ ಸಂದರ್ಭದಲ್ಲಿ ಶೋಕದಿಂದ ಪ್ರಯೋಜನವಿಲ್ಲವೆಂದು ಹೇಳಿದರು. ಆದೇ ಅಭಿಪ್ರಾಯವನ್ನು ಇನ್ನೊಂದು ವಿಧವಾಗಿ ಉಪಪಾದಿಸಿ ಹೇಳುತ್ತಾರೆ. ಹೇಗೆಂದರೆ, ನಾವು ಹಿಂದೆ ಮಾಡಿದ ಕರ್ಮಗಳು ಜನ್ಮ ಮರಣಗಳಿಗೆ ಕಾರಣವಾಗಿದ್ದರೂ, ನಾವು ಹುಟ್ಟುವದಕ್ಕೆ ಮೊದಲು, ದೇಹವು ಅತಿ ಸೂಕ್ಷ್ಮವಾಗಿ ಕಣ್ಣಿಗೆ ಕಾಣದೆ ಬಂದು ಅನಂತರ ಬೆಳೆದು ಕ್ಷೀಣತೆಯನ್ನು ಹೊಂದಿ ಪುನಃ ಅತಿ ಸೂಕ್ಷ್ಮವಾಗಿ ಕಣ್ಣಿಗೆ ಕಾಣದ ಅವಸ್ಥೆಯನ್ನು ಹೊಂದಿ ಹೊರಟು ಹೋಗುತ್ತದೆ. ಹೀಗೆ ತಿಳಿಯದೇ ಉಂಟಾಗುವ ಪೂರ್ವಾವಸ್ಥೆ ಉತ್ತರಾವಸ್ಥೆಗಳನ್ನು ಹೊಂದುವ ವಿಷಯದಲ್ಲಿ ಶೋಕವೇತಕ್ಕೆ ಎಂದು ಹೇಳುತ್ತಾರೆ.

ಮೂಲಕ್ಕೆ ಅರ್ಥವು :—**ಹೇ ಭಾರತ** - ಓ ಭರತಕುಲೋತ್ಪನ್ನನಾದ ಅರ್ಜುನನೇ! **ಭೂತಾನಿ** - ಮನುಷ್ಯಾದಿ ಶರೀರಗಳು, ಪೂರ್ವಾವಸ್ಥೆಯಲ್ಲಿ, **ಅವ್ಯಕ್ತಾದೀನಿ** - ಕಣ್ಣಿಗೆ ಕಾಣದಿರುವ ಅವಸ್ಥೆಯುಳ್ಳ ದ್ರವ್ಯಗಳಾಗಿವೆ, ಆದರೆ, **ವ್ಯಕ್ತಮಧ್ಯಾನಿ** - ಮಧ್ಯದಲ್ಲಿ ಕಣ್ಣಿಗೆ ಕಾಣುವವುಗಳಾಗಿ ಮನುಷ್ಯಾದಿ ಶರೀರಗಳಾಗುತ್ತವೆ. **ಅವ್ಯಕ್ತ ನಿಧನಾನ್ಯೇವ** - ಆಮೇಲೆ ಪುನಃ ಮರಣಾವಸ್ಥೆಯಲ್ಲಿ ಕಣ್ಣಿಗೆ ಕಾಣದ ಅವಸ್ಥೆಯುಳ್ಳವುಗಳೇ ಆಗುತ್ತವೆ. ಕಣ್ಣಿಗೆ ಕಾಣುತ್ತಿರುವ ರಮಣೀಯವಾದ ಘಟವು ಒಡೆದುಹೋಗಿ ಚೂರಾದರೆ ಒಳ್ಳೇ ವಸ್ತುವು ಈ ದುರವಸ್ಥೆಯನ್ನು ಹೊಂದಿತೇ, ಎಂದು ಸ್ವಲ್ಪ ಶೋಕಕ್ಕಾಗಲಿ ಕಾರಣವಿರಬಹುದು. ಮನುಷ್ಯ ದೇಹವು ಕಣ್ಣಿಗೆ ಕಾಣದಿರುವ ವಸ್ತುಗಳಿಂದುಂಟಾಗಿ ಪರಿಣಮಿಸುತ್ತಾ ಇದ್ದು ಆಮೇಲೆ ಕಣ್ಣಿಗೆ ಕಾಣದೇ ಇರುವ ದ್ರವ್ಯಗಳೇ ಆದರೆ, ಅದಕ್ಕಾಗಿ ಆ ಅಲ್ಪಶೋಕಕ್ಕೂ ಕಾರಣವಿಲ್ಲವೆಂಬ ಭಾವವು. ಭೂತಸೂಕ್ಷ್ಮ

**ಭಾ.** ಮನುಷ್ಯಾದಿಭೂತಾನಿ ಸನ್ತ್ಯೇವ ದ್ರವ್ಯಾಣ್ಯನುಪಲಬ್ಧಪೂರ್ವಾವಸ್ಥಾನ್ಯುಪಲಬ್ಧ ಮನುಷ್ಯತ್ವಾದಿ ಮಧ್ಯಮಾವಸ್ಥಾನ್ಯನುಪ ಲಬ್ಧೋತ್ತರಾವಸ್ಥಾನಿ ಸ್ವೇಷು ಸ್ವಭಾವೇಷು ವರ್ತನ್ತ ಇತಿ, ನ ತತ್ರ ಪರಿದೇವನಾ ನಿಮಿತ್ತ ಮಸ್ತಿ ॥ ೨೮ ॥

---

ಸೂಕ್ಷ್ಮೇಂದ್ರಿಯಗಳಿಂದ ಯುಕ್ತನಾಗಿ ಈ ಆತ್ಮನು ಸ್ಥೂಲದೇಹವಿಯೋಗಾನಂತರ, ಹೊರಟು ಹೋಗುವನು. ಉಪಾಯಾನುಷ್ಠಾನವನ್ನು ಮಾಡಿ ಪ್ರಪನ್ನನಾಗಿ ಮೋಕ್ಷವನ್ನು ಹೊಂದುವವನು ಬ್ರಹ್ಮನಾಡಿಯ ಅಥವಾ ಸುಷುಮ್ನಾನಾಡಿಯ ಮೂಲಕ ಅರ್ಚಿರಾದಿ ಮಾರ್ಗವನ್ನು ಕುರಿತು ಹೋಗುವನು. ಪುನಃ ಜನ್ಮವೆತ್ತುವವನು ಇತರ ನಾಡಿಗಳ ಮೂಲಕ ಹೊರಟು ಧೂಮಾದಿ ಮಾರ್ಗವನ್ನು ಸೇರುವನು. ಅನಂತರ ಸೂಕ್ಷ್ಮದೆಶೆಯಲ್ಲಿ ಮೇಘವನ್ನು ಹೊಂದಿ ಅಲ್ಲಿಂದ ಸಸ್ಯ ಮೊದಲಾದವುಗಳ ಮೂಲಕ ಪ್ರಾಣಿಯ ರೇತಸ್ಸಿನಲ್ಲಿ ಸೇರಿ ಸ್ತ್ರೀಯೋನಿಯನ್ನು ಹೊಂದುವನು. ಇವೆಲ್ಲರಲ್ಲೂ ಗತಿಯು ಅವ್ಯಕ್ತವಾದುದರಿಂದ, **ಅವ್ಯಕ್ತಾದೀನಿ ಭೂತಾನಿ** - ಅಲ್ಲಿಂದ ಪಿಂಡವಾಗಿ ಬೆಳೆದು, ಪ್ರಾಣಿಯ ರೂಪವನ್ನು ಹೊಂದುವದರಿಂದ **"ವ್ಯಕ್ತಮಧ್ಯಾನಿ"** ಎಂದು ಹೇಳಲ್ಪಟ್ಟಿತು. ದೇಹವಿಯೋಗವಾದ ನಂತರ ಅತಿ ಸೂಕ್ಷ್ಮವಾದ ದೇಹದೊಂದಿಗೆ ಹೊರಟುಹೋಗುವದರಿಂದ **"ಅವ್ಯಕ್ತ ನಿಧನಾನಿ"** ಎಂದೂ ಹೇಳಲ್ಪಟ್ಟಿತು. ॥ ೨೮ ॥

**ಭಾಷ್ಯಾರ್ಥವು** :—ಹಿಂದೆ ಅಪರಿಹಾರ್ಯತ್ವಮೂಲಕವಾಗಿ ಶೋಕಕ್ಕೆ ಕಾರಣವಿಲ್ಲವೆಂದು ಹೇಳಲ್ಪಟ್ಟಿತು. ಇಲ್ಲಿ ಆಯಾ ವಸ್ತುಗಳಿಗೆ ಪ್ರತಿನಿಯತವಾದ ಸ್ವಭಾವಗಳಿರುವದರಿಂದ ಪೂರ್ವೋತ್ತರಾವಸ್ಥೆಗಳಲ್ಲಿ ಸುಖ ದುಃಖಗಳೊಂದೂತೋರದ ಅವಸ್ಥೆಗಳನ್ನು ಹೊಂದುವದಾಗಿ ಈತನಿಗೆ ಸ್ವಲ್ಪವೂ ತಿಳಿಯದೆ ಪ್ರಾಪ್ತವಾಗುವದರಿಂದಲೂ ಶೋಕಕ್ಕೆ ಕಾರಣವಿಲ್ಲವೆಂದು ಹೇಳುತ್ತಾರೆ. **ಮನುಷ್ಯಾದಿ ಭೂತಾನಿ ಸನ್ತ್ಯೇವ ದ್ರವ್ಯಾಣಿ** - ಮನುಷ್ಯ ಮೊದಲಾದ ಶರೀರಗಳು ನಿತ್ಯವಾಗಿ ಇರುವ ದ್ರವ್ಯಗಳೇ, ಅವುಗಳು, ಪುರುಷನ ರೇತಸ್ಸಿನಲ್ಲಿರುವ ಸ್ಥಿತಿಯಲ್ಲೂ, ಸ್ತ್ರೀ ಯೋನಿಯನ್ನು ಸೇರಿದಾಗಲೂ ಸಹ ದೇಹವು ಅತಿಸೂಕ್ಷ್ಮವಾಗಿರುವದರಿಂದ **"ಅನುಪಲಬ್ಧ ಪೂರ್ವಾವಸ್ಥಾನಿ"** ಎಂದು ಹೇಳಲ್ಪಟ್ಟವು. ಅವುಗಳೇ ಪುನಃ **ಉಪಲಬ್ಧ ಮನುಷ್ಯತ್ವಾದಿ ಮಧ್ಯಮಾವಸ್ಥಾನಿ**– ಕಣ್ಣಿಗೆ ಕಾಣುವ ಮನುಷ್ಯ ಮೊದಲಾದ ಮಧ್ಯಮಾವಸ್ಥೆಯನ್ನುಳ್ಳವುಗಳಾಗುವವು. ಅವುಗಳೇ ಪುನಃ, **ಅನುಪಲಬ್ಧೋತ್ತರಾವಸ್ಥಾನಿ** - ಕಣ್ಣಿಗೆ ಕಾಣದಿರುವ ಉತ್ತರಾವಸ್ಥೆಗಳನ್ನುಳ್ಳವುಗಳಾಗುವವು. ಹೇಗೆಂದರೆ, ನಿರ್ಯಾಣಕಾಲದಲ್ಲಿ ಸೂಕ್ಷ್ಮೇಂದ್ರಿಯಗಳೂ ಭೂತಸೂಕ್ಷ್ಮಗಳೊಂದಿಗೇನೆ ಆತ್ಮನು ಕಣ್ಣಿಗೆ ಕಾಣದೇ ಹೋಗುವದರಿಂದ ಅನುಪಲಬ್ಧ ಉತ್ತರಾವಸ್ಥೆಯುಳ್ಳವುಗಳು ಈ ದೇಹಗಳೂ ಎಂದು ಹೇಳಲ್ಪಟ್ಟವು. ದೇಹಾವಸಾನಕಾಲದಲ್ಲಿ ಆತ್ಮನು ಸ್ಥೂಲದೇಹವನ್ನು ಬಿಟ್ಟು ಹೋಗುವದನ್ನು ನಿರ್ಯಾಣವೆಂದು ಹೇಳುವರು. ಪುನಃ ಬಂಧಕ್ಕೆ ಒಳಗಾಗುವ ಅಪ್ರಪನ್ನನು ಹೋಗುವ ಮಾರ್ಗವು ಸೂಕ್ಷ್ಮವಾಗಿ ೮-೨೫ ನೆಯ ಶ್ಲೋಕವಾದ **"ಧೂಮೋರಾತ್ರಿಃ"** ಶ್ಲೋಕದ ವ್ಯಾಖ್ಯಾನದಲ್ಲಿ ಉಪಪಾದಿತವು. ಅದನ್ನು ಪರಾಮರಿಸಬಹುದು. ನಿರ್ಯಾಣಕಾಲದಲ್ಲಿ ಹೃದಯದ ೧೦೦ ನಾಡಿಗಳಲ್ಲಿ ಒಂದರ ಮೂಲಕ ಭೂತಸೂಕ್ಷ್ಮ ಸೂಕ್ಷ್ಮೇಂದ್ರಿಯಗಳಿಂದ ಯುಕ್ತನಾಗಿ ಹೊರಟು ಕಡೆಗೆ ಮೇಘಾದಿಗಳ ಮೂಲಕ ಸಸ್ಯಾದಿಗಳನ್ನು ಸೇರಿ ಪುರುಷ ರೇತಸ್ಸನ್ನೂ ಸ್ತ್ರೀಯೋನಿಯನ್ನೂ ಸೇರುವದರಿಂದ ಅನುಪಲಬ್ಧವಾದ ಉತ್ತರಾವಸ್ಥೆಯನ್ನುಳ್ಳವು ಈ ದೇಹಗಳೆಂದು ಇಲ್ಲಿ ಹೇಳಲ್ಪಟ್ಟಿತು. ಹೀಗೆ, **ಸ್ವೇಷು ಸ್ವಭಾವೇಷು** - ತಮ್ಮ ತಮ್ಮ ಪರಿಣಾಮ ಹೊಂದುವ ಸ್ವಭಾವಗಳಲ್ಲಿ, **ವರ್ತನ್ತೇ ಇತಿ** - ಇರುತ್ತವೆಯಾದುದರಿಂದ, **ತತ್ರ** - ಆ ಸಂದರ್ಭ

ಭಾ. ಅ. ಏವಂ ಶರೀರಾತ್ಮವಾದೇಪಿ ನಾಸ್ತಿ ಶೋಕನಿಮಿತ್ತ ಮಿತ್ಯುಕ್ತ್ವಾ, ಶರೀರಾತಿರಿಕ್ತ ಆಶ್ಚರ್ಯಸ್ವರೂಪ ಆತ್ಮನಿ ದ್ರಷ್ಟಾ ಶ್ರೋತಾ ವಕ್ತಾ ಶ್ರವಣಾಯತ್ತಾತ್ಮನಿಶ್ಚಯಶ್ಚ ದುರ್ಲಭ ಇತ್ಯಾಹ—

ಮೂ. ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮ್ ಆಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನ ಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನಚೈವ ಕಶ್ಚಿತ್ ೨೯.

ದಲ್ಲಿ, ಪರಿದೇವನಾ ನಿಮಿತ್ತಂ - ಶೋಕಕ್ಕೆ ಕಾರಣವು, ನಾಸ್ತಿ - ಇಲ್ಲವು, ಹಿಂದೆ ಕಾಣಿಸದ ಅವಸ್ಥೆಯಲ್ಲಿ ಇದ್ದುದು ಈಗ ಮನುಷ್ಯ ಮೊದಲಾದ ಆಕಾರದಿಂದ ಕಣ್ಣಿಗೆ ಕಾಣಿಸುತ್ತಾ ಪುನಃ ಕಣ್ಣಿಗೆ ಕಾಣಿಸದೇ ಹೋಗುತ್ತದೆ. ಇದು ಶರೀರದ ನೈಜಸ್ವಭಾವವು. ಇದಕ್ಕಾಗಿ ಏಕೆ ಚಿಂತೆಯು? ಎಂಬಭಿಪ್ರಾಯವು. ಈ ಸಂದರ್ಭದಲ್ಲಿ ಮಹಾಭಾರತದ ಸ್ತ್ರೀಪರ್ವ (೨. ೧೩) ಶ್ಲೋಕವು ಅನುಸಂಧೇಯವು.

"ಅದರ್ಶನಾದಿಹಾಯಾತಃ ಪುನಶ್ಚಾದರ್ಶನಂ ಗತಃ ।
ನಾಸೌ ತವ ನತಸ್ಯತ್ವಂ ವೃಥಾ ಕಿಮನು ಶೋಚಸಿ॥"

ಹಿಂದೆ ಕಣ್ಣಿಗೆ ಕಾಣಿಸದೇ ಇದ್ದು ಎಂದರೆ ದೇಹವು ಅವ್ಯಕ್ತವಾದುದಾಗಿ ಇಲ್ಲಿಗೆ ಬಂದಿರುತ್ತಾನೆ. ಪುನಃ ಕಣ್ಣಿಗೆ ಕಾಣಿಸದೆ ಎಂದರೆ ದೇಹವು ಅವ್ಯಕ್ತವಾದುದಾಗಿ ಹೊರಟುಹೋಗಿರುತ್ತಾನೆ. ಈತನು ನಿನ್ನವನಲ್ಲವು, ನೀನೂ ಆತನವನಲ್ಲವು, ಹೀಗಿರುವಾಗ ವೃಥಾ ನೀನು ಶೋಕಿಸುತ್ತೀಯೇ ಎಂದು ಹೇಳಲ್ಪಟ್ಟಿರುತ್ತದೆ. ॥ ೨೮ ॥

ಭಾಷ್ಯಾವತಾರಿಕೆಯು. ಮುಂದಿನ ಶ್ಲೋಕಕ್ಕೆ ಅವತಾರಿಕೆಯನ್ನು ಕೊಡುತ್ತಾರೆ:— ಏವಂ - ಈ ವಿಧವಾಗಿ, ಶರೀರಾತ್ಮವಾದೇಪಿ - ಶರೀರವೇ ಆತ್ಮಾ ಎಂಬ ಚಾರ್ವಾಕನ ವಾದದಲ್ಲೂ ಕೂಡ, ನಾಸ್ತಿಶೋಕ ನಿಮಿತ್ತಮಿತಿ - ಶೋಕಕ್ಕೆ ಕಾರಣವಿಲ್ಲವೆಂದು, ಉಕ್ತ್ವಾ - ಹೇಳಿ, ಶರೀರಾತಿರಿಕ್ತ ಆಶ್ಚರ್ಯಸ್ವರೂಪೇ - ಶರೀರಕ್ಕಿಂತಲೂ ಬೇರೆಯಾಗಿ ಆಶ್ಚರ್ಯಸ್ವರೂಪವುಳ್ಳ, ಆತ್ಮನಿ - ಜೀವಾತ್ಮನ ವಿಷಯದಲ್ಲಿ, ದ್ರಷ್ಟಾ - ಸಾಕ್ಷಾತ್ಕರಿಸುವವನೂ, ಶ್ರೋತಾ - ಕೇಳುವವನೂ, ವಕ್ತಾ-ಹೇಳುವವನೂ, ಎಂದರೆ-ಯಥಾರ್ಥವಾಗಿ ಉಪದೇಶಕನೂ, ಶ್ರವಣಾಯತ್ತಾತ್ಮನಿಶ್ಚಯಶ್ಚ - ಉಪದೇಶಕ್ಕೆ ಅನುಗುಣವಾದ ಆತ್ಮನಿಶ್ಚಯವುಳ್ಳವನೂ ಸಹ, ದುರ್ಲಭವೆಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ. ದೇಹಾತ್ಮ ಭ್ರಮೆಯುಳ್ಳವರೇ ಅನೇಕರು. ಚಾರ್ವಾಕನಹಾಗೆ ಭ್ರಮೆಯಿದ್ದರೂ ಶೋಕಕ್ಕೆ ಕಾರಣವಿಲ್ಲವೆಂದು ಹೇಳಿ ಹಾಗೆ ಭ್ರಮೆಯಿಲ್ಲದೆ ಈ ಅತ್ಯಾಶ್ಚರ್ಯಕರವಾದ ಆತ್ಮಸ್ವರೂಪ ನಿಶ್ಚಯವುಳ್ಳವನು ಅತಿ ದುರ್ಲಭವೆಂದು ಹೇಳುವ ಸಂದರ್ಭದಲ್ಲಿ ಅದನ್ನು ಸಾಕ್ಷಾತ್ಕರಿಸುವವನೂ, ಅದರ ಸ್ವರೂಪವನ್ನು ಉಪದೇಶಿಸುವವನೂ, ಉಪದೇಶ ಹೊಂದುವವನೂ, ಇವರೆಲ್ಲರೂ, ಆತ್ಮಸ್ವರೂಪವು ಅತ್ಯಾಶ್ಚರ್ಯಕರವಾದುದೆಂದು ಭಾವಿಸುವರು ಎಂದು ಹೇಳುತ್ತಾರೆಂಬುದು ಅವತಾರಿಕೆಯ ತಾತ್ಪರ್ಯವು.

ಮೂಲಕ್ಕೆ ಅರ್ಥವು :—ಹೀಗೆ ದೇಹಾತ್ಮ ಭ್ರಮೆಯಿಂದ ಶೋಕವೇ ವಿನಾ, ಅಂತಹ ಭ್ರಮವಿಲ್ಲದವನಿಗೆ ಶೋಕವಿಲ್ಲವೆಂದೂ, ದೇಹಾತಿರಿಕ್ತನಾಗಿ ಒಬ್ಬ ಆತ್ಮನುಂಟು ಎಂದು ತಿಳಿದು ಆ ಆತ್ಮನ ಆಶ್ಚರ್ಯವಾದ ಶಕ್ತಿಯನ್ನೆಲ್ಲಾ ತಿಳಿದವರು ಅತಿ ವಿರಳರೆಂದು ಹೇಳುತ್ತಾರೆ. ಕಶ್ಚಿತ್ - ಸುಕೃತಿಯಾದ ಯಾವನೋ ಒಬ್ಬನು, ಏನಂ-ಈ ಹಿಂದೆ ಹೇಳಲ್ಪಟ್ಟ ಸ್ವಭಾವ

**ಭಾ.** ಏವಮುಕ್ತ ಸ್ವಭಾವಂ ಸ್ವೇತರ ಸಮಸ್ತವಸ್ತುವಿಸಜಾತೀಯತಯಾ ಆಶ್ಚರ್ಯವದವಸ್ಥಿತ ಮನನ್ತೇಷು ಜನ್ತುಷು ಮಹತಾ ತಪಸಾ ಕ್ಷೀಣಪಾಪ ಉಪಚಿತಪುಣ್ಯಃ ಕಶ್ಚಿತ್ಪ

---

ವುಳ್ಳ ಆತ್ಮನನ್ನು, **ಆಶ್ಚರ್ಯವತ್** - ಆಶ್ಚರ್ಯಕರವಾಗಿರುವ ವಸ್ತುವನ್ನಾಗಿ, **ಪಶ್ಯತಿ** - ನೋಡುತ್ತಾನೆ ಎಂದರೆ ಸಾಕ್ಷಾತ್ಕರಿಸುವನುಎಂಬರ್ಥವು, **ತಥೈವ** – ಹಾಗೆಯೇ, **ಅನ್ಯಃ** - ಇನ್ನೊಬ್ಬ ಯಾವನೋ ಒಬ್ಬ ಪುಣ್ಯಶಾಲಿಯು, **ಆಶ್ಚರ್ಯವತ್** - ಆಶ್ಚರ್ಯಕರವಾಗಿರುವ ವಸ್ತುವನ್ನಾಗಿ, **ವದತಿ** - ಹೇಳುತ್ತಾನೆ, **ಅನ್ಯಃ** - ಮತ್ತೊಬ್ಬ ಯಾವನೋ ಒಬ್ಬ ಸುಕೃತಿಯು, **ಏನಂ** - ಮೇಲೆ ಹೇಳಿದ ಲಕ್ಷಣವುಳ್ಳ ಆತ್ಮನನ್ನು, **ಆಶ್ಚರ್ಯವತ್ ಶೃಣೋತಿ** – ಕೇಳುತ್ತಾನೆ, **ಶ್ರುತ್ವಾಪಿ** - ಹೀಗೆ ಕೇಳಿದರೂ ಕೂಡ, **ಏನಂ** - ಈ ಆತ್ಮನನ್ನು, **ಕಶ್ಚಿತ್** – ಯಾವನೋ ಒಬ್ಬ ಸುಕೃತಿಯೂ, **ನೈವವೇದ**-ಯಥಾವತ್ತಾಗಿ ತಿಳಿಯಲೇ ಇಲ್ಲವು, **ಚ** ಕಾರದಿಂದ ಹೀಗೆ ಯಥಾರ್ಥವಾಗಿ ನೋಡುವವನಾಗಿಯೂ, ಹೇಳುವವನಾಗಿಯೂ, ಕೇಳುವವನಾಗಿಯೂ, ಇರುವವನೂ ದುರ್ಲಭವೆಂಬ ಭಾವವು. ಆತ್ಮ ಸ್ವರೂಪವು ಶಾಸ್ತ್ರಮೂಲಕವಾಗಿಯೇ ಗ್ರಹಿಸತಕ್ಕದ್ದಾಗಿರುತ್ತದೆ. ಆತನು ಅಣುವಾಗಿ ಅವ್ಯಕ್ತನು. ಆದುದರಿಂದ ಆತ್ಮಸ್ವರೂಪ ಸಾಕ್ಷಾತ್ಕಾರವಾಗಲಿ, ಉಪದೇಶವಾಗಲಿ, ಕೇಳಿ ತಿಳಿಯೋಣವಾಗಲಿ ದುರ್ಲಭವೆಂಬ ಭಾವವು"ಕಶ್ಚಿತ್" ಎಂಬುದರಿಂದ ಎಲ್ಲಿಯೋ ಒಬ್ಬೊಬ್ಬನು ಎಂಬ ಭಾವವು ತೋರಿಬರುವದರಿಂದ ದುರ್ಲಭತ್ವವು ಉಪದೇಶಿಸಲ್ಪಟ್ಟಿತು. ಈ ಸಾಕ್ಷಾತ್ಕಾರವು. ಶಾಸ್ತ್ರಜನ್ಯಜ್ಞಾನದಿಂದಲೇ ಉಂಟಾಗಬೇಕಾಗಿರುವದರಿಂದ ಎಲ್ಲೋ ಒಬ್ಬೊಬ್ಬ ಸುಕೃತಿಗೀಗ ಸಾಧ್ಯವೆಂಬ ಭಾವವು.

**ಭಾಷ್ಯಾರ್ಥವು :—ಏವಮುಕ್ತಸ್ವಭಾವಂ** - ಹೀಗೆ ಹಿಂದೆ ಹೇಳಲ್ಪಟ್ಟ ಸ್ವಭಾವವುಳ್ಳ, (ಇದು ಏನಂ ಎಂಬ ಶಬ್ದಾರ್ಥವು), **ಸ್ವೇತರ ಸಮಸ್ತ ವಸ್ತುವಿಸಜಾತೀಯತಯಾ** - ತನಗಿಂತಲೂ ಭಿನ್ನವಾದ ಇತರ ಸಮಸ್ತವಾದ ಕಣ್ಣಿಗೆ ಕಾಣುವ ಅಚಿದ್ವಸ್ತುಗಳಿಗಿಂತ ವಿಲಕ್ಷಣವಾಗಿರುವದರಿಂದ, ಈ ಅರ್ಥವು, "**ಆಶ್ಚರ್ಯವತ್**" ಎಂಬ ಶಬ್ದದಿಂದ ತೋರಿಬರುತ್ತದೆ; ಅಚಿದ್ದ್ರವ್ಯವೇ ವಿವಿಧ ವಿಚಿತ್ರತೆಯಿಂದ ಆಶ್ಚರ್ಯವಾದುದೇ, ಅವಕ್ಕೂ ವಿಲಕ್ಷಣವಾಗಿ ಅದರೊಂದಿಗೇನೆ ಈ ವಿಭೂತಿಯಲ್ಲಿ ಯಾವಾಗಲೂ ಸೇರಿದ್ದರೂ, ಅವರ ದೋಷಗಳಿಲ್ಲದೆ ಪರಿಣಾಮಾದಿಗಳಿಗೆ ಸಿಕ್ಕದೇ ಇರುವದರಿಂದ "ಆಶ್ಚರ್ಯವತ್ಪಶ್ಯತಿ" ಎಂದು ಹೇಳಲ್ಪಡುತ್ತದೆ. **ಆಶ್ಚರ್ಯವದವಸ್ಥಿತಂ** - ಆಶ್ಚರ್ಯವನ್ನು ಹೊಂದಿರುವದಾಗಿ ಇರುತ್ತಿರುವ, ಇದರಿಂದ ಆಶ್ಚರ್ಯವತ್ ಎಂಬುದು ಕ್ರಿಯಾವಿಶೇಷಣವಲ್ಲವೆಂದು ಹೇಳಲ್ಪಟ್ಟಿತು; **ಅನನ್ತೇಷು ಜನ್ತುಷು** - ಅನೇಕ ಜನ್ಮ ಹೊಂದಿದ ಪ್ರಾಣಿಗಳಲ್ಲಿ, **ಮಹತಾ ತಪಸಾ** - ಮಹತ್ತಾದ ತಪಸ್ಸಿನಿಂದ, **ಕ್ಷೀಣಪಾಪಃ** - ನಷ್ಟವಾದ ಪಾಪಗಳನ್ನುಳ್ಳ, **ಉಪಚಿತಪುಣ್ಯಃ ಕಶ್ಚಿತ್** - ವೃದ್ಧಿ ಹೊಂದಿದ ಪುಣ್ಯವುಳ್ಳ ಯಾವನೋ ಒಬ್ಬನು, **ಅನನ್ತೇಷು ಜಂತುಷು** - ಇತ್ಯಾದಿಗಳಿಂದ ಕಶ್ಚಿತ್ ಎಂಬ ಶಬ್ದದಲ್ಲಿ ತೋರಿಬರುವ ಅರ್ಥವನ್ನು ವಿವರಿಸಿದರು, **ಪಶ್ಯತಿ** – ನೋಡುತ್ತಾನೆ. ಇಂಥ ಸ್ವಭಾವವುಳ್ಳ ಆತ್ಮನೊಬ್ಬನು ನಮ್ಮ ಶರೀರದಲ್ಲಿ ಕಾಣುವವನು ಅತಿ ದುರ್ಲಭವೆಂಬ ತಾತ್ಪರ್ಯವು. ಅನೇಕ ಪ್ರಾಣಿಗಳಲ್ಲಿ **"ಕಷಾಯೇ ಕರ್ಮಭಿಃಪಕ್ವೇ ತತೋಜ್ಞಾನಂ ಪ್ರವರ್ತತೇ"** ಎಂದು ಹೇಳಿರುವ ಹಾಗೆ ನಿತ್ಯಕರ್ಮಾನುಷ್ಠಾನಗಳಿಂದ ಪ್ರತಿಬಂಧಕ ಪಾಪಗಳೆಲ್ಲಾ ಹೋಗಿ ಪರಿಶುದ್ಧನಾದವನಿಗೆ ಜ್ಞಾನವುಂಟಾಗುತ್ತದೆಂದು ಹೇಳಿರುವ ಮೇರೆಗೆ ಪುಣ್ಯಶೀಲನಾಗಿರುವ ಒಬ್ಬನೀಗ ಹಾಗೆ ಕಾಣುವನು ಎಂಬ ತಾತ್ಪರ್ಯವು. **ತಥಾವಿಧಃ ಕಶ್ಚಿತ್**-ಅಂತಹ ಸುಕೃತಿಯಾದ

ಶ್ಯತಿ. ತಥಾವಿಧಃ ಕಶ್ಚಿತ್ ಪರಸ್ಮೈವದತಿ. ಏವಂ ಕಶ್ಚಿದೇವ ಶೃಣೋತಿ. ಶ್ರುತ್ವಾಪ್ಯೇನಂ ಯಥಾವದನವಸ್ಥಿತಂ ತತ್ತ್ವತೋ ನಕಶ್ಚಿದ್ವೇದ. ಚಕಾರಾತ್ ದ್ರಷ್ಟೃವಕ್ತೃಶ್ರೋತೃಷ್ವಪಿ ತತ್ತ್ವತೋ ದರ್ಶನಂ ತತ್ತ್ವತೋ ವಚನಂ ತತ್ತ್ವತ ಶ್ರವಣಂ ದುರ್ಲಭಮಿತ್ಯುಕ್ತಂ ಭವತಿ. ||೨೯||

---

ಮೂ. ದೇಹೀ ನಿತ್ಯ ಮವಧ್ಯೋಯಂ ದೇಹೇಸರ್ವಸ್ಯ ಭಾರತ |
ತಸ್ಮಾ ತ್ಸರ್ವಾಣಿ ಭೂತಾನಿ ನತ್ವಂ ಶೋಚಿತು ಮರ್ಹಸಿ ೩೦.

---

ಯಾವನೋ ಒಬ್ಬನು, ಪರಸ್ಮೈ ವದತಿ – ಇನ್ನೊಬ್ಬನಿಗೆ ಆತ್ಮನು ಆಶ್ಚರ್ಯ ವಸ್ತುವೆಂದು ಹೇಳುತ್ತಾನೆ. ಮೂಲದಲ್ಲಿ ಸುಮ್ಮನೆ "ವದತಿ" ಎಂದಿರುವಾಗ "ಪರಸ್ಮೈ ವದತಿ" ಎಂದು ಹೇಗೆ ಭಾಷ್ಯವೆಂದರೆ, ಇನ್ನೊಬ್ಬನಿಗೆ ಎಂಬರ್ಥವು ಸ್ವತಃ ಸೂಚಿತವಾಗುತ್ತದೆ. ಎಂಬ ಭಾವವು. "ಕಶ್ಚಿತ್" ಎಂಬ ಶಬ್ದ ಪ್ರಯೋಗದಿಂದಲೂ ಪರಸ್ಮೈ ಎಂಬುದರಿಂದಲೂ ಜೀವಾನನ್ತ್ಯವು ಹೇಳಲ್ಪಟ್ಟಿತು. ಏವಂ ಕಶ್ಚಿದೇವ ಶೃಣೋತಿ - ಆತ್ಮನು ಈ ಪ್ರಕಾರವಾದವನೇ ಎಂಬದಾಗಿ ಯಾವನೋ ಒಬ್ಬ ಸುಕೃತಿಯು ಕೇಳಿ ತಿಳಿಯುತ್ತಾನೆ. ಶ್ರುತ್ವಾಪ್ಯೇನಂ–ಹೀಗೆ ಕೇಳಿದರೂ, ಈ ಆತ್ಮನನ್ನು, ಯಥಾವದನವಸ್ಥಿತಂ - ವಾಸ್ತವವಾಗಿ ಹೇಗೆ ಇದ್ದಾನೋ, ಅವನನ್ನು, ತತ್ತ್ವತಃ – ಯಥಾರ್ಥವಾಗಿ, ನಕಶ್ಚಿದ್ವೇದ - ಯಾವನೊಬ್ಬನೂ ತಿಳಿಯಲಿಲ್ಲವು, ಚಕಾರಾತ್ - ಮೂಲದಲ್ಲಿ ಚಕಾರವಿರುವದರಿಂದ ದ್ರಷ್ಟೃ ವಕ್ತೃ ಶ್ರೋತೃಷ್ವಪಿ - ಹಾಗೆ ನೋಡುವವರಲ್ಲೂ ಹೇಳುವವರಲ್ಲೂ ಕೇಳುವವರಲ್ಲೂ ಕೂಡ, ತತ್ತ್ವತಃ ಇತ್ಯಾದಿ - ಯಥಾರ್ಥವಾಗಿ ನೋಡೋಣವೂ, ಯಥಾರ್ಥವಾಗಿ ಹೇಳೋಣವೂ, ಕೇಳೋಣವೂ, ದುರ್ಲಭಮಿತ್ಯುಕ್ತಂ ಭವತಿ – ದುರ್ಲಭವೆಂದು ಹೇಳಲ್ಪಟ್ಟಿತು. ಇದರಿಂದ ಚಕಾರಕ್ಕೆ ಸಮುಚ್ಚಯಾರ್ಥವು ಹೇಳಲ್ಪಟ್ಟಿತು. ಆತ್ಮಜ್ಞಾನವುಂಟಾಗಿ ಆತ್ಮನು ಆಶ್ಚರ್ಯವಸ್ತುವೆಂದು ತಿಳಿಯದವನು "ಜ್ಞಾನೇನ ಹೀನಃ ಪಶುಭಿಸ್ಸಮಾನಃ" ಎನ್ನುವಹಾಗೆ ಪಶುವಿಗೆ ಸಮಾನನೆಂದು ತಿಳಿಸುವದಕ್ಕಾಗಿ ಭಾಷ್ಯದಲ್ಲಿ "ಅನನ್ತೇಷು ಜನ್ತುಷು" ಎಂಬ ಪ್ರಯೋಗವು. ದೇಹಾತಿರಿಕ್ತನಾಗಿ ಆತ್ಮನು ದೇಹದಲ್ಲಿದ್ದಾನೆಂದು ಕಾಣುವವನು ದುರ್ಲಭವು, ಆ ಆತ್ಮನನ್ನು ಯಥಾವತ್ತಾದ ಸ್ವರೂಪವುಳ್ಳವನೆಂದು ಕಾಣುವವನು ಇನ್ನೂ ದುರ್ಲಭವು. ಹಾಗೆ ಕೆಲವರಿದ್ದರೂ, ತಾನು ಕಂಡಿದುದನ್ನು ಉಪದೇಶಿಸುವನು ಇನ್ನೂ ದುರ್ಲಭವು, ಹಾಗೆಯೇ ಆತ್ಮನ ಸ್ವರೂಪದ ಸಕಲ ರಹಸ್ಯವನ್ನೂ ಬೋಧಿಸುವವನು ದುರ್ಲಭನೆಂದು ಹೇಳತಕ್ಕದ್ದೇನಿರುತ್ತದೆ? ಹಾಗೆ ಬೋಧಿಸಿದರೂ ಅದನ್ನು ಕೇಳಿ ತಿಳಿಯುವವನೂ ದುರ್ಲಭವು; ಉಪದೇಶಿಸಿದರೂ ಯಥಾವತ್ತಾಗಿ ಕೇಳಿ ತಿಳಿಯುವವನು ಇನ್ನೂ ದುರ್ಲಭವೆಂದು ಹೇಳತಕ್ಕದ್ದೇನಿದೆ ಎಂಬುದು ತಾತ್ಪರ್ಯವು. ಇಂತಹ ಅಜ್ಞಾನವಿರುವುದು ಸಾಧಾರಣವೇ, ಜ್ಞಾನವಿರುವದು ಪರಮ ದುರ್ಲಭವು. ಆದುದರಿಂದ ನಿನ್ನೊಬ್ಬನ ವಿಷಯದಲ್ಲೇ ನಿಂದಿಸಿ ಹೇಳುವದಿಲ್ಲವು. ಇಂತಹ ಅಜ್ಞಾನವು ಸಾಧಾರಣವೆಂದು ಹೇಳಿದಂತಾಯಿತು.

**ಮೂಲಕ್ಕೆ ಅರ್ಥವು :**—ಭೀಷ್ಮ ದ್ರೋಣಾದಿಗಳನ್ನು ಕುರಿತು ಶೋಕಿಸತಕ್ಕದ್ದಲ್ಲವೆಂದು ಹೇಳಿದುದು ಸಾರ್ವತ್ರಿಕವಾಗಿ ಹೇಳಿದುದೆಂದು ತಿಳಿದು ನೀನು ಯಾರನ್ನು ಉದ್ದೇಶಿಸಿಯೂ ಶೋಕಿಸತಕ್ಕದ್ದಲ್ಲವೆಂದು ಉಪದೇಶಿಸುತ್ತಾರೆ :—

**ಹೇ ಭಾರತ** – ಓ ಭರತ ಕುಲೋತ್ಪನ್ನನೇ, **ಸರ್ವಸ್ಯ** - ಸಮಸ್ತರ, **ದೇಹೇ** - ದೇಹವು,

**ಭಾ. ಸರ್ವಸ್ಯ – ದೇವಾದಿ ದೇಹಿನೋ ದೇಹೇ ವಧ್ಯಮಾನೇಪ್ಯಯಂ ದೇಹೀ ನಿತ್ಯ ಮನವಧ್ಯೋ ಮಂತವ್ಯಃ. ತಸ್ಮಾತ್ ಸರ್ವಾಣಿ-ದೇವಾದಿ ಸ್ಥಾವರಾನ್ತಾನಿ ಭೂತಾನಿ ವಿಷ ಮಾಕಾರಾಣ್ಯಪ್ಯುಕ್ತೇನ ಸ್ವಭಾವೇನಸ್ವರೂಪತಸ್ಸಮಾನಾನಿ ನಿತ್ಯಾನಿಚ. ದೇಹ ಗತಂತು ವೈಷಮ್ಯ ಮನಿತ್ಯತ್ವಾಚ್ಚ. ತತೋ ದೇವಾದೀನಿ ಸರ್ವಾಣಿ ಭೂತಾನ್ಯುದ್ದಿಶ್ಯ ನಶೋಚಿತು ಮರ್ಹಸಿ ; ನಕೇವಲಂ ಭೀಷ್ಮಾದೀನ್ ಪ್ರತಿ ||೩೦||**

---

(**ವಧ್ಯಮಾನೇಪಿ** - ಕೊಲ್ಲಲ್ಪಟ್ಟರೂ ಕೂಡ ಎಂದು ಅಧ್ಯಾಹಾರ ಮಾಡಿಕೊಳ್ಳತಕ್ಕದ್ದು, ಮುಂದೆ ಆತ್ಮನು ಅವಧ್ಯಃ ಎಂದಿರುವವರಿಂದ ಹಾಗೆ ಅಧ್ಯಾಹಾರಮಾಡಿಕೊಳ್ಳಬೇಕೆಂಬುದು ಸೂಚಿತವು.) **ಅಯಂದೇಹೀ** - ಈ ದೇಹವುಳ್ಳ ಆತ್ಮನು, **ನಿತ್ಯಂ** – ಸದಾ, **ಅವಧ್ಯಃ** - ವಧಿಸಲ್ಪಡುವವನಲ್ಲವು, **ತಸ್ಮಾತ್** - ಆ ಕಾರಣದಿಂದ, **ಸರ್ವಾಣಿ ಭೂತಾನಿ** – ಸಮಸ್ತ ಪ್ರಾಣಿಗಳನ್ನೂ ಕುರಿತು ಇಲ್ಲಿ ಭೂತಶಬ್ದವು ಪ್ರಾಣಿಯನ್ನು ಬೋಧಿಸುತ್ತದೆ ; **ಶೋಚಿತುಂ** – ದುಃಖಿಸಲು, **ನಾರ್ಹಸಿ** – ಯೋಗ್ಯನಾಗುವದಿಲ್ಲವು. || ೩೯ ||

**ಭಾಷ್ಯಾರ್ಥವು:—ಸರ್ವಸ್ಯ - ದೇವಾದಿ ದೇಹಿನಃ** - ಸರ್ವಸ್ಯ ಎಂದರೆ ದೇವಾದಿ ಸಮಸ್ತ ದೇಹಿಗಳ, **ದೇಹೇ ವಧ್ಯಮಾನೇಪಿ** - ದೇಹವು ವಧಿಸಲ್ಪಟ್ಟರೂ ಕೂಡ, **ಅಯಂದೇಹೀ** - ಈ ದೇಹದಲ್ಲಿರುವ ಆತ್ಮನಾದರೋ, **ನಿತ್ಯಮನವಧ್ಯೋಮಂತವ್ಯಃ** - ಸರ್ವಕಾಲದಲ್ಲೂ ಕೊಲ್ಲಲ್ಪಡ ತಕ್ಕವನಲ್ಲವೆಂಮ ತಿಳಿಯತಕ್ಕದ್ದು; **ವಧ್ಯಮಾನೇ** ಎಂದು ಏಕೆ ಅಧ್ಯಾಹಾರ ಮಾಡಿಕ್ಕೊಂಡರೆಂದರೆ, ಹಾಗಿಲ್ಲವೆ ಅರ್ಥಮಾಡಿದರೆ **ಸರ್ವಸ್ಯದೇಹೇ** - ಸಮಸ್ತರ ದೇಹದಲ್ಲೂ ಇರುವ, **ದೇಹೀ**– ದೇಹದಲ್ಲಿರುವ ಆತ್ಮಾ ಎಂದು ಅರ್ಥ ಹೇಳಬೇಕಾಗುತ್ತದೆ, **ದೇಹೀ** ಎಂಬ ಶಬ್ದದಿಂದಲೇ ದೇಹದಲ್ಲಿರುವ ಆತ್ಮಾ ಎಂಬರ್ಥ ಉಂಟಾಗುವದರಿಂದ, **ಸರ್ವಸ್ಯದೇಹೇ** ಎಂಬ ಪ್ರಯೋಗವು ಆಗ ನಿರರ್ಥಕವಾಗುತ್ತದೆ, ಆದುದರಿಂದ **ವಧ್ಯಮಾನೇಪಿ** ಎಂದು ಅಧ್ಯಾಹಾರಮಾಡಿಕೊಂಡರೆ ಆಗ **ಸರ್ವಸ್ಯ ದೇಹೇ** ಎಂಬ ಪ್ರಯೋಗವು ಸಾರ್ಥಕ್ಯವನ್ನು ಹೊಂದುತ್ತದೆ. **ತಸ್ಮಾತ್** - ಆ ಕಾರಣದ ದೆಶೆಯಿಂದ, **ಸರ್ವಾಣಿ** ಎಂದರೆ **ದೇವಾದಿ ಸ್ಥಾವರಾಂತಾನಿ** - ಸಮಸ್ತ ದೇವಾದಿ ಸ್ಥಾವರಾಂತಗಳಾದ, ದೇವ ತಿರ್ಯಙ್ ಮನುಷ್ಯ ಸ್ಥಾವರಗಳಾದ, **ಭೂತಾನಿ** - ಪ್ರಾಣಿಗಳೆಲ್ಲಾ, **ವಿಷಮಾ ಕಾರಾಣ್ಯಪಿ** - ವ್ಯತ್ಯಸ್ತವಾದ ಶರೀರಗಳನ್ನು ಹೊಂದಿದ್ದರೂ, **ಉಕ್ತೇನ ಸ್ವಭಾವೇನ** ಮೇಲೆ ಹೇಳಲ್ಪಟ್ಟ ಸೂಕ್ಷ್ಮತ್ವ, ಅಚ್ಛೇದ್ಯತ್ವ ಮೊದಲಾದ ಸ್ವಭಾವದಿಂದ, **ಸ್ವರೂಪತಃ ಸಮಾನಾನಿ** – ಸ್ವರೂಪಮೂಲಕವಾಗಿ ಸಮಾನರು ; ಮತ್ತು **ನಿತ್ಯಾನಿಚ** - ನಿತ್ಯರಾದವರು **ದೇಹಗತಂತು ವೈಷಮ್ಯಂ** - ದೇಹದಲ್ಲಿ ತೋರಿಬರುವ ವ್ಯತ್ಯಾಸವಾದರೋ **ಅನಿತ್ಯತ್ವಾಚ್ಚ** - ದೇಹದ ಅನಿತ್ಯತ್ವ ಪ್ರಯುಕ್ತವಾದುದು. ದೇವಾದಿ ಸನ್ನಿವೇಶ ವೈಷಮ್ಯವು ದೇಹಗತವಾದುದು ; ಸುಖದುಃಖಾದಿಗಳು ಆತ್ಮಗತವಾದರೂ, ಆಯಾ ದೇಹಗಳೆಂಬ ಉಪಾಧಿಗಳಿಂದ ವ್ಯತ್ಯಸ್ತವಾದ ಧರ್ಮಭೂತ ಜ್ಞಾನದ ಅವಸ್ಥಾ ವೈಷಮ್ಯ ಪ್ರಯುಕ್ತವಾದುವು. ಚೇತನನನ್ನೇ ಮನುಷ್ಯನು ದೇವನು ಎಂದು ಹೇಳುವದು ಈ ದೇಹವು ಆತನಿಗೆ ಅಪೃಥಕ್ಸಿದ್ಧ ವಿಶೇಷಣವಾದುದರಿಂದ ಹಾಗೆ ವ್ಯಪದೇಶವು, **ತತಃ** - ಆದುದರಿಂದ, **ದೇವಾದೀನಿ ಸರ್ವಾಣಿ ಭೂತಾನ್ಯುದ್ದಿಶ್ಯ** - ದೇವ ಮನುಷ್ಯ ಮೊದಲಾದ ಕ್ಷೇತ್ರಜ್ಞರನ್ನು ಕುರಿತು, **ನಶೋಚಿತು ಮರ್ಹಸಿ** - ನೀನು ಶೋಕಿಸಲು ಯೋಗ್ಯನಲ್ಲವು ; **ನಕೇವಲಂ ಭೀಷ್ಮಾದೀನ್‌ಪ್ರತಿ** - ಕೇವಲಭೀಷ್ಮಾದಿಗಳನ್ನು ಕುರಿತು ಶೋಕಿಸತಕ್ಕದ್ದಲ್ಲವು ಎಂಬುದು ಮಾತ್ರವೇ ಅಲ್ಲವು.

ಮೂ. ಸ್ವಧರ್ಮಮಪಿಚಾವೇಕ್ಷ್ಯ ನವಿಕಂಪಿತುಮರ್ಹಸಿ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋನ್ಯತ್ ಕ್ಷತ್ರಿಯಸ್ಯ ನವಿದ್ಯತೇ　　೩೧.

ಭಾ. ಅಪಿಚೇದಂ ಪ್ರಾರಬ್ಧಂ ಯುದ್ಧಂ ಪ್ರಾಣಿ ಮಾರಣಮಪಿ ಅಗ್ನೀಷೋಮೀಯಾದಿವತ್ ಸ್ವಧರ್ಮಮವೇಕ್ಷ್ಯ ನವಿಕಂಪಿತು ಮರ್ಹಸಿ. ಧರ್ಮ್ಯಾನ್ನ್ಯಾಯತಃ ಪ್ರವೃತ್ತಾದ್ಯುದ್ಧಾ

**ಮೂಲಕ್ಕೆ ಅರ್ಥವು:—** ಹಿಂದೆ ಆತ್ಮನ ಸ್ವರೂಪ ಸ್ವಭಾವಗಳ ಪರಿಶೀಲನ ಮುಖೇನ ಶೋಕಕ್ಕೆ ಕಾರಣವಿಲ್ಲವೆಂದು ಹೇಳಿದರು. ಧರ್ಮದಲ್ಲಿ ಅಧರ್ಮವೆಂಬ ಭ್ರಮೆಯನ್ನು ಮುಂದಿನ ಶ್ಲೋಕಗಳಿಂದ ನಿವರ್ತಿಸುತ್ತಾರೆ. **ಅಪಿಚ** – ಹಿಂದೆ ಹೇಳಿದ ಕಾರಣಗಳು ಮಾತ್ರವೇ ಅಲ್ಲವು, ಇನ್ನೂ ಹೇಳತಕ್ಕದ್ದುಂಟು ಎಂಬರ್ಥವು, **ಸ್ವಧರ್ಮಂ ಅವೇಕ್ಷ್ಯ** - ಈಗ ಪ್ರಾರಂಭಿಸಿದ ಯುದ್ಧವು ಸ್ವಧರ್ಮವಾದುದೆಂದೂ ತಿಳಿದು, ಇಲ್ಲಿ ಸ್ವಧರ್ಮವು ಕ್ಷತ್ರಿಯ ಧರ್ಮವು, ಇದು ಬ್ರಾಹ್ಮಣ ಮೊದಲಾದವರಿಗೆ ಸ್ವಧರ್ಮವಾಗದು, ಕ್ಷತ್ರಿಯನಿಗೆ ಧರ್ಮಯುದ್ಧವು ಸ್ವಧರ್ಮವು, **ವಿಕಂಪಿತುಮ್** - ವಿಶೇಷವಾಗಿ ನಡಗುವದಕ್ಕೆ, ಭಯಪಡುವದಕ್ಕೆ, **ನಾರ್ಹಸಿ** – ನೀನು ಯೋಗ್ಯನಲ್ಲವು; ಏತಕ್ಕೆಂದರೆ? ಉತ್ತರಾರ್ಧದಿಂದ ಕಾರಣವನ್ನು ಹೇಳುತ್ತಾರೆ:—**ಧರ್ಮ್ಯಾತ್** - ಧರ್ಮವನ್ನು ಬಿಟ್ಟಲ್ಲದೆ ಇರುವ, ಧರ್ಮದಿಂದ ಕೂಡಿಕೊಂಡಿರುವ, **ಯುದ್ಧಾತ್** - ಯುದ್ಧಕ್ಕಿಂತಲೂ, **ಶ್ರೇಯಃ**— ಶ್ರೇಯಸ್ಕರವಾದುದು, **ಅನ್ಯತ್** - ಬೇರೆ ಯಾವುದೂ, **ಕ್ಷತ್ರಿಯಸ್ಯ** - ಕ್ಷತ್ರಿಯನಿಗೆ, **ನವಿದ್ಯತೇ**- ಇರುವದಿಲ್ಲವು, ಈ ಉತ್ತರಾರ್ಧದಿಂದ ಸ್ವವರ್ಣೋಚಿತ ವ್ಯಾಪಾರವು ಅಧರ್ಮವೆಂದಿಗೂ ಅಲ್ಲವೆಂದು ಮಾತ್ರ ಹೇಳದೆ ಮುಖ್ಯವಾಗಿ ಕ್ಷತ್ರಿಯನಿಗೆ ಧರ್ಮಯುದ್ಧಕ್ಕಿಂತ ಶ್ರೇಯಸ್ಕರವಾದುದು ಯಾವುದೂ ಇಲ್ಲವೆಂದೂ ಹೇಳಲ್ಪಟ್ಟಿತು, ಶ್ರೀರಾಮನು ವಾಲಿಯನ್ನು ನಿಗ್ರಹಿಸಿದಾಗ ಹಾಗೆಯೇ ಹೇಳಿರುತ್ತಾನೆ **"ನಹಿ ತೇ ಮರ್ಷಯೇ ಪಾಪಂ ಕ್ಷತ್ರಿಯೋಹಂ ಕುಲೋದ್ಭವಃ"** ಸತ್ಕುಲ ಪ್ರಸೂತನಾಗಿ ವೀರ ಕ್ಷತ್ರಿಯನಾದ ನಾನು ಅಧರ್ಮಿಯಾದ ನಿನ್ನ ಪಾಪವನ್ನು ಸಹಿಸಲಾರೆನು. ಆದುದರಿಂದ ನಿನ್ನನ್ನು ದಂಡಿಸಿರುವೆನು ಎಂದು ಹೇಳಿರುತ್ತಾರೆ. ಕ್ಷತ್ರಿಯನು ಶರವನ್ನು ಹಿಡಿದಿರುವದು ದುಷ್ಟರನ್ನು ಶಿಕ್ಷಿಸುವದಕ್ಕಾಗಿಯೇ ಎಂಬ ಭಾವವು. ಇಕ್ಷ್ವಾಕು ಕುಲನಾಥನು ಧರ್ಮವೇ ಮೂರ್ತೀಭವಿಸಿದಂತಿರುವವನು; ಅಂತಹ ವೀರ ಕ್ಷತ್ರಿಯನು **"ಧನ್ವೀ"** ಯಾಗಿರುವದು **"ಅಧರ್ಮ ವಿರತಿ"** ಗಾಗಿಯೇ ಎಂಬ ಭಾವವು. ಧನಾಶೆ ರಾಜ್ಯದಾಶೆಯಿಂದ ಮಾಡಿದ ಯುದ್ಧವು ಧರ್ಮ ಯುದ್ಧವಾಗಲಾರದು, ಓಡಿ ಹೋಗುತಿದ್ದವನು, ಶಸ್ತ್ರವಿಲ್ಲದವನು, ಶರಣಾಗತನಾದವನು ಇಂತವರೊಂದಿಗೆ ಯುದ್ಧವೂ ಧರ್ಮಯುದ್ಧವಾಗಲಾರದು, ಹಾಗಲ್ಲದೆ ತನ್ನ ರಾಜ್ಯಾಪಹಾರಿಯಾಗಿಯೂ ಸಭೆಯಲ್ಲಿ ತನ್ನ ಧರ್ಮಪತ್ನಿಯ ಸೀರೆಯನ್ನು ಸೆಳೆಸಿದ ದುರ್ಮಾರ್ಗಿಯಾಗಿಯೂ ಇರುವ ಆತತಾಯಿ ಯೊಂದಿಗೆ ಯುದ್ಧವು ಎಂದಿಗೂ ಅಧರ್ಮವಾಗಲಾರದೆಂಬ ಭಾವವು. ಇಲ್ಲಿ ಸ್ವಧರ್ಮವು ಎಂದರೆ ಕ್ಷತ್ರಿಯಧರ್ಮವು, ಹೀಗೆ ಹೇಳಿದುದರಿಂದ ಚಾತುರ್ವರ್ಣ್ಯದ ವ್ಯವಸ್ಥೆಯೂ ಕೂಡ ಉಪದೇಶ ಕೋಟಿಯಲ್ಲೇ ಸೇರಿದುದೇ ಎಂದು ಈ ಅನೋಘ ಗ್ರಂಥದಲ್ಲಿ ತೋರುವಾಗ ಸನಾತನ ಧರ್ಮಕ್ಕೆ ವಿರುದ್ಧವಾಗಿ ಕೆಲವರು ಅರ್ಥಮಾಡುತ್ತಿರುವದು ಪರಮಾಶ್ಚರ್ಯಕರವಾಗಿರುತ್ತದೆ.

**ಭಾಷ್ಯಾರ್ಥವು :—** ಅಪಿಚ-ಇಷ್ಟೇ ಅಲ್ಲವು, ಇನ್ನೂ ಹೇಳತಕ್ಕದ್ದುಂಟೆಂಬ ಭಾವವು. ಇದಂ ಪ್ರಾರಬ್ಧಂ ಯುದ್ಧಂ ಪ್ರಾಣಿ ಮಾರಣಮಪಿ-ಈ ಆರಂಭಿಸಿರುವ ಯುದ್ಧವು, ಪ್ರಾಣಿಗಳಿಗೆ ಮರಣವನ್ನುಂಟುಮಾಡುವದಾದರೂ, ಅಗ್ನೀಷೋಮೀಯಾದಿವತ್-ಅಗ್ನೀಷೋಮೀಯಾದಿ ಯಜ್ಞಗಳ

**ಭಾ.** ದನ್ಯನ್ನ ಹಿ ಕ್ಷತ್ರಿಯಸ್ಯ ಶ್ರೇಯೋ ವಿದ್ಯತೇ. (೧) "ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ। ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಂ" ಇತಿ ಹಿ ವಕ್ಷ್ಯತೇ. ಅಗ್ನೀಷೋಮೀಯಾದಿಷು ಚ ನ ಹಿಂಸಾ ಪಶೋಃ; ನಿಹೀನತರ ಛಾಗಾದಿ ದೇಹ ಪರಿತ್ಯಾಗ ಪೂರ್ವಕ ಕಲ್ಯಾಣತರದೇಹ ಸ್ವರ್ಗಾದಿ ಪ್ರಾಪಕತ್ವ ಶ್ರುತೇಃ ಸಂಜ್ಞಪನಸ್ಯ, (೨) "ನವಾ ಉವೇತನ್ಮ್ರಿಯಸೇ ನರಿಷ್ಯಸಿ ದೇವಾಂ ಇದೇಷಿ

---

ಹಾಗೆ, **ಸ್ವಧರ್ಮಂ** - ಸ್ವಕೀಯವಾದ ಕ್ಷತ್ರಿಯಧರ್ಮವನ್ನು **ಅವೇಕ್ಷ್ಯ** - ಗಮನಿಸಿದವನಾಗಿ, **ನವಿಕಮ್ಪಿತು ಮರ್ಹಸಿ** - ಭಯದಿಂದ ನಡಗುವ ಆವಶ್ಯಕವಿಲ್ಲವು. "ಸ್ವಧರ್ಮ" ಶಬ್ದಕ್ಕೆ, **ಇದಂ ಪ್ರಾರಬ್ಧಂ ಯುದ್ಧಂ** - ಎಂಬ ತಾತ್ಪರ್ಯಾರ್ಥವು, ಧರ್ಮ್ಯಾದ್ಧಿಯುದ್ಧಾತ್ ಎಂದು ಮುಂದಿರುವದರಿಂದ ತೋರಿಬರುತ್ತದೆ; **ನವಿಕಂಪಿತುಂ** ಎಂದಿರುವದರಿಂದ ಕಂಪನಕ್ಕೆ ಕಾರಣವು ಯುದ್ಧವು ಪ್ರಾಣಿಮಾರಣ ಮಾಡುದರಿಂದ, ಪ್ರಾಣಿ ಮಾರಣಮುಪಿ ಎಂಬ ಪ್ರಯೋಗವು. ಪ್ರಾಣಿಮಾರಣವಾದರೂ ನಡುಗದೇ ಇರುವದಕ್ಕೆ ಒಂದು ನಿದರ್ಶನರೂಪದಲ್ಲಿ **ಅಗ್ನೀಷೋಮೀಯಾದಿವತ್** ಎಂದು ಹೇಳಿರುತ್ತಾರೆ, ಇಂತಹ ಯಜ್ಞದಲ್ಲಿ ಪ್ರಾಣಿಮಾರಣ ರೂಪವಾದ ಪಶುವಧೆಯು ಇದ್ದರೂ ಯಜ್ಞವನ್ನು ಹೇಗೆ ಮಾಡತಕ್ಕದ್ದೇ ಧರ್ಮವೋ, ಹಾಗೆಯೇ ಇಲ್ಲಿಯೂ ಯುದ್ಧವು ಧರ್ಮವೇ ಎಂಬ ಭಾವವು. **ಧರ್ಮ್ಯಾತ್** ಎಂಬುದಕ್ಕೆ **ನ್ಯಾಯತಃ ಪ್ರವೃತ್ತಾತ್** ಎಂದು ಅರ್ಥ ಹೇಳಿದರು, ನ್ಯಾಯವಾಗಿ ಪ್ರವರ್ತಿಸಲ್ಪಟ್ಟ, **ಯುದ್ಧಾತ್** - ಯುದ್ಧಕ್ಕಿಂತಲೂ, **ಅನ್ಯತ್**-ಬೇರೆ, **ನಹಿಕ್ಷತ್ರಿಯಸ್ಯ ಶ್ರೇಯೋ ವಿದ್ಯತೇ** - ಕ್ಷತ್ರಿಯನಿಗೆ ಶ್ರೇಯೋರೂಪವಾದುದು ಇರುವದಿಲ್ಲವು ಎಂದರೆ ಧರ್ಮಯುದ್ಧವೀಗ ಕ್ಷತ್ರಿಯನಿಗೆ ಪರಮಶ್ರೇಯಸ್ಕರವಾದುದೆಂಬ ಭಾವವು. ಹಿ ಶಬ್ದವು ಮುಂದೆ ಇರುವ ಪ್ರಮಾಣ ಬಲವನ್ನು ಸೂಚಿಸುತ್ತದೆ; "**ಶೌರ್ಯಂ**-ಯುದ್ಧದಲ್ಲಿ ನಿರ್ಭಯವಾಗಿ ಪ್ರವೇಶಿಸುವ ಸಾಮರ್ಥ್ಯವು; **ತೇಜಃ** – ಶತ್ರುಗಳಿಂದ ಪರಾಜಯ ಹೊಂದದಿರೋಣವು, **ಧೃತಿಃ** – ಪ್ರಾರಂಭಿಸಿದ ಕಾರ್ಯಕ್ಕೆ ವಿಘ್ನಗಳೊದಗಿದರೂ ಅವುಗಳನ್ನು ನಿರಾಕರಿಸಿ ಕಾರ್ಯವನ್ನು ಪೂರೈಸುವ ಶಕ್ತಿಯು, **ದಾಕ್ಷ್ಯಂ** - ಸಮಸ್ತ ಕಾರ್ಯಗಳನ್ನೂ ಹಿಡಿದು ಸಾಧಿಸುವ ಶಕ್ತಿಯು, **ಯುದ್ಧೇಚಾಪ್ಯಪಲಾಯನಂ** – ಯುದ್ಧದಲ್ಲಿ ತನಗೆ ಮರಣ ನಿಶ್ಚಯವಾಗಿದ್ದರೂ ಬೆಂಗೊಟ್ಟು ಓಡಿ ಹೋಗದಿರೋಣವು, **ದಾನಂ** – ತನ್ನ ಧನವನ್ನು ಇತರರ ವಶಮಾಡಿ ಕೊಡೋಣವು, **ಈಶ್ವರಭಾವಶ್ಚ** -ಇತರರನ್ನು ನಿಯಮಿಸುವ ಶಕ್ತಿಯೂ ಇವೆಲ್ಲಾ, **ಕ್ಷತ್ರಿಯಸ್ಯ ಸ್ವಭಾವಜಂ ಕರ್ಮ** – ಕ್ಷತ್ರಿಯನಿಗೆ ಆತನ ಸ್ವಭಾವದಿಂದುತ್ಪನ್ನವಾದ ಕರ್ಮವು, **ಇತಿ ಹಿವಕ್ಷ್ಯತೇ** – ಹೀಗಲ್ಲವೇ ಮುಂದೆ ಇದೇ ಗ್ರಂಥದಲ್ಲೇ ಹೇಳಲ್ಪಡುತ್ತದೆ. ತಾವು ಹಿಂದೆ ಹೇಳಿದ ಅಗ್ನೀಷೋಮೀಯಾದಿ ದೃಷ್ಟಾಂತವನ್ನೇ ಉಪಪಾದಿಸಿ ವ್ಯಕ್ತಪಡಿಸುತ್ತಾರೆ:-**ಅಗ್ನೀಷೋಮೀಯಾದಿ ಇತ್ಯಾದಿ**- ಅಗ್ನೀಷೋಮೀಯಾದಿ ಯಜ್ಞಗಳಲ್ಲಿಯಾದರೋ ಪಶುವಿಗೆ ಏನೂ ಹಿಂಸೆಯಿಲ್ಲವು. ಪಶುವನ್ನು ಕೊಲ್ಲುವಾಗ ಅದಕ್ಕೆ ಹಿಂಸೆಯಲ್ಲವೋ ಎಂಬಾಕ್ಷೇಪದ ಸಮಾಧಾನಕ್ಕಾಗಿ ಕಾರಣವನ್ನು ತಿಳಿಸುತ್ತಾರೆ:—**ನಿಹೀ ನತರ ಇತ್ಯಾದಿ**-ಅತಿ ನಿಕೃಷ್ಟವಾದ ಮೇಕೆಯೇ ಮೊದಲಾದ ದೇಹವನ್ನು ಬಿಡುವದರಮೂಲಕವಾಗಿ ತುಂಬಾ ಮಂಗಳಕರವಾದ ದೇಹಪ್ರಾಪ್ತಿ ಮತ್ತು ಸ್ವರ್ಗಾದಿ ಭೋಗ ಇವುಗಳುಂಟಾಗುತ್ತವೆ ಎಂದು ಅಲ್ಲಿ ಸಂಜ್ಞಪನ ಮನ್ತ್ರ ಶ್ರುತಿಯು ಹೇಳುವದರಿಂದ ಅದು ಹಿಂಸೆಯಾಗಿ ಭಾವಿಸಕೂಡದೆಂಬ ಭಾವವು. "**ಸಂಜ್ಞಪನ**" ಮಂತ್ರವೆಂದರೆ ಪಶುವನ್ನು ಕೊಲ್ಲುವಾಗ

---

(೧) ಗೀ. ೧೮. ೪೩. (೨) ಯಜು. ೪. ೬. ೯. ೪೬.

ಭಾ. ಪಥಿಭಿಸ್ಸುಗೇಭಿಃ, ಯತ್ರ ಯನ್ತಿ ಸುಕೃತೋ ನಾಪಿ ದುಷ್ಕೃತಃ, ತತ್ರತ್ವಾ ದೇವಸ್ಸ ವಿತಾದಧಾತು" ಇತಿ ಶ್ರೂಯತೇ. ಇಹ ಚ ಯುದ್ಧೇ ಮೃತಾನಾಂ ಕಲ್ಯಾಣತರ ದೇಹಾದಿ ಪ್ರಾಪ್ತಿ ರುಕ್ತಾ, "ವಾಸಾಂಸಿ ಜೀರ್ಣಾನಿ ಯಥಾವಿಹಾಯ ನವಾನಿ ಗೃಹ್ಣಾತಿ" ಇತ್ಯಾದಿನಾ. ಅತಶ್ಚಿಕಿತ್ಸಕ ಶಲ್ಯಾದಿಕರ್ಮ ಆತುರಸ್ಯೇ ವಾಸ್ಯರಕ್ಷಣ ಮೇವಾಗ್ನೀಷೋಮೀಯಾದಿಷು ಸಂಜ್ಞಪನಂ ॥ ೩೧ ॥

---

ಹೇಳುವ ಮಂತ್ರವು. ಆ ಶ್ರುತಿಯು ಹೇಳುತ್ತದೇನಂದರೆ:—"ಓ ಪಶುವೇ, ತ್ವಂ - ನೀನು, ಏತತ್ - ಇದು ಕ್ರಿಯಾ ವಿಶೇಷಣವು, ಈ ಸಂಜ್ಞಪನ ವ್ಯಾಪಾರದಿಂದ, ನವಾಉ ಮ್ರಿಯಸೇ – ಸರ್ವಥಾ ಸಾಯುವದಿಲ್ಲವು, ಆ ಕಾರಣದಿಂದಲೇ ನರಿಷ್ಯಸಿ - ನೀನು ನಾಶವಾಗುವದೂ ಇಲ್ಲವು; ಮತ್ತೇನೆಂದರೆ, ಸುಗೇಭಿಃ - ಸುಖವಾಗಿ ಹೋಗಲು ಯೋಗ್ಯವಾದ, ಪಥಿಭಿಃ - ಮಾರ್ಗಗಳಿಂದ ದೇವಾಂ ಇಪೇಷಿ - ದೇವತೆಗಳನ್ನೇ ಹೊಂದುತ್ತೀಯೆ. ಯಸ್ಮಿನ್ - ಯಾವ ಉತ್ತಮಲೋಕ ದಲ್ಲಿ, ಸುಕೃತಃ - ಪುಣ್ಯವಂತರಾದ ಸತ್ಕರ್ಮಿಗಳು, ಯನ್ತಿ - ಹೋಗುತ್ತಾರೆಯೋ, ದುಷ್ಕೃತಃ– ಪಾಪಿಗಳು, ನಾಪಿಯನ್ತಿ-ಹೋಗುವದಿಲ್ಲವೋ, ತತ್ರ-ಅಂತಹ ಉತ್ತಮ ಲೋಕದಲ್ಲಿ, ಸವಿತಾ – ಜಗತ್ಕಾರಣನಾದ, ದೇವಃ - ಲೀಲಾಶಕ್ತಿಯುಳ್ಳ, ಭಗವಂತನು, ತ್ವಾ ದಧಾತು - ನಿನ್ನನ್ನು ಸ್ಥಾಪಿಸಲಿ", ಹಾಗೆಯೇ ಐತರೇಯ ಬ್ರಾಹ್ಮಣದಲ್ಲೂ, "ಹಿರಣ್ಯಶರೀರ ಊರ್ಧ್ವಃ ಸ್ವರ್ಗಂ ಲೋಕಮೇತಿ" ಹಿರಣ್ಮಯ ಶರೀರಕನಾಗಿ ಸ್ವರ್ಗಲೋಕವನ್ನು ಕೂಡ ಹೊಂದುತ್ತಾನೆ ಆ ಆತ್ಮನು ಎಂದು ಹೇಳಿರುತ್ತದೆ, ಇಹಚ - ಈ ಗೀತೆಯಲ್ಲೂ ಕೂಡ, ಯುದ್ಧೇ ಮೃತಾನಾಂ - ಯುದ್ಧದಲ್ಲಿ ಮೃತಪಟ್ಟವರಿಗೆ, ಕಲ್ಯಾಣತರ ದೇಹಾದಿ ಪ್ರಾಪ್ತಿರುಕ್ತಾ - ದಿವ್ಯವಾದ ದೇಹ ಮೊದಲಾದವುಗಳ ಪ್ರಾಪ್ತಿಯು ಹೇಳಲ್ಪಟ್ಟಿರುತ್ತದೆ. ಎಲ್ಲಿ ಎಂದರೆ ಹೇಳುತ್ತಾರೆ :—"ವಾಸಾಂಸಿ ಜೀರ್ಣಾನಿ" ಎಂಬ ಇದೇ ಅಧ್ಯಾಯದ ೨೨ ನೆಯ ಶ್ಲೋಕ ಮೊದಲಾದುದರಲ್ಲಿ, ಅತಃ - ಆ ಕಾರಣದಿಂದ, ಚಿಕಿತ್ಸಕಸ್ಯ ಶಲ್ಯಾದಿಕರ್ಮ - ವೈದ್ಯನು ಶಸ್ತ್ರಗಳೇ ಮೊದಲಾದವುಗಳನ್ನು ಪಯೋಗಿಸುವ ಕರ್ಮವು, ಆತುರಸ್ಯ - ರೋಗಪೀಡಿತನಿಗೆ ರಕ್ಷಾರೂಪ ಕರ್ಮವು ಹೇಗೋ, ಹಾಗೆಯೇ, ಅಸ್ಯ - ಈ ಪಶುವಿಗೆ, ಅಗ್ನೀಷೋಮೀಯಾದಿ ಯಾಗಗಳಲ್ಲಿ, ಸಂಜ್ಞಪನಂ - ಪಶುವಧೆಯೂ ಕೂಡ, ರಕ್ಷಣಮೇವ - ರಕ್ಷಣರೂಪವಾದುದೇ. ಹಿಂಸೆಯು ಅಧರ್ಮ ಸಾಧಕವಾದುದರಿಂದ ಯಾವ ಪ್ರಾಣಿಹಿಂಸೆಯನ್ನೂ ಮಾಡಕೂಡದೆಂದು ನಿಷೇಧಿಸಿ, "ನಹಿಂಸ್ಯಾತ್" ಎಂದು ಸಾಮಾನ್ಯತಃ ಶಾಸ್ತ್ರವು ಹೇಳಿತು. ಆದರೆ ಅದಕ್ಕೆ ವಿರೋಧವಾಗಿ ವಿಶೇಷ ಶಾಸ್ತ್ರವು, "ಅಗ್ನೀಷೋಮೀಯಂ ಪಶುಮಾಲಭೇತ" ಎಂದು ಹೇಳಿರುವದರಿಂದ ಇಲ್ಲಿ ಪಶುವಧೆಯು ಹಿಂಸೆಯಲ್ಲವೆಂಬ ಭಿಪ್ರಾಯವು. ಆದರೆ ಕೆಲವರು ಇದೂ ಕೂಡ ಪಶುವಿಗೆ ಹಿಂಸೆಯೇ ಆಗಿರುವಾಗ ಪ್ರತ್ಯಕ್ಷ ಪಶುವಧೆ ಕೂಡದೆಂದು ಭಾವಿಸಿ ಪಿಷ್ಟ ಪಶುವನ್ನು ಉಪಯೋಗಿಸುತ್ತಾರೆ. ಈ ಆಚರಣೆಯಲ್ಲಿ ಆ ಪಶುವಿಗೆ ಉತ್ತಮ ಶರೀರ, ಉತ್ತಮ ಲೋಕ ಪ್ರಾಪ್ತಿಗಳುಂಟೆಂದು ಹೇಳುವ ಶ್ರುತಿಗೆ ವೈಯರ್ಥ್ಯವುಂಟಾಗುತ್ತದೆ, ಯಜ್ಞಗಳಲ್ಲಿ ಪಿಷ್ಟ ಪಶುಗಳನ್ನು ಕೃತಯುಗದಲ್ಲಿ ಉಪಯೋಗಿಸುತ್ತಿದ್ದರೆಂದು ಹೇಳಲ್ಪಟ್ಟಿರುತ್ತದೆ. ಭಾರತ ಶಾಂತಿಪರ್ವದಲ್ಲಿ (೧೭೫–೩೪) "ಪಶುಯಜ್ಞೈಃ ಕಥಂ ಹಿಂಸ್ರೈರ್ಮಾದೃಶೋ ಯಷ್ಟುಮರ್ಹತಿ" ಎಂದು ಪಶುವಧೆಯು ನಿಂದಿತವಾದುದರಿಂದ ಪ್ರಪನ್ನನಿಗೆ ಯಜ್ಞಾದಿಗಳು ಬೇಕಿಲ್ಲವು. ಆ ಕಾಲದಲ್ಲಿ ಪಶುವಿಗೆ ಹಿಂಸೆಯಾದರೂ ಅದಕ್ಕೆ ಉತ್ತಮದೇಹ ಉತ್ತಮಲೋಕ ಪ್ರಾಪ್ತಿಗಳಿರುವದರಿಂದ ವಾಸ್ತವವಾಗಿ ಸಂಜ್ಞಪನವು ರಕ್ಷಣಾ

ಮೂ. ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರ ಮಪಾವೃತಂ ।
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭನ್ತೇ ಯುದ್ಧಮೀದೃಶಂ ॥ ೩೨.

ರೂಪವಾದುದೆಂದು ಭಾವಿಸತಕ್ಕದ್ದೇ ವಿನಾ ಹಿಂಸಾರೂಪವೆಂದು ಭಾವಿಸತಕ್ಕದ್ದಲ್ಲವು. ಆದುದರಿಂದಲೇ ಮನುವು (ಸ್ಮೃತಿ ೫. ೩೯) "ತಸ್ಮಾದ್ಯಜ್ಞೇ ವಧೋಽವಧಃ" ಎಂದು ಯಜ್ಞದಲ್ಲಿ ಪಶುವಧೆಯು ವಧೆಯಾಗುವದಿಲ್ಲವೆಂದು ಹೇಳಿರುತ್ತಾರೆ. ಅದಕ್ಕೆ ದೃಷ್ಟಾಂತವಾಗಿ ರೋಗಪೀಡಿತನಾಗಿ ವೈದ್ಯನ ಶಲ್ಯಾದಿ ಚಿಕಿತ್ಸೆಯು ತತ್ಕಾಲದಲ್ಲಿ ಸ್ವಲ್ಪ ನೋವನ್ನುಂಟುಮಾಡಿದರೂ ಕೊನೆಗೆ ಸುಖದಾಯಕವಾದುದರಿಂದ ಹಿಂಸೆಯೆಂದು ಭಾವಿಸತಕ್ಕದ್ದಲ್ಲವು ಎಂಬ ತಾತ್ಪರ್ಯವು. ಆ ಕಾಲದಲ್ಲಿ ಹಿಂಸೆಯಾಗಿ ತೋರಿ ದುಃಖವನ್ನುಂಟುಮಾಡಿದರೂ ಜೀವನ ರಕ್ಷಾರ್ಥವಾಗಿ ಆ ಹಿಂಸಾರೂಪ ವ್ಯಾಪಾರವು ನಡೆದರೆ ಅದು ಹಿಂಸೆಯೇ ಅಲ್ಲವೆಂಬ ಭಾವವು. ಆದುದರಿಂದ ಅನರ್ಥವನ್ನುಂಟುಮಾಡುವ ವ್ಯಾಪಾರವೀಗ ಹಿಂಸೆಯು; ರಕ್ಷಣರೂಪ ಹಿಂಸೆಯು ಹಿಂಸೆಯಲ್ಲವು ಎಂಬ ಭಾವವು.

**ಮೂಲಕ್ಕೆ ಅರ್ಥವು:**—ಈ ಶ್ಲೋಕದಿಂದಲೂ, ಕ್ಷತ್ರಿಯನಿಗೆ ಇಂತಹ ಪ್ರಾರಂಭಿಸಿರುವ ಯುದ್ಧವು ಎಂದಿಗೂ ಅಧರ್ಮವಾಗಲಾರದೆಂದೂ ಪುಣ್ಯಪರಿಪಾಕದಿಂದುಂಟಾಗುತ್ತದೆಂದೂ ಉಪದೇಶಿಸುತ್ತಾರೆ. **ಹೇ ಪಾರ್ಥ** - ಓ ಅರ್ಜುನನೇ, ಪಾರ್ಥ ನಾಗಿಯೂ ಕೂಡ ಸುಕೃತ ಪರಿಪಾಕದಿಂದ ಕ್ಷತ್ರಿಯನಿಗೆ ಲಭಿಸತಕ್ಕ ಇಂತಹ ಧರ್ಮಯುದ್ಧವು ಪ್ರಾಪ್ತವಾಗಿದ್ದರೂ, ವಿವೇಕಿಯಾದ ನೀನು ಶೋಕಿಸಬಹುದೋ ಎಂಬ ಭಾವದಿಂದ ಹೇ ಪಾರ್ಥ ಎಂಬ ಸಂಬೋಧನೆಯು; **ಯದೃಚ್ಛಯಾ** - ಹಿಂದಿನ ಜನ್ಮದಲ್ಲಿ ತುಂಬಾ ಸುಕೃತವಮಾಡಿರುವೆಯಾದುದರಿಂದ ಈಗ ಏನೊಂದೂ ಪ್ರಯತ್ನವಿಲ್ಲದೆ, **ಉಪಪನ್ನಂ** - ಒದಗಿರುವ, **ಸ್ವರ್ಗದ್ವಾರಮಪಾವೃತಂ** – ತೆರೆಯಲ್ಪಟ್ಟ ಮೋಕ್ಷದ ಬಾಗಲುಳ್ಳ, ಎಂದರೆ ಮೋಕ್ಷಕ್ಕೆ ಸಾಧನಭೂತವಾದ, ಅಥವಾ ಸ್ವರ್ಗವೆಂದರೆ ಇಂದ್ರನ ಲೋಕವೆಂದೂ ಹೇಳಬಹುದು, ಏಕೆಂದರೆ, ಧರ್ಮಯುದ್ಧದಲ್ಲಿ ಮರಣಹೊಂದಿದವರಿಗೆ ಸ್ವರ್ಗಲೋಕಪ್ರಾಪ್ತಿಯುಂಟೆಂದು ಮುಂದೆ ೩೭ ನೆಯ ಶ್ಲೋಕದಲ್ಲಿ "**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ**" ಎಂಬಲ್ಲಿ ಹೇಳಿರುತ್ತದೆ. "**ಕ್ಷತ್ರಿಯೋ ನಿಹತಸ್ಸಂಖ್ಯೇ ನಶೋಚ್ಯ ಇತಿ ನಿಶ್ಚಯಃ**" (ರಾಮಾ. ಯುದ್ಧ. ೧೧೨. ೧೯.) ಕ್ಷತ್ರಿಯನು ಯುದ್ಧದಲ್ಲಿ ಕೊಲ್ಲಲ್ಪಟ್ಟವನಾದರೆ, ಆತನನ್ನು ಕುರಿತು ಶೋಕಿಸಬೇಕಾದುದಿಲ್ಲವು, ಏಕೆಂದರೆ, ಆತನಿಗೆ ವೀರಸ್ವರ್ಗವು ಸಿದ್ಧವು ಎಂಬ ಶ್ರೀರಾಮ ವಾಕ್ಯವೇ ಇರುತ್ತದೆ. ಆದರೆ ಮೋಕ್ಷವೆಂದು ಹೇಳುವದೂ ಸಹ ನ್ಯಾಯವೇ, ಹೇಗೆಂದರೆ, ಯುದ್ಧವು ಸ್ವಧರ್ಮವೆಂದು ಹಿಂದೆಯೇ ಹೇಳಲ್ಪಟ್ಟಿತು; ನಿತ್ಯನೈಮಿತ್ತಿಕಗಳಹಾಗೆ ಕ್ಷತ್ರಿಯನಿಗೆ ಇದು ಭಗವತ್ಪ್ರೀಣನಾರ್ಥವಾದ ಆಜ್ಞಾ ಕೈಙ್ಕರ್ಯವು. ಇಂಥಾದ್ದನ್ನು ಆಚರಿಸುವದರಿಂದ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾತಕಗಳು ತೊಲಗಿ ಮನಸ್ಸು ಉಪಾಯಾನುಷ್ಠಾನದಲ್ಲಿ ಪ್ರವರ್ತಿಸಬಹುದು. ಹಾಗೆ ಸ್ವರ್ಗಶಬ್ದವು ಮೋಕ್ಷವೆಂಬರ್ಥದಲ್ಲಿ ಕಠಾದಿ ಶ್ರುತಿಗಳಲ್ಲೂ, ಮಹರ್ಷಿಗಳಿಂದಲೂ ಉಪಯೋಗಿಸಲ್ಪಟ್ಟಿರುತ್ತದೆ. "**ಭರ್ತೃಶುಶ್ರೂಷಯಾನಾರೀ ಲಭತೇ ಸ್ವರ್ಗಮುತ್ತಮಮ್**" (ರಾಮಾ. ಅಯೋಧ್ಯಾ.) ಎಂಬ ಪ್ರಯೋಗವುಂಟು. **ಈದೃಶಂ ಯುದ್ಧಂ**-ಇಂತಹ ಧರ್ಮಯುದ್ಧವನ್ನು ಹಿಂದೆ "ಧರ್ಮ್ಯಂ" ಎಂದು ಹೇಳಿದುದನ್ನು ಸೂಚಿಸುವದಕ್ಕಾಗಿ "**ಈದೃಶಂ**" ಎಂಬ ಪ್ರಯೋಗವು; **ಸುಖಿನಃ** - ಸುಕೃತಿಗಳಾದುದರಿಂದ ಮುಂದಕ್ಕೂ ಸುಖಿಗಳಾಗುವ, **ಕ್ಷತ್ರಿಯಾಃ** - ಕ್ಷತ್ರಿಯರು, **ಲಭನ್ತೇ** - ಪಡೆಯುವರು, ಇಂತಹ ಧರ್ಮ

**ಭಾ.  ಅಯತ್ನೋಪನತಮಿದಂ ನಿರತಿಶಯ ಸುಖೋಪಾಯಭೂತಂ ನಿರ್ವಿಘ್ನಮೀದೃಶಂ ಯುದ್ಧಂ ಸುಖಿನಃ-ಪುಣ್ಯವನ್ತಃ ಕ್ಷತ್ರಿಯಾಃ ಲಭನ್ತೇ ॥ ೩೨ ॥**

---

ಯುದ್ಧವು ಪ್ರಾಪ್ತವಾಗಬೇಕಾದರೆ ಮಹಾ ಸುಕೃತಶಾಲಿಗಳಿಗೆ ಲಭಿಸೀತೇ ವಿನಾ ಇತರರಿಗೆ ಲಭಿಸಲಾರದೆಂಬ ಭಾವವು. ಆದುದರಿಂದ ಯುದ್ಧ ಮಾಡತಕ್ಕದ್ದು ನಿನಗೆ ಶ್ರೇಯಸ್ಕರವೆಂಬ ಭಾವವು.

**ಭಾಷ್ಯಾರ್ಥವು :—ಅಯತ್ನೇನ ಉಪನತಂ** - ನಮ್ಮ ಈಗಿನ ಪ್ರಯತ್ನ ಯಾವುದೂ ಇಲ್ಲದೆ ಭಗವದನುಗ್ರಹದಿಂದ ಪ್ರಾಪ್ತವಾದ, **ಇದಂ** - ಈ, **ನಿರತಿಶಯ ಸುಖೋಪಾಯಭೂತಂ**-ಮೋಕ್ಷಸುಖಕ್ಕೆ ಸಾಧನ ಭೂತವಾದ (ಇದು "**ಸ್ವರ್ಗದ್ವಾರ ಮಪಾವೃತಂ**" ಎಂಬುದರರ್ಥವು), ನಿರ್ವಿಘ್ನವಾದ ಇಂತಹ ಯುದ್ಧವು, **ಸುಖಿನಃ** ಎಂದರೆ **ಪುಣ್ಯವನ್ತಃ** - ಪುಣ್ಯವಂತರಾದ, **ಕ್ಷತ್ರಿಯಾಃ ಲಭನ್ತೇ** - ಕ್ಷತ್ರಿಯರು ಪಡೆಯುವರು ಎಂಬರ್ಥವು. ಇಲ್ಲಿ "ಯದೃಚ್ಛಯಾ" ಎಂಬುದಕ್ಕೆ ಅಯತ್ನೇನ ಎಂದು ಭಾಷ್ಯ ಬರೆದರು. ಇದಕ್ಕಭಿಪ್ರಾಯವು ಸ್ವಾಮಿಯು ಸ್ವತಂತ್ರನಾದುದರಿಂದ ತನ್ನಿಷ್ಟಬಂದಂತೆ ಫಲವನ್ನು ಕೊಟ್ಟನೆಂಬಭಿಪ್ರಾಯವಲ್ಲವು. ಹಾಗೆ ಅರ್ಥಹೇಳಿದರೆ, ಸರ್ವೇಶ್ವರನಿಗೆ ತಾನು ಕೊಟ್ಟಿರುವ ಶಾಸ್ತ್ರದಲ್ಲಿ ತನಗೆ ಅಭಿಮಾನವಿಲ್ಲವೆಂದೂ, ಮನಬಂದಂತೆ ನಡೆಸುವನಾದುದರಿಂದ ಆತನಿಗೆ ವೈಷಮ್ಯ ನೈರ್ಘೃಣ್ಯಗಳುಂಟೆಂದೂ, ಹೇಳಿದಂತಾಗುತ್ತದೆ; **ಯದೃಚ್ಛಯಾ**-ಉಂಟಾಗಿರುವುದು ಈತನ ಪೂರ್ವಜನ್ಮದ ಸುಕೃತ ಫಲವು, ಅದು ಭಗವದನುಗ್ರಹರೂಪವಲ್ಲಿ ಈತನಿಗೆ ಅಯತ್ನೇನ ಲಭಿಸುತ್ತದೆ ಎಂಬ ಭಾವವು. ಈ ಅಭಿಪ್ರಾಯವು **ಸುಖಿನಃ** ಎಂಬ ಪದದಿಂದಲೇ ವ್ಯಕ್ತವು. ಆದುದರಿಂದ ಅದಕ್ಕೆ **ಪುಣ್ಯವನ್ತಃ** ಎಂದು ವ್ಯಾಖ್ಯಾನ ಮಾಡಿದರು. "**ಸ್ವರ್ಗದ್ವಾರ ಮಪಾವೃತಂ**" ಎಂಬುದಕ್ಕೆ ಮೋಕ್ಷಸುಖಕ್ಕೆ ಉಪಾಯಭೂತಂ ಎಂದು ವ್ಯಾಖ್ಯಾನಮಾಡಿದುದರಭಿಪ್ರಾಯವೇನೆಂದರೆ, ಪ್ರತಿಯೊಬ್ಬನೂ ತನ್ನ ತನ್ನ ವರ್ಣಾಶ್ರಮ ಧರ್ಮಗಳನ್ನು ಫಲಾಭಿಸಂಧಿಯಿಲ್ಲದೆ ಭಗವತ್ಪ್ರೀಣನಾರ್ಥವಾಗಿ ನಡೆಸಿದರೆ, ಮೋಕ್ಷಸುಖಪ್ರಾಪ್ತಿಗೆ ಸಹಕಾರಿಯಾಗುತ್ತದೆ ಎಂಬ ಭಾವವು. **ಸ್ವರ್ಗದ್ವಾರವು ಅಪಾವೃತಂ** ಎಂದು ಹೇಳಿರುವುದರಿಂದ **ನಿರ್ವಿಘ್ನಂ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಅದು ಹೇಗೆ ಎಂದರೆ ಧರ್ಮಗಳಿಗೆಲ್ಲಾ ಶ್ರೇಯಸ್ಸಾಧನತ್ವ ಉಂಟೆಂಬುದು ಸರ್ವರೂ ಒಪ್ಪತಕ್ಕ ವಿಷಯವೇ. ಅವನ್ನೇ ಫಲಾಭಿಸಂಧಿಯಿಲ್ಲದೆ, ಭಗವತ್ಪ್ರೀಣನಾರ್ಥವಾಗಿ ಅನುಷ್ಠಿಸಿದುದಾದರೆ ಮೋಕ್ಷದ್ವಾರಕ್ಕೆ ಸಹಕಾರಿಯಾಗುವುದರಲ್ಲಿ ಸಂದೇಹವಿಲ್ಲವೆಂಬ ಭಾವವು. ಸುಖಿನಃ ಎಂದರೆ ಪುಣ್ಯವಂತರೆಂದು ಹೇಳಿದುದರಭಿಪ್ರಾಯದಿಂದ ಮುಂದಕ್ಕೂ ನಿರತಿಶಯ ಸುಖವನ್ನು ಹೊಂದಲು ಯೋಗ್ಯರೆಂಬ ಭಾವವೂ ತೋರಿಬರುತ್ತದೆ. ಸ್ವರ್ಗ ಶಬ್ದಕ್ಕೆ ನಿರತಿಶಯ ಸುಖವೆಂದು ಭಾಷ್ಯವು ಹೇಗೆಂದರೆ:—"**ಯಸ್ಮಿನ್ನೋಷ್ಣಂ ನಶೀತಂ**" ಎಂದೂ "**ಯನ್ನದುಃಖೇನ ಸಂಭಿನ್ನಂ ನ ಚ ಗ್ರಸ್ತಮನನ್ತರಮ್ । ಅಭಿಲಾಷೋಪನೀತಂ ತತ್ಸುಖಂ ಸ್ವಃಪದಾಸ್ಪದಮ್॥**" ಎಂದೂ ಇರುವುದರಿಂದ ಹಾಗೆ ವ್ಯಾಖ್ಯಾನವು. ॥ ೩೨ ॥

ಹಿಂದಿನ ಶ್ಲೋಕಗಳಲ್ಲಿ ಈ ಪ್ರಾರಂಭಿಸಿದ ಯುದ್ಧವು ಧರ್ಮಯುಕ್ತವಾದುದಾಗಿ ನಿರತಿಶಯ ಶ್ರೇಯಸ್ಸಿಗೆ ಸಾಧನ ಭೂತವೆಂದು ಹೇಳಲ್ಪಟ್ಟಿತು. ಶ್ರೇಯಸ್ಸು ತನಗೆ ಬೇಕಿಲ್ಲವು; ಆದುದರಿಂದ ಯುದ್ಧವು ಬೇಡವೆಂದೇನಾದರೂ ಅಭಿಪ್ರಾಯಪಟ್ಟನೆಂದು ಭಾವಿಸಿ, ಈ ಧರ್ಮಯುಕ್ತವಾದ ಯುದ್ಧವನ್ನು ಇನ್ನೂ ಚಿತ್ತಭ್ರಮೆಯಿಂದ ಮಾಡದೇ ಹೋದರೆ ಪ್ರತ್ಯುತ ಪ್ರತ್ಯವಾಯವುಂಟೆಂದೂ ಪಾಪಕ್ಕೆ ಗುರಿಯಾಗುವೀ ಎಂದೂ ಉಪದೇಶಿಸುತ್ತಾರೆ :—ಅಥ-ಹೀಗೆ, ಸರ್ವ ಶ್ರೇಯಸ್ಕರವಾಗಿ

ಮೂ. ಅಥ ಚೇತ್ತ್ವಮಿಮಂ ಧರ್ಮ್ಯಂ ಸಙ್ಗ್ರಾಮಂ ನ ಕರಿಷ್ಯಸಿ ।
ತತಃ ಸ್ವಧರ್ಮಂ ಕೀರ್ತಿಂಚ ಹಿತ್ವಾ ಪಾಪ ಮವಾಪ್ಸ್ಯಸಿ ॥ ೩೩.

ಭಾ. ಅಥ ಕ್ಷತ್ರಿಯಸ್ಯ ಸ್ವಧರ್ಮ ಭೂತ ಮಿಮ ಮಾರಬ್ಧಂ ಸಙ್ಗ್ರಾಮಂ ಮೋಹಾನ್ನ ಕರಿಷ್ಯಸಿ ಚೇತ್, ತತಃ ಪ್ರಾರಬ್ಧಸ್ಯ ಧರ್ಮಸ್ಯಾ ಕರಣಾತ್ಸ್ವಧರ್ಮಂ ಫಲಂ ನಿರತಿಶಯಸುಖಂ ವಿಜಯೇನ ನಿರತಿಶಯಂಚ ಕೀರ್ತಿಂ ಹಿತ್ವಾ ಪಾಪಂ ನಿರತಿಶಯ ಮವಾಪ್ಸ್ಯಸಿ ॥ ೩೩ ॥

ಪ್ಪದೂ, ಇಮಂ-ಈ ಪ್ರಾರಂಭಿಸಿದ, ಧರ್ಮ್ಯಂ ಸಙ್ಗ್ರಾಮಂ-ಈ ಸ್ವಧರ್ಮರೂಪವಾದ ಯುದ್ಧವನ್ನು, ತ್ವಂ-ಕ್ಷತ್ರಿಯನಾದ ನೀನು, ನಕರಿಷ್ಯಸಿ ಚೇತ್ - ಮಾಡದೇ ಹೋದರೆ, ತತಃ-ಆ ಕಾರಣದಿಂದ, ಸ್ವಧರ್ಮಂ - ಕ್ಷತ್ರಿಯ ಕರ್ಮವನ್ನೂ ಅದರಿಂದುಂಟಾಗುವ ಫಲವನ್ನೂ, ಕೀರ್ತಿಂಚ - ಯುದ್ಧ ವಿಜಯದಿಂದ ಪ್ರಾಪ್ತವಾಗುವ ಕೀರ್ತಿಯನ್ನೂ, ಒಂದುವೇಳೆ ಜಯಪ್ರಾಪ್ತಿಯಿಲ್ಲದಿದ್ದರೂ ಬಹು ಪರಾಕ್ರಮಿಯಾಗಿ ಅರ್ಜುನನು ಯುದ್ಧಮಾಡಿದನು, ಆತನಿಗೆ ಸಮಾನರು ಯಾರೂ ಇಲ್ಲವು, ಎಂಬ ಕೀರ್ತಿಯನ್ನೂ, ಹಿತ್ವಾ - ತ್ಯಜಿಸಿ, ಪಾಪಂ - ವಿಧಿವಾಕ್ಯವನ್ನುಲ್ಲಂಘಿಸಿದ ಕೃತ್ಯಾಕರಣಕ್ಕಾಗಿ ಪಾಪವನ್ನು, ಅಥವಾ ಕ್ಷತ್ರಿಯನಾಗಿ ದುಷ್ಟರನ್ನು ನಿಗ್ರಹಿಸದೆ ಬಿಟ್ಟಿದುದರಿಂದ ಶಿಷ್ಟರು ಹಿಂಸಿಸಲ್ಪಡುವುದರಿಂದುಂಟಾಗುವ ಪಾಪವನ್ನು, ಅವಾಪ್ಸ್ಯಸಿ – ಪಡೆಯುವಿ. ಧರ್ಮಯುದ್ಧವನ್ನು ಮಾಡತಕ್ಕದ್ದು ಆಜ್ಞಾಕೈಂಕರ್ಯವು. ಅಂತಹ ಆಜ್ಞೆಯನ್ನುಲ್ಲಂಘಿಸಿದುದಕ್ಕಾಗಿ ನೀನು ಪಾಪವನ್ನು ಹೊಂದುವಿ ಎಂಬ ಭಾವವು. ॥ ೩೩ ॥

**ಭಾಷ್ಯಾರ್ಥವು** :— **ಅಥ** - ಹೀಗೆ ಧರ್ಮಯುದ್ಧವು ಕ್ಷತ್ರಿಯನಿಗೆ ನಿರತಿಶಯ ಸುಖ ಸಾಧಕವೆಂದು ತಿಳಿದ ನಂತರವೂ, **ಕ್ಷತ್ರಿಯಸ್ಯ ಸ್ವಧರ್ಮಭೂತಂ** - (ಇದು ತ್ವಂ ಎಂಬ ಮತ್ತು ಧರ್ಮ್ಯಂ ಎಂಬ ಪದದ್ವಯಗಳಿಂದ ತೋರುವ ಅರ್ಥವು) ಕ್ಷತ್ರಿಯನಿಗೆ ಸ್ವಧರ್ಮವಾಗಿರುವ, ಇಲ್ಲಿ **ಧರ್ಮ್ಯಂ** ಎಂದರೆ **ಧರ್ಮಾದನಪೇತಂ** ಎಂದು ಅರ್ಥಮಾಡಲಿಲ್ಲವು. ಸಙ್ಗ್ರಾಮವೇ ಧರ್ಮವಾದುದರಿಂದ, ಸ್ವಾರ್ಥರೂಪ ಅರ್ಥಬರುವಹಾಗೆ **ಧರ್ಮಏವ ಧರ್ಮ್ಯಃ** ಎಂಬ ವ್ಯುತ್ಪತ್ತಿಮೂಲಕ **ಸ್ವಧರ್ಮಭೂತಂ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. **ಇಮ ಮಾರಬ್ಧಂ**-ಇಮಂ ಎಂದರೆ ಈ ಪ್ರಾರಂಭಿಸಿದ, **ಸಙ್ಗ್ರಾಮಂ** - ಯುದ್ಧವನ್ನು, **ಮೋಹಾತ್** - ಈ ಧರ್ಮರೂಪವಾದುದನ್ನು ಅಧರ್ಮವೆಂದು ತಿಳಿದ ಮೋಹದಿಂದ, **ನಕರಿಷ್ಯಸಿಚೇತ್** - ಕ್ಷತ್ರಿಯನಾದ ನೀನು ಮಾಡದೇ ಹೋದರೆ, **ತತಃ** - ಆ ಕಾರಣದಿಂದ ಎಂದರೆ, **ಪ್ರಾರಬ್ಧಸ್ಯ ಧರ್ಮಸ್ಯಾ ಕರಣಾತ್** -ಪ್ರಾರಂಭಿಸಿದ ಧರ್ಮವನ್ನು ಮಾಡದೇ ಇರುವುದರಿಂದ, **ಸ್ವಧರ್ಮಫಲಂ** –(ಇದು ಸ್ವಧರ್ಮಂ ಎಂಬುದರರ್ಥವು). ಸ್ವಧರ್ಮ ಫಲವಾದ, ನಿರತಿಶಯ ಸುಖವನ್ನೂ, ನಿರತಿಶಯವಾದ ಕೀರ್ತಿಯನ್ನೂ, **ಹಿತ್ವಾ** – ತ್ಯಜಿಸಿ, ನಿರತಿಶಯವಾದ ಪಾಪವನ್ನು, **ಅವಾಪ್ಸ್ಯಸಿ** - ಹೊಂದುವಿ, ಇಲ್ಲಿ **ನಿರತಿಶಯಂ** ಎಂಬುದನ್ನು **ಸ್ವಧರ್ಮಂ, ಕೀರ್ತಿಂ, ಪಾಪಂ,** ಎಂದು ಮೂರಕ್ಕೂ ವಿಶೇಷಣವಾಗಿ ಕೊಟ್ಟಿರುವುದು, ಯುದ್ಧದಿಂದ ಪ್ರಾಪ್ತವಾಗುವ ಫಲಗಳೂ ಪರಿತ್ಯಾಗದಿಂದುಂಟಾಗುವ ಅನರ್ಥವೂ ಸಹ ಮಹತ್ತಾದುದೆಂಬುದು ಸನ್ನಿವೇಶದಿಂದ ಅರ್ಥವಾಗಿ ತೋರುತ್ತದೆಂಬ ಭಾವವು.

**ಮೂಲಕ್ಕೆ ಅರ್ಥವು** :—ನಿರತಿಶಯ ಸುಖವೂ ಕೀರ್ತಿಯೂ ಉಂಟಾಗದಿದ್ದರೂ ಚಿಂತೆಯಿಲ್ಲವು, ಇಷ್ಟುಮಾತ್ರವೇ ಅಲ್ಲದೆ ಪ್ರತ್ಯುತ ಅದರಿಂದುಂಟಾಗುವ ಅಪಕೀರ್ತಿಯು ತುಂಬಾ ದುಸ್ಸಹವೆಂದೂ, ಅದಕ್ಕಿಂತ ಮರಣವಾದರೂ ಮೇಲೆಂದು ತಿಳಿಸುತ್ತಾರೆ. **ಅಪಿಚ** - ಮೇಲೆ

ಮೂ. ಅಕೀರ್ತಿಂಚಾಪಿ ಭೂತಾನಿ ಕಥಯಿಷ್ಯನ್ತಿ ತೇಽವ್ಯಯಾಂ ।
ಸಂಭಾವಿತಸ್ಯಚಾ ಕೀರ್ತಿಃ ಮರಣಾದ ತಿರಿಚ್ಯತೇ ॥ ೩೪.

ಭಾ. ನತೇ ಕೇವಲಂ ನಿರತಿಶಯ ಸುಖಕೀರ್ತಿಹಾನಿ ಮಾತ್ರಮ್, "ಪಾರ್ಥೋಯುದ್ಧೇ ಪ್ರಾರಬ್ಧೇ ಪಲಾಯಿತಃ" ಇತ್ಯವ್ಯಯಾಂ ಸರ್ವದೇಶಕಾಲ ವ್ಯಾಪಿನೀ ಮಕೀರ್ತಿಂಚ ಸಮರ್ಥಾ

ನಿರತಿಶಯ ಸುಖಕೀರ್ತಿಯಿಲ್ಲದೇ ಹೋಗುತ್ತದೆ ಎಂಬುದು ಮಾತ್ರವೇ ಅಲ್ಲವು, ಇನ್ನೂ ಹೇಳತಕ್ಕದ್ದುಂಟೆಂಬ ಭಾವವು. ಅಥವಾ ಅಪಿ ಎಂಬುವದನ್ನು, ಭೂತಾನ್ಯಪಿ - ಸಾಮಾನ್ಯಜನರೂ ಕೂಡ ಎಂದು ಅರ್ಥಮಾಡಬಹುದು. ಭೂತಾನಿ-ಎಲ್ಲಾ ಕ್ಷೇತ್ರಜ್ಞರೂ, ತೇ-ನಿನ್ನ, ಅವ್ಯಯಾಂ-ನಾಶರಹಿತವಾದ, ಎಂದರೆ ಭರತಖಂಡವನ್ನೆಲ್ಲಾ ವ್ಯಾಪಿಸಿ, ತನ್ಮೂಲಕ ಇನ್ನು ಮುಂದಿನ ಕಾಲಗಳಲ್ಲೆಲ್ಲಾ ನಿಂತುಹೋದರೆ ಆಗ ಅಂತಹ ಅಪಯಶಸ್ಸು ಅವ್ಯಯವು, ಅಂತಹ ಅಕೀರ್ತಿಂ - ಅಪಯಶಸ್ಸನ್ನು, ಕಥಯಿಷ್ಯನ್ತಿ - ಹೇಳಿಕೊಳ್ಳುವರು ; ಸಂಭಾವಿತಸ್ಯಚ - ಎಲ್ಲರಿಂದಲೂ ಬಹುಮಾನಿಸಲ್ಪಟ್ಟವನಿಗಾದರೋ, ಅಕೀರ್ತಿಃ - ಅಂತಹ ಅಪಯಶಸ್ಸು, ಮರಣಾತ್ - ಮರಣಕ್ಕಿಂತಲೂ, ಅತಿರಿಚ್ಯತೇ - ಹೆಚ್ಚಾದುದಾಗುತ್ತದೆ, ಎಂದರೆ ಇಂತಹ ಶೂರನಾದ ಅರ್ಜುನನು ಪ್ರಾರಂಭಿಸಿದ ಯುದ್ಧವನ್ನು ಬಿಟ್ಟು ಪಲಾಯನ ಮಾಡಿದನು ಎಂದು ನಾನಾಬಗೆಯಾಗಿ ಎಲ್ಲರೂ ಮನಸ್ಸಿಗೆ ಬಂದಹಾಗೆ ಹೇಳಿಕೊಳ್ಳುವರು. ಇಂತಹ ದುರ್ಯಶಸ್ಸಿಗಿಂತಲೂ ಸಾಯುವದಾದರೂ ಲೇಸು ಎಂಬ ತಾತ್ಪರ್ಯವು. ಪಾಂಡವರಲ್ಲಿ ಮುಖ್ಯಸ್ಥನಾಗಿ ಅರ್ಜುನನೆಂಬುವನೊಬ್ಬ ವೀರ ಕ್ಷತ್ರಿಯನಿದ್ದನು; ಯುದ್ಧಪ್ರಾರಂಭವಾಯಿತೋ ಇಲ್ಲವೋ ಕಾಂದಿಶೀಕನಾಗಿ ಬೆನ್ನು ಕೊಟ್ಟು ಹೇಡಿಯಾಗಿ ಓಡಿಹೋದನು ಎಂಬ ಅಪಯಶಸ್ಸು ಭರತಖಂಡವೂ ಚಂದ್ರ ಸೂರ್ಯರೂ ಇರುವವರೆಗೂ ನಿಂತುಹೋಗುತ್ತದೆ. ಇಂತಹ ದುರ್ಯಶಸ್ಸಿಗಿಂತ ಮರಣವು ಒಳ್ಳೆಯದಲ್ಲವೋ? ಯುದ್ಧಮಾಡಿ ಮಡಿದರೆ ವೀರಸ್ವರ್ಗವಾದರೂ ಉಂಟೆಂಬ ಭಾವವು. ಸಂಭಾವಿತಸ್ಯಚ ಎಂದಿರುವದರಿಂದ ಹಾಗೆ ಸನ್ಮಾನಿಸಲ್ಪಡದೇ ಯಾವನೋ ಒಬ್ಬ ಯಃಕಶ್ಚಿತ್ ಕ್ಷತ್ರಿಯಾಧಮನಾಗಿದ್ದರೆ ಏನೋ ಯುದ್ಧವನ್ನು ಬಿಟ್ಟು ಹೋದರೂ ಹೋಗಬಹುದು. ಸಂಭಾವಿತಸ್ಯಚ ತವ - ದಿಗ್ವಿಜಯಮಾಡಿ ಎಲ್ಲಾ ರಾಜರನ್ನೂ ವಶಮಾಡಿಕೊಂಡು ಬಂದು ಬಹುಧನವನ್ನು ಆರ್ಜಿಸಿ ಅಟ್ಟಹಾಸದಿಂದ ರಾಜಸೂಯ ಯಾಗವನ್ನು ನಡೆಸಿ ಮತ್ತು ಗೋಗ್ರಹಣಾದಿ ಕಾಲದಲ್ಲಿ ಮಹಾ ಪರಾಕ್ರಮವನ್ನು ತೋರಿಸಿ ಹೀಗೆಲ್ಲಾ ಸಂಭಾವಿತನಾದ ನಿನಗಾದರೋ, ಯುದ್ಧಾರಂಭಮಾಡಿ ನಿಲ್ಲಿಸಿಬಿಡುವ ದುರ್ಯಶಸ್ಸು ಮರಣಾದತಿರಿಚ್ಯತೇ ಎಂದು ಹೇಳಲ್ಪಟ್ಟಿತು.

**ಭಾಷ್ಯಾರ್ಥವು** :—ಹಿಂದೆ ದೃಷ್ಟಾದೃಷ್ಟರೂಪವಾದ ಫಲವಿಲ್ಲದೇ ಹೋಗೋಣವೂ ಅದೃಷ್ಟ ಪ್ರತ್ಯವಾಯವೂ ಈ ಧರ್ಮಯುದ್ಧವನ್ನು ನಡೆಸದೇ ಹೋದರೆ ಉಂಟಾಗುತ್ತವೆಂದು ಹೇಳಲ್ಪಟ್ಟಿತು. ಮುಂದೆ ದೃಷ್ಟವಾದ ಅನರ್ಥಪ್ರಾಪ್ತಿಯೂ ಉಂಟಾಗುತ್ತದೆಂದು ಹೇಳುತ್ತಾರೆ. **ನತೇಕೇವಲಂ ನಿರತಿಶಯ ಸುಖಕೀರ್ತಿಹಾನಿಮಾತ್ರಮ್** – ಇದು " **ಅಪಿಚ** " ಎಂಬುದರ ಭಾವವು, ನಿರತಿಶಯಗಳಾದ ಪಾರಲೌಕಿಕಗಳಾದ ಸುಖ ಮತ್ತು ಇಲ್ಲಿನ ಕೀರ್ತಿಗಳ ಹಾನಿ ಮಾತ್ರವೇ ಅಲ್ಲವು. ಸಮರ್ಥರೂ ಅಸಮರ್ಥರೂ ಹೀಗೆ ಎಲ್ಲರೂ ಬಾಯಿಗೆ ಬಂದಹಾಗೆಲ್ಲಾ ನಿನ್ನನ್ನು ಹೇಗೆ ಹೀಯಾಳಿಸುವರು, ಯಾವ ರೀತಿಯಲ್ಲಿ ಧಿಕ್ಕರಿಸಿ ಮಾತಾಡುವರು ಎಂದರೆ ಹೇಳುತ್ತಾರೆ. **"ಪಾರ್ಥೋ ಯುದ್ಧೇ ಪ್ರಾರಬ್ಧೇ ಪಲಾಯಿತಃ" "ಪಾರ್ಥನೆಂಬು**

ಭಾ. ನ್ಯಸಮರ್ಥಾನ್ಯಪಿ ಸರ್ವಾಣಿ ಭೂತಾನಿ ಕಥಯಿಷ್ಯಂತಿ. ತತಃಕಿಮಿತಿ ಚೇತ್, ಶೌರ್ಯ ವೀರ್ಯ ಪರಾಕ್ರಮಾದಿಭಿ ಸ್ಸರ್ವಸಂಭಾವಿತಸ್ಯ ತದ್ವಿಪರ್ಯಯಜಾಹ್ಯಕೀರ್ತಿರ್ಮರಣಾದತಿ ರಿಚ್ಯತೇ. ಏವಂ ವಿಧಾಯಾ ಅಕೀರ್ತೇ ರ್ಮರಣಮೇವ ತವಶ್ರೇಯ ಇತ್ಯರ್ಥಃ ||೩೪||

---

ದೊಡ್ಡ ಹೆಸರು, ಯುದ್ಧವಾರಂಭವಾಯಿತೋ ಇಲ್ಲವೋ, ಆತನು ಪಲಾಯನ ಸೂಕ್ತ ಹೇಳಿದನು" ಇನ್ನೂ ಯುದ್ಧಮಾಡಿ ಸೋಲುವ ದೆಶೆಯಲ್ಲಾದರೂ ಓಡಿ ಹೋದನು ಎಂದರಾದರೂ ಹೋಗಲಿ, ಹಾಗೂ ಇಲ್ಲದೆ ಯುದ್ಧ ಪ್ರಾರಂಭವಾಯಿತೋ ಇಲ್ಲವೋ ಕಾಲಿಗೆ ಬುದ್ಧಿಯನ್ನಿತ್ತನು ಎಂಬುದು **ಯುದ್ಧೇ ಪ್ರಾರಬ್ಧೇ** ಎಂಬ ಪ್ರಯೋಗದಿಂದ ತೋರಿಬರುತ್ತದೆ. **ಇತಿ** - ಎಂಬದಾಗಿ, **ಅನ್ಯಯಾಂ** – ಎಂದರೆ, **ಸರ್ವದೇಶಕಾಲ ವ್ಯಾಪಿನೀಂ** - ಸಮಸ್ತ ದೇಶಕಾಲಗಳಲ್ಲೂ ವ್ಯಾಪಿಸುವ ಭರತ ಖಂಡದಲ್ಲೆಲ್ಲಾ, ಮುಂದಕ್ಕೆಲ್ಲಾ ಕ್ಷತ್ರಿಯ ಗುಂಪನ್ನೆಲ್ಲಾ ವ್ಯಾಪಿಸಿರುವ, **ಅಕೀರ್ತಿಂಚ**– ಅಪಕೀರ್ತಿಯನ್ನೂ ಕೂಡ, **ಸಮರ್ಥಾನ್ಯಸಮರ್ಥಾನ್ಯಪಿ**-ಸಮರ್ಥರೂ ಅಸಮರ್ಥರೂ ಆದ ಸಮಸ್ತ ಜನರೂ, ಇದು ಮೂಲದ **"ಭೂತಾನಿ"** ಎಂಬುದರ ತಾತ್ಪರ್ಯವು, ಇದರಿಂದ **ಅಪಿ** ಎಂಬುದು ಹಿಂದೆ ಇದ್ದರೂ, ಮುಂದೆ ಇರುವ **ಭೂತಾನಿ** ಎಂಬುದರೊಂದಿಗೆ ಅನ್ವಯಿಸತಕ್ಕದ್ದೆಂದು ತೋರಿಸಿರುತ್ತಾರೆ; **ಕಥಯಿಷ್ಯನ್ತಿ** - ಹೇಳಿಕೊಳ್ಳುವರು. ನಿನ್ನನ್ನು ಮನಸ್ಸಿಗೆ ತೋರಿದಹಾಗೆ ಎಲ್ಲರೂ ಹೀಯಾಳಿಸಿ ಮಾತಾಡುವರು ಎಂಬ ಭಾವವು. **ತತಃಕಿಮಿತಿಚೇತ್** - ಆಗಲಿ, ಆದುದರಿಂದೇನು ಎನ್ನುತ್ತೀಯೋ, ಯಾರೋ ಸಿಕ್ಕಿದವರು ಹೀಯಾಳಿಸಿ ಮಾತಾಡಿದರು ಎಂದರೆ ಹಾಗೆ ಹೇಳಿಕೊಳ್ಳಲಿ ಅದರಿಂದ ನಮಗೇನಾಯಿತು ಎನ್ನುತ್ತೀಯೋ ಎಂದು ಆಶಙ್ಕಿಸಿ ಉತ್ತರಾರ್ಧದಿಂದ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. ಮೂಲದ **ಚ** ಶಬ್ದವು ಇಂತಹ ಶಙ್ಕಾವನ್ನು ನಿರಾಕರಿಸಿ ಹೇಳುತ್ತದೆ. **ಶೌರ್ಯ** - ಯುದ್ಧದಲ್ಲಿ ನಿರ್ಭಯವಾಗಿ ಪ್ರವೇಶಿಸುವ ಸಾಮರ್ಥ್ಯವು, **ವೀರ್ಯ** - ಎಷ್ಟು ಯುದ್ಧಮಾಡಿದರೂ ವಿಕಾರ ಹೊಂದದೇ ಇರೋಣವು, **ಪರಾಕ್ರಮಾದಿಭಿಃ** – ಶತ್ರು ಸೇನೆಯನ್ನು ಮುರಿಯುವ ಸಾಮರ್ಥ್ಯವು, ಇವೇ ಮೊದಲಾದ ಗುಣಗಳಿಂದ, **ಸರ್ವಸಂಭಾವಿತಸ್ಯ** – ಸರ್ವರಿಂದಲೂ ಬಹುಮತಿಯನ್ನು ಹೊಂದಿದವನಿಗೆ, **ತದ್ವಿಪರ್ಯಯ ಜಾಹ್ಯಕೀರ್ತಿಃ** - ಆ ಗುಣಗಳಿಗೆ ವ್ಯತ್ಯಾಸವಾಗಿ ಉಂಟಾಗಿರುವ ಅಪಯಶಸ್ಸು, **ಮರಣಾದತಿರಿಚ್ಯತೇ**– ಮರಣಕ್ಕಿಂತ ಹೆಚ್ಚಾದುದು, **ಏವಂವಿಧಾಯಾಃ ಅಕೀರ್ತೇಃ** - ಈ ವಿಧವಾದ ಅಪಯಶಸ್ಸಿಗಿಂತಲೂ, **ಮರಣಮೇವ ತವಶ್ರೇಯಃ** - ಮರಣವೇ ನಿನಗೆ ಶ್ರೇಯಸ್ಕರವಾದುದು. **ಇತ್ಯರ್ಥಃ**– ಎಂಬಭಿಪ್ರಾಯವು. ಶ್ಲೋಕದಲ್ಲಿ ಶೌರ್ಯ ವೀರ್ಯ ಪರಾಕ್ರಮಾದಿಗಳು ಹೇಳಲ್ಪಡದಿದ್ದರೂ, **ಸಂಭಾವಿತಸ್ಯ** - ಎಂದಿರುವದರಿಂದ ಹೇಗೆ ಸಂಭಾವಿತನೆಂಬುದಕ್ಕೆ ವಿವರಣವಾಗಿ ಹಾಗೆ ಭಾಷ್ಯವು, ಯಾರಿಂದ ಹಾಗೆ ಸಂಭಾವಿತನು ಅರ್ಜುನನು ಎಂಬ ಅಪೇಕ್ಷೆಯಲ್ಲಿ, **"ಭೂತಾನಿ"** ಎಂದು ಪೂರ್ವಾರ್ಧದಲ್ಲಿರುವದರಿಂದ, ಸಮರ್ಥರೂ ಅಸಮರ್ಥರಾದ ಸಮಸ್ತರಾದ **"ಭೂತೇಭ್ಯಃ"** ಎಂದು ಇಟ್ಟುಕೊಳ್ಳಬಹುದು. ಅಕೀರ್ತಿಯು ಮರಣಕ್ಕಿಂತಲೂ **"ಅತಿರಿಚ್ಯತೇ"** ಎಂದು ಮೂಲದಲ್ಲಿ ಹೇಳಲ್ಪಟ್ಟದುದೇನು ಹೇಯವಾಗಿಯೇ ಉಪಾದೇಯವಾಗಿಯೇ ಎಂದು ವಿಕಲ್ಪಿಸಿ ನೋಡಿದರೆ, ಪ್ರಥಮ ವಿಕಲ್ಪವು ಸರಿಯಿಲ್ಲವು; ಏಕೆಂದರೆ **"ಜೀವನ್ ಭದ್ರಾಣಿ ಪಶ್ಯತಿ"** ಎಂದು ಇರುವದರಿಂದ ಈಗೇನೋ ನಮಗೆ ಶ್ರೇಯಸ್ಸಿಲ್ಲವು; ಬದುಕಿದ್ದರೆ ಒಂದಾನೊಂದುಕಾಲದಲ್ಲಿ ಶುಭಪ್ರಾಪ್ತಿಯುಂಟು ಎಂದಿರುವಾಗ **"ಮರಣಾದತಿರಿಚ್ಯತೇ"** ಎಂದು ಹೇಗೆ ಹೇಳಲು ಸಾಧ್ಯವು, ಉಪಾದೇಯವಾಗಿ ಎರಡು ವಿಕಲ್ಪಿಸಿ ನೋಡಿದರೆ ಪ್ರಕರಣಕ್ಕೆ ವಿರೋಧವಾಗುತ್ತದೆ, ಆದುದರಿಂದಲೇ

ಭಾ. ಅ. ಬಂಧುಸ್ನೇಹಾತ್ಕಾರುಣ್ಯಾಚ್ಚ ಯುದ್ಧಾನ್ನಿವೃತ್ತಸ್ಯ ಶೂರಸ್ಯ ಮಮಾಕೀರ್ತಿಃ ಕಥಮಾಗಮಿಷ್ಯತೀತ್ಯತ್ರಾಹ :—

ಅಕೀರ್ತಿಗಿಂತಲೂ ಮರಣವೇ ಶ್ರೇಯಸ್ಕರವೆಂದು ಅರ್ಥ ಮಾಡಿದರು, ಇದರಿಂದ ಫಲಿತಾಂಶವೇನು ಎಂದರೆ, ವೀರಕ್ಷತ್ರಿಯನಾದವನು ಒಂದುವೇಳೆ ಮರಣವನ್ನಾದರೂ ಬಯಿಸಬಹುದೇ ವಿನಾ ಅಕೀರ್ತಿಗೆ ಎಂದಿಗೂ ಒಳಗಾಗಕೂಡದು; ಪ್ರಾರಂಭಿಸಿದ ಯುದ್ಧ ತ್ಯಾಗವು ಸರ್ವಾತ್ಮನಾ ಸರಿಯಲ್ಲವೆಂಬುದು ಭಾವವು. "ಜೀರ್ಣ ಭದ್ರಾಣಿ ಪಶ್ಯತಿ" ಎಂಬುದು ಯುದ್ಧಾರಂಭಮಾಡಿದ ವೀರಕ್ಷತ್ರಿಯನಿಗೆ ಹೇಳಿದುದಲ್ಲವು. ಮರಣವು ಅಕೀರ್ತಿಗಿಂತ ಹೇಗೆ ಶ್ರೇಯಸ್ಕರವು ಎಂದರೆ ಧರ್ಮಯುದ್ಧದಲ್ಲಿ ಕ್ಷತ್ರಿಯನಿಗೆ ಮರಣವು ಸ್ವರ್ಗ ಅಥವಾ ಮೋಕ್ಷಪ್ರಾಪ್ತಿಯನ್ನುಂಟು ಮಾಡುವಂತಾದ್ದು; ಇದು ಮುಂದೆ ೩೭ನೇಯ ಶ್ಲೋಕದಲ್ಲಿ ಹೇಳಲ್ಪಡುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು**:—ಭಯದಿಂದ ಓಡಿಹೋದರಲ್ಲವೇ ನನಗೆ ಅಪಯಶಸ್ಸು ಶಾಶ್ವತವಾಗಿ ಲೋಕದಲ್ಲಿ ನಿಂತು ಹೋದೀತು. ನಾನು ಯುದ್ಧಾರಂಭವನ್ನು ತ್ಯಾಗಮಾಡುವದಾದರೋ, ಬಂಧುಗಳಲ್ಲೂ ಗುರುಗಳಲ್ಲೂ ಅತ್ಯಂತ ಕರುಣೆಯನ್ನು ತೋರಿಸುವದಕ್ಕಾಗಿಯಾದುದರಿಂದ, ಅಂತಹ ನನಗೆ ಅಪಯಶಸ್ಸು ಎಲ್ಲಿಯದು ಎಂದೇನಾದರೂ ಕೇಳುತ್ತಿಯೋ, ಆಗಲೂ ನಿನಗೆ ಅಪಯಶಸ್ಸು ತಪ್ಪಿದ್ದಲ್ಲವೆಂದು ಹೇಳುತ್ತಾರೆಂಬದಾಗಿ ಅವತಾರಿಕೆಯನ್ನು ದಯಪಾಲಿಸುತ್ತಾರೆ. **ಬಂಧುಸ್ನೇಹಾತ್** -ಬಂಧುಗಳಲ್ಲಿರುವ ಸ್ನೇಹದಿಂದಲೂ, ಕಾರುಣ್ಯದಿಂದಲೂ ಸಹ, **ಯುದ್ಧಾನ್ನಿವೃತ್ತಸ್ಯ** – ಯುದ್ಧದಿಂದ ನಿವೃತ್ತನಾದ, **ಶೂರಸ್ಯ** – ಮತ್ತು ಶೂರನಾದ, **ಮಮ**-ನನಗೆ (ಅರ್ಜುನನಿಗೆ), **ಅಕೀರ್ತಿಃ** – ಅಪಯಶಸ್ಸು, **ಕಥಮಾಗಮಿಷ್ಯತಿ** - ಹೇಗೆ ಬಂದೀತು, **ಇತ್ಯತ್ರಾಹ** - ಎಂಬ ಶಙ್ಕಾ ಸಂದರ್ಭದಲ್ಲಿ। ಶ್ರೀಕೃಷ್ಣ ಭಗವಾನರವರು ಹೇಳುತ್ತಾರೆ. ಹಿಂದಿನ ಶ್ಲೋಕದಲ್ಲಿ ಸಿಕ್ಕಿದವರು ಮನಬಂದಂತೆ ತುಚ್ಛವಾಗಿ ನಿನ್ನನ್ನು ಕುರಿತು ಮಾತಾಡಿಕೊಳ್ಳುವರು, ಇಂತಹ ಅಪಯಶಸ್ಸಿಗಿಂತ ಮರಣವಾದರೂ ಉತ್ತಮವೆಂದು ಹೇಳಲ್ಪಟ್ಟಿತು. ಆದರೆ ಅದಕ್ಕೆ ಅರ್ಜುನನು ಆಕ್ಷೇಪಿಸಬಹುದು ಏನೆಂದರೆ, ತಾನು ಯುದ್ಧದಿಂದ ನಿವೃತ್ತನಾಗಿ ಹೋಗುವದು ಬಂಧು ಸ್ನೇಹದಿಂದಲೂ ಕಾರುಣ್ಯದಿಂದಲೂ ಆಗಿರುತ್ತದೆ; ಭೀಷ್ಮದ್ರೋಣಾದಿಗಳು, ದುರ್ಯೋಧನ ಕರ್ಣ ಮೊದಲಾದವರನ್ನೆಲ್ಲಾ ಕೊಲ್ಲುವದು ಯುಕ್ತವಲ್ಲವೆಂದಲ್ಲವೇ ತಾನು ಯುದ್ಧದಿಂದ ನಿವೃತ್ತನಾಗುವದು; ಒಂದುವೇಳೆ ಹೇಡಿಯಾದರೂ ಆಗಿದ್ದಪಕ್ಷದಲ್ಲಿ ಅಂತಹ ಅಪಯಶಸ್ಸು ಉಂಟಾಗುತ್ತಿತ್ತು ; ಹಾಗಿಲ್ಲದಿರುವಾಗ ಇಂತಹ ಅಕೀರ್ತಿಯು ಹೇಗೆ ಉಂಟಾದೀತೆಂದು ಆಕ್ಷೇಪವು. ಅದಕ್ಕೆ ಸಮಾಧಾನವನ್ನು ಮುಂದಿನ ಶ್ಲೋಕದಿಂದ ಹೇಳುತ್ತಾರೆ:—ಶತ್ರು ಪಕ್ಷದವರು ಎಂದಿಗೂ ನೀನು ಬಂಧುಸ್ನೇಹದಿಂದಲೂ ಕಾರುಣ್ಯದಿಂದಲೂ ಯುದ್ಧದಿಂದ ನಿವೃತ್ತನಾಗಿರುವೆ ಎಂದು ಹೇಳುವದಿಲ್ಲವು. ಭಯದಿಂದ ಓಡಿಹೋಗಿರುವೆ ಎಂದೇ ಹೇಳುವರು, ಅಂತಹ ಶತ್ರುಪಕ್ಷದವರಿಂದ ಹಾಗೆ ಹೇಳಿಸಿಕೊಳ್ಳುವದು ನಿನಗೆ ತುಂಬಾ ಲಾಘವವೆಂದು ತಿಳಿಸುತ್ತಾರೆ:—

**ಮೂಲಕ್ಕೆ ಅರ್ಥವು**:—ಧರ್ಮದಲ್ಲಿ ಅಧರ್ಮವೆಂಬ ಭ್ರಮೆಯು ಖಂಡಿಸಲ್ಪಟ್ಟಿತು. ಈ ಶ್ಲೋಕದಲ್ಲಿ ಅಸ್ಥಾನದಲ್ಲಿ ಮಾಡುವ ಸ್ನೇಹವು ನಿರಾಕರಿಸಲ್ಪಡುತ್ತದೆ. ಲೋಕಕಂಟಕರಾಗಿ ದುರ್ಮಾರ್ಗಿಗಳಾಗಿಯೂ, ಮತ್ತು ಅಂತವರಿಗೆ ಸಹಾಯಕರಾಗಿಯೂ ಇರುವವರ ವಿಷಯದಲ್ಲಿ ಸ್ನೇಹ ಕಾರುಣ್ಯಗಳು, ಸದ್ಧರ್ಮದಲ್ಲಿರುವ ಕ್ಷತ್ರಿಯನಿಗೆ ಸರಿಯಲ್ಲವೆಂದು ಹೇಳಲ್ಪಡುತ್ತದೆ. ಶತ್ರುಗಳಲ್ಲಿ ಸ್ನೇಹಭಾವವನ್ನು ಒಂದು ವೇಳೆ ತೋರಿದರೂ, ಶತ್ರುಗಳಾದುದರಿಂದ ಭಯ

ಮೂ. ಭಯಾದ್ರಣಾ ದುಪರತಂ ಮನ್ಯನ್ತೇ ತ್ವಾಂ ಮಹಾರಥಾಃ ।
ಯೇಷಾಂ ಚ ತ್ವಂ ಬಹುಮತೋ ಭೂತ್ವಾಯಾಸ್ಯಸಿ ಲಾಘವಂ ॥ ೩೫.

ಭಾ. ಯೇಷಾಂ ಕರ್ಣದುರ್ಯೋಧನಾದೀನಾಂ ಮಹಾರಥಾನಾ ಮಿತಃ ಪೂರ್ವಂ ತ್ವಂ ಶೂರೋ ವೈರೀತಿ ಬಹುಮತೋ ಭೂತ್ವೇದಾನೀಂ ಯುದ್ಧೇ ಸಮುಪಸ್ಥಿತೇ, ನಿವೃತ್ತ ವ್ಯಾಪಾರ ತಯಾ ಲಾಘವಂ ಸುಗ್ರಹತಾಂ ಯಾಸ್ಯಸಿ, ತೇ ಮಹಾರಥಾ ಸ್ತ್ವಾಂ ಭಯಾ ದ್ಯುದ್ಧಾ ದುಪರತಂ ಮಂಸ್ಯನ್ತೇ. ಶೂರಾಣಾಂ ಹಿ ವೈರಿಣಾಂ ಶತ್ರುಭಯಾ ದೃತೇ ಬನ್ಧು ಸ್ನೇಹಾದಿನಾ ಯುದ್ಧಾ ದುಪರತಿ ರ್ನೋಪಪದ್ಯತೇ ॥ ೩೫ ॥

ದಿಂದರ್ಜುನನು ಓಡಿಹೋದನೆಂದೇ ಅವರು ಪ್ರಕಟಿಸುತ್ತಾರೆ. ಆದುದರಿಂದ ಲಾಘವಕ್ಕೂ ಪರಿಹಾಸಕ್ಕೂ ಗುರಿಯಾಗುತ್ತೀ ಎಂದು ಬೋಧಿಸುತ್ತಾರೆ. **ಯೇಷಾಂ** - ಯಾವ ಪ್ರಸಿದ್ಧ ಶೂರರಾದ ಕರ್ಣ ದುರ್ಯೋಧನಾದಿಗಳಿಗೆ, **ತ್ವಂ** – ಅವರಿಗಿಂತಲೂ ಶೂರನಾದ ನೀನು, **ಬಹುಮತೋ ಭೂತ್ವಾ** - ಉತ್ತರ ಗೋಗ್ರಹಣ ಮೊದಲಾದ ಯುದ್ಧಗಳಲ್ಲಿ ಬಹು ಶೂರನೆಂದು ಬಹುಮಾನಿಸಲ್ಪಟ್ಟವನಾಗಿ, ಈಗ, **ತ್ವಾಂ** – ಅಂತಹ ನಿನ್ನನ್ನು ಅಂತಹ **ಮಹಾರಥಾಃ** – ಮಹಾರಥರು, **ರಣಾತ್** - ಯುದ್ಧದಿಂದ, **ಭಯಾತ್** - ಭಯ ಮೂಲಕವಾಗಿ, **ಉಪರತಂ** - ನಿಂತು ಹೋದವನನ್ನಾಗಿ, **ಮನ್ಯನ್ತೇ** - ತಿಳಿಯುವರು, ಮತ್ತು **ಲಾಘವಂ ಯಾಸ್ಯಸಿ** - ನಿನ್ನನ್ನು ಸುಲಭವಾಗಿ ಅವರು ಹಿಡಿಯುವದು ಶಿರೆಯಲ್ಲಿಡುವದು ಇವೇ ಮೊದಲಾದ ಲಾಘವವನ್ನು ಹೊಂದುವಿ.

**ಭಾಷ್ಯಾರ್ಥವು:—ಯೇಷಾಂ ಕರ್ಣ ದುರ್ಯೋಧನಾದೀನಾಂ ಮಹಾರಥಾನಾಂ-ಯೇಷಾಂ**– ಎಂದರೆ ಯಾವ ಕರ್ಣ ದುರ್ಯೋಧನರೇ ಮೊದಲಾದ ಮಹಾರಥರುಗಳಿಗೆ, **ಇತಃಪೂರ್ವಂ** - ಈ ಯುದ್ಧಾರಂಭಕ್ಕೆ ಮೊದಲೆಲ್ಲಾ, **ತ್ವಂ ಶೂರೋ ವೈರೀತಿ ಬಹುಮತೋಭೂತ್ವಾ** - ನೀನು ಶೂರನಾಗಿಯೂ ವೈರಿಯಾಗಿಯೂ ಇದ್ದುದರಿಂದ ಬಹುಮತಿಯನ್ನು ಹೊಂದಿದವನಾಗಿ, ಇದರಿಂದ ಕ್ಷತ್ರಿಯಶ್ರೇಷ್ಠನಾಗಿರುವವನಲ್ಲಿ ಯಾವ ಗುಣಗಳಿರಬೇಕೋ, ಅವೆಲ್ಲವೂ ನಿನ್ನಲ್ಲಿರುವವರಿಂದ ನೀನು ಹೆಚ್ಚಾಗಿ ಸನ್ಮಾನಿಸಲ್ಪಟ್ಟ ಎಂಬ ಭಾವವು, ಆದುದರಿಂದಲೇ "ಬಹುಮತೋಭೂತ್ವಾ" ಎಂಬ ಪ್ರಯೋಗವು; ನಿನ್ನಲ್ಲಿ ಬರೀ ಶೂರತ್ವವಿದ್ದು ನೀನು ವೈರಿಯಾಗಿಲ್ಲದಿದ್ದರೂ ಖ್ಯಾತಿಯಿಲ್ಲವು, ಬರೀ ವೈರಿಯಾಗಿದ್ದು ಶೌರ್ಯವಿಲ್ಲದಿದ್ದರೂ ಖ್ಯಾತಿಯಿಲ್ಲವು, ಶತ್ರು ಪಕ್ಷದವರು ಬಹುಮಾನಿಸಬೇಕಾದರೆ ನೀನು ಶೂರನಾಗಿಯೂ ವೈರಿಯಾಗಿಯೂ ಇದ್ದುದರಿಂದ "ಬಹುಮತೋಭೂತ್ವಾ" ಬಹುಶ್ಲಾಘಿಸಲ್ಪಟ್ಟ ಎಂಬರ್ಥವು, **ಇದಾನೀಂ** - ಈಗಲಾದರೋ, **ಯುದ್ಧೇ ಸಮುಪಸ್ಥಿತೇ**– ಯುದ್ಧವು ಪ್ರಾಪ್ತವಾಗಿರಲಾಗಿ, **ನಿವೃತ್ತ ವ್ಯಾಪಾರತಯಾ** – ಹಿಂತಿರಿಗಿದ ವ್ಯಾಪಾರದಿಂದ, **ಲಾಘವಂ** ಎಂದರೆ **ಸುಗ್ರಹತಾಂ** - ಸುಲಭವಾಗಿ ಅವರು ನಿನ್ನನ್ನು ಹಿಡಿಯೋಣರೂಪವಾದ ಅವಸ್ಥೆಯನ್ನು, **ಯಾಸ್ಯಸಿ** - ಹೊಂದುವಿಯೋ, **ತೇ ಮಹಾರಥಾಃ** - ಆ ಮಹಾರಥರು, **ತ್ವಾಂ** - ನಿನ್ನನ್ನು, **ಭಯಾತ್** - ಭಯದಿಂದ, **ಯುದ್ಧಾದುಪರತಂ**, ಯುದ್ಧದಿಂದ ನಿವೃತ್ತನನ್ನಾಗಿ, **ಮಂಸ್ಯನ್ತೇ** - ತಿಳಿಯುವರು. ನೀನೇನೋ ಬಂಧು ಸ್ನೇಹದಿಂದಲೇ ಯುದ್ಧದಿಂದ ನಿವೃತ್ತನಾಗಬಹುದು. ನೀನು ಬಹು ಶೂರನಾದ ವೈರಿಯು ಎಂದು ನಿನ್ನಲ್ಲಿ ಗೌರವವನ್ನು ಇಟ್ಟಿರುವರು; ಅಂತವರ ಎದುರಿಗೆ ನೀನು ಯುದ್ಧವನ್ನು ಪ್ರಾರಂಭಿಸಿ ಯುದ್ಧದಿಂದ ನಿವೃತ್ತನಾದರೆ, ನೀನು ಭಯದಿಂದ ವಿರಾಮವನ್ನು ಹೊಂದಿದಿ ಎಂದು ಭಾವಿಸುವರೇ ವಿನಾ

ಭಾ. ಅ. ಕಿಞ್ಚ,

ಮೂ. ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ ।
ನಿಂದಂತಸ್ತವ ಸಾಮರ್ಥ್ಯಂ ತತೋದುಃಖತರಂ ನುಕಿಮ್ ॥ ೩೬.

ಅನ್ಯಥಾ ಅಲ್ಲವು. ಅವರು ಮಹಾರಥರು, ಎಂದಿಗೂ ಸುಮ್ಮನಿರುವದಿಲ್ಲವು. ನಿನ್ನನ್ನು ಹಿಂಬಾಲಿಸಿ ಬಂದು ಬಂಧಿಸಿ ಎಳೆದುಕೊಂಡು ಹೋಗುವರು. ಹೀಗೆ ಬಹು ಲಾಘವವನ್ನು ಹೊಂದುವಿ. ಬಂಧು ಸ್ನೇಹದಿಂದ ಯುದ್ಧ ಬಿಟ್ಟನೆಂದಾಗಲಾರದೋ? ಎಂದರೆ ಹಾಗೆ ಎಂದಿಗೂ ಪ್ರತೀತಿ ಉಂಟಾಗಲಾರದೆಂದು ಹೇಳುತ್ತಾರೆ:—**ಶೂರಾಣಾಂಹಿ ವೈರಿಣಾಂ** - ಶೂರರಾದ ವೈರಿಗಳಿಗಾದರೋ, **ಶತ್ರುಭಯಾದೃತೇ** - ಶತ್ರುವಿನ ಭಯವಿಲ್ಲದೆ, **ಬಂಧುಸ್ನೇಹಾದಿನಾ** - ಬಂಧು ಸ್ನೇಹ ಮೊದಲಾದವುಗಳಿಂದ, **ಯುದ್ಧಾದುಪರತಿಃ** – ಯುದ್ಧದಿಂದ ನಿವೃತ್ತಿಯು, **ನೋಪಪದ್ಯತೇ** – ಎಂದಿಗೂ ಉಂಟಾಗಲಾರದು. ಶೂರನಾದ ಶತ್ರುವು ಯುದ್ಧಕ್ಕಾಗಿ ಬಂದು ನಿಂತು ಅನಂತರ ನಿವೃತ್ತನಾದರೆ ಭಯದಿಂದ ನಿಂತು ಹೋದನೆಂದು ಹೇಳುವರೇ ವಿನಾ, ಬಂಧು ಸ್ನೇಹದಿಂದ ನಿಂತುಹೋದನೆಂದು ಶತ್ರು ಪಕ್ಷದವರು ಎಂದಿಗೂ ಹೇಳಲಾರರೆಂಬ ಭಾವವು. ಭೀಷ್ಮ ದ್ರೋಣಾದಿ ಮಹನೀಯರಾದವರೂ ಸರಿಯಾಗಿ ತಿಳಿಯುವ ಜ್ಞಾನಿಗಳಾದುದರಿಂದ ಬಂಧು ಸ್ನೇಹದಿಂದ ನಿವೃತ್ತನಾದನೆಂದು ಒಪ್ಪಿದರೂ, ನಿನಗೆ ಅಹಿತವನ್ನೇ ಮಾಡಬೇಕೆಂದು ಕಂಕಣ ಬದ್ಧರಾದ ಕರ್ಣ ದುರ್ಯೋಧನಾದಿಗಳು ಎಂದಿಗೂ ಹಾಗೆ ಭಾವಿಸರು. ಆದುದರಿಂದಲೇ ಭಾಷ್ಯದಲ್ಲಿ ಭೀಷ್ಮ ದ್ರೋಣರ ಹೆಸರುಗಳನ್ನು ಬಿಟ್ಟು, ಕರ್ಣ ದುರ್ಯೋಧನರು ಹೇಳಲ್ಪಟ್ಟರು. ॥ ೩೬ ॥

**ಭಾಷ್ಯಾವತಾರಿಕೆಯ ಅರ್ಥವು**:—**ಕಿಂಚ** - ಇಷ್ಟೇ ಅಲ್ಲವು, ನಿನ್ನಂತಹ ಶೂರನಾದ ವೈರಿಯು ಬಂಧು ಸ್ನೇಹವನ್ನು ತೋರಿದರೂ, ಅದನ್ನು ನಿನ್ನ ದ್ವೇಷಿಗಳಾದ ಶತ್ರುಗಳು ಭಯದಿಂದ ಓಡಿಹೋದನೆಂದು ಹೇಳಿ, ನಿನ್ನನ್ನು ಹಿಡಿದು ಹಿಂಸಿಸುವದೂ ಅಲ್ಲದೆ, ಇನ್ನೂ ನಾನಾ ವಿಧವಾದ ಕರ್ಣ ಕಠೋರವಾಕ್ಕುಗಳಿಂದ ನಿನ್ನ ಸಾಮರ್ಥ್ಯವನ್ನು ನಿಂದಿಸುವರು, ಶೂರನಾದವನಿಗೆ ಅದಕ್ಕಿಂತಲೂ ದುಃಖಕರವಾದುದು ಯಾವುದೂ ಇಲ್ಲವೆಂದು ಹೇಳುತ್ತಾರೆ.

**ಮೂಲಕ್ಕೆ ಅರ್ಥವು**:—**ತವಾಹಿತಾಃ** - ನಿನ್ನ ಶತ್ರುಗಳಾದ ಧಾರ್ತರಾಷ್ಟ್ರಾದಿಗಳು, ನಿನಗೆ ಅಹಿತರಾದುದರಿಂದ ನೀನು ಬಂಧುಸ್ನೇಹದಿಂದ ನಿವೃತ್ತನಾದರೂ ಅವರು ಎಂದಿಗೂ ನಿನ್ನ ವಿಷಯದಲ್ಲಿ ಹಿತವಾದುದನ್ನು ಹೇಳರು. ಅಹಿತವಾದುದನ್ನೇ ಹೇಳುವರಾದುದರಿಂದ ಅಹಿತ ಶಬ್ದ ಪ್ರಯೋಗವು,**ತವಸಾಮರ್ಥ್ಯಂ** - ನಿನ್ನ ಸಾಮರ್ಥ್ಯವನ್ನು, **ನಿಂದಂತಃ** - ನಿಂದಿಸುವವರಾಗಿ, **ಬಹೂನ್**-ಬಹುವಾದ, **ಅವಾಚ್ಯವಾದಾಂಶ್ಚ** - ಬಾಯಲ್ಲಿ ಉಚ್ಚರಿಸಲಾಗದ ಅಂತಹ ಹೀನವಾದ ಮಾತುಗಳನ್ನು, **ವದಿಷ್ಯಂತಿ** - ಆಡುವರು, **ತತಃ** - ಅದಕ್ಕಿಂತಲೂ,(ಶೂರನಾದ ನಿನಗೆ) **ದುಃಖತರಂ** - ಹೆಚ್ಚು ದುಃಖವುಳ್ಳದ್ದು, **ಕಿನ್ನು** - ಯಾವುದು ತಾನೇ ಉಂಟು? ಕ್ಷತ್ರಿಯನಾಗಿ ಮಹಾ ಪರಾಕ್ರಮಿಯಾದ ನಿನಗೆ, ಹೀಗೆ ಶತ್ರುಗಳಿಂದ ಆಡಬಾರದ ಮಾತುಗಳನ್ನು ಕೇಳುವದಕ್ಕಿಂತಲೂ ಹೆಚ್ಚು ದುಃಖಕರವಾದ ವಿಷಯವು ಯಾವುದೂ ಇರುವದಿಲ್ಲವು. ಹಿಂದೆ ಅನೇಕ ಅಪಕಾರಗಳಿಂದ ಅವರಿಂದ ನೊಂದಿರುತ್ತೀಯೋ, ಆ ದುಃಖಗಳೆಲ್ಲಾ ಹಾಗಿರಲಿ, ಮಹಾಶೂರನಾದ ನಿನಗೆ ಅಂತಹ ಶತ್ರುಗಳಿಂದ ಬಾಯಲ್ಲಿ ಆಡಬಾರದುದನ್ನೆಲ್ಲಾ ಕೇಳುತ್ತಾ, ನಾನಾಬಗೆಯಾಗಿ ನಿಂದಿ

ಭಾ. "ಶೂರಾಣಾ ಮಸ್ಮಾಕಂ ಸನ್ನಿಧೌ ಕಥಮಯಂ ಪಾರ್ಥಃ ಕ್ಷಣಮಪಿ ಸ್ಥಾತುಂ ಶಕ್ನು ಯಾತ್? ಅಸ್ಮಾತ್ಸನ್ನಿಧಾನಾ ದನ್ಯತ್ರ ಹ್ಯಸ್ಯ ಸಾಮರ್ಥ್ಯ" ಮಿತಿ ತವ ಸಾಮರ್ಥ್ಯಂ ನಿಂದಂತಃ ಶೂರಾಣಾ ಮವಾಚ್ಯವಾದಾಂಶ್ಚ ಬಹೂನ್ವದಿಷ್ಯನ್ತಿ ತವ ಶತ್ರವೋ ಧಾರ್ತ ರಾಷ್ಟ್ರಾಃ ; ತತೋಧಿಕತರಂ ದುಃಖಂ ಕಿಂ ತವ ? ಏವಂ ವಿಧಾ ವಾಚ್ಯ ಶ್ರವಣಾ ನ್ಮರಣಮೇವ ಶ್ರೇಯ ಇತಿ ತ್ವಮೇವ ಮಂಸ್ಯಸೇ ॥ ೩೬ ॥

---

ಸೋಣವಿದೆಯಲ್ಲಾ, ಅದಕ್ಕಿಂತಲೂ ನಿನಗೆ ದುಃಖಕರವಾದುದು ಯಾವುದೂ ಇಲ್ಲವೆಂದು ಭಾವಿ ಸುತ್ತೇನೆ ಎಂಬ ಭಾವವು ॥ ೩೬ ॥

**ಭಾಷ್ಯಾರ್ಥವು :**—ಮೊದಲು "ತವಸಾಮರ್ಥ್ಯಂ ನಿಂದಂತಃ" ಎಂಬುದರ ಭಾಷ್ಯವನ್ನು ಬರೆಯುವದರಲ್ಲಿ, ಹೇಗೆ ಶತ್ರುಗಳು ನಿಂದಿಸುವರೆಂದರೆ ಹೇಳುತ್ತಾರೆ:—"**ಶೂರಾಣಾಮಸ್ಮಾಕಂ**— ಶೂರರಾದ ನಮ್ಮಗಳ, **ಸನ್ನಿಧೌ** - ಸಮೀಪದಲ್ಲಿ, **ಕಥಮಯಂ ಪಾರ್ಥಃ ಕ್ಷಣಮಪಿಸ್ಥಾತುಂ ಶಕ್ನುಯಾತ್?** "**ಅಯಂ**" ಎಂದು ಹೇಳಿದುದರಿಂದ ಈ ಹೇಡಿಯಾದ ಅರ್ಜುನನು ಒಂದು ಕ್ಷಣ ವಾಗಲಿ ನಿಲ್ಲಲು ಸಾಮರ್ಥ್ಯವುಳ್ಳವನಾಗುವನೇ ?-**ಅಸ್ಮಾತ್ಸನ್ನಿಧಾನಾದನ್ಯತ್ರಹಿ**-ನಮ್ಮೆದುರಿಗಲ್ಲದೆ ಬೇರೇಕಡೆಯಲ್ಲೀಗ, **ಅಸ್ಯಸಾಮರ್ಥ್ಯಂ**-ಈತನ ಸಾಮರ್ಥ್ಯವು" **ಇತಿ**-ಹೀಗೆಲ್ಲಾ, **ತವಸಾಮರ್ಥ್ಯಂ ನಿಂದಂತಃ**-ನಿನ್ನ ಸಾಮರ್ಥ್ಯವನ್ನು ನಿಂದಿಸುವ, **ತವ ಶತ್ರವಃ ಧಾರ್ತರಾಷ್ಟ್ರಾಃ**-ನಿನ್ನ ಶತ್ರುಗ ಳಾದ ಧೃತರಾಷ್ಟ್ರನ ಪುತ್ರರು, **ಶೂರಾಣಾಂ** - ಶೂರರಾದವರಿಗೆ, **ಬಹೂನ್**—ನಾನಾವಿಧವಾಗಿ ಬಹು ವಾದ,ಹೇಗೆಂದರೆ ಹೀಯಾಳಿಸುವದು, ನಗುವದು, ಕೋಪಬರುವಹಾಗೆಮಾಡುವದು, ಹೀಗೆ ಬಹು ವಿಧವಾದ, **ಅವಾಚ್ಯ ವಾದಾಂಶ್ಚ** - ಬಾಯಲ್ಲಿ ಉಚ್ಚರಿಸಲು ಯೋಗ್ಯವಲ್ಲದ ಮಾತುಗಳನ್ನು, **ವದಿಷ್ಯಂತಿ** - ಆಡುವರು, **ತತಃ** - ಅಂತಹ ನಿಂದೆಯನ್ನು ಕೇಳುವದಕ್ಕಿಂತಲೂ, **ಅಧಿಕ ತರಂ ದುಃಖಂ** - ಹೆಚ್ಚಾಗಿ ದುಃಖಕರವಾದುದು, **ತವ** - ನಿನಗೆ, **ಕಿಂ** - ಯಾವುದು? **ಏವಂ ವಿಧಾ ವಾಚ್ಯ ಶ್ರವಣಾತ್**—ಈ ಪರಿಯಾದ ಆಡಬಾರದ ಮಾತುಗಳನ್ನು ಕೇಳುವದಕ್ಕಿಂತಲೂ, **ಮರಣ ಮೇವ ಶ್ರೇಯಃ** — ಮರಣವೇ ಶ್ರೇಯಸ್ಕರವಾದುದು, **ಇತಿ** - ಎಂದು, **ತ್ವಮೇವ** - ನೀನೆಯೇ, **ಮಂಸ್ಯಸೇ** - ತಿಳಿಯುವೇ, "**ದುಃಖತರ**" ವೆಂಬಲ್ಲಿ "**ತರ**" ಶಬ್ದವು ಗುಣವಾಚಿ ಪದಗಳಿಗೆ ಸೇರಿಸುವ ಪ್ರತ್ಯಯವು, ನಾಮಪದಕ್ಕೆ ಸೇರಿಸುವದಿಲ್ಲವು, ಆದರೆ ಅಭಿಪ್ರಾಯವೇನೋ ವ್ಯಕ್ತವು, ಅದನ್ನು ತಿಳಿಸುವದಕ್ಕಾಗಿ, "**ಅಧಿಕತರಂ ದುಃಖಂ**" ಎಂದು ವ್ಯಾಖ್ಯಾನ ಮಾಡಿದರು, ಜನರು ನಾನಾವಿಧವಾಗಿ ಪರೋಕ್ಷದಲ್ಲಿ ನಿಂದಿಸಬಹುದು. ಅವೆಲ್ಲಾ ನಮಗೆ "**ದುಃಖತರ**" ವಾಗುವದಿ ಲ್ಲವು, ಒಂದುವೇಳೆ ಇತರರು ಬಂದು ಹೇಳಿದರೂ ಆಗಲೂ ದುಃಖತರನಾಗುವದಿಲ್ಲವು, ದುಃಖ ತರವು ಯಾವಾಗ ಎಂದರೆ ಪ್ರತ್ಯಕ್ಷದಲ್ಲಿ ನಮ್ಮ ಕಿವಿಗೇನೇ ಬೀಳುವಹಾಗೆ ನಿಂದಿಸಿದರೆ, ಆಗೀಗ ಹೆಚ್ಚಾದ ವ್ಯಥೆಯು ಎಂಬುದನ್ನು ತಿಳಿಸುವದಕ್ಕಾಗಿ, "**ಏವಂ ವಿಧ ಅವಾಚ್ಯ ಶ್ರವಣಾತ್**" ಎಂಬ ವ್ಯಾಖ್ಯಾನವು. ಇದು ಮೂಲದಲ್ಲಿ "**ನಿಂದಂತಸ್ತವ ಸಾಮರ್ಥ್ಯಂ**" ಎಂಬಲ್ಲಿ ಅರ್ಥವಾಗಿ ನಿನ್ನ ಎದುರಿಗೇನೇ ನಿಂದಿಸಿದರೆ ಆಗೀಗ ಅಧಿಕ ದುಃಖವೆಂಬ ಭಾವವು. ಧಾರ್ತರಾಷ್ಟ್ರರು ನಾನಾ ವಿಧವಾಗಿ ಬಾಯಲ್ಲಿ ಉಚ್ಚರಿಸಬಾರದ ಕಿವಿಯಲ್ಲಿ ಕೇಳಲಾಗದಿರುವ ನಿಂದೆಗಳನ್ನಾಡುವರು. ಯದ್ಯಪಿ ಭೀಷ್ಮ ದ್ರೋಣ ಕೃಪ ಶಲ್ಯರು ಅಷ್ಟುಮೂರ ನಿಂದಿಸರು, ಅವರುಗಳಲ್ಲಿ ಸ್ವಲ್ಪಧರ್ಮ ಬುದ್ಧಿಯುಂಟು. ಧಾರ್ತರಾಷ್ಟ್ರಾದಿಗಳಾದ ದುರ್ಯೋಧನ ದುಶ್ಶಾಸನಾದಿಗಳಾದರೋ ಹಾಗ ಲ್ಲವು. ಅವರುಗಳು ಎಂದಿಗೂ ನಿಂದಿಸದೇ ಬಿಡರು. ಆದುದರಿಂದಲೇ ಈ ಭಾಷ್ಯದಲ್ಲಿ ಧಾರ್ತ

ಭಾ. ಅ. ಅತಶ್ಶೂರಸ್ಯಾತ್ಮನಾ ಪರೇಷಾಂ ಹನನ ಮಾತ್ಮನೋವಾ ಪರೈರ್ಹನನ ಮುಭಯ ಮಪಿ ಶ್ರೇಯಸೇ ಭವತೀತ್ಯಾಹ.

ರಾಷ್ಟ್ರಾಃ ಎಂಬ ಪ್ರಯೋಗವು. ಧಾರ್ತರಾಷ್ಟ್ರರು ಜ್ಞಾತಿಗಳು "ಜ್ಞಾತಿಶ್ಚೇದನಲೇನ ಕಿಂ" ಜ್ಞಾತಿಗಳಿದ್ದರೆ ಬೇರೆ ಬೆಂಕಿಯು ಬೇಕಿಲ್ಲವೆಂದೂ, "ವಿದ್ಯತೇ ಜ್ಞಾತಿತೋಭಯಮ್" ಜ್ಞಾತಿ ಎಂದನಂತರ ಆತನಿಂದ ಭಯವು ತಪ್ಪದು ಎಂದೂ ಹೇಳಲ್ಪಟ್ಟಿರುವದರಿಂದ ಜ್ಞಾತಿಗಳಾದ ಧಾರ್ತರಾಷ್ಟ್ರರು ನಿನಗೆ ಅಹಿತವನ್ನೇ ಮಾಡಿ ನಾನಾಬಗೆಯಾಗಿ ನಿಂದಿಸುವವಕ್ಕಾಗಿಯೇ "ತವ ಶತ್ರವಃ ಧಾರ್ತರಾಷ್ಟ್ರಾಃ" ಎಂಬ ಪ್ರಯೋಗವು, ಈಗೇನೋ ಶತ್ರುಗಳಾಗಿ ಬಂದಿರುವರಾದರೂ ಹೀಯಾಳಿಸಿದರೂ ಚಿಂತೆಯಿಲ್ಲವೆಂದರೂ, ಹಿಂದೆ ನಾನಾ ವಿಧವಾಗಿ ಕೇಡನ್ನು ಮಾಡಲು ಯತ್ನಿಸಿರುವವರು ಹೀಯಾಳಿಸಿದರೆ ಅದನ್ನು ಸಹಿಸುವದು ಸಾಧ್ಯವಿಲ್ಲವು; ಅಂತಹ ನಿಂದೆಯೂ ತುಂಬಾ ದುಃಖಕರವಾದುದೆಂದೂ ತಿಳಿಸುವವಕ್ಕಾಗಲಿ, "ತವ ಶತ್ರವಃ ಧಾರ್ತರಾಷ್ಟ್ರಾಃ" ಎಂಬ ಪ್ರಯೋಗವು; ನಿನಗೆ ಅವರು ಶತ್ರುಗಳು ಎಂಬುದು ಲೋಕಕ್ಕೆಲ್ಲಾ ತಿಳಿದ ವಿಷಯವೆಂಬುದು ಸೂಚಿತವು. ಶೂರನಾದ ನಿನ್ನಂತವನಿಗೆ ಇಂತಹ ಮಾತುಗಳನ್ನು ಕೇಳುವದು ತುಂಬಾ ದುಸ್ಸಹವು, ನಿನ್ನ ಅಣ್ಣನಾದ ಧರ್ಮಪುತ್ರನು ಗಾಂಡೀವಧನುಸ್ಸನ್ನು ಸ್ವಲ್ಪನಿಂದಿಸಿದುದಕ್ಕೆ ಆತನನ್ನೇ ವಧಿಸಲು ಯತ್ನಿಸಿದವನು ನೀನು. ಹೀಗಿರುವವನು ಶತ್ರುಗಳು ಅವಮಾನಿಸಿದರೆ ನೀನು ಸಹಿಸುವಿಯಾ ಎಂಬ ಭಾವವು. "ಕಿಮ್" ಎಂಬ ಪ್ರಶ್ನೆಯಿಂದ ಇದು ಅರ್ಥವಾಗಿ ತೋರಿಬರುತ್ತದೆ. ಅಂತಹ ಮಾತುಗಳನ್ನು ಕೇಳುವದಕ್ಕಿಂತಲೂ ಮರಣವೇ ಉತ್ತಮವೆಂದು ನೀನೇ ತಿಳಿದಿರುವೆ ಎಂಬ ಭಾವವು. ಆದುದರಿಂದ ಅವರು ನಿಂದಿಸುವದೂ ನಿಶ್ಚಯವು. ಆನಿಂದೆಯನ್ನು ಸಹಿಸದೆ ನೀನೇ ಅವರೊಂದಿಗೆ ಯುದ್ಧಮಾಡಿ ಕೊಲ್ಲುವೆ. ಅಂತೂ ಯುದ್ಧ ಬೇರೇ ತಪ್ಪುವದಿಲ್ಲವು, ಎಂಬ ಭಾವವೂ ಸೂಚಿತವು. "ದುಃಖತರ" ಶಬ್ದವಿರುವದರಿಂದ, ಹಿಂದೆ "ಅಕೀರ್ತಿಃ ಮರಣಾದತಿರಿಚ್ಯತೇ" ಎಂದು ಇರುವದನ್ನು ಜ್ಞಾಪಿಸಿಕೊಂಡವರಾಗಿ ಅಕೀರ್ತಿಗಿಂತ ವೀರ ಕ್ಷತ್ರಿಯನಿಗೆ ಮರಣವೇ ಲೇಸಾದರೆ ಇನ್ನು ದುಃಖತರವಾದುದು ಮರಣಕ್ಕಿಂತ ಲೇಸೆಂದು ಹೇಳತಕ್ಕದ್ದೇನಿದೆ, ಎಂದು ಇಲ್ಲಿಯೂ "ಮರಣಮೇವ ಶ್ರೇಯಃ" ಎಂಬ ವ್ಯಾಖ್ಯಾನವು; ಇದನ್ನು ನಾನು ಹೇಳುವ ಅವಶ್ಯಕತೆಯಿಲ್ಲವು. ನಿನಗೇನೇ ಸ್ವತಃ ವೇದ್ಯವಾದೀತು ಎಂದು "ತ್ವಮೇವಮಂಸ್ಯಸೇ" ಎಂಬ ಪ್ರಯೋಗವು.

**ಭಾಷ್ಯಾವತಾರಿಕೆಯ ಅರ್ಥವು**:—**ಅತಃ** – ಆ ಕಾರಣದಿಂದ, ಹೇಡಿಗಳಾದ ಶತ್ರುಗಳಿಂದ ಪರಾಕ್ರಮಿಯಾದ ನಿನಗೆ ಈ ಶತ್ರು ನಿಂದನೆಯು ದುಸ್ಸಹವಾದ ದುಃಖರೂಪವಾದುದರಿಂದ ಎಂಬ ಭಾವವು, **ಶೂರಸ್ಯ** - ಶೂರನಾದವನಿಗೆ **ಆತ್ಮನಾ** - ತನ್ನಿಂದ, **ಪರೇಷಾಂ ಹನನಂ** – ಶತ್ರುಗಳ ಕೊಲೆಯೂ, **ಪರೈಃ** - ಶತ್ರುಗಳಿಂದ, **ಆತ್ಮನಃ ಹನನಂ** ತನ್ನ ಕೊಲೆಯೂ ಸಹ, **ಉಭಯಮಪಿ**-ಎರಡೂ ಕೂಡ, **ಶ್ರೇಯಸೇಭವತಿ** -ಶ್ರೇಯಸ್ಸಿಗಾಗಿಯೇ ಆಗುತ್ತದೆ, **ಇತ್ಯಾಹ** - ಎಂದು ಹೇಳುತ್ತಾರೆ. ಯುದ್ಧದಲ್ಲಿ ತಾನು ಮಡಿದರೂ ಅಥವಾ ತಾನು ಶತ್ರುಗಳನ್ನು ಕೊಂದರೂ, ಎರಡು ಸಂದರ್ಭದಲ್ಲೂ ತನಗೆ ಶ್ರೇಯಸ್ಸುಂಟೆಂದು ಶ್ರೀ ಕೃಷ್ಣಭಗವಾನರವರು ಉಪದೇಶಿಸುತ್ತಾರೆ ಎಂಬ ತಾತ್ಪರ್ಯವು.

ಆದುದರಿಂದ ಧರ್ಮ್ಯಯುದ್ಧದಲ್ಲಿ ನೀನು ಮಡಿದರೂ ಸರಿಯೇ, ಅಥವಾ ನೀನು ಶತ್ರುಗಳನ್ನು ಕೊಂದರೂ ಸರಿಯೇ, ಎರಡು ಸಂದರ್ಭದಲ್ಲೂ ಯುದ್ಧವು ನಿನಗೆ ಶ್ರೇಯಸ್ಕರವೇ ಎಂದು ಹೇಳಿ ಅಸ್ಥಾನ ಕಾರುಣ್ಯವು ಸರಿಯಲ್ಲವೆಂಬ ವಾದವನ್ನು ಮುಗಿಸುತ್ತಾರೆ.

**ಮೂ. ಹತೋವಾ ಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾವಾ ಭೋಕ್ಷ್ಯಸೇ ಮಹೀಂ।**
**ತಸ್ಮಾದುತ್ತಿಷ್ಠಕೌನ್ತೇಯ ಯುದ್ಧಾಯ ಕೃತನಿಶ್ಚಯಃ॥** ೩೭.

**ಭಾ. ಧರ್ಮಯುದ್ಧೇ ಪರೈರ್ಹತಶ್ಚೇತ್ತತ ಏವ ಪರಮ ನಿಶ್ರೇಯಸಂ ಪ್ರಾಪ್ಸ್ಯಸಿ ; ಪರಾನ್ವಾ ಹತ್ವಾ ಅಕಂಟಕಂ ರಾಜ್ಯಂ ಭೋಕ್ಷ್ಯಸೇ ; ಅನಭಿಸಂಹಿತ ಫಲಸ್ಯ ಯುದ್ಧಾಖ್ಯಸ್ಯ**

**ಮೂಲಕ್ಕೆ ಅರ್ಥವು:**—ನೀನು, **ಹತೋವಾ** – ಈ ಧರ್ಮಯುದ್ಧದಲ್ಲಿ ಕೊಲ್ಲಲ್ಪಟ್ಟರೂ, **ಸ್ವರ್ಗಂ** – ನಿರತಿಶಯ ಸುಖದಾಯಕವಾದ ಮೋಕ್ಷವನ್ನು, **ಪ್ರಾಪ್ಸ್ಯಸೇ** - ಪರಂಪರಯಾ ಹೊಂದುತ್ತೀಯೇ (ನಾನು ಮುಂದೆ ತಿಳಿಸುವಹಾಗೆ ಎಂಬ ಭಾವವು), ಪರಂಪರಯಾ ಮೋಕ್ಷ ವೆಂದು ಹೇಳಲು ಒಪ್ಪದಿದ್ದರೆ ಸ್ವರ್ಗವೆಂದರೆ ಇಂದ್ರನ ಲೋಕವನ್ನೂ ಎಂದು ಅರ್ಥಮಾಡ ಬಹುದು ; ಏಕೆಂದರೆ ಧರ್ಮ ಯುದ್ಧದಲ್ಲಿ ಸತ್ತವನಿಗೆ ಸ್ವರ್ಗಲೋಕಪ್ರಾಪ್ತಿಯುಂಟೆಂದು ಪ್ರಮಾ ಣಗಳಿರುತ್ತವೆ, **"ಪ್ರಾಪ್ಸ್ಯಸಿ"** ಎಂದು ಪಾಠಾಂತರ ಉಂಟು. **"ಹತೋವಾ ಪ್ರಾಪ್ಸ್ಯಸೇ ಸ್ವರ್ಗಂ"** ಎಂದು ಹೇಳಿರುವದರಿಂದಲೂ, ಅಂತಹ ಸ್ವರ್ಗವು ಧರ್ಮ ಯುದ್ಧದಲ್ಲಿ ಪ್ರವರ್ತಿಸಿ ರುವವನಿಗೆ ಮಾತ್ರವೇ ಅಲ್ಲದೆ, ಅಧರ್ಮವಾಗಿ ಯುದ್ಧಕ್ಕೆ ಬಂದವನಿಗಿಲ್ಲವಾದುದರಿಂದಲೂ, ಅರ್ಜು ನನ ಯುದ್ಧವು ಧರ್ಮವೆಂದೂ, ದುರ್ಯೋಧನನ ಯುದ್ಧವೂ ಅಧರ್ಮ ಯುದ್ಧವೆಂದೂ ಹೇಳಿ ದಂತಾಯಿತು. **ಜಿತ್ವಾವಾ** – ಅಥವಾ ನೀನು ಯುದ್ಧದಲ್ಲಿ ಜಯಿಸಿದರೂ, **ಮಹೀಂ** - ಭೂ ಮಂಡಲವನ್ನು, **ಭೋಕ್ಷ್ಯಸೇ** - ಅನುಭವಿಸುತ್ತೀಯೇ, **ತಸ್ಮಾತ್** - ಹೀಗೆ ಎರಡು ವಿಧ ದಲ್ಲೂ ನಿನಗೆ ಶ್ರೇಯಸ್ಸುಂಟಾಗುವದರಿಂದ ಒಂದು ಸಂದರ್ಭದಲ್ಲಿ ಆಮುಷ್ಮಿಕ ಸುಖವೂ, ಇನ್ನೊಂದು ಸಂದರ್ಭದಲ್ಲಿ ಐಹಿಕ ಭೋಗವೂ ಪ್ರಾಪ್ತವಾಗುತ್ತದೆಂಬ ಭಾವವೂ, ಹಾಗೆ ನಾನು ಹೇಳುವಹಾಗೆ ಕೇಳದೇ ಹೋದರೆ ನಿನಗೆ ಇಹಪರಗಳೆರಡೂ ಇಲ್ಲವಾಗುತ್ತದೆಂಬುದೂ, ಸೂಚಿ ತವು. **ಹೇ ಕೌನ್ತೇಯ** - ಓ ವೀರಮಾತೆಯಾದ ಕುನ್ತಿಯ ಕುಮಾರನಾದ ಅರ್ಜುನನೇ, **ಯು ದ್ಧಾಯ** - ನಿನ್ನ ಸ್ವಧರ್ಮವಾದ ಯುದ್ಧಕ್ಕಾಗಿಯೇ **ಕೃತನಿಶ್ಚಯಃ** - ದೃಢಸಙ್ಕಲ್ಪವುಳ್ಳವನಾಗಿ, **ಉತ್ತಿಷ್ಠ** – ಏಳು, ಸಿದ್ಧನಾಗು ಎಂಬ ಭಾವವು.

**ಭಾಷ್ಯಾರ್ಥವು:**—**ಧರ್ಮಯುದ್ಧೇ** - ಧರ್ಮರೂಪವಾದ ಯುದ್ಧದಲ್ಲಿ, **ಪರೈರ್ಹತಶ್ಚೇತ್**— ಶತ್ರುಗಳಿಂದ ನೀನು ಕೊಲ್ಲಲ್ಪಟ್ಟವನಾದರೆ, **ತತಏವ** - ಆ ಕಾರಣದಿಂದಲೇ, **ಪರಮನಿಶ್ರೇ ಯಸಂ** - ನಿರತಿಶಯ ಸುಖರೂಪ ಮೋಕ್ಷವನ್ನು, **ಪ್ರಾಪ್ಸ್ಯಸಿ** - ಹೊಂದುವಿ ; ಹೀಗೆ ಯುದ್ಧದಲ್ಲಿ ಸಾಯುವದರಿಂದಲೇ ಸಾಕ್ಷಾತ್ತಾಗಿ ಮೋಕ್ಷವೆಂಬ ಅಭಿಪ್ರಾಯವಲ್ಲವು. ಸಾಧನಾನುಷ್ಠಾನವಿಲ್ಲದೆ ಮೋಕ್ಷಪ್ರಾಪ್ತಿಯು ಎಂದಿಗೂ ಇಲ್ಲವು. ಸ್ವರ್ಗಪ್ರಾಪ್ತಿಯು ಒಂದು ಸುಕೃತ ವಿಶೇಷವು, ತನ್ಮೂ ಲಕ ಭಕ್ತ್ಯುಪಾಯಾನುಷ್ಠಾನವುಂಟಾಗಿ ಮೋಕ್ಷವು ಲಭಿಸಬಹುದೆಂಬ ಭಾವವು. ಇಲ್ಲಿ ನಿರತಿ ಶಯ ಸುಖವನ್ನು ಹೊಂದುವಿ ಎಂದು ಯಾವಾಗ ಹೇಳಲ್ಪಟ್ಟಿತೋ, ಅದರಿಂದಲೇ ಭೀಷ್ಮ ದ್ರೋಣಾದಿಗಳ ಹನನವು ಪಾತಕವಾಗುವದಿಲ್ಲವೆಂದು ಹೇಳಿದಂತಾಯಿತು. ಅಧರ್ಮಿಗಳ ಪಕ್ಷ ವನ್ನು ವಹಿಸಿ, ಅವರ ಸಹಾಯಕ್ಕಾಗಿ ಯುದ್ಧ ಮಾಡಲು ಬಂದವರು ಅಧರ್ಮಿಗಳ ಹಾಗೆ ಆಯಿ ತಾದುದರಿಂದ ಅಂತವರನ್ನು ವಧಿಸುವದು ಅಧರ್ಮವಾಗುವದಿಲ್ಲವೆಂಬ ಅಭಿಪ್ರಾಯದಿಂದ ಆಡಿದ ಮಾತಾಗಿರುತ್ತದೆ. **"ಪರಾನ್ವಾಹತ್ವಾ"** ಅಥವಾ ಶತ್ರುಗಳನ್ನಾದರೂ ಕೊಂದು, **ಅಕಂಟಕಂ ರಾಜ್ಯಂ** - ನಿಷ್ಕಂಟಕಂ ಎಂದು ಪಾಠಾಂತರವು, ಏನೊಂದೂ ಬಾಧೆಗಳಿಲ್ಲದಹಾಗೆ ರಾಜ್ಯವನ್ನು

ಭಾ. ಧರ್ಮಸ್ಯ ಪರಮನಿಶ್ಶ್ರೇಯಸೋಪಾಯತ್ವಾತ್ ತಚ್ಚ ಪರಮ ನಿಶ್ಶ್ರೇಯಸಂ ಪ್ರಾಪ್ಸ್ಯಸಿ. ತಸ್ಮಾದ್ಯುದ್ಧೋದ್ಯೋಗಃ ಪರಮಪುರುಷಾರ್ಥ ಲಕ್ಷಣ ಮೋಕ್ಷಸಾಧನ ಮಿತಿ ನಿಶ್ಚಿತ್ಯ ತದರ್ಥಮುತ್ತಿಷ್ಠ. ಕುನ್ತೀಪುತ್ರಸ್ಯ ತವೈತದೇವ ಯುಕ್ತಮಿತ್ಯಭಿಪ್ರಾಯಃ ॥ ೩೭ ॥

**ಭೋಕ್ಷ್ಯಸೇ** – ಅನುಭವಿಸುವಿ, ನಿಷ್ಕಂಟಕಂ ಎಂಬಭಿಪ್ರಾಯವು ಮೂಲದಲ್ಲಿಲ್ಲದುದು ಹೇಗೆ ಬಂತೆಂದರೆ, ಅನುಭವಿಸುವಿ ಎಂದು ಹೇಳಿರುವದರಿಂದ ಸುಖಾನುಭವಕ್ಕೆ ಏನೊಂದೂ ಈತಿಬಾಧೆಗ ಳಿಲ್ಲದಿರಬೇಕೆಂಬ ತಾತ್ಪರ್ಯವು. ಪ್ರಬಲರಾದ ಶತ್ರುಗಳು ಯಾವಾಗ ಹತರಾದರೋ, ಆಗ ರಾಜ್ಯವು ನಿಷ್ಕಂಟಕವಾದುದೆಂಬ ಭಾವವು. ಆವರೆ ಮೂಲದಲ್ಲಿ ಸ್ವರ್ಗಂ ಎಂದಿರುವ ಪದಕ್ಕೆ ಇಂದ್ರ ಲೋಕವು ರೂಢಿಯಲ್ಲಿರುವ ಅರ್ಥವಾಗಿರುವಾಗ ಪರಮನಿಶ್ಶ್ರೇಯಸ್ಸಂಬರ್ಧವು ಹೇಗೆ ಎಂದರೆ ಅದಕ್ಕೆ ಮುಂದೆ ಸಮಾಧಾನವನ್ನು ಹೇಳುತ್ತಾರೆ. **ಅನಭಿಸಂಹಿತಫಲಸ್ಯ** - ಫಲಾಪೇಕ್ಷೆಇಲ್ಲದ, **ಯುದ್ಧಾಖ್ಯಸ್ಯಧರ್ಮಸ್ಯ**-ಯುದ್ಧವೆಂಬ ನಿನ್ನ ಸ್ವಕೀಯವಾದ ಕ್ಷತ್ರಿಯವರ್ಣಕ್ಕೆ ಧರ್ಮರೂಪವಾದು ದಕ್ಕೆ, **ಪರಮನಿಶ್ಶ್ರೇಯಸೋ ಪಾಯತ್ವಾತ್**-ಮೋಕ್ಷಕ್ಕೆಉಪಾಯಭೂತವಾಗಬಹುದು, ಆದುದ ರಿಂದ, **ತಚ್ಚ ಪರಮ ನಿಶ್ರೇಯಸಂ**-ಅಂತಹ ನಿರತಿಶಯಸುಖರೂಪ ಮೋಕ್ಷವನ್ನು, **ಪ್ರಾಪ್ಸ್ಯಸಿ** - ಕೊನೆಗೆ ಹೊಂದುವಿ, **ತಸ್ಮಾತ್** – ಆ ಕಾರಣದಿಂದ, ಯಾವ ಕಾರಣದಿಂದೆಂದರೆ ಹೇಳುತ್ತಾರೆ:— **ಯುದ್ಧೋದ್ಯೋಗಃ** - ಈ ಯುದ್ಧ ಸನ್ನಾಹವು, **ಪರಮಪುರುಷಾರ್ಥ ಲಕ್ಷಣ ಮೋಕ್ಷಸಾಧನಂ**- ಸರ್ವೋತ್ಕೃಷ್ಟವಾದ ಪುರುಷಾರ್ಥರೂಪವಾದ ಮೋಕ್ಷಕ್ಕೆ ಸಹಕಾರಿಯು, **ಇತಿನಿಶ್ಚಿತ್ಯ** - ಎಂಬ ದೃಢಚಿತ್ತನಾಗಿ, **ತದರ್ಥಂ** – ಅದಕ್ಕಾಗಿ, **ಉತ್ತಿಷ್ಠ** - ಏಳು, ಸಿದ್ಧನಾಗು ; **ಕುನ್ತೀಪುತ್ರಸ್ಯ** - ವೀರಮಾತೆಯಾದ ಕುನ್ತಿಯ ಮಗನಾದ, **ತವ** – ನಿನಗೆ, **ಏತದೇವ** - ಈ ಧರ್ಮಯುದ್ಧ ಸನ್ನಾ ಹವೇ, **ಯುಕ್ತಮಿತ್ಯಭಿಪ್ರಾಯಃ** - ಯೋಗ್ಯವಾದುದೆಂಬಭಿಪ್ರಾಯವು. ಇಲ್ಲಿ ಸುಮ್ಮನೆ **ಹತೋವಾ** ಎಂದು ಮೂಲದಲ್ಲಿರುವದಕ್ಕೆ **ಧರ್ಮಯುದ್ಧೇ ಹತಶ್ಚೇತ್** ಎಂದು ವ್ಯಾಖ್ಯಾನ ಮಾಡಿ ದುದು,ಯುದ್ಧವು ಅಧರ್ಮವಾಗಿದ್ದಪಕ್ಷದಲ್ಲಿ ಫಲಾಭಿಸಂಧಿರಹಿತನಾಗಿ ಯುದ್ಧ ಮಾಡಿದರೂಮೋಕ್ಷಕ್ಕೆ ಪರಂಪರಯಾ ಹೇತುವಾಗಲಾರದೆಂಬ ಭಾವವು., ಇಲ್ಲಿ ಸ್ವರ್ಗಶಬ್ದವು ಐತರೇಯ, ಕೇನ, ಕಠೋ ಪನಿಷತ್ತುಗಳಲ್ಲಿ ಉಪಯೋಗಿಸಿರುವಹಾಗೆ **"ಪರಮನಿಶ್ರೇಯಸ ಎಂದು"** ಅರ್ಥ ಮಾಡಿರುತ್ತಾರೆ. **"ಸಏತೇನಪ್ರಾಜ್ಞೇನಾತ್ಮನಾಮುಷ್ಮಿನ್ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾ ಅಮೃತ ಸ್ಸಮಭವತ್""ಸ್ವರ್ಗಲೋಕಾ ಅಮೃತತ್ವಂಭಜನ್ತೇ"** ಇತ್ಯಾದಿ ಪ್ರಮಾಣಗಳಿವೆ. ಹಿಂದೆ ಅರ್ಜು ನನೇ**"ರಾಜ್ಯಂಸುರಾಣಾಮಪಿಚಾಧಿಪತ್ಯಂ"**(ಗೀ, ೨. ೮.) ಎಂದುದೇವಲೋಕಾಧಿಪತ್ಯವನ್ನು ತೃಣೀ ಕರಿಸಿರುವಾಗ**"ಹತೋವಾ ಪ್ರಾಪ್ಸ್ಯಸೇಸ್ವರ್ಗಂ,"** ನೀನು ಕೊಲ್ಲಲ್ಪಟ್ಟರೆಸ್ವರ್ಗಪ್ರಾಪ್ತಿಯುಂಟು, ಆದುದರಿಂದ ಯುದ್ಧಮಾಡು ಎಂದು ಹೇಳುವ ವಾದವು ಹೇಗೆ ಸಮಂಜಸವಾದೀತು? ಆದುದ ರಿಂದ ಇಲ್ಲಿ ಶ್ರುತಿಗಳಲ್ಲಿ ಹೇಳಿರುವ ಸ್ವರ್ಗ ಶಬ್ದಾರ್ಥವಾದ ಮೋಕ್ಷವೆಂದೇ ಅರ್ಥಮಾಡತಕ್ಕ ದ್ದೆಂಬ ಭಾವವು. ರಾಜ್ಯಾನುಭವಕ್ಕಿಂತ ಭಿಕ್ಷಬೇಡುವದು ಯುಕ್ತವೆಂದು ರಾಜ್ಯವನ್ನೂ ತಿರಸ್ಕ ರಿಸಿ **"ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ"** ಎಂದು ಪ್ರಾರ್ಥಿಸಿದವನಿಗೆ ಪರಮಶ್ರೇಯ ಸ್ಕರವಾದುದು ಯಾವುದೋ ಅದನ್ನು ತಾನೇ ಉಪದೇಶಿಸತಕ್ಕದ್ದು. ಆದುದರಿಂದ **"ಹತೋವಾ ಪ್ರಾಪ್ಸ್ಯಸೇ ಸ್ವರ್ಗಂ"** ಎಂಬಲ್ಲಿ ಸ್ವರ್ಗಂ ಎಂದರೆ **"ಪರಮ ನಿಶ್ರೇಯಸವೆಂದೇ"** ಅರ್ಥಮಾಡತ ತಕ್ಕದ್ದು ಸಮಂಜಸವು. ಮೂಲದಲ್ಲಿ **"ಜಿತ್ವಾವಾ"** ಎಂದರೆ ನೀನು ಜಯಿಸಿದರೆ ಎಂಬರ್ಥವಾಗಿ ರುವಾಗ, **"ಪರಾನ್ಹತ್ವಾ"** ಎಂದು ಹೇಗೆ ಅರ್ಥಮಾಡಿದರೆಂದರೆ, ಭೀಷ್ಮ, ದ್ರೋಣ,

**ಭಾ. ಅ. ಮುಮುಕ್ಷೋ ರ್ಯುದ್ಧಾನುಷ್ಠಾನ ಪ್ರಕಾರಮಾಹ :—**

ಕರ್ಣ, ದುರ್ಯೋಧನಾದಿ ಮಹಾರಥರು ಯುದ್ಧಕ್ಕೆ ಬಂದು ಎಂದಿಗೂ ಜೀವದೊಂದಿಗೆ ಪರಾಜಿತರಾಗಿ ಹಿಂತಿರುಗರು; ಪ್ರಾಣಬಿಡುವತನಕ ಯುದ್ಧಮಾಡುವವರಾದುದರಿಂದ ಹಾಗೆ ವ್ಯಾಖ್ಯಾನ ಮಾಡಿರುತ್ತಾರೆ. ಅವರುಗಳು ಜೀವದೊಂದಿಗೆ ಇದ್ದರೆ ಎಂದಿಗೂ ಸುಖವಾಗಿ ರಾಜ್ಯಾನುಭವವು ಸಾಧ್ಯವಿಲ್ಲವು. ಆದುದರಿಂದ ಹತರಾಗುವದರಿಂದ ನಿಷ್ಕಂಟಕ ರಾಜ್ಯಾನುಭವ ಉಂಟಾಗುತ್ತದೆಂಬ ಭಾವವು. ಆದರೆ ಅರ್ಜುನನು ರಾಜ್ಯವನ್ನೂ ನಿರಾಕರಿಸಿರುವಾಗ, "ಜಿತ್ವಾವಾ ಭೋಕ್ಷ್ಯಸೇಮಹೀಂ" ಎಂದು ಹೇಳುವದು ಹೇಗೆ ಸಮಂಜಸವು? ಎಂದರೆ, ಈ ಆಕ್ಷೇಪ ಬಂದೀತೆಂದೇ ಭಾವಿಸಿ ಅದಕ್ಕೆ ಸಮಾಧಾನವಾಗಿ "ಅನಭಿಸಂಹಿತ ಫಲಸ್ಯ" ಎಂದಾರಂಭಿಸಿ ಎರಡು ವಾಕ್ಯಗಳನ್ನು ಹೇಳಿರುತ್ತಾರೆ. ನೀನು ಯುದ್ಧಮಾಡಿ, ಶತ್ರುಗಳನ್ನು ಕೊಂದು, ರಾಜ್ಯಾನುಭವಗಳನ್ನು ಮಾಡುವದರಲ್ಲಿ ಫಲಾಪೇಕ್ಷೆಯಿಲ್ಲದೆ ಕ್ಷತ್ರಿಯಧರ್ಮ ವ್ಯಾಪಾರಗಳನ್ನು ಭಗವತ್ಪ್ರೀಣನಾರ್ಥವಾಗಿ ನಡೆಸಿದೆಯಾದರೆ "ಪರಮ ಪುರುಷಾರ್ಥ ಲಕ್ಷಣಮೋಕ್ಷಸಾಧನ"ಕ್ಕೆ ಹೇತುವಾಗುವದರಲ್ಲಿ ಸಂದೇಹವಿಲ್ಲವೆಂಬ ಭಾವವು. ||೩೭||

**ಭಾಷ್ಯಾರ್ಥವು :**—ಹಿಂದೆ ಅಯೋಗ್ಯವಿಷಯದಲ್ಲಿ ಸ್ನೇಹಕಾರುಣ್ಯವನ್ನು ತೋರಿಸಿದ್ದೀ, ಆ ಕಾರಣದಿಂದ ಧರ್ಮವನ್ನು ಅಧರ್ಮವೆಂದು ಭಾವಿಸಿರುವದರಿಂದ ಧರ್ಮಾಧರ್ಮ ವಿವೇಕವು ನಿನ್ನಲ್ಲಿಲ್ಲವೆಂದು ಹೇಳಿದರು. ಈಗ ಯುದ್ಧಮಾಡುವದು ತನ್ನಧರ್ಮವೇ ಎಂಬುದು ಸ್ಥಾಪಿತವಾದ ನಂತರ ಮುಮುಕ್ಷುವಾದವನೂ ಕೂಡ ತನ್ನ ಕರ್ತವ್ಯಾಂಶವನ್ನು ಮಾಡಿಯೇತೀರಬೇಕೆಂದು ಹೇಳುತ್ತಾರೆ. ಈ ಅಲ್ಪಾಸ್ಥಿರಫಲವಾದ ರಾಜ್ಯಪ್ರಾಪ್ತಿಯನ್ನುಂಟುಮಾಡಬಹುದಾದ ಈ ಯುದ್ಧದಿಂದ ನನಗೇನು ಎಂದು ಕ್ಷತ್ರಿಯನಾದ ನೀನು ತಟಸ್ಥನಾಗಿರಲು ಸಾಧ್ಯವಿಲ್ಲವು. ಅದು ನಿನ್ನ ಇತಿಕರ್ತವ್ಯತಾ. ಆದುದರಿಂದ ಯುದ್ಧವನ್ನುಮಾಡಿಯೇ ತೀರಬೇಕು ಎನ್ನುತ್ತಾರೆ:— **ಮುಮುಕ್ಷೋಃ**—ಪರಮ ನಿಶ್ಶ್ರೇಯಸರೂಪ ಮೋಕ್ಷಾರ್ಥಿಯಾದ ಕ್ಷತ್ರಿಯನ, **ಯುದ್ಧಾನುಷ್ಠಾನ ಪ್ರಕಾರಮಾಹ** – ಯುದ್ಧವೆಂಬ ಕರ್ಮದ ಅನುಷ್ಠಾನಕ್ರಮ ಹೇಗೆಂಬುದನ್ನು ಮುಂದಿನ ಶ್ಲೋಕದಿಂದ ಉಪದೇಶಿಸುತ್ತಾರೆ; ಇಲ್ಲಿ ಅರ್ಜುನನನ್ನು "ಮುಮುಕ್ಷು"ವೆಂದು ಹೇಳಲಾಧಾರವೇನೆಂದು ಆಕ್ಷೇಪಿಸಬಹುದು. ಅರ್ಜುನನು ತನಗೆ ರಾಜ್ಯವೂ ಬೇಡ, ದೇವಲೋಕಾಧಿಪತ್ಯವೂ ಬೇಡ ಎಂದು ಹೇಳಿ"**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿತನ್ಮೇ**" ಎಂದು ಪ್ರಾರ್ಥಿಸಿದನಂತರ ಪರಮ ಪುರುಷಾರ್ಥವನ್ನುಹೊಂದುವ ಉಪಾಯವನ್ನೇ ಆತನು ಪ್ರಾರ್ಥಿಸಿದನು. ಆ ಪ್ರಾರ್ಥನೆಗೆ ಅನುಗುಣವಾಗಿಯೇ ಪರಬ್ರಹ್ಮಪ್ರಾಪ್ತಿಗೆ ಉಪಾಯಭೂತವಾದುದನ್ನೇ ಮುಂದೆ ಉಪದೇಶಿಸುತ್ತಾರೆ. ಆದುದರಿಂದಲೇ ಇಲ್ಲಿ ಮುಮುಕ್ಷುವೆಂದು ಪ್ರಯೋಗವು, ಅಲ್ಲಿ ಶ್ರೇಯಃ ಎಂದು ಹೇಳಿರುವದು ಪರಮ ನಿಶ್ರೇಯಸವಾದ ಮೋಕ್ಷವು. ಇನ್ನು ಯಾವುದೂ ಶ್ರೇಯಸ್ಸೆಂದು ಹೇಳಿಸಿಕೊಳ್ಳುವದಕ್ಕೆ ಯೋಗ್ಯವಲ್ಲವು. ಅದೂ ಅಲ್ಲದೆ ಶಿಷ್ಯನು ನಮಸ್ಕಾರಮಾಡಿ ಜಾನಶ್ರುತಿಯು ರೈಕ್ವರನ್ನೂ, ಮೈತ್ರೇಯರು ಪರಾಶರರನ್ನೂ, ಪ್ರಾರ್ಥಿಸಿದಹಾಗೆ ಅತಿ ದೈನ್ಯದಿಂದ ಬೇಡದೆ ಹೋದರೆ ಹೇಳತಕ್ಕದ್ದಲ್ಲವು. ಲೆಕ್ಚರು ರೂಪದಲ್ಲಿ ಬೀದಿಯಲ್ಲಿ ಹೋಗುವರಿಗೆಲ್ಲಾ ಹೇಳತಕ್ಕದ್ದಲ್ಲವು. ಅರ್ಜುನನು ಶರಣಾಗತನಾಗಿ ಪ್ರಾರ್ಥಿಸಿದುದರಿಂದಲೇ ಬ್ರಹ್ಮವಿದ್ಯೆಯನ್ನು ಶ್ರೀಕೃಷ್ಣ ಭಗವಾನರವರು ಉಪದೇಶಿಸಿದರು. ಆದುದರಿಂದ ಅರ್ಜುನನನ್ನು ಮುಮುಕ್ಷುವೆಂದು ಹೇಳಲು ಯಾವ ಅಭ್ಯಂತರವೂ ಇರುವದಿಲ್ಲವು. ಕಡೆಗೆ ಉಪಾಯಾನುಷ್ಠಾನವನ್ನು ಮಾಡಿದನೆಂದೂ ತಿಳಿದು ಬರುತ್ತದೆ.

ಮೂ. ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾಜಯೌ ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪ ಮವಾಪ್ಸ್ಯಸಿ ॥ ೩೮.

ಭಾ. ಏವಂ ದೇಹಾತಿರಿಕ್ತ ಮಸಂಸ್ಪೃಷ್ಟ ಸಮಸ್ತ ದೇಹಸ್ವಭಾವಂ ನಿತ್ಯಮಾತ್ಮಾನಂ ಜ್ಞಾತ್ವಾ, ಯುದ್ಧೇ ಚಾವರ್ಜನೀಯ ಶಸ್ತ್ರಪಾತಾದಿ ನಿಮಿತ್ತ ಸುಖದುಃಖಾರ್ಥ ಲಾಭಾ

**ಮೂಲಕ್ಕೆ ಅರ್ಥವು :—ಸುಖದುಃಖೇ** - ಯುದ್ಧದಲ್ಲಿ ಸುಖವನ್ನಾಗಲಿ ದುಃಖವನ್ನಾಗಲಿ, **ಲಾಭಾಲಾಭೌ** - ಪ್ರಾಪ್ತವಾಗುವ ಅರ್ಥಲಾಭವನ್ನಾಗಲಿ ನಷ್ಟವನ್ನಾಗಲಿ, **ಜಯಾಜಯೌ** – ಜಯಪ್ರಾಪ್ತಿಯನ್ನೇಯಾಗಲಿ, ಪರಾಜಯ ಪ್ರಾಪ್ತಿಯನ್ನಾಗಲಿ, **ಸಮೇಕೃತ್ವಾ** – ಸಮವಾಗಿ ಭಾವಿಸಿ, ಎಂದರೆ ಮನೋವಿಕಾರಗಳನ್ನು ಹೊಂದದೆ, ಸುಖಲಾಭ ಜಯಗಳಿಂದ ಹಿಗ್ಗದೆ, ದುಃಖ, ನಷ್ಟ, ಪರಾಜಯಗಳಿಂದ ದೀನನಾಗದೆ ಎಂಬ ಭಾವವು, **ತತಃ** - ಹೀಗೆ ವಿಕಾರವಿಲ್ಲದಿರುವ ಭಾವನೆಯಿರುವ ಕಾರಣದಿಂದ ಎಂದರೆ ಫಲಾಭಿಸಂಧಿ ಯಿಲ್ಲದಿರುವಕಾರಣದಿಂದ, **ಯುದ್ಧಾಯ** - ಯುದ್ಧವು ತನ್ನ ಇತಿ ಕರ್ತವ್ಯತೆಯಾದುದರಿಂದ, ಯುದ್ಧಕ್ಕಾಗಿಯೇ ವಿನಾ ಬೇರೊಂದೂ ಫಲಕ್ಕಲ್ಲದೆ, **ಯುಜ್ಯಸ್ವ** - ಸನ್ನದ್ಧನಾಗು; **ಏವಂ** - ಈ ರೀತಿಯಾಗಿ ವಿಕಾರಾದಿಗಳಿಲ್ಲದೆ ಹರ್ಷಶೋಕಗಳನ್ನು ತೊರೆದು, ಫಲಾಭಿಸಂಧಿಯಿಲ್ಲದೆ ನೀನು ಮಾಡತಕ್ಕ ಕಾರ್ಯಗಳನ್ನು ಮಾಡಿಯೇ ತೀರಬೇಕೆಂಬ ಬುದ್ಧಿಯಿಂದ ಮಾಡಿದುದಾದರೆ, **ಪಾಪಂ** - ಸಂಸಾರ ಬಂಧರೂಪ ಪಾಪವನ್ನು, **ನಾವಾಪ್ಸ್ಯಸಿ** – ನೀನು ಹೊಂದುವದಿಲ್ಲವು. ಒಂದುವೇಳೆ ನಿನ್ನಿಂದಲೇ ಭೀಷ್ಮ ದ್ರೋಣಾದಿಗಳು ಹತರಾದರೂ ಕೂಡ ನಿನಗೆ ಪಾಪವು ಉಂಟಾಗುವದಿಲ್ಲವು ಎಂಬ ಭಾವವೂ ಸೂಚಿತವು. ಇಲ್ಲಿ ಪಾಪಶಬ್ದವು ಪ್ರಾರಬ್ಧವನ್ನು ಹೇಳಿತು ಎಂದರೆ "ಅವಾಪ್ಸ್ಯಸಿ" ಎಂಬುದರೊಂದಿಗೆ ಸರಿಹೋಗುವದಿಲ್ಲವು. ಮುಂದೆ ಮಾಡುವ ಪಾಪಗಳೂ ಆಗುವದಿಲ್ಲವು; ಈ ಉಪದೇಶವು ಕ್ಷತ್ರಿಯನನ್ನು ಕುರಿತು ಹೇಳಿದ್ದರೂ ಸರ್ವವರ್ಣದವರ ಕರ್ಮಾನುಷ್ಠಾನವೂ ಹೀಗೆಯೇ ಇರಬೇಕೆಂಬುದು ತೋರಿಬರುತ್ತದೆ. ಯುದ್ಧವು ಪಾಪಕರ್ಮವು ಯಾವಾಗ ಆದೀತು ಎಂದರೆ ಧನ ರಾಜ್ಯ ಮೊದಲಾದವುಗಳಲ್ಲಿ ಆಶೆಯಿಟ್ಟು ದುರ್ಬಲವಾದವನ ರಾಜ್ಯವನ್ನು ಅಪಹರಿಸುವದಕ್ಕಾಗಿ ಮಾಡಿದರೆ ಆಗ ಅದು ಅಧರ್ಮವಾಗಿ ಪಾಪವಾಗಿ ಪರಿಣಮಿಸಬಹುದು; ಹಾಗಲ್ಲದೆ ದುಷ್ಟ ನಿಗ್ರಹಕ್ಕಾಗಿ ಫಲಾಭಿಸಂಧಿಯಿಲ್ಲದೆ ಮಾಡಿದ ಯುದ್ಧವು ಪಾಪವಲ್ಲವೆಂಬದು ಅಷ್ಟೇ ಅಲ್ಲವು; ಶ್ರೇಯಸ್ಕರವೂ ಹೌದು ಎಂಬ ಭಾವವು-

**ಭಾಷ್ಯಾರ್ಥವು :—**ಮೋಕ್ಷಾರ್ಥಿಯು ಯುದ್ಧಾನುಷ್ಠಾನವನ್ನು ಅವಲಂಬಿಸುವಾಗ ಹಿಂದೆ ಉಪದೇಶಿಸಿದ ಆತ್ಮ ತತ್ವಜ್ಞಾನಪೂರ್ವಕವಾಗಿರಬೇಕೆಂದು ತಿಳಿಸುವದಕ್ಕಾಗಿ "ಏವಂ" ಎಂದು ಪ್ರಾರಂಭಿಸಿ ಹೇಳುತ್ತಾರೆ. **ಏವಂ** - ಹಿಂದೆ ಉಪದೇಶಿಸಿದ ರೀತ್ಯಾ, **ಆತ್ಮಾನಂ** – ಆತ್ಮನನ್ನು, **ದೇಹಾತಿರಿಕ್ತಂ** - ದೇಹಕ್ಕಿಂತ ವಿಲಕ್ಷಣನಾಗಿ ಬೇರೆಯಾದವನೆಂದೂ ಮತ್ತು **ಅಸಂಸ್ಪೃಷ್ಟ ಸಮಸ್ತದೇಹಸ್ವಭಾವಂ** - ಹೇಯವಾದ ದೇಹದ ಸಮಸ್ತ ಗುಣಗಳಿಂದಲೂ ಸ್ಪರ್ಶಿಸಲ್ಪಡದೇ ಇರುವನೆಂದೂ, **ನಿತ್ಯಂ** - ನಿತ್ಯನೆಂದೂ, **ಜ್ಞಾತ್ವಾ** - ತಿಳಿದವನಾಗಿ, **ಯುದ್ಧೇಚ** - ಯುದ್ಧದಲ್ಲಾದರೋ, **ಅವರ್ಜನೀಯ**-ತಪ್ಪಿಸಲ್ಲವಾದ, **ಶಸ್ತ್ರಪಾತಾದಿ ನಿಮಿತ್ತ** - ಶಸ್ತ್ರಗಳು ಮೇಲೆ ಬೀಳುವದೇ ಮೊದಲಾದ ಕಾರಣದಿಂದುಂಟಾಗುವ, **ಸುಖದುಃಖವೇನು, ಅರ್ಥ ಲಾಭಾಲಾಭ** - ದ್ರವ್ಯ ಲಾಭ ನಷ್ಟಗಳೇನು, **ಜಯಪರಾಜಯೇಷು**-ಜಯಪರಾಜಯಗಳೇನು, ಇವುಗಳಲ್ಲಿ, **ಅವಿಕೃತ ಬುದ್ಧಿಃ**–ವಿಕಾರಹೊಂದದ ಬುದ್ಧಿಯುಳ್ಳವನಾಗಿ, **ಸ್ವರ್ಗಾದಿ ಫಲಾಭಿ ಸಂಧಿರಹಿತಃ** - "**ಮಾಫಲೇಷು**

**ಲಾಭ ಜಯಪರಾಜಯೇಷ್ವ ವಿಕೃತ ಬುದ್ಧಿಃ ಸ್ವರ್ಗಾದಿ ಫಲಾಭಿಸಂಧಿ ರಹಿತಃ ಕೇವಲ ಕಾರ್ಯಬುದ್ಧ್ಯಾ ಯುದ್ಧಮಾರಭಸ್ವ. ಏವಂ ಕುರ್ವಾಣೋ ನ ಪಾಪ ಮವಾಪ್ಸ್ಯಸಿ, ಪಾಪಂ ದುಃಖರೂಪಂ ಸಂಸಾರಂ ನಾವಾಪ್ಸ್ಯಸಿ ; ಸಂಸಾರಬಂಧಾನ್ಮೋಕ್ಷ್ಯಸ ಇತ್ಯರ್ಥಃ || ೩೮ ||**

---

**ಕದಾಚನ**" ಎಂಬಲ್ಲಿ ಹೇಳಿರುವಹಾಗೆ ಇಂಪ್ರಲೋಕ ಭೋಗವೇ ಮೊದಲಾದ ಫಲಾಪೇಕ್ಷೆಯಿಲ್ಲ ದವನಾಗಿ, **ಕೇವಲ ಕಾರ್ಯಬುದ್ಧ್ಯಾ** - ಹೀಗೆ ಯಾವ ಫಲಾಪೇಕ್ಷೆಯೂ ಇಲ್ಲದೆ ಕೇವಲ ತಾನು ಇವನ್ನು ಮಾಡುವ ಇತಿ ಕರ್ತವ್ಯತೆಯುಂಟೆಂಬ ಬುದ್ಧಿಯಿಂದ (ಇದು **ಯುದ್ಧಾಯ** ಎಂಬಲ್ಲಿರುವ ತಾದರ್ಥ್ಯವನ್ನು ಸೂಚಿಸುವ ಚತುರ್ಥಿಯಿಂದ ವ್ಯಕ್ತವು) **ಯುದ್ಧಮಾರಭಸ್ವ** - ಯುದ್ಧವನ್ನಾ ರಂಭಿಸು, **ಏವಂ** - ಸುಖದುಃಖಾದಿ ದ್ವಂದಗಳಿಂದ ವಿಕಾರ ಹೊಂದದೆ ಫಲಾಭಿಸಂಧಿ ರಹಿತನಾಗಿ ಇದು ನನ್ನ ಕರ್ತವ್ಯಾಂಶವು ಎಂಬ ಬುದ್ಧಿಯುಕ್ತನಾಗಿ ಹೀಗೆ, **ಕುರ್ವಾಣಃ** - ಮಾಡತಕ್ಕವ ನಾದರೆ, **ನ ಪಾಪಮವಾಪ್ಸ್ಯಸಿ** – ಮುಂದಕ್ಕೆ ಕರ್ಮಬಂಧರೂಪ ಪಾಪವನ್ನು ಎಂದರೆ ಸಂಸಾರ ಬಂಧವನ್ನು ಹೊಂದುವದಿಲ್ಲವು. ಇಲ್ಲಿ ಪಾಪಶಬ್ದವು ಭೀಷ್ಮದ್ರೋಣಾದಿ ಗುರುಜನ ವನ್ನೂ ದುರ್ಯೋಧನಾದಿ ಬಂಧುಗಳನ್ನೂ ವಧಿಸಿವ ಪಾಪವನ್ನು ಬೋಧಿಸುವದಿಲ್ಲವು. ಯುದ್ಧವು ಸ್ವಧರ್ಮವೆಂದೇ ಹೇಳಿವ ಬಳಿಕ ದ್ವಂದ್ವವನ್ನು ಸಹಿಸತಕ್ಕದ್ದೆಂಬುಪದೇಶವು ನಿರರ್ಥಕವಾ ಗುತ್ತದೆ. ಮುಮುಕ್ಷುವಾದವನಿಗೆ ಹೇಳುವ ಉಪದೇಶ ಪ್ರಸಜ್ಞವಾದುದರಿಂದಲೂ, ಒಡನೆಯೇ ಮೋಕ್ಷಾರ್ಥಿಗೆ ಬೇಕಾದ ಕರ್ಮಯೋಗಾದಿ ಪರಂಪರೆಗಳ ಉಪದೇಶೋಪಕ್ರಮವಾಗುವದರಿಂ ದಲೂ ಇಲ್ಲಿ ಪಾಪಶಬ್ದವು ಈತನು ಮಾಡುವ ಕರ್ಮರೂಪವಾದುದು. ಪಾಪಶಬ್ದದಲ್ಲಿ ಈತನು ಮಾಡುವ ಪುಣ್ಯವೂ ಅಂತರ್ಗತವು. ಮೋಕ್ಷಕ್ಕೆ ಪುಣ್ಯಪಾಪಗಳೆರಡೂ ಪ್ರತಿಬಂಧಕಗಳು. ಆದುದರಿಂದ ಶ್ರುತಿಯು **"ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ"** ಎಂದು ಹೇಳಿರುತ್ತದೆ. ಇವರಿಂದ ಪಾಪಶಬ್ದಕ್ಕೆ ಮುಮುಕ್ಷುವಿಗೆ ಅನ್ವಯಿಸುವಹಾಗೆಯೇ ಅರ್ಥ ಹೇಳತಕ್ಕದ್ದು ಯುಕ್ತವಾದುದರಿಂದ ಕರ್ಮ ಬಂಧರೂಪ ಸಂಸಾರವೆಂದೇ ಅರ್ಥವು. ಆದುದ ರಿಂದ ಪಾಪ ಶಬ್ದಕ್ಕೆ **"ದುಃಖರೂಪಂ ಸಂಸಾರಂ"** ಎಂಬ ವ್ಯಾಖ್ಯಾನವು. ಮುಂದಿನ ಶ್ಲೋಕಾಂ ತ್ಯದಲ್ಲೂ ಈ ಅಭಿಪ್ರಾಯವನ್ನೇ **"ಕರ್ಮಬಂಧಂ ಪ್ರಹಾಸ್ಯಸಿ"** ಎಂಬುದರಿಂದ ಹೇಳಿರುತ್ತಾರೆ. ಲಾಭಾಲಾಭಗಳಲ್ಲೂ ಜಯಾಪಜಯಗಳಲ್ಲೂ ಸುಖದುಃಖಗಳಿರುವದರಿಂದ ಪುನರುಕ್ತಿದೋಷ ವಿಲ್ಲವೋ? ಎಂದರೆ ಇಲ್ಲವೆಂದು ತೋರಿಸುವದಕ್ಕಾಗಿ, ಸುಖದುಃಖಗಳು ಶಸ್ತ್ರಪಾತಾದಿ ನಿಮಿತ್ತ ವೆಂದೂ, ಲಾಭಾಲಾಭವು ಅರ್ಥಪ್ರಾಪ್ತಿ ವಿನಾಶವೆಂದೂ ವ್ಯಾಖ್ಯಾನಮಾಡಲ್ಪಟ್ಟಿತು. **"ಸಮೇ ಕೃತ್ವಾ"** ಎಂಬುದರಿಂದ ಎರಡರಲ್ಲೂ ಸಮಚಿತ್ತನಾಗಿರಬೇಕೆಂದು ಹೇಳಿದರೆ ವಿಕಾರವಿಲ್ಲದಿರಬೇ ಕೆಂದು ಹೇಳಿದಂತಾದುದರಿಂದ, **"ಸಮೇಕೃತ್ವಾ"** ಎಂಬುದಕ್ಕೆ **"ಅವಿಕೃತ ಬುದ್ಧಿಃ"** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಆದರೆ ಈ ಶ್ಲೋಕದಲ್ಲಿರುವ ಕರ್ಮಾನುಷ್ಠಾನಪ್ರಕಾರದಿಂದಲೇ ದುಃಖ ರೂಪ ಸಂಸಾರಬಂಧವು ತೊಲಗುತ್ತದೆಯೇ? ಎಂದಾಕ್ಷೇಪಿಸಿದರೆ ಮುಂದೆ ಹೇಳುವ ರೀತಿಯಲ್ಲಿ ಪರಂಪರಯಾ ಲಭಿಸುತ್ತದೆ ಎಂಬ ತಾತ್ಪರ್ಯವು. ಈ ಅಭಿಪ್ರಾಯವನ್ನು ಮುಂದಿನ ಶ್ಲೋಕದ ಅವತಾರಿಕೆಯಿಂದಲೂ ಗ್ರಹಿಸಬಹುದು. ಪಾಪವನ್ನು ಹೊಂದುವದಿಲ್ಲವೆಂದು ಹೇಳಿದರು; ಆ ಪಾಪ ಯದ್ರೂಪವೆಂದರೆ ಹೇಳುತ್ತಾರೆ. **"ಪಾಪಂ"** ಪಾಪರೂಪವಾದ, **ದುಃಖಸ್ವರೂಪಂ**-ದುಃಖ ವನ್ನುಂಟುಮಾಡುವ ಸ್ವರೂಪವುಳ್ಳ, **"ಸಂಸಾರ"**ವನ್ನು, **ನಾವಾಪ್ಸ್ಯಸಿ** - ಹೊಂದುವದಿಲ್ಲವು ; ತಾತ್ಪರ್ಯವೇನೆಂದರೆ, **"ಸಂಸಾರ ಬಂಧದ"** ದೆಶೆಯಿಂದ, **ಮೋಕ್ಷ್ಯಸೇ** - ಬಿಡಲ್ಪಡುತ್ತೀಯೇ,

ಭಾ. ಅ. ಏವ ಮಾತ್ಮ ಯಾಥಾತ್ಮ್ಯ ಜ್ಞಾನ ಮುಪದಿಶ್ಯ ತತ್ಪೂರ್ವಕಂ ಮೋಕ್ಷಸಾಧನಭೂತಂ ಕರ್ಮಯೋಗಂ ವಕ್ತು ಮಾರಭತೇ-

ಮೂ. ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।
ಬುಧ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥ ೩೯.

ಇತ್ಯರ್ಥಃ - ಎಂಬ ತಾತ್ಪರ್ಯವು, ಇದರಿಂದ ಹಿಂದೆ "ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ" ಎಂದು ಹಿಂದೆ ಹೇಳಿದ ಅರ್ಥವು ಸ್ಮಾರಿತವು. (ಗೀ. ೨. ೧೫.)

ಭಾಷ್ಯಾವತಾರಿಕೆಯ ಅರ್ಥವು :—ಏವಂ - ಈ ಮೇಲೆ ವಿವರಿಸಿದ ರೀತಿಯಲ್ಲಿ, ಆತ್ಮಯಾಥಾತ್ಮ್ಯಜ್ಞಾನಂ - ಜೀವಾತ್ಮನ ಯಥಾವತ್ತಾದ ಸ್ವರೂಪಜ್ಞಾನವನ್ನು, ಉಪದಿಶ್ಯ - ಉಪದೇಶಿಸಿ ತತ್ಪೂರ್ವಕಂ - ಆ ಆತ್ಮ ಯಾಥಾತ್ಮ್ಯಜ್ಞಾನ ಪೂರ್ವಕವಾಗಿ, ಮೋಕ್ಷಕ್ಕೆ ಸಾದನಭೂತವಾದ ಕರ್ಮಯೋಗವನ್ನು, ವಕ್ತುಂ – "ವಚಪರಿಭಾಷಣೆ" ಎಂಬ ಧಾತ್ವರ್ಥಪ್ರಕಾರ ಪ್ರಾಧಾನ್ಯೇನ ಹೇಳುವದಕ್ಕೆ ಆರಭತೇ - ಪ್ರಾರಂಭಿಸುತ್ತಾರೆ. ಹಿಂದೆ ಅರ್ಜುನನ ಶೋಕವನ್ನು ಹೋಗಲಾಡಿಸಲು ಹೇಳಿದ ಕಾರಣಗಳಿಗಿಂತಲೂ ಪ್ರಧಾನವಾದುದು ಈ ಮುಂದೆ ಹೇಳುವ ಆತ್ಮ ಯಾಥಾತ್ಮ್ಯಜ್ಞಾನಪೂರ್ವಕವಾದ ಕರ್ಮಯೋಗವು; ಆದುದರಿಂದಲೇ ಆತ್ಮ ಯಾಥಾತ್ಮ್ಯಜ್ಞಾನವಾವಶ್ಯಕವೆಂದು "ತತ್ಪೂರ್ವಕಂ" ಎಂಬುದರಿಂದ ಹೇಳಲ್ಪಟ್ಟಿತು. ಇಲ್ಲಿ ಕ್ರಮ ಹೇಗೇದರೆ ಮೊದಲು ಆತ್ಮಜ್ಞಾನದಿಂದಕೂಡಿದ, ಕರ್ಮಯೋಗವು; ಇದು ಪ್ರಾಪ್ತವಾದ ನಂತರ ತಚ್ಚಿಂತನರೂಪ ಜ್ಞಾನಯೋಗವು ಮುಂದೆ "ಪ್ರಜಹಾತಿ ಯದಾಕಾಮಾನ್" ಎಂಬಿವೇ ಮೊದಲಾದವುಗಳಿಂದ (ಗೀ. ೨. ೫೫.) ಹೇಳಲ್ಪಡುವದರಿಂದ ಮೊದಲು ಕರ್ಮಯೋಗವು ಹೇಳಲ್ಪಡುತ್ತದೆಂಬ ತಾತ್ಪರ್ಯವು. ಇವಾದನಂತರ ತಚ್ಚಿಂತನರೂಪ ಜ್ಞಾನಯೋಗವನ್ನುಪದೇಶಿಸದೆ ಈ ಕರ್ಮಯೋಗವನ್ನೇ ಪ್ರಾಧಾನ್ಯೇನ ಉಪದೇಶಿಸಲು ಪಕ್ರಮಿಸಿದುದು, ಜ್ಞಾನಯೋಗವು ಕರ್ಮಯೋಗದಿಂದ ಸಾಧ್ಯವಾದುದರಿಂದೆಂಬದಾಗಿ ಊಹಿಸತಕ್ಕದ್ದು. ಇಲ್ಲಿ "ಮೋಕ್ಷ ಸಾಧನಭೂತಂ" ಎಂದಿರುವವರಿಂದ ಇದೇ ಸಾಕ್ಷಾತ್ತಾದ ಸಾಧ್ಯೋಪಾಯವೆಂಬ ಭಾವವಲ್ಲವು; ಪರಂಪರಯಾ ಸಾಧನವೆಂಬುದು ತಾತ್ಪರ್ಯವು. ಜ್ಞಾನ ಯೋಗಕ್ಕೂ ಸಾಧನವೆಂಬುದರಿಂದಲೇ ಈ ಅಭಿಪ್ರಾಯವು ವ್ಯಕ್ತವು. ಭಕ್ತಿಯೋಗದ್ವಾರಾ ಸಾಧನವೆಂಬ ಭಾವದಿಂದ ಹಾಗೆ ಹೇಳಿದುದು.

ಮೂಲಕ್ಕೆ ಅರ್ಥವು :—ಹಿಂದೆ ಹೇಳಿದುದಕ್ಕೂ ಮುಂದೆ ಹೇಳುವದಕ್ಕೂ ಸಂಗತಿಯನ್ನು ಸೂಚಿಸುವದಕ್ಕಾಗಿ ಹಿಂದೆ ಹೇಳಿದುದನ್ನು ಅನುವಾದಮಾಡಿ ಹೇಳಿ, ಮುಂದೆ ಹೇಳುವದನ್ನು ತಿಳಿಸುತ್ತಾರೆ :—ಹೇ ಪಾರ್ಥ - ಓ ಅರ್ಜುನನೇ, ಸಾಂಖ್ಯೇ - ಬುದ್ಧಿಯಿಂದ ತಿಳಿಯತಕ್ಕದ್ದಾದ ಆತ್ಮತತ್ವ ವಿಷಯದಲ್ಲಿ, ಏಷಾ ಬುದ್ಧಿಃ - ಹಿಂದೆ ಕಲಿಸಿದ ಜ್ಞಾನೋಪದೇಶವು, ತೇ – ನಿನಗೆ ಎಂದರೆ ನಿನ್ನಲ್ಲಿರುವ ಪ್ರೀತ್ಯತಿಶಯದಿಂದ ನಿನ್ನ ಕ್ಷೇಮಾರ್ಥವಾಗಿ, ಅಭಿಹಿತಾ - ಹೇಳಲ್ಪಟ್ಟಿತು. ನೀನು ಸುಕೃತಿಯಾಗಿ ಶರಣಾಗತನಾಗಿ ಸಮುಪದೇಶವನ್ನು ದೈನ್ಯದಿಂದ ಪ್ರಾರ್ಥನೆ ಮಾಡಿದುದರಿಂದ ಪ್ರಸನ್ನನಾದ ನಿನಗೆ ಹೇಳಲ್ಪಟ್ಟಿತು ಎಂಬ ಭಾವವು. ಈಗಲಾದರೋ ಯಯಾಬುಧ್ಯಾ – ಯಾವ ಜ್ಞಾನದಿಂದ, ಯುಕ್ತಃ-ಕೂಡಿದವನಾಗಿ, ಆ ಕಾರಣದಿಂದ, ಕರ್ಮಬಂಧಂ-ಕರ್ಮದಿಂದುಂಟಾಗುವ ಸಂಸಾರ ಬಂಧವನ್ನು, ಪ್ರಹಾಸ್ಯಸಿ-ಕಳೆದುಕೊಳ್ಳುವೆಯೋ, ಯೋಗೇತು - ಮೋಕ್ಷಸಾಧನಭೂತವಾದ ಯೋಗದಲ್ಲಾದರೋ, (ತಾಂ-ಅಂತಹ) ಇಮಾಂ-ಈ ಮುಂದೆ ಹೇಳುವ ಬುದ್ಧಿಯನ್ನು, ಶೃಣು - ಕೇಳು, ಇಲ್ಲಿ ಉಪಯೋಗಿಸಿರುವ "ತು" ಶಬ್ದದಿಂದ, ಹಿಂದೆ ಹೇಳಿದ ಆತ್ಮ

ಭಾ. ಸಂಖ್ಯಾ ಬುದ್ಧಿಃ ; ಬುದ್ಧ್ಯಾಽವಧಾರಣೀಯ ಮಾತ್ಮತತ್ವಂ ಸಾಂಖ್ಯಮ್. ಜ್ಞಾತವ್ಯೇ ಆತ್ಮತತ್ವೇ ತಜ್ಞಾನಾಯ ಯಾ ಬುದ್ಧಿ ರಭಿಧೇಯಾ, "ನತ್ವೇವಾಹಂ" ಇತ್ಯಾರಭ್ಯ "ತಸ್ಮಾತ್ಸರ್ವಾಣಿ ಭೂತಾನಿ ನತ್ವಂ ಶೋಚಿತು ಮರ್ಹಸಿ" ಇತ್ಯನ್ತೇನ, ಸೈಷಾ ತೇ ಲಭಿಹಿತಾ. ಆತ್ಮಜ್ಞಾನಪೂರ್ವಕ ಮೋಕ್ಷಸಾಧನ ಭೂತ ಕರ್ಮಾನುಷ್ಠಾನೇ ಯೋ ಬುದ್ಧಿ

ತತ್ವಜ್ಞಾನವೇನೋ ಆವಶ್ಯಕವು, ಈ ಮುಂದೆ ಹೇಳುವದಾದರೋ ಅದಕ್ಕೆ ವಿಲಕ್ಷಣವಾಗಿ ಪ್ರಧಾನವಾದುದರಿಂದ ನೀನು ಜಾಗರೂಕನಾಗಿ ಕೇಳತಕ್ಕದ್ದೆಂಬ ಭಾವವು. ಕೇಳುತ್ತಲೇ ಇರುವವನಿಗೆ ಮಧ್ಯೆ "ಶೃಣು" ಎಂದು ಹೇಳುವದರಿಂದ, ಸಾವಧಾನದಿಂದ ಕೇಳಿ ಚನ್ನಾಗಿ ಗ್ರಹಿಸತಕ್ಕದ್ದೆಂಬ ಭಾವವು ಸೂಚಿತವು. ಹಿಂದೆ ಹೇಳಿದ "ನೈವಂ ಪಾಪಂ ಅವಾಪ್ಸ್ಯಸಿ" ಎಂದು ಹೇಳಿದುದೂ "ಕರ್ಮಬಂಧಂ ಪ್ರಹಾಸ್ಯಸಿ" ಎಂದು ಹೇಳಿದುದೂ ಸಮಾನಾಭಿಪ್ರಾಯವೆಂದು ಇದರಿಂದ ತೋರಿಬರುತ್ತದೆ, ಕರ್ಮ ಬಂಧವು ಪುಣ್ಯಪಾಪ ರೂಪವಾದುದು. ಇದರಿಂದ ಬಿಡಲ್ಪಟ್ಟವನಾದರೇನೇ ನಿರತಿಶಯ ಸುಖಪ್ರಾಪ್ತಿಯು ಎಂಬ ಭಾವವು.

**ಭಾಷ್ಯಾರ್ಥವು:**—ಇಲ್ಲಿ ಸಾಂಖ್ಯೇ ಯೋಗೇ ಎಂಬ ಶಬ್ದಗಳು ಉಪಯೋಗಿಸಲ್ಪಟ್ಟಿವೆ. ಕಾಪಿಲ ಸಾಂಖ್ಯವು, ಪಾತಂಜಲ ಯೋಗವು ಎಂದು ಭ್ರಮದಿಂದ ಅರ್ಥಮಾಡಬಹುದು; ಮತ್ತು "ಜ್ಞಾನಯೋಗೇನ ಸಾಂಖ್ಯಾನಾಂ" ಎಂದು ಹೇಳಲ್ಪಡುವದರಿಂದ ಸಾಂಖ್ಯಶಬ್ದವು ಜ್ಞಾನಯೋಗ ವಿಷಯವೆಂದೂ ಭ್ರಮಿಸಬಹುದು. ಇಂತಹ ಭ್ರಮನಿವಾರಣಕ್ಕಾಗಿ ಸಾಂಖ್ಯ ಯೋಗ ಶಬ್ದಗಳಿಗೆ ಅರ್ಥವನ್ನು ಹೇಳುತ್ತಾರೆ:—**ಸಂಖ್ಯಾಬುದ್ಧಿಃ**–ಸಂಖ್ಯಾ ಎಂದರೆ ಬುದ್ಧಿಯು, **ಬುದ್ಧ್ಯಾವಧಾರಿಣೀಯ ಮಾತ್ಮತತ್ವಂ - ಸಾಂಖ್ಯಂ;** ಆದುದರಿಂದ ಸಾಂಖ್ಯವೆಂದರೆ ಬುದ್ಧಿಯಿಂದ ತಿಳಿಯತಕ್ಕ ಆತ್ಮತತ್ವವು, **ಜ್ಞಾತವ್ಯೇ ಆತ್ಮತತ್ವೇ** - ಈ ತಿಳಿಯ ಬೇಕಾದ ಆತ್ಮತತ್ವ ವಿಷಯದಲ್ಲಿ, **ತಜ್ಞಾನಾಯ** - ಅದನ್ನು ತಿಳಿಯುವದಕ್ಕಾಗಿ; **ಯಾಬುದ್ಧಿರಭಿಧೇಯಾ** – ಯಾವ ಬುದ್ಧಿಯು ಹೇಳಲ್ಪಟ್ಟಿತೋ, **"ನತ್ವೇವಾಹಂ"** ಎಂದಾರಂಭಿಸಿ, **"ತಸ್ಮಾತ್ಸರ್ವಾಣಿ ಭೂತಾನಿ ನತ್ವಂ ಶೋಚಿತುಮರ್ಹಸಿ" ಇತ್ಯನ್ತೇನ** - ಎಂದು ಮುಗಿಸಿರುವ ವರೆಗೂ ಎಂದರೆ ಈ ಅಧ್ಯಾಯದ ೧೨ನೆಯ ಶ್ಲೋಕ ಮೊದಲುಗೊಂಡು ೩೦ನೆಯ ಶ್ಲೋಕಾಂತ್ಯದವರೆಗೂ ಯಾವುದು ಹೇಳಲ್ಪಟ್ಟಿತೋ, **ಸೈಷಾ** - ಅಂತಹ ಬುದ್ಧಿಯು, **ತೇ ಅಭಿಹಿತಾ** - ನಿನ್ನಲ್ಲಿರುವ ಪ್ರೀತ್ಯತಿಶಯದಿಂದ ನಿನಗೆ ಉಪದೇಶಿಸಲ್ಪಟ್ಟಿತು. ಈಗ ೧೯ ಶ್ಲೋಕಗಳಿಂದ ಆತ್ಮ ತತ್ವ ಸ್ವರೂಪವು ಉಪದೇಶಿಸಲ್ಪಟ್ಟಿತು. ಮುಂದೆಯೂ ಉಪದೇಶಿಸಿರುತ್ತಾರಲ್ಲಾ ಎಂದರೆ ಅವೆಲ್ಲಾ ಸ್ವಧರ್ಮಾದಿಗಳ ಉಪದೇಶವೆಂದು ತಿಳಿಯತಕ್ಕದ್ದು. ಇಲ್ಲಿ "ಏಷಾತೇಭಿಹಿತಾ" ಎಂದು ಹಿಂದೆ ಉಪದೇಶಿಸಿದುದಕ್ಕೆ ಅನ್ವಯಿಸಿ ಸಾಂಖ್ಯ ಶಬ್ದವನ್ನುಪಯೋಗಿಸಿರುವದರಿಂದ ಹಿಂದೆ ಉಪದೇಶಿಸಿದುದು ಆತ್ಮ ತತ್ವ ಜ್ಞಾನವಾದುದರಿಂದ, ಆ ಅಭಿಪ್ರಾಯವು ಬರುವಹಾಗೆ ಪ್ರಕರಣಾನುಗುಣವಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಮಾನ್ತ್ರಿಕೋಪನಿಷತ್ತಿನಲ್ಲಿ (೧೪) "ಪುರುಷಂ ನಿರ್ಗುಣಂ ಸಾಂಖ್ಯಂ" ಎಂದು ಪರಮಾತ್ಮನನ್ನು ಕುರಿತು ಹೇಳಿರುವದರಿಂದ, ಸಾಂಖ್ಯ ಶಬ್ದವನ್ನು ಆತ್ಮತತ್ವಕ್ಕೂ ಅನ್ವಯಿಸುವದು ಉಪಪನ್ನವು. ಸಂಖ್ಯಾ ಎಂದರೆ ಬುದ್ಧಿ ಎಂಬರ್ಥ ಉಂಟೋ ಎಂದರೆ "ಬುದ್ಧಿರ್ಮತಿಶ್ಚ ಮೇಧಾಸಂಖ್ಯಾ ಸಂವಿತ್ತಿರುಪಲಬ್ಧಿಃ" ಎಂದು ನಿಘಂಟು ಇರುತ್ತದೆ. ಮುಂದೆ ಮೂಲದ ಯೋಗ ಶಬ್ದಕ್ಕೆ ಅರ್ಥವನ್ನು ಬರೆಯುತ್ತಾರೆ, **ಆತ್ಮ ಜ್ಞಾನೇತ್ಯಾದಿ** - ಆತ್ಮಜ್ಞಾನಪೂರ್ವಕವಾಗಿ, ಮೋಕ್ಷಕ್ಕೆ ಸಾಧನವಾದ ಕರ್ಮಾನುಷ್ಠಾನ ವಿಷಯದಲ್ಲಿ, **ಯೋ ಬುದ್ಧಿಯೋಗೋ ವಕ್ತವ್ಯಃ** - ಯಾವ ಬುದ್ಧಿಯೋಗವು ಆವಶ್ಯಕವೆಂದು ಹೇಳತ

ಭಾ. ಯೋಗೋ ವಕ್ತವ್ಯಃ, ಸ ಇಹ ಯೋಗ ಶಬ್ದೇನ ಉಚ್ಯತೇ (೧) "ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾತ್" ಇತಿಹಿ ವಕ್ಷ್ಯತೇ. ತತ್ರ ಯೋಗೇ ಯಾ ಬುದ್ಧಿರ್ವಕ್ತವ್ಯಾ, ತಾ ಮಿಮಾ ಮಭಿಧೀಯಮಾನಾಂ ಶೃಣು. ಯಯಾ ಬುಧ್ಯಾ ಯುಕ್ತಃ ಕರ್ಮಬಂಧಂ ಪ್ರಹಾಸ್ಯತಿ. ಕರ್ಮಣಾ ಬಂಧಃ-ಕರ್ಮಬಂಧಃ, ಸಂಸಾರ ಬಂಧ ಇತ್ಯರ್ಥಃ ||

ಕ್ತವ್ಯೋ, ಸಃ - ಆ ಬುದ್ಧಿಯೋಗವು, ಇಹ - ಈ ಶ್ಲೋಕದಲ್ಲಿ, "ಯೋಗ" ಶಬ್ದದಿಂದ, ಉಚ್ಯತೇ - ಹೇಳಲ್ಪಡುತ್ತದೆ. ಆದರೆ ಆತ್ಮಜ್ಞಾನ ವಿಷಯವು ಹೇಳಲ್ಪಟ್ಟನಂತರ ತಚ್ಚಿಂತನ ರೂಪ ಜ್ಞಾನಯೋಗವು ಹೇಳಲ್ಪಡಬೇಕಾಗಿತ್ತು. ಆದರೆ ಆ ಜ್ಞಾನ ಯೋಗವು ಕರ್ಮಯೋಗದಿಂದ ಸಾಧ್ಯವಾದ ಪ್ರಯುಕ್ತವಾಗಿ ಮೊದಲು ಕರ್ಮಯೋಗವನ್ನು ಕುರಿತು ಹೇಳಿ ಅನಂತರ (೨) "ಪ್ರಜಹಾತಿ ಯದಾಕಾಮಾನ್" ಇತ್ಯಾದಿಯಿಂದ ಜ್ಞಾನಯೋಗವು ಹೇಳಲ್ಪಡುತ್ತದೆ. ಈ ಯೋಗ ಶಬ್ದಾಭಿಪ್ರಾಯವು ಎಲ್ಲಿ ವಿಶದವಾಗಿ ಹೇಳಲ್ಪಟ್ಟಿರುತ್ತವೆ ಎಂದರೆ "ದೂರೇಣಹ್ಯವರಂ" ಎಂಬ ೪೯ ನೆಯ ಶ್ಲೋಕದಲ್ಲಿ ಉಪಪಾದಿಸಲ್ಪಟ್ಟಿರುತ್ತದೆಂದು ತಿಳಿಸುತ್ತಾರೆ, "ಬುದ್ಧಿಯೋಗಾತ್ - ಈ ನಿಷ್ಕಾಮ ಕರ್ಮವನ್ನು ಮಾಡುವ ಬುದ್ಧಿ ಯೋಗಕ್ಕಿಂತಲೂ, ಕರ್ಮ – ಫಲ ಕಾಮನೆಯಿಂದ ಮಾಡುವ ಕರ್ಮವು, ದೂರೇಣ ಹ್ಯವರಂ - ಅತ್ಯಂತ ನಿಕೃಷ್ಟವಾದುದಷ್ಟೆ" ಇತಿ ಹಿ - ಹಾಗೆಂದಲ್ಲವೇ ವಕ್ಷ್ಯತೇ – ಮುಂದೆ ಹೇಳಲ್ಪಡುತ್ತದೆ, ತತ್ರಯೋಗೇ - ಆ ಬುದ್ಧಿಯೋಗದಲ್ಲಿ ಎಂದರೆ ಆತ್ಮಜ್ಞಾನ ಪೂರ್ವಕವಾದ ಮೋಕ್ಷಸಾಧನಭೂತವಾದ ಕರ್ಮಾನುಷ್ಠಾನಕ್ಕೆ ಬೇಕಾದ ಬುದ್ಧಿಯೋಗದಲ್ಲಿ, ಯಾಬುದ್ಧಿರ್ವಕ್ತವ್ಯಾ-ಯಾವ ಬುದ್ಧಿಯು ಪ್ರಾಧಾನ್ಯೇನ ಹೇಳತಕ್ಕದ್ದೋ, ತಾಮಿಮಾಮಭಿಧೀಯ ಮಾನಾಂ - ಅಂತಹ ಈ ಒಡನೆಯೇ ಮುಂದೆ ಹೇಳುವದನ್ನು, ಶೃಣು - ಗಮನಿಸಿ ಕೇಳು, ಯಯಾ ಬುಧ್ಯಾ - ಯಾವ ಈಗ ನಾನು ಮುಂದೆ ಹೇಳುವ ಪ್ರಸಿದ್ಧವಾದ ಬುದ್ಧಿಯಿಂದ, ಯುಕ್ತಃ - ಕೂಡಿದವನಾಗಿ, ಕರ್ಮಬಂಧಂ - ಕರ್ಮದಿಂದುಂಟಾದ ಸಂಸಾರ ಬಂಧವನ್ನು ಪ್ರಹಾಸ್ಯಸಿ - ಕಳೆದುಕೊಳ್ಳುವಿಯೋ, ಅಂಥಾ ಬುದ್ಧಿಯೋಗವನ್ನು ಹೇಳುವೆನು ಕೇಳು ಎಂದು ಹಿಂದಕ್ಕೆ ಅನ್ವಯವು. ಮೂಲದಲ್ಲಿರುವ ಕರ್ಮಬಂಧಂ ಎಂಬುದಕ್ಕೆ ಕರ್ಮಗಳನ್ನನುಷ್ಠಿಸುವ ಬಂಧವು ಎಂಬರ್ಥ ಬರುವ ಷಷ್ಠೀ ತತ್ಪುರುಷಾದಿಗಳು ಸರಿಯಾದರ್ಥವಲ್ಲವೆಂದು ಹೇಳುವದಕ್ಕಾಗಿ ಮುಂದೆ ಕರ್ಮ ಬಂಧ ಶಬ್ದಕ್ಕೆ ವಿಗ್ರಹವನ್ನು ಬರೆಯುತ್ತಾರೆ:—ಕರ್ಮಣಾಬಂಧ–ಕರ್ಮಬಂಧಃ ಸಂಸಾರಬಂಧ ಇತ್ಯರ್ಥಃ - ಈತನು ಮಾಡುವ ಪುಣ್ಯಪಾಪರೂಪ ಕರ್ಮದಿಂದ ಬಂಧವು, ಕರ್ಮ ಬಂಧವು, ಎಂದರೆ ಸಂಸಾರ ಬಂಧವೆಂಬರ್ಥವು. ಅವನ್ನು ಕಳೆದುಕೊಳ್ಳುತ್ತೀಯೇ ಎಂಬ ತಾತ್ಪರ್ಯವು. ಕರ್ಮಯೋಗಾನುಷ್ಠಾನದಿಂದ ಕರ್ಮಬಂಧನೆಂದರೆ ಕರ್ಮಣಾಬಂಧವಾದ ಸಂಸಾರಬಂಧವು ಹೋಗುತ್ತದೆಂದು ಹೇಳಿದುದರಿಂದ, ಮೋಕ್ಷಾರ್ಥಿಯಾದ ಜ್ಞಾನಿಗೆ ಅನುಷ್ಠಿಸಬೇಕಾದ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಕರ್ಮಾನುಷ್ಠಾನವು ಬೇಕಿಲ್ಲವೆಂಬ ವಾದವು ನಿರಸ್ತವು. ಸೂರ್ಯೋಪರಾಗಕಾಲದಲ್ಲಿ ಕುರುಕ್ಷೇತ್ರದಲ್ಲಿ ಶ್ರೀಕೃಷ್ಣ ಬಲರಾಮರೂ ವಸುದೇವನೂ ಮಹರ್ಷಿಗಳೂ ಎಲ್ಲರೂ ಸೇರಿದಿರುವ ಕಾಲದಲ್ಲಿ ವಸುದೇವನು ನಾರದರನ್ನು ಕುರಿತು ಕೇಳುತ್ತಾನೆ:—"ಕರ್ಮಣಾಕರ್ಮನಿರ್ಹಾರೋ ಯಥಾಸ್ಯಾನ್ನಸ್ತದುಚ್ಯತಾಮ್" (ಭಾಗ. )ಕರ್ಮದಿಂದ ಕರ್ಮವು ನಾಶವಾಗುವದು ಹೇಗೆ ಎಂಬುದನ್ನು ನಮಗೆ ತಿಳಿಸಬೇಕೆಂದು ಪ್ರಾರ್ಥಿಸುತ್ತಾನೆ. ಅದಕ್ಕೆ, ಮನೆಯಲ್ಲಿ ಪರತತ್ವವೇ ಇರುವಾಗ ಅಲ್ಲಿ ಅನಾದರಮಾಡಿ ನಮ್ಮನ್ನು ಕೇಳುತ್ತೀಯಲ್ಲಾ ಎಂದು ಹಾಸ್ಯಮಾಡಿ, "ಕರ್ಮಣಾ" ಎಂದರೆ ವರ್ಣಾಶ್ರಮಾನುಗುಣ

(೧) ಗೀ. ೨. ೪೯. (೨) ಗೀ. ೨. ೫೫.

**ಭಾ. ಅ. ವಕ್ಷ್ಯಮಾಣ ಬುದ್ಧಿಯುಕ್ತಸ್ಯ ಕರ್ಮಣೋ ಮಾಹಾತ್ಮ್ಯ ಮಾಹ.**

**ಮೂ. ನೇಹಾಭಿಕ್ರಮ ನಾಶೋಽಸ್ತಿ ಪ್ರತ್ಯವಾಯೋ ನವಿದ್ಯತೇ।**
**ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ ೪೦.**

ವಾದ ಕರ್ಮಾನುಷ್ಠಾನಗಳಿಂದ ಕೂಡಿದ ಕರ್ಮಯೋಗದಿಂದ, "ಕರ್ಮನಿರ್ಹಾರಃ" ಎಂದರೆ ಭಗವದ್ಭಕ್ತಿ ಯೋಗೋತ್ಪತ್ತಿಗೆ ಪ್ರತಿಬಂಧಕಗಳಾದ ಪ್ರಾಚೀನ ಪುಣ್ಯಪಾಪಗಳ ನಾಶವುಂಟಾಗುವದು ಸತ್ಯವೆಂದು ಉತ್ತರವನ್ನು ಮಹರ್ಷಿಯು ಇತ್ತರು. ॥೩೯॥

**ಭಾಷ್ಯಾವತಾರಿಕೆಯ ಅರ್ಥವು :—ವಕ್ಷ್ಯಮಾಣ ಬುದ್ಧಿಯುಕ್ತಸ್ಯ** - ಮುಂದೆ ತಾವು ಉಪದೇಶಿಸುವ ಒಳ್ಳೇ ಬುದ್ಧಿಯಿಂದ ಕೂಡಿದ, **ಕರ್ಮಣಃ** - ಕರ್ಮದ ಎಂದರೆ ಕರ್ಮಾನುಷ್ಠಾನದ, ಮಾಹಾತ್ಮ್ಯೆಯನ್ನು ಈ ಮುಂದಿನ ಶ್ಲೋಕದಿಂದ ಹೇಳುತ್ತಾರೆ. **ಇಮಾಂ ಶೃಣು** - ಈ ಮುಂದೆ ಹೇಳುವ ಬುದ್ಧಿ ಯೋಗವನ್ನು ಹೇಳುವೆನು ಕೇಳು ಎಂದು ಹೇಳಿದನಂತರ ಅದನ್ನೇ **"ವ್ಯವಸಾಯಾತ್ಮಿಕಾ ಬುದ್ಧಿಃ"** ಎಂದಾರಂಭಿಸಿ ಹೇಳಬೇಕೇ? ಅಲ್ಲದೆ ಮಧ್ಯೇ **"ನೇಹಾಭಿಕ್ರಮ"** ವೆಂದು ಹೇಳತಕ್ಕದ್ದೇ? ಎಂದಾಕ್ಷೇಪಿಸಿದರೆ, ತಾವು ಮುಂದೆ ಹೇಳುವ ಕರ್ಮಯೋಗವು ಮಹತ್ತರವಾದುದು, ತುಂಬಾ ಮಾಹಾತ್ಮ್ಯೆಯುಳ್ಳದ್ದೆಂದು ಹೇಳಿದರೆ ಕೇಳುವವನಿಗೆ ಅತ್ಯಾದರವು ಅದರಲ್ಲಿ ಉಂಟಾದೀತೆಂಬ ತಾತ್ಪರ್ಯದಿಂದ ಅಂತಹ ಬುದ್ಧಿಯಿಂದ ಮಾಡುವ ಕರ್ಮಯೋಗದ ಮಾಹಾತ್ಮ್ಯೆಯನ್ನು ತಿಳಿಸುವದಕ್ಕಾಗಿ ಈ ಶ್ಲೋಕವು ಮಧ್ಯದಲ್ಲಿ ಹೇಳಲ್ಪಟ್ಟಿರುತ್ತದೆ.

**ಮೂಲಕ್ಕೆ ಅರ್ಥವು :—ಇಹ** - ಈ ನಾನು ಮುಂದೆ ಉಪದೇಶಿಸುವ ನಿಷ್ಠಾನು ಕರ್ಮಯೋಗದಲ್ಲಿ, **ಅಭಿಕ್ರಮನಾಶಃ** - ಅಭಿಕ್ರಮವೆಂದೆರೆ ಉಪಕ್ರಮವು, ಪ್ರಾರಂಭಿಸಿದುದಕ್ಕೆ ಫಲವಿಲ್ಲದೆ ಹೋಗುವ ನಾಶವು, **ನಾಸ್ತಿ** - ಇರುವದಿಲ್ಲವು, ಫಲದ ಮಾತು ಹಾಗಿರಲಿ ಪ್ರತ್ಯವಾಯವಿಲ್ಲವೋ ಎಂದರೆ, **ಪ್ರತ್ಯವಾಯಃ** - ಪ್ರಾರಂಭಿಸಿಬಿಟ್ಟದುದಕ್ಕಾಗಿ ದೋಷವೂ, **ನವಿದ್ಯತೇ** - ಇರುವದಿಲ್ಲವು, ಪ್ರಾರಂಭಿಸಿದಮೇಲೆ ಅಲ್ಪಾನುಷ್ಠಾನ ಮಾತ್ರದಿಂದಲೂ ಫಲದ ನಾಶವಿಲ್ಲವೆಂದು ಹೇಳಿದುದನ್ನೇ ಉತ್ತರಾರ್ಧದಿಂದ ವ್ಯಕ್ತಪಡಿಸುತ್ತಾರೆ, **ಅಸ್ಯಧರ್ಮಸ್ಯ** - ಈ ಕರ್ಮಯೋಗವೆಂಬ ಧರ್ಮದ, **ಸ್ವಲ್ಪಮಪಿ** – ಅಲ್ಪಾನುಷ್ಠಾನವೂ ಕೂಡ, **ಮಹತೋಭಯಾತ್**– ಹಿಂದಿನ ಶ್ಲೋಕದಲ್ಲಿ ಹೇಳಿದ ಕರ್ಮ ಬಂಧವೇ, ಸಂಸಾರಬಂಧವೇ ಚೇತನನಿಗೆ ಮಹತ್ತಾದ ಭಯವು, ಜನ್ಮ ಮರಣಾದಿ ಬಹು ಕ್ಲೇಶಗಳಿಂದಲೂ, ಸ್ಥಿತಿ ದೆಶೆಯಲ್ಲೂ ನಾನಾವಿಧ ದುಃಖಗಳಿರುವದರಿಂದಲೂ, ಮಹದ್ಭಯವು ಸಂಸಾರ ಭಯವೇ, ಅಂತಹ ಭಯದಿಂದ, **ತ್ರಾಯತೇ** - ರಕ್ಷಿಸುತ್ತದೆ. ಆ ಕಾರಣದಿಂದ ನಾನು ಒಡನೇ ಉಪದೇಶಿಸುವ ಕರ್ಮಯೋಗವು ಹೀಗೆ ಮಹಾ ಮಾಹಾತ್ಮ್ಯೆಯುಳ್ಳದಾದುದರಿಂದ ನೀನು ಸಾವಧಾನದಿಂದ ಕೇಳತಕ್ಕದ್ದೆಂಬ ತಾತ್ಪರ್ಯವು.

**ಭಾಷ್ಯಾರ್ಥವು :—ಇಹ** - ಇಲ್ಲಿ ಎಂದರೆ "ಕರ್ಮಯೋಗ"ದಲ್ಲಿ, **ನಾಭಿಕ್ರಮ ನಾಶೋಽಸ್ತಿ**- ಪ್ರಾರಂಭಿಸಿದುದಕ್ಕೆ ನಾಶವೆಂಬುವದಿಲ್ಲವು, **"ಅಭಿಕ್ರಮ"** ವೆಂದರೆ ಆರಂಭವು, **"ನಾಶ"** ವೆಂದರೆ **ಫಲಸಾಧನ ಭಾವನಾಶಃ** - ಫಲವನ್ನು ಸಾಧಿಸಿ ಕೊಡುವದರ ನಾಶವು- ಇದರಿಂದ ಈ ಕರ್ಮಯೋಗಕ್ಕೂ ಇತರ ಕರ್ಮಾನುಷ್ಠಾನಗಳಿಗೂ ಇರುವ ತಾರತಮ್ಯವು ಹೇಳಲ್ಪಟ್ಟಿತು. ಇತರ ಕರ್ಮಗಳನ್ನು ಆರಂಭಿಸಿ ನಿಲ್ಲಿಸಿ ಬಿಟ್ಟರೆ ಫಲಸಾಧನ ಭಾವ ನಾಶವು ಉಂಟು, ಪ್ರತ್ಯವಾಯವೂ ಉಂಟು ಈ ಅಭಿಪ್ರಾಯವನ್ನು ಮುಂದೆ ಉಪದೇಶಿಸುತ್ತಾರೆ, **ಆರಬ್ಧಸ್ಯ**-ಪ್ರಾರಂಭಿಸಿದ

ಭಾ. ಇಹ ಕರ್ಮಯೋಗೇ, ನಾಭಿಕ್ರಮನಾಶೋಸ್ತಿ, ಅಭಿಕ್ರಮ-ಆರಂಭಃ, ನಾಶಃ-ಫಲಸಾಧನ ಭಾವನಾಶಃ, ಆರಬ್ಧಸ್ಯಾ ಸಮಾಪ್ತಸ್ಯ ವಿಚ್ಛಿನ್ನಸ್ಯಾಪಿ ನ ನಿಷ್ಫಲತ್ವಮ್ ; ಆರಬ್ಧಸ್ಯ ವಿಚ್ಛೇದೇ ಪ್ರತ್ಯವಾಯೋ ಪಿ ನವಿದ್ಯತೇ. ಅಸ್ಯ ಕರ್ಮಯೋಗಾಖ್ಯಸ್ಯ ಧರ್ಮಸ್ಯ ಸ್ವಲ್ಪಾಂಶೋಪಿ ಮಹತೋ ಭಯಾತ್-ಸಂಸಾರ ಭಯಾತ್ ತ್ರಾಯತೇ. ಅಯಮರ್ಥಃ, "ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ" ಇತ್ಯುತ್ತರತ್ರ ಪ್ರಪಂಚಯಿಷ್ಯತೇ. ಅನ್ಯಾನಿಹಿ ಲೌಕಿಕಾನಿ ವೈದಿಕಾನಿ ಚ ಸಾಧನಾನಿ ವಿಚ್ಛಿನ್ನಾನಿ ನ ಫಲಾಯ ಭವನ್ತಿ, ಪ್ರತ್ಯವಾಯಾಯ ಚ ಭವನ್ತಿ ||೪೦||

---

ಕರ್ಮವು, ಅಸಮಾಪ್ತಸ್ಯ – ಸಮಾಪ್ತಿಯನ್ನು ಹೊಂದದಿದ್ದರೂ, ಅಥವಾ ಒಂದುವೇಳೆ ಸಮಾಪ್ತಿ ಹೊಂದಿದರೂ ಮಧ್ಯೆ, ವಿಚ್ಛಿನ್ನಸ್ಯಾಪಿ - ಸ್ವಲ್ಪಕಾಲ ಬಿಟ್ಟು ಹೋಗಿದ್ದರೂ ಕೂಡ, ನನಿಷ್ಫಲತ್ವಮ್ - ಫಲವನ್ನು ಕೊಡದೆ ಹೋಗುವದಿಲ್ಲವು. ಈ ಮಾಹಾತ್ಮ್ಯೆಯು ಕರ್ಮ ಯೋಗಕ್ಕೆ ಮಾತ್ರವೇ ವಿನಾ ಕಾಮ್ಯ ಕರ್ಮಾನುಷ್ಠಾನಗಳಿಗಿಲ್ಲವೆಂಬ ಭಾವವು, ಆರಬ್ಧಸ್ಯ ವಿಚ್ಛೇದೇ - ಈ ಕರ್ಮಯೋಗವನ್ನು ಆರಂಭಿಸಿ ಮಧ್ಯದಲ್ಲಿ ಬಿಟ್ಟುಹೋದರೆ, ಪ್ರತ್ಯವಾಯೋ ಪಿ ನವಿದ್ಯತೇ-ಯಾವ ವಿಧವಾದ ಅನಿಷ್ಟಪ್ರಾಪ್ತಿಯೂ, ಇರುವದಿಲ್ಲವು. ಇತರ ಕರ್ಮಾನುಷ್ಠಾನಗಳ ವಿಚ್ಛೇದವಲ್ಲಿ ಪ್ರತ್ಯವಾಯವೂ ಉಂಟೆಂದು ಮುಂದೆ ಹೇಳಲ್ಪಡುತ್ತದೆ. ಹೀಗೆ ಫಲವಿಲ್ಲದೆಯೂ ಹೋಗುವದಿಲ್ಲವು ಮತ್ತು ಪ್ರತ್ಯವಾಯವೂ ಇಲ್ಲವೆಂದು ಹೇಳಿ, ಕರ್ಮಯೋಗದ ಮಾಹಾತ್ಮ್ಯೆಯನ್ನು ಉತ್ತರಾರ್ಧದಿಂದ ಚನ್ನಾಗಿ ವಿವರಿಸುತ್ತಾರೆ. ಮೂಲದ ಅಸ್ಯ ಎಂದರೆ ಕರ್ಮಯೋಗಾಖ್ಯಸ್ಯಧರ್ಮಸ್ಯ – ಕರ್ಮಯೋಗವೆಂದು ಹೆಸರುಳ್ಳ ಅನುಷ್ಠಾನದ, ಸ್ವಲ್ಪಾಂಶೋಪಿ - ಅನುಷ್ಠಿಸಲ್ಪಟ್ಟ ಸ್ವಲ್ಪಭಾಗವೂ ಕೂಡ, ಮಹತೋ ಭಯಾತ್ ಎಂದರೆ, ಸಂಸಾರಭಯಾತ್–ಸಂಸಾರಭಯದಿಂದ, ತ್ರಾಯತೇ-ರಕ್ಷಿಸುತ್ತದೆ. ಇಲ್ಲಿ ಮಹತ್ತಾದ ಭಯವು ಸಂಸಾರ ಭಯವೇ ಬೇರೆಯಲ್ಲವು. ಜೀವನು ಬಂಧ ದೆಶಿಯಲ್ಲಿ ನಾನಾವಿಧವಾದ ದುಃಖಗಳಿಗೆ ಗುರಿಯಾಗುವದರಿಂದ ಪುನಃಪುನಃ ಬದ್ಧದೆಶಿಯ ಪ್ರಾಪ್ತಿಯೇ ಮಹತ್ತಾದ ಭಯವು, "ಗರ್ಭಜನ್ಮ ಜರಾಜ್ಞಾನ ಮೃತ್ಯು ನಾರಕಜಂ ತಥಾ। ದುಃಖಂ ಸಹಸ್ರಶೋಭೇದೈರ್ಭಿದ್ಯತೇ ಮುನಿಸತ್ತಮ" (ವಿ. ಪು. ೬. ಅ. ೯.) ಗರ್ಭ ಜನ್ಮ ಜರಾಮರಣ ಮೊದಲಾದ ಸಹಸ್ರ ವಿಧದಲ್ಲಿ ದುಃಖಗಳು ಬಾಧಿಸುತ್ತವೆ ಎಂದೂ "ಯಾವಜ್ಜೀವತಿ ತಾವಚ್ಚ ದುಃಖೈರ್ನಾನಾ ವಿಧೈಃ ಪ್ಲುತಃ।ತಂತುಕಾರಣ ಪಕ್ಷ್ಮೋಘೈ ರಾಸ್ತೇ ಕಾರ್ಪಾಸ ಬೀಜವತ್"(ವಿ. ಪು. ೬. ಅ. ೫೩.)"ಹತ್ತಿಯ ಬೀಜಕ್ಕೆ ತಂತುಗಳು ಸುತ್ತಿಕೊಂಡಿರುವ ಹಾಗೆ ತಾಯಿಯ ಗರ್ಭವನ್ನು ಪ್ರವೇಶಿಸಿ ಸಾಯುವವರೆಗೂ ಅನಂತರವೂ, ಸಹ, ದುಃಖಗಳಿಂದ ಪೂರ್ಣನಾಗಿರುವನು" ಎಂದೂ ಹೇಳಿರುವದರಿಂದ ಸಂಸಾರಭಯವೇ ಮಹದ್ಭಯವು. ಅರ್ಜುನನಿಗೆ ಕರ್ಮಯೋಗದ ಮಾಹಾತ್ಮ್ಯೆಯನ್ನುಪದೇಶಿಸಿ ಆತನಿಗೆ ಇದರಲ್ಲಿ ಅಭಿರುಚಿಯನ್ನುಂಟುಮಾಡುವದಕ್ಕಾಗಿ ಇಲ್ಲಿ ಪ್ರಥಮತಃ ಹೇಳಿದಭಿಪ್ರಾಯವನ್ನೇ ಮುಂದೆಯೂ ಚನ್ನಾಗಿ ಉಪದೇಶಿಸುತ್ತಾರೆಂದು ಮುಂದಿನ ವಾಕ್ಯದಿಂದ ಬೋಧಿಸುತ್ತಾರೆ. ಅಯಮರ್ಥಃ–ಈ ಶ್ಲೋಕಾಭಿಪ್ರಾಯವೇ, "ಪಾರ್ಥನೈವೇಹನಾಮುತ್ರ" (ಗೀ. ೬. ೪೦.) ಇತ್ಯುತ್ತರತ್ರ - ಎಂದು ಮುಂದೆ ಪ್ರಪಂಚ ಯಿಷ್ಯತೇ - ವಿಸ್ತರಿಸಿ ಹೇಳಲ್ಪಡುತ್ತದೆ, ಅನ್ಯಾನಿಹಿ - ಈ ಕರ್ಮಯೋಗರೂಪ ಸಾಧನಗಳಲ್ಲದೆ ಬೇರೆಯಾದ, ಲೌಕಿಕಾನಿ ವೈದಿಕಾನಿ ಚ ಸಾಧನಾನಿ - ಲೌಕಿಕ ವೈದಿಕಗಳಾದ ಸಾಧನಗಳು ಎಂದರೆ ಇತರ ಕರ್ಮಗಳು, ವಿಚ್ಛಿನ್ನಾನಿ - ಮಧ್ಯೆ ಅವುಗಳಿಗೆ ತಡೆಯುಂಟಾದರೆ ನಫಲಾಯ ಭವನ್ತಿ - ಫಲವೂ ಉಂಟಾಗುವದಿಲ್ಲವು, ಪ್ರತ್ಯವಾಯಾಯ ಚ ಭವನ್ತಿ –

**ಭಾ. ಅವ - ಕಾಮ್ಯಕರ್ಮವಿಷಯಾಯಾ ಬುದ್ಧೇ ರ್ಮೋಕ್ಷ ಸಾಧನಭೂತ ಕರ್ಮವಿಷಯಾಂ ಬುದ್ಧಿಂ ವಿಶಿನಷ್ಟಿ.**

---

ತೊಂದರೆಯೂ ಉಂಟಾಗುತ್ತದೆ. ಲೌಕಿಕ ಕರ್ಮಗಳಲ್ಲಿ ಕರ್ಮವನ್ನು ಪೂರೈಸದಿದ್ದರೆ ಆ ಕರ್ಮದ ಫಲವಿಲ್ಲವೆಂಬುದು ಸ್ವತಸ್ಸಿದ್ಧವು. ಆ ಲೌಕಿಕಕರ್ಮವು ತನ್ನ ಯಜಮಾನನಿಂದ ನಿಯಮಿಸಲ್ಪಟ್ಟಿದ್ದುದಾದರೆ ಆ ಕೆಲಸವನ್ನು ಪೂರೈಸದೇ ಇರುವದರಿಂದ ಪ್ರತ್ಯವಾಯವುಂಟು. ಹಾಗೆಯೇ ವೈದಿಕ ಕರ್ಮಗಳಲ್ಲೂ ಎಂದು ಊಹಿಸತಕ್ಕದ್ದು. ನಿತ್ಯ ನೈಮಿತ್ತಿಕ ಕರ್ಮಗಳಲ್ಲಿ ವಿಚ್ಛೇದ ಉಂಟಾದರೆ, **"ಆಜ್ಞಾಚ್ಛೇದೀ ಮಮದ್ರೋಹೀ"** ಎಂದು ಸರ್ವೇಶ್ವರನೇ ಹೇಳಿರುವದರಿಂದ ಸಾಕ್ಷಾತ್ತಾಗಿ ಪ್ರತ್ಯವಾಯವೇ ವಿನಾ ಫಲವಿಲ್ಲವು. ಕಾಮ್ಯಕರ್ಮಗಳಲ್ಲಿ ಸ್ವಲ್ಪ ಅಙ್ಗನ್ಯೂನತೆಯಿದ್ದರೂ ಅವು ನಿಷ್ಫಲಗಳಾಗುವವು. ಯಜ್ಞಯಾಗಾದಿಗಳ ನ್ಯೂನತೆಯಲ್ಲಿ ಸ್ವರ್ಗಲೋಕ ಪ್ರಾಪ್ತಿ ಮೊದಲಾದವುಗಳಿಲ್ಲವೆಂಬುದು ಮಾತ್ರವೇ ಅಲ್ಲವು. ಬ್ರಹ್ಮರಕ್ಷಸ್ಸೇ ಮೊದಲಾದ ಜನ್ಮ ಪ್ರಾಪ್ತಿರೂಪ ಪ್ರತ್ಯವಾಯವೂ ಉಂಟು. ದಶರಥನು ಪುತ್ರಕಾಮೇಷ್ಟಿಯನ್ನು ಫಲಾಕಾಂಕ್ಷೆಯಿಂದ ಮಾಡಲು ಯತ್ನಿಸಿದಾಗ, **ಛಿದ್ರಂಹಿ ಮೃಗಯಂತೇಽತ್ರ ವಿದ್ವಾಂಸೋ ಬ್ರಹ್ಮರಾಕ್ಷಸಾಃ। ನಿಹತಸ್ಯ ಚ ಯಜ್ಞಸ್ಯ ಸದ್ಯಃಕರ್ತಾ ವಿನಶ್ಯತಿ'** ಬ್ರಹ್ಮರಕ್ಷಸ್ಸುಗಳು ಏನಾದರೂ ಅಪರಾಧ ನಡೆದೀತೋ ಎಂದು ಹುಡುಕುತ್ತಿವೆ; ಯಜ್ಞ ವಿಚ್ಛೇದದಿಂದ ಕರ್ತಾ ಶೀಘ್ರದಲ್ಲಿ ನಾಶಹೊಂದುವನು, ಆದುದರಿಂದ **"ತದ್ಯಥಾ ವಿಧಿಪೂರ್ವಂ ಮೇ ಕ್ರತುರೇಷ ಸಮಾಪ್ಯತೇ । ತಥಾ ವಿಧಾನಂ ಕ್ರಿಯತಾಂ".** ಈ ಯಜ್ಞವು ಯಥಾ ಶಾಸ್ತ್ರವಾಗಿ ಅನುಷ್ಠಿಸಲ್ಪಟ್ಟು ಸಮಾಪ್ತಿಯನ್ನು ಹೊಂದಲಿ ಎಂದು ಪ್ರಾರ್ಥಿಸುತ್ತಾನೆ. ಹೀಗೆ ಯಜ್ಞವಿಚ್ಛಿತ್ತಿಯಿಂದ ಪ್ರತ್ಯವಾಯ ಉಂಟೆಂದು ಶಾಸ್ತ್ರವಿತ್ತಾದ ದಶರಥನು ಹೇಳುವಹಾಗೆ ಮಹರ್ಷಿಯು ಬರೆದಿರುತ್ತಾರೆ. ಆದುದರಿಂದ ನ್ಯೂನಾತಿರಿಕ್ತ ದೋಷಗಳಿಗೂ ವಿಚ್ಛೇದಗಳಿಗೂ ಪ್ರಾಯಶ್ಚಿತ್ತಗಳು ವಿಧಿಸಲ್ಪಟ್ಟಿರುತ್ತವೆ. ಈ ಕರ್ಮಯೋಗಾನುಷ್ಠಾನದಲ್ಲಿ ಅಭಿಕ್ರಮನಾಶ, ಪ್ರತ್ಯವಾಯವೆರಡೂ ಇಲ್ಲವು. ಇತರ ಕಾಮ್ಯಕರ್ಮಾನುಷ್ಠಾನದಲ್ಲಾದರೋ ಎರಡೂ ಉಂಟೆಂಬ ಭಾವವು. ಹೀಗೆ ಕರ್ಮಯೋಗದ ಮಾಹಾತ್ಮ್ಯೆಯನ್ನುಪದೇಶಿಸಿ ಮುಂದಿನ ಶ್ಲೋಕದಿಂದುಪಕ್ರಮಿಸಿ ಮೋಕ್ಷಸಾಧನಭೂತವಾದ ಕರ್ಮಯೋಗವನ್ನುಪದೇಶಿಸುತ್ತಾರೆ. ಎಲ್ಲಾ ವಿಧದಲ್ಲೂ ನಿನಗೆ ಉತ್ತಾರಕವಾದುದು ಕರ್ಮಯೋಗವು; ಅದನ್ನೇ ನಿನಗೆ ಉಪದೇಶಿಸುತ್ತೇನೆಂಬ ಭಾವವು.

**ಭಾಷ್ಯಾವತಾರಿಕೆಯ ಅರ್ಥವು:—ಕಾಮ್ಯ ಕರ್ಮವಿಷಯಾಯಾಃ** – ಕಾಮ್ಯ ಕರ್ಮಗಳನ್ನು ಕುರಿತ, **ಬುದ್ಧೇಃ** – (ಪಂಚಮಿ) ಬುದ್ಧಿಗಿಂತಲೂ, ಮೋಕ್ಷಕ್ಕೆ ಸಾಧನ ಭೂತವಾದ ಕರ್ಮವನ್ನು ಕುರಿತ, **ಬುದ್ಧಿಂ** - ಬುದ್ಧಿಯನ್ನು ಕುರಿತು ವಿಶಿನಷ್ಟಿ – ಹೊಗಳುತ್ತಾರೆ. ಕಾಮ್ಯಕರ್ಮಗಳು ಫಲಾಕಾಂಕ್ಷೆಯಿಂದ ಮಾಡಲ್ಪಡುತ್ತವೆ. ಮುಂದೆ ಹೇಳುವ ಮೋಕ್ಷಕ್ಕೆ ಸಾಧನ ಭೂತವಾದ ಕರ್ಮಯೋಗದಲ್ಲಾದರೋ ಫಲಾಕಾಂಕ್ಷೆಯಿಲ್ಲವು, ಭಗವತ್ಪ್ರೀತ್ಯರ್ಥವಾಗಿ ಮಾಡಲ್ಪಡುವದರಿಂದ ಕಾಮ್ಯಕರ್ಮ ಬುದ್ಧಿಗಿಂತ, ಈ ಫಲಾಭಿ ಸಂಧಿರಹಿತವಾದ ಕರ್ಮಯೋಗ ಬುದ್ಧಿಯು, ಹೇಗೆ ತುಂಬಾ ವಿಲಕ್ಷಣವಾದುದೆಂಬುದನ್ನು ತಿಳಿಸುತ್ತಾರೆ. ಹೇತು, ಫಲಗಳೆರಡರಲ್ಲೂ ಕಾಮ್ಯ ಕರ್ಮ ಬುದ್ಧಿಗಿಂತ, ಈ ಕರ್ಮಯೋಗ ಬುದ್ಧಿಯು ವಿಲಕ್ಷಣವೆಂದುಪದೇಶಿಸಿಸುತ್ತಾರೆ. ಕಾಮ್ಯ ಕರ್ಮದಿಂದುಂಟಾಗುವ ಫಲವು ಅಲ್ಪಾಸ್ಥಿರವಾದುದರಿಂದ ತೃಣಕ್ಕೆ ಸಮಾನವೆಂದು ಹೇಳಲ್ಪಟ್ಟಿರುತ್ತದೆ; ಶ್ರೀ ಪರಾಶರರು **" ಧರ್ಮಾರ್ಥಕಾಮ್ಯೈರಲಮಲ್ಪಕಾಸ್ತೇ "**

**ಮೂ:—ವ್ಯವಸಾಯಾತ್ಮಿಕಾ ಬುದ್ಧಿ ರೇಕೇಹ ಕುರು ನಂದನ ।**
**ಬಹುಶಾಖಾಹ್ಯನನ್ತಾಶ್ಚ ಬುದ್ಧಯೋಽವ್ಯವಸಾಯಿನಾಂ ॥** ೪೧.

**ಭಾ. ಇಹ–ಶಾಸ್ತ್ರೀಯೇ ಸರ್ವಸ್ಮಿನ್ ಕರ್ಮಣಿ, ವ್ಯವಸಾಯಾತ್ಮಿಕಾ ಬುದ್ಧಿ ರೇಕಾ - ಮುಮುಕ್ಷುಣಾಽನುಷ್ಠೇಯೇ ಕರ್ಮಣಿ ಬುದ್ಧಿಃ – ವ್ಯವಸಾಯಾತ್ಮಿಕಾ ಬುದ್ಧಿಃ ; ವ್ಯವಸಾಯೋ ನಿಶ್ಚಯಃ, ಸಾಹಿಬುದ್ಧಿ ರಾತ್ಮ ಯಾಥಾತ್ಮ್ಯ ನಿಶ್ಚಯ ಪೂರ್ವಿಕಾ. ಕಾಮ್ಯಕರ್ಮ ವಿಷಯಾ**

(ವಿ. ಪು.) ಕಾಮ್ಯಫಲಗಳಾದ ಧರ್ಮಾರ್ಥಕಾಮುಗಳು ಬೇಕಿಲ್ಲವು ; ಏಕೆಂದರೆ' ಅಲ್ಪಕಾಸ್ತೇ"– ಅವುಗಳು ತುಂಬಾ ತುಚ್ಛವಾದವುಗಳೆಂದು ಹೇಳಿರುತ್ತಾರೆ.

**ಮೂಲಕ್ಕೆ ಅರ್ಥವು:—ಹೇ ಕುರುನಂದನ** - ಕುರುವಂಶೋತ್ಪನ್ನನಾದ ಅರ್ಜುನನೇ, **ಇಹ** – ಈ ಶಾಸ್ತ್ರಚೋದಿತವಾದ ನಿಷ್ಕಾಮ ಕರ್ಮಾನುಷ್ಠಾನದಲ್ಲಿ, **ವ್ಯವಸಾಯಾತ್ಮಿಕಾ** – ಆತ್ಮಯಾಥಾತ್ಮ್ಯನಿಶ್ಚಯ ಪೂರ್ವಕವಾದ, **ಬುದ್ಧಿಃ**–ಬುದ್ಧಿಯು, **ಏಕಾಹಿ** – ಒಂದೇಯಷ್ಟೇ; ಫಲಾಭಿಸಂಧಿ ರಹಿತವಾಗಿ ಭಗವತ್ಪ್ರೀತ್ಯರ್ಥವಾಗಿರುವದರಿಂದ ಸಮಸ್ತ ಕರ್ಮದಲ್ಲೂ ಬುದ್ಧಿಯು ಒಂದೇರೂಪವಾದುದೆಂಬ ಭಾವವು, **ಅವ್ಯವಸಾಯಿನಾಂಚ**-ಅಂತಹ ಆತ್ಮಯಾಥಾತ್ಮ್ಯ ನಿಶ್ಚಯ ಜ್ಞಾನವಿಲ್ಲದವರಿಗಾದರೋ, **ಬುದ್ಧಯಃ** – ಬುದ್ಧಿಗಳು, **ಬಹುಶಾಖಾಹಿ** ಒಂದರಲ್ಲೇ ಅನೇಕ ಅವಾಂತರ ಫಲಗಳಿರುವ ಪ್ರಯುಕ್ತ ಅನೇಕವಿಧವಾದವುಗಳು, ಅಂತಹ ಅನೇಕ ಕಾಮ್ಯಕರ್ಮಗಳೂ ಫಲಗಳೂ ಇರುವದರಿಂದ, **ಅನಂತಾಃ** - ಲೆಖ್ಖಮಾಡಲು ಕೂಡ ಅಸಾಧ್ಯವಾಗಿ ವಿಧವಿಧವಾದವುಗಳು.

**ಭಾಷ್ಯಾರ್ಥವು:—**ಹಿಂದಿನ ಶ್ಲೋಕದಲ್ಲಿ ಕರ್ಮಯೋಗವನ್ನು ಪ್ರಶಂಸಿಸುವ ವ್ಯಾಜದಿಂದ ತದಿತರ ಕರ್ಮಗಳು ಸರಿಯುಲ್ಲವೆಂದೂ ಮತ್ತು ಇಂತಹ ಇತರ ಕರ್ಮಗಳಿಗಿಂತ ಕರ್ಮಯೋಗದ ಕರ್ಮಗಳು ಉತ್ಕೃಷ್ಟವಾದವೆಂದೂ ಹೇಳಲ್ಪಟ್ಟವು. ಈಗ ಉಪದೇಶಿಸಬೇಕಿಂದಿರುವ ಕರ್ಮಗಳಲ್ಲಿನ ಬುದ್ಧಿಯು ಕಾಮ್ಯ ಕರ್ಮಗಳಲ್ಲಿ ಸಕ್ತವಾದ ಬುದ್ಧಿಗಿಂತ ವಿಲಕ್ಷಣವಾದುದೆಂದು ತಿಳಿಸುತ್ತಾರೆ. **ಇಹ** ಎಂದರೆ **ಶಾಸ್ತ್ರೀಯೇ ಸರ್ವಸ್ಮಿನ್‌ಕರ್ಮಣಿ**-ಶಾಸ್ತ್ರಗಳಲ್ಲಿ ಹೇಳಿರುವ ನಿತ್ಯನೈಮಿತ್ತಿಕ ಕಾಮ್ಯಗಳಿಂದ ಕೂಡಿದ ಸಮಸ್ತ ಕರ್ಮಯೋಗದಲ್ಲಿ, **ವ್ಯವಸಾಯಾತ್ಮಿಕ**ವಾದ **ಬುದ್ಧಿಯು, ಏಕಾ** - ಒಂದೇ, ಎಂದರೆ, **ಮುಮುಕ್ಷುಣಾಽನುಷ್ಠೇಯೇಕರ್ಮಣಿ**-ಮೋಕ್ಷಾರ್ಥಿಯಿಂದ ಅನುಷ್ಠಿಸಲ್ಪಟ್ಟ ಕರ್ಮದಲ್ಲಿ, **ಬುದ್ಧಿಯು**-ವ್ಯವಸಾಯಾತ್ಮಿಕವಾದ ಬುದ್ಧಿಯು, ವ್ಯವಸಾಯವೆಂದರೆ ನಿಶ್ಚಯವು, **ಸಾಹೀ ಬುದ್ಧಿಃ** - ಆ ಬುದ್ಧಿಯಾದರೋ, **ಆತ್ಮಯಾಥಾತ್ಮ್ಯ ನಿಶ್ಚಯ ಪೂರ್ವಿಕಾ** - ಜೀವಾತ್ಮನ ಸರಿಯಾದ ಸ್ವರೂಪದ ನಿಶ್ಚಯ ಜ್ಞಾನಪೂರ್ವಕವಾದುದು. ಇಲ್ಲಿ ಇಹ ಎಂಬುದಕ್ಕೆ **ಶಾಸ್ತ್ರೀಯೇ ಸರ್ವಸ್ಮಿನ್ ಕರ್ಮಣಿ** ಎಂದು ವ್ಯಾಖ್ಯಾನಮಾಡಿರುವದರಿಂದ ಅಶಾಸ್ತ್ರೀಯಗಳಾಗಿ ಪ್ರತಿಷಿದ್ಧ ಕರ್ಮಗಳನ್ನು ಮಾಡುವದೇ ಸರಿಯುಲ್ಲವೆಂಬುದು ಬೋಧಿತವು; ಅಂತಹ ಲೌಕಿಕ ಕರ್ಮಗಳನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ ಹಾಗೆ ಪ್ರಯೋಗವು. ಇದರಿಂದ ದುಷ್ಟನಿಗ್ರಹ ಶಿಷ್ಟಪರಿಪಾಲನರೂಪ ಧರ್ಮಯುದ್ಧವು ಕ್ಷತ್ರಿಯನಿಗೆ ಶಾಸ್ತ್ರೀಯ ಕರ್ಮದಲ್ಲೇ ಸೇರಿತು ಎಂಬ ಭಾವವೂದ್ಯೋತಿತವು. "ಶಾಸ್ತ್ರೀಯೇ ಸರ್ವಸ್ಮಿನ್ ಕರ್ಮಣಿ' ಎಂದು ಹೇಳಿದುದರಿಂದ ಶಾಸ್ತ್ರವಿಹಿತಗಳಾದ ನಿತ್ಯನೈಮಿತ್ತಿಕಗಳೂ ಕಾಮ್ಯಗಳಾದ ಯಜ್ಞಯಾಗಾದಿಗಳೂ ಎಲ್ಲವೂ ಹೇಳಲ್ಪಟ್ಟವು, ಈ ಎಲ್ಲಾ ಕರ್ಮಗಳಲ್ಲೂ ಒಂದೇ ಬುದ್ಧಿಯು ಮೋಕ್ಷಾರ್ಥಿಗೆ ಎಂಬುದರ ಮುಖ್ಯ ತಾತ್ಪರ್ಯವೇನು? ಎಂದರೆ ಭಗವತ್ಪ್ರೀಣನ ಮೂಲಕ ಮೋಕ್ಷಫಲ ಒಂದೇ ಅಂತವನಿಗೆ ಬೇಕಾದುದು ಎಂಬುದು. ಇದು ಸಿದ್ಧಿಸ

ಭಾ. ತು ಬುದ್ಧಿರವ್ಯವಸಾಯಾತ್ಮಿಕಾ ; ತತ್ರಹಿ ಕಾಮಾಧಿಕಾರೇ ದೇಹಾತಿರಿಕ್ತಂ ಆತ್ಮಾಸ್ತಿತ್ವಜ್ಞಾನ ಮಾತ್ರ ಮಪೇಕ್ಷಿತಮ್, ನಾತ್ಮಸ್ವರೂಪ ಯಾಥಾತ್ಮ್ಯ ನಿಶ್ಚಯಃ; ಸ್ವರೂಪ ಯಾಥಾತ್ಮ್ಯ ನಿಶ್ಚಯೇಪಿ ಸ್ವರ್ಗಾದಿ ಫಲಾರ್ಥಿತ್ವ ತತ್ಸಾಧನಾನುಷ್ಠಾನ ತತ್ಫಲಾನುಭವಾನಾಂ ಸಂಭವಾದ ವಿರೋಧಾಚ್ಚ. ಸೇಯಂ ವ್ಯವಸಾಯಾತ್ಮಿಕಾ ಬುದ್ಧಿಃ ಏಕ ಫಲ

---

ಬೇಕಾದರೆ ಆತ್ಮಯಾಥಾತ್ಮ್ಯನಿಶ್ಚಯ ಜ್ಞಾನ ಪೂರ್ವಕವಾಗಿಯೇ ಇರಬೇಕೆಂಬ ಭಾವವು. ಶಾಸ್ತ್ರದಲ್ಲಿ ಮೋಕ್ಷಾರ್ಥ ವಿಷಯದಲ್ಲಿ ಹೇಳಿರುವದೂ ಹಾಗೆಯೇ ಎಂಬ ತಾತ್ಪರ್ಯದಿಂದ ಶಾಸ್ತ್ರೀಯೇ ಸರ್ವಸ್ಮಿನ್ ಕರ್ಮಣಿ ಎಂದು ಹೇಳಿರುತ್ತಾರೆ. ಹೀಗೆ ಒಂದಾದ ಮೋಕ್ಷಫಲದ ವ್ಯವಸಾಯಾತ್ಮಿಕವಾದುವೇ ಅಂತವನ ಬುದ್ಧಿಯು ಎಂದು ಭಾವಿಸತಕ್ಕದ್ದು. ಶಾಸ್ತ್ರಗಳಲ್ಲಿ ಹೇಳಿರುವ ವಿಧಿಗಳೆಲ್ಲಾ ಇವನಿಗೆ ಒಂದೇ ಭಗವತ್ಪ್ರೀಣನಮುಖೇನ ಮೋಕ್ಷಫಲಕ್ಕೆ ಸಾಧಕವಾಗಿರುವದಾಗಿ ಒಂದೇ ಅಭಿಪ್ರಾಯವು. ಆದರೆ ಮೋಕ್ಷಾರ್ಥಿಯೂ ನಿತ್ಯನೈಮಿತ್ತಿಕಗಳನ್ನು ಅನುಷ್ಠಿಸುವದರಿಂದ ಉಪಾಯಾನುಷ್ಠಾನಕ್ಕೆ ಪ್ರತಿ ಬಂಧಕಗಳಾದ ಬೇರೆ ಪಾಪ ನಿವರ್ತನ ಫಲವಿರುವಾಗ "ಬುದ್ಧಿರೇಕೇಹ ಕುರುನಂದನ" ಎಂದು ಹೇಳಿದುದು ಹೇಗೆ ಸಮಂಜಸವೆಂದರೆ, ಮೋಕ್ಷ ಫಲಕ್ಕೇ ಇದೂ ಸಾಧನವಾದುದರಿಂದ ಅದಕ್ಕೇ ಸಾಧನವಾಗಿ ಬುದ್ಧಿಯು ಒಂದೇ ಎಂದು ಹೇಳಲು ಏನೂ ಅಭ್ಯಂತರವಿರುವದಿಲ್ಲವು. ಇಲ್ಲಿ ವ್ಯವಸಾಯಾತ್ಮಿಕಾ ಬುದ್ಧಿಯು ಎಂತಾದ್ದೆಂದರೆ ಆತ್ಮಯಾಥಾತ್ಮ್ಯನಿಶ್ಚಯ ಪೂರ್ವಕವಾದುದೆಂದು ಹೇಳಲ್ಪಟ್ಟಿತು. ಮೋಕ್ಷ ಫಲಕ್ಕೆ ಇದು ಸಾಧನವೆಂಬ ತಾತ್ಪರ್ಯವು. ಆದರೆ ಮೋಕ್ಷಾರ್ಥವಾಗಿಯಲ್ಲದೆ, ಇತರ ಫಲಾಪೇಕ್ಷೆಯಿಂದ ಮಾಡಿದ ಕಾಮ್ಯಕರ್ಮಬುದ್ಧಿಯು ಎಂತಾದ್ದೆಂದರೆ ತಿಳಿಸುತ್ತಾರೆ—**ಕಾಮ್ಯಕರ್ಮವಿಷಯಾತುಬುದ್ಧಿಃ** - ಆದರೆ ಕಾಮ್ಯ ಕರ್ಮಗಳ ವಿಷಯವಾದ ಬುದ್ಧಿಯಾದರೋ, **ಅವ್ಯವಸಾಯಾತ್ಮಿಕಾ** - ಆತ್ಮ ಯಾಥಾತ್ಮ್ಯ ನಿಶ್ಚಯ ಪೂರ್ವಕವಾದುದಲ್ಲವು, **ತತ್ರಹಿ**-ಆ ಕಾಮ್ಯ ಕರ್ಮ ಬುದ್ಧಿಯ ಸಂದರ್ಭದಲ್ಲಾದರೋ, **ಕಾಮಾಧಿಕಾರೇ** - ಕಾಮಾಧಿಕಾರಿಯಲ್ಲಿ, ಎಂದರೆ ಕಾಮನೆಯಿಂದ ಕರ್ಮವನ್ನನುಷ್ಠಿಸುವವನಿಗೆ ಅಥವಾ ಕಾಮನೆಯಿಂದ ಅಧಿಕಾರವುಳ್ಳವನಿಗೆ, ಅಥವಾ ಕಾಮ್ಯ ಕರ್ಮದ ಅಧಿಕಾರತ್ವದಲ್ಲಿ ಅಥವಾ ಕಾಮ್ಯಾಧಿಕಾರತ್ವವನ್ನು ಬೋಧಿಸುವ ಶಾಸ್ತ್ರದಲ್ಲಿ, **ದೇಹಾತಿರಿಕ್ತ** ಇತ್ಯಾದಿ–ದೇಹಕ್ಕಿಂತ ಬೇರೆಯಾಗಿ ಒಬ್ಬ ಜೀವಾತ್ಮನಿದ್ದಾನೆಂಬ ಇಷ್ಟುಮಾತ್ರ ಜ್ಞಾನವೇ ಬೇಕಾದುದು, **ನಾತ್ಮಸ್ವರೂಪಯಾಥಾತ್ಮ್ಯನಿಶ್ಚಯಃ** - ಜೀವಾತ್ಮನ ಸ್ವರೂಪ ನಿಜಸ್ಥಿತಿಯ ನಿಶ್ಚಯವು ಬೇಕಾಗಿರುವದಿಲ್ಲವು, ಎಂದರೆ ಜೀವಾತ್ಮನ ನಿತ್ಯತ್ವ, ಅಣುತ್ವ, ಸ್ವಯಂ ಪ್ರಕಾಶತ್ವ, ಆನಂದತ್ವ, ಭಗವತ್ಪ್ರಕಾರತ್ವ, ಗುಣಾಷ್ಟಕಯುಕ್ತತ್ವ, ಮೊದಲಾದವುಗಳ ಜ್ಞಾನವು ಬೇಕಿಲ್ಲವು ಎಂಬ ಭಾವವು. ಆದರೆ ದೇಹಕ್ಕಿಂತ ಬೇರೆಯಾಗಿ ಆತ್ಮನೊಬ್ಬನಿದ್ದಾನೆಂಬ ಜ್ಞಾನಮಾತ್ರ ಕಾಮ್ಯಕರ್ಮಾಧಿಕಾರಿಗೆ ಆವಶ್ಯಕವೋ? ಎಂದರೆ ಸ್ವರ್ಗಾದ್ಯುಪ ಭೋಗಕ್ಕೆ ಉಪಯುಕ್ತವಾದ ಜ್ಞಾನವಾದುದರಿಂದ ಆವಶ್ಯಕವೆಂಬ ತಾತ್ಪರ್ಯವು. ಮುಂದಿನ ವಾಕ್ಯದಿಂದ ಆತ್ಮಸ್ವರೂಪ, ಯಾಥಾತ್ಮ್ಯ ನಿಶ್ಚಯಜ್ಞಾನವು ಆ ಕಾಮಾಧಿಕಾರಿಗೆ ಹೇಗೆ ಆವಶ್ಯಕವಿಲ್ಲವೆಂಬುದನ್ನು ಉಪಪಾದಿಸುತ್ತಾರೆ:—**ಸ್ವರೂಪಯಾಥಾತ್ಮ್ಯ ನಿಶ್ಚಯೇಪಿ** - ಜೀವಾತ್ಮನ ಸ್ವರೂಪದ ಯಥಾವತ್ತಾದ ಸ್ಥಿತಿಯ ನಿಶ್ಚಯಜ್ಞಾನವಿಲ್ಲದಿದ್ದರೂ ಕೂಡ, **ಸ್ವರ್ಗಾದಿ** ಇತ್ಯಾದಿ, **ಸ್ವರ್ಗಾದಿ ಫಲಾರ್ಥಿತ್ವ** - ಸ್ವರ್ಗವೇ ಮೊದಲಾದ ಫಲ ಕಾಮನೆಯೇನು, **ತತ್ಸಾಧನಾನುಷ್ಠಾನ** - ಅದನ್ನು ಸಾಧಿಸುವ ಕರ್ಮದ ಅನುಷ್ಠಾನವೇನು, **ತತ್ಫಲಾನುಭವಾನಾಂ** - ಆ ಫಲಗಳುಪಭೋಗವೇನು, ಇವುಗಳು, **ಸಂಭವಾತ್** - ಉಂಟಾಗಬಹುದಾದುದರಿಂದಲೂ, **ಅವಿರೋಧಾಚ್ಚ** - ಶಾಸ್ತ್ರವಿರೋಧವೇನೂ ಇಲ್ಲದುದರಿಂದಲೂ, ಆತ್ಮಯಾಥಾ

ಭಾ. ಸಾಧನ ವಿಷಯತಯಾ ಏಕಾ ; ಏಕಸ್ಮೈ ಮೋಕ್ಷಾಖ್ಯ ಫಲಾಯ ಹಿ ಮುಮುಕ್ಷೋಸ್ಸರ್ವಾಣಿ ಕರ್ಮಾಣಿ ವಿಧೀಯನ್ತೇ, ಅತಶ್ಶಾಸ್ತ್ರಾರ್ಥಸ್ಯೈಕತ್ವಾತ್ ಸರ್ವಕರ್ಮ ವಿಷಯಾ ಬುದ್ಧಿರೇಕೈವ. ಯಥೈಕಫಲಸಾಧನತಯಾ ಆಗ್ನೇಯಾದೀನಾಂ ಷಣ್ಣಾಂ ಸೇತಿಕರ್ತವ್ಯತಾಕಾನಾಮೇಕಶಾಸ್ತ್ರಾರ್ಥತಯಾ ತದ್ವಿಷಯಾ ಬುದ್ಧಿರೇಕಾ,

---

ತ್ಮಜ್ಞಾನ ಬೇಕಿಲ್ಲವು, ದೇಹಾತಿರಿಕ್ತ ಆತ್ಮಜ್ಞಾನಮಾತ್ರ ಬೇಕು ಎಂಬ ತಾತ್ಪರ್ಯವು. ದೇಹಾತಿರಿಕ್ತವಾಗಿ ಒಬ್ಬ ಆತ್ಮನಿದ್ದಾನೆಂಬ ಇಷ್ಟುಮಾತ್ರ ಜ್ಞಾನವು ಸ್ವರ್ಗಾದಿ ಫಲಗಳ ಕಾಮನೆಯಿರುವವನಿಗೆ ಬೇಕು. ಏಕೆಂದರೆ ಈ ದೇಹಾವಸಾನಾನಂತರ ಆ ಫಲವು ಸಿದ್ಧಿಸುತ್ತದೆಂದು ಶಾಸ್ತ್ರದಲ್ಲಿ ಹೇಳಿರುವದರಿಂದ ದೇಹಾತಿರಿಕ್ತನಾದ ಒಬ್ಬ ಆತ್ಮನು ಇದ್ದಾನೆಂಬ ನಂಬಿಕೆಯಿದ್ದರಲ್ಲವೇ ಸ್ವರ್ಗಪ್ರಾಪ್ತಿಗಾಗಿ ಕರ್ಮವನ್ನೆಸಗುವನು ; ಹಾಗೆ ನಂಬಿಕೆ ಇಲ್ಲದಿದ್ದರೆ ಅಂತಹ ಕರ್ಮಗಳನ್ನು ಅನುಷ್ಠಿಸನೆಂಬ ಭಾವವು. ಮೋಕ್ಷಪ್ರಾಪ್ತಿಯೂ, ಸ್ವರ್ಗಾದಿಪ್ರಾಪ್ತಿಯೂ ಎರಡೂ ದೇಹಾವಸಾನಾನಂತರವೇ ಉಂಟಾಗತಕ್ಕವು; ಆದುದರಿಂದ ಮರಣಾನಂತರವೂ ದೇಹಾತಿರಿಕ್ತವಾಗಿ ಆತ್ಮನೊಬ್ಬನುಂಟು ಎಂಬ ಜ್ಞಾನವಿದ್ದರೆ ಇವೆರಡಕ್ಕಾಗಿಯೂ ಯತ್ನಿಸುವನು; ಎರಡೂ ಹೀಗೆ ಸಮನಾಗಿರುವಾಗ ಸ್ವರ್ಗಕಾಮನಿಗೆ ದೇಹಾತಿರಿಕ್ತ ಆತ್ಮಜ್ಞಾನಮಾತ್ರ ಸಾಕೆಂದೂ, ಮೋಕ್ಷಾರ್ಥಿಗೆ ಆತ್ಮಸ್ವರೂಪಜ್ಞಾನವೆಲ್ಲಾ ಬೇಕು ಎಂದೂ ಹೀಗೆ ವಿವೇಕಿಸಿ ಹೇಳಲು ಕಾರಣವೇನು ಎಂದು ಆಕ್ಷೇಪ ತಂದರೆ, ಮೋಕ್ಷಪ್ರಾಪ್ತಿಯಲ್ಲಿ ತನ್ನ ಸ್ವಸ್ವರೂಪಾವಿರ್ಭಾವ ಉಂಟಾಗಿಯೇ ತತ್ಪ್ರಾಪ್ತಿಯಾಪುದರಿಂದ ಅಂತಹ ಜ್ಞಾನವಿಲ್ಲದೆ ಅಂತಹ ಪ್ರಾಪ್ತಿಗಾಗಿ ಯತ್ನಿಸನು ಎಂಬ ಭಾವವು. ಸ್ವರ್ಗಾದಿ ಫಲ ಕಾಮನೆ ಯಿರುವವನಿಗೆ ಆತ್ಮನ ಯಥಾರ್ಥಸ್ವರೂಪ ಜ್ಞಾನವಿಲ್ಲದಿರುವದರಿಂದ ಶಾಸ್ತ್ರವಿರೋಧವೇನೂ ಇಲ್ಲವೆಂದು ಹೇಳಿದುದರಿಂದ, ಮೋಕ್ಷಾರ್ಥಿಗೆ ಇಂತಹ ಸ್ವರೂಪಜ್ಞಾನವಿಲ್ಲದಿರುವದು ಶಾಸ್ತ್ರವಿರುದ್ಧವೆಂದು ಹೇಳಿದಂತಾಯಿತು. ಮುಂದೆ ಮೋಕ್ಷಾರ್ಥಿಗೆ ಸರ್ವ ಕರ್ಮಗಳಲ್ಲೂ ಜ್ಞಾನವು ಒಂದೇರೀತಿ ಹೇಗೆಂಬುದನ್ನು ಉಪಪಾದಿಸುತ್ತಾರೆ:—**ಸೇಯಂ ವ್ಯವಸಾಯಾತ್ಮಿಕಾ ಬುದ್ಧಿಃ** ಅಂತಹ ಈ ಜೀವಾತ್ಮ ಯಾಥಾತ್ಮ್ಯ ನಿಶ್ಚಯವುಳ್ಳ ಬುದ್ಧಿಯು, **ಏಕಫಲಸಾಧನ ವಿಷಯತಯಾ ಏಕಾ** - ಒಂದೇ ಫಲವನ್ನು ಸಾಧಿಸುವ ವಿಷಯವಾದುದರಿಂದ ಒಂದೇ ಎಂಬ ಭಾವವು. ಅದನ್ನೇ ಇನ್ನೂ ಉಪಪಾದಿಸುತ್ತಾರೆ:—**ಏಕಸ್ಮೈ ಮೋಕ್ಷಾಖ್ಯಫಲಾಯಹಿ** - ಒಂದೇಯಾದ ಮೋಕ್ಷವೆಂಬ ಫಲಕ್ಕಾಗಿಯಲ್ಲವೇ, **ಮುಮುಕ್ಷೋಃ ಸರ್ವಾಣಿಕರ್ಮಾಣಿ ವಿಧೀಯನ್ತೇ** – ಮೋಕ್ಷಾರ್ಥಿಗೆ ಸಮಸ್ತ ಕರ್ಮಗಳೂ ವಿಧಿಸಲ್ಪಟ್ಟವೆ ; ನಿಗಮನ ಮಾಡಿ ಹೇಳುತ್ತಾರೆ: **ಅತಃ**–ಆ ಕಾರಣದಿಂದ, **ಶಾಸ್ತ್ರಾರ್ಥಸ್ಯೈಕತ್ವಾತ್** - ಮೋಕ್ಷಾರ್ಥಿಗೆ ಸಮಸ್ತ ಶಾಸ್ತ್ರಾಭಿಪ್ರಾಯವೂ ಒಂದೇಯಾದುದರಿಂದ, **ಸರ್ವಕರ್ಮವಿಷಯಾ ಬುದ್ಧಿಃ** - ನಿತ್ಯನೈಮಿತ್ತಿಕಕಾಮ್ಯರೂಪ ಸಮಸ್ತ ಕರ್ಮಗಳ ವಿಷಯವಾದ ಬುದ್ಧಿಯು, **ಏಕೈವ** - ಒಂದೆಯೇ ಎಂಬುದು ಸಿದ್ಧವು. ಮುಂದೆ ಒಂದು ದೃಷ್ಟಾಂತ ಮೂಲಕ ಒಂದೇ ಎಂಬುದನ್ನು ಸ್ಥಾಪಿಸುತ್ತಾರೆ :—**ಯಥಾ** - ಹೇಗೆ, **ಸೇತಿಕರ್ತವ್ಯತಾಕಾನಾಂ** – ಕ್ರಮಾನುಗುಣವಾಗಿ ಒಟ್ಟಿಗೆ ಮಾಡಬೇಕಾಗಿರುವ, **ಷಣ್ಣಾಂ** – ಆರಾದ, **ಆಗ್ನೇಯಾದೀನಾಂ** - ಆಗ್ನೇಯ, ಅಗ್ನೀಷೋಮೀಯ, ಉಪಾಂಶುಯಾಜ, ಎರಡು ಐಂದ್ರ, ಐಂದ್ರಾಗ್ನ ಎಂಬ ಆರು ಯಾಗಗಳಿಗೆ, **ಏಕಫಲಸಾಧನತಯಾ** - ಒಂದಾದ ಸ್ವರ್ಗಫಲವನ್ನು ಸಾಧಿಸಿಕೊಡುವ ಆಕಾರದಿಂದಲೂ, **ಏಕಶಾಸ್ತ್ರಾರ್ಥತಯಾ** - ಒಂದೇ ಶಾಸ್ತ್ರಾಭಿಪ್ರಾಯವನ್ನು ಹೊಂದಿರುವದರಿಂದಲೂ, **ತದ್ವಿಷಯಾ ಬುದ್ಧಿಃ**–ಆ ಆರು ಯಾಗಗಳ ವಿಷಯವಾದ ಬುದ್ಧಿಯು, **ಏಕಾ** - ಒಂದೆಯೋ, **ತದ್ವತ್ ಇತ್ಯರ್ಥಃ** - ಹಾಗೆಯೇ ಇಲ್ಲಿಯೂ ಎಂಬಭಿಪ್ರಾಯವು.

ಭಾ. ತದ್ವದಿತ್ಯರ್ಥಃ. ಅವ್ಯವಸಾಯಿನಾಂತು ಸ್ವರ್ಗಪುತ್ರ ಪಶ್ವನ್ನಾದಿ ಫಲಸಾಧನ ಕರ್ಮಾಧಿಕೃತಾನಾಂ ಬುದ್ಧಯಃ ಫಲಾನನ್ತ್ಯಾ ದನನ್ತಾಃ. ತತ್ರಾಪಿ ಬಹು ಶಾಖಾಃ; ಏಕಸ್ಮೈ ಫಲಾಯ ಚೋದಿತೇಪಿ ದರ್ಶಪೂರ್ಣಮಾಸಾದೌ ಕರ್ಮಣಿ "ಆಯುರಾಶಾಸ್ತೇ", ಇತ್ಯಾದ್ಯವಗತ ಫಲಾನ್ತರ ಭೇದೇನ ಬಹುಶಾಖತ್ವಂ ಚ ವಿದ್ಯತೇ. ಅತೋಽವ್ಯವಸಾಯಿನಾಂ ಬುದ್ಧಯೋ ಅನನ್ತಾ ಬಹುಶಾಖಾಶ್ಚ. ಏತದುಕ್ತಂಭವತಿ-ನಿತ್ಯೇಷು ನೈಮಿತ್ತಿಕೇಷು ಕರ್ಮಸು ಪ್ರಧಾನ ಫಲಾನ್ಯವಾಂತರ ಫಲಾನಿಚ ಯಾನಿ ಶ್ರೂಯಮಾಣಾನಿ, ತಾನಿಸರ್ವಾಣಿ ಪರಿತ್ಯಜ್ಯ, ಮೋಕ್ಷೈಕ ಫಲತಯಾ ಸರ್ವಾಣಿ ಕರ್ಮಾಣ್ಯೇಕ

---

ಅವ್ಯವಸಾಯಿನಾಂತು – ಆತ್ಮಸ್ವರೂಪ ಯಾಥಾತ್ಮ್ಯ ನಿಶ್ಚಯಜ್ಞಾನವಿಲ್ಲದವರಿಗಾದರೋ ಎಂದರೆ ಕಾಮ್ಯಕರ್ಮಗಳನ್ನು ಫಲಾಭಿಸಂಧಿಪೂರ್ವಕ ಮಾಡುವವರಿಗಾದರೋ ಅವರು ಎಂತವರೆಂದರೆ, ಸ್ವರ್ಗ, ಪುತ್ರ, ಪಶು, ಅನ್ನ ಮೊದಲಾದ, ಫಲಸಾಧನ ಕರ್ಮಾಧಿಕೃತಾನಾಂ – ಫಲಗಳನ್ನು ಸಾಧಿಸಿಕೊಡುವ ಕರ್ಮಾಧಿಕಾರಿಗಳಿಗಾದರೋ ಬುದ್ಧಯಃ - ಬುದ್ಧಿಗಳು, ಅವರುಗಳ ಅಪೇಕ್ಷಿಸುವ, ಫಲಾನನ್ತ್ಯಾತ್ - ಫಲಗಳು ಅನನ್ತಗಳಾದುದರಿಂದ, ಅನನ್ತಾಃ - ಅನನ್ತವಾದವುಗಳು, ತತ್ರಾಪಿ - ಅವುಗಳಲ್ಲಿಯೂ ಕೂಡ, ಬಹುಶಾಖಾಃ - ಒಂದೊಂದರಲ್ಲೂ ಅವಾಂತರ ಫಲಗಳಿರುವದರಿಂದ ಬಹುಶಾಖೆಯುಳ್ಳವುಗಳು. ಹೇಗೆ ಬಹುಶಾಖೆಯುಳ್ಳವೆಂಬುದನ್ನು ಮುಂದಿನ ವಾಕ್ಯದಿಂದ ವಿವರಿಸುತ್ತಾರೆ. ದರ್ಶಪೂರ್ಣಮಾಸಾದೌ ಕರ್ಮಣಿ - ದರ್ಶಪೂರ್ಣಮಾಸವೇ ಮೊದಲಾದ ಕರ್ಮವು ಏಕಸ್ಮೈಫಲಾಯ ಚೋದಿತೇಪಿ - ಒಂದೇ ಸ್ವರ್ಗ ಫಲಪ್ರಾಪ್ತಿಗಾಗಿ ವಿಧಿಸಿದ್ದರೂ, "ಆಯುರಾಶಾಸ್ತೇ" ಇತ್ಯಾದಿ, ಈ ಯಜಮಾನನು ದೀರ್ಘಾಯುಸ್ಸನ್ನೂ ಅಪೇಕ್ಷಿಸುತ್ತಾನೆ, ಸತ್ಸಂತಾನವನ್ನು ಅಪೇಕ್ಷಿಸುತ್ತಾನೆ, ಇತ್ಯಾದ್ಯವಗತ ಫಲಾನ್ತರ ಭೇದೇನ - ಇವೇ ಮೊದಲಾದವುಗಳಲ್ಲಿ ತೋರಿ ಬರುವ ಮುಖ್ಯವಲ್ಲದ ಇತರ ಫಲ ಭೇದದಿಂದ, ಬಹುಶಾಖತ್ವಂಚ ವಿದ್ಯತೇ - ಬಹು ಶಾಖೆಯನ್ನು ಹೊಂದಿರೋಣವೂ ಉಂಟು; ಇದರಿಂದ, ಮೋಕ್ಷಾರ್ಥಿಯ ಬುದ್ಧಿಯು ಮೋಕ್ಷವೆಂಬ ಮುಖ್ಯಫಲವನ್ನು ಸಾಧಿಸಿ ಕೊಡುವದಾಗಿ ಒಂದೇ ಎಂದೂ, ಕಾಮ್ಯಕರ್ಮಗಳನ್ನು ಫಲಕ್ಕಾಗಿ ಅನುಷ್ಠಿಸುವವನ ಬುದ್ಧಿಗಳು ಪ್ರಧಾನಫಲ ಭೇದಗಳಿಂದ ಅನಂತಗಳೆಂದೂ, ಅವುಗಳಲ್ಲೇ ಒಂದೊಂದರಲ್ಲೂ ಅಪ್ರಧಾನ ಅವಾಂತರಫಲ ಭೇದಗಳಿಂದ ಬಹುಶಾಖೆಗಳುಳ್ಳವೆಂದೂ ಹೇಳಲ್ಪಟ್ಟಿತು. ಅತಃ - ಆ ಕಾರಣದಿಂದ, ಅವ್ಯವಸಾಯಿನಾಂ - ಆತ್ಮಸ್ವರೂಪ ಯಾಥಾತ್ಮ್ಯ ನಿಶ್ಚಯವಿಲ್ಲದ ಫಲಕ್ಕಾಗಿ ಅನುಷ್ಠಿಸುವ ಕಾಮ್ಯಕರ್ಮಮಾಡುವವರಿಗೆ, ಬುದ್ಧಿಗಳು, ಅನನ್ತಗಳೂ ಮತ್ತು ಬಹು ಶಾಖೆಗಳುಳ್ಳವು, ಏತದುಕ್ತಂ ಭವತಿ - ತಾತ್ಪರ್ಯಾಭಿಪ್ರಾಯವು ಏನೆಂದರೆ - ನಿತ್ಯೇಷು ನೈಮಿತ್ತಿಕೇಷು ಕರ್ಮಸು–ನಿತ್ಯನೈಮಿತ್ತಿಕ ಕರ್ಮಗಳಲ್ಲಿ, ಯಾನಿ - ಯಾವ, ಪ್ರಧಾನ ಫಲಾನ್ಯವಾಂತರ ಫಲಾನಿ - ಮುಖ್ಯಫಲಗಳೂ ಮತ್ತು ಮುಖ್ಯವಾದವುಗಳಲ್ಲದ ಇತರ ಫಲಗಳೂ, ಶ್ರೂಯಮಾಣಾನಿ - ಶ್ರುತಿಗಳಲ್ಲಿ ಹೇಳಲ್ಪಟ್ಟವೆಯೋ, ತಾನಿಸರ್ವಾಣಿ - ಅವೆಲ್ಲವನ್ನೂ, ಪರಿತ್ಯಜ್ಯ - ಚನ್ನಾಗಿ ತ್ಯಜಿಸಿ, ಮೋಕ್ಷೈಕ ಫಲತಯಾ-ಮೋಕ್ಷ ಫಲ ವೊಂದನ್ನು ಸಾಧಿಸಿಕೊಡುವದೆಂಬ ಭಾವನೆಯಿಂದಲೂ, ಏಕಶಾಸ್ತ್ರಾರ್ಥತಯಾ - ಎಲ್ಲವೂ ಒಂದೇ ಶಾಸ್ತ್ರಾರ್ಥವನ್ನು ಬೋಧಿಸುತ್ತವೆ ಎಂಬ ಭಾವನೆಯಿಂದಲೂ, ಸರ್ವಕರ್ಮಾಣ್ಯನುಷ್ಠೇಯಾನಿ - ಈ ಸರ್ವ ನಿತ್ಯ ನೈಮಿತ್ತಿಕ ಕರ್ಮಗಳೂ ಅನುಷ್ಠಿಸತಕ್ಕವು, ಕಾಮ್ಯಾನಿಚ - ಕಾಮ್ಯ ಕರ್ಮಗಳಾದರೋ, ಸ್ವವರ್ಣಾಶ್ರಮೋಚಿತಾನಿ – ತನ್ನ ತನ್ನ ವರ್ಣಾಶ್ರಮಗಳಿಗೆ ಯೋಗ್ಯವಾದವುಗಳನ್ನು ಮಾತ್ರವೇ ತತ್ತತ್ಫಲಾನಿ ಪರಿತ್ಯಜ್ಯ–

**ಭಾ.** **ಶಾಸ್ತ್ರಾರ್ಥತಯಾಽನುಷ್ಠೇಯಾನಿ. ಕಾಮ್ಯಾನಿಚ ಸ್ವವರ್ಣಾಶ್ರಮೋಚಿತಾನಿ ತತ್ತತ್ಫಲಾನಿ ಪರಿತ್ಯಜ್ಯ, ಮೋಕ್ಷಸಾಧನತಯಾ ನಿತ್ಯನೈಮಿತ್ತಿಕೈ ರೇಕೀಕೃತ್ಯ ಯಥಾಬಲ ಮನುಷ್ಠೇಯಾನಿ--ಇತಿ ॥ ೪೧ ॥**

**ಭಾ. ಅವ. ಅಥ ಕಾಮ್ಯಕರ್ಮಾಧಿಕೃತಾ ನ್ನಿಂದತಿ—**

ಆಯಾ ಕಾಮ್ಯ ಕರ್ಮಗಳ ಫಲಗಳನ್ನು ಸಂಪೂರ್ಣವಾಗಿ ಬಿಟ್ಟು **ಮೋಕ್ಷಸಾಧನತಯಾ** – ಮೋಕ್ಷಕ್ಕೆ ಅವೂ ಕೂಡ ಸಾಧನವೆಂಬ ಬುದ್ಧಿಯಿಂದ, **ನಿತ್ಯನೈಮಿತ್ತಿಕೈ ರೇಕೀಕೃತ್ಯ** . ನಿತ್ಯನೈಮಿತ್ತಿಕಗಳೊಂದಿಗೆ ಏಕೀಭವಿಸಿದ ಹಾಗೆ ಭಾವಿಸಿ, ಎಂದರೆ ಅವುಗಳಹಾಗೆ ಇವೂ ಎಂದು ಭಾವಿಸಿ, ಒಂದೇ ಫಲವನ್ನು ಸಾಧಿಸುವದರಿಂದ ಒಂದೇ ಶಾಸ್ತ್ರಾರ್ಥವನ್ನು ಬೋಧಿಸುತ್ತದೆಂದು ಭಾವಿಸಿ, **ಯಥಾಬಲಂ** - ತನ್ನ ಶಕ್ತ್ಯನುಸಾರವಾಗಿ, **ಅನುಷ್ಠೇಯಾನಿ** - ಅನುಷ್ಠಿಸತಕ್ಕವುಗಳು, **ಇತಿ** - ಎಂಬುದು ಮುಖ್ಯ ತಾತ್ಪರ್ಯವು; **ಯಥಾಬಲಂ** ಎಂದು ಹೇಳಿರುವದರಿಂದ ಮೋಕ್ಷಾರ್ಥಿಗೆ ಕಾಮ್ಯಗಳಲ್ಲಿ ಏನಾದರೂ ಅಙ್ಗವೈಕಲ್ಯಗಳುಂಟಾದರೆ ಹೇಗೆ ಪ್ರತ್ಯವಾಯವಿಲ್ಲವೋ ಹಾಗೆಯೇ ನಿತ್ಯ ನೈಮಿತ್ತಿಕಗಳಲ್ಲೂ ಕೂಡ ಅಙ್ಗವೈಕಲ್ಯಗಳುಂಟಾದರೂ ಪ್ರತ್ಯವಾಯವಿಲ್ಲವೆಂಬ ಭಾವವು ತೋರಿ ಬರುತ್ತವೆ. ಇವರಿಂದ ಶಾಸ್ತ್ರ ಚೋದಿತಗಳಾದ ಕರ್ಮಗಳು ಮೂರು ವಿಧವು. (೧) ನಿತ್ಯ (೨) ನೈಮಿತ್ತಿಕ (೩) ಕಾಮ್ಯವೆಂಬದಾಗಿ. ಇವುಗಳಲ್ಲಿ ನಿತ್ಯ ನೈಮಿತ್ತಿಕಗಳು ಅವಶ್ಯಕವಾಗಿ ಅನುಷ್ಠಿಸಲೇಬೇಕು, ಆದುದರಿಂದ ಇವೂ ಕರ್ಮಯೋಗವಲ್ಲಿ ಮುಖ್ಯವಾಗಿ ಇರತಕ್ಕವುಗಳೇ. ಬಿಟ್ಟರೆ ಪ್ರತ್ಯವಾಯ ಉಂಟು. ಅವುಗಳೂ ಸ್ವವರ್ಣಾಶ್ರಮೋಚಿತವಾದವುಗಳನ್ನೇ ಅನುಷ್ಠಿಸತಕ್ಕವು. ಇದು ವ್ಯಕ್ತವಾದುದರಿಂದಲೇ ಕಾಮ್ಯಕರ್ಮಾನುಷ್ಠಾನಕ್ಕೆ ಮಾತ್ರ ಸ್ವವರ್ಣಾಶ್ರಮೋಚಿತವಾದವುಗಳಾಗಿರಬೇಕೆಂದು ಹೇಳಲ್ಪಟ್ಟವು. ಮೋಕ್ಷಾರ್ಥಿಗೆ ಮೋಕ್ಷೇತರ ಫಲದಲ್ಲಿ ಅಭಿಪ್ರಾಯವಿಲ್ಲದುದರಿಂದ ಆತನು ಈ ಮೂರು ವಿಧ ಕರ್ಮಗಳನ್ನನುಷ್ಠಿಸುವಾಗಲೂ ಅವುಗಳಿಂದ ಪ್ರಾಪ್ತವಾಗುವ ಫಲಗಳನ್ನು ಸಂಪೂರ್ಣವಾಗಿ ತೊರೆಯತಕ್ಕದ್ದು, ಏನಾದರೂ ಈಶ್ವರ ಕೃಪೆಯಿಂದ ಪ್ರಾಪ್ತವಾದರೂ ಮೋಕ್ಷೈಕ ಫಲಸಾಧನಕ್ಕಾಗಿ ಪ್ರಾಪ್ತವಾಯಿತೆಂದೂ ಸರ್ವ ಶಾಸ್ತ್ರಾರ್ಥವೂ ಹೀಗೆ ಎಂದೂ, ಆ ಮೋಕ್ಷಾರ್ಥಿಯ ಬುದ್ಧಿಯು ವ್ಯವಸಾಯಾತ್ಮಕವಾಗಿ ಒಂದೇ ಎಂಬಭಿಪ್ರಾಯವು. ಫಲಾಪೇಕ್ಷೆಯಿಂದ ಮಾಡುವವನ ಬುದ್ಧಿಗಳಾದರೋ ಅವ್ಯವಸಾಯಾತ್ಮಕವಾಗಿ ಅನೇಕವಾದವೂ ಮತ್ತು ಬಹು ಶಾಖೆಗಳುಳ್ಳವೂ ಎಂದು ಹೇಳಲ್ಪಟ್ಟಿತು.

**ಭಾಷ್ಯಾವತಾರಿಕೆಯ ಅರ್ಥವು:—ಅಥ** - ಅನಂತರದಲ್ಲಿ ಎಂದರೆ ಮುಂದಿನ ಮೂರು ಶ್ಲೋಕಗಳಿಂದ, **ಕಾಮ್ಯಕರ್ಮಾಧಿ ಕೃತಾ**ನ್ - ಕಾಮ್ಯ ಕರ್ಮಗಳನ್ನು ಫಲಾಭಿ ಸಂಧಿಯಿಂದ ಅನುಷ್ಠಿಸುವರನ್ನು, **ನಿಂದತಿ** - ಶ್ರೀಕೃಷ್ಣ ಭಗವಾನರವರು ದೂಷಿಸುತ್ತಾರೆ. ಅರ್ಜುನನಿಗೆ ಹೀಗೆ ಮೋಕ್ಷಾರ್ಥಿಗಳ ಕರ್ಮಾನುಷ್ಠಾನದ ಬುದ್ಧಿಯ ವೈಲಕ್ಷಣ್ಯವನ್ನು ತಿಳಿಸಿ, ಆತನಿಗೆ ಅಂತಹ ಬುದ್ಧಿಯಲ್ಲಿ ಶೀಘ್ರವಾಗಿ ಮನುತೆಯುಂಟಾಗುವದಕ್ಕಾಗಿ, ಇತರ ಕಾಮ್ಯ ಕರ್ಮಗಳನ್ನನುಷ್ಠಿಸುವ ಸಂಸಾರಿಗಳಿಗೆ ಅಂತಹ ಬುದ್ಧಿಯು ಸರ್ವಾತ್ಮನಾ ಉಂಟಾಗುವದಿಲ್ಲವೆಂದು, ಅವರುಗಳನ್ನು ಸರ್ವೇಶ್ವರನು ನಿಂದಿಸುತ್ತಾನೆ.

**ಮೂಲಕ್ಕೆ ಅರ್ಥವು:**—ಈ ಮೂರು ಶ್ಲೋಕಕ್ಕೂ ಏಕಾನ್ವಯವು ಹೇಗೆಂದರೆ:—ಹೇ ಪಾರ್ಥ, ಅವಿಪಶ್ಚಿತಃ, ವೇದವಾದರತಾಃ, ನಾನ್ಯದಸ್ತೀತಿವಾದಿನಃ, ಕಾಮಾತ್ಮಾನಃ, ಸ್ವರ್ಗಪರಾಃ, ಜನ್ಮಕರ್ಮ ಫಲಪ್ರದಾಂ, ಕ್ರಿಯಾವಿಶೇಷ ಬಹುಳಾಂ, ಭೋಗೈಶ್ವರ್ಯಗತಿಂ ಪ್ರತಿ (ವರ್ತಮಾನಾಂ) ಯಾಂ, ಇಮಾಂ, ಪುಷ್ಪಿತಾಂ ವಾಚಂ ಪ್ರವದನ್ತಿ, ತಯಾ (ವಾಚಾ) ಅಪ

ಮೂ. ಯಾ ಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯ ವಿಪಶ್ಚಿತಃ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ ೪೨.
ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮ ಫಲಪ್ರದಾಂ ।
ಕ್ರಿಯಾ ವಿಶೇಷ ಬಹುಳಾಂ ಭೋಗೈಶ್ವರ್ಯ ಗತಿಂ ಪ್ರತಿ ॥ ೪೩.
ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಪ ಹೃತ ಚೇತಸಾಂ ।
ವ್ಯವಸಾಯಾತ್ಮಿಕಾಬುದ್ಧಿಃ ಸಮಾಧೌ ನವಿಧೀಯತೇ ॥ ೪೪.

ಹೃತಚೇತಸಾಂ, ಭೋಗೈಶ್ವರ್ಯಪ್ರಸಕ್ತಾನಾಂ, ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನವಿಧೀಯತೇ. ನಿಷ್ಕಾಮ ಕರ್ಮಾನುಷ್ಠಾನವು ಭಗವತ್ಪ್ರೀತ್ಯಾ ಮಾಡಲ್ಪಟ್ಟರೆ ಸರ್ವಫಲಪ್ರದನ ಪ್ರಾಪ್ತಿಯುಂಟಾಗುವದರಿಂದ, ಹಾಗಲ್ಲದೆ ಐಹಿಕ ಸ್ವರ್ಗಾದಿ ಫಲ ಕಾಮನೆಯಿಂದ ಮಾಡಿದ ಕರ್ಮಾನುಷ್ಠಾನವು ಅಲ್ಪಾಸ್ಥಿರ ಫಲಪ್ರದವಾದುದರಿಂದ ಅದನ್ನು ನಿಂದಿಸುವ ಪ್ರಕರಣವು. **ಹೇ ಪಾರ್ಥ** - ಓ ಅರ್ಜುನನೇ, **ಅವಿಪಶ್ಚಿತಃ** - ಅಲ್ಪಜ್ಞರು, ವಿವಿಧಂ ಪಶ್ಯಚ್ಚಿತ್ತ್ವಂ ವಿಪಶ್ಚಿತ್ತ್ವಂ ಎಂಬುದರಿಂದ, ಶಾಸ್ತ್ರೋಕ್ತವಾದುದು ವೈಲಕ್ಷಣ್ಯಯುಕ್ತವಾಗಿ ವಿವಿಧವಾದುದಾಗಿ, ಯಥಾರ್ಥವಾಗಿ ಮನಸ್ಸಿನಿಂದ ಗ್ರಹಿಸುವಿಕೆಯು ವಿಪಶ್ಚಿತ್ತ್ವವು, ಅದಿಲ್ಲದವರು ಅಜ್ಞರು ಇವರು ಎಂತವರೆಂದರೆ, **ವೇದವಾದರತಾಃ** - ವೇದಗಳಲ್ಲಿ ಹೇಳಿರುವ ಕಾಮ್ಯಕರ್ಮಗಳಿಗೆ ಸ್ವರ್ಗಾದಿ ಫಲ ಉಂಟೆಂಬ ವಾದಗಳಲ್ಲಿ ಆಸಕ್ತರಾದವರು, ಮತ್ತು **ನಾನ್ಯದಸ್ತೀತಿವಾದಿನಃ** - ಆ ಐಹಿಕ ಸ್ವರ್ಗಾದಿ ಫಲಗಳಿಗಿಂತ ಬೇರೆಯಾಗಿ ಅಧಿಕವಾದುದು ಇನ್ಯಾವದೂ ಇಲ್ಲವೆಂದು ವಾದಿಸುವವರು, ಇನ್ನೂ ಎಂತವರೆಂದರೆ, **ಕಾಮಾತ್ಮಾನಃ** - ಇಂತಹ ಕಾಮಗಳಲ್ಲೇ ಸಕ್ತವಾದ ಮನಸ್ಸುಳ್ಳವರು, **ಸ್ವರ್ಗಪರಾಃ** - ಸ್ವರ್ಗವೇ ಮುಖ್ಯಫಲವೆಂದು ಭಾವಿಸುವವರು, ಇಂತಹ ಅಲ್ಪಜ್ಞರು **ಜನ್ಮಕರ್ಮಫಲಪ್ರದಾಂ** - ಜನ್ಮ ಮತ್ತು ಕರ್ಮರೂಪಗಳಾದ ಫಲಗಳನ್ನು ಕೊಡುವ, ಎಂದರೆ ಪುನಃಪುನಃ ಸಂಸಾರವನ್ನುಂಟುಮಾಡುವ, **ಕ್ರಿಯಾವಿಶೇಷ ಬಹುಳಾಂ** - ಸರಿಯಾದ ಜ್ಞಾನವಿಲ್ಲದೆ ಬರೀ ಕ್ರಿಯಾಕಲಾಪ ಬಾಹುಳ್ಯವುಳ್ಳ, **ಭೋಗೈಶ್ವರ್ಯಗತಿಂಪ್ರತಿ (ವರ್ತಮಾನಾಂ)**– ಭೋಗೈಶ್ವರ್ಯ ಮಾರ್ಗಗಳನ್ನು ಕುರಿತವುಗಳಾಗಿಯೂ ಇರುವ, **ಪುಷ್ಪಿತಾಂ** - ಬರೀಪುಷ್ಪದ ಹಾಗೆ ರಮಣೀಯವಾಗಿ ತೋರುವ, ಎಂದರೆ ಸರಿಯಾದ ಫಲವ್ಯಾವುದೂ ಇಲ್ಲದಿರುವ, **ಇಮಾಂ**– ಇಂತಹ, **ಯಾಂ ವಾಚಂ** - ಯಾವ ಮಾತನ್ನು, **ಪ್ರವದಂತಿ** - ಹೇಳುತ್ತಾರೋ, **ತಯಾ** – ಅಂತಹ ವಂಚಕ ಮಾತಿನಿಂದ, **ಅಪಹೃತಚೇತಸಾಂ** - ಅಪಹರಿಸಲ್ಪಟ್ಟ ಮನಸ್ಸುಳ್ಳ, **ಭೋಗೈಶ್ವರ್ಯ ಪ್ರಸಕ್ತಾನಾಂ** - ಭೋಗೈಶ್ವರ್ಯಗಳಲ್ಲೇ ಶ್ರದ್ಧೆಯುಳ್ಳವನರಿಗೆ, **ವ್ಯವಸಾಯಾತ್ಮಿಕಾ ಬುದ್ಧಿಃ** - ಆತ್ಮಸ್ವರೂಪ ಯಾಥಾತ್ಮ್ಯ ನಿಶ್ಚಯರೂಪ ಬುದ್ಧಿಯು, **ಸಮಾಧೌ** - ಮನಸ್ಸಿನಲ್ಲಿ, **ನವಿಧೀಯತೇ** - ಉಂಟಾಗುವದಿಲ್ಲವು.

**ಭಾಷ್ಯಾರ್ಥವು:**—ಆತ್ಮ ಸ್ವರೂಪ ಯಾಥಾತ್ಮ್ಯ ವಿವೇಕಶೂನ್ಯರು ಕಾಮ್ಯಕರ್ಮಗಳಲ್ಲಿ ಆಸಕ್ತರಾಗಿ, ಅವುಗಳು ಕೊಡತಕ್ಕ ಫಲಕ್ಕಿಂತ ಅಧಿಕವಾದ ಶ್ರೇಯಸ್ಸುಯಾವುದೂ ಇಲ್ಲವೆಂಬ ಅಜ್ಞಾನಯುಕ್ತರಾಗಿ, ವೇದಗಳಲ್ಲಿ ಇಂತವುಗಳನ್ನು ಉಪಪಾದಿಸಿರುವದನ್ನೇ ಪರಮಾರ್ಥವೆಂದು ನಂಬಿದವರಾಗಿ, ಪುನಃಪುನಃ ಸಂಸೃತಿಯ ಮಾರ್ಗವನ್ನೇ ಆಶ್ರಯಿಸುತ್ತಾರೆ ; ಇದು ಅಜ್ಞಾನದ ವಿಜೃಂಭಣೆ ಯೆಂದು ಹೇಳುತ್ತಾರೆ. **ಯಾಮಿಮಾಂ** - ಯಾವ ಈ ವಿಧವಾದ, **ಪುಷ್ಪಿತಾಂ** ಎಂದರೆ **ಪುಷ್ಪಮಾತ್ರ ಫಲಾಂ**-ಪುಷ್ಪಮಾತ್ರವೇ ಫಲವಾಗಿವುಳ್ಳ, ಇದರಭಿಪ್ರಾಯವನ್ನು ತಿಳಿಸುತ್ತಾರೆ— **ಆಪಾತರಮಣೀಯಾಂ** - ಮೇಲೆ ನೋಡುವವಕ್ಕೆ ಮಾತ್ರ .ರಮಣೀಯವಾಗಿರುವಂತಹ ಸರಿ

ಭಾ. ಯಾ ಮಿಮಾಂ ಪುಷ್ಪಿತಾಂ–ಪುಷ್ಪಮಾತ್ರಫಲಾಂ ಆಪಾತರಮಣೀಯಾಂ ವಾಚ ಮವಿಪಶ್ಚಿತೋಽಲ್ಪಜ್ಞಾಃ ಭೋಗೈಶ್ವರ್ಯಗತಿಂ ಪ್ರತಿವರ್ತಮಾನಾಂ ಪ್ರವದನ್ತಿ, ವೇದ ವಾದ ರತಾಃ-ವೇದೇಷು ಯೇ ಸ್ವರ್ಗಾದಿ ಫಲವಾದಾಃ ತೇಷು ಸಕ್ತಾಃ,ನಾನ್ಯದಸ್ತೀತಿ ವಾದಿ ನಃ-ತತ್ವಜ್ಞಾತಿ ರೇಕೇಣ ಸ್ವರ್ಗಾದೇ ರಧಿಕಂ ಫಲಂ ನಾಸ್ತ್ಯದಸ್ತೀತಿ ವಾದಿನಃ, ಕಾಮಾ ತ್ಮಾನಃ – ಕಾಮಪ್ರವಣ ಮನಸಃ, ಸ್ವರ್ಗಪರಾಃ-ಸ್ವರ್ಗ ಪರಾಯಣಾಃ, ಸ್ವರ್ಗಾದಿ ಫಲಾ ವಸಾನೇ ಪುನರ್ಜನ್ಮ ಕರ್ಮಾಖ್ಯಫಲಪ್ರದಾಂ, ಕ್ರಿಯಾ ವಿಶೇಷ ಬಹುಳಾಂ–ತತ್ವಜ್ಞಾನ ರಹಿತತಯಾ ಕ್ರಿಯಾವಿಶೇಷ ಪ್ರಚುರಾಂ, ಭೋಗೈಶ್ವರ್ಯಗತಿಂ ಪ್ರತಿ ವರ್ತಮಾನಾಂ

ಯಾದ ಫಲವೇನೂ ಇಲ್ಲವೆಂಬ ಭಾವವು, ವಾಚಂ - ಮಾತನ್ನು, ಅವಿಪಶ್ಚಿತಃ ಎಂದರೆ ಅಲ್ಪ ಜ್ಞರು, ವಿವಿಧಂ ಪಶ್ಯಚ್ಚಿತ್ತ್ವಂಹಿ - ವಿಪಶ್ಚಿತ್ತ್ವಂ, ಯಾವುದು ಅಲ್ಪಾಸ್ಥಿರ ಫಲಪ್ರದವು, ಯಾವುದು ನಿರತಿಶಯ ಶಾಶ್ವತ ಫಲಪ್ರದವು, ಹೀಗೆ ವೈಲಕ್ಷಣ್ಯಯುಕ್ತ ಜ್ಞಾನವುಳ್ಳವರು–ವಿಪ ಶ್ಚಿತ್ತರು, ಹಾಗಲ್ಲವವರು ಅವಿಪಶ್ಚಿತ್ತರು - ಅಜ್ಞರು ಎಂಬ ಭಾವವು, ಭೋಗೈಶ್ವರ್ಯಗಳ, ಗತಿಂ ಪ್ರತಿ - ಮಾರ್ಗವನ್ನು ಕುರಿತು, ವರ್ತಮಾನಾಂ - ಇರುವಂಥಾದ್ದನ್ನಾಗಿ, ಪ್ರವದಂತಿ - ಹೇಳು ತ್ತಾರೆಯೋ, ಅಂತಹ ಮಾತಿನಿಂದ ಮೋಹಿತರಾದ ವ್ಯವಸಾಯಾತ್ಮಿಕವಾದ ಬುದ್ಧಿಯು ಉಂಟಾಗುವದಿಲ್ಲವೆಂಬದಾಗಿ ಮುಂದಕ್ಕೆ ಅನ್ವಯವು. ಆ ಅಲ್ಪಜ್ಞರೆಂತವರೆಂದರೆ ಹೇಳು ತ್ತಾರೆ, ವೇದವಾದರತಾಃ ಎಂದರೆ ವೇದೇಷು ಯೇ ಸ್ವರ್ಗಾದಿ ಫಲವಾದಾಃ - ವೇದಗಳಲ್ಲಿ ಕರ್ಮ ಭಾಗಗಳಲ್ಲಿ ಯಾವ ಸ್ವರ್ಗಾದಿ ಫಲಗಳುಂಟೆಂಬ ವಾದಗಳಿವೆಯೋ ; ವೇದಗಳಲ್ಲಿ ಎಲ್ಲಾ ಭಾಗಗಳೂ ನಿಂದಿತವಲ್ಲವು, ಪರಮಾತ್ಮೋಪಾಸನವೇ ಮೊದಲಾದವುಗಳನ್ನುಪಪಾದಿಸುವ ಭಾಗಗಳು ತುಂಬಾ ಅಮೋಘವಾದವು, ಯಾವ ಭಾಗವು ಗ್ರಾಹ್ಯವಲ್ಲದುದು ಎಂದು ತಿಳಿಸುವ ದಕ್ಕಾಗಿ ವೇದೇಷು ಯೇ ಸ್ವರ್ಗಾದಿ ಫಲವಾದಾಃ ಎಂಬ ವ್ಯಾಖ್ಯಾನವು; ಆದುದರಿಂದ ಇಲ್ಲಿ ವೇದೇಷು ಎಂಬುದರಿಂದ ವೇದಗಳಲ್ಲಿ ಕರ್ಮಭಾಗವನ್ನು ಕುರಿತು ಹೇಳುವ . ಸಂದ ರ್ಭಗಳಲ್ಲಿ ಎಂಬರ್ಥವು. ತೇಷುಸಕ್ತಾಃ - ಅವುಗಳಲ್ಲಿ ಶ್ರದ್ಧೆಯುಳ್ಳವರು, ನ್ಯಾನ್ಯದಸ್ತೀತಿ ವಾದಿನಃ ಎಂದರೆ, ಸ್ವರ್ಗಾದೇ ರಧಿಕಂ ಫಲಂ ನಾನ್ಯದಸ್ತೀತಿ ವದನ್ತಃ - ಸ್ವರ್ಗಾದಿಗಳಿಗಿಂತ ಅಧಿಕವಾದ ಫಲವು ಬೇರೆ ಇಲ್ಲವೆಂದು ಹೇಳುವವರು. ಕಾಮಾತ್ಮಾನಃ ಎಂದರೆ ಕಾಮಪ್ರವಣ ಮನಸಃ - ಕಾಮುಗಳಲ್ಲೇ ಸಕ್ತವಾದ ಮನಸ್ಸುಳ್ಳವರು, ಸ್ವರ್ಗಪರಾಃ - ಎಂದರೆ ಸ್ವರ್ಗಪರಾ ಯಣಾಃ - ಸ್ವರ್ಗವೇ ಮುಖ್ಯ ಪ್ರಾಪ್ಯವೆಂದು ತಿಳಿದವರು, ಇದರಿಂದ ಇವರುಗಳು ಮೋಕ್ಷ ವಿಮುಖರು ಎಂಬುವ ತಾತ್ಪರ್ಯವು, ಇಂತವರು ಏನನ್ನುಪದೇಶಿಸುವರು ಎಂದರೆ ಹೇಳುತ್ತಾರೆ— ಸ್ವರ್ಗಾದಿಫಲಾವಸಾನೇ - ಸ್ವರ್ಗಾದಿ ಫಲಗಳು ಮುಗಿದನಂತರ, ಪುನರ್ಜನ್ಮಕರ್ಮಾಖ್ಯಫಲ ಪ್ರದಾಂ - ಪುನಃ ಜನ್ಮ ಕರ್ಮಗಳೆಂಬ ಫಲವನ್ನು ಕೊಡುವ, ಹಿಂದೆ ಕಾಮ್ಯ ಕರ್ಮ ವಿಷಯ ವಾದ ಬುದ್ಧಿಗಿಂತಲೂ, ಫಲಾಭಿಸಂಧಿ ರಹಿತ ಮೋಕ್ಷಸಾಧನ ಭೂತವಾಗಿರುವ ಕರ್ಮವಿಷಯ ವಾದ ಬುದ್ಧಿಯು ವಿಲಕ್ಷಣವಾದುದೆಂದು ಹೇಳಿ, ಈಗ ಇಂತಹ ಅಲ್ಪಾಸ್ಥಿರ ಫಲಪ್ರದಗಳಾದ ಕಾಮ್ಯ ಕರ್ಮಗಳಲ್ಲಿ ವೈರಾಗ್ಯ ಉಂಟಾಗುವದಕ್ಕಾಗಿ ಅಂತಹ ಕಾಮ್ಯಕರ್ಮಾಧಿಕಾರಿಗಳನ್ನು ನಿಂದಿಸುತ್ತಾರೆ. ಇದು ಯಾಮಿಮಾಂ ಪುಷ್ಪಿತಾಂ ವಾಚಂ ಎಂಬುದಕ್ಕೆ ವಿಶೇಷಣವು, ಕ್ರಿಯಾವಿಶೇಷ ಪ್ರಚುರಾಂ ಎಂದರೆ ತತ್ವಜ್ಞಾನ ರಹಿತ ತಯಾ - ಅವರುಗಳಿಗೆ ತತ್ವಜ್ಞಾನ ವಿಲ್ಲದಿರುವದರಿಂದ, ಕ್ರಿಯಾವಿಶೇಷ ಪ್ರಚುರಾಂ - ಬರೀ ಕಾರ್ಯಕಲಾಪದಿಂದ ತುಂಬಿರುವ, ಇದರಿಂದ ಜ್ಞಾನವಿಲ್ಲದ ವೃಥಾಯಾಸಕೊಡುವ ಕಾರ್ಯಕಲಾಪವುಳ್ಳ ಎಂಬ ಭಾವವು, ಇಂತಹ

**ಭಾ. ಯಾಮಿಮಾಂ ಪುಷ್ಪಿತಾಂ ವಾಚಂ ಯೇ ಪ್ರವದಂತೀತಿ ಸಂಬಂಧಃ ; ತೇಷಾಂ ಭೋಗೈಶ್ವರ್ಯ ಪ್ರಸಕ್ತಾನಾಂ ತಯಾ ವಾಚಾ ಭೋಗೈಶ್ವರ್ಯ ವಿಷಯಯಾ ಅಪಹೃತ ಜ್ಞಾನಾನಾಂ, ಯಥೋದಿತ ವ್ಯವಸಾಯಾತ್ಮಿಕಾ ಬುದ್ಧಿ ಸ್ಸಮಾಧೌ–ಮನಸಿ, ನವಿಧೀಯತೇ**

---

**ಭೋಗೈಶ್ವರ್ಯಗತಿಂ ಪ್ರತಿ ವರ್ತಮಾನಾಂ ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತಿ**– ಭೋಗೈಶ್ವರ್ಯ ಮಾರ್ಗ್ಗಕುರಿತ ಯಾವ ಈ ಆಪಾತ ರಮಣೀಯವಾದ ಮಾತನ್ನು ಹೇಳುತ್ತಾರೋ, ಎಂದರೆ ವೇದದಲ್ಲಿ ಕಾಮ್ಯ ವ್ರತಾದಿಗಳನ್ನು ಬೋಧಿಸುವ ವಿಧಿವಾಕ್ಯವು ಉಪಾದೇಯವೆಂದು ಹೇಳುತ್ತಾರೋ ಎಂಬ ತಾತ್ಪರ್ಯವು, **ಇತಿ ಸಂಬಂಧಃ** - ಹೀಗೀಗ ಅನ್ವಯವು, **ತೇಷಾಂ** - ಅಂತಹ, **ಭೋಗೈಶ್ವರ್ಯ ಪ್ರಸಕ್ತಾನಾಂ** - ಭೋಗೈಶ್ವರ್ಯಗಳಲ್ಲೇ ಆಸಕ್ತರಾದ, **ತಯಾ ವಾಚಾ** - ಅಂತಹ ಮೋಸಗೊಳಿಸುವ ವಾಕ್ಕಿನಿಂದ, ಮುಂದೆ **ಅಪಹೃತಚೇತಸಾಂ** ಎಂಬುದಕ್ಕೆ ಅರ್ಥ ಬರೆಯುತ್ತಾರೆ—**ಭೋಗೈಶ್ವರ್ಯ ವಿಷಯಯಾ** - ಆ ವಾಕ್ಕು ಭೋಗೈಶ್ವರ್ಯಗಳನ್ನು ಕುರಿತವಾದುದರಿಂದ, **ಅಪಹೃತಜ್ಞಾನಾನಾಂ** - ಅಪಹರಿಸಲ್ಪಟ್ಟ ಜ್ಞಾನವುಳ್ಳವರಿಗೆ, **ಯಥೋದಿತ ವ್ಯವಸಾಯಾತ್ಮಿಕಾಬುದ್ಧಿಃ**–ಹಿಂದೆ ನಾನು ನಿನಗೆ ಉಪದೇಶಿಸಿದ ಆತ್ಮ ಯಾಥಾತ್ಮ್ಯ ನಿಶ್ಚಯವುಳ್ಳ ಬುದ್ಧಿಯು, **ಸಮಾಧೌ** ಎಂದರೆ ಮನಸಿ - ಮನಸ್ಸಿನಲ್ಲಿ, **ನವಿಧೀಯತೇ** ಎಂದರೆ **ನೋತ್ಪದ್ಯತೇ** - ಉಂಟಾಗುವದಿಲ್ಲವು, ಇಲ್ಲಿ **ಸ್ವರ್ಗಾದಿ ಫಲಾವಸಾನೇ ಪುನರ್ಜನ್ಮ ಕರ್ಮಾಖ್ಯಫಲ ಪ್ರದಾಂ** ಎಂಬ ಭಾಷ್ಯವು, ಮುಂದೆ ಗೀ. ೮. ೧೬. ನೆಯ ಶ್ಲೋಕದಲ್ಲಿ **ಆಬ್ರಹ್ಮ ಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ**" ಎಂದು ಹೇಳಿರುವದರ, ಮತ್ತು "**ಸ್ವರ್ಗೇಽಪಿ ಪಾತಭೀತಸ್ಯ ಕ್ಷಯಿಷ್ಣೋರ್ನಾಸ್ತಿ ನಿರ್ವೃತಿಃ**" (ವಿ. ಪು. ೬. ೫. ೫೦) ಎಂಬ ವಿಷ್ಣು ಪುರಾಣವಾಕ್ಯಗಳನ್ನು ಸ್ಮರಿಸುವ ಹಾಗೆ ಮಾಡುತ್ತದೆ. ಹೀಗೆ ಪುನರಾವೃತ್ತಿಯೂ ಈ ಕರ್ಮಭೂಮಿ ಪ್ರವೇಶವೂ ಸ್ವರ್ಗಪ್ರಾಪ್ತಿಯುಂಟಾದವನಿಗೆ ಉಂಟೆಂಬುದು ಕರ್ಮಶೇಷ ವಿರುವದರಿಂದ ಎಂದು ಭಾವಿಸತಕ್ಕದ್ದು. ಆ ಕರ್ಮಶೇಷಕ್ಕೆ ಅನುಗುಣವಾಗಿ ಈತನಿಗೆ ಉತ್ಕೃಷ್ಟಾಪಕೃಷ್ಟ ಜನ್ಮಗಳುಂಟೆಂಬುದು ಸಿದ್ಧವು; ಏಕೆಂದರೆ ಶ್ರುತಿಯಲ್ಲಿ ಹಾಗೆಯೇ ಹೇಳಿರುತ್ತದೆ "**ಪ್ಲವಾಹ್ಯೇತೇ ಅಧೃಢಾ ಯಜ್ಞರೂಪಾಃ ಅಷ್ಟಾದಶೋಕ್ತಮವರಂ ಯೇಷುಕರ್ಮ । ಏತಚ್ಛ್ರೇಯೋಯೇಽಭಿನನ್ದನ್ತಿ ಮೂಢಾ ಜರಾಮೃತ್ಯೂ ತೇ ಪುನರೇವಾಪಿಯನ್ತಿ**" (ಮುಂ. ೧. ೨. ೭) ಈ ಯಜ್ಞರೂಪ ಕರ್ಮಗಳು ಭದ್ರವಲ್ಲದ ತೆಪ್ಪಗಳು, ಆದುದರಿಂದ ಸಂಸಾರ ಸಮುದ್ರದಲ್ಲೇ ಮುಳುಗಿಸುವುಗಳು ಅಂತವರಿಗೆ ಪುನಃ ಜನ್ಮಮೃತ್ಯುಗಳು ತಪ್ಪಿದ್ದಲ್ಲವೆಂದು ಹೇಳಲ್ಪಟ್ಟಿರುತ್ತದೆ. ಪುನಃ "**ತದ್ಯ ಇಹ ರಮಣೀಯ ಚರಣಾ ಅಭ್ಯಾಶೋಹ ಯತ್ತೇ ರಮಣೀಯಾಂ ಯೋನಿಮಾಪದ್ಯೇರನ್, ಬ್ರಾಹ್ಮಣ ಯೋನಿಂವಾ, ಕ್ಷತ್ರಿಯ ಯೋನಿಂವಾ, ವೈಶ್ಯ ಯೋನಿಂವಾ; ಅಥ ಯ ಇಹ ಕಪೂಯಚರಣಾಃ ಅಭ್ಯಾಶೋಹ ಯತ್ತೇ ಕಪೂಯಾಂ ಯೋನಿ ಮಾಪದ್ಯೇರನ್ ಶ್ವಯೋನಿಂವಾ ಸೂಕರ ಯೋನಿಂವಾ, ಚಂಡಾಲ ಯೋನಿಂವಾ**" (ಛಾಂ. ೫. ೧೦. ೭) ಕರ್ಮಶೇಷವು ಪುಣ್ಯರೂಪವಾಗಿದ್ದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಯೋನಿಗಳಲ್ಲಿ ಪುನರ್ಜನ್ಮಪ್ರಾಪ್ತಿಯೂ, ಕರ್ಮಶೇಷವು ಪಾಪರೂಪವಾಗಿದ್ದರೆ, ನಾಯಿ, ಹಂದಿ, ಚಂಡಾಲ ಯೋನಿಗಳಲ್ಲಿ ಪುನರ್ಜನ್ಮ ಪ್ರಾಪ್ತಿಯೂ ಹೇಳಲ್ಪಟ್ಟಿರುತ್ತದೆ. ಜನ್ಮ ಕರ್ಮ ಮೊದಲಾದವುಗಳಿಗೆ ಕರ್ಮಶೇಷವೇ ಕಾರಣವೆಂದು ಸ್ಮೃತಿಗಳೂ ಸಹ ಹೇಳುತ್ತವೆ. "**ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃಪ್ರೇತ್ಯ ಸ್ವಕರ್ಮಫಲನುನುಭೂಯ ತತಶ್ಶೇಷೇಣ ವಿಶಿಷ್ಟ ದೇಶಜಾತಿ ಕುಲರೂಪಾಯುಃ ಶ್ರುತ ವಿತ್ತವೃತ್ತ ಸುಖಮೇಧಸೋ ಜನ್ಮ ಪ್ರತಿಪದ್ಯನ್ತೇ**" (ಗೌತಮ ಧರ್ಮಸೂತ್ರೇ ೨. ೧೧. ೧೦)

ಭಾ. ನೋತ್ಪದ್ಯತೇ; ಸಮಾಧೀಯತೇಽಸ್ಮಿನ್ನಾತ್ಮಜ್ಞಾನಮಿತಿ ಸಮಾಧಿರ್ಮನಃ, ತೇಷಾಂ ಮನಸ್ಯಾತ್ಮಯಾಥಾತ್ಮ್ಯ ನಿಶ್ಚಯ ಪೂರ್ವಕ ಮೋಕ್ಷಸಾಧನ ಭೂತ ಕರ್ಮ ವಿಷಯಾ ಬುದ್ಧಿಃ ಕದಾಚಿದಪಿ ನೋತ್ಪದ್ಯತೇ ಇತ್ಯರ್ಥಃ. ಅತಃ ಕಾಮ್ಯೇಷು ಕರ್ಮಸು ಮುಮುಕ್ಷುಣಾ ನ ಸಙ್ಗಃ ಕರ್ತ್ತವ್ಯಃ ॥ ೪೨ ॥ ೪೩ ॥ ೪೪ ॥

ಫಲಕಾಮನೆಯಿಂದ ಕರ್ಮಾನುಷ್ಠಾನಮಾಡಿದವರು ಆ ಕರ್ಮ ಫಲವನ್ನನುಭವಿಸಿ, ಇನ್ನೂ ಇರುವ ಕರ್ಮಶೇಷಾನುಗುಣವಾಗಿ,ಜಾತಿ, ಕುಲ, ರೂಪ,ಆಯುಸ್ಸು ಇವೇ ಮೊದಲಾದವುಗಳನ್ನುಹೊಂದಿದ ಜನ್ಮಗಳನ್ನುಹೊಂದುವರು;ಇತ್ಯಾದಿ ಪ್ರಮಾಣಗಳುಂಟು. ಹೀಗೆ ನಶ್ವರಗಳಾದ ಭೋಗೈಶ್ವರ್ಯಗಳ ಮಾತುಗಳಿಗೆ ಬೆರಗಾದವರಿಗೆ ಆತ್ಮ ಯಾಥಾತ್ಮ್ಯ ಜ್ಞಾನ ಉಂಟಾಗುವದಿಲ್ಲವೆಂದು ಹೇಳಿದುದ ರಿಂದ, ಸರಿಯಾದ ಜ್ಞಾನವುಳ್ಳವರಿಗಾದರೋ ಏಕಫಲ ಸಾಧನರೂಪವಾದ ಏಕ ಶಾಸ್ತ್ರಾರ್ಥರೂಪ ವಾದ ಜ್ಞಾನವಿರುವದರಿಂದ ಅವರಿಗೆ ವ್ಯವಸಾಯಾತ್ಮಿಕಾಬುದ್ಧಿಯುಂಟಾಗುತ್ತದೆ. ಈ ಭೋಗೈ ಶ್ವರ್ಯಗಳೆಲ್ಲಾ ನಶ್ವರಗಳೆಂದು ತಿಳಿದು ಅವುಗಳು ಪುನರ್ಜನ್ಮ ಕರ್ಮಗಳಿಗೆ ಕಾರಣವಾಗುತ್ತ ವೆಂಬ ಜ್ಞಾನವುಳ್ಳವರಿಗಾದರೋ, ಕ್ರಿಯಾವಿಶೇಷ ಬಾಹುಳ್ಯದಲ್ಲಿ ಮನಸ್ಸಿರುವದಿಲ್ಲವು. ಇಲ್ಲಿ **ತತ್ವಜ್ಞಾನ ರಹಿತತಯಾ** ಎಂಬ ಪ್ರಯೋಗದಿಂದ ತೋರುವ ಅಭಿಪ್ರಾಯವೇನೆಂದರೆ, ಕಾಮ್ಯ ಕರ್ಮಗಳು ಆತ್ಮ ಯಾಥಾತ್ಮ್ಯ ತತ್ವಜ್ಞಾನವಿಲ್ಲದೆ ಫಲಾಭಿಸಂಧಿಯಿಂದ ಅನುಷ್ಠಿಸಿದರೆ ಬಂಧಕ ಗಳೇವಿನಾ, ಅವುಗಳನ್ನೂ ತತ್ವಜ್ಞಾನದೊಂದಿಗೆ ಫಲಾಭಿಸಂದಿಯಿಲ್ಲದೆ ಭಗವತ್ಪ್ರೀತ್ಯರ್ಥವಾಗಿ ಅನುಷ್ಠಿಸಿದರೆ ಪ್ರತ್ಯವಾಯವೇನೂ ಯಿಲ್ಲದೆ, ಮೋಕ್ಷಸಾಧನವಾಗಿಯೇ ಪರಿಣಮಿಸುತ್ತದೆಂಬ ಭಾವವು ದ್ಯೋತಿತವು. ಅಂತಹ ಜ್ಞಾನ ಶೂನ್ಯರಿಗಾದರೋ ಕ್ರಿಯಾವಿಶೇಷ ಬಾಹುಳ್ಯವಿರುವ ದರಿಂದ **ತತ್ವಜ್ಞಾನ ರಹಿತತಯಾ** ಎಂದು ಇಲ್ಲಿ ಪ್ರಯೋಗಿಸಲ್ಪಟ್ಟಿತು. ಇಲ್ಲಿ ಸಮಾಧಿ ಎಂದರೆ ಮನಸ್ಸೆಂದು ವ್ಯಾಖ್ಯಾನ ಮಾಡಿ ಅದು ಹೇಗೆಂದುಪಪಾದಿಸುತ್ತಾರೆ. **ಸಮಾಧೀಯತೇ** ಇತ್ಯಾದಿ, ಇದರಲ್ಲಿ ಆತ್ಮಜ್ಞಾನವು ಇಡಲ್ಪಡುವದರಿಂದ **ಸಮಾಧಿ** ಎಂದರೆ ಮನಸ್ಸು, **ತೇಷಾಂ ಮನಸಿ** - ಈ ಮೇಲೆ ಹೇಳಿದಂತಹ ಕಾಮ್ಯ ಕರ್ಮಾಧಿಕಾರಿಗಳ ಮನಸ್ಸಿನಲ್ಲಿ, **ವ್ಯವಸಾಯಾ ತ್ಮಿಕಾಬುದ್ಧಿಃ** - ಎಂಬುದಕ್ಕೆ ಅರ್ಥ ಬರೆಯುತ್ತಾರೆ, ·ಆತ್ಮಯಾಥಾತ್ಮ್ಯ ನಿಶ್ಚಯಪೂರ್ವಕವಾದ, ಮೋಕ್ಷಕ್ಕೆ ಸಾಧನಭೂತವಾದ, **ಕರ್ಮವಿಷಯಾಬುದ್ಧಿಃ** - ಕರ್ಮಾನುಷ್ಠಾನದ ಬುದ್ಧಿಯೂ, **ಕದಾಚಿದಪಿ** - ಎಂದಿಗೂ, **ನೋತ್ಪದ್ಯತೇ ಇತ್ಯರ್ಥಃ** – ಉಂಟಾಗುವದಿಲ್ಲವೆಂಬ ಭಾವವು, ಇದು ಮೂಲದ ನವಿಧೀಯತೇ ಎಂಬುದರರ್ಥವು, ಇಲ್ಲಿ **ಕದಾಚಿದಪಿ ನೋತ್ಪದ್ಯತೇ** ಎಂದು ಏಕೆ ಹೇಳಿದರು ಎಂದರೆ ಕಾಮದಲ್ಲಿ ಸಕ್ತವಾದ ಮನಸ್ಸಿಗೆ ವೈರಾಗ್ಯ ಹುಟ್ಟುವದು ದುರ್ಲಭವು, **"ನಜಾತು ಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ। ಹವಿಷಾಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ"** ಎಂದರೆ ಕಾಮವು ಆ ಕಾಮದ ಉಪಭೋಗದಿಂದ ಎಂದಿಗೂ ಶಮನ ಹೊಂದುವದಿಲ್ಲವು, ಎಂದರೆ ಪುನಃಪುನಃ ಕಾಮವು ಉಪಭೋಗದಿಂದ ವೃದ್ಧಿಯನ್ನೇ ಹೊಂದುತ್ತದೆ, ಹೇಗೆಂದರೆ, ಅಗ್ನಿಗೆ ಹವಿಸ್ಸಾದ ಆಜ್ಯವನ್ನು ಕೊಟ್ಟಷ್ಟೂ ಹೇಗೆ ಅದು ಅಭಿವೃದ್ಧಿಯನ್ನು ಹೊಂದುತ್ತದೋ ಹಾಗೆ ಎಂಬಭಾವವು. ಇದರಿಂದ ಕಾಮಾಸಕ್ತ ಮನಸ್ಸನ್ನು ಕಾಮ ಸಙ್ಗವಿವರ್ಜಿತವಾಗಿ ಮಾಡುವದು ಅತಿ ದುರ್ಲಭವೆಂಬ ಭಾವವು. ಈ ಮೂರು ಶ್ಲೋಕಗಳಿಂದ ತೋರಿಬರುವ ಸಾರಾಂಶವನ್ನು ಬರೆಯುತ್ತಾರೆ:— **ಅತಃ**-ಆ ಕಾರಣದಿಂದ, **ಕಾಮ್ಯೇಷು ಕರ್ಮಸು**- ಕಾಮ್ಯ ಕರ್ಮಗಳಲ್ಲಿ, **ಮುಮುಕ್ಷುಣಾ**-ಮೋಕ್ಷಾರ್ಥಿಯಿಂದ, **ನಸಙ್ಗಃ ಕರ್ತ್ತವ್ಯಃ**-ಫಲಕ್ಕಾಗಿ ಸಂಬಂಧ ವನ್ನು ·ಮಾಡತಕ್ಕದ್ದಲ್ಲವು. ಮೋಕ್ಷಾರ್ಥಿಯು ಈ ಕಾಮ್ಯ ಕರ್ಮಗಳನ್ನು ತ್ಯಜಿಸತಕ್ಕದ್ದೆಂಬ

**ಭಾ. ಅವ. ಏವ ಮಲ್ಪಫಲಾನಿ ಪುನರ್ಜನ್ಮ ಪ್ರಸವಾನಿ ಕರ್ಮಾಣಿ ಮಾತಾಪಿತೃ ಸಹಸ್ರೇಭ್ಯೋಽಪಿ ವತ್ಸಲ ತರತಯಾ ಆತ್ಮೋಜ್ಜೀವನೇ ಪ್ರವೃತ್ತಾ ವೇದಾಃ ಕಿಮರ್ಥಂ ವದನ್ತಿ, ಕಥಂ ವಾ ವೇದೋದಿತಂ ತ್ಯಾಜ್ಯತಯೋಚ್ಯತ ಇತ್ಯತ ಆಹ :—**

---

ಭಾವವು. ವೈರಾಗ್ಯ ಉಂಟಾದ ಮೋಕ್ಷಾರ್ಥಿಗೆ ಕಾಮ್ಯಕರ್ಮಗಳಿಂದಾಗತಕ್ಕದ್ದೇನಿದೆ? **ಕ್ರಿಯಾವಿಶೇಷಬಹುಳಾಂ** ಎಂಬ ಪ್ರಯೋಗದಿಂದ ತೋರುವ ಅಭಿಪ್ರಾಯವೇನೆಂದರೆ ಮುಮುಕ್ಷುವಲ್ಲದ ಕಾಮ್ಯಕರ್ಮಾನುಷ್ಠಾನ ಮಾಡುವವನಿಗೆ ಆ ಕರ್ಮಗಳು ಬಹು ಶ್ರಮಸಾಧ್ಯವು, ಫಲವು ಅಲ್ಪಾಸ್ಥಿರವಾದುದೂ ಎಂಬುದೂ, ಮುಮುಕ್ಷುವಾದವನಿಗಾದರೋ ಕರ್ಮಯೋಗ ಕರ್ಮಾನುಷ್ಠಾನವು ಅಷ್ಟು ದೇಹಶ್ರಮಯುಕ್ತವಾದುದೂ ಅಲ್ಲವು, ಮತ್ತು ನಿರತಿಶಯ ಸುಖಪ್ರಾಪ್ತಿಯು ಪರ್ಯವಸಾನದಲ್ಲಿ ಎಂಬುದೂ, ದ್ಯೋತಿತವು. ಸಮಾಧಿ ಶಬ್ದಕ್ಕೆ ಬುದ್ಧಿ ಎಂಬರ್ಥವು ಸಮಂಜಸವಾಗುವದಿಲ್ಲವಾದುದರಿಂದ, **ಸಮಾಧೌ**ಎಂಬುದಕ್ಕೆ **ಮನಸಿ** ಎಂಬದಾಗಿ ಭಾಷ್ಯವು; ಅದು ಹೇಗೆ ಮನಸ್ಸೆಂಬರ್ಥವೆಂದರೆ ವ್ಯುತ್ಪತ್ತಿ ಮೂಲಕವಾಗಿಎಂದು **ಸಮಾಧೀಯತೇ ಅಸ್ಮಿನ್ ಆತ್ಮಜ್ಞಾನಂ** - ಆತ್ಮಜ್ಞಾನವು ಅದರಲ್ಲಿ ಇಡಲ್ಪಡುತ್ತದೆ, ಆದುದರಿಂದ ಸಮಾಧಿಯು ಮನಸ್ಸು. ಎಂದು ವ್ಯಕ್ತಪಡಿಸಿರುತ್ತಾರೆ. ನಿಸ್ಸಙ್ಗತ್ವವೇ ಮೋಕ್ಷಹೇತುವು, ಸಙ್ಗತ್ವವು ಸಂಸ್ಕೃತಿಗೆ ಹೇತುವು ಎಂಬುದು ಮುಖ್ಯ ಭಾವವು. ಹೀಗೆ ಕಾಮ್ಯ ಕರ್ಮಗಳನ್ನು ನಿಂದಿಸಿದುದರ ಅಭಿಪ್ರಾಯವೇನೆಂದರೆ, ಮೋಕ್ಷಾರ್ಥಿಗೆ ಕಾಮ್ಯ ಕರ್ಮಾನುಷ್ಠಾನವು ಸರ್ವಾತ್ಮನಾ ಸರಿಯಲ್ಲವೆಂದು ಆದುದರಿಂದ **ನಸಙ್ಗಃ ಕರ್ತವ್ಯಃ** ಎಂದು ಉಪದೇಶಿಸಿರುತ್ತಾರೆ.

**ಭಾಷ್ಯಾವತಾರಿಕೆಯ ಅರ್ಥವು :—**ಮುಂದಿನ ಎರಡು ಶ್ಲೋಕಗಳಿಗೂ ಅವತಾರಿಕೆಯನ್ನನುಗ್ರಹಿಸುತ್ತಾರೆ. **ಏವಮಲ್ಪ ಫಲಾನಿ** - ಹೀಗೆ ಅಸ್ಥಿರವಾದುದರಿಂದ ಅಲ್ಪಫಲಗಳನ್ನುಳ್ಳ, ಹೇಗೆ ಅಲ್ಪ ಫಲಗಳೆಂಬುದನ್ನು ಮುಂದಿನ ವಿಶೇಷಣದಿಂದ ವ್ಯಕ್ತಪಡಿಸುತ್ತಾರೆ, **ಪುನರ್ಜನ್ಮ ಪ್ರಸವಾನಿ** - ಪುನರ್ಜನ್ಮಗಳನ್ನೇ ಹೂವಾಗಿಯುಳ್ಳ, **ಕರ್ಮಾಣಿ** - ಮಹಾ ಕಾನನದಲ್ಲಿರುವ ವೃಕ್ಷಗಳ ಹಾಗಿರುವ ಈ ಕಾಮ್ಯಕರ್ಮಗಳನ್ನು, **ಮಾತಾಪಿತೃಸಹಸ್ರೇಭ್ಯೋಽಪಿ** - ಈ ಜೀವನಿಗೆ ಪ್ರಾಪ್ತವಾಗಿರುವ ಒಂದು ಸಾವಿರ ತಂದೆ ತಾಯಿಗಳಿಗಿಂತಲೂ, **ವತ್ಸಲತರತಯಾ** - ಅತಿಶಯಿತ ವಾತ್ಸಲ್ಯಹೊಂದಿರುವದರಿಂದ, **ಆತ್ಮೋಜ್ಜೀವನೇ ಪ್ರವೃತ್ತಾಃ** - ಲೋಕದ ತಾಯಿ ತಂದೆಗಳ ಹಾಗೆ ದೇಹಪೋಷಣೆ ಸೌಖ್ಯ ಇವುಗಳಲ್ಲಿ ಮಾತ್ರವೇ ಪ್ರವೃತ್ತಿ ಯಿಲ್ಲದೆ, ಆತ್ಮವನ್ನೇ ಸಂರಕ್ಷಿಸುವದರಲ್ಲಿ ಪರಮಾದರಯುಕ್ತವಾದ ಮತ್ತು ಲೋಕದ ತಾಯಿ ತಂದೆಗಳ ಹಾಗೆ ಯಾವಾಗಲಾದರೂ ಹಿತೋಪದೇಶ ದೇಹಪೋಷಣೆಯಲ್ಲಿರದೆ, ಸದಾ ಹಿತೋಪದೇಶ, ಆತ್ಮೋಜ್ಜೀವನ ಇವುಗಳಲ್ಲಿ ಪರಮಾದರಪೂರ್ವಕ ಪ್ರವೃತ್ತಿಯುಳ್ಳ, **ವೇದಾಃ** - ವೇದಗಳು, **ಕಿಮರ್ಥಂ ವದನ್ತಿ** – ಏತಕ್ಕಾಗಿ ಹೇಳುತ್ತವೆ? ಏನು ಚೇತನನಿಗೆ ಮೋಸಮಾಡುವದಕ್ಕಾಗಿಯೇ ಅಥವಾ ಅತನನ್ನು ವಂಚಿಸಿ ಇನ್ನು ಯಾವ ಕೆಲಸವನ್ನಾದರೂ ಮಾಡಿಸುವದಕ್ಕಾಗಿಯೇ, ಇಂತಹ ಅಲ್ಪಾಸ್ಥಿರಫಲವುಳ್ಳ ಕಾಮ್ಯಕರ್ಮಗಳನ್ನು ಕುರಿತು ವೇದಗಳು ಹೇಳುತ್ತವೆ? ಎಂಬ ತಾತ್ಪರ್ಯವು; ಮತ್ತು **ವೇದೋದಿತಂ**-ಅಂತಹ ವೇದಗಳಲ್ಲಿ ಹೇಳಲ್ಪಟ್ಟಿರುವದು, **ತ್ಯಾಜ್ಯತಯೋಚ್ಯತೇ**- ನಿಂದಿಸಿ ಅವುಗಳು ತ್ಯಜಿಸತಕ್ಕವುಗಳೆಂದು ಏನಾದರೂ ಹೇಳಲ್ಪಟ್ಟಿವೆಯೇ? **ಇತ್ಯತ ಆಹ**-ಆದುದರಿಂದ ಈ ಶಙ್ಕೆಗಳಿಗೆ ಸಮಾಧಾನವಾಗಿ ಮುಂದಿನ ಎರಡು ಶ್ಲೋಕಗಳ ಮೂಲಕ ಶ್ರೀಕೃಷ್ಣಭಗವಾನರವರು ಹೇಳುತ್ತಾರೆ. ವೇದವಿರುದ್ಧವೀಗ ತ್ಯಾಜ್ಯವು, ವೇದಗಳಲ್ಲಿ ಬಹುಕಲಾಪ ಮೂಲಕ ವಿಧಿಸಲ್ಪಟ್ಟ

ಮೂ. ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥ ೪೫.
ಯಾವಾನರ್ಥ ಉದಪಾನೇ ಸರ್ವತ ಸ್ಸಂಪ್ಲುತೋ ದಕೇ ।
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬.

ಈ ಕಾಮ್ಯಕರ್ಮಗಳು ಹೇಗೆ ತ್ಯಾಜ್ಯಗಳು? ಎಂಬುದು ಆಕ್ಷೇಪವು. ಇದಕ್ಕೆ ಸಮಾಧಾನವು ಮುಂದಿನಎರಡು ಶ್ಲೋಕಗಳಿಂದ ಹೇಳಲ್ಪಡುತ್ತದೆ.

**ಮೂಲಕ್ಕೆ ಅರ್ಥವು**:— ವೇದಗಳಲ್ಲಿ ಸತ್ವರಜಸ್ತಮೋಗುಣಗಳುಳ್ಳ ಮೂರುವಿಧ ಅಧಿಕಾರಿಗಳಿಗೂ ಬೇಕಾದ ವಿಷಯಗಳುಂಟು. ನೀನಾದರೋ ಸತ್ವಗುಣ ಪ್ರಾಚುರ್ಯವುಳ್ಳವನಾಗಿರುವದರಿಂದ ಮೋಕ್ಷಾರ್ಥಿಗೆ ವೇದಗಳಲ್ಲಿನ ಯಾವ ಅಂಶಗಳು ಬೇಕೋ ಅವುಗಳನ್ನು ಮಾತ್ರ ನೀನು ಪರಿಗ್ರಹಿಸತಕ್ಕದ್ದು. ಮಿಕ್ಕಿದ್ದೆಲ್ಲಾ ತ್ಯಾಜ್ಯವೆಂದುಪದೇಶಿಸುತ್ತಾರೆ. **ಹೇ ಅರ್ಜುನ** – ಧವಳ ಶಬ್ದವಾಚ್ಯನಾಗಿರುವದರಿಂದ ಶ್ರುತಿಯಲ್ಲಿ ಶುಕ್ಲವರ್ಣದಿಂದ ಹೇಳಲ್ಪಟ್ಟ ಸತ್ವಗುಣದ ಪ್ರಾಚುರ್ಯವುಳ್ಳ ಅರ್ಜುನನೇ, **ವೇದಾಃ** - ವೇದಗಳು, **ತ್ರೈಗುಣ್ಯ ವಿಷಯಾಃ** - ತ್ರಿಗುಣಗಳಾದ ಸತ್ವ ರಜಸ್ತಮೋಗುಣ ಪ್ರಾಚುರ್ಯವುಳ್ಳ ಅಧಿಕಾರಗಳನ್ನು ಕುರಿತು ಹೇಳುವಂತವುಗಳು; ಆದರೆ ನೀನಾದರೋ, **ನಿಸ್ತ್ರೈಗುಣ್ಯೋಭವ** - ಹಾಗೆ ಮೂರು ಗುಣಗಳ ಪ್ರಾಚುರ್ಯವುಳ್ಳವನು ಆಗಬೇಡ, ಆದರೆ ಸತ್ವಗುಣ ಪ್ರಾಚುರ್ಯವುಳ್ಳವನೂ ಆಗಬೇಡವೋ? ಎಂದರೆ ರಜಸ್ತಮೋಗುಣಗಳ ಪ್ರಾಚುರ್ಯವುಳ್ಳ ಸತ್ವಗುಣವು ಕಾರ್ಯಕಾರಿಯಾಗುವದಿಲ್ಲವಾದುದರಿಂದ ರಜಸ್ತಮೋಗುಣಗಳ ಪ್ರಾಚುರ್ಯವಿಲ್ಲದೆ, ಸತ್ವಗುಣದ ಪ್ರಾಚುರ್ಯಮಾತ್ರವುಳ್ಳವನಾಗೆಂಬ ಭಾವವು. ಈ ಅಭಿಪ್ರಾಯಗಳನ್ನೇ ಉತ್ತರಾರ್ಧದಿಂದ ವ್ಯಕ್ತಪಡಿಸುತ್ತಾರೆ. **ನಿರ್ದ್ವಂದ್ವಃ** - ರಜಸ್ತಮೋಗುಣಗಳಾಧಿಕ್ಯದಿಂದ ಸಂಸಾರ ದೆಶೆಯಲ್ಲಿ ಉಂಟಾಗುವ ಸುಖದುಃಖ ಶೀತೋಷ್ಣಾದಿ ದ್ವಂದ್ವಗಳಿಂದ ಬಿಡಲ್ಪಟ್ಟವನಾಗಿ, **ನಿತ್ಯಸತ್ವಸ್ಥಃ** - ಯಾವಾಗಲೂ ರಜಸ್ತಮೋಗುಣಗಳಿಗೆ ಸಿಕ್ಕದ ಸತ್ವಗುಣಾಧಿಕ್ಯವುಳ್ಳವನಾಗಿ, **ನಿರ್ಯೋಗಕ್ಷೇಮಃ** - ಐಹಿಕಗಳಲ್ಲಿ ಯೋಗಕ್ಷೇಮವಿಲ್ಲದವನಾಗಿ, ಯೋಗವೆಂದರೆ **ಅಪ್ರಾಪ್ತಸ್ಯ ಪ್ರಾಪ್ತಿಃ** - ಇಲ್ಲದಿರುವದನ್ನು ಹೊಂದುವದು, ಕ್ಷೇಮವೆಂದರೆ **ಪ್ರಾಪ್ತಸ್ಯ ಪರಿರಕ್ಷಣಂ** - ಪ್ರಾಪ್ತವಾಗಿರುವದರ ರಕ್ಷಣೆಯು, ಹೀಗೆ ಯೋಗಕ್ಷೇಮವನ್ನು ಐಹಿಕ ವಿಷಯಗಳಲ್ಲಿ ಹೊಂದಿರುವದು ರಜಸ್ತಮೋಗುಣಗಳ ಮಾಹಾತ್ಮ್ಯೆಯು. ಆದುದರಿಂದ **ನಿರ್ಯೋಗಕ್ಷೇಮಃ** - ಎಂದು ಹೇಳಿರುವದರಿಂದ ರಜಸ್ತಮೋಗುಣಗಳಿಗೆ ವಶನಾಗಕೂಡದೆಂದು ಹೇಳಲ್ಪಟ್ಟಿತು, **ಆತ್ಮವಾನ್** - ಜೀವಾತ್ಮ ಸ್ವರೂಪವನ್ನು ತಿಳದವನಾಗಬೇಕು, ಜ್ಞಾನತ್ವ ಆನಂದತ್ವ ಅಮಲತ್ವಾದಿಗಳುಳ್ಳವನೆಂದು ತಿಳಿಯಲು ಸತ್ವಗುಣಾಧಿಕ್ಯವಿಲ್ಲದೆ ಸಾಧ್ಯವಲ್ಲದುದರಿಂದ ಈತನು ಸತ್ವಪ್ರಾಚುರ್ಯವನ್ನು ಹೊಂದತಕ್ಕದ್ದು ಆವಶ್ಯಕವೆಂದು ಹೇಳಿದಂತಾಯಿತು. ॥ ೪೫ ॥ ಈ ಅಭಿಪ್ರಾಯವು ಮನಸ್ಸಿಗೆ ಚನ್ನಾಗಿ ಹಿಡಿಯುವದಕ್ಕಾಗಿ, ಒಂದು ನಿದರ್ಶನಮೂಲಕ ಶ್ರೀಕೃಷ್ಣಭಗವಾನರವರು ಉಪದೇಶಿಸುತ್ತಾರೆ, **ಸರ್ವತಸ್ಸಂಪ್ಲುತೋದಕೇ** - ಎಲ್ಲಾ ಕಡೆಯಿಂದಲೂ ಪರಿಪೂರ್ಣವಾಗಿರುವ ಜಲವುಳ್ಳ, **ಉದಪಾನೇ**-ತಟಾಕಾದಿ ಜಲಾಶಯದಲ್ಲಿ, **ಯಾವಾನರ್ಥಃ**-ಎಷ್ಟುಮಟ್ಟಿಗೆ ಯಾವನಿಗೆ ಪ್ರಯೋಜನವೋ, **ತಾವಾನ್** – ಅಷ್ಟುಮಟ್ಟಿಗೆ ಮಾತ್ರವೇ ಅವನಿಗೆ ಬೇಕಾದುದು, ಹಾಗೆಯೇ, **ಸರ್ವೇಷು ವೇದೇಷು** - ಅಗಾಧವಾಗಿರುವ ಎಲ್ಲಾ ವೇದಗಳಲ್ಲೂ, **ವಿಜಾನತಃ** - ವಿವೇಕಜ್ಞಾನವುಳ್ಳ, **ಬ್ರಾಹ್ಮಣಸ್ಯ** - ಬ್ರಹ್ಮವೆಂದರೆ ವೇದವು, ಆದುದರಿಂದ

**ಭಾ.** **ತ್ರಯೋಗುಣಾ ಸ್ತ್ರೈಗುಣ್ಯಂ–ಸತ್ತ್ವರಜಸ್ತಮಾಂಸಿ; ಸತ್ತ್ವರಜಸ್ತಮಃ ಪ್ರಚುರಾ ಪುರುಷಾ ಸ್ತ್ರೈಗುಣ್ಯ ಶಬ್ದೇ ನೋಚ್ಯಂತೇ; ತದ್ವಿಷಯಾಃ ವೇದಾಃ; ತಮಃ ಪ್ರಚುರಾಣಾಂ ರಜಃ ಪ್ರಚುರಾಣಾಂ ಸತ್ತ್ವಪ್ರಚುರಾಣಾಂ ಚ ವತ್ಸಲತರತಯೈವ ಹಿತಮವಬೋಧ ಯಂತಿ ವೇದಾಃ.**

---

ವೈದಿಕನಿಗೆ, ಅಥವಾ ಪರಬ್ರಹ್ಮವನ್ನು, ಅಣತಿ - ತಿಳಿಯುವದಕ್ಕಾಗಿ ಹುಡುಕುವವನು, ಅಂತಹ ಬ್ರಾಹ್ಮಣನಿಗೆ, ಯಾವಾನರ್ಥ–ಎಷ್ಟುಮಾತ್ರ ಪ್ರಯೋಜನವೋ, ತಾವಾನ್ - ಅಷ್ಟೇ ಉಪಾದೇಯವು ||೪೬||

**ಭಾಷ್ಯಾರ್ಥವು** :—**ತ್ರಯೋಗುಣಾಸ್ತ್ರೈಗುಣ್ಯಂ,ಸತ್ತ್ವರಜಸ್ತಮಾಂಸಿ**-ತ್ರೈಗುಣ್ಯವೆಂದರೆ ಮೂರು ಗುಣಗಳು, ಸತ್ತ್ವ ರಜಸ್ತಮೋಗುಣಗಳು; **ಸತ್ತ್ವರಜಸ್ತಮಃ ಪ್ರಚುರಾ ಇತ್ಯಾದಿ** - ಈ ಮೂರುಗಳಾಧಿಕ್ಯವುಳ್ಳ ಪುರುಷರೂ ಈ ತ್ರೈಗುಣ್ಯ ಶಬ್ದದಿಂದ ಹೇಳಲ್ಪಡುತ್ತಾರೆ; **ತದ್ವಿಷಯಾಃವೇದಾಃ** - ಅಂತಹ ಮೂರು ಗುಣಗಳ ಪ್ರಾಚುರ್ಯವುಳ್ಳ ಪುರುಷರನ್ನು ಕುರಿತು ಹೇಳುವುವು ವೇದಗಳು, **ವತ್ಸಲತರತಯೈವ** - ಅತಿಶಯ ವಾತ್ಸಲ್ಯವಿರುವ ಭಾವದಿಂದ, **ಹಿತಮವಬೋಧಯಂತಿ ವೇದಾಃ** - ಹಿತವಾದುದನ್ನು ಎಂದರೆ ಶ್ರೇಯಸ್ಕರವಾದುದನ್ನು ಉಪದೇಶಿಸುವಂತವುಗಳು **ವೇದಾಃ. ತ್ರೈಗುಣ್ಯ ವಿಷಯಾ ವೇದಾಃ** ಎಂದು ಮೂಲದಲ್ಲಿರುವದಕ್ಕೆ ಇಷ್ಟು ಅಭಿಪ್ರಾಯವೆಂದು ತಿಳಿಸಿದರು. ಸ್ವರ್ಗಾದಿ ಫಲಕಾಮನೆಯುಳ್ಳ ಅಧಿಕಾರಿಗಳೂ ಮತ್ತು ಅವರು ಅನುಷ್ಠಿಸತಕ್ಕ ಧರ್ಮಗಳೂ ಇವುಗಳನ್ನು ಕುರಿತ ಅನುಷ್ಠಾನಕ್ರಮ ಮೊದಲಾದವುಗಳನ್ನಲ್ಲವೇ ವೇದಗಳು ಬೋಧಿಸುವವು. ಈ ಅಧಿಕಾರಿಗಳು ಸತ್ತ್ವರಜಸ್ತಮೋಗುಣಗಳ ಪ್ರಾಚುರ್ಯದಿಂದ ಅವರಿಗಭಿಮತವಾದ ಕರ್ಮಗಳ ಅನುಷ್ಠಾನವನ್ನು ಮಾಡಿ ತಮಗೆ ಇಷ್ಟವಾದ ಪುರುಷಾರ್ಥಗಳನ್ನು ಪಡೆಯುವರು ಎಂಬ ಭಾವವು. ಆದುದರಿಂದ "**ತ್ರೈಗುಣ್ಯವಿಷಯಾ ವೇದಾಃ**" ಎಂದು ಹೇಳಲ್ಪಟ್ಟಿತು. ಇಲ್ಲಿ **ತ್ರೈಗುಣ್ಯ** ಶಬ್ದಕ್ಕೆ ಈ ಮೂರು ಗುಣಗಳ ಪ್ರಾಚುರ್ಯಗಳುಳ್ಳ ಅಧಿಕಾರಿಗಳು ಎಂದು ಏಕೆ ವ್ಯಾಖ್ಯಾನಮಾಡಿದರೆಂದರೆ ವೇದಶಾಸ್ತ್ರವು ಅಧಿಕಾರಿಗಳನ್ನು ಕುರಿತು ಹೇಳಿದುದೇ ವಿನಾ ಅಚೇತನವನ್ನು ಕುರಿತು ಹೇಳಿದುದಲ್ಲವಾದುದರಿಂದ ಅಧಿಕಾರಿಯ ವಿಷಯವಾಗಿ ಅರ್ಥ ಮಾಡುವದೇ ಸ್ವರಸವು. ಪ್ರತಿಯೊಂದು ಅಧಿಕಾರಿಯಲ್ಲೂ ಮೂರು ಗುಣಗಳೂ ಉಂಟು, ಆದರೆ ಯಾವ ಗುಣದ ಪ್ರಾಚುರ್ಯವುಂಟೋ ಅಂತವರು, ಇಲ್ಲಿ ತಮಃ ಪ್ರಚುರರು, ರಜಃಪ್ರಚುರರು ಸತ್ತ್ವಪ್ರಚುರರು ಎಂದು ಹೇಳಲ್ಪಟ್ಟಿತು. ಇಲ್ಲಿ ತಮಃ ಪ್ರಚುರರನ್ನು ಏಕೆ ಮೊದಲು ಹೇಳಿ ಸತ್ತ್ವ ಪ್ರಚುರರನ್ನು ಕೊನೆಗೆ ಹೇಳಿದರೆಂದರೆ, ಲೋಕದಲ್ಲಿ ತಮಃ ಪ್ರಚುರರ ಬಾಹುಳ್ಯವನ್ನೂ ಸತ್ತ್ವಪ್ರಚುರರ ಅತ್ಯಲ್ಪತ್ವವನ್ನೂ ಸೂಚಿಸುವದಕ್ಕೆಂದು ಗ್ರಹಿಸತಕ್ಕದ್ದು. ಅದೂ ಅಲ್ಲದೆ ಮೊದಲಿನ ಇಬ್ಬರೂ ಐಹಿಕಾಭಿಲಾಷಿಗಳೂ ಸ್ವರ್ಗಾದ್ಯಭಿಲಾಷಿಗಳೂ ಆಗಿ, ಮೂರನೆಯವರು ಮೋಕ್ಷಾಕಾಂಕ್ಷೆಯುಳ್ಳವರೂ ಆಗಿರುವದರಿಂದಲೂ ಎಂದೂ ಗ್ರಹಿಸಬಹುದು. ಈ ಅಭಿಪ್ರಾಯವು ಮುಂದಿನ ವಾಕ್ಯವಾದ **ನಿಸ್ತ್ರೈಗುಣ್ಯೋ ಭವಾರ್ಜುನ** ಎಂಬುದರಿಂದ ಊಹಿಸಲ್ಪಡಬಹುದು. ಹೀಗೆ ವೇದಗಳು ತ್ರೈಗುಣ್ಯಾಧಿಕಾರಿಗಳಿಗೂ ಹಿತವಾದುದನ್ನು ಬೋಧಿಸುತ್ತವೆ ಎಂದು ಹೇಳಿದರೆ, ಒಂದು ಪೂರ್ವಪಕ್ಷವು ತೋರಬಹುದು. ಶಾಸ್ತ್ರವು ಸತ್ತ್ವ ಪ್ರಚುರಾಧಿಕಾರಿಗೆ ಹಿತವಾದುದನ್ನು ಹೇಳಬೇಕೇ, ರಜಸ್ತಮಃ ಪ್ರಾಚುರ್ಯಾಧಿಕಾರಿಗಳಿಗೂ ಕೂಡ ಹಿತವಾದುದನ್ನು ಹೇಳಬಹುದೋ ಎಂಬಾಕ್ಷೇಪಕ್ಕೆ ಮುಂದಿನ ವಾಕ್ಯಗಳಿಂದ ಸಮಾಧಾನವನ್ನು ಹೇಳುತ್ತಾರೆ. ಒಂದುವೇಳೆ ಶಾಸ್ತ್ರವು ಸತ್ತ್ವಪ್ರಾಚುರ್ಯಾಧಿಕಾರಿಗೆ

ಭಾ. ಯದ್ಯೇಷಾಂ ಸ್ವಗುಣಾನುಗುಣ್ಯೇನ ಸ್ವರ್ಗಾದಿಸಾಧನಮೇವ ಹಿತಂ ನಾವಬೋಧಯನ್ತಿ, ತದೈತೇ ರಜಸ್ತಮಃಪ್ರಚುರತಯಾ ಸಾತ್ತ್ವಿಕ ಫಲ ಮೋಕ್ಷವಿಮುಖಾಃ ಸ್ವಾಪೇಕ್ಷಿತ ಫಲಸಾಧನ ಮಜಾನಂತಃ ಕಾಮಪ್ರಾವಣ್ಯವಿವಶಾ ಅನುಪಾದೇಯೇಷೂಪಾದೇಯ ಭ್ರಾನ್ತ್ಯಾ ಪ್ರವಿಷ್ಟಾಃ ಪ್ರಣಷ್ಟಾ ಭವೇಯುಃ ; ಅತಃ ತ್ರೈಗುಣ್ಯ ವಿಷಯಾವೇದಾಃ.

---

ಮಾತ್ರ ಉಪಯುಕ್ತವಾದುದನ್ನುಪದೇಶಿಸಿದರೆ ಉಂಟಾಗುವ ಅನರ್ಥವನ್ನು ಮುಂದಿನ ವಾಕ್ಯದಿಂದ ತಿಳಿಸಿ, ಆದುದರಿಂದಲೇ ವೇದಗಳು ಮೂರು ಅಧಿಕಾರಿಗಳಿಗೂ ಹಿತವಾದುದನ್ನು ಉಪದೇಶಿಸುತ್ತವೆಂದು ಸ್ಥಾಪಿಸುತ್ತಾರೆ.

**ಏಷಾಂ** - ಈ ಮೂರು ಅಧಿಕಾರಿಗಳ, **ಸ್ವಗುಣಾನುಗುಣ್ಯೇನ** - ಪ್ರಾಚುರ್ಯವುಳ್ಳ ತಮ್ಮ ಗುಣಗಳಿಗನುಸಾರವಾಗಿ, **ಸ್ವರ್ಗಾದಿ ಸಾಧನಮೇವ ಹಿತಂ** - ಅವರುಗಳಿಗೆ ಹಿತವಾದ ಸ್ವರ್ಗಾದಿ ಫಲಗಳಿಗೆ ಸಾಧನವಾಗಿರುವ ಧರ್ಮಗಳನ್ನು, **ನಾವಬೋಧಯನ್ತಿ ಯದಿ** - ತಿಳಿಸದೇ ಹೋದರೆ, **ತತ್** - ಆಕಾರಣದಿಂದ, **ಏತೇ** - ಈ ರಜಸ್ತಮಃ ಪ್ರಾಚುರ್ಯವುಳ್ಳ ಅಧಿಕಾರಿಗಳು, **ರಜಸ್ತಮಃ ಪ್ರಚುರತಯಾ** - ತಮ್ಮಲ್ಲಿರುವ ರಜಸ್ತಮೋಗುಣಗಳ ಆಧಿಕ್ಯದಿಂದ, **ಸಾತ್ತ್ವಿಕಫಲ ಮೋಕ್ಷ ವಿಮುಖಾಃ** - ಸಾತ್ತ್ವಿಕಾಧಿಕಾರಿಗೆ ಫಲವಾದ ಮೋಕ್ಷದಿಂದ, ವಿಮುಖಾಃ-ವಿಮುಖರಾಗಿ, **ಸ್ವಾಪೇಕ್ಷಿತ ಫಲಸಾಧನಂ** - ತಮಗೆ ಅಪೇಕ್ಷಿತವಾದ ಫಲಗಳಿಗೆ ಸಾದನಭೂತವಾದುದನ್ನು, **ಅಜಾನಂತಃ** - ಆ ವೇದದಲ್ಲಿ ತಿಳಿಯದವರಾಗಿ, **ಕಾಮಪ್ರಾವಣ್ಯವಿವಶಾಃ** - ಕಾಮಾತಿಶಯಕ್ಕೆ ಅಧೀನರಾಗಿ, **ಅನುಪಾದೇಯೇಷು** - ಗ್ರಾಹ್ಯವಲ್ಲದವುಗಳಲ್ಲಿ, **ಉಪಾದೇಯ ಭ್ರಾನ್ತ್ಯಾ**-ಗ್ರಾಹ್ಯವೆಂಬುವ ಭ್ರಮೆಯಿಂದ, **ಪ್ರವಿಷ್ಟಾಃ** - ಪ್ರವೇಶಿಸಿದವರಾಗಿ, **ಪ್ರಣಷ್ಟಾಭವೇಯುಃ** - ನಷ್ಟರಾಗಬಹುದು. ಹೇಗೆಂದರೆ ವೇದದಲ್ಲಿ ತಮಗೆ ಬೇಕಾದವು ಸಿಕ್ಕದೆ, ಏನನ್ನೂ ಮಾಡದೆ ಅಚಿತ್ತ್ಪ್ರಾಯರಾಗಬಹುದು. ತರತಮ ಭಾವದಿಂದ ಹೋಲಿಸಲು ಯಾವುದೂ ಇಲ್ಲದೆ ನಿಕೃಷ್ಟವಾದುದನ್ನು ಬಿಟ್ಟು ಉತ್ಕೃಷ್ಟವಾದುದನ್ನು ಅವಲಂಬಿಸಲು ಅವಕಾಶವಿಲ್ಲದೆ ನಷ್ಟರಾಗುವರೆಂಬ ಭಾವವು. ಆದುದರಿಂದ ಕಾಮ್ಯೋಪದೇಶವೂ ಕೂಡ ಹಿತವೇ ಎಂಬ ಭಾವವು. ಮಗನಿಗೆ ಮದುವೆ ಮಾಡುವದು ಐಹಿಕವ್ಯಾಪ್ತಿಯುಂಟು ಮಾಡುವದಾಗಿದ್ದರೂ ಯವ್ವನ ಮದದಿಂದ ವಿಷಯಲಂಪಟನಾಗಿ ವೇಶ್ಯಾಸ್ತ್ರೀ ಸಂಬಂಧಾದಿಗಳನ್ನು ಹೊಂದುವದನ್ನು ತಪ್ಪಿಸಿ, ಹೇಗೆ ಹಿತವೆಂದು ತಂದೆಯು ಭಾವಿಸುವನೋ ಹಾಗೆ ಎಂಬ ಭಾವವು. ಅನಂತರ ಅದರಲ್ಲಿ ಜಿಹಾಸೆ ಹುಟ್ಟಿ ನಿರತಿಶಯ ಸುಖವನ್ನು ಹೊಂದಲು ಕಡೆಗೆ ಆತನೇ ಪ್ರವರ್ತಿಸಬಹುದಾದುದರಿಂದಲೂ ಹಿತವಾದುದೇ, **ಅತಃ**- ಆಕಾರಣದಿಂದ, ವೇದಗಳು ಮೂರು ವಿಧ ಅಧಿಕಾರಿಗಳನ್ನೂ ಕುರಿತು ಉಪದೇಶಿಸುತ್ತವೆ. ಒಂದು ತಂದೆಗೆ ಮೂರು ಮಕ್ಕಳಿದ್ದರೆ ಆ ಮಕ್ಕಳ ಅಭಿಲಾಷೆಗನುಗುಣವಾಗಿ ಆಹಾರಾದಿಗಳನ್ನು ತಂದೆಯು ಒದಗಿಸದಿದ್ದರೆ, ಮಕ್ಕಳು ಚೌರ್ಯಮಾಡಿ ಹೋಟೆಲ್ ತಿಂಡಿಯೇ ಮೊದಲಾದವುಗಳನ್ನು ಸೇವನೆ ಮಾಡಿ ಹೇಗೆ ನಷ್ಟರಾಗುವರೋ ಹಾಗೆ ಎಂಬ ಭಾವವು. ವೇದವು ಸಾತ್ವಿಕರಿಗೆ ಮಾತ್ರವೇ ಬೇಕಾದುದನ್ನು ಹೇಳಿ, ಇತರರಿಗೆ ಇಷ್ಟವಾದುದನ್ನು ಹೇಳದಿದ್ದರೆ, ತಾಮಸಿಯಾದ ಶೂದ್ರನೂ ಭಕ್ತಿಯೋಗವನ್ನಾರಂಭಿಸಿ ನಷ್ಟವಾಗುವನೆಂಬ ಭಾವವು. ವೈದ್ಯನು ಎಲ್ಲಾ ರೋಗಗಳಿಗೂ ಚಿಕಿತ್ಸಕನಾಗಿ ಹೇಗೆ ಎಲ್ಲಾ ರೋಗಗಳಿಗೂ ಔಷಧ ಚಿಕಿತ್ಸೆಗಳನ್ನು ಇಟ್ಟಿರುವನೋ ಹಾಗೆ ಎಂದು ತಿಳಿಯತಕ್ಕದ್ದು. ಹಾಗಲ್ಲದೆ ಒಂದೇವಿಧ ವೈದ್ಯವನ್ನಿಟ್ಟಿದ್ದರೆ, ಅದರ ಸೇವನೆಯಿಂದ ಇತರ ರೋಗಿಷ್ಟರೂ ಹೇಗೆ ನಷ್ಟರಾಗುವರೋ ಹಾಗೆ ಎಂಬ ತಾತ್ಪರ್ಯವು.

**ಭಾ ತ್ವಂತು ನಿಸ್ತ್ರೈಗುಣ್ಯೋಭವ ; ಇದಾನೀಂ ಸತ್ವ ಪ್ರಚುರಸ್ತ್ವಂ ತದೇವ ವರ್ಧಯ ; ನಾನ್ಯೋನ್ಯ ಸಙ್ಕೀರ್ಣ ಗುಣತ್ರಯ ಪ್ರಚುರೋಭವ; ನತತ್ಪ್ರಾಚುರ್ಯಂ ವರ್ಧಯೇತ್ಯರ್ಥಃ.**

ವೇದಗಳೇನೋ ಮೂರು ಅಧಿಕಾರಿಗಳಿಗೂ ಫಲಸಾಧನವನ್ನುಪದೇಶಿಸುತ್ತನೆ. ಆದರೆ ಅರ್ಜುನನಾದ ನೀನು ಎಂತಹ ಅಧಿಕಾರಿಯಾಗಬೇಕೆಂದರೆ ತಿಳಿಸುತ್ತಾರೆ. **ತ್ವಂತು** - ನೀನಾದರೋ, ಇಲ್ಲಿ ತು ಶಬ್ದವು ರಾಜಸ ತಾಮಸಾಧಿಕಾರಿಗಳಿಗಿಂತ ನೀನು ವಿಲಕ್ಷಣನೆಂದು ಸೂಚಿಸುತ್ತದೆ; **ನಿಸ್ತ್ರೈಗುಣ್ಯೋಭವ** - ಮೂರು ಗುಣಗಳ ಪ್ರಾಚುರ್ಯವನ್ನೂ ಹೊಂದಿದವನಾಗಬೇಡ ಎಂದರೆ, **ಇದಾನೀಂ** - ಈಗಲಾದರೋ ನೀನು **"ಶಿಷ್ಯಸ್ತೇಹಂ ಶಾಧಿಮಾಂ ತ್ವಾಂ ಪ್ರಪನ್ನಂ"** ಎಂದು ಹೇಳಿಕೊಂಡು ಪ್ರಣಾಮ ಅಭಿವಾದನಾದಿಗಳಿಂದ ನನ್ನನ್ನು ಆಶ್ರಯಿಸಿರುವದರಿಂದ ಸತ್ವಗುಣಾವಿಷ್ಟನಾಗಿ ತೋರುವದರಿಂದ, **ಸತ್ವಗುಣ ಪ್ರಚುರಸ್ತ್ವಂ** - ಸತ್ವಗುಣ ಪ್ರಾಚುರ್ಯವುಳ್ಳ ನೀನು, **ತದೇವ ವರ್ಧಯ** - ಆ ಸತ್ವಗುಣವನ್ನೇ ಅಭಿವೃದ್ಧಿ ಹೊಂದಿಸು. ಇದರ ತಾತ್ಪರ್ಯವೇನೆಂದರೆ ವಿಶದೀಕರಿಸುತ್ತಾರೆ, **ನಾನ್ಯೋನ್ಯ ಸಙ್ಕೀರ್ಣಗುಣತ್ರಯಪ್ರಚುರೋಭವ** - ಪರಸ್ಪರ ಸಂಬಂಧಿಸಿಕೊಂಡಿರುವ ಮೂರು ಗುಣಗಳ ಪ್ರಾಚುರವುಳ್ಳವನಾಗಬೇಡ, ಇದೀಗ **ನಿಸ್ತ್ರೈಗುಣ್ಯೋ ಭವಾರ್ಜುನ** ಎಂಬ ವಾಕ್ಯದ ತಾತ್ಪರ್ಯವು. **ನಿಸ್ತ್ರೈಗುಣ್ಯ**ವೆಂಬುವದರಿಂದ ಮೂರು ಗುಣಗಳೂ ಇಲ್ಲದವನಾಗು ಎಂಬರ್ಥವಲ್ಲವು. ಹಾಗೆ ಮೂರು ಗುಣಗಳಿಲ್ಲದ ಅವಸ್ಥೆಯೂ ಸಹ ಅಸಾಧ್ಯವು, ಹಾಗಾದರೆ ಸತ್ವಸ್ಥನು ಎಂದರೇನು ಎಂದರೆ ರಜಸ್ತಮೋಗುಣಗಳು ಅತ್ಯಲ್ಪವಾಗಿ ಸತ್ವಗುಣವು ಅಭಿವೃದ್ಧಿಯನ್ನು ಹೊಂದಿರುವವನು ಎಂಬುದು ಅಭಿಪ್ರಾಯವು. ಹಾಗೆ ಅರ್ಥವಲ್ಲವೆಂದು ಭಾವಿಸಿದರೆ ಮುಂದೆ **"ನಿತ್ಯಸತ್ವಸ್ಥಃ"** ಎಂಬುದಕ್ಕೆ ವಿರುದ್ಧವಾದ ಅರ್ಥವಾಗುತ್ತದೆ. **ನತತ್ಪ್ರಾಚುರ್ಯಂ ವರ್ಧಯೇತ್ಯರ್ಥಃ** - ಹೀಗೆ ಮೂರು ಗುಣಗಳೂ ಸಂಬಂಧಿಸಿರುವದರ ಪ್ರಾಚುರ್ಯವನ್ನೂ ಅಭಿವೃದ್ಧಿ ಹೊಂದಿಸಬೇಡವೆಂಬ ತಾತ್ಪರ್ಯವು, ಎಂದರೆ ರಜಸ್ತಮೋಗುಣಪ್ರಾಚುರ್ಯವಿಲ್ಲದ ಪರಮ ಭಾಗವತೋತ್ತಮರಾದ ಭರತರ ಕುಲದಲ್ಲಿ ಜನಿಸಿ,ತುಂಬಾ ಧರ್ಮಿಷ್ಠನಾಗಿ ಅಜಾತ ಶತ್ರುವಾದ ಧರ್ಮರಾಯನಿಗೆ ಅನುಜನಾಗಿ, ನನಗೆ ಪ್ರಿಯಸಖನಾಗಿರುವ ನಿನ್ನಂತವನಲ್ಲಿ, ಹೀಗೆ ಆಭಿಜಾತ್ಯಸಂಸರ್ಗಗಳ ಮಾಹಾತ್ಮ್ಯೆಯ ವೈಲಕ್ಷಣ್ಯವಿರುವದರಿಂದ ತು ಶಬ್ದವು. ಮುಂದೆ ದೈವಾಸುರ ವಿಭಾಗದಲ್ಲಿಯೂ ಅರ್ಜುನನು ದೈವೀ ಸಂಪತ್ತುಳ್ಳವನೆಂದೂ ಹೇಳಲ್ಪಡುವದೂ ಸಹ ಇದರಿಂದ ದ್ಯೋತಿತವು;ಇಲ್ಲಿ **ನಿಸ್ತ್ರೈಗುಣ್ಯೋಭವಾರ್ಜುನ** ಎಂಬಲ್ಲಿ ಅರ್ಜುನ ಎಂಬ ಸಂಬೋಧನೆಯೂ ಸಾಭಿಪ್ರಾಯವಾದುದು, ಅರ್ಜುನ ಶಬ್ದದಿಂದ ಶುಕ್ಲ ವರ್ಣವು ಸೂಚಿಸಲ್ಪಡುವದರಿಂದಲೂ, ಶ್ರುತಿಯಲ್ಲಿ **ಲೋಹಿತ ಶುಕ್ಲ ಕೃಷ್ಣಾಂ** ಎಂಬಲ್ಲಿ ಶುಕ್ಲವರ್ಣದಿಂದ ಸತ್ವಗುಣವು ಹೇಳಲ್ಪಟ್ಟಿರುವದರಿಂದ, ಸತ್ವಗುಣಪ್ರಾಚುರ್ಯವುಳ್ಳವನಾಗಲು ನಿನಗೆ ಅರ್ಹತೆಯುಂಟೆಂದು ಅರ್ಥವಾಗಿ ತೋರಿಸುವದಕ್ಕಾಗಿ ಅರ್ಜುನ ಎಂಬ ಸಂಬೋಧನೆಯೂ, ಮತ್ತು **ತದೇವ ವರ್ಧಯ** ಎಂಬ ಹಿತೋಪದೇಶವೂ ಸಹ ಸಂಗತವಾದುದು. ಕೃತ್ಯಾಕರಣ, ಅಕೃತ್ಯಕರಣ ದೋಷಗಳುಳ್ಳ ರಜಸ್ತಮೋಗುಣಗಳನ್ನು ವೃದ್ಧಿ ಹೊಂದಿಸಬೇಡವೆಂಬುದೂ ಇದರಿಂದ ಹೇಳಿದಂತಾಯಿತು. ಮೂರು ಗುಣಗಳನ್ನೂ ಉಳ್ಳದೇ ಪ್ರಕೃತಿಯು, ಅದರಿಂದ ಸೇರಿರುವನು ಈ ಆತ್ಮನು; ಹೀಗಿರುವಾಗ **ತದೇವ ವರ್ಧಯ** ಎಂಬ ಉಪದೇಶದ ಅಭಿಪ್ರಾಯವೇನೆಂಬುದನ್ನು **ನಾನ್ಯೋನ್ಯಸಂಕೀರ್ಣ ಗುಣತ್ರಯ ಪರೋಭವ** ಎಂದು ವ್ಯಾಖ್ಯಾನಮಾಡಿರುವದರಿಂದ ರಜಸ್ತಮಸ್ಸುಗಳ ಪ್ರಾಚುರ್ಯ ಕೂಡದೆಂದು ನಿಷೇಧಿಸಿದಂತಾಯಿತೆಂದು ಭಾವಿಸತಕ್ಕದ್ದು. **ನಿಸ್ತ್ರೈಗುಣ್ಯೋಭವ** ಎಂಬುದರ ಅಭಿಪ್ರಾಯವನ್ನೇ ಉತ್ತರಾರ್ಧದಲ್ಲಿ **ನಿತ್ಯಸತ್ವಸ್ಥಃ** ಎಂಬುದರಿಂದ ವ್ಯಕ್ತಪಡಿಸಿರುತ್ತಾರೆ. ಇದರಿಂದ ಸತ್ವಗುಣ ವೃದ್ಧಿ

ಭಾ ನಿರ್ದ್ವಂದ್ವಃ–ನಿರ್ಗತ ಸಕಲ ಸಾಂಸಾರಿಕ ಸ್ವಭಾವಃ; ನಿತ್ಯಸತ್ವಸ್ಥಃ–ಗುಣದ್ವಯ ರಹಿತ ನಿತ್ಯಪ್ರವೃದ್ಧ ಸತ್ವಸ್ಥೋ ಭವ ; ಕಥ ಮಿತಿಚೇತ್ ? ನಿರ್ಯೋಗಕ್ಷೇಮಃ–ಆತ್ಮಸ್ವರೂಪ ತತ್ಪ್ರಾಪ್ತ್ಯುಪಾಯ ಬಹಿರ್ಭೂತಾನಾ ಮರ್ಥಾನಾಂಯೋಗಂ, ಪ್ರಾಪ್ತಾನಾಂಚ ಕ್ಷೇಮಂ ಪರಿತ್ಯಜ್ಯ, ಆತ್ಮವಾನ್ ಭವ–ಆತ್ಮ ಸ್ವರೂಪಾನ್ವೇಷಣ ಪರೋ ಭವ. ಅಪ್ರಾಪ್ತಸ್ಯ ಪ್ರಾಪ್ತಿರ್ಯೋಗಃ, ಪ್ರಾಪ್ತಸ್ಯ ಪರಿರಕ್ಷಣಂ ಕ್ಷೇಮಃ. ಏವಂ ವರ್ತಮಾನಸ್ಯ ತೇ ರಜಸ್ತಮಃ ಪ್ರಚುರತಾ ನಶ್ಯತಿ, ಸತ್ವಂಚವರ್ಧತೇ. ನಚವೇದೋದಿತಂ ಸರ್ವಂ

---

ಯನ್ನುಂಟುಮಾಡುವ ಆಹಾರ, ಸತ್ಸಂಭಾಷಣಾದಿಗಳು ಹೇಳಲ್ಪಟ್ಟವು. ಸತ್ವಗುಣ ಸಂಬಂಧವು ಸ್ವಲ್ಪ ಮಟ್ಟಿಗೆ ಎಲ್ಲರಲ್ಲೂ ಉಂಟು ; ನೀನಾದರೋ ನಿತ್ಯ ಸತ್ವಸ್ಥನಾಗಿರಬೇಕು.

ಉತ್ತರಾರ್ಧವನ್ನು ವ್ಯಾಖ್ಯಾನಮಾಡುತ್ತಾರೆ, ನಿರ್ದ್ವಂದ್ವಃ ಎಂದರೆ **ನಿರ್ಗತ ಸಕಲ ಸಾಂಸಾರಿಕ ಸ್ವಭಾವಃ**-ನಿವೃತ್ತಿ ಹೊಂದಿದ ಸಮಸ್ತ ಸಂಸಾರ ಸಂಬಂಧವಾದ ಸ್ವಭಾವವುಳ್ಳವನಾಗು ; ಎಂದರೆ ಫಲಸ್ವರೂಪದಲ್ಲಿ ಮಮತೆ ಇಲ್ಲದವನಾಗಿ, ಅಥವಾ ಸಾಧನಾನುಷ್ಠಾನಕಾಲದಲ್ಲಿ ಚಿತ್ತ ಸ್ವಾಸ್ಥ್ಯವುಳ್ಳವನಾಗಿ, ಅಥವಾ ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸಿಕೊಳ್ಳುವನಾಗಿ ಎಂಬ ಭಾವವು ; **ನಿತ್ಯ ಸತ್ವಸ್ಥಃ** ಎಂದರೆ **ಗುಣದ್ವಯ ರಹಿತೇತ್ಯಾದಿ** - ರಜಸ್ತಮಸ್ಸುಗಳಾದ ಎರಡು ಗುಣಗಳಿಂದಲೂ ರಹಿತವಾದ ಯಾವಾಗಲೂ ಅಭಿವೃದ್ಧಿ ಹೊಂದಿದ ಸತ್ವಗುಣದಲ್ಲಿರುವವನಾಗು. ಹಿಂದೆ ನಿಸ್ತ್ರೈಗುಣ್ಯೋಭವ ಎಂದು ಹೇಳಿದುದನ್ನೇ ವಿವರಿಸಿ ನಿತ್ಯ ಸತ್ವಸ್ಥನಾಗೆಂದು ಶ್ರೀಕೃಷ್ಣಭಗವಾನ್ ಉಪದೇಶಿಸಿದರು. ಅದು ಹೇಗೆ ಎಂದು ಪ್ರಶ್ನಿಸಬಹುದೆಂದು ಆಲೋಚಿಸಿ ಶ್ರೀಕೃಷ್ಣಭಗವಾನರೇ ಅದಕ್ಕೆ ಉತ್ತರವನ್ನು ದಯಪಾಲಿಸುತ್ತಾರೆ, **ನಿರ್ಯೋಗಕ್ಷೇಮ ಆತ್ಮವಾನ್** ಎಂಬದಾಗಿ; ಆದುದರಿಂದ ಶ್ರೀ ಯತಿವರ್ಯರು ಅದನ್ನೇ ಮುಂದೆ ಪ್ರಶ್ನಿಸಿ, **ನಿರ್ಯೋಗಕ್ಷೇಮಾದಿ** ಗಳಿಂದ ಉತ್ತರವನ್ನು ತಿಳಿಸುತ್ತಾರೆ. **ಕಥಮಿತಿ ಚೇತ್** - ಹೇಗೆ ನಿತ್ಯ ಸತ್ವಸ್ಥನಾಗುವದು ಹೇಗೆ ಎಂದರೆ ನಿರ್ಯೋಗಕ್ಷೇಮನಾಗು ಎಂದುಪದೇಶಿಸಿದರು. **ಆತ್ಮಸ್ವರೂಪ** ವೇನು **ತತ್ಪ್ರಾಪ್ತ್ಯುಪಾಯ** - ಅದನ್ನು ಹೊಂದುವ ಉಪಾಯವೇನು, ಇವುಗಳಿಗೆ, **ಬಹಿರ್ಭೂತಾನಾಂ**- ಹೊರಗಾದ, ಬೇರೆಯಾದ ಎಂಬರ್ಥವು, **ಅರ್ಥಾನಾಂ ಯೋಗಂ** - ಪ್ರಯೋಜನಗಳ ಹೊಂದುವಿಕೆಯನ್ನೂ, ಮತ್ತು **ಪ್ರಾಪ್ತಾನಾಂ** - ಮೊದಲೇ ಉಂಟಾಗಿರುವವುಗಳ, ಕ್ಷೇಮವನ್ನೂ. **ಪರಿತ್ಯಜ್ಯ** - ತ್ಯಜಿಸಿ, **ಆತ್ಮವಾನ್ ಭವ** - ಎಂದರೆ, **ಆತ್ಮಸ್ವರೂಪಾನ್ವೇಷಣ ಪರೋಭವ** - ಆತ್ಮ ಸ್ವರೂಪವನ್ನು ಕಂಡು ಹಿಡಿಯುವದರಲ್ಲಿ ಆಸಕ್ತಿಯುಳ್ಳವನಾಗು. **ಅಪ್ರಾಪ್ತಸ್ಯಪ್ರಾಪ್ತಿರ್ಯೋಗಃ** - ತನಗೆ ಇಲ್ಲದಿರುವದನ್ನು ಹೊಂದುವದೇ ಯೋಗವು, **ಪ್ರಾಪ್ತಸ್ಯ ಪರಿರಕ್ಷಣಂಕ್ಷೇಮಃ**- ತನಗೆ ಪ್ರಾಪ್ತವಾಗಿರುವದನ್ನು ಕಾಪಾಡಿಕೊಳ್ಳುವದು ಕ್ಷೇಮವು, ಆತ್ಮಸ್ವರೂಪವೇನು ಅದರ ಪ್ರಾಪ್ತ್ಯುಪಾಯವೇನು ಇವುಗಳನ್ನು ಬಿಟ್ಟು ಮಿಕ್ಕೆಲ್ಲಾ ಬಾಹ್ಯವಿಷಯಗಳಲ್ಲೂ ಯೋಗಕ್ಷೇಮವನ್ನು ಬಿಟ್ಟು ವೈರಾಗ್ಯವನ್ನು ಹೊಂದತಕ್ಕದ್ದೆಂಬ ಭಾವವು. ತನಗೆ ಇನ್ನೂ ಪ್ರಾಪ್ತವಾಗದಿರುವದು ಬೇಕೆಂಬ ಯೋಗದಲ್ಲಿ ಆಸಕ್ತಿಯಿರಕೂಡದು. ಇರುವದನ್ನು ರಕ್ಷಿಸಬೇಕೆಂಬ ಕ್ಷೇಮದಲ್ಲೂ ಆಶೆಯನ್ನು ತೋರದಿರಬೇಕೆಂಬ ಭಾವವು, ಹೀಗೆ ವೈರಾಗ್ಯವಿದ್ದರೆ ರಜಸ್ತಮೋಗುಣಗಳ ಪ್ರಾಚುರ್ಯವನ್ನು ಕಳೆದುಕೊಂಡು ಸ್ವತ್ವವನ್ನು ವೃದ್ಧಿಮಾಡಿಕೊಳ್ಳಬಹುದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಏವಂ ವರ್ತಮಾನಸ್ಯ** - ಹೀಗೆ ಇರುವ, **ತೇ** - ನಿನಗೆ, **ರಜಸ್ತಮಃ ಪ್ರಚುರತಾ ನಶ್ಯತಿ**-ರಜಸ್ತಮೋಗುಣಗಳ ಪ್ರಾಚುರ್ಯವು ನಾಶವಾಗುತ್ತದೆ, **ಸತ್ವಂಚವರ್ಧತೇ** - ಸತ್ವಗುಣವೂ ಕೂಡ ಅಭಿವೃದ್ಧಿ ಹೊಂದುತ್ತದೆ. ಈ ಮೇಲಿನ ಉಪಪಾದನೆಯಿಂದ

ಭಾ. ಸರ್ವಸ್ಯೋಪಾದೇಯಮ್. ಯಥಾಸರ್ವಾರ್ಥ ಪರಿಕಲ್ಪಿತೇ ಸರ್ವತಸ್ಸಂಪ್ಲುತೋದಕೇ ಉದಪಾನೇ ಪಿಪಾಸೋ ರ್ಯಾವಾನರ್ಥಃ - ಯಾವದೇವ ಪ್ರಯೋಜನಮ್, ತಾವ ದೇವ ತೇನೋಪಾದೀಯತೇ, ನಸರ್ವಮ್ ; ಏವಂ ಸರ್ವೇಷು ಚ ವೇದೇಷು ಬ್ರಾಹ್ಮ ಣಸ್ಯ ವಿಜಾನತಃ-ವೈದಿಕಸ್ಯಮುಮುಕ್ಷೋಃ, ಯದೇವ ಮೋಕ್ಷಸಾಧನಂ ತದೇವೋ ಪಾದೇಯಮ್ ; ನಾನ್ಯತ್. ॥ ೪೬ ॥

---

ಪ್ರಾಪ್ತವಾದ ಅಭಿಪ್ರಾಯವನ್ನು ಸಙ್ಗ್ರಹಿಸಿ ಹೇಳುತ್ತಾರೆ. **ವೇದೋದಿತಂ ಸರ್ವಂ**-ಆದುದರಿಂದ ವೇದವಲ್ಲಿ ಹೇಳಲ್ಪಟ್ಟವೆಲ್ಲವೂ, **ಸರ್ವಸ್ಯ** - ಎಲ್ಲರಿಗೂ, **ನೋಪಾದೇಯಂ** - ಗ್ರಾಹ್ಯವಲ್ಲವು.

ಮುಂದೆ ಈ ಶ್ಲೋಕದಲ್ಲಿ ಹೇಳಿದ ದೃಷ್ಟಾಂತವು ವ್ಯಾಖ್ಯಾನ ಮಾಡಲ್ಪಡುತ್ತದೆ. **ಯಥಾ**-ಹೇಗೆ **ಸರ್ವಾರ್ಥಪರಿಕಲ್ಪಿತೇ** - ಸರ್ವವಿಧ ಪ್ರಯೋಜನಗಳಿಗಾಗಿಯೂ ಕೂಡ ಅಥವಾ ಯಾವ ಯಾವ ಅಧಿಕಾರಿಗೆ ಸ್ನಾನಪಾನಗಳೇ ಮೊದಲಾದ ಯಾವಯಾವ ಕಾರ್ಯಕ್ಕಾಗಿ ಬೇಕೋ ಅಂತಹ ಪ್ರಯೋಜನಕ್ಕಾಗಿ ಏರ್ಪಡಿಸಲ್ಪಟ್ಟ, ನಿರ್ಮಿಸಲ್ಪಟ್ಟ, **ಸರ್ವತಸ್ಸಂಪ್ಲುತೋದಕೇ** – ಸುತ್ತಲೂ ಪರಿಪೂರ್ಣವಾಗಿರುವ ಉದಕವುಳ್ಳ, **ಉದಪಾನೇ** - ತಟಾಕದಲ್ಲಿ, **ಪಿಪಾಸೋಃ** – ನೀರಡಿಕೆಯಾಗಿರುವವನಿಗೆ, **ಯಾವಾನರ್ಥಃ** ಎಂದರೆ **ಯಾವದೇವ ಪ್ರಯೋಜನಂ** - ಎಷ್ಟು ಮಟ್ಟಿಗೆ ಮಾತ್ರ ಪ್ರಯೋಜನವೋ, **ತಾವದೇವ** ಅಷ್ಟುಮಾತ್ರವೇ, **ತೇನ** - ಆ ದಾಹಪೀಡಿತ ನಿಂದ, **ಉಪಾದೀಯತೇ** - ಪರಿಗ್ರಹಿಸಲ್ಪಡುತ್ತೆ, **ನ ಸರ್ವಮ್** - ಸಮಸ್ತ ಜಲವೂ ಗ್ರಾಹ್ಯ ವಾಗುವದಿಲ್ಲವು, ಆತನಿಗೆ ಬೇಕಾಗಿಲ್ಲವು. ಇಲ್ಲಿ ಮೂಲದಲ್ಲಿಲ್ಲದ ಪಿಪಾಸು ವನ್ನು ಕುರಿತು ಹೇಳಿದುದು ಒಬ್ಬ ಅಧಿಕಾರಿಯ ಮತ್ತು ಆತನಿಗೆ ಬೇಕಾದ ಪ್ರಯೋಜನದ ದೃಷ್ಟಾಂತಕ್ಕಾಗಿ ಎಂದು ಭಾವಿಸತಕ್ಕದ್ದು. ಹೀಗೆ ದೃಷ್ಟಾಂತವನ್ನುಪಪಾದಿಸಿ ಮುಂದೆ ದಾರ್ಷ್ಟಾಂತಿಕವನ್ನು ವಿಶದೀ ಕರಿಸುತ್ತಾರೆ. **ಏವಂ** – ಅದೇಮೇರಿಗೆ ಎಂದರೆ ಎಲ್ಲಾ ಜಲವು ನೀರಡಿಕೆಯಾಗಿರುವವನಿಗೆ ಹೇಗೆ ಬೇಕಿಲ್ಲವೋ ಮತ್ತು ಅದರ ಇತರ ಪ್ರಯೋಜನಗಳೆಲ್ಲಾ ಆತನಿಗೆ ಹೇಗೆ ಅನಾವಶ್ಯಕವೋ ಹಾಗೆಯೇ, **ಸರ್ವೇಷು ಚ ವೇದೇಷು** - ಸಮಸ್ತವಾದ ಅಪಾರವಾದ ವೇದಗಳಲ್ಲೂ, **ಬ್ರಾಹ್ಮ ಣಸ್ಯ ವಿಜಾನತಃ** ಎಂದರೆ **ವೈದಿಕಸ್ಯ ಮುಮುಕ್ಷೋಃ** - ವೇದಾಧಿಕಾರಿಯಾದ ವಿಶಿಷ್ಟ ಜ್ಞಾನ ವಂತನಾದ ಮೋಕ್ಷಾರ್ಥಿಗೆ, **ವಿಜಾನತಃ** ಎಂಬುದರಿಂದ ವಿಶೇಷಜ್ಞಾನವುಳ್ಳವನೆಂಬುದು ಸೂಚಿ ಸಲ್ಪಟ್ಟಿತು, ಮೋಕ್ಷಸಾಧನಕ್ಕೆ ಬೇಕಾದ ಎಲ್ಲಾಶಾಸ್ತ್ರಜ್ಞಾನವುಳ್ಳವನಿಗೆ ಎಂಬ ಭಾವವು, **ಯದೇವಮೋಕ್ಷಸಾಧನಂ** - ವೇದದ ಯಾವಭಾಗವು ಮೋಕ್ಷಕ್ಕೆ ಸಾಧನ ಭೂತವೋ, **ತದೇವ** ಅಷ್ಟುಮಾತ್ರವೇ, **ಉಪಾದೇಯಂ** - ಗ್ರಾಹ್ಯವು, **ನಾನ್ಯತ್** - ಮಿಕ್ಕವೆಲ್ಲಾ ಗ್ರಾಹ್ಯವಾಗುವದಿ ಲ್ಲವು, **ಬ್ರಾಹ್ಮಣಸ್ಯ ವಿಜಾನತಃ** - ಎಂಬಲ್ಲಿ ಶ್ರೀಮಚ್ಛಂಕರಾಚಾರ್ಯರು ಬ್ರಾಹ್ಮಣ ಶಬ್ದಕ್ಕೆ ಸನ್ಯಾಸಿ ಎಂಬರ್ಥವನ್ನು ಹೇಳಿರುತ್ತಾರೆ ; ಪ್ರಕೃತ ಅರ್ಜುನನನ್ನು ಕುರಿತು ಹೇಳಿರುವ ಪ್ರಕ ರಣವಾದುದರಿಂದ ಕ್ಷತ್ರಿಯನಿಗೂ ಅನ್ವಯಸಾಮಾಗೆ ಬ್ರಾಹ್ಮಣ ಶಬ್ದಕ್ಕೆ ಅರ್ಥಮಾಡುವದೇ ಉಚಿತವು. ಜಾತಿಮಾತ್ರದಿಂದ ಬ್ರಾಹ್ಮಣನನ್ನು ಕುರಿತು ಇಲ್ಲಿ ಹೇಳಲಿಲ್ಲವು; ಸನ್ಯಾಸಿಯನ್ನು ಕುರಿ ತೂ ಹೇಳಲಿಲ್ಲವು; ಬ್ರಹ್ಮ ಅಣತಿ ಎಂಬ ವ್ಯುತ್ಪತ್ತಿಯಿಂದ ತ್ರಿವರ್ಣದವರಿಗೂ ಅನ್ವಯಿಸುತ್ತದೆ ಇಲ್ಲಿ ಬ್ರಹ್ಮವೆಂಬ ಶಬ್ದಕ್ಕೆ ಪ್ರಕರಣಾನುಗುಣವಾಗಿ ವೇದವೆಂಬರ್ಥವು, ಆದುದರಿಂದ, ವೈದಿಕಸ್ಯ ಎಂಬರ್ಥವು ಸಮಂಜಸವಾಗಿರುತ್ತದೆ. ಇಲ್ಲಿ ಬ್ರಾಹ್ಮಣನೆಂದರೆ ಬ್ರಾಹ್ಮಣಯೋನಿಯಲ್ಲಿ ಹುಟ್ಟಿ ದವನೆಂಬರ್ಥವಲ್ಲವು; **ತಾವಾನ್** ಅಷ್ಟುಮಾತ್ರವೇ ಎಂದರೆ ಎಷ್ಟುಮಾತ್ರ ಮೋಕ್ಷಸಾಧನವೋ;

ಭಾ. ಅ. ಅತಸ್ಸತ್ವಸ್ಥಸ್ಯ ಮುಮುಕ್ಷೋ ರೇತಾವದೇವೋಪಾದೇಯ ಮಿತ್ಯಾಹ—

ಮೂ. ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ ।
ಮಾ ಕರ್ಮಫಲಹೇತುರ್ಭೂಃ ಮಾ ತೇ ಸಙ್ಗೋಽಸ್ತ್ವ ಕರ್ಮಣಿ ॥ ೪೭.

ಅಷ್ಟುಮಾತ್ರವೇ ಮೋಕ್ಷಾರ್ಥಿಗೆ ಗ್ರಾಹ್ಯವು. ಮಿಕ್ಕ ಎಲ್ಲಾ ವೇದಭಾಗಗಳೋ ಎಂದರೆ, ನಾನ್ಯತ್- ಮಿಕ್ಕವೆಲ್ಲಾ ಅವನಿಗೆ ಗ್ರಾಹ್ಯವಲ್ಲವೆಂದು ವ್ಯಾಖ್ಯಾನ ಮಾಡಲ್ಪಟ್ಟಿತು. ವೇದದಲ್ಲಿ ನಾನಾ ಅಧಿಕಾರಿಗಳಿಗೂ ನಾನಾವರ್ಣದವರೇ ಮೊದಲಾದವರಿಗೆಲ್ಲಾ ಬೇಕಾದವೆಲ್ಲಾ ಇವೆ. ಯಾವ ಅಧಿಕಾರಿಗೆ ಎಷ್ಟುಮಾತ್ರ ಆವಶ್ಯಕವೋ ಅಷ್ಟುಮಾತ್ರವೇ ಗ್ರಾಹ್ಯವು. ಹಾಗೆಯೇ ಮೋಕ್ಷಾಧಿಕಾರಿಗೂ ಎಂಬ ಭಾವವು. ॥೪೬॥

**ಭಾಷ್ಯಾವತಾರಿಕೆಯ ಅರ್ಥವು** :—ಹಾಗೆ ಮೋಕ್ಷಾರ್ಥಿಗೆ ಮೋಕ್ಷಸಾಧನಭೂತವಾ...ದು ಮಾತ್ರವೇ ಗ್ರಾಹ್ಯವೆಂದರೆ, ನಿತ್ಯ ನೈಮಿತ್ತಿಕ ಕರ್ಮಗಳ ಪರಿತ್ಯಾಗಮಾಡಬಹುದೇ? ...ಮೋಕ್ಷಸಾಧನ ಭೂತವಾಗಿ ಉಪಾದೇಯಾಂಶವು ಯಾವುದು? ಎಂಬ ಪ್ರಶ್ನೆಗಳು ಉಂ...ತ್ತವೆ. ಈ ಪ್ರಶ್ನೆಗಳಿಗೆ ಮುಂದಿನಶ್ಲೋಕದಲ್ಲಿ ಉತ್ತರ ದೊರೆಯುತ್ತದೆಂದು ಅನತಾರಿ... ದಯವಾಲಿಸುತ್ತಾರೆ. ಅತಃ - ಆ ಕಾರಣದಿಂದ, ಸತ್ವಸ್ಥಸ್ಯ - ಸತ್ವಗುಣಪ್ರಾಚುರ್ಯವುಳ್ಳ..., ಮುಮುಕ್ಷೋಃ - ಮೋಕ್ಷಾರ್ಥಿಗೆ, ಏತಾವದೇವ - ಇಷ್ಟುಮಾತ್ರವೇ, ಉಪಾದೇಯಮಿ... ತ್ಯಾಹ - ಗ್ರಾಹ್ಯವೆಂದು ಮುಂದಿನ ಶ್ಲೋಕದಿಂದ ಹೇಳುತ್ತಾರೆ.

**ಮೂಲಕ್ಕೆ ಅರ್ಥವು** :—ಕರ್ಮಣ್ಯೇವ - ಶಾಸ್ತ್ರವಿಹಿತಗಳಾದ ನಿತ್ಯ ನೈಮಿತ್ತಿಕ ಕಾಮ್ಯರೂಪಗಳಾದ ಕರ್ಮಗಳಲ್ಲಿ ಮಾತ್ರವೇ, ತೇ - ಸತ್ವ ಪ್ರಾಚುರ್ಯದಿಂದ, ಮೋಕ್ಷಾರ್ಥಿಯಾಗಿರುವ ನಿನಗೆ, - ಅಧಿಕಾರಃ - ಅಧಿಕಾರವು; ಹಾಗಾದರೆ ಇನ್ನು ಯಾವುದರಲ್ಲಿ ಅಧಿಕಾರವಿಲ್ಲವೆಂದರೆ, ಮಾಫಲೇಷು ಕದಾಚನ; ಕದಾಚನ – ಎಂದಿಗೂ, ಫಲೇಷು – ಅವವು...ಗಳಿಗೆ ...ಫಲಗಳಲ್ಲಿ, ಅಧಿಕಾರವು, ಮಾ - ಇಲ್ಲವು. ಆಯಾ ಕರ್ಮಗಳಿಗೆ ಆಯಾ ಫಲಗಳೆಂದು ಶಾಸ್ತ್ರಗಳಲ್ಲಿ ನಿಯತವು. ಹೀಗಿರುವಾಗ ಕರ್ಮಕ್ಕೆ ಮಾತ್ರ ಅಧಿಕಾರಿ ಎಂದು ಹೇಳಿಬಿಟ್ಟು ಫಲಕ್ಕೆ ಅಧಿಕಾರಿಯಲ್ಲವೆಂದು ಹೇಳಿದುದು ಹೇಗೆ? ಅದೂ ಅಲ್ಲದೆ ಕರ್ಮವು ಸಿದ್ಧಿಸಿದರೂ ಸಿದ್ಧಿಸಬಹುದು, ಸಿದ್ಧಿಸದೆಯೂ ಇರಬಹುದು, ಸಿದ್ಧಿಸಿದರೆ ದೈವಾನುಗ್ರಹದಿಂದ ಫಲ ಉಂಟಾಗಬಹುದು. ದೈವಾನುಗ್ರಹವಿಲ್ಲದಿದ್ದರೆ ಫಲವಿಲ್ಲವು. ಆದುದರಿಂದ ಕರ್ಮ ಮಾಡುವದಕ್ಕೂ ಅದರ ಫಲಕ್ಕೂ ತಾನೇ ಹೇತುವೋ ಅಲ್ಲವೋ ಎಂಬ ಶಙ್ಕೆಯಲ್ಲಿ ಹೇಳುತ್ತಾರೆ, ಮಾಕರ್ಮ ಫಲಹೇತುರ್ಭೂಃ - ಕರ್ಮಕ್ಕೂ ಅದರ ಫಲಕ್ಕೂ ಎರಡಕ್ಕೂ ನೀನು ಹೇತುವಾಗಬೇಡ ಎಂದರೆ ನೀನೇ ಕಾರಣನೆಂದು ತಿಳಿಯಬೇಡ. ತಾನೇ ಕರ್ಮವನ್ನೂ ಅದರ ಫಲವನ್ನೂ ಸಾಧಿಸಿಕೊಂಡೆನೆಂಬಭಿಪ್ರಾಯವು ಕೂಡದೆಂಬ ಭಾವವು; ಹಾಗಾದರೆ ಅವು ಯಾವುದಕ್ಕೆ ಅಧೀನಗಳೆಂಬ ಪ್ರಶ್ನೆಯುಂಟಾಗಬಹುದು, ಅದಕ್ಕೆ ಉತ್ತರವು ತೃತೀಯಾಧ್ಯಾಯದಲ್ಲಿ ಪ್ರಕೃತಿಯೂ ಹೇತುವೆಂದೂ, ಸರ್ವೇಶ್ವರನೇ ಸರ್ವಕ್ಕೂ ಹೇತುವೆಂದೂ ದೊರೆಯುತ್ತದೆ. ಕರ್ಮವೂ ಫಲವೂ ನನ್ನಧೀನವಲ್ಲವೆಂಬ ಅನುಸಂಧಾನವಿರತಕ್ಕದ್ದು. ಒಂದು ಕರ್ಮವು ನಡೆಯುವದಕ್ಕೂ ಕೂಡ ನೀನೊಬ್ಬನು ಮಾತ್ರವೇ ಸಾಕೆಂದು ತಿಳಿಯಬೇಡ, ಪರಮಾತ್ಮನ ಸಙ್ಕಲ್ಪವೂ ಆವಶ್ಯಕವೆಂದು ಮುಂದೆ ೧೮ನೆಯ ಅಧ್ಯಾಯದಲ್ಲಿ ದೈವಂಚೈವಾತ್ರ ಪಂಚಮಂ (ಶ್ಲೋ. ೧೪–೧೬) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗಿರುವಲ್ಲಿ ಫಲಕ್ಕೆ ತಾನು ಹೇಗೆ ಅಧಿಕಾರಿಯಾದಾನು? ಆದುದರಿಂದ ಫಲಚಿಂತನೆಯು ನಿನಗೆ ಬೇಕಿಲ್ಲವೆಂಬುದು ತಾತ್ಪ

**ಭಾ. ನಿತ್ಯೇ ನೈಮಿತ್ತಿಕೇ ಕಾಮ್ಯೇಚ ಕೇನಚಿತ್ ಫಲವಿಶೇಷೇಣ ಸಂಬಂಧಿತಯಾ ಶ್ರೂಯಮಾಣೇ-ಕರ್ಮಣಿ ನಿತ್ಯಸತ್ವಸ್ಥಸ್ಯ ಮುಮುಕ್ಷೋಸ್ತೇ ಕರ್ಮಮಾತ್ರೇಽಧಿಕಾರಃ. ತತ್ಸಂಬಂಧಿತಯಾಽವಗತೇಷು ಫಲೇಷು ನ ಕದಾಚಿದಪ್ಯಧಿಕಾರಃ, ಸಫಲಸ್ಯ ಬಂಧರೂಪತ್ವಾತ್, ಫಲರಹಿತಸ್ಯ ಕೇವಲಸ್ಯ ಮದಾರಾಧನ ರೂಪಸ್ಯ ಮೋಕ್ಷಹೇತುತ್ವಾಚ್ಚ, ಮಾ ಚ ಕರ್ಮಫಲಯೋರ್ಹೇತುರ್ಭೂಃ.**

---

ರ್ಯವು. ಕರ್ಮದಲ್ಲೇನೋ ಅಧಿಕಾರವಿದ್ದರೂ ಕರ್ಮವನ್ನು ಬೇಕಾದರೆ ಮಾಡಬಹುದು, ಬಿಟ್ಟರೆ ಬಿಡಬಹುದೋ ? ಎಂದರೆ ಶಾಸ್ತ್ರವಿಹಿತವಾದ ಕರ್ಮವನ್ನು ಬಿಡಲು ಯತ್ನವಿಲ್ಲವೆಂದು ತಿಳಿಸುತ್ತಾರೆ, ಮಾತೇಸಙ್ಗೋಸ್ತ್ವಕರ್ಮಣಿ, ಅಕರ್ಮಣಿ - ವಿಹಿತ ಕರ್ಮವನ್ನು ಮಾಡದೇ ಇರುವದರಲ್ಲಿ, ತೇ - ಅಂತಹ ಮೋಕ್ಷಾರ್ಥಿಯಾದ ನಿನಗೆ, ಮಾಸಙ್ಗೋಸ್ತು - ಸಂಬಂಧವು ಕೂಡದು ಎಂದರೆ ಅಂತಹ ಕರ್ಮವನ್ನು ಮಾಡದೇ ಇರಕೂಡದು. ಯುದ್ಧವು ನಿನಗೆ ವಿಹಿತ ಕರ್ಮವು, ಅದನ್ನು ನೀನು ಬಿಡಕೂಡದು ಎಂಬ ತಾತ್ಪರ್ಯವು. ವೇದಗಳಲ್ಲಿ ವಿಧಿ ನಿಷೇಧ ವಾಕ್ಯಗಳಿಗೆ ಅನುಸಾರವಾದ ಕರ್ಮಗಳು ವಿಹಿತ ಕರ್ಮಗಳು. ಅವುಗಳನ್ನೇ ಮೂರಾಗಿ ವಿಭಾಗಿಸಿದರು; ನಿತ್ಯ ನೈಮಿತ್ತಿಕ ಕಾಮ್ಯಗಳೆಂಬದಾಗಿ; ಇವು ಮೂರರ ಫಲಾಭಿಸಂಧಿರಹಿತವಾದ ಅನುಷ್ಠಾನವೇ ಕರ್ಮಯೋಗವು. ಆದುದರಿಂದ ಈ ಶ್ಲೋಕದ ಮೂಲಕ ಕರ್ಮಯೋಗಪ್ರಕಾರವು ಹೇಳಲ್ಪಟ್ಟಿತು. ||೪೭||

**ಭಾಷ್ಯಾರ್ಥವು:**—ಹಿಂದೆ ಮೋಕ್ಷಸಾಧನಕ್ಕೆ ಎಷ್ಟು ಜ್ಞಾನವು ಆವಶ್ಯಕವೋ ಅಷ್ಟು ಮಾತ್ರ ಉಪಾದೇಯವೆಂದು ಹೇಳಿದರು. ಹಾಗಾದರೆ ಮಿಕ್ಕಿದುದೆಲ್ಲಾ ಅನುಪಾದೇಯವೆಂದಾಗಿ ನಿತ್ಯನೈಮಿತ್ತಿಕ ಕರ್ಮಗಳನ್ನೂ ತ್ಯಜಿಸಬಹುದು ಎಂದಾಗಿ, ಕಾಮಚಾರ ದೋಷಪ್ರಾಪ್ತವಾದೀತು ಎಂದು ಭಾವಿಸಿ, ವಿಹಿತ ಕರ್ಮಗಳ ತ್ಯಾಗವೂ ಕೂಡದು, ಅಂತಹ ವಿಹಿತ ಕರ್ಮಾಚರಣೆಯಲ್ಲೂ ಫಲಾಭಿಸಂಧಿಯೂ ಕೂಡದು, ಎಂದು ಉಪದೇಶಿಸುತ್ತಾರೆ. **ನಿತ್ಯ ನೈಮಿತ್ತಿಕೇ ಕಾಮ್ಯೇಚ**-ನಿತ್ಯಗಳಾದ ನೈಮಿತ್ತಿಕಗಳಾದ ಮತ್ತು ಕಾಮ್ಯಗಳಾದ, **ಕೇನ ಚಿತ್ಫಲ ವಿಶೇಷೇಣ ಸಂಬಂಧಿತಯಾ ಶ್ರೂಯಮಾಣೇ** - ಏನೋ ಫಲವಿಶೇಷದ ಸಂಬಂಧ ಉಂಟೆಂದು ಶ್ರುತಿಯಲ್ಲಿ ಹೇಳಿರುವ, **ಕರ್ಮಣಿ** - ಕರ್ಮದಲ್ಲಿ, ಇದು ಮೂಲದ ಕರ್ಮಣಿ ಎಂಬುದರ ಅರ್ಥವು, ಮುಂದೆ ಮೂಲದ ತೇ ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ, **ನಿತ್ಯಸತ್ವಸ್ಥಸ್ಯ ಮುಮುಕ್ಷೋಃ** – ನಿತ್ಯಸತ್ವ ಪ್ರಾಚುರ್ಯದಲ್ಲಿರುವ ಮುಮುಕ್ಷುವಾದ ನಿನಗೆ, **ಕರ್ಮಮಾತ್ರೇಽಧಿಕಾರಃ** - ಕರ್ಮದಲ್ಲಿ ಮಾತ್ರವೇ ಅಧಿಕಾರವು, ಇಲ್ಲಿ ಮೂಲದ ಏವ ಎಂಬುದಕ್ಕೆ ಮಾತ್ರವೆಂದು ಅರ್ಥಮಾಡಿರುತ್ತಾರೆ. **ಕರ್ಮಣ್ಯೇವ** ಎಂದು ಸಾಧಾರಣವಾಗಿ ಹೇಳಿರುವದರಿಂದ, ಆದರಿಂದಲೇ ಶಾಸ್ತ್ರದಲ್ಲಿ ಹೇಳಿರುವ ನಿತ್ಯ ನೈಮಿತ್ತಿಕ ಕಾಮ್ಯವೆಂಬ ಮೂರು ವಿಧ ಕರ್ಮಗಳೂ ಇಲ್ಲಿ ಹೇಳಲ್ಪಟ್ಟವೆಂದು ತೋರಿಸಿರುತ್ತಾರೆ. ಕರ್ಮದಲ್ಲಿ ಮಾತ್ರ ಅಧಿಕಾರವು, ಇನ್ನು ಯಾವುದರಲ್ಲಿ ಇಲ್ಲವೆಂದರೆ, ಅವುಗಳಿಗೆ ಸಂಬಂಧಪಟ್ಟ ಫಲಗಳಲ್ಲಿ ಅಧಿಕಾರವಿಲ್ಲವೆಂದು ಹೇಳುತ್ತಾರೆ, **ತತ್ಸಂಬಂಧಿತಯಾ**-ಆಯಾ ಕರ್ಮಗಳಿಗೇನೆ ಸಂಬಂಧಪಟ್ಟವೆಂಬದಾಗಿ, **ಅವಗತೇಷು**-ಶಾಸ್ತ್ರದಿಂದ ತೋರಿಬರುವ, **ಫಲೇಷು**-ಫಲಗಳಲ್ಲಿ, **ಕದಾಚಿದಪಿ** - ಎಂದಿಗೂ ಕೂಡ, **ನಾಧಿಕಾರಃ** - ನಿನಗೆ ಅಧಿಕಾರವಿಲ್ಲವು, ಇಲ್ಲಿ ಈ ಕರ್ಮಕ್ಕೆ ಈ ಫಲವೆಂದು ಶಾಸ್ತ್ರದಲ್ಲಿ ಹೇಳಿರುವದರಿಂದ, ಅಪೂರ್ವಮೂಲಕ ಫಲವು, ಎಂದು ಮೀಮಾಂಸಕನು ಮಧ್ಯೆ ಅಪೂರ್ವವನ್ನು ತರಲು ಅವಕಾಶವಿಲ್ಲದುದರಿಂದ, ಆತನದು ಅಪಸಿದ್ಧಾಂತವೆಂದು ಹೇಳಿದಂತಾಯಿತು. ಈ ಕರ್ಮಕ್ಕೆ ಈ ಫಲವೆಂದು ಸರ್ವೇಶ್ವರನೇ ಸಙ್ಕಲ್ಪಿಸಿರು

**ಭಾ. ತ್ವಯಾನುಷ್ಠೀಯಮಾನೇಽಪಿ ಕರ್ಮಣಿ ನಿತ್ಯಸತ್ತ್ವಸ್ಥಸ್ಯ ಮುಮುಕ್ಷೋಃ ಸ್ತವಾ ಕರ್ತೃತ್ವಮಪ್ಯನುಸಂಧೇಯಂ. ಫಲಸ್ಯಾಪಿ ಕ್ಷುನ್ನಿವೃತ್ತ್ಯಾದೇರ್ನತ್ವಂ ಹೇತುರಿತ್ಯನುಸಂಧೇಯಂ.**

---

ವದರಿಂದ ಆತನ ಸಙ್ಕಲ್ಪಾನುಸಾರ ಫಲವೆಂದು ಮುಂದೆ ಹೇಳಲ್ಪಡುತ್ತದೆ, ಮುಂದೆ **ಮಾಕರ್ಮ ಫಲಹೇತುರ್ಭೂಃ** - ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ, **ಸಫಲಸ್ಯ** - ಫಲಾಪೇಕ್ಷೆಯಿಂದ ಮಾಡಿದ ಕರ್ಮವು, **ಬಂಧರೂಪತ್ವಾತ್**-ಪುನಃ ಸಂಸಾರ ಬಂಧವನ್ನುಂಟುಮಾಡುವದರಿಂದಲೂ, **ಫಲರಹಿತಸ್ಯ** - ಫಲಾಪೇಕ್ಷೆಯಿಲ್ಲದೆ ಮಾಡಿದ, **ಕೇವಲಸ್ಯ ಮದಾರಾಧನ ರೂಪಸ್ಯ** – ಅದು ಕೇವಲ ಸ್ವರೂಪತಃ ನನ್ನ ಆರಾಧನೆಯೆಂಬ ಅನುಸಂಧಾನದಿಂದ ಮಾಡಿದ ಕರ್ಮವು, **ಮೋಕ್ಷ ಹೇತುತ್ವಾಚ್ಚ** - ಮೋಕ್ಷಕ್ಕೆ ಕಾರಣವಾಗುವದರಿಂದಲೂ ಕೂಡ, **ಕರ್ಮಫಲಯೋಃ** – ಕರ್ಮಕ್ಕೂ ಅದರ ಫಲಕ್ಕೂ ಹೀಗೆ ಎರಡಕ್ಕೂ, **ಮಾಚಹೇತುರ್ಭೂಃ** - ನೀನು ಕಾರಣನಾಗುವದಿಲ್ಲವು, ಎಂದರೆ ನೀನು ಕಾರಣವೆಂದು ಎಂದಿಗೂ ತಿಳಿಯಬೇಡ, ನೀನು ಫಲಕ್ಕೆ ಕಾರಣನಾಗಬೇಡ ಎಂಬರ್ಥವಲ್ಲವು; ಫಲಾಭಿಸಂಧಿಯಿಂದ ವಿಹಿತಕರ್ಮಗಳನ್ನು ಮಾಡಬೇಡ ಎಂಬರ್ಥವು. ಫಲಾಭಿಸಂಧಿಯಿಂದ ಕರ್ಮಮಾಡಿದರೇನಾಗುತ್ತದೆ ಮತ್ತು ಫಲಾಭಿಸಂಧಿಯಿಲ್ಲದೆ ಮಾಡಿದರೇನಾಗುತ್ತದೆಂಬುದನ್ನೂ ಮುಂದೆ ತಿಳಿಸುತ್ತಾರೆ. ಆದುದರಿಂದ ಮೋಕ್ಷಫಲವನ್ನು ಬಯಸುವವನ ಅನುಸಂಧಾನವು ಫಲಾಭಿಸಂಧಿರಹಿತವಾಗಿರತಕ್ಕದ್ದೆಂದೂ ಮುಂದೆ ಉಪದೇಶಿಸುತ್ತಾರೆ. ಯಾವಾಗ ಫಲಕ್ಕೆ ಕಾರಣನಲ್ಲವೋ, ಆಗ ಕರ್ಮಕ್ಕೂ ಕಾರಣನಾಗುವದಿಲ್ಲವು. ಆದುದರಿಂದ ತಾನು ಕರ್ತೃವೂ ಅಲ್ಲವು, ಫಲದ ಸಂಬಂಧವೂ ತನಗಿಲ್ಲವು ಎಂಬ ಅನುಸಂಧಾನವಿರಬೇಕೆಂಬ ಭಾವವು. ಇದರಿಂದ ಕರ್ಮಮಾಡುವದೂ, ತತ್ಫಲವನ್ನು ಹೊಂದುವದೂ, ಪರಮಾತ್ಮನದೆಂದಾಯಿತು. ಅದೂ ಅಲ್ಲದೆ ಮೋಕ್ಷಾರ್ಥಿಯು ಮಾಡುವ ಕರ್ಮವೆಲ್ಲವೂ ಪರಮಾತ್ಮಾರಾಧನರೂಪವಾದುದರಿಂದ, ಕರ್ಮವನ್ನು ತಾನು ಮಾಡಿದೆನು ಎಂಬ ಮಮತೆಯೂ ಕೂಡದು. ಮೋಕ್ಷೇತರ ಫಲವು ಆತನಿಗೆ ಬೇಕಾಗಿಲ್ಲವಾದುದರಿಂದ ಫಲಾಕಾಂಕ್ಷೆಯು ಇಲ್ಲದಿರಬೇಕಾದುದರಿಂದ **ಮಾಕರ್ಮ ಫಲಹೇತುರ್ಭೂಃ** ಎಂಬ ಪ್ರಯೋಗವು. **ಕರ್ಮದ ಫಲಕ್ಕೆ ಮಾಹೇತುರ್ಭೂಃ** ಎಂದು ಅರ್ಥಮಾಡುವದಕ್ಕಿಂತಲೂ, **ಕರ್ಮಫಲ** ಶಬ್ದಗಳಿಗೆ ದ್ವಂದ್ವ ಸಮಾಸದಿಂದ ಕರ್ಮಕ್ಕೂ ಅದರ ಫಲಕ್ಕೂ ಸಹ, **ಮಾಹೇತುರ್ಭೂಃ** ಎಂದು ಅರ್ಥಮಾಡುವದು ಸ್ವಾರಸ್ಯವು.

ಆದರೆ **ಕರ್ಮಣ್ಯೇವಾಧಿಕಾರಸ್ತೇ** ಎಂದು ಕರ್ಮದಲ್ಲಿ ಅಧಿಕಾರ ಹೇಳಿ, ನೀನು ಕರ್ಮಕ್ಕೆ ಹೇತುವಲ್ಲಾ ಎಂದು ತಿಳಿ ಎಂದೂ ಬೋಧಿಸಿದರೆ ಪರಸ್ಪರ ವಿರುದ್ಧವಾಗಲಿಲ್ಲವೇ? ಉಪಾಯಾನುಷ್ಠಾನವನ್ನೂ ಸಹ ಮಾಡುವದುತಾನೆ ಹೇಗೆ? ಎಂದರೆ ಆದಕ್ಕೆ ಸಮಾಧಾನವನ್ನು ಹೇಳುತ್ತಾರೆ. ವಿಹಿತ ಕರ್ಮವನ್ನೋ ಮಾಡಲೇಬೇಕು, ಕರ್ಮ ಮಾಡುವಾಗ ಅನುಸಂಧಾನವು ಹೇಗಿರಬೇಕೆಂದರೆ ತಿಳಿಸುತ್ತಾರೆ. **ತ್ವಯಾ** - ನಿನ್ನಿಂದ, **ಅನುಷ್ಠೀಯಮಾನೇಽಪಿ ಕರ್ಮಣಿ** - ವಿಹಿತ ಕರ್ಮವಾಗಿ ಅಧಿಕಾರವಿರುವದರಿಂದ, ಅನುಷ್ಠಿಸಲ್ಪಟ್ಟ ಕರ್ಮದಲ್ಲೂ ಕೂಡ, ನಿತ್ಯಸತ್ತ್ವಸ್ಥನಾಗಿ ಮುಮುಕ್ಷುವಾದ, ತವ – ನಿನಗೆ, **ಅಕರ್ತೃತ್ವಮಪ್ಯನುಸಂಧೇಯಂ** - ಅಕರ್ತೃತ್ವವೂ ಕೂಡ ಉಂಟೆಂದು ಅನುಸಂಧಾನ ಮಾಡತಕ್ಕದ್ದು ; **ಕ್ಷುನ್ನಿವೃತ್ತ್ಯಾದೇಃ** - ಭೋಜನ ಮಾಡುವದರಿಂದುಂಟಾದ ಹಸಿವಿನ ನಿವೃತ್ತಿಯೇ ಮೊದಲಾದ, **ಫಲಸ್ಯಾಪಿ** - ಫಲಕ್ಕೂ ಕೂಡ, **ನತ್ವಂ ಹೇತುರಿತ್ಯನುಸಂಧೇಯಂ** - ನೀನು ಕಾರಣವಲ್ಲವೆಂಬನುಸಂಧಾನವು ಇರತಕ್ಕದ್ದು. ಈ ನಿತ್ಯ ನೈಮಿತ್ತಿಕ ಕಾಮ್ಯಗಳಿಗೆ ಫಲಗಳೇನೋ ಹೇಳಲ್ಪಟ್ಟಿವೆ; ನಿತ್ಯ ನೈಮಿತ್ತಿಕಗಳಿಂದ ದುರಿತ ನಾಶವೂ, ಕಾಮ್ಯಗಳಿಂದ ಪಶು ಪುತ್ರ ಧನಾದಿ ಪ್ರಾಪ್ತಿಯೂ ಹೇಳಲ್ಪಟ್ಟಿವೆ. ಮೋಕ್ಷಾರ್ಥಿಗಾದರೋ ಈ ಯಾವ

ಭಾ. ತದುಭಯಂ ಗುಣೇಷು ವಾ, ಸರ್ವೇಶ್ವರೇ ಮಯಿ ವಾऽನುಸಂಧೇಯ ಮಿತ್ಯುತ್ತರತ್ರ ವಕ್ಷ್ಯತೇ. ಏವಮನುಸನ್ಧಾಯ ಕರ್ಮಕುರು.

---

ಫಲಗಳಲ್ಲೂ ಮಮತೆಯಿರಕೂಡದೆಂಬ ಭಾವವು. ಇಲ್ಲಿ ಕರ್ತೃತ್ವವಿಲ್ಲವೆಂಬನುಸಂಧಾನವಿರಬೇಕೆಂದು ಹೇಳಲ್ಪಟ್ಟಿತೇ ವಿನಾ ಕರ್ತೃತ್ವವಿಲ್ಲವೆಂಬರ್ಥವಲ್ಲವು. ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಎಂಬ ಶಾರೀರಕಸೂತ್ರಪ್ರಕಾರ ಶಾಸ್ತ್ರದಲ್ಲಿ ಈ ಜೀವಾತ್ಮನಿಗೆ ಕರ್ತೃತ್ವ ಉಂಟೆಂದು ಹೇಳಲ್ಪಟ್ಟಿರುತ್ತದೆ. ಆದರೆ ಆ ಕರ್ತೃತ್ವವು ಸ್ವತಂತ್ರವಾದುದಲ್ಲವೆಂದೂ, ಅದು ಪರಮಾತ್ಮನಿಗಧೀನವಾದುದೆಂದೂ, ಪರಾತ್ತು ತಚ್ಛ್ರುತೇಃ ಎಂಬ ಸೂತ್ರದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಆದುದರಿಂದಲೇ ಅಕರ್ತೃತ್ವ ಮಪ್ಯನುಸಂಧೇಯಂ ಎಂದು ಹೇಳಲ್ಪಟ್ಟಿತು. ಹೀಗೆ ಪರಮಾತ್ಮನಿಗೆ ಅಧೀನವಾದರೆ ಈ ಚೇತನನು ಏಕೆ ಪ್ರಯತ್ನಿಸಬೇಕು ಎಂಬಾಕ್ಷೇಪಣೆಯುಂಟಾಗುತ್ತದೆ. ಆದುದರಿಂದ ಕೃತಪ್ರಯತ್ನಾಪೇಕ್ಷಸ್ತು ಎಂಬ ಮುಂದಿನ ಸೂತ್ರದಲ್ಲಿ ಈ ಜೀವಾತ್ಮನ ಸ್ವಬುದ್ಧಿಯಿಂದ ಸರ್ವ ಪ್ರಯತ್ನವನ್ನು ಸರ್ವೇಶ್ವರನು ಅಪೇಕ್ಷಿಸಿ ಅನುಮತಿಯನ್ನು ಕೊಟ್ಟು ಜೀವಾತ್ಮನಿಂದ ಕೆಲಸ ಮಾಡಿಸುತ್ತಾನೆ. ಪ್ರಥಮ ಸಙ್ಕಲ್ಪದಲ್ಲಿ ಆತನಿಗೆ ಸ್ವಾತಂತ್ರವನ್ನು ಕೊಟ್ಟು, ಅದನ್ನು ನಡೆಸಿಕೊಡುವನೂ ಅವನೇ ಎಂದು ತಿಳಿಯತಕ್ಕದ್ದು. ಇಂತಹ ಸರ್ವ ಸಮಂಜಸಾಭಿಪ್ರಾಯವಾದರೇನೇ ಶಾಸ್ತ್ರದ ವಿಧಿ ನಿಷೇಧವಾಕ್ಯಗಳಿಗೆ ವೈಯರ್ಥ್ಯವೂ ಉಂಟಾಗುವದಿಲ್ಲವು. ಸರ್ವೇಶ್ವರನು ಅವನ ಕರ್ಮಾನುಗುಣವಾಗಿ ನಿಗ್ರಹಾನುಗ್ರಹಗಳನ್ನುಂಟುಮಾಡುವದಕ್ಕೂ ಕಾರಣವೂ ಸರಿಹೋಗುತ್ತದೆ. ಆದುದರಿಂದ ಅಕರ್ತೃತ್ವಾನುಸಂಧಾನವು ಆವಶ್ಯಕವೂ ಅಲ್ಲದೆ ಯುಕ್ತವಾದುದೂ ಆಗುತ್ತದೆ. ಯಾವಾಗ ಕರ್ತೃತ್ವಕ್ಕೇ ತಾನು ಹೇತುವಲ್ಲವೋ, ಫಲಕ್ಕೂ ಹೇತುವಲ್ಲವೆಂದು ಹೇಳುವ ಆವಶ್ಯಕತೆಯೇ ಇಲ್ಲವೆಂದು ಮುಂದೆ ಹೇಳುತ್ತಾರೆ, ಫಲಸ್ಯಾಪಿ - ಫಲಕ್ಕೂ ಕೂಡ, ನತ್ವಂ ಹೇತುರಿತ್ಯನುಸಂಧೇಯಂ - ನೀನು ಕಾರಣವೆಂದು ಅನುಸಂಧಾನವಿರಕೂಡದು. ಅದು ಹೇಗೆ ಎಂದು ತಿಳಿಯುವದಕ್ಕಾಗಿ ಕ್ಷುನ್ನಿವೃತ್ತ್ಯಾದೇಃ ಎಂದರೆ ಹಸಿವು ನಿವೃತ್ತಿಯಾಗುವದೇ ಮೊದಲಾದ ಫಲಗಳಹಾಗೆ ಎಂಬ ಭಾವವು. ಊಟವೇನೋ ಈತನು ಮಾಡುತ್ತಾನೆ, ಅದರಿಂದ ಹಸಿವು ನಿವಾರಣೆಯು ಹೇಗೆ ಇವನ ಅಧೀನವಲ್ಲವೋ, ಹಾಗೆಯೇ ಯಾವವಿಧ ಫಲಕ್ಕೂ ಈತನೇ ಕಾರಣನಾಗುವದಿಲ್ಲವು, ಊಟಮಾಡುವದರಿಂದ ಕ್ಷುನ್ನಿವೃತ್ತಿ ಎಂಬ ಫಲವೇ ಉಂಟಾಗುವದಿಲ್ಲವೆಂದು ಇಲ್ಲಿ ನಿಷೇಧಿಸಲಿಲ್ಲವು, ಈತನೇ ಕಾರಣವಲ್ಲವೆಂಬ ಅನುಸಂಧಾನವಿರಬೇಕೆಂಬ ಭಾವವು. ಊಟಮಾಡಿದರ ಫಲವು ತನ್ನ ಅಧೀನವಲ್ಲವಾದುದರಿಂದ ಊಟಮಾಡುವ ಕ್ಲೇಶವು ತಾನೆ ಏಕೆ ಎಂದು ಉದಾಸೀನದಿಂದ ಹೇಗೆ ತ್ಯಾಗಮಾಡಲು ಸಾಧ್ಯವಿಲ್ಲವೋ ಹಾಗೆಯೇ ವಿಹಿತ ಕರ್ಮಾನುಷ್ಠಾನದ ಫಲತ್ಯಾಗವು ಉಪದೇಶಿಸಲ್ಪಟ್ಟಿರುವದರಿಂದ ವಿಹಿತ ಕರ್ಮಾನುಷ್ಠಾನದ ಕ್ಲೇಶ ತಾನೇ ಏಕೆ ಎಂದು ಔದಾಸೀನ್ಯವು ಕೂಡದೆಂಬುದು ಬೋಧಿತವು. ಜಗತ್ತು ಪ್ರತ್ಯಕ್ಷಮೂಲಕ ಸತ್ಯವಾದರೂ ಮಿಥ್ಯಾ ಎಂಬ ಭ್ರಮೆಯುಕ್ತವಾದ ಅಪಲಾಪಮಾಡಿ ಹೇಳುವ ಅನುಸಂಧಾನದ ಹಾಗಲ್ಲವು. ಸತ್ಯವಾಗಿಯೂ ಈತನೇ ಕಾರಣವಲ್ಲವು, ಆದುದರಿಂದಲೇ ಅಂತಹ ಅನುಸಂಧಾನವು ಆವಶ್ಯಕವು. ಚಾರ್ವಾಕನು ಹೇಳುವಹಾಗೆ ಯಾವುದೋ ಒಂದು ಸಂಘಟನೆಯಿಂದ ಎಲ್ಲವೂ ಫಲವೂ ಉಂಟಾಗುತ್ತದೆ ಎಂದು ಊಹಿಸತಕ್ಕದ್ದೇ ? ಎಂದರೆ ಹಾಗೂ ಅಲ್ಲವು, ಏಕೆಂದರೆ ಆತನು ಕಂಡಿರುವ ಫಲಸಾಧನೆಗೆ ಬೇಕಾದ ಸರ್ವಪರಿಕರಗಳು ಇದ್ದರೂ ಫಲ ಸಿದ್ಧಿಸದೇ ಇರುವ ಸಂದರ್ಭಗಳುಂಟು; ಹಾಗೆ ಇರುವದು ಚಾರ್ವಾಕನ ಅನುಭವಕ್ಕೂ ಗೋಚರವಾಗಿರಬಹುದು, ಆದುದರಿಂದ ಫಲಕ್ಕೆ ತಾನು ಮಾತ್ರವೇ ಎಂದಿಗೂ ಹೇತುವಾಗುವದಿಲ್ಲವು. ಹಾಗಾ

ಭಾ. ಅಕರ್ಮಣ್ಯನನುಷ್ಠಾನೇ "ನಯೋತ್ಸ್ಯಾಮಿ" ಇತಿ ಯತ್ತ್ವಯಾಭಿಹಿತಂ ನ ತತ್ರ ತೇ ಸಙ್ಗೋಽಸ್ತು. ಉಕ್ತೇನ ಪ್ರಕಾರೇಣ ಯುದ್ಧಾದಿ ಕರ್ಮಣ್ಯೇವ ಸಙ್ಗೋಽಸ್ತ್ವಿತ್ಯರ್ಥಃ॥

ದರೆ ಈ ಕರ್ಮ ಫಲಗಳಿಗೆ ಹೇತುವು ಯಾರು ಎಂಬ ಪ್ರಶ್ನೆಯುಂಟಾಗುತ್ತದೆ. ಅದಕ್ಕುತ್ತರವನ್ನು ಮುಂದಿನ ವಾಕ್ಯದಿಂದ ಬೋಧಿಸುತ್ತಾರೆ. **ತದುಭಯಂ** - ಆ ಕರ್ಮಕ್ಕೆ ಹೇತುವೂ ಫಲಕ್ಕೆ ಹೇತುವೂ ಸಹ ಆ ಎರಡೂ, **ಗುಣೇಷುವಾ** - ತ್ರಿಗುಣಾತ್ಮಕವಾದ ಪ್ರಕೃತಿಯಲ್ಲಿಯಾಗಲಿ, **ಸರ್ವೇಶ್ವರೇ ಮಯಿವಾ** - ಸರ್ವಕ್ಕೂ ನಿಯನ್ತಾವಾದ ನನ್ನಲ್ಲಿಯಾಗಲಿ, **ಅನುಸಂಧೇಯ ಮಿತಿ**-ಅನುಸಂಧಾನ ಮಾಡತಕ್ಕದ್ದೆಂದು, **ಉತ್ತರತ್ರ** - ಮುಂದೆ ಎಂದರೆ ಮೂರನೆಯ ಅಧ್ಯಾಯ ದಲ್ಲೂ (೩. ೨೭. ೨೮) ಪುನಃ ೧೮ನೆಯ ಅಧ್ಯಾಯದಲ್ಲೂ (೧೮. ೨೫. ೬) **ವಕ್ಷ್ಯತೇ**- ಹೇಳಲ್ಪಡುತ್ತದೆ. ಜೀವಾತ್ಮನು ಅಣುವು. ಆತನಿಗೆ ಪ್ರಕೃತಿ ಸಂಬಂಧರೂಪ ಶರೀರ ಮನಸ್ಸು ಇಂದ್ರಿಯಗಳಿಲ್ಲದೆ ಕರ್ಮವನ್ನು ಮಾಡಲಾರನು, ಆದುದರಿಂದ ಫಲವೂ ಇಲ್ಲವಾದುದರಿಂದ **ಗುಣೇಷುವಾ** ಎಂದು ಹೇಳಿದರು. ಇದಕ್ಕೂ ನಿಯಾಮಕನಾಗಿ ಸರ್ವನಿಯನ್ತಾವಾದ ಸರ್ವೇಶ್ವರ ನಾದ ತಾನೇ ಪ್ರಧಾನಕಾರಣವಾದುದರಿಂದ **ಸರ್ವೇಶ್ವರೇ ಮಯಿವಾ** ಎಂದು ಹೇಳಿದರು ಈ ಅಭಿಪ್ರಾಯವೇ "**ಅಧಿಷ್ಠಾನಂ ತಥಾಕರ್ತಾ**" ಎಂದಾರಂಭಿಸಿ "**ದೈವಂಚೈವಾತ್ರ ಪಂಚಮಂ**" ಎಂದು ಮುಗಿಸಿ (೧೮. ೨೬ ರಲ್ಲಿ) ಹೇಳಿರುತ್ತದೆ. ಅಲ್ಲಿ ಹೇಳಲ್ಪಟ್ಟ ಐದು ಹೇತುಗಳಲ್ಲಿ ಕರ್ಮಕ್ಕೆ ಪ್ರಧಾನಕಾರಣನು ಈತನ ಕರ್ಮಾನುಗುಣವಾದ ದೈವಸಙ್ಕಲ್ಪವು. ಆದುದರಿಂದ ಕರ್ಮಕ್ಕೂ ಫಲಕ್ಕೂ ಅನೇಕ ಹೇತುಗಳಿರುವಾಗ, ತಾನೇ ಕರ್ಮಕ್ಕೂ ಫಲಕ್ಕೂ ಹೇತುವೆಂಬ ಬುದ್ಧಿಯು ಸರಿಯ ಲ್ಲವು ಆದುದರಿಂದಲೇ **ಮಾಕರ್ಮಫಲಹೇತುರ್ಭೂಃ** - ಎಂದು ಉಪದೇಶಿಸಲ್ಪಟ್ಟಿತು. ತಾನು ಕರ್ತಾ ತಾನು ಫಲವನ್ನು ಸಾಧಿಸಿದೆ ಎಂಬಭಿಪ್ರಾಯವು ರಜಸ್ತಮೋಗುಣಗಳ ವಿಜೃಂಭಣೆಯಾಗಿ ಅದು ಮುಂದೆ ನಿಂದಿಸಲ್ಪಡುತ್ತದೆ. ಆದುದರಿಂದ **ಏವಮನುಸನ್ಧಾಯ ಕರ್ಮಕುರು** - ಹೀಗೆ ಅನುಸಂಧಾನಮಾಡಿ ಕರ್ಮವನ್ನು ಮಾಡತಕ್ಕದ್ದು, ಕರ್ಮಕ್ಕೂ ಫಲಕ್ಕೂ ನನಗೆ ಸಂಬಂಧವಿಲ್ಲ ವಾದರೆ ನಾನು ಏಕೆ ಕರ್ಮಮಾಡತಕ್ಕದ್ದೆಂಬ ಉದಾಸೀನಭಾವಕ್ಕೆ ಮಾರ್ಗವಿಲ್ಲವು. ಹಾಗೆ ಅಪಾರ್ಥವನ್ನು ಪುರಸ್ಕರಿಸಿದರೆ, ಉಪಾಯಾನುಷ್ಠಾನಕ್ಕೂ ಕಾರಣವಿಲ್ಲವಾಗುತ್ತದೆ; ಆಗ ಗೀತೋ ಪದೇಶಕ್ಕೇ ಅವಕಾಶವಿಲ್ಲವಾಗುತ್ತದೆ. ಆದುದರಿಂದ ಈ ಸಂದರ್ಭದಲ್ಲಿ ವಿಹಿತಕರ್ಮ ಪರಿತ್ಯಾಗವು ಹೇಳಲ್ಪಡಲಿಲ್ಲವು, ತಾನು ಕರ್ಮವನ್ನೂ ಫಲವನ್ನೂ ಸಾಧಿಸಿದೆ ಎಂಬ ಅನುಸಂಧಾನಕೂಡ ದೆಂದೂ, ಕರ್ಮಫಲಗಳಿಗೆ ತಾನು ಹೇತುವಲ್ಲವೆಂಬ ಅಭಿಸಂಧಿಯಿಂದ, ಫಲಾಪೇಕ್ಷೆಯಿಲ್ಲದೆ ವಿಹಿತ ಕರ್ಮವನ್ನು ಮಾಡಿಯೇ ತೀರಬೇಕೆಂದು ಹೇಳಿದಂತಾಯಿತು. ಕೆಲವರು ವಿಹಿತಕರ್ಮಗಳೂ ಸಹ ಪ್ರಪನ್ನನಿಗೆ ಆವಶ್ಯಕವಿಲ್ಲವೆಂದು ಅಭಿಪ್ರಾಯಪಡುವರು. ಏಕೆಂದರೆ **ಜ್ಞಾನಾನ್ಮೋಕ್ಷಃ** ಎಂಬುದು ಅವರ ಸಿದ್ಧಾನ್ತವು. **ಜ್ಞಾನಾನ್ಮೋಕ್ಷಃ** ಎಂಬುದನ್ನೂ ಒಪ್ಪಿಕೊಂಡು ವಿಹಿತ ಕರ್ಮಗಳನ್ನೂ ಮಾಡಬೇಕೆಂಬುದು ನಮ್ಮ ಸಿದ್ಧಾನ್ತವು. ಇದರಿಂದ ಶಾಸ್ತ್ರಚೋದಿತ ಕರ್ಮವನ್ನು ಮಾಡಿಯೇತೀರಬೇಕೆಂದಾಯಿತು. ಇದನ್ನೇ ಮುಂದಿನ ವಾಕ್ಯದಿಂದ ಸ್ಥಾಪಿಸುತ್ತಾರೆ. ಪ್ರಕರ ಣಕ್ಕೆ ಅನುಗುಣವಾಗಿಯೂ ಅನ್ವಯಿಸುತ್ತಾರೆ. **ಮಾತೇ ಸಙ್ಗೋಽಸ್ತ್ವಕರ್ಮಣಿ** ಎಂಬುದರ ವ್ಯಾಖ್ಯಾನವು ಮುಂದೆ ಬರೆಯಲ್ಪಡುತ್ತದೆ. **ಅಕರ್ಮಣಿ** ಎಂದರೆ **ಅನನುಷ್ಠಾನೇ** - ಶಾಸ್ತ್ರವಿಹಿತ ವಾದ ಕರ್ಮವನ್ನನುಷ್ಠಿಸದೇ ಇರುವದರಲ್ಲಿ ಇಲ್ಲಿ ಕರ್ಮಶಬ್ದವು ಕ್ರಿಯಾವಾಚಿಯು, ಆದುದ ರಿಂದ **ಅಕರ್ಮಣಿ** ಎಂದರೆ ಕರ್ಮಾನುಷ್ಠಾನಮಾಡದೇ ಇರುವದರಲ್ಲಿ ಎಂಬರ್ಥವನ್ನು ಹೇಳ ಬೇಕು. ಶ್ರೀಮಚ್ಛಂಕರಾಚಾರ್ಯರೂ ಹೀಗೆಯೇ ಅರ್ಥಮಾಡಿರುತ್ತಾರೆ; **ಅಕರ್ಮಣಿ** ಎಂದರೆ

**ಭಾ. ಅವ. ಏತದೇವ ಸ್ಫುಟೀಕರೋತಿ—**

**ಮೂ. ಯೋಗಸ್ಥಃ ಕುರುಕರ್ಮಾಣಿ ಸಙ್ಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ ॥** ೪೮.

ಅಕರಣೆ ಎಂದೇ ಅರ್ಥಮಾಡಿರುತ್ತಾರೆ, ಇವನ್ನು ಪ್ರಕರಣಾನುಗುಣವಾಗಿ ಅರ್ಜುನನಿಗೆ ಜ್ಞಾಪಕಕ್ಕೆ ತರುವದಕ್ಕಾಗಿ ನಿದರ್ಶಿಸುತ್ತಾರೆ:—**"ನಯೋತ್ಸ್ಯಾಮಿ"** ಇತಿ - "ನಾನು ಯುದ್ಧ ಮಾಡುವದಿಲ್ಲ"ವೆಂದು, **ಯತ್ತ್ವಯಾಭಿಹಿತಂ** - ಯಾವುದು ನಿನ್ನಿಂದ ಹೇಳಲ್ಪಟ್ಟಿತೋ, **ತತ್ರ**-ಅಂತಹ ಸಂದರ್ಭವಲ್ಲಿ, **ತೇ** - ಶಾಸ್ತ್ರ ದೃಷ್ಟಿಯುಳ್ಳ ನಿನಗೆ, **ನಸಙ್ಗೋಽಸ್ತು** - ಸಂಬಂಧ ಬೇಡವು, ಹಾಗಾದರೆ ಇನ್ನು ಯಾವುದರಲ್ಲಿ ಸಙ್ಗವಿರತಕ್ಕದ್ದು ಎಂದರೆ ಶಾಸ್ತ್ರವಿಹಿತ ಕರ್ಮಮಾಡುವವರಲ್ಲೇ ಸಙ್ಗವಿರತಕ್ಕದ್ದೆಂಬುದನ್ನು ಪ್ರಕರಣಾನುಗುಣವಾಗಿ ಬೋಧಿಸುತ್ತಾರೆ.**ಉಕ್ತೇನ ಪ್ರಕಾರೇಣ** - ಮೇಲೆ ಹೇಳಿದ ಪ್ರಕಾರದಿಂದ, **ಯುದ್ಧಾದಿ ಕರ್ಮಣ್ಯೇವ** - ಕ್ಷತ್ರಿಯಧರ್ಮವಾದ ಯುದ್ಧಾದಿ ಕರ್ಮದಲ್ಲೇ, **ಸಙ್ಗೋಽಸ್ತ್ವಿತ್ಯರ್ಥಃ** - ಸಂಬಂಧವಿರಲಿ ಎಂಬುವ ತಾತ್ಪರ್ಯವು, ಹೀಗೆ ಹೇಳಿದುದರಿಂದ ಇತರ ಮೂರು ವರ್ಣದವರಾದ ಬ್ರಾಹ್ಮಣ ವೈಶ್ಯ ಶೂದ್ರರಿಗೂ ಅವರವರ ವರ್ಣಾಶ್ರಮ ಕರ್ಮಗಳಲ್ಲಿ ಸಙ್ಗವಿರಬೇಕೆಂದು ಉಪದೇಶಿಸಿದಂತೆ ಆಯಿತು.

**ಭಾಷ್ಯಾವತಾರಿಕೆಯ ಅರ್ಥವು :— ಏತದೇವ**–ಈ ಹಿಂದೆ ಹೇಳಿದ ಅಭಿಪ್ರಾಯವನ್ನೇ ಈಮುಂದಿನ ಶ್ಲೋಕದಿಂದ, **ಸ್ಫುಟೀಕರೋತಿ**–ಸ್ಫುಟವಾಗಿ ತೋರುವಹಾಗೆ ವ್ಯಕ್ತಪಡಿಸುತ್ತಾರೆ. ಏವ ಎಂಬವಧಾರಣದಿಂದ ಇದೇ ಅಭಿಪ್ರಾಯವನ್ನೇ ಮುಂದಿನ ಶ್ಲೋಕವೂ ಹೇಳುತ್ತದೆಯೇ ವಿನಾ ಬೇರೆ ಅರ್ಥವಲ್ಲವೆಂಬ ಭಾವವು. ಇಲ್ಲಿ **ಸ್ಫುಟೀ ಕರೋತಿ** ಎಂಬ ಅವತಾರಿಕೆಯ ಮೂಲಕ ಅದನ್ನೇ ಸಮರ್ಥನೆಯನ್ನುಮಾಡಿ ವ್ಯಕ್ತಪಡಿಸುವರಾದುದರಿಂದ ಪುನರುಕ್ತಿಯ ದೋಷವಿಲ್ಲವೆಂಬ ಭಾವವನ್ನು ಸೂಚಿಸಿರುತ್ತಾರೆ.

**ಮೂಲಕ್ಕೆ ಅರ್ಥವು :— ಹೇ ಧನಂಜಯ** - ಓ ಅರ್ಜುನನೇ, **ಯೋಗಸ್ಥಃ** - ಚಿತ್ತಸ್ವಾಸ್ಥ್ಯವುಳ್ಳವನಾಗಿ, **ಸಙ್ಗಂ ತ್ಯಕ್ತ್ವಾ** - ಐಹಿಕಗಳಲ್ಲಿ ಅಭಿಮಾನವಂ ತೊರೆದು, **ಕರ್ಮಾಣಿ ಕುರು** - ಕರ್ಮಗಳನ್ನು ಮಾಡು. ಇಲ್ಲಿ **ಧನಂಜಯ** ವೆಂಬ ಸಂಬೋಧನೆ ಏಕೆಂದರೆ ಅರ್ಜುನನಾದ ನೀನು ರಾಜಸೂಯ ಯಾಗದಲ್ಲಿ ವಿಶೇಷ ಧನವನ್ನು ಸಂಪಾದಿಸಿದುದರಿಂದ ಆ ನಾಮವು ನಿನಗೆ ಅನ್ವಯಿಸಿದ್ದರೂ, ನೀನು ಅಂತಹ ಧನರಾಜ್ಯಾದಿಗಳಲ್ಲಿ ಮಮತೆಯನ್ನು ತೊರೆದು, **ಸಙ್ಗಂ ತ್ಯಕ್ತ್ವಾ** - ಇರಬೇಕೆಂದು ಉಪದೇಶಿಸುವ ಆಶಯದಿಂದ **ಧನಂಜಯ** ವೆಂಬ ಸಂಬೋಧನೆಯು. ಆ ಕಾರಣದಿಂದಲೇ **ಸಙ್ಗಂತ್ಯಕ್ತ್ವಾ** ಎಂಬ ಮೂಲದಲ್ಲಿ ಪ್ರಯೋಗವೂ, **ರಾಜ್ಯಬಂಧು ಪ್ರಭೃತಿಷು ಸಙ್ಗಂತ್ಯಕ್ತ್ವಾ** ಎಂದು ಶ್ರೀ ಯತಿವರ್ಯರ ವ್ಯಾಖ್ಯಾನವೂ ಸಹ, ಎಂದು ಭಾವಿಸತಕ್ಕದ್ದು. ಆದರೆ ಯುದ್ಧಮಾಡು, ಯುದ್ಧ ಮಾಡು ಎಂದು ನಾನು ಮಾಡುವ ಉಪದೇಶವು ನಿನಗೆ ಧನ ರಾಜ್ಯಗಳೇ ಮೊದಲಾದ ಐಹಿಕ ಸುಖಪ್ರಾಪ್ತಿಗಳಿಗಾಗಿ ನಾನು ಉಪದೇಶಿಸುವದಿಲ್ಲವು. ಮೋಕ್ಷಸಾಧನಭೂತವಾದ ವಿಹಿತಕರ್ಮಾಚರಣೆಯ ಪರಿತ್ಯಾಗ ಕೂಡದು ಎಂಬುದನ್ನು ನೀನು ಚನ್ನಾಗಿ ಗ್ರಹಿಸುವದಕ್ಕಾಗಿ ಈ ಉಪದೇಶವು ಎಂಬ ಭಾವವು ಸೂಚಿತವು. ಆ ಚಿತ್ತ ಸಮಾಧಾನ ಉಂಟಾಗಬೇಕಾದರೆ ಹೇಗೆ ಕರ್ಮವನ್ನು ಮಾಡತಕ್ಕದ್ದೆಂಬುದನ್ನುಪದೇಶಿಸುತ್ತಾರೆ. **ಸಿದ್ಧ್ಯಸಿದ್ಧ್ಯೋಃ ಸಮೋಭೂತ್ವಾ ಕುರು** – ಆ ಕರ್ಮವು ಸಿದ್ಧಿಸಲಿ ಅಥವಾ ಸಿದ್ಧಿಸದೇ ಇರಲಿ ಎರಡು ಸಂದರ್ಭದಲ್ಲೂ ಚಿತ್ತವನ್ನು ಒಂದೇ ಸಮನಾಗಿಟ್ಟುಕೊಂಡವನಾಗಿ, ಕರ್ಮವನ್ನು ಮಾಡು, **ಸಮತ್ವಂ ಯೋಗ ಉಚ್ಯತೇ** – ಇಂತಹ ಚಿತ್ತ ಸ್ವಾಸ್ಥ್ಯವೇ, **ಯೋಗ** ವೆಂದು ಹೇಳಲ್ಪಡುತ್ತದೆ. ಹಿಂದಿನ

**ಭಾ. ರಾಜ್ಯಬಂಧುಪ್ರಭೃತಿಷು, ಸ್ಸಙ್ಗಂತ್ಯಕ್ತ್ವಾ ಯುದ್ಧಾದೀನಿ ಕರ್ಮಾಣಿ ಯೋಗಸ್ಥಃ ಕುರು. ತದನ್ತರ್ಭೂತ ವಿಜಯಾದಿ ಸಿದ್ಧ್ಯಸಿದ್ಧ್ಯೋಃ ಸ್ಸಮೋಭೂತ್ವಾ ಕುರು. ತದಿದಂ ಸಿದ್ಧ್ಯಸಿದ್ಧ್ಯೋಸ್ಸಮತ್ವಂ "ಯೋಗಸ್ಥಃ" ಇತ್ಯತ್ರ ಯೋಗಶಬ್ದೇ ನೋಚ್ಯತೇ. ಯೋಗ ಸ್ಸಿದ್ಧ್ಯಸಿದ್ಧ್ಯೋಸ್ಸಮತ್ವರೂಪಂ ಚಿತ್ತಸಮಾಧಾನಂ ||೪೮||**

ಶ್ಲೋಕದಲ್ಲಿ ಕರ್ಮಮಾತ್ರ ಮಾಡಬೇಕೆಂದೂ, ಆ ಕರ್ಮಕ್ಕೂ ಅದರ ಫಲಕ್ಕೂ ಈತನು ಹೇತುವಲ್ಲವೆಂದೂ ಹೇಳಲ್ಪಟ್ಟಿತು. ಯಾವಾಗ ತಾನು ಹೇತುವಲ್ಲವೋ ಸಿದ್ಧಿಯಿಂದ ಸಂತೋಷವೂ, ಅಸಿದ್ಧಿಯಿಂದ ಖೇದವೂ ಯುಕ್ತವಲ್ಲವು.ಸಿದ್ಧಿಯಲ್ಲಿಯೂ ಅಸಿದ್ಧಿಯಲ್ಲಿಯೂ ಸಮಚಿತ್ತತೆ ಇರಬೇಕೆಂದು ಶ್ರೀಕೃಷ್ಣಭಗವಾನ್ ಉಪದೇಶಿಸುತ್ತಾರೆ. ಅಂತಹ ಚಿತ್ತಸಮಾಧಾನದಿಂದ ಕರ್ಮಾನುಷ್ಠಾನವೇ ಇಲ್ಲಿ **ಯೋಗ** ಶಬ್ದದಿಂದ ಹೇಳಲ್ಪಟ್ಟಿರುತ್ತದೆ ಎಂಬ ಭಾವವು. ಯೋಗ ಶಬ್ದಕ್ಕೆ ಅನೇಕಾರ್ಥಗಳುಂಟು; ಇಲ್ಲಿ **ಯೋಗಸ್ಥಃ** ಎಂದು ಮಾಡಿರುವ ಪ್ರಯೋಗದಲ್ಲಿ ಯೋಗಶಬ್ದಕ್ಕೆ ತಾವೇ ಅರ್ಥವನ್ನು ಹೇಳಬೇಕಾದುದು ಆವಶ್ಯಕವಾದುದರಿಂದ,ಹೀಗೆ ತಾನು ಮಾಡತಕ್ಕ ಕರ್ಮಗಳಿಂದ ಸಿದ್ಧ್ಯಸಿದ್ಧಿಗಳ ಪ್ರಾಪ್ತಿಯಲ್ಲಿ ಸಮಚಿತ್ತತ್ವವು ಇರಬೇಕಾದುದು ಮುಖ್ಯವಾದುದರಿಂದ ಅಂತಹ **ಸಮತ್ವಂ**-ಸಮತ್ವವು, **ಯೋಗ ಉಚ್ಯತೇ**-ಯೋಗವೆಂದು ಹೇಳಲ್ಪಡುತ್ತದೆಂದು ಯೋಗ ಶಬ್ದಾರ್ಥವನ್ನು ವಿವರಿಸಿರುತ್ತಾರೆ. ಇಲ್ಲಿ **ಕುರುಕರ್ಮಾಣಿ** ಎಂಬ ವಿಧಿಯು ಇರುವದರಿಂದ ವಿಹಿತಕರ್ಮಪರಿತ್ಯಾಗವು ಸರ್ವಾತ್ಮನಾ ಕೂಡದೆಂಬುದು ವ್ಯಕ್ತವು. ಪ್ರಪನ್ನನಿಗೆ ನಿತ್ಯನೈಮಿತ್ತಿಕಗಳ ಆವಶ್ಯಕತೆ ಇರುವದಿಲ್ಲ ಎಂಬ ಅಭಿಪ್ರಾಯವು ಶ್ರೀಕೃಷ್ಣ ಭಗವಾನರವರ ಗೀತೋಪದೇಶಕ್ಕೆ ವಿರುದ್ಧವೆಂಬುದು ಇದರಿಂದ ಏರ್ಪಟ್ಟಿತು. ಅವುಗಳಲ್ಲಿ ಸಙ್ಗಬೇಡವೆಂದು ಇಷ್ಟುಮಾತ್ರಹೇಳಲ್ಪಟ್ಟಿತೇ ವಿನಾ ಕರ್ಮಪರಿತ್ಯಾಗವು ಉಪದೇಶಿಸಲ್ಪಡಲಿಲ್ಲವು. ಏಕೆಂದರೆ **ಕುರುಕರ್ಮಾಣಿ** ಎಂದು ವ್ಯಕ್ತವಾಗಿ ಉಪದೇಶಿಸಿರುತ್ತಾರೆ. ಶ್ರೀ ಶಂಕರಾಚಾರ್ಯರೂ ಸಹ ಹಾಗೆಯೇ ಉಪದೇಶಿಸಿರುತ್ತಾರೆ—"**ಯೋಗಸ್ಥಃ ಸನ್ ಕುರುಕರ್ಮಾಣಿ ಕೇವಲಂ ಈಶ್ವರಾರ್ಥಂ**" ಎಂಬುದು ಅವರ ವ್ಯಾಖ್ಯಾನವು.

**ಭಾಷ್ಯಾರ್ಥವು:—ಸಙ್ಗಂತ್ಯಕ್ತ್ವಾ** ಎಂದರೆ **ರಾಜ್ಯಬಂಧುಪ್ರಭೃತಿಷು**-ರಾಜ್ಯ, ಬಂಧುಗಳು ಮೊದಲಾದವುಗಳಲ್ಲಿ, **ಸಙ್ಗಂ ತ್ಯಕ್ತ್ವಾ**- ಲಿಪ್ತನಾಗದೆ, ಎಂದರೆ ಮಮತೆಯನ್ನು ತೊರೆದು, **ಕರ್ಮಾಣಿ** ಎಂದರೆ ಪ್ರಕರಣಾನುಗುಣವಾದ, **ಯುದ್ಧಾದೀನಿ ಕರ್ಮಾಣಿ** - ಯುದ್ಧವೇ ಮೊದಲಾದ ಕರ್ಮಗಳನ್ನು, **ಯೋಗಸ್ಥಃ** - ಚಿತ್ತ ಸಮಾಧಾನದಲ್ಲಿರುವವನಾಗಿ, **ಕುರು** - ಮಾಡು, ರಾಜ್ಯದಲ್ಲಾದರೋ ಫಲದ್ವಾರಾ ಬಾಧಕವು, ಯುದ್ಧದಲ್ಲಾದರೋ ಪ್ರವರ್ತಿಸುವದಿಲ್ಲವೆಂಬುದರಿಂದ ಬಾಧಕವೆಂಬ ಭಾವವು, ಆದುದರಿಂದ ಇವೆರಡೂ ಬಾಧಕಗಳಾದುದರಿಂದ ಇವುಗಳಲ್ಲಿ ಸಂಬಂಧವನ್ನು ಪರಿತ್ಯಾಗ ಮಾಡತಕ್ಕದ್ದು ಎಂಬ ಭಾವವು. ರಾಜ್ಯಾದಿಗಳ ಪ್ರಾಪ್ತಿರೂಪ ಫಲವನ್ನೂ ಪರಿತ್ಯಾಗ ಮಾಡತಕ್ಕದ್ದು, ಯುದ್ಧವನ್ನು ಮಾಡುವದಿಲ್ಲವೆಂಬ ವಿಹಿತಕರ್ಮಪರಿತ್ಯಾಗಬುದ್ಧಿಯನ್ನೂ ಬಿಡತಕ್ಕದ್ದು ಎಂಬ ಭಾವವು, ಈ ಅಭಿಪ್ರಾಯಗಳನ್ನೇ ಮುಂದಿನವಾಕ್ಯದಲ್ಲಿ ವಿಶದೀಕರಿಸುತ್ತಾರೆ. ಹೇಗೆ ಮಾಡಬೇಕೆಂದರೆ ತಿಳಿಸುತ್ತಾರೆ :—**ತದಂತರ್ಭೂತವಿಜಯಾದಿ ಸಿದ್ಧ್ಯಸಿದ್ಧ್ಯೋಸ್ಸಮೋಭೂತ್ವಾ ಕುರು**-ಆ ಯುದ್ಧಾದಿಗಳಲ್ಲೇ ಸೇರಿರುವ ಜಯಪರಾಜಯರೂಪಸಿದ್ಧಿ ಅಸಿದ್ಧಿ, ಇವುಗಳಲ್ಲಿ ಸಮಚಿತ್ತನಾಗಿ ಮಾಡು. ಸಿದ್ಧಿಯಲ್ಲಿ ಮದೋನ್ಮತ್ತನಾಗದೆ, ಅಸಿದ್ಧಿಯಿಂದ ದೀನನಾಗದೆ ಮಾಡು ಎಂಬ ಭಾವವು. ಇದರಿಂದ **ವಿಹಿತಕರ್ಮ**ವನ್ನು ಮಾಡು, **ಫಲಾಪೇಕ್ಷೆ**ಯು ಬೇಡವೆಂದು ಉಪದೇಶವು. **ಸಿದ್ಧ್ಯಸಿದ್ಧ್ಯೋಃ ಸ್ಸಮೋಭೂತ್ವಾ ಕುರು** ಎಂಬಲ್ಲಿ ಹೇಳಿರುವದು ಹಿಂದೆ ೩೮ನೆಯ ಶ್ಲೋಕವಾದ "**ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾಜಯೌ**" ಎಂಬುವರ

ಭಾ. ಅ. ಕಿಮರ್ಥ ಮಿದಮಸಕೃದುಚ್ಯತ ಇತ್ಯತ ಆಹ :—

ಮೂ. ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।
ಬುದ್ಧೌ ಶರಣ ಮನ್ವಿಚ್ಛ, ಕೃಪಣಾಃ ಫಲಹೇತವಃ ॥ ೪೯.

ಅನುವಾದವೆಂದು ಭಾವಿಸತಕ್ಕದ್ದು. ಇಲ್ಲಿರುವ ಸಮತ್ವ ಶಬ್ದಕ್ಕೂ ಮುಂದೆ "ಶುನಿಚೈವ ಶ್ವಪಾಕೇಚ ಪಂಡಿತಾಸ್ಸಮದರ್ಶಿನಃ" (ಗೀ. ೫-೧೮) ಎಂಬಲ್ಲಿ ತೋರಿಬರುವ ಸಮತ್ವಕ್ಕೂ, ಭಾವದಲ್ಲಿ ವ್ಯತ್ಯಾಸ ಉಂಟೆಂದು ತೋರಿಸುವದಕ್ಕಾಗಿಯೇ ಮೂಲದಲ್ಲಿ ಸಿದ್ಧ್ಯಸಿದ್ಧ್ಯೋಸ್ಸಮೋಭೂತ್ವಾ ಎಂಬಪಾಗಿ ಸಮಶಬ್ದದ ವಿವರಣವು; ಸಮದರ್ಶಿನಃ ಎಂಬಲ್ಲಿ ಹೇಳಿರುವ ಸಮತ್ವವು ಎಲ್ಲಾ ಆತ್ಮರುಗಳಿಗೂ ಜ್ಞಾನೈಕಾಕಾರತೆಯಿಂದ ತೋರಿಬರುವ ಸಮತ್ವವೆಂದು ತಿಳಿಯತಕ್ಕದ್ದು. ಯೋಗ ಶಬ್ದವೂ ಕೂಡ ಅನೇಕ ಕಡೆ ಭಿನ್ನಾರ್ಥಗಳು ಹೊಂದಿರುವವರಿಂದ, ಯೋಗಶಬ್ದದ ವಿಲಕ್ಷಣಾಭಿಪ್ರಾಯವನ್ನು ಸಮತ್ವಂ ಯೋಗ ಉಚ್ಯತೇ ಎಂದು ವಿವರಿಸಲ್ಪಟ್ಟಿತು. ಅದನ್ನೇ ವ್ಯಾಖ್ಯಾನಮಾಡುತ್ತಾರೆ. ತದಿದಂ ಸಿದ್ಧ್ಯಸಿದ್ಧ್ಯೋಸ್ಸಮತ್ವಂ "ಯೋಗಸ್ಥಃ" ಇತ್ಯತ್ರ – ಅಂತಹ ಈ ಸಿದ್ಧಿ ಅಸಿದ್ಧಿಗಳಲ್ಲಿರುವ ಚಿತ್ತ ಸಮಾಧಾನವೇ ಯೋಗಸ್ಥಃ ಎಂಬ ಪದದಲ್ಲಿರುವ, ಯೋಗ ಶಬ್ದೇನೋಚ್ಯತೇ - ಯೋಗಶಬ್ದದಿಂದ ಹೇಳಲ್ಪಟ್ಟಿರುತ್ತದೆ. ಆದುದರಿಂದ ಯೋಗವೆಂದರೆ ಸಿದ್ಧ್ಯಸಿದ್ಧ್ಯೋಸ್ಸಮತ್ವರೂಪಂ ಚಿತ್ತಸಮಾಧಾನಂ - ಸಿದ್ಧಿ ಅಸಿದ್ಧಿಗಳಲ್ಲಿ ಸಮಭಾವದಿಂದಿರುವ ಚಿತ್ತಸಮಾಧಾನವು. ॥೪೮॥

ಭಾಷ್ಯಾವತಾರಿಕೆಯ ಅರ್ಥವು:—ಕಿಮರ್ಥಂ - ಏತಕ್ಕಾಗಿ, ಇದಂ - ಸಿದ್ಧ್ಯಸಿದ್ಧಿಗಳಲ್ಲಿ ಸಮವಾಗಿರುವ ಈ ಚಿತ್ತಸಮಾಧಾನವು, ಅಸಕೃದುಚ್ಯತೇ - ಬಾರಿಬಾರಿಗೂ ಹೇಳಲ್ಪಡುತ್ತದೆ; ಇತ್ಯತ ಆಹ - ಎಂಬ ಶಙ್ಕಾದಲ್ಲಿ ಹೇಳುತ್ತಾರೆ. ಅಸಕೃತ್ - ಬಾರಿಬಾರಿಗೂ ಎಲ್ಲಿ ಹೇಳಿರುತ್ತಾರೆಂದರೆ ಹಿಂದೆ "ಸುಖದುಃಖೇ ಸಮೇಕೃತ್ವಾ" ಎಂಬ ೩೮ನೆಯ ಶ್ಲೋಕದಲ್ಲಿ ಹೇಳಿ ಈ ಹಿಂದಿನ ಶ್ಲೋಕದಲ್ಲೂ ಉಪದೇಶಿಸಿರುತ್ತಾರೆ ಮತ್ತು ಹಿಂದೆ ೧೫ನೆಯ ಶ್ಲೋಕದಲ್ಲೂ ಹೇಳಿರುತ್ತಾರೆ. ಆದುದರಿಂದ ಅಸಕೃದುಚ್ಯತೇ ಎಂಬ ಪ್ರಯೋಗವು.

ಮೂಲಕ್ಕೆ ಅರ್ಥವು:—ಹೇ ಧನಂಜಯ - ಓ ಅರ್ಜುನನೇ, ಬುದ್ಧಿಯೋಗಾತ್ - ಸಿದ್ಧ್ಯಸಿದ್ಧಿಗಳಲ್ಲಿ ಚಿತ್ತ ಸಮಾಧಾನವುಳ್ಳ ಬುದ್ಧಿಯಿಂದ ಯುಕ್ತವಾದ ಕರ್ಮಕ್ಕಿಂತಲೂ, ಕರ್ಮ-ಸಾಧಾರಣವಾದ ಅಂತಹ ಚಿತ್ತ ಸಮಾಧಾನ ವಿಲ್ಲದ ಕಾಮ್ಯ ಕರ್ಮವು, ದೂರೇಣಹ್ಯವರಂ - ತುಂಬಾ ನಿಕೃಷ್ಟವಾದುದು; ಗಜಕ್ಕೂ ಅಜಕ್ಕೂ ಎಷ್ಟು ಅಂತರವೋ, ಸಿಂಹಕ್ಕೂ ನಾಯಿಗೂ ಎಷ್ಟು ಅಂತರವೋ, ಅಷ್ಟು ವ್ಯತ್ಯಾಸವೆಂಬ ಭಾವವು. ಆದುದರಿಂದ ಪರಮ ಹಿತೋಪದೇಶವನ್ನು ಶ್ರೀಕೃಷ್ಣಭಗವಾನ್ ಮಾಡುವವರಾಗಿ ಇವೆರಡಕ್ಕೂ ಅಷ್ಟು ಉತ್ಕೃಷ್ಟಾಪಕೃಷ್ಟತೆ ಹೇಗೆ ಎಂಬುದನ್ನು ಪ್ರದರ್ಶಿಸುತ್ತಾರೆ. ಬುದ್ಧೌ ಶರಣಮನ್ವಿಚ್ಛ - ಅಂತಹ ಮನಸ್ಸಮಾಧಾನವಿರುವ ಬುದ್ಧಿಯಲ್ಲಿ ಆಶ್ರಯವನ್ನು ಅಪೇಕ್ಷಿಸು ಎಂದರೆ ಅಂತಹ ಬುದ್ಧಿಯನ್ನು ಆಶ್ರಯಿಸು, ನಿನಗದು ಮೋಕ್ಷಸಾಧನಭೂತವಾದುದಾಗುತ್ತದೆಂಬ ಭಾವವು; ಫಲಾಭಿಸಂಧಿಯಿಲ್ಲದೆ, ಅವಾಂತರ ಫಲರೂಪವಾದ ಸಿದ್ಧ್ಯಸಿದ್ಧಿಗಳಲ್ಲೂ ಸಮಚಿತ್ತನಾದರೆ ನಿನಗೆ ಅದು ಮೋಕ್ಷಸಾಧನಭೂತವಾಗುತ್ತದೆ. ಹಾಗಲ್ಲದೆ ಫಲಸಙ್ಗವನ್ನಿಟ್ಟು ಕರ್ಮಮಾಡುವವರಿಗಾದರೋ ಹೇಗೆಎಂಬುದನ್ನುಹೇಳುತ್ತಾರೆ, ಫಲಹೇತವಃ - ಕರ್ಮಮಾಡುವದರಲ್ಲಿ ಫಲವನ್ನೇ ಹೇತುವಾಗಿ ಉಳ್ಳವರು ಅಥವಾ ಫಲಕ್ಕೆ ಕಾರಣಭೂತರು ಎಂದರೆ ಫಲಾಕಾಂಕ್ಷಿಗಳು, ಕೃಪಣಾಃ - ದೀನರಾದವರು ಎಂದರೆ ಪುನಃ ಸಂಸಾರದಲ್ಲೇ

ಭಾ. ಯೋಽಯಂ ಪ್ರಧಾನ ಫಲತ್ಯಾಗ ವಿಷಯೋಽವಾನ್ತರ ಫಲ ಸಿದ್ಧ್ಯಸಿದ್ಧ್ಯೋಸ್ಸಮತ್ವ ವಿಷಯಶ್ಚ ಬುದ್ಧಿಯೋಗಃ, ತದ್ಯುಕ್ತಾತ್ಕರ್ಮಣಃ ಇತರತ್ ಕರ್ಮ ದೂರೇಣಾವರಂ-ಮಹದಿದಂ ದ್ವಯೋ ರುತ್ಕರ್ಷಾಪಕರ್ಷರೂಪಂ ವೈರೂಪ್ಯಂ. ಉಕ್ತ ಬುದ್ಧಿಯೋಗ ಯುಕ್ತಂ ಕರ್ಮ, ನಿಖಿಲ ಸಾಂಸಾರಿಕ ದುಃಖಂ ವಿನಿವರ್ತ್ಯ, ಪರಮ ಪುರುಷಾರ್ಥ

ಬಿದ್ದು ನರಳುವವರಾದುದರಿಂದ ದೀನರು, ಫಲಾಕಾಂಕ್ಷಿಗಳು ಸಂಸಾರದುಃಖವನ್ನು ಪುನಃಪುನಃ ಅನುಭವಿಸುವವರಿಂದಲೂ, ಫಲಾಭಿಸಂಧಿರಹಿತರಾಗಿ ಕರ್ಮ ಮಾಡುವವರು ಉತ್ತರೋತ್ತರ ಮೋಕ್ಷರೂಪ ನಿರತಿಶಯ ಸುಖವನ್ನು ಹೊಂದುವವರಿಂದಲೂ, ಅಜಗಜನ್ಯಾಯವು; ಆದುದ ರಿಂದ ಮೊದಲನೆಯದು ಪರಮ ನಿಕೃಷ್ಟವು, ಎರಡನೆಯದು ಸರ್ವೋತ್ಕೃಷ್ಟವು ಎಂಬ ಭಾವವು. ಈ ಶ್ಲೋಕದಲ್ಲಿ "ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾತ್" ಎಂದು ಇರುವದರಿಂದ ಜ್ಞಾನಕ್ಕಿಂತಲೂ ಕರ್ಮವು ನಿಕೃಷ್ಟವೆಂದು ಭಾವಿಸಿ, ಶಾಸ್ತ್ರಜನ್ಯ ಜ್ಞಾನ ಉಂಟಾದವನಿಗೆ ಕರ್ಮವು ಅನಾವಶ್ಯಕವೆಂದು ಕೆಲವರು ಅಭಿಪ್ರಾಯಪಡುವರು ; ಇಲ್ಲಿ ಜ್ಞಾನಯೋಗದ ಮಾತೇ ಇಲ್ಲವು. ಅದೂ ಅಲ್ಲದೆ ಕರ್ಮಯೋಗ ಮಾಹಾತ್ಮ್ಯೆಯನ್ನು ಹಿಂದೆ ಹೇಳಿ ಅದಕ್ಕೆ ವಿರುದ್ಧವಾದ ಅರ್ಥವನ್ನು ಎಂದಿಗಾದರೂ ಉಪದೇಶಿಸುತ್ತಾರೆಯೋ ? "ಜ್ಯಾಯಸೀ ಚೇತ್" ಎಂದು ಮುಂದೆ ಕರ್ಮಯೋಗ ನಿಷ್ಠೆಯನ್ನೇ ಕೊಂಡಾಡುವಾಗ ದೂರೇಣಹ್ಯವರಂ ಎಂದು ಇಲ್ಲಿ ನಿಂದಿಸುತ್ತಾರೆಯೋ? ಅರ್ಥ ಹೇಳುವಾಗ ಪೂರ್ವಾಪರ ವಿರುದ್ಧವಾಗದಹಾಗೆ ಪ್ರಕರಣ ಸಂಗತಿಗಳಿಗನುಗುಣವಾಗಿ ಅರ್ಥವನ್ನು ಹೇಳತಕ್ಕದ್ದಾಗಿರುತ್ತದೆ. ಹೀಗೆ ಜ್ಞಾನವನ್ನು ಪ್ರಶಂಸಿಸುವದಕ್ಕಾಗಿ ಕರ್ಮವನ್ನು ನಿಂದಿಸಿದರೆ, ತಸ್ಮಾದ್ಯೋಗಾಯ ಯುಜ್ಯಸ್ವ, ಯೋಗಃ ಕರ್ಮಸು ಕೌಶಲಮ್, ಎಂಬಲ್ಲಿ ಪುನಃ ಕರ್ಮವೇ ಪ್ರಶಂಸಿಸಲ್ಪಟ್ಟಿರುವದು ವಿರುದ್ಧವಲ್ಲವೇ ?

ಭಾಷ್ಯಾರ್ಥವು:—ಪ್ರಧಾನ ಫಲತ್ಯಾಗವಿಷಯಃ - ಮುಖ್ಯವಾದ ಫಲದ ತ್ಯಾಗವಿಷಯವಾದುದಾಗಿಯೂ, ಅವಾನ್ತರ ಫಲಸಿದ್ಧ್ಯ ಸಿದ್ಧ್ಯೋಃ ಸ್ಸಮತ್ವ ವಿಷಯಶ್ಚ - ಮಧ್ಯೆ ಉಂಟಾಗ ತಕ್ಕ ಫಲಗಳ ಸಿದ್ಧಿ ಮತ್ತು ಅಸಿದ್ಧಿಗಳಲ್ಲಿ ಚಿತ್ತಸಮಾಧಾನವಿಷಯವಾದುದಾಗಿಯೂ ಇರುವ, ಯಃ - ಯಾವ, ಅಯಂ ಬುದ್ಧಿಯೋಗಃ - ಈ ಬುದ್ಧಿಯೋಗವೆಂದು ಹೇಳಲ್ಪಟ್ಟಿತೋ, ತದ್ಯುಕ್ತಾತ್ಕರ್ಮಣಃ-ಅಂತಹ ಬುದ್ಧಿಯಿಂದ ಕೂಡಿದ ಕರ್ಮಕ್ಕಿಂತಲೂ, ಇದು ಬುದ್ಧಿಯೋಗಾತ್ ಎಂಬುದರ ತಾತ್ಪರ್ಯವು, ಇತರತ್ ಕರ್ಮ - ಬೇರೆಯಾದ ಕರ್ಮವು ಎಂದರೆ ಫಲಕ್ಕಾಗಿ ಮಾಡುವ ಅಂತಹ ಬುದ್ಧಿಯೋಗದಿಂದ ಕೂಡದೇ ಇರುವ ಫಲಕಾಮನೆಯಿಂದ ಮಾಡಿದ ಕಾಮ್ಯ ಕರ್ಮವು, ದೂರೇಣಹ್ಯವರಂ ಎಂದರೆ ಮಹದಿದಂ ದ್ವಯೋರುತ್ಕರ್ಷಾಪಕರ್ಷರೂಪಂ ವೈರೂಪ್ಯಂ – ಎರಡಕ್ಕೂ ಇರುವ ಈ ಉತ್ಕರ್ಷಾಪಕರ್ಷ ರೂಪವ್ಯತ್ಯಾಸವು ಮಹತ್ತಾದುದು. ಇಲ್ಲಿ ಬುದ್ಧಿಯೋಗವು ಎಂತಾದ್ದೆಂದರೆ ಪ್ರಧಾನ ಫಲದ ತ್ಯಾಗವಿರಬೇಕು, ಸಿದ್ಧ್ಯಸಿದ್ಧಿಗಳಲ್ಲಿ ಸಮ ಚಿತ್ತವು ಇರಬೇಕೆಂದು ಹೇಳಿರುವದರಿಂದ, ಕಾಮ್ಯ ಕರ್ಮಗಳನ್ನು ಸ್ವರೂಪತಃ ನಿಂದಿಸಬೇಕೆಂದು ಹೇಳಲಿಲ್ಲವು; ಕರ್ಮಯೋಗಕ್ಕೆ ಅವೂ ಆವಶ್ಯಕವೇ. ಆದರೆ ಪ್ರಧಾನ ಫಲತ್ಯಾಗವು ಉಪದೇಶಿಸಲ್ಪಟ್ಟಿತು; ಸಿದ್ಧ್ಯಸಿದ್ಧಿಗಳಲ್ಲಿ ಸಮಚಿತ್ತತೆಯೂ ಹೇಳಲ್ಪಟ್ಟಿತು. ಬುದ್ಧಿಯೋಗದಿಂದ ಮಾಡುವ ಕರ್ಮಕ್ಕೂ, ಅದು ಇಲ್ಲದೆ ಫಲಾಪೇಕ್ಷೆಯಿಂದ ಮಾಡುವ ಕರ್ಮಕ್ಕೂ, ಇರುವ ವ್ಯತ್ಯಾಸವು ಹೇಳಲ್ಪಟ್ಟಿತು. ಅಷ್ಟು ವ್ಯತ್ಯಾಸವು ಹೇಗೆ ಎಂಬುದನ್ನು ಮುಂದೆ ವ್ಯಕ್ತಪಡಿಸುತ್ತಾರೆ. ಉಕ್ತಬುದ್ಧಿ ಯೋಗಯುಕ್ತಂ ಕರ್ಮ - ಮೇಲೆ ಫಲಪಕ್ಷವಿಲ್ಲದೆಯೂ ಅವಾಂತರ ಫಲವಾದ ಸಿದ್ಧ್ಯಸಿದ್ಧಿಯಲ್ಲಿ ಸಮಚಿತ್ತತೆಯೂ ಇರಬೇಕೆಂದು ಹೇಳಲ್ಪಟ್ಟ ಬುದ್ಧಿಯೋಗದಿಂದ

ಭಾ. ಲಕ್ಷಣಂಚ ಮೋಕ್ಷಂ ಪ್ರಾಪಯತಿ, ಇತರದಪರಿಮಿತದುಃಖರೂಪಂ ಸಂಸಾರಮಿತಿ. ಅತಃ ಕರ್ಮಣಿ ಕ್ರಿಯಮಾಣೇ ಉಕ್ತಾಯಾಂ ಬುದ್ಧೌ ಶರಣಮನ್ವಿಚ್ಛ; ಶರಣಂ-ವಾಸ ಸ್ಥಾನಮ್; ತಸ್ಯಾಮೇವ ಬುದ್ಧೌ ವರ್ತಸ್ವೇತ್ಯರ್ಥಃ. ಕೃಪಣಾಃ ಫಲಹೇತವಃ - ಫಲಸಙ್ಗಾದಿನಾ ಕರ್ಮ ಕುರ್ವಾಣಾಃ, ಕೃಪಣಾಃ - ಸಂಸಾರಿಣೋ ಭವೇಯುಃ ॥ ೪೯ ॥

ಕೂಡಿದ ಕರ್ಮವು, ನಿಖಿಲಸಾಂಸಾರಿಕ ದುಃಖಂ ವಿನಿವರ್ತ್ಯ - ಸಮಸ್ತ ಸಂಸಾರ ದುಃಖವನ್ನೂ ಹೋಗಲಾಡಿಸಿ, ಪರಮ ಪುರುಷಾರ್ಥವಾದ, ಮೋಕ್ಷಂಚ-ಮೋಕ್ಷವನ್ನೂ ಕೂಡ, ಪ್ರಾಪಯತಿ - ಹೊಂದಿಸುತ್ತದೆ; ಇತರತ್ - ಅಂತಹ ಬುದ್ಧಿಯೋಗವಿಲ್ಲದೆ, ಅದಕ್ಕಿಂತಲೂ ಬೇರೆಯಾದ ಫಲಕ್ಕಾಗಿ ಮಾಡುವ ಕಾಮ್ಯ ಕರ್ಮವಾದರೋ, ಅಪರಿಮಿತ ದುಃಖರೂಪವಾದ, ಸಂಸಾರಂ ಪ್ರಾಪಯತೀತಿ – ಸಂಸಾರವನ್ನು ಹೊಂದಿಸುತ್ತದೆ, ಹೀಗೆ ಎರಡಕ್ಕೂ ಮಹತ್ತಾದ ವ್ಯತ್ಯಾಸವು ಎಂಬ ಭಾವವು. ಒಂದು ನಿರತಿಶಯ ಸುಖರೂಪವಾದ ಮೋಕ್ಷವನ್ನೂ ಇನ್ನೊಂದು ಅಪರಿಮಿತ ದುಃಖ ರೂಪವಾದ ಸಂಸಾರವನ್ನೂ ಹೊಂದಿಸುವದರಿಂದ ಮೊದಲನೆಯದು ಪರಮೋತ್ಕೃಷ್ಟವು, ಎರಡನೆಯದು ಪರಮನಿಕೃಷ್ಟವು ಎಂಬ ತಾತ್ಪರ್ಯವು; ಕಾಮ್ಯಕರ್ಮಗಳು ದಿವ್ಯಗಳಾದ ಸ್ವರ್ಗಾದಿ ಪುರುಷಾರ್ಥಗಳನ್ನು ಹೊಂದಿಸುವದಿಲ್ಲವೋ ? ಎಂದರೆ ಅವುಗಳೂ ಕೂಡ ಅಲ್ಪಾಸ್ಥಿರಗಳಾದುದರಿಂದ ಮೋಕ್ಷ ಫಲಕ್ಕೂ ಅವುಗಳಿಗೂ ತುಂಬಾ ವ್ಯತ್ಯಾಸವೆಂದು ತೋರಿಸುವವಕ್ಕಾಗಿ ಇಲ್ಲಿ, ಪರಮ ಪುರುಷಾರ್ಥರೂಪ ವೆಂದು ಪರಮ ಶಬ್ದವನ್ನುಪಯೋಗಿಸಿರುತ್ತಾರೆ, ಮೂಲದಲ್ಲಿರುವ ಹಿ ಶಬ್ದದಿಂದ ಇಷ್ಟು ಮಹತ್ತಾದ ವ್ಯತ್ಯಾಸ ಉಂಟೆಂಬುದು ನಿನಗೂ ತಿಳಿದವಿಷಯವೇ, ಆದುದರಿಂದ ನಿತ್ಯಸತ್ವಸ್ಥನಾದ ಅರ್ಜುನನಾದ ನೀನೂ ಒಪ್ಪತಕ್ಕದ್ದಾದುದರಿಂದ ಬುದ್ಧೌ ಶರಣಮನ್ವಿಚ್ಛ ಎಂದು ಪರಮ ಹಿತೋಪದೇಶವನ್ನು ಮಾಡುತ್ತಾರೆ, ಅತಃ - ಆ ಕಾರಣದ ದೆಶೆಯಿಂದ, ಕರ್ಮಣಿ ಕ್ರಿಯಮಾಣೇ - ಮಾಡುವ ಕರ್ಮದಲ್ಲಿ ಉಕ್ತಾಯಾಂ ಬುದ್ಧೌ - ಮೇಲೆ ಹೇಳಿದಂತಹ ಫಲಾಭಿಸಂಧಿ ಯಿಲ್ಲದ ಚಿತ್ತಸಮಾಧಾನವುಳ್ಳ ಬುದ್ಧಿಯಲ್ಲಿ, ಶರಣಮನ್ವಿಚ್ಛ - ಆಶ್ರಯವನ್ನಪೇಕ್ಷಿಸು, ಶರಣಂ ವಾಸಸ್ಥಾನಂ - ಇಲ್ಲಿ ಶರಣಶಬ್ದಕ್ಕೆ ವಾಸಸ್ಥಾನ, ಗೃಹವೆಂಬರ್ಥವು. ಶರಣ ಶಬ್ದಕ್ಕೆ "ಉಪಾಯೇ ಗೃಹರಕ್ಷಿತ್ರೋಃ ಶಬ್ದಶ್ಶರಣಮಿತ್ಯಯಂ" ಎಂಬ ಅಹಿರ್ಬುಧ್ನ್ಯ ಸಂಹಿತಾವಾಕ್ಯಾನುಸಾರ, ಉಪಾಯ, ಗೃಹ, ರಕ್ಷಕನೆಂಬ ಮೂರರ್ಥವು, ಅವರಲ್ಲಿ ಇಲ್ಲಿ ಶರಣ ಶಬ್ದವು ಗೃಹ ಎಂಬರ್ಥದಲ್ಲಿ ಉಪಯೋಗಿಸಿರುವವರಿಂದ, ಆಶ್ರಯಿಸುವ ಸ್ಥಾನವೆಂಬರ್ಥವು; ಬುದ್ಧೌ ಶರಣಮನ್ವಿಚ್ಛ ಎಂದು ಹೇಳಿದುದರಿಂದ ಕರ್ಮಗಳು ನಿಂದಿಸಲ್ಪಟ್ಟು ಜ್ಞಾನವೇ ಶ್ಲಾಘಿಸಲ್ಪಟ್ಟಿತೆಂಬ ಸಾಂಖ್ಯಾಭಿಪ್ರಾಯವು ಸರಿಯಲ್ಲವೆಂದು ಹೇಳುವವಕ್ಕಾಗಿ "ಕರ್ಮಣಿ ಕ್ರಿಯಮಾಣೇ" ಎಂಬ ಪ್ರಯೋಗವು. ಈ ವಾಕ್ಯ ತಾತ್ಪರ್ಯವೇನೆಂದರೆ ತಿಳಿಸುತ್ತಾರೆ. ಶರಣ ಶಬ್ದಕ್ಕೆ ವಾಸಸ್ಥಾನವೆಂದು ಅರ್ಥಮಾಡಿದವರ ತಾತ್ಪರ್ಯವೇನೆಂಬುದನ್ನು ತಿಳಿಸುತ್ತಾರೆ. ತಸ್ಯಾಮೇವ ಬುದ್ಧೌ ವರ್ತಸ್ವೇತ್ಯರ್ಥಃ - ಅಂತಹ ಬುದ್ಧಿಯೋಗದಲ್ಲೇ ಇರುವವನಾಗು ಎಂಬ ತಾತ್ಪರ್ಯವು. ಅಂತಹ ಬುದ್ಧಿಯೋಗವಿಲ್ಲದವರ ದುರ್ದೆಶೆ ಎಂಥಾದ್ದೆಂದರೆ ತಿಳಿಸುತ್ತಾರೆ:—ಕೃಪಣಾಃ, ಫಲಹೇತವಃ ಎಂದರೆ ಫಲಸಙ್ಗಾದಿನಾ ಕರ್ಮ ಕುರ್ವಾಣಾಃ-ಇದು ಫಲಹೇತವಃ ಎಂಬುದರ ವ್ಯಾಖ್ಯಾನವು, ಫಲಸಙ್ಗ ಮೊದಲಾದವುಗಳಿಂದ ಕರ್ಮವನ್ನು ಮಾಡುವವರು, ಕೃಪಣಾಃ ಎಂದರೆ ಸಂಸಾರಿಣಃ - ದುಃಖಭಾಜ್ಯಗಳಾದ ಸಂಸಾರಿಗಳು, ಭವೇಯುಃ - ಆಗುವರು. ಈ ಸಂದರ್ಭದಲ್ಲಿ ಯಾವುದು ನಿಂದಿಸಲ್ಪಟ್ಟದುದು ಎಂಬುದನ್ನು ವಿಶದವಾಗಿ ತಿಳಿಯತಕ್ಕದ್ದಾಗಿರುತ್ತದೆ. ಇದು ವಿಹಿತ ಕರ್ಮಗಳ ನಿತ್ಯನೈಮಿತ್ತಿಕ ಕಾಮ್ಯಕರ್ಮಗಳ ವಿಷಯವು, ಪ್ರಕರಣವು ಕರ್ಮಯೋಗವು. ಕರ್ಮಯೋಗಕ್ಕೆ

**ಮೂ. ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತ ದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ, ಯೋಗಃ ಕರ್ಮಸು ಕೌಶಲಮ್ ॥ ೫೦.**

ಇವು ಮೂರೂ ಬೇಕು. ಆದುದರಿಂದ ಕರ್ಮಗಳು ನಿಂದಿಸಲ್ಪಡಲಿಲ್ಲವು, ಇವುಗಳ ಅನುಷ್ಠಾನದಿಂದ ಫಲಗಳೂ ಉಂಟು, ಅವೂ ನಿಂದಿಸಲ್ಪಡಲಿಲ್ಲವು; ಇನ್ನು ಯಾವುದು ನಿಂದಿಸಲ್ಪಟ್ಟಿದುದು ಎಂದರೆ ಫಲಾಭಿ ಸಂಧಿಯಿಂದ ಇವುಗಳ ಅನುಷ್ಠಾನವು. ಹಾಗಾದರೆ ಯಾವುದು ಶ್ಲಾಘಿಸಲ್ಪಟ್ಟಿದುದು ಎಂದರೆ ಫಲಾಭಿ ಸಂಧಿರಹಿತ ಬುದ್ಧಿಯೋಗದಿಂದ ಅವುಗಳ ಅನುಷ್ಠಾನವು, ಇದು ಶ್ಲೋಕದ ಸಾರಭೂತಾರ್ಥವು, ಇಲ್ಲಿ ಕೃಪಣಾಃ ಎಂದು ಸಂಸಾರಿಗಳನ್ನು ಹೇಳಿ ಮುಂದೆ ಕೃಪಣರಲ್ಲದವರು ಯಾರೆಂಬುದನ್ನು ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ. ॥೪೯॥

**ಮೂಲಕ್ಕೆ ಅರ್ಥವು :—**ಬುದ್ಧಿಯೋಗದಿಂದ ಕರ್ಮಾನುಷ್ಠಾನ ಮಾಡುವ ವಿವೇಕಿಗಳಿಗುಂಟಾಗುವ ಪ್ರಯೋಜನವನ್ನು ತಿಳಿಸುತ್ತಾರೆ. ಅವರುಗಳಿಗೆ ಪೂರ್ವಸಂಚಿತವಾದ ಸಕಲ ಸುಕೃತ ದುಷ್ಕೃತಗಳೂ ನಾಶವಾಗುತ್ತವೆಂದುಪದೇಶಿಸುತ್ತಾರೆ. **ಬುದ್ಧಿಯುಕ್ತಃ** - ಕರ್ಮಗಳನ್ನು ಮಾಡುವಾಗ ಮೇಲೆ ಹೇಳಲ್ಪಟ್ಟ ಬುದ್ಧಿಯೋಗದಿಂದ ಕೂಡಿದವನು,ಫಲಾಭಿಸಂಧಿ ಇಲ್ಲದೆ ನಿತ್ಯನೈಮಿತ್ತಿಕ ಕಾಮ್ಯ ಕರ್ಮಾನುಷ್ಠಾನಮಾಡುವವನು, **ಇಹ** - ಈ ಕರ್ಮಯೋಗಾನುಷ್ಠಾನ ಕಾಲದಲ್ಲಿ ಅಥವಾ ಈ ಜನ್ಮದಲ್ಲೇ, **ಉಭೇ ಸುಕೃತ ದುಷ್ಕೃತೇ** - ಪುಣ್ಯ ಪಾಪಗಳೆರಡನ್ನೂ, **ಜಹಾತಿ**-ಬಿಟ್ಟು, ಬಿಡುವನು. ಪುಣ್ಯವೂ ಕೂಡ ಪಾಪದಹಾಗೆ ಮೋಕ್ಷಕ್ಕೆ ಪ್ರತಿಬಂಧಕವೆಂಬ ಭಾವವು, **"ಪುಣ್ಯಪಾಪೇವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ"** ಎಂಬ ಶ್ರುತಿಯು ಈ ಅಭಿಪ್ರಾಯವನ್ನು ತಿಳಿಸುತ್ತದೆ. ಇದರಿಂದ ಪುಣ್ಯವೂ ಪಾಪಕ್ಕೆ ಸಮಾನವಾದುದೇ ಎಂಬ ಭಾವವು. ಗೀತೆಯಲ್ಲಿಯೂ ಮುಂದೆ **"ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶಂತಿ"** ಎಂದೂ, **"ಆಬ್ರಹ್ಮ ಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ"** ಎಂದೂ (ಗೀ. ೮. ೧೬) ಈ ಅಭಿಪ್ರಾಯವೇ ಹೇಳಲ್ಪಡುತ್ತದೆ. ಕೆಲವರು ಇಲ್ಲಿ ಇಹ ಎಂದು ಹೇಳಿರುವದರಿಂದ, ಸುಕೃತ ದುಷ್ಕೃತಗಳನ್ನು ಇಲ್ಲೇ ಕಳೆದುಕೊಳ್ಳುವುದರಮೂಲಕ ಜೀವನ್ಮುಕ್ತಿಯು ಲಭಿಸುತ್ತದೆಂದು ಅಭಿಪ್ರಾಯಪಡುವರು. ಇಲ್ಲಿ ಮುಕ್ತನ ವಿಷಯ ಹೇಳುವ ಪ್ರಕರಣವಲ್ಲವು. ಯೋಗಕ್ಕೆ ಪ್ರತಿಬಂಧಕವಾಗಿರುವ ಪುಣ್ಯಪಾಪಗಳು ತೊಲಗುತ್ತವೆ ಎಂಬುದು ಪ್ರಕರಣವು. **ತಸ್ಮಾತ್**-ಆ ಕಾರಣದಿಂದ, **ಯೋಗಾಯ** - ಹಿಂದೆ ಹೇಳಿದ ಬುದ್ಧಿಯೋಗಕ್ಕಾಗಿ, **ಯುಜ್ಯಸ್ವ** - ಸನ್ನಾಹಮಾಡು, ಏಕೆಂದರೆ, **ಕರ್ಮಸು** - ಕರ್ಮಗಳಲ್ಲಿ ಎಂದರೆ, ಕರ್ಮಾನುಷ್ಠಾನಗಳಲ್ಲಿ ಎಂಬ ಭಾವವು, **ಯೋಗಃ**-ಈ ಬುದ್ಧಿಯೋಗವು, **ಕೌಶಲಂ** - ಕಷ್ಟಸಾಧ್ಯ ಪ್ರಾಜ್ಞತೆಯನ್ನುಳ್ಳದುದು, ಎಂದರೆ ವಿಶೇಷ ಪ್ರಯೋಜನಕಾರಿಯಾದುದು ; ಕುಶಲತೆ ಯಾವುದೆಂದರೆ, ಅತ್ಯುತ್ಕೃಷ್ಟಪ್ರಯೋಜನವನ್ನು ಹೊಂದುವದೇ ; ಆ ಕರ್ಮಯೋಗವನ್ನು ಫಲಾಭಿಸಂಧಿಯಿಲ್ಲದೆ ಅನುಷ್ಠಿಸುವದರಿಂದ ಪ್ರಾಪ್ತವಾಗುವ ವಿಶೇಷ ಪ್ರಯೋಜನವೇನು ಎಂದರೆ **ಜಹಾತೀಹ ಉಭೇ ಸುಕೃತ ದುಷ್ಕೃತೇ** ಎಂಬ ಪ್ರಯೋಗದಿಂದ ತೋರುವ, ಮುಂದೆ ಆಜ್ಞಿಯಾದ ಭಕ್ತಿಯೋಗಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪುಣ್ಯ ಪಾಪಗಳನ್ನು ಕಳೆದುಕೊಳ್ಳುವನು. ಅಂತಹ ಪಾಪಗಳು ತೊಲಗುವದರಿಂದ ಜ್ಞಾನವು ಪವಿತ್ರವಾದುದಾಗಿ ತನ್ಮೂಲಕ **"ಶುದ್ಧಭಾವಂಗತಃ"** ಸರ್ವೇಶ್ವರನನ್ನು ಉಪಾಸಿಸುವದರಲ್ಲಿ ಪ್ರವರ್ತಿಸುವನು ಎಂಬ ಭಾವವೂ ಅರ್ಥವಾಗಿ ತೋರಿಬರುತ್ತದೆ. ಆದರೆ ಸರ್ವಪುಣ್ಯಪಾಪಗಳೂ ತೊಲಗುತ್ತವೆಯೋ, ಎಂದರೆ ಸರ್ವವೂ ತೊಲಗಿದರೆ, ಒಡನೆ ದೇಹಾವಸಾನ ಉಂಟಾಗಿ ಮೋಕ್ಷ ಉಂಟಾಗಬೇಕಾಗುತ್ತದೆ. ಭಕ್ತಿಯೋಗವಿಲ್ಲದೆಯೂ ಪ್ರಾರಬ್ಧ ಕರ್ಮವು.

ಭಾ. ಬುದ್ಧಿಯೋಗ ಯುಕ್ತಸ್ತು ಕರ್ಮ ಕುರ್ವಾಣಃ ಉಭೇ ಸುಕೃತ ದುಷ್ಕೃತೇ ಅನಾದಿ ಕಾಲ ಸಂಚಿತೇ ಅನನ್ತೇ ಬಂಧ ಹೇತು ಭೂತೇ ಜಹಾತಿ. ತಸ್ಮಾದುಕ್ತಾಯ ಬುದ್ಧಿ

ಕಳೆಯದೆಯೂ ಮೋಕ್ಷವಿಲ್ಲವೆಂಬುದು ಶಾಸ್ತ್ರಸಿದ್ಧವು, ದೇಹವೆತ್ತಿರುವದೇ ಪ್ರಾರಬ್ಧ ಕರ್ಮೋಪ ಭೋಗಕ್ಕಾಗಿ, ಭಕ್ತಿಯೋಗನಿಷ್ಠನಿಗೆ ಭಕ್ತಿಯೋಗದ ಮೂಲಕ ಪರಮ ಪುರುಷಾರ್ಥ ಪ್ರಾಪ್ತಿ ಯೂ ಪ್ರಾರಬ್ಧ ಕರ್ಮವು ಕಳೆದುಹೋದನಂತರವೇ ಎಂಬುದು ಶ್ರುತಿ, ಸ್ಮೃತಿ ಸಿದ್ಧವು. ಪ್ರಾರಬ್ಧ ಕರ್ಮಕ್ಕೆ ಫಲ ಜನನಶಕ್ತಿಯುಂಟೆಂದು "ನಾಭುಕ್ತಂ ಕ್ಷೀಯತೇ ಕರ್ಮ" (ಬ್ರಹ್ಮ ವೈವರ್ತ. ಪ್ರ. ೨೬-೭೦) ಎಂಬ ಪ್ರಮಾಣದಿಂದ ಗ್ರಹಿಸಬಹುದು. ಕರ್ಮಯೋಗವನ್ನು ಅನುಷ್ಠಿಸಿ ಪರಬ್ರಹ್ಮೋಪಾಸನೆಯನ್ನು ಕೈಕೊಂಡವನಿಗೆ "ಏವಮೇವಂ ವಿದಿಪಾಪಂ ಕರ್ಮ ನಶ್ಲಿಷ್ಯತೇ, ಏವಂ ಹಾಸ್ಯ ಸರ್ವೇಪಾಪ್ಮಾನಃ ಪ್ರದೂಯನ್ತೇ" ಎಂದು ಹೇಳಿರುವ ಹಾಗೆ ಸುಕೃತ ದುಷ್ಕೃತಗಳೆರಡನ್ನೂ ಜಹಾತಿ-ಕಳೆದುಕೊಳ್ಳುತ್ತಾನೆ. ಆದರೆ, ಈ ಪ್ರಾರಬ್ಧವು ಕಳೆಯುವದಿಲ್ಲವೆಂಬುದು "ಅನಾರಬ್ಧ ಕಾರ್ಯೇ ಏವತು ಪೂರ್ವೇತದವಧೇಃ" ಎಂಬ (೪. ೧. ೧೫) ಬ್ರಹ್ಮಸೂತ್ರದಲ್ಲಿ ವ್ಯಕ್ತವು. ||೫೦||

**ಭಾಷ್ಯಾರ್ಥವು :— ಬುದ್ಧಿಯೋಗಯುಕ್ತಸ್ತು ಕರ್ಮ ಕುರ್ವಾಣಃ** - ಬುದ್ಧಿಯೋಗ ವೆಂದರೆ ಪ್ರಧಾನಫಲದಲ್ಲಿ, ಅಭಿಸಂಧಿಯಿಲ್ಲದೆಯೂ ಅವಾಂತರ ಫಲಗಳಲ್ಲಿ ಸಮಚಿತ್ತತೆಯಿಂದಲೂ, ಕರ್ಮಗಳನ್ನು ಮಾಡುವವನಾಗಿ, **ಉಭೇ ಸುಕೃತ ದುಷ್ಕೃತೇ** - ಪುಣ್ಯ ಪಾಪಗಳೆರಡನ್ನೂ, **ಜಹಾತಿ** – ಬಿಟ್ಟು ಬಿಡುತ್ತಾನೆ, ಇಹೈವ ಜಹಾತಿ ಎಂದಿರುವದರಿಂದ ಮುಂದೆ ಐದನೆಯ ಅಧ್ಯಾಯದ ೧೯ ನೆಯ ಶ್ಲೋಕದಲ್ಲಿ ಇಹೈವ ತೈರ್ಜಿತಸ್ಸರ್ಗಃ ಎಂದು ಹೇಳಿರುವಹಾಗೆ ಅಂತಹ ಬುದ್ಧಿಯುಕ್ತರಾಗಿ ಕರ್ಮಾನುಷ್ಠಾನಮಾಡುವವರು ಇಲ್ಲಿಯೇ ಸಂಸಾರಬಂಧವನ್ನು ನೀಗಿಕೊಳ್ಳುವಹಾಗೆ ಪುಣ್ಯ ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಪರಬ್ರಹ್ಮೋಪಾಸಕನಿಗೆ ಇಂತಹ ಬುದ್ಧಿಯೋಗದಿಂದ ಎಲ್ಲಾ ಪ್ರತಿಬಂಧಕಗಳೂ ತೊಲಗುತ್ತವೆ ಎಂಬುದು ಪ್ರಧಾನಾ ರ್ಥವು; ಈ ಪುಣ್ಯಪಾಪಗಳು ಅನಾದಿಕಾಲಸಂಚಿತಗಳಾಗಿ ಅನಂತಗಳು ಎಂದು ಹೇಳಿರುವ ಅಭಿಪ್ರಾಯದಿಂದ, ಈ ಉಪಾಸನಾಙ್ಗವಾದ ಬುದ್ಧಿಯುಕ್ತ ಕರ್ಮಾನುಷ್ಠಾನವಿಲ್ಲದೆ, ಅವುಗಳನ್ನು ಕಳೆದುಕೊಳ್ಳೋಣವು, ಅತಿ ದುಸ್ತರವೆಂಬುದೂ ಸೂಚಿತವು, ಆ ಸುಕೃತ ದುಷ್ಕೃತಗಳು ಎಂತವೆಂದರೆ ಹೇಳುತ್ತಾರೆ:—**ಅನಾದಿಕಾಲ ಸಂಚಿತೇ ಅನನ್ತೇ** - ಅನಾದಿಕಾಲದಿಂದಲೂ ಕೂಡಿಹಾಕಲ್ಪಟ್ಟಿದುದರಿಂದಲೇ ಅನಂತವಾದವುಗಳು ಮತ್ತು, **ಬಂಧಹೇತುಭೂತೇ** - ಪುನಃ ಸಂಸಾರ ಬಂಧಕ್ಕೆ ಕಾರಣಭೂತವಾದವುಗಳು, ಪಾಪವೇನೋ ಬಂಧಕ್ಕೆ ಕಾರಣವು, ಪುಣ್ಯವೂ ಬಂಧಕ್ಕೆ ಹೇತುವೇ ಎಂದರೆ, ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶಂತಿ-(ಗೀ. ೯, ೨೧) ಎಂದು ಮುಂದೆ ತಿಳಿಸಿರುವದರಿಂದ, ಬಂಧ ಹೇತುಭೂತವಾದುದೇ, ಎರಡೂ ಶೃಂಖಲವೇ, ಬೇಡಿಯೇ; ಪುಣ್ಯವು ಚಿನ್ನದಿಂದ ಮಾಡಿದ ಶೃಂಖಲವೆಂದೂ, ಪಾಪವು ಕಬ್ಬಿಣವೆಂದೂ ಬೇಕಾ ದರೆ ಹೇಳಬಹುದು. ಆ ಕಾರಣದಿಂದಲೇ ಸುಕೃತಮಾಡಿ "ರುದ್ರಾದಿತ್ಯವಸೂನಾಂ ಚ ತಥಾ ನ್ಯೇಷಾಂದಿವೌಕಸಾಂ। ಏತೇವೈನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ॥ (ಶಾನ್ತಿ. ೧೯೬.೬) ಎಂದು ಹೇಳಿರುವ ಹಾಗೆ ಇಂತವರ ಸ್ಥಾನಗಳನ್ನು ಹೊಂದಿದರೂ ಪರಮಾತ್ಮನ ದಿವ್ಯ ವೈಕುಂ ಠಕ್ಕೆ ಹೋಲಿಸಿದರೆ ಇವೆಲ್ಲಾ ನರಕಗಳೇ ಎಂದು ಶ್ರೀ ಭೀಷ್ಮರು ಯುಧಿಷ್ಠಿರನಿಗೆ ಉಪದೇಶಿಸಿ ರುತ್ತಾರೆ. ಈ ಸಂದರ್ಭದಲ್ಲಿ "ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾಮೃತ ಮಶ್ನುತೇ" ಎಂಬ ಶ್ರುತ್ಯರ್ಥವು ಅನುಸಂಧೇಯವು. ನಿತ್ಯ ನೈಮಿತ್ತಿಕಗಳಿಂದ ಕೂಡಿದ ಕರ್ಮ

ಭಾ. ಯೋಗಾಯ ಯುಜ್ಯಸ್ವ ; ಯೋಗಃ ಕರ್ಮಸು ಕೌಶಲಮ್ – ಕರ್ಮಸು ಕ್ರಿಯಮಾಣೇಷ್ವಯಂ ಬುದ್ಧಿಯೋಗಃ ಕೌಶಲಂ ಅತಿಸಾಮರ್ಥ್ಯಂ, ಅತಿಸಾಮರ್ಥ್ಯ ಸಾಧ್ಯ ಇತ್ಯರ್ಥಃ ‖ ೫೦ ‖

ಮೂ. ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।
ಜನ್ಮಬಂಧ ವಿನಿರ್ಮುಕ್ತಾಃ ಪದಂ ಗಚ್ಛನ್ತ್ಯನಾಮಯಂ ‖　　೫೧.

ಯೋಗಾನುಷ್ಠಾನವು ಸಂಸಾರವನ್ನು ದಾಟುವದಕ್ಕೆ ಸಹಕಾರಿಯು. ಬಂಧಕಗಳಾದ ಅನಾದಿಕಾಲದಿಂದ ಸಂಚಿತಗಳಾದ ಪುಣ್ಯಪಾಪಗಳೆಲ್ಲಾ ತೊಲಗುತ್ತವೆ. ಆಗ ಪವಿತ್ರೀಕೃತವಾದ ಮನಸ್ಸು, ಉಪಾಸನರೂಪವಾದ ಬ್ರಹ್ಮವಿದ್ಯೆಯಲ್ಲಿ ಪ್ರವರ್ತಿಸುವದರಿಂದ ಮೋಕ್ಷವನ್ನು ಅಂತಹ ಅಧಿಕಾರಿಯು ಪಡೆಯುವನು. ತಸ್ಮಾತ್ - ಆ ಕಾರಣದಿಂದ, ಉಕ್ತಾಯ ಬುದ್ಧಿಯೋಗಾಯ – ನಾನು ಈಗ ಪರಮಹಿತದಿಂದುಪದೇಶಿಸಿದ ಬುದ್ಧಿಯೋಗಕ್ಕಾಗಿ, ಯುಜ್ಯಸ್ವ - ಪ್ರಯತ್ನಪಡು, ಯೋಗಃ - ಈ ಯೋಗವು, ಕರ್ಮಸು - ಕರ್ಮಗಳಲ್ಲಿ, ಕೌಶಲಂ - ಎಂದರೆ ಕರ್ಮಸು ಕ್ರಿಯಮಾಣೇಷ್ವಯಂ ಬುದ್ಧಿಯೋಗಃ - ಕರ್ಮಗಳ ಅನುಷ್ಠಾನದಲ್ಲಿ ಈ ಬುದ್ಧಿಯೋಗವು, ಕೌಶಲಂ- ಅತಿ ಸಾಮರ್ಥ್ಯವುಳ್ಳದು ಎಂದರೆ ಅತಿಸಾಮರ್ಥ್ಯಸಾಧ್ಯ ಮಿತ್ಯರ್ಥಃ - ತುಂಬಾ ಸಾಮರ್ಥ್ಯದಿಂದ ಸಾಧ್ಯವಾದುದು ಎಂಬ ತಾತ್ಪರ್ಯವು. ಇಲ್ಲಿ ಯೋಗವೆಂದರೆ ಪ್ರಕರಣಾನುಗುಣವಾಗಿ ಬುದ್ಧಿಯೋಗವೆಂಬರ್ಥವೇ ವಿನಾ ಮಿಕ್ಕ ಅರ್ಥಗಳಲ್ಲವು. ಬುದ್ಧಿಯೋಗವನ್ನೇ ಕುರಿತು ಈಗ ಹೇಳುತ್ತಾ ಅದರ ಪ್ರಶಂಸೆಯಲ್ಲಿ ಯೋಗವೆಂದು ಪ್ರಯೋಗ ಮಾಡಿದರೆ ಬುದ್ಧಿಯೋಗವೆಂಬರ್ಥವೇ ವಿನಾ ಅನ್ಯಥಾ ಅರ್ಥ ಮಾಡುವದು ಪ್ರಕರಣವನ್ನು ದೂರೀಕರಿಸಿ ಹೇಳಿದಂತಾಗುವದು. ಆದುದರಿಂದ ಯೋಗವೆಂದರೆ ಅಯಂ ಬುದ್ಧಿಯೋಗಃ ಎಂಬ ಭಾಷ್ಯವು. ಈ ಶ್ಲೋಕದಲ್ಲಿ ಮುಖ್ಯವಾಗಿ ಹೇಳಲ್ಪಟ್ಟಿದುದು ಏನೆಂದರೆ- ಬುದ್ಧಿಯುಕ್ತ ಕರ್ಮಾನುಷ್ಠಾನದಿಂದ ಅನಿಷ್ಟಗಳಾಗಿ ಪ್ರತಿಬಂಧಕಗಳಾದ ಸುಕೃತ ದುಷ್ಕೃತಗಳು ತೊಲಗುವುವು ಎಂಬುದು. ಕೇವಲ ಯೋಗಶಬ್ದದಿಂದ ಜ್ಞಾನವು ಹೇಳಲ್ಪಟ್ಟತೆಂದು ಭಾವಿಸುವರು. ಇದು ಪ್ರಕರಣಕ್ಕೆ ಅನುಕೂಲಿಸುವದಿಲ್ಲವು. ಹಿಂದೆ ೪೮ ನೆಯ ಶ್ಲೋಕದಲ್ಲಿ "ಸಮತ್ವಂ ಯೋಗ ಉಚ್ಯತೇ" ಎಂದಿರುವದರಿಂದ, ಇಲ್ಲಿಯೂ ಯೋಗ ಶಬ್ದಾರ್ಥವು ಅದೇ ಎಂದು ಅಭಿಪ್ರಾಯಪಡುವರು, ಬುದ್ಧಿಯೋಗ, ಯೋಗ ಇತ್ಯಾದಿ ಶಬ್ದಗಳೆಲ್ಲಾ ಏಕಾಭಿಪ್ರಾಯವುಳ್ಳವುಗಳೇ, ಪ್ರಧಾನ ಫಲದಲ್ಲಿ ಅಭಿಸಂಧಿ ಇಲ್ಲದಿರೋಣವು ಮತ್ತು ಅವಾಂತರ ಫಲಗಳಲ್ಲಿ ಸಮತ್ವ ಬುದ್ಧಿಯಿಂದ ಚಿತ್ತಸಮಾಧಾನವು ಹೇಳಲ್ಪಟ್ಟತೆಂಬುದು ಸರಿಯಾದ ತಾತ್ಪರ್ಯವು.

**ಅವತಾರಿಕೆಯು** :—ಬುದ್ಧಿಯೋಗದಿಂದ ಮಾಡಲ್ಪಟ್ಟ ಕರ್ಮವು ಹೇಗೆ ಪರಮೋತ್ಕೃಷ್ಟವೆಂದು ತೋರಿಸುವದಕ್ಕಾಗಿ ಹಿಂದಿನ ಶ್ಲೋಕದಿಂದ ಅಂತಹ ಕರ್ಮಮಾಡುವವರಿಗೆ ಸುಕೃತ ದುಷ್ಕೃತಗಳು ತೊಲಗುವವು ಎಂಬುದರಿಂದ ಅವರಿಗೆ ಅನಿಷ್ಟ ನಿವೃತ್ತಿಯುಂಟೆಂದು ಉಪದೇಶಿಸಿದರು. ಈ ಶ್ಲೋಕದಲ್ಲಿ ಅಷ್ಟುಮಾತ್ರವೇ ಅಲ್ಲವು ಅವರಿಗೆ ಇಷ್ಟಪ್ರಾಪ್ತಿರೂಪ ಪರಮಪದವೂ ಸಿದ್ಧವೆಂದು ಹೇಳುತ್ತಾರೆ.

**ಮೂಲಕ್ಕೆ ಅರ್ಥವು** :—ಬುದ್ಧಿಯುಕ್ತಾಃ - ಹಿಂದೆ ನಾನು ಉಪದೇಶಿಸಿದ ಬುದ್ಧಿಯೋಗದಿಂದ ಕೂಡಿದವರು ಎಂದರೆ ಪ್ರಧಾನಫಲವನ್ನು ತ್ಯಜಿಸಿ, ಅಂತರಾಳಿಕ ಸಿದ್ಧ್ಯಸಿದ್ಧಿಯಲ್ಲಿ ಸಮಭಾವವುಳ್ಳ, ಮನೀಷಿಣಃ : ಪ್ರಾಜ್ಞರು, ಫಲಂತ್ಯಕ್ತ್ವಾ - ಸರ್ವ ಫಲವನ್ನೂ ತ್ಯಜಿಸಿ,

ಭಾ. **ಬುದ್ಧಿಯೋಗ ಯುಕ್ತಾಃ ಕರ್ಮಜಂ ಫಲಂ ತ್ಯಕ್ತ್ವಾ ಕರ್ಮಕುರ್ವಂತಃ, ತಸ್ಮಾತ್ ಜನ್ಮಬಂಧ ವಿನಿರ್ಮುಕ್ತಾಃ, ಅನಾಮಯಂ ಪದಂ ಗಚ್ಛಂತಿ. ಹಿ–ಪ್ರಸಿದ್ಧಂ, ಹ್ಯೇತತ್ಸರ್ವಾಸೂಪನಿಷತ್ಸ್ವಿತ್ಯರ್ಥಃ ||೫೧||**

---

**ಜನ್ಮಬಂಧ ವಿನಿರ್ಮುಕ್ತಾಃ** - ಜನ್ಮದಿಂದುಂಟಾಗುವ ಬಂಧ, ಅಥವಾ ಜನ್ಮರೂಪ ಬಂಧದಿಂದ ಬಿಟ್ಟವರಾಗಿ ಎಂದರೆ ಸಂಸಾರಬಂಧದಿಂದ ಬಿಡಲ್ಪಟ್ಟವರಾಗಿ, **ಅನಾಮಯಂ ಪದಂ** - ನಿರ್ದುಷ್ಟವಾದ ಪರಮಾರೋಗ್ಯಕರವಾದ ಕ್ಲೇಶರಹಿತವಾದ **ಪದಂ** ಎಂದರೆ ಸ್ಥಾನವನ್ನು ಕುರಿತು, **ಗಚ್ಛಂತಿ** - ಹೋಗುತ್ತಾರೆ. ಈ ಪದವು ಸ್ವಸ್ವರೂಪಪ್ರಾಪ್ತಿ, ದಿವ್ಯ ವೈಕುಂಠಪ್ರಾಪ್ತಿ, ಪ್ರಾಪ್ಯನಾದ ಶ್ರಿಯಃಪತಿಯ ಪ್ರಾಪ್ತಿ, ಈ ಮೂರನ್ನೂ ಒಳಗೊಂಡಿರುವ ಪದವನ್ನು ಕುರಿತು ಹೋಗುತ್ತಾರೆಂಬ ಭಾವವು ; **ಪದ್ಯತೇ ಗಮ್ಯತೇ ಇತಿ ಪದಂ** ಎಂಬ ವ್ಯುತ್ಪತ್ತಿಯಿಂದ ಈ ಮೂರರ್ಥವೂ ಸಮುಚ್ಚಯ ರೂಪದಲ್ಲಿ ಪ್ರಕೃತೋಚಿತವಾದುದು.

**ಭಾಷ್ಯಾರ್ಥವು :—ಬುದ್ಧಿಯುಕ್ತಾಃ** ಎಂದರೆ **ಬುದ್ಧಿಯೋಗಯುಕ್ತಾಃ**-ಬುದ್ಧಿಯೋಗದಿಂದ ಕೂಡಿದವರು, **ಕರ್ಮಜಂ ಫಲಂ** - ಪುಣ್ಯಪಾಪರೂಪ ಕರ್ಮಗಳಿಂದುಂಟಾದ ಫಲವನ್ನು ಎಂದರೆ ಸಂಸಾರ ಫಲವನ್ನು, **ತ್ಯಕ್ತ್ವಾ ಕರ್ಮಕುರ್ವಂತಃ** - ಪರಿತ್ಯಾಗಮಾಡಿ ಕರ್ಮವನ್ನು ಮಾಡುವವರು, **ಜನ್ಮಬಂಧವಿನಿರ್ಮುಕ್ತಾಃ** - ಜನ್ಮರೂಪವಾದ ಬಂಧದಿಂದ ಅಥವಾ ಜನ್ಮದಿಂದುಂಟಾದ ಬಂಧದಿಂದ ಬಿಡಲ್ಪಟ್ಟವರಾಗಿ, **ಅನಾಮಯಂ ಪದಂ** - ರೋಗಗಳಿಲ್ಲದ ಎಂದರೆ ಕ್ಲೇಶಗಳಿಲ್ಲದ ಪದವಾದ ಮೋಕ್ಷವನ್ನು, ಅಥವಾ ಪ್ರಕರಣಾನುಗುಣವಾಗಿ ಜೀವಸ್ವರೂಪವನ್ನು ಅಥವಾ ಪ್ರಾಪ್ಯವಾದ ಪರಬ್ರಹ್ಮನನ್ನು, **ಗಚ್ಛಂತಿ** - ಹೋಗಿ ಸೇರುವರು. ಮೂಲದಲ್ಲಿರುವ ಹಿ ಎಂಬುದರ ತಾತ್ಪರ್ಯವನ್ನು ತಿಳಿಸುತ್ತಾರೆ. ಹಿ ಎಂದರೆ ಪ್ರಸಿದ್ಧಂ - ಪ್ರಸಿದ್ಧವಾದುದಷ್ಟೆ, ಹೇಗೆಂದರೆ, **ಏತತ್** - ಈ ಅಭಿಪ್ರಾಯವು, **ಸರ್ವಾಸೂಪನಿಷತ್ಸು** - ಎಲ್ಲಾ ಉಪನಿಷತ್ತುಗಳಲ್ಲೂ ಪ್ರಸಿದ್ಧವೆಂಬ ಅಭಿಪ್ರಾಯವು, ಎಲ್ಲಿ ಎಂದರೆ :—

೧. **"ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯ ಮುಪೈತಿ"** (ಮುಂಡಕ ೩. ೧. ೩). ೨. **ಸ ಆಗಚ್ಛತಿ ವಿರಜಾಂ ನದೀಂ ತತ್ಸುಕೃತ ದುಷ್ಕೃತೇ ವಿಧೂನತೇ ||** (ಕೌಷೀತಕೀ). ೩. **ಯಥೇಷಿಕಾ ತೂಲ ಮಗ್ನೌ ಪ್ರೋತಂ ಪ್ರದೂಯೇತ, ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ ||** ೪ **"ಯಥಾ ಪುಷ್ಕರ ಪಲಾಶ ಆಪೋನ ಶ್ಲಿಷ್ಯಂತೇ ಏವಮೇವಂ ವಿದಿ ಪಾಪಂ ಕರ್ಮ ನಶ್ಲಿಷ್ಯಂತೇ" ||** (ಛಾಂ. ೪. ೧೪. ೩) ೫. **"ತದ್ವಿಷ್ಣೋಃ ಪರಮಂ ಪದಂ ಸದಾಪಶ್ಯಂತಿ ಸೂರಯಃ ದಿವೀವ ಚಕ್ಷುರಾತತಂ"** ಇತ್ಯಾದಿ. (ಸುಬಾಲ). ೬. **"ಯದಾ ಸರ್ವೇ ಪ್ರಮುಚ್ಯಂತೇ ಕಾಮಾಯೇಽಸ್ಯ ಹೃದಿಸ್ಥಿತಾಃ । ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ"** (ಕಠ. ೨. ೬. ೧೪.) ಇತ್ಯಾದ್ಯನೇಕ ಪ್ರಮಾಣಗಳಿಂದ ಹಿ-ಪ್ರಸಿದ್ಧವು.

**ಮೂಲಕ್ಕೆ ಅರ್ಥವು:—**ಕರ್ಮಗಳ ಫಲದಲ್ಲಿ ಆಶೆಯನ್ನಿಟ್ಟರೆ, ಆ ಫಲಗಳು ಅಲ್ಪಾಸ್ಥಿರವಾದವುಗಳಾಗಿ, ಪುನಃ ಪುನಃ ಸಂಸಾರ ಬಂಧಕ್ಕೆ ಕಾರಣವಾಗುತ್ತದೆಂದೂ, ಹಾಗೆ ಫಲಾಭಿಸಂಧಿಯಿಲ್ಲದೆ ಕರ್ಮಾನುಷ್ಠಾನಮಾಡಿದರೆ, ಸಂಸಾರ ಬಂಧದಿಂದ ಬಿಡುಗಡೆಯನ್ನು ಹೊಂದಿ, ಮೋಕ್ಷವನ್ನು ಹೊಂದುತ್ತೀಯೇ ಎಂದು ಹಿಂದೆ ಹೇಳಲ್ಪಟ್ಟಿತು. ಇಂತಹ ವಿವೇಕ ಜ್ಞಾನ ಯಾವಾಗ ಉಂಟಾಯಿತೋ, ಆಗ ನೀನು ಅಲ್ಪಾಸ್ಥಿರ ಫಲಗಳಲ್ಲಿ ಮೋಹರೂಪ ಕಾಲುಷ್ಯವನ್ನು ದಾಟಿ, ಅಯ್ಯೋ, ಇಷ್ಟು ವಿವೇಕವಿಲ್ಲದೆ ಹೋಯಿತೇ ನನಗೆ, ಎಂದು ನೀನೇ ನಿನ್ನನ್ನು ನಿಂದಿಸಿಕೊಳ್ಳು

**ಮೂ.** ಯದಾತೇ ಮೋಹಕಲಿಲಂ ಬುದ್ಧಿ ರ್ವ್ಯತಿತರಿಷ್ಯತಿ ।
ತದಾಗನ್ತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯಚ ॥ ೫೨.

**ಭಾ.** ಉಕ್ತಪ್ರಕಾರೇಣ ಕರ್ಮಣಿ ವರ್ತಮಾನಸ್ಯ ತಯಾ ವೃತ್ತ್ಯಾ ನಿರ್ಧೂತ ಕಲ್ಮಷಸ್ಯ ತೇ ಬುದ್ಧಿ ರ್ಯದಾ ಮೋಹಕಲಿಲಂ- ಅತ್ಯಲ್ಪಫಲ ಸಙ್ಗಹೇತು ಭೂತಂ ಮೋಹ

ತ್ತೀಯೇ, ಎಂಬ ಭಾವವು. ಐಹಿಕಾದಿ ನಶ್ವರ ಫಲಗಳಿಗೆ ಮನಕೊಟ್ಟೆನು; ನಿರತಿಶಯ ಸುಖಪ್ರಾಪ್ತಿಗೆ ಮನಸ್ಸನ್ನು ಕೊಡದೇ ಹೋದೆನೇ ಎಂದು ನಿರ್ವೇದವು, ನಿನಗೆ ಸ್ವತಃ ಉಂಟಾಗುತ್ತದೆಂದು ಉಪ ದೇಶಿಸುತ್ತಾರೆ. **ಯದಾ** - ಯಾವಾಗ, **ತೇ** - ನಿನ್ನ, ನೀನು ಎಂತವನೆಂದರೆ, ಹಿಂದೆ ನಾನು ಹೇಳಿದ ತೆರದಿ ಕರ್ಮಾನುಷ್ಠಾನದಿಂದ ಪುಣ್ಯಪಾಪಗಳನ್ನು ಕಳೆದುಕೊಂಡಿರುವ ನಿನ್ನ, **ಬುದ್ಧಿಃ** – ಬುದ್ಧಿಯು, ಎಂದರೆ ಹಿಂದೆ ಹೇಳಲ್ಪಟ್ಟ ಬುದ್ಧಿಯೋಗವು, **ಮೋಹಕಲಿಲಂ** - ಅಲ್ಪಾಸ್ಥಿರ ಫಲಗಳಲ್ಲಿ ಆಶೆ ಎಂಬ ಮೋಹರೂಪ ದೋಷವನ್ನು, **ವ್ಯತಿತರಿಷ್ಯತಿ** - ದಾಟುತ್ತದೋ, **ತದಾ** – ಆಗ, **ಶ್ರೋತವ್ಯಸ್ಯ** - ಮುಂದೆ ನನ್ನಿಂದ ಉಪದೇಶರೂಪದಲ್ಲಿ ಕೇಳುವುದರ ಮೂಲಕ ಉಂಟಾದ, **ಶ್ರುತಸ್ಯ** - ಇವಕ್ಕೆ ಮೊದಲು ನನ್ನಿಂದ ಕೇಳಿದುವರ ಮೂಲಕ ಉಂಟಾಗುವ, **ನಿರ್ವೇದಂ** - ಸ್ವರೂಪಹಾನಿ ಪ್ರಯುಕ್ತ ಉಂಟಾದ ಖೇದವನ್ನು, **ಗನ್ತಾಸಿ** – ಹೊಂದುತ್ತೀಯೇ, ನೀನೇ ನಿನ್ನನ್ನು ನಿಂದಿಸಿಕೊಳ್ಳುತ್ತೀಯೇ ಎಂಬ ತಾತ್ಪರ್ಯವು; ಏತಕ್ಕೆಂದರೆ ಹಿಂದೆ ಕೇಳಿದುದರಲ್ಲೂ ಮುಂದೆ ಕೇಳುವದರಲ್ಲೂ ಬಿಡತಕ್ಕದ್ದನ್ನು ಸ್ವೀಕರಿಸಿ, ಸ್ವೀಕರಿಸತಕ್ಕದ್ದನ್ನು ತ್ಯಜಿ ಸಿದುದರಿಂದ, ಮೂಢನಾಗಿ ಹೀಗೆ ಮಾಡಿದೆನೇ ಎಂಬದಾಗಿ ನಿರ್ವೇದವು. ಕರ್ತೃತ್ವ ಫಲಗಳನ್ನು ಸಂಪೂರ್ಣವಾಗಿ ತ್ಯಜಿಸಬೇಕಾದುದನ್ನು ಅಙ್ಗೀಕರಿಸಿದುದರಿಂದ ನಿರ್ವೇದವು; ಮತ್ತು ಕ್ಷತ್ರಿಯ ಧರ್ಮವನ್ನು ಮುಖ್ಯವಾಗಿ ಅವಲಂಬಿಸತಕ್ಕದುದನ್ನು ತ್ಯಾಗಮಾಡಿದುದರಿಂದಲೂ ನಿರ್ವೇದ ವೆಂಬ ಭಾವವು. ಅಕೃತ್ಯಕರಣವನ್ನೂ ಕೃತ್ಯಾಕರಣವನ್ನೂ ಮಾಡಿದೆನೇ ಎಂಬದಾಗಿ ನಿರ್ವೇದವು. ನಾವು ಇದುವರೆಗೂ ಬಿಡತಕ್ಕದ್ದೆಂದು ಹೇಳಿದುದರಲ್ಲೂ, ಮುಂದೆ ಉಪದೇಶಿಸುವೆಂದು ಹೇಳು ವದರಲ್ಲೂ ಅನುಷ್ಠಾನವಿರಲಿಲ್ಲವೇ ಎಂಬದಾಗಿ ನಿರ್ವೇದವು, ನಿನಗೆ ಸ್ವತಃ ಉಂಟಾಗುತ್ತವೆ ಎಂಬುದು ತಾತ್ಪರ್ಯವು. ಮುಖ್ಯ ತಾತ್ಪರ್ಯವೇನೆಂದರೆ ನಿನಗೆ ಈ ಮೇಲೆ ಹೇಳಿದ ಬುದ್ಧಿ ಯೋಗ ಯಾವಾಗ ಉಂಟಾಯಿತೋ, ಆಗ ಅಲ್ಪಾಸ್ಥಿರ ಫಲಗಳಲ್ಲಿ ಜಿಹಾಸೆಯು ತಾನಾಗಿಯೇ ಉಂಟಾಗಿ ವೈರಾಗ್ಯವು ಜನಿಸುತ್ತದೆ ಎಂಬುದು.

**ಭಾಷ್ಯಾರ್ಥವು:**—ಹಿಂದೆ ಹೇಳಿದ ಉಪದೇಶದ ಸಾರಾಂಶವೇನು ಎಂದರೆ ಕರ್ಮಾನು ಷ್ಠಾನಗಳಲ್ಲಿ ಸಂಸಾರ ಬಂಧಕ್ಕೆ ಹೇತುಭೂತವಾದ ಫಲಕಾಮನೆ ಇರಕೂಡದು ಎಂಬುದು, ಫಲಕಾಮನೆಯಿಲ್ಲದೆ ಕರ್ಮಾನುಷ್ಠಾನಗಳು ನಿರತಿಶಯ ಸುಖರೂಪ ಮೋಕ್ಷಕ್ಕೆ ಹೇತು ಭೂತವು ಎಂಬುದು, ಇಂತಹ ಜ್ಞಾನವೇ ಬುದ್ಧಿಯೋಗವು; ಇದು ಉಂಟಾದಹೊರತು ನಿನಗೆ ಈಗ ಮೋಹದಿಂದ ಮಾಡುತ್ತಿರುವ ಕರ್ಮಗಳ ಫಲಗಳಲ್ಲಿ ಜಿಹಾಸೆಯೂ ಎಂದರೆ ನಿರ್ವೇದವೂ ಉಂಟಾಗುವದಿಲ್ಲವು; ಮತ್ತು ನಾನು ಉಪದೇಶಿಸುತ್ತಿರುವಹಾಗೆ ಕರ್ಮಾನುಷ್ಠಾನಗಳಲ್ಲಿ ಅನಿರ್ವೇದವೂ ಉಂಟಾಗುವದಿಲ್ಲವೆಂದು ಹೇಳುತ್ತಾರೆ. ನಿರ್ವೇದವೆಲ್ಲಿರಬೇಕೆಂದರೆ ಕರ್ಮಗಳು ಕೊಡುವ ಅಲ್ಪಾಸ್ಥಿರಗಳಾದ ಫಲಗಳನ್ನುದ್ದೇಶಿಸಿ ಮಾಡುವ ಕರ್ಮಾನುಷ್ಠಾನಗಳಲ್ಲಿ, ಅನಿ ರ್ವೇದವೆಲ್ಲಿರಬೇಕು ಎಂದರೆ ಕರ್ಮಗಳು ಕೊಡುವ ಮಹತ್ತಾದ ಶಾಶ್ವತರೂಪ ಫಲಗಳನ್ನು ಮನಸ್ಸಿನಲ್ಲಿಟ್ಟು **ಉಕ್ತಪ್ರಕಾರೇಣ** – ಹಿಂದೆ ನಿನಗೆ ತಿಳಿಸಿದ ಪ್ರಕಾರದಿಂದ, **ಕರ್ಮಣಿವರ್ತಮಾ**

ಭಾ. ರೂಪಂ ಕಲುಷಂ ವ್ಯತಿತರಿಷ್ಯತಿ, ತದಾ ಅಸ್ಮತ್ತಃ ಇತಃಪೂರ್ವಂ ತ್ಯಾಜ್ಯತಯಾ ಶ್ರುತಸ್ಯ ಫಲಾದೇಃ, ಇತಃ ಪಶ್ಚಾಚ್ಛ್ರೋತವ್ಯಸ್ಯ ಚ ಕೃತೇ, ಸ್ವಯಮೇವ ನಿರ್ವೇದಂ ಗನ್ತಾಸಿ - ಗಮಿಷ್ಯಸಿ ॥ ೫೨ ॥

ಭಾ. ಅವ. "ಯೋಗೇ ತ್ವಿಮಾಂ ಶೃಣು" ಇತ್ಯಾದಿನೋಕ್ತಸ್ಯ ಆತ್ಮಯಾಥಾತ್ಮ್ಯ ಜ್ಞಾನ ಪೂರ್ವಕಸ್ಯ ಬುದ್ಧಿ ವಿಶೇಷ ಸಂಸ್ಕೃತಸ್ಯ ಧರ್ಮಾನುಷ್ಠಾನಸ್ಯ ಲಕ್ಷಭೂತಂ ಯೋಗಾಖ್ಯಂ ಫಲಮಾಹ.

ನಸ್ಯ – ಕರ್ಮದಲ್ಲಿರುವ ಎಂದರೆ ಕರ್ಮಾನುಷ್ಠಾನದಲ್ಲಿರುವ, ಮತ್ತು ತಯೋರ್ನಿವೃತ್ತ್ಯಾ–ಅಂತಹ ಅನುಷ್ಠಾನದಿಂದ, ನಿರ್ಧೂತ ಕಲ್ಮಷಸ್ಯ – ಕಳೆದು ಹೋದ ಪುಣ್ಯಪಾಪಗಳನ್ನುಳ್ಳ, ತೇ - ನಿನ್ನ, ಬುದ್ಧಿಃ - ಬುದ್ಧಿಯೋಗವು, ಯದಾ - ಯಾವಾಗ, ಮೋಹ ಕಲಿಲಂ - ಎಂದರೆ ಅತ್ಯಲ್ಪ ಫಲ ಸಙ್ಗ ಹೇತು ಭೂತಂ ಮೋಹರೂಪಂ ಕಲುಷಂ - ತುಂಬಾ ಅಲ್ಪವಾದ ಫಲಸಂಬಂಧಕ್ಕೆ ಕಾರಣಭೂತವಾಗಿ ಪುಣ್ಯಪಾಪರೂಪ ಸಾಂಸಾರಿಕ ಕರ್ಮದಿಂದುಂಟಾಗುವ ಮೋಹರೂಪವಾದ ದೋಷವನ್ನು, ವ್ಯತಿತರಿಷ್ಯತಿ - ಹೋಗಲಾಡಿಸುತ್ತದೋ, ತದಾ–ಆಗ, ಅಸ್ಮತ್ತಃ–"ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ" ಎಂದೂ, "ಸರ್ವಸ್ಯ ಶರಣಂ ಸುಹೃತ್" ಎಂದೂ ಹೇಳಿರುವ ಹಾಗೆ ನಿನಗೆ ಪರಮ ಸುಹೃತ್ತಾಗಿ ಆಪ್ತತಮನಾದ ನನ್ನಿಂದ, ಇತಃಪೂರ್ವಂ - ಇದಕ್ಕೆ ಪೂರ್ವ ದಲ್ಲಿ, ತ್ಯಾಜ್ಯತಯಾಶ್ರುತಸ್ಯ ಫಲಾದೇಃ-ಫಲಾಭಿಸಂಧಿಯನ್ನು ಬಿಡತಕ್ಕದ್ದೆಂದು ಉಪದೇಶಿಸಲ್ಪ ಟ್ಟಿದುದರ, ಮತ್ತು ಇತಃ ಪಶ್ಚಾತ್ – ಇನ್ನು ಮೇಲೆ, ಶ್ರೋತವ್ಯಸ್ಯ ಚ–ಯಾವುದು ತ್ಯಾಜ್ಯವು ಯಾವುದು ಉಪಾದೇಯವೆಂದು ಉಪದೇಶಿಸಲ್ಪಡುವುದರ, ಕೃತೇ - ವಿಷಯದಲ್ಲಿ, ಸ್ವಯ ಮೇವ - ನೀನೇ ಎಂದರೆ ಮುಂದಕ್ಕೆ ನನ್ನ ಪ್ರಯತ್ನ ಬೇಕಾಗದೇನೇ, ನಿರ್ವೇದಂ - ಹಿಂದಿನ ನಿನ್ನ ಅತಿಕ್ರಮ ವಿಷಯಕ್ಕಾಗಿ ಪರಿತಾಪವನ್ನು, ಗಂತಾಸಿ ಎಂದರೆ ಗಮಿಷ್ಯಸಿ-ಹೊಂದುವಿ, ಇಲ್ಲಿ ಗಂತಾ ಅಸಿ ಎಂದು ಪದವಲ್ಲವೆಂದು ತಿಳಿಸುವದಕ್ಕಾಗಿ ಗಂತಾಸಿ ಎಂದರೆ ಗಮಿಷ್ಯಸಿ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಸರಿಯಾದ ಜ್ಞಾನ ಉಂಟಾದನಂತರ ಪರಿತಾಪಕ್ಕೆ ಕಾರಣವೇನೆಂ ದರೆ ಹೇಯವಾದುದರಲ್ಲಿ ಮನಸ್ಸನ್ನಿಟ್ಟೆನೇ, ಉತ್ಕೃಷ್ಟವಾದುದನ್ನು ಕೈ ಬಿಟ್ಟೆನೇ, ಎಂಬದಾಗಿ ನಿರ್ವೇದ ಉಂಟಾಗುತ್ತದೆ. ಈ ನಿರ್ವೇದವು ಹುಟ್ಟದಿರುವದಕ್ಕೆ ಕಾರಣವು, ಕರ್ಮಗಳನ್ನು ಫಲಾಭಿ ಸಂಧಿಯೊಂದಿಗೆ ಆಚರಿಸೋಣವು. ಯಾವಾಗ ಕರ್ಮಗಳನ್ನು ಫಲಾಭಿ ಸಂಧಿರಹಿತ ವಾಗಿ ಆಚರಿಸುತ್ತೀಯೋ, ಆಗ ಕಾರಣಾಭಾವಾತ್ಕಾರ್ಯಾಭಾವಃ ಎಂಬಹಾಗೆ ಕಾರಣವೇ ಇಲ್ಲದಿದ್ದರೆ ಕಾರ್ಯವು ಹೇಗೆ ಇಲ್ಲವೋ, ಹಾಗೆ ಸಾಂಸಾರಿಕ ಮೋಹರೂಪ ದೋಷವೇ ಇಲ್ಲವಾಗಿ, ಇದುವರೆಗೂ ಇಂತಹ ಮೋಹರೂಪ ದೋಷಯುಕ್ತ ಪ್ರವೃತ್ತಿಯನ್ನು ಅನ್ಯಾಯವಾಗಿ ಹೊಂದಿದ್ದೆನೇ ಎಂಬ ನಿರ್ವೇದ ಉಂಟಾಗುತ್ತದೆ. ಈ ನಿರ್ವೇದವೇ ಮೋಕ್ಷಕ್ಕೆ ತಳಹದಿ ಎಂಬ ಭಾವದಿಂದ ಈ ನಿರ್ವೇದವು ತಾನಾಗಿಯೇ ಉಂಟಾಗುತ್ತದೆಂದು ಹೇಳಿರುತ್ತಾರೆ. ಈ ನಿರ್ವೇದ ಯಾವಾಗ ಉಂಟಾಯಿತೋ ಆಗ ಸಾಧನಾನುಷ್ಠಾನ ವಿಷಯದಲ್ಲಿ ಅನಿರ್ವೇದ ಉಂಟಾಗು ತ್ತದೆಂಬುದೂ ಸೂಚಿತವು.

**ಭಾಷ್ಯಾವತಾರಿಕೆಯ ಅರ್ಥವು:—"ಯೋಗೇತ್ವಿಮಾಂಶೃಣು" ಇತ್ಯಾದಿನಾ** ಎಂಬಿವೇ ಮೊದಲಾದುದರಿಂದ, ಉಕ್ತಸ್ಯ-ಹಿಂದೆ ೩೯ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ, ಆತ್ಮಯಾಥಾತ್ಮ್ಯ ಜ್ಞಾನ ಪೂರ್ವಕಸ್ಯ-ಜೀವಾತ್ಮ ತತ್ವದ ಸರಿಯಾದ ಜ್ಞಾನಪೂರ್ವಕವಾದ, ಬುದ್ಧಿವಿಶೇಷ

ಮೂ. ಶ್ರುತಿ ವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।
ಸಮಾಧಾ ವಚಲಾ ಬುದ್ಧಿ ಸ್ತದಾ ಯೋಗ ಮವಾಪ್ಸ್ಯಸಿ ॥ ೫೩.

ಭಾ. ಶ್ರುತಿಃ – ಶ್ರವಣಂ. ಅಸ್ಮತ್ತಃ ಶ್ರವಣೇನ ವಿಶೇಷತಃ ಪ್ರತಿಪನ್ನಾ - ಸಕಲೇತರ ವಿಸಜಾತೀಯ ನಿತ್ಯನಿರತಿಶಯ ಸೂಕ್ಷ್ಮಾತ್ಮ ವಿಷಯಾ, ಸ್ವಯಮೇವಾಚಲಾ - ಏಕ ರೂಪಾ, ಬುದ್ಧಿ ರಸಙ್ಗ ಕರ್ಮಾನುಷ್ಠಾನೇನ ನಿರ್ಮಲೀಕೃತೇ ಮನಸಿ, ಯದಾ ನಿಶ್ಚಲಾ ಸ್ಥಾಸ್ಯತಿ, ತದಾ ಯೋಗಮ್ – ಆತ್ಮಾವಲೋಕನಮ್, ಅವಾಪ್ಸ್ಯಸಿ. ಏತದುಕ್ತಂ

ಸಂಸ್ಕೃತಸ್ಯ - ವ್ಯವಸಾಯಾತ್ಮಿಕಾ ಎಂದು ಹಿಂದೆ ಹೇಳಿದ ಬುದ್ಧಿ ವಿಶೇಷದಿಂದ ಸಂಸ್ಕಾರ ಹೊಂದಿದ, ಧರ್ಮಾನುಷ್ಠಾನಸ್ಯ - ಶಾಸ್ತ್ರದಲ್ಲಿ ಹೇಳಿರುವ ಕರ್ಮಾನುಷ್ಠಾನಕ್ಕೆ, ಲಕ್ಷ್ಯಭೂತಂ - ಉದ್ದಿಶ್ಯವಾದ, ಯೋಗಾಖ್ಯಂ ಫಲಂ - ಸ್ಥಿತ ಪ್ರಜ್ಞತೆ, ಆತ್ಮಾವಲೋಕನ ಇತ್ಯಾದಿ ಶಬ್ದ ಗಳಿಂದ ಹೇಳಲ್ಪಟ್ಟ ಜ್ಞಾನ ನಿಷ್ಠೆಯೇ ಫಲವೆಂದು ಆಪ - ಈ ಮುಂದಿನ ಶ್ಲೋಕದಿಂದ ಹೇಳುತ್ತಾರೆ; ಎಂದರೆ ಈ ಶ್ಲೋಕದಿಂದ ಕರ್ಮನಿಷ್ಠೆಯು ಜ್ಞಾನನಿಷ್ಠೆಗೆ ಸಾಧನವೆಂದು ಹೇಳುತ್ತಾರೆ. ಕರ್ಮಯೋಗವು ಜ್ಞಾನಯೋಗವನ್ನು ಸಾಧಿಸಿ ಕೊಡುತ್ತದೆ ಎಂಬ ಪ್ರಧಾ ನಾರ್ಥವು ಈ ಮುಂದಿನ ಶ್ಲೋಕವಲ್ಲಿ ಹೇಳಲ್ಪಡುತ್ತದೆಂಬ ಭಾವವು.

ಮೂಲಕ್ಕೆ ಅರ್ಥವು :—ತೇ - ಸತ್ಪಸ್ಥನಾದ ನಿನ್ನ, ಶ್ರುತಿವಿಪ್ರತಿಪನ್ನಾ, ಶ್ರುತಿ - ನಾನು ಹಿಂದೆ ನಿನಗೆ ಉಪದೇಶಿಸಿರುವುದನ್ನು ಸಾವಧಾನದಿಂದ ಕೇಳಿ, ವಿಪ್ರತಿಪನ್ನಾ-ವಿಶೇಷ ವಿವೇಕದಿಂದ ಕೂಡಿದ, ಅಚಲಾ-ಏಕರೂಪವಾದ ಎಂದರೆ, ಒಂದೇ ಪ್ರಯೋಜನವೇ ಉದ್ದೇಶವಾಗಿರುವದರಿಂದ ಏಕರೂಪವಾದ, ವಿಷಯಾಂತರಗಳಲ್ಲಿ ಪ್ರವೇಶಿಸದ ಎಂಬರ್ಥವು; ಬುದ್ಧಿಃ ಎಂದರೆ ವ್ಯವಸಾ ಯಾತ್ಮಿಕಾಬುದ್ಧಿಯು, ಯದಾ-ಯಾವಾಗ, ಸಮಾಧೌ - ಆತ್ಮ ಯಾಥಾತ್ಮ್ಯವನ್ನು ಹೊಂದಿ ರುವ ನಿನ್ನ ಮನಸ್ಸಿನಲ್ಲಿ, ನಿಶ್ಚಲಾ-ಚಾಂಚಲ್ಯವನ್ನು ಹೊಂದದೆ, ಎಂದರೆ ಕುತರ್ಕಗಳಿಂದ ಕಲಕದೆ, ಸ್ಥಾಸ್ಯತಿ - ಈ ಕರ್ಮಯೋಗದಿಂದ ಪ್ರತಿಷ್ಠಿತವಾಗಿ ಸ್ಥಿರವಾಗಿನಿಲ್ಲುತ್ತದೋ, ತದಾ - ಆಗ, ಯೋಗಂ - ಸಿದ್ಧ್ಯ ಸಿದ್ಧಿಗಳಲ್ಲಿ ಸಮರೂಪವಾಗಿರುವ ಜ್ಞಾನಯೋಗವನ್ನು, ಅವಾಪ್ಸ್ಯಸಿ - ಹೊಂದುವಿ, ಅಂತಹ ಜ್ಞಾನನಿಷ್ಠೆಯೇ ಜ್ಞಾನಯೋಗವೆನಿಸುತ್ತದೆ. ಈ ಜ್ಞಾನಯೋಗದಲ್ಲಿ ಜೀವಾತ್ಮಸಾಕ್ಷಾತ್ಕಾರವು ದೊರೆಯುತ್ತದೆ.

ಭಾಷ್ಯಾರ್ಥವು:—ಶ್ರುತಿವಿಪ್ರತಿಪನ್ನಾ ಎಂಬ ಪದವಲ್ಲಿ, ಶ್ರುತಿ ಎಂದರೆ ಶ್ರವಣವು, ಅಸ್ಮತ್ತಃ ಶ್ರವಣೇನ-ಸರ್ವಜ್ಞನಾಗಿ, ಸರ್ವಶಕ್ತನಾಗಿ ಪರಮಕಾರುಣಿಕನಾಗಿ, ಭ್ರಮ ವಿಪ್ರ ಲಂಭ ಪ್ರಮಾದಾದಿ ದೋಷಗಂಧವಿಲ್ಲದವನಾಗಿ, ಅವ್ಯಾಜಬಂಧುವಾಗಿ, ಪರಮ ಹಿತೈಷಿಯಾಗಿ ರುವ ನನ್ನ ಉಪದೇಶವನ್ನು ಕೇಳೋಣದರಿಂದ, ವಿಪ್ರತಿಪನ್ನಾ - ವಿಶೇಷವಾಗಿ ಪ್ರತಿಪನ್ನವಾದ ಎಂದರೆ ಸಕಲೇತರ ವಿಸಜಾತೀಯ – ಇತರ ಸಮಸ್ತ ವಸ್ತುಗಳಿಗಿಂತಲೂ ವಿಲಕ್ಷಣವಾದ ನಿತ್ಯ ವಾದ, ನಿರತಿಶಯ ಸೂಕ್ಷ್ಮ - "ಏಷೋಣುರಾತ್ಮಾ" ಈ ಆತ್ಮನು ಅಣುರೂಪನೆಂದು ಶ್ರುತಿಯಲ್ಲಿ ಹೇಳಿರುವಹಾಗೆ ಅತ್ಯಂತ ಸೂಕ್ಷ್ಮವಾದ, ಆತ್ಮವಿಷಯಾ - ಜೀವಾತ್ಮ ತತ್ವವಿಷಯವಾದ ಮತ್ತು ಸ್ವಯಮೇವ - ತಾನಾಗಿಯೇ, ಅಚಲಾ - ಎಂದರೆ ಏಕರೂಪಾ-ಒಂದೇ ರೂಪವಾದ ಬುದ್ಧಿಯು, ಅಸಙ್ಗಕರ್ಮಾನುಷ್ಠಾನೇನ - ಕರ್ತೃತ್ವದಲ್ಲೂ ಫಲದಲ್ಲೂ ತನಗೆ ಸಂಬಂಧವಿಲ್ಲವೆಂದು ತಿಳಿದು ಕರ್ಮಾನುಷ್ಠಾನ ಮಾಡುವದರಿಂದ, ನಿರ್ಮಲೀಕೃತೇ ಮನಸಿ - ಮಲಗಳಿಲ್ಲದಹಾಗೆ ಪವಿತ್ರೀ ಕರಿಸಲ್ಪಟ್ಟ ಮನಸ್ಸಿನಲ್ಲಿ, ಯದಾ - ಯಾವಾಗ, ನಿಶ್ಚಲಾ-ಆ ಕಾರಣದಿಂದ ಅಪ್ರಕಂಪಿತವಾಗಿ,

ಸ್ಥಾಸ್ಯತಿ-ಸುಪ್ರತಿಷ್ಠಿತವಾಗಿನಿಲ್ಲುತ್ತದೋ, ತದಾ - ಆಗ, ಯೋಗ ವೆಂದರೆ ಆತ್ಮಾವಲೋಕನಂ - ತನ್ನ ಆತ್ಮಸ್ವರೂಪದ ಸಾಕ್ಷಾತ್ಕಾರವನ್ನು, ಅವಾಪ್ಸ್ಯಸಿ-ಹೊಂದುತ್ತೀಯೇ ; ಶ್ರುತಿ ವಿಪ್ರತಿಪನ್ನಾ ಎಂದು ಬುದ್ಧಿಯನ್ನು ಕುರಿತು ಹೇಳಿರುವದರಿಂದ, ಮನನದ ಮೂಲಕ ಸ್ಥಿರೀಕರಣವೂ ಕುತರ್ಕಗಳಿಂದ ಅಕಂಪನೀಯತ್ವವೂ ಬೋಧಿತವಾಗುವವರಿಂದಲೇ ಸ್ಥಾಸ್ಯತಿ ನಿಶ್ಚಲಾ ಎಂದು ಹೇಳಲ್ಪಟ್ಟಿತು. ಶ್ರೀಕೃಷ್ಣ ಭಗವಾನಂತಹ ಸದ್ಗುರೂಪದೇಶವಿಲ್ಲದವನಿಗೆ ಬುದ್ಧಿಯು ನಿಶ್ಚಲವಾಗಿ ಸ್ಥಿರವಾಗಿರುವದಿಲ್ಲವೆಂಬುದೂ ವ್ಯಕ್ತವು. ಈ ಬುದ್ಧಿಯು ಎಂಥಾದ್ದು ಎಂಬ ಆಶಯದಲ್ಲಿ ಪೂರ್ವೋಕ್ತವಾದ ಜೀವಾತ್ಮವಿಷಯ ವೈಲಕ್ಷಣ್ಯಯುಕ್ತ ಬುದ್ಧಿಯು ಎಂದು ವಿಶದೀಕರಿಸುವದಕ್ಕಾಗಿ "ಸಕಲೇತರ ವಿಸಜಾತೀಯ ನಿತ್ಯ ನಿರತಿಶಯ ಸೂಕ್ಷ್ಮಾತ್ಮ ವಿಷಯಾ" ಎಂದು ವ್ಯಾಖ್ಯಾನವು. ಈ ಶ್ಲೋಕದ ಶ್ರುತಿ ವಿಪ್ರತಿಪನ್ನಾ ಎಂಬುದಕ್ಕೆ ವೇದ ವಿರುದ್ಧವಾದ ಎಂಬರ್ಥವನ್ನು ಕೆಲವರು ಮಾಡಿರುತ್ತಾರೆ ; ಅರ್ಜುನನು ನಿತ್ಯಸತ್ವಸ್ಥನೆಂದು ಹೇಳಿರುವಾಗ ವೇದ ವಿರುದ್ಧವಾಗಿ ನಡೆವಾನೆ? ಹಾಗೆ ಅರ್ಥಮಾಡುವವನು ಅನ್ಯಾಯುವು. ಆದುದರಿಂದ, ಶ್ರುತಿ ಎಂದರೆ ಇಲ್ಲಿ ವೇದವೆಂಬರ್ಥವಲ್ಲವೆಂದೂ ವಿಪ್ರತಿಪನ್ನಾ ಎಂಬಲ್ಲಿರುವ ವಿ ಎಂಬ ಉಪಸರ್ಗವು ವಿರುದ್ಧಾರ್ಥವನ್ನು ಬೋಧಿಸುವದಿಲ್ಲವೆಂದೂ ವಿ ಎಂಬುದು ಪರಮಾತ್ಮನ ಉಪದೇಶವಾದುದರಿಂದ ವಿಶೇಷಾರ್ಥ ಬೋಧಕವೆಂದೂ ಹೇಳುವದಕ್ಕಾಗಿ, ಹಿಂದಿನ ಶ್ಲೋಕದಲ್ಲಿರುವ ಶ್ರೋತವ್ಯಸ್ಯ ಶ್ರುತಸ್ಯಚ ಎಂಬುದನ್ನನುಸರಿಸಿ ಶ್ರುತಿಃ - ಶ್ರವಣಂ ಎಂದೂ ಅಸ್ಮತ್ತಶ್ಶ್ರವಣೇನ ವಿಶೇಷತಃ ಪ್ರತಿಪನ್ನಾ ಎಂದೂ ವ್ಯಾಖ್ಯಾನ ಮಾಡಿರುತ್ತಾರೆ. ಪರಮಾತ್ಮನಿಂದಲೇ ಅರ್ಜುನನು ಎಲ್ಲವನ್ನೂ ಕೇಳಿ ತಿಳಿದಿರುವವರಿಂದ ಬುದ್ಧಿಯು ವಿಶೇಷತಃ ಪ್ರತಿಪನ್ನಾ ಎಂದು ಹೇಳಲು ಏನೂ ಅಭ್ಯಂತರವಿಲ್ಲವು. ಇನ್ನು ಕೆಲವರು ಶ್ರುತಿಗಳಿಂದ ವಿಪ್ರತಿಪನ್ನಾ ಎಂದರೆ ಪ್ರವೃತ್ತಿ ನಿವೃತ್ತಿ ಧರ್ಮಗಳನ್ನು ಬೋಧಿಸುವ ಶ್ರುತಿಗಳಿಂದ ವಿಕ್ಷಿಪ್ತವಾಗಿರುವ ಬುದ್ಧಿಯು ಎಂದು ಅರ್ಥಮಾಡಿರುತ್ತಾರೆ. ವೇದದಲ್ಲಿ ನಾನಾತ್ವ ಬೋಧನೆಯುಂಟೆಂದು ನಿಂದಿಸಿದಂತಾಯಿತು. ಇಂತಹ ದೋಷವು ಯಾವುದೂ ಇಲ್ಲದೆ ಯತಿವರ್ಯರು ಪ್ರಕರಣೋಚಿತವಾಗಿ ಅರ್ಥ ಮಾಡಿರುತ್ತಾರೆ. ಶ್ರೋತವ್ಯಸ್ಯ ಶ್ರುತಸ್ಯಚ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿರುವದಕ್ಕನುಸಾರವಾಗಿ ಅರ್ಥಮಾಡುವದು ಯುಕ್ತವು. ಅರ್ಜುನನ ಬುದ್ಧಿಯನ್ನು ಇಲ್ಲಿ ನಿಂದಿಸಲಿಲ್ಲವು, ತಾವು ಇಷ್ಟುದೂರ ಉಪದೇಶಿಸಿದುದು ಆತನ ಮನಸ್ಸಿಗೆ ಚನ್ನಾಗಿ ಹಿಡಿದಿದೆ ಎಂಬಭಿಪ್ರಾಯದಿಂದ ಶ್ರುತಿವಿಪ್ರತಿಪನ್ನಾ ಎಂದು ಪ್ರಯೋಗಿಸಿರುತ್ತಾರೆ. ಆದುದರಿಂದ ಆತನ ಮನಸ್ಸಿನಲ್ಲಿ ನಿಶ್ಚಲವಾಗಿ ನಿಲ್ಲಲೂ ಕೂಡ ಯೋಗ್ಯವೆಂಬ ಭಾವವು. ಅಚಲಾ ನಿಶ್ಚಲಾ ಎಂಬ ಶಬ್ದಗಳಿಂದ ಪುನರುಕ್ತಿಯಿಲ್ಲವೆಂದು ತೋರಿಸುವದಕ್ಕಾಗಿ, ಅಚಲಾ ಎಂದರೆ ಸ್ವಯಮೇವ ಏಕರೂಪಾ ಎಂಬ ವ್ಯಾಖ್ಯಾನಮಾಡಿರುತ್ತಾರೆ. ವ್ಯವಸಾಯಾತ್ಮಿಕಾಬುದ್ಧಿಃ ಏಕರೂಪಾ ಎಂದೂ,ಅವ್ಯವಸಾಯಾತ್ಮಕ ಬುದ್ಧಿಯು ಬಹು ಶಾಖೆಗಳುಳ್ಳದ್ದಾಗಿ ಅನಂತವೆಂದೂ ಹಿಂದೆ ಹೇಳಿದಹಾಗೆ ಅಲ್ಲವೆಂದೂ, ಹೇಳಿದುದರಿಂದ ಏಕರೂಪಾ. ಹಿಂದೆ ಶ್ರುತಿವಿಪ್ರತಿಪನ್ನಾ ಎಂಬಲ್ಲಿ ಶ್ರವಣವೂ ಮುಂದೆ ಮನನವೂ ಬೋಧಿತವು ಇಲ್ಲಿಯೂ ಸಮಾಧಿ ಶಬ್ದಕ್ಕೆ ಸಮಾಧೀಯತೇ ಅಸ್ಮಿನ್ ಇದರಲ್ಲಿಡಲ್ಪಡುತ್ತದೆ ಎಂಬ ವ್ಯುತ್ಪತ್ತಿಯಿಂದ ಮನಸ್ಸು ಎಂಬರ್ಥವು. ಶ್ರೀ ಶಂಕರಾಚಾರ್ಯರವರೂ ಹಾಗೆಯೇ ಅರ್ಥಮಾಡಿರುತ್ತಾರೆ. ಅಸಙ್ಗ ಕರ್ಮಾನುಷ್ಠಾನದಿಂದ ನಿರ್ಮಲೀಕೃತವಾಗಿ ನಿಶ್ಚಲವಾಗಿ ನಿಲ್ಲುತ್ತದೆ ಎಂದು ಹೇಳಿರುವದರಿಂದ ಸಮಾಧೌ ಎಂಬುದಕ್ಕೆ ಮನಸ್ಸಿನಲ್ಲಿ ಎಂಬರ್ಥವನ್ನೇ ಹೇಳತಕ್ಕದ್ದು. ಅಸಙ್ಗಕರ್ಮಾನುಷ್ಠಾನದಿಂದ ನಿರ್ಮಲೀಕೃತ ವೆಂದು ಹೇಳಿರುವದರಿಂದ ತೈಲಧಾರೆಯು ಹಾಗೆ ಅವಿಚ್ಛಿನ್ನವಾದ ಸ್ಮೃತಿಗೆ ಹೇತುಭೂತವಾದುದೆಂಬಭಿಪ್ರಾಯದಿಂದ ಮನನವೂ, ಹೇಳಲ್ಪಟ್ಟಿತು. ಇಲ್ಲಿ ಯೋಗ ಶಬ್ದಕ್ಕೆ ನಾನಾರ್ಥ

ಭಾ. ಭವತಿ - ಶಾಸ್ತ್ರಜನ್ಯಾತ್ಮಜ್ಞಾನ ಪೂರ್ವಕ ಕರ್ಮಯೋಗಃ, ಸ್ಥಿತಪ್ರಜ್ಞತಾಖ್ಯಜ್ಞಾನ ನಿಷ್ಠಾ ಮಾಪಾದಯತಿ. ಜ್ಞಾನನಿಷ್ಠಾ ರೂಪಸ್ಥಿತ ಪ್ರಜ್ಞತಾತು ಯೋಗಾಖ್ಯ ಮಾತ್ಮಾವಲೋಕನಂ ಸಾಧಯತಿ, ಇತಿ ||೫೩||

ಭಾ. ಅ. ಏವಮುಕ್ತಃ ಪಾರ್ಥೋಽಸಙ್ಗಕರ್ಮಾನುಷ್ಠಾನ ರೂಪ ಕರ್ಮಯೋಗ ಸಾಧ್ಯಸ್ಥಿತ ಪ್ರಜ್ಞತಾಯಾ ಯೋಗಸಾಧನ ಭೂತಾಯಾ ಸ್ಸ್ವರೂಪಂ, ಸ್ಥಿತಪ್ರಜ್ಞಸ್ಯಾನುಷ್ಠಾನ ಪ್ರಕಾರಂಚ ಪೃಚ್ಛತಿ.

ವಿರುವದರಿಂದ ಪ್ರಕರಣಾನುಗುಣವಾಗಿ ಅರ್ಥಮಾಡಬೇಕಾಗಿರುತ್ತದೆಯಾದುದರಿಂದ, ಇಲ್ಲಿ ಜ್ಞಾನ ಯೋಗದಿಂದ ಸಾಧ್ಯವಾದ ಆತ್ಮಾವಲೋಕನ ವೆಂಬರ್ಥವು. ಹಿಂದೆ ಹೇಳಿದ ಸಮತ್ವ ಬುದ್ಧಿ ರೂಪ ಯೋಗ ಉಂಟಾಗಬೇಕಾದರೆ ಕರ್ಮಯೋಗದಿಂದುಂಟಾಗುವ ಜೀವಾತ್ಮಯಾಥಾತ್ಮ್ಯ ಜ್ಞಾನದಿಂದಲೇ; ಇದು ಮುಂದಕ್ಕೆ ಜೀವಾತ್ಮ ಸಾಕ್ಷಾತ್ಕಾರ ರೂಪವಾದ ಜ್ಞಾನ ಯೋಗಕ್ಕೆ ಸಾಧಕ ವಾಗುತ್ತದೆಂಬ ಭಾವವು. ಇವರ ಮುಖ್ಯತಾತ್ಪರ್ಯವನ್ನು ಮುಂದೆ **ಏತದುಕ್ತಂ ಭವತಿ**-ಎಂದಾ ರಂಭಿಸಿ ಹೇಳುತ್ತಾರೆ. **ಶಾಸ್ತ್ರಜನ್ಯಾತ್ಮಜ್ಞಾನಪೂರ್ವಕ ಕರ್ಮಯೋಗಃ**-ಆಗಮೋತ್ಥಜ್ಞಾನ ದಿಂದುಂಟಾದ ಜೀವಾತ್ಮಸ್ವರೂಪ ಜ್ಞಾನದಿಂದ ಕೂಡಿದ ಫಲಾಭಿಸಂಧಿ ರಹಿತವಾದ ಕರ್ಮಾನು ಷ್ಠಾನವು, **ಜ್ಞಾನನಿಷ್ಠಾಮಾಪಾದಯತಿ** - ಜ್ಞಾನ ನಿಷ್ಠೆಯನ್ನುಂಟುಮಾಡುತ್ತದೆ. **ಜ್ಞಾನ ನಿಷ್ಠಾ ರೂಪಸ್ಥಿತ ಪ್ರಜ್ಞತಾತು**-ಪ್ರತಿಷ್ಠಿತ ಪ್ರಜ್ಞೆಯುಳ್ಳ ಅವಸ್ಥೆ ಎಂದು ಹೇಳಿಸಿಕೊಳ್ಳುವ ಈ ಜ್ಞಾನ ನಿಷ್ಠೆಯಾದರೋ, **ಯೋಗಾಖ್ಯಂ ಇತ್ಯಾದಿ** - ಯೋಗ ವೆಂದು ಹೇಳಿಸಿಕೊಳ್ಳುವ, ಜೀವಾತ್ಮ ಸಾಕ್ಷಾತ್ಕಾರವನ್ನು ಸಾಧಿಸಿ ಕೊಡುತ್ತದೆ. ಈ ಜ್ಞಾನ ನಿಷ್ಠೆಗೆ ಸ್ಥಿತ ಪ್ರಜ್ಞತಾ ಎಂದು ಹೆಸರು; ಇದರಿಂದುಂಟಾಗುವ ಪ್ರಯೋಜನವು ಜೀವಾತ್ಮಾವಲೋಕನವು, ಆತ್ಮಸಾಕ್ಷಾತ್ಕಾರ ವೆಂಬ ಭಾವವು. ಯೋಗ ಶಬ್ದಕ್ಕೆ **"ಯೋಗಸ್ಸನ್ನಹನೋಪಾಯ ಧ್ಯಾನಸಙ್ಗತಿಯುಕ್ತಿಷು"** ಎಂದು ಅನೇಕಾರ್ಥವಿರುವದರಿಂದ ಆತ್ಮಧ್ಯಾನದಿಂದಾಗುವ ಆತ್ಮಸಾಕ್ಷಾತ್ಕಾರವೆಂದು ಅರ್ಥ ಮಾಡಿದರು. ಇದಕ್ಕೆ ಜ್ಞಾನಯೋಗವೆಂದು ಹೆಸರು. ಅದು ಹೇಗೆ ಪ್ರಾಪ್ತವಾಗುತ್ತದೆಂಬು ದನ್ನು ವಿಶದವಾಗಿ ತಿಳಿಸುವದಕ್ಕಾಗಿ **ಏತದುಕ್ತಂ ಭವತಿ** ಎಂದಾರಂಭಿಸಿ ಅದು ಮೂರು ಪರ್ವಗಳುಳ್ಳ, ನಿಶ್ರೇಣಿ ಎಂದು ಹೇಳುತ್ತಾರೆ; ಮೊದಲು ಶಾಸ್ತ್ರಮೂಲಕ ಆತ್ಮ ತತ್ವದ ಜ್ಞಾನವು; ಅನಂತರ ಸ್ಮೃತಿ ಸಂತತಿ ರೂಪವಾದ ಉಪಾಸನವು; ಅನಂತರ ಅದರಿಂದ ಪ್ರಾಪ್ತ ವಾಗುವ ತನ್ನ ಆತ್ಮ ಸಾಕ್ಷಾತ್ಕಾರವು. ಇದರಿಂದ ಮೊದಲು ಶ್ರವಣ, ಅನಂತರ ಮನನ, ಅನಂತರ ಸಾಕ್ಷಾತ್ಕಾರವೆಂದು ಹೇಳಲ್ಪಟ್ಟಿತೆಂದು ಉಪದೇಶಿಸಿರುತ್ತಾರೆ. ಆದುದರಿಂದ ಇಲ್ಲಿ ಯೋಗ ವೆಂದರೆ ಜ್ಞಾನಯೋಗದಿಂದುಂಟಾಗುವ ಜೀವಾತ್ಮ ಸಾಕ್ಷಾತ್ಕಾರವು ಎಂದು ತಿಳಿಯತಕ್ಕ ದ್ದಾಗಿರುತ್ತದೆ. ಶ್ರೀಮಚ್ಛಂಕರಾಚಾರ್ಯರೂ **"ಕರ್ಮಯೋಗಜಂಫಲಂ ಪರಮಾರ್ಥಯೋಗಂ"** ಎಂದು ಯೋಗ ಶಬ್ದಕ್ಕೆ ಯತಿವರ್ಯರು ಮಾಡಿರುವಹಾಗೆಯೇ ಫಲತಯಾ ಅರ್ಥವನ್ನು ನಿರ್ದೇಶಿಸಿರುತ್ತಾರೆ. ಆದರೆ ಅವರ ತಾತ್ಪರ್ಯವು ಏಕಾತ್ಮಸಿದ್ಧಾಂತರೀತ್ಯಾ ವ್ಯತ್ಯಸ್ತವಾ ದುದು; ಅವರಿಗೆ ಜೀವಾತ್ಮ ಪರಮಾತ್ಮ ಭೇದವಿಲ್ಲವಾದುದರಿಂದ ಭಾವವು ಬೇರೇ ವಿಧವು.

ಭಾಷ್ಯಾಪಕಾರಿಕೆಯ ಅರ್ಥವು :—**ಏವಮುಕ್ತಃ** - ಹೀಗೆ ಉಪದೇಶಿಸಲ್ಪಟ್ಟವನಾಗಿ, **ಪಾರ್ಥಃ** - ಅರ್ಜುನನು, **ಯೋಗಸಾಧನಭೂತಾಯಾಃ** - ಜೀವಾತ್ಮ ಸಾಕ್ಷಾತ್ಕಾರಕ್ಕೆ ಸಾಧನ ಭೂತವಾದ, **ಅಸಙ್ಗ ಕರ್ಮಾನುಷ್ಠಾನ ರೂಪ ಇತ್ಯಾದಿ** - ಕರ್ಮ ಫಲಗಳಲ್ಲಿ ಸಂಬಂಧವನ್ನು

ಮೂ. ಅರ್ಜುನ ಉವಾಚ—

ಸ್ಥಿತಪ್ರಜ್ಞಸ್ಯ ಕಾಭಾಷಾ ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತಕಿಮ್ ॥ ೫೪.

ಪರಿತ್ಯಜಿಸಿ ಮಾಡುವ ಕರ್ಮಾನುಷ್ಠಾನ ರೂಪವಾದ ಕರ್ಮಯೋಗದಿಂದ ಸಾಧ್ಯವಾದ ಸ್ಥಿತ ಪ್ರಜ್ಞತೆಯು, ಸ್ವರೂಪಂ - ಸ್ವರೂಪವನ್ನೂ ಕುರಿತು ಮತ್ತು ಸ್ಥಿತ ಪ್ರಜ್ಞನ, ಅನುಷ್ಠಾನ ಪ್ರಕಾರಂಚ - ಅನುಷ್ಠಾನದ ರೀತಿಯನ್ನೂ ಕುರಿತು, ಪೃಚ್ಛತಿ - ಪ್ರಶ್ನಿಸುತ್ತಾನೆ. ಜ್ಞಾನಯೋಗ ನಿಷ್ಠೆಯನ್ನು ಅವಲಂಬಿಸಿರುವವನ ವಿಷಯವು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿರುವವರಿಂದ ಅರ್ಜುನನಿಗೆ ಪ್ರಶ್ನಿಸಲು ಅವಕಾಶ ಉಂಟಾಯಿತು. ಕರ್ಮಯೋಗವು ಶಾಸ್ತ್ರಜನ್ಯ ಆತ್ಮ ಜ್ಞಾನಯುಕ್ತವಾದುದರಿಂದ, ಆತ್ಮಸ್ವರೂಪ ವಿಷಯದ ಮನನಕ್ಕೆ ಹೇತುವಾಗಿ ಫಲರೂಪದಲ್ಲಿ ಆತ್ಮಸಾಕ್ಷಾತ್ಕಾರವನ್ನುಂಟುಮಾಡುತ್ತದೆಂದು ಯಾವಾಗ ಹೇಳಿದರೋ, ಆಗ ಅರ್ಜುನನು ಕುತೂಹಲಯುಕ್ತನಾಗಿ ಆ ಜ್ಞಾನಯೋಗದ ವಿಷಯದಲ್ಲಿ ಜ್ಞಾತವ್ಯಾಂಶಗಳನ್ನು ಕುರಿತು ಪ್ರಶ್ನಿಸುತ್ತಾನೆ ಎಂಬುದು ಅವತಾರಿಕೆಯ ಅಭಿಪ್ರಾಯವು

ಮೂಲಕ್ಕೆ ಅರ್ಥವು:—ಶ್ರೀಕೃಷ್ಣನು ಅಷ್ಟುದೂರ ಕರ್ಮಯೋಗ ಮಾಹಾತ್ಮ್ಯೆಯನ್ನೂ ಅದರ ಸ್ವರೂಪವನ್ನೂ ವಿವರಿಸಿ, ಅದರಿಂದುಂಟಾಗಬಹುದಾದ ಸ್ಥಿತಪ್ರಜ್ಞತಾ ರೂಪ ಜ್ಞಾನನಿಷ್ಠೆಯನ್ನು ಉಪದೇಶಿಸಿದನು. ಇದರಿಂದ ಹರ್ಷಿತನಾಗಿ ಪರಮ ಕೌತೂಹಲದಿಂದ ಆ ಸ್ಥಿತ ಪ್ರಜ್ಞತಾಸ್ವರೂಪವೆಂಥಾದ್ದೆಂದೂ ಅಂತಹ ಅವಸ್ಥೆಯಲ್ಲಿರುವವನ ಮನೋವಾಕ್ಕಾಯ ವ್ಯಾಪಾರಗಳು ಎಂತಹವೆಂದೂ ಅರ್ಜುನನು ಪ್ರಶ್ನಿಸುತ್ತಾನೆ:—ಹೇ ಕೇಶವ-"ಕ ಇತಿ ಬ್ರಹ್ಮಣೋ ನಾಮ ಈಶೋಽಹಂ ಸರ್ವದೇಹಿನಾಂ । ಆವಾಂ ತವಾಙ್ಗೇ ಸಂಭೂತೌ ತಸ್ಮಾತ್ಕೇಶವನಾಮ ವಾನ್" "ಕಃ ಎಂದರೆ ಚತುರ್ಮುಖ ಬ್ರಹ್ಮನು, ಈಶ ನೆಂದರೆ ಸರ್ವಪ್ರಾಣಿಗಳಿಗೂ ಯಜಮಾನನಾದ ರುದ್ರನು, ನಾವಿಬ್ಬರೂ ನಿನ್ನ ಶರೀರದಿಂದ ಜನಿಸಿದವರಾದ ಪ್ರಯುಕ್ತ ನೀನು ಕೇಶವ ನೆನಿಸಿರುವಿ" ಎಂಬ ರುದ್ರೋಕ್ತಿಯ ಪ್ರಕಾರ ಬ್ರಹ್ಮರುದ್ರಾದಿಗಳಿಗೂ ನಿಯಾಮಕನಾದ ಶ್ರೀ ಕೃಷ್ಣನೇ; ಅಥವಾ ಸೌಂದರ್ಯೋಪಲಕ್ಷಣಗಳಾದ ನೀಲ ಕುಟಿಲ ಕುಂತಳಗಳನ್ನು ಧರಿಸಿರುವ ಶ್ರೀ ಕೃಷ್ಣನೇ, ಸಮಾಧಿಸ್ಥಸ್ಯ - ಮೇಲೆ ಹೇಳಿದ ಚಿತ್ತವೃತ್ತಿಯುಳ್ಳ, ಇಲ್ಲಿಯೂ ಸಮಾಧಿ ಶಬ್ದಕ್ಕೆ ಮನಸ್ಸೆಂದೇ ಅರ್ಥವು; ಆದುದರಿಂದ ಮನಸ್ಸಿನಲ್ಲಿ ಇರುವ ಎಂದರೆ ಮನಸ್ಸನ್ನು ನಿಗ್ರಹಿಸಿ ತನ್ನ ವಶಮಾಡಿಕೊಂಡಿರುವವನ ಎಂದು ಅರ್ಥವನ್ನು ಹೇಳಬಹುದು, ಅಥವಾ ಶ್ರವಣ ಮನನಾದಿಗಳಿಂದುಂಟಾಗುವ ಸಮಾಧಿಯಲ್ಲಿರುವ ಎಂದರ್ಥವನ್ನೂ ಹೇಳಬಹುದು, ಪ್ರಕರಣಕ್ಕೆ ಸರಿಹೋಗುತ್ತದೆ, ಸ್ಥಿತಪ್ರಜ್ಞಸ್ಯ - ನಿಶ್ಚಲವಾದ ಬುದ್ಧಿಯಲ್ಲಿರುತ್ತಾನೆಂದು ಹೇಳಲ್ಪಟ್ಟುದರಿಂದ ಪ್ರತಿಷ್ಠಿತವಾದ ಪ್ರಜ್ಞೆಯುಳ್ಳವನ, ಕಾ ಭಾಷಾ - ಸ್ವರೂಪವ್ಯಾವುದು, ಇಲ್ಲಿ ಭಾಷಾ ಎಂಬುದರಿಂದ ಸ್ವರೂಪತಃ ಅವನನ್ನು ಎಂತವನೆಂದು ಕರೆಯಬಹುದು ಎಂಬರ್ಥವು; ಈ ಸ್ಥಿತಧೀಃ - ಈ ಸ್ಥಿತ ಪ್ರಜ್ಞನಾದವನು, ಕಿಂ ಪ್ರಭಾಷೇತ - ಏನನ್ನು ಮಾತನಾಡುವನು? ಆತನ ವಾಗ್ವ್ಯಾಪಾರವು ಎಂತಾದ್ದೆಂಬ ಭಾವವು. ಕಾ ಭಾಷಾ ಮತ್ತು ಕಿಂ ಪ್ರಭಾಷೇತ ಎಂಬುವುಗಳಿಗೆ ಹೀಗೆ ಅರ್ಥ ಹೇಳದಿದ್ದರೆ ಪುನರುಕ್ತಿದೋಷವುಂಟಾಗುವುದು. ಮಹರ್ಷಿಗಳು ಎಂದಿಗೂ ಅಂತಹ ದೋಷ ಉಂಟಾಗುವಹಾಗೆ ಪ್ರಯೋಗಿಸಲಾರರು. ಕಿಮಾಸೀತ - ಆತನು ಹೇಗಿರುವನು? ಎಂದರೆ ಅವನ ಮನೋವ್ಯಾಪಾರವೆಂಥಾದ್ದು ಎಂಬ ಭಾವವು ಕಿಂ ವ್ರಜೇತ - ಎಂತಹ ಕಾಯಿಕ ವ್ಯಾಪಾರವುಳ್ಳವನು? ಎಂಬದಾಗಿ, ಅರ್ಜುನ ಉವಾಚ – ಅರ್ಜುನನು ಪ್ರಶ್ನಿಸಿದನು.

ಭಾ. ಸಮಾಧಿಸ್ಥಸ್ಯ ಸ್ಥಿತಪ್ರಜ್ಞಸ್ಯ ಕಾಭಾಷಾ - ಕೋವಾಚಕಶ್ಶಬ್ದಃ ? ತಸ್ಯಸ್ವರೂಪಂ ಕೀದೃಶಮಿತ್ಯರ್ಥಃ, ಸ್ಥಿತಪ್ರಜ್ಞಃ ಕಿಂಚ ಭಾಷಣಾದಿಕಂ ಕರೋತಿ ? ||೫೪||

ಭಾ. ಅವ. ವೃತ್ತಿವಿಶೇಷ ಕಥನೇನ ಸ್ವರೂಪಮಪ್ಯುಕ್ತಂ ಭವತೀತಿ ವೃತ್ತಿವಿಶೇಷ ಉಚ್ಯತೇ.

---

**ಭಾಷ್ಯಾರ್ಥವು :—ಸಮಾಧಿಸ್ಥಸ್ಯ** - ನಿಶ್ಚಲವಾದ ಮನಸ್ಸಿನಿಂದ ಇರುವ, **ಸ್ಥಿತಪ್ರಜ್ಞಸ್ಯ** - ಅದರಿಂದ ಸ್ಥಿತ ಪ್ರಜ್ಞನೆಂದು ಹೇಳಲ್ಪಡುವವನ, **ಕಾಭಾಷಾ** ಎಂದರೆ **ಕೋವಾಚಕಶ್ಶಬ್ದಃ** - ಅವನ ಅವಸ್ಥೆಯನ್ನು ತಿಳಿಸುವ ಶಬ್ದವು ಯಾವುದು? ಸ್ಥಿತಪ್ರಜ್ಞನೆಂಬುದರಿಂದಲೇ ಆತನು ಹೇಳಲ್ಪಟ್ಟಿರುವಾಗ ಪುನಃ **ಕಾಭಾಷಾ** ಎಂಬ ಪ್ರಶ್ನೆಯು ಹೇಗೆ ಸಮಂಜಸವೆಂದರೆ? ಅದಕ್ಕೆ ಸಮಾಧಾನ ಹೇಳುತ್ತಾರೆ:—**ತಸ್ಯ ಸ್ವರೂಪಂ ಕೀದೃಶ ಮಿತ್ಯರ್ಥಃ** - ಆತನ ಸ್ವರೂಪವೆಂಥಾದ್ದು ಎಂಬಭಿಪ್ರಾಯವು. ಇನ್ನು ಯಾವುದಾದರೂ ವ್ಯವಹಾರಾನ್ತರ ಉಂಟೋ ಎಂಬ ಭಾವವು. ಹಾಗೆ ಕೇಳುವವರಲ್ಲಿ ಅರ್ಜುನನ ಆಶಯವು ಆತನ ಸ್ವರೂಪವನ್ನು ಚನ್ನಾಗಿ ತಿಳಿಯಬೇಕೆಂಬುದು. ಅಥವಾ **ಸ್ಥಿತಪ್ರಜ್ಞಸ್ಯ ಕಾಭಾಷಾ** ಎಂಬುದಕ್ಕೆ ಇನ್ನೊಂದು ವಿಧವಾಗಿಯೂ ಶ್ರೀಕೃಷ್ಣ ಭಗವಾನರವರು ಹೇಳಿರುವ ಮುಂದಿನ ಶ್ಲೋಕಕ್ಕನುಗುಣವಾಗಿಯೂ ಅನ್ವಯಿಸಬಹುದು ಹೇಗೆಂದರೆ, **ಸ್ಥಿತಪ್ರಜ್ಞಸ್ಯ**-ಸ್ಥಿತ ಪ್ರಜ್ಞನೆಂಬ, **ಕಾಭಾಷಾ**—ವ್ಯವಹಾರವು ಯಾವುದು? ಉಕ್ತಿಗೆ ಕಾರಣವು ಯಾವುದು? ಸ್ಥಿತಪ್ರಜ್ಞನೆಂದು ಅವನನ್ನು ಕುರಿತ ಉಕ್ತಿಯು ಹೇಗೆ? ಯಾವ ಕಾರಣದಿಂದ ಎಂಬ ತಾತ್ಪರ್ಯವು. ಅವಸ್ಥಾ ಭೇದಗಳಿಂದಲೂ ಅವರುಗಳ ಮನೋವಾಕ್ಕಾಯ ವೃತ್ತಿ ಭೇದಗಳಿಂದಲೂ ನಾಲ್ಕು ವಿಧಾವಸ್ಥೆಯುಳ್ಳವರೆಂದು ಶ್ರೀಕೃಷ್ಣನು ಮುಂದೆ ಹೇಳುವದರಿಂದ ಅದಕ್ಕನುಗುಣವಾಗಿ ಇಲ್ಲಿ ಅರ್ಥ ಹೇಳಬೇಕಾಗಿದೆ. ಹಾಗಲ್ಲದೆ, **ಕಾಭಾಷಾ** ಎಂದರೆ ಆತನ ಭಾಷೆಯಾವುದು? ಎಂದು ಅರ್ಥ ಹೇಳಿದರೆ, **"ಕಿಂ ಪ್ರಭಾಷೇತ"** ಎಂಬುದಕ್ಕೆ ಯಾವ ಅರ್ಥ ಹೇಳಲೂ ಸಾಧ್ಯವಿಲ್ಲವು. ಮುಂದಿನ ಉತ್ತರಕ್ಕನುಗುಣವಾಗಿ ಸ್ವರೂಪವೆಂಥಾದ್ದೆಂದು ಅರ್ಥ ಮಾಡಿರುತ್ತಾರೆ, **ಸ್ಥಿತ ಪ್ರಜ್ಞಃ** - ಈ ಜ್ಞಾನ ನಿಷ್ಠನು, **ಕಿಂಚ ಭಾಷಣಾದಿಕಂ ಕರೋತಿ**—ಯಾವ ಭಾಷಣ ಮೊದಲಾದವುಗಳನ್ನು ಮಾಡುತ್ತಾನೆ? ವಾಗಾದಿ ವೃತ್ತಿ ಎಂಥಾದ್ದೆಂಬ ಭಾವವು. ಮೂಲದ ಪೂರ್ವಾರ್ಧದಲ್ಲಿ ಸ್ಥಿತಪ್ರಜ್ಞನಿಗಿಂತಲೂ **ಸ್ಥಿತಧೀಃ** ಎಂಬ ಪ್ರಯೋಗವು ಅಧಿಕಾರ್ಯಾಂತರವನ್ನು ಬೋಧಿಸುತ್ತದೆ ಎಂಬ ಭ್ರಮ ನಿವಾರಣಕ್ಕಾಗಿ, ಉತ್ತರಾರ್ಧದ **ಸ್ಥಿತಧೀಃ** ಎಂಬುದಕ್ಕೂ ಸ್ಥಿತಪ್ರಜ್ಞನೆಂದೇ ವ್ಯಾಖ್ಯಾನ ಮಾಡಿ, **ಸ್ಥಿತಪ್ರಜ್ಞಃ ಕಿಂಚ ಭಾಷಣಾದಿಕಂ ಕರೋತಿ?** ಎಂದು ಅನ್ವಯಿಸಿರುತ್ತಾರೆ. **ಭಾಷಣಾದಿಕಂ** ಎಂಬಲ್ಲಿ ಆದಿ ಪದದಿಂದ **ಕಿಮಾಸೀತ? ವ್ರಜೇತಕಿಂ** ಎಂಬೆರಡು ಪ್ರಶ್ನೆಗಳ ಅರ್ಥಗಳು ಗರ್ಭೀಕರಿಸಲ್ಪಟ್ಟವು. ಭಾಷಣವು ವಾಕ್ಪ್ರವೃತ್ತಿಯಾದುದರಿಂದ **ಕಿಮಾಸೀತ** ಎಂಬುದನ್ನು ಮಾನಸ ಪ್ರವೃತ್ತಿ ವಿಷಯವಾದುದೆಂದೂ **ವ್ರಜೇತಕಿಂ** ಎಂಬುದು ಕಾಯಿಕ ಪ್ರವೃತ್ತಿ ವಿಷಯವಾದುದೆಂದೂ ಭಾವಿಸಬಹುದು. ಆದುದರಿಂದ ಉತ್ತರಾರ್ಧದ ಮೂರು ಪ್ರಶ್ನೆಗಳಿಂದಲೂ ಆತನ ವಾಚಿಕ ಮಾನಸಿಕ ಕಾಯಿಕ ವ್ಯಾಪಾರಗಳು ಹೇಗೆ ವಿಲಕ್ಷಣಗಳಾದವು ಎಂಬ ಭಾವವು ತೋರಿಬರುತ್ತದೆ, ಇದೀಗ ಅರ್ಜುನನ ಆಶಯವು. ||೫೪||

**ಭಾಷ್ಯಾವತಾರಿಕೆಯ ಅರ್ಥವು :—ವೃತ್ತಿವಿಶೇಷ ಕಥನೇನ**-ಆ ಸ್ಥಿತ ಪ್ರಜ್ಞನ ಪ್ರವೃತ್ತಿಯನ್ನು ಹೇಳುವವರಿಂದ **ಸ್ವರೂಪಮಪ್ಯುಕ್ತಂ ಭವತೀತಿ** - ಸ್ವರೂಪವೂ ಕೂಡ ಹೇಳಲ್ಪಟ್ಟದುದು ಆಗುತ್ತದೆಂದು ಭಾವಿಸಿ, **ವೃತ್ತಿವಿಶೇಷ ಉಚ್ಯತೇ** - ಆತನ ಪ್ರವೃತ್ತಿಯು ಹೇಳಲ್ಪಡುತ್ತದೆ. ನಾಲ್ಕು ಪ್ರಶ್ನೆಗಳನ್ನು ಅರ್ಜುನನು ಕೇಳಿರುತ್ತಾನೆ, ಅವುಗಳಲ್ಲಿ ಸ್ವರೂಪ ವಿಷಯ

ಮೂ. ಶ್ರೀ ಭಗವಾನುವಾಚ—

ಪ್ರಜಹಾತಿ ಯದಾ ಕಾಮಾರ್ನ್ ಸರ್ವಾನ್ ಪಾರ್ಥ ಮನೋಗತಾರ್ನ್ ।
ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫

ಭಾ. ಆತ್ಮನ್ಯೇವಾತ್ಮನಾ - ಮನಸಾ ಆತ್ಮೈಕಾವಲಂಬನೇನ, ತುಷ್ಟಸ್ತೇನ ತೋಷೇಣ

ಪ್ರಶ್ನೆಯು ಮೊದಲನೆಯದಾಗಿ ಇನ್ನು ಮಿಕ್ಕವು ಆತನ ಕರಣತ್ರಯ ಪ್ರವೃತ್ತಿ ವಿಷಯವಾದುವು. ಉತ್ತರವು ಪ್ರವೃತ್ತಿರೂಪವಾದುದಾದರೂ, ಅದರಿಂದ ಸ್ವರೂಪವೂ ವ್ಯಕ್ತವಾಗುತ್ತದೆಂಬ ಭಿಪ್ರಾಯದಿಂದ ಪ್ರವೃತ್ತಿಯೇ ಹೇಳಲ್ಪಡುತ್ತದೆ. ಮೊದಲು ಸ್ಥಿತ ಪ್ರಜ್ಞನೆಂದು ಪರಾಕಾಷ್ಠಾ ದೆಶೆಯಲ್ಲಿ ಹೇಳಲ್ಪಡಲು ಆತನ ಪ್ರವೃತ್ತಿಯು ಎಂಥಾದ್ದು ? ಆತನ ವಾಙ್ಮನಃಕಾಯವ್ಯಾಪಾರ ಗಳು ಎಂತವು ? ಎಂಬುವು ಪ್ರಶ್ನೆಗಳ ತಾತ್ಪರ್ಯವು.

**ಮೂಲಕ್ಕೆ ಅರ್ಥವು :—**ಅರ್ಜುನನ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ:-ಉತ್ತರವನ್ನು ಹೇಳುವದರಲ್ಲಿ ಮೊದಲು ಸ್ಥಿತಪ್ರಜ್ಞನ ಪರಾಕಾಷ್ಠಾ ದೆಶೆಯನ್ನು ಮುಂದಿನ ಶ್ಲೋಕದಿಂದ ಹೇಳಿ, ಅದು ನಾಲ್ಕನೆಯ ಅವಸ್ಥೆಯೆಂದೂ, ಆ ಅವಸ್ಥೆಗೆ ಬರಲು ಸ್ಥಿತಪ್ರಜ್ಞನು ಸ್ವಲ್ಪ ಸ್ವಲ್ಪ ವಾಗಿ ಪ್ರಯತ್ನಿಸುವನೆಂದೂ ಹೇಳುತ್ತಾರೆ. ಈ ಪರಾಕಾಷ್ಠಾದೆಶೆಯಾದ ನಾಲ್ಕನೆಯ ಅವಸ್ಥೆ ಯಲ್ಲಿ ಈ ಜ್ಞಾನಯೋಗಿಯನ್ನು ಸ್ಥಿತಪ್ರಜ್ಞನೆಂದು ಹೇಳಲು ಕಾರಣವೇನೆಂಬುದನ್ನು ತಿಳಿಸು ತ್ತಾರೆ :—ಹೇ **ಪಾರ್ಥ**- ಎಲೈ ಅರ್ಜುನನೇ, **ಆತ್ಮನ್ಯೇವ** - ಜೀವಾತ್ಮನಲ್ಲೇ, **ಆತ್ಮನಾ** - ಮನಸ್ಸಿ ನಿಂದ, **ತುಷ್ಟಃ** - ಸಂತುಷ್ಟನಾಗಿ ಎಂದರೆ ಜೀವಾತ್ಮನನ್ನೇ ಆಶ್ರಯಿಸಿ ಅದರ ಸ್ವರೂಪದಿಂದ ಸಂತೋಷಗೊಂಡವನಾಗಿ, **ಸರ್ವಾನ್ ಮನೋಗತಾನ್** - ಇತರ ಸಮಸ್ತವಾದ ಮನಸ್ಸಿಗೆ ಸಂಬಂ ಧಿಸಿದ, **ಕಾಮಾನ್** - ಕಾಮುಗಳನ್ನೂ, **ಪ್ರಜಹಾತಿ ಪ್ರಕರ್ಷೇಣ ಜಹಾತಿ** - ನಿಶ್ಶೇಷವಾಗಿ ಬಿಡುವನೋ, **ತದಾ** - ಆಗ, **ಸ್ಥಿತಪ್ರಜ್ಞಃ** - ಸಂಪೂರ್ಣನಾದ ಸ್ಥಿತಪ್ರಜ್ಞನೆಂದು, **ಉಚ್ಯತೇ** – ಹೇಳಲ್ಪಡುವನು. ಇದು ಜ್ಞಾನಯೋಗಿಯ ನಾಲ್ಕನೆಯದಾದ ಕೊನೆಯ ಸ್ಥಿತಪ್ರಜ್ಞನೆಂದು ಹೇಳಿ ಸಿಕೊಳ್ಳುವ ಉತ್ಕರ್ಷಾವಸ್ಥೆಯು. ಈತನು ಯಾವಾಗಲೂ ಜೀವಾತ್ಮಸ್ವರೂಪವನ್ನೇ ಚಿಂತಿಸು ವವನಾಗಿ, ಸರ್ವೇಂದ್ರಿಯಗಳನ್ನೂ ವಶೀಕಾರಮಾಡಿಕೊಂಡವನಾಗಿ, ಜೀವಾತ್ಮ ಸ್ವರೂಪವಿನಾ ಇನ್ನು ಯಾವ ಕಾಮುಗಳಲ್ಲೂ ಮನಸ್ಸಿಡದವನಾಗಿ ಅತ್ಯಂತ ವೈರಾಗ್ಯಾವಸ್ಥೆಯಲ್ಲಿ ಇರುವವನು, ಇವನಿಗೆ ಆತ್ಮಾವಲೋಕನ ಉಂಟಾಗಿರುವದರಿಂದ ಜ್ಞಾನನಿಷ್ಠೆಯ ಪರಾಕಾಷ್ಠಾವಸ್ಥೆಯೆಂದು ಶ್ರೀ ಭಾಷ್ಯಕಾರರು ಹೇಳಿರುತ್ತಾರೆ. ಇದಕ್ಕೆ ಪಾತಂಜಲ ಸೂತ್ರಾನುಸಾರ ವಶೀಕಾರ ಸಂಜ್ಞಾವಸ್ಥಾ ಎಂದು ಹೆಸರು. ಇದರಲ್ಲಿ ದೃಷ್ಟಫಲ ಮತ್ತು ಆನುಶ್ರವಿಕ ಫಲಗಳಲ್ಲಿ ಸಂಪೂರ್ಣವಾದ ವೈತೃ ಷ್ಣೆಯುಳ್ಳ ವೈರಾಗ್ಯವಿರುತ್ತದೆ. ಇದಕ್ಕಿಂತಲೂ ಸ್ವಲ್ಪ ಕಮ್ಮಿಯಾದ ಅವಸ್ಥೆಯು ೫೬ ನೆಯ ಶ್ಲೋಕದಲ್ಲೂ ಅದಕ್ಕೂ ಕಮ್ಮಿಯಾದುದು ವ್ಯತಿರೇಕ ಸಂಜ್ಞಾವಸ್ಥೆ ಎಂದೆನಿಸಿ ೫೭ ನೆಯ ಶ್ಲೋಕದಲ್ಲೂ, ಅದಕ್ಕೂ ಕಮ್ಮಿಯಾಗಿ ಮೊದಲನೆಯ ಅವಸ್ಥೆಯಾದ ಯತಮಾನಾವಸ್ಥೆಯು ೫೮ನೆಯ ಶ್ಲೋಕದಲ್ಲೂ ಉಪಪಾದಿತವಾಗಿರುತ್ತದೆ.

**ಭಾಷ್ಯಾರ್ಥವು :—**ಆತ್ಮನ್ಯೇವ ಆತ್ಮನಾ - ಎಂದರೆ, ಮನಸಾ ಆತ್ಮೈಕಾವಲಂಬನೇನ– ಆ ಆತ್ಮ ಒಂದರ ಅವಲಂಬನವುಳ್ಳ ಮನಸ್ಸಿನಿಂದ **ತುಷ್ಟಃ** - ಸಂತೋಷಗೊಂಡವ ನಾಗಿ, **ತೇನತೋಷೇಣ** – ಆ ಆನಂದದಿಂದ, **ತದ್ವ್ಯತಿರಿಕ್ತಾನ್** - ಅದಕ್ಕಿಂತಲೂ ಬೇರೆಯಾದ,

ಭಾ. ತದ್ವ್ಯತಿರಿಕ್ತಾನ್ ಸರ್ವಾನ್ ಮನೋಗತಾನ್ ಕಾಮಾನ್ ಯದಾ ಪ್ರಕರ್ಷೇಣ ಜಹಾತಿ, ತದಾ ಯಂ ಸ್ಥಿತಪ್ರಜ್ಞ ಇತ್ಯುಚ್ಯತೇ. ಜ್ಞಾನನಿಷ್ಠಾ ಕಾಷ್ಠೇಯಂ ||

ಭಾ. ಅ. ಅನನ್ತರಂ ಜ್ಞಾನನಿಷ್ಠಸ್ಯ ತತೋಽರ್ವಾಚೀನಾಽದೂರ ವಿಪ್ರಕೃಷ್ಟಾಽವಸ್ಥೋಚ್ಯತೇ.

---

ಸರ್ವಾನ್ ಮನೋಗತಾನ್ ಕಾಮಾನ್ - ಸಮಸ್ತ ಮನಸ್ಸಿಗೆ ಉಂಟಾಗಬಹುದಾದ ಕಾಮಗಳನ್ನೂ, ಯದಾ - ಯಾವಾಗ, ಪ್ರಕರ್ಷೇಣ ಜಹಾತಿ - ಸವಾಸನವಾಗಿ ಪುನಃ ಅಙ್ಕುರಿಸದ ಹಾಗೆ ಬಿಟ್ಟುಬಿಡುತ್ತಾನೋ, ತದಾ - ಆಗ, ಅಯಂ - ಈತನು, ಸ್ಥಿತಪ್ರಜ್ಞ ಇತ್ಯುಚ್ಯತೇ – ಸಂಪೂರ್ಣ ಸ್ಥಿತಪ್ರಜ್ಞನೆಂದು ಹೇಳಲ್ಪಡುವನು; ಜ್ಞಾನನಿಷ್ಠಾ ಕಾಷ್ಠೇಯಮ್ - ಜ್ಞಾನಯೋಗದ ಸರ್ವೋತ್ಕೃಷ್ಟವಾದ ಅವಸ್ಥೆಯು ಇದು. ಇಲ್ಲಿ ಸರ್ವ ಶಬ್ದವಿದ್ದರೂ ಆತ್ಮವ್ಯತಿರಿಕ್ತಾನ್ ಸರ್ವಾನ್ ಮನೋಗತಾನ್ ಎಂದು ಸಙ್ಕೋಚಾರ್ಥವನ್ನು ಪ್ರಕರಣಾನುಗುಣವಾಗಿ ಮಾಡಿರುತ್ತಾರೆ. ಸರ್ವ ಮನೋಗತ ಕಾಮುಗಳಲ್ಲಿ ಆತ್ಮ ಧ್ಯಾನವೂ ಸೇರಿಮದರಿಂದ, ಅದನ್ನೂ ತ್ಯಜಿಸುವನೆಂದು ಅರ್ಥಮಾಡಿದರೆ ಪ್ರಕರಣವಿರುದ್ಧವಾಗುವದರಿಂದ, ಆತ್ಮವ್ಯತಿರಿಕ್ತಾನ್ ಎಂಬ ಪ್ರಯೋಗವು. ಹೀಗೆಯೇ ಶಾಸ್ತ್ರಗಳಲ್ಲಿ ಅನೇಕ ಕಡೆಗಳಲ್ಲಿ ಸರ್ವ ಶಬ್ದಕ್ಕೆ ಕೆಲವನ್ನು ವ್ಯಾವರ್ತಿಸಿ ಸಙ್ಕುಚಿತಾರ್ಥವನ್ನು ಪ್ರಕರಣಾನುಗುಣವಾಗಿ ಹೇಳಬೇಕಾಗಿ ಬರುತ್ತದೆ. ಇದೇ ಗ್ರಂಥದಲ್ಲೇ ಸರ್ವಧರ್ಮಾನ್ಪರಿತ್ಯಜ್ಯ ಎಂಬಲ್ಲಿಯೂ ಕೆಲವನ್ನು ವ್ಯಾವರ್ತಿಸಿ ಪ್ರಕರಣಾನುಗುಣವಾಗಿ ಅರ್ಥಮಾಡಬೇಕಾಗಿ ಬರುತ್ತದೆ. ಇದಕ್ಕೆ ದೃಷ್ಟಾನ್ತವಾಗಿ ಉಪನ್ಯಾಸಕರೂ ಸಭಾಧ್ಯಕ್ಷರೂ ಕಾರ್ಯದರ್ಶಿಗಳೂ ಬಂದಿರುವವರಿಂದ ಸರ್ವರೂ ಒಳಗೆ ದಯಮಾಡಿಸಬೇಕು ಎಂದರೆ ಆ ಸರ್ವ ಶಬ್ದಕ್ಕೆ ಉಪನ್ಯಾಸಕರನ್ನೂ ಸಭಾಧ್ಯಕ್ಷರನ್ನೂ ಕಾರ್ಯದರ್ಶಿಗಳನ್ನೂ ವ್ಯಾವರ್ತಿಸಿ ಅರ್ಥಹೇಳಬೇಕಾದುದು ಪ್ರಕರಣದಿಂದ ಸಿದ್ಧವು. ಹಾಗೆಯೇ ಇಲ್ಲಿಯೂಎಂದು ಭಾವಿಸತಕ್ಕದ್ದು. ಆತ್ಮನ್ಯೇವಾತ್ಮನಾ ತುಷ್ಟಃ - ಜೀವಾತ್ಮನ ವಿಷಯದಲ್ಲೇ ಮನಸ್ಸಿನಿಂದ ಸಂತೋಷಗೊಂಡವನಾಗಿ ಸರ್ವಾನ್ ಕಾಮಾನ್ ಯದಾಪ್ರಜಹಾತಿ ಎಂದು ಅನ್ವಯಿಸಿದರೆ ಸ್ವತಃ ಆತ್ಮವ್ಯತಿರಿಕ್ತಃ ಎಂಬ ಭಿಪ್ರಾಯವು ವ್ಯಕ್ತಪಡುತ್ತದೆ. ಮನಸ್ಸನ್ನು ಜೀವಾತ್ಮ ಸ್ವರೂಪಾನುಸಂಧಾನದಲ್ಲಿಡುವವನು ಇತರ ಸರ್ವ ಐಹಿಕಗಳಲ್ಲಿ ಸಂಪೂರ್ಣವಾಗಿ ಜ್ಞಾನವಿಲ್ಲದಿರುವ ಇಂತಹ ಪರಾಕಾಷ್ಠಾದೆಶೆಯು ಸಾಧ್ಯವೋ ಎಂದರೆ ಶ್ರೀ ದೇಶಿಕರವರು ಪ್ರಹ್ಲಾದನ ಪರಮಾನಂದ ದೆಶೆಯನ್ನು ದೃಷ್ಟಾಂತವಾಗಿ ಉದಾಹರಿಸಿರುತ್ತಾರೆ "ನವಿವೇದಾತ್ಮನೋ ಗಾತ್ರಂ ತತ್ಸ್ಮೃತ್ಯಾಹ್ಲಾದಸಂಸ್ಥಿತಃ" (ವಿ. ಪು. ೧ ೧೯. ೩೯) ಕೃಷ್ಣನಲ್ಲೇ ಮನಸ್ಸನ್ನಿಟ್ಟು ಅಂತಹ ಧ್ಯಾನದಿಂದ ಪರಮಾನಂದವನ್ನು ಹೊಂದಿದವನಾದುದರಿಂದ, ಸರ್ಪಗಳು ದೇಹವನ್ನು ಕಚ್ಚಿದರೂ ತಿಳಿಯದೇ ಹೋದನೆಂದು ಹೇಳಲ್ಪಟ್ಟಿರುತ್ತದೆ. ||೫೫||

ಭಾಷ್ಯಾವತಾರಿಕೆಯ ಅರ್ಥವು:—ಅನನ್ತರಂ - ಆಮೇಲೆ, ಈ ಮುಂದಿನ ಶ್ಲೋಕದಿಂದ, ಜ್ಞಾನನಿಷ್ಠಸ್ಯ - ಹಿಂದೆ ಹೇಳಿದ ಸಂಪೂರ್ಣಜ್ಞಾನಯೋಗ ನಿಷ್ಠನಿಗೆ, ತತೋಽರ್ವಾಚೀನ - ಅದಕ್ಕೆ ಪೂರ್ವಭಾವಿಯಾಗಿ, ಅದೂರ ವಿಪ್ರಕೃಷ್ಟಾವಸ್ಥಾ-ಬಹಳ ದೂರವಾಗಿ ಎಳೆದುಕೊಂಡು ಹೋಗದ ಎಂದರೆ ತುಂಬಾ ಸಮೀಪವಾದ ಅವಸ್ಥೆಯು, ಎಂದರೆ ಪರಾಕಾಷ್ಠಾವಸ್ಥೆಯ ಹಿಂದಿನ ಅವಸ್ಥೆಯು,ಉಚ್ಯತೇ-ಹೇಳಲ್ಪಡುತ್ತದೆ. ಇದಕ್ಕೆ ಏಕೇಂದ್ರಿಯಾವಸ್ಥೆಯೆಂದು ಹೆಸರು.

**ಮೂ.** ದುಃಖೇಷ್ವನುದ್ವಿಗ್ನಮನಾಸ್ಸುಖೇಷು ವಿಗತಸ್ಪೃಹಃ ।
ವೀತರಾಗಭಯಕ್ರೋಧಃ ಸ್ಥಿತಧೀ ಮುನಿರುಚ್ಯತೇ ॥ ೫೬.

**ಭಾ.** ಪ್ರಿಯವಿಶ್ಲೇಷಾದಿ ದುಃಖನಿಮಿತ್ತೇಷು ಉಪಸ್ಥಿತೇಷ್ವ ನುದ್ವಿಗ್ನಮನಾಃ-ನದುಃಖೀ ಭವತಿ ; ಸುಖೇಷು ವಿಗತ ಸ್ಪೃಹಃ . ಪ್ರಿಯೇಷು ಸನ್ನಿಹಿತೇಷ್ವಪಿ ವಿಗತಸ್ಪೃಹಃ ; ವೀತರಾಗಭಯಕ್ರೋಧಃ; ಅನಾಗತೇಷು ಸ್ಪೃಹಾರಾಗಃ, ತದ್ರಹಿತಃ ; ಪ್ರಿಯವಿಶ್ಲೇಷ

**ಮೂಲಕ್ಕೆ ಅರ್ಥವು :—ದುಃಖೇಷು** - ದುಃಖ ಕಾರಣಭೂತಗಳು ಬಂದೊದಗಿದರೂ, **ಅನುದ್ವಿಗ್ನಮನಾಃ** - ಖೇದವಿಲ್ಲದ ಮನಸ್ಸುಳ್ಳವನಾಗಿಯೂ, **ಸುಖೇಷು** - ಸುಖಕಾರಣಗಳು ಒದಗಿದರೂ, **ವಿಗತಸ್ಪೃಹಃ** – ಅವುಗಳಲ್ಲಿ ಆಶೆಯಿಲ್ಲದವನಾಗಿಯೂ, **ವೀತರಾಗ ಭಯ ಕ್ರೋಧಃ**, ರಾಗವೆಂದರೆ ಇಲ್ಲದಿರುವದರಲ್ಲಿ ಅಪೇಕ್ಷೆಯು, ಭಯವೆಂದರೆ ಪ್ರಿಯವಾದುದು ನಷ್ಟ ವಾಗುವ, ಅಪ್ರಿಯವಾದುದು ಪ್ರಾಪ್ತವಾಗುವ, ಸಂದರ್ಭದಲ್ಲುಂಟಾಗುವ ಚಿತ್ತವಿಭ್ರಮವು, ಕ್ರೋಧವೆಂದರೆ ತನಗೆ ಇಷ್ಟವಿಲ್ಲದುದನ್ನುಂಟುಮಾಡಿದವನಿಗೆ ದುಃಖವನ್ನುಂಟುಮಾಡುವ ಚಿತ್ತಾ ವೇಶವು,ಇವುಗಳಿಂದ ರಹಿತನಾಗಿಯೂ ಇರುವವನು, **ಸ್ಥಿತಧೀಃ**-ಹೀಗೆ ಸ್ಥಿರವಾದಜ್ಞಾನವುಳ್ಳವನು, **ಮುನಿರುಚ್ಯತೇ**-ಮನನಶೀಲನೆಂದು ಹೇಳಲ್ಪಡುವನು. ಯಾವುದರ ಮನನವೆಂದರೆ ಪ್ರಕರಣಾನು ಗುಣವಾಗಿ ಜೀವಾತ್ಮ ಸಾಕ್ಷಾತ್ಕಾರಕ್ಕೆ ಪೂರ್ವಭಾವಿಯಾಗಿ ಆತ್ಮಸ್ವರೂಪದ ಮನನ ಶೀಲನು ಎಂಬ ತಾತ್ಪರ್ಯವು. ಪರಾಕಾಷ್ಠಾ ದೆಶೆಯಲ್ಲಿ ಸ್ಥಿತಪ್ರಜ್ಞನೆಂದೂ, ಅದಕ್ಕೆ ಹಿಂದಿನಾವಸ್ಥೆ ಯಲ್ಲಿ ಮುನಿಯೆಂದೂ ಹೇಳಲ್ಪಡುವನೆಂಬ ಭಾವವು; ಮುನಿಯಾದವನೇ ಕೊನೆಗೆ ಸ್ಥಿತಪ್ರಜ್ಞ ನಾಗುವನು ಎಂದು ಹೇಳಲ್ಪಟ್ಟಿತು.

**ಭಾಷ್ಯಾರ್ಥವು :**—ಹಿಂದೆ ಜ್ಞಾನಯೋಗಿಯ ನಾಲ್ಕನೆಯ ಪರಾಕಾಷ್ಠಾದೆಶೆಯು ಹೇಳಲ್ಪ ಟ್ಟಿತು, ಏಕೇಂದ್ರಿಯ ಸಂಜ್ಞಾವಸ್ಥೆಯಾದ ಜ್ಞಾನಯೋಗಿಯ ಮೂರನೆಯ ಅವಸ್ಥೆಯು ಇಲ್ಲಿ ಹೇಳಲ್ಪಡುತ್ತದೆ. **ಪ್ರಿಯವಿಶ್ಲೇಷಾದಿ ದುಃಖನಿಮಿತ್ತೇಷು** - ಪ್ರಿಯವಸ್ತುವಿನ ವಿಯೋ ಗವೇ ಮೊದಲಾದ ದುಃಖಕ್ಕೆ ಕಾರಣಗಳು, **ಉಪಸ್ಥಿತೇಷು** - ಒದಗಿದರೂ, ಇಲ್ಲಿ ಆದಿ ಪದದಿಂದ ಅಪ್ರಿಯವಾದುದರ ಆಗಮನವೂ ಸಙ್ಗ್ರಹಿಸಲ್ಪಟ್ಟಿತು, **ಅನುದ್ವಿಗ್ನಮನಾಃ** ಎಂದರೆ **ನದುಃಖೀ ಭವತಿ** - ದುಃಖವುಳ್ಳವನಾಗುವದಿಲ್ಲವು. ಇಲ್ಲಿ ದುಃಖವುಳ್ಳವನಾಗುವದಿಲ್ಲವೆಂದು ಹೇಳಿರುವದ ರಿಂದ, ಅವು ಅವನಿಗೆ ದುಃಖವೇ ಅಲ್ಲನಾದುದರಿಂದ **ದುಃಖೇಷು** ಎಂಬುದಕ್ಕೆ **ದುಃಖ ನಿಮಿ ತ್ತೇಷು** ಎಂಬದಾಗಿಯೇ ಅರ್ಥಮಾಡಬೇಕಾಗಿರುತ್ತದೆ. ಹಾಗೆಯೇ **ಸುಖೇಷು ವಿಗತಸ್ಪೃಹಃ** ಎಂದರೆ **ಪ್ರಿಯೇಷು ಸನ್ನಿಹಿತೇಷ್ವಪಿ ವಿಗತಸ್ಪೃಹಃ** - ಪ್ರಿಯವಾದವುಗಳು ಪ್ರಾಪ್ತವಾಗ.ವ ಹಾಗೆ ಇದ್ದರೂ, **ವಿಗತಸ್ಪೃಹಃ**-ಹೋದ ಆಶೆಯುಳ್ಳವನು, **ವೀತರಾಗ ಭಯಕ್ರೋಧಃ, ಅನಾಗತೇಷು ಸ್ಪೃಹಾ ರಾಗಃ** - ಇಲ್ಲಿ ರಾಗವೆಂದರೆ ಪ್ರಾಪ್ತವಾಗದೇ ಇರುವದರಲ್ಲಿ ಅಪೇಕ್ಷೆಯು, ಸ್ಪೃಹೆಯಾದರೋ ಗೋಬಲೀವರ್ದ ನ್ಯಾಯಪ್ರಕಾರ ಪ್ರಾಪ್ತವಾಗಿರುವದರಲ್ಲೇ ಅಪೇಕ್ಷೆಯು **ತದ್ರಹಿತಃ** - ಅಂತಹ ರಾಗವಿಲ್ಲದಿರುವವನು, **ವಿಗತಸ್ಪೃಹಃ, ವೀತರಾಗಃ** ಎಂಬ ಪದಗಳಿಂದ ಪುನರುಕ್ತಿ ಏನೂ ಇಲ್ಲವೆಂದು ತೋರಿಸುವದಕ್ಕಾಗಿ **ವಿಗತಸ್ಪೃಹಃ** ಎಂಬುದಕ್ಕೆ **ಪ್ರಿಯೇಷು ಸನ್ನಿಹಿತೇಷ್ವಪಿ ವಿಗತಸ್ಪೃಹಃ** ಪ್ರಾಪ್ತವಾಗಿರುವದರಲ್ಲಿ ಆಶೆ ಯಿಲ್ಲದವನಾಗಿ ಎಂದೂ, **ವೀತ ರಾಗಃ** ಎಂದರೆ **ಅನಾಗತೇಷು ಸ್ಪೃಹಾ ರಾಗಃ** ಎಂದೂ ಪ್ರಾಪ್ತವಾಗದಿರುವದರಿಂದ ಆಶೆಯಿಲ್ಲ ದವನಾಗಿ ಎಂದೂ ವ್ಯಾಖ್ಯಾನ ಮಾಡಿರುತ್ತಾರೆ, **ಸ್ಪೃಹಾ** - ಸಾಧಾರಣವಾದ ಆಶೆಯು, **ರಾಗಃ**-

ಭಾ. ಪ್ರಿಯಾಗಮನ ಹೇತುದರ್ಶನ ನಿಮಿತ್ತಂ ದುಃಖಂ, ಭಯಂ, ತದ್ರಹಿತಃ ; ಪ್ರಿಯ ವಿಶ್ಲೇಷಾ ಪ್ರಿಯಾಗಮನ ಹೇತುಭೂತ ಚೇತನಾನ್ತರ ಗತ ದುಃಖ ಹೇತುಭೂತ ಸ್ಸ್ವಮನೋ ವಿಕಾರಃ ಕ್ರೋಧಃ, ತದ್ರಹಿತಃ ; ಏವಂ ಭೂತೋ ಮುನಿಃ – ಆತ್ಮ ಮನನಶೀಲಃ, ಸ್ಥಿತಧೀ ರಿತ್ಯುಚ್ಯತೇ ॥೫೬॥

ಭಾ. ಅವ. ತತೋಽರ್ವಾಚೀನದಶಾ ಪ್ರೋಚ್ಯತೇ—

ವಿಶೇಷವಾದ ಆಶಿಯು, ಪ್ರಿಯವಿಶ್ಲೇಷಾ ಪ್ರಿಯಾಗಮನ ಹೇತು ದರ್ಶನ ನಿಮಿತ್ತಂ ದುಃಖಂ, ಭಯಂ - ಪ್ರಿಯವಾದುವರ ಅಗಲಿಕೆ ಮತ್ತು ಅಪ್ರಿಯವಾದುವರ ಸಂಭವ, ಇವುಗಳ ಕಾರಣ ಜ್ಞಾನದಿಂದುಂಟಾದ ದುಃಖಕ್ಕೆ ಭಯವೆಂದು ಹೆಸರು, ಇದರಿಂದ ಶರೀರ ಕಂಪನಾದಿಗಳು ಉಂಟಾಗಬಹುದು, ತದ್ರಹಿತಃ - ಇವಲ್ಲದಿರುವವನು, ಪ್ರಿಯ ವಿಶ್ಲೇಷಾ.......ಕ್ರೋಧಃ - ಪ್ರಿಯವಾದುದರ ಅಗಲಿಕೆ, ಅಪ್ರಿಯವಾದುವರ ಪ್ರಾಪ್ತಿ ಇವುಗಳಿಗೆ ಕಾರಣಭೂತನಾದ ಬೇರೆ ಚೇತನನನ್ನು ಹೊಂದಿದ ದುಃಖಕ್ಕೆ ಕಾರಣವಾದ ತನ್ನ ಮನೋವಿಕಾರಕ್ಕೆ ಕ್ರೋಧವೆಂದು ಹೆಸರು ; ಎಂದರೆ ಒಬ್ಬನು ತನಗೆ ಪ್ರಿಯ ವಿಶ್ಲೇಷಕ್ಕಾಗಲಿ ಅಪ್ರಿಯ ಪ್ರಾಪ್ತಿಗಾಗಲಿ ಕಾರಣಭೂತನಾಗಿದ್ದಾನೆ, ಆದ ಕ್ಕಾಗಿ ಆತನಿಗೆ ದುಃಖವನ್ನುಂಟುಮಾಡಬೇಕೆಂಬ ತನ್ನ ಚಿತ್ತವಿಕಾರಕ್ಕೆ ಕ್ರೋಧಃ-ಶಿಟ್ಟೆಂಬ ಹೆಸರು ತದ್ರಹಿತಃ-ಅದಿಲ್ಲದವನು, ಇಲ್ಲಿ ಪ್ರಿಯವಿಶ್ಲೇಷಾ ಪ್ರಿಯಾಗಮನಕ್ಕೆ ಹೇತುಭೂತವಾದ ಚೇತನಾನ್ತರಗತ ಎಂದು, ಕಾರಣವಾದ ಬೇರೆ ಚೇತನನ ವಿಷಯದಲ್ಲಿ ಉಂಟಾಗುವ ಮನೋವಿಕಾರವೆಂದು ಏಕೆ ವ್ಯಾಖ್ಯಾನವು ಎಂದರೆ, ಮುಳ್ಳು ಕಾಲಿಗೆ ತಗಲುವದು, ಕಂಭವು ತಲೆಗೆ ತಗಲುವದು, ಇತ್ಯಾದಿ ಅಚೇತನಗಳ ಮೂಲಕವೂ ದುಃಖಪ್ರಾಪ್ತಿಯುಂಟಾದರೂ ಅಂತಹ ಅಚೇತನಗಳ ವಿಷಯದಲ್ಲಿಯಾರೂ ಕೋಪಿಸುವದಿಲ್ಲವು; ಆದುದರಿಂದಲೇ ಚೇತನಾಂತರಗತ ಎಂದು ಅಚೇತನವನ್ನು ವ್ಯಾವರ್ತಿಸುವದಕ್ಕಾಗಿಯೂ, ಚೇತನನ ವಿಷಯದಲ್ಲೇ ಕ್ರೋಧನೆಂದು ತಿಳಿಸುವದಕ್ಕಾಗಿಯೂ,ಹಾಗೆ ವ್ಯಾಖ್ಯಾನವು. ಅಚೇತನ ವಿಷಯದಲ್ಲಿ ಕೋಪಿಸುವವನು ಜ್ಞಾನ ಶೂನ್ಯನಾದ ಹುಚ್ಚನೆಂದು ಹೇಳಲ್ಪಡುವನು, ಚೇತನಾನ್ತರವೆಂದು ಹೇಳಿರುವದರಿಂದ ಬೇರೆ ಚೇತನನಿಂದ ತನಗೆ ಪೀಡಾಪ್ರಾಪ್ತವಾಗಲಿ, ಅಥವಾ ಇತರ ದುರ್ಮಾರ್ಗಿಯ ವಿಷಯದಲ್ಲಾಗಲಿ ಕ್ರೋಧವುಂಟಾಗಬಹುದೆಂದು ಸೂಚಿತವು. ಆದರೆ ತನ್ನ ವಿಷಯದಲ್ಲೇ ತನಗೆ ಕ್ರೋಧವಿರುವದಿಲ್ಲವೋ? ಎಂದರೆ ಆಗೂ ಕ್ರೋಧನಾಗುವದಿಲ್ಲವು, ತನ್ನ ಕೆಟ್ಟ ಪ್ರವೃತ್ತಿಗಾಗಿ ತನ್ನನ್ನೇ ನಿಂದಿಸಿಕೊಳ್ಳಬಹುದು. ಆತ್ಮಹತ್ಯಮಾಡಿಕೊಳ್ಳುವವನು ತನ್ನ ವಿಷಯದ ಕ್ರೋಧದಿಂದಲ್ಲವೋ: ಎಂದರೆ ಅದೂ ಕ್ರೋಧವಲ್ಲವು, ಲೋಕಾಪವಾದ, ವಿಶೇಷ ದುಃಖ, ಅವಮಾನಾದಿಗಳನ್ನು ಸಹಿಸದೇ ಇರೋಣವೆಂದು; ಆದುದರಿಂದಲೇ ಚೇತನಾಂತರ ವೆಂಬ ವ್ಯಾಖ್ಯಾನವು. ಏವಂ ಭೂತಃ - ಇಂತಹ, ಮುನಿಃ ಎಂದರೆ ಆತ್ಮ ಮನನಶೀಲಃ – ತನ್ನ ಆತ್ಮವನ್ನು ಕುರಿತು ಮನನ ಮಾಡುತ್ತಿರುವವನು, ಸ್ಥಿತಧೀರಿತ್ಯುಚ್ಯತೇ - ಸ್ಥಿತಪ್ರಜ್ಞನೆಂದು ಹೇಳಿಸಿಕೊಳ್ಳುವನು. ಹಿಂದಿನ ಶ್ಲೋಕದಲ್ಲಿ ಹೇಳಿದ ವಶೀಕಾರ ಸಂಜ್ಞಾ ಅವಸ್ಥೆಯಲ್ಲಿ ಸಂಪೂರ್ಣವಾದ ವೈರಾಗ್ಯವು; ಇದು ದುಃಖ ಇದು ಸುಖವೆಂಬ ಜ್ಞಾನವೇ ಇಲ್ಲದ ಅವಸ್ಥೆಯು; ಆತ್ಮ ಸಾಕ್ಷಾತ್ಕಾರರೂಪವಾದ ಆನಂದದಲ್ಲಿ ಮಗ್ನನಾಗಿ, ಸರ್ವ ಕಾಮಗಳನ್ನೂ ಸವಾಸನವಾಗಿ ತ್ಯಜಿಸುವ ಅವಸ್ಥೆಯು. ಈ ಶ್ಲೋಕದಲ್ಲಿ ಹೇಳಿರುವ ಅದರ ಹಿಂದಿನ ಅವಸ್ಥೆಯಾದ ಈ ಏಕೇಂದ್ರಿಯಾವಸ್ಥೆಯಲ್ಲಾದರೋ ವಾಸನಾ ಸ್ವಲ್ಪಮಟ್ಟಿಗೆ ಅನುಸರಿಸಿ ಬರುತ್ತದೆ. ಇದು ದುಃಖಕ್ಕೆ ಕಾರಣ, ಇದು ಸುಖಕ್ಕೆ ಕಾರಣವೆಂಬ ಜ್ಞಾನವುಂಟಾಗಿ, ದುಃಖಕಾರಣದಲ್ಲಿ ಖೇದವಿಲ್ಲದೆಯೂ ಸುಖ ಕಾರಣದಲ್ಲಿ ಅಪೇಕ್ಷೆಯಿಲ್ಲದೆಯೂ, ರಾಗದ್ವೇಷಾದಿಗಳಿಲ್ಲದೆಯೂ ಇರುವ ಅವಸ್ಥೆಯು.

**ಮೂ. ಯಸ್ಸರ್ವತ್ರಾ ನಭಿಸ್ನೇಹ ಸ್ತತ್ತತ್ಪ್ರಾ ಪ್ಯ ಶುಭಾಶುಭಮ್ ।**
**ನಾಭಿನಂದತಿ ನದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭.**

**ಭಾ. ಯ ಸ್ಸರ್ವತ್ರ ಪ್ರಿಯೇಷ್ವ ನಭಿಸ್ನೇಹಃ-ಉದಾಸೀನಃ, ಪ್ರಿಯಸಂಶ್ಲೇಷ ವಿಶ್ಲೇಷ ರೂಪಂ ಶುಭಾ ಶುಭಂ ಪ್ರಾಪ್ಯಾಭಿನಂದನದ್ವೇಷರಹಿತಃ, ಸೋಽಪಿ ಸ್ಥಿತ ಪ್ರಜ್ಞಃ ॥೫೭॥**

**ಭಾಷ್ಯಾವತಾರಿಕೆಯ ಅರ್ಥವು :—ತತೋಽರ್ವಾಚೀನ ದಶಾ** - ಈ ಏಕೇಂದ್ರಿಯಾವಸ್ಥೆಗೂ ಹಿಂದಿನ ಅವಸ್ಥೆಯಾದ ವ್ಯತಿರೇಕ ಸಂಜ್ಞೆಯುಳ್ಳ ಅವಸ್ಥೆಯು ಹೇಳಲ್ಪಡುತ್ತದೆ :—

**ಮೂಲಕ್ಕೆ ಅರ್ಥವು :—ಸರ್ವತ್ರ** - ಎಲ್ಲಾ ವಿಷಯಗಳಲ್ಲೂ, **ಅನಭಿಸ್ನೇಹಃ** - ಸಂಗವಿಲ್ಲದವನಾಗಿ, ಉದಾಸೀನನಾಗಿ, **ತತ್ತಚ್ಛುಭಾಶುಭಂ** - ಆಯಾ ಶುಭಾಶುಭಗಳನ್ನು, ಇಷ್ಟಾನಿಷ್ಟಗಳನ್ನು, **ಪ್ರಾಪ್ಯ** - ಹೊಂದಿ, **ಯಃ** - ಯಾವನು, **ನಾಭಿನಂದತಿ** - ಶುಭಪ್ರಾಪ್ತಿಯಾಯಿತೆಂದು ಆನಂದ ಪಡುವದಿಲ್ಲವೋ, **ನದ್ವೇಷ್ಟಿ** - ಅಶುಭವುಂಟಾಯಿತೆಂದು ದ್ವೇಷಿಸುವದಿಲ್ಲವೋ, **ತಸ್ಯ** - ಅಂತವನ, **ಪ್ರಜ್ಞಾಪ್ರತಿಷ್ಠಿತಾ**-ಪ್ರಜ್ಞೆಯೂ ಪ್ರತಿಷ್ಠಿತವಾದುದೇ, ಎಂದರೆ ಈತನೂ ಜ್ಞಾನಯೋಗನಿಷ್ಠನಲ್ಲೇ ಸೇರಿದವನು ಎಂಬ ಭಾವವು. ಹಿಂದಿನ ಅವಸ್ಥೆಯಲ್ಲಾದರೋ ಆತ್ಮವ್ಯತಿರಿಕ್ತಗಳಾದ ವಿಷಯಾನುಭವಗಳಲ್ಲಿ ಸಂಗವಿಲ್ಲದೆ ವೈರಾಗ್ಯಸ್ಥಿತಿಯಲ್ಲಿರುವವನೆಂಬುದು ವಿಗತಸ್ಪೃಹಃ ವೀತರಾಗಃ ಇತ್ಯಾದಿ ಪ್ರಯೋಗಗಳಿಂದ ವ್ಯಕ್ತವು, ಈ ಅವಸ್ಥೆಯಲ್ಲಾದರೋ ಅಂತಹ ವೈರಾಗ್ಯ ಪ್ರಾಪ್ತಿಯಿಲ್ಲವು. ಐಹಿಕ ವಿಷಯೋಪಭೋಗಬೇಕೆಂದು ಅವುಗಳಲ್ಲಿ ಸ್ನೇಹವನ್ನೂ ತೋರಿಸುವದಿಲ್ಲವು. ಅವುಗಳ ಮಧ್ಯದಲ್ಲಿರುವವನಾಗಿ ಉದಾಸೀನ ಭಾವದಿಂದಿರುವನು. ಅವುಗಳ ಮಧ್ಯದಲ್ಲಿರುವದರಿಂದ ಶುಭಾಶುಭಪ್ರಾಪ್ತಿಗಳುಂಟಾದರೆ, ಶುಭಪ್ರಾಪ್ತಿಯಾಯಿತು ಎಂದು ಹಿಗ್ಗುವದಿಲ್ಲವು; ಅಶುಭಪ್ರಾಪ್ತಿಯಾಯಿತೆಂದು ಶೋಕಿಸುವದಿಲ್ಲವು, ಹೀಗೆ ಉದಾಸೀನಭಾವದಿಂದ ಇರುವವನು ; ಇವನೂ ಕೂಡ ಹಿಂದೆ ಹೇಳಿದ ೪-೩ನೇಯ ತರಗತಿಯಷ್ಟು ಉತ್ತಮಾವಸ್ಥೆಗೆ ಇನ್ನೂ ಬಾರದಿದ್ದರೂ, ಜ್ಞಾನಯೋಗಿಯಾಗಿ ಸ್ಥಿತಪ್ರಜ್ಞಜಾತಿಗೇ ಸೇರಿದವನೆಂದು ಹೇಳಿಸಿಕೊಳ್ಳಲು ಏನೊಂದೂ ಅಭ್ಯಂತರವಿಲ್ಲವೆಂಬಭಾವವು. ಈತನಿಗೆ ಇನ್ನೂ ಆತ್ಮಸ್ವರೂಪದ ಮನನಶೀಲರೂಪಾವಸ್ಥೆಯು ಪ್ರಾಪ್ತಿಯಿಲ್ಲದಿರುವದರಿಂದ ಹಿಂದೆ ಹೇಳಿದುದರ ಅರ್ವಾಚೀನದಶಾದಲ್ಲಿರುವವನೆಂದು ಹೇಳದಂತಾಯಿತು. ॥೫೭॥

**ಭಾಷ್ಯಾರ್ಥವು :—ಯಃ** - ಯಾವನು, **ಸರ್ವತ್ರ** ಎಲ್ಲಾ ಸಂದರ್ಭದಲ್ಲೂ, ಎಂದರೆ **ಪ್ರಿಯೇಷು** - ಸಮಸ್ತ ಪ್ರಿಯವಾದ ವಿಷಯಗಳಲ್ಲಿ, **ಅನಭಿಸ್ನೇಹಃ** ಎಂದರೆ **ಉದಾಸೀನಃ** - ಉದಾಸೀನನಾಗಿ, **ಪ್ರಿಯಸಂಶ್ಲೇಷ ವಿಶ್ಲೇಷರೂಪಂ ಶುಭಾಶುಭಂ** - ಪ್ರಿಯವಾದುದೊಂದಿಗೆ ಕೂಡಿರುವಿಕೆ ಎಂಬ ಶುಭವನ್ನೂ ಪ್ರಿಯವಾದುದರಿಂದಗಲುವಿಕೆ ಎಂಬ ಅಶುಭವನ್ನೂ, **ಪ್ರಾಪ್ಯ**-ಹೊಂದಿ, **ಅಭಿನಂದನದ್ವೇಷರಹಿತಃ** - ಶುಭಕ್ಕಾಗಿ ಸಂತೋಷವೂ ಅಶುಭಕ್ಕಾಗಿ ದ್ವೇಷವೂ ಇಲ್ಲದವನಾಗಿದ್ದಾನೋ, **ಸೋಽಪಿ** - ಅವನೂ ಕೂಡ, ಸ್ಥಿತಪ್ರಜ್ಞನೇ. ಇಲ್ಲಿ ಸರ್ವತ್ರ, ಎಂಬುದಕ್ಕೆ ಸಮಸ್ತ ಪ್ರಿಯವಾದವಿಷಯಗಳಲ್ಲಿ ಎಂದು ಏಕೆ ಹೇಳಲ್ಪಟ್ಟಿತೆಂದರೆ, ಅಪ್ರಿಯಗಳಲ್ಲಿ ಯಾರಿಗೂ ಸ್ನೇಹವಿಲ್ಲದಿರುವದು ವ್ಯಕ್ತವು, ಎಂದು ತಿಳಿಯತಕ್ಕದ್ದು. ಈ ದೆಶೆಯಲ್ಲಿ ಸ್ಥಿತಪ್ರಜ್ಞನಿಗೆ ಯಾವ ಪ್ರಿಯವಸ್ತುವಿನಲ್ಲೂ ಸ್ನೇಹವಿಲ್ಲದೆ ಉದಾಸೀನನಾಗಿರುವನು. ಶುಭ ಪ್ರಾಪ್ತಿಯಲ್ಲಿ ಸಂತೋಷವೂ ಅಶುಭಪ್ರಾಪ್ತಿಯಲ್ಲಿ ವಿಷಾದವೂ ಇಲ್ಲದೇ ಇರುವನೆಂದು ಹೇಳಲ್ಪಟ್ಟಿತು. ಶುಭಾಶುಭ ಪ್ರಾಪ್ತಿಗಳಲ್ಲೂ ಉದಾಸೀನನಾಗಿರುವನು; ಕೆಲವು ವಸ್ತುಗಳಿಂದ ಪ್ರಿಯವಾದುದುಂಟಾಯಿತೆಂದು, ಅವುಗಳ ರಕ್ಷಣೆಯಲ್ಲಾಗಲಿ ಅಂತವುಗಳನ್ನು ಪುನಃ ಹೊಂದುವದಕ್ಕಾಗಿ

ಭಾ. ಅವ. ತತೋಽರ್ವಾಚೀನ ದಶಾಮಾಹ :—

ಮೂ. ಯದಾ ಸಂಹರತೇ ಚಾಯಂ ಕೂರ್ಮೋಽಙ್ಗಾನೀವ ಸರ್ವಶಃ ।
ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮.

ಭಾ. ಯದೇನ್ದ್ರಿಯಾಣೀನ್ದ್ರಿಯಾರ್ಥ ಸ್ಪ್ರಷ್ಟುಮುದ್ಯುಕ್ತಾನಿ, ತದೈವ ಕೂರ್ಮೋಽಙ್ಗಾನೀವೇನ್ದ್ರಿಯಾರ್ಥೇಭ್ಯಸ್ಸರ್ವಶಃ ಪ್ರತಿ ಸಂಹೃತ್ಯ ಮನ ಆತ್ಮನ್ಯವಸ್ಥಾಪಯತಿ,

ಪ್ರಯತ್ನಪಡುವದಿಲ್ಲವು. ಅಪ್ರಿಯಪ್ರಾಪ್ತಿಯಿಂದ, ಖೇದಬಂದರೂ ಏನೋ ಪ್ರಾರಬ್ಧಮೂಲಕ ಉಂಟಾಯಿತೆಂದಿರುವನೇ ವಿನಾ, ಅದರಿಂದ ಬಿಡುಗಡೆಯನ್ನು ಹೊಂದಲೂ ಕೂಡ ಪ್ರಯತ್ನಿಸುವದಿಲ್ಲವು. ಹೀಗೆ ಅಜಗರದ ಹಾಗೆ ಉದಾಸೀನನಾಗಿರುವನು ಎಂಬ ಭಾವವು.

ಭಾಷ್ಯಾವತಾರಿಕೆಯ ಅರ್ಥವು :—ತತಃ - ಆ ವ್ಯತಿರೇಕ ಸಂಜ್ಞಾವಸ್ಥೆಗಿಂತಲೂ, ಅರ್ವಾಚೀನದಶಾಂ - ಪೂರ್ವಾವಸ್ಥೆಯನ್ನು ಕುರಿತು, ಆಹ - ಹೇಳುತ್ತಾರೆ :—ಈ ಅವಸ್ಥೆಗೆ ಯತಮಾನ ಸಂಜ್ಞಾವಸ್ಥೆಯೆಂದು ಹೆಸರು. ಇದು ಪ್ರಥಮಾವಸ್ಥೆಯು.

ಮೂಲಕ್ಕೆ ಅರ್ಥವು :—ಅಯಂ - ಈ ಜ್ಞಾನಯೋಗಿಯು, ಸರ್ವಶಃ - ಎಲ್ಲಾಕಡೆಯಿಂದಲೂ, ಇಂದ್ರಿಯಾರ್ಥೇಭ್ಯಃ - ಆಯಾ ಇಂದ್ರಿಯಗಳಿಗಧೀನವಾದ ವಿಷಯಗಳ ದೆಶೆಯಿಂದ, ಇನ್ದ್ರಿಯಾಣಿ - ಇಂದ್ರಿಯಗಳನ್ನು, ಕೂರ್ಮಃ - ಆಮೆಯು, ಅಙ್ಗಾನೀವ - ತನ್ನ ಅವಯವಗಳನ್ನೋಪಾದಿಯಲ್ಲಿ, ಯದಾ - ಯಾವಾಗ, ಸಂಹರತೇ - ಒಳಕ್ಕೆ ಸೆಳದುಕೊಳ್ಳುತ್ತಾನೋ, ತಸ್ಯ - ಅಂತವನ, ಪ್ರಜ್ಞಾ - ಪ್ರಜ್ಞೆಯು, ಪ್ರತಿಷ್ಠಿತಾ - ಪ್ರತಿಷ್ಠಿತವಾದುದು. ಈ ಅವಸ್ಥೆಯಲ್ಲಿ ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸಲು ಯತ್ನಿಸುತ್ತವೆ, ಆದರೆ ಈ ಅವಸ್ಥೆಯಲ್ಲಿ ಸ್ಥಿತ ಪ್ರಜ್ಞನು, ಕೂರ್ಮವು ಭಯನಿಮಿತ್ತವಾಗಿ ತನ್ನ ಅವಯವಗಳನ್ನು ಒಳಕ್ಕೆ ಸೆಳೆದುಕೊಳ್ಳುವಹಾಗೆ, ತನ್ನ ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸಲು ಯತ್ನಿಸದರೆ, ಆ ಇಂದ್ರಿಯಗಳನ್ನು ವಿಷಯಗಳಿಂದ ಸೆಳೆದುಕೊಳ್ಳುತ್ತಾನೆಂಬ ಭಾವವು. ಆದುದರಿಂದ ಇದಕ್ಕೆ ಯತಮಾನ ಸಂಜ್ಞಾವಸ್ಥೆ ಎಂದು ಹೆಸರು ಕೂರ್ಮದೃಷ್ಟಾಂತವನ್ನು ಕೊಟ್ಟಿರುವದರಿಂದ ಕೂರ್ಮವು ಹೇಗೆ ತನ್ನ ಮುಖನೊದಲಾದ ಅವಯವಗಳನ್ನು ಇತರರಿಂದ ಪ್ರಾಪ್ತವಾಗುವ ಭಯಕ್ಕಾಗಿ ಒಳಕ್ಕೆ ಸೆಳೆದುಕೊಳ್ಳುತ್ತದೋ ಹಾಗೆಯೇ ಸ್ಥಿತ ಪ್ರಜ್ಞನೂ ಕೂಡ ಸ್ವಾಮಿಯು ಅನುಗ್ರಹಿಸಿರುವ ಇಂದ್ರಿಯಗಳು ತನ್ನ ಪ್ರಾಪ್ತಿಗೆ ಸಾಧನಗಳನ್ನು ಒದಗಿಸಿಕೊಳ್ಳುವದಕ್ಕಾಗಿ ಎಂದು ಅವುಗಳನ್ನು ಉದಾರಭಾವದಿಂದ ಕೊಟ್ಟಿರುವದರಿಂದ, ವಿಷಯಗಳನ್ನು ಕಂಡರೆ ದುಷ್ಟಮೃಗಗಳನ್ನು ಕಂಡಹಾಗೆ ಭಾವಿಸಿ ಅವುಗಳನ್ನು ವಿಷಯಗಳ ಸಂಬಂಧವಿಲ್ಲದಹಾಗೆ ನಿಗ್ರಹಿಸತಕ್ಕದ್ದೆಂಬ ಭಾವವು. ಇಂದ್ರಿಯಗಳು ವಿಷಯಗಳ ಕಡೆಗೆ ತಿರುಗಿದರೆ ತನಗೆ ನಾಶವೆಂಬ ಭಯವಿರತಕ್ಕದ್ದೆಂಬುದು ಸೂಚಿತವು. "ಇನ್ದ್ರಿಯಾಣಿ ಹಯಾನಾಹುಃ" ಎಂಬ ಶ್ರುತಿಯು ಇಲ್ಲಿ ಅನುಸಂಧೇಯವು. ಅವುಗಳನ್ನು ದುಷ್ಟಾಶ್ವಗಳಹಾಗೆ ಸ್ವೇಚ್ಛೆಯಿಂದ ಬಿಡದೆ ಮನಸ್ಸೆಂಬ ಲಗಾಮಿನಿಂದ ಬಿಗಿಹಿಡಿದೇ ಇಟ್ಟಿರಬೇಕೆಂಬುದು ಬೋಧಿತವು. ಕರ್ಮಯೋಗದ ಬಲದಿಂದ ಪ್ರಾಪ್ತವಾದ ಸ್ಥಿತಪ್ರಜ್ಞತೆಯುಳ್ಳವನು ಹೀಗೆಗ ಇಂದ್ರಿಯಗಳನ್ನು ನಿರೋಧಿಸಿ ವಿಷಯಗಳಲ್ಲಿ ಪ್ರವರ್ತಿಸದಹಾಗೆ ಮಾಡುವನು ಎಂಬುದು ತಾತ್ಪರ್ಯವು.

ಭಾಷ್ಯಾರ್ಥವು :—ಯದಾ - ಯಾವಾಗ, ಇಂದ್ರಿಯಗಳು, ಇನ್ದ್ರಿಯಾರ್ಥಾ - ಅವುಗಳ ವಿಷಯಗಳನ್ನು, ಸ್ಪ್ರಷ್ಟುಮುದ್ಯುಕ್ತಾನಿ - ಸ್ಪರ್ಶಿಸಲು ಯತ್ನಿಸುತ್ತವೆಯೋ, ತದೈವ - ಆಗ

ಭಾ. ಸೋಽಪಿ ಸ್ಥಿತಪ್ರಜ್ಞಃ. ಏವಂ ಚತುರ್ವಿಧಾ ಜ್ಞಾನ ನಿಷ್ಠಾ ಪೂರ್ವ ಪೂರ್ವಾ ಉತ್ತರೋತ್ತರ ನಿಷ್ಪಾದ್ಯಾ.

---

ಲೇನೆ, ಕೂರ್ಮೋಽಙ್ಗಾನೀವ - ಕೂರ್ಮವು ತನ್ನ ಅಙ್ಗಗಳನ್ನು ಒಳಕ್ಕೆ ಎಳದುಕೊಳ್ಳುವ ಹಾಗೆ, ಇನ್ದ್ರಿಯಾರ್ಥೇಭ್ಯಃ - ವಿಷಯಗಳಿಂದ, ಸರ್ವಶಃ - ಎಲ್ಲಾಕಡೆಯಿಂದಲೂ, ಪ್ರತಿಸಂಹೃತ್ಯ - ಇಂದ್ರಿಯಗಳನ್ನು ಹಿಂದಕ್ಕೆ ಸೆಳೆದುಕೊಂಡವನಾಗಿ ಅದು ಹೇಗೆ ಎಂದರೆ ಮನಸ್ಸು ವಿಷಯಗಳಲ್ಲಿ ಪ್ರವರ್ತಿಸುವಹಾಗೆ ಇಂದ್ರಿಯಗಳನ್ನು ಪ್ರೇರಿಸುತ್ತದೆ. ಹಾಗೆ ಮನಸ್ಸು ಅವುಗಳಲ್ಲಿ ಪ್ರವರ್ತಿಸದಹಾಗೆ ಮಾಡಬೇಕಾದರೆ, ಮನಸ್ಸು ಆತ್ಮನ ದಿವ್ಯಸ್ವರೂಪಚಿನ್ತನದಲ್ಲಿ ಪ್ರವರ್ತಿಸುವಹಾಗೆ ಮಾಡಿದರೆ ಅದು ಸಿದ್ಧಿಸುತ್ತದೆಂದು ಹೇಳುತ್ತಾರೆ, ಮನಃ - ಇಂದ್ರಿಯಗಳನ್ನು ನಿಯಮಿಸುವ ಮನಸ್ಸನ್ನು, ಆತ್ಮನಿ - ಜೀವಾತ್ಮನಲ್ಲಿ ಎಂದರೆ ಆತ್ಮನ ದಿವ್ಯಸ್ವರೂಪವನ್ನನುಸಂಧಾನ ಮಾಡುವದರಲ್ಲಿ, ಅವಸ್ಥಾಪಯತಿ - ನಿಲ್ಲಿಸುತ್ತಾನೋ. ಸೋಽಪಿ - ಅವನೂ ಕೂಡ, ಸ್ಥಿತಪ್ರಜ್ಞನೇ; ಮುದುಕರು ರೋಗಿಗಳು ಮೊದಲಾದವರಿಗೆ, ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸುವದಿಲ್ಲವು. ಅಂತಹ ದೆಶೆಯು ಇಲ್ಲಿ ಹೇಳಲಿಲ್ಲವೆಂದು ತೋರಿಸುವದಕ್ಕಾಗಿ, ಸ್ಪಷ್ಟ ಮುದ್ಯುಕ್ತಾನಿ ಎಂಬ ಪ್ರಯೋಗವು. ಇಂದ್ರಿಯಗಳಿಗೆ ದೌರ್ಬಲ್ಯವಿಲ್ಲವು, ಪಟುವಾಗಿಯೇ ಇದ್ದು ವಿಷಯಗಳಲ್ಲಿ ಪ್ರವರ್ತಿಸಲು ಯೋಗ್ಯವಾಗಿವೆ. ಅಂತಹ ದೆಶೆಯಲ್ಲಿ ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸದದಹಾಗೆ ಮಾಡುವ ಅವಸ್ಥೆಯು; ವಿಷಯಗಳಲ್ಲಿ ಪ್ರವರ್ತಿಸಲು ಹೋಗುವ ಇಂದ್ರಿಯಗಳು ಒಡನೆಯೇ ತಡೆಯಲ್ಪಡುತ್ತವೆಂಬ ಭಾವವು. ಇಂದ್ರಿಯಗಳ ಭೋಗಾನಂತರ ನಿವೃತ್ತಿ ಎಂಬರ್ಥವಲ್ಲವು, ಆದುದರಿಂದಲೇ ತದೈವ-ಆಗಲೇ ಒಡನೆಯೇ ಎಂಬ ಪ್ರಯೋಗವು, ಸರ್ವಶಃ, ಎಂಬ ಪ್ರಯೋಗದಿಂದ ಅಂತಹ ವಿಷಯಗಳ ಅವಲೋಕನ, ಭಾಷಣ, ವಿಲಾಸ, ಪರಿಹಾಸ, ಮೊದಲಾದವುಗಳಲ್ಲಿಯೂ ಕೂಡ ಪ್ರವರ್ತಿಸದಹಾಗೆ ಮಾಡಿಕೊಳ್ಳುವನೆಂಬ ಭಾವವು. ಮನ ಆತ್ಮನ್ಯವಸ್ಥಾಪಯತಿ ಎಂಬಂಶವು ಮೂಲದಲ್ಲಿ ಹೇಳಿಲ್ಲವಲ್ಲಾ ಎಂದರೆ ಪ್ರಕರಣವು ಜ್ಞಾನನಿಷ್ಠೆಯುಳ್ಳವನನ್ನು ಕುರಿತದ್ದಾದುದರಿಂದ, ಉತ್ಕೃಷ್ಟವಾದ ಆತ್ಮನಿಷ್ಠೆಯಿರುವದರಿಂದಲೇ ಇಂದ್ರಿಯಗಳನ್ನು ತುಚ್ಛವಿಷಯಗಳಿಂದ ನಿವರ್ತಿಸುವಹಾಗೆ ಮಾಡುತ್ತಾನೆಂಬ ಭಾವದಿಂದ ಹೇಳಲ್ಪಟ್ಟಿತು. ಕರ್ಮಯೋಗಕ್ಕೆ ಆತ್ಮ ಯಾಥಾತ್ಮ್ಯ ಜ್ಞಾನವು ಆವಶ್ಯಕವೆಂದು ಹಿಂದೆ ಉಪದಿಷ್ಟವಾಗಿರುವದರಿಂದ, ಅಂತಹ ಕರ್ಮಯೋಗ ನಿಷ್ಠನೇ ಮುಂದಿನ ಪರ್ವವಾದ ಜ್ಞಾನನಿಷ್ಠೆಯನ್ನು ಹತ್ತುವದರಿಂದ ಮನ ಆತ್ಮನಿ ಸ್ಥಾಪಯತಿ ಎಂದು ಪ್ರಕರಣಾನುಗುಣವಾಗಿ ಹೇಳಲ್ಪಟ್ಟಿತು ಎಂದು ಭಾವಿಸತಕ್ಕದ್ದು.

ಹೀಗೆ ನಾಲ್ಕು ಶ್ಲೋಕಗಳಿಂದ ಜ್ಞಾನನಿಷ್ಠೆಯು ನಾಲ್ಕು ಅವಸ್ಥೆಗಳುಳ್ಳದ್ದೆಂದೂ ಮೊದಲನೆಯದಾದ ಯತಮಾನಾವಸ್ಥೆಯಿಂದ, ವ್ಯತಿರೇಕಾವಸ್ಥೆಯೂ, ಅನಂತರ ಏಕೇಂದ್ರಿಯಾವಸ್ಥೆಯೂ, ಅಲ್ಲಿಂದ ವಶೀಕಾರಾವಸ್ಥೆಯೂ ಉಂಟಾಗುತ್ತವೆಂಬಭಿಪ್ರಾಯವು.

೧. ಮೊದಲನೆಯ ಅವಸ್ಥೆಯಲ್ಲಿ ಬಾಹ್ಯೇಂದ್ರಿಯಗಳನ್ನು ವಿಷಯಗಳಿಂದ ಹಿಂತಿರುಗಿಸಿ, ಮನಸ್ಸನ್ನು ಜೀವಾತ್ಮ ಸ್ವರೂಪದಲ್ಲಿ ನಿಲ್ಲುವಹಾಗೆ ಪ್ರಯತ್ನಮಾಡುವನು.

೨. ಎರಡನೆಯ ಅವಸ್ಥೆಯಲ್ಲಿ ಬಾಹ್ಯೇಂದ್ರಿಯಗಳು ಬಲಾತ್ಕಾರದಿಂದ ನಿಗ್ರಹಿಸಲ್ಪಟ್ಟರೂ, ಉಳಿದ ರಾಗದ್ವೇಷಗಳಿಂದ ಕಲುಷಿತವಾದ ಮನಸ್ಸನ್ನು ಪುನಃಪುನಃ ಪ್ರಾಪ್ತಕಾಲದಲ್ಲಿ ಪ್ರೇರಿಸಬಹುದು; ಮನಸ್ಸು ಆತ್ಮನಲ್ಲೇ ನಿಲ್ಲಲು ಸಾಧ್ಯವಿಲ್ಲದಿರಬಹುದು; ಆದುದರಿಂದ ಪಕ್ವವಾಗದೇ ಮಿಕ್ಕ ರಾಗ ದ್ವೇಷಾದಿಗಳನ್ನು ಉದಾಸೀನ ಭಾವದಿಂದಲೂ, ಅವುಗಳಲ್ಲಿ ಸ್ನೇಹವಿಲ್ಲದಿರುವದ

ರಿಂದಲೂ, ಪಕ್ವಮಾಡಲು ಪ್ರಯತ್ನಪಡುವನು. ಇದೇ ವ್ಯತಿರೇಕ ಸಂಜ್ಞಾವಸ್ಥೆಯು.

೩. ಮೂರನೆಯ ಅವಸ್ಥೆಯಲ್ಲಿ, ದೋಷಶೇಷವೂ ಪಕ್ವವಾದರೂ, ಅನಾದಿಯಾಗಿ ವಿಷಯಾನುಭವ ಮಾಡಿದ ವಾಸನಾಮಾತ್ರ, ಜೀವಾತ್ಮನನ್ನನುಭವಿಸುವ ಜ್ಞಾನವನ್ನು ಬಾಧಿಸಲು ಯತ್ನಿಸಬಹುದು. ಆ ಸಂದರ್ಭದಲ್ಲಿ ನಿರತಿಶಯಾನಂದ ಸ್ವರೂಪನಾದ ಆತ್ಮನನ್ನು, ಈತನಿಗುಂಟಾಗಿರುವ ಜ್ಞಾನವು ಪ್ರೀತಿಸುವಹಾಗೆ ಮಾಡುತ್ತದೆ, ಹೇಗೆಂದರೆ ಪುರುಷನನ್ನು ದ್ವೇಷಿಸುವ ಯುವತಿಗೆ, ಪುರುಷನನ್ನು ಪುನಃಪುನಃ ನೋಡುವದರಿಂದ ಪುರುಷನಲ್ಲಿ ಅನುರಾಗವು ಹುಟ್ಟುವ ಹಾಗೆ, ಈ ಜ್ಞಾನನಿಷ್ಠನ ಜ್ಞಾನವು ಆತ್ಮನನ್ನು ಪ್ರೀತಿಸಲು ಅಪೇಕ್ಷಿಸುತ್ತದೆ. ಹೀಗೆ ಮಾಡುತ್ತಾ ಕ್ರಮವಾಗಿ ಇರುವ ವಾಸನಾಶೇಷವನ್ನು ಬೇರು ಸಹಿತ ಕಿತ್ತು ಹಾಕುತ್ತದೆ. ಇದೇ ಏಕೇಂದ್ರಿಯಾವಸ್ಥೆಯು.

೪. ನಾಲ್ಕನೆಯ ಅವಸ್ಥೆಯಲ್ಲಿ ಹೀಗೆ ಎಲ್ಲಾ ವಾಸನೆಯು ಕಳೆದು ಹೋಗುವದರಿಂದ ಪರಮ ವೈರಾಗ್ಯವು ಪ್ರಾಪ್ತವಾಗುತ್ತದೆ. ಇದಕ್ಕೇ ವಶೀಕಾರ ಸಂಜ್ಞಾವಸ್ಥೆಯೆಂದು ಹೆಸರು. ಜ್ಞಾನನಿಷ್ಠೆಯ ಪರಾಕಾಷ್ಠಾದಶೆಯು. ಇದು ಯೋಗವೆಂಬ ಆತ್ಮಾವಲೋಕನವನ್ನು ಸಾಧಿಸುತ್ತದೆ. ಈ ಅವಲೋಕನವು ಪರಂಪರೆಯಾಗಿ ನಿರತಿಶಯ ಪುರುಷಾರ್ಥಭೂತ ಮೋಕ್ಷಕ್ಕೆ ಕಾರಣಭೂತವಾದುದಾಗುತ್ತದೆ. ಇದರಲ್ಲಿ ಜೀವಾತ್ಮಸಾಕ್ಷಾತ್ಕಾರವೇ ಪರಮಾನಂದ ರೂಪವಾಗಿ, ಎಲ್ಲಾದರಲ್ಲೂ ಅತ್ಯಂತ ವಿರಕ್ತಿಯುಂಟಾಗಿ ವಿಷಯಗಳ ಮಧ್ಯೆ ತಾನು ಇದ್ದೇನೆಂಬ ಸ್ಮೃತಿಯೇ ಇಲ್ಲದಿರುವ ಹಾಗೆ ಆಗುತ್ತದೆ.

ಅಥವಾ ಇನ್ನೊಂದು ವಿಧವಾಗಿಯೂ ಮೇಲಿನ ನಾಲ್ಕು ಅವಸ್ಥೆಗಳುಂಟೆಂದು ಹೇಳಬಹುದು, ಹೇಗೆಂದರೆ:—ಮೊದಲಿನ ಅವಸ್ಥೆಯಲ್ಲಿ ಕಾಮಗಳಲ್ಲಿ ರಾಗವು ತುಂಬಾ ಪ್ರಚುರವಾಗಿದ್ದರೂ ಅವುಗಳನ್ನು ನಿಗ್ರಹಿಸೋಣವು, ಎರಡನೆಯ ಅವಸ್ಥೆಯಲ್ಲಿ ಸಜ್ಗಲೇಶದಿಂದ ವಿಷಯಾನುಭವವಿದ್ದರೂ ಅವುಗಳಲ್ಲಿ ತುಂಬಾ ಸ್ನೇಹವಿಲ್ಲದಿರೋಣವು, ಮೂರನೆಯ ಅವಸ್ಥೆಯಲ್ಲಿ ಕಾಮಗಳು ಹಾಗೆ ತೋರಿಬಂದರೂ ಅವುಗಳಲ್ಲಿ ನಿಸ್ಸಂಗತೆಯು, ನಾಲ್ಕನೆಯ ಅವಸ್ಥೆಯಲ್ಲಿ ಕಾಮಗಳ ಜ್ಞಾನವೇ ಇಲ್ಲದಿರುವ ಪರಮ ವೈರಾಗ್ಯಾವಸ್ಥೆಯು. ಇವುಗಳಲ್ಲಿ ೩ ನೆಯ ಮತ್ತು ೪ ನೆಯ ಅವಸ್ಥೆಗಳಲ್ಲೇ ವೈರಾಗ್ಯವು ಉತ್ಪನ್ನವಾಗಿ ಮನಸ್ಸು ಆತ್ಮಸ್ವರೂಪದ ಧ್ಯಾನ ಸಾಕ್ಷಾತ್ಕಾರಗಳುಂಟಾಗುವದರಿಂದ ಅಂತಹ ಅಧಿಕಾರಿಗಳೇ ಮುಂದೆ ೧೯ ನೆಯ ಮತ್ತು ೨೦ ನೆಯ ಶ್ಲೋಕಗಳಲ್ಲಿ ಶ್ಲಾಘಿಸಲ್ಪಟ್ಟಿರುತ್ತಾರೆ. ಹೀಗೆ ನಾಲ್ಕು ಅವಸ್ಥೆಗಳಿಂದ ಜ್ಞಾನಯೋಗ ನಿಷ್ಠನ ಉತ್ಕೃಷ್ಟಸ್ವರೂಪವು ಅರ್ಜುನನಿಗೆ ಸ್ಥಿತಪ್ರಜ್ಞಸ್ಯ ಕಾ ಭಾಷಾ ಎಂಬ ಪ್ರಶ್ನೆಗೆ ಉತ್ತರವಾಗಿ ಹೇಳಲ್ಪಟ್ಟಿತು. ಕಾ ಭಾಷಾ—ಆತನಿಗೆ ಸ್ಥಿತ ಪ್ರಜ್ಞನೆಂಬ ವ್ಯವಹಾರವು ಏಕೆ ಎಂಬುದಕ್ಕೆ ೪ ನೆಯ ಪರಾಕಾಷ್ಠಾ ದೆಶೆಯಾದ ೫೫ ನೆಯ ಶ್ಲೋಕವು ಉತ್ತರವು. ಹಾಗೆಯೇ ಮಿಕ್ಕ ಮೂರು ಪ್ರಶ್ನೆಗಳಿಗೂ ಇದರಲ್ಲೇ ಉತ್ತರವು ದೊರೆಯುತ್ತದೆ. ಕಿಂ ಪ್ರಭಾಷೇತ ಎಂಬ ಪ್ರಶ್ನೆಗೆ ಆತ್ಮನ್ಯೇವಾತ್ಮನಾತುಷ್ಟಃ ಎಂಬುದರಿಂದ ಉತ್ತರವು ದೊರೆಯುತ್ತದೆ; ನಿರತಿಶಯಾನಂದಸ್ವರೂಪನಾದ ಜೀವಾತ್ಮನಲ್ಲಿ ತುಷ್ಟನಾದುದರಿಂದ "ಆಶ್ಚರ್ಯವನ್ನದತಿ" (ಗೀ. ೨. ೨೯.) ಎಂದು ಹಿಂದೆ ಹೇಳಿರುವಹಾಗೆ, ಆತ್ಮಸ್ವರೂಪವು ಅತ್ಯಾಶ್ಚರ್ಯವಾದುದೆಂದು ಹೇಳುವನು. ಕಿಮಾಸೀತ ಎಂಬುದಕ್ಕೂ ಆತ್ಮನ್ಯೇವಾತ್ಮನಾತುಷ್ಟಃ ಎಂಬಲ್ಲೇ ಉತ್ತರವು ಲಭಿಸುತ್ತದೆ; ಆತ್ಮಾನುಸಂಧಾನವೇ ಅದಕ್ಕೆ ಉತ್ತರವು; ಆತ್ಮಸ್ವರೂಪ ಸಾಕ್ಷಾತ್ಕರಣಕ್ಕೆ ಬೇಕಾದ ಪ್ರವೃತ್ತಿಯಿಂದ ವ್ರಜೇತಕಿಂ ಎಂಬುದಕ್ಕೆ ಉತ್ತರವೂ ಸಿಕ್ಕುತ್ತದೆ, ೫೬, ೫೭, ೫೮ನೆಯ ಶ್ಲೋಕಗಳಾದರೋ ಆ ಸ್ಥಿತಪ್ರಜ್ಞನ ಪೂರ್ವಪೂರ್ವಾವಸ್ಥೆಗಳನ್ನು ಬೋಧಿಸುತ್ತವೆಯೆಂದು ಭಾವಿಸತಕ್ಕದ್ದಾಗಿರುತ್ತದೆ. ಕೆಲವರು ಈ ಮೇಲೆ ಹೇಳಿರುವ

ಭಾ. ಅವ. ಇದಾನೀಂ ಜ್ಞಾನ ನಿಷ್ಠಾಯಾ ದುಷ್ಪ್ರಾಪತಾಂ, ತತ್ಪ್ರಾಪ್ತ್ಯುಪಾಯಂಚಾಹ—

ಮೂ. ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯.

ನಾಲ್ಕು ಅವಸ್ಥೆಗಳೂ ಯತಿಯನ್ನು ಕುರಿತು ಹೇಳಿದವು ಎಂದು ಹೇಳುತ್ತಾರೆ ಇದಕ್ಕೆ ಆಧಾರ ವೇನೋ ತಿಳಿಯಲಿಲ್ಲವು; ಎಲ್ಲಾ ಆಶ್ರಮಿಗಳಿಗೂ ಇವು ಅನ್ವಯಿಸುವಹಾಗೆ ತೋರುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು :—ಇದಾನೀಂ** - ಈಗಲಾದರೋ, ಎಂದರೆ ಇನ್ನು ಮುಂದೆ ಎಂಬರ್ಥವು, **ಜ್ಞಾನ ನಿಷ್ಠೆಯ, ದುಷ್ಪ್ರಾಪತಾಂ**-ಹೊಂದುವದು ತುಂಬಾ ಕಷ್ಟವೆಂಬುದನ್ನೂ, **ತತ್ಪ್ರಾಪ್ತ್ಯುಪಾಯತಾಂಚ** - ಆ ಜ್ಞಾನನಿಷ್ಠೆಯನ್ನು ಹೊಂದುವ ಉಪಾಯವನ್ನೂ ಸಹ, ಆಹ-ಶ್ರೀಕೃಷ್ಣನು ಹೇಳುತ್ತಾನೆ:—ಹಿಂದೆ ಜ್ಞಾನನಿಷ್ಠೆಯ ಸ್ವರೂಪ ಮತ್ತು ಅವಸ್ಥಾ ಭೇದಗಳೇನೋ ಹೇಳಲ್ಪಟ್ಟವು. ಇನ್ನು ಮುಂದೆ ಆ ಜ್ಞಾನನಿಷ್ಠೆಯನ್ನು ಹೊಂದುವದು ಸುಲಭವಲ್ಲವೆಂದೂ, ಅದನ್ನು ಹೊಂದುವ ಉಪಾಯವು ಹೇಗೆ ಎಂದೂ ಹೇಳಲ್ಪಡುತ್ತದೆಂದು ತಿಳಿಸುವದಕ್ಕಾಗಿ ಇದಾನೀಂ ಎಂಬ ಪ್ರಯೋಗವು; ಇದಾನೀಂ ಎಂಬ ಪ್ರಯೋಗದಿಂದ ಅರ್ಜುನನ ಪ್ರಶ್ನೆಗೆ ಉತ್ತರವನ್ನು ಹೇಳುವ ಪ್ರಕರಣವು ಮುಗಿಯಿತು, ಮುಂದಿನ ಪ್ರಕರಣವು ಅದನ್ನೇ ಕುರಿತದ್ದಾದರೂ, ಬೇರೆ ಅಭಿಪ್ರಾಯವು ಉಪದೇಶಿಸಲ್ಪಡುತ್ತದೆಂಬ ಭಾವವನ್ನು ಸೂಚಿಸುತ್ತಾರೆ. **ಜ್ಞಾನ ನಿಷ್ಠಾಯಾಃ** ಎಂಬುದರಿಂದ ಈ ನಾಲ್ಕು ವಿಧವಾದ ಜ್ಞಾನಯೋಗ ನಿಷ್ಠೆಗಳೂ ಹೇಳಲ್ಪಟ್ಟವು; ಅವೆಲ್ಲವನ್ನು ಹೊಂದಲು ಕಷ್ಟಸಾಧ್ಯವೆಂದು ಹೇಳಲ್ಪಡುತ್ತದೆಂದೂ, ಹಾಗೆ ಕಷ್ಟಸಾಧ್ಯವಾದರೂ ಅವನ್ನು ಪಡೆಯುವ ಉಪಾಯವನ್ನು ತಿಳಿಸುತ್ತಾರೆಂದೂ, ಅವತಾರಿಕೆಯು. ಜ್ಞಾನಯೋಗಕ್ಕೆ ಬೇಕಾದುದು ಪರಮವೈರಾಗ್ಯವು; ವಿಷಯಗಳ ಮಧ್ಯೆಯಿದ್ದರೂ ಅವುಗಳ ಸ್ಮೃತಿಯೇ ಬರಕೂಡದು; ಅಂತಹ ವೈರಾಗ್ಯ ಉಂಟಾಗಬೇಕು; ಇದು ಉಂಟಾಗಲು ಉಪಾಯ ವೇನೆಂದರೆ ಹೇಳುತ್ತಾರೆ:—

**ಮೂಲಕ್ಕೆ ಅರ್ಥವು :—**ಜ್ಞಾನಯೋಗನಿಷ್ಠನ ಅವಸ್ಥಾ ಭೇದಗಳಿಂದ ಪರಾಕಾಷ್ಠಾ ದಶೆಯು ಹೇಳಿದ್ದಾಯಿತು, ಮುಂದೆ ಆ ಪರಾಕಾಷ್ಠಾ ದಶೆಯನ್ನು ಹೊಂದುವದು ಸುಲಭಸಾಧ್ಯವಲ್ಲವೆಂದೂ, ಹೇಗೆ ಕಷ್ಟಪಟ್ಟು ಸಾಧಿಸಿದರೆ ಸಿದ್ಧಿಸುತ್ತದೆಂಬುದನ್ನೂ ತಿಳಿಸುತ್ತಾರೆ:—**ನಿರಾಹಾರಸ್ಯ** - ವಿಷಯಗಳು ಇಂದ್ರಿಯಗಳಿಗೆ ಆಹಾರವಾದುದರಿಂದ, ನಿರಾಹಾರಸ್ಯ ಎಂದರೆ ವಿಷಯಗಳೆಂಬ ಆಹಾರಗಳಿಲ್ಲದ ಇಂದ್ರಿಯಗಳನ್ನುಳ್ಳ, **ದೇಹಿನಃ** - ಮನುಷ್ಯನ, **ವಿಷಯಾಃ** – ವಿಷಯಗಳು, **ರಸವರ್ಜಂ** - ಅವುಗಳ ಅನುಭವವಿಲ್ಲದೆ, **ವಿನಿವರ್ತಂತೇ** - ನಿವೃತ್ತಿಸಿ ಹೋಗುವುವು. ಶಬ್ದಾದಿ ವಿಷಯೋಪ ಭೋಗಗಳೆಲ್ಲಾ ಇಂದ್ರಿಯಗಳ ಮೂಲಕವಾಗಿಯೇ ಆದುದರಿಂದ, ಶಬ್ದಾದಿ ವಿಷಯಗಳು ಇಂದ್ರಿಯಗಳಿಗೆ ಆಹಾರವೆಂದು ಹೇಳಲ್ಪಟ್ಟಿರುತ್ತದೆ. ಇಂದ್ರಿಯಗಳಿಗೆ ಅವುಗಳ ಆಹಾರವಾದ ವಿಷಯಗಳು ದೊರೆಯದೇ ಹೋದರೆ ವಿಷಯಾನುಭವವೇ ನಿವೃತ್ತಿಸಿ ಹೋಗುತ್ತದೆಂಬ ಭಾವವು. ಇಂದ್ರಿಯಗಳಿಗೆ ಆಹಾರ ದೊರೆಯದ ಮಾತ್ರದಿಂದ, ವಿಷಯಾನುಭವೇಚ್ಛೆಯು ಹೋಗುವದಿಲ್ಲವೆಂದು, **"ರಸವರ್ಜಂ"** ಎಂದು ಹೇಳಲ್ಪಟ್ಟಿತು. ಆದರೆ ಈ ಇಚ್ಛೆಯೂ ಕೂಡ ತೊಲಗುವ ಉಪಾಯವು ಯಾವುದೆಂದರೆ ತಿಳಿಸುತ್ತಾರೆ:—**ಅಸ್ಯ** - ಈ ಜ್ಞಾನನಿಷ್ಠನ, **ರಸೋಽಪಿ** - ವಿಷಯಾನುಭವೇಚ್ಛೆಯೂ ಕೂಡ, **ಪರಂ** - ಶ್ರೇಷ್ಠವಾದ ಆತ್ಮನನ್ನು, ಶ್ರೇಷ್ಠವಾದುದು ಹೇಗೆಂದರೆ, ವಿಷಯಾನುಭವವು ಸುಖವಾಗಿ ತೋರಿದರೂ, ಆತ್ಮಾನುಭವವು

ಭಾ. ಇಂದ್ರಿಯಾಣಾ ಮಾಹಾರಾ ವಿಷಯಾಃ, ನಿರಾಹಾರಸ್ಯ-ವಿಷಯೇಭ್ಯಃ ಪ್ರತ್ಯಾಹೃತೇನ್ದ್ರಿಯಸ್ಯ ದೇಹಿನೋ ವಿಷಯಾ ವಿನಿವರ್ತಮಾನಾ ರಸವರ್ಜಂ ವಿನಿವರ್ತನ್ತೇ; ರಸೋ-ರಾಗಃ, ವಿಷಯರಾಗೋ ನ ನಿವರ್ತತ ಇತ್ಯರ್ಥಃ, ರಾಗೋಽಪ್ಯಾತ್ಮಸ್ವರೂಪಂ ವಿಷಯೇಭ್ಯಃ ಪರಂ-ಸುಖತರಂ ದೃಷ್ಟ್ವಾ ನಿವರ್ತತೇ ||೫೯||

---

ಅವಕ್ಕೂ ಸುಖವಾದುದು ಎಂಬ ಭಾವವು, ದೃಷ್ಟ್ವಾ - ಸಾಕ್ಷಾತ್ಕರಿಸಿ, ಎಂದರೆ ಸಾಕ್ಷಾತ್ಕರಿಸುವವರಿಂದ, ನಿವರ್ತತೇ - ತೊಲಗುತ್ತದೆ, ಇಲ್ಲಿ ದೃಷ್ಟ್ವಾ ಎಂಬುದು ಅಸ್ಯ ಎಂಬುದಕ್ಕೂ, ನಿವರ್ತತೇ ಎಂಬುದು ರಾಗಕ್ಕೂ ಸಂಬಂಧಿಸಿರುವದು ಸಮಾನಕರ್ತೃಕತ್ವವಿಲ್ಲದುದರಿಂದ ವ್ಯಾಕರಣಕ್ಕೆ ವಿರುದ್ಧವಲ್ಲವೇ ಎಂದು ಶಙ್ಕಿಸಬಹುದು ; ಮಹರ್ಷಿಗಳ ಪ್ರಯೋಗವು ಕೆಲವು ಸಂದರ್ಭಗಳಲ್ಲಿ ವಿಲಕ್ಷಣವಾದುದು. ಎರಡಕ್ಕೂ ಒಂದೇ ಕರ್ತೃವಿರತಕ್ಕದ್ದು ನ್ಯಾಯವು. ಅದಕ್ಕಾಗಿ ದೃಷ್ಟ್ವಾ ಸ್ಥಿತಸ್ಯ ಅಸ್ಯ ನಿವರ್ತತೇ ಎಂದರೆ ಸ್ಥಿತಸ್ಯ ಎಂಬುದನ್ನು ಇಟ್ಟುಕೊಂಡರೆ ಸರಿಹೋಗುತ್ತದೆ ಎಂದು ಹಾಗೆ ಭಾಷ್ಯವು.

ಭಾಷ್ಯಾರ್ಥವು:—ಇಂದ್ರಿಯಾಣಾ ಮಾಹಾರಾ ವಿಷಯಾಃ - ಇಂದ್ರಿಯಗಳಿಗೆ ಆಹಾರಗಳು, ವಿಷಯಗಳು; ನಿರಾಹಾರಸ್ಯ ಎಂದರೆ ವಿಷಯೇಭ್ಯಃ ಪ್ರತ್ಯಾಹೃತೇಂದ್ರಿಯಸ್ಯ-ವಿಷಯಗಳಿಂದ ತಪ್ಪಿಸಲ್ಪಟ್ಟ ಇಂದ್ರಿಯಗಳನ್ನುಳ್ಳ, ದೇಹಿನಃ - ಪ್ರಾಣಿಯ, ವಿಷಯಾ ವಿನಿವರ್ತಮಾನಾಃ - ನಿವೃತ್ತಿಸಲು ಯೋಗ್ಯವಾದ ವಿಷಯಗಳು, ರಸವರ್ಜಂ ವಿನಿವರ್ತನ್ತೇ – ಇಚ್ಛೆಯನ್ನು ಮಾತ್ರ ಬಿಟ್ಟು ನಿವೃತ್ತಿಸುವುವು. ಇಲ್ಲಿ ನಿರಾಹಾರಸ್ಯ – ಎಂಬುದಕ್ಕೆ ಆಹಾರವಿಲ್ಲದವನ ಎಂಬರ್ಥವಲ್ಲವೆಂದು ತಿಳಿಸುವದಕ್ಕಾಗಿ, ವಿಷಯೇಭ್ಯಃ ಪ್ರತ್ಯಾಹೃತೇಂದ್ರಿಯಸ್ಯ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಏಕೆಂದರೆ ಮುಮುಕ್ಷುವು ನಿರಾಹಾರನಾಗಿರಬೇಕೆಂದು ಹೇಳಲಿಲ್ಲವು. ಮುಂದೆ "ಯುಕ್ತಾಹಾರವಿಹಾರಸ್ಯ" (ಗೀ. ೬: ೧೭) ಎಂದು ಹೇಳಲ್ಪಟ್ಟಿರುತ್ತದೆ, ತೈತ್ತರೀಯದಲ್ಲೂ, "ಅತ್ಯಾಶನಾದತೀಪಾನಾದ್ಯಚ್ಚ ಉಗ್ರಾತ್ ಪ್ರತಿಗ್ರಹಾತ್," (ತೈ.ನಾರಾ. ೩೪) ಎಂಬ ವಾಕ್ಯದಲ್ಲಿ ಅತ್ಯಾಶನ - ಕೂಡದೆಂದು ನಿಷೇಧಿಸಿರುತ್ತದೆ. ಮೋಕ್ಷಪ್ರಾಪ್ತಿಗೆ ಮಿತಾಹಾರವು ಉಚಿತವೆಂದು ಹೇಳಲ್ಪಟ್ಟಿತೇ ವಿನಾ, ನಿರಾಹಾರವು ಆವಶ್ಯಕವೆಂದು ಹೇಳಲಿಲ್ಲವು. ವಿಷಯಗಳು ಇಂದ್ರಿಯಗಳ ಆಹಾರವೆಂದು ಭಾರತ ಮೋಕ್ಷ ಧರ್ಮದಲ್ಲಿ "ದಶ್ಯೈತಾ ನೀಂದ್ರಿಯೋಕ್ತಾನಿ ದ್ವಾರಾಣ್ಯಾಹಾರಸಿದ್ಧಯೇ" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ರಸವರ್ಜಂ - ಎಂಬಲ್ಲಿ ರಸವೆಂದರೆ ರಾಗವು - ಆಶೆಯು, ಆಹಾರವಿಲ್ಲದಿದ್ದರೆ ವಿಷಯಗಳು ನಿವರ್ತಿಸುತ್ತವೆ ಎಂದರೆ ಎಲ್ಲಾ ವಿಷಯಗಳು ಹೇಗೆ ನಿವರ್ತಿಸಿ ಹೋಗುವುವು? ರೋಗಿಷ್ಠನಾಗಿ ಆಹಾರವಿಲ್ಲದಿದ್ದರೂ ಆತನಿಗೆ ಹೆಂಡತಿಯು ಪಕ್ಕದಲ್ಲೇ ಇರಬೇಕೆಂಬ, ಹೊದಿಯಲು ಒಳ್ಳೇ ಶಾಲು ಬೇಕೆಂಬ, ಸ್ನೇಹಿತರೊಂದಿಗೆ ಮಾತು ಕಥೆ ಬೇಕೆಂಬ, ಸ್ವಲ್ಪಹೊತ್ತು ಸಂಗೀತ ಕೇಳಬೇಕೆಂಬ, ಆಶೇ ಇಷ್ಟೇ ಇರಬಹುದು. ಅದೂ ಅಲ್ಲದೆ ನಿರಾಹಾರನಾಗಿ ಇರಲು ಸಾಧ್ಯವೇ? ಅದೂ ಇಲ್ಲವು. ಆದುದರಿಂದ ನಿರಾಹಾರಸ್ಯ ಎಂದರೆ ವಿಷಯೇಭ್ಯಃ ಪ್ರತ್ಯಾಹೃತೇಂದ್ರಿಯಸ್ಯ ಎಂಬುದು ಸಮಂಜಸವಾದ ವ್ಯಾಖ್ಯಾನವು. ವಿಷಯರಾಗೋ ನ ನಿವರ್ತತೇ-ವಿಷಯಗಳ ಆಸಕ್ತಿಯು ನಿವೃತ್ತಿಸುವದಿಲ್ಲವು. ಇಂದ್ರಿಯಗಳಿಗೆ ವಿಷಯ ಸಂಬಂಧವಿಲ್ಲದುದರಿಂದ ಇಂದ್ರಿಯಗಳುಪಭೋಗ ಮಾತ್ರ ನಿವೃತ್ತಿಸುತ್ತದೇ ವಿನಾ, ವಿಷಯಗಳಲ್ಲಿ ಆಸಕ್ತಿಯು ಸಂಪೂರ್ಣವಾಗಿ ತೊಲಗಿ ಹೋಗುವದಿಲ್ಲವೆಂಬ ಭಾವವು. ಹಾಗಾದರೆ ಆ ವಿಷಯಾಸಕ್ತಿಯೂ ತೊಲಗುವ ಬಗೆ ಹೇಗೆ ಎಂದರೆ ಹೇಳುತ್ತಾರೆ. ರಾಗೋಪಿ – ಆ ವಿಷಯಾಸಕ್ತಿಯೂ ಕೂಡ, ಆತ್ಮಸ್ವರೂಪವು, ವಿಷಯೇಭ್ಯಃ - ವಿಷಯಗಳಿಗಿಂತಲೂ, ಪರಂ

**ಮೂ. ಯತತೋ ಹ್ಯಪಿಕೌನ್ತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ ॥ ೬೦.**

ಎಂದರೆ **ಸುಖತರಂ** ಅತ್ಯಂತ ಸುಖಕರವಾದುದೆಂದು, **ದೃಷ್ಟ್ವಾ** – ಕಂಡು, ಎಂದರೆ ಆತ್ಮಾವಲೋಕನವು ವಿಷಯಸುಖಕ್ಕಿಂತ ಹೆಚ್ಚಾದ ಸುಖವುಳ್ಳದ್ದೆಂದು ತಿಳಿದವನಾಗಿ, **ನಿವರ್ತತೇ** - ನಿವರ್ತಿಸಿ ಹೋಗುತ್ತದೆ. ಇಲ್ಲಿ **ದೃಷ್ಟ್ವಾ** ಆದನಂತರ, ಸ್ಥಿತಸ್ಯ ಎಂದು ಅಧ್ಯಾಹಾರಮಾಡಿಕ್ಕೊಂಡು, **ಅಸ್ಯ** ಎಂಬ ಪದಕ್ಕೆ ವಿಶೇಷಣವಾಗಿ ಇಟ್ಟುಕೊಂಡರೆ ಸರಿಹೋಗುತ್ತದೆ ಎಂದು ಮೇಲೆಯೇ ಹೇಳಲ್ಪಟ್ಟಿರುತ್ತದೆ. ಇದರಿಂದ ಆತ್ಮದರ್ಶನವಿಲ್ಲದೆ ವಿಷಯರಾಗವು ಹೋಗುವದಿಲ್ಲವೆಂದೂ ಹೇಳಲ್ಪಟ್ಟಿತು. ವಿಷಯೋಪಭೋಗದಿಂದ ತಪ್ಪಿಸಿಕೊಂಡು ವೈರಾಗ್ಯವು ಅಙ್ಕುರಿಸಿ ಸುಪ್ರತಿಷ್ಠಿತವಾಗಬೇಕಾದರೆ ಪರಮ ಭೇಷಜವು ದಿವ್ಯಾತ್ಮಸ್ವರೂಪದ ಚಿನ್ತನೆಯು ಎಂದು ಹೇಳಲ್ಪಟ್ಟಿತು. ವಿಷಯರಾಗವೇನೋ ಕೂಡದು. ಆತ್ಮಚಿಂತನ ರಾಗವು ಅವಶ್ಯಕವು. ಈ ರಾಗವು ತುಚ್ಛಗಳಾದ ವಿಷಯರಾಗವನ್ನು ಹೋಗಲಾಡಿಸುತ್ತದೆ. ಮೃಷ್ಟಾನ್ನವು ಒದಗಿದಾಗ ಹಳಸಿದ ಅನ್ನದಲ್ಲಿ ರುಚಿಯು ಹೇಗೆ ನಿವರ್ತಿಸುತ್ತದೋ, ಹಾಗೆ ಎಂಬ ಭಾವವು. ಇಲ್ಲಿ ಕೆಲವರು **ಪರಂ ದೃಷ್ಟ್ವಾ** - ಪರಮಾತ್ಮನನ್ನು ಸಾಕ್ಷಾತ್ಕರಿಸಿದನಂತರ, **ನಿವರ್ತತೇ** - ಎಂದು ಅರ್ಥಮಾಡಿರುತ್ತಾರೆ. ಭಕ್ತಿಯೋಗವಿಷಯವನ್ನು ಇನ್ನೂ ಹೇಳಲು ಉಪಕ್ರಮಿಸಲೇ ಇಲ್ಲವು. ಪರಮಾತ್ಮಜ್ಞಾನವೇನೋ ವೈರಾಗ್ಯಕ್ಕೆ ಹೇತುವೆಂದು ಮುಂದೆ ಹೇಳಲ್ಪಡುತ್ತದೆ. ಆದರೆ ಪರಮಾತ್ಮ **ಸಾಕ್ಷಾತ್ಕಾರವು** ವೈರಾಗ್ಯಕ್ಕೇ ಹೇತುವೇ, ವೈರಾಗ್ಯವು ಪರಮಾತ್ಮಸಾಕ್ಷಾತ್ಕಾರಕ್ಕೆ ಹೇತುವೇ ಎಂಬುದನ್ನು ಪ್ರಾಜ್ಞರೇ ವಿಮರ್ಶಿಸಬಹುದು. ವೈರಾಗ್ಯವಿಲ್ಲದೆ ಭಕ್ತಿಯೋಗದಲ್ಲಿ ಅಧಿಕಾರವು ಸಿದ್ಧಿಸುವದಿಲ್ಲವೆಂಬ ಭಾವವೂ ಅಧ್ಯಾಯಾಂತ್ಯ ಶ್ಲೋಕದಲ್ಲಿ ಸೂಚಿಸಲ್ಪಟ್ಟಿರುತ್ತದೆ. ಆದುದರಿಂದ **ಪರಂ** ಎಂದರೆ ಪರಮಾತ್ಮನನ್ನು ಎಂದು ಅರ್ಥಮಾಡಲು ಸಾಧ್ಯವಿಲ್ಲವು. ಮುಂದಿನ ಶ್ಲೋಕದಲ್ಲೇ ಇಂದ್ರಿಯಗಳನ್ನು ಜಯಿಸಿ ವೈರಾಗ್ಯ ಹುಟ್ಟದೆ ಜ್ಞಾನ ನಿಷ್ಠೆಯೇ ಉಂಟಾಗುವದಿಲ್ಲವೆಂದೂ ಯಾವನು ಇಂದ್ರಿಯಗಳನ್ನು ಸ್ವಾಧೀನದಲ್ಲಿಡುವನೋ ಅವನಿಗೀಗ ಜ್ಞಾನನಿಷ್ಠೆಯು ಉಂಟಾಗತ್ತದೆಂದು **"ವಶೇಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ"** (೬೧) ಎಂದು ಹೇಳಲ್ಪಟ್ಟಿರುತ್ತದೆ. ಇನ್ನೂ ಮೊದಲು ಮೆಟ್ಟಲುನಲ್ಲೇ ಇರುವವನಿಗೆ ತನ್ನ ಕ್ಷೇತ್ರಕ್ಕಿಂತ ತಾನು ಪರನೆಂಬ ಜ್ಞಾನ ಉಂಟಾಗಬೇಕು. ಪ್ರಕರಣವು ದೇಹಾತ್ಮ ವಿವೇಕೋಪದೇಶವಾದುದು. ಆದುದರಿಂದ ದೇಹಕ್ಕಿಂತ ಪರವಾದುದು ತನ್ನ ಆತ್ಮಸ್ವರೂಪವು. ಆದುದರಿಂದಲೇ **ಪರಂದೃಷ್ಟ್ವಾ** ಎಂಬುದಕ್ಕೆ **ಆತ್ಮ ಸ್ವರೂಪಂ ಸುಖತರಂ ದೃಷ್ಟ್ವಾ** ಎಂಬ ವ್ಯಾಖ್ಯಾನವು. ವಿಷಯೋಪ ಭೋಗವನ್ನೇ ಮನುಷ್ಯನು ಸುಖವೆಂದು ಭಾವಿಸಬಹುದು. ಆತ್ಮಾವಲೋಕನವನ್ನಾದರೋ **ಸುಖತರ** ವೆಂದು ಭಾವಿಸುವನು. ವಿಷಯೋಪಭೋಗಗಳು ಮೋಕ್ಷಕ್ಕೆ ದಾರಿಯನ್ನು ತೋರಿಸಲಾರವು;ಆತ್ಮಾವಲೋಕನವಾದರೋ ಸತ್ಯವಾಗಿಯೂ ಭಕ್ತಿಯೋಗಮೂಲಕ ಮೋಕ್ಷವನ್ನು ಸಾಧಿಸಿಕೊಡಬಲ್ಲದು. ಆದುದರಿಂದ **ಸುಖತರ** ವೆಂಬ ವ್ಯಾಖ್ಯಾನವು. ॥೫೯॥

**ಮೂಲಕ್ಕೆ ಅರ್ಥವು:—**ಹೀಗೆ ಆತ್ಮದರ್ಶನವಿಲ್ಲದೆ ವಿಷಯರಾಗದ ನಿವೃತ್ತಿಯುಂಟಾಗುವದಿಲ್ಲವಾದುದರಿಂದ, ಹಾಗೆ ಪ್ರಯತ್ನಮಾಡುತ್ತಿರುವಕಾಲದಲ್ಲೂ ಸಹ ಇಂದ್ರಿಯಗಳನ್ನು ಜಯಿಸುವದು ಸುಲಭ ಸಾಧ್ಯವಲ್ಲವು, ತುಂಬಾ ದುರ್ಲಭವೆಂದು ಹೇಳುತ್ತಾರೆ:—**ಹೇ ಕೌನ್ತೇಯ**–ಓ ಕುನ್ತೀಪುತ್ರನಾದ ಅರ್ಜುನನೇ, **ವಿಪಶ್ಚಿತಃ**-ಶಾಸ್ತ್ರಜನ್ಯಜ್ಞಾನದ ಮೂಲಕ ಇದು ಹೇಯ ಇದು ಉಪಾದೇಯ ವೆಂಬ ವಿವೇಕಜ್ಞಾನ, ಹೊಂದಿರುವವನ ಮತ್ತು **ಯತತೋಽಪಿ**-**ಯತಮಾನಸ್ಯ**

ಭಾ. ಆತ್ಮದರ್ಶನೇನ ವಿನಾ ವಿಷಯರಾಗೋ ನ ನಿವರ್ತತೇ; ಅನಿವೃತ್ತೇ ವಿಷಯರಾಗೇ ವಿಪಶ್ಚಿತೋ ಯತಮಾನಸ್ಯಾಪಿ ಪುರುಷಸ್ಯೇಂದ್ರಿಯಾಣಿ, ಪ್ರಮಾಥೀನಿ-ಬಲವಂತಿ, ಮನಃ ಪ್ರಸಹ್ಯ ಹರಂತಿ. ಏವ ಮಿಂದ್ರಿಯ ಜಯ ಆತ್ಮದರ್ಶನಾಧೀನಃ, ಆತ್ಮ ದರ್ಶನ ಮಿಂದ್ರಿಯ ಜಯಾಧೀನಮಿತಿ ಜ್ಞಾನನಿಷ್ಠಾ ದುಷ್ಪ್ರಾಪಾ. ॥೬೦॥

ಎಂದು ಇರತಕ್ಕದ್ದು, ಆದುದರಿಂದಲೇ ಇಂದ್ರಿಯಗಳನ್ನು ಜಯಿಸಬೇಕೆಂದು ಯತ್ನಿಸುತ್ತಲಿರುವ, **ಪುರುಷಸ್ಯ** - ಪುರುಷನ, **ಇಂದ್ರಿಯಾಣಿ**- ಇಂದ್ರಿಯಗಳು, **ಪ್ರಮಾಥೀನಿ** - ಮಥಿಸುವ ಸ್ವಭಾವವುಳ್ಳವುವಾದುದರಿಂದಲೇ ಎಂದರೆ ಮಹಾ ಬಲಿಷ್ಠವಾದುದರಿಂದಲೇ, **ಮನಃ**-ಆತನ ಮನಸ್ಸನ್ನು, **ಪ್ರಸಭಂ** - ಬಲಾತ್ಕರಿಸಿ, **ಹರನ್ತಿ** - ಅಪಹರಿಸುತ್ತವೆ. ಎಷ್ಟು ಶಾಸ್ತ್ರಜನ್ಯಜ್ಞಾನ ಮೂಲಕ ಪ್ರಾಪ್ತವಾದ ವಿವೇಕವಿದ್ದರೂ, ಇಂದ್ರಿಯಗಳು ಮಹಾ ಬಲಿಷ್ಠವಾದುದರಿಂದ ಮನಸ್ಸನ್ನು ತಮ್ಮ ವಶಮಾಡಿಕೊಳ್ಳುತ್ತವೆ ಎಂಬ ಭಾವವು. ಶಾಸ್ತ್ರಜ್ಞಾನವಿರುವವನ ಅವಸ್ಥೆಯೇ ಹೀಗಾದ ಮೇಲೆ, ಅಂತಹ ಜ್ಞಾನಶೂನ್ಯನಾದವನ ಅವಸ್ಥೆಯನ್ನು ಇನ್ನು ಹೇಳಲೇ ಕೆಲಸವಿಲ್ಲವು, **"ಜಿಹ್ವೈಕತೋ ಮುಮುಷ ಕರ್ಷತಿ"** ಎಂದು ಆರಂಭಿಸಿ, **"ಬಹ್ವಃ ಸಪತ್ನ್ಯ ಇವ ಗೇಹಪತಿಂ ಲುನನ್ತಿ"** ಎಂದು ಭಾಗವತದಲ್ಲಿ (೧೧. ೯. ೨೭) ಹೇಳಿರುವ ಮೇರೆಗೆ ತನ್ನ ಹಿರೀ ಹೆಂಡತಿಯಾದ ಮನಸ್ಸಿಗೂ, ಇತರ ಚಿಕ್ಕ ಹೆಂಡತಿಗಳಾದ ದಶೇಂದ್ರಿಯಗಳಿಗೂ ವಶನಾಗುವದರಿಂದ ಈ ಹನ್ನೊಂದು ಮಂದಿಯೂ ಸೇರಿಕೊಂಡು, ತಮಗೆ ಪತಿಯಾದ ಆತ್ಮನನ್ನು ನಾಶಗೊಳಿಸುತ್ತಾರೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಇಂದ್ರಿಯ ಜಯವು ತುಂಬಾ ಕಷ್ಟತರವಾದುದೆಂದು ಹೇಳಲ್ಪಟ್ಟಿತು. ಇದಕ್ಕೆ ವಿಶ್ವಾಮಿತ್ರಾದಿಗಳೇ ನಿದರ್ಶನವು. **"ಮಹರ್ಷಯೋ ಧ್ಯಾನತಪೋ ಭಿಕಾಮಾಃ ಕಾಮಾಭಿಕಾಮಾ ಪ್ರತಿಬದ್ಧಮೋಹಾಃ"** ಇಂದ್ರಿಯಗಳ ಹಾವಳಿಯು ಜ್ಞಾನನಿಧಿಗಳಾದ ಮಹರ್ಷಿಗಳಿಗೂ ತಪ್ಪಿದ್ದಲ್ಲವೆಂದು ಹೇಳಲ್ಪಟ್ಟಿರುತ್ತದೆ. (ರಾಮಾ. ಕಿಷ್ಕಿಂಧಾ. ೩೩-೫೭) ಇದು ತಾರೆಯು ಲಕ್ಷ್ಮಣನನ್ನು ಕುರಿತು ಹೇಳುವ ವಾಕ್ಯವು.

**ಭಾಷ್ಯಾರ್ಥವು :—ಆತ್ಮದರ್ಶನೇನ ವಿನಾ** - ಆತ್ಮದರ್ಶನದಿಂದಲ್ಲದೇ, **ವಿಷಯರಾಗಃ** - ಆ ವಿಷಯಾಸಕ್ತಿಯು, **ನ ನಿವರ್ತತೇ** - ಹೋಗುವದಿಲ್ಲವು, **ಅನಿವೃತ್ತೇ ವಿಷಯರಾಗೇ** - ವಿಷಯಾಸಕ್ತಿಯು ಹೋಗದೇ ಇರಲಾಗಿ, **ವಿಪಶ್ಚಿತಃ** - ಶಾಸ್ತ್ರಜನ್ಯಜ್ಞಾನದಿಂದುಂಟಾದ ವಿವೇಕವುಳ್ಳವನಾಗಿ, **ಯತತಃ** ಎಂದರೆ **ಯತಮಾನಸ್ಯಾಪಿ** - ಇಂದ್ರಿಯಗಳನ್ನು ಜಯಿಸಬೇಕೆಂದು ಪ್ರಯತ್ನಿಸುತ್ತಲಿದ್ದರೂ ಕೂಡ, **ಪುರುಷಸ್ಯ** - ಅಂತಹ ಪುರುಷನ ಇಂದ್ರಿಯಗಳು, **ಪ್ರಮಾಥೀನಿ** ಎಂದರೆ **ಬಲವನ್ತಿ** - ತುಂಬ ಬಲವಾದವುಗಳು, **ಮನಃ** - ಆತನ ಮನಸ್ಸನ್ನು, **ಪ್ರಸಭಂ** ಎಂದರೆ **ಪ್ರಸಹ್ಯ** - ಬಲಾತ್ಕರಿಸಿ, **ಹರನ್ತಿ** - ಅಪಹರಿಸುತ್ತವೆ, ಮನುವೂ (೨. ೨೧೫) ಹಾಗೆಯೇ ಹೇಳಿರುತ್ತಾನೆ:—**"ಮಾತ್ರಾಸ್ವಸ್ರಾ ದುಹಿತ್ರಾವಾ ನ ವಿವಿಕ್ತಾಸನೋಭವೇತ್ । ಬಲವಾನ್ ಇಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ"** "ತಾಯಿ ಸೊಸೆ ಮಗಳು ಇವರುಗಳು ಯಾರೊಂದಿಗೂ ನಿರ್ಜನ ಪ್ರದೇಶದಲ್ಲಿರಕೂಡದು, ಏಕೆಂದರೆ ಇಂದ್ರಿಯ ಸಮೂಹವು ಮಹಾಬಲಿಷ್ಠವಾದುದು; ಎಷ್ಟು ಶಾಸ್ತ್ರಜನ್ಯಜ್ಞಾನವಿರುವ ವಿದ್ವಾಂಸನನ್ನೂ ದುರ್ಮಾರ್ಗಕ್ಕೆ ಸೆಳೆಯುತ್ತವೆ." ಎಂದಿರುವದರಿಂದ ಶಾಸ್ತ್ರಜನ್ಯಜ್ಞಾನವಿದ್ದರೂ ಕೂಡ, ಇಂದ್ರಿಯಗಳ ಹಾವಳಿಯುಂಟು ಎಂದು ಹೇಳಿರುವದರಿಂದ, ಯತತಃ ವಿಪಶ್ಚಿತಃ ಎಂಬ ಪ್ರಯೋಗವು; ಇದುವರೆಗೂ ಹೇಳಿದ ಅಭಿಪ್ರಾಯಗಳನ್ನು ಸಙ್ಗ್ರಹಿಸಿ ಹೇಳುತ್ತಾರೆ. **ಏವಂ** - ಈ ಪ್ರಕಾರವಾಗಿ, **ಇಂದ್ರಿಯಜಯ ಆತ್ಮದರ್ಶನಾಧೀನಃ** ಇತ್ಯಾದಿ - ಇಂದ್ರಿಯ ಜಯವು ಆತ್ಮದರ್ಶನಕ್ಕೆ ಅಧೀನವಾದುದು,

Funding: Tattva Heritage Foundation,Kolkata. Digitization: eGangotri.



**ಮೂ. ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ॥ ೬೧.**

**ಭಾ. ಅಸ್ಯ ಸರ್ವಸ್ಯ ಪರಿಜಿಹೀರ್ಷಯಾ ವಿಷಯಾನುರಾಗ ಯುಕ್ತತಯಾ ದುರ್ಜಯಾನೀಂದ್ರಿಯಾಣಿ ಸಂಯಮ್ಯ, ಚೇತಸಶ್ಶುಭಾಶ್ರಯ ಭೂತೇ ಮಯಿ ಮನೋಽ**

ಹಾಗೆಯೇ ಆತ್ಮದರ್ಶನವೂ ಇಂದ್ರಿಯಗಳ ಜಯಕ್ಕೆ ಅಧೀನವಾದುದು, ಇತಿ - ಹೀಗೆ, ಜ್ಞಾನನಿಷ್ಠೆ ಎಂಬುದು, ದುಷ್ಪ್ರಾಪಾ - ಹೊಂದಲಸಾಧ್ಯವು. ಹೀಗೆ ಪರಸ್ಪರಾಧೀನವಾಗಿರುವದರಿಂದ ಹೊಂದಲಸಾಧ್ಯವೆಂಬ ಭಾವವು. ಹೀಗೆ ಹೇಳಿದರೆ ಅನ್ಯೋನ್ಯಾಶ್ರಯ ದೋಷಯುಕ್ತವಾದ ಉಕ್ತಿ ಆಗಲಿಲ್ಲವೇ? ಎಂದರೆ ಅದರಿಂದಲೇ ಇದು ಉಂಟಾಗುತ್ತದೆ, ಇದರಿಂದಲೇ ಅದು ಉಂಟಾಗುತ್ತದೆ ಎಂಬ ಹೇಳಿಕೆಯಲ್ಲಿ ಅನ್ಯೋನ್ಯಾಶ್ರಯದೋಷವನ್ನು ಹೇಳಬಹುದು. ಪರಸ್ಪರ ಸಹಾಯಕಗಳಾಗಿ ಪರಸ್ಪರಾಭಿವೃದ್ಧಿಗೆ ಅಧೀನಗಳಾಗಿರುವವರಲ್ಲಿ ಅನ್ಯೋನ್ಯಾಶ್ರಯದೋಷವಿಲ್ಲವು. ಅದು ಹೇಗೆ ಎಂಬುದು ಮುಂದಿನ ಶ್ಲೋಕದಲ್ಲಿ ವ್ಯಕ್ತಪಡುತ್ತದೆ.

**ಅವತಾರಿಕೆಯು :—**ಮುಂದಿನ ಶ್ಲೋಕದಲ್ಲಿ ಇಂತಹ ದುಷ್ಪ್ರಾಪವಾದುದೂ ಸಹ ಲಭಿಸುವ ಉಪಾಯವುಂಟೋ? ಎಂದರೆ ಉಂಟು ಎಂದು ತಿಳಿಸುತ್ತಾರೆ. ಆ ಉಪಾಯದಿಂದ ಇಂದ್ರಿಯ ಜಯವೂ ಆತ್ಮದರ್ಶನವೂ ಪರಸ್ಪರ ಸಹಾಯಕಗಳಾಗಿ ಎರಡೂ ಲಭಿಸುತ್ತದೆಂದು ಹೇಳುತ್ತಾರೆ.

**ಮೂಲಕ್ಕೆ ಅರ್ಥವು :— ತಾನಿ ಸರ್ವಾಣಿ** - ಆ ಎಲ್ಲಾ ಇಂದ್ರಿಯಗಳನ್ನೂ, **ಸಂಯಮ್ಯ**— ವಿಷಯಗಳಲ್ಲಿ ಪ್ರವರ್ತಿಸದ ಹಾಗೆ ಅವುಗಳ ಸಂಬಂಧವಿಲ್ಲದಹಾಗೆ ನಿರೋಧಿಸಿ, **ಮತ್ಪರಃ** - ನನ್ನ ದಿವ್ಯಮಙ್ಗಳವಿಗ್ರಹದಲ್ಲಿ ಸಕ್ತಮಾದ ಮನಸ್ಸನ್ನುಳ್ಳವನಾಗಿ, **ಯುಕ್ತಃ** - ಸಮಾಧಾನಚಿತ್ತನಾಗಿಯೂ, **ಆಸೀತ** - ಇರತಕ್ಕದ್ದು, ಹೀಗೆ, **ಇಂದ್ರಿಯಾಣಿ** - ಇಂದ್ರಿಯಗಳೆಲ್ಲಾ, **ಯಸ್ಯ** – ಯಾವನಿಗೆ, **ವಶೇ** - ವಶದಲ್ಲಿವೆಯೋ, **ತಸ್ಯಪ್ರಜ್ಞಾ** - ಆತನ ಜ್ಞಾನವು, **ಪ್ರತಿಷ್ಠಿತಾಹಿ** – ಸ್ಥಿರವಾದುದಾಗುತ್ತದಷ್ಟೆ. ಎಂದರೆ ಆತ್ಮದರ್ಶನಕ್ಕೆ ಸಮರ್ಥವಾದುದಾಗುತ್ತದೆಂಬ ಭಾವವು. ಪರಮಾತ್ಮನ ದಿವ್ಯಮಙ್ಗಳವಿಗ್ರಹದಲ್ಲಿ ಮನಸ್ಸು ಸಕ್ತವಾದವನಿಗೆ ಹೀಗೆ ಪರಸ್ಪರ ಸಹಾಯಕಗಳಾದ ಇಂದ್ರಿಯ ಜಯವೂ ಆತ್ಮಾವಲೋಕನವೂ ಎರಡೂ ಸಿದ್ಧಿಸುತ್ತವೆ ಎಂದು ಹೇಳಲ್ಪಟ್ಟಿತು. ಈ ಸಂದರ್ಭದಲ್ಲಿ **"ಸಂಸಾರಾರ್ಣವ ಮಗ್ನಾನಾಂ ವಿಷಯಾಕ್ರಾಂತ ಚೇತಸಾಮ್। ವಿಷ್ಣುಪೋತಮ್ ವಿನಾ ನಾನ್ಯತ್ಕಿಂಚಿದಸ್ತಿ ಪರಾಯಣಮ್"** ಎಂಬ ವಿಷ್ಣುಧರ್ಮ ಶ್ಲೋಕವು ಅನುಸಂಧೇಯವು. ಸಂಸಾರಾರ್ಣವದಲ್ಲಿ ಮುಳಿಗಿ ವಿಷಯಗಳೆಂಬ ಮೊಸಳೆಗಳಿಂದ ಹಿಡಿಯಲ್ಪಟ್ಟವರಿಗೆ ವಿಷ್ಣುವೆಂಬ ನಾವೆಯಿಲ್ಲದೆ ಬೇರೆ ಗತಿಯಿಲ್ಲವು. ॥೬೧॥

**ಭಾಷ್ಯಾರ್ಥವು :—** ಹಿಂದೆ ಆತ್ಮದರ್ಶನ ಮತ್ತು ಇಂದ್ರಿಯ ಜಯವೆರಡೂ ಅನ್ಯೋನ್ಯಾಶ್ರಯವುಳ್ಳದ್ದೆಂದು ಹೇಳಲ್ಪಟ್ಟಿತಲ್ಲಾ, ಅದು ಹೇಗೆ ಎಂದರೆ ಉಪದೇಶಿಸುತ್ತಾರೆ:—**ಅಸ್ಯ ಸರ್ವಸ್ಯ**- ಈ ಮೇಲೆ ಹೇಳಿದನುವನ್ನೆಲ್ಲಾ, **ಪರಿಜಿಹೀರ್ಷಯಾ**-ಬಿಡಬೇಕೆಂಬ ಅಪೇಕ್ಷೆಯಿಂದ, **ವಿಷಯಾನುರಾಗ ಯುಕ್ತತಯಾ**-ವಿಷಯಗಳಲ್ಲಿ ಆಸಕ್ತಿಯನ್ನು ಹೊಂದಿರುವದರಿಂದ, **ದುರ್ಜಯಾನಿ ಇಂದ್ರಿಯಾಣಿ ಸಂಯಮ್ಯ** - ಜಯಿಸಲಸಾಧ್ಯವಾದ ಇಂದ್ರಿಯಗಳನ್ನು ನಿಗ್ರಹಿಸಿ ಎಂದರೆ ಅವುಗಳಿಗೆ ವಿಷಯಸ್ಪರ್ಶ ಉಂಟಾಗದ ಹಾಗೆ ಮಾಡಿ, **ಚೇತಸಃ** - ಮನಸ್ಸಿಗೆ, **ಶುಭಾಶ್ರಯಭೂತೇ**-ಪಾಪನಿವಾರಕತ್ವ ಮತ್ತು ಧ್ಯಾನವಿಷಯತ್ವಗಳುಳ್ಳ ದಿವ್ಯಮಙ್ಗಳವಿಗ್ರಹಯುಕ್ತನಾದ, **ಮಯಿ**-ನನ್ನಲ್ಲಿ, **ಮನೋಽವಸ್ಥಾಪ್ಯ** - ಮನಸ್ಸನ್ನಿಟ್ಟವನಾಗಿ, **ಯುಕ್ತಃ** ಎಂದರೆ **ಸಮಾಹಿತಃ** - ಸಮಾಧಾನ

ಭಾ. ವಸ್ಥಾಪ್ಯ, ಸಮಾಹಿತ ಆಸೀತ ; ಮನಸಿ ಮದ್ವಿಷಯೇ ಸತಿ, ನಿರ್ದಗ್ಧಾ ಶೇಷ ಕಲ್ಮಷ ತಯಾ ನಿರ್ಮಲೀ ಕೃತಂ ವಿಷಯಾನುರಾಗರಹಿತಂ ಮನ ಇಂದ್ರಿಯಾಣಿ ಸ್ವವಶಾನಿ ಕರೋತಿ ; ತತೋ ವಶ್ಯೇಂದ್ರಿಯಂ ಮನ ಆತ್ಮದರ್ಶನಾಯ ಪ್ರಭವತಿ;ಯಥೋಕ್ತಂ-

(೧) "ಯಥಾಗ್ನಿ ರುದ್ಧ ತ ಶಿಖಃ ಕಕ್ಷಂ ದಹತಿ ಸಾನಿಲಃ ।

ತಥಾ ಚಿತ್ತ ಸ್ಥಿತೋ ವಿಷ್ಣುರ್ಯೋಗಿನಾಂ ಸರ್ವ ಕಿಲ್ಬಿಷಮ್" ॥ ಇತಿ.

ತದಾಹ "ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ" ಇತಿ ॥೬೧॥

ಉಳ್ಳವನು, ಆಸೀತ-ಇರತಕ್ಕದ್ದು; ಈಗ ಮತ್ಪರಃ ಎಂದು ಹೇಳುವ ಶ್ರೀಕೃಷ್ಣನು ದಿವ್ಯಮಙ್ಗಳ ವಿಗ್ರಹ ಯುಕ್ತನಾದುದರಿಂದ ಹಾಗೆ ಅರ್ಥಮಾಡಿರುತ್ತಾರೆ. ದಿವ್ಯಮಙ್ಗಳವಿಗ್ರಹವು ಶುಭಾಶ್ರ ಯವೆಂದು ಹೇಳಿದುದರಿಂದ ಶುಭ ಶಬ್ದದಿಂದ ಬ್ರಹ್ಮಾದಿಗಳ ವಿಗ್ರಹದ ಚಿನ್ತನವೂ ಮತ್ತು ಆಶ್ರಯ ಶಬ್ದದಿಂದ ಆತ್ಮಸ್ವರೂಪದ ಚಿನ್ತನವೂ ವ್ಯಾವರ್ತಿಸಲ್ಪಟ್ಟವು. ಮತ್ಪರಃ ಎಂಬು ದಕ್ಕೆ ಮಯಿ ಮನೋಽವಸ್ಥಾಪ್ಯ ಎಂದು ಶ್ರೀ ಯತಿವರ್ಯರು ಅರ್ಥಮಾಡಿರುತ್ತಾರೆ. ನನ್ನನ್ನು ಚಿಂತಿಸುವವನಾಗಿ ಎಂಬುದು ಸಹಜವಾದ ಅರ್ಥವು. ಕೆಲವರು **ಅಹಂ ಸರ್ವ ಪ್ರತ್ಯಗಾತ್ಮಾ ಪರೋ ಯಸ್ಯ ಸಃ** ಎಂದು ಮಾಡಿರುವ ಅರ್ಥವೂ,**ಅಹಮೇವ ಸರ್ವಸ್ಮಾದುತ್ಕೃಷ್ಟೋಽಯಸ್ಯ ಸಃ** ಎಂಬ ಅರ್ಥವೂ ಪ್ರಕರಣಕ್ಕೆ ಬೇಕಾದ ಪರಮಾತ್ಮನಲ್ಲಿ ಮನಸ್ಸನ್ನು ಇಡಬೇಕೆಂಬ ಅರ್ಥಕ್ಕೆ ಸಾಧಕವಾಗುವದಿಲ್ಲವು, ಇಂತಹ ಪ್ರಕರಣವೆಂದು ಬೋಧಿಸುವದಕ್ಕಾಗಿಯೇ **ಮನಸಿ ಮದ್ವಿ ಷಯೇ ಸತಿ** ಎಂದು ಮತ್ಪರಶಬ್ದಾರ್ಥವನ್ನುಪಪಾದಿಸಿ ಇದರಿಂದಲೇ ಇಂದ್ರಿಯಗಳ ವಶ್ಯತಾ ರೂಪ ಫಲವೆಂದುಪದೇಶಿಸಿರುತ್ತಾರೆ. ಆ ಇಂದ್ರಿಯಗಳ ಸಂಯಮನದಿಂದ ಪ್ರಜ್ಞಾಪ್ರತಿಷ್ಠಾ ಪ್ರಾಪ್ತಿಯೆಂದು ಹೇಳಲ್ಪಟ್ಟಿರುತ್ತದೆ. ಅದರಿಂದುಂಟಾಗುವದು ಆತ್ಮದರ್ಶನವು ಎಂಬ ಭಾವವು. **ಮನಸಿ ಮದ್ವಿಷಯೇ ಸತಿ** - ಹೀಗೆ ಮನಸ್ಸು ನನ್ನ ವಿಷಯವಾದುದೇ ಆಗಲಾಗಿ, **ನಿರ್ದಗ್ಧಾ ಶೇಷ ಕಲ್ಮಷತಯಾ** - ಸಮಸ್ತಪಾಪಗಳೂ ಭಸ್ಮವಾಗಿಹೋಗುವವರಿಂದ, **ನಿರ್ಮಲೀಕೃತಂ** – ರಜಸ್ತಮೋಗುಣಗಳಿಲ್ಲದೆ ನಿರ್ಮಲವಾಗಿ ಮಾಡಲ್ಪಟ್ಟ, **ವಿಷಯಾನುರಾಗ ರಹಿತಂ** - ಆದುದ ರಿಂದಲೇ ವಿಷಯಗಳಲ್ಲಿ ಆಸಕ್ತಿಯಿಲ್ಲದ, **ಮನಃ** - ಮನಸ್ಸು, **ಇಂದ್ರಿಯಾಣಿ** - ಇಂದ್ರಿಯಗ ಳನ್ನು, **ಸ್ವವಶಾನಿ ಕರೋತಿ** - ತನಗೆ ವಶವಾದವುಗಳನ್ನಾಗಿ ಮಾಡಿಕೊಳ್ಳುತ್ತದೆ. **ತತಃ** - ಆ ಕಾರಣದಿಂದ ಅಥವಾ ಅನಂತರ, **ವಶ್ಯೇಂದ್ರಿಯಂ ಮನಃ** - ವಶಮಾಡಿಕೊಂಡ ಇಂದ್ರಿಯಗಳ ನ್ನುಳ್ಳ ಮನಸ್ಸು, **ಆತ್ಮದರ್ಶನಾಯ ಪ್ರಭವತಿ** - ತನ್ನ ಆತ್ಮದರ್ಶನ ಮಾಡಲು ಸಮರ್ಥವಾ ಗುತ್ತದೆ, **ಯಥೋಕ್ತಂ** - ಹಾಗೆಯೇ ಹೇಳಿರುತ್ತದೆ. ಹೇಗೆಂದರೆ:—"**ಉದ್ಧತ ಶಿಖಃ** - ದೀಪ್ತ ಜ್ವಾಲೆಯುಳ್ಳ, **ಅಗ್ನಿಃ** - ಅಗ್ನಿಯು, **ಸಾನಿಲಃ** - ವಾಯುವಿನಿಂದ ಸೇರಿದವನಾಗಿ, **ಯಥಾ** – ಹೇಗೆ, **ಕಕ್ಷಂ** - ಒಣಗಿದ ಕಾಷ್ಠವನ್ನು, **ದಹತಿ** - ದಹಿಸುತ್ತದೆಯೋ, **ತಥಾ** - ಹಾಗೆಯೇ, **ಚಿತ್ತಸ್ಥಿತೋವಿಷ್ಣುಃ** - ಮನಸ್ಸಿನಲ್ಲಿರುವ ವಿಷ್ಣುವು, **ಯೋಗಿನಾಂ** - ಧ್ಯಾನಿಸುವವರ, **ಸರ್ವ ಕಿಲ್ಬಿಷಂ** - ಸಮಸ್ತ ಪಾಪವನ್ನೂ, **ದಹತಿ** – ದಹಿಸುತ್ತಾನೆ." ಇತಿ-ಎಂದು ಹೇಳಲ್ಪಟ್ಟಿರುತ್ತದೆ, **ತದಾಹ** - ಈ ಅಭಿಪ್ರಾಯವನ್ನೇ ಈ ಶ್ಲೋಕದ ಉತ್ತರಾರ್ಧವಾದ "**ವಶೇಹಿ ಯಸ್ಯೇಂದ್ರಿ ಯಾಣಿ**" ಎಂಬುದರಿಂದ ಶ್ರೀಕೃಷ್ಣನು ಹೇಳಿರುತ್ತಾನೆ. ಯಾರು ಪರಮಾತ್ಮನ ದಿವ್ಯಮಙ್ಗಳ ವಿಗ್ರಹದಲ್ಲಿ ಮನಸ್ಸನ್ನಿಟ್ಟು ಧ್ಯಾನಿಸುವರೋ ಅವರ ಪಾಪಗಳೆಲ್ಲಾ ತೊಲಗುವವು. ಇಂದ್ರಿ

(೧) ವಿ. ಪು. ೬. ೭. ೭೪.

ಭಾ. ಅವ. ಏವಂ ಮಯ್ಯನಿವೇಶ್ಯ ಮನಃ ಸ್ವಯತ್ನ ಗೌರವೇಣೇಂದ್ರಿಯ ಜಯೇ ಪ್ರವೃತ್ತೋ ವಿನಷ್ಟೋ ಭವತೀತ್ಯಾಹ—

ಮೂ. ಧ್ಯಾಯತೋ ವಿಷಯಾನ್ಪುಂಸ ಸ್ಸಙ್ಗ ಸ್ತೇಷೂಪಜಾಯತೇ ।
ಸಙ್ಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿ ಜಾಯತೇ ॥ ೬೨.
ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ಸ್ಮೃತಿ ವಿಭ್ರಮಃ ।
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾ ತ್ಪ್ರಣಶ್ಯತಿ ॥ ೬೩.

ಯಗಳು ವಿಷಯಗಳಲ್ಲಿ ಪ್ರವರ್ತಿಸದೇ ಇರುವವರಿಂದ ಮನಸ್ಸು ಪರಿಶುದ್ಧವಾಗಿ, ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುತ್ತದೆ. ಅಂತವನಿಗೆ ಆತ್ಮದರ್ಶನವೂ ಲಭಿಸುತ್ತದೆ ಎಂಬ ತಾತ್ಪರ್ಯವು. ದುಷ್ಪ್ರಾಪವಾದರೂ ಪರಮಾತ್ಮನಲ್ಲಿ ಸಕ್ತವಾದ ಮನಸ್ಸಿನಿಂದ ಸಾಧ್ಯವೆಂದು ಉಪಪಾದಿಸಲ್ಪಟ್ಟಿತು. ॥೬೧॥

**ಭಾಷ್ಯಾವತಾರಿಕೆಯ ಅರ್ಥವು:**—ಹಿಂದೆ ಅನ್ಯೋನ್ಯಾಶ್ರಯವಾದ ಇಂದ್ರಿಯ ಜಯವೂ ಆತ್ಮದರ್ಶನವೂ ಎರಡೂ ಲಭಿಸುವ ಉಪಾಯವು ಹೇಳಲ್ಪಟ್ಟಿತು. ಹಾಗೆ ಎರಡೂ ಲಭಿಸದೇ ಇರುವದು ಯಾವಾಗ ಎಂಬುದನ್ನು ಅವತಾರಿಕೆ ಮೂಲಕ ತಿಳಿಸುತ್ತಾರೆ. **ಏವಂ** - ಈ ಪ್ರಕಾರವಾಗಿ, **ಮನಃ** - ಮನಸ್ಸನ್ನು, **ಮಯಿ** - ಕೃಪಾಸಾಗರನಾಗಿ ಶುಭಾಶ್ರಯವುಳ್ಳ ನನ್ನಲ್ಲಿ, **ಅನಿವೇಶ್ಯ**-ಇಡದೆ, ಇದರಿಂದ ಮನುಷ್ಯನ ದೌರ್ಭಾಗ್ಯವು ತೋರಿಬರುತ್ತದೆ, **ಸ್ವಯತ್ನ ಗೌರವೇಣ**-ತನ್ನ ಪ್ರಯತ್ನದ ಗೌರವದಿಂದ, **ಇಂದ್ರಿಯ ಜಯೇ**- ಇಂದ್ರಿಯಗಳನ್ನು ಜಯಿಸುವ ವಿಷಯದಲ್ಲಿ, **ಪ್ರವೃತ್ತಃ** - ಪ್ರವರ್ತಿಸಿದವನು, **ವಿನಷ್ಟೋ ಭವತಿ** - ನಷ್ಟನಾಗುವನು, ಎಂದರೆ ತನ್ನ ಸ್ವರೂಪವನ್ನೂ ತನ್ನ ಶ್ರೇಯಸ್ಸನ್ನೂ ಕಳೆದುಕೊಂಡವನಾಗುವನು, **ಇತ್ಯಾಹ** - ಎಂಬದಾಗಿ ಮುಂದಿನ ಎರಡು ಶ್ಲೋಕಗಳಿಂದ ಹೇಳುತ್ತಾರೆ:—

**ಮೂಲಕ್ಕೆ ಅರ್ಥವು:**—**ವಿಷಯಾನ್ ಧ್ಯಾಯತಃ** - ನನ್ನಲ್ಲಿ ಮನಸ್ಸನ್ನಿಡದೆ ವಿಷಯಗಳನ್ನೇ ಚಿಂತಿಸುತ್ತಲಿರುವ **ಪುಂಸಃ** - ಮನುಷ್ಯನಿಗೆ,(**ಪುಮಾನ್** ಎಂಬ ಪ್ರಯೋಗವಿರುವದರಿಂದ ಜೀವಾತ್ಮನು ಮಹಾ ಪರಿಶುದ್ಧನು, ಆದರೆ ಕರ್ಮವಶಾಲಕನಾಗಿ ಬಂದ ಶರೀರದ ಮೂಲಕ ಇಂದ್ರಿಯವಶನಾಗಿ ವಿಷಯಗಳನ್ನು ಕುರಿತು ಚಿಂತಿಸುವನೆಂಬ ಭಾವವು. **ಪುಮಾನ್ ನ ದೇವೋ ನನರೋ** ಇತ್ಯಾದಿ ಶ್ಲೋಕವು ಇಲ್ಲಿ ಅನುಸಂಧೇಯವು.) **ತೇಷು** - ಆ ವಿಷಯಗಳಲ್ಲಿ, **ಸಙ್ಗಃ**-ಸಂಬಂಧವು, **ಉಪಜಾಯತೇ** - ಅಭಿವೃದ್ಧಿಯನ್ನು ಹೊಂದಿದುದಾಗುತ್ತದೆ. "**ನ ಜಾತು ಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ**" ಎಂದು ಹೇಳಿರುವಹಾಗೆ ಕಾಮವು ಉಪಭೋಗದಿಂದ ಇನ್ನೂ ಅಭಿವೃದ್ಧಿಯಾಗುತ್ತದೇ ವಿನಾ ಶಮನವಾಗುವದಿಲ್ಲವೆಂದು ಹೇಳಲ್ಪಟ್ಟಿರುತ್ತದೆ. **ಸಙ್ಗಾತ್** - ವಿಷಯ ಸಂಬಂಧದಿಂದ, **ಕಾಮಃ** - ಅನುಭವಿಸಲೇಬೇಕೆಂಬ ಉತ್ಕಟೇಚ್ಛೆಯು, **ಸಂಜಾಯತೇ** - ಚನ್ನಾಗಿ ಉತ್ಪನ್ನವಾಗುತ್ತದೆ, **ಕಾಮಾತ್ಕ್ರೋಧೋಽಭಿಜಾಯತೇ** - ಅಂತಹ ಉತ್ಕಟೇಚ್ಛೆ ಉಂಟಾಗುವದರಿಂದ, ಅಂತಹ ವಿಷಯೋಪಭೋಗಕ್ಕೆ ಪ್ರತಿಬಂಧಕವ ಸಂದರ್ಭದಲ್ಲಿ ಕೋಪವು ಉತ್ಪನ್ನವಾಗುತ್ತದೆ. **ಕ್ರೋಧಾದ್ಭವತಿ ಸಮ್ಮೋಹಃ** - ಕ್ರೋಧದಿಂದ ಇದನ್ನು ಮಾಡಬಹುದು ಅಥವಾ ಮಾಡಬಾರದು ಎಂದು ವಿಮರ್ಶಿಸುವ ವಿವೇಕ ಶೂನ್ಯತೆಯು ಉಂಟಾಗುವದು, **ಸಮ್ಮೋಹಾತ್ಸ್ಮೃತಿ ವಿಭ್ರಮಃ** - ಈ ವಿವೇಕದ ಶೂನ್ಯತೆಯಿಂದ ಜ್ಞಾಪಕವಿಲ್ಲದೇ

ಭಾ. ಅನಿರಸ್ತ ವಿಷಯಾನುರಾಗಸ್ಯ ಹಿ ಮಯ್ಯನಿವೇಶಿತ ಮನಸ ಇಂದ್ರಿಯಾಣಿ ಸಂಯಮ್ಯಾವಸ್ಥಿತಸ್ಯಾಪ್ಯ ನವಧಿಪಾಪವಾಸನಯಾ ವಿಷಯಧ್ಯಾನ ಮವರ್ಜನೀಯಂ ಸ್ಯಾತ್ ; ಧ್ಯಾಯತೋ ವಿಷಯಾನ್ ಪುಂಸಃ ಪುನರಪಿ ಸಙ್ಗೋಽತಿ ಪ್ರವೃದ್ಧೋ ಜಾಯತೇ. ಸಙ್ಗಾತ್ ಸಂಜಾಯತೇ ಕಾಮಃ-ಕಾಮೋನಾಮ ಸಙ್ಗಸ್ಯ ವಿಪಾಕ ದಶಾ,

---

ಹೋಗೋಣವು ಪ್ರಾಪ್ತವಾಗುತ್ತದೆ; ಆಗ ತಾನು ಇಂದ್ರಿಯವನ್ನು ಜಯಿಸಬೇಕೆಂಬ ಸಙ್ಕಲ್ಪವು ಮರೆತುಹೋಗುತ್ತದೆ. ಭ್ರಮೆಗಳು ಉತ್ಪನ್ನವಾಗುತ್ತವೆಂಮೂ ಅರ್ಥಮಾಡ ಬಹುದು. ಸ್ಮೃತಿಭ್ರಂಶಾದ್ಬುದ್ಧಿ ನಾಶಃ - ಇಂತಹ ಸ್ಮೃತಿಭ್ರಂಶದಿಂದ ತಾನು ಆತ್ಮದರ್ಶನ ಮಾಡಬೇಕೆಂಬ ಬುದ್ಧಿಯ ನಾಶ ಉಂಟಾಗುತ್ತದೆ. ಬುದ್ಧಿನಾಶಾತ್ಪ್ರಣಶ್ಯತಿ - ಬುದ್ಧಿಯ ನಾಶದಿಂದ ಆತ್ಮಸ್ವರೂಪದ ಹಾನಿಯುಂಟಾಗುತ್ತದೆ ಎಂದರೆ ಪುನಃ ಪುನಃಸಂಸಾರಿಯಾಗುತ್ತಾನೆ. ತನ್ನ ಸ್ವರೂಪಕ್ಕನುಗುಣವಾದ ಸ್ಥಿತಿಯು, ದಿವ್ಯ ವೈಕುಂಠದಲ್ಲಿ ಪರಮಾತ್ಮನೊಂದಿಗೆ ಇದ್ದು ಆತನಿಗೆ ಕೈಙ್ಕರ್ಯವನ್ನೆಸಗುವದು ; ಅದು ತಪ್ಪಿ ಜ್ಞಾನಸಂಕೋಚ ಹೊಂದಿ, ಇಂದ್ರಿಯಗಳ ಹಾವಳಿಗೆ ಶಿಕ್ಷೆ ಬದ್ಧನಾಗಿರುವದು ಈತನಿಗೆ ದುಸ್ಥಿತಿಯು, ಈ ಅವಸ್ಥೆಯೇ ಪ್ರಣಶ್ಯತಿ ಎಂಬುದರಿಂದ ಹೇಳಲ್ಪಟ್ಟಿತು. ||೬೨-೬೩||

ಭಾಷ್ಯಾರ್ಥವು :—ಇಂದ್ರಿಯ ಜಯವೂ ಆತ್ಮದರ್ಶನವೂ ಎಂತವನಿಗೆ ಉಂಟಾಗುವದಿಲ್ಲವೆಂಬುದನ್ನು ಮುಂದಿನ ಎರಡು ಶ್ಲೋಕಗಳ ಮೂಲಕ ತಿಳಿಸುತ್ತಾರೆ.—ಮಯ್ಯ ನಿವೇಶಿತ ಮನಸಃ - ಇದು ಹಿಂದಿನ ಶ್ಲೋಕದಲ್ಲಿ ಹೇಳಿದಹಾಗೆ ಮತ್ಪರನಾಗದೇ ಇರುವದ ವಿಷಯವಾದುದರಿಂದ, ಕೃಪಾಸಾಗರನಾದ ನನ್ನಲ್ಲಿ ಮನಸ್ಸನ್ನು ಇಡದವನಾಗಿ, ಅನಿರಸ್ತ ವಿಷಯಾನುರಾಗಸ್ಯ ಹಿ - ವಿಷಯಾಸಕ್ತಿಯು ಹೋಗದೇ ಇರುವವನಿಗೆ ತಾನೇ, ಇಂದ್ರಿಯಾಣಿ ಸಂಯಮ್ಯ ಅವಸ್ಥಿತಸ್ಯಾಪಿ - ಇಂದ್ರಿಯಗಳನ್ನು ನಿಗ್ರಹಿಸಿ ಇರಬೇಕೆಂದಿರುವವನಾದರೂ ಕೂಡ, ಅನವಧಿ ಪಾಪ ವಾಸನಯಾ - ಅವಧಿಯಿಲ್ಲದ ಪಾಪಗಳ ವಾಸನೆಯಿಂದ, ಅಂತವನಿಗೆ, ವಿಷಯಧ್ಯಾನಂ- ವಿಷಯವನ್ನು ಕುರಿತು ಚಿಂತಿಸೋಣವು, ಅವರ್ಜನೀಯಂಸ್ಯಾತ್ - ತಪ್ಪಿದ್ದಲ್ಲವಾಗುತ್ತದೆ. ಸ್ವಾಮಿಯಲ್ಲಿ ಮನಸ್ಸನ್ನಿಟ್ಟರೆ ಆತನ ಕೃಪಾ ಪ್ರಭಾವದಿಂದ ಸಕಲ ಪಾಪವಾಸನೆಯೂ ತೊಲಗುವದರಿಂದ ವಿಷಯಾನುರಾಗವು ನಿವರ್ತಿಸುತ್ತದೆ; ಹಾಗೆ ಆತನ ಅನುಗ್ರಹವನ್ನು ಸಂಪಾದಿಸಿಕೊಳ್ಳದೇ ಇರುವದರಿಂದ ಪಾಪವಾಸನಾ ಮೂಲಕವಾಗಿ ವಿಷಯಗಳಲ್ಲಿ ಚಿಂತೆಯು ತಪ್ಪಿದ್ದಲ್ಲವು, ವಿಷಯಾನ್ ಧ್ಯಾಯತಃ ಪುಂಸಃ - ವಿಷಯಗಳನ್ನು ಕುರಿತು ಚಿಂತಿಸುವ ಪುರುಷನಿಗೆ, ಪುನರಪಿ- ಪುನಃ ಪುನಃ, ಸಙ್ಗಃ - ಸಂಬಂಧವು, ಅತಿಪ್ರವೃದ್ಧೋ ಜಾಯತೇ – ತುಂಬಾ ಅಭಿವೃದ್ಧಿಯಾದುದಾಗುತ್ತದೆ. ಇದು ಮೂಲದ ಉಪಜಾಯತೇ ಎಂಬುದರ ಅರ್ಥವು ; ಉಪ ಎಂಬ ಉಪಸರ್ಗದ ಬಲದಿಂದ ತೋರಿಬರುವ ಅರ್ಥವು. ಸಙ್ಗದಿಂದ ಕಾಮವು ಉತ್ಪನ್ನವಾಗುತ್ತದೆಂದು ಹೇಳಿರುತ್ತದೆ. ಸಙ್ಗಃ ಕಾಮಃ ಎಂಬ ಪದಗಳು ಪರ್ಯಾಯ ಪದಗಳೆಂದು ಕೆಲವರು ಭಾವಿಸುವರು; ಹಾಗಲ್ಲವೆಂಬುದು ಮೂಲದಿಂದಲೇ ಸಙ್ಗಾತ್ಸಞ್ಜಾಯತೇ ಕಾಮಃ ಎಂಬುದರಿಂದಲೇ ವ್ಯಕ್ತವು ಪ್ರಥಮತಃ ಇಂದ್ರಿಯಗಳಿಗೆ ವಿಷಯ ಸಂಸರ್ಗವುಂಟಾಗಬೇಕು, ಅನಂತರ ಅದನ್ನು ಅನುಭವಿಸಬೇಕೆಂಬ ಉತ್ಕಟೇಚ್ಛೆಯುಂಟಾಗುತ್ತದೆ. ಸಙ್ಗವಿಲ್ಲದಿದ್ದರೆ ಕಾಮ ಉಂಟಾಗಲು ಅನುಕೂಲವಿಲ್ಲವು. ಋಷ್ಯಶೃಂಗರು ಸ್ತ್ರೀ ವ್ಯಕ್ತಿಯನ್ನು ಕಾಣದಿರುವವರೆಗೂ ಸ್ತ್ರೀ ಕಾಮನೆಯೇ ಅವರಿಗೆ ಇಲ್ಲವು; ಯಾವಾಗ ಅವರುಗಳ ಹಾಸವಿಲಾಸ ವಿಭ್ರಮಾದಿಗಳಿಗೆ ವಶರಾದರೋ ಆಗ ಅವರಲ್ಲಿ ಕಾಮನೆಯು ಉಂಟಾಯಿತು. ಹಾಗೆಯೇ ಮೊಗುವಿನ ಬಾಯಲ್ಲಿ ಕಲ್ಲುಸಕ್ಕರೆಯನು

**ಭಾ. ಪುರುಷೋ ಯಾಂ ದಶಾ ಮಾಪನ್ನೋ ವಿಷಯಾನಭುಕ್ತ್ವಾ ಸ್ಥಾತುಂ ನಶಕ್ನೋತಿ ಸ ಕಾಮಃ; ಕಾಮಾತ್ಕ್ರೋಧೋಭಿಜಾಯತೇ–ಕಾಮೇವರ್ತಮಾನೇ, ವಿಷಯೇ ಚಾ ಸನ್ನಿಹಿತೇ, ಸನ್ನಿಹಿತಾ ಪುರುಷಾ ಪ್ರತ್ಯೇ ಭಿರಸ್ಮದಿಷ್ಟಂ ವಿಹತಮತಿ ಕ್ರೋಧೋ ಭವತಿ. ಕ್ರೋಧಾದ್ಭವತಿ ಸಮ್ಮೋಹಃ–ಸಮ್ಮೋಹಃ ಕೃತ್ಯಾಕೃತ್ಯ ವಿವೇಕಶೂನ್ಯತಾ, ತಯಾ ಸರ್ವಂ ಕರೋತಿ. ತತಶ್ಚ ಪ್ರಾರಬ್ಧೇ ಇಂದ್ರಿಯ ಜಯಾದಿಕೇ ಪ್ರಯತ್ನೇಸ್ಮೃತಿಭ್ರಂಶೋ ಭವತಿ. ಸ್ಮೃತಿಭ್ರಂಶಾದ್ಬುದ್ಧಿನಾಶಃ- ಆತ್ಮಜ್ಞಾನೇ ಯೋ ವ್ಯವಸಾಯಃ ಕೃತಸ್ತಸ್ಯ ನಾಶಸ್ಸ್ಯಾತ್; ಬುದ್ಧಿನಾಶಾತ್ಪುನರಪಿ ಸಂಸಾರೇ ನಿಮಗ್ನೋ ವಿನಷ್ಟೋ ಭವತಿ ||೬೨-೬೩||**

ಇಡದೇ ಇರುವತನಕ ಅದರಲ್ಲಿ ಅದಕ್ಕೆ ಅಪೇಕ್ಷೆಯಿಲ್ಲವು. ಬಾಯಲ್ಲಿ ! ಇಟ್ಟನಂತರ ಅದಕ್ಕೆ ಕಲ್ಲು ಸಕ್ಕರೆ ಬೇಕೆಂಬ ಕಾಮನೆಯು ಉತ್ಪನ್ನವಾಗುತ್ತದೆ. ಆದುದರಿಂದ ಸಙ್ಗ ಕಾಮಗಳಿಗೆ ಕಾರಣಕಾರ್ಯರೂಪದಲ್ಲಿ ಭೇದವು. ಇದನ್ನೇ ಮುಂದೆ ವ್ಯಕ್ತಪಡಿಸುತ್ತಾರೆ:—**ಕಾಮೋ ನಾಮ ಸಙ್ಗಸ್ಯ ವಿಪಾಕದಶಾ** - ಇಲ್ಲಿ ಕಾಮವೆಂಬುದು ಸಙ್ಗದ ಪರಿಪಕ್ವದೆಶೆಯು **ಪುರುಷ**ನಾದವನು **ಯಾಂ ದಶಾಮಾಪನ್ನಃ**; ಯಾವ ಅವಸ್ಥೆಯನ್ನು ಹೊಂದಿದವನಾಗಿ— **ವಿಷಯಾನಭುಕ್ತ್ವಾ ಸ್ಥಾತುಂ** - ವಿಷಯಗಳನ್ನುಪಭೋಗಿಸದೆಯಿರಲು, **ನ ಶಕ್ನೋತಿ** - ಸಮರ್ಥನಾಗುವದಿಲ್ಲವೋ ಎಂದರೆ ಉಪಭೋಗಮಾಡಬೇಕೆಂಬ ಉತ್ಕಟೇಚ್ಛೆಯುಂಟಾಗುತ್ತದೋ, **ಸ ಕಾಮಃ** – ಆ ಅವಸ್ಥೆಗೆ ಕಾಮವೆಂದು ಹೆಸರು. ಕಾಮೋತ್ಪತ್ತಿಯುಂಟಾದರೆ ಅದನ್ನು ಹೇಗಾದರೂ ಮಾಡಿ ಅನುಭವಿಸಬೇಕೆಂಬ ಉತ್ಕಟೇಚ್ಛೆಯುಂಟಾಗುತ್ತದೆಂಬುದನ್ನು **"ಯಾಪ್ರೀತಿ ರವಿವೇಕಾನಾಂ ವಿಷಯೇಷ್ವ ನಿವರ್ತಿನಾಮ್"** (ವಿ. ಪು.       ) ಎಂಬುದರಿಂದ ಶ್ರೀ ಪರಾಶರರು ವ್ಯಕ್ತಪಡಿಸಿರುತ್ತಾರೆ. **ಕಾಮಾತ್ಕ್ರೋಧೋಭಿ ಜಾಯತೇ** ಎಂದರೆ, **ಕಾಮೇ ವರ್ತಮಾನೇ** - ಅಂತಹ ಉಪಭೋಗಿಸಬೇಕೆಂಬ ಉತ್ಕಟೇಚ್ಛೆಯು ಇದ್ದು, **ವಿಷಯೇಚಾ ಸನ್ನಿಹತೇ** - ಭೋಗ್ಯವಸ್ತುವಾದ ವಿಷಯವು ಮಾತ್ರ ಹತ್ತಿರವಿಲ್ಲದಿದ್ದರೆ, **ಸನ್ನಿಹಿತಾ ಪುರುಷಾ ಪ್ರತಿ** - ಹತ್ತಿರಿರುವ ಪುರುಷರನ್ನು ಕುರಿತು, **ಏಭಿರಸ್ಮದಿಷ್ಟಂ ವಿಹತಮಿತಿ** - ಇವರುಗಳಿಂದ ನಮ್ಮ ಕೋರಿಕೆಯು ನಷ್ಟಹೊಂದಿತೆಂದು, **ಕ್ರೋಧೋ ಭವತಿ**–ಸಿಟ್ಟು ಉಂಟಾಗುತ್ತದೆ. ಇಲ್ಲಿ ಕೋಪಾವಿಷ್ಟನಾದವನಿಗೆ ವಿವೇಕವಿಲ್ಲದಿರುವದರಿಂದ ಯಾರಮೇಲೆ ಕೋಪಿಸತಕ್ಕದ್ದೆಂಬ ವಿವೇಚನೆಯಿಲ್ಲದೆ, ಹತ್ತಿರಿರುವರ ಮೇಲೆಲ್ಲಾ ಕೋಪಿಸುವನೆಂಬ ಭಾವವು. **ಕ್ರೋಧಾದ್ಭವತಿ ಸಮ್ಮೋಹಃ** ಎಂಬಲ್ಲಿ **ಸಮ್ಮೋಹ** ವೆಂದರೆ, **ಕೃತ್ಯಾಕೃತ್ಯ ವಿವೇಕ ಶೂನ್ಯತಾ** - ಇದನ್ನು ಮಾಡಬಹುದು, ಇದನ್ನು ಮಾಡಕೂಡದು ಎಂಬ ವಿವೇಕವಿಲ್ಲದಿರುವಿಕೆಯು, **ತಯಾ** - ಅಂತಹ ವಿವೇಕವಿಲ್ಲದೇಯಿರುವದರಿಂದ **ಸರ್ವಂ ಕರೋತಿ** - **"ಕ್ರುದ್ಧಃ, ಪಾಪಂ ನಕುರ್ಯಾತ್ಕಃ ಕ್ರುದ್ಧೋ ಹನ್ಯಾದ್ಗುರೂನಪಿ ! ಕ್ರುದ್ಧಃ ಪರುಷಯಾ ವಾಚಾ ನರ ಸ್ಸಾಧೂನ ಧಿಕ್ಷಿಪೇತ್ । ವಾಚ್ಯಾವಾಚ್ಯಂ ಪ್ರಕುಪಿತೋ ನವಿಜಾನಾತಿ ಕರ್ಹಿಚಿತ್ । ನಾಕಾರ್ಯ ಮಸ್ತಿ ಕ್ರುದ್ಧಸ್ಯ ನಾವಾಚ್ಯಂ ವಿದ್ಯತೇಕ್ವಚಿತ್"** (ರಾ. ಸುಂದರ. ೫೫-೫೬) ಕೋಪಗೊಂಡವನು ಪಾಪಮಾಡದಿರುವನುಯಾ..? ಕೋಪಗೊಂಡವನು ಗುರುಗಳನ್ನೂ ಕೂಡ ಕೊಲ್ಲಬಹುದು, ಈ ಮಾತನ್ನು ಹೇಳಬಹುದು ಹೇಳಕೂಡದು ಎಂಬ ವಿವೇಕ ಸ್ವಲ್ಪವೂ ಆತನಿಗಿರುವದಿಲ್ಲವು, ಆತನು ಮಾಡದ ಕ್ರೂರ ಕೃತ್ಯವಾಗಲಿ!ಹೇಳದ.ಕ್ರೂರ ವಾಕ್ಯಗಲಿ ಇರುವದಿಲ್ಲವು."ಎಂದು ಹೇಳಿರುವಹಾಗೆ ಸರ್ವ ಪಾಪಕಾರ್ಯಗಳನ್ನೂ ಮಾಡುವನು, ಕೋಪೋತ್ಪತ್ತಿಗೆ ಎರಡು ಕಾರಣ

**ಮೂ. ರಾಗದ್ವೇಷ ವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದ ಮಧಿಗಚ್ಛತಿ ॥ ೬೪.**

---

ಗಳು ಹೇಳಲ್ಪಟ್ಟವು, **ಕಾಮೇ ವರ್ತಮಾನೇ** - ಕಾಮ ಉಂಟಾಗಿರಬೇಕು; **ವಿಷಯೇ ಚ ಅಸನ್ನಿಹಿತೇ**-ವಿಷಯವನ್ನು ಹೊಂದಲು ಪ್ರತಿಬಂಧಕದಿಂದ ಹತ್ತಿರವಿಲ್ಲದಿರಬೇಕು; ಆಗ ಕೋಪೋತ್ಪನವು. ಇದರಿಂದ **ಕಾಮಾತ್ಕ್ರೋಧೋಽಭಿಜಾಯತೇ** ಎಂಬುದೂ ಉಪನ್ಯಸ್ತವು; ಆದೂ ಅಲ್ಲದೆ ಆ ವಿಷಯೋಪಭೋಗಕ್ಕೆ ಅಡ್ಡಿಯಿಲ್ಲದಿದ್ದರೆ ಕ್ರೋಧವಿಲ್ಲವು. ಆದುದರಿಂದ ಕಾಮವಿದ್ದರೆ ಅದರೊಂದಿಗೆ ಕ್ರೋಧವೂ ಇದೆ ಎಂದು ಭಾವಿಸತಕ್ಕದ್ದಲ್ಲವು. ವಿಷಯೋಪಭೋಗಕ್ಕೆ ತಡೆಯುಂಟಾದರೆ ಕೋಪವುಂಟಾಗುತ್ತದೇ ವಿನಾ ಇಲ್ಲದಿದ್ದರೆಯಿಲ್ಲವು. ಇಂತಹ ಕೋಪವು ದೋಷಾವಹವು; ಇನ್ನೊಂದು ವಿಧವಾದ, ಸ್ವಾಮಿಯಾದವನು ಭೃತ್ಯನು ಮಾಡಿದ ಅವಿವೇಕ ಸಂದರ್ಭದಲ್ಲಿ ಅಭಿನಯಿಸುವ ಕೋಪವು, ದೋಷಯುಕ್ತವಾದುದಲ್ಲವು; ಅದು ಕಾಮದಿಂದ ಉತ್ಪನ್ನವಾದುದಲ್ಲವಾಗಿ ಇಲ್ಲಿ ಹೇಳಲ್ಪಡಲಿಲ್ಲವು. ಆದುದರಿಂದ ಕೋಪವು ಎರಡು ವಿಧವು ಒಂದು ದೋಷಾವಹವು, ಇನ್ನೊಂದು ಉಪಯುಕ್ತವಾದುದು. **ತತಶ್ಚ**-ಆ ಕಾರಣದಿಂದಲೇ, **ಪ್ರಾರಬ್ಧೇ**-ಪ್ರಾರಂಭಿಸಲ್ಪಟ್ಟ, **ಪ್ರಯತ್ನೇ** - ಇಂದ್ರಿಯ ಜಯಾದಿಗಳ ಪ್ರಯತ್ನದಲ್ಲಿ, **ಸ್ಮೃತಿಭ್ರಂಶೋ ಭವತಿ**-ಜ್ಞಾಪಕವಿಲ್ಲದೆ ಹೋಗುತ್ತದೆ, **ಸ್ಮೃತಿಭ್ರಂಶಾದ್ಬುದ್ಧಿನಾಶಃ** ಎಂದರೆ **ಆತ್ಮಜ್ಞಾನೇ ಯೋ ವ್ಯವಸಾಯಃ** – ಆತ್ಮಸ್ವರೂಪ ಜ್ಞಾನದಲ್ಲಿ ಯಾವ ನಿಶ್ಚಯ ಬುದ್ಧಿಯು, **ಕೃತಃ** - ಮಾಡಲ್ಪಟ್ಟಿತೋ **ತಸ್ಯ ನಾಶಸ್ಸ್ಯಾತ್** - ಅದಕ್ಕೆ ನಾಶ ಉಂಟಾಗುತ್ತದೆ; **ಬುದ್ಧಿನಾಶಾತ್ಪ್ರಣಶ್ಯತಿ** ಎಂದರೆ **ಬುದ್ಧಿನಾಶಾತ್ ಇತ್ಯಾದಿ** - ಬುದ್ಧಿ ನಾಶದಿಂದ ಪುನಃಪುನಃ ಸಂಸಾರದಲ್ಲೇ ಮುಳುಗುವದರಿಂದ ಆತ್ಮನು ನಷ್ಟವಾದವನಹಾಗೆ ಆಗುವನು. ಆತನು ನಿತ್ಯನು, ಆದುದರಿಂದ ಆತನಿಗೆ ನಾಶವಿಲ್ಲವು; ಆದುದರಿಂದ **ಪ್ರಣಶ್ಯತಿ** ಎಂದರೆ ಸ್ವಸ್ವರೂಪಾವಿರ್ಭಾವಕ್ಕೆ ಕುಂದಕಮಾಡಿಕೊಳ್ಳುವನೆಂಬ ಭಾವವು. ||೬೨-೬೩||

**ಮೂಲಕ್ಕೆ ಅರ್ಥವು**:—ಹಿಂದೆ ೬೧ನೆಯ ಶ್ಲೋಕದಲ್ಲಿ ಸಜ್ಗ್ರಹವಾಗಿ ಮನಸ್ಸನ್ನು ಶುಭಾಶ್ರಯಭೂತನಾದ ತನ್ನಲ್ಲಿಡುವದೇ ಪರಮ ಭೇಷಜವೆಂದೂ, ಆದರಿಂದ ಪರಸ್ಪರಾಧೀನಗಳಾದ ಇಂದ್ರಿಯಜಯ ಆತ್ಮದರ್ಶನವೆರಡೂ ಲಭಿಸುತ್ತದೆಂದೂ ಹೇಳಿ, ೬೨, ೬೩ನೆಯ ಶ್ಲೋಕಗಳಲ್ಲಿ ಹಾಗೆ ತನ್ನಲ್ಲಿ ಮನಸ್ಸನ್ನಿಡದವರಿಗೆ ಪರಂಪರಯಾ ಯಾವ ಅನರ್ಥಗಳು ಪ್ರಾಪ್ತವಾಗುತ್ತದೆಂದು ತಿಳಿಸಿದರು. ಈ ೬೪, ೬೫ನೆಯ ಶ್ಲೋಕಗಳಲ್ಲಾದರೋ ಹಾಗೆ ತನ್ನಲ್ಲೇ ಮನಸ್ಸನ್ನು ಇಟ್ಟದುದಾದರೆ ಉಂಟಾಗುವ ಶ್ರೇಯಸ್ಸುಗಳು ಯಾವುವು, ಅವು ಹೇಗೆ ಈತನಿಗೆ ಮೋಕ್ಷಕ್ಕೆ ಕಾರಣಭೂತಗಳಾಗುತ್ತವೆ ಎಂಬುದನ್ನುಪದೇಶಿಸುತ್ತಾರೆ. **ರಾಗದ್ವೇಷವಿಯುಕ್ತೈಃ**-ಪರಮಾತ್ಮನಲ್ಲಿಟ್ಟ ಮನಸ್ಸಿನಿಂದುಂಟಾದ ರಾಗದ್ವೇಷಗಳಿಲ್ಲದ, **ಆತ್ಮವಶ್ಯೈಃ** - ತನ್ನ ಮನಸ್ಸಿಗೆ ಅಧೀನವಾದ, **ಇಂದ್ರಿಯೈಃ** - ಇಂದ್ರಿಯಗಳಿಂದ, **ವಿಷಯಾನ್ ಚರನ್** - ವಿಷಯಗಳ ಮಧ್ಯೆ ಸುಮ್ಮನೇ ಚರಿಸುವನಾಗಿ ಎಂದರೆ ಅವುಗಳು ಭೋಗ್ಯವೆಂದೆಣಿಸದೆ ತಿರಸ್ಕಾರಭಾವದಿಂದಿರುವವನಾಗಿ, **ವಿಧೇಯಾತ್ಮಾ** - ಮನಸ್ಸನ್ನೂ ತನಗೆ ವಿಧೇಯವಾಗಿ ಮಾಡಿಕೊಂಡಿರುವವನು, **ಪ್ರಸಾದಂ** - ಮನಸ್ಸಿನ ಶಾಂತತೆಯನ್ನು, **ಅಧಿಗಚ್ಛತಿ** - ಹೊಂದುವನು, ಹೀಗೆ ಸರ್ವೇಶ್ವರನಲ್ಲಿಟ್ಟ ಮನಸ್ಸುಳ್ಳವನಿಗೆ, ಇಂದ್ರಿಯಗಳು ಮನಸ್ಸಿಗೆ ವಶವೆಂದೂ,ಮನಸ್ಸು ಆತನಿಗೆ ವಶವೆಂದೂ ಹೇಳಿ, ಹೀಗೆ ಆತನಿಗೆ ಮನಸ್ಸಿನ ಪ್ರಸನ್ನತೆಯು ಲಭಿಸುತ್ತದೆಂದು ಹೇಳಲ್ಪಟ್ಟಿತು. ಈ ಲೀಲಾವಿಭೂತಿಯಲ್ಲಿರುವತನಕ **ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ** ಎಂಬ ಶ್ರುತಿಯಲ್ಲಿ

**ಭಾ. ಉಕ್ತೇನ ಪ್ರಕಾರೇಣ ಮಯಿ ಸರ್ವೇಶ್ವರೇ ಚೇತಸ ಶ್ಶುಭಾಶ್ರಯಭೂತೇ ನ್ಯಸ್ತಮನಾ ನಿರ್ದಗ್ಧಾಶೇಷಕಲ್ಮಷತಯಾ, ರಾಗದ್ವೇಷ ವಿಯುಕ್ತೈ ರಾತ್ಮವಶ್ಯೈರಿಂದ್ರಿಯೈರ್ವಿಷಯಾಂಶ್ಚರನ್-ವಿಷಯಾಂ ಸ್ತಿರಸ್ಕೃತ್ಯ ವರ್ತಮಾನೋ, ವಿಧೇಯಾತ್ಮಾ-ವಿಧೇಯಮನಾಃ, ಪ್ರಸಾದಮಧಿಗಚ್ಛತಿ-ನಿರ್ಮಲಾಂತಃ ಕರಣೋ ಭವತೀತ್ಯರ್ಥಃ ||೬೪||**

---

ಹೇಳಿರುವ ಹಾಗೆ ಭೋಗ್ಯ ವಸ್ತುಗಳಾದ ವಿಷಯಗಳ ಸಂಬಂಧವು ತಪ್ಪಿದ್ದಲ್ಲವೆಂದೂ ಆದರೆ ಪದ್ಮಪತ್ರವು ನೀರಿನ ಮಧ್ಯದಲ್ಲಿದ್ದರೂ ನೀರನ್ನು ಕಂಡರೆ ಹೇಗೆ ಲಿಪ್ತವಾಗದೇ ಇರುತ್ತದೋ ಹಾಗೆ ಈ ಪ್ರಾಜ್ಞನೂ ಅವುಗಳಲ್ಲಿ ರಮಿಸದೆ ಅನಾದರದಿಂದಿರುವನು ಎಂಬುದು **ವಿಷಯಾನಿಂದ್ರಿಯೈಶ್ಚರನ್** ಎಂಬುವರಿಂದ ಸೂಚಿಸಲ್ಪಟ್ಟಿತು. **ಚರನ್** ಎಂಬುದರ ಧಾತ್ವರ್ಥದಿಂದಲೂ ಈ ಅನಾದರ ರೂಪಾರ್ಥವು ತೋರಿಬರುತ್ತದೆ. ತನಗೆ ಪ್ರಾಪ್ತವಾಗಿರುವ ಶರೀರವೂ ಇಂದ್ರಿಯಗಳೂ, ಮನಸ್ಸೂ, ಬುದ್ಧಿಯೂ ಎಲ್ಲವೂ ಅಲ್ಲಿನ ಭೋಗ್ಯವಸ್ತುಗಳುಪಭೋಗಕ್ಕಲ್ಲವೆಂದೂ, ಪರಮಾತ್ಮನನ್ನು ಹೊಂದುವ ಸಾಧನವನ್ನು ತಿಳಿದು ಅನುಷ್ಠಿಸುವದಕ್ಕಾಗಿ ಎಂದೂ ಭಾವಿಸಿ ವಿಷಯಗಳ ಮಧ್ಯೆ ಇದ್ದರೂ ಅವುಗಳನ್ನು ತಿರಸ್ಕರಿಸಿದವನಾಗಿ ಇಂದ್ರಿಯಗಳು ಮನಸ್ಸಿಗೆ ಅಧೀನವಾಗಿ, ಮನಸ್ಸು ತನಗಧೀನವಾಗಿ, ರಾಗದ್ವೇಷಾದಿಗಳಿಲ್ಲದಿದ್ದರೆ, ಅಂತವನು ಮನಸ್ಸಿನ ಪಾರಿಶುಧ್ಯವನ್ನು ಹೊಂದುವನು ಎಂದು ಹೇಳಲ್ಪಟ್ಟಿತು. ಹೀಗೆ ಮನಸ್ಸಿನ ಪ್ರಸನ್ನತೆಯುಂಟಾದರೆ, ಅದರಿಂದಾಗುವ ಪ್ರಯೋಜನವನ್ನು ಮುಂದಿನ ಶ್ಲೋಕದಿಂದ ಹೇಳುತ್ತಾರೆ. || ೬೪ ||

**ಭಾಷ್ಯಾರ್ಥವು :—ರಾಗದ್ವೇಷ ವಿಯುಕ್ತೈಃ** ಎಂಬುದಕ್ಕೆ ಕಾರಣವೇನೆಂಬುದನ್ನು ಮೊದಲು ತಿಳಿಸುತ್ತಾರೆ :—**ಉಕ್ತೇನ ಪ್ರಕಾರೇಣ**-ಹಿಂದೆ ೬೧ನೆಯ ಶ್ಲೋಕದಲ್ಲಿ ಹೇಳಿದಹಾಗೆ, **ಮಯಿ ಸರ್ವೇಶ್ವರೇ ಚೇತಸ ಶ್ಶುಭಾಶ್ರಯಭೂತೇ** - ಸರ್ವೇಶ್ವರನಾಗಿಯೂ, ಪಾಪನಿವಾರಕತ್ವ ಧ್ಯಾನವಿಷಯತ್ವಗಳನ್ನು ಹೊಂದಿದ ದಿವ್ಯಮಙ್ಗಳವಿಗ್ರಹವುಳ್ಳ ನನ್ನಲ್ಲಿ, **ನ್ಯಸ್ತಮನಾಃ**- ಇಡಲ್ಪಟ್ಟ ಮನಸ್ಸುಳ್ಳವನು, **ನಿರ್ದಗ್ಧಾಶೇಷ ಕಲ್ಮಷತಯಾ** - ಭಸ್ಮೀಭೂತವಾದ ಸಮಸ್ತ ಪಾಪಗಳುಳ್ಳೀಣವರಿಂದ, **ರಾಗದ್ವೇಷವಿಯುಕ್ತೈಃ** - ರಾಗದ್ವೇಷಗಳಿಂದ ಬಿಡಲ್ಪಟ್ಟ, **ಆತ್ಮವಶ್ಯೈಃ** - ಮನಸ್ಸಿಗೆ ವಿಧೇಯಗಳಾದ, **ಇಂದ್ರಿಯೈಃ** ಇಂದ್ರಿಯಗಳಿಂದ, **ವಿಷಯಾನ್** – ವಿಷಯಗಳನ್ನು, **ಚರನ್** ಎಂದರೆ **ತಿರಸ್ಕೃತ್ಯ** - ಸಂಬಂಧವಿದ್ದರೂ ಅವುಗಳಲ್ಲಿ ಲಿಪ್ತನಾಗದೆ ಅವುಗಳನ್ನು ತಿರಸ್ಕರಿಸಿ ಎಂದರೆ ಅನಾದರಮಾಡಿ, **ವರ್ತಮಾನಃ** - ಇರುವವನಾಗಿಯೂ, **ವಿಧೇಯಾತ್ಮಾ** ಎಂದರೆ **ವಿಧೇಯ ಮನಾಃ** - ತನಗೆ ವಶ್ಯವಾದ ಮನಸ್ಸುಳ್ಳವನಾಗಿ ಇರುವವನು, **ಪ್ರಸಾದ ಮಧಿಗಚ್ಛತಿ** ಎಂದರೆ **ನಿರ್ಮಲಾಂತಃಕರಣೋ ಭವತಿ** - ಪರಿಶುದ್ಧ ಮನಸ್ಕನಾಗುವನು, **ಇತ್ಯರ್ಥಃ** - ಎಂಬ ತಾತ್ಪರ್ಯವು. ರಾಗದ್ವೇಷ ಉಂಟಾಗುವದಕ್ಕಾಗಲಿ, ಅವುಗಳಿಂದ ವಿಮುಕ್ತತೆಯುಂಟಾಗುವದಕ್ಕಾಗಲಿ, ಮನಸ್ಸೇ ಮುಖ್ಯವಾದುದರಿಂದ, ಈ ಶ್ಲೋಕದಲ್ಲಿ ಮನಸ್ಸು ಇಂದ್ರಿಯಗಳನ್ನು ವಶಮಾಡಿಕೊಳ್ಳಬೇಕೆಂದೂ, **ಮನಸ್ಸು** ಈತನಿಗೆ ವಿಧೇಯವಾಗಿಯೂ ಇರಬೇಕೆಂದೂ ಹೇಳಲ್ಪಟ್ಟಿತು. ಅದರಿಂದ ಬುದ್ಧಿಯು ವಿವೇಕವುಳ್ಳ ಸಾರಥಿಯಾಗಿ, ಮನಸ್ಸೆಂಬ ಲಗಾಮುನಿಂದ, ಇಂದ್ರಿಯಗಳೆಂಬ ದುಷ್ಟಾಶ್ವಗಳನ್ನು ತನ್ನ ವಶಮಾಡಿಕೊಂಡಿವೆ ಎಂಬರ್ಥವುಳ್ಳ ಶ್ರುತ್ಯರ್ಥವು ಇಲ್ಲಿ ಸೂಚಿತವು. ಇಂದ್ರಿಯಗಳು ತಮ್ಮ ತಮ್ಮ ಕೆಲಸವನ್ನು ಮಾಡದೇ ಇರಲಾರವು. ಊಟ, ಧನ, ವಸನಾದಿಗಳೆಲ್ಲವೂ ಈತನಿಗೆ ಬೇಕು; ಪ್ರಜೋತ್ಪತ್ತಿಗೆ ಗೃಹಸ್ಥಾಶ್ರಮಿಯಾದರೆ ದಾರ ಪುತ್ರ ಗೃಹಾದಿಗಳ ಸಂಬಂಧವೂ ತಪ್ಪಿದ್ದಲ್ಲವು. ಹೀಗೆ ಇವುಗಳ ಮಧ್ಯೆ

**ಮೂ. ಪ್ರಸಾದೇ ಸರ್ವ ದುಃಖಾನಾಂ ಹಾನಿರಸ್ಯೋಪ ಜಾಯತೇ |**
**ಪ್ರಸನ್ನ ಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ||** ೬೫.

**ಭಾ. ಅಸ್ಯ ಪುರುಷಸ್ಯ ಮನಃಪ್ರಸಾದೇ ಸತಿ, ಪ್ರಕೃತಿ ಸಂಸರ್ಗ ಪ್ರಯುಕ್ತ ಸರ್ವ್ವದುಃಖಾನಾಂ ಹಾನಿ ರುಪಜಾಯತೇ. ಪ್ರಸನ್ನ ಚೇತಸಃ ಆತ್ಮಾವಲೋಕನ ವಿರೋಧಿ ದೋಷ ರಹಿತ**

ಈತನಿದ್ದರೂ, ನೀರಿನ ಮಧ್ಯೆಯಿರುವ ಪದ್ಮಪತ್ರದಹಾಗೆ ಈತನು ಇರತಕ್ಕದ್ದೆಂದು ಸೂಚಿಸುವ ದಕ್ಕಾಗಿ **ವಿಷಯಾನಿಂದ್ರಿಯೈಶ್ಚರ್** ಎಂಬ ಪ್ರಯೋಗಕ್ಕೆ **ಇಂದ್ರಿಯೈಃ ವಿಷಯಾ್** ತಿರ ಸ್ಕೃತ್ಯ ವರ್ತಮಾನಃ ಎಂಬ ಭಾಷ್ಯವು ; ಭೋಗ್ಯ ವಸ್ತುಗಳ ಮಧ್ಯೆ ಈ ಭೋಕ್ತಾ ಇದ್ದರೂ ನಿರ್ಲಿಪ್ತನಾಗಿರಬೇಕು ಎಂಬುದು ಬೋಧಿಸಲ್ಪಟ್ಟಿತು. ಮನಸ್ಸನ್ನು ತನ್ನ ವಶಮಾಡಿಕೊಳ್ಳಬೇಕು ಎಂಬುದು **ವಿಧೇಯಾತ್ಮಾ** ಎಂಬುದರಿಂದ ಹೇಳಲ್ಪಟ್ಟಿತು. ಶಾಸ್ತ್ರಜನ್ಯಜ್ಞಾನ ವಿವೇಕೋತ್ಥಜ್ಞಾನ ಗಳ ಮೂಲಕ ಆತ್ಮನು ಮನಸ್ಸನ್ನು ವಶಮಾಡಿಕೊಳ್ಳಬೇಕೆಂಬ ತಾತ್ಪರ್ಯವು. ಮನಸ್ಸು ಅನ್ಯಥಾ ಪ್ರವರ್ತಿಸಿದರೆ, ತನ್ನ ಧರ್ಮ ಭೂತಜ್ಞಾನ ದ್ವಾರಾ ಅದನ್ನು ನಿಗ್ರಹಿಸುವ ಶಕ್ತಿ ಇರಬೇಕೆಂಬ ಭಾವವು. ಹೀಗೆ ವಿವೇಕದ ಬಲದಿಂದ ಮನಸ್ಸನ್ನು ಸ್ವಾಧೀನ ಪಡಿಸಿಕೊಂಡರೆ ಮನಶ್ಶಾಂತಿಯು ದೊರೆಯುತ್ತದೆ ಎಂದು **ಪ್ರಸಾದ ಮಧಿಗಚ್ಛತಿ** ಎಂದು ಹೇಳಲ್ಪಟ್ಟಿತು. ಆಗ ಮನಸ್ಸಿನ ಎಂಟು ಮಲಗಳೂ ಕಳೆದು ಹೋಗುವದರಿಂದ **ನಿರ್ಮಲಾಂತಃಕರಣೋ ಭವತಿ** ಎಂಬ ಭಾಷ್ಯವು. **ಚರ್** ಎಂಬುದಕ್ಕೆ ತಿರಸ್ಕೃತ್ಯ ವರ್ತಮಾನಃ ಎಂಬರ್ಥವು ಹೇಗೆ? ಎಂದರೆ ಧಾತುವು ಗತ್ಯರ್ಥಕವಾದುದರಿಂದ ಬರೀ ಆಕ್ರಮಣರೂಪಗತ್ಯರ್ಥದಿಂದಲಾಗಲಿ ಭಕ್ಷಣಾರ್ಥದಿಂದ ಲಾಗಲಿ ತಿರಸ್ಕಾರಾರ್ಥವು ವಿವಕ್ಷಿತವು. ಪ್ರಸಾದ ಶಬ್ದಕ್ಕೆ ಮನೋ ನೈರ್ಮಲ್ಯವೆಂಬರ್ಥವು ಹೇಗೆ ಎಂದರೆ, **ವಿಧೇಯಾತ್ಮಾ** ಆದುದರಿಂದ ಮನಸ್ಸು ಪ್ರಸನ್ನತೆಯನ್ನು ಹೊಂದುತ್ತದೆ ಎಂಬ ಭಾವದಿಂದ ಹಾಗೆ ವ್ಯಾಖ್ಯಾನವು. ಮುಂದಿನ ಶ್ಲೋಕದಲ್ಲಿ, ಪ್ರಸಾದವಾಗಲಿಕ್ಕಾಗಿ ಸರ್ವದುಃಖಗಳ ಹಾನಿಯು ಉಂಟಾಗುತ್ತದೆ ಎಂದು ಹೇಳಿರುವದರಿಂದ ಪ್ರಸಾದವು ಮನಸ್ಸಿನ ಸಂಬಂಧವಾದು ದೆಂಬುದು ವ್ಯಕ್ತವು. ಅದೂ ಅಲ್ಲದೆ **ಪ್ರಸನ್ನ ಚೇತಸಃ** ಎಂಬ ಪ್ರಯೋಗವು ಮೂಲದಲ್ಲೇ ಇರುತ್ತದೆ.

**ಮೂಲಕ್ಕೆ ಅರ್ಥವು** :—ಹೀಗೆ ಚಿತ್ತ ಸ್ವಾಸ್ಥ್ಯದಿಂದುಂಟಾಗುವ ಫಲವೇನೆಂಬುದು ಹೇಳ ಲ್ಪಡುತ್ತದೆ. **ಅಸ್ಯ** - ಈ ಮನುಷ್ಯನಿಗೆ, **ಪ್ರಸಾದೇ** - ಮನಸ್ಸು ನಿರ್ಮಲವಾಗುತ್ತಿರಲಕ್ಕಾಗಿ, **ಸರ್ವ್ವ ದುಃಖಾನಾಂ** - ಸಮಸ್ತ ದುಃಖಗಳ, **ಹಾನಿಃ** - ನಾಶವು, **ಉಪಜಾಯತೇ** - ಉಂಟಾಗು ತ್ತದೆ. ಇದಕ್ಕೆ ಕಾರಣವೇನೆಂದರೆ ಉತ್ತರಾರ್ಧದಿಂದ ಹೇಳುತ್ತಾರೆ :—ಹಿ-ಯಾವ ಕಾರಣದಿಂದ **ಪ್ರಸನ್ನ ಚೇತಸಃ** - ನಿರ್ಮಲಾಂತಃಕರಣನಾದವನಿಗೆ, **ಆಶು** - ಕ್ಷಿಪ್ರದಲ್ಲೇ, **ಬುದ್ಧಿಃ** - ಆತ್ಮವಿಷ ಯಕ ವಿವೇಕ ಜ್ಞಾನವು, **ಪರ್ಯವತಿಷ್ಠತೇ** - ಸುತ್ತಲೂ ಇರುತ್ತದೋ, ಎಂದರೆ ಪ್ರಕಾಶಿಸು ತ್ತದೋ, ಅದರಿಂದ ಸರ್ವ್ವ ದುಃಖಗಳ ನಾಶವು ಉಂಟಾಗುತ್ತದೆಂಬ ಭಾವವು. ಸರ್ವದುಃಖ ಗಳೂ ತೊಲಗಬೇಕಾದರೆ ಈತನಿಗೆ ನಿರ್ಮಲಾಂತಃಕರಣವೂ ಅದರಿಂದ ಆತ್ಮವಿಷಯಕ ವಿವೇಕ ಜ್ಞಾನವೂ ಎರಡೂ ಆವಶ್ಯಕವೆಂಬ ಭಾವವು-

**ಭಾಷ್ಯಾರ್ಥವು** :—**ಅಸ್ಯ ಪುರುಷಸ್ಯ** - ಸರ್ವೇಶ್ವರನಲ್ಲಿ ಮನಸ್ಸನ್ನಿಟ್ಟ ಈ ಪುರುಷನಿಗೆ, **ಮನಃಪ್ರಸಾದೇಸತಿ**-ಮನಸ್ಸು ನಿರ್ಮಲವಾಗಲಾಗಿ, **ಪ್ರಕೃತಿ ಸಂಸರ್ಗಪ್ರಯುಕ್ತ ಸರ್ವ್ವ ದುಃಖಾ ನಾಮ್** - ಪ್ರಕೃತಿಸಂಬಂಧಮೂಲಕವಾಗಿ, ಪ್ರಾಪ್ತವಾಗುವ ಸಮಸ್ತ ದುಃಖಗಳ, **ಹಾನಿರುಪಜಾ ಯತೇ** - ನಾಶವುಂಟಾಗುತ್ತದೆ. **ಪ್ರಸನ್ನಚೇತಸಃ** ಎಂದರೆ **ಆತ್ಮಾವಲೋಕನ ವಿರೋಧಿ**

**ಭಾ.** ಮನಸಃ ತದಾನೀಮೇವಹಿ, ವಿವಿಕ್ತಾತ್ಮವಿಷಯಾ ಬುದ್ಧಿಃ ಪರ್ಯವತಿಷ್ಠತೇ. ಅತಃ ಮನಃ ಪ್ರಸಾದೇ ಸರ್ವದುಃಖಾನಾಂ ಹಾನಿರ್ಭವತ್ಯೇವ ||೬೫||

---

**ಮೂ.** ನಾಸ್ತಿ ಬುದ್ಧಿ ರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ |
ನ ಚಾ ಭಾವಯತಃ ಶಾನ್ತಿ ರಶಾನ್ತಸ್ಯ ಕುತಃಸುಖಂ? || ೬೬.

---

**ದೋಷರಹಿತ ಮನಸಃ** - ಆತ್ಮಾವಲೋಕನಕ್ಕೆ ವಿರೋಧಿಗಳಾದ ದೋಷಗಳಿಲ್ಲದ ಮನಸ್ಸುಳ್ಳ ಈತನಿಗೆ, **ತದಾನೀಮೇವ** - ಇದು ಆಶು ಎಂಬುದರ ವ್ಯಾಖ್ಯಾನವು, ಆಗಲೇನೆ ಎಂದರೆ ಒಡನೆಯೇ, **ವಿವಿಕ್ತಾತ್ಮ ವಿಷಯಾ ಬುದ್ಧಿಃ** - ಆತ್ಮಸ್ವರೂಪ ವಿವೇಚನೆಯುಳ್ಳ ಎಂದರೆ ಪ್ರಕೃತಿಗಿಂತ ವಿಲಕ್ಷಣವಾದ ಸ್ವರೂಪ ಉಳ್ಳವನೆಂಬ ಬುದ್ಧಿಯು, **ಪರ್ಯವತಿಷ್ಠತೇ** - ಸುತ್ತಲೂ ಇರುತ್ತದೆ ಎಂದರೆ ವಿಕಸಿತವಾಗುತ್ತದೆ, **ಅತಃ** - ಆ ಕಾರಣದಿಂದ, **ಮನಃ ಪ್ರಸಾದೇ** - ಮನಸ್ಸು ನಿರ್ಮಲವಾಗಲಾಗಿ, **ಸರ್ವ ದುಃಖಾನಾಂ ಹಾನಿರ್ಭವತ್ಯೇವ** - ಸಮಸ್ತ ದುಃಖಗಳ ಹಾನಿಯು ಆಗಲೇಬೇಕು, ಯಾವಾಗ ಮನಸ್ಸು ನಿರ್ಮಲವಾಗುತ್ತದೋ ಆಗ ಪ್ರಕೃತಿಗಿಂತ ಆತ್ಮಾ ವಿಲಕ್ಷಣನೆಂಬ ಬುದ್ಧಿಯುಂಟಾಗುತ್ತದೆ ಎಂದೂ, ಆ ಕಾರಣದಿಂದ ಸಮಸ್ತ ದುಃಖನಿವಾರಣವು ಆಗುತ್ತದೆಂದೂ ಹೇಳಲ್ಪಟ್ಟಿತು. ಏಕೆಂದರೆ ದುಃಖ ಧರ್ಮವು ಪ್ರಕೃತಿಗೆ ಸಂಬಂಧಪಟ್ಟದುದೇ ವಿನಾ ಆತ್ಮನಿಗೆ ಸಂಬಂಧಿಸಿದುದಲ್ಲವು. ವಿಷ್ಣು ಪುರಾಣದಲ್ಲಿ (೬. ೭. ೨೨) ದುಃಖಾಜ್ಞಾನ ಮಲಾ ಧರ್ಮಾ ಪ್ರಕೃತೇಸ್ತೇ ನ ಚಾತ್ಮನಃ | ನಿರ್ವಾಣ ಮಯ ಏವಾಯ ಮಾತ್ಮಾ ಜ್ಞಾನ ಮಯೋಽಮಲಃ || ಎಂದರೆ "ದುಃಖವೂ, ಅಜ್ಞಾನವೂ, ಮಲಗಳೂ ಇವೆಲ್ಲವೂ ಪ್ರಕೃತಿಯ ಧರ್ಮಗಳು,ಆತ್ಮಾವಿಗೆ ಸೇರಿದ ಧರ್ಮಗಳಲ್ಲವು, ಈ ಆತ್ಮನಾದರೋ ಆನಂದಮಯನು, ಜ್ಞಾನ ಮಯನು, ಅಮಲನು ಎಂದರೆ ಪರಿಶುದ್ಧನು" ಎಂದು ಹೇಳಲ್ಪಟ್ಟಿರುತ್ತದೆ.

**ಅವತಾರಿಕೆ :**—ಸರ್ವೇಶ್ವರನಲ್ಲಿ ಮನಸ್ಸಿಟ್ಟವನಿಗೆ ಹಿಂದಿನ ಶ್ಲೋಕದಲ್ಲಿ ವಿವಿಕ್ತಾತ್ಮ ವಿಷಯವಾದ ಬುದ್ಧಿಯು ಉಂಟಾಗುವದತ್ತದೆಂದು ಹೇಳಲ್ಪಟ್ಟಿತು. ಹಾಗೆ ಮನಸ್ಸನ್ನಿಡದವನಿಗೆ ಅಂತಹ ಬುದ್ಧಿಯು ಉಂಟಾಗದೇ ಇರುವದರಿಂದ, ಅಂತವನಿಗೆ ಮೋಕ್ಷಸುಖವು ದೊರಕದು ಎಂದು ಉಪದೇಶಿಸುತ್ತಾರೆ.

**ಮೂಲಕ್ಕೆ ಅರ್ಥವು :**—**ಅಯುಕ್ತಸ್ಯ** - ಪರಮಾತ್ಮನಲ್ಲಿ ಮನಸ್ಸಿಡದೆ ಸ್ವತಃ ಇಂದ್ರಿಯ ಜಯಕ್ಕಾಗಿ ಪ್ರವರ್ತಿಸಿದವನಿಗೆ, **ಬುದ್ಧಿಃ** - ಪ್ರಕೃತಿಗಿಂತ ಆತ್ಮಾ ವಿಲಕ್ಷಣನೆಂಬ ಬುದ್ಧಿಯು, **ನಾಸ್ತಿ** - ಉಂಟಾಗುವದಿಲ್ಲವು. ಅಂತಹ **ಅಯುಕ್ತಸ್ಯ** - ಹಾಗೆ ಪರಮಾತ್ಮನಲ್ಲಿ ಮನಸ್ಸನ್ನಿಡದವನಿಗೆ ಆ ಕಾರಣದಿಂದಲೇ, **ಭಾವನಾಚ** - ಆತ್ಮ ದರ್ಶನವೂ, **ನ** - ಇಲ್ಲವು ; **ಅಭಾವಯತಃ**- ಹೀಗೆ ಆತ್ಮದರ್ಶನವಿಲ್ಲದವನಿಗೆ, **ಶಾನ್ತಿಶ್ಚ** - ವಿಷಯಾನುರಾಗದ ಶಾಂತಿಯೂ ಕೂಡ ಇಲ್ಲವು ; **ಅಶಾನ್ತಸ್ಯ** - ವಿಷಯಾನುರಾಗ ಶಾಂತಿಯಿಲ್ಲದವನಿಗೆ, **ಸುಖಂ** – ನಿರತಿಶಯ ಸುಖರೂಪ ಮೋಕ್ಷವು **ಕುತಃ** - ಎಲ್ಲಿಯದು? ಪರಮಾತ್ಮನಲ್ಲಿ ಮನಸ್ಸಿಡದೆ ಯತ್ನಿಸುವನಿಗೆ ಆತ್ಮವಿಷಯಕ ಸಾಕ್ಷಾತ್ಕಾರವೂ ಇಲ್ಲವು, ವಿಷಯಸ್ಪೃಹಾನಿವೃತ್ತಿಯೂ ಇಲ್ಲವು, ಇವು ಯಾವಾಗ ಇಲ್ಲವೋ ಮೋಕ್ಷಸುಖವು ಇಲ್ಲವೇಯಿಲ್ಲವೆಂದು ಹೇಳುವ ಅವಶ್ಯಕತೆಯೇ ಇಲ್ಲವು ಎಂಬ ಭಾವವು. ಈ ಆತ್ಮದರ್ಶನ ಇಂದ್ರಿಯ ಜಯಗಳು ಪರಸ್ಪರ ಸಹಾಯಕಗಳೆಂದು ಹೇಳಲ್ಪಟ್ಟಿತು. ಇವೆರಡೂ ಉಂಟಾಗಬೇಕಾದರೆ ಪರಮಾತ್ಮನಲ್ಲಿ ಮನಸ್ಸನ್ನು ಇಟ್ಟಿರಬೇಕು. ಹಾಗೆ ಇಡದಿದ್ದರೆ ಆತ್ಮವಿಷಯಕ ಜ್ಞಾನವೂ, ತನ್ಮೂಲಕ ಆತ್ಮ ಸಾಕ್ಷಾತ್ಕಾರವೂ, ತನ್ಮೂಲಕ ವಿಷಯಸ್ಪೃಹೆ

ಭಾ. ಮಯಿ ಸನ್ನ್ಯಸ್ತಮನೋ ರಹಿತಸ್ಯ ಸ್ವಯತ್ನೇ ನೇಂದ್ರಿಯ ನಿಯಮನೇ ಪ್ರವೃತ್ತಸ್ಯ ಕದಾಚಿದಪಿ ವಿವಿಕ್ತಾತ್ಮ ವಿಷಯಾ ಬುದ್ಧಿ ರ್ನ ಸೇತ್ಸ್ಯತಿ. ಅತ ಏವ ತಸ್ಯ ತದ್ಭಾವನಾ ಚ ನ ಸಂಭವತಿ. ವಿವಿಕ್ತಾತ್ಮಾನ ಮಭಾವಯತೋ ವಿಷಯ ಸ್ಪೃಹಾ ಶಾನ್ತಿ

---

ಯಿಲ್ಲದಿರುವ ಮನಶ್ಶಾಂತಿಯೂ ಇಲ್ಲವೆಂದು ಹೇಳಿ, ಯಾವಾಗ ಇವುಗಳು ಯಾವುವೂ ಇಲ್ಲವಾದರೆ ಮೋಕ್ಷಸುಖವು ಇಲ್ಲವೇಯಿಲ್ಲವೆಂದು ಹೇಳುವದು ಆವಶ್ಯಕವೇ ಇಲ್ಲವೆಂಬ ಭಾವವು. ಹಾಗೆ ಪರಮಾತ್ಮನನ್ನು ಏತಕ್ಕೆ ಸ್ಮರಿಸಬೇಕೆಂದರೆ, ಸರ್ವಪಾಪಗಳ ಪರಿಹಾರ ರೂಪದಲ್ಲಿ ಸರ್ವೋತ್ಕೃಷ್ಟ ಪ್ರಾಯಶ್ಚಿತ್ತವು; ಈ ಸಂದರ್ಭದಲ್ಲಿ ಪ್ರಾಯಶ್ಚಿತ್ತಾನ್ಯಶೇಷಾಣಿ ತಪಃಕರ್ಮಾತ್ಮಕಾನಿವೈ । ಯಾನಿತೇಷಾಮಶೇಷಾಣಾಂ ಕೃಷ್ಣಾನುಸ್ಮರಣಂ ಪರಮ್ । ಕೃತೇ ಪಾಪೇನುತಾಪೋವೈ ಯಸ್ಯ ಪುಂಸಃ ಪ್ರಜಾಯತೇ । ಪ್ರಾಯಶ್ಚಿತ್ತಂತು ತಸ್ಯೈಕಂ ಹರಿ ಸಂಸ್ಮರಣಂ ಪರಮ್ । ಪ್ರಾತರ್ನಿಶಿ ತಥಾ ಸಂಧ್ಯಾ ಮಧ್ಯಾಹ್ನಾದಿಷು ಸಂಸ್ಮರನ್ । ನಾರಾಯಣ ಮವಾಪ್ನೋತಿ ಸದ್ಯಃ ಪಾಪಕ್ಷಯಾನ್ನರಃ ॥ ವಿಷ್ಣು ಸಂಸ್ಮರಣಾತ್ ಕ್ಷೀಣ ಸಮಸ್ತ ಕ್ಲೇಶ ಸಂಚಯಃ । (ವಿ. ಪು. ೨. ೬. ೩೯. ೪೦. ೪೧.) ಹೀಗೆ ಹರಿ ಸಂಸ್ಮರಣವು ಸರ್ವಪಾಪಗಳಿಗೂ ಪ್ರಾಯಶ್ಚಿತ್ತವಾಗಿ ಮನಸ್ಸು ವಿಷಯೋಪ ಭೋಗಗಳಲ್ಲಿ ಪ್ರವರ್ತಿಸುವದಿಲ್ಲವು. ಹಾಗೆಯೇ "ಕ್ಷೇತ್ರಜ್ಞಸ್ಯೇಶ್ವರ ಜ್ಞಾನಾದ್ವಿಶುದ್ಧಿಃ ಪರಮಾ ಮತಾ" ಎಂಬಲ್ಲಿ ಈಶ್ವರ ಜ್ಞಾನದಿಂದ ಮನಸ್ಸು ಇಂದ್ರಿಯಗಳ ಪವಿತ್ರತೆಯಿಂದ, ಕ್ಷೇತ್ರಜ್ಞನಿಗೆ ವಿಶುದ್ಧಿಯುಂಟೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಇನ್ನೊಂದು ಕಡೆಯಲ್ಲೂ "ಯಥಾಗ್ನಿ ಸಂಗಾತ್ಕನಕ ಮಪದೋಷಂ ಪ್ರಜಾಯತೇ । ಸಂಕ್ಷಿಷ್ಟಂ ವಾಸುದೇವೇನ ಮನುಷ್ಯಾಣಾಂ ತಥಾಮನಃ ॥ ಅಗ್ನಿ ಸಂಬಂಧದಿಂದ ಭಂಗಾರವು ಹೇಗೆ ತನ್ನ ದೋಷವನ್ನು ಕಳೆದು ಕೊಳ್ಳುತ್ತದೋ, ಹಾಗೆಯೇ ಮನಸ್ಸು ಪರಮಾತ್ಮ ಸಂಬಂಧದಿಂದ ಪರಿಶುದ್ಧವಾಗುತ್ತದೆ. ಮತ್ತು "ಯಥಾಗ್ನಿರುದ್ಧತ ಶಿಖಃ ಕಕ್ಷಂ ದಹತಿಸಾನಿಲಃ । ತಥಾ ಚಿತ್ತಸ್ಥಿತೋ ವಿಷ್ಣುಃ ಪ್ರಾಣಿನಾಂ ಸರ್ವ ಕಿಲ್ಬಿಷಮ್ ॥ ಅಗ್ನಿಯು ಒಣಗಿದ ತರಗನ್ನು ವಾಯುವಿನಿಂದ ಸೇರಿ ಹೇಗೆ ಸುಟ್ಟು ಬಿಡುತ್ತಾನೋ, ಹಾಗೆಯೇ ಪ್ರಾಣಿಗಳ ಮನಸ್ಸಿನಲ್ಲಿರುವ ವಿಷ್ಣುವು ಪ್ರಾಣಿಗಳ ಸರ್ವ ಪಾಪಗಳನ್ನೂ ದಹಿಸಿ ಬಿಡುತ್ತಾನೆ," ಹೀಗೆಲ್ಲಾ ಹೇಳಿರುವದರಿಂದಲೇ "ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ" ಎಂದು ಇಲ್ಲಿ ವ್ಯತಿರೇಕ ರೂಪದಲ್ಲಿ ಹೇಳಲ್ಪಟ್ಟಿರುತ್ತದೆ. ಇದರಿಂದ ಮನಸ್ಸು ಪರಮಾತ್ಮನಲ್ಲಿ ಯುಕ್ತತೆಯನ್ನು ಹೊಂದಿರುವದಕ್ಕೆ ಪ್ರಾಧಾನ್ಯವು ಅಯುಕ್ತಸ್ಯ ಎಂದು ಎರಡುಸಲ ವ್ಯತಿರೇಕರೂಪದಲ್ಲಿ ಹೇಳಿರುವದರಿಂದ ವ್ಯಕ್ತವು.

ಭಾಷ್ಯಾರ್ಥವು :—ಮಯಿಸನ್ನ್ಯಸ್ತ ಮನೋರಹಿತಸ್ಯ-ನನ್ನಲ್ಲಿ ಇಡಲ್ಪಟ್ಟ ಮನಸ್ಸಿಲ್ಲದ, ಸ್ವಯತ್ನೇನೇಂದ್ರಿಯ ನಿಯಮನೇ ಪ್ರವೃತ್ತಸ್ಯ - ತಾನೇ ಸ್ವತಂತ್ರನಾಗಿ ಇಂದ್ರಿಯ ನಿಯಮನದಲ್ಲಿ ಪ್ರವೃತ್ತಿಸಿದವನಿಗೆ, ಕದಾಚಿದಪಿ-ಎಂದಿಗೂ ಎಂದರೆ ಆತನು ನನ್ನಲ್ಲಿ ಮನಸ್ಸನ್ನಿಡುವತನಕ ಎಂಬ ಭಾವವು, ವಿವಿಕ್ತಾತ್ಮ ವಿಷಯಾಬುದ್ಧಿಃ-ಪ್ರಕೃತಿಗಿಂತ ವಿಲಕ್ಷಣನು ಆತ್ಮನು ಎಂಬ ವಿವೇಕವುಳ್ಳ ಬುದ್ಧಿಯು, ನ ಸೇತ್ಸ್ಯತಿ - ಸಿದ್ಧಿಸುವದಿಲ್ಲವು, ಇಲ್ಲಿ ಅಯುಕ್ತಸ್ಯ ಎಂಬುದಕ್ಕೆ ಮಯಿ ಸನ್ನ್ಯಸ್ತ ಮನೋರಹಿತಸ್ಯ - ಎಂಬ ವ್ಯಾಖ್ಯಾನ ಹೇಗೆ ಎಂದಾಕ್ಷೇಪಿಸಿದರೆ ಹಿಂದೆ ೬೧ನೆಯ ಶ್ಲೋಕದಲ್ಲಿರುವ ಯುಕ್ತ ಆಸೀತಮತ್ಪರಃ ಎಂದು ಅನ್ವಯ ರೀತಿಯಲ್ಲಿ ಹೇಳಿದುದನ್ನನುಸರಿಸಿ ಹಾಗೆ ವ್ಯಾಖ್ಯಾನವು. ಇಲ್ಲಿ ವ್ಯತಿರೇಕ ರೂಪದಲ್ಲೇ ಆ ಅಭಿಪ್ರಾಯವೇ ಉಪಪಾದಿತವು, ಸ್ವಯತ್ನೇನೇನ್ದ್ರಿಯ ನಿಯಮನೇ ಪ್ರವೃತ್ತಸ್ಯ ಎಂದು ಹೇಳಿರುವದು ಹಿಂದೆ ೬೦ನೆಯ ಶ್ಲೋಕವಾದ "ಯತತೋಹ್ಯಪಿ" ಎಂಬ ಶ್ಲೋಕದ ಉಪಪಾದನವೆಂದು ಭಾವಿಸತಕ್ಕದ್ದು. ಅತ ಏವ-

ಭಾ. ರ್ನ ಭವತಿ. ಅಶಾಂತಸ್ಯ – ವಿಷಯಸ್ಪೃಹಾಯುಕ್ತಸ್ಯ ಕುತೋ ನಿತ್ಯ ನಿರತಿಶಯ ಸುಖಪ್ರಾಪ್ತಿಃ? ||೬೬||

ಆ ಕಾರಣದಿಂದಲೇ ಎಂದರೆ ಯಾವಾಗ ಬುದ್ಧಿ ಇಲ್ಲವೋ ಆವಾಗ ಭಾವನೆಯೂ ಇಲ್ಲವೆಂಬರ್ಥವು, ತಸ್ಯ - ಅಂತವನಿಗೆ, ತದ್ಭಾವನಾಚ - ಆ ಆತ್ಮನ ಸ್ವರೂಪ ಚಿಂತನೆಯೂ ಕೂಡ ನ ಸಂಭವತಿ-ಉಂಟಾಗುವದಿಲ್ಲವು;ವಿವಿಕ್ತಾತ್ಮಾನಂ-ಪ್ರಕೃತಿವಿಯುಕ್ತ ವಿಲಕ್ಷಣವಾದ ಆತ್ಮನ ಸ್ವರೂಪವನ್ನು, ಅಭಾವಯತಃ - ಚಿಂತಿಸದವನಿಗೆ, ವಿಷಯಸ್ಪೃಹಾಶಾನ್ತಿಃ - ವಿಷಯಗಳಲ್ಲಿ ಆಸಕ್ತಿಯ ಶಾಂತಿಯು, ನ ಭವತಿ - ಉಂಟಾಗುವದಿಲ್ಲವು, ಅಶಾನ್ತಸ್ಯ ಎಂದರೆ ವಿಷಯಸ್ಪೃಹಾಯುಕ್ತಸ್ಯ - ವಿಷಯಾಭಿಲಾಷೆಯಿಂದ ಕೂಡಿರುವವನಿಗೆ, ನಿತ್ಯನಿರತಿಶಯ ಸುಖದ ಪ್ರಾಪ್ತಿಯು, ಕುತಃ - ಎಲ್ಲಿಯದು? ಇಲ್ಲಿ ಶಾನ್ತಿ ಎಂದರೆ ಮನಸ್ಸಿನ ಶಾಂತತೆ ಎಂಬರ್ಥವು; ಆದುದರಿಂದಲೇ ವಿಷಯಸ್ಪೃಹಾ ಶಾನ್ತಿಃ ಎಂದರ್ಥಮಾಡಿದರು. ಹಿಂದೆಯಿರುವ "ರಸೋಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ" (ಗೀ. ೨. ೫೯) "ರಾಗದ್ವೇಷ ವಿಯುಕ್ತೈಃ" (ಗೀ. ೨. ೬೪) "ಸುಖೇಷು ವಿಗತಸ್ಪೃಹಃ" (ಗೀ. ೨. ೫೬) ಎಂಬೀ ಪ್ರಯೋಗಗಳನ್ನನುಸರಿಸಿ ವಿಷಯಸ್ಪೃಹಾ ಶಾನ್ತಿಃ ಎಂಬ ವ್ಯಾಖ್ಯಾನವೆಂದು ಭಾವಿಸತಕ್ಕದ್ದು; ಕುತಸ್ಸುಖಂ ಎಂಬಲ್ಲಿರುವ ಸುಖ ಶಬ್ದಕ್ಕೆ ನಿತ್ಯ ನಿರತಿಶಯ ಸುಖರೂಪವಾದ, ಸ್ವರ್ಗಾದಿ ಸುಖಗಳಿಗೂ ಮೇಲಾದ ನಿರತಿಶಯವಾದ ಮೋಕ್ಷ ಸುಖವು ಹೇಳಲ್ಪಟ್ಟಿತೆಂದು ಶ್ರೀ ಯತಿವರ್ಯರು ಅಭಿಪ್ರಾಯಪಡುತ್ತಾರೆ. ಜ್ಞಾನಯೋಗ ನಿಷ್ಠನು ಯಾವಾಗ ಆತ್ಮ ಸಾಕ್ಷಾತ್ಕಾರಕ್ಕಾಗಿ ಜೀವಾತ್ಮಸ್ವರೂಪವನ್ನು ಕುರಿತು ಉಪಾಸಿಸುವನಾಗಿ ಆತ್ಮಸಾಕ್ಷಾತ್ಕಾರವನ್ನು ಹೊಂದುವನೋ ಆಗ ಆತನು ಭಕ್ತಿಯೋಗದಲ್ಲಿಳಿದು ಪರಮಾತ್ಮೋಪಾಸನವನ್ನು ಮಾಡುವದು ಸಿದ್ಧವಾದುದರಿಂದ ಅಂತವನಿಗೆ ನಿತ್ಯ ನಿರತಿಶಯ ಸುಖರೂಪ ಮೋಕ್ಷವೆಂಬುದು ಕರಗತವು. ಅಥವಾ ಆತ್ಮಪ್ರಾಪ್ತಿಗಾಗಿ ಪರಮಾತ್ಮೋಪಾಸನೆಯನ್ನು ಮಾಡಿದರೂ, ಅಂತವನು ಮುಂದೆ ಜಿಜ್ಞಾಸುವೆಂದು (೭. ೧೬) ಎಂಬಲ್ಲಿ ಹೇಳಿ ಅತನಿಗೂ ಕೂಡ್ಯಕ್ರಮೇಣ ಮೋಕ್ಷವೆಂದೇ ಹೇಳಲ್ಪಡುತ್ತದೆ. ಯಾವಾಗ ವಿಷಯ ಸ್ಪೃಹೆಯೇ ಹೋಗದೆ ಮನಶ್ಶಾಂತಿ ಇಲ್ಲವೋ, ಆಗ ಭಕ್ತಿಯೋಗ ಆತ್ಮಸಾಕ್ಷಾತ್ಕಾರಗಳಿಲ್ಲವು ; ಆಗ ಮೋಕ್ಷವೂ ಇಲ್ಲವೆಂಬ ಭಾವವು. ಆದುದರಿಂದ ಈ ಶ್ಲೋಕದಲ್ಲಿ ಆತ್ಮೋಪಾಸನದಿಂದುಂಟಾಗುವ ಆತ್ಮ ಸಾಕ್ಷಾತ್ಕಾರ ಯಾವಾಗ ಇಲ್ಲವೋ, ಆಗ ಅದಕ್ಕೆ ಬೇಕಾದ ಪ್ರತ್ಯಾಹಾರ ಧಾರಣ ಧ್ಯಾನಾ, ದಿಗಳೂ ಇಲ್ಲವೆಂದು ಗ್ರಹಿಸತಕ್ಕದ್ದಾಗಿರುತ್ತದೆ. ನಾಸ್ತಿ ಬುದ್ಧಿರಯುಕ್ತಸ್ಯ ಎಂಬಲ್ಲಿ ವಿಷಯಗಳಿಂದ ಮನಸ್ಸನ್ನು ತಪ್ಪಿಸಿ ಆತ್ಮಾವಿನಲ್ಲಿಡಬೇಕಾದ ಅವಸ್ಥೆಗೆ ಪ್ರತ್ಯಾಹಾರವೆಂದು ಹೆಸರು ; ಅದೇ ಯಾವಾಗ ಇಲ್ಲವೋ ನ ಚಾಯುಕ್ತಸ್ಯ ಭಾವನಾ ಎಂಬುದರಿಂದ ಮನಸ್ಸನ್ನು ಜೀವಾತ್ಮಸ್ವರೂಪದಲ್ಲಿಡುವದರಿಂದುಂಟಾಗುವ ಧಾರಣೆಯೇಯಿಲ್ಲವು. ಪ್ರತ್ಯಾಹಾರ ಉಂಟಾದರೆ ಧಾರಣೆಯು; ಪ್ರತ್ಯಾಹಾರವೇ ಇಲ್ಲದಿದ್ದರೆ ಧಾರಣೆಯು ಎಲ್ಲಿಯದು? ಎಂಬರ್ಥವು. ಮುಂದೆ ಧಾರಣೆಯೇ ಯಿಲ್ಲದಿದ್ದರೆ ಜೀವಾತ್ಮ ಸ್ವರೂಪದ ಧ್ಯಾನವೇ ಸಿದ್ಧಿಸುವದಿಲ್ಲವೆಂದು ನ ಚಾಭಾವಯತಶ್ಶಾನ್ತಿಃ ಎಂಬುದರಿಂದ ಹೇಳಲ್ಪಡುತ್ತದೆ. ಆತ್ಮಸ್ವರೂಪ ಧಾರಣೆಯೇ ಇಲ್ಲದಿದ್ದರೆ ಶಾನ್ತಿ ಎಂದರೆ ಪ್ರಕೃತಿ ವಿಯುಕ್ತ ಆತ್ಮಸ್ವರೂಪದ ಧ್ಯಾನವು, ವಿಷಯಸ್ಪೃಹಾದಿಗಳಿಂದ ಪ್ರತಿಹತವಾಗದ ಧ್ಯಾನವು ದುರ್ಲಭವು. ಇದು ಯಾವಾಗ ಇಲ್ಲವೋ ಆತ್ಮಸಾಕ್ಷಾತ್ಕಾರವೇ ಇಲ್ಲವು, ತನ್ಮೂಲಕ ಪ್ರಾಪ್ತವಾಗುವ ಮೋಕ್ಷಸುಖವೂ ಇಲ್ಲವೆಂಬ ಭಾವವು.

ಭಾ. ಅವ. ಪುನರಪ್ಯುಕ್ತೇನ ಪ್ರಕಾರೇಣೇಂದ್ರಿಯ ನಿಯಮನ ಮಕುರ್ವತೋಽನರ್ಥಮಾಹ

ಮೂ. ಇಂದ್ರಿಯಾಣಾಂಹಿ ಚರತಾಂ ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯು ರ್ನಾವ ಮಿವಾಂಭಸಿ ॥ ೬೭.

**ಭಾಷ್ಯಾವತಾರಿಕೆಯ ಅರ್ಥವು :—ಪುನರಪಿ** - ಇನ್ನೊಂದುಸಲ, **ಉಕ್ತೇನ ಪ್ರಕಾರೇಣ** ಮೇಲೆ ಹೇಳಿದ ರೀತಿಯಲ್ಲಿ, **ಇಂದ್ರಿಯ ನಿಯಮನಂ** - ಇಂದ್ರಿಯನಿಗ್ರಹವನ್ನು, **ಅಕುರ್ವತಃ** - ಮಾಡದೇ ಇರುವವನನಿಗುಂಟಾಗುವ, **ಅನರ್ಥಮಾಹ** - ಅನರ್ಥವನ್ನು ಹೇಳುತ್ತಾರೆ. ಹಿಂದೆ ೬೨, ೬೩ ನೆಯ ಶ್ಲೋಕಗಳಲ್ಲೂ ಅನರ್ಥಗಳು ಉಪಪಾದಿತವಾಗಿರುವದರಿಂದ, ಇಲ್ಲಿ **ಪುನರಪಿ** ಎಂಬ ಪ್ರಯೋಗವು, "ಬುದ್ಧಿನಾಶಃ, ಬುದ್ಧಿನಾಶಾತ್ಪ್ರಣಶ್ಯತಿ" ಎಂಬಲ್ಲಿ ಹೇಳಲ್ಪಟ್ಟ ಅರ್ಥವೇ ಅನುವದಿಸಲ್ಪಡುತ್ತದೆ, ಹೇಳಿದುದನ್ನೇ ಹೇಳಬಹುದೋ? ಪುನರುಕ್ತಿಯು ದೋಷವಲ್ಲವೇ? ಎಂದರೆ, ಆದರಾರ್ಥದಲ್ಲಿ ಪುನರುಕ್ತಿಯು ಉಪಾದೇಯವು.

**ಮೂಲಕ್ಕೆ ಅರ್ಥವು :—**ಇಂದ್ರಿಯಗಳು ಮನಸ್ಸಿಗೆ ವಶವಾಗಿಯೂ ಮನಸ್ಸು ಬುದ್ಧಿಗೆ ವಶವಾಗಿಯೂ ಇದ್ದರೆ, ಅದು ಪರಮ ನಿಶ್ರೇಯಸ್ಸಿಗೆ ಕಾರಣಭೂತವಾಗುತ್ತದೆ. ಹಾಗಲ್ಲದೆ ಇಂದ್ರಿಯಗಳಿಗೆ ಮನಸ್ಸು ವಶವಾಗಿ ಮನಸ್ಸಿಗೆ ಬುದ್ಧಿಯು ವಶವಾದರೆ ಬುದ್ಧಿಯು ನಾಶವಾಗುತ್ತದೆಂದೂ, ಆಗ ಈತನು ಒಳ್ಳೇ ಗತಿಯನ್ನು ಹೊಂದಲಾರನೆಂದೂ ಹೇಳುತ್ತಾರೆ. ಬುದ್ಧಿಯು ಯಾವಾಗ ಮನಸ್ಸನ್ನು ನಿಗ್ರಹಿಸಿ ವಿಷಯಸ್ಪೃಹೆ ಯಿಲ್ಲದ ಹಾಗೆ ಮಾಡುತ್ತದೋ, ಆಗ ತಾನು ಜಡ ಪ್ರಕೃತಿಗಿಂತ ವಿಲಕ್ಷಣನೆಂಬ ಜ್ಞಾನ ಉಂಟಾಗಿ ಪುನಃ ವಿಷಯಾನುಭವಗಳಲ್ಲಿ ಮನಸ್ಸುಂಟಾದರೂ, ಇಂದ್ರಿಯಗಳನ್ನು ನಿಗ್ರಹಿಸಿ, ಪ್ರತ್ಯಾಹಾರ, ಧಾರಣ ಧ್ಯಾನಾದಿಗಳುಂಟಾಗಿ ಆತ್ಮಾವಲೋಕನವು ಮೋಕ್ಷಪ್ರಾಪ್ತಿಗೆ ಹೇತುವಾಗಿ ಲಭಿಸುತ್ತದೆ; ಆದರೆ ಹಾಗೆ ಪ್ರತ್ಯಾಹಾರವೇ ಯಾವಾಗ ಯಿಲ್ಲವೋ ಧಾರಣ, ಧ್ಯಾನ, ಜೀವಾತ್ಮಸಾಕ್ಷಾತ್ಕಾರ ಅದರಿಂದ ಪ್ರಾಪ್ತವಾಗುವ ಮೋಕ್ಷವು, ಇವು ಯಾವುವೂ ಯಿಲ್ಲವೆಂದು ಹೇಳಲ್ಪಟ್ಟಿತು. ಹೀಗೆ ಇಷ್ಟ ಪ್ರಾಪ್ತಿಯು ಅನಿಷ್ಟ ನಿವೃತ್ತಿಯಿಂದ ಉಂಟಾಗದೆ ಇದ್ದರೂ ಚಿಂತೆ ಇಲ್ಲವು ಎಂದು ಉದಾಸೀನದಿಂದಲಾದರೂ ಇರಬಹುದೋ ಎಂದರೆ ಯಾವಾಗ ಪ್ರತ್ಯಾಹಾರವಿಲ್ಲದೆ ಇಂದ್ರಿಯಗಳು ನಿಗ್ರಹಿಸಲ್ಪಡದೆ ಸ್ವೇಚ್ಛೆಯಾಗಿ ಬಿಡಲ್ಪಟ್ಟವೋ, ಆಗ ಉಂಟಾಗುವ ಅನರ್ಥಗಳನ್ನು ತಿಳಿಸುತ್ತಾರೆ. ಆಗ ಅವು ದುಷ್ಟಾಶ್ವಗಳ ಹಾಗೆ ರಥದಲ್ಲಿ ಕೂತಿರುವ ಯಜಮಾನನನ್ನು ಕೆಡವಿ ನಷ್ಟಪಡಿಸುತ್ತವೆ; ಅಥವಾ ಇಂದ್ರಿಯಗಳೆಂಬ ಹತ್ತು ಹೆಂಡರೂ, ಇವರುಗಳಿಗೆ ನಿಯಾಮಕಗಳಾಗಿರುವ ಮನಸ್ಸೆಂಬ ಪಟ್ಟಮಹಿಷಿಯೂ ಎಲ್ಲರೂ ಸೇರಿಕೊಂಡು ಮನೆಯ ಯಜಮಾನನಾದ ಈ ಕ್ಷೇತ್ರಜ್ಞನನ್ನು ನಾಶಗೊಳಿಸುತ್ತಾರೆ; ಎಂಬ ಅಭಿಪ್ರಾಯದಿಂದ ಉಪದೇಶಿಸುತ್ತಾರೆ:—**ಹಿ** - ಯಾವಕಾರಣದಿಂದ, **ಚರತಾಂ** - ವಿಷಯಗಳಲ್ಲಿ ಪ್ರವರ್ತಿಸುತ್ತಿರುವ, **ಇಂದ್ರಿಯಾಣಾಂ** - ಇಂದ್ರಿಯಗಳನ್ನು, **ಅನು** - ಅನುಸರಿಸಿ, **ಯನ್ಮನಃ**- ಯಾವ ಮನಸ್ಸು, **ವಿಧೀಯತೇ** - ಪುರುಷನಿಂದ ಅನುವರ್ತಿಸುವ ಹಾಗೆ ಮಾಡಲ್ಪಡುತ್ತದೋ ಆ ಕಾರಣದಿಂದ, **ತತ್** - ಆ ಮನಸ್ಸು, **ಅಸ್ಯ** - ಈ ಪುರುಷನ, **ಪ್ರಜ್ಞಾಂ** - ಬುದ್ಧಿಯನ್ನು, ಪ್ರಕೃತಿ ವಿಲಕ್ಷಣವಾದ ಆತ್ಮಸ್ವರೂಪವು ಎಂಬ ಜ್ಞಾನವನ್ನು, **ಹರತಿ** - ನಾಶಮಾಡುತ್ತದೆ, ಎಂದರೆ ವಿಷಯದಲ್ಲಿ ಪ್ರವರ್ತಿಸುವ ಹಾಗೆ ಮಾಡುತ್ತದೆ. ಹೇಗೆ ಎಂದರೆ ಒಂದು ದೃಷ್ಟಾಂತ ಮೂಲಕ ತಿಳಿಸುತ್ತಾರೆ. **ಅಂಭಸಿ** - ಸಮುದ್ರದಲ್ಲಿ, **ವಾಯುಃ** - ಗಾಳಿಯು, **ನಾವಂ** - ಹಡಗನ್ನು ಹೇಗೆ, **ಹರತಿ** - ಅಪಹರಿಸುತ್ತದೋ, ಎಂದರೆ ಹೊಡದುಕೊಂಡುಹೋಗುತ್ತದೋ ಹಾಗೆ ಈತನ ಮನಸ್ಸು ಈತನ ಪ್ರಜ್ಞೆಯನ್ನು ಅಪಹರಿಸಿಬಿಡುತ್ತದೆ.

**ಭಾ. ಇಂದ್ರಿಯಾಣಾಂವಿಷಯೇಷು ಚರತಾಂ ವರ್ತಮಾನಾನಾಂ ವರ್ತನ ಮನು ಯನ್ಮನೋ ವಿಧೀಯತೇ–ಪುರುಷೇಣಾನುವರ್ತತೇ, ತನ್ಮನೋಽಸ್ಯ ವಿವಿಕ್ತಾತ್ಮ ಪ್ರವಣಾಂ ಪ್ರಜ್ಞಾಂ ಹರತಿ-ವಿಷಯ ಪ್ರವಣಾಂ ಕರೋತೀತ್ಯರ್ಥಃ; ಯಥಾಂಭಸಿ ನೀಯಮಾನಾಂ ನಾವಂ ಪ್ರತಿಕೂಲೋ ವಾಯುಃ ಪ್ರಸಹ್ಯ ಹರತಿ ||೬೭||**

---

ಇಲ್ಲಿ ಪ್ರಜ್ಞೆಗೂ ನಾವೆಗೂ ಸಾದೃಶ್ಯವು, ಮನಸ್ಸು ಇಂದ್ರಿಯಗಳಿಗೂ ಗಾಳಿಗೂ ಸಾದೃಶ್ಯವು. ನಾವಿಕನು ಹೇಗೆ ನಾವೆಯನ್ನು ಗಾಳಿಗೆ ವಶಮಾಡಿ ಬಿಡದೆ ಕಾಪಾಡಿಕೊಳ್ಳುವನೋ ಹಾಗೆಯೇ ಆತ್ಮನು ತನ್ನ ವಿವೇಕವುಳ್ಳ ಧರ್ಮಭೂತಜ್ಞಾನ ಮೂಲಕ ಪ್ರಜ್ಞೆಯನ್ನು ಕಾಪಾಡಿ ಕೊಳ್ಳಬೇಕೆಂಬ ಭಾವವು. ಪರಮಾತ್ಮನಲ್ಲೇ ಇಟ್ಟ ಬುದ್ಧಿ ಎಂಬ ನಾವೆಯಾದರೋ ಇಂದ್ರಿಯ ಗಳು ಮನಸ್ಸು ಎಂಬ ಸುಂಟರಗಾಳಿಗೆ ಸಿಕ್ಕದೆ ಕ್ಷೇಮವಾಗಿ ಸಂಸಾರಾಂಬುಧಿಯ ಆಚೆ ದಡವನ್ನು ಹೋಗಿ ಸೇರುತ್ತದೆ.

**ಭಾಷ್ಯಾರ್ಥವು :—ಇಂದ್ರಿಯಾಣಾಂ** - ಇಂದ್ರಿಯಗಳು, **ವಿಷಯೇಷು ಚರತಾಂ ವರ್ತಮಾನಾನಾಂ**-ವಿಷಯಗಳಲ್ಲಿ ಪ್ರವರ್ತಿಸುತ್ತಾ ಇರುವುವುಗಳಾಗಿ, ಅವುಗಳ, **ವರ್ತನಮನು**-ಪ್ರವೃತ್ತಿಯನ್ನನುಸರಿಸಿ, **ಯನ್ಮನಃ** - ಯಾವ ಮನಸ್ಸು, **ವಿಧೀಯತೇ** - ಎಂದರೆ, **ಪುರುಷೇಣಾನುವರ್ತತೇ** - ಪುರುಷನಿಂದ ಅಧೀನವಾಗಿ ಮಾಡಲ್ಪಡುತ್ತದೋ, **ತನ್ಮನಃ** - ಆ ಮನಸ್ಸು, **ಅಸ್ಯ**–ಈತನ, **ವಿವಿಕ್ತಾತ್ಮಪ್ರವಣಾಂ** - ಪ್ರಕೃತಿಗಿಂತ ವಿಲಕ್ಷಣವಾದ ಆತ್ಮನಲ್ಲಿ ಸಕ್ತವಾದ, **ಪ್ರಜ್ಞಾಂ**-ಬುದ್ಧಿಯನ್ನು, **ಹರತಿ** ಎಂದರೆ, **ವಿಷಯ ಪ್ರವಣಾಂ ಕರೋತೀತ್ಯರ್ಥಃ** - ವಿಷಯಗಳಲ್ಲಿ ಆಸಕ್ತಿಯುಳ್ಳದ್ದಾಗಿ ಮಾಡುತ್ತದೆ ಎಂಬರ್ಥವು. ಹೇಗೆಂದರೆ, **ಯಥಾ** - ಹೇಗೆ, **ಅಂಭಸಿ** – ಸಮುದ್ರದಲ್ಲಿ, **ನೀಯಮಾನಾಂ ನಾವಂ**-ಒಯ್ಯಲ್ಪಟ್ಟ ನಾವೆಯನ್ನು, **ಪ್ರತಿಕೂಲೋ ವಾಯುಃ**-ಪ್ರತಿಕೂಲವಾದ ವಾಯುವು, **ಪ್ರಸಹ್ಯ** - ಬಲಾತ್ಕರಿಸಿ, **ಹರತಿ** - ಹೊಡಕೊಂಡು ಹೋಗುತ್ತದೋ, ಹಾಗೆ ಎಂಬ ಭಾವವು. ಈ ಶ್ಲೋಕದಲ್ಲಿ **ಇಂದ್ರಿಯಾಣಾಂಹಿ ಚರತಾಂ** ಎಂಬುದರಿಂದ ಇಂದ್ರಿಯಗಳೇ ಹೋಗಿ ವಿಷಯಗಳಲ್ಲಿ ಪ್ರವರ್ತಿಸಬೇಕೆಂಬರ್ಥವಲ್ಲವು: ಏಕೆಂದರೆ ಕೆಲವು ಸಂದರ್ಭಗಳಲ್ಲಿ ವಿಷಯಗಳೇ ಬಂದು ಇಂದ್ರಿಯಗಳೊಂದಿಗೆ ಸೇರುವದರಿಂದ, ಇಂದ್ರಿಯ ವಿಷಯಗಳ ಸನ್ನಿಕರ್ಷರೂಪಸಂಬಂಧವು ಇಲ್ಲಿ ಹೇಳಲ್ಪಟ್ಟಿದುದರಿಂದ ಚರತಾಂ ಎಂಬುದಕ್ಕೆ **ವಿಷಯೇಷು ವರ್ತಮಾನಾನಾಂ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಅಂತಹ ವ್ಯಾಖ್ಯಾನಕ್ಕೆ ಬಲವು ಹಿಂದೆ (ಗೀ. ೫. ೪೯) "ಇಂದ್ರಿಯಾಣಿ ಇಂದ್ರಿಯಾರ್ಥೇಷು ವರ್ತಂತೇ" ಎಂದಿರುವದರಿಂದ ಎಂದು ತಿಳಿಯತಕ್ಕದ್ದು; **ಹರತಿ ಪ್ರಜ್ಞಾಂ** - ಪ್ರಜ್ಞೆಯನ್ನು ಅಪಹರಿಸುತ್ತದೆ ಎಂದರೆ ಪ್ರಜ್ಞೆಯು ಸಂಪೂರ್ಣವಾಗಿ ನಾಶವಾಗುವದಿಲ್ಲವೆಂಬಭಿಪ್ರಾಯದಿಂದ, ಆ ಪ್ರಜ್ಞಾಹರಣದಿಂದುಂಟಾಗುವ ದುರವಸ್ಥೆಯಾದ **ವಿಷಯಪ್ರವಣತೆ** ಯನ್ನುಂಟುಮಾಡುತ್ತದೆ ಎಂದು ಹೇಳಲ್ಪಟ್ಟಿತು. ಪ್ರಜ್ಞಾ ಹರಣೆಯಲ್ಲಿ ಮನಸ್ಸಿಗೆ ಪ್ರಾಧಾನ್ಯತೆಯಾದುದರಿಂದ ಈ ಶ್ಲೋಕದ **"ಯತ್ ತತ್"** ಎಂಬ ಪದಗಳು ಮನಸ್ಸಿಗೇ ಸಂಬಂಧಿಸಿದುವು. ಮನುವೂ (೨. ೯೯) ಕೂಡ **"ಇಂದ್ರಿಯಾಣಾಂತು ಸರ್ವೇಷಾಂ ಯದ್ಯೇಕಂ ಕ್ಷರತೀಂದ್ರಿಯಮ್ । ತೇನಾಸ್ಯ ಕ್ಷರತಿಪ್ರಜ್ಞಾ ದೃತೇಃ ಪಾದಾದಿ ವೋದಕಮ್"॥** ಎಂಬಲ್ಲಿ ಹಾಗೆಯೇ ಹೇಳಿರುತ್ತಾರೆ. ಮನಸ್ಸು ಪ್ರಜ್ಞೆಯನ್ನು ಆಕರ್ಷಿಸುವದಕ್ಕೆ ಒಂದು ದೃಷ್ಟಾಂತದಿಂದ ಬೋಧಿಸಿದರು. ಪ್ರತಿಕೂಲ ವಾಯುವು ನಾವೆಯನ್ನು ಹೇಗೆ ರುಜುವಾದ ಮಾರ್ಗದಿಂದ ಶೆಳದು ಬಿಡುತ್ತದೋ ಹಾಗೆ ಎಂಬ ಭಾವವು; ಇಲ್ಲಿ ಚಂಚಲವಾದ ಮನಸ್ಸಿಗೂ ಚಂಚಲವಾದ ಪ್ರತಿಕೂಲವಾಯುವಿಗೂ ಹೋಲಿಕೆಯು; ಹಾಗೆಯೇ ಪ್ರಜ್ಞೆ

ಮೂ. ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯ ಸ್ತಸ್ಯಪ್ರಜ್ಞಾ ಪ್ರತಿಷ್ಠಿತಾ ॥ ೬೮.

ಭಾ. ತಸ್ಮಾದುಕ್ತೇನ ಪ್ರಕಾರೇಣ ಶುಭಾಶ್ರಯೇ ಮಯಿ ನಿವಿಷ್ಟಮನಸೋ ಯಸ್ಯೇಂದ್ರಿಯಾಣೀಂದ್ರಿಯಾರ್ಥೇಭ್ಯ ಸ್ಸರ್ವಶೋ ನಿಗೃಹೀತಾನಿ, ತಸ್ಯೈವ ಆತ್ಮನಿಪ್ರಜ್ಞಾ ಪ್ರತಿಷ್ಠಿತಾ ಭವತಿ.

ಗೂ ನಾವೆಗೂ ಹೋಲಿಕೆಯು; ನಾವೆಯು ತನ್ನ ಸ್ವಂತ ಸ್ಥಳಕ್ಕೆ ಹೋಗಲು ಅನುಕೂಲವಾದ ವಾಯುವೇ ಸಹಕಾರಿಯಾಗಿರುತ್ತದೆ. ಪ್ರತಿಕೂಲವಾಯುವು ಇದಕ್ಕೆ ಪ್ರತಿಬಂಧಕವು. ಹಾಗೆಯೇ ಅನುಕೂಲವಾದ ಮನಸ್ಸು ಶಾಂತತೆಯನ್ನು ಹೊಂದಿ ಆತ್ಮಪ್ರಾಪ್ತಿಗೆ ಸಹಕಾರಿಯು. ಪ್ರತಿಕೂಲ ವಾದ ಮನಸ್ಸು ಶಾಂತತೆಯಿಲ್ಲದೆ ವಿಷಯಪ್ರಾವಣ್ಯವನ್ನುಂಟುಮಾಡುತ್ತದೆ. "ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ । ಬಂಧಾಯ ವಿಷಯಾಸಙ್ಗಿಮುಕ್ತ್ಯೈ ನಿರ್ವಿಷಯಂ ಮನಃ" ಎಂಬ ಶ್ಲೋಕವು ಇಲ್ಲಿ ಅನುಸಂಧೇಯವು. ಬಂಧಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣವು; ಮನಸ್ಸು ವಿಷಯಗಳಲ್ಲಿ ಪ್ರವರ್ತಿಸಿದರೆ ಬಂಧವು. ಹಾಗಲ್ಲದೆ ವಿಷಯ ಜಿಹಾಸೆ ಯಿದ್ದರೆ ಮೋಕ್ಷವು ಎಂಬ ಭಾವವು.

ಮೂಲಕ್ಕೆ ಅರ್ಥವು :—"ಯದಾ ಸಂಹರತೇ" ಎಂಬ ಶ್ಲೋಕವನ್ನಾರಂಭಿಸಿ ಮಾಡಲ್ಪಟ್ಟ ಇಂದ್ರಿಯ ನಿಗ್ರಹೋಪದೇಶವು ಇಲ್ಲಿ ಉಪಸಂಹಾರ ಮಾಡಲ್ಪಡುತ್ತದೆ. ಇಂದ್ರಿಯಗಳನ್ನು ವಿಷಯದಲ್ಲಿ ಪ್ರವರ್ತಿಸದ ಹಾಗೆ ಯಾವನು ನಿಗ್ರಹಿಸುತ್ತಾನೋ ಆತನಿಗೀಗ ಆತ್ಮಾವಲೋಕನ ರೂಪ ಪ್ರಜ್ಞೆಯು ದೊರೆಯುತ್ತದೇ ವಿನಾ ಅನ್ಯಥಾಯಿಲ್ಲವೆಂದು ಹೇಳುತ್ತಾರೆ. ಇದರಿಂದ ಜ್ಞಾನಯೋಗವು ಪರಮಾತ್ಮನಲ್ಲಿ ಮನಸ್ಸನ್ನಿಟ್ಟು, ಮನಸ್ಸಿನಿಂದ ಇಂದ್ರಿಯಗಳನ್ನು ನಿಗ್ರಹಿಸಿದ ಹೊರತು ಸಾಧ್ಯವಿಲ್ಲವೆನ್ನುತ್ತಾರೆ. ತಸ್ಮಾತ್ - ಇಂದ್ರಿಯಗಳಿಗೆ ವಶವಾದ ಮನಸ್ಸು ಪ್ರಜ್ಞಾ ಪ್ರತಿಷ್ಠೆಗೆ ವಿರೋಧಿಯಾಗುವದರಿಂದ, ಹೇ ಮಹಾಬಾಹೋ - ಓ ಹೆಚ್ಚಾದ ಭುಜ ಪರಾಕ್ರಮವುಳ್ಳ ಅರ್ಜುನನೇ, ಯಸ್ಯ - ಯಾವ ಸರ್ವೇಶ್ವರನಲ್ಲಿ, ಮನಸ್ಸಿಟ್ಟಿರುವ ಸುಕೃತಿಗೆ, ಇಂದ್ರಿಯಾಣಿ - ಇಂದ್ರಿಯಗಳು, ಸರ್ವಶಃ - ಎಲ್ಲಾಕಡೆಯಿಂದಲೂ, ಇಂದ್ರಿಯಾರ್ಥೇಭ್ಯಃ — ವಿಷಯಗಳಿಂದ, ನಿಗೃಹೀತಾನಿ - ನಿಗ್ರಹಿಸಲ್ಪಟ್ಟವೆಯೋ, ತಸ್ಯ - ಅಂತವನ, ಪ್ರಜ್ಞಾ - ಆತ್ಮಾವಲೋಕನ ರೂಪ ಪ್ರಜ್ಞೆಯು, ಪ್ರತಿಷ್ಠಿತಾ-ಸ್ಥಿರವಾದುದು, ಮಹಾಬಾಹೋ ಎಂಬ ಸಂಬೋಧನೆಯಿಂದ ಬಾಹು ಪರಾಕ್ರಮದಿಂದ ಶತ್ರುಗಳನ್ನು ಜಯಿಸುವ ಹಾಗೆ, ಈ ಅಂತರಿಂದ್ರಿಯದ ಮೂಲಕ ಶತ್ರುಗಳಾದ ಬಾಹ್ಯೇಂದ್ರಿಯಗಳನ್ನು ಜಯಿಸಲು ನೀನು ಸಮರ್ಥನೈಯ್ಯಾ ಎಂಬ ಭಾವವೂ ದ್ಯೋತಿತವು; ಅಥವಾ ನೀನು ಶತ್ರುಜಯದಲ್ಲೇನೋ ಸಮರ್ಥನು; ಆದರೆ ಮನಸ್ಸನ್ನು ವಶದಲ್ಲಿಟ್ಟು, ಅದು ಇಂದ್ರಿಯಗಳನ್ನು ಜಯಿಸುವ ಹಾಗೆ ಮಾಡುವದು ಅಷ್ಟು ಸುಲಭವಲ್ಲವೆಂಬ ಭಾವವೂ ಸೂಚಿತವು.

ಭಾಷ್ಯಾರ್ಥವು :—ತಸ್ಮಾತ್ - ಆ ಕಾರಣದದೆಶೆಯಿಂದ, ಉಕ್ತೇನ ಪ್ರಕಾರೇಣ - ಮೇಲೆ ಹೇಳಿದ ರೀತಿಯಿಂದ, ಯಸ್ಯ - ಎಂಬುದಕ್ಕೆ ವ್ಯಾಖ್ಯಾನ ಮಾಡುತ್ತಾರೆ—ಶುಭಾಶ್ರಯೇ ಮಯಿ - ದಿವ್ಯ ಮಙ್ಗಳ ವಿಗ್ರಹ ಯುಕ್ತನಾಗಿರುವ ನನ್ನಲ್ಲಿ, ನಿವಿಷ್ಟ ಮನಸಃ - ಇಡಲ್ಪಟ್ಟ ಮನಸ್ಸುಳ್ಳ, ಯಸ್ಯ - ಯಾವ ಸುಕೃತಿಯ, ಇಂದ್ರಿಯಾಣಿ - ಇಂದ್ರಿಯಗಳು, ಇಂದ್ರಿಯಾ

**ಭಾ. ಅವ ಏವಂ ನಿಯಿತೇಂದ್ರಿಯಸ್ಯ ಪ್ರಸನ್ನ ಮನಸ ಸ್ಸಿದ್ಧಿ ಮಾಹ.**

**ರ್ಥೇಭ್ಯಃ** - ವಿಷಯಗಳಿಂದ, **ಸರ್ವಶಃ** - ಸಂಪೂರ್ಣವಾಗಿ ಎಲ್ಲಾ ಸಂದರ್ಭದಲ್ಲೂ, **ನಿಗೃಹೀತಾನಿ** - ನಿಗ್ರಹಿಸಲ್ಪಟ್ಟವೆಯೋ, **ತಸ್ಯೈವ** - ಅಂತವನಿಗೇನೇ, **ಆತ್ಮನಿ ಪ್ರಜ್ಞಾ** - ಆತ್ಮನ ವಿಷಯದಲ್ಲಿ ಸರಿಯಾದ ಜ್ಞಾನವು, **ಪ್ರತಿಷ್ಠಿತಾ ಭವತಿ** - ಪ್ರತಿಷ್ಠಿತವಾಗಿರುವುದಾಗುತ್ತದೆ. ಇಲ್ಲಿ, **ಯಸ್ಯ** ಎಂಬುದಕ್ಕೆ ಮೂಲದಲ್ಲಿಲ್ಲದ **"ಉಕ್ತೇನ ಪ್ರಕಾರೇಣ ಶುಭಾಶ್ರಯೇ ಮಯಿ ನಿವಿಷ್ಟಮನಸಃ"** ಎಂಬ ವಿಶೇಷಣವನ್ನು ಕೊಡಲು ಕಾರಣವೇನೆಂದರೆ, ಇಂದ್ರಿಯ ನಿಗ್ರಹಕ್ಕೆ ಸರ್ವೇಶ್ವರನಲ್ಲಿಟ್ಟ ಮನಸ್ಸೇ ಹೇತುವೆಂದು ಹಿಂದೆ ಹೇಳಿದುದನ್ನು ಪುನಃ ಜ್ಞಾಪಿಸುವದಕ್ಕಾಗಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು, ಇಲ್ಲಿ **ಶುಭಾಶ್ರಯೇ ಮಯಿ** ಎಂದು ಹೇಳಿರುವದರಿಂದ ಧ್ಯಾನಕ್ಕೆ ದಿವ್ಯ ಮಙ್ಗಳ ವಿಗ್ರಹವೇ ಆವಶ್ಯಕವೆಂದು ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲಿ ಹೇಳಿದೆಯೇ ವಿನಾ ನಿರ್ಗುಣ ಬ್ರಹ್ಮನಲ್ಲವು, ಎಂಬ ಭಾವವೂ ಸೂಚಿತವು. ಪರಬ್ರಹ್ಮವು ನಿರ್ವಿಶೇಷವಾದರೆ ಧ್ಯಾನಕ್ಕೆ ಅರ್ಹತೆಯೇ ಇಲ್ಲವು. ಈ ಶ್ಲೋಕವೂ ಯತಿಯ ವಿಷಯವೆಂದು ಕೆಲವರು ಅಭಿಪ್ರಾಯಪಡುವದಕ್ಕೆ ಆಧಾರವೇನೂ ತೋರಲಿಲ್ಲವು. ಇಂದ್ರಿಯ ನಿಗ್ರಹಕ್ಕೆ ಯತ್ಯಾಶ್ರಮವೇ ಆವಶ್ಯಕವೆಂದರೆ, ಗೃಹಸ್ಥಾಶ್ರಮಕ್ಕೆ ನಿಕೃಷ್ಟ ಭಾವವನ್ನು ಕಲ್ಪಿಸಿದಂತಾಗುತ್ತದೆ. ಬ್ರಹ್ಮವಿದ್ಯೆಯು ಎಲ್ಲಾ ಆಶ್ರಮಿಗಳಿಗೂ ವಿಹಿತವಾದುದೆಂದು **"ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ"** ಎಂಬ ಬ್ರಹ್ಮ ಸೂತ್ರದಲ್ಲಿ ಸಮಸ್ತಾಶ್ರಮಿಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವದರಿಂದ ಗೃಹಸ್ಥಾಶ್ರಮಿಗೂ ಉಂಟು ಎಂದು ತಿಳಿಸುವದಕ್ಕಾಗಿ ಗೃಹಸ್ಥಾಶ್ರಮಿಯನ್ನು ಮುಂದು ಮಾಡಿಕೊಂಡು, **"ಸಖಲ್ವೇವಂ ವರ್ತಯರ್ನ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ"** (ಛಾಂ. ೮. ೧೫. ೧೦) ಹೀಗೆ ದೇಹಾವಸಾನದವರಿಗೂ ವರ್ತಿಸಿದರೆ ದಿವ್ಯ ವೈಕುಂಠಲೋಕವನ್ನು ಹೊಂದುವನು ಪುನರಾವೃತ್ತಿಯಿಲ್ಲವೆಂದು ಹೇಳಿ ಶ್ರುತಿಯಲ್ಲಿ ಉಪಸಂಹಾರಮಾಡಲ್ಪಟ್ಟಿರುತ್ತದೆ. ಹಾಗೆಯೇ **"ಅಥ ಭಿಕ್ಷಾಚರ್ಯಂ ಚರೇತ್"** ಎಂದು ಶ್ರುತಿಯು ಸನ್ನ್ಯಾಸಾಶ್ರಮಧರ್ಮದಲ್ಲಿ ಉಪಸಂಹಾರಮಾಡಿರುವದೂ ಸಹ, ಇತರಾಶ್ರಮ ಪ್ರದರ್ಶನಾರ್ಥವಾಗಿಯೂ ಎಂದು ಭಾವಿಸತಕ್ಕದ್ದಾಗಿರುತ್ತದೆ. ಆದುದರಿಂದ ಭಗವದ್ಗೀತೋಪದೇಶವು ಇಂತಹ ಆಶ್ರಮಿಯನ್ನು ಕುರಿತು ಹೇಳಿದುದು ಎಂಬ ಅಭಿಪ್ರಾಯವು ಸರಿಹೋಗುವದಿಲ್ಲವು.

**ಭಾಷ್ಯಾವತಾರಿಕೆಯ ಅರ್ಥವು :—ಏವಂ** - ಹಿಂದೆ ಹೇಳಿದ ರೀತಿಯಲ್ಲಿ ಮನಸ್ಸನ್ನು ಪರಮಾತ್ಮನಲ್ಲಿಟ್ಟದುದರಿಂದ, **ನಿಯತೇಂದ್ರಿಯಸ್ಯ** - ಇಂದ್ರಿಯ ನಿಗ್ರಹಮಾಡಿದ, **ಪ್ರಸನ್ನಮನಸಃ** - ನಿರ್ಮಲಾಂತಃಕರಣನಿಗೆ ಉಂಟಾಗುವ, **ಸಿದ್ಧಿಮಾಹ** - ಪ್ರಯೋಜನವನ್ನು ಹೇಳುತ್ತಾರೆ. ಹೀಗೆ ಪ್ರಯೋಜನವನ್ನು ಹೇಳುವದರ ಮೂಲಕ ಜಿತೇಂದ್ರಿಯನಿಗೂ ಅಜಿತೇಂದ್ರಿಯನಿಗೂ ವಿಶೇಷ ವತ್ಯಾಸವುಂಟೆಂದೂ ತಿಳಿಸುತ್ತಾರೆ. ನಿಯತೇಂದ್ರಿಯನಿಗೆ ಉಂಟಾಗುವ ಪ್ರಯೋಜನವು ಹಿಂದೆ **"ಪ್ರಜಹಾತಿ ಯದಾ ಕಾಮಾನ್"** ಎಂದಾರಂಭಿಸಿ ನಾಲ್ಕು ಶ್ಲೋಕಗಳಲ್ಲಿ ಹೇಳಲ್ಪಟ್ಟಿತು. ಅದನ್ನೇ ಮುಂದಿನ ಮೂರು ಶ್ಲೋಕಗಳಿಂದ ಉಪಪಾದನೆ ಮಾಡಿ ನಿಗಮನಮಾಡಿ, ಅನಂತರ ಕೊನೆಯ ಶ್ಲೋಕದಲ್ಲಿ ಅಂತವನಿಗೆ ಮೋಕ್ಷಪ್ರಾಪ್ತಿಯುಂಟೆಂಬು ಉಪದೇಶಿಸುತ್ತಾರೆ.

**ಮೂಲಕ್ಕೆ ಅರ್ಥವು :—ಯಾ** - ಯಾವ ಜೀವಾತ್ಮ ವಿಷಯವಾದ ಜ್ಞಾನವು, ಪ್ರಕರಣವು ಜೀವಾತ್ಮ ಸಾಕ್ಷಾತ್ಕಾರವಾಗಿರುವದರಿಂದ, ಪರಮಾತ್ಮವಿಷಯವಾದ ಜ್ಞಾನವೆಂದರ್ಥ

**ಮೂ. ಯಾನಿಶಾ ಸರ್ವ ಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥೬೯॥**

**ಭಾ: ಯಾ – ಆತ್ಮವಿಷಯಾ ಬುದ್ಧಿಃ, ಸರ್ವಭೂತಾನಾಂ ನಿಶಾ – ನಿಶೇವಾಪ್ರಕಾಶಾ. ತಸ್ಯಾಂ – ಆತ್ಮವಿಷಯಾಯಾಂ ಬುದ್ಧೌ, ಇಂದ್ರಿಯ ಸಂಯಮೀ ಪ್ರಸನ್ನಮನಾಃ**

ಮಾಡುವದು ಪ್ರಕರಣಕ್ಕೆ ಬೇಕಾದುದಲ್ಲವು, ಸರ್ವಭೂತಾನಾಂ - ಸಮಸ್ತ ಚೇತನರಿಗೂ ಇದರಿಂದ ಅಜಿತೇಂದ್ರಿಯರಾದ ಸರ್ವ ಭೂತಗಳೂ ಹೇಳಲ್ಪಟ್ಟರು, ನಿಶಾ - ರಾತ್ರಿಯಾಗಿರುತ್ತದೋ ಎಂದರೆ ರಾತ್ರಿಯ ಹಾಗೆ ಪ್ರಕಾಶಶೂನ್ಯವಾಗಿರುತ್ತದೋ, ತಸ್ಯಾಂ - ಅಂತಹ ಆತ್ಮವಿಷಯವಾದ ಜ್ಞಾನದಲ್ಲಿ, **ಸಂಯಮೀ** - ಇಂದ್ರಿಯಗಳನ್ನು ಜಯಿಸಿರುವ, ನಿರ್ಮಲಾಂತಃಕರಣನು, **ಜಾಗರ್ತಿ** - ಜಾಗರೂಕನಾಗಿರುವನು, ಎದ್ದಿರುವನು. ಇಲ್ಲಿ ಸಂಯಮೀ ಎಂದು ಸರ್ವ ಭೂತಗಳನ್ನು ವ್ಯಾವರ್ತಿಸಿ ಹೇಳಿರುವದರಿಂದ ಅವರು ಅಸಂಯಮಿಗಳೆಂಬುದು ಏರ್ಪಟ್ಟಿತು. ಇಲ್ಲಿಯೂ ಸರ್ವ ಶಬ್ದಕ್ಕೆ ಸಂಕೋಚಾರ್ಥವನ್ನು ಹೇಳಿಯೇ ತೀರಬೇಕು, **ಯಸ್ಯಾಂ** - ಯಾವ ಶಬ್ದಾದಿ ವಿಷಯವಾದ ಬುದ್ಧಿಯಲ್ಲಿ, **ಭೂತಾನಿ** - ಅಜಿತೇಂದ್ರಿಯರಾದ ಸಮಸ್ತ ಪ್ರಾಣಿಗಳು, **ಜಾಗ್ರತಿ** – ಎದ್ದಿರುವರೋ, **ಸಾ** - ಅಂತಹ ಬುದ್ಧಿಯು, **ಪಶ್ಯತೋ ಮುನೇಃ** - ಆತ್ಮಾವಲೋಕನಮಾಡುವ ಜಿತೇಂದ್ರಿಯನಾಗಿರುವ ಮುನಿನ ಶೀಲನಿಗೆ, **ನಿಶಾ** – ರಾತ್ರಿಯು, ಅಪ್ರಕಾಶವಾದುದಾಗುತ್ತದೆಂಬ ಭಾವವು. ಜಿತೇಂದ್ರಿಯನಾಗಿ ಆತ್ಮಾವಲೋಕನದಲ್ಲಿ ಅಪೇಕ್ಷೆಯುಳ್ಳವನಿಗೆ ಬುದ್ಧಿಗೆ ಶಬ್ದಾದಿ ವಿಷಯೋಪ ಭೋಗಗಳ ಸಂಬಂಧವೇ ಇಲ್ಲವೆಂಬ ತಾತ್ಪರ್ಯವು. ಅಜಿತೇಂದ್ರಿಯನು ಶಬ್ದಾದಿ ವಿಷಯೋಪ ಭೋಗಗಳಲ್ಲಿ ಜಾಗರೂಕನು, ಆತ್ಮಾವಲೋಕನ ವಿಷಯದಲ್ಲಿ ಮಲಗಿರುವನು; ಜಿತೇಂದ್ರಿಯನು ಆತ್ಮಾವಲೋಕನದಲ್ಲಿ ಜಾಗರೂಕನು, ಶಬ್ದಾದಿ ವಿಷಯೋಪಭೋಗಗಳ ವಿಷಯದಲ್ಲಿ ಮಲಗಿರುವವನು ಎಂಬ ತಾತ್ಪರ್ಯವು. ಹೀಗೆ ನಿಯತೇಂದ್ರಿಯನಾಗಿ ಪ್ರಸನ್ನ ಮನಸ್ಕನಾದವನಿಗೆ ಆತ್ಮಾವಲೋಕನ ಸಿದ್ಧಿಯುಂಟು ಎಂದು ಹೇಳಲ್ಪಟ್ಟಿತು.

**ಭಾಷ್ಯಾರ್ಥವು:**—ಹಿಂದೆ ನಾಲ್ಕು ಶ್ಲೋಕಗಳಿಂದ ನಾಲ್ಕು ಪರ್ವದಲ್ಲಿ ಜ್ಞಾನಯೋಗವು ಸಿದ್ಧಿಸುವ ಪ್ರಕಾರವನ್ನು "ಪ್ರಜಹಾತಿ ಯದಾಕಾಮಾನ್" ಎಂದು ಆರಂಭಿಸಿ ಹೇಳಿದರು. (೫೫ನೆಯ ಶ್ಲೋಕವು) ಹಾಗೆ ಜ್ಞಾನಯೋಗನಿಷ್ಠೆಯು ಸಿದ್ಧಿಸುವವನಿಗೆ ಉಂಟಾಗುವ ಫಲಗಳನ್ನು ಕ್ರಮವಾಗಿ ಉಪದೇಶಿಸುತ್ತಾರೆ. ಸಾಕ್ಷಾತ್ಫಲವೇನೋ ತಸ್ಯ ಪ್ರಜ್ಞಾಪ್ರತಿಷ್ಠಿತಾ.ಎಂಬಲ್ಲಿ ಆತ್ಮಸಾಕ್ಷಾತ್ಕಾರ ಉಂಟಾಗುತ್ತದೆಂದು ಹೇಳಿರುತ್ತಾರೆ. ಹಿಂದೆಯೂ "ಪ್ರಜಹಾತಿ ಯದಾ ಕಾಮಾನ್" ಎಂಬ ಶ್ಲೋಕಾಂತ್ಯದಲ್ಲೂ "ಸ್ಥಿತಪ್ರಜ್ಞಸ್ತದೋಚ್ಯತೇ" ಎಂಬಲ್ಲೂ ಹೇಳಲ್ಪಟ್ಟಿತು. ಅದೇ ಪ್ರಯೋಜನವನ್ನೇ ಉಪಪಾದಿಸುವವರಾಗಿ ಅದರ ಮಾಹಾತ್ಮ್ಯವನ್ನು ತಿಳಿಸುವ ಉದ್ದೇಶ್ಯವಾಗಿ ಅಂತಹ ಜ್ಞಾನಯೋಗನಿಷ್ಠನಿಗೂ ಇತರ ಸಾಮಾನ್ಯ ಜನರಿಗೂ ಇರುವ ವೈಲಕ್ಷಣ್ಯವನ್ನು ತಿಳಿಸುತ್ತಾರೆ. ಆದುದರಿಂದ ಹಿಂದೆ ಹೇಳಿದುದರ ಪುನರುಕ್ತಿಯಾಗುವದಿಲ್ಲವು. **ಯಾ**-ಎಂದರೆ, **ಆತ್ಮವಿಷಯಾ ಬುದ್ಧಿಃ**-ಯಾವ ಜೀವಾತ್ಮ ಸ್ವರೂಪಾವಲೋಕನ ರೂಪವಾದ ಬುದ್ಧಿಯು, **ಸರ್ವಭೂತಾನಾಂ**-ಸಾಧಾರಣರಾದ ಸಮಸ್ತ ಪ್ರಾಣಿಗಳಿಗೂ, **ನಿಶಾ**-ಎಂದರೆ, **ನಿಶೇವಾಪ್ರಕಾಶಾ**-ರಾತ್ರಿಯ ಹಾಗೆ ಪ್ರಕಾಶಶೂನ್ಯವಾದುದೋ, **ತಸ್ಯಾಂ** ಎಂದರೆ **ಆತ್ಮವಿಷಯಾಯಾಂ ಬುದ್ಧೌ** - ಅಂತಹ ಜೀವಾತ್ಮ ವಿಷಯವಾದ ಬುದ್ಧಿಯಲ್ಲಿ, **ಸಂಯಮೀ** ಎಂದರೆ ಇಲ್ಲಿ **ಇಂದ್ರಿಯಸಂಯಮೀ**

ಭಾ. ಜಾಗರ್ತಿ-ಆತ್ಮಾನಮುವಲೋಕಯನ್ನಾಸ್ತ ಇತ್ಯರ್ಥಃ. ಯಸ್ಯಾಂ – ಶಬ್ದಾದಿ ವಿಷಯಾಯಾಂ ಬುದ್ಧೌ, ಸರ್ವಾಣಿ ಭೂತಾನಿ, ಜಾಗ್ರತಿ-ಪ್ರಬುದ್ಧಾನಿ ಭವಂತಿ, ಸಾ-ಶಬ್ದಾದಿ ವಿಷಯಾ ಬುದ್ಧಿಃ, ಆತ್ಮಾನಂ ಪಶ್ಯತೋ ಮುನೇ ರ್ನಿಶೇವಾಪ್ರಕಾಶಾ ಭವತಿ ||೬೯||

---

ಎಂಬರ್ಥವು, ಇಂದ್ರಿಯುಗಳನ್ನು ನಿಗ್ರಹಿಸಿದವನು ಆದುದರಿಂದಲೇ, **ಪ್ರಸನ್ನಮನಾಃ** - ನಿರ್ಮಲಾಂತಃಕರಣನಾದವನು, **ಜಾಗರ್ತಿ**–ಎಂದರೆ, **ಆತ್ಮಾನಮುವಲೋಕಯನ್ನಾಸ್ತೇ** – ಜೀವಾತ್ಮಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡು ಇರುವವನು, **ಇತ್ಯರ್ಥಃ** - ಎಂಬರ್ಥವು. **ಯಾ** ಎಂಬುದಕ್ಕೆ **ಆತ್ಮಾವಿಷಯಾ ಬುದ್ಧಿಃ** ಎಂಬ ವ್ಯಾಖ್ಯಾನವು ಹೇಗೆ ? ಹೀಗೆ ಅರ್ಥಮಾಡಲು ಸಾಧನವೇನು ? ಎಂದು ಪ್ರಶ್ನಿಸಿದರೆ, ಹಿಂದಿನ ಶ್ಲೋಕಾಂತ್ಯದಲ್ಲಿ **ಪ್ರಜ್ಞಾ ಪ್ರತಿಷ್ಠಿತಾ** ಎಂದು ಹೇಳಿ, ಮುಂದೆ **ಯಾ** ಎಂದೂ, **ಯಸ್ಯಾಂ** ಎಂದೂ ಸ್ತ್ರೀಲಿಙ್ಗ ಯಚ್ಛಬ್ದವಿರುವದರಿಂದ ಪ್ರಜ್ಞಾವೆಂದೇ ಅರ್ಥಮಾಡಬೇಕಾಗಿರುತ್ತದೆ. **ಪ್ರಜ್ಞಾ** ಎಂತಾದ್ದೆಂಬ ವಿವೇಚನೆಯಲ್ಲಿ **ಆತ್ಮವಿಷಯಾ ಬುದ್ಧಿಃ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಕೆಲವರು ನಿದ್ರಿಸುವಾಗ ಇತರರು ಜಾಗರಾವಸ್ಥೆಯಲ್ಲಿದ್ದಾರೆಂಬುದು ಅಲೌಕಿಕ ವಿಷಯವಾದುದರಿಂದ ಶಕ್ಯಾರ್ಥವನ್ನು ಬಿಟ್ಟು ಲಾಕ್ಷಣಿಕಾರ್ಥವನ್ನೇ ಹೇಳಬೇಕೆಂದು ನಿರ್ಧರಿಸಿ **ನಿಶೇವ ಅಪ್ರಕಾಶಾ** ಎಂದು ವಾಖ್ಯಾನ ಮಾಡಿರುತ್ತಾರೆ; ಇಲ್ಲಿ **ಸಂಯಮೀ** ಎಂಬ ಶಬ್ದದಿಂದ ಪಾತಂಜಲ ಯೋಗದಲ್ಲಿ **"ತ್ರಯಮೇಕತ್ರ ಸಂಯಮಃ"** ಎಂದು ಹೇಳಿರುವ ಹಾಗೆ, ಧ್ಯಾನ ಧಾರಣ ಸಮಾಧಿಗಳ ಸಮುಚ್ಚಯವುಳ್ಳವನೆಂಬರ್ಥವಲ್ಲವೆಂದೂ, ಪ್ರಕೃತದಲ್ಲಿ ಇಂದ್ರಿಯನಿಗ್ರಹವು ಉಪಪಾದಿಸಲ್ಪಡುತ್ತಲಿರುವದರಿಂದ **ಇಂದ್ರಿಯ ಸಂಯಮೀ** ಇಂದ್ರಿಯಗಳನ್ನು ನಿಗ್ರಹಿಸಿದವನೆಂದೂ ಭಾಷ್ಯ ಬರೆದಿರುತ್ತಾರೆ. ಮೂಲದಲ್ಲಿ ಸಂಯಮೀ ಎಂದಿರುವದಕ್ಕೆ **ಪ್ರಸನ್ನಮನಾಃ** ಎಂದು ಮೂಲದಲ್ಲಿಲ್ಲದಿರುವದನ್ನು ಹೇಗೆ ಬರೆದರೆಂದರೆ, ಇಂದ್ರಿಯನಿಗ್ರಹದಿಂದುಂಟಾಗುವ ಫಲವು ಪ್ರಸನ್ನ ಮನಸ್ಸೆಂದು ಹಿಂದೆ ೬೪ನೆಯ ಶ್ಲೋಕದಲ್ಲಿ ಹೇಳಿರುವದರಿಂದ **ಪ್ರಸನ್ನಮನಾಃ** ಎಂದು ವಾಖ್ಯಾನ ಮಾಡಿದರು. ಉತ್ತರಾರ್ಧಕ್ಕೆ ಭಾಷ್ಯವನ್ನು ಬರೆಯುತ್ತಾರೆ. **ಯಸ್ಯಾಂ** ಎಂದರೆ **ಶಬ್ದಾದಿವಿಷಯಾಯಾಂ ಬುದ್ಧೌ**-ಶಬ್ದಾದಿ ವಿಷಯುಗಳನ್ನು ಕುರಿತ ಬುದ್ಧಿಯಲ್ಲಿ, **ಸರ್ವಾಣಿ ಭೂತಾನಿ** – ಇಲ್ಲಿ ಭೂತಾನಿ ಎಂದು ಇಷ್ಟೇ ಇದ್ದರೂ, ಹಿಂದೆ **ಸರ್ವಾಣಿ ಭೂತಾನಿ** ಎಂದಿರುವದರಿಂದ ಇಲ್ಲಿಯೂ ಹಾಗೆಯೇ ಇಟ್ಟುಕೊಳ್ಳತಕ್ಕದ್ದು, ಆದುದರಿಂದ ಜಿತೇಂದ್ರಿಯರನ್ನು ವ್ಯಾವರ್ತಿಸಿ ಸಮಸ್ತ ಅಜಿತೇಂದ್ರಿಯರಾದ ಪ್ರಾಣಿಗಳೂ ಎಂಬರ್ಥವು, **ಜಾಗ್ರತಿ** ಎಂದರೆ **ಪ್ರಬುದ್ಧಾನಿ ಭವಂತಿ** - ಎಚ್ಚರದಿಂದ ಇರುವರೋ, **ಸಾ** ಎಂದರೆ, ಶಬ್ದಾದಿ ವಿಷಯವಾದ ಬುದ್ಧಿಯು, **ಪಶ್ಯತಃ** ಎಂದರೆ ನೋಡುತ್ತಿರುವ, ಯಾವುದನ್ನು ನೋಡುತ್ತಿರುವ ಎಂದರೆ ಪ್ರಕರಣಾತ್, **ಆತ್ಮಾನಂ ಪಶ್ಯತಃ** - ಜೀವಾತ್ಮಸ್ವರೂಪ ಸಾಕ್ಷಾತ್ಕಾರ ಮಾಡುತ್ತಿರುವ, **ಮುನೇಃ** - ಮನನ ಶೀಲನಾದ ಜಿತೇಂದ್ರಿಯನಿಗೆ, **ನಿಶಾ** ಎಂದರೆ **ನಿಶೇವಾ ಪ್ರಕಾಶಾ ಭವತಿ** - ರಾತ್ರಿಯಹಾಗೆ ಅಪ್ರಕಾಶವಾದುದಾಗುತ್ತದೆ ; **ಸರ್ವ ಭೂತಾನಿ ಯಸ್ಯಾಂ ಜಾಗರ್ತಿ** ಎಂಬಲ್ಲಿ ಪೂರ್ವಾರ್ಧದಲ್ಲಿರುವ ಸಂಯಮಿ ಶಬ್ದಕ್ಕೆ ಪ್ರತಿದ್ವಂದ್ವಿ ಎಂಬುದು ವ್ಯಕ್ತವಾಗುವದರಿಂದ ಅಸಂಯಮಿಗಳೆಂಬುದು ವ್ಯಕ್ತಪಡುವದರಿಂದ, **ಯಸ್ಯಾಂ** ಎಂಬುದಕ್ಕೆ **ಶಬ್ದಾದಿವಿಷಯಾಯಾಂ ಬುದ್ಧೌ** ಎಂಬ ವ್ಯಾಖ್ಯಾನವು. ಬುದ್ಧಿಯು ಸ್ವಯಂ ಪ್ರಕಾಶವಾಗಿರುವಾಗ ಪ್ರಕಾಶಾಪ್ರಕಾಶಾವಸ್ಥೆಗಳು ಹೇಗೆ ಎಂದರೆ, ಈ ಬದ್ಧ ದೆಶೆಯಲ್ಲಿ ಅಂತಹ ಅವಸ್ಥೆಗಳುಂಟೆಂದು ಭಾವಿಸತಕ್ಕದ್ದು. ಮುಕ್ತದೆಶೆಯಲ್ಲಾದರೋ ಯಾವಾಗಲೂ ಸ್ವಯಂ ಪ್ರಕಾಶ

**ಮೂ. ಆಪೂರ್ಯಮಾಣ ಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।**
**ತದ್ವತ್ಕಾಮಾಯಂ ಪ್ರವಿಶನ್ತಿ ಸರ್ವೇ ಸ ಶಾನ್ತಿ ಮಾಪ್ನೋತಿ ನ ಕಾಮಕಾಮೀ ॥೭೦॥**

---

ವಾಗಿಯೇ ಇರುತ್ತದೆಂಬ ತಾತ್ಪರ್ಯವು ; **ತಸ್ಯಾಂ ಜಾಗರ್ತಿ ಸಂಯಮೀ** ಎಂಬಲ್ಲಿಯೂ ಮುಕ್ತಿ ದೆಶೆಯಲ್ಲುಂಟಾಗುವ ಅಸಙ್ಕುಚಿತ ಜ್ಞಾನ ಸ್ವರೂಪವೆಂದು ಭಾವಿಸತಕ್ಕದ್ದಲ್ಲವು. ಇಲ್ಲಿಯೇ ಜೀವನ್ಮುಕ್ತಿಯು ಎಂಬಭಿಪ್ರಾಯವು ಸರಿಯಲ್ಲವು. ಆದರೆ ಅಸಙ್ಕುಚಿತ ಜ್ಞಾನವುಳ್ಳವರು ಈ ಲೋಕವಲ್ಲೇ ಇಲ್ಲವೋ ? ಎಂದರೆ **ದದಾಮಿ ಬುದ್ಧಿಯೋಗಂತಂ** ಎಂಬಲ್ಲಿ ಹೇಳಿರುವಹಾಗೆ ಶ್ರೀ ಪರಾಶರ, ವ್ಯಾಸ, ಶುಕಾದಿಗಳಿಗೂ, ನಮ್ಮಾಳ್ವಾರ್ ಪ್ರಭೃತಿಗಳಿಗೂ ದರ್ಶನ ಸ್ಥಾಪಕರುಗಳಿಗೂ ಸರ್ವೇಶ್ವರನು ಪರಮಕೃಪಯಾ ಕೆಲವು ವಿಷಯಗಳಲ್ಲಿ ಬುದ್ಧಿಯೋಗವನ್ನು ಕೊಡಬಹುದು. ಇವರಲ್ಲಿ ಕೆಲವರು ಕೂಡ ಕೆಲವು ಸಮಯಗಳಲ್ಲಿ ಜ್ಞಾನ ಸಂಕೋಚವನ್ನು ತಿಳಿಯಪಡಿಸಿರುತ್ತಾರೆ. ವಸಿಷ್ಠರಿಗೆ ಪುತ್ರವಿಯೋಗದಲ್ಲೂ, ಶ್ರೀ ಪರಾಶರರಿಗೆ ಅಸುರರಿಂದುಂಟಾದ ತಂದೆಯ ಮರಣದಲ್ಲೂ ನೋಡಿಕೊಳ್ಳಬಹುದು. ಆದುದರಿಂದ ಈ ಲೋಕದಲ್ಲೇ ಜೀವನ್ಮುಕ್ತಿ ಎಂಬುದಿಲ್ಲವು. **ತಮೇವಂ ವಿದ್ವಾನಮೃತ ಇಹ ಭವತಿ** ಎಂದು ಹೇಳಿರುವ ಹಾಗೆ ನಿಷ್ಪನ್ನ ಯೋಗಿಗಳು ಸ್ವಲ್ಪಮಟ್ಟಿಗೆ ಮುಕ್ತತುಲ್ಯರಾಗುವರೆಂಬ ಭಾವವು.

**ಮೂಲಕ್ಕೆ ಅರ್ಥವು :—** ಹಿಂದಿನ ಶ್ಲೋಕದಲ್ಲಿ ಜಿತೇಂದ್ರಿಯನಿಗೆ ಆತ್ಮಾವಲೋಕನಸಿದ್ಧಿಯುಂಟೆಂದು ಹೇಳಲ್ಪಟ್ಟಿತು. ಅಂತವನು ಶಬ್ದಾದಿಗಳ ಮಧ್ಯದಲ್ಲಿದ್ದರೂ ಆತನ ಮನಸ್ಸು ವಿಕಾರವನ್ನು ಹೊಂದದೇ ಇರುತ್ತದೆಂದು ಹೇಳುತ್ತಾರೆ. ಈ ಅವಸ್ಥೆಯು ಮೇಲಿನ ಆತ್ಮಾವಲೋಕನ ಸಿದ್ಧಿಯುಂಟಾಗಿರುವ ಅವಸ್ಥೆಗಿಂತ ಸ್ವಲ್ಪ ಕಮ್ಮಿಯಾದವಸ್ಥೆಯೆಂದು ಭಾವಿಸತಕ್ಕದ್ದು; ಹಿಂದಿನ ಅವಸ್ಥೆಯಲ್ಲಿ ವಿಷಯ ಗೋಚರತೆಯೇ ಯಿಲ್ಲದಿರುವ ರಾತ್ರಿಯಹಾಗೆ ಅಪ್ರಕಾಶವಾಗಿರುವ ಅವಸ್ಥೆಯು. **ಯದ್ವತ್** - ಹೇಗೆ, **ಆಪೂರ್ಯಮಾಣಂ** - ಸ್ವತಃ ತುಂಬಿರುವ, **ಅಚಲಪ್ರತಿಷ್ಠಂ** - ಚಲಿಸದಹಾಗೆ ಇರುವ ಎಂದರೆ ಯಾವಾಗಲೂ ಒಂದೇ ರೀತಿಯಲ್ಲಿರುವ, **ಸಮುದ್ರಂ**- ಸಮುದ್ರವನ್ನು, ಇತರ ನೀರು ಬಂದು ಸೇರಲಿ ಅಥವಾ ಸೇರದೇ ಇರಲಿ ಹೆಚ್ಚುಕಮ್ಮಿಯಾಗದೇ ಯಾವಾಗಲೂ ಒಂದೇ ರೀತಿಯಲ್ಲಿರುತ್ತದೆಂದು ಹೇಳಲ್ಪಟ್ಟಿತು. ಇಂತಹ ಸಮುದ್ರವನ್ನು, **ಆಪಃ** - ನದಿಗಳ ನೀರುಗಳು, **ಪ್ರವಿಶನ್ತಿ** - ಪ್ರವೇಶಿಸುತ್ತವೋ, ಎಂದರೆ ಸಮುದ್ರವು ಹೇಗೆ ಈ ನದೀ ಪ್ರವಾಹಗಳು ಬಂದು ಸೇರಿದರೂ ವಿಕಾರವನ್ನು ಹೊಂದದೆ ತನ್ನ ಎಲ್ಲೆಯನ್ನು ಹೇಗೆ ಅತಿಕ್ರಮಿಸುವದಿಲ್ಲವೋ, **ತದ್ವತ್** - ಹಾಗೆಯೇ, **ಸರ್ವೇ ಕಾಮಾಃ** - ಸಮಸ್ತ ವಿಷಯಗಳೂ, **ಯಂ** - ಯಾವ ಇಂದ್ರಿಯ ನಿಗ್ರಹಮಾಡಿ ಆತ್ಮಾವಲೋಕನದಲ್ಲಿರುವವನನ್ನು, **ಪ್ರವಿಶನ್ತಿ**-ಪ್ರವೇಶಿಸುತ್ತವೆಯೋ ಎಂದರೆ ಸಮುದ್ರವು ಹೇಗೆ ವೃದ್ಧಿಹ್ರಾಸರೂಪ ವಿಕಾರವನ್ನು ಹೊಂದುವದಿಲ್ಲವೋ ಹಾಗೆಯೇ ವಿಕಾರವನ್ನು ಹೊಂದುವದಿಲ್ಲವು. ಅದನ್ನೇ ಮುಂದೆ ವ್ಯಕ್ತಪಡಿಸುತ್ತಾರೆ. **ಸಶಾನ್ತಿಮಾಪ್ನೋತಿ ಸಃ** - ಅಂತವನು, **ಶಾನ್ತಿಂ** - ಮನಸ್ಸಿನ ಶಾಂತತೆಯನ್ನೂ, ಎಂದರೆ ನಿತ್ಯ ನಿರವದ್ಯ ನಿರತಿಶಯ ಸ್ವಾತ್ಮಾನುಭವರೂಪವಾದ ಆನಂದವನ್ನು, **ಆಪ್ನೋತಿ** - ಹೊಂದುವನೆಂಬ ಭಾವವು. **ಕಾಮಕಾಮೀ**-ಐಹಿಕಾದಿ ಕಾಮುಗಳನ್ನಪೇಕ್ಷಿಸುವನಾದರೋ, **ನ** ಎಂದರೆ **ನ ಶಾನ್ತಿಮಾಪ್ನೋತಿ** - ಸ್ವಾತ್ಮಾನುಭವರೂಪ ಆನಂದವನ್ನು ಹೊಂದಲಾರನು ಎಂಬ ತಾತ್ಪರ್ಯವು. ॥೭೦॥

**ಭಾಷ್ಯಾರ್ಥವು :— ಯಥಾ** - ಇದು ಯದ್ವತ್ತೆಂಬುದರ ವ್ಯಾಖ್ಯಾನವು, **ಸ್ವೇನೈವಾಪೂರ್ಯಮಾಣಂ** - ತನ್ನಿಂದಲೇ ಪೂರ್ಣವಾಗಿರುವ **ಏಕರೂಪಂ** - ಇದು, **ಅಚಲ ಪ್ರತಿಷ್ಠಮ್** - ಎಂಬುದರ ವ್ಯಾಖ್ಯಾನವು, ಯಾವಾಗಲೂ ಒಂದೇ ವಿಧವಾಗಿರುವ ಎಂದರೆ ವೃದ್ಧಿ ಹ್ರಾಸಗಳಿಲ್ಲ

ಭಾ. ಯಥಾ ಸ್ವೇನೈವಾ ಪೂರ್ಯಮಾಣಮೇಕರೂಪಂ ಸಮುದ್ರಂ ನಾದೇಯ್ಯ ಆಪಃ ಪ್ರವಿಶನ್ತಿ, ಆಸಾಮಪಾಂ ಪ್ರವೇಶೇಪ್ಯಪ್ರವೇಶೇ ಚ ಸಮುದ್ರೋ ನ ಕಂಚನ ವಿಶೇಷಮಾಪದ್ಯತೇ; ಏವಂ ಸರ್ವೇ ಕಾಮಾಶ್ಶಬ್ದಾದಯೋ ವಿಷಯಾಃ ಯಂ ಸಂಯಮಿನಂ ಪ್ರವಿಶನ್ತಿ – ಇಂದ್ರಿಯ ಗೋಚರತಾಂ ಯಾನ್ತಿ, ಸಶಾನ್ತಿ ಮಾಪ್ನೋತಿ – ಶಬ್ದಾದಿಷ್ವಿಂದ್ರಿಯ ಗೋಚರತಾ ಮಾಪನ್ನೇಷ್ವನಾಪನ್ನೇಷು ಚ ಸ್ವಾತ್ಮಾವಲೋಕನ ತೃಪ್ತ್ಯೈವ ಯೋ ನ ವಿಕಾರಮಾಪ್ನೋತಿ, ಸ ಏವ ಶಾಂತಿಮಾಪ್ನೋತೀತ್ಯರ್ಥಃ. ನ ಕಾಮಕಾಮೀ – ಯಶ್ಶಬ್ದಾದಿಭಿರ್ವಿಕ್ರಿಯತೇ, ಸ ಕದಾಚಿದಪಿ ನ ಶಾನ್ತಿ ಮಾಪ್ನೋತಿ ||೭೦||

---

ದಿರುವ ಸಮುದ್ರವನ್ನು, ನಾದೇಯ್ಯಃ - ನದಿಯ ಸಂಬಂಧವಾದ, ಆಪಃ - ಉದಕಗಳು, ಪ್ರವಿಶನ್ತಿ - ಪ್ರವೇಶಿಸುತ್ತವೋ, ಈ ವಾಕ್ಯ ತಾತ್ಪರ್ಯವನ್ನು ವಿಶದೀಕರಿಸುತ್ತಾರೆ—ಆಸಾಂ - ಈ ನದಿಯ ಸಂಬಂಧವಾದ ಅಪಾಂ - ಉದಕಗಳ, ಪ್ರವೇಶೇಪ್ಯ ಪ್ರವೇಶೇಚ - ಪ್ರವೇಶದಲ್ಲಿಯಾಗಲಿ, ಅಪ್ರವೇಶದಲ್ಲಿಯಾಗಲಿ, ಸಮುದ್ರವು, ನಕಂಚನ ವಿಶೇಷಮಾಪದ್ಯತೇ - ಸ್ವಲ್ಪವಾಗಲಿ ವೃದ್ಧಿ ಹ್ರಾಸರೂಪ ವಿಶೇಷವನ್ನು ಹೊಂದುವದಿಲ್ಲವೋ, ಏವಂ - ಹಾಗೆಯೇ ಇದು ತದ್ವತ್ ಎಂಬುದರರ್ಥವು, ಸರ್ವೇಕಾಮಾಃ ಎಂದರೆ ಶಬ್ದಾದಯೋ ವಿಷಯಾಃ - ಸಮಸ್ತ ಶಬ್ದಾದಿ ವಿಷಯಗಳೂ, ಯಂ ಎಂದರೆ ಪ್ರಕರಣಾನುಗುಣವಾಗಿ, ಸಂಯಮಿನಂ - ಎಂದು ಅರ್ಥ ಮಾಡಿದರು, ಯಾವ ಇಂದ್ರಿಯನಿಗ್ರಹವಿರುವವನನ್ನು, ಪ್ರವಿಶನ್ತಿ ಎಂದರೆ ಇಂದ್ರಿಯ ಗೋಚರತಾಂ ಯಾನ್ತಿ - ಇಂದ್ರಿಯಗಳಿಗೆ ಗೋಚರವಾಗಿರುವ ಭಾವವನ್ನು ಹೊಂದುತ್ತವೆಯೋ, ಎಂದರೆ ಸ್ವಲ್ಪವೂ ವಿಕಾರವಿಲ್ಲದಹಾಗೆ ಹೊಂದುತ್ತವೆಯೋ ಎಂಬರ್ಥವು. ಅನ್ನ ಪಾನಗಳು ಹೊಟ್ಟೆಯನ್ನು ಪ್ರವೇಶಿಸುವಹಾಗೆ ವಿಷಯಗಳು ಇಂದ್ರಿಯಗಳನ್ನು ಪ್ರವೇಶಿಸಬೇಕಾಗಿರುವದಿಲ್ಲವಾದುದರಿಂದ, ಇಂದ್ರಿಯ ಗೋಚರತಾಂ ಯಾಂತಿ ಎಂದು ವ್ಯಾಖ್ಯಾನ ಮಾಡಿರುತ್ತಾರೆ, ಸಃ-ಅಂತಹ ಇಂದ್ರಿಯವನ್ನು ನಿಗ್ರಹಿಸಿದವನು, ಶಾಂತಿ ಮಾಪ್ನೋತಿ ಎಂದರೆ ಶಬ್ದಾದಿಷ್ವಿಂದ್ರಿಯ ಗೋಚರತಾಂ ಆಪನ್ನೇಷ್ವ ನಾಪನ್ನೇಷು ಇತ್ಯಾದಿ, ಶಬ್ದಾದಿಗಳು ಇಂದ್ರಿಯ ಗೋಚರತ್ವವನ್ನು ಹೊಂದಿದರೇ ಆಗಲಿ ಹೊಂದದೇ ಇದ್ದರೇಯಾಗಲಿ, ಸ್ವಾತ್ಮಾವಲೋಕನತೃಪ್ತಿಯಿಂದ ವಿಕಾರವನ್ನು ಹೊಂದುವದಿಲ್ಲವೋ, ಸ ಏವ-ಅಂತವನೇ, ಶಾಂತಿಮಾಪ್ನೋತೀತ್ಯರ್ಥ-ಮನಶ್ಶಾಂತಿಯನ್ನು ಹೊಂದುವನೆಂಬರ್ಥವು, ನಕಾಮ ಕಾಮೀ ಎಂದರೆ, ಯಶ್ಶಬ್ದಾದಿಭಿರ್ವಿಕ್ರಿಯತೇ - ಯಾವನು ಶಬ್ದಾದಿ ವಿಷಯಗಳಿಂದ ವಿಕಾರವನ್ನು ಹೊಂದುವನೋ, ಸಃ-ಅಂತವನು, ಕದಾಚಿದಪಿ - ಎಂದಿಗೂ ಕೂಡ ಎಂದರೆ ಶಬ್ದಾದಿ ವಿಷಯಗಳಿಂದ ವಿಕಾರವು ಅಡಗುವ ತನಕವೂ, ನಶಾಂತಿಮಾಪ್ನೋತಿ-ಮನಶ್ಶಾಂತಿಯನ್ನು ಹೊಂದುವದಿಲ್ಲವು ಎಂದರೆ ಆದರಿಂದ ಆತ್ಮಾವಲೋಕನವು ಉಂಟಾಗುವದಿಲ್ಲವೆಂಬ ಭಾವವು. ಶಬ್ದಾದಿ ವಿಷಯಗಳು ಇಂದ್ರಿಯ ಗೋಚರತೆಯನ್ನು ಹೊಂದಿದರೂ, ಈ ಜಿತೇಂದ್ರಿಯನು ಸಮುದ್ರನಂತೆ ವಿಕಾರವನ್ನು ಹೊಂದುವದಿಲ್ಲವು, ಆತ್ಮ ದರ್ಶನದಲ್ಲೇ ಮಗ್ನನಾಗಿರುವನೆಂದು ಹೇಳಲ್ಪಟ್ಟಿತು. ಯಾವನು ಶಬ್ದಾದಿಗಳಿಂದ ವಿಕಾರಹೊಂದುವನೋ ಆತನಿಗೆ ಆತ್ಮದರ್ಶನರೂಪ ಆನಂದವಿಲ್ಲವೆಂದು ಹೇಳಲ್ಪಟ್ಟಿತು.

ಮೂಲಕ್ಕೆ ಅರ್ಥವು:—ಹಿಂದೆ ೫೫ ನೆಯ ಶ್ಲೋಕದ ಮೂಲಕ ಹೇಳಿದ ನಾಲ್ಕು ವಿಧ ಜ್ಞಾನನಿಷ್ಠೆಯುಳ್ಳವರಿಗೆ ಆತ್ಮಾವಲೋಕನವೂ ಮತ್ತು ವಿಷಯಸ್ಪೃಹೆ ಇಲ್ಲದ ಮನಶ್ಶಾಂತಿಯೂ ಪ್ರಯೋಜನವಾಗಿ ಹೇಳಿದರು; ಇದರಿಂದ ಕರ್ಮಯೋಗದ ಫಲವು ಜ್ಞಾನಯೋಗದ

ಮೂ. ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥　　೭೧.

ಭಾ. ಕಾಮ್ಯಂತ ಇತಿ ಕಾಮಾಶ್ಶಬ್ದಾದಯಃ. ಯಃ ಪುಮಾನ್ ಶಬ್ದಾದೀನ್ ಸರ್ವಾನ್ ವಿಷಯಾನ್ ವಿಹಾಯ, ತತ್ರ ನಿಸ್ಪೃಹಃ, ತತ್ರ ಮಮತಾರಹಿತಶ್ಚ ಅನಾತ್ಮನಿ ದೇಹೇ ಆತ್ಮಾಭಿಮಾನರಹಿತಶ್ಚರತಿ, ಸ ಆತ್ಮಾನಂ ದೃಷ್ಟ್ವಾ ಶಾಂತಿ ಮಧಿಗಚ್ಛತಿ ॥೭೧॥

ನ್ನುಂಟುಮಾಡಿ ಆತ್ಮಸಾಕ್ಷಾತ್ಕಾರಕ್ಕೆ ಹೇತುವಾಗುತ್ತದೆಂದು ಹೇಳಿ ಮುಗಿಸಿದರು. ಈಗ ಈ ಅಧ್ಯಾಯವನ್ನು ಮುಗಿಸುವ ಸಂದರ್ಭದಲ್ಲಿ ಕರ್ಮಯೋಗವನ್ನು ಅನುಷ್ಠಿಸುವವನಿಗೆ ಸ್ಥಿರವಾಗಿ ನಿಲ್ಲುವ ಆತ್ಮಾವಿನ ಯಥಾರ್ಥ ಸ್ವರೂಪ ಜ್ಞಾನವನ್ನೇ ೬೯, ೭೦ ನೆಯ ಶ್ಲೋಕಗಳಲ್ಲೂ ಅನುವಾದಮಾಡಿ ಹೇಳಿ, ಈ ೭೧ನೆಯ ಶ್ಲೋಕದಲ್ಲಿ ನಿಗಮನರೂಪದಲ್ಲಿ ಅವೆಲ್ಲವನ್ನೂ **ಈ ವಿಹಾಯ ಕಾಮಾನ್** ಎಂಬ ಶ್ಲೋಕದಲ್ಲಿ ಸಜ್ಗ್ರಹಿಸಿ ಹೇಳುತ್ತಾರೆ. **ಯಃ ಪುಮಾನ್** – ಯಾವ ಪುರುಷನು, **ಸರ್ವಾನ್ ಕಾಮಾನ್** - ಸಮಸ್ತ ವಿಷಯಗಳನ್ನು, **ವಿಹಾಯ** - ಪರಿತ್ಯಾಗ ಮಾಡಿ, ಅದು ಏತರಿಂದೆಂದರೆ, **ನಿಸ್ಪೃಹಃ** - ಆ ವಿಷಯಗಳಲ್ಲಿ ಅಪೇಕ್ಷೆಯಿಲ್ಲದವನಾಗಿ, ಅದು ಏತರಿಂದೆಂದರೆ **ನಿರ್ಮಮಃ** - ಯಾವುದರಲ್ಲೂ ಮಮತೆಯಿಲ್ಲದವನಾಗಿಯೂ, ಅದು ಏತರಿಂದೆಂದರೆ ಮನಶ್ಶಾಂತಿಯನ್ನೂ ತನ್ಮೂಲಕ **ನಿರಹಂಕಾರಃ** - ದೇಹದಲ್ಲಿ ಅಹಂಬುದ್ಧಿ ಯಿಲ್ಲದವನಾಗಿಯೂ, **ಚರತಿ** - ಇರುತ್ತಾನೆಯೋ ಅಥವಾ ಪ್ರವೃತ್ತಿವುಳ್ಳವನಾಗಿರುತ್ತಾನೋ, **ಸಃ** – ಅವನು, **ಶಾಂತಿಂ** - ಸ್ವಾತ್ಮಾನುಭವರೂಪವಾದ ಆನಂದವನ್ನು, **ಅಧಿಗಚ್ಛತಿ** - ಹೊಂದುತ್ತಾನೆ. ಆತ್ಮಾನುಭವರೂಪಾನಂದಕ್ಕೆ ಐಹಿಕ ವಿಷಯಗಳನ್ನು ಪರಿತ್ಯಾಗಮಾಡಬೇಕೆಂದೂ ಅದಕ್ಕಾಗಿ ಅವುಗಳಲ್ಲಿ ಅಪೇಕ್ಷೆ ಕೂಡದೆಂದೂ, ಅದಕ್ಕಾಗಿ ಅವುಗಳು ತನ್ನವೆಂಬ ಭಾವ ಕೂಡದೆಂದೂ ಅದಕ್ಕಾಗಿ ದೇಹದಲ್ಲಿ ಆತ್ಮಬುದ್ಧಿಯೂ ಕೂಡದೆಂದೂ ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಹೇಳಲ್ಪಟ್ಟದುದು ಏನು ಎಂದರೆ ಕರ್ಮಯೋಗದ ಅನುಷ್ಠಾನವು ಕಡೆಯಲ್ಲಿ ಆತ್ಮಾವಲೋಕನಕ್ಕೆ ಸಾಧನಭೂತವಾದುದು; ಅದಕ್ಕೆ ಇಂದ್ರಿಯನಿಗ್ರಹವು ಅವಶ್ಯಕವಾಗಿರುವ ಭಾವವು ನಿಗಮನದಲ್ಲಿ ಉಪಪಾದಿಸಲ್ಪಟ್ಟಿತು ಆತ್ಮಾವಲೋಕನವೇ ಕರ್ಮಯೋಗಜ್ಞಾನಯೋಗಗಳ ಫಲವೆಂದು ೭೨ನೆಯ ಶ್ಲೋಕದಲ್ಲಿ ಹೇಳಲ್ಪಡುತ್ತದೆ.

**ಭಾಷ್ಯಾರ್ಥವು :**—ಕಾಮ ಕಾಮಿಗಳಿಗೆ **ಶಾಂತಿ** ಎಂಬುದೇನು ಎಂದಿಗೂ ಇಲ್ಲವೋ ಎಂಬ ಶಜ್ಕೆಯನ್ನು ನಿರಾಕರಿಸುವರಾಗಿ, ಮೇಲೆ ಹೇಳಿದ ಎರಡು ಅವಸ್ಥೆಗಳಾದ ಅದರ್ಶನ ಮತ್ತು ವಿಕಾರಗಳಿಗೆ ಕಾರಣಭೂತಗಳಾದ ವಿಷಯ ಸಂಗ್ರಹಣ ಸ್ಪೃಹಾ ಮಮಕಾರ ದೇಹಾತ್ಮಭ್ರಮೆ ಇವುಗಳಿಗೆ ಕಾರ್ಯಕಾರಣ ನಿಬಂಧನಮೂಲಕ ಕ್ರಮವಾಗಿಯೂ ವ್ಯತ್ಯಸ್ತವಾಗಿಯೂ ಇರುವ ಸಂಬಂಧವನ್ನು ತೋರಿಸಿ, ಅವುಗಳ ನಿವೃತ್ತಿಯ ವಿಷಯವನ್ನು ಸ್ಥಾಪಿಸುತ್ತಾರೆ. ಹಿಂದಿನ ಎರಡು ಶ್ಲೋಕಗಳಲ್ಲೂ ಆತ್ಮದರ್ಶನ ಪ್ರವೃತ್ತಿ ಇರುವ ಪುರುಷನ ಪರ್ವಭೇದಗಳು ಹೇಳಲ್ಪಟ್ಟವೆಂದೂ, ಈ ಶ್ಲೋಕದಲ್ಲಿ ಆತ್ಮದರ್ಶನಾರ್ಥಿಯಾಗಿರುವ ಪುರುಷನ ವಿಷಯವೆಂದೂ ಭಾವಿಸಬಹುದು. **ಕಾಮ್ಯಂತೆ ಇತಿ ಕಾಮಾಃ** - ಅಪೇಕ್ಷಿಸಲ್ಪಡುವವರಿಂದ **ಕಾಮಾಃ** ಎಂದರೆ **ಶಬ್ದಾದಯಃ** - ಶಬ್ದಾದಿ ವಿಷಯಗಳು; **ಯಃ ಪುಮಾನ್** - ಯಾವ ಚೇತನನು, **ಶಬ್ದಾದೀನ್ ಸರ್ವಾನ್ ವಿಷಯಾನ್ ವಿಹಾಯ** - ಶಬ್ದಾದಿಗಳಾದ ಸಮಸ್ತ ವಿಷಯಗಳನ್ನೂ ಪರಿತ್ಯಾಗಮಾಡಿ, **ತತ್ರ ನಿಸ್ಪೃಹಃ** - ಅವುಗಳಲ್ಲಿ ಆಶೆಯಿಲ್ಲದವನಾಗಿ, **ತತ್ರ ಮಮತಾ ರಹಿತಶ್ಚ** - ಅವುಗಳಲ್ಲಿ ಮಮತೆಯಿಲ್ಲದವನಾಗಿ, **ಅನಾತ್ಮನಿ ದೇಹೇ** - ಆತ್ಮನಲ್ಲದ ದೇಹದಲ್ಲಿ, **ಆತ್ಮಾಭಿಮಾನ ರಹಿತಃ**- ಆತ್ಮ

ಮೂ. ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಽಸ್ಯಾಮಂತಕಾಲೇಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨.

ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಪರಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಸಾಂಖ್ಯಯೋಗೋ ನಾಮ ದ್ವಿತೀಯೋಧ್ಯಾಯಃ
ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

ವೆಂಬ ಅಭಿಮಾನವಿಲ್ಲದವನಾಗಿ, ಚರತಿ - ಪ್ರವರ್ತಿಸುವನೋ, ಇರುವನೋ, ಸಃ ಅಂತವನು, ಆತ್ಮಾನಂ ದೃಷ್ಟ್ವಾ - ಆತ್ಮನ ಯಥಾರ್ಥಸ್ವರೂಪವನ್ನು ಕಂಡವನಾಗಿ, ಶಾಂತಿಮಧಿಗಚ್ಛತಿ – ಆದರಿಂಮುಂಟಾಗುವ ಆನಂದವನ್ನು ಹೊಂದುವನು. ಹಿಂದಿನ ಶ್ಲೋಕದಲ್ಲಿ ಕಾಮ ಕಾಮಿಗಳಿಗೆ ಎಂದಿಗೂ ಶಾಂತಿಯಿಲ್ಲವೆಂದು ಹೇಳಲ್ಪಟ್ಟಿತು. ಹಾಗಾದರೆ ಅವನು ಎಂದಿಗೂ ಶ್ರೇಯಸ್ಸನ್ನು ಹೊಂದುವದೇ ಇಲ್ಲವೇ ? ಎಂದರೆ ಹಾಗಲ್ಲವು, ಆತನಿಗೂ ಕೂಡ ಆತ್ಮಾನುಭವ ರೂಪಾನಂದ ಉಂಟಾಗಬಹುದೆಂದು ಹೇಳುತ್ತಾರೆ. ಆದರೆ ಆತನು ವಿಷಯಗಳನ್ನೆಲ್ಲಾ ಪರಿತ್ಯಾಗ ಮಾಡ ಬೇಕೆಂಮೂ ಅವುಗಳಲ್ಲಿ ಆಶೆ, ತನ್ನದೆಂಬ ಭಾವಗಳು ಕೂಡದೆಂಮೂ, ದೇಹದಲ್ಲಿ ಅಹಂಭಾವವೂ ಕೂಡದೆಂದೂ ಉಪದೇಶಿಸುತ್ತಾರೆ. ಇವುಗಳನ್ನು ತ್ಯಜಿಸಿದುದಾದರೆ ಈತನಿಗೆ ಸದ್ಗತಿಯಲ್ಲಿ ಏನೊಂದೂ ಸಂದೇಹವಿಲ್ಲವೆಂಬಭಿಪ್ರಾಯವು. ಈ ಶ್ಲೋಕ ಮತ್ತು ಇವರ ಹಿಂದಿನ ಶ್ಲೋಕವೆ ರಡರಲ್ಲೂ ಉಪಪಾದಿಸಲ್ಪಟ್ಟ ವಿಷಯ ನಿವೃತ್ತಿಯೇ "ಸಾನಿಶಾ ಪಶ್ಯತೋ ಮುನೇಃ" ಎಂದು ಪ್ರಥಮದಲ್ಲಿ ಪ್ರತಿಜ್ಞಾವಾಕ್ಯರೂಪದಲ್ಲಿ ಹೇಳಲ್ಪಟ್ಟಿತೆಂದು ಭಾವಿಸಬಹುದು.

**ಮೂಲಕ್ಕೆ ಅರ್ಥವು :—** ಹೇ ಪಾರ್ಥ - ಓ ಅರ್ಜುನನೇ, ಏಷಾ - ಈ ಅಧ್ಯಾಯದಲ್ಲಿ ನಾನು ಉಪದೇಶಿಸಿರುವದು, ಬ್ರಾಹ್ಮೀಸ್ಥಿತಿಃ - ಪುರುಷನು ತನ್ನ ಪರಿಶುದ್ಧ ಸ್ವರೂಪವನ್ನು ತಿಳಿಯುವ ನಿಷ್ಠೆಯು ; ಏನಾಂ - ಆತ್ಮ ಯಾಥಾತ್ಮ್ಯಜ್ಞಾನದಿಂದ ಕೂಡಿದ, ಈ ನಿಷ್ಕಾಮ ಕರ್ಮ ನಿಷ್ಠೆಯನ್ನು, ಪ್ರಾಪ್ಯ - ಹೊಂದಿ, ನ ವಿಮುಹ್ಯತಿ - ಪುನಃ ಮೋಹವನ್ನುಂಟುಮಾಡುವ ಸಂಸಾರವನ್ನು ಹೊಂದುವದಿಲ್ಲವು; ಅಸ್ಯಾಂ - ಇಂತಹ ಕರ್ಮನಿಷ್ಠೆಯಲ್ಲಿ, ಅಂತಕಾಲೇಪಿ - ಕಾಲಕ್ರಮೇಣ, ಸ್ಥಿತ್ವಾ - ಇದ್ದುದಾದರೆ, ನಿರ್ವಾಣಃ ಬ್ರಹ್ಮ (ಬೇರೆ ಬೇರೆ ಪದಗಳು) ಆನಂದ ಮಯವಾದ ಆತ್ಮನನ್ನು, ಋಚ್ಛತಿ - ಹೊಂದುವನು. ಇಲ್ಲಿ ಬ್ರಹ್ಮಶಬ್ದಕ್ಕೆ ಜೀವಾತ್ಮ ನೆಂಬರ್ಥವು. ಪ್ರಕೃತಿ ವಿಮುಕ್ತತೆಯಿಂದ ಸ್ವಸ್ವರೂಪಾವಿರ್ಭಾವವನ್ನು ಹೊಂದಿದವನಾಗುವನು. ಹೀಗೆ ಅನಿಷ್ಟನಿವೃತ್ತಿ ಯಾವಾಗ ಆಯಿತೋ ಇಷ್ಟಪ್ರಾಪ್ತಿರೂಪವಾದ ಮೋಕ್ಷಪ್ರಾಪ್ತಿಯೂ ಹೇಳಿದಂತೆ ಆಯಿತು ; ಹೀಗೆ ಹೇಳಿರುವದರಿಂದ, ಕರ್ಮಯೋಗವೂ ಸಾಕ್ಷಾತ್ ಉಪಾಯವೆಂದು ಇಲ್ಲಿ ಹೇಳಲ್ಪಟ್ಟಿರುತ್ತದೆಂದೂ, ಶ್ರೀ ಭಾಷ್ಯಾಭಿಪ್ರಾಯವೂ ಹಾಗೆ ಎಂದೂ, ಹೇಳುವ ಸಂಪ್ರದಾಯ ಉಂಟೆಂದು ಕೆಲವರು ಹೇಳುವರು. ಇದು ಸರಿಯಾದ ಅಭಿಪ್ರಾಯವಲ್ಲವು. ಹೀಗೆ ಹೇಳಿದುದಾದರೆ ಅನೇಕ ಪೂರ್ವಪಕ್ಷಗಳಿಗೆ ಕಾರಣವುಂಟಾಗುತ್ತದೆ, ಹೇಗೆಂದರೆ:—

೧. ಶ್ರೀಕೃಷ್ಣ ಭಗವಾನರವರು ಗಾಂಡೀವಧನುಸ್ಸನ್ನು ಬಿಸಾಡಿದ ಅರ್ಜುನನಿಗೆ ಕರ್ಮ ಯೋಗದ ಮಾಹಾತ್ಮ್ಯೆಯನ್ನುತಿಳಿಸಿ ತನ್ಮೂಲಕ ಆತನ ಕೈಯಲ್ಲಿ ಯುದ್ಧಮಾಡಿಸಬೇಕೆಂಬ ಅಭಿಪ್ರಾಯವುಳ್ಳವರಾಗಿ ಈ ಉಪದೇಶವನ್ನು ಕೈಕೊಂಡರು. ಇಷ್ಟು ಮಾತ್ರದಿಂದಲೇ ಇಷ್ಟ ಸಿದ್ಧಿಯಾದರೆ ಯುದ್ಧೋಪಕ್ರಮವನ್ನು ಸೂಚಿಸುವ ಶಂಖ ಭೇರೀ ನಿನಾದಗಳೆಲ್ಲಾ ಉಂಟಾಗಿ ರುವ ಕಾಲದಲ್ಲಿ ಇಲ್ಲಿಗೇನೇ ನಿಲ್ಲಿಸಬೇಕಾಗಿತ್ತಲ್ಲವೇ? ಆಗ ಜ್ಞಾನಯೋಗ ಭಕ್ತಿಯೋಗಗಳ ಆವ ಶ್ಯಕತೆಯೇನು ? ಲಘುವಾದ ಮಾರ್ಗವನ್ನು ಬಿಟ್ಟು, ಗುರುತರ ಮಾರ್ಗವೇತಕ್ಕೆ ?

೨. ಶ್ರೀ ಯಾಮುನೇಯರ ಗೀತಾರ್ಥ ಸಙ್ಗ್ರಹದ ಪ್ರತಿಜ್ಞಾವಾಕ್ಯವಾದ "ಸ್ವಧರ್ಮ ಜ್ಞಾನವೈರಾಗ್ಯ ಸಾಧ್ಯಭಕ್ತ್ಯೈಕ ಗೋಚರಃ । ನಾರಾಯಣಃ ಪರಬ್ರಹ್ಮ ಗೀತಾ ಶಾಸ್ತ್ರೇ ಸಮೀರಿತಃ" ಎಂಬುದಕ್ಕೆ ಪ್ರತ್ಯುತ ವಿರುದ್ಧವಾಗುತ್ತದೆ. ಇಲ್ಲಿ ಕರ್ಮಯೋಗವು ಸಾಕ್ಷಾತ್ತಾದ ಉಪಾಯವಲ್ಲವು. ಭಕ್ತಿಯೋಗವೇ ಉಪಾಯವು, ಅದಕ್ಕೆ ಕರ್ಮ ಯೋಗವು ಅಙ್ಗವು ಎಂಬುದು ಈ ಶ್ಲೋಕದಿಂದ ವ್ಯಕ್ತಪಡುತ್ತದೆ.

೩. ಶ್ರೀ ನಿಗಮಾನ್ತ ದೇಶಿಕರವರ ಅಭಿಪ್ರಾಯಕ್ಕೂ ವಿರುದ್ಧವು. ಅವರೂಸಹ ಭಕ್ತಿಯೋಗಕ್ಕೆ ಅಙ್ಗವೆಂದೇ ಹೇಳಿರುತ್ತಾರೆ ಶ್ರೀಮದ್ರಹಸ್ಯತ್ರಯಸಾರದ ಉಪಾಯ ವಿಭಾಗಾಧಿಕಾರದಲ್ಲಿ, ಕರ್ಮಯೋಗವಾವತು ? ಕರ್ಮಯೋಗವೆಂದರೇನು ಎಂಬುದಕ್ಕೆ ಉತ್ತರವನ್ನು ದಯಪಾಲಿಸುವ ಅವಸರದಲ್ಲಿ ಸಪರಿಕರವಾದ ಪರಮಾತ್ಮೋಪಾಸನೆಗೆ ಬೇಕಾದ ಆತ್ಮಾವಲೋಕನಕ್ಕೆ ಸಾಧನವೆಂದು ಇಷ್ಟುಮಾತ್ರವೇ ಹೇಳಿರುತ್ತಾರೆ. ಇದೇ ಈ ಶ್ಲೋಕದ ಸರಿಯಾದ ಅಭಿಪ್ರಾಯವು. ಇದೇ ಶ್ರೀ ಯತಿವರ್ಯರವರ ಅರ್ಥವೂ, ಅದೂಅಲ್ಲದೆ ಭರನ್ಯಾಸವನ್ನು ಅನುಷ್ಠಿಸಿದರೆ ಭಕ್ತಿಯೋಗಸ್ಥಾನದಲ್ಲಿ ಪರಮೇಶ್ವರನು ತಾನೇ ನಿಂತು ಮೋಕ್ಷ ಫಲವನ್ನುಸಾಧಿಸಿ ಕೊಡುವನೆಂದು ಹೇಳಿದರೇ ವಿನಾ ಕರ್ಮಯೋಗದ ಸ್ಥಾನದಲ್ಲಿ ತಾನೇ ನಿಂತು ಕರ್ಮಯೋಗ ಫಲವನ್ನು ಸಾಧಿಸಿಕೊಡುವನೆಂದು ಹೇಳಲಿಲ್ಲವು. ಕರ್ಮಯೋಗವು ಜ್ಞಾನಯೋಗಕ್ಕಾಗಲಿ ಭಕ್ತಿಯೋಗಕ್ಕಾಗಲಿ ಸಾಧನವೆಂದು ಕಂಠೋಕ್ತವಾಗಿ ಅಲ್ಲಿಯೇ ಹೇಳಿರುತ್ತಾರೆ, ಅದೂ ಅಲ್ಲದೆ "ಶುದ್ಧಭಾವಂಗತೋ ಭಕ್ತ್ಯಾ ಶಾಸ್ತ್ರಾದ್ವೇದ್ಮಿಜನಾರ್ದನಂ" ಎಂಬ ಅಮೋಘವಾದ ಸಂಜಯ ವಾಕ್ಯಕ್ಕೆ ಅನೇಕ ಮಹನೀಯರೂ ಕೂಡ ಸರಿಯಾದ ಅರ್ಥವನ್ನು ಗ್ರಹಿಸದೇ ಇರುವದರಿಂದ, ಅದಕ್ಕೆ ಸಮಂಜಸಾರ್ಥವನ್ನು ಹೇಳುವ ಸಂದರ್ಭದಲ್ಲಿ ಬರೆದಿರುತ್ತಾರೇನೆಂದರೆ. "ಶಾಸ್ತ್ರಜನ್ಯ ತತ್ವಜ್ಞಾನ ಕರ್ಮಯೋಗಾದಿ ಪರಂಪರೈಯಾಲೆ ಪಿರನ್ದ ಭಕ್ತಿಯಾನದು ಸಾಕ್ಷಾತ್ಕರಿಕ್ಕವೇಣುಮೆನ್ರು ಅಭಿನಿವೇಶತ್ತೈಯುಂಡಾಕ್ಕಿ" ಎಂದರೆ "ಶಾಸ್ತ್ರ ಜನ್ಯವಾದ ತತ್ವಜ್ಞಾನ ಮತ್ತು ಕರ್ಮಯೋಗ ಪರಂಪರೆ ಎಂದರೆ ಕರ್ಮಯೋಗ ಜ್ಞಾನಯೋಗ ಆತ್ಮಾವಲೋಕನಗಳಿಂದುಂಟಾದ ಭಕ್ತಿಯೋಗವು ಪರಮಾತ್ಮನನ್ನು ಸಾಕ್ಷಾತ್ಕರಿಸಬೇಕೆಂಬಸ್ಥಿರಸಙ್ಕಲ್ಪವನ್ನುಂಟುಮಾಡುತ್ತದೆ." ಎಂದು ಹೇಳಿ, ಈ ಪರಭಕ್ತಿಯಾದ ಭಕ್ತಿಯೋಗವು ಪರಮಾತ್ಮ ಸಾಕ್ಷಾತ್ಕಾರ ರೂಪವಾದ ಪರಜ್ಞಾನವನ್ನುಂಟುಮಾಡುತ್ತದೆಂದು ಹೇಳಿರುತ್ತಾರೆ. ಕರ್ಮಯೋಗ ಪರಂಪರೆಯಿಂದುಂಟಾದುದು ಭಕ್ತಿಯೋಗವೆನ್ನುವದರಿಂದ ಕರ್ಮಯೋಗವು ಅಙ್ಗವೆಂದು ಹೇಳಿದಂತಾಯಿತು. ಇನ್ನೊಂದು ಕಡೆಯಲ್ಲಿ ಕರ್ಮಯೋಗವನ್ನು ಸದ್ವಾರಕೋಪಾಯವೆಂದು ತಿಳಿಸಿರುತ್ತಾರೆ. ಭಕ್ತಿಯೋಗದ್ವಾರಾ ಉಪಾಯವೆಂದು ಸ್ಪಷ್ಟವಾಗಿ ಹೇಳಿರುವದರಿಂದಲೂ ಅಙ್ಗವೇ.

೪. ಈ ಗ್ರಂಥದಲ್ಲೇ ಶ್ರೀಕೃಷ್ಣಭಗವಾನರವರ ದಿವ್ಯಸೂಕ್ತಿಗೂ ವಿರುದ್ಧವು ಹೇಗೆಂದರೆ ೧೧ನೆಯ ಅಧ್ಯಾಯದ ೫೩ ೫೪ ನೆಯ ಶ್ಲೋಕಗಳಲ್ಲಿ ಯಜ್ಞ, ದಾನ, ತಪಸ್ಸು, ಸ್ವಾಧ್ಯಾಯಗಳಿಂದ ನನ್ನ ಸಾಕ್ಷಾತ್ಕಾರವುಂಟಾಗುವದಿಲ್ಲವೆಂದೂ, ಅನನ್ಯ ಭಕ್ತಿಯೋಗದಿಂದಲೇ ಎಂದರೆ ಪರಭಕ್ತಿಯಿಂದ ಕೂಡಿದ ಉಪಾಸನದಿಂದಲೇ ಸಾಧ್ಯನೆಂದೂ, ಆದರಿಂದಲೇ ಮೋಕ್ಷವೆಂದೂ ಸ್ಪಷ್ಟವಾಗಿ ಉಪದೇಶಿಸಿರುತ್ತಾರೆ; ಈ ಯಜ್ಞ,ದಾನ,ತಪಸ್ಸುಗಳು ಕರ್ಮಯೋಗಕ್ಕೆ ಸೇರಿದವು; ಇವುಗಳು ಬೇಡಲೇಬೇಡ ಎಂದು। ತಿರಸ್ಕರಿಸಲ್ಪಡಲಿಲ್ಲವು, ಇವುಗಳಿಂದ ಮಾತ್ರವೇ ಉಪಾಸನ ನಿಷ್ಪತ್ತಿ ಇಲ್ಲವು; ಐಕಾನ್ತಿಕಾನ್ತ್ಯನ್ತಿಕ ಭಕ್ತಿರೂಪಾಪನ್ನ ಪರಮಾತ್ಮೋಪಾಸನದಿಂದಲೇ ಉಪಾಸನ ನಿಷ್ಪತ್ತಿಯೂ ಫಲನಿಷ್ಪತ್ತಿಯೂ ಎಂದು ಹೇಳಲ್ಪಟ್ಟಿತು.

೫. ಅನೇಕ ಶ್ರುತಿ ಸ್ಮೃತಿ ವಾಕ್ಯಗಳಿಗೂ ವಿರುದ್ಧವಾಗುತ್ತದೆ. ಕಷಾಯೇ ಕರ್ಮಭಿ ಪಕ್ವೇ ತತೋಜ್ಞಾನಂ ಪ್ರವರ್ತತೇ" "ತಮೇವಂ ವಿದ್ವಾನಮೃತ ಇಹ ಭವತಿ" "ನಾನ್ಯಃಪನ್ಥಾ ವಿದ್ಯತೇ ಅಯನಾಯ" "ಧರ್ಮೇಣಪಾಪಮಪನುದತಿ" ಇತ್ಯಾದಿಗಳ ಉಪದೇಶಕ್ಕೂ ವಿರೋಧವು. ಈ ಕಾರಣಗಳಿಂದ ಕರ್ಮಯೋಗವು ಜ್ಞಾನಯೋಗಕ್ಕಾಗಲಿ ಭಕ್ತಿಯೋಗಕ್ಕಾಗಲಿ ಅಙ್ಗವೇ ವಿನಾ, ಸಾಕ್ಷಾದುಪಾಯವಾಗುವದಿಲ್ಲವು. ಆದುದರಿಂದ ಕರ್ಮಯೋಗದ ಫಲವು, ಬ್ರಹ್ಮ ನಿರ್ವಾಣಮೃಚ್ಛತಿ-ಸುಖರೂಪವಾಗಿರುವ ಆತ್ಮಯಾಥಾತ್ಮ್ಯಸ್ವರೂಪದ ಜ್ಞಾನ ಪ್ರಾಪ್ತಿ ಎಂದು ಹೇಳಲ್ಪಟ್ಟಿತು. ಕರ್ಮಯೋಗದಿಂದುಂಟಾಗುವ ಸಾಕ್ಷಾತ್ಪ್ರಯೋಜನವನ್ನು ಶ್ರೀ ಶ್ರುತಪ್ರಕಾಶಿಕಾ ಚಾರ್ಯರಾದ ಶ್ರೀ ಸುದರ್ಶನ ಭಟ್ಟರು "ಉಪಾಯವಿರೋಧಿ ನಿರಾಸಕತ್ವಂ ಕರ್ಮಣಸ್ಸ್ಪಷ್ಟಮ್" ಎಂದೂ ಆ ಕಾರಣದಿಂದ "ಕರ್ಮಣ ಉಪಾಯ ಹೇತುತ್ವಸ್ಯಕಣ್ಠೋಕ್ತಿಃ" ಎಂದೂ ಅಪ್ಪಣೆ ಕೊಡಿಸಿರುತ್ತಾರೆ. ಶ್ರೀಪರಾಶರರು ಹೇಳಿರುವ "ಇಯಾಜಸೋಪಿ ಸುಬಹೂನ್ ಯಜ್ಞಾನ್ ಜ್ಞಾನವ್ಯಪಾಶ್ರಯಃ ಬ್ರಹ್ಮವಿದ್ಯಾಂ ಮಧಿಷ್ಠಾಯ ತರ್ತುಂ ಮೃತ್ಯು ಮವಿದ್ಯಯಾ"(೬.೬.೧೨) ಎಂಬ ಶ್ಲೋಕಕ್ಕೆ ಶ್ರೀ ಯತಿವರ್ಯರು ಜ್ಞಾನವಿರೋಧಿ ಕರ್ಮಗಳಾದ ಪುಣ್ಯ ಪಾಪಗಳ ನಿರಸನಾರ್ಥವಾಗಿ ಬಹು ಯಜ್ಞಗಳನ್ನು ರಾಜನು ಅನುಷ್ಠಿಸಿದನೆಂದು ಅರ್ಥ ಮಾಡಿರುತ್ತಾರೆ. ಹಾಗೆಯೇ ಈಶಾವಾಸ್ಯೋಪನಿಷದ್ವಾಕ್ಯವಾದ (೧೧) "ವಿದ್ಯಾಂಚಾ ವಿದ್ಯಾಂಚ ಯಸ್ತದ್ವೇದೋ ಭಯಗ್ ಸಹ। ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಮೃತಮಶ್ನುತೇ" ಎಂಬುದಕ್ಕೆ ಶ್ರೀ ಯತಿವರ್ಯರು "ಅವಿದ್ಯಾಶಬ್ದಾಭಿಹಿತಂ ವರ್ಣಾಶ್ರಮವಿಹಿತಂ ಕರ್ಮ; ಅವಿದ್ಯಯಾ-ಕರ್ಮಣಾ, ಮೃತ್ಯುಂ - ಜ್ಞಾನೋತ್ಪತ್ತಿ ವಿರೋಧಿ ಪ್ರಾಚೀನಂ ಕರ್ಮ, ತೀರ್ತ್ವಾ-ಅಪೋಹ್ಯ, ವಿದ್ಯಯಾ-ಜ್ಞಾನೇನ, ಅಮೃತಂ-ಬ್ರಹ್ಮ, ಅಶ್ನುತೇ - ಪ್ರಾಪ್ನೋತೀತ್ಯರ್ಥಃ" ಎಂದು ಭಾಷ್ಯವನ್ನು ಬರೆದಿರುತ್ತಾರೆ. ಶ್ರೀ ನಿಗಮಾಂತ ದೇಶಿಕರವರೂ ಹಾಗೆಯೇ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಯಃ - ಯಾವ ಯಥಾವಸ್ಥಿತ ಉಪದೇಶವನ್ನು ಹೊಂದಿದವನು, ವಿದ್ಯಾಂ - ಪರಮಾತ್ಮೋಪಾಸನರೂಪ ಬ್ರಹ್ಮವಿದ್ಯೆಯನ್ನೂ ಅವಿದ್ಯಾಂ - ಅದಕ್ಕೆ ಅಙ್ಗಭೂತವಾದ ಕರ್ಮಯೋಗವಾದುದನ್ನೂ, ಇವೆರಡನ್ನೂ, ಪರಸ್ಪರ ವಿರೋಧ ಪ್ರಸಂಗ ರಹಿತವಾದುದಾಗಿ ಅಙ್ಗಾಙ್ಗಿಗಳಾಗಿ ಅನುಷ್ಠಿಸತಕ್ಕದ್ದೆಂದು ಯಾವನು ತಿಳಿಯುವನೋ, ಅವಿದ್ಯಯಾ ಮೃತ್ಯುಂತೀರ್ತ್ವಾ - ಕರ್ಮಯೋಗಾನುಷ್ಠಾನದಿಂದ, ಮೃತ್ಯುಂ - ಜ್ಞಾನಸಂಕೋಚರೂಪವಾಗಿ ಸಂಸಾರಕ್ಕೆ ಹೇತುವಾಗಿರುವ ಪ್ರಾಚೀನ ಕರ್ಮಗಳನ್ನೆಲ್ಲಾ, ತೀರ್ತ್ವಾ - ದಾಟಿ, ಅಮೃತ ಮಶ್ನುತೇ-"ಪರಮಾತ್ಮಾನಮಾಪ್ನೋತೀತ್ಯರ್ಥಃ" ಎಂದು ಅಪ್ಪಣೆ ಕೊಡಿಸಿರುತ್ತಾರೆ. ಕರ್ಮಯೋಗವು ಹೀಗೆ ಮೋಕ್ಷ ಸಾಧನಕ್ಕೆ ಹೇತುವಾದುದರಿಂದಲೇ ಶಾಸ್ತ್ರಗಳಲ್ಲಿ ಅಙ್ಗಿಯಾದ ಭಕ್ತಿಯೋಗಕ್ಕೆ ಹೇಳುವ ಫಲವನ್ನೇ ತತ್ಸಾಧಕಗಳಾದ ಕರ್ಮಯೋಗಾದಿಗಳಿಗೆ ಹೇಳುವ ಸಂಪ್ರದಾಯವುಂಟೆಂಬುದು ಶ್ರೀ ಭಾಷ್ಯಾದಿಗಳಲ್ಲಿ ವ್ಯಕ್ತವು. ಜಟಾಯು ವಿಷಯದಲ್ಲಿ ಸಂಸ್ಕಾರಮಾಡಿ, ಅನುಜ್ಞೆಯನ್ನು ಕೊಟ್ಟ ಶ್ರೀ ರಾಮಚಂದ್ರಪ್ರಭುವಿನ ವಾಕ್ಯವಾದ "ಯಾಗತಿರ್ಯಜ್ಞಶೀಲಾನಾ ಮಾಹಿತಾಗ್ನೇಶ್ಚ ಯಾಗತಿಃ। ಅಪರಾವರ್ತಿನಾಂಚ ಯಾಚಭೂಮಿಪ್ರದಾಯಿನಾಂ। ಮಯಾತ್ವಂ ಸಮನುಜ್ಞಾತ ಗಚ್ಛಲೋಕಾನನುತ್ತಮಾನ್" ಎಂಬಲ್ಲಿ ದಿವ್ಯ ವೈಕುಂಠವನ್ನು ಕುರಿತು ಹೋಗು ಎಂದು ಹೇಳುವ ಸಂದರ್ಭದಲ್ಲಿ, ಯಜ್ಞ, ದಾನ, ತಪಸ್ಸನ್ನು ಮಾಡುವವರಿಗೂ ವೈಕುಂಠಲೋಕಪ್ರಾಪ್ತಿಯನ್ನು ಹೇಳಿದುದು ಹೇಗೆ? ಅವುಗಳು ಉಪಾಯವೇ? ಎಂಬ ವಿಚಾರದಲ್ಲಿ ಪೂರ್ವಪಕ್ಷಸಮಾಧಾನಾರ್ಥವಾಗಿ "ಅಂಗಿಫಲಸ್ಯೇವಾಂಗಫಲತ್ವೇನ ಉಪಾಸನಾಂಗಾನಾಂ ಯಜ್ಞದಾನಾದೀನಾಮಪಿ ಮುಕ್ತಿರೇವಫಲಂ ಇತ್ಯಭಿಪ್ರಾಯೇಣ ಯಾ ಗತಿರ್ಯಜ್ಞಶೀಲಾನಾಮಿತ್ಯಾದ್ಯುಕ್ತಮ್"

**ಭಾ. ಏಷಾ-ನಿತ್ಯಾತ್ಮಜ್ಞಾನಪೂರ್ವಿಕಾ ಅಸಙ್ಗಕರ್ಮಣಿ ಸ್ಥಿತಿಃ ಸ್ಥಿತಧೀ ಲಕ್ಷಣಾ, ಬ್ರಾಹ್ಮೀ-ಬ್ರಹ್ಮ ಪ್ರಾಪಿಕಾ, ಈದೃಶೀಂ ಕರ್ಮಣಿ ಸ್ಥಿತಿಂ ಪ್ರಾಪ್ಯ, ನ ವಿಮುಹ್ಯತಿ -**

ಎಂದು ಶ್ರೀ ಗೋವಿಂದರಾಜೀಯ ವ್ಯಾಖ್ಯಾನವಿರುತ್ತದೆ. ಶ್ರೀ ವ್ಯಾಸಸೂತ್ರಗಳಲ್ಲೂ ಪುರಾಣೇತಿಹಾಸಗಳಲ್ಲೂ ಅಙ್ಗಗಳಿಗೆ ಅಙ್ಗಿ ಫಲವನ್ನು ಹೇಳಿರುವ ನಿದರ್ಶನಗಳುಂಟು. ಆದರೆ ಜ್ಞಾನಯೋಗವ ವಿಷಯ ಹೇಗೆಂದರೆ ಜ್ಞಾನಯೋಗವಲ್ಲಿ ಈ ಜೀವಾತ್ಮನ ಉಪಾಸನೆಯು ಜರಗುವದರಿಂದ ಹೀಗೆ ಭಕ್ತಿಯೋಗಕ್ಕೆ ಸಾಧನವಾಗಿ ಅಙ್ಗವು. ಆ ಜೀವಾತ್ಮೋಪಾಸನೆಯಲ್ಲಿ ತನ್ನ ಆತ್ಮವು ಪರಬ್ರಹ್ಮವನ್ನೇ ಆತ್ಮವಾಗಿ ಉಳ್ಳದ್ದೆಂದು ಭಾವಿಸಿ ಉಪಾಸಿಸಿದರೆ ತತ್ಕ್ರತುನ್ಯಾಯದ ಪ್ರಕಾರ, ಆತ್ಮಪ್ರಾಪ್ತಿಯುಂಟಾಗುವ ಕೈವಲ್ಯವು ಲಭಿಸುತ್ತದೆ. ಗೀತಾ ಅಷ್ಟಮೋಧ್ಯಾಯದ ೧೩ನೆಯ ಶ್ಲೋಕವನ್ನೂ ೨೧ ಶ್ಲೋಕವನ್ನೂ ಶ್ರೀಮದ್ಭಾಗವತ ೩-೨೮-೩೫ ನೆಯ ಶ್ಲೋಕವನ್ನೂ ಪರಾಂಬರಿಸಿ; ಇವುಗಳಲ್ಲಿ ಪ್ರಕೃತಿ ವಿಯುಕ್ತ ಬ್ರಹ್ಮಾತ್ಮಕ ಪ್ರತ್ಯಗಾತ್ಮಾನುಚಿನ್ತನವು **"ತದ್ಯ ಇತ್ಥಂವಿದುಃ"** ಎಂಬ ಛಾಂದೋಗ್ಯ ಶ್ರುತ್ಯನುಸಾರ ಮೋಕ್ಷಪ್ರಾಪ್ತಿಯು. ಕರ್ಮಯೋಗವು ಈ ಜ್ಞಾನಯೋಗಕ್ಕೆ ಸಾಧನವೆಂದು ಈ ಕೊನೆಯ ಶ್ಲೋಕದಲ್ಲಿ ಉಪಪಾದಿತವು; ಕರ್ಮಯೋಗವು ಭಕ್ತಿಯೋಗಕ್ಕೂ ಸಾಕ್ಷಾತ್ತಾಗಿ ಅಙ್ಗವು. **"ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ"** ಎಂಬುದು ಇದಕ್ಕೆ ಪ್ರಮಾಣವು. ಋಚ್ಛತಿ – ಹೊಂದುವನು. ಇಲ್ಲಿ ಬ್ರಹ್ಮ ಶಬ್ದಕ್ಕೆ ಜೀವಾತ್ಮನೆಂಬರ್ಥವು, ಬ್ರಾಹ್ಮೀ ಎಂಬಲ್ಲಿ ಬ್ರಹ್ಮ ಪಾಪಿಕಾ ಎಂದು ಅರ್ಥವಾದುದರಿಂದ ಪ್ರತ್ಯಗಾತ್ಮಪ್ರಾಪ್ತಿ ಎಂಬರ್ಥವು. ಆದುದರಿಂದ ಕರ್ಮಯೋಗದಿಂದುಂಟಾಗುವ ಫಲವು ತನ್ನ ಆತ್ಮವನ್ನು ಸರಿಯಾಗಿ ತಿಳಿಯುವದಕ್ಕೂ ಸಾಕ್ಷಾತ್ಕರಿಸುವದಕ್ಕೂ ಸಾಕ್ಷಾತ್ತಾಗಿ ಹೇತುವೆಂದೂ, ಇದು ಪರಮಾತ್ಮೋಪಾಸನೆಗೆ ಸಾಧನವಾಗಬಹುದೆಂದೂ ಹೇಳಲ್ಪಟ್ಟಿತು. ಕರ್ಮಯೋಗವು ಕರ್ಮಾನುಷ್ಠಾನವಾದುದರಿಂದ ಸಾಕ್ಷಾತ್ತಾಗಿ ಉಪಾಯವಾಗಲಾರದು. ಅದು ಪರಮಾತ್ಮಧ್ಯಾನಕ್ಕೆ ಕಾರಣವಾಗಿ ಅನುಷ್ಠಾನವು. ಜ್ಞಾನರೂಪವಾದರೇನೇ ಮೋಕ್ಷವು, ಅದು ಹೇಗೆ ಎಂಬುದನ್ನು ಶ್ರೀ ನಿಗಮಾಂತ ದೇಶಿಕರವರು ಭಕ್ತಿಯೋಗವೆಂದರೇನು ಎಂಬ ಪ್ರಶ್ನೆಯ ಉತ್ತರದಲ್ಲಿ ಹೇಳಿರುವದೇನೆಂದರೆ; ಆತ್ಮ ಸ್ವರೂಪ ಯಾಥಾತ್ಮ್ಯಜ್ಞಾನವು ತಾನು ಪರಮಾತ್ಮನಿಗೆ ಶೇಷಭೂತನು ಸಂಪೂರ್ಣ ಪಾರತಂತ್ರ್ಯನೆಂಬ ಜ್ಞಾನೋದಯವಾಗುವದರಿಂದಲೂ ಸರ್ವ ಫಲಪ್ರದನೂ ಶ್ರೀಮನ್ನಾರಾಯಣನೇ ಎಂಬ ಜ್ಞಾನ ಉಂಟಾಗುವದರಿಂದಲೂ, ಪರಮಾತ್ಮೋಪಾಸನದಲ್ಲಿ ಪ್ರವರ್ತಿಸಿ ಸಿದ್ಧಿಯನ್ನು ಹೊಂದುವನು. ಈ ಆತ್ಮ ಯಾಥಾತ್ಮ್ಯ ಜ್ಞಾನವು ಶಾಸ್ತ್ರಗಳಲ್ಲಿ ಪ್ರತಿಪಾದಿತ ವಾದುದು ಇವನಿಗೆ ಸ್ವತಃ ಉಂಟಾಗಲಾರದಾದುದರಿಂದಲೂ, ಒಳ್ಳೇ ಬ್ರಹ್ಮನಿಷ್ಠರಾದ ಆಚಾರ್ಯನ ಮೂಲಕ ಸಙ್ಗ್ರಹಿಸತಕ್ಕದ್ದಾಗಿರುತ್ತದೆ. ಈ ಅಧ್ಯಾಯದಲ್ಲಿ ಇದು ಹೇಳಲಿಲ್ಲವಾದುದರಿಂದ ಈ ಅಭಿಪ್ರಾಯಗಳನ್ನೆಲ್ಲಾ ಚೆನ್ನಾಗಿ ವಿಸ್ತರವಾಗಿ ಮುಂದೆ ಉಪಪಾದಿಸುವ ಸಂದರ್ಭದಲ್ಲಿ ೧೩ ನೇ ಅಧ್ಯಾಯದ ೨೫ನೆಯ ಶ್ಲೋಕವಾದ **"ಅನ್ಯೇ ತ್ವೇವ ಮಜಾನಂತಃ ಶ್ರುತ್ವಾನ್ಯೇಭ್ಯಃ ಉಪಾಸತೆ"** ಎಂಬ ಶ್ಲೋಕದಲ್ಲಿ ಈ ಕ್ಷೇತ್ರಕ್ಷೇತ್ರಜ್ಞ ವೈಲಕ್ಷಣ್ಯ ಜ್ಞಾನಮೂಲಕ ಆತ್ಮಸ್ವರೂಪೋಪದೇಶವನ್ನು ಸದ್ಗುರುವಿನ ಮೂಲಕ ಹೊಂದಿ ಕರ್ಮಯೋಗವನ್ನಾರಂಭಿಸಿ ಉಪಾಯಾನುಷ್ಠಾನವನ್ನು ಮಾಡತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ.

**ಭಾಷ್ಯಾರ್ಥವು :**—ಈ ಎರಡನೆಯ ಅಧ್ಯಾಯದಲ್ಲಿ ಉಪದೇಶಿಸಲ್ಪಟ್ಟಿದುದನ್ನು ನಿಗಮನದಲ್ಲಿ ಸಙ್ಗ್ರಹಿಸಿ ಈ ಶ್ಲೋಕಮೂಲಕ ತಿಳಿಸುತ್ತಾರೆ:—**ಏಷಾ** - ಎಂದರೆ ಈ ಅಧ್ಯಾಯದಲ್ಲಿ ಹೇಳಲ್ಪಟ್ಟ, **ನಿತ್ಯಾತ್ಮ ಜ್ಞಾನಪೂರ್ವಿಕಾ ಅಸಙ್ಗಕರ್ಮಣಿ ಸ್ಥಿತಿಃ** - ಆತ್ಮನು ನಿತ್ಯನು

ಭಾ. ಪುನಸ್ಸಂಸಾರಂ ನಾಪ್ನೋತಿ, ಅಸ್ಯಾಂ ಸ್ಥಿತ್ಯಾ ಮನ್ತಿಮೇಽಪಿ ವಯಸಿ ಸ್ಥಿತ್ವಾ ಬ್ರಹ್ಮ ನಿರ್ವಾಣ ಮೃಚ್ಛತಿ—ನಿರ್ವಾಣಮಯಂ ಬ್ರಹ್ಮ ಗಚ್ಛತಿ, ಸುಖೈಕತಾನ ಮಾತ್ಮಾನ ಮವಾಪ್ನೋತೀತ್ಯರ್ಥಃ.

---

ಎಂಬ ಜ್ಞಾನಪೂರ್ವಿಕವಾಗಿರುವ, ಕರ್ಮ ಮತ್ತು ಅದರ ಫಲ ಇವುಗಳಲ್ಲಿ ತನಗೆ ಸಂಬಂಧವಿಲ್ಲವೆಂಬ, ಸ್ಥಿತಧೀ ಲಕ್ಷಣಾ - ಜ್ಞಾನಯೋಗವೆನಿಸುವ ಸ್ಥಿತ ಪ್ರಜ್ಞತೆಯನ್ನೇ ಲಕ್ಷ್ಯವಾಗಿವುಳ್ಳ ಎಂದರೆ ಜ್ಞಾನಯೋಗಕ್ಕೆ ಸಾಧನಭೂತವಾದ, ಸ್ಥಿತಿಃ - ಈ ಕರ್ಮನಿಷ್ಠೆಯು; ಎಂದರೆ ಇದೀಗ ನಿನಗೆ ಉಪದೇಶಿಸಲ್ಪಟ್ಟಿತೆಂಬ ತಾತ್ಪರ್ಯವು. ಈ ಕರ್ಮನಿಷ್ಠೆಯು ಎಂಥಾದ್ದೆಂದರೆ ಹೇಳುತ್ತಾರೆ:—ಬ್ರಾಹ್ಮೀ ಎಂದರೆ ಬ್ರಹ್ಮಪ್ರಾಪಿಕಾ - ಆತ್ಮ ಯಾಥಾತ್ಮ್ಯ ಸ್ವರೂಪವನ್ನು ಹೊಂದಿಸುವಂಥದ್ದು; ಶ್ರೀ ನಿಗಮಾಂತ ದೇಶಿಕರವರ ಅಭಿಪ್ರಾಯವು, ಜ್ಞಾನಯೋಗದಲ್ಲಿ ತುಂಬಾ ಹಿತಕರವಾದ ಜೀವಾತ್ಮ ಸಾಕ್ಷಾತ್ಕಾರ ಪ್ರಾಪಿಕಾ ಎಂಬದಾಗಿರುತ್ತದೆ. ಇದೇ ಮುಂದೆ ಬ್ರಹ್ಮನಿರ್ವಾಣಮೃಚ್ಛತಿ ಎಂದು ವ್ಯಕ್ತಗೊಳಿಸಲ್ಪಟ್ಟಿತೆಂಬ ಭಾವವು. ಬ್ರಾಹ್ಮೀ ಎಂಬಲ್ಲಿರುವ ಅರ್ಥವನ್ನೇ ಈದೃಶೀಂ ಎಂಬ ಪ್ರಯೋಗವೂ ಸೂಚಿಸುತ್ತದೆಂದು ಹೇಳುತ್ತಾರೆ. ಏನಾಂ ಪ್ರಾಪ್ಯ ಎಂಬ ಮೂಲದ ಪ್ರಯೋಗವೂ ಈ ಅರ್ಥವನ್ನೇ ಸೂಚಿಸುತ್ತದೆ. ಕರ್ಮನಿಷ್ಠೆಯು ಆತ್ಮಸ್ವರೂಪಜ್ಞಾನ ಪೂರ್ವಕವಾದುದೆಂದೂ, ಅದು ಜ್ಞಾನಯೋಗವೆನಿಸುವ ಆತ್ಮಸಾಕ್ಷಾತ್ಕಾರಕ್ಕೆ ಹೇತುವೆಂದೂ ಇಲ್ಲಿ ಹೇಳಲ್ಪಟ್ಟಿದುದೂ ಅಲ್ಲದೆ, ಉತ್ತರೋತ್ತರ ಪರಮಾತ್ಮೋಪಾಸನೆಯ ಮೂಲಕ ಪರಬ್ರಹ್ಮಪ್ರಾಪ್ತಿಗೂ ಕಾರಣವಾಗುತ್ತದೆಂಬ ಭಾವವು. ಈದೃಶೀಂ ಕರ್ಮಣಿ ಸ್ಥಿತಿಂ ಪ್ರಾಪ್ಯ – ಇದು ಏನಾಂ ಪ್ರಾಪ್ಯವೆಂಬುದರ ವ್ಯಾಖ್ಯಾನವು, ಇಂತಹ ಕರ್ಮಯೋಗನಿಷ್ಠೆಯನ್ನು ಹೊಂದಿ, ನ ವಿಮುಹ್ಯತಿ ಎಂದರೆ ಪುನಸ್ಸಂಸಾರಂ ನಾಪ್ನೋತಿ – ಪುನಃ ಸಂಸಾರವನ್ನು ಹೊಂದುವದಿಲ್ಲವು. ಯಾವಾಗ ಮೋಹವು ದೂರೀಕೃತವೋ ಆಗ ಪುನಸ್ಸಂಸಾರವನ್ನು ಹೊಂದದೇ ಇರಲು ಮಾರ್ಗವನ್ನು ಮಾಡಿಕೊಳ್ಳುವನೆಂಬ ಭಾವವು. ಅಸ್ಯಾಂ ಸ್ಥಿತ್ಯಾಂ– ಇಂತಹ ಕರ್ಮಯೋಗನಿಷ್ಠೆಯಲ್ಲಿ, ಅನ್ತಿಮೇಽಪಿ ವಯಸಿ ಎಂಬುದು ಅನ್ತಕಾಲೇಽಪಿ ಎಂಬುದರ ವ್ಯಾಖ್ಯಾನವು, ಅಪರವಯಸ್ಸಿನಲ್ಲಿಯಾದರೂ, ಸ್ಥಿತ್ವಾ – ಇರುವವನಾಗಿ, ಬ್ರಹ್ಮನಿರ್ವಾಣಮೃಚ್ಛತಿ ಎಂದರೆ ನಿರ್ವಾಣಮಯಂ ಬ್ರಹ್ಮ ಗಚ್ಛತಿ - ಆನಂದಸ್ವರೂಪನಾದ ತನ್ನ ಆತ್ಮವನ್ನು ಹೊಂದುವನು, ಎಂದರೆ ಸಾಕ್ಷಾತ್ಕರಿಸುವನೆಂಬ ಭಾವವು. ಅನ್ತಕಾಲೇಽಪಿ ಎಂಬುದಕ್ಕೆ ದೇಹಾವಸಾನಕಾಲದಲ್ಲೂ ಎಂದು ಕೆಲವರು ಅರ್ಥಮಾಡಿರುವದು ಸರಿಯಾದುದಲ್ಲವೆಂದು ತಿಳಿಸುವದಕ್ಕಾಗಿ ಅನ್ತಿಮೇಽಪಿ ವಯಸಿ ಎಂದು ಅರ್ಥಮಾಡಿದರು. ಏತಕ್ಕೆಂದರೆ "ಯಾವಜ್ಜೀವಂತು ತತ್ಕುರ್ಯಾತ್ ಯೇನ ಪ್ರೇತ್ಯ ಸುಖಮೇಧತೇ" ಎಂಬ ಶ್ರೀ ವಿದುರೋಕ್ತಿಯಿಂದಲೂ ಮತ್ತು ಈ ಗ್ರಂಥದಿಂದಲೂ ವ್ಯಕ್ತವಾದುದರಿಂದ ಹಾಗೆ ವ್ಯಾಖ್ಯಾನವು. ಪೂರ್ವ ವಯಸ್ಸಿನಲ್ಲಿ ಸಾಧ್ಯವಲ್ಲದಿದ್ದರೂ ಅಪರ ವಯಸ್ಸಿನಲ್ಲಾದರೂ ಕ್ರಮೇಣ ಉಂಟಾಗಬಹುದೆಂಬ ಅಭಿಪ್ರಾಯದಿಂದ ಹಾಗೆ ಹೇಳಿದರು. ಇದರ ಸರಿಯಾದ ಅಭಿಪ್ರಾಯವೇನೆಂಬುದನ್ನು ತಿಳಿಸುತ್ತಾರೆ:—ಸುಖೈಕತಾನ ಮಾತ್ಮಾನಮವಾಪ್ನೋತೀತ್ಯರ್ಥಃ - ಆನಂದಕ್ಕೆ ಮುಖ್ಯಾಶ್ರಯಭೂತವಾದ ಆತ್ಮಾವನ್ನು ಹೊಂದುವನು ಎಂಬರ್ಥವು. ಆದರೆ ಈ ಅಧ್ಯಾಯದಲ್ಲಿ ನಿತ್ಯನಾದ ಆತ್ಮಸ್ವರೂಪದ ಜ್ಞಾನವೂ ಮತ್ತು ಆತ್ಮಸಾಕ್ಷಾತ್ಕಾರವೂ ಎರಡೂ ಹೇಳಲ್ಪಟ್ಟಿರುವದರಿಂದ, ಈ ಶ್ಲೋಕವು ಕರ್ಮಯೋಗದ ನಿಗಮನ ಶ್ಲೋಕವೆಂದು ಹೇಳಲು ಸಂದೇಹವಿಲ್ಲವು. ಅಥವಾ ಪ್ರಧಾನಭೂತವಾಗಿ ಕರ್ಮಯೋಗವೂ ಮತ್ತು ಅದರ ಸಂಬಂಧದಿಂದ ಉಂಟಾಗುವ ಜ್ಞಾನಯೋಗವೂ ಸಹ ನಿಗ

ಏವಮಾತ್ಮಯಾಥಾತ್ಮ್ಯಂ ಯುದ್ಧಾಖ್ಯಸ್ಯ ಚ ಕರ್ಮಣ ಸ್ತತ್ಪ್ರಾಪ್ತಿ ಸಾಧನತಾ ಮಜಾನತ ಶ್ಶರೀರಾತ್ಮಜ್ಞಾನೇನ ಮೋಹಿತಸ್ಯ, ತೇನ ಚ ಮೋಹೇನ ಯುದ್ಧಾನ್ನಿವೃತ್ತಸ್ಯ ಮೋಹ ಶಾಂತಯೇ ನಿತ್ಯಾತ್ಮವಿಷಯಾ ಯಾ ಸಾಂಖ್ಯ ಬುದ್ಧಿಃ, ತತ್ಪೂರ್ವಿಕಾಚ ಅಸಙ್ಗಕರ್ಮಾನುಷ್ಠಾನ ರೂಪ ಕರ್ಮಯೋಗ ವಿಷಯಾ ಬುದ್ಧಿಃ, ಸ್ಥಿತಪ್ರಜ್ಞತಾಯೋಗ ಸಾಧನ ಭೂತಾ ದ್ವಿತೀಯೇಽಧ್ಯಾಯೇ ಪ್ರೋಕ್ತಾ; ತದುಕ್ತಂ "ನಿತ್ಯಾತ್ಮಾ ಸಙ್ಗಕರ್ಮೇಹಾಗೋಚರಾ ಸಾಂಖ್ಯಯೋಗಧೀಃ । ದ್ವಿತೀಯೇ ಸ್ಥಿತಧೀಲಕ್ಷಾ ಪ್ರೋಕ್ತಾ ತನ್ಮೋಹಶಾಂತಯೇ. ॥೭೨॥

ಇತಿ ಶ್ರೀ ಭಗವದ್ರಾಮಾನುಜವಿರಚಿತೇ ಶ್ರೀಮದ್ಗೀತಾಭಾಷ್ಯೇ
ಸಾಂಖ್ಯಯೋಗೋ ನಾಮ ದ್ವಿತೀಯೋಽಧ್ಯಾಯಃ.
ಶ್ರೀಮತೇ ರಾಮಾನುಜಾಯ ನಮಃ.

---

ಮನಮಾಡಿ ಹೇಳಲ್ಪಡುತ್ತದೆಂದೂ ಭಾವಿಸಬಹುದು ; ಈ ಶ್ಲೋಕದಲ್ಲಿ ಹೇಳಿರುವದೇನೆಂದರೆ:—ಈ ಚೇತನನಿಗೆ ಮುಖ್ಯವಾಗಿ ಪರಮ ಪುರುಷಾರ್ಥರೂಪವಲ್ಲಿ ಬೇಕಾದುದು ಸಂಸಾರ ನಿವೃತ್ತಿರೂಪ ಲಕ್ಷಣವುಳ್ಳ, ಹಿಂದೆ ಎರಡು ಶ್ಲೋಕಗಳಲ್ಲೂ "ಶಾಂತಿ" ಶಬ್ದದಲ್ಲಿ ಹೇಳಲ್ಪಟ್ಟದುದು, ಅದೇ ಇಲ್ಲಿ ನಿರ್ವಾಣ ಶಬ್ದದಿಂದ ವ್ಯಾಖ್ಯಾನಮಾಡಲ್ಪಟ್ಟಿತು. ಆ ಶಾನ್ತಿಯು ನಿರತಿಶಯಸುಖರೂಪವಾದುದು. ಶ್ರೀ ಯತಿವರ್ಯರಿಗೆ ನಿರ್ವಾಣ ಶಾನ್ತಿಪದಗಳು ಸಮಾನಾರ್ಥಕಗಳೆಂಬೇ ಭಾವವು. ಏಕೆಂದರೆ ಮುಂದೆ ೪ - ೩೯ ರಲ್ಲು "ಜ್ಞಾನಂ ಲಬ್ಧ್ವಾ ಪರಾಂಶಾಂತಿಮಚಿರೇಣಾಧಿಗಚ್ಛತಿ" ಎಂಬುದಕ್ಕೆ ವ್ಯಾಖ್ಯಾನವಾಗಿ "ಪರಂ ನಿರ್ವಾಣಮಾಪ್ನೋತಿ" ಎಂದು ಅಪ್ಪಣೆ ಕೊಡಿಸಿರುತ್ತಾರೆ. ಹೀಗೆ ಸಂಸಾರವಿಮೋಚನೆಗೆ ಮುಖ್ಯವಾದ ಅಸ್ತಿಭಾರವು ಕರ್ಮಯೋಗವೆಂಬರ್ಥವನ್ನು ವ್ಯಕ್ತಪಡಿಸಿ, ಅದು ಹೇಗೆ ಸಾಧನವಾಗುತ್ತದೆ ಎಂಬ ಆಶಯದಲ್ಲಿ ತನ್ನ ಆತ್ಮ ಸಾಕ್ಷಾತ್ಕಾರಕ್ಕೆ ಎಂದರೆ ಸ್ಥಿತಪ್ರಜ್ಞತೆಗೆ ಹೇತುವಾಗುತ್ತದೆಂಬ ಜ್ಞಾನಯೋಗದ ಮಹಿಮೆಯನ್ನೂ ತಿಳಿಸಿ, ತನ್ಮೂಲಕ ಪ್ರಥಮಷಟ್ಕದ ನಾಲ್ಕು ಅಧ್ಯಾಯಗಳಲ್ಲಿ ಏನು ಹೇಳಲ್ಪಡುತ್ತದೆಂಬುದನ್ನೂ ಏವಂ ಎಂದು ಆರಂಭಿಸಿದ ವಾಕ್ಯಗಳಮೂಲಕ ತಿಳಿಸುತ್ತಾರೆ. ತಮ್ಮ ಅಭಿಪ್ರಾಯವು ತಮ್ಮ ಗುರುಗಳಾದ ಆಳವಂದಾರರು ಅನುಗ್ರಹಿಸಿರುವ ದ್ವಿತೀಯಾಧ್ಯಾಯದ ಸಙ್ಗ್ರಹ ಶ್ಲೋಕ ತಾತ್ಪರ್ಯವನ್ನು ಅನುಸರಿಸಿರುತ್ತದೆಂದೂ ಹೇಳುತ್ತಾರೆ:—ಏವಂ - ಈ ಪ್ರಕಾರವಾಗಿ, **ಆತ್ಮಯಾಥಾತ್ಮ್ಯವನ್ನೂ,** ಮತ್ತು **ಯುದ್ಧಾಖ್ಯಸ್ಯ ಚ ಕರ್ಮಣಃ** - ಯುದ್ಧವೆನ್ನಲ್ಪಡುವ ಕ್ಷತ್ರಿಯಧರ್ಮಕ್ಕೆ, **ತತ್ಪ್ರಾಪ್ತಿಸಾಧನತಾಂ** - ಆ ಆತ್ಮಪ್ರಾಪ್ತಿಯನ್ನು ಸಾಧಿಸಿಕೊಡುವ ಶಕ್ತಿಯುಂಟೆಂಬುದನ್ನೂ, ಈ ಎರಡನ್ನೂ **ಅಜಾನತಃ** - ತಿಳಿಯದೇ ಇರುವ, **ಶರೀರಾತ್ಮಜ್ಞಾನೇನ**- ದೇಹವೇ ಆತ್ಮಾ ಎಂಬ ಜ್ಞಾನದಿಂದ, **ಮೋಹಿತಸ್ಯ** - ಮೋಹಪಡುತ್ತಿರುವ, ಮತ್ತು **ತೇನ ಚ ಮೋಹೇನ** - ಆ ಮೋಹದಿಂದಲೇ, **ಯುದ್ಧಾನ್ನಿವೃತ್ತಸ್ಯ** - ಯುದ್ಧದಿಂದ ನಿವೃತ್ತಿಹೊಂದಿದ, ಎಂದರೆ ಯುದ್ಧಮಾಡುವದಿಲ್ಲವೆಂದು ಸಙ್ಕಲ್ಪಿಸಿದ ಅರ್ಜುನನ, **ಮೋಹಶಾನ್ತಯೇ** - ಅಂತಹಭ್ರಮವು ಶಾನ್ತಿಯನ್ನು ಹೊಂದುವದಕ್ಕಾಗಿ, **ನಿತ್ಯಾತ್ಮ ವಿಷಯಾ** - ನಮ್ಮ ಜೀವಾತ್ಮವು ನಿತ್ಯವೆಂಬುದೇ ವಿಷಯವಾಗಿವುಳ್ಳ, **ಯಾ ಸಾಂಖ್ಯಬುದ್ಧಿಃ** - ಆತ್ಮ ತತ್ವವಿಷಯವಾದ ಬುದ್ಧಿಯು ಯಾವುದುಂಟೋ, (ಇದು "ಏಷಾತೇಽಭಿಹಿತಾಸಾಂಖ್ಯೇ" ಎಂಬ ೩೯ನೆಯ ಶ್ಲೋಕದಲ್ಲಿ ನಿಗಮನ ಮಾಡಲ್ಪಟ್ಟಿತು.) ಮತ್ತು **ತತ್ಪೂರ್ವಿಕಾಚ** - ಆ ಆತ್ಮತತ್ವವಿಷಯಜ್ಞಾನ

**ಪೂರ್ವಿಕವಾದ, ಅಸಙ್ಗ ಕರ್ಮಾನುಷ್ಠಾನ ರೂಪ ಕರ್ಮಯೋಗ ವಿಷಯಾ ಯಾ ಬುದ್ಧಿಃ**– ಕರ್ಮ ಫಲಗಳಲ್ಲಿ ಸಂಬಂಧವಿಲ್ಲದ ಕರ್ಮಾನುಷ್ಠಾನರೂಪವಾದ ಕರ್ಮಯೋಗವಿಷಯವಾದ ಯಾವ ಬುದ್ಧಿಯುಂಟೋ, (ಇದು "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ" ಎಂಬ ೪೭ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ.) **ಇವೆರಡೂ ಸಹ ಸ್ಥಿತಪ್ರಜ್ಞತಾ ಯೋಗಸಾಧನ ಭೂತಾ** - ಸ್ಥಿತಿ ಪ್ರಜ್ಞತೆಯಿಂದ ಕೂಡಿದ ಜ್ಞಾನಯೋಗಕ್ಕೆ ಸಾಧನಭೂತವೆಂದೂ, ಅಥವಾ ಸ್ಥಿತಪ್ರಜ್ಞತೆ ಮತ್ತು ಜೀವಾತ್ಮ ಸಮಾಧಿರೂಪಯೋಗ, ಇವೆರಡೂ **ದ್ವಿತೀಯಾಧ್ಯಾಯೇ ಪ್ರೋಕ್ತಾ**-ಈ ಎರಡನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿರುತ್ತದೆ. **ತದುಕ್ತಂ**- ಆ ಅಭಿಪ್ರಾಯವನ್ನೇ ಹಾಗೆಯೇ ಶ್ರೀ ಯಾಮುನೇಯರವರ ದ್ವಿತೀಯಾಧ್ಯಾಯದ ಸಙ್ಗ್ರಹಶ್ಲೋಕವಾದ "**ನಿತ್ಯಾತ್ಮಾಸಙ್ಗಕರ್ಮೇಹಾ**" ಎಂಬುದರಲ್ಲಿ ವಿಶದವಾಗಿ ಹೇಳಲ್ಪಟ್ಟಿರುತ್ತದೆ. ಈ ಶ್ಲೋಕಾರ್ಥವನ್ನು ಮುಂದೆ ಕಾಣಬಹುದು. **ತದುಕ್ತಂ** ಎಂಬುದರ ತಮ್ಮ ಆಚಾರ್ಯಪ್ರಾಚಾರ್ಯರುಗಳಮೂಲಕ ಬಂದ ಸಂಪ್ರದಾಯಾರ್ಥವನ್ನು ಮನಸ್ಸಿನಲ್ಲಿಟ್ಟು ಹೇಳುತ್ತೇನೆಂಬ ಭಾವವು. ಸ್ಥಿತಪ್ರಜ್ಞತಾ ಶಬ್ದದಿಂದ ಹೇಳಲ್ಪಡುವ ಜ್ಞಾನನಿಷ್ಠಾರೂಪವಾದ ಜೀವಾತ್ಮದರ್ಶನಕ್ಕೆ ಎರಡು ವಿಧವಾದ ಬುದ್ಧಿಯೂ ಆವಶ್ಯಕವೆಂದು ಹೇಳಲ್ಪಡುತ್ತದೆ. ಅವು ಯಾವುವೆಂದರೆ:—(೧) ಜೀವಾತ್ಮಸ್ವರೂಪವು ನಿತ್ಯವಾದುದೆಂಬುದೂ (೨) ಈ ಸ್ವರೂಪಜ್ಞಾನದಿಂದ ಕೂಡಿದ ಕರ್ಮಫಲಗಳಲ್ಲಿ ಸಙ್ಗವಿಲ್ಲದಿರುವ ಕರ್ಮಯೋಗವೂ ಇವೆರಡರಿಂದಲೂ ಆತ್ಮದರ್ಶನವು ಸಿದ್ಧಿಸುತ್ತದೆಂದು ೫೩ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗೆ ಹೇಳಿ ಆ ಸ್ಥಿತಪ್ರಜ್ಞತೆಯ ಸ್ವರೂಪವೂ ಮತ್ತು ಅವಸ್ಥಾಭೇದ ಮೊದಲಾದವುಗಳು ಅನಂತರ ಹೇಳಲ್ಪಟ್ಟವು. ಕರ್ಮಯೋಗವು ಆತ್ಮಯಾಥಾತ್ಮ್ಯಜ್ಞಾನದಿಂದ ಫಲಾಭಿಸಂಧಿಯಿಲ್ಲದ ಕರ್ಮಾನುಷ್ಠಾನವಾದುದರಿಂದ ಉಪಾಯಾಙ್ಗವೇ ವಿನಾ ಸಾಕ್ಷಾತ್ತಾಗಿ ಉಪಾಯವಲ್ಲವು. ಇದು ಜ್ಞಾನಯೋಗಕ್ಕಾಗಲಿ, ಸಾಕ್ಷಾತ್ತಾಗಿಯೇ ಭಕ್ತಿಯೋಗಕ್ಕಾಗಲಿ ಸಾಧಕವೆಂದು ತಿಳಿಯತಕ್ಕದ್ದು. ಎಂಬಲ್ಲಿಗೆ

ಶ್ರೀ ತಿರುನಾರಾಯಣಪುರಂ ವಿಜಯರಾಘವಶರ್ಮನಿಂದ ರಚಿಸಲ್ಪಟ್ಟ

**ಆಚಾರ್ಯ ಹೃದಯಾನ್ವೇಷಿಣೀ**

ಎಂಬ ಶ್ರೀಮದ್ಭಗವದ್ಗೀತಾ ಮತ್ತು ಗೀತಾ ಭಾಷ್ಯಗಳಿಗೆ ಅರ್ಥ ತಾತ್ಪರ್ಯಗಳಲ್ಲಿ ಎರಡನೆಯ ಅಧ್ಯಾಯವು ಸಂಪೂರ್ಣವಾದುದು.

ಶ್ರೀಮತೇ ನಿಗಮಾನ್ತ ಮಹಾ ದೇಶಿಕಾಯ ನಮಃ

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

ಶ್ರೀ ಯಾಮುನೇಯ ಮಹಾ ಮುನಯೇ ನಮಃ.

# ಶ್ರೀಮದ್ಗೀತಾರ್ಥಸಙ್ಗ್ರಹಃ

**ನಿತ್ಯಾತ್ಮಾಽಸಙ್ಗಕರ್ಮೇಹಾಗೋಚರಾ ಸಾಂಖ್ಯಯೋಗಧೀಃ ।**
**ದ್ವಿತೀಯೇ ಸ್ಥಿತಧೀಲಕ್ಷಾ ಪ್ರೋಕ್ತಾ ತನ್ಮೋಹ ಶಾಂತಯೇ ॥೬॥**

---

**ಅರ್ಥವು :—**ಅನ್ವಯಕ್ರಮ ಹೇಗೆಂದರೆ :—"**ನಿತ್ಯಾತ್ಮಗೋಚರಾ ಸಾಂಖ್ಯಧೀಃ** ಮತ್ತು **ಅಸಙ್ಗಕರ್ಮೇಹಾಗೋಚರಾ ಯೋಗಧೀಃ**" ಇವೆರಡೂ **ಸ್ಥಿತಧೀ ಲಕ್ಷಾ** ಎಂದು ಎರಡನೆಯ ಅಧ್ಯಾಯದಲ್ಲಿ, **ತನ್ಮೋಹ ಶಾಂತಯೇ** - ಆ ಅರ್ಜುನನ ಮೋಹಶಾಂತಿಗೋಸ್ಕರ, **ಪ್ರೋಕ್ತಾ** - ಹೇಳಲ್ಪಟ್ಟಿತು ಎಂಬದಾಗಿ. **ನಿತ್ಯಾತ್ಮಗೋಚರಾ ಸಾಂಖ್ಯಧೀಃ** - ಸಾಂಖ್ಯವೆಂದರೆ ನಿತ್ಯವಾದ ಆತ್ಮತತ್ವವನ್ನು, ತೋರಿಸುವ ಬುದ್ಧಿಯು. ಹಿಂದೆ ಸಂಖ್ಯಾ ಎಂದರೆ ಬುದ್ಧಿ ಎಂದೂ, ಆದುದ ರಿಂದ ಸಾಂಖ್ಯವೆಂದರೆ ಆತ್ಮತತ್ವ ಸ್ವರೂಪವನ್ನು ಪ್ರದರ್ಶಿಸುವ ಜ್ಞಾನವೂ, ಮತ್ತು **ಅಸಙ್ಗಕರ್ಮೇಹಾ ಗೋಚರಾ ಯೋಗಧೀಃ** - ಕರ್ಮ ಫಲಗಳಲ್ಲಿ ಸಂಬಂಧವಿಲ್ಲದ ಕರ್ಮಾ ನುಷ್ಠಾನ ವಿಷಯವಾದ ಸಿದ್ಧ್ಯಸಿದ್ಧಿಗಳಲ್ಲಿ ಚಿತ್ತ ಸಮಾಧಾನವುಳ್ಳ ಬುದ್ಧಿಯು. ಇದು "**ಯೋಗಸ್ಥಃ ಕುರುಕರ್ಮಾಣಿ ಸಙ್ಗಂತ್ಯಕ್ತ್ವಾ ಧನಂಜಯ । ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ, ಸಮತ್ವಂ ಯೋಗ ಉಚ್ಯತೇ ॥**" ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಇಂತಹ **ಸಾಂಖ್ಯಯೋಗಧೀಃ** - ಆತ್ಮ ತತ್ವ ವಿಷಯವಾದ ಜ್ಞಾನವೂ ಫಲಾಭಿಸಂಧಿರಹಿತವಾದ ಕರ್ಮಾನುಷ್ಠಾನವನ್ನು ಮಾಡಿ ಸಿದ್ಧ್ಯಸಿದ್ಧಿಗಳಲ್ಲಿ ಸಮಾಧಾನ ಚಿತ್ತತೆಯೂ, **ಸ್ಥಿತಧೀ ಲಕ್ಷಾ** - ಸ್ಥಿತಪ್ರಜ್ಞತೆ ಅಥವಾ ಜ್ಞಾನಯೋಗ ಎಂದು ಹೇಳಲ್ಪಡುವ ಆತ್ಮದರ್ಶನವೇ ಸಾಧ್ಯ ವಾಗಿವುಳ್ಳದ್ದೆಂದು ಎಂದರೆ ಅವೆರಡು ಜ್ಞಾನವೂ ಸ್ಥಿತಪ್ರಜ್ಞತೆಗೆ ಅಙ್ಗವೆಂದು ಎಂದರೆ ಜ್ಞಾನ ಯೋಗಕ್ಕೆ ಅಙ್ಗವೆಂದೂ, **ತನ್ಮೋಹ ಶಾನ್ತಯೇ** - ಆ ಅರ್ಜುನನ ದೇಹವೇ ಆತ್ಮಾ ಎಂಬ ಮೋಹ ಶಾಂತಿಗೋಸ್ಕರ **ದ್ವಿತೀಯೇ ಪ್ರೋಕ್ತಾ** - ಈ ಎರಡನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿತು. ಹೀಗೆ ಸಾಂಖ್ಯಯೋಗ ಬುದ್ಧಿಯು, ಸ್ಥಿತಧೀಗೆ ಸಾಧಕವೆಂದು ಹೇಳಿರುವದರಿಂ ದಲೇ ಈ ಅಧ್ಯಾಯಕ್ಕೆ ಸಾಂಖ್ಯಯೋಗವೆಂಬ ಹೆಸರು ಕೊಡಲ್ಪಟ್ಟಿರುತ್ತದೆ.

ಹೀಗೆ ಎರಡನೆಯ ಅಧ್ಯಾಯದಲ್ಲಿ ಮೂರು ವಿಷಯಗಳು ಮುಖ್ಯವಾಗಿ ಹೇಳಲ್ಪಟ್ಟವು :—

೧. ನಿತ್ಯಾತ್ಮಜ್ಞಾನವು ಕರ್ಮಯೋಗಕ್ಕೆ ಆವಶ್ಯಕವು.

೨. ಕರ್ಮಾನುಷ್ಠಾನವು ಫಲಾಭಿಸಂಧಿ ಇಲ್ಲದೆ ಭಗವದರ್ಪಣರೂಪವಾಗಿರಬೇಕು. ಸಿದ್ಧ್ಯಸಿದ್ಧಿಗಳಲ್ಲಿ ಚಿತ್ತಸಮಾಧಾನವಿರತಕ್ಕದ್ದು.

೩. ಇವೆರಡೂ ಜ್ಞಾನಯೋಗಕ್ಕೆ ಆವಶ್ಯಕವು. ಆ ಜ್ಞಾನಯೋಗದ ಸ್ವರೂಪವು ಎಂಥಾದ್ದೆಂಬುದೂ ಹೇಳಲ್ಪಟ್ಟಿತು.

# ಶ್ರೀಮದ್ಭಗವದ್ಗೀತಾಯಾಂ

## ತೃತೀಯೋಽಧ್ಯಾಯಃ

**ಭಾ. ಅವ. ತದೇವಂ ಮುಮುಕ್ಷುಭಿಃ ಪ್ರಾಪ್ಯತಯಾ ವೇದಾಂತೋದಿತ ನಿರಸ್ತ ನಿಖಿಲಾಽವಿದ್ಯಾದಿ ದೋಷಗಂಧಾನವಧಿಕಾ ತಿಶಯಾ ಸಂಖ್ಯೇಯ ಕಲ್ಯಾಣ ಗುಣಗಣ ಪರಬ್ರಹ್ಮ ಪುರುಷೋತ್ತಮ ಪ್ರಾಪ್ತ್ಯುಪಾಯ ಭೂತ ವೇದನೋಪಾಸನ ಧ್ಯಾನಾದಿ ಶಬ್ದ ವಾಚ್ಯ ತದೈಕಾಂತಿಕಾತ್ಯಂತಿಕ ಭಕ್ತಿಂ ವಕ್ತುಂ, ತದಙ್ಗಭೂತಂ (೧) "ಯ**

---

**ಭಾಷ್ಯಾವತಾರಿಕೆಯ ಅರ್ಥವು :**—ಈ ಮೂರನೆಯ ಅಧ್ಯಾಯದಲ್ಲೂ ಮತ್ತು ಮುಂದಿನ ಮೂರು ಅಧ್ಯಾಯಗಳಲ್ಲೂ ಹೇಳಲ್ಪಡುವ ಉಪದೇಶಗಳಿಗೂ ಈ ಎರಡನೆಯ ಅಧ್ಯಾಯದ ಅರ್ಥಗಳಿಗೂ ಸಙ್ಗತಿಯೇನು ಎಂಬುದನ್ನು ತಿಳಿಸಬೇಕೆಂಬ ಆಶಯವುಳ್ಳವರಾಗಿ, ಸಾಕ್ಷಾತ್ಮೋಕ್ಷೋಪಾಯವು ಯಾವುದು ಅದರ ಸ್ವರೂಪವೇನು? ಪ್ರಾಪ್ಯವು ಯಾವುದು? ಎಂಬ ಅಪೇಕ್ಷೆಯಲ್ಲಿ, ದ್ವಿತೀಯೋಽಧ್ಯಾಯದಲ್ಲಿ ಹೇಳಲ್ಪಟ್ಟ ಅರ್ಥಗಳಾದ ಕರ್ಮ ಜ್ಞಾನ ಯೋಗಗಳಿಗೆ ಸಾಕ್ಷಾತ್ತಾಗಿ ಮೋಕ್ಷೋಪಾಯತ್ವವಿಲ್ಲದುದರಿಂದ, ಇಂತಹ ಮೋಕ್ಷ ಸಾಧನವನ್ನು ತಿಳಿಸುವ ಶಾಸ್ತ್ರದಲ್ಲಿ ಸಙ್ಗತಿ ಯಾವುದೂ ಇಲ್ಲವೆಂಬ ಶಙ್ಕೆಯನ್ನು ಪರಿಹರಿಸುವದಕ್ಕಾಗಿ ಮೊದಲು ಮೋಕ್ಷಾರ್ಥಿಯ ಇತಿಕರ್ತವ್ಯತೆಯನ್ನು **ತದೇವಂ** ಎಂದಾರಂಭಿಸಿ ಅವತಾರಿಕೆಯನ್ನು ಶ್ರೀ ಯತಿವರ್ಯರು ದಯಪಾಲಿಸಿರುತ್ತಾರೆಂದು ಶ್ರೀ ನಿಗಮಾಂತ ದೇಶಿಕರು ಅಪ್ಪಣೆ ಕೊಡಿಸಿರುತ್ತಾರೆ.

ಎರಡನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಸರ್ವಸ್ವವೂ ಜೀವಾತ್ಮಪರವಾಗಿ ಪರಮಾತ್ಮ ಪರವಲ್ಲವೆಂದು ಇತರ ಭಾಷ್ಯಾದಿಗಳನ್ನೆಲ್ಲಾ ನಿರಾಕರಿಸಿ ಹೇಳಿದುದರಿಂದ, **ತತ್**–ಆ ಕಾರಣದಿಂದಲೇ, **ಏವಂ**–ಈ ವಿಧವಾಗಿ ಎಂದರೆ ಈ ಗ್ರಂಥದ ಉಪದೇಶಕ್ಕನುಸಾರವಾಗಿ, **ಮುಮುಕ್ಷುಭಿಃ**–ಮೋಕ್ಷಾರ್ಥಿಗಳಿಂದ, **ಪ್ರಾಪ್ಯತಯಾ** - ಪ್ರಾಪ್ಯನೆಂಬದಾಗಿ **ವೇದಾಂತೋದಿತ** - ವೇದಾಂತದಲ್ಲಿ ಎಂದರೆ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ, **ನಿರಸ್ತ ನಿಖಿಲಾವಿದ್ಯಾದಿ ದೋಷಗಂಧ** - ನಿರಸನಮಾಡಲ್ಪಟ್ಟ ಸಮಸ್ತವಾದ ಅವಿದ್ಯೆಯೇ ಮೊದಲಾದ ದೋಷ ಸಂಬಂಧವೇ ಇಲ್ಲದ ಎಂದರೆ ಹೇಯಪ್ರತ್ಯನೀಕನಾದ, ಇದು ಪುರುಷೋತ್ತಮನಿಗೆ ವಿಶೇಷಣವು, ಮತ್ತು **ಅನವಧಿಕಾತಿಶಯ**-ಇಷ್ಟೆಂದು ಹೇಳಲು ಸಾಧ್ಯವಿಲ್ಲದ ಅತಿಶಯವುಳ್ಳ, **ಅಸಂಖ್ಯೇಯ ಕಲ್ಯಾಣ ಗುಣಗಣ** - ಲೆಕ್ಕಮಾಡಲು ಸಾಧ್ಯವಿಲ್ಲದ ಕಲ್ಯಾಣಗುಣಗಳ ಸಮೂಹವುಳ್ಳ, **ಪರಬ್ರಹ್ಮ**ನೆಂದು ಹೇಳಿಸಿಕೊಳ್ಳುವ **ಪುರುಷೋತ್ತಮ**ನನ್ನು, **ಪ್ರಾಪ್ತ್ಯುಪಾಯ ಭೂತ** - ಹೊಂದಲು ಉಪಾಯವಾದ, **ವೇದನ, ಉಪಾಸನ, ಧ್ಯಾನ**ವೇ ಮೊದಲಾದ, **ಶಬ್ದವಾಚ್ಯ** - ಶಬ್ದಗಳಿಂದ ಹೇಳಿಸಿಕೊಳ್ಳುವ, **ತದೈಕಾಂತಿಕ** - ಆ ಪುರುಷೋತ್ತಮನಲ್ಲೇ ಅಲ್ಲದೆ ಇನ್ನೆಲ್ಲೂ ಎಂಬುದನ್ನು ತಿಳಿಸಿ, ಅನಂತರ ಹಿಂದೆ ಹೇಳಿದ ನಿಶ್ಚಯಜ್ಞಾನವುಳ್ಳ, ಮತ್ತು **ಆತ್ಯಂತಿಕ** - ಫಲದೆಶೆಯಲ್ಲಿಯೂ ಅನುಸರಿಸಿ ಬರುವ, **ಭಕ್ತಿಂ ವಕ್ತುಂ** - ಭಕ್ತಿಯೋಗವನ್ನು ಮುಂದೆ ಹೇಳುವದಕ್ಕಾಗಿ, **ತದಙ್ಗಭೂತಂ** - ಆ ಭಕ್ತಿಯೋಗಕ್ಕೆ ಅಙ್ಗವಾದ ಎಂದರೆ ಸಾಧನವಾದ, **"ಯ ಆತ್ಮಾಽಪಹತ ಪಾಪ್ಮಾ"** "ಯಾವ ಜೀವಾತ್ಮನು ಸಕಲ ದೋಷಗಳಿಂದಲೂ ಬಿಡಲ್ಪಟ್ಟವನೋ" ಎಂಬಿವೇ ಮೊದಲಾದ, **ಪ್ರಜಾಪತಿ ವಾಕ್ಯೋದಿತಂ** - ಚತುರ್ಮುಖಬ್ರಹ್ಮನ ವಾಕ್ಯದಲ್ಲಿ ಹೇಳಲ್ಪಟ್ಟ, **ಪ್ರಾಪ್ತುರಾತ್ಮನಃ** - ಪ್ರಾಪ್ತೃವಾದ ಜೀವಾತ್ಮನ, ಎಂದರೆ ಪರಬ್ರಹ್ಮವನ್ನು ಹೊಂದುವ ಜೀವಾತ್ಮನ **ಯಾಥಾತ್ಮ್ಯ ದರ್ಶನಂ** -

---

(೧) ಛಾಂ. ೮. ೭. ೧.

**ಭಾ. ಆತ್ಮಾಽಪಹತ ಪಾಪ್ಮಾ" ಇತ್ಯಾದಿ ಪ್ರಜಾಪತಿ ವಾಕ್ಯೋದಿತಂ ಪ್ರಾಪ್ತುರಾತ್ಮನೋ ಯಾಥಾತ್ಮ್ಯದರ್ಶನಂ ತನ್ನಿತ್ಯತಾಜ್ಞಾನ ಪೂರ್ವಕಾಽಸಙ್ಗಕರ್ಮ ನಿಷ್ಪಾದ್ಯ ಜ್ಞಾನಯೋಗ ಸಾಧ್ಯಮುಕ್ತಂ. ಪ್ರಜಾಪತಿ ವಾಕ್ಯೇಹಿ ದಹರ ವಾಕ್ಯೋದಿತ ಪರ**

---

ಯಥಾವತ್ತಾದ ಸ್ವರೂಪದ ಸಾಕ್ಷಾತ್ಕಾರವು **ತನ್ನಿತ್ಯತಾ ಜ್ಞಾನಪೂರ್ವಕಾ** - ಆ ಜೀವಾತ್ಮನು ನಿತ್ಯವೆಂಬ ಜ್ಞಾನಪೂರ್ವಕವಾದ, ಮತ್ತು **ಅಸಙ್ಗ ಕರ್ಮ** - ಫಲಾಭಿಸಂಧಿಯಿಲ್ಲದ ಕರ್ಮ ಯೋಗದಿಂದ, **ನಿಷ್ಪಾದ್ಯ** - ಉಂಟಾಗುವ, **ಜ್ಞಾನಯೋಗ ಸಾಧ್ಯಂ** - ಜ್ಞಾನಯೋಗದಿಂದ ಸಾಧಿಸಲ್ಪಡತಕ್ಕದ್ದೆಂದು, **ಉಕ್ತಂ** - ಹೇಳಲ್ಪಟ್ಟಿತು. ಆತ್ಮಾವಲೋಕನವು ಭಕ್ತ್ಯುಪಾಯಕ್ಕೆ ಅಙ್ಗವೆಂಬುದಕ್ಕೆ **"ಯ ಆತ್ಮಾ ಪಹತ ಪಾಪ್ಮಾ"** ಎಂಬ ಶ್ರುತಿವಾಕ್ಯವನ್ನು ಪ್ರಮಾಣವಾಗಿ ಉದಾಹರಿಸಿದರು. ಹಿಂದೆ ಹೇಳಿದುದಕ್ಕೂ ಗೀತೆಯಲ್ಲಿ ಮುಂದೆ ಹೇಳುವಹಕ್ಕೂ ಸಙ್ಗತಿ ಹೇಗೆಂಬುದನ್ನು ಈ ಒಂದು ವಾಕ್ಯಮೂಲಕ ಸಙ್ಗ್ರಹಿಸಿ ಹೇಳುತ್ತಾರೆ. ಪರಮಾತ್ಮನು ಪ್ರಾಪ್ಯನು, ಈ ಜೀವಾತ್ಮನು ಪ್ರಾಪ್ತಾ ಹೀಗೆ ಇಬ್ಬರೂ ಭಿನ್ನರೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆಂದು ಅದಕ್ಕಾಗಿ ಛಾಂದೋಗ್ಯ ಶ್ರುತಿಯನ್ನು **"ಯ ಆತ್ಮಾ ಅಪಹತ ಪಾಪ್ಮಾ"** ಎಂದು ಉದಾಹರಿಸಿರುತ್ತಾರೆ. ಈ ಜೀವಾತ್ಮನು ಪ್ರಾಪ್ಯನಾದ ಪರಬ್ರಹ್ಮವನ್ನು ಹೊಂದುವ ಉಪಾಯವೇನೆಂದರೆ ಭಕ್ತಿಯೋಗವು; ಇದು ವೇದನ, ಉಪಾಸನ, ಧ್ಯಾನ ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟಿರುತ್ತದೆ. ಪ್ರಾಪ್ಯನು ಸರ್ವೇಶ್ವರನೆಂದೂ ಪ್ರಾಪ್ತೃಗಳು ಜೀವಾತ್ಮರೆಂದೂ ಶ್ರುತಿಯಲ್ಲಿ ಅನೇಕ ಕಡೆಯಲ್ಲಿ ಹೇಳಲ್ಪಟ್ಟಿವೆಯೆಂದು ತೋರಿಸುವದಕ್ಕಾಗಿ ತಾತ್ಪರ್ಯ ಚಂದ್ರಿಕೆಯಲ್ಲಿ ಈ ಪ್ರಮಾಣಗಳು ಉದಾಹರಿಸಲ್ಪಟ್ಟಿವೆ;—ಪ್ರಾಪ್ಯನೂ ಪ್ರಾಪ್ತಾ ಒಂದೇ ಎಂಬ ಅಭಿಪ್ರಾಯವು ಸರಿಯಲ್ಲವೆಂದು ತೋರಿಸುವದಕ್ಕಾಗಿ ಉದಾಹರಿಸಿರುತ್ತಾರೆ:

೧. **ಬ್ರಹ್ಮವಿದಾಪ್ನೋತಿ ಪರಂ**—(ತೈ. ಆ. ೧. ೧.) ಪರಬ್ರಹ್ಮೋಪಾಸಕನು ಪ್ರಾಪ್ಯನಾದ ಪರಬ್ರಹ್ಮವನ್ನು ಹೊಂದುವನು.

೨. **"ಪರಂಜ್ಯೋತಿರುಪಸಂಪದ್ಯ"** (ಛಾಂ. ೮. ೩. ೪.) ಈ ಜೀವಾತ್ಮನು ಪರಂಜ್ಯೋತಿಸ್ಸಾದ ಪರಬ್ರಹ್ಮವನ್ನು ಪ್ರಾಪ್ಯವೆಂದು ತಿಳಿದು.

೩. **"ಯಥಾನದ್ಯ ಸ್ಸ್ಯಂದಮಾನಾ ಸ್ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ। ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷ ಮುಪೈತಿ ದಿವ್ಯಂ॥**

ಹೇಗೆ ಗಂಗಾ ಯಮುನಾ ಸರಸ್ವತೀ ಮೊದಲಾದ ನದಿಗಳು, ತಮ್ಮ ಉತ್ಪತ್ತಿ ಸ್ಥಾನದಿಂದ ಪ್ರವಹಿಸುವವುಗಳಾಗಿ, ಗಂಗಾ ಯಮುನಾ ಮೊದಲಾದ ನಾಮಗಳನ್ನೂ, ಶುಕ್ಲ ಕೃಷ್ಣ ಮೊದಲಾದ ಬಣ್ಣಗಳನ್ನೂ ತೊರೆದು ಸಮುದ್ರವನ್ನು ಹೊಂದುತ್ತವೆಯೋ, ಹಾಗೆಯೇ **ವಿದ್ವಾನ್** - ಪರಬ್ರಹ್ಮೋಪಾಸಕನು, ನಾಮರೂಪಗಳಿಂದ ಬಿಡಲ್ಪಟ್ಟವನಾಗಿ ಎಂದರೆ ದೇವ ಮನುಷ್ಯಾದಿ ನಾಮ ರೂಪಗಳನ್ನು ತೊರೆದು ಸರ್ವಶ್ರೇಷ್ಠನಾದ ಪರಬ್ರಹ್ಮವನ್ನು ಹೊಂದುವನು.

೪. **"ರಸಂ ಹ್ಯೇವಾಯಂ ಲಬ್ಧ್ವಾಽನಂದೀ ಭವತಿ"** (ತೈ. ಆನ. ೮. ೧). **ರಸಂ** - ಆನಂದ ಸ್ವರೂಪನಾದ ಪರಬ್ರಹ್ಮವನ್ನು, **ಅಯಂ** - ಈ ಉಪಾಸಕನು, **ಲಬ್ಧ್ವಾ** - ಹೊಂದಿ, ತಾನೂ, **ಆನಂದೀ ಭವತಿ** - ಆನಂದಮಯನಾಗುತ್ತಾನೆ.

೫. **"ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ"** (ಮುಂ. ೩. ೧. ೩.) **ತದಾ** - ಆ ಕಾಲದಲ್ಲೇ (ಇದಕ್ಕೆ ಹಿಂದೆ ಯದಾ ಎಂದು ಅನ್ವಯ ಉಂಟು) **ವಿದ್ವಾನ್** - ಉಪಾಸಕನು, ಪುಣ್ಯಪಾಪಗಳನ್ನು ಕಳೆದುಕೊಂಡು, ಸ್ವಲ್ಪವೂ ಪ್ರಕೃತಿ ಸಂಬಂಧ

ವಿಲ್ಲದವನಾಗಿ, ಪರಮಾತ್ಮನೊಂದಿಗೆ ಸಮಾನ ಧರ್ಮವನ್ನು ಹೊಂದುವನು. ಮತ್ತು ಶಾರೀರಕ ಸೂತ್ರವಾದ "ಕರ್ಮಕರ್ತೃವ್ಯಪದೇಶಾಚ್ಚ" ಎಂಬ ಸೂತ್ರದಲ್ಲಿ (೧. ೨. ೪.) "ಏತ ಮಿತಃ ಪ್ರೇತ್ಯಾಭಿಸಂಭವಿತಾಸ್ಮಿ" ಎಂದು (ಛಾಂ.೩.೧೪.೪) ಶ್ರುತಿಯಲ್ಲಿ ಪರಬ್ರಹ್ಮನು ಪ್ರಾಪ್ಯವೆಂದೂ ಮುಕ್ತಿ ಹೊಂದುವವನನ್ನು ಪ್ರಾಪ್ತಾನಾಗಿಯೂ ಹೇಳಿರುವದರಿಂದ ಅಭಿಸಮ್ಭಾವಿತಾ ಆದ ಎಂದರೆ ಪ್ರಾಪ್ತಾವಾದ ಜೀವನು, ಅಭಿಸಮ್ಭಾವ್ಯ ನಾದ ಎಂದರೆ ಪ್ರಾಪ್ಯನಾದ ಪರಮಾತ್ಮನಾಗಲಾರನು ಎಂದು ಹೇಳಲ್ಪಟ್ಟಿರುತ್ತದೆ. ಸರ್ವೇಶ್ವರನನ್ನು ಭಕ್ತಿಯಿಂದ ಉಪಾಸನೆ ಮಾಡತಕ್ಕದ್ದೇ ಸಾಕ್ಷಾದ್ಯುಪಾಯವು. ಹೇಗೆ ಧ್ಯಾನಿಸತಕ್ಕದ್ದೆಂದರೆ ಐಕಾಂತಿಕಾತ್ಯಂತಿಕ ಜ್ಞಾನಪೂರ್ವಕವಾಗಿ ಎಂದು ಹೇಳಲ್ಪಟ್ಟಿರುತ್ತದೆ. ಐಕಾಂತಿಕತ್ವವೆಂದರೆ (೧) "ಬ್ರಹ್ಮಾಣಂ ಶಿತಿಕಂಠಂ ಚ ಯಾಶ್ಚಾನ್ಯಾ ದೇವತಾಸ್ಸ್ಮೃತಾಃ । ಪ್ರತಿಬುದ್ಧಾ ನ ಸೇವಂತೇ ಯಸ್ಮಾತ್ ಪರಿಮಿತಂ ಫಲಂ" ಚತುರ್ಮುಖನನ್ನೇಯಾಗಲಿ ರುದ್ರನನ್ನೇಯಾಗಲಿ, ಅಥವಾ ಇತರ ಅನ್ಯದೇವತೆಗಳನ್ನೇಯಾಗಲಿ "ಪ್ರತಿಬುದ್ಧಸ್ತು ಮೋಕ್ಷಭಾಕ್" ಎಂದು ಹೇಳಿರುವ ಮೇರಿಗೆ "ಮೋಕ್ಷಾರ್ಥಿಯಾದ ವಿವೇಕಿಯು ಸೇವಿಸುವದಿಲ್ಲವು; ಏಕೆಂದರೆ ಇವರುಗಳೆಲ್ಲಾ ಪರಿಮಿತವಾದ ಐಹಿಕ ಫಲ ಸ್ವರ್ಗ ಫಲಾದಿಗಳನ್ನು ಕೊಡತಕ್ಕವರು" ಎಂದು ಹೇಳಿರುವ ಮೇರಿಗೆ ಪರಬ್ರಹ್ಮನಾದ ಪುರುಷೋತ್ತಮನಲ್ಲಿ ಮಾತ್ರವೇ ಇಟ್ಟಿರುವ ನಿಶ್ಚಯಜ್ಞಾನವು. ಎಲ್ಲಾ ಮೋಕ್ಷಾರ್ಥಿಗಳಿಗೂ ಉಪಾಸ್ಯನು ಒಬ್ಬನೇ ವಿನಾ ಸಗುಣಬ್ರಹ್ಮ ನಿರ್ಗುಣ ಬ್ರಹ್ಮವೆಂದು ಪ್ರತ್ಯೇಕವಾಗಿ ಹೇಳಿಲ್ಲವು. ಆದುದರಿಂದಲೇ ಮುಮುಕ್ಷುಭಿಃ ಎಂಬಲ್ಲಿ ಬಹುವಚನ ಪ್ರಯೋಗವೂ ತದೈಕಾಂತಿಕ ಎಂಬಲ್ಲಿ ಏಕವಚನ ಪ್ರಯೋಗವೂ ಇರುತ್ತದೆ. ಆದುದರಿಂದ ಮೋಕ್ಷಾರ್ಥಿಗಳನೇಕರು ಪ್ರಾಪ್ಯನು ಒಬ್ಬನೇ, ಆತನು ಸಗುಣನೇ. ಅನೇಕ ಸಂದರ್ಭಗಳಲ್ಲಿ ಫಲಪ್ರಾಪ್ತಿಯಾದನಂತರ ಉಪಾಯ ಬೇಕಿಲ್ಲವು. ಭಕ್ತಿಯಾದರೋ ಹಾಗಲ್ಲವು, ಮೋಕ್ಷದಶೆಯಲ್ಲಿ ಇನ್ನೂ ವೃದ್ಧಿಯನ್ನು ಹೊಂದುವದರಿಂದ ಆತ್ಯಂತಿಕವೆಂದು ಹೇಳಲ್ಪಟ್ಟಿತು. ಹೀಗೆ ಪ್ರಾಪ್ಯನು ಸರ್ವೇಶ್ವರನೆಂದೂ ಪ್ರಾಪ್ತಾ ಪ್ರತ್ಯಗಾತ್ಮನೆಂದೂ ಎಲ್ಲಾ ಉಪನಿಷತ್ತುಗಳೂ, ಬ್ರಹ್ಮಸೂತ್ರವೂ ಇತಿಹಾಸ ಪುರಾಣಗಳಲ್ಲಿವೂ ಹೇಳುತ್ತವೆ. ಆದುದರಿಂದ ಸಂಸಾರ ಬಂಧಕ್ಕೆ ಬಿದ್ದು ಸಂಕಟಪಡುವ ಜೀವಾತ್ಮನೂ ನಿರತಿಶಯಾನಂದ ಸ್ವರೂಪನಾದ ಪರಮಾತ್ಮನು ಒಂದೇ ಎಂಬ ವಾದವೂ ಸುತರಾಂ ಕೂಡುವದಿಲ್ಲವೆಂದು ಹೇಳುವದಕ್ಕಾಗಿ "ಪುರುಷೋತ್ತಮ ಪ್ರಾಪ್ತಿ, ಪ್ರಾಪ್ತುರಾತ್ಮನಃ" ಎಂಬದಾಗಿ ಪೃಥಕ್ಕಾಗಿ ಪ್ರಯೋಗಗಳು. ಕೆಲವರು ಪರಮಾತ್ಮನೇ ಅವಿದ್ಯಾಗೃಹೀತನಾಗಿ ಬದ್ಧ ಜೀವನಾಗಿದ್ದಾನೆಂದು ಹೇಳುವದು ಹೇಯ ಪ್ರತ್ಯನೀಕನಾಗಿರುವ ಪರಮಾತ್ಮನಿಗೆ ದೋಷ ಸಂಬಂಧವನ್ನು ಹೇಳುವದು ಸುತರಾಂ ಸರಿಯಲ್ಲವೆಂಬ ಭಾವದಿಂದ, ಅವಿದ್ಯಾದಿ ದೋಷಗಂಧ ನೆಂದು ಹೇಳಲ್ಪಟ್ಟಿತು, ಹೀಗೆ ಹೇಯಗುಣ ರಹಿತನಾಗಿಯೂ ಕಲ್ಯಾಣ ಗುಣಕರನಾಗಿರುವ ಪರಬ್ರಹ್ಮನೇ ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಉಪಾಸ್ಯನೆಂದು ಹೇಳಲು ಪ್ರಮಾಣವೇನು ಎಂದರೆ "ಆನಂದಾದಯಃ ಪ್ರಧಾನಸ್ಯ" (ಶಾ. ೩. ೩. ೧೧.) ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವು. ಆನನ್ದಾದಯಃ - ಆನಂದತ್ವ ಸತ್ಯತ್ವ, ಜ್ಞಾನತ್ವ, ಅನಂತತ್ವ, ಅಮಲತ್ವ, ಶ್ರಿಯಃಪತಿತ್ವಗಳಾದ ಸ್ವರೂಪ ನಿರೂಪಕ ಧರ್ಮಗಳು ಸಮಸ್ತ ಬ್ರಹ್ಮವಿದ್ಯೆಗಳಲ್ಲೂ ಅನುಸಂಧೇಯಗಳು, ಏಕೆಂದರೆ ಪ್ರಧಾನಸ್ಯಾ ಭೇದಾತ್, ಈ ಗುಣಗಳಿಗೆ ಆಶ್ರಯನಾದ ಪ್ರಧಾನವಾದ ಪರಬ್ರಹ್ಮನ ಸ್ವರೂಪಕ್ಕೆ ಸರ್ವ ಬ್ರಹ್ಮವಿದ್ಯೆಗಳಲ್ಲೂ ಭೇದವಿಲ್ಲದುದರಿಂದ ಅವು ಅನುಸಂಧೇಯಗಳೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ

(೧) ಭಾರ. ಮೋಕ್ಷ. ೩೪೨-೩೬

ಶಾರೀರಕಸೂತ್ರ ೩. ೩. ೩೩ರಲ್ಲೂ ಉಪಪಾದಿತವು. ಒಂದು ವಿದ್ಯೆಯಲ್ಲಿ ಹೇಳಲ್ಪಟ್ಟವು ಇನ್ನೊಂದರಲ್ಲೂ ಹೇಳಲ್ಪಟ್ಟರೆ ಬ್ರಹ್ಮ ವಿದ್ಯೆಗಳು ಬೇರೆ ಬೇರೆ ಹೇಗಾಗುತ್ತವೆ ಎಂಬ ಆಕ್ಷೇಪಕ್ಕೆ ಒಬ್ಬ ಪರಬ್ರಹ್ಮನೇ ಎಲ್ಲಾ ವಿದ್ಯೆಗಳಲ್ಲಿ ಉಪಾಸ್ಯನಾದುದರಿಂದ ಹಾಗೆಯೇ ಆತನಗುಣಗಳೂ ಅನುಸಂಧೇಯಗಳೇ ಎಂಬ ತಾತ್ಪರ್ಯವು. ಆದುದರಿಂದ "**ನಿರಸ್ತನಿಖಿಲಾ ವಿದ್ಯಾದಿ ದೋಷ**"ವೆಂದಾರಂಭಿಸಿ ಹೇಳಿರುವ ಪ್ರಯೋಗವು. **ಪರಮಪುರುಷಪ್ರಾಪ್ತ್ಯುಪಾಯಭೂತವೇದನ** ವೆಂದಾರಂಭಿಸಿ **ತದೈಕಾನ್ತಿಕಾತ್ಯನ್ತಿಕ ಭಕ್ತಿಂ ವಕ್ತುಂ ತದಙ್ಗಭೂತಂ** ಎಂಬ ವಿವರಣೆಯ ಆಶಯವೇನೆಂದರೆ:--- ಕೆಲವರು ಜ್ಞಾನಕರ್ಮಗಳ ಸಮುಚ್ಚಯವು ಉಪಾಯವು ; ಅವುಗಳಲ್ಲಿ ಒಂದರಿಂದ ಸಾಧಿಸಲ್ಪಟ್ಟದುದು ಉಪಾಯವು ; ಇವುಗಳಲ್ಲಿ ಒಂದು ಮಾತ್ರವೇ ಉಪಾಯವು ; ಎಂದು ಹೇಳುವ ನಾನಾ ಬಗೆಯ ಪೂರ್ವ ಪಕ್ಷಗಳನ್ನೆಲ್ಲಾ ನಿರಾಕರಿಸುವದಕ್ಕಾಗಿ "**ನಾನ್ಯಃ ಪನ್ಥಾ ಅಯನಾಯ ವಿದ್ಯತೇ**" ಮೋಕ್ಷಕ್ಕೆ ಉಪಾಸನವಲ್ಲದೇ ಬೇರೇ ಉಪಾಯವಿಲ್ಲವೆಂದೂ, (ಪುರುಷ ಸೂಕ್ತ), "**ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾಶ್ರುತೇನ**" (ಕಠ. ೧. ೨. ೨೩.) ಎಂಬ ಶ್ರುತಿಯೂ ಸಹ ಉಪಾಸನವೇ ಸಾಧ್ಯೋಪಾಯವೆಂದು ಹೇಳಿ, ಈ ಸಾಧ್ಯೋಪಾಯಸಿದ್ಧಿಗೆ ಸಿದ್ಧೋಪಾಯನಾದ ಪರಮ ಪುರುಷನ ಪ್ರೀತಿ ಪುರಸ್ಸರವಾದ ವರಣೀಯತೆ ಇಲ್ಲದೆ ಸಾಧ್ಯವಿಲ್ಲವೆಂದು ತಿಳಿಸುತ್ತದೆ. ತತ್ಕ್ರತುನ್ಯಾಯದ ಪ್ರಕಾರವಾಗಿಯೂ, ಪರಮಾತ್ಮೋಪಾಸನವಿಲ್ಲದೆ ಪರಮಾತ್ಮಪ್ರಾಪ್ತಿಯಿಲ್ಲವು. ಶ್ರೀ ಯತಿವರ್ಯರು "**ಅಪಿಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್**" (ಶಾರೀ. ೩.೨.೨೪) ಎಂಬುದಕ್ಕೆ ವೇದಾಂತದೀಪದಲ್ಲಿ "**ಉಪಾಸನರೂಪ ತತ್ಪ್ರೀಣನೇನ ವಿನಾ ಕೇನಾಪಿನೋಪಲಭ್ಯತ ಇತಿ ಶ್ರುತಿಸ್ಮೃತಿಭ್ಯಾ ಮವಗಮ್ಯತೇ**" ಎಂದು ಅಪ್ಪಣೆ ಕೊಡಿಸಿರುತ್ತಾರೆ. ಉಪಾಸನವಲ್ಲದೆ ಇನ್ನು ಯಾವುದರಿಂದಲೂ ಭಗವಂತನ ಪ್ರೀತಿಯು ಲಭಿಸುವದಿಲ್ಲವೆಂದೂ, ಹಾಗೆ ಅಂತಹಪ್ರೀತಿ ಇಲ್ಲದೆ ಮೋಕ್ಷವೂ ಇಲ್ಲವೆಂಬುದು ವ್ಯಕ್ತವು. ಇದರಿಂದ ಭಕ್ತಿಯೋಗವು ಉಪಾಯವೇ ವಿನಾ,ಕರ್ಮಯೋಗಾದಿಗಳಲ್ಲವೆಂಬುದೂ ವ್ಯಕ್ತವು. ಆದುದರಿಂದಲೇ **ತದೈಕಾನ್ತಿಕಾತ್ಯನ್ತಿಕ ಭಕ್ತಿಂ** ಎಂಬ ಪ್ರಯೋಗವು. ಏಕತ್ರ, ಅನ್ತಃ ಎಂದರೆ ನಿಶ್ಚಯವು; ಹಾಗೆ ಒಂದರಲ್ಲೇ ನಿಶ್ಚಿತವಾದ ಭಕ್ತಿ ಯಾವುದೋ ಅದು ಐಕಾನ್ತಿಕ ಭಕ್ತಿಯು. ಇಂತಹ ಭಕ್ತಿಯಿಂದ ಕೂಡಿದ ಉಪಾಸನೆ ಇಲ್ಲದೆ ಭಕ್ತಿಯೋಗ ನಿಷ್ಠನಿಗೆ ಮೋಕ್ಷವು ಸಿದ್ಧಿಸುವದಿಲ್ಲವು. ಪರಜ್ಞಾನವಾದ ಪರಮಾತ್ಮ ಸಾಕ್ಷಾತ್ಕಾರಕ್ಕೆ ಇದು ಆವಶ್ಯಕವಾದ ಶ್ರೇಷ್ಠವಾದ ಭಕ್ತಿಯಾದುದರಿಂದ ಅಂತಹ ಐಕಾಂತಿಕ ಭಕ್ತಿಯು ಸಾಮಾನ್ಯ ಭಕ್ತಿಯನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ ಪರಭಕ್ತಿ ಎಂದು ಹೇಳಲ್ಪಡುವದು. ಇಂತಹ ಪರಭಕ್ತಿಯು ಜ್ಞಾನಯೋಗದಿಂದ ಸಾಧ್ಯವೆಂದು ಹೇಳಲ್ಪಟ್ಟಿತು. ಭಕ್ತಿಯೋಗವೇ ಸಾಕ್ಷಾದುಪಾಯವೆಂಬುದು "**ಭಕ್ತ್ಯಾತ್ವನನ್ಯಯಾ**" (ಗೀ. ೧೧. ೫೪.) ಎಂಬಲ್ಲಿ ವ್ಯಕ್ತವು, ಪುನಃ "**ಮಯಿಚಾನನ್ಯ ಯೋಗೇನ ಭಕ್ತಿರವ್ಯಭಿಚಾರಿಣೀ**" (ಗೀ. ೧೩. ೧೦.) ಎಂಬಲ್ಲಿಯೂ ಸ್ಫುಟವು. ಪರಮಾತ್ಮನು ಎಂದಿಗೂ ನಿರ್ಗುಣನಾಗಲಾರನು. ಹಾಗೆ ನಿರ್ಗುಣನಾದರೆ ಶಾಸ್ತ್ರವು ಆತನ ಸ್ವರೂಪವನ್ನು ಬೋಧಿಸಲು ಸಾಧ್ಯವೇ ಇಲ್ಲವಾಗುತ್ತದೆಂದೂ, ಆಗ ಸ್ವರೂಪ ಬೋಧಕ ವಾಕ್ಯಗಳು ಸರಿಯಾದ ಪರಬ್ರಹ್ಮವನ್ನು ಬೋಧಿಸುವದಿಲ್ಲವೆಂದೂ ಹೇಳಬೇಕಾಗುತ್ತದೆ. ಆದುದರಿಂದ ಆತನು ಕಲ್ಯಾಣ ಗುಣಾಕರನೆಂದೂ ಹೇಳಲ್ಪಟ್ಟಿತು. ಅದ್ವೈತಿಗಳು ಹೇಳುವ ಸಗುಣ ಬ್ರಹ್ಮಕ್ಕೂ ನಿರ್ಗುಣ ಬ್ರಹ್ಮಕ್ಕೂ ವೈಲಕ್ಷಣ್ಯವೇನೂ ತಮ್ಮ ಸಿದ್ಧಾಂತದಲ್ಲಿಲ್ಲವೆಂದೂ ತಿಳಿಸುವದಕ್ಕಾಗಿ, ಪರಬ್ರಹ್ಮ ಪುರುಷೋತ್ತಮ ವೆಂಬ ಪ್ರಯೋಗಗಳು ಈ ಎರಡು ಶಬ್ದಗಳಿಂದಲೂ ಹೇಳಲ್ಪಡುವವನು ಒಬ್ಬನಾದ ಜಗತ್ಕಾರಣನಾದ ಸರ್ವೇಶ್ವರನೆಂಬಭಿಪ್ರಾಯವು. ಹಾಗಾದರೆ ಶಾಸ್ತ್ರಗಳಲ್ಲಿ ಕೆಲವು ಕಡೆಗಳಲ್ಲಿ ಪರಬ್ರಹ್ಮವು ನಿರ್ಗುಣ

ನೆಂದು ಹೇಳಿರುತ್ತದೆಯಲ್ಲಾ ಎಂದರೆ, ಈ ಜಗತ್ತಿನಲ್ಲಿ ತೋರಿಬರುವಯಾವ ಗುಣಗಳೂ ಆತನಲ್ಲಿಲ್ಲವೆಂಬ ಭಾವವು; ಪ್ರಕೃತಿ ಸಂಬಂಧವಾದ ಪ್ರಾಕೃತ ಗುಣಗಳಿಲ್ಲವೆಂದೂ ಅವು ಅಪ್ರಾಕೃತ ಕಲ್ಯಾಣ ಗುಣಗಳೆಂದೂ, ತಾತ್ಪರ್ಯವು. ಉಪಾಸನವು ನಿರ್ಗುಣ ಪರಬ್ರಹ್ಮವಿಷಯವಾಗಿ ಈ ಗೀತೆಯಲ್ಲಾಗಲಿ ಬ್ರಹ್ಮಸೂತ್ರಗಳಲ್ಲಾಗಲಿ, ಉಪನಿಷತ್ತುಗಳಲ್ಲಿಯಾಗಲಿ ಹೇಳಿಲ್ಲವು ; ಕಲ್ಯಾಣ ಮಹೋದಧಿಯಾಗಿ ಶುಭಾಶ್ರಯ ರೂಪ ದಿವ್ಯಮಙ್ಗಳ ವಿಗ್ರಹಯುಕ್ತನಾಗಿರುವ ಸರ್ವೇಶ್ವರನೇ ಧ್ಯೇಯವೆಂದು ಹೇಳಲ್ಪಟ್ಟಿತು. (ಗೀ. ೧೨. ೨ನೆಯ ಶ್ಲೋಕವನ್ನು ನೋಡಿ.) ಇದು ಹನ್ನೊಂದನೆಯ ಅಧ್ಯಾಯದಲ್ಲಿ ಸುವ್ಯಕ್ತವು. ಅಲ್ಲಿ ಹೇಳಿರುವದೇನಂದರೆ—ಅಂತಹ ಪರವಾಸುದೇವರೂಪ ದಿವ್ಯಮಙ್ಗಳ ವಿಗ್ರಹದೊಂದಿಗೆ ಸೇವೆಯನ್ನು ತೋರಿಸು ಎಂದು ಅರ್ಜುನನು ಪ್ರಾರ್ಥಿಸಲು (೧೧. ೪೬.) ಅಂತಹ ರೂಪವನ್ನು ತಾಳಿ ಅತನಿಗೆ ಶ್ರೀಕೃಷ್ಣ ಭಗವಾನರವರು ಸೇವೆಯನ್ನಿತ್ತಿರುತ್ತಾರೆ. (೪೭, ೫೦ ನೆಯ ಶ್ಲೋಕಗಳು) ಅಂತಹ ದಿವ್ಯ ಮಙ್ಗಳವಿಗ್ರಹವೇ ಧ್ಯೇಯವೆಂದು ತಮ್ಮ ತಾಯಿಯಾದ ದೇವಹೂತಿಗೆ ಶ್ರೀ ಕಪಿಲರು ಉಪದೇಶಿಸಿರುತ್ತಾರೆ—(ಭಾಗ. ೩. ೨೮. ೧೩-೩೩) "**ಪ್ರಸನ್ನವದನಾಂಭೋಜಂ ಪದ್ಮಪತ್ರಾರುಣೇಕ್ಷಣಂ । ನೀಲೋತ್ಪಲದಳಶ್ಯಾಮಂ ಶಙ್ಖಚಕ್ರಗದಾಧರಮ್** ॥ ಎಂದಾರಂಭಿಸಿ ಹೇಳಿ, ೩೩ನೆಯ ಶ್ಲೋಕದಲ್ಲಿ ನಿಗಮನಮಾಡಿ ಹೇಳಿರುತ್ತಾರೆ. ಜೀವಾತ್ಮಸ್ವರೂಪವು ಅವ್ಯಕ್ತವಾಗಿಯೂ ಅಕ್ಷರವಾಗಿಯೂ ದಿವ್ಯ ಮಙ್ಗಳ ವಿಗ್ರಹವಿಲ್ಲದುದರಿಂದ, ಅದರ ಉಪಾಸನೆಯು ಕ್ಲೇಶತರವೆಂದು ೧೨ನೆ ಅಧ್ಯಾಯದ ೫ನೆಯ ಶ್ಲೋಕದಲ್ಲಿ ಮುಂದೆ ದೂಷಿಸುವದರಿಂದ, ಪರಮಾತ್ಮನ ದಿವ್ಯ ಮಙ್ಗಳವಿಗ್ರಹವಿಯುಕ್ತವಾದ ಸ್ವರೂಪ ಚಿಂತನವೂ ಕ್ಲಿಷ್ಟತರವೆಂದೇ ಹೇಳಿದಂತಾಯಿತು. ಆದುದರಿಂದ ನಾವು ಗ್ರಹಿಸತಕ್ಕ ಮುಖ್ಯ ವಿಷಯವೇನೆಂದರೆ ಕರ್ಮಯೋಗ ಜ್ಞಾನಯೋಗಗಳು ಪರಮಪುರುಷನ ಶುಭಾಶ್ರಯವಾದ ದಿವ್ಯ ಮಙ್ಗಳ ವಿಗ್ರಹದ ಉಪಾಸನೆಗೆ ಸಾಧಕಗಳು ಎಂಬುದು. ಜ್ಞಾನಯೋಗದ ಆತ್ಮೋಪಾಸನೆಯು ಕ್ಲೇಶತರವಾದರೆ ಈ ದಿವ್ಯ ಮಙ್ಗಳ ವಿಗ್ರಹೋಪಾಸನೆಯಿಂದಲೇ ಆತ್ಮಾವಲೋಕನವು ಸಿದ್ಧಿಯಾಗಿ ಪರಮಾತ್ಮ ಸಾಕ್ಷಾತ್ಕಾರವೂ ಲಭಿಸುತ್ತದೆ. ಎರಡನೆಯ ಅಧ್ಯಾಯಾಂತ್ಯದಲ್ಲಿ ಕರ್ಮಯೋಗವು ಸ್ಥಿತ ಪ್ರಜ್ಞತೆಗೆ ಎಂದರೆ ಜ್ಞಾನಯೋಗನಿಷ್ಠೆಗೆ ಅಙ್ಗವೆಂದು ಹೇಳಲ್ಪಟ್ಟಿತು. ಅಂತಹ ಜ್ಞಾನಯೋಗವು ಭಕ್ತಿಯೋಗಕ್ಕೂ ಅಙ್ಗವೆಂದು ಹೇಳಲ್ಪಟ್ಟಿತೆಂಬುದು ತಾತ್ಪರ್ಯವು. ಅಙ್ಗವೆಂದು ಹೇಳಲು ಶ್ರುತಿಪ್ರಮಾಣವನ್ನು "ಯ ಆತ್ಮಾ" ಎಂದು ಛಾಂದೋಗ್ಯವಾಕ್ಯವನ್ನು ಉದಾಹರಿಸಿರುತ್ತಾರೆ. ಆದರೆ ಪ್ರಾಪ್ತಾ ಈ ಜೀವಾತ್ಮನೆಂದೂ, ಪ್ರಾಪ್ಯನು ಬೇರೆಯಾಗಿ ಸರ್ವೇಶ್ವರನೆಂದೂ, ಈ ಪ್ರಾಪ್ತವಾದವನ **ಯಾಥಾತ್ಮ್ಯ ದರ್ಶನವು** ಭಕ್ತಿಯೋಗ ನಿಷ್ಪತ್ತಿಗೆ ಅಙ್ಗವೆಂದೂ ಸಹ ಶ್ರುತಿಯಲ್ಲಿ ಎಲ್ಲಿ ಹೇಳಿದೆ ಎಂದರೆ ಛಾಂದೋಗ್ಯ ವಾಕ್ಯವನ್ನು(೮. ೭. ೧.)ಉದಾಹರಿಸಿರುತ್ತಾರೆ. ಆದರೆ"**ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ವಿದಧಾತಿ ಕಾಮಾನ್**" (ಕಠ. ೨. ೫. ೧೩) "**ದ್ವಾ ಸುಪರ್ಣಾ ಸಯುಜಾ**" (ಮುಂ ೩. ೧. ೧.) ಇತ್ಯಾದಿ ಶ್ರುತಿಗಳು ಜೀವ ಪರಮಾತ್ಮ ಭೇದವನ್ನು ಚನ್ನಾಗಿ ಹೇಳುವಾಗ ಅವುಗಳನ್ನೆಲ್ಲಾ ಬಿಟ್ಟು ಈ ಪ್ರಜಾಪತಿ ವಾಕ್ಯವನ್ನು ಏಕೆ ಉದಾಹರಿಸಿದರೆಂದರೆ; ಆತ್ಮದರ್ಶನವು ಭಕ್ತಿಯೋಗಕ್ಕೆ ಅಙ್ಗವೆಂದು ಗೀತೆಯಲ್ಲಿ ಹೇಳಿರುವಹಾಗೆ, ಛಾಂದೋಗ್ಯದಲ್ಲೂ ಹೇಳಿರುವದರಿಂದಲೂ, ಅದರಿಂದ ಪ್ರಕರಣಾನುಗುಣ್ಯವಿರುವದರಿಂದಲೂ ಛಾಂದೋಗ್ಯವಾಕ್ಯವನ್ನೇ ಈ ಸಂದರ್ಭ ಉದಾಹರಿಸಿರುತ್ತಾರೆ. ಅದು ಯಾವುದೆಂದರೆ :—

"**ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಙ್ಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ. ಸ ಸರ್ವಾಂ**

ಭಾ. ವಿದ್ಯಾಶೇಷತಯಾ ಪ್ರಾಪ್ತು ರಾತ್ಮನಸ್ಸ್ವರೂಪದರ್ಶನಂ (೧) "ಯಸ್ತ ಮಾತ್ಮಾನ ಮನುವಿದ್ಯ ವಿಜಾನಾತಿ" ಇತ್ಯುಕ್ತ್ವಾ, ಜಾಗರಿತ ಸ್ವಪ್ನ ಸುಷುಪ್ತ್ಯತೀತಂ ಪ್ರತ್ಯಗಾತ್ಮ ಸ್ವರೂಪ ಮಶರೀರಂ ಪ್ರತಿಪಾದ್ಯ, (೨) ಏವ ಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ" ಇತಿ ದಹರ ವಿದ್ಯಾ ಫಲೇನೋಪ ಸಂಹೃತಮ್.

---

ಶ್ಚ ಲೋಕಾನಾಪ್ನೋತಿ, ಸರ್ವಾಂಶ್ಚ ಕಾಮಾನ್ ಯಸ್ತಮಾತ್ಮಾನ ಮನುವಿದ್ಯ ವಿಜಾನಾತೀತಿಹ ಪ್ರಜಾಪತಿ ರುವಾಚ" "ಯ ಆತ್ಮಾ-ಯಾವ ಜೀವಾತ್ಮನು, ಅಪಹತ ಪಾಪ್ಮಾ-ಹೋಗಲಾಡಿಸಲ್ಪಟ್ಟ ಪಾಪಗಳುಳ್ಳವನಾಗಿ, ಎಂದರೆ ಶುದ್ಧ ಸ್ವಭಾವವುಳ್ಳವನಾಗಿ, ವಿಜರಃ - ವಾರ್ಧಕವಿಲ್ಲದವನಾಗಿ, ವಿಮೃತ್ಯುಃ - ಮರಣವಿಲ್ಲದವನಾಗಿ, ವಿಶೋಕಃ - ಶೋಕವಿಲ್ಲದವನಾಗಿ, ಅವಿಜಿಘತ್ಸಃ - ಹಸಿವು ಇಲ್ಲದವನಾಗಿ, ಅಪಿಪಾಸಃ - ಬಾಯಾರಿಕೆಯಿಲ್ಲದವನಾಗಿ, ಎಂದರೆ ಸಂಸಾರದ ದುರವಸ್ಥೆಗಳೊಂದೂ ಇಲ್ಲದವನಾಗಿ, ಸತ್ಯಕಾಮಃ - ಭೋಗ್ಯ ಭೋಗೋಪಕರಣ ಭೋಗಸ್ಥಾನರೂಪಗಳಾದ ನಿತ್ಯಗಳಾದ ಕಾಮುಗಳುಳ್ಳವನಾಗುತ್ತಾನೆಯೋ, ಸತ್ಯಸಙ್ಕಲ್ಪಃ-ತಡೆಯಿಲ್ಲದ ಸಙ್ಕಲ್ಪಗಳುಳ್ಳವನಾಗುತ್ತಾನೆಯೋ, ಸಃ - ಅಂತಹ ಜೀವಾತ್ಮನು, ಅನ್ವೇಷ್ಟವ್ಯಃ - ಹುಡುಕತಕ್ಕವನು, ವಿಜಿಜ್ಞಾಸಿತವ್ಯಃ - ಚನ್ನಾಗಿ ಜಿಜ್ಞಾಸಮಾಡಿ ತಿಳಿಯತಕ್ಕವನು, ಆದುದರಿಂದಲೇ ಹೀಗೆ ಆತ್ಮಸ್ವರೂಪವನ್ನು ಜಿಜ್ಞಾಸಮಾಡಿ ತಿಳಿಯುವನಿಗೆ ಜಿಜ್ಞಾಸುವೆಂದು "ಚತುರ್ವಿಧಾ ಭಜನ್ತೇ ಮಾಂ" ಎಂಬಲ್ಲಿ (ಗೀ. ೭. ೧೬) ಹೇಳಲ್ಪಟ್ಟಿರುತ್ತದೆ. ಸಃ – ಅವನು, ಸರ್ವಾಂಶ್ಚ ಲೋಕಾನ್ ಆಪ್ನೋತಿ-ಸಮಸ್ತ ಲೋಕಗಳನ್ನೂ ಹೊಂದುವನು, ಯಃ - ಯಾವ ಜೀವಾತ್ಮನು, ತಂ ಆತ್ಮಾನಂ - ಅಂತಹ ತನ್ನನ್ನು, ಅನುವಿದ್ಯ - ವಾಕ್ಯಾರ್ಥಜ್ಞಾನದಿಂದ ತಿಳಿದು, ವಿಜಾನಾತಿ - ಧ್ಯಾನಿಸುವನೋ, ಸರ್ವಾಂಶ್ಚ ಕಾಮಾಂಶ್ಚ -ಸಮಸ್ತ ಭೋಗ ಭೋಗೋಪಕರಣ ಭೋಗಸ್ಥಾನಗಳನ್ನೂ ಹೊಂದುವನು ಎಂಬುದು ಈ ಶ್ರುತ್ಯರ್ಥವು. ಈ ಉಪನಿಷದ್ವಾಕ್ಯದಿಂದ ಗ್ರಹಿಸತಕ್ಕದ್ದೇನೆಂದರೆ:—

(೧) ಪ್ರಾಪ್ಯನು, ಸರ್ವೇಶ್ವರನು, ಪ್ರಾಪ್ತೃಗಳು, ಜೀವಾತ್ಮರೂ, ಇಬ್ಬರೂ ಬೇರೆಯೇ ವಿನಾ ಒಂದೇಯಲ್ಲವು.

(೨) ಪ್ರಾಪ್ಯನನ್ನು ಹೊಂದಲು ಉಪಾಯವು ಉಪಾಸನೆಯೇ.

(೩) ಆ ಉಪಾಸನೆಗೆ ಸಾದನವು ಆತ್ಮದರ್ಶನವು.

ಈ ಅಭಿಪ್ರಾಯಗಳನ್ನೇ ಮುಂದಿನ ವಾಕ್ಯಗಳಿಂದ ಉಪಪಾದಿಸುತ್ತಾರೆ:—

ಪ್ರಜಾಪತಿ ವಾಕ್ಯೇಹಿ - ಚತುರ್ಮುಖನ ವಾಕ್ಯದಲ್ಲಿಯಾದರೋ, ದಹರ ವಾಕ್ಯೋದಿತ - ದಹರ ವಿದ್ಯೆಯ ವಾಕ್ಯದಲ್ಲಿ ಹೇಳಲ್ಪಟ್ಟ, ಪರವಿದ್ಯಾ ಶೇಷತಯಾ - ಬ್ರಹ್ಮವಿದ್ಯೆಗೆ ಅಙ್ಗವಾಗಿ, ಪ್ರಾಪ್ತಾವಾದ ಜೀವಾತ್ಮನ, ಯಾಥಾತ್ಮ್ಯ ದರ್ಶನಂ - ಸರಿಯಾದ ಸ್ವರೂಪದ ಸಾಕ್ಷಾತ್ಕಾರವನ್ನು, "ಯಸ್ತಮಾತ್ಮಾನ ಮನುವಿದ್ಯ ವಿಜಾನಾತಿ" ಇತ್ಯುಕ್ತ್ವಾ, "ಯಾವನು ಅಂತಹ ಜೀವಾತ್ಮನ ಸರಿಯಾದ ಸ್ವರೂಪವನ್ನು ಶಾಸ್ತ್ರಜನ್ಯಜ್ಞಾನಮೂಲಕ ತಿಳಿದು ಉಪಾಸಿಸುವನೋ' ಎಂದು ಹೇಳಿ, ಜಾಗರಿತ ಸ್ವಪ್ನ ಸುಷುಪ್ತ್ಯತೀತಂ - ಎಚ್ಚರವಾಗಿರುವಿಕೆ, ಸ್ವಪ್ನ, ನಿದ್ರಾ, ಈ ಅವಸ್ಥೆಗಳಿಂದ ಬಿಡಲ್ಪಟ್ಟ, ಪ್ರತ್ಯಗಾತ್ಮ ಸ್ವರೂಪ ಮಶರೀರಂ - ಜೀವಾತ್ಮ

---

(೧) ಛಾಂ. ೮.೭.೧. (೨) ಛಾಂ. ೮. ೧೨. ೨.

**ಭಾ. ಅನ್ಯತ್ರಾಪಿ (೧)"ಅಧ್ಯಾತ್ಮ ಯೋಗಾಧಿಗಮೇನ ದೇವಂ ಮತ್ವಾಧೀರೋ ಹರ್ಷ**

ಸ್ವರೂಪವು ಶರೀರವಿಲ್ಲದದು, ಎಂದು **ಪ್ರತಿಪಾದ್ಯ** - ಪ್ರತಿಪಾದಿಸಿ, "**ಏವಮೇವ** - ಅದರ ಹಾಗೆಯೇ, ಎಂದರೆ ಶ್ರುತಿಯಲ್ಲಿ ಹಿಂದಿನವಾಕ್ಯದಲ್ಲಿ ಹೇಳಿರುವ ವಾಯ್ವಭ್ರಾದಿ ದೃಷ್ಟಾಂತದ ಹಾಗೆಯೇ, **ಏಷಸಂಪ್ರಸಾದಃ**-ಈ ಜೀವಾತ್ಮನು,**ಅಸ್ಮಾಚ್ಛರೀರಾತ್**-ಈಗ ತನಗಿರುವ ಶರೀರದಿಂದ, **ಸಮುತ್ಥಾಯ**-ಬಿಟ್ಟು ಹೊರಟವನಾಗಿ, ದೇಹಾತ್ಮ ಭ್ರಮದಿಂದ ಬಿಡಲ್ಪಟ್ಟವನಾಗಿ ಎಂಬ ಅರ್ಥ ವಲ್ಲವು, **ಪರಂಜ್ಯೋತಿರುಪಸಂಪದ್ಯ**–ಪರಮಾತ್ಮನನ್ನು ಹೊಂದಿದವನಾಗಿ, ಇದರಿಂದ ಜೀವಾತ್ಮ ಪರಮಾತ್ಮ ಐಕ್ಯವೆಂಬಭಿಪ್ರಾಯವು ಸರಿಯಲ್ಲವು: **ಸ್ವೇನ ರೂಪೇಣ**-ತನ್ನ ನೈಜವಾದ ಸ್ವರೂಪ ದೊಂದಿಗೆ, **ಅಭಿನಿಷ್ಪದ್ಯತೇ**-ಪ್ರಕಾಶಿಸಿದವನಾಗುತ್ತಾನೆ". ಎಂಬದಾಗಿ **ದಹರವಿದ್ಯಾ ಫಲೇನ** - ದಹರ ವಿದ್ಯೆಗೆ ಫಲವನ್ನು ಹೇಳುವದರೊಂದಿಗೆ **ಉಪಸಂಹೃತಂ** - ಉಪಸಂಹಾರ ಮಾಡಲ್ಪ ಟ್ಟಿರುತ್ತದೆ. ಇಲ್ಲಿ ಮುಖ್ಯವಾಗಿ ಹೇಳಲ್ಪಟ್ಟಿರುವುದೇನೆಂದರೆ:—ಪ್ರಜಾಪತಿ ವಾಕ್ಯವು ದಹರ ವಿದ್ಯೆಯನ್ನು ಬೋಧಿಸುವಂತಾದ್ದು. ಅಲ್ಲಿ ಪ್ರತ್ಯಗಾತ್ಮ ದರ್ಶನವು ಹೇಳಲ್ಪಟ್ಟಿರುತ್ತದೆ. ಈ ದರ್ಶನಕ್ಕೆ ಪರಬ್ರಹ್ಮಪ್ರಾಪ್ತಿಯೇ ಫಲವೆಂದೂ ಬೋಧಿಸಲ್ಪಟ್ಟಿರುತ್ತದೆ. ಆದರೆ ಕೇವಲ ಪ್ರತ್ಯ ಗಾತ್ಮ ದರ್ಶನವೇ ಸಾಕ್ಷಾತ್ತಾಗಿ ಪರಬ್ರಹ್ಮಪ್ರಾಪ್ತಿಗೆ ಕಾರಣವಲ್ಲವು. ಏಕೆಂದರೆ "**ನಾನ್ಯಃ ಪನ್ಥಾ ವಿದ್ಯತೇ ಅಯನಾಯ**" ಎಂಬ ಶ್ರುತಿವಾಕ್ಯಕ್ಕೆ ವಿರೋಧವಾದುದಾಗುತ್ತದೆ. ಈದಹರ ವಿದ್ಯೆಗೆ ಜೀವಾತ್ಮ ದರ್ಶನವೇ ಫಲವಲ್ಲವು; ಏಕೆಂದರೆ "**ಪರಂಜ್ಯೋತಿಃ**" ಎಂಬ ಪದವಿರುವದ ರಿಂದ ಪ್ರತ್ಯಗಾತ್ಮವೆಂಬರ್ಥವಾಗುವದಿಲ್ಲವು, "**ನಾರಾಯಣ ಪರೋಜ್ಯೋತಿಃ**" ಎಂದಿರುವದ ರಿಂದ ಪರಮಾತ್ಮನೆಂದೇ ಅರ್ಥವು. ಆದುದರಿಂದ ಜೀವಾತ್ಮನು ಪ್ರಾಪ್ತಾ ಎಂದೂ, ಪರಮಾ ತ್ಮನು ಪ್ರಾಪ್ಯನೆಂದೂ ಭಾವಿಸಿ, ಈ ಜೀವಾತ್ಮನಿಗೆ ಪರಬ್ರಹ್ಮ ಸಾಮ್ಯವೂ ನಿರತಿಶಯಾನಂದವೂ ಪರಿಪೂರ್ಣ ಬ್ರಹ್ಮಾನುಭವವೂ ತತ್ಕೈಂಕರ್ಯವೂ ಸಹ ಆಗ ಉಂಟಾಗುತ್ತದೆ. ಆ ಪರಬ್ರಹ್ಮ ಪ್ರಾಪ್ತಿಗಾಗಿ ಸ್ವಸ್ವರೂಪಾವಿರ್ಭಾವವೂ ಉಂಟಾಗುತ್ತದೆ. ಇದರಿಂದ ಆತ್ಮ ದರ್ಶನವು ಸಾಕ್ಷಾ ತ್ತಾಗಿ ಯಲ್ಲದೆ ದಹರ ವಿದ್ಯೆಗೆ ಅಙ್ಗವಾಗಿ ಅಂತಹ ವಿದ್ಯಾಮೂಲಕ ಪರಬ್ರಹ್ಮ ಪ್ರಾಪ್ತಿ ಎಂಬುದು ಮುಖ್ಯಾಭಿಪ್ರಾಯವೆಂಬುದು ಶ್ರೀ ನಿಗಮಾನ್ತರವರ ಸಿದ್ಧಾನ್ತವು. ಹೀಗೆ ಪ್ರತ್ಯಗಾತ್ಮ ದರ್ಶನವು ಉಪಾಸನಕ್ಕೆ ಅಙ್ಗವೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿದುದನ್ನು ಛಾಂದೋಗ್ಯದ ದಹರವಿದ್ಯಾ ಪ್ರಕರಣದಿಂದ ಸಮರ್ಥನೆ ಮಾಡಿ ಹೇಳಿದರು. ಒಂದು ಉಪನಿಷತ್ತಿನಲ್ಲಿ ಹೇಳಿದುದೇ ಇನ್ನೊಂದು ಉಪನಿಷತ್ತಿನಲ್ಲಿಯೂ ಹೇಳಲ್ಪಡುವದರಿಂದ ಕಠೋಪನಿಷತ್ತಿನಲ್ಲಿಯೂ ಕೂಡ ಆತ್ಮದರ್ಶನವು ಪರಮ ಪುರುಷ ಪ್ರಾಪ್ತಿಯೇ ಫಲವಾದ ಪರವಿದ್ಯೆಗೆ ಅಙ್ಗವೆಂದು ಸಿದ್ಧಾನ್ತಮಾಡಿ ಹೇಳುವದ ಕ್ಕಾಗಿ "**ಅನ್ಯತ್ರಾಪಿ**" ಎಂದಾರಂಭಿಸಿ ತಿಳಿಸುತ್ತಾರೆ. **ನ ಜಾಯತೇ ಮ್ರಿಯತೇವಾ** ಇತ್ಯಾದಿ ದ್ವಿತೀಯಾಧ್ಯಾಯದಲ್ಲಿರುವ ಕೆಲವು ವಾಕ್ಯಗಳೇ ಕಠಶ್ರುತಿಯಲ್ಲೂ ಇರುವದರಿಂದ ಉತ್ತರಾ ರ್ಧಾರ್ಥವು ಕಠಶ್ರುತಿಯ ಉಪಬ್ರಹ್ಮಣವೆಂದೇ ಹೇಳಬಹುದು.

**ಅನ್ಯತ್ರಾಪಿ** - ಇನ್ನೊಂದುಕಡೆಯಲ್ಲಿಯೂ ಕೂಡ ಎಂದರೆ ಕಠೋಪನಿಷತ್ತಿನಲ್ಲಿಯೂ, ಈ ಮುಂದಿನ ವಾಕ್ಯದ ಪೂರ್ವಾರ್ಧವು:-"**ತಂ ದುರ್ದರ್ಶಂ ಗೂಢ ಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಮ್ ಪುರಾಣವ್**-"ಎಂದಿರುತ್ತದೆ; **ದುರ್ದರ್ಶಂ**-ಸಾಕ್ಷಾತ್ಕರಿಸಲು ಕಷ್ಟಸಾಧ್ಯನಾದ, **ಗೂಢಂ** - ಗುಣತ್ರಯದಿಂದ ತಿರೋಹಿತನಾಗಿರುವ ಜೀವಾತ್ಮ ಶರೀರಕನಾಗಿ ಗುಪ್ತಸ್ವರೂಪನಾದ,

(೧) ಕಠ. ೧. ೨. ೧೨.

ಭಾ. ಶೋಕೌ ಜಹಾತಿ" ಇತ್ಯೇವ ಮಾದಿಷು "ದೇವಂಮತ್ವೇ"ತಿ ವಿಧೀಯಮಾನ ಪರವಿದ್ಯಾ ಙ್ಗತಯಾ "ಅಧ್ಯಾತ್ಮಯೋಗಾಧಿಗಮೇನ" ಇತಿ ಪ್ರತ್ಯಗಾತ್ಮ ಜ್ಞಾನಮಪಿ ವಿಧಾಯ, (೨) "ನ ಜಾಯತೇ ಮ್ರಿಯತೇವಾ ವಿಪಶ್ಚಿತ್" ಇತ್ಯಾದಿನಾ ಪ್ರತ್ಯಗಾತ್ಮಸ್ವರೂಪಂ ವಿಶೋಧ್ಯ, (೩) "ಅಣೋರಣೀಯಾ೯" ಇತ್ಯಾರಭ್ಯ "ಮಹಾನ್ತಂ ವಿಭು ಮಾತ್ಮಾನಂ

ಅನುಪ್ರವಿಷ್ಟಂ - ಶರೀರವನ್ನು ಅನುಪ್ರವೇಶಮಾಡಿರುವ, ಗುಹಾಹಿತಂ - ಆ ಶರೀರದಲ್ಲೂ ಒಂದು ಮೂಲೆಯಾದ್ದ (ಹೃದಯ) ಗುಹೆಯನ್ನು ಹೊಂದಿದ ಗಹ್ವರೇಷ್ಠಂ - ಆ ಹೃದಯವನ್ನು ಹೊಂದಿದ ಜೀವಾತ್ಮನಲ್ಲಿ ಸೇರಿಕೊಂಡಿರುವ, ಪುರಾಣಂ - ಅನಾದಿಯಾದ, ದೇವಂ-ಪರಮಾತ್ಮ ನನ್ನು, ಅಧ್ಯಾತ್ಮಯೋಗಾಧಿಗಮೇನ–ವಿಷಯಗಳಿಂದ ಹಿಂತಿರಿಗಿಸಲ್ಪಟ್ಟ ಮನಸ್ಸನ್ನು ಜೀವಾತ್ಮ ನಲ್ಲಿ ಇಡೋಣದರಿಂದ ಎಂದರೆ ಇಂದ್ರಿಯಗಳನ್ನು ಜಯಿಸಿ ಚಿತ್ತಸಮಾಧಾನದೊಂದಿಗೆ ಆತ್ಮ ಯಾಥಾತ್ಮ್ಯ ದರ್ಶನದೊಂದಿಗೆ ಎಂಬರ್ಥವು, ಮತ್ವಾ - ಉಪಾಸನೆಯನ್ನು ಮಾಡಿ, ಧೀರಃ - ಜ್ಞಾನದಿಂದ ರಮಿಸುವ ಮುಮುಕ್ಷುವು, ಹರ್ಷಶೋಕೌ ಜಹಾತಿ - ದೇಹಸಂಬಂಧ ಪ್ರಯುಕ್ತ ವಾಗಿ ಉಂಟಾದ ಲಾಭಾ ಲಾಭಗಳಿಂದ ಪ್ರಾಪ್ತವಾದ ಹರ್ಷಶೋಕಗಳನ್ನು ಬಿಡುತ್ತಾನೆ" ಇತ್ಯೇವ ಮಾದಿಷು-ಇವೇ ಮೊದಲಾದ ಶ್ರುತಿಗಳಲ್ಲಿ, ದೇವಂ ಮತ್ವೇತಿ ವಿಧೀಯಮಾನ - "ಪರಮಾತ್ಮ ನನ್ನು ಉಪಾಸನೆಮಾಡಿ" ಎಂಬುವಲ್ಲಿ ವಿಧಿಸಲ್ಪಟ್ಟ, ಪರವಿದ್ಯಾಙ್ಗತಯಾ - ಬ್ರಹ್ಮವಿದ್ಯೆಗೆ ಅಙ್ಗವೆಂಬುವ ಭಾವದಿಂದ, "ಅಧ್ಯಾತ್ಮ ಯೋಗಾಧಿಗಮೇನ" ಇತಿ - ಎಂಬೀಪ್ರಯೋಗದಿಂದ, ಪ್ರತ್ಯಗಾತ್ಮ ಜ್ಞಾನಮಪಿ ವಿಧಾಯ - ಜೀವಾತ್ಮಸ್ವರೂಪ ವಿಷಯಕ ಜ್ಞಾನ ನಿಷ್ಠೆಯನ್ನೂ ಸಹ ವಿಧಿಸಿ, (೨) ನ ಜಾಯತೇ ಮ್ರಿಯತೇವಾ ವಿಪಶ್ಚಿತ್ ಇತ್ಯಾದಿನಾ–ನಜಾಯತೇ ಎಂಬ ಕಠ ಶ್ರುತಿ ವಾಕ್ಯವೇ ಮೊದಲಾದುವರಿಂದ, ಪ್ರತ್ಯಗಾತ್ಮ ಸ್ವರೂಪಂವಿಶೋಧ್ಯ-ಜೀವಾತ್ಮನ ಸ್ವರೂಪ ವನ್ನು ವಿವೇಚನೆ ಮಾಡಿ ತಿಳಿದು, (೩) "ಅಣೋರಣೀಯಾ೯" ಇತ್ಯಾರಭ್ಯ - ಅಣೋರಣೀ ಯಾ೯ ಎಂಬ ಕಠಶ್ರುತಿ ಶ್ಲೋಕ ಮೊದಲುಗೊಂಡು, ಈ ಪೂರಾ ವಾಕ್ಯಗಳು ಯಾವುವೆಂದರೆ:—

ಅಣೋರಣೀಯಾ೯ ಮಹತೋ ಮಹೀಯಾ೯ ಆತ್ಮಾಸ್ಯಜನ್ತೋರ್ನಿಹಿತೋಗುಹಾಯಾಂ।
ತಮಕ್ರತುಃಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನ ಮಾತ್ಮನಃ ॥೨೦॥
ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ।
ಕಸ್ತಂ ಮದಾ ಮದಂ ದೇವಂ ಮದನ್ಯೋಜ್ಞಾತುಮರ್ಹತಿ ॥೨೧॥
ಅಶರೀರಂ ಶರೀರೇಷು ಅನವಸ್ಥೇಷ್ವ ವಸ್ಥಿತಮ್ ।
ಮಹಾನ್ತಂ ವಿಭುಮಾತ್ಮಾನಂ ಮತ್ವಾಧೀರೋ ನ ಶೋಚತಿ ॥೨೨॥

ಪ್ರತ್ಯಗಾತ್ಮನಿಗೂ ಅಂತರ್ಯಾಮಿಯಾಗಿರುವ ಪರಬ್ರಹ್ಮನ ಸ್ವರೂಪವು ಹೇಳಲ್ಪಡುತ್ತದೆ, ಅಣೋಃ - ಅಚೇತನಾಪೇಕ್ಷೆಯಾ ತುಂಬಾ ಸೂಕ್ಷ್ಮವಾಗಿ ಅಣುರೂಪನಾಗಿರುವ ಚೇತನಕ್ಕಿಂ ತಲೂ, ಅಣೀಯಾ೯ - ಸೂಕ್ಷ್ಮತರನು ಎಂದರೆ ಅಣುವನ್ನೂ ಕೂಡ ಅಂತಃಪ್ರವೇಶಮಾಡಲು ಯೋಗ್ಯವಾದ ಶಕ್ತಿಯುಳ್ಳವನು, ಆದರೆ ಅಣುವಿನಲ್ಲಿ ಸ್ಥಳವಿಲ್ಲದುದರಿಂದ ಅದನ್ನು ಅನುಪ್ರವೇಶ ಮಾಡಬೇಕಾದ ಆವಶ್ಯಕತೆಯಿಲ್ಲವು, ಮಹತಃ - ಮಹತ್ತಾದ ಆಕಾಶಾದಿಗಳಿಗಿಂತಲೂ, ಮಹೀ ಯಾ೯ - ಮಹತ್ತರಃ, ಎಂದರೆ ವಿಭು ಪದಾರ್ಥಗಳಿಗೆ ಕೂಡ ಬಹಿರ್ವ್ಯಾಪ್ತಿಮಾಡುವ ಶಕ್ತಿಯು ಳ್ಳವನು, ಎಂದರೆ ತನ್ನನ್ನು ವ್ಯಾಪಿಸುವ ವಸ್ತುವ್ಯಾವುದೂ ಇಲ್ಲದವನು, ಅಸ್ಯ ಜನ್ತೋಃ –

(೨) ಕಠ. ೧. ೨. ೧೮. (೩) ಕಠ. ೧. ೨. ೨೦

ಈ ಜನ್ಮಾದಿಗಳಿರುವ ಜೀವಾತ್ಮನಿಗೆ, **ಆತ್ಮಾ** - ಅನುಪ್ರವೇಶಮಾಡಿ ನಿಯನ್ತಾವಾಗಿರುವನು, **ಗುಹಾಯಾಂ** - ಹೃದಯ ಗುಹೆಯಲ್ಲಿ, **ನಿಹಿತಃ** - ಇರುವಂತವನು, **ತಂ** - ಅಂತಹ ಪರಮಾತ್ಮನನ್ನು **ಅಕ್ರತುಃ**-ಕಾಮ್ಯ ಕರ್ಮಾದಿಗಳನ್ನು ಸೃಷ್ಟಿಸದವನಾಗಿ ಎಂದರೆ ಅವುಗಳ ಫಲಗಳನ್ನು ಕೋರದೆ,ಅವುಗಳನ್ನು ಮಾಡಿದರೂ ಫಲಾಭಿಸಂಧಿ ರಹಿತನಾಗಿ ಪರಮಾತ್ಮನಲ್ಲಿ ಸಮರ್ಪಿಸಿ ಎಂಬ ಭಾವವು, **ಧಾತೋಃ ಪ್ರಸಾದಾತ್** - ಧಾರಕನಾದ ಪರಮಾತ್ಮನ ಅನುಗ್ರಹದಿಂದ, **ಆತ್ಮನಃ ಮಹಿಮಾನಂ**–ತನಗೆ ಮಹತ್ವವನ್ನುಂಟುಮಾಡುವವನನ್ನು ಎಂದರೆ ತನಗೆ ಸಾರ್ವಜ್ಞ್ಯಾದಿ ಗುಣಾಷ್ಟಕಗಳ ಆವಿರ್ಭಾವಕ್ಕೆ ಕಾರಣಭೂತನಾದ ಪರಮಾತ್ಮನನ್ನು ಎಂಬರ್ಥವು, **ಯದಾಪಶ್ಯತಿ** - ಯಾವಾಗ ಉಪಾಸನೆ ಮೂಲಕ ಸಾಕ್ಷಾತ್ಕರಿಸುತ್ತಾನೋ, **ತದಾ**–ಆಗ, **ವೀತಶೋಕೋ ಭವತಿ**- ದುಃಖಗಳನ್ನೆಲ್ಲಾ ಕಳೆದುಕೊಂಡವನಾಗುವನು, ಹಾಗೆ ಧಾತುಃಪ್ರಸಾದ ವಿಲ್ಲದವನಿಗೆ ಹೇಗೆಂದರೆ ಹೇಳಲ್ಪಡುತ್ತದೆ. **ಆಸೀನೋ ದೂರಂ ವ್ರಜತಿ** - ಹತ್ತಿರವಿದ್ದರೂ ದೂರಹೋಗುವನು, **ಶಯಾನೋಯಾತಿ ಸರ್ವತಃ** - ಮಲಗಿರುವಾಗಲೇ ಸುತ್ತಲೂ ಸಂಚರಿಸುವನು, ಇವುಗಳು ಚೇತನನಿಗೆ ಅಂತರ್ಯಾಮಿಯಾಗಿರುವವರ ಮೂಲಕವೆಂದು ಭಾವಿಸತಕ್ಕದ್ದು; **ಮದಾ ಮದಂ ದೇವಂತಂ** - ಹರ್ಷಾಹರ್ಷ ವಿರುದ್ಧ ಧರ್ಮಮಧ್ಯದಲ್ಲಿರುವ ಅಂತಹ ಪರಮಾತ್ಮನನ್ನು, **ಮದನ್ಯಃ** - ಪರಮಾತ್ಮಪ್ರಸಾದದಿಂದ ಅನುಗ್ರಹಿಸಲ್ಪಟ್ಟ ನನ್ನಂತವರಲ್ಲದೆ ಬೇರೆ, **ಕೋವಾ ಜ್ಞಾತು ಮರ್ಹತಿ** - ಯಾರುತಾನೆ ತಿಳಿಯಲು ಅರ್ಹರಾದಾರು, **ಅಶರೀರಂ** - ಕರ್ಮಕೃತ ಶರೀರವಿಲ್ಲದ, ಮತ್ತು **ಅನವಸ್ಥೇಷು ಶರೀರೇಷು** - ಅನಿತ್ಯಗಳಾದ ಶರೀರಗಳಲ್ಲಿ, **ಅವಸ್ಥಿತಂ**- ನಿತ್ಯವಾಗಿರುವ, **ಮಹಾನ್ತಂ ವಿಭುಂ** - ಮಹಾ ವೈಭವಶಾಲಿಯಾದ, **ಆತ್ಮಾನಂ** - ಪರಮಾತ್ಮನನ್ನು **ಮತ್ವಾ** - ಉಪಾಸನೆಯಿಂದ ಸಾಕ್ಷಾತ್ಕರಿಸಿ, ಧೀರನಾದವನು, **ನ ಶೋಚತಿ** - ದುಃಖಿಸುವದಿಲ್ಲವು." ಹೀಗೆ ಈ ಮೂರು ಶ್ಲೋಕದಿಂದ ಪರಸ್ವರೂಪವೂ, ಆತನ ಉಪಾಸನವೂ, ಆ ಪರಮಾತ್ಮೋಪಾಸನೆಗೆ ಆತ್ಮಯಾಥಾತ್ಮ್ಯ ದರ್ಶನವು ಅಙ್ಗವೆಂದೂ ಹೇಳಲ್ಪಟ್ಟಿತು. ಇಲ್ಲಿ **ದೇವಂ ಮತ್ವಾ** ಎಂದು ಹೇಳಿರುವದೇ ಪ್ರಧಾನೋಪಾಯವು, ಎಂದು ಹೇಳುವದಕ್ಕಾಗಿ ಅದೇ **ಪರ ವಿದ್ಯಾ**ವೆಂದು ಹೇಳಿ, ಅದಕ್ಕೆ ಅಙ್ಗವೆಂದು ಹೇಳುವದಕ್ಕಾಗಿ **ಅಧ್ಯಾತ್ಮ ಯೋಗಾಧಿಗಮೇನ** ಎಂಬ ಪ್ರಯೋಗವೆಂದು ವ್ಯಕ್ತಪಡಿಸಿರುತ್ತಾರೆ. ಇಲ್ಲಿ **ಅಧ್ಯಾತ್ಮ ಯೋಗಾಧಿಮಕ್ಕೂ** ತತ್ಫಲವೇ ಎಂಬರ್ಥವನ್ನು ಊಹಿಸಬಹುದಾದುದರಿಂದ ಅದೇ ಉಪಾಯವೆಂದು ಹೇಳಲಭ್ಯಂತರವೇನು ಎಂದರೆ **ದೇವಂ ಮತ್ವಾ** ಎಂಬುವಕ್ಕೆ ಫಲಸಾಧ್ಯತ್ವವು ಹೊರಟು ಹೋಗುತ್ತದೆ. ಅಧ್ಯಾತ್ಮ ಜ್ಞಾನದಿಂದ ದೇವಂ ಮತ್ವಾ ಎಂದು ಹೇಳಿರುವದರಿಂದಲೇ ಆತ್ಮದರ್ಶನವು ಪ್ರಧಾನೋಪಾಯಕ್ಕೆ ಅಙ್ಗವೆಂಬುದು ಸಿದ್ಧವು. ಆತ್ಮ ಯಾಥಾತ್ಮ್ಯಜ್ಞಾನವು ಅಙ್ಗವಾದನಂತರ, ಆತ್ಮನ ಯಥಾರ್ಥ ಸ್ವರೂಪದ ಜ್ಞಾನಕ್ಕಾಗಿ "ನ ಜಾಯತೇ ಮ್ರಿಯತೇ" ಎಂಬ ವಾಕ್ಯವು ಉಪಾತ್ತವು, ಹೀಗೆ ಹೇಳಿದುದರಿಂದ ಈ ಪ್ರಥಮ ಷಟ್ಕದಲ್ಲಿ ಹೇಳಲ್ಪಡುವದು ಏನೆಂದರೆ:—ಕರ್ಮಯೋಗವು ಫಲಾಭಿಸಂಧಿಯಿಲ್ಲದೆ ಭಗವತ್ಪ್ರೀತಿಗಾಗಿ ಮಾಡುವ ಕರ್ಮಾನುಷ್ಠಾನವೆಂದು, ಇದು ಆತ್ಮಯಾಥಾತ್ಮ್ಯಜ್ಞಾನವನ್ನು ಒಳಗೊಂಡದಾಗಿ, ಜ್ಞಾನಯೋಗಕ್ಕೂ ಭಕ್ತಿಯೋಗಕ್ಕೂ ಅಙ್ಗವು. ಜ್ಞಾನಯೋಗವು ಭಕ್ತಿಯೋಗಕ್ಕೆ ಅಙ್ಗವೆಂದೂ ಹೇಳಲ್ಪಟ್ಟಿತು. ಭಕ್ತಿಯೋಗಕ್ಕೆ ಜ್ಞಾನಯೋಗ ಸಾಧ್ಯವಾದ ಆತ್ಮಾವಲೋಕನವೂ ಅಙ್ಗವು. ಪ್ರಥಮ ಷಟ್ಕದಲ್ಲಿ ಈ ಅಙ್ಗವಾದ ಆತ್ಮಾವಲೋಕನವು ಉಪಪಾದಿಸಲ್ಪಡುತ್ತದೆಂದು ಹೇಳಿ, ಮುಂದಕ್ಕೆ "ಅಣೋರಣೀಯಾ" ಇತ್ಯಾದಿ ಪ್ರಮಾಣಗಳಿಂದ ದ್ವಿತೀಯ ತೃತೀಯ ಷಟ್ಕಗಳ ಸಙ್ಗ್ರಹಾರ್ಥವನ್ನು ಉಪಪಾದಿಸುತ್ತಾರೆ. ಈ ಅಭಿಪ್ರಾಯಗಳು ಶ್ರೀ ಯಾಮುನೇಯರ ಸಙ್ಗ್ರಹ ಶ್ಲೋಕಗಳನ್ನನುಸರಿಸಿದವಾ

ಭಾ. ಮತ್ವಾ ಧೀರೋ ನ ಶೋಚತಿ (೧) "ನಾಯಮಾತ್ಮಾ ಪ್ರವಚನೇನಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ। ಯಮೇವೈಷವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾವಿವೃಣುತೇ ತನೂಂ ಸ್ವಾಮ್" ಇತ್ಯಾದಿಭಿಃ ಪರಸ್ವರೂಪಂ, ತದುಪಾಸನ ಮುಪಾಸನಸ್ಯ ಚ ಭಕ್ತಿರೂಪತಾಂ, ಪ್ರತಿಪಾದ್ಯ, (೨)"ವಿಜ್ಞಾನಸಾರಥಿ ರ್ಯಸ್ತು ಮನಃ ಪ್ರಗ್ರಹವಾನ್ನರಃ ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಮ್ ಪದಮ್"

ಗಿರುತ್ತವೆ. ಇವರ ಎರಡನೆಯ ಶ್ಲೋಕವಾದ "ಜ್ಞಾನ ಕರ್ಮಾತ್ಮಕೇನಿಷ್ಠೇ ಯೋಗಲಕ್ಷ್ಯೇ ಸುಸಂಸ್ಕೃತೇ। ಆತ್ಮಾನುಭೂತಿ ಸಿದ್ಧ್ಯರ್ಥೇ ಪೂರ್ವ ಷಟ್ಕೇನ ಚೋದಿತೇ" ಇಲ್ಲಿ ಜ್ಞಾನ ಕರ್ಮ ಯೋಗಗಳು ಭಕ್ತಿಯೋಗವನ್ನೇ ಗುರಿಯಾಗಿವುಳ್ಳವು ಎಂದು ಹೇಳಿರುವದರಿಂದ ಅವುಗಳು ಭಕ್ತಿಯೋಗಕ್ಕೆ ಅಙ್ಗವೆಂಬುದು ಸ್ಥಾಪಿತವು. "ಅಣೋರಣೀಯಾಂ" ಎಂದಾರಂಭಿಸಿ ಉಪಸಂಹೃತಂ ಎಂದು ಮುಗಿಸಿ ಹೇಳಿರುವದರಿಂದ ೨, ೩ ನೆಯ ಷಟ್ಕಗಳ ಸಙ್ಗ್ರಹಾರ್ಥವು ಹೇಳಲ್ಪಡುವವು.

(೧) ಅಯಮಾತ್ಮಾ - ಮೇಲಿನ ಶ್ಲೋಕದಲ್ಲಿ ಹೇಳಲ್ಪಟ್ಟ ಪರಮಾತ್ಮನು ಪ್ರವಚನೇನ– ಪ್ರವಚನ ಫಲವಾದ ಮನನದಿಂದ, ನ ಲಭ್ಯಃ - ಹೊಂದಲು ಸಾಧ್ಯನಲ್ಲವು; ಮೇಧಯಾ – ಕೇವಲ ಭಕ್ತಿಯಿಂದಲೂ, ನಲಭ್ಯಃ - ಹೊಂದಲು ಸಾಧ್ಯನಲ್ಲವು, ಬಹುನಾಶ್ರುತೇನ-ತುಂಬಾ ಶ್ರವಣದಿಂದಲೂ, ನ ಲಭ್ಯಃ, ಏಷಃ - ಈ ಪರಮಾತ್ಮನು, ಯಂ - ಯಾವ ಅಧಿಕಾರಿಯನ್ನು, ವೃಣುತೇ - ಆತನ ಭಕ್ತಿಯಿಂದ ಸುಪ್ರೀತನಾಗಿ ಯೋಗ್ಯನೆಂದು ವರಿಸುತ್ತಾನೋ, ತೇನ - ಅವನಿಂದಲೇ, ಲಭ್ಯಃ - ಹೊಂದಲು ಸಾಧ್ಯನು, ಎಂದರೆ ಯಾವನು ಈ ಪರಮಾತ್ಮನನ್ನೇ ಸಿದ್ಧೋಪಾಯನನ್ನಾಗಿ ಪ್ರಾರ್ಥಿಸುತ್ತಾನೋ, ಅಂತಾವನಿಂದ ಲಭ್ಯನು; ಹಾಗೆ ಪ್ರಾರ್ಥಿಸುವನು ಭಗವಂತನಿಗೆ ಪ್ರಿಯತಮನಾದವನು; ಭಗವಂತನನ್ನು ಕುರಿತು ಉಪಾಸನೆಮಾಡಿದರೆ, ಭಗವಂತನು ಪ್ರೀತನಾಗುವನು; ಹಾಗೆ ಪ್ರೀತನಾದರೇನೇ ತನ್ನ ಪ್ರಾಪ್ತಿಗೆ ಹೇತುಭೂತನಾಗುವನೆಂಬ ಭಾವವು. ಇಲ್ಲಿ ಹೇಳಿರುವ ಭಕ್ತಿಯೋಗದ ಭಕ್ತಿಯು ಸಾಮಾನ್ಯವಲ್ಲವು; ಇದನ್ನು ಶ್ರೀ ನಿಗಮಾಂತರು ಪರಭಕ್ತಿಯೆಂದು ಹೇಳಿರುತ್ತಾರೆ. ಇದನ್ನೇ ಶ್ರೀ ಭಾಷ್ಯಕಾರರು ಐಕಾನ್ತಿಕಾತ್ಯನ್ತಿಕ ಭಕ್ತಿ ಎಂಬ ಪ್ರಯೋಗದಿಂದ ನಿರ್ದೇಶಿಸಿರುತ್ತಾರೆ. ಈ ಭಕ್ತಿಯೋಗ ಭಕ್ತಿಯು ಪ್ರಥಮದಲ್ಲಿ ಬಹುಳವಾಗಿ ಅನಂತರ ಬಹುಳತರವಾಗಿ ಕೊನೆಗೆ ಬಹುಳತಮವಾಗುತ್ತದೆಂದು ವರ್ಣಿಸಿರುತ್ತಾರೆ; ಭಕ್ತಿಯೋಗಾರಂಭದಲ್ಲಿ ಪರಭಕ್ತಿ ಎಂದು ಹೇಳಲ್ಪಟ್ಟದುದು ಪರಮಾತ್ಮ ಸಾಕ್ಷಾತ್ಕಾರವಾಗಿ ನಿಷ್ಪನ್ನ ಭಕ್ತಿಯೋಗಿಯ ವಿಷಯದಲ್ಲಿ ಪರಜ್ಞಾನವೆಂದು ಹೇಳಲ್ಪಟ್ಟು, ಪರಮಾತ್ಮನೊಂದಿಗೆ ವಿಶ್ಲೇಷವನ್ನು ಇನ್ನು ಒಂದು ಕ್ಷಣವೂ ಇರಲಾರನೆಂಬ ಆತ್ಮಾವಸ್ಥೆಯ ಭಕ್ತಿಯು ಪರಮಾಭಕ್ತಿ ಎನಿಸುತ್ತದೆ. ತಸ್ಯ - ಅಂತಹ ಭಗವತ್ಪ್ರಿಯನಾದ ಚೇತನನಿಗೆ, ಏಷ ಆತ್ಮಾ - ಈ ಪರಮಾತ್ಮನು, ಸ್ವಾಂ ತನುಂ - ಸ್ವಕೀಯವಾದ ಅಪ್ರಾಕೃತ ದಿವ್ಯ ಮಙ್ಗಳ ವಿಗ್ರಹವನ್ನು ವಿವೃಣುತೇ - ಪ್ರಕಾಶಗೊಳಿಸುತ್ತಾನೆ." ಈ ಶ್ಲೋಕದಿಂದ ಪರಮಾತ್ಮಪ್ರಾಪ್ತಿಗೆ ಉಪಾಯವು ಇಲ್ಲಿಯೂ ಉಪಾಸನವು ಎಂದು ಹೇಳಿ, ಅನನ್ಯ ಭಕ್ತಿಯಿಂದುಂಟಾಗುವ ಭಗವಂತನ ಪ್ರೀತ್ಯತಿಶಯವೂ ತತ್ಪ್ರಾಪ್ತಿಯೂ ಹೇಳಲ್ಪಟ್ಟವು," ಇತ್ಯಾದಿಭಿಃ - ಇವೇ ಮೊದಲಾದವುಗಳಿಂದ, ಪರಸ್ವರೂಪವನ್ನೂ, ತದುಪಾಸನಂ - ಆ ಪರಮಾತ್ಮನ ಉಪಾಸನವನ್ನೂ, ಉಪಾಸನಸ್ಯ ಭಕ್ತಿರೂಪತಾಂ - ಬಗೀ ಉಪಾ

(೧) ಕಠ. ೧. ೨. ೨೩. (೨) ಕಠ ೧. ೩. ೯.

**ತಾ. ಇತಿ ಪರವಿದ್ಯಾ ಫಲೇನೋಪಸಂಹೃತಮ್. ತದ್ವಿಷ್ಣೋಃ ಪರಮಂ ಪದಂ" ಇತಿ ಪರ ವಿದ್ಯಾ ಫಲೇನೋ ಪಸಂಹೃತಮ್. ಅತಃಪರ ಮಧ್ಯಾಯ ಚತುಷ್ಟಯೇನೇ ದನೇವ ಪ್ರಾಪ್ತುಃ ಪ್ರತ್ಯಗಾತ್ಮನೋ ದರ್ಶನಂ ಸಸಾಧನಂ ಪ್ರಪಂಚಯತಿ ||**

ಸನದಿಂದ ಪ್ರಯೋಜನವಿಲ್ಲವೆಂದೂ, ಅದು ನಿರತಿಶಯ ಭಕ್ತಿಯೋಗದಿಂದ ಕೂಡಿದ್ದರೇ ಫಲದಾಯಕವೆಂದೂ, ಪ್ರತಿಪಾದ್ಯ-ಪ್ರತಿಪಾದಿಸಿ, ಈ ಬ್ರಹ್ಮವಿದ್ಯೆಗೆ ಫಲವೇನೆಂಬುದನ್ನೂ ಆ ಬ್ರಹ್ಮ ವಿದ್ಯೆಗೆ ಯಾವುದು ಮುಖ್ಯಾಂಗವೆಂಬುದನ್ನೂ ಈ ಮುಂದಿನ ಶ್ಲೋಕದಲ್ಲಿ ಹೇಳಲ್ಪಡುವವದರಿಂದ ಅದನ್ನು ಉದಾಹರಿಸುತ್ತಾರೆ:—ಹಿಂದಿನ ಶ್ಲೋಕದಲ್ಲಿ ವಿಜ್ಞಾನವುಳ್ಳವನಾಗಿ ಶುಚಿಯಾಗಿರುವವನು **ತತ್ಪದಮಾಪ್ನೋತಿ** ಎಂದು ಹೇಳಲ್ಪಟ್ಟಿತು. ಆ ಪದವೆಂಥಾದ್ದೆಂಬುದು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ:—"**ವಿಜ್ಞಾನ ಸಾರಥಿಃ** - ಸಮೀಚೀನವಾದ ಜ್ಞಾನವನ್ನು ಸಾರಥಿಯಾಗಿವುಳ್ಳವನಾಗಿಯೂ, **ಮನಃ ಪ್ರಗ್ರಹವಾನ್** - ಮನಸ್ಸನ್ನು ನಿಗ್ರಹಿಸಿರುವನಾಗಿಯೂ ಇರುವ, **ನರಃ** - ಮನುಷ್ಯನು, **ಯಃ** - ಯಾರೋ, **ಸಃ** - ಅಂತವನು, **ಅಧ್ವನಃ ಪಾರಂ** - ಸಂಸಾರ ಮಾರ್ಗದ ಆಚೇದಡವಾದ, **ವಿಷ್ಣೋಃ** - ವ್ಯಾಪನಶೀಲನಾದ ಭಗವಂತನ, **ಪರಮಂ ಪದಂ** - ಸರ್ವೋತ್ಕೃಷ್ಟಪದವಾದ ದಿವ್ಯ ವೈಕುಂಠವನ್ನು, **ಆಪ್ನೋತಿ** - ಹೊಂದುವನು," **ಇತಿ** - ಎಂಬದಾಗಿ, **ಪರವಿದ್ಯಾ ಫಲೇನ** - ಪರವಿದ್ಯಾ ಫಲವೇ ಅದಕ್ಕೂ ಫಲವಾಗಿ, **ಉಪಸಂಹೃತಮ್** - ಉಪಸಂಹಾರವಮಾಡಿ ಹೇಳಲ್ಪಟ್ಟಿತು. ಈ **ಉಪಸಂಹೃತಮ್**-ಎಂಬುದಕ್ಕೆ ಕರ್ತೃ ಪದವು **ಪ್ರಾಪ್ತುರಾತ್ಮನಸ್ಸ್ವರೂಪದರ್ಶನಂ** ಎಂಬುದು ಹಿಂದಿನ ವಾಕ್ಯದಲ್ಲಿ ತುಂಬಾ ಹಿಂದೆ ಇರುತ್ತದೆ. ಇದರಿಂದ ಪರವಿದ್ಯೆಗೆ **ವಿಜ್ಞಾನ ಸಾರಥಿ** ಶಬ್ದದಿಂದ ಸೂಚಿಸಲ್ಪಟ್ಟ ಜ್ಞಾನನಿಷ್ಠೆಯಿಂದುಂಟಾಗುವ ಜೀವಾತ್ಮಸ್ವರೂಪದರ್ಶನವು ಪರ ವಿದ್ಯೆಗೆ ಅಙ್ಗವೆಂದೂ, ಆ ಪರವಿದ್ಯೆಗೆ ಯಾವ ಫಲವೋ ಆತ್ಮದರ್ಶನಕ್ಕೂ ಅದುವೇ ಫಲವೆಂದು ಹೇಳಲ್ಪಟ್ಟಿತೆಂಬ ತಾತ್ಪರ್ಯವು. ಸಾಧಾರಣವಾಗಿ ಅಙ್ಗಿಗೆ ಹೇಳುವ ಫಲವೇ ಅಙ್ಗಗಳಿಗೂ ಕೂಡ ಅವುಗಳ ಪ್ರಾಮುಖ್ಯತೆಯನ್ನು ತಿಳಿಸುವದಕ್ಕಾಗಿ ಹೇಳಲ್ಪಡುತ್ತದೆ. ಛಾಂದೊಗ್ಯಮಾತ್ರವೇ ಅಲ್ಲದೆ ಕಠಶ್ರುತಿಯಲ್ಲೂ ಪ್ರತ್ಯಗಾತ್ಮದರ್ಶನವು ಪರ್ಯವಸಾನದಲ್ಲಿ ದಿವ್ಯ ವೈಕುಂಠಪ್ರಾಪ್ತಿಗೆ ಕಾರಣವಾಗುತ್ತದೆಂದು ಹೇಳಿರುತ್ತದೆಂಬುದು ತಾತ್ಪರ್ಯವು, **ಅತಃ ಪರಂ** - ಇಲ್ಲಿಂದ ಮುಂದಕ್ಕೆ, **ಅಧ್ಯಾಯ ಚತುಷ್ಟಯೇನ** - ನಾಲ್ಕು ಅಧ್ಯಾಯಗಳಿಂದ ಎಂದರೆ ೩. ೪. ೫. ೬ನೆಯ ಅಧ್ಯಾಯಗಳಿಂದ, **ಇದನೇವ** ಈಗ ಈ ಎರಡನೆಯ ಅಧ್ಯಾಯದಲ್ಲಿ ಹೇಳಿದುದನ್ನೇ ಅವು ಯಾವುದೆಂದರೆ **ಪ್ರಾಪ್ತುಃ** - ಪ್ರಾಪ್ತವಾದ, **ಪ್ರತ್ಯಗಾತ್ಮನಃ** - ಜೀವಾತ್ಮನ, **ದರ್ಶನಂ** - ಸಾಕ್ಷಾತ್ಕಾರವು, **ಸಸಾಧನಂ ಯಥಾತಥಾ** - ಸಾಧನವಾದ ಉಪಾಸನೆಯೊಂದಿಗೆ ಸೇರಿರೋಣ ಹೇಗೋ ಹಾಗೆ, ಅಥವಾ ಆ ಜೀವಾತ್ಮ ದರ್ಶನಕ್ಕೆ ಸಾಧನದೊಂದಿಗೆ ಇರೋಣ ಹೇಗೋ ಹಾಗೆ, **ಪ್ರಪಂಚಯತಿ** - ಉಪಪಾದಿಸಿ ಹೇಳುತ್ತಾರೆ. ಹೀಗೆ ಛಾಂದೋಗ್ಯ ಕಠಶ್ರುತಿ ವಾಕ್ಯಗಳಿಂದ ತನ್ನ ಆತ್ಮ ದರ್ಶನವು ಭಕ್ತ್ಯುಪಾಯಕ್ಕೆ ಅಙ್ಗವೆಂದೂ ಪರಮಾತ್ಮನ ಉಪಾಸನಕ್ಕೆ ಯಾವ ಫಲವೋ ತನ್ನ ಆತ್ಮದರ್ಶನಕ್ಕೂ ಅದೇ ಫಲವು ಎಂದು ಹೇಳಲ್ಪಟ್ಟದುದನ್ನೇ ಇಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಾನೆಂಬ ಭಾವವು.

**ಮೂಲಕ್ಕೆ ಅರ್ಥವು** :—ಅರ್ಜುನನು ಪ್ರಶ್ನಿಸುತ್ತಾನೆ:—ಹಿಂದೆ ಕರ್ಮಯೋಗಪ್ರಶಂಸೆಯನ್ನು ಮಾಡಿ ಕರ್ಮಯೋಗದಿಂದಲೇ ಯುದ್ಧವನ್ನು ಫಲಾಭಿಸಂಧಿ ರಹಿತನಾಗಿ ಮಾಡು ಎಂದು ಹೇಳಿದರು; ಅನಂತರ ಅದು ಜ್ಞಾನಯೋಗಕ್ಕೆ ಅಙ್ಗವೆಂದು ಹೇಳಿ ಐಹಿಕ ಪ್ರವೃತ್ತಿಗಳನ್ನು ತೊರೆದು ತನ್ನ ಆತ್ಮನ ವಿಲಕ್ಷಣ ಸ್ವರೂಪದ ಚಿನ್ತನವು ಅಮೋಘವಾದುದೆಂದು ಹೇಳಿದರು;

ಮೂ. ಅರ್ಜುನ ಉವಾಚ :—

ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿ ರ್ಜನಾರ್ದನ ।
ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧.

ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಂ ॥ ೨.

---

ಭಾ. ಯದಿ ಕರ್ಮಣೋ ಬುದ್ಧಿರೇವ ಜ್ಯಾಯಸೀತಿ ತೇ ಮತಾ, ಕಿಮರ್ಥಂ ತರ್ಹಿ ಘೋರೇ ಕರ್ಮಣಿ ಮಾಂ ನಿಯೋಜಯಸಿ? ಏತದುಕ್ತಂ ಭವತಿ :—"ಜ್ಞಾನನಿಷ್ಠೈವಾ ತ್ಮಾವ

---

ಮೊದಲಿನಲ್ಲಿ ಶಿಷ್ಯಾನು ಪ್ರವೃತ್ತಿರೂಪಧರ್ಮವನ್ನು ಪದೇಶಿಸಿದಿರಿ, ಅನಂತರ ಪರವು ನಿವೃತ್ತಿರೂಪ ಧರ್ಮವನ್ನು ಪದೇಶಿಸಿದಿರಿ. ಅರ್ಜುನನಿಗೆ ಯುದ್ಧ ಮಾಡುವದು ಇಷ್ಟವಲ್ಲವಾದುದರಿಂದ, ಎರಡ ನೆಯದೇ ಉತ್ತಮವೆಂದು ಹೇಳಿಬಿಟ್ಟರೆ, ಯುದ್ಧವನ್ನು ತ್ಯಾಗಮಾಡಬೇಕೆಂಬ ಇಷ್ಟವು ಸಿದ್ಧಿಸು ತ್ತದೆ ಎಂಬಾಶಯದಿಂದ ಯಾವುದು ಇವೆರಡರಲ್ಲಿ ಶ್ರೇಷ್ಠವು ಎಂದು ಪ್ರಶ್ನಿಸುತ್ತಾನೆ. ಪ್ರಶ್ನಿಸು ವದರಲ್ಲಿ ಜ್ಞಾನಯೋಗವೇ ಕರ್ಮಯೋಗಕ್ಕಿಂತ ಶ್ರೇಷ್ಠವೆಂದು ಶ್ರೀಕೃಷ್ಣ ಭಗವಾನರವರು ಹೇಳು ವರೆಂದು ಭಾವಿಸಿ ಮಾಡುವ ಪ್ರಶ್ನೆಯು. ಹೇ ಜನಾರ್ದನ-ಜನಿ ಎಂದರೆ ಹುಟ್ಟುವಿಕೆಯನ್ನು ಹೋಗಲಾಡಿಸುವ ಶ್ರೀಕೃಷ್ಣನೇ, ಕರ್ಮಣಃ-(ಪಂಚಮಿ)-ಕರ್ಮಕ್ಕಿಂತಲೂ ಎಂದರೆ ಕರ್ಮ ನಿಷ್ಠೆ ಗಿಂತಲೂ, ಬುದ್ಧಿಃ - ಜ್ಞಾನ ನಿಷ್ಠೆಯು, ಜ್ಯಾಯಸೀತಿ-ಶ್ರೇಷ್ಠವಾದುದೆಂದು, ತೇ - ನಿನಗೆ, ಮತಾಚೇತ್-ಅಭಿಪ್ರಾಯವಾದರೆ, ತತ್-ಹಾಗಾದಪಕ್ಷದಲ್ಲಿ, ಹೇ ಕೇಶವ-ಬ್ರಹ್ಮರುದ್ರರಿಗೂ ಸ್ವಾಮಿಯಾದ ಶ್ರೀಕೃಷ್ಣನೇ, ಕಿಂ-ಕಿಮರ್ಥಂ-ಏತಕ್ಕಾಗಿ, ಮಾಂ-ನನ್ನನ್ನು, ಘೋರೇಕರ್ಮಣಿ-ಘೋರವಾದ ಇಂದ್ರಿಯ ಪ್ರಾಬಲ್ಯಗಳಿಗೆ ವಶವಾಗಿರುವದರಿಂದ ಘೋರವಾದ ಕರ್ಮದಲ್ಲಿ, ಅಥವಾ ಪ್ರಕೃತ ಶತ್ರುಹನನರೂಪವಾದ ಘೋರ ಕರ್ಮದಲ್ಲಿ, ನಿಯೋಜಯಸಿ-ಆಜ್ಞಾಪಿಸುತ್ತೀಯೆ? ಹೀಗೆ ವ್ಯಾಮಿಶ್ರೇಣೈವ ವಾಕ್ಯೇನ-ವಿರುದ್ಧಾಭಿಪ್ರಾಯವಿರುವ ವಾಕ್ಯದಿಂದ, ಮೇ-ನಿಶ್ಚಯಜ್ಞಾನ ವನ್ನು ಹೊಂದಬೇಕೆಂದು (ಶಾಧಿಮಾಂ ಎಂದು ಬೇಡಿದ) ಪ್ರಪನ್ನನಾದ ನನ್ನ, ಬುದ್ಧಿಂ - ಬುದ್ಧಿಯನ್ನು, ಮೋಹಯಸೀವ - ಮೋಹಪಡಿಸುವಹಾಗೆ ತೋರುತ್ತದೆ; ನೀನು ಕೃಪಾ ಪುರ ಸ್ಸರವಾಗಿ ಸರಿಯಾಗಿಯೇ ಉಪದೇಶಿಸಿರಬಹುದು; ಆದರೆ ಮಂದಬುದ್ಧಿಯಾದ ನನಗೆ ವ್ಯಾ ಮಿಶ್ರವಿಲ್ಲದಿದ್ದರೂ, ವ್ಯಾಮಿಶ್ರವಿರುವಹಾಗೆ ತೋರಬರುತ್ತದೆ. (ಆದುದರಿಂದಲೇ ಮೋಹಯ ಸೀವ ಎಂಬಲ್ಲಿ ಇವ ಎಂಬ ಅವ್ಯಯವು.) ತತ್ - ಆದುದರಿಂದ, ಯೇನ - ನನಗೆ ವಿಶದವಾಗಿ ತೋರುವ ಯಾವ ನಿನ್ನ ವಾಕ್ಯದಿಂದ, ಅಹಂ - ನಾನು, ನಿಶ್ಚಿತ್ಯ-ನಿಶ್ಚಯವಾದುದನ್ನು ತಿಳಿದು, ಶ್ರೇಯಃ - ನಿರತಿಶಯ ಪುರುಷಾರ್ಥವನ್ನು, ಆಪ್ನುಯಾಂ - ಹೊಂದುವೆನೋ, ಅಂತಹ, ಏಕಂ - ವ್ಯಾಮಿಶ್ರವು ನನ್ನ ಬುದ್ಧಿಗೆ ತೋರದ ಒಂದಾದ ವಾಕ್ಯವನ್ನು, ವದ - ಹೇಳು.

ಭಾಷ್ಯಾರ್ಥವು :—ಕರ್ಮಣಃ - ಕರ್ಮಯೋಗಕ್ಕಿಂತಲೂ, ಬುದ್ಧಿರೇವ - ಜ್ಞಾನನಿಷ್ಠೆ ಯೇ, ಜ್ಯಾಯಸೀತಿ - ಉತ್ಕೃಷ್ಟವಾದುದೆಂದು, ತೇ ಮತಾಯದಿ - ನಿನ್ನ ಅಭಿಪ್ರಾಯವಾದು ದಾದರೆ, ತರ್ಹಿ - ಹಾಗಾದರೆ, ಕಿಮರ್ಥಂ - ಏತಕ್ಕಾಗಿ, ಘೋರೇ ಕರ್ಮಣಿ - ಈ ಯುದ್ಧರೂಪ ಘೋರಕರ್ಮದಲ್ಲಿ, ಅಥವಾ ನಿವೃತ್ತಿರೂಪವಾದ ಜ್ಞಾನಯೋಗವನ್ನು ಬಿಟ್ಟು ಈ ಪ್ರವೃತ್ತಿ ರೂಪವಾಗಿರುವದರಿಂದ ಘೋರರೂಪವಾದ ಕರ್ಮಯೋಗದಲ್ಲಿ, ಮಾಂ - ನನ್ನನ್ನು, ನಿಯೋ

ಭಾ. ಲೋಕನ ಸಾಧನಂ; ಕರ್ಮನಿಷ್ಠಾತು ತಸ್ಯಾಃ ನಿಷ್ಪಾದಿಕಾ ; ಆತ್ಮಾವಲೋಕನ ಸಾಧನ ಭೂತಾ ಚ ಜ್ಞಾನನಿಷ್ಠಾ, ಸಕಲೇಂದ್ರಿಯ ಮನಸಾಂ ಶಬ್ದಾದಿ ವಿಷಯವ್ಯಾಪಾರೋಪರತಿ ನಿಷ್ಪಾದ್ಯೇತ್ಯಭಿಹಿತಾ. ಇಂದ್ರಿಯವ್ಯಾಪಾರೋಪರತಿನಿಷ್ಪಾದ್ಯ ಮಾತ್ಮಾವಲೋಕನಂ ಚೇತ್, ಸಿಷಾಧಯಿಷಿತಂ ಸಕಲ ಕರ್ಮ ನಿವೃತ್ತಿಪೂರ್ವಕ ಜ್ಞಾನನಿಷ್ಠಾಯಾಮೇವಾಹಂ ನಿಯೋಜಯಿತವ್ಯಃ ; ಕಿಮರ್ಥಂ ಘೋರೇ ಕರ್ಮಣಿ ಸರ್ವೇಂದ್ರಿಯವ್ಯಾಪಾರರೂಪೇ ಆತ್ಮಾವಲೋಕನವಿರೋಧಿನಿ ಕರ್ಮಣಿ ಮಾಂ ನಿಯೋಜಯಸಿ?" ಇತಿ. ಅತಃ ಮಿಶ್ರವಾಕ್ಯೇನ ಮಾಂ ಮೋಹಯಸೀವ ಪ್ರತಿಭಾತಿ. ತಥಾ

---

ಜಯಸಿ - ಆಜ್ಞಾಪಿಸುತ್ತೀಯೆ ? ಏತದುಕ್ತಂ ಭವತಿ - ಮೇಲಿನ ವಾಕ್ಯಾಭಿಪ್ರಾಯದ ತಾತ್ಪರ್ಯವು ಇಷ್ಟೇ :-"ಜ್ಞಾನನಿಷ್ಠೈವ"- ಜ್ಞಾನ ನಿಷ್ಠೆಯೇ, ಆತ್ಮಾವಲೋಕನ ಸಾಧನಂ - ಜೀವಾತ್ಮಸ್ವರೂಪ ಸಾಕ್ಷಾತ್ಕಾರಕ್ಕೆ ಸಾಧನವಾದುದು ; ಆದರೆ ಕರ್ಮನಿಷ್ಠೆಯಾದರೋ, ತಸ್ಯಾಃ- ಆ ಜ್ಞಾನ ನಿಷ್ಠೆಯನ್ನು ನಿಷ್ಪಾದಕಾ -- ಉಂಟುಮಾಡುವಂಥಾದ್ದು ; ಹೀಗೆ ಆತ್ಮಾವಲೋಕನ ಸಾಧನಭೂತಾ ಚ ಜ್ಞಾನನಿಷ್ಠಾ - ಆತ್ಮಾವಲೋಕನಕ್ಕೆ ಸಾಧನಭೂತವಾದ ಜ್ಞಾನನಿಷ್ಠೆಯಾದರೋ, ಸಕಲೇಂದ್ರಿಯ ಮನಸಾಂ - ಸಮಸ್ತ ಇಂದ್ರಿಯಗಳು ಮತ್ತು ಮನಸ್ಸಿಗೆ, ಶಬ್ದಾದಿ ವಿಷಯವ್ಯಾಪಾರೋಪರತಿನಿಷ್ಪಾದ್ಯೇತಿ - ಶಬ್ದಾದಿ ವಿಷಯ ವ್ಯಾಪಾರದ ಶಾಂತಿಯಿಂದ ಉಂಟಾಗತಕ್ಕದ್ದೆಂದೂ, ಅಭಿಹಿತಾ - ಹೇಳಲ್ಪಟ್ಟಿತು. ಎಲ್ಲಿ ಹೇಳಲ್ಪಟ್ಟಿತು ಎಂದರೆ ಹಿಂದೆ "ಯದಾ ಸಂಹರತೇ" (ಗೀ. ೨. ೫೮) ಎಂಬ ಶ್ಲೋಕದಲ್ಲಿ ಹೇಳಿದುದನ್ನು ಅನುವಾದಮಾಡಿ ಹೇಳುತ್ತಾರೆ. ಪ್ರಥಮತಃ ಪ್ರಥಮಶ್ಲೋಕಾನ್ವಯವನ್ನು ದಯಪಾಲಿಸಿ, "ಏತದುಕ್ತಂ ಭವತಿ" ಎನ್ನುವದರಿಂದ ತಾತ್ಪರ್ಯವನ್ನು ತಿಳಿಸುತ್ತಾರೆ. ಹೀಗೆ ಇಂದ್ರಿಯವ್ಯಾಪಾರೋಪರತಿ ನಿಷ್ಪಾದ್ಯಂ - ಇಂದ್ರಿಯ ವ್ಯಾಪಾರಗಳ ಶಾಂತತೆಯಿಂದುಂಟಾಗುವ, ಆತ್ಮಾವಲೋಕನವು, ಸಿಷಾಧಯಿಷಿತಂಚೇತ್ - ಸಾಧಿಸಲು ಯೋಗ್ಯವಾದುದಾದರೆ, ಸಕಲ ಕರ್ಮ ನಿವೃತ್ತಿಪೂರ್ವಕ ಜ್ಞಾನ ನಿಷ್ಠಾಯಾಮೇವ - ಸಕಲಕರ್ಮಗಳ ಫಲಾಭಿಸಂಧಿರಹಿತಗಳಾದ ನಿವೃತ್ತಿಪೂರ್ವಕವಾದ, ಜ್ಞಾನನಿಷ್ಠೆಯಲ್ಲಿಯೇ, ಅಹಂ - ನಿನಗೆ ಪ್ರಾಣಪ್ರಿಯನಾದ ನಾನು, ನಿಯೋಜಯಿತವ್ಯಃ - ನಿನ್ನಿಂದ ಆಜ್ಞಾಪಿಸಲ್ಪಡತಕ್ಕದ್ದು. ಹೀಗಿರುವಾಗ, ಕಿಮರ್ಥಂ - ಏತಕ್ಕಾಗಿ, ಘೋರೇಕರ್ಮಣಿ ಎಂದರೆ ಸರ್ವೇಂದ್ರಿಯವ್ಯಾಪಾರರೂಪೇ ಆತ್ಮಾವಲೋಕನವಿರೋಧಿನಿ - ಸಮಸ್ತಗಳಾದ ಇಂದ್ರಿಯಗಳ ವ್ಯಾಪಾರವುಳ್ಳ ಮತ್ತು ಆತ್ಮಾವಲೋಕನಕ್ಕೆ ವಿರೋಧಿಯಾದ, ಕರ್ಮಣಿ – ಕರ್ಮಯೋಗದಲ್ಲಿ, ಮಾಂ ನಿಯೋಜಯಸಿ - ನನ್ನನ್ನು ಪ್ರವರ್ತಿಸುವವನಾಗಿ ಆಜ್ಞಾಪಿಸುತ್ತೀಯೆ?" ಇತಿ - ಎಂಬಭಿಪ್ರಾಯವು. ಮೂಲದಲ್ಲಿ ಮೇ ಬುದ್ಧಿಂ ಮೋಹಯಸೀವ ಎಂದಿರುವದಕ್ಕೆ ಮಾಂ ಮೋಹಯಸೀವ ಎಂಬ ಭಾಷ್ಯವು ಏತಕ್ಕೆ ? ಎಂದರೆ ಅಚೇತನವಾದುದು ಬುದ್ಧಿಯಾದುದರಿಂದ, ಮೋಹವು ಚೇತನಧರ್ಮವಾದುದರಿಂದ ಮಾಂ ಎಂಬ ಪ್ರಯೋಗವು; ಆದುದರಿಂದ ನಿನ್ನಲ್ಲಿ ಶರಣಾಗತಿಯನ್ನನುಷ್ಠಿಸಿರುವದರಿಂದ ಪ್ರಿಯತಮನಾದ ನನ್ನಲ್ಲಿ ನೀನು ವಾತ್ಸಲ್ಯವಿಟ್ಟು, ಯಾವನು ನಿನಗೆ ಶೇಷಭೂತನಾದ ನನಗೆ ಪರಮ ಹಿತವೋ ಅದನ್ನಲ್ಲವೇ ನೀನು ಉಪದೇಶಿಸತಕ್ಕದ್ದು. ಪರಮ ಹಿತವು ಯಾವುದೋ ಅದನ್ನೇ ಮಾಡು, ಇನ್ನು ಯಾವುದೂ ಬೇಕಿಲ್ಲವೆಂದಲ್ಲವೇ ನೀನು ಉಪದೇಶಿಸತಕ್ಕದ್ದೆಂಬ ಭಾವವು. ಅತಃ - ಆ ಕಾರಣದಿಂದ, ಮಿಶ್ರವಾಕ್ಯೇನ - ಪರಸ್ಪರ ವಿರೋಧಗಳಿಂದ ಮಿಶ್ರವಾದ ವಾಕ್ಯದಿಂದ, ಮೋಹಯಸೀವ - ಮೋಹಗೊಳಿಸುವವನಾಗಿ, ಪ್ರತಿಭಾತಿ - ನನಗೆ ತೋರುತ್ತದೆ. ಇದು ಮೂಲದ ಇತಿ

ಭಾ. ಹ್ಯಾತ್ಮಾವಲೋಕನ ಸಾಧನಭೂತಾಯಾ ಸ್ಸರ್ವೇಂದ್ರಿಯವ್ಯಾಪಾರೋಪರತಿ ರೂಪಾಯಾ ಜ್ಞಾನ ನಿಷ್ಠಾಯಾಸ್ತದ್ವಿಪರ್ಯಯರೂಪಂ ಕರ್ಮ,'ಸಾಧನಂ, ತದೇವ ಕುರ್ವಿತಿ ವಾಕ್ಯಮ್ ವಿರುದ್ಧಮ್,'ತ್ತೆ ವ್ಯಾಮಿಶ್ರಮೇವ. ತಸ್ಮಾದೇಕ ಮಮಿಶ್ರರೂಪಂ ವಾಕ್ಯಂ ವದ; ಯೇನ ವಾಕ್ಯೇನಾನುಷ್ಠೇಯರೂಪಂ ನಿಶ್ಚಿತ್ಯ ಶ್ರೇಯಃ ಪ್ರಾಪ್ನುಯಾಮ್ ||೧, ೨||

ಎಂಬುದರರ್ಥವು, ವಸ್ತುತಃ ನೀನು ಹಾಗೆ ಮೋಹಗೊಳಿಸಿಲ್ಲವು, ನನಗೆ ಹಾಗೆ ತೋರುತ್ತದೆಂಬ ಭಾವವು. ಅರ್ಜುನನಿಗೆ ಹೇಗೆ ವಿರೋಧವಾಗಿ ತೋರಿತು ಎಂಬುದನ್ನು ತಥಾಹಿ - ಎಂದಾರಂಭಿಸಿ ಉಪಪಾದನೆ ಮಾಡುತ್ತಾರೆ:—ತಥಾಹಿ - ಹಾಗೆಯೇ ಸರಿ, ಅದು ಹೇಗೆಂದರೆ ಎಂಬ ಭಾವವು. ಆತ್ಮಾವಲೋಕನ ಸಾಧನ; ಭೂತಾಯಾಃ - ಆತ್ಮಾವಲೋಕನಕ್ಕೆ ಸಾಧನವಾದ, ಸರ್ವೇಂದ್ರಿಯ ವ್ಯಾಪಾರೋಪರತಿ ರೂಪಾಯಾಃ - ಸರ್ವೇಂದ್ರಿಯಗಳ ವ್ಯಾಪಾರವಿಲ್ಲದಿರುವ, ಜ್ಞಾನನಿಷ್ಠೆಗೆ, ತದ್ವಿಪರ್ಯಯ ರೂಪಂ ಕರ್ಮ - ಆ ಜ್ಞಾನನಿಷ್ಠೆಗೆ ವ್ಯತ್ಯಸ್ತವಾಗಿ ಇಂದ್ರಿಯ ವ್ಯಾಪಾರಗಳನ್ನು ಹೊಂದಿರುವ ಕರ್ಮನಿಷ್ಠೆಯು, ಸಾಧನಂ-ಅದು ಜ್ಞಾನನಿಷ್ಠೆಗೆ ಸಾಧನವು ಆದುದರಿಂದ ತದೇವ ಕುರು-ಆ ಕರ್ಮನಿಷ್ಠೆಯನ್ನೇ ಮಾಡು ಎಂದೂ, ಇತಿ ವಾಕ್ಯಂ - ಹೇಳುವ ಮಾತು, ವಿರುದ್ಧಮ್ - ವಿರುದ್ಧವಾದುದು. ಆದುದರಿಂದ, ವ್ಯಾಮಿಶ್ರಮೇವ - ವಿರುದ್ಧಾರ್ಥದಿಂದ ಕೂಡಿದುದೇ; ತಸ್ಮಾತ್ - ಆ ಕಾರಣದಿಂದ, ಏಕಂ ಎಂದರೆ ಅಮಿಶ್ರರೂಪಂ ವಾಕ್ಯಂ - ಪರಸ್ಪರ ವಿರುದ್ಧಾರ್ಥ ತೋರಿಬರದೇ ಇರುವ ವಾಕ್ಯವನ್ನು, ವದ - ಹೇಳು; ಯೇನ ವಾಕ್ಯೇನ-ಯಾವ ನಿನ್ನ ಅಂತಹ ಅಮಿಶ್ರರೂಪ ವಾಕ್ಯದಿಂದ, ಅನುಷ್ಠೇಯ ರೂಪಂ - ಅನುಷ್ಠಿಸತಕ್ಕಂಶವನ್ನು, ನಿಶ್ಚಿತ್ಯ - ನಿಶ್ಚಯಿಸಿಕೊಂಡು, ಶ್ರೇಯಃ - ಪರಮ ನಿಃಶ್ರೇಯಸ್ಸಾದ ಮೋಕ್ಷವನ್ನು, ಪ್ರಾಪ್ನುಯಾಮ್ - ಹೊಂದಬಹುದೋ, ಅಂತಹ ವಾಕ್ಯವನ್ನು ವದ ಎಂಬದಾಗಿ ಅನ್ವಯವು; ಇಲ್ಲಿ ಮೋಹಯಸೀವ-ಮೋಹಪಡಿಸಿದ ಹಾಗೆ ತೋರುತ್ತದೆ ಎಂದು ಹೇಳಿರುವದರಿಂದ ವಾಸ್ತವವಾಗಿಯೂ ಇದಕ್ಕೆ ಕಾರಣವಿಲ್ಲದಿದ್ದರೂ ಮೋಹವಿರುವಹಾಗೆ ಭಾವಿಸಿರುತ್ತಾನೆ. ಮೋಹವೆಲ್ಲಿ ಎಂದರೆ ಕರ್ಮಯೋಗವು ಜ್ಞಾನಯೋಗಕ್ಕೆ ಅಜ್ಗವೆಂದು ದ್ವಿತೀಯಾಧ್ಯಾಯಾಂತ್ಯ ಶ್ಲೋಕದಲ್ಲಿ ಉಪಪಾದಿತವಾಗಿದ್ದರೂ ಜ್ಞಾನಯೋಗಕ್ಕೆ ಕರ್ಮಯೋಗವು ಸಾಧನವಲ್ಲವೆಂದುಭಾವಿಸಿ, ಆವು ಪರಸ್ಪರ ಸ್ವತಂತ್ರವಾದುವು, ಎಂಬುದೇ ಮೋಹವು. ಈಭ್ರಮ ಜ್ಞಾನವನ್ನು ಮುಂದೆ ೭-೮ನೇ ೨ ಶ್ಲೋಕಗಳಲ್ಲಿ ಹೋಗಲಾಡಿಸುತ್ತಾರೆ. ಜ್ಞಾನಯೋಗಾನುಷ್ಠಾನಕ್ಕೂಅನಭಿಸಂಹಿತ ಫಲವುಳ್ಳ ಕರ್ಮಯೋಗವು ಸಾಧಕವಾಗಿ ಅಜ್ಗವು. ಹೇಗಾದರೂ ಮಾಡಿ ಸ್ವಜನ ಗುರುಜನ ಹನನ ರೂಪ ಘೋರಕರ್ಮವು ತಪ್ಪಿದರೆ ಸಾಕು ಎಂದು ಪ್ರೇರಿತನಾಗಿರುವದರಿಂದಲೇ, ಕರ್ಮಯೋಗ ಮಾಡದೆ ಜ್ಞಾನಯೋಗವಮಾಡು ಎಂದು ಹೇಳಿದರೆ ಸಾಕು'ಎಂದು ಹಾರೈಸುತ್ತಿರುವದರಿಂದ,ಅಂತಹ ವಾಸನಾ ಜ್ಞಾನವು, ಶ್ರೀ ಕೃಷ್ಣೋಪದೇಶದಲ್ಲಿ ಸಾಮಂಜಸ್ಯವನ್ನು ಗ್ರಹಿಸದೆ, ಕರ್ಮಯೋಗವು ಇಂದ್ರಿಯಗಳ ಪ್ರವೃತ್ತಿಯಿರುವದರಿಂದ ಪ್ರವೃತ್ತಿಧರ್ಮವು; ಜ್ಞಾನಯೋಗವು ನಿವೃತ್ತಿರೂಪವಾದುದು, ಎಂದು ಭಾವಿಸಿ ಪರಸ್ಪರವಿರುದ್ಧವೆಂದು ತಿಳಿದು ಆಕ್ಷೇಪಿಸುತ್ತಾನೆ. ಅದು ಹೇಗೆ ಪ್ರವೃತ್ತಿ ನಿವೃತ್ತಿ ಧರ್ಮಗಳೆಂದರೆ ಆತ್ಮಾವಲೋಕನವು ಸಂಸಾರ ನಿವೃತ್ತಿಗೆ ಹೇತುಭೂತವಾಗುತ್ತದೆಂದೂ, ಅದೂ ಸರ್ವೇಂದ್ರಿಯೋಪರತಿ ಪೂರ್ವಕವಾದ ಜ್ಞಾನನಿಷ್ಠೆಯಿಂದಲೇ ಸಾಧ್ಯವೆಂದೂ ಶ್ರೀ ಕೃಷ್ಣನು ಉಪದೇಶಿಸಿದನು. ಗುರುಜನವೇನು, ದೇಹಾನುಬಂಧಿಗಳೇನು ಇಂತವರನ್ನು ಕೊಲ್ಲಲು ಇಷ್ಟವಿಲ್ಲದ ಅರ್ಜುನನು ಯುದ್ಧದಿಂದ ನಿವೃತ್ತನಾಗಲು ಈಗ ಒಂದು ಸುಸಮಯ ದೊರೆಯಿ

ತೆಂದು ಯೋಚಿಸಿ ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ:—ಓ ಶ್ರೀಕೃಷ್ಣನೇ, ನಿನ್ನ ಉಪದೇಶದಿಂದ ನಾನು ಗ್ರಹಿಸಿರುದೇನೆಂದರೆ, ಕರ್ಮನಿಷ್ಠೆಗಿಂತಲೂ ಜ್ಞಾನನಿಷ್ಠೆಯು ಶ್ರೇಷ್ಠವೆಂದು ಗ್ರಹಿಸಿದೆನು. ಹಾಗಾದಪಕ್ಷದಲ್ಲಿ ನೀನು ಘೋರವಾದ ಕರ್ಮನಿಷ್ಠೆಯನ್ನೂ ಅವಲಂಬಿಸು ಎಂದು ಏಕೆ ಉಪದೇಶಿಸಿದೆ ಎಂದು ಕೇಳುತ್ತಾನೆ. ಜ್ಞಾನ ನಿಷ್ಠೆಯು ಶ್ರೇಷ್ಠವೆಂದು ಎಲ್ಲಿಯೂ ಕಂಠೋಕ್ತವಾಗಿ ಉಪದೇಶಿಸಿಲ್ಲವು. ಆದರೆ ಜ್ಞಾನನಿಷ್ಠೆಗೆ ಶ್ರೇಷ್ಠತ್ವವೆಂಬುದು ಹೇಗೆ ಎಂಬುದನ್ನು ವಿಚಾರಿಸತಕ್ಕದ್ದು. ಕೆಲವರು **"ದೂರೇಣ ಹ್ಯವರಂ ಕರ್ಮ ಬುದ್ಧಿ ಯೋಗಾದ್ಧನಂಜಯ"** ಎಂಬಲ್ಲಿ ವಿಶದವಾಗಿ ಹೇಳಲ್ಪಟ್ಟಿರುತ್ತದೆಂದು ಅಭಿಪ್ರಾಯಪಡುವರು. ಆ ಶ್ಲೋಕಕ್ಕೆ ಹಾಗೆ ಅರ್ಥಮಾಡಲು ಸಾಧ್ಯವಿಲ್ಲವೆಂದು ಹಿಂದೆಯೇ ವ್ಯಕ್ತಪಡಿಸಲ್ಪಟ್ಟಿರುತ್ತದೆ. ಆ ಶ್ಲೋಕದಲ್ಲಿ ಹೇಳಿದುದು ಬುದ್ಧಿಯೋಗ ವಿಶಿಷ್ಟ ಕರ್ಮಯೋಗದ ಶ್ಲಾಘನೆಯು. ಹಾಗಾದರೆ ಕರ್ಮಯೋಗವು ಘೋರವು ಎಂದರೆ ಭಯಂಕರವಾದುದು ಹೇಗೆ? ಭಗವಂತನ ಪ್ರೀತ್ಯರ್ಥವಾಗಿ ನಡೆಸುವ ಕರ್ಮಕ್ಕೆ ಘೋರತ್ವತಾನೇ ಎಲ್ಲಿಯದು? ಅದು ಭಗವಂತನ ಆರಾಧನ ರೂಪವಾಗಿ ಅದಕ್ಕೂ ಶ್ರೇಷ್ಠತೆಯೇ ಇರುತ್ತದೆ. ಆಗ ಕರ್ಮವು ಪವಿತ್ರತೆಯನ್ನು ಹೊಂದಿತು. ಆಗಲಿ ಜ್ಞಾನಯೋಗಕ್ಕೆ ಪ್ರಾಶಸ್ತ್ಯವೇ ಇರಲಿ. ಅಧಿಕಾರಿಯು ಶಾಸ್ತ್ರವಿಹಿತ ಕರ್ಮಗಳನ್ನು ಭಗವಂತನ ಪ್ರೀತಿಗಾಗಿಯೂ ತದಾರಾಧನ ರೂಪವಾಗಿಯೂ ಮಾಡದೇ ಇರಬಹುದೋ? ಕಿಂ ಎಂಬ ಶಬ್ದವೇನು? ಪ್ರಶ್ನಪರವೇ ಆಕ್ಷೇಪಪರವೇ? ಇತ್ಯಾದಿ ಶಙ್ಕೆಗಳಿಗೆ ಸಮಾಧಾನವನ್ನು ಹೇಳುವದು ಆವಶ್ಯಕವೆಂದು ಭಾವಿಸಿ, **ಏತ ದುಕ್ತಂ ಭವತಿ** ಎಂದಾರಂಭಿಸಿ ಹೇಳುತ್ತಾರೆ. ಜ್ಞಾನನಿಷ್ಠೆಯೇ ಪರಬ್ರಹ್ಮಪ್ರಾಪ್ತಿಗೆ ಅಙ್ಗವಾದ ಆತ್ಮಾವಲೋಕನಕ್ಕೆ ಸಾಧಕವು, ಕರ್ಮನಿಷ್ಠೆಯಾದರೋ ಸ್ಥಿತಪ್ರಜ್ಞತಾ ಪ್ರಕರಣದಲ್ಲಿ ಜ್ಞಾನನಿಷ್ಠೆಗೆ ಮಾತ್ರ ಸಾಧಕವು. ಆದುದರಿಂದ ಆತ್ಮಾವಲೋಕನವು ಜ್ಞಾನನಿಷ್ಠೆಯಲ್ಲಿ ಉಂಟಾಗುವದರಿಂದ ಜ್ಞಾನನಿಷ್ಠಾ ಜ್ಯಾಯಸೀ ಎಂದು ತಿಳಿದನು. ಇದರಿಂದ ಕರ್ಮಯೋಗವು ಜ್ಞಾನಯೋಗವನ್ನುಂಟುಮಾಡುತ್ತದೆ. ಆ ಜ್ಞಾನಯೋಗವು ಆತ್ಮಾವಲೋಕನವನ್ನುಂಟುಮಾಡುತ್ತದೆ. ಕರ್ಮಯೋಗಕ್ಕೆ ಸಾಕ್ಷಾತ್ತಾಗಿ ಈ ಶಕ್ತಿಯಿಲ್ಲವು; ಆದುದರಿಂದ ಕರ್ಮಯೋಗಕ್ಕಿಂತ ಜ್ಞಾನಯೋಗಕ್ಕೆ **ಜ್ಯಾಯಸ್ತ್ವ** ವೆಂದು ಶ್ರೀ ದೇಶಿಕರವರು ಉಪಪಾದಿಸಿರುತ್ತಾರೆ. ಇದನ್ನು ಅರ್ಜುನನು ಗ್ರಹಿಸಿದನು. ಆದರೆ ಆತನಿಗೆ ಸಂದೇಹ ಎಲ್ಲಿ ಎಂದರೆ ಮುಂದೆ ಹೇಳುತ್ತಾರೆ. ಜ್ಞಾನನಿಷ್ಠೆಯು ಸಕಲೇಂದ್ರಿಯ ವ್ಯಾಪಾರಗಳ ಉಪರತಿಯಿಂದುಂಟಾಗತಕ್ಕದ್ದು; ಇದು ಮುಖ್ಯವಾಗಿ ಸಾಧಿಸತಕ್ಕದ್ದೆಂದಾದನಂತರ, ಸಕಲೇಂದ್ರಿಯ ವ್ಯಾಪಾರಗಳುಳ್ಳ ಕರ್ಮಯೋಗದಲ್ಲಿ ಪ್ರವೃತ್ತಿಯಿರಬೇಕೆಂಬ ಉಪದೇಶವು ಏತಕ್ಕೆ ಎಂಬಭಿಪ್ರಾಯವು. **ಕಿಮರ್ಥಂ** ಎಂದು ಹೇಳಿರುವದರಿಂದ ಪರಿಪೂರ್ಣಕಾಮನಾದ ಶ್ರೀಕೃಷ್ಣನಿಗೇನೂ ಬೇಕಾಗಿಲ್ಲವು. ಐಹಿಕ ಫಲಗಳನ್ನು ಅರ್ಜುನನಿಗೆ ಕೊಡುವದಕ್ಕಾಗಿಯೂ ಅಲ್ಲವು. ಜನಾರ್ದನ ಎಂದು ಶ್ರೀಕೃಷ್ಣನನ್ನು ಕುರಿತು ಸಂಬೋಧಿಸಿರುವದರಿಂದ, ಜನಿ ಎಂದರೆ ಹುಟ್ಟುವಿಕೆಯು ನಿರಾಸಕನಾದ ಶ್ರೀಕೃಷ್ಣನಿಗೆ ಅಂತಹ ಸಂಸಾರ ನಿವರ್ತನೆಯೇ ಸ್ವಭಾವವಾದುದರಿಂದ ಐಹಿಕ ಫಲಗಳಿಗಾಗಿಯೂ ಅಲ್ಲವು. ಏನೋ ವಂಚಿಸಿ ಅರ್ಜುನನ ಮೂಲಕ ಕೆಲಸಮಾಡಿಸಬೇಕೆಂಬಭಿಪ್ರಾಯದಿಂದಲೂ ಅಲ್ಲವು. ಸ್ವಾಮಿಯ ವಂಚನೆಯು ದುಷ್ಟರನ್ನು ಶಿಕ್ಷಿಸುವದರಲ್ಲಿ ಮಾತ್ರವೇ ವಿನಾ, ಪ್ರಪನ್ನರನ್ನು ಎಂದಿಗೂ ವಂಚಿಸನು. ಕರ್ಮಯೋಗದಿಂದಲೇ ಬೇಗ ಫಲ ಸಿದ್ಧಿಯಾಗುತ್ತದೆಂಬ ಭಾವನೆಯಿಂದಲೂ ಇಲ್ಲವು, ಏಕೆಂದರೆ ಕರ್ಮಯೋಗವು ಜ್ಞಾನಯೋಗಕ್ಕೆ ಅಙ್ಗವೆಂದೂ ಆ ಜ್ಞಾನಯೋಗದಿಂದ ಆತ್ಮಾವಲೋಕನವು ಉಂಟಾಗುತ್ತದೆಂದೂ ಉಪದೇಶಿಸಲ್ಪಟ್ಟಿರುವದರಿಂದ; **ಶಾಧಿಮಾಂ ಪ್ರಪನ್ನಂ** ಎಂದು ದೈನ್ಯದಿಂದ ಬೇಡಿದ ಶರಣಾಗತನನ್ನು ಎಂದಿಗೂ ವಂಚಿಸಲು ಸಾಧ್ಯವಲ್ಲವು. ಆದುದರಿಂದ ಅರ್ಜುನನ ಪ್ರಶ್ನೆ

ಯಲ್ಲಿ ಕಿಮರ್ಥಂ ಎಂಬುದು ಅರ್ಜುನನಿಗೆ ಶ್ರೇಯೋರೂಪವಾದುದಾಗಿರತಕ್ಕದ್ದು. ಈಗ ಅರ್ಜುನಿನಗೆ ಉಪದೇಶರೀತ್ಯಾ ಆತ್ಮಾವಲೋಕನವು ಆವಶ್ಯಕವೆಂದು ಏರ್ಪಟ್ಟಿತು. ಇದಕ್ಕೆ ಜ್ಞಾನನಿಷ್ಠೆಯು ಸಾಧನವೆಂದೂ, ಆ ಜ್ಞಾನನಿಷ್ಠೆಗೆ ವಿಷಯಗಳಲ್ಲಿ ವೈರಾಗ್ಯವೂ ಇಂದ್ರಿಯಗಳ ಉಪರತಿಯೂ ಆವಶ್ಯಕವೆಂದೂ, ಹೇಳಲ್ಪಟ್ಟಿತು. ಹೀಗಾದಪಕ್ಷದಲ್ಲಿ ಕರ್ಮನಿಷ್ಠೆಗೆ ಇಂದ್ರಿಯಗಳ ವ್ಯಾಪಾರ ಬೇಕಾದುದರಿಂದ ಆ ಕರ್ಮನಿಷ್ಠೆಯು ತನಗೆ ಹೇಗೆ ಪ್ರಯೋಜನವೆಂಬ ಭಾವವು; ಸರ್ವೇಶ್ವರನಿಗಾಗಿಯೂ ಅಲ್ಲವು, ತನಗಾಗಿಯೂ ಅಲ್ಲವು; ಲೋಕಸಂಗ್ರಹಾರ್ಥವಾಗಿ ಆಜ್ಞಾಪಿಸುತ್ತೀಯೋ ಎಂದರೆ ಆಗಲೂ ಸರಿಹೋಗುವದಿಲ್ಲವು, ಲೋಕಕ್ಕೆ ಯಥಾವಸ್ಥಿತವಾದ ಆಕಾರವನ್ನು ಪದೇಶಿಸುವದೇ ಯುಕ್ತವಾದುದರಿಂದ; ಹೀಗಿರುವದರಿಂದ ಜ್ಞಾನನಿಷ್ಠೆಯೇ ಯೋಗ್ಯವಾದುದಾದರೆ, ಕರ್ಮಯೋಗವನ್ನು ಕಿಮರ್ಥಂ ಏತಕ್ಕಾಗಿ ಅವಲಂಬಿಸು ಎಂದು ಉಪದೇಶಿಸುತ್ತೀಯೇ ಎಂಬ ಭಾವವು.

ಅರ್ಜುನಾಭಿಪ್ರಾಯದ ಪ್ರಕಾರ ಮೂಲದಲ್ಲಿ ಕರ್ಮವು ಘೋರವೆಂದು ಹೇಳಲ್ಪಟ್ಟಿರುತ್ತದೆ. ಅರ್ಜುನನಿಗೆ ಶಾಸ್ತ್ರವಿಹಿತವಾಗಿರುವ ಕರ್ಮವು ಯುದ್ಧದಲ್ಲಿ ಕೊಲ್ಲತಕ್ಕದ್ದಾಗಿರುವದರಿಂದ ಘೋರವಾಗಿ ತೋರಬಹುದು, ದುಷ್ಟ ನಿಗ್ರಹವು ಹೇಗೆ ಘೋರವೆಂಬುದು ಆತನಿಗೆ ತಿಳಿಯಲಿಲ್ಲವು, ಆದರೆ ಈ ಶಾಸ್ತ್ರಾವತರಣರೂಪೋಪದೇಶವು ಸಾರ್ವತ್ರಿಕವಾಗಿ ಅನ್ವಯಿಸುವದು ಯುಕ್ತವಾದುದರಿಂದು ಕರ್ಮವು ಘೋರ ಹೇಗೆ ಎಂದರೆ ಸರ್ವೇಂದ್ರಿಯ ವ್ಯಾಪಾರರೂಪವಾಗಿಯೂ, ಆವಶ್ಯಕವಾದ ಆತ್ಮಾವಲೋಕನಕ್ಕೆ ವಿರುದ್ಧವಾಗಿಯೂ, ಏನಾದರೂ ಘೋರರೂಪವಾದುದೋ ಈ ಕರ್ಮಾನುಷ್ಠಾನವು ಎಂದು ಇತರರೂ ಭಾವಿಸಬಹುದು. ಸ್ಥಿತಪ್ರಜ್ಞತಾಪ್ರಕರಣದಲ್ಲೇ, ಕರ್ಮಯೋಗವು ಜ್ಞಾನಯೋಗಕ್ಕೆ ಸಾಧಕವೆಂದು ಹೇಳಿದುದನ್ನು ಮರೆತು ವ್ಯಾಮಿಶ್ರವಾದವಾಕ್ಯದಿಂದ ನನ್ನ ಬುದ್ಧಿಯು ಮೋಹಗೊಂಡಿದೆ ಎಂದು ಅರ್ಜುನನು ಹೇಳಿರುತ್ತಾನೆ. ಸರ್ವೇಶ್ವರನು ಎಂದಿಗೂ ಪರಮಕಾರುಣಿಕನಾದ ತನ್ನ ಪ್ರಿಯಶಿಷ್ಯನಾದ ಅರ್ಜುನನ ಬುದ್ಧಿಗೆ ಮೋಹವನ್ನುಂಟುಮಾಡಲಾರನು. ಅರ್ಜುನನು ಚನ್ನಾಗಿ ತಿಳಿದುಕೊಳ್ಳಲು ಯೋಗ್ಯತೆ ಇಲ್ಲದವನಾಗಿ ಮೋಹಗೊಂಡಿರುತ್ತಾನೆ. ಆದುದರಿಂದ ಮಿಶ್ರವಾಕ್ಯೇನ ಮಾಂ ಮೋಹಯಸೀವ ಪ್ರತಿಭಾತಿ ಎಂಬ ಪ್ರಯೋಗವು. ಹಾಗೆ ಕೃಪಾಸಾಗರನು ಎಂದಿಗೂ ಮಾಡಲಾರನೆಂಬ ಭಾವದಿಂದ ಇವ ಎಂಬ ಅನ್ವಯದ ಪ್ರಯೋಗವೂ ಪ್ರತಿಭಾತಿ ಎಂಬ ಕ್ರಿಯಾಪದವೂ. ಹೇಗೆ ವ್ಯಾಮಿಶ್ರವೆಂಬುವ ಹಾಗೆ ಅರ್ಜುನನು ತಿಳಿದನು ಎಂಬುದನ್ನು ತಥಾಪಿ ಎಂದಾರಂಭಿಸಿದ ವಾಕ್ಯದಿಂದ ತಿಳಿಸುತ್ತಾರೆ. ಅರ್ಜುನನಃಮನಸ್ಸನ್ನು ಎರಡು ವಿರೋಧಸೂಚಕಶಙ್ಕಾಗಳು ಬಾಧಿಸುತ್ತವೆ. ಹೇಗೆಂದರೆ:–(೧)ಆತ್ಮಾವಲೋಕನಕ್ಕೆ ಸಾಧನಭೂತವಾಗಿರುವದು ಸರ್ವೇಂದ್ರಿಯೋಪರತಿಯಿಂದ ಕೂಡಿದ ಜ್ಞಾನನಿಷ್ಠೆಯು, ಇದಕ್ಕೆ ವಿರೋಧವಾಗಿ ಸರ್ವೇಂದ್ರಿಯವ್ಯಾಪಾರಯುಕ್ತವಾದುದು ಕರ್ಮನಿಷ್ಠೆಯು; ಈ ವಿರುದ್ಧಧರ್ಮವುಳ್ಳ ಕರ್ಮನಿಷ್ಠೆಯು ಜ್ಞಾನನಿಷ್ಠೆಗೆ ಹೇಗೆ ಸಾಧನವು? (೨) ಅಂತಹ ವಿರುದ್ಧವಾದ ಕರ್ಮನಿಷ್ಠೆಯನ್ನು ಜ್ಞಾನನಿಷ್ಠೆಯಲ್ಲಿ ಅಪೇಕ್ಷೆಯುಳ್ಳ ನನಗೆ ಮಾಡು ಎಂದು ಹೇಗೆ ಉಪದೇಶವು? ಹೀಗೆ ನನ್ನ ಬುದ್ಧಿಗೆ ವಿರೋಧತೋರಿ ಬರುತ್ತದೆಂದು ತಿಳಿದು ವ್ಯಾಮಿಶ್ರೇಣೈವ ವಾಕ್ಯೇನ ಎಂಬ ಪ್ರಯೋಗವು. ಆದುದರಿಂದ ಹೀಗೆ ನನ್ನ ಬುದ್ಧಿಗೆ ವಿರೋಧ ತೋರದ ಹಾಗೆ ವಿಶದವಾಗಿರುವ ಒಂದು ವಾಕ್ಯವನ್ನು ಅಪ್ಪಣೆ ಕೊಡಿಸಬೇಕಾಗಿ ಪ್ರಾರ್ಥಿಸುತ್ತಾನೆ. ತದೇಕಂ ವದ ಎಂದರೆ ಜ್ಞಾನನಿಷ್ಠೆ ಕರ್ಮನಿಷ್ಠೆಗಳಲ್ಲಿ ಯಾವುದಾದರೂ ಒಂದನ್ನು ಹೇಳು ಎಂದು ಅರ್ಜುನನು ಪ್ರಶ್ನಿಸಿದನೆಂದು ಅರ್ಥಮಾಡಿರುತ್ತಾರೆ. ಹಾಗೆ ಅರ್ಥಮಾಡುವದು ಅರ್ಜುನ ಮೋಹಕ್ಕೆ ಸಮಾನವಾದುದೇ. ಜ್ಞಾನ ನಿಷ್ಠೆಗೆ ಕರ್ಮನಿಷ್ಠೆಯು ಸಾಧನವೆಂದು ವಿಶದವಾಗಿ ಹೇಳಿದನಂತರ, ಜ್ಞಾನಯೋಗವಾಗಲಿ

ಮೂ. ಶ್ರೀ ಭಗವಾನುವಾಚ:—
ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ ॥ ೩.

ಕರ್ಮಯೋಗವಾಗಲಿ ಒಂದನ್ನೇ ಹೇಳುವದು ಹೇಗೆ ಸಾಧ್ಯವು? ಆದುದರಿಂದ **ಏವಂ ವ್ಯಾಮಿಶ್ರ ರೂಪಂ ವಾಕ್ಯಂ ವದ** ಎಂದು ಭಾಷ್ಯವನ್ನು ಬರೆದಿರುತ್ತಾರೆ. **ನಿಶ್ಚಿತ್ಯ** ಎಂಬುವನ್ನು ವದ ಎಂಬುದಕ್ಕೆ ಅನ್ವಯಿಸಿ ಕೆಲವರು ಬರೆದಿರುತ್ತಾರೆ. ಸರ್ವಜ್ಞನಾದ ಸರ್ವೇಶ್ವರನಿಗೆ ಯಾವಾಗಲೂ ನಿಶ್ಚಯ ಜ್ಞಾನವಿರುವಾಗ, **ನಿಶ್ಚಿತ್ಯ ವದ** ಎಂದು ಅರ್ಜುನನು ಹೇಳುವದು, ಮೊದಲು ನಿಶ್ಚಯ ಜ್ಞಾನವಿರಲಿಲ್ಲವೆಂಬ ದೋಷವನ್ನಾರೋಪಿಸಿದ ಹಾಗೆ ಆಗುತ್ತದೆ. ಪರಮಾತ್ಮನಿಗೆ ಅವಿದ್ಯಾ ಸಂಬಂಧವನ್ನು ಹೇಳದ ನಾವು ಹಾಗೆ ಎಂದಿಗೂ ಅರ್ಥವನ್ನು ಹೇಳಲಾರೆವು. ಪರಮಾತ್ಮನಿಗೆ ಕಲ್ಯಾಣಗುಣಾಕರತ್ವವನ್ನೂ ಹೇಯಪ್ರತ್ಯನೀಕತ್ವವನ್ನೂ ಹೇಳುವವರಿಗೆ ಹಾಗೆ ಅನ್ವಯಿಸುವದು ಯುಕ್ತವಲ್ಲವಾಗಿ **ನಿಶ್ಚಿತ್ಯ** ಎಂಬುದನ್ನು **ಶ್ರೇಯ ಆಪ್ನುಯಾಂ** ಎಂಬುದರೊಂದಿಗೆ ಇಲ್ಲಿ ಅನ್ವಯಿಸಿರುತ್ತಾರೆ. ನಿಶ್ಚಯಜ್ಞಾನವಿಲ್ಲದಿರುವದು ಅರ್ಜುನನಿಗೆ, ಪರಮಾತ್ಮನಿಗಲ್ಲವು; ಅರ್ಜುನನು ನಿಶ್ಚಯಜ್ಞಾನವನ್ನು ಅಪೇಕ್ಷಿಸುವದರಿಂದ ಹೀಗೆ ಅನ್ವಯಿಸುವದೇ ಸರಸವು.

**ಮೂಲಕ್ಕೆ ಅರ್ಥವು:**—ಅರ್ಜುನನ ಎರಡು ಶಙ್ಕಾಗಳ ನಿವಾರಣೆಗಾಗಿ ಸರ್ವೇಶ್ವರನು ಮುಂದಿನ ಶ್ಲೋಕದಿಂದಾರಂಭಿಸಿ ಹೇಳುತ್ತಾನೆ:— ತಾನು ಹಿಂದೆ ಉಪದೇಶಿಸಿದ್ದರಲ್ಲಿ ಏನೊಂದೂ ವ್ಯಾಮಿಶ್ರವಿಲ್ಲವೆಂದು ತಿಳಿಸಲು ಉಪಕ್ರಮಿಸುತ್ತಾರೆ. **ಹೇ ಅನಘ** - ಓ ದೋಷರಹಿತನಾದ ಅರ್ಜುನನೇ, (ಅದೇಕೆ ಹಾಗೆ ಸಂಬೋಧನೆ ಎಂದರೆ, ನಿನ್ನ ವಾಕ್ಯದಲ್ಲಿ ವ್ಯಾಮಿಶ್ರವಿರುವಹಾಗೆ ತೋರಿಬರುತ್ತದೆಂದು, ಸರ್ವೇಶ್ವರನ ಉಪದೇಶವಲ್ಲಿ ದೋಷವನ್ನೆಣಿಸದೆ, ತನ್ನ ತಿಳುವಳಿಕೆಯಲ್ಲೇ ದೋಷವನ್ನು ಒಪ್ಪಿಕೊಂಡಿರುವದರಿಂದ ಇತರರಲ್ಲಿ ದೋಷವನ್ನೆಣಿಸದ ಅನಘನೇ ಎಂಬ ಸಂಬೋಧನೆಯು.) ನೀನು ನನ್ನ ಉಪದೇಶವನ್ನು ಸರಿಯಾಗಿ ಗ್ರಹಿಸಲಿಲ್ಲವಾದುದರಿಂದ ನಿನಗೆ ಇಂತಹ ಶಙ್ಕಾ ಉತ್ಪನ್ನವಾಗಿದೆ; ಪರಸ್ಪರ ವಿರುದ್ಧಮಾತುಗಳನ್ನು ಆಡಲಿಲ್ಲವು; ಹಿಂದೆ ಹೇಳಿದುದನ್ನೇ ವ್ಯಕ್ತಪಡಿಸುತ್ತೇನೆ ಸಾವಧಾನದಿಂದ ಕೇಳು (ಎಂದು ಹೇಳುವಹಾಗೆ ಹೇ ಅನಘ ಎಂದು ವಾತ್ಸಲ್ಯದಿಂದ ಸಂಬೋಧಿಸಿರುತ್ತಾರೆ.) **ಅಸ್ಮಿನ್ ಲೋಕೇ** - ನಾನಾವಿಧಾಧಿಕಾರಿಗಳಿಂದ ತುಂಬಿರುವ ಈ ಲೋಕದಲ್ಲಿ, **ಪುರಾ** - ಹಿಂದೆ ನಾನು ಮಾಡಿದುಪದೇಶದಲ್ಲಿ, **ದ್ವಿವಿಧಾನಿಷ್ಠಾ** - ಎರಡು ವಿಧಗಳುಳ್ಳ ನಿಷ್ಠೆಯು, **ಮಯಾ** - ನನ್ನಿಂದ, **ಪ್ರೋಕ್ತಾ** - ಚನ್ನಾಗಿಯೇ ಏನೊಂದೂ ವ್ಯಾಮಿಶ್ರಕ್ಕವಕಾಶವಿಲ್ಲದ ಹಾಗೆಯೇ ಹೇಳಲ್ಪಟ್ಟವು. ಅವು ಯಾವವೆಂದರೆ, **ಸಾಂಖ್ಯಾನಾಂ**-ಆತ್ಮತತ್ವವಿಷಯಕಜ್ಞಾನ ಬೇಕಾದವರಿಗೆ, **ಜ್ಞಾನಯೋಗೇನ ನಿಷ್ಠಾ** - ಜ್ಞಾನಯೋಗದಿಂದ ನಿಷ್ಠೆಯೂ, **ಯೋಗಿನಾಂ** - ಫಲಸಿದ್ಧ್ಯಸಿದ್ಧಿಗಳಲ್ಲಿ ಸಮಚಿತ್ತರಾಗಿರುವ ಅಧಿಕಾರಿಗಳಿಗೆ, **ಕರ್ಮಯೋಗೇನ ನಿಷ್ಠಾ** - ಫಲಾಭಿಸಂಧಿರಹಿತವಾದ ಕರ್ಮಯೋಗಾನುಷ್ಠಾನವೂ **ಮಯಾ ಪ್ರೋಕ್ತಾ:**- ನನ್ನಿಂದ ಚನ್ನಾಗಿ ಹೇಳಲ್ಪಟ್ಟವೆಂದು ಅನ್ವಯವು.

**ಭಾಷ್ಯಾರ್ಥವು :**—ಹಿಂದೆ ಹೇಳಿದ ಉಪದೇಶದಲ್ಲೂ ವ್ಯಾಮಿಶ್ರವಿಲ್ಲವು. ನೀನು ಪರಸ್ಪರ ವಿರುದ್ಧವಾದ ಮಾತನ್ನು ಆಡಿದೆನೆಂದು ಭಾವಿಸಿರುತ್ತೀಯೆ, ಏನೊಂದೂ ವಿರೋಧವಿಲ್ಲವೆಂದು ವ್ಯಕ್ತವಾಗಿ ತೋರಿಸುತ್ತೇನೆ ಕೇಳು ಎಂದು ಶ್ರೀ ಕೃಷ್ಣಭಗವಾನರವರು ಹೇಳುತ್ತಾರೆ. **ಪೂರ್ವೋಕ್ತಂ** - ನಾನು ಹಿಂದೆ ಉಪದೇಶಿಸಿದುದು, **ತ್ವಯಾ**- ನಿನ್ನಿಂದ, **ನ ಸಮ್ಯಗವಧೃತಂ**-ಚನ್ನಾಗಿ

ಭಾ. ಪೂರ್ವೋಕ್ತಂ ನ ಸಮ್ಯಗವಧೃತಂ ತ್ವಯಾ ; ಪುರಾಹ್ಯಸ್ಮಿನ್ ಲೋಕೇ ವಿಚಿತ್ರಾಧಿಕಾರಿಪೂರ್ಣೇ ದ್ವಿವಿಧಾ ನಿಷ್ಠಾ ಜ್ಞಾನಕರ್ಮವಿಷಯಾ ಯಥಾಧಿಕಾರ ಮಸಙ್ಕೀರ್ಣೈವ ಮಯೋಕ್ತಾ ; ನಹಿ ಸರ್ವೋ ಲೌಕಿಕಃ ಪುರುಷ ಸ್ಸಂಜಾತಮೋಕ್ಷಾಭಿಲಾಷ ಸ್ತದಾನೀಮೇವ ಜ್ಞಾನಯೋಗಾಧಿಕಾರೇ ಪ್ರಭವತಿ, ಅಪಿತ್ವನಭಿಸಂಹಿತ ಫಲೇನ ಕೇವಲ ಪರಮ ಪುರುಷಾರಾಧನವೇಷೇಣಾನುಷ್ಠಿತೇನ ಕರ್ಮಣಾ ವಿಧ್ವಸ್ತಸ್ವಾಂತಮಲೋಽ

---

ತಿಳಿಯಲ್ಪಡಲಿಲ್ಲವು, ಸ್ವಲ್ಪವೂ ತಿಳಿಯಲೇ ಇಲ್ಲವೆಂದಲ್ಲವು, ನಿಸ್ಸಂಶಯವಾಗಿ ನೀನು ತಿಳಿಯಲಿಲ್ಲವೆಂಬ ಭಾವವು. **ಪುರಾಹಿ** - ಹಿಂದೆಯೇನೇ. **ವಿಚಿತ್ರಾಧಿಕಾರಿಗಳಿಂದ ಪೂರ್ಣ**ವಾಗಿರುವ, **ಅಸ್ಮಿನ್ ಲೋಕೇ** - ಈ ಲೋಕದಲ್ಲಿ, ಜ್ಞಾನಕರ್ಮಗಳ ವಿಷಯವಾದ, **ದ್ವಿವಿಧಾ ನಿಷ್ಠಾ** - ಎರಡು ವಿಧಗಳುಳ್ಳ ನಿಷ್ಠೆಯು, **ಯಥಾಧಿಕಾರಂ** - ಅವರವರುಗಳ ಅಧಿಕಾರಾನುಗುಣವಾಗಿ, **ಅಸಙ್ಕೀರ್ಣೈವ** - ಪರಸ್ಪರ ವಿರುದ್ಧಾರ್ಥಗಳಿಂದ ಸೇರದೇನೇ, **ಮಯೋಕ್ತಾ** - ನನ್ನಿಂದ ಹೇಳಲ್ಪಟ್ಟಿತು. ಇಲ್ಲಿ **ಉಕ್ತಾ** ಅಥವಾ **ಪ್ರೋಕ್ತಾ** ಎಂದಿಷ್ಟೇ ಹೇಳಿದ್ದರೇ ಸಾಕಾಗಿತ್ತು; **ಮಯಾ ಪ್ರೋಕ್ತಾ** ಎಂದು ಹೇಳಿರುವದರಿಂದ, ಸರ್ವಜ್ಞನಾದ ತನಗೆ ಭ್ರಮೆ, ವಿಪ್ರಲಂಭ, ಪ್ರಮಾದ, ಅಶಕ್ತಿಯೇ ಮೊದಲಾದವೂ ಇಲ್ಲದೆ ಸ್ಪಷ್ಟವಾಗಿ ಅವರವರುಗಳ ಅಧಿಕಾರಾನುಗುಣವಾಗಿ ಹಿತಮಾಡಬೇಕೆಂಬ ಕುತೂಹಲವಿರುವ **ಮಯಾ**-ನನ್ನಿಂದ, **ಪ್ರೋಕ್ತಾ** - ಸ್ಪಷ್ಟವಾಗಿಯೇ ಹೇಳಲ್ಪಟ್ಟಿತು. **ಸರ್ವೋ ಲೌಕಿಕಃ ಪುರುಷಃ** - ಸಮಸ್ತ ಲೋಕದ ಜನವೂ, **ಸಂಜಾತ ಮೋಕ್ಷಾಭಿಲಾಷಃ** - ಮೋಕ್ಷಾಭಿಲಾಷೆಯುಂಟಾದವನಾಗಲು, **ತದಾನೀಮೇವ** - ಆ ಕೂಡಲೇನೇ, **ಜ್ಞಾನಯೋಗದ ಅಧಿಕಾರಕ್ಕೆ, ನ ಪ್ರಭವತಿಹಿ**-ಸಮರ್ಥನಾಗುವದಿಲ್ಲವಷ್ಟೇ? ಮೋಕ್ಷೇಚ್ಛೆಯುಂಟಾದ ಒಡನೆಯೇ ಆತನು ಜ್ಞಾನನಿಷ್ಠೆಗೆ ಅಧಿಕಾರಿಯಾಗುವದಿಲ್ಲವೆಂಬರ್ಥವು. ಆತನು ಕರ್ಮಯೋಗವನ್ನು ಅನುಷ್ಠಿಸಿದನಂತರವೇ ಯೋಗ್ಯನಾಗುತ್ತಾನೆಂದು ಹೇಳುತ್ತಾರೆ. ನೀನು ಅನಘನಾಗಿ ಸುಕೃತಿಯು, ಕರ್ಮಯೋಗಕ್ಕೆ ಅಧಿಕಾರಿಯು, ಅನಂತರ ಅನಘತರ ಅಧಿಕಾರಿಯಾಗಿ ಜ್ಞಾನಯೋಗಾನುಷ್ಠಾನಕ್ಕೆ ನೀನು ಯೋಗ್ಯನಾಗುವೆ ಎಂಬ ಭಾವವೂ ಸೂಚಿತವು. ಹಾಗಾದರೆ ಎಂತವನು ಜ್ಞಾನನಿಷ್ಠೆಗೆ ಅಧಿಕಾರಿ ಎಂಬುದನ್ನು ತಿಳಿಸುತ್ತಾರೆ:—**ಅಪಿತು** - ಮತ್ತೇನೆಂದರೆ, **ಅನಭಿಸಂಹಿತ ಫಲೇನ** - ಫಲಾಪೇಕ್ಷೆಯಿಲ್ಲದ, ಕೇವಲ ಪರಮ ಪುರುಷನ, **ಆರಾಧನ ವೇಷೇಣ** – ಆರಾಧನರೂಪವಾಗಿ, **ಅನುಷ್ಠಿತೇನ ಕರ್ಮಣಾ** - ಶಾಸ್ತ್ರರೀತ್ಯಾ ಮಾಡಲ್ಪಟ್ಟ ಕರ್ಮದಿಂದ, **ವಿಧ್ವಸ್ತ ಸ್ವಾಂತಮಲಃ** - ಮನಸ್ಸಿನ ಕಾಮಕ್ರೋಧಾದಿ ಸರ್ವ ಮಲಗಳನ್ನೂ ಕಳಕೊಂಡವನಾದ, **ಅವ್ಯಾಕುಲೇಂದ್ರಿಯಃ** - ಶಬ್ದಾದಿ ವಿಷಯಗಳಿಂದ ಪೀಡಿತನಾಗದಿರುವ ಇಂದ್ರಿಯಗಳುಳ್ಳ ಪುರುಷನೀಗ, **ಜ್ಞಾನನಿಷ್ಠಾಯಾಂ ಅಧಿಕರೋತಿ** - ಜ್ಞಾನ ನಿಷ್ಠೆಯಲ್ಲಿ ಅಧಿಕಾರ ಹೊಂದುವನು. ಫಲಕ್ಕೆ ಆಶೆಪಡದೆ, ತಾನುಮಾಡುವ ಕರ್ಮವು ಭಗವತ್ಪ್ರೀತ್ಯರ್ಥವಾಗಿ ತದಾರಾಧನ ರೂಪದಲ್ಲಿ ಮಾಡುತ್ತೇನೆಂಬ ಭಾವನೆ ಇದ್ದುದಾದರೆ ಆತನ ಮನಸ್ಸಿನ ಮಲವೆಲ್ಲಾ ತೊಲಗುತ್ತವೆ. ಆಗ ಕರ್ಮಗಳಿಗೆ ಪಾವನತ್ವರೂಪ ಸಂಸ್ಕಾರವುಂಟಾಗುವದರಿಂದ ಆತನು ಇಂದ್ರಿಯಗಳನ್ನೆಲ್ಲಾ ಜಯಿಸಿ ಜ್ಞಾನನಿಷ್ಠೆಗೆ ಅಧಿಕಾರಿಯಾಗುತ್ತಾನೆ. ಇದರಿಂದ ಕರ್ಮಯೋಗಾಧಿಕಾರಿಯೇ ಕೊನೆಗೆ ಕಷ್ಟದಿಂದ ಇಂದ್ರಿಯಗಳನ್ನೆಲ್ಲಾ ಜಯಿಸಿ ತನ್ನ ಸುಕೃತಪರಿಪಾಕ ಮೂಲಕವಾಗಿ, ಪರಮಾತ್ಮನ ಕೃಪಾದ್ವಾರಾ ಜ್ಞಾನಯೋಗಕ್ಕೆ ಅಧಿಕಾರಿಯಾಗುತ್ತಾನೆಂಬ ಭಾವವು. ಇವರಿಂದ ಜ್ಞಾನಯೋಗವು ಕರ್ಮಯೋಗದ ಮೂಲಕವೇ ಅಧಿಕಾರವನ್ನು ಹೊಂದಬೇಕೇ ವಿನಾ ಸ್ವತಂತ್ರವಾಗಿ ಇಲ್ಲವೆಂಬುದು ಸ್ಫುಟವು. ಅದು ಹೇಗೆ ಎಂದರೆ ಜ್ಞಾನನಿಷ್ಠೆಗೆ ವಿರೋಧಿಯು ವ್ಯಾಕುಲೇಂ

ಭಾ. ವ್ಯಾಕುಲೇನ್ದ್ರಿಯೋ ಜ್ಞಾನ ನಿಷ್ಠಾಯಾ ಮಧಿಕರೋತಿ. (೧)"ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ । ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥" ಇತಿ ಪರಮ ಪುರುಷಾರಾಧನೈಕ ವೇಷತಾ ಕರ್ಮಣಾಂ ವಕ್ಷ್ಯತೇ ; ಇಹಾಪಿ (೨) "ಕರ್ಮಣ್ಯೇವಾಧಿಕಾರಸ್ತೇ" ಇತ್ಯಾದಿನಾ ಅನಭಿಸಂಹಿತಫಲಂ ಕರ್ಮಾನುಷ್ಠೇಯಂ ವಿಧಾಯ, ತೇನವಿಷಯವ್ಯಾಕುಲತಾರೂಪಮೋಹಾದುತ್ತೀರ್ಣ ಬುದ್ಧೇಃ

---

ದ್ರಿಯತ್ವವು; ಇದು ಮನಸ್ಸಿನ ಮಲಗಳ ಮೂಲಕ ಉಂಟಾಗತಕ್ಕದ್ದು ; ಈ ಮನಸ್ಸಿನ ಮಲಗಳಾದರೋ ಅನಾದಿಯಾಗಿ ಬಂದ ಜನ್ಮ ಪರಂಪರೆಗಳಲ್ಲಿನ ದುಷ್ಕರ್ಮ ಮೂಲಕ ಪ್ರಾಪ್ತವಾದ ರಜಸ್ತಮೋಗುಣಗಳಾಧಿಕ್ಯದಿಂದ ಉಂಟಾಪವು. ಇಂತಹ ದುಷ್ಕರ್ಮದಿಂದುಂಟಾದ ರಜಸ್ತಮೋಗುಣಾಧಿಕ್ಯ ಕಳೆಯಬೇಕಾದರೆ "ಕಷಾಯೇ ಕರ್ಮಭಿಃ ಪಕ್ವೇ ತತೋಜ್ಞಾನಂ ಪ್ರವರ್ತತೇ" ಎಂದು ಹೇಳಿರುವಹಾಗೆ ಕರ್ಮಯೋಗಾನುಷ್ಠಾನವನ್ನು ಕೈಕೊಂಡು ಪರಮ ಪುರುಷಾರಾಧನ ರೂಪದಲ್ಲಿ ಫಲಾಭಿಸಂಧಿಯಿಲ್ಲದೆ ಕರ್ಮಾನುಷ್ಠಾನಮಾಡಿದರೆ, ಆಗ ಜ್ಞಾನಯೋಗಕ್ಕೆ ಅಧಿಕಾರಿಯಾಗುವನು. ಹಾಗೆಯೇ "ಧರ್ಮೇಣಪಾಪ ಮಪನುದತಿ" (ತೈ. ನಾರಾ. ೬. ೫೦) ಎಂಬ ಶ್ರುತಿಯು ಅನಭಿಸಂಹಿತ ಫಲದಿಂದ ಅನುಷ್ಠಿಸಲ್ಪಟ್ಟ ಶಾಸ್ತ್ರವಿಹಿತ ಕರ್ಮಯೋಗದಿಂದ ಪರಬ್ರಹ್ಮ ಪ್ರಾಪ್ತಿಗೆ ಆವಶ್ಯಕವಾಗಿರುವ ಉಪಾಯಾನುಷ್ಠಾನಕ್ಕೆ ಅಙ್ಗವಾಗಿರುವ ಆತ್ಮಾವಲೋಕನಕ್ಕೆ ವಿರೋಧಿಯಾದ ಪಾಪವು ತೊಲಗಿ ಜ್ಞಾನಉಂಟಾಗುತ್ತದೆಂದು ಹೇಳಿರುತ್ತದೆ. ಕರ್ಮಯೋಗದಲ್ಲಿ ಅಡಗಿರುವ "ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ" ಎಂದು ಹೇಳಿರುವಹಾಗೆ, ಈ ಯಜ್ಞದಾನ ತಪಸ್ಸುಗಳು ಜ್ಞಾನೋತ್ಪತ್ತಿಗೆ ಪ್ರತಿಬಂಧಕ ಪಾಪಗಳನ್ನು ಹೋಗಲಾಡಿಸುತ್ತವೆಂದು ಆಮೂಲಕ ಪಾವನಾನಿ ಎಂದು ಹೇಳಲ್ಪಟ್ಟಿವೆ. ಇದರಿಂದ ಜ್ಞಾನಯೋಗಕ್ಕೆ ಕರ್ಮಯೋಗದ ಸಾಪೇಕ್ಷತ್ವವು ಸ್ಥಾಪಿತವು. ಹೀಗೆ ಜ್ಞಾನಯೋಗಾಧಿಕಾರಿಯಾಗಿ ಮೋಕ್ಷವನ್ನು ಹೊಂದಬೇಕೆಂಬಭಿಲಾಷೆಯುಳ್ಳವನಿಗೆ ಪರಮ ಪುರುಷಾರಾಧನ ರೂಪ ಕರ್ಮಯೋಗವೂ ಆವಶ್ಯಕವೆಂದು ಹೇಳಿದುದಕ್ಕೆ ಗೀತಾವಾಕ್ಯ ಪ್ರಮಾಣವನ್ನೇ ಮುಂದೆ ಉದಾಹರಿಸುತ್ತಾರೆ :—**ಭೂತಾನಾಂ ಪ್ರವೃತ್ತಿಃ** - ಚೇತನರ ಪ್ರವೃತ್ತಿಗಳೆಲ್ಲಾ, **ಯತಃ** - ಯಾವ ಪರಮಾತ್ಮನ ದೆಶೆಯಿಂದಲೋ, **ಸರ್ವಮಿದಂ** - ಈ ಚಿದಚಿತ್ತುಗಳಿಂದ ಕೂಡಿದ ಜಗತ್ತೆಲ್ಲಾ, **ಯೇನ** - ಯಾವ ಪರಮಾತ್ಮನಿಂದ, **ತತಂ** - ವ್ಯಾಪಿಸಲ್ಪಟ್ಟಿರುತ್ತದೋ, **ತಂ** - ಅಂತಹ ಸರ್ವೇಶ್ವರನನ್ನು, **ಕರ್ಮಣಾ**–ನಿತ್ಯನೈಮಿತ್ತಿಕಾದಿ ಕರ್ಮಗಳಿಂದ ಕೂಡಿದ ಕರ್ಮಯೋಗಾನುಷ್ಠಾನದಿಂದ, **ಅಭ್ಯರ್ಚ್ಯ** - ಆರಾಧಿಸಿ, **ಮಾನವಃ** - ಮನುಷ್ಯನು, ಪರಮ ಶ್ರೇಯಸ್ಸನ್ನು ಹೊಂದುವನು", **ಇತಿ** - ಎಂಬದಾಗಿ, **ಕರ್ಮಣಾಂ** - ಕರ್ಮಗಳಿಗೆ, **ಪರಮ ಪುರುಷಾರಾಧನೈಕ ವೇಷತಾ** - ಪರಮ ಪುರುಷನ ಆರಾಧನೆಯೇ ಮುಖ್ಯವಾದ ಭಾವವು, **ವಕ್ಷ್ಯತೇ** - ಹೇಳಲ್ಪಡುತ್ತದೆ, **ಇಹಾಪಿ** – ಈ ಸಂದರ್ಭದಲ್ಲಿಯೂ ಕೂಡ, **"ಕರ್ಮಣ್ಯೇವಾಧಿಕಾರಸ್ತೇ" ಇತ್ಯಾದಿನಾ** - ಎಂಬಿವೇ ಮೊದಲಾದವುಗಳಿಂದ, **ಅನಭಿಸಂಹಿತಫಲಂ ಕರ್ಮ** – ಫಲಾಪೇಕ್ಷೆಯಿಲ್ಲದ ಕರ್ಮವು, **ಅನುಷ್ಠೇಯಂ** – ಅನುಷ್ಠಿಸತಕ್ಕದ್ದೆಂಬುದನ್ನು, **ವಿಧಾಯ** - ವಿಧಿಸಿ, **ತೇನ** - ಅಂತಹ ಕರ್ಮಾನುಷ್ಠಾನದಿಂದ, **ವಿಷಯ ವ್ಯಾಕುಲತಾರೂಪಮೋಹಾತ್** - ಶಬ್ದಾದಿ ವಿಷಯಗಳಿಂದ ವ್ಯಾಕುಲತಾರೂಪ ಮೋಹದಿಂದ, **ಉತ್ತೀರ್ಣ**

---

(೧) ಗೀ. ೧೮. ೪೬. (೨) ಗೀ. ೨. ೪೭.

ಭಾ. (೩) "ಪ್ರಜಾಪತಿ ಯದಾ ಕಾರ್ವಾ" ಇತ್ಯಾದಿನಾ ಜ್ಞಾನಯೋಗ ಉದಿತಃ. ಅತ ಸ್ಸಾಂಖ್ಯಾನಾಮೇವ ಜ್ಞಾನಯೋಗೇನ ಸ್ಥಿತಿರುಕ್ತಾ. ಯೋಗಿನಾಂತು ಕರ್ಮಯೋಗೇನ. ಸಂಖ್ಯಾಬುದ್ಧಿಃ ; ತದ್ಯುಕ್ತಾಃ ಸಾಂಖ್ಯಾಃ ; ಆತ್ಮೈಕವಿಷಯಯಾ ಬುದ್ಧ್ಯಾ ಸಂಬಂಧಿನ ಸ್ಸಾಂಖ್ಯಾಃ; ಅತದರ್ಹಾಃ ಕರ್ಮಯೋಗಾಧಿಕಾರಿಣೋ ಯೋಗಿನಃ ವಿಷಯ ವ್ಯಾಕುಲ ಬುದ್ಧಿಯುಕ್ತಾನಾಂ ಕರ್ಮಯೋಗೇಽಧಿಕಾರಃ; ಅವ್ಯಾಕುಲಬುದ್ಧೀನಾಂ ತು ಜ್ಞಾನಯೋಗೇಽಧಿಕಾರ ಉಕ್ತ ಇತಿ, ನ ಕಿಂಚಿದಿಹ ವಿರುದ್ಧಂ ವ್ಯಾಮಿಶ್ರಮಭಿಹಿತಮ್ ।

ಬುದ್ಧೀಃ - ಬಿಡಲ್ಪಟ್ಟ ಬುದ್ಧಿಗೆ ಎಂದರೆ ಬುದ್ಧಿಯುಳ್ಳ ಅಧಿಕಾರಿಗೆ, "ಪ್ರಜಾಪತಿ ಯದಾ ಕಾರ್ವಾ" ಇತ್ಯಾದಿನಾ - ಎಂಬಿವೇ ಮೊದಲಾದುದರಿಂದ, ಜ್ಞಾನಯೋಗಃ - ಜ್ಞಾನನಿಷ್ಠೆಯು, ಉದಿತಃ-ಹೇಳಲ್ಪಟ್ಟಿತು. ಕಠಶ್ರುತಿಯಲ್ಲಿ ಹೇಗೆ ಹೇಳಿದೆಯೋ ಹಾಗೆಯೇ ಈ ಗೀತೆಯಲ್ಲೂ ಹೇಳಲ್ಪಟ್ಟಿದೆ. ಕರ್ಮಣ್ಯೇವಾಧಿಕಾರಸ್ತೇ (ಗೀ.೨.೪೭.) ಎಂಬ ಶ್ಲೋಕದಲ್ಲಿ ವ್ಯಾಮಿಶ್ರವೇನೂ ಇಲ್ಲವೆ, ವಿಶದವಾಗಿ ನಿನಗೆ ಕರ್ಮದಲ್ಲಿ ಮಾತ್ರವೇ ಅಧಿಕಾರವೆಂದು ಹೇಳಿದನಂತರ ಕರ್ಮಯೋಗವು ಆವಶ್ಯಕವೆಂದು ಹೇಳಿರುದನ್ನು ಅರ್ಜುನನು ಗ್ರಹಿಸಿರುತ್ತಾನೆ. ಅಧಿಕಾರ ಉಂಟೆಂದರೆ ಆ ಕರ್ಮಕ್ಕೆ ತಾನು ಮಾತ್ರವೇ ಹೇತುವೆಂದೂ, ಫಲಕ್ಕೂ ತಾನೇ ಹೇತುವೆಂದೂ, ಎಲ್ಲಿ ತಿಳಿಯುತ್ತಾನೋ ಎಂದು ಆಲೋಚಿಸಿ, ಮಾಕರ್ಮ ಫಲ ಹೇತುರ್ಭೂಃ - ಎಂದೂ ಶ್ರೀಕೃಷ್ಣನುಪದೇಶಿಸಿರುತ್ತಾನೆ; ಆದುದರಿಂದ ಕರ್ಮಯೋಗದ ನಿತ್ಯ ನೈಮಿತ್ತಿಕ ಕಾಮ್ಯ ಕರ್ಮಗಳನ್ನು ಅನುಷ್ಠಿಸುವ ಸಂದರ್ಭದಲ್ಲಿ ಅನಭಿಸಂಹಿತಫಲರೂಪವಾಗಿ ಕರ್ಮವು ಅನುಷ್ಠೇಯವೆಂದು ಹೇಳಲ್ಪಟ್ಟಿರುತ್ತದೆ. ಹೀಗೆ ಅನುಷ್ಠಿಸಿ ವಿಷಯ ವೈರಾಗ್ಯ ಹುಟ್ಟಿ ಸರ್ವೇಂದ್ರಿಯೋಪರತಿಯುಂಟಾದವನಿಗೇನೇ ಜ್ಞಾನಯೋಗದಲ್ಲಿ ಅಧಿಕಾರವೆಂದು ಹಿಂದೆ ಹೇಳಲ್ಪಟ್ಟಿರುತ್ತದೆಂಬ ಭಾವವು. ಅತಃ . ಆ ಕಾರಣದಿಂದ ಸಾಂಖ್ಯಾನಾಮೇವ - ಯಥಾರ್ಥವಾದ ಆತ್ಮಜ್ಞಾನ ಬೇಕೆಂಬುವರಿಗೇನೇ, ಜ್ಞಾನಯೋಗೇನ ಸ್ಥಿತಿಃ - ಜ್ಞಾನನಿಷ್ಠೆಯಲ್ಲಿ ಅಧಿಕಾರವು, ಉಕ್ತಾ - ಹೇಳಲ್ಪಟ್ಟಿತು. ಯೋಗಿಗಳಾದರೋ, ಕರ್ಮಯೋಗದಲ್ಲಿ ಅಧಿಕಾರವು. ಮುಂದೆ ಸಾಂಖ್ಯರು ಎಂದರೆ ಕೆಲವರು ಅರ್ಥಮಾಡಿರುವಹಾಗೆ ಕಾಪಿಲ ಸಿದ್ಧಾಂತಿಗಳಲ್ಲವು ; ಅವರ ಸಿದ್ಧಾಂತವು ಇಲ್ಲಿ ಅಪ್ರಸ್ತುತವೂ ಅನುಪಾದೇಯವೂ. ಆದುದರಿಂದ ಸಾಂಖ್ಯರೆಂದರೆ ಯಾರು? ಯೋಗಿಗಳೆಂದರೆ ಯಾರು? ಎಂಬುದನ್ನು ಇನ್ನೊಂದುಸಲ ವಿಶದವಾಗಿ ತಿಳಿಸುತ್ತಾರೆ. ಸಂಖ್ಯಾ ಎಂದರೆ ಬುದ್ಧಿಯು ; ಅಂತಹ ಬುದ್ಧಿಯಿಂದ, ಯುಕ್ತಾಃ - ಸೇರಿರುವವರು ಸಾಂಖ್ಯರೆಂದು ಹೇಳಿಸಿಕೊಳ್ಳುತ್ತಾರೆ; ಆ ಬುದ್ಧಿಯು ಎಂಥಾದ್ದೆಂಬುದನ್ನು ತಿಳಿಸುತ್ತಾರೆ:—ಆದುದರಿಂದ ಆತ್ಮೈಕ ವಿಷಯಯಾ ಬುದ್ಧ್ಯಾ, ಸಂಬಂಧಿನಃ - ಜೀವಾತ್ಮಸ್ವರೂಪ ನಿಶ್ಚಯಜ್ಞಾನವಿರುವ ಯುಕ್ತರಾದವರು ಸಾಂಖ್ಯರು, ಅತದರ್ಹಾಃ- ಅದಕ್ಕೆ ಯೋಗ್ಯತೆಯಿಲ್ಲದವರು ಎಂದರೆ ಅಶಕ್ತರು ಕರ್ಮಯೋಗಾಧಿಕಾರಿಗಳು; ಯೋಗಿನಃ - ಅವರಿಗೆ ಯೋಗಿಗಳೆಂದು ಹೆಸರು. (ಗೀ. ೨. ೪೮ನೆಯ ಶ್ಲೋಕವನ್ನು ಪರಾಂಬರಿಸಿ. ಶ್ರೀ ಕೃಷ್ಣನೇ ಯೋಗ ಶಬ್ದಕ್ಕೆ ಅರ್ಥವನ್ನು ಹೇಳಿರುತ್ತಾನೆ) ವಿಷಯ ವ್ಯಾಕುಲ ಬುದ್ಧಿಯುಕ್ತಾನಾಂ - ವಿಷಯಗಳಿಂದ ವ್ಯಾಕುಲಿತ ಬುದ್ಧಿಯುಳ್ಳವರಿಗೆ, ಕರ್ಮಯೋಗದಲ್ಲಿ ಅಧಿಕಾರವು, ಅವ್ಯಾಕುಲ ಬುದ್ಧೀನಾಂತು . ಹಾಗೆ ವಿಷಯಗಳಿಂದ ವ್ಯಾಕುಲಿತವಾಗದ ಬುದ್ಧಿಯುಳ್ಳವರಿಗಾದರೋ ಎಂದರೆ ಇಂದ್ರಿಯಗಳನ್ನು ನಿಗ್ರಹಿಸಿದವರಿಗಾದರೋ, ಜ್ಞಾನಯೋಗದಲ್ಲಿ ಅಧಿಕಾರವು,

(೩) ಗೀ. ೨. ೫೫.

ಭಾ. ಅವ. ಸರ್ವಸ್ಯ ಲೌಕಿಕಸ್ಯ ಪುರುಷಸ್ಯ ಮೋಕ್ಷೇಚ್ಛಾಯಾಂ ಜಾತಾಯಾಂ ಸಹಸೈವ ಜ್ಞಾನಯೋಗೋ ದುಷ್ಕರ ಇತ್ಯಾಹ :—

ಮೂ. ನ ಕರ್ಮಣಾ ಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।
ನ ಚ ಸನ್ನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪.

ಉಕ್ತಾ - ಹೇಳಲ್ಪಟ್ಟಿತು ; ಇತಿ – ಎಂದು, ವಿರುದ್ಧಂ ವ್ಯಾಮಿಶ್ರಂ - ವಿರುದ್ಧವಾದುದಾಗಿ ನೀನು ಹೇಳಿದಹಾಗೆ ವ್ಯಾಮಿಶ್ರವಾಗಿರುವನು, ನ ಕಿಂಚನಸ್ಯಭಿಹಿತಮ್-ಸ್ವಲ್ಪವೂ ಕೂಡ ಹೇಳಲ್ಪಡಲಿಲ್ಲವು, ಎಂಬ ತಾತ್ಪರ್ಯವು. ಈ ಅರ್ಥವೆಲ್ಲಾ ಮೂಲದಲ್ಲಿ ಎಲ್ಲಿದೆ ಎಂದರೆ ಪ್ರೋಕ್ತಾ ಎಂಬಲ್ಲಿರುವ "ಪ್ರ" ಎಂಬ ಉಪಸರ್ಗದಿಂದ ಚೆನ್ನಾಗಿ ಹೇಳಲ್ಪಟ್ಟಿತು ಎಂದರೆ ನಿನಗೆ ತೋರಿದ ವ್ಯಾಮಿಶ್ರಮುಂತಾದ್ದು ಯಾವುದೂ ಇಲ್ಲದೆ ಹೇಳಲ್ಪಟ್ಟಿತು ಎಂಬ ಭಾವವು ತೋರಿಬರುತ್ತದೆ. ಮಯಾ ಪ್ರೋಕ್ತಾ ಎಂದು ಹೇಳಿರುವದರಿಂದ, ಯಾವ ಯಾವ ಅಧಿಕಾರಿಗೆ ಯಾವ ಯಾವ ಅನುಷ್ಠಾನವು ಯುಕ್ತವೆಂದು ತಿಳಿದ ಮತ್ತು ಆ ಅಧಿಕಾರಿಗಳಿಗೆ ಹೇಗೆ ಹಿತವನ್ನುಂಟುಮಾಡಬೇಕೆಂದಿರುವ ಸರ್ವಜ್ಞನಾದ ನನ್ನಿಂದ ಎಂಬರ್ಥವು; ಮತ್ತು ಅವಿಸ್ಪಾಗೃಹೀತತತ್ವವೇನೂ ತನಗಿಲ್ಲದಿರುವದರಿಂದ ಭ್ರಮ ವಿಪ್ರಲಂಭ ಪ್ರಮಾದ ಆಲಸ್ಯ ಮೊದಲಾದ ದೋಷಗಳಿಲ್ಲದಿರುವ ಮಯಾ ನನ್ನಿಂದ ಹೇಳಲ್ಪಟ್ಟಿತು ಎಂದಿರುವದರಿಂದ ವ್ಯಾಮಿಶ್ರಾದಿದೋಷವು ತನ್ನ ವಾಕ್ಯಕ್ಕಿಲ್ಲದೆ ಪ್ರೋಕ್ತಾ ಎಂಬ ಭಾವವು. ಜ್ಞಾನಯೋಗವು ಶ್ರೇಷ್ಠವಾದುದಾಗಿರುವಾಗ ಕರ್ಮಯೋಗೋಪದೇಶವೇ ಸಮಂಜಸವಲ್ಲವೆಂಬ ಪೂರ್ವಪಕ್ಷಕ್ಕೆ ಸಮಾಧಾನವನ್ನು ಹೇಳುತ್ತಾರೆ. ಮೋಕ್ಷಾಭಿಲಾಷೆಯುಂಟಾದ ಒಡನೆಯೇ ಜ್ಞಾನಯೋಗವನ್ನವಲಂಬಿಸಲು ಸಾಧ್ಯವಲ್ಲವು. ಸುಕೃತಪರಿಪಾಕವು ವಿಶೇಷವಾಗಿದ್ದು ಪಾಪಗಳ ಬಾಹುಳ್ಯವಿಲ್ಲದಿರುವವರಿಗೇ ಬೇಗ ಜ್ಞಾನಯೋಗದಲ್ಲಿ ಅಧಿಕಾರ ಉಂಟಾದೀತು. ಆದರೆ ಸಾಧಾರಣವಾಗಿ ಮೋಕ್ಷೇಚ್ಛೆಯುಂಟಾದಮೇಲೆ ತುಂಬಾ ಕಷ್ಟದಿಂದ ವೈರಾಗ್ಯಉಂಟಾಗಿ, ಇಂದ್ರಿಯಗಳನ್ನು ಜಯಿಸಿ, ಜ್ಞಾನಯೋಗದಲ್ಲಿ ಅಧಿಕಾರವು ಪ್ರಾಪ್ತವಾಗುತ್ತದೆ. ವಿಷಯಗಳಿಂದ ವ್ಯಾಕುಲಿತಗಳಾಗದ ಅಧಿಕಾರಿಗಳಿಗೇನೇ ಜ್ಞಾನಯೋಗದಲ್ಲಿ ಅಧಿಕಾರವೆಂಬ ತಾತ್ಪರ್ಯವು. ಹಾಗೆ ವಿಷಯ ವ್ಯಾಕುಲತೆಯು ತೊಲಗುವದಕ್ಕಾಗಿ, ಫಲಾಭಿಸಂಧಿರಹಿತವಾಗಿ ಪರಮಾತ್ಮ ಪ್ರೀಣನಕ್ಕಾಗಿ ಪರಮಾತ್ಮಾರಾಧನರೂಪವಾಗಿ ಕರ್ಮಯೋಗಾನುಷ್ಠಾನವನ್ನು ಮಾಡಬೇಕೆಂದು ಹೇಳಲ್ಪಟ್ಟಿತು.

ಭಾಷ್ಯಾವತಾರಿಕೆಯ ಅರ್ಥವು :—ಸರ್ವಸ್ಯ ಲೌಕಿಕಸ್ಯ ಪುರುಷಸ್ಯ - ಸಮಸ್ತವಾದ ಲೌಕಿಕ ಪುರುಷನಿಗೆ, ಲೌಕಿಕಸ್ಯ ಎಂದು ಹೇಳಿದುದರಿಂದ, ವೈದಿಕ ಕರ್ಮನಿಷ್ಠರಲ್ಲವೆಂಬ ಭಾವವು, ಇವರಿಂದ ಸಮಸ್ತ ಲೌಕಿಕರೂ ವಿಷಯ ವ್ಯಾಕುಲಿತೇಂದ್ರಿಯರೆಂದು ಹೇಳಿದಂತಾಯಿತು, ಮೋಕ್ಷೇಚ್ಛಾಯಾಂ ಜಾತಾಯಾಂ - ಮೋಕ್ಷೇಚ್ಛೆಯು ಉತ್ಪನ್ನವಾಗಲಾಗಿ, ಸಹಸೈವ ಉತ್ಪನ್ನವಾದ ಒಡನೆಯೇ ಎಂದರೆ ಕರ್ಮಯೋಗವನ್ನವಲಂಬಿಸದೆ ಎಂಬ ಭಾವವು, ಜ್ಞಾನಯೋಗದಲ್ಲಿ ಅಧಿಕಾರವು, ದುಷ್ಕರಃ - ಕಷ್ಟಸಾಧ್ಯವು, ಇತ್ಯಾಹ - ಎಂದು ಮುಂದಿನ ಶ್ಲೋಕದಿಂದ ಹೇಳುತ್ತಾರೆ. ಮೋಕ್ಷೇಚ್ಛೆಯುಂಟಾದರೆ ಕರ್ಮಯೋಗದಲ್ಲೇನೋ ಅಧಿಕಾರ ಉಂಟಾಗಬಹುದು, ಯಾವಾಗ ಮೋಕ್ಷೇಚ್ಛೆಯು ಉಂಟಾಯಿತೋ, ಆಗ ಕರ್ಮಯೋಗ ಏತಕ್ಕೆ? ಒಡನೆ ಜ್ಞಾನಯೋಗವೇ ಏಕೆ ಕೂಡದು? ಎಂಬಾಕ್ಷೇಪಕ್ಕೆ ಮುಂದಿನ ಶ್ಲೋಕವು ಸಮಾಧಾನವನ್ನು ಹೇಳುತ್ತದೆ.

ಭಾ. ನ ಶಾಸ್ತ್ರೀಯಾಣಾಂ ಕರ್ಮಣಾಮನಾರಂಭಾದೇವ ನೈಷ್ಕರ್ಮ್ಯಂ–ಜ್ಞಾನನಿಷ್ಠಾಂ ಪ್ರಾಪ್ನೋತಿ; ನಚಾರಬ್ಧಸ್ಯ ಶಾಸ್ತ್ರೀಯಸ್ಯ ತ್ಯಾಗಾತ್; ಯತೋಽನಭಿಸಂಹಿತ

ಮೂಲಕ್ಕೆ ಅರ್ಥವು :—ಪುರುಷಃ - ಮನುಷ್ಯನು, ಕರ್ಮಣಾಮನರಂಭಾತ್-ಕರ್ಮವನ್ನು ಪ್ರಾರಂಭಿಸಿದೇನೇ ಇದ್ದುಬಿಟ್ಟರೆ ನೈಷ್ಕರ್ಮ್ಯಂ - ನಿಷ್ಕರ್ಮವೆಂದರೆ ನಿಷ್ಕ್ರಾಂತ ಕರ್ಮಯೋಗವುಳ್ಳದ್ದು, ಸಾಧಿಸಲ್ಪಟ್ಟ ಕರ್ಮಯೋಗವನ್ನುಳ್ಳದ್ದು ಎಂದರೆ ಜ್ಞಾನ ನಿಷ್ಠೆಯನ್ನು, ನಾಶ್ನುತೇ - ಹೊಂದಲಾರನು, ಸನ್ನ್ಯಸನಾದೇವಚ - ಆರಂಭಿಸಿದನಂತರ ಒಂದು ವೇಳೆ ಅದನ್ನು ಪೂರಾ ಬಿಟ್ಟುಬಿಟ್ಟರೂ, ಸಿದ್ಧಿಂ - ಆ ಸಿದ್ಧಿಯನ್ನು ಎಂದರೆ ಕರ್ಮಯೋಗದಿಂದಾಗುವ ಸಿದ್ಧಿಯಾದ ಜ್ಞಾನನಿಷ್ಠೆಯನ್ನು, (ಇಲ್ಲಿ ಸಿದ್ಧಿ ಶಬ್ದಕ್ಕೆ ತಾತ್ಪರ್ಯಾರ್ಥವಾಗಿ ಜ್ಞಾನನಿಷ್ಠೆ ಎಂಬರ್ಥವು ಹೇಗೆ ಎಂದರೆ, ಕರ್ಮಯೋಗದಿಂದುಂಟಾಗುವ ಸಿದ್ಧಿಯು ಜ್ಞಾನಯೋಗವಾದುದರಿಂದ ಹಾಗೆ ವ್ಯಾಖ್ಯಾನವು) ನ ಸಮಧಿಗಚ್ಛತಿ - ಹೊಂದಲಾರನು. ಕರ್ಮಯೋಗವನ್ನಾರಂಭಿಸದೆ ಇದ್ದರೂ, ಆರಂಭಿಸಿ ಬಿಟ್ಟರೂ ಸಹ, ಜ್ಞಾನನಿಷ್ಠೆಯುಂಟಾಗುವದಿಲ್ಲವೆಂಬ ಭಾವವು. ಕೆಲವುದಿನ ಕರ್ಮಯೋಗ ನಿಷ್ಠೆಯನ್ನು ನಡೆಸಿರುತ್ತೇನೆಂದು ಒಡನೇ ಜ್ಞಾನಯೋಗವನ್ನವಲಂಬಿಸಿದರೂ ಅದು ಸಿದ್ಧಿಸುವದಿಲ್ಲವೆಂಬ ಭಾವವು.

ಭಾಷ್ಯಾರ್ಥವು :—ಶಾಸ್ತ್ರೀಯಾಣಾಂ - ವೇದವೇ ಮೊದಲಾದ ಶಾಸ್ತ್ರಗಳಲ್ಲಿ ವಿಧಿಸಿರುವ, ಕರ್ಮಣಾಂ - ಕರ್ಮಗಳ, ಮೂಲದಲ್ಲಿರುವ ಕರ್ಮಣಾಂ ಎಂಬ ಪದವು ವೈದಿಕಕರ್ಮಗಳಾದ ಅನಭಿಸಂಹಿತ ಫಲವುಳ್ಳ ಕರ್ಮಯೋಗದ ನಿತ್ಯನೈಮಿತ್ತಿಕ ಕಾಮ್ಯಕರ್ಮಗಳನ್ನು ಬೋಧಿಸುತ್ತದೇ ವಿನಾ ಲೌಕಿಕ ಕರ್ಮಗಳು ಇಲ್ಲಿ ಹೇಳಲ್ಪಡಲಿಲ್ಲವೆಂಬ ಭಾವವು; ಲೌಕಿಕ ಕರ್ಮಗಳಾದರೋ ಸಂಸಾರಕ್ಕೆ ಸಂಬಂಧಿಸಿದುವಾಗಿ ವಿಷಯ ವ್ಯಾಕುಲಿತೇಂದ್ರಿಯಗಳನ್ನುಳ್ಳವೆಂದು ಹೇಳಿದಂತಾಯಿತು. ಇಂತಹ ವೈದಿಕ ಕರ್ಮಗಳ ಅನಾರಂಭಾದೇವ . ಆರಂಭಿಸದೇನೇ . ನೈಷ್ಕರ್ಮ್ಯಂ ಎಂದರೆ ಜ್ಞಾನನಿಷ್ಠೆಯನ್ನು, ನಪ್ರಾಪ್ನೋತಿ - ಹೊಂದುವದಿಲ್ಲವು. ಆರಬ್ಧಸ್ಯ ಶಾಸ್ತ್ರೀಯಸ್ಯ - ಆರಂಭಿಸಿದ ಶಾಸ್ತ್ರಸಲ್ಲಿ ವಿಧಿಸಿದ ಕರ್ಮದ, ನತ್ಯಾಗಾತ್ - ಬಿಡೋಣದಿಂದಲೂ ನೈಷ್ಕರ್ಮ್ಯವು ಸಿದ್ಧಿಸುವದಿಲ್ಲವು. ನೈಷ್ಕರ್ಮ್ಯ ಶಬ್ದವನ್ನೇ ಪುನಃ ಉಪಯೋಗಿಸುವದಕ್ಕೆ ಬದಲಾಗಿ ಉತ್ತರಾರ್ಧದಲ್ಲಿ ಸಿದ್ಧಿ ಶಬ್ದವು ಪ್ರಯೋಗಿಸಲ್ಪಟ್ಟಿರುತ್ತದೆ. ನೈಷ್ಕರ್ಮ್ಯ ಶಬ್ದಕ್ಕೆ ಮೋಕ್ಷವೆಂಬರ್ಥವೆಂದು ಕೆಲವರು ಹೇಳುವರು. ಈಗ ಕರ್ಮಜ್ಞಾನ ಯೋಗಗಳ ಪ್ರಶಂಸೆಯೇ ವಿನಾ ಮೋಕ್ಷಪ್ರಶಂಸೆಯಿಲ್ಲವು; ಅಥವಾ ನೈಷ್ಕರ್ಮ್ಯವೆಂದರೆ ಕರ್ಮಗಳು ಬೇಕಾದವಸ್ಥೆ ಎಂದು ಇನ್ನು ಕೆಲವರು ಹೇಳುವರು. ಕರ್ಮಾರಂಭದಿಂದ ಕರ್ಮವಿಲ್ಲದವಸ್ಥೆಯುಂಟಾಗುತ್ತದೆಂಬುದು ಅಸಮಂಜಸವು. ಇದರಿಂದ ಜ್ಞಾನ ಉಂಟಾಗುತ್ತದೆ ಎಂಬರ್ಥಮಾಡಿ ಜ್ಞಾನಯೋಗವೆಂದು ಹೇಳಿದರೆ, ಆ ಅರ್ಥವು ನಮಗೂ ಸಮ್ಮತವಾದುದೇ ಅಥವಾ ಜ್ಞಾನದಿಂದ ಪರಮಾತ್ಮಧ್ಯಾನ ರೂಪಜ್ಞಾನವೆಂದರೆ ಆಗಲೂ ನಮಗೆ ಇಷ್ಟವಾದ ಅರ್ಥವೇ. ಏಕೆಂದರೆ ಕರ್ಮಯೋಗವು ಜ್ಞಾನಯೋಗಕ್ಕೂ ಸಾಧನವು; ಜ್ಞಾನಯೋಗವು ಅಶಕ್ಯವಾದರೆ ಭಕ್ತಿಯೋಗಕ್ಕೂ ಸಾಧನವು. ಇದು ಕರ್ಮಣೈವಹಿ ಸಂಸಿದ್ಧಿಂ ಆಸ್ಥಿತಾಜನಕಾದಯಃ ಎಂಬಲ್ಲಿ ಹೇಳಲ್ಪಟ್ಟಿತು. ಕರ್ಮಾರಂಭದಿಂದಲೂ, ಅದನ್ನು ಬಿಡದೇ ಅನುಷ್ಠಿಸುವದರಿಂದಲೂ ಕರ್ಮಯೋಗದ ಪರಾಕಾಷ್ಠಾದೆಶೆಯಾದ ಜ್ಞಾನಯೋಗ ಉಂಟಾಗುತ್ತದೆಂದು ಹೇಳುವದು ಸರ್ವ ಸಮಂಜಸವು; ಆದುದರಿಂದಲೇ ಪರಾಕಾಷ್ಠಾ ದೆಶೆಯಾದ ಜ್ಞಾನನಿಷ್ಠೆಯೆಂದು ನೈಷ್ಕರ್ಮ್ಯ ಶಬ್ದಕ್ಕೆ ಭಾಷ್ಯ ಬರೆದಿರುತ್ತಾರೆ. ಬರೀ ಶಾಸ್ತ್ರೀಯ ಕರ್ಮಾರಂಭಮಾತ್ರವೇ ನೈಷ್ಕರ್ಮ್ಯ ಸಿದ್ಧಿಗೆ ಸಾಲದು. ಆದುದರಿಂದ ನ ಚ

ಭಾ. ಫಲಸ್ಯ ಪರಮ ಪುರುಷಾರಾಧನವೇಷಸ್ಯ ಕರ್ಮಣ ಸ್ಸಿದ್ಧಿ ಸ್ಸ್ಯಾತ್; ಅತ ಸ್ತೇನ ವಿನಾ ತಾಂ ನ ಪ್ರಾಪ್ನೋತಿ; ಅನಭಿಸಂಹಿತಫಲೈಃ ಕರ್ಮಭಿ ರನಾರಾಧಿತ ಗೋವಿಂದೈ ರವಿನಷ್ಟಾನಾದಿ ಕಾಲಪ್ರವೃತ್ತಾನಂತಪಾಪಸಂಚಯೈ ರವ್ಯಾಕುಲೇಂದ್ರಿಯತಾ ಪೂರ್ವಿಕಾತ್ಮನಿಷ್ಠಾ ದುಸ್ಸಂಪಾದಾ ॥ ೪ ॥

---

ಸನ್ನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ಎಂದು ಉತ್ತರಾರ್ಧದಿಂದ ಹೇಳಿದರು. ಆರಂಭಿಸಿದ ಕರ್ಮವನ್ನು ತ್ಯಜಿಸತಕ್ಕದ್ದೂ ಅಲ್ಲವು. ಈತನು ಜನ್ಮವೆತ್ತಿರುವ ದೇಹಕ್ಕೆ ಸಂಬಂಧಿಸಿದವು ಆ ಕರ್ಮಗಳಲ್ಲಿ ಕೆಲವು; ಆದುದರಿಂದ ದೇಹವಿರುವವರೆಗೂ ಈತನು ಅವುಗಳನ್ನನುಷ್ಠಿಸತಕ್ಕದ್ದು. ತನ್ನ ಆತ್ಮಾವಿಗೆ ಅವು ಸಂಬಂಧಿಸಿವಲ್ಲವು. ಆತ್ಮಾವಿಗೆ ಬ್ರಾಹ್ಮಣ ಕ್ಷತ್ರಿಯಾದಿ ವರ್ಣಭೇದಗಳಿಲ್ಲವು. ಶ್ರೀ ಪರಾಶರರು ಈ ಅರ್ಥವನ್ನು ಈ ಮುಂದಿನ ಶ್ಲೋಕದಲ್ಲಿ ವ್ಯಕ್ತಪಡಿಸಿರುತ್ತಾರೆ. "ಚತುರ್ಣಾಮಪಿ ವರ್ಣಾನಾಮಾಚಾರೋ ಧರ್ಮಪಾಲಕಃ। ಆಚಾರಭ್ರಷ್ಟ ದೇಹಾನಾಂ ಭವೇದ್ಧರ್ಮಃ ಪರಾಙ್ಮುಖಃ" ಆಯಾ ವರ್ಣಾಶ್ರಮ ಧರ್ಮಗಳನ್ನು ನಡೆಸದ ದೇಹಿಗಳಿಗೆ ಧರ್ಮವು ಪರಾಙ್ಮುಖವಾಗುವದು ಎಂಬುದು ಇದರ ತಾತ್ಪರ್ಯವು. ಕೆಲವರು ಸನ್ನ್ಯಸನಾದೇವ ಎಂಬುದಕ್ಕೆ ಯತಿ ಧರ್ಮದಲ್ಲಿರುವದೆಂದು ಅರ್ಥ ಬರೆದಿರುತ್ತಾರೆ. ಪೂರ್ವಾರ್ಧದಲ್ಲಿ ಕರ್ಮಣಾಂ ಅನಾರಂಭಾತ್ ಎಂದಿರುವದರಿಂದ, ಉತ್ತರಾರ್ಧದಲ್ಲಿ ಸನ್ನ್ಯಸನಾತ್ ಎಂಬ ಪಂಚಮಿ ಇದ್ದರೆ ಕರ್ಮಣಃ ಸನ್ನ್ಯಸನಾತ್ ಎಂದು ಅರ್ಥ ಹೇಳಬೇಡವೇ? ಅಪ್ರಸ್ತುತವಾಗಿರುವ ಯತಿ ಧರ್ಮವೆಂದರ್ಥಮಾಡಬಹುದೋ? ಇನ್ನು ಕೆಲವರು ಕರ್ಮದ ಸಂನ್ಯಾಸವೆಂದೇ ಅರ್ಥಮಾಡಿ ಜ್ಞಾನೋತ್ಪತ್ತಿಗೆ ಪೂರ್ವಭಾವಿಯಾಗಿ ಕರ್ಮತ್ಯಾಗವೆಂದು ಅರ್ಥ-ಮಾಡಿರುತ್ತಾರೆ. "ಜ್ಞಾನೋತ್ಪತ್ತಿ ಪೂರ್ವಭಾವಿಯಾಗಿ" ಎಂದು ಸೇರಿಸಿಕೊಳ್ಳಲು ಆಧಾರವಿಲ್ಲವು. ಈಗ ಅರ್ಜುನನು ಸ್ವವರ್ಣೋಚಿತವಾದ ಯುದ್ಧ ಕರ್ಮವನ್ನಾರಂಭಿಸಿ ಬಿಟ್ಟಿರುತ್ತಾನೆ. ಇದು ಅನುಚಿತವೆಂದು ಹೇಳಬೇಕಾಗಿರುವದರಿಂದ ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ಎಂಬುದರಿಂದ ಕರ್ಮತ್ಯಾಗಮಾಡಿದರೆ ಸಿದ್ಧಿಯಿಲ್ಲವೆಂಬ ಶ್ರೀಕೃಷ್ಣೋಕ್ತಿಯು ಸರ್ವ ಸಮಂಜಸವಾದುದು.

ಹೀಗೆ ಕರ್ಮಯೋಗದಲ್ಲಿ ನಿಷ್ಠೆಯಿಲ್ಲದೆ ಜ್ಞಾನ ನಿಷ್ಠೆಯನ್ನು ಸಂಪಾದಿಸುವದು ತುಂಬಾ ದುಷ್ಕರವೆಂಬ ಈ ಶ್ಲೋಕ ತಾತ್ಪರ್ಯವನ್ನು ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ, ಯತಃ - ಯಾವಕಾರಣದಿಂದ, ಅನಭಿಸಂಹಿತಫಲಸ್ಯ - ಫಲಾಪೇಕ್ಷೆಯಿಲ್ಲದ, ಪರಮಪುರುಷಾರಾಧನವೇಷಸ್ಯ - ಪರಮಪುರುಷಾರಾಧನರೂಪವಾದ, ಕರ್ಮಣಃ - ಕರ್ಮದ, ಸಿದ್ಧಿಸ್ಸ್ಯಾತ್ - ಸಿದ್ಧಿಯಾದ ಜ್ಞಾನನಿಷ್ಠೆಯು ಉಂಟಾಗುತ್ತದೋ, ಅತಃ - ಆ ಕಾರಣದಿಂದ, ತೇನ ವಿನಾ - ಆ ಕರ್ಮ ನಿಷ್ಠೆಯಿಲ್ಲದೆ, ತಾಂ - ಆ ಜ್ಞಾನ ನಿಷ್ಠೆಯನ್ನು, ನ ಪ್ರಾಪ್ನೋತಿ - ಹೊಂದುವದಿಲ್ಲವು. ಯಾವಾಗ ಕಾರಣವಾದ ಕರ್ಮನಿಷ್ಠೆಯಿಲ್ಲವೋ, ಅದರ ಕಾರ್ಯವಾದ ಜ್ಞಾನ ನಿಷ್ಠೆಯೂಯಿಲ್ಲವೆಂದು ತಿಳಿಸುವದಕ್ಕಾಗಿ, ತೇನ ವಿನಾ ತಾಂ ನ ಪ್ರಾಪ್ನೋತಿ ಎಂದು ವ್ಯಾಖ್ಯಾನಮಾಡಿರುತ್ತಾರೆ. ಆರಂಭಿಸದೇ ಇದ್ದರೂ ಆರಂಭಿಸಿಬಿಟ್ಟರೂ ಇವೆರಡು ಸಂದರ್ಭವನ್ನೂ ಸೇರಿಸಿ ಹೇಳುವದಕ್ಕಾಗಿ, ತೇನವಿನಾ ಎಂದರೆ ಕರ್ಮಯೋಗವಿಲ್ಲದೆ ಜ್ಞಾನಯೋಗ ಸಿದ್ಧಿಯಿಲ್ಲವೆಂದು ಹೇಳಲ್ಪಟ್ಟಿತು. ಅನಭಿಸಂಹಿತಫಲೈಃ - ಫಲಾಪೇಕ್ಷೆಯಿಲ್ಲದೆ ಮಾಡಲ್ಪಟ್ಟ, ಕರ್ಮಭಿಃ - ಕರ್ಮಗಳಿಂದ, ಅನಾರಾಧಿತಗೋವಿಂದೈಃ - ಗೋವಿಂದನನ್ನಾರಾಧಿಸದೇ ಇರುವ, ಅವಿನಷ್ಟಾನಾದಿ ಕಾಲಪ್ರವೃತ್ತಾನಂತ ಪಾಪಸಂಚಯೈಃ - ನಷ್ಟವಾಗದಿರುವ ಅನಾದಿಕಾಲದಿಂದಲೂ ಆಚರಿಸಲ್ಪಟ್ಟ ಕೊನೆಯೇಯಿಲ್ಲದ ಪಾಪಸಮೂಹಗಳುಳ್ಳವರುಗಳಿಂದ, ಅವ್ಯಾಕುಲೇಂದ್ರಿಯತಾಪೂರ್ವಿ

**ಭಾ. ಅವ. ಏತದೇವೋಪಪಾದಯತಿ :—**

**ಮೂ. ನಹಿಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥　　೫.**

**ಜ್ಞಾನನಿಷ್ಠಾ** – ವಿಷಯಗಳಿಂದ ಬಾಧಿಸಲ್ಪಡದೇಯಿರುವ ಇಂದ್ರಿಯಗಳುಳ್ಳಸ್ಥಿತಿಯಿಂದ ಕೂಡಿದ ಆತ್ಮಾವಲೋಕನವು, ದುಸ್ಸಂಪಾದಾ - ಸಂಪಾದಿಸುವದು ಅಸಾಧ್ಯವು, **"ಅನಾರಾಧಿತ ಗೋವಿಂದಾಃ ಯೇನರಾ ದುಃಖ ಭಾಗಿನಃ"** ಎಂಬುದು ಇಲ್ಲಿ ಅನುಸಂಧೇಯವು. ಫಲಾಪೇಕ್ಷೆಯಿಲ್ಲದೆ ಗೋವಿಂದನ ಪ್ರೀತಿಗಾಗಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ಸ್ವವರ್ಣೋಚಿತ ಕರ್ಮಗಳನ್ನೆಸಗುವವರಿಗೇನೇ ಬಾಹ್ಯವಿಷಯಗಳಲ್ಲಿ ವೈರಾಗ್ಯ ಹುಟ್ಟಿ, ಇಂದ್ರಿಯಗಳು ಜಯಿಸಲ್ಪಟ್ಟು, ಜ್ಞಾನನಿಷ್ಠೆಯುಂಟಾಗಿ, ಆತ್ಮಾವಲೋಕನವು ಸಿದ್ಧಿಸುತ್ತದೆ ಎಂಬ ಭಾವವು. ಅನಭಿಸಂಹಿತ ಫಲದಿಂದ ಕರ್ಮಾನುಷ್ಠಾನವಿಲ್ಲದೆ ಪರಮ ನಿಃಶ್ರೇಯಸ್ಸಿನ ಪ್ರಾಪ್ತಿಗೆ ಬೇಕಾದ ಪರಮಪುರುಷನ ಅನುಗ್ರಹವು ದೊರಕುವದಿಲ್ಲವು; ಪರಮ ಪುರುಷನ ಅನುಗ್ರಹವಿಲ್ಲದೆ ಪಾಪಸಂಚಯವು ತೊಲಗುವದಿಲ್ಲವು: ಪಾಪಸಂಚಯು ತೊಲಗದೆ ಮನಸ್ಸಿನ ಎಂಟು ವಿಧಮಲಗಳೂ ಹೋಗುವದಿಲ್ಲವು; ಮನಸ್ಸಿನ ಮಲಗಳು ಹೋಗದೆ ಯಾವಾಗ ರಾಗದ್ವೇಷಾದಿಗಳಿಗೆ ನೆಲೆಯುಂಟಾಯಿತೋ ಆಗ, ಇಂದ್ರಿಯ ವ್ಯಾಕುಲತೆ ಮೂಲಕ ಶಾನ್ತಿಯಿಲ್ಲವು; ಹಾಗೆ ಶಾನ್ತಿಯಿಲ್ಲದೆ ಬಹಿರ್ವಿಷಯಗಳಿಂದ ಈ ಇಂದ್ರಿಯಗಳು ವ್ಯಾಕುಲಿತಗಳಾದರೆ, ಪ್ರತ್ಯಗಾತ್ಮ ಸ್ವರೂಪಜ್ಞಾನವೇ ಉಂಟಾಗುವದಿಲ್ಲವು. ಹೀಗಿರುವದರಿಂದ ಕರ್ಮನಿಷ್ಠೆಯಿಲ್ಲದೆ ಜ್ಞಾನನಿಷ್ಠೆಗೆ ಒಂದೇ ಸಲಹಾರಿ ಬಿಡುತ್ತೇನೆಂಬುವನು ಕೆಳಗೆ ನಿಂತು ಪರ್ವತಾಗ್ರಕ್ಕೆಯಾಗಲಿ, ಉನ್ನತ ಗೋಪುರದ ಏಳನೆಯ ಅಂತಸ್ಥಿಗೆಯಾಗಲಿ ಒಂದೇಸಲ ಹಾರಲು ಪ್ರಯತ್ನಿಸಿದ ಹಾಗಾಗುತ್ತದೆ. **"ಪ್ರಾಂಶುಲಭ್ಯೇ ಫಲೇಲೋಭಾ ದುದ್ಬಾಹುರಿವ ವಾಮನಃ"** ಎಂಬ ಮಹಾಕವಿಯ ವಾಕ್ಯವು ಇಲ್ಲಿ ಅನುಸಂಧೇಯವು ॥೪॥

**ಭಾಷ್ಯಾವತಾರಿಕೆಯ ಅರ್ಥವು:—ಏತದೇವ** - ಈ ಹಿಂದೆ ಹೇಳಿವ ಅಭಿಪ್ರಾಯವನ್ನೇ **ಉಪಪಾದಯತಿ** - ವಾದಮೂಲಕ ಉಪಪಾದಿಸಿ ಹೇಳುತ್ತಾರೆ. ಹಿಂದೆ ಅರ್ಜುನನು ಮಾಡಿದ ಶಜ್ಕಾವಿಗೆ ಕಾರಣವೇ ಇಲ್ಲವೆಂದು ತಿಳಿಸುವದಕ್ಕಾಗಿ, ಪ್ರತಿಯೊಬ್ಬ ಚೇತನನೂ ತನಗೆ ಪ್ರಕೃತಿ ಸಂಬಂಧವಿರುವದರಿಂದ ಯಾವಾಗಲೂ ಏನಾದರೂ ಕರ್ಮವನ್ನು ಮಾಡುತ್ತಲೇ ಇರುವನೆಂದೂ, ಹಾಗೆ ಕರ್ಮವಿಲ್ಲದೇ ಇರುವದಕ್ಕೆ ಸಾಧ್ಯವೇ ಇಲ್ಲವೆಂದೂ ತಿಳಿಸುತ್ತಾರೆ, ಇದು ಅಪ್ರಸ್ತುತ ವಿಷಯವಲ್ಲವು. ಹೀಗೆ ಯಾವಾಗಲೂ ಕರ್ಮವನ್ನು ಮಾಡುತ್ತಲೇ ಇರುವದರಿಂದ, ಇಂದ್ರಿಯಗಳನ್ನು ಮಾತ್ರ ನಿರೋಧಿಸಿ ಮನಸ್ಸನ್ನು ಮಾತ್ರ ಜಯಿಸದಿದ್ದರೆ ಮಿಥ್ಯಾಚಾರನಾಗಿ ನಷ್ಟನಾಗುವನೆಂದೂ, ಆದುದರಿಂದ ಮನಸ್ಸನ್ನು ಜಯಿಸಿ ಇಂದ್ರಿಯಗಳನ್ನು ವಶದಲ್ಲಿಟ್ಟು, ಸದಾ ಮಾಡುತ್ತಲಿರುವ ಲೌಕಿಕ ವ್ಯಾಪಾರಗಳಿಗೆ ಬದಲಾಗಿ ಶಾಸ್ತ್ರೀಯ ಕರ್ಮಗಳನ್ನು ಫಲಾಭಿಸಂಧಿಯಿಲ್ಲದೆ ಆಚರಿಸಿದರೆ, ಕರ್ಮಯೋಗನಿಷ್ಠನೆನಿಸಿ ಮಹಿಮೆಯನ್ನು ಹೊಂದುವನು ಎಂದು ಮುಂದೆ ಎರಡು ಶ್ಲೋಕಗಳ ಮೂಲಕ ತಿಳಿಸುವದಕ್ಕಾಗಿ ಈ ವಿಷಯವನ್ನು ಇಲ್ಲಿ ಬೋಧಿಸುತ್ತಾರೆ.

**ಮೂಲಕ್ಕೆ ಅರ್ಥವು:—ಕಶ್ಚಿತ್** - ಈ ಲೋಕದ ಯಾವ ಪುರುಷನೇ ಆಗಲಿ, **ಜಾತು**– ಯಾವಕಾಲದಲ್ಲೇಯಾಗಲಿ, **ಕ್ಷಣಮಪಿ** - ಒಂದು ಕ್ಷಣವಾಗಲಿ, **ಅಕರ್ಮಕೃತ್** - ಕರ್ಮ

**ಭಾ.** ನಹ್ಯಸ್ಮಿನ್ ಲೋಕೇ ವರ್ತಮಾನಃ ಪುರುಷಃ ಕಶ್ಚಿತ್ಕದಾಚಿದಪಿ ಕರ್ಮಾಕುರ್ವಾಣ ಸ್ತಿಷ್ಠತಿ. ನಕಿಂಚಿತ್ಕರೋಮೀತಿ ವ್ಯವಸಿತೋಽಪಿ ಸರ್ವಃ ಪುರುಷಃ ಪ್ರಕೃತಿ ಸಂಭವೈಃ ಸ್ವತ್ವರಜಸ್ತಮೋಭಿಃ ಪ್ರಾಚೀನಕರ್ಮಾನುಗುಣಂ ಪ್ರವೃದ್ಧೈರ್ಗುಣೈಃ ಸ್ವೋಚಿತಂ ಕರ್ಮ ಪತ್ಯವಶಃ ಕಾರ್ಯತೇ–ಪ್ರವರ್ತ್ಯತೇ. ಅತ ಉಕ್ತ ಲಕ್ಷಣೇನ

ವನ್ನು ಮಾಡದೇ, **ನ ತಿಷ್ಠತಿ** - ಇರಲು ಸಾಧ್ಯವಿಲ್ಲವು. ನಿದ್ರಾ ಮೊದಲಾದ ಸಮಸ್ತ ಕಾಲದಲ್ಲಿಯೂ ಪ್ರವೃತ್ತಿಯುಯಿರುತ್ತದೆಂಬ ಭಾವವು. ಪ್ರಕೃತಿ ಸಂಬಂಧವಿರುವ ಈ ಆತ್ಮನಿಗೆ ಕರ್ಮರೂಪ ವ್ಯಾಪಾರವು ತಪ್ಪಿದ್ದಲ್ಲವೆಂಬ ಭಾವವು. ಈ ಅಭಿಪ್ರಾಯವನ್ನೇ ಉತ್ತರಾರ್ಧದಿಂದ ವಿಶದೀಕರಿಸುತ್ತಾರೆ. **ಹಿ** - ಏತಕ್ಕೆಂದರೆ, **ಸರ್ವಃ** - ಸಮಸ್ತ ಜನರೂ, **ಕರ್ಮಪ್ರತಿ** - ಕರ್ಮದ ವಿಷಯದಲ್ಲಿ, **ಪ್ರಕೃತಿಜೈರ್ಗುಣೈಃ** - ಪ್ರಕೃತಿಯಿಂದುಂಟಾದ ಸತ್ವ ರಜಸ್ತಮೋಗುಣಗಳಿಂದ, **ಅವಶಃ** - ಪರವಶನಾಗಿ, **ಕಾರ್ಯತೇ** - ಪ್ರವರ್ತಿಸಲ್ಪಡುವರು. ಸರ್ವರಿಗೂ ಪ್ರಕೃತಿ ಸಂಬಂಧವಿರುವದರಿಂದ ಕರ್ಮವನ್ನು ಮಾಡದೇ ಇರಲು ಸಾಧ್ಯವೇ ಇಲ್ಲವೆಂಬ ಭಾವವು. ಈ ಅಭಿಪ್ರಾಯವು ಈಗಿನ ಭೌತಿಕ ಶಾಸ್ತ್ರಕ್ಕೂ ಅನುಗುಣವಾದುದು. ಅಣುಗಳಿಗೂ ಸೂಕ್ಷ್ಮತರಗಳಾಗಿ ಅಣೀಯಗಳೆಂದು ಹೇಳಲ್ಪಡುವ ಐಯರ್ಾ ಎಂಬುವಗಳಿಗೂ ಈ ವಿಧವಾದ ಚಲನೆಯುಂಟೆಂಬುದು ಭೌತಿಕ ಶಾಸ್ತ್ರಜ್ಞರ ಅಭಿಪ್ರಾಯವು. ಇದರಿಂದಲೇ ನಾನಾವಿಧ ಚಲನೆಗಳು ಪೃಥಿವಿಯಲ್ಲಿ ಕಂಡುಬರುತ್ತವೆ.

**ಭಾಷ್ಯಾರ್ಥವು :**—ಶಾಸ್ತ್ರವಿಹಿತ ಕರ್ಮವು ಪರಮ ಪುರುಷಾರಾಧನ ರೂಪವಾಗಿ ಆತನ ಅನುಗ್ರಹವನ್ನು ಸಂಪಾದಿಸಿಕೊಡುವಂಥಾದ್ದು. ಅಂತಹ ಕರ್ಮತ್ಯಾಗವು ಜ್ಞಾನನಿಷ್ಠೆಯನ್ನು ಅಪೇಕ್ಷಿಸುವನಿಗೆ ಸರಿಯಲ್ಲವೆಂದು ಹೇಳಲುಪಕ್ರಮಿಸಿರುತ್ತಾರೆ:—**ಅಸ್ಮಿನ್ ಲೋಕೇ** - ಈ ಲೋಕದಲ್ಲಿ, **ವರ್ತಮಾನಃ ಪುರುಷಃ** - ಇರುವ ಪುರುಷನು, **ಕಶ್ಚಿತ್** - ಯಾವನೇಯಾಗಲಿ, **ಕದಾಚಿದಪಿ** - ಇದು ಜಾತು ಮತ್ತು ಕ್ಷಣಮಪಿ ಎಂದೆರಡನ್ನು ಸೇರಿಸಿದ ಅರ್ಥವು, ಯಾವಕಾಲವಲ್ಲೇಯಾಗಲಿ, ಜಾತು ಎಂಬುದು ದಿನ ಮೊದಲಾದ ಹೆಚ್ಚಾದ ಕಾಲವನ್ನೂ **ಕ್ಷಣಮಪಿ** ಎಂಬುದು ಸೂಕ್ಷ್ಮಕಾಲವನ್ನೂ ತಿಳಿಸುತ್ತದೆ. **ಕರ್ಮ** - ಕರ್ಮವನ್ನು, **ಅಕುರ್ವಾಣಃ** - ಮಾಡದೇನೇ, **ನ ತಿಷ್ಠತಿ ಹಿ** - ಇರಲಾರನಷ್ಟೇ? ಜೀವಾತ್ಮನಿಗೆ ಪ್ರಕೃತಿ ಸಂಬಂಧ ಯಾವಾಗ ಉಂಟಾಯಿತೋ ಒಡನೆಯೇ ಕರ್ಮವನ್ನು ಮಾಡಲು ಉಪಕ್ರಮಿಸುವನು, ಕರ್ಮ ಮಾಡದೆ ಒಂದು ಕ್ಷಣಕಾಲ ಕೂಡ ಸುಮ್ಮನೆ ಇರಲಾರನೆಂಬ ಭಾವವು. ಈ "ಹಿ"ಶಬ್ದವು ಹಿಂದೆ ಹೇಳಿದುದೇ ಇಲ್ಲಿ ಸಮರ್ಥನೆ ಮಾಡಲ್ಪಟ್ಟಿತೆಂಬುದನ್ನು ಸೂಚಿಸುತ್ತದೆ, ಇಲ್ಲಿ **ಅಸ್ಮಿನ್ ಲೋಕೇ** ಎಂದು ಶ್ಲೋಕದಲ್ಲಿಲ್ಲದುದನ್ನು ಹೇಗೆ ಹೇಳಿರುತ್ತಾರೆಂದರೆ, ಮೂಲದ ಕಶ್ಚಿಚ್ಛಬ್ದವು ಲೋಕದ ಸರ್ವಜನಕ್ಕೂ ಅನ್ವಯಿಸುತ್ತದೆಂದು ತಿಳಿಸುವದಕ್ಕಾಗಿ ಎಂದು ಗ್ರಹಿಸತಕ್ಕದ್ದು. ಉತ್ತರಾರ್ಧದ **ಸರ್ವಃ** ಎಂಬ ಪ್ರಯೋಗವು ಈ ಅಭಿಪ್ರಾಯವನ್ನು ಸೂಚಿಸುತ್ತದೆ. ಈ ಅಭಿಪ್ರಾಯವನ್ನೇ ಉತ್ತರಾರ್ಧದ ಅರ್ಥವಾದ ಮುಂದಿನ ವಾಕ್ಯಗಳಿಂದಲೂ ಸಮರ್ಥನೆ ಮಾಡುತ್ತಾರೆ. ಅದಕ್ಕಾಗಿಯೇ ಉತ್ತರಾರ್ಧದ ಹಿ ಶಬ್ದವು. **ನ ಕಿಂಚಿತ್ಕರೋಮೀತಿ** - ನಾನು ಏನನ್ನೂ ಮಾಡುವದಿಲ್ಲವೆಂದು, **ವ್ಯವಸಿತೋಽಪಿ**–ನಿಶ್ಚಯ ಬುದ್ಧಿವುಳ್ಳವನಾದರೂ ಕೂಡ **ಸರ್ವಃಪುರುಷಃ**-ಸಮಸ್ತ ಜನವೂ, **ಪ್ರಕೃತಿ ಸಂಭವೈಃ ಸತ್ವರಜಸ್ತಮೋಭಿಃ** - ಇದು **ಪ್ರಕೃತಿ ಜೈರ್ಗುಣೈಃ** ಎಂಬುದರ ವ್ಯಾಖ್ಯಾನವು, ಪ್ರಕೃತಿಯಿಂದುಂಟಾದ ಸತ್ವರಜಸ್ತಮೋಗುಣಗಳಿಂದ, **ಪ್ರಾಚೀನ ಕರ್ಮಾನುಗುಣಂ** - ಹಿಂದಿನ ಕರ್ಮಗಳಿಗೆ ಅನುಗುಣವಾಗಿ, **ಪ್ರವೃದ್ಧೈರ್ಗುಣೈಃ** - ಪ್ರವೃದ್ಧಗಳಾದ ಗುಣಗಳಿಂದ, **ಸ್ವೋಚಿತ** - ಆ ಗುಣಗಳಿಗೆ ಯೋಗ್ಯವಾದ, **ಕರ್ಮಪ್ರತಿ** - ಕರ್ಮ

ಭಾ. ಕರ್ಮ ಯೋಗೇನ ಪ್ರಾಚೀನಂ ಪಾಪಸಂಚಯಂ ನಾಶಯಿತ್ವಾ ಗುಣಾಂಶ್ಚ ಸತ್ವಾದೀನ್ ವಶೀಕೃತ್ವಾ ನಿರ್ಮಲಾಂತಃಕರಣೇನ ಸಂಪಾದ್ಯೋ ಜ್ಞಾನಯೋಗಃ ||೫||

ಭಾ. ಅ. ಅನ್ಯಥಾ ಜ್ಞಾನಯೋಗಾಯ ಪ್ರವೃತ್ತೋ ಮಿಥ್ಯಾಚಾರೋ ಭವತೀತ್ಯಾಹ:—

ವನ್ನು ಕುರಿತು, ಅವಶಃ - ಅಸ್ವತಂತ್ರನಾಗಿ, ಕಾರ್ಯತೇ - ಎಂದರೆ ಪ್ರವರ್ತ್ಯತೇ–ಪ್ರವರ್ತಿಸಲ್ಪಡುತ್ತದೆ. ಇಲ್ಲಿ ಅವಶಃ ಸರ್ವಪುರುಷಃ ಎಂದು ಅನ್ವಯಿಸದೆ, ಕಾರ್ಯತೇ ಎಂಬುದರೊಂದಿಗೆ ಅನ್ವಯಿಸತಕ್ಕದ್ದು ಸರಸವು. ಈ ಪುರುಷನು ಈಗ ಮಾಡುವ ಕರ್ಮಗಳೆಲ್ಲಾ ಪ್ರಾಚೀನ ಕರ್ಮಾನುಗುಣವಾಗಿ ಸತ್ವರಜಸ್ತಮೋಗುಣಗಳ ಪ್ರಾಚುರ್ಯವುಳ್ಳವು. ಹೀಗೆ ಅನಾದಿ ಕಾಲದಿಂದಲೂ ಪ್ರಕೃತಿ ಸಂಬಂಧವಿರುವದರಿಂದ ಕರ್ಮ, ಅವಿದ್ಯಾ, ವಾಸನಾ ಇವುಗಳು ಸಂಬಂಧಿಸಿ ಬಂದಿರುವದರಿಂದ ಅನಂತ ಪಾಪ ಸಂಚಯಗಳು ಇಪ್ಪನಿಗೆ ಉಂಟು. ಇವುಗಳಿಂದ ಪ್ರೇರಿತನಾಗುವವರಿಂದ ಅವಶಃ ಪ್ರವರ್ತ್ಯತೇ ಎಂಬ ಪ್ರಯೋಗವು- ಇವುಗಳನ್ನು ಕಳೆದುಕೊಂಡು ಮನಸ್ಸನ್ನು ಪರಿಶುದ್ಧವಾಗಿ ಮಾಡಿಕೊಳ್ಳುವದಕ್ಕಾಗಿ ಕರ್ಮಯೋಗದಲ್ಲಿ ಪ್ರವರ್ತಿಸುವದು ಆವಶ್ಯಕವು. ಈತನು ಸದಾ ಕರ್ಮವನ್ನು ಮಾಡುತ್ತಾ ಅವಶನಾಗಿ ಪ್ರಾರಬ್ಧವನ್ನು ಅನುಭವಿಸುತ್ತಾ ಇರುತ್ತಾನಾದುದರಿಂದ ಕರ್ಮವನ್ನೆಸಗುವದು ಈತನಿಗೆ ಸ್ವಭಾವವಾದುದರಿಂದ, \ಜ್ಞಾನಯೋಗಕ್ಕೆ ಸಾಧನವಾದ ಕರ್ಮಾನುಷ್ಠಾನಮಾಡುವದು ಸರ್ವ ಶ್ರೇಷ್ಠವೆಂದು\ ಹಿಂದೆ ಹೇಳಿದುದನ್ನೇ ಮುಂದೆ ಹೇಳುತ್ತಾರೆ. ಆದುದರಿಂದ ಹಿಂದೆ ನಾಲ್ಕನೆಯ ಶ್ಲೋಕದಲ್ಲಿ ಹೇಳಲ್ಪಟ್ಟ ಕರ್ಮಯೋಗವಿಲ್ಲದೆ ಜ್ಞಾನಯೋಗವು ದುರ್ಲಭವೆಂಬಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾರೆ:— ಅತಃ - ಹೀಗೆ ಗುಣಪರತಂತ್ರನಾಗಿ ಪ್ರಾರಬ್ಧ ಕರ್ಮಾನುಗುಣವಾಗಿ ಕರ್ಮಗಳನ್ನೆಸಗುವದರಿಂದ ಪ್ರಾಪ್ತವಾದ ಪಾಪ ಸಂಚಯವಿರುವದರಿಂದ, ಉಕ್ತಲಕ್ಷಣೇನ ಕರ್ಮಯೋಗೇನ - ಹಿಂದೆ ಹೇಳಲ್ಪಟ್ಟ ಲಕ್ಷಣವುಳ್ಳ ಕರ್ಮಯೋಗದಿಂದ, ಪ್ರಾಚೀನ ಪಾಪಸಂಚಯಂ - ಹಿಂದಿನ ಪಾಪಸಮೂಹವನ್ನೆಲ್ಲಾ, ನಾಶಯಿತ್ವಾ - ನಾಶಗೊಳಿಸಿ, ಗುಣಾಂಶ್ಚ ಸತ್ವಾದೀನ್ ವಶೀಕೃತ್ವಾ - ಸತ್ವರಜಸ್ತಮೋಗುಣಗಳನ್ನು ವಶಮಾಡಿಕೊಂಡು, ನಿರ್ಮಲಾಂತಃಕರಣೇನ - ಪರಿಶುದ್ಧ ಮನಸ್ಸುಳ್ಳ ಮಹಾನುಭಾವನಿಂದ, ಜ್ಞಾನಯೋಗಃ - ಜ್ಞಾನಯೋಗವು, ಸಂಪಾದ್ಯಃ - ಹೊಂದಲ್ಪಡತಕ್ಕದ್ದು- \ ರಜಸ್ತಮೋಗುಣಗಳಿಂದ ರಾಗದ್ವೇಷಾದಿಗಳು ಉಂಟಾಗುತ್ತವೆ; ಕರ್ಮಯೋಗದಿಂದ ಅವುಗಳ ಹಾವಳಿಯನ್ನಡಗಿಸಿ ವಿಮಲ ಮನಸ್ಕನಾಗತಕ್ಕದ್ದು, ಅಂತಾವನಿಗೀಗ ಜ್ಞಾನಯೋಗಪ್ರಾಪ್ತಿಯು ಎಂಬ ತಾತ್ಪರ್ಯವು. \ "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಮೃತಮಶ್ನುತೇ" ಎಂಬ ಶ್ರುತಿಯೂ ಇದನ್ನೇ ಹೇಳುತ್ತದೆ. ಅವಿದ್ಯಯಾ-ವಿದ್ಯೆಯಲ್ಲದುದು ಕರ್ಮಾನುಷ್ಠಾನವು, ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನದಿಂದ, ಮೃತ್ಯುಂ ತೀರ್ತ್ವಾ - ಸಂಸಾರವನ್ನು ದಾಟಿ ಎಂದರೆ ಬಂಧಕವಾದ ಪಾಪ ಸಂಚಯವನ್ನು ಹೋಗಲಾಡಿಸಿಕೊಂಡು, ವಿದ್ಯಯಾ-ಜ್ಞಾನಯೋಗದಿಂದ ಯುಕ್ತವಾದ ಉಪಾಸನಾರೂಪ ಬ್ರಹ್ಮವಿದ್ಯೆಯಿಂದ, ಅಮೃತ ಮಶ್ನುತೇ-ಮೋಕ್ಷವನ್ನು ಹೊಂದುತ್ತಾನೆ. || ೫ ||

**ಭಾಷ್ಯಾವತಾರಿಕೆಯ ಅರ್ಥವು:**—ಅನ್ಯಥಾ - ಹಾಗೆ ಕರ್ಮಯೋಗದಿಂದ ಪಾಪ ಸಂಚಯವನ್ನು ಹೋಗಲಾಡಿಸಿಕೊಂಡು ನಿರ್ಮಲಾಂತಃಕರಣನಾಗದೇ ಹೋದರೆ, ಜ್ಞಾನಯೋಗಾಯ ಪ್ರವೃತ್ತಃ - ಕೇವಲ ಜ್ಞಾನಯೋಗದಲ್ಲೇ ಪ್ರವೃತ್ತನಾದವನು, ಮಿಥ್ಯಾಚಾರೋ ಭವತೀತ್ಯಾಹ - ಮಿಥ್ಯಾಚಾರನಾಗುವನೆಂದು ಈ ಮುಂದಿನ ಶ್ಲೋಕದಿಂದ ಹೇಳುತ್ತಾರೆ.

**ಮೂಲಕ್ಕೆ ಅರ್ಥವು:**—ಅರ್ಜುನನ ಮನಸ್ಸಿನಲ್ಲಿ ಇದ್ದ ಆಶಯವೇನೆಂದರೆ:—ಶ್ರೀ

ಮೂ. ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾಸ್ಮರನ್ ।
ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ ೬.

ಭಾ. ಅವಿನಷ್ಟ ಪಾಪತಯಾ ಅಜಿತಬಾಹ್ಯಾಂತಃಕರಣಃ ಆತ್ಮಜ್ಞಾನಾಯ ಪ್ರವೃತ್ತೋ ವಿಷಯ ಪ್ರವಣತಯಾ ಆತ್ಮನಿ ವಿಮುಖೀಕೃತಮನಾಃ ವಿಷಯಾನೇವ ಸ್ಮರನ್ ಯ ಆಸ್ತೇ, ಅನ್ಯಥಾ ಸಂಕಲ್ಪ್ಯ ಅನ್ಯಥಾಚರತೀತಿ ಸ ಮಿಥ್ಯಾಚಾರ ಉಚ್ಯತೇ; ಆತ್ಮಜ್ಞಾನಾಯೋದ್ಯುಕ್ತೋ ವಿಪರೀತೋ ವಿನಷ್ಟೋ ಭವತೀತ್ಯರ್ಥಃ ॥೬॥

ಕೃಷ್ಣನು ಈಗ ತನ್ನನ್ನು ಕರ್ಮಯೋಗವನ್ನವಲಂಬಿಸು, ಯುದ್ಧಮಾಡು ಎಂದು ಬಲಾತ್ಕರಿಸುತ್ತಿರುವನು, ಹಾಗಲ್ಲದೆ ಜ್ಞಾನಯೋಗವೇ ಉತ್ತಮವೆಂದು ಹೇಳಿಬಿಟ್ಟರೆ ಯುದ್ಧವನ್ನು ತ್ಯಜಿಸ ಬಹುವಾದ ಮನೋರಥಾವಾಪ್ತಿಯುಂಟಾಗುತ್ತದೆಂದು ಭಾವಿಸಿದನು. ಇದಕ್ಕೆ ಶ್ರೀಕೃಷ್ಣಭಗವಾನ್ ಹೇಳುತ್ತಾರೇನಂದರೆ, ಕರ್ಮಯೋಗವನ್ನು ಅವಲಂಬಿಸದಿದ್ದರೆ ಪಾಪಗಳು ತೊಲಗುವದಿಲ್ಲವು; ಆ ಕಾರಣದಿಂದ ಇಂದ್ರಿಯಗಳ ಜಯವಿಲ್ಲವು; ಇಂದ್ರಿಯಗಳ ಜಯವಿಲ್ಲದುದರಿಂದ ವಿಷಯಗಳನ್ನೇ ಮನಸ್ಸಿನಲ್ಲಿ ಸ್ಮರಿಸುತ್ತಿರುವನು ; ಅದರಿಂದ ಆತನಿಗೆ ಆತ್ಮಜ್ಞಾನ ದೊರೆಯದು. ಹೀಗಾಗುವವರಿಂದ ಮಿಥ್ಯಾಚಾರನಾಗುವನೆಂದು ಮುಂದೆ ಉಪದೇಶಿಸುತ್ತಾರೆ. **ಕರ್ಮೇಂದ್ರಿಯಾಣಿ** - ಬಾಯಿ, ಕೈ, ಕಾಲು, ಪಾಯು, ಉಪಸ್ಥಗಳೆಂಬ ಕರ್ಮೇಂದ್ರಿಯಗಳನ್ನು, ಇವುಗಳಿಗೆ ಜ್ಞಾನೇಂದ್ರಿಯಗಳ ಸಹಾಯವೂ ಬೇಕಾಗಿರುವದರಿಂದ ಕಣ್ಣು, ಕಿವಿ, ನಾಲಿಗೆ, ಮೂಗು, ತ್ವಕ್ಕು ಎಂಬ ಪಂಚ ಜ್ಞಾನೇಂದ್ರಿಯಗಳು ಸೇರಿವವೆಂದು ಕೆಲವರು ವ್ಯಾಖ್ಯಾನ ಮಾಡಿರುತ್ತಾರೆ, **ಸಂಯಮ್ಯ** - ತಡೆದು, **ಯಃ** - ಯಾವನಾದರೂ, **ಇಂದ್ರಿಯಾರ್ಥಾನ್** - ವಿಷಯಗಳನ್ನು, **ಮನಸಾ ಸ್ಮರನ್** - ಮನಸ್ಸಿನಿಂದ ಸ್ಮರಿಸುತ್ತಿರುವನೋ, **ವಿಮೂಢಾತ್ಮಾ** - ಆತ್ಮ ವಿಷಯಕ ವಿವೇಕವಿಲ್ಲದ ಮನಸ್ಸುಳ್ಳ, **ಸಃ** - ಅವನು ಎಂದರೆ ಅಂತಹ ಸ್ಥಿತಿಯಲ್ಲಿ ಜ್ಞಾನಯೋಗದಲ್ಲಿ ಪ್ರವರ್ತಿಸುವನು, **ಮಿಥ್ಯಾಚಾರ**ನೆಂದು, **ಉಚ್ಯತೇ**–ಹೇಳಲ್ಪಡುವನು.

**ಭಾಷ್ಯಾರ್ಥವು :— ಅವಿನಷ್ಟ ಪಾಪತಯಾ** - ಕರ್ಮಯೋಗದಲ್ಲಿ ಪ್ರವೃತ್ತಿಯಿಲ್ಲದಿರುವದರಿಂದ ಪಾಪಗಳೆಲ್ಲಾ ನಷ್ಟವಾಗದೇ ಇರುವವರಿಂದ, (ಇದು **ಕರ್ಮೇಂದ್ರಿಯಾಣಿ ಸಂಯಮ್ಯ** ಎಂಬುದರಿಂದ ತೋರಿಬರುವ ಅಭಿಪ್ರಾಯವು,) ಮುಂದೆ **ಮನಸಾ ಸ್ಮರನ್** ಎಂದಿರುವದರಿಂದ **ಅವಿನಷ್ಟ ಪಾಪತಯಾ** ಎಂಬ ವ್ಯಾಖ್ಯಾನವು. **ಅಜಿತ ಬಾಹ್ಯಾಂತಃಕರಣಃ** - ಬಾಹ್ಯೇಂದ್ರಿಯಗಳನ್ನೂ ಮನಸ್ಸನ್ನೂ ಸಹ ಜಯಿಸದೇ ಇರುವವನು, **ಆತ್ಮಜ್ಞಾನಾಯ ಪ್ರವೃತ್ತಃ** - ಆತ್ಮಾವಲೋಕನದಲ್ಲಿ ಎಂದರೆ ಜ್ಞಾನಯೋಗದಲ್ಲಿ ಪ್ರವೃತ್ತಿಯುಳ್ಳವನಾದರೆ, **ವಿಷಯ ಪ್ರವಣತಯಾ** - ವಿಷಯಾಸಕ್ತಿ ಇರುವದರಿಂದ, **ಆತ್ಮನಿ ವಿಮುಖೀಕೃತಮನಾಃ** - ಆತ್ಮನಿಂದ ಹಿಂತಿರಿಗಿದ ಮನಸುಳ್ಳವನಾಗಿ, **ವಿಷಯಾನೇವ** (ಅದು **ಇಂದ್ರಿಯಾರ್ಥಾನ್** ಎಂಬುದರರ್ಥವು) ಬಾಹ್ಯ ವಿಷಯಗಳನ್ನೇ, ಇಲ್ಲಿನ ಏವಕಾರವು ಯಾವ ವಿಷಯಗಳನ್ನು ನಿರೋಧಿಸಬೇಕೆಂದಪೇಕ್ಷೆಯೋ ಅವುಗಳನ್ನೇ ಸ್ಮರಿಸುವನು ಎಂಬುದನ್ನು ಸೂಚಿಸುತ್ತದೆ; ಯಾವುವನ್ನು ಪರಿಹರಿಸಬೇಕೋ ಅವುಗಳನ್ನೇ ಯಾವಾಗಲೂ ಸ್ಮರಿಸುತ್ತಿರುವನೆಂಬ ಭಾವವು; **ಸ್ಮರನ್**-ಚಿಂತಿಸುತ್ತಿರುವವನಾಗಿ, **ಯ ಆಸ್ತೇ** - ಯಾವನು ಇರುತ್ತಾನೋ, **ಸಃ** - ಅವನು, **ಅನ್ಯಥಾ ಸಂಕಲ್ಪ್ಯ ಅನ್ಯಥಾ ಚರತೀತಿ** - ಸಂಕಲ್ಪವನ್ನು ಒಂದು ವಿಧವಾಗಿ ಮಾಡಿ ಬೇರೇ ವಿಧವಾಗಿ ಆಚರಿಸುವನಾದುದರಿಂದ, (ಹೇಗೆ ಮಿಥ್ಯಾಚಾರನೆಂಬುದು ಇದರಿಂದ ಹೇಳಲ್ಪಟ್ಟಿತು) **ಮಿಥ್ಯಾಚಾರ ಉಚ್ಯತೇ** - ಮಿಥ್ಯಾ

**ಮೂ. ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗ ಮಸಕ್ತ ಸ್ಸವಿಶಿಷ್ಯತೇ ॥** ೭.

ಚಾರನೆಂದು ಹೇಳಲ್ಪಡುತ್ತಾನೆ. ಮಿಥ್ಯಾ ಶಬ್ದಕ್ಕೆ ಎಲ್ಲಾ ಕಡೆಯಲ್ಲಿಯೂ ಅನ್ಯಥಾವಾಗಿರುವ ಭಾವದಲ್ಲಿ ಪ್ರಯೋಗವೇ ವಿನಾ ಶೂನ್ಯವೆಂಬರ್ಥದಲ್ಲಿ ಇಲ್ಲವು. ಭಾವರೂಪವಾದ ಜಗತ್ತಿಗೆ ಶೂನ್ಯರೂಪ ಮಿಥ್ಯಾತ್ವವನ್ನು ಆರೋಪಿಸುವದು ಹೇಗೋ ತಿಳಿಯದು ; ಒಂದು ವಿಧವಾಗಿ ಇರುವದೇ ಇನ್ನೊಂದು ವಿಧವಾಗಿ ತೋರೋಣವೇ ಮಿಥ್ಯಾತ್ವವು. **ಆತ್ಮಜ್ಞಾನಾಯೋದ್ಯುಕ್ತಃ** – ಸರಿಯಾದ ಆತ್ಮಜ್ಞಾನವನ್ನು ಹೊಂದಬೇಕೆಂದು ಉದ್ಯುಕ್ತನಾದವನು, **ವಿಪರೀತಃ** - ಉಪಾಯವೈಷಮ್ಯದಿಂದ ಫಲವೈಷಮ್ಯವನ್ನು ಹೊಂದಿದವನೂ, **ವಿನಷ್ಟಃ** - ನಷ್ಟವಾದ ಆತ್ಮವನ್ನುಳ್ಳವನು ಎಂದರೆ ಪುನಃ ಸಂಸಾರದಲ್ಲೇ ಮುಳುಗಿದವನೂ, **ಭವತೀತ್ಯರ್ಥಃ** - ಆಗುತ್ತಾನೆಂಬಭಿಪ್ರಾಯವು. ಇಲ್ಲಿ ಇಂದ್ರಿಯಾರ್ಥಗಳಾದ ವಿಷಯಗಳನ್ನೇ ಸ್ಮರಿಸುತ್ತಲಿರುವದರಿಂದ ಆ ವಿಷಯಗಳೊಂದಿಗೆ ಸಙ್ಗವುಂಟಾಗುತ್ತದೆ. ಅನಂತರ **"ಧ್ಯಾಯತೋ ವಿಷಯಾನ್ ಪುಂಸಃ"** (ಗೀ. ೨. ೬೨.) ಎಂದು ಆರಂಭಿಸಿ, ಹೇಳಿರುವ ಹಾಗೆ **"ಬುದ್ಧಿನಾಶಾತ್ಪ್ರಣಶ್ಯತಿ"** ಎಂದು ಹೇಳಿರುವ ಹಾಗೆ ನಷ್ಟನಾಗುವನೆಂಬ ಭಾವವು. ಹೀಗೆ ಕರ್ಮಯೋಗವನ್ನು ತ್ಯಜಿಸಿ ಕೇವಲ ಜ್ಞಾನಯೋಗವನ್ನೇ ಅವಲಂಬಿಸುವೆನೆಂದು ಯತ್ನಿಸಿದ ಅಧಿಕಾರಿಯು ಮಿಥ್ಯಾಚಾರಿ ಮಾತ್ರವೇ ಅಲ್ಲದೆ ತುಂಬಾ ದುರ್ದೆಶೆಯನ್ನೂ ಹೊಂದುವನು. ಆದುದರಿಂದಲೇ ಆತನು ವಿಮೂಢಾತ್ಮಾ ಎಂದು ಹೇಳಲ್ಪಟ್ಟಿರುವನು. ತನಗೆ ಯಾವುದು ಪ್ರಯೋಜನಕಾರಿ ಎಂಬ ವಿಮರ್ಶಿಸುವ ಜ್ಞಾನಶೂನ್ಯತೆಯುಳ್ಳವನು ವಿಮೂಢಾತ್ಮನು. ಈಗ ತನಗೆ ಮುಖ್ಯವಾಗಿ ಬೇಕಾದುದು ಆತ್ಮಯಾಥಾತ್ಮ್ಯದರ್ಶನವು, ಕರ್ಮಯೋಗವನ್ನು ತ್ಯಜಿಸಿದುದರಿಂದ ಅದಕ್ಕೆ ಬದಲಾಗಿ ವಿಷಯಗಳ ಸ್ಮರಣೆಯೋ ಪ್ರಾಪ್ತವಾಯಿತು. ನಿಃಶ್ರೇಯಸ್ಸಿನ ಹಾದಿ ದೂರವಾಯಿತು. ಸಂಸಾರ ಬಂಧವು ಒದಗಿತು. ಆದುದರಿಂದಲೇ ವಿಮೂಢಾತ್ಮನು. ॥ ೬ ॥

**ಮೂಲಕ್ಕೆ ಅರ್ಥವು :—**ಹೀಗೆ ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗದಲ್ಲಿ ಉದ್ಯುಕ್ತನಾದವನನ್ನು ನಿಂದಿಸಿ, ಮುಂದಿನ ಶ್ಲೋಕದಿಂದ ಕರ್ಮಯೋಗವನ್ನವಲಂಬಿಸಿದವನನ್ನು ಪ್ರಶಂಸಿಸುತ್ತಾರೆ. ಹಿಂದಿನ ವಿಮೂಢಾತ್ಮನಿಗಿಂತ ಈತನು ಬುದ್ಧಿಶಾಲಿಯು, ಅವನಿಗಿರುವ ಪ್ರಮಾದ ದುರ್ದೆಶೆಗಳು ಇವನಿಗಿರುವದಿಲ್ಲವೆಂಬಭಿಪ್ರಾಯದಿಂದ ಈತನು ಅವನಿಗಿಂತ ಶ್ರೇಷ್ಠನೆಂದು ಹೇಳುತ್ತಾರೆ :—**ಯಸ್ತು** - ಯಾವನಾದರೆ, (ಇಲ್ಲಿನ ತು ಶಬ್ದವು ಹಿಂದಿನವನಿಗಿಂತ ಈತನು ವಿಲಕ್ಷಣನೆಂದು ತೋರಿಸುತ್ತದೆ) **ಇಂದ್ರಿಯಾಣಿ** - ಇಂದ್ರಿಯಗಳನ್ನು, **ಮನಸಾ ನಿಯಮ್ಯ** - ಮನಸ್ಸಿನಿಂದ ನಿಗ್ರಹಿಸಿ, **ಕರ್ಮೇಂದ್ರಿಯೈಃ** - ಕರ್ಮಮಾಡುವದರಲ್ಲೇ ಅಭ್ಯಾಸವಿರುವ ಈ ಕರ್ಮೇಂದ್ರಿಯಗಳಿಂದ, **ಅಸಕ್ತಃ** - ಸಙ್ಗರಹಿತನಾಗಿ, **ಕರ್ಮಯೋಗವನ್ನು, ಆರಭತೇ** - ಆರಂಭಿಸುತ್ತಾನೋ, **ಸಃ** - ಅಂತಹ ಮೋಕ್ಷಾರ್ಥಿಯು, **ವಿಶಿಷ್ಯತೇ** - ವಿಲಕ್ಷಣನಾಗಿರುತ್ತಾನೆ ಎಂದರೆ ಪ್ರಶಂಸೆಗೆ ಅರ್ಹನೆಂಬ ಭಾವವು. ಕರ್ಮಯೋಗವನ್ನು ತ್ಯಜಿಸಿ ಕೇವಲ ಜ್ಞಾನಯೋಗದಲ್ಲಿ ಪ್ರವರ್ತಿಸಿದವನಿಗೂ, ಕರ್ಮಯೋಗದಲ್ಲಿ ಪ್ರವರ್ತಿಸಿದವನಿಗೂ ಇರುವ ತಾರತಮ್ಯವು ಈ ಎರಡು ಶ್ಲೋಕಗಳಿಂದ ವ್ಯಕ್ತಗೊಳಿಸಲ್ಪಟ್ಟಿತು. ಮೊದಲು ವಿಧದ ಅನುಷ್ಠಾನದಲ್ಲಿ ಮನಸ್ಸು ಪರಿಶುದ್ಧವಾಗಲು ಅವಕಾಶವಿಲ್ಲದೆ, ಅದು ವಿಷಯಗಳನ್ನೇ ಸ್ಮರಿಸುತ್ತಿರುವದರಿಂದ ಮಿಥ್ಯಾಚಾರನಾಗಿ ಕಡೆಗೆ ಆತ್ಮನಷ್ಟವನ್ನು ಮಾಡಿಕೊಳ್ಳುವನು. ಕರ್ಮಯೋಗಾನುಷ್ಠಾತೃವಾದರೋ

ಭಾ. ಅತಃ ಪೂರ್ವಾಭ್ಯಸ್ತ ವಿಷಯ ಸಜಾತೀಯೇ ಶಾಸ್ತ್ರೀಯೇ ಕರ್ಮಣಿ ಇಂದ್ರಿಯಾಣ್ಯಾತ್ಮಾವಲೋಕನ ಪ್ರವೃತ್ತೇನ ಮನಸಾ ನಿಯಮ್ಯ ತೈಸ್ಸ್ವತ ಏವ ಕರ್ಮ ಪ್ರವಣೈ ರಿಂದ್ರಿಯೈ ರಸಙ್ಗಪೂರ್ವಕಂ ಯಃ ಕರ್ಮಯೋಗ ಮಾರಭತೇ, ಸೋಽಸಮ್ಭಾವ್ಯಮಾನ ಪ್ರಮಾದತ್ವೇನ ಜ್ಞಾನನಿಷ್ಠಾದಪಿ ಪುರುಷಾದ್ವಿಶಿಷ್ಯತೇ ||೭||

ಕರ್ಮಯೋಗದಿಂದ ಮನಸ್ಸು ಪರಿಶುದ್ಧವಾಗುವದರಿಂದ ಆತ್ಮಜ್ಞಾನಕ್ಕೆ ಅರ್ಹನಾಗಿ ತತ್ಪ್ರಾಪ್ತಿ ಮೂಲಕ ಪರಮಾತ್ಮೋಪಾಸನದ್ವಾರಾ ಮುಕ್ತಿಯನ್ನು ಹೊಂದುವನು ಎಂಬ ಭಾವವು.

ಭಾಷ್ಯಾರ್ಥವು:—ಅತಃ - ಆ ಕಾರಣದಿಂದ ಎಂದರೆ ಕರ್ಮಯೋಗವನ್ನು ತ್ಯಜಿಸಿ ಬರೀ ಜ್ಞಾನಯೋಗವನ್ನವಲಂಬಿಸಿದವನು ಪುನಃ ಸಂಸಾರವನ್ನೇ ಹೊಂದಿ ಆತ್ಮನಷ್ಟ ಮಾಡಿಕೊಳ್ಳುವದರಿಂದ, ಮುಂದೆ ಇಂದ್ರಿಯಾಣಿ ಮನಸಾ ನಿಯಮ್ಯ ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ, ಪೂರ್ವಾಭ್ಯಸ್ತವಿಷಯ ಸಜಾತೀಯೇ - ಮೊದಲೇ ಅಭ್ಯಾಸವಾಗಿರುವ ವಿಷಯಗಳಿಗಾಗಿ ಮಾಡಿದ ಕರ್ಮಗಳಿಗೆ ಸಜಾತೀಯವಾದ ಶಾಸ್ತ್ರೀಯವಾದ ಕರ್ಮಣಿ, ಮೊದಲು ಅಭ್ಯಾಸವಾಗಿರುವುದು ವಿಷಯೋಪಭೋಗಗಳಿಗಾಗಿ ಲೌಕಿಕ ಕರ್ಮವು, ಅಂತೂ ಕರ್ಮಮಾಡಿ ಅಭ್ಯಾಸವಾಗಿರುವದರಿಂದ ಹಾಗೆಯೇ ಆ ಲೌಕಿಕ ಕರ್ಮಗಳಿಗೆ ಸಜಾತೀಯವಾದ ಶಾಸ್ತ್ರೀಯ ಕರ್ಮದಲ್ಲಿ, ಆತ್ಮಾವಲೋಕನಕ್ಕಾಗಿ ಪ್ರವರ್ತಿಸಿದ ಮನಸ್ಸಿನಿಂದ, ಯಾವಾಗ ಮನಸ್ಸು ಆತ್ಮಾವಲೋಕನಕ್ಕಾಗಿ ಪ್ರವರ್ತಿಸಿತು, ಆಗ ಅದೂ ಮತ್ತು ಮನಸ್ಸಿಗೆ ಅಧೀನಗಳಾದ ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸುವದಿಲ್ಲವೆಂಬ ಅಭಿಪ್ರಾಯವು ಸೂಚಿತವು; ಇದರಿಂದ ಕರ್ಮಯೋಗಾಭ್ಯಾಸವಿರುವಾಗಲೇ ಮನಸ್ಸೂ ಇಂದ್ರಿಯಗಳೂ ವಿಷಯಗಳಲ್ಲಿ ಏಕೆ ಪ್ರವರ್ತಿಸಕೂಡದು ಎಂಬಾಕ್ಷೇಪಕ್ಕೆ ಸಮಾಧಾನವು ಹೇಳಲ್ಪಟ್ಟಿತು. ನಿಯಮ್ಯ - ನಿಗ್ರಹಿಸಿ, ತೈಃ - ಆ, ಸ್ವತ ಏವ ಕರ್ಮ ಪ್ರವಣೈಃ - ಸಹಜವಾಗಿ ತಾವಾಗಿಯೇ ಕರ್ಮದಲ್ಲಿ ಆಸಕ್ತಿಯುಳ್ಳ ಇಂದ್ರಿಯಗಳಿಂದ, ಅಸಙ್ಗಪೂರ್ವಕಂ – ಫಲಾಭಿಸಂಧಿರಾಹಿತ್ಯಪೂರ್ವಕವಾಗಿ, ಯಃ - ಯಾವ ಮೋಕ್ಷಾರ್ಥಿಯು, ಕರ್ಮಯೋಗವನ್ನು, ಆರಭತೇ - ಆರಂಭಿಸುತ್ತಾನೋ, ಸಃ - ಅವನು, ಅಸಂಭಾವ್ಯಮಾನ ಪ್ರಮಾದತ್ವೇನ – ಯಾವವಿಧ ಪ್ರಮಾದವು ಇಲ್ಲದಿರುವದರಿಂದ, ಜ್ಞಾನನಿಷ್ಠಾದಪಿ ಪುರುಷಾತ್ - ಕರ್ಮವನ್ನು ತ್ಯಜಿಸಿ ಕೇವಲ ಜ್ಞಾನಯೋಗವನ್ನವಲಂಬಿಸಿದ ಮಿಥ್ಯಾಚಾರನಾದ ಪುರುಷನಿಗಿಂತಲೂ, ವಿಶಿಷ್ಯತೇ - ಶ್ರೇಷ್ಠನೆನಿಸುತ್ತಾನೆ, ಹಿಂದೆ ಹೇಳಿದ ಮಿಥ್ಯಾಚಾರನಿಗಿಂತಲೂ ಈತನು ಶ್ರೇಷ್ಠನು ಎಂದು ಹೇಳಲ್ಪಟ್ಟನು, ಏಕೆಂದರೆ:—(೧) ಈ ಕರ್ಮಯೋಗಿಯು ಮನಸ್ಸಿನಿಂದ ಇಂದ್ರಿಯಗಳನ್ನು ನಿಗ್ರಹಿಸುವನು, ಮಿಥ್ಯಾಚಾರನಾದರೋ ಇಂದ್ರಿಯಗಳನ್ನು ನಿಗ್ರಹಿಸಿ ಮನಸ್ಸನ್ನು ಸ್ವೇಚ್ಛೆಯಾ ಪ್ರವರ್ತಿಸುವಹಾಗೆ ಬಿಟ್ಟುಬಿಡುವನು. (೨) ಕರ್ಮನಿಷ್ಠನು ಫಲಾಸಕ್ತಿಯಿಲ್ಲದೆ ಕರ್ಮವನ್ನು ಮಾಡುವನು, ಕೇವಲ ಜ್ಞಾನಯೋಗಿಯಾದರೋ ಐಹಿಕ ಫಲಸಂಗವನ್ನಪೇಕ್ಷಿಸುವನು. (೩) ಕರ್ಮಯೋಗವು ಸುಕರವು ಏಕೆಂದರೆ ಕರ್ಮೇಂದ್ರಿಯಗಳು ೫ನೆಯ ಶ್ಲೋಕದಲ್ಲಿ ಹೇಳಿರುವ ಹಾಗೆ ಸ್ವತಏವ ಕರ್ಮ ಪ್ರವಣಗಳು. ಕೇವಲ ಜ್ಞಾನಯೋಗವಾದರೋ ದುಷ್ಕರವೆಂದು ಹಿಂದೆ ಹೇಳಲ್ಪಟ್ಟಿತು. ಇದು ಮೂಲದಲ್ಲಿ ಎಲ್ಲಿ ಹೇಳಿದೆ ಎಂದರೆ ಕರ್ಮೇಂದ್ರಿಯೈಃ ಕರ್ಮಯೋಗಂ ಎಂಬ ಪ್ರಯೋಗದಿಂದ ಸುಕರತ್ವವು ತೋರಿಬರುತ್ತದೆ, ಕರ್ಮಯೋಗದಲ್ಲಿ ಕರ್ಮಪ್ರಾವಣ್ಯವಿರುವದರಿಂದ ವಿಷಯಗಳಲ್ಲೂ ಪ್ರವರ್ತಿಸಬಹುದಲ್ಲಾ ಎಂದರೆ,ಮನಸ್ಸು ಈ ಕರ್ಮಗಳಿಂದ ಪವಿತ್ರವಾಗುವದರಿಂದಲೂ, ಆತ್ಮಯಾಥಾತ್ಮ್ಯ ಜ್ಞಾನದಲ್ಲಿ ಮನಸ್ಸು ಇಡಲ್ಪಡುವದರಿಂದಲೂ, ಅಸಕ್ತಃ ಕರ್ಮಾನುಷ್ಠಾನ ಮಾಡಬೇಕೆಂದು, ಫಲಾಭಿಸಂಧಿರಹಿತ ಕರ್ಮಗಳೇ

**ಮೂ. ನಿಯತಂ ಕುರು ಕರ್ಮತ್ವಂ ಕರ್ಮಜ್ಯಾಯೋಹ್ಯಕರ್ಮಣಃ ।**
**ಶರೀರ ಯಾತ್ರಾ ಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥** ೮.

ವಿಧಿಸಲ್ಪಟ್ಟಿರುವದರಿಂದಲೂ, ವಿಷಯ ಪ್ರಾವಣ್ಯ ಉಂಟಾಗುವದಿಲ್ಲವೆಂದು ಭಾವಿಸತಕ್ಕದ್ದು. (೪) ಕರ್ಮಯೋಗವು ಪ್ರಮಾದರಹಿತವಾದುದು, ಕೇವಲ ಜ್ಞಾನಯೋಗವಾದರೋ ಕೊನೆಗೆ ಬಂಧಕವಾಗಿ ಪರಿಣಮಿಸಬಹುದಾದುದರಿಂದ ಸಪ್ರಮಾದವು ಈ ಅಭಿಪ್ರಾಯವು, ಮೂಲದಲ್ಲಿ ಎಲ್ಲಿದೆ ಎಂದರೆ ವಿಶಿಷ್ಯತೇ ಎಂಬ ಪದದಿಂದ ವೈಲಕ್ಷಣ್ಯವನ್ನು ಊಹಿಸಬಹುದು. ॥೭॥

**ಮೂಲಕ್ಕೆ ಅರ್ಥವು**:—ಹಿಂದಿನ ಶ್ಲೋಕಗಳಿಂದ ಬರೀ ಜ್ಞಾನಯೋಗಕ್ಕೂ ಕರ್ಮಯೋಗಕ್ಕೂ ಇರುವ ವೈಲಕ್ಷಣ್ಯವನ್ನು ತಿಳಿಸಿ, ಜ್ಯಾಯಸೀಚೇತ್ ಕರ್ಮಣಸ್ತೇ ಮತಾಬುದ್ಧಿ ರ್ಜನಾರ್ದನ ಎಂದು ತಪ್ಪು ಅಭಿಪ್ರಾಯವನ್ನು ಹೊಂದಿ ಇವುಗಳಲ್ಲಿ ಯಾವುದು ಜ್ಯಾಯಃ ಎಂದು ಮಾಡಿದ ಅರ್ಜುನ ಪ್ರಶ್ನೆಗೆ ಕರ್ಮಯೋಗನೇ ಬರೀ ಜ್ಞಾನಯೋಗಕ್ಕಿಂತ ಶ್ರೇಷ್ಠವೆಂದು ಸರಿಯಾದ ತಿಳುವಳಿಕೆಯನ್ನು ಕೊಡುತ್ತಾರೆ:—ತ್ವಂ-ಮೋಕ್ಷಾರ್ಥಿಯಾಗಿ ಜ್ಞಾನನಿಷ್ಠೆಗೆ ಅರ್ಹನಾಗಿರುವ ನೀನೂ, **ನಿಯತಂ** - ಸ್ವಭಾವದಿಂದಲೂ ಶಾಸ್ತ್ರದಿಂದಲೂ ನಿನಗೆ ಕ್ಲಿಪ್ತವಾದ, ಕರ್ಮ- ಕರ್ಮವನ್ನು, **ಕುರು** - ಮಾಡು, ಏಕೆಂದರೆ, **ಕರ್ಮ** - ಕರ್ಮಯೋಗವು, **ಅಕರ್ಮಣಃ** – ಕರ್ಮಯೋಗವಿಲ್ಲದ ಬರೀ ಜ್ಞಾನಯೋಗಕ್ಕಿಂತಲೂ, **ಜ್ಯಾಯಃ** - ಶ್ರೇಷ್ಠವು. ವರ್ಣಾಶ ಮೋಚಿತವಾದ ಕರ್ಮಗಳನ್ನು ಫಲಾಭಿಸಂಧಿಯಿಲ್ಲದೆ ಪರಮ ಪುರುಷಾರಾಧನ ರೂಪವಾಗಿ ಇಂದ್ರಿಯಗಳನ್ನು ಜಯಿಸಿದ ಮನಸ್ಸಿನಿಂದ ಮಾಡತಕ್ಕದ್ದೆಂಬ ಭಾವವು. ಹೀಗೆ ಕರ್ಮಯೋಗದಲ್ಲಿ ಪ್ರವರ್ತಿಸದೆ ಹೋದರೆ ಉಂಟಾಗುವ ದೋಷವೇನೆಂಬುದನ್ನು ಉತ್ತರಾರ್ಧದಿಂದ ಹೇಳುತ್ತಾರೆ:— **ಅಕರ್ಮಣಃ** - ಕರ್ಮಯೋಗದಲ್ಲಿ ಪ್ರವರ್ತಿಸದೆ ಇರುವ, **ತೇ** - ಮೋಕ್ಷಾರ್ಥಿಯಾಗಿರುವ ನಿನಗೆ, **ಶರೀರ ಯಾತ್ರಾಪಿ** - ಜ್ಞಾನನಿಷ್ಠೆ ಮೊದಲಾದವುಗಳಿಗೆ ಬೇಕಾದ ಶರೀರ ಯಾತ್ರೆಯೂ ಕೂಡ ಎಂದರೆ ನಿತ್ಯವೂ ಅನುಷ್ಠಿಸುವ ಪಂಚ ಮಹಾಯಜ್ಞದಿಂದ ಪವಿತ್ರೀಕರಿಸಲ್ಪಟ್ಟ ಸಾತ್ವಿಕವಾದ ಅನ್ನದಿಂದ ಶರೀರ ಧಾರಣವೂ ಕೂಡ, **ನ ಪ್ರಸಿಧ್ಯೇತ್** - ಸಿದ್ಧಿಸುವದಿಲ್ಲವು. ಹಿಂದಿನ ಅಧ್ಯಾಯದ ಶ್ಲೋಕಗ[illegible] ಸ್ಥಿತಪ್ರಜ್ಞನು ವಿಶೇಷವಾಗಿ ಕೊಂಡಾಡಲ್ಪಟ್ಟಿರುವದೂ, ಆ ರೀತಿಯಲ್ಲಿ ಕರ್ಮಯೋಗ ನಿಷ್ಠನು ಕೊಂಡಾಡದೇ ಇರುವದೂ, ಇಲ್ಲಿ **ಕರ್ಮಜ್ಯಾಯೋಹ್ಯ ಕರ್ಮಣಃ**, ಜ್ಞಾನ ನಿಷ್ಠೆಗಿಂತ ಕರ್ಮನಿಷ್ಠೆಯು ಶ್ರೇಷ್ಠವೆಂದು ಇಲ್ಲಿ ಹೇಳುವದೂ, ಮುಂದೆ ೪ ನೆಯ ಅಧ್ಯಾಯದಲ್ಲಿ "ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ" ಜ್ಞಾನವನ್ನು ಶ್ಲಾಘಿಸಿರುವದೂ, ಇವೆಲ್ಲಾ ಪರಸ್ಪರ ವಿರುದ್ಧವಾಗುವದಿಲ್ಲವೋ ಎಂದು ಆಕ್ಷೇಪವನ್ನು ತಂದರೆ, ಜ್ಞಾನಗಳಲ್ಲಿ ತುಂಬಾ ಶ್ರೇಷ್ಠವಾದ ಜ್ಞಾನಗಳು ಎರಡು :---(೧) ಜೀವಾತ್ಮ ಸ್ವರೂಪ ಯಾಥಾತ್ಮ್ಯಜ್ಞಾನವೂ, (೨) ಪರಮಾತ್ಮ ಸ್ವರೂಪ ಯಾಥಾತ್ಮ್ಯಜ್ಞಾನವೂ ; (೨) ನೆಯ ಜ್ಞಾನವು ಭಕ್ತಿಯೋಗ ಪ್ರಕರಣದಲ್ಲಿ ಹೇಳಲ್ಪಡುವ ಉಪಾಸನರೂಪ ಜ್ಞಾನವು. ಇಲ್ಲಿ ಹೇಳಲ್ಪಟ್ಟಿರುವದು ಭಕ್ತಿಯೋಗದಲ್ಲಿ ಉಂಟಾಗುವ ಆತ್ಮ ಯಾಥಾತ್ಮ್ಯ ದರ್ಶನವು. ಇದು ಜ್ಞಾನಯೋಗದಲ್ಲೂ ಕರ್ಮಯೋಗದ್ವಾರಾ ಉಂಟಾಗುತ್ತದೆ ಎಂದು ಹೇಳಲ್ಪಟ್ಟಿರುತ್ತವೆ. ಇವರ ಉತ್ಕೃಷ್ಟತೆಯನ್ನು ತಗ್ಗಿಸಿ ಕರ್ಮಜ್ಯಾಯೋಹ್ಯ ಕರ್ಮಣಃ ಎಂಬಲ್ಲಿ ಹೇಳಲ್ಪಟ್ಟಿತು ಎಂಬ ಅಭಿಪ್ರಾಯವು ತಪ್ಪು. ಇಲ್ಲಿ ಶ್ರೀಕೃಷ್ಣ ಭಗವಾನರವರು ಹೇಳಿದುದೇನೆಂದರೆ, ಕರ್ಮಯೋಗವನ್ನು ತ್ಯಜಿಸಿ ಸ್ವತಂತ್ರವಾದ ಜ್ಞಾನಯೋಗ ನಿಷ್ಠೆಗಿಂತ ಕರ್ಮಯೋಗ ನಿಷ್ಠೆಯು ಶ್ರೇಷ್ಠವೆಂದು ಹೇಳಿದುದರಿಂದ ಮೇಲಿನ ಯಾವ ಪೂರ್ವಪಕ್ಷಗಳಿಗೂ ಕಾರಣವಿಲ್ಲವು. ಮೋಕ್ಷಾರ್ಥಿಗೆ ಮುಖ್ಯವಾಗಿ ಬೇಕಾದವು ಎರಡು ಜ್ಞಾನಗಳು (೧) ತನ್ನ

ಭಾ. ನಿಯತಂ–ವ್ಯಾಪ್ತಮ್; ಪ್ರಕೃತಿ ಸಂಸೃಷ್ಟತ್ವೇನ ಹಿ ವ್ಯಾಪ್ತಂ ಕರ್ಮ; ಪ್ರಕೃತಿ ಸಂಸೃಷ್ಟತ್ವಮನಾದಿ ವಾಸನಯಾ. ನಿಯತತ್ವೇನ ಸುಶಕತ್ವಾದಸಂಭಾವಿತ ಪ್ರಮಾದತ್ವಾಚ್ಚ ಕರ್ಮಣಃ, ಕರ್ಮೈವ ಕುರು. ಅಕರ್ಮಣಃ–ಜ್ಞಾನ ನಿಷ್ಠಾಯಾ ಅಪಿ ಕರ್ಮೈವ ಜ್ಯಾಯಃ. "ನೈಷ್ಕರ್ಮ್ಯಂ ಪುರುಷೋಽಶ್ನುತೇ" ಇತಿ ಪ್ರಕ್ರಮಾ

---

ಯಾಥಾರ್ಥ ಸ್ವರೂಪ ಚಿಂತನವು (೨) ಪರಮಾತ್ಮನ ಯಾಥಾರ್ಥ ಚಿಂತನವು ಇವೆರಡೂ ಸಿದ್ಧಿಸದೇ ಮೋಕ್ಷವಿಲ್ಲವೆಂಬುದೇ ಗೀತೋಪದೇಶವು. ಇವೆರಡಕ್ಕೂ ಅತ್ಯಾವಶ್ಯಕವಾಗಿ ಕರ್ಮಯೋಗಾನುಷ್ಠಾನವು ಬೇಕಾಗಿರುವದರಿಂದ, ಬರೀ ಜ್ಞಾನಯೋಗದಲ್ಲಿ ಪ್ರವರ್ತಿಸುವದು. (೧) ದುಷ್ಕರವು (೨) ಪ್ರಮಾದ ಯುಕ್ತವು ಎಂಬುದೇ ಇಲ್ಲಿನ ಅಮೋಘವಾದ ಉಪದೇಶವು.

ಕರ್ಮಯೋಗವನ್ನು ಬಿಟ್ಟು ಬರೀ ಜ್ಞಾನಯೋಗದಲ್ಲಿ ಪ್ರವರ್ತಿಸಿದವನಿಗೆ ಶರೀರ ಯಾತ್ರೆಯೂ ಕೂಡ ಸಿದ್ಧಿಸುವದಿಲ್ಲವೆಂದು ಹೇಳಿದುವದರ ಅಭಿಪ್ರಾಯವೇನೆಂದು ಪ್ರಶ್ನಿಸಬಹುದು. ಶ್ರೀ ಯತಿವರ್ಯರು ವಿಶದವಾಗಿ ಭಾಷ್ಯದಲ್ಲಿ ಇದನ್ನು ವ್ಯಕ್ತಪಡಿಸಿರುತ್ತಾರೆ. ||೮||

**ಭಾಷ್ಯಾರ್ಥವು:—ಜ್ಯಾಯಸೀಚೇತ್ಕರ್ಮಣಸ್ತೇ** ಎಂದು ಅರ್ಜುನನು ಪೂರ್ವಪೀಠಿಕೆಯೊಂದಿಗೆ ಮಾಡಿದ ಆಕ್ಷೇಪಕ್ಕೆ ಸಾಕ್ಷಾತ್ತಾಗಿ ಉತ್ತರವನ್ನು ಹೇಳುವವರಾಗಿ, ಓ ಅರ್ಜುನನೇ ನೀನು ಹೇಗೆ ಹೇಗೆ ಯೋಚಿಸಿದರೂ, ಕರ್ಮಯೋಗಕ್ಕೇನೇ ಜ್ಯಾಯಸ್ತ್ವವು ಕೂಡುತ್ತದೆಂದು ಉಪದೇಶಿಸುತ್ತಾರೆ. **ನಿಯತವೆಂದರೆ** ವ್ಯಾಪ್ತವು, ಇದು ಕರ್ಮಕ್ಕೆ ವಿಶೇಷಣವೆಂದು ಮಾಡುವದೇ ಸರಸವೆಂದೂ ಕ್ರಿಯಾವಿಶೇಷಣವಲ್ಲವೆಂದೂ ತಿಳಿಸುವದಕ್ಕಾಗಿ **ಪ್ರಕೃತಿ ಸಂಸೃಷ್ಟತ್ವೇನ ಹಿ ವ್ಯಾಪ್ತಂ ಕರ್ಮ** ಎಂದು ಪ್ರಯೋಗಿಸಿರುತ್ತಾರೆ. ಕರ್ಮಕ್ಕೆ ನಿಯತತ್ವವು (೧) ಸ್ವಭಾವತಃ ಆಗಲಿ ಅಥವಾ (೨) ಶಾಸ್ತ್ರವಿಧಿಯಿಂದಲಾಗಲಿ (೩) ಅಥವಾ ಎರಡರಿಂದಲಾಗಲಿ ಉಂಟಾಗಬಹುದು. ಮೊದಲು ಇಲ್ಲಿ ಸ್ವಭಾವತಃ ನಿಯತತ್ವವು ಉಪಪಾದಿಸಲ್ಪಟ್ಟು, ಮುಂದೆ **ಶರೀರ ಯಾತ್ರಾಪಿಚ ತೇ** ಎಂಬುದರಿಂದ ಶಾಸ್ತ್ರಮೂಲಕ ನಿಯತತ್ವವೂ ಹೇಳಲ್ಪಡುತ್ತದೆ. ಇವೆಲ್ಲವನ್ನೂ ಮನಸ್ಸಿನಲ್ಲಿಟ್ಟೇ **ನಿಯತಂ** ಎಂಬುದಕ್ಕೆ **ವ್ಯಾಪ್ತಂ** ಎಂಬ ವ್ಯಾಖ್ಯಾನವು. ಪ್ರಕೃತಿ ಸಂಬಂಧವಿರುವದರಿಂದಲೇ ಕರ್ಮವು ನಿಯತವಾಯಿತು. ಎಲ್ಲೆಲ್ಲಿ ಪ್ರಕೃತಿ ಸಂಬಂಧವುಂಟೋ ಅಲ್ಲಿ ಕರ್ಮವೂ ಉಂಟೆಂಬ ಭಾವವು, ಹೀಗೆ ನಿಯತವೆಂಬರ್ಥವು. ಪ್ರಕೃತಿಸಂಬಂಧ ತಾನೇ ಈ ಚೇತನನಿಗೆ ಹೇಗೆ ಎಂದರೆ ಹೇಳುತ್ತಾರೆ:—**ಪ್ರಕೃತಿ ಸಂಸೃಷ್ಟತ್ವಂ** - ಪ್ರಕೃತಿಸಂಬಂಧವು, ಅನಾದಿವಾಸನಯಾ- ಅನಾದಿಕಾಲದಿಂದುಂಟಾದ ವಾಸನಾಮೂಲಕವಾಗಿ ಪ್ರಾಪ್ತವಾದುದು. ಎರಡು ಕಾರಣಗಳಿಂದ ನಿಯತ ಕರ್ಮವನ್ನೇ ಮಾಡತಕ್ಕದ್ದೆಂದು ತಿಳಿಸುತ್ತಾರೆ. **ಕರ್ಮಣಃ** - ಕರ್ಮವು, (೧) **ನಿಯತತ್ವೇನ** - ಹೀಗೆ ಅನಾದಿಕಾಲದಿಂದಲೂ ಪ್ರಕೃತಿ ಸಂಬಂಧ ಮೂಲಕ ನಿಯತವಾಗಿ ಪ್ರಾಪ್ತವಾದುದರಿಂದಲೂ, **ಸುಶಕತ್ವಾತ್** - ಸುಲಭವಾದುದರಿಂದಲೂ ಮತ್ತು (೨) **ಅಸಂಭಾವಿತಪ್ರಮಾದತ್ವಾಚ್ಚ** - ಪ್ರಮಾದ ಉಂಟಾಗದೇ ಇರುವದರಿಂದಲೂ, **ಕರ್ಮೈವಕುರು** - ಶಾಸ್ತ್ರವಿಹಿತವಾದ ವರ್ಣಾಶ್ರಮ ಧರ್ಮಗಳನ್ನೇ ಮಾಡತಕ್ಕದ್ದು ಎಂದರೆ ಕರ್ಮಯೋಗವನ್ನೇ ಅನುಷ್ಠಿಸತಕ್ಕದ್ದು. **ಅಕರ್ಮಣಃ** ಎಂದರೆ **ಜ್ಞಾನ ನಿಷ್ಠಾಯಾ ಅಪಿ** - ಕರ್ಮಯೋಗವಲ್ಲದ್ದು ಎಂದರೆ ಕೇವಲ ಜ್ಞಾನಯೋಗಕ್ಕಿಂತಲೂ (ಪಂಚಮಿ), **ಕರ್ಮೈವ** - ಕರ್ಮಯೋಗವೇ, **ಜ್ಯಾಯಃ** - ಶ್ರೇಷ್ಠವು. ಇಲ್ಲಿ ಅಕರ್ಮ ಶಬ್ದಕ್ಕೆ ಜ್ಞಾನನಿಷ್ಠೆ ಎಂಬ ಅರ್ಥ ಹೇಗೆ? **"ಮಾತೇಸಂಗೋಽಸ್ತ್ವಕರ್ಮಣಿ"** (ಗೀ. ೨. ೪೭) ಎಂಬಲ್ಲಿ ಅಕರ್ಮ ಶಬ್ದಕ್ಕೆ ಕರ್ಮವನ್ನು ಮಾಡದಿರುವದೆಂದು ಹೇಳಿ ಇಲ್ಲಿ ಜ್ಞಾನನಿಷ್ಠೆಯೆಂದು ಅರ್ಥವನ್ನುಹೇಳಬಹುದೇ? ಎಂಬಾಕ್ಷೇಪ ಬಂದೀತೆಂದು ಭಾವಿಸಿ ಸಮಾಧಾನ

ಭಾ. ದ ಕರ್ಮಶಬ್ದೇನ ಜ್ಞಾನನಿಷ್ಠೈವೋಚ್ಯತೇ. ಜ್ಞಾನನಿಷ್ಠಾಧಿಕಾರಿಣೋ ಪ್ಯನಭ್ಯಸ್ತ ಪೂರ್ವತಯಾ ಹ್ಯನಿಯತತ್ವೇನ ದುಶ್ಶಕತ್ವಾತ್ಸಪ್ರಮಾದತ್ವಾಚ್ಚ ಜ್ಞಾನನಿಷ್ಠಾಯಾಃ ಕರ್ಮನಿಷ್ಠೈವ ಜ್ಯಾಯಸೀ;|ಕರ್ಮಣಿ ಕ್ರಿಯಮಾಣೇ ಚಾತ್ಮಯಾಥಾತ್ಮ್ಯಜ್ಞಾನೇನಾತ್ಮನೋಽಕರ್ತೃತ್ವಾನುಸಂಧಾನ ಮನನ್ತರ ಮೇವ ವಕ್ಷ್ಯತೇ ; ಅತ ಆತ್ಮಜ್ಞಾನಸ್ಯಾಪಿ ಕರ್ಮಯೋಗಾನ್ತರ್ಗತತ್ವಾ ತ್ಸ ಏವ ಜ್ಯಾಯಾ ನಿತ್ಯರ್ಥಃ ;|ಕರ್ಮಣೋ ಜ್ಞಾನ

---

ವನ್ನು ಹೇಳುತ್ತಾರೆ:—"ನೈಷ್ಕರ್ಮ್ಯಂ ಪುರುಷೋಽಶ್ನುತೇ" (ಗೀ. ೩. ೪) ಎಂಬಲ್ಲಿ ಇತಿ ಪ್ರಕ್ರಮಾತ್ - ನೈಷ್ಕರ್ಮ್ಯ ಶಬ್ದಕ್ಕೆ ಜ್ಞಾನನಿಷ್ಠೆ ಎಂದು ಆರಂಭಿಸಿ ಹೇಳಿರುವದರಿಂದ, ಅಕರ್ಮಶಬ್ದೇನ - ಅಕರ್ಮ ಶಬ್ದದಿಂದಲೂ, ಜ್ಞಾನ ನಿಷ್ಠೈವ-ಜ್ಞಾನ ನಿಷ್ಠೆಯೇ, ಉಚ್ಯತೇ-ಹೇಳಲ್ಪಡುತ್ತದೆ- ಅರ್ಜುನನ ಪ್ರಶ್ನೆಯು ಕರ್ಮಯೋಗ ಜ್ಞಾನಯೋಗಗಳಲ್ಲಿ ಯಾವುದಕ್ಕೆ ಜ್ಯಾಯಸ್ತ್ವವು ಎಂಬುದು. ಈಗ ಅದಕ್ಕೆ ಶ್ರೀಕೃಷ್ಣ ಭಗವಾನರವರು ಕರ್ಮಜ್ಯಾಯೋಹ್ಯಕರ್ಮಣಃ- ಎಂದು ಸಿದ್ಧಾಂತಾಭಿಪ್ರಾಯವನ್ನು ದಯಪಾಲಿಸಿದರೆ, ಕರ್ಮಯೋಗವು ಜ್ಞಾನಯೋಗಕ್ಕಿಂತ ಶ್ರೇಷ್ಠವೆಂದೇ ಅರ್ಥಹೇಳಬೇಕೇ ವಿನಾ ಬೇರೆ .ಮಾರ್ಗವಿಲ್ಲವು, ಹೀಗಿರುವಾಗ, ಅಕರ್ಮಣಃ ಕರ್ಮಮಾಡದೇ ಇರುವವಕ್ಕಿಂತ, ಕರ್ಮ ಮಾಡುವವು ಶ್ರೇಷ್ಠವೆಂದು ಅರ್ಥ ಮಾಡುವದು ಪರಮ ನಿಸ್ಸಾರವು. ಹಿಂದಿನ ಎರಡು ಶ್ಲೋಕಾಭಿಪ್ರಾಯಗಳನ್ನು ಮನಸ್ಸಿನಲ್ಲಿಟ್ಟು ಕರ್ಮನಿಷ್ಠೆಯೇ ಜ್ಞಾನನಿಷ್ಠೆಗಿಂತಲೂ ಶ್ರೇಷ್ಠವೆಂದು ಮುಂದಿನ ವಾಕ್ಯದಿಂದ ಉಪಪಾದಿಸುತ್ತಾರೆ:— ಜ್ಞಾನನಿಷ್ಠಾಧಿಕಾರಿಣೋಽಪಿ - ಜ್ಞಾನನಿಷ್ಠೆಗೆ ಒಂದುವೇಳೆ ಅಧಿಕಾರಿಯಾಗಿದ್ದರೂ ಕೂಡ, ಅನಭ್ಯಸ್ತ ಪೂರ್ವತಯಾಹಿ - ಬರೀ ಜ್ಞಾನನಿಷ್ಠೆಯಲ್ಲೇ ಪ್ರವರ್ತಿಸುವದರಿಂದ ಮೊದಲು ಅಭ್ಯಾಸವಿಲ್ಲದಿರುವದರಿಂದಲ್ಲವೇ, ಅನಿಯತತ್ವೇನ - ಸ್ವಭಾವಸಿದ್ಧವಾಗಿ ಕ್ಲಿಪ್ತವಲ್ಲದೇ ಇರುವದರಿಂದ, ದುಶ್ಶಕತ್ವಾತ್ - ಕಷ್ಟತರವಾದುದರಿಂದಲೂ, ಮತ್ತು ಸಪ್ರಮಾದತ್ವಾಚ್ಚ - ಪುನಸ್ಸಂಸಾರಕ್ಕೆ ಹೇತುವಾಗುವ, ಪ್ರಮಾದ ಉಳ್ಳದುದರಿಂದಲೂ ಕೂಡ, ಜ್ಞಾನನಿಷ್ಠಾಯಾಃ — ಕೇವಲ ಜ್ಞಾನನಿಷ್ಠೆಗಿಂತಲೂ, ಕರ್ಮನಿಷ್ಠೈವ-ಕರ್ಮನಿಷ್ಠೆಯೇ, ಜ್ಯಾಯಸೀ - ಶ್ರೇಷ್ಠವು. ಆದರೆ ಜ್ಞಾನನಿಷ್ಠೆಯಲ್ಲಿ ಆತ್ಮಯಾಥಾತ್ಮ್ಯಜ್ಞಾನ ಉಂಟಾಗುವದರಿಂದ ಜ್ಞಾನನಿಷ್ಠೆಯು ಉತ್ತಮವಲ್ಲವೇ ಎಂಬಾಕ್ಷೇಪ ತಂದರೆ, ಅದಕ್ಕೆ ಮುಂದಿನ ವಾಕ್ಯದಿಂದ ಸಮಾಧಾನ ಹೇಳಿ ಕರ್ಮಯೋಗವೇ ಶ್ರೇಷ್ಠವೆಂದು ಸ್ಥಾಪಿಸುತ್ತಾರೆ:—ಕರ್ಮಣಿ ಕ್ರಿಯಮಾಣೇ ಚ - ಕರ್ಮಯೋಗವು ಅನುಷ್ಠಿತವಾಗಲ್ಪಟ್ಟರೂ ಕೂಡ, ಆತ್ಮಯಾಥಾತ್ಮ್ಯಜ್ಞಾನೇನ - ಆತ್ಮಯಾಥಾತ್ಮ್ಯಜ್ಞಾನದಿಂದ ಆತ್ಮನೋಽಕರ್ತೃತ್ವಾನುಸಂಧಾನಂ-ತನ್ನ ಆತ್ಮನಿನ ಅಕರ್ತೃತ್ವದ ಅನುಸಂಧಾನವು, ಅನನ್ತರಮೇವ - ಸದ್ಯದಲ್ಲೇ, ವಕ್ಷ್ಯತೇ - ಹೇಳಲ್ಪಡುತ್ತದೆ; ಅತಃ - ಆ ಕಾರಣದಿಂದ, ಆತ್ಮಜ್ಞಾನಸ್ಯಾಪಿ ಕರ್ಮಯೋಗಾನ್ತರ್ಗತತ್ವಾತ್ - ಆತ್ಮಜ್ಞಾನವೂ ಕೂಡ ಕರ್ಮಯೋಗದಲ್ಲೇ ಅಡಗಿರುವದರಿಂದಲೂ, ಸ ಏವ - ಆ ಕರ್ಮಯೋಗವೇ, ಜ್ಯಾಯಾನಿತ್ಯರ್ಥಃ - ಶ್ರೇಷ್ಠವೆಂಬಭಿಪ್ರಾಯವು. ಕರ್ಮಯೋಗದಿಂದ ಮನಸ್ಸು ಪವಿತ್ರವಾಗಲಿಲ್ಲವಾಗುವದರಿಂದ ಆತ್ಮಯಾಥಾತ್ಮ್ಯಜ್ಞಾನವು ಲಭಿಸುವದಕ್ಕೆ ಬದಲಾಗಿ ಕೇವಲ ಜ್ಞಾನಯೋಗದಲ್ಲಿ ವಿಷಯಪ್ರಾವಣ್ಯವು ಉಂಟಾದರೂ ಉಂಟಾಗಬಹುದೆಂದು ಹಿಂದೆಯೇ ಹೇಳಲ್ಪಟ್ಟಿತು. ಕೇವಲ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಶ್ರೇಷ್ಠವೆಂದು ಮೂರು ಕಾರಣಗಳಿಂದ ಈಗ ಸ್ಥಾಪಿಸಲ್ಪಟ್ಟಿರುತ್ತದೆ. (೧)ಬರೀ ಜ್ಞಾನಯೋಗದಲ್ಲಿ ಪೂರ್ವಾಭ್ಯಾಸವಿಲ್ಲದಿರುವದರಿಂದ ಅದು ದುಶ್ಶಕವು, ಕರ್ಮಯೋಗವಾದರೋ ಪೂರ್ವಾಭ್ಯಾಸವಿರುವದರಿಂದ ಸುಕರವು; ಆದುದರಿಂದ ಕರ್ಮಯೋಗವು ಶ್ರೇಷ್ಠವು. (೨) ಕೇವಲ ಜ್ಞಾನನಿಷ್ಠೆಯು

ಭಾ. ನಿಷ್ಠಾಯಾ ಜ್ಯಾಯಸ್ತ್ವ ವಚನಂ ಜ್ಞಾನನಿಷ್ಠಾಯಾ ಮಧಿಕಾರೇ ಸತ್ಯೇವೋಪಪದ್ಯತೇ. ಯದಿಸರ್ವಂ ಕರ್ಮ ಪರಿತ್ಯಜ್ಯ ಕೇವಲಂ ಜ್ಞಾನ ನಿಷ್ಠಾಯಾಂ ಮಧಿಕರೋಷಿ, ತರ್ಹ್ಯಕರ್ಮಣಸ್ತೇ ಜ್ಞಾನನಿಷ್ಠಸ್ಯ ಜ್ಞಾನನಿಷ್ಠೋಪಕಾರಿಣೀ ಶರೀರಯಾತ್ರಾಪಿ ನ ಸೇತ್ಸ್ಯತಿ; ಯಾವತ್ಸಾಧನ ಸಮಾಪ್ತಿ ಶರೀರಧಾರಣಂ ಚಾವಶ್ಯಂ ಕಾರ್ಯಮ್.

---

ಸಪ್ರಮಾದವಾಗಿ, ಕರ್ಮಯೋಗವು ಅಪ್ರಮಾದವಾಗಿರುವದರಿಂದಲೂ ಕರ್ಮಯೋಗವೇ ಶ್ರೇಷ್ಠವು. (೩) ಕೇವಲ ಜ್ಞಾನನಿಷ್ಠೆಯಲ್ಲಿ ಆತ್ಮಯಾಥಾತ್ಮ್ಯಜ್ಞಾನ ಉಂಟಾದರೆ ಉಂಟಾಗಬಹುದು, ಇಲ್ಲದಿದ್ದರೆ ಇಲ್ಲವು, ಕರ್ಮಯೋಗವಲ್ಲಾದರೋ ಆತ್ಮ ಯಾಥಾತ್ಮ್ಯಜ್ಞಾನ ಉಂಟಾಗುವದರಿಂದಲೂ ಕರ್ಮಯೋಗವೇ ಶ್ರೇಷ್ಠವು.

ಜ್ಞಾನಯೋಗಾಧಿಕಾರಕ್ಕೆ ಶಕ್ತಿಯಿರುವವನಿಗೂ ಕೂಡ ಕರ್ಮಯೋಗವು ಆವಶ್ಯಕವಾಗಿರುವದರಿಂದ ಕರ್ಮಯೋಗಕ್ಕೆ ಜ್ಯಾಯಸ್ತ್ವವು. ಅಂತವನಿಗೂ ಈಕರ್ಮಯೋಗದಅನ್ವಯವು ಬೇಕೆಂದು ಮುಂದಿನವಾಕ್ಯದಿಂದ ತಿಳಿಸುತ್ತಾರೆ. **ಕರ್ಮಣಃ**-ಕರ್ಮಯೋಗವು, **ಜ್ಞಾನನಿಷ್ಠಾಯಾ ಜ್ಯಾಯಸ್ತ್ವವಚನಂ** - ಜ್ಞಾನ ನಿಷ್ಠೆಗಿಂತಲೂ ಶ್ರೇಷ್ಠವೆಂದು ಹೇಳುವ ವಚನವು, **ಜ್ಞಾನನಿಷ್ಠಾಯಾ ಮಧಿಕಾರೇ ಸತ್ಯೇವ** - ಜ್ಞಾನನಿಷ್ಠೆಗೆ ಅಧಿಕಾರವೆಂದರೆ ಯೋಗ್ಯತೆಯಿರುವಾಗಲೇ **ಉಪಪದ್ಯತೇ** - ಉಂಟಾಗುತ್ತದೆ, ಕೂಡುತ್ತದೆ. ಮುಂದೆ ಉತ್ತರಾರ್ಧಕ್ಕೆ ಭಾಷ್ಯವನ್ನು ಬರೆಯುತ್ತಾರೆ :—**ಸರ್ವಂ ಕರ್ಮ ಪರಿತ್ಯಜ್ಯ** - ಸಮಸ್ತ ಕರ್ಮವನ್ನೂ ಪರಿತ್ಯಾಗಮಾಡಿ, **ಕೇವಲಂ ಜ್ಞಾನ ನಿಷ್ಠಾಯಾ ಮಧಿಕರೋಷಿ ಯದಿ** - ಬರೀ ಜ್ಞಾನನಿಷ್ಠೆಯಲ್ಲಿ ಮಾತ್ರ ಅಧಿಕಾರವನ್ನು ಹೊಂದಿದವನಾದರೆ, **ತರ್ಹ್ಯಕರ್ಮಣಸ್ತೇಜ್ಞಾನನಿಷ್ಠಸ್ಯ** - ಇದು ಉತ್ತರಾರ್ಧದಲ್ಲಿರುವ, **ಅಕರ್ಮಣಃ ತೇ** ಎಂಬುದರರ್ಥವು, ಆಗ ಕರ್ಮಗಳನ್ನು ಬಿಟ್ಟು ಜ್ಞಾನ ನಿಷ್ಠನಾದ ನಿನಗೆ, **ಜ್ಞಾನನಿಷ್ಠೋಪಕಾರಿಣೀ** - ಜ್ಞಾನನಿಷ್ಠೆಗೆ ಸಹಾಯಭೂತವಾದ, **ಶರೀರಯಾತ್ರಾಪಿ** - ಶರೀರ ಪೋಷಣೆಯೂ ಕೂಡ, **ನಸೇತ್ಸ್ಯತಿ** - ಸಿದ್ಧಿಸುವದಿಲ್ಲವು; ಇದರ ತಾತ್ಪರ್ಯವನ್ನು ವಿಶದೀಕರಿಸುತ್ತಾರೆ. / **ಉಪಾಯಾನುಷ್ಠಾನವನ್ನು** ಜ್ಞಾನಯೋಗದಮೂಲಕ ನಡೆಸಿದರೆ ಫಲಸಿದ್ಧಿಯುಂಟಾಗುವಾಗ, ಶರೀರ ಯಾತ್ರೆ ತಾನೆ ಏತಕ್ಕೆ ? ಎಂಬಾ ಶಜ್ಕಾವಿಗೆ ಸಮಾಧಾನವನ್ನು ಹೇಳುತ್ತಾರೆ. ಉಪಾಯಾನುಷ್ಠಾನವನ್ನು ಪ್ರಾರಂಭಿಸುವ ಮಾತ್ರದಿಂದ ಫಲಸಿದ್ಧಿಯಾಗದು. ತುಂಬಾ ಕಾಲದ ಅನುಷ್ಠಾನದಿಂದ ಉಪಾಯವು ಸಂಪೂರ್ಣವಾದರೇನೇ ಫಲಸಿದ್ಧಿಯಾಗುವದರಿಂದ, ಅದುವರೆಗೂ ಶರೀರಯಾತ್ರೆಯು ಆವಶ್ಯಕವೆಂದು ಹೇಳುತ್ತಾರೆ :—**ಯಾವತ್ಸಾಧನಸಮಾಪ್ತಿ** - ಉಪಾಯವು ಸಮಾಪ್ತಿಯಾಗುವವರೆಗೂ ಎಂದರೆ ಪರಮಾತ್ಮೋಪಾಸನದ್ವಾರಾ ಪರಮಾತ್ಮ ಸಾಕ್ಷಾತ್ಕಾರ ಉಂಟಾಗುವವರೆಗೂ, **ಶರೀರಧಾರಣಂ ಕಾರ್ಯಮ್** - ಶರೀರಧಾರಣವನ್ನು ಮುಖ್ಯವಾಗಿ ಮಾಡತಕ್ಕದ್ದು, ಏನೋ ಉಪಾಯಾನುಷ್ಠಾನವನ್ನು ಪ್ರಾರಂಭಿಸಿದ ಮೂರು ನಾಲ್ಕು ದಿನಗಳಲ್ಲೇ ಉಪಾಸನನಿಷ್ಪತ್ತಿಯೊಂದಿಗೆ ಮೋಕ್ಷಸಿದ್ಧಿಯಾದರೆ ಶರೀರ ಯಾತ್ರೆಗಾಗಿ ಪ್ರವೃತ್ತಿಯೂ ಬೇಡವೆಂದು ಇರಬಹುದು. ಉಪಾಸನ ನಿಷ್ಪತ್ತಿಯು ಬಹುಕಾಲಾನಂತರ ಸಿದ್ಧಿಸುವದರಿಂದ **ಯಾವತ್ಸಾಧನ ಸಮಾಪ್ತಿ ಶರೀರಧಾರಣಂ ಕಾರ್ಯಂ** ಎಂದು ಹೇಳಲ್ಪಟ್ಟಿತು. ಮುಂದೆ ಯೋಗನಿಷ್ಪತ್ತಿಯು ಈ ಜನ್ಮದಲ್ಲೇ ಸಿದ್ಧಿಸಿದರೂ ಸಿದ್ಧಿಸಬಹುದು; ಇಲ್ಲವೇ ಮುಂದಿನ ಜನ್ಮದಲ್ಲಾದರೂ ಸಿದ್ಧಿಸಬಹುದು. ಆದುದರಿಂದ ಧರ್ಮಾರ್ಜಿತ ದ್ರವ್ಯಮೂಲಕ ಅನುಷ್ಠಿತ ಭಗವದಾರಾಧನ, ಮತ್ತು ವೈಶ್ವದೇವಾದಿಗಳಿಂದ ಪರಿಶುದ್ಧವಾದ ಅನ್ನದಿಂದ ಶರೀರಯಾತ್ರೆಯು ನಡೆಯತಕ್ಕದ್ದು; ಕರ್ಮಯೋಗವನ್ನು ತ್ಯಜಿಸಿದವನಿಗೆ ಇದೂ ಕೂಡ ಸಿದ್ಧಿಸುವದಿಲ್ಲವೆಂದು ಹೇಳುತ್ತಾರೆ.

ಈ ಕ್ಷೇತ್ರವು ಅಂತಹ ಸಾಧನಾನುಷ್ಠಾನಕ್ಕಾಗಿಯಾದುದರಿಂದ, ಸತ್ವಗುಣ ವೃದ್ಧಿಯಾಗುವಹಾಗೆ ಅದು ರಕ್ಷಣೀಯವೆಂಬ ಭಾವವು. ಹಾಗೆ ರಕ್ಷಿಸದೇ ಹೋದರೆ ಸಾಧನಾನುಷ್ಠಾನವೂ ಇಲ್ಲವು. ಶರೀರಶಬ್ದವೇ, ಹಾಗೆ ರಕ್ಷಿಸಿಕೊಳ್ಳದಿದ್ದರೆ ಅದು ನಾಶವಾದುದಾಗಿ ಮೋಕ್ಷಾರ್ಥಿಯಾದ ಇವನಿಗೆ ಯಾವ ಸಾಧನಕ್ಕೂ ಸಹಾಯವಾಗದೇ ಹೋಗುತ್ತದೆಂಬುದನ್ನು ಸೂಚಿಸುತ್ತದೆ. ಆದುದರಿಂದ ಧರ್ಮಾರ್ಜಿತ ದ್ರವ್ಯದ ಮೂಲಕ ಸತ್ವಪದಾರ್ಥಗಳನ್ನು ಸಙ್ಗ್ರಹಿಸಿಕೊಂಡು ಪಂಚ ಮಹಾ ಯಜ್ಞಗಳಿಂದ ಸಂಸ್ಕರಿಸಲ್ಪಟ್ಟ ಹವಿಸ್ಸಿನಿಂದ ರಕ್ಷಿಸಿಕೊಂಡು, ಸಾಧನಾನುಷ್ಠಾನವನ್ನು ಈ ಸುಸಮಯದಲ್ಲೇ ನಿರ್ವಹಿಸಿಕೊಳ್ಳುವದು ಉಚಿತವು ಎಂಬ ಭಾವದಿಂದ ಶರೀರ ಯಾತ್ರೆ ಯೇ ಸಿದ್ಧಿಸುವದಿಲ್ಲವೆಂದು ಹೇಳಲ್ಪಟ್ಟಿತು. ಅಷ್ಟುಮಾತ್ರವೇ ಅಲ್ಲದೆ ಪ್ರತ್ಯವಾಯವೂ ಕೂಡ ಸಂಘ ಟಿಸಬಹುದೆಂಬ ಭಾವವು. ಈ ಸಂದರ್ಭದಲ್ಲಿ ಒಂದು ಮುಖ್ಯ ವಿಷಯವು ಸ್ಥಾಪಿತವಾಯಿತು ಏನೆಂದರೆ:—ಶ್ರೀ ಕರ್ಮಯೋಗದಲ್ಲಿ ಅಡಗಿರುವ ನಿತ್ಯ ನೈಮಿತ್ತಿಕಗಳನ್ನು ಎಲ್ಲಿವರೆಗೆ ಮಾಡತ ಕ್ಕದ್ದೆಂಬ ವಿಷಯದಲ್ಲಿ ಕೆಲವರು ಭಿನ್ನಾಭಿಪ್ರಾಯವನ್ನು ಹೊಂದಿರುವರು; ಜ್ಞಾನಯೋಗವನ್ನಾ ಗಲಿ, ಭಕ್ತಿಯೋಗವನ್ನಾಗಲಿ ಸಾಧಿಸಿಕೊಟ್ಟ ಒಡನೆಯೇ ಅದನ್ನು ಪರಿತ್ಯಾಗಮಾಡಬಹುದೆಂದು ಅಭಿಪ್ರಾಯಪಡುವರು. ಇದು ಸರಿಯಲ್ಲವೆಂದು ತಿಳಿಸುವದಕ್ಕಾಗಿಯೇ ಯಾವತ್ಸಾಧನ ಸಮಾಪ್ತಿ ಶರೀರಧಾರಣವು ಮಹಾ ಯಜ್ಞಾದಿಗಳಿಂದ ಪವಿತ್ರೀಕರಿಸಲ್ಪಟ್ಟ ಅನ್ನದಿಂದ ಮಾಡ ತಕ್ಕದ್ದೆಂದು ವಿಧಿಸಿರುತ್ತಾರೆ. ನಿಯತಂ ಕುರುಕರ್ಮ ಎಂಬ ಶಾಸನವು ದೇಹಾವಸಾನದವರೆಗೂ ಎಂದು ಭಾವಿಸತಕ್ಕದ್ದು. ಅಂತಹ ನಿಯತಕರ್ಮ ಪರಿತ್ಯಾಗಿಯು "ಆಜ್ಞಾಚ್ಛೇದೀ ಮಮ ದ್ರೋಹೀ" ಎಂದುಹೇಳಿರುವಂತೆ ಆಗುವನು. ಈ ವಿಷಯವು ಈಶಾವಾಸ್ಯದ ದ್ವಿತೀಯ ಶ್ಲೋಕ ದಲ್ಲಿ ಸುವ್ಯಕ್ತವು. "ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇಚ್ಛತಗ್ ಸಮಾಃ। ಏವಂ ತ್ವಯಿ ನಾನ್ಯಥೇತೋಽಸ್ತಿನ ಕರ್ಮಲಿಪ್ಯತೇ ನರೇ" ಕರ್ಮಯೋಗದ ಐಚ್ಛಿಕಾಂಶವಾದ ಕಾಮ್ಯ ಕರ್ಮವನ್ನು ಬಿಟ್ಟು, ಮಿಕ್ಕ ನಿತ್ಯ ನೈಮಿತ್ತಿಕಾಂಶಗಳನ್ನೆಲ್ಲಾ ಶತಾಯುಸ್ಸು ಅನಧಿಯಾದು ದರಿಂದ ದೇಹಾವಸಾನದವರೆಗೂ ಮಾಡುತ್ತಲೇ ಜೀವಿಸಿಕೊಂಡಿರತಕ್ಕದ್ದೆಂದು ವಿಧಿಸಲ್ಪ ಟ್ಟಿತು. ಕರ್ಮಯೋಗವನ್ನೆಲ್ಲಾ ಪೂರ್ತಿಯಾಗಿ ಜ್ಞಾನಯೋಗದ ಸಿದ್ಧಿ ಅಥವಾ ಭಕ್ತಿಯೋಗ ಸಿದ್ಧಿಯುಂಟಾಗುವವರೆಗೂ ಮಾಡತಕ್ಕದ್ದು. ಆ ಕರ್ಮಯೋಗದಲ್ಲೇ ಅಂತರ್ಗತವಾದ ನಿಯತಂ ಕರ್ಮವನ್ನಾದರೋ ಯಾವಜ್ಜೀವವೂ ಮಾಡತಕ್ಕದ್ದು. ಈ ನಿತ್ಯ ನೈಮಿತ್ತಿಕಗಳ ಅನುಷ್ಠಾನವು ಬ್ರಹ್ಮವಿದ್ಯೆಗೆ ಅಙ್ಗವೆಂದು "ಸರ್ವಾಪೇಕ್ಷಾಚ ಯಜ್ಞಾದಿ ಶ್ರುತೇರಶ್ವವತ್" ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವು. ನಾನ್ಯಥೇತೋಽಸ್ತಿ ಎಂದು, ಪ್ರಕಾರಾಂತರಕ್ಕೆ ಮಾರ್ಗ ವೇ ಇಲ್ಲವೆಂದು ಶ್ರುತಿಯು ಹೇಳಿಬಿಟ್ಟಿತು. ಈ ಕರ್ಮಾನುಷ್ಠಾನವು ಪ್ರಪನ್ನನಿಗೆ ಬಂಧಕವಲ್ಲವೋ ಎಂದರೆ ನ ಕರ್ಮಲಿಪ್ಯತೇ ನರೇ ಎಂದು ಹೇಳಲ್ಪಟ್ಟಿತು. ನರ ಶಬ್ದದಿಂದ ಬ್ರಹ್ಮವಿದ್ಯಾ ವಿರುದ್ಧ ಗಳಾದ ಕರ್ಮಗಳಲ್ಲಿ ನರಮತೇ ಇತಿ ನರಃ ಎಂಬ ವ್ಯುತ್ಪತ್ತಿಯಿಂದ ಪ್ರಪನ್ನನು ಹೇಳಲ್ಪ ಟ್ಟವನು. ಇಂತವನಲ್ಲಿ ಕರ್ಮವು ಲೇಪಿಸುವದಿಲ್ಲವು. ಇದರ ಅರ್ಥವೇನೆಂಬುದನ್ನು ಮಹಾನು ಭಾವರು ವ್ಯಕ್ತಪಡಿಸಿರುತ್ತಾರೆ "ಬ್ರಹ್ಮವಿದ್ಯಾಙ್ಗತಯಾ ಕ್ರಿಯಮಾಣಃ ಕರ್ಮಯೋಗಃ ನ ಲಿಪ್ಯತೇ" "ಜ್ಞಾನಯೋಗದ್ವಾರಾವಾ ಸಾಕ್ಷಾದ್ವಾ ಪ್ರಥಮಂ ಪರಿಶುದ್ಧಜೀವಾತ್ಮ ವಿಷ ಯಕ ಯೋಗಮುತ್ಪಾದ್ಯ ಪಶ್ಚಾದ್ಭಕ್ತಿಯೋಗಾಂಗ ಭೂತಂ ಪ್ರತ್ಯಗಾತ್ಮಸಾಕ್ಷಾತ್ಕಾರ ಮೇಪ್ಯೋತ್ಪಾದಯತೀತಿ ಭಾವಃ" ಎಂದು ಅಪ್ಪಣೆ ಕೊಡಿಸಿರುತ್ತಾರೆ. ಇದರರ್ಥವೇನೆಂದರೆ :— ಬ್ರಹ್ಮವಿದ್ಯೆಗೆ ಅಙ್ಗವಾಗಿ ಅನುಷ್ಠಿಸಿದ ಕರ್ಮಯೋಗವು ಲೇಪಿಸುವದಿಲ್ಲವು. ಕರ್ಮಯೋ ಗವು ಜ್ಞಾನ ಯೋಗದ್ವಾರವಾಗಿ ಯಾಗಲಿ ಸಾಕ್ಷಾತ್ತಾಗಿಯಾಗಲಿ, ಭಕ್ತಿಯೋಗವನ್ನೂ, ಅದಕ್ಕೆ

ಭಾ. ನ್ಯಾಯಾರ್ಜಿತ ಧನೇನ ಮಹಾಯಜ್ಞಾದಿಕಂ ಕೃತ್ವಾ ತಚ್ಛಿಷ್ಟಾಶನೇನೈವ ಶರೀರ ಧಾರಣಂ ಕಾರ್ಯಮ್(೧)"ಆಹಾರಶುದ್ಧೌ ಸತ್ತ್ವಶುದ್ಧಿಸ್ಸತ್ತ್ವಶುದ್ಧೌ ಧ್ರುವಾಸ್ಮೃತಿಃ" ಇತ್ಯಾದಿ ಶ್ರುತೇಃ ; (೨) "ತೇ ತ್ವಘಂ ಭುಂಜತೇ ಪಾಪಾ ಯೇಪಚನ್ತ್ಯಾತ್ಮಕಾರಣಾತ್" ಇತಿ

ಅಜ್ಞವಾದ ಆತ್ಮಸಾಕ್ಷಾತ್ಕಾರವನ್ನೂ, ಉಂಟುಮಾಡುತ್ತದೆಂಬುದು. ನಿಯತಕರ್ಮಗಳನ್ನಾದರೋ ಜೀವಿಸಿರುವ ತನಕವೂ ಮಾಡಲೇಬೇಕು. ನ್ಯಾಯಾರ್ಜಿತ ಧನೇನ-ಧರ್ಮದಿಂದ ಸಂಪಾದಿಸಲ್ಪಟ್ಟ ಧನದಿಂದ,ಮಹಾಯಜ್ಞಾದಿಕಂ ಕೃತ್ವಾ-ನಿತ್ಯವೂ ಅನುಷ್ಠಿಸಬೇಕಾದ ಪಂಚಮಹಾಯಜ್ಞಗಳನ್ನನುಷ್ಠಿಸಿ, ತಚ್ಛಿಷ್ಟಾಶನೇನೈವ-ಆ ಯಜ್ಞಶೇಷವಾದ ಅನ್ನದಿಂದಲೇನೇ, ಶರೀರಧಾರಣಂ ಕಾರ್ಯಂ - ಶರೀರವನ್ನು ಕಾಪಾಡತಕ್ಕದ್ದು ಕರ್ತವ್ಯವು; ಏಕೆಂದರೆ ಮೋಕ್ಷಸಾಧನ ಭೂತವಾದ ಉಪಾಸನವು ಸಿದ್ಧಿಸುವದಕ್ಕೆ, ಉಪಾಸನಕ್ಕೆ ಪ್ರತಿಬಂಧಕವಾದ ಪಾಪಗಳಿಲ್ಲದೆ ಮನಸ್ಸು ನಿರ್ಮಲವಾಗಿರಬೇಕು, ಹಾಗಾಗಬೇಕಾದರೆ ರಾಜಸ ತಾಮಸ ಆಹಾರಗಳಿಲ್ಲದೆ, ಸಾತ್ವಿಕವಾದ ಆಹಾರ ಸೇವನೆಯಿಂದುಂಟಾಗುತ್ತದೆಂದು ಮುಂದೆ ಹೇಳಲ್ಪಡುತ್ತದೆ. ಆಹಾರ ಶುದ್ಧೌ - ಆಹಾರವು ರಾಜಸ ತಾಮಸವಾಗಿರದೆ ಸಾತ್ವಿಕವಾಗಿದ್ದರೆ, ಸತ್ತ್ವಶುದ್ಧಿಃ-ಅಂತಃಕರಣ ಶುದ್ಧಿಯುಂಟಾಗುತ್ತದೆ, ಸತ್ತ್ವಶುದ್ಧೌ - ಮನಸ್ಸು ಪರಿಶುದ್ಧವಾಗಲು, ಧ್ರುವಾಸ್ಮೃತಿಃ - ನಿಶ್ಚಲವಾದ ಸ್ಮೃತಿಯು ; ಮುಂದೆ ಸ್ಮೃತಿಲಮ್ಭೇ ಸರ್ವಗ್ರನ್ಥೀನಾಂ ವಿಪ್ರಮೋಕ್ಷಃ - ಸ್ಮೃತಿಯುಂಟಾದರೇ ಬಿಡಿಸುವದಕ್ಕೆ ಕಷ್ಟವಾದ ಅವಿದ್ಯಾರಾಗಾದಿ ಗಂಟುಗಳೆಲ್ಲಾ ಬಿಟ್ಟುಹೋಗುತ್ತದೆಂದು ಇರುತ್ತದೆ. ಇತ್ಯಾದಿ ಶ್ರುತೇಃ - ಇದೇ ಮೊದಲಾದ ಶ್ರುತಿಗಳಲ್ಲಿ ಹೇಳಿರುತ್ತದೆ. ಆಹಾರಕ್ಕೆ ಶುದ್ಧ ಭಾವವೆಂದರೇನು ಎಂದರೆ, ಸಾತ್ವಿಕಾಹಾರವಾಗಿ ಆರು ವಿಧವಾದ ಶಾಸ್ತ್ರಗಳಲ್ಲಿ ಹೇಳಿರುವ ದೋಷಗಳೊಂದೂ ಇಲ್ಲದೆ ಭಗವನ್ನಿವೇದನಮೂಲಕ ಸಂಸ್ಕಾರವನ್ನು ಹೊಂದಿರುವ ಆಹಾರವು ಪರಿಶುದ್ಧಾಹಾರವು. ಫಲಸಿದ್ಧಿಯು ಉಪಾಸನಾರಂಭದಲ್ಲೇ ಏತಕ್ಕೆ ಉಂಟಾಗುವದಿಲ್ಲವು? ಚಿರಕಾಲ ಉಪಾಯಾನುಷ್ಠಾನ ,ಮಾಡಬೇಕೆಂಬ ನಿಯಮವೇನು ಎಂದಾಕ್ಷೇಪಿಸಿದರೆ, ಪ್ರತಿಯೊಬ್ಬ ಮನುಷ್ಯನು ಜನ್ಮವೆತ್ತಿದನಂತರ ಪ್ರಾರಬ್ಧಕರ್ಮವನ್ನನುಭವಿಸತಕ್ಕದ್ದಿರುತ್ತದೆ. ಆರಂಭಿಸಿದ ದೇಹಕ್ಕೆ ನಿಯತವಾದ ಅವಧಿಯುಂಟು. ಪ್ರಾರಬ್ಧ ಕರ್ಮಾನುಸಾರವಾಗಿ ಆತನಿಗೆ ವಿವಾಹ, ಪುತ್ರೋತ್ಪತ್ತಿ ಮರಣ ಮುಂತಾದವು ಕ್ಲಿಪ್ತಕಾಲಗಳಲ್ಲಿ ಪ್ರಾಪ್ತವಾಗಬೇಕೆಂದು ಸ್ವಾಮಿಯಿಂದ ಸಙ್ಕಲ್ಪಿಸಲ್ಪಟ್ಟಿರುತ್ತದೆ. ಆದುದರಿಂದ ಆಯುಸ್ಸು ನಿಯತವಾಗಿರುತ್ತದೆ. ಅಲ್ಲಿಯವರೆಗೂ ಉಪಾಸನವು ನಡೆಯಬೇಕಾದುದರಿಂದ ಶರೀರಧಾರಣೆಯೂ ಆವಶ್ಯಕವೆಂಬ ಭಾವವು. ಕರ್ಮಫಲಗಳೂ ಕೂಡ (೧) ಕ್ಲಿಪ್ತವಾದುವೆಂದೂ (೨) ಅಕ್ಲಿಪ್ತವಾದುವೆಂದೂ ಎರಡು ವಿಧವು. ಪ್ರಬಲಶಾಪ ಮೊದಲಾದವುಗಳಿಂದುಂಟಾಗುವ ಫಲಗಳು ಕ್ಲಿಪ್ತವಾದವುಗಳು, ಮಿಕ್ಕವು ಅಕ್ಲಿಪ್ತವಾದವು, ಅವು ದೇಶಕಾಲಾದ್ಯಪೇಕ್ಷೆಯಿಂದ ಅಕ್ಲಿಪ್ತಗಳೇ ವಿನಾ ಸ್ವಸ್ವರೂಪತಃ ಅನಿಯತಗಳಲ್ಲವು; ಸ್ವರೂಪತಃ ಅಕ್ಲಿಪ್ತವೆಂದರೆ, ಕರ್ಮವು ನಿಷ್ಫಲವೆಂದಾಗುವದು. ಅಕ್ಲಿಪ್ತವಾಗಿರುವದರಿಂದ ತನ್ನ ಪ್ರಯತ್ನ ವ್ಯಾಪಾರಗಳ ಮೂಲಕ ಅವುಗಳ ಫಲಗಳಿಂದ ತಪ್ಪಿಸಿಕೊಳ್ಳಬಹುದು. ಹಾಗೆ ಮಾಡಿಕೊಳ್ಳುವದಕ್ಕೆ ಪ್ರಾಯಶ್ಚಿತ್ತ ಮಂತ್ರ ಮೊದಲಾದವುಗಳನ್ನು ಅವಲಂಬಿಸಬಹುದು. ಹಾಗಿಲ್ಲದೇಹೋದರೆ ಅನಿಷ್ಟವನ್ನು ತಪ್ಪಿಸಿಕೊಂಡು ಇಷ್ಟಪ್ರಾಪ್ತಿಗಾಗಿ ಏನೊಂದೂ ಪ್ರಯತ್ನವಿಲ್ಲದೆ ತಟಸ್ಥನಾಗಿರುವನು ; ತನಗೆ ಸಂಪೂರ್ಣ ಕರ್ಮ ಪಾರತಂತ್ರ್ಯವು, ಆದಕ್ಕಾಗಿ ತನಗೆ ಯಾವದೊಂದು ಕರ್ತೃತ್ವವೂ ಇಲ್ಲವೆಂದಾ

(೧) ಛಾಂ. ೭. ೨೬. ೨. (೨) ಗೀ. ೩.೧೩.

ಭಾ. ವಕ್ಷ್ಯತೇ. ಅತೋಜ್ಞಾನನಿಷ್ಠಸ್ಯಾಪಿ ಕರ್ಮಾಕುರ್ವತೋ ದೇಹಯಾತ್ರಾಪಿ ನ ಸೇತ್ಸ್ಯತಿ; ಯತೋಜ್ಞಾನ ನಿಷ್ಠಸ್ಯಾಪಿ ಧ್ರಿಯಮಾಣ ಶರೀರಸ್ಯ ಯಾವತ್ಸಾಧನ

ದರೆ ಶಾಸ್ತ್ರವು ನಿರರ್ಥಕವೆಂದು ಭಾವಿಸುವನು. ಆದುದರಿಂದ ಕರ್ಮಯೋಗವು ಅನಿಷ್ಟನಿವೃತ್ತಿ ಮತ್ತು ಇಷ್ಟಪ್ರಾಪ್ತಿಗಾಗಿ ಅತ್ಯಾವಶ್ಯಕವು; ಹಾಗಲ್ಲದೆ ಜ್ಞಾನಯೋಗಮಾತ್ರವನ್ನೇ ಅವಲಂಬಿಸಿಬಿಟ್ಟರೆ, ಎಲ್ಲರೂ ಕರ್ಮಯೋಗವನ್ನು ತ್ಯಜಿಸಿ, ಸುಲಭವಾಗಿ ಮೋಕ್ಷಸಿದ್ಧಿಸುವದು ಎಂದು ಭಾವಿಸುವರು ಎಂಬ ಭಾವವು. "ತಮೇತಂ ವೇದಾನುವಚನೇನ ಬ್ರಾಹ್ಮಣಾವಿವಿದಿಷನ್ತಿ ಯಜ್ಞೇನ ದಾನೇನ ತಪಸಾಽನಾಶಕೇನ" (೬. ೪. ೨೨.) ಎಂಬ ಬೃಹದಾರಣ್ಯಕ ವಾಕ್ಯವೂ ಸಹ ಪರಬ್ರಹ್ಮೋಪಾಸಕನಿಗೆ ಯಜ್ಞದಾನ ತಪಸ್ಸುಗಳು ಬ್ರಹ್ಮವಿದ್ಯಾಂಗವಾಗಿ ಆವಶ್ಯಕವೆಂದು ಹೇಳುತ್ತದೆ. ಆಗ ಶರೀರ ಯಾತ್ರೆಯೂ ಕೂಡ ಅನಾವಶ್ಯಕವೆಂದು ತಿಳಿಯುವರು ಎಂಬ ತಾತ್ಪರ್ಯವು. ಶರೀರಧಾರಣವು, ನ್ಯಾಯಾರ್ಜಿತ ಧನದಿಂದ ಪ್ರಾಪ್ತವಾದ ಯಜ್ಞಶಿಷ್ಟಾಶನದಿಂದಲೇ ಮಾಡಿದರೇನೇ ಜ್ಞಾನ ನಿಷ್ಠೆಯು ಸಿದ್ಧಿಸುತ್ತದೆ ಎಂದು ತೋರಿಸುವದಕ್ಕಾಗಿ ಏವ ಕಾರವನ್ನು ಭಾಷ್ಯದಲ್ಲಿ ಉಪಯೋಗಿಸಿರುತ್ತಾರೆ. ಶರೀರ ಯಾತ್ರಾಪಿ ನ ಪ್ರಸಿದ್ಧ್ಯೇತ್ ಎಂಬುವ ಪ್ರಕರಣದಲ್ಲಿ "ಆಹಾರ ಶುದ್ಧೌ ಸತ್ತ್ವಶುದ್ಧಿಃ" ಎಂದು ಶ್ರುತ್ಯುದಾಹರಣವು ಇನ್ನೂ ಯಾವಕಾರಣದಿಂದೆಂದರೆ, ಈ ಶರೀರ ಯಾತ್ರೆಯು ಜ್ಞಾನಯೋಗ ಸಾಧ್ಯವಾದ ಭಕ್ತಿಯೋಗಾನುಷ್ಠಾನದ ದೆಶೆಯಲ್ಲಿಯೂ ಕೂಡ, ಅವಿಚ್ಛೇದವಾಗಿ ನಡೆಯಬೇಕಾದರೆ ಆಹಾರ ಶುದ್ಧಿಯೂ, ತನ್ಮೂಲಕ ಸತ್ತ್ವಗುಣಾಭಿವೃದ್ಧಿಯೂ ಇಲ್ಲದೆ ಆಗುವದಿಲ್ಲವೆಂದು ಮುಂದೆ ನೆಯ ಅಧ್ಯಾಯದಲ್ಲಿ ಹೇಳಲ್ಪಡುವ ಅಭಿಪ್ರಾಯವೂ ಸೂಚಿತವು. ಮೋಕ್ಷಾರ್ಥಿಯು ಮುಖ್ಯವಾಗಿ ಸತ್ತ್ವ ಗುಣಾಭಿವೃದ್ಧಿಯನ್ನುಂಟು ಮಾಡುವ ಪ್ರವೃತ್ತಿಗಳನ್ನೇ ಅವಲಂಬಿಸತಕ್ಕದ್ದೆಂಬುದೂ ಶ್ರುತಿಯಿಂದ ದ್ಯೋತಿತವು. ಈ ಶ್ರುತ್ಯಭಿಪ್ರಾಯವೇ ವ್ಯತಿರೇಕರೂಪದಲ್ಲಿ ಮುಂದೆಯೇ "ತೇತ್ವಘಂ ಭುಂಜತೇ" ಎಂಬ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಹಾಗೆ ಯಜ್ಞಶಿಷ್ಟಾಶನದಿಂದಲ್ಲದೆ ಶರೀರಧಾರಣವು ನಿಷ್ಪ್ರಯೋಜನವೆಂದು ನಿಂದಿಸುವ ಪ್ರಮಾಣವನ್ನು ಮುಂದೆ ಉದಾಹರಿಸುತ್ತಾರೆ. ಯೇ - ಯಾರು, ಆತ್ಮಕಾರಣಾತ್-ಸ್ವಪ್ರಯೋಜನವಾಗಿ ಹೊಟ್ಟೆ ಹೊರೆಕೊಳ್ಳುವಗಕ್ಕಾಗಿಯೇ ಪಚನ್ತಿ-ಅಡಿಗೆ ಮಾಡುವರೋ, ತೇ ಪಾಪಾಃ – ಆ ಪಾಪಿಷ್ಠರು ಅಘಂ ಭುಂಜತೇ - ಪಾಪವನ್ನೇ ಭುಜಿಸುವರು ಎಂದರೆ ದುರ್ಗತಿಯನ್ನು ಹೊಂದುವರು ಎಂಬ ಭಾವವು." ಇತಿ ವಕ್ಷ್ಯತೇ - ಎಂಬದಾಗಿ ಮುಂದೆಯೇ ಈ ಅಧ್ಯಾಯದಲ್ಲೇ ಹೇಳಲ್ಪಡುತ್ತದೆ. ಆ ಶ್ರುತ್ಯರ್ಥವೇ ಇಲ್ಲಿಯೂಕೂಡ ಮುಂದೆ ಉಪಪಾದಿಸಲ್ಪಡುತ್ತದೆಂಬಭಿಪ್ರಾಯವು. ಅತಃ - ಆ ಕಾರಣದಿಂದ, ಕರ್ಮಾ ಕುರ್ವತಃ - ಕರ್ಮವನ್ನು ಮಾಡದೇ ಇರುವ, ಜ್ಞಾನನಿಷ್ಠಸ್ಯಾಪಿ - ಜ್ಞಾನಯೋಗಿಗೂ ಕೂಡ, ದೇಹಯಾತ್ರಾಪಿ - ದೇಹಯಾತ್ರೆಯೂ ಕೂಡ, ನ ಸೇತ್ಸ್ಯತಿ –ಸಿದ್ಧಿಸುವದಿಲ್ಲವು; ಯಾವಾಗ ಕರ್ಮಯೋಗವನ್ನಾಚರಿಸದೇ ಜ್ಞಾನಯೋಗದಲ್ಲಿ ಪ್ರವರ್ತಿಸುವನೋ, ಆಗ ನಿತ್ಯ ನೈಮಿತ್ತಿಕರೂಪ ಕರ್ಮಾನುಷ್ಠಾನವನ್ನು ಮಾಡದಿರುವದರಿಂದ ಯಜ್ಞಶಿಷ್ಟಾಶನವು ದೊರೆಯದೇ ಇರುವದರಿಂದ ಶರೀರಯಾತ್ರೆಯೂ ಇಲ್ಲವೆಂಬ ಭಾವವು. ಅದಕ್ಕೆ ಕಾರಣವನ್ನು ತಿಳಿಸುತ್ತಾರೆ:—ಯತಃ - ಯಾವ ಕಾರಣದಿಂದ, ಜ್ಞಾನನಿಷ್ಠಸ್ಯಾಪಿ - ಜ್ಞಾನನಿಷ್ಠನಾದವನಿಗೆ, ಧ್ರಿಯಮಾಣ ಶರೀರಸ್ಯ - ಧರಿಸಲ್ಪಟ್ಟ ಶರೀರವುಳ್ಳವನಾದುದರಿಂದಲೇ, ಯಾವತ್ಸಾಧನ ಸಮಾಪ್ತಿ - ಉಪಾಯವು ಸಮಾಪ್ತಿಯಾಗುವವರೆಗೂ, ಮಹಾ ಯಜ್ಞಾದಿ ನಿತ್ಯ ನೈಮಿತ್ತಿಕಂ - ಪಂಚಮಹಾಯಜ್ಞಗಳಾದ ನಿತ್ಯನೈಮಿತ್ತಿಕಗಳಾದ, ಕರ್ಮ –

ಭಾ. ಸಮಾಪ್ತಿ ಮಹಾಯಜ್ಞಾದಿ ನಿತ್ಯನೈಮಿತ್ತಿಕಂ ಕರ್ಮಾವಶ್ಯಂ ಕರ್ತವ್ಯಂ ; ಯತಶ್ಚ ಕರ್ಮಯೋಗೇಽಪ್ಯಾತ್ಮನೋಽಕರ್ತೃತ್ವಭಾವನಯಾ ತದ್ಯಾಥಾತ್ಮ್ಯಾನುಸಂಧಾನಮಂತರ್ಭೂತಮ್ ; ಯತಶ್ಚ ಪ್ರಕೃತಿ ಸಂಸೃಷ್ಟಸ್ಯ ಕರ್ಮಯೋಗಸ್ಸುಕರೋಽಪ್ರಮಾದಶ್ಚ ; ಅತೋ ಜ್ಞಾನನಿಷ್ಠಾಯೋಗ್ಯಸ್ಯಾಪಿ ಜ್ಞಾನಯೋಗಾತ್ಕರ್ಮಯೋಗೋ ಜ್ಯಾಯಾನ್. ತಸ್ಮಾತ್ತ್ವಂ ಕರ್ಮಯೋಗಮೇವ ಕುರ್ವಿತ್ಯಭಿಪ್ರಾಯಃ ॥೮॥

ಕರ್ಮವು, ಅವಶ್ಯಂ ಕರ್ತವ್ಯಮ್ - ಮುಖ್ಯವಾಗಿ ಮಾಡತಕ್ಕದ್ದು ; ದೇಹಾವಸಾನದವರೆಗೂ ಶಾಸ್ತ್ರವಿಧಿ ಇರುವವರಿಂದ ಈ ಆಜ್ಞಾರೂಪ ಕೈಂಕರ್ಯಗಳನ್ನು ಮಾಡಿಯೇ ತೀರಬೇಕೆಂಬ ಭಾವವು, ಮಾಡದೇಬಿಟ್ಟರೆ ಸ್ವಾಮಿಯ ನಿಗ್ರಹಕ್ಕೆ ಪಾತ್ರರಾಗುವರೆಂಬ ತಾತ್ಪರ್ಯವು. ಹಿಂದಿನಿಂದಾರಂಭಿಸಿ ಇದುವರೆಗೂ ಹೇಳಿದಭಿಪ್ರಾಯವನ್ನೆಲ್ಲಾ ಒಟ್ಟು ಸೇರಿಸಿ ಸುಖಗ್ರಹಣಕ್ಕಾಗಿ ಮುಂದೆ ಸಙ್ಗ್ರಹಿಸಿ ಹೇಳುತ್ತಾರೆ:— ಯತಶ್ಚ - ಯಾವಕಾರಣದಿಂದ, ಕರ್ಮಯೋಗೇಽಪಿ - ಜ್ಞಾನಯೋಗದಲ್ಲಿನ ಹಾಗೆ ಕರ್ಮಯೋಗದಲ್ಲೂ ಕೂಡ, ಆತ್ಮನಃ - ಜೀವಾತ್ಮನಾದ ತನ್ನ, ಅಕರ್ತೃತ್ವ ಭಾವನಯಾ-ಸ್ವತಂತ್ರ ಕರ್ತೃತ್ವವಿಲ್ಲವೆಂಬ ಭಾವನೆಯಿಂದ, ಆತ್ಮಯಾಥಾತ್ಮ್ಯಾನುಸಂಧಾನಂ - ಜೀವಾತ್ಮನ ವಾಸ್ತವಿಕ ಸ್ವರೂಪದ ಅನುಸಂಧಾನವು, ಅಂತರ್ಭೂತಂ - ಅಡಗಿದೆಯೋ, ಮತ್ತು ಯತಶ್ಚ - ಯಾವ ಕಾರಣದಿಂದ, ಪ್ರಕೃತಿ ಸಂಸೃಷ್ಟಸ್ಯ - ಪ್ರಕೃತಿ ಸಂಬಂಧವನ್ನು ಹೊಂದಿದ ಜೀವಾತ್ಮನಾದ ತನಗೆ, ಕರ್ಮಯೋಗವು, ಸುಕರಃ - ಸ್ವಭಾವತಃ ಸುಲಭವಾದುದೋ, ಮತ್ತು ಅಪ್ರಮಾದಶ್ಚ - ಪ್ರಮಾದವಿಲ್ಲದಿರುತ್ತದೋ ಎಂದರೆ ಪುನಃಬಂಧಾದಿಗಳನ್ನುಂಟುಮಾಡದೇ ಇರುತ್ತದೋ, ಅತಃ - ಆ ಕಾರಣಗಳಿಂದ ಜ್ಞಾನನಿಷ್ಠಾ ಯೋಗ್ಯಸ್ಯಾಪಿ - ಜ್ಞಾನ ನಿಷ್ಠೆಗೆ ಯೋಗ್ಯನಾಗಿರುವವನಿಗೂ ಕೂಡ, ಜ್ಞಾನಯೋಗಾತ್ – ಜ್ಞಾನಯೋಗಕ್ಕಿಂತಲೂ, ಕರ್ಮಯೋಗವು, ಜ್ಯಾಯಾನ್ - ಶ್ರೇಷ್ಠವಾದುದು, ಎಂದರೆ ಹಿತವನ್ನುಂಟುಮಾಡುವಂತಾದ್ದು. ತಸ್ಮಾತ್ – ಆಕಾರಣದಿಂದ, ತ್ವಂ - ಜ್ಞಾನಯೋಗಕ್ಕೂ ಕೂಡ ಅರ್ಹನಾಗಿರುವ ನೀನೂ ಅಥವಾ ಜ್ಞಾನಯೋಗಕ್ಕೆ ಇನ್ನೂ ಅರ್ಹತೆಯಿಲ್ಲದಿರುವ ನೀನು ಎಂದಾಗಲಿ ಅರ್ಥಮಾಡಬಹುದು, ಕರ್ಮಯೋಗಮೇವ - ಕರ್ಮಯೋಗವನ್ನೇ, ಕುರ್ವಿತ್ಯಭಿಪ್ರಾಯಃ – ಮಾಡೆಂಬಭಿಪ್ರಾಯವು. ಈ ಮೂರನೆಯ ಅಧ್ಯಾಯದಲ್ಲಿ ಈ ಎಂಟು ಶ್ಲೋಕಗಳಿಂದಲೂ ಉಪಪಾದಿಸಲ್ಪಟ್ಟ ಅರ್ಥವು ಈಯತಶ್ಚ ಎಂದಾರಂಭಿಸಿನ ವಾಕ್ಯದಿಂದ ಸಙ್ಗ್ರಹಿಸಿರುತ್ತಾರೆ, ಆದುದರಿಂದ ಮುಮುಕ್ಷುವು ಕರ್ಮಯೋಗವನ್ನು ತ್ಯಜಿಸತಕ್ಕದ್ದಲ್ಲವು, ಜ್ಞಾನಯೋಗದಲ್ಲಿರುವವನಿಗೂ ಕೂಡ ಆವಶ್ಯಕವು ಎಂಬ ತಾತ್ಪರ್ಯವು. ನಿಯತಂ ಕುರು ಕರ್ಮ ಎಂದು ಇಷ್ಟು ಮಾತ್ರ ಹೇಳಿದ್ದರೆ ಸಾಕಾಗಿತ್ತು. ತ್ವಂ ಎಂದು ಅರ್ಜುನನನ್ನು ವಿಶೇಷಿಸಿ ನೀನು ಮಾಡತಕ್ಕದ್ದೆಂದು ಹೇಳಿದ ಅಭಿಪ್ರಾಯವೇನೆಂದರೆ, ಈಗ ಪ್ರಾಪ್ತವಾಗಿರುವ ದುಷ್ಟನಿಗ್ರಹ ಕರ್ಮವನ್ನು ನೀನು ಮಾಡಲೇಬೇಕು, ಇಲ್ಲವಾದರೆ ನಿನಗೆ ಪ್ರತ್ಯವಾಯವುಂಟು ಎಂಬ ಭಾವದಿಂದ ವಿಶೇಷಿಸಿ ಹೇಳಲ್ಪಟ್ಟಿತೆಂದು ಭಾವಿಸಬಹುದು, ಅಥವಾ ನಾವಿಬ್ಬರು ನರನಾರಾಯಣರಾಗಿ ಅವತರಿಸಿ ಧರ್ಮಸಂಸ್ಥಾಪನೆಗಾಗಿಯಾದುದರಿಂದ, ನೀನು ಲೋಕ ಸಙ್ಗ್ರಹಾರ್ಥವಾಗಿ, ನನ್ನ ಹಾಗೆಯೇ ವಿಹಿತ ಕರ್ಮವನ್ನು ಅನುಷ್ಠಿಸಲೇ ಬೇಕು;ಕರ್ಮ ಭ್ರಷ್ಟತೆಯು ಎಂದಿಗೂ ಕೂಡದೆಂದು ತಿಳಿಸುವದಕ್ಕಾಗಿ ಕರ್ಮ ಮಾಡು ಎಂಬಲ್ಲಿ ತ್ವಂ ಎಂಬ ವಿಶೇಷ ಪ್ರಯೋಗವು. ಬ್ರಾಹ್ಮಣನಾಗಿ ಜನಿಸಿದವನಿಗೂ ಉಪಾಸನಾಂಗವಾಗಿ ಕರ್ಮಯೋಗವು ಆವಶ್ಯಕವಾಗಿರುವಾಗ ಲೋಕಹಿತಾರ್ಥಕ್ಕಾಗಿ ಕ್ಷತ್ರಿಯನಾಗಿ ಜನಿಸಿರುವ ನಿನಗೆ ಯುದ್ಧಾದಿ ಕರ್ಮಗಳು ಆಜ್ಞಾ

ಭಾ. ಅ. ಏವಂ ತರ್ಹಿ ದ್ರವ್ಯಾರ್ಜನಾದೇಃ ಕರ್ಮಣೋಽಹಙ್ಕಾರಮಮಕಾರಾದಿ ಸರ್ವೇಂದ್ರಿಯ ವ್ಯಾಕುಲತಾಗರ್ಭತ್ವೇನಾಸ್ಯ ಪುರುಷಸ್ಯ ಕರ್ಮವಾಸನಯಾ ಬಂಧನಂ ಭವಿಷ್ಯತೀತ್ಯತ್ರಾಹ:—

ಮೂ. ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ ।
ತದರ್ಥಂ ಕರ್ಮ ಕೌನ್ತೇಯ ಮುಕ್ತಸಂಗಸ್ಸಮಾಚರ ॥ ೯.

ಕೈಂಕರ್ಯವಾದುದರಿಂದಲಾಗಲಿ ನೀನು ಮಾಡಿಯೇ ತೀರಬೇಕೆಂದು ತ್ವಂ ಎಂಬ ಪ್ರಯೋಗವು. ॥೮॥

ಭಾಷ್ಯಾವತಾರಿಕೆಯ ಅರ್ಥವು :—ಏವಂ ತರ್ಹಿ - ಹೀಗಾದ ಪಕ್ಷದಲ್ಲಿ, ಎಂದರೆ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಶ್ರೇಷ್ಠವೆಂದೆನಿಸಿ ಕರ್ಮಾನುಷ್ಠಾನವು ಆವಶ್ಯಕವಾದರೆ, ದ್ರವ್ಯಾರ್ಜನಾದೇಃ ಕರ್ಮಣಃ - ದ್ರವ್ಯವನ್ನು ಸಂಪಾದಿಸೋಣವೇ ಮೊದಲಾದ ಕರ್ಮಗಳು ಅಹಂಕಾರ ಮಮಕಾರವೇ ಮೊದಲಾದ, ಸರ್ವೇಂದ್ರಿಯ ವ್ಯಾಕುಲತಾ ಗರ್ಭತ್ವೇನ - ಸಮಸ್ತ ಇಂದ್ರಿಯಗಳ ವ್ಯಾಕುಲತೆಯನ್ನು ಒಳಗೊಂಡಿರುವದರಿಂದ, ಅಸ್ಯಪುರುಷಸ್ಯ - ಈ ಮುಮುಕ್ಷುವಿಗೆ, ಕರ್ಮ ವಾಸನಯಾ-ಉಂಟಾದ ಕರ್ಮಪರಿಪಾಕದಿಂದ, ಬಂಧನಂ ಭವಿಷ್ಯತಿ - ಸಂಸಾರ ಬಂಧವು ಉಂಟಾಗುತ್ತದೆ;ಇಲ್ಲಿ ಸರ್ವೇಂದ್ರಿಯ ವ್ಯಾಕುಲತೆ ಹೇಗೆ ಎಂಬ ಸಂದರ್ಭದಲ್ಲಿ ಅಹಂಕಾರ ಮಮಕಾರಗಳಿಂದ ಅದು ಪ್ರಾಪ್ತವಾಗಬಹುದೆಂದು ಹೇಳಿದರು; ಮುಕ್ತಸಙ್ಗನಾಗದೆ ಅನ್ಯತ್ರ ಮಾಡುವ ಕರ್ಮಗಳಲ್ಲಾದರೋ ಈ ಅಹಂಕಾರ ಮಮಕಾರಗಳ ಮೂಲಕ ಸರ್ವೇಂದ್ರಿಯ ವ್ಯಾಕುಲತೆಯೇ ವಿನಾ,ಮುಕ್ತಸಙ್ಗನಾಗಿ ಕರ್ಮವನ್ನಾಚರಿಸಿದರೆ ಈ ಅಹಂಕಾರ ಮಮಕಾರಗಳೂ ಇಲ್ಲವು; ಆ ಕಾರಣದಿಂದ ಇಂದ್ರಿಯ ವ್ಯಾಕುಲತೆಯೂ ಇಲ್ಲವು; ತನ್ಮೂಲಕ ಬಂಧನವೂ ಇಲ್ಲವು ಎಂಬ ತಾತ್ಪರ್ಯವು, ಇತಿ - ಹೀಗೆ ಪೂರ್ವಪಕ್ಷ ಉಂಟಾದರೆ, ಅತ್ರ - ಆ ಸಂದರ್ಭದಲ್ಲಿ, ಆಹ - ಸಮಾಧಾನವನ್ನು ಶ್ರೀಕೃಷ್ಣನು ಹೇಳುತ್ತಾನೆ. ಕರ್ಮಯೋಗದಲ್ಲಿ ಪ್ರವರ್ತಿಸುವನು ಯಜ್ಞರೂಪದಲ್ಲಿ ಭಗವತ್ಕೈಂಕರ್ಯಾದಿಗಳನ್ನು ನಡೆಸಬೇಕಾಗುತ್ತದೆ, ಅದಕ್ಕಾಗಿ ದ್ರವ್ಯಾರ್ಜನೆ ಮೊದಲಾದವುಗಳನ್ನು ಮಾಡಬೇಕಾಗುತ್ತದೆ. ಆ ಸಂದರ್ಭದಲ್ಲಿ ಅಹಂಕಾರ ಮಮಕಾರಗಳ ಮೂಲಕ ಇಂದ್ರಿಯಗಳು ವ್ಯಾಕುಲತೆಯನ್ನು ಹೊಂದಬಹುದು. ಹೀಗೆ ರಾಗಾದಿಗಳು ಪ್ರಾಪ್ತವಾಗುವದರಿಂದ ಅನರ್ಥ ಉಂಟಾಗಿ ಮೋಕ್ಷೇಚ್ಛೆಯುಳ್ಳವನೂ ಪುನಃ ಸಂಸಾರದುಷ್ಟಬಂಧವನ್ನು ಹೊಂದುವನಲ್ಲಾ ಎಂದರೆ, ಹಾಗಲ್ಲವೆಂದು ಸಮಾಧಾನವು ಹೇಳಲ್ಪಡುತ್ತದೆ:—ಹೇಗೆ ಕರ್ಮಮಾಡಿದರೆ ಬಂಧನಕ್ಕೆ ಕಾರಣವಾಗುತ್ತದೆ? ಹೇಗೆ ಮಾಡಿದರೆ ಬಂಧನವುಂಟಾಗುವದಿಲ್ಲವು? ಎಂಬುದನ್ನು ತಿಳಿಸುತ್ತಾರೆ. ಮುಮುಕ್ಷುವು ವಿಹಿತ ಕರ್ಮಗಳನ್ನು ಮಾಡಬಹುದೇ, ಮಾಡಕೂಡದೇ, ಎಂಬ ಸಂದೇಹದಲ್ಲಿ ಮಾಡಲೇಬೇಕು ಎಂದು ವ್ಯವಸ್ಥೆಮಾಡಿ ಸಿದ್ಧಾಂತಿಸುವ ಶ್ಲೋಕವು ಇದು ಎಂದು ಭಾವಿಸತಕ್ಕದ್ದು. ಮಾಡಲೇಬೇಕು ; ಆದರೆ ಮುಕ್ತಸಙ್ಗನಾಗಿ ಮಾಡಬೇಕೆಂದು ಹೇಳುತ್ತಾರೆ.

ಮೂಲಕ್ಕೆ ಅರ್ಥವು :—ಯಜ್ಞಾರ್ಥಾತ್ - ಶಾಸ್ತ್ರೀಯಗಳಾದ ಯಜ್ಞವೇ ಪ್ರಯೋಜನವಾಗಿವುಳ್ಳ, ಕರ್ಮಣಃ - ಕರ್ಮಕ್ಕಿಂತಲೂ, ಅನ್ಯತ್ರ - ಬೇರೆಯಾದ ಕರ್ಮಗಳಲ್ಲಿ, ಎಂದರೆ ಸ್ವಪ್ರಯೋಜನಕ್ಕಾಗಿ ಮಾಡುವ ಕರ್ಮದಿಂದ, ಅಯಂ ಲೋಕಃ-ಈ ಲೋಕದ ಜನವು, ಕರ್ಮಬಂಧನಃ-ಕರ್ಮದಿಂದ ಬಂಧಿಸಲ್ಪಟ್ಟದುದು ಆಗುತ್ತದೆ, ಅಥವಾ ಕರ್ಮರೂಪವಾದ ಬಂಧನವುಳ್ಳದ್ದು ಆಗುತ್ತದೆ. ಹೇ ಕೌನ್ತೇಯ - ಓ ಕುಂತೀಪುತ್ರನೇ, ತದರ್ಥಂ - ಅಂತಹ ಶಾಸ್ತ್ರೀಯಗಳಾದ

**ಭಾ.** **ಯಜ್ಞಾದಿ ಶಾಸ್ತ್ರೀಯ ಕರ್ಮ ಶೇಷಭೂತಾದ್ದ್ರವ್ಯಾರ್ಜನಾದೇಃ ಕರ್ಮಣೋಽನ್ಯತ್ರಾತ್ಮೀಯ ಪ್ರಯೋಜನ ಶೇಷಭೂತೇ ಕರ್ಮಣಿ ಕ್ರಿಯಮಾಣೇಽಯಂ ಲೋಕಃ ಕರ್ಮ ಬಂಧನೋ ಭವತಿ. ಅತ ಸ್ತ್ವಂ ಯಜ್ಞಾರ್ಥಂ ದ್ರವ್ಯಾರ್ಜನಾದಿಕಂ ಕರ್ಮ ಸಮಾಚರ. ತತ್ರಾತ್ಮ ಪ್ರಯೋಜನ ಸಾಧನತಯಾ ಯಸ್ಸಙ್ಗಃ, ತಸ್ಮಾತ್ಸಙ್ಗಾನ್ಮುಕ್ತ**

---

**ಯಜ್ಞಾದಿಗಳಿಗಾಗಿ,** **ಕರ್ಮ** - ಧನಾರ್ಜನೆ ಮೊದಲಾದ ಕರ್ಮಗಳನ್ನು, **ಮುಕ್ತಸಙ್ಗಃ** - ಅವುಗಳಲ್ಲಿ ಬಿಡಲ್ಪಟ್ಟ ಸಙ್ಗವುಳ್ಳವನಾಗಿ, **ಸಮಾಚರ** - ಅನುಷ್ಠಿಸು. ॥ ೯ ॥

**ಭಾಷ್ಯಾರ್ಥವು :—ಯಜ್ಞಾದಿಶಾಸ್ತ್ರೀಯ ಕರ್ಮಶೇಷಭೂತಾತ್** - ಇದು ಯಜ್ಞಾರ್ಥಾತ್ ಎಂಬುದರ ಅರ್ಥವು, ಯಜ್ಞವೇ ಮೊದಲಾದ ಶಾಸ್ತ್ರೀಯಕರ್ಮಗಳಿಗೆ ಅಙ್ಗವಾದ ಇಲ್ಲಿ ಆದಿ ಪದದಿಂದ ಪಂಚಮಹಾಯಜ್ಞಗಳೂ, ದಾನ ತಪಸ್ಸುಗಳೂ ಎಲ್ಲಾ ಹೇಳಲ್ಪಟ್ಟವು, ಕೆಲವರು **ಯಜ್ಞೋವೈವಿಷ್ಣುಃ** ಎಂಬ ಶ್ರುತ್ಯನುಸಾರ ಯಜ್ಞವೆಂದರೆ ವಿಷ್ಣುವೆಂದು ಅರ್ಥಮಾಡಿ ವಿಷ್ಣುವಿನಲ್ಲಿ ಅರ್ಪಿಸಲ್ಪಟ್ಟ ಕರ್ಮಕ್ಕಿಂತಲೂ ಎಂದು ಅರ್ಥಮಾಡಿರುತ್ತಾರೆ, ಹಾಗೆ ಅರ್ಥಮಾಡುವದರಲ್ಲಿ ವಿರುದ್ಧವಾದುದು ಏನೂ ಇಲ್ಲದಿದ್ದರೂ ಮುಂದಿನ ಶ್ಲೋಕಗಳಲ್ಲಿ, **ಸಹಯಜ್ಞೈಃ** ಇತ್ಯಾದಿ ಪ್ರಯೋಗಗಳಿಂದ ಕರ್ಮಗಳು ಯಜ್ಞರೂಪದಲ್ಲಿ ಅನುಷ್ಠಿಸತಕ್ಕದ್ದೆಂದು ಹೇಳುವ ಪ್ರಕರಣವಾದುದರಿಂದ **ಯಜ್ಞ** ಶಬ್ದಕ್ಕೆ ಯಜ್ಞವೆಂದೇ ಅರ್ಥವೇ ವಿನಾ ವಿಷ್ಣುವೆಂಬರ್ಥವು ಇಲ್ಲಿ ಪ್ರಕೃತವಿಲ್ಲವು ; ಹಾಗೆ ಯಜ್ಞಕ್ಕೆ ಅಂಗಭೂತಗಳಾದ ಕರ್ಮಗಳು ಯಾವುವೆಂದರೆ ಹೇಳುತ್ತಾರೆ:- **ದ್ರವ್ಯಾರ್ಜನಾದೇಃ** - **"ಧರ್ಮಾಥರ್ಥಃ ಪ್ರಭವತಿ"** (ರಾ. ) ಎಂಬ ಮಹರ್ಷಿವಾಕ್ಯಾನುಸಾರ ಶಾಸ್ತ್ರೀಯಗಳಾದ ಕರ್ಮಾನುಷ್ಠಾನಗಳಿಂದ ಅವುಗಳಿಗೆ ಬೇಕಾದ ದ್ರವ್ಯವು ಲಭಿಸುತ್ತದೆ ಎಂದು ಹೇಳಿರುವಹಾಗೆ, ಧರ್ಮದಿಂದ ಮಾಡಿದ ದ್ರವ್ಯಾರ್ಜನೆ ಮೊದಲಾದವುಗಳಾದ, **ಕರ್ಮಣಃ** - ಕರ್ಮಗಳಿಗಿಂತ, (ಪಂಚಮಿ), **ಅನ್ಯತ್ರ** - ಬೇರೆಯಾದ ಎಂದರೆ, **ಆತ್ಮೀಯ ಪ್ರಯೋಜನ ಶೇಷಭೂತೇ ಕರ್ಮಣಿ ಕ್ರಿಯಮಾಣೇ** - ತನ್ನ ಸ್ವಂತ ಪ್ರಯೋಜನಕ್ಕಾಗಿಯೇ ಆಗಿರುವ ಕರ್ಮವು ಮಾಡಲ್ಪಡಲಾಗಿ, **ಅಯಂ ಲೋಕಃ** - ಈ ಬದ್ಧ ಚೇತನವು, (ಜಾತ್ಯೇಕ ವಚನ) **ಕರ್ಮ ಬಂಧನೋಭವತಿ** - ಕರ್ಮವೇ ಬಂಧಕವಾಗಿ ಉಳ್ಳವರಾಗುವರು, ಅಥವಾ ಕರ್ಮದಿಂದ ಬಂಧನವುಳ್ಳವರಾಗಿ ಆಗುವರು. ಯಜ್ಞಾದಿಗಳು ವಿಹಿತ ಕರ್ಮಗಳು, ಅವುಗಳು ಹೇಗೆ ಬಂಧಕಗಳು? ಕರ್ಮಗಳು ಅವಿಹಿತಗಳಾಗಿ ನಿಷಿದ್ಧಗಳಾಗಿದ್ದ ಪಕ್ಷದಲ್ಲಿ ಪಾಪರೂಪಗಳಾದುದರಿಂದ ಬಂಧಕಗಳೇನೋ ಸರಿಯೇ. ಯಜ್ಞಾದಿಗಳು ವಿಹಿತ ಕರ್ಮಗಳು, ಅವುಗಳಿಗಾಗಿ ನಡೆಸಿದ ಕರ್ಮಗಳು ಹೇಗೆ ಬಂಧಕಗಳು ಎಂದರೆ ಅವುಗಳಲ್ಲಿ ಸಙ್ಗವನ್ನಿಟ್ಟು, ಅವುಗಳಲ್ಲೇ ಲಿಪ್ತನಾಗಿ ಫಲಕಾಮನೆಯಿಂದ ನಡೆಸಿದರೆ ಬಂಧಕವೇವಿನಾ ಮುಕ್ತಸಙ್ಗನಾಗಿ ನಡೆಸಿದ ಕರ್ಮಗಳು ಬಂಧಕವಲ್ಲವೆಂದು ಹೇಳಲ್ಪಡುತ್ತದೆ. ಧನಾರ್ಜನೆಯು ಭಗವದ್ಭಾಗವತಕೈಙ್ಕರ್ಯಗಳಿಗಾಗಿ ಮಾಡಲ್ಪಟ್ಟರೆ ಬಂಧಕವಲ್ಲವು ; ಹೆಂಡತಿ ಮಕ್ಕಳಿಗಾಗಿಯೂ, ತನ್ನ ಸುಖಗಳಿಗಾಗಿಯೂ ಮಾಡಲ್ಪಟ್ಟರೆ ಬಂಧಕವು. ಇದೇ ಉತ್ತರಾರ್ಧದಲ್ಲಿ ಹೇಳಲ್ಪಡುತ್ತದೆ. **ಅತಃ** - ಆ ಕಾರಣದಿಂದ, ಎಂದರೆ ಯಜ್ಞಾರ್ಥವಾದ ಕರ್ಮವು ಬಂಧಕವಲ್ಲದುದರಿಂದ, **ತ್ವಂ** - ನೀನು, **ಯಜ್ಞಾರ್ಥಂ**- ಪರಮ ಪುರುಷಾರಾಧನ ರೂಪ ಯಜ್ಞಪ್ರಯೋಜನಕ್ಕಾಗಿ, **ದ್ರವ್ಯಾರ್ಜನಾದಿಕಂ ಕರ್ಮ** – ದ್ರವ್ಯವನ್ನು ಸಂಪಾದಿಸೋಣವೇ ಮೊದಲಾದವುಗಳನ್ನುಳ್ಳ ಕರ್ಮವನ್ನು, **ಸಮಾಚರ** - ಧರ್ಮದಿಂದ ಚನ್ನಾಗಿ ಆಚರಿಸು. ಆ ಕರ್ಮಗಳಲ್ಲಿ ಲಿಪ್ತನಾಗದೆ, ಫಲ ಕರ್ತೃತ್ವ ಮಮತೆಯನ್ನು ತೊರೆದು, ಆ ಕರ್ಮಗಳನ್ನು ಅನುಷ್ಠಿಸು ಎಂದು ಉಪದೇಶಿಸಲ್ಪಟ್ಟಿತು. ಇದರಿಂದ ಐಹಿಕ

ಭಾ. ಸ್ತತ್ಸಮಾಚರ. ಏವಂ ಮುಕ್ತಸಙ್ಗೇನ ಯಜ್ಞಾದ್ಯರ್ಥತಯಾ ಕರ್ಮಣಿ ಕ್ರಿಯಮಾಣೇ ಯಜ್ಞಾದಿಭಿಃ ಕರ್ಮಭಿರಾರಾಧಿತಃ ಪರಮಪುರುಷೋಽಸ್ಯಾನಾದಿ ಕಾಲ ಪ್ರವೃತ್ತ ಕರ್ಮ ವಾಸನಾಮುಚ್ಛಿದ್ಯಾ ವ್ಯಾಕುಲಾತ್ಮಾವಲೋಕನಂ ದದಾತೀತ್ಯರ್ಥಃ॥

ಗಳಾದ ಧನಾರ್ಜನಾದಿಗಳು ಬಂಧಕಗಳಾಗದೇ ಇರಬೇಕಾದರೆ ಎರಡು ಆವಶ್ಯಕವು:—(೧) ಆ ಧನಾರ್ಜನೆ ಮೊದಲಾದವುಗಳು ಸ್ವಪ್ರಯೋಜನಕ್ಕಾಗಿ ಅಲ್ಲದೆ ಪರಮ ಪುರುಷಾರಾಧನರೂಪ ಕರ್ಮಗಳಿಗಾಗಿರಬೇಕು. (೨) ಆ ಧನಾರ್ಜನೆಯು ಧರ್ಮ್ಯಯುಕ್ತವಾಗಿ ಸಙ್ಗವನ್ನು ತ್ಯಾಗಮಾಡ ತಕ್ಕದ್ದು. ಹೀಗೆ ಇವೆರಡೂ ಇದ್ದರೇನೇ ಬಂಧಕಗಳಾಗುವದಿಲ್ಲವೆಂಬ ತಾತ್ಪರ್ಯವು. ಧರ್ಮ ಯುದ್ಧವನ್ನು ಮಾಡಿ ಅದರಿಂದ ರಾಜ್ಯಲಾಭ ಉಂಟಾದರೆ ಭಗವದಾರಾಧನರೂಪ ಕರ್ಮಾನುಷ್ಠಾನಗಳು ನಿನಗೆ ಪ್ರಾಪ್ತವಾಗಿ ಮುಕ್ತಿಗೆ ಹೇತುಭೂತವಾದವುಗಳಾಗುತ್ತವೆಂಬ ಭಾವದಿಂದ ಇಲ್ಲಿ ಆದಿ ಶಬ್ದವು ಉಪಯೋಗಿಸಲ್ಪಟ್ಟಿತು. ಸಙ್ಗತ್ಯಾಗದ ಸ್ವರೂಪವು ಕರ್ತೃತ್ವ ಫಲಗಳ ತ್ಯಾಗಕ್ಕಿಂತಲೂ ವಿಲಕ್ಷಣರೂಪವಾದುದು ಎಂದು ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ. **ತತ್ರ** - ಆ ಸಂದರ್ಭದಲ್ಲಿ, **ಅತ್ಮಪ್ರಯೋಜನತಯಾ ಯಸ್ಸಙ್ಗಃ** – ತನಗೆ ಆ ಕರ್ಮಗಳು ಪ್ರಯೋಜನವಾದವೆಂಬ ಭಾವದಿಂದ ಯಾವ ಸಙ್ಗವೋ, **ತಸ್ಮಾತ್ಸಙ್ಗಾತ್** - ಅಂತಹ ಸಙ್ಗದಿಂದ, **ಮುಕ್ತಃ** - ಬಿಡಲ್ಪಟ್ಟವನಾಗಿ, **ತತ್ಸಮಾಚರ** - ಆ ಕರ್ಮವನ್ನು ಮಾಡು, **ಮುಕ್ತಸಂಗಃ** ಎಂದರೆ ಹಿಂದೆ ಇದ್ದ ಸಙ್ಗದಿಂದ ಬಿಡಲ್ಪಟ್ಟವನಾಗಿ ಎಂಬರ್ಥವಲ್ಲವೆಂದು ತೋರಿಸುವದಕ್ಕಾಗಿ, **ಸಙ್ಗಾನ್ಮುಕ್ತಃ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಮೂಲದ ಪೂರ್ವಾರ್ಧದಿಂದ ಯಜ್ಞಕ್ಕಾಗಿ ಅಲ್ಲದೆ ಮಾಡಿದ ಕರ್ಮವು ಬಂಧಕವಾಗುತ್ತದೆಂದು ಹೇಳಲ್ಪಟ್ಟಿತು; ಇದರಿಂದ ಯಜ್ಞಾರ್ಥಕ್ಕಾಗಿ ಮಾಡಿದ ಕರ್ಮದಿಂದ ಆಗುವ ಫಲವೇನೆಂಬುದನ್ನು, ಮುಂದಿನ ವಾಕ್ಯದಿಂದ ಸೂಚಿಸುತ್ತಾರೆ. **ಏವಂ** - ಈ ಪ್ರಕಾರವಾಗಿ, **ಮುಕ್ತ ಸಙ್ಗೇನ** - ಕರ್ಮಗಳಲ್ಲಿ ಸಙ್ಗವಿಲ್ಲದೇ ಇರುವವನಿಂದ, **ಯಜ್ಞಾದ್ಯರ್ಥತಯಾ** - ಯಜ್ಞವೇ ಮೊದಲಾದವುಗಳ ಪ್ರಯೋಜನಕ್ಕಾಗಿ, **ಕರ್ಮಣಿ ಕ್ರಿಯಮಾಣೇ** - ಕರ್ಮವು ಮಾಡಲ್ಪಡಲಾಗಿ, ಎಂದರೆ ಶಾಸ್ತ್ರ ಮರ್ಯಾದೆಯೊಂದಿಗೆ ಧರ್ಮವನ್ನು ಅತಿಕ್ರಮಿಸದೇ ಮಾಡಲ್ಪಡಲಾಗಿ, **ಯಜ್ಞಾದಿಭಿಃ ಕರ್ಮಭಿಃ**-ಯಜ್ಞಾದಿ ಕರ್ಮಗಳಿಂದ (ನಿತ್ಯ ನೈಮಿತ್ತಿಕರೂಪ ಪಂಚಮಹಾಯಜ್ಞಾಗಳೂ ಅಂತರ್ಗತವು.) **ಆರಾಧಿತಃ**-ಆರಾಧಿಸಲ್ಪಟ್ಟ, **ಪರಮ ಪುರುಷನು**, ಇದರಿಂದ ಈತನು ಶ್ರದ್ಧೆಯಿಂದ ಸಮರ್ಪಿಸುವ, ಫಲಪುಷ್ಪ ಹವಿಸ್ಸು ಮೊದಲಾದವುಗಳನ್ನು ಸ್ವೀಕರಿಸೋಣವೂ ಮತ್ತು ಅವುಗಳಿಂದ ಪರಮ ಪುರುಷನು ಪ್ರೀತನಾಗೋಣವೂ ಸೂಚಿಸಲ್ಪಟ್ಟವು; **ಅಸ್ಯ** - ಈ ಮೋಕ್ಷಾರ್ಥಿಗೆ, **ಅನಾದಿಕಾಲಪ್ರವೃತ್ತ ಕರ್ಮವಾಸನಾಂ** - ಅನಾದಿ ಕಾಲದಿಂದಲೂ ಅನುಸರಿಸಿ ಬಂದ ಕರ್ಮವಾಸನೆಯನ್ನು, **ಉಚ್ಛಿದ್ಯ**-ನಾಶಗೊಳಿಸಿ, **ಅವ್ಯಾಕುಲಾತ್ಮಾವಲೋಕನಂ** - ಇಂದ್ರಿಯಗಳಿಂದ ವ್ಯಾಕುಲತೆಯನ್ನು ಹೊಂದದ ಆತ್ಮಾವಲೋಕನವನ್ನು, **ದದಾತೀತ್ಯರ್ಥಃ** - ಕೊಡುವನು ಎಂಬ ತಾತ್ಪರ್ಯವು. ಕರ್ತೃತ್ವ ತ್ಯಾಗ ಫಲತ್ಯಾಗಕ್ಕಿಂತ ಈ ಮುಕ್ತ ಸಙ್ಗತ್ವದಲ್ಲಿ ವೈಲಕ್ಷಣ್ಯ ಹೇಗೆ? ಎಂದರೆ ಈ ಯಜ್ಞಾದಿ ಕರ್ಮಗಳು ಪರಮ ಪುರುಷಾರಾಧನರೂಪಕ್ಕಾಗಿಯೇ ವಿನಾ ತನ್ನ ಪ್ರಯೋಜನಕ್ಕಾಗಿ ಅಲ್ಲವೆಂಬ ಭಾವನೆಯಲ್ಲೇ ವೈಲಕ್ಷಣ್ಯವು. ಇಂತಹ ವೈಲಕ್ಷಣ್ಯವಿರುವದರಿಂದಲೇ ಪರಮ ಪುರುಷನು ಪ್ರೀತನಾಗುವದರಿಂದ ಅಪ್ರಾರ್ಥಿತನಾಗಿಯೇ ಮೋಕ್ಷಪ್ರಾಪ್ತಿಗೆ ಮುಖ್ಯವಾಗಿ ಬೇಕಾದ ಆತ್ಮಾವಲೋಕನವನ್ನುಂಟುಮಾಡುತ್ತಾನೆ. ಇದರಿಂದ ಮೋಕ್ಷವು ಕರಗತವಾಗುವದರಲ್ಲಿ ಸಂದೇಹವಿಲ್ಲವೆಂಬುದು ತಾತ್ಪರ್ಯವು. ಮುಂದೆ ೧೮ನೆಯ ಅಧ್ಯಾಯದಲ್ಲಿ ಸ್ವೇಸ್ವೇ ಕರ್ಮಣ್ಯಭಿರತನಾಗಿ, ಸ್ವ

**ಭಾ. ಅ. ಯಜ್ಞಶಿಷ್ಟೇನೈವ ಸರ್ವಪುರುಷಾರ್ಥಸಾಧನ ನಿಷ್ಠಾನಾಂ ಶರೀರ ಧಾರಣ ಕರ್ತ್ತವ್ಯತಾ ಮಯಜ್ಞಶಿಷ್ಟೇನ ಶರೀರ ಧಾರಣಂ ಕುರ್ವತಾಂ ದೋಷಂ ಚಾಹ—**

**ಕರ್ಮಣಾಽಽಹತಮಭ್ಯರ್ಚ್ಯ** ಸಿದ್ಧಿಯನ್ನು ಹೊಂದುವನೆಂದು ಹೇಳಲ್ಪಡುತ್ತದೆ. ಹೀಗೆ **ಪರಮ ಪುರುಷಃ ದದಾತಿ** ಎಂದು ಹೇಳಿದುದರಿಂದ ಯಜ್ಞರೂಪ ಕರ್ಮಗಳೇ ಅಪೂರ್ವದ್ವಾರಾ ಫಲಪ್ರದಗಳೆಂಬ ಮತವು ನಿರಸನಮಾಡಲ್ಪಟ್ಟಿತು. ಕ್ಷಣಿಕಗಳಾದ ಅಚೇತನಗಳಾದ ಕರ್ಮಗಳು ಹೇಗೆ ಸ್ವತಃ ಫಲಪ್ರದಗಳಾಗುವುವು ? ಆದುದರಿಂದ ಯಜ್ಞಾದಿ ಕರ್ಮಗಳಿಂದ ಆರಾಧಿತನಾದ ಪರಮ ಪುರುಷನೇ ಫಲದಾಯಕನು ; ಅನ್ಯ ದೇವತೆಗಳು ಕೂಡ ಅಲ್ಲವು ; ಅನ್ಯದೇವತೆಗಳನ್ನಾರಾಧಿಸಿ ಅವರು ಸುಪ್ರೀತರಾದರೇನೆ ಪರಮ ಪುರುಷನು ಫಲಪ್ರದನಾಗುವನು ಎಂಬ ಭಾವವೂ, ಇದರಿಂದ ನಿರಸ್ತವು, ಏಕೆಂದರೆ ಸರ್ವ ಕರ್ಮಾರಾಧ್ಯನು ಪರಮ ಪುರುಷನೇ ; ಆದುದರಿಂದ ಆತನೇ ಈ ಆತ್ಮಾವಲೋಕನವನ್ನು ಕೊಡುವನೆಂಬಭಿಪ್ರಾಯವು. ಹಾಗೆಯೇ **"ಸ ಏನಂ ಪ್ರೀತಃ ಪ್ರೀಣಾತಿ"** ಎಂಬ ಶ್ರುತಿಯು (ಯಜುಃಷಿ ಕಾ ೫, ಪ್ರ ೫, ಅನು ೧೦, ಪಂ ೪೮) ಹೇಳುತ್ತದೆ, ಸಃ - ಆ ಅಗ್ನ್ಯಂತರ್ಯಾಮಿಯಾದ ಪರಮಾತ್ಮನಾದ ಶ್ರೀಮನ್ನಾರಾಯಣನು, ಪ್ರೀತಃ - ಈ ಕೈಙ್ಕರ್ಯದಿಂದ ಸುಪ್ರೀತನಾಗಿ, ಏನಂ - ಈ ಯಜಮಾನನನ್ನು, ಪ್ರೀಣಾತಿ - ಇಷ್ಟಾರ್ಥವನ್ನು ಕೊಟ್ಟು ಪ್ರೀತಿಗೊಳಿಸುವನು ಎಂಬರ್ಥವು. **ಕರ್ಮಭಿರಾರಾಧಿತಃ** ಎಂಬುದರಿಂದ ಈತನು ಮಾಡುವ ಕೈಙ್ಕರ್ಯ ಸ್ವೀಕಾರವೂ, ಅದರಿಂದುಂಟಾದ ಆತನ ಅನುಗ್ರಹವೂ ಮತ್ತು ಅನೇಕ ಆತ್ಮರುಗಳು ಏಕಕಾಲದಲ್ಲಿ ಕರ್ಮಾನುಷ್ಠಾನಮಾಡಿದರೆ ಅಲ್ಲಿಲ್ಲಾ ಸರ್ವ ಬ್ರಹ್ಮಾಂಡದಲ್ಲೂ ಇದ್ದು ಪರಿಗ್ರಹಿಸುವ ಶಕ್ತಿಯೂ, ಸೂಚಿಸಲ್ಪಟ್ಟವು ; ಆದುದರಿಂದ ಕರ್ಮಗಳ ಮೂಲಕ ಪ್ರೀತನಾದ ಭಗವಂತನನುಗ್ರಹವೇ ಫಲದಾಯಕವಲ್ಲದೆ, ಅಪೂರ್ವವೇ ಆಗಲಿ ಅನ್ಯದೇವತೆಯಾಗಲಿ ಆಗುವದಿಲ್ಲವು. ಅದೂ ಅಲ್ಲದೆ ಅಪೂರ್ವವು ಫಲದಾಯಕವೆಂಬುದಕ್ಕೆ ಪ್ರಮಾಣಬಲವಿಲ್ಲವು,ಅನ್ಯದೇವತಾರಾಧನೆಯು ಮುಂದೆ **ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯನ್ತೇಽನ್ಯದೇವತಾಃ** (ಗೀ. ೭. ೨೦ರಲ್ಲೂ) ಎಂಬಲ್ಲಿ ನಿಷೇಧಿಸಲ್ಪಟ್ಟಿರುತ್ತದೆ. **ದದಾತಿ** ಎಂದು ಹೇಳಿದುದರಿಂದ ಆದಿತ್ಯವರ್ಣಾದಿ ಶ್ರುತಿ ಸಿದ್ಧವಾದ ವಿಗ್ರಹ ವಿಶಿಷ್ಟತೆಯೂ ಸರ್ವ ಬ್ರಹ್ಮಾಂಡದಲ್ಲಿದ್ದುಕೊಂಡು ಏಕ ಕಾಲದಲ್ಲಿ ಅನೇಕರು ಮಾಡುವ ಆರಾಧನೆಗಳನ್ನು ಸ್ವೀಕರಿಸುವ ಶಕ್ತಿಯೂ, ಅವುಗಳಿಂದ ಪ್ರೀತನಾಗಿ ಅವರುಗಳ ಇಷ್ಟಾರ್ಥವನ್ನು ಕೊಡುವ ಶಕ್ತಿಯೂ ಹೀಗೆ ಇವೆಲ್ಲಾ ಉಂಟೆಂಬುದು ಸೂಚಿತವು. ಇದು **ಸರ್ವಾರ್ಥಸಿದ್ಧಿ** ಯ ೬೮ನೆಯ ಶ್ಲೋಕದಲ್ಲಿ ಉಪಪಾದಿತವು, ಅಲ್ಲಿ ವಿಗ್ರಹಾದಿ ಪಂಚಕ ನಿರಾಕರಣೆಗೆ ಪರಿಹಾರವು ಹೇಳಲ್ಪಟ್ಟಿರುತ್ತದೆ. ||೯||

**ಭಾಷ್ಯಾವತಾರಿಕೆಯ ಅರ್ಥವು :—ಯಜ್ಞಶಿಷ್ಟೇನೈವ** - ಯಜ್ಞಶೇಷವಾದ ಅನ್ನದಿಂದಲೇ ಎಂದರೆ ಪರಮ ಪುರುಷನಿಗೆ ನಿವೇದಿತವಾದ ಅನ್ನದಿಂದಲೇ, **ಸರ್ವ ಪುರುಷಾರ್ಥ ಸಾಧನ ನಿಷ್ಠಾನಾಂ** - ಸಮಸ್ತ ಪುರುಷಾರ್ಥಗಳನ್ನೂ ಸಾಧಿಸಿಕೊಳ್ಳಬೇಕೆಂದಿರುವವರಿಗೆ, **ಶರೀರ ಧಾರಣ ಕರ್ತ್ತವ್ಯತಾಂ** - ಶರೀರ ಧಾರಣವನ್ನು ಮಾಡತಕ್ಕದ್ದೆಂಬುದನ್ನೂ, **ಅಯಜ್ಞ ಶಿಷ್ಟೇನ** - ಪರಮ ಪುರುಷನಿಗೆ ನಿವೇದನಮಾಡಲ್ಪಡದ ಅನ್ನದಿಂದ, **ಶರೀರ ಧಾರಣಂ ಕುರ್ವತಾಂ** - ಶರೀರ ಧಾರಣೆಯನ್ನು ಮಾಡುವವರಿಗೆ (ಉಂಟಾಗುವ) **ದೋಷಂ ಚಾಹ** – ದೋಷವನ್ನೂ ಸಹ ಹೇಳುತ್ತಾರೆ. ಈ ಮೇಲಿನವತಾರಿಕೆಯು ಈ **ಸಹಯಜ್ಞಾಃ** ಎಂಬ ಶ್ಲೋಕ ಮೊದಲುಗೊಂಡು, **ಮೋಘಂ ಪಾರ್ಥ ಸ ಜೀವತಿ** ಎಂಬ ಶ್ಲೋಕಾಂತ್ಯದ ವರೆಗೂ ಏಳು ಶ್ಲೋಕಗಳಿಗೂ ಅನ್ವಯಿಸುತ್ತದೆ. ಅದುದರಿಂದ ಈ ಏಳು ಶ್ಲೋಕಗಳಲ್ಲೂ ಈ ಅವತಾರಿಕೆ

**ಮೂ.** ಸಹ ಯಜ್ಞೈಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವ ಮೇಷವೋಽಸ್ತ್ವಿಷ್ಟ ಕಾಮಧುಕ್ ॥ ೧೦.

ಯಲ್ಲಿ ಹೇಳಲ್ಪಟ್ಟಭಿಪ್ರಾಯವೇ ಉಪಪಾದಿತವಾಗಿವೆ ಎಂದು ತಿಳಿಯತಕ್ಕದ್ದು. ಇದರಿಂದ ಯಜ್ಞಾನುಷ್ಠಾನಗಳನ್ನುಮಾಡಿ ಅದರಿಂದ ದೇವತೆಗಳ ಅಥವಾ ಪರಮಾತ್ಮನ ಪ್ರೀತಿಯನ್ನು ಸಂಪಾದಿಸಿ, ಆ ಯಜ್ಞಾವಶಿಷ್ಟಾನ್ನದಿಂದ ದೇಹಧಾರಣೆ ಮಾಡಿದವರಿಗೆ ಅವರುಗಳು ಕೋರಿದ ಪ್ರಕಾರ ಐಹಿಕಭೋಗಗಳನ್ನಾಗಲಿ, ಸ್ವರ್ಗಸುಖವನ್ನಾಗಲಿ, ಅಥವಾ ನಿರತಿಶಯ ಮೋಕ್ಷವನ್ನಾಗಲಿ ಹೀಗೆ ಚತುರ್ವಿಧ ಪುರುಷಾರ್ಥಗಳೂ ಪರಮಾತ್ಮನಿಂದ ಉಂಟಾಗುತ್ತವೆ. ಹಾಗಲ್ಲದೆ,ಯಜ್ಞಾನುಷ್ಠಾನಗಳಿಲ್ಲದೆ ದೇವತೆಗಳನ್ನೂ ಪರಮ ಪುರುಷನನ್ನೂ ಪ್ರೀತಿಗೊಳಿಸದೆ, ಹಾಗೆ ಯಜ್ಞಶಿಷ್ಟವಲ್ಲದ ಆಹಾರದಿಂದ ದೇಹವನ್ನು ಬೆಳಸಿದರೆ, ಯಾವ ಪುರುಷಾರ್ಥವೂ ಇಲ್ಲವು; ಪ್ರತ್ಯುತ ದೋಷವೂ ಉಂಟೆಂದು ಮುಂದೆ ಉಪಪಾದಿಸಲ್ಪಡುತ್ತದೆಂಬುದು ಅಭಿಪ್ರಾಯವು.

**ಮೂಲಕ್ಕೆ ಅರ್ಥವು:—**ಹಿಂದೆ ಭಗವತ್ಪ್ರೀತಿಯನ್ನುಂಟುಮಾಡುವ ಯಜ್ಞಾದಿ ಕರ್ಮಗಳನ್ನೇ ಭಗವತ್ಪ್ರೀತ್ಯರ್ಥವಾಗಿ ಅಲ್ಲದೆ ಇನ್ನು ಯಾವ ಪ್ರಯೋಜನಕ್ಕಾಗಿಯೂ ಮಾಡಬೇಡ. ಇದರಿಂದ ನಿನಗೆ ಭಗವದನುಗ್ರಹ ಉಂಟಾಗಿ, ಪಾಪಗಳು ತೊಲಗಿ ಸಿದ್ಧಿಗೆ ಬೇಕಾದ ಆತ್ಮಾವಲೋಕನವು ಉಂಟಾಗುತ್ತದೆಂದು ಹೇಳಿದರು. ಆಗಲಿ, ಈ ಯಜ್ಞಾನುಷ್ಠಾನಗಳನ್ನು ಏತಕ್ಕೆ ಮಾಡತಕ್ಕದ್ದು ಎಂದು ಪ್ರಶ್ನಿಸಿದರೆ ಅದಕ್ಕೆ ಕಾರಣವನ್ನು ತಿಳಿಸುತ್ತಾರೆ. **ಪ್ರಜಾಪತಿಃ** - ಬ್ರಹ್ಮರುದ್ರೇಂದ್ರಾದಿಗಳು ಮೊದಲುಗೊಂಡು ಸಮಸ್ತ ಪ್ರಜೆಗಳಿಗೂ ಸ್ವಾಮಿಯಾದ ಸರ್ವೇಶ್ವರನು, **ಸಹ ಯಜ್ಞೈಃ** - ಯಜ್ಞಗಳೊಂದಿಗೆ, (ಸಹ **ಯಜ್ಞಾಃ** ಎಂಬುದು ಶಂಕರ ಪಾಠವು, ಆವಾಗ ಪ್ರಜಾಃ ಎಂಬುದಕ್ಕೆ ವಿಶೇಷಣವು) **ಪ್ರಜಾಃ** - ಹಿರಣ್ಯಗರ್ಭನೇ ಮೊದಲಾದ ಪ್ರಜೆಗಳನ್ನು, **ಪುರಾ** - ಹಿಂದೆ ಎಂದರೆ ಪ್ರಳಯವಾದನಂತರ ಸೃಷ್ಟಿಕಾಲದಲ್ಲಿ, **ಸೃಷ್ಟ್ವಾ** - ಕರಣ ಕಳೇಬರ ಪ್ರದಾನದಿಂದ ಸೃಷ್ಟಿಸಿ, ಆ ಪ್ರಜೆಗಳನ್ನು ಕುರಿತು, **ಉವಾಚ** - ಹೇಳಿದನು. ಏನನ್ನು ಹೇಳಿದನೆಂಬುದನ್ನು ಈ ಶ್ಲೋಕದ ಉತ್ತರಾರ್ಧದಿಂದಲೂ ಮುಂದಿನ ಎರಡು ಶ್ಲೋಕಗಳಿಂದಲೂ, ಉಪಪಾದಿಸಿರುತ್ತಾರೆ, **ಅನೇನ** - ಈ ಯಜ್ಞ ಮೂಲಕವಾಗಿ, **ಪ್ರಸವಿಷ್ಯಧ್ವಂ** ವೃದ್ಧಿಯನ್ನು ಮಾಡಿಕೊಳ್ಳುವಿರಿ ಎಂದರೆ ಸರ್ವ ಶ್ರೇಯಸ್ಸನ್ನೂ ನೀವು ಪಡೆಯುವಿರಿ ಎಂಬ ತಾತ್ಪರ್ಯವು. ಅದನ್ನೇ ವಿಶದೀಕರಿಸುತ್ತಾರೆ, **ವಃ**-ನಿಮಗೆ, **ಏಷಃ** - ಈ ಯಜ್ಞವು ಎಂದರೆ ಪರಮ ಪುರುಷಾರಾಧನವೇಷದಿಂದ ವಿಹಿತಕರ್ಮಗಳ ಅನುಷ್ಠಾನವು, **ಇಷ್ಟಕಾಮಧುಕ್** - ಚತುರ್ವಿಧ ಅಭೀಷ್ಟಗಳನ್ನು ಕೊಡುವ ಕಾಮಧೇನುವು, **ಅಸ್ತು** - ಆಗಲಿ. (ಇಲ್ಲಿ ಪ್ರಜಾಪತಿ ಶಬ್ದವು ಪರಮ ಪುರುಷನನ್ನು ಬೋಧಿಸುತ್ತೆಯೇ ವಿನಾ, ಚತುರ್ಮುಖನನ್ನು ಬೋಧಿಸುವದಿಲ್ಲವು. ಸರ್ವೇಶ್ವರನೇ ಮಾತನಾಡುವಾಗ **ಅಹಂ** ಎಂದು ಹೇಳಿಕೊಳ್ಳದೆ **ಪ್ರಜಾಪತಿಃ** ಎಂಬ ಪ್ರಯೋಗವೇತಕ್ಕೆ? ಎಂದರೆ, **ಪತಿಂ ವಿಶ್ವಸ್ಯ** ಎಂಬಲ್ಲಿ ತೋರಿಬರುವ ಅರ್ಥವನ್ನು ಉಪಪಾದಿಸಿ, ಸರ್ವಚೇತನರಿಗೂ ತಾನು ಸ್ವಾಮಿಯಾಗಿ ತನ್ನ ನಿರ್ಹೇತುಕ ಕೃಪೆಯಿಂದ ಅವರಿಗೆ ಬೇಕಾದ ಇಷ್ಟಾರ್ಥಗಳನ್ನೆಲ್ಲಾ **"ವಿದಧಾತಿ ಕಾಮಾನ್"** ಎಂಬಲ್ಲಿ ಹೇಳಿರುವಹಾಗೆ ಉಂಟುಮಾಡುವವನು ತಾನೇ ಎಂದು ತೋರಿಸುವದಕ್ಕಾಗಿ ಎಂದು ತಿಳಿಯತಕ್ಕದ್ದು. ಚತುರ್ಮುಖನೂ ಕೂಡ ಸೃಷ್ಟಿ ಕರ್ತನೆಂದು ಹೇಳಲ್ಪಡುವದರಿಂದ ಶ್ರೀಕೃಷ್ಣನು ಅಹಂ ಎಂದು ಹೇಳದೆ ಮೂರನೆಯವನಹಾಗೆ **ಪ್ರಜಾಪತಿಃ** ಎಂದು ಹೇಳಿರುವದರಿಂದ,ಚತುರ್ಮುಖನೆಂದೇ ಅರ್ಥಮಾಡುವದು ಯುಕ್ತವಲ್ಲವೇ? ಎಂದರೆ, ಸ್ವಾಮಿಯಿಂದ ಆಜ್ಞಪ್ತನಾಗಿ ಆತನ ಇಷ್ಟಾನುಸಾರ ವ್ಯಷ್ಟಿ ಸೃಷ್ಟಿಯನ್ನು ಮಾಡುವ

ಭಾ. (೧) "ಪತಿಂ ವಿಶ್ವಸ್ಯ" ಇತ್ಯಾದಿ ಶ್ರುತೇ ರ್ನಿರುಪಾಧಿಕಃ ಪ್ರಜಾಪತಿ ಶಬ್ದಃ ಸರ್ವೇ

ಅಧಿಕಾರ ಉಳ್ಳವನು ಚತುರ್ಮುಖನು. ಸಮಷ್ಟಿ ಮೊದಲಾದ ಸರ್ವ ಸೃಷ್ಟಿಗೆ ಅಧಿಪನು ಪರಮ ಪುರುಷನೇ; ಅದೂ ಅಲ್ಲದೆ ಪುರಾಸೃಷ್ಟ್ವಾ ಎಂದು ಹೇಳಿರುವದರಿಂದ ಮೊದಲು ಪ್ರಳಯವನ್ನುಂಟುಮಾಡಿ ಅನಂತರ ಸೃಷ್ಟಿಸಿದವನೆಂಬರ್ಥ ಬರುವದರಿಂದ ಪ್ರಳಯವನ್ನುಂಟುಮಾಡುವ ಶಕ್ತಿಯು ಚತುರ್ಮುಖನಿಗಿಲ್ಲವು. ಆದುದರಿಂದ ಪ್ರಜಾಪತಿಯು ಶ್ರೀಕೃಷ್ಣಭಗವಂತನೇ; ಪ್ರಳಯವೆಂದರೆ ಈ ಸಮಸ್ತ ಜಗತ್ತಿನ ಸ್ಥೂಲಪ್ರಕೃತಿಯೂ ಚೇತನರೂ ಅತಿಸೂಕ್ಷ್ಮದೆಶೆಯನ್ನು ಹೊಂದುವರಿಂದ ರೂಪ ಹೆಸರುಗಳಿಲ್ಲದೆ ತಟಸ್ಥವಾಗಿ ಯಾವ ಕೆಲಸವೂ ನಡೆಯದಿರುವ ದೆಶೆಯು. ಹೀಗೆ ಪರಮಾತ್ಮನು ಸೂಕ್ಷ್ಮ ಚಿದಚಿದ್ವಿಶಿಷ್ಟನಾಗಿರುವನು. ಅನಂತರ ಸರ್ವೇಶ್ವರನು, ತನ್ನ ನಿರ್ಹೇತುಕ ಕೃಪೆಯಿಂದ ಜಗತ್ಸೃಷ್ಟಿಯನ್ನು ಮಾಡಲಾರಂಭಿಸಿ, ಪ್ರಕೃತಿ ಚೇತನರ ಸಮ್ಮೇಳನವು ಸ್ಥೂಲರೂಪವನ್ನೂ ನಾನಾವಿಧ ಹೆಸರುಗಳನ್ನೂ ಹೊಂದಿ, ಅವುಗಳೇ ತನಗೆ ಶರೀರ ವಾಗಿ ತಾನು ಅವುಗಳಿಗೆ ಆತ್ಮವಾಗಿ ಮಾಡಿಕೊಳ್ಳುತ್ತಾನೆ. ಈ ಕರಣ ಕಳೇಬರ ಯೋಗದಿಂದ ಅವರು ತನ್ನನ್ನು ತಿಳಿಯುವ ಹಾಗೆ ಜ್ಞಾನ ವಿವೇಕಗಳನ್ನೂ ಕೊಟ್ಟು, ಅವರುಗಳು ತಮಗೆ ಸುಖವನ್ನುಂಟುಮಾಡಿಕೊಳ್ಳುವ ಯಜ್ಞಯಾಗಾದಿ ಶಾಸ್ತ್ರೀಯ ಕರ್ಮಗಳ ಅನುಷ್ಠಾನವು ಒಳ ಗೊಂಡಿರುವ ವೇದ ಮತ್ತು ಅವುಗಳ ಉಪಬೃಹ್ಮಣರೂಪ ಶಾಸ್ತ್ರಗಳನ್ನು ಕೊಟ್ಟು, ಅವುಗಳನ್ನು ಉಪದೇಶಿಸುವ ಶಾಸ್ತ್ರಜ್ಞರನ್ನೂ ಒದಗಿಸಿ ಕೊಟ್ಟು (ಇವೆಲ್ಲವೂ ಸೃಷ್ಟಿಕ್ರಮದಲ್ಲೇ ಅಡಗಿದವು) **ಅನೇನ ಪ್ರಸವಿಷ್ಯಧ್ವಂ** ಇದರಿಂದ ಎಂದರೆ, **ಯಜ್ಞಾದಿಗಳಿಂದ** ನೀವುಗಳು ಸರ್ವ ಶ್ರೇಯಸ್ಸನ್ನು ಪಡೆಯಿರಿ ಎಂದೂ, **ಏಷವೋಸ್ತ್ವಿಷ್ಟಕಾಮಧುಕ್** - ಇದು ನಿಮಗೆ ಸರ್ವ ಶ್ರೇಯಸ್ಸನ್ನೂ ಕರೆಯುವ ಕಾಮಧೇನುವಾಗಲಿ ಎಂದು ಪರಮ ಪುರುಷನು ಹರಸಿದನು; ಪ್ರಥಮತಃ ಚತುರ್ಮುಖನನ್ನು ಅಂಡಸೃಷ್ಟಿಯಲ್ಲಿ ತನ್ನ ನಾಭೀಕಮಲದಿಂದ ಉತ್ಪನ್ನನಾಗುವ ಹಾಗೆ ಮಾಡಿ ದುದರಿಂದ ತಾನು ಚತುರ್ಮುಖನಿಗೂ, ಈ ಭಗವಂತನಾಜ್ಞೆಯು ಆತನು ತನ್ನ ಮಕ್ಕಳಿಗೂ ಹೀಗೆ ಪರಂಪರೆಯಾಗಿ ಹೇಳಲ್ಪಟ್ಟತೆಂದು ಭಾವಿಸತಕ್ಕದ್ದು. ಅಚಿತ್ಪ್ರಾಯರಾಗಿ ಪ್ರಳಯದಲ್ಲಿದ್ದವರಿಗೆ ಇಷ್ಟೆಲ್ಲಾ ಮಹೋಪಕಾರವನ್ನೆಸಗಿದ ಸರ್ವೇಶ್ವರನ ಕೃಪಾಪ್ರಭಾವವನ್ನು ಸೂಚಿಸುವ ಶ್ಲೋಕವಿದು. **ಪ್ರಜಾಃ ಸೃಷ್ಟ್ವಾ** ಎಂಬ, ಮತ್ತು **ಪ್ರಜಾಪತಿಃ** ಎಂಬ, ಮತ್ತು **ವಃ** - ಎಂಬ, ಪ್ರಯೋಗಗಳೂ, ಮತ್ತು ಪ್ರಜಾಪತಿಯು ಸರ್ವ ಶ್ರೇಯಸ್ಸಿನ ಪ್ರದಾತಾ ಎಂಬ ಅದನ್ನು ಪಡೆಯು ವರು ಅವನಿಗಿಂತ ಬೇರೆಯಾದ ಪ್ರಜೆಗಳೆಂಬ ಅಭಿಪ್ರಾಯವೂ, ಇರುವ ಈ ಶ್ಲೋಕವು, ಲೋಕದಲ್ಲಿರುವರೆಲ್ಲಾ ಒಂದೇ ಆತ್ಮಾ ಎಂಬ ಅದ್ವೈತಾಭಿಪ್ರಾಯಕ್ಕೆ ಅನುಕೂಲಿಸುವದಿಲ್ಲವು. ಏತಕ್ಕೆಂದರೆ ಆತನ ಕೃಪಾಪ್ರಭಾವವನ್ನು ಉಪಯೋಗಿಸಿಕೊಳ್ಳುವ ಎರಡನೆಯವರೇ ಇಲ್ಲವಾದರೆ ಆತನಿಗೆ ಕೃಪಾ ಮಹೋದಧಿ ಎಂಬ ನಾಮವೇ ಸಲ್ಲಲು ಅನುಕೂಲವಿಲ್ಲವು. ||೧೦||

**ಭಾಷ್ಯಾರ್ಥವು :—ಪ್ರಜಾಪತಿ ಶಬ್ದದಿಂದ** ಯಾರು ಹೇಳಲ್ಪಟ್ಟರೆಂಬುವದನ್ನು ಪ್ರಥಮತಃ ನಿರ್ಧರಿಸುತ್ತಾರೆ. **"ಪತಿಂ ವಿಶ್ವಸ್ಯ"** ಎಂದರೆ ಸಮಸ್ತ ವಿಶ್ವಕ್ಕೂ ಶೇಷಿಯು, **ಇತ್ಯಾದಿಶ್ರುತೇಃ** - ತಾತ್ಪರ್ಯವುಳ್ಳ ಎಂಬಿವೇಮೊದಲಾದ ಶ್ರುತಿ ಪ್ರಮಾಣಮೂಲಕವಾಗಿ ನಿರುಪಾಧಿಕವಾದ ಪ್ರಜಾಪತಿಶಬ್ದವು, **ಸರ್ವೇಶ್ವರಂ** - ಸರ್ವಕ್ಕೂ ನಿಯಾಮಕನಾಗಿರುವ, **ವಿಶ್ವಸ್ಯ ಸ್ರಷ್ಟಾರಂ** - ವಿಶ್ವಕ್ಕೆಲ್ಲಾ ಸೃಷ್ಟಿಕರ್ತಾವಾದ, **ವಿಶ್ವಾತ್ಮಾನಂ** - ಸಮಸ್ತವಿಶ್ವವನ್ನು

(೧) ಪುರುಷಸೂಕ್ತ.

ಭಾ- ಶ್ವರಂ ವಿಶ್ವಸ್ಯ ಸ್ರಷ್ಟಾರಂ ವಿಶ್ವಾತ್ಮಾನಂ ನಾರಾಯಣಮಾಹ. ಪುರಾ- ಸರ್ಗ ಕಾಲೇ, ಸಃ ಭಗವಾನ್ ಪ್ರಜಾಪತಿರನಾದಿಕಾಲಪ್ರವೃತ್ತಾಚಿತ್ಸಂಸರ್ಗವಿವಶಾ ಉಪ ಸಂಹೃತನಾಮರೂಪವಿಭಾಗಾ ಸ್ವಸ್ಮಿನ್ಪ್ರಲೀನಾಃ ಸಕಲಪುರುಷಾರ್ಥಾನರ್ಹಾಶ್ಚೇತನೇ ತರಕಲ್ಪಾಃ ಪ್ರಜಾ ಸ್ಸಮೀಕ್ಷ್ಯ ಪರಮಕಾರುಣಿಕ ಸ್ತದುಜ್ಜಿಜೀವಯಿಷಯಾ ಸ್ವಾರಾ ಧನ ಭೂತಯಜ್ಞನಿರ್ವೃತ್ತಯೇ ಯಜ್ಞೈಸ್ಸಹ ತಾಸ್ಸೃಷ್ಟ್ವೇತ್ಥಮುವಾಚ :—

ಶರೀರವಾಗಿ ಹೊಂದಿ, ಅವನ್ನೆಲ್ಲಾ ಪ್ರವೇಶಿಸಿ, ಅದಕ್ಕೆಲ್ಲಾ ಅಂತರಾತ್ಮನಾದ, ನಾರಾಯಣಂ– ಶ್ರೀಮನ್ನಾರಾಯಣನನ್ನು, ಆಹ - ಬೋಧಿಸುತ್ತದೆ, ಪುರಾ ಎಂದರೆ ಸರ್ಗಕಾಲೇ - ಸೃಷ್ಟಿ ಕಾಲದಲ್ಲಿ, ಸ ಭಗವಾನ್ ಪ್ರಜಾಪತಿಃ - ಆ ಹೇಯಪ್ರತ್ಯನೀಕನಾಗಿ ಕಲ್ಯಾಣಗುಣಾಕರನಾದುದ ರಿಂದ ಭಗವಚ್ಛಬ್ದವಾಚ್ಯನಾದ ಪ್ರಜೆಗಳಿಗೆಲ್ಲಾ ಸ್ವಾಮಿಯಾದ ಸರ್ವೇಶ್ವರನು, ಅನಾದಿಕಾಲ ಪ್ರವೃತ್ತಾಚಿತ್ಸಂಸರ್ಗವಿವಶಾಃ - ಅನಾದಿಕಾಲದಿಂದಲೂ ಅನುಸರಿಸಿ ಬಂದ ಅಚಿತ್ಸಂಬಂ ಧದಿಂದ ಪರತಂತ್ರರಾಗಿಯೂ, ಉಪಸಂಹೃತನಾಮರೂಪವಿಭಾಗಾಃ - ನಾಮರೂಪವಿಭಾಗ ಗಳಿಲ್ಲದೆ ವ್ಯವಹರಿಸುವದಕ್ಕಾಗದ ಅವಸ್ಥೆಯನ್ನು ಹೊಂದಿದವರಾಗಿಯೂ. ಸ್ವಸ್ಮಿನ್ ಪ್ರಲೀನಾಃ– ತನ್ನಲ್ಲೇ ಲೀನವಾಗಿರುವ, ಸಕಲ ಪುರುಷಾರ್ಥಾನರ್ಹಾಃ-ಚತುರ್ವಿಧವಾದ ಸಕಲ ಪುರುಷಾರ್ಥ ಗಳನ್ನು ಸಾಧಿಸಲನರ್ಹರಾಗಿಯೂ, ಚೇತನೇತರ ಕಲ್ಪಾಃ - ಅಚೇತನಗಳಿಗೆ ಸಮಾನರಾ ಗಿಯೂ ಇರುವ, ಪ್ರಜಾಃ - ಪ್ರಜೆಗಳನ್ನು, ಅವೇಕ್ಷ್ಯ - ತನ್ನ ನಿರ್ಹೇತುಕ ಕೃಪೆಯಿಂದ ಅವಲೋಕಿಸಿದವನಾಗಿ, ಪರಮಕಾರುಣಿಕಃ-ಆದುದರಿಂದಲೇ ನಿರತಿಶಯ ಕಾರುಣ್ಯನಿಧಿಯಾದ ಸರ್ವೇಶ್ವರನು, ತದುಜ್ಜಿಜೀವಯಿಷಯಾ–ತನಗೇನೂ ಪ್ರಯೋಜನವಿಲ್ಲದಿದ್ದರೂ ಆಶ್ರಿತಜನ ಗಳ ಉಜ್ಜೀವನಕ್ಕಾಗಿ ಎಂದರೆ ಅವರುಗಳು ಶ್ರೇಯಸ್ಸನ್ನು ಹೊಂದುವದಕ್ಕಾಗಿ, ಸ್ವಾರಾಧನ ಭೂತಯಜ್ಞನಿರ್ವೃತ್ತಯೇ - ತನಗೆ ಆರಾಧನರೂಪವಾದ ಯಜ್ಞವನ್ನು ಮಾಡುವದಕ್ಕಾಗಿ, ಯಜ್ಞೈಸ್ಸಹ - ಯಜ್ಞಗಳೊಂದಿಗೆ, ತಾಃ–ಆ ಪ್ರಜೆಗಳನ್ನು, ಸೃಷ್ಟ್ವಾ-ಸೃಷ್ಟಿಸಿ, ಉವಾಚ - ಹೇಳಿದನೇನೆಂದರೆ :—

ಮೂಲದಲ್ಲಿರುವ ಪ್ರಜಾಪತಿ ಶಬ್ದವು ಕೆಲವರು ಚತುರ್ಮುಖನನ್ನು ಬೋಧಿಸುತ್ತದೆಂದು ಅಭಿಪ್ರಾಯಪಡುವರು. ಹಾಗೆ ಹೇಳಲು ಕಾರಣವೇನೆಂದರೆ (೧) ಅಂಡಸೃಷ್ಟಿಯಾದನಂತರ ಪರ ಮಾತ್ಮನು ಮುಂದೆ ಎಲ್ಲಾ ಸೃಷ್ಟಿಯನ್ನು ಚತುರ್ಮುಖನ ಮೂಲಕ ನಡೆಸುವದರಿಂದಲೂ, (೨) ಪ್ರಜಾಪತಿ ಶಬ್ದವು ಚತುರ್ಮುಖನನ್ನೂ ಬೋಧಿಸುವದರಿಂದಲೂ, ಹಾಗೆ ಅಭಿಪ್ರಾಯಪಡುವರು. ಆದರೆ ಚತುರ್ಮುಖನೂ "ಪ್ರಜಾಃ" ಎಂಬ ಶಬ್ದದಲ್ಲೇ ಅಂತರ್ಭೂತನಾದುದರಿಂದಲೂ, ಆತ ನಿಗೆ ಮೋಕ್ಷಪ್ರದತ್ವವಿಲ್ಲದುದರಿಂದಲೂ, ಚತುರ್ಮುಖನು ಇಲ್ಲಿ ಹೇಳಲ್ಪಡಲಿಲ್ಲವು. ಆದರೆ ಪ್ರಜಾಪತಿ ಶಬ್ದದಿಂದ ಏಕೆ ಹೇಳಲ್ಪಟ್ಟನು? ಇನ್ನು ಯಾವುದಾದರೂ ಇತರ ನಾಮಗಳಿಂದ ಹೇಳ ಲ್ಪಡಕೂಡದೆ? ಎಂದರೆ, ಹಿಂದೆ "ಪ್ರಜಾಃ ಸೃಷ್ಟ್ವಾ" ಎಂದಿರುವದರಿಂದ ಅಂತಹ ಪ್ರಜೆಗಳಿಗೆ ಪತಿ ಎಂದರೆ ಶೇಷಿಯು ಎಂದು ತಿಳಿಸುವದಕ್ಕಾಗಿ ಪ್ರಜಾಪತಿ ಶಬ್ದವೇ ಇಲ್ಲಿ ಸಮಂಜಸವಾ ದುದು. ಕೃಷ್ಣನು ತಾನೇ ಪರತತ್ವವಾದುದರಿಂದ ಆ ಭಾವನೆಯಿಂದ ಅಹಂ ಎಂದು ಏಕೆ ಹೇಳ ಬಾರದಿತ್ತು ಎಂದಾಕ್ಷೇಪಿಸಿದರೆ, ಈಗ ಆತನು ಮಾನುಷ ವೇಷಧಾರಿಯಾಗಿ ಲೀಲಾಸಾರಥಿಯಾಗಿರು ವದರಿಂದಲೂ, ಇಲ್ಲಿ ಪ್ರಜಾಃ ಸೃಷ್ಟ್ವಾ ಎಂದು ಹೇಳಿರುವದರಿಂದ ಆ ಪ್ರಜೆಗಳಿಗೆ ನಿಯಾಮಕ ನಾದ ಸ್ವಾಮಿಯೆಂದು ಹೇಳುವದಕ್ಕಾಗಿಯೂ ಪ್ರಜಾಪತಿಶಬ್ದವೇ ಇಲ್ಲಿ ಸರ್ವಸಮಂಜಸವಾದುದು.

ಪ್ರಜಾಪತಿ ಶಬ್ದವೇ ಶ್ರುತಿಯಲ್ಲಿ ಅನೇಕ ಕಡೆಗಳಲ್ಲಿ ನಿರುಪಾಧಿಕವಾಗಿ ಪರಮಾತ್ಮನನ್ನೇ ಬೋಧಿಸುತ್ತದೆ; ಚತುರ್ಮುಖನಲ್ಲಿ ಆ ಶಬ್ದವು ಔಪಚಾರಿಕವು. (೧) "ಪ್ರಜಾಪತಿಶ್ಚರತಿ ಗರ್ಭೇ ಅಂತಃ", ಪ್ರಜಾಪತಿಃ - ಪ್ರಜೆಗಳಿಗೆ ಶೇಷಿಯಾದ ಶ್ರೀಮನ್ನಾರಾಯಣನು, ಸಮಸ್ತರ ಗರ್ಭೇ – ಹೃದಯದಲ್ಲಿ, ಅಂತಶ್ಚರತಿ - ಒಳಗೆ ಪ್ರವೇಶಿಸಿರುತ್ತಾನೆಂಬ ಭಾವವು (೨) "ಪತಿಂ ವಿಶ್ವಸ್ಯಾತ್ಮೇಶ್ವರಂ" ಇಲ್ಲಿಯೂ ವಿಶ್ವಸ್ಯಪತಿ ಎಂಬುದರಿಂದ ಪರಮಾತ್ಮನೇ ಹೇಳಲ್ಪಟ್ಟನು. ಮುಂದೆ ಶ್ರುತಿಯಲ್ಲಿ "ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ" ಎಂದಿರುವ ಭಾಗವನ್ನು ಮನಸ್ಸಿನಲ್ಲಿಟ್ಟು ವಿಶ್ವಾತ್ಮಾನಂ ಪರಾಯಣಂ ನಾರಾಯಣಮಾಹ ಎಂದು ಪ್ರಯೋಗಿಸಿರುತ್ತಾರೆ. ಇಲ್ಲಿ ನಾರಾಯಣಶಬ್ದವನ್ನು ಪ್ರಜಾಪತಿ ಶಬ್ದವ್ಯಾಖ್ಯಾನದಲ್ಲಿ ಹೇಳಿರುವ ಅಭಿಪ್ರಾಯವೇನೆಂದರೆ, ಪರಬ್ರಹ್ಮವನ್ನು ಬೋಧಿಸುವ ಎಲ್ಲಾ ಶಬ್ದಗಳಿಗಿಂತಲೂ ತತ್ಪುರುಷ ಬಹುವ್ರೀಹಿ ಅರ್ಥಗಳಿಂದ ಆತನ ಪರತ್ವ ಮೊದಲಾದ ಸರ್ವ ವಿಶೇಷಣಗಳನ್ನೂ ಬೋಧಿಸುವ ಶಕ್ಯಾರ್ಥವು ಪುರುಷಸೂಕ್ತ ನಾರಾಯಣ ಸೂಕ್ತಗಳಲ್ಲಿ ವೇದ್ಯವು. ಶ್ರೀ ಪರಾಶರರು ಸರ್ವಸ್ರಷ್ಟಾ ಯಾರೆಂದರೆ ಹೇಳುತ್ತಾರೆ. ಜಗತ್ಪತಿಂ ವಿಷ್ಣುಂ ಸರ್ವ ಸ್ರಷ್ಟಾರ ಮೀಶ್ವರಮ್ ಎಂದು ಹೇಳಿರುವದರಿಂದ ಪುರಾಸೃಷ್ಟ್ವಾ ಪ್ರಜಾಪತಿಃ ಎಂಬಲ್ಲಿ ಪ್ರಜಾಪತಿ ಶಬ್ದದಿಂದ ಹೇಳಲ್ಪಟ್ಟವನು ಶ್ರೀಮಹಾವಿಷ್ಣುವಿನ ಅವತಾರಿಯಾದ ಶ್ರೀ ಕೃಷ್ಣನೇ ಎಂದು ಭಾವಿಸತಕ್ಕದ್ದು. ಶ್ರೀ ಯುಧಿಷ್ಠಿರನು ಶ್ರೀ ಭೀಷ್ಮರನ್ನು ಕೇಳುತ್ತಾನೆ ಏನೆಂದರೆ. (೧) "ಕುತಸ್ಸೃಷ್ಟಮಿದಂ ಸರ್ವಂ ಜಗತ್ಸ್ಥಾವರ ಜಙ್ಗಮಂ। ಪ್ರಲಯೇಚ ಕಿಮಭ್ಯೇತಿ ತನ್ಮೇಬ್ರೂಹಿ ಪಿತಾಮಹ" ಸೃಷ್ಟಿಪ್ರಳಯಕರ್ತಾ ಯಾರೆಂಬುದಕ್ಕೆ ಉತ್ತರವು. "ನಾರಾಯಣೋ ಜಗನ್ಮೂರ್ತಿಃ ಅನ್ತರಾತ್ಮಾ ಸನಾತನಃ" ಎಂಬದಾಗಿ. ಆದುದರಿಂದಲೇ ಭೀಷ್ಮರು ಯುಧಿಷ್ಠಿರರಿಗೆ "ನಮೋ ನಾರಾಯಣೇತಿ ಮನ್ತ್ರಸ್ಸರ್ವಾರ್ಥ ಸಾಧಕಃ" ಎಂದು ಅಮೋಘೋಪದೇಶವನ್ನು ಮಾಡಿದರು. ಇದನ್ನೆಲ್ಲಾ ಮನಸ್ಸಿನಲ್ಲಿಟ್ಟೇ ಪ್ರಜಾಪತಿಶಬ್ದವು ವಿಶ್ವಾತ್ಮಾನಂ ನಾರಾಯಣಮಾಹ ಎಂಬ ಸಾರವತ್ತಾದ ವ್ಯಾಖ್ಯಾನವು. "ಸರ್ವಭೂತಾಂತರಾತ್ಮಾ" ಎಂದು ಇನ್ನೊಂದು ಕಡೆಯಲ್ಲೂ (ಸುಬಾಲ. ೭) ಹೇಳಿರುವದರಿಂದಲೂ ವಿಶ್ವಾತ್ಮನು ಸಹ ಯಜ್ಞೈಃ ಸೃಷ್ಟ್ವಾ ಎಂದು ಹೇಳಿರುವದರಿಂದ ಯಜ್ಞಗಳನ್ನು ಸೃಷ್ಟಿಸಿದನು ಎಂಬ ಹೇಳಿಕೆಯು ಯಜ್ಞವಿಧಿಗಳು ಅಂತರ್ಗತವಾದ ವೇದಗಳಿಗೂ ಆತನು ಕಾರಣನೆಂಬ ಭಾವವನ್ನು ಸೂಚಿಸುತ್ತದೆ. "ತಸ್ಮಾದ್ಯಜ್ಞಾತ್ಸರ್ವಹುತಃ ಋಚಸ್ಸಾಮಾನಿ ಜಜ್ಞಿರೇ" ಎಂಬ ಶ್ರುತಿವಾಕ್ಯದಿಂದದ್ಯೋತಿತವು. (೩) ಪ್ರಜಾಪತೇ ಸ್ಸಭಾಂವೇಶ್ಮ ಪ್ರಪದ್ಯೇ ಇಲ್ಲಿಯೂ ಪ್ರಜಾಪತಿಶಬ್ದವು ಚತುರ್ಮುಖನನ್ನು ಬೋಧಿಸುವದಿಲ್ಲವೆಂದೂ, ಪರಮಾತ್ಮನನ್ನೇ ಬೋಧಿಸುತ್ತದೆ ಎಂದೂ "ಪರಮೇವ ನಯತಿ ನ ಚ ಕಾರ್ಯೇ ಪ್ರತ್ಯಭಿಸಂಧಿಃ" ಎಂಬ ಬ್ರಹ್ಮಸೂತ್ರದಲ್ಲಿ (೪. ೩. ೧೩) ತೋರಿಬರುತ್ತದೆ. ಪ್ರಜಾಪತಿ ಶಬ್ದವು ಸರ್ವೇಶ್ವರನನ್ನು ಬೋಧಿಸುವದರಿಂದ ಪುರಾ ಎಂದರೆ ಸರ್ಗಕಾಲೇ ಎಂದು ವ್ಯಾಖ್ಯಾನ ಮಾಡಿರುತ್ತಾರೆ. "ಸೋಽಭಿಧ್ಯಾಯ ಶರೀರಾತ್ಸ್ವಾತ್ಸಿಸೃಕ್ಷುರ್ವಿವಿಧಾಃ ಪ್ರಜಾಃ। ಅಪ ಏವ ಸಸರ್ಜಾದೌ ತಾಸುವೀರ್ಯ ಮಪಾಸೃಜತ್। ತದಂಡ ಮಭವದ್ಧೈಮಂ ಸಹಸ್ರಾಂಶು ಸಮಪ್ರಭಮ್। ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ" ಎಂಬ ಮನುವಿನ ಉಕ್ತಿಯು (೧. ೮.) ಪ್ರಜೆಗಳನ್ನು ಸೃಷ್ಟಿಸಬೇಕೆಂದು ಪರಬ್ರಹ್ಮವು ಸಙ್ಕಲ್ಪಿಸಿ, ಅನಂತರ ಅಂಡೋತ್ಪತ್ತಿಯುಂಟಾಗಿ ಚತುರ್ಮುಖನು ಸ್ವಯಂ ಜನಿಸಿದನು ಎಂದು ಹೇಳಿರುವದರಿಂದ ಪ್ರಜಾಪತಿಯು ನಾರಾಯಣನೇ ಎಂಬುದು ವ್ಯಕ್ತವು.

---

(೧) ಮೋಕ್ಷಧರ್ಮ. ೧೮೦ನೆಯ ಅಧ್ಯಾಯವು.

**ಪ್ರಜಾಃ ಸೃಷ್ಟ್ವಾ** ಎಂಬಲ್ಲಿ ಪ್ರಜೆಗಳ ಸೃಷ್ಟಿಯೂ ಅದಕ್ಕೆ ಪೂರ್ವಭಾವಿಯಾಗಿ ಪ್ರಳಯವೂ ಇವೆಲ್ಲಾ, ಪರಿಪೂರ್ಣಕಾಮನಾದ ಸರ್ವೇಶ್ವರನಿಗೆ ಏಕೆ ಎಂದಾಕ್ಷೇಪಿಸಬಹುದು. ತನಗೇನೂ ಪ್ರಯೋಜನವಿಲ್ಲದೆ ಬರೀ ಲೀಲೆಯಾದರೂ, ಈ ಪ್ರಳಯ ಸೃಷ್ಟಿಗಳೂ ಕೂಡ ಈ ಜೀವಾತ್ಮರುಗಳು ತಮ್ಮ ಶ್ರೇಯಸ್ಸನ್ನು ಸಂಪಾದಿಸಿಕೊಳ್ಳಲಿ ಎಂಬ ನಿರ್ಹೇತುಕ ಕೃಪೆಯಿಂದ ಸರ್ವೇಶ್ವರನು ಕರಣ ಕಳೇಬರ ಯೋಗವನ್ನೂ ಶಾಸ್ತ್ರ ಪ್ರದೀಪವನ್ನೂ ವಿವೇಕವನ್ನೂ ಒದಗಿಸಿಕೊಟ್ಟು ಉದ್ಧಾರಮಾಡುತ್ತಾನೆಂಬುದನ್ನೂ **"ಅನಾದಿಕಾಲ ಪ್ರವೃತ್ತ"** ಎಂದಾರಂಭಿಸಿ ವ್ಯಕ್ತಪಡಿಸಿರುತ್ತಾರೆ. ಅನಾದಿಕಾಲದಿಂದಲೂ ಶರೀರಸಂಬಂಧವಿರುವವರಿಂದ ಅನೇಕಜನ್ಮಗಳನ್ನೆತ್ತಿ ಬಳಲಿರುತ್ತಾರೆ. ಚೇತನರು ಪ್ರಳಯದಲ್ಲಿ ಸ್ವಲ್ಪ ವಿಶ್ರಾಂತಿಯನ್ನು ಹೊಂದಿದವರಾಗಿ ಸೂಕ್ಷ್ಮದೆಶೆಯನ್ನು ಹೊಂದಿ, ನಾಮರೂಪವನ್ನು ಕಳೆದುಕೊಂಡವರಾಗುತ್ತಾರೆ. ಇದೂ ಕೂಡ ಪರಮಾತ್ಮನ ಕೃಪಾ ಪ್ರಭಾವವೇ. ಅನಂತರ ಹೀಗೆ ಅಚಿತ್ತಿಗೆ ಸಮರಾಗಿ ಏನೊಂದು ವ್ಯಾಪಾರಕ್ಕೂ ಅನರ್ಹರಾಗಿರುವರನ್ನು ಕಂಡು ಪರಮ ಕಾರುಣಿಕನಾದುದರಿಂದಲೇ ತಮ್ಮ ಶ್ರೇಯಸ್ಸುಗಳನ್ನು ಸಾಧಿಸಿಕೊಳ್ಳಲಿ ಎಂಬದಾಗಿ **ಸಹಯಜ್ಞೈಃ ಪ್ರಜಾಃಸೃಷ್ಟ್ವಾ** ಎಂದು ಯಜ್ಞಗಳೊಂದಿಗೆ ಪ್ರಜೆಗಳನ್ನು ಪ್ರಜಾಪತಿಯು ಸೃಷ್ಟಿಸಿದನು ಎಂಬುವನ್ನು ವ್ಯಾಖ್ಯಾನಮಾಡುವಾಗ ಸರ್ವೇಶ್ವರನು **ಪರಮ ಕಾರುಣಿಕನೆಂದು** ತೋರಿಸಿರುತ್ತಾರೆ. ಈ ಲೋಕ ವ್ಯಾಪಾರದಲ್ಲಿ ತನಗೇನೂ ಪ್ರಯೋಜನವಿಲ್ಲದಿದ್ದರೂ, ಇತರರಿಗಾಗಿ ಒದ್ದಾಡುವುದು ಪರಮ ಸುಹೃತ್ತಿನ ಲಕ್ಷಣವೆಂದು ತೋರಿಸುವದಕ್ಕಾಗಿ **ತದುಜ್ಜೀವಯಿಷಯಾ** ಆ ಪ್ರಜೆಗಳ ಉಜ್ಜೀವನಕ್ಕಾಗಿ ಎಂದು ಪ್ರಯೋಗಿಸಿರುತ್ತಾರೆ, ಆದುದರಿಂದ **"ಸರ್ವಸ್ಯ ಶರಣಂ ಸುಹೃತ್"** ಎಂಬುದು ಪರಮಾತ್ಮನಿಗೆ ಚನ್ನಾಗಿ ಸಲ್ಲುತ್ತದೆ. ಹಾಗೆ ಉಜ್ಜೀವನ ಮಾಡಿಕೊಳ್ಳುವದು ಹೇಗೆ ಎಂದರೆ ಯಜ್ಞಾನುಷ್ಠಾನಗಳ ಮೂಲಕ ಎಂದು ತೋರಿಸುವದಕ್ಕಾಗಿ **ಯಜ್ಞೈಸ್ಸಹ** ಎಂದು ಮೂಲದಲ್ಲಿ ಹೇಳಲ್ಪಟ್ಟಿರುತ್ತದೆ. ಅವುಗಳನ್ನು ಹೇಗೆ ಅನುಷ್ಠಿಸತಕ್ಕದ್ದೆಂದರೆ ಪರಮ ಪುರುಷಾರಾಧನರೂಪವಾಗಿ ಎಂದು ತಿಳಿಸುವದಕ್ಕಾಗಿ **ಸ್ವಾರಾಧನ ಭೂತ ಯಜ್ಞ ನಿರ್ವೃತ್ತಯೇ** ಎಂಬ ಪ್ರಯೋಗವು; ಹೀಗೆ ಸೃಷ್ಟಿಸುವ ಕಾಲದಲ್ಲಿ ಕರಣ ಕಳೇಬರ ಪ್ರದಾನಮಾಡುವಾಗ ತನ್ನ ಇಷ್ಟಬಂದಂತೇನಾದರೂ ಮಾಡಿದನೋ ಎಂದರೆ, ಹಾಗಲ್ಲವು. ಅವರುಗಳು ಪ್ರಳಯಕ್ಕೆ ಸಿಕ್ಕುವಾಗ ಅವರಿಗೆ ಉಂಟಾಗಿದ್ದ ಕರ್ಮಗಳಿಗನುಸಾರವಾಗಿ ಕರಣ ಕಳೇಬರಪ್ರಾಪ್ತಿಯಾದುದರಿಂದ ಪರಮಾತ್ಮನಿಗೆ ವೈಷಮ್ಯ ನೈರ್ಘೃಣ್ಯ ದೋಷಗಳ ಸಂಬಂಧವಿಲ್ಲವು. ಇದು **"ವೈಷಮ್ಯ ನೈರ್ಘೃಣ್ಯೇನ ಸಾಪೇಕ್ಷತ್ವಾತ್"** (೨. ೧. ೩೪) ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವು. ಆಗಲಿ, ಸೃಷ್ಟಿಗೆ ಮುಂಚೆ ಕರ್ಮವೆಲ್ಲಿಯದು? ಎಂದು ಪೂರ್ವಪಕ್ಷತಂದರೆ—ಅದರ ಮುಂದಿನ ಸೂತ್ರವಾದ **"ನ ಕರ್ಮಾವಿಭಾಗಾದಿತಿಚೇನ್ನ, ಅನಾದಿತ್ವಾತ್ ಉಪಪದ್ಯತೇ ಚಾಪ್ಯುಪಲಭ್ಯತೇಚ"** (೨. ೧. ೩೫) ಎಂಬುದರಿಂದ ಸಮಾಧಾನವು ಹೇಳಲ್ಪಡುತ್ತದೆ, ನಕರ್ಮ - ಸೃಷ್ಟಿಗೆ ಮೊದಲು ಕರ್ಮವೆಲ್ಲಿಯದು; ಏಕೆಂದರೆ ಪೂರ್ವಪಕ್ಷಿಯು ಕಾರಣವನ್ನು ಹೇಳುತ್ತಾನೇನೆಂದರೆ, **ಅವಿಭಾಗಾತ್ – ಸದೇವಸೋಮ್ಯೇದಮಗ್ರ ಆಸೀತ್ ಏಕಮೇವ** ಎಂದು ಹೇಳಿರುವದರಿಂದ ಸೃಷ್ಟಿಗೆ ಮೊದಲು ಜೀವಪರಮಾತ್ಮ ವಿಭಾಗವಿಲ್ಲದೇ ಇರುವದರಿಂದ; ಹೀಗೆ ಹೇಳಿದರೆ ಅದು ಸರಿಯಲ್ಲವು; ಏಕೆಂದರೆ **ಅನಾದಿತ್ವಾತ್** - ಜೀವನೂ ಮತ್ತು ಆತನಿಗೆ ಪ್ರಾಪ್ತವಾದ ಶರೀರ ಮೂಲಕ ಕರ್ಮವೂ ಎರಡೂ ಅನಾದಿಗಳಾದುದರಿಂದ; ಹೀಗೆ ಕರ್ಮ ಪ್ರವಾಹವು ಅನಾದಿಯಾಗಿ ಬಂದಿರುವದರಿಂದ, ತದನುಗುಣವಾಗಿ ಪುನಃ ಸೃಷ್ಟಿಯಾದುದರಿಂದ, ಪರಮಾತ್ಮನಿಗೆ ಈ ವಿವಿಧ ವಿಚಿತ್ರ ಸೃಷ್ಟಿಯಿಂದ ವೈಷಮ್ಯ ನೈರ್ಘೃಣ್ಯ ದೋಷಪ್ರಾಪ್ತಿಯಿಲ್ಲವು.

ಭಾ. ಅನೇನ ಯಜ್ಞೇನ ಪ್ರಸವಿಷ್ಯಧ್ವಂ–ಆತ್ಮನೋ ವೃದ್ಧಿಂ ಕುರುಧ್ವಮ್, ಏಷವೋ ಯಜ್ಞಃ ಪರಮಪುರುಷಾರ್ಥ ಲಕ್ಷಣಮೋಕ್ಷಾಖ್ಯಸ್ಯ ಕಾಮಸ್ಯ ತದನುಗುಣಾನಾಂಚ ಕಾಮಾನಾಂ ಪ್ರಪೂರಯಿತಾ ಭವತು ||೧೦||

ಆಗಲಿ ಅನಾದಿಯಾಗಿ ಕರ್ಮವು ಅನುಸರಿಸಿ ಬಂದುದಕ್ಕನುಗುಣವಾಗಿ ಕರಣ ಕಳೇಬರ ಯೋಗವೆಂದು ಅಙ್ಗೀಕರಿಸೋಣ, ಹಾಗೆ ಕರ್ಮಗಳನ್ನು ಮಾಡಿಸಿದವನು ಪರಮಾತ್ಮನು; ತಾನೇ ಕರ್ಮಗಳನ್ನು ಮಾಡಿಸಿ, ಹೀಗೆ ವಿಷಮಗಳಾದ ಸೃಷ್ಟಿಯನ್ನುಂಟುಮಾಡಿದರೆ ಆತನಿಗೆ ದೋಷವು ತಪ್ಪಿದ್ದಲ್ಲವಲ್ಲಾ ಎಂದರೆ, ಕರ್ಮಾನುಗುಣವಾಗಿ ನಡೆಯುವ ವ್ಯಾಪಾರಗಳೆಲ್ಲಾ ಯದ್ಯಪಿ ತನಗೆ ಅಧೀನವಾಗಿ ನಡೆದರೂ, ಪ್ರತಿಯೊಂದು ಕರ್ಮವು ನಡೆಯುವಾಗ ಪ್ರಥಮ ಸಙ್ಕಲ್ಪದಲ್ಲಿ ಮಾತ್ರ ಸರ್ವೇಶ್ವರನು ಈ ಬದ್ಧಜೀವನಿಗೆ ಸ್ವಾತಂತ್ರ್ಯವನ್ನು ಕೊಟ್ಟಿರುವನಾದುದರಿಂದ, ಈ ಪೂರ್ವಪಕ್ಷವೂ ಕೂಡುವದಿಲ್ಲವು. ಶಾಸ್ತ್ರವೈಯರ್ಥ್ಯವೂ ಇಲ್ಲವು. ಇದು ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾऽವೈಯರ್ಥ್ಯಾದಿಭ್ಯಃ" (೨. ೩. ೪೧) ಎಂಬ ಶಾರೀರಕ ಸೂತ್ರದಲ್ಲಿ ಉಪಪಾದಿತವು. ಆಗಲಿ, ಪ್ರಳಯದಲ್ಲಿ ಪರಮಾತ್ಮನೊಂದಿಗೆ ಈ ಚಿದಚಿತ್ತುಗಳು ಸೂಕ್ಷ್ಮದೆಶೆಯಲ್ಲಿ ಇವೆ ಎಂಬುದು ಸಿದ್ಧಾನ್ತವಾದರೆ, ಇದೇ ಮೋಕ್ಷವಾಯಿತು, ಇನ್ನು ಬೇರೇ ಪುರುಷಾರ್ಥವೇಕೆ ಎಂದಾಕ್ಷೇಪವನ್ನು ತರಬಹುದು. ಸೃಷ್ಟಿಯಾದನಂತರವೂ ಪರಮಾತ್ಮನು ನಮ್ಮೊಡನೆಯೇ ಇರುತ್ತಾನೆ, ಹಾಗಾದರೆ ಇದೂ ಮೋಕ್ಷವಾಗುತ್ತದೋ ? ಮೋಕ್ಷವೆಂದರೇನು ? ನಮ್ಮನ್ನು ಬಿಡದಿರುವದು ಪ್ರಕೃತಿಸಂಬಂಧವು ; ಅದು ಪ್ರಳಯದಲ್ಲೂ ಉಂಟು ; ಸೃಷ್ಟಿಯಲ್ಲೂ ಉಂಟು. ಆದುದರಿಂದ ಪ್ರಕೃತಿ ಸಂಬಂಧವೆಂಬ ಬೇಡಿಯು ತೊಲಗಿ ಪರಮಾತ್ಮನೊಂದಿಗೆ ಸಾಯುಜ್ಯವು ಮೋಕ್ಷವು. ಪ್ರಳಯದಲ್ಲಿ ಉಪಾಯಾನುಷ್ಠಾನವನ್ನು ಮಾಡಿ, ಪ್ರಕೃತಿಯಿಂದ ಬಿಡುಗಡೆಯನ್ನು ಹೊಂದಲು ಸಾಧ್ಯವಿಲ್ಲವು. ಈ ದೇವಮನುಷ್ಯ ಜನ್ಮಗಳಲ್ಲಾದದರೋ ಉಂಟು. ಇದನ್ನು ತಿಳಿಸುವದಕ್ಕಾಗಿಯೇ ಪ್ರಳಯದಲ್ಲಿ ಹೇಗಿದ್ದರೆಂದರೆ ಸಕಲಪುರುಷಾರ್ಥಾನರ್ಹಾ ಚೇತನಕಲ್ಪಾಃ ಯಾವ ಪುರುಷಾರ್ಥವನ್ನು ಸಾಧಿಸಲು ಅನರ್ಹರಾಗಿ ಅಚೇತನ ಪ್ರಾಯರಾಗಿದ್ದರೆಂದು ವ್ಯಾಖ್ಯಾನವು. ಐಹಿಕವನ್ನು ಸಾಧಿಸಿಕೊಳ್ಳ ಲಶಕ್ತರಾದವರು, ಇನ್ನು ಮೋಕ್ಷವನ್ನು ಸಾಧಿಸಿಕೊಳ್ಳುವರೇ? ಇದಕ್ಕೆ ಕಾರಣವೇನೆಂದು ಪ್ರಶ್ನಿಸಬಹುದು- ಈ ಪ್ರಕೃತಿಸಂಬಂಧದಿಂದ ಈಗಲೂ ಜ್ಞಾನ ಸಙ್ಕೋಚವು, ಆಗ ಇನ್ನೂ ಹೆಚ್ಚು ಜ್ಞಾನ ಸಙ್ಕೋಚವು ; ಇಂತಹ ಜ್ಞಾನ ಸಂಕೋಚ ದೆಶೆಯು ಹೇಗೆ ಮೋಕ್ಷವಾದೀತು? ಹೀಗೆ ಜ್ಞಾನ ಸಂಕೋಚವಿರುವ ದೆಶೆಯನ್ನು ನೋಡಿ ಪರಮ ಕಾರುಣಿಕನು ಸುಮ್ಮನಿರುವನೇ ? ಆದುದರಿಂದ ಇಂತಹ ಸ್ಥಿತಿಯಲ್ಲಿರುವವರನ್ನು ತನ್ನ ದಿವ್ಯದೃಷ್ಟಿಯಿಂದ ಕಟಾಕ್ಷಿಸುವನೆಂದು ತಿಳಿಸುವದಕ್ಕಾಗಿ "ಪ್ರಜಾಸ್ಸಮೀಕ್ಷ್ಯ" ಎಂಬ ಪ್ರಯೋಗವು. ಕಟಾಕ್ಷಿಸಿ ಮಾಡಿದುದೇನು ಎಂದರೆ,ಪರಮ ಕಾರುಣಿಕ ಸ್ತದುಜ್ಜಿ ಜೀವಯಿಷಯಾ ಸ್ವಾರಾಧನಭೂತ ಯಜ್ಞನಿರ್ವೃತ್ತಯೇ ಯಜ್ಞೈಸ್ಸಹತಾಸ್ಸೃಷ್ಟ್ವಾ ಉವಾಚ" ಅವರುಗಳು ಸಾಧನಾನುಷ್ಠಾನಮಾಡಲು ಯೋಗ್ಯವಾದ ತನ್ನ ಆರಾಧನರೂಪ ಯಜ್ಞಗಳನ್ನು ನಡೆಸಲೆಂದು ಯಜ್ಞಗಳೊಂದಿಗೆ ಅವರನ್ನೂ ಸೃಷ್ಟಿಸಿದನೆಂದು ಭಾಷ್ಯವು. ಪ್ರಜಾಪತಿಯು ಹೀಗೆ ಸೃಷ್ಟಿಸಿದುದೂ ಅಲ್ಲದೆ, ಮೊದಲು ಸೃಷ್ಟಿಸಿದ ಚತುರ್ಮುಖಾದಿ ಪ್ರಜೆಗಳನ್ನು ಕುರಿತು ಉಪದೇಶಿಸುತ್ತಾರೆ. ಆ ಉಪದೇಶವು ಯಾವುದೆಂಬುದನ್ನು ಉತ್ತರಾರ್ಧವ ಮೂಲಕ ವ್ಯಕ್ತಪಡಿಸುತ್ತಾರೇನೆಂದರೆ :—ಅನೇನ ಯಜ್ಞೇನ - ಪೂರ್ವಾರ್ಧದಲ್ಲಿ ಬಹುವಚನವಿದ್ದರೂ ಜಾತ್ಯೇಕವಚನಾಭಿಪ್ರಾಯದಿಂದ ಏಕವಚನವು, ಈ ಯಜ್ಞದಿಂದ, ಪ್ರಸವಿಷ್ಯಧ್ವಂ ಎಂದರೆ

**ಭಾ. ಅ. ಕಥಮ್ ?**

**ಆತ್ಮನಃ ವೃದ್ಧಿಂ ಕುರುಧ್ವಂ** - ನಿಮ್ಮ ವೃದ್ಧಿಯನ್ನು ಮಾಡಿಕೊಳ್ಳತಕ್ಕದ್ದು; ಮುಂದೆ **ಏಷ ವೋಸ್ತ್ವಿಷ್ಟ ಕಾಮಧುಕ್** ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ, **ವಃ** - ನಿಮಗೆ, **ಏಷಃ ಯಜ್ಞಸ್ತು** - ಈ ಪರಮಪುರುಷಾರಾಧನರೂಪವಾದ ಯಜ್ಞವಾದರೋ, **ಪರಮಪುರುಷಾರ್ಥ** ಲಕ್ಷಣವಾದ, **ಮೋಕ್ಷಾಖ್ಯಸ್ಯ ಕಾಮಸ್ಯ** - ಮೋಕ್ಷವೆನ್ನಲ್ಪಡುವ ಇಷ್ಟಾರ್ಥದ, ಮತ್ತು ತದನು **ಗುಣಾನಾಂ ಚ ಕಾಮಾನಾಂ** - ಆ ಮೋಕ್ಷಕ್ಕೆ ಸಹಕಾರಿಯಾದ ಇಷ್ಟಾರ್ಥಗಳ, **ಪ್ರಪೂರಯಿತಾ**-ಪೂರ್ಣತೆಯನ್ನುಂಟುಮಾಡುವಂಥಾದ್ದು, **ಭವತು**-ಆಗಲಿ,ಈ ಯಜ್ಞವು ನಿಮಗೆ ಮೋಕ್ಷವನ್ನೂ ಮತ್ತು ಅದಕ್ಕೆ ಸಹಾಯಭೂತವಾದ ಇತರ ಮೂರು ವಿಧ ಪುರುಷಾರ್ಥಗಳ ಸಮೃದ್ಧಿಯನ್ನುಂಟುಮಾಡಲಿ ಎಂಬ ತಾತ್ಪರ್ಯವು. **ಇಷ್ಟಕಾಮ ಧುಕ್** ಎಂಬಲ್ಲಿ ಕಾಮಶಬ್ದವು ನಿಷಿದ್ಧವಲ್ಲದ ಮತ್ತು ಧರ್ಮವಿರುದ್ಧವಲ್ಲದ ಸಮಸ್ತ ಕೋರಿಕೆಗಳನ್ನೂ ಬೋಧಿಸುತ್ತದೆ. ಆದರೆ ಅದರಲ್ಲಿ ಮೋಕ್ಷಕ್ಕೂ ಮತ್ತು ಅದಕ್ಕೆ ಸಾಧನಭೂತ ಇತರ ಪುರುಷಾರ್ಥಗಳೂ ಇಲ್ಲಿ ಹೇಳಲ್ಪಟ್ಟವೆಂದು ತಿಳಿಸುವದಕ್ಕಾಗಿ **ಮೋಕ್ಷಾಖ್ಯಸ್ಯ ಕಾಮಸ್ಯ ತದನುಗುಣಾನಾಂಚಕಾಮಾನಾಂ** ಎಂದು ಹೇಳಲ್ಪಟ್ಟಿತು. ತುಂಬಾ ಇಷ್ಟವಾದಕಾಮವು ಮೋಕ್ಷವೂ ಆದಕ್ಕೆ ಸಹಕಾರಿಯಾದ ಪುರುಷಾರ್ಥಗಳೇ. ಸ್ವರ್ಗಾದಿ ಭೋಗಗಳನ್ನು ಅರ್ಜುನನು ಸ್ವಯಂ ನಿರಾಕರಿಸಿದನಷ್ಟೇ. ಇಲ್ಲಿ ಯಜ್ಞವು ಕಾಮಗಳ **ಪ್ರಪೂರಯಿತಾ** ಎಂಬುದರಿಂದ, ದುಹಪ್ರಪೂರಣೇ ಎಂಬ ಧಾತ್ವರ್ಥವು ವ್ಯಕ್ತಪಡಿಸಲ್ಪಟ್ಟಿತು. **ಏಕೋ ಬಹೂನಾಂ ಯೋವಿದಧಾತಿ ಕಾಮಾರ್ನ** ಎಂದು ಹೇಳಿರುವ ಮೇರಿಗೆ ಇದರಿಂದ ಯಜ್ಞಗಳಿಂದುತ್ಪನ್ನವಾದ ಅಪೂರ್ವವು ಫಲದಾಯಕವೆಂಬ ಮತವು ನಿರಸ್ತವು ಎಂಬುದು **ಇಷ್ಟಕಾಮಧುಕ್** ಎಂಬ ಪ್ರಯೋಗದಿಂದಲೇ ಸುವ್ಯಕ್ತವು. ಕಾಮಧೇನುವಿನ ಕೆಚ್ಚಲಿನಲ್ಲಿ ಬೇಕಾದಷ್ಟು ಹಾಲು ಇರಬಹುದು. ಕರೆಸುವವನು ಫಲದಾಯಕನೇವಿನಾ ಬರೀ ಕಾಮಧೇನುಮಾತ್ರದಿಂದಲೇ ಅಮೃತ ಸದೃಶ ಹಾಲು ದೊರೆಯದು. ಹಾಗೆ ಯಜ್ಞವು ಫಲಕಾರಿಯಾದರೂ ಫಲಪ್ರದನು ಸರ್ವೇಶ್ವರನೇ ಎಂದು ಭಾವಿಸತಕ್ಕದ್ದು- ಈ ಶ್ಲೋಕದಿಂದ ಮುಖ್ಯವಾಗಿ ಗ್ರಹಿಸತಕ್ಕದ್ದೇನೆಂದರೆ, ನಾವು ಮಾಡುವ ಸಮಸ್ತ ಕರ್ಮವು ನಿಷಿದ್ಧವಲ್ಲದೆ ಧರ್ಮಪ್ರತಿಷ್ಠಿತವಾದುದಾಗಿ ಮತ್ತು ವಿಹಿತ ಯಜ್ಞರೂಪ ಕರ್ಮಗಳನ್ನು ಒಳಗೊಂಡು ಮೋಕ್ಷಕ್ಕೆ ಸಹಕಾರಿಯಾಗಿ ಕೊನೆಗೆ ಮೋಕ್ಷಸಾಧನವನ್ನುಂಟುಮಾಡತಕ್ಕದ್ದಾಗಿರತಕ್ಕದ್ದು ||೧೦||

**ಭಾಷ್ಯಾವತಾರಿಕೆಯ ಅರ್ಥವು**:—ಹಿಂದಿನ ಶ್ಲೋಕದಲ್ಲಿ ಯಜ್ಞದಿಂದ ನಿಮಗೆ ಸರ್ವಶ್ರೇಯಸ್ಸಿನ ರೂಪದಲ್ಲಿ ಅಭಿವೃದ್ಧಿಯುಂಟಾಗುತ್ತದೆಂದು ಹೇಳಲ್ಪಟ್ಟಿತು. ಇಷ್ಟಕಾಮಧುಕ್ ಎಂಬ ವ್ಯಾಖ್ಯಾನದಲ್ಲಿ ಯಜ್ಞಗಳೇ ಸ್ವತಃ ಫಲದಾಯಕಗಳಲ್ಲವೆಂದೂ, ಇವುಗಳನ್ನೇ ವ್ಯಾಜಮಾಡಿಕೊಂಡು **"ದೋಗ್ಧಾ ಗೋಪಾಲನಂದನಃ"** ಎಂಬಲ್ಲಿ ಹೇಳಿರುವಹಾಗೆ ಪ್ರಜಾಪತಿಯೇ ಸರ್ವಪುರುಷಾರ್ಥಗಳನ್ನೂ ವರ್ಷಿಸುವನೆಂದೂ, ಹೇಳಲ್ಪಟ್ಟಿತು. ಅಂತಹ ಶ್ರೇಯಸ್ಸನ್ನು ಹೊಂದುವ ಬಗೆ ಹೇಗೆ? ಯಜ್ಞವನ್ನು ಮಾಡಿದುದು ಆಗಲೇ ಪೂರೈಸಿ ಹೋದುದು ಕಾಲಾಂತರದಲ್ಲಿ ಫಲವನ್ನು ಹೇಗೆ ಆದು ಕೊಡುತ್ತದೆ? **"ನಾನ್ಯಃಪನ್ಥಾ ವಿದ್ಯತೇ ಅಯನಾಯ"** ಎಂದು ಹೇಳಿರುವ ಮೇರಿಗೆ ಜ್ಞಾನರೂಪವಾದ ಉಪಾಸನ ಮೂಲಕವೇ ಮೋಕ್ಷಪ್ರಾಪ್ತಿ ಎಂದು ಶ್ರುತಿಯು ಘೋಷಿಸುವಾಗ ಈ ಯಜ್ಞಕ್ಕೆ ಮೋಕ್ಷಸಾಧನತ್ವವು ಹೇಗೆ ಕೊಡುತ್ತದೆ? ಅದೂ ಅಲ್ಲದೆ (೧) **"ಕರ್ಮಣಾ ಬಧ್ಯತೇ ಜನ್ತುಃ ವಿದ್ಯಯಾಚ ವಿಮುಚ್ಯತೇ। ತಸ್ಮಾ**

(೧) ಭಾರತ ಶಾಂತಿ. ೨೪೭. ೭.

**ಮೂ. ದೇವಾ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರ ಮವಾಪ್ಸ್ಯಥ ॥ ೧೧.**

ತ್ಕರ್ಮ ನಕುರ್ವನ್ತಿ ಯತಯಃ ಪಾರದರ್ಶಿನಃ" ಎಂದು ಕರ್ಮವು ಬಂಧಕವೆಂದೂ ಜ್ಞಾನವು ತನ್ನಿವರ್ತಕವೆಂದೂ, ಅವರಿಂದ ಯತಿಗಳು ಕರ್ಮಾನುಷ್ಠಾನವನ್ನು ಮಾಡುವದಿಲ್ಲವೆಂದೂ ಮೋಕ್ಷಧರ್ಮವಲ್ಲಿ ಹೇಳಲ್ಪಟ್ಟಿರುತ್ತದೆ. ಹಾಗೆಯೇ "ಜ್ಞಾನಂ ಸನ್ನ್ಯಾಸಲಕ್ಷಣಂ" ಎಂದೂ ಹೇಳಲ್ಪಟ್ಟಿರುತ್ತದೆ. ಆದುದರಿಂದ ಸಾಂಸಾರಿಕ ಐಹಿಕ ಕರ್ಮಗಳು ಮೋಕ್ಷಕ್ಕೆ ಹೇಗೆ ಸಾಧನ ಭೂತವಾದಾವು? ಹೀಗೆ ಈ ನಾಲ್ಕು ಆಕ್ಷೇಪಣಗಳ ಸಮಾಧಾನಾರ್ಥವಾಗಿ ಮುಂದಿನ ಶ್ಲೋಕ ಗಳಿಂದ ಹೇಳಲ್ಪಡುವದರಿಂದ **ಕಥಮ್** - ಅದು ಹೇಗೆ? ಈ ಯಜ್ಞಾನುಷ್ಠಾನವೇ ಚತುರ್ವಿಧ ಪುರುಷಾರ್ಥವನ್ನೂ ಕರೆಯುವ ಕಾಮಧೇನುವೆಂದು ಭಾವಿಸುವದು ಹೇಗೆ ಎಂಬ ತಾತ್ಪರ್ಯವು.

**ಮೂಲಕ್ಕೆ ಅರ್ಥವು**:—ಇದೂ ಪ್ರಜಾಪತಿಯ ವಾಕ್ಯವೇ ಎಂದು ಭಾವಿಸಬಹುದು. ಹಿಂದಿನ ಶ್ಲೋಕದ ಉತ್ತರಾರ್ಧವಲ್ಲಿ ಪ್ರಜಾಪತಿಯು ಬ್ರಹ್ಮಾದಿ ಪ್ರಜೆಗಳಿಗೆ ಹೇಳಿದ ವಾಕ್ಯಕ್ಕೆ ಇದೂ ಸೇರಿದುದೆಂದು ಭಾವಿಸಬಹುದು. **ಅನೇನ** - ಈ ಯಜ್ಞದಿಂದ, ಈ ಯಜ್ಞಾನುಷ್ಠಾನ ದಿಂದ, **ದೇವಾ್** - ಮದಾತ್ಮಕರಾದ ದೇವತೆಗಳನ್ನು, **ಭಾವಯತ** - ಹವಿಸ್ಸಮರ್ಪಣ ಮೂಲಕ ವಾಗಿ ಅವರನ್ನು ಪ್ರೀತಿಸಿರಿ; ಇದರಿಂದ, **ತೇ ದೇವಾಃ** - ಆ ದೇವತೆಗಳು, **ವಃ** - ನಿಮ್ಮನ್ನು, **ಭಾವಯಂತು** - ಈ ಯಜ್ಞಗಳಿಂದ, ನಿಮ್ಮನ್ನು ಪ್ರೀತಿಸಲಿ ಎಂದರೆ ನಿಮಗೆ ದೇಹಯಾತ್ರೆ ಮೊದ ಲಾದವುಗಳಿಗೆ ಬೇಕಾದ ಸರ್ವ ಸಮೃದ್ಧಿಯನ್ನೂ ಉಂಟುಮಾಡಲಿ; **ಪರಸ್ಪರಂ ಭಾವಯಂತಃ**- ಹೀಗೆ ಪರಸ್ಪರ ಪ್ರೀತಿಸುವವರಾಗಿ, ಹೇಗೆಂದರೆ ನೀವುಗಳು ಹವಿಸ್ಸೇ ಮೊದಲಾದವುಗಳನ್ನು ಕೊಟ್ಟು ಮಚ್ಛರೀರಕರಾದ ಅವರುಗಳನ್ನು ಪ್ರೀತಿಗೊಳಿಸಿರಿ, ಇದರಿಂದ ಅವರುಗಳು ಪ್ರತಿ ಫಲವಾಗಿ ನಿಮಗೆ ಸಮೃದ್ಧಿಯನ್ನು ಕೊಟ್ಟು ನಿಮ್ಮನ್ನು ಪ್ರೀತಿಗೊಳಿಸಲಿ; ಹೀಗೆ ಪರ ಸ್ಪರ ಪ್ರೀತಿಸುವವರಾಗಿ, **ಶ್ರೇಯಃಪರಂ** - ಶ್ರೇಷ್ಠವಾದ ಶ್ರೇಯಸ್ಸು ಎಂದರೆ ಮೋಕ್ಷವನ್ನು, **ಅವಾಪ್ಸ್ಯಥ** - ಹೊಂದುವಿರಿ. ಇದು ಯಜ್ಞದಿಂದುಂಟಾಗುವ ಪರಮ ಲಾಭವು, ಇಲ್ಲಿ ಪ್ರತಿಜ್ಞಾ ವಾಕ್ಯರೂಪದಲ್ಲಿ ಹೇಳಲ್ಪಟ್ಟಿತು. ಇದು ಹೇಗೆ ಎಂದು ಮುಂದೆ ಉಪಪಾದಿಸಲ್ಪಡುವದು. ಹೀಗೆ ಶಾಸ್ತ್ರವಿಹಿತ ರೀತಿಯಲ್ಲಿ ಯಜ್ಞಾದಿಗಳು ಅನುಷ್ಠಿಸಲ್ಪಟ್ಟರೆ, ಅದರಿಂದ ಸುಪ್ರೀತರಾದ ದೇವತೆ ಗಳು ಕಾಲಕಾಲಕ್ಕೆ ಸರಿಯಾಗಿ ವೃಷ್ಟಿ ಸಸ್ಯವೃದ್ಧಿಗಳ ಮೂಲಕ ಇವರಿಗೆ ಅನ್ನಪಾನಾದಿಗಳನ್ನು ಕೊಟ್ಟು ವೃದ್ಧಿಗೊಳಿಸಬೇಕೆಂಬ ಸರ್ವೇಶ್ವರನ ಸಙ್ಕಲ್ಪಾನುಸಾರವಾಗಿ ಫಲಗಳನ್ನು ಕೊಡುತ್ತಾ ರೆಂಬ ಭಾವವು. ಇದರಿಂದ ಅಚೇತನಗಳಾದ ಯಜ್ಞಾದಿಗಳೇ ಫಲಗಳನ್ನು ಕೊಡಲಾರವು. ಸರ್ವೇಶ್ವರನೇ, ತನಗೆ ಶರೀರಭೂತರಾದ ದೇವತೆಗಳನ್ನು ಇವರು ಆರಾಧಿಸಿದುದರಿಂದ, ಅವರ ಮೂಲಕವಾಗಿ ಇವರ ಶರೀರ ಪೋಷಣಾದಿಗಳಿಗೆ ಬೇಕಾದ ಸಕಲ ಸಮೃದ್ಧಿಯನ್ನೂ ಕೊಡುತ್ತಾ ನೆಂಬುದು ಹೇಳಲ್ಪಟ್ಟಿತು. ಹೀಗೆ ದೇವತೆಗಳಿಗೂ ಮನುಷ್ಯರಿಗೂ ಸಂಬಂಧವೂ ಪರಸ್ಪರ ಪ್ರೀತಿ ಯುಂಟೆಂಬುದೂ ಇಲ್ಲಿ ಹೇಳಲ್ಪಟ್ಟಿತು. ಇದು ಹೇಗೆ ಮೋಕ್ಷಕ್ಕೆ ಸಾಧನವೆಂಬುದು ಮುಂದೆ ಹೇಳ ಲ್ಪಡುತ್ತದೆ. ಅಂತಹ ಯಜ್ಞಗಳಿಂದ ಪಾಪನಿವೃತ್ತಿಯೂ ಜ್ಞಾನಪ್ರಾಪ್ತಿಯೂ ಲಭಿಸುವದ ರಿಂದ ಮೋಕ್ಷಕ್ಕೆ ಸಾಧಕವೆಂದು ಹಿಂದೆಯೂ ಹೇಳಲ್ಪಟ್ಟಿತು, ಮುಂದೆಯೂ ಹೇಳಲ್ಪಡುವದು॥

**ಭಾಷ್ಯಾರ್ಥವು**:—ಹಿಂದೆ ಯಜ್ಞವು ಅಲ್ಪಕಾಲ ಸಾಧ್ಯವಾದುದಾಗಿ ಹೇಗೆ ಫಲದಾಯ ಕವು? ಎಂಬಾಕ್ಷೇಪಕ್ಕೆ ಮೊದಲು ಉತ್ತರವು ಹೇಗೆಂದರೆ:—**ಅನೇನ** - ಈ ಯಜ್ಞದಿಂದ, ಅದು ಎಂತಾದ್ದೆಂದರೆ, ಮದಾರಾಧನ **ಭೂತೇನ** - **"ಯಜ್ಞೋವೈ ವಿಷ್ಣುಃ"** ಎಂದು ಹೇಳಿ

ಭಾ. ಅನೇನ ದೇವತಾರಾಧನ ಭೂತೇನ, ದೇವಾರ್ನ್ ಮಚ್ಛರೀರ ಭೂತಾರ್ನ್ ಮದಾತ್ಮಕಾ ನಾರಾಧಯತ ; (೧) "ಅಹಂ ಹಿ ಸರ್ವ ಯಜ್ಞಾನಾಂ ಭೋಕ್ತಾಚ ಪ್ರಭುರೇವ ಚ", ಇತಿ ಹಿ ವಕ್ಷ್ಯತೇ. ಯಜ್ಞೇನಾರಾಧಿತಾಸ್ತೇ ದೇವಾ ಮದಾತ್ಮಕಾಃ ಸ್ವಾರಾಧನಾಪೇಕ್ಷಿತಾನ್ನ

ರ.ವಹಾಗೆ ಯಜ್ಞಸ್ವರೂಪನೇ ತಾನಾಗಿರುವದರಿಂದ, ತನಗೆ ಆರಾಧನರೂಪವಾದ ಇಂತಹ ಯಜ್ಞದಿಂದ, ಮೂಲದಲ್ಲಿಲ್ಲದ ಈ ಅರ್ಥವು ಎಲ್ಲಿಂದ ಬಂತು ಎಂದರೆ ಯಜದೇವ ಪೂಜಾಯಾಂ ಎಂಬ ಧಾತ್ವರ್ಥದ ಪ್ರಕಾರ ಯಜ್ಞಗಳು ದೇವತೆಗಳನ್ನುದ್ದೇಶಿಸಿ ನಡೆಸಿದರೂ, ಅವರೆಲ್ಲಾ ಪರಮಾತ್ಮನಿಗೆ ಶರೀರವಾಗುವದರಿಂದ ಅವರುಗಳ ಆರಾಧನವೂ ಪರಮ ಪುರುಷನ ಆರಾಧನವಾಗಿಯೇ ಪರಿಣಮಿಸುತ್ತದೆ. ಬ್ರಹ್ಮರುದ್ರೇಂದ್ರಾಗ್ನ್ಯಾದಿ ದೇವತೆಗಳನ್ನು ಹವಿಸ್ಸುಗಳಮೂಲಕ ಆರಾಧಿಸುವದೂ ಪರಮ ಪುರುಷನ ಆರಾಧನ ರೂಪವಾದುದೇ ಎಂದು ಭಾವಿಸತಕ್ಕದ್ದು. ಅದು ಹೇಗೆಂದರೆ ಒಬ್ಬನು ತಮ್ಮ ಗುರುವೆಂಬ ಭಾವನೆಯಿಂದ ಮರ್ಯಾದಾರ್ಥವಾಗಿ ಕೊರಳಿಗೆ ಒಂದು ಹಾರವನ್ನು ಹಾಕಿದರೆ ಅದನ್ನು ಆ ಆತ್ಮನ ಶರೀರಕ್ಕೆ ಸಮರ್ಪಿಸಿದರೂ ಅದರಿಂದ ಆತ್ಮನು ಹೇಗೆ ಸಂತೋಷಿಸುವನೋ, ಹಾಗೆಯೇ ತನಗೆ ಶರೀರಗಳಾದ ದೇವತೆಗಳ ಆರಾಧನದಿಂದ ಪರಮ ಪುರುಷನೇ ಆರಾಧಿಸಲ್ಪಡುವನಾದುದರಿಂದ, ಮದಾರಾಧನ ಭೂತೇನ ಎಂಬ ಪ್ರಯೋಗವು. ಇಂತಹ ಯಜ್ಞದಿಂದ, ಮದಾತ್ಮಕಾರ್ನ್ - ನನ್ನನ್ನೇ ಆತ್ಮಾವಾಗಿವುಳ್ಳ ಆ ದೇವತೆಗಳನ್ನು, ಆರಾಧಯತ - ಆರಾಧಿಸಿರಿ; ಮೂಲದಲ್ಲಿ ಭಾವಯತ ಎಂಬುದಕ್ಕೆ ಆರಾಧಯತ ಎಂಬರ್ಥವು ಹೇಗೆ? ಎಂದರೆ:—ಭಾವಯತ - ಅವರ ಪ್ರೀತಿಯನ್ನು ಸಂಪಾದಿಸಿರಿ ಎಂಬರ್ಥವಾಗುವದರಿಂದ ಆ ಪ್ರೀತಿ ಸಂಪಾದನವು ಯಜ್ಞದಿಂದಾದುದರಿಂದ, ಅದರ ಧಾತ್ವರ್ಥದ ಪ್ರಕಾರ ಆರಾಧನೆ ಎಂಬರ್ಥವು ತೋರಿಬರುತ್ತದೆ. ಇದಕ್ಕೆ ಪ್ರಮಾಣವೇನಾದರೂ ಉಂಟೋ ಎಂದರೆ ಮುಂದೆ ಗೀತಾ ೯-೨೪ನೆಯ ಶ್ಲೋಕದಲ್ಲೇ ಶ್ರೀಕೃಷ್ಣ ಭಗವಾನ್‌ರವರ ಉಕ್ತಿಯೇ ಇದೆ ಎಂದು ಅದನ್ನು ಉದಾಹರಿಸುತ್ತಾರೆ:—"ಅಹಂ ಹಿ-ನಾನೇಯಲ್ಲವೇ, ಸರ್ವ ಯಜ್ಞಾನಾಂ-ಸಮಸ್ತ ಯಜ್ಞಗಳನ್ನು ಭೋಕ್ತಾ - ಪರಿಗ್ರಹಿಸಿ ಆನಂದಿಸುವನು ಮತ್ತು ಪ್ರಭುಃ - ಅವುಗಳನ್ನೆಲ್ಲಾ ನಿರ್ವಹಿಸಿಕೊಡುವ ಸಾಮರ್ಥ್ಯವುಳ್ಳವನು", ಇತಿ ಹಿ ವಕ್ಷ್ಯತೇ - ಎಂದಲ್ಲವೇ ಮುಂದೆ ಹೇಳಲ್ಪಡುತ್ತದೆ, ಆದುದರಿಂದಲೇ ಶ್ರೀ ವಿಷ್ಣು ಸಹಸ್ರನಾಮದಲ್ಲಿ ಯಜ್ಞಪತಿಃ, ಯಜ್ಞವಾಹನಃ, ಯಜ್ಞಕೃತ್, ಯಜ್ಞಭುಕ್ ಇತ್ಯಾದಿ ನಾಮಗಳುಂಟು. ದಾಸನು ಬರೆದಿರುವ ಸಹಸ್ರನಾಮ ಭಾಷ್ಯದಲ್ಲಿ ಇವುಗಳ ತಾತ್ಪರ್ಯವನ್ನು ಕಾಣಬಹುದು. ಆ ದೇವತೆಗಳು ಮಚ್ಛರೀರಕರಾಗಿ ಮದಾತ್ಮಕರಾದುದರಿಂದ ಅವರ ಆರಾಧನೆಯು ತನ್ನ ಆರಾಧನೆಯೇ ಆಗುವದರಿಂದ ನನ್ನಿಂದ ಸಙ್ಕಲ್ಪಿಸಿದ ಫಲವೇ ಅವರ ಮೂಲಕ ದೊರೆಯುತ್ತದೆಂಬ ಭಾವವು. ಯಜ್ಞೇನ ಆರಾಧಿತಾಃ - ಹೀಗೆ ಯಜ್ಞದಿಂದ ಆರಾಧಿಸಲ್ಪಟ್ಟ ಮದಾತ್ಮಕಾಃ - ನನ್ನನ್ನೇ ಆತ್ಮಾವಾಗಿವುಳ್ಳ, ತೇ ದೇವಾಃ - ಆ ದೇವತೆಗಳು, ಸ್ವಾರಾಧನಾಪೇಕ್ಷಿತಾನ್ನ ಪಾನಾದಿಕೈಃ - ತಮ್ಮ ಆರಾಧನೆಯಿಂದ ಈ ಯಜ್ಞ ಕರ್ತೃಗಳಾದ ನಿಮ್ಮಿಂದ ಅಪೇಕ್ಷಿಸಲ್ಪಟ್ಟ ಅನ್ನಪಾನ ಮೊದಲಾದವುಗಳಿಂದ, ಯುಷ್ಮಾನ್ - ನಿಮ್ಮನ್ನು, ಪುಷ್ಣಾತು - ವೃದ್ಧಿ ಹೊಂದಿಸಿ ರಕ್ಷಿಸಲಿ; ಇದು ಭಾವಯನ್ತುವಃ ಎಂಬುದರ ವ್ಯಾಖ್ಯಾನವು; ದೇವತೆಗಳ ಭಾವನೆಯು ಆ ಯಜ್ಞಾನುಷ್ಠಾನದ ಪ್ರತಿಫಲವಾಗಿ ಏನೆಂದರೆ—ಅವರುಗಳು ಮದಾತ್ಮಕರಾದುದರಿಂದ ನನ್ನ ಸಙ್ಕಲ್ಪಾನುಸಾರ ನಿಮಗೆ ಅನ್ನ ಪಾನಾದಿಗಳನ್ನು ಒದಗಿಸಿಕೊಟ್ಟು ನಿಮ್ಮನ್ನು ಪೋಷಿಸಿ ಅಭಿವೃದ್ಧಿಗೆ ತರುವದೇ, ಅವರು ನಿಮಗೆ ತೋರಿಸುವ ಭಾವನೆಯು, ಎಂದು ತಿಳಿಸುವದಕ್ಕಾಗಿ,

(೧) ಗೀ. ೯. ೨೪.

ಪಾನಾದಿಕೈರ್ಯುಷ್ಮಾನ್ ಪುಷ್ಯನ್ತು. ಏವಂ ಪರಸ್ಪರಂ ಭಾವಯನ್ತಃ ಪರಂ ಶ್ರೇಯೋ ಮೋಕ್ಷಾಖ್ಯ ಮವಾಪ್ಸ್ಯಥ ||೧೧||

**ಮೂ. ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯನ್ತೇ ಯಜ್ಞಭಾವಿತಾಃ |**
**ತೈರ್ದತ್ತಾನ ಪ್ರದಾಯೈಭ್ಯೋ ಯೋ ಭುಙ್ತೇಸ್ತೇನ ಏವ ಸಃ || ೧೨.**

ಭಾವಯನ್ತುವಃ ಎಂಬುದಕ್ಕೆ ಹಾಗೆ ವ್ಯಾಖ್ಯಾನವು. "ಕೃತೇಚ ಪ್ರತಿಕರ್ತವ್ಯಂ ಏಷಧರ್ಮ ಸ್ಸನಾತನಃ" ಎಂಬ ಸನಾತನ ಧರ್ಮವಿರುವದರಿಂದ, ನೀವು ಯಜ್ಞಮೂಲಕ ಆರಾಧಿಸಿದುದಾದರೆ, ಅವರು ನನ್ನ ಆಜ್ಞಾನುಸಾರ ಪ್ರತ್ಯುಪಕಾರರೂಪದಲ್ಲಿ ಅನ್ನಪಾನಗಳನ್ನು ಕೊಟ್ಟು ಸಲಹುತ್ತಾರೆಂಬ ಭಾವವು. **ಏವಂ ಪರಸ್ಪರಂ ಭಾವಯನ್ತಃ** - ಹೀಗೆ ಪರಸ್ಪರಪ್ರೀತಿಯನ್ನುಂಟುಮಾಡಿಕೊಂಡವರಾಗಿ, **ಶ್ರೇಯಃಪರಮವಾಪ್ಸ್ಯಥ** - ಇಲ್ಲಿನ ಐಹಿಕ ಶ್ರೇಯಸ್ಸನ್ನು ಮಾತ್ರವೇ ಪಡೆಯುವದಲ್ಲದೆ, **ಶ್ರೇಯಃ ಪರಂ** - ಪರಮ ಶ್ರೇಷ್ಠವಾದ ಶ್ರೇಯಸ್ಸಾದ ಮೋಕ್ಷವನ್ನೂ ಸಹ ಕ್ರಮೇಣ, **ಅವಾಪ್ಸ್ಯಥ**-ಹೊಂದುವಿರಿ. ಹೀಗೆ ಹೇಳಿದುದರಿಂದ ಯಜ್ಞವು ಅಪೂರ್ವವೆಂಬುದನ್ನುಂಟುಮಾಡಿ, ತನ್ಮೂಲಕ ಫಲಸಿದ್ಧಿ ಎಂಬ ಮೀಮಾಂಸಕರ ಅಭಿಪ್ರಾಯವು ನಿರಸ್ತವು. ಇಲ್ಲಿ ಅಚೇತನವಾದ ಯಜ್ಞವೇ ಕೊಡಲಾರದೆಂದೂ, ಇದು ವ್ಯಾಜಮಾತ್ರವೆಂದೂ, ಕೊಡುವವರು, ಪರಮಾತ್ಮನ ಆಜ್ಞಾನುಸಾರ ದೇವತೆಗಳೆಂಬುದು ಸ್ಥಾಪಿತವು; ಆದರೆ **ಪರಂ ಶ್ರೇಯಃ ಅವಾಪ್ಸ್ಯಥ** - ಎಂದು ಪ್ರತ್ಯೇಕಿಸಿ ಹೇಳಿದುದರಿಂದ ದೇವತೆಗಳಿಗೆ ಈ ಫಲವನ್ನು ಕೊಡುವ ಶಕ್ತಿಯಿಲ್ಲವೆಂಬುದು ವ್ಯಕ್ತವು; ಅದು ಹೇಗೆಂದರೆ ಅವರು ಕೊಡಲು ಶಕ್ತಿಯುಳ್ಳದು ಅನ್ನಪಾನಾದಿ ಪೋಷಣವು; ಇದು ಪೂರ್ವಾರ್ಧದಲ್ಲಿ ಸೂಚಿತವು. ಉತ್ತರಾರ್ಧದಲ್ಲಿರುವ **ಪರಂಶ್ರೇಯಸ್ಸಾದರೋ** ಪರಸ್ಪರ ಭಾವನೆಯಿಂದ ಪ್ರಾಪ್ತವಾಗುವ ಸಾಧನಾನುಷ್ಠಾನದಿಂದ ಪ್ರೀತನಾದ ತಾನೇಯಾದುದರಿಂದ, ಪೂರ್ವಾರ್ಧಫಲದಿಂದ ಪ್ರತ್ಯೇಕಿಸಿ ಪೃಥಕ್ಕಾಗಿ ಉತ್ತರಾರ್ಧದಲ್ಲಿ **ಅವಾಪ್ಸ್ಯಥ** ಎಂಬ ಹೇಳಿಕೆಯು. ಈ **ಶ್ರೇಯಃ ಪರಂ** ಎಂದು ಹೇಳಲ್ಪಟ್ಟಿರುವದರ ಪ್ರಾಪ್ತಿಗೆ ಹೇತುವು ಯಜ್ಞಾನುಷ್ಠಾನದಿಂದ ಪ್ರಾಪ್ತವಾಗುವ ಪರಸ್ಪರ ಭಾವನೆಯು; ಇದರಿಂದ ಕರ್ಮಯೋಗದ ಜ್ಯಾಯಸ್ತ್ವವು ಉಪಪಾದಿತವು ||೧೧||

**ಮೂಲಕ್ಕೆ ಅವತಾರಿಕೆಯೂ ಅರ್ಥವೂ :—ದೇವಾನ್ ಭಾವಯತ** - ಎಂದು ಹಿಂದೆ ಉಪದೇಶಿಸಲ್ಪಟ್ಟಿತು. ಎಲ್ಲರೂ ಹಾಗೆ ಎಲ್ಲಿ ಮಾಡುತ್ತಾರೆ, ಅವರಿಗೂ ಅನ್ನಪಾನಾದಿ ದೊರೆಯುತ್ತವಲ್ಲಾ, ಹಾಗೆ ದೇವತೆಗಳನ್ನು ಯಜ್ಞಗಳಿಂದ ಆರಾಧಿಸದೇ ಇದ್ದರೆ, ಅವನು ಎಂತವನೆನಿಸುತ್ತಾನೆ? ಆತನಿಗೆ ಎಂತಹ ಫಲವು? ಎಂಬುದನ್ನು ಮುಂದೆ ಉಪಪಾದಿಸಿ ಹೇಳುತ್ತಾರೆ. **ಯಜ್ಞಭಾವಿತಾಃ** - ಯಜ್ಞಗಳಿಂದ ಆರಾಧಿಸಿ ಪ್ರೀತಿಗೊಳಿಸಲ್ಪಟ್ಟ, **ದೇವಾಃ** - ನನಗೆ ಶರೀರಗಳಾಗಿ ನನ್ನನ್ನೇ ಆತ್ಮಾವಾಗಿವುಳ್ಳದೇವತೆಗಳು, **ವಃ** - ನಿಮಗೆ, **ಇಷ್ಟಾನ್** - ಹಿತಕರವಾಗಿರುವ, **ಭೋಗಾನ್** - ಅನ್ನಪಾನಾದಿ ಭೋಗಗಳಿಗೆ ಯೋಗ್ಯವಾದ ದ್ರವ್ಯಗಳನ್ನು, **ದಾಸ್ಯನ್ತೇ ಹಿ**-ಕೊಡುತ್ತಾರೆಯಲ್ಲವೇ; ಹೀಗಿರುವಾಗ, **ಯಃ** - ಹೀಗೆ ಉಪಕಾರವನ್ನು ಹೊಂದಿದ ಯಾವನು, **ತೈರ್ದತ್ತಾನ್**- ಅವರುಗಳು ಕೊಟ್ಟಿದ್ದನ್ನೇ ಸ್ವಲ್ಪವಾಗಿ ಯಜ್ಞದಲ್ಲಿ ಹವಿಸ್ಸಿನ ರೂಪದಲ್ಲಿ, **ಏಭ್ಯಃ**-ಅಂತಹ ಉಪಕಾರಹೊಂದಿದ ದೇವತೆಗಳಿಗೆ, **ಅಪ್ರದಾಯ** - ಕೊಡದೆ, **ಭುಙ್ತೇ** - ಭುಜಿಸುತ್ತಾನೋ **ಸಃ** - ಅಂತವನು, **ಸ್ತೇನ ಏವ** - ಕಳ್ಳನೇ ಸರಿ; ಅದರಲ್ಲೇನೂ ಸಂದೇಹವೇ ಇಲ್ಲವೆಂಬ ಭಾವವು. ಈ ಲೋಕದ ಮನುಷ್ಯರಿಗಿಂತ ದೇವತೆಗಳು ಉತ್ತಮರೇ. ಅವರು ನನ್ನ ಆಜ್ಞೆಯಪ್ರಕಾರ ಈ ಲೋಕದವರು ಅವರಿಗೆ ವಿಹಿತವಾಗಿರುವ ಯಜ್ಞವನ್ನು ಮಾಡಿದರೆ, ತತ್ಫಲವಾಗಿ ಆ ಜನ್ಮದಲ್ಲೂ

ಭಾ. ಯಜ್ಞಭಾವಿತಾಃ–ಯಜ್ಞೇನಾರಾಧಿತಾಃ ಮದಾತ್ಮಕಾ ದೇವಾಃ ಇಷ್ಟಾನ್ ಭೋಗಾನ್ ವೋ ದಾಸ್ಯನ್ತೇ ; ಉತ್ತಮ ಪುರುಷಾರ್ಥ ಲಕ್ಷಣಂ ಮೋಕ್ಷಂ ಸಾಧಯತಾಂ ಯೇ ಇಷ್ಟಾಭೋಗಾಸ್ತಾನ್‌ಭೋಗಾನ್ ಪೂರ್ವ ಪೂರ್ವ ಯಜ್ಞಭಾವಿತಾ ದೇವಾ ದಾಸ್ಯನ್ತೇ, ಉತ್ತರೋತ್ತರಾರಾಧನಾ ಪೇಕ್ಷಿತಾನ್ ಸರ್ವಾನ್ ಭೋಗಾನ್ ವೋ

ಮುಂದಿನ ಜನ್ಮದಲ್ಲೂ ಅವರಿಗೆ ಪ್ರಿಯವಾಗಿ ಭೋಗಗಳನ್ನೆಲ್ಲಾ ಒದಗಿಸಕೊಡಬೇಕೆಂಬ ನನ್ನ ಆಜ್ಞಾನುಸಾರವಾಗಿ ಉಂಟುಮಾಡುತ್ತಾರೆ. ಹೀಗೆ ಅವರುಗಳು ಮಾಡಿದ ಉಪಕಾರಕ್ಕೆ ಕೃತಜ್ಞತಾರೂಪವಲ್ಲಿ ಯಜ್ಞವನ್ನನುಷ್ಠಿಸಿ ಅವರಿಗೆ ಹವಿಸ್ಸನ್ನು ಸಮರ್ಪಿಸತಕ್ಕದ್ದೆಂಬ ನನ್ನ ಆಜ್ಞೆಯು ಉಂಟು. ಅವರಿಗೆ ಸಲ್ಲತಕ್ಕ ಹವಿಸ್ಸನ್ನು ಸಲ್ಲಿಸದೆ ಹಾಗೆಯೇ ತಾವೇ ಇಟ್ಟುಕೊಂಡು ಬಿಟ್ಟರೆ, ಅವರುಗಳು ಕಳ್ಳರೇ ಸರಿ ಎಂದು ಹೇಳಿದರು. ಒಬ್ಬರಿಗೆ ಸಲ್ಲತಕ್ಕ ಪದಾರ್ಥವನ್ನು ತಾನು ಇಟ್ಟುಕೊಂಡರೆ ಅದು ಚೋರತನವೇ ಸರಿ. ಇಂತಹ ಚೋರತನ ಮಾಡುವವನಿಗೆ ದಂಡನೆಯೇವಿನಾ ಅನುಗ್ರಹವಿಲ್ಲವೆಂದು ಹೇಳಿದಂತಾಯಿತು. ಇಲ್ಲಿಯೂ **ದೇವಾಃ ದಾಸ್ಯನ್ತೇಯಜ್ಞಭಾವಿತಾಃ** - ಎಂದಿರುವದರಿಂದ ಯಜ್ಞದಿಂದ ಅಪೂರ್ವೋತ್ಪತ್ತಿಯೂ ತನ್ಮೂಲಕ ಫಲವು ಎಂಬ ಸಿದ್ಧಾಂತವು ನಿರಸ್ತವು; ಫಲಕೊಡುವವರು ಪ್ರಜಾಪತಿಯ ಆಜ್ಞೆಯ ಪ್ರಕಾರ ದೇವತೆಗಳೆಂದು ವ್ಯಕ್ತವಾಗಿ ಹೇಳಲ್ಪಟ್ಟಿರುತ್ತದೆ. ದೇವತೆಗಳು ಕೊಟ್ಟಿದ್ದರಲ್ಲೇ ಅಲ್ಪ ಭಾಗವು ದೇವತೆಗಳಿಗೆ ಸಲ್ಲತಕ್ಕದ್ದೆಂದಿದ್ದರೂ, ಹಾಗೆ ಕೊಡದೆ ತಾವೇ ಇಟ್ಟುಕೊಂಡರೆ ಅದು ಕಳ್ಳತನವೇ , ಅದರಲ್ಲೇನೂ ಸಂದೇಹವಿಲ್ಲವು, ಅದು ಶಿಕ್ಷಾರ್ಹವೇ. ಅನುಗ್ರಹವಿಲ್ಲದೆ ನಿಗ್ರಹಕ್ಕೆ ಪಾತ್ರರಾಗುತ್ತಾರೆಂಬ ಭಾವವು ||೧೨||

**ಭಾಷ್ಯಾರ್ಥವು:**—ಹಿಂದೆ **ದೇವಾನ್‌ಭಾವಯತ** - ಎಂಬದಾಗಿ ಉಪದೇಶವು. ಹಾಗೆ ಅವರುಗಳ ವಿಷಯದಲ್ಲಿ ಭಾವನೆಯು ಇಲ್ಲದ ವಿಷಯದಲ್ಲಿ ಪ್ರತ್ಯವಾಯವೇನೆಂದರೆ ಹೇಳುತ್ತಾರೆ. ಆಗ ನೀನು ಕಳ್ಳನಾಗಿ ದಂಡ್ಯನಾಗುತ್ತೀ ಎಂದು ಉಪದೇಶವು, **ಯಜ್ಞಭಾವಿತಾಃ** - ಎಂದರೆ **ಯಜ್ಞೇನಾರಾಧಿತಾಃ** - ಯಜ್ಞದಿಂದ ಆರಾಧಿಸಲ್ಪಟ್ಟ, **ಮದಾತ್ಮಕಾ ದೇವಾಃ** - ನನ್ನನ್ನೇ ಆತ್ಮಾವಾಗಿವುಳ್ಳ ದೇವತೆಗಳು, **ಇಷ್ಟಾನ್ ಭೋಗಾನ್** - ನಿಮಗೆ ಇಷ್ಟವಾದ ಸುಖಾನುಭವಗಳನ್ನೆಲ್ಲಾ, **ವಃ** - ನಿಮಗೆ, **ದಾಸ್ಯನ್ತೇ** - ನನ್ನ ಆಜ್ಞಾನುಸಾರ ಕೊಡುವರು. ಇದರಿಂದ ಯಜ್ಞವೆಲ್ಲಾ ವ್ಯಾಜವೇ ವಿನಾ, ಅಚೇತನವಾದುದರಿಂದ ಕೊಡಲು ಶಕ್ತಿಯಿಲ್ಲವು. ಕೊಡುವವರೆಲ್ಲಾ ನನ್ನಾಜ್ಞಾನುಸಾರವಾಗಿ ದೇವತೆಗಳೇ, **ಉತ್ತಮ ಪುರುಷಾರ್ಥ ಲಕ್ಷಣಂ ಮೋಕ್ಷಂ ಸಾಧಯತಾಂ** - ಪುರುಷಾರ್ಥಗಳಲ್ಲೆಲ್ಲಾ ಸರ್ವೋತ್ಕೃಷ್ಟವಾದ ಲಕ್ಷಣವುಳ್ಳದು ಮೋಕ್ಷವು, ಅದನ್ನೇ ಸಾಧಿಸಿಕೊಳ್ಳಬೇಕೆಂದಿರುವವರಿಗೆ, **ಯೇ ಇಷ್ಟಾ ಭೋಗಾಃ**-ಯಾವುವು ಪ್ರಿಯವಾದ ಸುಖಾನುಭವಕ್ಕೆ ಯೋಗ್ಯಗಳಾದ ವಸ್ತುಗಳೋ, **ತಾನ್ ಭೋಗಾನ್**-ಅಂತಹ ಸುಖಾನುಭವಕ್ಕೆ ಯೋಗ್ಯವಾದ ವಸ್ತುಗಳನ್ನು, **ಪೂರ್ವ ಪೂರ್ವ ಯಜ್ಞಭಾವಿತಾಃ**-ಹಿಂದೆ ಹಿಂದೆ ಆಚರಿಸಿದ ಯಜ್ಞಗಳಿಂದ ಆರಾಧಿಸಲ್ಪಟ್ಟ, **ದೇವಾಃ** - ನನ್ನ ಶರೀರ ಭೂತರಾದ ದೇವತೆಗಳು, **ದಾಸ್ಯನ್ತೇ**-ನನ್ನಾಜ್ಞಾನುಸಾರ ಕೊಡುವರು ; **ಉತ್ತರೋತ್ತರಾರಾಧನಾಪೇಕ್ಷಿತಾನ್** - ಉತ್ತರೋತ್ತರ ಅವರುಗಳ ಆರಾಧನೆಗೆ ಬೇಕಾದವುಗಳಾದ, **ವಃ**-ನಿಮಗೆ, **ಸರ್ವಾನ್‌ಭೋಗಾನ್**-ಸಮಸ್ತ ಭೋಗಗಳನ್ನು, **ದಾಸ್ಯನ್ತೇ**-ಕೊಡುವರು ಎಂಬ ತಾತ್ಪರ್ಯವು. ಹಾಗೆ ಯಜ್ಞಾನುಷ್ಠಾನವನ್ನು ಹಿಂದಿನ ಜನ್ಮದಲ್ಲೋ, ಅಥವಾ ಈಜನ್ಮದಲ್ಲೇ ಹಿಂದೆ ಮಾಡಿದುದಕ್ಕಾಗಿಯೋ, ನಿಮಗೆ ಇಷ್ಟವಾದ ಭೋಗಗಳನ್ನು ಕೊಡುವರು ಎಂದರೆ ಮೋಕ್ಷಾರ್ಥಿಯಾಗಿದ್ದ ಪಕ್ಷದಲ್ಲಿ ಅಂತಹ ಅಧಿಕಾರಿಗೆ ಉದರ ಪೋಷಣಾದಿಗಳಿಗಾಗಿ ಕೊಡುತ್ತಾ

**ಭಾ. ದಾಸ್ಯನ್ತೇಽಇತ್ಯರ್ಥಃ. ಸ್ವಾರಾಧನಾರ್ಥತಯಾ ತೈರ್ದತ್ತಾನ್ ಭೋಗಾನ್ ತೇಭ್ಯೋಽ ಪ್ರದಾಯ ಯೋ ಭುಙ್ಕ್ತೇ ಚೋರ ಏವಸಃ; ಚೌರ್ಯಂ ಹಿ ನಾಮ–ಅನ್ಯದೀಯೇ ತತ್ಪ್ರಯೋಜನಾಯೈವ ಪರಿಕ್ಲೃಪ್ತೇ ವಸ್ತುನಿ ಸ್ವಕೀಯತಾ ಬುದ್ಧಿಂ ಕೃತ್ವಾ ತೇನ ಸ್ವಾತ್ಮ ಪೋಷಣಮ್. ಅತೋಽಸ್ಯ ನ ಪರಮ ಪುರುಷಾರ್ಥಾನರ್ಹತಾಮಾತ್ರಂ, ಅಪಿತು ನಿರಯಗಾಮಿತ್ವಂಚ ಭವಿಷ್ಯತೀತ್ಯಭಿಪ್ರಾಯಃ ||೧೨||**

ರೆಂಬ ಅರ್ಥವಲ್ಲವೆಂದೂ, ಮುಂದಕ್ಕೂ ಅಂತಹ ಯಜ್ಞಗಳನ್ನು ನಡೆಸಿ ಉತ್ತರೋತ್ತರ ಪುನಃ ದೇವತೆಗಳ ಆರಾಧನೆಗಾಗಿ ಅಂತಹ ಭೋಗಗಳನ್ನು ದಯಪಾಲಿಸುವರೆಂದೂ, ತಿಳಿಸುವದಕ್ಕಾಗಿ, **ಪೂರ್ವ ಪೂರ್ವ ಯಜ್ಞ ಭಾವಿತಾಃ** ಎಂದೂ, **ಉತ್ತರೋತ್ತರಾರಾಧನಾಪೇಕ್ಷಿತಾನ್ ಭೋಗಾನ್** ಎಂದೂ ಪ್ರಯೋಗಗಳು. ಉತ್ತರಾರ್ಧದಿಂದ, ಹಾಗೆ ಅವರಿಂದ ಅವರುಗಳ ಆರಾಧನಾರ್ಥವಾಗಿ ಕೊಟ್ಟವುಗಳನ್ನು ಅವರಿಗೆ ಆರಾಧನ ರೂಪವಲ್ಲಿ ಕೊಡದೇಹೋದರೆ ಉಂಟಾಗುವ ಪ್ರತ್ಯವಾಯ ವನ್ನು ತಿಳಿಸುತ್ತಾರೆ. **ಸ್ವಾರಾಧನಾರ್ಥತಯಾ** - ತಮ್ಮಗಳ ಆರಾಧನೆಗಾಗಿಯೇ, **ತೈರ್ದತ್ತಾನ್**- ಅವರುಗಳಿಂದ ಕೊಡಲ್ಪಟ್ಟ, **ಭೋಗಾನ್** - ಭೋಗ್ಯಭೂತವಾದ ವಸ್ತುಗಳನ್ನು, **ತೇಭ್ಯಃ** - ಆ ದೇವತೆಗಳಿಗೆ, **ಅಪ್ರದಾಯ** - ಕೊಡದೇ, **ಯಃ** - ಯಾವನು, **ಭುಙ್ಕ್ತೇ** - ಅನುಭವಿಸುವನೋ, **ಚೋರ ಏವ ಸಃ** - ಆತನು ಕಳ್ಳನೇ ಸರಿ, ಅದು ಹೇಗೆ ಚೋರನು ಎಂಬುವನ್ನು ವ್ಯಕ್ತಪಡಿಸು ತ್ತಾರೆ—**ಚೌರ್ಯಂ ಹಿ ನಾಮ**-ಚೌರ್ಯವೆಂಬುದು ಯಾವುದು ಎಂದರೆ **ತತ್ಪ್ರಯೋಜನಾಯೈವ ಪರಿಕ್ಲೃಪ್ತೇ ವಸ್ತುನಿ** - ಆ ದೇವತೆಗಳ ಪ್ರಯೋಜನಕ್ಕಾಗಿಯೇ ಏರ್ಪಟ್ಟ ವಸ್ತುವಿನಲ್ಲಿ, **ಸ್ವಕೀಯತಾ ಬುದ್ಧಿಂ ಕೃತ್ವಾ** - ತನ್ನದೇ ಎಂಬ ಬುದ್ಧಿಯನ್ನು ಹೊಂದಿ, **ತೇನ** - ಅದರಿಂದ ಎಂದರೆ ಆ ವಸ್ತುವಿನಿಂದ, **ಸ್ವಾತ್ಮಪೋಷಣಂ** - ತನ್ನ ಶರೀರ ಪೋಷಣೆಯನ್ನು ಮಾಡಿಕೊಳ್ಳು ವದು. ಯಾವಾಗ ಹೀಗೆ ಇದು ಕಳ್ಳತನವಾಯಿತೋ ಅದರಿಂದುಂಟಾಗುವ ಫಲವನ್ನು ಸೂಚಿಸು ತ್ತಾರೆ. ಇದು ಮೂಲದಲ್ಲಿಲ್ಲವಿದ್ದರೂ, **ಸ್ತೇನ ಏವಸಃ** - ಎಂದು ಇಷ್ಟುಮಾತ್ರ ಹೇಳಲ್ಪಟ್ಟಿ ದ್ದರೂ ಫಲವು ಅರ್ಥವಾಗಿ ತೋರಿಬರುತ್ತದೆಂಬ ಭಾವದಿಂದ ಉಪಪಾದಿಸುತ್ತಾರೆ. ಲೋಕದಲ್ಲಿ ಕಳ್ಳತನವು ಹೇಗೆ ಶಿಕ್ಷಿಸಲು ಯೋಗ್ಯವೋ, ಹಾಗೆಯೇ ದೇವತೆಗಳು ಕೊಟ್ಟಿದುದನ್ನೇ ಅಲ್ಪ ಭಾಗವನ್ನು ಯಜ್ಞದಲ್ಲಿ ಹವಿಸ್ಸಾಗಿ ಸಮರ್ಪಿಸದೆ ತನ್ನ ಪ್ರಯೋಜನಕ್ಕೇ ಅದು ಎಂದು ಭಾವಿಸಿ ಉದರ ಭರಣವನ್ನು ಮಾಡಿ ಯಾವಾಗ ಕಳ್ಳನೆನಿಸಿದನೋ ಆಗ ದಂಡ್ಯನೇ ಎಂಬ ಭಾವವು. **ಅತಃ** - ಹೀಗೆ ಆತನು ಕಳ್ಳನಾದುದರಿಂದ, **ಅಸ್ಯ** - ಈತನಿಗೆ, **ನ ಪರಮ ಪುರು ಷಾರ್ಥಾನರ್ಹತಾ ಮಾತ್ರಂ** - ಪರಮ ಪುರುಷಾರ್ಥರೂಪ ಮೋಕ್ಷಕ್ಕೆ ಅನರ್ಹತೆಯುಂಟಾದುದು ಮಾತ್ರವೇ ಅಲ್ಲವು, **ಅಪಿತು** - ಮತ್ತೇನೆಂದರೆ, **ನಿರಯಗಾಮಿತ್ವಂಚ ಭವಿಷ್ಯತೀತ್ಯಭಿ ಪ್ರಾಯಃ** – ನರಕವನ್ನು ಕುರಿತು ಹೋಗುವದೂ ಕೂಡ, ಮುಂದಕ್ಕೆ ಉಂಟಾದರೂ ಉಂಟಾಗ ಬಹುದೆಂಬ ತಾತ್ಪರ್ಯವು; ಕಳ್ಳತನ ನಡೆಸಿದುದರಿಂದ ದಂಡನೆಗೆ ಒಳಪಟ್ಟು ನಿಕೃಷ್ಟ ಜನ್ಮ ಪ್ರಾಪ್ತಿಯೂ ಹಾಗೆಯೇ ಕ್ರಮೇಣ ನರಕ ಪ್ರಾಪ್ತಿಯೂ ಉಂಟಾಗಬಹುದೆಂಬ ಭಾವವು. ಇಲ್ಲಿ ಚೋರ ಭಾವವು ಹೇಗೆ ಎಂದು ಪ್ರಶ್ನಿಸತಕ್ಕದ್ದಾಗಿರುತ್ತದೆ—ದೇವತೆಗಳ ಭೋಗಗಳನ್ನು ಗೂಢ ವಾಗಿ ಬಲಾತ್ಕರಿಸಿ ಈತನೇನೂ ಅಪಹರಿಸಲಿಲ್ಲವು; ದೇವತೆಗಳು ಕೊಟ್ಟು ತಮ್ಮ ವಶಕ್ಕೆ ಬಂದು ದನ್ನು ಅನುಭವಿಸುವದು ಹೇಗೆ ಚೌರ್ಯವು? ರಾಜನು ತನ್ನ ಆಧಿಕಾರಿಗೆ ಸಂಬಳವನ್ನು ಕೊಡು ವನು, ಅದನ್ನು ತಾನು ಉಪಯೋಗಿಸಿಕೊಂಡಿದುದು ಚೌರ್ಯವಾಗುತ್ತದೆಯೇ ? ಹೀಗಿರುವಾಗ ಇದು ಚೌರ್ಯವಾಗುವದು ಹೇಗೆ ಎಂಬ ವಿವೇಚನೆಯಲ್ಲಿ **ಚೌರ್ಯಂ ಹಿ ನಾಮ** ಎಂದು ಉಪ

ಕ್ರಮಿಸಿ, ಅದನ್ನು ಉಪಪಾದಿಸುತ್ತಾರೆ. ವಸ್ತುವು ತನ್ನದಲ್ಲದಿರೋಣವಾಗಿ, ಮತ್ತು ಇತರರದಾಗಿದ್ದು ಇತರ ಪ್ರಯೋಜನಕ್ಕಾಗಿ ಉದ್ದೇಶಿಸಲ್ಪಟ್ಟುದುವನ್ನು ತನ, ಪ್ರಯೋಜನಕ್ಕಾಗಿ ಉಪಯೋಗಿಸಿಕೊಂಡರೆ ಆಗ ಚೌರ್ಯವಾಗುತ್ತದೆಂಬ ಭಾವವು. ಈ ಅಭಿಪ್ರಾಯವನ್ನು "ಅನ್ಯದೀಯೇ"ಎಂದಾರಂಭಿಸಿವ ವಾಕ್ಯದಿಂದ ತಿಳಿಸುತ್ತಾರೆ. ವಸ್ತುವೇನೋ ಇತರರದು ಆಗಿ ತನ್ನ ವಶದಲ್ಲೇ ಇರಬಹುದು; ಅದು ತನ್ನದು ಎಂಬ ಭಾವನೆಯು ಯಾವಾಗ ಉಂಟಾಯಿತೋ ಆಗ ಅದು ಚೌರ್ಯವಾಗುತ್ತದೆ; ಅದಕ್ಕಾಗಿಯೇ ಸ್ವಕೀಯತಾ ಬುದ್ಧಿಂ ಕೃತ್ವಾ ಎಂಬ ಪ್ರಯೋಗವು; ತನ್ನದಲ್ಲದುದನ್ನು ತನ್ನದೆಂದು ಭಾವಿಸಿದರೆ ಚೌರ್ಯವು. ಹೀಗೆಯೇ ಈ ಜೀವಾತ್ಮನು ಪರಮಾತ್ಮನ ಸ್ವತ್ತು; ಈ ಭಾವನೆಗೆ ಬದಲಾಗಿ ಈ ಜೀವಾತ್ಮನು, ತಾನೇ ಸ್ವತಂತ್ರನೆಂದು ಭಾವಿಸಿಬಿಟ್ಟರೆ, ಆಗ ಚೋರಕೃತ್ಯವಾಯಿತು ಎಂದು ಶ್ರೀ ವ್ಯಾಸ ಮಹರ್ಷಿಯು "ಯೋನ್ಯಥಾ ಸನ್ತಮಾತ್ಮಾನಂ ಯೋನ್ಯಥಾ ಪ್ರತಿಪದ್ಯತೇ। ಕಿಂತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ" (ಭಾರ. ಆದಿಪರ್ವ ಶಕುಂತಳೋಪಾಖ್ಯಾನ ಮತ್ತು ಉದ್ಯೋಗ. ೪೨. ೩೫,) ಎಂಬಲ್ಲಿ ಉಪಪಾದಿಸಿರುತ್ತಾರೆ. ಪರಮಾತ್ಮನ ಸ್ವತ್ತಾದ ಜೀವಾತ್ಮನನ್ನು ಅನ್ಯಥಾ ಭಾವಿಸೋಣವು ಹೇಗೆ ಚೋರಕೃತ್ಯವೋ, ಹಾಗೆಯೇ ಅನ್ಯಥಾ ಉದ್ದೇಸಿಸಲ್ಪಟ್ಟ ಪರರ ವಸ್ತುವನ್ನು ತನ್ನ ಉದರ ಭರಣಕ್ಕಾಗಿ ಉಪಯೋಗಿಸುವದು ಚೌರ್ಯವೆಂಬ ಭಾವವು: ಆದರೆ ದೇವತೆಗಳು ವೃಷ್ಟಿ ಮೊದಲಾದವುಗಳ ಮೂಲಕ ಕೊಡುವ ಅನ್ನಪಾನಾದಿಗಳು ಮನುಷ್ಯನಿಗಾಗಿಯೇ ಇರುವಾಗ, ಅದರಿಂದ ಅವರಿಗೆ ಮರ್ಯಾದೆಮಾಡಿದರೆ ಮಾಡಬಹುದು, ಬಿಟ್ಟರೆ ಬಿಡಬಹುದು; ಅದು ಹೇಗೆ ಚೌರ್ಯವಾದೀತು; ವಸ್ತುವೇನೋ ಪರಮಾತ್ಮನದು, ದೇವತೆಗಳದೂ ಅಲ್ಲವು, ಮನುಷ್ಯರದೂ ಅಲ್ಲವು; ಹೀಗಿರುವಾಗ ಅವರಿಗೆ ಯಜ್ಞಮೂಲಕ ಹವಿಸ್ಸನ್ನು ಸಮರ್ಪಿಸದಿರುವದು ಚೌರ್ಯವು ಹೇಗೆ ಎಂದರೆ, ಒಂದು ನಿದರ್ಶನದಮೂಲಕ ಇದು ವ್ಯಕ್ತವಾಗಬಹುದು, ಹೇಗೆಂದರೆ:–ಯದ್ಯಪಿ ಕ್ಷೇತ್ರಾದಿಗಳೆಲ್ಲಾ ರಾಜನ ಸ್ವತ್ತೇ, ಆದರೂ ಕೆಲವು ಜಮೀನನ್ನು ನಮ್ಮ ಉಪಯೋಗಕ್ಕಾಗಿಯೇ ನಮ್ಮ ವಶಮಾಡಿದರೂ, ಅದರ ಒಂದು ಹಿಸ್ಸೆಯಾದ ಕಂದಾಯವನ್ನು ರಾಜನಿಗಾಗಿ ಸಲ್ಲಿಸದಿದ್ದರೆ, ಅದು ಚೋರಕೃತ್ಯವು ಹೇಗಾಗಿ ಅದಕ್ಕಾಗಿ ಶಿಕ್ಷೆಗೆ ಹೇಗೆ ಅರ್ಹತೆಯೋ, ಹಾಗೆಯೇ ಇಲ್ಲಿಯೂ ಕೂಡ ದೇವತೆಗಳು ಕೊಟ್ಟ ವ್ರೀಹಿ ಮೊದಲಾದವುಗಳು ಮನುಷ್ಯನ ಭೋಗಕ್ಕಾಗಿಯಾದರೂ, ಅದರ ಸ್ವಲ್ಪ ಭಾಗವನ್ನು ಯಜ್ಞಮೂಲಕ ಹವಿಸ್ಸಿನ ರೂಪದಲ್ಲಿ ಅವರಿಗೇನೇ ಕೊಡದೇ ಹೋದರೆ, ಅದು ಚೌರ್ಯವೇ ಎಂಬುದು ತಾತ್ಪರ್ಯವು. ಯಾವಾಗ ಚೋರತ್ವವು ಸ್ಥಾಪಿತವೋ, ಆಗ ದಂಡ್ಯರೆಂದು ಅತಃ ಎಂದಾರಂಭಿಸಿ ವ್ಯಕ್ತಪಡಿಸಿರುತ್ತಾರೆ. ಮೂಲದಲ್ಲಿ ಚೋರ ಏವ ಸಃ ಎಂದು ಇಷ್ಟೇ ಇರುತ್ತದೆ. ಆತನು ಶಿಕ್ಷಾರ್ಹನೆಂಬ ವ್ಯಾಖ್ಯಾನವು ಹೇಗೆ; ಎಂದರೆ ಚೋರಶಬ್ದದಿಂದ ಅರ್ಥವಾಗಿ ತೋರಿಬರುತ್ತದೆಂದು ಹಾಗೆ ವ್ಯಾಖ್ಯಾನವು. ಈ ಶ್ಲೋಕವು ವಾಕ್ಯಜನ್ಯ ಜ್ಞಾನ ಉಂಟಾದವರಿಗೆ ಯಜ್ಞಾದಿಗಳ ರೂಪದಲ್ಲಿರುವ ನಿತ್ಯನೈಮಿತ್ತಿಕಗಳ ಆವಶ್ಯಕತೆಯಿಲ್ಲವೆಂಬ ವಾದಕ್ಕೆ ಪ್ರಬಲ ವಿರುದ್ಧವು. ಹಾಗೆಯೇ ನಿಯತಂ ಕುರುಕರ್ಮತ್ವಂ ಎಂದು ಹಿಂದೆ ಹೇಳಿದ ಶ್ಲೋಕವೂ ವಿರುದ್ಧವು. "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್" ಎಂಬ ಈಶಾವಾಸ್ಯ ಮಂತ್ರವೂ ವಿರುದ್ಧವು. ಆದುದರಿಂದ ಗೀತಾ ಚರಮಶ್ಲೋಕದ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬಲ್ಲಿ ಸರ್ವಕರ್ಮ ಪರಿತ್ಯಾಗಾರ್ಥವನ್ನು ಹೇಳುವದು ಹೇಗೆ ಸಮಂಜಸವೋ ತಿಳಿಯದು. ॥೧೨॥

**ಭಾಷ್ಯಾವತಾರಿಕೆಯ ಅರ್ಥವು**:—ಹಿಂದೆ ಪರಮಾತ್ಮ ಶರೀರಗಳಾದ ದೇವತೆಗಳಿಗೆ ಯಜ್ಞಹವಿಸ್ಸನ್ನು ಸಮರ್ಪಿಸಿ, ಯಜ್ಞಶೇಷಾನ್ನವನ್ನು ಭುಂಜಿಸದವನು ಕಳ್ಳನು ಶಿಕ್ಷಾರ್ಹನು

ಭಾ. ಅ- ತದೇವ ವಿವೃಣೋತಿ—

**ಮೂ. ಯಜ್ಞ ಶಿಷ್ಟಾಶಿನ ಸ್ಸನ್ತೋ ಮುಚ್ಯನ್ತೇ ಸರ್ವ ಕಿಲ್ಬಿಷೈಃ।**
**ಭುಞ್ಜತೇ ತೇತ್ವಘಂ ಪಾಪಾ ಯೇ ಪಚನ್ತ್ಯಾತ್ಮ ಕಾರಣಾತ್ ॥೧೩.**

ಎಂದು ಹೇಳಿದ ಅಭಿಪ್ರಾಯವೇ ಈ ಮುಂದಿನ ಶ್ಲೋಕವಲ್ಲಿ ವಿಸ್ತರಿಸಿ ಹೇಳುವವರಿಂದ ತದೇವ ವಿವೃಣೋತಿ ಎಂಬ ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಹಾಗೆಯೇ ಹಿಂದೆ ಯಜ್ಞಶಿಷ್ಟಾಶಿನರು ಪರಂ ಶ್ರೇಯಃ ಮೋಕ್ಷವನ್ನು ಹೊಂದುವರೆಂಬುದು ಹೇಗೆ? ಹಾಗೆ ಮಾಡದವರಿಗೆ ಅಧೋಗತಿಯು ಹೇಗೆ ಎಂದು ಹಿಂದಿನ ಅಭಿಪ್ರಾಯವನ್ನೇ ಕುರಿತು ಹೇಳುವದರಿಂದ ತದೇವ ಎಂಬ ಪ್ರಯೋಗವು; ಆದುದರಿಂದ ಪುನರಾವೃತ್ತಿ ದೋಷವಿಲ್ಲವೆಂಬುದೂ ಸೂಚಿತವು.

**ಮೂಲಕ್ಕೆ ಅರ್ಥವು:**—ಪರಮ ಪುರುಷನ ಶರೀರಗಳಾದ ದೇವತೆಗಳನ್ನು ಕುರಿತು ಮಾಡಿದ ಆರಾಧನೆಯು ಪರಮ ಪುರುಷಾರಾಧನ ರೂಪವೇ ಆಗುವದರಿಂದ ಯಜ್ಞಹವಿಸ್ಸನ್ನು ಸಮರ್ಪಣೆಮಾಡಿ ಶೇಷವಾದ ಅನ್ನವನ್ನು ಪರಿಗ್ರಹ ಮಾಡುವರಿಗುಂಟಾಗುವ ಉತ್ಕೃಷ್ಟ ಫಲವನ್ನೂ, ಹಾಗೆ ಮಾಡದಿರುವರಿಗುಂಟಾಗುವ ನಿಕೃಷ್ಟ ಫಲವನ್ನೂ ಹೇಳುತ್ತಾರೆ. **ಯಜ್ಞಶಿಷ್ಟಾಶಿನಃ**-ಪಂಚಮಹಾ ಯಜ್ಞಗಳೇ ಮೊದಲಾದವುಗಳನ್ನು ಪರಮ ಪುರುಷಾರಾಧನವೆಂದು ಭಾವಿಸಿ, ಧರ್ಮದಿಂದಾರ್ಜಿಸಿದ ದ್ರವ್ಯಮೂಲಕ ಪಡೆದ ಆಹಾರ ವಸ್ತುಗಳನ್ನು ಪಕ್ವಮಾಡಿ, ಹವಿಸ್ಸಮರ್ಪಿಸಿ ಮಿಕ್ಕ ಆಹಾರವನ್ನೇ ಭುಜಿಸುವ ಶೀಲವುಳ್ಳವರಾಗಿ, **ಸನ್ತಃ** - ಇರುವವರು, (ಅಥವಾ ಉತ್ತರಾರ್ಧವಲ್ಲಿ, **ಪಾಪಾಃ** - ಎಂಬುದಕ್ಕೆ ಪ್ರತಿದ್ವಂದ್ವಿಯಾಗಿ ಭಾವಿಸಿ, ಪುಣ್ಯವಂತರಾದ ಸತ್ಪುರುಷರು ಎಂದೂ ಅರ್ಥಮಾಡಬಹುದು.) **ಸರ್ವ ಕಿಲ್ಬಿಷೈಃ** - ಸಮಸ್ತ ಪಾಪಗಳಿಂದಲೂ **ಮುಚ್ಯಂತೇ** - ಬಿಡಲ್ಪಡುವರು. ಇಲ್ಲಿ ಸರ್ವ ಶಬ್ದಗಳಿಂದ ಇರುವ ಎಲ್ಲಾ ಪಾಪಗಳು ಎಂದರ್ಥವಾದರೆ ಒಡನೆ ಮೋಕ್ಷಪ್ರಾಪ್ತಿಯುಂಟಾಗಬೇಕಾದುದರಿಂದ, ಸರ್ವ ಶಬ್ದಕ್ಕೆ ಇಲ್ಲಿಯೂ ಸಙ್ಕುಚಿತಾರ್ಥವನ್ನೇ ಹೇಳತಕ್ಕದ್ದಾಗಿರುತ್ತದೆ; ಯಾವ ಎಲ್ಲಾ ಪಾಪಗಳೆಂದರೆ ಆತ್ಮಜ್ಞಾನ ಉಂಟಾಗುವದಕ್ಕೆ ವಿರೋಧಿಗಳಾಗಿರುವ ಸರ್ವ ಪಾಪಗಳೆಂದು ಅರ್ಥಮಾಡತಕ್ಕದ್ದಾಗಿರುತ್ತದೆ. ಯಾವಾಗ ಇಂತಹ ಪಾಪಗಳೆಲ್ಲಾ ಕಳೆದವೋ ಆತ್ಮ ಜ್ಞಾನ ಉಂಟಾಗಿ ಉಪಾಯಾನುಷ್ಠಾನ ದ್ವಾರಾ ಮೋಕ್ಷಪ್ರಾಪ್ತಿಯೂ ಲಭಿಸುತ್ತದೆಂದು **ಶ್ರೇಯಃ ಪರಮವಾಪ್ಸ್ಯಥ** ಎಂದು ಹಿಂದೆ ೧೧ನೆಯ ಶ್ಲೋಕಾರ್ಥವು ವಿವರಿಸಲ್ಪಟ್ಟಿತು. ಇಲ್ಲಿ ಕಿಲ್ಬಿಷ ಶಬ್ದದಿಂದ ಬರೀ ಪಾಪವೇ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದಲ್ಲವು. ಪುಣ್ಯವೂ ಆತ್ಮ ಯಾಥಾತ್ಮ್ಯ ದರ್ಶನಕ್ಕೆ ಪ್ರತಿಬಂಧಕವಾದರೆ, ಅದೂ ಕಿಲ್ಬಿಷ ಸಮಾನವೇ. ಆದುದರಿಂದಲೇ ಶ್ರುತಿಯು **ಪುಣ್ಯಪಾಪೇ ವಿಧೂಯ** ಎಂದು ಹೇಳಿರುತ್ತದೆ. **ಯಜ್ಞಶಿಷ್ಟಾಶನ** ಸ್ವಭಾವವುಳ್ಳವರು ಯಜ್ಞಕ್ಕೆ ಬೇಕಾದ ದ್ರವ್ಯ ಮತ್ತು ಸಾಮುಗ್ರಿಗಳನ್ನು ಒದಗಿಸಿಕೊಳ್ಳುವಾಗಲು ಧರ್ಮದಿಂದಲೇ ಸಂಪಾದಿಸಿಕೊಳ್ಳುವರೆಂಬುದು ಅರ್ಥವಾಗಿ ಆ ಪ್ರಯೋಗದಿಂದಲೇ ತೋರಿಬರುತ್ತದೆ. ಹೀಗೆ ಮಾಡದಿರುವವರು, ಬೇಕಾದ ದ್ರವ್ಯ, ತನ್ಮೂಲಕ ಅನ್ನ, ಇವುಗಳನ್ನು ಅಧರ್ಮ ಮೂಲಕವಾಗಿ ಪರಪೀಡಾದಿಗಳೊಂದಿಗೆ ಒದಗಿಸಿಕೊಂಡವರಾದುದರಿಂದ ಅವರನ್ನು ಪಾಪಿಷ್ಠರೆಂದು ಹೇಳಿ ಅವರಿಗುಂಟಾಗುವ ದುರ್ಗತಿಯನ್ನು ಉತ್ತರಾರ್ಧದಿಂದ ತಿಳಿಸುತ್ತಾರೆ;—**ಯೇ** - ಯಾರಾದರೆ **ಪಾಪಾಃ** - ಹಿಂದಿನ ದುಷ್ಕೃತದ ಮೂಲಕವಾಗಿ ಅಧರ್ಮದಿಂದ ದ್ರವ್ಯಗಳೇ ಮೊದಲಾದವನ್ನು

ಭಾ. ಇನ್ದ್ರಾದ್ಯಾತ್ಮನಾವಸ್ಥಿತ ಪರಮಪುರುಷಾರಾಧನಾರ್ಥತಯೈವ ದ್ರವ್ಯಾಣ್ಯುಪಾದಾಯ ವಿಪಚ್ಯ ತೈರ್ಯಥಾವಸ್ಥಿತಂ ಪರಮಪುರುಷ ಮಾರಾಧ್ಯ ತಚ್ಛಿಷ್ಟಾಶನೇನ ಯೇ ಶರೀರ ಯಾತ್ರಾಂ ಕುರ್ವತೇ, ತೇ ತ್ವನಾದಿಕಾಲೋಪಾರ್ಜಿತೈಃ ಕಿಲ್ಬಿಷೈ ರಾತ್ಮ

---

ಒದಗಿಸಿಕೊಳ್ಳುವ ಪಾಪಿಷ್ಠರಾದರೋ, ಆತ್ಮಕಾರಣಾತ್ - ದೇಹಧಾರಣಕ್ಕಾಗಿ ಮಾತ್ರ, ಪಚನ್ತಿ- ಆಹಾರವನ್ನು ಸಿದ್ಧಮಾಡಿಕೊಳ್ಳುವರೋ ಎಂದರೆ ಪರಮ ಪುರುಷಾರಾಧನ ರೂಪಗಳಾದ ಯಜ್ಞಗಳನ್ನನುಷ್ಠಿಸಿ ಶೇಷವಾದ ಅನ್ನವನ್ನು ಭುಜಿಸಿದೆ, ತನ್ನ ಉದರ ಪೋಷಣೆಗೆಂದೇ ಅಡಿಗೆ ಮಾಡಿಸಿ ಊಟಮಾಡುವವರೋ, ತೇ - ಅಂತವರು, ಅಘಂ ಭುಂಜತೇ - ಊಟ ಮಾಡುವದು ಪಾಪರೂಪವಾದುದರಿಂದ ಪಾಪವನ್ನೇ ಭುಜಿಸುವರು; ಪುನಃ ಪಾಪಗಳಿಗೇ ಹೇತುಗಳಾಗಿರುವ ಅನ್ನವನ್ನು ತಿನ್ನುವರು ಎಂಬ ಭಾವವು. ಆದುದರಿಂದಲೇ ಸಂಧ್ಯಾವಂದನ ಮಂತ್ರದಲ್ಲಿ, ಸತ್ಯಾಯ ಹನ್ಯಂ ಘೃತವದ್ವಿಧೇಮ ಎಂದು ಯಜ್ಞಶಿಷ್ಟಾಶನವಾಗಿಯೇ ಇರುವದಕ್ಕಾಗಿ ಪರಮ ಪುರುಷನಿಗೆ ಸಮರ್ಪಿಸತಕ್ಕದ್ದೆಂದು ಹೇಳಲ್ಪಟ್ಟಿದೆ. ಇದಾದನಂತರ "ಪಞ್ಚ ವಾ ಏತೇ ಮಹಾಯಜ್ಞಾಸ್ಸತತಿ ಪ್ರತಾಯನ್ತೇ ದೇವಯಜ್ಞಃ ಪಿತೃಯಜ್ಞೋ ಭೂತಯಜ್ಞೋ ಮನುಷ್ಯಯಜ್ಞೋ ಬ್ರಹ್ಮ ಯಜ್ಞಃ" ಎಂದು ಪಂಚ ಮಹಾ ಯಜ್ಞಗಳನ್ನು ಗೃಹಸ್ಥನು ಅನುಷ್ಠಿಸಿ, ಅಂತಹ ಯಜ್ಞಶಿಷ್ಟಾನ್ನವನ್ನು ಪ್ರತಿದಿನದಲ್ಲೂ ಸ್ವೀಕರಿಸುವ ಶೀಲವಿರಬೇಕೆಂದು ಇಲ್ಲಿ ಹೇಳಲ್ಪಟ್ಟಿತು (ವೈಶ್ವದೇವ ಪ್ರಕ್ರಿಯೆಯನ್ನು ಪರಾಂಬರಿಸಬಹುದು). ಇದನ್ನು ಮನಸ್ಸಿನಲ್ಲಿಟ್ಟೇ "ದೇವಾನ್ ಋಷೀನ್ ಪಿತೄಂಶ್ಚೈವ ಭೂತಾನಿಬ್ರಾಹ್ಮಣಾಂ ಸ್ತಥಾ । ತರ್ಪಯನ್ವಿಧಿನಾ ವಿಪ್ರೋಬ್ರಹ್ಮಭೂಯಾಯ ಕಲ್ಪತೇ" (ಹಾರೀತಃ) ಎಂಬ ಪ್ರಮಾಣವಿರುತ್ತದೆ; ಈ ಉತ್ತರಾರ್ಧವು ಕೇವಲಾಘೋ ಭವತಿ ಕೇವಲಾದೀ ಎಂಬ ಶ್ರುತಿಯನ್ನನುಸರಿಸಿ ಪ್ರತ್ಯವಾಯವನ್ನು ಬೋಧಿಸಿರುತ್ತದೆ. ಕೇವಲ ಉದರ ಪೋಷಣೆಗಾಗಿಯೇ ಆಹಾರವನ್ನು ತೆಗೆದುಕೊಳ್ಳುವವನು ಸ್ವಲ್ಪವೂ ಸುಕೃತವಿಲ್ಲದೆ ಕೇವಲ ಪಾಪಿಯೇ ಆಗುವನು ಎಂಬರ್ಥವು.

ಭಾಷ್ಯಾರ್ಥವು:—ಇನ್ದ್ರಾದ್ಯಾತ್ಮನಾವಸ್ಥಿತ ಪರಮಪುರುಷಾರಾಧನಾರ್ಥತಯೈವ - ಇಂದ್ರಾದಿ ದೇವತೆಗಳಿಗೆಲ್ಲಾ ಆತ್ಮನಾಗಿರುವ ಪರಮ ಪುರುಷನ ಆರಾಧನೆಗೋಸ್ಕರವಾಗಿಯೇ ದ್ರವ್ಯಾಣ್ಯುಪಾದಾಯ - ದ್ರವ್ಯಗಳನ್ನು ಸಙ್ಗ್ರಹಿಸಿಕೊಂಡು, ವಿಪಚ್ಯ - ವಿವಿಧವಾಗಿ ಭೋಗ್ಯವಾದ ಆಹಾರರೂಪವನ್ನು ಹೊಂದುವಹಾಗೆ ಅಡಿಗೆಮಾಡಿ, ತೈಃ - ಅಂತಹ ಆಹಾರದ್ರವ್ಯಗಳಿಂದ ಯಥಾವಸ್ಥಿತಂ ಪರಮಪುರುಷ ಮಾರಾಧ್ಯ - ಯಥಾವತ್ತಾಗಿ ಪರಮ ಪುರುಷನಾಗಿರುವನನ್ನು ಆರಾಧಿಸಿ, ತಚ್ಛಿಷ್ಟಾಶನೇನ - ಪರಮ ಪುರುಷ ನಿವೇದನವಾಗಿ ಶೇಷವಾದ ಅನ್ನದಿಂದ, ಎಂದರೆ ಭಗವಚ್ಛೇಷವಾದ ಅನ್ನದಿಂದ, ಯೇ - ಯಾವ ಸುಕೃತಶಾಲಿಗಳು, ಶರೀರಯಾತ್ರಾಂ ಕುರ್ವತೇ - ಶರೀರ ಯಾತ್ರೆಯನ್ನು ನಡೆಸುತ್ತಾರೋ, ತೇತು – ಅಂತಹ ಸುಕೃತಿಗಳಾದರೋ, ಅನಾದಿಕಾಲೋಪಾರ್ಜಿತೈಃ - ಅನಾದಿಕಾಲದಿಂದಲೂ ಪ್ರಾಪ್ತವಾಗಿರುವ, ಆತ್ಮಯಾಥಾತ್ಮ್ಯಾವಲೋಕನ ವಿರೋಧಿಭಿಃ-ಜೀವಾತ್ಮನ ಯಥಾರ್ಥವಾದ ದರ್ಶನಕ್ಕೆ ವಿರೋಧಿಗಳಾದ ಸರ್ವೈಃ ಕಿಲ್ಬಿಷೈಃ – ಸಮಸ್ತ ಪಾಪಗಳಿಂದಲೂ, ಮುಚ್ಯಂತೇ - ಬಿಡಲ್ಪಡುವರು. ಆತ್ಮಯಾಥಾತ್ಮ್ಯದರ್ಶನಕ್ಕೆ ವಿರೋಧವಾದ ಸಕಲ ಪಾಪಗಳನ್ನೂ ಕಳೆದುಕೊಳ್ಳುವರು ಎಂಬ ಭಾವವು. ಈ ಪೂರ್ವಾರ್ಧದ ವ್ಯಾಖ್ಯಾನದಿಂದ, ಶ್ರೇಯಃ ಪರಮವಾಪ್ಸ್ಯಥ ಎಂದು ಹಿಂದೆ ೧೧ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತಲ್ಲಾ ಅದು ಹೇಗೆ ಎಂಬ ಶಙ್ಕೆಗೆ ಉತ್ತರವನ್ನು ವ್ಯಕ್ತಪಡಿಸಿರುತ್ತಾರೆ. ಯಾವಾಗ ಆತ್ಮಯಾಥಾತ್ಮ್ಯದರ್ಶನಕ್ಕೆ ಪ್ರತಿಬಂಧಕಗಳಾದ ಪಾಪಗಳು ತೊಲಗಿದವೋ, ಆಗ

**ಯಾಥಾತ್ಮ್ಯಾವಲೋಕನ ವಿರೋಧಿಭಿ ಸರ್ವೈರ್ಮುಚ್ಯನ್ತೇ ; ಯೇ ತು ಪರಮಪುರುಷೇ**

ಉಪಾಯವಾದ ಭಕ್ತಿಯೋಗಕ್ಕೆ ಆವಶ್ಯಕವಾದ ಆತ್ಮಯಾಥಾತ್ಮ್ಯ ದರ್ಶನವು ಲಭಿಸಿದುದರಿಂದ ಮೋಕ್ಷವು ಕರಗತವಾದಹಾಗೆಯೇ ಭಾವನೆಯು. ಅಂತವನು **ಅಮೃತ ಇಹ ಭವತಿ** ಎಂದು ಶ್ರುತಿಯು ಹೇಳಿರುವ ಹಾಗೆ ಮುಕ್ತನಹಾಗೆ ಆನಂದವನ್ನು ಪರಮಾತ್ಮೋಪಾಸನದಿಂದ ಹೊಂದುವನು ಎಂಬ ಭಾವವು. ಅಂತವನು ದ್ರವ್ಯ ಮೊದಲಾದವನ್ನೂ ಅವುಗಳ ಮೂಲಕ ಪರಮಪುರುಷನ ನಿವೇದನಕ್ಕೆ ಬೇಕಾದ ಸಮಸ್ತ ಸೋಪಸ್ಕರಗಳನ್ನು ಒದಗಿಸಿಕೊಳ್ಳುವಾಗಲೂ, ಅವುಗಳಿಂದ ಭೋಗ್ಯವಾದ ನಿವೇದನ ಪದಾರ್ಥಗಳಾಗ ನಾಲ್ಕು ವಿಧ ಆಹಾರಗಳು ಪಚನವಾಗುವಾಗಲೂ ಭಗವದರ್ಪಣಕ್ಕಾಗಿಯೇ ಇವೆಲ್ಲಾ ನಡೆಯುತ್ತಿರುವದು ಎಂಬ ಸರ್ವೋತ್ಕೃಷ್ಟ ಬುದ್ಧಿಯು ಇರುತ್ತದೆಂದು ತೋರಿಸುವದಕ್ಕಾಗಿಯೇ, **ದ್ರವ್ಯಾಣ್ಯುಪಾದಾಯ ವಿಪಚ್ಯ** ಎಂಬದಾಗಿ ಭಾಷ್ಯವು- ಈ ಅಭಿಪ್ರಾಯಗಳೆಲ್ಲಾ ಮೂಲದ **ಯಜ್ಞಶಿಷ್ಟಾಶಿನಃ** ಎಂಬ ಪ್ರಯೋಗದಿಂದ ಅರ್ಥವಾಗಿ ತೋರಿಬರುತ್ತವೆ. ನ್ಯಾಯಾರ್ಜಿತ ದ್ರವ್ಯದಿಂದ ಸಙ್ಗ್ರಹಿಸಲ್ಪಟ್ಟ ಸಾತ್ವಿಕಾಹಾರ ದ್ರವ್ಯಗಳಾಗಿ, ಆರು ವಿಧ ದೋಷಗಳು ಯಾವುದೂ ಇಲ್ಲದೆ, ಮಿಂದು ಪರಿಶುದ್ಧವಾಗಿ ಪಕ್ವವಾಗಿದ್ದರೇನೇ ಭಗವನ್ನಿವೇದನಕ್ಕೆ ಅರ್ಹವಾಗಿ ತದನಂತರ ಯಜ್ಞಶಿಷ್ಟಾಶನವಾಗಿ, ಅದನ್ನು ಸ್ವೀಕರಿಸುವನರು **ಯಜ್ಞಶಿಷ್ಟಾಶಿನಿಗಳೆಂದು** ಹೇಳಲ್ಪಡುವರು. ಇದನ್ನೆಲ್ಲಾ ವ್ಯಾವರ್ತಿಸಿ ಹೇಳುವದಕ್ಕಾಗಿ ಭಗವನ್ನಿವೇದನರೂಪ ಯಜ್ಞಶಬ್ದವೇ ಇಲ್ಲದೇ ಸುಮ್ಮನೆ **ಯೇ ಪಚನ್ತ್ಯಾತ್ಮಕಾರಣಾತ್** ಎಂಬ ಪ್ರಯೋಗವಿರುತ್ತದೆ. ಈ ಸಂದರ್ಭದಲ್ಲಿ ಇಂದ್ರಾದಿ ದೇವತೆಗಳಿಗೆ ಸಮರ್ಪಣಕ್ಕೂ ಕೂಡ ಭಗವನ್ನಿವೇದಿತವಾದ ಹವಿಸ್ಸೇ ಯೋಗ್ಯವೆಂದು ತಿಳಿಸುವದಕ್ಕಾಗಿ **ಯಥಾವಸ್ಥಿತ ಪರಮಪುರುಷಾರಾಧನಾರ್ಥತಯಾ** ಎಂಬ ಪ್ರಯೋಗವು. ಈ ಅಂಶವನ್ನು ವೈಶ್ವದೇವ ಪ್ರಕ್ರಿಯೆಯಲ್ಲಿ ತಿಳಿಯತಕ್ಕದ್ದಾಗಿರುತ್ತದೆ. ಶರೀರಯಾತ್ರೆಗೆ ಈ ಅಮೃತ ಸದೃಶವಾದ ಯಜ್ಞಶಿಷ್ಟಾನ್ನವೇ ಆವಶ್ಯಕವೆಂಬುದು ಶಾಸ್ತ್ರರೀತ್ಯಾ ನಿಯತವು. ಸುಕೃತಿಗಳಾದ ಸತ್ಪುರುಷರು ಇಂಥಾದ್ದನ್ನೇ ಸ್ವೀಕರಿಸುವದರಿಂದ ಮೂಲದಲ್ಲಿ **ಸನ್ತಃ** ಎಂಬ ಪ್ರಯೋಗವು. ಇದು ಉತ್ತರಾರ್ಧದಲ್ಲಿ ಹೀಗೆ ಮಾಡದಿರುವ ಅಸತ್ತುಗಳಾದ **ಪಾಪಾಃ** ಎಂಬುದಕ್ಕೆ ಪ್ರತಿ ದ್ವಂದಿರೂಪದಲ್ಲಿ ಪ್ರಯೋಗವೆಂದು ಭಾವಿಸಬಹುದು. ಶ್ರೀ ಯತಿವರ್ಯರೂ **ಸನ್ತಃ** ಎಂಬುದಕ್ಕೆ ಹೀಗೆ ಸಾಕ್ಷಾತ್ತಾಗಿ ಅರ್ಥಮಾಡದೇ ಸುಮ್ಮನೇ **ಯೇ ಶರೀರ ಯಾತ್ರಾಂ ಕುರ್ವತೇ** ಇಷ್ಟು ಮಾತ್ರವೇ ಬರೆದಿದ್ದರೂ, **ಪರಮಪುರುಷಾರಾಧನಾರ್ಥತಯೈವ** ಎಂದು ಏವ ಕಾರದೊಂದಿಗೆ ಉಪಪಾದನೆ ಮಾಡಿರುವದರಿಂದ **ಸನ್ತಃ** ಎಂಬುದಕ್ಕೆ ಶ್ರೀ ನಿಗಮಾನ್ತರು ಅರ್ಥಮಾಡಿರುವಹಾಗೆ ಸುಕೃತಿಗಳಾಗಿರುವ ಸಾಧುಗಳು ಎಂಬರ್ಥವೇ ಯತಿವರ್ಯರಿಗೂ ಗ್ರಾಹ್ಯವೆಂದು ತೋರಿಬರುತ್ತದೆ ಇಲ್ಲಿ **ಸರ್ವಕಿಲ್ಬಿಷೈಃ** ಎಂಬ ಪ್ರಯೋಗವು ಮೂಲದಲ್ಲಿದ್ದರೂ ವ್ಯಾಖ್ಯಾನದಲ್ಲಿ ಸರ್ವ ಶಬ್ದಕ್ಕೆ ಸಙ್ಕೋಚವುಂಟಾಗುವಹಾಗೆ **ಆತ್ಮಯಾಥಾತ್ಮ್ಯಾವಲೋಕನ ವಿರೋಧಿಭಿಃ ಸರ್ವೈಃ ಕಿಲ್ಬಿಷೈಃ** ಎಂಬ ವ್ಯಾಖ್ಯಾನವು ಹೇಗೆ ಎಂದರೆ, ಕಿಲ್ಬಿಷಗಳು ಅನಾದಿಕಾಲದಿಂದಲೂ ಪ್ರಾಪ್ತವಾದುವುಗಳನ್ನು ಎರಡು ವಿಧವಾಗಿ ವಿಙ್ಗಡಿಸಬಹುದು—(೧) ಪ್ರಾಪ್ತಿ ವಿರೋಧಿ ಪಾಪಗಳು (೨) ಉಪಾಯ ವಿರೋಧಿ ಪಾಪಗಳು ; ಈ ಯಜ್ಞಶಿಷ್ಟಾಶನದಿಂದ ತೊಲಗುವುವು ಎರಡನೆಯ ವಿಧ ಪಾಪಗಳೇ ವಿನಾ ಮೊದಲನೇಯವು ಹೋಗುವದಿಲ್ಲವು. ಮೊದಲನೆಯವಾದರೋ, ಉಪಾಯವಾದ ಭಕ್ತಿಯೋಗ ಮಾತ್ರದಿಂದಲೇ ಹೋಗತಕ್ಕವೇ ವಿನಾ ಕರ್ಮಯೋಗದಿಂದ ಹೋಗತಕ್ಕವುಗಳಲ್ಲವು. ಆದುದರಿಂದಲೇ ಸರ್ವಸಮಂಜಸವಾಗಿ ಹಾಗೆ ವ್ಯಾಖ್ಯಾನವು. ಹೀಗೆಯೇ ಅನೇಕ ಕಡೆಗಳಲ್ಲಿ ಸರ್ವಶಬ್ದ

ಭಾ. ಹೇನ್ದ್ರಾದ್ಯಾತ್ಮನಾ ಸ್ವಾರಾಧನಾಯ ದತ್ತಾನಾತ್ಮಾರ್ಥತಯೋಪಾದಾಯ ವಿಪಚ್ಯಾಕ್ಷನ್ತಿ, ತೇ ಪಾಪಾತ್ಮಾನೋಽಘಮೇವ ಭುಞ್ಜತೇ, ಅಘಪರಿಣಾಮಿತ್ವಾತ್ ಅಘಮಿತ್ಯುಚ್ಯತೇ ; ಆತ್ಮಾವಲೋಕನ ವಿಮುಖಾಃ ನರಕಾಯೈವ ಪಚನ್ತೇ ||೧೩||

---

ವಿದ್ದರೂ ಸಙ್ಕೋಚಾರ್ಥಗಳನ್ನೇ ಹೇಳತಕ್ಕದ್ದಾಗಿರುತ್ತವೆ. ಪ್ರಕೃತಸ್ಥಳಗಳಲ್ಲಿ ಉಪಪಾದಿಸುವೆವು. ಅನೇಕರು ಒಳಗೆ ಸಭೆ ನೆರೆದಿದ್ದರೂ, ಹೊರಗೂ ಕೆಲವರು ನಿಂತಿದ್ದರೆ, ಸರ್ವರೂ ಒಳಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಿದರೆ ಸರ್ವ ಶಬ್ದಕ್ಕೆ ಹೊರಗೆ ನಿಂತಿರುವವರಿಗೆ ಮಾತ್ರವೇ ಅನ್ವಯಿಸುವ ಹಾಗೆ ಸಙ್ಕುಚಿತಾರ್ಥವನ್ನೇ ಹೇಳತಕ್ಕದ್ದು ಹೇಗೆ ಅವಶ್ಯಕವೋ ಹಾಗೆಂದು ಭಾವಿಸತಕ್ಕದ್ದು.

ಮುಂದೆ ಹಾಗೆ ಸಾಧುಗಳಲ್ಲದೆ, ಅಸಾಧುಗಳಾದ ಪಾಪಿಗಳಾಗಿ ಯಜ್ಞದ ಹವಿಸ್ಸಾಗಿ ಪರಮಪುರುಷಾರಾಧನಾರೂಪದಲ್ಲಿ ನಿವೇದನಕ್ಕಾಗಿ ಭಾವಿಸದೆ, ಅಧರ್ಮದಿಂದ ಧನದ್ರವ್ಯಗಳನ್ನು ಒದಗಿಸಿಕೊಂಡು ಉದರಪೋಷಣೆಗಾಗಿಯೇ ಊಟಮಾಡುವವರು ಹಿಂದಿನ ಶ್ಲೋಕದಲ್ಲಿ ಸ್ತೇನ ಏವ ಸಃ ಅವರು ಕಳ್ಳರು ಎಂದು ಹೇಳಿದುದನ್ನೇ ಉಪಪಾದಿಸಿ ಹೇಳುತ್ತಾರೆ. ಅವರಿಗೆ ಉಪಾಯ ವಿರೋಧಿ ಪಾಪಗಳು ಅನಾದಿ ಕಾಲದಿಂದ ಬಂದವು ಸ್ವಲ್ಪವೂ ನಾಶವಾಗದೆ, ಆತ್ಮಾವಲೋಕನವು ಸಿದ್ಧಿಸದೆ, ಪಾಪಗಳು ಇನ್ನು ಹೆಚ್ಚುತ್ತಾ ಹೋಗಿ ಸಂಸಾರ ಪರಂಪರೆಗಳ ಮೂಲಕ ನರಕವನ್ನು ಕೂಡ ಹೋಗಿ ಸೇರಬಹುದೆಂದು ಹೇಳುತ್ತಾರೆ—**ಯೇತು**—ಯಾರಾದರೇ, **ಇನ್ದ್ರಾದ್ಯಾತ್ಮನಾ** - ಇನ್ದ್ರಾದಿ ದೇವತೆಗಳಿಗೆ ಆತ್ಮಾವಾದ, **ಪರಮಪುರುಷೇಣ** - ಪರಮಪುರುಷನಿಂದ, **ಸ್ವಾರಾಧನಾಯ** - ತನ್ನ ಆರಾಧನೆಗೋಸ್ಕರವಾಗಿಯೇ, **ದತ್ತಾನ್** - ಕೊಟ್ಟ ದ್ರವ್ಯಗಳನ್ನು **ಆತ್ಮಾರ್ಥತಯಾ ಉಪಾದಾಯ** - ಇದು ಮೂಲದ ಅತ್ಮಕಾರಣಾತ್ ಎಂಬುದರ ವ್ಯಾಖ್ಯಾನವು; ತನಗೋಸ್ಕರವಾಗಿಯೇ ಉಂಟಾದುವೆಂದು ಭಾವಿಸಿ, **ವಿಪಚ್ಯಾಶ್ನನ್ತಿ** - ಅಡಿಗೆ ಮಾಡಿಸಿಯೋ ಮಾಡಿಯೋ ತಿನ್ನುತ್ತಾರೋ, **ತೇ** - ಅಂತವರಾದರೋ, **ಪಾಪಾತ್ಮಾನಃ** - ಪಾಪಬುದ್ಧಿಯುಳ್ಳವರು; ಮೂಲದ ಪಾಪಾಃ ಎಂದರೆ ಪಾಪಿಗಳಾಗಿ ಪಾಪವಿಶಿಷ್ಟರಾದುದರಿಂದ ಪಾಪಾತ್ಮಾನಃ ಎಂಬ ವ್ಯಾಖ್ಯಾನವು, **ಅಘಮೇವ ಭುಞ್ಜತೇ** - ಪಾಪವನ್ನೇ ತಿನ್ನುತ್ತಾರೆ. ಆಹಾರವನ್ನು ತಿನ್ನುವಾಗ ಪಾಪವನ್ನೇ ತಿನ್ನುತ್ತಾರೆಂಬ ಹೇಳಿಕೆಯು ಹೇಗೆ? ಎಂದರೆ ಕಾರಣವನ್ನು ತಿಳಿಸುತ್ತಾರೆ. ಆಹಾರವು **ಅಘಪರಿಣಾಮಿತ್ವಾತ್**—ಪಾಪರೂಪವಾದುದರಿಂದ, ದ್ರವ್ಯಗಳನ್ನು ಒದಗಿಸಿಕೊಂಡುದೂ ಅಧರ್ಮವಾಗಿ, ಯಜ್ಞಹವಿಸ್ಸಿನ ರೂಪವನ್ನು ಹೊಂದದೇ ಇರುವದರಿಂದ ಪಾಪಗಳು ತೊಲಗದೇ ಇರುವದರಿಂದ ಪಾಪರೂಪವಾದುದೇ ಎಂಬ ಅಭಿಪ್ರಾಯವು. ಇವರು ಯಾವಾಗ ಪಾಪಾಃ ಎಂದು ಹೇಳಲ್ಪಟ್ಟರೋ, ಅಂತವರಿಗೆ ಫಲವು ಯಾವುದೆಂಬುದನ್ನು ತಿಳಿಸುತ್ತಾರೆ. **ಆತ್ಮಾವಲೋಕನ ವಿಮುಖಾಃ**-ಆತ್ಮಾವಲೋಕನವನ್ನು ಸಂಪಾದಿಸಬೇಕೆಂಬುದರಿಂದ ವಿಮುಖರಾಗಿರುವದರಿಂದಲೇ, ಎಂದರೆ ಅನಾದಿಕಾಲಸಂಚಿತ ಅಘಗಳು ನಾಶವಾಗದೇ ಇರುವದರಿಂದಲೇ **ನರಕಾಯೈವ** - ನರಕವನ್ನು ಹೊಂದುವದಕ್ಕಾಗಿಯೇ, **ಪಚನ್ತಿ** - ಅಡಿಗೆಮಾಡಿ ಊಟಮಾಡುತ್ತಾರೋ ಎಂಬ ಹಾಗೆ ತೋರುತ್ತದೆ. ನರಕ ಪ್ರಾಪ್ತಿಯನ್ನು ಹೊಂದಬೇಕೆಂಬ ಆಶೆಯಿಂದಲೇನಾದರೂ, ಹಾಗೆ ಅಡಿಗೆ ಮಾಡಿ ಊಟಮಾಡುತ್ತಾರೋ ಎಂಬಹಾಗೆ ತೋರುತ್ತದೆಂಬ ಭಾವವು; ಇದರಿಂದ ಅಂತವರಿಗೆ ಪುನಃಪುನಃ ಸಂಸಾರಗಳ ಮೂಲಕ ಅಧೋಗತಿಯೇ ವಿನಾ ಸದ್ಗತಿಯು ಅವರಿಗೆ ದೂರವೆಂದು ಹೇಳಿದಂತಾಯಿತು, ಇದರಿಂದ ಇಂತವರಿಗೆ ಎರಡು ವಿಧಗಳಾದ ಅನಿಷ್ಟ ಫಲಗಳು ಹೇಳಲ್ಪಟ್ಟವು :—(೧) ಈತನಿಗೆ ಉತ್ತಾರಕವಾದ ಆತ್ಮಾವಲೋಕನವು ದೂರೀಕೃತ

**ಭಾ. ಅ. ಪುನರಪಿ ಲೋಕದೃಷ್ಟ್ಯಾ ಶಾಸ್ತ್ರದೃಷ್ಟ್ಯಾ ಚ ಸರ್ವಸ್ಯ ಯಜ್ಞಮೂಲತ್ವಂ ದರ್ಶಯಿತ್ವಾ ಯಜ್ಞಾನುವರ್ತನಸ್ಯಾವಶ್ಯಕಾರ್ಯತಾ ಮನನುವರ್ತನೇ ದೋಷಂಚಾಹ—**

**ಮೂ. ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪.**

ವಾದುದು. (೨) ಇದರಿಂದ ಅನಾದಿಕಾಲದಿಂದ ಪ್ರಾಪ್ತವಾದ ಪಾಪಗಳು ಕಳೆಯದೆ ಪಾಪಗಳು ವೃದ್ಧಿಯಾಗುತ್ತಾ ಹೋಗಿ ಅಧೋಗತಿಯು. ಹೀಗೆ ಕೇವಲಾಘೋ ಭವತಿ ಕೇವಲಾದೀ ಎಂಬ ಶ್ರುತ್ಯರ್ಥವು ಉಪದೇಶಿಸಲ್ಪಟ್ಟಿತು. ||೧೩||

**ಭಾಷ್ಯಾವತಾರಿಕೆಯ ಅರ್ಥವು:—**ಲೋಕ ದೃಷ್ಟಿಯಿಂದಲೂ ಶಾಸ್ತ್ರ ದೃಷ್ಟಿಯಿಂದಲೂ ಸಮಸ್ತವೂ ಯಜ್ಞಮೂಲಕವಾಗಿಯೇ ಆಗುತ್ತದೆಂದು ಹಿಂದೆಯೂ ಹೇಳಿ, **ಪುನರಪಿ**-ಇನ್ನೊಂದು ಸಲವೂ ಕೂಡ, **ಲೋಕದೃಷ್ಟ್ಯಾ**ಯಿಂದಲೂ **ಶಾಸ್ತ್ರದೃಷ್ಟ್ಯಾ**ಯಿಂದಲೂ ಸಹ, **ಸರ್ವಸ್ಯ** - ಸಮಸ್ತಕ್ಕೂ, **ಯಜ್ಞ ಮೂಲತ್ವಂ** - ಯಜ್ಞವೇ ಮೂಲಕಾರಣವೆಂಬುವನ್ನು, **ದರ್ಶಯಿತ್ವಾ** - ತೋರಿಸುವವರಾಗಿ, **ಯಜ್ಞಾನುವರ್ತನಸ್ಯ** - ಯಜ್ಞವನ್ನನುಸರಿಸಿ ನಡೆಯುವದು, **ಅವಶ್ಯಕಾರ್ಯತಾಂ** - ಅವಶ್ಯಕವಾಗಿ ಮಾಡತಕ್ಕದೆಂಬುದನ್ನು, **ಅನನುವರ್ತನೇ** - ಹಾಗೆ ಯಜ್ಞರೂಪವನ್ನನುಸರಿಸದೇ ಇರುವದರಲ್ಲಿ, **ದೋಷಂಚಾಹ** - ದೋಷ ಉಂಟೆಂಬುವನ್ನೂ ಸಹ ಮುಂದಿನ ಮೂರು ಶ್ಲೋಕಗಳಿಂದ ಆಹ - ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ. **ಪುನರಪಿ** ಎಂಬ ಪ್ರಯೋಗದಿಂದ ಉಕ್ತಾರ್ಥದ.ಪುನರುಕ್ತಿಯೇ,ಹಾಗಾದರೆ ದೋಷವಲ್ಲವೇ?ಎಂದರೆ,ಹಾಗಲ್ಲವೆಂದೂ ಹಿಂದಿನ ಅಭಿಪ್ರಾಯವನ್ನೇ ಉಪಪಾದಿಸಿ ಲೋಕದೃಷ್ಟ್ಯಾ ಶಾಸ್ತ್ರ ದೃಷ್ಟ್ಯಾ ತೋರಿಸುವದು ಎಂದಿಗೂ ಪುನರುಕ್ತಿಯಾಗುವದಿಲ್ಲವು. ಶಾಸ್ತ್ರಗಳಲ್ಲಿ ಅಭಿಪ್ರಾಯಗಳನ್ನು ಮೊದಲು ತಿಳಿಸಿ ಅವುಗಳನ್ನು ಸಮರ್ಥನೆಮಾಡಿ ತಿಳಿಸುವದೇ ವಾಡಿಕೆಯಾಗಿರುತ್ತದೆ; ಅನೇಕ ಕಡೆಗಳಲ್ಲಿ ಮೊದಲು ಪ್ರತಿಜ್ಞಾವಾಕ್ಯವೂ, ಅಲ್ಲಿಂದ ಪೂರ್ವಪಕ್ಷಗಳ ನಿರಸನ ಮೂಲಕ ಸಿದ್ಧಾಂತಿಸಿ ಹೇಳುವದೇ ಶಾಸ್ತ್ರಾರ್ಥಕ್ರಮವು. **ಶಾಸ್ತ್ರದೃಷ್ಟ್ಯಾ ಲೋಕದೃಷ್ಟ್ಯಾ** ಎಂದು ಎರಡನ್ನೂ ಹೇಳಿರುವದು ಮುಂದೆ ಹೇಳುವ ಅಭಿಪ್ರಾಯಗಳಲ್ಲಿ ಕೆಲವು ಶಾಸ್ತ್ರಮೂಲಕವೇ ತಿಳಿಯತಕ್ಕವು ಎಂದೂ, ಇನ್ನು ಕೆಲವು ಲೋಕಸಿದ್ಧವೆಂದೂ ಹೇಳಿದಂತಾಯಿತು.

**ಮೂಲಕ್ಕೆ ಅರ್ಥವು:—**ಹೀಗೆ ಪರಮ ಪುರುಷಾರಾಧನಾರೂಪವಾದ ಯಜ್ಞಾನುಷ್ಠಾನ ಮೂಲಕ ಪ್ರಾಪ್ತವಾದುದನ್ನು ಪುನಃ ಹವಿಸ್ಸಿನ ರೂಪದಲ್ಲಿ ಸಮರ್ಪಣೆಯು ಹೇಗೆ ಆವಶ್ಯಕವೆಂಬುದನ್ನು ಇನ್ನೂ ವಿಶದವಾಗಿ ಉಪಪಾದಿಸಿ, ಹಾಗೆ ಮಾಡದಿರುವವನ ಜನ್ಮವೇ ವ್ಯರ್ಥವಾದುವೆಂದು ಮುಂದಿನ ಮೂರು ಶ್ಲೋಕಗಳಿಂದ ವ್ಯಕ್ತಪಡಿಸುತ್ತಾರೆ—**ಅನ್ನಾತ್**-ಅನ್ನಮೂಲಕವಾಗಿ, **ಭೂತಾನಿ** - ಚೇತನನ ಶರೀರಗಳು ಎಂದರೆ ಸಜೀವಶರೀರಗಳು, **ಭವಂತಿ** - ಉಂಟಾಗ.ವವು. ಇವು ಲೋಕದೃಷ್ಟ್ಯಾಸಿದ್ಧವು ; **ಅನ್ನಾದ್ಭೂತಾನಿ ಜಾಯಂತೇ, ಜಾತಾನ್ಯನ್ನೇನ ವರ್ಧನ್ತೇ** ಎಂಬ ತೈತ್ತರೀಯ ಶ್ರುತಿ ವಾಕ್ಯಗಳು ಅನುಸಂಧೇಯವು; **ಪರ್ಜನ್ಯಾತ್**-ಮೇಘದಿಂದ ಎಂದರೆ ವೃಷ್ಟಿಯಿಂದ, **ಅನ್ನಸಂಭವಃ** - ಅನ್ನಪ್ರಾಪ್ತಿಯುಂಟಾಗುತ್ತದೆ, ಇದೂ ಲೋಕಸಿದ್ಧವು, **ಯಜ್ಞಾತ್**-ಯಜ್ಞಮೂಲಕವಾಗಿ, **ಪರ್ಜನ್ಯಃ**-ಮಳೆಯು, **ಭವತಿ** - ಉಂಟಾಗುತ್ತದೆ, ಇದು ಶಾಸ್ತ್ರಸಿದ್ಧವು. **ಯಜ್ಞಃ** - ಯಜ್ಞವು, **ಕರ್ಮಸಮುದ್ಭವಃ** - ದ್ರವ್ಯಾರ್ಜನಾದಿ ಕರ್ಮದ

ಮೂ. ಕರ್ಮಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರ ಸಮುದ್ಭವಂ ।
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥ ೧೫.
ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥ ೧೬.

ಭಾ. ಅನ್ನಾತ್ಸರ್ವಾಣಿ ಭೂತಾನಿಭವನ್ತಿ, ಪರ್ಜನ್ಯಾಚ್ಚಾನ್ನಸಂಭವ ಇತಿ ಸರ್ವಲೋಕ ಸಾಕ್ಷಿಕಂ ; ಯಜ್ಞಾತ್ಪರ್ಜನ್ಯೋ ಭವತಿ ಇತಿ ಚ. ಶಾಸ್ತ್ರೇಣಾವ ಗಮ್ಯತೇ; (೧)"ಅಗ್ನೌ

ದೇಶೆಯಿಂದುಂಟಾಗುವಂತಾದ್ದು, ಇದು ಲೋಕಸಿದ್ಧವು, ಕರ್ಮಬ್ರಹ್ಮೋದ್ಭವಂ ವಿದ್ಧಿ - ಕರ್ಮವು ಬ್ರಹ್ಮದ ಮೂಲಕವುಂಟಾಗುವದೆಂದು ತಿಳಿ, ಇಲ್ಲಿ ಬ್ರಹ್ಮವೆಂದರೆ ಜೀವಾತ್ಮ ಪರಮಾತ್ಮರಿಬ್ಬರೂ ಅಲ್ಲವು, ಪ್ರಕೃತಿ ಎಂಬರ್ಥವು; ಇದೂ ಲೋಕಸಿದ್ಧವು ; ಬ್ರಹ್ಮ - ಶರೀರ ರೂಪ ಪ್ರಕೃತಿಯು, ಅಕ್ಷರಸಮುದ್ಭವಂ-ಅದುಂಟಾಗುವದಕ್ಕೆ ಹೇತುವಾದ ಚೇತನಮೂಲಕ ಪ್ರಾಪ್ತವಾದುದು; ಇಲ್ಲಿ ಅಕ್ಷರ ಶಬ್ದದಿಂದ ನಾಶರಹಿತನಾಗಿ ನಿತ್ಯನಾಗಿರುವ ಜೀವಾತ್ಮನು ಹೇಳಲ್ಪಟ್ಟನು. ಇದೂ ಶಾಸ್ತ್ರ ದೃಷ್ಟ್ಯಾ ವಿದಿತವು. ಅಕ್ಷರ ಶಬ್ದವು ಅನೇಕ ಕಡೆಗಳಲ್ಲಿ ಜೀವಾತ್ಮನನ್ನೇ ಈ ಗ್ರಂಥದಲ್ಲೇ ಬೋಧಿಸಿರುತ್ತದೆ. ಏಕೆಂದರೆ ಆತನ ಸ್ವರೂಪವು ನಿತ್ಯವಾದುದಾಗಿ ಪರಿಣಾಮ ರಹಿತವಾದುದರಿಂದ ಶ್ರುತಿಯು ಅಕ್ಷರ ಶಬ್ದದಿಂದ ಜೀವಾತ್ಮನನ್ನೇ "ಅಮೃತಾಕ್ಷರಂ ಹರಃ" ಎಂಬಲ್ಲಿ ಬೋಧಿಸುತ್ತದೆ ; ತಸ್ಮಾತ್ - ಆ ಕಾರಣದಿಂದ, ಸರ್ವಗತಂ – ಸಮಸ್ತ ಅಧಿಕಾರಿಗಳನ್ನೂ ಹೊಂದಿದ, ಬ್ರಹ್ಮ - ಶರೀರವು, ನಿತ್ಯಂ - ಯಾವಾಗಲೂ, ಯಜ್ಞೇಪ್ರತಿಷ್ಠಿತಮ್ - ಯಜ್ಞದಲ್ಲಿ, ಪ್ರತಿಷ್ಠಿತವಾದುದು ಎಂದರೆ ಯಜ್ಞಮೂಲವಾದುದು ಎಂಬ ಭಾವವು. ಏವಂ - ಈ ಮೇಲೆ ಹೇಳಿದ ರೀತಿಯಲ್ಲಿ, ಪ್ರವರ್ತಿತಂ-ಪರಮ ಪುರುಷನ ಸಙ್ಕಲ್ಪದಿಂದ ಪ್ರವರ್ತಿಸಲ್ಪಟ್ಟ, ಚಕ್ರಂ-ಚಕ್ರವನ್ನು, ಯಃ – ಯಾವ ಪುರುಷನು, ಕರ್ಮಯೋಗಮಾತ್ರಕ್ಕೇ ಯೋಗ್ಯತೆ ಇರುವ ಅಧಿಕಾರಿಯೇ ಯಾಗಲಿ, ಅಥವಾ ಜ್ಞಾನಯೋಗಕ್ಕೂ ಸಹ ಯೋಗ್ಯತೆ ಇರುವ ಅಧಿಕಾರಿಯೇಯಾಗಲಿ, ಯಾರೇ ಆಗಲಿ ಎಂಬ ಭಾವವು ; ಇಹ - ಈ ಉಪಾಯಾನುಷ್ಠಾನದಲ್ಲಿ, ನಾನುವರ್ತಯತಿ-ಅನುಸರಿಸುವದಿಲ್ಲವೋ, ಸಃ - ಅಂತಹ ಅಧಿಕಾರಿಯು, ಅಘಾಯುಃ - ಪಾಪ ಮಾಡುವದಕ್ಕಾಗಿಯೇ ಉಂಟಾದ ಆಯುಸ್ಸುಳ್ಳವನಾಗಿ, ಅಥವಾ ಪಾಪಪರಿಣಾಮವೇ ಆದ ಆಯುಸ್ಸುಳ್ಳವನಾಗಿ, ಇಂದ್ರಿಯಾರಾಮಃ - ಆತ್ಮಾರಾಮನಾಗಿ ಆತ್ಮಾವಲೋಕನ ಆನಂದವನ್ನು ಹೊಂದುವದಕ್ಕೆ ಬದಲಾಗಿ ಇಂದ್ರಿಯಗಳೆಂಬ ಉದ್ಯಾನವನದಲ್ಲಿ ವಿಹರಿಸುವವನಾಗಿ, ಮೋಘಂ-ವ್ಯರ್ಥವಾಗಿ, ಹೇ ಪಾರ್ಥ - ಓ ಅರ್ಜುನನೇ, ಜೀವತಿ - ಜೀವಿಸುತ್ತಾನೆ. ಹೀಗೆ ಎರಡು ಶ್ಲೋಕಗಳಿಂದ ಸಮಸ್ತ ಶ್ರೇಯಸ್ಸಿಗೂ ಪರಮ ಪುರುಷಾರಾಧನರೂಪವಾದ ಯಜ್ಞವೇ ಮೂಲಭೂತವಾದುದೆಂದು ತೋರಿಸಿದರು. ಮೂರನೆಯ ಶ್ಲೋಕದಿಂದ, ಹಾಗೆ ಪರಮ ಪುರುಷಾರಾಧನರೂಪವಲ್ಲದ ಕರ್ಮಗಳಿಂದ ಈತನಿಗೆ ಅಶ್ರೇಯಸ್ಸೂ ಉಂಟಾಗುತ್ತದೆಂದೂ ಹೇಳಲ್ಪಟ್ಟಿತು.

ಭಾಷ್ಯಾರ್ಥವು :—ಮೇಲೆ ಹೇಳಿದ ಅಭಿಪ್ರಾಯಗಳನ್ನೇ ಪ್ರಮಾಣ ಪ್ರದರ್ಶನ ಪೂರ್ವಕವಾಗಿ ವ್ಯಕ್ತಪಡಿಸಿ ಹೇಳುತ್ತಾರೆ. ಅನ್ನಾತ್ - ಆಹಾರದಿಂದ, ಸರ್ವಾಣಿ ಭೂತಾನಿ ಭವಂತಿ- ಸಮಸ್ತ ಜೀವಾತ್ಮರ ಶರೀರಗಳೂ ಉಂಟಾಗುವುವು ಮತ್ತು ಪರ್ಜನ್ಯಾಚ್ಚ - ಮೇಘದಿಂದ ಎಂದರೆ

(೧) ಬ್ರಹ್ಮಪುರಾಣ. ೨೯. ೪.

ಭಾ. ಪ್ರಾಸ್ತಾಹುತಿ ಸ್ಸಮ್ಯಗಾದಿತ್ಯಮುಪತಿಷ್ಠತೇ, ಆದಿತ್ಯಾಜ್ಜಾಯತೇ ವೃಷ್ಟಿಃ" ಇತ್ಯಾದಿನಾ; ಯಜ್ಞಶ್ಚ ದ್ರವ್ಯಾರ್ಜನಾದಿ ಕರ್ತೃ ವ್ಯಾಪಾರರೂಪ ಕರ್ಮಸಮುದ್ಭವಃ ; ಕರ್ಮ ಚ ಬ್ರಹ್ಮೋದ್ಭವಂ. ಅತ್ರ ಚ ಬ್ರಹ್ಮಶಬ್ದನಿರ್ದಿಷ್ಟಂ ಪ್ರಕೃತಿ ಪರಿಣಾಮರೂಪಂ ಶರೀರಂ. (೨) "ತಸ್ಮಾದೇತದ್ಬ್ರಹ್ಮನಾಮರೂಪ ಮನ್ನಂಚ ಜಾಯತೇ" ಇತಿ ಹಿ ಬ್ರಹ್ಮಶಬ್ದೇನ ಪ್ರಕೃತಿರ್ನಿರ್ದಿಷ್ಟಾ ; ಇಹಾಪಿ (೩) "ಮಮಯೋನಿರ್ಮಹದ್ಬ್ರಹ್ಮ" ಇತಿಹಿ

ಅದರ ಕಾರ್ಯವಾದ ಮಳೆಯಿಂದ, ಅನ್ನ ಸಂಭವಃ - ಆಹಾರವು ಬೆಳೆಯುವದು, ಇತಿ-ಎಂಬುವ ಈ ಎರಡೂ, ಸರ್ವಲೋಕ ಸಾಕ್ಷಿಕಂ - ಸಮಸ್ತ ಜನರಿಗೂ ಪ್ರತ್ಯಕ್ಷವಾದ ವಿಷಯವು. ಸರ್ವೇಶ್ವರನಿಂದ ಸಙ್ಕಲ್ಪಿಸಲ್ಪಟ್ಟ ಚಕ್ರರೂಪ ಪ್ರವರ್ತನೆಯಲ್ಲಿ ಯಾವುವು ಪ್ರತ್ಯಕ್ಷದಿಂದ ತಿಳಿಯತಕ್ಕದ್ದೆಂಬುದನ್ನು ಹೇಳಿದರು. ಮುಂದೆ ಶಾಸ್ತ್ರಮೂಲಕ ತಿಳಿಯತಕ್ಕದ್ದು ಯಾವುದು ಎಂಬುದನ್ನು, ತಿಳಿಸುತ್ತಾರೆ. ಯಜ್ಞಾತ್ಪರ್ಜನ್ಯೋ ಭವತಿ – ಯಜ್ಞಮೂಲಕವಾಗಿ ಮಳೆಯು ಉಂಟಾಗುತ್ತದೆ, ಇತಿ ಚ – ಎಂಬುವದಾದರೋ, ಶಾಸ್ತ್ರೇಣಾವ ಗಮ್ಯತೇ – ಶಾಸ್ತ್ರದಿಂದಲೇ ತಿಳಿಯಲ್ಪಡುತ್ತದೆ. ಆ ಶಾಸ್ತ್ರಪ್ರಮಾಣವು ಯಾವುದೆಂದರೆ ಬ್ರಹ್ಮಪುರಾಣ ವಾಕ್ಯವನ್ನು ಉದಾಹರಿಸುತ್ತಾರೆ, "ಅಗ್ನೌ - ಅಗ್ನಿಯಲ್ಲಿ, ಸಮ್ಯಕ್ - ಚನ್ನಾಗಿ, ಎಂದರೆ ಶಾಸ್ತ್ರರೀತ್ಯಾ ಶ್ರದ್ಧೆಯಿಂದ, ಪ್ರಾಸ್ತಾಹುತಿಃ-ಇಡಲ್ಪಟ್ಟ ಹವಿಸ್ಸು, ಆದಿತ್ಯಂ - ಸೂರ್ಯನನ್ನು, ಉಪತಿಷ್ಠತೇ – ಹೊಂದುತ್ತದೆ. ಆ ಕಾರಣದಿಂದ, ಆದಿತ್ಯಾತ್ - ಸೂರ್ಯನಿಂದ, ವೃಷ್ಟಿಃ-ಮಳೆಯು, ಜಾಯತೇ- ಹುಟ್ಟುತ್ತದೆ" ಇತ್ಯಾದಿನಾ - ಇವೇ ಮೊದಲಾದ ಪ್ರಮಾಣಗಳಿಂದ, ಅವಗಮ್ಯತೇ - ತೋರಿಬರುತ್ತದೆ, ಇಲ್ಲಿ ಮೂರು ಪಾದಗಳನ್ನು ಮಾತ್ರ ಉದಾಹರಿಸಿ, ನಾಲ್ಕನೆಯ ಪಾದವಾದ "ವೃಷ್ಟೇರನ್ನಂ ತತಃ ಪ್ರಜಾಃ" ಎಂಬುದನ್ನು ಬಿಟ್ಟಿರುತ್ತಾರೆ. ಏಕೆಂದರೆ, ಮೊದಲು ಮೂರು ಪಾದಗಳಲ್ಲಿ ಹೇಳಿರುವುವು ಶಾಸ್ತ್ರ ಮುಖೇನ ತಿಳಿಯತಕ್ಕವು, ನಾಲ್ಕನೆಯಪಾದದಲ್ಲಿ ಹೇಳಿರುವದು ಪ್ರತ್ಯಕ್ಷ ಗೋಚರವೆಂದು ಮೇಲೆಯೇ ಹೇಳಲ್ಪಟ್ಟಿರುವದರಿಂದ ಅದನ್ನು ಇಲ್ಲಿ ಹೇಳಲಿಲ್ಲವು, ಯಜ್ಞಶ್ಚ - ಯಜ್ಞವಾದರೋ, ದ್ರವ್ಯಾರ್ಜನಾದಿ ಕರ್ತೃ ವ್ಯಾಪಾರ ರೂಪ ಕರ್ಮ ಸಮುದ್ಭವಃ - ದ್ರವ್ಯಸಂಪಾದನೆಯೇ ಮೊದಲಾದ ಚೇತನನ ವ್ಯಾಪಾರವಾದ ಕರ್ಮದಿಂದ ಉಂಟಾದುದು, ಹಿಂದೆಯೇ ದ್ರವ್ಯಾರ್ಜನಾದಿಗಳು ಯಜ್ಞಕ್ಕೆ ಸಹಕಾರಿಯಾದ ಪ್ರವೃತ್ತಿ ಎಂದು ಹೇಳಲ್ಪಟ್ಟಿರುತ್ತವೆ; ಇಲ್ಲಿ ಯಜ್ಞವು ಕರ್ಮಸಮುದ್ಭವವೆಂದು ಹೇಳಿರುವದರಿಂದ ; ಇಲ್ಲಿ ಕರ್ಮ ಶಬ್ದವು ಪುಣ್ಯಪಾಪರೂಪ ಕರ್ಮವೆಂಬರ್ಥವುಳ್ಳದ್ದಲ್ಲವು ; ಆದುದರಿಂದ ದ್ರವ್ಯಾರ್ಜನಾದಿ ಎಂಬ ವ್ಯಾಖ್ಯಾನವು ; ಪರಮ ಪುರುಷಾರಾಧನೆಗೆ ಬೇಕಾದ ಕರ್ಮವೆಂಬರ್ಥವು; ದ್ರವ್ಯಾರ್ಜನಾದಿ ಎಂಬಲ್ಲಿ ಆದಿ ಪದದಿಂದ ದ್ರವ್ಯಾರ್ಜನೆಯಾದನಂತರ ಮಾಡಬೇಕಾದ ವಸ್ತುಸಂಗ್ರಹ ಪಚನ ಹವಿಸ್ಸಮರ್ಪಣ ಮೊದಲಾದವುಗಳು ಹೇಳಲ್ಪಟ್ಟವು. ಬ್ರಹ್ಮ ಚ - ಶರೀರವಾದರೋ, ಕರ್ಮೋದ್ಭವಂ - ಕರ್ಮದಿಂದುಂಟಾದುದು; ಅತ್ರ ಚ - ಈ ಸಂದರ್ಭದಲ್ಲಿಯಾದರೋ, ಬ್ರಹ್ಮಶಬ್ದ ನಿರ್ದಿಷ್ಟಂ - ಬ್ರಹ್ಮ ಶಬ್ದದಿಂದ ಹೇಳಲ್ಪಟ್ಟದುದು, ಪ್ರಕೃತಿಯ ಪರಿಣಾಮ ರೂಪವಾದ ಶರೀರವು, ಬ್ರಹ್ಮಶಬ್ದವು ಪ್ರಕೃತಿಯನ್ನು ಬೋಧಿಸುತ್ತದೆಂಬುದಕ್ಕೆ ಶ್ರುತಿಪ್ರಮಾಣವನ್ನು ತೋರಿಸುತ್ತಾರೆ, "ತಸ್ಮಾತ್ - ಸಙ್ಕಲ್ಪಮೂಲಕ ಸೃಷ್ಟ್ಯುನ್ಮುಖನಾದ ಪರಬ್ರಹ್ಮನಿಂದ, ಏತದ್ಬ್ರಹ್ಮ - ಈ ಪ್ರಧಾನ ಅವ್ಯಾಕೃತ ಶಬ್ದಗಳಿಂದ ಹೇಳಲ್ಪಟ್ಟ ಸಾಕ್ಷಾತ್ತಾಗಿ ಪ್ರಕೃತಿಯೂ ಮತ್ತು ಅದರ ಮೂಲಕವಾಗಿ, ನಾಮರೂಪಮನ್ನಂಚ ಜಾಯತೇ- ನಾಮರೂಪವನ್ನು ಹೊಂದಿದ

(೨) ಮುಂಡಕ. ೧. ೧. ೯. (೩) ಗೀತೆ ೧೪. ೬.

ಭಾ. ವಕ್ಷ್ಯತೇ. ಅತಃ "ಕರ್ಮಬ್ರಹ್ಮೋದ್ಭವಂ" ಇತಿ ಪ್ರಕೃತಿ ಪರಿಣಾಮರೂಪ ಶರೀರೋದ್ಭವಂ ಕರ್ಮೇತ್ಯುಕ್ತಂ ಭವತಿ. "ಬ್ರಹ್ಮಾಕ್ಷರ ಸಮುದ್ಭವಮ್" ಇತ್ಯತ್ರಾಕ್ಷರ ಶಬ್ದ

---

ಅನ್ನಶಬ್ದದಿಂದ ನಿರ್ದಿಷ್ಟವಾದ ಭೋಗ್ಯ ಭೋಕ್ತೃರೂಪ ವಸ್ತುವೂ ಕೂಡ, ಜಾಯತೇ - ಹುಟ್ಟುತ್ತದೆ" ಇತಿ ಹಿ - ಎಂದಲ್ಲವೇ, ಬ್ರಹ್ಮಶಬ್ದೇನ - ಬ್ರಹ್ಮಶಬ್ದದಿಂದ, ಪ್ರಕೃತಿಯು ನಿರ್ದಿಷ್ಟಾ - ಹೇಳಲ್ಪಟ್ಟಿರುತ್ತದೆ. ಇಲ್ಲಿ ಬ್ರಹ್ಮ ಶಬ್ದವು ಪರಮಾತ್ಮವಿಷಯವಲ್ಲವು; ಏಕೆಂದರೆ "ಯಸ್ಸರ್ವಜ್ಞಸ್ಸರ್ವವಿದ್ಯಸ್ಯಜ್ಞಾನಮಯಂತಪಃ, ತಸ್ಮಾದ್ಯೇತದ್ಬ್ರಹ್ಮ" ಪರಮಾತ್ಮನಿಂದ ಈ ಬ್ರಹ್ಮವು ಉಂಟಾಗುತ್ತದೆ ಎಂದು ಶ್ರುತಿಯಲ್ಲಿರುವದರಿಂದ ಈ ಬ್ರಹ್ಮಶಬ್ದಕ್ಕೆ ಪರಬ್ರಹ್ಮವೆಂದರ್ಥಮಾಡಲು ಸಾಧ್ಯವಿಲ್ಲವು, ಮತ್ತು ಪ್ರತ್ಯಗಾತ್ಮ ವಿಷಯವೂ ಅಲ್ಲವು, ಏಕೆಂದರೆ ನಾಮರೂಪಮನ್ನಂ ಚ ಎಂದು ಹೇಳಿರುವದರಿಂದ ಎಂದು ತಿಳಿಯತಕ್ಕದ್ದು. ಈ ಮೇಲಿನ ಶ್ರುತ್ಯಭಿಪ್ರಾಯವೇನೆಂದರೆ "ಏತತ್ ಪ್ರಧಾನಾಖ್ಯಂಬ್ರಹ್ಮ" ಈ ಪ್ರಧಾನವಾದ ಬ್ರಹ್ಮವು ಕಾರ್ಯಾಕಾರದಿಂದ ನಾಮರೂಪ ವಿಭಾಗವನ್ನು ಹೊಂದಿ ಚೇತನನಿಗೆ ಭೋಗ್ಯಭೂತವಾದುದು ಆಗುತ್ತದೆ ಎಂಬುದು. ಬ್ರಹ್ಮ ಶಬ್ದಕ್ಕೆ ಪ್ರಕೃತಿ ಎಂಬರ್ಥವು ಈ ಗೀತೆಯಲ್ಲೇ ಇನ್ನೊಂದುಕಡೆಯಲ್ಲಿ ತೋರಿಬರುತ್ತದೆಂದು ಉದಾಹರಿಸುತ್ತಾರೆ :—"ಯೋನಿಃ - ಸಕಲ ಜಗತ್ತಿಗೆಲ್ಲಾ ಕಾರಣಭೂತವಾದ,ಮಮ ಮಹದ್ಬ್ರಹ್ಮ-ನನ್ನ ಮಹದ್ಬ್ರಹ್ಮವೆಂಬದಾಗಿ ಯಾವುದು ಹೇಳಿಸಿಕೊಳ್ಳುತ್ತದೋ, ಮುಂದೆ "ತಸ್ಮಿನ್ ಗರ್ಭಂ ದಧಾಮ್ಯಹಂ" ಎಂದಿರುತ್ತದೆ, ಅಂತಹ ಯೋನಿಭೂತವಾದ ಅಚೇತನವಾದ ಮಹದ್ಬ್ರಹ್ಮವೆಂದು ಹೇಳಿಸಿಕೊಳ್ಳುವ ಪ್ರಕೃತಿಯಲ್ಲಿ, ಚೇತನ ವರ್ಗರೂಪವಾದ ಗರ್ಭವನ್ನು ದರಿಸುವೆನು, ಎಂದರೆ ಭೋಗಕ್ಷೇತ್ರವಾದ ಅಚೇತನದೊಂದಿಗೆ ಚೇತನವರ್ಗವನ್ನು ಸೇರಿಸುವೆನು ಎಂಬರ್ಥವು," ಇತಿ ಹಿ-ಎಂಬದಾಗಿಯಲ್ಲವೇ, ವಕ್ಷ್ಯತೇ - ಮುಂದೆ ಹೇಳಲ್ಪಡುತ್ತದೆ; ಇಲ್ಲಿಯೂ ಮಮ ಎಂದು ಪರಮಾತ್ಮನನ್ನು ಪೃಥಕ್ಕಾಗಿ ಹೇಳಿ ಅನಂತರಬ್ರಹ್ಮವೆಂದು ಹೇಳಿರುವದರಿಂದ ಪ್ರಕೃತಿಯೇ ಹೇಳಲ್ಪಟ್ಟಿತೇವಿನಾ ಪರಮಾತ್ಮನು ಹೇಳಲ್ಪಡಲಿಲ್ಲವು. ಕರ್ಮವು ಒಬ್ಬ ಕರ್ತೃವಿನ ವ್ಯಾಪಾರವು ; ಹೀಗಿರುವಾಗ ಅದು ಬ್ರಹ್ಮೋದ್ಭವಂ ಎಂದು ಹೇಳಿದುದು ಹೇಗೆ ? ಪ್ರತ್ಯಗಾತ್ಮನಿಂದ ಶರೀರೇಂದ್ರಿಯಗಳ ಮೂಲಕ ಕರ್ಮವು ಹುಟ್ಟಿದುದು ಎಂದು ಒಂದುವೇಳೆ ಹೇಳಿದರಾದರೂ ಒಪ್ಪಬಹುದು; ಇಲ್ಲಿ ಪರಬ್ರಹ್ಮನು ಸರ್ವಸಾಧಾರಣವಾಗಿ ಎಲ್ಲಕ್ಕೂ ಹೇತುವು ಎಂದು ಹೇಳಬೇಕಾಗಿರುವ ಪ್ರಕರಣವಲ್ಲವು; ಒಂದಕ್ಕೊಂದು ಕಾರ್ಯ ಕಾರಣಭಾವವನ್ನು ಹೇಳುವ ಪ್ರಕರಣವಾಗಿರುತ್ತದೆ, ಅದೂ ಅಲ್ಲದೆ ಪರಬ್ರಹ್ಮವೆಂದರ್ಥಮಾಡಿದರೆ ಮುಂದೆ! ಆತನಿಗೆ ಅಕ್ಷರ ಸಮುದ್ಭವತ್ವವೆಂದು ಹೇಳುವದು ಪರಮ ಅಸಙ್ಗತವು ; ಇಲ್ಲಿ ಕೆಲವರು ಬ್ರಹ್ಮಶಬ್ದಕ್ಕೆ ವೇದವೆಂದೂ, ಅಕ್ಷರ ಶಬ್ದಕ್ಕೆ ಪರಮಾತ್ಮನೆಂದೂ ಅರ್ಥಮಾಡಿರುವುದೂ ಸರಿಹೋಗುವದಿಲ್ಲವು; ಕರ್ಮವು ವೇದದಿಂದುಂಟಾದುದು ಎಂದು ಹೇಳಿದರೂ ಚಕ್ರವು ಸರಿಹೋಗುವದಿಲ್ಲವು. ಆದುದರಿಂದ ಬ್ರಹ್ಮಶಬ್ದಾರ್ಥವೇನೆಂಬುದನ್ನು ಅತ್ರ ಚ ಎಂದು ಪ್ರಾರಂಭಿಸಿದ ವಾಕ್ಯದಿಂದ ಪ್ರಕೃತಿ ಪರಿಣಾಮರೂಪಶರೀರಂ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಅದನ್ನೇ ಅತಃ ಎಂದಾರಂಭಿಸಿದ ಮುಂದಿನ ವಾಕ್ಯದಿಂದ ಉಪಪಾದಿಸಿ ಹೇಳುತ್ತಾರೆ. ಅತ್ರ ಚ ಎಂಬಲ್ಲಿರುವ ಚ ಶಬ್ದವು ಮೇಲಿನ ಶಙ್ಕೆಗಳನ್ನೆಲ್ಲಾ ವ್ಯಾವರ್ತಿಸಿ ಹೇಳುತ್ತದೆ. ಅತಃ - ಆ ಕಾರಣದಿಂದ, ಎಂದರೆ ಬ್ರಹ್ಮಶಬ್ದಕ್ಕೆ ಪ್ರಕೃತಿ ಎಂಬ ಪ್ರಯೋಗವಿರುವದರಿಂದಲೂ, ಶರೀರವು ಅದರ ಪರಿಣಾಮರೂಪವಾದುದರಿಂದಲೂ. ದ್ರವ್ಯಾರ್ಜನಾದಿಗಳು ಅಂತಹ ಶರೀರದಿಂದ ಸಾಧ್ಯವಾದುದರಿಂದಲೂ ಜೀವ ಪರಮಾತ್ಮರೆಂದು ಅನ್ವಯಿಸಲು ಸಾಧ್ಯವಿಲ್ಲದುದರಿಂದಲೂ ಪ್ರಕೃತಿಯೇ ಇಲ್ಲಿ ಹೇಳಲ್ಪಟ್ಟಿರುವದರಿಂದ, ಎಂಬ

ಭಾ. ನಿರ್ದಿಷ್ಟೋ ಜೀವಾತ್ಮಾ, ಅನ್ನ ಪಾನಾದಿನಾ ತೃಪ್ತಾತ್ಕ್ಷರಾಧಿಷ್ಠಿತಂ ಶರೀರಂ ಕರ್ಮಣೇ ಪ್ರಭವತೀತಿ ಕರ್ಮಸಾಧನಭೂತಂ ಶರೀರಮಕ್ಷರ ಸಮುದ್ಭವಮ್. ತಸ್ಮಾತ್ ಸರ್ವ ಗತಂ ಬ್ರಹ್ಮ - ಸರ್ವಾಧಿಕಾರಿಗತಂ ಶರೀರಂ ನಿತ್ಯಂ ಯಜ್ಞೇ ಪ್ರತಿಷ್ಠಿತಂ-ಯಜ್ಞ

'ಭಾವವು; "ಕರ್ಮಬ್ರಹ್ಮೋದ್ಭವಂ" ಇತಿ – ಕರ್ಮವು ಪ್ರಕೃತಿ ಎಂದರೆ ಶರೀರದಿಂದುಂ ಟಾಗತಕ್ಕದ್ದೆಂದು, ಪ್ರಕೃತಿ ಪರಿಣಾಮರೂಪ ಶರೀರೋದ್ಭವಂ - ಪ್ರಕೃತಿಯ- ಪರಿಣಾಮ ರೂಪವಾದ ಜೀವಾತ್ಮನು ಧರಿಸಿರುವ ಶರೀರದಿಂದುಂಟಾಗತಕ್ಕ, ಕರ್ಮ - ಧನಾರ್ಜನೆ ಮೊದ ಲಾದ ಕರ್ಮವು, ಇತ್ಯುಕ್ತಂ ಭವತಿ - ಎಂದು ಹೇಳಿದಂತಾಯಿತು; ಧನಾರ್ಜನೆ ಮೊದಲಾದ ಸರ್ವವ್ಯಾಪಾರಗಳು ಚೇತನ ಶರೀರದಿಂದುಟಾಗುತ್ತವೆ ಎಂಬ ತಾತ್ಪ ರ್ಯವು. ಯಾವಾಗ ಬ್ರಹ್ಮಶಬ್ದಕ್ಕೆ ಪ್ರಕೃತಿ ಎಂಬ ಅರ್ಥವಾಯಿತೋ, ಆಗ ಅಕ್ಷರ ಶಬ್ದವನ್ನು ಬ್ರಹ್ಮಾಕ್ಷರ ಸಮುದ್ಭವಂ ಎಂಬಲ್ಲಿ ಅಕ್ಷರ ಶಬ್ದದೊಂದಿಗೆ ಸೇರಿಸಿ ಹೇಳಿರುವದ ರಿಂದ ಅಕ್ಷರ ಶಬ್ದವು ಪರಿಶುದ್ಧನಾದ ಜೀವಾತ್ಮನನ್ನೇ ಬೋಧಿಸುತ್ತದೆಂಬುದನ್ನು ಗ್ರಹಿಸಬಹುದು. ಬ್ರಹ್ಮಾಕ್ಷರ ಸಮುದ್ಭವಂ" ಚೇತನ ಶರೀರವು ಅಕ್ಷರದಿಂದುಂಟಾಗುತ್ತದೆ, ಎಂದರೆ ಅಕ್ಷರನ ಪೂರ್ವ ಕರ್ಮಾನುಭವಕ್ಕಾಗಿ ಉಂಟಾಗುತ್ತದೆಂಬುದು ತಾತ್ಪರ್ಯವು. ಇತ್ಯತ್ರ - ಎಂಬ ಸ್ಥಳ ವಲ್ಲಿ, ಅಕ್ಷರ ಶಬ್ದ ನಿರ್ದಿಷ್ಟಃ - ಅಕ್ಷರ ಶಬ್ದದಿಂದ ಹೇಳಲ್ಪಟ್ಟವನು, ಜೀವಾತ್ಮನು; ಅನ್ನ ಪಾನಾದಿನಾ - ಅನ್ನ ಪಾನಾದಿಗಳಿಂದ, ತೃಪ್ತಾತ್ಕ್ಷರಾಧಿಷ್ಠಿತಂ - ತೃಪ್ತನಾದ ಜೀವಾತ್ಮನಿಂದ ಆಶ್ರಯಿಸಲ್ಪಟ್ಟ, ಶರೀರವು, ಕರ್ಮಣೇ ಪ್ರಭವತಿ ಇತಿ-ಧನಾರ್ಜನೆ ಮೊದಲಾದ ಪ್ರವೃತ್ತಿಯಲ್ಲಿ ಸಾಮರ್ಥ್ಯವನ್ನು ಹೊಂದುತ್ತದೆಯಾದುದರಿಂದ ಕರ್ಮಸಾಧನ ಭೂತಂ-ಇಂತಹ ಪ್ರವೃತ್ತಿಗಳಿಗೆ ಸಾಧನವಾದ, ಶರೀರಂ - ಶರೀರವು, ಅಕ್ಷರ ಸಮುದ್ಭವಂ - ಕರ್ಮಾನುಗುಣವಾಗಿ ಜೀವಾತ್ಮ ನಿಂದುಂಟಾದುದೆಂದು ಹೇಳಲ್ಪಡುತ್ತದೆ. ಇಲ್ಲಿ ಬ್ರಹ್ಮಾಕ್ಷರ ಸಮುದ್ಭವಂ ಎಂಬಲ್ಲಿ ಶರೀರವು ಪ್ರತ್ಯಗಾತ್ಮನಿಂದುಂಟಾದುದು ಎಂದು ಹೇಳಲ್ಪಟ್ಟಿದುದು ಅಯುಕ್ತವಲ್ಲವೋ? ತನ್ನ ಶರೀರಕ್ಕೆ ತಾನೇ ಹೇಗೆ ಕಾರಣನು? ಆಗ ಚಕ್ರಭಾವವು ತಾನೇ ಹೇಗೆ ಕೂಡುತ್ತದೆ? ಜೀವಾತ್ಮನಿಗೆ ಅನ್ನಾ ದಿಗಳು ಹೇಗೆ ಕಾರಣವು? ಎಂಬ ಈ ಆಕ್ಷೇಪಗಳಿಗೆ ಸಮಾಧಾನವಾಗಿ "ಅನ್ನ ಪಾನಾದಿನಾ ತೃಪ್ತಾತ್ಕ್ಷರಸಮುದ್ಭವಂ ಶರೀರಂ" ಎಂದಾರಂಭಿಸಿದ ವಾಕ್ಯಗಳನ್ನು ಹೇಳಿರುತ್ತಾರೆ. ಇದರ ಅಭಿಪ್ರಾಯವು ಇಷ್ಟೇ— ಅಕ್ಷರನಾದ ಜೀವಾತ್ಮನಿಂದ ಶರೀರಮಾತ್ರ ಉಂಟಾಯಿತು ಎಂಬರ್ಥ ವಲ್ಲವು, ಹಾಗೆಯೇ ಕರ್ಮವೂ ಶರೀರದಿಂದ ಮಾತ್ರವೇ ಉಂಟಾಗುವದೂ ಇಲ್ಲವು; ಶರೀರಕ್ಕೆ ಕರ್ಮವನ್ನು ಸಾಧಿಸುವ ಶಕ್ತಿಯು ಶರೀರಕ್ಕೆ ಜೀವಾತ್ಮನ ಅಧಿಷ್ಠಾನವಿದ್ದರೇನೇ ಉಂಟು. ಇಂತಹ ಶಕ್ತಿಯು ಅನ್ನಪಾನಾದಿಗಳು ಶರೀರದಲ್ಲಿ ಬಿದ್ದು ಜೀವಾತ್ಮನು ತೃಪ್ತನಾದರೇನೇ ಉಂಟಾ ಗುತ್ತದೆ. ಆದುದರಿಂದ ಕರ್ಮವನ್ನು ಸಾಧಿಸುವ ಶಕ್ತಿಯುಳ್ಳ ಶರೀರವು ಅಕ್ಷರಾಧಿಷ್ಠಿತವಾಗಿದ್ದ ರೇನೇ ಕರ್ಮಸಾಧ್ಯನಾದುದರಿಂದ ಬ್ರಹ್ಮಾಕ್ಷರ ಸಮುದ್ಭವಂ ಎಂಬ ಪ್ರಯೋಗವು ಸಮಂಜ ಸವೇ ಎಂಬ ಭಾವವು. ಹೀಗೆ ಅರ್ಥಹೇಳಿದರೇನೆ ಚಕ್ರತ್ವವು ಕೂಡುತ್ತದೆ. ಇತರರು ಹೇಳುವ ಅರ್ಥಗಳಿಂದ ಚಕ್ರತ್ವವನ್ನು ಸಾಧಿಸಲು ಸಾಧ್ಯವಲ್ಲವು, ಚಕ್ರತ್ವವು ನಮಗೆ ಉಪಪನ್ನವು ಹೇಗೆಂದರೆ-ಅನ್ನದಿಂದ ಪ್ರಾಣಿಗಳ ಶರೀರವು; ಪರ್ಜನ್ಯದಿಂದ ಅನ್ನವು; ಯಜ್ಞದಿಂದ ಪರ್ಜನ್ಯವು; ಯಜ್ಞರೂಪ ಕರ್ಮವು ಧನಾರ್ಜನೆಯೂ ಶರೀರದಿಂದ; ಜೀವಾತ್ಮನಿಂದ ಶರೀರವು. ಹೀಗೆ ಚಕ್ರವು ಎಂಬ ಭಾವವು, ಇದನ್ನೇ ವಿವರಿಸಿ ಹೇಳುತ್ತಾರೆ. ಜೀವನು ಅಕ್ಷರ ಶಬ್ದದಿಂದ ಹೇಳ ಲ್ಪಡುವನೆಂಬುದು ಶ್ರುತಿಯಿಂದ ವ್ಯಕ್ತವು:—"ಕ್ಷರಂ ಪ್ರಧಾನಂ, ಅಮೃತಾಕ್ಷರಂ ಹರಃ, ಕ್ಷರಾ ತ್ಮಾನೌ ಈಶತೇ ದೇವ ಏಕಃ" (ಶ್ವೇ. ೧. ೧೦.) "ಪ್ರಧಾನ ಶಬ್ದದಿಂದ ಹೇಳಲ್ಪಟ್ಟ ಪ್ರಕೃ

ಭಾ. ಮೂಲಮಿತ್ಯರ್ಥಃ. ಏವಂ ಪರಮಪುರುಷೇಣ ಪ್ರವರ್ತಿತ ಮಿದಂ ಚಕ್ರಂ - ಅನ್ನಾತ್ ಭೂತಶಬ್ದ ನಿರ್ದಿಷ್ಟಾನಿ ಸಜೀವಾನಿ ಶರೀರಾಣಿ, ಪರ್ಜನ್ಯಾದನ್ನಂ, ಯಜ್ಞಾತ್ಪರ್ಜನ್ಯಃ, ಯಜ್ಞಶ್ಚ ಕರ್ತೃವ್ಯಾಪಾರರೂಪಾತ್ಕರ್ಮಣಃ, ಕರ್ಮ ಚ ಸಜೀವಾ ಚ್ಛರೀರಾತ್, ಸಜೀವಂ

---

ತಿಯು ಸ್ವರೂಪ ವಿಕಾರವನ್ನು ಹೊಂದುವದರಿಂದ ಕ್ಷರವೆನ್ನಲ್ಪಡುತ್ತದೆ; ಹರಃ-ಅಂತಹ ಪ್ರಧಾನ ವನ್ನು ಭೋಗ್ಯವಾದುದಾಗಿ ತನ್ನ ಭೋಗಾರ್ಥವಾಗಿ ಅಪಹರಿಸುವ ಜೀವಾತ್ಮನು, ಅಮೃತಾ ಕ್ಷರಂ-ಜರಾಮರಣಾದಿಗಳಿಂದ ಶೂನ್ಯವಾದವನಾಗಿ ಅಕ್ಷರ ಶಬ್ದದಿಂದ ಹೇಳಲ್ಪಡುವನು. ಈ ಕ್ಷರಾ ಕ್ಷರ ಶಬ್ದಿತರಾದ ಅಚೇತನ ಚೇತನರನ್ನು, ದೇವ ಏಕಃ - ದಿವ್ಯೋ ದೇವ ಏಕೋನಾರಾ ಯಣಃ ಎಂಬಲ್ಲಿ ಹೇಳಿರುವಹಾಗೆ ಒಬ್ಬನಾದ ಶ್ರೀಮನ್ನಾರಾಯಣನು, ಈಶತೇ ಶೇಷಿಯಾಗಿ ನಿಯಮಿಸುತ್ತಾನೆ' ಎಂಬುದು ಈ ಶ್ರುತ್ಯರ್ಥವು. ಮುಂದೆಯೂ ಇದೇ ಗೀತೆಯಲ್ಲೇ "ಕೂಟ ಸ್ಥೋಕ್ಷರ ಉಚ್ಯತೇ" (ಗೀ. ೧೫, ೧೬.) ಎಂಬಲ್ಲಿ ಅಕ್ಷರ ಶಬ್ದದಿಂದ ಪ್ರಕೃತಿ ವಿಮುಕ್ತ ನಾದ ಜೀವಾತ್ಮನು ಹೇಳಲ್ಪಟ್ಟಿರುತ್ತಾನೆ. ಪರಮಾತ್ಮನು ಹೇಳಲ್ಪಡಲಿಲ್ಲವು. ಏಕೆಂದರೆ "ಉತ್ತಮಪುರುಷಸ್ತ್ವನ್ಯಃ" ಎಂದು ಪೃಥಕ್ಕಾಗಿ ಹಿಂದೆ ಹೇಳಿದ ಕ್ಷರಾಕ್ಷರ ಶಬ್ದಗಳಿಂದ ಹೇಳ ಲ್ಪಟ್ಟ ಬದ್ಧ ಮುಕ್ತರುಗಳನ್ನು ತು ಶಬ್ದದಿಂದ ವ್ಯಾವರ್ತಿಸಿ ಹೇಳಿರುತ್ತದೆ; ಈ ಸಂದರ್ಭದಲ್ಲಿ ಕ್ಷರಶಬ್ದವು ಬದ್ಧ ಜೀವನನ್ನು ಬೋಧಿಸುತ್ತದೆ; ಮೇಲಿನ ಶ್ವೇತಾಶ್ವತರ ಶ್ರುತಿಯಹಾಗೆ ಪ್ರಕೃತಿ ಯನ್ನು ಬೋಧಿಸುವದಿಲ್ಲವು;

ಮುಂದೆ ಶಾಸ್ತ್ರವಶ್ಯನಾದ ಪುರುಷನ ಕರ್ತವ್ಯಾಂಶವನ್ನು ನಿಷ್ಕರ್ಷಿಸಿ ಹೇಳುವ "ತಸ್ಮಾತ್ಸರ್ವ ಗತಂ ಬ್ರಹ್ಮ" ಎಂಬ ವಾಕ್ಯಕ್ಕೆ ಭಾಷ್ಯವನ್ನು ಬರೆಯುತ್ತಾರೆ, ತಸ್ಮಾತ್ - ಆಕಾರಣದೆಸೆಯಿಂದ ಸರ್ವಗತಂ ಬ್ರಹ್ಮ ಎಂದರೆ ಸರ್ವಾಧಿಕಾರಿಗತಂ ಶರೀರಮ್ - ಸಮಸ್ತ ಕರ್ಮಜ್ಞಾನ ಯೋಗಾ ಧಿಕಾರಿಯಾದ ಚೇತನನನ್ನು ಹೊಂದಿದ ಶರೀರವು, ನಿತ್ಯಂ - ಯಾವಾಗಲೂ, ಯಜ್ಞೇಪ್ರತಿ ಷ್ಠಿತಂ ಎಂದರೆ ಯಜ್ಞಮೂಲಮಿತ್ಯರ್ಥಃ - ಯಜ್ಞಮೂಲಕವಾಗಿ ಉಂಟಾದುದು ಎಂಬ ರ್ಥವು. ಈ ಚಕ್ರವನ್ನು ಉಪಪಾದಿಸಿ ಹೇಳಿದುದು ಏತಕ್ಕೆಂದರೆ:—ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ" ಎಂದು ತಿಳಿಸುವದಕ್ಕಾಗಿ ಎಂದು ತಿಳಿಯತಕ್ಕದ್ದು- ಸಮಸ್ತ ಶರೀರಗತ ವ್ಯಾಪಾರಗಳೂ ಯಜ್ಞ ಮೂಲಕನಾದವೆಂದು ತಿಳಿಯತಕ್ಕದ್ದೆಂಬ ಭಾವವು. ಮುಂದೆ ಏವಂ ಪ್ರವರ್ತಿತಂ ಚಕ್ರಂ ಎಂಬುದಕ್ಕೆ ವ್ಯಾಖ್ಯಾನಮಾಡುವವರಾಗಿ, ಪ್ರವರ್ತಿತಂ ಎಂದಿರು ವದರಿಂದ, ಯಾರಿಂದ ಈ ಚಕ್ರ ರೂಪ ಪ್ರವೃತ್ತಿಯುಂಟಾದುದು ಎಂಬುವ ಪ್ರಶ್ನೆಗೆ ಉತ್ತರ ವಾಗಿ ಹಿಂದೆ ಸಹ ಯಜ್ಞಾಃ ಎಂಬ ಶ್ಲೋಕದಲ್ಲಿ ಪ್ರಜೆಗಳಿಗೆ ಪತಿಯಾದವನೇ ಎಂದು, ಏವಂ ಪರಮ ಪುರುಷೇಣ ಎಂಬ ವ್ಯಾಖ್ಯಾನವು. ಪ್ರವರ್ತಿತಂ ಚಕ್ರಮ್ - ಈ ಪರಿಯಲ್ಲಿ ಪರಮ ಪುರುಷನಾದ ಸರ್ವೇಶ್ವರನಿಂದ ಪ್ರವೃತ್ತಿಸಲ್ಪಟ್ಟ ಈ ಚಕ್ರವು; ಚಕ್ರವು ಯಾವಾಗ ಸಿದ್ಧವೆಂದರೆ ಅನ್ನದಿಂದ ಶರೀರಗಳೆಂದು ಪ್ರಾರಂಭಿಸಿಅನ್ನವು ಉಂ ಟಾಗುತ್ತದೆ ಎಂತ ಎಂದರೆ ಚಕ್ರವು ಸಿದ್ಧಿಸುತ್ತದೆ. ಆದುದರಿಂದ ಮೂಲದಿಂದ ಈ ಚಕ್ರವು ಚನ್ನಾಗಿಯೂ ಸುಲಭವಾಗಿಯೂ ವ್ಯಕ್ತವಾಗುವದಿಲ್ಲವಾದುದರಿಂದ, ಚಕ್ರವು ಹೇಗೆ ಎಂಬುದನ್ನು ವ್ಯಕ್ತಪಡಿಸುತ್ತಾರೆ.—ಅನ್ನದಿಂದ ಭೂತಶಬ್ದ ನಿರ್ದಿಷ್ಟಾನಿ - ಭೂತ ಶಬ್ದದಿಂದ ಹೇಳಲ್ಪಟ್ಟ, ಸಜೀವಾನಿ ಶರೀರಾಣಿ - ಜೀವನೊಂದಿಗಿರುವ ಶರೀರಗಳು, ಎಂದರೆ ಅಧಿಕಾರಿಗಳಿಗೆ ಸಂಬಂಧಪಟ್ಟ ಶರೀರಗಳು; ಪರ್ಜನ್ಯಾದನ್ನಂ - ಮಳೆಯಿಂದ ನ್ನವು; ಯಜ್ಞಾತ್ಪರ್ಜನ್ಯಃ - ಯಜ್ಞದಿಂದ ಮಳೆಯು, ಕರ್ತೃವ್ಯಾಪಾರ ರೂಪಕರ್ಮಣಃ - ಕರ್ತೃವಿನ ಧನಾರ್ಜನಾದಿ ವ್ಯಾಪಾರ ರೂಪ ಕರ್ಮದಿಂದ, ಯಜ್ಞಶ್ಚ - ಯಜ್ಞವೂ; ಸಜೀವಾ

ಭಾ. ಶರೀರಂ ಪುನರಪಿ ಅನ್ನಾತ್, ಇತ್ಯನ್ಯೋನ್ಯ ಕಾರ್ಯಕಾರಣ ಭಾವೇನ ಚಕ್ರವತ್ಪರಿವರ್ತ ಮಾನಂ, ಇಹ-ಸಾಧನೇ, ವರ್ತಮಾನೋ ಯಃ – ಕರ್ಮಯೋಗಾಧಿಕಾರೀ ಜ್ಞಾನ ಯೋಗಾಧಿಕಾರೀವಾ, ನಾನುವರ್ತಯತಿ-ನಪ್ರವರ್ತಯತಿ, ಯಜ್ಞಶಿಷ್ಟೇನ ದೇಹ ಧಾರಣಮಕುರ್ವನ್, ಸೋಽಘಾಯುರ್ಭವತಿ; ಅಘಾರಂಭಾಯೈವ ಯಸ್ಯಾಯು ರಘುಪರಿಣತಂವೋಽಭಯರೂಪಂ ವಾ ಸೋಽಘಾಯುಃ; ಅತ ಏವೇನ್ದ್ರಿಯಾ ರಾಮೋ ಭವತಿ, ನಾತ್ಮಾರಾಮಃ; ಇಂದ್ರಿಯಾಣ್ಯೇವಾಽಸ್ಯೋದ್ಯಾನಾನಿ ಭವನ್ತಿ;

ಶರೀರಾತ್-ಜೀವನೊಂದಿಗಿರುವ ಶರೀರದಿಂದ, ಕರ್ಮ ಚ - ಕರ್ಮವೂ; ಪುನರಪಿ ಅನ್ನಾತ್ - ಪುನಃ ಅನ್ನದಿಂದ ಸಜೀವ ಶರೀರಗಳು, ಇತಿ - ಹೀಗೆ, ಅನ್ಯೋನ್ಯಕಾರ್ಯಕಾರಣ ಭಾವದಿಂದ ಚಕ್ರವತ್ - ಚಕ್ರದಹಾಗೆ, ಪರಿವರ್ತಮಾನಂ-ಸುತ್ತುತ್ತಲಿರುವಂತಾದ್ದುದನ್ನು ಇಲ್ಲಿ ಚಕ್ರವೆಂದು ಹೇಳಿದುದು, ಅನ್ನದಿಂದ ಪ್ರಾರಂಭಿಸಿ ಹೇಳಿದುದು ಅನ್ನದಲ್ಲಿ ಬಂದು ನಿಲ್ಲಬೇಕೆಂಬ ನಿಯಮ ದಿಂದ ಹೇಳಿದುದಲ್ಲವು; ಚಕ್ರಸಾಮ್ಯ ಏತರಲ್ಲಿ ಎಂದರೆ ಚಕ್ರದಹಾಗೆ ಪರಿವರ್ತ್ರಮಾನಂ, ಸುತ್ತುವ ವಿಷಯದಲ್ಲಿ ಎಂದು ಭಾವಿಸತಕ್ಕದ್ದು. ಇಂತಹ ಚಕ್ರರೂಪ ಪರಿವರ್ತನೆಗೆ ಗಮನ ವನ್ನು ಕೊಟ್ಟು, ಕರ್ಮಯೋಗ ಜ್ಞಾನಯೋಗಾಧಿಕಾರಿಗಳು ಯಜ್ಞರೂಪದಲ್ಲಿ ಪರಮ ಪುರು ಷಾರಾಧನವೆಂದು ಭಾವಿಸಿ ಕರ್ಮಗಳನ್ನು ಅನುಷ್ಠಿಸತಕ್ಕದ್ದು. ಹಾಗೆ ಅನುಷ್ಠಿಸದೇ ಹೋದರೆ ಪ್ರಾಪ್ತವಾಗುವ ದುರ್ಗತಿಯನ್ನುಪದೇಶಿಸುತ್ತಾರೆ:—ಹೀಗೆ ಪರಮ ಪುರುಷನಿಂದ ಪ್ರವರ್ತಿಸ ಲ್ಪಟ್ಟ ಚಕ್ರವನ್ನು, ಇಹ - ಈ ಆತ್ಮ ಸಾಕ್ಷಾತ್ಕಾರರೂಪ ಸಾಧನದಲ್ಲಿ, ಕೆಲವರು ಇಹ ಎಂಬು ದಕ್ಕೆ ಈ ಲೋಕದಲ್ಲಿ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಪ್ರಸ್ತುತ ವಿಷಯವನ್ನು ಕುರಿತು ಹೇಳುವದು ಉಚಿತವಾದ ವಿಷಯವು. ಆದುದರಿಂದ ಇಹ ಈ ಸಂದರ್ಭದಲ್ಲಿ, ಸಂದರ್ಭವು ಯಾವುದೆಂದರೆ ಆತ್ಮಾವಲೋಕನ ಸಿದ್ಧಿಯನ್ನು ಹೊಂದುವ ಸಂದರ್ಭದಲ್ಲಿ ಎಂಬ ಭಾವವು, ವರ್ತ ಮಾನಃ - ಇರುವಂತಹ, ಯಃ - ಯಾವನಾದರೆ ಎಂದರೆ ಕರ್ಮಯೋಗಾಧಿಕಾರಿಯೇ ಆಗಲಿ ಅಥವಾ ಜ್ಞಾನಯೋಗಕ್ಕೆ ಅರ್ಹನಾದ ಅಧಿಕಾರಿಯೇ ಆಗಲಿ, ನಾನುವರ್ತ್ತಯತಿ, ನ ಪ್ರವರ್ತ ಯತಿ - ಅನುಮೋದನ ಮಾತ್ರವೇ ಅಲ್ಲದೆ ಅನುಷ್ಠಿಸುವದಿಲ್ಲವೋ ಎಂದರೆ, ಯಜ್ಞಶಿಷ್ಟೇನ – ಪರಮ ಪುರುಷಾರಾಧನವಾಗಿ ಶೇಷವಾದ ಅನ್ನದಿಂದ, ದೇಹಧಾರಣಮಕುರ್ವನ್ - ದೇಹ ಧಾರಣವನ್ನು ಮಾಡದಿರುವನಾಗಿ, ದೇಹಧಾರಣವನ್ನು ಮಾಡದೇ ಹೋದರೆ ಎಂಬರ್ಥವು, ಸಃ - ಅಂತಹ ಜ್ಞಾನಯೋಗಾಧಿಕಾರಿಯೇ ಆಗಲಿ ಯಾರೇ ಆಗಲಿ, ಅಘಾಯುರ್ಭವತಿ – ಪಾಪಕ್ಕಾಗಿಯೇ ಆಯುಸ್ಸುಳ್ಳವನಾಗುವನು, ಅಘಾಯುಃ ಎಂಬುದಕ್ಕೆ ಭಾಷ್ಯವನ್ನು ಬರೆಯು ತ್ತಾರೆ:—ಅಘಾರಂಭಾಯೈವ ಯಸ್ಯ ಆಯುಃ - ಯಾವನ ಆಯುಸ್ಸೆಲ್ಲಾ ಪಾಪ ಕರ್ಮವನ್ನು ಮಾಡುವದಕ್ಕಾಗಿಯೋ, ಅವನು ಅಘಾಯುಃ ಎಂದು ಹೇಳಬಹುದು; ಅಥವಾ ಅಘ ಪರಿ ಣತಂ ವಾ - ಪಾಪವೇ ಆಯುಸ್ಸಾಗಿ ಯಾವನಿಗೆ ಪರಿಣಮಿಸಿದೆಯೋ ಅವನು ಎಂದೂ ಹೇಳ ಬಹುದು; ಅಥವಾ ಉಭಯರೂಪಂವಾಸೋಽಘಾಯುಃ - ಈ ಎರಡು ವಿಧವಾದ ಆಯುಸ್ಸು ಳ್ಳವನು ಯಾವನೋ ಅವನೂ ಎಂದೂ ಅರ್ಥಹೇಳಬಹುದು. ಅನುವರ್ತನವೆಂಬಲ್ಲಿ ಅನು ಶಬ್ದವನ್ನು ಉಪಯೋಗಿಸಿರುವದು ಪರಮಪುರುಷನ ಆಜ್ಞಾನುಸಾರವಾಗಿ ಪ್ರವೃತ್ತಿಯು ಆವ ಶ್ಯಕವೆಂದೂ, ಅದಕ್ಕೆ ವಿರೋಧವಾದ ಪ್ರವೃತ್ತಿಯು ದೋಷಾವಹವೆಂದೂ ಸೂಚಿಸುತ್ತದೆ. ಅತಏವ - ಆಕಾರಣದಿಂದಲೇ ಎಂದರೆ ಹೀಗೆ ವಿಷಯಭೋಗೈಕರತಿಯುಂಟಾಗುವದರಿಂದಲೇ, ಇಂದ್ರಿಯಾ ರಾಮೋ ಭವತಿ, ನಾತ್ಮಾ ರಾಮಃ-ಆತನು ಆತ್ಮಾರಾಮನಾಗಿ ಆತ್ಮನಲ್ಲೇ ರತಿಯುಳ್ಳ

ಭಾ. ಅಯಜ್ಞಶಿಷ್ಟವರ್ಧಿತ ದೇಹಮನಸ್ತ್ವೇನೋದ್ರಿಕ್ತರಜಸ್ತಮಸ್ಕ ಆತ್ಮಾವಲೋಕನ ವಿಮುಖತಯಾ ವಿಷಯಭೋಗೈಕರತಿರ್ಭವತಿ. ಅತಃಜ್ಞಾನ ಯೋಗಾದೌ ಯತಮಾನೋಪಿ ನಿಷ್ಫಲ ಪ್ರಯತ್ನತಯಾ ಮೋಘಂ ಪಾರ್ಥಸಜೀವತಿ ||೧೬||

---

ವನಾಗುವವಕ್ಕೆ ಬದಲಾಗಿ, ಇಂದ್ರಿಯಗಳಲ್ಲಿ ರತಿಯುಳ್ಳವನಾಗುವನು ; ಇಂದ್ರಿಯಾರಾಮೋ ಭವತಿ ಎಂಬುವದರ ತಾತ್ಪರ್ಯವೇನೆಂದರೆ, ಇಂದ್ರಿಯಾಣ್ಯೇವಾಸ್ಯೋದ್ಯಾನಾನಿ ಭವಂತಿ–ಈತನಿಗೆ ಇಂದ್ರಿಯಗಳೇ ರಮಿಸುವ ಉದ್ಯಾನ ವನಗಳಾಗುವುವು. ಆತ್ಮಾರಾಮನಾಗುವದು ಮೋಕ್ಷಾರ್ಥಿಗೆ ಆವಶ್ಯಕವು. ಅದು ಕರ್ಮಯೋಗದಿಂದಾರಂಭಿಸಿದ ಅನುಷ್ಠಾನದಿಂದ ಉಂಟಾದೀತೇವಿನಾ, ಕರ್ಮ ಯೋಗವನ್ನು ತ್ಯಜಿಸಿ ಜ್ಞಾನಯೋಗವನ್ನವಲಂಬಿಸಿದವನು ಇಂದ್ರಿಯಾರಾಮನಾಗುವನು ಎಂಬುದು ಮುಖ್ಯತಾತ್ಪರ್ಯವು. ಈ ಮೇಲಿನ ಅಭಿಪ್ರಾಯವನ್ನೇ ಉಪಪಾದನಮಾಡಿ ಹೇಳುತ್ತಾರೆ:—ಅಯಜ್ಞಶಿಷ್ಟವರ್ಧಿತದೇಹ........ತಮಸ್ಕಃ ಯಜ್ಞಶಿಷ್ಟವಲ್ಲದ ಅನ್ನದಿಂದ ಬೆಳದ ದೇಹ ಮನಸ್ಸು ಹೊಂದಿರುವದರಿಂದ ಅಭಿವೃದ್ಧಿಹೊಂದಿದ ರಜಸ್ತಮೋ ಗುಣಗಳುಳ್ಳವನಾಗಿ, ಆತ್ಮಾವಲೋಕನ ವಿಮುಖತಯಾ - ಆತ್ಮಸ್ವರೂಪ ಸಾಕ್ಷಾತ್ಕಾರದಲ್ಲಿ ವಿಮುಖನಾಗುವದರಿಂದ, ವಿಷಯ ಭೋಗೈಕ ರತಿ ರ್ಭವತಿ - ವಿಷಯೋಪಭೋಗಗಳಲ್ಲಿ ವಿಶೇಷಾಸಕ್ತಿಯುಳ್ಳವನಾಗುತ್ತಾನೆ. ಇದರಿಂದ ಸಾತ್ವಿಕಾಹಾರದ ಮೂಲಕ ಭಗವದಾರಾಧನೆಮಾಡಿ ಪಂಚಮಹಾಯಜ್ಞವನ್ನು ವೈಶ್ವದೇವ ಮೂಲಕ ನಡೆಸಿ ಸಂಸ್ಕಾರಹೊಂದಿ ಪರಿಶುದ್ಧಾನ್ನವನ್ನು ಸೇವಿಸುವನಿಗೇನೆ ಆತ್ಮಾವಲೋಕನಮೂಲಕ ಮುಕ್ತಿಯುಂಟೆಂದು ಮುಂದೆ ೧೭ ನೆಯ ಅಧ್ಯಾಯದಲ್ಲಿ ಹೇಳಲ್ಪಡುವ ಅರ್ಥವು ಇಲ್ಲಿಯೇ ಸೂಚಿತವು. ಹಾಗೆ ಯಜ್ಞಶೇಷವಲ್ಲದ ಆಹಾರವನ್ನು ಸೇವಿಸುವನು ರಜಸ್ತಮೋಗುಣಗಳ ಅಭಿವೃದ್ಧಿಮೂಲಕ ಆಸುರನೆಂದೆನಿಸಿ ಹೀನ ದೆಶೆಯನ್ನು ಹೊಂದುವನೆಂಬುದೂ ಸಹ ಸೂಚಿತವು. ಅತಃ - ಆ ಕಾರಣದಿಂದ ಎಂದರೆ ವಿಷಯ ಭೋಗೈಕ ರತಿಯುಂಟಾಗುವದರಿಂದ ಜ್ಞಾನಯೋಗ ಮೊದಲಾದವುಗಳಲ್ಲಿ ಯತಮಾನೋಪಿ-ಯತ್ನಿಸಿದವನಾದರೂ ಕೂಡ, ನಿಷ್ಫಲ ಪ್ರಯತ್ನತಯಾ - ಪ್ರಯತ್ನವು ನಿಷ್ಫಲವಾಗುವದರಿಂದ, ಮೋಘಂ - ನಿರರ್ಥಕವಾಗಿ, ಹೇ ಪಾರ್ಥ - ಓ ಅರ್ಜುನನೇ, ಸಃ - ಅಂತವನು ಜೀವತಿ - ಜೀವಿಸುತ್ತಾನೆ, ಎಂದರೆ ಆತನು ಎತ್ತಿದ ಜನ್ಮವು ವ್ಯರ್ಥವಾದುದಾಗುತ್ತದೆ, ಪುನಃ ಜನ್ಮವನ್ನೇ ಎತ್ತಬೇಕಾಗುತ್ತದೆ ಎಂಬ ಭಾವವು.

ಈ ಮೂರು ಶ್ಲೋಕಗಳ ಸಙ್ಗ್ರಹ ತಾತ್ಪರ್ಯವು ಇಷ್ಟೇ. ಆಹಾರದಿಂದಲೇ ಎಲ್ಲಾ ಪ್ರಾಣಿಗಳ ಶರೀರವೂ ಅಭಿವೃದ್ಧಿಹೊಂದುತ್ತವೆಂಬುದು ಲೋಕಸಿದ್ಧವು. ಅಂತಹ ಆಹಾರವು ವರ್ಷದಿಂದಲೇ ಉಂಟಾಗುತ್ತದೆಂಬುದೂ ಲೋಕಸಿದ್ಧವು. ಯಜ್ಞಗಳಿಂದ ಎಂದರೆ ವೈಶ್ವದೇವಾದಿ ಪಂಚಮಹಾಯಜ್ಞಗಳಿಂದ ಮಳೆಯುಂಟಾಗುತ್ತದೆ, ಇದು ಶಾಸ್ತ್ರಸಿದ್ಧವು, ಈ ಪಂಚಮಹಾಯಜ್ಞಗಳೂ ಅದಕ್ಕಾಗಿ ಧನಾರ್ಜನಾದಿ ಕರ್ಮಗಳೂ ಈ ಪ್ರಾಣಿ ಶರೀರಗಳಿಂದಲೇ ನಡೆಯುವುವು ; ಹಾಗೆ ಶರೀರಗಳೇ ಇಲ್ಲದಿದ್ದರೆ ಯಾವ ಕೆಲಸಗಳೂ ನಡೆಯುವದಿಲ್ಲವು. ಶರೀರದಲ್ಲಿ ಆತ್ಮನು ಪ್ರತಿಷ್ಠಿತವಾಗಿದ್ದರೆ, ಆಗ ಆತನು ಅನ್ನಪಾನಗಳನ್ನು ತೆಗೆದುಕೊಳ್ಳುವದರಿಂದ, ಶರೀರವು ಕೆಲಸಕ್ಕೆ ಅರ್ಹತೆಯನ್ನು ಹೊಂದುತ್ತದೆ. ಆದುದರಿಂದ ಎಲ್ಲಾ ಪ್ರಾಣಿಶರೀರಗಳೂ ಯಜ್ಞಗಳಿಂದಲೇ ಉಂಟಾಗುತ್ತವೆ. ಹೀಗೆ ಚಕ್ರರೂಪದಲ್ಲಿ ಕಾರ್ಯ ಕಾರಣ ಭಾವದಿಂದ ಎಲ್ಲವೂ ನಡೆಯ ಬೇಕೆಂದು ಪರಮ ಪುರುಷನಿಂದ ಏರ್ಪಟ್ಟಿರುವದರಿಂದ, ಕರ್ಮಯೋಗವನ್ನೇ ನೀನು ನಡೆ

**ಭಾ. ಆ. ಅಸಾಧನಾಯತ್ತಾತ್ಮ ದರ್ಶನಸ್ಯ ಮುಕ್ತಸ್ಯೈವ ಮಹಾಯಜ್ಞಾದಿ ವರ್ಣಾಶ್ರಮೋಚಿತ ಕರ್ಮಾನಾರಂಭ ಇತ್ಯಾಹ :—**

ಸುವದು ಯುಕ್ತವು. ಹಾಗೆ ನಡೆಸದೆ ಯಜ್ಞಶಿಷ್ಟವಲ್ಲದ ಆಹಾರದಿಂದ ಯಾವನು ದೇಹವನ್ನು ಬೆಳೆಸುವನೋ ಅವನು ಅಘಾಯುವು; ಅವನ ಜನ್ಮವೇ ನಿರರ್ಥಕವು, ಎಂಬುದು.

**ಭಾಷ್ಯಾವತಾರಿಕೆಯ ಅರ್ಥವು :**—ಹಿಂದೆ ಎಲ್ಲಾ ಮೋಕ್ಷಾರ್ಥಿಗೂ ಜ್ಞಾನಯೋಗಕ್ಕೆ ಶಕ್ತಿಯಿದ್ದರೂ ಕೂಡ ಕರ್ಮಯೋಗವೇ ಆವಶ್ಯಕವು ಎಂದು ಉಪದೇಶಿಸಿದರು; ಶ್ರುತಿಯೂ **"ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಗ್ಂ ಸಮಾಃ"** ಎಂದು ಹಾಗೆಯೇ ವಿಧಿಸಿತು. ಆದರೆ ಕರ್ಮತ್ಯಾಗವು ಯಾವ ಸಂದರ್ಭದಲ್ಲಾದರೂ ಉಂಟೋ ಎಂದು ಅರ್ಜುನನು ಪ್ರಶ್ನಿಸಬಹುದೆಂದು ಭಾವಿಸಿ, ತಾವೇ ಹೇಳುತ್ತಾರೇನೆಂದರೆ, ಶರೀರ ಸಂಬಂಧವಿರುವತನಕ ವಿಹಿತ ಕರ್ಮಗಳನ್ನು ಬಿಡಲು ಅನುಕೂಲವಿಲ್ಲವು, ಬ್ರಾಹ್ಮಣಾದಿಗಳು ಅವರವರ ಕರ್ಮಗಳನ್ನು ಮಾಡಿಯೇ ತೀರಬೇಕು, ಹಾಗೆಯೇ ಬ್ರಹ್ಮಚಾರಿ ಮೊದಲಾದ ಆಶ್ರಮಿಗಳೂ ತಮ್ಮ ತಮ್ಮ ಕರ್ಮಗಳನ್ನು, ಅನುಷ್ಠಿಸಲೇಬೇಕು. ಶರೀರವಿರುವತನಕ ಅವುಗಳನ್ನು ಬಿಡಲು ಸಾಧ್ಯವಿಲ್ಲವು, ಮುಕ್ತದೆಶೆಯಲ್ಲೀಗ ಶರೀರ ಬಿಟ್ಟುಹೋಗುತ್ತದೆ. ಆಗೀಗ ಕರ್ಮಗಳ ಆವಶ್ಯಕತೆಯಿಲ್ಲವು, ಅನ್ನಪಾನಾದಿಗಳು ಬೇಕಿಲ್ಲವು; ಶಾಸ್ತ್ರ ಬೇಕಿಲ್ಲವು; ನಿರತಿಶಯಾನಂದದಿಂದಿರಬಹುದೆಂದು ಉಪದೇಶವೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. **ಅಸಾಧನಾಯತ್ತಾತ್ಮದರ್ಶನಸ್ಯ**, ಇಲ್ಲಿ ಸಾಧನವು, ಕರ್ಮಯೋಗ ಜ್ಞಾನಯೋಗದಿಂದ ಕೂಡಿದ ಉಪಾಸನವು, ಅಂತಹ ಸಾಧನದ ಆವಶ್ಯಕತೆಯಿಲ್ಲದೇನೇ ಆತ್ಮದರ್ಶನವನ್ನು ಹೊಂದಿರುವ, **ಮುಕ್ತಸ್ಯೈವ** - ಮುಕ್ತನಿಗೇನೇ **ಮಹಾಯಜ್ಞಾದಿ ವರ್ಣಾಶ್ರಮೋಚಿತಕರ್ಮಾನಾರಂಭಃ** - ಸ್ನಾನ ಸಂಧ್ಯಾವಂದನ, ಬ್ರಹ್ಮಯಜ್ಞ, ಭಗವದಾರಾಧನ ವೈಶ್ವದೇವರೂಪದಲ್ಲಿರುವ ಪಂಚ ಮಹಾಯಜ್ಞಗಳೇ ಮೊದಲಾದ ವರ್ಣಾಶ್ರಮಗಳಿಗೆ ಯೋಗ್ಯಗಳಾದ ಕರ್ಮಗಳನ್ನು ಆರಂಭಿಸದೇ ಇರೋಣವು, **ಇತ್ಯಾಹ**-ಎಂದು ಮುಂದಿನ ಎರಡು ಶ್ಲೋಕಗಳಿಂದಲೂ ಹೇಳುತ್ತಾರೆ. ಮುಕ್ತನಿಗೀಗ ಕರ್ಮಗಳ ಆವಶ್ಯಕತೆ ಇಲ್ಲವು; ಏಕೆಂದರೆ ಆಗ ಪ್ರಾರಬ್ಧಕರ್ಮವಿಲ್ಲವು, ಶರೀರವಿಲ್ಲವು, ಅನ್ನಪಾನಾದಿಗಳಿಲ್ಲವು, ಸುಖದುಃಖಾದಿಗಳಿಲ್ಲವು, ಶಾಸ್ತ್ರವಶ್ಯತೆ ಇಲ್ಲವು. **ಮುಕ್ತಸ್ಯೈವ** ಎಂಬ ಏವಕಾರದಿಂದ ಬದ್ಧನಿಗಾದರೋ ಕರ್ಮಾರಂಭವು ತಪ್ಪಿದ್ದಲ್ಲವೆಂಬುದು ಸೂಚಿತವು.

ಇಲ್ಲಿ **ಮುಕ್ತಸ್ಯ** ಎಂದು ಹೇಳಿರುವವರ ಅಭಿಪ್ರಾಯವು ವರ್ಣಾಶ್ರಮ ಧರ್ಮಗಳಿಗೆ ಒಳಪಡದವನು, ಅವುಗಳಿಂದ ಬಿಡಲ್ಪಟ್ಟವನು; ಈ ವರ್ಣಾಶ್ರಮ ಧರ್ಮಾವಶ್ಯಕತೆಯು ಹೋಗಬೇಕಾದರೆ ಈ ಪ್ರಾಕೃತ ಶರೀರದ ವಿಯೋಗವು ಆತ್ಮನಿಗೆ ಉಂಟಾಗಬೇಕು; ಅದರಿಂದ ತಪ್ಪಬೇಕಾದರೆ ಮುಕ್ತನೇ ಆಗಬೇಕು". ಕರ್ಮಾವಶ್ಯಕತೆಯು ಅದುವರೆಗೂ ತಪ್ಪಿದಲ್ಲವೆಂಬ ಭಾವವು.

**ಮೂಲಕ್ಕೆ ಅರ್ಥವು :**—ಹಿಂದೆ ಜ್ಞಾನಯೋಗಕ್ಕೆ ಶಕ್ತಿ ಇರುವವನಿಗೂ ಕೂಡ ಕರ್ಮಯೋಗವು ಆವಶ್ಯಕವೆಂದು ಹೇಳಲ್ಪಟ್ಟಿತು. ಮುಂದೆ ೧೯ನೆಯ ಶ್ಲೋಕದಲ್ಲೂ ಅದೇ ಹೇಳಲ್ಪಡುತ್ತದೆ. ಇವುಗಳ ಮಧ್ಯೆ ಈ ೧೭, ೧೮ನೆಯ ಶ್ಲೋಕಗಳನ್ನು ತರಲು ಕಾರಣವೇನೆಂಬುದು ನ್ಯಾಯವಾದ ಪ್ರಶ್ನೆಯು. ಈ ಎರಡು ಶ್ಲೋಕಗಳ ಅಭಿಪ್ರಾಯವಿಷ್ಟೇ. ಈಗ ಉಪದೇಶದ ಸಾರಾಂಶವೇನಾಯಿತು? ಮೋಕ್ಷಾರ್ಥಿಗಳೆಲ್ಲರೂ ಕರ್ಮಯೋಗವನ್ನೇ ಮಾಡಬೇಕೆಂದು ಹೇಳಲ್ಪಟ್ಟಿತು. ಹಾಗಾದರೆ ವಿಹಿತ ಕರ್ಮಗಳನ್ನು ತ್ಯಜಿಸಿ ಜ್ಞಾನರೂಪಗಳಾದ ಜ್ಞಾನಯೋಗ ಭಕ್ತಿಯೋಗಗಳಲ್ಲಿ ಮಾತ್ರ ಪ್ರವೃತ್ತಿಯು ಎಂದಿಗೂ ಸಾಧ್ಯವಿಲ್ಲವೋ ಎಂಬುದು ನ್ಯಾಯವಾದ

ಮೂ. ಯಸ್ತ್ವಾತ್ಮರತಿರೇವ ಸ್ಯಾತ್ ಆತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಃ ತಸ್ಯ ಕಾರ್ಯಂ ನ ವಿದ್ಯತೇ ॥ ೧೭.
ನೈವ ತಸ್ಯ ಕೃತೇನಾರ್ಥೋ ನಾಕೃತೇ ನೇಹ ಕಶ್ಚನ ।
ನ ಚಾಸ್ಯ ಸರ್ವ ಭೂತೇಷು ಕಶ್ಚಿದರ್ಥ ವ್ಯಪಾಶ್ರಯಃ ೧೮.

---

ಪ್ರಶ್ನೆಯು. ಇದರ ಉತ್ತರವನ್ನು ನಿಯತಂ ಕುರು ಕರ್ಮತ್ವಂ ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ ಶ್ರೀ ಯತಿವರ್ಯರು ಯಾವತ್ಸಾಧನ ಸಮಾಪ್ತಿ ಮಹಾ ಯಜ್ಞಾದಿ ನಿತ್ಯನೈಮಿತ್ತಿಕಂ ಕರ್ಮಾವಶ್ಯಂಕರ್ತವ್ಯಂ ಎಂಬಲ್ಲಿ ಸೂಚಿಸಿದರು. ಶ್ರೀಕೃಷ್ಣ ಭಗವಾನರೇ ಸ್ಪಷ್ಟವಾಗಿ ಈ ಮುಂದಿನ ಎರಡು ಶ್ಲೋಕಗಳಿಂದ ಆತ್ಮದರ್ಶನವು ಮುಕ್ತದೆಶೆಯಲ್ಲಿ ಸದಾ ಇರುವದರಿಂದ ಕರ್ಮಯೋಗಾದಿ ಸಾಧನಗಳು ಯಾವುವೂ ಬೇಕಿಲ್ಲವೆಂದು ಹೇಳುತ್ತಾರೆ. ಆದುದರಿಂದ ಪ್ರಕರಣ ಸಂಗತಿಗಳನ್ನು ತ್ಯಾಗಮಾಡಿ ಅಪ್ರಸ್ತುತವಾಗಿ ಏನೂ ಹೇಳಲಿಲ್ಲವು. ಜ್ಞಾನಯೋಗಾಧಿಕಾರಿಯನ್ನು ಮಾತ್ರ ಕುರಿತ ಶ್ಲೋಕಗಳೆಂದು ಹೇಳುವದು ಪ್ರಕರಣ ಸಙ್ಗತಿಗಳನ್ನು ಪರಿಶೀಲಿಸದೆ ಹೇಳುವ ಅಭಿಪ್ರಾಯವಾಗುತ್ತದೆ. ಯಸ್ತು ಮಾನವಃ - ಯಾವ ಸ್ವಾಯಂಭುವ ಮನುವಿನಿಂದ ಉತ್ಪನ್ನನಾದ ಮಾನವನು ಎಂದರೆ ಮನುಷ್ಯನು, ತಿರ್ಯಗಾದಿ ಇತರ ಜೀವರಾಶಿಗಿಂತ ಮನುಷ್ಯನು ಮೋಕ್ಷೋಪಾಯವನ್ನವಲಂಬಿಸಲು ಅರ್ಹನೆಂದು ಇಲ್ಲಿ ಮಾನವ ಶಬ್ದ ಪ್ರಯೋಗವು. ಆತ್ಮರತಿರೇವ-ಜೀವತತ್ವ ಯಾಥಾತ್ಮ್ಯ ದರ್ಶನದಲ್ಲೇ ಅಭಿಮುಖವುಳ್ಳವನಾಗಿ, ಆತ್ಮತೃಪ್ತಶ್ಚ-ಅಂತಹ ದರ್ಶನದಲ್ಲೇ ಪ್ರೀತಿಯುಳ್ಳವನಾಗಿ, ಆತ್ಮನ್ಯೇವಚ ಸಂತುಷ್ಟಃ-ಅಂತಹ ಆತ್ಮನಲ್ಲೇ ಸಂತೋಷವುಳ್ಳವನಾಗಿ, ಸ್ಯಾತ್ - ಆಗುತ್ತಾನೋ, ತಸ್ಯ - ಅಂತಹ ಮುಕ್ತ ಸ್ಥಿತಿಯನ್ನು ಹೊಂದಿದವನಿಗೆ, ಕಾರ್ಯಂ - ಸಾಧನರೂಪ ಕಾರ್ಯವು, ನ ವಿದ್ಯತೇ - ಇರುವದಿಲ್ಲವು. ರತಿ, ತೃಪ್ತಿ, ತುಷ್ಟಿ ಶಬ್ದಗಳು ಒಂದೇ ಅರ್ಥವುಳ್ಳವುಗಳಾಗಿ ತೋರಿದರೂ ಕ್ರಮವಾಗಿ ಇವುಗಳು ಧಾರಕ ಪೋಷಕ ಭೋಗ್ಯಗಳೆಂಬ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟವೆ. ಆತ್ಮಸಾಕ್ಷಾತ್ಕಾರ ಉಂಟಾಗಿರುವವನು ಆ ಆತ್ಮ ಸಾಕ್ಷಾತ್ಕಾರಕ್ಕಾಗಿ ಯಾವ ವರ್ಣಾಶ್ರಮ ಕರ್ಮಗಳನ್ನೂ ಆಚರಿಸಬೇಕಾದುದಿಲ್ಲವೆಂಬ ಭಾವವು; ಏಕೆಂದರೆ ಆತ್ಮ ಸಾಕ್ಷಾತ್ಕಾರವು ಉಂಟಾಗಿ ಮುಕ್ತನಾಗಿರುವದರಿಂದ. ಕೆಲವರು ಈ ಶ್ಲೋಕವು ಜ್ಞಾನಯೋಗನಿಷ್ಠನನ್ನು ಕುರಿತು ಹೇಳಿದುದೆಂದು ಹೇಳುವರು ಹಿಂದೆ ಜ್ಞಾನಯೋಗಶಕ್ತನಿಗೂ ಕರ್ಮಯೋಗವೇ ಜ್ಯಾಯಾ ಎಂದು ೮ರಿಂದ ೧೬ನೆಯ ಶ್ಲೋಕದ ವರೆಗೂ ಹೇಳಿ "ನಿಯತಂ ಕುರುಕರ್ಮತ್ವಂ" ಎಂದೂ ಹಿಂದೆ ಕಂಠೋಕ್ತವಾಗಿ ಹೇಳಿ,"ತಸ್ಯಕಾರ್ಯಂ ನ ವಿದ್ಯತೇ" ಎಂದು ಅದಕ್ಕೆ ವಿರುದ್ಧೋಪದೇಶಮಾಡಿದರು ಎಂದರೆ ಉಪದೇಶ ಸಾಮಂಜಸ್ಯವೇ ಓಡಿಹೋಯಿತು. ಆದುದರಿಂದ ಸಮಾಧಿಯಲ್ಲಿರುವವನಿಗೆ ಸಮಾಧಿ ವ್ಯತಿರಿಕ್ತ ಸಮಯಗಳಲ್ಲೂ, ವರ್ಣಾಶ್ರಮೋಚಿತ ಕರ್ಮಗಳು ಆವಶ್ಯಕವಿಲ್ಲವೆಂಬ ವ್ಯಾಖ್ಯಾತೃಗಳು ಪೂರ್ವಾಪರ ವಿರೋಧವನ್ನು ಆಲೋಚಿಸದೆ ಹೇಳುವವರಾಗಿರುತ್ತಾರೆ. "ಅಹರಹಸ್ಸಂಧ್ಯಾಮುಪಾಸೀತ" "ಕುರ್ವನ್ನೇವೇಹ ಕರ್ಮಾಣಿ" ಇತ್ಯಾದಿ ವಿಧಿವಾಕ್ಯಗಳಿಗೆ ವಿರುದ್ಧಾಚರಣೆಯಾಗಿ, ಭಗವನ್ನಿಗ್ರಹಕ್ಕೆ ಅಂತವನು ಗುರಿಯಾಗುವನು. ಇದೂ ಅಲ್ಲದೆ ಮುಂದೆ ೧೯ನೆಯ ಶ್ಲೋಕದಲ್ಲಿ ಪುನಃ, ಈ ಶ್ಲೋಕಗಳಲ್ಲಿ ಹೇಳಿದುದನ್ನೇ ಹೇತುವಾಗಿಟ್ಟು ತಸ್ಮಾತ್ ಎಂದಾರಂಭಿಸಿ, ಕರ್ಮಯೋಗವನ್ನೇ ಅನುಷ್ಠಿಸು ಎಂದು ಹೇಳುವದು, ಪರಸ್ಪರ ಅಸಾಮಂಜಸ್ಯವನ್ನು ಹೇಳಿದಂತಾಗುವದಿಲ್ಲವೇ? ಸಾಮಂಜಸ್ಯವು ಬೇಕಾದ ಪಕ್ಷದಲ್ಲಿ, ಈ ಶ್ಲೋಕವೂ ಮುಂದಿನ ಶ್ಲೋಕವೂ ಸಹ ಸಂಸಾರವು ಕಳೆದು

ಹೋಗಿ, ಪ್ರಕೃತಿ ಸಂಬಂಧವಿಲ್ಲದೆ, ಸ್ವಸ್ವರೂಪಾವಿರ್ಭಾವ ಉಂಟಾದ ಮುಕ್ತದೆಶೆಯನ್ನು ಹೇಳಿತು ಎಂದು ಅಙ್ಗೀಕರಿಸಿದರೆ, ಅಂತಹ ಆತ್ಮ ಸಾಕ್ಷಾತ್ಕಾರ ಉಂಟಾದವನಿಗೆ ಯಜ್ಞಾದಿ ಯಾವ ಸಾಧನವೂ ಬೇಕಿಲ್ಲವು, ಅಂತವನಿಗೆ ಅನ್ನಪಾನಾದಿಗಳು ಬೇಕಿಲ್ಲವು, ಆತನಿಗೆ ಜಾತಿ ಆಶ್ರಮಗಳು ಯಾವುವೂ ಇಲ್ಲವು, ಏಕೆಂದರೆ ಶರೀರವಿಲ್ಲವಾದುದರಿಂದ ಇವು ಯಾವುವೂ ಇಲ್ಲವು. (ಇಲ್ಲಿ ಆತ್ಮರತ್ಯಾದಿ ಶಬ್ದಗಳಲ್ಲಿರುವ ಆತ್ಮಶಬ್ದವು ಪರಮಾತ್ಮನನ್ನು ಬೋಧಿಸುತ್ತದೆಂದು ಕೆಲವರು ಭಾಷ್ಯ ಬರೆದಿರುತ್ತಾರೆ,) ಇಲ್ಲಿ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಜ್ಯಾಯರ್ಸಾ ಎಂದು ಸ್ಥಾಪಿಸುವ ಪ್ರಕರಣವಾದುದರಿಂದ ಆತ್ಮಶಬ್ದವು ಜೀವಾತ್ಮನನ್ನೇ ಬೋಧಿಸುತ್ತದೆಯೇ ವಿನಾ ಪರಮಾತ್ಮನನ್ನಲ್ಲವು. ಹಿಂದೆ ಹೇಳಿದ ಅಭಿಪ್ರಾಯವೇ ಇನ್ನೂ ಈ ಶ್ಲೋಕದಿಂದಲೂ ಉಪಪಾದಿಸಿ ಹೇಳುತ್ತಾರೆ,) ತಸ್ಯ - ಮುಕ್ತದೆಶೆಯಲ್ಲಿ ಯಾವಾಗಲೂ ಆತ್ಮದರ್ಶನ ಉಂಟಾಗಿರುವ ಪುರುಷನಿಗೆ, ಕೃತೇನ - ಕರ್ಮಯೋಗವನ್ನಾಗಲಿ ವರ್ಣಾಶ್ರಮೋಚಿತ ಕರ್ಮ ಮಾಡಿದುದರಿಂದಲಾಗಲಿ, ಅರ್ಥಃ - ಪ್ರಯೋಜನವು, ನೈವ - ಇರುವದೇ ಇಲ್ಲವು. ಸಂಸಾರಬಂಧವಿಲ್ಲವು, ಕೃತಕೃತ್ಯನಾಗಿರುವಪರಿಂದ ಸಾಧಿಸತಕ್ಕದ್ದು ಯಾವುದೂ ಇಲ್ಲವು ಎಂಬ ತಾತ್ಪರ್ಯವು. ಮತ್ತು ಅಕೃತೇನ - ಇಂತಹ ಕರ್ಮಗಳನ್ನನುಷ್ಠಿಸದೇ ಇರುವದರಿಂದ, ಇಹ - ಈ ಸಂದರ್ಭದಲ್ಲಿ, ಕಶ್ಚನಾನರ್ಥಃ - ಯಾವುದೊಂದು ಪ್ರತ್ಯವಾಯವೂ ಇಲ್ಲವು; ಅಂತವನು ಶಾಸ್ತ್ರಾತೀತನಾದುದರಿಂದ, ಆಜ್ಞೆಯನ್ನು ಉಲ್ಲಂಘಿಸಿದ ದೋಷಪ್ರಾಪ್ತಿಯು ಆತನಿಗೆ ಉಂಟಾಗುವದಿಲ್ಲವು; ಎಲ್ಲವೂ ಆತನಿಗೆ ಅನುಕೂಲವಾಗಿಯೇ ಇರುತ್ತದೆ. ಭಗವತ್ಸನ್ನಿಧಿಯಲ್ಲೇ ಇರುವವನು ಆತನಿಗೆ ಪ್ರತಿಕೂಲನಾಗಿ ನಡೆಯುವನೋ? ಶಾಸ್ತ್ರವು ಯಾರಿಗೆ? ಎಂದರೆ ಪ್ರತಿಕೂಲವಾಗಿ ನಡೆಯುವ ಸಂದರ್ಭವಿರುವ ನಮಗೆ; ಮುಕ್ತದೆಶೆಯಲ್ಲಿ ಪ್ರತಿಕೂಲಾಚರಣೆಯೇ ಇಲ್ಲವಾದುದರಿಂದ ಶಾಸ್ತ್ರವು ಬೇಕಿಲ್ಲವೆಂಬ ತಾತ್ಪರ್ಯವು. ಅಸ್ಯ - ಈತನಿಗೆ, ಸರ್ವಭೂತೇಷು - ಸಮಸ್ತ ಭೂತಗಳಲ್ಲಿಯೂ, ಕಶ್ಚಿದರ್ಥವ್ಯಪಾಶ್ರಯಃ - ಪ್ರಯೋಜನ ರೂಪದಲ್ಲಿ ಸ್ವೀಕರಿಸೋಣವು ಯಾವುದೂ,, ನೈವ-ಇರುವದಿಲ್ಲವು. ಯಾವ ಐಹಿಕ ವಿಷಯದಲ್ಲೂ ತನಗೆ ಪ್ರಯೋಜನ ಉಂಟೆಂದು ಭಾವಿಸುವದಿಲ್ಲವು; ಏಕೆಂದರೆ ಆತ್ಮನಲ್ಲೇ ರತಿ, ತೃಪ್ತಿಸಂತುಷ್ಟಿಯುಂಟಾಗಿರುವದರಿಂದ ಎಂಬ ತಾತ್ಪರ್ಯವು. ಅದೂ ಅಲ್ಲದೆ,ಅಲ್ಪಾಸ್ಥಿರಗಳಾದ ವಿಷಯ ಸುಖಗಳಲ್ಲಿ ಅಭಿಲಾಷೆಯಿರುವ ಬದ್ಧನಿಗಾದರೆ ಅವುಗಳು ಬೇಕು: ಅವುಗಳು ತುಚ್ಛವೆಂಬ ಜ್ಞಾನ ಉಂಟಾದವನಿಗೆ ಐಹಿಕಗಳಲ್ಲಿ ಭೋಗ ಬುದ್ಧಿಯು ಎಂದಿಗಾದರೂ ಉದಯಿಸುವದೋ? ಎಂದಿಗೂ ಇಲ್ಲವೆಂಬ ಭಾವವು.। ಆದುದರಿಂದ ನೀನು ಕರ್ಮಯೋಗವನ್ನೇ ಮಾಡಲೇಬೇಕು ಎಂದು ತಸ್ಮಾತ್ ಎಂದಾರಂಭಿಸಿದ ಶ್ಲೋಕದ ಮೂಲಕ ಪರಮ ಹಿತೋಪದೇಶವನ್ನು ಮಾಡುತ್ತಾರೆ. ಈ ತಸ್ಮಾತ್ ಎಂಬ ಶಬ್ದದಿಂದ, ಈ ಮೂರನೆಯ ಅಧ್ಯಾಯದಲ್ಲಿ ಕರ್ಮಯೋಗವನ್ನು ಪ್ರತಿಯೊಬ್ಬ ಮೋಕ್ಷಾರ್ಥಿಯು ಮಾಡಿಯೇ ತೀರಬೇಕು ಎಂದು ಸಿದ್ಧಾಂತಿಸಿ ಹೇಳುವ ಪ್ರಕಾರಣವಾದುದರಿಂದ, ಹಿಂದೆ ಹೇಳಿದ ಸಮಸ್ತಕಾರಣಗಳಿಂದಲೂ ಎಂಬರ್ಥವು. ಅವು ಯಾವುವೆಂದರೆ- ಕರ್ಮಯೋಗವನ್ನು ಮೋಕ್ಷದೆಶೆಯಲ್ಲಿ ಆತ್ಮ ಸಾಕ್ಷಾತ್ಕಾರ ಹೊಂದಿರುವನೀಗ ಬಿಡಬಹುದೇವಿನಾ, ಇನ್ನು ಯಾವ ಮೋಕ್ಷಾರ್ಥಿಯು ಕರ್ಮಯೋಗವಿಲ್ಲದೆ ಸ್ವಮೋಕ್ಷಫಲವನ್ನು ಸಾಧಿಸಲಾರನಾದುದರಿಂದಲೂ ಕರ್ಮಯೋಗವು ನಿನಗೆ ಸ್ವಾಭಾವಿಕವಾಗಿ ಉಂಟಾಗತಕ್ಕದ್ದಾಗಿ ಸುಕರವಾದುದರಿಂದಲೂ, ಕರ್ಮಯೋಗದಲ್ಲೇ ಸಾಧನ ಪ್ರತಿಬಂಧಕಗಳಾದ ಪಾಪಗಳೆಲ್ಲಾ ತೊಲಗಿ, ಆತ್ಮಜ್ಞಾನಪ್ರಾಪ್ತಿಗೆ ಸೌಕರ್ಯವು ಉಂಟಾಗುವದರಿಂದಲೂ, ಕರ್ಮಯೋಗವನ್ನು ತ್ಯಜಿಸಿ ಕೇವಲ ಜ್ಞಾನಯೋಗದಲ್ಲೇ ಪ್ರವರ್ತಿಸುತ್ತೇನೆಂದು ಸಙ್ಕಲ್ಪಿಸಿದವನು, ಕಾಲುಜಾರಿ

ಮೂ. ತಸ್ಮಾದಸಕ್ತಸ್ಸತತಂ ಕಾರ್ಯಂ ಕರ್ಮ ಸಮಾಚರ ।
ಅಸಕ್ತೋಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯.

ವಿಷಯೋಪ ಭೋಗಗಳಲ್ಲೇ ಬೀಳಬಹುದಾದುದರಿಂದಲೂ, ಹೀಗೆ ಕೇವಲ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಹಿತಕರವಾದುದರಿಂದ ಎಂಬ ಭಾವವು; ಸತತಂ - ಯಾವಾಗಲೂ, [ಎಂದರೆ ಶ್ರುತಿಯು "ಕುರ್ವನ್ನೇವೇಹ ಕರ್ಮಾಣಿಜಿಜೀವಿಷೇತ್ ಶತಗ್ಂಸಮಾಃ" ಎಂದು ಹೇಳಿರುವಮೇರಿಗೆ] ದೇಹವಿರುವವರೆಗೂ ವಿಹಿತ ಕರ್ಮಗಳನ್ನು ಮಾಡಲೇ ಬೇಕು. ॥೧೮॥ ತಸ್ಮಾತ್- ಹಿಂದೆ ಹೇಳಿದ ಆ ಕಾರಣದಿಂದ, ಅಸಕ್ತಃ - ಕರ್ಮದಲ್ಲಿಯೂ ಫಲದಲ್ಲಿಯೂ ಸಙ್ಗವಿಲ್ಲದವನಾಗಿ, ಕಾರ್ಯಂ-ಶಾಸ್ತ್ರದಲ್ಲಿವಿಧಿಸಿರುವವರಿಂಧ ಮಾಡಬೇಕಾಗಿರುವ, ಕರ್ಮ-ವಿಹಿತ ಕರ್ಮವನ್ನು, ಸಮಾಚರ-ಸರಿಯಾಗಿ ಶಾಸ್ತ್ರ ವಿಧಿಗನುಗುಣವಾಗಿ ಚನ್ನಾಗಿ ಅನುಷ್ಠಿಸತಕ್ಕದ್ದು. ಪೂರುಷಃ - ಶರೀರವನ್ನು ಧರಿಸಿರುವ ಪುರುಷನು, ಇಲ್ಲಿ ಮೋಕ್ಷಾರ್ಥಿಯು ಹೇಳಲ್ಪಟ್ಟನು, ಒಂದುವೇಳೆ ಜ್ಞಾನಯೋಗಕ್ಕೆ ಅರ್ಹನಾಗಿದ್ದರೂ, ಕರ್ಮ - ತನಗೆ ಶಾಸ್ತ್ರವಿಹಿತವಾದ ಕರ್ಮವನ್ನು, ಅಸಕ್ತೋಹ್ಯಾಚರನ್ - ಕರ್ಮದಲ್ಲೂ ಫಲದಲ್ಲೂ ಸಙ್ಗರಹಿತನಾಗಿ ಆಚರಿಸುವವನಾಗಿ, ಪರಮಾಪ್ನೋತಿ - ಸರ್ವೇಶ್ವರನನ್ನು ಹೊಂದಲು ಆವಶ್ಯಕವಾದ ಉಪಾಯದ ಉತ್ಕೃಷ್ಟದೆಶೆಯನ್ನು ಹೊಂದುತ್ತಾನೆ. [ಆ ಅವಸ್ಥೆಯು ಯಾವುದೆಂದರೆ ಯಾವಾಗಲೂ ತನ್ನ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡಿರುವ ದೆಶೆಯು. ಈ ಮೂರು ಶ್ಲೋಕಗಳಿಂದಲೂ ಹೇಳಲ್ಪಟ್ಟ ಅಂಶಗಳು ಯಾವುವೆಂದರೆ—ಕರ್ಮಯೋಗದಲ್ಲಿ ಅನುಷ್ಠಿಸುವ ಕರ್ಮಗಳು ಯಾವುವೆಂದರೆ (೧) ನಿತ್ಯಗಳು-(೨)ನೈಮಿತ್ತಿಕಗಳು (೩) ಮತ್ತು ಮುಂದೆ ನಾಲ್ಕನೆಯ ಅಧ್ಯಾಯದ ದೈವಮೇವಾ ಪರೇಯಜ್ಞಂ ಎಂದು ಆರಂಭಿಸಿ ಹೇಳುವುವುಗಳಲ್ಲಿ ತನಗೆ ಯಾವುದರಲ್ಲಿ ಇಷ್ಟವೋ ಅದು ಒಂದು, ಹೀಗೆ ಇವುಗಳ ಅನುಷ್ಠಾನವು. ಮೋಕ್ಷಾಪೇಕ್ಷೆಯುಳ್ಳವನು ಈ ಮೂರನ್ನೂ ಅನುಷ್ಠಿಸಲೇ ಬೇಕು. ಎಲ್ಲಿವರೆಗೆ ಅನುಷ್ಠಿಸತಕ್ಕದ್ದು ಎಂಬ ಚರ್ಚೆಯಲ್ಲಿ, ಮೋಕ್ಷಕ್ಕೆ ಸಾಧನಭೂತವಾದ, ಆತ್ಮಾವಲೋಕನ ದೊರೆಯುವ ತನಕ ಈ ದೈವಮೇವಾಪರೆ ಎಂಬಲ್ಲಿ ಹೇಳಲ್ಪಡುವ ಐಚ್ಛಿಕವಾದ ಮೂರನೆಯ ಭಾಗವನ್ನೂ ನಿತ್ಯ ನೈಮಿತ್ತಿಕಗಳೊಂದಿಗೆ ಅನುಷ್ಠಿಸತಕ್ಕದ್ದು, ಅನಂತರ ಐಚ್ಛಿಕ ಮಾತ್ರ ಆವಶ್ಯಕವಿಲ್ಲವು; ಮಿಕ್ಕ ಒಂದನೆಯ ಎರಡನೆಯ ಭಾಗಗಳಾದ ನಿತ್ಯನೈಮಿತ್ತಿಕಗಳ ಅನುಷ್ಠಾನವನ್ನು ಮಾತ್ರ ಭಕ್ತಿಯೋಗಾಂಗವಾಗಿ ಯಾವಜ್ಜೀವವೂ ಮಾಡತಕ್ಕದ್ದು. ಇದೀಗ ಸತತಂ ಕಾರ್ಯಂ ಎಂಬುದರ ಅರ್ಥವು. ಆತ್ಮಜ್ಞಾನ ಉಂಟಾಗುವವರೆಗೂ ಕರ್ಮಯೋಗವನ್ನು ಸಂಪೂರ್ಣವಾಗಿ ಅನುಷ್ಠಿಸತಕ್ಕದ್ದು. ಮೋಕ್ಷಸಾಧನವಾದ ಆತ್ಮಸಾಕ್ಷಾತ್ಕಾರ ಉಂಟಾದನಂತರ ಐಚ್ಛಿಕ ಭಾಗವು ಆವಶ್ಯಕವಿಲ್ಲವು. ಆಜ್ಞಾರೂಪವಾಗಿ ವಿಹಿತಕರ್ಮಗಳಾದ ನಿತ್ಯನೈಮಿತ್ತಿಕಗಳನ್ನಾದರೋ ಯಾವಜ್ಜೀವವೂ ನಡೆಸತಕ್ಕದ್ದು. ಆದುದರಿಂದ ಯಾವ ಸಂದರ್ಭದಲ್ಲಾದರೂ ಕರ್ಮಗಳನ್ನು ಬಿಡಬಹುದೋ ? ಬಿಟ್ಟು ಜ್ಞಾನಯೋಗದಲ್ಲಿ ಮಾತ್ರ ಇರಬಹುದೋ ? ಎಂದು ಅರ್ಜುನನಿಗೆ ಶಙ್ಕಾ ಬಾಧಿಸುತ್ತಿರಬಹುದೆಂದು ಭಾವಿಸಿ, ಎಲ್ಲಾ ಕರ್ಮಗಳನ್ನೂ ತ್ಯಜಿಸಬೇಕಾದರೆ ಮುಕ್ತದೆಶೆಯಲ್ಲಿಯೇ ವಿನಾ ಅನ್ಯಥಾ ಇಲ್ಲವು. ಮೋಕ್ಷಾರ್ಥಿಯು ಕರ್ಮಯೋಗವನ್ನು ಪ್ರಾರಂಭಿಸಿ ಅನುಷ್ಠಿಸಲೇಬೇಕು. ಅದೇ ಸ್ವಭಾವತಃ ಸುಕರವು; ಅದರಲ್ಲೇ ಆತ್ಮಸಾಕ್ಷಾತ್ಕಾರವು ದೊರೆಯುತ್ತದೆ ಎಂದು ಹೇಳಿದರು. ಆ ಕರ್ಮಯೋಗದ ನಿತ್ಯನೈಮಿತ್ತಿಗಳು ಭಕ್ತಿಯೋಗಕ್ಕೆ ಅಙ್ಗವಾದುದರಿಂದ ಯಾವಜ್ಜೀವವೂ ಅನುಷ್ಠೇಯಗಳು. ಐಚ್ಛಿಕ ಭಾಗವು ಮಾತ್ರ ಆತ್ಮಾವಲೋಕನ

ಭಾ. ಯಸ್ತು ಜ್ಞಾನಯೋಗ ಕರ್ಮಯೋಗ ಸಾಧನ ನಿರಪೇಕ್ಷಃ, ಸ್ವತ ಏವಾತ್ಮರತಿಃ- ಆತ್ಮಾಭಿಮುಖಃ, ಆತ್ಮನ್ಯೈವ ತೃಪ್ತೋ, ನಾನ್ನಪಾನಾದಿಭಿರಾತ್ಮವ್ಯತಿರಿಕ್ತೈಃ, ಆತ್ಮನ್ಯೇವಚ ಸಂತುಷ್ಟೋ, ನೋದ್ಯಾನ ಸ್ರಕ್ಚಂದನ ಗೀತ ವಾದಿತ್ರ ನೃತ್ತಾದೌ ಧಾರಣ ಪೋಷಣ ಭೋಗ್ಯಾದಿಕಂ ಸರ್ವಮಾತ್ಮೈವ ಯಸ್ಯ, ತಸ್ಯಾತ್ಮದರ್ಶನಾಯ ಕರ್ತವ್ಯಂ ನ ವಿದ್ಯತೇ, ಸ್ವತ ಏವ ಸರ್ವದಾ ದೃಷ್ಟಾತ್ಮ ಸ್ವರೂಪತ್ವಾತ್. ಅತ ಯೇವ ತಸ್ಯಾತ್ಮದರ್ಶನಾಯ ಕೃತೇನ ತತ್ಸಾಧನೇನ ನಾರ್ಥಃ-ನಕಿಂಚಿತ್ಪ್ರಯೋಜನಮ್; ಅಕೃತೇನಾತ್ಮದರ್ಶನ ಸಾಧನೇನ ನಕಶ್ಚಿದನರ್ಥಃ, ಅಸಾಧನಾಯತ್ತಾತ

---

ದೊರೆಯುವವರೆಗೂ ಅನುಷ್ಠೇಯವು ಎಂಬುದು ಈ ಶ್ಲೋಕಗಳ ಮುಖ್ಯ ತಾತ್ಪರ್ಯವು. ಆದುದರಿಂದ ಕರ್ಮಯೋಗವೇ ನಿನಗೆ ಜ್ಯಾಯರ್ಸೀ ಹಿತಕರವಾದುದ.

**ಭಾಷ್ಯಾರ್ಥವು:**—ಈ ೧೭-೧೮ನೆಯ ಶ್ಲೋಕಗಳು ಮುಕ್ತನಿಗೀಗ ವರ್ಣಾಶ್ರಮೋಚಿತ ಕರ್ಮಗಳು ಬೇಕಿಲ್ಲವೆಂದು ಹೇಳುತ್ತವೆಂದು ಉಪದೇಶಿಸುತ್ತಾರೆ. ಅಂತಹ ಮುಕ್ತನಿಗೀಗ ಬೇಕಿಲ್ಲವೇ ವಿನಾ ಬದ್ಧರಾದ ಸರ್ವ ಮೋಕ್ಷಾರ್ಥಿಗಳಿಗೂ ಆವಶ್ಯಕವೆಂದು ೧೯ನೆಯ ಶ್ಲೋಕದಲ್ಲಿ ವಿಧಿಸಿರುತ್ತದೆಂದು ಹೇಳುತ್ತಾರೆ:—**ಯಸ್ತು** - ಇಲ್ಲಿ ತು ಶಬ್ದವು ಹಿಂದೆ ಹೇಳಿದುದಕ್ಕೆ ವ್ಯತ್ಯಸ್ತ ಭಾವವನ್ನು ತೋರಿಸುತ್ತದೆ, ಆದುದರಿಂದ ಹಿಂದೆ ಕರ್ಮಯೋಗಸಾಪೇಕ್ಷತ್ವವು ಹೇಳಲ್ಪಟ್ಟಿರುವದರಿಂದ, ಕರ್ಮಯೋಗ ಮತ್ತು ಅದರಿಂದ ಸಾಧ್ಯವಾದ ಜ್ಞಾನಯೋಗ ನಿರಪೇಕ್ಷವೆಂದು ಮುಂದೆ ವ್ಯಾಖ್ಯಾನವು, **ಯಸ್ತು**–ಯಾವನಾದರೆ, **ಜ್ಞಾನಯೋಗ ಕರ್ಮಯೋಗಸಾಧನ ನಿರಪೇಕ್ಷಃ** - ಜ್ಞಾನಯೋಗ ಕರ್ಮಯೋಗಗಳ ಸಾಧನದ ಅಪೇಕ್ಷೆಯಿಲ್ಲದವನಾಗಿ, **ಸ್ವತ ಏವ** - ತಾನಾಗಿಯೇ ಎಂದರೆ ಸರ್ವೇಶ್ವರಕೃಪೆಯಿಂದ **ಆತ್ಮರತಿಃ** ಎಂದರೆ **ಆತ್ಮಾಭಿ ಮುಖಃ** ಆತ್ಮಾಭಿಮುಖನಾಗಿರುವನೋ, **ನಾನ್ನಪಾನಾದಿಭಿರಾತ್ಮ ವ್ಯತಿರಿಕ್ತೈಃ** - ಆತ್ಮಕ್ಕಿಂತಲೂ ಬೇರೆಯಾದ ಅನ್ನಪಾನಾದಿಗಳಿಂದ ತೃಪ್ತನಾಗದೆ, **ಆತ್ಮನ್ಯೈವತೃಪ್ತಃ** - ಸ್ವಸ್ವರೂಪಾವಿರ್ಭಾವವು ಮುಕ್ತದೆಶೆಯಲ್ಲುಂಟಾಗಿ ಆತ್ಮಸ್ವರೂಪದಲ್ಲೇ ತೃಪ್ತನಾಗಿರುವನೋ, **ಆತ್ಮನ್ಯೇವಚ ಸಂತುಷ್ಟಃ** ಎಂದರೆ **ನೋದ್ಯಾನ ಸ್ರಕ್ಚಂದನ ಗೀತವಾದಿತ್ರಾದೌ** - ಇಲ್ಲಿನಹಾಗೆ ಉದ್ಯಾನವನ, ಹೂವಿನಹಾರ, ಚಂದನ, ಹಾಡು, ವಾದ್ಯ, ಮೊದಲಾದವುಗಳಲ್ಲಿ ಸಂತುಷ್ಟಿಯಿಲ್ಲದೆ, ಆತ್ಮನಲ್ಲೇ ಸಂತುಷ್ಟಿಯುಳ್ಳವನೋ ಇದರ ತಾತ್ಪರ್ಯವೇನೆಂಬುದನ್ನು ತಿಳಿಸುತ್ತಾರೆ:—**ಧಾರಣ ಪೋಷಣ ಭೋಗ್ಯಾದಿಕಂ** - ಆಶ್ರಯಭೂತವಸ್ತುವು, ರಕ್ಷಕ ವಸ್ತುವು, ಭೋಗ್ಯವಸ್ತುವು, ಆದಿಶಬ್ದದಿಂದ ಭೋಗಸ್ಥಾನವು ಹೇಳಲ್ಪಟ್ಟಿತು, ಇವುಗಳನ್ನುಳ್ಳ, **ಸರ್ವಂ** - ಹೀಗೆ ಸಮಸ್ತವೂ **ಆತ್ಮೈವ ಯಸ್ಯ** - ಯಾವನಿಗೆ ಜೀವಾತ್ಮನೋ, **ತಸ್ಯ** - ಅಂತವನಿಗೆ, **ಆತ್ಮದರ್ಶನಾಯ ಕರ್ತವ್ಯಂ ನ ವಿದ್ಯತೇ** - ಆತ್ಮದರ್ಶನಕ್ಕಾಗಿ, **ಕರ್ತವ್ಯಂ** - ಮಾಡತಕ್ಕದ್ದು, **ನ ವಿದ್ಯತೇ** - ಇರುವದಿಲ್ಲವು; ಏಕೆಂದರೆ **ಸ್ವತ ಏವ** – ತಾನಾಗಿಯೇ, ಯಾವ ಸಾಧನದ ಅಪೇಕ್ಷೆಯೂ ಇಲ್ಲದೆ, **ಸರ್ವದಾ**-ಯಾವಾಗಲೂ, **ದೃಷ್ಟಾತ್ಮಸ್ವರೂಪಾತ್**-ಆತ್ಮಸ್ವರೂಪವು ವೇದ್ಯವಾದುದರಿಂದ. **ಅತ ಏವ** - ಆ ಕಾರಣದಿಂದಲೇ, **ತಸ್ಯ** - ಅಂತವನಿಗೆ, ಎಂದರೆ ಮುಕ್ತನಿಗೆ, **ಆತ್ಮದರ್ಶನಾಯ** - ಆತ್ಮಸ್ವರೂಪ ಸಾಕ್ಷಾತ್ಕಾರಕ್ಕಾಗಿ, **ಕೃತೇನ ತತ್ಸಾಧನೇನ**-ಮಾಡಿದ ಆ ಸಾಧನದಿಂದ ಎಂದರೆ ವರ್ಣಾಶ್ರಮೋಚಿತ ಕರ್ಮಾನುಷ್ಠಾನದಿಂದಾಗುವ, **ನಾರ್ಥಃ** - ಎಂದರೆ, **ನ ಕಿಂಚಿತ್ಪ್ರಯೋಜನಮ್** - ಏನೊಂದೂ ಪ್ರಯೋಜನವೂ ಇಲ್ಲವು; ಪ್ರಯೋಜನವಿಲ್ಲದುದರಿಂದ ಮಾಡತಕ್ಕದ್ದೂ ಯಾವುದೂ ಇಲ್ಲವೆಂಬ ಭಾವವು. **ಅಕೃತೇನ ಆತ್ಮದರ್ಶನ ಸಾಧನೇನ** - ಆತ್ಮದರ್ಶನಕ್ಕೆ ಸಾಧನರೂಪಕರ್ಮವನ್ನು ಮಾಡದಿರುವದ

ರಿಂದ, ನ ಕಶ್ಚಿದನರ್ಥಃ - ಏನೊಂದು ಪ್ರತ್ಯವಾಯವೂ ಇಲ್ಲವು, ಎಂದರೆ ಆತ್ಮ ದರ್ಶನವು ಪ್ರಾಪ್ತವಾಗಿರುವದು ತಪ್ಪಿಹೋಗುತ್ತದೆಂಬ ಭಯವೂ ಇಲ್ಲವೆಂಬ ಭಾವವು. ಏಕೆಂದರೆ ಹೇತುವನ್ನು ತಿಳಿಸುತ್ತಾರೆ :—ಅಸಾಧನಾಯತ್ತ ಆತ್ಮದರ್ಶನತ್ವಾತ್ - ಸಾಧನದ ಆವಶ್ಯಕತೆಯಿಲ್ಲದೆ ಇರುವ ಅವಸ್ಥೆಯುಳ್ಳ ಆತ್ಮಸ್ವರೂಪಜ್ಞಾನವು ಪ್ರಾಪ್ತವಾಗಿರುವದರಿಂದ. ಇದರ ತಾತ್ಪರ್ಯವು ಇಷ್ಟೇ; ಆತ್ಮದರ್ಶನವು ಸಿದ್ಧಿಸಿರುವದರಿಂದ ಸಾಧಿಸತಕ್ಕದ್ದು ಯಾವುದೂ ಇಲ್ಲವು. ತಪ್ಪಿಹೋಗುವ ಭಯವಿದ್ದರೆ ಪುನಃ ಸಾಧನವು ಆವಶ್ಯಕವು; ಅದೂ ಇಲ್ಲವು. ಮುಕ್ತದೆಶೆಯಲ್ಲಿ ಕರ್ಮವಶ್ಯತೆಯಾಗಲಿ ಶಾಸ್ತ್ರವಶ್ಯತೆಯಾಗಲಿ ಇಲ್ಲವು. ಪ್ರಾಕೃತ ದೇಹವಿಯೋಗದ ಮೂಲಕ ಸ್ವೇನರೂಪೇಣಾಭಿ ನಿಷ್ಪದ್ಯತೇ(ಛಾಂ. )ಎಂಬ ವಾಕ್ಯಾನುಸಾರ ತನ್ನ ನೈಜಸ್ವರೂಪವು ಉಂಟಾಗುತ್ತದೆಯಾದುದರಿಂದ, ಆತ್ಮ ದರ್ಶನವು ತಪ್ಪಿ ಹೋಗುತ್ತದೆಂಬ ಭಯವಿಲ್ಲವೆಂಬ ತಾತ್ಪರ್ಯವು. ಇಲ್ಲಿ ಆತ್ಮನೈವತೃಪ್ತಃ ಎಂಬ ವಾಖ್ಯಾನವನ್ನು ಆತ್ಮರತಿರೇವಸ್ಯಾತ್ ಎಂಬದಕ್ಕೇನೋ ಒಪ್ಪಬಹುದು; ನಾನ್ನಪಾನಾದಿಭಿರಾತ್ಮವ್ಯತಿರಿಕ್ತೈಃ ಎಂಬ ವ್ಯಾಖ್ಯಾನವು ಹೇಗೆ ? ಎಂದರೆ, ಆತ್ಮರತಿರೇವ ಎಂಬ ಅವಧಾರಣ ಬಲದಲ್ಲಿ ಆತ್ಮಸ್ವರೂಪ ವ್ಯತಿರಿಕ್ತವಾದವುಗಳಲ್ಲಿ ರತಿಯಿಲ್ಲವೆಂಬುದು ಅರ್ಥವಾಗಿ ತೋರುವದರಿಂದ ಹಾಗೆ ಭಾಷ್ಯವು. ಹಾಗೆಯೇ ಆತ್ಮನ್ಯೇವಚಸಂತುಷ್ಟಃ ಎಂಬಲ್ಲಿನ ಏವಕಾರಾರ್ಥವನ್ನು "ನೋದ್ಯಾನ ಸ್ರಕ್ಚಂದನ ಗೀತವಾದಿತ್ರನೃತ್ತಾದೌ ಎಂದು ಉಪಪಾದಿಸಿ ವ್ಯಕ್ತಪಡಿಸಿರುತ್ತಾರೆ; ಐಹಿಕೋಪ ಭೋಗಗಳೆಲ್ಲಾ ಅಂತವನಿಗೆ ಅತಿ ತುಚ್ಛವಾದುವು, ವೃಷ್ಟಾನ್ನವನ್ನು ಸೇವಿಸುವನು ಹಳಸಿದ ಅನ್ನವನ್ನು ಬಯಿಸುವನೇ ಎಂಬ ತಾತ್ಪರ್ಯವ. ರತಿ ಶಬ್ದಕ್ಕೆ ಆಭಿಮುಖ್ಯ ಮಾತ್ರನೇ ಅರ್ಥವೆಂದು ಹೇಳಿದುದು ಹೇಗೆ? ಎಂದರೆ ಅದರಿಂದುಂಟಾಗುವ ತೃಪ್ತಿಮೊದಲಾದವು ಪೃಥಕ್ಕಾಗಿ ಮುಂದೆ ಆತ್ಮನ್ಯೇವಚ ಸಂತುಷ್ಟಃ ಎಂದು ಹೇಳಿರುವದರಿಂದ ಎಂದು ಭಾವಿಸತಕ್ಕದ್ದು. ಈ ಶ್ಲೋಕಗಳು ಜ್ಞಾನ ಯೋಗನಿಷ್ಠನನ್ನಾಗಲಿ, ಯತಿಯನ್ನಾಗಲಿ ಬೋಧಿಸುತ್ತದೆ ಎಂದು ಹೇಳುವವರು, ಇವರಿಗೂ ಕೂಡ ಅನ್ನಪಾನಾದಿಗಳೂ ಇತಿ ಕರ್ತವ್ಯತೆಗಳೂ ಉಂಟು ಎಂಬಭಾವವನ್ನು ಜ್ಞಾಪಕಕ್ಕೆ ತಂದುಕೊಳ್ಳಲಿಲ್ಲವು. ಆದರೆ ಇದು ಮುಕ್ತನನ್ನು ಕುರಿತು ಹೇಳಿದುದು ಎಂದರ್ಥಮಾಡಿದರೆ ಆಗಲೂ ಈತನು "ಜಕ್ಷತ್ಕ್ರೀಡನ್ರಮಮಾಣಃ" ಇತ್ಯಾದಿ ವ್ಯಾಪಾರಯುಕ್ತನೆಂದೂ, ನಿರತಿಶಯಾನಂದಾನುಭವವನ್ನು ಹೊಂದುವನೆಂದೂ, ಶ್ರಿಯಃಪತಿಗೆ ಸತತ ಕೈಙ್ಕರ್ಯವನ್ನೆಸಗುವ ಇತಿ ಕರ್ತ್ತವ್ಯತೆಯುಂಟೆಂದೂ,ಹೇಳಿರುತ್ತದೆಯಲ್ಲಾ ಎಂದು ಆಕ್ಷೇಪಗಳು ಬಂದೀತೆಂದು ಭಾವಿಸಿ, ಆತನಿಗೆ ಈ ಆತ್ಮರತಿಯೂ ಆತ್ಮಸಂತುಷ್ಟಿಯೂ ಆಗಲೇ ಉಂಟಾಗಿರುವದರಿಂದ ತತ್ಪ್ರಾಪ್ತಿಗಾಗಿ ಏನನ್ನೂ ಮಾಡತಕ್ಕದ್ದಿಲ್ಲವೆಂದೂ "ತಸ್ಮಾತ್ತದರ್ಶನಾಯ ಕರ್ತವ್ಯಂ ನ ವಿದ್ಯತೇ" ಎಂದು ಭಾಷ್ಯವನ್ನು ಬರೆದಿರುತ್ತಾರೆ. "ತಸ್ಯ ಕಾರ್ಯಂ ನ ವಿದ್ಯತೇ" ಎಂಬಲ್ಲಿ ಕಾರ್ಯಶಬ್ದವು "ನ ತಸ್ಯಕಾರ್ಯಂ ಕರಣಂ ಚ ವಿದ್ಯತೇ" (ಶ್ವೇ. ೬೭) ಎಂಬಲ್ಲಿ ಕಾರ್ಯ ಶಬ್ದವು ಶರೀರವೆಂಬರ್ಥವನ್ನು ಬೋಧಿಸಿರುವದರಿಂದ, ಅಂತಹ ಮುಕ್ತನಿಗೆ ಇಂತಹ ಪ್ರಾಕೃತ ಶರೀರವಿಲ್ಲವೆಂದು ಅರ್ಥಮಾಡಿ, ಅರ್ಥವಾಗಿ ಪ್ರಾಕೃತ ಶರೀರದಿಂದ ಸಾಧಿಸತಕ್ಕ ಕರ್ಮಯೋಗಾದಿಗಳು ಅಂತವನಿಗೀಗ ಬೇಕಿಲ್ಲವು ಎಂದೂ ಅರ್ಥಮಾಡಬಹುದು. ಆತ್ಮದರ್ಶನಕ್ಕಾಗಿ ಮುಕ್ತನು ಮಾಡತಕ್ಕದ್ದೇನೂ ಇಲ್ಲವೆಂದು ಹೇಳಲು ಕಾರಣವೇನೆಂದರೆ."ಸ್ವತ ಏವ ಸರ್ವದಾ ದೃಷ್ಟಾತ್ಮಸ್ವರೂಪಾತ್" ಎಂದು ಹೇಳಿರುತ್ತಾರೆ. ಮೊದಲೇ ಆತ್ಮಸ್ವರೂಪಪ್ರಾಪ್ತಿಯುಂಟಾಗಿರುವಾಗ ಪುನಃ ಅದಕ್ಕೆ ಪ್ರಯತ್ನವೇತಕ್ಕೆ? ಅಥವಾ ಒಂದುವೇಳೆ ಸ್ವಲ್ಪಕಾಲವಿದ್ದು ಗತಿಸಿ ಹೋದರಾದರೂ ಪುನಃ ಪ್ರಯತ್ನವು ಬೇಕು. ಹಾಗಿಲ್ಲದೆ ಯಾವಾಗಲೂ ಅಂತಹ ಸ್ವರೂಪಪ್ರಾಪ್ತಿ ಇದ್ದರೆ ಪ್ರಯತ್ನವು ಬೇಕಿಲ್ಲವು.

ಭಾ. ದರ್ಶನತ್ವಾತ್. ಸ್ವತ ಏವಾತ್ಮವ್ಯತಿರಿಕ್ತ ಸಕಲಾಚಿದ್ವಸ್ತು ವಿಮುಖಸ್ಯಾಸ್ಯ ಸರ್ವೇಷು ಪ್ರಕೃತಿ ಪರಿಣಾಮವಿಶೇಷೇ ಷ್ವಾಕಾಶಾದಿ ಭೂತೇಷು ಸಕಾರ್ಯೇಷು ನಕಶ್ಚಿತ್ಪ್ರಯೋಜನತಯಾ ವ್ಯಪಾಶ್ರಯಃ ; ಯತ ಸ್ತದ್ವಿಮುಖೀ ಕರಣಾಯ ಸಾಧನಾರಂಭಃ ; ಸಹಿಮುಕ್ತ ಏವ. ಯಸ್ಮಾದಸಾಧನಾಯತ್ತಾತ್ಮದರ್ಶನಸ್ಯೈವ ಸಾಧನಾಪ್ರವೃತ್ತಿಃ, ಯಸ್ಮಾಚ್ಚ ಸಾಧನೇ ಪ್ರವೃತ್ತಸ್ಯಾಪಿ ಸುಶಕತ್ವಾದ ಪ್ರಮಾದತ್ವಾದಂತರ್ಗತಾತ್ಮಯಾ

ಅದಕ್ಕಾಗಿಯೇ ಸರ್ವದಾ ಎಂಬ ಪ್ರಯೋಗವು. ಮೂಲದಲ್ಲಿ ಸ್ವತ ಏವ ಸರ್ವದಾ ಎಂದ ಹೇಳಿಲ್ಲವಲ್ಲಾ, ಹಾಗೆ ವ್ಯಾಖ್ಯಾನಕ್ಕೆ ಅವಕಾಶ ಎಲ್ಲಿಯದು ? ಎಂದರೆ, ಆತ್ಮರತಿರೇವ, ಆತ್ಮನ್ಯೇವ ಸಂತುಷ್ಟಃ ಎಂಬಲ್ಲಿನ ಅವಧಾರಣೆಗಳು ಈ ಅರ್ಥಗಳನ್ನು ಸೂಚಿಸುತ್ತವೆ. ಮುಂದೆ "ನ ಚಾಸ್ಯ ಸರ್ವಭೂತೇಷು" ಎಂಬ ಉತ್ತರಾರ್ಧಕ್ಕೆ ವ್ಯಾಖ್ಯಾನವನ್ನು ಅಪ್ಪಣೆ ಕೊಡಿಸುತ್ತಾರೆ:- ಸ್ವತ ಏವ - ತಾನಾಗಿಯೇ, ಆತ್ಮವ್ಯತಿರಿಕ್ತ ಸಕಲಾಚಿದ್ವಸ್ತುವಿಮುಖಸ್ಯ - ಆತ್ಮಕ್ಕಿಂತ ಬೇರೆಯಾದ ಸಮಸ್ತ ಅಚಿದ್ವಸ್ತುಗಳಲ್ಲೂ ಆಸಕ್ತಿಯಿಲ್ಲದ, ಅಸ್ಯ - ಈ ಮುಕ್ತನಿಗೆ, ಸರ್ವೇಷು ಪ್ರಕೃತಿ ಪರಿಣಾಮ ವಿಶೇಷೇಷು - ಸಮಸ್ತ ಪ್ರಕೃತಿಯ ಪರಿಣಾಮ ರೂಪಗಳಾದ, ಸಕಾರ್ಯೇಷು, ಸೃಷ್ಟಿಕಾರ್ಯರೂಪಗಳಿಂದ ಕೂಡಿದ, ಆಕಾಶಾದಿ ಭೂತಗಳಲ್ಲಿ, ನಕಶ್ಚಿತ್ಪ್ರಯೋಜನತಯಾ ವ್ಯಪಾಶ್ರಯಃ - ಯಾವ ಪ್ರಯೋಜನವೂ ಉಂಟೆಂದು ಸ್ವೀಕರಿಸೋಣವಿಲ್ಲವು. ಅವುಗಳೆಲ್ಲಾ ತುಂಬಾ ತುಚ್ಛವೆಂಬಭಾವದಿಂದ ಕಣ್ಣೆತ್ತಿಕೂಡ ನೋಡುವದಿಲ್ಲವೆಂಬ ಭಾವವು, ಏಕೆಂದರೆ :—ಯತಃ - ಯಾವಕಾರಣದಿಂದ ಎಂದರೆ ಸಾಧನಾರಂಭವು, ತದ್ವಿಮುಖೀ ಕರಣಾಯ – ಪ್ರಕೃತಿ ಪರಿಣಾಮರೂಪವಾದ ಭೂತಗಳನ್ನು ಕಳೆದುಕೊಳ್ಳುವದಕ್ಕೋಸ್ಕರವಾಗಿ ಮಾತ್ರವೋ, ಆ ಕಾರಣದಿಂದತುಚ್ಛವಾದ ಪ್ರಕೃತಿಸಂಬಂಧವು ಆಗಲೇ ಕಳೆದು ಹೋಗಿರುವದರಿಂದ, ಆಕಾಶಾದಿ ಭೂತಗಳಿಂದ ತನಗೇನೂ ಪ್ರಯೋಜನವೇ ಇಲ್ಲವೆಂದು ಭಾವಿಸುವನೆಂಬ ತಾತ್ಪರ್ಯವು. ಅದಕ್ಕೆ ಕಾರಣವೇನೆಂದರೆ ಹೇಳುತ್ತಾರೆ, ಸಹಿ - ಆತನಾದರೋ. ಮುಕ್ತ ಏವ - ಮುಕ್ತನೇ ಯಷ್ಟೇ ಈ ಎರಡು ಶ್ಲೋಕಗಳಲ್ಲೂ ಮುಕ್ತನ ವಿಷಯವೆಂದು ಕಂಠೋಕ್ತನಾಗಿ ಹೇಳದಿದ್ದರೂ ಈ ಜೀವಾತ್ಮನಿಗೆ ದಿವ್ಯಾತ್ಮಸ್ವರೂಪದಲ್ಲೇ ರತಿಯುಂಟಾಗಬೇಕಾದರೆ ಮುಕ್ತಾವಸ್ಥೆಯೇ ಆಗಿರಬೇಕೆಂಬ ಭಾವವು ಇತರರು ಹೇಳುವಹಾಗೆ ಯತ್ಯವಸ್ಥೆಯಲ್ಲವು ಏಕೆಂದರೆ ಸನ್ಯಾಸಾವಸ್ಥೆಯಲ್ಲಿತಾನೆ ಸರ್ವ ಕರ್ಮ ನಿವೃತ್ತಿಯು ಎಲ್ಲಿಯದು ? ಆಗಲೂ ಕ್ಷುತ್ಪಿಪಾಸಗಳಿಂದ ಪೀಡಿತನಾಗಿ ಅನ್ನಪಾನ ನಿದ್ರಾದಿಗಳಿಗಾಗಿ ಪ್ರವೃತ್ತಿಯು ಉಂಟಷ್ಟೇ. ಮತ್ತು ತನ್ನ ಯತ್ಯಾಶ್ರಮ ಧರ್ಮಗಳನ್ನೂ ಮಾಡಿಯೇತೀರಬೇಕು. ಆದುದರಿಂದ ಆ ಅಭಿಪ್ರಾಯವು ಕೂಡುವದಿಲ್ಲವು. ಆಗಲಿ ಮಾನವಃ ಎಂದು ಇರುವಾಗ, ಮುಕ್ತನೆಂಬರ್ಥವು ಹೇಗೆ ಎಂದರೆ, ಮಾನವಜನ್ಮದಲ್ಲೇ ಸಾಧಾರಣವಾಗಿ ಮುಕ್ತಿಗೆ ಸಾಧನವು ಉಂಟು ಎಂದು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವು. ಮುಂದಿನ ಮೂರನೆಯ ಶ್ಲೋಕಕ್ಕೆ ಭಾಷ್ಯವನ್ನು ಬರೆಯುತ್ತಾರೆ ;—ಹಿಂದಿನ ಎರಡು ಶ್ಲೋಕಗಳಿಂದಲೂ ಯಾವಾಗಲಾದರೂ ಕರ್ಮಯೋಗವನ್ನೂ, ಅದರಲ್ಲಿ ಅಂತರ್ಗತವಾಗಿರುವ ವರ್ಣಾಶ್ರಮ ಧರ್ಮಗಳನ್ನೂ ಬಿಡಲು ಅನುಕೂಲವೇ ಎಂದು ಯೋಚಿಸುತ್ತಿರುವ ಅರ್ಜುನನಿಗೆ ಸಾಧನರೂಪಕರ್ಮತ್ಯಾಗ ಯಾವಾಗ ಎಂದರೆ ಅದರಿಂದ ಸಿದ್ಧಿಯುಂಟಾದನಂತರ,ಅದು ಮುಕ್ತದಶೆಯಲ್ಲೇ ಯಾದುದರಿಂದ ಆಗೀಗ ಸರ್ವದಾ ಆತ್ಮಸಾಕ್ಷಾತ್ಕಾರ ದಶೆಯಾದುದರಿಂದ ಸಾಧನವು ಬೇಕಿಲ್ಲವೆಂದು ಹೇಳಿ, ಈಗ ಬದ್ಧ ದಶೆಯಲ್ಲಿ ತ್ಯಾಗಮಾಡಲು ಸಾಧ್ಯವೇ ಇಲ್ಲ

(೧) ಭಾಂ.

ಭಾ. ಥಾತ್ಮ್ಯಾನುಸಂಧಾನತ್ವಾಚ್ಚ, ಜ್ಞಾನಯೋಗಿನೋಽಪಿ ಮಾತ್ರಯಾ ಕರ್ಮಾನುವೃತ್ತ್ಯಪೇಕ್ಷತ್ವಾಚ್ಚ, ಕರ್ಮಯೋಗ ಏವಾತ್ಮದರ್ಶನಾ ನಿರ್ವೃತ್ತೌ ಶ್ರೇಯಾನ್. ತಸ್ಮಾದಸಙ್ಗಪೂರ್ವಕಂ ಕಾರ್ಯಮಿತ್ಯೇವ ಸತತಂ ಯಾವದಾತ್ಮಪ್ರಾಪ್ತಿ ಕರ್ಮೈವ ಸಮಾಚರ. "ಅಸಕ್ತಃ" "ಕಾರ್ಯಂ" ಇತಿ ವಕ್ಷ್ಯಮಾಣಾ ಕರ್ತೃತ್ವಾನುಸಂಧಾನಪೂರ್ವಕಂ ಚ ಕರ್ಮಾಚರನ್ ಪುರುಷಃ ಕರ್ಮಯೋಗೇನೈವ ಪರಮಾಪ್ನೋತಿ-ಆತ್ಮಾನಂ ಪ್ರಾಪ್ನೋತೀತ್ಯರ್ಥಃ ||೧೯||

---

ವೆಂದು ಸ್ಥಿರೀಕರಿಸಿ, ತಸ್ಮಾತ್ ಎಂದಾರಂಭಿಸಿ, ಹೇಳುತ್ತಾರೆ. ಆದುದರಿಂದ ಕರ್ಮಜ್ಯಾಯಾನ್ ಅಕರ್ಮಣಃ ಎಂದು ಸ್ಥಾಪಿಸುವ ಪ್ರಕರಣವೆಂದು ಭಾವಿಸತಕ್ಕದ್ದು. ಶ್ಲೋಕಾದಿಯಲ್ಲಿ ತಸ್ಮಾತ್ ಎಂದು ಇರುವವರಿಂದ, ಯಸ್ಮಾತ್ ಎಂಬುದನ್ನು ಅದು ಅಪೇಕ್ಷಿಸುವದರಿಂದ, ಯಸ್ಮಾತ್ ಎಂದು ಆರಂಭಿಸಿ ವ್ಯಾಖ್ಯಾನಮಾಡುತ್ತಾರೆ:—ಯಸ್ಮಾತ್ - ಯಾವ ಕಾರಣದಿಂದ, ಅಸಾಧನಾಯತ್ತಾತ್ಮದರ್ಶನಸ್ಯೈವ - ಯಾವಸಾಧನದಪೇಕ್ಷೆಯೂ ಇಲ್ಲದೆ ಆತ್ಮದರ್ಶನವುಂಟಾಗಿರುವ ಮುಕ್ತನಿಗೇನೆ, ಸಾಧನಾಪ್ರವೃತ್ತಿಃ - ಸಾಧನೆಯಲ್ಲಿ ಪ್ರವೃತ್ತಿ ಇಲ್ಲವೋ (೧೭. ೧೮ನೆಯ ಶ್ಲೋಕಗಳು) ಯಸ್ಮಾಚ್ಚ - ಯಾವಕಾರಣದಿಂದಲೂ ಕೂಡ, ಸಾಧನೇ ಪ್ರವೃತ್ತಸ್ಯಾಪಿ - ಸಾಧನದಲ್ಲಿ ಪ್ರವೃತ್ತಿಯುಳ್ಳವನಾಗಿದ್ದವನಿಗೂ ಕೂಡ, ಸುಕರತ್ವಾತ್ - ಸುಲಭವಾಗಿರುವದರಿಂದಲೂ, ಅಪ್ರಮಾದತ್ವಾತ್ - ಪ್ರಮಾದವೇನೂ ಇಲ್ಲದೆ ಇರುವದರಿಂದಲೂ, (ಶ್ಲೋ. ೫. ೭.) ಅಂತರ್ಗತಾತ್ಮ ಯಾಥಾತ್ಮ್ಯಾನುಸಂಧಾನಾಚ್ಚ-ಒಳಗೊಂಡಿರುವ ಆತ್ಮಸ್ವರೂಪದ ಯಾಥಾತ್ಮ್ಯದ ಅನುಸಂಧಾನವಿರುವದರಿಂದಲೂ ಕೂಡ, (ಈ ಶ್ಲೋಕದಲ್ಲೇ) ಜ್ಞಾನಯೋಗಿನೋಽಪಿ - ಜ್ಞಾನಯೋಗಿಗೂ ಕೂಡ, ಮಾತ್ರಯಾ - ಸ್ವಲ್ಪಮಟ್ಟಿಗೆ, ಕರ್ಮಾನುವೃತ್ತ್ಯಪೇಕ್ಷತ್ವಾಚ್ಚ - ಕರ್ಮಯೋಗವನ್ನನುಸರಿಸಿ ನಡೆಯುವದರಾವಶ್ಯಕತೆ ಯಿರುವದರಿಂದಲೂ ಕೂಡ, ಕರ್ಮಯೋಗವೇ, ಆತ್ಮದರ್ಶನ ನಿರ್ವೃತ್ತೌ - ಆತ್ಮದರ್ಶನ ಉಂಟಾಗುವದರಲ್ಲಿ, ಶ್ರೇಯಾನ್ - ಶ್ರೇಯಸ್ಕರವಾಗಿ ಶ್ರೇಷ್ಠವಾದುದು. ಹೀಗೆ ಹೇತುಗಳನ್ನುಪಪಾದಿಸುವದರಲ್ಲಿ ಹಿಂದೆ ಉಪದೇಶಿಸಿದ ಕಾರಣಗಳನ್ನೆಲ್ಲಾ ಒಟ್ಟುಕೂಡಿಸಿ ಹೇಳಿರುತ್ತಾರೆ:—ಈ ಮೂರು ಹೇತುಗಳಲ್ಲಿ ಮೊದಲನೆಯದು ಹಿಂದಿನ ಶ್ಲೋಕಗಳಲ್ಲಡಗಿರುವದು; ಮಿಕ್ಕ ಎರಡೂ ಹಿಂದೆ ಉಪಪಾದಿಸಿದುದು; ಸಾಧನವಿಲ್ಲದೆ ಆತ್ಮದರ್ಶನ ಉಂಟಾಗಿರುವ ಮುಕ್ತನಿಗೆ ವರ್ಣಾಶ್ರಮ ಧರ್ಮಾಚರಣೆಯು ಆವಶ್ಯಕವಿಲ್ಲವು; ಆದರೆ ಆತ್ಮದರ್ಶನವನ್ನಪೇಕ್ಷಿಸುವನಿಗೆ ವರ್ಣಾಶ್ರಮ ಧರ್ಮಾಚರಣೆಯು ಆವಶ್ಯಕವು, ಏಕೆಂದರೆ ಅದು ಸುಕರವೆಂದೂ, ಪ್ರಮಾದವಿಲ್ಲದುದೆಂದೂ, ಆತ್ಮಯಾಥಾತ್ಮ್ಯಜ್ಞಾನಯುಕ್ತವೆಂದೂ ಹೇಳಿ, ಆ ಕಾರಣದಿಂದ ಕರ್ಮಯೋಗವೇ ಶ್ರೇಷ್ಠವೆಂದು ಹಿಂದೆಯೇ ಹೇಳಲ್ಪಟ್ಟಿತು. ತಸ್ಮಾತ್ - ಆ ಕಾರಣದಿಂದ, ಅಸಙ್ಗಪೂರ್ವಕಂ - ಸಙ್ಗವನ್ನು ಅವುಗಳಲ್ಲಿಡದಹಾಗೆ, ಕಾರ್ಯಮಿತ್ಯೇವ - ಶಾಸ್ತ್ರವಿಧಿ ಇರುವದರಿಂದ ನಮಗೆ ಇತಿಕರ್ತವ್ಯತೆಯೆಂದು, ಸತತಂ ಎಂದರೆ ಯಾವದಾತ್ಮಪ್ರಾಪ್ತಿ - ಆತ್ಮಪ್ರಾಪ್ತಿಯುಂಟಾಗುವವರೆಗೂ, ಕರ್ಮೈವ ಸಮಾಚರ-ಕರ್ಮಯೋಗವನ್ನೇ ಅನುಷ್ಠಿಸತಕ್ಕದ್ದು, "ಅಸಕ್ತಃ" ಎಂದೂ, "ಕಾರ್ಯಂ ಇತಿ" ಇತಿ ಕರ್ತವ್ಯವೂ ಎಂದೂ ವಕ್ಷ್ಯಮಾಣಾಂ ಕರ್ತೃತ್ವಾನುಸಂಧಾನಪೂರ್ವಕಂ ಚ–ಮುಂದೆ ೧೮-೧೯ರಲ್ಲಿ ಹೇಳಲ್ಪಡುವ ತನಗೆ ಕರ್ತೃತ್ವವಿಲ್ಲ, ಸರ್ವೇಶ್ವರನೇ ನಡೆಸುವನು ಎಂಬ ಅನುಸಂಧಾನ ಪೂರ್ವಕವಾಗಿ, ಕರ್ಮಾಚರನ್-ಕರ್ಮವನ್ನನುಷ್ಠಿಸುವ, ಪುರುಷನು, ಕರ್ಮಯೋಗೇನೈವ - ಕರ್ಮಯೋಗದಿಂದಲೇನೇ ಜ್ಞಾನಯೋಗದ ಸಂಬಂಧವಿಲ್ಲದೇನೇ; ಪರಮಾಪ್ನೋತಿ ಎಂದರೆ ಆತ್ಮಾನಂ

**ಮೂ. ಕರ್ಮಣೈವ ಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ ೧೯.**

**ಪ್ರಾಪ್ನೋತೀತ್ಯರ್ಥಃ**-ಆತ್ಮ ಸಾಕ್ಷಾತ್ಕಾರವನ್ನು ಹೊಂದುವನೆಂಬ ತಾತ್ಪರ್ಯವು. ಇಲ್ಲಿ ಕರ್ಮ ಯೋಗಾಚರಣೆಯಿಂದ ಉಂಟಾಗುವ ಶ್ರೇಯಸ್ಸು ಆತ್ಮಸಾಕ್ಷಾತ್ಕಾರವಾದುದರಿಂದ, ಪರಮಾ ಪ್ನೋತಿ ಎಂದರೆ ಆತ್ಮಾನಂ ಪ್ರಾಪ್ನೋತಿ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ದೇಹಾತಿ ರಿಕ್ತ ಜೀವನು ಪರಮ ಶ್ರೇಷ್ಠನು ವಿಲಕ್ಷಣನು, ಆದುದರಿಂದಲೂ ಪರಮಾಪ್ನೋತಿ ಎಂದರೆ ಆತ್ಮಾನಂ ಪ್ರಾಪ್ನೋತಿ ಎಂಬ ವ್ಯಾಖ್ಯಾನವು. ಆದುದರಿಂದ ಕರ್ಮಯೋಗದಿಂದುಂಟಾಗುವ ಫಲವೇನು ಎಂದರೆ ಆತ್ಮಸಾಕ್ಷಾತ್ಕಾರವೆಂದು ಇದರಿಂದ ನಿರ್ಣಯಿಸಲ್ಪಟ್ಟಿತು. ಶ್ರೀ ಭಾಷ್ಯ ಕಾರರವರು ಈ ಮೂರು ಶ್ಲೋಕಗಳಿಂದ ಮುಖ್ಯವಾಗಿ ಉಪದೇಶಿಸಿದುದು ಏನೆಂದರೆ :— ಮುಕ್ತಿಯನ್ನು ಹೊಂದಿದವನಿಗೆ ಕರ್ಮವಶ್ಯತೆಯೂ ಶಾಸ್ತ್ರವಶ್ಯತೆಯೂ ಇಲ್ಲವೇವಿನಾ ಹಾಗೆ ಮುಕ್ತಿ ಹೊಂದದೆ ಇಹಲೋಕದಲ್ಲಿರುವವರೆಲ್ಲರಿಗೂ ಕರ್ಮವಶ್ಯತೆ ಶಾಸ್ತ್ರವಶ್ಯತೆಗಳಿರುವದರಿಂದ ಇತಿ ಕರ್ತವ್ಯತಾ ರೂಪಗಳಾದ ಆಜ್ಞಾ ಕೈಂಕರ್ಯಗಳಾದ ವರ್ಣಾಶ್ರಮೋಚಿತ ಕರ್ಮಗ ಳನ್ನು ಅನುಷ್ಠಿಸಲೇಬೇಕು ಎಂಬಭಿಪ್ರಾಯವು. ಹೀಗೆ ಕರ್ಮಯೋಗವು ಎಲ್ಲರಿಗೂ ಆವಶ್ಯಕ ವಾದುದರಿಂದ ಅದರಿಂದಲೇ ಉತ್ತರೋತ್ತರ ಪರಮ ಶ್ರೇಯಸ್ಸನ್ನುಂಟುಮಾಡುವ ಆತ್ಮಸಾಕ್ಷಾ ತ್ಕಾರವು ಜ್ಞಾನಯೋಗದಪೇಕ್ಷೆ ಯಿಲ್ಲದೇನೇ ಪ್ರಾಪ್ತವಾಗುವದರಿಂದ ಕರ್ಮಯೋಗವೇ ಶ್ರೇಷ್ಠ ವೆಂದೂ ಹೇಳಲ್ಪಟ್ಟಿತು. ಅದು ಹೇಗೆ ಶ್ರೇಷ್ಠವೆಂದು ಹಿಂದೆ ಹೇಳಿದುದನ್ನೇ ಸ್ಥಿರೀಕರ ಣಾರ್ಥವಾಗಿ ಪುನಃ ಸುಕರವೆಂದೂ, ಅಪ್ರಮಾದವೆಂದೂ, ಆತ್ಮಯಾಥಾತ್ಮ್ಯಜ್ಞಾನವನ್ನು ಒಳಗೊಂಡಿರುವದೆಂದೂ ಕಾರಣಗಳು ಹೇಳಲ್ಪಟ್ಟವು. ಆದುದರಿಂದ ಯಾವುದಕ್ಕೆ ಜ್ಯಾಯ ಸ್ತ್ವವೆಂಬ ಅರ್ಜುನ ಪ್ರಶ್ನೆಗೆ ಅನೇಕ ಕಾರಣಗಳಿಂದ ಕರ್ಮಯೋಗಕ್ಕೇ ಜ್ಯಾಯಸ್ತ್ವ ವೆಂದು ಸ್ಥಾಪಿಸಿರುತ್ತಾರೆ; ಜ್ಞಾನವೇ ಸರ್ವೋತ್ಕೃಷ್ಟವಾಗಿರುವಾಗ ಇಲ್ಲಿ ಜ್ಯಾಯಸ್ತ್ವವೆಂದ ರೇನು ಎಂದರೆ ನಿನಗೆ ಪರಮ ಹಿತರೂಪದಲ್ಲಿ ಶ್ರೇಯಸ್ಕರವಾದುದು ಎಂಬ ಭಾವವು.

**ಅವತಾರಿಕೆಯು :—** ಅರ್ಜುನನಿಗೆ ಈಗ ಉಪದೇಶವು ಏನಾಯಿತು ಎಂದರೆ ಮೋಕ್ಷಾ ರ್ಥಿಯಾದ ನೀನು ಒಂದುವೇಳೆ ಜ್ಞಾನಯೋಗಕ್ಕೂ ಅರ್ಹತೆಯಿದ್ದರೂಕೂಡ, ಕರ್ಮಯೋಗ ವನ್ನು ತ್ಯಜಿಸಿ ಕೇವಲ ಜ್ಞಾನಯೋಗವನ್ನೇ ಅವಲಂಬಿಸುವೆನು ಎಂದರೆ ಸರಿಯಲ್ಲವು; ನೀನು ಕರ್ಮಯೋಗವನ್ನು ತ್ಯಜಿಸಲು ಮಾರ್ಗವಿಲ್ಲವು, ಇದರಿಂದಲೇ ಆತ್ಮಾವಲೋಕನವು ಜ್ಞಾನಯೋಗದ ಆವಶ್ಯಕತೆ ಯಿಲ್ಲದೆ ಸಿದ್ಧಿಸುತ್ತದೆ ಎಂಬದಾಗಿ ಉಪದೇಶಿಸಿದರು. ಹಾಗಾದರೆ ಕರ್ಮಯೋಗದಿಂದಲೇ ಆತ್ಮಾವಲೋಕನ ಉಂಟಾಗಿ ಉಪಾಸನ ನಿಷ್ಪತ್ತಿಯೊಂದಿಗೆ ಮೋಕ್ಷ ವನ್ನು ಹೊಂದಿದವರುಂಟೋ ಎಂದು ಅರ್ಜುನನು ಪ್ರಶ್ನಿಸಬಹುದೆಂದು ಭಾವಿಸಿ ತಾವೇ ಅಂತಹ ನಿದರ್ಶನಗಳುಂಟು ಎಂದು ಹೇಳುತ್ತಾರೆ. ಶಾಸ್ತ್ರೋಪದೇಶವು ಸತ್ಸಂಪ್ರದಾಯವನ್ನು ಹೊಂದಿರ ಬೇಕು. ಹಾಗೆ ಶಿಷ್ಟಾಚಾರವುಂಟು ಎಂದು ಬೋಧಿಸುತ್ತಾರೆ :—

**ಅರ್ಥ :—** ಜನಕಾದಯಃ - ಜನಕರೇ ಮೊದಲಾದ ರಾಜರ್ಷಿಗಳು, ಇಲ್ಲಿ ಆದಿ ಶಬ್ದದಿಂದ ಇಂದ್ರಿಯ ನಿಗ್ರಹಮೂಲಕ ಸತ್ವೋದ್ರೇಕ ಉಂಟಾಗಿ ಆತ್ಮಯಾಥಾತ್ಮ್ಯಜ್ಞಾನಹೊಂದಿದ ಭಗೀ ರಥ, ಅಶ್ವಪತಿ ಮೊದಲಾದವರು ಸೂಚಿಸಲ್ಪಟ್ಟರು, ಕರ್ಮಣೈವ ಹಿ–ಕರ್ಮಯೋಗ ಮೂಲಕ ವಾಗಿಯೇ, ಇಲ್ಲಿ ಹಿ ಶಬ್ದವಿರುವದರಿಂದ, ಇಂದ್ರಿಯ ನಿಗ್ರಹಮೂಲಕ ಜ್ಞಾನನಿಧಿಗಳಾಗಿದ್ದ ರೆಂಬುವದೂ ಸೂಚಿತವು, ಆದರೂ ಜ್ಞಾನಯೋಗಾಪೇಕ್ಷೆಯಿಲ್ಲದೆ ಕರ್ಮಯೋಗಮಾತ್ರ ದಿಂದಲೇ, ಸಂಸಿದ್ಧಿಂ - ಆ ಕರ್ಮಗಳ ಫಲರೂಪವಾದ ಆತ್ಮ ಸಾಕ್ಷಾತ್ಕಾರವನ್ನು, ಆಸ್ಥಿತಾಃ –

ಭಾ. ಯತೋ ಜ್ಞಾನಯೋಗಾಧಿಕಾರಿಣೋಽಪಿ ಕರ್ಮಯೋಗ ಏವಾತ್ಮದರ್ಶನೇ ಶ್ರೇಯಾನ್, ಅತ ಏವ ಹಿ ಜನಕಾದಯೋ ರಾಜರ್ಷಯೋ ಜ್ಞಾನಿನಾಮಗ್ರೇಸರಾಃ ಕರ್ಮಯೋಗೇನೈವ ಸಂಸಿದ್ಧಿ ಮಾಸ್ಥಿತಾಃ-ಆತ್ಮಾನಂ ಪ್ರಾಪ್ತವಂತಃ. ||೧೯|| ||

ಹೊಂದಿದವರಾಗಿದ್ದಾರೆ. ಹಿ ಶಬ್ದದಿಂದ ಇನ್ನೊಂದು ಅರ್ಥವೂ ತೋರಿಬರುತ್ತದೆ. ಹೇಗೆ ಜ್ಞಾನಯೋಗಾರ್ಹತೆ ಇದ್ದರೂ ಬರೀ ಕರ್ಮಯೋಗದಿಂದಲೇ ಆತ್ಮಸಾಕ್ಷಾತ್ಕಾರವನ್ನು ಹೊಂದಿದರು ಎಂಬಲ್ಲಿ ಈಷದಪಿ ಸಂಶಯವು ಬೇಕಿಲ್ಲವು ಎಂದೂ ಹೇಳಿದಂತಾಯಿತು.

**ಭಾಷ್ಯಾರ್ಥವು :—ಯತಃ** - ಯಾವ ಕಾರಣದಿಂದ, **ಜ್ಞಾನಯೋಗಾಧಿಕಾರಿಣೋಽಪಿ**- ಜ್ಞಾನಯೋಗಾಧಿಕಾರಿಗಳಿಗೂ ಕೂಡ, **ಕರ್ಮಯೋಗ ಏವ**-ಕರ್ಮಯೋಗವೇ, **ಆತ್ಮದರ್ಶನೇ**-ಆತ್ಮ ಸಾಕ್ಷಾತ್ಕಾರವನ್ನು ಹೊಂದುವವರಲ್ಲಿ, **ಶ್ರೇಯಾನ್** - ಶ್ರೇಷ್ಠವಾದುದೋ ಎಂದರೆ ಪರಮ ಹಿತವಾದುದೋ, **ಅತ ಏವಹಿ** - ಆ ಕಾರಣದಿಂದಲೇ ಯಷ್ಟೇ, ಜನಕರೇ ಮೊದಲಾದವರಾದ, **ರಾಜರ್ಷಯಃ** - ರಾಜರುಗಳಾಗಿದ್ದರೂ, ಋಷಿಗಳಹಾಗೆ ಇಂದ್ರಿಯ ನಿಗ್ರಹವನ್ನು ಮಾಡಿ, ಸತ್ತ್ವವನ್ನು ವೃದ್ಧಿಪಡಿಸಿಕೊಂಡವರು, ರಾಜರುಗಳಾಗಿರುವ ಋಷಿಗಳು ಎಂಬರ್ಥವು, **ಜ್ಞಾನಿನಾಂ ಅಗ್ರೇಸರಾಃ** - ಜ್ಞಾನಿಗಳಲ್ಲಿ ಮುಖಂಡರೆನಿಸಿದವರಾಗಿ, ಎಂದರೆ ಶಾಸ್ತ್ರಜನ್ಯಜ್ಞಾನ ವಿವೇಕ ಜನ್ಯಜ್ಞಾನಗಳಿಂದ ಶ್ರೇಷ್ಠರೆನಿಸಿದವರು ಎಂಬ ಭಾವವು ; ಬರೀ ಐಹಿಕ ವ್ಯಾಪಾರಗಳಾದ ರಾಜ್ಯಾಡಳಿತ ಮೊದಲಾದವುಗಳಲ್ಲೇ ಮಗ್ನರಾದವರಲ್ಲವು. ಶಾಸ್ತ್ರಾದಿ ಜ್ಞಾನ ನೈಪುಣ್ಯವು ಇತ್ತೆಂಬುದೂ ಹೇಳಲ್ಪಟ್ಟಿತು; ಏಕೆಂದರೆ **"ಮಿಥಿಲಾಯಾಂ ಪ್ರದೀಪ್ತಾಯಾಂ ನಮೇ ಕಿಂಚನದಹ್ಯತೇ"** (ಶಾನ್ತಿ ಪರ್ವ) ಎಂದು ಹೇಳಿ ತಮ್ಮ ಸಮಚಿತ್ತತೆಯನ್ನೂ ಪರಮಾತ್ಮ ಪಾರವಶ್ಯತೆಯನ್ನೂ ಪ್ರಕಟಿಸಿದ ಜ್ಞಾನಾಗ್ರಗಣ್ಯರೆಂಬ ಭಾವವು; ರಾಜರಾದುದರಿಂದ ವಿಸ್ತೀರ್ಣವಾದ ಅಗಾಧ ಮನಸ್ಸುಳ್ಳವರು; ಅವರು ಋಷಿಗಳೂ ಸಹ ಆಗಿದ್ದರೆಂದು ಹೇಳಿದುದರಿಂದ ಅತೀಂದ್ರಿಯ ವಿಷಯವನ್ನೂ ಗ್ರಹಿಸುವ ಶಕ್ತಿಯುಳ್ಳವರೆಂದೂ, ಆತ್ಮಸ್ವರೂಪವನ್ನು ತಿಳಿದವರೆಂದೂ ನಿಗೃಹೀತೇಂದ್ರಿಯಗ್ರಾಮರೆಂದೂ ಹೇಳಿದಂತೆ ಆಯಿತು. ಅದನ್ನೇ **ಜ್ಞಾನಿನಾಂ ಅಗ್ರೇಸರಾಃ** ಎಂದು ಹೇಳಿದರು ; **ಕರ್ಮಯೋಗೇನೈವ** - ಕರ್ಮಯೋಗದಿಂದಲೇ, **ಸಂಸಿದ್ಧಿಮಾಸ್ಥಿತಾಃ** ಎಂದರೆ **ಆತ್ಮಾನಂ ಪ್ರಾಪ್ತವಂತಃ** - ಆ ಕರ್ಮಯೋಗದ ಸಿದ್ಧಿ ಎಂದರೆ ಫಲರೂಪವಾದ ಆತ್ಮ ಸಾಕ್ಷಾತ್ಕಾರವನ್ನು ಹೊಂದಿದವರಾದರು. ಮೂಲದಲ್ಲಿ **ಜನಕಾದಯಃ** ಎಂದು ಇಷ್ಟು ಮಾತ್ರವಿದ್ದರೆ **ರಾಜರ್ಷಿಗಳೆಂದೂ ಜ್ಞಾನಿನಾಂ ಅಗ್ರೇಸರಾಃ** ಎಂದು ಹೇಗೆ ವ್ಯಾಖ್ಯಾನಮಾಡಿದರು ಎಂದರೆ, ಅವರುಗಳ ಚರಿತ್ರೆಯಿಂದಲೇ ಸಿದ್ಧವಾದುದೂ ಅಲ್ಲದೆ, ಈಗ ಉಪಪಾದಿಸಿ ಹೇಳುವ ಅಭಿಪ್ರಾಯದಿಂದಲೂ ದ್ಯೋತಿತವೆಂದು ತಿಳಿಸುವುದಕ್ಕಾಗಿ ಹಾಗೆ ಅರ್ಥಮಾಡಿರುತ್ತಾರೆ. **ಕರ್ಮಣೈವ ಹಿ** ಎಂಬ ಮೂಲದ ಪ್ರಯೋಗದಿಂದಲೇ ಅಷ್ಟು ಅಭಿಪ್ರಾಯವೂ ಸೂಚಿತವು. ಹೇಗೆಂದರೆ:—ಹಿಂದೆ ಹೇಳಿದುದು, ಜ್ಞಾನಯೋಗಿಗೂ ಕರ್ಮಯೋಗವೂ ಆವಶ್ಯಕವೆಂದು ಹೇಳಿ, ಜನಕಾದಿಗಳನ್ನು ನಿರ್ದೇಶಿಸಿ ಅವರು ಕರ್ಮಯೋಗದಿಂದಲೇನೇ ಆತ್ಮಸಾಕ್ಷಾತ್ಕಾರವನ್ನು ಹೊಂದಿದರೆಂದು ಹೇಳಿದರೆ,ಅವರು ಜ್ಞಾನಯೋಗಾಧಿಕಾರಿಗಳಾಗಿದ್ದರೂ ಕರ್ಮಯೋಗವನ್ನೇ ಅವಲಂಬಿಸಿದರೆಂಬ ಭಾವವು ಸುವ್ಯಕ್ತವು. ಏವ ಮಾತ್ರವೇ ಅಲ್ಲದೆ ಹಿ ಶಬ್ದವೂ ಇರುವುದರಿಂದ ಈ ಅಭಿಪ್ರಾಯವು ಚನ್ನಾಗಿ ತೋರಿಬರುತ್ತದೆಂಬ ಭಾವವು. ಹೀಗೆ ಕರ್ಮಯೋಗದಿಂದಲೇ ಈ ರಾಜರ್ಷಿಗಳು ಸಿದ್ಧಿಯನ್ನು ಹೊಂದಿದರೆಂದು ಹೇಳಿರುವುದರಿಂದ ಬರೀ ಕರ್ಮಯೋಗವೇ ಫಲಸಿದ್ಧಿಗಕ್ಕೆ ಸಾಧಕವೆಂಬಂಶವನ್ನೂ ಜ್ಞಾನಯೋಗದ ನೈರಪೇಕ್ಷ್ಯವನ್ನೂ ಉಪದೇಶಿಸಿದಂತಾಯಿತು.

**ಭಾ- ಅ. ಏವಂ ಪ್ರಥಮಂ ಮುಮುಕ್ಷೋ ಜ್ಞಾನಯೋಗಾನರ್ಹತಯಾ ಕರ್ಮಯೋಗಾಧಿ**

ಇಲ್ಲಿ **ಯತಃ ಅತಃ** ಎಂಬ ವ್ಯಾಖ್ಯಾನದಿಂದ ಹಿಂದಿನ ಶ್ಲೋಕಗಳಿಗೂ ಈ ಶ್ಲೋಕಕ್ಕೂ ಸಙ್ಗತಿಯನ್ನು ಉಪಪಾದಿಸಿರುತ್ತಾರೆ. ಕೆಲವರು ಈ ಶ್ಲೋಕದಲ್ಲಿ ಸಂಸಿದ್ಧಿಂ ಎಂದಿರುವದರಿಂದ ಕರ್ಮಯೋಗವೇ ಸಾಕ್ಷಾತ್ ಮೋಕ್ಷಕ್ಕೆ ಉಪಾಯವೆಂದು ಹೇಳಲ್ಪಟ್ಟಿತೆಂದು ಭಾವಿಸುವರು. ಇದು ಸರಿಯಾದ ಅರ್ಥವಲ್ಲವೆಂದು ವಿಸ್ತರವಾಗಿ ಹಿಂದೆಯೇ ಎರಡನೆಯ ಅಧ್ಯಾಯಾಂತದಲ್ಲಿ ಅನೇಕ ಕಾರಣಗಳಿಂದ ಶ್ರುತಿಸ್ಮೃತಿ ಪುರಾಣೇತಿಹಾಸೋಕ್ತಿಗಳಿಗೂ ಶ್ರೀ ಯತಿರಾಜರ ಮತ್ತು ಶ್ರೀ ದೇಶಿಕರವರ ದಿವ್ಯ ಸೂಕ್ತಿಗಳಿಗೂ ವಿರೋಧವೆಂದು ಸುಸ್ಪಷ್ಟವಾಗಿ ಸ್ಥಾಪಿಸಲ್ಪಟ್ಟಿತು. ಇಲ್ಲಿಯೂ ಶ್ರೀ ಯತಿವರ್ಯರು **ಸಿದ್ಧಿಂ ಆಸ್ಥಿತಾಃ** ಎಂಬುದಕ್ಕೆ **ಆತ್ಮಾನಂ ಪ್ರಾಪ್ನುವಂತಃ** ಎಂದು ಇಷ್ಟು ಮಾತ್ರವೇ ಅರ್ಥವನ್ನು ಬರೆದರು; ಹೀಗೆ ವ್ಯಾಖ್ಯಾನಮಾಡಲು ಕಾರಣವೇನು ಎಂದು ಕೇಳಿದರೆ, ಹಿಂದೆ ೧೯ನೆಯ ಶ್ಲೋಕದಲ್ಲೂ **ಪರಮಾಪ್ನೋತಿ ಪೂರುಷಃ** ಎಂಬಲ್ಲಿ ಯಾವ ಅರ್ಥವೋ, ಅದೇ ಅರ್ಥವೇ ಇಲ್ಲಿಯೂ ಈ ನಿದರ್ಶನದಲ್ಲೂ ಹೇಳಬೇಕಷ್ಟೇ, ಆದುದರಿಂದ ಹಾಗೆ ವ್ಯಾಖ್ಯಾನವು. ಕರ್ಮಯೋಗದಿಂದ ಯಾವ ಫಲವು ಉಂಟಾಗುತ್ತದೋ, ಅದೇ ಅದರಿಂದುಂಟಾಗುವ ಸಂಸಿದ್ಧಿಯು. ಕರ್ಮಯೋಗದಿಂದುಂಟಾಗುವುದು ಎರಡು ಫಲವೆಂದು ಹಿಂದೆಯೇ ಅನೇಕ ಸಲ ಹೇಳಿರುವೆವು. ಪುನಃ ಇನ್ನೊಂದಾವರ್ತಿ ಹೇಳುವೆವು, (೧) ಉಪಾಯಾನುಷ್ಠಾನವಾದ ಉಪಾಸನೆಗೆ ಪ್ರತಿಬಂಧಕಗಳಾದ ಪಾಪಗಳ ನಿವೃತ್ತಿಯು. (೨) ಆತ್ಮಾವಲೋಕನವು, ಇವೆರಡೇ ಫಲಗಳು. ಆದುದರಿಂದ ಇವೇ ಸಂಸಿದ್ಧಿಗಳು. ಅರ್ಜುನನು ಮಾಡಿದ ಪ್ರಶ್ನೆಯು ಜ್ಞಾನಯೋಗವನ್ನು ಮಾತ್ರ ಅವಲಂಬಿಸಬಹುದೇ ಎಂಬುದು, ಈಗ ಉಪದೇಶದ ಸಾರಭೂತಾಂಶವು, ಜ್ಞಾನಯೋಗವನ್ನೇ ಬೇಕಾದರೆ ತ್ಯಜಿಸಬಹುದು, ಕರ್ಮಯೋಗವನ್ನು ತ್ಯಜಿಸಲು ಸಾಧ್ಯವಿಲ್ಲವೆಂಬುದು. ಇದು **ಕರ್ಮಣೈವ** ಎಂಬಲ್ಲಿನ ಅವಧಾರಣದಿಂದ ವ್ಯಕ್ತವು. ಇದರ ಅಭಿಪ್ರಾಯವೇನೆಂದರೆ ಈ ಆತ್ಮಸಾಕ್ಷಾತ್ಕಾರವು ಭಕ್ತಿಯೋಗ ನಿಷ್ಪತ್ತಿಯನ್ನುಂಟುಮಾಡಿ ಮೋಕ್ಷದಾಯಕವೆಂಬುದು. ಮೋಕ್ಷಪ್ರಾಪ್ತಿಯು ಕರ್ಮಾನುಷ್ಠಾನಮಾತ್ರದಿಂದಲೇ ಎಂದಿಗೂ ಸಾಧ್ಯವಲ್ಲವು. ಏತಕ್ಕೆಂದರೆ ಭಕ್ತಿಯೋಗದಲ್ಲಿ ಹೇಳಿರುವ ಪರಮಾತ್ಮ ಸಾಕ್ಷಾತ್ಕಾರವು ಪರಜ್ಞಾನ ಉಂಟಾದವನಿಗೆ ಯಾದುದರಿಂದ, **ಜ್ಞಾನಾನ್ಮೋಕ್ಷಃ** ಎಂಬ ಉಕ್ತಿಗೆ ಅನುಗುಣವಾಗಿ ಮನೋವೃತ್ತಿರೂಪವಾದ ತೈಲಧಾರಾವದವಿಚ್ಛಿನ್ನ ಜ್ಞಾನ ಸಂತತಿರೂಪ ಉಪಾಸನದಿಂದಲೇಯಾದುದರಿಂದಲೂ ಕರ್ಮಯೋಗವು ಸಾಕ್ಷಾತ್ತಾಗಿ ಮೋಕ್ಷದಾಯಕವೆಂಬ ಉಕ್ತಿಯು ಈ ಶ್ಲೋಕದಿಂದ ನಿರಸ್ತವು.

**ಭಾಷ್ಯಾವತಾರಿಕೆಯ ಅರ್ಥವು :—** ಈ ಇಪ್ಪತ್ತನೆಯ ಶ್ಲೋಕದ ಉತ್ತರಾರ್ಧವ ಅರ್ಥವನ್ನು ಪರಿಶೀಲನಮಾಡಿದರೆ ಮುಂದಿನ ೨೧ ನೆಯ ಶ್ಲೋಕದಲ್ಲಿ ಹೇಳುವದಕ್ಕೆ ಸಂಬಂಧಿಸಿರುವದರಿಂದ ಅದರೊಂದಿಗೆ ಅನ್ವಯಿಸುವದೇ ಯುಕ್ತವು. ಆದುದರಿಂದ ಶ್ರೀ ಯತಿವರ್ಯರು ಈ ಉತ್ತರಾರ್ಧವನ್ನು ಪ್ರತಿಜ್ಞಾವಾಕ್ಯವಾಗಿ ಭಾವಿಸಿ, ೨೧ ನೆಯ ಶ್ಲೋಕವನ್ನು ಅದಕ್ಕೆ ಹೇತುವನ್ನಾಗಿ ಭಾವಿಸಿದರು. **ಕರ್ಮ ಯೋಗವೇ ಜ್ಯಾಯಾ** ಎಂಬುದಕ್ಕೆ ಅನೇಕ ಕಾರಣಗಳನ್ನು ತಿಳಿಸಿದರು—೧. ಪಾಪಗಳು ಸ್ವಲ್ಪಸ್ವಲ್ಪವಾಗಿ ತೊಲಗುವದರಿಂದ ಕ್ರಮೇಣ ವಿಷಯ ಸ್ಪೃಹೆಯು ತೊಲಗಿ ಇಂದ್ರಿಯ ನಿಗ್ರಹವು ಉಂಟಾಗುತ್ತದೆ. ೨. ಹೀಗಾಗುವದರಿಂದ ಉಪಾಯಾನುಷ್ಠಾನಕ್ಕೆ ಬೇಕಾದ ಆತ್ಮ ಯಾಥಾತ್ಮ್ಯಜ್ಞಾನವೂ ಲಭಿಸುತ್ತದೆ. ೩. ಯಾವಾಗಲೂ ಶರೀರವನ್ನು ಹೊಂದಿರುವ ಚೇತನನು ಕರ್ಮವನ್ನು ಮಾಡುತ್ತಲೇ ಇರುವನು, ಹಾಗೆ ಕರ್ಮವನ್ನು

ಭಾ. ಅ. ಕಾರಿಣಃ ಕರ್ಮಯೋಗ ಏವ ಕಾರ್ಯ ಇತ್ಯುಕ್ತ್ವಾ, ಜ್ಞಾನಯೋಗಾಧಿಕಾರಿಣೋಽಪಿ ಜ್ಞಾನಯೋಗಾತ್ಕರ್ಮಯೋಗ ಏವ ಶ್ರೇಯಾನಿತಿ ಸಹೇತುಕ ಮುಕ್ತಮ್; ಇದಾನೀಂ ಶಿಷ್ಟತಯಾ ವ್ಯಪದೇಶ್ಯಸ್ಯ ಸರ್ವಥಾ ಕರ್ಮಯೋಗ ಏವ ಕಾರ್ಯ ಇತ್ಯುಚ್ಯತೇ.

ಮೂ. ಲೋಕಸಙ್ಗ್ರಹಮೇವಾಪಿ ಸಂಪಶ್ಯನ್ಕರ್ತು ಮರ್ಹಸಿ॥ ೨೦.

ಮಾಡದೇ ಇರುವದು ಸಾಧ್ಯವಿಲ್ಲದುದರಿಂದ, ಕರ್ಮ ಮಾಡುವ ಅಭ್ಯಾಸವಿರುವದರಿಂದ ಕರ್ಮ ಯೋಗವೇ ಸುಕರವು. ೪. ಶಿಷ್ಟಾಚಾರವೂ ಹಾಗೆಯೇ ಎಂದು ಜನಕಾದಿ ರಾಜರ್ಷಿಗಳ ನಿದರ್ಶನವನ್ನೂ ಕೊಟ್ಟರು. ೫. ಈಗ ಈ ಶಿಷ್ಟಾಚಾರದಿಂದ ಇನ್ನೊಂದು ಮಹತ್ತಾದ ಪ್ರಯೋಜನವುಂಟು; ಅವರನ್ನನುಸರಿಸಿ ಇತರ ಮೋಕ್ಷಾರ್ಥಿಗಳೂ ಕರ್ಮಯೋಗದಲ್ಲೇ ಪ್ರವರ್ತಿಸಲು ಅನುಕೂಲವಾಗುತ್ತದೆಂಬೂ ಹೇಳುತ್ತಾರೆ; ಇದೇ ಲೋಕಸಙ್ಗ್ರಹವು. ಆದುದರಿಂದ ಹಿಂದೆ ಹೇಳಿದುದಕ್ಕೂ ಮುಂದೆ ಹೇಳುವದಕ್ಕೂ ಸಙ್ಗತಿಯು ವ್ಯಕ್ತವಾಗಿ ಏರ್ಪಟ್ಟಿತು, ಏವಂ-ಈ ಪ್ರಕಾರವಾಗಿ, **ಪ್ರಥಮಂ** - ಮೊದಲು, **ಮುಮುಕ್ಷುಃ** - ಮೋಕ್ಷಾರ್ಥಿಯು, **ಜ್ಞಾನಯೋಗಾನರ್ಹತಯಾ**- ಜ್ಞಾನಯೋಗಕ್ಕೆ ತನಗೆ ಅರ್ಹತೆಯಿಲ್ಲದಿರುವದರಿಂದ, **ಕರ್ಮಯೋಗಾಧಿಕಾರಿಣಃ** - ಕರ್ಮಯೋಗದಲ್ಲಿ ಮಾತ್ರವೇ ಅಧಿಕಾರವುಳ್ಳವನಿಗೆ, ಕರ್ಮಯೋಗವೇ, **ಕಾರ್ಯಂ** - ಅನುಷ್ಠೇಯವು, **ಇತ್ಯುಕ್ತ್ವಾ** - ಎಂಬದಾಗಿ ಹಿಂದೆ ಹೇಳಿ, ಅನಂತರ, **ಜ್ಞಾನಯೋಗಾಧಿಕಾರಿಗೂಕೂಡ**, **ಜ್ಞಾನಯೋಗಾತ್** - ಜ್ಞಾನಯೋಗಕ್ಕಿಂತಲೂ, **ಕರ್ಮಯೋಗ ಏವ** - ಕರ್ಮಯೋಗವೇ, **ಶ್ರೇಯಾನ್** - ಉತ್ಕೃಷ್ಟವಾದುದು, **ಇತಿ** - ಎಂಬದಾಗಿ, **ಸಹೇತುಕ ಮುಕ್ತಂ** - ಕಾರಣಗಳೊಂದಿಗೆ ಹೇಳಲ್ಪಟ್ಟಿತು, **ಇದಾನೀಂ** - ಈಗಲಾದರೋ, ಎಂದರೆ ಇನ್ನು ಮುಂದೆ, **ಶಿಷ್ಟತಯಾ ವ್ಯಪದೇಶ್ಯಸ್ಯ** - ಶಾಸ್ತ್ರದಲ್ಲಿ ಹೇಳಿರುವರೀತ್ಯಾ ಅನುಷ್ಠಿಸುವನೆಂದು ಪ್ರಸಿದ್ಧನಾಗಿ ಹೇಳಲ್ಪಟ್ಟವನಿಗೆ, ಶಿಷ್ಟ ಶಬ್ದಕ್ಕೆ **"ವೇದೋಕ್ತ ತತ್ತ್ವಜ್ಞಾನೇನ ವೇದವಿಹಿತ ಕರ್ಮಕಾರೀ ಶಿಷ್ಟಃ"** ಎಂದು ನೈಯಾಯಿಕರು ಅರ್ಥಮಾಡುತ್ತಾರೆ, ವೇದದಲ್ಲಿ ಹೇಳಿರುವಹಾಗೆ ಅನುಷ್ಠಿಸುವನು ಯಾರೋ ಅವನು ಶಿಷ್ಟಾಚಾರನು ಎಂಬ ಭಾವವು. ಹೀಗೆ ಜ್ಞಾನ ನಿಧಿಗಳ ಅನುಷ್ಠಾನದ ಪ್ರಕಾರವನ್ನು ನಾವು ಸತ್ಸಂಪ್ರದಾಯವೆಂದು ಹೇಳುವೆವು; ಶಾಸ್ತ್ರಜನ್ಯ ವಿವೇಕೋತ್ಥ ಜ್ಞಾನಶೂನ್ಯರಿಗೆ ಸತ್ಸಂಪ್ರದಾಯರೀತ್ಯಾ ಅನುಷ್ಠಾನವೇ ಅವರಿಗೆ ಸರ್ವಶ್ರೇಯಸ್ಕರವೆಂದು ಭಾವಿಸತಕ್ಕದ್ದು. **ಸರ್ವಥಾ** - ಸರ್ವ ಪ್ರಕಾರದಿಂದಲೂ. **ಕರ್ಮಯೋಗ ಏವ ಕಾರ್ಯ ಇತ್ಯುಚ್ಯತೇ** - ಕರ್ಮಯೋಗವೇ ಅನುಷ್ಠಿಸತಕ್ಕದ್ದು ಎಂಬದಾಗಿ ಹೇಳಲ್ಪಡುತ್ತದೆ. ಇದರಿಂದ ಮುಂದೆ ಲೋಕಸಂಗ್ರಹಾರ್ಥವಾಗಿ ಕರ್ಮಮಾಡುವ ಜ್ಞಾನಿಗಳಲ್ಲಿ ಅಗ್ರೇಸರನಾಗಿ ಶ್ರೇಷ್ಠನೆನಿಸಿದವನೂ ಕೂಡ ಶಾಸ್ತ್ರರೀತ್ಯಾ ಕರ್ಮಾನುಷ್ಠಾನವು ಆವಶ್ಯಕವೆಂದು ಭಾವಿಸಿದವನೇ ವಿನಾ ಜ್ಞಾನಯೋಗಿಯಾದುದರಿಂದ ಕರ್ಮವು ಅನಾವಶ್ಯವೆಂದು ತಿಳಿದು ಲೋಕಕ್ಕಾಗಿಮಾತ್ರ ಕರ್ಮಾನುಷ್ಠಾನ ಮಾಡುವನಲ್ಲವೆಂಬ ಭಾವವು ಸೂಚಿತವು. ಆದುದರಿಂದಲೇ ಶಿಷ್ಟತಯಾವ್ಯಪದೇಶ್ಯಸ್ಯ ಎಂಬ ಪ್ರಯೋಗವು.

**ಮೂಲಕ್ಕೆ ಅರ್ಥವು:—ಲೋಕಸಙ್ಗ್ರಹಂ** - ತಿಳಿಯದ ಜನರನ್ನು ನಮ್ಮ ಮಾರ್ಗಕ್ಕೆ ಸಙ್ಗ್ರಹಿಸಬೇಕೆಂಬುದನ್ನು, **ಸಂಪಶ್ಯನ್ನಪಿ**-ಚನ್ನಾಗಿ ಬಹುಮಾನಿಸಿಯೂ ಕೂಡ, ನೀನು ವಿಧಿವಾಕ್ಯಕ್ಕೆ ಕಟ್ಟುಬಿದ್ದು ನಡಿಸತಕ್ಕದ್ದೆಂಬ ಅಭಿಸಂಧಿಮಾತ್ರದಿಂದಲ್ಲದೆ, ನೀನು ಮಾಡಿದರೆ ಇತರರಾದ ನಿನ್ನಷ್ಟು ತಿಳಿಯದ ಜನರೂ ಕೂಡ ನಿನ್ನನ್ನು ಅನುವರ್ತಿಸಲಿ ಎಂಬಭಿಪ್ರಾಯದಿಂದಲೂ ಕೂಡ

ಮೂ. ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇ ತರೋಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ॥ ೨೧.

ಕರ್ತ್ತುಮರ್ಹಸಿ - ವರ್ಣಾಶ್ರಮೋಚಿತ ಕರ್ಮಗಳನ್ನೇ ಮಾಡಲು ಯೋಗ್ಯನಾಗು, ಎಂದರೆ ಲೋಕಸಂಗ್ರಹಕ್ಕಾಗಿಯೂ ನೀನು ಮಾಡಲೇಬೇಕೆಂಬ ಭಾವವು. **ಸಂಪಶ್ಯನ್** ಎಂಬಲ್ಲಿರುವ ಉಪಸರ್ಗವು ಏನು ಬೋಧಿಸುತ್ತದೆ ಎಂದರೆ, ಮನುಷ್ಯನಾದವನು ಇಲ್ಲಿ ಜನ್ಮವೆತ್ತಿರುವದು ತನಗೆ ಮಾತ್ರ ಐಹಿಕಾಮುಷ್ಮಿಕ ಪ್ರಯೋಜನಗಳನ್ನು ಸಂಪಾದಿಸಿಕೊಳ್ಳುವದಕ್ಕಾಗಿಯಲ್ಲವು; ಸ್ವಪ್ರಯೋಜನಕ್ಕಿಂತ ಪರಪ್ರಯೋಜನವು ತುಂಬಾ ಉತ್ಕೃಷ್ಟವಾದುದು ; ಇದನ್ನು ಎಲ್ಲರೂ ಸಂಪಶ್ಯನ್ ಚನ್ನಾಗಿ ಮನಸ್ಸಿನಲ್ಲಿಟ್ಟು, ಲೋಕೋಪಕಾರಕ್ಕಾಗಿಯೂ ಕರ್ಮವನ್ನು ಮಾಡಲೇಬೇಕೆಂಬ ಭಾವವು. ನಾವು ಊಟಮಾಡುವಾಗ ನಮ್ಮ ಶಕ್ತ್ಯನುಸಾರ ಇತರರಿಗೂ ಊಟಹಾಕತಕ್ಕದ್ದು. ನಾವು ಮೋಕ್ಷಾರ್ಥಿಗಳಾಗಿ ಸಾಧನಾನುಷ್ಠಾನಮಾಡಿ ಬ್ರಹ್ಮಪ್ರಾಪ್ತಿಯನ್ನು ಹೊಂದುವಾಗ ಇತರರನ್ನೂ ಮೋಕ್ಷಾರ್ಥಿಗಳನ್ನಾಗಿ ಮಾಡಿ, ಸಾಧನಾನುಷ್ಠಾನಮಾಡಿ ಬ್ರಹ್ಮಪ್ರಾಪ್ತಿಯುಂಟಾಗುವಹಾಗೆ ಮಾಡಿಸುವದು ನಮ್ಮ ಇತಿಕರ್ತವ್ಯತೆಯು. ಹಾಗೆಯೇ ನಾವುಗಳು ವರ್ಣಾಶ್ರಮೋಚಿತ ಕರ್ಮಗಳನ್ನು ಶಾಸ್ತ್ರರೀತ್ಯಾ ಅನುಷ್ಠಿಸುವದರಿಂದ, ಇತರರೂ ನಮ್ಮನ್ನು ನೋಡಿ ವರ್ಣಾಶ್ರಮೋಚಿತ ಕರ್ಮನಿಷ್ಠರಾಗುವರು. ಹೀಗೆ ಲೋಕ ರಕ್ಷಣವನ್ನು ಚನ್ನಾಗಿ ಮನಸ್ಸಿನಲ್ಲಿ ಯಾವಾಗಲೂ ಇಡತಕ್ಕದ್ದು ನಮ್ಮ ಇತಿಕರ್ತವ್ಯವು ಎಂದು ತಿಳಿಸುವದಕ್ಕಾಗಿ **ಸಂಪಶ್ಯನ್**ಎಂಬ ಪ್ರಯೋಗವು. **ಶ್ರೇಷ್ಠಃ** - ಶಾಸ್ತ್ರಜ್ಞಾನದಲ್ಲಿ ನಿಪುಣನಾಗಿ, ತದನುಗುಣವಾಗಿ ಕರ್ಮನಿಷ್ಠೆಯುಳ್ಳ ಪ್ರಸಿದ್ಧ ಪುರುಷನು, **ಯದ್ಯದಾ ಚರತಿ** - ಯಾವಯಾವ ಕರ್ಮಗಳನ್ನನುಷ್ಠಿಸುವನೋ, **ತತ್ತದೇವ** – ಆ ಆ ಕರ್ಮಗಳನ್ನೇ, **ಇತರೋ ಜನಃ** - ಅವನನ್ನನುಸರಿಸಿ ನಡೆಯುವ ಇತರ ಜನವೂ, **ಆಚರತಿ** - ಆಚರಿಸುತ್ತದೆ, **ಸಃ** - ಅಂತಹ ಶ್ರೇಷ್ಠನು, **ಯತ್ಪ್ರಮಾಣಂ ಕುರುತೇ** - ಯಾವ ಅನುಷ್ಠಾನಪ್ರಕಾರವನ್ನು ಪ್ರಮಾಣವಾಗಿ ಮಾಡುವನೋ, **ತತ್** - ಅದನ್ನೇ, **ಲೋಕಃ** - ಅಷ್ಟು ಶಾಸ್ತ್ರಜ್ಞಾನವಿಲ್ಲದ ಇತರ ಜನವೂ, **ಅನುವರ್ತತೇ** - ಅನುಸರಿಸಿ ನಡೆಯುತ್ತದೆ. ಶಾಸ್ತ್ರಜ್ಞನಾಗಿರುವವನು ಶಾಸ್ತ್ರದಲ್ಲಿ ವಿಧಿಸಿರುವ ಕರ್ಮವನ್ನು ಯಾವ ಪ್ರಕಾರವಾಗಿ ಪ್ರಮಾಣೀಕರಿಸಿ ನಡೆಸುವನೋ, ಹಾಗೆಯೇ ಆತನನ್ನು ನೋಡಿ ಜ್ಞಾನಶೂನ್ಯರಾದ ಇತರರೂ ಆ ಕರ್ಮವನ್ನೇ ಆಪ್ರಕಾರವಾಗಿಯೇ ಅನುಸರಿಸಿ ನಡೆಸುವರು ಎಂಬ ತಾತ್ಪರ್ಯವು. ಜ್ಞಾನಾಗ್ರೇಸರನಿಗೆ ಲೋಕಸಙ್ಗ್ರಹವೂ ಒಂದು ಇತಿಕರ್ತವ್ಯವೇ ಎಂದು ಈ ಶ್ಲೋಕಗಳಿಂದ ಹೇಳಲ್ಪಟ್ಟಿತು. ಶಾಸ್ತ್ರಗಳಿಂದಲೂ ಗುರುಗಳಿಂದಲೂ ತಾನು ಹೊಂದಿದ ಅನುಷ್ಠಾನವೂ ಜ್ಞಾನವೂ ಸಹ ತನಗೆ ಮಾತ್ರವೇ ಅಲ್ಲವು. ತನ್ನನ್ನು ಅನುಸರಿಸಿ ನಡೆಯುವವರಿಗಾಗಿಯೂ ಎಂದು ಭಾವಿಸತಕ್ಕದ್ದು. ಹಾಗಲ್ಲದೆ ತನಗೆ ಮಾತ್ರವೇ ಎಂದು ಭಾವಿಸುವವನು, ಚೋರನಿಗೆ ಸಮಾನನು; ಏಕೆಂದರೆ ಶಾಸ್ತ್ರವೂ, ಗುರುವೇ ಮೊದಲಾದವರೂ, ಇವರಿಗೆ ಕೊಟ್ಟಿರುವ ಜ್ಞಾನಾನುಷ್ಠಾನಗಳನ್ನು ಸತ್ಪಾತ್ರದಲ್ಲಿ ವಿನಿಯೋಗಿಸಲಿ ಎಂದು ಕೊಟ್ಟ ಪಿತ್ರಾರ್ಜಿತ ಧನವು ಎಂಬ ಭಾವನೆ ಇರಬೇಕು. ಅದು ತನಗೆ ಮಾತ್ರವೇ ಎಂದು ಭಾವಿಸುವದು ದ್ರೋಹವು. ಆದುದರಿಂದ ಇತರರಿಗಾಗಿ ತಾನೂ ಆಚರಿಸಿ, ಜ್ಞಾನವನ್ನು ಇತರರಿಗೆ ಉಪದೇಶಿಸಿದರೆ ಆಗೀಗ ಶಾಸ್ತ್ರಗುರುಗಳ ಋಣವು ತೀರಿತೆಂದು ಭಾವಿಸತಕ್ಕದ್ದು. ಆದುದರಿಂದ ಲೋಕಸಙ್ಗ್ರಹಾರ್ಥವಾಗಿ ಆಚರಣೆಯು ಆವಶ್ಯಕವಾಗಿ ಕರ್ತವ್ಯವೆಂಬ ತಾತ್ಪರ್ಯವು. ಈ ವಿಷಯದಲ್ಲಿ ಅನೇಕ ಪ್ರಮಾಣಗಳೂ ಉಂಟು ; ಇತಿಹಾಸಗಳೂ ಉಂಟು. ಗ್ರಂಥ ವಿಸ್ತರ ಭಯದಿಂದ ಈ

ಭಾ. ಲೋಕ ಸಙ್ಗ್ರಹಂ ಪಶ್ಯನ್ನಪಿ ಕರ್ಮೈವ ಕರ್ತುಮರ್ಹಸಿ ; ಶ್ರೇಷ್ಠಃ-ಕೃತ್ಸ್ನಶಾಸ್ತ್ರಜ್ಞತಯಾಽನುಷ್ಠಾತೃತಯಾ ಚ ಪ್ರಥಿತೋ ಯದ್ಯದಾಚರತಿ, ತತ್ತದೇವಾ ಕೃತ್ಸ್ನವಿಜ್ಜನೋಪ್ಯಾಚರತಿ, ಅನುಷ್ಠೀಯಮಾನಮಪಿ ಕರ್ಮ, ಶ್ರೇಷ್ಠೋ ಯತ್ಪ್ರಮಾಣಂ-

ವಿಷಯವನ್ನು ಚರ್ಚಿಸಲಿಲ್ಲವು. ಲೋಗ ಸಙ್ಗ್ರಹವ ಇತಿಕರ್ತವ್ಯತೆಯನ್ನು ಶ್ರೀ ಭೀಷ್ಮರೂ ದ್ರೋಣರೂ ನಡೆಸದೇ ಇರುವವರಿಂದಲೇ ಶ್ರೀ ಕೃಷ್ಣಭಗವಾನರವರು ಅವರನ್ನು ವಧ್ಯರೆಂದು ಭಾವಿಸಿದರು. "ನ್ಯಾಯೇನ ಪೃಚ್ಛತೇ ಸರ್ವಂ ವಕ್ತವ್ಯಂಶೌಚಯೋಗಿನೇ" ಎಂಬ ಸ್ಮೃತಿ ವಾಕ್ಯವು ಇರುತ್ತದೆ. ಸಯತ್ಪ್ರಮಾಣಂ ಕುರುತೇ ಎಂಬ ಸಂದರ್ಭದಲ್ಲಿ "ಧರ್ಮಶಾಸ್ತ್ರರಥಾರೂಢಾ ವೇದಖಡ್ಗಧರಾದ್ವಿಜಾಃ । ಕ್ರೀಡಾರ್ಥಮಪಿ ಯದ್ಬ್ರೂಯುಃ ಸ್ಸಧರ್ಮಃ ಪರಮೋಮತಃ" ಧರ್ಮಶಾಸ್ತ್ರವೆಂಬ ರಥದಲ್ಲಿ ಕುಳಿತು ವೇದವೆಂಬ ಖಡ್ಗವನ್ನು ಧರಿಸಿರುವ ಬ್ರಾಹ್ಮಣರು ಕ್ರೀಡಾರ್ಥವಾಗಿ ಹೇಳುವದೂ ಕೂಡ ಪ್ರಮಾಣವೇ ಎಂಬ ಸ್ಮೃತಿವಾಕ್ಯವಿರುತ್ತದೆ.

ಭಾಷ್ಯಾರ್ಥವು :—ಲೋಕಸಙ್ಗ್ರಹಮೇವಾಪಿ ಎಂಬಲ್ಲಿ ಏವ ಅಪಿ ಎಂಬ ಪದಗಳಿವೆ; ಇವುಗಳನ್ನು ಹೇಗೆ ಅನ್ವಯಿಸತಕ್ಕದ್ದೆಂದು ಪ್ರಥಮತಃ ಹೇಳುತ್ತಾರೆ:—ಲೋಕಸಙ್ಗ್ರಹಂ ಪಶ್ಯನ್ನಪಿ ಕರ್ಮೈವ ಕರ್ತುಮರ್ಹಸಿ ಎಂಬದಾಗಿ; ಲೋಕ ಸಙ್ಗ್ರಹದಲ್ಲಿ ದೃಷ್ಟಿಯನ್ನಿಟ್ಟಾದರೂ ಕರ್ಮವನ್ನೇ ಮಾಡಲು ಯೋಗ್ಯನಾಗು. ಇದೂ ನಿನಗೆ ತುಂಬಾ ಆವಶ್ಯಕವಾಗಿ ಇತಿ ಕರ್ತವ್ಯತೆಯಲ್ಲಿಯೇ ಸೇರಿದುದು. ಇದನ್ನು ಗಮನಿಸದೆ ಭೀಷ್ಮದ್ರೋಣರು ಕೆಟ್ಟುಹೋಗುವ ಹಾಗೆ, ನೀನೂ ಕೆಟ್ಟುಹೋಗಬೇಡವೆಂಬ ಭಾವವೂ ಸೂಚಿತವು. ಇಲ್ಲಿ ಕರ್ಮವ್ಯಾವುದು ಎಂದರೆ ಹಿಂದೆಯೇ ಕಾರ್ಯಂ ಕರ್ಮ ಎಂದು ಹೇಳಲ್ಪಟ್ಟಿರುತ್ತದೆ:—ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ಇತಿ ಕರ್ತವ್ಯತಾ ರೂಪವಾದ ವರ್ಣಾಶ್ರಮೋಚಿತ ಕರ್ಮವನ್ನು ಮಾಡಲೇಬೇಕೆಂಬ ಭಾವವು. ಇಲ್ಲಿ ಯತಿವರ್ಯರು ಅವಧಾರಣವನ್ನು ಕರ್ತುಂ ಎಂಬುದಕ್ಕೆ ಸೇರಿಸಿರುತ್ತಾರೆ. ಆದರೆ ಲೋಕಸಙ್ಗ್ರಹ ಮೇವ ಎಂದಿರುವಹಾಗೆ ಲೋಕ ಸಙ್ಗ್ರಹಕ್ಕೆ ಅವಧಾರಣವನ್ನು ಸೇರಿಸಿದರೆ ಅನ್ಯವ್ಯವಚ್ಛೇದದಿಂದ, ಲೋಕ ಸಙ್ಗ್ರಹಕ್ಕಾಗಿಯೇ ಕರ್ಮವನ್ನಾಚರಿಸುವದು, ಇನ್ನು ಯಾವದೃಷ್ಟಿಯಿಂದಲೂ ಬೇಕಾಮದಲ್ಲವೆಂಬ ಅಪಾರ್ಥವಾಗುತ್ತದೆ. ಈಗ ಪ್ರಕರಣವೇನೆಂದರೆ ಜ್ಞಾನಯೋಗಕ್ಕಿಂತ ಕರ್ಮಯೋಗ ಶ್ರೇಷ್ಠವೆಂದು ಹೇಳಬೇಕಾಗಿರುವದರಿಂದ ಕಾರ್ಯಂಕರ್ತುಮೇವ ಅರ್ಹಸಿ ಎಂಬ ಯೋಜನೆಯೇ ಸಮಂಜಸವಾದುದು. ಇನ್ನು ಅಪಿ ಎಂಬುದನ್ನು ಸಂಪಶ್ಯನ್ ಎಂಬುದಕ್ಕೆ ಅನ್ವಯಿಸಿವರೇವಿನಾ, ಲೋಕಸಙ್ಗ್ರಹಕ್ಕೆ ಅನ್ವಯಿಸಲಿಲ್ಲವು. ಹಾಗೆ ಲೋಕಸಙ್ಗ್ರಹದೊಂದಿಗೇನೇ ಸೇರಿಸಿದರೆ, ಲೋಕರಕ್ಷಣವು ಅಪ್ರಧಾನವಾದುದೆಂದೂ ತೋರಿಬರುತ್ತದೆ. ಲೋಕ ಸಙ್ಗ್ರಹವು ತುಂಬಾ ಪ್ರಧಾನವಾಗಿ ಪುರುಷನಿಗೆ ಇತಿಕರ್ತವ್ಯತಾರೂಪವಾದುದರಿಂದ ಪಶ್ಯನ್ನಪಿ ಎಂದು ಅನ್ವಯಿಸುತ್ತಾರೆ, ಶ್ರೇಷ್ಠಃ - ಎಂದರೆ, ಕೃತ್ಸ್ನಶಾಸ್ತ್ರಜ್ಞತಯಾ ಅನುಷ್ಠಾತೃತಯಾ ಚ ಪ್ರಥಿತಃ - ಸಮಸ್ತ ಶಾಸ್ತ್ರಜ್ಞನಾಗಿರುವದರಿಂದಲೂ ಹಾಗೆ ಶಾಸ್ತ್ರದಲ್ಲಿ ಹೇಳಿರುವದನ್ನು ಅನುಷ್ಠಿಸುವನಾಗಿರುವದರಿಂದಲೂ ಪ್ರಖ್ಯಾತಿಯನ್ನು ಹೊಂದಿರುವವನು, ಪ್ರಶಸ್ಯತಮನು, ಯದ್ಯದಾಚರತಿ - ಏನೇನನ್ನು ಅನುಷ್ಠಿಸುವನೋ, ತತ್ತದೇವ - ಆ ಆ ಕರ್ಮವನ್ನೇ, ಅಕೃತ್ಸ್ನವಿಜ್ಜನೋಪ್ಯಾಚರತಿ - ಎಲ್ಲಾ ಶಾಸ್ತ್ರವನ್ನೂ ತಿಳಿಯದ ಜನವೂ ಅನುಷ್ಠಿಸುತ್ತದೆ, ಇಲ್ಲಿ ಕೃತ್ಸ್ನವಿತ್, ಅಕೃತ್ಸ್ನವಿತ್ ಶಬ್ದಗಳ ಪ್ರಯೋಗವು ಹೇಗೆಂದರೆ:—ಮುಂದೆ "ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನವಿಚಾಲಯೇತ್" (೨೯ನೆಯ ಶ್ಲೋಕ) ಎಂದು ಇರುವದರಿಂದ ಅದನ್ನು ಮನಸ್ಸಿನಲ್ಲಿಟ್ಟು, ಶ್ರೇಷ್ಠನು ಕೃತ್ಸ್ನವಿತ್ತೆಂದೂ, ಇತರ ಜನವು

**ಭಾ. ಯದಙ್ಗಯುಕ್ತಂ ಅನುತಿಷ್ಠತಿ, ತದಙ್ಗಯುಕ್ತಮೇವಾ ಕೃತ್ಸ್ನವಿಲ್ಲೋಕೋಽಪ್ಯ ನುತಿಷ್ಠತಿ ; ಅತೋಲೋಕರಕ್ಷಾರ್ಥಂ ಶಿಷ್ಟತಯಾ ಪ್ರಥಿತೇನ ಶ್ರೇಷ್ಠೇನ ಸ್ವವ ರ್ಣಾಶ್ರಮೋಚಿತಂ ಕರ್ಮ ಸಕಲಂ ಸರ್ವದಾನುಷ್ಠೇಯಂ, ಅನ್ಯಥಾ ಲೋಕನಾಶ ಜನಿತಂ ಪಾಪಂ ಜ್ಞಾನಯೋಗಾದಪ್ಯೇನಂ ಪ್ರಚ್ಯಾವಯೇತ್ ॥ ೨೧ ॥**

ಅಕೃತ್ಸ್ನವಿತ್ತೆಂದೂ ವ್ಯಾಖ್ಯಾನಮಾಡಿರುತ್ತಾರೆ. ಶ್ರೇಷ್ಠನೆನಿಸುವದಕ್ಕೆ ಶಾಸ್ತ್ರಜ್ಞತೆಯೂ,ಅನುಷ್ಠಾನವೂ ಪ್ರಸಿದ್ಧನಾಗಿ ಬಹುಜನರು ಇವನನ್ನನುಸರಿಸೋಣವೂ, ಮೂರೂ ಆವಶ್ಯಕವೆಂದು ಭಾವಿಸಿ, ಹಾಗೆ ವ್ಯಾಖ್ಯಾನಮಾಡಿರುತ್ತಾರೆ. **ಅನುಷ್ಠೀಯಮಾನಮಪಿ ಕರ್ಮ** – ಹಾಗೆ ಅನುಷ್ಠಿಸಲ್ಪಟ್ಟ ಕರ್ಮವನ್ನು, ಆ ಶ್ರೇಷ್ಠನು, **ಯತ್ಪ್ರಮಾಣಂ** ಎಂದರೆ **ಯದಙ್ಗಯುಕ್ತಂ** – ಯಾವ ಅಙ್ಗದಿಂದ ಕೂಡಿದುದೆಂದು, **ಅನುತಿಷ್ಠತಿ** - ಅನುಷ್ಠಿಸುವನೋ, **ತದಙ್ಗಯುಕ್ತಮೇವ** - ಆ ಅಙ್ಗದಿಂದ ಕೂಡಿದುದೆಂದೇ, **ಅಕೃತ್ಸ್ನವಿಲ್ಲೋಕೋಪಿ** ಶಾಸ್ತ್ರಜ್ಞರಲ್ಲದ ಇತರ ಜನವೂ ಕೂಡ, **ಅನುತಿಷ್ಠತಿ** – ಅನುಷ್ಠಿಸುತ್ತದೆ,**ಅತಃ** - ಆ ಕಾರಣದಿಂದ, **ಲೋಕರಕ್ಷಾರ್ಥಂ** - ಲೋಕದ ಜನರಿಗೆ ಒಳ್ಳೇದಾಗುವದಕ್ಕಾಗಿ, **ಶಿಷ್ಟತಯಾ ಪ್ರಥಿತೇನ** - ಶಾಸ್ತ್ರಜ್ಞನೆಂದೂ ಒಳ್ಳೇ ಅನುಷ್ಠಾತಾ ಎಂದೂ ಪ್ರಸಿದ್ಧಿಯುಳ್ಳ, **ಶ್ರೇಷ್ಠೇನ** - ಶ್ರೇಷ್ಠನಾದ ಪುರುಷನಿಂದ, **ಸ್ವವರ್ಣಾಶ್ರಮೋಚಿತಂ ಕರ್ಮ ಸಕಲಂ** - ತನ್ನ ವರ್ಣಾಶ್ರಮಗಳಿಗೆ ಯೋಗ್ಯವಾದ ಸಕಲ ಕರ್ಮವೂ **ಸರ್ವದಾನುಷ್ಠೇಯಂ**-ಯಾವಾಗಲೂ ಎಂದರೆ ದೇಹಾವಸಾನದವರೆಗೂ ಅನುಷ್ಠಿಸಲ್ಪಡತಕ್ಕದ್ದು. ಇಲ್ಲಿ **ಸಕಲಂ** ಎಂದು ಹೇಳಿದುದರಿಂದ ತನಗೆ ಐಚ್ಛಿಕಭಾಗವೂ ಸಹ ಇದರಲ್ಲೇ ಸೇರಿತು. ಈ ಭಾಗವನ್ನು ಯಾವದಾತ್ಮಸಾಕ್ಷಾತ್ಕಾರಂ ನಡೆಸತಕ್ಕದ್ದು ಎಂಬುದೂ **ಸರ್ವದಾ** ಎಂಬುದರಿಂದ ಸೂಚಿತವು. **ಸಯತ್ಪ್ರಮಾಣಂ ಕುರುತೇ** ಎಂಬುದರಿಂದ ಆ ಶ್ರೇಷ್ಠನಾದವನು ತನ್ನಿಷ್ಟಾನುಸಾರ ನಡೆಸಿದುದೇ ಪ್ರಮಾಣವೆಂಬರ್ಥವಲ್ಲವು. ಆತನೂ ಕೂಡ ಶಾಸ್ತ್ರವನ್ನನುಸರಿಸಿಯೇ ನಡೆಯತಕ್ಕದ್ದು, ಹಾಗೆ ನಡೆಯುವಾಗ ಕರ್ಮಗಳನ್ನು ಯಾವ ಅಙ್ಗಗಳುಳ್ಳದ್ದಾಗಿ ಅನುಷ್ಠಿಸುವನೋ, ಇತರರೂ ಸಹ ಆತನನ್ನನುಸರಿಸಿ ಅದೇ ಅಙ್ಗಗಳಿಂದ ಯುಕ್ತವಾದುದಾಗಿ ಆಚರಿಸುವರು ಎಂಬರ್ಥವು. ಉಪಾಯಾನುಷ್ಠಾನ ಮಾಡುವವನು ಅವಕ್ಕೆ ಕರ್ಮಯೋಗವು ಮುಖ್ಯಾಙ್ಗವೆಂದು ತಿಳಿದು ಅನುಷ್ಠಿಸಿದರೆ, ಎಲ್ಲಾ ಮೋಕ್ಷಾರ್ಥಿಗಳೂ ಸಹಾ ಹಾಗೆಯೇ ಅನುಷ್ಠಿಸುವರೆಂಬ ಭಾವವು. **ಸಂಪಶ್ಯನ್ ಕರ್ತುಮರ್ಹಸಿ** ಎಂದು **ಅರ್ಹಸಿ** ಎಂಬ ಪ್ರಯೋಗವಿದ್ದರೂ, ಅದೂ ವಿಧಿವಾಕ್ಯವೇ ಎಂಬ ಭಾವವು. ಹೀಗೆ ವಿಧಿವಾಕ್ಯವನ್ನು ಕೈಗೊಂಡು ನಡೆಸದಿದ್ದರೆ ಪ್ರತ್ಯವಾಯು ಉಂಟೋ ಎಂದರೆ, ಪ್ರತ್ಯವಾಯು ಉಂಟೆಂದು ಮುಂದೆ ಹೇಳಲ್ಪಡುವ ಅಭಿಪ್ರಾಯವನ್ನೇ ಸೂಚಿಸುತ್ತಾರೆ:—ಆದರೆ ಜ್ಞಾನನಿಷ್ಠನಿಗೆ ಲೋಕ ಸಙ್ಗ್ರಹದಿಂದ ಆಗತಕ್ಕದ್ದೇನು, ಆತ್ಮದರ್ಶನವುಂಟಾಗಿ ಬ್ರಹ್ಮಪ್ರಾಪ್ತಿಯಾದರೆ ಸರಿ, ಎಂದರೆ ಲೋಕ ಸಙ್ಗ್ರಹ ಕಾರ್ಯವನ್ನು ತ್ಯಜಿಸಿದರೆ ಬಾಧಕ ಉಂಟೆಂದು ತಿಳಿಸುತ್ತಾರೆ. **ಅನ್ಯಥಾ** - ಹಾಗೆ, ಅನುಷ್ಠಿಸದೆ ಹೋದರೆ **ಲೋಕನಾಶ ಜನಿತಂ ಪಾಪಂ** - ಲೋಕದ ಜನರು ಕೆಟ್ಟುಹೋಗುವದರಿಂದ ಪ್ರಾಪ್ತವಾಗುವ ಪಾಪವು, **ಜ್ಞಾನಯೋಗಾದಪಿ** - ಜ್ಞಾನಯೋಗದಿಂದಲೂ ಕೂಡ, **ಏನಂ** - ಈತನನ್ನು, **ಪ್ರಚ್ಯಾವಯೇತ್** - ಜಾರಿ ಬೀಳುವಹಾಗೆ ಮಾಡುತ್ತದೆ, ಪಾಪಕ್ಕೆ ಗುರಿಯಾಗಿ ಅಧೋಗತಿಯನ್ನು ಹೊಂದುತ್ತಾನೆಂಬ ತಾತ್ಪರ್ಯವು. ಜ್ಞಾನಯೋಗಕ್ಕಾಗಿ ಆರಂಭಿಸಿ, ಕರ್ಮಭ್ರಷ್ಟನಾಗಿರುವವರಿಂದ ಜ್ಞಾನಯೋಗವೂ ಸಿದ್ಧಿಸದೆ ಭ್ರಷ್ಟನೂ ಆಗುವದರಿಂದ ಉಭಯ ಭ್ರಷ್ಟತ್ವವೂ ಪ್ರಾಪ್ತವಾಗುತ್ತದೆಂಬ ಭಾವವು. ಆದುದರಿಂದ ಜ್ಞಾನನಿಷ್ಠೆಯಿರುವ

**ಮೂ. ನಮೇ ಪಾರ್ಥಾಸ್ತಿ ಕರ್ತ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತ ಮವಾಪ್ತವ್ಯಂ ವರ್ತ್ತ ಏವ ಚ ಕರ್ಮಣಿ॥ ೨೨.**

ವನಿಗೂ ಕರ್ಮನಿಷ್ಠೆಯೂ ಆವಶ್ಯಕವೆಂದು ಹೇಳಲ್ಪಟ್ಟಿತು. ಇದರಿಂದ ಕರ್ಮನಿಷ್ಠೆಯು ಸರ್ವರಿಗೂ ಜ್ಞಾನ ತಾರತಮ್ಯಸಂಬಂಧ ನಿರಪೇಕ್ಷವಾಗಿ ಆವಶ್ಯಕವೆಂದು ಉಪದೇಶಿಸಲ್ಪಟ್ಟಿತು; ಮನುಷ್ಯನು ಜನ್ಮವನ್ನೆತ್ತಿರುವದು ತನ್ನ ಉಜ್ಜೀವನಾರ್ಥಕ್ಕಾಗಿ ಮಾತ್ರವೇ ಅಲ್ಲದೆ, ಇತರರಿಗಾಗಿಯೂ ಜನ್ಮವೆತ್ತಿರುವುದು ಎಂದು ಭಾವಿಸತಕ್ಕದ್ದು. ಆದುದರಿಂದ ಇತರರಿಗೂ ಐಹಿಕಾಮುಷ್ಮಿಕ ಸುಖಗಳನ್ನುಂಟುಮಾಡುವದು ಮನುಷ್ಯನ ಇತಿಕರ್ತವ್ಯತೆಯು; ತನ್ನ ಪ್ರಯೋಜನಗಳನ್ನೂ ಪರಿಗಣಿಸದೆ ಇತರರ ಪ್ರಯೋಜನವನ್ನೇ ಮುಖ್ಯವಾಗಿ ಎಣಿಸುವುದು ಉತ್ತಮ ಪುರುಷಲಕ್ಷಣವು. ಈ ಭಾವನೆಯು ಗೃಹಸ್ಥಾಶ್ರಮಿಯಲ್ಲಿ ಮುಖ್ಯವಾಗಿರುವದರಿಂದ ಶ್ರೀ ಭೀಷ್ಮರು **"ಗಾರ್ಹಸ್ಥ್ಯಂ ಚ ಮಹಾಶ್ರಮಮ್"** ಎಂದು ಶಾನ್ತಿಪರ್ವದಲ್ಲಿ ಕೊಂಡಾಡಿರುತ್ತಾರೆ. ಆದುದರಿಂದ ಲೋಕಸಙ್ಗ್ರಹಕ್ಕಾಗಿ ವರ್ಣಾಶ್ರಮೋಚಿತ ಕರ್ಮಗಳನ್ನು ಯಾವಜ್ಜೀವವೂ ಮಾಡತಕ್ಕದ್ದೆಂದು ಹೇಳಲ್ಪಟ್ಟಿತು. ಕರ್ಮಯೋಗದ ಐಚ್ಛಿಕವಾದ ಅಂಶವನ್ನು ಮಾತ್ರ ಆತ್ಮಪ್ರಾಪ್ತಿವರೆಗೂ ಮಾಡತಕ್ಕದ್ದೆಂದೂ ವಿಧಿಸಲ್ಪಟ್ಟಿತು.

**ಅವತಾರಿಕೆಯು:—**ಕರ್ಮವಶ್ಯತೆಯೂ ಶಾಸ್ತ್ರವಶ್ಯತೆಯೂ ಇಲ್ಲದೆ ಪರಿಪೂರ್ಣಕಾಮನಾದ ನಾನೂ ಕೂಡ ಸ್ವೋಚಿತ ಕರ್ಮಗಳನ್ನು ಯಾವಾಗಲೂ ಮಾಡುತ್ತಿದ್ದೇನೆಂದು ಹೇಳುತ್ತಾರೆ. ಹೀಗಿರುವಾಗ ಕರ್ಮವಶ್ಯನಾಗಿ, ಶಾಸ್ತ್ರವಶ್ಯನಾಗಿ, ಪರಿಪೂರ್ಣಕಾಮನಲ್ಲದ ನೀನು ಸ್ವೋಚಿತ ಕರ್ಮಗಳನ್ನೆಸಗದೇ ಇರಬಹುದೋ ? ಕೈಮುತಿಕ ನ್ಯಾಯದಿಂದ ನಿನಗೆ ಕರ್ಮಾನುಷ್ಠಾನವು ಅತ್ಯಾವಶ್ಯಕವೆಂದು ತಿಳಿಸುತ್ತಾರೆ. ಲೋಕಸಙ್ಗ್ರಹ ಕಾರ್ಯವು ನಿನಗೆ ಹೇಗೆ ಆವಶ್ಯಕವೋ, ಹಾಗೆಯೇ ನಾನೂ ಕೂಡ ಅದಕ್ಕಾಗಿಯೇ ಕರ್ಮಗಳನ್ನು ಆಚರಿಸುತ್ತಲೇ ಇರುವೆನು. ನಿನಗೆ ಹೇಗೆ ಅದು ಇತಿಕರ್ತವ್ಯತೆಯಲ್ಲಿ ಸೇರಿತೋ, ಹಾಗೆ ನನಗೂ ಸಹ ಇತಿಕರ್ತವ್ಯತೆಯಲ್ಲೇ ಸೇರಿದುದು. ಆದುದರಿಂದಲೇ ನಿನಗೆ ಈ ಉಪದೇಶವು ಎಂಬ ಭಾವವು. ನೀನು ಈ ಇತಿಕರ್ತವ್ಯತೆಯನ್ನು ಬಿಟ್ಟರೆ ತುಂಬಾ ದೋಷವೆಂದು ಹೇಗೆ ಹೇಳಿದೆನೋ, ಹಾಗೆಯೇ ನಾನೂ ನನ್ನ ಈ ಲೋಕ ಸಙ್ಗ್ರಹ ಕೆಲಸವನ್ನು ತ್ಯಜಿಸಿದರೆ ದೋಷಿಯಾಗುವೆನು ಎಂದು ಹೇಳುತ್ತಾರೆ. ಮೊದಲು ಈ ಶ್ಲೋಕದಲ್ಲಿ ತಾನು ಲೋಕಸಙ್ಗ್ರಹ ಕೆಲಸವನ್ನು ಮಾಡುತ್ತೇನೆಂದು ಇಷ್ಟುಮಾತ್ರ ಹೇಳಿ, ಮುಂದಿನ ಎರಡು ಶ್ಲೋಕಗಳಿಂದಲೂ ಹಾಗೆ ಮಾಡದಿದ್ದರೆ ಪ್ರಾಪ್ತವಾಗುವ ಅನರ್ಥಗಳನ್ನು ತಿಳಿಸುತ್ತಾರೆ.

**ಮೂಲಕ್ಕೆ ಅರ್ಥವು:—ಹೇಪಾರ್ಥ** - ಓ ಅರ್ಜುನನೇ, **ಮೇ** - ಸರ್ವಜ್ಞನಾಗಿ, ಸತ್ಯಸಙ್ಕಲ್ಪನಾಗಿ, ಅವಾಪ್ತ ಸಮಸ್ತ ಕಾಮನಾಗಿರುವ ನನಗೆ, **ತ್ರಿಷು ಲೋಕೇಷು** - ಮೂರು ಲೋಕದಲ್ಲೂ ಎಂದರೆ ಸಮಸ್ತವಿಶ್ವದಲ್ಲೂ, **ಕಿಂಚನ** - ಸ್ವಲ್ಪವಾಗಲಿ, **ಕರ್ತ್ತವ್ಯಂ** - ಇತಿಕರ್ತವ್ಯತಾರೂಪದಲ್ಲಿ ಮಾಡಬೇಕಾದುದು, ಎಂದರೆ ಕರ್ಮವಶ್ಯತೆ, ಶಾಸ್ತ್ರವಶ್ಯತೆ, ಪರಾಧೀನತೆ ಮುಂತಾದವುಗಳಿಂದುಂಟಾದುದು, **ನಾಸ್ತಿ** - ಇರುವದಿಲ್ಲವು. ನೀನಾದರೋ ನಿನ್ನ ಮಾತಾಪಿತೃಗಳ ಮತ್ತು ಗುರುಗಳ ಆಜ್ಞೆಯನ್ನು ನಡೆಸಬೇಕು. ಲೋಕ ಗುರುವಾದ ನನ್ನ ಆಜ್ಞಾರೂಪವಾದ ಶಾಸ್ತ್ರವಿಧಿಯನ್ನನುಸರಿಸಿ ನಡೆಯಬೇಕು. ಹೆಂಡತಿ ಮಕ್ಕಳು ಮೊದಲಾದವರುಗಳ ವಿಷಯದಲ್ಲೂ ಇತಿ ಕರ್ತವ್ಯತೆಗಳುಂಟು. ನಾನು ಯಾರಿಗೂ ಅಧೀನನಲ್ಲದೆ ಸ್ವತಂತ್ರನಾಗಿರುವದರಿಂದ, ನಿನಗಿರುವಹಾಗೆ ಕರ್ತವ್ಯಾಂಶವು ನನಗೆ ಯಾವುದೂ ಇರುವದಿಲ್ಲವೆಂಬ ಭಾವವು;

ಭಾ. ನಮೇ ಸರ್ವೇಶ್ವರಸ್ಯಾ ಪ್ತ (ವಾಪ್ತಸಮಸ್ತ) ಕಾಮಸ್ಯ ಸರ್ವಜ್ಞಸ್ಯ ಸತ್ಯಸಙ್ಕಲ್ಪಸ್ಯ ತ್ರಿಷು ಲೋಕೇಷು ದೇವ ಮನುಷ್ಯಾದಿ ರೂಪೇಣ ಸ್ವಚ್ಛಂದತೋ ವರ್ತಮಾನಸ್ಯ ಕಿಂಚಿದಪಿ ಕರ್ತ್ತವ್ಯಮಸ್ತಿ ; ಯತೋಽನವಾಪ್ತಂ ಕರ್ಮಣಾಽವಾಪ್ತವ್ಯಂ ನ ಕಿಂಚಿದ ಪ್ಯಸ್ತಿ ; ಅಥಾಪಿ ಲೋಕ ರಕ್ಷಾಯೈ ಕರ್ಮಣ್ಯೇವ ವರ್ತೇ ||೨೨||

ಆದರೆ ಉಪಾಸಕರ ಮತ್ತು ಶರಣಾಗತರ ರಕ್ಷಣೆಯೂ ಕರ್ತವ್ಯವೆಂದು ಭಾವಿಸಲಿಲ್ಲವೋ ಎಂದರೆ ಹೌದು, ಅದನ್ನು ಐಚ್ಛಿಕವಾಗಿ ಭಾವಿಸಿರುವೆನು ಎಂಬ ಭಾವವು. ಅದೇನು ಏನೂ ಇಲ್ಲದುದು ಎಂದರೆ ಕಾರಣವನ್ನು ಹೇಳುತ್ತಾರೆ:—**ತ್ರಿಷು ಲೋಕೇಷು**-ಮೂರು ಲೋಕದಲ್ಲೂ ಎಂದರೆ ಎಲ್ಲಾ ವಿಶ್ವದಲ್ಲೂ, **ಅನವಾಪ್ತಂ** - ತಾನು ಹೊಂದದೆ ಇರುವದಾಗಿ, **ಅವಾಪ್ತವ್ಯಂ** - ಆದುವ ರಿಂದ ತಾನು ಹೊಂದಬೇಕಾದುದಾಗಿರುವುದೂ, **ನಾಸ್ತಿ** - ಇಲ್ಲವು. ಎಂದರೆ ಸರ್ವ ವಿಭೂ ತಿಯೂ ತನ್ನದೇ ಆಗಿರುವದರಿಂದ ತಾನು ಅವಾಪ್ತಸಮಸ್ತಕಾಮನು ; ಆದುದರಿಂದ ತನಗೆ ಬೇಕಾದುದು ಮೂರು ಲೋಕದಲ್ಲೂ ಯಾವುದೂ ಇಲ್ಲವೆಂಬ ಭಾವವು. ಆದರೂ ಕರ್ಮಣಿ- ತನಗೆ ಉಚಿತವಾದ ಕರ್ಮಗಳನ್ನು ಅನುಷ್ಠಿಸುವದರಲ್ಲೇ, **ವರ್ತ್ತೇ ಏವ** - ಯಾವಾಗಲೂ ಇದ್ದೇ ಇರುವೆನು ಅಥವಾ **ಕರ್ಮಣ್ಯೇವ** - ಕರ್ಮಮಾಡುವದರಲ್ಲೇ, **ವರ್ತೇ** - ಇರುವೆನು. ಎಂದರೆ ಲೋಕಸಙ್ಗ್ರಹಾರ್ಥವಾಗಿಯೇ ಕರ್ಮಗಳನ್ನು ಮಾಡುತ್ತಿರುವೆನು. ನೀನಾದರೋ ಕರ್ಮ ಬದ್ಧನಾಗಿ ಶಾಸ್ತ್ರವಶ್ಯನಾಗಿರುವದರಿಂದ ನಿನಗೆ ಲೋಕಸಙ್ಗ್ರಹವೂ ಒಂದು ಇತಿಕರ್ತವ್ಯತೆಯು, ಎಂದು ಭಾವಿಸಿ ಹಾಗೆ ನಡೆಸದಿದ್ದರೆ ತುಂಬಾ ದೋಷವೆಂದು ತಿಳಿದು ಮಾಡತಕ್ಕದ್ದಾಗಿರುತ್ತದೆ. ನೀನು ಮೋಕ್ಷಾರ್ಥಿಯಾಗಿರುವದರಿಂದಲೂ ಮೋಕ್ಷ ಫಲಕ್ಕಾಗಿ ಮಾಡತಕ್ಕದ್ದಾಗಿರುತ್ತದೆ. ನಾನು ಲೋಕ ಸಙ್ಗ್ರಹಕ್ಕಾಗಿ ಕರ್ಮವನ್ನೆಸಗುವದರಲ್ಲಿ ವೈಲಕ್ಷಣ್ಯ ಉಂಟು. ನಾನು ಸ್ವತಂತ್ರನು ಕರ್ಮವಶ್ಯನೂ ಅಲ್ಲವು, ಶಾಸ್ತ್ರವಶ್ಯನೂ ಅಲ್ಲವು. ನಾನು ಪರಿಪೂರ್ಣಕಾಮನು, ನನಗೇನೂ ಬೇಕಾದುದೂ ಇಲ್ಲವು, ಆದರೆ ಪರಮ ಕೃಪಯಾ ಪ್ರೇರಿತನಾಗಿ ಲೋಕಸಙ್ಗ್ರಹ ಕರ್ಮವನ್ನು ಮಾಡುತ್ತಲೇ ಇದ್ದೇನೆ. ಈಗ ನಿನಗೆ ಉಪದೇಶಿಸುತ್ತಿರುವದೇ ನಿದರ್ಶನವೆಂಬ ಭಾವಗಳು ಸೂಚಿತವು. ಅನವಾಪ್ತವಾಗಿ ಅವಾಪ್ತವ್ಯವಾಗಿರುವದು ನಿನಗಾದರೋ ಉಂಟು. ನಿನಗಾ ದರೋ ಮೋಕ್ಷಸುಖವು ಬೇಕಾದುದು. ಹಾಗೆ ನನಗೆ ಈ ಸರ್ವ ವಿಶ್ವದಲ್ಲೂ ಬೇಕಾದುದು ಯಾವುದೂ ಇಲ್ಲವು. ಏಕೆಂದರೆ ಈ ವಿಶ್ವವೆಲ್ಲಾ ನನ್ನದೇಯಾಗಿರುತ್ತದೆ; ನಿತ್ಯ ವಿಭೂತಿ ಲೀಲಾ ವಿಭೂತಿಗಳೆರಡಕ್ಕೂ ನಾನೇ ಅಧ್ಯಕ್ಷನು ಎಂಬ ಭಾವವು.

**ಭಾಷ್ಯಾರ್ಥವು:**—ಮುಂದಿನ ಮೂರು ಶ್ಲೋಕಗಳಿಂದಲೂ ನಾನು ಸ್ವತಂತ್ರನಾಗಿ, ನಿರಪೇಕ್ಷ ನಾಗಿದ್ದರೂ ಲೋಕ ಕ್ಷೋಭವಿಲ್ಲದೆ ಇರುವದಕ್ಕಾಗಿಯೂ, ನನ್ನನ್ನು ಆಶ್ರಯಿಸಿದವರ ರಕ್ಷಣಾರ್ಥ ವಾಗಿಯೂ, ಪರಮಕೃಪಯಾ ಯಾವಾಗಲೂ ಕರ್ಮಗಳನ್ನೇ ಲೋಕ ಸಙ್ಗ್ರಹಾರ್ಥವಾಗಿ ಮಾಡುತ್ತಿರುವಾಗ, ನೀನು ನನಗೂ ನನ್ನ ಆಜ್ಞೆಗಳಿಗೂ ಪೂರ್ವಕರ್ಮಗಳಿಗೂ ಅಧೀನನಾಗಿದ್ದು ಕೊಂಡು, ಮೋಕ್ಷಾಪೇಕ್ಷಾಯುಕ್ತನಾಗಿ ಕ್ಷತ್ರಿಯನಾಗಿ ಲೋಕಕಂಟಕರ ಶಿಕ್ಷೆ, ಸಾಧುಗಳರಕ್ಷೆ, ಇವುಗಳೇ ಇತಿಕರ್ತವ್ಯಗಳಾಗಿರುವ ನೀನು, ವಿಹಿತ ಕರ್ಮಗಳನ್ನು ಮಾಡಬೇಡವೇ ಎಂದು ಉಪ ದೇಶಿಸುತ್ತಾರೆ. ಮೇ ಎಂಬ ಪದದಲ್ಲಿ ತೋರಿಬರುವ ಅಭಿಪ್ರಾಯವನ್ನು **ಸರ್ವೇಶ್ವರಸ್ಯ** ಎಂದಾ ರಂಭಿಸಿ **ಸತ್ಯಸಙ್ಕಲ್ಪಸ್ಯ** ಎಂಬುವವರೆಗೂ ಸೂಚಿಸುತ್ತಾರೆ :—**ಸರ್ವೇಶ್ವರಸ್ಯ**-ಸರ್ವೇಶ್ವರನಾಗಿ **ಆಪ್ತಕಾಮಸ್ಯ** – ಸಮಸ್ತ ಕಾಮಗಳನ್ನೂ ಹೊಂದಿರುವ, ಆದುದರಿಂದ ಇನ್ನು ಯಾವ ಪ್ರಯೋಜ ನವೂ ಬೇಕಾಗದಿರುವ, ಸರ್ವಜ್ಞನಾಗಿ ಸತ್ಯಸಙ್ಕಲ್ಪನಾಗಿರುವ, **ಮೇ**-ನನಗೆ, **ತ್ರಿಷು ಲೋಕೇಷು** -

ಊರ್ಧ್ವ, ಮಧ್ಯಮ ಅಧೋಲೋಕಗಳಲ್ಲೂ, ದೇವಮನುಷ್ಯಾದಿ ದಿವ್ಯಮಙ್ಗಳರೂಪವನ್ನು ಹೊಂದಿ, ಸ್ವಚ್ಛಂದತಃ-ಸ್ವೇಚ್ಛೆಯಿಂದ ಸ್ವತಂತ್ರನಾಗಿ, ವರ್ತಮಾನಸ್ಯ- ಇರುವಂತವನಿಗೆ ಎಂದರೆ ಇರುವಂತಹ ನನಗೆ, ಕಿಂಚಿದಪಿ-ಸ್ವಲ್ಪವಾಗಲಿ, ಕರ್ತವ್ಯಂ-ಶಾಸ್ತ್ರವಶ್ಯತೆಯಿಂದಲಾಗಲಿ ಕರ್ಮವಶ್ಯತೆಯಿಂದಲಾಗಲಿ ನಿರ್ಬಂಧದಿಂದ ಮಾಡಬೇಕಾದುದು, ನಾಸ್ತಿ - ಇರುವದಿಲ್ಲವು. ಅದಕ್ಕೆ ಕಾರಣವನ್ನು ತಿಳಿಸುತ್ತಾರೆ. ಯತಃ - ಯಾವಕಾರಣದಿಂದ, ಅನವಾಪ್ತಂ-ನಾನು ಹೊಂದದೇ ಇರುವದು, ಕರ್ಮಣಾzವಾಪ್ತವ್ಯಂ - ಮೂರು ಲೋಕದಲ್ಲೂ ಕರ್ಮಮಾಡಿ ಹೊಂದತಕ್ಕದ್ದು, ನ ಕಿಂಚಿದಪ್ಯಸ್ತಿ- ಸ್ವಲ್ಪವೂಕೂಡ ಇರುವದಿಲ್ಲವು, ಅಥಾಪಿ - ಹಾಗಾದರೂ ಕೂಡ, ಇದು ಮೂಲದ ಚ ಶಬ್ದಾರ್ಥವು, ಲೋಕರಕ್ಷಾಯೈ - ಲೋಕ ಸಂರಕ್ಷಣಾರ್ಥವಾಗಿ, ಕರ್ಮಣ್ಯೇವ - ನನಗೆ ಉಚಿತವಾದ ಕರ್ಮದಲ್ಲೇ ಅಥವಾ ನಾನು ಅವತರಿಸಿದ ಜನ್ಮಾನುಗುಣವಾದ ಧರ್ಮಗಳಲ್ಲೇ, ವರ್ತ್ರೇ- ವರ್ತಿಸುವೆನು. ದೇವ ಮನುಷ್ಯಾದಿರೂಪೇಣ ಸ್ವಚ್ಛಂದತೋ ವರ್ತಮಾನಸ್ಯ ಎಂಬ ವಿಶೇಷಣವನ್ನು ಮೇ ಎಂಬ ಪದಕ್ಕೆ ಕೊಡಲು ಕಾರಣವೇನೆಂದರೆ—ನಾನೂ ನಿನ್ನಹಾಗೆ ದೇವ, ಮನುಷ್ಯ ತಿರ್ಯಗ್ರೂಪದಿಂದ ಜನ್ಮವನ್ನೆತ್ತಿರುವೆನು ; ನನ್ನ ಅವತಾರಗಳಾದರೋ ಸ್ವಚ್ಛಂದತಃ, ಸ್ವತಂತ್ರನಾಗಿರುವದರಿಂದ ಸ್ವೇಚ್ಛಾನುಸಾರವಾಗಿ ; ನಿನ್ನ ಜನ್ಮಗಳಾದರೋ ಹಾಗಲ್ಲವು, ಕರ್ಮಬದ್ಧನಾಗಿ ಅಂತಹ ಜನ್ಮ ಸಂತತಿಗಳನ್ನೆತ್ತಿರುವದು; ಎಂದು ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. ಶ್ರೀ ಕೃಷ್ಣಭಗವಾನರವರು ಹಿಂದೆ ಜನಕಾದಿಗಳ ದೃಷ್ಟಾಂತದಿಂದ ಸ್ವೋಚಿತ ಕರ್ಮಾನುಷ್ಠಾನವೇ ಶ್ರೇಯಸ್ಕರವೆಂದು ಸ್ಥಾಪಿಸಿದರು; ಈಗಲಾದರೋ ತಮ್ಮ ದೃಷ್ಟಾಂತವನ್ನೇ ಸೂಚಿಸಿ ಅದನ್ನೇ ಸಮರ್ಥಿಸುತ್ತಾರೆ. ನಮೇ ಪಾರ್ಥಾಸ್ತಿ ಎಂಬಲ್ಲಿರುವ ಮೇ ಶಬ್ದದಲ್ಲಿ ತೋರುವ ಶ್ರೀಕೃಷ್ಣನಾದ ತನಗೂ ಅರ್ಜುನನಿಗೂ ಇರುವ ವೈಲಕ್ಷಣ್ಯವನ್ನು ವಿವರಿಸುತ್ತಾರೆ. ಶ್ರೀಕೃಷ್ಣನಾದ ತಾನು ಸಮಸ್ತಲೋಕಗಳಿಗೂ ಈಶ್ವರನು, ಅರ್ಜುನನಾದ ನೀನು ತನಗೆ ದಾಸನು, ತಾನು ಅವಾಪ್ತ ಸಮಸ್ತ ಕಾಮನಾಗಿರುವದರಿಂದ ತನಗೇನೂ ಬೇಕಾದುದಿಲ್ಲವು ; ನಿನಗೆ ಹಾಗಲ್ಲವು ; ತಾನು ಸರ್ವಜ್ಞನು ಸತ್ಯಸಙ್ಕಲ್ಪನು, ನೀನಾದರೋ ಸರ್ವಜ್ಞನೂ ಅಲ್ಲವು ಸತ್ಯಸಙ್ಕಲ್ಪನೂ ಅಲ್ಲವು. ಮೂರು ಲೋಕದಲ್ಲೂ ತನಗೆ ಬೇಕಾದುದಿಲ್ಲವು, ಕರ್ಮಮಾಡಿ ಸಂಪಾದಿಸತಕ್ಕದ್ದಿಲ್ಲವು, ತನ್ನ ಸಙ್ಕಲ್ಪಮಾತ್ರದಿಂದಲೇ ಸೃಷ್ಟ್ಯಾದಿ ಸರ್ವವ್ಯಾಪಾರಗಳನ್ನೂ ನಡೆಸುವ ಶಕ್ತಿಯುಳ್ಳವನು, ನೀನು ಹಾಗಲ್ಲವು; ತಾನು ಸ್ವತಂತ್ರನು, ನೀನಾದರೋ ಪರತಂತ್ರನು; ತಾನು ಕರ್ಮವಶ್ಯನಲ್ಲದುದರಿಂದ ಮಾಡಲೇಬೇಕೆಂಬ ನಿರ್ಬಂಧವಿಲ್ಲವು, ನೀನಾದರೋ ಬದ್ಧಾತ್ಮನಾದುದರಿಂದ ನಿರ್ಬಂಧವುಂಟು. ತಾನಾದರೋ ಅವತಾರಗಳನ್ನು ದೇವ ಮನುಷ್ಯಾದಿ ರೂಪದಿಂದೆತ್ತುವದು ಸ್ವಚ್ಛಂದದಿಂದ ; ಅರ್ಜುನನಾದ ನೀನಾದರೋ ಕರ್ಮವಶ್ಯನಾಗಿ ಅಂತಹ ರೂಪಗಳನ್ನು ಎತ್ತುತ್ತೀಯೆ; ಹೇಗಿದ್ದರೂ ಲೋಕರಕ್ಷಣಾರ್ಥವಾಗಿ ಮೂರು ಲೋಕಗಳಲ್ಲೂ ದೇವ ಮನುಷ್ಯ ಆದಿ ಶಬ್ದದಿಂದ ತಿರ್ಯಗ್ರೂಪ ಅವತಾರಗಳನ್ನೆತ್ತಿ ನನ್ನ ಜನ್ಮಕ್ಕೆ ಉಚಿತಗಳಾದ ದುಷ್ಟನಿಗ್ರಹ ಶಿಷ್ಟಪರಿಪಾಲನೆ ಧರ್ಮಸಂಸ್ಥಾಪನಾದಿ ದಿವ್ಯಚೇಷ್ಟೆಗಳನ್ನೆಸಗಿರುವೆನು, ಹೀಗಿರುವಾಗ ನಿನ್ನಂತವನು ಲೋಕರಕ್ಷಣಾರ್ಥವಾಗಿ ನಿನಗೆ ಉಚಿತವಾಗಿ ವಿಧಿಸಲ್ಪಟ್ಟ ಕರ್ಮಗಳನ್ನು ಎಸಗಬೇಡವೇ? ಮಾಡಲೇಬೇಕೆಂಬುದು ಕೈಮುತಿಕ ನ್ಯಾಯಸಿದ್ಧವೆಂಬ ಭಾವವು. ಪೃಥಾತನಯನೆಂದು ಪ್ರಸಿದ್ಧಿಯನ್ನು ಹೊಂದಿರುವದರಿಂದ ಲೋಕದ ಜನರು ನಿನ್ನನ್ನು ಅನುವರ್ತಿಸುವರು, ಆ ಕಾರಣದಿಂದ ವಿಧಿ ವಿಹಿತವಾದ ಕರ್ಮವನ್ನು ಮಾಡಿಯೇ ತೀರಬೇಕೆಂಬುದು ಸೂಚಿತವು. ಹಾಗೆ ಮಾಡದೇಹೋದರೆ ಪ್ರತ್ಯುತ ಪ್ರತ್ಯವಾಯ ಉಂಟೆಂದು ಮುಂದೆ ತಿಳಿಸುತ್ತಾರೆ ; ಸರ್ವೇಶ್ವರನು ದೇವ ಮನುಷ್ಯಾದಿ ರೂಪಗಳನ್ನೆತ್ತುವದು ಜಗದುಪಕಾರಕ್ಕಾಗಿಯೇ ಎಂದು ಶ್ರೀ ಪರಾಶರರು ಚೆನ್ನಾಗಿ ವ್ಯಕ್ತಪಡಿಸಿರುತ್ತಾರೆ :—

**ಸಮಸ್ತಶಕ್ತಿ ರೂಪಾಣಿ ತತ್ಕರೋತಿ ಜನೇಶ್ವರ ।**
**ದೇವತಿರ್ಯಙ್ಮನುಷ್ಯಾಖ್ಯಾ ಚೇಷ್ಟಾವನ್ತಿ ಸ್ವಲೀಲಯಾ ॥**
**ಜಗತಾಮುಪಕಾರಾಯ ನ ಸಾ ಕರ್ಮನಿಮಿತ್ತಜಾ ।**
**ಚೇಷ್ಟಾ ತಸ್ಯಾಪ್ರಮೇಯಸ್ಯ ವ್ಯಾಪಿನ್ಯವ್ಯಾಹತಾತ್ಮಿಕಾ ॥** (ವಿ. ಪು. ೬. ೭. ೭೧-೨)

ಇದರರ್ಥವು—ಸಮಸ್ತ ಶಕ್ತಿಗಳುಳ್ಳ ಆ ಪರಬ್ರಹ್ಮನು ಓ ರಾಜನಾದ ಖಾಂಡಿಕ್ಯನೇ (ಎಂದು ಸಂಬೋಧಿಸಿ ಕೇಶಿಧ್ವಜರು ಹೇಳುವ ಪ್ರಕರಣವು) ತನ್ನ ಲೀಲೆಯಿಂದಲೇ, ಪ್ರತಿ ಕಲ್ಪದಲ್ಲೂ ಹದಿನಾಲ್ಕು ದೇವಾವತಾರಗಳನ್ನೂ, ಮತ್ಸ್ಯ ಕೂರ್ಮ ವರಾಹಾದಿ ತಿರ್ಯಗವತಾರಗಳನ್ನೂ, ರಾಮಕೃಷ್ಣಾದಿ ಮಾನುಷಾವತಾರಗಳನ್ನೂ ಮಾಡಿ ದಿವ್ಯ ಚೇಷ್ಟೆಗಳನ್ನೆಸಗುತ್ತಾನೆ. ಈ ಅವತಾರಗಳು ಏಕೆಂದರೆ **ಜಗತಾಮುಪಕಾರಾಯ** - ಲೋಕಗಳ ರಕ್ಷಣಾರ್ಥವಾಗಿ; ಹಾಗೆ ಅವತಾರಗಳನ್ನೆತ್ತುವದರಲ್ಲಿ ಸ್ವಾಮಿಗೆ ಪ್ರಯೋಜನವೇನಾದರೂ ಉಂಟೋ ಎಂದರೆ, ಏನೂ ಇಲ್ಲವು, **ಸ್ವಲೀಲಯಾ** - ಲೀಲಾಮಾತ್ರವೇ ಪ್ರಯೋಜನವು. ಪರಿಪೂರ್ಣ ಕಾಮನಾದ ರಾಜನಿಗೆ ಕೇವಲ ಲೀಲೆಯೇ ಹೇಗೆ ಪ್ರಯೋಜನವೋ ಹಾಗೆಯೇ ಎಂದು **ಲೋಕವತ್ತು ಲೀಲಾಕೈವಲ್ಯಂ** ಎಂಬ ಬ್ರಹ್ಮಸೂತ್ರದಲ್ಲಿ ಹೇಳಲ್ಪಟ್ಟಿರುತ್ತದೆ. **ನ ಸಾ ಕರ್ಮನಿಮಿತ್ತಜಾ** - ಆ ಚೇಷ್ಟೆಯು ನಮ್ಮಗಳ ಚೇಷ್ಟೆಯಹಾಗೆ ಸರ್ವೇಶ್ವರನಿಗೆ ಕರ್ಮಮೂಲವಾದುದಲ್ಲವು, ಮತ್ತು ಆ ಅಪ್ರಮೇಯನ ಚೇಷ್ಟೆಯು, **ವ್ಯಾಪಿನೀ** - ಅನೇಕ ಜಾತಿಗಳಲ್ಲಿ ಜನ್ಮವನ್ನೂ ಮತ್ತು ಕರ್ಮಗಳನ್ನೂ ವ್ಯಾಪಿಸಿರುವಂಥಾದ್ದು; **ಅಜಾಯಮಾನೋ ಬಹುಧಾ ವಿಜಾಯತೇ** ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಬಹುಜಾತಿ ವ್ಯಾಪಿನೀ; ಅಯೋಧ್ಯಾ, ಚಿತ್ರಕೂಟ, ದಂಡಕಾರಣ್ಯ, ದಕ್ಷಿಣ ಸಮುದ್ರ, ಲಂಕಾ ಮೊದಲಾದವುಗಳೇನು, ದ್ವಾರಕ ಬೃಂದಾವನ ಯಮುನಾ ತಟಾದಿಗಳೇನು, ಹೀಗೆ ಅನೇಕ ಪ್ರದೇಶಗಳಲ್ಲಿ ಕರ್ಮಗಳಿಂದಲೂ **ವ್ಯಾಪಿನೀ** ಮತ್ತು **ಅವ್ಯಾಹತಾತ್ಮಿಕಾ** - ರಾವಣ, ಕುಂಭಕರ್ಣ, ಶಿಶುಪಾಲ, ದಂತವಕ್ತ್ರ, ಕಂಸ, ಬಾಣಾದಿಗಳಿಂದಲೂ ಅಪ್ರತಿಹತವಾದುದು. ಇಲ್ಲಿ **ವರ್ತ ಏವ ಚ ಕರ್ಮಣಿ** ಎಂದಿದ್ದರೂ ದಿವ್ಯಗಳಾದ ಸ್ವೋಚಿತ ಕರ್ಮಗಳನ್ನೆಸಗುವನು ಎಂದು ಇಷ್ಟು ಮಾತ್ರವೇ ಮೂಲದಲ್ಲಿ ಇರುವಾಗ, **ಲೋಕ ರಕ್ಷಾಯೈ** ಎಂದು ಹೇಗೆ ಇಲ್ಲದಿರುವದನ್ನು ಸೇರಿಸಿ ಹೇಳಿದರು ಎಂದರೆ, ಹಿಂದೆಯೂ **ಲೋಕ** ಸಂಗ್ರಹ ವಿಷಯವು ಹೇಳಲ್ಪಟ್ಟು, ಮುಂದಿನ ಎರಡು ಶ್ಲೋಕಗಳಲ್ಲೂ ಲೋಕರಕ್ಷಣಾರ್ಥವಾಗಿ ತಾನು ಕರ್ಮವನ್ನು ಎಸಗದಿದ್ದರೆ ಉಂಟಾಗುವ ಪ್ರತ್ಯವಾಯವನ್ನು ತಿಳಿಸುವದರಿಂದ, ಇಲ್ಲಿ **ಲೋಕರಕ್ಷಾಯೈ** ಎಂದು ಹೇಳಲ್ಪಟ್ಟು ಸರ್ವೇಶ್ವರನ ನಿರ್ಹೇತುಕ ಕೃಪೆಯು ಪ್ರಕಾಶಗೊಳಿಸಲ್ಪಟ್ಟಿತು. ಇಲ್ಲಿ **ಏವ** ಎಂಬ ಅವಧಾರಣವು **ವರ್ತೇ** ಎಂಬುದರೊಂದಿಗೆ ಸೇರಿಸಿದರೆ ಕರ್ಮವನ್ನೇ ಮಾಡುತ್ತಲಿರುವೆನೆಂಬರ್ಥವು ಬೋಧಿತವಾಗುತ್ತದೆ. **ಲೋಕರಕ್ಷಣ ವ್ಯಾಪಾರವು** ಸತತ ಸರ್ವೇಶ್ವರನಿಗೆ ಹಿತವಾದ ಕಾರ್ಯವಾದರೂ ಪ್ರಳಯಾದಿಗಳಲ್ಲಿ ವಿರಾಮವನ್ನು ಹೊಂದುವದರಿಂದ **ಕರ್ಮಣ್ಯೇವ** ಎಂದು ಅವಧಾರಣ ಪ್ರಯೋಗವೇ ಸಮಂಜಸವೆಂದು ಹಾಗೆ ಭಾಷ್ಯದಲ್ಲಿ ಬರೆದಿರುತ್ತಾರೆ. ಪ್ರಕರಣವು ಶ್ರೀ ಕೃಷ್ಣಾವತಾರ ವಿಷಯವೆಂದು ಭಾವಿಸಿದ ಪಕ್ಷದಲ್ಲಿ ವರ್ತ ಏವ ಎಂಬದಾಗಿಯೂ ಅನ್ವಯಿಸಬಹುದು. ಕರ್ಮಯೋಗದ ಜ್ಯಾಯಸ್ತ್ವವನ್ನು ಸ್ಥಾಪಿಸುವ ಪ್ರಕರಣವಾದುದರಿಂದ **ಕರ್ಮಣ್ಯೇವ ವರ್ತೇ** ಎಂಬ ವ್ಯಾಖ್ಯಾನವೇ ಸರಸವು. ಪರಮಾತ್ಮನೊಬ್ಬನೇ ಇರುವನು, ಇನ್ನೆಲ್ಲಾ ಶೂನ್ಯವೆಂಬ ವಾದಕ್ಕೆ ಪರಮಾತ್ಮನಿಗೆ ರಕ್ಷ್ಯವಾದ ಆಶ್ರಿತ ವರ್ಗವೇ ಇಲ್ಲವು. ಆದುದರಿಂದ ಈ ಶ್ಲೋಕವು ಅವರಿಗೆ ಅನುಕೂಲಿಸದು. **"ನಾನವಾಪ್ತಮವಾಪ್ತವ್ಯಂ"** ಎಂಬ ಪ್ರಯೋ

ಮೂ. ಯದಿಹ್ಯಹಂ ನವರ್ತ್ತೇಯಂ ಜಾತು ಕರ್ಮಣ್ಯತಂದ್ರಿತಃ ।
ಮಮ ವರ್ತ್ಮಾನು ವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩.
ಉತ್ಸೀದೇಯು ರಿಮೇಲೋಕಾ ನ ಕುರ್ಯಾಂ ಕರ್ಮಚೇದಹಂ ।
ಸಙ್ಕರಸ್ಯ ಚ ಕರ್ತ್ತಾಸ್ಯಾ ಮುಪಹನ್ಯಾ ಮಿಮಾಃ ಪ್ರಜಾಃ ॥ ೨೪.

---

ಗವೂ, ಆ ಸಿದ್ಧಾಂತಕ್ಕೆ ವಿರುದ್ಧವು; ಎಲ್ಲವನ್ನೂ ಹೊಂದಿರುವ ಅವಾಪ್ತ ಸಮಸ್ತ ಕಾಮನು ಎಂಬರ್ಥವು ಉಂಟಾಗುವದರಿಂದ, ನಿರ್ವಿಶೇಷನು, ವಿಭೂತಿ ರಹಿತನು ಎಂಬ ವಾದವೂ ನಿರಸ್ತವು.

**ಮೂಲಕ್ಕೆ ಅರ್ಥವು:**—ಹಿಂದೆ ಸರ್ವೇಶ್ವರನಾದ ತನಗೆ ಮಾಡಲೇಬೇಕೆಂಬ ನಿರ್ಬಂಧವೂ, ಮಾಡುವದರಿಂದ ತನಗೆ ಪ್ರಯೋಜನವೂ, ಎರಡೂ ಇಲ್ಲವೆಂದು ಹೇಳಲ್ಪಟ್ಟಿತು. ಹಾಗಾದರೆ ಏತಕ್ಕೆ ಕರ್ಮದಲ್ಲೇ ಪ್ರವರ್ತನೆಯು ಎಂಬ ಪ್ರಶ್ನೆಗೆ ಉತ್ತರವಾಗಿ, ಹಾಗೆ ತಾವು ಕರ್ಮವನ್ನು ಮಾಡವೇ ಇದ್ದರೆ ಉಂಟಾಗುವ ಅನರ್ಥವನ್ನು ಈ ಎರಡು ಶ್ಲೋಕಗಳಿಂದ ಪ್ರದರ್ಶಿಸುತ್ತಾರೆ :—**ಹೇ ಪಾರ್ಥ** - ಓ ಅರ್ಜುನನೇ, **ಅಹಂ** - ಜಗತ್ತಿಗೆ ಹಿತವನ್ನುಂಟುಮಾಡುವದರಲ್ಲೇ ಸಕ್ತನಾದ ಮನಸ್ಸುಳ್ಳವನೆಂದು ಪ್ರಸಿದ್ಧನಾದ ನಾನು, **ಜಾತು** - ಯಾವಾಗಲಾಗಲಿ, ಎಂದರೆ ಸರ್ವದಾ, **ಕರ್ಮಣಿ** - ಕರ್ಮ ಮಾಡುವದರಲ್ಲಿ, **ಅತಂದ್ರಿತಃ** - ಉದಾಸೀನನಲ್ಲದೆ ಜಾಗರೂಕನಾಗಿ, **ನ ವರ್ತ್ತೇಯಂ ಯದಿ** - ಇಲ್ಲದೆ ಹೋದರೆ, **ಮನುಷ್ಯಾಃ** - ಮನುಷ್ಯರು, **ಸರ್ವಶಃ**-ಸರ್ವಪ್ರಕಾರದಲ್ಲಿಯೂ **ಮಮವರ್ತ್ಮ** - ನನ್ನ ಮಾರ್ಗವನ್ನೇ, **ಅನುವರ್ತಂತೇಹಿ** – ಅನುಸರಿಸಿ ನಡೆಯುವರಷ್ಟೇ. ಹಾಗೆ ನಾನು ನಡೆದರೆ ಇತರರೂ ನಡೆಯಲಿ ಪ್ರತ್ಯವಾಯವೇನು ? ಎಂದರೆ ವಿಶೇಷ ಪ್ರತ್ಯವಾಯ ಉಂಟೆಂದು ಹೇಳುತ್ತಾರೆ:—ಮಮವರ್ತ್ಮಾನುವರ್ತನ್ತೇ ಎಂಬಲ್ಲಿ ತನ್ನನ್ನೇ ಅನುಸರಿಸಿ ನಡೆಯುವರು ಎಂಬಲ್ಲಿ ತನಗೆ ಹೇಗೆ ಪ್ರಸಿದ್ಧಿಯು ಎಂದು ಕೇಳಬಹುದು. ಪೂತನಾ ಶಕಟ ಕಂಸ ಶಿಶುಪಾಲಾದಿ ಲೋಕ ಕಂಟಕರನ್ನೆಲ್ಲಾ ಸಂಹರಿಸಿದುದರಿಂದಲೂ, ಗೋವರ್ಧನೋದ್ಧಾರಣಾದಿ ಅತಿಮಾನುಷ ಚೇಷ್ಟಿತಗಳಿಂದಲೂ ಪ್ರಸಿದ್ಧನಾಗಿರುವದರಿಂದ ತನ್ನನ್ನೇ ಎಲ್ಲರೂ ಅನುವರ್ತಿಸಿ ನಡೆಯುವರೆಂದು ಹೇಳಲ್ಪಟ್ಟಿತು. ಆಭಿಜಾತ್ಯ,ಕಲ್ಯಾಣ ಗುಣಗಳು,ಲೋಕೋಪಕಾರ,ನಿರತಿಶಯ ಸಾಮರ್ಥ್ಯ,ಮೊದಲಾದವುಗಳು ನನ್ನಲ್ಲಿವೆ ಎಂದು ತುಂಬಾ ಶ್ರೇಷ್ಠನೆಂದು ಭಾವಿಸಿ, ಲೋಕದವರೆಲ್ಲಾ ತನ್ನನ್ನೇ ಅನುವರ್ತಿಸುವರೆಂದಾದನಂತರ, ಅಂತವನು ಬಹು ಜಾಗರೂಕನಾಗಿ ಶಾಸ್ತ್ರದ ಎಲ್ಲೆಯನ್ನೂ ಸ್ವಲ್ಪವೂ ಮೀರದಂತೆ ಕರ್ಮಾನುಷ್ಠಾನವನ್ನು ಮಾಡತಕ್ಕದ್ದು. ಹಾಗೆ ಮಾಡದೆ ಹೋದರೆ ಆಗುವ ಅನರ್ಥವನ್ನು ಉಪಪಾದಿಸುತ್ತಾರೆ:—**ಅಹಂ** - ಅಂತಹ ಶ್ರೇಷ್ಠನೆಂದು ಪ್ರಸಿದ್ಧನಾದ ನಾನು, **ಕರ್ಮ** - ಸ್ವವರ್ಣಾಶ್ರಮೋಚಿತ ಕರ್ಮವನ್ನು, **ನಕುರ್ಯಾಂಚೇತ್** - ಮಾಡದೇ ಹೋದರೆ, **ಇಮೇ ಲೋಕಾಃ** - ಈ ಜನರು, **ಉತ್ಸೀದೇಯುಃ**-ನಷ್ಟರಾಗುವರು, ಮತ್ತು **ಸಂಕರಸ್ಯ** - ಕುಲಗಳ ಸಾಂಕರ್ಯದ, **ಕರ್ತಾಸ್ಯಾಮ್** - ಕಾರಣನಾಗುವೆನು, ಮಾಡಿದವನಾಗುವೆನು, **ಇಮಾಃ ಪ್ರಜಾಃ**-ನನಗೆ ಪುತ್ರವದ್ವಾತ್ಸಲ್ಯಕ್ಕೆ ಪಾತ್ರರಾದ ಈ ಪ್ರಜೆಗಳನ್ನು, **ಉಪಹನ್ಯಾಮ್** - ಪಾಲಿಸುವದಕ್ಕೆ ಬದಲಾಗಿ ನಾಶಮಾಡಿದವನಾಗುವೆನು ಎಂದರೆ ಶ್ರೇಯಸ್ಸುಗಳನ್ನು ಹೊಂದದೆ ದುರ್ಗತಿಯನ್ನು ಹೊಂದುವಹಾಗೆ ಮಾಡುವೆನೆಂಬ ಭಾವವು.

**ಭಾಷ್ಯಾರ್ಥವು :**—ಕರ್ತವ್ಯವೂ ಪ್ರಯೋಜನವೂ ಎರಡೂ ಇಲ್ಲದಿರುವಾಗ, ಶ್ರೀಕೃಷ್ಣನಾದ ನೀನು ಯಾವಾಗಲೂ ಕರ್ಮಗಳನ್ನು ಅನುಷ್ಠಿಸುತ್ತಿರುವದು ಏತಕ್ಕೆ ಎಂಬ ಶಙ್ಕಾ ಸಮಾಧಾನಾರ್ಥವಾಗಿ ಮೊದಲನೆಯ ಶ್ಲೋಕದಲ್ಲಿ ನಾನು ಶ್ರೇಷ್ಠನೆಂದು ಭಾವಿಸಿ ಲೋಕದ ಜನರು ನನ್ನ

ಭಾ. ಅಹಂ ಸರ್ವೇಶ್ವರಸ್ಸತ್ಯಸಙ್ಕಲ್ಪಃ ಸ್ವಸಙ್ಕಲ್ಪಕೃತಜಗದುದಯವಿಭವಲಯಲೀಲಃ ಛಂದತೋ ಜಗದುಪಕೃತಿ ಮರ್ತ್ಯೋ ಜಾತೋಪಿ ಮನುಷ್ಯೇಷು ಶಿಷ್ಟಜನಾಗ್ರೇಸರ ವಸುದೇವಗೃಹೇಽವತೀರ್ಣ ಸ್ತತ್ಕುಲೋಚಿತೇ ಕರ್ಮಣ್ಯತಂದ್ರಿತ ಸ್ಸರ್ವದಾ ಯದಿ ನ ವರ್ತೇಯಂ, ಮಮ - ಶಿಷ್ಟಜನಾಗ್ರೇಸರ ವಸುದೇವಸೂನೋ ರ್ವರ್ತ್ಮ ಕೃತ್ಸ್ನವಿದ

---

ಹಾಗೆಯೇ ನಡೆಯುವರು ಎಂದು ಹೇಳಿ, ಎರಡನೆಯ ಶ್ಲೋಕದಲ್ಲಿ ಹಾಗೆ ನಡೆಯದಿದ್ದರೆ ಲೋಕಕ್ಕೆ ತುಂಬಾ ಅನರ್ಥಗಳುಂಟಾಗುತ್ತವೆಂದು,ಶ್ರೀಕೃಷ್ಣ ಭಗವಾನರವರು ಹೇಳುತ್ತಾರೆ. ಮೊದಲು **ಅಹಂ**- ಎಂಬ ಪದದಲ್ಲಿ ತೋರಿಬರುವ ಅರ್ಥವನ್ನು ವ್ಯಕ್ತಪಡಿಸುತ್ತಾರೆ. **ಅಹಂ** - ನಾನು ಎಂದರೆ ಸರ್ವೇಶ್ವರನಾಗಿ, ಸತ್ಯಸಙ್ಕಲ್ಪನಾಗಿ, **ಸ್ವಸಙ್ಕಲ್ಪಕೃತಜಗದುದಯವಿಭವಲಯಲೀಲಃ** – ಸಙ್ಕಲ್ಪಮಾತ್ರದಿಂದಲೇ **"ತದೈಕ್ಷತ ಬಹುಸ್ಯಾಂ"** ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವ ಹಾಗೆ ಮಾಡಲ್ಪಟ್ಟ ಜಗತ್ತಿನ ಸೃಷ್ಟಿ, ವೃದ್ಧಿಹೊಂದಿದ ಸ್ಥಿತಿ, ಲಯಗಳನ್ನೇ ಲೀಲೆಯಾಗಿರುವವನಾಗಿ **ಛಂದತಃ** - ಸ್ವೇಚ್ಛೆಯಿಂದಲೇ ಎಂದರೆ ಕರ್ಮವಶ್ಯನಲ್ಲದೇ ಎಂಬ ಭಾವವು, **ಜಗದುಪಕೃತಿ ಮರ್ತ್ಯಃ** - ಜಗತ್ತಿಗೆ ಉಪಕಾರವನ್ನು ಶಿಷ್ಟ ಪರಿಪಾಲನೆ, ದುಷ್ಟ ನಿಗ್ರಹ, ಧರ್ಮಸಂಸ್ಥಾಪನೆ ಮೂಲಕ ಮಾಡುವ ಮನುಷ್ಯನಾಗಿ, **ಮನುಷ್ಯೇಷು ಜಾತೋಪಿ** - ಮನುಷ್ಯರಲ್ಲಿ ಹುಟ್ಟಿದರೂ ಎಂದರೆ ಅವರಹಾಗೆ ಕರ್ಮವಶ್ಯನಾಗದೇನೆ ಎಂಬರ್ಥವು. ಇದು ಮೂಲದಲ್ಲಿರುವ ಹಿ ಶಬ್ದದಿಂದ ತೋರುವರ್ಥವು, **ಶಿಷ್ಟಜನಾಗ್ರೇಸರ ವಸುದೇವಗೃಹೇಽವತೀರ್ಣಃ**-ಶಾಸ್ತ್ರರೀತ್ಯಾ ಅನುಷ್ಠಾನವುಳ್ಳವರುಗಳಲ್ಲಿ ಮುಖ್ಯನಾದ ವಸುದೇವನ ಮನೆಯಲ್ಲಿ ಅವತರಿಸಿದವನಾಗಿ, **ತತ್ಕುಲೋಚಿತೇ** – ಆ ವಸುದೇವನ ಕುಲಕ್ಕೆ ಯೋಗ್ಯವಾದ, **ಕರ್ಮಣಿ** - ಕರ್ಮಾನುಷ್ಠಾನದಲ್ಲಿ, **ಅತಂದ್ರಿತಃ** – ಆಲಸ್ಯವಿಲ್ಲದೆ ಜಾಗರೂಕನಾಗಿ, **ಸರ್ವದಾ** - ಯಾವಾಗಲೂ, ಇದು ಮೂಲದ ಜಾತು ಶಬ್ದಾರ್ಥವು, **ಯದಿ ನವರ್ತೇಯಂ** - ನಾನು ಪ್ರವರ್ತಿಸದೇಹೋದರೆ, **ಮಮ** - ನನ್ನ ಎಂದರೆ, **ಶಿಷ್ಟಜನಾಗ್ರೇಸರ ವಸುದೇವಸೂನೋಃ** - ಶಿಷ್ಟ ಜನಗಳಲ್ಲಿ ಅಗ್ರ ಗಣ್ಯನೆನಿಸಿದ ವಸುದೇವನಿಗೆ ಪುತ್ರನಾದ ನನ್ನ, **ವರ್ತ್ಮ** - ಮಾರ್ಗವನ್ನು, **ಅಕೃತ್ಸ್ನ ವಿದಶ್ಶಿಷ್ಟಾಃ** ಇದು **ಮನುಷ್ಯಾಃ** - ಎಂಬುದಕ್ಕೆ ವ್ಯಾಖ್ಯಾನವು, ; ಅವರು ಎಂತವರೆಂದರೆ ತುಂಬಾ ತಿಳಿಯದವರಾಗಿ ಶ್ರೇಷ್ಠರನ್ನನುವರ್ತಿಸಿ ನಡೆಯಬೇಕೆಂದಿರುವವರು, **ಸರ್ವಪ್ರಕಾರೇಣ**- ಎಲ್ಲಾ ರೀತಿಯಿಂದಲೂ ಎಂದರೆ ಸಮಸ್ತ ಪ್ರಮಾಣಪೂರ್ವಕವಾಗಿಯೂ, ಆದುದರಿಂದ ಸಮಸ್ತ ಇತಿಕರ್ತವ್ಯತಾರೂಪದಿಂದಲೂ ಎಂಬಭಿಪ್ರಾಯವು, **ಅಯಮೇವಧರ್ಮಃ ಇತಿ** - ಇದೇ ಶಾಸ್ತ್ರದಲ್ಲಿ ಹೇಳಿರುವ ಅನುಷ್ಠಾನವೆಂದು, **ಅನುವರ್ತಂತೇ** - ಅನುಸರಿಸಿ ನಡೆಯುವರು; ಇಲ್ಲಿ ಮನುಷ್ಯರೂಪದಲ್ಲಿರುವ ವಸುದೇವ ಪುತ್ರನು **ಅಹಂ** ಎಂದು ಹೇಳಿರುವಾಗ ಅದಕ್ಕೆ, **ಅಹಂ ಸರ್ವೇಶ್ವರಃ ಸತ್ಯಸಙ್ಕಲ್ಪಃ** ಎಂಬ ವ್ಯಾಖ್ಯಾನವು ಹೇಗೆ? ಎಂದರೆ, ಶ್ರೀಕೃಷ್ಣಭಗವಾನರವರು ಅರ್ಜುನನಿಗೆ ತಾನು ಸರ್ವೇಶ್ವರನೆಂದು ಅನೇಕ ಸಲ ತಿಳಿಯಪಡಿಸಿರುತ್ತಾರೆ. ಹಿಂದಿನ ಶ್ಲೋಕ ದಲ್ಲೇ **"ನ ಮೇಪಾರ್ಥಾಸ್ತಿಕರ್ತವ್ಯಂ"** ಎಂದೂ **"ನಾನವಾಪ್ತಮವಾಪ್ತವ್ಯಂ"** ಎಂದು ಹೇಳಿರು ವದರಿಂದಲೇ **ತಾನುಸರ್ವೇಶ್ವರಃ - ಸತ್ಯಸಙ್ಕಲ್ಪಃ** ಎಂಬುದು ವ್ಯಕ್ತವು. ಈಗ **ಮನುಷ್ಯಾಃ** ಎಂದು ಹೇಳಿರುವದರಿಂದ, ತಾನು ಈಗ ಮನುಷ್ಯರಿಗೆ ಉಪಕಾರಕನಾಗಿ ಮನುಷ್ಯಾವತಾರ ವನ್ನು ಎತ್ತಿರುತ್ತೇನೆಂಬ ಭಾವವು ಸೂಚಿತವು. ಆದುದರಿಂದಲೇ **ಜಗದುಪಕೃತಿ ಮರ್ತ್ಯಃ** ಎಂಬ ಪ್ರಯೋಗವು. **ಸ್ವಸಙ್ಕಲ್ಪಕೃತ ಜಗದುದಯವಿಭವಲಯಲೀಲಃ** ಎಂದು ಹೇಳಿರುವದು, ಹಿಂದಿನ ಶ್ಲೋಕದ **ನಾನವಾಪ್ತ ಮವಾಪ್ತವ್ಯಂ** ಎಂಬುದರ ಅನುವಾದವು. ಸರ್ವೇಶ್ವರನು

ಭಾ. ಶ್ಶಿಷ್ಟಾಃ ಸರ್ವಪ್ರಕಾರೇಣಾಯ'ಮೇವ ಧರ್ಮ ಇತ್ಯನುವರ್ತ್ತಂತೇ; ತೇಚ ಸ್ವಕರ್ತ್ತವ್ಯಾನನು ಷ್ಠಾನೇನಾಕರಣೇ ಪ್ರತ್ಯವಾಯೇನಚಾ ತ್ಮಾನಮುಲಬ್ಧ್ವಾ ನಿರಯಗಾಮಿನೋ ಭವೇಯುಃ;

ದೇವನಾಗಿ ಮನುಷ್ಯನಾಗಿ ತಿರ್ಯಕ್ಕಾಗಿ ಹೀಗೆಲ್ಲಾ ಅವತಾರಮಾಡುವದು ತನ್ನ ಇಷ್ಟಾನು ಸಾರವಾಗಿಯೇ ವಿನಾ, ನಾವು ಜನ್ಮವನ್ನೆತ್ತುವಹಾಗಲ್ಲವು. ನಾವಾದರೋ ಕರ್ಮಬದ್ಧ ರಾಗಿ ಅಂತಹ ಕರ್ಮಾನುಭವಕ್ಕಾಗಿ ಜನ್ಮಗಳನ್ನೆತ್ತುವೆವು; ಸರ್ವೇಶ್ವರನಾದರೋ ಜಗತ್ತಿಗೆ ಉಪಕಾರಮಾಡುವವಕ್ಕಾಗಿ "ಇಚ್ಛಾಗೃಹೀತಾಭಿಮತೋರುದೇಹಃ" (ವಿ. ಪು. ೬. ೫. ೮೪) ಸ್ವೇಚ್ಛಾನುಸಾರವಾಗಿ ದಿವ್ಯಮಙ್ಗಳ ವಿಗ್ರಹಗಳನ್ನು ಸ್ವೀಕರಿಸುವವನು; ಆದುದರಿಂದ, ಛಂದ ತೋಜಗದುಪಕೃತಿ ಮರ್ತ್ಯಃ ಎಂಬ ಪ್ರಯೋಗವು; ಜಗದುಪಕೃತಿಮರ್ತ್ಯಃ ಎಂಬುದು ಪ್ರಸಿದ್ಧರಾದ ಪರಾಶರರ ವಾಕ್ಯವಾದುದರಿಂದ ಅದನ್ನೇ ಉಪಯೋಗಿಸಿರುತ್ತಾರೆ:—ಇಂದ್ರನು ಪಾರಿಜಾತಾಪಹರಣಕಾಲದಲ್ಲಿ ಶ್ರೀಕೃಷ್ಣನನ್ನು "ಸಕಲಭುವನಸೂತಿ ಮೂರ್ತಿರಲ್ಪಾಲ್ಪ ಸೂಕ್ಷ್ಮಾ ವಿದಿತಸಕಲವೇದ್ಯೈರ್ಜ್ಞಾಯತೇ ಯಸ್ಯನಾನ್ಯೈಃ । ತಮುಜಮಕೃತಿಮೀಶಂ ಶಾಶ್ವತಂ ಸ್ವೇಚ್ಛಯೈನಂ ಜಗದುಪಕೃತಿಮರ್ತ್ಯಂ ಕೋವಿಜೇತುಂ ಸಮರ್ಥಃ॥" (ವಿ. ಪು. ೫. ೩೦. ೮೦.) ಎಂಬ ಶ್ಲೋಕದಲ್ಲಿ ಸ್ತುತಿಸವ ಪ್ರಕರಣವು. ಶ್ರುತಿಯೂ "ಅಜಾಯಮಾನೋ ಬಹುಧಾ ವಿಜಾಯತೇ" ಮತ್ಸ್ಯ ಕೂರ್ಮ ವರಾಹಾದಿರೂಪದಿಂದ ವಿಜಾಯತೇ; ಈ ವಿಜಾಯತೇ ಎಂಬ ಶಬ್ದವು ಸ್ವೇಚ್ಛೆಯಿಂದ ಜಗದ್ರಕ್ಷಣಾರ್ಥವಾಗಿ ನಾನಾವಿಧವಾದ ದಿವ್ಯ ಮಙ್ಗಳ ವಿಗ್ರಹಯುಕ್ತನಾಗಿ ತನ್ನ ಅವತಾರಕ್ಕೆ ತನ್ನ ಸಙ್ಕಲ್ಪವೇ ಕಾರಣವೆಂದು ಹೇಳುತ್ತದೆ. ಹಾಗೆಯೇ ವಿಷ್ಣುಪುರಾಣದಲ್ಲೂ (೫. ೧. ೫೨) ನಾಕಾರಣಾತ್ಕಾರಣಾ ದ್ವಾಕಾರಣಾಕಾರಣಾನ್ನಚ । ಶರೀರ ಗ್ರಹಣಂವ್ಯಾಪಿನ್ ಧರ್ಮತ್ರಾಣಾಯ ಕೇವಲಮ್" ॥ ಎಂದರೆ ಓ ಸರ್ವವ್ಯಾಪಿಯಾದ ಪರ ಮಾತ್ಮನೇ ನಿನ್ನ ಶರೀರ ಗ್ರಹಣವು ಎಂದರೆ ದಿವ್ಯಮಙ್ಗಳ ವಿಗ್ರಹವನ್ನು ಹೊಂದಿ ಅವತರಿಸು ವದು, ನಕಾರಣಾತ್ - ಕಾರಣವೆಂದರೆ ಪ್ರಯೋಜನರೂಪ ಸುಖವು, ಸ್ವರ್ಗಾದಿ ಸುಖೋಪ ಭೋಗಕ್ಕಾಗಿಯೂ ಅಲ್ಲವು, ನಾಕಾರಣಾತ್ - ಅಕಾರಣವೆಂದರೆ ಪ್ರಯೋಜನವಲ್ಲದ ದುಃಖವು, ದುಃಖಾದಿಗಳನ್ನನುಭವಿಸುವದಕ್ಕೂ ಅಲ್ಲವು; ಕಾರಣಾಕಾರಣಾನ್ನಚ - ಮನುಷ್ಯನಹಾಗೆ ಸುಖ ದುಃಖಗಳೆರಡನ್ನು ಅನುಭವಿಸುವದಕ್ಕೂ ಅಲ್ಲವು; ಇನ್ನು ಯಾವುದಕ್ಕೆ ಎಂದರೆ ಧರ್ಮತ್ರಾ ಣಾಯಕೇವಲಮ್ - ಕೇವಲ ಧರ್ಮ ಸಂಸ್ಥಾಪನಕ್ಕಾಗಿಯೇ ಎಂದು ಹೇಳಿರುವದು, ಇಲ್ಲಿ ಅನು ಸಂಧೇಯವು. ವಸ್ತುತಃ ಸರ್ವೇಶ್ವರನು ಕರ್ಮವಶ್ಯನಲ್ಲದುದರಿಂದ ವರ್ಣಾಶ್ರಮೋಚಿತ ಕರ್ಮ ಗಳ ನಿರ್ಬಂಧವು ಆತನಿಗಿಲ್ಲವು. ಈಗ ವಸುದೇವನ ಮನೆಯಲ್ಲಿ ಜನಿಸಿ ಪ್ರಸಿದ್ಧನಾಗಿರುವದ ರಿಂದ ತತ್ಕುಲೋಚಿತವಾದ ಕ್ಷತ್ರಧರ್ಮವನ್ನು ಅವಲಂಬಿಸಲೇಬೇಕೆಂಬ ತಾತ್ಪರ್ಯವು; ಏಕೆಂ ದರೆ, ಇತರರು ತುಂಬಾ ಜ್ಞಾನವಿಲ್ಲದವರು ತನ್ನನ್ನೇ ಸರ್ವ ಪ್ರಕಾರದಿಂದಲೂ ಅನುವರ್ತಿ ಸುವರು; ತನ್ನನ್ನು ಎಲ್ಲರೂ ಅನುಸರಿಸಿ ನಡೆಯುತ್ತಾರೆಂಬುದು. ಮೂಲದ ಹಿ ಶಬ್ದದಿಂದ ತೋರಿಬರುತ್ತದೆ. ಈ ಅಭಿಪ್ರಾಯವನ್ನೇ ಮನುಷ್ಯೇಷು ಶಿಷ್ಟ ಜನಾಗ್ರೇಸರ ವಸುದೇವಗೃಹೇ zವತೀರ್ಣಃ ಎಂದಾರಂಭಿಸಿ ಉಪಪಾದಿಸಿರುತ್ತಾರೆ. ತಾನು ಸ್ವಕುಲೋಚಿತ ಧರ್ಮಗಳನ್ನಾ ಚರಿಸದೇ ಹೋದರೆ ಏನು? ಎಂದರೆ ತುಂಬಾ ಪ್ರತ್ಯವಾಯ ಉಂಟೆಂದು ಮುಂದಿನ ಶ್ಲೋಕಾರ್ಥ ವನ್ನು ಸಙ್ಗ್ರಹಿಸುತ್ತಾರೆ:—ತೇ ಚ-ಆ ಅಕೃತ್ಸ್ನ ವಿತ್ತುಗಳಾದ ಶಿಷ್ಟರಾದರೋ, ಸ್ವಕರ್ತವ್ಯಾ ನನುಷ್ಠಾನೇನ - ತಾವು ಅಗತ್ಯವಾಗಿ ಮಾಡಬೇಕಾದ ವರ್ಣಾಶ್ರಮಧರ್ಮಗಳನ್ನಾಚರಿಸದೇ ಇರುವದರಿಂದಲೂ, ಅಕರಣೇ ಪ್ರತ್ಯವಾಯೇನ ಚ - ಹಾಗೆ ಮಾಡದೇ ಇರುವದರಿಂದ ಉಂಟಾ

ಭಾ. ಅಹಂ ಕುಲೋಚಿತಂ ಕರ್ಮ ನ ಚೇತ್ಕುರ್ಯಾಂ, ಏವಮೇವ ಸರ್ವೇ ಶಿಷ್ಟ ಲೋಕಾ ಮದಾಚಾರಾಯತ್ತಧರ್ಮನಿಶ್ಚಯಾಃ ಅಕರಣಾದೇವ ಉತ್ಸೀದೇಯುಃ- ನಷ್ಟಾಭವೇಯುಃ; ಶಾಸ್ತ್ರೀಯಾಚಾರಾನನುಪಾಲನಾತ್ಸರ್ವೇಷಾಂ ಶಿಷ್ಟಕುಲಾನಾಂ ಸಂಕರಸ್ಯ ಚ ಕರ್ತಾಸ್ಯಾಮ್. ಅತ ಏವ ಇಮಾಃ ಪ್ರಜಾಃ ಉಪಹನ್ಯಾಮ್. ಏವ

---

ಗುವ ಪ್ರತ್ಯವಾಯದಿಂದಲೂ, ಆತ್ಮನ ಮಲಬದ್ಧಾತ್ವ - ಆತ್ಮಾವಲೋಕನವನ್ನು ಹೊಂದದೆ **ನಿರಯಗಾಮಿನೋ ಭವೇಯುಃ** - ನರಕವನ್ನು ಹೊಂದುವವರಾಗುವರು. ಅವರುಗಳು ತುಂಬಾ ತಿಳಿಯದವರಲ್ಲವಾದರೂ ಶಾಸ್ತ್ರಾಭಿಮಾನವಿರುವ ಶಿಷ್ಟರಾದುದರಿಂದ ನಿನ್ನನ್ನು ಅನುಸರಿ ಸದೇ ಇರಬಹುದಲ್ಲಾ ? ಎಂದರೆ ಹಾಗಲ್ಲವು. ಅವರು ಖಂಡಿತವಾಗಿಯೂ **ಮನುವರ್ತ್ಮಾನು ವರ್ತಂತೇ**ಯಾದುದರಿಂದ ನನ್ನನ್ನನುಸರಿಸದೇ ಇರುವದಿಲ್ಲವು, ಆಗ ಪ್ರತ್ಯವಾಯ ಉಂಟಾ ಗದೇ ಇರುವದಿಲ್ಲವೆಂದು ಹೇಳುತ್ತಾರೆ. ಇವನ್ನು ಅರ್ಜುನನಿಗೆ ತಿಳಿಸುವದರಲ್ಲಿ ಸ್ವಾಮಿಗೆ ಅಭಿಪ್ರಾಯವೇನೆಂದರೆ:—ನೀನೂ ಸ್ವಲ್ಪಮಟ್ಟಿಗೆ ಪ್ರಖ್ಯಾತಿಯನ್ನು ಹೊಂದಿರುವವನೇ; ನೀನು ಶಿಷ್ಟನೆಂದು ಭಾವಿಸಿ ನಿನ್ನನ್ನೂ ಅನುಸರಿಸಿ ನಡೆಯುವ ಅನೇಕ ಕ್ಷತ್ರಿಯರುಂಟು; ನಿನ್ನ ವರ್ಣಕ್ಕೆ ಉಚಿತವಾದ ಕರ್ಮವನ್ನು ನೀನೂ ಮಾಡದೇ ಹೋದರೆ, ಇತರ ಕ್ಷತ್ರಿಯರೂ ನಿನ್ನನ್ನನುಸರಿಸಿ ಲೋಕ ಕಂಟಕರನ್ನು ನಿಗ್ರಹಿಸದೆ ಇರುವದರಿಂದ, ಲೋಕದಲ್ಲಿ ಅಧರ್ಮವು ಹೆಚ್ಚಿ, ಅನೇಕ ಪಾತಕಗಳುಂಟಾಗುವದಕ್ಕೆ ನೀನೂ ಕಾರಣವಾಗುತ್ತೀಯೇ ಎಂಬುದು ತಾತ್ಪ ರ್ಯವು. **ಅಹಂ** - ನಾನು, ಕುಲೋಚಿತವಾದ ಕರ್ಮವನ್ನು, **ನ ಚೇತ್ಕುರ್ಯಾಂ** - ಮಾಡದೇ ಹೋದರೆ, **ಏವಮೇವ** - ಹಾಗೆಯೇ, **ಸರ್ವೇ ಶಿಷ್ಟಲೋಕಾಃ** - ಸಮಸ್ತ ಶಿಷ್ಟಜನರೂ, ಇಲ್ಲಿ **ಲೋಕಾಃ**ಎಂಬುದರಿಂದ ಸಮಸ್ತ ಜನರೂ ಹೇಳಲ್ಪಡಲಿಲ್ಲವು, ಎಂತವರು ಹೇಳಲ್ಪಟ್ಟರೆಂದರೆ, ದೊಡ್ಡವರು ಅನುಷ್ಠಿಸಿದ ಮಾರ್ಗವೇ ಸರಿಯಾದ ಮಾರ್ಗವೆಂದು ನಂಬಿ, ಅದರಹಾಗೆ ಅನು ಷ್ಠಿಸಬೇಕೆಂಬ ಆಶೆಯುಳ್ಳವರು, ಆದುದರಿಂದ **ಶಿಷ್ಟಲೋಕಾಃ** ಎಂದು ವ್ಯಾಖ್ಯಾನಮಾಡಿರು ತ್ತಾರೆ. ಎಲ್ಲರಿಗೂ ಶಾಸ್ತ್ರಾಚಾರವು ವೇದ್ಯವಾಗುವದು ಕಷ್ಟವು, ಆದರೆ ಅವರುಗಳಲ್ಲಿ ಆಸ್ತಿಕ್ಯ ಬುದ್ಧಿ ಇರುವದರಿಂದ ಹಿರಿಯರು ಹೇಗೆ ನಡೆಯುತ್ತಾರೋ ಅದೇ ನಮಗೆ ಶಾಸ್ತ್ರಾಚಾರವೆಂದು ಭಾವಿಸಿ ಹಾಗೆ ನಡೆಯುವರು; ಆದುದರಿಂದಲೇ ಇವೇ **ಲೋಕಾಃ** ಎಂಬುದಕ್ಕೆ ಇವೇ **ಶಿಷ್ಟ ಲೋಕಾಃ** ಎಂಬ ವ್ಯಾಖ್ಯಾನವು. **ಮದಾಚಾರಾಯತ್ತ ಧರ್ಮನಿಶ್ಚಯಾಃ** - ನನ್ನ ಆಚಾರಕ್ಕ ಧೀನವಾದ ಧರ್ಮನಿಶ್ಚಯವುಳ್ಳವರಾಗಿ, **ಅಕರಣಾದೇವ** - ಸ್ವವರ್ಣೋಚಿತ ಕರ್ಮವನ್ನು ಮಾಡದೇ ಇರುವದರಿಂದಲೇ, **ಉತ್ಸೀದೇಯುಃ** ಎಂದರೆ **ನಷ್ಟಾಭವೇಯುಃ** - ನಷ್ಟರಾಗುವರು. ಆತ್ಮನು ನಿತ್ಯವಾಗಿ ಆತನಿಗೆ ಎಂದಿಗೂ ನಾಶವೆಂಬುದು ಇಲ್ಲದಿರುವಾಗ, ಇಲ್ಲಿ ನಾಶ ಶಬ್ದಕ್ಕೆ ಏನು ಅಭಿಪ್ರಾಯವೆಂದರೆ (೧) ಪುರುಷಾರ್ಥವಿಲ್ಲದೆ ಹೋಗೋಣವೂ (೨) ಅಪುರುಷಾರ್ಥವಾದ ದುಃಖಪ್ರಾಪ್ತಿಯೂ ಎಂಬುದು ತಾತ್ಪರ್ಯವು. ಹೀಗೆಯೇ ಶ್ರುತಿಯಲ್ಲೂ **"ಅಸನ್ನೇವ ಸ ಭವತಿ"** (ತೈ. ೬. ೧) ಎಂಬಲ್ಲೂ ಈ ಅಭಿಪ್ರಾಯವೇ ಉಪಪಾದಿತವು. ಮೋಕ್ಷಪ್ರಾಪ್ತಿಯಿಲ್ಲದೆ ದುಃಖಪ್ರಾಪ್ತಿಗಾಗಿ ಪುನಃಪುನಃ ಸಂಸಾರವನ್ನು ಹೊಂದೋಣವೇ ಆತ್ಮನಾಶವೆಂಬ ಭಾವವು. ಹೇಗೆ ನಷ್ಟರಾಗುವರೆಂಬುದನ್ನು ಮುಂದೆ ಉತ್ತರಾರ್ಧವ ಅರ್ಥಮೂಲಕವಾಗಿ ವ್ಯಕ್ತಪಡಿಸು ತ್ತಾರೆ:—**ಶಾಸ್ತ್ರೀಯಾಚಾರಾನನುಪಾಲನಾತ್** - ಶಾಸ್ತ್ರದಲ್ಲಿ ವಿಧಿಸಲ್ಪಟ್ಟ ಆಚಾರವನ್ನು ಪರಿಗ್ರಹಿಸದೆ ಇರುವದರಿಂದ, **ಸರ್ವೇಷಾಂ ಶಿಷ್ಟಕುಲಾನಾಂ** ಸಮಸ್ತ ಶಿಷ್ಟಜನರ ಕುಲಗಳ, **ಸಂಕರಸ್ಯ ಚ ಕರ್ತಾಸ್ಯಾಮ್**- ವರ್ಣಾಶ್ರಮ ಧರ್ಮಗಳು ನಷ್ಟವಾಗುವದರಿಂದ ಜಾತಿಸಾಂಕರ್ಯ

ಭಾ. ಮೇವ ತ್ವಮಪಿ ಶಿಷ್ಟಜನಾಗ್ರೇಸರ ಪಾಂಡುತನಯೋ ಯುಧಿಷ್ಠಿರಾನುಜೋಽರ್ಜುನಸ್ಸನ್ ಯದಿ ಜ್ಞಾನನಿಷ್ಠಾಯಾಮಧಿಕರೋಷಿ, ತತಸ್ತ್ವದಾಚಾರಾನುವರ್ತಿನೋಽಕೃತ್ಸ್ನವಿದಶ್ಶಿಷ್ಟಾ ಮುಮುಕ್ಷವಃ ಸ್ವಾಧಿಕಾರ ಮಜಾನಂತಃ ಕರ್ಮನಿಷ್ಠಾಯಾಂ

ವನ್ನುಂಟುಮಾಡಿದವನಾಗುವೆನು. ಈ ಸಂಕರವು ಈ ಆತ್ಮನಾಶ ಉಂಟಾಗಲು ಹೇತುವೆಂದು ಉಪಪಾದಿಸಿದಂತಾಯಿತು. ಸಂಕರವು ಹೇಗೆ? ಎಂದರೆ ಕ್ಷತ್ರಿಯನಾದವನು ಸ್ವೋಚಿತ ಕರ್ಮವಾದ ದುಷ್ಟಜನರನ್ನು ಯುದ್ಧದಲ್ಲಿ ಕೊಲ್ಲದೆ ಬ್ರಾಹ್ಮಣ ಧರ್ಮವನ್ನು ಅವಲಂಬಿಸುತ್ತೇನೆಂಬುದು. **ಅತ ಏವ** - ಆ ಕಾರಣದಿಂದಲೇ, **ಇಮಾಃ ಪ್ರಜಾಃ** - ನನ್ನ ನಿರ್ಹೇತುಕ ಕೃಪೆಗೆ ಪಾತ್ರರಾದ ಈ ಪ್ರಜೆಗಳನ್ನು, **ಉಪಹನ್ಯಾಮ್** - ಕರ್ಮಭ್ರಷ್ಟರನ್ನಾಗಿ ಮಾಡಿ ನಾಶ ಮಾಡುವೆನು. ಈಗ ಇಷ್ಟುದೂರ ಶ್ರೀಕೃಷ್ಣನು ಹೇಳಿದ.ದು ಅರ್ಜುನನಿಗೆ ಅನ್ವಯಿಸಬೇಕೆಂಬ ಆಶಯದಿಂದಲಾದುದರಿಂದ, ಹೇಗೆ ಅನ್ವಯಿಸುತ್ತದೆಂಬುದನ್ನು ವ್ಯಕ್ತಪಡಿಸುತ್ತಾರೆ :— **ಏವಮೇವ** - ಅದೇ ರೀತಿಯಲ್ಲೇ, **ತ್ವಮಪಿ** - ನೀನೂ ಕೂಡ ಶಿಷ್ಟ ಜನಗಳಲ್ಲಿ ಶ್ರೇಷ್ಠನಾದ ಪಾಂಡುಪುತ್ರನು, **ಯುಧಿಷ್ಠಿರಾನುಜಃ** - ಯುದ್ಧದಲ್ಲಿ ಅಪ್ರತಿಹತನಾಗಿ ಸ್ಥಿರವಾಗಿ ನಿಲ್ಲುವ ಧರ್ಮರಾಜನ ತಮ್ಮನು ಮತ್ತು **ಅರ್ಜುನಸ್ಸನ್** - ಅಷ್ಟುಮಾತ್ರವೇ ಅಲ್ಲದೆ ಸ್ವಯಂಪರಾಕ್ರಮಿಯಾಗಿ ಅನೇಕ ಯುದ್ಧಕ್ರಮಗಳನ್ನು ನಡೆಸಿಯೂ, ಮತ್ತು ಊರ್ವಶಿ ವಿರಾಟಪುತ್ರಿಗಳ ವೃತ್ತಾಂತಗಳಿಂದ ಪ್ರಸಿದ್ಧಿಯನ್ನು ಹೊಂದಿದವನಾಗಿಯೂ, ಹೀಗೆ ಮೂರು ವಿಧ ಪ್ರಸಿದ್ಧಿಯು ನಿನಗುಂಟು ಯಾವುವೆಂದರೆ (೧) ಶಿಷ್ಟಜನಾಗ್ರೇಸರ ಪಾಂಡುತನಯನು (೨) ಮಹಾಧರ್ಮಿಷ್ಠನಾಗಿ ಅಜಾತು ಶತ್ರುವೆಂದು ಪ್ರಸಿದ್ಧಿ ಇರುವ ಧರ್ಮರಾಯನ ತಮ್ಮನು ಅಥವಾ ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವ ಯುಧಿಷ್ಠಿರನ ತಮ್ಮನು (೩) ಮಹಾಪರಾಕ್ರಮಿಯಾಗಿ ರಾಜಸೂಯಯಾಗದ ಸಮಯದಲ್ಲಿ ಎಲ್ಲಾ ರಾಜರನ್ನೂ ಗೆದ್ದು ಗೋಗ್ರಹಣಕಾಲವಲ್ಲಿ ನಿರತಿಶಯ ಪರಾಕ್ರಮವನ್ನು ತೋರಿಸಿರುವ ಅರ್ಜುನನು; ಹೀಗೆ ಪಾರ್ಥನೆಂಬ ಸಂಬೋಧನೆಯಿಂದ ಈ ಮೂರು ವಿಧ ಪ್ರಸಿದ್ಧಿಯನ್ನು ಹೊಂದಿರ.ವವನಾಗಿ ಎಂಬರ್ಥವು. **ಜ್ಞಾನನಿಷ್ಠಾಯಾಂ** - ಜ್ಞಾನಯೋಗದಲ್ಲಿ ಮಾತ್ರ, **ಅಧಿಕರೋಷಿ ಯದಿ**-ಅಧಿಕಾರವನ್ನು ಹೊಂದಿದವನಾದರೆ, **ತತಃ**-ಆ ಕಾರಣದಿಂದ **ತ್ವದಾಚಾರಾನುವರ್ತಿನಃ** - ನಿನ್ನ ಆಚಾರವನ್ನು ಅನುಸರಿಸಿ ನಡೆಯುವ, **ಅಕೃತ್ಸ್ನವಿದಃ** - ತುಂಬಾ ತಿಳಿಯದ, ಶಿಷ್ಟರಾದ ಮೋಕ್ಷಾರ್ಥಿಗಳು, **ಸ್ವಾಧಿಕಾರಮಜಾನಂತಃ** - ತನಗಿರುವ ಅಧಿಕಾರವನ್ನು ತಿಳಿಯದವರಾಗಿ, **ಕರ್ಮನಿಷ್ಠಾಯಾಂ ನಾಧಿಕುರ್ವಂತಃ** - ಕರ್ಮಯೋಗದಲ್ಲಿ ಅಧಿಕಾರವನ್ನು ವಹಿಸದವರಾಗಿ, **ವಿನಶ್ಯೇಯುಃ** - ನಷ್ಟರಾಗುವರು. ಎಲ್ಲರೂ ಜ್ಞಾನಯೋಗಕ್ಕೆ ಅರ್ಹರಲ್ಲವು, ಕರ್ಮಯೊಗವಾದರೋ ಎಲ್ಲರಿಗೂ ಸುಕರವು, ಇದನ್ನು ತಿಳಿದುಕೊಳ್ಳದೆ, ತಮ್ಮ ಅಧಿಕಾರಕ್ಕೆ ಯೋಗ್ಯವಾದುದನ್ನು ತ್ಯಜಿಸಿ, ತಮಗೆ ಯೋಗ್ಯತೆ ಇಲ್ಲದಿರುವ ಜ್ಞಾನಯೋಗವನ್ನು ಮಾತ್ರ ಅವಲಂಬಿಸುವದರಿಂದ ಉಭಯ ಭ್ರಷ್ಟರಾಗಿ ತಮ್ಮ ಮನೋರಥವನ್ನು ಹೊಂದದೆಯೂ, ವಿಧಿವಾಕ್ಯವನ್ನು ತಿರಸ್ಕರಿಸಿದುದರಿಂದ ಭಗವನ್ನಿಗ್ರಹಕ್ಕೆ ಪಾತ್ರರಾಗಿಯೂ, ಕೆಟ್ಟುಹೋಗುವರೆಂಬ, ಭಾವವು. ಇಲ್ಲಿ ಜ್ಞಾನಯೋಗವು ಬೇಡಲೇಬೇಡವೆಂದು ನಿಷೇಧಿಸಲ್ಪಡಲಿಲ್ಲವು; ಜ್ಞಾನಯೋಗದಿಂದುಂಟಾಗುವದು ಆತ್ಮಾವಲೋಕನವೂ ಭಕ್ತಿಯೋಗಕ್ಕೆ ಸಾಮರ್ಥ್ಯವೂ, ತನ್ಮೂಲಕ ಮೋಕ್ಷಪ್ರಾಪ್ತಿಯೂ, ಇದು ಬೇಡವೋ? ಇವು ಲೋಕರಕ್ಷೆಯಲ್ಲವೋ ಎಂದು ಆಕ್ಷೇಪಿಸಬಹುದು. ಆದುದರಿಂದ ಇಲ್ಲಿ ಹೇಳಲ್ಪಟ್ಟಿದುದೇನು ಎಂದರೆ ಜ್ಞಾನಯೋಗವನ್ನವಲಂಬಿಸಬೇಕೆಂದಿರುವವನು ಕರ್ಮಯೋಗವನ್ನು ತ್ಯಜಿಸಿ, ಜ್ಞಾನಯೋಗದಲ್ಲೇ ಪ್ರವರ್ತಿಸಿಬಿಟ್ಟರೆ ತನಗೆ ಯೋಗ್ಯತೇ ಇಲ್ಲ

ಭಾ. ನಾಧಿ ಕುರ್ವನ್ನೋ ವಿನಶ್ಯೇಯುಃ. ಅತೋ ವ್ಯಪದೇಶ್ಯೇನ ವಿದುಷಾ ಕರ್ಮೈವ ಕರ್ತವ್ಯಮ್. ॥ ೨೩ ॥ ೨೪ ॥

ದಿರುವದನ್ನು ಪ್ರಯುಕ್ತಿಸಿ ಕೆಟ್ಟುಹೋಗುವನೆಂದು ಸ್ವಾಧಿಕಾರಮುಚಾನಂತಃ ಇತ್ಯಾದಿಯಿಂದ ಹೇಳಲ್ಪಟ್ಟಿತೆಂಬ ಭಾವವು. ಯಾವಾಗ ಸ್ವವರ್ಣೋಚಿತ ಕರ್ಮಗಳ ಅನುಷ್ಠಾನವಿಲ್ಲವೋ, ಆಗ ಎಲ್ಲಾ ಜಾತಿಯೂ ಒಂದೇಯಾಗಿ ವರ್ಣ ಸಾಙ್ಕರ್ಯವುಂಟಾಗಿ, ಲೋಕವು ಅನೇಕ ಅನರ್ಥಗಳಿಗೆ ಗುರಿಯಾಗುತ್ತದೆಂಬ ಭಾವವು. ಹೀಗೆ ಜನಗಳು ಕರ್ಮಭ್ರಷ್ಟರಾಗಿರುವದರಿಂದಲೇ ವರ್ಣಾಶ್ರಮ ಧರ್ಮಗಳು ಸರಿಯಾಗಿ ನಡೆಯದೆ, ಬರೀ ಜನ್ಮತಃ ಉಂಟಾದ ಜಾತಿ ಭೇದಗಳು ಮಾತ್ರ ನೆಲೆಗೊಂಡಿರುವದರಿಂದ ಪರಸ್ಪರ ವೈಷಮ್ಯಗಳು ಹೆಚ್ಚುತ್ತಾ ಬಂದು, ಅನೇಕ ಅನರ್ಥಗಳಿಗೆ ಕಾರಣಭೂತವಾಗಿರುವದು ನಮಗೆ ಈಗ ಪ್ರತ್ಯಕ್ಷತಃ ವೇದ್ಯವೇ ಆಗಿರುತ್ತದೆ ; ಸ್ವೋಚಿತ ಧರ್ಮಗಳಲ್ಲಿ ಈ ಚಾತುರ್ವರ್ಣ್ಯವು ಇದ್ದು, ಇತರ ವರ್ಣದವರ ಧರ್ಮಗಳನ್ನಾರೋಪಿಸಿಕೊಳ್ಳದಿದ್ದರೆ, ಪರಸ್ಪರಾನುರಾಗವು ದೂರೀಕೃತವಾಗುವದಕ್ಕೂ, ಅಸೂಯೆಯು ಹೆಚ್ಚುವದಕ್ಕೂ, ಕಾರಣವೇ ಇಲ್ಲವು. ಈ ಶ್ಲೋಕಗಳಿಂದ ಮುಖ್ಯವಾಗಿ ಗ್ರಹಿಸತಕ್ಕ ಅಭಿಪ್ರಾಯವನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಅತಃ** - ಆ ಕಾರಣದಿಂದ, **ವ್ಯಪದೇಶ್ಯೇನ ವಿದುಷಾ** - ಮಹಾ ಪ್ರಸಿದ್ಧನು ಎಂದು ಹೇಳಿಸಿಕೊಳ್ಳುವ ವಿದ್ವಾಂಸನಿಂದಲೂ ಕೂಡ, **ಕರ್ಮೈವ ಕರ್ತವ್ಯಮ್** - ಕರ್ಮಯೋಗವೇ ಅನುಷ್ಠಿಸತಕ್ಕದ್ದು. ಹೀಗೆ ಹೇಳಿದುದರಿಂದ ಪ್ರತಿಯೊಬ್ಬ ಮೋಕ್ಷಾರ್ಥಿಯು ತಾನು ಎಷ್ಟು ಜ್ಞಾನವನ್ನು ಹೊಂದಿದವನಾಗಿ ವಿದ್ವಾಂಸನೆಂದು ಹೇಳಿಸಿಕೊಂಡಿದ್ದರೂ ಆತನೂ ಕೂಡ ಕರ್ಮಯೋಗದಲ್ಲೇ ಪ್ರವರ್ತಿಸಬೇಕೆಂದು ವಿಧಿಸಿದಂತಾಯಿತು. ಪೂರ್ವಜನ್ಮದಲ್ಲಿ ತಾನು ಜ್ಞಾನಾಗ್ರೇಸರನಾಗಿದ್ದುದರಿಂದಲೇ, ಈಗ ನಾನು ವಿದ್ವಾಂಸನಾಗಿದ್ದೇನೆ ಎಂದು ಭಾವಿಸಿ, ಆಗಲೂ ಕರ್ಮಯೋಗವನ್ನು ತ್ಯಜಿಸಲು ಶಕ್ಯವಲ್ಲವೆಂಬುದು ಉಪಪಾದಿತವು. ಏಕೆಂದರೆ ಲೋಕಸಙ್ಗ್ರಹಾರ್ಥವಾಗಿ ಶಾಸ್ತ್ರೋಪದೇಶರೀತಿಯನ್ನೇ ಅವಲಂಬಿಸತಕ್ಕದ್ದೆಂಬುದು ಇಲ್ಲಿ ಮುಖ್ಯವಾಗಿ ಬೋಧಿಸಲ್ಪಟ್ಟಿತು. ಮಹಾ ಜ್ಞಾನಾಗ್ರೇಸರರಾದ ವಿದುರರೂ ಕೂಡ ಬ್ರಹ್ಮವಿದ್ಯಾವಿಷಯ ಜ್ಞಾನವು ಸ್ವತಃ ತನಗಿದ್ದರೂ, ಧೃತರಾಷ್ಟ್ರನಿಂದ ಪ್ರಾರ್ಥಿಸಲ್ಪಟ್ಟರೂ ಕೂಡ ಲೋಕಸಙ್ಗ್ರಹಾರ್ಥವಾಗಿ ತಾನು ಉಪದೇಶಿಸದೆ "**ಶೂದ್ರಯೋನಾವಹಂ ಜಾತಃ**" ಎಂದು ಹೇಳಿಬಿಟ್ಟು, ಸನತ್ಸುಜಾತರನ್ನು ರಾಜನಿಗೆ ಉಪದೇಶಿಸುವಹಾಗೆ ಮಾಡಿದರು. ಆದುದರಿಂದ ಬ್ರಹ್ಮವಿದ್ಯಾನಿಷ್ಠನು ಆತನು ವಿದ್ವಾಂಸನೇಯಾದರೂ, ಶಾಸ್ತ್ರವಿಧಿರೀತ್ಯಾ ಲೋಕಸಙ್ಗ್ರಹಾರ್ಥವಾಗಿ ಕರ್ಮಯೋಗವನ್ನಾರಂಭಿಸಿ ಅನುಷ್ಠಿಸಲೇಬೇಕೆಂದು ಈ ಎರಡು ಶ್ಲೋಕಗಳಿಂದಲೂ ಬೋಧಿತವು ಎಂಬ ಸಾರಭೂತಾರ್ಥವನ್ನು "**ಅತಃ**" ಎಂದಾರಂಭಿಸಿದ ವಾಕ್ಯದಿಂದ ತಿಳಿಸಿರುತ್ತಾರೆ. ಹೀಗೆ ಈ ಶ್ಲೋಕಾರ್ಥಗಳ ಸಿಗಮನದಲ್ಲಿ ಸಾರಭೂತಾರ್ಥವನ್ನು ತೋರಿಸಿರುವದು ಮುಂದಿನ ಎರಡು ಶ್ಲೋಕಗಳನ್ನು ಮನಸ್ಸಿನಲ್ಲಿಟ್ಟು ಎಂದು ಭಾವಿಸತಕ್ಕದ್ದು. ಆದುದರಿಂದಲೇ ಮುಂದೆಇರುವ ವಿದ್ವಾನ್ ಎಂಬ ಪ್ರಯೋಗವನ್ನು ಮನಸ್ಸಿನಲ್ಲಿಟ್ಟೇ **ವಿದುಷಾಂ** ಎಂಬ ಪ್ರಯೋಗವು ಈ ಕೊನೆಯ ವಾಕ್ಯದಲ್ಲಿರುತ್ತದೆ. ॥೨೩–೨೪॥

**ಮೂಲಕ್ಕೆ ಅರ್ಥವು**:—ಸಾಧಾರಣ ಜನಕ್ಕೆ ಕರ್ಮಯೋಗದಲ್ಲೇ ಅಧಿಕಾರವುಂಟೆಂದೂ, ಜ್ಞಾನಯೋಗದಲ್ಲಿ ಅವರಿಗೆ ಅಶಕ್ತತೆಯಿಂದ ಅಧಿಕಾರವಿಲ್ಲವೆಂದೂ, ಜ್ಞಾನಯೋಗಕ್ಕೆ ಶಕ್ತರಾಗಿ ಅಧಿಕಾರವಿದ್ದರೂ, ಆ ಅಧಿಕಾರವನ್ನು ಪರಿಗಣಿಸದೆ ಸಾಧಾರಣ ಜನದಹಾಗೆ ಲೋಕ ಸಙ್ಗ್ರಹಾರ್ಥವಾಗಿ ಕರ್ಮಯೋಗವನ್ನೇ ಅವಲಂಬಿಸಬೇಕೆಂದು "**ಸಕ್ತಾಃ**" ಎಂದಾರಂಭಿಸಿ ಎರಡು ಶ್ಲೋಕ

ಮೂ. ಸಕ್ತಾಃ ಕರ್ಮಣ್ಯ ವಿದ್ವಾಂಸೋ ಯಥಾಕುರ್ವಂತಿ ಭಾರತ ।
ಕುರ್ಯಾ ದ್ವಿದ್ವಾಂ ಸ್ತಥಾಽಸಕ್ತ ಶ್ಚಿಕೀರ್ಷುರ್ಲೋಕ ಸಙ್ಗ್ರಹಮ್ ॥ ೨೫.
ನ ಬುದ್ಧಿ ಭೇದಂ ಜನಯೇ ದಜ್ಞಾನಾಂ ಕರ್ಮಸಙ್ಗಿನಾಮ್ ।
ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಸ್ಸಮಾಚರನ್ ॥ ೨೬.

ಗಳಿಂದ ಉಪದೇಶಿಸುತ್ತಾರೆ:—ಹಾಗಾದರೆ ಲೋಕ ಸಙ್ಗ್ರಹ ವಿಷಯವು ನನಗೆ ಬೇಡವು, ನನಗೆ ಸಾಮರ್ಥ್ಯ ಉಂಟೆಂದು ನಾನು ಜ್ಞಾನಯೋಗವನ್ನೇ ಅವಲಂಬಿಸುವೆನೆಂದು ಹೇಳಲೂ ಸಾಧ್ಯವಿಲ್ಲವು ; ಲೋಕದ ಪಾಪಕ್ಕೆ ಈತನು ಗುರಿಯಾಗಿ ಅಂತವನೂ ಕೂಡ ಅಕಾರಣದಿಂದಲೂ, ಶಾಸ್ತ್ರ ವಿಧಿಯನ್ನತಿಕ್ರಮಿಸುವದರಿಂದಲೂ ಭಗವನ್ನಿಗ್ರಹಕ್ಕೆ ಪಾತ್ರನಾಗಿ ಕೆಟ್ಟುಹೋಗುವನೆಂದು ಹಿಂದೆಯೇ ಉಪದೇಶಿಸಿರುವದರಿಂದ ಅಂತಹ ಪೂರ್ವಪಕ್ಷವನ್ನು ತರಲು ಸಾಧ್ಯವಿಲ್ಲವು, ಅವಿದ್ವಾಂಸಃ-ಆತ್ಮಜ್ಞಾನದಲ್ಲಿ ನಿಪುಣರಲ್ಲದವರು, ಕರ್ಮಣಿ - ಕರ್ಮಯೋಗದಲ್ಲಿ, ಸಕ್ತಾಃ - ಕರ್ಮವಾಸನಾಬಲದಿಂದ ಆದರಲ್ಲೇ ಸಂಬಂಧವುಳ್ಳವರಾಗಿ, ಯಥಾ ಕುರ್ವಂತಿ - ಹೇಗೆ ವರ್ಣಾಶ್ರಮೋಚಿತ ಧರ್ಮಗಳನ್ನು ಆತ್ಮಸಾಕ್ಷಾತ್ಕಾರಕ್ಕಾಗಿ ಮಾಡುತ್ತಾರೋ, ತಥಾ - ಆಪ್ರಕಾರವಾಗಿ ಅದಕ್ಕಾಗಿಯೇ, ವಿದ್ವಾನ್ - ಆತ್ಮಜ್ಞಾನವನ್ನು ಹೊಂದಲು ಸಮರ್ಥನಾದ ನಿಪುಣನೂ ಸಹ, ಅಸಕ್ತಃ-ಸಙ್ಗವಿಲ್ಲದವನಾಗಿ, ಇಲ್ಲಿ ಸಙ್ಗವು ಪ್ರಕರಣಾನುಗುಣವಾಗಿ ಯಾವುದೆಂದರೆ, ತನಗೆ ಜ್ಞಾನಯೋಗದಲ್ಲಿ ಶಕ್ತಿಯುಂಟೆಂಬ ಮಮತಾಶೂನ್ಯನಾಗಿ, ಲೋಕಸಙ್ಗ್ರಹಂ - ಲೋಕದ ಜನರು ತಮ್ಮ ಮಾರ್ಗಕ್ಕೆ ಬರೋಣವನ್ನು, ಚಿಕೀರ್ಷುಃ - ಮಾಡಲಿಚ್ಛೆಯುಳ್ಳವನಾಗಿ, ಎಂದರೆ ಲೋಕ ರಕ್ಷಣೆಯನ್ನು ಮನಸ್ಸಿನಲ್ಲಿಟ್ಟವನಾಗಿ, ಕುರ್ಯಾತ್ - ಕರ್ಮಯೋಗವನ್ನೇ ಮಾಡತಕ್ಕದ್ದು.| ಹೀಗೆ ಸಾಧಾರಣ ಜನರು ತನ್ನನುವರ್ತಿಸಿ ನಡೆಯುವದಕ್ಕಾಗಿ, ಆ ಜನರು ಮಾಡಬೇಕಾದ ಸ್ವವರ್ಣೋಚಿತ ಕರ್ಮಗಳನ್ನು, ತಾನು ಜ್ಞಾನಯೋಗಕ್ಕೆ ಅಧಿಕಾರಿಯಾಗಿದ್ದರೂ ಮಾಡತಕ್ಕದ್ದು ಅವಶ್ಯಕವು ; ಇದೀಗ ಶ್ರೇಷ್ಠನಿಗೂ ಕೂಡ ಸರಿಯಾದ ಮಾರ್ಗವೆಂದುಪದೇಶಿಸಿದರು. ಮುಂದಿನ ಶ್ಲೋಕದ ಪೂರ್ವಾರ್ಧದಿಂದ ಇದಕ್ಕೆ ವ್ಯತಿರಿಕ್ತವಾದ ಆಚರಣೆಯು ಸರಿಯಾದುದಲ್ಲವೆಂದು ಹೇಳಿ ಈ ಅಭಿಪ್ರಾಯವನ್ನೇ ಪುನಃ ಉತ್ತರಾರ್ಧದಿಂದ ಸಮರ್ಥನೆಮಾಡಿ ಹೇಳುತ್ತಾರೆ:—ವಿದ್ವಾನ್ - ಆತ್ಮಜ್ಞಾನವನ್ನು ಹೊಂದಲು ನಿಪುಣನು, ಕರ್ಮ ಸಙ್ಗಿನಾಂ ಅಜ್ಞಾನಾಂ - [ಮೇಲೆ ಸಕ್ತಾಃ ಕರ್ಮಣ್ಯವಿದ್ವಾಂಸಃ ಎಂದು ಹೇಳಿದವರೇ ಇಲ್ಲಿ ಕರ್ಮಸಙ್ಗಿನಾಂ ಅಜ್ಞಾನಾಂ ಎಂಬ ಶಬ್ದಗಳಿಂದ ಹೇಳಲ್ಪಟ್ಟಿರುತ್ತಾರೆ, ಕರ್ಮವಾಸನಾ ಬಲದಿಂದ ಕರ್ಮಯೋಗದಲ್ಲೇ ಸಂಬಂಧಿಸಿಕೊಂಡಿರುವ ಆತ್ಮಜ್ಞಾನವಿಲ್ಲದವರಿಗೆ, ಬುದ್ಧಿಭೇದಂ - ಬುದ್ಧಿಯನ್ನು ವ್ಯತ್ಯಸ್ತವಾಗಿ ಮಾಡೋಣವನ್ನು ಎಂದರೆ ಆತ್ಮಾವಲೋಕನಕ್ಕೆ ಕರ್ಮಯೋಗಕ್ಕಿಂತಲೂ ಬೇರೆಯಾದ ಉಪಾಯವು ಜ್ಞಾನಯೋಗವೆಂಬ ವ್ಯತ್ಯಸ್ತ ಬುದ್ಧಿಯನ್ನು, ನ ಜನಯೇತ್ - ಹುಟ್ಟಿಸಬಾರದು. ಇನ್ನೇನು ಮಾಡತಕ್ಕದ್ದೆಂದರೆ ಉಪದೇಶಿಸುತ್ತಾರೆ. ವಿದ್ವಾನ್ - ಜ್ಞಾನಯೋಗಾರ್ಹನಾದ ಅಧಿಕಾರಿಯೂಕೂಡ, ಯುಕ್ತಃ - ಜ್ಞಾನಯೋಗದ ಸಂಬಂಧವಿಲ್ಲದೇನೇ ಕರ್ಮಯೋಗದಿಂದಲೇ ಆತ್ಮಾವಲೋಕನವನ್ನು ಸಾಧಿಸಬಹುದೆಂಬ ಬುದ್ಧಿಯಿಂದ ಕೂಡಿದವನಾಗಿ, ಸಮಾಚರನ್ - ಕರ್ಮಯೋಗವನ್ನೇ ಚನ್ನಾಗಿ ಅನುಷ್ಠಿಸುವವನಾಗಿ, ಸರ್ವಕರ್ಮಾಣಿ - ಕರ್ಮಯೋಗದ ಸಮಸ್ತ ಕರ್ಮಗಳನ್ನೂ, ಜೋಷಯೇತ್ ಅಂತಹ ಅಜ್ಞರು ಪ್ರೀತಿಸುವ ಹಾಗೆ ಮಾಡತಕ್ಕದ್ದು. [ಈ ಜೋಷಯೇತ್ ಎಂಬ ಕ್ರಿಯೆಯೂ ಕೂಡ ಭಗವಂತನಿಂದ ಹೇಳಲ್ಪಟ್ಟದುದರಿಂದ ವಿಧಿರೂಪವೇ ವಿನಾ ಐಚ್ಛಿಕವೆಂದು ಭಾವಿಸತಕ್ಕದ್ದಲ್ಲವು.] ಆವಶ್ಯಕವಾಗಿ ಹಾಗೆ ಮಾಡತಕ್ಕದ್ದೆಂಬ

ಭಾ. ಅವಿದ್ವಾಂಸಃ-ಆತ್ಮನ್ಯಕೃತ್ಸ್ನವಿದಃ, ಕರ್ಮಣಿ ಸಕ್ತಾಃ-ಕರ್ಮಣ್ಯವರ್ಜನೀಯ ಸಂಬಂಧಾಃ ಆತ್ಮನ್ಯ ಕೃತ್ಸ್ನವಿತ್ತಯಾ ತದಭ್ಯಾಸರೂಪಜ್ಞಾನಯೋಗೇಽನಧಿಕೃತಾಃ ಕರ್ಮಯೋಗಾಧಿಕಾರಿಣಃ ಕರ್ಮಯೋಗಮೇವ ಯಥಾ ಆತ್ಮದರ್ಶನಾಯಕುರ್ವತೇ, ತಥಾ

ಭಾವವು. ಅವಿದ್ವಾಂಸರಿಗೆ ಪ್ರದರ್ಶನಾರ್ಥವಾಗಿಯಲ್ಲವೇ ತಾನು ಮಾಡತಕ್ಕದ್ದು, ತನಗೇನೂ ಅದರ ಆವಶ್ಯಕತೆ ಯಿಲ್ಲವು, ಏಕೆಂದರೆ ತಾನು ಜ್ಞಾನಾಧಿಕಾರಿಯೇ ಆಗಿರುವದರಿಂದ ಎಂದು ಭಾವಿಸಿ ಶ್ರದ್ಧೆಯು ಬೇಕಿಲ್ಲದೆ ಮಾಡತಕ್ಕದ್ದಲ್ಲವು. ಚೆನ್ನಾಗಿ ಶ್ರದ್ಧೆಯಿಂದಲೇ ತನಗೆ ಶಾಸ್ತ್ರೋಕ್ತ ವಿಹಿತಕರ್ಮವೆಂದು ಭಾವಿಸಿಯೇ ಅನುಷ್ಠಿಸತಕ್ಕದ್ದೆಂದು ತಿಳಿಸುವದಕ್ಕಾಗಿ, ಸಮಾಚರ್ನ ಸಮ್ಯಕ್ ಆಚರನ್ ಎಂಬ ಪ್ರಯೋಗವು, ಯಥಾಶಾಸ್ತ್ರ ಯಥಾವಿಧಿ ಮಾಡುವವನಾಗಿ, ಸರ್ವ ಕರ್ಮಾಣಿ - ಸಮಸ್ತ ಕರ್ಮಗಳನ್ನು, ಜೋಷಯೇತ್ - ಆ ಅಲ್ಪಜ್ಞರು ಪ್ರೀತಿಸುವಹಾಗೆ ಮಾಡ ತಕ್ಕದ್ದು. ಹಿಂದೆ "ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತು ಮರ್ಹಸಿ" (೨೦) ಎಂಬ ದಾಗಿ ಸಙ್ಗ್ರಹವಾಗಿ ಹೇಳಿದುದನ್ನು ಇಲ್ಲಿ ವಿಸ್ತರಿಸಿ ಹೇಳಿದರು. ಈ ಲೋಕ ಸಙ್ಗ್ರಹಕ್ಕಾ ಗಿಯೇ ಜ್ಞಾನಯೋಗಾರ್ಹನಾದ ಶ್ರೇಷ್ಠನೂ ಕೂಡ ಸಾಧಾರಣ ಜನವು ಹೇಗೆ ವರ್ಣಾಶ್ರಮೋ ಚಿತ ಕರ್ಮಗಳನ್ನು ಮಾಡುತ್ತಾರೋ ಹಾಗೆಯೇ ಮಾಡತಕ್ಕದ್ದು. ಲೋಕ ಸಙ್ಗ್ರಹವೆಂದರೆ ಲೋಕದ ಜನರನ್ನು ತನ್ನೊಂದಿಗೆ ಏಕೀಭವಿಸಿ ಸ್ವೀಕರಣವು, ಎಲ್ಲರೂ ಒಂದೇ ಪಂಗಡಕ್ಕೆ ಸೇರಿದಹಾಗೆ ಭಾವಿಸಿ ಅವರನ್ನು ಸ್ವಾಧೀನಮಾಡಿಕೊಳ್ಳೋಣವು. ಶಾಸ್ತ್ರಾನುಸಾರವಾಗಿ, ತಾನೇ ಕರ್ಮಾನುಷ್ಠಾನ ಮಾಡಿದರಲ್ಲವೇ, ಇತರರೂ ಈತನಿಗೆ ಸ್ವಾಧೀನವಾಗಿ ಅನುಸರಿಸಿ ನಡೆಯು ವರು, ಹೀಗೆ ನಡೆಸದೆ ತಾನೇ ಕರ್ಮವನ್ನು ತ್ಯಜಿಸಿದುದಾದರೆ, ಎಲ್ಲರೂ ಕರ್ಮಭ್ರಷ್ಟರಾಗಿ ಜಾತಿಸಂಕರ ಉಂಟಾಗುತ್ತದೆಂದು ಹಿಂದೆಯೇ ಹೇಳಲ್ಪಟ್ಟಿತು. ಇಂತಹ ಅನರ್ಥಗಳಿಲ್ಲದಹಾಗೆ ಕರ್ಮಾನುಷ್ಠಾನದಲ್ಲಿ ಪ್ರೀತಿಯುಂಟಾಗುವಹಾಗೆ ಈ ಜ್ಞಾನಿಯು ಮಾಡತಕ್ಕದ್ದು ಅವಶ್ಯಕ ವಾದ ಕರ್ತವ್ಯವೆಂದು ಹೇಳಲ್ಪಟ್ಟಿತು.

ಭಾಷ್ಯಾರ್ಥವು :—ಮೋಕ್ಷಾರ್ಥಿಯು ಸಾಧಾರಣವಾಗಿ ಜ್ಞಾನಯೋಗಕ್ಕೆ ಅಧಿಕಾರ ವಿಲ್ಲದವನಾಗಿದ್ದರೆ ಹೇಗೆ ಕರ್ಮಯೋಗವನ್ನು ಅವಲಂಬಿಸತಕ್ಕದ್ದೋ, ಹಾಗೆಯೇ ಜ್ಞಾನ ಯೋಗಕ್ಕೆ ಅರ್ಹತೆಯಿರುವ ವಿದ್ವಾಂಸನೂ ಕೂಡ ಕರ್ಮಯೋಗವನ್ನೇ ಅನುಷ್ಠಿಸತಕ್ಕದ್ದು. ಇಂತಹ ಪ್ರಾಜ್ಞನ ಅನುಷ್ಠಾನದಿಂದ ಲೋಕೋಪಕಾರ ಉಂಟು ಎಂದೂ, ಅದರಿಂದ ಇತರರು ಮಾರ್ಗತಪ್ಪಿ ನಡೆಯದೇ ಇರುವದಕ್ಕೆ ಕಾರಣವಾಗುತ್ತದೆಂದೂ, ತನಗೆ ಜ್ಞಾನಯೋಗಾಧಿಕಾ ರಕ್ಕೆ ಅರ್ಹತೆ ಇದೆ ಎಂದು ಶಾಸ್ತ್ರಮರ್ಯಾದೆಯನ್ನತಿಕ್ರಮಿಸಿ ನಡೆದುದಾದರೆ ಶಾಸ್ತ್ರಾತಿಕ್ರಮಕ್ಕೆ ಬೇಕಾದ ಬುದ್ಧಿ ಭೇದವನ್ನುಂಟುಮಾಡಿದ ದೋಷಕ್ಕೂ ಗುರಿಯಾಗುವನೆಂದೂ ಉಪದೇಶಿಸು ತ್ತಾರೆ. ಅವಿದ್ವಾಂಸಃ ಎಂದರೆ ಆತ್ಮನ್ಯಕೃತ್ಸ್ನವಿದಃ - ಆತ್ಮಸ್ವರೂಪವನ್ನು ಚನ್ನಾಗಿ ತಿಳಿ ಯದವರು, ಕರ್ಮಣಿಸಕ್ತಾಃ ಎಂದರೆ ಕರ್ಮಣ್ಯ ವರ್ಜನೀಯ ಸಂಬಂಧಾಃ-ಕರ್ಮಾನುಷ್ಠಾನದಲ್ಲೇ ತಪ್ಪಿದ್ದಲ್ಲವಾದ ಸಂಬಂಧವುಳ್ಳವರು, ಹಿಂದೆ ಕರ್ಮವಮಾಡುವದೇ ಸ್ವಭಾವವೆಂದು "ನಹಿಕಶ್ಚಿತ್ಕ್ಷ ಣಮಪಿ" ಯೆಂಬ ಶ್ಲೋಕದಲ್ಲಿ ಹೇಳಿದುದನ್ನು ಜ್ಞಾಪಿಸುವದಕ್ಕಾಗಿ "ಅವರ್ಜನೀಯ ಸಂ ಬಂಧಾಃ" ಎಂಬ ಪ್ರಯೋಗವು. ಆತ್ಮನ್ಯಕೃತ್ಸ್ನವಿತ್ತಯಾ - ಆತ್ಮಸ್ವರೂಪವಿಷಯದಲ್ಲಿ ತುಂಬಾ ಜ್ಞಾನವಿಲ್ಲದುದರಿಂದ, ತದಭ್ಯಾಸರೂಪ ಜ್ಞಾನಯೋಗಾನಧಿಕೃತಾಃ—ಆ ಆತ್ಮಾವ ಲೋಕನರೂಪವಾದ ಜ್ಞಾನಯೋಗದಲ್ಲಿ ಅಧಿಕಾರವಿಲ್ಲದ, ಕರ್ಮಯೋಗಾಧಿಕಾರಿಗಳು, ಕರ್ಮ ಯೋಗವನ್ನೇ, ಯಥಾ - ಹೇಗೆ, ಆತ್ಮದರ್ಶನಾಯ ಕುರ್ವತೇ - ಆತ್ಮಸಾಕ್ಷಾತ್ಕಾರಕ್ಕಾಗಿ ಮಾಡು

ಭಾ. ಆತ್ಮನಿ ಕೃತ್ಸ್ನವಿತ್ತಯಾ ಕರ್ಮಣ್ಯಸಕ್ತೋ ಜ್ಞಾನಯೋಗಾಧಿಕಾರಯೋಗ್ಯೋಽಪಿ ವ್ಯಪದೇಶ್ಯ ಶ್ಶಿಷ್ಟೋ ಲೋಕರಕ್ಷಾರ್ಥಂ ಸ್ವಾಚಾರೇಣ ಶಿಷ್ಟಲೋಕಾನಾಂ ಧರ್ಮನಿಶ್ಚಯಂ ಚಿಕೀರ್ಷುಃ, ಕರ್ಮಯೋಗಮೇವ ಕುರ್ಯಾತ್. ಅಜ್ಞಾನಾಂ ಆತ್ಮನ್ಯ

ತ್ತಾರೋ, ತಥಾ - ಹಾಗೆಯೇ, ಆತ್ಮನಿ ಕೃತ್ಸ್ನವಿತ್ತಯಾ - ಆತ್ಮಸ್ವರೂಪ ವಿಷಯದಲ್ಲಿ ಸಂಪೂರ್ಣ ಜ್ಞಾನವಿರುವದರಿಂದ, ಕರ್ಮಣ್ಯಸಕ್ತಃ - ಕರ್ಮಾನುಷ್ಠಾನದಲ್ಲಿ ಸಂಬಂಧವನ್ನು ತೋರ್ಪಡಿಸಿಕೊಳ್ಳದೆ, ಜ್ಞಾನಯೋಗಾಧಿಕಾರಯೋಗ್ಯೋಽಪಿ - ಜ್ಞಾನ ಯೋಗಾಧಿಕಾರಕ್ಕೆ ಸಮರ್ಥನಾಗಿದ್ದರೂ ಕೂಡ, ವ್ಯಪದೇಶ್ಯಶ್ಶಿಷ್ಟಃ - ಪ್ರಸಿದ್ಧನಾಗಿ ಹೇಳಲ್ಪಟ್ಟ ಶಿಷ್ಟನು, ಇದು ಮೂಲದ ವಿದ್ವಾನ್ ಎಂಬುದರರ್ಥವು, ಲೋಕರಕ್ಷಾರ್ಥಂ - ಲೋಕವನ್ನು ಸಂರಕ್ಷಿಸುವದ ಕ್ಕಾಗಿ, ಲೋಕೋಪಕಾರಕ್ಕಾಗಿ ಎಂಬ ಭಾವವು, ಸ್ವಾಚಾರೇಣ - ತನ್ನ ಸ್ವಂತ ಕರ್ಮನಿಷ್ಠೆ ಯಿಂದ, ಶಿಷ್ಟಲೋಕಾನಾಂ - ದೊಡ್ಡವರ ಶಾಸ್ತ್ರಾನುಗುಣವಾದ ಆಚಾರವನ್ನು ಅನುವರ್ತಿಸಿ ನಡೆಯುವ ಸಾಧಾರಣ ಜನರಿಗೆ, ಧರ್ಮ ನಿಶ್ಚಯವನ್ನು, (ಲೋಕ ರಕ್ಷಾರ್ಥಂ ಎಂದಾರಂ ಭಿಸಿ ಧರ್ಮನಿಶ್ಚಯಂ ಎಂಬುದರವರೆಗೂ ಲೋಕ ಸಙ್ಗ್ರಹಂ ಎಂಬುದರ ವಿವರಣವು.) ಚಿಕೀರ್ಷುಃ - ಮಾಡಲಿಚ್ಛಿಸಿದವನಾಗಿ, ಕರ್ಮಯೋಗಮೇವ ಕುರ್ಯಾತ್ - ಕರ್ಮಯೋಗವನ್ನೇ ಮಾಡತಕ್ಕದ್ದು. ಇಲ್ಲಿ ಕರ್ಮಣಿ ಸಕ್ತಾಃ ಎಂದರೆ ಐಹಿಕ ಸಾಂಸಾರಿಕ ಕರ್ಮಗಳಲ್ಲಿ ಸಂಗವುಳ್ಳ ವರಾಗಿ ಎಂದು ಕೆಲವರು ಅರ್ಥಮಾಡಿದ್ದಾರೆ; ಆಗ ಜ್ಞಾನಿಯೂ ಸಂಸಾರಿಯಹಾಗೆ ಅಂತಹ ಕರ್ಮಮಾಡತಕ್ಕದ್ದು ಎಂಬುಪದೇಶವು ಉಚಿತೋಪದೇಶವಾಗುವದಿಲ್ಲವು; ಆಗ ವೈರಾಗ್ಯವು ಜ್ಞಾನಿಗೆ ಬೇಡವೆಂದು ಹೇಳಿದಂತಾಗುವದು. ಇಲ್ಲಿ ಯಥಾ ಅಕೃತ್ಸ್ನ ವಿದಃ ಕುರ್ವಂತಿ ತಥಾ ಕೃತ್ಸ್ನ ವಿದಪಿ ಕುರ್ಯಾತ್ ಎಂದರೆ ದೃಷ್ಟಾಂತಭಾವದಿಂದ ಹೇಳಿದುದಲ್ಲವು; ಯಾವ ಪ್ರಕಾರ ದಿಂದ, ಅವಿದ್ವಾಂಸನು ಶಾಸ್ತ್ರವನ್ನನುಸರಿಸಿ ಕರ್ಮಾನುಷ್ಠಾನಮಾಡುತ್ತಾನೋ ಆಪ್ರಕಾರ ವಾಗಿಯೇ ವಿದ್ವಾಂಸನೂ ಮಾಡತಕ್ಕದ್ದು ಎಂಬದಾಗಿ ಉಪದೇಶವು. ತಿಳಿದ ಜ್ಞಾನಿಗೆ ಒಂದು ವಿಧವಾದ ಮೋಕ್ಷೋಪಾಯಾನುಷ್ಠಾನವು; ತಿಳಿಯದ ಸಾಧಾರಣ ಮನುಷ್ಯನಿಗೆ ಇನ್ನೊಂದು ವಿಧವಾದ ಮೋಕ್ಷೋಪಾಯಾನುಷ್ಠಾನವೆಂದು ಶಾಸ್ತ್ರದಲ್ಲಿ ಪ್ರತ್ಯೇಕಿಸಿ ಹೇಳಲಿಲ್ಲವು. ಆದುದರಿಂದಲೇ ಅಕೃತ್ಸ್ನವಿದಃ, ಕೃತ್ಸ್ನವಿದಃ ಎಂಬ ಪ್ರಯೋಗಗಳು ಉಪಾಸನಕ್ಕೆ ಶಕ್ತರಾಗಿರುವವರು ಅವಿದ್ವಾಂಸರೇ ಆಗಲಿ ವಿದ್ವಾಂಸರೇ ಆಗಲಿ ಇಬ್ಬರಿಗೂ ಶಾಸ್ತ್ರ ಪಙ್ಕ್ತಿಯೂ ಒಂದೇ, ಅನುಷ್ಠಾನವೂ ಒಂದೇ; ಆದರೆ ವಿದ್ವಾಂಸನಿಂದ ಆಗುವ ಇನ್ನೊಂದು ಹೆಚ್ಚಾದ ಪ್ರಯೋಜನ ಉಂಟು. ಆ ಪ್ರಯೋಜನವು ಲೋಕ ಸಙ್ಗ್ರಹವೆಂದು ಮುಂದೆ ತಿಳಿ ಸುತ್ತಾರೆ. ಆದರೆ ಈ ಸಾಧಾರಣನಾಗಿ ತುಂಬಾ ಪ್ರಾಜ್ಞನಲ್ಲದವನ ಕರ್ಮನಿಷ್ಠೆಗೂ ಈ ಪ್ರಾಜ್ಞನ ಕರ್ಮಯೋಗ ನಿಷ್ಠೆಗೂ ಏನು ವ್ಯತ್ಯಾಸವೆಂದರೆ—ಅವಿದ್ವಾಂಸಃ ಸಕ್ತಾಃ ಕುರ್ವನ್ತಿ-ಇನ್ನೂ ಜ್ಞಾನವು ಪರಿಪಕ್ವವಾಗದಿರುವದರಿಂದ, ಸಕ್ತಾಃ - ಕರ್ಮಗಳಲ್ಲಿ ಸಂಬಂಧವನ್ನು ಹೊಂದಿದ ವರು; ವಿದ್ವಾಂಸನಾದವನು ಹೇಗೆ ಮಾಡುವನು ಎಂದರೆ ಅಸಕ್ತಃ - ಕರ್ಮಗಳಲ್ಲಿ ಸಂಬಂಧ ವಿಲ್ಲದವನಾಗುವನೆಂದು ಹೇಳಲ್ಪಟ್ಟಿತು. ಅವಿದ್ವಾಂಸಃ ಎಂಬಲ್ಲಿ ಬಹುವಚನಪ್ರಯೋಗದಿಂದ ಅಂತವರ ಬಾಹುಳ್ಯವನ್ನೂ, ವಿದ್ವಾನ್ ಎಂಬಲ್ಲಿ ಏಕವಚನ ಪ್ರಯೋಗದಿಂದ ಅಂತವರ ವಿರಳತೆ ಯನ್ನೂ ಸೂಚಿಸಿರುತ್ತಾರೆ. ಆದುದರಿಂದ ಆತ್ಮಸ್ವರೂಪವನ್ನು ತಿಳಿದ ಶ್ರೇಷ್ಠನೆನಿಸುವನೂ ಕೂಡ ಸ್ವವರ್ಣೋಚಿತ ಕರ್ಮಗಳಿಂದ ಸೇರಿದ ಕರ್ಮಯೋಗವನ್ನು ಎರಡು ಕಾರಣಗಳಿಂದ ಮಾಡತಕ್ಕದ್ದೆಂಬುದು ಏರ್ಪಟ್ಟಿತು:—ಒಂದನೆಯದು, ವಿಧಿವಿಹಿತವಾದ ಕರ್ಮಗಳನ್ನು ಬಿಟ್ಟರೆ

**ಭಾ. ಕೃತ್ಸ್ನವಿತ್ತ್ಯಯಾ ಜ್ಞಾನಯೋಗೋಪಾದಾನಾಶಕ್ತಾನಾಂ ಮುಮುಕ್ಷೂಣಾಂ ಕರ್ಮ ಸಙ್ಗಿನಾ-ಮನಾದಿಕರ್ಮವಾಸನಯಾಕರ್ಮಣ್ಯೇವ ನಿಯತತ್ವೇನ ಕರ್ಮಯೋಗಾಧಿಕಾರಿಣಾಂ ಕರ್ಮಯೋಗಾದ ನ್ಯದಾತ್ಮಾವಲೋಕನಸಾಧನ ಮಸ್ತೀತಿ ನಬುದ್ಧಿಭೇದಂ ಜನ ಯೇತ್. ಕಿಂ ತರ್ಹಿ?ಆತ್ಮನಿ ಕೃತ್ಸ್ನವಿತ್ತಯಾ ಜ್ಞಾನಯೋಗಶಕ್ತೋಽಪಿ ಪೂರ್ವೋಕ್ತ**

---

ತನಗೆ ಪ್ರತ್ಯವಾಯ ಉಂಟಾಗುವದರಿಂದಲೂ ಫಲಕರ್ತೃತ್ವಮಮತಾ ತ್ಯಾಗಪೂರ್ವಕವಾಗಿ ಮಾಡ ದಿದ್ದರೆ ಮೋಕ್ಷಪ್ರಾಪ್ತಿ ಇಲ್ಲದುದರಿಂದಲೂ ಮಾಡತಕ್ಕದ್ದು. ಎರಡನೆಯದು ಇತರರಿಗಾಗಿಯೂ ಸಹ ಮಾಡತಕ್ಕದ್ದು ; ತನ್ನನುವರ್ತಿಸಿ ನಡೆಯುವವರಿಗೆ ಧರ್ಮನಿಶ್ಚಯವನ್ನುಂಟುಮಾಡುವದ ಕ್ಕಾಗಿಯೂ ಮಾಡತಕ್ಕದ್ದು. ಸಾಧಾರಣ ಕರ್ಮಯೋಗಿಗೆ ಒಂದು ವಿಧವಾದ ಇತಿಕರ್ತವ್ಯತೆ ಯಿದ್ದರೆ ಜ್ಞಾನಯೋಗಿಗೆ ಹೀಗೆ ಎರಡು ತೆರನಾಗಿ ಇತಿಕರ್ತವ್ಯತೆಯುಂಟೆಂಬ ಭಾವವು. ಇಲ್ಲಿ ಭಾರತ ಎಂಬ ಸಂಬೋಧನೆಯು, ಈ ಲೋಕ ಸಙ್ಗ್ರಹಾರ್ಥವಾಗಿ ಅನುಷ್ಠಾನವು ಆವಶ್ಯಕ ವೆಂಬುದರ ಮಹಿಮೆಯನ್ನರಿತವರು ನಿನ್ನ ವಂಶೀಯರೈಯ್ಯಾ, ಅಂತಹ ವಂಶಕ್ಕೆ ಸೇರಿದವನು ನೀನೂ ಆಗಿದ್ದೀಯೇ, ಆದುದರಿಂದ ಈ ವಿಷಯವನ್ನು ನೀನು ಮುಖ್ಯವಾಗಿ ಗ್ರಹಿಸತಕ್ಕದ್ದೆಂಬ ಭಾವವು. ಮೂಲದ **ಚಿಕೀರ್ಷುರ್ಲೋಕಸಙ್ಗ್ರಹಂ** ಎಂಬುದರಿಂದ ಜನ್ಮವೆತ್ತಿ ಶಕ್ತಿಯಿರುವ ಪ್ರಾಜ್ಞನಾದವನು ತನ್ನ ಶಕ್ತ್ಯನುಸಾರ ಲೋಕೋಪಕಾರವನ್ನೆಸಗಲು ವಿಶೇಷ ಮಮತೆಯು ಇರಬೇಕೆಂಮ **ಚಿಕೀರ್ಷುಃ** ಎಂಬ ಪದವು ಉಪದೇಶಿಸುತ್ತದೆ. ಹಾಗೆ ಮಾಡದಿರುವವನ ಜನ್ಮವು ನಿರರ್ಥಕವು. ತಾನು ಸಾಧುಮಾರ್ಗದಲ್ಲಿ ನಡೆದು, ಅದನ್ನು ನಾಲ್ಕು ಜನರಾಗಲಿ ಅವಲಂ ಬಿಸಿ ಸುಖಿಗಳಾವರೆ ಅಂತವನ ಜನ್ಮವು ಸಾರ್ಥಕವಾದುದು. ಹಾಗಿಲ್ಲವಿದ್ದರೆ ನಿರುಪಯೋಗಗ ಳಾದ ತಿರ್ಯಗ್ಜಂತುಗಳ ಜನ್ಮಕ್ಕೆ ತನ್ನ ಜನ್ಮವೂ ಸಮಾನವು ಎಂಬುದು ಬೋಧಿತವು. ಇದನ್ನು ವಿಭೀಷಣ ಪ್ರವೃತ್ತಿಯು ಪ್ರಕಟಿಸುತ್ತದೆ. ತಾನು ರಾಮಾನುಗ್ರಹವನ್ನು ಸಂಪಾದಿಸಲು ಬಂದಾಗ "**ಚತುರ್ಭಿಸ್ಸಹರಾಕ್ಷಸೈಃ**" (ರಾ. ಯು. ೧೭ ) ಬಂದ ವೃತ್ತಾಂತವನ್ನುಜ್ಞಾಪಿಸಿಕೊಳ್ಳಬಹುದು.

ಮುಂದಿನ ಶ್ಲೋಕಾಭಿಪ್ರಾಯವನ್ನುಪದೇಶಿಸುತ್ತಾರೆ:— **ಅಜ್ಞಾನಾಂ** ಎಂದರೆ ಆತ್ಮನ್ನ **ಕೃತ್ಸ್ನವಿತ್ತಯಾ** - ಆತ್ಮಸ್ವರೂಪದಲ್ಲಿ ಜ್ಞಾನಸಂಪೂರ್ಣವಾಗಿಲ್ಲದಿರುವದರಿಂದ, **ಜ್ಞಾನ ಯೋಗೋಪಾದಾನಾಶಕ್ತಾನಾಂ**-ಜ್ಞಾನಯೋಗವನ್ನವಲಂಬಿಸಲು ಶಕ್ತಿಯಿಲ್ಲದ **ಮುಮುಕ್ಷೂ ಣಾಂ** - ಮೋಕ್ಷಾರ್ಥಿಗಳಾದ, **ಕರ್ಮಸಙ್ಗಿನಾಂ** ಎಂದರೆ, ಅನಾದಿ ಕರ್ಮ ವಾಸನೆಯಿಂದ, **ಕರ್ಮಣ್ಯೇವ** - ಕರ್ಮದಲ್ಲೇ, **ನಿಯತತ್ವೇನ** - ಇರುವದು ಸ್ವಭಾವವಾಗಿರುವದರಿಂದ, **ಕರ್ಮ ಯೋಗಾಧಿಕಾರಿಣಾಂ** - ಕರ್ಮಯೋಗಾಧಿಕಾರಿಗಳಾಗಿರುವವರಿಗೆ, **ಬುದ್ಧಿ ಭೇದಂ** - ಬುದ್ಧಿ ಯಲ್ಲಿ ವ್ಯತ್ಯಾಸವನ್ನು, ಅದು ಎಂಥಾದ್ದೆಂದರೆ, **ಕರ್ಮಯೋಗಾತ್** - ಕರ್ಮಯೋಗಕ್ಕಿಂತಲೂ, **ಅನ್ಯತ್** - ಬೇರೆಯಾಗಿ ಆತ್ಮಾವಲೋಕನಕ್ಕೆ ಸಾಧನವು, **ಅಸ್ತೀತಿ** - ಇದೆ ಎಂಬ ಬುದ್ಧಿಭೇದ ವನ್ನು, **ನ ಜನಯೇತ್** - ಉಂಟು ಮಾಡಬಾರದು. ಇಲ್ಲಿ ಬುದ್ಧಿ ಭೇದವೆಂದರೆ ಬುದ್ಧಿಯು ಬೇರೆಯಾಗುವಹಾಗೆ ಮಾಡೋಣವು, ಯಥಾರ್ಥಜ್ಞಾನಕ್ಕಿಂತ ಭಿನ್ನವಾದುದೇ ಬುದ್ಧಿ ಭೇದವು, ಶಾಸ್ತ್ರವು ಬೋಧಿಸಿರುವದನ್ನು ವಿಪರೀತವಾಗಿ ತಿಳಿಯುವುದು ; ಹೀಗೆ ಮೋಹಜ್ಞಾನದಿಂದ ಬುದ್ಧಿಯನ್ನು ಬದಲಾಯಿಸುವಹಾಗೆ ಮಾಡಕೂಡದೆಂದು ಹೇಳಲ್ಪಟ್ಟಿತು ; ಕರ್ಮಯೋಗದ ಪೇಕ್ಷೆಯಿಲ್ಲದೇನೇ ಬರೀ ಜ್ಞಾನಯೋಗದಿಂದಲೇ ಆತ್ಮಾವಲೋಕನವನ್ನು ಹೊಂದಬಹುದೆಂಬ ತಪ್ಪಾದ ಅಭಿಪ್ರಾಯವನ್ನುಂಟುಮಾಡಬಾರದು ಎಂಬ ತಾತ್ಪರ್ಯವು. ಹಾಗಾದರೆ ಇನ್ನೇನನ್ನು ಮಾಡತಕ್ಕದ್ದೆಂದರೆ, ಉಪದೇಶಿಸುತ್ತಾರೆ:—**ಕಿಂತರ್ಹಿ** - ಹಾಗಾದರೆ ಏನನ್ನು ಮಾಡತಕ್ಕದ್ದು

ಭಾ. ರೀತ್ಯಾ ಕರ್ಮಯೋಗ ಏವ ಜ್ಞಾನಯೋಗನಿರಪೇಕ್ಷ ಆತ್ಮಾವಲೋಕನಸಾಧನಮಿತಿ ಬುದ್ಧ್ಯಾಯುಕ್ತಃ ಕರ್ಮ್ಯೇವಾಚರ್ಣ ಸರ್ವಕರ್ಮಸ್ವಕೃತ್ಸ್ನವಿದಾಂ ಪ್ರೀತಿಂಜನಯೇತ್ || ೨೫, ೨೬ ||

ಎಂದರೆ—ಆತ್ಮನಿ ಕೃತ್ಸ್ನವಿತ್ತಯಾ ಜ್ಞಾನಯೋಗ ಶಕ್ತೋಽಪಿ - ಇದು ಮೂಲದ ವಿದ್ವಾನ್ ಎಂಬುದರರ್ಥವು, ಆತ್ಮಸ್ವರೂಪದಲ್ಲಿ ಪೂರ್ಣಜ್ಞಾನವಿರುವದರಿಂದ ಜ್ಞಾನಯೋಗಕ್ಕೆ ಶಕ್ತನಾಗಿದ್ದರೂ ಕೂಡ, ಪೂರ್ವೋಕ್ತರೀತ್ಯಾ - ಮೇಲೆ ಹೇಳಿದ ಪ್ರಕಾರ, ಮುಂದೆ ಯುಕ್ತಃ ಎಂಬ ಪದದ ತಾತ್ಪರ್ಯವನ್ನು ಹೇಳುತ್ತಾರೆ—ಕರ್ಮಯೋಗ ಏವ - ಕರ್ಮಯೋಗವೇ, ಜ್ಞಾನಯೋಗ ನಿರಪೇಕ್ಷಃ - ಜ್ಞಾನಯೋಗದಪೇಕ್ಷೆಯಿಲ್ಲದೇನೆ, ಆತ್ಮಾವಲೋಕನಕ್ಕೆ ಸಾಧನವೆಂದು, ಬುದ್ಧ್ಯಾಯುಕ್ತಃ - ಬುದ್ಧಿಯಿಂದ ಕೂಡಿದವನಾಗಿ, ಕರ್ಮ್ಯೇವಾಚರ್ಣ - ಕರ್ಮಯೋಗ ನಿರತನಾಗಿ, ಸರ್ವಕರ್ಮಸು - ಸಮಸ್ತ ವಿಧಿವಿಹಿತ ಕರ್ಮಗಳಲ್ಲಿ, ಅಕೃತ್ಸ್ನ ವಿದಾಂ - ಆತ್ಮ ವಿಷಯಕ ಜ್ಞಾನ ತುಂಬಾ ಇಲ್ಲದವರಿಗೆ, ಪ್ರೀತಿಂ - ವಿಶ್ವಾಸವನ್ನು, ಜನಯೇತ್ - ಉಂಟು ಮಾಡತಕ್ಕದ್ದು. "ಜುಷೀ ಪ್ರೀತಿಸೇವನಯೋಃ" ಎಂಬ ಧಾತ್ವರ್ಥಾನುಸಾರವಾಗಿ, ಇದು ಜೋಷಯೇತ್ ಎಂಬುದರರ್ಥವು ; ಜ್ಞಾನಯೋಗ ನಿರಪೇಕ್ಷವಾಗಿಯೇ ಕರ್ಮಯೋಗವೇ ಆತ್ಮಾವಲೋಕನಕ್ಕೆ ಸಾಧನವೆಂಬ ಬುದ್ಧಿಯಿಂದ ಕೂಡಿದವನಾಗಿ ವಿಧಿವಿಹಿತ ಕರ್ಮಗಳನ್ನು ವಿಧ್ಯನುಸಾರವಾಗಿ ಅನುಷ್ಠಿಸುವದರಿಂದ ಇತರ ಅಲ್ಪಜ್ಞರೂ ಅದನ್ನು ನೋಡಿ, ಅಂತಹ ಕರ್ಮಗಳನ್ನು ತತ್ಪ್ರಕಾರವಾಗಿಯೇ ಅನುಷ್ಠಿಸಲು ಪ್ರೀತಿಯನ್ನು ಹೊಂದುವಹಾಗೆ ಮಾಡತಕ್ಕದ್ದೆಂಬ ಭಾವವು. ಇದರಿಂದ ಜ್ಞಾನಯೋಗಾರ್ಹನಿಗೂ ಕೂಡ ಕರ್ಮಯೋಗವಾವಶ್ಯಕವೆಂದೂ, ಆದುದರಿಂದ ಎಲ್ಲರೂ ಕರ್ಮಯೋಗವನ್ನೇ ಅವಲಂಬಿಸತಕ್ಕದ್ದೆಂದೂ ಸ್ಥಾಪಿತವಾಯಿತು. ಕರ್ಮಯೋಗವು ಮೋಕ್ಷಾರ್ಥಿಗೆ ಉಪಾಯಾನುಷ್ಠಾನದಲ್ಲಿ ಪ್ರಥಮ ಪರ್ವವಾದುದರಿಂದ ತ್ಯಜಿಸಲು ಸಾಧ್ಯವಿಲ್ಲವೆಂಬ ಭಾವವು. ಈ ಎರಡು ಶ್ಲೋಕಗಳಿಗೂ ಕೆಲವರು ಬೇರೆವಿಧವಾಗಿ ಅರ್ಥಮಾಡಿರುತ್ತಾರೆ, ಹೇಗೆಂದರೆ ವಿದ್ವಾಂಸನು ಜ್ಞಾನಯುಕ್ತನಾದುದರಿಂದ ಆತನು ತನ್ನ ಪ್ರಯೋಜನಕ್ಕಾಗಿ ಕರ್ಮಮಾಡುವ ಆವಶ್ಯಕವಿಲ್ಲವು; ಇತರರಿಗೆ ಮೇಲುಪಜ್ತಿಯಾಗಿ ಕರ್ಮಯೋಗವನ್ನು ಅನುಷ್ಠಿಸತಕ್ಕದ್ದೆಂದು ಅರ್ಥಮಾಡಿರುತ್ತಾರೆ. ಹಾಗಾದರೆ ಇತರರಿಲ್ಲದೆ ವಾನಪ್ರಸ್ಥನಾಗಿ ವಿಜನ ಪ್ರದೇಶದಲ್ಲಿರುವವರಿಗೆ ನಿಯತ ಕರ್ಮಗಳು ಬೇಕಾಗಿಲ್ಲವೆಂದು ಹೇಳಿದಂತಾಗುವದಿಲ್ಲವೇ? ಆಗ ಶ್ರೀಕೃಷ್ಣಭಗವಾನ್‌ರವರ "ನಿಯತಂ ಕುರು ಕರ್ಮತ್ವಂ" ಎಂಬ ವಿಧಿರೂಪೋಪದೇಶವು ನಿರರ್ಥಕವಾಗುವದಲ್ಲದೆ ಆಜ್ಞಾ ಚ್ಛೇದೀ ಎಂಬ ದೋಷಕ್ಕೆ ಗುರಿಯಾಗುವದಿಲ್ಲವೇ? ಅಲ್ಲದೆ ಇದು ಪೂರ್ವಾಪರ ಅಭಿಪ್ರಾಯಗಳಿಗೆ ವಿರುದ್ಧವಾದ ಅಭಿಪ್ರಾಯವಾಗುತ್ತದೆ. ಕರ್ಮಯೋಗದಲ್ಲಿರುವ ಕರ್ಮಗಳು ನಿತ್ಯ, ನೈಮಿತ್ತಿಕ, ಕರ್ಮಯೋಗಕ್ಕೆ ವಿಹಿತ ಕರ್ಮಗಳಲ್ಲಿ ಐಚ್ಛಿಕವಾದುದು ಒಂದು ; ಹೀಗೆ ಮೂರುವಿಧ ಕರ್ಮಗಳುಂಟು. ಅವುಗಳಲ್ಲಿ ಎರಡಾದ ನಿತ್ಯ ನೈಮಿತ್ತಿಕ ಕರ್ಮಗಳು ವಿದ್ಯಾಙ್ಗಗಳೆಂದೂ ಅವುಗಳು ತ್ಯಾಜ್ಯಗಳಲ್ಲವೆಂದೂ ಶ್ರುತಿ ಸ್ಮೃತಿ, ಸೂತ್ರಾದಿಗಳಲ್ಲಿ ವ್ಯಕ್ತವು. "ಕುರ್ವನ್ನೇವೇ ಹಿ ಕರ್ಮಾಣಿ" ಎಂಬ ಉಪನಿಷದ್ವಾಕ್ಯಕ್ಕೂ, ವಿರೋಧವು. ಹಿಂದೆ ಶ್ರೀಕೃಷ್ಣ ಭಗವಾನರವರು "ನಿಯತಂ ಕುರು ಕರ್ಮತ್ವಂ" ಎಂದು ಹೇಳಿ, ಮುಂದೆ ೧೮ನೆಯ ಅಧ್ಯಾಯದಲ್ಲಿ ಕರ್ಮವನ್ನು ಬಿಡಬಹುದೇ ಕೂಡದೇ ಎಂಬ ಚರ್ಚೆಯಲ್ಲಿ ನಾನಾವಿಧ ಅಭಿಪ್ರಾಯಗಳುಂಟು ; ಆದರೆ ನನ್ನ ಸಿದ್ಧಾಂತಾಭಿಪ್ರಾಯವನ್ನು ಹೇಳುತ್ತೇನೆ ಕೇಳು ಎಂದು "ನಿಶ್ಚಯಂ ಶೃಣು" "ಯಜ್ಞದಾನ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವತತ್" ಎಂಬದಾಗಿ ಹಿತೋಪ

**ಭಾ. ಅ. ಕರ್ಮಯೋಗಮನುತಿಷ್ಠತೋ ವಿದುಷೋಽವಿದುಷಶ್ಚ ವಿಶೇಷಂ ಪ್ರದರ್ಶಯನ್ ಕರ್ಮಯೋಗಾಪೇಕ್ಷಿತ ಮಾತ್ಮನೋಽಕರ್ತೃತ್ವಾನುಸಂಧಾನ ಪ್ರಕಾರಮುಪದಿಶತಿ—**

**ಮೂ. ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಙ್ಕಾರ ವಿಮೂಢಾತ್ಮಾ ಕರ್ತಾಹ ಮಿತಿ ಮನ್ಯತೇ ॥ ೨೭.**

ದೇಶವನ್ನು ಮಾಡಿರುತ್ತಾರೆ. ಹಾಗೆಯೇ, ನಿಗಮನದಲ್ಲೂ "ಸ್ವೇಸ್ವೇ ಕರ್ಮಣ್ಯಭಿರತ ಸ್ಸಂಸಿದ್ಧಿಂ ಲಭತೇ ನರಃ"(೧೮. ೪೫) "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ (೧೮. ೪೬) ಎಂದು ಹೀಗೆಲ್ಲಾ ಹೇಳಿರುವಾಗ ಬುದ್ಧಿ ಭೇದವನ್ನುಂಟುಮಾಡುವ ಇಂತಹ ಅರ್ಥ ವನ್ನು ಹೇಳಬಹುದೇ? ಶ್ರೀ ವ್ಯಾಸಮಹರ್ಷಿಯ ವಾಕ್ಯವು ತುಂಬಾ ಗೂಢವಾದುದು. ಮೇಲು ಮೇಲೆ ತೋರುವ ಅರ್ಥಗಳನ್ನು ಹೇಳಿಬಿಟ್ಟರೆ ಪೂರ್ವಾಪರ ವಿರೋಧಗಳುಂಟಾಗುತ್ತವೆ. ಆದುದ ರಿಂದ ತುಂಬಾ ಯೋಚಿಸಿ ವ್ಯಾಖ್ಯಾನ ಮಾಡತಕ್ಕದ್ದಾಗಿರುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು**:—ಮುಂದಿನ ಎರಡು ಶ್ಲೋಕಕ್ಕೂ ಮತ್ತು ಅನಂತರ ಬರುವ ಎರಡು ಶ್ಲೋಕಕ್ಕೂ ಸಹ ಈ ಮುಂದಿನ ವಾಕ್ಯವನ್ನು ಅವತಾರಿಕೆಯಾಗಿ ಭಾವಿಸ ಬಹುದು :—**ಕರ್ಮಯೋಗಮನುತಿಷ್ಠತೋ ವಿದುಷೋಽವಿದುಷಶ್ಚ** - ಕರ್ಮಯೋಗದಲ್ಲಿ ಪ್ರವರ್ತಿಸಿದ ಆತ್ಮಜ್ಞಾನವುಳ್ಳವನಿಗೂ ಆತ್ಮಜ್ಞಾನವಿಲ್ಲದವನಿಗೂ ಇರುವ, (ಇದರಿಂದ ಎಲ್ಲಾ ಮುಮುಕ್ಷುಗಳೂ ಕರ್ಮಯೋಗವನ್ನವಲಂಬಿಸತಕ್ಕದ್ದೆಂಬುದು ನಿರ್ಧರಿಸಲ್ಪಟ್ಟಿತು) **ವಿಶೇಷಂ** - ವ್ಯತ್ಯಾಸವನ್ನು, **ಪ್ರದರ್ಶಯನ್** - ವ್ಯಕ್ತಪಡಿಸುವರಾಗಿ, **ಕರ್ಮಯೋಗಾಪೇಕ್ಷಿತಂ** - ಕರ್ಮ ಯೋಗಕ್ಕೆ ಆವಶ್ಯಕವಾಗಿ ಬೇಕಾದ, ಕರ್ಮಯೋಗದ ಇತಿಕರ್ತವ್ಯತಾ ರೂಪವಾದ, **ಆತ್ಮನೋಽ ಕರ್ತೃತ್ವಾನುಸಂಧಾನ ಪ್ರಕಾರಂ** - ತನಗೆ ಕರ್ತೃತ್ವವಿಲ್ಲವೆಂಬ ತಿಳುವಳಿಕೆಯ ರೀತಿಯನ್ನು, **ಉಪದಿಶತಿ** - ಶ್ರೀಕೃಷ್ಣ ಭಗವಾನರವರು ಉಪದೇಶಿಸುತ್ತಾರೆ, ಹಿಂದೆಯೇ "**ಮಾಕರ್ಮ ಫಲ ಹೇತುರ್ಭೂಃ**" (ಗೀ. ೨. ೪೭) ಎಂದು ತನಗೆ ಕರ್ತೃತ್ವದಲ್ಲೂ ಫಲದಲ್ಲೂ ಸಂಬಂಧವಿಲ್ಲವೆಂಬ ಅನುಸಂಧಾನವು ಕರ್ಮಯೋಗಕ್ಕೆ ಆವಶ್ಯಕವೆಂಬ ಭಾವವನ್ನು ಇನ್ನೊಂದುಸಲ ಜ್ಞಾಪಿಸು ತ್ತಾರೆ. ಇಲ್ಲಿ ಅವತಾರಿಕೆಯಲ್ಲಿ **ವಿದುಷೋಽವಿದುಷಶ್ಚ** ಎಂದು ಹೇಳಿರುತ್ತದೆ. ಮೂಲದಲ್ಲಿ ಅವಿದ್ವಾಂಸನ ವಿಷಯವು ಮೊದಲು ಹೇಳಲ್ಪಟ್ಟು ವಿದ್ವಾಂಸನ ವಿಷಯವು ಅನಂತರ ಹೇಳಲ್ಪ ಟ್ಟಿರುತ್ತದೆ. **ಈ ವಿದುಷೋಽವಿದುಷಶ್ಚ**, ಎಂಬ ಪ್ರಯೋಗದಿಂದ ಇವರಿಬ್ಬರಿಗೂ ಇರುವ ಅನು ಸಂಧಾನ ವ್ಯತ್ಯಾಸವನ್ನು ಹೇಳುವ ಮುಂದಿನ ಎರಡು ಶ್ಲೋಕಗಳ ಅಭಿಪ್ರಾಯವು ಸೂಚಿ ತವು; ಮತ್ತು ಮುಂದಿನ ವಾಕ್ಯಶೇಷವಾದ **ಕರ್ಮಯೋಗಾಪೇಕ್ಷಿತ ಮಾತ್ಮನೋಽಕರ್ತೃ ತ್ವಾನುಸನ್ಧಾನಪ್ರಕಾರಂ** ಎಂಬುದರಿಂದ ೩೦ನೆಯ ಶ್ಲೋಕಾಭಿಪ್ರಾಯವೂ ಸೂಚಿಸಲ್ಪಟ್ಟಿತು.

**ಮೂಲಕ್ಕೆ ಅರ್ಥವು**:—**ಅಹಙ್ಕಾರವಿಮೂಢಾತ್ಮಾ** - ಇಲ್ಲಿ ಅಹಙ್ಕಾರ ಶಬ್ದದಿಂದ ಅಹಂಭಾವಮಾತ್ರವಾಗಲಿ ಅಹಙ್ಕಾರ ತತ್ತ್ವವಾಗಲಿ, ಗರ್ವವಾಗಲಿ ಹೇಳಲ್ಪಡಲಿಲ್ಲವು; ದೇಹಾತ್ಮ ಭ್ರಮವು ಹೇಳಲ್ಪಟ್ಟಿತು, ದೇಹಾತ್ಮ ಭ್ರಮೆಯಿಂದ ತಿಳಿಯಲ್ಪಡದೇ ಇರುವ ಆತ್ಮ ಸ್ವರೂಪವುಳ್ಳವನು, **ಪ್ರಕೃತೇಃ** - ಪ್ರಕೃತಿಯ, **ಗುಣೈಃ** - ಸತ್ವ ರಜಸ್ತಮೋಗುಣಗಳಿಂದ, **ಸರ್ವಶಃ** - ಆ ಗುಣಗಳಿಗೆ ಅನುರೂಪವಾಗಿ, **ಕ್ರಿಯಮಾಣಾನಿ** - ಮಾಡಲ್ಪಡುವ, **ಕರ್ಮಾಣಿ**– ಕರ್ಮಗಳನ್ನು ಕುರಿತು, **ಕರ್ತಾಹಮಿತಿ ಮನ್ಯತೇ** - ತಾನೇ ಕರ್ತಾವೆಂದು ತಿಳಿದುಕೊಳ್ಳುವನು. ಜೀವಾತ್ಮನು ದೇಹಸಂಬಂಧವಿಲ್ಲದೆ ತಾನೇ ಸ್ವತಂತ್ರಿಸಿ ಯಾವಕೆಲಸವನ್ನೂ ಮಾಡಲಾರನು.

**ಮೂ. ತತ್ತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯೋಃ ।
ಗುಣಾಗುಣೇಷು ವರ್ತನ್ತೇ ಇತಿಮತ್ವಾ ನ ಸಜ್ಜತೇ ॥ ೨೮.**

**ಭಾ. ಪ್ರಕೃತೇರ್ಗುಣೈ - ಸ್ಸತ್ವಾದಿಭಿಃ, ಸ್ವಾನುರೂಪಂ ಕ್ರಿಯಮಾಣಾನಿ ಕರ್ಮಾಣಿಪ್ರತಿ ಅಹಂಕಾರ ವಿಮೂಢಾತ್ಮಾಽಹಂ ಕರ್ತೇತಿ ಮನ್ಯತೇ; ಅಹಂಕಾರೇಣ ವಿಮೂಢ ಆತ್ಮಾ ಯಸ್ಯಾಸಾ ವಹಂಕಾರ ವಿಮೂಢಾತ್ಮಾ ; ಅಹಂಕಾರೋನಾಮ ಅನಹಮರ್ಥೇ**

ದೇಹೇಂದ್ರಿಯಗಳ ಸಹಾಯವು ಕೆಲಸಮಾಡಲು ಮುಖ್ಯವಾಗಿಬೇಕು. ಆದುದರಿಂದ ಈತನು ಮಾಡುವ ಕರ್ಮಗಳೆಲ್ಲಾ ಈತನಿಗೆ ಪಾಪಪುಣ್ಯ ಕರ್ಮಾನುಗುಣವಾಗಿ ಪ್ರಾಪ್ತವಾಗಿರುವ ದೇಹ ದಲ್ಲಿ ತೋರಿಬರುವ ಸತ್ವರಜಸ್ತಮೋಗುಣಗಳಿಗನುಸಾರವಾಗಿ ಉಂಟಾದವು. ಆ ಕರ್ಮಗಳು ಶರೀರಮೂಲಕ ಉಂಟಾದರೂ ದೇಹಾತ್ಮ ಭ್ರಮದಿಂದ ತಾನೇ ಕರ್ತಾವೆಂದು ಭಾವಿಸುವನು. ಆತ್ಮತತ್ವವನ್ನು ತಿಳಿದವನಾದರೋ ಹಾಗಲ್ಲವು, ದೇಹದಲ್ಲಿರುವ ಸತ್ವ ರಜಸ್ತಮೋಗುಣಗಳ ಮೂಲಕ ನಡೆಯುತ್ತವೆ ಎಂದು ತಿಳಿಯುವನೆಂದೂ, ಆ ಕರ್ಮಗಳಿಗೆ ತನಗೆ ಸಂಬಂಧ ಉಂ ಟೆಂದು ಭಾವಿಸುವದಿಲ್ಲವೆಂದು ಹೇಳುತ್ತಾರೆ :—**ಹೇ ಮಹಾಬಾಹೋ** - ಓ ಮಹತ್ತಾದ ಬಾಹು ಗಳುಳ್ಳ ಎಂದರೆ ಭುಜಪರಾಕ್ರಮಿಯಾದ ಅರ್ಜುನನೇ, **ಗುಣಕರ್ಮವಿಭಾಗಯೋಃ** - ಸತ್ವರಜ ಸ್ತಮೋಗುಣಗಳ ಆಧಿಕ್ಯದ ಮೂಲಕ ವಿಭಾಗವ ಮತ್ತು ಆ ಆ ಗುಣಗಳಿಂದುಂಟಾಗುವ ಕರ್ಮ ವಿಭಾಗದ, **ತತ್ವವಿತ್ತು** - ತತ್ವಜ್ಞನಾದರೋ ಎಂದರೆ ಆತ್ಮ ಮತ್ತು ಪ್ರಕೃತಿಗಳ ಸ್ವರೂಪ ಸ್ವಭಾವಗಳನ್ನು ವಿಮರ್ಶಿಸಿ ತಿಳಿದವನಾದರೋ, **ಗುಣಾಃ** - ಸತ್ವರಜಸ್ತಮೋಗುಣಗಳು, **ಸ್ವಗು ಣೇಷು** - ಆ ಆ ಗುಣಗಳ ಕಾರ್ಯಭೂತವಾದ ವ್ಯಾಪಾರಗಳಲ್ಲಿ **ವರ್ತಂತೇ** – ಇರುತ್ತವೆ, **ಇತಿಮತ್ವಾ** - ಎಂದು ತಿಳಿದವನಾಗಿ, **ನ ಸಜ್ಜತೇ** – ಅವುಗಳೊಂದಿಗೆ ಸಂಬಂಧಿಸುವದಿಲ್ಲವು, ಗುಣಕರ್ಮ ವಿಭಾಗ ಎಂಬಲ್ಲಿ ಗುಣ ವಿಭಾಗ ಕರ್ಮ ವಿಭಾಗವೆಂದಿಟ್ಟುಕೊಳ್ಳತಕ್ಕದ್ದು, ಇವು ಗಳ ವಿಭಾಗವು ಮುಂದೆ ಹೇಳಲ್ಪಡುತ್ತದೆ. ಗುಣಾಧಿಕ್ಯ ಭೇದ, ಮತ್ತು ಕರ್ಮಗಳ ಸುಕೃತ ದುಷ್ಕೃತಗಳ ಮೂಲಕ ಉಂಟಾದ ಭೇದ, ಇವುಗಳಿಂದ ಉಂಟಾಗುತ್ತದೆಂದು ತಿಳಿದವನಾಗಿ, ಅವುಗಳಲ್ಲಿ ಸಜ್ಜವನ್ನೂ ಮಮತೆಯನ್ನೂ ಇಡುವದಿಲ್ಲವೆಂಬ ಭಾವವು. ಈ ಆತ್ಮನು ಹಿಂದಿನ ಜನ್ಮದಲ್ಲಿ ಮಾಡಿದ ಸುಕೃತ ದುಷ್ಕೃತಗಳಿಗನುಸಾರವಾಗಿ, ಸಾತ್ವಿಕ ಗುಣ ಮತ್ತು ರಾಜಸ ತಾಮಸ ಗುಣಗಳಾಧಿಕ್ಯ ಉಂಟಾಗಿ ತದನುಸಾರ ಶರೀರದ ಮೂಲಕ ಪ್ರವೃತ್ತಿಗಳುಂಟಾಗು ತ್ತವೇ ವಿನಾ, ತನ್ನ ಪರಿಶುದ್ಧ ಸ್ವರೂಪದಿಂದ ಉಂಟಾದವಲ್ಲವೆಂದು ತಿಳಿದು, ಆ ಕರ್ಮ ಗಳಲ್ಲಿ ತನಗೆ ಕರ್ತೃತ್ವದ ಸಂಬಂಧವಿಲ್ಲವೆಂದು ಭಾವಿಸುವನು ಎಂಬ ತಾತ್ಪರ್ಯವು.

**ಭಾಷ್ಯಾರ್ಥವು :—ಪ್ರಕೃತೇಃ** ಪ್ರಕೃತಿಯ, **ಗುಣೈಃ** ಎಂದರೆ **ಸತ್ವಾದಿಭಿಃ** - ಸತ್ತ್ವವೇ ಮೊದಲಾದವುಗಳಿಂದ, ಇಲ್ಲಿ ಆದಿಪದದಿಂದ ರಜಸ್ತಮೋಗುಣಗಳು ಹೇಳಲ್ಪಟ್ಟವು, ಶಬ್ದಾದಿ ಗುಣಗಳು ಹೇಳಲ್ಪಡಲಿಲ್ಲವು **ಸ್ವಾನುರೂಪಂ** - ಇದು ಸರ್ವಶಃ ಎಂಬುದರರ್ಥವು, ತನಗೆ ಅನುರೂಪವಾಗಿ, **ಕ್ರಿಯಮಾಣಾನಿ ಕರ್ಮಾಣಿ ಪ್ರತಿ** - ಮಾಡಲ್ಪಡುವ ಸಾತ್ವಿಕಾದಿ ಕರ್ಮಗ ಳನ್ನು ಕುರಿತು, **ಅಹಂಕಾರವಿಮೂಢಾತ್ಮಾ** - ದೇಹದಲ್ಲಿ ಅಹಂ ಎಂಬ ಭಾವದಿಂದ ಭ್ರಮೆ ಗೊಂಡ ಸ್ವರೂಪವುಳ್ಳವನು, **ಅಹಂಕರ್ತೇತಿ ಮನ್ಯತೇ** - ತಾನೇ ಕರ್ತಾವೆಂದು ತಿಳಿಯುತ್ತಾನೆ, **ಅಹಂಕಾರೇಣ** - ಅಹಂ ಎಂಬ ಭಾವದಿಂದ, **ವಿಮೂಢಾತ್ಮಾ** - ಭ್ರಮೆಗೊಂಡ ಸ್ವರೂಪವು, **ಯಸ್ಯ** - ಯಾವನಿಗೋ, **ಅಸೌ** - ಅವನು, **ಅಹಂಕಾರವಿಮೂಢಾತ್ಮಾ** - ಎಂದೆನಿಸುವನು,

ಭಾ. ಪ್ರಕೃತಾ ವಹ ಮಭಿಮಾನಃ;ತೇನ ಅಜ್ಞಾತ(ಆತ್ಮ) ಸ್ವರೂಪೋ ಗುಣಕರ್ಮಸುಅಹಂ ಕರ್ತ್ರೇತಿ ಮನ್ಯತ ಇತ್ಯರ್ಥಃ. ಗುಣಕರ್ಮವಿಭಾಗಯೋಃ - ಸತ್ತ್ವಾದಿಗುಣ ವಿಭಾಗೇ ತತ್ತತ್ಕರ್ಮ ವಿಭಾಗೇ ಚ, ತತ್ತ್ವವಿತ್ ಗುಣಾ-ಸ್ಸತ್ತ್ವಾದಯಃ, ಸ್ವಗುಣೇಷು-ಸ್ವೇಷು ಕಾರ್ಯೇಷು ವರ್ತನ್ತ ಇತಿ ಮತ್ವಾ, ಗುಣಕರ್ಮಸು ಅಹಂ ಕರ್ತ್ರೇತಿ ನ ಸಜ್ಜತೇ ||೨೭,೨೮||

---

ಅಹಂಕಾರೋಣಾಮ - ಅಹಂಕಾರವೆಂದರೆ, ಅನಹಮರ್ಥೇ - ಅಹಮರ್ಥವಲ್ಲದ, ಪ್ರಕೃತೌ - ಪ್ರಕೃತಿಯಾದ ದೇಹದಲ್ಲಿ, ಅಹಮಭಿಮಾನಃ - ತಾನು ಎಂಬಭಿಮಾನವು, ಇಲ್ಲಿ ಅಹಂಕಾರೋಣಾಮ ಎಂದು ಅಹಂಕಾರ ಶಬ್ದಕ್ಕೆ ಅರ್ಥವನ್ನು ಹೇಳಲು ಕಾರಣವೇನೆಂದರೆ ತಾನು ಎಂಬ ಅಭಿಪ್ರಾಯವೆಂದಾಗಲಿ, ಅಹಂಕಾರ ಶಬ್ದದಿಂದ ಹೇಳಲ್ಪಡುವ ಅಚಿದ್ದ್ರವ್ಯವೆಂದಾಗಲಿ, ಗರ್ವವೆಂಬ ಅರ್ಥವಾಗಲಿ, ಸರಿಹೋಗುವದಿಲ್ಲವೆಂದು ತಿಳಿಸಿ, ಅಹಂಕಾರ ಶಬ್ದಕ್ಕೆ ಇಲ್ಲಿ ದೇಹಾತ್ಮ ಭ್ರಮೆ ಎಂಬುದೇ ತಾತ್ಪರ್ಯವೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು; ಏಕೆಂದರೆ ಈಗ ಪ್ರಸ್ತುತವಾದುದು ದೇಹಾತ್ಮ ಭ್ರಮೆಯೇಯಾದುದರಿಂದ, ಇಂತಹ ದೇಹಾತ್ಮ ಭ್ರಮೆಯು "ಅನಾತ್ಮನ್ಯಾತ್ಮಬುದ್ಧಿರ್ಯಾ ಅಸ್ವೇಸ್ವಮಿತಿಯಾಮತಿಃ । ಅವಿದ್ಯಾತರುಸಂಭೂತಂ ಬೀಜಮೇ ತದ್ದ್ವಿಧಾಸ್ಥಿತಂ" (ವಿ.ಪು. ೬-೭.೧೧)ಎಂಬಲ್ಲಿ ಅವಿದ್ಯೆ ಯೆಂಬ ವೃಕ್ಷದಲ್ಲಿ ಉಂಟಾದ ಬೀಜವೆಂದು ನಿಂದಿಸಲ್ಪಟ್ಟಿರುತ್ತದೆ. ತೇನ - ಅಂತಹ ದೇಹಾತ್ಮಭ್ರಮದಿಂದ, ಅಜ್ಞಾತಾತ್ಮಸ್ವರೂಪಃ - ತಿಳಿಯದ ಆತ್ಮಾವಿನ ಸ್ವರೂಪವುಳ್ಳವನು, ಗುಣಕರ್ಮಸು - ಆ ಗುಣಗಳಿಂದುಂಟಾಗುವ ಕರ್ಮಗಳಲ್ಲಿ ಇವರಲ್ಲಿ ಕರ್ಮಯೋಗವೂ ಸೇರಿತು. ಅಹಂಕರ್ತ್ರೇತಿ ಮನ್ಯತೇ - ತಾನೇ ಕರ್ತಾವೆಂದು ಭಾವಿಸುತ್ತಾನೆ, ಇತ್ಯರ್ಥಃ-ಎಂಬರ್ಥವು, ಈ ಅಭಿಪ್ರಾಯವೇ ಕಪಿಲರು ತಮ್ಮ ತಾಯಿಗೆ ಉಪದೇಶಿಸಿರುವ ಸಂದರ್ಭದಲ್ಲೂ ಉಪಪಾದಿತವು. "ಏವಂ ಪರಾಭಿಧ್ಯಾನೇನಕರ್ತೃತ್ವಂ ಪ್ರಕೃತೇಃ ಪುಮಾನ್ । ಕರ್ಮಸು ಕ್ರಿಯಮಾಣೇಷು ಗುಣೈರಾತ್ಮನಿಮನ್ಯತೇ" (ಭಾಗ. ೩-೨೬.೭) ಎಂಬಲ್ಲಿ ಪ್ರಕೃತಿಯಿಂದ ಜ್ಞಾನ ತಿರೋಹಿತರಾದ ವಿಮೂಢಾತ್ಮರು, ಪ್ರಕೃತಿಯಿಂದುಂಟಾಗುವ ಸಾಂಸಾರಿಕ ಪ್ರವೃತ್ತಿಗಳಲ್ಲಿ ತಾನು ಮಾಡಿದೆನೆಂದು ತಿಳಿಯುವರು ಎಂದು ಹೇಳಲ್ಪಟ್ಟಿರುತ್ತದೆ. ಮುಂದೆ, ಕಾರ್ಯಕಾರಣಕರ್ತೃತ್ವೇ ಕಾರಣಂಪ್ರಕೃತಿರ್ವಿದುಃ" (ಭಾಗ. ೩-೨೬.೯) ಈ ಅಭಿಪ್ರಾಯವೇ ಇನ್ನೊಂದು ವಿಧವಾಗಿ ಜ್ಞಾನತಿರೋಹಿತತ್ವವಿಲ್ಲದವರು ಶರೀರಮೂಲಕವಾಗಿ ಮಾಡಲ್ಪಡುವ ಪ್ರವೃತ್ತಿಗಳಲ್ಲಿ ಪ್ರಕೃತಿಯೇ ಕಾರಣವೆಂದು ತಿಳಿಯುತ್ತಾರೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಗೀ. ೧೩.೨೧ನೆಯಶ್ಲೋಕವನ್ನೂ ನೋಡಿ. ಆತ್ಮನು ಅಣುವು. ಶರೀರೇಂದ್ರಿಯ ರೂಪ ಪ್ರಕೃತಿ ಸಂಬಂಧವಿಲ್ಲದೆ ಯಾವ ಕರ್ಮವನ್ನೂ ಮಾಡಲಶಕ್ತನು. ಆದುದರಿಂದ ಪ್ರಕೃತಿಯ ಮೂಲಕವಾಗಿಯೇ ಸರ್ವಕರ್ಮಗಳನ್ನೂ ಮಾಡಬಲ್ಲನು. ಆಕಾರಣದಿಂದ ತಾನೇ ಕರ್ತಾ ಎಂದು ತಿಳಿಯುವದು ದೇಹಾತ್ಮ ಭ್ರಮೆಯಿಂದಾದುದರಿಂದ ಅಹಂಕಾರ ವಿಮೂಢಾತ್ಮಾ ಎಂಬ ಪ್ರಯೋಗವು. ಕರ್ಮಯೋಗಾದಿ ಉಪಾಯಗಳನ್ನವಲಂಬಿಸಿ ತನ್ನನ್ನು ಹೊಂದಲಿ ಎಂಬಭಿಪ್ರಾಯದಿಂದಲೇ ದಯಾನಿಧಿಯಾದ ಸರ್ವೇಶ್ವರನು ನಮ್ಮಗಳ ಕರ್ಮಾನುಸಾರವಾಗಿ ನಮಗೆ ಕರಣಕಳೇಬರ ಯೋಗವನ್ನುಂಟುಮಾಡಿರುತ್ತಾನೆ. ಹೀಗೆ ಶರೀರಾಕೃತಿ ಭೇದಾಸ್ತು ಭೂಪೈತೇಕರ್ಮಯೋನಯಃ (ವಿ. ಪು.) ಎಂದು ಹೇಳಿರುವಹಾಗೆ ಶರೀರಗಳು ಕರ್ಮಮೂಲಕವಾದುದರಿಂದ ಸತ್ವರಜಸ್ತಮೋಗುಣಗಳ ಆಧಿಕ್ಯವು ಅವರವರುಗಳ ಕರ್ಮಾನುಸಾರ ಉಂಟಾಗುತ್ತದೆ. ಮುಂದೆ "ಅಧಿಷ್ಠಾನಂ ತಥಾಕರ್ತಾ" (ಗೀ. ೧೮. ೧೪) ಎಂಬ ಶ್ಲೋಕದಲ್ಲಿ ಒಂದು ಕರ್ಮ ನಡೆಯಬೇಕಾದರೆ ಶರೀರ, ಇಂದ್ರಿಯಗಳು, ಜೀವಾತ್ಮಾ, ಚೇಷ್ಟಾ, ಸರ್ವೇಶ್ವರನು ಹೀಗೆ ಐದೂ ಸೇರಬೇಕೆಂದು ಹೇಳಲ್ಪಡುತ್ತದೆ, ಆದುದರಿಂದ ಜೀವಾತ್ಮ ಮಾತ್ರವೇ ಕರ್ತಾ

**ಮೂ. ಪ್ರಕೃತೇರ್ಗುಣಸಮ್ಮೂಢಾಸ್ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥ ೨೯.**

ನಾಗುವದಿಲ್ಲವು. ಆದರೆ ಜೀವಾತ್ಮನ ಸಹಾಯವಿಲ್ಲದೆಯೂ ನಡೆಯುತ್ತದೋ ಎಂದರೆ ಹಾಗೂ ಅಲ್ಲವು. ಜೀವಾತ್ಮನಿಲ್ಲದ ಪ್ರೇತವು ಏನು ಕಾರ್ಯವನ್ನೂ ಮಾಡಲಾರದು. ಕರ್ತೃತ್ವವೇನೋ ಉಂಟೆಂದು "ಕರ್ತಾ ಶಾಸ್ತ್ರಾರ್ಥವತ್ತ್ವಾತ್" ಎಂಬ ಬ್ರಹ್ಮಸೂತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ಈ ಕರ್ತೃತ್ವವು ಈತನಿಗೆ ಮೋಕ್ಷದಶೆಯಲ್ಲೂ ಉಂಟು. ಆದರೆ ಕರಣಕಳೇಬರಯೋಗವೇನು, ಪರಮಾತ್ಮ ಸಙ್ಕಲ್ಪವೇನು, ಇವುಗಳಿಗೆ ಅಧೀನವಾಗಿರುವದರಿಂದ ಅಹಂ ಕರ್ತಾ ಎಂಬ ಅಭಿಮಾನವು ದೇಹಾತ್ಮ ಭ್ರಮೆಯಿಂದುಂಟಾಗುತ್ತದೆಂದು ಇಲ್ಲಿ ಹೇಳಲ್ಪಟ್ಟಿತು. ಆದುದರಿಂದ ಆತ್ಮಸ್ವರೂಪಜ್ಞಾನವುಳ್ಳವನು ಆ ಕರ್ಮಗಳು ದೇಹ ಗುಣಗಳ ಮೂಲಕ ಪ್ರಾರಬ್ಧ ಕರ್ಮಾನುಸಾರವಾಗಿಯೂ ಸ್ವಾಮಿಸಙ್ಕಲ್ಪಾನುಸಾರವಾಗಿಯೂ ನಡೆಸುವದರಿಂದ ತಾನುಮಾಡಿದನೆಂಬ ಅಭಿಮಾನವಿಡುವದಿಲ್ಲವೆಂದು ಮುಂದಿನ ಶ್ಲೋಕದಲ್ಲಿ ಹೇಳಲ್ಪಡುತ್ತದೆ:—ಗುಣಕರ್ಮವಿಭಾಗಯೋಃ ಎಂದರೆ ಸತ್ತ್ವಾದಿ ಗುಣ ವಿಭಾಗದಲ್ಲಿಯೂ, ತತ್ತತ್ಕರ್ಮವಿಭಾಗೇ ಚ - ಆ ಆ ಗುಣಗಳಿಂದುಂಟಾಗುವ ಕಾರ್ಯ ವಿಭಾಗದಲ್ಲಿಯೂ ಕೂಡ, ತತ್ತ್ವವಿತ್ತು - ಆತ್ಮತತ್ತ್ವವನ್ನು ತಿಳಿದವನಾದರೋ, **ಗುಣಾಃ** ಎಂದರೆ **ಸತ್ತ್ವಾದಯಃ** - ಸತ್ತ್ವವೇ ಮೊದಲಾದವುಗಳು, ಆದಿ ಶಬ್ದದಿಂದ ರಾಜಸ ತಾಮಸಗುಣಗಳು ಹೇಳಲ್ಪಟ್ಟವು, ಸ್ವಗುಣೇಷು ಎಂದರೆ ಸ್ವೇಷು ಕಾರ್ಯೇಷು - ಅವುಗಳ ಕಾರ್ಯಭೂತವಾದ ಕರ್ಮಗಳಲ್ಲಿ, ವರ್ತನ್ತೇ - ಇರುತ್ತವೆ. ಇತಿಮತ್ವಾ - ಎಂದಾಗಿ ತಿಳಿದು **ಅಹಂಕರ್ತೇತಿ** - ತಾನು ಕರ್ತಾವೆಂಬದಾಗಿ, ನ ಸಜ್ಜತೇ-ಅವುಗಳಲ್ಲಿ ಅಭಿಮಾನವನ್ನಿಡುವದಿಲ್ಲವು. ಆತ್ಮಜ್ಞಾನ ವಿವೇಕವುಳ್ಳವನಾದರೋ ಈ ಕರ್ಮಗಳೆಲ್ಲಾ ತನಗೆ ಉಂಟಾಗಿರುವ ಶರೀರದ ಕಾರ್ಯಗಳೆಂದು ತಿಳಿದವನಾಗಿ, ಶರೀರದ ಸತ್ತ್ವರಜಸ್ತಮೋಗುಣಗಳ ಆಧಿಕ್ಯಗಳಿಗನುಸಾರವಾಗಿ ಸಾಂಸಾರಿಕ ಕರ್ಮಗಳು ನಡೆಯುತ್ತವೆಂದು ತಿಳಿದವನಾಗಿ, ಅವುಗಳಲ್ಲಿ ಮಮತೆಯನ್ನಿಡುವದಿಲ್ಲವೆಂಬ ಭಾವವು. ಆದರೆ ಶರೀರವೇ ಎಲ್ಲಾ ಕಾರ್ಯಗಳನ್ನು ಮಾಡುತ್ತವೆ, ಆತ್ಮನಿಗೆ ಕರ್ತೃತ್ವವಿಲ್ಲವೆಂದರೆ ಸಾಂಖ್ಯರ ಮತ ಪ್ರಕ್ರಿಯೆಯು ಆಗುವದಿಲ್ಲವೋ ಎಂದರೆ, ಹಾಗಲ್ಲವು. ಜೀವಾತ್ಮನು ಪಾಷಾಣದಹಾಗೆ ಸುಮ್ಮನಿರುವದಿಲ್ಲವು. ಅಥವಾ ಸ್ಫಟಿಕದಲ್ಲಿ ಜಪಾಕುಸುಮವೆಂದರೆ ಕೆಂಪು ದಾಸವಾಳದ ರಕ್ತಿಮೆಯು ಆರೋಪಿತವಾಗಿರುವಹಾಗೆ ಆತ್ಮನಲ್ಲಿ ಪ್ರಕೃತಿಯ ಪ್ರವೃತ್ತಿಗಳು ಆರೋಪಿತವಾಗುತ್ತವೆಂದೂ ಭಾವಿಸತಕ್ಕದ್ದಲ್ಲವು. ಏಕೆಂದರೆ, ಆತ್ಮನಿಲ್ಲದ ಪ್ರೇತಕ್ಕೆ ಇಂತಹ ಪ್ರವೃತ್ತಿಗಳಿರುವದಿಲ್ಲವು. ಪ್ರವೃತ್ತಿಗಳಿಗೆ ಆತ್ಮನ ಗುಣಗಳಾದ ಜ್ಞಾನ ಚಿಕೀರ್ಷೆಗಳು ಆವಶ್ಯಕವು; ದೇಹವಾದ ಪ್ರಕೃತಿಯ ಮೂಲಕವಾಗಿಯೇ ಪ್ರವೃತ್ತಿಗಳು ಎಂಬ ಭಾವವು. ಶರೀರಕ್ಕೂ ಸರ್ವೇಶ್ವರ ಸಙ್ಕಲ್ಪಕ್ಕೂ ಅಧೀನವಾದ ಕರ್ತೃತ್ವವೂ ಉಂಟು. ಪರಾತ್ತು ತಚ್ಛ್ರುತೇಃ ಎಂಬ ಬ್ರಹ್ಮ ಸೂತ್ರದಲ್ಲಿ ಈತನ ಕರ್ತೃತ್ವವು ಪರಾಯತ್ತವಾದುದೆಂದು ಹೇಳಲ್ಪಟ್ಟಿರುತ್ತದೆ. ಈ ಅಭಿಪ್ರಾಯವು ಮುಂದಿನ ಒಂಬತ್ತನೆಯ ಶ್ಲೋಕದಲ್ಲೂ ಉಪಪಾದಿತವು. ॥೨೮॥೨೮॥

**ಮೂಲಕ್ಕೆ ಅರ್ಥವು:**—ಹಿಂದಿನ ಶ್ಲೋಕದಲ್ಲಿ ಆತ್ಮಜ್ಞಾನವಿರುವವನಿಗೂ ಆತ್ಮಜ್ಞಾನವಿಲ್ಲದಿರುವವನಿಗೂ ಇರುವ ವೈಲಕ್ಷಣ್ಯವನ್ನು ತಿಳಿಸಿ, ಈ ಶ್ಲೋಕದಿಂದ ಆತ್ಮಜ್ಞಾನಿಯು ಆತ್ಮಜ್ಞಾನವಿಲ್ಲದಿರುವವರಿಗೆ ಬುದ್ಧಿ ಚಾಂಚಲ್ಯವನ್ನುಂಟುಮಾಡಕೂಡದೆಂದೂ, ಈತನಿಗಿರುವ ಕರ್ಮಶ್ರದ್ಧೆಯನ್ನು ಕೆಡಿಸಕೂಡದೆಂದೂ, ಈತನು ಹೇಗೆ ಶಾಸ್ತ್ರರೀತ್ಯಾ ಕರ್ಮಾನುಷ್ಠಾನವನ್ನು ಮಾಡುತ್ತಾನೋ, ಹಾಗೆಯೇ ಜ್ಞಾನಿಯೂ ಕೂಡ ಕರ್ಮಾನುಷ್ಠಾನವನ್ನು ಮಾಡ

ಭಾ. ಅಕೃತ್ಸ್ನವಿದಸ್ತ್ವಾತ್ಮದರ್ಶನಾಯ ಪ್ರವೃತ್ತಾಃ ಪ್ರಕೃತಿಸಂಸೃಷ್ಟತಯಾ ಪ್ರಕೃತೇ ರ್ಗುಣೈ ರ್ಯಥಾವಸ್ಥಿತಾತ್ಮನಿ ಸಮ್ಮೂಢಾಃ ಗುಣಕರ್ಮಸು ಕ್ರಿಯಾಸ್ವೇವ ಸಜ್ಜಂತೇ, ನ ತದ್ವಿವಿಕ್ತಾತ್ಮಸ್ವರೂಪೇ; ಅತ ಸ್ತೇ ಜ್ಞಾನಯೋಗಾಯ

ತಕ್ಕದ್ದೆಂದು ಉಪದೇಶಿಸುತ್ತಾರೆ—ಪ್ರಕೃತೇಃ - ಶರೀರ ರೂಪದಲ್ಲಿರುವ ಪ್ರಕೃತಿಯ, ಗುಣಸಮ್ಮೂಢಾಃ-ರಜಸ್ತಮೋಗುಣಗಳಿಂದುಂಟಾದ ಭ್ರಮೆಯಿಂದ ಕೂಡಿದವರು,ಗುಣಕರ್ಮಸು-ಆ ಗುಣಗಳ ಕಾರ್ಯರೂಪವಾದ ಕರ್ಮಗಳಲ್ಲಿ, ಸಜ್ಜಂತೇ - ಸಂಬಂಧವಿಡುತ್ತಾರೆ ಎಂದರೆ ಅಭಿಮಾನವಿಡುತ್ತಾರೆ; ಆಕಾರಣದಿಂದಲೇ ಮುಮುಕ್ಷುಗಳಾದ ಗುಣ ಸಮ್ಮೂಢರು ಕರ್ಮಯೋಗದಲ್ಲೂ ಕೂಡ ಅಭಿಮಾನವುಳ್ಳವರಾಗುತ್ತಾರೆಂಬ ಭಾವವು. ಇವುಗಳಲ್ಲೇ ಅಭಿಮಾನವುಳ್ಳವರಾದರೆ ದೇಹಾತಿರಿಕ್ತ ಆತ್ಮಸ್ವರೂಪವನ್ನು ತಿಳಿಯುವುದರಲ್ಲಿ ಒಡನೆಯೇ ಅಭಿಮಾನವುಳ್ಳವರಾಗುವದಿಲ್ಲವೆಂದೂ ಅಂತವರು ಜ್ಞಾನಯೋಗಕ್ಕೆ ಅರ್ಹರಲ್ಲವೆಂದೂ, ಕರ್ಮಯೋಗದಲ್ಲಿ ಮಾತ್ರ ಇರಲು ಅರ್ಹರೆಂದೂ, ಇದರಿಂದ ಹೇಳಿದಂತಾಯಿತು, ತಾನ್ - ಅಂತಹ, ಅಕೃತ್ಸ್ನವಿದಃ - ಆತ್ಮಜ್ಞಾನವು ಸಂಪೂರ್ಣವಾಗಿ ಇಲ್ಲದಿರುವ, ಮಂದಾನ್ - ಅಲ್ಪಜ್ಞರನ್ನು, ಕೃತ್ಸ್ನವಿತ್ - ಆತ್ಮವಿಷಯದಲ್ಲಿ ಪೂರ್ಣಜ್ಞಾನವಿರುವವನು, ನವಿಚಾಲಯೇತ್ - ಬುದ್ಧಿ ಚಾಂಚಲ್ಯವನ್ನು ಹೊಂದುವಹಾಗೆ ಮಾಡಕೂಡದು. ತಾನು ಜ್ಞಾನಯೋಗವನ್ನೇ ಅವಲಂಬಿಸುವದರಿಂದ, ಅಂತಹ ಅನಧಿಕಾರಿಗಳನ್ನು ಬರೀ ಜ್ಞಾನಯೋಗವನ್ನವಲಂಬಿಸುವ ಹಾಗೂ ಮಾಡಕೂಡದು, ಮತ್ತು ಕರ್ಮಯೋಗವಲ್ಲದೆ ಆತ್ಮಸಾಧನಕ್ಕೆ ಬೇರೆ ಉಪಾಯವಾಗಿ ಜ್ಞಾನಯೋಗ ಉಂಟೆಂಬಭ್ರಮವನ್ನುಂಟುಮಾಡಿ ಚಿತ್ತಚಾಂಚಲ್ಯವನ್ನುಂಟುಮಾಡಕೂಡದೆಂಬ ಭಾವವು ||೨೯||

ಭಾಷ್ಯಾರ್ಥವು:—ಹಿಂದೆ ಜ್ಞಾನಯೋಗಾರ್ಹನೂ ಕರ್ಮಾನುಷ್ಠಾನವನ್ನೇ ಮಾಡತಕ್ಕದ್ದೆಂದುಪದೇಶಿಸಿ, ಕರ್ಮಾನುಷ್ಠಾನಪ್ರಕಾರವನ್ನು ಇಲ್ಲಿಂದ ಎರಡು ಶ್ಲೋಕಗಳ ಮೂಲಕ ತಿಳಿಸುತ್ತಾರೆ. ತನಗೆ ಕರ್ತೃತ್ವವಿಲ್ಲವೆಂಬದಾಗಿಯೂ, ಶರೀರ ಸಂಬಂಧದಿಂದ ಕರ್ಮಗಳನ್ನೆಸಗುವದರಿಂದ ಕರ್ಮಾನುಸಾರವಾಗಿ ಪ್ರಕೃತಿಯಿಂದ ಕರ್ಮಗಳು ನಡೆಯುತ್ತವೆಂದೂ, ಈ ಪ್ರಕೃತಿಯ ಕರ್ತೃತ್ವವೂ ಕೂಡ ಪರಮ ಪುರುಷಾಯತ್ತವಾಗಿ ಆತನ ಸಙ್ಕಲ್ಪ ನಿಯಮನಗಳ ರೀತ್ಯಾ ನಡೆಯುತ್ತವೆಂಬ ಅನುಸಂಧಾನವಿರಬೇಕೆಂದೂ ಉಪದೇಶಿಸುತ್ತಾರೆ. ಪ್ರಥಮತಃ "ಪ್ರಕೃತೇ ರ್ಗುಣಸಮ್ಮೂಢಾಃ - ಎಂಬುದಕ್ಕೆ ಭಾಷ್ಯವನ್ನು ಬರೆಯುತ್ತಾರೆ:—ಅಕೃತ್ಸ್ನವಿದಸ್ತು – ಆತ್ಮವಿಷಯ ಸಂಪೂರ್ಣ ಜ್ಞಾನವಿಲ್ಲದವರಾದರೋ, ಆತ್ಮದರ್ಶನಾಯ ಪ್ರವೃತ್ತಾಃ - ಆತ್ಮಸಾಕ್ಷಾತ್ಕಾರಕ್ಕಾಗಿ ಪ್ರವರ್ತಿಸಿದವರಾಗಿ, ಪ್ರಕೃತಿ ಸಂಸೃಷ್ಟತಯಾ - ಶರೀರ ಸಂಬಂಧವಿರುವದರಿಂದ, ಪ್ರಕೃತೇರ್ಗುಣೈಃ - ಶರೀರದ ಗುಣಗಳಾದ ಸತ್ತ್ವರಜಸ್ತಮೋಗುಣಗಳಿಂದ, ಯಥಾವಸ್ಥಿತಾತ್ಮನಿ - ಯಥಾವತ್ತಾಗಿರುವ ಆತ್ಮನಲ್ಲಿ, ಸಮ್ಮೂಢಾಃ - ಭ್ರಮೆಯಿಂದ ಸೇರಿದ ಜ್ಞಾನವುಳ್ಳವರು ಎಂದರೆ ಆತ್ಮಸ್ವರೂಪವನ್ನು ಯಥಾವತ್ತಾಗಿ ತಿಳಿಯದವರು, ಗುಣಕರ್ಮಸು - ಆ ಗುಣಗಳ ಕಾರ್ಯರೂಪವಾದ ಕರ್ಮಗಳಲ್ಲಿ ಎಂದರೆ, ಕ್ರಿಯಾಸ್ವೇವ - ಅಂತಹ ಕ್ರಿಯೆಗಳಲ್ಲೇನೇ, ಇದರಲ್ಲೇ ಕರ್ಮಯೋಗ ಕರ್ಮಗಳೂ ಸಹ ಸೇರಿದವು, ಸಜ್ಜಂತೇ - ಸಂಬಂಧವನ್ನು ಹೊಂದುವರಾಗುತ್ತಾರೆ. ಸರ್ವ ವಾಕ್ಯಗಳೂ ಅವಧಾರಣಾಯುಕ್ತವಾದವುಗಳೇ; ಆದರೆ ಆ ಏವಕಾರವನ್ನು ಯಾವ ಪದದೊಂದಿಗೆ ಸೇರಿಸತಕ್ಕದ್ದೆಂಬುದನ್ನು ಪ್ರಕರಣದಿಂದ ತಿಳಿಯತಕ್ಕದ್ದಾಗಿರುತ್ತದೆ. ಗುಣ ಸಮ್ಮೂಢರಿಗೆ ಸಂಬಂಧವು ಗುಣಕರ್ಮಗಳಲ್ಲೇ ಎಂಬುದು ಪ್ರಸ್ತುತ ವಿಷಯವಾದುದರಿಂದ, ಗುಣಕರ್ಮಸ್ವೇವ - ಎಂದು ವ್ಯಾಖ್ಯಾನಮಾಡಿರುತ್ತಾರೆ. ಹಾಗೆ ಏವಕಾ

ಭಾ. ನ ಪ್ರಭವನ್ತೀತಿ ಕರ್ಮಯೋಗಏವ ತೇಷಾ ಮಧಿಕಾರಃ. ಏವಂಭೂತಾಂ ಸ್ತಾನ್ ಮಂದಾನ ಕೃತ್ಸ್ನವಿದಃ ಕೃತ್ಸ್ನವಿತ್ ಸ್ವಯಂ ಜ್ಞಾನಯೋಗಾವಸ್ಥಾನೇನ ನ ವಿಚಾಲಯೇತ್. ತೇ ಕಿಲ ಮಂದಾಃ ಶ್ರೇಷ್ಠಜನಾಚಾರಾನುವರ್ತಿನಃ ಕರ್ಮಯೋಗಾದುತ್ಥಿತ್ತಮೇನಂ ದೃಷ್ಟ್ವಾ ಕರ್ಮಯೋಗಾತ್ ಪ್ರಚಲಿತ ಮನಸೋ ಭವೇಯುಃ; ಅತ ಶ್ಶ್ರೇಷ್ಠಸ್ಸ್ವಯಮಪಿ ಕರ್ಮಯೋಗೇ ತಿಷ್ಠನ್ನಾತ್ಮಯಾಥಾತ್ಮ್ಯಜ್ಞಾನೇನಾತ್ಮನೋಽಕರ್ತೃತ್ವಮನುಸನ್ದಧಾನಃ. ಕರ್ಮಯೋಗಏವಾತ್ಮಾವಲೋಕನೇ ನಿರಪೇಕ್ಷಸಾಧನಮಿತಿ

ರವನ್ನು ಸೇರಿಸಿದರೆ, ಇನ್ನು ಯಾವುದರಲ್ಲಿ ಅವರುಗಳು ಸಂಬಂಧವನ್ನು ಹೊಂದುವದಿಲ್ಲನೆಂದರೆ ತಿಳಿಸುತ್ತಾರೆ:—ನ ತದ್ವಿವಿಕ್ತಾತ್ಮಸ್ವರೂಪೇ-ಆ ಪ್ರಕೃತಿಯಿಂದ ಬಿಡಲ್ಪಟ್ಟ ಆತ್ಮಸ್ವರೂಪದಲ್ಲಿ ಎಂದರೆ ಆತ್ಮಸ್ವರೂಪ ಜ್ಞಾನದಲ್ಲಿ ಅವರಿಗೆ ಸಂಬಂಧವಿರುವದಿಲ್ಲವೆಂಬ ತಾತ್ಪರ್ಯವು; ಅತಃ -- ಆ ಕಾರಣದಿಂದ, ತೇ - ಆ ಪ್ರಕೃತಿಯ ಗುಣದಿಂದ ಸಮ್ಮೂಢರು, ಜ್ಞಾನಯೋಗಾಯ - ಜ್ಞಾನಯೋಗಾನುಷ್ಠಾನಕ್ಕೆ, ನ ಪ್ರಭವನ್ತೀತಿ - ಸಮರ್ಥರಲ್ಲವಾದುದರಿಂದ, ಕರ್ಮಯೋಗ ಏವ-ಕರ್ಮಯೋಗದಲ್ಲಿ ಮಾತ್ರವೇ, ಅಧಿಕಾರವು. ಸಜ್ಜನ್ತೇ ಗುಣಕರ್ಮಸು ಎಂದು ಹೇಳಿರುವದರಿಂದ, ಅವರು ಜ್ಞಾನಯೋಗಕ್ಕೆ ಅನರ್ಹರೆಂದೂ, ಕರ್ಮಯೋಗಕ್ಕೆ ಮಾತ್ರವೇ ಅಧಿಕಾರವೆಂದೂ, ಇದರಿಂದ ಹೇಳಿದಂತಾಯಿತೆಂಬ ಭಾವವು. ಅಂತವರಿಗೆ ಕರ್ಮಯೋಗವನ್ನು ತ್ಯಜಿಸಿ, ಜ್ಞಾನಯೋಗಾಧಿಕಾರಿಯಾದವನು ಬುದ್ಧಿಚಾಂಚಲ್ಯವನ್ನುಂಟುಮಾಡಬಾರದೆಂದು ಉತ್ತರಾರ್ಧದಿಂದುಪದೇಶಿಸುತ್ತಾರೆ. ಏವಂಭೂತಾನ್-ಇಂತಹ, ತಾನ್ ಮಂದಾನ್-ಆ ಅಲ್ಪಜ್ಞರಾದ, ಅಕೃತ್ಸ್ನವಿದಃ - ಸರಿಯಾದ ಆತ್ಮಜ್ಞಾನವಿಲ್ಲದವರು, ಸ್ವಯಂ ಜ್ಞಾನಯೋಗಾವಸ್ಥಾನೇನ - ತಾವೇ ಜ್ಞಾನಯೋಗದಲ್ಲಿರುವದರಿಂದ, ನ ವಿಚಾಲಯೇತ್-ಕದಲಿಸಕೂಡದು ಎಂದರೆ ಬುದ್ಧಿಚಾಂಚಲ್ಯವನ್ನುಂಟುಮಾಡಕೂಡದು. ಅವರು ಮಂದಾಃ- ಎಂದು ಹೇಳಲ್ಪಟ್ಟಿತು, ಯಾವ ಸಂದರ್ಭದಿಂದ ಮಂದಮತಿಗಳೆಂದರೆ ಹೇಳುತ್ತಾರೆ. ತಾವೇ ಸ್ವತಂತ್ರಿಸಿ ತಿಳಿಯುವ ಸಾಮರ್ಥ್ಯವು ಅವರಿಗಿಲ್ಲದುದರಿಂದ ಶ್ರೇಷ್ಠರ ಆಚಾರವನ್ನು ಅನುವರ್ತಿಸಿ ನಡೆಯತಕ್ಕವರು ; ಏಕೆಂದರೆ ಅವರಿಗೆ ಆಚಾರವನ್ನು ತಾವೇ ನಿರ್ಣಯಿಸಿಕೊಳ್ಳುವ ಶಕ್ತಿಯೂ ಇಲ್ಲವು, ಇತರರು ನಡೆಯುವವನ್ನು ಸರಿಯಾಗಿ ಗ್ರಹಿಸುವ ಶಕ್ತಿಯೂ ಯಿಲ್ಲವು. ಅಂತಹ ಅಲ್ಪಜ್ಞರ ವಿಷಯದಲ್ಲಿ ಶ್ರೇಷ್ಠನಾದ ಜ್ಞಾನಿಯು ಮನಶ್ಚಾಂಚಲ್ಯವನ್ನುಂಟುಮಾಡದಹಾಗೆ ಜಾಗರೂಕನಾಗಿರಬೇಕೆಂಬ ಭಾವವು. ತೇ ಕಿಲ - ಅವರಾದರೋ, ಮಂದಾಃ - ಮಂದಮತಿಗಳು ಅಲ್ಪಜ್ಞರು, ಆಕಾರಣದಿಂದಲೇ, ಶ್ರೇಷ್ಠಜನಾಚಾರಾನುವರ್ತಿನಃ - ತಾವೇ ಸ್ವತಂತ್ರಿಸಿ ತಿಳಿದುಕೊಳ್ಳುವಶಕ್ತಿಯಿಲ್ಲದುದರಿಂದ ಶ್ರೇಷ್ಠರಾದ ಜನಗಳ ಆಚಾರಾನುಗುಣವಾಗಿ ನಡೆಯುವವರು, ಕರ್ಮಯೋಗಾದುತ್ಥಿತಂ-ಕರ್ಮಯೋಗವನ್ನು ಅನುಷ್ಠಿಸದೆ ಬಿಟ್ಟು ಬಂದ, ಏನಂ-ಈ ಜ್ಞಾನಯೋಗಿಯನ್ನು, ದೃಷ್ಟ್ವಾ - ನೋಡಿ, ಪ್ರಚಲಿತ ಮನಸಃ - ಚಲಿಸಿದ ಮನಸ್ಸುಳ್ಳವರು ಎಂದರೆ ತಾವೂ ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗವನ್ನವಲಂಬಿಸಬಹುದೆಂಬ ವ್ಯತ್ಯಸ್ತ ಬುದ್ಧಿಯುಳ್ಳವರು, ಭವೇಯುಃ - ಆಗಬಹುದು. ಆದುದರಿಂದ ಜ್ಞಾನಯೋಗಿಯು ಏನನ್ನು ಮಾಡತಕ್ಕದ್ದೆಂದರೆ ತಿಳಿಸುತ್ತಾರೆ ; ಅತಃ - ಆಕಾರಣದ ದೆಸೆಯಿಂದ, ಶ್ರೇಷ್ಠಃ - ಜ್ಞಾನಯೋಗಕ್ಕೂ ಸಾಮರ್ಥ್ಯವಿರುವ ಪ್ರಸಿದ್ಧನು, ಸ್ವಯಮಪಿ-ತಾನೂ ಕೂಡ, ಇದರಿಂದ ತಾನು ಜ್ಞಾನಯೋಗಾರ್ಹನೆಂಬ ಹೆಮ್ಮೆಯನ್ನು ಬಿಟ್ಟು ಎಂಬ ಭಾವವು, ಕರ್ಮಯೋಗೇ ತಿಷ್ಠನ್-ಕರ್ಮಯೋಗದಲ್ಲೇ ಇರುವವನಾಗಿ, ಆತ್ಮಯಾಥಾತ್ಮ್ಯ ಜ್ಞಾನೇನ - ತನಗಿರುವ ಆತ್ಮಸ್ವರೂಪದ ನಿಶ್ಚಯಜ್ಞಾನದಿಂದ,

ಭಾ. ದರ್ಶಯಿತ್ವಾ ತಾನ ಕೃತ್ಸ್ನವಿದೋ ಜೋಷಯೇದಿತ್ಯರ್ಥಃ. ಜ್ಞಾನಯೋಗಾಧಿಕಾರಿಣೋಽಪಿ ಜ್ಞಾನಯೋಗಾದಸ್ಯೈವ ಜ್ಯಾಯಸ್ತ್ವಂ ಪೂರ್ವಮೇವೋಕ್ತಮ್. ಅತೋ ವ್ಯಪದೇಶ್ಯೋ ಲೋಕಸಙ್ಗ್ರಹಾಯೈತದೇವ ಕುರ್ಯಾತ್. ಪ್ರಕೃತಿ ವಿವಿಕ್ತಾತ್ಮಸ್ವಭಾವನಿರೂಪಣೇನ ಗುಣೇಷು ಕರ್ತೃತ್ವಮಾರೋಪ್ಯ ಕರ್ಮಾನುಷ್ಠಾನ

---

ಆತ್ಮನಃ - ತನ್ನ ಆತ್ಮನಿನ, ಅಕರ್ತೃತ್ವ ಮನುಸಂದಧಾನಃ - ಅಕರ್ತೃತ್ವವನ್ನು ಅನುಸಂಧಾನಮಾಡುವವನಾಗಿ, ಕರ್ಮಯೋಗವೇ ಆತ್ಮಾವಲೋಕನೇ - ಆತ್ಮಸಾಕ್ಷಾತ್ಕಾರ ವಿಷಯದಲ್ಲಿ, ನಿರಪೇಕ್ಷ ಸಾಧನಮಿತಿ - ಇನ್ನು ಯಾವುದರಪೇಕ್ಷೆಯೂ ಇಲ್ಲದೆ ಸಾಧನವೆಂಬದಾಗಿ, ದರ್ಶಯಿತ್ವಾ - ತೋರಿಸಿ, ತಾನ ಕೃತ್ಸ್ನವಿದಃ - ಆ ಆತ್ಮಜ್ಞಾನವಿಲ್ಲದವರನ್ನು, ಜೋಷಯೇದಿತ್ಯರ್ಥಃ - ಕರ್ಮಯೋಗವನ್ನೇ ಪ್ರೀತಿಸುವಹಾಗೆ ಮಾಡತಕ್ಕದ್ದು ಎಂಬ ತಾತ್ಪರ್ಯವು. ಈ ಶ್ಲೋಕದಿಂದಲೂ ಹಿಂದಿನ ಶ್ಲೋಕಗಳಿಂದಲೂ ತೋರಿಬರುವ ಒಟ್ಟು ತಾತ್ಪರ್ಯವನ್ನು ಈ ವಾಕ್ಯದಿಂದ ವ್ಯಕ್ತಗೊಳಿಸಿದರು. ಶ್ರೇಷ್ಠನಾದ ಜ್ಞಾನಾಧಿಕಾರಿಯೂ ಕೂಡ ಕರ್ಮಯೋಗದಲ್ಲೇ ಇದ್ದುಕೊಂಡು ಎಂದರೆ ಫಲಕರ್ತೃತ್ವಗಳ ಸಂಗವಿಲ್ಲದೆ ಸ್ವವರ್ಣೋಚಿತ ಕರ್ಮಗಳನ್ನೆಸಗುತ್ತಾ, ಕರ್ಮಯೋಗವೇ ಆತ್ಮಾವಲೋಕನಕ್ಕೆ ನಿರಪೇಕ್ಷಸಾಧನವೆಂದು ಇತರ ಅಲ್ಪಜ್ಞರಿಗೆ ಪ್ರಕಟಿಸುವವನಾಗಿ, ಅವರಿಗೆ ಕರ್ಮಯೋಗದಲ್ಲೇ ಪ್ರೀತಿಯನ್ನುಂಟುಮಾಡತಕ್ಕದ್ದೆಂಬುದು ಮುಖ್ಯಾಭಿಪ್ರಾಯವು. ಆದುದರಿಂದಲೇ ಜ್ಞಾನಯೋಗಕ್ಕಿಂತಲೂ ಕರ್ಮಯೋಗವೇ ಶ್ರೇಷ್ಠವೆಂಬುದು ಹಿಂದೆಯೇ "ಕರ್ಮಜ್ಯಾಯೋಹ್ಯಕರ್ಮಣಃ" ಎಂದು ೮ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಇದನ್ನೇ ಮುಂದಿನ ವಾಕ್ಯದಿಂದಲೂ ತಿಳಿಸುತ್ತಾರೆ:—ಜ್ಞಾನಯೋಗಾಧಿಕಾರಿಣೋಽಪಿ-ಜ್ಞಾನಯೋಗಕ್ಕೆ ಅರ್ಹರಾಗಿರುವ ಅಧಿಕಾರಿಗಳಿಗೂ ಕೂಡ, ಜ್ಞಾನಯೋಗಾತ್-ಜ್ಞಾನಯೋಗಕ್ಕಿಂತಲೂ, ಅಸ್ಯೈವ - ಈ ಕರ್ಮಯೋಗಕ್ಕೇನೆ, ಜ್ಯಾಯಸ್ತ್ವಂ - ಪರಮಹಿತವಾದುದಾಗಿರುವದರಿಂದ ಪ್ರಾಧಾನ್ಯವು, ಪೂರ್ವಮೇವ ಉಕ್ತಮ್ - ಹಿಂದೆಯೇ ಅನೇಕ ಕಾರಣಗಳೊಂದಿಗೆ ಹೇಳಲ್ಪಟ್ಟಿತು. ಇದರ ಸಙ್ಗ್ರಹೋಪದೇಶಕ್ಕಾಗಿ ೩೨೪ನೆಯ ಪುಟವನ್ನು ಸ್ಮರಿಸಿ. ಲೋಕ ಸಙ್ಗ್ರಹಕ್ಕಾಗಿ ಕರ್ಮಯೋಗವನ್ನೇ ಜ್ಞಾನಿಯೂ ಕೂಡ ಮಾಡತಕ್ಕದ್ದೆಂದು ಹೇಳಿದುದರಭಿಪ್ರಾಯವು ಇಷ್ಟೇ ಎಂದು ಹೇಳುತ್ತಾರೆ:—ಅತಃ - ಆ ಕಾರಣದಿಂದ, ವ್ಯಪದೇಶ್ಯಃ - ಪ್ರಸಿದ್ಧನೆಂದು ಹೇಳಿಸಿಕೊಳ್ಳುವನು, ಲೋಕ ಸಙ್ಗ್ರಹಾಯ - ಲೋಕಸಂರಕ್ಷಣಾರ್ಥವಾಗಿ. ಏತದೇವ - ಈ ಕರ್ಮಯೋಗವನ್ನೇ, ಕುರ್ಯಾತ್ - ಮಾಡತಕ್ಕದ್ದು. ಈ ಕರ್ಮಾನುಷ್ಠಾನದಲ್ಲಿ ಅನುಸಂಧಾನವಿರಬೇಕಾದ ಪ್ರಕಾರವನ್ನು ಮುಂದೆ ಹೇಳುತ್ತಾರೆ:—ಪ್ರಕೃತಿ ವಿವಿಕ್ತಾತ್ಮಸ್ವಭಾವ ನಿರೂಪಣೇನ - ಪ್ರಕೃತಿಗಿಂತಲೂ ವಿಲಕ್ಷಣವಾಗಿರುವ ಜೀವಾತ್ಮನ ಸ್ವಭಾವವನ್ನು ಹಿಂದೆ ಹೇಳಿದುದರ ಮೂಲಕ, ಗುಣೇಷು ಕರ್ತೃತ್ವಂ ಆರೋಪ್ಯ-ತ್ರಿಗುಣಗಳುಳ್ಳ ಪ್ರಕೃತಿಗೇನೆ ಕರ್ತೃತ್ವವನ್ನು ಆರೋಪಿಸಿ ಹೇಳಿ, ಎಂದರೆ, ಅಣುವಾದ ಆತ್ಮನು ಸ್ವರೂಪತಃ ತುಂಬಾ ಪರಿಶುದ್ಧನಾಗಿರುವದರಿಂದ ಈಗ ಆಗಂತುಕವಾಗಿ ಬಂದಿರುವ ಪ್ರಾಚೀನ ಕರ್ಮಗಳ ಮೂಲಕ ತ್ರಿಗುಣಾತ್ಮಕವಾದ ದೇಹಸಂಬಂಧದಿಂದ ಮಾಡುತ್ತಾನೆ, ಆದುದರಿಂದ ಪ್ರಕೃತಿಯಲ್ಲಿ ಕರ್ತೃತ್ವವನ್ನು ತೋರಿಸಿ ಎಂದರೆ ಹಾಗೆ ಅನುಸಂಧಾನಮಾಡಿ, ಕರ್ಮಾನುಷ್ಠಾನ ಪ್ರಕಾರ ಉಕ್ತಃ - ಅನುಷ್ಠಿಸುವ ಪ್ರಕಾರವೂ ಸಹ ಹಿಂದೆಯೇ ೨೭–೨೮ನೆಯ ಶ್ಲೋಕಗಳಲ್ಲೇ ಹೇಳಲ್ಪಟ್ಟಿತು. ಪ್ರಕೃತಿಯು ಜಡವು, ಜ್ಞಾನ, ಚಿಕೀರ್ಷಾ, ಪ್ರಯತ್ನವೇ ಮೊದಲಾದವುಗಳಿಂದ ಶೂನ್ಯವಾದುದು. ಹಾಗೆ ಅನುಸಂಧಾನವು ಹೇಗೆ ಎಂದರೆ ವಿಶದೀಕರಿಸುತ್ತಾರೆ:—

**ಭಾ. ಪ್ರಕಾರ ಉಕ್ತಃ. ಗುಣೇಷು ಕರ್ತೃತ್ವಾನುಸಂಧಾನಂ ಚೇದಮ್ – ಆತ್ಮನೋ ನ ಸ್ವರೂಪ ಪ್ರಯುಕ್ತ ಮಿದಂ ಕರ್ತೃತ್ವಮ್, ಅಪಿತು ಗುಣಸಂಪರ್ಕಕೃತ ಮಿತಿ ಪ್ರಾಪ್ತಾಪ್ರಾಪ್ತವಿವೇಕೇನ ಗುಣಕೃತಮ್—ಇತ್ಯನುಸಂಧಾನಮ್. ॥೨೯॥**

---

**ಗುಣೇಷು** - ಸತ್ವಾದಿಗುಣಗಳಿಂದ ಕೂಡಿದ ಪ್ರಕೃತಿಯಲ್ಲಿ, **ಕರ್ತೃತ್ವಾನುಸಂಧಾನಂ ಚ**-ಕರ್ತೃತ್ವವುಂಟೆಂಬುದರ ಅನುಸಂಧಾನವಾದರೋ, ಇದಮ್–ಈ ಮುಂದೆ ಹೇಳುವಪ್ರಕಾರವಾದುದು :– **ಆತ್ಮನಃ** - ಆತ್ಮಾವಿಗೆ, **ಇದಂ ಕರ್ತೃತ್ವಂ** - **"ಕರ್ತಾ ಶಾಸ್ತ್ರಾರ್ಥವತ್ವಾತ್"** ಎಂಬದಾಗಿ ಶಾಸ್ತ್ರದಲ್ಲಿ ಹೇಳಿರುವ ಕರ್ತೃತ್ವವು, **ನ ಸ್ವರೂಪಪ್ರಯುಕ್ತಂ** - ಸ್ವರೂಪಮೂಲಕವಾದುದಲ್ಲವು, ಈತನ ಸ್ವರೂಪವು ಅಣುವು, ಶರೀರವಿಲ್ಲದೆ ಯಾವ ಕಾರ್ಯವನ್ನೂ ಮಾಡಲಾರನಾದುದರಿಂದ, **ನ ಸ್ವರೂಪ ಪ್ರಯುಕ್ತಂ** - ಎಂದು ಹೇಳಲ್ಪಟ್ಟಿತು, ಇನ್ನು ಯಾವುದರಮೂಲಕ ಉಂಟಾದುದೆಂದರೆ ಹೇಳುತ್ತಾರೆ:—**ಅಪಿ ತು**-ಇನ್ನು ಯಾವುದರ ಮೂಲಕವೆಂದರೆ-**ಗುಣಸಂಪರ್ಕಕೃತಮ್**-ತನಗೆ ಸತ್ವರಜಸ್ತಮೋಗುಣಗಳ ಸಂಪರ್ಕದಿಂದ ಉಂಟಾದುದು, ಪ್ರಾಚೀನ ಕರ್ಮಮೂಲಕ ಪ್ರಾಪ್ತವಾಗಿರುವ ಶರೀರದಿಂದ ಉಂಟಾದುದು, **ಇತಿ**-ಎಂದು, **ಪ್ರಾಪ್ತಾಪ್ರಾಪ್ತ ವಿವೇಕೇನ** - ಅನ್ವಯ ವ್ಯತಿರೇಕ ಸಾಮಂಜಸ್ಯ ಮೂಲಕವಾಗಿ, ಹೇಗೆಂದರೆ, ಶರೀರವಿದ್ದರೆ ಕರ್ಮ ನಡೆಯುತ್ತದೆ, ಇದು ಅನ್ವಯಕ್ರಮವು; ಶರೀರವಿಲ್ಲದಿದ್ದರೆ ಕರ್ಮವು ನಡೆಯುವದಿಲ್ಲವು; ಇದು ವ್ಯತಿರೇಕ ಕ್ರಮವು, ಹೀಗೆ ಎಂಬ ಭಾವವು ; ಅಥವಾ ಯುಕ್ತಾಯುಕ್ತ ನಿಶ್ಚಯಮೂಲಕವಾಗಿ, **ಗುಣಕೃತಮ್** - ತ್ರಿಗುಣವಾದ ಪ್ರಕೃತಿಯಿಂದುಂಟಾದುದು **ಇತಿ** ಎಂಬದಾಗಿ, **ಅನುಸಂಧಾನಮ್** - ಅನುಸಂಧಾನವು. ಪ್ರಕೃತಿಯು ಜಡವಲ್ಲವೇ, ಅದರಲ್ಲಿ ಕರ್ತೃತ್ವಾನುಸಂಧಾನ ಹೇಗೆ ಎಂಬ ಮುಂಗಿನ ಶ್ಲೋಕಕ್ಕೆ ಸಙ್ಗತಿಯು ಏನೆಂಬುದು ಈ ವಾಕ್ಯದಿಂದ ತೋರಿಬರುತ್ತದೆ. ಈ ಎರಡೂ ಶ್ಲೋಕಕ್ಕೂ ಸಂಬಂಧವನ್ನೇರ್ಪಡಿಸುವದಕ್ಕಾಗಿ ಈ ವಾಕ್ಯವು ಹೇಳಲ್ಪಟ್ಟಿತೆಂದು ಗ್ರಹಿಸತಕ್ಕದ್ದು. ಒಂದು ಕಾರ್ಯವು ನೆರವೇರುವದಕ್ಕೆ ಬರೀ ಆತ್ಮಸ್ವರೂಪವು ಸಾಲದು. ಅದು ಶರೀರೇಂದ್ರಿಯ ಸಂಬಂಧಗಳಿಗೆ ಅಧೀನವು ಎಂದು ಹಿಂದೆ ಹೇಳಲ್ಪಟ್ಟಿತು. ಮುಂದೆ ಪರಮಾತ್ಮನ ನಿಯಮನಕ್ಕೂ ಅಧೀನನೆಂದು **"ಪರಾತ್ತು ತಚ್ಛ್ರುತೇಃ"** ಎಂಬ ಬ್ರಹ್ಮಸೂತ್ರದಲ್ಲಿ ಹೇಳುವ ಅಭಿಪ್ರಾಯವು ಮುಂದೆ ಉಪಪಾದಿಸಲ್ಪಡುತ್ತದೆ. ಆದುದರಿಂದ ಈ ಚೇತನನ ಕರ್ಮಮೂಲಕ ಪ್ರಾಪ್ತವಾದ ಶರೀರಾನುಗುಣವಾದ ಕರ್ತೃತ್ವವು, ಸರ್ವೇಶ್ವರ ನಿಯಮನಾನುಸಾರ ನಡೆಯುತ್ತದೆಂಬ ಅನುಸಂಧಾನವೂ ಇರತಕ್ಕದ್ದು. ಈ ಸರ್ವೇಶ್ವರಾಯತ್ತವೆಂಬ ವಿಷಯವು ಮುಂದಿನ ಶ್ಲೋಕವಲ್ಲಿ ಉಪಪಾದಿಸಲ್ಪಡುತ್ತದೆ. ಹೀಗೆ ಈ ಶ್ಲೋಕಗಳಿಗೆ ಸಙ್ಗತಿಯು ಬಹು ಸ್ಫುಟವಾಗಿರುವಾಗ,ಕೆಲವರು ಈ ಶ್ಲೋಕದಲ್ಲಿ ಜ್ಞಾನಿಗಳು ಮಂದಬುದ್ಧಿಗಳನ್ನು ತಿದ್ದಲು ಯತ್ನಿಸ ಕೂಡದೆಂಬಭಿಪ್ರಾಯವನ್ನು ಹೇಳುವರು. ಅಪ್ರಸ್ತುತ ವಿಷಯವಾಗಿ ಪೂರ್ವಾಪರ ಸಙ್ಗತಿಯನ್ನು ತಿಳಿಸದ ವಿಷಯವಾಗುವದರಿಂದ ಉಪಪನ್ನವಲ್ಲವು. ಈಗ ಅರ್ಜುನನಿಗೆ ಅಂತಹ ಉಪದೇಶಕ್ಕೆ ಪ್ರಕರಣವೇನು ಎಂಬ ಪ್ರಶ್ನೆಯು ನಿರುತ್ತರವಾದುದಾಗುವದು. ಅರ್ಜುನನು ಸಂಪೂರ್ಣವಾಗಿ ಕೃತ್ಸ್ನವಿತ್ತಾದರೆ ಈ ಉಪದೇಶವೆಲ್ಲಾ ಏತಕ್ಕೆ? ೧೮ನೆಯ ಅಧ್ಯಾಯದಲ್ಲೂ ಕೂಡ ಮೋಹಜ್ಞಾನದಿಂದಲೇ ಪ್ರಶ್ನಿಸುತ್ತಾನೆ. ಸರ್ವೇಶ್ವರನು ಪರಮ ಕೃಪಯಾ ಹೋಗಲಾಡಿಸಿದುದರಿಂದ ಕೊನೆಗೆ **ನಷ್ಟೋಮೋಹಃ** (ಗೀ. ೧೮.೭೩) ಎಂದು ಹೇಳಿ ಕೊಂಡಿರುತ್ತಾನೆ.

**ಭಾಷ್ಯಾವತಾರಿಕೆಯ ಅರ್ಥವು** :—ಶಾರೀರಕ ಸೂತ್ರವಾದ (೧) **"ಕರ್ತಾ ಶಾಸ್ತ್ರಾರ್ಥವತ್ವಾತ್"** ಎಂಬಲ್ಲಿ ಈ ಚೇತನನಿಗೆ ಕರ್ತೃತ್ವ ಉಂಟು ಎಂದು ಹೇಳಿರುವದರಿಂದ ಈತನಿಗೆ

**ಭಾ. ಅವ. ಇದಾನೀ ಮಾತ್ಮನಾಂ ಪರಮಪುರುಷಶರೀರತಯಾ ತನ್ನಿಯಾಮ್ಯತ್ವಸ್ವರೂಪ ನಿರೂಪಣೇನ ಭಗವತಿ ಪುರುಷೋತ್ತಮೇ ಸರ್ವಾತ್ಮಭೂತೇ ಗುಣಕೃತಂ ಚ ಕರ್ತೃತ್ವ ಮಾರೋಪ್ಯ ಕರ್ಮಕರ್ತವ್ಯತೋಚ್ಯತೇ —**

ಜಡವಾದ ಪ್ರಕೃತಿಯ ಮೂಲಕವಾಗಿಯೇ ವಿನಾ,ಸ್ವತಃ ಕರ್ತೃತ್ವವಿಲ್ಲವೆಂಬ ಅನುಸಂಧಾನವಿರಬೇಕೆಂದು ಹೇಳಲ್ಪಟ್ಟಿತು. ಈಗಲಾದರೋ, ಈ ಚೇತನನಿಗೆ ಪ್ರಾಪ್ತವಾಗಿರುವ ಕರ್ತೃತ್ವವೂ ಪರಮಾತ್ಮ ಸಙ್ಕಲ್ಪಕ್ಕಧೀನವಾಗಿರುವದರಿಂದ, ಆತನೇ ಎಲ್ಲವನ್ನೂ ನಡೆಸುತ್ತಾನೆಂಬ ಅನುಸಂಧಾನವೂ ಸಹ ಇರತಕ್ಕದ್ದೆಂದು (೨) "ಪರಾತ್ತು ತಚ್ಛ್ರುತೇಃ" ಎಂಬ ಶಾರೀರಕ ಸೂತ್ರಾಭಿಪ್ರಾಯವು ಬೋಧಿಸಲ್ಪಡತ್ತದೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. ಇದಾನೀಂ ಈಗಲಾದರೋ ಎಂದರೆ ಈ ಶ್ಲೋಕದಲ್ಲಿಯಾದರೋ, **ಆತ್ಮನಾಂ ಪರಮ ಪುರುಷ ಶರೀರತಯಾ** - ಜೀವಾತ್ಮರೆಲ್ಲಾ ಪರಮ ಪುರುಷನಿಗೆ ಶರೀರವಾಗಿರುವವರಿಂದ, **ತನ್ನಿಯಾಮ್ಯತ್ವ ಸ್ವರೂಪ ನಿರೂಪಣೇನ** - ಆ ಪರಮ ಪುರುಷನಿಂದ ನಿಯಮಿಸಲು ಯೋಗ್ಯವಾದವರೆಂಬ ಸ್ವರೂಪವನ್ನು ಬೋಧಿಸುವದರಿಂದ, ಇದರಿಂದ ಚೇತನರೆಲ್ಲಾ ಪರಮಾತ್ಮನಿಗೆ ಶರೀರವಾಗಿ, ಶೇಷಭೂತರೆಂಬ ತತ್ತ್ವಾರ್ಥವು ಬೋಧಿಸಲ್ಪಟ್ಟಿತು. **ಸರ್ವಾತ್ಮಭೂತೇ**-ಸಮಸ್ತ ಆತ್ಮರು ಆತನಿಗೆ ಶರೀರವಾದುದರಿಂದ ಆ ಆತ್ಮರಿಗೆಲ್ಲಾ ನಿಯಮಿಸುವ ಆತ್ಮವಾದ, **ಭಗವತಿ**-ಹೇಯ ಪ್ರತ್ಯನೀಕನಾಗಿ ಕಲ್ಯಾಣಗುಣಾಕರನಾದ ಪುರುಷೋತ್ತಮನಲ್ಲಿ, **ಗುಣಕೃತಂ ಚ ಕರ್ತೃತ್ವಂ** - ತ್ರಿಗುಣವಾದ ಪ್ರಕೃತಿಯಿಂದ ಎಂದರೆ ಶರೀರದಿಂದ ಉಂಟುಮಾಡಲ್ಪಟ್ಟ ಕರ್ತೃತ್ವವನ್ನು, **ಆರೋಪ್ಯ** - ಹೊರಿಸಿ ಎಂದರೆ ಎಲ್ಲಾ ಕಾರ್ಯಗಳಿಗೂ ನಿಯಾಮಕನು ಪುರುಷೋತ್ತಮನೆಂದು ಅನುಸಂಧಾನಮಾಡಿ, **ಕರ್ಮಕರ್ತವ್ಯತಾ** - ಕರ್ಮವನ್ನು ಮಾಡತಕ್ಕದ್ದೆಂಬುದು, **ಉಚ್ಯತೇ** - ಈ ಮುಂದಿನ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಮುಂದಿನ ಶ್ಲೋಕದ ಆದಿಯಲ್ಲಿ **ಮಯಿ** ಎಂಬ ಪದವಿರುವದರಿಂದ ಸೂಚಿಸಲ್ಪಟ್ಟ ಅರ್ಥವು, **ಭಗವತಿ ಪುರುಷೋತ್ತಮೇ ಸರ್ವಾತ್ಮಭೂತೇ** ಎಂಬ ಮೂರು ಪದಗಳಿಂದ ವಿವರಿಸಲ್ಪಟ್ಟಿವು. ಒಂದೇ ಆತ್ಮವು ನಮ್ಮ ಶರೀರದಲ್ಲಿರುವದೆಂಬಭಿಪ್ರಾಯವನ್ನು ನಿರಸನ ಮಾಡುವದಕ್ಕಾಗಿಯೂ ನಿಯಾಮ್ಯ ನಿಯಾಮಕರಾಗಿ ಜೀವಾತ್ಮನೂ ಭಗವಂತನೂ ಇಬ್ಬರೂ ಇದ್ದಾರೆಂಬುದನ್ನು ಸೂಚಿಸುವದಕ್ಕಾಗಿಯೂ, **ಪುರುಷೋತ್ತಮೇ** ಎಂಬ ಶಬ್ದವನ್ನು ಪಯೋಗಿಸಿ **"ಉತ್ತಮಃ ಪುರುಷಸ್ತ್ವನ್ಯಃ"** ಎಂದು ಮುಂದೆ ಹೇಳಲ್ಪಡುವ ತತ್ತ್ವಾಭಿಪ್ರಾಯವನ್ನು ಪ್ರದರ್ಶಿಸಿರುತ್ತಾರೆ. ಆತನು ಎಲ್ಲಕ್ಕೂ ಆತ್ಮವಾಗಿರುವದರಿಂದಲೇ ನಿಯಮನವು ಕೂಡುತ್ತದೆಂದು ಹೇಳುವದಕ್ಕಾಗಿ, **ಸರ್ವಾತ್ಮ ಭೂತೇ** ಎಂಬ ಪ್ರಯೋಗವು. ಹೀಗೆ ಎಲ್ಲಾ ಚೇತನರಿಗೂ ಅಂತರಾತ್ಮ ಮಾತ್ರವೇ ಅಲ್ಲದೆ, ಸಮಸ್ತವಾದ ಅಚಿತ್ತಿಗೂ ಕೂಡ ಎಂದರೆ ಪ್ರಕೃತಿರೂಪ ಶರೀರಕ್ಕೂ ಕೂಡ ಆತ್ಮವಾದರೂ, ಆತನ ಕಲ್ಯಾಣತ್ವಕ್ಕೆ ಸ್ವಲ್ಪವೂ ಕುಂದಕವಿಲ್ಲವೆಂದು ತೋರಿಸುವದಕ್ಕಾಗಿ **ಭಗವತಿ** ಎಂಬ ಪ್ರಯೋಗವು. ಇದರಿಂದ ಹೇಯ ಪ್ರತ್ಯನೀಕನೆಂದೂ ಆಶ್ರಿತೋಪಯುಕ್ತ ಕಲ್ಯಾಣ ಗುಣಾಕರನೆಂದೂ ಉಪದೇಶಿಸಲ್ಪಟ್ಟಿತು.

**ಮೂಲಕ್ಕೆ ಅರ್ಥವು:**—ಹಿಂದೆ ಕರ್ಮಾನುಸಾರ ಪ್ರಾಪ್ತವಾದ ಶರೀರದ ಗುಣಗಳಿಗನುಸಾರವಾಗಿ ಕರ್ಮಗಳುಪ್ರಕೃತಿಯಿಂದ ನಡೆಯುತ್ತವೆಂಬ ಅನುಸಂಧಾನವಿರಬೇಕೆಂದು ಹೇಳಲ್ಪಟ್ಟಿತು. ಈಗ ಆ ಕರ್ಮಗಳು ಸರ್ವನಿಯಂತೃವಾದ ಪರಮಪುರುಷಾಯತ್ತವಾಗಿ ನಡೆಯುತ್ತವೆಂದೂ ಆತನ ಸಂಪ್ರೀಣನಾರ್ಥವಾಗಿ ಶ್ರೀಕೃಷ್ಣಾರ್ಪಣಮಸ್ತು ಎಂದು ಫಲಕರ್ತೃತ್ವತ್ಯಾಗಪೂರ್ವಕವಾಗಿ ಆ ಕರ್ಮಗಳನ್ನು ಆತನಲ್ಲೇ ಸಮರ್ಪಿಸತಕ್ಕದ್ದೆಂದು ಹೇಳುತ್ತಾರೆ—**ಮಯಿ**- ಸರ್ವೇಶ್ವರನಾಗಿ,

**ಮೂ. ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಽಧ್ಯಾತ್ಮ ಚೇತಸಾ ।**
**ನಿರಾಶೀ ರ್ನಿರ್ಮಮೋ ಭೂತ್ವಾ, ಯುಧ್ಯಸ್ವ ವಿಗತಜ್ವರಃ ॥** ೩೦.

ಸರ್ವ ಶರೀರಕನಾಗಿ, ಸರ್ವಕ್ಕೂ ಅಂತರಾತ್ಮನಾಗಿ ಸರ್ವನಿಯಾಮಕನಾದ ನನ್ನಲ್ಲಿ, **ಸರ್ವಾಣಿ ಕರ್ಮಾಣಿ**-ಜೀವಾತ್ಮನಾದ ನಿನಗೂ, ನಿನ್ನ ದೇಹಕ್ಕೂ ಸರ್ವನಿಯಮ್ಯನಾದ ನನಗೂ ಸಹ ಅಧೀನವಾದ ಸಮಸ್ತ ಕರ್ಮಗಳನ್ನು, **ಅಧ್ಯಾತ್ಮ ಚೇತಸಾ** - ಪರಮಾತ್ಮನಲ್ಲಿಟ್ಟ ಮನಸ್ಸಿನಿಂದ, ಎಂದರೆ ಸರ್ವೇಶ್ವರನೇ ಈ ಸಮಸ್ತ ಕರ್ಮವನ್ನು ನಡೆಸುವನು, ನನ್ನ ಆವುಗಳಿಂದ ತೃಪ್ತನಾಗುವ ನೆಂಬ ಮನಸ್ಸಿನಿಂದ, **ಸನ್ನ್ಯಸ್ಯ** - ಇಟ್ಟು ಎಂದರೆ ಸಮರ್ಪಿಸಿ, **ನಿರಾಶೀಃ** - ಫಲದಲ್ಲಿ ಆಶೆಯಿಲ್ಲ ದವನಾಗಿ, **ನಿರ್ಮಮಃ** - ಆ ಕರ್ಮಗಳನ್ನು ನಾನು ಮಾಡಿದೆನೆಂಬ ಮಮತಾಶೂನ್ಯನಾಗಿ, **ಭೂತ್ವಾ** - ಆಗಿ, **ವಿಗತಜ್ವರಃ** - ಬಂಧಗಳನ್ನು ನಾನು ಹೇಗೆ ಕೊಲ್ಲಲಿ ಎಂಬ ಸಂತಾಪ ರಹಿತ ನಾಗಿ, ಸಾರ್ವತ್ರಿಕವಾಗಿ ಅನ್ವಯಿಸುವಾಗ ಅನಾದಿ ಪಾಪಸಮೂಹವು ತನಗಿರುವದರಿಂದ ತನಗೆ ಗತಿ ಹೇಗೆ ಎಂಬ ಸಂತಾಪ ಶೂನ್ಯನಾಗಿ ಎಂಬರ್ಥವು, **ಯುಧ್ಯಸ್ವ** - ಯುದ್ಧಮಾಡುವ ವನಾಗು. ಇಲ್ಲಿ ಅರ್ಜುನನು ಕ್ಷತ್ರಿಯನಾಗಿ, ಯುದ್ಧಮಾಡುವದು ಸ್ವವರ್ಣೋಚಿತ ಕರ್ಮ ವಾದುದರಿಂದ ಹಾಗೆ ಹೇಳಲ್ಪಟ್ಟಿತು. ಇತರರಿಗೆ ಅನ್ವಯಿಸುವಾಗ ಇದು ಅವರುಗಳ ಸ್ವವ ರ್ಣೋಚಿತವಾದ ಶಾಸ್ತ್ರಚೋದಿತವಾದ ಕರ್ಮಗಳಿಗೂ ಉಪಲಕ್ಷಣವೆಂದು ಭಾವಿಸತಕ್ಕದ್ದು. ಹಿಂದಿನ ಶ್ಲೋಕದಿಂದ ಕರ್ಮಗಳೆಲ್ಲಾ ಪ್ರಕೃತಿಯಿಂದಾಗತಕ್ಕದ್ದು ಎಂದು ಹೇಳಲ್ಪಟ್ಟಿತು. ಆ ಪ್ರಕೃತಿಯು ಮಾಡಿದ ಕರ್ಮವೆಲ್ಲ ಭಗವಂತನು ನಡೆಸಿದುದು ಎಂದು ಇಲ್ಲಿ ಹೇಳಲ್ಪಟ್ಟ ದುದರಿಂದ, ಅನುಸಂಧಾನದ ಪ್ರಕಾರ ಹೇಗೆ ಎಂದರೆ—ಮಾಡುವದು ಪ್ರಕೃತಿಯು, ಮಾಡಿಸುವ ನೆಲ್ಲಾ ಭಗವಂತನು; ಆದುದರಿಂದ ತನಗೆ ಸಂಬಂಧಿಸಿದುದಲ್ಲವು ಎಂಬದಾಗಿ. ಇಲ್ಲಿ ಕರ್ಮಸ ನ್ನ್ಯಾಸ ವೆಂದರೇನು ಎಂಬುದು ಉಪದೇಶಿಸಲ್ಪಟ್ಟಿತು. ಕರ್ಮಸನ್ನ್ಯಾಸವೆಂದರೆ ಕರ್ಮಗಳನ್ನು ಜ್ಞಾನಿಯಾದವನು ಬಂಧಕವೆಂದು ಸಂಪೂರ್ಣವಾಗಿ ಬಿಡತಕ್ಕದ್ದಲ್ಲವು. ಇದು **ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯ** ಎಂಬ ಪ್ರಯೋಗದಿಂದಲೇ ವ್ಯಕ್ತವು. ಹಾಗಾದರೆ ಕರ್ಮ ಸನ್ನ್ಯಾಸವೆಂದರೇ ನೆಂದರೆ:-ವಿಹಿತಕರ್ಮಗಳನ್ನು ಎಂದಿಗೂ ತ್ಯಾಗಮಾಡಕೂಡದೆಂದೂ, ಹಾಗೆ ತ್ಯಾಗಮಾಡಿದರೆ ಭಗ ವನ್ನಿಗ್ರಹಕ್ಕೆ ಗುರಿಯಾಗುವದರಿಂದ ಅಂತಹ ಕರ್ಮಗಳನ್ನು ಯಥಾವಿಧಿ ಅನುಷ್ಠಿಸಿ, ಆ ಕರ್ಮ ಗಳನ್ನು **ನಿರ್ಮಮೋಭೂತ್ವಾ** ಎಂದು ಇಲ್ಲಿ ಹೇಳಿರುವಹಾಗೆ ನಾನು ಮಾಡಿದೆನೆಂಬ ಮಮತೆ ಯನ್ನು ತೊರೆದು, ಅದರಲ್ಲಿ ಸಂಗವನ್ನು ಬಿಟ್ಟು, ಫಲವನ್ನು ತ್ಯಜಿಸಿ, ಪರಮ ಪುರುಷನು ನಡೆಸಿ ದನು ಎಂಬ ಅನುಸಂಧಾನದಿಂದ ಆತನಲ್ಲಿ ಸಮರ್ಪಿಸತಕ್ಕದ್ದೆಂಬ ಅಮೋಘೋಪದೇಶವು. ಈ ಶ್ಲೋಕವನ್ನು ಮುಖ್ಯವಾಗಿ ಗಮನಿಸತಕ್ಕದ್ದು. ಏಕೆಂದರೆ ಈ ಶ್ಲೋಕಾಭಿಪ್ರಾಯವನ್ನು ಚೆನ್ನಾಗಿ ಗಮನಿಸದೆ ಅರ್ಜುನನು ಐದನೆಯ ಅಧ್ಯಾಯದಲ್ಲಿ ಜ್ಞಾನಿಯು ವಿಹಿತಕರ್ಮವನ್ನೂ ಸಹ ತ್ಯಾಗ ಮಾಡಬಹುದೆಂದು ಇತರ ಸಿದ್ಧಾಂತಗಳು ಅಪಾರ್ಥವನ್ನು ಕಲ್ಪಿಸಿ ಹೇಳುವಹಾಗೆ ಕರ್ಮಸನ್ನ್ಯಾಸ ವೆಂಬುದು ಕರ್ಮಗಳ ಸಂಪೂರ್ಣತ್ಯಾಗವೆಂದು ಭಾವಿಸಿ, ಕರ್ಮ ಸನ್ನ್ಯಾಸವೆಂದರೇನು? ಕರ್ಮ ತ್ಯಾಗವೆಂದರೇನು ? ಎರಡೂ ಬೇರೆಬೇರೆಯೇ ? ಅಭಿಪ್ರಾಯವೇನು ? ಎಂದು ಸಂಶಯಾವಿಷ್ಟ ನಾಗಿ ಐದನೆಯ ಅಧ್ಯಾಯಾದಿಯಲ್ಲಿ ಪ್ರಶ್ನಿಸುತ್ತಾನೆ. ಅದಕ್ಕೆ ಶ್ರೀಕೃಷ್ಣಭಗವಾನರವರು ಉತ್ತರ ವನ್ನು ಹೇಳುವ ಸಂದರ್ಭದಲ್ಲಿ ವಿಹಿತಕರ್ಮಗಳಸಂಪೂರ್ಣ ತ್ಯಾಗವು ಸರ್ವಾತ್ಮನಾ ಕೂಡದು; ಅಂತಹ ತ್ಯಾಗದಿಂದ ಇಷ್ಟಸಿದ್ಧಿಯೂ ಇಲ್ಲವು, ಅನಿಷ್ಟ ನಿವೃತ್ತಿಯೂ ಇಲ್ಲವು; ಇದೂ ಅಲ್ಲದೆ ಭಗವನ್ನಿಗ್ರಹಕ್ಕೂ ಪಾತ್ರನಾಗುವನೆಂದು ಹೇಳಿ, ಕರ್ಮಸನ್ನ್ಯಾಸ ಅಥವಾ ಕರ್ಮತ್ಯಾಗದ

ಅಭಿಪ್ರಾಯವೇನೆಂದರೆ ; ವಿಹಿತ ಕರ್ಮಗಳನ್ನು ಶ್ರದ್ಧೆಯಿಂದ ಯಥಾವಿಧಿ ನಡೆಸಿ ಮೂರನ್ನು ತ್ಯಾಗ ಮಾಡಬೇಕು, ಅಥವಾ ಮೂರರ ಸನ್ನ್ಯಾಸವಿರಬೇಕು ; ಅವು ಯಾವುವೆಂದರೆ :—(೧)ಪ್ರಕೃತಿಯು ಮಾಡುವುದನ್ನು ಪರಮಾತ್ಮನು ನಡೆಸುವನು ಎಂಬ ಅನುಸಂಧಾನಮೂಲಕ, ನಾನು ಮಾಡಲಿಲ್ಲವು ಎಂದು ಕರ್ತೃತ್ವ ತ್ಯಾಗವು. (೨) ನಾನು ಯಾವಾಗ ಮಾಡಲಿಲ್ಲವೋ ಆವಾಗ ಫಲವೂ ನನಗಿಲ್ಲವು ಎಂದು ಫಲತ್ಯಾಗವು. (೩) ನಾನು ಮಾಡಲಿಲ್ಲವೆಂದು ಅದರಲ್ಲಿ ಮಮತಾ ತ್ಯಾಗವು. ಹೀಗೆ ಅನುಸಂಧಾನಮಾಡಿ ಈ ಕರ್ಮಗಳಿಂದ ಭಗವಂತನು ಪ್ರೀತನಾಗಲಿ ಎಂದು ಶ್ರೀ ಕೃಷ್ಣಾರ್ಪಣಮಸ್ತು ಎಂದು ಹೇಳಿ, ಆತನಲ್ಲೇ ಸಮರ್ಪಿಸತಕ್ಕದ್ದೆಂಬುದೇ ಈ ಶ್ಲೋಕದ ಅಮೋಘಾಭಿಪ್ರಾಯವು. ಈ **ಮಯಿ ಕರ್ಮಾಣಿ ಸನ್ನ್ಯಸ್ಯ** ಎಂಬಲ್ಲಿರುವ ಸನ್ನ್ಯಾಸ ಶಬ್ದಕ್ಕೆ ಕರ್ಮಗಳನ್ನು ಬಿಟ್ಟು ಬಿಡಬಹುದೆಂಬ ಅರ್ಥವು ಕೂಡುವದೇ ಇಲ್ಲವು. ಇಂತಹ ವಿಹಿತ ಕರ್ಮಾನುಷ್ಠಾನ ಬೇಡವೆಂಬ, ಈ ಅಮೋಘೋಪದೇಶಕ್ಕೆ ವಿರುದ್ಧಾಭಿಪ್ರಾಯವು ಹೇಗೆ ಉಂಟಾಯಿತೋ ತಿಳಿಯದು. ಸನ್ನ್ಯಾಸ ತ್ಯಾಗಶಬ್ದಗಳ ಅರ್ಥವು (೧) ಕರ್ತೃತ್ವ. (೨) ಫಲ. (೩) ಸಙ್ಗ ಇವು ಮೂರುಗಳ ತ್ಯಾಗವೆಂಬುದನ್ನು ಜ್ಞಾಪಕದಲ್ಲಿಡತಕ್ಕದ್ದು, ಇಲ್ಲಿ **ಯುಧ್ಯಸ್ವ** ಎಂಬುದು ಉಪಲಕ್ಷಣವಾಗಿ ಈ ಮೋಕ್ಷಾರ್ಥಿಯು ಮಾಡುವ ಸರ್ವ ವಿಹಿತ ಕರ್ಮಗಳನ್ನೂ ಪರಮಾತ್ಮನಲ್ಲಿ ಸಮರ್ಪಿಸತಕ್ಕದ್ದೆಂಬ ಅರ್ಥವೇನೋ ವ್ಯಕ್ತವು. ಇದು ಭಾಷ್ಯದಲ್ಲೂ ಬಹು ಸ್ಫುಟವಾಗಿ ಉಪಪಾದಿತವು. **ಯುಧ್ಯಸ್ವ** ಎಂಬುದರಿಂದ ಇನ್ನೊಂದು ಅರ್ಥವೂ ತೋರಿಬರುತ್ತದೆ ; ಏನೆಂದರೆ :—ಪ್ರಥಮ ಶ್ಲೋಕದಲ್ಲಿ ಧ್ವನ್ಯರ್ಥವನ್ನು ಉಪಪಾದಿಸುವ ಸಂದರ್ಭದಲ್ಲಿ **ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತಸಞ್ಜಯ** ಎಂಬಲ್ಲಿ ಈ ನಮ್ಮ ದೇಹವಾದ ಧರ್ಮಕ್ಷೇತ್ರದಲ್ಲೂ ಮಾಮಕಗಳಾದ ಕಾಮಕ್ರೋಧಾದಿಗಳಿಗೂ ಜ್ಞಾನ ವಿವೇಕಾದಿಗಳಿಗೂ ಮಹತ್ತಾದ ಯುದ್ಧವೂ ನಡೆಯುತ್ತಿರುವದರಿಂದ, ಈ ಕಾಮಕ್ರೋಧಾದಿಗಳನ್ನು ಜ್ಞಾನ ವಿವೇಕಗಳ ಮೂಲಕ ಜಯಿಸುವ ಯುದ್ಧದಲ್ಲಿ ಪ್ರವರ್ತಿಸು ಎಂಬ ಧ್ವನ್ಯರ್ಥವೂ ಸೂಚಿತವು. ಮೋಕ್ಷಾರ್ಥಿಯು ಮುಖ್ಯವಾಗಿ ಮಾಡತಕ್ಕ ಯುದ್ಧವೇ ಇದು. ವಿಷಯ ಸ್ಪೃಹೆಯ ಮೂಲಕ ಈತನು ಇಂದ್ರಿಯಗಳಿಗೆ ವಶನಾಗಿ ಕಾಮಜ್ವರಾದಿಗಳಿಂದ ತಪಿಸುತ್ತಿರುವನು ; ಆದುದರಿಂದ ಅಂತಹ ಸ್ಪೃಹೆಗಳನ್ನೆಲ್ಲಾ ಬಿಟ್ಟು ವಿಗತಜ್ವರನಾಗಿ ಅರಿಷಡ್ವರ್ಗಗಳನ್ನು ಜಯಿಸು ಎಂದು **ವಿಗತಜ್ವರಃ** ಎಂಬ ಪ್ರಯೋಗವು. ಈತನಿಗೆ ಅಹಂಕಾರ ಮಮಕಾರಗಳು ಪರಮ ಶತ್ರುಗಳು ; ಅವುಗಳನ್ನು ಗೆಲ್ಲು ಎಂದು **ನಿರಾಶೀರ್ನಿರ್ಮಮೋಭೂತ್ವಾ** ಎಂದೂ ಪ್ರಯೋಗವು. **ವಿಷಯವೈರಾಗ್ಯ**ವು ಈ ಯುದ್ಧದಿಂದ ಉಂಟಾಗತಕ್ಕ ಜಯವು ; ಅದು ಸಿದ್ಧಿಸುವ ಬಗೆ ಹೇಗೆ? ಎಂದರೆ **ಅಧ್ಯಾತ್ಮಚೇತಸಾ** ಎಂದು ಹೇಳಲ್ಪಟ್ಟಿತು. **ಪರಮಾತ್ಮನಿಯೋರಕ್ತಃ ವಿರಕ್ತೋಽಪರಮಾತ್ಮನಿ**, ಪರಮಾತ್ಮನಲ್ಲಿ ಅನುರಕ್ತನಾದರೆ, ಸ್ವತಃ ಪರಮಾತ್ಮನಲ್ಲದ ಐಹಿಕವಿಷಯಗಳಲ್ಲಿ ವಿರಕ್ತಿಯು ದೊರೆಯುತ್ತದೆಂಬುದು **ಮಯಿಸರ್ವಾಣಿ ಕರ್ಮಾಣಿ ಸನ್ನ್ಯಸ್ಯ** ಎಂಬುದರಿಂದ ತೋರಿಬರುತ್ತದೆ. ಹೀಗೆ ಮಹಾ ಕಾವ್ಯವೆಂದು ಹೇಳಿಸಿಕೊಳ್ಳುವದಕ್ಕನುಗುಣವಾಗಿ ಹೀಗೆಲ್ಲಾ ಗೂಢಾರ್ಥಗಳು ತೋರಿಬರುತ್ತವೆ.)

**ಭಾಷ್ಯಾರ್ಥವು** :—ಹಿಂದಿನ ಶ್ಲೋಕಗಳಲ್ಲಿ ಅಣುವಾದ ಈ ಜೀವಾತ್ಮನು ಪ್ರಕೃತಿ ಸಂಬಂಧವಿಲ್ಲದೆ ಯಾವ ಕರ್ಮವನ್ನೂ ನಡೆಸಲು ಸಾಧ್ಯವಿಲ್ಲವು, ಆದುದರಿಂದ ಶರೀರೇಂದ್ರಿಯಗಳಸಂಬಂಧದಿಂದ ಪೂರ್ವಕರ್ಮಾನುಸಾರ ನಡೆಯುವ ಪ್ರವೃತ್ತಿಗಳಲ್ಲಿ **ತತ್ತ್ವವಿತ್ತಾದರೋನ ಸಜ್ಜತೇ** ಎಂದು ಹೇಳಲ್ಪಟ್ಟಿತು. ಜಡವಾದ ಪ್ರಕೃತಿಯೇ ಸ್ವತಂತ್ರಿಸಿ ಯಾವ ಕರ್ಮಗಳ

ಭಾ. ಮಯಿ–ಸರ್ವೇಶ್ವರೇ ಸರ್ವಭೂತಾನ್ತರಾತ್ಮಭೂತೇ ಸರ್ವಾಣಿ ಕರ್ಮಾಣ್ಯಧ್ಯಾತ್ಮ ಚೇತಸಾ ಸನ್ನ್ಯಸ್ಯ, ನಿರಾಶೀ ರ್ನಿರ್ಮಮಶ್ಚ ವಿಗತಜ್ವರೋ ಯುದ್ಧಾದಿಕಂ ಸರ್ವಂ ಚೋದಿತಂ ಕರ್ಮಕುರುಷ್ವ. ಆತ್ಮನಿ ಯಚ್ಚೇತ ಸ್ತದ ಧ್ಯಾತ್ಮಚೇತಃ ಆತ್ಮಸ್ವರೂಪ ವಿಷಯೇಣ ಶ್ರುತಿ ಶತಸಿದ್ಧೇನ ಜ್ಞಾನೇನೇತ್ಯರ್ಥಃ ; (೧) "ಅನ್ತಃ ಪ್ರವಿಷ್ಟಶ್ಶಾಸ್ತಾ

ನ್ನಾದರೂ ಹೇಗೆ ಮಾಡೀತು ? ಚೇತನನ ಸಙ್ಕಲ್ಪ ಯತನ ಪ್ರಯತನಾದಿಗಳಿಲ್ಲದೆ ಯಾವ ಕರ್ಮಗಳೇ ಆಗಲಿ ಹೇಗೆ ಉಂಟಾಗುವುವು? ಎಂದರೆ ಈ ಚೇತನನ ಸಙ್ಕಲ್ಪಾದಿಗಳೇನೋ ಆವಶ್ಯಕವಾದರೂ, ಪರಮ ಪುರುಷನ ಸಙ್ಕಲ್ಪವಿಲ್ಲದೆ ನಡೆಯುವುದಿಲ್ಲವಾದುದರಿಂದ ಈ ಅರ್ಥವು ಶಾರೀರಕಸೂತ್ರವಾದ "ಪರಾತ್ತು ತಚ್ಛ್ರುತೇಃ"(ಶಾರೀ. ೨. ೩. ೪೦)ಎಂಬಲ್ಲಿ ಉಪಪಾದಿತವಾಗಿ ಆತನಿಗೆ ಅಧೀನವಾಗಿ ಎಲ್ಲವೂ ನಡೆಯುವವರಿಂದ, ಅಂತಹ ತತ್ತ್ವವಿತ್ತಾದರೋ, ಸರ್ವೇಶ್ವರ ನಾದ ನನ್ನ ಆರಾಧನಾರೂಪವಾದುದು ಈ ಕರ್ಮಗಳೆಂದು ಭಾವಿಸಿ, ನನ್ನಲ್ಲೇ ಸಮರ್ಪಿಸು ವನು ಎಂದು ಉಪದೇಶಿಸುತ್ತಾರೆ. ಮಯಿ–ನನ್ನಲ್ಲಿ, ಎಂದರೆ ಸರ್ವೇಶ್ವರನಾಗಿಯೂ, ಸರ್ವಭೂ ತಾನ್ತರಾತ್ಮಭೂತೇ-ಸಮಸ್ತ ಚಿದಚಿತ್ತುಗಳನ್ನೂ ವ್ಯಾಪಿಸಿ ಅವುಗಳಿಗೆ ಅಂತರಾತ್ಮಾವಾಗಿಯೂ ಇರುವ ನನ್ನಲ್ಲಿ, ಇದರಿಂದ ಸರ್ವನಿಯಮನವು ಹೇಳಲ್ಪಟ್ಟಿತು, ಸರ್ವಾಣಿ ಕರ್ಮಾಣಿ-ಸಮಸ್ತ ಕರ್ಮಗಳನ್ನು ಎಂದರೆ ಚಿಕೀರ್ಷಾಮೊದಲಾದ ಸ್ವಕೀಯ ಕರ್ಮಗಳನ್ನೂ ಮತ್ತು ಪ್ರವೃತ್ತಿ ರೂಪ ಗುಣಕೃತ ಪರಾಯತ್ತ ಕರ್ಮಗಳನ್ನೂ, ಅಧ್ಯಾತ್ಮಚೇತಸಾ-ಪರಮಾತ್ಮನಾದ ನನ್ನಲ್ಲಿಟ್ಟ ಮನಸ್ಸಿನಿಂದ, ಸನ್ನ್ಯಸ್ಯ - ಸಮರ್ಪಿಸಿ, ನಿರಾಶೀಃ - ಫಲದಲ್ಲಿ ಆಶೆಯಿಲ್ಲದೆ, ನಿರ್ಮಮಶ್ಚ - ನಾನು ಇದನ್ನು ನಿರ್ವಹಿಸಿ ಮಾಡಿದೆನೆಂಬ ಮಮತಾಶೂನ್ಯನಾಗಿ, ವಿಗತಜ್ವರಃ - ಸುಖ ದೊರೆ ಯುತ್ತದೋ ದುಃಖ ಪ್ರಾಪ್ತಿಯಾಗುತ್ತದೋ ಎಂಬ ಶಙ್ಕಾಮೂಲಕ ಪರಿತಾಪವಿಲ್ಲದವನಾಗಿ, ಯುದ್ಧಾದಿಕಂ-ಯುದ್ಧವೇ ಮೊದಲಾದವುಗಳಾದ, ಅರ್ಜುನನ ಹಾಗೆ ಕ್ಷತ್ರಿಯನಾಗಿದ್ದರೆ ಧರ್ಮ ಯುದ್ಧವನ್ನೂ ಬ್ರಾಹ್ಮಣ ವೈಶ್ಯಾದಿಗಳಾಗಿದ್ದರೆ ಅವರಿಗೆ ವಿಧಿವಿಹಿತ ಕರ್ಮಗಳನ್ನೂ ಎಂದು ತಿಳಿಸುವದಕ್ಕಾಗಿ ಆದಿ ಪದವು, ಸರ್ವಂ ಚೋದಿತಂ ಕರ್ಮ-ಸಮಸ್ತವಾದ ಶಾಸ್ತ್ರಗಳಲ್ಲಿ ವಿಧಿಸಿ ರುವ ಕರ್ಮವನ್ನು, ಕುರುಷ್ವ - ಮಾಡು; ಫಲಕರ್ತೃತ್ವ ಸಙ್ಗತ್ಯಾಗಪೂರ್ವಕವಾಗಿ ಸ್ವವರ್ಣೋ ಚಿತ ಕರ್ಮಗಳನ್ನು ನಡಿತಕ್ಕದ್ದೆಂಬ ತಾತ್ಪರ್ಯವು ; ಮುಂದೆ ಅಧ್ಯಾತ್ಮಚೇತಸಾ ಎಂಬ ಪದದಲ್ಲಿನ ಅರ್ಥ ತಾತ್ಪರ್ಯಗಳನ್ನು ವ್ಯಕ್ತಪಡಿಸುತ್ತಾರೆ :—ಆತ್ಮನಿ - ಪರಮಾತ್ಮನಲ್ಲಿ, ಯಚ್ಚೇತಃ - ಯಾವ ಮನಸ್ಸು ಉಂಟೋ, ತತ್ - ಅದು, ಅಧ್ಯಾತ್ಮ ಚೇತಸ್ಸೆಂದು ಹೇಳಿಸಿ ಕೊಳ್ಳುತ್ತದೆ; ಎಂದರೆ ಆತ್ಮಸ್ವರೂಪ ವಿಷಯೇಣ - ಪರಮಾತ್ಮನ ಸ್ವರೂಪ ಪ್ರಯುಕ್ತ ವಾದ, ಶ್ರುತಿಶತಸಿದ್ಧೇನ - ಅನೇಕ ಶ್ರುತಿಪ್ರಮಾಣಗಳಿಂದ ಸಿಷ್ಟಯಿಸಲ್ಪಟ್ಟ, ಜ್ಞಾನೇನೇ ತ್ಯರ್ಥಃ, ಜ್ಞಾನದಿಂದ ಎಂಬರ್ಥವು. ಶ್ರುತಿ ಶತ ಸಿದ್ಧವಾದರೆ, ತಾವು ಕೆಲವು ಪ್ರಮಾಣಗಳ ನ್ನಾದರೂ ಉದಾಹರಿಸಬೇಡವೇ ? ಎಂದರೆ ಕೆಲವು ಅಂತಹ ಶ್ರುತಿಪ್ರಮಾಣಗಳನ್ನು ಉದಾಹರಿ ಸುತ್ತಾರೆ:—"ಸರ್ವೇಶ್ವರನು, ಜನಾನಾಂ-ಸಮಸ್ತ ಚೇತನರನ್ನೂ, (೧)ಅನ್ತಃ ಪ್ರವಿಷ್ಟಃ – ಪ್ರವೇಶಿಸಿ ವ್ಯಾಪಿಸಿರುವವನು, ಶಾಸ್ತಾ - ಆದುದರಿಂದಸರ್ವರಿಗೂ ನಿಯಾಮಕನು, ಸರ್ವಾತ್ಮಾ- ಸರ್ವರೂ ಅವನಿಗೆ ಶರೀರವಾದುದರಿಂದ, ಆತನು ಅವರಿಗೆಲ್ಲಾ ಆತ್ಮನು,...........ಅನ್ತಃ ಪ್ರವಿ ಷ್ಟಂ - ಎಲ್ಲರೊಳಗೂ ಪ್ರವೇಶಿಸಿರುವ, ಕರ್ತಾರಂ - ಜೀವ ವ್ಯಾಪಾರಗಳಾದ ಸಮಸ್ತ ಕರ್ಮಗ ಳಿಗೂ ನಿಯಾಮಕರೂಪದಲ್ಲಿ ಕರ್ತಾವಾದ ಅಥವಾ ಜೀವ ವ್ಯಾಪಾರಗಳಿಗೆ ಪ್ರೇರಕನಾದ, ಏತಂ

(೧) ಯಾಜುಷಿ. ಆರಣಿ. ೩. ೧೧. ೨೧. ೨೩.

ಭಾ. ಜನಾನಾಂ ಸರ್ವಾತ್ಮಾ....ಅನ್ತಃ ಪ್ರವಿಷ್ಟಂ ಕರ್ತಾರಮೇತಂ" (೨) "ಯ ಆತ್ಮನಿ ತಿಷ್ಠನ್ನಾತ್ಮನೋಽನ್ತರೋ ಯ ಮಾತ್ಮಾ ನವೇದ ಯಸ್ಯಾತ್ಮಾ ಶರೀರಂ ಯ ಆತ್ಮಾನ ಮನ್ತರೋ ಯಮಯತಿ ಸ ತ ಆತ್ಮಾನ್ತರ್ಯಾಮ್ಯ ಮೃತಃ" ಇತ್ಯೇವ ಮಾದ್ಯಾಃ ಶ್ರುತಯಃ ಪರಮ ಪುರುಷ ಪ್ರವರ್ತ್ಯಂ ತಚ್ಛರೀರ ಭೂತ ಮೇತಮಾತ್ಮಾನಂ, ಪರಮ ಪುರುಷಂಚ ಪ್ರವರ್ತಯಿತಾರ, ಮಾಚಕ್ಷತೇ. ಸ್ಮೃತಯಶ್ಚ-

ಈ ಸರ್ವೇಶ್ವರನನ್ನು," (೨) "ಯಃ - ಯಾವ ಪರಮಾತ್ಮನು, ಆತ್ಮನಿ ತಿಷ್ಠನ್-ಜೀವಾತ್ಮನಲ್ಲೇ ಇರುವವನಾಗಿ, ಆತ್ಮನೋಽನ್ತರಃ-ಜೀವಾತ್ಮನಿಗಿಂತ ಬೇರೆಯೋ, ಹೀಗಿದ್ದರೂ, ಯಮಾತ್ಮಾ ನವೇದ - ಅಂತಃ ಪ್ರವೇಶಮಾಡಿ ಒಳಗಿರುವ ಯಾವ ಪರಮಾತ್ಮನನ್ನು ಈ ಜೀವಾತ್ಮನು ತಿಳಿಯಲಾರನೋ, ಯಸ್ಯ - ಯಾವ ಪರಮಾತ್ಮನಿಗೆ, ಆತ್ಮಾ - ಈ ಜೀವಾತ್ಮನು, ಶರೀರಂ-ಶರೀರವೋ, ಯಃ - ಯಾವ ಪರಮಾತ್ಮನು, ಆತ್ಮಾನಂ - ಈ ಜೀವಾತ್ಮನನ್ನು, ಅಂತರಃ - ಒಳಗೆ, ಯಮಯತಿ - ನಿಯಮಿಸುತ್ತಾನೋ, ಸಃ - ಆ ಪರಮಾತ್ಮನು, ತೇ - ಉದ್ದಾಲಕನಾದ ನಿನಗೂ ಕೂಡ, ಆತ್ಮಾ - ಆತ್ಮನು, ಅಂತರ್ಯಾಮೀ – ಅನ್ತರ್ಯಾಮಿಯಾಗಿ ನಿಯಾಮಕನು, ಅಮೃತಃ - ಪ್ರತಿಫಲ ನಿರಪೇಕ್ಷನಾಗಿ ಮೋಕ್ಷದಾಯಕನು," ಇದು ಯಾಜ್ಞವಲ್ಕ್ಯರು ಉದ್ದಾಲಕರಿಗೆ ಮಾಡುವ ಉಪದೇಶವು," ಇತ್ಯೇವಮಾದ್ಯಾಃ ಶ್ರುತಯಃ - ಇವೇ ಮೊದಲಾದ ಶ್ರುತಿಗಳು, ಏತಂ ಆತ್ಮಾನಂ - ಈ ಜೀವಾತ್ಮನನ್ನು, ಪರಮಪುರುಷ ಪ್ರವರ್ತ್ಯಂ - ಪುರುಷೋತ್ತಮನಿಂದ ಕಾರ್ಯಗಳಲ್ಲಿ ನಿಯಮಿಸಲ್ಪಡುವನನ್ನಾಗಿಯೂ, ತಚ್ಛರೀರಭೂತಂ - ಆ ಪರಮ ಪುರುಷನಿಗೆ ಶರೀರ ರೂಪನೆಂದೂ, ಮತ್ತು ಪರಮಪುರುಷಂ - ಪರಮ ಪುರುಷನನ್ನೂ-ಪ್ರವರ್ತಯಿತಾರಂ ಚ-ಜೀವಾತ್ಮನಿಗೆ ಪ್ರೇರಕನೆಂದೂ ಕೂಡ, ಆಚಕ್ಷತೇ-ಹೇಳುತ್ತವೆ. ಆದಿಶಬ್ದದಿಂದ"ಭೋಕ್ತಾಭೋಗ್ಯಂಪ್ರೇರಿತಾರಂಚಮತ್ವಾ."(ಶ್ವೇ.೧.೧೨.,"ಪತಿಂವಿಶ್ವಸ್ಯಾತ್ಮೇಶ್ವರಂ" (ಪು.ಸೂ.)"ಸರ್ವಸ್ಯವಶೀ ಸರ್ವಸ್ಯೇಶಾನಃ"(ಬೃ. ೬. ೪ ೨೨.)ಎಂಬ ಮತ್ತು"ಪೃಥಗಾತ್ಮಾನಂ ಪ್ರೇರಿತಾರಂಚಮತ್ವಾ"(ಶ್ವೇ.೧.೬.)ಎಂಬಿವೇ ಮೊದಲಾದಶ್ರುತಿಗಳುಸೂಚಿಸಲ್ಪಟ್ಟವು. ಹಾಗೆಯೇ ಮುಂದೆ ಈ ಗ್ರಂಥದಲ್ಲೇ "ಅಧಿಷ್ಠಾನಂ ತಥಾ ಕರ್ತಾ ಕರಣಂಚ ಪೃಥಗ್ವಿಧಂ।ವಿವಿಧಾಶ್ಚಪೃಥಕ್ಚೇಷ್ಟಾದೈವಂ ಚೈವಾತ್ರಪಂಚಮಮ್"(ಗೀ.೧೮.೧೪.)ಇಲ್ಲಿ ದೈವಂ ಎಂದು ಪುರುಷೋತ್ತಮನೇ ಹೇಳಲ್ಪಟ್ಟಿರುತ್ತಾನೆ. ಮಯಿ ಸರ್ವಾಣಿಕರ್ಮಾಣಿಸನ್ನ್ಯಸ್ಯ ಎಂಬುದರಲ್ಲಿ ತೋರಿಬರುವ ಅಭಿಪ್ರಾಯಕ್ಕೆ ಶ್ರುತಿಪ್ರಮಾಣಗಳನ್ನು ತೋರಿಸಿದರು. ಅನೇಕ ಶ್ರುತಿಗಳು ಸಮಸ್ತ ಚಿದಚಿತ್ತುಗಳನ್ನೂ ಪರಮಾತ್ಮನು ಅನುಪ್ರವೇಶಮಾಡಿರುವನೆಂದೂ, ಅವುಗಳೆಲ್ಲಾ ಆತನಿಗೆ ಶರೀರವೆಂದೂ, ಅವುಗಳಿಗೆಲ್ಲಾ ಪರಮಾತ್ಮನೇ ಆತ್ಮಾವೆಂದೂ, ಆದುದರಿಂದ ಸರ್ವನಿಯಾಮಕನು, ಪ್ರೇರಕನು ಸರ್ವೇಶ್ವರನೆಂದೂ ಹೇಳುತ್ತವೆ. ಇದರಿಂದ ಸರ್ವಕರ್ಮಗಳೂ ಪರಮಾತ್ಮನಿಂದ ಪ್ರೇರಿಸಲ್ಪಟ್ಟೇ ನಡೆಯುವದರಿಂದ ಎಲ್ಲಾ ಕರ್ಮಗಳೂ ಆತನಿಂದಲೇ ನಡೆಯುತ್ತವೆ ಎಂಬ ಅಧ್ಯಾತ್ಮಬುದ್ಧಿಯಿಂದ ಆತನಲ್ಲೇ ಸಮರ್ಪಿಸತಕ್ಕದ್ದೆಂದು ಹೇಳಲ್ಪಟ್ಟಿತ. ಸ್ಮೃತಿಗಳೂ ಶ್ರುತಿಗಳನ್ನನುಸರಿಸಿ ಹಾಗೆಯೇ ಹೇಳುತ್ತವೆಂದು ಕೆಲವನ್ನು ಉದಾಹರಿಸುತ್ತಾರೆ. ಸ್ಮೃತಿಯಶ್ಚ - ಸ್ಮೃತಿಗಳೂ ಕೂಡ (೩) "ಸರ್ವೇಷಾಂ - ಬ್ರಹ್ಮಾದಿ ಸ್ತಂಬ ಪರ್ಯನ್ತವಾದ ಸಮಸ್ತ ಚೇತನವರ್ಗ ಅಚೇತನವರ್ಗವೆಲ್ಲಕ್ಕೂ, ಪ್ರಶಾಸಿತಾರಂ - ನಿಯಾಮಕನಾದ ಸರ್ವೇಶ್ವರನನ್ನು; ಪೂರಾ ಶ್ಲೋಕವು ಯಾವುದೆಂದರೆ :—

(೨) ಬೃ. ೫. ೭. ೨೨. ಮಾಧ್ಯಂದಿನ ಪಾಠ.

ಭಾ. (೩)"ಪ್ರಶಾಸಿತಾರಂ ಸರ್ವೇಷಾಂ" ಇತ್ಯಾದ್ಯಾಃ (೪)ಸರ್ವಸ್ಯಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿ ರ್ಜ್ಞಾನ ಮಪೋಹನಂಚ" (೫) "ಈಶ್ವರ ಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ। ಭ್ರಾಮಯ‌ನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ" ಇತಿ ವಕ್ಷ್ಯತೇ. ಅತೋ ಮಚ್ಛರೀರತಯಾ ಮತ್ಪ್ರವರ್ತ್ಯಾತ್ಮ ಸ್ವರೂಪಾನುಸಂಧಾನೇನ ಸರ್ವಾಣಿ ಕರ್ಮಾಣಿ ಮಯ್ಯೈವ ಕ್ರಿಯಮಾಣಾನೀತಿ ಮಯಿ

---

ಪ್ರಶಾಸಿತಾರಂ ಸರ್ವೇಷಾಂ ಮಣೀಯಾಂಸ ಮಣೀಯಸಾಂ।
ರುಕ್ಮಾಭಂ ಸ್ವಪ್ನಧೀಗಮ್ಯಂ ವಿದ್ಯಾತ್ತಂ ಪುರುಷಂಪರಮ್ ॥

ಅಣೀಯಸಾಂ ಅಣೀಯಾಂಸಂ - ಅಣೋರಣೀಯಾನ್ ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಅತಿಸೂಕ್ಷ್ಮವಸ್ತುಗಳನ್ನೂ ಕೂಡ ಅನುಪ್ರವೇಶಮಾಡುವ ಸೂಕ್ಷ್ಮತರನಾದ, ರುಕ್ಮಾಭಂ -"ಹಿರಣ್ಮಯಃ ಪುರುಷಃ" ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಸುವರ್ಣಕಾಂತಿಯುಳ್ಳ, ಇದರಿಂದ ದಿವ್ಯ ಮಙ್ಗಳವಿಗ್ರಹಯುಕ್ತನೆಂದು ಹೇಳಲ್ಪಟ್ಟಿತು ; ಸ್ವಪ್ನಧೀಗಮ್ಯಂ - ಸ್ವಪ್ನಜ್ಞಾನಕ್ಕೆ ಸಮಾನವಾದ ಜ್ಞಾನದಿಂದ ಹೊಂದಲ್ಪಡುವನಾದ, ತಂ - ಅಂತಹ ಶ್ರುತಿಪ್ರಸಿದ್ಧನಾದ, ಪರಂಪುರುಷಂ - ಪರಮಪುರುಷನಾದ ನಾರಾಯಣನನ್ನು, ವಿದ್ಯಾತ್ - ಉಪಾಸನೆ ಮಾಡತಕ್ಕದ್ದು" ಇತ್ಯಾದ್ಯಾಃ-ಇವೇ ಮೊದಲಾದ ಪ್ರಮಾಣಗಳುಂಟು. ಮುಂದೆ ಗೀತೆಯಲ್ಲೂ ಈ ಅಭಿಪ್ರಾಯವೇ ಉಪಪಾದಿತವಾಗಿದೆ ಎಂದೂ ಗೀತಾವಾಕ್ಯಗಳನ್ನು ಉದಾಹರಿಸುತ್ತಾರೆ :— "(೪) ಅಹಂ - ಸರ್ವಚಿದಚಿತ್ತುಗಳಿಗೂ ನಿಯಾಮಕನಾಗಿ ಸರ್ವೇಶ್ವರನಾದ ನಾನು, ಸರ್ವಸ್ಯ ಹೃದಿ - ಸಕಲ ಪ್ರವೃತ್ತಿನಿವೃತ್ತಿಗಳಿಗೂ ಮೂಲವಾಗಿ ಜ್ಞಾನೋದಯಕ್ಕೆ ಹೇತುವಾದ ಸಮಸ್ತರ ಹೃದಯದಲ್ಲೂ, ಸನ್ನಿವಿಷ್ಟಃ - ಅವರಿಗೆ ನಿಯಾಮಕನಾಗಿ ಇರುವವನಾದುದರಿಂದಲೇ, ಮತ್ತಃ - ನನ್ನಿಂದಲೇ, ಸ್ಮೃತಿಃ - ಪೂರ್ವಾನುಭವದ ಸ್ಮರಣೆಯೂ, ಜ್ಞಾನಂ- ಇಂದ್ರಿಯಗಳಿಂದಲೂ ಶಾಸ್ತ್ರದಿಂದಲೂ ಉಂಟಾಗುವ ಜ್ಞಾನವೂ, ಅಪೋಹನಂ ಚ - ಜ್ಞಾನನಿವೃತ್ತಿಯೂ ಅಥವಾ ವಿವೇಕಜನ್ಯ ಜ್ಞಾನವಾದ, ಪ್ರಮಾಣಗಳಿಂದ ಊಹಾರೂಪ ಜ್ಞಾನವೂ ಸಹ, ಉಂಟಾಗುತ್ತವೆ" ಮತ್ತು (೫) "ಹೇ ಅರ್ಜುನ - ಓ ಅರ್ಜುನನೇ, ಸರ್ವಭೂತಾನಾಂ - ಸಮಸ್ತ ಚೇತನರ, ಹೃದ್ದೇಶೇ - ಹೃದಯ ಪ್ರದೇಶದಲ್ಲಿ, ಈಶ್ವರಃ - ಸರ್ವೇಶ್ವರನು, ತಿಷ್ಠತಿ - ಇರುತ್ತಾನೆ, ಅಲ್ಲಿದ್ದು ಏನುಮಾಡುತ್ತಾನೆಂದರೆ ಹೇಳುತ್ತಾರೆ:—ಮಾಯಯಾ – ತನ್ನ ಸಙ್ಕಲ್ಪಮಾತ್ರದಿಂದಲೇ, ಯಂತ್ರಾರೂಢಾನಿ - ಶರೀರವೆಂಬಯಂತ್ರವನ್ನು ಹೊಂದಿದ, ಸರ್ವಭೂತಾನಿ - ಸಮಸ್ತ ಚೇತನರನ್ನೂ, ಭ್ರಾಮಯನ್ - ತಿರಗಿಸುವವನಾಗಿ, ತಿಷ್ಠತಿ - ಇರುತ್ತಾನೆ. ಯಂತ್ರದ ಬೊಂಬೆಗಳನ್ನು ಸೂತ್ರದ ಮೂಲಕ ತಿರುಗಿಸುವದುಂಟು, ಈತನು ಹಾಗಲ್ಲವು, ಸಙ್ಕಲ್ಪದಿಂದಲೇ ತಿರುಗಿಸುವನು ಎಂದರೆ ಚೇತನರನ್ನು ಕೆಲಸಮಾಡುವಹಾಗೆ ನಿಯಮಿಸುವನು ಎಂಬ ಭಾವವು." ಮುಂದೆ ಅತಃ ಎಂದು ಪ್ರಾರಂಭಿಸಿ ಈ ಶ್ಲೋಕದ ಅರ್ಥವನ್ನು ಉಪದೇಶಿಸುತ್ತಾರೆ :—ಅತಃ - ಹೀಗೆ ಶ್ರುತಿ ಸ್ಮೃತಿ ಪ್ರಮಾಣಗಳಿರುವದರಿಂದ, ಮಚ್ಛರೀರತಯಾ - ಜೀವಾತ್ಮನಾದ ನೀನೂ ನನಗೆ ಶರೀರವಾಗಿರುವದರಿಂದ, ಮತ್ಪ್ರವರ್ತ್ಯಾತ್ಮಸ್ವರೂಪಾನುಸಂಧಾನೇನ - ನನ್ನಿಂದಲೇ ಪ್ರವರ್ತಿಸಲ್ಪಡುವ ಆತ್ಮಸ್ವರೂಪವುಳ್ಳವನೆಂಬ ಅನುಸಂಧಾನದಿಂದ (ಇದು ಅಧ್ಯಾತ್ಮಚೇತಸಾ ಎಂಬುದರಭಿಪ್ರಾಯವು) ಸರ್ವಾಣಿ ಕರ್ಮಾಣಿ – ಸಮಸ್ತ ಕರ್ಮ

---

(೩) ಮನು. ೧೨. ೧೨೨. (೪) ಗೀ. ೧೫. ೧೫. (೫) ಗೀ. ೧೮. ೬೧.

ಭಾ. ಪರಮ ಪುರುಷೇ ಸನ್ನ್ಯಸ್ಯ, ತಾನಿ ಚ ಕೇವಲಂ ಮದಾರಾಧನಾನೀತಿ ಕೃತ್ವಾ, ತತ್ಫಲೇ ನಿರಾಶೀಃ, ತತ ಏವ ತತ್ರ ಕರ್ಮಣಿ ಮಮತಾ ರಹಿತೋ ಭೂತ್ವಾ ವಿಗತಜ್ವರೋ ಯುದ್ಧಾದಿಕಂ ಕುರುಷ್ವ. ಸ್ವಕೀಯೇನಾ ತ್ಮನಾ ಕರ್ತ್ರಾ ಸ್ವಕೀಯೈಶ್ಚೋಪಕ ರಣೈ ಸ್ಸ್ವಾರಾಧನೈಕ ಪ್ರಯೋಜನಾಯ ಪರಮಪುರುಷ ಸ್ಸರ್ವೇಶ್ವರ ಸ್ಸರ್ವಶೇಷೀ ಸ್ವಯಮೇವ ಸ್ವಕರ್ಮಾಣಿ ಕಾರಯತೀ ತ್ಯನುಸಂಧಾಯ ಕರ್ಮಸು ಮಮತಾ ರಹಿತಃ ಪ್ರಾಚೀನೇನಾನಾದಿಕಾಲಪ್ರವೃತ್ತಾನಂತ ಪಾಪಸಂಚಯೇನ ಕಥಮಹಂ ಭವಿಷ್ಯಾಮೀ ತ್ಯೇವಂಭೂತಾಂತರ್ಜ್ವರ ವಿನಿರ್ಮುಕ್ತಃ ಪರಮ ಪುರುಷ ಏವ ಕರ್ಮಭಿ

---

ಗಳೂ, ಮಯ್ಯೈವ ಕ್ರಿಯಮಾಣಾನೀತಿ - ಸರ್ವೇಶ್ವರನಾದ ನನ್ನಿಂದಲೇ ಮಾಡಲ್ಪಡುವು ದೆಂದು, ಮಯಿ ಪರಮಪುರುಷೇ - ಪರಮಪುರುಷನಾದ ನನ್ನಲ್ಲಿ, ಸನ್ನ್ಯಸ್ಯ - ಸಮರ್ಪಿಸಿ ಇದರಿಂದ ಕರ್ತೃತ್ವತ್ಯಾಗವು ಹೇಳಲ್ಪಟ್ಟಿತು, ತಾನಿ ಚ - ಆ ಕರ್ಮಗಳನ್ನೂ ಕೂಡ, ಕೇವಲಂ ಮದಾರಾಧನಾನೀತಿ - ಕೇವಲ ನನಗೆ ಆರಾಧನಾರೂಪವೆಂದು, ಕೃತ್ವಾ - ಮಾಡಿ, ತತ್ಫಲೇ ನಿರಾಶೀಃ-ಆ ಕರ್ಮ ಫಲದಲ್ಲಿ ಆಶಾರಹಿತನಾಗಿ, ಇದರಿಂದ ಫಲತ್ಯಾಗವು ಉಪದೇಶಿಸಲ್ಪಟ್ಟಿತು, ತತ ಏವ-ಆಕಾರಣದಿಂದಲೇ, ತತ್ರಕರ್ಮಣಿ-ಆ ಕರ್ಮದಲ್ಲಿ ಮಮತಾ ರಹಿತೋಭೂತ್ವಾ-ಇದು ಮೂಲದ ನಿರ್ಮಮೋ ಭೂತ್ವಾ ಎಂಬುದರ ಅರ್ಥವು, ಇಲ್ಲಿ ಮಮತಾತ್ಯಾಗವು ಬೋಧಿತವು ಯಾವಾಗ ಫಲದಲ್ಲಿ ಆಶೆಯಿಲ್ಲವೋ ಆಗ ಮಮತಾ ರಹಿತನಾಗಿ,ವಿಗತಜ್ವರಃ-ಸಂತಾಪರಹಿತನಾಗಿ, ಯುದ್ಧಾದಿಕಂ ಕುರುಷ್ವ-ಸ್ವವರ್ಣೋಚಿತವಾದ ಯುದ್ಧವೇ ಮೊದಲಾದ ಆಜ್ಞಾ ಕೈಙ್ಕರ್ಯಗ ಳನ್ನು ಮಾಡು. ಪರಮಪುರುಷನೇ ಸರ್ವರ ಶರೀರದಲ್ಲೂ ಇರುವವನಾಗಿ ಅವರುಗಳಿಗೆ ಆತ್ಮಾವಾಗಿ ಆ ಕಾರಣದಿಂದ ನಿಯನ್ತಾವಾಗಿ ತನ್ನ ಸಙ್ಕಲ್ಪದಿಂದ ಸಮಸ್ತ ಕರ್ಮಗಳನ್ನೂ ಮಾಡಿಸುವನೂ ಅಲ್ಲದೆ ಆತನೇ ಅದರಿಂದ ಪ್ರೀತನಾಗುವನೆಂದು ಅನುಸಂಧಾನಮಾಡಿ, ಫಲವನ್ನೂ ಕರ್ಮಕರ್ತೃತ್ವ ವನ್ನೂ, ಕರ್ಮದಲ್ಲಿ ಮಮತೆಯನ್ನೂ, ತ್ಯಾಗಮಾಡಿ, ಸನ್ನ್ಯಸ್ಯ - ನಿರಾತಂಕವಾಗಿ ಸರ್ವೇಶ್ವರ ನಲ್ಲಿ ಸಮರ್ಪಿಸತಕ್ಕದ್ದೆಂದು ಹೇಳಿದರು. ಸಮರ್ಪಿಸತಕ್ಕದ್ದೆಂದು ಹೇಳಿರುವದರಿಂದ ಹಾಗೆ ಸಮರ್ಪಿಸುವಾಗ ಅನುಸಂಧಾನವು ಹೇಗಿರತಕ್ಕದ್ದೆಂಬುದನ್ನು ಬಹು ಸ್ವಾರಸ್ಯವಾಗಿ ಉಪ ದೇಶಿಸುತ್ತಾರೆ:—ಸ್ವಕೀಯೇನ - ಈಶ್ವರನಾದ ತನಗೆ ದಾಸಪುತ್ರಾದಿವತ್ ಸಂಬಂಧಪಟ್ಟ, ಕರ್ತ್ರಾ - ಕರ್ತಾಶಾಸ್ತ್ರಾರ್ಥವತ್ವಾತ್ ಎಂಬ ಸೂತ್ರವೇ ಮೊದಲಾದವುಗಳಲ್ಲಿ ಹೇಳಲ್ಪಟ್ಟ ಕರ್ತೃತ್ವವುಳ್ಳ, ಆತ್ಮನಾ - ಈ ಜೀವಾತ್ಮನಿಂದ, ಸ್ವಕೀಯೈಶ್ಚೋಪಕರಣೈಃ - ಸರ್ವೇಶ್ವರನಿಗೆ ಎಲ್ಲವೂ ಸೇರಿದ ವಿಭೂತಿಯಾದುದರಿಂದ, ಪರಮಪುರುಷನಾದ ತನಗೆ ಸೇರಿದ ಸಹಾಯದ್ರವ್ಯ ಗಳಿಂದಲೇ, ಸ್ವಾರಾಧನೈಕ ಪ್ರಯೋಜನಾಯ ತನ್ನ ಆರಾಧನೆಯೇ ಮುಖ್ಯವಾದ ಪ್ರಯೋಜನೆಗಾಗಿ, ಪರಮ ಪುರುಷನಾದ ಸರ್ವೇಶ್ವರನಾದ ಸರ್ವ ಶೇಷಿಯಾದ ಭಗವಂತನು, ಸ್ವಯಮೇವ - ತಾನೆಯೇ, ಸ್ವ ಕರ್ಮಾಣಿ - ತನಗೆ ಸಂಬಧಪಟ್ಟ ಕರ್ಮಗಳನ್ನೇ, ಕಾರಯತಿ - ಮಾಡಿಸುತ್ತಾರೆ, ಇತ್ಯನುಸಂಧಾಯ - ಹೀಗೆ ಅನುಸಂಧಾನಮಾಡಿ, ಕರ್ಮಸು ಮಮತಾರಹಿತಃ- ಕರ್ಮಗಳಲ್ಲಿ ಮಮತಾ ಇಲ್ಲದವನಾಗಿ, ಪ್ರಾಚೀನೇನ - ಹಿಂದೆ ಬಹುಕಾಲದಿಂದ ಬಂದ, ಅನಾದಿ ಕಾಲ ಪ್ರವೃತ್ತ - ಅನಾದಿಕಾಲದಿಂದಲೂ ಮಾಡಲ್ಪಟ್ಟ, ಅನಂತ ಪಾಪಗಳ, ಸಂಚಯೇನ- ಸಮೂಹದಿಂದ, ಕಥಮಹಂ ಭವಿಷ್ಯಾಮೀತಿ - ನಾನು ಹೇಗೆ ಆಗುತ್ತೇನೋ ಎಂದು, ಎಂದರೆ ನನ್ನಗತಿ ಏನಾಗುತ್ತದೋ ಎಂದು, ಏವಂ ಭೂತಾಂ ತಜ್ವರವಿನಿರ್ಮುಕ್ತಃ - ಇಂತಹ ಪರಿತಾಪ ದಿಂದ ಬಿಡಲ್ಪಟ್ಟವನಾಗಿ, ಪರಮ ಪುರುಷನೇ, ಕರ್ಮಭಿ ರಾರಾಧಿತಃ – ಕರ್ಮಗಳಿಂದಾರಾಧಿಸ

ಭಾ. ರಾರಾಧಿತೋ ಬಂಧಾ ನ್ಮೋಚಯತೀತಿ ಸುಖೇನ ಕರ್ಮಯೋಗಮೇವ ಕುರುಷ್ವೇ ತ್ಯರ್ಥಃ (೬) ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೈವತಾನಾಂ ಪರಮಂಚ

ಲ್ಪಟ್ಟವನಾಗಿ, ಬ ಧಾನ್ಮೋಚಯತೀತಿ - ಬಂಧದಿಂದ ಬಿಡಿಸುವನೆಂದು ಸುಖೇನ–ಸುಖದಿಂದ ಕರ್ಮಯೋಗಮೇವ ಕುರುಷ್ವೇತ್ಯರ್ಥಃ - ಕರ್ಮಯೋಗವನ್ನೇ ಮಾಡು ಎಂಬಭಿಪ್ರಾಯವು. ಕರ್ಮಾರಂಭದಲ್ಲೂ ಕರ್ಮ ಸಮಾಪ್ತಿಯಲ್ಲೂ ಸಹ ತ್ಯಾಗವನ್ನು ಈ ಅನುಸಂಧಾನವುಂಟಾಗುವ ವಕ್ಕಾಗಿ ಹೇಳತಕ್ಕದ್ದೆಂಬ ಭಾವವು. ಕರ್ಮಾರಂಭದಲ್ಲಿ ಕಾರಯತಿ ಎಂಬನುಸಂಧಾನವೂ ಕರ್ಮ ಕರ್ಮಸಮಾಪ್ತಿಯಲ್ಲಿ ಕಾರಿತವಾ‍ನ್ ತಾನೇ ನಡಿಸಿದನೆಂಬನುಸಂಧಾನವೂ ಇರತಕ್ಕದ್ದೆಂಬ ಭಾವವು. "ಸ್ವಶೇಷಭೂತೇನ ಮಯಾ ಸ್ವೀಯೈ ಸ್ಸರ್ವಪರಿಚ್ಛದೈಃ । ವಿಧಾತುಂ ಪ್ರೀತಮಾತ್ಮಾನಂ ದೇವಃ ಪ್ರಕ್ರಮತೇಸ್ವಯಂ" ಎಂಬ ಶ್ಲೋಕದಿಂದ ಕರ್ಮಾರಂಭದಲ್ಲಿ ಸಾತ್ವಿಕ ತ್ಯಾಗವನ್ನು ಹೇಳತಕ್ಕದ್ದು; "ತನಗೆ ದಾಸಭೂತನಾದ ನನ್ನಿಂದ ತನ್ನದಾದ ಸಮಸ್ತ ಪರಿಕರಗಳಿಂದಲೂ ತನ್ನನ್ನೇ ಪ್ರೀತನಾಗಿ ಮಾಡಿಕೊಳ್ಳುವದಕ್ಕೋಸ್ಕರ ಎಂದರೆ ತಾನೇ ಸಂತೋಷಪಡುವದಕ್ಕೋ, ಸ್ಕರ ಲೀಲಾಸಕ್ತನಾದ ಸರ್ವೇಶ್ವರನು ಪ್ರಾರಂಭಿಸುತ್ತಾನೆ ಎಂಬುದು ಇದರರ್ಥವು; ಮತ್ತು "ಭಗವತೋ ಬಲೇನ, ಭಗವತೋ ವೀರ್ಯೇಣ,ಭಗವತಸ್ತೇಜಸಾ,ಭಗವತಃ ಕರ್ಮಣಾ,ಭಗವತಃ ಕರ್ಮ ಕರಿಷ್ಯಾಮಿ, ಭಗವತೋ ವಾಸುದೇವಸ್ಯ" ಎಂದು ಬಲಮಂತ್ರವನ್ನು ಅನುಸಂಧಾನ ಮಾಡಿ ಅನಂತರ, ಭಗವಾನೇವ ಸ್ವನಿಯಾಮ್ಯ ಸ್ವರೂಪಸ್ಥಿತಿ ಪ್ರವೃತ್ತಿ ಸ್ವಶೇಷ ತೈಕರ ಸೇನ ಮಯಾ ಸ್ವಕೀಯೈ ಶ್ಚೋಪ ಕರಣೈಃ ಸ್ವಾರಾಧನೈಕ ಪ್ರಯೋಜನಾಯ ಪರಮ ಪುರುಷಸ್ಸರ್ವ ಶೇಷೀ, ಸ್ವಶೇಷಭೂತಮಿದಂ....ಕರ್ಮ ಸ್ವಪ್ರೀತಯೇಸ್ವಯಮೇವ ಕಾರಯತಿ"ಎಂದು ಹೇಳಿ ಹೀಗೆ ಫಲ ಕರ್ತೃತ್ವಗಳನ್ನು ತ್ಯಜಿಸಿ ಮಾಡುವ ಕರ್ಮವನ್ನು, ಸರ್ವಶೇಷಿಯಲ್ಲಿ ಸಮರ್ಪಿಸತಕ್ಕದ್ದೇ ಕರ್ಮಾರಂಭದಲ್ಲಿ ಹೇಳುವ ಸಾತ್ವಿಕತ್ಯಾಗವು. ಕರ್ಮಸಮಾಪ್ತಿಯಲ್ಲಾದರೋ ಹೀಗೆಯೇ "ಭಗವಾನೇವ ಸ್ವನಿಯಾಮ್ಯ" ಎಂದು ಆರಂಭಿಸಿ ಹೇಳಿ, ಸ್ವಯಮೇವ ಕಾರಯತಿ ಎಂಬುದಕ್ಕೆ ಬದಲಾಗಿ ಸ್ವಯಮೇವ ಕಾರಿತವಾ‍ನ್, ಅನೇನ ಕರ್ಮಣಾ ಭಗವಾನ್ಪ್ರೀಯತಾಂ ವಾಸುದೇವಃ ಎಂದು ಸಾತ್ವಿಕ ತ್ಯಾಗವನ್ನು ಹೇಳತಕ್ಕದ್ದು. ವಿಶಿಷ್ಟಾದ್ವೈತಿಗಳು ಹೀಗೆ ಕರ್ಮಾರಂಭಾಂತ್ಯಗಳಲ್ಲಿ ಸಾತ್ವಿಕತ್ಯಾಗವನ್ನು ಹೇಳುವ ಸಂಪ್ರದಾಯವು ಉಂಟು. ಇದರರ್ಥವು ವ್ಯಕ್ತವು;ಈ ತ್ಯಾಗವನ್ನುಪದೇಶಿಸುವಾಗ ಈಶ್ವರನು ಸರ್ವನಿಯನ್ತಾವಾಗಿ ಸರ್ವಕರ್ಮಗಳನ್ನೂ ಮಾಡಿಸುವನೆಂದೂ ಆ ಕರ್ಮಗಳೆಲ್ಲಾ ಅವನಿಗೆ ಪ್ರಯೋಜನವಾಗಿ ಆದರಿಂದ ಆತನು ಸರ್ವಶೇಷೀ ಎಂದೂ ಹೇಳಲ್ಪಟ್ಟಿತು; ಅದಕ್ಕೆ ಶ್ರುತಿಪ್ರಮಾಣಗಳನ್ನು ಮುಂದೆ ಉದಾಹರಿಸುತ್ತಾರೆ:—ಇದು (೬) ಶ್ವೇತಾಶ್ವತರೋಪನಿಷತ್ತಿನ ವಾಕ್ಯವು (೬-೭) ಈಶ್ವರಾಣಾಂ - ಸಮಸ್ತ ನಿಯಮಿಸುವ ಅಧಿಕಾರಿಗಳಿಗೂ ಕೂಡ, ಪರಮಂ ಮಹೇಶ್ವರಂ - ಸರ್ವೋತ್ತಮನಾಗಿ ಮಹತ್ತಾದ ಸರ್ವನಿಯಾಮಕನಾದ, ದೈವತಾನಾಂ - ಕರ್ಮಗಳಿಂದಾರಾಧ್ಯರಾದವರಿಗೂ, ಪರಮಂಚ ದೈವತಂ - ಸರ್ವಶ್ರೇಷ್ಠನಾಗಿ ಸರ್ವಕರ್ಮಾರಾಧ್ಯನಾದ, ತಂ - ಅಂತಹ ಪ್ರಸಿದ್ಧನಾದ ಭಗವಂತನನ್ನು ಎಂಬರ್ಥವು. ಇದರಿಂದ ಭಗವಂತನು ಸರ್ವರಿಗೂ ನಿಯನ್ತಾವೆಂದು, ಸರ್ವಕರ್ಮಾರಾಧ್ಯನೆಂಬೂ ಹೇಳಲ್ಪಟ್ಟು ಈ ವಾಕ್ಯದಿಂದ ಕ್ರಮವಾಗಿ ಸರ್ವೇಶ್ವರನಿಗೆ ಸರ್ವೇಶ್ವರತ್ವವೂ, ಸರ್ವಶೇಷಿತ್ವವೂ ಹೇಳಲ್ಪಟ್ಟಿತು, (೭) "ವಿಶ್ವಸ್ಯಪತಿಂ" ಸಮಸ್ತವಿಶ್ವಕ್ಕೂ ಶೇಷಿಯಾದವನನ್ನು ಎಂಬರ್ಥವು. ಗೀ. ೩. ೧೦. ನೆಯ ಶ್ಲೋಕದ ಭಾಷ್ಯದಲ್ಲಿ ಪತಿಶಬ್ದವು ಮುಖ್ಯವಾಗಿ ಸರ್ವಶೇಷಿಯನ್ನೇ ಬೋಧಿಸುತ್ತದೆಂದು ವ್ಯಾಖ್ಯಾನಮಾಡಲ್ಪಟ್ಟಿರುತ್ತದೆ. "ಶೇಷಿಗಳಿಗೂ ಶೇಷಿಯಾದವನನ್ನು" ಎಂಬರ್ಥವು. "ತಮೀಶ್ವರಾಣಾಂ" ಎಂಬ ಶ್ವೇತಾಶ್ವತರ ವಾಕ್ಯದ ಮುಂದಿನ

ಭಾ. ದೈವತಂ," (೭) "ಪತಿಂ ವಿಶ್ವಸ್ಯ" (೮) "ಪತಿಂ ಪತೀನಾಂ" ಇತ್ಯಾದಿ ಶ್ರುತಿ ಸಿದ್ಧಂ ಹಿ ಸರ್ವೇಶ್ವರತ್ವಂ ಸರ್ವಶೇಷಿತ್ವಂಚ ; ಈಶ್ವರತ್ವಂ-ನಿಯನ್ತೃತ್ವಮ್, ಶೇಷಿತ್ವಮ್–ಪತಿತ್ವಮ್ ||೩೦||

ವಾಕ್ಯವು :—"ಪತಿಂ ಪತೀನಾಂ ಪರಮಂ ಪರಸ್ತಾತ್ । ವಿದಾಮದೇವಂ ಭುವನೇಶ ಮೀಡ್ಯಮ್" ಎಂಬುದು ಪೂರಾ ವಾಕ್ಯವು ; ಇದರರ್ಥವು, ಶೇಷಿಗಳಿಗೆಲ್ಲಾ ಶೇಷಿಯಾದ ಉತ್ಕೃಷ್ಟರಿಗೆಲ್ಲಾ ಉತ್ಕೃಷ್ಟನಾದ, ಸರ್ವಲೋಕೇಶ್ವರನಾದ, ಸ್ತುತ್ಯರ್ಹನಾದ ಲೀಲಾಪರನಾದ ಭಗವಂತನನ್ನು ಉಪಾಸನೆಯನ್ನು ಮಾಡತಕ್ಕದ್ದು. ಇತ್ಯಾದಿಶ್ರುತಿಸಿದ್ಧಂ ಹಿ ಎಂಬಿವೇ ಮೊದಲಾದ ಶ್ರುತಿಗಳಿಂದ ಸ್ಥಾಪಿತವಾದುದು, ಸರ್ವೇಶ್ವರತ್ವವೂ ಮತ್ತು ಸರ್ವಶೇಷಿತ್ವವೂ ಸಹ. ಈಶ್ವರತ್ವನೆಂದರೆ ನಿಯನ್ತೃತ್ವಂ - ಸಮಸ್ತವನ್ನೂ ನಿಯಮಿಸೋಣವು; ಶೇಷಿತ್ವಮ್ - ಎಲ್ಲವೂ ಸರ್ವೇಶ್ವರನಾದ ತನ್ನ ಪ್ರಯೋಜನಕ್ಕಾಗಿ ಎಂಬುದೇ ಪತಿತ್ವವೂ ಎಂದು ಗ್ರಹಿಸತಕ್ಕದ್ದು.

ಈ ಶ್ಲೋಕೋಪದೇಶದಲ್ಲಿ ಕೆಲವು ಶಙ್ಕೆಗಳು ತೋರಬಹುದು. ಹೇಗೆಂದರೆ :—(೧) ಪರಮಾತ್ಮನಲ್ಲೇ ಕರ್ತೃತ್ವವನ್ನು ಅರ್ಪಿಸಿದರೆ ಯುಧ್ಯಸ್ವ-ಎಂಬದಾಗಿ ಜೀವನಾದ ಅರ್ಜುನನಲ್ಲಿ ಹೇಗೆ ಕರ್ತೃತ್ವವು? ಇದರ ಸಮಾಧಾನಕ್ಕಾಗಿಯೇ ತ್ಯಾಗವನ್ನು ಹೇಳುವಾಗ ಸ್ವಶೇಷಭೂತೇನ ಮಯಾ ಎಂಬ ಪ್ರಯೋಗವು; ಸರ್ವಶೇಷಿಯು ತನ್ನ ಕೆಲಸದಲ್ಲಿ ತನ್ನ ದಾಸನನ್ನು ನಿಯಮಿಸಿ, ಕೆಲಸವನು ಮಾಡಿಸಿಕೊಳ್ಳಬಹುದಷ್ಟೇ ; ರಾಜನು ತನ್ನ ದಾಸನಾದ ಇಂಜನಿಯರ್‌ಮೂಲಕ ತನ್ನ ಪ್ರಜೆಗಳಿಗೆ ಬೇಕಾದ ಒಂದು ಸೇತುವೆಯನ್ನು ಹೇಗೆ ಕಟ್ಟಿಸಬಹುದೋ ಹಾಗೆ ಎಂಬ ಭಾವವು. ಒಂದು ಸೇತುವೆಯನ್ನು ಕಟ್ಟಬೇಕೆಂಬ ಸಙ್ಕಲ್ಪವು ರಾಜನಿಗೆ ಸೇರಿದುದು ; ಅದರ ನಿರ್ಮಾಣವಾದುದನ್ನು ನೋಡಿ ರಾಜನು ಸಂತೋಷಿಸುವನು. ಇಂಜನಿಯರು ರಾಜನಿಗೆ ಶೇಷಭೂತನಾಗಿ ಆ ಕೆಲಸವನ್ನೆಲ್ಲಾ ರಾಜನ ದ್ರವ್ಯದಿಂದಲೂ ಆತನು ಒದಗಿಸಿದ ಸಿಬ್ಬಂದಿ ಪರಿಗಣದಿಂದಲೂ ನಿರ್ಮಿಸವನು. ಜೀವನ ಕರ್ತೃತ್ವವು ಇಂಜನಿಯರ ಕರ್ತೃತ್ವದಹಾಗೆ ಪರಾಯತ್ತವಾದುದು, ರಾಜನ ಕರ್ತೃತ್ವವು, ಈಶ್ವರ ಕರ್ತೃತ್ವಕ್ಕೆ ದೃಷ್ಟಾಂತವು. ಇಂಜನಿಯರು ಅದನ್ನು ಕಟ್ಟಿಸಿ, ರಾಜನ ಅಧ್ಯಕ್ಷತೆಯಲ್ಲಿ ಆತನಿಗೆ ಸಮರ್ಪಿಸುವನು ; ಅದರ ಹಾಗೆಯೇ ನಾವೂ ತ್ಯಾಗ ಹೇಳಿ ಪರಮಾತ್ಮನಲ್ಲಿ ಸಮರ್ಪಿಸತಕ್ಕದ್ದು. (೨) ಕರ್ಮದ ಫಲದಲ್ಲಿ ಆಶೆಯಿಲ್ಲದಿದ್ದರೆ, ಪರನು ಪುರುಷಾರಾಧನರೂಪವಾದುದಾದರೂ, ಅದರಲ್ಲಿ ಪ್ರವೃತ್ತಿ ಹೇಗೆ ಉಂಟಾದೀತು? ಎಂಬುದು ಎರಡನೆಯ ಪೂರ್ವಪಕ್ಷವು. ಜೀವನು ಪರಮಾತ್ಮನಿಗೆ ಶೇಷಭೂತನಾದುದರಿಂದ ತನ್ನ ಶೇಷಿಗೆ ಹೇಗೆ ಅಭಿಮತವಾಗಬೇಕೋ ಹಾಗೆ ಈತನಿಗೆ ಪ್ರವೃತ್ತಿಯುಂಟಾಗಲು ಏನೊಂದೂ ಅಡ್ಡಿ ಇರುವದಿಲ್ಲವು. (೩) ಯಾವಾಗ ಕರ್ಮದಲ್ಲಿ ತನಗೆ ಪ್ರಯೋಜನವಿಲ್ಲವೋ, ಆತನು ಶ್ರದ್ಧೆಯಿಂದ ಹೇಗೆ ಕೆಲಸ ಮಾಡಿಯಾನು? ಎಂಬುದು ಮೂರನೆಯ ಪೂರ್ವಪಕ್ಷವು. ಶೇಷನಾದವನು ತನ್ನ ಶೇಷಿಗೆ ಅತಿಶಯವನ್ನುಂಟುಮಾಡುವದೇ ಪರಮಪ್ರಯೋಜನವಾದುದರಿಂದ ಕರ್ಮದಲ್ಲಿ ಮಮತೆಯಿಲ್ಲದಿದ್ದರೂ ಕೆಲಸ ಮಾಡಲು ಆಸಕ್ತಿಯುಂಟೆಂದು ಹೇಳಬಹುದು. (೪) ಸರ್ವೇಶ್ವರನಿಗೆ ತಾನೇ ಕೆಲಸಮಾಡಿಕೊಳ್ಳಲು ಶಕ್ತಿಯಿರುವಾಗ ಈ ಜೀವಾಧಿಕಾರತ್ವವನ್ನು ಏಕೆ ನಿರೀಕ್ಷಿಸುತ್ತಾನೆ? ಎಂಬುದು ನಾಲ್ಕನೆಯ ಪೂರ್ವಪಕ್ಷವು. ಲೀಲಾವಿಭೂತಿಯಲ್ಲಿ ಮಮತೆಯುಳ್ಳ ಸರ್ವೇಶ್ವರನು ಜೀವಾತ್ಮರುಗಳಿಗೆ ಶಾಸ್ತ್ರವಶ್ಯತೆಯನ್ನುಂಟುಮಾಡಿ, ಅವರುಗಳ ಪ್ರಾರಬ್ಧ ಕರ್ಮಗಳ ಉಪಭೋಗಗಳ ಮೂಲಕ ಕೆಲಸವನ್ನು ನಡೆಸಿಕೊಂಡು ಆನಂದಿಸುವನು. ಆದುದರಿಂದಲೇ ತ್ಯಾಗದಲ್ಲಿ ಕಾರ

(೭). ತೈ. ನಾರಾ. ೧೧. ೩. (೮). ಶ್ವೇತ. ೬. ೭.

ಭಾ. ಅವ. ಅಯಮೇವ ಸಾಕ್ಷಾದುಪನಿಷತ್ಸಾರಭೂತೋಽರ್ಥ ಇತ್ಯಾಹ :—

ಮೂ. ಯೇ ಮೇ ಮತ ಮಿದಂ ನಿತ್ಯ ಮನುತಿಷ್ಠನ್ತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ. ತೇಽಪಿ ಕರ್ಮಭಿಃ॥ ೩೧.

ಯಿತಾ ಎಂಬ ಪ್ರಯೋಗವು. (೫) ಹೀಗೆ ತನ್ನ ಶರೀರಕ್ಕೂ ಸರ್ವೇಶ್ವರನಿಗೂ ಅಧೀನವಾಗಿ ಕೆಲಸವು ನಡೆಯುವಾಗ ಜೀವಾತ್ಮನಿಗೆ ಅಂತರ್ಜ್ವರವು ಏತಕ್ಕೆ? ಹಾಗೆ ಅಂತರ್ಜ್ವರವಿದ್ದರೂ ಅಂತಹ ಪರಾಯತ್ತ ಕರ್ಮಗಳನ್ನು ಮಾಡುವವರಲ್ಲಿ ವಿಗತಜ್ವರನು ಹೇಗೆ ಆದಾನು ? ಎಂಬುದು ಇನ್ನೊಂದಾಕ್ಷೇಪವು. ಅಂತರ್ಜ್ವರ ಹೇಗೆಂಬುವದನ್ನು ಹೇಳುವದಕ್ಕಾಗಿ ಪ್ರಾಚೀನೇನಾ ನಾದಿಕಾಲ ಪ್ರವೃತ್ತಾನಂತ ಪಾಪಸಂಚಯೇನ ಕಥಮಹಂ ಭವಿಷ್ಯಾಮಿ" ಎಂಬ ಪ್ರಯೋಗವು. "ಪರಮ ಪುರುಷಃ ಬಂಧಾನ್ಮೋಚಯಿಷ್ಯತಿ" ಎಂದು ಹೇಳಿರುವವರಿಂದ ಈತನು ವಿಗತಜ್ವರನಾಗು ತ್ತಾನೆಂಬ ಭಾವವು.

ಭಾಷ್ಯಾವತಾರಿಕೆಯ ಅರ್ಥವು ;—ಅಯಮೇವ - ಈ ಹಿಂದೆ ೩೦ನೆಯ ಶ್ಲೋಕದಲ್ಲಿ ಹೇಳಿದುದೇ ಸಾಕ್ಷಾತ್ ಉಪನಿಷತ್ತುಗಳಸಾರಭೂತವಾದ ಎಂದರೆ ಪ್ರಧಾನಭೂತವಾದ ಅರ್ಥಃ- ಅಭಿಪ್ರಾಯವು, ಇತ್ಯಾಹ - ಎಂದು ಈ ಮುಂದಿನ ಶ್ಲೋಕದಿಂದ ಹೇಳುತ್ತಾರೆ :—ಈ ಅಭಿಪ್ರಾ ಯಕ್ಕೆ ಪ್ರಾಧಾನ್ಯ ಹೇಗೆ ಎಂದರೆ:—(೧) ಮೋಕ್ಷಸಾಧನಕ್ಕೆ ಕಾರಣಭೂತವಾದುದರಿಂದಾಗಲಿ ಅಥವಾ (೨) ತಾನು ಭಗವಂತನಿಗೆ ಶರೀರವಾಗಿ, ಆತನು ತನಗೆ ಆತ್ಮಾವಾಗಿರುವದರಿಂದ ತಾನು ಆತನಿಗೆ ದಾಸನು, ಆತನು ನಿಯಾಮಕನು ; ಆದುದರಿಂದ ತಾನು ಮಾಡುವದೆಲ್ಲಾ ಭಗವತ್ಪ್ರೀ ಣನಕ್ಕಾಗಿಯೇ ವಿನಾ ತನಗಾಗಿ ಅಲ್ಲವು ಎಂಬ ಉಪನಿಷತ್ಸಿದ್ಧಾನ್ತವು ಸರ್ವಸಂಶಯ ಭ್ರಮೆಗ ಳನ್ನೆಲ್ಲಾ ನಿವಾರಣ ಮಾಡುವದರಿಂದಲೂ ಸಾರಭೂತವಾದುದು. (೩) ಅಥವಾ ನಾವೆಲ್ಲಾ ಪರ ಮಾತ್ಮನಿಗೆ ಶರೀರವು, ಆತನು ನಮಗೆಲ್ಲಾ ಆತ್ಮಾ ಎಂಬ ಶ್ರುತ್ಯಭಿಪ್ರಾಯವು ನಮ್ಮ ಸಿದ್ಧಾನ್ತಕ್ಕೆ ತಳಹದಿಯಾಗಿರುವದರಿಂದ, ನಮಗೆ ಎಲ್ಲಾ ಶ್ರುತಿವಾಕ್ಯಗಳೂ ಸಮಂಜಸವು ; ಈ ಘಟಕ ಶ್ರುತಿ ಗಳ ಮೂಲಕ ನಮಗೆ ಅಭೇದ ಭೇದಶ್ರುತಿಗಳು ಪರಸ್ಪರ ವಿರುದ್ಧವಲ್ಲವು ; ಈ ಶ್ರುತ್ಯರ್ಥದ ಮೂಲಕ ವಿಶಿಷ್ಟಾದ್ವೈತಿಗಳಿಗೆ ಸರ್ವ ಶ್ರುತಿವಾಕ್ಯಗಳು ಸಮಂಜಸವಾದುವೆಂದೂ ಹೇಳಲ್ಪ ಟ್ಟಿತು; ಆದುದರಿಂದ ಈ ಶ್ರುತ್ಯಭಿಪ್ರಾಯವು ಮುಖ್ಯವಾಗಿ ಪ್ರಧಾನ ಪ್ರತಿತನ್ತ್ರವೆಂದೆನಿಸುತ್ತದೆ ಆದುದರಿಂದಲಾಗಲಿ ಉಪನಿಷತ್ತಿನ ಸಾರಭೂತಾರ್ಥವು. ಹೀಗೆ ಇತರ ಸಿದ್ಧಾನ್ತಿಗಳು ಈ ಉಪ ದೇಶವು ಸಾರಭೂತವಾದುದೆಂದು ಪರಿಗಣಿಸದಿರುವದರಿಂದ (೧) "ಸದೇವ ಸೌಮ್ಯೇದ ಮಗ್ರ ಆಸೀತ್" (೨) "ದ್ವಾಸುಪರ್ಣಾ" (೩) "ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ"(೪) "ಆನೀದವಾತಗ್ಂ ಸ್ವಧಯಾ ತದೇಕಂ" ಇತ್ಯಾದಿ ಶ್ರುತಿಗಳಲ್ಲಿ ಏಕತ್ವ, ದ್ವಿತ್ವ, ತ್ರಿತ್ವ, ಚತುಷ್ಟ್ವ ಭಾವಗಳು ಬೋಧಿಸಲ್ಪಡುವದರಿಂದ, ಪರಸ್ಪರ ವಿರುದ್ಧಗಳೆಂದು ಭಾವಿಸಿ ಬಾಧ್ಯ ಬಾಧಕ ಭಾವಗಳನ್ನು ಕಲ್ಪಿಸಬೇಕಾದ ಆವಶ್ಯಕತೆಯುಂಟಾಗಿರುತ್ತದೆ. ನಮಗಾದರೋ ಇವೆ ಲ್ಲವೂ ಸರ್ವಸಮಂಜಸವು. ಗ್ರಂಥ ವಿಸ್ತರ ಭಯದಿಂದ ಸಾಮಂಜಸ್ಯ ಹೇಗೆ ಎಂಬುದನ್ನು ಯತ್ನಿ ಸಲಿಲ್ಲವು. ಈ ಉಪನಿಷತ್ಸಾರಭೂತಾರ್ಥವನ್ನು ಪರಿಗ್ರಹಿಸದ ಇತರ ಸಿದ್ಧಾನ್ತಿಗಳು ಶಾಸ್ತ್ರ ಗಳಲ್ಲಿ ಹೇಳಿರುವ ಸಾಮಾನಾಧಿಕರಣ್ಯಕ್ಕೂ ಸರಿಯಾದ ಅರ್ಥವನ್ನು ಹೇಳಲಾರರು. ನಮಗಾ ದರೋ ಸುವ್ಯಕ್ತವು ಎಂದು ಮುಂದೆ ಉಪಪಾದಿಸಲ್ಪಡುತ್ತದೆ.

**ಮೂಲಕ್ಕೆ ಅರ್ಥವು:—ಯೇ ಮಾನವಾಃ** - ಯಾವ ಮನುಜರು, [ಇದರಿಂದ ತಿರ್ಯಗಾದಿಗಳು ವ್ಯಾವರ್ತಿಸಲ್ಪಟ್ಟು, ಮನುಷ್ಯ ಜನ್ಮ ಪ್ರಾಪ್ತವಾದಾಗಲೇ ಅನಾದಿ ಪಾಪಪುಣ್ಯ ಕರ್ಮಗಳಿಂದ ಮೋಚನೋಪಾಯವು ಆವಶ್ಯಕವಾಗಿ ಅನುಷ್ಠಿಸತಕ್ಕದ್ದೆಂಬುದು ಸೂಚಿತವು] **ಇದಂ** - ಈ ಹಿಂದೆ ಹೇಳಿದುದು, **ಮೇ ಮತಂ** – ಉಪನಿಷತ್ತೇ ಮೊದಲಾದವುಗಳಲ್ಲಿ ನಾನೇ ಹೇಳಿರುವವದರಿಂದ ಉಪನಿಷತ್ತುಗಳಲ್ಲಿ ಪ್ರತಿಪಾದ್ಯನಾದ ನನ್ನ ಅಭಿಪ್ರಾಯವನ್ನು, **ನಿತ್ಯಮನುತಿಷ್ಠಂತಿ** - ನಿತ್ಯವೂ ಅನುಸರಿಸಿ ವಿಹಿತಕರ್ಮಗಳನ್ನು ಅನುಷ್ಠಿಸುವರೋ, ಮತ್ತು **ಯೇ** - ಯಾರು, **ಶ್ರದ್ಧಾವಂತಃ** - ಅಂತಹ ನನ್ನಭಿಪ್ರಾಯದಲ್ಲಿ ಶ್ರದ್ಧೆಯನ್ನು ಹೊಂದಿರುತ್ತಾರೋ, ಮತ್ತು **ಯೇ** - ಯಾರು, **ಅನಸೂಯಂತಃ** - ನಿರ್ದುಷ್ಟವಾದ ಆ ಶಾಸ್ತ್ರಾರ್ಥದಲ್ಲಿ ದೋಷವನ್ನೆಣಿಸದಿರುವರೋ, **ತೇಽಪಿ** - ಇವರೆಲ್ಲರೂ ಕೂಡ, **ಕರ್ಮಭಿಃ** - ತಾವು ಮಾಡಿದ ಪುಣ್ಯ ಪಾಪರೂಪ ಕರ್ಮಗಳಿಂದ, **ಮುಚ್ಯಂತೇ** - ಬಿಡಲ್ಪಡುವರು, ಎಂದರೆ ಮೋಕ್ಷೋಪಾಯಕ್ಕೆ ಅರ್ಹರಾಗುವರೆಂಬ ಭಾವವು. ನಾನು ಈಗ ನಿನ್ನಲ್ಲಿರುವ ಪ್ರೀತ್ಯತಿಶಯದಿಂದ ಉಪದೇಶಿಸಿರುವ ಅಭಿಪ್ರಾಯವು ಸರ್ವಶಾಸ್ತ್ರದಸಾರಭೂತಾರ್ಥವು; ಆದುದರಿಂದ ಸರ್ವಶಾಸ್ತ್ರಕ್ಕೂ ಕಾರಣಭೂತನಾಗಿರುವ ನಾನು ಉಪದೇಶಿಸುವದೇನೆಂದರೆ:—ಯಾರು ತಮಗೆ ವಿಹಿತಗಳಾದ ಕರ್ಮಗಳನ್ನು ಕರ್ತೃತ್ವ ಮಮತಾ, ಫಲತ್ಯಾಗಗಳ ಮೂಲಕ ನನ್ನಲ್ಲಿ ಅವುಗಳನ್ನು ಸಮರ್ಪಿಸಿ ಅನುಷ್ಠಿಸುವರೋ, ಅಥವಾ ಈ ಉಪದೇಶದಲ್ಲಿ ಶ್ರದ್ಧೆಯನ್ನು ತೋರಿಸುವರೋ, ಅಥವಾ ಈ ಅಭಿಪ್ರಾಯವನ್ನು ದ್ವೇಷಿಸುವದಿಲ್ಲವೋ, ಅವರೆಲ್ಲರೂ ನಾನು ಹೇಳಿದ ರೀತಿಯಲ್ಲಿ ನಡೆಸುವವರಾಗಿ ಪಾಪಪುಣ್ಯರೂಪ ಉಪಾಯಕ್ಕೆ ಪ್ರತಿಬಂಧಕಗಳಾಗಿರುವ ಪ್ರಾಚೀನ ಕರ್ಮಗಳಿಂದಲೂ ಬಿಡಲ್ಪಡುವರು ಎಂಬ ತಾತ್ಪರ್ಯವು; ಯಾವಾಗ ದ್ವೇಷಿಸುವದಿಲ್ಲವೋ, ಆಗ ಒಂದಾನೊಂದು ಕಾಲದಲ್ಲಿ ಅವುಗಳಲ್ಲಿ ಪ್ರೀತಿಯು ಜನಿಸಿ, ಅನುಷ್ಠಾನವೂ ಏರ್ಪಡುತ್ತದೆಂಬ ಭಾವವು. [ಮೇ ಇದಂ ಮತಂ ಎಂದು ಹೇಳಿದನಂತರ ತದ್ವ್ಯತಿರಿಕ್ತಾಚರಣವು ದೋಷಾವಹವೆಂಬುದು ಸೂಚಿತವು. ಮತಮಿದಂ ಎಂದು ಹೇಳಿರುವದು, ಈ ಮೂರನೆಯ ಅಧ್ಯಾಯದಲ್ಲಿ ಇದುವರೆಗೂ ಹೇಳಿದುದೆಲ್ಲಾ ಸಙ್ಗ್ರಹೀತವು; ಕರ್ಮಾನುಷ್ಠಾನವನ್ನು ಈ ಮೂರು ತ್ಯಾಗಗಳ ಮೂಲಕ ಪರಮ ಪುರುಷಾರಾಧನರೂಪದಲ್ಲಿಮಾಡುವದೂ ಅಲ್ಲದೆ, ಜ್ಞಾನಯೋಗಾರ್ಹನಾಗಿದ್ದರೂ ಅಂತವನೂ ಕೂಡ ಜ್ಞಾನಯೋಗ ನಿರಪೇಕ್ಷವಾಗಿ ಮಾಡತಕ್ಕದ್ದೆಂಬ ಭಾವವು. (ಹೀಗೆ ವಿಹಿತ ಕರ್ಮಾನುಷ್ಠಾನಮಾಡುವವರೂ, ಶ್ರದ್ಧಾವಂತರಾಗಿರುವವರೂ, ಈ ಅಭಿಪ್ರಾಯವನ್ನು ನಿರಾಕರಿಸಿದವರೂ ಮುಚ್ಯನ್ತೇ ಎಂದು, ಹಾಗೆ ಪಾಪ ವಿಮೋಚನಕ್ಕೆ ಈ ಮೂರೂ ಆವಶ್ಯಕವೆಂದು ಕೆಲವರು ಸಮುಚ್ಚಯಾರ್ಥವನ್ನು ಹೇಳುತ್ತಾರೆ. ಆದರೆ ಅನುಷ್ಠಿಸುವವರು ಶ್ರದ್ಧಾವಂತರಾಗಿಯೂ ಅನಸೂಯರಾಗಿಯೇ ಇರುತ್ತಾರೆ; ಮತ್ತು ಶ್ರದ್ಧಾವಂತರೂ ಅನಸೂಯರಾಗಿಯೇ ಇರುತ್ತಾರೆ. ಆದರೆ ಅನಸೂಯರಾಗಿರುವವರು, ಆಕಾಲದಲ್ಲೇ ಶ್ರದ್ಧಾವಂತರಾಗಿಯೂ ಮತ್ತು ಅನುಷ್ಠಾನ ಪರರೂ ಆಗಿರುವದಿಲ್ಲವಾದುದರಿಂದ ಸಮುಚ್ಚಯಾರ್ಥವು ಸರಿಹೋಗುವದಿಲ್ಲವು; ಆದುದರಿಂದ ಶ್ರೀ ಯತಿವರ್ಯರು ಮೂರು ಬೇರೇ ಬೇರೆ ಅಧಿಕಾರಿಗಳಾಗಿ ವ್ಯಾಖ್ಯಾನಮಾಡಿರುತ್ತಾರೆ. ಹಾಗೆ ಅರ್ಥಮಾಡಲು "ಅಪಿ" ಶಬ್ದದ ಬಲದಿಂದ ಮಾಡಿರುವದಾಗಿ ತಿಳಿಸಿರುತ್ತಾರೆ.]

**ಭಾಷ್ಯಾರ್ಥವು :—**ಈ ಶ್ಲೋಕದಲ್ಲಿ **ಮೇ ಮತಮಿದಂ** ಎಂದು ಉಪನಿಷದ್ವಾಚ್ಯನಾದ ಪರಮ ಪುರುಷನಾದ ತನ್ನ ಅಭಿಪ್ರಾಯವೆಂದು ಹೇಳುವದರ ಮೂಲಕ, ಇದೇ ಸಿದ್ಧಾನ್ತವೆಂದೂ ಹೀಗೆಯೇ ಅನಿಷ್ಟ ನಿವೃತ್ತಿಯ ಮೂಲಕ ಇಷ್ಟಪ್ರಾಪ್ತಿಯೂ ಸಿದ್ಧಿಸುವದೆಂದೂ ಹೇಳಿ, ತಮ್ಮ

ಭಾ. ಯೇ ಮಾನವಾಶ್ಶಾಸ್ತ್ರಾಧಿಕಾರಿಣೋಽಯಮೇವ ಶಾಸ್ತ್ರಾರ್ಥ ಇತ್ಯೇತನ್ಮೇ ಮತಂ ನಿಶ್ಚಿತ್ಯ ತಥಾನುತಿಷ್ಠಂತಿ, ಯೇಚಾನನುತಿಷ್ಠಂತೋಽಪ್ಯಸ್ಮಿನ್ ಶಾಸ್ತ್ರಾರ್ಥೇ ಶ್ರದ್ದಧಾನಾ ಭವನ್ತಿ, ಯೇಚಾಶ್ರದ್ದಧಾನಾ ಅಪ್ಯೇವಂ ಶಾಸ್ತ್ರಾರ್ಥೋ ನ ಸಂಭವತೀತಿ ನಾಭ್ಯಸೂಯನ್ತಿ-ಅಸ್ಮಿನ್ ಮಹಾಗುಣೇ ಶಾಸ್ತ್ರಾರ್ಥೇ ದೋಷಮನಾವಿಷ್ಕುರ್ವಂತೋ ಭವನ್ತೀತ್ಯರ್ಥಃ; ತೇ ಸರ್ವೇ, ಬನ್ಧಹೇತುಭಿರನಾದಿಕಾಲಾರಬ್ಧೈಸ್ಸರ್ವೈಃ ಕರ್ಮಭಿರ್ಮುಚ್ಯಂತೇ. "ತೇಽಪಿ ಕರ್ಮಭಿಃ" ಇತ್ಯಪಿ ಶಬ್ದಾದೇಷಾಂ ಪೃಥಕ್ಕರಣಂ, ಇದಾನೀಮನನುತಿಷ್ಠಂತೋಽಪ್ಯಸ್ಮಿನ್ ಶಾಸ್ತ್ರಾರ್ಥೇ ಶ್ರದ್ದಧಾನಾ ಅನಭ್ಯಸೂಯವಶ್ಚ ಶ್ರದ್ಧ

---

ಈ ಸಿದ್ಧಾನ್ತಕ್ಕೆ ಪ್ರಾಶಸ್ತ್ಯವನ್ನುಂಟುಮಾಡುತ್ತಾರೆ. **ಯೇ ಮಾನವಾಃ** - ಯಾವ ಮನುಷ್ಯರು ಎಂದರೆ, **ಶಾಸ್ತ್ರಾಧಿಕಾರಿಣಃ** - ಶಾಸ್ತ್ರಾಧಿಕಾರಿಗಳು, **ಅಯಮೇವ ಶಾಸ್ತ್ರಾರ್ಥಃ** - ಇದೇ ಶಾಸ್ತ್ರಾರ್ಥವು, **ಇತಿ** - ಎಂದು, **ಏತತ್** - ಇದೇ, **ಮೇ ಮತಂ** - ಸರ್ವೇಶ್ವರನಾಗಿ ಶಾಸ್ತ್ರಪ್ರದನಾದ ನನ್ನ ಅಭಿಪ್ರಾಯವನ್ನು ಅಥವಾ ಸಿದ್ಧಾನ್ತವನ್ನು, **ನಿಶ್ಚಿತ್ಯ** - ನಿರ್ಣಯಮಾಡಿಕೊಂಡವರಾಗಿ, **ತಥಾ** - ಹಾಗೆಯೇ ನಾನು ಉಪದೇಶಿಸಿದ ರೀತಿಯಲ್ಲಿ, **ಅನುತಿಷ್ಠಂತಿ** - ಅನುಸರಿಸಿ ಅನುಷ್ಠಿಸುವರೋ, **ಯೇ ಚ** - ಮತ್ತು ಯಾರಾದರೆ, **ಅನನುತಿಷ್ಠಂತೋಽಪಿ** - ಅನುಸರಿಸಿ ಅನುಷ್ಠಿಸದಿದ್ದರೂ, **ಅಸ್ಮಿನ್ ಶಾಸ್ತ್ರಾರ್ಥೇ**-ಈ ಶಾಸ್ತ್ರಾರ್ಥದಲ್ಲಿ, **ಶ್ರದ್ದಧಾನಾ ಭವಂತಿ**-ಶ್ರದ್ಧೆಯುಳ್ಳವರಾಗುತ್ತಾರೋ, **ಯೇ ಚ** – ಮತ್ತು ಯಾರಾದರೆ, **ಅಶ್ರದ್ದಧಾನಾ ಅಪಿ** - ಶ್ರದ್ಧೆಯಿಲ್ಲದವರಾಗಿದ್ದರೂ ಕೂಡ, **ಏವಂ ಶಾಸ್ತ್ರಾರ್ಥೋ ನ ಸಂಭವತೀತಿ**-ಹೀಗೆಲ್ಲಾದರೂ ಶಾಸ್ತ್ರಾರ್ಥ ಉಂಟೋ ಎಂದು, **ನಾಭ್ಯಸೂಯನ್ತಿ** - ಅಸೂಯೆಪಡುವದಿಲ್ಲವೋ, ಎಂದರೆ, **ಅಸ್ಮಿನ್ ಮಹಾಗುಣೇ ಶಾಸ್ತ್ರಾರ್ಥೇ** - ಈ ಮಹಾ ಮಹಿಮೆಯುಳ್ಳ ಶಾಸ್ತ್ರಾರ್ಥದಲ್ಲಿ, **ದೋಷಮನಾವಿಷ್ಕುರ್ವಂತೋ ಭವನ್ತೀತ್ಯರ್ಥಃ** - ಯಾರು ದೋಷಾರೋಪಣೆಯನ್ನು ಮಾಡುವದಿಲ್ಲವೋ ಎಂಬರ್ಥವು, **ತೇ ಸರ್ವೇ** - ಈ ಎಲ್ಲಾ ಮೂರು ವಿಧ ಶಾಸ್ತ್ರಾಧಿಕಾರಿಗಳೂ, **ಬನ್ಧಹೇತುಭಿಃ** - ಸಂಸಾರ ಬಂಧಕ್ಕೆ ಕಾರಣಭೂತಗಳಾದ, **ಅನಾದಿ ಕಾಲಾರಬ್ಧೈಃ** - ಅನಾದಿಕಾಲದಿಂದಲೂ ಆರಂಭಿಸಿ ಬಂದಿರುವ **ಸರ್ವೈಃ ಕರ್ಮಭಿಃ** - ಸಮಸ್ತ ಪುಣ್ಯಪಾಪರೂಪ ಕರ್ಮಗಳಿಂದಲೂ, **ಮುಚ್ಯಂತೇ** - ಬಿಡಲ್ಪಡುವರು. ಮೂಲದ **ಅನಸೂಯನ್ತಃ** ಎಂಬುದಕ್ಕೆ **ಅಸ್ಮಿನ್ ಮಹಾಗುಣೇ ಶಾಸ್ತ್ರಾರ್ಥೇ ದೋಷಮನಾವಿಷ್ಕುರ್ವನ್ತಃ** ಎಂದು ವ್ಯಾಖ್ಯಾನವನ್ನು ಬರೆದಿರುವದು ಅಸೂಯಾ ಶಬ್ದವನ್ನು ಮನಸ್ಸಿನಲ್ಲಿಟ್ಟು ಹಾಗೆ ವ್ಯಾಖ್ಯಾನವು. ಗುಣವಿರುವದರಲ್ಲಿ ದೋಷಾರೋಪಣೆಯೇ ಅಸೂಯೆ ಎಂದು ಹೇಳಿಸಿಕೊಳ್ಳುತ್ತದೆ. ಮೂಲದಲ್ಲಿ **ಯೇ** ಎಂಬುದು ಒಂದು ಸಲವೇ ಹೇಳಲ್ಪಟ್ಟು **ಅನುತಿಷ್ಠಂತಿ** ಎಂದು ಕ್ರಿಯಾಪದವೊಂದೇ ಇರುವಾಗ, ಏಕವಾಕ್ಯವಾಗಿ ಅನ್ವಯಿಸುವದು ಯುಕ್ತವಾಗಿರುವಾಗ ಬಹುವಾಕ್ಯವಾಗಿ ಅನ್ವಯಿಸುವದು ಯುಕ್ತವಲ್ಲದಿರುವಾಗ ಮೂರು ವಾಕ್ಯಗಳಾಗಿ ವಿಭಾಗಿಸಿ, ಪ್ರತಿಯೊಂದರೊಂದಿಗೂ **ಯೇ** - ಎಂಬುದನ್ನು ಅನ್ವಯಿಸಿ ಹೇಳುವದು ಸರಿಯೇ ಎಂದಾಕ್ಷೇಪಿಸಬಹುದೆಂದು ಊಹಿಸಿ, ಹಾಗೆ ಭಿನ್ನವಾಕ್ಯಗಳಾಗಿ ಭಾಗಿಸಲು ಕಾರಣವನ್ನು ಹೇಳುತ್ತಾರೆ:—**ತೇಽಪಿ ಕರ್ಮಭಿಃ ಇತಿ** - ಅವರೂ ಕೂಡ ಕರ್ಮಗಳಿಂದ ಬಿಡಲ್ಪಡುವರೆಂದು, **ಅಪಿ ಶಬ್ದಾತ್** - ಅಪಿಶಬ್ದವಿರುವದರಿಂದ, **ಏಷಾಂ** - ಈ ಮೂರು ಅಧಿಕಾರಿಗಳ ಅಥವಾ ಈ ಮೂರು ವಾಕ್ಯಗಳ, **ಪೃಥಕ್ಕರಣಂ** - ನಾವು ಬೇರೆಬೇರೆಯಾಗಿ ಮಾಡಿರುವದು, **ಇದಾನೀಮನನುತಿಷ್ಠಂತೋಽಪಿ** - ಈಗಲೇ ಅನುಸರಿಸಿ ಅನುಷ್ಠಿಸದಿದ್ದರೂ, **ಅಸ್ಮಿನ್ ಶಾಸ್ತ್ರಾರ್ಥೇ**-ಈ ಶಾಸ್ತ್ರಾರ್ಥದಲ್ಲಿ, **ಶ್ರದ್ದಧಾನಾಃ** - ಶ್ರದ್ಧೆಯುಳ್ಳವರೂ, **ಅನಭ್ಯಸೂಯವಶ್ಚ** - ಅಸೂಯೆ

ಭಾ. ಯಾ ಚ ಅನಸೂಯಯಾ ಚ ಕ್ಷೀಣಪಾಪಾ ಅಚಿರೇಣೇಮಮೇವ ಶಾಸ್ತ್ರಾರ್ಥ ಮನು ಷ್ಠಾಯ ಮುಚ್ಯನ್ತ ಇತ್ಯರ್ಥಃ ||೩೧||

ಇಲ್ಲದವನೂ ಸಹ, ಶ್ರದ್ಧಯಾ ಚ - ಕ್ರಮವಾಗಿ, ತಮ್ಮಲ್ಲಿರುವ ಶ್ರದ್ಧೆಯಿಂದಲೂ, ಅನಸೂಯ ಯಾಚ - ಅಸೂಯಾ ರಾಹಿತ್ಯದಿಂದಲೂ, ಕ್ಷೀಣಪಾಪಾಃ - ಪಾಪಗಳು ಕ್ಷಯಿಸಿ ಹೋಗಿರುವವ ರಾಗಿ, ಅಚಿರೇಣ - ಶೀಘ್ರದಲ್ಲೇ, ಇಮ ಮೇವ ಶಾಸ್ತ್ರಾರ್ಥ ಮನುಷ್ಠಾಯ - ಇದೇ ಶಾಸ್ತ್ರಾರ್ಥವೆಂದು ತಿಳಿದು ಅನುಷ್ಠಿಸುವರಾಗಿ, ಮುಚ್ಯನ್ತೇ ಇತ್ಯರ್ಥಃ-ಪ್ರಾಚೀನಕರ್ಮಗಳಿಂದಲೂ ಬಿಡಲ್ಪಡುವರು ಎಂಬಭಿಪ್ರಾಯವು. ಮೂರು ವಾಕ್ಯಗಳಾಗಿ ಭಾಗಿಸಲು ಕಾರಣವನ್ನು ಹೇಳುತ್ತಾರೆ. ಒಂದೇ ವಾಕ್ಯವಾದರೆ ಅಪಿ ಶಬ್ದಕ್ಕೆ ಕಾರಣವಿಲ್ಲವು ; ಹಿಂದಿನ ಶ್ಲೋಕದಲ್ಲಿ ಏನಾದರೂ ಕೆಲವು ಅಧಿಕಾರಿಗಳು ಮುಚ್ಯನ್ತೇ ಎಂದು ಹೇಳಿದ್ದರೆ ಒಂದು ವಾಕ್ಯವೆಂದೇ ಭಾವಿಸಿ, ಇವರೂ ಕೂಡ ಮುಚ್ಯನ್ತೇ ಎಂದು ಹೇಳಬಹುದಿತ್ತು. ಹಾಗೆ ಹೇಳದೆ ತೇಪಿ ಎಂದು ಈ ಶ್ಲೋಕದಲ್ಲೇ ಅಪಿ ಶಬ್ದವಿರುವದರಿಂದ, ಶ್ರದ್ಧಾವಂತೋಽನಸೂಯಂತೋ ತೇಪಿ ಎಂದು ಹೇಳಿರುವದರಿಂದ ಇವರುಗಳೆಲ್ಲಾ ಎಂಬ ಭಾವವು ; ಇದೂ ಅಲ್ಲದೆ ಶಾಸ್ತ್ರಾರ್ಥದಲ್ಲಿ ಅಸೂಯೆ ಇಲ್ಲದಿರುವವರು ಪ್ರಥಮಾಧಿಕಾರಿಗಳು ; ಯಾವಾಗ ಅದರಲ್ಲಿ ದ್ವೇಷವಿಲ್ಲವೋ, ಒಡನೆ ಅದರಲ್ಲಿ ಶ್ರದ್ಧೆಯುಂಟಾಗುತ್ತದೆ. ಯಾವಾಗ ಶ್ರದ್ಧೆಯುಂಟಾಯಿತೋ, ಆಗ ಆ ಶಾಸ್ತ್ರಾರ್ಥಾನುಸಾರವಾಗಿ ಅನುಷ್ಠಾನ ಉಂಟಾಗುತ್ತದೆ. ಅನುಸರಿಸಿ ಯಾವಾಗ ಅನುಷ್ಠಾನವಿದೆಯೋ ಆಗ ಅಸೂಯೆ ಇಲ್ಲವಿರೋಣವೂ, ಅವರಲ್ಲಿ ಶ್ರದ್ಧೆಯುಳ್ಳೋಣವೂ ವ್ಯಕ್ತವು. ಬೇರೆಯಾಗಿ ಶ್ರದ್ಧಾವಂತೋಽನಸೂಯನ್ತಃ ಎಂಬ ಪ್ರಯೋಗದೊಡನೆ ಅಪಿ ಶಬ್ದವೂ ಇರುವದರಿಂದ ಬೇರೆ ಬೇರೆಯಾಗಿ ಹೇಳುವದೇ ಸಮಂಜಸವು. ಆಗಲಿ, ಅನುಷ್ಠಾನಪರರಿಗೂ, ಶ್ರದ್ಧಾನಿಷ್ಠರಿಗೂ, ಅಸೂಯಾ ರಹಿತರಿಗೂ ಎಲ್ಲರಿಗೂ ಒಂದೇ ಫಲವಾದ ಸರ್ವಪಾಪಗಳಿಂದ ವಿಮೋಚನೆಯು ಯುಕ್ತವೋ ಎಂದರೆ, ಅಸೂಯಾರಹಿತನು, ಶ್ರದ್ಧಾನಿಷ್ಠನಾಗುವನು, ಶ್ರದ್ಧಾನಿಷ್ಠನು ಅನುಷ್ಠಾನಪರನಾಗುವನೆಂಬ ಭಾವವು; ಈ ಅಭಿಪ್ರಾಯವೇ "ಧರ್ಮಃಶ್ರುತೋವಾ ದೃಷ್ಟೋವಾ ಸ್ಮೃತೋವಾ ಕಥಿತೋಪಿವಾ । ಅನುಮೋದಿತೋವಾ ರಾಜೇನ್ದ್ರ ಪುನಾತಿ ಪುರುಷಂ ಸದಾ" ಎಂದು ಭಾರತದಲ್ಲಿ ಹೇಳಲ್ಪಟ್ಟಿರುತ್ತದೆ. (ಅಶ್ವಮೇಧಿಕೇ, ೯೪, ೩೯) ಆದುದರಿಂದ ಈ ಮೂರು ವಿಧಾವಸ್ಥೆಯಲ್ಲಿರುವವರೂ ಸಮಸ್ತಪಾಪ ಪುಣ್ಯಗಳಿಂದಲೂ ಬಿಡಲ್ಪಡುವರು ಎಂಬ ಭಾವವು.

ಮೂಲದಲ್ಲಿ ಇಂತಹ ಅಧಿಕಾರಿಗಳು ಮಾನವಾಃ ಎಂಬ ಪ್ರಯೋಗದಿಂದ ಹೇಳಲ್ಪಟ್ಟಿರುತ್ತಾರೆ. ಆದರೆ ಎಲ್ಲಾ ಮಾನವರಿಗೂ ಈ ಕರ್ಮಯೋಗ ಭಕ್ತಿಯೋಗಾದಿಗಳಲ್ಲಿ ಅಧಿಕಾರವಿರುವದಿಲ್ಲ. ಬ್ರಹ್ಮಸೂತ್ರದ ಅಪಶೂದ್ರಾಧಿಕರಣದಲ್ಲಿ ಶೂದ್ರಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಹೇಳಲ್ಪಟ್ಟಿರುತ್ತದೆ; ಮತ್ತು ದೇವತಾಧಿಕರಣದಲ್ಲಿ ದೇವತೆಗಳಿಗೂ ಅಧಿಕಾರ ಉಂಟೆಂದು ಹೇಳಲ್ಪಟ್ಟಿರುತ್ತದೆ ಇವುಗಳಿಗೆ ವಿರೋಧವಿಲ್ಲದೆ ಮೂಲದ ಅರ್ಥವನ್ನು ಹೇಳಬೇಕಾಗುತ್ತದೆ. ಆದುದರಿಂದ, ಯೇ ಮಾನವಾಃ - ಯಾವ ಅಧಿಕಾರವುಳ್ಳ ಮನುಜರೋ ಎಂಬದಾಗಿ ಅರ್ಥಹೇಳತಕ್ಕದ್ದು. ಇದನ್ನು ಮನಸ್ಸಿನಲ್ಲಿಟ್ಟೇ ಇಲ್ಲಿ ಮಾನವಾಃ ಎಂಬ ಶಬ್ದಕ್ಕೆ ಶಾಸ್ತ್ರಾಧಿಕಾರಿಣಃ ಎಂದು ಭಾಷ್ಯ ಬರೆದಿರುತ್ತಾರೆ. ಶಾಸ್ತ್ರಾಧಿಕಾರಿಗಳಲ್ಲದವರಿಗೆ ಗೀತೆಯಲ್ಲಿ ಉಪದೇಶಿಸಿರುವ ಉಪಾಸನ ವಿಧಿಯು ಅನ್ವಯಿಸುವದಿಲ್ಲವು. ಹಾಗಾದರೆ ಅವರುಗಳಿಗೆ ಮೋಕ್ಷವಿಲ್ಲವೋ ಎಂದರೆ ಈ ತ್ರಿವರ್ಣದವರಿಗಿಂತ ಅತಿ ಸುಲಭವಾಗಿ ಅವರಿಗೆ ಮೋಕ್ಷವೆಂದು ಬೇರೇ ಶಾಸ್ತ್ರಾರ್ಥವುಂಟು ;—ದ್ವಿಜೇತರರಿಗೆ ಭಾಗವತಾಶ್ರಯಣದಿಂದಲೇ ಮೋಕ್ಷವು. ಸ್ತ್ರೀಯರುಗ

**ಭಾ. ಅ. ಭಗವದಭಿಮತ ಮೌಪನಿಷದ ಮರ್ಥ ಮನನುತಿಷ್ಠ ತಾ ಮಶ್ರದ್ದ ಧಾನಾನಾ ಮಭ್ಯ ಸೂಯತಾಂ ಚ ದೋಷಮಾಹ —**

ೞಗೆ ಪತಿ ಶುಶ್ರೂಷೆಯಿಂದಲೇ ಮೋಕ್ಷವು; ಪತಿಯಿಲ್ಲದಕಾಲದಲ್ಲಿ ಭಾಗವತಾಶ್ರಯಣದಿಂದಲೇ ಅವರಿಗೂ ಮೋಕ್ಷವು. **"ಭರ್ತೃ ಶುಶ್ರೂಷಯಾ ನಾರೀ ಲಭತೇ ಸ್ವರ್ಗಮುತ್ತಮಂ । ಅಪಿ ಯಾ ನಿರ್ನಮಸ್ಕಾರಾ ನಿವೃತ್ತಾ ದೇವಪೂಜನಾತ್॥"** ಪರಮ ಪುರುಷನ ನಮಸ್ಕಾರ ಪೂಜನಾದಿ ಗಳೂ ಕೂಡ ಸ್ತ್ರೀಗೆ ಬೇಕಿಲ್ಲವು; ಭರ್ತೃ ಶುಶ್ರೂಷೆಯಿಂದಲೇ ಮೋಕ್ಷವೆಂದು ಮಹರ್ಷಿಯು ಹೇಳಿರುತ್ತಾರೆ. ಅದನ್ನೇ ವ್ಯತಿರೇಕರೂಪದಲ್ಲೂ **"ವ್ರತೋಪವಾಸ ನಿರತಾ ಯಾನಾರೀ ಪರಮೋತ್ತಮಾ । ಭರ್ತಾರಂನಾನುವರ್ತೇತ ಸಾಚಪಾಪಗತಿ ರ್ಭವೇತ್"** ವ್ರತ ಉಪವಾಸ ಇವೇ ಮೊದಲಾದವುಗಳಲ್ಲಿ ನಿರತಳಾಗಿ ಲೋಕದ ಜನರಿಗೆ ಪರಮೋತ್ತಮಳೆಂದು ತೋರಿ, ಗಂಡನನ್ನು ಮಾತ್ರ ಅನುವರ್ತಿಸಿ ನಡೆಯದಿದ್ದರೆ, ಅಂತಹ ಸ್ತ್ರೀಗೆ ಪಾಪಗತಿಯೇ ಎಂದೂ ಹೇಳಿರುತ್ತಾರೆ. (ರಾಮಾ. ಅಯೋಧ್ಯಾ. ೨೪-೨೫,೨೬) ಇವಕ್ಕೆ ಅನೇಕ ನಿದರ್ಶನಗಳುಂಟು. ಭಾಗವತರು ಇವರಿಗಾಗಿ ಮಾಡುವ ಆಚಾರ್ಯನಿಷ್ಠಾರೂಪ ಶರಣಾಗತಿ ದ್ವಾರಾ ಮೋಕ್ಷವು. ಈ ಸಂದರ್ಭದಲ್ಲಿ ಶಬರಿಯು ಮತಂಗ ಮಹರ್ಷಿಯನ್ನು ಆಶ್ರಯಿಸಿದುದರಿಂದಲೇ ಮೋಕ್ಷವನ್ನು ಹೊಂದಿದಳು. ಭಗವದ್ಗೀತೆಯಲ್ಲಿ ಅರ್ಜುನನ ಕೈಯಲ್ಲಿ ಯುದ್ಧಮಾಡಿಸಲು ಬೇಕಾದ ಮೋಕ್ಷಶಾಸ್ತ್ರವೆಷ್ಟೋ ಅಷ್ಟು ಮಾತ್ರವೇ ಇಲ್ಲಿ ಉಪನ್ಯಸ್ತವು. ಮಿಕ್ಕ ವಿಷಯಗಳಿಗೆ ಇತರ ಶಾಸ್ತ್ರಪ್ರಮಾಣಗಳು ಉಪಾದೇಯವು. ಇವುಗಳೆಲ್ಲಾ ಇಲ್ಲಿ ಹೇಳಲು ಕಾರಣವಿಲ್ಲವು.

**ಭಾಷ್ಯಾವತಾರಿಕೆಯ ಅರ್ಥವು**:—ಹಿಂದಿನ ಶ್ಲೋಕದಲ್ಲಿ ಅನ್ವಯ ರೂಪದಲ್ಲಿ ತನ್ನ ಉಪದೇಶಾನುಗುಣವಾಗಿ ನಡೆಯುವವರಿಗೆ ಅನಿಷ್ಟ ನಿವೃತ್ತಿಯನ್ನೂ ತನ್ಮೂಲಕ ಇಷ್ಟಪ್ರಾಪ್ತಿಯನ್ನೂ ಹೇಳಿ, ಈ ಶ್ಲೋಕದಲ್ಲಿ ವ್ಯತಿರೇಕರೂಪದಲ್ಲಿ ಶ್ರದ್ಧಾವಿಹೀನರಾಗಿ ಅಸೂಯಾವಿಷ್ಟಮನಸ್ಕರಾಗಿ ತನ್ನ ಉಪದೇಶರೀತ್ಯಾ ನಡೆಯದವರು ಆತ್ಮಹಾನಿಯನ್ನು ಮಾಡಿಕೊಳ್ಳುವರೆಂದು ಅವತಾರಿಕೆಯನ್ನು ದಪ:ನಾ:ಲಿನಾತ್ತಾರೆ.—**ಭಗವದಭಿಮತಂ** - ಭಗವಂತನಿಗೆ ತುಂಬಾ ಪ್ರಿಯವಾದ, **ಔಪನಿಷದಂ ಅರ್ಥಂ** – ಉಪನಿಷತ್ತಿನ ಉಪದೇಶವಾದ ಈ ತನ್ನ ಅಭಿಪ್ರಾಯವನ್ನು, **ಅನನುತಿಷ್ಠತಾಂ** - ಅನುಸರಿಸಿ ನಡೆಯದೇ ಇರುವವರಿಗೂ, **ಅಶ್ರದ್ದಧಾನಾನಾಂ** – ಆ ಶಾಸ್ತ್ರಾರ್ಥದಲ್ಲಿ ಶ್ರದ್ಧೆಯಿಲ್ಲದಿರುವವರಿಗೂ, **ಅಭ್ಯಸೂಯತಾಂ ಚ** - ಶಾಸ್ತ್ರಾರ್ಥದಲ್ಲಿ ಅಸೂಯೆವುಳ್ಳವರಿಗೂ ಸಹ, ಪ್ರಾಪ್ತವಾಗುವ, **ದೋಷಮಾಹ** - ದೋಷವನ್ನು ಈ ಮುಂದಿನ ಶ್ಲೋಕದಲ್ಲಿ ಹೇಳುತಾರೆ. ಮುಂದಿನ ಶ್ಲೋಕದಲ್ಲಿ ಅಸೂಯಾಪರರೂ ಮತ್ತು ಅನುಷ್ಠಾನವಿಲ್ಲದವರೂ ಮಾತ್ರ ೯ ಹೇಳಲ್ಪಟ್ಟಿದ್ದರೂ, ಭಾಷ್ಯದ ಅವತಾರಿಕೆಯಲ್ಲಿ ಅಶ್ರದ್ದಧಾನರನ್ನೂ ಸೇರಿಸಿ ಹೇಗೆ ವ್ಯಾಖ್ಯಾನ ಬರೆದರು ಎಂದಾಕ್ಷೇಪಿಸಿದರೆ, ಯಾವಾಗ ಅಸೂಯೆಯುಂಟೋ ಮತ್ತು ಅನುಷ್ಠಾನವಿಲ್ಲವೋ, ಈ ಎರಡು ಸಂದರ್ಭದಲ್ಲೂ, ಶ್ರದ್ಧೆಯಿಲ್ಲವೆಂಬುದು ವ್ಯಕ್ತವು. ಇದೂ ಅಲ್ಲದೆ ಹಿಂದೆ ಮೂರುವಿಧ ಅಧಿಕಾರಿಗಳನ್ನು ಹೇಳಿ, ಅವರುಗಳಿಗೆ ಸದ್ಗತಿಯನ್ನು ಹೇಳಿ, ಅವುಗಳಿಲ್ಲದವರಿಗೆ ದುರ್ಗತಿಯುಂಟೆಂದು ವ್ಯತಿರೇಕದಲ್ಲಿ ಹೇಳುವಾಗ ಎರಡು ಅಧಿಕಾರಿಗಳು ಮಾತ್ರ ಹೇಳಲ್ಪಟ್ಟರೆ, ಉಪಲಕ್ಷಣರೀತ್ಯಾ ಮೂರನೆಯವರನ್ನು ಇಟ್ಟುಕೊಳ್ಳತಕ್ಕದ್ದು, ಶಾಸ್ತ್ರ ಸಮ್ಮತ ವಿಷಯವಾದುದರಿಂದ, **ಅಶ್ರದ್ದಧಾನಾನಾಂ** ಎಂದು ಸೇರಿಸಿರುತ್ತಾರೆ. ಎಲ್ಲಾ ಮೋಕ್ಷಾರ್ಥಿಗಳೂ ಜ್ಞಾನಯೋಗಕ್ಕೆ ಅರ್ಹರೇ ಆಗಿರಲಿ, ಅರ್ಹರಲ್ಲದೇ ಇರಲಿ, ಸರ್ವರೂ ವಿಹಿತಕರ್ಮಗಳನ್ನು ಅನುಷ್ಠಿಸಲೇಬೇಕೆಂದು ಎಲ್ಲಿ ಉಪನಿಷತ್ತಿನಲ್ಲಿ ಹೇಳ

ಮೂ. ಯೇ ತ್ವೇತದಭ್ಯಸೂಯನ್ತೋ ನಾನುತಿಷ್ಠಂತಿ ಮೇ ಮತಮ್ ।
ಸರ್ವಜ್ಞಾನವಿಮೂಢಾಂ ಸ್ತಾನ್ ವಿದ್ಧಿ ನಷ್ಟಾನಚೇತಸಃ ॥ ೩೨.

ಭಾ. ಯೇ ತ್ವೇ ತತ್ಸರ್ವ ಮಾತ್ಮವಸ್ತು ಮಚ್ಛರೀರತಯಾ ಮದಾಧಾರಂ ಮಚ್ಛೇಷಭೂತಂ ಮದೇಕಪ್ರವರ್ತ್ಯಮಿತಿ ಮೇ ಮತಂ ನಾನುತಿಷ್ಠಂತಿ-ನೈವ ಮನುಸಂಧಾಯ ಸರ್ವಾಣಿ ಕರ್ಮಾಣಿ ಕುರ್ವತೇ, ಯೇ ಚ ನ ಶ್ರದ್ದಧತೇ, ಯೇಚಾಭ್ಯಸೂಯನ್ತೋ ವರ್ತನ್ತೇ,

ಲ್ಪಟ್ಟಿದೆ ? ಎಂದರೆ "ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇಚ್ಛತಗ್ ಸಮಾಃ" ಎಂಬದಾಗಿ ಈಶಾವಾಸ್ಯದಲ್ಲಿ ಹೇಳಲ್ಪಟ್ಟಿರುತ್ತದೆ. ಹಾಗೆಯೇ ಬೃಹದಾರಣ್ಯಕದಲ್ಲೂ "ತಮೇತಂ ವೇದಾನುವಚನೇನ ಬ್ರಾಹ್ಮಣಾಃ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾ ನಾಶಕೇನ" (ಬೃ. ೬ ೪. ೨೨.) ಇತ್ಯಾದಿ ಉಪನಿಷದ್ವಾಕ್ಯಗಳನ್ನು ಮನಸ್ಸಿನಲ್ಲಿಟ್ಟು, ಔಪನಿಷದ ಮರ್ಥಂ ಎಂದು, ಶ್ರೀಕೃಷ್ಣಭಗವಾನವರ ಈ ಮಹತ್ತಾದ ಉಪದೇಶವೆಲ್ಲಾ ಉಪನಿಷತ್ತುಗಳಲ್ಲೂ ಪ್ರತಿಪಾದ್ಯವಾದುವೆಂದು ಸೂಚಿಸುವದಕ್ಕಾಗಿ, ಹಾಗೆ ಪ್ರಯೋಗವು.

**ಮೂಲಕ್ಕೆ ಅರ್ಥವು:**—ಹಿಂದಿನ ಶ್ಲೋಕದಲ್ಲಿ ಶಾಸ್ತ್ರಾರ್ಥಾನುಗುಣವಾಗಿ ತನ್ನ ಈ ಉಪದೇಶವನ್ನನುಸರಿಸಿ ಅನುಷ್ಠಿಸುವವರಿಗೂ, ಅವರಲ್ಲಿ ಶ್ರದ್ಧಾಯುಕ್ತರಿಗೂ, ಅವರಲ್ಲಿ ಅಸೂಯಾರಹಿತರಿಗೂ, ಸರ್ವಪಾಪ ಪರಿಹಾರ ಉಂಟೆಂದು ಹೇಳಿ, ಈ ಶ್ಲೋಕದಲ್ಲಿ ಹಾಗಿಲ್ಲದವರಿಗೆ ಉಂಟಾಗುವ ದುರ್ಗತಿಯನ್ನು ಉಪದೇಶಿಸುತ್ತಾರೆ. [ಆದುದರಿಂದ ಹಿಂದಿನವರನ್ನು ವ್ಯಾವರ್ತಿಸಿ ಇಲ್ಲಿ ಯೇತು ಎಂದು ತು ಶಬ್ದವು.] **ಯೇತು** - ಇನ್ನು ಯಾರಾದರೋ, **ಏತತ್** - ಈ ಉಪನಿಷತ್ತಿನ ಅಭಿಪ್ರಾಯವಾಗಿ ಈಗ ನಾನು ಮಾಡಿರುವ ಮಹತ್ತಾದ ಉಪದೇಶವನ್ನು, **ಅಭ್ಯಸೂಯನ್ತಃ** - ದ್ವೇಷಿಸುವರೋ, ಮತ್ತು **ಮೇ ಮತಮ್** - ನನ್ನ ಅಭಿಪ್ರಾಯವಾದ ಶಾಸ್ತ್ರಾರ್ಥವನ್ನು, **ನಾನುತಿಷ್ಠಂತಿ** - ಅನುಸರಿಸಿ ನಡೆಯುವದಿಲ್ಲವೋ, **ತಾನ್** - ಅಂತವರನ್ನು, **ಸರ್ವಜ್ಞಾನ ವಿಮೂಢಾನ್** - ಸಮಸ್ತ ಜ್ಞಾನಗಳಲ್ಲೂ ವಿಶೇಷ ಮೂಢರನ್ನಾಗಿಯೂ, **ನಷ್ಟಾನ್** - ತಮ್ಮ ಒಳ್ಳೆಯ ಸ್ವರೂಪ ಸ್ವಭಾವಗಳನ್ನು ಕಳೆದುಕೊಂಡವರನ್ನಾಗಿಯೂ, **ಅಚೇತಸಃ** - ವಸ್ತುವಿನ ಯಾಥಾತ್ಮ್ಯ ನಿಶ್ಚಯವಿಲ್ಲದವರನ್ನಾಗಿಯೂ, **ವಿದ್ಧಿ** - ಓ ಅರ್ಜುನನೇ ತಿಳಿ ಎಂದು ಉಪದೇಶಿಸುತ್ತಾರೆ.

**ಭಾಷ್ಯಾರ್ಥವು:**—**ಯೇತು**-ಯಾರಾದರೆ, **ಏತತ್ಸರ್ವಂ ಆತ್ಮವಸ್ತು**-ಈ ಎಲ್ಲಾ ಜೀವಾತ್ಮರೆಂಬ ವಸ್ತುವು, **ಮಚ್ಛರೀರ ತಯಾ**-ನನಗೆ ಅವು ಶರೀರವಾಗಿರುವದರಿಂದ, ಹೇಗೆ ನಾವೆಲ್ಲಾ ಸರ್ವೇಶ್ವರನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರವೆಂಬುದನ್ನು ಉಪಪಾದಿಸಿ ಮುಂದೆ ಹೇಳುತ್ತಾರೆ, **ಮದಾಧಾರಂ**-ಆ ಆತ್ಮವಸ್ತುವು ನನ್ನನ್ನೇ ಆಧಾರವಾಗಿವುಳ್ಳದ್ದು, **ಮಚ್ಛೇಷಭೂತಂ**-ನನಗೇನೇ ಶೇಷಭೂತವಾದುದು ಎಂದರೆ ನನಗೇನೇ ಅತಿಶಯವನ್ನುಂಟುಮಾಡುವಂಥಾದ್ದು, **ಮದೇಕಪ್ರವರ್ತ್ಯಂ**-ನನ್ನಿಂದ ಮಾತ್ರವೇ ನಿಯಮಿಸಲು ಯೋಗ್ಯವಾದುದು, **ಇತಿ** - ಎಂಬದು, **ಮೇ ಮತಂ** - ನನ್ನ ಅಭಿಪ್ರಾಯವನ್ನು ಎಂದರೆ ಈ ಶಾಸ್ತ್ರಾರ್ಥವನ್ನು, **ನಾನುತಿಷ್ಠಂತಿ** - ಅನುಸರಿಸಿ ನಡೆಯುವದಿಲ್ಲವೋ, ಇದರ ತಾತ್ಪರ್ಯವೇನೆಂಬುದನ್ನು ವಿವರಿಸುತ್ತಾರೆ:—**ಏವ ಮನುಸಂಧಾಯ** - ಹೀಗೆ ಅನುಸಂಧಾನಮಾಡಿ, **ಸರ್ವಾಣಿ ಕರ್ಮಾಣಿ** - ಸಮಸ್ತ ಕರ್ಮಗಳನ್ನು **ನ ಕುರ್ವತೇ** - ಮಾಡುವದಿಲ್ಲವೋ, **ಯೇ ಚ** - ಮತ್ತು ಯಾರು, **ನ ಶ್ರದ್ದಧತೇ** - ಆ ಶಾಸ್ತ್ರಾರ್ಥದಲ್ಲಿ ಶ್ರದ್ಧೆಯುಳ್ಳವರಾಗಿರುವದಿಲ್ಲವೋ, **ಯೇ ಚ** - ಇನ್ನು ಯಾರಾದರೆ, **ಅಭ್ಯಸೂಯನ್ತೋ**

ಭಾ. ತಾನ್ ಸರ್ವೇಷು ಜ್ಞಾನೇಷು ವಿಶೇಷೇಣ ಮೂಢಾನ್ ಸ್ತತ ಏವ ನಷ್ಟಾನ ಚೇತಸೋ ವಿದ್ಧಿ ; ಚೇತಃಕಾರ್ಯಂ ಹಿ ವಸ್ತು ಯಾಥಾತ್ಮ್ಯ ನಿಶ್ಚಯಃ ; ತದಭಾವಾದ ಚೇತಸೋ ವಿಪರೀತಜ್ಞಾನಾಸ್ಸರ್ವತ್ರ ವಿಮೂಢಾಶ್ಚ ||೩೨||

ವರ್ತಂತೇ – ಆ ಶಾಸ್ತ್ರಾರ್ಥದಲ್ಲಿ ದೋಷವೆಣಿಸುವವರಾಗಿ ನಡೆಯುತ್ತಾರೋ, ತಾನ್ - ಅವರುಗಳೆಲ್ಲರನ್ನೂ, ಸರ್ವೇಷು ಜ್ಞಾನೇಷು ವಿಶೇಷೇಣವಿಮೂಢಾನ್-ಇದು ವಿಮೂಢಾನ್ ಎಂಬುದರಭಿಪ್ರಾಯವು, ಸಮಸ್ತ ಜ್ಞಾನಗಳಲ್ಲೂ ವಿಶೇಷ ಮೂಢರನ್ನಾಗಿ, ತತ ಯೇವ - ಅಕಾರಣದಿಂದಲೇ, ನಷ್ಟಾನ್ - ನಷ್ಟರನ್ನಾಗಿಯೂ, ಅಚೇತಸರನ್ನಾಗಿಯೂ, ವಿದ್ಧಿ - ತಿಳಿ. ನಷ್ಟರು ಎಂದು ಹೇಳಿರುವದು, ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗದೆ ಯಾವವಿಧವಾದ ಪುರುಷಾರ್ಥವನ್ನು ಹೊಂದಲು ಅನರ್ಹರು ಎಂಬ ಭಾವವನ್ನು ಸೂಚಿಸುತ್ತದೆ. ಮೂಲದಲ್ಲಿ ಅಭ್ಯಸೂಯನ್ತಃ ಎಂದಿಷ್ಟು ಮಾತ್ರವೇ ಇದ್ದರೂ, ಹಿಂದಿನ ಶ್ಲೋಕಾರ್ಥವನ್ನು ಮನಸ್ಸಿನಲ್ಲಿಟ್ಟು ಅದಕ್ಕೆ ವ್ಯತಿರೇಕವಾಗಿ ಇಲ್ಲಿ ಹೇಳಲ್ಪಡುವದರಿಂದ ಅಶ್ರದ್ದಧತೇ ಎಂಬ ಪ್ರಯೋಗವು. ಶ್ರದ್ಧಾರಹಿತನ ವಿಷಯದಲ್ಲಿ ಶ್ರೀ ಕೃಷ್ಣಭಗವಾನರಿಗೆ ತುಂಬಾ ಕೋಪದಿಂದ ನಷ್ಟನಾಗುವನೆಂದು ನಿಂದಿಸಿರುತ್ತಾರೆ. ಇದೇ ಅರ್ಜುನನು ಈ ಗೀತೋಪದೇಶವನ್ನೆಲ್ಲಾ ಮರೆತು ಪುನಃ ಉಪದೇಶಿಸು ಎಂದು, ಕೇಳಿದುದಕ್ಕೆ "ನೂನ ಮಶ್ರದ್ದಧಾನೋಽಸಿ ದುರ್ಮೇಧಾಶ್ಚಾಸಿಪಾಂಡವ" ಎಂದು ಕೋಪದಿಂದ ನಿಂದಿಸಿರುತ್ತಾರೆ. ಮುಂದೆ ಅಚೇತಸರು ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ. ಚೇತಃ ಕಾರ್ಯಂ ಹಿ - ಮನಸ್ಸಿನ ಕಾರ್ಯವಾದರೋ, ವಸ್ತುವಿನ ಯಥಾರ್ಥ ಸ್ಥಿತಿಯ ನಿಶ್ಚಯವು ; ತದಭಾವಾತ್ - ಅದು ಇವರುಗಳಿಗಿಲ್ಲದಿರುವದರಿಂದ, ಇವರು ಅ ಚೇತಸರು ಎಂದರೆ ವಿಪರೀತ ಜ್ಞಾನವುಳ್ಳವರು, ಸರ್ವತ್ರ ವಿಮೂಢಾಂಶ್ಚ - ಹೀಗೆ ಎಲ್ಲಾ ವಿಷಯದಲ್ಲೂ ವಿಶೇಷ ಮೂಢರು. ಮುಖ್ಯವಾಗಿ ಮನುಷ್ಯನು ಮೂಢನಲ್ಲವು, ಜ್ಞಾನಿಯು ಎಂದು ಹೇಳಿಸಿಕೊಳ್ಳಬೇಕಾದರೆ, ತನ್ನ ಯಾಥಾತ್ಮ್ಯ ಸ್ವರೂಪದ ಜ್ಞಾನವೂ ಪರಮಾತ್ಮನ ಸ್ವರೂಪ ಯಾಥಾತ್ಮ್ಯಜ್ಞಾನವೂ ಬೇಕು ; ಇವುಗಳು ಯಾವಾಗ ಇಲ್ಲವೋ ಆಗ ಅವನು ಪಶುವಿಗೆ ಸಮಾನನಾಗಿ ಮೂಢನು ಎಂಬ ಭಾವವು ; ಹಾಗೆ ಜ್ಞಾನವಿದ್ದುದಾದರೆ ಅದರ ಕಾರ್ಯವಾಗಿ ಶಾಸ್ತ್ರಜ್ಞಾನವಿಷಯದಲ್ಲಿ ಶ್ರದ್ಧಾಳುವಾಗಿಯೂ ಅಸೂಯಾರಹಿತನಾಗಿ ಅನುಷ್ಠಾನಪರನಾಗಿಯೂ ಇರುತ್ತಿದ್ದನು. ಯಾವಾಗ ಈ ಮೂರು ಇಲ್ಲವೋ ಆಗ ಜ್ಞಾನವಿಲ್ಲವು ಮೂಢನು, ಅಜ್ಞಾನಿಯು ಎಂಬುದು ವ್ಯಕ್ತವೆಂಬ ಭಾವವು. ಇಷ್ಟು ಭಾವವು ಅಚೇತಸಃ ಎಂಬ ಪ್ರಯೋಗದಿಂದ ತೋರಿಬರುತ್ತದೆ. ಇಲ್ಲಿ ಉಪನಿಷತ್ಸಾರಭೂತಾರ್ಥವು ಯಾವುದೆಂದು ಉಪಪಾದಿಸಿ ಹೇಳಿರುತ್ತಾರೆ. ಈ ಅಭಿಪ್ರಾಯವು ನಮ್ಮ ಸಿದ್ಧಾಂತಕ್ಕೇ ಅಸ್ತಿಭಾರವಾದುದರಿಂದ, ಈ ಉಪನಿಷದರ್ಥವನ್ನು ಪ್ರಧಾನ ಪ್ರತಿತಂತ್ರವಾಗಿ ಭಾವಿಸಿ ಹೇಳುತ್ತಾರೆ. ಬೃಹದಾರಣ್ಯಕದಲ್ಲಿ (೫. ೭) ಸಮಸ್ತ ಚೇತನಾಚೇತನಗಳೂ ಪರಮಾತ್ಮನಿಗೆ ಶರೀರವೆಂದೂ ಹಾಗೆಯೇ ಛಾಂದೋಗ್ಯದಲ್ಲಿ (೬-೮. ೭) ಎಲ್ಲಕ್ಕೂ ಪರಮಾತ್ಮನೇ ಆತ್ಮಾ, ಶರೀರಿ ಎಂದೂ "ಐತದಾತ್ಮ್ಯ ಮಿದಂ ಸರ್ವಂ" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಈಶ್ವರನಿಗೆ ಶರೀರಿತ್ವ ಅಥವಾ ಆತ್ಮತ್ವ ಹೇಗೆ ಎಂದರೆ, ಸಮಸ್ತ ಚೇತನಾಚೇತನಗಳಿಗೂ ಭಗವಂತನು ನಿಯಮೇನ ಧಾರಕನು, ನಿಯಮೇನ ಶೇಷಿಯು, ನಿಯಮೇನ ನಿಯನ್ತಾ ಎಂಬ ಭಾವವು ; ಅದುದರಿಂದಲೇ ಭಾಷ್ಯದಲ್ಲಿ ಮದಾಧಾರಂ ಮಚ್ಛೇಷಭೂತಂ, ಮದೇಕಪ್ರವರ್ತ್ಯಂ ಎಂದು ಪ್ರಯೋಗಿಸಿರುತ್ತಾರೆ. ನಾವೆಲ್ಲಾ ಆತನಿಗೆ ಶರೀರವು; ಶರೀರಭಾವಕ್ಕೆ ನಿಯಮೇನ ಧಾರ್ಯವಾಗಿ, ನಿಯಮೇನ ಶೇಷವಾಗಿ, ನಿಯಮೇನ ನಿಯಾಮ್ಯ

**ಭಾ. ಅ. ಏವಂ ಪ್ರಕೃತಿ ಸಂಸರ್ಗಿಣಃ ಸ್ವಗುಣೋದ್ರೇಕಕೃತಂ ಕರ್ತೃತ್ವಂ ತಚ್ಚ ಪರಮ ಪುರುಷಾಯತ್ತ ಮಿತ್ಯನುಸಂಧಾಯ, ಕರ್ಮಯೋಗಯೋಗ್ಯೇನ ಜ್ಞಾನಯೋಗಯೋಗ್ಯೇನ ಚ ಕರ್ಮಯೋಗಸ್ಯ ಸುಕರತ್ವಾದ ಪ್ರಮಾದತ್ವಾದ ನ್ತರ್ಗತಾತ್ಮಜ್ಞಾನತಯಾ**

ವಾಗಿರಬೇಕು. ನಾವುಗಳು ನಿತ್ಯವಾಗಿ ಶರೀರವಾಗಿರುವದರಿಂದ ನಾವು ಸದಾ ಆಧೇಯರಾಗಿಯೂ, ಶೇಷರಾಗಿಯೂ ನಿಯಾಮ್ಯರಾಗಿಯೂ ಇರುತ್ತೇವೆ. ಸುಮ್ಮನೆ ಧಾರಕ, ಶೇಷಿ, ನಿಯನ್ತಾವಾದರೆ ಶರೀರಾತ್ಮಭಾವವು ಕೂಡುವದಿಲ್ಲವು. ಹೇಗೆಂದರೆ ಒಂದು ಹೊರೆಯನ್ನು ನಾವು ಹೊತ್ತರೆ ಆಗ ಅದಕ್ಕೂ ನಮಗೂ ಶರೀರಾತ್ಮಭಾವವು ಕೂಡುವದಿಲ್ಲವು. ಹೊರೆಯು ಧಾರ್ಯವು, ನಾವು ಧರಿಸಿರುವವರು. ಆದರೆ ಅದು ನಿಯಮೇನ ಧಾರ್ಯವಲ್ಲದೆ ಇರುವುದರಿಂದ ಶರೀರಾತ್ಮಭಾವವಿಲ್ಲವು. ಒಬ್ಬ ಜವಾನನು ನಮಗೆ ಶೇಷನು ನಿಯಾಮ್ಯನು, ನಾವು ಶೇಷಿಯು, ನಿಯಂತಾ ಆದರೂ, ನಿಯಮೇನ ಈ ಸಂಬಂಧವಿಲ್ಲದೆ ಜವಾನನು ನಾಳೆಯೇ ನಮ್ಮನ್ನು ಬಿಟ್ಟು ಹೋಗಬಹುದಾದುದರಿಂದ, ಜವಾನನು ನಮಗೆ ಶರೀರವಲ್ಲವು. ಈ ಶರೀರಾತ್ಮಭಾವವು ನಮ್ಮ ಸಿದ್ಧಾನ್ತಕ್ಕೆ ಮುಖ್ಯ ತಳಹದಿಯಾದುದರಿಂದ ಸರ್ವಶ್ರುತಿ ವಾಕ್ಯಗಳೂ ನಮಗೆ ಸಮಂಜಸವೇ: ಸಮಸ್ತಕ್ಕೂ ಮುಖ್ಯಾರ್ಥವನ್ನೇ ನಾವು ಹೇಳಬಹುದು. ಇತರ ಸಿದ್ಧಾನ್ತಗಳಿಗಾದರೋ ಕೆಲವು ಶ್ರುತಿವಾಕ್ಯಗಳು ಸರಿಹೋಗುತ್ತವೆ. ಇತರವು ಸರಿಹೋಗುವದಿಲ್ಲವು. ಬಾಧ್ಯ ಬಾಧಕ ಭಾವಗಳನ್ನು ಇವುಗಳಿಗೆ ಹೇಳಬೇಕಾಗುತ್ತದೆ. ಇದು ಸರ್ವಾತ್ಮನಾ ಸರಿಯಲ್ಲವು. ಈ ಪ್ರತಿತಂತ್ರದ ಮೂಲಕ ಪರಮಾತ್ಮನೊಂದಿಗೆ ಈ ಚಿದಚಿತ್ತುಗಳಿಗೆ ಸಾಮಾನಾಧಿಕರಣ್ಯವು ನಮಗೆ ಕೂಡುತ್ತದೆ. "ತತ್ತ್ವಮಸಿ" ಇತ್ಯಾದಿ ವಾಕ್ಯಗಳಿಗೆ ಸರ್ವಸಮಂಜಸಾರ್ಥವೂ, ಸಾಮಾನಾಧಿಕರಣ್ಯವಿದ್ದರೂ ಸರ್ವೇಶ್ವರನಿಗೆ ಹೇಯಪ್ರತ್ಯನೀಕತ್ವವೂ, ಕೂಡುತ್ತದೆ. ಅದ್ವೈತ ಮೊದಲಾದ ಸಿದ್ಧಾನ್ತಗಳಿಗೆ ಇವುಗಳು ಸಾಧ್ಯವಲ್ಲವು. ಹೀಗೆ ಪರಮ ಪುರುಷನಿಗೆ ನಾವು ಶರೀರವಾಗಿ, ದಾಸಭೂತರಾಗಿ, ಆತನಿಗೆ ಪರತಂತ್ರರಾಗಿರುವದರಿಂದ ೩೦ನೆಯ ಶ್ಲೋಕದಲ್ಲಿ ಹೇಳಿರುವಹಾಗೆ ಸರ್ವೇಶ್ವರನಲ್ಲಿ ಅಧ್ಯಾತ್ಮ ಮನಸ್ಸುಳ್ಳವರಾಗಿ ಕರ್ತೃತ್ವ ಫಲಾಭಿಸಂಧಿಯಿಲ್ಲದೆ ಪರಮ ಪುರುಷನಾದ ಆತನು ಆರಾಧಿಸಲ್ಪಡುವನೆಂಬ ಭಾವನೆಯಿಂದ ಸ್ವೋಚಿತ ಕರ್ಮಗಳನ್ನೆಸಗಿ, ಅವುಗಳನ್ನೆಲ್ಲಾ ಆತನಲ್ಲಿ ಸಮರ್ಪಿಸುವೆವೆಂಬರ್ಥವು, ನಮಗೆ ಸರ್ವಸಮಂಜಸವಾದುದಾಗುತ್ತದೆಂಬ ಭಾವವು ||೩೨||

**ಭಾಷ್ಯಾವತಾರಿಕೆಯ ಅರ್ಥವು:—** ಹಿಂದಿನ ಪ್ರಕರಣಕ್ಕೂ ಮುಂದಿನ ಪ್ರಕರಣಕ್ಕೂ ಇರುವ ಸಙ್ಗತಿಯನ್ನು ಹೇಳಲು ಹೊರಟು, ಹಿಂದೆ ಉಪದೇಶಿಸಿದುದರಿಂದ ಸಾರಾಂಶವನ್ನು ತಿಳಿಸಿ ಅನಂತರ ಸಙ್ಗತಿಯನ್ನು ಪ್ರದರ್ಶಿಸುತ್ತಾರೆ:— **ಏವಂ** - ಹೀಗೆ ಎಂದರೆ ಮೇಲೆ ಹೇಳಿದಪ್ರಕಾರವಾಗಿ, **ಪ್ರಕೃತಿ ಸಂಸರ್ಗಿಣಃ** - ಪ್ರಕೃತಿಸಂಬಂಧವಿರುವವರಿಗೆ ಎಂದರೆ ಬದ್ಧ ಜೀವಾತ್ಮರಿಗೆ, ಹೀಗೆ ಹೇಳಿದುದರಿಂದ ಇಂತಹ ಕರ್ತೃತ್ವವಿಲ್ಲದ ಮುಕ್ತರು ವ್ಯಾವರ್ತಿಸಲ್ಪಟ್ಟವರು, **ಕರ್ತೃತ್ವಂ** – ಕರ್ತೃತ್ವವು, **ತದ್ಗುಣೋದ್ರೇಕಕೃತಂ** - ಆ ಪ್ರಕೃತಿಯ ಗುಣಗಳಾದ ಸತ್ವರಜಸ್ತಮೋಗುಣಗಳ ಆಧಿಕ್ಯದಿಂದ ಉಂಟಾದುದು, **ತಚ್ಚ** - ಆ ಕರ್ತೃತ್ವವಾದರೋ, **ಪರಮ ಪುರುಷಾಯತ್ತಮಿತಿ**-ಪರಮ ಪುರುಷಾಧೀನವಾದುದು ಎಂದೂ, **ಅನುಸಂಧಾನಮಾಡಿ, ಕರ್ಮಯೋಗ ಯೋಗ್ಯೇನ** - ಕರ್ಮಯೋಗಕ್ಕೆ ಅರ್ಹನಾದವನಿಗೂ ಮತ್ತು **ಜ್ಞಾನಯೋಗ ಯೋಗ್ಯೇನ ಚ**-ಜ್ಞಾನಯೋಗ ಯೋಗ್ಯನಿಗೂ ಕೂಡ, **ಕರ್ಮಯೋಗಸ್ಯ** - ಕರ್ಮಯೋಗದ **ಸುಕರತ್ವಾತ್** – ಸುಲಭ ಸಾಧ್ಯತ್ವದಿಂದಲೂ, **ಅಪ್ರಮಾದತ್ವಾತ್** - ಪ್ರಮಾದ ರಾಹಿತ್ಯದಿಂದಲೂ, **ಅಂತರ್ಗತಾತ್ಮಜ್ಞಾನತಯಾ ನಿರಪೇಕ್ಷತ್ವಾತ್** - ಆತ್ಮಸ್ವರೂಪ ಜ್ಞಾನವನ್ನೊಳಗೊಂಡಿರುವದರಿಂದ

**ಭಾ.** **ನಿರಪೇಕ್ಷತ್ವಾ ದಿತರಸ್ಯ ದುಶ್ಶಕತ್ವಾತ್ ಸಪ್ರಮಾದತ್ವಾತ್ ಶರೀರಧಾರಣಾದ್ಯರ್ಥತಯಾ ಕರ್ಮಾಪೇಕ್ಷತ್ವಾತ್ ಕರ್ಮಯೋಗ ಏವ ಕರ್ತವ್ಯಃ; ವ್ಯಪದೇಶ್ಯಸ್ಯತು ವಿಶೇಷತಸ್ಸಏವ ಕರ್ತವ್ಯ ಇತಿ ಚೋಕ್ತಮ್. ಅತಃಪರ ಮಧ್ಯಾಯಶೇಷೇಣ ಜ್ಞಾನಯೋಗಸ್ಯ ದುಶ್ಶಕತಯಾ ಸಪ್ರಮಾದತೋಚ್ಯತೇ—**

---

ಇನ್ನು ಯಾವುದರಪೇಕ್ಷೆಯಿಲ್ಲದುದರಿಂದಲೂ, **ಇತರಸ್ಯ** - ಇನ್ನೊಂದರ ಎಂದರೆ ಜ್ಞಾನಯೋಗದ, **ದುಶ್ಶಕತ್ವಾತ್** - ಕಷ್ಟಸಾಧ್ಯವಾದುದರಿಂದಲೂ, **ಸಪ್ರಮಾದತ್ವಾತ್** - ಪ್ರಮಾದದಿಂದ ಕೂಡಿರುವದರಿಂದಲೂ, **ಶರೀರಧಾರಣಾದ್ಯರ್ಥತಯಾ** - ಶರೀರಧಾರಣವೇ ಮೊದಲಾದ ಪ್ರಯೋಜನವುಳ್ಳದಾದುದರಿಂದ, **ಕರ್ಮಾಪೇಕ್ಷತ್ವಾತ್** - ಧನಾರ್ಜನಾದಿ ಕರ್ಮಗಳ ಅಪೇಕ್ಷೆಯುಳ್ಳದಾದುದರಿಂದಲೂ, **ಕರ್ಮಯೋಗ ಏವ ಕರ್ತವ್ಯಃ** - ಕರ್ಮಯೋಗವೇ ಅನುಷ್ಠಿಸಲ್ಪಡತಕ್ಕದ್ದು; **ವ್ಯಪದೇಶ್ಯಸ್ಯ ತು** - ಪ್ರಸಿದ್ಧನೆಂದು ಹೇಳಲ್ಪಡುವವನಿಗಾದರೋ, **ವಿಶೇಷತಃ** - ವಿಶೇಷವಾಗಿ ಎಂದರೆ ಮುಖ್ಯವಾಗಿ, **ಸ ಏವ ಕರ್ತವ್ಯ ಇತಿಚೋಕ್ತಮ್** - ಆ ಕರ್ಮಯೋಗವೇ ಮಾಡಲ್ಪಡತಕ್ಕದ್ದೆಂದೂ ಸಹ ಹೇಳಲ್ಪಟ್ಟಿತು. **ಅತಃ ಪರಂ** - ಇಲ್ಲಿಂದ ಮುಂದಕ್ಕೆ, **ಅಧ್ಯಾಯಶೇಷೇಣ** – ಮಿಕ್ಕ ಅಧ್ಯಾಯಭಾಗದಿಂದ, ಜ್ಞಾನಯೋಗವು, **ದುಶ್ಶಕತಯಾ** - ಶ್ರಮಸಾಧ್ಯವಾಗಿರುವದರಿಂದ, **ಸಪ್ರಮಾದತಾ** - ಪ್ರಮಾದದಿಂದ ಕೂಡಿರುವಿಕೆಯು, **ಉಚ್ಯತೇ** - ಹೇಳಲ್ಪಡುತ್ತದೆ. ಇನ್ನು ಮಿಕ್ಕ ಅಧ್ಯಾಯಭಾಗದಿಂದ ಜ್ಞಾನಯೋಗವು ದುಶ್ಶಕವೆಂದೂ ಸಪ್ರಮಾದವೆಂದೂ ಉಪಪಾದಿಸುತ್ತಾರೆ. ಹಾಗೆ ಹೇಳುವದರಿಂದ ಕರ್ಮಯೋಗದ ಜ್ಯಾಯಸ್ತ್ವವನ್ನೇ ಸಮರ್ಥಿಸಿ ಹೇಳಿದಂತಾಯಿತು. **ತದ್ಗುಣೋದ್ರೇಕಕೃತಂ ಕರ್ತೃತ್ವಂ** ಎಂದು ಎಲ್ಲಿ ಹೇಳಲ್ಪಟ್ಟಿತೆಂದರೆ **"ಪ್ರಕೃತೇಃ ಕ್ರಿಯಮಾಣಾನಿ"** ಎಂದಾರಂಭಿಸಿ ೨೭-೨೮ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುತ್ತದೆ. **ಅದು ಪರಮ ಪುರುಷಾಯತ್ತಂ** ಎಂದು **ಮಯಿ ಸರ್ವಾಣಿ ಕರ್ಮಾಣಿ** ಎಂಬ ಶ್ಲೋಕದಲ್ಲೂ ಹೇಳಲ್ಪಟ್ಟಿರುತ್ತದೆ. **ಕರ್ಮಯೋಗವು ಸುಕರವು** ಎಂದು ೫ ನೆಯ ಶ್ಲೋಕದಲ್ಲೂ, **ಅಪ್ರಮಾದ**ವೆಂದು ೧೧, ೧೩ನೆಯ ಶ್ಲೋಕಗಳಲ್ಲೂ, **ಅಂತರ್ಗತ ಆತ್ಮಯಾಥಾತ್ಮ್ಯ** ಜ್ಞಾನವುಳ್ಳದೆಂದು ೧೯ನೆಯ ಶ್ಲೋಕದಲ್ಲೂ ಉಪಪಾದಿತವು; ಹಾಗೆಯೇ ಜ್ಞಾನಯೋಗವು ದುಷ್ಕರವೆಂದು **"ನಕರ್ಮಣಾಮನಾರಂಭಾತ್"** ಎಂಬ ನಾಲ್ಕನೆಯ ಶ್ಲೋಕದಲ್ಲೂ ಸಪ್ರಮಾದವೆಂದೂ, **"ಕರ್ಮೇಂದ್ರಿಯಾಣಿ ಸಂಯಮ್ಯ"** ಎಂಬ ೬ ನೆಯ ಶ್ಲೋಕದಲ್ಲಿ ಮಿಥ್ಯಾಚಾರನಾಗುವನೆಂದೂ, ೮ನೆಯ ಶ್ಲೋಕದಲ್ಲಿ ಶರೀರಯಾತ್ರೆಯೂ ಲಭಿಸದೆಂದೂ, ೧೬ನೆಯ ಶ್ಲೋಕದಲ್ಲಿ ಇಂದ್ರಿಯಾರಾಮನಾಗುವನೆಂದೂ ಹೀಗೆ ಹಿಂದೆ ಹೇಳಲ್ಪಟ್ಟಿರುತ್ತದೆ. ಈ ಅವತಾರಿಕೆಯುಲ್ಲಿ ಕರ್ಮಯೋಗ ಜ್ಞಾನಯೋಗಗಳಿಗಿರುವ ವ್ಯತ್ಯಾಸವನ್ನು ಮೂರು ಮೂರು ಹೇತುಗಳಿಂದ ವ್ಯಕ್ತಪಡಿಸುತ್ತಾರೆ. ಕರ್ಮಯೋಗವು (೧) ಸುಕರವು. (೨) ಪ್ರಮಾದ ರಹಿತವು. (೩) ಆತ್ಮಜ್ಞಾನವನ್ನೊಳಗೊಂಡಿರುವದರಿಂದ ನಿರಪೇಕ್ಷವು. ಬರೀ ಜ್ಞಾನಯೋಗವಾದರೋ (೧) ದುಶ್ಶಕವು (೨) ಸಪ್ರಮಾದವು (೩) ಶರೀರ ಧಾರಣಾದಿ ಕರ್ಮ ಸಾಪೇಕ್ಷವು. ಆದುದರಿಂದ ಎಲ್ಲರಿಗೂ ಕರ್ಮಯೋಗವೇ ಆವಶ್ಯಕವು; ಜ್ಞಾನಯೋಗಾಧಿಕಾರಿಗೂ ಸಹ ಆವಶ್ಯಕವು. ಅವರಲ್ಲೂ ತುಂಬಾ ಶ್ರೇಷ್ಠನಿಗೂ ಲೋಕ ಸಙ್ಗ್ರಹಾರ್ಥವಾಗಿಯೂ, ಅತ್ಯಾವಶ್ಯಕವು ಎಂದು ಹಿಂದೆ ೨೦–೨೫ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟಿತು; ಮುಂದೆ ಜ್ಞಾನಯೋಗಕ್ಕಿರುವ ದುಶ್ಶಕತ್ವವೂ ಸಪ್ರಮಾದತೆಯೂ ಸಮರ್ಥಿಸಿ ಹೇಳಲ್ಪಡುತ್ತವೆ.

**ಮೂಲಕ್ಕೆ ಅರ್ಥವು** :—ಹಿಂದಿನ ಶ್ಲೋಕದಲ್ಲಿ ಹೀಗೆ ತನ್ನ ಈ ಅಮೋಘೋಪದೇಶಕ್ಕೆ ಮನಸ್ಸನ್ನು ಕೊಡದೆ, ತನ್ನ ಮತಾನುಸಾರವಾಗಿ ನಡೆಯದೆ ಮೂಢರಾಗಿ ನಷ್ಟಾತ್ಮರಾಗಿ ವರ್ತಿ

ಮೂ. ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇ ರ್ಜ್ಞಾನವಾನಪಿ ।
ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩.

ಭಾ- ಪ್ರಕೃತಿ ವಿವಿಕ್ತ ಮೀದೃಶ ಮಾತ್ಮಸ್ವರೂಪಂ ತದೇವ ಸರ್ವದಾನುಸಂಧೇಯ ಮಿತಿ ಶಾಸ್ತ್ರಾಣಿ ಪ್ರತಿಪಾದಯನ್ತೀತಿ ಜ್ಞಾನವಾನಪಿ ಸ್ವಸ್ಯಾಃ ಪ್ರಕೃತೇಃ—ಪ್ರಾಚೀನ

ಸುತ್ತಾರಲ್ಲಾ ಎಂದು ಪರಿತಾಪದಿಂದ ಹೇಳಿದರು; ಅದಕ್ಕೆ ಕಾರಣವೇನೆಂಬುದನ್ನು ಈಗ ತಿಳಿಸುತ್ತಾರೆ. ಎಷ್ಟು ಜ್ಞಾನವಾ ಆಗಿದ್ದರೆ ಏನು? ಈತನ ಕರ್ಮವಾಸನೆಯು ಈತನಿಗೆ ವಿಷಯ ಸ್ಪೃಹೆಯುಂಟಾಗುವ ಹಾಗೆ ಮಾಡಿ, ಇಂದ್ರಿಯಗಳು ಈತನ ಮನಸ್ಸನ್ನು ಸೆಳದು ಆ ಕರ್ಮ ವಾಸನೆಗೆ ಅನುಗುಣವಾದ ವ್ಯಾಪಾರಗಳನ್ನು ಮಾಡಿಸುತ್ತದೆ; ಅಂತವನಿಗೆ ಶಾಸ್ತ್ರಜ್ಞಾನದಿಂ ದೇನೂ ಪ್ರಯೋಜನವಿಲ್ಲವು ಎಂದು ಹೇಳುತ್ತಾರೆ. ಜ್ಞಾನವಾನಪಿ - ಆತ್ಮಸ್ವರೂಪವು ಪ್ರಕೃತಿ ವಿಮುಕ್ತವಾಗಿರುವದು, ಪರಿಶುದ್ಧವಾದುದು, ಶರೀರಗಳಾದರೋ "ಕರ್ಮಯೋನಯಃ" (ವಿ. ಪು.) ಪಾಪ ಪುಣ್ಯರೂಪ ಕರ್ಮಮೂಲಕ ಪ್ರಾಪ್ತವಾದವು, ಇಂತಹ ಪ್ರಕೃತಿ ವಿಮುಕ್ತ ಆತ್ಮಸ್ವರೂಪವೀಗ ಅನುಸಂಧೇಯವೆಂಬ ಶಾಸ್ತ್ರಜ್ಞಾನವನ್ನು ಹೊಂದಿದ್ದರೂ ಕೂಡ ಸ್ವಸ್ಯಾಃ - ತನ್ನ, ಪ್ರಕೃತೇಃ - ದೇಹಕ್ಕೆ ಸಂಬಂಧಿಸಿವ ಪ್ರಾರಬ್ಧ ಕರ್ಮವಾಸನೆಗೆ, ಸದೃಶಂ- ಅನುಗುಣವಾಗಿ ಎಂದರೆ ಶಬ್ದಾದಿ ವಿಷಯೋಪಭೋಗ ಉಂಟಾಗುವಹಾಗೆ, ಚೇಷ್ಟತೇ - ಪ್ರವರ್ತಿಸುತ್ತಾನೆ:—ಅದೇತಕ್ಕೆ ಹಾಗೆ ಎಂದರೆ ಹೇಳಲ್ಪಡುತ್ತದೆ. ಭೂತಾನಿ - ಅಚಿತ್ತಿನೊಂದಿಗೆ ಸೇರಿದ ಚಿತ್ತಿಗೆ ಭೂತವೆಂದು ಹೆಸರು, ಎಂದರೆ ಶರೀರವಿರುವ ಬದ್ಧಚೇತನರು, ಪ್ರಕೃತಿಂ - ಅನಾದಿಯಾಗಿ ಉಂಟಾದ ಪ್ರಕೃತಿಸಂಬಂಧದಿಂದ ಪ್ರಾಪ್ತವಾದ ಕರ್ಮವಾಸನೆಯನ್ನು, ಯಾನ್ತಿ- ಹೊಂದುತ್ತಾರೆ, ಆ ಕರ್ಮವಾಸನಾ ಬಲಿಷ್ಠವಾದುದರಿಂದಲೇ, ನಿಗ್ರಹಃ - ಶಾಸ್ತ್ರದ ವಿಧಿ ನಿಷೇಧ ವಾಕ್ಯಗಳ ಮೂಲಕ ಉಂಟಾದ ನಿಯಮನವು, ಕಿಂ ಕರಿಷ್ಯತಿ - ಏನನ್ನು ಮಾಡೀತು ? ಎಂದರೆ ಕರ್ಮವಾಸನಾ ಮುಂದೆ ಶಾಸ್ತ್ರಜ್ಞಾನದುರ್ಬಲವೆಂಬ ಭಾವವು. ಶಾಸ್ತ್ರಜ್ಞಾನವಿದ್ದರೂ ಕರ್ಮವಾಸನಾ ಪ್ರಬಲವಾದುದರಿಂದ ಪ್ರಾರಬ್ಧ ಕರ್ಮಾನುಸಾರವೇ ನಡೆಯುವನು ಎಂಬುದು ತಾತ್ಪರ್ಯವು. ಹೀಗೆ ಹೇಳಿಬಿಟ್ಟರೆ ಅನೇಕ ಪೂರ್ವಪಕ್ಷಗಳಿಗೆ ಕಾರಣವಾಗುತ್ತದೆ. ಹೇಗೆಂದರೆ.— ೧. ಕರ್ಮವಾಸನೆಯೇ ಯಾವಾಗಲೂ ಪ್ರಬಲವಾದರೆ, ಶಾಸ್ತ್ರಜ್ಞಾನವೂ ಗುರೂಪದೇಶವೂ ನಿರರ್ಥಕವಲ್ಲವೋ? ೨. ಹಾಗೆ ಒಂದು ಸಲ ಮಾರ್ಗತಪ್ಪಿ ನಡೆದವನು, ಪುನಃ ಪುನಃ ಪ್ರಬಲತರ ಕರ್ಮವಾಸನೆಗೇ ಒಳಪಟ್ಟವನಾಗಿ ನರಕವನ್ನು ಹೊಂದುವನೇ ವಿನಾ ಅಂತವನಿಗೆ ಸದ್ಗತಿಯೇ ಇಲ್ಲವೆಂದಾಗುತ್ತದೆ. ೩. ಪರಮಾತ್ಮನು ಇಂತಹ ದುಸ್ಥಿತಿಗೆ ಕಾರಣಭೂತನಾಗಿ ನಿಂದೆಗೆ ಒಳಗಾಗುವದಿಲ್ಲವೇ? ಆತನು ಹೇಗೆ ಕೃಪಾಳುವು ? ಈ ಪೂರ್ವ ಪಕ್ಷಗಳಿಗೆ ಮುಂದಿನ ಶ್ಲೋಕದಲ್ಲಿ ಸಮಾಧಾನವು ದೊರೆಯುತ್ತದೆ.

ಭಾಷ್ಯಾರ್ಥವು:—ಈದೃಶಂ ಆತ್ಮಸ್ವರೂಪಂ - ಇಂತಹ ಪರಶೇಷತ್ವರೂಪ ಜೀವಾತ್ಮ ಸ್ವರೂಪವು, ಪ್ರಕೃತಿ ವಿವಿಕ್ತಂ - ಪ್ರಕೃತಿಗಿಂತಲೂ ಬೇರೆಯಾಗಿ ವಿಲಕ್ಷಣವಾದುದು, ತದೇವ- ಅದೇ, ಸರ್ವದಾನುಸಂಧೇಯಮಿತಿ - ಯಾವಾಗಲೂ ಎಂದರೆ ಫಲಪ್ರಾಪ್ತಿಯುಂಟಾಗುವ ವರೆಗೂ ಅನುಸಂಧಾನ ಮಾಡಲ್ಪಡತಕ್ಕದ್ದೆಂದು, ಶಾಸ್ತ್ರಾಣಿ ಪ್ರತಿಪಾದಯನ್ತೀತಿ-ಶಾಸ್ತ್ರಗಳು ಉಪಪಾದಿಸುತ್ತವೆಂಬ, ಜ್ಞಾನವಾನಪಿ - ಜ್ಞಾನವುಳ್ಳವನಾದರೂ, ಸ್ವಸ್ಯಾಃ ಪ್ರಕೃತೇಃ - ತನ್ನ ಪ್ರಾಚೀನ ಕರ್ಮವಾಸನೆಗೆ, ಸದೃಶಂ - ಅನುಗುಣವಾಗಿ ಎಂದರೆ, ಪ್ರಾಕೃತವಿಷಯೇಷ್ವೇವ-

ಭಾ. ವಾಸನಾ ಯಾಸ್ಸದೃಶಂ - ಪ್ರಾಕೃತವಿಷಯೇಷ್ವೇವ ಚೇಷ್ಟತೇ ; ಕುತಃ? ಪ್ರಕೃತಿಂ ಯಾನ್ತಿ ಭೂತಾನಿ-ಅಚಿತ್ಸಂ ಸೃಷ್ಟಾ ಜನ್ತವೋಽನಾದಿಕಾಲ ಪ್ರವೃತ್ತ ವಾಸನಾ ಮೇವ, (ಅನು) ಯಾನ್ತಿ. ತಾನಿ ವಾಸನಾನುಯಾಯಿನಾನಿ ಭೂತಾನಿ ಶಾಸ್ತ್ರ ಕೃತೋ ನಿಗ್ರಹಃ ಕಿಂಕರಿಷ್ಯತಿ ? ||೩೩||

ಪ್ರಕೃತಿಸಂಬಂಧವಾದ ಶಬ್ದಸ್ಪರ್ಶಾದಿ ವಿಷಯುಗಳಲ್ಲೇ, ಚೇಷ್ಟತೇ - ಪ್ರವೃತ್ತಿಯುಳ್ಳವನಾಗು ತ್ತಾನೆ. ಈತನಿಗೆ ಈ ಕರ್ಮವಾಸನಾ ಏನುಮಾಡುತ್ತದೆ? ಚೇಷ್ಟತೇ ಎಂಬುದರಿಂದ ವ್ಯಾಪಾ ರಗಳು ಹೇಳಲ್ಪಟ್ಟವು- ಜೀವಾತ್ಮನ ಸಙ್ಕಲ್ಪ ಪ್ರಯತನಾದಿಗಳಿಲ್ಲದೆ ಅವು ನಡೆಯುವದಿಲ್ಲವು. ಹೀಗಿರುವಾಗ ತನ್ನ ಕರ್ಮವಾಸನಾನುಗುಣವಾಗಿ ನಡೆಯುವದು ಹೇಗೆ? ಎಂದರೆ ಕರ್ಮವಾಸ ನಾನುಗುಣವಾಗಿ ವಿಷಯೋಪಭೋಗಗಳಲ್ಲಿ ಆಶೆಯೂ, ಅದಕ್ಕಾಗಿ ಇಂದ್ರಿಯಗಳ ಪ್ರವೃ ತ್ತಿಯೂ, ಅದಕ್ಕಾಗಿ ಮನಸ್ಸಿನ ಪ್ರೇರಣೆಯೂ, ಹಾಗೆಯೇ ಆತ್ಮಾವಿನ ಸಙ್ಕಲ್ಪಪ್ರಯತನಾದಿಗ ಳೂ ಎಂದು ಭಾವಿಸತಕ್ಕದ್ದು. ಹೀಗೆ ಶಾಸ್ತ್ರವಿರುದ್ಧಾಚರಣೆಗೆ ರಾಗದ್ವೇಷಗಳು ಕಾರಣವೆಂದೂ ಅವುಗಳಿಗೆ ಕಾರಣವು ಕರ್ಮವಾಸನೆಯೆಂದೂ ಮುಂದಿನ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಆದು ದರಿಂದಲೇ ಮೂಲದ ಪ್ರಕೃತೇಃ ಎಂಬ ಶಬ್ದಕ್ಕೆ ಪ್ರಾಚೀನ ವಾಸನಾಯಾಃ ಎಂಬ ವ್ಯಾಖ್ಯಾ ನವು. ಆ ಕರ್ಮವಾಸನೆಗೆ ಸದೃಶವಾದುದು ಎಂದರೆ ಅನುರೂಪವಾದುದು ಎಂಬರ್ಥವನ್ನು ಮನಸ್ಸಿನಲ್ಲಿಟ್ಟು ಆದರ ತಾತ್ಪರ್ಯವು ಪ್ರಾಕೃತ ವಿಷಯುಗಳಲ್ಲಿ ಪ್ರವೃತ್ತಿಯಾದುದರಿಂದ ಪ್ರಾಕೃ ತ ವಿಷಯೇಷ್ವೇವ ಚೇಷ್ಟತೇ ಎಂಬ ಭಾಷ್ಯವು. ಶಬ್ದಾದಿಗಳಲ್ಲಿ ಪ್ರವರ್ತಿಸಿದ ಕರ್ಮವಾಸನೆ ಇರುವದರಿಂದ, ಪುನಃ ಅವುಗಳಲ್ಲೇ ಪ್ರವೃತ್ತಿಯು ಎಂಬ ಭಾವವು. ಹಿಂದಿನ ಶ್ಲೋಕದಲ್ಲಿ ಅಭ್ಯ ಸೂಯನ್ತೋ ನಾನುತಿಷ್ಠಂತಿಮೇಮತಂ ಎಂದು ಹೇಳಿ ಅವರು ವಿಮೂಢರೆಂದು ತಿಳಿಸಿದರು. ಅವರು ಹಾಗಿರಲು ಕಾರಣವೇನೆಂಬುದು ಇಲ್ಲಿ ಹೇಳಲ್ಪಟ್ಟಿತು. ಇಲ್ಲಿ ಜ್ಞಾನವಾನ್ ಎಂದು ಹೇಳಿರುವದು ಲೌಕಿಕ ಜ್ಞಾನವುಳ್ಳವನೆಂದು ಅಷ್ಟುಮಾತ್ರವೇ ಅರ್ಥವಲ್ಲವು; ಆಗ ಅಪಿ ಎಂಬ ಶಬ್ದವು ನಿರರ್ಥಕವಾಗುತ್ತದೆ. ಆದುದರಿಂದ, ಶಾಸ್ತ್ರೋಪದೇಶವನ್ನು ಹೊಂದಿದವನೆಂದೇ ಅರ್ಥ ಮಾಡತಕ್ಕದ್ದಾಗಿರುತ್ತದೆ; ಏಕೆಂದರೆ ಹಿಂದಿನ ಶ್ಲೋಕದಲ್ಲಿ ಶ್ರೀ ಕೃಷ್ಣಭಗವಾನವರು ಮಾಡಿದ ಉಪದೇಶಾನುಗುಣವಾಗಿ ನಡೆಯದೇ ಇರುವರನ್ನು ಕುರಿತಲ್ಲವೇ ಹೇಳುವ ಪ್ರಕರಣವು. ಇಲ್ಲಿ ಯಾವ ವಿಷಯವಾದ ಜ್ಞಾನವನ್ನು ಮನಸ್ಸಿನಲ್ಲಿಟ್ಟು ಜ್ಞಾನವಾನಪಿ ಎಂದು ಹೇಳಲ್ಪಟ್ಟಿ ತೆಂಬುದನ್ನು ವ್ಯಕ್ತಪಡಿಸುವದಕ್ಕಾಗಿ ಪ್ರಕೃತಿ ವಿವಿಕ್ತ ಮಾದೃಶಂ ಆತ್ಮಸ್ವರೂಪಂ ಎಂದಾ ರಂಭಿಸಿ, ಇಂತಹ ಆತ್ಮಸ್ವರೂಪವನ್ನೇ ಅನುಸಂಧಾನಮಾಡತಕ್ಕದ್ದೆಂಬ ಜ್ಞಾನವಾನಪಿ ಎಂದು ಅರ್ಥಮಾಡಿರುತ್ತಾರೆ. ಆದರೆ ಜ್ಞಾನವಾನ್ ಆದರೆ ಜ್ಞಾನಕ್ಕನುಸಾರವಾಗಿ ನಡೆಯ ಬೇಕು, ಕರ್ಮವಾಸನೆಗೆ ಅನುಗುಣವಾಗಿ ಏತಕ್ಕೆ ನಡೆಯುತ್ತಾರೆ? ಎಂದರೆ ಉತ್ತರಾರ್ಧ ದಿಂದ ಸಮಾಧಾನವನ್ನು ಹೇಳುತ್ತಾರೆ; ಅದಕ್ಕಾಗಿ, ಕುತಃ? ಎಂದು ಪ್ರಶ್ನಿಸಿ ಉತ್ತರವನ್ನು ಹೇಳುತ್ತಾರೆ. ಕುತಃ - ಯಾವಕಾರಣದಿಂದ ವಿಷಯ ವಾಸನಾನುಗುಣವಾಗಿ ಚೇಷ್ಟೆಯು? ಇದಕ್ಕೆ ಉತ್ತರವು, ಪ್ರಕೃತಿಂ ಯಾಂತಿ ಭೂತಾನಿ - ಇದರಭಿಪ್ರಾಯವೇನೆಂದರೆ, ಅಚಿತ್ಸಂ ಸೃಷ್ಟಾಃ - ಜಡದೇಹದಿಂದಕೂಡಿದ, ಆ ಕಾರಣದಿಂದ ಭೂತಶಬ್ದದಿಂದ ನಿರ್ದೇಶಿಸಲ್ಪಡುವ, ಜನ್ತವಃ-ಜ್ಞಾನ ತಿರೋಧಾನ ಉಂಟಾಗುವವರಿಂದ ಜನನ ಮರಣಾದಿಗಳನ್ನು ಹೊಂದಿರುವ ಪಶುಸಮಾನ ಪ್ರಾಣಿಗಳು, ಅನಾದಿಕಾಲ ಪ್ರವೃತ್ತ ವಾಸನಾ ಮೇವಯಾನ್ತಿ - ಅನಾದಿಕಾಲ ದಿಂದಲೂ ಅನುಸರಿಸಿ ಬರುವ ವಾಸನೆಯನ್ನೇ ಹೊಂದುವರು ; ಎಂದರೆ ರಾಗದ್ವೇಷಾದಿಗಳಿಗೆ

ಭಾ. ಅವ. ಪ್ರಕೃತ್ಯನುಯಾಯಿತ್ವಪ್ರಕಾರಮಾಹ—

ವಶರಾಗಿ ಕೆಟ್ಟುಹೋಗುವರೆಂಬ ಭಾವವು. ಈ ಅಭಿಪ್ರಾಯವು ಉತ್ತರ ಶ್ಲೋಕದಲ್ಲಿ ವ್ಯಕ್ತವು. ಇಲ್ಲಿಯೂ ಕೂಡ ಪ್ರಕೃತಿಂಯಾನ್ತಿ ಎಂದರೆ ಅನಾದಿಕಾಲಪ್ರವೃತ್ತ ವಾಸನಾಮೇವಯಾನ್ತಿ ಎಂದು ವ್ಯಾಖ್ಯಾನವು. ಅವರು ಜ್ಞಾನವಂತರಾಯಿತಲ್ಲಾ, ಜ್ಞಾನವೇನೂ ಕಾರ್ಯಕಾರಿ ಯಲ್ಲವೋ ಎಂದರೆ, ತಾನಿ - ಅಂತಹ, ವಾಸನಾನುಯಾಯೀನಿ - ವಾಸನಾನುಗುಣವಾಗಿ ಅನುವರ್ತಿಸಿ ನಡೆಯುವ, ಭೂತಾನಿ - ಈ ಅಚಿತ್ಸಂಸೃಷ್ಟರಾದ ಚೇತನರನ್ನು, ಶಾಸ್ತ್ರಕೃತಃ ನಿಗ್ರಹಃ - ಮೂಲದ ನಿಗ್ರಹ ಶಬ್ದದ ವಿವರಣವು, ಶಾಸ್ತ್ರದಲ್ಲಿ ಮಾಡಲ್ಪಟ್ಟ ನಿಯಮನವು, ಕಿಂಕರಿಷ್ಯತಿ - ಏನನ್ನು ಮಾಡಬಲ್ಲದು? ವಾಸನೆಯಾದರೋ ಅನಾದಿಕಾಲದಿಂದ ಅನುಸರಿಸಿ ಬಂದುದು, ಅದರ ಮುಂದೆ ಶಾಸ್ತ್ರಚೋದನವು ದುರ್ಬಲವು ಎಂಬಭಿಪ್ರಾಯವು, ; ಅಂತಹ ಅನುಸರಿಸಿ ಬಂದ ಕರ್ಮವಾಸನೆಯನ್ನು ಒಡನೆಯೇ ಜ್ಞಾನದಿಂದ ನಿಗ್ರಹಿಸುವದು ಸಾಧ್ಯವಿಲ್ಲವು. ಗುರು ಕಟಾಕ್ಷದಿಂದುಂಟಾದ ಶಾಸ್ತ್ರೋಪದೇಶವು ಸ್ವಲ್ಪ ವಿಳಂಬಿಸಿ ಮಾರ್ಗಕ್ಕೆ ತರಬೇಕಾಗುತ್ತದೆಂಬುದೂ ಸೂಚಿತವು. ಕಿಂಕರಿಷ್ಯತಿ - ಎಂಬುದರಿಂದ ಎಂದಿಗೂ ಏನೂ ಮಾಡಲಾರದೆಂಬ ಭಾವವಲ್ಲವು. ಅಂತಹ ಗುರೂಪದೇಶಾದಿ ಸುಕೃತಗಳಿಲ್ಲದೇ ಇರುವರೇ ಲೋಕದಲ್ಲಿ ಹೆಚ್ಚಾದುದರಿಂದ ಅಂತವರ ವಿಷಯದಲ್ಲಿ ಶಾಸ್ತ್ರಜ್ಞಾನವು ಏನು ಮಾಡೀತೆಂಬ ಭಾವವು. ಶಾಸ್ತ್ರ ಜ್ಞಾನಕ್ಕೆ ಸದ್ಗುರುವಿನ ಉಪದೇಶರೂಪ ಸಂಸ್ಕಾರವು ಒದಗಿದರೆ, ಆಗ ಕರ್ಮವಾಸನೆಯನ್ನು ಹೊಡೆಯುವದರಲ್ಲಿ ಸಂದೇಹವಿಲ್ಲವು. "ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ । ಆಚಾರ್ಯವತ್ತಯಾಮುಕ್ತಾ ತಸ್ಮಾದಾಚಾರ್ಯವಾನ್ ಭವೇತ್" ಎಂದು ಶ್ರೀ ನಾರದೋಪದೇಶ ಮಾಹಾತ್ಮ್ಯೆಯಿಂದ ಪಾಪಿಷ್ಠನಾದ ಕ್ಷತ್ರಬಂಧುವೆಂಬುವನೂ ಸಹ ಮುಕ್ತಿಯನ್ನು ಹೊಂದಿದನೆಂದು ಹೇಳಲ್ಪಟ್ಟಿರುತ್ತದೆ. ಮೂಲದಲ್ಲಿ ನಿಗ್ರಹಃ ಎಂದರೆ ನಿರೋಧವು ಮಾತ್ರ ಹೇಳಲ್ಪಟ್ಟಿತು, ಯಾವುದರಿಂದ ಅಥವಾ ಯಾವನಿಂದ ಎಂಬುದು ಹೇಳಲ್ಪಡಲಿಲ್ಲವು ; ಜ್ಞಾನವಾನ್ ಎಂದು ಮೇಲೆ ಹೇಳಿರುವದರಿಂದ, ಶಾಸ್ತ್ರಜ್ಞಾನದಿಂದಲೇ ಆತನು ಜ್ಞಾನವಾನ್ ಆಗಿರುವದರಿಂದ, ಶಾಸ್ತ್ರಕೃತ ನಿಗ್ರಹ ವೆಂದು ವ್ಯಾಖ್ಯಾನ ಮಾಡಲ್ಪಟ್ಟಿತು, ಜ್ಞಾನ ಯೋಗಕ್ಕೆ ಮುಖ್ಯವಾಗಿ ಇಂದ್ರಿಯ ನಿಗ್ರಹವು ಆವಶ್ಯಕವು, ಪ್ರಕೃತಿ ವಾಸನೆಯು ಅನಾದಿಕಾಲದಿಂದ ಪ್ರಬಲವಾಗಿ ಅನುಸರಿಸಿ ಬರುವದರಿಂದ ಅದಕ್ಕೆ ವಶನಾಗಿ ವಿಷಯವಾಸನೆಯುಳ್ಳವನಾಗುವದರಿಂದ ರಾಗದ್ವೇಷಗಳಿಗೆ ವಶನಾಗಿ ಕೆಟ್ಟುಹೋಗುವನೆಂಬ ಭಾವವು. ಇಂತಹ ರಾಗದ್ವೇಷಗಳಿಗೆ ವಶನಾಗುವ ಸಪ್ರಮಾದತ್ವವು ಜ್ಞಾನ ಯೋಗಿಗೇನೆ ವಿಶೇಷವಾಗಿ ಉಂಟೆಂದೂ ಕರ್ಮ ಯೋಗಿಗೆ ಅಷ್ಟು ಪ್ರಮಾದವಲ್ಲವೆಂದೂ ಮುಂದಿನ ಶ್ಲೋಕದಲ್ಲಿ ಉಪದೇಶಿಸುತ್ತಾರೆ.

ಭಾಷ್ಯಾವತಾರಿಕೆಯ ಅರ್ಥವು:—ಹಿಂದಿನ ಶ್ಲೋಕದಲ್ಲಿ ಕರ್ಮವಾಸನಾನುಗುಣವಾಗಿ ಸರ್ವ ಪ್ರವೃತ್ತಿಗಳು ಎಂದು ಹೇಳಲ್ಪಟ್ಟಿತು. ಹೀಗೆ ಕರ್ಮವಾಸನಾ ಮೂಲಕವಾಗಿ ಪ್ರಾಪ್ತವಾಗುವ ಅನರ್ಥಗಳು ಯಾವುವು ಎಂಬುದು ಹೇಳಲ್ಪಡುತ್ತದೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. ಪ್ರಕೃತ್ಯನುಯಾಯಿತ್ವಪ್ರಕಾರಮಾಹ - ಕರ್ಮವಾಸನೆಗೆ ಅನುಗುಣವಾದ ಪ್ರವರ್ತನೆಯು; ಜ್ಞಾನವಾನ್ ಆದವನಿಗೂ ಕೂಡ ಉಂಟಾಗುವ ರೀತಿಯು ಹೇಗೆ ಎಂಬುವನ್ನು ತಿಳಿಸುತ್ತಾರೆ.

ಮೂಲಕ್ಕೆ ಅರ್ಥವು:—ಹಿಂದೆ ಕರ್ಮವಾಸನೆಯು ಮಹಾ ಬಲಿಷ್ಠವು. ಅದರ ಮುಂದೆ ಶಾಸ್ತ್ರಜ್ಞಾನವೂ ಕೂಡ ದುರ್ಬಲವೆಂದು ಹೇಳಲ್ಪಟ್ಟಿತು. ಕರ್ಮವಾಸನಾ ಬಲದಿಂದ ಉಂಟಾ

ಮೂ. ಇನ್ದ್ರಿಯಸ್ಯೇಂನ್ದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।
ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥ ೩೪.

ಗುವ ಅನರ್ಥಗಳು ಯಾವುವು ಎಂದು ತಿಳಿಸಿ ಅಂತಹ ಅನರ್ಥಗಳಿಗೆ ವಶನಾಗಿ ಕೆಟ್ಟು ಹೋಗ ಬೇಡವೆಂದು ಹಿತೋಪದೇಶವನ್ನು ಮಾಡುತ್ತಾರೆ:—ಇಂದ್ರಿಯಸ್ಯ - ಪಂಚ ಜ್ಞಾನೇಂದ್ರಿಯದ ಮತ್ತು ಇಂದ್ರಿಯಸ್ಯ - ಪಂಚ ಕರ್ಮೇಂದ್ರಿಯದ, ಇಂದ್ರಿಯಸ್ಯ ಇಂದ್ರಿಯಸ್ಯ ಎಂದು ಎರಡು ಸಲ ಹೇಳಿದರೆ ಪ್ರತಿ ಇಂದ್ರಿಯದ, ಎಂಬರ್ಥವು. ಇದರಿಂದ ಏಕಾದಶೇಂದ್ರಿಯಗಳೂ ಹೇಳಲ್ಪಟ್ಟವು; ೫ ಜ್ಞಾನೇಂದ್ರಿಯ, ೫ ಕರ್ಮೇಂದ್ರಿಯ, ಮತ್ತು ಮನಸ್ಸು ಹೀಗೆ ೧೧ ಇಂದ್ರಿಯಗಳ್ಗೆ ಅರ್ಥೇ-ಪ್ರಯೋಜನವಾದ ಶಬ್ದಸ್ಪರ್ಶಾದಿ ವಿಷಯದಲ್ಲಿ, ರಾಗದ್ವೇಷೌ-ಅವುಗಳನ್ನು ಹೊಂದಬೇಕೆಂಬ ಕಾಮನೆಯೂ, ತತ್ಪ್ರಾಪ್ತಿಯಲ್ಲಿ ಏನಾದರೂ ಪ್ರತಿಬಂಧಕದಿಂದಲೂ, ಅಥವಾ ಇತರ ಕಾರಣದಿಂದಲೂ ದ್ವೇಷವೂ, ವ್ಯವಸ್ಥಿತೌ-ತಪ್ಪಿದ್ದಲ್ಲವೆಂದು ನಿಷ್ಕರ್ಷಿಸಲ್ಪಟ್ಟಿರುವುವು. ಕರ್ಮಯೋಗಾಧಿಕಾರಿಯಾದ ನೀನು, ಜ್ಞಾನಯೋಗವನ್ನಾರಂಭಿಸುತ್ತೇನೆಂದು ಹೊರಟು ಅವುಗಳ ವಶನಾಗಬೇಡ. ಅಭ್ಯಾಸವಿಲ್ಲದ ಬ್ರಾಹ್ಮಣ ಹೋಮವನ್ನು ಮಾಡಿ ಗಡ್ಡ ಮೀಸೆ ಸುಟ್ಟುಕೊಂಡನೆಂಬ ಲೋಕಗಾದೆಯ ಪ್ರಕಾರ ನಿನಗೆ ಅಭ್ಯಾಸವಿಲ್ಲದ ಈ ಜ್ಞಾನಯೋಗವನ್ನಾರಂಭಿಸಿ ಈ ರಾಗದ್ವೇಷಗಳ ಕೈಗೆ ಸಿಕ್ಕಿ ಹಾಳಾಗಬೇಡವೆಂಬ ಹಿತೋಪದೇಶವು. ತೌ ಹಿ - ಈ ರಾಗದ್ವೇಷಾದಿಗಳಾದರೋ ಅಸ್ಯ - ಈ ಜ್ಞಾನಯೋಗಿಗೆ, ಪರಿಪಂಥಿನೌ - ಶತ್ರುಗಳು. ಹಿಂದಿನ ಶ್ಲೋಕವಾದ ಸದೃಶಂ ಚೇಷ್ಟತೇ ಎಂಬಲ್ಲಿ ಪ್ರಾರಬ್ಧ ಕರ್ಮಗಳ ವಾಸನಾನುಗುಣವಾಗಿಯೇ ಎಲ್ಲವೂ ನಡೆಯುತ್ತವೆ, ನಿಗ್ರಹಃ ಕಿಂಕರಿಷ್ಯತಿ, ಆಗ ಶಾಸ್ತ್ರಜನ್ಯಜ್ಞಾನವೇನೂ ಪ್ರಯೋಜನವಾಗುವದಿಲ್ಲವೆಂದು ಹೇಳಿ; ಈ ಶ್ಲೋಕದಲ್ಲಿ ತಯೋರ್ನವಶಮಾಗಚ್ಛೇತ್ ಎಂಬ ಉಪದೇಶವು ಸಮಂಜಸವೋ? ಕರ್ಮವಾಸನಾರೀತಿಯಲ್ಲೇ ಎಲ್ಲವೂ ನಡೆಯುವದರಿಂದ, ತಯೋರ್ನವಶಮಾಗಚ್ಛೇತ್ ಎಂಬ ಉಪದೇಶವು ನಿರರ್ಥಕವಲ್ಲವೋ? ಎಂದರೆ, ನಿರರ್ಥಕವಲ್ಲವು. ಈ ಉಪದೇಶವು ನಿರರ್ಥಕವಾದರೆ, ಹಾಗೆಯೇ ಎಲ್ಲಾ ಶಾಸ್ತ್ರೋಪದೇಶವೂ ನಿರರ್ಥಕವಾಗಬೇಕಾಗುತ್ತದೆ. ಇದಕ್ಕೆ ಸಮಾಧಾನವು ಹೇಗೆಂದರೆ, ಹಿಂದಿನ ಕರ್ಮ ವಾಸನೆಯನ್ನು ಅನುಸರಿಸಿ ಕರ್ಮ ಮಾಡುವಾಗಲೂ "ಕೃತಪ್ರಯತ್ನಾ ಪೇಕ್ಷಸ್ತು" ಎಂಬಸೂತ್ರದಲ್ಲಿ ಹೇಳಿರುವಹಾಗೆ ಕರ್ಮಕ್ಕೆ ಸಙ್ಕಲ್ಪರೂಪ ಇಚ್ಛೆಯಲ್ಲಿ ಸ್ವಾತಂತ್ರ್ಯವನ್ನೂ ಸರ್ವೇಶ್ವರನು ಜೀವಾತ್ಮನಿಗೆ ಕೊಟ್ಟಿರುತ್ತಾನೆ. ಆದುದರಿಂದ ಈ ಉಪದೇಶವು ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಾರಬ್ಧ ಕರ್ಮಾನುಗುಣವಾಗಿ ಕರ್ಮಗಳು ನಡೆಯುತ್ತವೆ ಎಂದು ಹೇಳಿದುದಕ್ಕೆ ವಿರುದ್ಧವಲ್ಲವು. ಒಂದುಕಾರ್ಯವು ಉಂಟಾಗಲು ಐದು ಹೇತುಗಳಿರಬೇಕೆಂದು ಮುಂದೆ "ಅಧಿಷ್ಠಾನಂತಥಾಕರ್ತಾ" ಎಂಬ ಶ್ಲೋಕದಲ್ಲಿ (ಗೀ. ೧೮. ೧೪.) ಉಪಪಾದಿತವು. ಅದರಲ್ಲಿ ಜೀವಾತ್ಮನ ಸಙ್ಕಲ್ಪಾದಿ ವ್ಯಾಪಾರವೂ ಒಂದು ಕಾರಣವೆಂದು ಹೇಳಲ್ಪಟ್ಟಿರುತ್ತದೆ. ಶಾಸ್ತ್ರಜ್ಞಾನದೊಂದಿಗೆ ವಿವೇಕಜನ್ಯ ಜ್ಞಾನವೂ ಸೇರಿದರೆ ಸಙ್ಕಲ್ಪವು ಒಳ್ಳೇ ವ್ಯಾಪಾರಕ್ಕೆ ಕಾರಣವಾಗುತ್ತದೆ. ಹಾಗೆ ವಿವೇಕಜನ್ಯಜ್ಞಾನವಿಲ್ಲದೆ ಸಙ್ಕಲ್ಪವು ವಿಷಯೋಪಭೋಗಗಳಲ್ಲಿ ಪ್ರವರ್ತಿಸಿದರೆ ಕೆಟ್ಟಕಾರ್ಯಗಳಿಗೆ ಹೇತುವಾಗುತ್ತವೆ ಎಂಬುದು ಸೂಚಿತವು. ಆದುದರಿಂದಲೇ ಸುಸಙ್ಕಲ್ಪಕ್ಕೆ ಹೇತುವಾಗಿ "ತಯೋರ್ನವಶಮಾಗಚ್ಛೇತ್" ಎಂದು ಉಪದೇಶಿಸಲ್ಪಟ್ಟಿತು. ಇದರಿಂದ ಹಿಂದಿನ ಶ್ಲೋಕದ ಮೂರು ಪೂರ್ವಪಕ್ಷಕ್ಕೂ ಸಮಾಧಾನವು ಹೇಳಲ್ಪಟ್ಟಿತು: (೧) ಶಾಸ್ತ್ರವನ್ನೂ ತದುಪದೇಶಕರನ್ನೂ ಕೊಟ್ಟು ವಿಧಿವಾಕ್ಯಗಳಿಗನುಸಾರವಾಗಿ ನಡೆಯಲು ವಿವೇಕವನ್ನೂ ಕೊಟ್ಟು ಪ್ರಥಮ ಸಙ್ಕಲ್ಪದಲ್ಲಿ ಆತನಿಗೆ ಸ್ವಾತಂತ್ರ್ಯವನ್ನೂ ಕೊಟ್ಟು,

ಭಾ. ಶ್ರೋತ್ರಾದಿ ಜ್ಞಾನೇಂದ್ರಿಯಸ್ಯಾರ್ಥೇ ಶಬ್ದಾದೌ ವಾಗಾದಿ ಕರ್ಮೇಂದ್ರಿಯಸ್ಯ ಚಾರ್ಥೇ ವಚನಾದೌ ಪ್ರಾಚೀನ ವಾಸನಾ-ಜನಿತ ತದನುಬುಭೂಷಾ ರೂಪೋ ರಾಗೋಽವರ್ಜನೀಯೋ ವ್ಯವಸ್ಥಿತಃ ; ತದನುಭವೇ ಪ್ರತಿಹತೇ ಚಾ ವರ್ಜನೀಯೋ ದ್ವೇಷೋ ವ್ಯವಸ್ಥಿತಃ. ತಾವೇವಂ ಜ್ಞಾನಯೋಗಾಯಯ ತಮಾನಂ ನಿಯಮಿತ ಸರ್ವೇಂದ್ರಿಯಂ

---

ಕರ್ಮವಾಸನೆಯು ತೊಂದರೆಯು ಆ ಕ್ಷಣದಲ್ಲಿ ಮಾತ್ರ ಇಲ್ಲದಹಾಗೆ ಕೃಪಾಪ್ರೇರಿತನಾಗಿ ಸರ್ವೇಶ್ವರನು ಮಾಡಿರುವದರಿಂದ ಮೊದಲನೆಯ ಮತ್ತು ಮೂರನೆಯ ಆಕ್ಷೇಪಣೆಗಳಿಗೆ ಸಮಾಧಾನವು ದೊರೆಯಿತು. (೨) ಗುರೂಪದೇಶಾದಿ ಸುಕೃತಗಳಿಂದ ಈತನಿಗೆ ಕರ್ಮವಾಸನೆಯನ್ನು ನಿಗ್ರಹಿಸಿ ನಡೆಯಬಹುದೆಂಬುದು ಏರ್ಪಟ್ಟಿತು. ಆದುದರಿಂದ "ತಯೋರ್ನವಶಮಾಗಚ್ಛೇತ್" ಎಂಬ ಪರಮ ಹಿತೋಪದೇಶವು ಸಮಂಜಸವಾದುದೇ.

ಭಾಷ್ಯಾರ್ಥವು :—ಶ್ರೋತ್ರಾದಿಜ್ಞಾನೇಂದ್ರಿಯಸ್ಯಾರ್ಥೇ - ಇದು ಮೊದಲಿನ ಇಂದ್ರಿಯಸ್ಯಾರ್ಥೇ ಎಂಬುದರರ್ಥವು, ಕಿವಿಯೇ ಮೊದಲಾದ ಜ್ಞಾನೇಂದ್ರಿಯದ ವಿಷಯವಾದ ಶಬ್ದಾದೌ – ಶಬ್ದಾದಿಗಳಲ್ಲಿ ಮೊದಲಿನ ಆದಿಪದವು ಮಿಕ್ಕ ನಾಲ್ಕು ಜ್ಞಾನೇಂದ್ರಿಯಗಳಾದ, ಕಣ್ಣು, ಮೂಗು, ನಾಲಿಗೆ, ತ್ವಕ್ಕು, ಇವುಗಳನ್ನು ಸೂಚಿಸುತ್ತದೆ. ಕೆಲವರು ಮನಸ್ಸನ್ನೂ ಸೇರಿಸಿ ಆರು ಜ್ಞಾನೇಂದ್ರಿಯಗಳೆಂದು ಹೇಳುವರು ; ಎರಡನೆಯ ಆದಿಪದದಿಂದ ಜ್ಞಾನೇಂದ್ರಿಯಗಳ ವಿಷಯಗಳು ಹೇಳಲ್ಪಟ್ಟವು ; ಇವುಗಳು ಕ್ರಮವಾಗಿ, ಶಬ್ದ, ರೂಪ, ಗಂಧ, ರಸ, ಸ್ಪರ್ಶಗಳು ; ವಾಗಾದಿ ಕರ್ಮೇಂದ್ರಿಯಸ್ಯಚಾರ್ಥೇ – ಮತ್ತು ವಾಕ್ಕೇ ಮೊದಲಾದ ಕರ್ಮೇಂದ್ರಿಯಗಳಿಗೆ ವಿಷಯವಾದ, ವಚನಾದೌ - ವಚನವೇ ಮೊದಲಾದವುಗಳಲ್ಲೂ, ಮೊದಲನೆಯ ಆದಿ ಪದದಿಂದ ಪಾಣಿ ಪಾದ ಪಾಯೂಪಸ್ಥಗಳು ಹೇಳಲ್ಪಟ್ಟವು, ಎರಡನೆಯ ಆದಿಪದದಿಂದ ಇವುಗಳಿಗೆ ವಿಷಯವಾದ ಶಿಲ್ಪ, ಸಂಚರಣ, ಮಲತ್ಯಾಗ, ಆನಂದಗಳು ಹೇಳಲ್ಪಟ್ಟವು ; ಪ್ರಾಚೀನ ವಾಸನಾ ಜನಿತ ತದನುಬುಭೂಷಾರೂಪೋ ರಾಗಃ - ಬಹುಕಾಲದಿಂದ ಬಂದ ವಾಸನೆಯಿಂದುಂಟಾದ ಆ ವಿಷಯವನ್ನನುಭವಿಸಬೇಕೆಂಬ ಇಚ್ಛೆಯೇ ರಾಗವೆನಿಸುತ್ತದೆ ; ಅದು, ಅವರ್ಜನೀಯೋ ವ್ಯವಸ್ಥಿತಃ - ತಪ್ಪಿದ್ದಲ್ಲವೆಂಬುದು ನಿಷ್ಕರ್ಷಿಸಲ್ಪಟ್ಟಿರುತ್ತದೆ. ಮತ್ತು ತದನುಭವೇ- ಆ ವಿಷಯಾನುಭವವು, ಪ್ರತಿಹತೇ ಸತಿಚ - ನಿರೋಧಿಸಲ್ಪಡಲಾಗಿ, ಅವರ್ಜನೀಯದ್ವೇಷೋ ವ್ಯವಸ್ಥಿತಃ - ದ್ವೇಷವೂ ತಪ್ಪಿದ್ದಲ್ಲವೆಂಬುದು ನಿರ್ಣಯವಾದ ವಿಷಯವು ; ಈ ಚೇತನನಿಗೆ ಪ್ರಾಚೀನ ಕರ್ಮವಾಸನಾನುಗುಣವಾಗಿ ವಿಷಯಾನುಭವದಲ್ಲಿಯೂ, ಆ ಆಶೆಗೆ ವಿಘಾತ ಉಂಟಾದರೆ ದ್ವೇಷ, ಅದರಿಂದುಂಟಾಗುವ ಕಲಹವೇ ಮುಂತಾದವುಗಳು ಪ್ರಾಪ್ತವಾಗುತ್ತವೆ. ವಾಸನೆಯಿಂದಲೇ ವಿಷಯಾನುಭವದಲ್ಲಿ ಇಚ್ಛೆಯುಂಟಾಗುತ್ತದೆ. ಆ ಇಚ್ಛೆಯಿಂದ ಪ್ರವೃತ್ತಿಯೂ ಪ್ರವೃತ್ತಿಗೆ ವಿಘಾತಉಂಟಾದರೆ ದ್ವೇಷವೂ ಪ್ರಾಪ್ತವಾಗುತ್ತವೆ. ಆದರೆ ಕರ್ಮವಾಸನಾ ಎಂತಾದ್ದೆಂದರೆ ಅದೂ ಜ್ಞಾನರೂಪವಾದುದೇ ; ಪ್ರಾಚೀನ ಕರ್ಮಗಳ ಮೂಲಕ ವಿಷಯಾನುಭವ ಮಾಡಬೇಕೆಂಬ ಇಚ್ಛೆಯು ಸಂಸ್ಕಾರ ರೂಪವಲ್ಲಿ ಅನುಸರಿಸಿ ಬರುತ್ತದೆಂಬ ತಾತ್ಪರ್ಯವು. ಆದುದರಿಂದಲೇ ಹಿಂದಿನ ಶ್ಲೋಕದಲ್ಲಿ ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇಃ - ಎಂಬದಾಗಿ ಹೇಳಲ್ಪಟ್ಟಿತು. ಆ ಕಾರಣದಿಂದಲೇ ಪ್ರಕೃತಿ ಶಬ್ದಕ್ಕೆ ಪ್ರಕೃತಿಯಿಂದುಂಟಾಗುವ, ಕರ್ಮವಾಸನಾ ಎಂದು ಭಾಷ್ಯವನ್ನು ಬರೆದಿರುತ್ತಾರೆ. ಈ ಶ್ಲೋಕದ ಅವತಾರಿಕೆಯಲ್ಲೂ ಕರ್ಮವಾಸನಾನುಗುಣ ಪ್ರವೃತ್ತಿಯನ್ನು ಹೇಳುವದಕ್ಕಾಗಿ, ಪ್ರಕೃತ್ಯನುಯಾಯಿತ್ವವೆಂಬ ಪ್ರಯೋಗವು. ರಾಗೋ ಅವರ್ಜನೀಯಃ, ದ್ವೇಷೋ ಅವರ್ಜನೀಯ ವೆಂದು ವ್ಯಾಖ್ಯಾನಮಾಡಲು

ಛಾ. ಸ್ವವಶೇ ಕೃತ್ವಾ ಪ್ರಸಹ್ಯ ಸ್ವಕಾರ್ಯೇಷು ಸಂಯೋಜಯತಃ. ತತಶ್ಚಾಯಮಾತ್ಮ ಸ್ವರೂಪಾನುಭವವಿಮುಖೋ ವಿನಷ್ಟೋ ಭವತಿ. ಜ್ಞಾನಯೋಗಾರಂಭೇಣ ರಾಗ ದ್ವೇಷ ವಶಮಾಗಮ್ಯ ನವಿನಶ್ಯೇತ್. ತೌ ರಾಗದ್ವೇಷಾವಹ್ಯಸ್ಯ ದುರ್ಜಯೌ ಶತ್ರೂ ಜ್ಞಾನಾಭ್ಯಾಸಂ ವಾರಯತಃ ॥ ೩೪ ॥

---

ಕಾರಣವೇನೆಂದರೆ, ವ್ಯವಸ್ಥಿತಃ ಎಂಬ ಪದದಲ್ಲಿ ತೋರುವ ಉಪಸರ್ಗದಿಂದ ವ್ಯಕ್ತವು. ರಾಗ ದ್ವೇಷಗಳು ನಿಷ್ಕರ್ಷಿಸಲ್ಪಟ್ಟವುಗಳು ಎಂದರೆ ಅವುಗಳು ತಪ್ಪಿದ್ದಲ್ಲವೆಂಬ ಭಾವವು. ತೌ - ಆ ಪ್ರಬಲವಾದ ರಾಗದ್ವೇಷಗಳು, ಜ್ಞಾನಯೋಗಾಯ ಯತಮಾನಂ - ಜ್ಞಾನಯೋಗವ ನ್ನಾರಂಭಿಸಬೇಕೆಂದು ಪ್ರಯತ್ನಿಸಿರುವವನನ್ನು, ಆ ಕಾರಣದಿಂದ, ನಿಯಮಿತ ಸರ್ವೇಂದ್ರಿ ಯಂ - ಸಮಸ್ತ ಇಂದ್ರಿಯಗಳನ್ನು ನಿಯಮಿಸುವವನಾದರೂ, ಅಲ್ಪಕಾಲ ಇಂದ್ರಿಯ ಗಳ ನಿಗ್ರಹವನ್ನು ಮಾಡಿದವನಾದರೂ ಎಂಬರ್ಥವು, ಏವಂ - ಹೀಗೆ ಕರ್ಮವಾಸನೆಗೆ ಅನು ಸಾರವಾಗಿ ಪ್ರವೃತ್ತಿ ಹೊಂದಿದವನಾಗಿ, ಸ್ವವಶೇಕೃತ್ವಾ - ತಮ್ಮ ಎಂದರೆ ರಾಗದ್ವೇಷಗಳ ವಶವನ್ನು ಮಾಡಿ, ಪ್ರಸಹ್ಯ - ಬಲಾತ್ಕರಿಸಿ, ಸ್ವಕಾರ್ಯೇಷು–ತಮ್ಮ ಎಂದರೆ ಆ ರಾಗದ್ವೇಷಗಳ ಕಾರ್ಯಗಳಾದ ವಿಷಯಾನುಭವಗಳಲ್ಲೂ ಮತ್ತು ವಚನ ಆದಾನವೆಂದರೆ ಸ್ವೀಕರಿಸೋಣ ಇವೇ ಮೊದಲಾದ ಕರ್ಮಗಳಲ್ಲಿ, ಸಂಯೋಜಯತಃ - ಸಂಬಂಧ ವುಂಟಾಗುವಹಾಗೆ ಮಾಡುತ್ತವೆ, ಸೇರಿಸುತ್ತವೆ ; ತತಶ್ಚ -ಆ ಕಾರಣದಿಂದಲೇ, ಅಯಂ - ಈ ಜ್ಞಾನಯೋಗಾರಂಭದಲ್ಲಿರುವ ವನು, ಆತ್ಮಸ್ವರೂಪದ ಅನುಭವದಿಂದ ವಿಮುಖನಾಗಿ, ವಿನಷ್ಟೋಭವತಿ - ಹಿಂದೆ ಹೇಳಿದ ಕಾಮದಿಂದ ಕ್ರೋಧ, ಕ್ರೋಧದಿಂದ ಮೋಹ, ಹೀಗೆ ಕ್ರಮವಾಗಿ "ಬುದ್ಧಿನಾಶಾತ್ಪ್ರಣಶ್ಯತಿ" ಎಂದು ಹೇಳಿದಹಾಗೆ ನಷ್ಟನಾಗುವನು, ಪುನಃ ಪುನಃ ಸಂಸಾರದಲ್ಲೇ ಬಿದ್ದು ನರಳುವನು ಎಂಬರ್ಥವು. ಮುಂದೆ ತಯೋರ್ನವಶ ಮಾಗಚ್ಛೇತ್ ಎಂಬುದರ ವ್ಯಾಖ್ಯಾನವನ್ನು ಬರೆ ಯುತ್ತಾರೆ :—ಜ್ಞಾನಯೋಗಾರಂಭೇಣ-ಜ್ಞಾನಯೋಗವನ್ನಾರಂಭಿಸುವದರಿಂದ, ರಾಗದ್ವೇಷ ವಶಮಾಗಮ್ಯ-ರಾಗದ್ವೇಷಗಳಿಗೆ ವಶನಾಗಿ, ಆಕಾರಣದಿಂದ,'ನವಿನಶ್ಯೇತ್-ಕೆಟ್ಟುಹೋಗುವದು ಬೇಡ; ತೌ ರಾಗದ್ವೇಷೌಹಿ - ಆ ರಾಗದ್ವೇಷಗಳಾದರೋ ಅಸ್ಯ - ಈ ಕರ್ಮಯೋಗವನ್ನು ಬಿಟ್ಟ ಈ ಜ್ಞಾನಯೋಗಾರಂಭಕನ, ದುರ್ಜಯೌ ಶತ್ರೂ-ಜಯಿಸಲಸಾಧ್ಯರಾದ ಎರಡು ಶತ್ರು ಗಳಾಗಿ ಜ್ಞಾನಾಭ್ಯಾಸಂ-ಜ್ಞಾನಯೋಗದಲ್ಲಿ ಅಭ್ಯಾಸರೂಪವಾದ ಆತ್ಮಸ್ವರೂಪಾನುಭವವನ್ನು, ವಾರಯತಃ-ತಪ್ಪಿಸುತ್ತವೆ. ಇಲ್ಲಿ ತಯೋರ್ನವಶಮಾಗಚ್ಛೇತ್ ಎಂಬುದರಿಂದ ಸುಮ್ಮನೆ ರಾಗ ದ್ವೇಷಗಳ ವಶವಾಗಬೇಡವೆಂದಿಷ್ಟುಮಾತ್ರವೇ ಹೇಳಲ್ಪಟ್ಟಿತೆಂದು ಭಾವಿಸಕೂಡದು. ಹಾಗೆ ಅರ್ಥಮಾಡಿದರೆ ಅರ್ಜುನನಿಗೆ ಉಪದೇಶಿಸುತ್ತಿರುವ ಕರ್ಮಯೋಗವು ಯಾವಾಗಲೂ ಜ್ಞಾನ ಯೋಗಕ್ಕೆ ಅಙ್ಗವೆಂದು ಹೇಳಿದಂತಾಗುವದು. ನೀನೂ ಜ್ಞಾನಯೋಗವನ್ನವಲಂಬಿಸುವಾಗ ಕಾಮದ್ವೇಷಗಳಿಗೆ ವಶವಾಗಬೇಡವೆಂಬರ್ಥವಾಗುತ್ತದೆ. ಈಗ ಅರ್ಜುನನಿಗೆ ತಿಳಿಸಬೇಕಾದು ದೇನು ಎಂದರೆ ಕರ್ಮಯೋಗವನ್ನು ತ್ಯಜಿಸಿ. ಜ್ಞಾನಯೋಗವನ್ನು ಅವಲಂಬಿಸುವದು ಸಾಧ್ಯ ವಲ್ಲವೆಂದೂ ಅಪಾಯಕರವೆಂದೂ ಹೇಳಬೇಕಾದ ಪ್ರಕರಣವು, ಆದುದರಿಂದ ಕರ್ಮಯೋಗವೇ ಜ್ಞಾನಯೋಗಕ್ಕಿಂತ ಜ್ಯಾಯಾ ಹಿತಕರವಾದುದಾಗಿ ಶ್ರೇಷ್ಠವು ಎಂದೂ, ಆದುದರಿಂದ ಜ್ಞಾನ ಯೋಗವನ್ನು ಸ್ವತಂತ್ರಿಸಿ ಆರಂಭಿಸುವದು ಸರಿಯಲ್ಲವೆಂದು' ಉಪದೇಶಿಸಬೇಕಾದುದರಿಂದ, ತಯೋರ್ನವಶಮಾಗಚ್ಛೇತ್ ಎಂದರೆ ನೀನೂ ಅಭ್ಯಾಸವಿಲ್ಲದ ಜ್ಞಾನಯೋಗದಲ್ಲಿ ಪ್ರವೇ

ಶಿಸಿ ಆ ರಾಗದ್ವೇಷಗಳಿಗೆ ತುತ್ತಾಗಬೇಡವೆಂದೇ ಅರ್ಥಹೇಳತಕ್ಕದ್ದು ಯುಕ್ತವು. ಹೀಗೆ ಜ್ಞಾನಯೋಗವನ್ನು ಮಾತ್ರವೇ ಆರಂಭಿಸುವನಿಗೆ ರಾಗದ್ವೇಷಗಳು ಪ್ರಾಪ್ತವಾಗುತ್ತವೆ ಎಂದು ಹೇಳಿದುದರಿಂದ ಜ್ಞಾನಯೋಗಪ್ರವೇಶದಲ್ಲಿ ಈ ರಾಗದ್ವೇಷಗಳ ಕೈಗೆ ಸಿಕ್ಕುವ ಅಪಾಯ ಉಂಟೆಂದೂ ಭಾವಿಸತಕ್ಕದ್ದಲ್ಲವು. ಜ್ಞಾನಯೋಗವು ತುಂಬಾ ಪವಿತ್ರಕರವಾದುದು. ಆ ಕಾರಣದಿಂದ ಜ್ಞಾನಯೋಗವು ಅನುಪಾದೇಯವೂ ಎಂದೂ, ಆದರೆ ಕರ್ಮಯೋಗವನ್ನು ಅನುಷ್ಠಿಸದೇ ಇರುವನಾದುದರಿಂದ ಅನಾದಿಯಾಗಿಬಂದ ಪಾಪಸಂಚಯಗಳು ನಷ್ಟವಾಗದಿರುವದರಿಂದ ಪ್ರಬಲ ಕರ್ಮವಾಸನಾ ಇರುವದರಿಂದ ಇಂತಹ ಪ್ರಬಲ ಪರಿಪಂಥಿಗಳು ಹತವಾಗದಿರುವ ಪ್ರಯುಕ್ತ ಜ್ಞಾನಯೋಗದಲ್ಲಿ ಅಂತಹ ಶತ್ರುಗಳ ಕೈಯಿಗೆ ಸಿಕ್ಕಿ ನಾಶವಾಗುವ ಸಂದರ್ಭ ಉಂಟೆಂಬ ಭಾವವು. ಆದರೆ ಜ್ಞಾನಯೋಗವು ಶಕ್ತಿಯಿರುವವನಿಗೆ ಒಳ್ಳೆಯ ಸಾಧನವೇ ಎಂಬುದನ್ನು ಜ್ಞಾಪಿಸುವದಕ್ಕಾಗಿಯೇ **"ನಿಯಮಿತ ಸರ್ವೇಂದ್ರಿಯಂ"** ಎಂಬ ಪ್ರಯೋಗವು. ಇನ್ನೂ ಅರ್ಜುನನು ಆವಶ್ಯಕವಾದ ಕರ್ಮಯೋಗವನ್ನೇ ಸರಿಯಾಗಿ ಅನುಷ್ಠಿಸಲಿಲ್ಲವು. ಇಂತಹ ಆವಶ್ಯಕವಾದ ಕರ್ಮಯೋಗವನ್ನು ಚನ್ನಾಗಿ ಅನುಷ್ಠಿಸುವವಕ್ಕೆ ಮುಂಚಿಯೇ ಅದನ್ನು ತ್ಯಜಿಸಿ ಅಭ್ಯಾಸವಿಲ್ಲದ, ಕಷ್ಟವಾದ, ಆವಶ್ಯಕವಲ್ಲದ, ಸಾಮರ್ಥ್ಯವಿರುವವನಿಗೆ ಮಾತ್ರ ಉಪಾದೇಯವಾದ, ಜ್ಞಾನಯೋಗವನ್ನಾರಂಭಿಸಿ, ರಾಗದ್ವೇಷಗಳಿಗೆ ವಶನಾಗಿ ಕೆಟ್ಟು ಹೋಗಬೇಡವೆಂಬ ತಾತ್ಪರ್ಯವು. ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗದಲ್ಲಿ ಪ್ರವರ್ತಿಸುವನಿಗೆ ಇಬ್ಬರು ಪ್ರಬಲ ಶತ್ರುಗಳು ಕಾದಿರುತ್ತಾರೆ. ಮೋಕ್ಷಮಾರ್ಗದಲ್ಲಿ ಹೋಗುವವನನ್ನು ಕಾದುಕೊಂಡಿದ್ದು ಆತನ ತಲೆ ಒಡೆಯುವ ದರೋಡೆ ಕೋರರು ಎಂದುಪದೇಶಿಸಿರುತ್ತಾರೆ. ಇಲ್ಲಿ ಒಂದು ಶಙ್ಕಾ ಉತ್ಪನ್ನವಾಗಬಹುದು; ಈ ಭಯವು ಕರ್ಮಯೋಗಿಗಿಲ್ಲವೋ ಎಂದರೆ, ಚಿರಕಾಲ ಪ್ರವೃತ್ತಿರೂಪವಾದ ಅಭ್ಯಾಸವಿರುವದರಿಂದ ಈ ಕರ್ಮಯೋಗವು ಪ್ರವೃತ್ತಿರೂಪವಾದುದರಿಂದ ಅಂತಹ ಪ್ರಮಾದ ಭಯಗಳಿರುವದಿಲ್ಲವು. ಅದೂ ಅಲ್ಲದೆ ಹಿಂದೆ ೩೧ನೆಯ ಶ್ಲೋಕದಲ್ಲಿ ಕರ್ಮಯೋಗಿಗಳು **ಮುಚ್ಯಂತೇ ತೇಽಪಿಕರ್ಮಭಿಃ"** ಎಂದು ಹೇಳಿರುವದರಿಂದ ಕ್ಷೀಣಪಾಪರಾಗುವದರಿಂದ ಅಂತಹ ಪ್ರಮಾದಕ್ಕೆ ಅವಕಾಶವಿಲ್ಲವೆಂದು ಭಾವಿಸತಕ್ಕದ್ದು. ಇಂತಹ ಕರ್ಮಯೋಗವನ್ನು ಬಿಟ್ಟು ಅಭ್ಯಾಸವಿಲ್ಲದ ಜ್ಞಾನಯೋಗಕ್ಕೆ ಹಾರಿದರೆ ಜಾರಿ ಬೀಳುವದರಲ್ಲಿ ಸಂದೇಹವಿಲ್ಲವೆಂಬ ಭಾವವು. ಮುಂದೆ ಹೇಳುವ ಕಾಮ ಏಷ ಕ್ರೋಧ ಏಷಃ (೩೭ನೆಯ ಶ್ಲೋಕವು) ಎಂಬುದನ್ನು ಸೂಚಿಸುವದಕ್ಕಾಗಿ ಇಲ್ಲಿ **ದುರ್ಜಯೌ** ಶತ್ರೂ ಎಂದು ವ್ಯಾಖ್ಯಾನ ಮಾಡಲ್ಪಟ್ಟಿತು. || ೩೪ ||

**ಅವತಾರಿಕೆಯು :—** ಹಿಂದಿನ ಎರಡು ಶ್ಲೋಕಗಳಲ್ಲಿ ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗವನ್ನಾರಂಭಿಸಿದವನು ಕರ್ಮವಾಸನೆಗೆ ಒಳಪಟ್ಟು ಪಾಪಗಳು ಕಳೆಯದಿರುವದರಿಂದ ಕರ್ಮವಾಸನೆಗೆ ಅನುಗುಣವಾಗಿ ಪ್ರವರ್ತಿಸುವನೆಂದೂ, ಅಂತವನಿಗೆ ಶಾಸ್ತ್ರಜನ್ಯಜ್ಞಾನವೂ ಕೂಡ ಕಾರ್ಯಕಾರಿಯಾಗಲಾರದೆಂದೂ, ಮಹಾಬಲಿಷ್ಠರಾದ ಶತ್ರುಗಳಾದ ರಾಗದ್ವೇಷಗಳಿಗೆ ವಶನಾಗುತ್ತನೆಂದೂ, ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಸ್ವಲ್ಪಕಾಲ ತನ್ನ ಆತ್ಮೋಪಾಸನದ ಅನುಷ್ಠಾನ ಸುಖವನ್ನು ಹೊಂದಿ ಅನಂತರ ವಿಚ್ಛಿತ್ತಿಯುಂಟಾದರೂ ಆಗಲೂ ಅದು ಭಯಾವಹವಾದುದರಿಂದ ಅಂತಹ ಪ್ರಮಾದವಿಲ್ಲದ ಕರ್ಮಯೋಗ ವಿಚ್ಛಿತ್ತಿಯಲ್ಲಾದರೋ ಉತ್ತರಜನ್ಮದಲ್ಲಾದರೂ ಈತನಿಗೆ ಅದು ಶ್ರೇಯೋವಹವಾಗುವದರಿಂದ ಕರ್ಮಯೋಗವೇ ಜ್ಞಾನಯೋಗಕ್ಕಿಂತಲೂ ಶ್ರೇಷ್ಠವೆಂದು ಹೇಳುತ್ತಾರೆ.

ಮೂ. ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫.

ಮೂಲಕ್ಕೆ ಅರ್ಥವು :—ಸ್ವಧರ್ಮಃ - ಸರ್ವದಾ ಕರ್ಮವನ್ನೆಸಗಲು ಸಹಕಾರಿಯಾದ ಪ್ರಕೃತಿಸಂಬಂಧವಿರುವದರಿಂದ ಸುಲಭವಾಗಿ ಸ್ವಧರ್ಮವಾದ ಕರ್ಮಯೋಗವು, ವಿಗುಣಃ - ಅಙ್ಗಲೋಪವಿರುವದರಿಂದಲಾಗಲಿ ಅನುಷ್ಠಾನದಲ್ಲಿ ನ್ಯೂನತೆಗಳು ಸ್ವಲ್ಪ ಇದ್ದರೂ ಕೂಡ ಅಥವಾ ಆತ್ಮೋಪಾಸನಾನಂದವು ಇದರಲ್ಲಿಲ್ಲದುದರಿಂದಲಾಗಲಿ, ಗುಣಲೋಪವಿರುವದಾದರೂ ಕೂಡ, ಸ್ವನುಷ್ಠಿತಾತ್ - ಸ್ವಲ್ಪಕಾಲ ಆತ್ಮೋಪಾಸನವು ಚನ್ನಾಗಿ ಮಾಡಲ್ಪಟ್ಟು ಅನಂತರ ವಿಚ್ಛಿತ್ತಿಯುಳ್ಳ, ಅಥವಾ ಆತ್ಮೋಪಸನಾನಂದರೂಪ ಒಳ್ಳೇ ಗುಣವುಳ್ಳದುದಾಗಿ ಸ್ವಲ್ಪಕಾಲ ಅನುಷ್ಠಿಸಲ್ಪಟ್ಟು ಅನಂತರ ವಿಚ್ಛಿತ್ತಿಯುಳ್ಳ, ಪರಧರ್ಮಾತ್ - ಸ್ವಧರ್ಮವಾದ ಕರ್ಮಯೋಗಕ್ಕಿಂತ ಇತರ ಧರ್ಮವಾದ ಜ್ಞಾನಯೋಗಕ್ಕಿಂತಲೂ, ಶ್ರೇಯಾನ್ - ಶ್ರೇಷ್ಠವು.] ಇಲ್ಲಿ ಶ್ರೇಯಾನ್ - ಎಂಬುದು ಅರ್ಜುನ ಪ್ರಶ್ನೆಯ ಪದವಾದ ಜ್ಯಾಯಸ್ತ್ವವನ್ನು ಬೋಧಿಸುವದರಿಂದ ಕರ್ಮಯೋಗವೇ ಜ್ಞಾನಯೋಗಕ್ಕಿಂತ ನಿನಗೆ ಕ್ಷೇಮಕರವಾದುದೆಂದೇ ಅನೇಕ ಹೇತುಗಳಿಂದ ಉಪದೇಶಿಸುತ್ತಾ ಬಂದಿರುವದರಿಂದ, ಪ್ರಕರಣಾನುಗುಣವಾಗಿ ಸ್ವಧರ್ಮ ಶಬ್ದದಿಂದ ಕ್ಷತ್ರಿಯನಾದ ಅರ್ಜುನನ ಯುದ್ಧಾರಂಭಕ್ಕೆ ಅನುಗುಣವಾದ ಕರ್ಮಯೋಗವೇ ಹೇಳಲ್ಪಟ್ಟಿತೆಂದು ಭಾವಿಸಿ, ಅದಕ್ಕೆ ಪ್ರತಿಯಾಗಿ ಹೇಳಲ್ಪಟ್ಟ ಪ್ರಕರಣಾನುಗುಣವಾದ ಜ್ಞಾನಯೋಗವು ಪರಧರ್ಮ ಶಬ್ದದಿಂದ ಹೇಳಲ್ಪಟ್ಟಿತೆಂದು ಭಾವಿಸಿ, ಹಿಂದೆ ಕರ್ಮಜ್ಯಾಯೋಹ್ಯಕರ್ಮಣಃ ಎಂದು ಹೇಳಿದ ಅಭಿಪ್ರಾಯವೇ ಇಲ್ಲಿ ಸಿಗಮನಮಾಡಿ ಹೇಳಲ್ಪಟ್ಟಿತೆಂದು ಭಾವಿಸುವದು ಸಮಂಜಸವಾಗಿ ತೋರುತ್ತದೆ. ಇತರರು ಮಾಡಿರುವ ಅರ್ಥಗಳು ಪ್ರಕರಣಕ್ಕೆ ಸರಿಹೋಗುವದಿಲ್ಲವು. ಅಥವಾ ಒಂದುವೇಳೆ ಜ್ಞಾನಯೋಗವೇ ಮಾಹಾತ್ಮ್ಯಯುಳ್ಳದ್ದು, ಆದುದರಿಂದ ಅದು ಸಗುಣವಾದುದಾದರೂ ಕರ್ಮಯೋಗವಾದರೋ ಅಂತಹ ಗುಣವಿಲ್ಲದೆ ವಿಗುಣವಾದರೂ, ಕರ್ಮಯೋಗವೇ ಶ್ರೇಯಾನ್ ಎಂಬ ಅಭಿಪ್ರಾಯವು. ಅಥವಾ ವಿಗುಣಃ ಎಂಬ ಶಬ್ದಕ್ಕೆ, ನಾನು ಹಿಂದೆ ನಿನಗೆ ಉಪಪಾದಿಸಿ ಹೇಳಿದರೀತಿಯಲ್ಲಿ ಸುಕರವಾಗಿ, ಪ್ರಮಾದ ರಹಿತವಾಗಿ, ದೇಹಯಾತ್ರೆಯ ಸಿದ್ಧಿಗೆ ಅನುಕೂಲಿಸುವದಾಗಿ, ಪರಮ ಪುರುಷನಾದ ನನ್ನ ಪ್ರೀತಿ ಸಂಪಾದಕವಾಗಿ, ದೇವತೆಗಳಿಗೆ ಹವಿಸ್ಸಮರ್ಪಣಮಾಡದ ದೋಷರಹಿತವಾಗಿ,ಲೋಕಸಙ್ಗ್ರಹರೂಪ ಪ್ರಯೋಜನವುಳ್ಳದ್ದಾಗಿ, ಲೋಕದ ಜನರಿಗೆ ಭ್ರಮೆಯನ್ನು ತಪ್ಪಿಸುವದಾಗಿ, ಹೀಗೆ ನಾನಾವಿಧ ವಿಶೇಷವಾದ ಗುಣವುಳ್ಳದು ಕರ್ಮಯೋಗವು ಎಂದೂ ಅರ್ಥಮಾಡಬಹುದು. ಆದರೆ ವಿಗುಣಃ ಎಂಬ ಶಬ್ದಕ್ಕೆ ರೂಢಿಯಲ್ಲಿ ಅವಗುಣವುಳ್ಳವೆಂಬರ್ಥವಾಗುವಾಗ ವಿ ಎಂಬ ಪ್ರತ್ಯಯಕ್ಕೆ ವಿಶೇಷವೆಂಬ ಅರ್ಥವುಂಟೆಂಬುದರಿಂದ ರೂಢವನ್ನು ತ್ಯಜಿಸಿ ವ್ಯುತ್ಪತ್ತಿಯಿಂದ ಅರ್ಥಮಾಡಬಹುದೋ? ಎಂದರೆ ಕವಿಗಳು ಪ್ರಕರಣಾನುಗುಣವಾಗಿ ಹಾಗೆ ಪ್ರಯೋಗಿಸಿರುವ ಅನೇಕ ನಿದರ್ಶನಗಳುಂಟು. ಭಾಗವತದಲ್ಲಿ 'ವಿರಾಡ ವಿದುಷಾಂ'(೧೦-೮೩.೧೭) ಎಂಬಲ್ಲಿ ಕೆಲವರು ಅವಿದುಷಾಂ ಅವಿದ್ವಾಂಸರೆಂದು ಕೆಲವರು ಅರ್ಥ ಮಾಡಿದ ಹಾಗೆ ಅರ್ಥ ಮಾಡದೆ, ಅಕಾರವಾಚ್ಯನಾದ ವಿಷ್ಣುವನ್ನು ತಿಳಿದವನು ಎಂದು ಅರ್ಥಮಾಡಿರುತ್ತಾರೆ. ಹಾಗೆಯೇ "ಅಜ್ಞಾನ" ಶಬ್ದಕ್ಕೂ ಅಕಾರವಾಚ್ಯನಾದ ಶ್ರೀ ಮಹಾವಿಷ್ಣುವಿನ ಜ್ಞಾನವೆಂದು ಪ್ರಕರಣಾನುಗುಣವಾಗಿ ಅರ್ಥಮಾಡಿರುತ್ತಾರೆ. ಹೀಗೆ ವಿಗುಣವೆಂದು ಕರ್ಮಯೋಗಕ್ಕೆ ಜ್ಯಾಯಸ್ತ್ವವನ್ನು ಹೇಳುವ ಪದವೆಂದು ಗ್ರಹಿಸಿ ವಿಶೇಷ ಗುಣವುಳ್ಳದ್ದೆಂದು ಅರ್ಥಮಾಡುವದರಲ್ಲಿ ಸ್ವಾರಸ್ಯವುಂಟು. ಜ್ಯಾಯಸ್ತ್ವವು ಹೇಗೆ ಎಂದರೆ ಉತ್ತರಾರ್ಧದಿಂದ ಉಪಪಾದಿಸುತ್ತಾರೆ. ಸ್ವಧರ್ಮೇ

**ಭಾ- ಅತಸ್ಸುಶಕತಯಾ ಸ್ವಧರ್ಮಭೂತಃ - ಕರ್ಮಯೋಗೋವಿಗುಣೋಪಿ ಅಪ್ರಮಾದ ಗರ್ಭಃ ಪ್ರಕೃತಿಸಂಸೃಷ್ಟಸ್ಯ ದುಶ್ಶಕತಯಾ ಪರಧರ್ಮಭೂತಾತ್ - ಜ್ಞಾನಯೋಗಾತ್ ಸಗುಣಾದಪಿ ಕಿಂಚಿತ್ಕಾಲ ಮನುಷ್ಠಿತಾತ್ ಸಪ್ರಮಾದಾ ಚ್ಛ್ರೇಯಾನ್ ; ಸ್ವೇನೈವೋ**

ಕರ್ಮಯೋಗದಲ್ಲೇ, **ನಿಧನಂ** - ಮರಣವು, ಎಂದರೆ ಕರ್ಮಯೋಗಾನುಷ್ಠಾನದಲ್ಲೇ ಮರಣ ಪ್ರಾಪ್ತಿಯಾಗಿ ವಿಚ್ಛಿತ್ತಿಯುಂಟಾದರೂ, **ಶ್ರೇಯಃ** - ಉತ್ತರ ಜನ್ಮದಲ್ಲಾದರೂ ಶ್ರೇಯ ಸ್ಕರವು, ಪುನಃ ಕರ್ಮಯೋಗವನ್ನೇ ಅವಲಂಬಿಸುವನಾಗಿ ಭಕ್ತಿಯೋಗವನ್ನು ಹೊಂದುವ ನೆಂಬ ಭಾವವು, **ಪರಧರ್ಮಃ** - ಜ್ಞಾನಯೋಗಾರಂಭವಾದರೋ ವಿಚ್ಛಿತ್ತಿಯನ್ನು ಹೊಂದಿ ಸುವದರಿಂದ, **ಭಯಾವಹಃ** - ಮುಂದಿನ ಜನ್ಮದಲ್ಲಿ ಶ್ರೇಯಸ್ಸನ್ನು ಹೊಂದುವ ಅವಕಾಶವಿಲ್ಲ ದುದರಿಂದ, ಸಪ್ರಮಾದವಾದುದು. ಇದೂ ಸೇರಿ ಒಂಭತ್ತು ಕಾರಣಗಳಿಂದ ಕರ್ಮಯೋಗ ವನ್ನು ತ್ಯಾಗಮಾಡಿ ಜ್ಞಾನಯೋಗಾರಂಭಿಸುವದಕ್ಕಿಂತ ಕರ್ಮಯೋಗವೇ ಶ್ರೇಷ್ಠವೆಂದು ಬಹು ಸ್ವಾರಸ್ಯವಾಗಿ ಉಪಪಾದಿಸಿರುತ್ತಾರೆ. ಅರ್ಜುನನು ತನ್ನ ಸ್ವಧರ್ಮವಾದ ಯುದ್ಧವ್ಯಾಪಾರ ವನ್ನು ಬಿಟ್ಟು ಜ್ಞಾನಯೋಗದಲ್ಲಿ ಪ್ರವರ್ತಿಸಬೇಕೆಂಬ ಆಶೆಯುಳ್ಳವನಾಗಿ ಪ್ರಥಮ ಶ್ಲೋಕದಲ್ಲಿ **"ಜ್ಯಾಯಸೀ ಚೇತ್ಕರ್ಮಣಸ್ತೇಮತಾಬುದ್ಧಿರ್ಜನಾರ್ದನ। ತತ್ಕಿಂಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ"** ಎಂದು ಆಕ್ಷೇಪಿಸಿದುದರಿಂದ, ಕರ್ಮತ್ಯಾಗಮಾಡಿ ಜ್ಞಾನಯೋಗದಲ್ಲಿ ಪ್ರವರ್ತಿಸಕೂಡದೆಂದೂ ಅಂತಹ ಜ್ಞಾನಯೋಗಕ್ಕಿಂತ ಕರ್ಮಯೋಗಕ್ಕೆ ಜಾಯಸ್ತ್ವವೂ ಎಂದೂ ಇದುವರೆಗೂ ಹತ್ತು ಕಾರಣಗಳಿಂದ ಉಪಪಾದಿಸಿರುತ್ತಾರೆ. ಅವು ಯಾವುವೆಂಬುದನ್ನು ಅಧ್ಯಾಯಾಂತ್ಯದಲ್ಲಿ ಕಾಣಬಹುದು. ಈ ಶ್ಲೋಕಾಭಿಪ್ರಾಯವು ತುಂಬಾ ಮುಖ್ಯವಾದುದರಿಂದ ಪುನಃ ೧೮ನೆಯ ಅಧ್ಯಾಯದಲ್ಲಿ ಇದನ್ನು ಜ್ಞಾಪಕಕ್ಕೆ ತರುತ್ತಾರೆ. (ಗೀ. ೧೮.೪೭.)

**ಭಾಷ್ಯಾರ್ಥವು :—ಅತಃ** - ಹಿಂದಿನ ಎರಡು ಶ್ಲೋಕದಲ್ಲೂ ಉಪಪಾದಿಸಲ್ಪಟ್ಟ ಕರ್ಮ ವಾಸನೆಗೆ ಅನುಸಾರವಾಗಿ ಪ್ರವೃತ್ತಿಯಿರುವದರಿಂದ, **ಸುಶಕತಯಾ** - ತನಗೆ ಪ್ರಕೃತಿಸಂಬಂಧ ವಿರುವದರಮೂಲಕ ಅಭ್ಯಾಸಮುಖೇನ ಸುಲಭವಾಗಿರುವದರಿಂದ; ಸ್ವಧರ್ಮಭೂತವಾದ ಕರ್ಮ ಯೋಗವು, **ವಿಗುಣೋಪಿ** - ಅಜ್ಞಲೋಪದಿಂದ ಗುಣವಿಲ್ಲದಿದ್ದರೂ ಕೂಡ; ಅಥವಾ ಆತ್ಮೋ ಪಾಸನಾನಂದವಿಲ್ಲದಿರುವದರಿಂದ ಸ್ವಲ್ಪ ಗುಣವಿಲ್ಲದುದೆಂದೆನಿಸಿದರೂ ಕೂಡ, **ಅಪ್ರಮಾದ ಗರ್ಭಃ** - ಪ್ರಮಾದವಿಲ್ಲದಿರುವದಾಗಿ ಆ ಕಾರಣದಿಂದಲೇ; **ಪ್ರಕೃತಿ ಸಂಸೃಷ್ಟಸ್ಯ** - ಪ್ರಕೃತಿ ಯಿಂದ ಎಂದರೆ ಶರೀರದಿಂದ ಸೇರಿದ ಈ ಚೇತನನಿಗೆ, **ದುಶ್ಶಕತಯಾ** - ಕಷ್ಟಸಾಧ್ಯವಾದುದ ರಿಂದ, **ಪರಧರ್ಮಭೂತಾತ್** - ಸಹಜ ಧರ್ಮವಲ್ಲದ ಎಂದರೆ, **ಜ್ಞಾನಯೋಗಾತ್** - ಜ್ಞಾನ ಯೋಗಕ್ಕಿಂತಲೂ **ಸಗುಣಾದಪಿ** - ಆ ಜ್ಞಾನಯೋಗವು ಸ್ವಲ್ಪಕಾಲವು ಆತ್ಮಸಾಕ್ಷಾತ್ಕಾರ ರೂಪ ಆನಂದದಾಯಿಕವಾದುದಾಗಿ ಗುಣಯುಕ್ತವಾಗಿದ್ದರೂ, ಅದು **ಕಿಂಚಿತ್ಕಾಲಮನುಷ್ಠಿತಾತ್** - ಸ್ವಲ್ಪಕಾಲ ಅನುಷ್ಠಿಸಲ್ಪಟ್ಟದುದಾಗಿ, **ಸಪ್ರಮಾದಾತ್** - ಪ್ರಮಾದಯುಕ್ತವಾಗಿ ರುವದರಿಂದ, **ಶ್ರೇಯಾನ್** - ಶ್ರೇಷ್ಠವು. ಹೀಗೆ ಪ್ರಕೃತಿಸಂಬಂಧವು ಈ ಚೇತನನಿಗಿರುವದರಿಂದ ಕರ್ಮವನ್ನೆಸಗುವದು ಶರೀರಿಯ ಧರ್ಮವಾದುದರಿಂದ; ಕರ್ಮಯೋಗಕ್ಕೆ ಇಲ್ಲಿ ಸ್ವಧರ್ಮವೆಂಬ ಮತ್ತು ಜ್ಞಾನಯೋಗಕ್ಕೆ ಪರಧರ್ಮವೆಂಬ ಪ್ರಯೋಗವು. ಕಿಂಚಿತ್ಕಾಲವೆಂದು ಮೂಲದಲ್ಲಿ ಲ್ಲದಿದ್ದರೂ **ಅನುಷ್ಠಿತಾತ್** ಎಂದು ಭೂತಕಾಲವಿರುವದರಿಂದ, ಹಿಂದೆ ಇತ್ತು ಈಗ ಇಲ್ಲವೆಂಬ ರ್ಥವು ತೋರಿಬರುವದರಿಂದ ಕಿಂಚಿತ್ಕಾಲವೆಂದು ವ್ಯಾಖ್ಯಾನಮಾಡಿದರು. ಈ ಕರ್ಮಯೋಗ ಜ್ಞಾನಯೋಗಗಳಲ್ಲಿ ಸ್ವಲ್ಪಕಾಲವಿದ್ದು ಮರಣಹೊಂದುವದರಿಂದ ವಿಚ್ಛಿತ್ತಿಯುಂಟಾದರೆ ಆಗಲೂ

**ಭಾ.** ಸಾದಾತುಂ ಯೋಗ್ಯತಯಾ ಸ್ವಧರ್ಮಭೂತೇ ಕರ್ಮಯೋಗೇ ವರ್ತಮಾನಸ್ಯೈಕಸ್ಮಿನ್ ಜನ್ಮನ್ಯಪ್ರಾಪ್ತ ಫಲತಯಾ ನಿಧನಮಪಿ ಶ್ರೇಯಃ, ಅನನ್ತರಾಯಹತತಯಾಽನನ್ತರ ಜನ್ಮನ್ಯಪ್ಯವ್ಯಾಕುಲಕರ್ಮಯೋಗಾರಂಭ ಸಂಭವಾತ್. ಪ್ರಕೃತಿ ಸಂಸೃಷ್ಟಸ್ಯ ಸ್ವೇನೈವೋ ಪಾದಾತು ಮಶಕ್ಯತಯಾ ಪರಧರ್ಮಭೂತೋ ಜ್ಞಾನಯೋಗಃ ಪ್ರಮಾದಗರ್ಭತಯಾ ಭಯಾವಹಃ ॥ ೩೫ ॥

---

ಕೂಡ ಕರ್ಮಯೋಗವೇ ಜ್ಞಾನಯೋಗಕ್ಕಿಂತ ಶ್ರೇಷ್ಠವೆಂದು ಹೇಳುತ್ತಾರೆ:—ಸ್ವೇನೈವೋ ಪಾದಾತುಂ **ಯೋಗ್ಯತಯಾ** - ತನ್ನಿಂದಲೇ ಪರಿಗ್ರಹಿಸಲು ಯೋಗ್ಯವಾದ, ಸ್ವಧರ್ಮಭೂತವಾದ ಕರ್ಮಯೋಗದಲ್ಲಿ **ವರ್ತಮಾನಸ್ಯ** - ಇರುವವನಿಗೆ, **ಏಕಸ್ಮಿನ್ ಜನ್ಮನಿ** - ಒಂದೇ ಜನ್ಮದಲ್ಲಿ, **ಅಪ್ರಾಪ್ತ ಫಲತಯಾ** - ಫಲಸಿದ್ಧಿಯಾಗದೇ ಇರುವದರಿಂದ, **ನಿಧನಮಪಿ ಶ್ರೇಯಃ** - ಮರಣವಾದರೂಕೂಡ ಶ್ರೇಯಸ್ಸನ್ನುಂಟುಮಾಡುವಂಥಾದ್ದೇ ಸರಿ. ಹೇಗೆ ಕರ್ಮಯೋಗದ ವಿಚ್ಛಿತ್ತಿಯಾಗಿ ಮರಣವಾದರೂ ಅದು ಒಳ್ಳೇದೇ ಎಂಬುದನ್ನು ಮುಂದಿನ ವಾಕ್ಯದಿಂದ ಉಪಪಾದಿಸುತ್ತಾರೆ. ಕರ್ಮಯೋಗದಲ್ಲಿ ಅಙ್ಗವೈಕಲ್ಯ ಪ್ರಾಪ್ತಿಯುಂಟಾದರೂ ಮುಂದಿನ ಜನ್ಮದಲ್ಲಾದರೂ ಫಲಸಾಧನತ್ವವು ಹೇಗೆ ಎಂಬ ಶಙ್ಕೆಗೆ ಸಮಾಧಾನವನ್ನೂ ಹೇಳುತ್ತಾರೆ. **ಅನನ್ತರಾಯಹತತಯಾ** - ಜ್ಞಾನಯೋಗದಲ್ಲಿರುವ ಹಾಗೆ ವಿಘ್ನದಿಂದ ಯಾವುದೊಂದು ಹೊಡೆತವೂ ಇಲ್ಲದುದರಿಂದ, **ಅನಂತರ ಜನ್ಮನ್ಯಪಿ** - ಮುಂದಿನ ಜನ್ಮದಲ್ಲಾದರೂ, **ಅವ್ಯಾಕುಲ ಕರ್ಮಯೋಗಾರಂಭ ಸಂಭವಾತ್** - ಅಙ್ಗ ವೈಕಲ್ಯವಿಲ್ಲದಿರುವ ಕರ್ಮಯೋಗದಲ್ಲಿ ಪ್ರವೇಶವುಂಟಾಗಬಹುದಾದುದರಿಂದ, ಮುಂದಿನ ಜನ್ಮದಲ್ಲಾದರೂ ಶ್ರೇಯಸ್ಸುಂಟಾಗುತ್ತದೆಂಬ ಭಾವವು. ಕರ್ಮಯೋಗದಲ್ಲಿ ವಿಘ್ನದ ತೊಂದರೆಯು ಹೇಗೆ ಇಲ್ಲವೆಂದರೆ:—ಇಂದ್ರಿಯಗಳಿಗೆ ಅನುಭವಿಸಲ್ಪಟ್ಟ ಸಜಾತೀಯವಾದ ವಿಷಯಗಳು ಸಮರ್ಪಿಸಲ್ಪಡುವದರಿಂದ ಕರ್ಮಯೋಗದ ಸ್ವರೂಪದ ವಿಚ್ಛಿತ್ತಿಯಿಲ್ಲವು. ಜ್ಞಾನಯೋಗ ವಿಚ್ಛಿತ್ತಿಯಲ್ಲಾದರೋ ಅದರ ಸ್ವರೂಪವಿಚ್ಛಿತ್ತಿಯೇ ಉಂಟಾಗುವದರಿಂದ ಮುಂದಿನ ಜನ್ಮದಲ್ಲೇ ಜ್ಞಾನಯೋಗ ಪ್ರಾಪ್ತಿಯಿಲ್ಲವೆಂಬ ಭಾವವು. ಕರ್ಮಯೋಗವಿಚ್ಛಿತ್ತಿಯಲ್ಲೂ ಮುಂದಕ್ಕೆ ಫಲಪ್ರಾಪ್ತಿಯುಂಟೆಂಬ ವಿಷಯವು ಹಿಂದೆಯೇ (೧) "ನೇಹಾಭಿಕ್ರಮ ನಾಶೋಸ್ತಿ" ಎಂಬ ಶ್ಲೋಕದಲ್ಲಿ ಸಙ್ಗ್ರಹವಾಗಿ ಹೇಳಿ, (೨) "ಪಾರ್ಥ ನೈವೇಹ ನಾಮುತ್ರ" ಎಂಬ ಶ್ಲೋಕದಲ್ಲಿ ಮುಂದೆ ವಿಶದೀಕರಿಸಲ್ಪಡುತ್ತದೆ. ಆದರೆ ಮುಂದಿನ ಜನ್ಮದಲ್ಲೇ ಖಂಡಿತವಾಗಿಯೂ ಕರ್ಮಯೋಗದ ಫಲಪ್ರಾಪ್ತಿಯುಂಟೆಂದು ನಿರ್ಧರಮಾಡಿ ಹೇಳುವದು ಸಾಧ್ಯವಿಲ್ಲದುದರಿಂದ **ಕರ್ಮಯೋಗಾರಂಭ ಸಂಭವಾತ್** ಎಂಬ ಪ್ರಯೋಗವು. ಅಂತೂ ಫಲಸಿದ್ಧಿಯು ಉಂಟೆಂದು ಹೇಳಬಹುದು ಎಂಬಭಿಪ್ರಾಯವು. ಹಾಗೆಯೇ ಜ್ಞಾನಯೋಗಾರಂಭಮಾಡಿದವನಿಗೂ ಫಲಸಿದ್ಧಿಯುಂಟೆಂದು ಏಕೆ ಹೇಳಕೂಡದು ಎಂದರೆ ಶ್ಲೋಕದ ನಾಲ್ಕನೆಯ ಪಾದಾಭಿಪ್ರಾಯವನ್ನು ತಿಳಿಸುತ್ತಾರೆ:—**ಪರಧರ್ಮೋಭಯಾವಹಃ** - **ಪ್ರಕೃತಿ ಸಂಸೃಷ್ಟಸ್ಯ** - ಪ್ರಕೃತಿ ಸಂಬಂಧ ಹೊಂದಿದ ಆತ್ಮನಿಗೆ, **ಸ್ವೇನೈವೋ ಪಾದಾತು ಮಶಕ್ಯತಯಾ** - ತಾನೇ ಪರಿಗ್ರಹಿಸಲು ಸಾಧ್ಯವಲ್ಲದೆ ಅಶಕ್ಯವಾದ, ಆ ಕಾರಣದಿಂದ **ಪರಧರ್ಮಭೂತೋ ಜ್ಞಾನಯೋಗಃ** - ಸ್ವಧರ್ಮವಲ್ಲದೆ ಬೇರೇಧರ್ಮವಾದ ಜ್ಞಾನಯೋಗವು, **ಪ್ರಮಾದ ಗರ್ಭತಯಾ** - ಹೀಗೆ ಪ್ರಮಾದವನ್ನೊಳಗೊಂಡಿರುವದರಿಂದ, **ಭಯಾವಹ**ವಾದುದು ಎಂದರೆ ಮುಂದಿನ ಜನ್ಮದಲ್ಲಿ ಫಲಕಾರಿಯಾಗುವ ಸಂಭವವೇ ಇಲ್ಲವೆಂಬ ಭಾವವು. ಅಙ್ಗ ವೈಕಲ್ಯವಿದ್ದರೂ ಸ್ವರೂಪ ವಿಚ್ಛಿತ್ತಿಯಿಲ್ಲದೆ

---

(೧) ಗೀ. ೨. ೪೦. (೨) ಗೀ. ೬. ೪೦.

ಇಂದ್ರಿಯ ಪ್ರವರ್ತನೆಯಿಂದ ಕರ್ಮಯೋಗಕ್ಕೆ ವಿಚ್ಛಿತ್ತಿಯುಂಟಾದರೂ ಸಜಾತೀಯವಾಗಿ ಫಲ ಸಿದ್ಧಿಯು ವಿಳಂಬಿಸಬಹುದು. ಜ್ಞಾನಯೋಗ ವಿಚ್ಛಿತ್ತಿಯಲ್ಲಾದರೋ ಅದರ ಸ್ವರೂಪವಿಚ್ಛಿತ್ತಿ ಯುಂಟಾಗುವದರಿಂದ ಫಲಸಿದ್ಧಿಯುಂಟಾಗುವದಿಲ್ಲವೆಂಬ ತಾತ್ಪರ್ಯವು. ಈ ಕಾರಣದಿಂದಲೂ ಕರ್ಮಯೋಗವೇ ಶ್ರೇಯಾನ್ ಎಂಬ ತಾತ್ಪರ್ಯವು.

ಉತ್ತರಾರ್ಧದಲ್ಲಿ ಸ್ವಧರ್ಮೇ ನಿಧನಂ ಶ್ರೇಯಃ ಎಂದಿರುವದರಿಂದ, ಪರಧರ್ಮೋ ಭಯಾವಹಃ ಎಂಬುದರ ಅಭಿಪ್ರಾಯವು, ಪರಧರ್ಮೇ ನಿಧನಂ ಭಯಾವಹಂ ಎಂದೂ ಭಾವಿಸ ಬಹುದು. ಕರ್ಮಯೋಗದ ಮಧ್ಯದಲ್ಲಿ ಮರಣವಾದರೆ ಉತ್ತರ ಜನ್ಮದಲ್ಲಾದರೂ ಫಲಸಿದ್ಧಿ ಯುಂಟು. ಓ ಅರ್ಜುನನೇ ನೀನು ಮಾಡಿರುವಹಾಗೆ ಸ್ವಧರ್ಮವನ್ನು ತ್ಯಜಿಸಿ, ಅನ್ಯಧರ್ಮ ವಾದ ಜ್ಞಾನಯೋಗವನ್ನಾರಂಭಿಸಿ ಅದರಲ್ಲಿ ಮರಣಹೊಂದಿದರೆ ಉತ್ತರ ಜನ್ಮದಲ್ಲಿ ಫಲಸಿದ್ಧಿ ಯುಂಟೆಂದು ನಂಬಲು ಸಾಧ್ಯವೇ ಯಿಲ್ಲವು. ಆತನು ನಷ್ಟನಾಗುವನೆಂದು ೩೨ನೆಯ ಶ್ಲೋಕ ದಲ್ಲಿ ಹೇಳಲ್ಪಟ್ಟಿರುತ್ತದೆ. ಇದೂ ಅಲ್ಲದೆ ಕರ್ಮಯೋಗತ್ಯಾಗದಲ್ಲಿ ಆಜ್ಞಾರೂಪಗಳಾದ ನಿತ್ಯ ನೈಮಿತ್ತಿಕ ಕರ್ಮಗಳ ತ್ಯಾಗವೂ ಉಂಟಾಗುವದರಿಂದ "ಆಜ್ಞಾಚ್ಛೇದೀ ಮಮದ್ರೋಹೀ" ಎಂದು ಹೇಳಿರುವ ಹಾಗೆ ಭಗವನ್ನಿಗ್ರಹಕ್ಕೆ ಪಾತ್ರನಾಗುವದರಿಂದ, ಅದು ಭಯಾವಹವೆಂದೂ ಹೇಳಬಹುದು. ಅಥವಾ ಕರ್ಮಯೋಗದಲ್ಲಿ ನಿಧನವೂ ಕೂಡ ಶ್ರೇಯಸ್ಕರವು; ಕರ್ಮತ್ಯಾಗ ಮಾಡಿದ ಜ್ಞಾನಯೋಗವು ಜೀವದೆಶೆಯಲ್ಲೂ ಕೂಡ ಭಯಾವಹವೆಂದು ಹಿಂದೆಯೇ ಉಪ ಪಾದಿಸಲ್ಪಟ್ಟಿರುತ್ತದೆ ಎಂಬಭಿಪ್ರಾಯವಾದರೂ ಆಗಬಹುದು.

ಆದರೆ ಈ ಶ್ಲೋಕದಲ್ಲಿ ಸ್ವಧರ್ಮ ಪರಧರ್ಮ ಶಬ್ದಗಳು ವರ್ಣಾಶ್ರಮಧರ್ಮಗಳನ್ನು ಬೋ ಧಿಸುತ್ತವೆಂದು ಕೆಲವರು ಅಭಿಪ್ರಾಯಪಡುವರು. ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳು ಗುಣಹೀನವಾದವಾದರೂ ಇತರ ವರ್ಣಾಶ್ರಮ ಧರ್ಮಗಳಿಗಿಂತ ಪ್ರಶಸ್ತವೆಂದು ಅರ್ಥಹೇಳಲು ಕಾರಣವೇ ಇಲ್ಲವು. ಅದು ಅಪ್ರಸ್ತುತ ಪ್ರಶಂಸೆಯಾಗುತ್ತದೆ. ಅರ್ಜುನನು ತನ್ನ ಧರ್ಮ ವನ್ನು ತ್ಯಜಿಸಿ ತನಗಿಂತ ಉತ್ಕೃಷ್ಟವಾದ ಬ್ರಾಹ್ಮಣಧರ್ಮವನ್ನು ವಿಶ್ವಾಮಿತ್ರರಹಾಗೆ ಅಪೇ ಕ್ಷಿಸಿದ್ದರೆ ಈ ಉಪದೇಶವು ಆಗ ಸಾರ್ಥಕವು. ಇಲ್ಲಿ ಅದರ ಪ್ರಸಕ್ತಿಯೇ ಇಲ್ಲವು. ಹಾಗೆ ಅರ್ಥ ಹೇಳಿದರೆ ಇನ್ನೊಂದು ದೋಷವೂ ಪ್ರಾಪ್ತವಾಗುತ್ತದೆ. ಸ್ವನುಷ್ಠಿತವಾದ ಪರ ಧರ್ಮವೂ ಪ್ರಶಸ್ಯವೇ ಎಂಬ ಅಪಾರ್ಥ ಉಂಟಾಗುತ್ತದೆ. ಪರಧರ್ಮವು ಸ್ವನುಷ್ಠಿತ ವಾಗಲಿ ದುರನುಷ್ಠಿತವಾಗಲಿ ನಿಂದ್ಯವೇಸರಿ. ಶಂಬೂಕನೆಂಬ ಶೂದ್ರನು ಪರಧರ್ಮವಾದ ತಪ ಸ್ಸನ್ನು ಮಾಡಿದುದರಿಂದಲೇ ಭಗವನ್ನಿಗ್ರಹವುಂಟಾಗಿ ಶ್ರೀರಾಮನ ಆಜ್ಞೆಯಿಂದ ಕೊಲ್ಲಲ್ಪ ಟ್ಟನು. ಆಗಲಿ ಯುದ್ಧವನ್ನು ಪರಿತ್ಯಾಗಮಾಡಿದ ಅರ್ಜುನನಿಗೆ ಉಪದೇಶರೂಪದಲ್ಲಿ ಸ್ವಧರ್ಮ ಪ್ರಶಂಸೆಯ ಜೊತೆಯಲ್ಲಿ ಪರಧರ್ಮವಾದ ಬ್ರಾಹ್ಮಣಾದಿ ಧರ್ಮಗಳ ಅವಲಂಬನೆಯೂ ನಿಂದ್ಯ ವೆಂದು ಹೇಳುವದು ಯುಕ್ತನೇ, ಆದುದರಿಂದ ಹಾಗೆ ಹೇಳಲು ಪ್ರಸಕ್ತಿಯುಂಟೆಂದರೆ, ಆಗಲೂ ಮೇಲೆ ಹೇಳಿದ ಪರಧರ್ಮವೂ ಪ್ರಶಸ್ಯವೆಂದುಂಟಾಗುವ ದೋಷವು ತಪ್ಪಿದ್ದಲ್ಲವು. ಅರ್ಜುನನಿಗೆ ಸ್ವಧರ್ಮವಾದ ಯುದ್ಧದ ಪರಿತ್ಯಾಗ ಬೇಕೇವಿನಾ ಬ್ರಾಹ್ಮಣನಾಗಬೇಕೆಂಬ ಆಶೆಯು ಸುತರಾಂ ಇಲ್ಲವು, ಯುದ್ಧ ಪರಿತ್ಯಾಗವೂ ಸ್ವಧರ್ಮವೆಂದು ಭ್ರಮಿಸಿರುವ ಅರ್ಜುನನಿಗೆ ಅದು ಪರ ಧರ್ಮವಾಗುತ್ತದೆ, ಆದುದರಿಂದ ಭಯಾವಹವೆಂದು ಶ್ರೀಕೃಷ್ಣನು ತೋರಿಸಿ ಕೊಡುತ್ತಾನೆ ಎಂದರೆ ಸ್ವನುಷ್ಠಿತಾತ್ ಪರಧರ್ಮಾತ್ ಎಂಬಲ್ಲಿ ಸ್ವನುಷ್ಠಿತಾತ್ ಎಂಬುದಕ್ಕೆ ಅರ್ಥವು ಕೂಡು ವದಿಲ್ಲವು. ಪರಧರ್ಮಾನುಷ್ಠಾನದಲ್ಲಿ ಪ್ರವರ್ತಿಸಿದ್ದರೆ ಆಗ ಹಾಗೆ ಅರ್ಥವನ್ನು ಹೇಳಬಹುದು. ಆದುದರಿಂದ ಕರ್ಮಯೋಗವು ಸ್ವಧರ್ಮವಾಗಿ ಉಪಾದೇಯವಾಗಿರುವದರಿಂದ ಪ್ರಶಸ್ಯವೆಂದೂ

ಅರ್ಜುನ ಉವಾಚ :—

ಮೂ. ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ।
ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬.

ಜ್ಞಾನಯೋಗವು ಸ್ವಧರ್ಮವಲ್ಲದೆ ಪರಧರ್ಮವಾಗಿರುವದರಿಂದ ಅನುಪಾದೇಯವೆಂದೂ ಹೇಳುವದು ಸರಸವಾದುದರಿಂದ ಸ್ವಧರ್ಮ ಪರಧರ್ಮ ಶಬ್ದಗಳು ಇಲ್ಲಿ ಕರ್ಮಯೋಗ ಜ್ಞಾನಯೋಗವೆಂಬ ಅಭಿಪ್ರಾಯಗಳನ್ನೇ ಸೂಚಿಸುತ್ತವೆ. ಹೀಗೆ ಸ್ವಧರ್ಮ ಪರಧರ್ಮ ಪದಗಳಿಗೆ ಅರ್ಥಹೇಳಿದರೆ ಜ್ಞಾನಯೋಗಕ್ಕೆ ಪ್ರಶಸ್ಯತ್ವ ಉಂಟಾದರೂ ಯುಕ್ತವೇ ಸರಿ, ಅದಕ್ಕಿಂತ ಪ್ರಶಸ್ತತರ ಕರ್ಮಯೋಗವೆಂದಾಗುತ್ತದೆ, ವರ್ಣಾಶ್ರಮ ಧರ್ಮ ಪದಗಳು ಈ ಶಬ್ದಗಳೆಂದರೂ ಹಿಂದಿನ ಎರಡು ಶ್ಲೋಕಕ್ಕೂ ಈ ಶ್ಲೋಕಕ್ಕೂ ಮತ್ತು ಈ ಶ್ಲೋಕಕ್ಕೂ ಮುಂದಿನ ಶ್ಲೋಕಕ್ಕೂ ಸಙ್ಗತಿಗಳು ಏರ್ಪಡುವದಿಲ್ಲವು. ಕರ್ಮಯೋಗವೇ ಶ್ರೇಯಸ್ಕರವೆಂದು ಅರ್ಥಮಾಡಿದರೆ ಜ್ಞಾನಯೋಗವು ಕಷ್ಟಸಾಧ್ಯವೆಂದಾಗುವದರಿಂದ ಹಿಂದಕ್ಕು ಮುಂದಕ್ಕು ಸಙ್ಗತಿ ಕೂಡುತ್ತದೆ. ಹಿಂದಿನ ಶ್ಲೋಕಗಳಲ್ಲಿ ಉಪಪಾದಿಸಲ್ಪಟ್ಟ ದುಶ್ಯಕತ್ವವೇ ಇಲ್ಲಿಯೂ ಸಮರ್ಥಿಸಲ್ಪಟ್ಟಿತು. ಮುಂದಿನ ಶ್ಲೋಕದಲ್ಲಿನ ಅರ್ಜುನ ಪ್ರಶ್ನೆಗೂ ಸಙ್ಗತಿಯು ದೊರೆಯುತ್ತದೆ. ಇಚ್ಛೆ ಯಿಲ್ಲದಿದ್ದರೂ ಪಾಪಾಚರಣೆಗೆ ಕಾರಣವೇನೆಂಬುದು ಪ್ರಶ್ನೆಯು ; ಆ ಪ್ರಶ್ನೆಯು ಜ್ಞಾನಯೋಗವು ದುಷ್ಕರವಾದುದರಿಂದ ಸಮಂಜಸವಾದುದೇ. ॥೩೫॥

ಮೂಲಕ್ಕೆ ಅರ್ಥವು :—ಅರ್ಜುನನು ಪ್ರಶ್ನಿಸುತ್ತಾನೆ—ಹಿಂದೆ "ಸದೃಶಂ ಚೇಷ್ಟತೇ" ಎಂಬ ಶ್ಲೋಕದಲ್ಲಿ ಪುರುಷನು ಕರ್ಮವಾಸನಾನುಗುಣವಾಗಿ ಪ್ರವರ್ತಿಸುವನೆಂದು ಹೇಳಲ್ಪಟ್ಟಿತು. ವಾಸನೆಯಾದರೋ ಚೇತನನ ಇಚ್ಛಾಮೂಲಕವಾಗಿಯೇ ತೋರಿಬರುವಂತಾದ್ದು ಮತ್ತು ಪ್ರವೃತ್ತಿಯುಳ್ಳದು ; ಹೀಗಿರುವಾಗ ಕರ್ಮಯೋಗಾಪೇಕ್ಷೆಯಿಲ್ಲದೆ ಜ್ಞಾನಯೋಗವನ್ನವಲಂಬಿಸಬೇಕೆಂಬ ಇಚ್ಛೆಯುಳ್ಳವನು ಅದಕ್ಕೆ ಪ್ರತ್ಯುತ ವಿರೋಧವಾಗಿ ವಿಷಯಾನುಭವದಲ್ಲಿಚ್ಛೆಯು ಇಲ್ಲದಿದ್ದರೂ,ಕರ್ಮವಾಸನೆಯು ಬಲಿಷ್ಠವಾಗಿ ಹೇಗೆ ವಿಷಯಾನುಭವಕ್ಕೆ ಕಾರಣವಾಗುತ್ತದೆಂದು ಅರ್ಜುನನು ಪ್ರಶ್ನಿಸುತ್ತಾನೆ. ಪರಧರ್ಮೋ ಭಯಾವಹಃ - ಕರ್ಮ ಯೋಗವನ್ನು ತ್ಯಜಿಸಿ ಜ್ಞಾನಯೋಗವನ್ನು ಆಶ್ರಯಿಸುವದು ಭಯಾವಹವೆಂದು ಹಿಂದಿನ ಶ್ಲೋಕದಲ್ಲಿ ಕರ್ಮಯೋಗ ಜ್ಯಾಯಸ್ತ್ವ ನಿಗಮನ ಪ್ರಕರಣದಲ್ಲಿ ಹೇಳಲ್ಪಟ್ಟದುದರಿಂದ, ಹಾಗೆ ಭಯಾವಹವಾಗಲು ಕಾರಣವೇನು ? ಎಂದು ಅರ್ಜುನನು ನ್ಯಾಯವಾಗಿ ಪ್ರಶ್ನಿಸತಕ್ಕದ್ದಾದುದರಿಂದ ಪ್ರಶ್ನಿಸುತ್ತಾನೆ. ಅರ್ಜುನನಿಗೆ ಏನು ಸಂದೇಹವೆಂದರೆ ಜ್ಞಾನಯೋಗಕ್ಕೆ ಅರ್ಹನಾಗಿರುವವನು ಅಂತಹ ಉತ್ತಮವಾದ ಮಾರ್ಗವನ್ನು ಅವಲಂಬಿಸಿದ್ದರೂ, ಅಂತವನಿಗೆ ಪ್ರವಾದದ ಭಯವೇತಕ್ಕೆ ? ಎಂಬುದು; ಅಯಂ ಎಂಬ ಶಬ್ದವನ್ನು ಅರ್ಜುನನು ಉಪಯೋಗಿಸಿರುವದರಿಂದ ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗವನ್ನು ಆಶ್ರಯಿಸಬೇಕೆಂಬ ಅಧಿಕಾರಿಯನ್ನು ಮನಸ್ಸಿನಲ್ಲಿಟ್ಟೇ ಅಯಂ ಎಂಬ ಪ್ರಯೋಗವು. ಹೀಗೆಯೇ ಹಿಂದಿನ ಶ್ಲೋಕಕ್ಕೂ ಅರ್ಥಮಾಡಿದರೇ ಅರ್ಜುನ ಪ್ರಶ್ನೆಗೂ ಪ್ರಕರಣಕ್ಕೂ ಸಮಂಜಸವಾದ ಸಙ್ಗತಿಯು ದೊರೆಯುತ್ತದೆ; ಈ ಮೂರನೆಯ ಅಧ್ಯಾಯವು ಕರ್ಮಯೋಗವನ್ನು ತ್ಯಾಗಮಾಡಿ ಜ್ಞಾನಯೋಗಕ್ಕೆ ಹೋಗಬೇಕೆಂದಿರುವವರನ್ನು ನಿರಾಕರಿಸುವದಕ್ಕಾಗಿಯೇ ಹೊರಟಿರುವದು. ಅಥ - ಹಾಗಾದಪಕ್ಷದಲ್ಲಿ ಎಂದರೆ ಹೀಗೆ ತಾವು ಉಪದೇಶಿಸಿದ ಹಾಗೆ ಕರ್ಮಯೋಗವನ್ನು ಬಿಟ್ಟು ಜ್ಞಾನಯೋಗವನ್ನವಲಂಬಿಸಿದರೆ ಅದು ಮುಖ್ಯಕವಾಗಿ ಸಪ್ರಮಾದವಾಗಿ ಭಯಾವಹವಾದರೆ, (ಈ ಅಥ ಶಬ್ದವು ಪ್ರಶ್ನೆಯನ್ನು ಬೋಧಿಸುತ್ತದೆಂದು

**ಭಾ. ಅಥಾಯಂ ಜ್ಞಾನಯೋಗಾಯ ಪ್ರವೃತ್ತಃ ಪುರುಷಃ ಸ್ವಯಂ ವಿಷಯಾನನುಭವಿತು ಮನಿಚ್ಛನ್ನಪಿ ಕೇನ ಪ್ರಯುಕ್ತೋ ವಿಷಯಾನುಭವರೂಪಂ ಪಾಪಂ ಬಲಾನ್ನಿಯೋ ಜಿತ ಇವಚರತಿ ? || ೩೬ ||**

---

ಭಾವಿಸತಕ್ಕದ್ದು,) ಹೇ ವಾರ್ಷ್ಣೇಯ-ಓ ವೃಷ್ಣಿಕುಲ ಶಿಖಾಮಣಿಯಾದ ಶ್ರೀಕೃಷ್ಣನೇ, **ಅಯಂ ಪೂರುಷಃ**-ಈ ಚೇತನನು, ಇಲ್ಲಿ ಮುಮುಕ್ಷುವು ಉದ್ದೇಶ್ಯನು, **ಅನಿಚ್ಛನ್ನಪಿ**-ವಿಷಯೋಪಭೋಗ ಗಳನ್ನಪೇಕ್ಷಿಸದೇ ಇದ್ದರೂ ಕೂಡ, **ಕೇನ ಪ್ರಯುಕ್ತಃ**-ಯಾವುದರಿಂದ ವಿಶೇಷವಾಗಿ ಪ್ರೇರಿತ ನಾಗಿ, **ಬಲಾತ್** - ಬಲಾತ್ಕರಿಸಲ್ಪಟ್ಟು, **ನಿಯೋಜಿತ ಇವ**-ನಿಯಮಿಸಲ್ಪಟ್ಟವನಹಾಗೆ, **ಪಾಪಂ ಚರತಿ**-ಪಾಪವನ್ನು ಮಾಡುತ್ತಾನೆ? ಜ್ಞಾನಯೋಗದಲ್ಲಿ ಆತನಿಗೆ ಇಚ್ಛೆಯುಂಟು, ವಿಷಯಾನು ಭವದಲ್ಲಿ ಇಚ್ಛೆಯಿಲ್ಲವು. ಹೀಗಿದ್ದರೂ ಯಾವಕಾರಣವು ಅಂತವನನ್ನು ವಿಷಯಾನುಭವದಲ್ಲಿ ಮಗ್ನನಾಗುವಹಾಗೆ ಮಾಡುತ್ತದೆ? ಎಂದು ಅರ್ಜುನನು ಪ್ರಶ್ನಿಸುತ್ತಾನೆ. ||೩೬||

**ಭಾಷ್ಯಾರ್ಥವು :—ಅಥ** - ಇದು ಪ್ರಶ್ನದ್ಯೋತಕ ಅವ್ಯಯವು. ಹಿಂದೆ ಹೇಳಿದುದನ್ನು ಸಮ್ಮತಿಸಿ ಅದರಮೇಲೆ ಪ್ರಶ್ನಿಸುವ ಸಂದರ್ಭವು, ಹಾಗಾದಪಕ್ಷದಲ್ಲಿ ಎಂಬರ್ಥವು, **ಅಯಂ** - ಈತನು ಎಂದರೆ ಕರ್ಮಯೋಗವನ್ನು ಆರಂಭಿಸದೆ, **ಜ್ಞಾನಯೋಗಾಯ ಪ್ರವೃತ್ತಃ** - ಜ್ಞಾನ ಯೋಗದಲ್ಲಿ ಪ್ರವರ್ತಿಸಿದ, **ಸದೃಶಂ ಚೇಷ್ಟತೇ** ಎಂಬ ಶ್ಲೋಕದಲ್ಲಿ **ಜ್ಞಾನವಾನ್** ಎಂಬ ದಾಗಿ ಹೇಳಲ್ಪಟ್ಟವನು, **ಪುರುಷಃ** - ಪುರುಷನು, ಇಚ್ಛಾಪ್ರಕಾರ ಪ್ರವೃತ್ತಿಯುಳ್ಳ ಚೇತನ ನನ್ನು ನಿರ್ದೇಶಿಸುವದಕ್ಕಾಗಿ ಇಲ್ಲಿ **ಪೂರುಷ** ಶಬ್ದವು, **ವಿಷಯಾನನುಭವಿತುಂ**-ವಿಷಯೋಪ ಭೋಗಗಳನ್ನು ಹೊಂದಲು, **ಅನಿಚ್ಛನ್ನಪಿ** - ಇಚ್ಛೆ ಯಿಲ್ಲದಿದ್ದರೂ, ಮೂಲದಲ್ಲಿ ಅನಿಚ್ಛ ನ್ನಪಿ ಎಂದು ಇಷ್ಟುಮಾತ್ರವಿರುತ್ತದೆ, ಯಾವುದನ್ನು ಇಚ್ಛಿಸದಿದ್ದರೂ ಎಂದರೆ ವಿಷಯಾ ನುಭವವನ್ನು ಎಂಬುದು ವ್ಯಕ್ತವು. **ಕೇನ ಪ್ರಯುಕ್ತಃ** - ಯಾವುದರಿಂದ ಪ್ರೇರಿತನಾಗಿ, **ವಿಷಯಾನುಭವರೂಪಂ ಪಾಪಂ** - ವಿಷಯಗಳ ಅನುಭವ ರೂಪವಾಗಿರುವ ಪಾಪವನ್ನು, ಮೂಲದಲ್ಲಿ **ಪಾಪಂ** ಎಂದು ಮಾತ್ರವಿರುತ್ತದೆ, ಆ ಪಾಪವು ಯದ್ರೂಪವೆಂದರೆ ವಿಷಯಾ ನುಭವ ರೂಪವೆಂದು ಹೇಳಿದರು, **ಬಲಾನ್ನಿಯೋಜಿತ ಇವ** - ಬಲಾತ್ಕಾರದಿಂದ ಆಜ್ಞಾಪಿಸಲ್ಪ ಟ್ಟವನ ಅಥವಾ ಪ್ರೇರಿಸಲ್ಪಟ್ಟವನಹಾಗೆ ಯಾವಾಗ ಇಚ್ಛೆಯಿಲ್ಲವೋ ಆಗ ಬಲಾತ್ಕಾರದಿಂದ ನಿಯಮಿಸಲ್ಪಟ್ಟವನಹಾಗೆ ಎಂಬ ಭಾವವು, **ಚರತಿ** - ಆಚರಿಸುತ್ತಾನೆ? ಇಲ್ಲಿ ಇವ ಶಬ್ದವನ್ನು **ನಿಯೋಜಿತ** ಎಂಬುವರೊಂದಿಗೆ ಸೇರಿಸಿ ಅರ್ಥಮಾಡಿರುತ್ತಾರೆ, **ಬಲಾದಿವ** ಎಂದು **ಬಲಾತ್** ಎಂಬ ಶಬ್ದದೊಂದಿಗೆ ಸೇರಿಸಿದರೆ ಕೇನ ಎಂಬ ಪ್ರಶ್ನೆಗೆ **ಬಲಾತ್** ಎಂದು ತಾನೇ ಉತ್ತರ ವನ್ನು ಹೇಳಿದಂತಾಗುತ್ತದೆ; ಅದಕ್ಕಾಗಿ ವಾಯು ಉದಕ ಪ್ರವಾಹ ಮೊದಲಾದವುಗಳಿಂದ ಹೇಗೆ ಬಲಾತ್ಕರಿಸಿ ಸೆಳೆಯಲ್ಪಡುವನೋ ಹಾಗೆ ಈ ಜ್ಞಾನವಾನ್ ಆದವನನ್ನು ಇಚ್ಛೆ ಯಿಲ್ಲದಿದ್ದರೂ ಬಲಾತ್ಕರಿಸಿ ವಿಷಯಗಳಲ್ಲಿ ಪ್ರವರ್ತಿಸುವಹಾಗೆ ಮಾಡುವದು ಯಾವುದು ? ಎಂಬ ತಾತ್ಪರ್ಯವು. ಕರ್ಮವಾಸನಾ ತುಂಬಾ ಪ್ರಬಲವಾದುದಾದರೆ, ಈತನಿಗಿರುವ ಜ್ಞಾನವಿವೇಕ ಇಚ್ಛಾ ಮೊದ ಲಾದವುಗಳು ದುರ್ಬಲವಾಗಿ, ಶಾನಾದಿಗಳಿಗೆ ವಶನಾಗುತ್ತಾನೆಂಬ ತಾತ್ಪರ್ಯವು. ಕರ್ಮ ವಾಸನೆಯು, ಆಂಜನೇಯನನ್ನು ಬ್ರಹ್ಮಾಸ್ತ್ರವು ಬಂಧಿಸಿದುದಕ್ಕಿಂತ, ಪ್ರಬಲವಾಗಿ ಬಂಧಿಸುವದ ರಿಂದ, ಸ್ವಾಮಿದತ್ತ ವಿವೇಕ ಸ್ವತಂತ್ರೇಚ್ಛಾಗಳು ದುರ್ಬಲಗಳಾಗುವುವು ಎಂಬ ಭಾವವು. ಇಲ್ಲಿ **ಬಲಾದಿವ ನಿಯೋಜಿತಃ** ಎಂಬುದರಿಂದ, **ಜ್ಞಾನವಾನ್** ಆದ ಜ್ಞಾನಯೋಗಿಗೆ ಪಾಪವನ್ನು ಮಾಡುವದು ಇಷ್ಟವಿಲ್ಲವು. ಆದರೆ ಪ್ರಬಲ ಮಷ್ಟನು ಬಲಾತ್ಕರಿಸಿ ಆಜ್ಞಾಪಿಸಿ ತನಗೆ ಅಧೀನ

ಶ್ರೀ ಭಗವಾನುವಾಚ :—

ಮೂ. ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನ ಮಿಹ ವೈರಿಣಂ ॥ ೩೭.

ನಾಗಿರುವವನಿಂದ ಹೇಗೆ ಪಾಪಕೆಲಸವನ್ನು ಮಾಡಿಸುತ್ತಾನೋ ಹಾಗೆ ಎಂಬ ಭಾವವು. ॥೩೬॥

ಮೂಲಕ್ಕೆ ಅರ್ಥವು :—ಜ್ಞಾನಯೋಗವನ್ನಾರಂಭಿಸಬೇಕೆಂಬಪೇಕ್ಷೆಯುಳ್ಳವನಿಗೆ ಸಾಧಾರಣವಾಗಿ ಐಹಿಕ ವಿಷಯೋಪ ಭೋಗಗಳಲ್ಲಿ ಇಚ್ಛೆಯು ಇಲ್ಲವು. ಈ ವಿಷಯೋಪಭೋಗಗಳಿಗಾಗಿಯೇ ಮನುಷ್ಯನು ಪಾಪಗಳನ್ನು ಆಚರಿಸುವನು. ಹೀಗೆ ಇಚ್ಛೆಯಿಲ್ಲದಿದ್ದರೂ ಯಾವ ಕಾರಣದಿಂದ ಶಾಸ್ತ್ರಜ್ಞಾನವಿರುವವನೂ ಕೂಡ ಪಾಪಗಳನ್ನಾಚರಿಸುವನು ಎಂಬ ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣಭಗವಾನರವರು ಒಡನೆಯೇ ಉತ್ತರವನ್ನು ದಯಪಾಲಿಸುತ್ತಾರೆ. ಕಾರಣವು ಯಾವುದೆಂದರೆ:—ಕಾಮವೆಂಬುದು ಒಂದು, ಕ್ರೋಧವೆಂಬುದು ಒಂದು, ಇವೆರಡೂ ಈತನಿಗೆ ಪ್ರಬಲ ಶತ್ರುಗಳೆಂದು ಈ ಶ್ಲೋಕದಲ್ಲಿ ಹೇಳಿ, ಮುಂದಿನ ಶ್ಲೋಕಗಳಲ್ಲಿ ಅವು ಹೇಗೆ ಇವನಿಗೆ ಶತ್ರುವಾಗಿ ಪರಿಣಮಿಸಿ ಐಹಿಕಗಳಾದ ಅಪುರುಷಾರ್ಥಗಳಲ್ಲೇ ಇಚ್ಛೆಯುಂಟಾಗುವಹಾಗೆ ಮಾಡುತ್ತವೆ ಎಂಬುದನ್ನು ಉಪಪಾದಿಸುತ್ತಾರೆ:—ಏಷಃ - ಹಾಗೆ ಪಾಪಮಾಡಲು ಕಾರಣವು, ಕಾಮಃ- ವಿಷಯಾಭಿಲಾಷೆಯು, ಮತ್ತು ಏಷಃ - ಹಾಗೆ ಪಾಪಮಾಡಲು ಕಾರಣವು ಕ್ರೋಧಃ – ವಿಷಯಾಭಿಲಾಷೆಯುಂಟಾಗಿ ಅದರ ಉಪಭೋಗಕ್ಕೆ ಏನಾದರೂ ವಿಘ್ನಗಳುಂಟಾದರೆ ಆಗ ಪ್ರಾಪ್ತವಾಗುವ ಕ್ರೋಧಃ, ಯಾವಾಗ ಕಾಮ ಉಂಟಾಗುತ್ತದೋ ಆಗ ಕ್ರೋಧಾದಿಗಳು ಅದರ ಅನುಚರರಾಗಿ ತಾನೇ ಉಂಟಾಗುತ್ತವೆ ಎಂಬ ತಾತ್ಪರ್ಯವು. ಈ ಕಾಮಾದಿಗಳು ಪ್ರಾಪ್ತವಾಗುವದು ಹೇಗೆ ಎಂದರೆ ಹೇಳುತ್ತಾರೆ, ರಜೋಗುಣ ಸಮುದ್ಭವಃ - ರಜೋಗುಣದಿಂದುಂಟಾಗುವವು, ಇದು ಏಕವಚನದಲ್ಲಿದ್ದರೂ ಕಾಮಕ್ರೋಧವೆರಡಕ್ಕೂ ಅನ್ವಯಿಸುತ್ತದೆ. ಕ್ರೋಧವು ಅಭಿಲಾಷೆಯ ಜೊತೆಯಲ್ಲೇ ಇರುವದರಿಂದ ಇನ್ನು ಮುಂದಕ್ಕೆ ಕಾಮ ಒಂದನ್ನೇ ಕುರಿತು ಹೇಳಿದರೂ ಕ್ರೋಧಾದಿಗಳೂ ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. ಈ ಕಾಮಕ್ರೋಧಗಳೆಂತವೆಂದರೆ, ಮಹಾಶನಃ - ಬಕಾಸುರನಹಾಗೆ ಹೆಚ್ಚಾಗಿ ಆಹಾರವನ್ನಪೇಕ್ಷಿಸುವಂಥಾದ್ದು, ಎಂದರೆ ಎಷ್ಟು ಅನುಭವಿಸಿದರೂ ಇನ್ನೂ ಬೇಕು, ಇನ್ನೂ ಬೇಕೆಂಬ ವಾಂಛಾ ಉಳ್ಳದುದು. ಅದು ಹೇಗೆಂದರೆ "ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ । ಹವಿಷಾಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥" ಅಗ್ನಿಗೆ ಆಜ್ಯಾಹುತಿ ಮಾಡಿದರೆ ಪುನಃಪುನಃ ಅಭಿವೃದ್ಧಿ ಹೊಂದುವಹಾಗೆ ತೃಪ್ತಿಯನ್ನು ಹೊಂದದಿರುವದು, ಮಹಾಪಾಪ್ಮಾ - ವಿಶೇಷ ಪಾಪಮಾಡುವಂಥಾದ್ದು. ಮಹಾಶನವೆಂಬ ವಿಶೇಷಣವನ್ನು ಕಾಮಕ್ಕೂ ಮಹಾಪಾಪ್ಮಾವೆಂಬುವದನ್ನು ಕ್ರೋಧಕ್ಕೂ ಅನ್ವಯಿಸಬಹುದು. ಕಾಮಾತುರನು ಎಂಬ ಪ್ರಯೋಗವು ಮಹಾಶನವೆಂಬ ಪ್ರಯೋಗದ ಸಾರ್ಥಕ್ಯವನ್ನು ಸೂಚಿಸುತ್ತದೆ; ಮತ್ತು "ಪೂರ್ಣಂ ವರ್ಷಸಹಸ್ರಂ ಮೇ ವಿಷಯಾಸಕ್ತಚೇತಸಃ । ತಥಾಪ್ಯನುದಿನಂ ತೃಷ್ಣಾ ಮಮ ತೇಷೂಪಜಾಯತೇ" (ವಿ. ಪು. ೪. ೧೦. ೨೮.) ವಿಷಯಾಸಕ್ತನಾಗಿ ಬಹುಕಾಲ ಕಳೆದೆನು; ಹೀಗೆ ವಿಶೇಷೋಪಭೋಗಗಳನ್ನನುಭವಿಸಿದರೂ ಹೊಸ ಹೊಸದಾಗಿ ಪ್ರತಿದಿನದಲ್ಲೂ ಅವುಗಳಲ್ಲಿ ಅನುರಾಗವು ತಪ್ಪಲಿಲ್ಲವೆಂಬ ಯಯಾತಿ ರಾಜನ ವಾಕ್ಯವೂ ಸಹ ಈ ಮಹಾಶನಃ ಎಂಬ ಪ್ರಯೋಗವನ್ನು ಸಮರ್ಥಿಸುತ್ತದೆ. ಕ್ರೋಧವು ಮಹಾಪಾಪ್ಮಾ ಎಂಬುದಕ್ಕೆ "ಕ್ರುದ್ಧಃ ಪಾಪಂ ನ ಕುರ್ಯಾತ್ಕಃ ಕ್ರುದ್ಧೋ ಹನ್ಯಾದ್ಗುರೂನಪಿ" ಎಂದರೆ ಕೋಪಗೊಂಡವನು ಮಾಡದಿರುವ ಪಾಪವು ಯಾವುದುಂಟು, ಹಿರಿಯರ

**ಭಾ.** **ಅಸ್ಯೋದ್ಭವಾಭಿಭವರೂಪೇಣ ವರ್ತಮಾನ ಗುಣಮಯ ಪ್ರಕೃತಿ ಸಂಸೃಷ್ಟಸ್ಯ ಜ್ಞಾನಾಯಾರಬ್ಧಸ್ಯ ರಜೋಗುಣ ಸಮುದ್ಭವಃ ಪ್ರಾಚೀನವಾಸನಾ ಜನಿತಶ್ಶಬ್ದಾದಿ ವಿಷಯಃ ಕಾಮೋ ಮಹಾಶನಃ ಶತ್ರುಃ ವಿಷಯೇಷ್ವೇನ ಮಾಕರ್ಷತಿ. ಏಷಏವ ಪ್ರತಿಹತಗತಿಃ ಪ್ರತಿಹತಿ ಹೇತುಭೂತ ಚೇತನಾನ್ ಪ್ರತಿ ಕ್ರೋಧರೂಪೇಣ ಪರಿಣತೋ**

---

ಗುರುವನ್ನೂ ಕೂಡ ಕೊಂದುಬಿಡುವನು" ಎಂಬ ಮಹಾ ಪ್ರಾಜ್ಞನಾದ ಆಂಜನೇಯನ ದಿವ್ಯ ಸೂಕ್ತಿಯು ಮಹಾಪಾಪ್ಮಾ ಎಂಬ ಪ್ರಯೋಗಕ್ಕೆ ವ್ಯಾಖ್ಯಾನವಾಗಿ ಭಾವಿಸಬಹುದು.) **ಏನಂ** - ಇಂತಹ ಕಾಮನನ್ನೂ, **ಇಹ** - ಈ ಸಂದರ್ಭದಲ್ಲಿ ಎಂದರೆ ಕರ್ಮಯೋಗವನ್ನು ತ್ಯಜಿಸಿ, ಜ್ಞಾನಯೋಗವನ್ನಾರಂಭಿಸಿದ ಸಂದರ್ಭದಲ್ಲಿ, **ವೈರಿಣಂ** ಶತ್ರುವನ್ನಾಗಿ, **ವಿದ್ಧಿ** - ತಿಳಿ, **ಅಥ ಕೇನ ಪ್ರಯುಕ್ತೋಽಯಂ** ಎಂಬ ಪ್ರಶ್ನೆಗೆ ಕರ್ಮವಾಸನಾಮೂಲಕವಾಗಿ ಉಂಟಾಗುವ ಕಾಮನೊಬ್ಬನು ಕ್ರೋಧ ಒಬ್ಬನು ಹೀಗೆ ಶತ್ರುವಿನಿಂದ ಪ್ರೇರಿಸಲ್ಪಟ್ಟವನಾಗಿ ಪಾಪಾಚರಣೆಯನ್ನು ಮಾಡುತ್ತಾನೆಂದು ಶ್ರೀಕೃಷ್ಣಭಗವಾನರವರು ಉಪದೇಶಿಸಿದರು. ||೩೭||

**ಭಾಷ್ಯಾರ್ಥವು:** —ಹಿಂದೆ ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ಎಂಬ ಶ್ಲೋಕದಲ್ಲೇ ಸಙ್ಗ್ರಹವಾಗಿ ಈ ಜ್ಞಾನಯೋಗಾರಂಭಕನಿಗೆ ರಾಗದ್ವೇಷಗಳೇ **ಪರಿಪನ್ಥಿನೌ** ಶತ್ರುಗಳೆಂದು ಹೇಳಿದ್ದರು. ಆದರೂ ಆ ವಿಷಯವು ಅರ್ಜುನನಿಗೆ ಚನ್ನಾಗಿ ಮನಸ್ಸಿಗೆ ಹಿಡಿಯಲಿಲ್ಲವಾಗಿ ಚನ್ನಾಗಿ ತಿಳಿಯಬೇಕೆಂದು ಪುನಃ ಪ್ರಶ್ನಿಸಿರುವದರಿಂದ, ಕಾಮಾದಿಗಳು ಉತ್ಪನ್ನವಾಗುವ ಬಗೆಯೂ ಅದು ವೃದ್ಧಿಯಾಗುವ ರೀತಿಯೂ, ಅದಕ್ಕೆ ಸಹಕಾರಿಗಳು ಯಾವುವೆಂಬುದೂ ಎಲ್ಲವನ್ನೂ ವಿಸ್ತರವಾಗಿ ಹೇಳಲುಪಕ್ರಮಿಸುತ್ತಾರೆ. ಕಾಮನನ್ನು ವೈರಿ ಎಂದು ತಿಳಿ ಎಂಬದಾಗಿ ಹೇಳುತ್ತಾರೆ; ಯಾರಿಗೆಂದು ಮೂಲದಲ್ಲಿ ಹೇಳಲಿಲ್ಲವು, ಜ್ಞಾನಯೋಗಾರಂಭಕ್ಕೆ ಸಪ್ರಮಾದತ್ವವನ್ನು ಸಮರ್ಥಿಸುವ ಪ್ರಕರಣವಾದುದರಿಂದ, ಯಾರಿಗೆ ಶತ್ರುವೆಂದರೆ ಜ್ಞಾನಯೋಗವನ್ನಾರಂಭಿಸುವನಿಗೆಂದು ಹೇಳುತ್ತಾರೆ. ಹಿಂದಿನ ಶ್ಲೋಕದಲ್ಲಿ **ಅಯಂ** ಎಂಬ ಪದವು ಯಾರನ್ನು ಬೋಧಿಸುತ್ತದೆಯೋ ಅವನಿಗೇನೇ ಇವು ವೈರಿ ಎಂಬುದೂ ಅನ್ವಯಿಸುತ್ತದೆ ಎಂಬುದು ಸ್ಪಷ್ಟವು. **ಉದ್ಭವಾಭಿಭವರೂಪೇಣ**-ಹುಟ್ಟುವ ಮತ್ತು ಕ್ಷೀಣತೆಯನ್ನು ಹೊಂದುವ ಸ್ವರೂಪದಿಂದ, **ವರ್ತಮಾನ ಗುಣಮಯ ಪ್ರಕೃತಿ ಸಂಸೃಷ್ಟಸ್ಯ**-ಇರುವ ಸತ್ವರಜಸ್ತಮೋಗುಣಗಳಿಂದ ಸೇರಿದ, **ಅಸ್ಯ ಜ್ಞಾನಾಯಾರಬ್ಧಸ್ಯ**-ಈ ಜ್ಞಾನಯೋಗಾರಂಭಕನಿಗೆ **ರಜೋಗುಣ ಸಮುದ್ಭವಃ** - ರಜೋಗುಣದಿಂದುಂಟಾದ **ಪ್ರಾಚೀನವಾಸನಾಜನಿತಃ** - ಹಿಂದಿನ ಕರ್ಮವಾಸನೆಯಿಂದ ಹುಟ್ಟಿದ, **ಶಬ್ದಾದಿ ವಿಷಯಃ**-ಶಬ್ದಾದಿ ವಿಷಯಕವಾದ, **ಕಾಮವು, ಮಹಾಶನಃ ಶತ್ರುಃ** - ಎಷ್ಟು ಉಪಭೋಗ ಹೊಂದಿದರೂ ತೃಪ್ತಿಯಿಲ್ಲದ ಶತ್ರುವು, **ವಿಷಯೇಷ್ವೇನಂ ಆಕರ್ಷತಿ** - ವಿಷಯಗಳಲ್ಲಿ ಎಂದರೆ ವಿಷಯೋಪಭೋಗಗಳಲ್ಲಿ ಈ ಕರ್ಮಯೋಗ ತ್ಯಾಗಮಾಡಿದ ಜ್ಞಾನಯೋಗಾರಂಭಕನನ್ನು ಆಕರ್ಷಿಸುತ್ತದೆ. ಇಲ್ಲಿ ಆಕರ್ಷತಿ ಎಂಬ ಪ್ರಯೋಗವು, ಈತನಿಗೆ ಇಷ್ಟವಿಲ್ಲದಿದ್ದರೂ ಪೂರ್ವ ಕರ್ಮವಾಸನೆಯು ವಿಷಯಗಳಲ್ಲಿ ಪ್ರವರ್ತಿಸುವಹಾಗೆ ಮಾಡುತ್ತದೆಂಬ ಭಾವವನ್ನು ಸೂಚಿಸುತ್ತದೆ. **ಏಷ ಏವ** - ಈ ಕಾಮವೇ, **ಪ್ರತಿಹತಗತಿಃ** - ಇಷ್ಟಪ್ರಾಪ್ತಿಗೆ ಅಡ್ಡಿಯುಂಟಾದುದಾಗಿ, **ಪ್ರತಿಹತಿ ಹೇತುಭೂತ ಚೇತನಾನ್ ಪ್ರತಿ** - ವಿಘ್ನಕ್ಕೆ ಕಾರಣಭೂತರಾದ ಚೇತನರನ್ನು ಕುರಿತು, **ಕ್ರೋಧರೂಪೇಣ** - ಕ್ರೋಧರೂಪದಿಂದ, **ಪರಿಣತಃ** - ಪರಿಣಾಮವನ್ನು ಹೊಂದಿದುದಾಗಿ, **ಮಹಾಪಾಪ್ಮಾ** - ಮಹತ್ತಾದ ಪಾಪಾನುಷ್ಠಾನ ಮಾಡುವದಾಗಿ, **ಪರಹಿಂಸಾದಿಷು** - ಇತರರನ್ನು ಹಿಂಸಿಸುವದು, ಕೊಲ್ಲುವದು ಮೊದಲಾದವುಗಳಲ್ಲಿ, **ಪ್ರವರ್ತಯತಿ**-ಪ್ರವೃತ್ತಿ

ಭಾ. ಮಹಾಪಾಪ್ಮಾ ಪರಹಿಂಸಾದಿಷು ಪ್ರವರ್ತಯತಿ. ಏನಂ ರಜೋಗುಣ ಸಮುದ್ಭವಂ ಸಹಜಂ ಜ್ಞಾನಯೋಗ ವಿರೋಧಿನಂ ವೈರಿಣಂ ವಿದ್ಧಿ. ||೩೭||

ಸುವ ಹಾಗೆ ಮಾಡುತ್ತದೆ. ಇದರಿಂದ ಕಾಮವೇ ಹೇಗೆ ಕ್ರೋಧರೂಪವಾಗಿ ಪರಿಣಮಿಸುತ್ತದೆಂಬುದನ್ನು ವ್ಯಕ್ತಪಡಿಸಿ "ಕಾಮಾತ್ಕ್ರೋಧೋಭಿಜಾಯತೇ" ಎಂಬುದನ್ನು ಉಪಪಾದಿಸಿ ಹೇಳಿದರು. ಕ್ರೋಧವು ಮಹಾ ಪಾಪ್ಮಾ ಹೇಗೆ ಎಂದರೆ ಪರಹಿಂಸಾದಿಷು ಪ್ರವರ್ತಯತಿ ಎಂದು ವಿಸ್ತರಿಸಿ ಹೇಳಿದರು. ರಜೋಗುಣ ಸಮುದ್ಭವಂ ಸಹಜಂ - ಸಹಜವಾದ ಎಂದರೆ ಆತ್ಮನ ಪೂರ್ವ ಕರ್ಮವಾಸನಾನುಗುಣವಾಗಿ ಸಹಜವಾದ, ರಜೋಗುಣಸಮುದ್ಭವಂ-ರಜೋಗುಣಾಧಿಕ್ಯದಿಂದುಂಟಾದ, ಏನಂ - ಈ ಕಾಮವನ್ನು, ಜ್ಞಾನಯೋಗ ವಿರೋಧಿನಂ ವೈರಿಣಂ- ಜ್ಞಾನಯೋಗ ನಿಷ್ಪತ್ತಿಗೆ ವಿರೋಧಿಯಾದ ಶತ್ರುವನ್ನಾಗಿ, ವಿದ್ಧಿ - ತಿಳಿ. ಇಲ್ಲಿ ಪ್ರಕರಣಾನುಗುಣವಾಗಿ ಯಾರಿಗೆ ವೈರಿ ಎಂದರೆ ಕರ್ಮಯೋಗ ತ್ಯಾಗಮಾಡಿ ಜ್ಞಾನಯೋಗಾರಂಭಕನಿಗೆ ಎಂದು ತಿಳಿಸುವದಕ್ಕಾಗಿ, ಜ್ಞಾನಯೋಗ ವಿರೋಧಿನಂ ಎಂದು ವ್ಯಾಖ್ಯಾನವು. ಇಲ್ಲಿ ವಿಷಯಾನುಭವರೂಪ ವಾಸನೆ ಎಂಬ ಬೀಜವು ಕಾಮಕ್ರೋಧರೂಪದಲ್ಲಿ ಅಙ್ಕುರಿಸುವದಕ್ಕೆ ರಜೋಗುಣವು ಉದಕ ಸೇಚನದಹಾಗೆ ಎಂಬಭಾವವು; ಈರೀತಿಯಲ್ಲಿ, ರಜೋಗುಣ ಸಮುದ್ಭವಃ ಎಂಬ ತಾತ್ಪರ್ಯವು. ಕಾಮಾದಿಗಳು ಆತ್ಮಗುಣಗಳು, ರಜಸ್ಸು ಪ್ರಕೃತಿಯ ಗುಣವು, ಆ ಆತ್ಮ ಗುಣಗಳಿಗೆ ಈ ರಜೋಗುಣವು ಹೇಗೆ ಕಾರಣವು ಎಂದರೆ, ಈ ಆತ್ಮನು ರಜೋಗುಣ ಪ್ರಾಚುರ್ಯವುಳ್ಳ ಪ್ರಕೃತಿ ಸಂಸೃಷ್ಟನಾಗಿರುವದರಿಂದ ಆ ಕಾಮಾದಿಗಳು ಈ ರಜೋಗುಣದಿಂದ ವ್ಯಕ್ತವಾಗುತ್ತವೆ ಎಂಬಭಿಪ್ರಾಯವು. ಘಟಕ್ಕೆ ಕುಲಾಲ ಚಕ್ರಾದಿಗಳು ಹೇಗೆ ಕಾರಣವೋ, ಹಾಗೆ ದೇಹದ ರಜೋಗುಣವು ಕಾಮ ಕ್ರೋಧಗಳಿಗೆ ಕಾರಣವು. ಸತ್ವಗುಣವು ಆತನ ದೇಹದಲ್ಲಿ ಅಲ್ಪವಾಗಿರುವದರಿಂದ ಜ್ಞಾನ ಯೋಗಾರಂಭ ಪ್ರವೃತ್ತಿಗೆ ಮಾತ್ರವೇ ಕಾರಣವಾಗಿ ಅದು ಪೂರಾ ಕಾರ್ಯಕಾರಿಯಾಗದೆ ರಜೋಗುಣವು ತಲೆ ಎತ್ತಿರುತ್ತದೆಂಬ ಭಾವವು. ತಮೋಗುಣವು ಆಲಸ್ಯಾದಿಗಳಿಗೆ (ಗೀ. ೧೪. ೮. ) ಕಾರಣವಾದುದರಿಂದ ಅದನ್ನು ಇಲ್ಲಿ ಹೇಳಲಿಲ್ಲವು. ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ಎಂಬ ಶ್ಲೋಕದಲ್ಲಿ ರಾಗದ್ವೇಷ ಶಬ್ದಗಳಿಂದ ಹೇಳಲ್ಪಟ್ಟವುಗಳೇ ಇಲ್ಲಿ ಕಾಮಕ್ರೋಧ ಶಬ್ದಗಳಿಂದ ಹೇಳಲ್ಪಟ್ಟವೆ. ಆದರೆ ಅಲ್ಲಿ ಎರಡೂ ದ್ವಿವಚನ ಮೂಲಕ ಒಟ್ಟಿಗೆ ಹೇಳಲ್ಪಟ್ಟಿರುವಾಗ ಇಲ್ಲಿ ಪ್ರತ್ಯೇಕವಾಗಿ ಕಾಮ ಏಷಃ ಕ್ರೋಧ ಏಷಃ ಎಂದು ಹೇಳಲು ಎರಡು ಕಾರಣಗಳುಂಟು. ಯಾವುದರ ಮೂಲಕ ಪಾಪಾಚರಣೆಯು ಎಂದರೆ ಬರೀ ಕಾಮದಿಂದಲೇ ಆಗುವದಿಲ್ಲವಾಗಿ, ಕ್ರೋಧಾದಿಗಳು ಬೇಕಾಗಿರುವದರಿಂದ ಪೃಥಕ್ಕಾಗಿ ಹೇಳಲ್ಪಟ್ಟವು. ಅದೂ ಅಲ್ಲದೆ "ಕಾಮಾತ್ಕ್ರೋಧೋಭಿ ಜಾಯತೆ" ಎಂದು ಹಿಂದೆ ಹೇಳಿರುವಂತೆ, ಕಾಮವಿಲ್ಲದೆ ಕ್ರೋಧಾದಿಗಳು ಉತ್ಪನ್ನವಾಗುವದಿಲ್ಲವಾದುದರಿಂದ, ಇವುಗಳನ್ನು ಹೇಳುವ ಸಂದರ್ಭಗಳಲ್ಲೆಲ್ಲಾ ಕಾಮವನ್ನು ಕುರಿತು ಹೇಳಿದರೆ ಕ್ರೋಧಾದಿಗಳನ್ನೂ ಕುರಿತು ಹೇಳಿದಂತಾಗುವದು. ಹೀಗೆ ಈ ಎರಡು ಕಾರಣಗಳಿಂದ ಕಾಮ ಏಷಃ ಕ್ರೋಧ ಏಷಃ ಎಂಬ ಪ್ರಯೋಗವು. ಆದುದರಿಂದ ಕಾಮಕ್ರೋಧಗಳು ಈ ಜ್ಞಾನಯೋಗಾರಂಭಕನಿಗೆ ವೈರಿಗಳೆಂದು ಹೇಳುವದಕ್ಕೆ ಬದಲಾಗಿ ವಿದ್ಧ್ಯೇನ ಮಿಹ ವೈರಿಣಂ"ಎಂದು ಏನಂ ಎಂಬ ಪದದಿಂದ ಕಾಮವನ್ನೊಂದನ್ನೇ ವೈರಿಯೆಂದು ಹೇಳಲ್ಪಟ್ಟಿತು. ಇನ್ನು ಮುಂದಿನ ಆರು ಶ್ಲೋಕಗಳಲ್ಲೂ ಕಾಮ ಒಂದೇ "ತೇನ", "ಏತೇನ' "ಕಾಮರೂಪೇಣ". "ಅಸ್ಯ", "ಏನಂ", "ಯಃ", "ಕಾಮರೂಪಂ" ಇಂತಹ ಏಕವಚನದ ಪದಗಳಿಂದಲೇ ನಿರ್ದೇಶಿಸಲ್ಪಟ್ಟಿರುತ್ತದೆ.

ಮೂ. ಧೂಮೇನಾ ವ್ರಿಯತೇ ವಹ್ನಿ ರ್ಯಥಾಽದರ್ಶೋ ಮಲೇನ ಚ ।
ಯಥೋಽಲ್ಬೇನಾ ವೃತೋಗರ್ಭಸ್ತಥಾ ತೇನೇದ ಮಾವೃತಮ್ ॥ ೩೮.

ಅದೂ ಅಲ್ಲದೆ ಅರ್ಜುನ ಪ್ರಶ್ನೆಯು ಕೇನ ಪ್ರಯುಕ್ತೋಽಯಂ ಎಂದು ಏಕವಚನದಲ್ಲಿರುವ ದರಿಂದ ಕಾಮ ಏಷಃ ಕ್ರೋಧ ಏಷಃ ಎಂಬದಾಗಿ ಉತ್ತರವು. ಇದರಿಂದ ಕ್ರೋಧ ವಿಷ ಯವು ಹೇಳಲ್ಪಡಲಿಲ್ಲವೆಂದು ಭಾವಿಸತಕ್ಕದ್ದಲ್ಲವು. ಕ್ರೋಧವು ಹೇಗೆ ಪಾಪಾಚರಣೆಗೆ ಹೇತು ವೆಂಬುದನ್ನು ತಿಳಿಸುವದಕ್ಕಾಗಿ ಪರಹಿಂಸಾದಿಷು ಪ್ರವರ್ತಯತಿ ಎಂಬ ಪ್ರಯೋಗವು.

ಮಹರ್ಷಿಯು (೧) ಕ್ರುದ್ಧಃಪಾಪಂ ನ ಕುರ್ಯಾತ್ಕಃಕ್ರುದ್ಧೋಽಹನ್ಯಾದ್ಗುರೂನಪಿ ।
ಕ್ರುದ್ಧಃ ಪರುಷಯಾ ವಾಚಾ ನರಸ್ಸಾಧೂನ ಧಿಕ್ಷಿಪೇತ್ ॥

ಎಂದರೆ ಕೋಪಾವಿಷ್ಟನಾದವನು ಪಾಪಮಾಡದಿರುವನು ಯಾರುತಾನೇ ಇದ್ದಾರೆ? ಕೋಪಿ ಷ್ಠನು ಸಾಧು ಜನಗಳನ್ನು ಕ್ರೂರವಾಕ್ಯಗಳಿಂದ ಧಿಕ್ಕರಿಸುವನು" ಎಂಬದಾಗಿ ಮಹಾಪ್ರಾಜ್ಞ ನಾದ ಆಂಜನೇಯೋಕ್ತಿಯಿಂದ ಕ್ರೋಧವು ಪಾಪಕ್ಕೆ ಹೇತುವೆಂದು ಉಪಪಾದಿಸಿರುತ್ತಾರೆ. ಹಾಗೆಯೇ ಇನ್ನೊಂದು ಕಡೆಯಲ್ಲಿ ಯುಧಿಷ್ಠಿರನು ತನ್ನ ಪತ್ನಿಯಾದ ದ್ರೌಪದಿಗೆ ಕ್ರೋಧವನ್ನು ನಿಂದಿಸಿ ಹೇಳುತ್ತಾನೆ:—(೨) "ಯಃ ಪುನಃ ಪುರುಷಃ ಕ್ರೋಧಂ ನಿತ್ಯಂ ವಿಸೃಜತೇಶುಭೇ। ತಸ್ಯಾಭಾವಾಯ ಭವತಿ ಕ್ರೋಧಃ ಪರಮದಾರುಣಃ । ಕ್ರೋಧಮೂಲೋ ವಿನಾಶೋಹಿ ಪ್ರಜಾನಾಮಿಹದೃಶ್ಯತೇ। ತತ್ಕಥಂ ಮಾದೃಶಃ ಕ್ರೋಧ ಮುತ್ಸೃಜೇಲ್ಲೋಕ ನಾಶನಮ್" ದ್ರೌಪದಿಯು ದುರ್ಯೋಧನಾದಿಗಳ ವಿಷಯದಲ್ಲಿ ಕೋಪಮಾಡುವದು ಸಹೇತುಕವಾದುದ ರಿಂದ ನಿಂದ್ಯವಲ್ಲವೆಂದು ಬಲಿ, ಪ್ರಹ್ಲಾದ ಸಂವಾದಮೂಲಕ, ತನ್ನ ಪತಿಗೆ ತಿಳಿಸಲು, ಯುಧಿಷ್ಠಿ ರನು ಕ್ರೋಧವು ಸರ್ವ ನಾಶಕ್ಕೂ ಹೇತುವಾಗಿರುವಾಗ ತನ್ನಂತಹ ಪ್ರಾಜ್ಞನು ಕೋಪವನ್ನು ಮಾಡುವದು ಉಚಿತವಲ್ಲವೆಂದು ಹೇಳುವ ಪ್ರಕರಣವು. ಆದರೆ ಈ ಸಂದರ್ಭದಲ್ಲಿ ನಾವು ಗ್ರಹಿಸತಕ್ಕ ವಿಷಯವೇನೆಂದರೆ—ಕ್ರೋಧವು ಎರಡು ತೆರನಾಗಿರುವದು; ತಪ್ಪುಮಾಡಿದವರಲ್ಲಿ ಮಾಡುವ ಕೋಪವು ನಿಂದ್ಯವಲ್ಲವು; ತಂದೆಯು ದುರ್ಮಾರ್ಗಿಯಾದ ಮಗನ ವಿಷಯದಲ್ಲೂ ರಾಜನು ದುರ್ಮಾರ್ಗಿಗಳ ವಿಷಯದಲ್ಲೂ ಮಾಡುವ ಕೋಪವು ನಿಂದ್ಯವಲ್ಲವು. ಅದು ಹಿತವ ನ್ನುಂಟುಮಾಡುವದಕ್ಕಾಗಿ ಮಾಡಿದ ಕೋಪವು. ಹಾಗೆಯೇ ಸರ್ವೇಶ್ವರನು ದುರ್ಮಾರ್ಗಿ ಗಳ ವಿಷಯದಲ್ಲಿ ಕೋಪಿಸಿ ನಿಗ್ರಹಿಸುವದೂ ಅವರುಗಳ ಹಿತಕ್ಕಾಗಿಯೇಯಾದುದರಿಂದ ನಿಂದ್ಯ ವಲ್ಲವು. ಆತನ ಕೃಪಾ ಪ್ರಭಾವಕ್ಕೇನೂ ಅಂತಹ ನಿಗ್ರಹವು ಕುಂದಕವಾಗುವದಿಲ್ಲವು. ಆದರೆ ರಾಗಾದಿ ಮೂಲಕ ಮಾಡುವ ಕ್ರೋಧವೀಗ ನಿಂದ್ಯವು, ಅನರ್ಥಸಾಧನವು. ರಜೋಗುಣ ವೃದ್ಧಿಯಿಂದ ಕಾಮಕ್ರೋಧಗಳು ಉಂಟಾಗಲು ಕಾರಣವೇನೆಂದು ಪ್ರಶ್ನಿಸಬಹುದೆಂದು ಊಹಿಸಿ ಅದಕ್ಕೆ ಉತ್ತರವಾಗಿ " ಪ್ರಾಚೀನವಾಸನಾಜನಿತಶಬ್ದಾದಿವಿಷಯಃಕಾಮಃ " ಎಂದು ವ್ಯಾಖ್ಯಾನಮಾಡಿರುತ್ತಾರೆ. ಈತನಿಗೆ ಶರೀರ ಸಂಬಂಧವು ಪ್ರಾಚೀನ ಕರ್ಮವಾಸನಾನು ಗುಣವಾದುದರಿಂದ, ತದನುಗುಣವಾಗಿ ವಿಷಯಾಸಕ್ತಿಯುಂಟಾಗಿ ಕಾಮವು ಉದ್ಭವಿಸುತ್ತದೆ.

**ಮೂಲಕ್ಕೆ ಅರ್ಥವು**:—ಕಾಮವು ಶತ್ರುವೆಂದು ಹೇಳಿದರು; ಯಾವ ರೀತಿಯಲ್ಲಿ ಶತ್ರು ವಾಗಿ ಪರಿಣಮಿಸುತ್ತದೆಂಬುದು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಪೂರ್ವಾರ್ಧ ಮಧ್ಯದಲ್ಲಿ ರುವ **ಯಥಾ** ಎಂಬ ಪದವು ಎರಡು ಕಡೆಗೂ ಅನ್ವಯಿಸುತ್ತದೆ. **ಯಥಾ** - ಹೇಗೆ, **ವಹ್ನಿಃ**-

(೧) ರಾ. ಸುಂ. (೨) ಭಾ. ವನ. ೨೯. ೫. ೬.

ಭಾ. ಯಥಾಧೂಮೇನ ವಹ್ನಿ ರಾವ್ರಿಯತೇ, ಯಥಾ ಆದರ್ಶೋ ಮಲೇನ, ಯಥಾ ಚೋಲ್ಬೇನಾ ವೃತೋ ಗರ್ಭಃ, ತಥಾತೇನ ಕಾಮೇನೇದಂ ಜನ್ತುಜಾತ ಮಾವೃತಂ ||

ಅಗ್ನಿಯು, ಧೂಮೇನ - ಹೊಗೆಯಿಂದ, ಆವ್ರಿಯತೇ - ಮರೆಸಲ್ಪಡುತ್ತದೋ, ಯಥಾ ಚ-ಮತ್ತು ಹೇಗಾದರೆ, ಆದರ್ಶಃ - ಸ್ವಚ್ಛವಾಗಿರುವ ಕನ್ನಡಿಯು, ಮಲೇನಾ ವ್ರಿಯತೇ - ಕೊಳೆಯಿಂದ ಮರೆಸಲ್ಪಡುತ್ತದೋ, ಮತ್ತು ಯಥಾ ಚ-ಹೇಗಾದರೆ, ಉಲ್ಬೇನ - ಗರ್ಭಚೀಲ ದಿಂದ, ಆವೃತಃ-ಆವರಿಸಲ್ಪಟ್ಟ ಗರ್ಭವು, ಮರೆಸಲ್ಪಟ್ಟಿರುತ್ತದೋ, ತಥಾ-ಹಾಗೆಯೇ, ತೇನ-ಕ್ರೋಧ ಜನಕವಾದ ಕಾಮದಿಂದ, ಇದಂ - ನೆರದಿರುವ ಸೈನ್ಯವನ್ನೆಲ್ಲಾ ಶ್ರೀಕೃಷ್ಣನೇ ತನ್ನ ಕೈಯಿಂದ ಪ್ರದರ್ಶಿಸುತ್ತಾ ಹೇಳಿದ ಈ ಚೇತನ ವರ್ಗವೆಲ್ಲಾ, ಆವೃತಮ್ - ಆವರಿಸಲ್ಪಟ್ಟಿರುತ್ತದೆ. ಹೇಗೆ ಅಗ್ನಿಯೊಂದಿಗೆ ಧೂಮವು ಇರುತ್ತದೋ ಹಾಗೆಯೇ ಕರ್ಮವಾಸನೆಯೂ ಆತ್ಮನೊಂದಿಗೇನೆ ಸೇರಿರುತ್ತದೆ ; ಅಗ್ನಿಯು ಉರಿದರೆ ಧೂಮದ ನಿವೃತ್ತಿ ಹೇಗೋ, ಹಾಗೆಯೇ ಧರ್ಮಭೂತಜ್ಞಾನದ ವಿಕಾಸವು ಶಾಸ್ತ್ರಜ್ಞಾನದಿಂದ ಉಂಟಾದರೆ, ಆಗ ಈ ಕಾಮಾದಿಗಳು ನಶ್ವರವಾದುವುಗಳನ್ನು ಅಪೇಕ್ಷಿಸುತ್ತವೆ ಎಂಬ ಜ್ಞಾನ ಉಂಟಾಗಿ ಅವು ತೊಲಗುತ್ತವೆ. ಕನ್ನಡಿಯು ಹೇಗೆ ಮೇಲೆ ಮೇಲೆ ಕೊಳೆಯಿಂದ ಮುಚ್ಚಲ್ಪಡುತ್ತದೋ, ಹಾಗೆಯೇ ಈ ಚೇತನನ ಧರ್ಮಭೂತ ಜ್ಞಾನವೂ ಐಹಿಕ ಕಾಮುಗಳಿಂದ ಮಾಲಿನ್ಯವನ್ನು ಹೊಂದುತ್ತದೆ. ಕನ್ನಡಿಯನ್ನು ಪದೇ ಪದೇ ಒಳ್ಳೇ ಬಟ್ಟೆಯಿಂದ ಒರಿಸುವಹಾಗೆ, ಆ ಮಾಲಿನ್ಯವನ್ನು ಶಾಸ್ತ್ರಜ್ಞಾನದಿಂದ ತೊಳೆಯತಕ್ಕದ್ದು ಎಂದರೆ ಶಾಸ್ತ್ರಜ್ಞಾನದಿಂದ ಐಹಿಕ ಸುಖಗಳಲ್ಲಿ ಕಾಮನೆಯನ್ನು ಬಿಡತಕ್ಕದ್ದು. ಹಾಗೆಯೇ ಗರ್ಭವು ೯, ೧೦ ತಿಂಗಳು ತಾಯಿಯ ಹೊಟ್ಟೆಯಲ್ಲಿ ಉಲ್ಬದಿಂದ ಬಂಧಿಸಲ್ಪಟ್ಟದುದು ಬಿಟ್ಟುಹೋಗಿ, ಬಂಧನದಿಂದ ಶಿಶುವು ಮುಕ್ತವಾಗುತ್ತದೋ, ಹಾಗೆಯೇ ಪರಮಾತ್ಮನಲ್ಲಿ ಸಕ್ತನಾಗುವವರ ಮೂಲಕ ಐಹಿಕ ಕಾಮವು ತೊಲಗಿ, ಪ್ರಕೃತಿ ಬಂಧವು ನಿವರ್ತಿಸಿ ಧರ್ಮಭೂತ ಜ್ಞಾನದ ಪ್ರಕಾಶ ಉಂಟಾಗುವದರಲ್ಲಿ ಸಂದೇಹವಿಲ್ಲವು. ಆದುದರಿಂದ ಅಗ್ನಿಗೆ ಧೂಮರೂಪದಲ್ಲೂ, ಕನ್ನಡಿಗೆ ಮಾಲಿನ್ಯರೂಪದಲ್ಲೂ ಶಿಶುವಿಗೆ ಗರ್ಭಚೀಲದ ರೂಪದಲ್ಲೂ ಇರುವ ಈ ಐಹಿಕ ವಿಷಯಾಸಕ್ತಿಯು ಈ ಆತ್ಮನಿಗೆ ಪರಮ ವೈರಿಯಾದುದರಿಂದ ಸದ್ಗುರುವನ್ನಾಶ್ರಯಿಸಿ ಬಂದ ಶಾಸ್ತ್ರಜನ್ಯ ಜ್ಞಾನಾಸಿಯಿಂದ ಅದನ್ನು ಕತ್ತರಿಸತಕ್ಕದ್ದೆಂಬ ಭಾವವು. ||೩೮||

ಭಾಷ್ಯಾರ್ಥವು :—ಹೇಗೆ ಕಾಮವು ವೈರಿಯು ಎಂಬುದಕ್ಕೆ ಶಾಸ್ತ್ರಗಳಲ್ಲಿ ಉಪಪಾದಿತಗಳಾದ ಮೂರು ದೃಷ್ಟಾಂತಗಳನ್ನು ಕೊಟ್ಟು ಉಪಪಾದಿಸುತ್ತಾರೆ. ಯಥಾ - ಹೇಗೆ, ಧೂಮೇನ- ಹೊಗೆಯಿಂದ, ವಹ್ನಿಃ - ಅಗ್ನಿಯು, ಆವ್ರಿಯತೇ - ಮುಚ್ಚಲ್ಪಡುತ್ತದೋ, ಯಥಾ-ಹೇಗೆ, ಆದರ್ಶಃ - ಕನ್ನಡಿಯು, ಮಲೇನ - ಮಲದಿಂದ, ಆವ್ರಿಯತೇ - ಮುಚ್ಚಲ್ಪಡುತ್ತದೋ, ಯಥಾ - ಹೇಗೆ, ಉಲ್ಬೇನ - ಗರ್ಭಚೀಲದಿಂದ (ಮಾಸಿನಿಂದ), ಆವೃತಃ - ಆವರಿಸಲ್ಪಟ್ಟ ಗರ್ಭಃ - ಗರ್ಭವು, ಮುಚ್ಚಲ್ಪಟ್ಟಿರುತ್ತದೋ, ತಥಾ - ಹಾಗೆಯೇ, ತೇನ - ಅದರಿಂದ, ಎಂದರೆ ಕಾಮೇನ - ಕಾಮದಿಂದ, ಇದಂ - ಎಂದರೆ ಜನ್ತುಜಾತಂ - ಶರೀರ ಹೊಂದಿ ಹುಟ್ಟುವದು ಮುಂತಾದ್ದು ಮಾತ್ರವೇ ಇರುವ ಪ್ರಾಣಿ ವರ್ಗವು, ಆವೃತಮ್ .. ಆವರಿಸಲ್ಪಟ್ಟಿರುತ್ತದೆ ಇಲ್ಲಿ ಮೂರು ದೃಷ್ಟಾಂತಗಳಲ್ಲಿ ಮೊದಲನೆಯದರಿಂದ ಅನಾದಿಯಾಗಿ ಶರೀರ ಸಂಬಂಧವೂ ತನ್ಮೂಲಕ ವಾಸನಾ ಸಂಬಂಧವೂ ಇರುವದರಿಂದ ಜ್ಞಾನಕ್ಕೆ ಈ ಕಾಮನಿಂದ ಆವರಣವೂ ಸಹಜವೆಂದೂ, ಎರಡನೆಯದರಿಂದ ಕನ್ನಡಿಯನ್ನು ತೊಳೆದು ನಿರ್ಮಲವಾಗಿ ಮಾಡಿ

ದರೂ ಪುನಃ ಕೊಳೆಯು ಕೂಡುವವರಿಂದ ಹೇಗೆ ಮಾಲಿನ್ಯವನ್ನು ಹೊಂದುತ್ತದೋ, ಹಾಗೆಯೇ ಸ್ವಲ್ಪ ಸ್ವಲ್ಪ ಪಾಪಗಳು ಕಳೆದರೂ ಉಪಾಧಿಯಿಂದ ನೈಮಿತ್ತಿಕವಾಗಿ ಕಾಮವು ಪ್ರಾಪ್ತವಾಗ ಬಹುದೆಂದೂ, ಉಲ್ಬರೂಪ ಚೇಲದಿಂದ ಬಲಾತ್ಕಾರವಾಗಿ ನಿರ್ಬಂಧಿಸಲ್ಪಟ್ಟಿರುವದರಿಂದ ಕಾಮ ದಿಂದ ತಪ್ಪಿಸಿಕೊಳ್ಳುವದು ದುಶ್ಶಕವೆಂದೂ, ಇಲ್ಲಿ ಪ್ರದರ್ಶಿಸಲ್ಪಟ್ಟಿತು. ಇಲ್ಲಿ ಇದಂ ಶಬ್ದವು, ಅಥಕೇನ ಪ್ರಯುಕ್ತೋಽಯಂ ಎಂಬ ೩೬ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ ಅಯಂ ಎಂಬ ಪದಕ್ಕೆ ಸಂಬಂಧಿಸಿದಾದ ಪ್ರಯುಕ್ತ ಚೇತನನನ್ನುದ್ದೇಶಿಸಿ ಹೇಳುವದರಿಂದ ಇದು ಸರ್ವತ್ರ ಅನ್ವಯಿಸಬಹುದಾಗಿ ಜಾತ್ಯೇಕ ವಚನವಾಗಿ ತೋರಿಬರುವದರಿಂದ ಜನ್ತುಜಾತಂ - ಎಂದು ವ್ಯಾಖ್ಯಾನಮಾಡಲ್ಪಟ್ಟಿತು. ತಾತ್ಪರ್ಯ ಚಂದ್ರಿಕೆಯಲ್ಲಿ ಇದನ್ನು ವ್ಯಾಖ್ಯಾನಮಾಡುವಾಗ ಶ್ರೀ ಪರಾಶರರೂ ೬. ೭. ೬೧.೪. ಶ್ಲೋಕಗಳಲ್ಲಿ ಹೀಗೆಯೇ ಕ್ಷೇತ್ರಜ್ಞರ ಜ್ಞಾನವು ಆವೃತವಾಗಿದೆ ಎಂದು ಹೇಳಿರುತ್ತಾರೆಂದು ಅಪ್ಪಣೆ ಕೊಡಿಸಿರುತ್ತಾರೆ:—ಆ ಶ್ಲೋಕಗಳು ಯಾವುವೆಂದರೆ;—

ವಿಷ್ಣುಶಕ್ತಿಃ ಪರಾಪ್ರೋಕ್ತಾ ಕ್ಷೇತ್ರಜ್ಞಾಖ್ಯಾ ತಥಾಪರಾ ।
ಅವಿದ್ಯಾ ಕರ್ಮಸಂಜ್ಞಾನ್ಯಾ ತೃತೀಯಾ ಶಕ್ತಿರಿಷ್ಯತೇ ॥೬೧॥
ಯಯಾಕ್ಷೇತ್ರಜ್ಞ ಶಕ್ತಿಸ್ಸಾ ವೇಷ್ಟಿತಾ ನೃಪಸರ್ವಗಾ ।
ಸಂಸಾರ ತಾಪಾ ನಖಿಲಾ ನವಾಪ್ನೋತ್ಯತಿ ಸಂತತಾ ॥೬೨॥
ತಯಾ ತಿರೋಹಿತತ್ವಾಚ್ಚ ಶಕ್ತಿಃ ಕ್ಷೇತ್ರಜ್ಞ ಸಂಜ್ಞಿತಾ ।
ಸರ್ವ ಭೂತೇಷು ಭೂಪಾಲ ತಾರತಮ್ಯೇನ ಲಕ್ಷ್ಯತೇ ॥೬೩॥

ಇವರರ್ಥವು:—ಈ ಜಗತ್ತೆಲ್ಲಾ ಪರಮಾತ್ಮನ ಶಕ್ತಿಗಳಿಂದ ವ್ಯಾಪಿಸಲ್ಪಟ್ಟಿವೆ ಎಂದು ಹೇಳುತ್ತಾರೆ, ಇಲ್ಲಿ ಶಕ್ತಿ ಎಂದರೆ ಶಕ್ತನಲ್ಲಿರುವ ಕಾರ್ಯೋಪಯೋಗಿಯಾದ ಅಪೃಥಕ್ಸಿದ್ಧವಿಶೇಷಣವು. ಶಕ್ತಿಗಳು ಮೂರು:-(೧) ಸರ್ವೋತ್ಕೃಷ್ಟವಾಗಿ ಬಲಿಷ್ಠವಾದುದು ವಿಷ್ಣುಶಕ್ತಿಯು. (೨) ಅಷ್ಟು ಬಲಿಷ್ಠವಲ್ಲದೆ ಎರಡನೆಯದಾದುದು ಜೀವಾತ್ಮಶಕ್ತಿಯು (೩) ಮೂರನೆಯ ಶಕ್ತಿಯು, ಪುಣ್ಯಪಾಪಾತ್ಮಕ ಕರ್ಮರೂಪವಾದ ಅವಿದ್ಯೆಯು. ಈ ಮೂರನೆಯದರಿಂದ ಎರಡನೆಯ ಶಕ್ತಿಯು ಆವರಿಸಲ್ಪಟ್ಟಿರುತ್ತದೆ. ಇದರಿಂದ ಕ್ಷೇತ್ರಜ್ಞನು ಪ್ರವಾಹದಹಾಗೆ ಮೇಲೆ ಮೇಲೆ ಬರುತ್ತಿರುವ ಸಕಲ ಸಂಸಾರ ತಾಪಗಳನ್ನೂ ಹೊಂದುವನು. ಈ ಅವಿದ್ಯೆಯಿಂದ ಆವರಣದಲ್ಲಿ ತಾರತಮ್ಯವಿರುವದರಿಂದ, ಚೇತನರಲ್ಲೂ ಜ್ಞಾನತಾರತಮ್ಯ ಉಂಟು. ಇದರಿಂದ ಸಮಸ್ತರ ಜ್ಞಾನಕ್ಕೂ ತಾರತಮ್ಯದಿಂದ ಜ್ಞಾನ ಸಂಕೋಚ ವಿಕಾಸಗಳಿರುವದರಿಂದ ಜ್ಞಾನಿಗಳೆನಿಸಿರುವವರ ಉಪದೇಶವು ಹೇಗೆ ಗ್ರಾಹ್ಯವೆಂದು ಆಕ್ಷೇಪಿಸಬಹುದು. ಅಂತಹ ಜ್ಞಾನಿಗಳಿಗೆ ಜ್ಞಾನ ಸಂಕೋಚವು ಅತ್ಯಲ್ಪವಾಗಿರುವದರಿಂದ ಗ್ರಾಹ್ಯವು. ಇದೂ ಅಲ್ಲದೆ ಪರಾಶರ, ವ್ಯಾಸ, ಶುಕಾದಿಗಳೂ ಹಾಗೆಯೇ ನಮ್ಮ ಆಳ್ವಾರಾಚಾರ್ಯರುಗಳೆಲ್ಲಾ ನಿತ್ಯಸೂರಿಗಳ ಅಂಶಭೂತರಾಗಿ ಜ್ಞಾನಸಂಕೋಚವೇ ಇಲ್ಲದುದರಿಂದ ಅಂತವರುಗಳುಪದೇಶವು ಪರಮಗ್ರಾಹ್ಯವು. ಇನ್ನು ಕೆಲವರು ಸರ್ವೇಶ್ವರ ನಿಯಮನಾನುಸಾರ "ದದಾಮಿ ಬುದ್ಧಿಯೋಗಂ" ಎಂದು ಇದೇ ಗೀತೆಯಲ್ಲೇ ಮುಂದೆ ಹೇಳಿರುವಮೇರಿಗೆ, ಒಳ್ಳೇ ಜ್ಞಾನವನ್ನು ಹೊಂದಿ ಉಪದೇಶಿಸುವದರಿಂದಲೂ ಗ್ರಾಹ್ಯವು. ಆದರೆ ಇದನ್ನು ವಿಮರ್ಶಿಸಿ ತಿಳಿಯುವ ಶಕ್ತಿಯು ಈತನಲ್ಲಿರತಕ್ಕದ್ದು. ಹಾಗಲ್ಲದೆ ಸುಲಭವಾಗಿ ಲೆಕ್ಚರುಗಳ ಮೂಲಕ (ಉಪನ್ಯಾಸ) ಬೀದಿಯಲ್ಲಿ ಹೇಳುವದೆಲ್ಲಾ ಗ್ರಾಹ್ಯವೆಂದು ಭಾವಿಸತಕ್ಕದ್ದಲ್ಲವು. ಜ್ಞಾನ ನಿಧಿಯನ್ನಾಶ್ರಯಿಸಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಪ್ರಾರ್ಥಿಸಿ ಬಂದ ಜ್ಞಾನವೀಗ ಸಂಸ್ಕಾರದಿಂದುಂಟಾದ ಜ್ಞಾನವಾಗುವದರಿಂದ ಪರಮಗ್ರಾಹ್ಯವು ಮತ್ತು ಸರ್ವೋತ್ಕೃಷ್ಟವು. ಶ್ರೀ ರಾಘವೇಂದ್ರ ಸ್ವಾಮಿಗಳವರು ಈ ಮೂರು ದೃಷ್ಟಾಂತಗಳೂ ಉತ್ತಮ

ಭಾ. ಅ. ಆವರಣ ಪ್ರಕಾರಮಾಹ,

ಮೂ. ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।
ಕಾಮರೂಪೇಣ ಕೌನ್ತೇಯ ದುಷ್ಪೂರೇಣಾ ನಲೇನ ಚ ॥ ೩೯.

ಮಧ್ಯಮ ಅಧಮ ಜೀವರುಗಳಿಗೆ ಪ್ರಾಪ್ತವಾಗುವ ಜ್ಞಾನಾವರಣದ ಸ್ಥಿತಿಯನ್ನು ಬೋಧಿಸುತ್ತದೆಂದು ವ್ಯಾಖ್ಯಾನಮಾಡಿರುತ್ತಾರೆ. ಧೂಮವು ಅಗ್ನಿಯನ್ನು ಸೂಕ್ಷ್ಮವಾಗಿಯೂ, ಕೊಳೆಯು ಆದರ್ಶವನ್ನು ಸ್ವಲ್ಪ ಹೆಚ್ಚಾಗಿಯೂ, ಗರ್ಭಚೀಲವು ಗರ್ಭವನ್ನು ಬಹು ಕಠಿಣವಾಗಿಯೂ ಆವರಿಸುವಹಾಗೆ ಉತ್ತಮ ಮಧ್ಯಮ ಅಧಮ ಜೀವರುಗಳ ಜ್ಞಾನವು ಅದೇರೀತಿಯಲ್ಲೇ ಆವರಿಸಲ್ಪಟ್ಟಿರುತ್ತದೆಂದು ಅಭಿಪ್ರಾಯಪಟ್ಟಿರುತ್ತಾರೆ.

**ಭಾಷ್ಯಾವತಾರಿಕೆ:—ಆವರಣ ಪ್ರಕಾರ ಮಾಹ** - ಆವರಿಸುವ ಕ್ರಮವನ್ನು ಕುರಿತು ಹೇಳುತ್ತಾರೆ. ಈ ಜ್ಞಾನಯೋಗಾರಂಭಕನಿಗೂ ಕೂಡ ಅದು ಹೇಗೆ ಆವರಣವೆಂಬುದನ್ನು ಉಪಪಾದಿಸುತ್ತಾರೆಂಬ ಭಾವವು.

**ಮೂಲಕ್ಕೆ ಅರ್ಥವು :—ಹೇ ಕೌಂತೇಯ** - ಓ ಕುಂತೀಪುತ್ರನಾದ ಅರ್ಜುನನೇ, ಹಾಗೆಯೇ **ಜ್ಞಾನಿನಃ** - ಜ್ಞಾನಸ್ವರೂಪನಾಗಿಯೂ ಜ್ಞಾನ ಸ್ವಭಾವನಾಗಿಯೂ ಇರುವ ಈ ಜ್ಞಾನಯೋಗಾರಂಭಕನಾಗಿರುವ ಮೋಕ್ಷಾರ್ಥಿಯ, **ಜ್ಞಾನಂ** - ತನ್ನ ಆತ್ಮವಿಷಯಕ ಜ್ಞಾನವೂ ಕೂಡ, **ದುಷ್ಪೂರೇಣ** - ಹೊಂದಲಶಕ್ಯವಾದವುಗಳಲ್ಲಿ ಆಶೆಯುಳ್ಳ, **ಅನಲೇನ ಚ** - ತೃಪ್ತಿಯೇ ಇಲ್ಲದಿರುವ, **ನಿತ್ಯವೈರಿಣಾ** - ಸದಾ ವೈರಿಯಾಗಿರುವ, **ಏತೇನ** - ಈ ಮೇಲೆ ಹೇಳಿದ, **ಕಾಮರೂಪೇಣ** - ಕಾಮದಿಂದ, **ಆವೃತಂ** - ಆವರಿಸಲ್ಪಟ್ಟಿರುತ್ತದೆ. ಹಿಂದೆ ಸಾಮಾನ್ಯವಾಗಿ ಹೇಳಿದುದನ್ನೇ ಪ್ರಕೃತವಿಷಯವಾದ ಕರ್ಮಯೋಗವನ್ನು ತ್ಯಜಿಸಿದ ಜ್ಞಾನಯೋಗಾರಂಭಕನ ಆತ್ಮವಿಷಯಕ ಜ್ಞಾನಕ್ಕೂ ಅನ್ವಯಿಸುತ್ತದೆಂದು ಹೇಳುತ್ತಾರೆ. ಈತನ ಆತ್ಮವಿಷಯಕ ಜ್ಞಾನವೂ ಕೂಡ ಕಾಮದಿಂದ ಆವರಿಸಲ್ಪಟ್ಟಿರುತ್ತದೆ. ಆ ಕಾಮನು ಈತನಿಗೂ ಸದಾವೈರಿಯು. ಪಡೆಯಲಸಾಧ್ಯವಾದ ವಿಷಯಗಳಲ್ಲಿ ಆಶೆಯನ್ನುಂಟುಮಾಡುವಂಥಾದ್ದು, ಮತ್ತು ಎಷ್ಟು ಅನುಭವಿಸಿದರೂ ಸಾಕು ಎಂಬ ತೃಪ್ತಿಯನ್ನುಂಟುಮಾಡತಕ್ಕದ್ದಲ್ಲವು. ಇಲ್ಲಿ ಜ್ಞಾನಿನಃ ಜ್ಞಾನಂ ಎಂಬುದರಿಂದ ಧರ್ಮಿಯಾದ ಆತ್ಮನು ಜ್ಞಾನಸ್ವರೂಪನೆಂದೂ ಆತನ ಧರ್ಮವೂ ಜ್ಞಾನರೂಪವಾದುದಾಗಿ ಧರ್ಮಭೂತ ಜ್ಞಾನವೆಂದು ಹೇಳಲ್ಪಟ್ಟಿರುವದರಿಂದ ಆತ್ಮಾ ಜ್ಞಾನ ಸ್ವರೂಪಮಾತ್ರವೇ, ಅದು ನಿರ್ಗುಣವಾದುದು ಎಂಬ ವಾದಕ್ಕೆ ಈ ಶ್ಲೋಕದಲ್ಲಿ ಅವಕಾಶವಿಲ್ಲವು. ನಾವಾದರೋ ಆತ್ಮನು ಜ್ಞಾನಸ್ವರೂಪನೂ ಜ್ಞಾನಗುಣಕನೂ ಎಂದು ಹೇಳುವದರಿಂದ ನಮಗೆ ಈ ಶ್ಲೋಕವು ಸಮಂಜಸವಾದುದು. ಆವರಣ ಹೇಗೆ ಎಂದರೆ ಧರ್ಮರೂಪಜ್ಞಾನದ ತಿರೋಹಿತತ್ವವು. ಇದು ಪ್ರಕೃತಿ ಸಂಸರ್ಗರೂಪ ಆವರಣದಿಂದ ಉಂಟಾದುದು; ಆದುದರಿಂದಲೇ ರಜೋಗುಣ ಸಮುದ್ಭವಂ" ಎಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಮನಸ್ಸನ್ನು ಪರಮಾತ್ಮನಲ್ಲಿಟ್ಟು ವಿಹಿತಕರ್ಮಗಳನ್ನು ಪರಮಾತ್ಮನಲ್ಲಿ ಸಮರ್ಪಿಸಿ ಕರ್ಮಯೋಗವನ್ನನುಷ್ಠಿಸಿದರೆ, ಪರಮಾತ್ಮನ ಕೃಪೆಯು ಒದಗಿ ಪಾಪಗಳು ತೊಲಗಿ ಉಪಾಯವು ಕೈಗೂಡಿ, ಈ ಜ್ಞಾನ ತಿರೋಹಿತತ್ವಕ್ಕೆ ಕಾರಣವಾಗಿದ್ದ ಪ್ರಕೃತಿ ಸಂಬಂಧವು ತೊಲಗಿ ತನ್ನ ಧರ್ಮಭೂತಜ್ಞಾನವು ನಿರತಿಶಯ ಪ್ರಕಾಶದಿಂದ ವಿರಾಜಿಸುತ್ತದೆಂದು ಶ್ರುತಿಯಲ್ಲಿ "ಸ್ವೇನರೂಪೇಣಾಭಿ ನಿಷ್ಪದ್ಯತೇ" ಎಂದು ಹೇಳಲ್ಪಟ್ಟಿರುತ್ತದೆ; ಹಾಗೆ ಆತ್ಮಾವಿಗೆ ಗುಣವಿಲ್ಲವಾದರೆ, ಗುಣಕ್ಕೆ ತಿರೋಹಿತತ್ವ

ಭಾ- ಅಸ್ಯಜನ್ತೋಃ ಜ್ಞಾನಿನೋ ಜ್ಞಾನಸ್ವಭಾವಸ್ಯಾತ್ಮವಿಷಯಂ ಜ್ಞಾನಮೇತೇನ ಕಾಮಾಕಾರೇಣ ವಿಷಯ ವ್ಯಾಮೋಹ ಜನನೇನ ನಿತ್ಯವೈರಿಣಾ ಆವೃತಂ ದುಷ್ಪೂರೇಣ ಪ್ರಾಪ್ತ್ಯನರ್ಹ ವಿಷಯೇಣ ಅನಲೇನ ಚ ಪರ್ಯಾಪ್ತಿ ರಹಿತೇನ ||೩೯||

ಪ್ರಕಾಶತ್ವವನ್ನು ಹೇಳದೆ ಸ್ವರೂಪಕ್ಕೇ ಅವಿದ್ಯಾವೇಷ್ಟಿತತ್ವವನ್ನು ಕಲ್ಪಿಸಿ, ಆತ್ಮಸ್ವರೂಪಕ್ಕೆ ಹೇಯತ್ವವನ್ನು ಹೇಳಬೇಕಾಗುತ್ತದೆ.

ಭಾಷ್ಯಾರ್ಥವು :—ಹಾಗೆಯೇ ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗಾರಂಭಕನ ಜ್ಞಾನವೂ ಸಹ ಈ ಕಾಮದಿಂದ ಆವರಿಸಲ್ಪಡುತ್ತದೆಂದು ಹೇಳಲು ಹೊರಟು ಎಷ್ಟುಮಟ್ಟಿಗೆ ಅದರಿಂದ ಅನರ್ಥ ಉಂಟಾಗಬಹುದೆಂಬುದನ್ನು ತಿಳಿಸುತ್ತಾರೆ. ಮೊದಲು ಜ್ಞಾನಿನಃ ಎಂಬ ಶಬ್ದಕ್ಕೆ ಅರ್ಥವನ್ನು ಬರೆಯುವವರಾಗಿ, ಹಿಂದಿನ ಶ್ಲೋಕದಲ್ಲಿರುವ ತೇನೇದ ಮಾವೃತಂ ಎಂಬಲ್ಲಿರುವ, ಇದಮ್ ಶಬ್ದಕ್ಕೆ ಜನ್ತುಜಾತಮ್ ಎಂದು ಅರ್ಥಮಾಡಿ ಜ್ಞಾನಯೋಗಾರಂಭಕನೂ ಕೂಡ ಇದಂ ಶಬ್ದದಲ್ಲೇ ಅಡಗಿದವನೆಂದು ತೋರಿಸುವದಕ್ಕಾಗಿ, ಜ್ಞಾನಿನಃ ಎಂಬುದಕ್ಕೆ ಅಸ್ಯಜನ್ತೋಃ ಜ್ಞಾನಸ್ವಭಾವಸ್ಯ ಎಂದು ಪ್ರಯೋಗಿಸಿರುತ್ತಾರೆ. ಈ ಚೇತನನ ಸ್ವರೂಪವೂ ಗುಣವೂ ಸಹ ಜ್ಞಾನವೇ, ಆದುದರಿಂದ ಜ್ಞಾನಸ್ವಭಾವಸ್ಯ ಎಂದು ವ್ಯಾಖ್ಯಾನವು. ನಿಷ್ಪನ್ನ ಜ್ಞಾನಾಧಿಕಾರಿಯು ಇಲ್ಲಿ ಹೇಳಲ್ಪಡಲಿಲ್ಲವು, ಜೀವಾತ್ಮನ ಸ್ವಯಂ ಪ್ರಕಾಶವಾದ ಧರ್ಮ ಭೂತಜ್ಞಾನಕ್ಕೆ ಮಾತ್ರ ತಿರೋಹಿತತ್ವ ಪ್ರಕಾಶತ್ವಗಳು ಪ್ರಾಪ್ತವಾಗಬಹುದಾದುದರಿಂದ, ಜ್ಞಾನಸ್ವಭಾವಸ್ಯ ಎಂಬ ಪ್ರಯೋಗವು. ಸ್ವಾಭಾವಿಕವಾಗಿ ಆತ್ಮನು ಧರ್ಮಭೂತ ಜ್ಞಾನದೊಂದಿಗೆ ಬಹು ಪ್ರಕಾಶವುಳ್ಳ ಜ್ಞಾನವುಳ್ಳವನು. ಅತನಿಗೆ ಉಪಾಧಿಯಾದ ಪ್ರಕೃತಿಯಿಂದ ಇದು ಮಾಲಿನ್ಯವನ್ನು ಹೊಂದಿರುತ್ತದೆಂಬ ಅಭಿಪ್ರಾಯವು ಇದರಿಂದ ವ್ಯಕ್ತವು. ಹೀಗೆ ಜ್ಞಾನಯೋಗದಲ್ಲಿಳಿದವನ, ಆತ್ಮವಿಷಯಂ ಜ್ಞಾನಂ - ಆತ್ಮವಿಷಯಕ ಜ್ಞಾನವು, ಏತೇನ- ಈ ಹಿಂದೆ ಹೇಳಲ್ಪಟ್ಟ, ಕಾಮಾಕಾರೇಣ-ಕಾಮರೂಪದಿಂದ, ವಿಷಯವ್ಯಾಮೋಹ ಜನನೇನ- ವಿಷಯಗಳಲ್ಲಿ ವ್ಯಾಮೋಹವನ್ನು ಹುಟ್ಟಿಸುವ, ನಿತ್ಯವೈರಿಣಾ - ಬದ್ಧ ಚೇತನನಿಗೆ ಸದಾ ವೈರಿಯಾಗಿ, ಆವೃತಂ-ಆವರಿಸಲ್ಪಟ್ಟಿರುತ್ತದೆ. ಇದರಿಂದ ಕಾಮಾವರಣವಿಲ್ಲದ ಕಾಲದಲ್ಲಿ ಚೇತನನು ಮಹಾ ಪರಿಶುದ್ಧನೆಂಬ ಭಾವವು. ಶ್ರೀ ಪರಾಶರರು ಹೇಳುತ್ತಾರೆ—"ಪುಮಾನ್ನದೇವೋ ನನರೋ ನ ತಿರ್ಯಙ್ನ ಚ ಪಾದಪಃ।ಶರೀರಾಕೃತಿಭೇದಾಸ್ತು ಭೂಪೈತೇ ಕರ್ಮಯೋನಯಃ"ಈ ಜೀವಾತ್ಮನು ದೇವತೆಯೂ ಅಲ್ಲವು, ಮನುಷ್ಯನೂ ಅಲ್ಲವು, ತಿರ್ಯಗ್ಜಂತುವೂ ಅಲ್ಲವು, ಶರೀರಾಕೃತಿಗಳಾದರೋ ಕರ್ಮ ಮೂಲಕ ಬಂದವು; ಆದುದರಿಂದ ಈತನು ಪುಮಾನ್ - ಪ್ರಕೃತಿ ವಿಯುಕ್ತ ದೆಶೆಯಲ್ಲಿ ಮಹಾ ಪರಿಶುದ್ಧನು. ಏಕೆಂದರೆ ಆತನು ಜ್ಞಾನಸ್ವರೂಪನಾಗಿ ಜ್ಞಾನ ಗುಣಕನಾಗಿ, ಗುಣಾಷ್ಟಕಗಳಿಂದ ಪ್ರಕಾಶಿಸುವಂತವನು. ಆದರೆ ಈ ವಿಷಯೋಪಭೋಗದಲ್ಲಿ ಆಸಕ್ತಿರೂಪ ಕಾಮವು ನಿತ್ಯ ವೈರಿ ಹೇಗೆ? ಎಂದರೆ ಅನಾದಿಕಾಲದಿಂದಲೂ ಬಂದುದಾಗಿ ಸ್ವಾಮಿ ಕೃಪಯಾ ಪರಮಾತ್ಮ ಸಾಕ್ಷಾತ್ಕಾರ ಉಂಟಾಗುವವರೆಗೂ, ಶತ್ರುವಾಗಿ ಪರಿಣಮಿಸುವದರಿಂದ ಬದ್ಧ ದೆಶೆಯಲ್ಲಿ ಯಾವಾಗಲೂ ವೈರಿಯಾದುದರಿಂದ ನಿತ್ಯ ವೈರಿ ಎಂಬ ಪ್ರಯೋಗವು; ಅಥವಾ ಈ ಲೋಕದಲ್ಲಿಜೀವಾತ್ಮನಿಗೆ ನಿತ್ಯವೈರಿಯು ಎಂಬ ಭಾವವು. ಈ ಪ್ರಯೋಗದಿಂದ ಕೆಲವರು ಬದ್ಧ ಜೀವಾತ್ಮರು ಯಾವಾಗಲೂ ಸುಕೃತಗಳನ್ನು ಮಾಡದೆ ಪರಮಾತ್ಮಾನುಗ್ರಹವನ್ನು ಸಂಪಾದಿಸಿಕೊಳ್ಳದೇ ಯಾವಾಗಲೂ ನಿತ್ಯ ಸಂಸಾರಿಗಳಾಗಿಯೇ ಇದ್ದುಬಿಡುತ್ತಾರೆಂಬ ಭಾವವು, ವೈರಿಣಾ ಮತ್ತು ದುಷ್ಪೂರೇಣ ಎಂಬ ಪ್ರಯೋಗಗಳಿಂದ ಸೂಚಿತವೆಂದು ಭಾವಿಸುವರು-

ಜೀವಾತ್ಮನು ಪ್ರಥಮ ಪ್ರವೃತ್ತಿಯಲ್ಲಿ ಸ್ವತಂತ್ರನಾದುದರಿಂದ ಯಾವುದೋ ಒಂದು ಸಮಯದಲ್ಲಿ ಕಿಂಚಿತ್ಸುಕೃತವನ್ನು ಮಾಡಿ ತನ್ಮೂಲಕ ವಿಶೇಷ ಸುಕೃತ ಭಾಕ್ಕಾಗಿ ಪರಮಾತ್ಮಾನುಗ್ರಹವನ್ನು ಏಕೆ ಹೊಂದಕೂಡದೆಂಬ ಪ್ರಶ್ನೆಯು ಆಗ ನಿರುತ್ತರವಾದುದಾಗುತ್ತದೆ. ಜ್ಞಾನವನ್ನು ಕಾಮವು ಆವರಿಸಿ ಯಾವ ಅನರ್ಥವನ್ನುಂಟುಮಾಡುತ್ತದೆಂದರೆ, ವಿಷಯವ್ಯಾಮೋಹಜನನವನ್ನುಂಟುಮಾಡುವಂಥಾದ್ದೆಂದು ಹೇಳಲ್ಪಟ್ಟಿತು. ನಿತ್ಯವೈರಿಣಾ ಎಂದು ಏತಕ್ಕೆ ಹೇಳಲ್ಪಟ್ಟಿತೆಂದರೆ ಅನಾದಿಕಾಲದಿಂದಲೂ ಪ್ರಕೃತಿ ಸಂಸರ್ಗ ಉಂಟಾದಕಾಲದಿಂದಲೂ ವೈರಿಯಾಗಿ, ಪ್ರಕೃತಿ ಸಂಬಂಧವಿರುವತನಕ ಈ ವೈರತ್ವವು ತಪ್ಪಿದ್ದಲ್ಲವಾದುದರಿಂದ ಹಾಗೆ ಪ್ರಯೋಗವು. ಆದುದರಿಂದಲೇ ಕಾಮರೂಪೇಣ ಎಂಬ ಮೂಲದ ಪ್ರಯೋಗಕ್ಕೆ ವಿಷಯವ್ಯಾಮೋಹಜನನೇನ ಎಂಬ ವ್ಯಾಖ್ಯಾನವು. ಆ ವೈರಿಯಾದ ಕಾಮವು ಎಂತಾದ್ದೆಂದರೆ ಹೇಳುತ್ತಾರೆ. ದುಷ್ಪೂರೇಣ ಎಂದರೆ ಪ್ರಾಪ್ತ್ಯನರ್ಹವಿಷಯೇಣ - ತನಗೆ ಹೊಂದಲು ಅನರ್ಹವಾಗಿಯೂ ಸಾಧ್ಯವಿಲ್ಲದೆಯೂ ಇರುವ ವಿಷಯಗಳುಳ್ಳದ್ದು ; ಮತ್ತು ಅನಲೇನಚ ಎಂದರೆ ಪರ್ಯಾಪ್ತಿ ರಹಿತೇನ – ಸಾಕು ಎಂಬ ತೃಪ್ತಿಯಿಲ್ಲದಿರುವಂಥಾದ್ದು ; “ನಜಾತುಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ। ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ” (ವಿ. ಪು. ೪. ೧೦. ೨೨.) ಕಾಮವು ಇಷ್ಟವಾದ ವಿಷಯೋಪಭೋಗಗಳಿಂದ ತೃಪ್ತಿ ಹೊಂದುವದಿಲ್ಲವು; ಹೇಗೆಂದರೆ ಅಗ್ನಿಯು ಹವಿಸ್ಸನ್ನು ಸಮರ್ಪಿಸಿದಹಾಗೆಲ್ಲಾ ಪುನಃ ಪುನಃ ಹೇಗೆ ಅಭಿವೃದ್ಧಿಯನ್ನು ಹೊಂದುತ್ತದೋ ಹಾಗೆ ಎಂಬ ಭಾವವು. ಮತ್ತು ಅದರ ಮುಂದಿನ ಶ್ಲೋಕದಲ್ಲಿ “ಯತ್ಪೃಥಿವ್ಯಾಂ ವ್ರೀಹಿ ಯವಂ ಹಿರಣ್ಯಂ ಪಶವಃ ಸ್ತ್ರಿಯಃ। ಏಕಸ್ಯಾಪಿ ನಪರ್ಯಾಪ್ತಂ ತಸ್ಮಾತ್ತೃಷ್ಣಾಂ ಪರಿತ್ಯಜೇತ್” ಎಷ್ಟಾದರೂ ಆಶೆಗೆ ಸಾಲದು ಎಂಬುದು ಇಲ್ಲಿ ಅನುಸಂಧೇಯವು. ಹಾಗೆಯೇ “ಮನೋರಥಾನಾಂ ನ ಸಮಾಪ್ತಿರಸ್ತಿ ವರ್ಷಾಯುತೇನಾಪ್ಯಥವಾಪಿ ಲಕ್ಷೈಃ। ಪೂರ್ಣೇಷು ಪೂರ್ಣೇಷು ಪುನರ್ನವಾನಾ ಮುತ್ಪತ್ತಯ ಸ್ಸಂತಿ ಮನೋರಥಾನಾಂ” (ವಿ. ಪು. ೪. ೨. ೧೧೭). “ತೃಷ್ಣಾಖನಿ ರಗಾಧೇಯಂ ದುಷ್ಪೂರಾ ಕೇನಪೂರ್ಯತೇ। ಯಾ ಮಹದ್ಭಿರಪಿ ಕ್ಷಿಪ್ತೈಃ ಪೂರಣೈರೇವ ಖನ್ಯತೇ” ಆಶೆಯೆಂಬ ಗಣಿಯು ಆಳವನ್ನು ಕಂಡು ಹಿಡಿಯುವದು ಅಗಾಧವು, ಅದನ್ನು ತುಂಬಲಸಾಧ್ಯವು, ಅದು ಯಾವುದರಿಂದ ತಾನೇ ತುಂಬಲ್ಪಡುತ್ತದೆ? ಅದು ಯಾವ ದೊಡ್ಡ ವಸ್ತುಗಳಿಂದ ತುಂಬಿದರೂ, ಅವುಗಳಿಂದಲೇ ಇನ್ನೂ ಆಳವಾಗಿ ಅಗೆಯಲ್ಪಡುತ್ತದೆ ; ಆದುದರಿಂದ ಆಶೆಯು ತನಗೆ ಇನ್ನೂ ದುರ್ಲಭವಾಗಿಯೂ ಇರುವ ವಿಷಯದಲ್ಲೂ ಪ್ರವರ್ತಿಸುವದರಿಂದ ದುಷ್ಪೂರಾ ಎಂದು ಹೇಳಲ್ಪಟ್ಟಿತು. ಧನಾಶಾ ಜೀವಿತಾಶಾಚ ಇವುಗಳಿಗೆ ವೃದ್ಧತ್ವವೇ ಇಲ್ಲವೆಂದು ಮಹರ್ಷಿಯ ಉಕ್ತಿಯು ಇದೆ. ಅನಲ ಶಬ್ದಕ್ಕೆ ಅಗ್ನಿ ಎಂಬದಾಗಿ ಅರ್ಥಮಾಡಿದರೂ ಮಾಡಬಹುದು; ಏಕೆಂದರೆ “ನಾಗ್ನಿಸ್ತೃಪ್ಯತಿಕಾಷ್ಠಾನಾಂ” ಎಂದು ಹೇಳಿರುವ ಹಾಗೆ ಅಗ್ನಿಗೆ ಎಷ್ಟು ಕಾಷ್ಠಗಳನ್ನು ಹಾಕಿದರೂ ಹೇಗೆ ತೃಪ್ತಿಯಿಲ್ಲವೋ ಹಾಗೆ ಕಾಮಕ್ಕೂ ವಿಷಯೋಪಭೋಗಗಳಿಂದ ತೃಪ್ತಿಯಿಲ್ಲವಾದುದರಿಂದ ಅಗ್ನಿ ಎಂದೂ ಭಾವಿಸಬಹುದು. ಆಗ ಅರ್ಥಕ್ರಮ ಹೇಗೆಂದರೆ ಕಾಮರೂಪೇಣ-ಕಾಮರೂಪವಾದ ಅನಲೇನ ಚ - ಬೆಂಕಿಯಿಂದಲೂ ಕೂಡ, ಆವೃತಂ - ಆವರಿಸಲ್ಪಟ್ಟಿರುತ್ತದೆ. ಅಗ್ನಿಯು ಯಾವುದನ್ನು ಆವರಿಸುತ್ತದೋ, ಆಶ್ರಯಿಸುತ್ತದೋ ಅದನ್ನು ನಾಶಮಾಡಿಬಿಡುವದರಿಂದ ಆಶ್ರಯಾಶನೆಂದು ಹೇಳಲ್ಪಡುತ್ತದೆ, ಆದುದರಿಂದ ಈ ಕಾಮವೆಂಬ ಬೆಂಕಿಯು ಈತನ ಜ್ಞಾನವನ್ನು ಸುಟ್ಟುಬಿಡುತ್ತದೆಂಬ ಧ್ವನ್ಯರ್ಥವೂ ತೋರಿಬರುತ್ತದೆ ; ಹೀಗೆ ಅನಲ ಶಬ್ದಕ್ಕೆ ಯೋಗಾರ್ಥವಲ್ಲದೆ ರೂಢ್ಯರ್ಥವನ್ನೂ ಹೇಳಬಹುದು. ಜ್ಞಾನಿನಃ ಜ್ಞಾನವು ಆವೃತಂ ಎಂದು ಹೇಳಿದುದರಿಂದ ಧರ್ಮಭೂತಜ್ಞಾನಕ್ಕೆ ಮಾತ್ರ

**ಭಾ. ಅವ. ಕೈರುಪಕರಣೈ ರಯಂ ಕಾಮ ಆತ್ಮಾನ ಮಧಿತಿಷ್ಠತೀತ್ಯತ್ರಾಹ—**

**ಮೂ. ಇಂದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನ ಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦.**

ಸಙ್ಕೋಚ ವಿಕಾಸಗಳೇ ವಿನಾ ಧರ್ಮಿ ಸ್ವರೂಪಕ್ಕೆ ಇಲ್ಲವೆಂಬುದು ವ್ಯಕ್ತವು. ಜ್ಞಾನವುಳ್ಳದೇ ಜ್ಞಾನಿಯಾದ ಆತ್ಮಾ. ಆ ಜ್ಞಾನಿಗಳ ಜ್ಞಾನವು ಯದ್ರೂಪವೆಂದರೆ ಪರಮಾತ್ಮಸ್ವರೂಪ ಸ್ವಭಾವ ಮತ್ತು ಜೀವಾತ್ಮ ಸ್ವರೂಪ ಸ್ವಭಾವವಿಷಯವಾದುದರಿಂದ ಆತ್ಮವಿಷಯಂ ಜ್ಞಾನಂ ಎಂದರ್ಥ ಮಾಡಲ್ಪಟ್ಟಿತು. ಅಥವಾ ಜೀವಾತ್ಮವಿಷಯಜ್ಞಾನ ಉಂಟಾದರೆ ಇನ್ನೊಂದೂ ತಾನೇ ಸಿದ್ಧಿಸುವದರಿಂದ ಅದು ಮಾತ್ರವೇ ಹೇಳಲ್ಪಟ್ಟಿತೆಂದು ಭಾವಿಸಬಹುದು.

**ಭಾಷ್ಯಾವತಾರಿಕೆಯ ಅರ್ಥವು :—**ಕಾಮವು ಆತ್ಮನನ್ನು ಆವರಿಸುವ ಪ್ರಕಾರವು ಹೇಗೆಂದರೆ, ಆತ್ಮನ ಧರ್ಮಭೂತಜ್ಞಾನವನ್ನು ಆವರಿಸಿ ಅನರ್ಥವನ್ನುಂಟುಮಾಡುತ್ತದೆಂದು ಹಿಂದೆ ಹೇಳಲ್ಪಟ್ಟಿತು. ಕಾಮವಾದರೋ ಜೀವಾತ್ಮನ ಸಙ್ಕಲ್ಪರೂಪವಾದುದು. ಅಂತಹ ವಿಷಯಗಳ ಪ್ರವೃತ್ತಿರೂಪ ಇಚ್ಛೆಯುಂಟಾಗುವ ಕ್ರಮವೂ ಅದಕ್ಕೆ ಸಹಕಾರ ದ್ರವ್ಯಗಳು ಯಾವುವು ಎಂಬುದು ಈ ಶ್ಲೋಕದಲ್ಲಿ ಉಪದೇಶಿಸಲ್ಪಡುತ್ತದೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. **ಅಯಂ ಕಾಮಃ** - ಈ ಕಾಮರೂಪ ಸಙ್ಕಲ್ಪವು, **ಕೈರುಪಕರಣೈಃ** - ಯಾವುಗಳ ಸಹಾಯದ ಮೂಲಕ **ಆತ್ಮಾನಂ** ಜೀವಾತ್ಮನನ್ನು, **ಅಧಿತಿಷ್ಠತಿ** - ಆಶ್ರಯಿಸಿ ತನ್ನ ವಶಮಾಡಿಕೊಳ್ಳುತ್ತದೆ. **ಇತ್ಯತ್ರಾಹ** ಎಂಬ ಸಂದರ್ಭದಲ್ಲಿ ಉಪದೇಶಿಸುತ್ತಾರೆ ಎಂಬುದು ಅವತಾರಿಕೆಯು ; ಇತ್ಯತ್ರಾಹ - ಎಂಬ ಪ್ರಯೋಗವು ಪೂರ್ವಪಕ್ಷಕ್ಕೆ ಸಮಾಧಾನವನ್ನು ಹೇಳುವ ಸಂದರ್ಭವನ್ನು ಸೂಚಿಸುತ್ತದೆ; ಹಾಗಾದರೆ ಪೂರ್ವಪಕ್ಷವು ಯಾವುದೆಂದರೆ—ಆತ್ಮಸ್ವರೂಪವು ಜ್ಞಾನತ್ವ ಆನಂದತ್ವ ಅಮಲತ್ವಾದಿಗಳಿಂದ ಬಹು ಪರಿಶುದ್ಧವಾದುದು, ಜ್ಞಾನವಿಜ್ಞಾನಗಳಿಂದ ಅಮೋಘವಾದುದು; ಇಂತಹ ಆತ್ಮನಿಗೆ ವಿಷಯ ಸ್ಪೃಹೆ ಉಂಟಾಗುತ್ತದೆ ಎಂದರೆ ಒಪ್ಪತಕ್ಕದ್ದೇ; ಅದು ದೇಹ ಧರ್ಮಮಾತ್ರವೆಂದಾದರೂ ಹೇಳಿದರೆ ಒಪ್ಪಬಹುದು; ಆತ್ಮನಿಗೆ ಸಂಬಂಧವು ಹೇಗೆ ಎಂಬ ಪೂರ್ವಪಕ್ಷಕ್ಕೆ ಸಮಾಧಾನ ದೊರೆಯುವದರಿಂದ ಇದನ್ನು ಮನಸ್ಸಿನಲ್ಲಿಟ್ಟು ಇತ್ಯತ್ರಾಹ ಎಂದು ಶ್ರೀ ಯತಿವರ್ಯರು ಪ್ರಯೋಗಿಸಿರುತ್ತಾರೆ—ಅಧಿತಿಷ್ಠತಿ ಎಂಬ ಪ್ರಯೋಗದಿಂದಲೇ ದೇಹಕ್ಕಿಂತ ಭಿನ್ನನಾದ ಆತ್ಮನನ್ನು ಈ ವಿಷಯ ಸ್ಪೃಹೆಯು ತನ್ನ ವಶಮಾಡಿಕೊಳ್ಳುವ ಬಗೆ ಹೇಗೆ ಎಂಬುದು ಬೋಧಿತವು.

**ಮೂಲಕ್ಕೆ ಅರ್ಥವು :—**ಇಂದ್ರಿಯಗಳೂ ಮನಸ್ಸೂ ಬುದ್ಧಿಯೂ ಇವು ಮೂರೂ **ಅಸ್ಯ** - ಈ ಕಾಮನಿಗೆ, **ಅಧಿಷ್ಠಾನಂ** - ಆಶ್ರಯವು, ವಾಸಸ್ಥಾನವು, ಎಂದು **ಉಚ್ಯತೇ** - ಹೇಳಲ್ಪಡುತ್ತದೆ, **ಏಷಃ** - ಈ ಕಾಮವು, **ಏತೈಃ** - ಈ ಇಂದ್ರಿಯ ಮನೋ ಬುದ್ಧಿಗಳ ಮೂಲಕವಾಗಿ **ಜ್ಞಾನಮಾವೃತ್ಯ** - ಚೇತನನ ಜ್ಞಾನವನ್ನು ಆವರಿಸಿ, **ದೇಹಿನಮ್** - ಈ ಶರೀರವನ್ನು ಹೊಂದಿರುವ ಆತ್ಮನನ್ನು, **ವಿಮೋಹಯತಿ** - ಮೋಹಗೊಳಿಸುತ್ತದೆ, ವಿಷಯಭ್ರಮವುಂಟಾಗುವಹಾಗೆ ಮಾಡುತ್ತದೆ. ಹೀಗೆ ಕಾಮವು ಜ್ಞಾನವನ್ನು ಆವರಿಸದೇ ಇದ್ದರೆ ಇಂದ್ರಿಯ ಮನೋಬುದ್ಧಿಗಳ ಮೂಲಕವಾಗಿ ಆತ್ಮಾವಿಗೆ ಭ್ರಮೆ ಎಂಬುದು ಉಂಟಾಗುವದಿಲ್ಲವೆಂಬ ಭಾವವೂ ಇದರಿಂದ ವ್ಯಕ್ತವು. ವಿಷಯಗಳಲ್ಲಿ ಆತ್ಮನಿಗೆ ಇಚ್ಛೆಯು, ಇಂದ್ರಿಯಗಳೂ, ಮನಸ್ಸೂ, ಧರ್ಮಭೂತ ಜ್ಞಾನ ಇವುಗಳ ಮೂಲಕವೆಂದು ಇಲ್ಲಿ ಉಪದೇಶಿಸಲ್ಪಟ್ಟಿತು. ಈ ಶ್ಲೋಕದಲ್ಲಿ

ಭಾ. ಅಧಿತಿಷ್ಠತ್ಯೇಭಿರಯಂ ಕಾಮ ಆತ್ಮಾನ ಮಿತೀನ್ದ್ರಿಯಾಣಿ ಮನೋಬುದ್ಧಿ ರಸ್ಯಾಧಿಷ್ಠಾನಮ್ ; ಏತೈರಿನ್ದ್ರಿಯಮನೋಬುದ್ಧಿಭಿಃ ಕಾಮಾಧಿಷ್ಠಾನಭೂತೈರ್ವಿಷಯ

ಈ ಪರಿಶುದ್ಧನಾಗಿ ಜ್ಞಾನಸ್ವರೂಪನಾಗಿರುವ ಆತ್ಮನಿಗೆ ವಿಷಯೋಪಭೋಗಗಳಲ್ಲಿ ಇಚ್ಛೆಯು ಉಂಟಾಗುವದು ಹೇಗೆ ಎಂದರೆ-ಇಂದ್ರಿಯಗಳಿಗೆ ವಿಷಯಗಳಲ್ಲಿ ಸಂಬಂಧ ಉಂಟಾಗಿ, ಅದರಿಂದ ಮನಸ್ಸಿನ ಮೂಲಕವಾಗಿ ಧರ್ಮಭೂತದ್ವಾರಾ ವಿಷಯದ ಜ್ಞಾನವು ಚೇತನನಿಗೆ ಉಂಟಾಗುತ್ತದೆ; ಆದರಿಂದ ಆತ್ಮನಿಗೆ ವ್ಯಾಮೋಹ ಉಂಟಾಗಿ ತನ್ನ ಧರ್ಮಭೂತ ಜ್ಞಾನದ್ವಾರಾ ಮನಸ್ಸು ಆ ವಿಷಯವಲ್ಲಿ ಸಕ್ತವಾಗುತ್ತದೆ ; ಮನಸ್ಸು ಇಂದ್ರಿಯಗಳನ್ನು ಪ್ರೇರಿಸಿ ವಿಷಯಗಳಲ್ಲಿ ರಮಿಸುವ ಹಾಗೆ ಪ್ರವೃತ್ತಿಯನ್ನುಂಟುಮಾಡುತ್ತದೆ ; ಹೀಗೀಗ ವಿಷಯ ವ್ಯಾಮೋಹ ಉಂಟಾಗುವ ಪ್ರಕಾರವೆಂಪು ಈ ಶ್ಲೋಕದ ಉಪದೇಶವು. ಜೀವಾತ್ಮನ ಧರ್ಮಭೂತ ಜ್ಞಾನಕ್ಕೂ ಮನಸ್ಸಿಗೂ ಸಾರಥಿಯ ಕೈಯಲ್ಲಿರುವ ಲಗಾಮಿನಹಾಗೆ ಶ್ರುತಿಪ್ರೋಕ್ತ ಸಂಬಂಧವಿರುವದರಿಂದ ಮನಸ್ಸು ಇಂದ್ರಿಯಗಳ ಮೂಲಕ ವಿಷಯೋಪಭೋಗಗಳಲ್ಲಿ ಸಕ್ತವಾಗದಹಾಗೆ ಅದನ್ನು ಧರ್ಮಭೂತ ಜ್ಞಾನದ್ವಾರಾ ಜಯಿಸಿದರೆ, ಕಾಮವು ದುರ್ಬಲವಾಗುತ್ತದೆ. ಹಾಗಿಲ್ಲದೆ ಮನಸ್ಸು ಅವುಗಳಲ್ಲಿ ಪ್ರವರ್ತಿಸಿದರೆ ಕಾಮವು ಬಲವಾಗಿ ದುಷ್ಪೂರವಾಗುತ್ತದೆಂಬ ಭಾವವು. ಕಾಮವು ತುಂಬಾ ಪ್ರಬಲವಾದರೆ ನಿರ್ಲಜ್ಜನಾಗಿ ಮುಂದೆ ಬರುವ ಅನರ್ಥಗಳನ್ನು ಸ್ವಲ್ಪವೂ ಲಕ್ಷಿಸದೆ ಪ್ರವರ್ತಿಸಿಬಿಟ್ಟು ನಾನಾವಿಧವಾದ ಅನರ್ಥಗಳಿಗೆ ಗುರಿಯಾಗುವನು. ಇಂದ್ರಿಯಗಳು ಮನಸ್ಸು ಆತ್ಮನ ಧರ್ಮಭೂತ ಜ್ಞಾನವೂ ಸಹ ಪೂರ್ವ ಕರ್ಮಾನುಗುಣವಾಗಿ ಉಂಟಾಗುವ ಕಾಮಕ್ಕೆ ಆಶ್ರಯ ಸ್ಥಾನವೆಂದು ಹೇಳಲ್ಪಟ್ಟಿತು. ಈ ಮೂರನ್ನು ನಿಗ್ರಹಿಸಿ ತನ್ನ ವಶದಲ್ಲೇ ಇಟ್ಟುಕೊಳ್ಳತಕ್ಕದ್ದೆಂಬ ಭಾಗವತ ಶ್ಲೋಕವು ಅನುಸಂಧೇಯವು. "ವಾಚಂ ಯಚ್ಛ ಮನೋಯಚ್ಛ ಯಚ್ಛ ಪ್ರಾಣೇಂದ್ರಿಯಾಣಿ ಚ। ಆತ್ಮಾನಂ ಆತ್ಮನಾಯಚ್ಛ ನ ಭೂಯಃ ಕಲ್ಪಸೇ ಧ್ವನೇ" ಪುನಸ್ಸಂಸಾರ ಬೇಡ ಎಂಬುವನು ವಾಕ್ಕು ಮನಸ್ಸು ಪ್ರಾಣ ಇಂದ್ರಿಯಗಳು ಧರ್ಮಭೂತ ಜ್ಞಾನ ಇವುಗಳನ್ನೆಲ್ಲಾ ನಿಗ್ರಹಿಸಿ ತನ್ನ ವಶದಲ್ಲಿಟ್ಟುಕೊಳ್ಳತಕ್ಕದ್ದು ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ಪ್ರಾಣವಾಯುಗಳನ್ನು ನಿಗ್ರಹಿಸುವದು ಹೇಗೆ ಎಂದರೆ ಪರಿಶುದ್ಧಾಹಾರ ಸೇವನೆಯಿಂದಲೂ ಪೂರಕ ರೇಚಕ ಕುಂಭಕ ಪ್ರಾಣಾಯಾಮ ಕ್ರಮದಿಂದಲೂ ಅವುಗಳನ್ನು ವಶದಲ್ಲಿಡತಕ್ಕದ್ದೆಂಬ ಭಾವವು. ಇಲ್ಲಿ ಪ್ರಾಣವು ಹೇಳಲ್ಪಡದಿದ್ದರೂ ಅದು ಇಂದ್ರಿಯಗಳಲ್ಲೇ ಸೇರಿದಹಾಗೆ ಭಾವನೆಯು. ಇಲ್ಲಿ ದೇಹಿನಂ ಎಂದು ಹೇಳಿರುವದರಿಂದ ಈ ಕಾಮನಿಂದುಂಟಾಗುವ ಹತಿಯು ಈ ಆತ್ಮನಿಗೆ ಸತತ ವಿಕಾರಿ ದ್ರವ್ಯವಾದ ದೇಹದೊಂದಿಗೆ ಇಂದ್ರಿಯಾದಿಗಳಿಂದಕೂಡಿ ಭೋಗ್ಯವಸ್ತುಗಳ ಮಧ್ಯೆ ಇರುವದರಿಂದಲೇ ಎಂಬುದನ್ನು ವ್ಯಕ್ತಪಡಿಸುತ್ತದೆ.

ಭಾಷ್ಯಾರ್ಥವು :—ಹಿಂದೆ ಕಾಮವು ಆವರಿಸುವ ಪ್ರಕಾರವು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಕಾಮವು ಯಾವುಗಳನ್ನು ಆಶ್ರಯಿಸಿ ವಶಪಡಿಸಿಕೊಂಡು ಆತ್ಮನಿಗೆ ವ್ಯಾಮೋಹವನ್ನುಂಟುಮಾಡುತ್ತದೆಂಬುದು ಹೇಳಲ್ಪಡುತ್ತದೆ:—ಅಯಂ ಕಾಮಃ – ಈ ಮೇಲೆ ಹೇಳಲ್ಪಟ್ಟ ಕಾಮವಿಷಯಗಳಲ್ಲಿ ಪ್ರೀತಿಯು, ಏಭಿಃ - ಈ ಮುಂದೆ ಹೇಳಲ್ಪಡುವ, ಇಂದ್ರಿಯಗಳೂ ಮನಸ್ಸೂ ಬುದ್ಧಿಗಳಿಂದ, ಆತ್ಮಾನಂ - ಜೀವಾತ್ಮನನ್ನು ಅಧಿತಿಷ್ಠತಿ - ಆಶ್ರಯಿಸುತ್ತದೆ, ಎಂದರೆ ತನ್ನ ವಶಮಾಡಿಕೊಳ್ಳುತ್ತದೆ. ಪ್ರಕೃತಿಗಿಂತ ವಿಲಕ್ಷಣನಾಗಿ ಪರಿಶುದ್ಧನಾಗಿರುವವನನ್ನು ಪ್ರಕೃತಿಯ ವಶವಾಗುವಹಾಗೆ ಮಾಡುತ್ತದೆ; ಬಂಧಕ್ಕೆ ಅನರ್ಹನಾಗಿರುವವನನ್ನು ಬಂಧಾರ್ಹನನ್ನಾಗಿ ಮಾಡುತ್ತದೆಂಬ ಭಾವವು. ಇತಿ - ಎಂಬುದರಿಂದ, ಇಂದ್ರಿಯಗಳೂ, ಮನಸ್ಸೂ, ಬುದ್ಧಿಯೂ

**ಭಾ. ಪ್ರವಣೈರ್ದೇಹಿನಂ-ಪ್ರಕೃತಿಸಂಸೃಷ್ಟಂ, ಜ್ಞಾನಮಾವೃತ್ಯ ವಿಮೋಹಯತಿ-ವಿವಿಧಂ ಮೋಹಯತಿ,ಆತ್ಮಜ್ಞಾನ ವಿಮುಖಂ ವಿಷಯಾನುಭವ ಪರಂ,' ಕರೋತೀತ್ಯರ್ಥಃ ||೪೦||**

ಈ ಮೂರೂ, **ಅಸ್ಯ** - ಈ ಕಾಮಕ್ಕೆ, **ಅಧಿಷ್ಠಾನಮ್** – ಆಶ್ರಯವು ಎಂದರೆ ಇವು ಮೂರುಗಳ ಮೂಲಕವಾಗಿ ಆತ್ಮನನ್ನು ಕಾಮವು ಮೋಹಗೊಳಿಸುತ್ತದೆಂಬ ಭಾವವು. ಇದನ್ನೇ ಉತ್ತರಾರ್ಧದಿಂದ ವಿಶದೀಕರಿಸುತ್ತಾರೆ. **ಏತೈಃ** ಎಂದರೆ ಇಂದ್ರಿಯ ಮನೋಬುದ್ಧಿಗಳಿಂದ, ಅವು ಎಂತವುಗಳೆಂದರೆ, **ಕಾಮಾಧಿಷ್ಠಾನ ಭೂತೈಃ** - ಕಾಮಕ್ಕೆ ಆಶ್ರಯ ಭೂತಗಳಾದ, ವಶಗಳಾದ, ಮತ್ತು **ವಿಷಯ ಪ್ರವಣೈಃ** - ವಿಷಯಗಳಲ್ಲೇ ಎಂದರೆ ವಿಷಯೋಪಭೋಗಗಳಲ್ಲೇ ಸಕ್ತಗಳಾದ ಇಂತಹ ಇಂದ್ರಿಯ ಮನೋ ಬುದ್ಧಿಗಳ ಮೂಲಕವಾಗಿ, **ಜ್ಞಾನಮಾವೃತ್ಯ** – ಆತ್ಮನ ಧರ್ಮಭೂತ ಜ್ಞಾನವನ್ನಾವರಿಸಿ **ದೇಹಿನಂ** ಎಂದರೆ **ಪ್ರಕೃತಿ ಸಂಸೃಷ್ಟಂ**- ಪ್ರಕೃತಿ ಸಂಬಂಧವುಳ್ಳ ಈ ಆತ್ಮನನ್ನು, **ವಿಮೋಹಯತಿ** ಎಂದರೆ **ವಿವಿಧಂ ಮೋಹಯತಿ** - ನಾನಾವಿಧವಾಗಿ ಆತನ ಪೂರ್ವಕರ್ಮಾನುಗುಣವಾಗಿ ಮೋಹಗೊಳಿಸುತ್ತದೆ. ಹೇಗೆ ವಿವಿಧವಾಗಿ ಮೋಹಗೊಳಿಸುತ್ತದೆಂದರೆ ವಿವರಿಸುತ್ತಾರೆ:—**ಆತ್ಮಜ್ಞಾನದಲ್ಲಿ ವಿಮುಖನನ್ನಾಗಿಯೂ, ವಿಷಯಾನುಭವಪರಂ** - ವಿಷಯಾನುಭವಗಳಲ್ಲಿ ಆಸಕ್ತಿಯುಳ್ಳವನನ್ನಾಗಿಯೂ, **ಕರೋತಿ** - ಮಾಡುತ್ತದೆ. ಈ ವಿವಿಧ ಮೋಹವೆಂತಾದ್ದೆಂಬುದು ಶ್ರೀ ವಿಷ್ಣು ಪುರಾಣದಲ್ಲಿ ಉಪಪಾದಿತವು. **"ಅನಾತ್ಮನ್ಯಾತ್ಮಬುದ್ಧಿರ್ಯಾ ಅಸ್ವೇಸ್ವಮಿತಿ ಯಾ ಮತಿಃ । ಅವಿದ್ಯಾತರುಸಂಭೂತ ಬೀಜಮೇತದ್ದ್ವಿಧಾಸ್ಥಿತಮ್"** (ವಿ. ಪು. ೬. ೭. ೧೧) ಅವಿದ್ಯೆ ಎಂಬ ವೃಕ್ಷದಿಂದುಂಟಾದ್ದು ಎರಡು ಬೀಜಗಳುಂಟು; ದೇಹವೇ ತಾನು ಎಂಬ ಬುದ್ಧಿಯು ಒಂದು, ಇನ್ನೊಂದು ತನ್ನದಲ್ಲದೆ, ದೇಹಕ್ಕೆ ಪೋಷಕ ಧಾರಕಗಳಾದ ವಸ್ತುಗಳಲ್ಲಿ ತನ್ನದು ಎಂಬ ಬುದ್ಧಿಯು, ಹೀಗೆ **ಅಹಂ, ಮಮ** ಎಂಬ ಎರಡು ಬೀಜಗಳು ವಿಷಯಾನುಭವದಲ್ಲಿ ಆಸಕ್ತಿಯನ್ನುಂಟುಮಾಡುವವು. ವಾಸ್ತವವಾಗಿಯೂ ಭೋಗ್ಯವಾದುದು ಆತ್ಮಸಾಕ್ಷಾತ್ಕಾರವು, ಅದರಲ್ಲಿ ಅಭೋಗ್ಯವಾದುದೆಂಬ ಭ್ರಮವನ್ನುಂಟುಮಾಡುತ್ತದೆ. ವಾಸ್ತವವಾಗಿಯೂ ಅಭೋಗ್ಯವಾದುದು ವಿಷಯಾನುಭವವು, ಅದರಲ್ಲಿ ಭೋಗ್ಯತಾಭ್ರಮವನ್ನೂ ಹೀಗೆ ಭ್ರಮವೈವಿಧ್ಯವನ್ನುಂಟುಮಾಡುತ್ತದೆಂಬ ತಾತ್ಪರ್ಯವು. ಹೀಗೆ ಆಶೆಯೆಂಬುದು ಇಂದ್ರಿಯ ಮನೋಜ್ಞಾನಗಳ ಮೂಲಕವಾಗಿ ಆತ್ಮನ ಧರ್ಮಭೂತ ಜ್ಞಾನವನ್ನಾವರಿಸಿ ಆತ್ಮನಿಗೆ ವಿವಿಧ ಭ್ರಮೆಯನ್ನುಂಟುಮಾಡಿ ಮೋಹಗೊಳಿಸುತ್ತದೆಂದು ಹೇಳಲ್ಪಟ್ಟಿತು. ಇಲ್ಲಿ **ಬುದ್ಧಿ** ಎಂಬುದು. ಪುರುಷಾರ್ಥಗಳಲ್ಲದೇ ಇರುವಂತವುಗಳಲ್ಲಿ ಪುರುಷಾರ್ಥವೆಂಬ ನಿಶ್ಚಯಜ್ಞಾನವೆಂಬರ್ಥದಲ್ಲಿ ಉಪಯೋಗಿಸಿರುತ್ತದೆ. ಅಥವಾ ಕರ್ಮಾನುಸಾರ ಧರ್ಮ ಭೂತಜ್ಞಾನವನ್ನು ಆವರಿಸಿ ಆತ್ಮನನ್ನು ಭ್ರಮೆಗೆ ಒಳಪಡಿಸುತ್ತದೆಂದು ಅರ್ಥಮಾಡಿದರೂ ಏನೂ ಬಾಧಕವಿಲ್ಲವು, ಏಕೆಂದರೆ ಧರ್ಮ ಭೂತಜ್ಞಾನಕ್ಕೂ ಮನಸ್ಸಿಗೂ ಸಂಬಂಧವಿರುವದರಿಂದ. **ಇಂದ್ರಿಯಾಣಿ** ಎಂಬುದರಿಂದ ಗೋಬಲೀವರ್ಧನ್ಯಾಯಪ್ರಕಾರ ಬಾಹ್ಯೇಂದ್ರಿಯಗಳು ಮಾತ್ರವೇ ಹೇಳಲ್ಪಟ್ಟತೆಂದು ಭಾವಿಸತಕ್ಕದ್ದು ; ಏಕೆಂದರೆ ಅಂತರಿಂದ್ರಿಯವಾದ ಮನಸ್ಸು ಪೃಥಕ್ಕಾಗಿ ಹೇಳಲ್ಪಟ್ಟಿರುವದರಿಂದ. **ಪ್ರಕೃತಿ ಸಂಸೃಷ್ಟಂ** ಎಂದು ಹೇಳಿದುದರಿಂದ ಬದ್ಧಾತ್ಮನಿಗೆ ದೇಹಸಂಬಂಧವಿರುವದರಿಂದ ಇಂದ್ರಿಯ ಮನೋಬುದ್ಧಿಗಳಿಗೆ ವಶವಾಗೋಣವೂ, ತನ್ಮೂಲಕ ನಾನಾವಿಧ ಆಶೆಗಳಿಂದ ಬಾಧಿತನಾಗಿ, ನಾನಾವಿಧಭ್ರಮೆಗಳಿಗೆ ಆಕರನಾಗೋಣವೂ ತಿಳಿಸಲ್ಪಟ್ಟವು. **ವಿಮೋಹಯತಿ** ಎಂಬಲ್ಲಿರುವ "ವಿ" ಉಪಸರ್ಗವು ನಾನಾವಿಧ ಭ್ರಮೆಗಳನ್ನುಂಟುಮಾಡುತ್ತದೆ ಎಂಬ ಅಭಿಪ್ರಾಯದಿಂದ ಹೇಳಲ್ಪಟ್ಟತೆಂದು **ವಿವಿಧಂ**

**ಮೂ. ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನ ನಾಶನಮ್ ॥** ೪೧.

ಮೋಹಯತಿ. ಆ ವೈವಿಧ್ಯವು ಹೇಗೆ ಎಂದರೆ ಸಾರವತ್ತಾದ ಜ್ಞಾನದಿಂದ ವಿಮುಖನನ್ನಾಗಿಯೂ, ಅಸಾರವಾದುದರಲ್ಲಿ ಸಾರವಾದುದೆಂಬ ಭ್ರಮೆಯುಳ್ಳವನನ್ನಾಗಿಯೂ ಮಾಡುತ್ತದೆಂದು ಆತ್ಮ ಜ್ಞಾನವಿಮುಖಂ ಮತ್ತು ವಿಷಯಾನುಭವಪರಂ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಹೀಗೆ ಭೋಗ್ಯವಾದುದರಲ್ಲಿ ಅಭೋಗ್ಯವೆಂಬ ಭ್ರಮೆಯನ್ನೂ ಅಭೋಗ್ಯವಾದುದರಲ್ಲಿ ಭೋಗ್ಯವೆಂಬ ಭ್ರಮೆಯನ್ನೂ ಉಂಟುಮಾಡುತ್ತದೆಂಬ ಭಾವವು. ||೪೦||

**ಮೂಲಕ್ಕೆ ಅವತಾರಿಕೆಯು :**—ಅರ್ಜುನನು ಶ್ರೀಕೃಷ್ಣನನ್ನು **"ಶಾಧಿಮಾಂ ತ್ವಾಂ ಪ್ರಪನ್ನಂ"** ಎಂದು ಹೇಳಿ ಆಶ್ರಯಿಸಿ ಪ್ರಪನ್ನನಾಗಿ ತನಗೆ ಸರಿಯಾದ ಜ್ಞಾನವನ್ನು ಉಪದೇಶಿಸೆಂದು ಪ್ರಾರ್ಥಿಸಿರುವುದರಿಂದ ಕರ್ಮಯೋಗವನ್ನನುಷ್ಠಿಸಿ ಜ್ಞಾನಯೋಗಾಧಿಕಾರಿಯಾಗುವ ಸಾಮರ್ಥ್ಯವಿರುವುದರಿಂದ, ಈ ಮಹಾ ಶತ್ರುವಾದ ಕಾಮನು ಮಾಡುವ ದರೋಡೆಯಲ್ಲಿ ಸಹಾಯಭೂತಗಳಾದ ಇಂದ್ರಿಯ ಮನೋಬುದ್ಧಿಗಳಲ್ಲಿ ಪ್ರಥಮತಃ ಬಾಹ್ಯೇಂದ್ರಿಯಗಳ ನಿಯಮನವು ಆವಶ್ಯಕವೆಂದು ಉಪದೇಶಿಸುತ್ತಾರೆ. **"ಯಚ್ಛೇತ್ಪ್ರಾಣೇಂದ್ರಿಯಾಣಿಚ"** ಎಂಬ ವಾಕ್ಯದಲ್ಲಿರುವ ಉಪದೇಶವು ಬೋಧಿಸಲ್ಪಡುತ್ತದೆ.

**ಮೂಲಕ್ಕೆ ಅರ್ಥವು :—ಹೇ ಭರತರ್ಷಭ** - ಹೇ ಭರತವಂಶಶ್ರೇಷ್ಠನೇ, **ತಸ್ಮಾತ್** - ಸರ್ವೇಂದ್ರಿಯೋಪರತಿಯು ಜ್ಞಾನಯೋಗದಲ್ಲಿ ಪ್ರವರ್ತಿಸುವವನಿಗೆ ಅತ್ಯಾವಶ್ಯಕವಾಗಿ ಕಾಮವು ಪ್ರಬಲ ಶತ್ರುವಾಗಿ ಪರಿಣಮಿಸಿ ಆತನನ್ನು ಆತ್ಮವಿಮುಖನನ್ನಾಗಿಯೂ ವಿಷಯಪ್ರವಣನನ್ನಾಗಿಯೂ ಮಾಡುವುದರಿಂದ, ಅಥವಾ ಯಾವಕಾರಣದಿಂದ ಕಾಮವು ಹಿಂದೆ ಉಪಪಾದಿಸಿದರೀತಿಯಲ್ಲಿ ಭ್ರಮಜ್ಞಾನವನ್ನುಂಟುಮಾಡುತ್ತದೆಯೋ ಆ ಕಾರಣದಿಂದ ಎಂಬ ಭಾವವು; ಈ ಅಭಿಪ್ರಾಯವನ್ನು ಪುನಃ **ಏನಂ ಜ್ಞಾನವಿಜ್ಞಾನ ನಾಶನಂ** ಎಂಬುದರಿಂದ ಮುಂದೆ ಅನುವಾದಮಾಡಿ ಹೇಳುತ್ತಾರೆ:—ಈ ಕಾಮವು ಜ್ಞಾನವಿಜ್ಞಾನ ನಾಶಕವಾದುದರಿಂದಲೇ ಎಂಬ ತಾತ್ಪರ್ಯವು; ಮೋಕ್ಷಾರ್ಥಿಯಾಗಿ ಪ್ರಪನ್ನನಾದ, **ತ್ವಂ** - ನೀನು, **ಆದೌ** - ಮೋಕ್ಷೋಪಾಯವನ್ನು ಆರಂಭಿಸುವಾಗಲೇ ಎಂದರೆ ಈ ಕರ್ಮಯೋಗದಲ್ಲೇ, **ಇಂದ್ರಿಯಾಣಿ** - ಬಾಹ್ಯೇಂದ್ರಿಯಗಳನ್ನು **ನಿಯಮ್ಯ** - ಬಲಾತ್ಕಾರದಿಂದ ತಡೆದು, **ಜ್ಞಾನವಿಜ್ಞಾನ ನಾಶನಂ** - ಆತ್ಮಸ್ವರೂಪ ಜ್ಞಾನವೇನು, ಆತ್ಮನು ಯಾವ ಗುಣಗಳಿಂದ ವೈಲಕ್ಷಣ್ಯವನ್ನು ಹೊಂದಿರುವನೆಂಬ ವಿವೇಕ ಜ್ಞಾನವೇನು ಇವುಗಳಿಗೆ ನಾಶಭೂತವಾದ, **ಪಾಪ್ಮಾನಂ** - ಮಹಾ ಪಾಪಿಯಾದ, **ಏನಂ** - ಈ ಪ್ರಬಲ ಶತ್ರುವೆಂದು ಹೇಳಲ್ಪಟ್ಟ ಕಾಮವನ್ನು, **ಪ್ರಜಹಿ** - ಸಂಪೂರ್ಣವಾಗಿ ನಾಶಮಾಡು. ಭರತರ್ಷಭ ಎಂಬ ಸಂಬೋಧನೆಯಿಂದ ಭರತಾದಿಗಳು ಹೀಗೆ ಈ ಶತ್ರುವನ್ನು ಜಯಿಸಿದ ಹಾಗೆ ನಿನಗೂ ಆ ವಂಶೀಯನಾಗಿ ಸಾಧ್ಯವೆಂಬ ಭಾವವು ಸೂಚಿತವು. ||೪೧||

**ಭಾಷ್ಯಾರ್ಥವು :**—ಕಾಮದಿಂದ ಪೀಡಿತನಾಗಿ ವಿಪರೀತ ಜ್ಞಾನವನ್ನು ಹೊಂದುವದಕ್ಕೆ ಉಪಕರಣಗಳಾಗಿ ಹೇಳಲ್ಪಟ್ಟ ಇಂದ್ರಿಯಗಳು,ಮನಸ್ಸು,ಬುದ್ಧಿಗಳಲ್ಲಿ, ಮೋಕ್ಷಾರ್ಥಿಯಾದ ನೀನು ಉಪಾಯಾನುಷ್ಠಾನಕ್ಕೆ ಪ್ರಥಮ ಸೋಪಾನವಾದ ಕರ್ಮಯೋಗವನ್ನೇ ಅವಲಂಬಿಸುವದರ ಮೂಲಕ ಮೊದಲು ಇಂದ್ರಿಯಗಳನ್ನು ಜಯಿಸು ಎಂದು ಹಿತೋಪದೇಶವನ್ನು ಮಾಡುತ್ತಾರೆ.—ಒಂದೇಸಲ ಎರಡನೆಯ ಮೆಟ್ಟಲಿಗೆ ಹಾರುವದಕ್ಕೆ ಹೋಗಿ ಕಾಮವಶವಾಗಿ ಕೆಳಗೆ ಬೀಳಬೇಡವೆಂಬ ಭಾವದಿಂದ ಉಪದೇಶವು. ಮೂಲದ"**ತಸ್ಮಾತ್**"ಎಂಬ ಪದಕ್ಕೆ **ಯಸ್ಮಾತ್** ಎಂಬ ಶಬ್ದದ ಸಾಪೇ

ಭಾ. ಯಸ್ಮಾತ್ಸರ್ವೇನ್ದ್ರಿಯವ್ಯಾಪಾರೋಪರತಿರೂಪೇ ಜ್ಞಾನಯೋಗೇ ಪ್ರವೃತ್ತಸ್ಯಾಯಂ ಕಾಮರೂಪಶ್ಶತ್ರುಃ ವಿಷಯಾಭಿಮುಖ್ಯಕರಣೇನಾತ್ಮನಿ ವೈಮುಖ್ಯಂ ಕರೋತಿ, ತಸ್ಮಾತ್ಪ್ರಕೃತಿ ಸಂಸೃಷ್ಟತಯೇನ್ದ್ರಿಯ ವ್ಯಾಪಾರ ಪ್ರವಣಸ್ತ್ವಂ ಮಾದೌ-ಮೋಕ್ಷೋಪಾಯಾರಂಭಸಮಯ ಏವೇನ್ದ್ರಿಯವ್ಯಾಪಾರಾನುರೂಪೇ ಕರ್ಮಯೋಗೇ, ಇನ್ದ್ರಿಯಾಣಿ ನಿಯಮ್ಯ, ಏನಂ, ಜ್ಞಾನವಿಜ್ಞಾನ ನಾಶನಂ - ಆತ್ಮಸ್ವರೂಪವಿಷಯಸ್ಯ ಜ್ಞಾನಸ್ಯ ತದ್ವಿವೇಕ ವಿಷಯಸ್ಯ ಚ ನಾಶನಂ,ಪಾಪ್ಮಾನಂ ಕಾಮರೂಪಂ ವೈರಿಣಂ ಪ್ರಜಹಿ-ನಾಶಯ ॥೪೧॥

ಕ್ಷತೆಯು ಆವಶ್ಯಕವಾದುದರಿಂದ, ಯಸ್ಮಾತ್ ಎಂದಾರಂಭಿಸಿ ಹೇಳುತ್ತಾರೆ. ಯಸ್ಮಾತ್-ಯಾವ ಕಾರಣದಿಂದ,ಸರ್ವೇಂದ್ರಿಯ ವ್ಯಾಪಾರೋಪರತಿರೂಪೇ-ಸಮಸ್ತ ಇಂದ್ರಿಯ ವ್ಯಾಪಾರಗಳೆಲ್ಲಾ ಶಾಂತವಾಗಿರುವಂಥ... ಶಃಮ್ಯತೆಯನ್ನು ಹೊಂದಬೇಕಾದ, ಜ್ಞಾನಯೋಗದಲ್ಲಿ, ಪ್ರವೃತ್ತಸ್ಯ-ಪ್ರವರ್ತಿಸಿದವನಿಗೆ ಈ ಕಾಮರೂಪನಾದಶತ್ರುವು, ವಿಷಯಾಭಿಮುಖ್ಯಕರಣೇನ-ಶಬ್ದಾದಿ ವಿಷಯಗಳಿಗೆ ಅಭಿಮುಖನಾಗುವ ಹಾಗೆ ಮಾಡುವದರಿಂದ, ಆತ್ಮನಿ ವೈಮುಖ್ಯಂ - ತನ್ನ ಆತ್ಮವಿಷಯಕ ಜ್ಞಾನದಲ್ಲಿ ವೈಮುಖ್ಯವನ್ನು. ಕರೋತಿ-ಉಂಟುಮಾಡುತ್ತದೋ, ತಸ್ಮಾತ್-ಆ ಕಾರಣದಿಂದ, ತಸ್ಮಾತ್ ಶಬ್ದಕ್ಕೆ ಹೀಗೆ ಅರ್ಥ ಹೇಳಿ ತ್ವಂ ಶಬ್ದಕ್ಕೆ ಅರ್ಥವನ್ನು ಹೇಳುತ್ತಾರೆ.—ಪ್ರಕೃತಿ ಸಂಸೃಷ್ಟತಯಾ ಇಂದ್ರಿಯ ವ್ಯಾಪಾರ ಪ್ರವಣಸ್ತ್ವಂ-ಪ್ರಕೃತಿ ಸಂಸರ್ಗವಿರುವದರಿಂದ ಇಂದ್ರಿಯಗಳ ವ್ಯಾಪಾರವಾದ ಕರ್ಮಗಳನ್ನು ಮಾಡುವದರಲ್ಲೇ ಅಭ್ಯಾಸವಿರುವನೀನು,ಈಗ ಇರುವ ಸ್ಥಿತಿಯನ್ನು ಪರ್ಯಾಲೋಚಿಸಿ ನೀನು ಮಾಡತಕ್ಕದ್ದೇನೆಂಬುವದನ್ನು ಹಿತೈಷಿಯಾಗಿ ಹೇಳುವೆನು ಕೇಳು ಎಂಬ ಭಾವದಿಂದ ತ್ವಂ ಎಂಬ ಪ್ರಯೋಗವು; ಆದೌ ಎಂದರೆ ಮೋಕ್ಷೋಪಾಯಾರಂಭ......ಕರ್ಮಯೋಗೇ-ಮೋಕ್ಷೋಪಾಯವನ್ನು ಆರಂಭಿಸುವ ಸಮಯದಲ್ಲೇನೇ ಇಂದ್ರಿಯ ವ್ಯಾಪಾರಗಳಿಗೆ ಅನುಗುಣವಾದ ಕರ್ಮಯೋಗದಲ್ಲೇ, ಇಂದ್ರಿಯಾಣಿ ನಿಯಮ್ಯ - ಬಾಹ್ಯೇಂದ್ರಿಯಗಳನ್ನು ನಿಗ್ರಹಿಸಿ, ಅಂತರಿಂದ್ರಿಯವಾದ ಮನೋನಿಗ್ರಹ ವಿಷಯವು ಮುಂದಿನ ಶ್ಲೋಕದಲ್ಲಿ ಹೇಳಲ್ಪಡುತ್ತದೆ, ಅದನ್ನೂ ಸೇರಿಸಿ ಅರ್ಥಮಾಡಿದರೂ ಬಾಧಕವೇನೂ ಇಲ್ಲವು, ಏನಂ-ಈ ಹಿಂದೆ ಹೇಳಲ್ಪಟ್ಟ, ಜ್ಞಾನವಿಜ್ಞಾನನಾಶನಂ ಎಂದರೆ ಆತ್ಮಸ್ವರೂಪವಿಷಯಸ್ಯ ಜ್ಞಾನಸ್ಯ - ಜೀವಾತ್ಮಸ್ವರೂಪ ವಿಷಯಕವಾದ ಜ್ಞಾನವೇನು, ತದ್ವಿವೇಕ ವಿಷಯಸ್ಯ ಚ - ಆತನು ಯಾವ ಸ್ವಭಾವಗಳಿಂದ ವೈಲಕ್ಷಣ್ಯವನ್ನು ಹೊಂದಿರುವನೆಂಬ ವಿವೇಕ ಜ್ಞಾನವೇನು, ಇವುಗಳಿಗೆ ನಾಶಕವಾದ, ಪಾಪ್ಮಾನಂ - ಪಾಪಿಯಾದ, ಕಾಮರೂಪ ವೈರಿಯನ್ನು, ಪ್ರಜಹಿ ಎಂದರೆ ನಾಶಯ - ನಾಶಮಾಡು. ಇಲ್ಲಿ ಆದೌ ಎಂದು ಮೂಲದಲ್ಲಿ ಹೇಳಿರುವದರ ಅಭಿಪ್ರಾಯವೇನೆಂದರೆ, ಮೋಕ್ಷಾರ್ಥಿಯಾದವನು ಮೊದಲು ಮಾಡತಕ್ಕ ಕೆಲಸವೇನೆಂದರೆ,- ಕರ್ಮಯೋಗವನ್ನು ಪ್ರಾರಂಭಿಸಿ, ಆ ಕರ್ಮಯೋಗದಿಂದ ಸುಲಭ ಸಾಧ್ಯವಾದ ಇಂದ್ರಿಯಗಳನ್ನು ಜಯಿಸುವ ಕೆಲಸವನ್ನು ಮೊದಲು ಇಟ್ಟುಕೊಳ್ಳತಕ್ಕದ್ದು. ಓಂ ಪ್ರಥಮದಲ್ಲೇ ಜ್ಞಾನಯೋಗಕ್ಕೆ ಹಾರುತ್ತೇನೆಂದು ಹೋಗಬಾರದೆಂಬ ಭಾವವು. ಕರ್ಮಯೋಗದಲ್ಲಿ ಅದು ಸುಲಭ ಸಾಧ್ಯವಾದುದೆಂದು ಹಿಂದೆಯೇ ೭ ನೆಯ ಶ್ಲೋಕದಲ್ಲಿ "ಯಸ್ತ್ವಿನ್ದ್ರಿಯಾಣಿ ಮನಸಾ ನಿಯಮ್ಯಾ ರಭತೇಽರ್ಜುನ । ಕರ್ಮೇನ್ದ್ರಿಯೈಃ ಕರ್ಮಯೋಗ ಮಸಕ್ತಸ್ಸ ವಿಶಿಷ್ಯತೇ" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ ; ಏಕೆಂದರೆ ಸರ್ವೇಂದ್ರಿಯೋಪರತಿಯು ಆವಶ್ಯಕವಾದುದರಿಂದ ಇಂದ್ರಿಯಗಳನ್ನು ಜಯಿಸುವದು ಸುದುಷ್ಕರವು ಎಂಬ ಭಾವವು. ಆದುದರಿಂದ ಯಸ್ಮಾತ್ ಎಂದಾರಂಭಿಸಿ ತಸ್ಮಾತ್ ಎಂಬುದಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಯಸ್ಮಾತ್ಸರ್ವೇನ್ದ್ರಿಯ ವ್ಯಾಪಾರೋಪರತಿ ರೂಪೇ ಜ್ಞಾನ

ಭಾ. ಅವ. ಜ್ಞಾನವಿರೋಧಿಷು ಪ್ರಧಾನಮಾಹ—

ಯೋಗೇ ಪ್ರವೃತ್ತಸ್ಯ ಕಾಮರೂಪಶ್ಶತ್ರುಃ ಎಂಬ ಉಪಪಾದನವು. ಇಲ್ಲಿ ಭಾಷ್ಯದಲ್ಲಿ ಜ್ಞಾನಯೋಗಕ್ಕೆ ಸರ್ವೇಂದ್ರಿಯವ್ಯಾಪಾರೋಪರತಿಯು ಆವಶ್ಯಕವೆಂದು ಏಕೆ ಹೇಳಲ್ಪಟ್ಟಿತೆಂದರೆ, ಎರಡನೆಯ ಅಧ್ಯಾಯದಲ್ಲಿ "ಪ್ರಜಹಾತಿ ಯದಾ ಕಾಮಾನ್" (೫೫) ಎಂದಾರಂಭಿಸಿ ನಾಲ್ಕು ಶ್ಲೋಕಗಳಿಂದ ಜ್ಞಾನನಿಷ್ಠೆಯ ನಾಲ್ಕು ವಿಧಾವಸ್ಥೆಯನ್ನು ಜ್ಞಾಪಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಕರ್ಮಯೋಗವನ್ನವಲಂಬಿಸದೆ ಜ್ಞಾನಯೋಗಾರಂಭವು ಆತ್ಮವೈಮುಖ್ಯವನ್ನೂ ವಿಷಯ ಪ್ರವಣತೆಯನ್ನೂ ಉಂಟುಮಾಡುತ್ತದೆಂಬಂಶವನ್ನು ಪುನಃ ಇಲ್ಲಿ ಜ್ಞಾಪಕಕೊಡುವ ಉದ್ದಿಶ್ಯವಾಗಿ ವಿಷಯಾಭಿಮುಖ್ಯಕರಣೇನಾ ತ್ಮನಿ ವೈಮುಖ್ಯಂ ಕರೋತಿ ಎಂದು ಹೇಳಿರುತ್ತಾರೆ. ಇಲ್ಲಿ ಇಂದ್ರಿಯಾಣಿ ನಿಯಮ್ಯವೆಂದಿರುವದರಿಂದ ಅರ್ಜುನನು ಪ್ರವರ್ತಿಸಬೇಕಾದ ಇಂದ್ರಿಯ ವ್ಯಾಪಾರವುಳ್ಳ ಕರ್ಮಯೋಗದಲ್ಲೇ ಇಂದ್ರಿಯ ನಿಯಮನವೂ ದೊರೆಯುತ್ತದೆಂದರೆ ಆ ಇಂದ್ರಿಯ ನಿಯಮನವು ಎಂತಾದ್ದು? ಸರ್ವೇಂದ್ರಿಯೋಪರತಿರೂಪವಾದುದು ಎಂದರೆ ಆಗ ಇವಕ್ಕೂ ಜ್ಞಾನಯೋಗಕ್ಕೂ ವ್ಯತ್ಯಾಸವೇನು? ಎಂಬ ಶಙ್ಕಾಗಳಲ್ಲಿ,ಇಲ್ಲಿ ಇಂದ್ರಿಯಾಣಿ ನಿಯಮ್ಯ ಎಂಬುದರಿಂದ ಸರ್ವೇಂದ್ರಿಯೋಪರತಿಯು ಅಶಕ್ಯವಾದುದರಿಂದ ಅದು ಹೇಳಲ್ಪಡಲಿಲ್ಲವು, ಅಧರ್ಮಪ್ರವರ್ತನೆಗೆ ಹೋಗದಹಾಗೆ ನಿಯಮನವು ಇಲ್ಲಿ ವಿವಕ್ಷಿತವು. ಏಕೆಂದರೆ ಕರ್ಮಯೋಗದಲ್ಲಿ ಇಂದ್ರಿಯ ಪ್ರವರ್ತನರೂಪಗಳಾದ ಕರ್ಮಗಳು ಇದ್ದೇ ಇರುತ್ತವೆ. ಧರ್ಮಯುಕ್ತವಾದ ಧನಾರ್ಜನಾದಿ ವ್ಯಾಪಾರಗಳು ತಪ್ಪಿದ್ದಲ್ಲವು. ೩-೬ ನೆಯ ಶ್ಲೋಕದಲ್ಲೂ ಹೇಳಿರುವ "ಯಸ್ತ್ವಿಂದ್ರಿಯಾಣಿ ಮನಸಾನಿಯಮ್ಯ" ಎಂಬಲ್ಲಿಯೂ ಕೂಡ ಇದೇ ತಾತ್ಪರ್ಯವು; ಆದದರಿಂದಲೇ "ಇಂದ್ರಿಯ ವ್ಯಾಪಾರಾನುರೂಪೇ ಕರ್ಮಯೋಗೇ" ಎಂದು ಹೇಳಲ್ಪಟ್ಟಿತು. ಕಾಮವು ಜ್ಞಾನ ವಿಜ್ಞಾನ ನಾಶೀ ಎಂದು ಹೇಳಲ್ಪಟ್ಟಿರುತ್ತದೆ, ಜ್ಞಾನಶಬ್ದಕ್ಕೆ ಆತ್ಮಸ್ವರೂಪ ಜ್ಞಾನವೆಂದೂ, ವಿಜ್ಞಾನಕ್ಕೆ ಆತ್ಮವಿವೇಕ ವಿಷಯಜ್ಞಾನವೆಂದೂ ಭಾಷ್ಯ ಬರೆದಿರುತ್ತಾರೆ. ಮೊದಲಿನ ಜ್ಞಾನಿಗಿಂತಲೂ, ವಿಜ್ಞಾನವನ್ನು ಹೊಂದಿರುವವನು, "ಬ್ರಾಹ್ಮಣೇಷು ಚ ವಿದ್ವಾಂಸೋ, ವಿದ್ವತ್ಸು ಕೃತಬುದ್ಧಯಃ। ಕೃತ ಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವೇದಿನಃ" (ಮನು. ೧. ೧೪) ಎಂಬ ವಾಕ್ಯಗಳಲ್ಲಿ ಪರಸ್ಪರ ವೈಲಕ್ಷಣ್ಯ ಹೇಳಿರುವಹಾಗೆ, ಶ್ರೇಷ್ಠನು; ಪ್ರತ್ಯಕ್ತ್ವ ಜ್ಞಾನತ್ತ್ವ ಆನಂದತ್ವಾದಿಗಳುಂಟೆಂಬುದು ಸ್ವರೂಪಜ್ಞಾನವು; ಅಣುತ್ವ, ನಿತ್ಯತ್ವ, ಜ್ಞಾತೃತ್ವ, ಭೋಕ್ತೃತ್ವ, ಕರ್ತೃತ್ವಾದಿ ವೈಲಕ್ಷಣ್ಯ ಬೋಧಿಸುವ ಧರ್ಮವರ್ಗವೆಲ್ಲಾ ವಿಜ್ಞಾನವು; ಇವೆರಡಕ್ಕೂ ನಾಶಕವು ಕಾಮವು ಎಂಬರ್ಥವು. ಅಥವಾ ಆತ್ಮನು ದೇಹಾತಿರಿಕ್ತನೆಂಬುದು ಜ್ಞಾನಶಬ್ದದಿಂದಲೂ, ಪ್ರತ್ಯಕ್ತ್ವಾದಿ ಸಕಲ ಇತರ ಧರ್ಮಗಳೂ ವಿಜ್ಞಾನ ಶಬ್ದದಿಂದಲೂ ಹೇಳಲ್ಪಟ್ಟವೆಂದೂ ಭಾವಿಸಬಹುದು. ಅಥವಾ ಜ್ಞಾನ ವಿಜ್ಞಾನ ಶಬ್ದಗಳಿಂದ ಪ್ರಮೇಯ ಪ್ರಮಾಣಗಳು ಹೇಳಲ್ಪಟ್ಟವೆಂದೂ ಊಹಿಸಬಹುದು. ಏನಂ ಎಂಬ ಶಬ್ದದಿಂದ ಇಲ್ಲಿ ಕಾಮವು ಎಂಬುದರ ಅನ್ವಾದೇಶವಿರುವದರಿಂದ ಹಿಂದೆ ಹೇಳಿದ ಕಾಮವೇ ಪಾಪ್ಮಾನಂ ಮಹಾಪಾಪಿಯೆಂದೂ ಜ್ಞಾನನಾಶಕವೆಂದೂ ಇಲ್ಲಿ ಹೇಳಲ್ಪಟ್ಟಿರುತ್ತದೆ. ಪ್ರಜಹಿ ಎಂಬುದು ಹನ ಹಿಂಸಾಗತ್ಯೋಃ ಎಂಬ ಧಾತು ವ್ಯುತ್ಪತ್ತಿಯಿಂದ ಸಂಪೂರ್ಣವಾಗಿ ಹಿಂಸಿಸು ಎಂಬರ್ಥವುಂಟಾಗುವದರಿಂದ ನಾಶಯ ನಾಶಮಾಡು ಎಂದು ಭಾಷ್ಯವನ್ನು ಬರೆದಿರುತ್ತಾರೆ.

**ಭಾಷ್ಯಾವತಾರಿಕೆಯ ಅರ್ಥವು :**—ಜ್ಞಾನಯೋಗಾಧಿಕಾರಿಗೆ ಕಾಮವು ಪ್ರಬಲ ಶತ್ರುವೆಂದೂ, ಆ ಶತ್ರುವಿಗೆ ಇಂದ್ರಿಯಗಳೂ, ಮನಸ್ಸೂ,ಬುದ್ಧಿಯೂ ಈ ಮೂರೂ ಸಹಕಾರಿಗಳೆಂದೂ

**ಮೂ. ಇಂದ್ರಿಯಾಣಿ ಪರಾಣ್ಯಾಹು ರಿನ್ದ್ರಿಯೇಭ್ಯಃ ಪರಂ ಮನಃ।**
**ಮನಸಸ್ತು ಪರಾಬುದ್ಧಿ ರ್ಯೋ ಬುದ್ಧೇಃ ಪರತ ಸ್ತು ಸಃ॥ ೪೨.**

ಹಿಂದೆ ಹೇಳಿ, ಪ್ರಥಮತಃ ಆ ಸಹಕಾರಿ ಶತ್ರುವಾದ ಇಂದ್ರಿಯಗಳನ್ನು ನಿಗ್ರಹಿಸು ಎಂದು ಉಪ ದೇಶಿಸಿನರು. ಮುಂದೆ ಅದಕ್ಕಿಂತ ಪ್ರಬಲ ಸಹಕಾರಿ ಶತ್ರುವು ಮನಸ್ಸೆಂದೂ, ಈ ಮನಸ್ಸಿಗಿಂ ತಲೂ ಪ್ರಬಲ ಸಹಕಾರಿ ಶತ್ರುವು ಬುದ್ಧಿಯೆಂದೂ, ಈ ಮೂರಕ್ಕಿಂತಲೂ ತುಂಬಾ ಪ್ರಬಲವಾ ದುದು ಆಶೆ ಅಥವಾ ಕಾಮವೆಂದೂ ಹೇಳಿ, ಇವುಗಳನ್ನೂ ಜಯಿಸು ಎಂದು ಉಪದೇಶಿಸಬೇಕಾ ಗಿತ್ತು. ಅದಕ್ಕೆಬದಲಾಗಿ ಇಂದ್ರಿಯಗಳಿಗಿಂತ ಮನಸ್ಸು ಪ್ರಬಲವೆಂದೂ, ಮನಸ್ಸಿಗಿಂತಲೂ ಬುದ್ಧಿ ಯೂ ಪ್ರಬಲವೆಂದೂ, ಬುದ್ಧಿಗಿಂತಲೂ ಕಾಮವೇ ಸರ್ವಪ್ರಬಲವೆಂದೂ ಈ ಶ್ಲೋಕದಲ್ಲಿ ಹೇಳಿ, ಮುಂದಿನ ಶ್ಲೋಕದಲ್ಲಿ ಈ ಸರ್ವ ಪ್ರಬಲವಾದುದನ್ನು ನಾಶಮಾಡು ಎಂದು ಉಪದೇಶಿಸುವದರಿಂದ, ಇವೆಲ್ಲವೂ ನಿಗ್ರಾಹ್ಯವೇ ಎಂದೂ ಹೇಳಿದಂತಾಯಿತು. ಆದುದರಿಂದ ಜ್ಞಾನವಿರೋಧಿಷು ಪ್ರಧಾನ ಮೋಹ - ಜ್ಞಾನವಿರೋಧಿಗಳಾದ ಮಿಕ್ಕ ಮನಸ್ಸು, ಬುದ್ಧಿ ಕಾಮಗಳಲ್ಲಿ ಉತ್ತರೋತ್ತರವಾ ದವು ತರತಮ ಭಾವಗಳಿಂದ ಪ್ರಬಲಪ್ರಬಲತರ ಪ್ರಬಲತಮ ವಿರೋಧಿಗಳೆಂದು ಹೇಳುತ್ತಾರೆ. ಆದರೆ ಇವುಗಳು ಜ್ಞಾನವಿರೋಧಿ ಎಂದು ಎಲ್ಲಿ ಹೇಳಲ್ಪಟ್ಟಿದೆ ಎಂದರೆ ಕಾಮನು ಜ್ಞಾನ ವಿಜ್ಞಾನ ನಾಶನಂ ಎಂಬುವದರಿಂದಲೇ ವ್ಯಕ್ತವು. ಯಾವಾಗ ಕಾಮನು ಜ್ಞಾನ ವಿಜ್ಞಾನ ನಾಶಕನೋ, ಆ ಕಾಮನ ಸಹಾಯಕಗಳೂ ಹಾಗೆಯೇ ಎಂಬ ಭಾವವು. ಇಂದ್ರಿಯಗಳಿಗಿಂತ ಮನಸ್ಸು ಪ್ರಬಲ ವಿರೋಧಿಯೆಂದೂ, ಮನಸ್ಸಿಗಿಂತ ಬುದ್ಧಿಯು ಪ್ರಬಲತರ ವಿರೋಧಿಯೆಂದೂ, ಬುದ್ಧಿ ಗಿಂತ ಕಾಮವು ಪ್ರಬಲತಮ ವಿರೋಧಿಯೆಂದೂ, ಆದುದರಿಂದ ಇವುಗಳೆಲ್ಲವೂ ನಿಗ್ರಹಿಸಲು ಯೋಗ್ಯಗಳೆಂದೇ ಹೇಳಿದಂತಾಯಿತು.

**ಮೂಲಕ್ಕೆ ಅರ್ಥವು:**—ಆತ್ಮಜ್ಞಾನ ವಿರೋಧಿಗಳಲ್ಲಿ ಒಂದಕ್ಕಿಂತ ಒಂದು ಪ್ರಬಲ ವಾದುವೆಂದು ಶ್ರೀ ಕೃಷ್ಣ ಭಗವದಾಚಾರ್ಯರು ತಿಳಿಸುತ್ತಾರೆ. **ಇಂದ್ರಿಯಾಣಿ** - ಬಾಹ್ಯೇಂ ದ್ರಿಯಗಳನ್ನು, **ಪರಾಣಿ** - ಜ್ಞಾನವಿರೋಧಿಯಾಗುವವುಗಳಲ್ಲಿ ಪ್ರಬಲಗಳೆಂದು, **ಆಹುಃ** - ಹೇಳುತ್ತಾರೆ; **ಇಂದ್ರಿಯೇಭ್ಯಃ** - ಬಾಹ್ಯೇಂದ್ರಿಯಗಳಿಗಿಂತಲೂ, **ಮನಃ** - ಅಂತರಿಂದ್ರಿಯವಾದ ಮನಸ್ಸನ್ನೂ, **ಪರಂ** - ಇನ್ನೂ ಪ್ರಬಲವಿರೋಧಿಯೆಂದು, **ಆಹುಃ** - ಹೇಳುತ್ತಾರೆ; ಯಾರೆಂದು ಹೇಳಲಿಲ್ಲವು. ಮನು ವೊದಲಾದ ಶಾಸ್ತ್ರಜ್ಞರು ಎಂದಾದರೂ ಅಥವಾ ಶ್ರುತಿಸ್ಮೃತಿಗಳು ಆಹುಃ ಎಂದಾದರೂ, ಹೇಳಬಹುದು. **ಮನಸಸ್ತು**-ಮನಸ್ಸಿಗಿಂತಲಾದರೋ, **ಬುದ್ಧಿಃ**-ಇಲ್ಲಿ ಬುದ್ಧಿ ಎಂದರೆ ವಿಪರೀತಾಧ್ಯವಸಾಯವು, ವಿವೇಕಶೂನ್ಯವಾದುದು, **ಪರಾ** - ಇನ್ನೂ ಪ್ರಬಲ ಜ್ಞಾನವಿರೋ ಧಿಯು; **ಯಃ** - ಯಾವುದು **ಬುದ್ಧೇಃ** - ಈ ವಿಪರೀತಾಧ್ಯವಸಾಯಕ್ಕಿಂತಲೂ, **ಪರತಸ್ತು** - ಪ್ರಧಾನತಮವಿರೋಧಿಯಾದರೋ, **ಸಃ**-ಆ ಹಿಂದೆ ಹೇಳಿದ ಕಾಮವೇ. ಹೀಗೆ ಒಂದಕ್ಕಿಂತ ಒಂದು ಪ್ರಬಲ ವಿರೋಧಿ ಎಂದು ಇಲ್ಲಿ ಹೇಳಿ, ಹಿಂದಿನ ಶ್ಲೋಕದಲ್ಲಿ ಇಂದ್ರಿಯಗಳನ್ನು ಕರ್ಮಯೋಗಾ ನುಷ್ಠಾನದ ಬಲದಿಂದ ನಿಯಮಿಸಿ ನಿನ್ನ ವಶದಲ್ಲಿಡು ಎಂದು ಹೇಳಿರುವದರಿಂದ, ತನ್ಮೂಲಕ ವಾಗಿ ಮನಸ್ಸನ್ನೂ, ಅದರ ಮೂಲಕವಾಗಿ ಬುದ್ಧಿಯನ್ನೂ ಜಯಿಸು ಎಂದೂ ಹೇಳಿದಂತೆ ಯಾಯಿತು. ಹೀಗೆ ಇವು ಮೂರನ್ನೂ ಯಾವಾಗ ನಿನ್ನ ವಶಮಾಡಿಕೊಂಡಿಯೋ, ಆಗ ಈ ಪ್ರಬಲತಮ ಶತ್ರುವಾದ ಕಾಮವು ದುರ್ಬಲವಾಗಿ ಸುಲಭವಾಗಿ ಜಯಿಸಲ್ಪಡುವನೆಂಬ ಮುಖ್ಯ ತಾತ್ಪರ್ಯವೂ ಸೂಚಿತವು. ॥೪೨॥

**ಭಾಷ್ಯಾರ್ಥವು:**—ಬಾಹ್ಯೇಂದ್ರಿಯಗಳೂ ಮನಸ್ಸೂ ಬುದ್ಧಿಯೂ ಕಾಮಕ್ಕೆ ಸಹಾಯ

ಭಾ. ಜ್ಞಾನವಿರೋಧೇ ಪ್ರಧಾನಾನೀಂದ್ರಿಯಾಣ್ಯಾಹುಃ, ಯತಇನ್ದ್ರಿಯೇಷು ವಿಷಯ ವ್ಯಾಪೃತೇಷು ಆತ್ಮನಿ ಜ್ಞಾನಂ ನ ಪ್ರವರ್ತತೇ; ಇನ್ದ್ರಿಯೇಭ್ಯಃ ಪರಂ ಮನಃ - ಇನ್ದ್ರಿಯೇಷೂ ಪರತೇಷ್ವಪಿ, ಮನಸಿ ವಿಷಯಪ್ರವಣೇ ಆತ್ಮಜ್ಞಾನಂ ನಸಂಭವತಿ; ಮನಸಸ್ತು ಪರಾಬುದ್ಧಿಃ - ಮನಸಿ ವೃತ್ತ್ಯನ್ತರ ವಿಮುಖೇ ವಿಪರೀತಾ ಧ್ಯವಸಾಯ ಪ್ರವೃತ್ತಾ ಸತ್ಯಾಂ ಜ್ಞಾನಂ ನ ಪ್ರವರ್ತತೇ; ಬುದ್ಧಿಪರ್ಯಂತೇಷೂ ಪರಿತೇಷ್ವಪೀ

---

ಭೂತಗಳಾಗಿ ಈತನ ಜ್ಞಾನಕ್ಕೆ ವಿರೋಧಿಗಳಾಗಿ ಶತ್ರುಗಳಾಗಿ ಪರಿಣಮಿಸುತ್ತವೆ ಎಂದು ಹೇಳಲ್ಪಟ್ಟು, ಹಾಗೆ ಜ್ಞಾನ ವಿರೋಧಿಯಾದ ಬಾಹ್ಯೇಂದ್ರಿಯಗಳನ್ನು ಪ್ರಥಮತಃ ನಿಗ್ರಹಿಸತಕ್ಕದ್ದೆಂದು ಹೇಳಲ್ಪಟ್ಟಿತು. ಮಿಕ್ಕ ಮನಸ್ಸು, ಬುದ್ಧಿ, ಕಾಮುಗಳಲ್ಲಿ ಜ್ಞಾನವಿರೋಧಿಯಾಗಿರುವದು ರಲ್ಲಿ ತರತಮ ಭಾವದಲ್ಲಿ ಪ್ರಧಾನಗಳು ಯಾವುವು ಎಂಬುದನ್ನು ತಿಳಿಸಿ, ಅವುಗಳೂ ಕೂಡ ನಿಗ್ರಹಿಸತಕ್ಕವುಗಳೆಂದು ಹೇಳುತ್ತಾರೆ:— ಜ್ಞಾನವಿರೋಧೇ - ಒಳ್ಳೇ ಜ್ಞಾನಕ್ಕೆ ವಿರೋಧವಾಗಿರುವುವುಗಳಲ್ಲಿ, ಪ್ರಧಾನಾನಿ - ಮುಖ್ಯವಾದವುಗಳು, ಇಂದ್ರಿಯಾಣ್ಯಾಹುಃ - ಇಂದ್ರಿಯಗಳೆಂದು, ಶಾಸ್ತ್ರಗಳು ಹೇಳುತ್ತವೆ; ಅಥವಾ ಜ್ಞಾನಿಗಳು ಹೇಳುತ್ತಾರೆ ಎಂಬರ್ಥಗಳನ್ನು ಹೇಳಬಹುದು. ಇದು ಮೂಲದ ಪದ ಶಬ್ದಾರ್ಥವು. ಅವು ಹೇಗೆ ಪ್ರಬಲವಾದವು? ಎಂದರೆ ಕಾರಣವನ್ನು ತಿಳಿಸುತ್ತಾರೆ. ಯತಃ-ಯಾವ ಕಾರಣದಿಂದ, ಇಂದ್ರಿಯೇಷು ವಿಷಯ ವ್ಯಾಪೃತೇಷು – ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸಲಾಗಿ, ಆತ್ಮನಿ - ಆತ್ಮಾವಿನಲ್ಲಿ ಎಂದರೆ ಆತ್ಮವಿಷಯದಲ್ಲಿ, ಜ್ಞಾನಂ ನ ಪ್ರವರ್ತತೇ - ಜ್ಞಾನವು ಪ್ರವರ್ತಿಸುವದಿಲ್ಲವು. ಇನ್ದ್ರಿಯೇಭ್ಯಃ ಪರಂ ಮನಃ ಎಂದರೆ, ಇಂದ್ರಿಯೇಷೂ ಪರತೇಷ್ವಪಿ - ಬಾಹ್ಯೇಂದ್ರಿಯಗಳು ಶಾಂತಗಳಾದರೂ ಕೂಡ, ಮನಸಿ ವಿಷಯ ಪ್ರವಣೇ ಸತಿ - ಮನಸ್ಸು ವಿಷಯದಲ್ಲಿ ಸಕ್ತವಾಗಲು, ಆತ್ಮಜ್ಞಾನಂ, ನ ಸಂಭವತಿ- ಉಂಟಾಗುವದಿಲ್ಲವು; ಆದುದರಿಂದ ಜ್ಞಾನವಿರೋಧಿಯಲ್ಲಿ ಬಾಹ್ಯೇಂದ್ರಿಯಗಳಿಗಿಂತ ಮನಸ್ಸು ಪ್ರಬಲವಾಗಿ ಪ್ರಧಾನವಾದುದು, ಪ್ರಬಲತರವು. ಮನಸಸ್ತು ಪರಾಬುದ್ಧಿಃ ಎಂದರೆ ಮನಸಿ ವೃತ್ತ್ಯನ್ತರ ವಿಮುಖೇ-ಮನಸ್ಸು ಬೇರೆ ಪ್ರವೃತ್ತಿಯಿಂದ ವಿಮುಖವಾಗಿದ್ದರೂ, ವಿಪರೀತಾಧ್ಯವಸಾಯ ಪ್ರವೃತ್ತಾ ಸತ್ಯಾಂ-ವಿಪರೀತವಾದುದರಲ್ಲಿ ಬುದ್ಧಿಯು ಪ್ರವರ್ತನೆಯು ಇದ್ದುದಾದರೆ, ಜ್ಞಾನಂ ನ ಪ್ರವರ್ತತೇ - ಆತ್ಮವಿಷಯವಾದ ಜ್ಞಾನವು ಪ್ರವರ್ತಿಸುವದಿಲ್ಲವು. ಆಗಲಿ, ಮನಸ್ಸು ವಿಷಯಾಂತರದಲ್ಲಿ ಪ್ರವರ್ತಿಸದಿದ್ದರೂ, ಬುದ್ಧಿಯು ಹೇಗೆ ವಿಪರೀತ ವಿಷಯದಲ್ಲಿ ಪ್ರವರ್ತಿಸೀತು ಎಂಬಾಕ್ಷೇಪ ತೋರಬಹುದು, ಏಕೆಂದರೆ ಮನಸ್ಸಿಗೆ ಆ ವಿಪರೀತ ವಿಷಯವು ತೋರಿ ಬಂದಲ್ಲವೇ ಇದನ್ನು ಮಾಡಬಹುದು, ಇದನ್ನು ಮಾಡಕೂಡದೆಂಬ ನಿಶ್ಚಯಜ್ಞಾನ ಉಂಟಾಗತಕ್ಕದ್ದು; ಇದಕ್ಕೆ ಸಮಾಧಾನ ಹೇಗೆಂದರೆ, ಮನಸ್ಸು ವಿಷಯಗಳಲ್ಲಿ ವಿಮುಖವಾಗಿದ್ದರೂ ನಿಶ್ಶೇಷವಾದ ವೈಮುಖ್ಯವಿಲ್ಲವೆಂದು ತಿಳಿಯತಕ್ಕದ್ದು. ವಿಷಯಾಧ್ಯವಸಾಯ ಉಂಟಾಗುವದರಿಂದ ಮನಸ್ಸು ಮೊದಲು ವಿಮುಖವಾಗಿದ್ದರೂ, ಬುದ್ಧಿಗೆ ವಶವಾಗಿ ಅದಕ್ಕೂ ವಿಷಯ ಪ್ರಾವಣ್ಯತೆಯುಂಟಾಗುತ್ತದೆಂಬ ಭಾವವು. ಹೀಗೆ ಮನಸ್ಸಿಗಿಂತಲೂ ಬುದ್ಧಿಯು ಜ್ಞಾನವಿರೋಧಿಯಾಗಿರುವದರಲ್ಲಿ ಇನ್ನೂ ಪ್ರಬಲವಾದುದೆಂಬ ಭಾವವು. ಇಂದ್ರಿಯಗಳು ಪ್ರಬಲವಾದರೆ ಮನಸ್ಸು ಪ್ರಬಲತರವು, ಬುದ್ಧಿಯು ಪ್ರಬಲತಮವೆಂಬ ಭಾವವು. ಮನಸಸ್ತು ಪರಾಬುದ್ಧಿಃ ಎಂಬಲ್ಲಿ ತು ಶಬ್ದವು ಈ ಮೇಲೆ ಹೇಳಿದ ಶಙ್ಕೆಯನ್ನು ನಿರಸನಮಾಡುತ್ತದೆ. ಈ ಸಂದರ್ಭದಲ್ಲಿ ವಿಷಯ ಪ್ರಾವಣ್ಯರೂಪವಾದ ಇಚ್ಛೆಯು ಹೇಗೆ ಉಂಟಾಗುತ್ತದೆಂಬುದನ್ನೂ ಅದರಿಂದ ಪ್ರವೃತ್ತಿಯೂ ಹೇಗೆ ಉಂಟಾಗುತ್ತದೆಂಬುದನ್ನೂ, ಗ್ರಹಿಸಬಹುದು. ಕರ್ಮವಾಸನಾಪ್ರಕಾರ

**ಭಾ. ಇಚ್ಛಾಪರ್ಯಾಯಃ ಕಾಮೋ ರಜಸ್ಸಮುದ್ಭವೋಽವರ್ತತೇ ಚೇತ್, ಸ ಏವೈ ತಾನೀ ನ್ದ್ರಿಯಾದೀನ್ಯಪಿ ಸ್ವವಿಷಯೇ ವರ್ತಯಿತ್ವಾ ಆತ್ಮಜ್ಞಾನಂ ನಿರುಣದ್ಧಿ, ತದಿದ ಮುಚ್ಯತೇ "ಯೋ ಬುದ್ಧೇಃ ಪರತಸ್ತು ಸಃ" ಇತಿ ;ಬುದ್ಧೇರಪಿ ಯಃ ಪರಸ್ಸಕಾಮ ಇತ್ಯರ್ಥಃ ॥೪೨॥**

ಪ್ರಾಪ್ತವಾದ ದೇಹ ಮತ್ತು ಅದರಲ್ಲಿ ಅಭಿವೃದ್ಧಿಹೊಂದಿದ ರಜಸ್ಸೇ ಮೊದಲಾದ ಗುಣದಿಂದ ಬುದ್ಧಿಯು ವಿಷಯಾಸಕ್ತವಾಗುತ್ತದೆ. ಆಗ ಕಾಮವು ಉಂಟಾಗುವ ಬಗೆ ಹೇಗೆ, ಎಂದರೆ, ಇಂದ್ರಿಯಗಳಿಗೂ ವಿಷಯಗಳಿಗೂ ಸಂಬಂಧವುಂಟಾಗಿ ಮನಸ್ಸಿನ ಮೂಲಕ ಆತ್ಮನ ಧರ್ಮಭೂತ ಜ್ಞಾನದ ಮೂಲಕ ಆತ್ಮಾವಿಗೆ ವಿಷಯ ಜ್ಞಾನವುಂಟಾಗುತ್ತದೆ. ಕರ್ಮಾನುಗುಣವಾಗಿ ಈ ಆತ್ಮನಲ್ಲಿ ಇಚ್ಛಾರೂಪ ಕಾಮಸಙ್ಕಲ್ಪವುಂಟಾಗುತ್ತದೆ, ಆಗ ಧರ್ಮಭೂತಜ್ಞಾನಕ್ಕೆ ವಿಷಯ ಪ್ರಾವಣ್ಯತೆಯುಂಟಾಗಿ, ಮನಸ್ಸು, ಇಂದ್ರಿಯಗಳ ಮೂಲಕ ವಿಷಯಾನುಭವಕ್ಕಾಗಿ ಪ್ರವರ್ತಿ ಸುತ್ತದೆ. ಅಂತಹ ಪ್ರವೃತ್ತಿಯ ಉಪಭೋಗವೂ ಕೂಡ ಇಂದ್ರಿಯಗಳು, ಮನಸ್ಸು, ಧರ್ಮಭೂತ ಜ್ಞಾನಗಳ ಮೂಲಕ ಆತ್ಮಾವಿಗೆ ಉಂಟಾಗುತ್ತದೆಂಬ ಅಂಶವೂ ಸಹ ಇಲ್ಲಿ ಬೋಧಿತವು. ಆದು ದರಿಂದ ಕರ್ಮವಾಸನಾ ಮೂಲಕ ಧರ್ಮಭೂತ ಜ್ಞಾನವು ಕಾಮಾಸಕ್ತವಾದರೆ, ಆಗ ಮನಸ್ಸೂ ಇಂದ್ರಿಯಗಳೂ ಸಹ ಅದರ ಮುಂದೆ ದುರ್ಬಲವಾದವು. ಈ ಭಾವವನ್ನು ಸಹ ದಾಸನು ಮುಂದೆ ಉದಾಹರಿಸುವ ರಾಮಾಯಣ ಶ್ಲೋಕದಿಂದಲೂ ಗ್ರಹಿಸಬಹುದು. ಇವೆಲ್ಲಕ್ಕಿಂ ತಲೂ ವಿಶೇಷ ಪ್ರಬಲವಾದುದು ಕಾಮವೇ ಎಂದು ಮುಂದಿನ ವಾಕ್ಯದಲ್ಲಿ ಹೇಳಲ್ಪಡುತ್ತದೆ. **ಸರ್ವೇಷು ಬುದ್ಧಿಪರ್ಯಂತೇಷು ಉಪರಿತೇಷ್ವಪಿ** - ಬುದ್ಧಿ ಪರ್ಯಂತವಾದ ಸಮಸ್ತಗಳು ಎಂದರೆ ಬಾಹ್ಯೇಂದ್ರಿಯಗಳೂ ಮನಸ್ಸೂ ಬುದ್ಧಿಯೂ ಸಹ ಶಾಂತತೆಯನ್ನು ಹೊಂದಿದರೂಕೂಡ, **ರಜಸ್ಸಮುದ್ಭವಃ** - ರಜೋಗುಣ ಪ್ರಾಬಲ್ಯದಿಂದಹುಟ್ಟಿದ, **ಇಚ್ಛಾಪರ್ಯಾಯಃ ಕಾಮಃ** – ಇಚ್ಛೆಯೆಂಬ ಪರ್ಯಾಯಶಬ್ದವನ್ನುಳ್ಳ ಕಾಮವು, **ವರ್ತತೇ ಚೇತ್** - ಇದ್ದುದೇಯಾದರೆ, **ಸ ಏವ** - ಆ ಇಚ್ಛೆಯೇ, **ಏತಾನೀನ್ದ್ರಿಯಾ ದೀನ್ಯಪಿ** - ಈ ಇಂದ್ರಿಯ ಮೊದಲಾದವುಗಳನ್ನು **ಸ್ವ ವಿಷಯೇ** - ಆ ಇಚ್ಛೆಗೆ ವಿಷಯವಾದ ವಸ್ತುವಿನಲ್ಲಿ, **ವರ್ತಯಿತ್ವಾ** - ಪ್ರವರ್ತಿಸುವಹಾಗೆ ಮಾಡಿ, ಆತ್ಮಜ್ಞಾನವನ್ನು, **ನಿರುಣದ್ಧಿ** - ತಡೆದು ಬಿಡುತ್ತದೆ- ಆತ್ಮಾವಿನ ಧರ್ಮಭೂತ ಜ್ಞಾ ನವು ಕರ್ಮವಾಸನೆಯಿಂದ ಕಾವಮಾನುಕಾಮುವಾದರೆ ಆತ್ಮಾವಿಗೆ ಆತ್ಮಜ್ಞಾನವನ್ನು ಹೊಂದಬೇ ಕೆಂಬ ಇಚ್ಛೆ ಎಲ್ಲಿಯದು ? ಎಂಬರ್ಥವು; ಆ ವಿಷಯೇಚ್ಛೆಯ ಮುಂದೆ ಜ್ಞಾನೇಚ್ಛೆಯು ಓಡಿ ಹೋಗುತ್ತದೆಂಬ ಭಾವವು. **"ಯೋ ಬುದ್ಧೇಃ ಪರತಸ್ತುಸಃ"** ಎಂದು **ತದಿದ ಮುಚ್ಯತೇ** - ಆ ಅಭಿಪ್ರಾಯವೇ ಇಲ್ಲಿ ಹೇಳಲ್ಪಡುತ್ತದೆ. ಈ ವಾಕ್ಯಾಭಿಪ್ರಾಯವೇನೆಂದರೆ :—**ಬುದ್ಧೇರಪಿ ಯಃ ಪರಃ** - ಬುದ್ಧಿಗಿಂತಲೂ ಯಾವುದು ಜ್ಞಾನವಿರೋಧಿಯಾಗಿರುವದರಲ್ಲಿ ಪ್ರಬಲವೋ, **ಸಃ**- ಅದೇ, **ಕಾಮಃ** ಎಂಬರ್ಥವು, ಆ ಧರ್ಮಭೂತ ಜ್ಞಾನವನ್ನು ಆವರಿಸಿರುವ ವಿಷಯ ಪ್ರಾವ ಣ್ಯತೆಯು ಎಂಬರ್ಥವು. **ಇಚ್ಛಾಪರ್ಯಾಯಃಕಾಮಃ** ಎಂಬುದರಿಂದ ಈ ರಜೋಗುಣ ಪ್ರಾಬಲ್ಯ ದಿಂದುಂಟಾಗುವ ಕಾಮವು ಪೂರ್ವಜನ್ಮ ವಿಷಯೋಪಭೋಗಗಳಲ್ಲುಂಟಾದ ಆಶೆಯ ಮೂಲಕ ಪ್ರಾಪ್ತವಾದ ವಾಸನಾರೂಪವಾದುದೆಂದು ತಿಳಿಸುತ್ತಾರೆ. ಆ ಕಾರಣದಿಂದ **ಕಾಮಃ ರಜಸ್ಸ ಮುದ್ಭವಃ** ಎಂಬ ವ್ಯಾಖ್ಯಾನವು. ಈ ರಜೋಗುಣದ ಸಂಬಂಧವು ಉಂಟಾಗುವ ಬಗೆ ಹೇಗೆ? ಎಂಬ ವಿಷಯದಲ್ಲಿ ಶ್ರೀ ನಿಗಮಾಂತ ದೇಶಿಕರವರು ಹೇಳಿರುವದೇನೆಂದರೆ ಕರ್ಮಾನುಗುಣವಾಗಿ ಈ ಆತ್ಮಾವಿಗೆ ಪ್ರಾಪ್ತವಾಗಿರುವದು ದೇಹವು ಮನಸ್ಸು ಇಂದ್ರಿಯಗಳಾದುದರಿಂದ, ಈ ಮು

ಸ್ಸಿನ ಸಂಬಂಧವು ಧರ್ಮಭೂತಜ್ಞಾನಕ್ಕಿರುವದರಿಂದಲೇ ವಿಷಯಪ್ರಾವಣ್ಯತೆಯು ಉಂಟಾಗುತ್ತದೆ ಎಂಬದಾಗಿ; ಈ ಭಾವವನ್ನೇ ರಜಸ್ಸಮುದ್ಭವಃ ಎಂಬ ವ್ಯಾಖ್ಯಾನವು ಸೂಚಿಸುತ್ತದೆ. ಆದುದರಿಂದಲೇ ಎಲ್ಲಾ ಇಂದ್ರಿಯಗಳಿಗಿಂತಲೂ ಅತಿಪ್ರಬಲವೆಂಬ ಭಾವವು. ಆಗಲಿ ಇಂದ್ರಿಯ ಮನೋ ಬುದ್ಧಿಗಳೆಲ್ಲಾ ಉಪರತಗಳಾಗಿ ಆತ್ಮಜ್ಞಾನದಲ್ಲಿ ಪ್ರವರ್ತನೆ ಇರುವಾಗ, ಕಾಮವೇನು ಮಾಡೀತು? ಅದು ಹೇಗೆ ಅತ್ಯಂತ ಪ್ರಬಲವು? ಎಂದಾಕ್ಷೇಪಿಸಿದರೆ ವಾಸನಾರೂಪವಾದ ಈ ಇಚ್ಛೆಯು ಅತಿ ಪ್ರಬಲವಾದುದರಿಂದ, ಅಲ್ಪ ಸತ್ವಗುಣದ ಮಾಹಾತ್ಮ್ಯೆಯಿಂದ ಆತ್ಮಜ್ಞಾನದಲ್ಲಿ ಪ್ರವರ್ತನೆಯಿದ್ದರೂ ಅದಕ್ಕೆ ಪ್ರತಿಬಂಧಕವನ್ನುಂಟುಮಾಡಿ ತಾನು ಮಹಾಬಲಿಷ್ಠವಾದುದರಿಂದ ಆತ್ಮಜ್ಞಾನಂ ನಿರುಣದ್ಧಿ - ಆತ್ಮಜ್ಞಾನವನ್ನು ನಿರೋಧಿಸಿ ಬಿಡುತ್ತದೆಂಬ ಭಾವವು. ಇಂತಹ ವಿಲಕ್ಷಣವಾದ ಶಕ್ತಿಯು ಕಾಮನಿಗುಂಟೆಂಬರ್ಥವು ತೋರುವದಕ್ಕಾಗಿಯೂ, ಮೇಲೆ ಹೇಳಿದ ಶಜ್ಕಾ ನಿವೃತ್ತಿಗಾಗಿಯೂ ಈ ಜ್ಞಾನವಿರೋಧಿಯಾಗಿರುವದರಲ್ಲಿ ಅತ್ಯಂತ ಪ್ರಬಲವಾದುದರಿಂದ ಮಿಕ್ಕವುಗಳನ್ನು ವ್ಯಾವರ್ತಿಸಿ ಹೇಳುವದಕ್ಕಾಗಿಯೂ, "ಯೋ ಬುದ್ಧೇಃ ಪರತಸ್ತು" ಎಂಬಲ್ಲಿ "ತು" ಶಬ್ದವು. ಮೂರು ಪಾದಗಳಲ್ಲೂ ಪರ ಶಬ್ದವಿರುವದರಿಂದ, ನಾಲ್ಕನೇ ಪಾದದ ಪರತಃ ಎಂಬ ಶಬ್ದವು ಸಾರ್ವವಿಭಕ್ತಿಕ ಪ್ರತ್ಯಯವುಳ್ಳದಾಗಿ, ಸಃ ಎಂಬ ಪದಕ್ಕನುಗುಣವಾಗಿ ಪ್ರಥಮಾವಿಭಕ್ತಿ ಎಂದೇ ತಿಳಿದು ವ್ಯಾಖ್ಯಾನಮಾಡಲ್ಪಟ್ಟಿರುತ್ತದೆ. ಮೂರು ವಾಕ್ಯದಲ್ಲೂ ಪರ ಶಬ್ದವನ್ನುಪಯೋಗಿಸಿ, ಇಲ್ಲಿ ಪರತಃ ಎಂದುಪಯೋಗಿಸಿರುವದು ಛಂದಸ್ಸಿಗಾಗಿ ಎಂದು ಭಾವಿಸತಕ್ಕದ್ದು. ಅಹಂಕಾರವು ಭೋಕ್ತಾವಾದ ಆತ್ಮನಿಗೆ ಅಧಿಷ್ಠಾನವಾದುದರಿಂದ, ಬುದ್ಧಿ ಎಂದರೆ ಅಹಂಕಾರವೆಂದರ್ಥಮಾಡಿ, ಯೋ ಬುದ್ಧೇಃ ಪರತಸ್ತು ಸಃ – ಈ ಜೀವಾತ್ಮನು ಅಹಂಕಾರಕ್ಕಿಂತ ಪ್ರಬಲನೆಂದರ್ಥವನ್ನು ಕೆಲವರು ಮಾಡಿರುತ್ತಾರೆ. ಇದು ಪ್ರಕೃತಕ್ಕೆ ಅಸಜ್ಗತವಾದುದರಿಂದ ಅನಾದರಣೀಯವು. ಆದರೆ

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿ ರ್ಬುದ್ಧೇ ರಾತ್ಮಾ ಮಹಾನ್ ಪರಃ ।
ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ ।
ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾಗತಿಃ ॥ (ಕಠ. ೧. ೩. ೧೦. ೧೧.)

ಎಂಬದಾಗಿ ಕಠವಲ್ಲಿಯಲ್ಲಿ ಹೇಳಿರುವ ನಿಯಮನ ವರ್ಗವು ಉತ್ತರೋತ್ತರ ಪ್ರಬಲವಾದುದೆಂದು ಹೇಳಿರುವಹಾಗೆ, ಈ ಶ್ಲೋಕವೂ ಅದರ ಸಾಮ್ಯವನ್ನೇ ಹೊಂದಿರುವದರಿಂದ, ಅದರಂತೆ ಅರ್ಥ ಹೇಳುವದೇ ಯುಕ್ತವೆಂದು ಭಾವಿಸಿ ಹಾಗೆ ಭಾಷ್ಯವನ್ನು ಕೆಲವರು ಬರೆದಿರುತ್ತಾರೆ. ವಾಕ್ಯಸಾಮ್ಯ ಮಾತ್ರವೇ ವಿನಾ ಅರ್ಥಸಾಮ್ಯವಿಲ್ಲವು ಆದರೂ ಕೆಲವರು ಪೂರ್ವಪಕ್ಷವನ್ನು ಮಾಡುವರು ಹೇಗೆಂದರೆ:- ಮೂಲದಲ್ಲಿ ಇಂದ್ರಿಯೇಭ್ಯಃ ಪರಂ ಮನಃ ಎಂದು ಇದೆ. ಶ್ರುತಿಯಲ್ಲಾದರೋ ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಇದೆಯೆಲ್ಲಾ; ಈ ಶ್ಲೋಕಕ್ಕೂ ಶ್ರುತಿಗೂ ಐಕಕಂಠ್ಯ ಹೇಗೆ? ಎಂದರೆ ಸೃಷ್ಟಿ ಕ್ರಮದಲ್ಲಿ ಶ್ರುತಿಗಳಲ್ಲಿ ಹೇಗೆ ಕೆಲವನ್ನು ಬಿಟ್ಟು ಕೆಲವನ್ನು ಮಾತ್ರ ಹೇಳುತ್ತವೋ, ಹಾಗೆ ಇಲ್ಲಿಯೂ ಅರ್ಥಗಳಾದ ವಿಷಯುಗಳು ಬಿಟ್ಟುಹೋದವೆಂದು ಹೇಳುವರು.

೨. ಮೂಲದಲ್ಲಿ "ಯೋ ಬುದ್ಧೇಃ ಪರತಸ್ತು ಸಃ" ಎಂದಿರುತ್ತದೆ. ಶ್ರುತಿಯಲ್ಲಾದರೋ ಬುದ್ಧಿಗಿಂತಲೂ ಆತ್ಮಾ ಮಹಾನ್ ಪರಃ ಎಂದು ಹೇಳಿ, ಅಲ್ಲಿಂದ ಅವ್ಯಕ್ತವು ಪರವೆಂದೂ ಅವ್ಯಕ್ತಕ್ಕಿಂತ-ಪರನು ಪುರುಷನು ಪರನೆಂದೂ ಹೇಳಿರುತ್ತದೆ. ಇವೆರಡಕ್ಕೂ ಐಕಕಂಠ್ಯ ಬರುವದಕ್ಕಾಗಿ ಮುಂದಿನ ಶ್ಲೋಕದಲ್ಲಿ "ಏವಂ ಬುದ್ಧೇಃ ಪರಂ ಬುದ್ಧ್ವಾ" ಎಂದಿರುವದರಿಂದ ಯೋ ಬುದ್ಧೇಃ ಪರತಃ ಎಂಬುದರಿಂದ ಬುದ್ಧಿಗಿಂತಲೂ ಪರನಾದ ಜೀವಾತ್ಮನಿಗಿಂತ ಪರನಾದವನು ಸಃ - ಆ

ಪರಮ ಪುರುಷನೆಂದೂ ಅರ್ಥ ಮಾಡುವದೇ ಸರಿಯಾದುದು ಎಂದೂ ಪೂರ್ವಪಕ್ಷವು ; ಹೀಗಿರುವಲ್ಲಿ ಬುದ್ಧಿಗಿಂತಲೂ ಪ್ರಬಲವು ಸಃ ಎಂದರೆ ಕಾಮವು ಎಂದು ಹೇಗೆ ಅರ್ಥಮಾಡುವದು ನ್ಯಾಯ ವೆಂದು ಪೂರ್ವ ಪಕ್ಷವನ್ನು ತರಬಹುದು.

೩. ಅದೂ ಅಲ್ಲದೆ ಮುಂದಿನ ಏವಂ ಬುದ್ಧೇಃ ಪರಂಬುಧ್ವಾ ಎಂದು ಹೇಳಿರುವದು ನೀನು ಬುದ್ಧಿಗಿಂತಲೂ ಪರನೆಂದು ತಿಳಿದು ಎಂದಿರುವದರಿಂದಲೂ ಸಃ ಎಂದರೆ ಜೀವಾತ್ಮ ನೆಂದಾದರೂ ಅರ್ಥ ಮಾಡಬಹುದು. ಹೀಗೆ ಅಕ್ಷೇಪಣೆಗಳನ್ನು ತರಬಹುದು. ಇದಕ್ಕೆ ಸಮಾಧಾನಗಳು ಹೇಗೆಂದರೆ:—

೧. ಹಿಂದೆ ಕಾಮವೇ ಪ್ರಬಲ ಶತ್ರುವೆಂದು ಹೇಳಿ, ಅದಕ್ಕೆ ಮೂರು ಸಹಾಯಕವುದು ವೆಂದು ಹೇಳಿ, ಕ್ರಮವಾಗಿ ಇಂದ್ರಿಯಗಳೂ, ಮನಸ್ಸೂ, ಬುದ್ಧಿಯೂ ಹೇಳಲ್ಪಟ್ಟವು. ಈ ಶ್ಲೋಕದಲ್ಲೂ ಕ್ರಮವಾಗಿ ಅವು ನಾಲ್ಕೇ ಹೇಳಲ್ಪಟ್ಟವೆ. ಹೇಳದೇ ಇರುವ, ಅರ್ಥಗಳು ಎಂದರೆ ವಿಷಯಗಳು, ಜೀವಾತ್ಮಾ, ಅವ್ಯಕ್ತ, ಪರಮ ಪುರುಷವೆಂಬೀ ಶಬ್ದಗಳೆಲ್ಲವನ್ನೂ ಶ್ರುತಿಬಲದ ಮೇಲೆ ಏಕೆ ಊಹಿಸಬೇಕು? ಹಾಗೆ ಊಹಿಸಿ ಅರ್ಥ ಹೇಳಿದರೂ ಪ್ರಕರಣಕ್ಕೆ ಸರಿಹೋಗುವದಿ ಲ್ಲವು. ಪ್ರಕರಣವಾದರೋ ಇವುಗಳಲ್ಲಿ ತರತಮ ಭಾವದಲ್ಲಿ ಬಲಿಷ್ಠವು ಯಾವುವು ಎಂಬುದು; ಪೂರ್ವ ಪೂರ್ವಕ್ಕಿಂತ ಉತ್ತರೋತ್ತರಗಳು ಬಲಿಷ್ಠವೆಂಬುದೇ ಮುಖ್ಯವಾದ ಉತ್ತರವು. ಅದೇ ಈ ಶ್ಲೋಕದಲ್ಲಿ ಹೇಳಿರುವದು. ಯೋ ಬುದ್ಧೇಃ ಪರತಸ್ತು ಸಃ ಎಂಬಲ್ಲಿ ಪರತಃ ಎಂಬುವ ಶಬ್ದವಿರುವ ಶ್ರುತಿಯೇ ಇಲ್ಲಿ ಹೇಳಲ್ಪಟ್ಟಿತೆಂಬ ಭ್ರಮೆಗೆ ಕಾರಣವಾಗಿರುತ್ತದೆ. ಪರತಃ ಎಂಬುದು ಪಂಚಮೀ ವಿಭಕ್ತ್ಯರ್ಥದಲ್ಲಿ ಪ್ರಯೋಗಿಸಿಲ್ಲವು; ತಸಿಲ್ ಅಲ್ಲವು,ಸಾರ್ವವಿಭಕ್ತಿಕೆ ತಸಿಃ ಯಾದುದರಿಂದ ಪರತಃ ಎಂಬುದು ಪ್ರಥಮಾಂತವಾದ ಪರಃ ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿ ರುತ್ತದೆ. ಯೋ ಬುದ್ಧೇಃಪರಃ ಬುದ್ಧಿಗಿಂತ ಪ್ರಬಲವಾದುದು ಯಾವುದೋ ಅದೇ ಸಃ ಕಾಮವು ಎಂಬರ್ಥವು; ಸಃ ಎಂಬುದಕ್ಕೆ ಹಿಂದೆ ಹೇಳಲ್ಪಟ್ಟ ಕಾಮನೆಂದು ಅರ್ಥಮಾಡದೆ, ಶ್ರುತಿಯಲ್ಲೂ ಹಾಗೆ ಸಃ ಎಂದು ನಿರ್ದೇಶಿಸದೇ ಇರುವಾಗ, ಪರಮ ಪುರುಷನೆಂದು ಅರ್ಥಮಾಡುವದು ತಾನೇ ಹೇಗೆ? ಅಥವಾ ಜೀವಾತ್ಮನೆಂದು ಹೇಳಲೂ ಸಾಧ್ಯವಿಲ್ಲವು.

೨. ಜೀವಾತ್ಮ ಪರಮಾತ್ಮಗಳ ವಿಷಯವು ಪ್ರಕರಣಕ್ಕೆ ಬೇಕಿಲ್ಲವು. ಮುಂದಿನ ಶ್ಲೋ ಕದ ಏವಂ ಬುದ್ಧೇಃ ಪರಂ ಬುಧ್ವಾ ಎಂಬುದರಿಂದ ಜೀವಾತ್ಮನಾಗಲಿ ಪರಮಾತ್ಮನಾಗಲಿ ಹೇಳ ಲ್ಪಡಲಿಲ್ಲವು ; ಏಕೆಂದರೆ ಆ ವಾಕ್ಯಾಭಿಪ್ರಾಯವು ಈ ಶ್ಲೋಕದಲ್ಲಿ ಹೇಳಿದುದರ ಅನುವಾದವು. ಮುಂದಿನ ಶ್ಲೋಕದ ಏವಂ ಎಂದಿರುವದರಿಂದ ಅನುವಾದವೆಂಬುದು ಸಿದ್ಧವು. ಹೀಗೆ ಅರ್ಥಮಾ ಡುವದೇ ಪ್ರಕರಣಾನುಗುಣವಾಗಿ ಸಮಂಜಸವೆಂದರೆ, ಈ ಶ್ಲೋಕವು ಶ್ರುತಿಯ ಶ್ಲೋಕದ ಹಾಗೆ ಯೇ ಇರಲು ಕಾರಣವೇನು ? ಎಂದು ಪ್ರಶ್ನಿಸಬಹುದು. ಸಮಸ್ತ ಶ್ರುತಿಗಳು ಮಹರ್ಷಿಗೆ ಕರತ ಲಾಮಲಕವಾದುದರಿಂದ, ಶ್ರುತಿಯಲ್ಲಿ ಹೇಳಿರುವ ಇಂದ್ರಿಯ ಮನೋಬುದ್ಧಿಗಳನ್ನು ಕುರಿತು ಹೇಳಬೇಕಾಗಿರುವದರಿಂದ ಆ ಶ್ರುತಿಯು ಸ್ಮೃತಿ ಪಥಕ್ಕೆ ಬಂದುದರಿಂದ ಅದು ಹೇಳಿರುವ ಹಾಗೆಯೇ ಇಲ್ಲಿನ ಪ್ರಕರಣಕ್ಕೂ ಅನುಕೂಲಿಸುತ್ತದೆ ಎಂದು ಕವಿ ಚಮತ್ಕಾರವನ್ನು ಪ್ರದರ್ಶಿ ಸಿರುತ್ತಾರೆಂದು ಭಾವಿಸತಕ್ಕದ್ದು. ಅದೂ ಅಲ್ಲದೆ ಸಃ ಎಂಬ ಶಬ್ದವು ಪೂರ್ವಪರಾಮರ್ಶಿತ್ವ ವನ್ನು ಅಪೇಕ್ಷಿಸುತ್ತದೆ. ಪ್ರಕರಣಾನುಗುಣವಾಗಿ ಹಿಂದೆ ಹೇಳುತ್ತಾ ಬಂದಿರುವದು ಕಾಮ ವಿಷಯವಾದುದರಿಂದಲೂ ಸಃ ಎಂದರೆ ಕಾಮವು. ಇಷ್ಟೆಲ್ಲಾ ವಾದವು ಬೇಕಾಗಿಯೇ ಇಲ್ಲವು : ಮುಂದಿನ ಶ್ಲೋಕಾರ್ಥವನ್ನು ಮನಸ್ಸಿಗೆ ತಂದುಕೊಂಡರೆ, ಬುದ್ಧೇಃ ಪರತಸ್ತು ಸಃ ಎಂದು ತಚ್ಛ ಬ್ದದಿಂದ ಹೇಳಲ್ಪಟ್ಟದುದು ಏವಂಬುದ್ಧೇಃ ಪರಂಬುಧ್ವಾ ಜಹಿಶತ್ರುಂ ಎಂದಿರುವದರಿಂದ

ಬುದ್ಧಿಗಿಂತಲೂ ಪರವು ಪ್ರಬಲವಾದುದು ಒಂದು ಶತ್ರುವು, ಎಂದಾಯಿತು. ಅಂತಹ ಪ್ರಬಲ ಶತ್ರುವು ಯಾರು ಎಂದರೆ ಕಾಮವೆಂಬುದು ಸುಸ್ಪಷ್ಟವು. ಶ್ರೀ ವೇದವ್ಯಾಸರು ಗೀತೆಯಲ್ಲಿ ಅನೇಕ ಕಡೆಗಳಲ್ಲಿ ಗೂಢವಾಗಿ ಹೇಳಿದುದನ್ನು ಎಲ್ಲಿ ಸರಿಯಾಗಿ ತಿಳಿದುಕೊಳ್ಳುವದಿಲ್ಲವೋ ಎಂಬ ಶಙ್ಕಾದಿಂದ ಮುಂದಿನ ಶ್ಲೋಕದಲ್ಲಿ ಅದನ್ನು ವ್ಯಕ್ತಪಡಿಸುತ್ತಾರೆ. ಪ್ರಾಪ್ತ ಸ್ಥಳಗಳಲ್ಲಿ ಇದನ್ನು ಸೂಚಿಸುವೆವು. ಆದುದರಿಂದ ಇನೆಯ ಆಕ್ಷೇಪದಲ್ಲಿ ಜೀವನೆಂದು ಅರ್ಥ ಹೇಳಿದುದೂ ಕೂಡುವದಿಲ್ಲವು, ಏಕೆಂದರೆ ತಾನೇ ಶತ್ರುವು ಎಂದಾಗುವದರಿಂದಲೂ, ಈ ಜೀವಾತ್ಮನ ಶತ್ರುವು ಜೀವಾತ್ಮನಿಗಿಂತ ಭಿನ್ನವಾಗಿರಬೇಕಾದುದರಿಂದ ಜೀವಾತ್ಮನಲ್ಲವೆಂಬುದು ವ್ಯಕ್ತಪಡುತ್ತದೆ. ಈ ದೂಷಣೆಗಳಿಂದಲೇ ಪರಮಾತ್ಮನೆಂಬರ್ಥವು ಕೂಡುವದಿಲ್ಲವು. ಆದುದರಿಂದ ಸಃ ಎಂದರೆ ಪ್ರಕರಣಾನುಗುಣವಾಗಿ ಕಾಮವೆಂದೇ ಹೇಳತಕ್ಕದ್ದು. ಬಾಹ್ಯೇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸಿದರೆ ಆತ್ಮಜ್ಞಾನವುಂಟಾಗುವದಿಲ್ಲವು. ಆ ಕಾರಣದಿಂದಲೇ 'ಇಂದ್ರಿಯಗಳು ಪ್ರಬಲಗಳೆಂದು ಹೇಳಿದರು. ಒಂದುವೇಳೆ ಬಾಹ್ಯೇಂದ್ರಿಯಗಳನ್ನು ವಿಷಯಪ್ರವಣಗಳಾಗದ ಹಾಗೆ ತಡೆದರೂ, ಮನಸ್ಸು ವಿಷಯಗಳನ್ನೇ ಚಿಂತಿಸುತ್ತಾ ಕೊನೆಗೆ ಇಂದ್ರಿಯಗಳನ್ನು ಪ್ರವರ್ತಿಸುವ ಹಾಗೆ ಮಾಡುವದರಿಂದ, ಮನಸ್ಸು ಬಾಹ್ಯೇಂದ್ರಿಯಗಳಿಗಿಂತ ಬಲಿಷ್ಠವು. ಮನಸ್ಸನ್ನು ವಿಷಯಗಳಲ್ಲಿ ಪ್ರವರ್ತಿಸದಹಾಗೆ ನಿರೋಧಿಸಿದರೂ, ಬುದ್ಧಿ ಮೂಲಕ ಪ್ರೇರಣೆಯುಂಟಾಗಬಹುದು. ಆದುದರಿಂದ ಬುದ್ಧಿಯು ಮನಸ್ಸಿಗಿಂತ ಪ್ರಬಲತರವು. ಈ ಬುದ್ಧಿಗಿಂತಲೂ ವಾಸನಾರೂಪವಾಗಿ ರಜೋಗುಣದಿಂದುಂಟಾಗುವ ಇಚ್ಛೆಯೆಂದು ಹೇಳಿಸಿಕೊಳ್ಳುವ ಕಾಮವು, "ಜ್ಞಾನವರ್ಮ" ಆಗಿ, ಶಾಸ್ತ್ರಜ್ಞಾನದಿಂದ ಬುದ್ಧಿಯು ವಶದಲ್ಲಿದ್ದರೂ ಅವನ್ನು ತಿರೋಹಿಸಿ ಮೋಹಜ್ಞಾನವುಂಟಾಗುವಹಾಗೆ ಮಾಡಿ ಕಾಮವು ಬುದ್ಧಿ ಮನಸ್ಸು ಇಂದ್ರಿಯಗಳ ಮೂಲಕ ಪ್ರವರ್ತಿಸುವಹಾಗೆ ಮಾಡುತ್ತದೆ. ಆದುದರಿಂದ ಕಾಮವು ಅತ್ಯಂತ ಬಲಿಷ್ಠವು. ಈ ಸಂದರ್ಭದಲ್ಲಿ ಸೌಭರಿ, ಯಯಾತಿ, ಜಡಭರತರುಗಳ ಕಾಮಪ್ರವೃತ್ತಿ ವೃತ್ತಾನ್ತಗಳೂ, ಹಾಗೆಯೇ ವಿಶ್ವಾಮಿತ್ರವೃತ್ತಾಂತವೂ ಕೂಡ ನಿದರ್ಶನಗಳು. ಸೌಭರಿಯು ನೀರಿನಲ್ಲಿ ಉಪಾಸನೆಯನ್ನು ಮಾಡುವಾಗ ಮತ್ಸ್ಯದ ಸಂಸಾರದ ಗತಿ ಮೊದಲಾದವುಗಳಿಂದ ಮೋಹಿತರಾಗಿ, ಕಾಮಪರವಶರಾಗಿ ಮಾಂಧಾತರಾಯನ ಐವತ್ತು ಹೆಣ್ಣುಮಕ್ಕಳನ್ನೂ ಮದುವೆ ಮಾಡಿಕೊಂಡು ಸಂಸಾರ ಬಂಧಕ್ಕೆ ಒಳಗಾದರು. ಜಡಭರತರೂ ಒಂದು ಮೃಗಪೋತದಲ್ಲಿಟ್ಟ ಅನುರಾಗದಿಂದ ಮೃಗಜನ್ಮವನ್ನು ಹೊಂದಿದರು ; ವಿಶ್ವಾಮಿತ್ರರು ಜಪತಪಗಳನ್ನು ತ್ಯಜಿಸಿ ಮೇನಕೆಯೊಂದಿಗೆ ಭೋಗಿಸಿ ಶಕುಂತಳೆಗೆ ತಂದೆಯಾದರು. ಯಯಾತಿಯು ಮಕ್ಕಳನ್ನೆಲ್ಲಾ ನಿಮ್ಮ ಯವ್ವನವನ್ನು ಕೊಡಿ ಎಂದು ನಿರ್ಬಂಧಿಸಿ "ಕಾಮಾತುರಾಣಾಂ ನ ಸುಖಂ ನ ಲಜ್ಜಾ" ಎಂಬ ಗಾಥಾ ಪ್ರಕಾರವಾಗಿ ನಿರ್ಲಜ್ಜನಾಗಿ ಬೇಡುವಹಾಗೆ ಈ ಕಾಮವು ಮಾಡಿತು. ಹೀಗೆ ಇಂದ್ರಿಯ ಮನೋಬುದ್ಧಿಗಳನ್ನು ವಶದಲ್ಲಿಟ್ಟಿರುವ ಮಹರ್ಷಿಗಳೂ ಕೂಡ ಕಾಮ ಪರವಶರಾಗಿರುತ್ತಾರೆ. ಅಂತಹ ಮಹನೀಯರಿಗೂಕೂಡ ಕಾಮ ಪ್ರವೃತ್ತಿ ಹೇಗೆ ಎಂದರೆ, ಅದಕ್ಕಾಗಿ ರಜೋಗುಣ ಸಮುದ್ಭವಃ ಎಂದು ಹೇಳಿದರು. ರಜೋಗುಣಮೂಲಕ ಉಂಟಾದ ವಾಸನಾರೂಪ ಇಚ್ಛೆಯಿಂದುಂಟಾಗುತ್ತದೆಂದು ತಿಳಿಸಿರುತ್ತಾರೆ. ಆದುದರಿಂದ ಕಾಮನೇ ಅತ್ಯಂತ ಪ್ರಬಲವು. ಈ ಸಂದರ್ಭದಲ್ಲಿ ತಾರೆಯ ವಾಕ್ಯವಾದ (೧) "ಮಹರ್ಷಯೋ ಧರ್ಮತಪೋಭಿಕಾಮಾಃ ಕಾಮಾನುಕಾಮಾಃ ಪ್ರತಿಬದ್ಧ ಮೋಹಾಃ। ಅಯಂ ಪ್ರಕೃತ್ಯಾ ಚಪಲಃ ಕಪಿಸ್ತು ಕಥಂ ನ ಸಜ್ಜೇತ ಸುಖೇಷು ರಾಜಾ ॥ ಎಂಬುದು ಅನುಸಂಧೇಯವು. ಸುಗ್ರೀವನು ಸೀತಾನ್ವೇಷಣಕ್ಕೆ ಸಹಾಯಮಾಡುತ್ತೇನೆಂದು ಪ್ರತಿಜ್ಞೆಯನ್ನು

(೧) ರಾಮಾ. ಕಿಷ್ಕಿಂಧಾ.

ಮಾಡಿ, ನಡೆಸಿ ಕೊಡದೇ ಇದ್ದುದರಿಂದ ಕುಪಿತನಾದ ಲಕ್ಷ್ಮಣನನ್ನು ಕುರಿತು ಹೇಳುವ ತಾರೆಯ ವಾಕ್ಯವು; ಏನೆಂದರೆ ಧರ್ಮ ತಪೋಭಿಕಾಮರಾಗಿರುವ ಮಹರ್ಷಿಗಳೂ ಕೂಡ ಐಹಿಕ ವಿಷಯೋಪ ಭೋಗ ಕಾಮಯುಕ್ತರಾಗಿ ಮೋಹಬುದ್ಧಿಯುಳ್ಳವರಾಗಿರುವದರಿಂದ ಈ ಸುಗ್ರೀವನ ಪಾಡೇನು, ಈತನು ಸ್ವಭಾವತಃ ಚಪಲನು, ಮತ್ತು ಕಪಿತ್ವಬೇರೇ ಇದೆ, ಇದೂ ಅಲ್ಲದೆ ಇದುವರೆಗೂ ತಪ್ಪಿ ಹೋಗಿದ್ದ ಭಾರ್ಯಾ ರಾಜ್ಯ ಇವುಗಳೂ ದೊರೆತು, ಸುಖದಲ್ಲಿ ಸಜ್ಜಬೇಡವೆಂದರೆ ಹೇಗೆ ಸಾಧ್ಯವು? ಆದುದರಿಂದ, ಮನ್ನಿಸು ಎಂಬುದು ಮೇಲೆ ಮೇಲೆ ತೋರುವ ಅರ್ಥವು. ಇವರಲ್ಲಿ ತೋರಿಬರುವ ಧ್ವನ್ಯರ್ಥವೀಗ ಈಗ ಪ್ರಕೃತಕ್ಕೆ ಬೇಕಾದುದು; ಪೂರ್ವಾರ್ಧದಲ್ಲಿ ಕಾಮಾನುಕಾಮಾಃ ಪ್ರತಿಬದ್ಧ ಮೋಹಾಃ ಎಂಬುದರಿಂದ ಕಾಮವು ತುಂಬಾ ಪ್ರಬಲವೆಂದು ಹೇಳಿ, ಉತ್ತರಾರ್ಧದಲ್ಲಿ ಅದಕ್ಕೆ ಸಹಕಾರಿಯಾದದು ಮನಸ್ಸೂ ಇಂದ್ರಿಯಗಳಿಂದ ಸೇರಿದ ಶರೀರದಿಂದ ಪ್ರಾಪ್ತವಾದ ಕರ್ಮ ವಾಸನಾ ಚಾಪಲ್ಯವು ಎಂಬ ಭಾವವು ಉತ್ತರಾರ್ಧದಿಂದ ವ್ಯಕ್ತವು ; ಹೇಗೆಂದರೆ ಅಯಂ - ಈ ಜೀವಾತ್ಮನು, ತಾರೆಯು ತನ್ನ ಹೃದಯವನ್ನು ಮುಟ್ಟಿ ಹೇಳುವ ಸಂದರ್ಭವು ; ಪ್ರಕೃತ್ಯಾ- ಪ್ರಕೃತಿಯಿಂದ, ಎಂದರೆ ಶರೀರದಿಂದ, ಚಪಲಃ - ಕರ್ಮವಾಸನೆಯಿಂದ ಚಪಲನು, ಅದೂ ಅಲ್ಲದೆ ಕಪಿಃ, ಕಂಪಿಬತೀತಿ ಕಪಿಃ - ಕರ್ಮಾನುಸಾರವಾಗಿ ಸುಖವನ್ನು ಅನುಭವಿಸುವನು ಭೋಕ್ತಾ, ಅದೂ ಅಲ್ಲದೆ, ರಾಜಾ ಈ ಕ್ಷೇತ್ರಕ್ಕೆ ಆತ್ಮನು ರಾಜನು, ಮನಸ್ಸು ಪಟ್ಟಮಹಿಷಿಯು, ಅವಳೊಂದಿಗೆ, ಮತ್ತೂ ದಶೇಂದ್ರಿಯಗಳು ಇನ್ನೂ ಹತ್ತು ಹೆಂಡರು, ಇವರುಗಳೊಂದಿಗೆ ಕಥಂ ನ ಸಜ್ಜೇತ-ಸಜ್ಜವಿಟ್ಟು ರಮಿಸಬೇಡವೆಂದರೆ ಹೇಗೆಸಾಧ್ಯವು ಎಂಬ ಧನ್ವರ್ಥವು ತೋರಿಬರುತ್ತದೆ. ಇದರಿಂದ ಕಾಮವು ತುಂಬಾ ಪ್ರಬಲವಾದುದು; ವಿಶ್ವಾಮಿತ್ರಾದಿ ಮಹರ್ಷಿಗಳೂ ಕೂಡ ಅದನ್ನು ನಿಗ್ರಹಿಸಲು ಅಶಕ್ತರೆಂಬುದು ವ್ಯಕ್ತವು ; ಹೀಗೆ ಮೂಲದ ಸಃ ಎಂದರೆ ಕಾಮವೆಂದು ಅರ್ಥ ಮಾಡಿದರೇನೇ ಹಿಂದೆ ಪ್ರತಿಜ್ಞೆಮಾಡಲ್ಪಟ್ಟ "ಕಾಮ ಏಷಃ" ಎಂಬ ಅಭಿಪ್ರಾಯವೇ, ನಿಗಮನದಲ್ಲೂ ತುಂಬಾ ಬಲಿಷ್ಠವಾದುದು ಕಾಮವು, ಎಂದಾಗಿ, ಹೀಗೆ ಅರ್ಥಮಾಡುವದು ಸ್ವಾರ ಸ್ಯವೂ ಮತ್ತು ಸಮಂಜಸವೂ ಆಗುತ್ತದೆ.

**ಮೂಲಕ್ಕೆ ಅರ್ಥವು**:—ಹೀಗೆ ನಾಲ್ಕರಲ್ಲೂ ಅತ್ಯಂತ ಬಲಿಷ್ಠವಾದ ಕಾಮವನ್ನು, ನಿಗ್ರಹಿ ಸುವದು ಅತಿಪ್ರಯಾಸವಾದರೂ, ಸರ್ವಪ್ರಯತ್ನದಿಂದಲೂ ಅದನ್ನು ನಿರ್ಮೂಲಮಾಡು ಎಂದು ಉಪದೇಶಿಸಿ, ಅರ್ಜುನನ ಪ್ರಶ್ನೆಯಾದ "ಅಥಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ" ಎಂಬುದಕ್ಕೆ ಸರ್ವಸಮಂಜಸವಾದ ಉತ್ತರವನ್ನು ಹೇಳಿ ನಿಗಮನಮಾಡುತ್ತಾರೆ. ಅರ್ಜುನನ ಪ್ರಶ್ನೆಯಲ್ಲಿ ಕೇನ ಪ್ರಯುಕ್ತೋಽಯಂ ಎಂಬುದರಿಂದ ಯಾವ ದುಷ್ಟ ಚೇತನನಿಂದ ಪ್ರೇರಿಸಲ್ಪಟ್ಟವನಾಗಿ, ಹೀಗೆ ಜ್ಞಾನವಾನ್ ಆಗಿರುವವನೂ ಕೂಡ, ಪಾಪಂ ಚರತಿ- ಪಾಪ ಕರ್ಮಗಳನ್ನು ಆಚರಿಸುತ್ತಾನೆ ಎಂಬ ಪ್ರಶ್ನೆಗೆ, ಕವಿಚಮತ್ಕಾರದಿಂದ ಅಂತಹ ಜ್ಞಾನ ವಾನ್ ಆದವನನ್ನೂ ಕೂಡ ಇಂತಹ ದುರ್ವೃತ್ತಗಳಲ್ಲಿ ಪ್ರವರ್ತಿಸುವಹಾಗೆ ಮಾಡುವ ಅಪಿಚ ಪಿಶಾಚಗ್ರಸ್ತಃ ಎಂಬಲ್ಲಿ ಹೇಳಿರುವ ತುಂಬಾ ಬಲಿಷ್ಠವಾದ ಪಿಶಾಚಿಯು ಕಾಮವೇ ಎಂದು ಹಿಂದಿನ ಶ್ಲೋಕದಲ್ಲಿ ಸಃ ಎಂಬ ಪದದಿಂದ ಕವಿತಾರಸದಿಂದ ತೋರಿಸಿ, ಪುನಃ ಅದನ್ನೇ ಶತ್ರುಂ ಎಂಬ ಪದದಿಂದ ಆ ಶತ್ರುವಾದ ಪಿಶಾಚಿಯನ್ನು ಜಯಿಸು ಎಂದು ಬೋಧಿಸುತ್ತಾರೆ. ಈ ಮುಮುಕ್ಷುವಿಗೆ ಇದು ಪರಮ ಹಿತೋಪದೇಶವು ; ವೈರಾಗ್ಯವಿಲ್ಲ ದವನಿಗೆ ಮೋಕ್ಷವಿಲ್ಲವು. ಆದುದರಿಂದಲೇ ಶ್ರೀ ಯಾಮುನೇಯರು ಸ್ವಧರ್ಮಜ್ಞಾನ ವೈರಾಗ್ಯ ಸಾಧ್ಯ ಭಕ್ತ್ಯೈಕ ಗೋಚರಃ ಎಂಬಲ್ಲಿ ವೈರಾಗ್ಯವೂ ಆವಶ್ಯಕವೆಂದು ಹೇಳಿರು ತ್ತಾರೆ. ಎರಡು ವಿಧ ಉಪಾಯಗಳಾದ ಭಕ್ತಿ ಪ್ರಪತ್ತಿಗಳಿಗೂ ಈ ವೈರಾಗ್ಯವು ಆವಶ್ಯಕವು.

ಮೂ. ಏವಂ ಬುದ್ಧೇಃ ಪರಂ ಬುಧ್ವಾ ಸಂಸ್ತಭ್ಯಾತ್ಮಾನ ಮಾತ್ಮನಾ ।
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ ॥ ೪೩.
ಇತಿ ಶ್ರೀ ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಕರ್ಮಯೋಗೋನಾಮ ತೃತೀಯೋಽಧ್ಯಾಯಃ ॥

ಶ್ರೀ ವಿಭೀಷಣನು ಮಹಾ ಪ್ರಾಜ್ಞನಾಗಿ ಹೇಳುವದೇನೆಂದರೆ—(೧) "ಪರಿತ್ಯಕ್ತಾ ಮಯಾ ಲಂಕಾಮಿತ್ರಾಣಿ ಚ ಧನಾನಿ ವೈ । ಭವದ್ಗತಂ ಮೇ ರಾಜ್ಯಂಚ ಜೀವಿತಂಚ ಸುಖಾನಿಚ" ಇಲ್ಲಿ ರಾಜ್ಯಂ ಎಂದರೆ ಐಹಿಕ ರಾಜ್ಯವಲ್ಲವು, ಎಲ್ಲವನ್ನೂ ಬಿಟ್ಟು ಬಂದವನಿಗೆ ಈ ರಾಜ್ಯವೇತಕ್ಕೆ? ಕಿಂಕರತ್ವಾಧಿರಾಜ್ಯಂ ಎಂದು ಮಹಾನುಭಾವರು ಉಪದೇಶಿಸಿರುವಹಾಗೆ ಪರಮಾತ್ಮನಿಗೆ ದಿವ್ಯ ವೈಕುಂಠವಲ್ಲಿ ಮಾಡುವ ಕೈಙ್ಕರ್ಯವೇ ರಾಜ್ಯವು ; ಜೀವಿತಂ ಯಾವುದು? ಎಂದರೆ, ಅಮೃತತ್ವ ಅಭಯತ್ವಗಳಿಗೆ ಆಕರವಾದ ಪದವಿಯೇ ಜೀವಿತವು ; ಸುಖಾನಿ ಯಾವುವು ಎಂದರೆ? ಪರಿಪೂರ್ಣ ಬ್ರಹ್ಮಾನುಭವವೇ; ಆದುದರಿಂದ ಈ ಉಪಾಯಗಳಿಗೆ ವೈರಾಗ್ಯವೇ ಆವಶ್ಯಕವಾದುದರಿಂದ "ಪರಿತ್ಯಕ್ತಾ" ನಿಶ್ಶೇಷವಾಗಿ ಬಿಡಲ್ಪಟ್ಟವು, ಎಂಬ ಪ್ರಾಜ್ಞಶಿಖಾಮಣಿಯ ವಾಕ್ಯವು.

ಓ ಮಹಾಬಾಹೋ - ಓ ಬಾಹ್ಯರಾದ ಶತ್ರುಗಳನ್ನೆಲ್ಲಾ ನಿರ್ಮೂಲಮಾಡುವ ಪರಾಕ್ರಮವುಳ್ಳ ಅರ್ಜುನನೇ, ಏವಂ - ಹಿಂದೆ ನಾವು ಉಪದೇಶಿಸಿದ ರೀತಿಯಲ್ಲಿ ಬುದ್ಧೇಃ ಪರಂ-ಬುದ್ಧಿಗಿಂತಲೂ ಮಹಾ ಬಲಿಷ್ಠವಾದ ಈ ಕಾಮವನ್ನು, ಬುಧ್ವಾ - ತಿಳಿದು, ಏನೆಂದು ತಿಳಿದು ಎಂದರೆ ನಾವು ಹಿಂದೆ"ಕಾಮ ಏಷ ಕ್ರೋಧ ಏಷಃ"ಎಂದಾರಂಭಿಸಿ ಹೇಳಿದ ರೀತಿಯಲ್ಲಿ ಜ್ಞಾನಯೋಗಕ್ಕೆ ಪ್ರಬಲವೈರಿಯೆಂದು ತಿಳಿದು, ಆತ್ಮನಾ - ವಿವೇಕೋತ್ಪಜ್ಞಾನರೂಪ ಬುದ್ಧಿಯಿಂದ, ಆತ್ಮಾನಂ-ಮನಸ್ಸನ್ನು, ಸಂಸ್ತಭ್ಯ - ಚನ್ನಾಗಿ ನಿರೋಧಿಸಿ, ಅದೇನು ಅಷ್ಟು ಶ್ರಮಪಟ್ಟಾದರೂ ನಿಗ್ರಹಿಸತಕ್ಕದ್ದು, ಎಂದರೆ, ದುರಾಸದಂ - ನಿಗ್ರಹಿಸಲಸಾಧ್ಯವಾದ, ಕಾಮ ರೂಪಂ ಶತ್ರುಂ - ಕಾಮರೂಪವಾದ ಶತ್ರುವನ್ನು, ಜಹಿ - ಹಿಂಸಿಸು ಎಂದರೆ ನಾಶಮಾಡು ಎಂಬ ಭಾವವು. ಈ ಕಾಮವನ್ನು ಜಯಿಸುವದು ಸುಲಭವಲ್ಲವು. ಶಾಸ್ತ್ರಜ್ಞಾನವುಳ್ಳವರಾಗಿ ವಿಪಶ್ಚಿತ್ತುಗಳೆಂದೂ ಮಹರ್ಷಿಗಳೆಂದೂ ಹೇಳಿಸಿಕೊಳ್ಳುವವರೂ ಕೂಡ ಕಾಮಪರವಶರಾಗಿರುತ್ತಾರೆ. ನಾನಾರೂಪ ಇಚ್ಛೆಗಳಿಗೆ ವಶರಾಗಿ ಪುನಃ ಪುನಃ ಸಂಸಾರದಲ್ಲೇ ತೊಳಲುತ್ತಿದ್ದಾರೆ. ಆದುದರಿಂದ ಶ್ರಮಪಟ್ಟು ಐಹಿಕ ಭೋಗಗಳಲ್ಲಿ ಮನಸ್ಸು ಪ್ರವರ್ತಿಸದಹಾಗೆ ಮಾಡಿಕೊಳ್ಳಬೇಕು. ಹೆಂಗಸಿನಲ್ಲೂ ಧನದಲ್ಲೂ ಇರುವ ಆಶೆಯನ್ನು ತೊರೆಯುವದು ಬಹು ಕಷ್ಟವು. ಮಹಾ ಜ್ಞಾನಿಗೂ ಕೂಡ ತುಂಬಾ ಕಷ್ಟವು. ಆದುದರಿಂದ ಹಾಗೆ ಅವುಗಳಲ್ಲಿ ಆಶೆ ಹುಟ್ಟಿದರೆ ಈ ಪ್ರವೃತ್ತಿಯು ಸರಿಯೋ ಎಂದು ತನ್ನ ವಿವೇಕ ಜ್ಞಾನವನ್ನು ಪ್ರಶ್ನಿಸಿ, ಸರಿಯಲ್ಲವೆಂದು ಉತ್ತರ ದೊರೆತರೆ, ಅಂತಹ ಪ್ರವೃತ್ತಿಯನ್ನು ತ್ಯಜಿಸುವ ಮನಸ್ಥೈರ್ಯವಿರಬೇಕೆಂಬ ತಾತ್ಪರ್ಯವು. ಕೆಲವರು ಬುದ್ಧೇಃ ಪರಂ ಬುಧ್ವಾ ಎಂಬುದಕ್ಕೆ ಬುದ್ಧಿಗಿಂತಲೂ ಕಾಮವು ಪ್ರಬಲವೆಂದು ತಿಳಿದು ಎಂದು ಇಷ್ಟುಮಾತ್ರವೇ ಅರ್ಥ ಮಾಡಿರುತ್ತಾರೆ. ಹಾಗೆ ಮಾಡಿದರೆ ಪುನರುಕ್ತಿ ದೋಷವು ಪ್ರಾಪ್ತವಾಗುತ್ತದೆ. ಮುಖ್ಯವಾಗಿ ಈ ಅಧ್ಯಾಯದಲ್ಲಿ ತಿಳಿಯತಕ್ಕದ್ದೇನೆಂದರೆ, ಕರ್ಮ ಯೋಗವನ್ನು ತ್ಯಜಿಸಿ ಜ್ಞಾನಯೋಗಾರಂಭದಲ್ಲಿ ಪ್ರವರ್ತಿಸಿದರೆ ಕಾಮವು ಪ್ರಬಲ ಶತ್ರುವಾಗುತ್ತದೆ ; ಈ ವಿಷಯವನ್ನು ತಿಳಿದು ಎಂಬರ್ಥವು ; ಅರ್ಜುನನಾದ ನೀನು ನನ್ನ ಉಪದೇಶವನ್ನು ಗ್ರಹಿಸಿ ಕರ್ಮಯೋಗವನ್ನವಲಂಬಿಸಿ ಅನಂತರ ಜ್ಞಾನಯೋಗದಲ್ಲಿ ಪ್ರವರ್ತಿಸಬಹುದಾದುದರಿಂದ ಈ ಕಾಮವನ್ನು

(೧) ರಾ. ಯುದ್ಧ. ೧೮.

**ಭಾ. ಏವಂ ಬುದ್ಧೇರಪಿ ಪರಂಕಾಮಂ ಜ್ಞಾನಯೋಗ ವಿರೋಧಿನಂ ವೈರಿಣಂ ಬುಧ್ವಾ**

ಜಯಿಸುವವದೇನೋ ಆಗ ಕಷ್ಟವಾಗಲಾರದು. ಆದುದರಿಂದ ಮನಸ್ಸನ್ನು ಹಿಡಿದು ಸ್ಥೈರ್ಯದಿಂದ ಪ್ರಬಲಶತ್ರುವಾದ ಕಾಮವನ್ನು ನಾಶ ಮಾಡು ಎಂಬ ಉಪದೇಶವು. ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗಕ್ಕೆ ಹಾರಿದರೆ ಕಾಲುಜಾರಿ ಬಿದ್ದು ಜ್ಞಾನಯೋಗವೂ ಸಿದ್ಧಿಸದೆ, ಕಾಮದ ವಶವಾಗುತ್ತೀಯೇ ಎಂಬುದು ಉಪದೇಶವು. ಇಲ್ಲಿ ಮಹಾಬಾಹೋ ಎಂಬ ಸಂಬೋಧನೆಯು ಬಹು ಸ್ವಾರಸ್ಯವಾಗಿ ಉಪಯೋಗಿಸಲ್ಪಟ್ಟಿರುತ್ತದೆ. ಹೊರಗಿನ ಮಹಾ ಪರಾಕ್ರಮಿಗಳಾದ ಭೀಷ್ಮ ದ್ರೋಣದುರ್ಯೋಧನಾದಿಗಳನ್ನು ಜಯಿಸಲು ಪರಾಕ್ರಮವುಳ್ಳವನಾಗಿ ನೀನು ಮಹಾಬಾಹುವಾಗಿರುವದೇನೋ ಸತ್ಯವು. ಅಂತರಿಂದ್ರಿಯವಾದ ಮನಸ್ಸನ್ನು ಆವರಿಸಿರುವ ಕಾಮವನ್ನು ಜಯಿಸುವದು ಅಷ್ಟು ಸುಲಭವಲ್ಲವು, ಓ ಅರ್ಜುನನೇ, ಎಂದು ಹೇಳುವ ಧ್ವನ್ಯರ್ಥವನ್ನು ಸೂಚಿಸುತ್ತದೆ. ಅದು ಹೇಗೆ ಅಷ್ಟು ಸುಲಭವಲ್ಲವೆಂದು ಹೇಳುತ್ತೀರಿ? ಎಂದರೆ ಆ ಕಾಮರೂಪವಾದುದು ದುರಾಸದವೆಂದು ಹೇಳಿರುತ್ತಾರೆ. ಆದುದರಿಂದ ಅಂತರಿಂದ್ರಿಯವಾದ ಮನಸ್ಸನ್ನೂ ನಿಗ್ರಹಿಸುವದು ತುಂಬಾ ಕಷ್ಟವಾದುದರಿಂದ **ಸಂಸ್ತಭ್ಯಾತ್ಮಾನಮಾತ್ಮನಾ** ಎಂದು ಹೇಳಲ್ಪಟ್ಟಿತು. ಬುದ್ಧಿಯು ಮನಸ್ಸನ್ನು ನಿಗ್ರಹಿಸಬಹುದಾದುದರಿಂದ, ಆತ್ಮನಾ - ನಿನ್ನ ಶಾಸ್ತ್ರಜ್ಞಾನ ವಿವೇಕ ಜ್ಞಾನಗಳಿಂದ, ಆತ್ಮಾನಂ - ಮನಸ್ಸನ್ನು, ಸಂಸ್ತಭ್ಯ - ತಡೆದು, ವಿಷಯ ಸ್ಪೃಹೆಯುಂಟಾಗದಹಾಗೆ ಮಾಡಿ, ಕರ್ತೃತ್ವ ಮಮತಾ ಫಲತ್ಯಾಗದಿಂದ ಕೂಡಿದ ಪರಮ ಪುರುಷಾರಾಧನರೂಪವಾದ ಕರ್ಮಯೋಗದಲ್ಲೇ ನಿಲ್ಲಿಸಿ, ಈ ಕಾಮವನ್ನು ಜಯಿಸು ಎಂದು ಹೇಳಿದರು. ಆಗೀಗ ನೀನು ಸರಿಯಾದ ಮಹಾಬಾಹುವು. ಹೊರಗೆ ಎಲ್ಲಾ ಶತ್ರುಗಳನ್ನೂ ಬಾಹು ಪರಾಕ್ರಮದಿಂದ ಜಯಿಸಿಬಿಟ್ಟು, ಒಳಗೆ ನಿನ್ನ ಮನಸ್ಸನ್ನು ತನ್ನ ವಶಮಾಡಿಕೊಂಡಿರುವ ಈ ಅಂತಶ್ಶತ್ರುವನ್ನು ಜಯಿಸದೇ ಹೋದರೆ ಈ ಸಂಬೋಧನೆಗೆ ನೀನು ಅರ್ಹನಾಗಲಾರೆ ಎಂಬ ಮಹಾ ಕವಿಯ ಆಶಯವು ದ್ಯೋತಿತವು. **ಸಂಸ್ತಭ್ಯ** ಎಂಬಲ್ಲಿರುವ ಉಪಸರ್ಗವು ನೀನು ತುಂಬಾ ವಿವೇಕವನ್ನು ತೆಗೆದುಕೊಂಡು ಪರಮ ಪುರುಷಾರಾಧನರೂಪ ಕರ ಯೋಗದಲ್ಲಿ ಚನ್ನಾಗಿ ನಿಲ್ಲಿಸಿದ ಹೊರ್ತು ಕಾಮವನ್ನು ಸುಲಭವಾಗಿ ಜಯಿಸಲು ಸಾಧ್ಯವೇ ಇಲ್ಲವೆಂಬ ಭಾವವನ್ನು ಸೂಚಿಸುತ್ತದೆ.

ಈಗ ಹೇಳಿದುದು ಏನಾಯಿತು ಎಂದರೆ ಆತ್ಮಾವಾದ ನೀನು ನಿನ್ನ ಧರ್ಮಭೂತ ಜ್ಞಾನದ್ವಾರಾ ನೀನು ಗ್ರಹಿಸಿರುವ ಶಾಸ್ತ್ರಜ್ಞಾನ ವಿವೇಕಜ್ಞಾನಗಳ ಮೂಲಕ ಮನಸ್ಸನ್ನು ನಿಗ್ರಹಿಸಿ, ತನ್ಮೂಲಕ ಇಂದ್ರಿಯಗಳನ್ನು ನಿಗ್ರಹಿಸಿ, ಮನಸ್ಸನ್ನು ಪರಮ ಪುರುಷಾರಾಧನರೂಪವಾದ ಕರ್ಮಯೋಗದಲ್ಲೇ ನಿಲ್ಲಿಸು, ಏಕಾಏಕಿ ಜ್ಞಾನಯೋಗಕ್ಕೆ ಹೋಗಬೇಡವೆಂಬುದು. ಆದರೆ ಹಿಂದೆ ಇಂದ್ರಿಯಗಳಿಗಿಂತ, ಮನಸ್ಸು ಬಲಿಷ್ಠವು, ಮನಸ್ಸಿಗಿಂತ ಬುದ್ಧಿಯು ಕರ್ಮವಾಸನಾದಿಂದ ಬಲಿಷ್ಠವು, ಬುದ್ಧಿಗಿಂತ ಕಾಮವು ಅತಿ ಬಲಿಷ್ಠವು ಎಂದು ಹೇಳಿದರು. ಇವು ಪರಸ್ಪರ ವಿರುದ್ಧವಲ್ಲವೋ, ಬುದ್ಧಿಗಿಂತಲೂ ಬಲಿಷ್ಠವಾದುದನ್ನು ದುರ್ಬಲವಾದ ಬುದ್ಧಿ ಮನಸ್ಸುಗಳಿಂದ ಜಯಿಸುವದು ಹೇಗೆ? ಎಂಬ ಆಕ್ಷೇಪವನ್ನು ತಂದರೆ ಕರ್ಮಯೋಗವನ್ನಾರಂಭಿಸಿ ಪರಮ ಪುರುಷಾರಾಧನಾರೂಪ ಸುಕೃತವು ಪೂರ್ವಕರ್ಮವಾಸನೆಯನ್ನು ನಿರೋಧಿಸಿ, ಅದರಿಂದ ಪವಿತ್ರವಾದ ಧರ್ಮಭೂತ ಜ್ಞಾನವು ಮನಸ್ಸಿಗಿಂತ ಬಲಿಷ್ಠವಾದುದರಿಂದ ಮನಸ್ಸನ್ನು ತನ್ನ ವಶಮಾಮಾಡಿಕೊಂಡು ಮನಸ್ಸು ಇಂದ್ರಿಯಗಳೂ ವಿಷಯಗಳಲ್ಲಿ ಪ್ರವರ್ತಿಸದ ಹಾಗೆ ಮಾಡುವ ಶಕ್ತಿಯು ಈ ಜೀವಾತ್ಮನಿಗೆ ಉಂಟು. ಇದು ಸ್ವಾಮಿದತ್ತವಾದ ಶಕ್ತಿಯು ಎಂಬ ಭಾವವು.

**ಭಾಷ್ಯಾರ್ಥವು:—"ಸದೃಶಂ ಚೇಷ್ಟತೇ"**(ಗೀ. ೩. ೩೩)ಎಂದು ಉಪಕ್ರಮಿಸಿ ಹೇಳಿದ ಜ್ಞಾನಯೋಗವು ಸಪ್ರಮಾದವೆಂದು ಹೇಳಿ ಉಪಸಂಹಾರಮಾಡುವ ಸಂದರ್ಭದಲ್ಲಿ, ಕರ್ಮ

ಭಾ. ಆತ್ಮಾನಂ-ಮನಃ, ಆತ್ಮನಾ-ಬುದ್ಧ್ಯಾ ಕರ್ಮಯೋಗೇಽವಸ್ಥಾಪ್ಯ, ಏನಂ ಕಾಮರೂಪಂ ದುರಾಸದಂ ಶತ್ರುಂ ಜಹಿ - ನಾಶಯೇತಿ ||೪೩||

ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ ತೃತೀಯೋಽಧ್ಯಾಯಃ
ಶ್ರೀಮತೇ ರಾಮಾನುಜಾಯನಮಃ.

ಯೋಗದಲ್ಲೇ ಮನಸ್ಸನ್ನು ದೃಢವಾಗಿ ಇಡಬೇಕೆಂದು ಹೇಳಿ, ಕರ್ಮಯೋಗ ಪ್ರಶಂಸೆಯನ್ನು ಮುಗಿಸುತ್ತಾರೆ. ಏನಂ - ಈಗ ಉಪದೇಶಿಸಿದ ಪ್ರಕಾರ, ಬುದ್ಧೇರಪಿ - ಬುದ್ಧಿಗಿಂತಲೂ, ಪರಂ-ಪ್ರಬಲವಾದುದನ್ನು ಎಂದರೆ ಕಾಮವನ್ನು ಜ್ಞಾನಯೋಗಕ್ಕೆ ವಿರೋಧಿಯಾದ ವೈರಿಯೆಂದು, ಬುದ್ಧ್ವಾ - ತಿಳಿದು, ಇದು ಬುಧ್ವಾ ಎಂಬ ಪ್ರಯೋಗದಿಂದ ಸೂಚಿತವಾದರ್ಥವು, ಆತ್ಮಾನಂ ಎಂದರೆ ಮನಃ - ಮನಸ್ಸನ್ನು, ಆತ್ಮನಾ ಎಂದರೆ ಬುದ್ಧಿಯಿಂದ ಕರ್ಮಯೋಗೇಽವಸ್ಥಾಪ್ಯ - ಇದು ಸಂಸ್ತಭ್ಯ ಎಂದು ಮೂಲದಲ್ಲಿರುವದರರ್ಥವು, ದೃಢವಾಗಿ ನಿಲ್ಲಿಸಿ ಎಂಬರ್ಥವು, ಎಲ್ಲಿ ಎಂದರೆ ಪ್ರಕರಣಾತ್ ಕರ್ಮಯೋಗದಲ್ಲಿ ಇಂತಹ ಪ್ರಮಾದವಿಲ್ಲದುದರಿಂದ ಕರ್ಮಯೋಗದಲ್ಲಿ ನಿಲ್ಲಿಸಿ, ಏನಂ - ಈ ಮೇಲೆಹೇಳಿದ, ಕಾಮರೂಪವಾದ, ದುರಾಸದಂ - ನಿಗ್ರಹಿಸಲು ಅಸಾಧ್ಯವಾದ, ಶತ್ರುವನ್ನು, ಜಹಿ - ಎಂದರೆ ನಾಶಯ-ನಾಶಮಾಡು. ಜ್ಞಾನಯೋಗ ಪ್ರವರ್ತನೆಗೆ ಕಾಮಜಯವು ಅತ್ಯಾವಶ್ಯಕವು, ಅದಕ್ಕಾಗಿ ತತ್ಪೂರ್ವದಲ್ಲೇ ಕರ್ಮಯೋಗದಲ್ಲಿ ಪ್ರವರ್ತಿಸಿದರೆ ಕಾಮಜಯವು ಸುಲಭವೆಂಬ ಭಾವವು. ಕರ್ಮಯೋಗದ ಅನುಷ್ಠಾನವಿಲ್ಲದಿದ್ದರೆ ಪಾಪಗಳು ನಿರಸ್ತವಾಗುವದಿಲ್ಲವಾದುದರಿಂದಲೂ, ಸತ್ವವು ತಲೆ ಎತ್ತುವದಿಲ್ಲವಾದುದರಿಂದಲೂ, ಕಾಮವನ್ನು ನಿಗ್ರಹಿಸುವದು ಕಷ್ಟವೆಂಬ ಭಾವವು. ಸಂಸ್ತಭ್ಯಾತ್ಮಾನ ಮಾತ್ಮನಾ ಎಂಬುದರಿಂದ ಕಾಮಜಯಕ್ಕೆ ಒಂದು ಒಳ್ಳೇ ಉಪಾಯವು ಹೇಳಲ್ಪಟ್ಟಿತು. ಕರ್ಮಯೋಗದಲ್ಲಿ ಮನಸ್ಸನ್ನು ಚನ್ನಾಗಿ ಕಷ್ಟಪಟ್ಟು ನಿಲ್ಲಿಸಿದುದಾದರೆ ಸ್ವತಃ ಉತ್ತರೋತ್ತರ ಕಾಮ ವಿಜಯವು ಬಹು ಸುಲಭವೆಂಬಭಿಪ್ರಾಯವು. ಜಹಿ, ಪ್ರಜಹಿ ಎಂಬ ಪದಗಳಲ್ಲಿನ ಧಾತ್ವರ್ಥವುಹಿಂಸಾಪರವು. ಇಲ್ಲಿ ಅಚೇತನವಾದ ಕಾಮರೂಪ ಅಭಿಲಾಷೆಗೆ ಹಿಂಸೆ ಎಂದರೆ ನಾಶವೆಂಬಭಿಪ್ರಾಯದಿಂದ ಜಹಿ - ನಾಶಯ ಎಂದು ವ್ಯಾಖ್ಯಾನಮಾಡಿರುತ್ತಾರೆ. ಶ್ರೀಮದಾನಂದ ತೀರ್ಥರು ಆತ್ಮಾನಂ ಆತ್ಮನಾ ಎಂಬ ಶಬ್ದಗಳಿಗೆ ಇಲ್ಲಿ ಮಾಡಿರುವ ಅರ್ಥಗಳಹಾಗೆಯೇ ಭಾಷ್ಯವನ್ನು ಬರೆದಿರುತ್ತಾರೆ. ಆದರೆ ಪರ ಶಬ್ದಕ್ಕೆ ಹಿಂದಿನ ಶ್ಲೋಕದಲ್ಲಿ ಉತ್ಕೃಷ್ಟತೆ ಎಂಬರ್ಥವನ್ನು ಹೇಳಿ, ಇಲ್ಲಿ ಪರ ಶಬ್ದಕ್ಕೆ ಪರಮಾತ್ಮನೆಂದು ಅರ್ಥಮಾಡಿರುತ್ತಾರೆ. ಪರಮಾತ್ಮಜ್ಞಾನವೇನೋ ಬೇಡವೆನ್ನುವದಿಲ್ಲವು ; ಅದು ಕರ್ಮಯೋಗದಲ್ಲೇ ಸಿದ್ಧಿಸುವದರಿಂದ, ಪರಶಬ್ದಕ್ಕೆ ಹಿಂದಿನ ಶ್ಲೋಕದಲ್ಲೂ ಈ ಶ್ಲೋಕದಲ್ಲೂ ಒಂದೇ ವಿಧವಾಗಿ ಅರ್ಥಮಾಡುವದು ಒಂದೇ ಪ್ರಕರಣದಲ್ಲಿ ನ್ಯಾಯವು ; ಆತ್ಮನಾತ್ಮಾನಂ ಎಂಬಲ್ಲಿ ಬೇರೆಬೇರೆಯಾಗಿ ಅರ್ಥಮಾಡಬೇಕಲ್ಲವೇ ಎಂದರೆ ಬೇರೆ ಬೇರೆಯಾಗಿ ಅರ್ಥಮಾಡಬೇಕಾಗಿಯೇ ಹೇಳಿರುವದರಿಂದ ನಿರ್ವಾಹವಿಲ್ಲವು.

ಒಂದು ವೇಳೆ ಜ್ಞಾನಯೋಗವೇ ಶ್ರೇಷ್ಠವಾದುದಾದರೆ ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗವನ್ನು ಅವಲಂಬಿಸಿ, ಈ ಘೋರಯುದ್ಧಕರ್ಮವನ್ನು ಆಗ ತ್ಯಾಗಮಾಡಬಹುದಲ್ಲಾ ಎಂಬ ಆಶೆಯಿಂದ ಅರ್ಜುನನು ಪ್ರಶ್ನಿಸಿದನು. ಕರ್ಮಯೋಗವಿಲ್ಲದೆ ಜ್ಞಾನಯೋಗವು ಸಾಧ್ಯವಿಲ್ಲವೆಂದು ೧೧ ಕಾರಣಗಳಿಂದ ಹೇಳಿ ಮುಗಿಸಿದರು. ೮ನೆಯ ಶ್ಲೋಕವು ಅರ್ಜುನನಿಗೆ ಪ್ರತಿಜ್ಞಾವಾಕ್ಯರೂಪದಲ್ಲಿ ಉತ್ತರವು. ೩೦ ಮತ್ತು ೩೫ನೆಯ ಶ್ಲೋಕಗಳಲ್ಲಿ ನಿಗಮನವು.

ಈ ಅಧ್ಯಾಯಕ್ಕೆ ಕರ್ಮಯೋಗವೆಂದು ಹೆಸರು ಕೊಡಲ್ಪಟ್ಟಿರುತ್ತದೆ; ಹಾಗೆಯೇ ಈ ಗೀತಾ ಶಾಸ್ತ್ರವೂ, ಯೋಗಶಾಸ್ತ್ರವೆಂದೂ ಹೇಳಲ್ಪಟ್ಟಿರುತ್ತದೆ. ಇದೂ ಅಲ್ಲದೆ ಪ್ರತಿಯೊಂದು ಅಧ್ಯಾಯಾಂತ್ಯದಲ್ಲೂ ಯಾವ ಸಙ್ಗತಿಯು ವಿಚಾರಿಸಲ್ಪಟ್ಟಿತೆಂದು ತಿಳಿಸುವದಕ್ಕಾಗಿ "ಅರ್ಜುನವಿಷಾದ ಯೋಗೋನಾಮ" "ಕ್ಷೇತ್ರಕ್ಷೇತ್ರಜ್ಞ ವಿಭಾಗಯೋಗೋನಾಮ" ಮತ್ತು "ದೈವಾಸುರ ವಿಭಾಗಯೋಗೋನಾಮ" ಇತ್ಯಾದಿಗಳನ್ನು ಕಾಣಬಹುದು. ಇಲ್ಲೆಲ್ಲಾ ಯೋಗ ಶಬ್ದಕ್ಕೆ ಯಾವ ಅರ್ಥವನ್ನು ಹೇಳಬಹುದು ಎಂಬ ಸಂದರ್ಭದಲ್ಲಿ ಯೋಗ ಶಬ್ದದ ನಾನಾರ್ಥವನ್ನು ಪರಿಶೀಲಿಸಿ "ಯೋಗಸ್ಸನ್ನಹನೋಪಾಯಧ್ಯಾನಸಙ್ಗತಿ ಯುಕ್ತಿಷು" ಎಂಬ ನಿಘಂಟುವನ್ನನುಸರಿಸಿ ಯಾವಯಾವ ಸಂದರ್ಭದಲ್ಲಿ ಯಾವ ಅರ್ಥವು ಸರಿಹೋಗುತ್ತದೋ ಅವುಗಳನ್ನು ಇಟ್ಟುಕೊಳ್ಳಬಹುದು. ಯೋಗಶಾಸ್ತ್ರ ಶಬ್ದಕ್ಕೆ ಧ್ಯಾನಶಾಸ್ತ್ರವೆಂದು ಅರ್ಥ ಹೇಳಬಹುದು. ಅಧ್ಯಾಯಗಳಲ್ಲಿ ಪ್ರತಿಯೊಂದಕ್ಕೂ ಯೋಗವೆಂಬರ್ಥದಲ್ಲಿ ಸಂಹನನವೆಂದಾದರೂ ಅರ್ಥಮಾಡಬಹುದು. ಸನ್ನಹನ ಶಬ್ದಕ್ಕೆ "ಮಹಾ ಕರ್ಮಸು ಸಂಭೃತ ಸಂಭಾರಸ್ಯ ತದೇಕತಾನತ್ವಂ - ಸನ್ನಹನಂ" ಎಂದು ವ್ಯಾಖ್ಯಾನಮಾಡಿರುವದರಿಂದ ಯೋಗಶಾಸ್ತ್ರಕ್ಕೆ ಪ್ರತಿಯೊಂದು ಅಧ್ಯಾಯವೂ ತುಂಬಾ ಮುಖ್ಯವಾದ ಪರಿಕರವಾದುದರಿಂದ ಹಾಗೆ ಅರ್ಥಮಾಡಬಹುದು; ಅಥವಾ ಪ್ರತಿಯೊಂದು ಅಧ್ಯಾಯದಲ್ಲೂ ಹೇಳುವ ಸಙ್ಗತಿ ಎಂದಾಗಲಿ ಅರ್ಥಮಾಡಬಹುದು; ಅರ್ಜುನ ವಿಷಾದವನ್ನು ಕುರಿತ ಸಙ್ಗತಿ, ಮತ್ತು ದೈವಾಸುರವಿಭಾಗ ರೂಪಸಙ್ಗತಿ ಹೀಗೆ ಅರ್ಥವನ್ನು ಹೇಳಬಹುದು. ಆದುದರಿಂದ ಇಲ್ಲಿ ಕರ್ಮಯೋಗೋನಾಮ, ಎಂಬಲ್ಲಿ ಕರ್ಮಾನುಷ್ಠಾನರೂಪ ಸಙ್ಗತಿ, ಎಂದು ಅರ್ಥವನ್ನು ಹೇಳಬಹುದು. ಹಾಗೆಯೇ ಜ್ಞಾನಯೋಗೋನಾಮ, ಭಕ್ತಿಯೋಗೋನಾಮ, ಎಂದು ಅಧ್ಯಾಯಗಳಿಗೆ ಹೆಸರುಗಳನ್ನು ಕೊಟ್ಟಿರುವ ಯೋಗ ಶಬ್ದಕ್ಕೆ ಹೀಗೆಯೇ ಅರ್ಥವು. ಆದರೆ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಶಬ್ದಗಳು ಅನುಷ್ಠಾನರೂಪ ಪ್ರವೃತ್ತಿಯನ್ನು ಬೋಧಿಸುವ ಅರ್ಥಗಳಲ್ಲಿ ಉಪಯೋಗಿಸುವದೂ ಉಂಟು. ಆಗ ಯೋಗ ಶಬ್ದಕ್ಕೆ ಉಪಾಯವೆಂಬರ್ಥವನ್ನು ಹೇಳಬಹುದು, ಉಪಾಯವು ಯಾವುದೆಂದರೆ ಪರಮಾತ್ಮಪ್ರಾಪ್ತಿಯನ್ನುಂಟುಮಾಡುವ ಪ್ರವೃತ್ತಿಯು. ಆದುದರಿಂದ ಭಕ್ತಿಯೋಗವೆಂದರೆ ಭಕ್ತಿರೂಪ ಉಪಾಯವು. ಇಲ್ಲಿ ಭಕ್ತಿ ಶಬ್ದವು ಉಪಾಸನದ ಮೂಲಕ ಪರಮಾತ್ಮ ಸಾಕ್ಷಾತ್ಕಾರವನ್ನು ಸಾಧಿಸಿಕೊಡುವ ಪರಭಕ್ತಿಯನ್ನು ಗೀತಾ ೧೮ನೆಯ ಅಧ್ಯಾಯದ ೫೪ನೆಯ ಶ್ಲೋಕದಲ್ಲಿ ಹೇಳಿರುವದನ್ನು ಬೋಧಿಸುತ್ತದೆ. ಆದರೆ ಕರ್ಮಯೋಗಾದಿಗಳೂ ಭಕ್ತಿಯೋಗ ರೂಪೋಪಾಯವನ್ನು ಸಾಧಿಸಿ ಕೊಡುವದರಿಂದ ಕರ್ಮಯೋಗವು ಭಕ್ತಿಯೋಗರೂಪ ಉಪಾಯ ನಿಷ್ಪತ್ತಿಗೆ ಮುಖ್ಯಸಾಧನವಾದುದರಿಂದ ಮುಖ್ಯಸಾಧನವೆಂಬರ್ಥದಲ್ಲಿ ಉಪಾಯವಾಚಕ ಯೋಗಶಬ್ದವನ್ನುಪಯೋಗಿಸುವ ಪದ್ಧತಿಯುಂಟು. ಉಪಾಯಸಾಧನ ಶಬ್ದಗಳು ಪರ್ಯಾಯಪದಗಳಾದರೂ, ಉಪಾಯವು ಮುಖ್ಯಾರ್ಥದಲ್ಲಿ ಅಙ್ಗಿಯನ್ನು ಬೋಧಿಸುತ್ತದೆ. ಸಾಧನಶಬ್ದವು ಸಾಮಾನ್ಯಪದವಾಗಿ ಅಙ್ಗಿಯನ್ನೂ ಅಙ್ಗವನ್ನೂ ಸಹ ಬೋಧಿಸಬಹುದು.

ಇಂತು ಕರ್ಮಯೋಗೋನಾಮ, ತೃತೀಯಾಧ್ಯಾಯಕ್ಕೆ

ತಿರುನಾರಾಯಣಪುರಂ ವಿಜಯರಾಘವಶರ್ಮನಿಂದ ರಚಿಸಲ್ಪಟ್ಟ

**ಶ್ರೀಮದಾಚಾರ್ಯಹೃದಯಾನ್ವೇಷಿಣೀ**

ಎಂಬ ಅರ್ಥ ತಾತ್ಪರ್ಯಗಳು ಸಮಾಪ್ತವಾದವು.

ಶ್ರೀಮತೇ ನಿಗಮಾಂತ ಮಹಾದೇಶಿಕಾಯನಮಃ.

ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ

## ಈ ಮೂರನೆಯ ಅಧ್ಯಾಯದಲ್ಲಿ ಚರ್ಚಿಸಲ್ಪಟ್ಟ ಅಂಶಗಳು ಯಾವುವೆಂದರೆ:—

ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗವನ್ನವಲಂಬಿಸುವದರಿಂದ ಜ್ಞಾನಯೋಗವು ಸಿದ್ಧಿಸುವದಿಲ್ಲವು. (ಶ್ಲೋ. ೪.) ಆದುದರಿಂದ ಕರ್ಮಯೋಗವೇ ಶ್ರೇಷ್ಠವೆಂದು ಈ ಮುಂದಿನ ಕಾರಣಗಳಿಂದ ಉಪಪಾದಿಸಿರುತ್ತಾರೆ.

೧. ಕರ್ಮಯೋಗದಲ್ಲಿ ಪ್ರವೃತ್ತಿಯು ಸುಕರವಾದುದರಿಂದ (ಶ್ಲೋ. ೫) ಮಿಥ್ಯಾಚಾರದ ಭಯವಿಲ್ಲವು. ಕೇವಲ ಜ್ಞಾನಯೋಗವು ಸುಕರವಲ್ಲದುದರಿಂದ ಮಿಥ್ಯಾಚಾರಕ್ಕೆ ಕಾರಣವಾಗ ಬಹುದು. (ಶ್ಲೋ. ೬)

೨. ಕರ್ಮಯೋಗದಲ್ಲಿ ಶಾಸ್ತ್ರರೀತ್ಯಾ ಶರೀರಯಾತ್ರೆಯು ಲಭಿಸುತ್ತದೆ. (ಶ್ಲೋ. ೮.) ಕೇವಲ ಜ್ಞಾನಯೋಗದಲ್ಲಿ ಶರೀರಯಾತ್ರೆಯೂ ಸಿದ್ಧಿಸುವದಿಲ್ಲವು. (ಶ್ಲೋ. ೧೩)

೩. ಕರ್ಮಯೋಗದಿಂದ ದೇವತೆಗಳ ಮೂಲಕ ತುಂಬಾ ಶ್ರೇಯಸ್ಸುಂಟು. (ಶ್ಲೋ. ೧೧). ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗಪ್ರವರ್ತನೆಯಲ್ಲಿ ಇಂತಹ ಶ್ರೇಯಸ್ಸಿಗೆ ಅನುಕೂಲವಿಲ್ಲವು

೪. ಕರ್ಮಯೋಗದಲ್ಲಿ ಧರ್ಮಯುಕ್ತವಾದ ಧನಾರ್ಜನಾದಿಗಳಿಗೆ ಅವಕಾಶವುಂಟಾಗಿ ಕರ್ಮ ಯೋಗಿಯು ಮಾಡುವ ಸಮಸ್ತ ಕರ್ಮಗಳಿಂದಲೂ ವಿಷ್ಣುವು ಆರಾಧಿಸಲ್ಪಡುವನು. ದೇವತೆಗಳಿಗೂ ಮನುಷ್ಯರಿಗೂ ಪರಸ್ಪರ ಸಹಾಯವಾಗುವಹಾಗೆ ಸರ್ವೇಶ್ವರನಾದ ತಾನು ಏರ್ಪಡಿಸಿರುವ ಚಕ್ರವ ನ್ನನುಸರಿಸಿ ನಡೆಯುವವನು ಆತ್ಮಾರಾಮನಾಗುವನು, ಹಾಗಲ್ಲದೆ ಕೇವಲ ಜ್ಞಾನಯೋಗಾ ರಂಭಕನು ಇಂದ್ರಿಯಾರಾಮನಾಗುವನು. (ಶ್ಲೋ. ೧೬.)

೫. ಅಸಕ್ತವಾಗಿ ಮಾಡುವ ಕರ್ಮಯೋಗದಿಂದ ಸುಕರವಾಗಿ ಆತ್ಮಾವಲೋಕನವು ಇದರಲ್ಲೇ ಸಿದ್ಧಿಸುವದರಿಂದಲೂ ಶ್ರೇಷ್ಠವು. ಜನಕಾದಿಗಳು ನಿದರ್ಶನವು. (ಶ್ಲೋ.೧೯ಮತ್ತು ೨೦ನೆಯ ಪೂರ್ವಾರ್ಧ).

೬. ಲೋಕಸಙ್ಗ್ರಹವಿಷಯವಾಗಿ ನೋಡಿದರೂ ಕರ್ಮಯೋಗವೇ ಶ್ರೇಷ್ಠವು.(ಶ್ಲೋ. ೨೦) ಹಾಗಲ್ಲದೆ ಬರೀ ಜ್ಞಾನಯೋಗಪ್ರವರ್ತನೆಯಿಂದ ವರ್ಣಸಾಂಕರ್ಯ ಉಂಟಾಗುತ್ತದೆ. (ಶ್ಲೋ.೨೪)ಆದು ದರಿಂದ ಲೋಕನಾಶಮಾಡಿದ ಪಾಪಕ್ಕೆ ಕರ್ಮಭ್ರಷ್ಟನಾದವಿದ್ವಾಂಸನುಗುರಿಯಾಗುವನು(ಶ್ಲೋ.೨೬)

೭. ಅಕೃತ್ಸ್ನವಿತ್ತಾದ ಮಂದರಿಗೂ ಕೂಡ ಕರ್ಮಯೋಗವೇ ಸುಕರವು. ಅಂತವರಿಗೆ ಜ್ಞಾನ ಯೋಗವು ಸಾಧ್ಯವಲ್ಲವು. (೨೯)

೮. ಕರ್ಮಯೋಗನಿಷ್ಠರು, ಕರ್ಮಗಳ ಕರ್ತೃತ್ವವು ಪ್ರಕೃತಿಗುಣಗಳಮೂಲಕವೆಂದು ಭಾವಿಸಿ, ಆ ಕರ್ತೃತ್ವವು ಸರ್ವೇಶ್ವರನ ಅಧೀನವೆಂದು ತಿಳಿದು,ಅಹಂಕಾರ ಮಮಕಾರಗಳನ್ನುತ್ಯಜಿಸಿ, ಹೀಗೆ ಕರ್ಮಸನ್ಯಾಸವನ್ನು ಮಾಡಿದವರು. ಅಂತವರು "ಮುಚ್ಯನ್ತೇ ಸರ್ವಕರ್ಮಭಿಃ" ಸಮಸ್ತ ಪುಣ್ಯ ಪಾಪರೂಪಕರ್ಮಗಳಿಂದ ಬಿಡಲ್ಪಡುವರು.(ಶ್ಲೋ. ೩೦, ೩೧)ಹಾಗೆ ಮಾಡದವರು ನಷ್ಟರಾಗುವರು. (ಶ್ಲೋ೩೨)

೯. ಕರ್ಮತ್ಯಾಗಮಾಡಿದ ಜ್ಞಾನಯೋಗಾರಂಭಕನಿಗೆ ವಿಘ್ನವೂ, ಕರ್ಮತ್ಯಾಗಮೂಲಕ ಭಗ ವನ್ನಿಗ್ರಹವೂ ಉಂಟು. (ಶ್ಲೋ. ೩೫) ಅರ್ಜುನನ ಪ್ರಶ್ನೆಗೆ ಉತ್ತರವು ೮ನೆಯ ಶ್ಲೋಕವು. ಇದು ಅದರ ನಿಗಮನವು.

೧೦. ಕರ್ಮತ್ಯಾಗಮಾಡಿದ ಜ್ಞಾನಯೋಗಾರಂಭಕನಿಗೆ ಕಾಮಕ್ರೋಧಗಳು ಶತ್ರುಗಳಾಗುವರು. (ಶ್ಲೋ. ೩೭) ಕರ್ಮಯೋಗಿಗೆ ಈ ಭಯವಿರುವದಿಲ್ಲವು. (ಶ್ಲೋ. ೩೪) ಅದರಲ್ಲಿ ಕಾಮವೇ ಪ್ರಬಲವಾದ ಮೂಲಶತ್ರುವು (ಶ್ಲೋ. ೩೯) ಇಂದ್ರಿಯ ಮನೋಬುದ್ಧಿಗಳು ಕಾಮಕ್ಕೆ ಸಹಕಾರಿ ಶತ್ರುಗಳು. (೪೦) ಎಲ್ಲಕ್ಕಿಂತಲೂ ಅತಿ ಪ್ರಬಲಶತ್ರುವೇ ಕಾಮವು. (೪೨) ಆದುದರಿಂದ ಅದನ್ನು ನಾಶಮಾಡತಕ್ಕದ್ದು. (ಶ್ಲೋ. ೪೩).

ಶ್ರೀಮದ್ಯಾಮುನಮುನಿ ಪ್ರಣೀತವಾದ

**ಶ್ರೀಮದ್ಗೀತಾರ್ಥ ಸಙ್ಗ್ರಹದ ಮೂರನೆಯ ಅಧ್ಯಾಯದ ಸಙ್ಗ್ರಹಶ್ಲೋಕವು.**

**ಅಸಕ್ತ್ಯಾ ಲೋಕರಕ್ಷಾಯೈ ಗುಣೇಷ್ವಾರೋಪ್ಯ ಕರ್ತೃತಾಮ್ ।**
**ಸರ್ವೇಶ್ವರೇ ವಾ ನ್ಯಸ್ಯೋಕ್ತಾ ತೃತೀಯೇ ಕರ್ಮಕಾರ್ಯತಾ ॥ ೭.**

ಅರ್ಥವು :—ತೃತೀಯೇ - ಈ ಮೂರನೆಯ ಅಧ್ಯಾಯದಲ್ಲಿ ಕರ್ಮಕಾರ್ಯತಾ - ಕರ್ಮಯೋಗವೇ ಜ್ಞಾನಾಧಿಕಾರಿಗೂ ಕೂಡ ಆವಶ್ಯಕವಾಗಿ ಮಾಡತಕ್ಕ ವಿಷಯವು, ಉಕ್ತಾ - ಹೇಳಲ್ಪಟ್ಟಿತು, ಹೇಗೆ ಅನುಷ್ಠಿಸತಕ್ಕದ್ದೆಂದರೆ ಹೇಳುತ್ತಾರೆ:— ಅಸಕ್ತ್ಯಾ - ಪರಮ ಪುರುಷಾರಾಧನವಾಗಿ ಬೇರೆ ಫಲಸಂಗವಿಲ್ಲದೆ ತಾನು ಕರ್ತಾ ಎಂಬಭಿಮಾನವಿಲ್ಲದೆ ; (ಶ್ಲೋ. ೯. ೧೯. ಮತ್ತು ೩೦) ಹಾಗಾದರೆ ಕರ್ತೃತ್ವವನ್ನು ಎಲ್ಲಿ ಆರೋಪಿಸತಕ್ಕದ್ದೆಂದರೆ:—ಗುಣೇಷು - ಪ್ರಕೃತಿಯ ಗುಣಗಳಾದ ಸತ್ತ್ವರಜಸ್ತಮೋಗುಣಗಳಲ್ಲಿ, ಕರ್ತೃತಾಂ ಆರೋಪ್ಯ - ಕರ್ತೃತ್ವವನ್ನಾರೋಪಿಸಿ, (೨೭, ೨೮ನೆಯ ಶ್ಲೋಕಗಳು), ಇನ್ನೆಲ್ಲಿಯೂ ಕರ್ತೃತ್ವವನ್ನಿಡತಕ್ಕದ್ದೆಂದರೆ ತಿಳಿಸುತ್ತಾರೆ:— ಸರ್ವೇಶ್ವರೇ ವಾ, ಪರಾತ್ತು ತಚ್ಛ್ರುತೇಃ ಎಂಬ ಸೂತ್ರಾನುಗುಣವಾಗಿ ಸರ್ವೇಶ್ವರನಲ್ಲೂ ಕೂಡ ನ್ಯಸ್ಯ - ಇಟ್ಟು, ವಾ - ಎಂಬುದು ಇಲ್ಲಿ ಸಮುಚ್ಚಯಾರ್ಥವು. (೩೦ನೆಯ ಶ್ಲೋಕವು) ಇಲ್ಲಿ ಆರೋಪ್ಯ ಕರ್ತೃತಾಂ ಎಂಬುದರಿಂದ ತನಗೆ ದೇಶಕಾಲಾವಸ್ಥಾದಿಗಳಿಂದ ನಿಯತವಾದ ಜ್ಞಾನ ಚಿಕೀರ್ಷಾಪ್ರಯತ್ನಗಳಿಗೆ ಆಶ್ರಯನಾಗಿ ತಾನು ನಡೆಸುವದೆಲ್ಲಾ, ತನ್ನನ್ನು ಸೇರಿರುವ ತ್ರಿಗುಣಾತ್ಮಕವಾದಶರೀರ ಮೂಲಕವೆಂದು ಅನುಸಂಧಾನಮಾಡಿ ಎಂಬರ್ಥವು ಸೂಚಿಸಲ್ಪಟ್ಟಿತು. ಈ ಅಧ್ಯಾಯಕ್ಕೇನೇ ಕರ್ಮಯೋಗವೆಂದೇ ಹೆಸರಿರುವದರಿಂದ ಕರ್ಮಯೋಗವೇ ಅನುಷ್ಠಿಸತಕ್ಕದ್ದೇ ವಿನಾ, ಅದನ್ನು ತ್ಯಜಿಸಿ ಜ್ಞಾನಯೋಗವನ್ನಾರಂಭಿಸತಕ್ಕದ್ದಲ್ಲವೆಂಬ ಉಪದೇಶಕ್ಕಾಗಿ ಕರ್ಮಕಾರ್ಯತಾ ಎಂಬ ಪ್ರಯೋಗವು. ಇಲ್ಲಿ ಅಸಕ್ತ್ಯಾ ಎಂದು ಹೇಳಿರುವದರಿಂದ ಕರ್ತೃತ್ವವನ್ನೂ, ಸ್ವರ್ಗಾದಿ ಸರ್ವಫಲಗಳ ಸಙ್ಗವನ್ನೂ, ಸಂಪೂರ್ಣವಾಗಿ ತ್ಯಜಿಸಿ, ಎಲ್ಲಾ ಕರ್ಮಗಳಿಂದಲೂ ಪರಮ ಪುರುಷನೇ ಪ್ರೀತನಾಗುವನೆಂದೂ ಭಾವಿಸತಕ್ಕದ್ದೆಂಬ ಅಭಿಪ್ರಾಯವು. ಲೋಕರಕ್ಷಾಯೈ ಎಂದು ಹೇಳಿರುವದರಿಂದ, ಜ್ಞಾನಿಗಳಾದ ಶ್ರೇಷ್ಠರೆನಿಸುವರು, ಜ್ಞಾನಿಗಳಲ್ಲದ ಸಾಧಾರಣ ಜನಕ್ಕೆ ಮೇಲುಪಙ್ಕ್ತಿಯಾಗಿ ತೋರಿಸಿಕೊಟ್ಟು ಈ ಕರ್ಮಯೋಗವೇ ರಾಜಮಾರ್ಗವು, ತಲೆ ಒಡೆಯುವ ಕಳ್ಳರಾದ ಕಾಮಕ್ರೋಧಾದಿಗಳು ಈ ಮಾರ್ಗದಲ್ಲಿ ಇಲ್ಲದಿರುವದರಿಂದ ಪ್ರಮಾದರಹಿತವಾದುದೆಂದು ತೋರ್ಪಡಿಸತಕ್ಕದ್ದೆಂದು ಹೇಳಿದಂತಾಯಿತು. ಇದು ಬರೀ ಇತರರ ಉಪಕಾರಕ್ಕಾಗಿ ಲೋಕ ರಕ್ಷಣಾರ್ಥವಾಗಿ ಮಾಡತಕ್ಕದ್ದು ಮಾತ್ರವೇ ಅಲ್ಲವು. ಹಾಗೆ ಮಾಡದೇ ಹೋದರೆ ಶ್ರೇಷ್ಠನೆನಿಸಿದವನು ಲೋಕನಾಶದಿಂದುಂಟಾದ ಪಾಪಗಳಿಗೂ ಗುರಿಯಾಗುವನು (೩.೨೧ನೆಯ ಭಾಷ್ಯವು). ಈ ಅಧ್ಯಾಯದ ೩೦ನೆಯ ಶ್ಲೋಕವಾದ ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮ ಚೇತಸಾ। ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ" ಎಂಬುದೇ ಈ ಅಧ್ಯಾಯದ ಸಾರಭೂತಾರ್ಥವು. ಇಲ್ಲಿ ಯುಧ್ಯಸ್ವ' ಎಂಬುದಕ್ಕೆ ಬದಲಾಗಿ ಕುರುಷ್ವ ಎಂದು ಇಟ್ಟುಕೊಂಡರೆ, ತ್ರಿವರ್ಣದವರಿಗೂ ಅನ್ವಯಿಸುತ್ತದೆ. ಇದು ಉಪಲಕ್ಷಣವೆಂಬುದು ಮೇಲೆ ಉಪಪಾದಿತವು. ಇದನ್ನೇ ಶ್ರೀ ಯತಿವರ್ಯರು "ಸ್ವಕೀಯೇನಾತ್ಮನಾ ಕರ್ತ್ರಾ ಸ್ವಕೀಯೈಶ್ಚೋಪಕರಣೈಸ್ಸ್ವಾರಾಧನೈಕ ಪ್ರಯೋಜನಾಯ ಪರಮಪುರುಷಸ್ಸರ್ವಶೇಷೀ ಸರ್ವೇಶ್ವರಸ್ಸ್ವಯಮೇವ ಸ್ವಕೀಯ ಕರ್ಮಾಣಿ ಕಾರಯತಿ" ಎಂದು ೩೦ನೆಯ ಶ್ಲೋಕದಲ್ಲಿ ಈ ಸಾರಭೂತಾರ್ಥವನ್ನು ಉಪಪಾದಿಸಿರುತ್ತಾರೆ. ॥೭॥

ಶ್ರೀ ಯಾಮುನ ಮುನಯೇ ನಮಃ

ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ

# ಶ್ರೀಮದ್ಭಗವದ್ಗೀತಾಯಾಂ

## ಚತುರ್ಥೋಽಧ್ಯಾಯಃ

---

**ಭಾ. ಅವ. ತೃತೀಯೇಽಧ್ಯಾಯೇ ಪ್ರಕೃತಿಸಂಸೃಷ್ಟಸ್ಯ ಮುಮುಕ್ಷೋಸ್ಸಹಸಾ ಜ್ಞಾನಯೋಗೇಽನಧಿಕಾರಾತ್ ಕರ್ಮಯೋಗ ಏವಕಾರ್ಯಃ ; ಜ್ಞಾನಯೋಗಾಧಿಕಾರಿಣೋಽಪ್ಯಕರ್ತೃತ್ವಾನುಸನ್ಧಾನಪೂರ್ವಕ ಕರ್ಮಯೋಗ ಏವ ಶ್ರೇಯಾನಿತಿ ಸಹೇತುಕ ಮುಕ್ತಮ್. ಶಿಷ್ಟತಯಾ ವ್ಯಪದೇಶ್ಯಸ್ಯ ತು ವಿಶೇಷತಃ ಕರ್ಮಯೋಗ ಏವ ಕಾರ್ಯ ಇತಿ ಚೋಕ್ತಮ್.**

---

**ಬಾಷ್ಯಾವತಾರಿಕೆಯ ಅರ್ಥವು :**—ಈ ನಾಲ್ಕನೆಯ ಅಧ್ಯಾಯಕ್ಕೂ, ಹಿಂದಿನ ಅಧ್ಯಾಯಕ್ಕೂ ಸಂಗತಿಯನ್ನು ಸ್ಪಷ್ಟವಾಗಿ ಹೇಳತಕ್ಕದ್ದು ವಿಧಾಯಕವಾದುದರಿಂದ, ಅದಕ್ಕಾಗಿ ಮೂರನೆಯ ಅಧ್ಯಾಯದಲ್ಲಿ ಹೇಳಿದುದನ್ನು ಸಙ್ಗ್ರಹಿಸಿ, ನಾಲ್ಕನೆಯ ಅಧ್ಯಾಯಕ್ಕೆ ಸಙ್ಗತಿ ಏನೆಂಬುವದನ್ನು ಪ್ರಥಮತಃ ತಿಳಿಸುತ್ತಾರೆ :—**ತೃತೀಯೇಽಧ್ಯಾಯೇ** - ಮೂರನೆಯ ಅಧ್ಯಾಯದಲ್ಲಿ, **ಪ್ರಕೃತಿಸಂಸೃಷ್ಟಸ್ಯ**-ಶರೀರ ಮೂಲಕವಾಗಿ ಪ್ರಕೃತಿ ಸಂಬಂಧವನ್ನು ಹೊಂದಿದ, **ಮುಮುಕ್ಷೋಃ** – ಮೋಕ್ಷಾರ್ಥಿಗೆ, **ಸಹಸಾ** - ಬೇಗನೆ ಎಂದರೆ ಕರ್ಮಯೋಗವಿಲ್ಲದೆ ಒಡನೆಯೇ, **ಜ್ಞಾನಯೋಗೇಽನಧಿಕಾರಾತ್** - ಜ್ಞಾನಯೋಗದಲ್ಲಿ ಅಧಿಕಾರವಿಲ್ಲದುದರಿಂದ, **ಕರ್ಮಯೋಗ ಏವಕಾರ್ಯಃ** - ಕರ್ಮಯೋಗವೇ ಅನುಷ್ಠಿಸತಕ್ಕದ್ದು, ಎಂದು ಮೂರನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿತು ಎಂಬ ಭಾವವು. ೮ ಮತ್ತು ೯ನೆಯ ಶ್ಲೋಕಗಳನ್ನು ಪರಾಂಬರಿಸಿ. ಇದರಿಂದ ಜ್ಞಾನಯೋಗಕ್ಕೆ ಅಧಿಕಾರವು ಕರ್ಮಯೋಗದ ಮೂಲಕವೇ ಎಂದು ಹೇಳಲ್ಪಟ್ಟಿತು ಎಂಬ ತಾತ್ಪರ್ಯವು. **ಜ್ಞಾನಯೋಗಾಧಿಕಾರಿಣೋಽಪಿ**- ಜ್ಞಾನಯೋಗಕ್ಕೆ ಶಕ್ತನಾಗಿರುವವನಿಗೂ ಕೂಡ, **ಅಕರ್ತೃತ್ವಾನುಸಂಧಾನಪೂರ್ವಕ ಕರ್ಮಯೋಗಏವ**- ತನಗೆ ಇಚ್ಛಾ ಮೊದಲಾದುದರ ಮೂಲಕ ಕರ್ತೃತ್ವವಿದ್ದರೂ ಕರ್ತೃತ್ವವಿಲ್ಲವೆಂಬ ಅನುಸಂಧಾನಪೂರ್ವಕವಾಗಿ ಕರ್ಮಯೋಗವೇ, **ಶ್ರೇಯಾನಿತಿ** - ಶ್ರೇಷ್ಠವೆಂದು, ಹಿತವಾದ್ದುದೆಂದು **ಸಹೇತುಕ ಮುಕ್ತಮ್**-ಸಕಾರಣವಾಗಿ ಹೇಳಲ್ಪಟ್ಟಿತು. ಆ ಹೇತುಗಳು ಯಾವುವೆಂದರೆ ಕರ್ಮಯೋಗವು ಅಭ್ಯಾಸವಿರುವದರಿಂದ ಸುಕರವಾಗಿಯೂ ಪ್ರಮಾದರಹಿತವಾಗಿಯೂ ಆತ್ಮಜ್ಞಾನವನ್ನೂ ಒಳಗೊಂಡಿರುವದಾಗಿಯೂ ಇರುವದರಿಂದ; ಆತ್ಮನು ಅಣುವಾಗಿ ಶರೀರವಿಲ್ಲದೆ ಕರ್ಮಮಾಡಲಾರನಾದುದರಿಂದ ಆ ಕರ್ತೃತ್ವವನ್ನು ಪ್ರಕೃತಿಯಲ್ಲಿ ಆರೋಪಿಸತಕ್ಕದ್ದು ; (೨೭-೮) ಇದೂ ಅಲ್ಲದೆ ಪರಮಾತ್ಮಸಙ್ಕಲ್ಪವಿಲ್ಲದೆ ಯಾವ ಕರ್ಮವೂ ನಡೆಯಲಾರದಾದುದರಿಂದ, ಆ ಕರ್ತೃತ್ವವನ್ನು ಪರಮಾತ್ಮನಲ್ಲೂ ಇಡತಕ್ಕದ್ದೆಂದೂ, ಇದರಿಂದ ಹೇಳಿದಂತಾಯಿತು(೩೦). **ಜ್ಞಾನಯೋಗಾಧಿಕಾರಿಣೋಽಪಿ** ಎಂದು ಅಪಿ ಶಬ್ದವಿರುವದರಿಂದ ಜ್ಞಾನಯೋಗಕ್ಕೆ ಅರ್ಹನಾಗಿರುವವನಿಗೂ, ಮತ್ತು ಅರ್ಹನಲ್ಲದವನಿಗೂ, ಸಾಮಾನ್ಯವಾಗಿ ಎಲ್ಲಾ ಕರ್ಮಯೋಗಾಧಿಕಾರಿಗೂ ಅಕರ್ತೃತ್ವಾನು

**ಭಾ. ಚತುರ್ಥೇನೇ ದಾನೀ ಮಸ್ಯೈವ ಕರ್ಮಯೋಗಸ್ಯ ನಿಖಿಲ ಜಗದುದ್ಧರಣಾಯ ಮನ್ವಂತರಾದಾ ವೇವೋ ಪದಿಷ್ಟತಯಾ ಕರ್ತವ್ಯತಾಂ ದ್ರಢಯಿತ್ವಾ, ಅನರ್ಗತ ಜ್ಞಾನತಯಾಸ್ಯೈವ ಜ್ಞಾನಯೋಗಾಕಾರತಾಂ ಪ್ರದರ್ಶ್ಯ, ಕರ್ಮಯೋಗಸ್ವರೂಪಂ, ತದ್ಭೇಧಾಃ, ಕರ್ಮಯೋಗೇ ಜ್ಞಾನಾಂಶಸ್ಯೈವ ಪ್ರಾಧಾನ್ಯಂ ಚೋಚ್ಯತೇ. ಪ್ರಸಜ್ಞಾಚ್ಚ ಭಗವದವತಾರ ಯಾಥಾತ್ಮ್ಯ ಮುಚ್ಯತೇ.**

---

ಸಂಧಾನವು ಆವಶ್ಯಕವೆಂದು ಹೇಳಿದಂತಾಯಿತು. ಶಿಷ್ಟತಯಾ ವ್ಯಪದೇಶ್ಯಸ್ಯತು-ಶ್ರೇಷ್ಠನೆಂದು ಹೇಳಿಸಿಕೊಳ್ಳುವ ಜ್ಞಾನಯೋಗಕ್ಕೆ ಸಮರ್ಥನಾಗಿರುವವನಿಗೂ ಅಥವಾ ಜ್ಞಾನವಿಲ್ಲದಿದ್ದರೂ ಶ್ರೇಷ್ಠನೆಂಬದಾಗಿ ಹೇಳಿಸಿಕೊಂಡು ಇತರರು ತನ್ನನ್ನು ಅನುಸರಿಸಿ ನಡೆಯುವ ಸಂದರ್ಭವುಳ್ಳವನಿಗೂ ಕೂಡ, ವಿಶೇಷತಃ - ಮುಖ್ಯವಾಗಿ, ಏಕೆಂದರೆ ಇತರರು ಈ ಶ್ರೇಷ್ಠನನ್ನು ಅನುವರ್ತಿಸಿ ನಡೆಯುವವರಿಂದ ಕರ್ಮಭ್ರಷ್ಟರಾಗಿ ವರ್ಣಸಾಂಕರ್ಯಕ್ಕೆ ಕಾರಣವಾಗುವದರಿಂದಲೂ ಎಂಬದಾಗಿ ಹೇತುಗಳು ಹೇಳಲ್ಪಟ್ಟವು: ಜ್ಞಾನಯೋಗನಾದರೋ ಅಭ್ಯಾಸರಹಿತವಾದುದರಿಂದ ದುಷ್ಕರವೆಂಬದಾಗಿಯೂ, ಪ್ರಮಾದಯುಕ್ತವಾಗಿಯೂ, ಆತ್ಮಜ್ಞಾನವಿರೋಧಿಗಳಾದ ಕಾಮಕ್ರೋಧಗಳಿಗೆ ವಶವಾಗಿಯೂ ಇರುವದರಿಂದ ಎಂದು ಹೇತುಗಳು ಹೇಳಲ್ಪಟ್ಟವು (೨೪). ಧರ್ಮನಿಶ್ಚಯರೂಪ ಲೋಕರಕ್ಷಣೆಗಾಗಿಯೂ ಬೇರೊಂದುಪಾಯ ಉಂಟೆಂಬ ಭೇದಬುದ್ಧಿಯುಂಟಾಗುವದರಿಂದಲೂ (೨೬) ಇಂತಹ ಪ್ರತ್ಯವಾಯಗಳಿಲ್ಲದೆ ಇರುವದಕ್ಕಾಗಿ ಮುಖ್ಯವಾಗಿ, **ಕರ್ಮಯೋಗ ಏವ ಕಾರ್ಯ ಇತಿ ಚೋಕ್ತಮ್**-ಕರ್ಮಯೋಗವೇ ಮಾಡತಕ್ಕದ್ದೆಂದೂ ಸಹ ಹೇಳಲ್ಪಟ್ಟಿತು. ಈ ಅಭಿಪ್ರಾಯವೇ ಯಾಮುನೇಯರ ಮೂರನೆಯ ಅಧ್ಯಾಯದ ಸಙ್ಗ್ರಹಶ್ಲೋಕವಾದ "**ಅಸಕ್ತ್ಯಾ ಲೋಕರಕ್ಷಾಯೈ**" ಎಂಬುವದರಲ್ಲೂ ಹೇಳಲ್ಪಟ್ಟಿರುತ್ತದೆ. ಜ್ಞಾನಯೋಗಕ್ಕೆ ಸಾಮರ್ಥ್ಯವಿರಲಿ, ಸಾಮರ್ಥ್ಯವಿಲ್ಲದೇ ಇರಲಿ, ಪ್ರಸಿದ್ಧನಾಗಿಯೇ ಇರಲಿ ಪ್ರಸಿದ್ಧನಲ್ಲದೇ ಇರಲಿ, ತನ್ನ ಪ್ರಯೋಜನವಾದ ಉಪಾಯ ಸಿದ್ಧಿಗೆ ಆಗಲಿ ಇತರರ ಪ್ರಯೋಜನಕ್ಕಾಗಿಯೇ ಆಗಲಿ, ಎಲ್ಲಾ ಸಂದರ್ಭವಲ್ಲೂ ಕರ್ಮಯೋಗವೇ ಅನುಷ್ಠಿಸತಕ್ಕದ್ದೆಂದು ಹೇಳಲ್ಪಟ್ಟಿತು ಎಂಬುದು ಶ್ರೀ ನಿಗಮಾಂತ ದೇಶಿಕರವರ ಅಭಿಪ್ರಾಯವು. ಇದೇ ಶ್ರೀ ಯತಿವರ್ಯರ **ಕರ್ಮಯೋಗ ಏವಕಾರ್ಯಃ** ಎಂಬ ಪ್ರಯೋಗದ ಅಭಿಪ್ರಾಯದಿಂದುಂಟಾಗುವ ಭಾವವು ಎಂಬ ತಾತ್ಪರ್ಯವು.

**ಚತುರ್ಥೇನ**-ಈ ನಾಲ್ಕನೆಯ ಅಧ್ಯಾಯದಿಂದ, **ಇದಾನೀಂ** - ಈಗ, **ಅಸ್ಯೈವಕರ್ಮಯೋಗಸ್ಯ**-ಈ ಕರ್ಮಯೋಗಕ್ಕೇ, **ನಿಖಿಲಜಗದುದ್ಧರಣಾಯ** - ಸಮಸ್ತ ಜಗತ್ತನ್ನೂ ಉದ್ಧಾರ ಮಾಡುವದಕ್ಕಾಗಿ, **ಮನ್ವಂತರಾದಾವೇವ** - ಮನ್ವಂತರಾದಿಯಲ್ಲೇ, **ಉಪದಿಷ್ಟತಯಾ** - ಉಪದೇಶಿಸಲ್ಪಟ್ಟಿದುದರಿಂದ, **ಕರ್ತವ್ಯತಾಂ** - ಮಾಡಿಯೇ ತೀರಬೇಕೆಂಬ ಇತಿಕರ್ತವ್ಯತಾಭಾವವನ್ನು **ದ್ರಢಯಿತ್ವಾ** - ಸಮರ್ಥನೆಮಾಡಿ, **ಅನ್ತರ್ಗತ ಜ್ಞಾನತಯಾ** - ಆತ್ಮಜ್ಞಾನವನ್ನು ಒಳಕೊಂಡಿರುವದರಿಂದ, **ಅಸ್ಯೈವ** - ಈ ಕರ್ಮಯೋಗಕ್ಕೇನೇ **ಜ್ಞಾನಯೋಗಾಕಾರತಾಂ** - ಜ್ಞಾನಯೋಗ ಸಾಮ್ಯವನ್ನೇ, **ಪ್ರದರ್ಶ್ಯ** - ಚೆನ್ನಾಗಿ ತೋರಿಸಿ, ಹೇಗೆಂದರೆ ಜ್ಞಾನಯೋಗದಲ್ಲಿ ಉಂಟಾಗುವ ಆತ್ಮಯಾಥಾತ್ಮ್ಯಜ್ಞಾನವು ಈ ಕರ್ಮಯೋಗದಲ್ಲೇ ಉಂಟಾಗಿ ಆತ್ಮಾವಲೋಕನವು ಭಕ್ತಿಯೋಗಾನುಷ್ಠಾನ ಸಮಯದಲ್ಲೇ ದೊರೆಯಬಹುದೆಂಬ ಭಾವವು ಸೂಚಿತವು. ಕರ್ಮಯೋಗದ ಸ್ವರೂಪವೂ **ತದ್ಭೇದಾಃ**-ಅದರ ಭೇದಗಳೂ ಮತ್ತು, ಕರ್ಮಯೋಗದಲ್ಲಿ, **ಜ್ಞಾನಾಂಶಸ್ಯೈವ ಚ ಪ್ರಾಧಾನ್ಯಂ** – ಜ್ಞಾನಭಾಗಕ್ಕೇನೇ ಪ್ರಾಧಾನ್ಯವೂ ಸಹ, **ಉಚ್ಯತೇ** - ಹೇಳಲ್ಪಡುತ್ತದೆ. ಈ ನಾಲ್ಕನೆಯ ಅಧ್ಯಾಯದಲ್ಲಿ ಹೇಳಲ್ಪಡುವ, ಅಂಶಗಳು ಆರು. ಅವು ಯಾವುವೆಂದರೆ :—

ಶ್ರೀ ಭಗವಾನುವಾಚ—

ಮೂ. ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹ ಮವ್ಯಯಂ ।
ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇ ಬ್ರವೀತ್ ॥ ೧.

(೧) ಕರ್ಮಯೋಗವು ಆವಶ್ಯಕವೆಂದು ಹೇಳಲ್ಪಟ್ಟಿತಲ್ಲಾ ಅದಕ್ಕೆ ಪ್ರಾಮಾಣಿಕತ್ವವೂ (೨ ಅದೂ ಅಕರ್ಮತಾಜ್ಞಾನಮಿಶ್ರವೆಂಬ ಭಾವವೂ, (೩) ಅದರ ಸ್ವರೂಪವೂ, (೪) ಅದರ ಭೇದಗಳೂ, (೫) ಜ್ಞಾನಾಂಶವೇ ಪ್ರಾಧಾನ್ಯವಾಗಿ ಉಳ್ಳದೆಂಬುದೂ (೬) ಪ್ರಾಸಜ್ಗಿಕವಾಗಿ ಅವತಾರ ರಹಸ್ಯಗಳೂ, ಎಂಬದಾಗಿ ಆರು ವಿಷಯಗಳು. ಆದರೆ "ಪ್ರಸಜ್ಗಾತ್ಸ್ವಸ್ವಭಾವೋಕ್ತಿಃ ಕರ್ಮಣೋಽಕರ್ಮತಾಸ್ಯ ಚ । ಭೇದಾ ಜ್ಞಾನಸ್ಯ ಮಾಹಾತ್ಮ್ಯಂ ಚತುರ್ಥಾಧ್ಯಾಯ ಉಚ್ಯತೇ" ಎಂಬ ಶ್ರೀ ಯಾಮುನೇಯರ ಸಜ್ಗ್ರಹಶ್ಲೋಕದಲ್ಲಿ ನಾಲ್ಕೇ ಹೇಳಲ್ಪಟ್ಟಿವೆಯಲ್ಲಾ ಎಂದರೆ ಕರ್ಮಯೋಗದ ಭೇದಗಳು ಹೇಳಲ್ಪಟ್ಟರೆ ಸ್ವರೂಪ ತಿಳಿಯದೆ ಭೇದಗಳು ವಿದಿತವಾಗುವದಿಲ್ಲವಾದುದರಿಂದ ಸ್ವರೂಪವು ಹೇಳಲ್ಪಟ್ಟಿತೆಂದು ಗ್ರಹಿಸತಕ್ಕದ್ದು. ಮತ್ತು ಸ್ವಸ್ವಭಾವೋಕ್ತಿಯು ಎಂದರೆ ಅವತಾರ ರಹಸ್ಯೋಕ್ತಿಯು ಕರ್ಮಯೋಗ ಪ್ರಾಮಾಣ್ಯವಿಷಯ ಚರ್ಚೆಯಲ್ಲೇ ಬಂದುದರಿಂದ, ಕರ್ಮಯೋಗ ಪ್ರಾಮಾಣ್ಯವೂ ಅದರಲ್ಲೇ ಅಂತರ್ಗತವು. ಆದುದರಿಂದ ಎರಡಕ್ಕೂ ಏನೂ ವ್ಯತ್ಯಾಸವಿಲ್ಲವು. ಆಕಾರಣದಿಂದ ಶ್ರೀ ಯಾಮುನೇಯರ ಸಜ್ಗ್ರಹ ಶ್ಲೋಕವನ್ನನುಸರಿಸಿಯೇ ಶ್ರೀ ಭಾಷ್ಯಕಾರರೂ ಭಾಷ್ಯವನ್ನು ಬರೆದಿರುತ್ತಾರೆ. ಈ ಸಜ್ಗ್ರಹ ಶ್ಲೋಕಕ್ಕೆ ವ್ಯಾಖ್ಯಾನವನ್ನು ಅಧ್ಯಾಯಾಂತ್ಯದಲ್ಲಿ ಕಾಣಬಹುದು.

ಮೂಲಕ್ಕೆ ಅರ್ಥವು :—ಶ್ರೀಕೃಷ್ಣಭಗವಾನರವರು ಹೇಳುತ್ತಾರೇನೆಂದರೆ :—ಮೊದಲು ತಾವು ಮಾಡಿದ ಉಪದೇಶವೇ ಪ್ರಮಾಣವಾಗಿರುವಾಗ ಸರ್ವೇಶ್ವರನಾದ ಶ್ರೀಕೃಷ್ಣನೂ ಸಹ ಲೋಕವಿಡಂಬನಾರ್ಥವಾಗಿ, ಸಾಮಾನ್ಯವಾಗಿ, ಜನರಿಗೆಲ್ಲಾ ಶಾಸ್ತ್ರವೇ ಪ್ರಮಾಣವೆಂದು ಭಾವಿಸಲಿ, "ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ" (ಗೀ. ೧೬-೨೪) ಎಂದು ಮುಂದೆ ಹೇಳುವ ಅಮೋಘೋಪದೇಶವನ್ನು ಪರಮ ಹಿತವಾಗಿ ಭಾವಿಸಲಿ, ಎಂದು ತೋರಿಸುವದಕ್ಕಾಗಿ ಎಲ್ಲಾ ಮೋಕ್ಷಶಾಸ್ತ್ರವು ತನ್ನಿಂದಲೇ ಉಂಟಾಗಿ ತನ್ನಿಂದಲೇ ಉಪದಿಷ್ಟವಾದುದರಿಂದ, ಈ ಶಾಸ್ತ್ರವು ಪರಮ ಗ್ರಾಹ್ಯವೆಂದು ಅರ್ಜುನನು ತಿಳಿಯಲಿ ಎಂಬ ಅಭಿಪ್ರಾಯದಿಂದ ಮೊದಲು ಈ ಕರ್ಮಯೋಗಾದಿಗಳಿಗೆ ಪ್ರಾಮಾಣ್ಯವನ್ನು ಸ್ಥಾಪಿಸುತ್ತಾರೆ. ಆದರೆ ಕೆಲವರು ಇಲ್ಲಿನ ಯೋಗಶಬ್ದವು ಜ್ಞಾನಯೋಗವನ್ನು ಬೋಧಿಸುತ್ತದೆಂದು ಹೇಳುವರು. ಇದು ಪ್ರಕರಣಕ್ಕೆ ವಿರುದ್ಧವು. ಮೂರನೆಯ ಅಧ್ಯಾಯದಲ್ಲಿ ಮುಮುಕ್ಷುವಾದವನು ಕರ್ಮಯೋಗದಿಂದಲೇ ಆರಂಭಿಸತಕ್ಕದ್ದೆಂದು ಸ್ಥಾಪಿಸಿದನಂತರವೂ ಜ್ಞಾನಯೋಗವು ಇಲ್ಲಿ ಹೇಳಲ್ಪಟ್ಟಿತೆಂದರೆ ಮೂರನೆಯ ಅಧ್ಯಾಯದ ತಾತ್ಪರ್ಯವು ಮನಸ್ಸಿಗೆ ಹಿಡಿಯದೇ ಹೇಳುವ ಅಭಿಪ್ರಾಯವಾಗುತ್ತದೆ. ಮುಂದೆಯೂ ಕರ್ಮಯೋಗ ಪ್ರಾಧಾನ್ಯವೇ "ಕುರುಕರ್ಮೈವತಸ್ಮಾತ್ತ್ವಂ" (೪.೧೫) ಎಂಬಲ್ಲಿಯೂ ಹೇಳಿ ಸ್ಥಾಪಿತವಾಗುವದರಿಂದ ಇಮಂ ಯೋಗಂ ಎಂಬುದರಿಂದ ಜ್ಞಾನಯೋಗವು ಹೇಳಲ್ಪಟ್ಟಿತೆಂಬ ವ್ಯಾಖ್ಯಾನವು ಸಮಂಜಸವಾಗುವದಿಲ್ಲವು. ಅಹಂ - ನಾನು, ಅವ್ಯಯಂ-ನಾಶರಹಿತ ಫಲವಾದ ಮೋಕ್ಷವನ್ನು ಕೊಡುವ, ಇಮಂ ಯೋಗಂ - ಈ ಕರ್ಮಯೋಗವನ್ನು, ವಿವಸ್ವತೇ - ಸೂರ್ಯನಿಗೆ, ಪ್ರೋಕ್ತವಾನ್ - ಹಿಂದೆ ಹೇಳಿದವನಾದೆನು, ವಿವಸ್ವಾನ್ - ಸೂರ್ಯನು, ಮನವೇ - ತನ್ನ ಮಗನಾದ ವೈವಸ್ವತ ಮನುವಿಗೆ, ಪ್ರಾಹ - ಈ ಕರ್ಮಯೋಗವನ್ನೇ ಹೇಳಿದನು; ಮನುವಾದರೋ, ಇಕ್ಷ್ವಾಕವೇ - ಇಕ್ಷ್ವಾಕು ಮಹಾರಾಜನಿಗೆ, ಅದನ್ನೇ, ಅಬ್ರವೀತ್ - ಹೇಳಿದನು. ಅಲ್ಲಿಂದ ಮುಂದಕ್ಕೂ

ಮೂ. ಏವಂ ಪರಂಪರಾ ಪ್ರಾಪ್ತಮಿಮಂ ರಾಜರ್ಷಯೋ ವಿದುಃ ।
ಸಕಾಲೇನೇಹ ಮಹತಾ ಯೋಗೋನಷ್ಟಃ ಪರಂತಪ ॥ ೨.
ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।
ಭಕ್ತೋಽಸಿ ಮೇ ಸಖಾಚೇತಿ ರಹಸ್ಯಂ ಹ್ಯೇತದುತ್ತಮಮ್ ॥ ೩.

ಇಕ್ಷ್ವಾಕು ವಂಶೀಯರೆಲ್ಲಾ ಯೋಗನಿಷ್ಠರಾದುದರಿಂದಲೇ ಅವರ ಚರಿತ್ರೆಯು ಪರಮಗ್ರಾಹ್ಯವೆಂದು ಮಹಾ ಕವಿಯು "ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ" (ರಘು) ಎಂಬಲ್ಲಿ ಹೇಳಿರುತ್ತಾರೆ. ॥ ೧ ॥ ಏವಂ-ಈ ಪ್ರಕಾರವಾಗಿ, ಪರಂ ಪರಾಪ್ರಾಪ್ತಂ - ಉಪದೇಶ ಮೂಲಕ ಪರಂಪರೆಯಾಗಿ ಬಂದ, ಇಮಂ-ಈ ಕರ್ಮಯೋಗವನ್ನು, ರಾಜರ್ಷಿಗಳು ಎಂದರೆ ರಾಜರಾಗಿದ್ದರೂ ಋಷಿಗಳಹಾಗೆ ಕರ್ಮನಿಷ್ಠರಾದವರು, ವಿದುಃ-ಚನ್ನಾಗಿ ತಿಳಿದಿರುತ್ತಾರೆ, ಇಹ-ಈ ಲೋಕದಲ್ಲೀಗ ಮಹತಾ ಕಾಲೇನ - ಕಲ್ಪಾದಿ ಹಿಡಿದ ಈ ದ್ವಾಪರಯುಗದವರೆಗೂ ಬಹುಕಾಲವಾದುದರಿಂದ, ಸಃ ಯೋಗಃ - ಅಂತಹ ಮೋಕ್ಷದಾಯಕವಾದ ಉತ್ಕೃಷ್ಟವಾದ ಕರ್ಮಯೋಗವು, ಹೇ ಪರಂತಪ-ಶತ್ರುಗಳನ್ನು ತಪಿಸುವ ಅರ್ಜುನನೇ, ನಷ್ಟಃ-ನಷ್ಟವಾಯಿತು ಎಂದರೆ ಅನುಷ್ಠಾನಕ್ಕೆ ಬಾರದೆ ಖಿಲವಾಯಿತು, ಸ ಏವ-ಹಾಗೆ ಪರಂಪರಾ ಪ್ರಾಪ್ತವಾಗಿ ರಾಜರ್ಷಿಗಳ ಅನುಷ್ಠಾನಕ್ಕೆ ಸಿಕ್ಕಿ, ನನ್ನಿಂದಲೇ ಉಪದಿಷ್ಟವಾದ, ಪುರಾತನ ವಾದ ಅಯಂ ಯೋಗಃ-ಆ ಕರ್ಮಯೋಗವೇ ಅದ್ಯ-ಈಗ, ತೇ-ನಿನಗೆ, ಮಯಾಪ್ರೋಕ್ತಃ-ನನ್ನಿಂದ ಉಪದೇಶಿಸಲ್ಪಟ್ಟಿತು. ಅದೇನು ಅಂತಹ ಅಮೋಘೋಪದೇಶವನ್ನು ನಿನಗೆ ಅನುಗ್ರಹಿಸಿದುದು ಎಂದು ಕೇಳುವೆಯೋ ಎಂದರೆ, ಭಕ್ತೋಽಸಿ ನನಗೆ ತುಂಬಾ ಭಕ್ತನಾಗಿರುವೆ, ಮತ್ತು ಸಖಾಚೇತಿ ಪ್ರೋಕ್ತಃ-ಸಖನೂ ಆಗಿದ್ದೀ ಎಂದೂ ಉಪದೇಶಿಸಿದೆನು; ನೀನು ನರನು, ನಾನು ನಾರಾಯಣನು, ಹೀಗೆ ಸಖ್ಯವು. ಈ ಯೋಗವೆಂಥಾದ್ದೆಂದು ಕೇಳುವಿಯೋ ? ಏತತ್ - ಇದು, ಉತ್ತಮಂ ರಹಸ್ಯಂ-ಸರ್ವೋತ್ಕೃಷ್ಟವಾದ ರಹಸ್ಯವು, ನಿನ್ನಂತಹ ಯೋಗ್ಯನಾದ ಪಾತ್ರವರಿತು ಉಪದೇಶಿಸತಕ್ಕದ್ದೇ ವಿನಾ, ಎಲ್ಲರಿಗೂ ಸಾಮಾನ್ಯವಾಗಿ ಉಪದೇಶಿಸತಕ್ಕದ್ದಲ್ಲವು. ಶಾಸ್ತ್ರಾರ್ಥವು ಅತಿ ಗಹನವಾಗಿ ವೇದಾಂತ ರಹಸ್ಯವಾದುದರಿಂದ ನಾನಲ್ಲದೆ ಇತರರು ಉಪದೇಶಿಸಲೂ ಸಾಧ್ಯವಲ್ಲವು. ನಿನ್ನಂತಹ ಅಧಿಕಾರಿಯು ದೊರೆಯುವದೂ ದುರ್ಲಭವೆಂಬ ಭಾವವು. ಇಲ್ಲಿ "ಯೋಗಂ" ಎಂಬುದು ಮೋಕ್ಷಾರ್ಥಿಯು ಕರ್ಮಯೋಗದಲ್ಲೇ ನಿಂತು ಬಿಡುವದಿಲ್ಲವಾದುದರಿಂದ ಭಕ್ತಿಯೋಗಕ್ಕೂ ಉಪಲಕ್ಷಣವಾಗಿ ಹೇಳಲ್ಪಟ್ಟಿತೆಂದು ಭಾವಿಸಿದರೂ ಭಾವಿಸಬಹುದು. ಕರ್ಮಯೋಗವು ಮೋಕ್ಷಪ್ರಾಪ್ತಿಗೆ ಮುಖ್ಯವಾದ ಸಾಧನವಾದ ಭಕ್ತಿಯೋಗದ್ವಾರಾ ಮೋಕ್ಷದಾಯಕವಾದುದರಿಂದ, ಭಕ್ತಿಯೋಗಕ್ಕೂ ಉಪಲಕ್ಷಣವೆಂದೇ ಭಾವಿಸತಕ್ಕದ್ದಾಗಿರುತ್ತದೆ; ಆದುದರಿಂದಲೇ ಶಾಶ್ವತ ಫಲ ಸಾಧಿಸುವದಾಗಿ ಅವ್ಯಯಂ ಎಂದು ಹೇಳಲ್ಪಟ್ಟಿತು. ಹೀಗೆ ಈ ಬ್ರಹ್ಮವಿದ್ಯೆಯು ಸರ್ವೇಶ್ವರನಾದ ತನ್ನಿಂದಲೇ ಹೊರಟು ಪರಂಪರಾಕ್ರಮದಿಂದ ಬಂದುದಾದುದರಿಂದ ಇದಕ್ಕೆ ಪ್ರಾಧಾನ್ಯವೂ, ಪ್ರಾಮಾಣಿಕತ್ವವೂ, ಅಪೌರುಷೇಯತ್ವವೂ ಸ್ಥಾಪಿತವು. ಇದೇ ವೇದಾಂತ ಶಾಸ್ತ್ರವಾದುದರಿಂದ ಶ್ರೀಮದ್ಗೀತಾಸೂಪನಿಷತ್ಸು ಎಂಬ ಪ್ರಯೋಗವೂ ಇರುತ್ತದೆ. ಪ್ರಾಸಙ್ಗಿಕವಾಗಿ ವೇದವೇನು ಅಪೌರುಷೇಯವೇ ಪೌರುಷೇಯವೇ ಎಂಬ ಚರ್ಚೆಯು ಶಾಸ್ತ್ರಜ್ಞರಾದ ಪಂಡಿತ ಮಂಡಲಿಯಲ್ಲಿ ಹಿಂದೆಯೂ ಈಗಲೂ ಸಹ ಉಂಟು. ಇಂತಹ ಸಂದೇಹಕ್ಕೆ ಕಾರಣವೇ ಇಲ್ಲವು. ವೇದವು ಆದಿಯಲ್ಲಿ ಸರ್ವೇಶ್ವರನಿಂದ ಚತುರ್ಮುಖನಿಗೆ ಉಪದೇಶಿಸಲ್ಪಟ್ಟು ಅಲ್ಲಿಂದ

ಭಾ. ಯೋಽಯಂ ತವೋದಿತೋ ಯೋಗಃ, ಸ ಕೇವಲಂ ಯುದ್ಧಪ್ರೋತ್ಸಾಹನಾಯೇ ದಾನೀ ಮುದಿತ ಇತಿ ನಮನ್ತವ್ಯಂ. ಮನ್ವನ್ತರಾದಾವೇವ ನಿಖಿಲ ಜಗದುದ್ಧರಣಾಯ ಪರಮಪುರುಷಾರ್ಥಲಕ್ಷಣ ಮೋಕ್ಷಸಾಧನತಯೇಽಮಂ ಯೋಗ ಮಹಮೇವ ವಿವಸ್ವತೇಪ್ರೋಕ್ತವಾನ್, ವಿವಸ್ವಾಂಶ್ಚ ಮನವೇ, ಮನುರಿಕ್ಷ್ವಾಕವ, ಇತ್ಯೇವಂ ಸಮ್ಪ್ರದಾಯ ಪರಂಪರಯಾ ಪ್ರಾಪ್ತ ಮಿಮಂ ಯೋಗಂ ಪೂರ್ವೇ ರಾಜರ್ಷಯೋ ವಿದುಃ.

ಮುಂದಕ್ಕೆ ಉಚ್ಚಾರಣಾನೂಚ್ಚಾರಣರೂಪದಲ್ಲಿ ಅನರವರುಗಳ ಶಿಷ್ಯರಿಗೆ ಬೋಧಿಸಲ್ಪಟ್ಟವೆಂದೂ ಭಾವಿಸತಕ್ಕದ್ದಾಗಿರುತ್ತದೆ ಶ್ರುತಿಪ್ರಮಾಣವೂ ಹಾಗೆಯೇ ಇರುತ್ತದೆ. "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ" (ಶ್ವೇ. ೬-೮) ಹೀಗೆ ಸ್ಪತಃ ವ್ಯಕ್ತವಾಗಿರುವಾಗ, ಆಧುನಿಕ ಪಂಡಿತ ಮಂಡಲಿಯು ಈ ವಿಷಯದಲ್ಲಿ ಒಂದು ಕಮಿಟಿಯನ್ನು ಏರ್ಪಡಿಸಿರುತ್ತಾರೆಂದು ಕೇಳಿ ಆಶ್ಚರ್ಯವಾಯಿತು. ಪಂಡಿತರಿಗೇನೆ ಇಂತಹ ಸಂಶಯಗಳು ಪ್ರಾಪ್ತವಾದರೆ ಮಾಡತಕ್ಕದ್ದೇನಿರುತ್ತದೆ. ವೇದವೂ ಅದರ ಭಾಷೆಯಾದ ಸಂಸ್ಕೃತವೂ ಸಹ ಅಪೌರಷೇಯವೆಂಬುದರಲ್ಲಿ ಈಷದಪಿ ಸಂದೇಹವಿಲ್ಲವು. ಹಾಗೆ ಉಚ್ಚಾರಣ ನೂಚ್ಚಾರಣೆಯ ಪ್ರಕಾರ ಬಂದುದರಿಂದಲೇ ಅವುಗಳನ್ನು ಇಂತವರು ಮಾಡಿದರೆಂದು ಹೆಸರಿಲ್ಲವು. ಶ್ರೀಮದ್ರಾಮಾಯಣ ಭಾರತಾದಿ ಗ್ರಂಥಕರ್ತರು ವಾಲ್ಮೀಕಿ ವ್ಯಾಸಾದಿಗಳೆಂದಿರುವ ಹಾಗೆ, ಹೆಸರುಗಳಿಲ್ಲದಿರುವದರಿಂದಲೂ ಸಹ ಊಹಿಸಬಹುದು.

ಭಾಷ್ಯಾರ್ಥವು :—ಯೋಽಯಂ ತವೋದಿತೋಯೋಗಃ - ಯಾವ ಈ ನಿನಗೆ ಉಪದೇಶಿಸಲ್ಪಟ್ಟ ಕರ್ಮಯೋಗವೋ, ಸಃ - ಅದೇ, ಕೇವಲಂ ಯುದ್ಧ ಪ್ರೋತ್ಸಾಹ ನಾಯ – ಕೇವಲ ಯುದ್ಧವನ್ನು ಮಾಡಲಿ ಎಂಬ ಪ್ರೋತ್ಸಾಹಕ್ಕಾಗಿ ಮಾತ್ರವೇ, ಇದಾನೀ ಮುದಿತ ಇತಿ- ಈಗ ಉಪದೇಶಿಸಲ್ಪಟ್ಟತೆಂದು, ನಮಂತವ್ಯಂ - ನೀನು ತಿಳಿಯತಕ್ಕದ್ದಲ್ಲವು. ಮನ್ವಂತರಾದಾವೇವ - ಈ ವೈವಸ್ವತಮನ್ವಂತರದ ಪ್ರಾರಂಭದಲ್ಲೇ, ನಿಖಿಲ ಜಗದುದ್ಧರಣಾಯ - ಸಮಸ್ತ ಜಗತ್ತಿನ ಪ್ರಾಣಿಗಳ ಉದ್ಧಾರಕ್ಕಾಗಿ, ಪರಮ ಪುರುಷಾರ್ಥಲಕ್ಷಣ ಮೋಕ್ಷಸಾಧನತಯಾ - ಇದು"ಅನ್ವಯ" ಶಬ್ದ ತಾತ್ಪರ್ಯವು. ಮೋಕ್ಷವನ್ನು ಕೊಡುವ ಲಕ್ಷಣದಿಂದ, ಇಮಂ ಯೋಗಂ- ಈ ಕರ್ಮ ಯೋಗವನ್ನು, ಅಹಮೇವ - ನಾನೆಯೇ, ಏಕೆಂದರೆ ಇನ್ನು ಯಾರಿಗೂ ಸ್ವಾರಸ್ಯವಾಗಿ ಶಾಸ್ತ್ರದಲ್ಲಿ ಹೇಳಿರುವ ರೀತ್ಯಾ ಉಪದೇಶಿಸಲು ಶಕ್ತಿ ಯಿಲ್ಲದುದರಿಂದ ನಾನೆಯೇ ವಿವಸ್ವತೇ ಪ್ರೋಕ್ತವಾನ್ - ನನ್ನ ಅಭಿಪ್ರಾಯವು ಪರಂಪರಯಾ ಲೋಕವಿದಿತವಾಗಲಿ ಎಂಬ ಉದ್ದೇಶ್ಯದಿಂದ ಸೂರ್ಯನಿಗೆ ಹೇಳಿದವನಾದೆನು. ಅಥವಾ ಅನ್ವಯ ಶಬ್ದವು ಇನ್ನೊಂದು ಅಭಿಪ್ರಾಯವನ್ನೂ ಸೂಚಿಸುತ್ತದೆ. ಹೇಗೆಂದರೆ ಹಿಂದೆ "ಮಯಿಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ" ಈ ಕರ್ಮಯೋಗವು ಮಾಡತಕ್ಕದ್ದೆಂದು ಹೇಳಲ್ಪಟ್ಟಿರುವದರಿಂದ ಇಂತಹ ಕೃಪಾನಿಧಿಯಾಗಿ ಸರ್ವಜ್ಞನಾಗಿರುವವನಲ್ಲಿ ಮಾಡಲ್ಪಟ್ಟ ಆರಾಧನೆಗೆ ಎಂದಿಗೂ ಚ್ಯುತಿಯಿಲ್ಲವೆಂದು ಅನ್ವಯ ಶಬ್ದವು ಬೋಧಿಸುತ್ತದೆ. ಮನ್ವಂತರಕ್ಕೆ ಕಾರಣಭೂತನಾಗಿರುವ ವೈವಸ್ವತ ಮನುವಿಗೂ ತಂದೆಯಾದ ವಿವಸ್ವಾನನಿಗೆ ಉಪದೇಶಿಸಿದುದರಿಂದ, ಮನ್ವಂತರಾದಾವೇವ ಎಂಬ ಪ್ರಯೋಗವು. ಹಿಂದೆ ಯುದ್ಧ ಪ್ರೋತ್ಸಾಹನಕ್ಕಾಗಿ ಮಾತ್ರವೇ ಅಲ್ಲವೆಂದು ಹೇಳಿದನಂತರ, ಇನ್ನು ಯಾವ ಉದಾರಭಾವದಿಂದೆಂದರೆ, ನಿಖಿಲಜಗದುದ್ಧರಣಾಯ ಎಂದು ಹೇಳಿದರು-ಮೋಕ್ಷಾರ್ಥಿಗಳಿಗೆ ಪರಮಪುರುಷಾರ್ಥರೂಪ ಮೋಕ್ಷವನ್ನು ಕೊಟ್ಟು ಕಾಪಾಡಬೇಕೆಂಬ ಶರಣ್ಯನಾದ ತನ್ನ ವಾತ್ಸಲ್ಯೌದಾರ್ಯಾದಿಭಾವಗಳಿಂದ ಉಪದೇಶಿಸಲ್ಪಟ್ಟದುದು ಈ ಯೋಗ

**ಭಾ.** ಸ ಮಹತಾ ಕಾಲೇನ ತತ್ತಚ್ಛ್ರೋತೃ ಬುದ್ಧಿಮಾಂದ್ಯಾದ್ವಿನಷ್ಟ ಪ್ರಾಯೋಽಭೂತ್. ಸ್ವವಿಷಾಯ ಮಸ್ಖಲಿತ ಸ್ವರೂಪಃ ಪುರಾತನೋ ಯೋಗಃ ಸಖ್ಯೇನಾತಿಮಾತ್ರ ಭಕ್ತ್ಯಾ ಚ ಮಾಮೇವ ಪ್ರಪನ್ನಾಯ ತೇ ಮಯಾ ಪ್ರೋಕ್ತಃ – ಸಪರಿಕರಸ್ಸವಿಸ್ತರ ಮುಕ್ತ ಇತ್ಯರ್ಥಃ। ಮದನ್ಯೇನ ಕೇನಾಪಿ ಜ್ಞಾತುಂ ವಕ್ತುಂ ಚಾಶಕ್ಯಂ, ಯತ ಇದಂ ವೇದಾನ್ತೋದಿತ ಮುತ್ತಮಂ ರಹಸ್ಯಂ ಜ್ಞಾನಂ ॥ ೧ ॥ ೨ ॥ ೩ ॥

ವಾದುದರಿಂದ, ಇದು ಅವ್ಯಯವೆಂದು ಶ್ಲಾಘಿಸಲ್ಪಟ್ಟಿತು. ಅಹಮೇವ ವಿವಸ್ವತೇ ಪ್ರೋಕ್ತವಾನ್, ಎಂಬ ಅವಧಾರಣದ ಉದ್ದೇಶ್ಯವು, ತಾನೇ ಮನ್ವಂತರಾದಿಯಲ್ಲೂ, ಈಗ ಈ ಭಾರತ ಯುದ್ಧಕಾಲದಲ್ಲಿ ಅರ್ಜುನನಿಗೂ ಉಪದೇಶಿಸಿರುವದರಿಂದ ಮುಂದೆ ಅವತಾರ ಮಾಹಾತ್ಮ್ಯ ರಹಸ್ಯಾದಿಗಳ ಅರ್ಜುನನ ಪ್ರಶ್ನೆಗಳಿಗೆ ಕಾರಣವನ್ನು ಸೂಚಿಸುತ್ತದೆ. ವಿವಸ್ವಾಂಶ್ಚ ಮನವೇ - ಸೂರ್ಯನೂ ತನ್ನ ಮಗನಾದ ಮನುವಿಗೆ ಉಪದೇಶಿಸಿದನು; ಮನುರಿಕ್ಷ್ವಾಕವೇ- ಮನುವು ಇಕ್ಷ್ವಾಕುಮಹಾರಾಜನಿಗೆ ಉಪದೇಶಿಸಿದನು ; ಇತಿ-ಎಂಬದಾಗಿ, ಏವಂ-ಹೀಗೆ, ಸಂಪ್ರದಾಯ ಪರಂಪರಯಾಪ್ರಾಪ್ತಂ-ತಂದೆಯಿಂದ ಮಗನಿಗೂ, ಆಚಾರ್ಯರಿಂದ ಶಿಷ್ಯರಿಗೂ ಹೀಗೆ ಸಂಪ್ರದಾಯ ಪರಂಪರೆಯಿಂದುಂಟಾದ, ಇಮಂ ಯೋಗಂ - ಈ ನಾನು ಉಪದೇಶಿಸಿದ ಕರ್ಮಯೋಗವನ್ನು, ಪೂರ್ವೇ ರಾಜರ್ಷಯೋ ವಿದುಃ-ಪೂರ್ವಕಾಲದವರಾದ ಋಷಿಗಳ ಹಾಗಿರುವ ರಾಜರುಗಳೂ, ವಿದುಃ-ಉಪದೇಶಮೂಲಕ ಗ್ರಹಿಸಿರುತ್ತಾರೆ. ಅವರುಗಳು ಯಾರೆಂದರೆ ಅಶ್ವಪತಿ, ಜನಕ, ಅಂಬರೀಷ ಇಕ್ಷ್ವಾಕುವಂಶದ ರಾಜರೂ ಮೊದಲಾದವರು. ಈಗಲೂ ಅರ್ಜುನನನ್ನು ಕುರಿತು ಹೇಳಿರುವದೂ ಸಹ ಆ ಮಹತ್ತಾದ ಉದ್ದೇಶ್ಯದಿಂದಲೇ ಎಂಬುದು ಸೂಚಿತವು. ಅಂತಹ ಉದ್ದೇಶ್ಯವನ್ನು ಈ ರಾಜಸ ತಾಮಸ ಪ್ರಕೃತಿಗಳು ಉಪಯೋಗಿಸಿಕೊಳ್ಳಲಿಲ್ಲವೇ ಎಂಬ ಪರಿತಾಪದಿಂದ ಮುಂದೆ ಯೋಗೋನಷ್ಟಃ ಪರಂತಪ ಎಂದು ಹೇಳುತ್ತಾರೆ. ಮನುವು ತನಗೆ ಪ್ರಾಪ್ತವಾದ ಉಪದೇಶವನ್ನು ಮುಂದೆ ಎಲ್ಲರಿಗೂ ಉಪಯುಕ್ತವಾಗಲೆಂದು ಸ್ಮೃತಿರೂಪದಲ್ಲಿ ಬರೆಯುತ್ತಾರೆಂದು, ಶ್ರುತಿಯಲ್ಲೇ "ಯದ್ವೈಕಿಂಚನ ಮನುರವದತ್ ತದ್ಭೇಷಜಂ" ಮನುವು ಅಲ್ಪಸ್ವಲ್ಪ ಏನನ್ನು ಹೇಳಿದರೂ, ಅದೆಲ್ಲಾ ಭವರೋಗಕ್ಕೆ ಸಿದ್ಧೌಷಧವೆಂದು ಹೊಗಳಲ್ಪಟ್ಟಿರುತ್ತದೆ. ಅಂತಹ ಮನುವು ಏನನ್ನು ಹೇಳಿರುತ್ತಾನೆ ಎಂದರೆ,—"ವೇದೋದಿತಂ ಸ್ವಕಂ ಕರ್ಮ ನಿತ್ಯಂ ಕುರ್ಯಾದತಂದ್ರಿತಃ। ತದ್ಧಿ ಕುರ್ವನ್ಯಥಾಶಕ್ತಿ ಪ್ರಾಪ್ನೋತಿ ಪರಮಾಂ ಗತಿಂ ॥ ವರ್ಣಾಶ್ರಮಪರಿಭ್ರಷ್ಟಃ ಪತಿತಃಪರಿಕೀರ್ತಿತಃ। ತಸ್ಮಾತ್ಸರ್ವಪ್ರಯತ್ನೇನ ವರ್ಣಧರ್ಮಂ ಸಮಾಚರೇತ್" ಇಲ್ಲಿ ಇಮಂ ಯೋಗಂ ಎಂಬುದರಿಂದ ಕರ್ಮಯೋಗವೇ ಹೇಳಲ್ಪಟ್ಟಿತೇ ವಿನಾ ಇತರರು ಅಭಿಪ್ರಾಯಪಡುವಹಾಗೆ ಈ ಅಧ್ಯಾಯದಲ್ಲಿ ಹೇಳಲ್ಪಡುವ ಜ್ಞಾನಯೋಗವಲ್ಲವು. ಈಗ ಅರ್ಜುನನಿಗೆ ಶ್ರೋತೃ ಪ್ರತ್ಯಕ್ಷವಾಗಿರುವದು ಕರ್ಮಯೋಗವೇ,ಆದುದರಿಂದ ಕರ್ಮಯೋಗವೆಂದೇ ಅರ್ಥಮಾಡಬೇಕಾಗಿರುತ್ತದೆ. ಕೇವಲಂ ಯುದ್ಧಪ್ರೋತ್ಸಾಹನಾಯ ಉದಿತ ಇತಿ ನಮನ್ತವ್ಯಂ ಎಂದು ಮೂಲದಲ್ಲಿ ಹೇಳಿದರ್ಥಕ್ಕೆ ಕಾರಣವು ಏನೆಂದರೆ, ಆ ಯೋಗವು, ಅವ್ಯಯವೆಂದೂ, ರಹಸ್ಯಮೇತದುತ್ತಮಂ - ಎಂದೂ ಹೇಳಿರುವದರಿಂದ ಈ ಅಭಿಪ್ರಾಯವು ಸೂಚಿತವು;ಏವಂಪರಂಪರಾಪ್ರಾಪ್ತಂ ಎಂಬಲ್ಲಿ ಅರ್ಥಗರ್ಭಿತವಾಗಿರುವದು,ಸಂಪ್ರದಾಯ ಪರಂಪರೆಯು ಸರ್ವಶಾಸ್ತ್ರೋಪದೇಶವು ಎಂಬುದು; ಅದರಲ್ಲೂ ಮುಖ್ಯವಾಗಿ ಮೋಕ್ಷಶಾಸ್ತ್ರವು ಸಂಪ್ರದಾಯರೀತ್ಯಾ ತಂದೆಯಿಂದ ಮಕ್ಕಳಿಗೂ, ಈಗ ತಂದೆಗಳು ತುಂಬಾ ಶಾಸ್ತ್ರಜ್ಞರಲ್ಲದುದರಿಂದ, ಗುರುವಿನಿಂದ ಶಿಷ್ಯರಿಗೂ ಉಪದೇಶಾರ್ಹವೆಂಬುದು ; ಹಾಗೆ ಉಪದೇಶಿಸಲ್ಪಟ್ಟರೇನೇ

ಸಂಸ್ಕಾರಯುಕ್ತವಾಗಿ ಶಿಷ್ಯಜ್ಞಾನವು ಕಾರ್ಯಕಾರಿಯಾಗುತ್ತದೆಂಬ ಭಾವವೂ ಸೂಚಿತವು. ಸಃ - ಅಂತಹ ಮಾಹಾತ್ಮ್ಯಯುಳ್ಳ ಕರ್ಮಯೋಗವು, ಮಹತಾಕಾಲೇನ - ತುಂಬಾ ಕಾಲಯಾಪನೆಯಿಂದ, ತತ್ತಚ್ಛ್ರೋತೃ ಬುದ್ಧಿಮಾಂದ್ಯಾತ್ - ಆಯಾ ಉಪದಿಷ್ಟರಾದವರ ಬುದ್ಧಿಮಾಂದ್ಯದಿಂದ, ವಿನಷ್ಟಪ್ರಾಯೋಽಭೂತ್ - ನಷ್ಟವಾದಹಾಗೆ ಆಯಿತು, ನಷ್ಟವಾಯಿತು ಎಂದರೆ ಸಂಪೂರ್ಣನಾಶವಾಯಿತೆಂಬರ್ಥವಲ್ಲವು. ಏಕೆಂದರೆ ಅರ್ಜುನ ಶ್ರೀಕೃಷ್ಣರ ಕಾಲದಲ್ಲೂ ಸಹ ವ್ಯಾಸ, ಭೀಷ್ಮ, ಅಕ್ರೂರ, ಉದ್ಧವ, ಸಂಜಯರೇ ಮೊದಲಾದ ಅನೇಕ ಕರ್ಮನಿಷ್ಠರು ಇದ್ದೇ ಇದ್ದರು. ಆದುದರಿಂದ ಕರ್ಮಯೋಗನಿಷ್ಠರು ಆಗ ವಿಶೇಷವಾಗಿರಲಿಲ್ಲನೆಂಬಭಿಪ್ರಾಯದಿಂದ "ಯೋಗೋನಷ್ಟಃ ಪರಂತಪ" ಎಂದು ಹೇಳಲ್ಪಟ್ಟಿತು. ಏತರಿಂದ ನಷ್ಟವಾಯಿತು ಎಂದು ತಿಳಿಸುವದಕ್ಕಾಗಿ ಶ್ರೋತೃಬುದ್ಧಿಮಾಂದ್ಯಾತ್ - ಪ್ರಾಚೀನಕರ್ಮವು ಬಲಿಷ್ಠವಾಗಿ ರಾಜಸ ತಾಮಸಗಳು ಅನೇಕರಲ್ಲಿ ವೃದ್ಧಿಹೊಂದಿದುದರಿಂದ ತಿರೋಹಿತಜ್ಞಾನರಾಗಿ, ಇಂತಹ ಮಹತ್ತಾದ ಉಪದೇಶದ ಮಾಹಾತ್ಮ್ಯಯನ್ನು ಅರಿಯದೇ ಹೋದರೆಂದು ವ್ಯಕ್ತಪಡಿಸಿರುತ್ತಾರೆ. ಸ ಏವ-ಹಾಗೆ ಪರಂಪರೆಯಾಗಿ ಸಂಪ್ರದಾಯರೀತ್ಯಾ ಬಂದುದೇ, ಅಯಮಸ್ಖಲಿತ ಸ್ವರೂಪಃ ಪುರಾತನೋಯೋಗಃ ಈ ಸ್ವರೂಪ ಸ್ವಲ್ಪವೂ ವ್ಯತ್ಯಸ್ತವಾಗದ ಪುರಾತನವಾದ ಕರ್ಮಯೋಗವು. ಸಖ್ಯೇನ-ಸ್ನೇಹಭಾವದಿಂದಲೂ, ಅತಿ ಮಾತ್ರ ಭಕ್ತ್ಯಾ ಚ-ನಿರತಿಶಯ ಭಕ್ತಿಯಿಂದಲೂ, ಮಾಮೇವ ಪ್ರಪನ್ನಾಯ - ನಾನೇ ಅನನ್ಯಶರಣ್ಯನು, ನಾನೇ ಜ್ಞಾನಪ್ರದಾತಾ ಎಂದು ಭರನ್ಯಾಸ ಮಾಡಿದ, (ಗೀ. ೨-೭) ಶ್ಲೋಕವನ್ನು ನೋಡಿ) ತೇ-ನಿನಗೆ, ಮಯಾ - ನನ್ನಿಂದ, ಪ್ರೋಕ್ತಃ - ಎಂದರೆ ಸಪರಿಕರ ಸ್ಸವಿಸ್ತರವಾಕ್ತ ಇತ್ಯರ್ಥಃ - ಅಙ್ಗಗಳೊಡನೆ ವಿಸ್ತರವಾಗೋಣ ಹೇಗೋ ಹಾಗೆ ಹೇಳಲ್ಪಟ್ಟಿತೆಂಬರ್ಥವು. ಆಗ ಸೂರ್ಯನಿಗೂ ಈಗ ನಿನಗೂ ಹೇಳಿದವನು ನಾನೇಯಾದುದರಿಂದ ಎಲ್ಲಾ ವಿಷಯಗಳಲ್ಲೂ ಉಪದೇಶವು ಒಂದೇಯಾದ ಪ್ರಯುಕ್ತ, ಅಸ್ಖಲಿತ ಸ್ವರೂಪಃ - ಎಂಬ ಪ್ರಯೋಗವು. ಆಗ ಹೇಳಿದುದೇನೋ ವೇದಮಯನಾದ ಸೂರ್ಯಭಗವಾನಿಗಾದುದರಿಂದ ಸರಿಯಾದ ಉಪದೇಶವಾಗಿರಬಹುದು. ಈಗೇನಾದರೂ ಅಸುರರನ್ನು ವಂಚಿಸಿದಹಾಗೆ, ನಿನ್ನನ್ನೂ ವಂಚಿಸುವದಕ್ಕಾಗಿ ವ್ಯತ್ಯಸ್ತವೆಂದು ಭಾವಿಸಬೇಡ, ಏಕೆಂದರೆ ನೀನೂ "ಭಕ್ತೋಽಸಿ ಮೇ ಸಖಾ ಚ" ಎಂದು ನಿನಗೆ ಉಪದೇಶಿಸಲ್ಪಟ್ಟಿತು. ಆ ಕಾರಣದಿಂದಲೇ ಅಸ್ಖಲಿತ ಸ್ವರೂಪಃ ಎಂದು ಪ್ರಯೋಗಿಸಿರುತ್ತಾರೆ, ನಿನಗೆ ಅಪನಂಬಿಕೆಯು ಬೇಡ, ಸ ಏವಾಯಂ – ಅದೇ ಇದು ಎಂದು ಹೇಳುತ್ತಾರೆ. ಪುರಾತನಃ - ಪುರಾತನವಾದುದೇ, ಅದ್ಯ - ಈಗ ನಿನಗೆ ಉಪದೇಶಿಸಲ್ಪಟ್ಟಿತು. ಸೂರ್ಯನಿಗೆ ಉಪದೇಶಿಸುವಾಗ, ಹೇಗೆ ಅಙ್ಗಗಳೊಂದಿಗೆ ವಿಸ್ತರವಾಗಿ ಹೇಳಲ್ಪಟ್ಟಿತೋ, ಹಾಗೆಯೇ ನಿನಗೂ ಈಗ ಉಪದೇಶಿಸಲ್ಪಟ್ಟಿರುತ್ತದೆ. ಆದರೆ ತಾನೇನೇ ಉಪದೇಶಿಸಬೇಕೇ : ಇನ್ನು ಯಾರ ಮೂಲಕವಾಗಿಯೂ ನಡೆಸಕೂಡದೋ ಎಂದರೆ "ವಕ್ತಾಶ್ರೋತಾ ಚ ದುರ್ಲಭಃ" ಎಂದು ಹೇಳಿರುವ ಹಾಗೆ, ತಾನಲ್ಲದೆ ಈ ಉಪನಿಷತ್ಸಾರಭೂತವಾದ ಅರ್ಥವನ್ನು ಇನ್ನು ಯಾರೂ ಹೇಳಲು ಸಮರ್ಥರಲ್ಲವೆಂದೂ, ನೀನಲ್ಲದೆ ಇನ್ನು ಯಾರೂ ಸರಿಯಾದ ಪಾತ್ರರಿಲ್ಲವೆಂದೂ ಕೊನೆಯ ಪಾದದ ವ್ಯಾಖ್ಯಾನವನ್ನು ಬರೆಯುತ್ತಾರೆ. ಸಖಾವಾಗಿಯೂ ಅತಿಮಾತ್ರಭಕ್ತ ಅಥವಾ ಆಗಿಯೂ ಇರುವದರಿಂದ, ನೀನೇ ಸರಿಯಾದ ಸತ್ಪಾತ್ರವು. ಮತ್ತು ಇದು, ಮದನ್ಯೇನ ಕೇನಾಪಿ - ನಾನಲ್ಲದೆ ಇನ್ನು ಯಾರಿಂದಲೂ, ಜ್ಞಾತುಂ ವಕ್ತುಂ ಚ - ತಿಳಿಯಲೂ ಮತ್ತು ಉಪದೇಶಿಸಲೂ, ಅಶಕ್ಯಂ - ಅಸಾಧ್ಯವಾದುದು, ಏಕೆಂದರೆ, ಯತಃ - ಯಾವ ಕಾರಣದಿಂದ, ಇದಂ - ಈ ಕರ್ಮಯೋಗವು. ವೇದಾನ್ತೋದಿತಂ - ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ, ಉತ್ತಮಂ ರಹಸ್ಯಂ ಜ್ಞಾನಂ - ಸರ್ವಶ್ರೇಷ್ಠವಾದ ರಹಸ್ಯವಾದ

ಜ್ಞಾನವೋ ಎಂಬ ಭಾವವು. **ಯತಃ** ಎಂದಾರಂಭಿಸಿ ಹೇಳಿದುದು ಮೂಲದ ಹಿ ಶಬ್ದಾರ್ಥದ ಉಪಪಾದನೆಯು; ಇಲ್ಲಿ ಹಿ ಶಬ್ದವು ಹೇತ್ವರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ. ರಹಸ್ಯದ ಉಪದೇಶವು ತುಂಬಾ ಯೋಗ್ಯನಾದವನಿಗೇನೇ ಮಾಡತಕ್ಕದ್ದೇವಿನಾ ಬೀದಿಯಲ್ಲಿ ಹೋಗುವ ಎಲ್ಲರಿಗೂ ಹೇಳತಕ್ಕದ್ದಲ್ಲವೆಂಬ ಭಾವವೂ ಸೂಚಿತವು- ಉಪನಿಷತ್ತುಗಳಲ್ಲಿ ಗೂಢವಾಗಿ ಅಡಗಿರುವ ಈ ಜ್ಞಾನವನ್ನು, ಇತರರು ತಿಳಿಯಲೂ ಲಾರರು, ಆ ಕಾರಣದಿಂದ ಇತರರಿಗೆ ಉಪದೇಶಿಸಲೂ ಲಾರರು. ಆದುದರಿಂದ ನಿನ್ನಲ್ಲಿರುವ ಪ್ರೀತ್ಯತಿಶಯದಿಂದ ನಾನೇ ಸಪರಿಕರವಾಗಿ, ಸವಿಸ್ತರವಾಗಿ, ಸ್ವಲ್ಪವೂ ವ್ಯತ್ಯಾಸವಿಲ್ಲದೆ ನಿನಗೆ ಆ ಯೋಗವನ್ನೇ ಈಗ ಉಪದೇಶಿಸಿರುತ್ತೇನೆಂಬ ಭಾವವು. ಏತಕ್ಕಾಗಿ ಪ್ರೋಕ್ತಃ ಎಂದರೆ ನೀನೂ ಮೋಕ್ಷಪ್ರಾಪ್ತಿಗೆ ಮಾರ್ಗವನ್ನವಲಂಬಿಸಲಿ ಎಂಬದಾಗಿ **ಪ್ರೋಕ್ತಃ. ಪ್ರೋಕ್ತಃ** ಎಂಬಲ್ಲಿರುವ ಪ್ರ ಎಂಬ ಉಪಸರ್ಗದಿಂದ, **ಪ್ರಕರ್ಷೇಣ ಉಕ್ತಃ** ಎಂಬುದರ ಮೂಲಕ ಸಪರಿಕರವಾಗಿಯೂ ಸವಿಸ್ತರವಾಗಿಯೂ, ಈಗ ಹೇಳಿರುತ್ತೇನೆಂಬರ್ಥವು ತೋರಿಬರುವದರಿಂದ, **ಸಪರಿಕರಸ್ಸವಿಸ್ತರಂ** ಎಂದು ಭಾಷ್ಯ ಬರೆದಿರುತ್ತಾರೆ. ಮೂರನೆಯ ಅಧ್ಯಾಯದಲ್ಲೆಲ್ಲಾ ಕರ್ಮಯೋಗದ ಮಾಹಾತ್ಮ್ಯೆಯನ್ನು ಸ್ಥಾಪಿಸಿ ಹತ್ತು ಕಾರಣಗಳಿಂದ ಮೋಕ್ಷಾರ್ಥಿಗೆ ಈ ಕರ್ಮಯೋಗವು ಆವಶ್ಯಕವಾಗಿ ಅನುಷ್ಠಿಸಲ್ಪಡತಕ್ಕದ್ದೆಂದು ಹೇಳಿದುದರಿಂದ ಸವಿಸ್ತರವಾಗಿ ಹೇಳಲ್ಪಟ್ಟಿತು. **ಸಪರಿಕರಃ** ಎಂದರೆ ಅದರ ಅಙ್ಗದೊಂದಿಗೆ ಹೇಳಲ್ಪಟ್ಟಿತು. ಎಂದರೆ ಪರಿಕರಗಳು ಯಾವುವು ಎಂದರೆ ನಿತ್ಯನೈಮಿತ್ತಿಕಗಳು ಈ ಕರ್ಮಯೋಗಕ್ಕೆ ಅಙ್ಗಗಳು; ಹಾಗೆ ಎಲ್ಲಿ ಹೇಳಲ್ಪಟ್ಟಿರುತ್ತೆ ಎಂದರೆ **"ನಿಯತಂ ಕುರುಕರ್ಮತ್ವಂ ಕರ್ಮಜ್ಯಾಯೋಹ್ಯಕರ್ಮಣಃ। ಶರೀರಯಾತ್ರಾಪಿ ಚತೇ ನ ಪ್ರಸಿದ್ಧ್ಯೇದ ಕರ್ಮಣಃ॥** (೩.೮) ಎಂಬಲ್ಲೂ, **"ಸಹಯಜ್ಞಾಃ ಪ್ರಜಾಸ್ಸೃಷ್ಟ್ವಾ"** (೩. ೧೦) ಎಂಬಲ್ಲೂ **"ಯಜ್ಞಶಿಷ್ಟಾಶನಸ್ಸನ್ತೋ ಮುಚ್ಯನ್ತೇ ಸರ್ವಕಿಲ್ಬಿಷೈಃ"** (೩. ೧೩) ಎಂಬಲ್ಲೂ ಹೇಳಲ್ಪಟ್ಟಿರುತ್ತದೆ. ಅದೂ ಅಲ್ಲದೆ **ಶಾಧಿಮಾಂ ತ್ವಾಂ ಪ್ರಪನ್ನಂ** ಎಂದು ಶರಣಾಗತನಾದನಂತರ ನೀನು **ಭಕ್ತೋಽಸಿ, ಸಖಾಚ** - ನೀನು ಭಕ್ತನೂ ಆಗಿರುತ್ತೀಯೇ, ಸಖನೂ ಆಗಿರುತ್ತೀಯೇ, ಅಂತವನಿಗೆ ನಾನೇ ಇಂತಹ ರಹಸ್ಯವನ್ನುಪದೇಶಿಸುವದು ನನ್ನ ಕರ್ತವ್ಯವಾದುದರಿಂದಲೂ ಉಪದೇಶಿಸಿರುತ್ತೇನೆಂಬ ಭಾವವು ತೋರುವದಕ್ಕಾಗಿ **ಮಯಾತೇದ್ಯ ಯೋಗಃಪ್ರೋಕ್ತಃ** ಎಂದು ನಿರತಿಶಯ ಭಕ್ತವತ್ಸಲನು ಹೇಳಿಕೊಂಡಿರುತ್ತಾನೆ. **ಸಖಾಚ** ಎಂದು ಹೇಳಿರುವದರಿಂದ ವಿಭವಾವತಾರಕಾಲದಲ್ಲಿ ತಾನು ತೋರಿಸುವ ಸೌಲಭ್ಯ ಸೌಶೀಲ್ಯಾದಿಗಳನ್ನು ಪ್ರಕಟನೆಮಾಡುವದಕ್ಕಾಗಿ ಹಾಗೆ ಪ್ರಯೋಗವು. ವೇದಾಂತಗಳಲ್ಲಿ ರಹಸ್ಯವಾಗಿರುವದು ನಾವು ಸಙ್ಗ್ರಹಿಸತಕ್ಕದ್ದು ಜ್ಞಾನವಾದುದರಿಂದ **ರಹಸ್ಯಂ ಜ್ಞಾನಂ** ಎಂದು ಹೇಳಲ್ಪಟ್ಟಿತು. ಅದು ಯಾವುದೆಂದರೆ ಕರ್ಮಯೋಗ ವಿಷಯಕವಾದ ಜ್ಞಾನವು. ಹೀಗೆ ವೇದಾಂತಗಳಲ್ಲಿ ರಹಸ್ಯವಾಗಿರುವದು ಚನ್ನಾಗಿ ವ್ಯಕ್ತವಾಗಿ ಇದೇ ಪರಮಹಿತವಾದುದೆಂದು ತೋರ್ಪಡಿಸಿ ಉಪದೇಶಿಸುವದಕ್ಕೆ ಇತರರು ಯಾರಿಗೂ ಅಷ್ಟು ಯೋಗ್ಯತೆ ಇಲ್ಲವು ಎಂದು ಭಾವಿಸಿ, ಪರಮಕೃಪಯಾ ತಾನೇ ಆಗಲೂ ಈಗಲೂ ಸಹ ಹೇಳಿದುದು ಎಂದು ತಿಳಿಸುವದಕ್ಕಾಗಿ **ಮಯಾಪ್ರೋಕ್ತಃ** ಎಂಬ ಸಾರ್ಥವತ್ತಾದ ಪ್ರಯೋಗವು. ಹಿಂದೆ **ಸ ವಿಮಾಯಂ ಮಯಾತೇದ್ಯ** ಎಂದಿರುವದನ್ನು **ಅಹಮೇವ ಪ್ರೋಕ್ತವಾನ್** ಎಂದು ವ್ಯಾಖ್ಯಾನವನ್ನು ಮಾಡಿರುವದು, ನೀನು ಜನ್ಮವನ್ನು ಎತ್ತಿ ಕೃಷ್ಣಾವತಾರಿಯಾಗಿರುವದು ಈಚೆಗೆ, ಮನ್ವಂತರಾದಿ ಕಾಲವು ಬಹಳ ಹಿಂದಿನ ಕಾಲವು, ಹೀಗಿರುವಾಗ ಹಿಂದೆ ನೀನೇ ಹೇಳಿದೆ ಎಂಬುದು ಹೇಗೆ ಎಂಬುದು ತಿಳಿಯಲಿಲ್ಲವೇ? ಎಂದು ಅರ್ಜುನನು ಮುಂದೆ ಪ್ರಶ್ನಿಸಲು ಕಾರಣವೆಂಬುದನ್ನು ಸೂಚಿಸುವದೂ ಅಲ್ಲದೆ ಮುಖ್ಯವಾದ ಅವತಾರ ರಹಸ್ಯಜ್ಞಾನವನ್ನು ಪ್ರಾಸಙ್ಗಿಕವಾಗಿ ಉಪ

ಭಾ. ಅವ. ಅಸ್ಮಿನ್ ಪ್ರಸಙ್ಗೇ ಭಗವದವತಾರ ಯಾಥಾತ್ಮ್ಯಂ ಯಥಾವತ್ ಜ್ಞಾತು ಮರ್ಜುನ ಉವಾಚ :—

ದೇಶಿಸಲು ಅನುಕೂಲವಾದ ಸಮಯವೆಂಬುದೂ ಸೂಚಿತವು. ಮೂರನೆಯ ಶ್ಲೋಕದಲ್ಲಿ ಹಿ ಶಬ್ದವು ಹೇತುವನ್ನು ಬೋಧಿಸುತ್ತದೆ. ಇದು ರಹಸ್ಯವಾದುದರಿಂದಲ್ಲವೇ ನಾನೇ ಉಪದೇಶಿಸಲು ಯೋಗ್ಯವಾದುದು ಎಂಬರ್ಥವು; ಅಂತಹ ರಹಸ್ಯವಾದುದನ್ನು ನಾನು ಅನುಗ್ರಹಿಸಬೇಕಾದರೆ ಎಲ್ಲರಿಗೂ ಸಾಮಾನ್ಯವಾಗಿ ತಿಳಿಸುವನೆಂದು ತಿಳಿಯಬೇಡ. ನನಗೆ ಭಕ್ತನು ಯಾರೋ ಅವನೇ ಸಖನಾಗುವನು, ಅಂತವನಿಗೆ ಮಾತ್ರವೇ ನಾನು ಅನುಗ್ರಹಿಸತಕ್ಕವನೆಂಬುದೂ ಸೂಚಿತವು. ಇದು ಉತ್ತಮರಹಸ್ಯವು ಹೇಗೆ ಎಂಬುವನ್ನು ಸೂಚಿಸುವವಕ್ಕಾಗಿ ವೇದಾಂತೋದಿತಂ ಎಂಬ ವ್ಯಾಖ್ಯಾನವು. ತನ್ನ ಹಿತೋಪದೇಶವೇ ಉಪನಿಷದ್ರೂಪದಲ್ಲಿ ವೇದಾಂತವೆಂದು ಹೇಳಿಸಿ ಕೊಂಡಿರುವದು ಎಂಬ ಭಾವವು. ಪ್ರಲಯದಿಂದಾಗಲಿ, ಯುಗಾದಿ ಸ್ವಭಾವದಿಂದಲಾಗಲಿ ಸಂಪ್ರದಾಯಕ್ಕೆ ವಿಚ್ಛೇದ ಉಂಟಾದುದೇಯಾದರೆ, ಪುನಃ ನಾನೇ ಸಂಪ್ರದಾಯ ಪ್ರವರ್ತಕನಾಗುವೆನು ಎಂಬ ಭಾವವೂ ಇಲ್ಲಿ ಸೂಚಿತವು; ಹಾಗೆಯೇ ಲೋಕದಲ್ಲಿ ಅಧರ್ಮ ಪ್ರವರ್ತನೆಯು ಹೆಚ್ಚಾಗಿ ಹೋದರೆ, ಪುನಃ ಧರ್ಮಸಂಸ್ಥಾಪನೆಯನ್ನು ಮಾಡುವನೂ ನಾನೇ ಇನ್ನು ಯಾರಿಂದಲೂ ಇದು ಸಾಧ್ಯವಲ್ಲವು. ಈ ಕಲಿಯುಗದಲ್ಲಿ ಹಾಗೆಯೇ ಅಧರ್ಮ ಪ್ರವರ್ತನೆಯು ಬಹು ಹೆಚ್ಚಾಗುತ್ತಾ ಬಂದಿರುವದರಿಂದ ಅದನ್ನು ಪುನಃ ಸರಿಪಡಿಸುವನು ಸರ್ವೇಶ್ವರನೇ ಎಂಬುದನ್ನುಊಹಿಸಬಹುದು. ಮೂಲದಲ್ಲಿ ಭಕ್ತೋಽಸಿಮೇ ಸಖಾಚೇತಿ ಎಂದಿರುವದರಿಂದ, ಯಾವಾಗ ಭಕ್ತನಾದನೋ ಅಂತವನು ಆತನೊಂದಿಗೆ ಸಮಭಾವದಲ್ಲಿರಲು ಯೋಗ್ಯನಾಗುವನು ಎಂಬ ಭಾವವು. ಆದುದರಿಂದಲೇ ಶ್ರೀ ವಿಭೀಷಣಾಳ್ವಾರ್ ವಿಷಯದಲ್ಲಿ "ತಸ್ಮಾತ್ ಕ್ಷಿಪ್ರಂ ಸಹಾಸ್ಮಾಭಿ ಸ್ತುಲ್ಯೋಭವತು ರಾಘವ । ವಿಭೀಷಣೋ ಮಹಾಪ್ರಾಜ್ಞ ಸ್ಸಖಿತ್ವಂ ಚಾಭ್ಯುಪೈತುನಃ" ಎಂದು ಶ್ರೀರಾಮಾಭಿಪ್ರಾಯವನ್ನು ತಿಳಿದ ಸುಗ್ರೀವನಿಂದ ಹೇಳಲ್ಪಟ್ಟಿತು. ॥ ೧ ॥ ೨ ॥ ೩ ॥

ಭಾಷ್ಯಾವತಾರಿಕೆಯ ಅರ್ಥವು:—ಅಸ್ಮಿನ್ ಪ್ರಸಙ್ಗೇ - ಈ ಕರ್ಮಯೋಗವಿಷಯಕವಾದ ಪ್ರಸಙ್ಗದಲ್ಲಿ, ಭಗವದವತಾರ ಯಾಥಾತ್ಮ್ಯಂ-ಭಗವಂತನ ಅವತಾರದ ನಿಜಸ್ಥಿತಿಯನ್ನು, ಯಥಾವತ್ - ಮಾಹಾತ್ಮ್ಯೆಯು ಹೇಗಿವೆಯೋ ಹಾಗೆಯೇ ಹೆಚ್ಚು ಕಡಿಮೆಯಿಲ್ಲದೆ ಎಂದರೆ ಪ್ರಾತಿಭಾಸಿಕಾದಿ ವಾದಗಳನ್ನು ದೂರೀಕೃತಮಾಡುವ ಪ್ರಮಾಣೋಪಪತ್ತಿಯಿಂದ ಎಂಬ ಭಾವವು, ಜ್ಞಾತುಮ್ - ತಿಳಿಯುವದಕ್ಕಾಗಿ, ಅರ್ಜುನನು, ಉವಾಚ - ಪ್ರಶ್ನಿಸಿ ಹೇಳುತ್ತಾನೆ. ಅವತಾರ ಯಾಥಾತ್ಮ್ಯವನ್ನು ಯಥಾವತ್ತಾಗಿ ಎಂದು ಪ್ರಯೋಗಿಸಿರುವದರಿಂದ ಅವತಾರವು ಸತ್ಯವೇ ಮಿಥ್ಯೆಯಲ್ಲವೆಂಬ, ಅಥವಾ ಶುಕ್ತಿ ರಜತದಹಾಗೆ ಪ್ರಾತಿಭಾಸಿಕವಲ್ಲವೆಂಬ ಅರ್ಥವನ್ನು ಸೂಚಿಸುವದಕ್ಕಾಗಿ ಎಂದು ಊಹಿಸಬಹುದು. ಹಿಂದೆ ಸೂರ್ಯನಿಗೆ ಮನ್ವಂತರಾದಿಯಲ್ಲಿ ಉಪದೇಶಿಸಿದವನೂ ತಾನೇ; ಈಗ ಅದನ್ನು ಉಪದೇಶಿಸುವವನೂ ತಾನೇ ಎಂದು ಶ್ರೀಕೃಷ್ಣಭಗವಾನರವರು ಯಾವಾಗ ಹೇಳಿದರೋ ಆಗ ಅದರಿಂದಲೇ ತಾನೇ ಈಗಲೂ ಅವತಾರವನ್ನು ಎತ್ತಿ ಉಪದೇಶಿಸಿರುತ್ತಾನೆಂಬಭಿಪ್ರಾಯವು ವ್ಯಕ್ತವು. ಆದುದರಿಂದ ಪ್ರಶ್ನಾಭಿಪ್ರಾಯವು, ಭಗವದವತಾರದ ಯಾಥಾತ್ಮ್ಯವನ್ನು ಯಥಾವತ್ತಾಗಿ ತಿಳಿಯಬೇಕೆಂಬುದೇ. ಶ್ರೀ ಕೃಷ್ಣನು ಭಗವದವತಾರವಲ್ಲವೆಂಬ ಅಜ್ಞಾನದಿಂದ ಕೇಳಿದ ಪ್ರಶ್ನೆಯಲ್ಲವು. ಆದುದರಿಂದ ಈ ಮೇಲೆ ಹೇಳಿದರೀತಿಯಲ್ಲಿ ಅವತಾರಿಕೆಯನ್ನು ಶ್ರೀ ಭಾಷ್ಯಕಾರರು ದಯಪಾಲಿಸಿರುತ್ತಾರೆ. ಇಲ್ಲಿ ಅಸ್ಮಿನ್ ಪ್ರಸಙ್ಗೇ ಎಂಬ ಭಾಷ್ಯದಿಂದ ಈ ಅವತಾರ ರಹಸ್ಯವು ಪ್ರಾಸಙ್ಗಿಕವಾಗಿ ಹೇಳಲ್ಪಟ್ಟ

**ಅರ್ಜುನ ಉವಾಚ—**

**ಮೂ. ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥ ಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪.**

**ಭಾ. ಕಾಲ ಸಂಖ್ಯಯಾ ಅವರಂ ಅಸ್ಮಜ್ಜನ್ಮ ಸಮಕಾಲಂಹಿ ಭವತೋ ಜನ್ಮ, ವಿವಸ್ವತಶ್ಚ**

ರುತ್ತದೆಂಬುವನ್ನು ಸೂಚಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ತಮ್ಮ ಪ್ರಾಚಾರ್ಯರಾದ ಶ್ರೀ ಯಾಮುನೇಯರವರ ಸಙ್ಗ್ರಹಶ್ಲೋಕವಲ್ಲಿ "ಪ್ರಸಜ್ಗಾತ್ ಸ್ವಭಾವೋಕ್ತಿಃ" ಎಂಬ ವಾಕ್ಯವನ್ನನುಸರಿಸಿಯೂ ಹಾಗೆ ಭಾಷ್ಯವು.

**ಮೂಲಕ್ಕೆ ಅರ್ಥವು :—** ಅರ್ಜುನನು ಹೇಳುತ್ತಾನೆ, ಪ್ರಶ್ನಿಸುತ್ತಾನೆಂಬರ್ಥವು. **ಭವತಃ ಜನ್ಮ**-ವಸುದೇವ ಪುತ್ರನಾಗಿ ಜನಿಸಿರುವ ನಿನ್ನ ಜನ್ಮವು, **ಅವರಂ**-ಈಚಿನಕಾಲದಲ್ಲುಂಟಾದುದು; **ವಿವಸ್ವತಃ**-ಸೂರ್ಯನ, ಜನ್ಮವು, **ಪರಂ** - ದೇವ ಜನ್ಮವಾಗಿ ಬಹಳ ಹಿಂದಿನಕಾಲದಲ್ಲುಂಟಾಗಿ ಇಷ್ಟುಕಾಲ ವ್ಯತ್ಯಾಸವಿರುವಾಗ, **ತ್ವಂ** - ನೀನು; **ಆದೌ**-ಮನ್ವಂತರಾದಿಯಲ್ಲಿ, **ಪ್ರೋಕ್ತವಾನ್ ಇತಿ** - ಸೂರ್ಯನಿಗೆ ಚನ್ನಾಗಿ ಉಪದೇಶಿಸಿವೆ ಎಂಬುವ, **ಏತತ್** - ಇದನ್ನು, **ಕಥಂ** - ಹೇಗೆ, **ವಿಜಾನೀಯಾಂ**-ಚನ್ನಾಗಿ ವಿಮರ್ಶಿಸಿ ತಿಳಿಯಲಿ? ಚನ್ನಾಗಿ ವಿಮರ್ಶಿಸಿ ತಿಳಿಯಲಿ ಎಂದು ಕೇಳಿದುದಕ್ಕೆ, ಸರ್ವೇಶ್ವರನು ಅರ್ಜುನನ ಹೃದಯವನ್ನರಿತು ಮುಂದಿನ ಐದು ಶ್ಲೋಕಗಳ ಮೂಲಕ ಉತ್ತರ ಹೇಳುವದರಿಂದ, **ಕಥಂ ವಿಜಾನೀಯಾಂ** - ಎಂಬುದರಿಂದ (೧) ಅವತಾರ ಜನ್ಮಗಳೇನು ಸತ್ಯವೇ ಅಥವಾ ಮಿಥ್ಯೆಯೇ (೨) ಎತ್ತುವ ರೂಪಗಳೆಂತವುಗಳು ದಿವ್ಯ ಸಙ್ಕಲ್ಪಮೂಲವಾದುವೇ, ಇಲ್ಲವೇ ನಮ್ಮಹಾಗೆ ಕರ್ಮಮೂಲವಾಗಿ ಹೇಯವಾದವೇ (೩) ಅವತಾರಕಾಲವು ಯಾವುದು. (೪) ಅವತಾರಪ್ರಯೋಜನವೇನು (೫) ಅವತಾರ ರಹಸ್ಯದ ಯಾಥಾತ್ಮ್ಯ ಜ್ಞಾನದ ಪ್ರಯೋಜನವೇನು, ಇವುಗಳನ್ನೆಲ್ಲಾ ವಿಮರ್ಶಿಸಿ ತಿಳಿಯಬೇಕೆಂಬಾಶಯದಿಂದ, **ಕಥ ಮೇತದ್ವಿಜಾನೀಯಾಂ** ಎಂದು ಪ್ರಶ್ನಿಸಿರುತ್ತಾನೆ. ಮುಂದಿನ ಐದು ಶ್ಲೋಕಗಳೂ ಅವತಾರ ರಹಸ್ಯವನ್ನು ಬೋಧಿಸುವ ಅಮೋಘ ಶ್ಲೋಕಗಳಾಗಿವೆ. ಆದರೆ ಈಗ ಪ್ರಸ್ತುತವಾದುದು ಕರ್ಮಯೋಗದ ವಿಚಾರವು, ಹೀಗಿರುವಾಗ ಅದನ್ನು ಬಿಟ್ಟು ಬೇರೇ ವಿಷಯವನ್ನು ಚರ್ಚೆಗೆ ತರುವದು ದೋಷಾವಹವಲ್ಲವೋ ಎಂದರೆ, ಸರ್ವೇಶ್ವರನು ನಾನೇ ಹಿಂದೆ ಈ ಅಮೋಘೋಪದೇಶವನ್ನೇ ವಿವಸ್ವಾನ್ನಿಗೆ ಹೇಳಿದೆನೆಂದು ತಿಳಿಸಿದನಂತರ, ವಿವೇಕಿಯಾದವನು, ಹೀಗೆ ಸರ್ವೇಶ್ವರನು ರೂಪಗಳನ್ನೆತ್ತುವದು ಪ್ರಾಸಙ್ಗಿಕವಾದ ವಿಷಯವಾಗಿ, "ಸ್ಮೃತಸ್ಯ ಉಪೇಕ್ಷಾನರ್ಹತ್ವಂ ಪ್ರಸಙ್ಗಃ" ಎಂದು ಹೇಳಿರುವಹಾಗೆ ಅಂತಹ ಪ್ರಾಸಙ್ಗಿಕ ವಿಷಯವನ್ನು ಚರ್ಚಿಸದಿರುವದು ಯುಕ್ತವಲ್ಲದುದರಿಂದ, ಅವಶ್ಯಕವಾಗಿ ಉಪದೇಶಿಸುವದು ಯುಕ್ತವಾಗಿ ಸರ್ವೇಶ್ವರನು ವಿಶದವಾಗಿ ಅವತಾರ ರಹಸ್ಯಗಳನ್ನುಪದೇಶಿಸುತ್ತಾರೆ.—ಅದೂ ಅಲ್ಲದೆ ಈ ಅವತಾರ ರಹಸ್ಯದ ಜ್ಞಾನವು ಮೋಕ್ಷಾರ್ಥಿಗೆ ಉಪಕಾರಕವಾದುದರಿಂದಲೂ ಇಲ್ಲಿ ಹೇಳಲ್ಪಡುತ್ತದೆಂಬ ಭಾವವು. ॥೪॥

**ಭಾಷ್ಯಾರ್ಥವು :—** **ಕಾಲಸಂಖ್ಯಯಾ** - ಕಾಲಸಂಖ್ಯೆಯಿಂದ, **ಭವತಃ ಜನ್ಮ** - ನಿಮ್ಮ ಜನ್ಮವು, ಅವತಾರವು, **ಅವರಂ** ಎಂದರೆ ಈಚಿನದಾಗಿ, **ಅಸ್ಮಜ್ಜನ್ಮ ಸಮಕಾಲಂಹಿ** - ನನ್ನ ಜನ್ಮದ ಸಮಕಾಲವಾದುದಷ್ಟೇ ಎಂದರೆ ತಮಗೂ ನನಗೂ ವಯಸ್ಸಿನಲ್ಲಿ ತುಂಬಾ ವ್ಯತ್ಯಾಸವಿಲ್ಲವೆಂಬಭಾವವು; ನಾವಿಬ್ಬರೂ ಸಮಕಾಲದವರು ಎಂಬರ್ಥವು. **ವಿವಸ್ವತಶ್ಚ ಜನ್ಮ** - ಸೂರ್ಯನ ಜನ್ಮವಾದರೋ ಕಾಲ ಸಂಖ್ಯೆಯಿಂದ, **ಪರಂ** - ಎಂದರೆ ಪೂರ್ವಕಾಲದ್ದು, **ಅಷ್ಟಾ**

**ಭಾ- ಜನ್ಮಕಾಲ ಸಂಖ್ಯಯಾ ಪರಂ - ಅಷ್ಟಾವಿಂಶತಿ ಚತುರ್ಯುಗ ಸಂಖ್ಯಾ ಸಂಖ್ಯಾತಮ್, ತ್ವಮೇವಾದೌ ಪ್ರೋಕ್ತವಾನಿತಿ ಕಥ ಮೇತದ ಸಂಭಾವನೀಯಮ್ ಯಥಾರ್ಥಂ ಜಾನೀಯಾಮ್ ? ನನು ಜನ್ಮಾಂತರೇಣಾಪಿ ವಕ್ತುಮ್ ಶಕ್ಯಮ್, ಜನ್ಮಾಂತರ ಕೃತಸ್ಯ ಮಹತಾಂ ಸ್ಮೃತಿಶ್ಚ ಯುಜ್ಯತ ಇತಿ, ನಾತ್ರ ಕಶ್ಚಿದ್ವಿರೋಧಃ**

**ವಿಂಶತಿ ಚತುರ್ಯುಗಸಂಖ್ಯಾ ಸಂಖ್ಯಾತಮ್** - ಇಪ್ಪತ್ತೆಂಟುಸಲ ನಾಲ್ಕು ಯುಗಗಳೂ ಮರಳಿ ಒಂದಾಗಿ ಗಣಿಸಲ್ಪಟ್ಟಿದುದು ; ಇಷ್ಟುಕಾಲ ವ್ಯತ್ಯಾಸ ಇರುವಾಗ, **ತ್ವಮೇವ** - ಈಗಿರುವ ನೀನೇ, **ಆದೌ** - ಮನ್ವಂತರಾದಿಯಲ್ಲಿ, **ಪ್ರೋಕ್ತವಾನಿತಿ** - ಹೇಳಿದಿರಿ ಎಂಬುದು. **ಕಥಮೇತದ ಸಂಭಾವನೀಯಮ್** - ಹೇಗೆ ಈ ಅಸಂಭಾವಿತವಾದ ಎಂದರೆ ಒಪ್ಪತಕ್ಕದಲ್ಲವಾದ ವಿಷಯವನ್ನು, **ಯಥಾರ್ಥಂ** - ಯಥಾವತ್ತಾಗಿ, **ಕಥಂ ಜಾನೀಯಾಮ್** - ಹೇಗೆ ತಿಳಿಯುವೆನು, ಮೂಲದಲ್ಲಿರುವ ವಿಜಾನೀಯಾಂ ಎಂಬ ಶಬ್ದದ ಉಪಸರ್ಗಾರ್ಥವನ್ನು ಯಥಾರ್ಥಂ ಜಾನೀಯಾಂ ಎಂದು ವ್ಯಾಖ್ಯಾನಮಾಡಿರುತ್ತಾರೆ- ಇಲ್ಲಿ ಅವರಂ ಪರಂ ಶಬ್ದಗಳು ಮನುಷ್ಯದೇವಾದಿ ಅಪಕೃಷ್ಟ ಉತ್ಕೃಷ್ಟ ಜನ್ಮಗಳೆಂಬ ಅರ್ಥದಲ್ಲಿ ಪ್ರಯೋಗಿಸಿದುದಲ್ಲವು. ಅರ್ಜುನನು ಶ್ರೀ ಕೃಷ್ಣನ ಜನ್ಮವು ನಿಕೃಷ್ಟವಾದುದೆಂದು ಎಂದಿಗೂ ಹೇಳನು; ಆತನಿಗೆ ಶ್ರೀಕೃಷ್ಣನು ಭಗವದವತಾರವು ಎಂಬ ಸೂಚನೆಯೇನೋ ಉಂಟು. ಇದನ್ನೇ ಭಾಷ್ಯದಲ್ಲಿ ಮುಂದೆ ಉಪಪಾದಿಸುತ್ತಾರೆ. ಆಗ ಏತಕ್ಕೆ ಅವತಾರವು, ಈಗ ಏತಕ್ಕೆ? ಇತ್ಯಾದಿ ವಿಷಯಗಳನ್ನು ಮನಸ್ಸಿನಲ್ಲಿಟ್ಟು ಮಾಡಿದ ಪ್ರಶ್ನೆಯಾಗಿರುತ್ತದೆಂಬ ಭಾವವು. ಕಾಲವ್ಯತ್ಯಾಸದಿಂದತೋರುವ ಅಂಶಗಳ ವಿರೋಧ ಮಾಡಿದ ಪ್ರಶ್ನೆಯೆಂಬುದು ವ್ಯಕ್ತವು. ಇದನ್ನು ಮನಸ್ಸಿನಲ್ಲಿಟ್ಟೇ **"ಬಹೂನಿಮೇ ವ್ಯತೀತಾನಿ" "ಯದಾಯದಾಹಿ ಧರ್ಮಸ್ಯ" "ಸಂಭವಾಮಿ ಯುಗೇಯುಗೇ"** ಇತ್ಯಾದಿ ಉತ್ತರಗಳು ಶ್ರೀ ಕೃಷ್ಣನಿಂದ ಹೇಳಲ್ಪಟ್ಟವು. ಕಾಲಸಂಖ್ಯೆಯಿಂದ ತೋರುವ ವಿರೋಧನನ್ನೇ ವ್ಯಕ್ತಪಡಿಸಿರುತ್ತಾರೆ. ನೀನು ನನ್ನ ಸಮಕಾಲಿಕನು ; ವಿವಸ್ವಂತನ ಕಾಲದಿಂದ ಈಚೆಗೆ ೨೮ ಸಲ ಚತುರ್ಯುಗಗಳು ಮರಳಿ ಹೋದವು; ಹೀಗಿರುವಾಗ ನೀನೇ ಆಗ ಆತನಿಗೆ ಉಪದೇಶಿಸಿದಿ ಎಂಬುದು ಹೇಗೆ? ಇದರ ಯಾಥಾತ್ಮ್ಯವನ್ನು ತಿಳಿಯಲಪೇಕ್ಷಿಸುತ್ತೇನೆ, ಎಂಬಭಿಪ್ರಾಯದಿಂದ **ತ್ವಮೇವಾದೌ** ಎಂಬ ವಾಕ್ಯದ ಪ್ರಯೋಗವು. ಅರ್ಜುನನಿಗೆ ಮನಸ್ಸಿನಲ್ಲಿ ಏನೋ ವಿರೋಧ ತೋರಿ ಪ್ರಶ್ನಿಸಿದನು ಎಂಬುದರಲ್ಲೇನೂ ಸಂದೇಹವಿಲ್ಲವು. ಹೀಗೆ ಕಾಲವ್ಯತ್ಯಾಸದಿಂದ ತೋರಿಬರುವ ವಿರೋಧವನ್ನೇ ಮನಸ್ಸಿನಲ್ಲಿಟ್ಟು ಪ್ರಶ್ನಿಸಬೇಕಾದರೆ ಮನಸ್ಸಿನಲ್ಲಿ ಆತನಿಗಿರುವ ಆಶಯವೇನೆಂಬುದನ್ನು ಮುಂದೆ ತೋರ್ಪಡಿಸುತ್ತಾರೆ:—ಆತನಿಗುಂಟಾದ ಶಙ್ಕಾ ಎಂಥಾದ್ದು ಎಂದು ತಿಳಿಸುವದಕ್ಕಾಗಿ ಒಂದು ಪೂರ್ವಪಕ್ಷದ ಮೂಲಕ ಚರ್ಚಿಸುತ್ತಾರೆ. ಹಿಂದೆ ವಿವಸ್ವಂತನಿಗೆ ನಾನೇ ಹೇಳಿದೆ ಎಂದು ಹೇಳಿ, ಈಗ ಬೇರೆ ಅವತಾರಮಾಡಿ, ಅದನ್ನೇ ಹೇಳುವದರಲ್ಲಿ ಏನೂ ವಿರೋಧವಿಲ್ಲವು, ಮತ್ತು ಆಗ ಹೇಳಿದುದು ಈ ಜನ್ಮದಲ್ಲಿ ಹೇಗೆ ತಿಳಿಯಿತು ಎಂದರೆ ಮಹಾತ್ಮರಿಗೆ ಪೂರ್ವ ಜನ್ಮ ಸ್ಮೃತಿ ಯಿರುವಾಗ ಸರ್ವೇಶ್ವರನಾದ ಶ್ರೀ ಕೃಷ್ಣನಿಗೆ ಆಗ ಉಪದೇಶಿಸಿದರೆ ಸ್ಮೃತಿಯುಂಟಾಗುನವದರಲ್ಲೇನೂ ವಿರೋಧವಿಲ್ಲವು, ಹೀಗಿರುವಾಗ ಶಙ್ಕಾವಿಗೆ ಕಾರಣವೆಲ್ಲಿ ಎಂದರೆ "ನನು"ಎಂದಾರಂಭಿಸಿ ಉಪಪಾದಿಸುತ್ತಾರೆ. **"ನನು ಜನ್ಮಾಂತರೇಣಾಪಿ ವಕ್ತುಮ್" ಶಕ್ಯಮ್** - ಆಗಲಿ ಹಿಂದೆ ಹೇಳಿದುದನ್ನೇ ಬೇರೆ ಜನ್ಮದಿಂದಲೂ ಕೂಡ ಹೇಳಲು ಸಾಧ್ಯವು. ಏಕೆಂದರೆ **ಜನ್ಮಾಂತರ ಕೃತಸ್ಯ ಮಹತಾಂ ಸ್ಮೃತಿಶ್ಚ ಯುಜ್ಯತೇ** - ಮಹಾತ್ಮರಿಗೇನೇ ಬೇರೆ ಜನ್ಮದಲ್ಲಿ ಮಾಡಿದುದರ ಸ್ಮೃತಿಯೂ ಕೂಡ ಯುಕ್ತವಾದುದೇ, **ಇತಿನಾತ್ರ ಕಶ್ಚಿದ್ವಿರೋಧಃ** - ಆದುದರಿಂದ ಈ ವಿಷ

ಭಾ- ನಚಾಸೌ ವಕ್ತಾರ ಮೇನಂ ವಸುದೇವತನಯಂ ಸರ್ವೇಶ್ವರಂ ನಜಾನಾತಿ; ಯತ ಏವಂ ವಕ್ಷ್ಯತಿ (೧) "ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ । ಪುರುಷಂ ಶಾಶ್ವತಂ ದಿವ್ಯ ಮಾದಿದೇವ ಮಜಂ ವಿಭುಮ್ । ಆಹುಸ್ತ್ವಾ ಮೃಷಯ ಸ್ಸರ್ವೇ ದೇವರ್ಷಿ ರ್ನಾರದ ಸ್ತಥಾ । ಅಸಿತೋ ದೇವಲೋ ವ್ಯಾಸ ಸ್ಸ್ವಯಂ ಚೈವ ಬ್ರವೀಷಿಮೇ" ಇತಿ; ಯುಧಿಷ್ಠಿರ ರಾಜಸೂಯಾದಿಷು ಭೀಷ್ಮಾದಿಭ್ಯ ಶ್ಚಾ ಸಕೃಚ್ಛ್ರುತಂ

ಯದಲ್ಲಿ ಏನೊಂದೂ ವಿರೋಧವಿಲ್ಲವು. ಈ ವಿರೋಧಕ್ಕಾಗಿ ಅರ್ಜುನನು ಪ್ರಶ್ನಿಸಲಿಲ್ಲವೆಂಬ ಭಾವವು ; ನಚಾಸೌ ವಕ್ತಾರ ಮೇನಂ ವಸುದೇವ ತನಯಂ ಸರ್ವೇಶ್ವರಂ ನ ಜಾನಾತಿ ಇನ್ನೂ ಏನೆಂದರೆ ಈ ಅರ್ಜುನನು ತನಗೆ ಉಪದೇಶಕನಾದ ವಸುದೇವಕುಮಾರನಾಗಿ ಮಾನುಷರೂಪ ಧರಿಸಿರುವ ಮಾತ್ರದಿಂದ, ಶ್ರೀಕೃಷ್ಣನನ್ನು ಸರ್ವೇಶ್ವರನೆಂದು ತಿಳಿದಿರಲಿಲ್ಲವೆಂಬುದೂ ಸರಿಯಲ್ಲವು. ಆತನು ವಿವಸ್ವಂತನಿಗೂ ಕೂಡ ಸರ್ವೇಶ್ವರನೆಂದು ತಿಳಿಯದೆ ಅರ್ಜುನನು ಹಾಗೆ ಪ್ರಶ್ನಿಸಿದನೆಂದು ಭಾವಿಸಲು ಸಾಧ್ಯವಿಲ್ಲವೆಂಬಭಿಪ್ರಾಯವು. ಏಕೆಂದರೆ ಅಸೌ ಎಂಬ ಪ್ರಯೋಗದಿಂದಲೇ ಈ ಅರ್ಜುನನು ಈ ವೃದ್ಧೋಪಸೇವಿಯಾಗಿ ಬಹು ಶ್ರುತನು ಎಂಬ ಭಾವವು ತೋರಿಬರುತ್ತದೆ. ಅರ್ಜುನನು ಪ್ರಾಜ್ಞನಾಗಿ ಇದನ್ನೆಲ್ಲಾ ತಿಳಿದಿರುವವನು ಎಂಬುದಕ್ಕೆ ಇನ್ನೂ ಕಾರಣಗಳುಂಟು ; ಪೂತನಾ ಮೊದಲಾದ ಕಂಸನಿಂದ ಕಳುಹಿಸಲ್ಪಟ್ಟವರನ್ನೆಲ್ಲಾ ಸಂಹರಿಸೋಣವೇನು, ಗೋವರ್ಧನೋದ್ಧರಣವೇನು, ಇವೇ ಮೊದಲಾದ ಅನೇಕ ಅತಿಮಾನುಷ ಚರಿತ್ರೆಗಳಿಂದಲೂ, ಹುಟ್ಟುವಾಗಲೇ ಚತುರ್ಭುಜತ್ವಾದಿ ಆಕಾರದಿಂದ ವಸುದೇವ ದೇವಕಿಯರಿಗೆ ಸೇವೆಯನ್ನಿತ್ತುದದೇನು, ಇವುಗಳಿಂದ ಸರ್ವೇಶ್ವರತ್ವವು ಅರ್ಜುನನಿಗೆ ವ್ಯಕ್ತವಾಗಿರಬಹುದೆಂದೂ ಊಹಿಸಬಹುದು. ಅರ್ಜುನನು ಇದನ್ನು ತಿಳಿದಿದ್ದನೆಂಬುದಕ್ಕೆ ಪ್ರಮಾಣವನ್ನು ಆತನ ವಾಕ್ಯವನ್ನೇ ಉದಾಹರಿಸುತ್ತಾರೆ. ಯತಃ ಏವಂ ವಕ್ಷ್ಯತಿ - ಯಾವ ಕಾರಣದಿಂದ ಅರ್ಜುನನೇ ಮುಂದೆ ಹತ್ತನೆಯ ಅಧ್ಯಾಯದ ೧೨ ೧೩ನೆಯ ಶ್ಲೋಕಗಳಲ್ಲಿ ವಿಶ್ವರೂಪದರ್ಶನಕ್ಕೆ ಮುಂಚೆಯೇ ಹೇಳುತ್ತಾನೋ ಅದರಿಂದ; ಆ ಶ್ಲೋಕಗಳ ತಾತ್ಪರ್ಯವೇನೆಂದರೆ. ಶ್ರುತಿಗಳು ಯಾವ ನಿನ್ನನ್ನುಪರಬ್ರಹ್ಮವೆಂದೂ, ಪರಂಜ್ಯೋತಿಸ್ಸೆಂದೂ, ಸ್ಮರಿಸಿದವರಿಗೆ ಪರಮ ಪಾವನವೆಂದೂ ನೀನು ಮಾತ್ರವೇ ಪುರುಷನೆಂದೂ ಮಿಕ್ಕೆಲ್ಲವೂ ಸ್ತ್ರೀಪ್ರಾಯವೆಂದೂ ನೀನು ಯಾವಾಗಲೂ ಶಾಶ್ವತನೆಂದೂ, ಪರಮ ವ್ಯೋಮದಲ್ಲಿ ಎಂದರೆ ನಿತ್ಯವಿಭೂತಿಯಲ್ಲಿ ಪ್ರಕಾಶಿಸಿಕೊಂಡಿರುವನೆಂದೂ, ಆದಿದೇವನೆಂದೂ, ಉತ್ಪತ್ತಿ ರಹಿತನೆಂದೂ,ಸರ್ವವ್ಯಾಪೀಯೆಂದೂ,ಹೇಳುತ್ತವೋ ಅವನೇ ಶ್ರೀಕೃಷ್ಣನೆಂದೂ,ಸಮಸ್ತ ಋಷಿಗಳೂ ದೇವರ್ಷಿಯಾದ ನಾರದರೂ ಹಾಗೆಯೇ ಅಸಿತರೂ, ದೇವಲರೂ ವೇದವ್ಯಾಸರೂ ಸಹ ಹೇಳಿರುತ್ತಾರೆ. ಇಷ್ಟೇ ಅಲ್ಲವು, ನೀನೇ ಸಹ ನನಗೆ ಸಾಕ್ಷಾತ್ತಾಗಿಯೂ ಹೇಳಿರುತ್ತೀಯೆ"ಎಂಬುದು ಈ ಎರಡು ಶ್ಲೋಕಗಳ ತಾತ್ಪರ್ಯವು. ಮುಂದೆ ೧೦ನೆಯ ಅಧ್ಯಾಯದಲ್ಲಿ ಸವಿಸ್ತರವಾಗಿ ಈ ಶ್ಲೋಕಗಳು ವ್ಯಾಖ್ಯಾನಮಾಡಲ್ಪಟ್ಟಿವೆ. ಅರ್ಜುನನು ಶ್ರೀ ಕೃಷ್ಣನನ್ನು ಸರ್ವೇಶ್ವರನೆಂದು ತಿಳಿದಿದ್ದನೆಂಬುದಕ್ಕೆ ಅರ್ಜುನನ ವಾಕ್ಯವನ್ನೇ ನಿದರ್ಶನವಾಗಿ ಉದಾಹರಿಸಿದರು. ಆತನು ರಾಜಸೂಯ ಯಾಗಾದಿ ಕಾಲಗಳಲ್ಲಿ ಮಹಾ ಜ್ಞಾನಿಗಳಾದ ಭೀಷ್ಮಾದಿಗಳಿಂದಲೂ ಒಂದುಸಲವೇ ಅಲ್ಲದೆ ನಾನಾ ಸಮಯಗಳಲ್ಲಿ ಶ್ರೀಕೃಷ್ಣನು ಸಾಮಾನ್ಯಮನುಷ್ಯನಲ್ಲವೆಂದೂ ಸಾಕ್ಷಾತ್ ಜಗತ್ಕಾರಣನಾದ ಸರ್ವೇಶ್ವರನೇ ಎಂದೂ ಉಪದೇಶಿಸಲ್ಪಟ್ಟಿರುತ್ತಾನೆಂದೂ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ-—ಯುಧಿಷ್ಠಿರನು ನಡೆಸಿದ ರಾಜಸೂಯಾದಿ ಸಮಯಗಳಲ್ಲಿ, ಭೀಷ್ಮರೇ ಮೊದಲಾದ

(೧) ಗೀ. ೧೦-೧೨, ೧೩.

ಭಾ. (೧) "ಕೃಷ್ಣ ಏವಹಿ ಲೋಕಾನಾಮುತ್ಪತ್ತಿ ರಪಿ ಚಾಪ್ಯಯಃ। ಕೃಷ್ಣಸ್ಯ ಹಿ ಕೃತೇ ಭೂತ ಮಿದಂ ವಿಶ್ವಂ ಚರಾಚರಮ್" ಇತ್ಯೇವ ಮಾದಿಷು; ಕೃಷ್ಣಸ್ಯ ಹಿ ಕೃತೇ ಇತಿ ಕೃಷ್ಣಸ್ಯ ಶೇಷಭೂತ ಮಿದಂ ಕೃತ್ಸ್ನಂ ಜಗದಿತ್ಯರ್ಥಃ। ಅತ್ರೋಚ್ಯತೇ - ಜಾನಾತ್ಯೇ ವಾಯಂ ಭಗವಂತಂ ವಸುದೇವ ಸೂನುಂ ಪಾರ್ಥಃ। ಜಾನ

ಜ್ಞಾನಿಗಳಿಂದ ಇಲ್ಲಿ ಆದಿಪದದಿಂದ ಸಂಜಯ, ಅಕ್ರೂರಾದಿಗಳು ಹೇಳಲ್ಪಟ್ಟರು, ಅಸಕೃತ್ – ಅನೇಕಾವರ್ತಿ, "ಕೃಷ್ಣ ಏವ ಹಿ" ಇತ್ಯೇವ ಮಾದಿಷು-"ಕೃಷ್ಣ ಏವ ಹಿ" ಎಂಬಿವೇ ಮೊದಲಾದ ವಾಕ್ಯಗಳಲ್ಲಿ ಶ್ರುತಂ - ಅರ್ಜುನನು ಕೇಳಿಯೂ ಇರುತ್ತಾನೆ. ಈ ಶ್ಲೋಕಾರ್ಥವೇನೆಂದರೆ—"ಕೃಷ್ಣ ಏವಹಿ" ಕೃಷ್ಣನುಮಾತ್ರವೇ ಎಂದರೆ ಇನ್ಯಾರೂ ಅಲ್ಲವೆಂಬ ತಾತ್ಪರ್ಯವು, ಲೋಕಗಳ ಉತ್ಪತ್ತಿಃ - ಸೃಷ್ಟಿಗೆ ಕಾರಣನು, ಅಪಿಚಾಪ್ಯಯಃ - ಅವುಗಳ ನಾಶಪ್ರಾಯವಾದ ಪ್ರಳಯಕ್ಕೂಸಹ ಕಾರಣನು, ಸೃಷ್ಟಿ ಪ್ರಳಯಗಳು ಯಾವಾಗ ಹೇಳಲ್ಪಟ್ಟವೋ, ಸ್ಥಿತಿ ಯಿಲ್ಲದೆ ಪ್ರಳಯವಿಲ್ಲವಾದುದರಿಂದ ಸ್ಥಿತಿಯೂ ಕೂಡ ಹೇಳಲ್ಪಟ್ಟಿತು. ಉತ್ತರಾರ್ಧಕ್ಕೆ ಸರಿಯಾಗಿ ಅರ್ಥಮಾಡುತ್ತಾರೋ ಇಲ್ಲವೋ ಎಂಬ ಶಙ್ಕಾದಿಂದ ತಾವೇ ಸರಿಯಾದ ಭಾಷ್ಯವನ್ನು ಬರೆಯುತ್ತಾರೆ:—ಕೃಷ್ಣಸ್ಯ ಹಿ ಕೃತೇ ಇತಿ - ಎಂಬುದರಿಂದ ಶ್ರೀ ಕೃಷ್ಣನಿಗೇನೇ, ಕೃತ್ಸ್ನಂಜಗತ್-ಸಮಸ್ತ ಜಗತ್ತೂ, ಇದು ಇದಂ ವಿಶ್ವಂ ಚರಾಚರಮ್ ಎಂದು ಶ್ಲೋಕದಲ್ಲಿರುವದರರ್ಥವು, ಶೇಷಭೂತ ಮಿತ್ಯರ್ಥಃ - ಶೇಷಭೂತವಾದುದು, ಎಂದರೆ ಶ್ರೀಕೃಷ್ಣನಿಗೇನೆ ಲೀಲೆಯಾಗಿ ಭೋಗ್ಯಭೂತವಾದುದೆಂಬ, ಅರ್ಥವು- ಈ ಶ್ಲೋಕದ ಪೂರ್ವಾರ್ಧದಿಂದ "ಯತೋವಾ ಇಮಾನಿಭೂತಾನಿ ಜಾಯನ್ತೇ ಯೇನ ಜಾತಾನಿ ಜೀವನ್ತಿ ಯತ್ಪ್ರಯನ್ತ್ಯಭಿಸಂವಿಶನ್ತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ" ಎಂಬ ಶ್ರುತ್ಯರ್ಥವೂ "ಪತಿಂ ವಿಶ್ವಸ್ಯ" ಎಂಬ ಶ್ರುತ್ಯರ್ಥವೂ ಉತ್ತರಾರ್ಧದಿಂದಲೂ ಉಪಪಾದಿತವು. ಆದುದರಿಂದ ಶ್ರೀಕೃಷ್ಣನೇ ಪರಬ್ರಹ್ಮವು ಎಂಬ ಭಾವವು. ಇಲ್ಲಿಭೂತ ಶಬ್ದವು "ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ। ನಾನ್ಯಥಾ ಲಕ್ಷಣಂತೇಷಾಂ ಬನ್ಧೇ ಮೋಕ್ಷೇ ತಥೈವಚ॥"ಎಂಬ ಪಾಂಚರಾತ್ರ ಶ್ಲೋಕದಲ್ಲಿರುವ ಭೂತಶಬ್ದವು. ದಾಸಭೂತರೆಂದರೆ ಹಿಂದೆ ದಾಸಭೂತರಲ್ಲದೆ ಈಗ ದಾಸರಾದವರು ಎಂಬರ್ಥವಲ್ಲವು; ದಾಸಾಶ್ಚ ತೇ ಭೂತಾಶ್ಚ ಎಂಬ ವ್ಯುತ್ಪತ್ತಿಯಿಂದ ಯಾವಾಗಲೂ ದಾಸಭೂತತ್ವವೇ ಅವರಿಗೆ ಸ್ವರೂಪವು. ಆದರೆ "ಆತ್ಮಾನಃ" ಎಂಬುದಕ್ಕೆ ವ್ಯುತ್ಪತ್ತಿ ಮೂಲಕ ವ್ಯಾಪನ ಭರಣ ಸ್ವಾಮ್ಯಗಳು ತೋರಿಬರುವಾಗ ದಾಸಭೂತತ್ವ ಹೇಗೆ ಎಂದರೆ ಈತನ ಸ್ವರೂಪವು ಅಣುವಾಗಿ ಧರ್ಮಭೂತಜ್ಞಾನಮೂಲಕ ವ್ಯಾಪನೆಯು; ಪರಮಾತ್ಮನಿಗಾದರೋ ಸ್ವರೂಪತಃ; ಮತ್ತು ಆತ್ಮರುಗಳ ಭರಣ ಸ್ವಾಮ್ಯಗಳು ಪರಮಾತ್ಮದತ್ತವಾದುವು, ಪರಮಾತ್ಮನಿಗಾದರೋ ಸ್ವಾಭಾವಿಕವಾಗಿ ಸ್ವತಃ ಉಂಟಾದುದು; ಆದುದರಿಂದ ಈ ಸಮಸ್ತ ಚರಾಚರಗಳಿಂದ ಸೇರಿದ ಸಮಸ್ತ ಜಗತ್ತು ಆತನಿಗೇನೇ, "ಪತಿಂ ವಿಶ್ವಸ್ಯ" ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಶೇಷಭೂತವೆಂದು ತಿಳಿಸುವದಕ್ಕಾಗಿಯೇ "ಕೃಷ್ಣಸ್ಯ ಹಿ ಕೃತೇ ಭೂತಂ" ಎಂಬ ಪ್ರಯೋಗವೆಂದು ತಿಳಿಸಿರುತ್ತಾರೆ. ಈ ಭೀಷ್ಮಾಚಾರ್ಯರ ವಾಕ್ಯವನ್ನೂ "ಜನ್ಮಾದ್ಯಸ್ಯ ಯತಃ" ಎಂದರೆ ಯಾವನ ದೆಶೆಯಿಂದ ಜಗತ್ತಿನ ಸೃಷ್ಟಿಸ್ಥಿತಿ ಲಯಗಳುಂಟಾಗುತ್ತದೋ ಆತನೇ ಪರಬ್ರಹ್ಮವೆಂಬ ಬ್ರಹ್ಮಸೂತ್ರವನ್ನೂ ಮತ್ತು "ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ" – ಯಾವನಿಂದ ಈ ಚರಾಚರವೆಲ್ಲಾ ಸೃಷ್ಟಿಸಲ್ಪಡುತ್ತದೋ ಇತ್ಯಾದ್ಯಭಿಪ್ರಾಯವುಳ್ಳ ಶ್ರುತಿಯನ್ನೂ

(೧) ಭಾ. ಸಭಾ. ೩೮,೨೩.

ಭಾ. ತೋಽಪ್ಯಜ್ಞಾನತ ಇವ ಪೃಚ್ಛತೋ ಯ ಮಾಶಯಃ - ನಿಖಿಲಹೇಯ ಪ್ರತ್ಯನೀಕ ಕಲ್ಯಾಣೈಕ ತಾನಸ್ಯ ಸರ್ವೇಶ್ವರಸ್ಯ ಸರ್ವಜ್ಞಸ್ಯ ಸತ್ಯ ಸಙ್ಕಲ್ಪಸ್ಯಾವಾಪ್ತ ಸಮಸ್ತ ಕಾಮಸ್ಯ ಕರ್ಮ ಪರವಶ ದೇವ ಮನುಷ್ಯಾದಿ ಸಜಾತೀಯಂ ಜನ್ಮ ಕಿಮಿಂದ್ರಜಾಲಾದಿವನ್ಮಿಥ್ಯಾ, ಉತಸತ್ಯಂ; ಸತ್ಯತ್ವೇಚ ಕಥಂ ಜನ್ಮ ಪ್ರಕಾರಃ, ಕಿಮಾತ್ಮ

---

ಪರಿಶೀಲಿಸಿದುದಾದರೆ ಶ್ರೀ ಕೃಷ್ಣನೇ ಪರತತ್ವವೆಂಬುದು ವ್ಯಕ್ತವು. ಆದರೆ ಶ್ರೀಕೃಷ್ಣನು ವಸುದೇವ ಸೂನುವಾಗಿ ಅರ್ಜುನನು ಪಾರ್ಥನಾಗಿರುವದರಿಂದ ಸೋದರಮಾವನ ಮಗ ಮತ್ತು ಅತ್ತೆಯ ಮಗ ಹೀಗೆ ಪ್ರಾಕೃತ ಸಂಬಂಧವಿರುವದರಿಂದ ಈಶ್ವರತ್ವ ದಾಸತ್ವಗಳು ತೋರದೇ ಹೋಗುವ ಸಂಭವವಿದ್ದರೂ ಸುಕೃತ ಪರಿಪಾಕದಿಂದಲೂ ಗುರೂಪದೇಶದಿಂದಲೂ ಶ್ರೀಕೃಷ್ಣನು ಸರ್ವೇಶ್ವರನೆಂಬುದು ಅರ್ಜುನನಿಗೆ ತಿಳಿದೇ ಇತ್ತೆಂಬಭಿಪ್ರಾಯವು. ಇದರಿಂದ ಅರ್ಜುನನಿಗೆ ಶ್ರೀ ಕೃಷ್ಣನೇ ಸರ್ವೇಶ್ವರನೆಂಬುದು ಸೂಚಿತವಾದುದರಿಂದ, ಸರ್ವೇಶ್ವರನೇ ಆಗಲೂ ಈಗಲೂ ಸಹ ಅವತಾರಗಳನ್ನೆತ್ತಿ ಈ ಯೋಗವನ್ನು ಉಪದೇಶಿಸಿಲಬಹುದೆಂಬುದರಲ್ಲೂ ಏನೊಂದೂ ವಿರೊಧವಿಲ್ಲವು. ಮತ್ತು ತಾನೇ ಆಗಲೂ ಉಪದೇಶಿಸಿದುದು ಎಂಬ ಸ್ಮೃತಿಯು ಸರ್ವೇಶ್ವರನಿಗೆ ಉಂಟಾಗುವದರಲ್ಲೂ ಏನೂ ವಿರೋಧವಿಲ್ಲವು. ಹೀಗಿದ್ದರೂ "ಕಥಮೇತದ್ವಿಜಾನೀಯಾಂ" ಎಂಬ ಪ್ರಶ್ನೆಯಲ್ಲಿ ಅರ್ಜುನನ ಆಶಯವೇನೆಂಬುದನ್ನು ನಾವು ಚನ್ನಾಗಿ ತಿಳಿಯತಕ್ಕದ್ದು ಆವಶ್ಯಕವು. ಆದುದರಿಂದ, ಅತ್ರೋಚ್ಯತೇ - ಈ ವಿಷಯದಲ್ಲಿ ಸಮಾಧಾನವನ್ನು ಹೇಳುವೆವು ಎಂದು ಉಪಕ್ರಮಿಸಿ ತಿಳಿಸುತ್ತಾರೆ.—ಅಯಂ ಪಾರ್ಥಃ-ಈ ಬಹು ಶ್ರುತನಾದ ಅರ್ಜುನನು, ವಸುದೇವ ಸೂನುಂ-ವಸುದೇವ ಕುಮಾರನಾಗಿ ಜನಿಸಿದ ಶ್ರೀಕೃಷ್ಣನನ್ನು ಭಗವಂತನೆಂದು, ಜಾನಾತ್ಯೇವ-ತಿಳಿದೇ ಇರುತ್ತಾನೆ. ಏವ ಎಂಬ ಅವಧಾರಣದಿಂದ ಈ ವಿಷಯದಲ್ಲಿ ಸಂದೇಹವಿಲ್ಲವೆಂದು ಎಲ್ಲರೂ ಒಪ್ಪತಕ್ಕದ್ದೆಂಬ ಭಾವವು. ಮೇಲೆ ಉದಾಹರಿಸಿರುವ ಪ್ರಮಾಣಗಳನ್ನು ವಿಮರ್ಶಿಸಿ ನೋಡಿದರೆ ವಿವಾದಕ್ಕೆ ಆಸ್ಪದವೇ ಇಲ್ಲವೆಂಬ ಭಾವವು. ತ್ವಮಾದೌ ಪ್ರೋಕ್ತವಾನ್ ಎಂದಿರುವದರಿಂದಲೂ, ಈಗಿನ ಕೃಷ್ಣ ಜನ್ಮದಹಾಗೆ ಹಿಂದೆಯೇ ಒಂದು ಜನ್ಮವನ್ನೆತ್ತಿರಬೇಕೆಂಬುದು ಎಂತವನಿಗಾದರೂ ಗೊತ್ತಾಗುತ್ತದೆ. ಆದುದರಿಂದ ಜಾನಾತ್ಯೇವ ಎಂಬ ಪ್ರಯೋಗವು. ಇಲ್ಲಿ ಶ್ರೀಕೃಷ್ಣನಿಗೆ ಭಗವಚ್ಛಬ್ದವು ಸರಿಯಾಗಿ ಸಲ್ಲುತ್ತದೆ ಎಂಬ ಭಾವದಿಂದ ಶ್ರೀ ಪರಾಶರರು(ವಿ.ಪು. ೬. ೫:೭೭.೭೮) ಶ್ಲೋಕಗಳಲ್ಲಿ ಉಪಪಾದಿಸಿರುವಹಾಗೆ "ಸರ್ವಕಾರಣ ಕಾರಣನಾಗಿಯೂ ಸಂಭರ್ತಾ"ವಾಗಿಯೂ ಭರ್ತಾವಾಗಿಯೂ, ರಕ್ಷಕನಾಗಿಯೂ ಸಂಹರ್ತಾವಾಗಿಯೂ ಷಾಡ್ಗುಣ್ಯಾದಿ ಕಲ್ಯಾಣ ಗುಣಾಕರನೆಂದೂ ಹೇಯ ಪ್ರತ್ಯನೀಕನೆಂದೂ ಹೇಳುವದಕ್ಕಾಗಿಯೂ ಹಾಗೆ ಪ್ರಯೋಗಿಸಲ್ಪಟ್ಟಿರುತ್ತದೆ. ಜಾನತೋಽಪಿ - ಹಾಗೆ ತಿಳಿದಿದ್ದರೂ ಕೂಡ, ಅಜ್ಞಾನತ ಇವ - ತಿಳಿಯದವನಹಾಗೆ, ಪೃಚ್ಛತಃ-ಪ್ರಶ್ನಿಸುವ ಅರ್ಜುನನಿಗೆ, ಅಯಂ ಆಶಯಃ - ಇದೀಗ ಅಭಿಪ್ರಾಯವು—ನಿಖಿಲಹೇಯ ಪ್ರತ್ಯನೀಕ ಕಲ್ಯಾಣೈಕತಾನಸ್ಯ - ಸಮಸ್ತ ಹೇಯವಾದುದಕ್ಕೆಲ್ಲಾ ಪ್ರತಿಭಟರೂಪನಾಗಿ ಸಮಸ್ತ ಕಲ್ಯಾಣಗುಣಗಳಿಗೆ ಅನನ್ಯವೃತ್ತಿಯಾಗಿರುವ ಎಂದರೆ ಪ್ರಧಾನಸ್ಥಾನಭೂತನಾಗಿರುವ, ಸರ್ವೇಶ್ವರನಾಗಿ, ಸರ್ವಜ್ಞನಾಗಿ, ಸತ್ಯ ಸಙ್ಕಲ್ಪನಾಗಿ, ಪರಿಪೂರ್ಣ ಕಾಮನಾಗಿರುವ ಭಗವಂತನಿಗೆ, ಇಂತಹ ಸ್ವರೂಪ ಸ್ವಭಾವಗಳೆಲ್ಲಾ ಭಗವಂತನಾದ ಶ್ರೀ ಕೃಷ್ಣನಿಗೆ ಉಂಟೆಂಬ ಜ್ಞಾನವು ಅರ್ಜುನನಿಗಿತ್ತು ಎಂದು ತಿಳಿಸುವದಕ್ಕಾಗಿ ಈ ವಿಶೇಷಣಗಳು; ಕರ್ಮಪರವಶ ದೇವ ಮನುಷ್ಯಾದಿ ಸಜಾತೀಯಂ ಜನ್ಮ - ಕರ್ಮವಶ್ಯರಾದ ದೇವ ಮನುಷ್ಯರೇ ಮೊದಲಾದವರುಗಳಿಗೆ ಸಜಾತೀಯವಾಗಿ ಎತ್ತಿದ ಅವತಾರವು, ಕಿಮಿಂದ್ರ ಜಾಲಾದಿವನ್ಮಿಥ್ಯಾ, ಉತಸತ್ಯಂ-ಇಂದ್ರ

ಭಾ. ಕೋಽಯಂ ದೇಹಃ, ಕಶ್ಚ ಜನ್ಮ ಹೇತುಃ, ಕದಾಚಜನ್ಮ, ಕಿಮರ್ಥಂಚಜನ್ಮೇತಿ ಪರಿಹಾರ ಪ್ರಕಾರೇಣ ಪ್ರಶ್ನಾರ್ಥೋ ವಿಜ್ಞಾಯತೇ ||೪||

ಜಾಲಾದಿಗಳ ಹಾಗೆ ಮಿಥ್ಯೆಯೋ ಅಥವಾ ಸತ್ಯವೋ? ಸತ್ಯತ್ವೇ ಚ - ಸತ್ಯವಾದುದಾದರೆ, ಕಥಂಜನ್ಮಪ್ರಕಾರಃ – ಅವತಾರ ಪ್ರಕಾರವು ಹೇಗೆ? ಇದರಭಿಪ್ರಾಯವನ್ನು ತಿಳಿಸುತ್ತಾರೆ.—ಕಿಮಾತ್ಮಕೋಽಯಂ ದೇಹಃ-ಪ್ರಾಕೃತ ಶರೀರದಹಾಗೆ ಇರುವ ಈ ಅವತಾರ ಎತ್ತುವ ದೇಹದ ಸ್ವರೂಪವೇಂತಾದ್ದು? ಕಶ್ಚ ಜನ್ಮಹೇತುಃ – ಅವತಾರಕ್ಕೆ ಕಾರಣವು ಯಾವುದು? ಕದಾ ಚ ಜನ್ಮ - ಅವತಾರಕ್ಕೆ ಕಾಲವು ಯಾವುದು? ಕಿಮರ್ಥಂ ಚ ಜನ್ಮ - ಯಾವಪ್ರಯೋಜನಕ್ಕಾಗಿ ಅವತಾರವು? ಇತಿ - ಎಂಬದಾಗಿ, ಪರಿಹಾರ ಪ್ರಕಾರೇಣ - ಮೇಲಿನ ಶಙ್ಕಾಗಳಿಗೆ ಪರಿಹಾರ ರೂಪದಲ್ಲಿ, ಪ್ರಶ್ನಾರ್ಥಃ - ಅರ್ಜುನನ ಪ್ರಶ್ನಾಭಿಪ್ರಾಯವು, ವಿಜ್ಞಾಯತೇ - ವಿಶದವಾಗಿ ತೋರಿಬರುತ್ತದೆ. ಅರ್ಜುನನು ಶಾಸ್ತ್ರಜ್ಞನಲ್ಲದೇ ಇಲ್ಲವು; ಗುರುಗಳಿಂದ ಉಪದೇಶವನ್ನು ಹೊಂದದೇ ಇಲ್ಲವು. ಯಾವಾಗ ಸರ್ವೇಶ್ವರನು ತಾನೇ ವಿವಸ್ವಂತನಿಗೆ ಹೇಳಿದೆನು ಎಂದು ತಿಳಿಸಿದನೋ, ಆಗ ಸರ್ವೇಶ್ವರನೇ ಆಗಲೂ ಈಗಲೂ ಸಹ ಅವತಾರ ಮಾಡಿರಬೇಕೆಂದು ಏರ್ಪಟ್ಟಿತು. ಯದ್ಯಪಿ ಶಾಸ್ತ್ರಜ್ಞನಾದುದರಿಂದ ಆತನಿಗೆ ಈ ಅವತಾರಗಳ ವಿಷಯವು ಶ್ರುತವಾದುದಾಗಿತ್ತು; ಆದರೂ ಈಗ ಉಪದೇಶಿಕನು ಸರ್ವೇಶ್ವರನಾಗಿರುವದರಿಂದ ಅವತಾರವಿಷಯದಲ್ಲಿರುವ ರಹಸ್ಯಗಳನ್ನೆಲ್ಲಾ ಚನ್ನಾಗಿ ತಿಳಿಯಬೇಕೆಂಬ ಆಶಯದಿಂದ ತಿಳಿದಿದ್ದರೂತಿಳಿಯದವನಹಾಗೆ ಪ್ರಶ್ನೆ ಮಾಡಿದನೆಂದು ಭಾವಿಸಬಹುದು. ಈಗಲೂ ಕೂಡ ಬಹಳ ತಿಳಿದವರು ಉಪದೇಶಿಕರಾದರೆ ಮಹಾಜ್ಞಾತಾವಾದವರೂ ಕೂಡ ಹೋಗಿ ಕೇಳುವದನ್ನು ಕಂಡಿರುವೆವಷ್ಟೇ. ಆ ಕಾರಣದಿಂದ ಜ್ಞಾನಿಯಾದ ಅರ್ಜುನನು ಪ್ರಶ್ನಿಸಿರಬಹುದು.ಅಥವಾ ಅವತಾರ ವಿಷಯದಲ್ಲಿ ಕೆಲವು ಶಙ್ಕಾಗಳು ಕೆಲವು ಸಮಾಜದವರಿಗಿರುವಹಾಗೆ ಅರ್ಜುನನಿಗಿದ್ದರೂ ಇರಬಹುದು. ಈ ಶಙ್ಕಾಗಳು "ನಿಖಿಲ ಹೇಯಪ್ರತ್ಯನೀಕ" ಎಂದಾರಂಭಿಸಿದ ನಾಲ್ಕು ಷಷ್ಠ್ಯಂತ ಪದಗಳಿಂದ ತೋರಿ ಬರುತ್ತವೆ. ಹೇಗೆಂದರೆ:—(೧) ಇತರ ಚೇತನರ ಜನ್ಮಜರಾದಿಗಳನ್ನು ಹೋಗಲಾಡಿಸುವ ಶಕ್ತಿಯುಳ್ಳವನು ತಾನೇ ಅಂತಹ ಅವಸ್ಥೆಗಳನ್ನನುಭವಿಸುವನೇ? ಸ್ವರೂಪತಃ ಆನಂದನಾದವನು ಈ ಹೇಯ ಜನ್ಮವನ್ನು ಹೊಂದುವನೇ? ಹಾಗೆ ಹೇಯ ಜನ್ಮವಲ್ಲದಿದ್ದರೆ, ಅವತಾರವೇನು ಸತ್ಯವೇ ಮಿಥ್ಯೆಯೇ? (೨) ಸರ್ವೇಶ್ವರನಾಗಿ ಸರ್ವನಿಯಂತಾವಾದವನಿಗೆ, ಇತರರಿಂದ ನಿಯಮಿಸಲ್ಪಡುವ ಜನ್ಮಾದಿಗಳ ಘಟನೆಯು ಹೇಗೆ? (೩) ತಾನೇ ಸರ್ವಜ್ಞನಾಗಿ ತನಗೆ ಹಿತಾ ಹಿತಗಳನ್ನು ಚನ್ನಾಗಿ ತಿಳಿದವನು ಈ ದುಃಖ ಭಾಕ್ಕಾದ ಸಂಸಾರಿಗೆ ಸಮಾನವಾದ ಜನ್ಮವನ್ನೆತ್ತುವನೇ? ಅಗ್ನಿ ಸಮಾನವಾದ ಈ ಸಂಸಾರವನ್ನು ಸ್ಪರ್ಶಿಸುವದಕ್ಕೆ ಸರ್ವಜ್ಞನೇನು ಬಾಲನೇ? ಅಥವಾ ಅವಿದ್ಯಾಗೃಹೀತನಾಗಿ ಭ್ರಾಂತನಾಗಿ ಕೆಸರುಗುಂಡಿ ಎಂದು ತಿಳಿಯದೆ ಅಂತಹ ಮಾನುಷ ಜನ್ಮವನ್ನು ಏನಾದರೂ ಅವಲಂಬಿಸಿದನೇ? (೪) ಸರ್ವೇಶ್ವರನು ಸತ್ಯಸಙ್ಕಲ್ಪನಾಗಿರುವಾಗ ಸಙ್ಕಲ್ಪಮಾತ್ರದಿಂದಲೇ "ಅಙ್ಗುಳ್ಯಗ್ರೇಣತಾನ್ ಹನ್ಯಾ ಮಿಚ್ಛನ್ ಹರಿಗಣೇಶ್ವರ" "ಓ ಸುಗ್ರೀವನೇ, ಸಙ್ಕಲ್ಪಿಸಿದರೆ ರಾಕ್ಷಸರೇ ಮೊದಲಾದವರನ್ನೆಲ್ಲಾ ಒಂದು ಬೆರಳು ತುದಿಯಿಂದಲೇ ಕೊಂದು ಬಿಡಲು ಶಕ್ತಿಯುಂಟೆಂದು" ಶ್ರೀರಾಮನು ಹೇಳಿದಹಾಗೆ, ಸಮಸ್ತವನ್ನೂ ನೆರವೇರಿಸಿಕೊಳ್ಳುವ ಶಕ್ತಿಯುಳ್ಳವನು ಅವತಾರಗಳನ್ನೆತ್ತಿ ನಡೆಸಿಕೊಳ್ಳಬೇಕೇ? ಲೋಕರಕ್ಷಣಾರ್ಥವಾಗಿ ಈ ಹೇಯ ಜನ್ಮವನ್ನು ಹೊಂದಬೇಕೇ? ಹಾಗೆ ನಡೆಸಲು ಶಕ್ತಿಯಿರುವವನಿಗೆ ಈ ಅವತಾರಗಳು ಅನಾವಶ್ಯಕವಲ್ಲವೆ? (೫) ಏನಾದರೂ ಸಾಧಿಸಿಕೊಳ್ಳುವ ಪ್ರಯೋಜನವಿದ್ದುದಾದರೆ ಸರ್ವೇಶ್ವರನು

ಶ್ರೀ ಭಗವಾನುವಾಚ :—

ಮೂ. ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ ನತ್ವಂ ವೇತ್ಥ ಪರಂ ತಪ ॥ ೫.

ಅವತಾರಗಳನ್ನೆತ್ತಿ ಸಾಧಿಸಿಕೊಳ್ಳಬೇಕು ; ಅವಾಪ್ತ ಸಮಸ್ತಕಾಮನಿಗೆ ಯಾವ ಪ್ರಯೋಜನವೂ ಬೇಡದಿರುವಾಗ ಅವತಾರಗಳುತಾನೇ ಏಕೆ ? ಇತ್ಯಾದಿ ಶಙ್ಕಾಗಳು ಅರ್ಜುನನನ್ನು ಬಾಧಿಸುತ್ತಿರಬಹುದು, ಆದುದರಿಂದಲೇ ಕಥಮೇತದ್ವಿಜಾನೀಯಾಂ, ನೀನೇ ಅವತಾರವನ್ನೆತ್ತಿ ಉಪದೇಶಿಸಿದುದನ್ನು ನಾನು ಹೇಗೆ ಇಂತಹ ಶಙ್ಕಾಗಳೊಂದೂ ಇಲ್ಲದೆ ಚನ್ನಾಗಿ ತಿಳಿಯುವೆನೋ ಹಾಗೆ ಉಪದೇಶಿಸಬೇಕೆಂದು ಪ್ರಾರ್ಥಿಸಿರುತ್ತಾನೆ. ಶಙ್ಕಾಗಳು ಹೇಗೆ ಎಂದರೆ ಓ ಶ್ರೀಕೃಷ್ಣನೇ (೧) ನೀನು ಸರ್ವಜ್ಞನು ಸಙ್ಕುಚಿತ ಜ್ಞಾನಶೂನ್ಯನು ಮನುಷ್ಯ ಜನ್ಮಕ್ಕಾದರೋ ಸಙ್ಕುಚಿತ ಜ್ಞಾನವುಂಟು. (೨) ನೀನಾದರೋ ಅಕರ್ಮವಶ್ಯನು, ಮನುಷ್ಯಜನ್ಮಕ್ಕಾದರೋ ಕರ್ಮವಶ್ಯತೆಯುಂಟು (೩) ನೀನು ಸತ್ಯಸಙ್ಕಲ್ಪನು, ಮನುಷ್ಯಜನ್ಮಕ್ಕೆ ಪ್ರತಿಹತ ಸಙ್ಕಲ್ಪತ್ವವುಂಟು. (೪) ನೀನು ಪರಿಪೂರ್ಣ ಕಾಮನು, ಮನುಷ್ಯಜನ್ಮದಲ್ಲಾದರೋ ಅಪೂರ್ಣಕಾಮತ್ವವೂ ಭಗ್ನಮನೋರಥತ್ವವೂ ಉಂಟು. (೫) ನೀನಾದರೋ ಸರ್ವನಿಯನ್ತಾ, ಮನುಷ್ಯ ಜನ್ಮದಲ್ಲಿ ನಿಯಾಮ್ಯತ್ವವೂ ಉಂಟು. ಇಂತಹ ಶಙ್ಕಾಗಳನ್ನೂ ಮನಸ್ಸಿನಲ್ಲಿಟ್ಟು ಪ್ರಶ್ನಿಸಿರಬಹುದೆಂದೂ ಭಾವಿಸಬಹುದು. ಸರ್ವಜ್ಞನಾದ ಸರ್ವೇಶ್ವರನು ಈತನ ಹೃದಯವನ್ನು ಚನ್ನಾಗಿ ಅರಿತವನಾದ ಪ್ರಯುಕ್ತ ಇಂತಹ ಸರ್ವಶಙ್ಕಾಗಳು ತೊಲಗುವಹಾಗೆ ಉತ್ತರಗಳನ್ನು ದಯಪಾಲಿಸಿರುತ್ತಾರೆ. ಮುಂದಿನ ನಾಲ್ಕು ಶ್ಲೋಕಗಳಿಂದ ಅರ್ಜುನನ ಯಾವಯಾವ ಶಙ್ಕಾಗಳು ತೊಲಗುತ್ತವೆಂಬುದು ಮುಂದಿನ ಭಾಷ್ಯದಲ್ಲಿ ಉಪಪಾದಿತವಾಗಿದೆ. ೧. ಮೊದಲನೆಯ ಶ್ಲೋಕವಾದ "ಬಹೂನಿಮೇ" ಎಂಬುದರಿಂದ, ಕರ್ಮ ಪರವಶರಾದ ದೇವತೆಗಳಿಗೂ ಮತ್ತು ಮನುಷ್ಯರಿಗೂ ಸಮವಾದ ಅವತಾರವೇನು ಇಂದ್ರಜಾಲದಹಾಗೆ ಮಿಥ್ಯೆಯೋ ಅಥವಾ ಸತ್ಯವೋ? ಮಿಥ್ಯೆಯಲ್ಲವು ಸತ್ಯವೇ ಎಂದು ನಿರ್ಧರಿಸಲ್ಪಡುತ್ತದೆ. ೨. ಜನ್ಮಪ್ರಕಾರವೆಂತಾದ್ದು ? ಆಗ ದೇಹವೇನು ಕರ್ಮಕೃತವಾಗಿ ಹೇಯರೂಪವಾದುದೇ? ಅಪ್ರಾಕೃತವಾದುದೇ ? ಕರ್ಮವಶ್ಯವಲ್ಲದಿದ್ದರೆ ಜನ್ಮಕ್ಕೆ ಹೇತುವೇನು ? ಸಙ್ಕಲ್ಪ ಮಾತ್ರದಿಂದಲೇ ಇಲ್ಲವೇ ಸ್ವೇಚ್ಛೆಯಿಂದ ಪುಣ್ಯಪಾಪಗಳನ್ನು ಪರಿಗ್ರಹಿಸುವದರಿಂದಲೇ ? ೩. ಅವತಾರಕ್ಕೆ ಕಾಲವು ಯಾವುದು ? ಪುಣ್ಯಪಾಪ ವಿನಾಶ ಕಾಲವೇ ? ಅಥವಾ ಧರ್ಮಾದಿಗಳಿಗೆ ಹಾನಿಯುಂಟಾಗಿರುವಕಾಲವೇ ? ೪. ಯಾವುವನ್ನುದ್ದೇಶಿಸಿ ಅವತಾರಗಳು ? ಸುಖ ದುಃಖೋಪಭೋಗಕ್ಕಾಗಿಯೇ ? ಇಲ್ಲವೆ ಸಾಧು ಪರಿತ್ರಾಣ ಮೊದಲಾದವುಗಳಿಗಾಗಿಯೇ? ಎಂಬ ಭಾವವು. ಮಿಕ್ಕ ಶ್ಲೋಕಗಳಲ್ಲಿ ಈ ವಿಷಯಗಳು ಚರ್ಚಿಸಲ್ಪಟ್ಟವೆ. ಅದೂ ಅಲ್ಲದೆ ಪ್ರಶ್ನೆಯ ಅಭಿಪ್ರಾಯವನ್ನು ಉತ್ತರಗಳಿಗನುಸಾರವಾಗಿಯಷ್ಟೇ ನಿರ್ಧರಿಸತಕ್ಕದ್ದು. ಉತ್ತರಗಳಲ್ಲಿ ಈ ಶಙ್ಕಾಗಳಿಗೆ ಸಮಾಧಾನವು ಸಿಕ್ಕುವದರಿಂದ ಅವುಗಳನ್ನೇ ಮನಸ್ಸಿನಲ್ಲಿಟ್ಟು ಅರ್ಜುನನು ಪ್ರಶ್ನಿಸಿದನೆಂದು ಭಾವಿಸುವದೇ ಉಚಿತವು. ಅಥವಾ, ಶಿಷ್ಯ ಪ್ರಶ್ನೆಯು "ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನ್" ಇಷ್ಟು ಮಾತ್ರವೇಯಾದರೂ, ಅವತಾರ ವಿಷಯವನ್ನೆಲ್ಲಾ ವ್ಯಕ್ತವಾಗಿ ಹೇಳತಕ್ಕದ್ದು ಗುರುವಿನ ಕರ್ತವ್ಯವೆಂದು ಭಾವಿಸಿ ಅವತಾರ ರಹಸ್ಯವನ್ನೆಲ್ಲಾ ಉಪದೇಶಿಸಿದರೆಂದೂ ಭಾವಿಸಬಹುದು. ಲೋಕಗುರುವೇ ಉಪದೇಷ್ಟಾವಾದರೆ ಇಲ್ಲಿ ಹೇಳತಕ್ಕದ್ದೇನಿರುತ್ತದೆ.

**ಮೂಲಕ್ಕೆ ಅರ್ಥವು:—**ಶ್ರೀಕೃಷ್ಣಭಗವಾನರವರು ಉತ್ತರವನ್ನು ಹೇಳುತ್ತಾರೆ :—

ಭಾ. ಅನೇನ ಜನ್ಮನಸ್ಸತ್ಯತ್ವಮುಕ್ತಮ್, "ಬಹೂನಿ ಮೇ ವ್ಯತೀತಾನಿ ಜನ್ಮಾನಿ" ಇತಿ ವಚನಾತ್, "ತವ ಚ" ಇತಿ ದೃಷ್ಟಾನ್ತತಯೋಪಾದಾನಾಚ್ಚ. ||೫||

ಅರ್ಜುನನ ಪ್ರಶ್ನೆಗೆ ಐದು ಶ್ಲೋಕಗಳಿಂದ ಉತ್ತರವು. ಆದುದರಿಂದ ಈ ಐದು ಶ್ಲೋಕಗಳೂ (೫ ರಿಂದ ೯) ಅವತಾರ ರಹಸ್ಯವನ್ನು ಉಪಪಾದಿಸುವ ಶ್ಲೋಕಗಳೆನ್ನುತ್ತಾರೆ. ಈ ೫ ನೆಯ ಶ್ಲೋಕದಲ್ಲಿ ಅವತಾರವು ಸತ್ಯವು, ಮಿಥ್ಯೆಯಲ್ಲವು ಎಂದು ಉಪದೇಶಿಸಲ್ಪಡುತ್ತದೆ. ಹೇ ಅರ್ಜುನ- ಓ ಅರ್ಜುನನೇ, ಮೇ - ಕರ್ಮವಶ್ಯನಲ್ಲದೆ ಜನ್ಮವೆತ್ತಬೇಕೆಂಬ ನಿರ್ಬಂಧವಿಲ್ಲದಿರುವ ನನಗೆ, ಬಹೂನಿ - ಅನೇಕ, ಜನ್ಮಾನಿ - ಜನ್ಮಗಳು, ಅವತಾರಗಳು, ವ್ಯತೀತಾನಿ - ಕಳೆದು ಹೋದವು. ತವ ಚ - ನಿನಗೂ ಕೂಡ ಹಾಗೆಯೇ ಬಹು ಜನ್ಮಗಳು ಸೃಷ್ಟಿ ಮೊದಲುಗೊಂಡು ಇದುವರೆಗೂ ಕರ್ಮ ಮೂಲಕವಾಗಿ, ವ್ಯತೀತಾನಿ - ಕಳೆದುಹೋದವು. ಹೀಗೆ ಬಹು ಜನ್ಮಗಳನ್ನೆತ್ತಿದ್ದ ರಲ್ಲಿ ಮಾತ್ರ ನಾವಿಬ್ಬರೂ ಸರಿಯೇ, ಆದರೆ ನಿನಗೂ ನನಗೂ ವೈಲಕ್ಷಣ್ಯವೇನೆಂದರೆ ತಿಳಿಸುತ್ತಾರೆ. ತಾನಿ ಸರ್ವಾಣಿ - ಆ ಜನ್ಮಗಳನ್ನೆಲ್ಲಾ ಎಂದರೆ ನನ್ನ ಅವತಾರಗಳೆಲ್ಲವನ್ನೂ ನಿನ್ನ ಜನ್ಮಗ ಳೆಲ್ಲವನ್ನೂ ಸಹ, ಅಹಂ - ಸರ್ವಜ್ಞನಾಗಿರುವ ನಾನು, ನಿನ್ನಹಾಗೆ ಜ್ಞಾನವು ತಿರೋಹಿತವಲ್ಲವಾದು ದರಿಂದ, ವೇದ - ತಿಳಿದಿರುತ್ತೇನೆ, ಹೇಪರಂತಪ - ಓ ಶತ್ರುಗಳನ್ನು ತಪಿಸುವಹಾಗೆ ಮಾಡುವ ಅರ್ಜುನನೇ, ತ್ವಂ - ಕರ್ಮದಿಂದ ಜ್ಞಾನ ತಿರೋಹಿತನಾಗಿರುವ ನೀನು, ನ ವೇತ್ಥ - ತಿಳಿಯು ವದಿಲ್ಲವು, ನೀನು ತಿಳಿಯಲು ಅಶಕ್ತನೆಂಬ ಭಾವವು. ನೀನೂ ಸರ್ವಜ್ಞನೇ ನಾನೂ ಸರ್ವಜ್ಞನೇ ನನ್ನ ಸರ್ವಜ್ಞತೆಗೆ ಚ್ಯುತಿಯಿಲ್ಲವು. ನಿನ್ನ ಸರ್ವಜ್ಞತೆಯಾದರೂ ಕರ್ಮ ಮೂಲಕವಾಗಿ ನಿನಗೆ ಪ್ರಾಪ್ತವಾಗಿರುವ ಪ್ರಕೃತಿ ಸಂಬಂಧದಿಂದ ಸಙ್ಕೋಚವನ್ನು ಹೊಂದಿರುತ್ತದೆ ಎಂಬ ಭಾವವು.

ಭಾಷ್ಯಾರ್ಥವು :—ಈ ಶ್ಲೋಕದ ಮುಖ್ಯಾಭಿಪ್ರಾಯವನ್ನು ತಿಳಿಸುತ್ತಾರೆ.—ಅನೇನ – ಈ ಶ್ಲೋಕದಿಂದ, ಜನ್ಮನಃ - ಅವತಾರದ, ಸತ್ಯತ್ವ ಮುಕ್ತಮ್ - ಸತ್ಯತ್ವವು ಹೇಳಲ್ಪಟ್ಟಿತು. ಇದು ಪೂರ್ವಾರ್ಧದಿಂದ ವ್ಯಕ್ತವು. ನನಗೂ ನಿನಗೂ ಬಹು ಜನ್ಮಗಳು ಕಳೆದುಹೋಗಿವೆ ಎಂದು ಹೇಳಿದರು. ವಿವಸ್ವಂತನಿಗೆ ಉಪದೇಶಿಸಿದುದು ಒಂದು ಅವತಾರ, ನಿನಗೆ ಈಗ ಉಪದೇಶಿಸ ವದು ಒಂದು ಅವತಾರ, ಇವರಡು ಮಾತ್ರವೇ ಅಲ್ಲದೆ ಇನ್ನೂ ಬಹು ಅವತಾರಗಳು ನನಗೆ ಕಳೆದುಹೋಗಿವೆ. ಹಾಗೆಯೇ ನಿನಗೂ ಕಳೆದುಹೋಗಿವೆ ಎಂದು ಹೇಳಿರುತ್ತಾರೆ. ನಿನಗೆ ಇವು ಯಾವುದರ ಜ್ಞಾನವೂ ಇಲ್ಲವಲ್ಲ, ನನಗೆ ಮಾತ್ರ ಹೇಗೆ ತಿಳಿಯುವದು ಎಂದು ಪ್ರಶ್ನಿಸು ತ್ತೀಯೋ? ಹೇಳುತ್ತೇನೆ ಕೇಳು, ಎಂದು ಉತ್ತರಾರ್ಧದಿಂದ ತಿಳಿಸುತ್ತಾರೆ. ನಾನು ಸರ್ವೇಶ್ವರ ನಾಗಿ ಕರ್ಮವಶ್ಯನಲ್ಲದಿರುವದರಿಂದ ಸರ್ವಜ್ಞನು, ನೀನಾದರೋ ಕರ್ಮದಿಂದ ಜ್ಞಾನವು ತಿರೋ ಹಿತವಾಗಿರುವದರಿಂದ ನಿನ್ನ ಸರ್ವಜ್ಞತೆಗೆ ಕುಂದಕ ಉಂಟು, ಆದುದರಿಂದ ನಾನು ಅವೆಲ್ಲವನ್ನೂ ತಿಳಿಯುತ್ತೇನೆ, ನೀನು ನಿನ್ನ ಜನ್ಮಗಳನ್ನು ಯಾವುದನ್ನೂ ತಿಳಿಯಲಾರೆ ಎಂದು ಸಮಾಧಾನವನ್ನು ಹೇಳಿರುತ್ತಾರೆ. ಹೀಗೆ ಅವತಾರಗಳೆಲ್ಲಾ ಸತ್ಯವೆನ್ನುವದಕ್ಕೆ ಎರಡು ಹೇತುಗಳನ್ನು ಕೊಟ್ಟಿರು ತ್ತಾರೆ.—"ಬಹೂನಿಮೇ ವ್ಯತೀತಾನಿ ಜನ್ಮಾನಿ ಇತಿ ವಚನಾತ್" - ಬಹೂನಿಮೇ ವ್ಯತೀತಾನಿ ಜನ್ಮಾನಿ ಎಂದು ಹೇಳಿರುವದರಿಂದಲೂ, ಮತ್ತು "ತವ ಚ" ಇತಿ ದೃಷ್ಟಾಂತ ತಯೋ ಪಾದಾನಾ ಚ್ಚ-"ತವ ಚ" ಎಂದು ದೃಷ್ಟಾಂತವಾಗಿ ಅಙ್ಗೀಕರಿಸಿರುವದರಿಂದಲೂ ಸಹ. ಸರ್ವೇಶ್ವರನು ಸ್ವತಂ ತ್ರನಾಗಿ ಸರ್ವಶಕ್ತನಾಗಿ ಸತ್ಯಸಙ್ಕಲ್ಪನಾಗಿರುವಾಗ ಸ್ವಸಙ್ಕಲ್ಪದಿಂದಲೇ ಸರ್ವವನ್ನು ನಿರ್ವಹಿಸುವ ಶಕ್ತಿ ಇರುವಾಗ ಅವತಾರಗಳನ್ನು ಏಕೆ ಎತ್ತಬೇಕೆಂದು ಕೆಲವರ ಆಕ್ಷೇಪವು. ಸಮಸ್ತ ಶಾಸ್ತ್ರ ವನ್ನೂ ತಮ್ಮ ಜ್ಞಾನ ಚಕ್ಷುಸ್ಸಿನಿಂದ ಸಾಕ್ಷಾತ್ಕರಿಸಿದ ಶ್ರೀ ವ್ಯಾಸಮಹರ್ಷಿಯು, "ಲೋಕವತ್ತು

ಲೀಲಾ ಕೈವಲ್ಯಂ" ಎಂಬ ಸೂತ್ರದಲ್ಲಿ ಸರ್ವೇಶ್ವರನಿಗೆ ಇದು ಲೀಲಾ ವಿಭೂತಿಯೆಂದು ನಿರ್ಧರಿಸಿರುವಾಗ, ಸರ್ವೇಶ್ವರನು ಸುಮ್ಮನೆ ಪಾಷಾಣದಹಾಗೆ ಇದ್ದುಕೊಂಡು ಸಙ್ಕಲ್ಪಮಾತ್ರದಿಂದಲೇ ಪ್ರವರ್ತಿಸಬೇಕೆಂಬ ನಿರ್ಬಂಧವೇನು ? ಲೀಲಾರೂಪದಲ್ಲಿ ಅವತಾರಗಳನ್ನು ಏತಕ್ಕೆ ಎತ್ತಕೂಡದು ? ಶಾಸ್ತ್ರಗಳು ನಮಗೂ ಈಶ್ವರನಿಗೂ ನವವಿಧ ಸಂಬಂಧಗಳುಂಟೆಂದು ಉಪಪಾದಿಸುತ್ತವೆ. ಪಿತಾಪುತ್ರ, ಭರ್ತೃಭಾರ್ಯಾ, ಸಂಬಂಧಗಳ ರೀತ್ಯಾ ಚೇತನರೊಂದಿಗೆ ಅವುಗಳ ಹಿತಕ್ಕಾಗಿ ದಿವ್ಯಗಳಾದ ಅತಿಮಾನುಷಚೇಷ್ಟೆಗಳನ್ನೆಸಗುತ್ತಾ ಅತ್ಯರ್ಥಪ್ರಿಯರಾದ ಭಕ್ತರಿಗೆ ದರ್ಶನ, ಆಲಿಂಗನ, ಆಲಾಪಾದಿಗಳನ್ನು ಅವರ ಇಷ್ಟಪ್ರಕಾರ ಸಲ್ಲಿಸುವದಕ್ಕಾಗಿಯೂ, ಅವತಾರಗಳನ್ನೆಸಗಬೇಕೆಂದು ಸಙ್ಕಲ್ಪಿಸಿ ಏಕೆ ಅವತಾರಗಳನ್ನೆತ್ತಕೂಡದು ? ಹಾಗೆ ಆಕ್ಷೇಪಿಸುವರೂ ಕೂಡ ಋಗ್ವೇದಾದಿಗಳನ್ನು ಪ್ರಮಾಣವಾಗಿ ನಂಬುವದಾದರೆ, ಅಂತಹ ಪ್ರಮಾಣಗಳಲ್ಲೂ ಭಗವಂತನ ಅವತಾರಗಳೂ ಮಹಿಮೆಗಳೂ ಕೊಂಡಾಡಲ್ಪಟ್ಟಿವೆ. ಸ್ವಾಮಿಗೆ ಸ್ವರೂಪ ಉಂಟೆಂದು ಹೇಳಿ ಸರ್ವ ನಿಯನ್ತೃತ್ವವನ್ನು ಸ್ಥಾಪಿಸುವವರು, ಸ್ವಾಮಿಗೆ ರೂಪಗುಣಗಳೂ ಉಂಟೆಂದು ಅಙ್ಗೀಕರಿಸಲು ಅಭ್ಯಂತರವೇನು ?

ಇನ್ನು ಕೆಲವರು ಸರ್ವೇಶ್ವರನು ವಿಭವಾವತಾರಗಳನ್ನು ಎತ್ತುವನು ಎಂದು ಮಾತ್ರ ಹೇಳಿ, ಆತನ ಅವತಾರಗಳೆಲ್ಲಾ ಮಿಥ್ಯೆ ಎಂದು ಹೇಳುವರು. ಇದೂ ಸರಿಯಲ್ಲವು. ಅವತಾರವು ಮಿಥ್ಯೆಯಾದರೆ, (೧) ಭ್ರಾಂತಿ ಜ್ಞಾನದಿಂದ ಕ್ಲೇಶಪಡುವ ಅರ್ಜುನನಿಗೆ ಸರ್ವೇಶ್ವರನು ಶುಕ್ತಿ ರಜತರೂಪ ಭ್ರಮೆಯನ್ನುಂಟುಮಾಡುವ ಮಿಥ್ಯೆಯಾದ ಅವತಾರಗಳನ್ನು ತಿಳಿಯಪಡಿಸುವನೇ ? (೨) **ಬಹೂನಿ ಮೇ ವ್ಯತೀತಾನಿ** - ಬಹುವಾದ ಮಿಥ್ಯೆಗಳಾದ ಅವತಾರಗಳಾದರೆ ಅವುಗಳ ವಿಷಯವನ್ನು ಕುರಿತು ಹೇಳುವವನು ಅವಿದ್ಯಾಗೃಹೀತನಾಗಿರಬೇಕೆಂದು ಏರ್ಪಡುತ್ತದೆ. ಯಾವಾಗ ಶರೀರವನ್ನು ಸ್ವೀಕರಿಸಿದನೋ ಆಗ ಅವಿದ್ಯಾಗೃಹೀತನೆಂದೇ ಹೇಳುವೆವು, ಬಾಧಕವೇನು ? ಎಂದರೆ—ಅಂತವನ ಉಪದೇಶವು ಕಾರ್ಯ ಕಾರಿಯಾದೀತೇ ? ಯಾಥಾತ್ಮ್ಯಯುಳ್ಳದೆಂದು ನಂಬುವದು ಹೇಗೆ ? ಹಾಗೆ ಅವಿದ್ಯಾಗೃಹೀತನಾಗಿದ್ದರೆ ತಾನೂ ಅರ್ಜುನನೂಸಹ ಸಮರಾದರು. ಉತ್ತರಾರ್ಧದಲ್ಲಿ ಹೇಳಿರುವ **ತಾನ್ಯಹಂ ವೇದ, ನತ್ವಂ ವೇತ್ಥ** ಇತ್ಯಾದಿ ವ್ಯತ್ಯಾಸಗಳಿಗೆ ಕಾರಣವಿಲ್ಲವಾಗುತ್ತದೆ. ಇದರಿಂದ ಭಗವಂತನಿಗೆ ಅವತಾರಕಾಲದಲ್ಲಿ ಅವಿದ್ಯಾಗೃಹೀತತ್ವವಿಲ್ಲವೆಂದೇ ಹೇಳಬೇಕಾಗುತ್ತದೆ. ಆದುದರಿಂದ ಅವತಾರವು ಸತ್ಯವೆಂದೇ ಭಾವಿಸತಕ್ಕದ್ದಾಗಿರುತ್ತದೆ. (೩) ಭಗವಂತನು **ತಾನ್ಯಹಂವೇದ** ವೆಂದು ಹೇಳಿರುವದರಿಂದ, ಮಿಥ್ಯೆಯಾಗಿರುವ ಅವತಾರಗಳನ್ನು ಮಿಥ್ಯೆ ಎಂದು ತಿಳಿದನೇ, ಅಥವಾ ಸತ್ಯವೆಂದೇ ತಿಳಿದನೇ ಎಂದು ಕೇಳಬೇಕಾಗುತ್ತದೆ. ಮಿಥ್ಯೆ ಎಂದು ತಿಳಿದನು ಎಂದರೆ ಅದು **"ಜನ್ಮಕರ್ಮ ಚಮೇದಿವ್ಯಂ"** ಹೇಗಾಗುತ್ತದೆ ? ಅಂತಹ ಮಿಥ್ಯೆಯಾದುದು ಉಪದೇಶಕ್ಕೆ ಅನರ್ಹವು. ಮಿಥ್ಯೆಯಾದ ಅವತಾರಗಳನ್ನು ಸತ್ಯವೆಂದು ತಿಳಿದನು ಎಂದರೆ, ಅಂತಹ ಅವಿದ್ಯಾಗೃಹೀತನಾದವನ ಉಪದೇಶವು ನಿರರ್ಥಕವೆಂದಾಗುತ್ತದೆ. ಆದುದರಿಂದ ತಿಳಿಯುವದಕ್ಕೆ ಯಾವಾಗ ಅರ್ಹವಾದುದಾಯಿತೋ ಆಗ ಅವು ಎಂದರೆ ಅವತಾರಗಳು ಸತ್ಯವೆಂದೇ ಭಾವಿಸತಕ್ಕದ್ದು ನ್ಯಾಯವು. ಗಗನ ಕುಸುಮವಿಂತಾದ್ದೆಂದು ತಿಳಿಯಲು ಸರ್ವಜ್ಞನಿಂದಲೂ ಸಾಧ್ಯವಿಲ್ಲವಷ್ಟೆ ? ಗಗನಕುಸುಮವನ್ನು ತಿಳಿದೆನೆಂಬ ಹೇಳಿಕೆಯು ಹೇಗೆ ಸಮಂಜಸವಾದೀತು ? (೪) **ನ ತ್ವಂ ವೇತ್ಥ** – ಅರ್ಜುನನು ತಿಳಿಯದೇ ಇರುವದಕ್ಕೆ ಅರ್ಜುನನಿಗೆ ಅವಿದ್ಯಾಗೃಹೀತತ್ವವೇ ಕಾರಣವಾಗಬೇಕು, **ತಾನ್ಯಹಂ ವೇದ** ವೆಂಬ ವೈಲಕ್ಷಣ್ಯವನ್ನು ಹೇಳಿಕೊಂಡಿರುವದರಿಂದ ಶ್ರೀಕೃಷ್ಣನಿಗೆ ಅವಿದ್ಯಾಗೃಹೀತತ್ವವಿಲ್ಲವೆಂದು ಹೇಳಬೇಕಾಗುತ್ತದೆ- ಆದುದರಿಂದಲೇ ಅವತಾರಗಳೆಲ್ಲಾ ಸತ್ಯವಾದವು.(೫) **ಬಹೂನಿ ಮೇ ವ್ಯತೀತಾನಿ**

**ಭಾ. ಅ- ಅವತಾರಪ್ರಕಾರಮ್, ದೇಹಯಾಥಾತ್ಮ್ಯಮ್, ಜನ್ಮಹೇತುಂ ಚಾಹ :—**

**ಮೂ. ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ॥ ೬.**

ಎಂದು ಮಿಥ್ಯಾರೂಪ ಶರೀರವು ಯಾವಾಗ ಕಳೆದುಹೋಯಿತೋ ಆಗ ಮೋಕ್ಷವನ್ನು ಹೊಂದಿದ ಹಾಗಾಯಿತು. ಆಗ ಪುನಃ ಶರೀರ ಪ್ರಾಪ್ತಿಯು ಹೇಗೆ? ಬಹೂನಿ ಎಂದು ಬಹುವಚನವಿರುತ್ತದೆ. ಆದುದರಿಂದ ಮಿಥ್ಯಾತ್ವವು ಕೂಡುವದಿಲ್ಲವು. ವ್ಯತೀತಾನಿ ಎಂದು ಕಾಲಸಂಬಂಧವಿರುವದರಿಂದಲೂ ಸತ್ಯವು. (೬) "ತವ ಚ" ಎಂಬುದನ್ನು ದೃಷ್ಟಾಂತವಾಗಿ ಅಙ್ಗೀಕರಿಸಿರುವದರಿಂದ, ತನ್ನ ಅವತಾರಗಳೆಲ್ಲಾ ಹೇಗೆ ಸತ್ಯವೋ, ಹಾಗೆ ಅರ್ಜುನನ ಜನ್ಮಗಳೆಲ್ಲವೂ ಸತ್ಯವೇ ವಿನಾ ಮಿಥ್ಯೆಯಲ್ಲವೆಂದೇರ್ಪಡುತ್ತದೆ. ಅರ್ಜುನನ ಜನ್ಮಗಳೇನೋ, ನ ತ್ವಂ ವೇತ್ಥ ಎಂಬುವರಿಂದ ಅವಿದ್ಯಾಗೃಹೀತತ್ವದಿಂದ ಜ್ಞಾನತಿರೋಧಾನವಿರುವವರಿಂದ ಮಿಥ್ಯೆ ಎಂದೇ ಹೇಳತಕ್ಕದ್ದೆಂದರೆ ತನ್ನ ಸತ್ಯವಾದ ಅವತಾರಗಳಿಗೆ ಅರ್ಜುನನ ಮಿಥ್ಯಾರೂಪ ಜನ್ಮಗಳನ್ನು ದೃಷ್ಟಾಂತವಾಗಿ ಹೇಳಬಹುದೇ? ಹೀಗೆ ಅನೇಕ ದೋಷಗಳು ಪ್ರಾಪ್ತವಾಗುವದರಿಂದ, ಸರ್ವೇಶ್ವರನ ಅವತಾರಗಳೂ ಸತ್ಯವೂ, ಅರ್ಜುನನ ಜನ್ಮಗಳೂ ಸತ್ಯವೂ ಎಂದೇ ಅಙ್ಗೀಕರಿಸತಕ್ಕದ್ದು ಯುಕ್ತವು. ಇನ್ನೂ ಕೆಲವರು ಈ ಶ್ಲೋಕವು ಪರಮಾತ್ಮನಿಗೂ ಜೀವಾತ್ಮನಿಗೂ, ಇರುವ ವೈಲಕ್ಷಣ್ಯವನ್ನು ತಿಳಿಸುವಂತಾದ್ದೆಂದು ಹೇಳುವರು. ಅರ್ಜುನನು ಅವತಾರ ಮಹಿಮೆಯನ್ನು ತಿಳಿಯಬೇಕೆಂಬ ಸಂದರ್ಭದಲ್ಲಿ ಭಗವಂತನು ತನಗೂ ಜೀವಾತ್ಮನಿಗೂ ಇರುವ ತಾರತಮ್ಯವನ್ನು ತಿಳಿಸಿದರೆ ಪ್ರಶ್ನೆಗೂ ಉತ್ತರಕ್ಕೂ ಸಾಮಂಜಸ್ಯ ಹೇಗೆ ಎಂದು ಕೇಳಬೇಕಾಗುತ್ತದೆ- ಇದು ಅಪ್ರಸ್ತುತ ವಿಷಯುವಾಗುವದರಿಂದ ಅದರ ವಿಚಾರ ಬೇಕಿಲ್ಲವು.

**ಭಾಷ್ಯಾವತಾರಿಕೆಯ ಅರ್ಥವು :—**(೧). ಅವತಾರದ ಪ್ರಕಾರವನ್ನೂ, (೨) ದೇಹ **ಯಾಥಾತ್ಮ್ಯಮ್** - ಸರ್ವೇಶ್ವರನ ದಿವ್ಯ ಮಙ್ಗಳ ವಿಗ್ರಹದ ಯಾಥಾತ್ಮ್ಯವನ್ನೂ (೩) ಜನ್ಮ ಹೇತುಂ ಚ-ಜನ್ಮಕ್ಕೆ ಕಾರಣವನ್ನೂ ಸಹ, ಆಹ - ಈ ಮುಂದಿನ ಶ್ಲೋಕದಿಂದ ಹೇಳುತ್ತಾರೆ.

**ಮೂಲಕ್ಕೆ ಅರ್ಥವು :—ಅಜೋಽಪಿಸನ್** - ಉತ್ಪತ್ತಿ ಯಿಲ್ಲದಿದ್ದವನಾಗಿಯೂಕೂಡ ಹಾಗಾದರೆ ಅಚಿತ್ತಾದ ಸ್ವರೂಪ ವಿಕಾರಹೊಂದುವ ಪ್ರಕೃತಿಯಹಾಗೋ ಎಂದರೆ, ಅದಕ್ಕೂ ವಿಲಕ್ಷಣನೆಂದು ಮುಂದೆ ಹೇಳುತ್ತಾರೆ, **ಅವ್ಯಯಾತ್ಮಾಪಿಸನ್** - ಪ್ರಕೃತಿಗೂ ವಿಲಕ್ಷಣನಾಗಿ, ನಾಶರಹಿತವಾದ ಸ್ವರೂಪವುಳ್ಳವನಾಗಿಯಾದರೂ, ಹಾಗಾದರೆ ಸ್ವರೂಪನಿತ್ಯನಾದ ಜೀವಾತ್ಮನ ಹಾಗೋಎಂದರೆ, ಅದಕ್ಕೂ ವಿಲಕ್ಷಣನೆಂದು ಮುಂದೆ ಹೇಳುತ್ತಾರೆ.---**ಭೂತಾನಾಮೀಶ್ವರೋಽಪಿಸನ್** - ಅಚಿದ್ಮಿಶ್ರವಾದ ಚೇತನರುಗಳಿಗೆಲ್ಲಾ ನಿಯಾಮಕನಾದರೂ ಕೂಡ, ಅಥವಾ ಓ ಅರ್ಜುನನೇ ಕರ್ಮಕೃತವಾದ ಜನನ ಮರಣಗಳಿರುವಹಾಗೆ ಅಲ್ಲದೆ **ಆತ್ಮಮಾಯಯಾ**-ಸ್ವಕೀಯವಾದ ಸಙ್ಕಲ್ಪದಿಂದಲೇ (ಇದು ಅವತಾರಕ್ಕೆ ಹೇತುವು) ಇಲ್ಲಿ ಮಾಯಾ ಶಬ್ದಕ್ಕೆ ಸಙ್ಕಲ್ಪವೆಂಬರ್ಥವು, **ಸ್ವಾಂ ಪ್ರಕೃತಿಂ** - ತನ್ನ ಸ್ವಭಾವವನ್ನು, ಇದು ಸ್ವರೂಪ ರೂಪ, ಗುಣ, ವಿಭವಾದಿ ಸರ್ವವಿಧ ಪಾರಮೇಶ್ವರಕ್ಕೂ ಉಪಲಕ್ಷಣವು, ಆದುದರಿಂದ ಸ್ವಾಂ ಪ್ರಕೃತಿಂ ಎಂಬುದರಿಂದ ಲಕ್ಷ್ಮಿಯೊಂದಿಗೆ ನಿತ್ಯಯೋಗವೂ ಉಪದೇಶಿಸಲ್ಪಟ್ಟಿತು; ಮತ್ತು ನಿತ್ಯ ವಿಭೂತಿಯಾದ ದಿವ್ಯ ವೈಕುಂಠದಲ್ಲಿರುವ ನಿತ್ಯವಾದ ದಿವ್ಯಮಙ್ಗಳ ವಿಗ್ರಹವನ್ನೂ **ಅಧಿಷ್ಠಾಯ** - ಆಶ್ರಯಿಸಿಕೊಂಡೇ ಎಂದರೆ ಪಡದೇ, **ಸಂಭವಾಮಿ** - ಶರೀರವನ್ನು ಎತ್ತುವೆನು. **ಸ್ವಾಂ ಪ್ರಕೃತಿಂ ಅಧಿಷ್ಠಾಯ** - ಎಂಬುದರಿಂದ ತನ್ನ ನೈಜ ಸ್ವರೂಪ ಸ್ವಭಾವಾದಿಗಳನ್ನು

**ಭಾ- ಅಜತ್ವಾವ್ಯಯತ್ವ ಸರ್ವೇಶ್ವರತ್ವಾದಿ ಸರ್ವಮ್ ಪಾರಮೇಶ್ವರಮ್ ಪ್ರಕಾರ ಮಜಹ ದೇವ ಸ್ವಾಂ ಪ್ರಕೃತಿಮಧಿಷ್ಠಾಯ ಆತ್ಮಮಾಯಯಾ ಸಂಭವಾಮಿ. ಪ್ರಕೃತಿಃ- ಸ್ವಭಾವಃ, ಸ್ವಮೇವ ಸ್ವಭಾವಮಧಿಷ್ಠಾಯ ಸ್ವೇನೈವ ರೂಪೇಣ ಸ್ವೇಚ್ಛಯಾ**

ಬಿಡವೇನೇ ಅವತರಿಸುವೆನೆಂಬುದರಿಂದ ಅವತಾರ ಪ್ರಕಾರವೂ, ಅದರಿಂದಲೇ ತನ್ನ ದಿವ್ಯ ಮಙ್ಗಳ ವಿಗ್ರಹವು ಇತರ ಜನರಹಾಗೆ ನಶ್ವರವಾದ ಪ್ರಾಕೃತವಾದುದಲ್ಲವೆ, ಅಪ್ರಾಕೃತವಾದು ದೆಂಬುವದರಿಂದ ದೇಹ ಯಾಥಾತ್ಮ್ಯವೂ ಹೇಳಲ್ಪಟ್ಟವು. ಮತ್ತು ಅಜತ್ವ, ಅವ್ಯಯಾತ್ಮತ್ವ, ಈಶ್ವರತ್ವಗಳನ್ನು ಹೊಂದಿಯೇ ಅತ್ಮ ಸಙ್ಕಲ್ಪದಿಂದ, ಸಂಭವಾಮಿ - ಅವತರಿಸುವೆನು ಎಂದು ಹೇಳಿರುವವದರಿಂದಲೂ ತನ್ನ ನೈಜಸ್ವಭಾವವನ್ನು ಅಜಹತ್-ಬಿಡದೆಯೇ ಅವತರಿಸುವನೆಂಬುದು ತೋರಿಬರುತ್ತದೆ; ಹೀಗೆ ಅರ್ಥಮಾಡದಿದ್ದರೆ ಸರ್ವ ಎಂಬ ಶಬ್ದಕ್ಕೆ ಸಾರ್ಥಕ್ಯವಿಲ್ಲವಾಗುತ್ತದೆ. ದಿವ್ಯ ವೈಕುಂಠದಲ್ಲಿರುವ ವಾಸುದೇವರೂಪ ದಿವ್ಯಮಙ್ಗಳ ವಿಗ್ರಹವು,ಇತರ ಕಾರ್ಯರೂಪವಾದ ವ್ಯೂಹ ವಿಭವ ಹಾರ್ದ ಅರ್ಚಾವತಾರ ರೂಪ ದಿವ್ಯಮಙ್ಗಳಗಳಿಗೆ ಕಾರಣಭೂತವಾಗಿರುವದರಿಂದ ನಿತ್ಯವು. ಸರ್ವೇಶ್ವರನು ನಿತ್ಯವಾಗಿರಲಿ ಎಂದು ಸಙ್ಕಲ್ಪಿಸಿರುವದರಿಂದ ನಿತ್ಯವು. ಇತರ ಕಾರ್ಯರೂಪಗ ಳೆಲ್ಲಾ ಅನಿತ್ಯವು. ದ್ರವ್ಯವು ನಿತ್ಯವು; ಅವಸ್ಥೆಯು ಅನಿತ್ಯವು; ಸರ್ವೇಶ್ವರನು ಅನಿತ್ಯವಾಗಿರಲಿ ಎಂಬ ಸಙ್ಕಲ್ಪದಿಂದುಂಟಾದವು. ಇದರಿಂದ ಅವತಾರ ಸಮಾಪ್ತಿಯಲ್ಲಿ ಈದ್ರವ್ಯವು ಮೂಲಕಾ ರಣದ್ರವ್ಯದೊಂದಿಗೆ ಸೇರಿಹೋಗುತ್ತದೆ. ಇದರಿಂದಲೂ ಅವತಾರಗಳೆಲ್ಲಾ ಮಿಥ್ಯಾ ಎಂಬ ವಾದವು ಕೂಡುವದಿಲ್ಲವು, ಸ್ವಾಂ ಪ್ರಕೃತಿಂ ಅಧಿಷ್ಠಾಯ ಎಂಬುದರಿಂದ (೧) ತನ್ನ ಅಘಟಿತ ಘಟನಾ ಶಕ್ತಿಯು ಆಗಲೂ ಇರುವದರಿಂದ ಅವತಾರಕಾಲಗಳಲ್ಲಿ ಅತಿಮಾನುಷ ದಿವ್ಯಚೇಷ್ಟಿತಗಳನ್ನು ಎಸಗುವ ಸಾಮರ್ಥ್ಯ ಉಂಟೆಂಬುದು ಹೇಳಲ್ಪಟ್ಟಿತು. ಲಂಕಾತರಣಕ್ಕೆ ಮುಂಚೆಯೇ ವಿಭೀಷಣನಿಗೆ ಲಂಕಾರಾಜ್ಯದ ಪಟ್ಟವನ್ನು ಕಟ್ಟಿ ಅಭಿಷೇಕಮಾಡಿಸುವದೂ, ೧೪,೦೦೦ ರಾಕ್ಷಸರನ್ನು ಮೂರೂ ಮುಕ್ಕಾಲು ಘಳಿಗೆಗಳಲ್ಲಿ ನಾಶಮಾಡುವದೂ, ಗೋವರ್ಧನಗಿರಿ ಯನ್ನೆತ್ತುವದೂ, ಮಗುವಾಗಿಯೇ ಪೂತನಿಯನ್ನು ಕೊಂದುಬಿಡುವದೂ ಇತ್ಯಾದಿ. (೨) ಲಕ್ಷ್ಮಿಯು ತನಗೆ ನಿತ್ಯಾನಪಾಯಿನಿಯು, ಆದುದರಿಂದ "ರಾಘವತ್ವೇ ಭವತ್ಸೀತಾ ರುಕ್ಮಿಣೀ **ಕೃಷ್ಣಜನ್ಮನಿ । ಅನ್ಯೇಷು ಚಾವತಾರೇಷು ವಿಷ್ಣೋರೇಷಾನಪಾಯಿನೀ"** (ವಿ.ಪು. ೧.೯.೧೪೪) ಎಂದು ಹೇಳಿರುವಹಾಗೆ ಯಾವಾಗಲೂ ತನ್ನ ಪತ್ನಿಯೊಂದಿಗೇನೇ ಇರುವವನು ಎಂಬುದೂ ಸೂಚಿತವು,

**ಭಾಷ್ಯಾರ್ಥವು:—ಅಜತ್ವ....ಸರ್ವಂ** - ಅನಾದಿಕಾಲದಿಂದಲೂ ಹೊಸದಾಗಿ ಉತ್ಪತ್ತಿ ನಾಶಮೊದಲಾದವುಗಳಿಲ್ಲದಿರುವಿಕೆಯೂ, ಮತ್ತು ಸರ್ವನಿಯಾಮಕತ್ವವೇ ಮೊದಲಾದ ಲೇಶ ಮಾತ್ರವೂ ವ್ಯತ್ಯಾಸವಿಲ್ಲದೆ ಸಮಸ್ತವಾದ, **ಪಾರಮೇಶ್ವರಮ್**-ಪರಮೇಶ್ವರನಾದ ನನಗೆ ಸಲ್ಲತಕ್ಕ ಪ್ರಕಾರವನ್ನು, **ಅಜಹದೇವ** - ಬಿಡದೇನೇ, **ಸ್ವಾಂ ಪ್ರಕೃತಿಮಧಿಷ್ಠಾಯ** - ನನ್ನ ಸ್ವಕೀಯ ಸ್ವಭಾವಗಳನ್ನಾಶ್ರಯಿಸುವನಾಗಿಯೇ, **ಆತ್ಮಮಾಯಯಾ** - ಸ್ವಸಙ್ಕಲ್ಪದಿಂದಲೇ, **ಸಂಭ ವಾಮಿ** - ಅವತರಿಸುವೆನು. ಇಲ್ಲಿ **ಪ್ರಕೃತಿಃ** ಎಂದರೆ ಸ್ವಭಾವವು, **ಸ್ವಮೇವ ಸ್ವಭಾವಮ ಧಿಷ್ಠಾಯ** - ನನ್ನ ಸ್ವಂತವಾದ ಸ್ವಭಾವವನ್ನೇ ಆಶ್ರಯಿಸಿಕೊಂಡು, **ಸ್ವೇನೈವ ರೂಪೇಣ** - ಸ್ವಕೀಯವಾದ ದಿವ್ಯಮಙ್ಗಳ ವಿಗ್ರಹದಿಂದಲೇ, **ಸ್ವೇಚ್ಛಯಾ** - ಕರ್ಮಮೊದಲಾದ ಉಪಾಧಿ ಗಳಿಲ್ಲದೆ ನನ್ನ ಇಷ್ಟದಿಂದಲೇ, **ಸಂಭವಾಮೀತ್ಯರ್ಥಃ** - ಅವತರಿಸುವೆನೆಂಬರ್ಥವು. ಇಲ್ಲಿ ಭಾಷ್ಯಕಾರರು ಉಪಯೋಗಿಸಿರುವ ಆದಿ ಪದದಿಂದ ಸರ್ವಜ್ಞತ್ವ, ಸತ್ಯಸಙ್ಕಲ್ಪತ್ವ, ಅವಾಪ್ತ

ಸಮಸ್ತ ಕಾಮತ್ವಗಳು ಸೂಚಿಸಲ್ಪಟ್ಟವು. ಇಲ್ಲಿ ಅಜತ್ವ ಮತ್ತು ಅವ್ಯಯತ್ವ ವೆಂಬಎರಡು ಶಬ್ದಗಳಿಂದ ಸರ್ವೇಶ್ವರನ ನಿರ್ವಿಕಾರತ್ವವು ಸ್ಥಾಪಿತವು. ಜೀವಾತ್ಮನಹಾಗೆ ಸ್ವಭಾವಗಳಲ್ಲಿ ವಿಕಾರವೂ, ಪ್ರಕೃತಿಯಹಾಗೆ ಸ್ವರೂಪದಲ್ಲಿ ವಿಕಾರವೂ, ಹೀಗೆ ಎರಡುವಿಧ ವಿಕಾರವೂ ಪರಮಾತ್ಮನಿಗೆ ಇಲ್ಲವೆಂಬ ಭಾವವು. ಆದುದರಿಂದ ಹೇಯ ಪ್ರತ್ಯನೀಕನು ಎಂಬ ಭಾವವು. ಮಾಯಾಮೃಗವು ಸುಳಿದಾಗ ಸೀತಾರಾಮರುಗಳಿಗೆ ಸರ್ವಜ್ಞತ್ವವಿಲ್ಲದೆ ಬಹಳ ದುಃಖಗಳಿಗೆ ಒಳಗಾದರೆಂದು ಭಾವಿಸತಕ್ಕದ್ದಲ್ಲವು. ಅಜ್ಞರಂತೆ ವಿಡಂಬನಮಾತ್ರವು. "ಅಬ್ಧಿಂ ನ ತೇರಿಥ ನಜಿಗ್ಯಥ ರಾಕ್ಷಸೇಂದ್ರಂ" (ಅತಿ ಮಾನುಷಸ್ತವ) ಇನ್ನೂ ಸಮುದ್ರತರಣವಿಲ್ಲ, ರಾವಣನನ್ನು ಕೊಲ್ಲಲಿಲ್ಲ, ಆದರೂ "ನಿಸ್ಸಂಶಯ ಸ್ಸಪದಿತಸ್ಯ ಪದೇಽಭ್ಯಷಿಂಚಃ" ಮುಂಚಿತವಾಗಿಯೇ ನಿಸ್ಸಂಶಯನಾಗಿ ಶರಣಾಗತನಾದ ವಿಭೀಷಣನಿಗೆ ರಾವಣನಸ್ಥಾನದಲ್ಲಿ ಲಂಕಾರಾಜ್ಯಾಭಿಷೇಕವನ್ನು ಮಾಡಿಸಬೇಕಾದರೆ ಅವತಾರಕಾಲದಲ್ಲೂ ಸತ್ಯಸಙ್ಕಲ್ಪತೆ ಇತ್ತೆಂಬುದು ಸುಪ್ರಸಿದ್ಧವು. "ರಾಜ್ಯಂವಾ ವನವಾಸೋವಾ ಽವನವಾಸೋ ಮಹೋದಯಃ" (ರಾಮಾ. ಅಯೋಧ್ಯಾ.) ಎಂದು ಹೇಳುತ್ತಾ ರಾಜ್ಯತ್ಯಾಗಮಾಡಿದ ಶ್ರೀರಾಮನಲ್ಲಿ ಅವಾಪ್ತ ಸಮಸ್ತ ಕಾಮತ್ವವು ವ್ಯಕ್ತವು. ಸಮಸ್ತ ಪಾರಮೈಶ್ವರ್ಯವು ಅವತಾರಕಾಲದಲ್ಲೂ ಇತ್ತೆಂಬುದು ವಸುದೇವ ದೇವಕಿಯರಿಗೆ ಕೊಟ್ಟ ದಿವ್ಯಸೇವೆಯಿಂದಲೇ ತಿಳಿಯಬಹುದು. "ತಮದ್ಭುತಂ ಬಾಲಕ ಮಂಬುಜೇಕ್ಷಣಂ" ಇತ್ಯಾದಿ ಭಾಗವತ ಶ್ಲೋಕಗಳು ಇಲ್ಲಿ ಅನುಸಂಧೇಯವು. ಮುಂದೆಯೂ ಅರ್ಜುನನಿಗೆ ಏಕಾದಶಾಧ್ಯಾಯದಲ್ಲಿ ತಮ್ಮ ಪಾರಮೈಶ್ವರ್ಯವನ್ನೆಲ್ಲಾ ಪ್ರಕಟಿಸಿರುತ್ತಾರೆ. ದುರ್ಬಲನಾಗಿಯೂ, ಅಜ್ಞನಾಗಿಯೂ ದುಃಖಿತನಾಗಿಯೂ, ಇರುವಹಾಗೆ ಅವತಾರಗಳಲ್ಲಿ ತೋರಿಬರುವದೆಲ್ಲಾ ಸ್ವೇಚ್ಛೆಯಿಂದಲೇ ಹಾಗೆ ತೋರಿಸಿಕೊಂಡ ವಿಡಂಬನವು. ಭಾರತೋದ್ಯೋಗಪರ್ವದಲ್ಲಿ "ಈಶನ್ನಪಿ ಮಹಾಯೋಗೀ ಸರ್ವಸ್ಯ ಜಗತೋ ಹರಿಃ। ಕರ್ಮಾಣ್ಯಾರಭತೇ ಕರ್ತುಂ ಕೀನಾಶ ಇವದುರ್ಬಲಃ" ದುರ್ಬಲನಾದ ವ್ಯವಸಾಯಗಾರನಹಾಗೆ ಎಂದು ಹೇಳಲ್ಪಟ್ಟಿರುತ್ತದೆ. "ಆತ್ಮಾನಂ ಮಾನುಷಂ ಮನ್ಯೇ" "ಅಹಂವೋ ಬಾಂಧವೋ ಜಾತಃ" ಎಂದು ಹೇಳಿಕೊಂಡೇ ಅತಿಮಾನುಷ ದಿವ್ಯಚೇಷ್ಟಿತೆಗಳನ್ನೆಸಗಿರುತ್ತಾರೆ. ಆದುದರಿಂದ ಪ್ರಕೃತಿಂ ಸ್ವಾಮಧಿಷ್ಠಾಯ ಎಂಬಲ್ಲಿ ಪ್ರಕೃತಿ ಶಬ್ದಕ್ಕೆ ತ್ರಿಗುಣಾತ್ಮಕ ಪ್ರಕೃತಿ ಎಂದು ಕೆಲವರು ಅಭಿಪ್ರಾಯಪಟ್ಟಿರುವದು ಸರಿಯಲ್ಲವು. ಅವತಾರಕಾಲಗಳಲ್ಲಿನ ಶರೀರವು ತ್ರಿಗುಣಾತ್ಮಕವಲ್ಲವೆಂಬುದಕ್ಕೂ ಅಪ್ರಾಕೃತವೆಂಬುದಕ್ಕೂ ಅನೇಕ ಪ್ರಮಾಣಗಳುಂಟು. ಮಹಾಜ್ಞಾನಿಗಳಾದ ಶ್ರೀ ಪರಾಶರರು "ಇಚ್ಛಾಗೃಹೀತಾಭಿಮತೋರುದೇಹಃ"(ವಿ.ಪು.೬.೫.೮೩) ತನ್ನ ದಿವ್ಯ ಸಙ್ಕಲ್ಪದಿಂದಲೇ ಸ್ವೀಕರಿಸಲ್ಪಟ್ಟ ತನಗೆ ಅಭಿಮತವಾದ ದಿವ್ಯಮಙ್ಗಳವಿಗ್ರಹಯುಕ್ತನೆಂದೂ ಹೇಳಿರುತ್ತಾರೆ. ಹಾಗೆಯೇ ಭಾರತ ಶಾಂತಿಪರ್ವದಲ್ಲಿ (೨೦೬. ೬೦) "ತದೇವ ಕೃಷ್ಣೋ ದಾಶಾರ್ಹಃ ಶ್ರೀಮಾನ್ ಶ್ರೀವತ್ಸಲಕ್ಷಣಃ। ನ ಭೂತಸಂಘಸಂಸ್ಥಾನೋ ದೇಹೋಽಸ್ಯ ಪರಮಾತ್ಮನಃ" ಶ್ರೀಕೃಷ್ಣನ ಶರೀರವು ಪ್ರಾಕೃತ ಶರೀರವಲ್ಲವೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ "ನ ತಸ್ಯ ಪ್ರಾಕೃತಾಮೂರ್ತಿರ್ಮಾಂಸ ಮೇದೋಽಸ್ಥಿ ಸಂಭವಾ" ಎಂಬ ವರಾಹ ಪುರಾಣವಾಕ್ಯದಿಂದಲೂ ಆತನ ಶರೀರವು ಪ್ರಾಕೃತವಲ್ಲವು, ಅಪ್ರಾಕೃತವಾದ ದಿವ್ಯಮಙ್ಗಳವಿಗ್ರಹವೆಂದು ಹೇಳಲ್ಪಟ್ಟಿರುತ್ತದೆ. ಮತ್ತು ಶ್ರೀಮದ್ರಾಮಾಯಣದಲ್ಲಿ (ಯುದ್ಧಕಾಂಡ. ೧೧೪. ೧೫) ಈ ರಾಮನು "ತಮಸಃ ಪರಮೋಧಾತಾ" ಪ್ರಾಕೃತಮಂಡಲಕ್ಕಿಂತ ವಿಲಕ್ಷಣನಾಗಿರುವ ಶಂಖ ಚಕ್ರ ಗದಾಧಾರಿಯಾದ ಪರವಾಸುದೇವನೆಂದೂ ಉಪದೇಶಿಸಲ್ಪಟ್ಟಿರುತ್ತದೆ. ಪ್ರಕೃತಿ ಎಂದರೆ ಸ್ವಭಾವವೆಂದೇ ಅರ್ಥಮಾಡಿದರೂ ಚಿಂತೆಯಿಲ್ಲವು, ಆ ಕಾರಣದಿಂದ ಮಾನುಷಾವತಾರವಾದರೆ ಮಾನುಷ ಸ್ವಭಾವವನ್ನು ಆಶ್ರಯಿಸಿ ಎಂದು ಅರ್ಥ ಹೇಳಬಹುದು

**ಭಾ. ಸಂಭವಾಮೀತ್ಯರ್ಥಃ. ಸ್ವಸ್ವರೂಪಂ ಹಿ (೧) "ಆದಿತ್ಯವರ್ಣಂ ತಮಸಃ ಪರಸ್ತಾತ್" (೨) "ಕ್ಷಯನ್ತ ಮಸ್ಯ ರಜಸಃ ಪರಾಕೇ" (೩) ಯ ಏಷೋಽನ್ತರಾದಿತ್ಯೇ ಹಿರಣ್ಮಯಃ**

ದಲ್ಲಾ ಎಂದರೆ ಅದೂಕೂಡ ಶಾಸ್ತ್ರವಿರುದ್ಧವಾದಭಿಪ್ರಾಯವಾಗುವದರಿಂದ ಸ್ವಮೇವ ಸ್ವಭಾವ ಮಧಿಷ್ಠಾಯ ಎಂದು ವ್ಯಾಖ್ಯಾನಮಾಡಿರುತ್ತಾರೆ. ಇದರಭಿಪ್ರಾಯವೇನೆಂದರೆ, ಸ್ವೇನೈವ ರೂಪೇಣ ಎಂದು ಹೇಳಿರುತ್ತಾರೆ. ವ್ಯಾಖ್ಯಾನಗಳು ಸರ್ವಶಾಸ್ತ್ರ ಸಾಮಂಜಸ್ಯವುಳ್ಳವುಗಳಾಗಿರಬೇಕಲ್ಲದೆ ಪರಸ್ಪರ ವಿರುದ್ಧವಾಗಿರಕೂಡದು. ಸರ್ವೇಶ್ವರನ ಶರೀರವು ಅವತಾರ ಕಾಲಗಳಲ್ಲಿ ಪ್ರಾಕೃತವೆಂದರೆ ಅನೇಕ ಶ್ರುತಿ ಸ್ಮೃತೀತಿಹಾಸಗಳಿಗೆ ವಿರೋಧವಾಗುತ್ತದೆ. ತಾವು ಹೇಳಿರುವ ಅರ್ಥವಾದರೋ ಅನೇಕ ಶ್ರುತಿ ಸುಸ್ಮೃತಿಯುಳ್ಳದೆಂದು ತೋರಿಸ ವದಕ್ಕಾಗಿ ಅನೇಕ ಶ್ರುತಿಗಳನ್ನು ಉದಾಹರಿಸುತ್ತಾರೆ. ಆ ದಿವ್ಯಮಙ್ಗಳ ವಿಗ್ರಹದ ಸ್ವರೂಪವನ್ನು ತಿಳಿಸುತ್ತಾರೆ. (೧) **ಸ್ವಸ್ವರೂಪಂ ಹಿ** - ತನ್ನ ಸ್ವರೂಪವಾದರೋ ಇಲ್ಲಿ ಸ್ವರೂಪವು, ವಿಗ್ರಹ ಸ್ವರೂಪವನ್ನು ಬೋಧಿಸುತ್ತದೆ, **ತಮಸಃ ಪರಸ್ತಾತ್** - ಪ್ರಾಕೃತ ಮಂಡಲಕ್ಕೂ ಆಚೆಯಾಗಿ ಅವಕ್ಕೂ ವಿಲಕ್ಷಣವಾಗಿರುವ ಸ್ವಯಂ ಪ್ರಕಾಶವಾದ ಶುದ್ಧ ಸತ್ವಮಯವಾದ ದಿವ್ಯವೈಕುಂಠದಲ್ಲಿರುವ, **ಆದಿತ್ಯ ವರ್ಣಮ್** - ಸೂರ್ಯನ ವರ್ಣದ ಹಾಗೆ ಶೋಭಿಸುತ್ತಿರುವವನನ್ನು ; ಇದರಿಂದ ಅಪ್ರಾಕೃತತ್ತ್ವವೂ ಸ್ವಾಸಾಧಾರಣನಿರತಿಶಯ ದೀಪ್ತಿಯುಕ್ತವಾದುದು ಆ ದಿವ್ಯಮಙ್ಗಳ ವಿಗ್ರಹವು ಎಂಬುದೂ ಹೇಳಿದಂತಾಯಿತು. ಇದು ದಿವ್ಯ ವೈಕುಂಠದಲ್ಲಿರುವ ತನಗೇ ಅಸಾಧಾರಣವಾಗಿ, ಆಕಾರಣದಿಂದ ಸ್ವಕೀಯವಾದ, ನಿತ್ಯವಾದ, ದಿವ್ಯಮಙ್ಗಳ ವಿಗ್ರಹವಾದುದರಿಂದ ಪರಮಾಕಾಶವಾಸಿತ್ವ, ದಿವ್ಯಸೂರಿ 'ಸೇವ್ಯತ್ವ, ಲಕ್ಷ್ಮೀ ಪತಿತ್ವಾದಿ ಲಕ್ಷಣಗಳೂ ಸೂಚಿತವು. (೨) **ರಜಸಃ ಪರಾಕೇ** - ಮೂಲ ಪ್ರಕೃತಿಮಂಡಲಕ್ಕಾಚೇ, ಅಪ್ರಾಕೃತ ದಿವ್ಯ ವೈಕುಂಠದಲ್ಲಿ **ಕ್ಷಯಂತಂ** - ವಾಸಮಾಡಿರುವ ವಾಸುದೇವಮೂರ್ತಿಯನ್ನು, ಇದೂ ಮೇಲಿನ ಪ್ರಮಾಣಕ್ಕೆ ಸಮಾನಾರ್ಥ ಉಳ್ಳದ್ದು. ಇವೆರಡು ಪ್ರಮಾಣಗಳಿಂದ ನಿತ್ಯವಾದ ಶುದ್ಧ ಸತ್ವಮಯವಾದ ದಿವ್ಯವೈಕುಂಠ ನಿಲಯವಾಸನು ಪರಮ ಪುರುಷನು, ಅಲ್ಲಿ ಅಪ್ರಾಕೃತದಿವ್ಯಮಙ್ಗಳವಿಗ್ರಹಯುಕ್ತನೆಂದು ಹೇಳಲ್ಪಟ್ಟಿತು. ಮುಂದಿನ ಪ್ರಮಾಣದಿಂದ ಆತನೇ ಉಪಾಸ್ಯದಶೆಯಲ್ಲೂ ಅಂತಹ ಶರೀರವನ್ನೇ ಧರಿಸುವನೆಂದು ತೋರಿಸುತ್ತಾರೆ. (೩) **ಯಃ** - ಯಾವ ಪ್ರಸಿದ್ಧನಾದ, **ಏಷಃ**-ಈ, **ಅನ್ತರಾದಿತ್ಯೇ** - ಇಲ್ಲಿ ಆದಿತ್ಯ ಶಬ್ದವು ಆದಿತ್ಯಮಂಡಲವನ್ನು ಸೂಚಿಸುತ್ತದೆ; ಆದಿತ್ಯ ಮಂಡಲದೊಳಗೆ, **ಹಿರಣ್ಮಯಃ ಪುರುಷಃ** – ರಮಣೀಯನಾದ ಪುರುಷನು, ವಾಕ್ಯಕಾರರು ಚಂದ್ರನ ಮುಖದಹಾಗೆ ಇರುವವನು ಎಂದು ವ್ಯಾಖ್ಯಾನ ಮಾಡಿರುತ್ತಾರೆ, ಆದುದರಿಂದ ತುಂಬಾ ಪ್ರಕಾಶವಾದ ರೂಪವುಳ್ಳವನೆಂಬರ್ಥವು. ಆದರೆ ನೀಲಮೇಘಶ್ಯಾಮನೆಂದು ಹೇಳುತ್ತಾರಲ್ಲಾ ಇದಕ್ಕೂ ಅದಕ್ಕೂ ವಿರೋಧವೋ ಎಂದರೆ ಶುದ್ಧವಾದ ಹಿರಣ್ಯವೂ ಕೂಡ ಮಯೂರಕಂಠದ ವರ್ಣವುಳ್ಳದೆಂದು ಹೇಳಲ್ಪಡುತ್ತದೆ. "**ಮಯೂರ ಕಂಠಚ್ಛವಿ ಶುದ್ಧ ಹೇಮ**" ವೆಂಬ ಪ್ರಯೋಗವುಂಟು. ಅಥವಾ ಆದಿತ್ಯವರ್ಣ, ಹಿರಣ್ಮಯ, ನೀಲತೋಯದ ವರ್ಣ ಇವೆಲ್ಲವೂ ಪ್ರತ್ಯೇಕ ಪ್ರತ್ಯೇಕ ಸಂದರ್ಭಗಳಲ್ಲಿ ಸ್ವೀಕರಿಸಿದ ವರ್ಣಗಳೆಂದು ಹೇಳಿದರೂ ಏನೊಂದೂ ಅನುಪಪತ್ತಿಯಿಲ್ಲವು; ಮುಂದಕ್ಕೆ ಛಾಂದೋಗ್ಯದಲ್ಲಿ "**ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರು ರ್ಹಿರಣ್ಯಕೇಶಃ ಆಪ್ರಣಖಾತ್ ಸರ್ವ ಏವ ಸುವರ್ಣಃ**" ಎಂದಿರುತ್ತದೆ, ಅಲ್ಲಿಂದ ಮುಂದಕ್ಕೆ ತಸ್ಯಯ

(೧) ಪುರುಷ ಸೂಕ್ತವು. (೨) ಸಾಮವೇದ ಸಂ. ಉತ್ತರ ಪ್ರಪಾ. ೧೭. ೨. ೪ ೨.
(೩) ಛಾಂ. ೧. ೬. ೬.

ಭಾ. ಪುರುಷಃ," (೪) "ತಸ್ಮಿನ್ನಯಂ ಪುರುಷೋ ಮನೋಮಯಃ" (೫) "ಸರ್ವೇನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ" (೬) "ಭಾರೂಪಸ್ಸತ್ಯಸಙ್ಕಲ್ಪ ಆಕಾಶಾತ್ಮಾ" ಸರ್ವ ಕರ್ಮಾ ಸರ್ವಕಾಮ ಸ್ಸರ್ವಗಂಧ ಸ್ಸರ್ವರಸಃ" (೭) "ಮಹಾರಜನಂ ವಾಸಃ"

ಥಾ ಕಪ್ಯಾಸಂ ಪುಂಡರೀಕ ಮೇವ ಮಕ್ಷಿಣೀ" ಇತ್ಯಾದಿ ಇರುತ್ತದೆ; ಇಂತಹ ಪುರುಷನು "ದೃಶ್ಯತೇ ತ್ವಗ್ರ್ಯಯಾಬುದ್ಧ್ಯಾಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ಎಂದು ಹೇಳಿರುವಹಾಗೆ ದೃಶ್ಯತೇ - ಯೋಗಿಗಳಿಂದ ಸಾಕ್ಷಾತ್ಕರಿಸಲ್ಪಡುವನು. ಆತನು ಇನ್ನೂ ಎಂತವನೆಂದರೆ ಹಿರಣ್ಯ ಶ್ಮಶ್ರು ಇತ್ಯಾದಿ-ಮೀಸೆಯೂ, ಕೂದಲೂ, ಎಲ್ಲವೂ ಉಗುರಿನವರೆಗೂ ಎಲ್ಲವೂ ಸುವರ್ಣ ವರ್ಣವು ಎಂದರೆ ಬಹು ರಮಣೀಯವಾದುದು ಎಂಬ ಭಾವವು. (೪) ಹೀಗೆ ಉಪಾಸ್ಯನು ಆದಿತ್ಯಮಂಡಲದಲ್ಲಿರುತ್ತಾನೆಂದೂ ಅನಂತರ ಆತನೇ ಉಪಾಸಕನ ಹೃದಯಾಂತರ್ವರ್ತಿಯಾಗಿ ದಿವ್ಯಮಙ್ಗಳ ವಿಗ್ರಹವನ್ನು ಧರಿಸಿರುತ್ತಾನೆಂಬುದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ. "ಸ ಯ ಏಷೋ ನ್ತ ರ್ಹೃದಯ ಆಕಾಶಃ ಎಂದು ಪ್ರಾರಂಭಿಸಿ ಹಿಂದಿರುತ್ತದೆ. ಯಃ-ಯಾವ ಪ್ರಸಿದ್ಧನಾದ, ಏಷಃ - ಈ ಪರಬ್ರಹ್ಮನು, ಉಪಾಸಕನ ಹೃದಯದ ಆಕಾಶದಲ್ಲಿದ್ದಾನೋ, ತಸ್ಮಿನ್ - ಆ ಹೃದಯಾಕಾಶದಲ್ಲಿ, ಅಯಂ ಪುರುಷಃ - ಈ ಪರಮ ಪುರುಷನು; ಮನೋ ಮಯಃ - ವಿಶುದ್ಧವಾದ ಉಪಾಸಕನ ಮನಸ್ಸಿನಿಂದ ಗ್ರಾಹ್ಯನಾಗಿ, ಅಮೃತಃ - ಅಸಂ ಸಾರಿಯಾಗಿ, ಕಮನೀಯವಾದ ವಿಗ್ರಹವುಳ್ಳವನಾಗಿ, ಹಿರಣ್ಮಯಃ - ರಮಣೀಯ ವರ್ಣವುಳ್ಳ ವನಾಗಿ, ಆಸ್ತೇ-ಇರುತ್ತಾನೋ, ಸಃ-ಅಂತಹ ಪರಮಾತ್ಮನು, ಉಪಾಸಿಸಲ್ಪಡತಕ್ಕವನೆಂಬ ಭಾವವು. (೩) (೪) ಎರಡು ಶ್ರುತಿಗಳಿಂದ ಉಪಾಸಕನಿಗೆ ಉಪಾಸ್ಯನ ಸ್ಥಾನ ವಿಶೇಷ ಗಳೂ ಅಲ್ಲಿರುವ ದಿವ್ಯಮಙ್ಗಳವಿಗ್ರಹಗಳೂ ಹೇಳಲ್ಪಟ್ಟವು. (೫) "ವಿದ್ಯುತಃ ಪುರು ಷಾತ್ - ಮಿಂಚಿನ ವರ್ಣವುಳ್ಳ ದಿವ್ಯಮಙ್ಗಳ ವಿಗ್ರಹವುಳ್ಳ ಕಾರಣ ಪುರುಷನಾದ ಪರಮಾತ್ಮ ನಿಂದ, ಸರ್ವೇ ನಿಮೇಷಾಃ - ಸಮಸ್ತ ಕಾಲಭಾಗಗಳು ಅಧಿಜಜ್ಞಿರೇ - ಹುಟ್ಟಿದವು. (೬) "ಮನೋಮಯಃ ಪ್ರಾಣಶರೀರೋ ಭಾರೂಪಃ ಎಂದು ಇದೆ; ಮನೋಮಯಃ - ಪರಿಶುದ್ಧ ವಾದ ಮನಸ್ಸುಳ್ಳವನಿಂದ ಗ್ರಹಿಸಲು ಯೋಗ್ಯನು, ವಿವೇಕ ವಿಮೋಕಾದಿ ಸಾಧನ ಸಪ್ತಕಗಳಿಂದ ಅನುಗ್ರಹಿಸಲ್ಪಟ್ಟ ಪರಮಾತ್ಮೋಪಾಸನದಿಂದ ನಿರ್ಮಲವಾಗಿ ಮಾಡಲ್ಪಟ್ಟ ಮನಸ್ಸಿನಿಂದ ಗ್ರಾಹ್ಯನೆಂಬ ಭಾವವು, ಇದರಿಂದ ಹೇಯ ಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವಗಳಿಂದ ಸಕಲೇ ತರ ವಸ್ತುಗಳಿಗಿಂತಲೂ ವಿಲಕ್ಷಣನೆಂದು ಹೇಳಲ್ಪಟ್ಟಿತು; ಪ್ರಾಣಶರೀರಃ - ಸಮಸ್ತಪ್ರಾಣಿಗಳೂ ಯಾವನಿಗೆ ಶರೀರವೋ ಎಂದರೆ ಯಾವನಿಂದ ಈ ಪ್ರಾಣವು ಆಧೇಯ ವಿಧೇಯ ಶೇಷಭೂತವೋ ಅಂತಹ ಪರಮಾತ್ಮನು: ಭಾರೂಪಃ - ಅಪ್ರಾಕೃತ ಸ್ವಾಸಾಧಾರಣ ನಿರತಿಶಯ ಕಲ್ಯಾಣ ದಿವ್ಯ ರೂಪದಿಂದ ನಿರತಿಶಯ ದೀಪ್ತಿಯುಳ್ಳವನು; ಸತ್ಯಸಙ್ಕಲ್ಪ ಃ - ಅಪ್ರತಿಹತವಾದ ಸಙ್ಕಲ್ಪವುಳ್ಳ ವನು, ಆಕಾಶಾತ್ಮಾ - ತಾನೂ ಸ್ವಯಂ ಪ್ರಕಾಶನಾಗಿ ಇತರ ವಸ್ತುಗಳನ್ನೂ ಪ್ರಕಾಶಪಡಿಸು ವವನು. ಅಥವಾ, ಆಕಾಶದಹಾಗೆ ಸೂಕ್ಷ್ಮವಾದ ಸ್ವಚ್ಛವಾದ ಸ್ವರೂಪವುಳ್ಳವನು, ಅಥವಾ ಸಕ ಲೇತರಕ್ಕೂ ಕಾರಣಭೂತವಾದ ಆಕಾಶವನ್ನೇ ಶರೀರವಾಗಿವುಳ್ಳವನು, ಸರ್ವಕರ್ಮಾ-ಸಮಸ್ತ ಜಗತ್ತೂ ಯಾವನ ಕರ್ಮವೋ ಅವನು, ಸಮಸ್ತಕರ್ಮವೂ ಯಾವನಿಗೋ ಅವನು ಸರ್ವ ಕರ್ಮನು, ಸರ್ವ ಕಾಮಃ - ಕಾಮ್ಯಂತೇ ಇತಿ ಕಾಮಾಃ ಎಂಬ ವ್ಯುತ್ಪತ್ತಿಮೂಲಕ ಭೋಗ್ಯ ಭೋಗೋ ಪಕರಣಗಳು, ಇವುಗಳೆಲ್ಲಾ ಪರಿಶುದ್ಧಗಳಾಗಿ ಸರ್ವ ವಿಧಗಳಾಗಿ ಬೇಕಾದವೆಲ್ಲಾ ಯಾವನಿಗೆ

(೪) ಶಿಕ್ಷಾ. ೬. ೧. (೫) ತೈ. ನಾರಾ ೬. ೧. ೮. (೬) ಛಾಂ. ೩. ೧೪. ೨. (೭) ಬೃಹ. ೪. ೩. ೬.

ಭಾ. ಇತ್ಯಾದಿ ಶ್ರುತಿ ಸಿದ್ಧಮ್. ಆತ್ಮಮಾಯಯಾ - ಆತ್ಮೀಯಯಾ ಮಾಯಯಾ (೮) "ಮಾಯಾ ವಯುನಂ ಜ್ಞಾನಂ" ಇತಿ ಜ್ಞಾನಪರ್ಯಾಯೋಽತ್ರ ಮಾಯಾ ಶಬ್ದಃ. ತಥಾ ಚಾಭಿಯುಕ್ತ ಪ್ರಯೋಗಃ-"ಮಾಯಯಾ ಸತತಂ ವೇತ್ತಿ ಪ್ರಾಣಿ

ಉಂಟೋ ಆತನು; —ಸರ್ವಗಂಧ ಸ್ಸರ್ವರಸಃ - ಅಪ್ರಾಕೃತಗಳಾಗಿ ತನಗೆ ಮಾತ್ರವೇ ಅಸಾಧಾರಣಗಳಾಗಿ, ನಿರವದ್ಯಗಳಾಗಿ ನಿರತಿಶಯಗಳಾಗಿ ತನಗೆ ಭೋಗ್ಯಭೂತಗಳಾಗಿರುವ ಸರ್ವವಿಧ ಗಂಧ ರಸಗಳುಳ್ಳವನು; ಸರ್ವಮಿದ ಮಭ್ಯಾತ್ತಃ - ಮೇಲೆ ಹೇಳಿದ ಸಮಸ್ತ ಕಲ್ಯಾಣ ಸಮೂಹವನ್ನೂ ಸ್ವೀಕರಿಸಿದವನು ಮುಂದಕ್ಕೆ "ಅವಾಕ್ಯನಾದರಃ'' ಎಂದಿರುತ್ತದೆ, ಅವಾಕೀ-ವಾಕಃ ಎಂದರೆ ಉಕ್ತಿಯು ಈತನಿಗಿಲ್ಲವು; ಏತಕ್ಕೆಂದರೆ ಅನಾದರಃ ಅವಾಪ್ತ ಸಮಸ್ತಕಾಮನಾದುದರಿಂದ ಯಾತರಲ್ಲೂ ಆದರವಿಲ್ಲದವನು; ಆದುದರಿಂದಲೇ ಅವಾಕೀ - ಪರಿಪೂರ್ಣೈಶ್ವರ್ಯವುಳ್ಳವನಾದುದರಿಂದ ಯಾವುದೂ ಬೇಕೆಂತ ಕೇಳದವನು; ಈ ಜಗತ್ತಿನ ಯಾವ ಪದಾರ್ಥವನ್ನೂ ಅಪೇಕ್ಷಿಸದವನು" ಇಲ್ಲಿ "ಶಾಂತ ಉಪಾಸೀತ" ಎಂದು ಉಪಾಸನೆಯನ್ನು ವಿಧಿಸಿ ಅದನ್ನು ಸಕ್ರತುಂ ಕುರ್ವೀತ ಎಂದು ಅನುವಾದಮಾಡಿ, ಅದಕ್ಕೆ ಅಙ್ಗವಾಗಿ ಹೇಳಿದ ಸತ್ಯಗಳಾದ ಗುಣಗಳಲ್ಲಿ ಅವುಗಳೊಂದಿಗೆ ದಿವ್ಯಮಙ್ಗಳ ವಿಗ್ರಹವೂ ಸೇರಿದೆ ಎಂಬುದು ಈಶ್ರುತಿಯಲ್ಲಿ ಹೇಳಲ್ಪಟ್ಟಿತು. (೭) ಈ ಪೂರಾಶ್ರುತಿ ವಾಕ್ಯವು ಹೇಗೆಂದರೆ—"ತಸ್ಯಹವಾ ಏತಸ್ಯ ಪುರುಷಸ್ಯರೂಪಂ ಯಥಾ ಮಾಹಾರಜನಂ ವಾಸಃ ಯಥಾಪಾಣ್ಡ್ವಾವಿಕಂ ಯಥೇನ್ದ್ರಗೋಪೋ ಯಥಾಗ್ನ್ಯರ್ಚಿ, ರ್ಯಥಾ ಪುಂಡರೀಕಂ ಯಥಾಸಕೃದ್ವಿದ್ಯುತಮ್" ಬೃಹದಾರಣ್ಯಕ ೪. ೩. ೧. ರಲ್ಲಿ ಪರಬ್ರಹ್ಮನಿಗೆ ಮೂರ್ತಾಮೂರ್ತವೆಂದು ಎರಡು ವಿಧ ಸ್ವರೂಪ ಉಂಟೆಂದು ಹೇಳಿ, ಈ ೪. ೩. ೬. ನೆಯ ವಾಕ್ಯದಿಂದ ಅಂತಹ ಪರಬ್ರಹ್ಮನಿಗೆ ದಿವ್ಯಮಙ್ಗಳ ವಿಗ್ರಹವೂ ಉಂಟೆಂದೂ, ಅದು ದಿವ್ಯ ತೇಜೋಮಯವಾದ ಆಕಾರ ಉಳ್ಳದ್ದೆಂದೂ, ಶ್ರುತಿಯು ಹೇಳುತ್ತದೆ; ಆ ಆಕಾರವು ಹೇಗೆ ಶೋಭಿಸುತ್ತದೆಂದರೆ ಹೇಳುತ್ತಾರೆ—ಕೌಸಂಭ ವರ್ಣದ ಬಟ್ಟೆ ಎಂದರೆ ಪೀತಾಂಬರದಹಾಗೂ, ಪಾಂಡುರ ವರ್ಣವೆಂದರೆ ಹಳದಿ ಬಿಳಪು ಮಿಶ್ರವಾದ ಕಂಬಳಿಯಹಾಗೂ, ಇಂದ್ರ ಗೋಪವೆಂಬ ಪ್ರಕಾಶಿಸುವ ಹುಳದಹಾಗೂ,ಅಗ್ನಿಜ್ವಾಲೆಯಹಾಗೂ,ಕಮಲದ ಹಾಗೂ, ಯಾವಾಗಲೂ ಮಿಂಚುವ ಮಿಂಚಿನಹಾಗೂ, ದೇದೀಪ್ಯಮಾನವಾದ ಆಕಾರವೆಂಬ ಭಾವವು. ಇತ್ಯಾದಿ ಶ್ರುತಿಸ್ಸಿದ್ಧಂ ಇವೇ ಮೊದಲಾದ ಶ್ರುತಿಗಳಿಂದ, ತನಗೆ ಒಂದು ನಿತ್ಯವಾದ ದಿವ್ಯ ಮಙ್ಗಳವಿಗ್ರಹ ಉಂಟೆಂಬುದು ಸಿದ್ಧವು. ಇದು ಜೀವಾತ್ಮನಿಗೆ ಉಂಟಾದಹಾಗೆ ಕರ್ಮಮೂಲಕವಾಗಿ ಬಂದುದೂ ಅಲ್ಲವು, ಕರ್ಮಫಲಾನುಭವರೂಪ ಭೋಕ್ತೃತ್ವಕ್ಕಾಗಿಯೂ ಅಲ್ಲವು. ಇವುಗಳು ವ್ಯಾಸಸೂತ್ರಗಳಿಂದ ವ್ಯಕ್ತವು. ದ್ವಾಸುಪರ್ಣಾ ಎಂಬ ಶ್ರುತಿಯೂ ಸಹ ಅದೇ ಅಭಿಪ್ರಾಯ ಉಳ್ಳದ್ದು. ಹಾಗಾದರೆ ಹೇಗೆ ಉಂಟಾದವು ಎಂದರೆ ಹೇಳುತ್ತಾರೆ.—ಆತ್ಮ ಮಾಯಯಾ ಎಂದರೆ ಆತ್ಮೀಯಯಾ ಮಾಯಯಾ — ತನ್ನ ಸಂಬಂಧವಾದ ಜ್ಞಾನರೂಪ ಸಙ್ಕಲ್ಪದಿಂದಲೇ; ಅತ್ರ - ಇಲ್ಲಿ, ಮಾಯಾ ಎಂಬ ಶಬ್ದವು "ಮಾಯಾ ವಯುನಂ ಜ್ಞಾನಂ" ಇತಿ - ಎಂಬ ವೇದ ನಿಘಂಟುವಿನ ಧರ್ಮ ವರ್ಗವನ್ನನುಸರಿಸಿ, ಜ್ಞಾನಪರ್ಯಾಯ ಶಬ್ದವು; ತಥಾಚ - ಹಾಗೆಯೇ, ಅಭಿಯುಕ್ತೈಃ - ಪೂರ್ವಾಚಾರ್ಯರುಗಳಿಂದ, ಪ್ರಯೋಗ ಉಂಟು, ಎಲ್ಲಿ ಎಂದರೆ "ಮಾಯಯಾ - ತನ್ನ ಸರ್ವಜ್ಞತೆಯಿಂದಲೇ ಸತತಂ - ಯಾವಾಗಲೂ, ಪ್ರಾಣಿಗಳ ಶುಭಾಶುಭಗಳನ್ನು, ವೇತ್ತಿ - ಪರಬ್ರಹ್ಮನು ತಿಳಿಯುವನು, ಇತಿ - ಎಂಬದಾಗಿ ಪ್ರಯೋಗವಿರುತ್ತದೆ. ಆದುದರಿಂದ, ಆತ್ಮಮಾಯಯಾ ಎಂದರೆ

(೮) ವೇದನಿಘಂಟುಃ, ಧರ್ಮ ವರ್ಗಃ. ೨೨.

ಭಾ. ನಾಂ ಚ ಶುನಾ ಶುಭೇನ" ಇತಿ; ಆತ್ಮೀಯೇನ ಜ್ಞಾನೇನ - ಆತ್ಮ ಸಙ್ಕಲ್ಪೇನೇತ್ಯರ್ಥಃ. ಅತೋಽಪಹತ ಪಾಪ್ಮತ್ವಾದಿ ಸಮಸ್ತಕಲ್ಯಾಣ ಗುಣಾತ್ಮಕತ್ವಮ್ ಸರ್ವೈಶ್ವರ್ಯಂ ಸ್ವಭಾವ ಮಜಹತ್ ಸ್ವಮೇವರೂಪಂ ದೇವಮನುಷ್ಯಾದಿ ಸಜಾತೀಯ ಸಂಸ್ಥಾನಮ್ ಕುರ್ವನ್ನಾತ್ಮ ಸಙ್ಕಲ್ಪೇನ ದೇವಾದಿರೂಪ ಸ್ಸಂಭವಾಮಿ. ತದಿದಮಾಹ

ಆತ್ಮೀಯೇನ ಜ್ಞಾನೇನ - ಸ್ವಕೀಯವಾದ ಜ್ಞಾನದಿಂದ ಎಂದರೆ ಆತ್ಮಸಙ್ಕಲ್ಪೇನೇತ್ಯರ್ಥಃ - ತನ್ನ ಸಙ್ಕಲ್ಪದಿಂದಲೇ ಎಂಬರ್ಥವು. ಇದರಿಂದ ಮಾಯಾ ಶಬ್ದಕ್ಕೆ ಮಾಯಾಂತು ಪ್ರಕೃತಿಂ ವಿದ್ಯಾತ್"ಎಂದು ಹೇಳಿರುವರೀತ್ಯಾ ತ್ರಿಗುಣಾತ್ಮಕ ಪ್ರಕೃತಿ ಎಂಬ ಅರ್ಥ ಹೇಳಿ, ಅವತಾರ ಶರೀರಕ್ಕೆ ಮಿಥ್ಯಾತ್ವವನ್ನು ಕೆಲವರು ಆರೋಪಿಸಿ ಹೇಳುವದು ಪೂರಾ ಅಸಂಗತವೆಂದು ತೋರಿಬರುತ್ತದೆ ಮಾಯಾ ಶಬ್ದಕ್ಕೆ ಇಂದ್ರಜಾಲವೆಂಬ ಅರ್ಥವೂ ಅಲ್ಲವು. ಹಾಗೆ ಅರ್ಥಹೇಳಿದರೆ ಅನೇಕ ಶ್ರುತಿಗಳಿಗೂ, ಸ್ಮೃತಿ, ಪುರಾಣೇತಿಹಾಸ ವಾಕ್ಯಗಳಿಗೂ ವಿರೋಧವುಂಟಾಗುತ್ತದೆ. "ನತಸ್ಯ ಪ್ರಾಕೃತಾಮೂರ್ತಿಃ ಮಾಂಸಮೇದೋಽಸ್ಥಿ ಸಂಭವಾ" ಮತ್ತು "ನ ಭೂತ ಸಂಘ ಸಂಸ್ಥಾನೋ ದೇಹೋಽಸ್ಯ ಪರಮಾತ್ಮನಃ" ಎಂಬಿವೇ ಮೊದಲಾದ ಕಂಠೋಕ್ತ ಪ್ರಮಾಣಗಳಿಗೆ ವಿರುದ್ಧವಾಗಿ ಅರ್ಥ ಹೇಳಬಹುದೇ? ಬೃಹದಾರಣ್ಯಕ ೪. ೩. ೧ರಲ್ಲಿ ಪರಬ್ರಹ್ಮ ಸ್ವರೂಪವನ್ನು ಕುರಿತು ಹೇಳಿ ೪. ೩. ೬. ರಲ್ಲಿ ಆತನಿಗೆ ಒಂದು ನಿತ್ಯವಾದ ದಿವ್ಯಮಙ್ಗಳವಿಗ್ರಹವೂ ಉಂಟೂ ಎಂದೂ ಹೇಳುತ್ತದೆ. ಈ ವಿಗ್ರಹವೆಂತಾದ್ದೆಂದರೆ, ರಹಸ್ಯಾಮ್ನಾಯ ಬ್ರಾಹ್ಮಣದಲ್ಲಿ "ನಿತ್ಯಾ ಲಿಙ್ಗಾ ಸ್ವಭಾವ ಸಂಸಿದ್ಧಿ ರಿಂದ್ರಿಯಾಕಾರಾಙ್ಗ ಪ್ರತ್ಯಙ್ಗ ವ್ಯಂಜನವತೀ", ನಿತ್ಯಾ - ಕಾಲಪರಿಚ್ಛೇದ ರಹಿತವಾದುದು ಆ ಮೂಲ ದಿವ್ಯವ ಙ್ಗಳ ವಿಗ್ರಹವು, ಅಲಿಙ್ಗಾ - ಕರ್ಮ ಕೃತವಾದ ಸ್ತ್ರೀ ಪು ಭೇದ ರಹಿತವಾದುದು, ಸ್ವಭಾವಸಂಸಿದ್ಧಿಃ - ಭಗವಂತನ ಭಾವೇನೆ ಎಂದರೆ ಇಚ್ಛೆಯಿಂದುಂಟಾದ ನಿಯತವಾದ ಸಂಸ್ಥಾನಉಳ್ಳದುದು, ನಮ್ಮಹಾಗೆಯೆ' ಇರುವ ಇಂದ್ರಿಯಗಳು ಆಕಾರ ಅಙ್ಗಪ್ರತ್ಯಙ್ಗಗಳಿದ್ದರೂ ಕರ್ಮ ಕೃತವಲ್ಲದೆ ವಿಲಕ್ಷಣವಾದವು. ಈ ಶುದ್ಧ ಸತ್ವಮಯ ದ್ರವ್ಯವು ಉಪಾದಾನ ಕಾರಣವಾಗಿ ಸ್ವಾಮಿಯ ಅನಿತ್ಯ ಸಙ್ಕಲ್ಪಾನುಸಾರ ಅನೇಕ ಅವತಾರಗಳು ಉಂಟಾಗುತ್ತವೆ. ಅವತಾರ ಸಮಾಪ್ತಿಯಲ್ಲಿ ಅವು ಅದರ ಮೂಲಕಾರಣವನ್ನೇ ಹೋಗಿ ಸೇರುತ್ತದೆ. ಈ ಅಭಿಪ್ರಾಯವು ಸಮಂಜಸವಾಗಿರುವದರಿಂದ ಮೂಲಕಾರಣದ ಮೂಲಕ ಎರಡು ಅವತಾರಗಳು ಏಕಕಾಲದಲ್ಲಿರಬಹುದು. ಪರಶುರಾಮಾವತಾರವೂ ರಾಮಾವತಾರವೂ ಮತ್ತು ಕೃಷ್ಣಾವತಾರವೂ ಸಂಕರ್ಷಣರೂಪ ಬಲರಾಮಾವತಾರವೂ ಒಟ್ಟಿಗೆ ಇರಬಹುದೇ ಎಂಬ ಕೆಲವರ ಆಕ್ಷೇಪವು ಇದರಿಂದ ದೂರೀಕೃತವು.

ಈ ಶ್ಲೋಕದಿಂದ ಗ್ರಹಿಸತಕ್ಕ ಮುಖ್ಯಾರ್ಥವೇನೆಂದರೆ ಮುಂದೆ ಅತಃ ಎಂದು ಪ್ರಾರಂಭಿಸಿ ಹೇಳುತ್ತಾರೆ. ಶ್ರುತಿಯಲ್ಲಿ ದಹರ ವಿದ್ಯಾಪ್ರಸಙ್ಗದಲ್ಲೂ ಸುಬಾಲೋಪನಿಷತ್ತಿನಲ್ಲೂ ಹೇಳಿರುವ ನಿರ್ದೋಷತ್ವ ದಿವ್ಯಮಙ್ಗಳತ್ವ ಕಲ್ಯಾಣಗುಣಾಕರತ್ವಗಳನ್ನು ಪ್ರತಿಪಾದಿಸುವ ವಾಕ್ಯಗಳನ್ನು ಮನಸ್ಸಿನಲ್ಲಿಟ್ಟು ಹೇಳುತ್ತಾರೆ. ಅತಃ-ಆ ಕಾರಣದೆಶೆಯಿಂದ, ಅಪಹತಪಾಪ್ಮತ್ವವೇ ಮೊದಲಾದ ಸಮಸ್ತ ಕಲ್ಯಾಣಗುಣಗಳುಳ್ಳ ಸ್ವರೂಪವನ್ನೂ, ಹೀಗೆ ಸರ್ವಮೈಶಂ ಸ್ವಭಾವಮಜಹತ್-ಸಮಸ್ತ ಈಶ್ವರ ಸಂಬಂಧವಾದ ಸ್ವಭಾವವನ್ನು ಬಿಡದೇ, ಸ್ವಮೇವ ರೂಪಂ - ತನ್ನ ದಿವ್ಯಮಙ್ಗಳ ವಿಗ್ರಹವನ್ನೇ, ದೇವ ಮನುಷ್ಯಾದಿ ಸಜಾತೀಯ ಸಂಸ್ಥಾನಂ ಕುರ್ವ - ದೇವಮನುಷ್ಯ, ಆದಿಶಬ್ದದಿಂದ - ತಿರ್ಯಗ್ಜಂತು. ಇವುಗಳಿಗೆ ಸಮಾನವಾದ ಅವಯವಗಳುಳ್ಳದ್ದಾಗಿ ಮಾಡಿಕೊಂಡವನಾಗಿ, ಆತ್ಮಸಙ್ಕಲ್ಪೇನ - ತನ್ನ ಸಙ್ಕಲ್ಪದಿಂದಲೇ, ದೇವ ಮನುಷ್ಯಾದಿ ರೂಪವುಳ್ಳವನಾಗಿ,

ಭಾ. (೧) "ಅಜಾಯಮಾನೋ ಬಹುಧಾ ವಿಜಾಯತೇ" ಇತಿ ಶ್ರುತಿಃ. ಇತರ ಪುರುಷ ಸಾಧಾರಣಂ ಜನ್ಮಾಕುರ್ವನ್ ದೇವಾದಿರೂಪೇಣ ಸ್ವಸಙ್ಕಲ್ಪೇನೋಕ್ತ ಪ್ರಕ್ರಿಯಯಾ ಜಾಯತ ಇತ್ಯರ್ಥಃ, "ಬಹೂನಿಮೇ ವ್ಯತೀತಾನಿ ಜನ್ಮಾನಿ ತವಚಾರ್ಜುನ । ತಾನ್ಯಹಂ ವೇದಸರ್ವಾಣಿ" ತದಾತ್ಮಾನಂ ಸೃಜಾಮ್ಯಹಂ" "ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋವೇತ್ತಿ ತತ್ತ್ವತಃ" ಇತಿ ಪೂರ್ವಾಪರಾ ವಿರೋಧಾಚ್ಚ ||೬||

ಸಂಭವಾಮಿ - ಹುಟ್ಟುವೆನು ಎಂದರೆ ಆಗುವೆನು ಎಂಬರ್ಥವು, ತತ್ - ಅಂತಹ, ಇದಂ - ಈ ಅಭಿಪ್ರಾಯವನ್ನು "ಅಜಾಯಮಾನೋ" ಎಂಬ ಶ್ರುತಿಯು ಹೇಳುತ್ತದೆ. ಆ ಶ್ರುತ್ಯರ್ಥವೇ ನೆಂದರೆ.—"ಅಜಾಯಮಾನಃ ಯಾವ ಕಾರಣಮೂಲಕ ಉತ್ಪತ್ತಿ ಯಿಲ್ಲದವನಾಗಿದ್ದರೂ, ಸಙ್ಕಲ್ಪ ಮೂಲಕ ಬಹುಧಾ ವಿಜಾಯತೇ - ಬಹುವಿಧನಾಗಿ ಅವತರಿಸುವೆನು" ಈ ದಿವ್ಯ ಮಙ್ಗಳ ವಿಗ್ರಹವನ್ನು ಎತ್ತಿದಾಗಲೂ ಸಹ ಆತನು ಅಪಹತ ಪಾಪ್ಮತ್ವ ಕಲ್ಯಾಣಗುಣಾಕರತ್ವ ವುಳ್ಳವನೆಂದು ತಿಳಿಸುವದಕ್ಕಾಗಿ"ಅಪಹತಪಾಪ್ಮ ವೆಂದು ಆರಂಭಿಸಿ ಐಶಂ ಸ್ವಭಾವ ಮಜಹತ್" ಎಂಬ ಪ್ರಯೋಗವು. ಇಂತಹ ಐಶ ಸ್ವಭಾವವು ಇತರರು ಹೇಳುವಹಾಗೆ ಹೇಗೆ ಮಿಥ್ಯೆಯಾ ದೀತು ? ಆದುದರಿಂದ ಮೂಲದ ಪ್ರಕೃತಿ ಶಬ್ದದಿಂದ ನಮ್ಮ ಈ ಲೋಕದ ಸಾಂಸಾರಿಕ ಜಡ ಪ್ರಕೃತಿಯು ಹೇಳಲ್ಪಡಲಿಲ್ಲವು. ಈ ವಿಷಯದಲ್ಲಿ ಪರಾಶರ ಮಹರ್ಷಿಯ ಶ್ಲೋಕವಾದ

(೨) ಸಮಸ್ತ ಕಲ್ಯಾಣಗುಣಾತ್ಮಕೋಽಸೌ ಸ್ವಶಕ್ತಿ ಲೇಶಾದ್ಧೃತ ಭೂತಸರ್ಗಃ ।
ಇಚ್ಛಾ ಗೃಹೀತಾ ಭಿಮತೋರುದೇಹಃ ಸಂಸಾಧಿತಾ ಶೇಷ ಜಗದ್ಧಿತೋಽಸೌ ॥

ಎಂಬುದು ಅನುಸಂಧೇಯವು. ಇಲ್ಲಿ ಸಮಸ್ತ ಕಲ್ಯಾಣ ಗುಣಾಕರತ್ವವೂ ದಿವ್ಯಮಙ್ಗಳ ವಿಗ್ರಹ ವನ್ನು ಧರಿಸಿದಾಗಲೂ ಉಂಟೆಂಬುದನ್ನು ಇಚ್ಛಾ ಗೃಹೀತೋಭಿಮತೋರುದೇಹಃ - ಸ್ವಸಙ್ಕಲ್ಪ ದಿಂದ ಸ್ವೀಕರಿಸಲ್ಪಟ್ಟ ತನಗೆ ಅಭಿಮತವಾದ ಉತ್ಕೃಷ್ಟದೇಹವುಳ್ಳವನು ಎಂದು ಹೇಳಲ್ಪಟ್ಟಿತು. ಹೀಗೆ ತನ್ನ ಐಶ ಸ್ವಭಾವ ಮಜಹತ್ ಈಶ್ವರ ಸ್ವಭಾವವನ್ನು ಬಿಡದೇ ಇರುವದರಿಂದ ಉತ್ಕೃಷ್ಟವಾದ ಅಪ್ರಾಕೃತ ಶರೀರವುಳ್ಳವನೆಂದು ಬೋಧಿತವು ಸ್ವಮೇವರೂಪಂ ಎಂಬಿವೇ ಮೊದಲಾದುದರಿಂದ ಶ್ರೀಪರಾಶರರ

(೩) "ಸಮಸ್ತ ಶಕ್ತಿ ರೂಪಾಣಿ ತತ್ಕರೋತಿ ಜನೇಶ್ವರ ।
ದೇವ ತಿರ್ಯಙ್ಮನುಷ್ಯಾಖ್ಯಾ ಚೇಷ್ಟಾವನ್ತಿ ಸ್ವಲೀಲಯಾ॥"

ಎಂಬ ವಚನವು ಸ್ಮರಿಸಲ್ಪಟ್ಟಿತು. ಸಮಸ್ತ ಶಕ್ತಿಗಳಿಗೂ ಆಶ್ರಯವಾದ ಆ ಪರಬ್ರಹ್ಮನು ಉಪೇಂದ್ರಾದಿ ದೇವಾವತಾರಗಳ, ಮತ್ಸ್ಯ ಕೂರ್ಮಾದಿ ತಿರ್ಯಗವತಾರಗಳ, ರಾಮ ಕೃಷ್ಣಾದಿ ಮನುಷ್ಯಾವತಾರಗಳ, ಆದಿ ಶಬ್ದದಿಂದ ಮಿಶ್ರರೂಪವಾದ ನೃಸಿಂಹಾವತಾರದ, ದಿವ್ಯ ಚೇಷ್ಟೆಗಳನ್ನು ಹೊಂದಿದ ದಿವ್ಯಮಙ್ಗಳವಿಗ್ರಹಗಳನ್ನೂ ತನ್ನ ಲೀಲೆಯ ಮೂಲಕವಾಗಿ ಮಾಡಿಕೊಳ್ಳುತ್ತಾನೆ ಎಂಬುದು ಈ ಶ್ಲೋಕಾರ್ಥವು.

ಹೀಗೆ ಶ್ರುತಿಯೂ ಜ್ಞಾನಾಗ್ರೇಸರರ ವಾಕ್ಯಗಳೂ ಈ ದಿವ್ಯಮಙ್ಗಳ ವಿಗ್ರಹವನ್ನು ಪ್ರಾಕೃತ ವಲ್ಲವೆಂದು ಹೇಳುವದರಿಂದ ಬೇರೆಯಾದ ಅಪ್ರಾಕೃತ ದ್ರವ್ಯಯುಕ್ತವಾದುದೆಂದು ತಿಳಿಸುವದಕ್ಕಾಗಿ ಸ್ವಮೇವ ಸ್ವಭಾವಮಧಿಷ್ಠಾಯ ಎಂದು ಪ್ರಯೋಗಿಸಿರುತ್ತಾರೆ. ಶ್ರೀ ಭಾಷ್ಯಕಾರರು ಈ ಅಭಿಪ್ರಾಯವನ್ನು ಶ್ರೀ ಭಾಷ್ಯದ ೧. ೧. ೨೧. ಸೂತ್ರದ ಭಾಷ್ಯದಲ್ಲಿ "ಸ್ವಮೇವ ಸ್ವಭಾವ ಮಾಸ್ಥಾಯ, ನ ಸಂಸಾರಿಣಾಂ ಸ್ವಭಾವಮಿತ್ಯರ್ಥಃ" ಎಂದು ಸೂಚಿಸಿರುತ್ತಾರೆ. ಮೂಲದಲ್ಲಿ

(೧) ಪುರುಷಸೂಕ್ತ. (೨) ವಿ. ಪು. ೬. ೫. ೮೪. (೩) ವಿ. ಪು. ೬. ೫. ೮೬.

ರುವ "ಪ್ರಕೃತಿಂ ಸ್ವಾಮಧಿಷ್ಠಾಯ" ಎಂಬಲ್ಲಿ ದಿವ್ಯಮಙ್ಗಳ ವಿಗ್ರಹಕ್ಕೆ ಬೇಕಾದ ದಿವ್ಯ ವೈಕುಂಠದಲ್ಲಿರುವ ಅಪ್ರಾಕೃತ ಮೂಲ ಪ್ರಕೃತಿ ಎಂದೂ ಅರ್ಥಮಾಡಬಹುದು ಅಥವಾ ಹಿಂದೆ ಹೇಳಿದ ಹಾಗೆ ಸ್ವಭಾವವೆಂದಾಗಲಿ ಅರ್ಥಮಾಡಬಹುದು, ಇದರಿಂದ ಪ್ರಕೃತಿ ಶಬ್ದಕ್ಕೆ ತ್ರಿಗುಣಾತ್ಮಕ ಪ್ರಕೃತಿ ಎಂಬರ್ಥಕ್ಕೂ, ಮಾಯಾ ಶಬ್ದಕ್ಕೆ ಮಿಥ್ಯಾ ಅಥವಾ ಇಂದ್ರಜಾಲವೆಂದು ಕೆಲವರು ಹೇಳುವ ಅರ್ಥಕ್ಕೂ ಸಾಮಂಜಸ್ಯವು ಇಲ್ಲದೆ ಶ್ರುತಿ ಸ್ಮೃತಿವಾಕ್ಯಗಳಿಗೆಲ್ಲಾ ಅವು ವಿರುದ್ಧವಾಗುತ್ತವೆ. ಹೀಗೆ ಅವತಾರ ವಿಗ್ರಹವು ವಿಲಕ್ಷಣವಾದುದೆಂದು ವ್ಯಕ್ತಪಡಿಸಿ ಮುಂದಿನವಾಕ್ಯದಿಂದ ಉಪಸಂಹಾರಮಾಡಿ ಹೇಳುತ್ತಾರೆ:—ಇತರ ಪುರುಷಸಾಧಾರಣ ಜನ್ಮಾಽಕುರ್ವನ್ - ನಮ್ಮಂತಹ ಇತರ ಪುರುಷರಿಗೆ ಸಾಧಾರಣವಾದ ದೇಹವನ್ನೆತ್ತದೆ, ದೇವಾದಿರೂಪೇಣ - ದೇವ ತಿರ್ಯಙ್ಮನುಷ್ಯರೂಪದಿಂದ, ಸ್ವಸಙ್ಕಲ್ಪದಿಂದಲೇ, ಉಕ್ತ ಪ್ರಕ್ರಿಯಯಾ - ಮೇಲೆ ಹೇಳಲ್ಪಟ್ಟ ಪ್ರಕಾರದಿಂದ, ಜಾಯತೇ-ಅವತರಿಸುತ್ತಾನೆ. ಇತ್ಯರ್ಥಃ-ಎಂಬಭಿಪ್ರಾಯವು. ಇತರಿಂದ ಎಂದರೆ ಹೀಗೆ, ಹೇಳಿದರೇನೆ, "ಬಹೂನಿಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ। ತಾನ್ಯಹಂವೇದ" ಎಂಬ, "ತದಾತ್ಮಾನಂ ಸೃಜಾಮ್ಯಹಂ" ಎಂಬ, "ಜನ್ಮಕರ್ಮ ಚ ಮೇದಿವ್ಯ ಮೇವಂ ಯೋ ವೇತ್ತಿ ತತ್ವತಃ" ಎಂಬ, ವಾಕ್ಯಗಳಿಗೆ ಪೂರ್ವಾಪರ ವಿರೋಧಾಚ್ಚ - ಪೂರ್ವಾಪರ ವಿರೋಧವಿಲ್ಲದಿರುವದಕ್ಕಾಗಿ; ಹಾಗಲ್ಲದೆ ಶರೀರವು ತ್ರಿಗುಣಾತ್ಮಕವಾದ ದೇಹ ಪ್ರಕೃತಿ ಸಂಬಂಧವಾದರೆ, ಜನ್ಮ ಕರ್ಮ ಚ ಮೇದಿವ್ಯಂ ಎಂಬಲ್ಲಿ ದಿವ್ಯವಾದುದು ಹೇಗಾಗುತ್ತದೆ? ತದಾತ್ಮಾನಂ ಸೃಜಾಮ್ಯಹಂ - ಎಂಬಲ್ಲಿ ಸಙ್ಕಲ್ಪವು ತೋರಿಬರುತ್ತದೇ ವಿನಾ ಮಿಥ್ಯಾತ್ವವು ತೋರಿಬರುವದಿಲ್ಲವು. ತಾನ್ಯಹಂವೇದ ಎಂಬುದರಿಂದ ಸರ್ವಜ್ಞತೆಯು ತೋರಿಬರುತ್ತದೆ. ಪ್ರಕೃತಿ ಸಂಬಂಧವಿರುವ ಭಾವಕ್ಕೆ ಇದು ವಿರುದ್ಧವು. ಹೀಗೆಲ್ಲಾ ಪೂರ್ವಾಪರ ವಿರೋಧ ಉಂಟಾಗುತ್ತದೆಂಬ ಭಾವವು. ಆಕಾರಣದಿಂದ ಅದೀಗ ಸರ್ವಸಮಂಜಸವಾದ ಅಭಿಪ್ರಾಯವೆಂಬ ಭಾವವು. ಅವತಾರದ ದಿವ್ಯಮಙ್ಗಳ ವಿಗ್ರಹಗಳಿಗೆ ಉಪಾದಾನ ಕಾರಣವು ದಿವ್ಯವೈಕುಂಠದ ಪರಮಾತ್ಮನಿಗೇನೇ ಅಸಾಧಾರಣವಾದ ನಿತ್ಯವಾದ ಅಪ್ರಾಕೃತ ಮಙ್ಗಳವಿಗ್ರಹವು; ಇಂಥಾದ್ದುಂಟೆಂದು ಅನೇಕ ಶ್ರುತಿಸೂತ್ರಗಳು ಬೋಧಿಸುತ್ತವೆ. ಅವತಾರ ಸಮಾಪ್ತಿಯಲ್ಲಿ ಕಾರ್ಯರೂಪವಾದ ದಿವ್ಯಮಙ್ಗಳವಿಗ್ರಹದ್ರವಕ್ಕೆ ಮೂಲಕಾರಣದಲ್ಲಿ ಲಯವು ಎಂಬುದನ್ನು ಇಲ್ಲಿ ಮುಖ್ಯವಾಗಿ ಗ್ರಹಿಸತಕ್ಕದ್ದು. ಆದುದರಿಂದ ಅವತಾರವೂ ಸತ್ಯವು, ಅವತಾರ ಶರೀರದ್ರವವೂ ಸತ್ಯವೂ ಮಿಥ್ಯೆಯಲ್ಲವು. ಅವರೆ ಅವಸ್ಥಾಮಾತ್ರ ಅನಿತ್ಯವು ಏಕೆಂದರೆ ಆದಿ ಅಂತ್ಯಗಳಿರುವದರಿಂದ.

ಇಲ್ಲಿ ಇನ್ನೊಂದು ಮುಖ್ಯ ವಿಷಯವು ಚರ್ಚಿಸತಕ್ಕದ್ದಾಗಿರುತ್ತದೆ, ಏನೆಂದರೆ—ಶ್ರೀ ಪರಾಶರರು ವಿಷ್ಣು ಪುರಾಣದಲ್ಲಿ (೧.೧೦. ೧೪೨.) "ಏವಂ ಯಥಾ ಜಗತ್ಸ್ವಾಮೀ ದೇವದೇವೋ ಜನಾರ್ದನಃ। ಅವತಾರಂ ಕರೋತ್ಯೇಷಾ ತದಾಶ್ರೀ ಸ್ತತ್ಸಹಾಯಿನೀ" ಎಂದರೆ ಯಾವಾಗ ವಿಷ್ಣುವು ಅವತಾರವನ್ನು ಎತ್ತುತ್ತಾನೋ, ಆಗ ಲಕ್ಷ್ಮಿಯೂ ಕೂಡ ಆತನಿಗೆ ಸಹಾಯಕಳಾಗಿ, ಆತನ ಸ್ವರೂಪ ರೂಪಗುಣವಿಭವೈಶ್ವರ್ಯಗಳಿಗೆ ಅನುರೂಪವಾದ ಸ್ವರೂಪ ರೂಪಗುಣ ವಿಭವೈಶ್ವರ್ಯಯುಕ್ತಳಾಗಿ ಅವತಾರವನ್ನು ಎತ್ತುತ್ತಾಳೆಂದು ತಮ್ಮ ಶಿಷ್ಯರಾದ ಮೈತ್ರೇಯರಿಗೆ ಬಹು ವಿಸ್ತರವಾಗಿ ಉಪದೇಶಿಸಿರುತ್ತಾರೆ. ಲಕ್ಷ್ಮಿಯು ನಿತ್ಯಾನಪಾಯಿನೀಯಾದುದರಿಂದ ಎಂದಿಗೂ ವಿಷ್ಣುವನ್ನು ಬಿಟ್ಟು ಅಗಲದೆ ಇರುವಳು. ಹೀಗೆ ಅರ್ಜುನನಿಗೆ ಶ್ರೀಕೃಷ್ಣಭಗವಾನರವರು ತಮ್ಮ ಅವತಾರ ರಹಸ್ಯವನ್ನೆಲ್ಲಾ ಉಪದೇಶಿಸುವಾಗ ಈ ವಿಷಯವನ್ನು ಈ ಅವತಾರ ರಹಸ್ಯವನ್ನು ಬೋಧಿಸುವ ಐದು ಶ್ಲೋಕಗಳಲ್ಲಿ ಎಲ್ಲಾದರೂ ಹೇಳಬೇಡವೇ? ಇಲ್ಲವೇ ಮರೆತರೇ ಎಂದರೆ ಪರಮಾತ್ಮನಿಗೆ ವಿಸ್ಮೃತಿಯು ಎಲ್ಲಿಯದು? ಪ್ರಸಕ್ತಿಯಿಲ್ಲವಾದುದರಿಂದ ಹೇಳಲಿಲ್ಲವೆಂದರೆ; ಅವ

ಭಾ. ಅವ. ಜನ್ಮಕಾಲಮಾಹ—

ಮೂ. ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥ ೭.

ತಾರ ರಹಸ್ಯವನ್ನು ಹೇಳಲು ಪ್ರಸಕ್ತಿಯು ಇದ್ದರೆ ಮುಖ್ಯ ವಿಷಯವನ್ನು ಹೇಳಲು ಪ್ರಸಕ್ತಿ ಇಲ್ಲವೇ ? ಆದುದರಿಂದ ಇಲ್ಲಿಯೇ ಗೋಪ್ಯವಾಗಿ (ವ್ಯಾಸೋಕ್ತಿಯೆಲ್ಲಾ ರಹಸ್ಯವೇ) ಪ್ರಕೃತಿಂ ಸ್ವಾಂ ಅಧಿಷ್ಠಾಯ ಎಂಬಲ್ಲಿಯೇ ಹೇಳಲ್ಪಟ್ಟಿರುತ್ತದೆಂದು ಭಾವಿಸತಕ್ಕದು. ಈ ಅಜಹತ್ಸ್ವಭಾವತ್ವದಲ್ಲೇ ಇವೂ ಸೇರಿ "ರಾಘವತ್ವೇ ಭವೇತ್ಸೀತಾರುಕ್ಮಿಣೀ ಕೃಷ್ಣಜನ್ಮನಿ । ಅನ್ಯೇಷು ಚಾವತಾರೇಷು ವಿಷ್ಣೋರೇಷಾನಪಾಯಿನೀ" (ವಿ. ಪು. ೧. ೧೧. ೧೪೪.) ಎಂಬ ಶ್ರೀ ಪರಾಶರೋಕ್ತಿಯ ಪ್ರಕಾರ ಲಕ್ಷ್ಮಿಯೊಂದಿಗೇನೇ ಯಾವಾಗಲೂ ಇರುವದೂ ಸ್ವಸ್ವಭಾವವೇ ; ತನ್ನ ಚಕ್ರ, ಯುಧ ಮೊದಲಾದವುಗಳನ್ನು ಉಪಯೋಗಿಸಿಕೊಳ್ಳುವದೂ ಸ್ವಸ್ವಭಾವವೇ. ಆದುದರಿಂದ ಈ ಅಭಿಪ್ರಾಯಗಳೆಲ್ಲಾ ಈ ಶ್ಲೋಕದಲ್ಲೇ ಅಂತರ್ಗತವೆಂದು ಭಾವಿಸತಕ್ಕದ್ದು.

ಭಾಷ್ಯಾವತಾರಿಕೆಯ ಅರ್ಥವು :—ಅವತಾರಕ್ಕೆ ಕಾಲವು ಯಾವುದೆಂಬುದನ್ನು ತಿಳಿಸುತ್ತಾರೆ ಜೀವಾತ್ಮನಹಾಗೇನಾದರೂ ಪುಣ್ಯಪಾಪಗಳ ವಿಪಾಕಕಾಲದಲ್ಲೇ, ಅಥವಾ ಸ್ವಸಙ್ಕಲ್ಪದಿಂದ ವ್ಯವಸ್ಥೆ ಮಾಡಿಕೊಂಡ ಕ್ರಮವನ್ನನುಸರಿಸಿದ ಕಾಲದಲ್ಲೇ, ಅಥವಾ ಮನ್ವಂತರ ಮಹಾಕಲ್ಪ ಮೊದಲಾದ ಮಹತ್ತಾದ ಕಾಲದಲ್ಲೇ ? ಹೀಗೆಲ್ಲಾ ಏನಾದರೂ ಕಾಲನಿಯಮವುಂಟೋ ಎಂದರೆ, ಧರ್ಮಕ್ಕೆ ಕೊರತೆಯೂ ಅಧರ್ಮಕ್ಕೆ ಏಳಿಗೆಯೂ ಯಾವಾಗ ಯಾವಾಗ ಉಂಟಾಗುತ್ತದೋ ಆವಾಗ ಆವಾಗೆಲ್ಲಾ ಅವತಾರಕಾಲವೇ ವಿನಾ ಬೇರೆ ಇನ್ನು ಯಾವ ಕಾರಣವೂ ಇಲ್ಲವೆಂದುಪದೇಶಿಸುತ್ತಾರೆ.

ಮೂಲಕ್ಕೆ ಅರ್ಥವು :—ಓ ಭಾರತ - ಅರ್ಜುನನೇ, ಯದಾ ಯದಾ ಹಿ - ಯಾವ ಯಾವ ಸಮಯಗಳಲ್ಲಾದರೋ, ಧರ್ಮಸ್ಯ - ವೇದದಲ್ಲಿ ವಿಧಿನಿಷೇಧ ವಾಕ್ಯಗಳಿಂದ ಹೇಳಿರುವ ಇತಿಕರ್ತವ್ಯತೆಗಳಿಗೆ, ಗ್ಲಾನಿಃ - ನ್ಯೂನತೆಯು, ಭವತಿ - ಉಂಟಾಗುತ್ತದೋ, ಅಧರ್ಮಸ್ಯ - ಧರ್ಮಗಳಿಗೆ ವಿಪರೀತವಾದುದಕ್ಕೆ ಎಂದರೆ ಕೃತ್ಯಾಕರಣ ಮತ್ತು ಅಕೃತ್ಯಕರಣ ಇವುಗಳಿಗೆ, ಅಭ್ಯುತ್ಥಾನಂ - ಏಳಿಗೆಯು, ಭವತಿ - ಆಗುತ್ತದೋ, ತದಾ - ತದಾ ತದಾ ಎರಡುಸಲವಿರತಕ್ಕದ್ದು, ಆ ಆ ಸಮಯಗಳಲ್ಲೆಲ್ಲಾ, ಅಹಂ - ನಾನು, ಆತ್ಮಾನಂ ಸೃಜಾಮಿ - ದಿವ್ಯ ಶರೀರಯುಕ್ತನಾಗಿ ಅವತರಿಸುವೆನು. ಮುಂದೆ, "ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ" ಎಂಬದಾಗಿ (ಗೀ. ೧೬-೨೪) ವೇದಗಳೂ ಅವುಗಳ ಉಪಬೃಹ್ಮಣಗಳೂ ತನ್ನ ಶಾಸನವಾಗಿ ಆಜ್ಞಾರೂಪವಾದುವು ಎಂದು ಹೇಳಿರುವದಕ್ಕೆ ವ್ಯತ್ಯಸ್ತವಾಗಿ ಅಕೃತ್ಯಕರಣ ಕೃತ್ಯಾಕರಣರೂಪಗಳಾದ ಅಪರಾಧಗಳನ್ನು ಮಾಡುವವನು ಆಜ್ಞಾಚ್ಛೇದೀ ಮಮ ದ್ರೋಹೀ" ಎಂದು ಹೇಳಿಕೊಂಡಿರುವದರಿಂದ ಇಂತಹ ದ್ರೋಹಿಗಳು ಹೆಚ್ಚಿ, ಅಧರ್ಮವು ತುಂಬಾ ವೃದ್ಧಿಯನ್ನು ಹೊಂದಿ ಧರ್ಮಕ್ಕೆ ಚ್ಯುತಿಯುಂಟಾದರೆ, ಆ ಕಾಲವೇ ತನಗೆ ಅವತಾರಕಾಲವೆಂದು ಹೇಳಿಕೊಂಡಿರುತ್ತಾರೆ. ಈಗ ಧರ್ಮಾಧರ್ಮಗಳ ವಿವೇಚನೆ ಸ್ವಲ್ಪವೂ ಇಲ್ಲದೆ ಜರ್ಮ ಇಟಲಿಯವರಹಾಗೆ ಬಲಿಷ್ಠರು ದುರ್ಬಲರ ಸರ್ವಸ್ವವನ್ನು ಕಿತ್ತುಕೊಂಡು ಪೀಡಿಸುವ ಕಾಲವಾಗಿರುತ್ತದೆ. ಆದುದರಿಂದ ಅವತಾರಕ್ಕೆ ಬೇಕಾದ ಸಂದರ್ಭವು ಒದಗುತ್ತಲಿದೆ ಎಂಬುದರಲ್ಲಿ ಸಂದೇಹವಿಲ್ಲವು. ॥೭॥

ಭಾಷ್ಯಾರ್ಥವು:—ಅಸ್ಮತ್ಸಂಭವಸ್ಯ - ನಮ್ಮ ಅವತಾರಕ್ಕೆ, ನ ಕಾಲ ನಿಯಮಃ - ಒಂದು ಗೊತ್ತಾದ ಕಾಲವೆಂಬ ನಿಯಮವಿಲ್ಲವು, ಈ ವಾಕ್ಯದಿಂದ ಶ್ಲೋಕದ ಮುಖ್ಯಾರ್ಥವು ಹೇಳಲ್ಪಟ್ಟಿತು. ಜೀವನಿಗೆ ಜನ್ಮಕಾಲವು ನಿರ್ಬಂಧದಿಂದುಂಟಾಗುವ ಹಾಗೆ ಪುಣ್ಯಪಾಪ ಪರಿಪಾಕಕಾಲ

**ಭಾ.** ನ ಕಾಲ ನಿಯಮೋಽಸ್ಮತ್ಸಂಭವಸ್ಯ ; ಯದಾಯದಾಹಿ ಧರ್ಮಸ್ಯ – ವೇದೋ ದಿತಸ್ಯ ಚಾತುರ್ವರ್ಣ್ಯ ಚಾತುರಾಶ್ರಮ್ಯ ವ್ಯವಸ್ಥಯಾ ವಸ್ಥಿತಸ್ಯ ಕರ್ತವ್ಯಸ್ಯ, ಗ್ಲಾನಿರ್ಭವತಿ ಯದಾಚ ತದ್ವಿಪರ್ಯಯಸ್ಯಾಽಧರ್ಮಸ್ಯಾಽಭ್ಯುತ್ಥಾನಮಹ ಮೇವ ಸ್ವಸಙ್ಕಲ್ಪೇ ನೋಕ್ತ ಪ್ರಕಾರೇಣಾತ್ಮಾನಂ ಸೃಜಾಮಿ ||೭||

ನಿಯಮುಗಳಹಾಗೂ ಅಲ್ಲವು. ಒಂದೊಂದು ಗೊತ್ತಾದಕಾಲಗಳಲ್ಲಿ ನಿಯಮೇನ ಸ್ವಸಙ್ಕಲ್ಪದಿಂದಲೇ ಅವತರಿಸುತ್ತೇನೆಂಬ ಹಾಗೂ ಅಲ್ಲವು ; ಮನ್ವಂತರಾದಿಗಳ ಮಹಾಕಲ್ಪಕಾಲದಲ್ಲಿ ಎಂಬ ನಿಯಮವೂ ಇಲ್ಲನು; ಈ ವಿಷಯದಲ್ಲಿ ನಾನು ಏನೊಂದು ನಿಯಮವನ್ನೂ ಏರ್ಪಡಿಸಿಲ್ಲವೆಂಬ ಭಾವವು. ಹಾಗಾದರೆ ಯಾವಾಗ ಯಾವಾಗ ಅವತಾರವೆಂದರೆ ಹೇಳುತ್ತಾರೆ:— **ಯದಾ ಯದಾ ಹಿ** – ಯಾವಾಗ ಯಾವಾಗಲಾದರೆ, **ಧರ್ಮಸ್ಯ** - ಎಂದರೆ **ವೇದೋದಿತಸ್ಯ ಚಾತುರ್ವರ್ಣ್ಯ ಚಾತುರಾಶ್ರಮ್ಯ ವ್ಯವಸ್ಥಯಾ ಅವಸ್ಥಿತಸ್ಯ ಕರ್ತವ್ಯಸ್ಯ**-ವೇದದಲ್ಲಿ ಹೇಳಿರುವ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಾದ ನಾಲ್ಕುವರ್ಣಗಳೇನು, ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥ ಸನ್ನ್ಯಾಸಗಳೆಂಬ ನಾಲ್ಕು ಆಶ್ರಮಗಳೇನು, ಇವುಗಳಿಗೆ ಸಂಬಂಧಿಸಿದ ಕರ್ಮಗಳ ವ್ಯವಸ್ಥೆಯಮೂಲಕ ಈ ಈ ವರ್ಣಾಶ್ರಮಗಳಿಗೆ ಇವಿವು ಕರ್ತವ್ಯ ಕರ್ಮಗಳೆಂದಿರುವದಕ್ಕೆ, **ಗ್ಲಾನಿರ್ಭವತಿ** - ಕೊರತೆಯುಂಟಾಗುತ್ತದೋ, **ಯದಾ ಯದಾ ಚ** - ಮತ್ತು ಯಾವಾಗ ಯಾವಾಗ, **ಅಧರ್ಮಸ್ಯ** - ಎಂದರೆ **ತದ್ವಿಪರ್ಯಯಸ್ಯ**-ಹಿಂದೆ ಹೇಳಿದುವದಕ್ಕೆ ವ್ಯತ್ಯಸ್ತವಾದುದಕ್ಕೆ, **ಅಭ್ಯುತ್ಥಾನಂ** - ಅಭಿವೃದ್ಧಿಯುಂಟಾಗುತ್ತದೋ, **ತದಾ** - ಆವಾಗ ಆವಾಗೆಲ್ಲಾ, **ಅಹಮೇವ** - ನಾನೇ ಇನ್ನಾರೂ ಹಾಗೆ ಸಾಧು ಪರಿತ್ರಾಣಕ್ಕೂ, ಅಧರ್ಮ ನಿಧನಕ್ಕೂ, ಧರ್ಮ ಸ್ಥಾಪನೆಗೂ, ಶಕ್ತರಲ್ಲವಾದುದರಿಂದ ನಾನೇ, **ಸ್ವಸಙ್ಕಲ್ಪೇನ** - ನನ್ನ ಸಙ್ಕಲ್ಪವನ್ನೇ ನಿಮಿತ್ತಕಾರಣವನ್ನು ಮಾಡಿಕೊಂಡು. ಇನ್ನು ಯಾವುದನ್ನೂ ಅಪೇಕ್ಷಿಸದೆ ಎಂಬ ಭಾವವು, **ಉಕ್ತಪ್ರಕಾರೇಣ** - ಹಿಂದೆ ಹೇಳಿದ ಪ್ರಕಾರದಲ್ಲಿ, **ಆತ್ಮಾನಂ ಸೃಜಾಮಿ** - ದಿವ್ಯಮಙ್ಗಳ ವಿಗ್ರಹದೊಡನೆ ನಾನೇ ಅವತರಿಸುವೆನು. ಇಲ್ಲಿ ಧರ್ಮ ಶಬ್ದದಿಂದ ನಾಲ್ಕು ವರ್ಣದವರಿಗೂ ನಾಲ್ಕು ಆಶ್ರಮದವರಿಗೂ ಯಾವುದು ಕರ್ತವ್ಯವೆಂದು ಶಾಸ್ತ್ರದಲ್ಲಿ ಹೇಳಿದೆಯೋ ಅದು ಹೇಳಲ್ಪಟ್ಟಿತು. ಶಾಸ್ತ್ರದಲ್ಲಿನ ಚೋದನವು ಎಂದರೆ ಪ್ರೇರಣೆಯು, ಹೀಗೆ ಮಾಡತಕ್ಕದ್ದು, ಹೀಗೆ ಮಾಡಕೂಡದು ಎಂದು ಯಾವುದು ಹೇಳಲ್ಪಟ್ಟಿದೆಯೋ ಅದೇ ಧರ್ಮವು. ತದ್ವ್ಯತಿರಿಕ್ತವಾಗಿ ಅಕೃತ್ಯಕರಣ ಕೃತ್ಯಾಕರಣವು ಅಧರ್ಮವು, ಆದುದರಿಂದಲೇ ಧರ್ಮಸ್ಯ ಎಂಬುದಕ್ಕೆ ವೇದೋದಿತಸ್ಯ ಕರ್ತವ್ಯಸ್ಯ ಎಂಬ ವ್ಯಾಖ್ಯಾನವು; ಹಾಗೆಯೇ ಅಧರ್ಮಸ್ಯ ಎಂಬುದಕ್ಕೆ ತದ್ವಿಪರ್ಯಯಸ್ಯ ಎಂಬದಾಗಿಯೂ ವ್ಯಾಖ್ಯಾನವು- ಕರ್ತವ್ಯವನ್ನು ತ್ಯಜಿಸುವದೂ, ಅಕರ್ತವ್ಯವೆಂದು ಹೇಳಿದುದನ್ನು ಮಾಡುವದೂ ಸಹ, ಮೇಲಿನ ಧರ್ಮಕ್ಕೆ ವಿರುದ್ಧವಾದುದರಿಂದ ಅಧರ್ಮವೆಂಬ ಭಾವವು. ಕಲಿಯುಗದಲ್ಲಿ ಧರ್ಮವೆಂಬ ಗೋವು ಒಂದು ಕಾಲಿನಲ್ಲಿ ನಿಂತಿರುತ್ತದೆ. ಅದಕ್ಕೂ ತೊಂದರೆಯಾದರೆ ಧರ್ಮವು ನಿಲ್ಲಲೇರಾದು. ಗ್ಲಾನಿಶಬ್ದವನ್ನು ಮೂಲದಲ್ಲಿ ಪ್ರಯೋಗಿಸಿರುವ ತಾತ್ಪರ್ಯವೇನೆಂದರೆ, ಧರ್ಮಕ್ಕೆ ತುಂಬಾ ಕೊರತೆಯುಂಟಾದರೇನೆ ಸಹಿಸುವದಿಲ್ಲವು,ಸ್ವಲ್ಪವೂ ನಡೆಯದೆ ಸಂಪೂರ್ಣ ಹಾನಿಯುಂಟಾದರೆ ಹೇಳತಕ್ಕದ್ದೇನು ಎಂಬ ಭಾವವು. ಆಗ ಒಡನೆಯೇ ಅವತರಿಸುವೆನೆಂಬ ಭಾವವು. ಇದೂ ಅಲ್ಲದೆ, ಅಧರ್ಮ ಮೊಳಕೆಯನ್ನೇ ನಾನು ಸಹಿಸಲಾರೆನು, ಅದು ಬೆಳೆದು ಸಸಿಯಾದರೆ ಇನ್ನೂ ಸಹಿಸೆನು ; ಶಾಖೋಪಶಾಖೆಗಳಾಗಿ ಬೆಳೆದು ದೊಡ್ಡ ವೃಕ್ಷವಾದರೆ ತಡೆಯುವೆನೇ!ಅದನ್ನೆಲ್ಲಾ ನಿರ್ಮೂಲವಾಡಲು ಒಡನೆಯೇ ಅವತಾರವನ್ನು ಎತ್ತುವೆನೆಂಬ ಭಾವವು ಸೂಚಿತವು. ಇದನ್ನನುಸರಿಸಿಯೇ,ಈಗ ವರ್ಣಾಶ್ರಮ ಧರ್ಮಗಳಿಗೆ

**ಭಾ. ಅವ. ಜನ್ಮನಃ ಪ್ರಯೋಜನಮಾಹ—**

**ಮೂ. ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ ೮.**

ಗ್ಲಾನಿಯೂ ಹಾನಿಯೂ ಒದಗುತ್ತಾ ಬರುತ್ತಿರುವದರಿಂದಲೇ, ಶ್ರೀ ಪರಾಶರಾದಿ ಜ್ಞಾನಿಗಳು ಮೊದಲುಗೊಂಡು ಎಲ್ಲಾ ವಿದ್ವಾಂಸರೂ ಈ ಕಲಿಯುಗದಲ್ಲಿ ಕಲ್ಕ್ಯವತಾರವು ನಡೆಯುತ್ತದೆಂದು ಹೇಳಿರುತ್ತಾರೆ.. ಕಾಲ ನಿಯಮವೇನೂ ಇಲ್ಲವೆಂಬುದರಿಂದ ಸರ್ವೇಶ್ವರನು ಕಾಲಕ್ಕೂ ನಿಯಾಮಕನೆಂಬುದೂ ತೋರಿರುತ್ತದೆ. ನಾವುಗಳೆಲ್ಲಾ ಕಾಲಕ್ಕೆ ಅಧೀನರು, ಆತನು ಅಲ್ಲವು, ಆತನು ಸ್ವಾಮಿಯು, "ಅಹಂ ಸೃಜಾಮಿ" ಎಂದಿರುವದರಿಂದ ಇತರರು ತನಗೆ ಹೇಳಬೇಕು, ಇತ್ಯಾದಿ ಅನ್ಯಾಪೇಕ್ಷೆಯು ಬೇಕಿಲ್ಲವು; ತಾನೇ ಸ್ವತಂತ್ರಿಸಿ ತನ್ನ ಸಙ್ಕಲ್ಪಮಾತ್ರದಿಂದಲೇ ದಿವ್ಯ ಮಙ್ಗಳ ವಿಗ್ರಹವನ್ನು ಧರಿಸುವೆನೆಂದು ಹೇಳಿದಂತಾಯಿತು. ಕೆಲವರು ಅಹಂ ಸೃಜಾಮಿ ಎಂಬುದಕ್ಕೆ **ಮಾಯಯಾ** ಎಂದು ಸೇರಿಸಿ ಅರ್ಥಮಾಡಿರುತ್ತಾರೆ, ಮೂಲದಲ್ಲಿ ಇಲ್ಲದೇ ಇರುವದನ್ನು ಸೇರಿಸಿ ಹೇಳುವದು ಯುಕ್ತವಲ್ಲವು. ಇಲ್ಲಿ ಅಹಂ ಆತ್ಮಾನಂ ಸೃಜಾಮಿ ಎಂಬಲ್ಲಿ ನಾನು ಆತ್ಮಾನೇ ಸೃಷ್ಟಿಸುತ್ತೇನೆ ಎಂದಾಗುತ್ತದೆ. ಆತ್ಮಾನಂ ಎಂಬ ಪದಕ್ಕೆ ಅರ್ಥವೇನು? ಸ್ವರೂಪವೆಂಬರ್ಥವಲ್ಲವು, ಅದು ನಿತ್ಯವಾದುದರಿಂದ ಸೃಷ್ಟಿಸಲ್ಪಡುವದಿಲ್ಲವು. ಆದುದರಿಂದ ವಿಗ್ರಹ ವಿಶಿಷ್ಟನಾಗಿ ಮಾಡಿಕೊಳ್ಳುವನೆಂಬರ್ಥವು. ಇದು ಮೂಲವಿಗ್ರಹ ವಿಶಿಷ್ಟನಾಗುವೆನೆಂಬರ್ಥವೂ ಅಲ್ಲವು: ಏಕೆಂದರೆ ಮೂಲವಿಗ್ರಹವೂ ನಿತ್ಯವು. ಆದುದರಿಂದ ಇದರ ಕಾರ್ಯಭೂತವಾದ ವಿಗ್ರಹ ವಿಶಿಷ್ಟನಾಗುವೆನೆಂಬ ಭಾವವು. ಇದನ್ನು ತಿಳಿಸುವದಕ್ಕಾಗಿಯೇ ಸ್ವಸಙ್ಕಲ್ಪೇ ನೋಕ್ತ **ಪ್ರಕಾರೇಣ** ಎಂದು ಹೇಳಲ್ಪಟ್ಟಿತು. ||೭||

**ಭಾಷ್ಯಾವತಾರಿಕೆಯ ಅರ್ಥವು** :—ಅರ್ಜುನನ ಪ್ರಶ್ನೆಯಲ್ಲಿ ಗರ್ಭಿತವಾದ ಅವತಾರದ ಪ್ರಯೋಜನವನ್ನು ಉಪದೇಶಿಸುತ್ತಾರೆ.—ಅವತಾರದಿಂದಾಗುವದು ಮೂರು ಪ್ರಯೋಜನಗಳೆಂದು ಹೇಳುತ್ತಾರೆ:—

**ಮೂಲಕ್ಕೆ ಅರ್ಥವು** :—ಮುಖ್ಯವಾದ ಪ್ರಯೋಜನವನ್ನು ಮೊದಲು ಹೇಳುತ್ತಾರೆ:— **ಸಾಧೂನಾಂ**-ಸತ್ಪುರುಷರಾದ ಭಕ್ತರ, ಇವರು ಎಂತವರೆಂಬುದನ್ನು ಭಾಷ್ಯದಲ್ಲಿ ಉಪಪಾದಿಸಿರುತ್ತಾರೆ. **ಪರಿತ್ರಾಣಾಯ**-ಸಂರಕ್ಷಣೆಗೋಸ್ಕರವಾಗಿಯೂ, **ದುಷ್ಕೃತಾಂ**-ಪಾಪಿಗಳ, **ವಿನಾಶಾಯ ಚ**-ನಾಶಕ್ಕಾಗಿಯೂ, ಮತ್ತು **ಧರ್ಮಸಂಸ್ಥಾಪನಾಯಚ**-ಅಧರ್ಮವು ಆಗ ತಲೆ ಎತ್ತಿದುದರಿಂದ ಅದರ ಹಾವಳಿಯನ್ನು ಹೋಗಲಾಡಿಸಿ ಧರ್ಮವನ್ನು ಚನ್ನಾಗಿ ಸ್ಥಾಪಿಸುವದಕ್ಕಾಗಿಯೂ,**ಯುಗೇ ಯುಗೇ** - ಇಂತಹ ಯುಗವೆಂಬ ನಿಯಮವಿಲ್ಲದೆ ಯಾವ ಯುಗದಲ್ಲೇಯಾಗಲಿ, **ಸಂಭವಾಮಿ** - ಅವತರಿಸುವೆನು. ಸಾಧು ಪರಿತ್ರಾಣಕ್ಕಾಗಿಯೇ ಅವತರಿಸುತ್ತೇನೆ. ಅದು ದುಷ್ಕೃತಿಗಳ ಸಂಹಾರವಿಲ್ಲದೆ ನಡೆಯದಾದುದರಿಂದ ಅದನ್ನೂ ಮಾಡಬೇಕಾಗಿರುತ್ತದೆ. ಹಾಗೆ ಅವತರಿಸಿದ ಸುಸಮಯವನ್ನೇ ನೆಪಮಾಡಿಕೊಂಡು ಧರ್ಮಸಂಸ್ಥಾಪನೆಯನ್ನೂ ನಡೆಸುತ್ತೇನೆ ಎಂಬ ಭಾವವು. ಮುಖ್ಯವಾಗಿ ಸಾಧುಪರಿತ್ರಾಣಕ್ಕಾಗಿಯೇ ಅವತಾರವು, ದುಷ್ಕೃತಿಗಳ ನಾಶವನ್ನಾದರೋ ಸಙ್ಕಲ್ಪದಿಂದಲೇ ನಡೆಸಿ ಬಿಡಬಹುದು ; ಧರ್ಮ ಸಂಸ್ಥಾಪನೆಯನ್ನು, ಪರಾಶರ ವ್ಯಾಸ ಶುಕ ಶೌನಕಾದಿಗಳ ಮೂಲಕ ನಡೆಸಿ ಬಿಡಬಹುದು ; ಸಾಧು ಪರಿತ್ರಾಣಕ್ಕೆ ಮಾತ್ರ ತಾನೇ ನಿಲ್ಲುವದು ಯುಕ್ತವು. ಆಗಲಿ ಸಾಧು ಪರಿತ್ರಾಣವನ್ನೂ ಸಙ್ಕಲ್ಪಮೂಲಕವೇ ನಡೆಸಿ ಬಿಡಬಹುದಲ್ಲಾ ಎಂದರೆ ಇಷ್ಟು

ಭಾ. ಸಾಧವಃ-ಉಕ್ತಲಕ್ಷಣ ಧರ್ಮಶೀಲ ವೈಷ್ಣವಾಗ್ರೇಸರಾ ಮತ್ಸಮಾಶ್ರಯಣೇ

ಮಾತ್ರದಿಂದಲೇ ಸಾಧುಗಳು ತೃಪ್ತರಾಗುವದಿಲ್ಲವು. ತನ್ನ ದರ್ಶನ ಆಲಿಂಗನ ತನ್ನೊಂದಿಗೆ ಸರಸ ಸಲ್ಲಾಪ, ತನ್ನ ದಿವ್ಯಚೇಷ್ಟಿತಗಳ ಅವಲೋಕನ, ತನಗೆ ಕೈಂಕರ್ಯ, ತನ್ನ ಅನುಭವ, ಇವುಗಳಿಂದಲೇ ತೃಪ್ತರಾಗುವವರಿಂದ ತಾನು ಅವಕ್ಕಾಗಿ ಅವತಾರ ಮಾಡಲೇಬೇಕೆಂಬ ನಿರ್ಬಂಧವೆಂಬ ಭಾವವು. "ತಂ ದೃಷ್ಟ್ವಾ ಶತ್ರುಹಂತಾರಂ ಮಹರ್ಷೀಣಾಂ ಸುಖಾವಹಂ" ಎಂಬ ಶ್ಲೋಕ ವ್ಯಾಖ್ಯಾನದಲ್ಲಿ, ಶ್ರೀರಾಮನು ಶತ್ರುಹಂತಾ, ಏತಕ್ಕೆಂದರೆ ಮಹರ್ಷೀಣಾಂ ಸುಖಾವಹಕ್ಕಾಗಿ, ಮಹರ್ಷಿಗಳಿಗೆ ಶತ್ರುಗಳಾದುದರಿಂದ ತನಗೂ ಶತ್ರುರು ; ಅವರನ್ನು ಕೊಲ್ಲದ ಹೊರ್ತು ಅವರಿಗೆ ಸುಖವಾಗುವದಿಲ್ಲವು; ಅವರಿಗೆ ಸುಖವು ಶತ್ರುಪಕ್ಷಹನನಮಾತ್ರದಿಂದಲೇ ಅಲ್ಲವು. ದೃಷ್ಟ ಏವ ಹಿ ನಶ್ಶೋಕಂ ವ್ಯಪನೇಷ್ಯತಿ ರಾಘವಃ" ಎಂದು ಹೇಳಿರುವ ಹಾಗೆ ಸಂದರ್ಶನವನ್ನು ಕೊಟ್ಟು, ಅವರು ಮಾಡಿದ ಶರಣಾಗತಿಯನ್ನಂಗೀಕರಿಸಿ, ಸಂಸಾರ ಬಂಧರೂಪ ಶೋಕವನ್ನು ಹೋಗಲಾಡಿಸಿದರೇನೇ ಆತನು ಮಹರ್ಷೀಣಾಂ ಸುಖಾವಹನಾಗುತ್ತಾನೆ. ಆದಕ್ಕಾಗಿ ಅವತಾರವನ್ನು ಮಾಡಲೇಬೇಕು ಎಂಬುದು ಮುಖ್ಯ ತಾತ್ಪರ್ಯವು. ಅರಣ್ಯದಲ್ಲಿ ವಸಿಸುವ ಋಷಿಗಳಿಗೆ ಸಂದರ್ಶನವನ್ನು ಕೊಡುವದಕ್ಕಾಗಿಯೇ, ಮಂಥರೆಯ ಮೂಲಕ ತನ್ನ ಯೌವರಾಜ್ಯಾಭಿಷೇಕಕ್ಕೆ ಬೇಕೆಂದು ವಿಘ್ನಮಾಡಿಕೊಂಡು "ರಾಜ್ಯೋವಾ ವನ ವಾಸೋವಾ ವನವಾಸೋ ಮಹೋದಯಃ" ಎಂದು ಹೇಳಿ ವನವಾಸವನ್ನು ಕೈಕೊಂಡ ಕೃಪಾಸಾಗರನು.

**ಭಾಷ್ಯಾರ್ಥವು:—ಸಾಧವಃ** ಎಂದರೆ **ಉಕ್ತಲಕ್ಷಣ ಧರ್ಮಶೀಲಾಃ** - ಹಿಂದೆ ವೇದೋದಿತವೆಂದು ಹೇಳಲ್ಪಟ್ಟ ಧರ್ಮದಲ್ಲಿ ಆಸಕ್ತಿಯುಳ್ಳವರು; ಆ ಸಾಧುಗಳು ಎಂತಹರೆಂದರೆ ತಿಳಿಸುತ್ತಾರೆ:—**ವೈಷ್ಣವಾಗ್ರೇಸರಾಃ** - ವಿಷ್ಣುಭಕ್ತರಲ್ಲಿ ಶ್ರೇಷ್ಠರಾಗಿರುವವರು, ಅನ್ಯದೇವತಾಭಕ್ತಿಯು ಇದರಿಂದ ವ್ಯವಚ್ಛೇದ ಮಾಡಲ್ಪಟ್ಟಿತು, ಮುಮುಕ್ಷುವಿಗೆ ಅನ್ಯದೇವತಾ ಭಜನವು ಕೂಡದಾದುದರಿಂದ **ವೈಷ್ಣವಾಗ್ರೇಸರಾಃ** ಎಂದು ಹೇಳಲ್ಪಟ್ಟಿತು; ಪರತತ್ತ್ವವು ಹರಿಃ, ವಿಷ್ಣುಃ, ಕೇಶವ ಇತ್ಯಾದಿ ಶಬ್ದಗಳಿಂದ ಹೇಳಲ್ಪಡುವ ಶ್ರೀಮನ್ನಾರಾಯಣನು ಎಂಬುದು ಸರ್ವಶಾಸ್ತ್ರಗಳಿಂದಲೂ ಸುಪ್ರಸಿದ್ಧವು. ವಿಶಿಷ್ಟಾದ್ವೈತ ಸಿದ್ಧಾಂತರೀತ್ಯಾ "**ಶ್ರೀಮಾನ್ ನಾರಾಯಣೋ ನಃ ಪತಿ ರಖಿಲತನು ರ್ಮುಕ್ತಿದೋ ಮುಕ್ತಭೋಗ್ಯಃ**" ಎಂದು ಹೇಳಿರುವಹಾಗೆ ಲಕ್ಷ್ಮೀಪತಿಯಾದ ನಾರಾಯಣನೇ ಪರತತ್ತ್ವವು. ಚತುರ್ಮುಖ ರುದ್ರರೂ ಆವನ ವಿಭೂತಿಗೆ ಸೇರಿದವರಾಗಿ ವೃಷ್ಟಿ ಸೃಷ್ಟಿ ಲಯಗಳಿಗೆ ಅಧಿಕಾರಿಗಳಾಗಿ ನಿಯಮಿಸಲ್ಪಟ್ಟವರು. ಪಾಲನ ಕಾರ್ಯವನ್ನು ಮಾತ್ರ ಶ್ರೀಮನ್ನಾರಾಯಣನೇ ತಾನೇ, "**ನ ಹಿ ಪಾಲನ ಸಾಮರ್ಥ್ಯಂ ಋತೇ ಸರ್ವೇಶ್ವರಂ ಹರಿಂ**" ಎಂದು ವಿಷ್ಣು ಪುರಾಣದಲ್ಲಿ ಹೇಳಿರುವಹಾಗೆ, ಇಟ್ಟುಕೊಂಡಿರುತ್ತಾನೆ. ನಾರಾಯಣಾನುವಾಕದಲ್ಲಿ ಹೇಳಿರುವ "**ನಾರಾಯಣಾದ್ಬ್ರಹ್ಮಾ ಜಾಯತೇ, ನಾರಾಯಣಾದ್ರುದ್ರೋ ಜಾಯತೇ**" ಎಂಬುದು ಪ್ರಮಾಣವು. "**ವೇದೇಷು ಪೌರುಷಂ ಸೂಕ್ತಂ**" ಎಂದೂ "**ಶ್ರುತಿಷು ಪ್ರಬಲಾ ಮನ್ತ್ರಾಸ್ತೇಷ್ವಪ್ಯಥ್ಯಾತ್ಮವಾದಿನಃ। ತತ್ರಾಪಿ ಪೌರುಷಂ ಸೂಕ್ತಂ ನ ತಸ್ಮಾದ್ವಿದ್ಯತೇ ಪರಂ**" ಎಂದೂ ಮೋಕ್ಷಧರ್ಮದಲ್ಲಿ ಹೇಳಿರುವದರಿಂದ ಪುರುಷಸೂಕ್ತವು ಪರಮ ಗ್ರಾಹ್ಯವು. ಅಲ್ಲಿ ಹೇಳುವದೇನೆಂದರೆ—"ಓಂ ಸಹಸ್ರಶೀರ್ಷಂ ದೇವಂ" ಎಂದಾರಂಭಿಸಿ ಹೇಳಿರುವದರಲ್ಲಿ, ಶ್ರುತಿಗಳಲ್ಲಿ ಹೇಳಲ್ಪಟ್ಟಿರುವ ಶಿವ, ಶಂಭು, ಪರಮಾತ್ಮಾ, ಪರಂಜ್ಯೋತಿಸ್ಸೇ ಮೊದಲಾದ ಶಬ್ದಗಳೆಲ್ಲಾ ಶ್ರೀಮನ್ನಾರಾಯಣನನ್ನೇ ಬೋಧಿಸುತ್ತವೆಂಬುದೂ "ಹ್ರೀಶ್ಚ ತೇ-ಲಕ್ಷ್ಮೀಶ್ಚ ಪತ್ನ್ಯೌ" ಎಂಬುದರಿಂದ ಲಕ್ಷ್ಮೀ ಪತಿತ್ವವೇ ಆತನಿಗೆ ಸ್ವರೂಪ ನಿರೂಪಕ ಧರ್ಮವೆಂದೂ, ಇದರಿಂದ ಅನ್ಯ ದೇವತೆ

ಯನ್ನೆಲ್ಲಾ ವ್ಯಾವರ್ತಿಸಿ ಹೇಳಿ, "ಯಚ್ಚ ಕಿಞ್ಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿವಾ। ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ" ಎಂದು ಹೇಳಿ, ಆತನು "ಅಖಿಲತನು"ವಾದುದರಿಂದ, ಸ ಬ್ರಹ್ಮಾ ಸಶಿವಃ ಎಂಬ ಸಾಮಾನಾಧಿಕರಣ್ಯದಿಂದ ಬ್ರಹ್ಮಾತ್ಮಕನೂ ಶಿವಾತ್ಮಕನೂ ಆತನೇ ಎಂದು ಹೇಳಿ, ನಿಗಮನಮಾಡಲ್ಪಟ್ಟಿರುತ್ತದೆ. ವಿಷ್ಣುಸಹಸ್ರನಾಮದಲ್ಲೂ ಈ ಶಿವ ಶಂಭು ಹಿರಣ್ಯಗರ್ಭ ಪದಗಳೂ ವಿಷ್ಣುವಿಗೂ ಅನ್ವಯಿಸಲ್ಪಟ್ಟಿವೆ. ಆಗ ವ್ಯುತ್ಪತ್ತಿಮೂಲಕ ಅರ್ಥವು; ಶಿವಃ ಎಂದರೆ ಮಙ್ಗಳಕರನು, ಶಂಭು ವೆಂದರೆ ಸುಖವನ್ನುಂಟುಮಾಡುವವನು; ಹಿರಣ್ಯಗರ್ಭ ಶಬ್ದದಲ್ಲಿ ಹಿರಣ್ಯವೆಂದರೆ ಶುದ್ಧ ಸತ್ವಮಯವಾದುದರಿಂದ ಸುವರ್ಣಕಾಂತಿಯಿಂದ ಕಂಗೊಳಿಸುವ ಪರಮ ಪದವು, ಅಲ್ಲಿ ಗರ್ಭನು ಎಂದರೆ ನಿತ್ಯವಾಸವನ್ನು ಮಾಡುವವನು. ಇದಕ್ಕೆ ಪ್ರಮಾಣವು "ದೇವಾನಾಂ ಪೂರಯೋಧ್ಯಾ, ತಸ್ಯಾಂ ಹಿರಣ್ಮಯಃ ಕೋಶಃ" (ಆರ. ೧. ಪ್ರ. ೨೭.) ಅಥವಾ "ಯಥಾ ಹಿರಣ್ಯನಿಧಿಂ" ಎಂಬ ಶ್ರುತಿವಾಕ್ಯದಲ್ಲಿ ಹಿರಣ್ಯನಿಧಿಗೆ ಹೋಲಿಸಲ್ಪಟ್ಟಿರುವದರಿಂದಲೂ ಹಿರಣ್ಯಗರ್ಭನು. ಶ್ರೀ ವ್ಯಾಸ ಮಹರ್ಷಿಯ ಸಿದ್ಧಾನ್ತವೂ ವಿಶಿಷ್ಟಾದ್ವೈತವೇ; ಅವರೂ ಬ್ರಹ್ಮರುದ್ರಾದಿಗಳಿಗೆ ಮೋಕ್ಷಪ್ರದತ್ವವಿಲ್ಲವೆಂದು "ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾದೇವತಾಸ್ಸ್ಮೃತಾಃ। ಪ್ರತಿಬುದ್ಧಾ ನ ಸೇವಂತೇ ಯಸ್ಮಾತ್ಪರಿಮಿತಂ ಫಲಂ" ಎಂಬಲ್ಲಿ ಹೇಳಿರುತ್ತಾರೆ. ಪರಮಾತ್ಮನಿಂದ ಅವರು ಸತ್ತೆಯನ್ನು ಹೊಂದಿದವರೆಂದೂ "ಏತೌದ್ವೌ ವಿಬುಧಶ್ರೇಷ್ಠೌ ಪ್ರಸಾದಕ್ರೋಧಜೌಸ್ಮೃತೌ। ತದಾದರ್ಶಿತಪನ್ಥಾನೌ ಸೃಷ್ಟಿಸಂಹಾರ ಕಾರಕೌ" ಎಂಬಲ್ಲಿ ವಿಬುಧರೆಂದು ಹೇಳಿರುವದರಿಂದ ಜೀವಕೋಟಿಗೆ ಸೇರಿದ ದೇವತೆಗಳಿಗೆ ಯಜಮಾನರೆಂದು ಹೇಳಿದಂತಾಯಿತು. ಮತ್ತು ಮೋಕ್ಷಧರ್ಮದಲ್ಲಿ "ಕುತಸ್ಸೃಷ್ಟಮಿದಂ ಸ್ವರ್ವಂ ಜಗತ್" ಎಂಬ ಯುಧಿಷ್ಠಿರ ಪ್ರಶ್ನೆಗೆ, ನಾರಾಯಣೋ ಜಗನ್ಮೂರ್ತಿ ರನ್ತರಾತ್ಮಾ ಸನಾತನಃ ಎಂಬ ಉತ್ತರವಿರುತ್ತದೆ. ಶ್ರೀ ವ್ಯಾಸ ಮಹರ್ಷಿಯು ಸಭೆಯಲ್ಲಿ ಕೈ ಎತ್ತಿ ಹೇಳಿದುದೇನೆಂದರೆ:—"ಆಲೋಡ್ಯಸರ್ವ ಶಾಸ್ತ್ರಾಣಿ ವಿಚಾರ್ಯ ಚ ಪುನಃಪುನಃ। ಇದಮೇಕಂ ಸುನಿಷ್ಪನ್ನಂ ಧ್ಯೇಯೋನಾರಾಯಣಸ್ಸದಾ । ಸತ್ಯಂ ಸತ್ಯಂ ಪುನಸ್ಸತ್ಯ ಮುದ್ಧೃತ್ಯ ಭುಜಮುಚ್ಯತೇ। ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಂ" ನಾರಾಯಣನೇ ಧ್ಯೇಯವಸ್ತುವು; ಬ್ರಹ್ಮರುದ್ರರಿಗೂ ನಿಯಾಮಕನಾಗಿ ಆ ಕಾರಣದಿಂದ, ಕೇಶವನೆಂದು ಹೇಳಿಸಿಕೊಳ್ಳುವ ಆ ನಾರಾಯಣನೇ ಪರತತ್ವವು ಎಂದು ಮಹರ್ಷಿಯು ಸ್ಥಾಪಿಸಿರುತ್ತಾರೆ. ಹಾಗೆಯೇ ಮನುವೂ,ಪರಾಶರರೂ, ವಾಲ್ಮೀಕಿ ಮಹರ್ಷಿಯೂ ಎಲ್ಲರೂ ವಿಷ್ಣುವೇ ಪರತತ್ವವೆಂದು ಸ್ಥಾಪಿಸಿರುತ್ತಾರೆ. ಈ ಮುಂದಿನ ಕೆಲವು ಪ್ರಮಾಣಗಳನ್ನು ಅವರುಗಳ ಗ್ರಂಥಗಳಲ್ಲಿ ಕಾಣಬಹುದು:—

(೧) "ಚಿನ್ತಯನ್ತೋ ಹಿ ಯಂ ನಿತ್ಯಂ ಬ್ರಹ್ಮೇಶಾನಾದಯಃ ಪ್ರಭುಮ್। ನಿಶ್ಚಯಂ ನಾಧಿಗಚ್ಛಂತಿ ತಮಸ್ಮಿ ಶರಣಂಗತಃ" ಉತ್ತರ ರಾಮಾಯಣ. (೧೦೪, ೭, ೮) (೨) "ಅಧಿಕಂ ಮೇ ನಿರೇ ವಿಷ್ಣುಂ"(ರಾ. ಬಾ. ೭೫-೧೯) (೩) "ಬ್ರಹ್ಮಾ ಸ್ವಯಂಭೂ ಶ್ಚತುರಾನನೋವಾ ರುದ್ರಸ್ತ್ರಿನೇತ್ರ ಸ್ತ್ರಿಪುರಾಂತಕೋ ವಾ। ಇಂದ್ರೋ ಮಹೇಂದ್ರಸ್ಸುರನಾಯಕೋವಾ ತ್ರಾತುಂ ನಶಕ್ತಾ ಯುಧಿರಾಮವಧ್ಯಮ್ (ರಾ.ಸುಂ.೫೧-೪೫) (೪) ತವಾನ್ತರಾತ್ಮಾ ಮಮಚ ಯೇ ಚಾನ್ಯೇ ದೇಹಿ ಸಂಜ್ಞಿತಾಃ। ಸರ್ವೇಷಾಂ ಸಾಕ್ಷಿಭೂತೋಽಸೌ ನಗ್ರಾಹ್ಯಃ ಕೇನ ಚಿತ್ಕ್ವಚಿತ್ (ಭಾರ. ಶಾನ್ತಿ. ೩೬೧. ೪.) ಇದು ರುದ್ರನನ್ನು ಕುರಿತ ಚತುರ್ಮುಖನಮಾತು. (೫) "ರುದ್ರಂ ಸಮಾಶ್ರಿತಾದೇವಾಃ, ರುದ್ರೋ ಬ್ರಹ್ಮಾಣಮಾಶ್ರಿತಃ। ಬ್ರಹ್ಮಾ ಮಾಮಾಶ್ರಿತೋ ರಾಜನ್ನಾಹಂ ಕಂಚಿದುಪಾಶ್ರಿತಃ। ಮಮಾಶ್ರಯೋ ನ ಕಶ್ಚಿತ್ತು ಸರ್ವೇಷಾಮಾಶ್ರಯೋಹ್ಯಹಮ್॥ (ಭಾರ. ಶಾನ್ತಿ. ೧೧೮. ೩೬. ೮.) (೬) "ಕಟೌ ಜಗತ್ಪತಿಂ ವಿಷ್ಣುಂ ಸರ್ವಪ್ರಭ್ವಾರವಿಶ್ವರಂ।

ನಾರ್ಚಯಿಷ್ಯನ್ತಿ ಮೈತ್ರೇಯ ಪಾಷಂಡೋಪಹತಾ ಜನಾಃ" (ವಿ. ಪು. ೬. ೧. ೫೦) (೭) "ತಂ ತ್ವಾ ಜಗತ್ ಸ್ಥಿತ್ಯುದಯಾನ್ತಹೇತುಂ ಸಮಂ ಪ್ರಶಾಂತಂ ಸುಹೃದಾತ್ಮನಾಯಕಮ್। ಅನನ್ಯಮೇಕಂ ಜಗದಾತ್ಮಕೇತುಂ ಭವಾಪವರ್ಗಾಯ ಭಜಾಮ ದೇವಮ್"(ಭಾಗ.೧೦.೬೪.೪೫) ರುದ್ರಭಗವಾನನು ಕೃಷ್ಣಪರಮಾತ್ಮನನ್ನು ಬಾಣಾಸುರ ಯುದ್ಧದಲ್ಲಿ ಸ್ತುತಿಸುವ ಪ್ರಕರಣವು. (೮) "ಆಪೋನಾರಾ ಇತಿ ಪ್ರೋಕ್ತಾ ಆಪೋವೈ ನರಸೂನವಃ। ತಾಯದಸ್ಯಾಯನಂ ಪುಂಸ ಸ್ತೇನ ನಾರಾಯಣಸ್ಸ್ಮೃತಃ"(ಮನು) (೯) "ವಿಷ್ಣೋಃ ಸ್ಸಕಾಶಾದು ದ್ಭೂತಂ ಜಗತ್ತತ್ರೈವಚ ಸ್ಥಿತಮ್। ಸ್ಥಿತಿ ಸಂಯಮಕರ್ತಾಸೌ ಜಗತೋಽಸ್ಯಜಗಚ್ಚ ಸಃ"॥(ವಿ. ಪು. ೧. ೧. ೩೨.) (೧೦) "ಪರಮಾತ್ಮಾ ಚ ಸರ್ವೇಷಾ ಮಾಧಾರಃ ಪರಮೇಶ್ವರಃ। ವಿಷ್ಣುನಾಮಾ ಸವೇದೇಷು ವೇದಾನ್ತೇಷು ಚ ಗೀಯತೇ" (ವಿ. ಪು. ೬. ೪. ೩೯.) ಇಂತಹ ಅನೇಕ ಪ್ರಮಾಣಗಳನ್ನೆಲ್ಲಾ ಮನಸ್ಸಿನಲ್ಲಿಟ್ಟು ಮೂಲದ ಸಾಧವಃ ಎಂಬುದರ ವ್ಯಾಖ್ಯಾನದಲ್ಲಿ ವೈಷ್ಣವಾಗ್ರೇಸರಾಃ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಪರತತ್ವವಾದ ವಿಷ್ಣುವನ್ನು ಅವ್ಯಭಿಚರಿತ ಭಕ್ತಿಯಿಂದ ಉಪಾಸಿಸುವರು ವೈಷ್ಣವಾಗ್ರೇಸರರು ; ಇವರು ವಿಷ್ಣುಭಕ್ತರಲ್ಲಿ ಅಗ್ರೇಸರರು ಹೇಗೆ ಎಂದರೆ, ಯಥಾವಸ್ಥಿತವಾದ ಉಪಾಯವನ್ನು, ಹೇಗೆ ಹೇಳಿದೆಯೋ ಹಾಗೆ ಸಪರಿಕರವಾಗಿ, ಅನುಷ್ಠಿಸಿ ಪ್ರಾಪ್ಯವನ್ನು ಹೊಂದಬೇಕೆಂಬ ಸ್ಥಿರಮನಸ್ಕರಾಗಿರುವದರಿಂದ ಅಗ್ರೇಸರರು. ವೈಷ್ಣವಾಗ್ರೇಸರರು ಯಾರೆಂದರೆ ಶ್ರೀ ಪರಾಶರರು ಹೇಳಿರುತ್ತಾರೆ:—

ನ ಚಲತಿ ನಿಜವರ್ಣಧರ್ಮತೋ ಯಸ್ಸಮಮತಿ ರಾತ್ಮಸುಹೃದ್ವಿಪಕ್ಷಪಕ್ಷೇ।
ನ ಹರತಿ ನ ಚ ಹನ್ತಿ ಕಿಂಚಿದುಚ್ಚೈಸ್ಸಿತಮನಸಂ ತಮವೇಹಿ ವಿಷ್ಣುಭಕ್ತಮ್ ॥

(ವಿ. ಪು. ೩. ೭. ೨೦.) ಉಚ್ಚೈಃ - ಅತಿಶಯದಿಂದ, ಸಿತಮನಸಂ - ರಾಗಾದಿಗಳಿಂದ ಕಲುಷಿತವಾಗದೆ ಪರಿಶುದ್ಧವಾಗಿ ಸ್ವಚ್ಛವಾದ ಮನಸ್ಸುಳ್ಳವನನ್ನು ವಿಷ್ಣುಭಕ್ತನೆಂದು ತಿಳಿ. ಮನಸ್ಸಿನ ಪಾರಿಶುಧ್ಯವನ್ನು ತಿಳಿಯುವದು ಕಷ್ಟವಲ್ಲವೇ? ತಿಳಿಯುವ ಬಗೆ ಹೇಗೆ ಎಂದರೆ ಹೇಳುತ್ತಾರೆ, ತನ್ನ ಸ್ವಂತ ವರ್ಣದ ಧರ್ಮಗಳಿಂದ ಸ್ವಲ್ಪವಾಗಲಿ ಕದಲುವದಿಲ್ಲವು, ಮತ್ತು ತನಗೆ ಮಿತ್ರ ಶತ್ರುಗಳೆರಡು ಪಕ್ಷವಲ್ಲೂ ಸತ್ವೋದ್ರೇಕದಿಂದ ಸಮಭಾವವುಳ್ಳವನು. ಇತರ ಸ್ವತ್ತುಗಳನ್ನಪಹರಿಸದವನು, ಮತ್ತು ಯಾರನ್ನಾಗಲಿ ಕೊಲ್ಲದೆ, ಹಿಂಸಿಸದೇ ಇರುವವನು. ಇಂತವನೀಗ ವಿಷ್ಣುಭಕ್ತನು. ವಿಷ್ಣುವು ಹೇಗೆ ಆರಾಧಿಸಲ್ಪಡುವನು ಎಂಬುದು ವಿ. ಪು. ೩ನೆಯ ಅಂಶ ೮ನೆಯ ಅಧ್ಯಾಯದಲ್ಲಿ ವಿಸ್ತರವಾಗಿ ಹೇಳಲ್ಪಟ್ಟಿರುತ್ತದೆ. ಅಲ್ಲಿ ಮುಖ್ಯವಾಗಿ

ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್।
ವಿಷ್ಣುರಾರಾಧ್ಯತೇ ಪನ್ಥಾ ನಾನ್ಯ ಸ್ತತ್ತೋಷಕಾರಕಃ ॥

ಪ್ರಥಮತಃ ವರ್ಣಾಶ್ರಮಾಚಾರದಿಂದ ಶ್ರೀ ಮಹಾವಿಷ್ಣುವು ಆರಾಧಿಸಲ್ಪಡುವನು, ಇದಲ್ಲದೆ ಇನ್ನು ಯಾವುದೂ ಆತನಿಗೆ ಸಂತೋಷವನ್ನುಂಟುಮಾಡತಕ್ಕದ್ದಿಲ್ಲವು ಎಂದು ಹೇಳಲ್ಪಟ್ಟಿರುತ್ತದೆ. ಆತನಿಗೆ ಸಂತೋಷವನ್ನುಂಟುಮಾಡತಕ್ಕದ್ದಾದರೋ ಯಥಾವತ್ತಾದ ಉಪಾಯಾನುಷ್ಠಾನವೂ, ತನ್ಮೂಲಕ ಪರಮಾತ್ಮಪ್ರಾಪ್ತಿಯೂ ಇವು ಮಾತ್ರವೇ. ವಿಷ್ಣ್ವವತಾರಿಯಾದ ತನ್ನನ್ನು ಅಸಾಧುಗಳಾದ ದುಷ್ಕೃತಿಗಳು ಆಶ್ರಯಿಸುವದಿಲ್ಲವೆಂದು ತಾವೇ ಮುಂದೆ ಹೇಳುತ್ತಾರೆ. "ನಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ ನರಾಧಮಾಃ" (ಗೀ.೭.೧೫.) ಎಂಬಲ್ಲಿ ಅಂತವರನ್ನು ವಿಭಾಗಿಸಿ ತಿಳಿಸುತ್ತಾರೆ. ಆ ಸಾಧುಗಳು ಇನ್ನು ಎಂತವರೆಂದರೆ ಮತ್ಸಮಾಶ್ರಯಣೇ ಪ್ರವೃತ್ತಾಃ - ಈ ಕರ್ಮಯೋಗ ಜ್ಞಾನಯೋಗಗಳಿಂದ ಅನುಗೃಹೀತವಾದ ಭಕ್ತಿಯೋಗರೂಪೋಪಾಯಾನುಷ್ಠಾನದಿಂದ ನನ್ನನ್ನು ಸಮ್ಯಕ್ - ಚೆನ್ನಾಗಿ ಆಶ್ರ

ಭಾ- ಪ್ರವೃತ್ತಾ ಮನ್ನಾಮ ಕರ್ಮ ಸ್ವರೂಪಾಣಾಂ ವಾಙ್ಮನಸಾ ಗೋಚರತಯಾಮದ್ದ ರ್ಶನಾದೃತೇ ಸ್ವಾತ್ಮಧಾರಣ ಪೋಷಣಾದಿಕ ಮಲಭಮಾನಾಃ, ಕ್ಷಣಮಾತ್ರಕಾಲಂ ಕಲ್ಪಸಹಸ್ರಂ ಮನ್ವಾನಾಃ, ಪ್ರ ಶಿಥಿಲ ಸರ್ವ ಗಾತ್ರಾ ಭವೇಯುರಿತಿ ಮತ್ಸ್ವರೂಪ

ಯಿಸುವ ಪ್ರವೃತ್ತಿಯುಳ್ಳವರು, ಮನ್ನಾಮ ಕರ್ಮಸ್ವರೂಪಾಣಾಂ ವಾಙ್ಮನಸಾಽಗೋಚರ ತಯಾ - ಉಪಾಸನೆಯನ್ನು ಬಿಟ್ಟ ಕಾಲದಲ್ಲಿ ನನ್ನ ನಾಮ, ದಿವ್ಯಚೇಷ್ಟಿತಸ್ವರೂಪಗಳು ವಾಕ್ಕಿಗೂ ಮನಸ್ಸಿಗೂ ಅಗೋಚರವಾಪುದರಿಂದ, ಮದ್ದರ್ಶನಾದೃತೇ-ಈಗ ನಾನು ಅವತಾರವನ್ನು ಎತ್ತಿ ರುವಪರಿಂದ ನನ್ನನ್ನು ಪ್ರತ್ಯಕ್ಷಿಸಿ ನೋಡದಿದ್ದರೆ, ಸ್ವಾತ್ಮಧಾರಣ ಪೋಷಣಾದಿಕಂ - ತಮ್ಮ ಶರೀರ ಧಾರಣೆ ಪೋಷಣವೇ ಮೊದಲಾದವುಗಳನ್ನುಳ್ಳ ಸ್ಥಿತಿಯನ್ನು, ಅಲಭಮಾನಾಃ - ಹೊಂದದೆ ಇರುವವರು ; ಮೃಷ್ಟಾನ್ನ, ಹಾಲು, ಚಿರೋಟಿ, ಮುಂತಾದವುಗಳು ಅವರಿಗೆ ಧಾರಣ ಪೋಷಣ ಭೋಗ್ಯಗಳಾಗುವದಿಲ್ಲವು, ನನ್ನ ಸಮಾಗಮ, ಅವಲೋಕನ, ಆಲಾಪಾದಿಗಳೇ ಅವರು ಗಳಿಗೆ ಧಾರಣ ಪೋಷಣ ಭೋಗ್ಯಗಳೆಂಬ ಭಾವವು; ಹೀಗೆ ಆ ಸಾಧುಗಳಿಗೆ ನಾನೇ ಎಲ್ಲವೂ ಎಂಬ ಭಾವವು. ಇನ್ನೂ ಎಂತಹವರೆಂದರೆ :—ಒಂದು ಕ್ಷಣಕಾಲದ ವಿಯೋಗವನ್ನು ಕಲ್ಪ ಸಹಸ್ರದ ವಿಳಂಬವಾಗಿ ತಿಳಿಯುವವರು, ಈ ವಿಯೋಗದಲ್ಲಿರುವ ದುಃಖವೂ ಪ್ರಾಪ್ತಿಯಲ್ಲಿರುವ ಸುಖವೂ ಭಾಗವತದ ಗೋಪಿಕಾ ಗೀತೆಯಲ್ಲಿ ಬಹು ಚನ್ನಾಗಿ ಉಪಪಾದಿತವಾಗಿರುತ್ತದೆ:—

ಅಟತಿ ಯದ್ಭವಾನಹ್ನಿ ಕಾನನಂ ತ್ರುಟಿಯುಗಾಯತೇ ತ್ವಾ ಮಪಶ್ಯತಾಂ ।
ಕುಟಿಲ ಕುಂತಳಂ ಶ್ರೀಮುಖಂ ಚ ತೇ ಜಡ ಉದೀಕ್ಷತಾಂ ಪಕ್ಷ್ಮಕೃದ್ದೃಶಾಂ ॥

(ಭಾಗ. ೧೦. ೩೧. ೧೫.) ನೀನು ಮಧ್ಯಾಹ್ನಕಾಲದಲ್ಲಿ ಯಾವಾಗ ನಮ್ಮನ್ನು ಬಿಟ್ಟು ಕಾಣದೆ ಬೃಂದಾವನದ ಕಾನನವನ್ನು ಕುರಿತು ಹೋಗುತ್ತೀಯೋ ಆಗ ಒಂದು ಕ್ಷಣಾರ್ಧವು ಯುಗವಾಗು ತ್ತದೆ, ನಿನ್ನ ಕುಟಿಲ ಕುಂತಳವುಳ್ಳ ಬಹು ಲಾವಣ್ಯವುಳ್ಳ ನಿನ್ನ ಮುಖವನ್ನು ಸಾಯಂಕಾಲದಲ್ಲಿ ಎಲ್ಲರಿಗೂ ನೋಡುವ ಸುಖವೇನೋ ಉಂಟಾಗುತ್ತದೆ. ಆದರೆ ಆ ಸುಖಕ್ಕೆ ಬ್ರಹ್ಮನು ಸ್ವಲ್ಪ ವಿಘ್ನ ರೂಪವಾಗಿ ರೆಪ್ಪೆ ಪಾಟವವನ್ನುಂಟುಮಾಡಿರುತ್ತಾನೆ; ಆದುದರಿಂದ ಆತನು ಮಂದಬುದ್ಧಿಯುಕ್ತ ನೆಂದು ಭಾವಿಸುವೆವು ಎಂಬರ್ಥವು. ಇಂತಹ ಸಾಧುಗಳು ಪ್ರಶಿಥಿಲ ಸರ್ವಗಾತ್ರಾ ಭವೇಯುರಿತಿ- ಈ ಅದರ್ಶನದಿಂದ ಸಮಸ್ತಾವಯವಗಳಲ್ಲೂ ಶಿಥಿಲವಾಗಿ ಆಗುವರೆಂದು, ಮತ್ಸ್ವರೂಪ ಚೇಷ್ಟಿ ತಾವಲೋಕನಾಲಾಪಾದಿ ದಾನೇನ-ನಿನಗೇನೆ ಮುಂದೆ ತೋರಿಸುವಹಾಗೆ ನನ್ನ ಸ್ವರೂಪಗಳನ್ನು ಪ್ರಕಟಿಸುವ ದಿವ್ಯಮಙ್ಗಳ ವಿಗ್ರಹವನ್ನು ತೋರಿಸುವದೇನು, ನನ್ನ ದಿವ್ಯ ಚೇಷ್ಟಿತಗಳ ದರ್ಶನ ವೇನು, ನನ್ನೊಂದಿಗೆ ಸಲ್ಲಾಪವೇನು, ಇವುಗಳನ್ನು ದಯಪಾಲಿಸುವದರಮೂಲಕ ಹೀಗೆ ತೇಷಾಂ- ಅಂತಹ ಸಾಧುಗಳ, ಪರಿತ್ರಾಣಾಯ ಅನಿಷ್ಟ ನಿವೃತ್ತಿಪೂರ್ವಕ ಇಷ್ಟಪ್ರಾಪ್ತಿಯನ್ನುಂಟುಮಾಡಿ ಚನ್ನಾಗಿ ರಕ್ಷಿಸುವದಕ್ಕೋಸ್ಕರವಾಗಿಯೂ, ಆ ಇಷ್ಟಪ್ರಾಪ್ತಿಯಾವುದೆಂದರೆ ಆ ಪ್ರಾಪ್ಯವನ್ನು ಹೊಂದುವದೇ ಎಂಬ ಭಾವವು, ಅವರಿಗೆ ಅನಿಷ್ಟವು ಪರಮಾತ್ಮನನ್ನು ಕಾಣದಿರೋಣವೇ; ಆದು ದರಿಂದಲೇ ಇದನ್ನೇ ಮದ್ದರ್ಶನಾದೃತೇ ಎಂದಾರಂಭಿಸಿ ಪ್ರ ಶಿಥಿಲಸರ್ವಗಾತ್ರಾ ಎಂಬುವವರೆಗೂ ವಿವರಿಸಿದ್ದಾರೆ. ಇದೀಗ ಅವರಿಗೆ ಅಂತಃ ಬಹಿಃ ಮನಸ್ಸಿನ ಮೂಲಕ ಉಂಟಾಗುವ ಅನಿಷ್ಟವೂ ತನ್ಮೂಲಕ ಭಯವೂ ದುಃಖವೂ ಹೇಳಲ್ಪಟ್ಟಿತು. ಬಾಹ್ಯದಲ್ಲೂ ಭಯದುಃಖಗಳೂ ಆ ಸಾಧುಗಳಿಗೆ ಉಂಟಾಗಬಹುದು. ಕಂಸ ಬಾಣಾದಿ ರಾಕ್ಷಸರುಗಳಿಂದಲೂ ರಾಮಾವತಾರದಲ್ಲಿ ವಿಶ್ವಾಮಿತ್ರ ರಿಗೂ ದಂಡಕಾರಣ್ಯ ಋಷಿಗಳಿಗೇ ಮೊದಲಾದವರಿಗೂ ರಾಕ್ಷಸರಿಂದುಂಟಾದಹಾಗೆ ಭಯವೂ ದುಃಖ ವೂ ಪ್ರಾಪ್ತವಾಗಬಹುದು. ಅವನ್ನು ಹೋಗಲಾಡಿಸುವದೂ ತನ್ನ ಕರ್ತವ್ಯವೆಂದು ತಿಳಿಸುವದ

ಭಾ. ಚೇಷ್ಟಿತಾವಲೋಕನಾ ಲಾಪಾದಿ ದಾನೇನ ತೇಷಾಂ ಪರಿತ್ರಾಣಾಯ. ತದ್ವಿಪರೀತಾನಾಂ ವಿನಾಶಾಯಚ, ಕ್ಷೀಣಸ್ಯ ವೈದಿಕಸ್ಯ ಧರ್ಮಸ್ಯ ಮದಾರಾಧನರೂಪಸ್ಯಾರಾಧ್ಯ ಸ್ವರೂಪ ಪ್ರದರ್ಶನೇನ ಸ್ಥಾಪನಾಯಚ, ದೇವಮನುಷ್ಯಾದಿರೂಪೇಣ ಯುಗೇಯುಗೇ ಸಂಭವಾಮಿ ; ಕೃತತ್ರೇತಾದಿ ಯುಗನಿಯಮೋಪಿ ನಾಸ್ತೀತ್ಯರ್ಥಃ ॥೮॥

---

ಕ್ಕಾಗಿ ವಿನಾಶಾಯ ಚ ದುಷ್ಕೃತಾಂ ಎಂದು ಹೇಳಿರುತ್ತಾರೆ. ಸರ್ವೇಶ್ವರನನ್ನು ಭಕ್ತಿಯಿಂದ ಉಪಾಸನೆ ಮಾಡುವವರೇ ಸಾಧುಗಳು, ಅವರ ಪರಿತ್ರಾಣವನ್ನೇ ತನ್ನ ಮುಖ್ಯಕರ್ತವ್ಯವಾಗಿ ಭಾವಿಸುವನು. ಇಂತಹ ಪರಿತ್ರಾಣಶಕ್ತಿಯು ಇನ್ನು ಯಾರಿಗೂ ಇಲ್ಲವಾದುದರಿಂದ ಸೃಷ್ಟಿ, ಲಯಕಾರ್ಯಗಳನ್ನು ಇತರರಿಗೆ ಎಂದರೆ ಬ್ರಹ್ಮರುದ್ರರಿಗೆ ಕೊಟ್ಟು ಜಗತ್ಪಾಲನವನ್ನು ಮಾತ್ರ ತಾನೇ ಇಟ್ಟುಕೊಂಡಿರುತ್ತಾನೆ .ಆದುದರಿಂದ ವಿಷ್ಣುವಾಗಿಯೇ ತಾನೇ ಪ್ರತಿಲೋಕದಲ್ಲೂ ನಿಂತು ರಕ್ಷಿಸುತ್ತಾನೆ; ಇದು ಪ್ರಥಮಾವತಾರವು. ಹಾಗೆಯೇ ಸಾಧು ಪರಿತ್ರಾಣಕ್ಕಾಗಿಯೇ ಮುಖ್ಯವಾಗಿ ಅವತಾರಗಳು ಎಂದು ಭಾವಿಸತಕ್ಕದ್ದು. **"ನ ಹಿ ಪಾಲನ ಸಾಮರ್ಥ್ಯ ಮೃತೇ ಸರ್ವೇಶ್ವರಂ ಹರಿಂ"** ಎಂದರೆ ಶ್ರೀಹರಿ ಯಲ್ಲದೆ ಇನ್ನು ಯಾರಿಗೂ ಪಾಲಿಸುವ ಶಕ್ತಿಯಿಲ್ಲವೆಂದು ಶ್ರೀಪರಾಶರರು ಹೇಳಿರುತ್ತಾರೆ. ಆಗಲಿ ಪರಮಾತ್ಮನು ಸಾಧುಗಳ ವಿಷಯದಲ್ಲಿ ಪರಮ ಸೌಲಭ್ಯಕೃಪಾದಿ ಗುಣಗಳಿಂದ ರಕ್ಷಿಸುತ್ತಾನೆ. ಏನೋ ದುಷ್ಕೃತಿಗಳು ಈ ಸಾಧುಗಳಿಗೆ ಬೇದವನ್ನುಂಟುಮಾಡಿದರು; ಆದರೂ ತನ್ನ ಕೃಪಾಮೂಲಕವಾಗಿ ಅವರನ್ನೂ ಮನ್ನಿಸಬಾರದೋ ? "ರಿಪೂಣಾಮಪಿ ವತ್ಸಲ ನೆಂದು ಹೇಳಿರುವಾಗ **ವಿನಾಶಾಯ ಚ ದುಷ್ಕೃತಾಂ** ಎಂದು ಅವರ ವಿನಾಶವನ್ನುಂಟು ಮಾಡಬಹುದೋ ? ಎಂದರೆ ಸರ್ವೇಶ್ವರನು ತನಗೆ ಮಾಡಿದ ಅಪರಾಧವನ್ನಾದರೂ ಮನ್ನಿಸುವನು. ಭಾಗವತಾಪರಾಧವನ್ನು ಮಾತ್ರ ಎಂದಿಗೂ ಮನ್ನಿಸನು. ಆದುದರಿಂದ ಸರ್ವವಿಧಾಪರಾಧಗಳಲ್ಲೂ ಭಾಗವತಾಪರಾಧವು ಪ್ರಧಾನವೆಂಬ ಭಾವವು. ಆದುದರಿಂದಲೇ ಜಯವಿಜಯರು ಮಾಡಿದ ಭಾಗವತಾಪರಾಧವನ್ನೂ,ದೂರ್ವಾಸರು ಅಂಬರೀಷನಿಗೆ ಮಾಡಿದ ಅಪರಾಧವನ್ನೂ ಮನ್ನಿಸಲಿಲ್ಲವು. ಹೀಗೆ **ಪರಿತ್ರಾಣಾಯ ಸಾಧೂನಾಂ** ಎಂಬ ಅಮೋಘೋಕ್ತಿಗೆ ಈ ಅಮೋಘವಾದ ಭಾಷ್ಯದಿಂದ ಇಂತಹ ಪರಮ ಭಕ್ತರ ಇಷ್ಟಸಿದ್ಧಿಗಾಗಿ ತಾನು ಅವತಾರವನ್ನು ಮಾಡಿಯೇ ರಕ್ಷಿಸಬೇಕೆಂದು ಹೇಳಿದಂತಾಗಿ, ಅವತಾರಮಾಡದೇನೇ ಅವುಗಳನ್ನು ನೆರವೇರಿಸಕೂಡದೇ ಎಂಬ ನಾನಾವಿಧ ಆಕ್ಷೇಪಗಳಿಗೆ ಇಲ್ಲಿ ಸಮಾಧಾನವನ್ನು ಹೇಳಿದಂತಾಯಿತು. ಆದುದರಿಂದಲೇ ಮತ್ತು **ತದ್ವಿಪರೀತಾನಾಂ** - ಮೇಲೆ ಹೇಳಿದುದಕ್ಕೆ ವ್ಯತ್ಯಸ್ತವಾಗಿರುವವರ, **ವಿನಾಶಾಯ ಚ**-ನಾಶಕ್ಕಾಗಿಯೂ, ಮತ್ತು **ಕ್ಷೀಣಸ್ಯ ವೈದಿಕಸ್ಯ ಧರ್ಮಸ್ಯ** - ಕ್ಷೀಣದಶೆಯನ್ನು ಹೊಂದಿದ ವೈದಿಕ ಧರ್ಮಕ್ಕೆ, ಆ ವೈದಿಕ ಧರ್ಮವೆಂತಾದ್ದೆಂದರೆ, **ಮದಾರಾಧನರೂಪಸ್ಯ** - ನನ್ನ ಆರಾಧನಾರೂಪವಾದುದು, ಹೀಗೆ ಹೇಳಿರುವದರಿಂದ, ಧರ್ಮಗಳು ಶಾಸ್ತ್ರಗಳಲ್ಲಿ ವಿಧಿನಿಷೇಧರೂಪಗಳಲ್ಲಿ ಹೇಳಲ್ಪಟ್ಟಿರುವದೆಲ್ಲಾ ಭಗವದಾಜ್ಞೆಗಳೆಂದೂ, ಅವುಗಳ ಅನುಷ್ಠಾನವು ಭಗವದಾರಾಧನರೂಪವಾದವೆಂದೂ, ಅವುಗಳಿಂದ ಭಗವಂತನು ಸುಪ್ರೀತನಾಗುವನೆಂದೂ, ಅಂತಹ ಆಜ್ಞೆಗಳನ್ನು ತಿರಸ್ಕರಿಸಿದವನು ಭಗವಂತನ ನಿಗ್ರಹಕ್ಕೆ ಪಾತ್ರನೆಂದೂ, ಹೇಳಿದಂತಾಯಿತು. ಇಂತಹ ಧರ್ಮಕ್ಕೆ, **ಆರಾಧ್ಯ ಸ್ವರೂಪ ಪ್ರದರ್ಶನೇನ** - ಇಷ್ಟುಕಾಲವೂ ಬಿಟ್ಟುಹೋಗಿದ್ದ ಸರ್ವಕರ್ಮಗಳಿಂದಲೂ ಆರಾಧ್ಯನು ಶ್ರೀ ಮಹಾವಿಷ್ಣುವು ಎಂಬ ಸ್ವರೂಪವನ್ನು ತೋರ್ಪಡಿಸುವದರ ಮೂಲಕವಾಗಿ, **ಸ್ಥಾಪನಾಯಚ** - ಧರ್ಮಸ್ಥಾಪನೆಯನ್ನು ಮಾಡುವದಕ್ಕೋಸ್ಕರವಾಗಿಯೂ, ದೇವ ಮನುಷ್ಯನೊದಲಾದ ರೂಪದಿಂದ, **ಸಂಭವಾಮಿ** - ಅವತರಿಸುವೆನು. ಸರ್ವ ಕರ್ಮಗಳಿಂದಲೂ ಆರಾ

ಧ್ಯನು ಶ್ರೀ ಮಹಾವಿಷ್ಣುವು ಎಂದು ವೇದಗಳಲ್ಲಿ ಹೇಳಿರುವ ಅಭಿಪ್ರಾಯಕ್ಕೆ ಲೋಕದಲ್ಲಿ ನ್ಯೂನತೆಯುಂಟಾಗಿ ಅಧರ್ಮವು ತಲೆ ಎತ್ತಿತ್ತು, ಈಗ ಈ ಕರ್ಮಗಳಿಂದ, **ಯಜ್ಞೋವೈ ವಿಷ್ಣುಃ** ಎಂದು ಹೇಳಿರುವಹಾಗೆ ಶ್ರೀಮಹಾವಿಷ್ಣುವೇ ಆರಾಧಿಸಲ್ಪಡುವವನೆಂಬುದನ್ನು ತೋರಿಸಿ ಕೊಡುವದಕ್ಕಾಗಿಯೂ ಅವತರಿಸುವನೆಂಬ ತಾತ್ಪರ್ಯವು. ಧರ್ಮದ ಸಂಸ್ಥಾಪನೆ ವೆಂದರೆ ಸಮ್ಯಕ್ ಸ್ಥಾಪನವು, ಸರ್ವಧರ್ಮಗಳಿಂದಲೂ ಹೀಗೆ ಶ್ರೀ ಮಹಾ ವಿಷ್ಣುವೇ ಆರಾಧ್ಯನೆಂಬ ಭಾವ ಉಂಟಾಗುವಹಾಗೆ ಮಾಡುವದೇ ಸಂಸ್ಥಾಪನವು. ಇದರಿಂದ ಧರ್ಮರಾಯನ ರಾಜಸೂಯ ಯಾಗದಲ್ಲಿ ಶಿಶುಪಾಲಾದಿಗಳು ಆರಾಧ್ಯರಲ್ಲದೆ ಶ್ರೀ ಕೃಷ್ಣನೇ ಆರಾಧಿಸಲ್ಪಟ್ಟನು. ಈ ಅವತಾರಗಳಿಗೆ ಕಾಲಕ್ಲೃಪ್ತವೇನೂ ಇಲ್ಲವೆಂಬಭಿಪ್ರಾಯದಿಂದಲೇ **ಯುಗೇಯುಗೇ** ಸಂಭವಾಮಿ ಎಂಬುದಕ್ಕೆ **ಯುಗವಿಷಯ ನಿಯಮೋಪಿನಾಸ್ತಿ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಆದರೆ **ಯುಗೇಯುಗೇ** ಎಂದರೆ ಪ್ರತಿಯುಗದಲ್ಲೂ ಎಂದಲ್ಲವೇ ಅರ್ಥವು? ಶ್ರೀರಾಮನಾಗಿ ತ್ರೇತಾಯುಗದಲ್ಲೂ ಶ್ರೀಕೃಷ್ಣನಾಗಿ ದ್ವಾಪರಯುಗದಲ್ಲೂ ಹೀಗಲ್ಲವೇ ಅಭಿಪ್ರಾಯವು? ಎಂದರೆ ಹಾಗಲ್ಲ ವೆಂದು ಮುಂದೆ ವ್ಯಾಖ್ಯಾನಮಾಡಿರುತ್ತಾರೆ:-**ಕೃತತ್ರೇತಾದಿ ಗುಣವಿಶೇಷ ನಿಯಮೋಪಿನಾಸ್ತೀತ್ಯರ್ಥಃ**-ಧರ್ಮವೂ ಸಂಪೂರ್ಣವಾಗಿರುವ ಕೃತಯುಗವೇನು, ಮುಕ್ಕಾಲುಪಾಲು ಧರ್ಮವಿರುವ ತ್ರೇತಾಯುಗವೇನು, ಇಂತ ವಿಶೇಷಗುಣವಿರುವ ಯುಗದಲ್ಲೇ ಅವತಾರವೆಂಬ ನಿಯಮವೂ ಕೂಡ ಇಲ್ಲವೆಂಬ ಭಾವವು. ಹೀಗೆ ವ್ಯಾಖ್ಯಾನಮಾಡಲು ಮೂಲದಲ್ಲಿ ಅವಕಾಶವೆಲ್ಲಿಯದು? ಹಿಂದಿನ ಶ್ಲೋಕದಲ್ಲಿ ಅವತಾರಕ್ಕೆ ಕಾಲವು "**ಯದಾ ಯದಾಹಿ ಧರ್ಮಸ್ಯ ಗ್ಲಾನಿ ರ್ಭವತಿ ಭಾರತ**"ಎಂದು ವಿಶೇಷಿಸಿ ಹೇಳಿರುವದರಿಂದ, ಯುಗೇಯುಗೇ ಎಂದರೆ, ಯಾವಯಾವ ಯುಗಗಳಲ್ಲಿ ಈ ಮೇಲಿನ ಕಾರಣಗಳು ಎಂದರೆ ಧರ್ಮಕ್ಕೆ ವಿಶೇಷ ಗ್ಲಾನಿಯೂ, ಅಧರ್ಮಕ್ಕೆ ವಿಶೇಷ ಏಳಿಗೆಯೂ,ಉಂಟಾಗುತ್ತವೋ, ಆ ಆ ಯುಗಗಳಲ್ಲಿ ಅವತರಿಸುತ್ತೇನೆಂಬ ಭಾವವು. ಧರ್ಮಸಂಸ್ಥಾಪನೆಯನ್ನಾದರೋ ಶ್ರೀ ಪರಾಶರ, ವ್ಯಾಸ, ಶುಕ, ಶೌನಕಾದಿಗಳಿಗೆ "ದದಾಮಿ ಬುದ್ಧಿ ಯೋಗಂ" ಎಂದು ಹೇಳಿರುವಹಾಗೆ ಅವರಿಗೆ ಬುದ್ಧಿಯೋಗವನ್ನು ದಯಪಾಲಿಸಿ ನಡೆಸಬಹುದು. ಆದರೆ ಭಕ್ತರುಗಳಿಗೆ ತನ್ನ ಆರಾಧ್ಯ ರೂಪ ದಿವ್ಯಮಂಗಳವಿಗ್ರಹ ಪ್ರದರ್ಶನಮಾಡಿ, ಅದನ್ನು ಸಾಕ್ಷಾದ್ದರ್ಶನ ಮಾಡಬೇಕೆಂಬ ಉತ್ಕಟೇಚ್ಛೆಯನ್ನುಂಟುಮಾಡಿ, ಅಂತಹ ಅವರ ಮನೋರಥವನ್ನು ಪೂರ್ಣಮಾಡುವದಕ್ಕಾಗಿಯೇ ತಾನು ಅವತರಿಸುವದು. ಸುಸಮಯದಲ್ಲೇ ಅಂತಹ ಭಕ್ತರಿಗೇನೆ ಭಕ್ತಿಯನ್ನು ಈ ಅವತಾರ ಮುಖೇನ ಇನ್ನೂ ಹೆಚ್ಚಿಸಿ ಅವರುಗಳಿಗೆ ಧರ್ಮೋಪದೇಶಮಾಡಿದರೆ ಇನ್ನೂ ಲೋಕಕ್ಕೆ ಹೆಚ್ಚಾದ ಉಪಕಾರವು. ಆದುದರಿಂದಲೇ ಈಗ ನಿನಗೆ ಈ ಗೀತೋಪದೇಶವನ್ನೂ ಮಾಡುತ್ತಿರುವದು ಎಂಬ ಅರ್ಥವೂ ಇಲ್ಲಿ ಗರ್ಭಿತವು. ಅದೂ ಅಲ್ಲದೆ ನಾನು ಮಾಡಿದ ಈ ಅಮೋಘೋಪದೇಶವನ್ನನುಸರಿಸಿ ಈ ಸಾಧುಗಳೂ ಸಹ ಧರ್ಮಪ್ರವರ್ತಕರಾಗುವರು. ಇದಕ್ಕೆ ಭೀಷ್ಮ ಸಂಜಯಾದಿಗಳೇ ನಿದರ್ಶನಗಳೆಂದು ಹೇಳಿದಂತಾಯಿತು. ಶ್ರೀ ಭೀಷ್ಮರ ಶಾಂತಿಪರ್ವದಲ್ಲಿರುವ ಉಪದೇಶವೆಲ್ಲಾ ಅತ್ಯದ್ಭುತವಾದವು; ಶ್ರೀಕೃಷ್ಣಭಗವಾನರವರು ಇಲ್ಲಿ ಸಂಗ್ರಹವಾಗಿ ಸಾರಭೂತವಾಗಿ ಹೇಳಿರುವ ಉಪದೇಶದ ವಿವರಣವೇ, ಶ್ರೀ ಭೀಷ್ಮರು ಶರತಲ್ಪದಲ್ಲಿ ಮುಂದೆ ಮಾಡುವ ಉಪದೇಶವು. ಆದುದರಿಂದ ಶ್ಲೋಕದ ಮುಖ್ಯತಾತ್ಪರ್ಯವೇನಾಯಿತೆಂದರೆ:—ಈಗ ನಾನು ಶ್ರೀಕೃಷ್ಣನಾಗಿ ಅವತರಿಸಿರುವದು ಹಿಂದೆ ಋಷಿಗಳಾಗಿದ್ದು ಈಗ ಗೋಪಿಕಾಸ್ತ್ರೀಯರಾಗಿ ಜನಿಸಿರುವ ನನ್ನ ಅತ್ಯರ್ಥಪ್ರಿಯಭಕ್ತರಿಗೂ, ಇತರ ಭಕ್ತರಾದ ನಿನಗೂ, ಅಕ್ರೂರ ಉದ್ಧವ ಸಂಜಯಾದಿಗಳಿಗೂ ನನ್ನ ದರ್ಶನಾಲಾಪಾಲಿಂಗನಾದಿಗಳಿಂದಲೂ, ನನ್ನ ದಿವ್ಯ ಚೇಷ್ಟಿತಗಳ ದರ್ಶನ ಶ್ರವಣಗಳಿಂದಲೂ, ನನ್ನ ಪಾರಮೈಶ್ವರ್ಯವನ್ನವಲೋಕಿಸುವದರಿಂದಲೂ, ಅವರಿಗೆ ಪರಮಾನಂದವನ್ನು ಕೊಡುವದಕ್ಕಾಗಿಯೇ ಎಂದು

**ಮೂ. ಜನ್ಮಕರ್ಮ ಚ ಮೇ ದಿವ್ಯ ಮೇವಂ ಯೋ ವೇತ್ತಿ ತತ್ತ್ವತಃ।**
**ತ್ಯಕ್ತ್ವಾದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ ೯.**

ನೀನು ಭಾವಿಸತಕ್ಕದ್ದು ; ಅದರೊಂದಿಗೆ ಯಾದೃಚ್ಛಿಕವಾಗಿ ಅವರುಗಳಿಗೆಲ್ಲಾ ತೊಂದರೆಯನ್ನು ಕೊಡುತ್ತಿರುವ ನನ್ನ ಭಕ್ತರ ದ್ವೇಷಿಗಳಾದ ಕಂಸ ಶಿಶುಪಾಲ ಜರಾಸಂಧ ದುರ್ಯೋಧನಾದಿಗಳ ವಿನಾಶವನ್ನೂ, ಹಾಗೆಯೇ ಧರ್ಮಸಂಸ್ಥಾಪನೆಯನ್ನೂ, ಮಾಡುವೆನು ಎಂಬುದು.

**ಮೂಲಕ್ಕೆ ಅರ್ಥವು:**—ಅರ್ಜುನನು ಪ್ರಾಸಙ್ಗಿಕವಾಗಿ ಪ್ರಾರ್ಥಿಸಿ ತಿಳಿದ ಅವತಾರ ರಹಸ್ಯದ ಜ್ಞಾನಕ್ಕೆ ಫಲಶ್ರುತಿಯನ್ನು ಹೇಳುತ್ತಾರೆ. ಪ್ರಾಸಙ್ಗಿಕವಾದರೂ ಅದೂಕೂಡ ಮೋಕ್ಷಪ್ರಾಪ್ತಿಗೆ ಸಹಾಯಕವೇ ಎಂದು ತಿಳಿಸುತ್ತಾರೆ ಆದುದರಿಂದಲೇ ಈ ಮೋಕ್ಷಶಾಸ್ತ್ರದಲ್ಲಿ ಅದೂ ಹೇಳಲ್ಪಟ್ಟಿತೆಂಬ ತಾತ್ಪರ್ಯವು. **ಹೇ ಅರ್ಜುನ** - ಓ ಅರ್ಜುನನೇ, **ಮೇ** - ಭಕ್ತವಾತ್ಸಲ್ಯದಿಂದ ಪ್ರೇರಿತನಾಗಿ ಹೀಗೆ ಅವತಾರವನ್ನೆತ್ತಿರುವ ನನ್ನ ಜನ್ಮವೂ, **ಕರ್ಮ ಚ** - ಚೇಷ್ಟಿತವೂ ಕೂಡ **ದಿವ್ಯಂ** - ಅಪ್ರಾಕೃತವಾಗಿ ವಿಲಕ್ಷಣವಾಗಿ ನನಗೇನೇ ಅಸಾಧಾರಣವಾದುದು, **ಏವಂ** - ಎಂದು ಹೀಗೆ, **ಯಃ** - ಯಾವನು, **ತತ್ತ್ವತಃ** - ಯಥಾರ್ಥವಾಗಿ, **ವೇತ್ತಿ** - ತಿಳಿದು ಉಪಾಸನೆ ಮಾಡುತ್ತಾನೋ, **ಸಃ** - ಅವನು, **ದೇಹಂ** - ಈ ತನ್ನ ಹೇಯವಾದ ಪ್ರಾಕೃತ ದೇಹವನ್ನು, **ತ್ಯಕ್ತ್ವಾ**—ಮರಣವಾದಾಗ ಬಿಟ್ಟು, **ಪುನರ್ಜನ್ಮ** – ಪುನಃ ಜನ್ಮವನ್ನು, **ನೈತಿ** - ಹೊಂದುವದಿಲ್ಲವು, **ಮಾಂ**-ನನ್ನನ್ನೇ, **ಏತಿ** – ಹೊಂದುವನು. ಬರೀ ಅವತಾರ ರಹಸ್ಯಜ್ಞಾನವೇ ಮೋಕ್ಷಪ್ರಾಪ್ತಿಯನ್ನುಂಟುಮಾಡಲಾರದು. ಆದರೆ ಮೋಕ್ಷಪ್ರಾಪ್ತಿಗೆ ಸಹಾಯಕವು. ಮೋಕ್ಷಪ್ರಾಪ್ತಿಗೆ ಉಪಾಸನ ದ್ವಾರಾ ಪರಮಾತ್ಮ ಸಾಕ್ಷಾತ್ಕಾರವೇ ಹೇತುವೆಂದು ಇದೇ ಗೀತೆಯಲ್ಲೇ ಹೇಳಲ್ಪಡುವಾಗ, ಈ ಅವತಾರ ಮತ್ತು ಆಕಾಲದ ದಿವ್ಯ ಚೇಷ್ಟಿತಗಳ ಜ್ಞಾನವೇ ಹೇಗೆ ಸಾಕ್ಷಾತ್ತಾಗಿ ಮೋಕ್ಷದಾಯಕವಾದೀತು ? ಹಾಗೆ ಮೋಕ್ಷದಾಯಕವಾದರೆ ಶ್ರೀಕೃಷ್ಣನು ಅರ್ಜುನನಿಗೆ ಈ ೧೮ ಅಧ್ಯಾಯಗಳನ್ನೂ ಉಪದೇಶಿಸುವ ಕಷ್ಟವೇತಕ್ಕೆ ? ಈ ಅವತಾರ ರಹಸ್ಯವನ್ನುಪದೇಶಿಸುವ ೪–೫ ಶ್ಲೋಕಗಳೇ ಸಾಲದೇ ? ಎಂಬ ಪೂರ್ವಪಕ್ಷಕ್ಕೆ ಉತ್ತರವಿಲ್ಲವಾಗುತ್ತದೆ. ಮಹರ್ಷಿಯು **ವೇತ್ತಿ**-ಎಂಬ ಪದವನ್ನು ಪ್ರಯೋಗಿಸಿರುತ್ತಾರೆ. ವೇದನ ಶಬ್ದಕ್ಕೆ ಉಪಾಸನೆಯಮೂಲಕ ಪರಮಾತ್ಮ ಸಾಕ್ಷಾತ್ಕಾರವೆಂದೇಅರ್ಥವು. ಬ್ರಹ್ಮವೇದ ಬ್ರಹ್ಮೈವಭವತಿ ಎಂಬ ವಾಕ್ಯಕ್ಕೆ“ಪರಬ್ರಹ್ಮೋಪಾಸಕನು ಪರಬ್ರಹ್ಮ ಸಾಮ್ಯವನ್ನೇ ಹೊಂದುವನು’’ ಎಂಬರ್ಥವು. ಅಥವಾ **ವೇತ್ತಿ** ಎಂದರೆ **ಯಥಾರ್ಥವಾಗಿ ತಿಳಿಯುವದು**, ಇಷ್ಟುಮಾತ್ರವೇ ಅರ್ಥವೆಂದು ವಾದಿಸುವವರಿಗೆ, ಅಂತಹ ಭಕ್ತವಾತ್ಸಲ್ಯದಿಂದ ಅವತಾರವನ್ನು ಎತ್ತುವ ಮಾಹಾತ್ಮ್ಯೆಯನ್ನುಳ್ಳವನನ್ನು ಹೊಂದುವ ಬಗೆ ಹೇಗೆ? ಎಂಬ ಆಶೆಯು ಸ್ವಾಭಾವಿಕವಾಗಿ ಉಂಟಾಗುವದರಿಂದ ಅಂತಹ ಮೋಕ್ಷೋಪಾಯವನ್ನವಲಂಬಿಸಿ, **ಮಾ ಮೇತಿ** - ನನ್ನನ್ನೇ ಹೊಂದುವನು ಎಂಬುದರಲ್ಲಿ ಸಂದೇಹವಿಲ್ಲವೆಂದು ಅರ್ಥ ಹೇಳುವೆವು. ಮುಂದಿನ ಶ್ಲೋಕದಲ್ಲಿ ಈ ಅವತಾರ ರಹಸ್ಯ ಜ್ಞಾನವು ಹೇಗೆ ಮೋಕ್ಷದಾಯಕವು ಎಂಬುದನ್ನು ಚರ್ಚಿಸುತ್ತಾರೆ. ಇಲ್ಲಿಯೂ ಕೂಡ **ಜನ್ಮಕರ್ಮ ಚ ಮೇ ದಿವ್ಯಂ** ಎಂದು ಹೇಳಿದುದರಿಂದ ಇವುಗಳು ಸತ್ಯವೆಂಬುದೂ ಮಿಥ್ಯೆಯಲ್ಲವೆಂಬುದೂ ಏರ್ಪಟ್ಟಿತು. **ಮಾ ಮೇತಿ** ಎಂಬುದರಿಂದ ಇಂತಹ ರಹಸ್ಯಗಳನ್ನು ಉಪದೇಶಿಸುವಾಗ ಪರಮಾರ್ಥವನ್ನು ಹೇಳಿರಬೇಕೆಂದು ಊಹಿಸುವದು ಆವಶ್ಯಕವಾದುದರಿಂದ ಸರ್ವೇಶ್ವರನೇ ಪ್ರಾಪ್ಯನೆಂದೂ, ಜೀವಾತ್ಮನು ಪ್ರಾಪ್ತನೆಂದೂ ಹೇಳಿರುವದೇ ಸತ್ಯವಾದ ವಿಷಯವೆಂದೇರ್ಪಡುತ್ತದೆ. ಇದರಿಂದ ಜೀವಾತ್ಮನು ಅವಿದ್ಯಾಗೃಹೀತನಾದ ಪರಮಾತ್ಮನೆಂಬ ವಾದವೂ ದೂರೀಕೃತವಾಯಿತು. ಇಲ್ಲಿ ಜನ್ಮ ಕರ್ಮಚ ಮೇ

ಭಾ. ಏವಂ ಕರ್ಮಮೂಲ ಹೇಯ ತ್ರಿಗುಣ ಪ್ರಕೃತಿ ಸಂಸರ್ಗ ರೂಪ ಜನ್ಮರಹಿತಸ್ಯ ಸರ್ವೇಶ್ವರತ್ವ ಸರ್ವಜ್ಞ ಸತ್ಯಸಙ್ಕಲ್ಪತ್ವಾದಿ ಸಮಸ್ತಕಲ್ಯಾಣಗುಣೋಪೇತಸ್ಯ ಸಾಧುಪರಿತ್ರಾಣ ಮತ್ಸಮಾಶ್ರಯಣೈಕ ಪ್ರಯೋಜನಂ ದಿವ್ಯಂ-ಅಪ್ರಾಕೃತಂ ಮದಸಾಧಾರಣಂ ಮಮ ಜನ್ಮ ಚೇಷ್ಟಿತಂಚ ತತ್ತ್ವತಃ ಯೋವೇತ್ತಿ, ಸಃ ವರ್ತಮಾನಂ ದೇಹಂ ಪರಿತ್ಯಜ್ಯ

---

ದಿವ್ಯಂ ನನಗೀಗ ಇವು ದಿವ್ಯವಾದವು ಎಂದು ಹೇಳಿದುದರಿಂದ ಜೀವಾತ್ಮನಾದ ನಿನ್ನ ಜನ್ಮ ಕರ್ಮಗಳು ದಿವ್ಯವಲ್ಲವು ಏಕೆಂದರೆ ಅವು ಪಾಪಪುಣ್ಯರೂಪ ಕರ್ಮಮೂಲಕ ಉಂಟಾದವೆಂದೂ ಹೇಳಿದಂತಾಯಿತು. ||೯||

**ಭಾಷ್ಯಾರ್ಥವು**:—ಪ್ರಾಸಙ್ಗಿಕವಾಗಿ ಅವತಾರದ ಯಾಥಾತ್ಮ್ಯವನ್ನು ತಿಳಿಯುವದು ಈಗ ಪ್ರಕೃತೋಪದೇಶವಾದ ಮೋಕ್ಷಪ್ರಾಪ್ತಿಗೆ ಹೇಗೆ ಉಪಯೋಗವೆಂಬುದು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಹೇಗೆಂದರೆ.—**ಏವಂ** - ಹಿಂದಿನ ಶ್ಲೋಕಗಳಲ್ಲಿ ಉಪಪಾದಿಸಿದಹಾಗೆ, **ಕರ್ಮಮೂಲಹೇಯ ತ್ರಿಗುಣಪ್ರಕೃತಿ ಸಂಸರ್ಗರೂಪ ಜನ್ಮರಹಿತಸ್ಯ**-ಕರ್ಮಮೂಲಕವಾಗಿ ಉಂಟಾಗುವ, ಹೇಯವಾದ ಸತ್ತ್ವರಜಸ್ತಮೋಗುಣಗಳಿಂದ ಸೇರಿದ ಪ್ರಕೃತಿ ಸಂಸರ್ಗ ರೂಪವಾದ ದೇಹವನ್ನೆತ್ತುವ ಜನ್ಮವಿಲ್ಲದಿರುವ, **ಸರ್ವೇಶ್ವರತ್ವ ಸರ್ವಜ್ಞತ್ವ ಸತ್ಯಸಙ್ಕಲ್ಪತ್ವ**ವೇ ಮೊದಲಾದ ಸಮಸ್ತ ಕಲ್ಯಾಣಗುಣಗಳಿಂದ ಸೇರಿರುವ ನನಗೆ, **ಸಾಧುಪರಿತ್ರಾಣಮತ್ಸಮಾಶ್ರಯಣೈಕಪ್ರಯೋಜನಂ**-ಸಾಧುಗಳ ಪರಿತ್ರಾಣವೂ ಚೇತನರು ನನ್ನನ್ನಾಶ್ರಯಿಸುವದೂ ಇವುಗಳೇ ಮುಖ್ಯ ಪ್ರಯೋಜನವಾಗಿವುಳ್ಳ, **ದಿವ್ಯಂ** ಎಂದರೆ **ಅಪ್ರಾಕೃತಂ** - ಅಪ್ರಾಕೃತವಾದ, ಹೀಗೆ ವಿಲಕ್ಷಣವಾದ, **ಮದಸಾಧಾರಣಂ** - ನನಗೆ ಮಾತ್ರವೇ ಅಸಾಧಾರಣವಾದ, **ಮಮ** - ನನ್ನ, **ಜನ್ಮ ಚೇಷ್ಟಿತ**ಗಳನ್ನು, **ತತ್ತ್ವತಃ**-ಸಂಶಯ ವಿಪರ್ಯಯಗಳೊಂದೂ ಇಲ್ಲದೆ ಯಥಾರ್ಥವಾಗಿ, **ಯೋವೇತ್ತಿ**-ಯಾವನು ತಿಳಿಯುತ್ತಾನೋ, ಎಂದರೆ ತಿಳಿದು ಉಪಾಸಿಸುವನೋ, **ಸಃ** - ಆತನು, **ವರ್ತಮಾನಂ ದೇಹಂ ಪರಿತ್ಯಜ್ಯ** - ಈಗಿರುವ ದೇಹವನ್ನು ಮರಣಕಾಲದಲ್ಲಿ ಬಿಟ್ಟು, **ಪುನರ್ಜನ್ಮನೈತಿ** - ಪುನಃ ಜನ್ಮವನ್ನು ಹೊಂದುವದಿಲ್ಲವು ; ಪ್ರಾರಬ್ಧವೇ ಈ ದೇಹದಲ್ಲಿ ಕಳೆಯದಿದ್ದರೂ, ಅನಭ್ಯುಪಗತ ಪ್ರಾರಬ್ಧವು ಮುಂದಿನಜನ್ಮದಲ್ಲಿದ್ದರೂ, ಅವುಗಳ ಪ್ರತಿಬಂಧಕಗಳು ಯಾವುವೂ ಇಲ್ಲದೆ ಈ ದೇಹಾವಸಾನದೊಳಗೆ ಉಪಾಸನ ನಿಷ್ಪತ್ತಿಯಿಂದ ಪರಮಾತ್ಮ ಸಾಯುಜ್ಯವನ್ನು ಹೊಂದುವನೆಂಬ ಭಾವವು. ಭರನ್ಯಾಸದಲ್ಲಿ ದೇಹಾವಸಾನದಲ್ಲೇ ಮೋಕ್ಷಪ್ರಾಪ್ತಿಹೇಗೋ ಹಾಗೆ ಎಂಬ ಭಾವವು. ಇದೀಗ ಅವತಾರ ರಹಸ್ಯದ ಯಥಾರ್ಥಜ್ಞಾನದ ಮಹಿಮೆಯು ಎಂಬ ತಾತ್ಪರ್ಯವು. ಆ ಜ್ಞಾನದಿಂದ ಉಪಾಸನ ನಿಷ್ಪತ್ತಿ ಪ್ರತಿಬಂಧಕಗಳಾದ ಪಾಪಗಳೆಲ್ಲಾ ಶೀಘ್ರವಾಗಿ ತೊಲಗುವದರಿಂದ **ಮಾಮೇತಿ** ಎಂದು ಹೇಳಲ್ಪಟ್ಟಿತು. **ಮಾಮೇವ ಪ್ರಾಪ್ನೋತಿ** ಎಂಬುದರ ತಾತ್ಪರ್ಯವನ್ನು ವಿವರಿಸುತ್ತಾರೆ:—**ಮದೀಯದಿವ್ಯಜನ್ಮ ಚೇಷ್ಟಿತ** ಇತ್ಯಾದಿ. ನನ್ನ ಸಂಬಂಧವಾದ ಅಪ್ರಾಕೃತವಾಗಿ ವಿಲಕ್ಷಣವಾದ ಅವತಾರ ಚೇಷ್ಟಿತಗಳ ಯಾಥಾತ್ಮ್ಯವನ್ನು ಚನ್ನಾಗಿ ತಿಳಿಯೋಣದರಿಂದ, **ವಿಧ್ವಸ್ತ ಸಮಸ್ತ ಮತ್ಸಮಾಶ್ರಯಣ ವಿರೋಧಿ ಪಾಪಃ** - ನನ್ನನ್ನು ಆಶ್ರಯಿಸುವದಕ್ಕೆ ವಿರೋಧಿಯಾದ ನಾಶಪಡಿಸಲ್ಪಟ್ಟ ಸಮಸ್ತಪಾಪಗಳುಳ್ಳವನಾಗಿ ಎಂದರೆ ಆಶ್ರಯಣಕ್ಕೆ ಪ್ರತಿಬಂಧಕವಾದ ಸಮಸ್ತಪಾಪಗಳಿಂದಲೂ ಬಿಡಲ್ಪಟ್ಟವನಾಗಿ, **ಅಸ್ಮಿನ್ನೇವ** - ಈ ಜನ್ಮದಲ್ಲೇ **ಯಥೋದಿತಪ್ರಕಾರೇಣ**-ಶಾಸ್ತ್ರಗಳಲ್ಲಿ ಹೇಳಿರುವ ಪ್ರಕಾರದಿಂದ, ಅಥವಾ ಇಲ್ಲಿ ಉಪದೇಶಿಸುವ ಪ್ರಕಾರದಿಂದ, ಅದು ಹೇಗೆ ಎಂದರೆ ಕರ್ಮಯೋಗದಿಂದ ಲಬ್ಧ ಉಪಾಸನದಮೂಲಕ, **ಮಾಮಾಶ್ರಿತ್ಯ** - ನನ್ನನ್ನಾಶ್ರಯಿಸಿದವನಾಗಿ, **ಮದೇಕಪ್ರಿಯಃ** - ನನ್ನನ್ನೇ ಮುಖ್ಯ ಪ್ರಿಯವಸ್ತುವಾಗಿ

ಭಾ. ಪುನರ್ಜನ್ಮ ನೈತಿ, ಮಾಮೇವ ಪ್ರಾಪ್ನೋತಿ-ಮದೀಯ ದಿವ್ಯ ಜನ್ಮ ಚೇಷ್ಟಿತ ಯಾಥಾತ್ಮ್ಯ ವಿಜ್ಞಾನೇನ ವಿಧ್ವಸ್ತ ಸಮಸ್ತ ಮತ್ಸಮಾಶ್ರಯಣ ವಿರೋಧಿಪಾಪೋಽಸ್ಮಿನ್ನೇವ ಜನ್ಮನಿ ಯಥೋದಿತ ಪ್ರಕಾರೇಣ ಮಾಮಾಶ್ರಿತ್ಯ ಮದೇಕಪ್ರಿಯೋ ಮದೇಕಚಿತ್ತೋ ಮಾಮೇವ ಪ್ರಾಪ್ನೋತಿ ||೯||

ಭಾವಿಸಿದವನಾಗಿ, ಇದರಿಂದ ಭಕ್ತಿರೂಪಾಪನ್ನದಶೆಯಾದ ಪರಭಕ್ತಿಯುಂಟಾಗಿರುವ ಅವಸ್ಥೆಯು ಹೇಳಲ್ಪಟ್ಟಿತು; ಮದೇಕಚಿತ್ತಃ - ನನ್ನೊಬ್ಬನನ್ನೇ ಚಿತ್ತದಲ್ಲಿ ಉಳ್ಳವನಾಗಿ, ಇದರಿಂದ ಪರಜ್ಞಾನದಶೆಯು ಹೇಳಲ್ಪಟ್ಟಿತು; ಮಾಮೇವ ಪ್ರಾಪ್ನೋತಿ-ನನ್ನನ್ನೇ ಹೊಂದುವನು, ಹೀಗೆ ಹೇಳಿದುದು ಗೀತಾಶಾಸ್ತ್ರದ ಸಾರಭೂತಾರ್ಥವಾದ "ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು। ಮಾಮೇವೈಷ್ಯಸಿ ಕೌನ್ತೇಯ"(ಗೀ.೯-೩೪ ೧೮-೬೫)ಎಂದು ಪದೇಪದೇ ಹೇಳಲ್ಪಟ್ಟ ಉಪದೇಶವನ್ನು ಮನಸ್ಸಿನಲ್ಲಿಟ್ಟು ಎಂದು ಭಾವಿಸತಕ್ಕದ್ದು. ಬಹುಸ್ಯಾಂ ಪ್ರಜಾಯೇಯ (ತೈ. ಆ. ೬. ೨) ಎಂಬ ಶ್ರುತ್ಯನುಸಾರ ಸ್ವರೂಪತಃ ಸರ್ವವನ್ನೂ ವ್ಯಾಪಿಸಿರುವ ಸೃಷ್ಟಿಯು ಇಲ್ಲಿ ಹೇಳಲ್ಪಡಲಿಲ್ಲವೆಂದೂ, ರೂಪತಃ - ಸೃಷ್ಟಿಯೇ ಇಲ್ಲಿ ಹೇಳಲ್ಪಟ್ಟಿತೆಂದೂ ತಿಳಿಸುವದಕ್ಕಾಗಿ ಭಾಷ್ಯದಲ್ಲಿ, ಮದಸಾಧಾರಣಂ ಮಮ ಜನ್ಮ ವೆಂದು ವ್ಯಾಖ್ಯಾನಮಾಡಿರುತ್ತಾರೆ. ಮೂಲದ ಕರ್ಮ ಶಬ್ದವು ಪುಣ್ಯ ಪಾಪರೂಪ ಕರ್ಮವನ್ನು ಬೋಧಿಸುವದಿಲ್ಲವೆಂದೂ ತಿಳಿಸುವದಕ್ಕಾಗಿ ಚೇಷ್ಟಿತವೆಂದು ವ್ಯಾಖ್ಯಾನವು. ತತ್ತ್ವತಃ ಎಂದು ಹೇಳಿರುವದರಿಂದ ಸಂಶಯ ವಿಪರ್ಯಯಗಳು ಯಾವುದೂ ಇಲ್ಲದೆಯೂ ಮಿಥ್ಯಾತ್ವ ಮೊದಲಾದವುಗಳನ್ನು ಆರೋಪಣೆ ಮಾಡದೆಯೂ ಹೇಗಿದೆಯೋ ಹಾಗೆ ಯಥಾರ್ಥವಾಗಿ ಎಂಬ ಭಾವವು. ತ್ಯಕ್ತ್ವಾ ದೇಹಂ ಎಂದು ಮೂಲದಲ್ಲಿರುವದಕ್ಕೆ ಪ್ರಾರಬ್ಧಕರ್ಮಾಂತ್ಯದಲ್ಲಿ ಉಂಟಾಗುವ ದೇಹವನ್ನು ಬಿಟ್ಟು ಎಂದರೆ ಮುಂದಿನ ಜನ್ಮಗಳಲ್ಲೂ ಪ್ರಾರಬ್ಧ ಕರ್ಮವು ಸಂಬಂಧವನ್ನುಂಟುಮಾಡುವದರಿಂದ ವರ್ತಮಾನ ದೇಹಂ ಪರಿತ್ಯಜ್ಯ ಎಂದು ವ್ಯಾಖ್ಯಾನಮಾಡಿರುತ್ತಾರೆ. ಮೂಲದಲ್ಲಿ ಪುನರ್ಜನ್ಮ ನೈತಿ ಎಂಬುದರಿಂದ ಅನಿಷ್ಟ ನಿವೃತ್ತಿಯೂ, ಮಾಮೇತಿ ಎಂಬುದರಿಂದ ಇಷ್ಟಪ್ರಾಪ್ತಿಯೂ ಹೇಳಲ್ಪಟ್ಟವು. ಹೀಗೆ ವರ್ತಮಾನ ದೇಹಂ ಎಂದು ವ್ಯಾಖ್ಯಾನ ಮಾಡದಿದ್ದರೆ, ಪ್ರಾರಬ್ಧ ಕರ್ಮವು ಪೂರೈಸಲು ಮುಂದೆ ಇನ್ನೂ ಜನ್ಮಗಳಮೂಲಕ ಬಂದ ದೇಹ ಎಂಬರ್ಥವು ಉಂಟಾಗುತ್ತಿತ್ತು- ಆ ಅರ್ಥವಲ್ಲವೆಂದು ತಿಳಿಸುವದಕ್ಕಾಗಿ ವರ್ತಮಾನಂದೇಹಂ ಎಂದು ವ್ಯಾಖ್ಯಾನಮಾಡುತ್ತಾರೆ. ಈ ಅವತಾರ ರಹಸ್ಯದ ಯಥಾರ್ಥಜ್ಞಾನದಿಂದ ಉಪಾಸನಕ್ಕೆ ಪ್ರತಿ ಬಂಧಕಗಳಾದ ಸಮಸ್ತ ಅನಿಷ್ಟ ನಿವೃತ್ತಿಯುಂಟಾಗುವದರಿಂದ, ಉಪಾಸನವು ಸಂಪೂರ್ಣತೆಯನ್ನು ಹೊಂದಿ, ಪರಬ್ರಹ್ಮ ಸಾಕ್ಷಾತ್ಕಾರ ಉಂಟಾಗುವದರಿಂದ ಈ ಜನ್ಮಾವಸಾನದಲ್ಲೇ ಮೋಕ್ಷ ಪ್ರಾಪ್ತಿಯುಂಟಾಗುತ್ತದೆಂಬ ಭಾವವು. ಆದರೆ ಪ್ರಾರಬ್ಧ ಕರ್ಮವು ಭೋಗಾದೇವ ಕ್ಷಯಃ ಎಂದಿರುವಾಗ, ಈ ಜನ್ಮಾಂತ್ಯದಲ್ಲೇ ಮೋಕ್ಷ ಹೇಗೆ? ಎಂದರೆ ಮದೀಯ ಎಂದಾರಂಭಿಸಿ ಉತ್ತರವನ್ನು ಹೇಳುತ್ತಾರೆ. ತನ್ನ ಜನ್ಮ ಮತ್ತು ಚೇಷ್ಟಿತಗಳ ವಿಜ್ಞಾನದಿಂದ ಉಪಾಸನವು ಕೈಗೂಡಿ ಈ ಜನ್ಮದಲ್ಲೇ ಮೋಕ್ಷಪ್ರಾಪ್ತಿಯುಂಟಾಗಬಹುದು ಎಂಬ ತಾತ್ಪರ್ಯವು. ಪ್ರಾರಬ್ಧಾನುಗುಣವಾಗಿ ಮುಂದಿನ ಜನ್ಮಪ್ರಾಪ್ತಿಗೆ ಕಾರಣವಿದ್ದರೂ, ಉಪಾಸನ ಪೌಷ್ಕಲ್ಯದಿಂದ ಈ ಜನ್ಮದ ಅವಸಾನದಲ್ಲೇ ಮೋಕ್ಷ ಉಂಟಾಗುತ್ತದೆಂಬುದಕ್ಕೆ ಪ್ರಮಾಣ ಉಂಟೋ ಎಂದರೆ ವಿಷ್ಣುಪುರಾಣದಲ್ಲಿ (೬. ೭. ೩೪. ೩೫) ಉಪಾಸಕರು ಎರಡು ವಿಧವೆಂದು ವಿಭಾಗಿಸಿ, ಯೋಗ ಯುಕ್ಕಿಗೆ ಈ ಜನ್ಮವಾದ ಒಡನೆಯೇ "ಜನ್ಮಾಂತರೈ ರಭ್ಯಸತೋಃ ಮುಕ್ತಿಃ ಪೂರ್ವಸ್ಯ ಜಾಯತೇ" ಎಂದು ಉತ್ತರ ಜನ್ಮಗಳಾದ

**ಭಾ. ಅವ. ತದಾಹ—**

**ಮೂ. ವೀತರಾಗ ಭಯಕ್ರೋಧಾ ಮನ್ಮಯಾ ಮಾ ಮುಪಾಶ್ರಿತಾಃ ।**
**ಬಹವೋ ಜ್ಞಾನ ತಪಸಾ ಪೂತಾ ಮದ್ಭಾವ ಮಾಗತಾಃ ॥ ೧೦.**

ನಂತರವೆಂದು ಹೇಳಿ, ವಿನಿಷ್ಪನ್ನ ಸಮಾಧಿ ಎಂದು ಸಾಕ್ಷಾತ್ಕರಿಸಿದ ಪರಮಾತ್ಮಸ್ವರೂಪವುಳ್ಳ ಯೋಗಿಗಳಾದರೋ,, "ವಿನಿಷ್ಪನ್ನ ಸಮಾಧಿಸ್ತು ಮುಕ್ತಿಂ ತತ್ರೈವ ಜನ್ಮನಿ । ಪ್ರಾಪ್ನೋತಿ ಯೋಗಿ ಯೋಗಾಗ್ನಿ ಧಗ್ಧ ಕರ್ಮಚಯೋಽಚಿರಾತ್"॥ ಆ ಜನ್ಮಾವಸಾನದಲ್ಲೇ ಮೋಕ್ಷ ವೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಅವತಾರ ರಹಸ್ಯ ಜ್ಞಾನದ ಮಾಹಾತ್ಮ್ಯಯು ಆ ದೇಹಾವಸಾನದಲ್ಲೇ ಉಪಾಸನ ಪ್ರತಿಬಂಧಕಗಳ ನಾಶಮೂಲಕ ಯೋಗ ವಿನಿಷ್ಪತ್ತಿಯನ್ನುಂಟು ಮಾಡಿ ಮೋಕ್ಷವನ್ನು ಕೊಡುತ್ತದೆಂಬ ತಾತ್ಪರ್ಯವು. ಇದರಿಂದ ಉಪಾಸನೋಪಾಯವನ್ನು ವಿಧಿಸುವ ಶಾಸ್ತ್ರಕ್ಕೇನೂ ವೈಯರ್ಥ್ಯವಿಲ್ಲವು. ಹೀಗೆ ವೈಯರ್ಥ್ಯವಿಲ್ಲವೆಂದು ತಿಳಿಸುವದಕ್ಕಾಗಿ ಭಾಷ್ಯದಲ್ಲಿ ಯಥೋದಿತ ಪ್ರಕಾರೇಣ ಮಾಮಾಶ್ರಿತ್ಯ ಎಂದು ಪ್ರಯೋಗಿಸಿರುತ್ತಾರೆ. ಯೋಗದ ಪರಾಕಾಷ್ಠಾ ದೆಸೆಯನ್ನು ಈ ಜನ್ಮದಲ್ಲೇ ಹೊಂದುವನೆಂಬಭಿಪ್ರಾಯವನ್ನು ಮದೇಕ ಪ್ರಿಯಃ ಮದೇಕಚಿತ್ತಃ ಎಂದು ವಿವರಿಸಿರುತ್ತಾರೆ. ಮದೇಕ ಪ್ರಿಯಃ ಎಂಬುದರರ್ಥವೇ ಮುಂದೆ ಗೀ. ೭. ೧೭. ನೆಯ ಶ್ಲೋಕದಲ್ಲಿ "ಪ್ರಿಯೋಹಿ ಜ್ಞಾನಿನೋಽತ್ಯರ್ಥಂ ಅಹಂ" ಹೇಳಲ್ಪಡುತ್ತದೆ. ಮದೇಕಚಿತ್ತಃ ಎಂಬ ಅಭಿಪ್ರಾಯವು "ಮಯ್ಯೇವ ಮನ ಆಧತ್ಸ್ವ" (ಗೀ. ೧೨-೭)ಎಂಬಲ್ಲಿ ಹೇಳಲ್ಪಟ್ಟಿತು. ಮದೇಕ ಪ್ರಿಯಃ ಮದೇಕಚಿತ್ತಃ ಎಂದು ಹೇಳಿರುವದ ರಿಂದ ಮುಮುಕ್ಷುವಿಗೆ ಅನ್ಯದೇವತಾ ಭಜನವು ಸರ್ವಾತ್ಮನಾ ಕೂಡದೆಂಬುದೂ ಮದೇಕಚಿತ್ತ ವಾದ ಸಮಾಧ್ಯವಸ್ಥೆಯೇ ಯೋಗದ ಪರಮಾವಸ್ಥೆ ಎಂಬುದೂ ಏರ್ಪಟ್ಟಿತು. ॥೯॥

**ಭಾಷ್ಯಾವತಾರಿಕೆಯ ಅರ್ಥವು:**—ಈ ಅವತಾರ ರಹಸ್ಯದ ಜ್ಞಾನವು ಪರಮಾತ್ಮ ನನ್ನು ಹೊಂದುವದಕ್ಕೆ ಹೇಗೆ ಸಹಕಾರಿ ಎಂಬುದನ್ನು ಹೇಳುತ್ತಾರೆಂಬುದನ್ನು ತಿಳಿಸುವದಕ್ಕಾಗಿ ತದಾಹ - ಆ ಅಭಿಪ್ರಾಯವನ್ನೇ ಸಮರ್ಥಿಸಿ ಹೇಳುತ್ತಾರೆ ಎಂಬ ಅವತಾರಿಕೆಯು.

**ಮೂಲಕ್ಕೆ ಅರ್ಥವು:**—ಈ ಅವತಾರ ರಹಸ್ಯ ಜ್ಞಾನಕ್ಕೆ ಮಾಹಾತ್ಮ್ಯ ಏನೆಂದರೆ "ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ" ಎಂದು ಹೇಳಲ್ಪಟ್ಟಿತು. ಹಾಗಾದರೆ ಇದೂ ಒಂದು ಉಪಾಯವೇ ಎಂದು ಭಾವಿಸಬಹುದು ಎಂದಾಲೋಚಿಸಿ, ಇದರಿಂದುಂಟಾಗುವ ಪ್ರಯೋಜ ನವು ಎಷ್ಟರಮಟ್ಟಿಗೆ ಎಂಬುದನ್ನು ತಿಳಿಸುತ್ತಾರೆ, ಈ ಅವತಾರ ರಹಸ್ಯಜ್ಞಾನವುಳ್ಳವರು, **ವೀತರಾಗ ಭಯಕ್ರೋಧಾಃ** – ಕಳೆದುಕೊಳ್ಳಲ್ಪಟ್ಟ ಇಚ್ಛಾ ಭಯ ಕೋಪಗಳುಳ್ಳ, ವಿಷಯಗ ಳಲ್ಲಿ ಪ್ರೀತಿ ಎಂಬುದೇ ರಾಗವು, ಆ ರಾಗಪ್ರಾಪ್ತಿಗೆ ವಿರೋಧ ಉಂಟಾದರೆ ಆ ವಿರೋಧ ನಿರಸನ ಕ್ಕಾಗಿ ಕೋಪವು, ತನಗೆ ಪ್ರಾಪ್ತಿಯಾಗುವ ಇಷ್ಟಕ್ಕೆ ಪ್ರತಿಬಂಧಕವಾಗಿ ಎಲ್ಲಿ ಅನಿಷ್ಟ ಉಂಟಾಗು ತ್ತದೋ ಎಂಬದಾಗಿ ಭಯವು, ಇವು ಯಾವುದೊಂದೂ ಇಲ್ಲದ ಅವತಾರ ರಹಸ್ಯಜ್ಞಾನದ ಮಾಹಾತ್ಮ್ಯಯಿಂದ ಶ್ರೀ ವಾಸುದೇವನಲ್ಲಿಟ್ಟ ಮನಸ್ಸುಳ್ಳವರಿಗೆ ಇಂತಹ ಮಲಗಳು ಯಾವುವೂ ಅವರುಗಳ ಮನಸ್ಸಿನಲ್ಲಿರುವದಿಲ್ಲವೆಂಬರ್ಥವು; ಏಕೆಂದರೆ ವಾಸುದೇವನಲ್ಲಿಟ್ಟಿರುವದರಿಂದ ಪರಿ ಶುದ್ಧ ಮನಸ್ಸುಳ್ಳವರೆಂಬ ಭಾವವು; ಅದನ್ನೇ ಹೇಳುತ್ತಾರೆ. ಮನ್ಮಯಾಃ-ಇಲ್ಲಿ ಮಯಟ್‌ಗೆ ತಾದಾತ್ಮ್ಯವಿಕಾರಾರ್ಥಗಳು ಕೂಡುವದಿಲ್ಲವಾದುದರಿಂದ ಪ್ರಾಚುರ್ಯಾರ್ಥವನ್ನೇ ಹೇಳಬೇಕು, ಅವರ ಜ್ಞಾನಕ್ಕೆ ವಿಷಯಿಭೂತನಾದ ನನ್ನಿಂದ ಪ್ರಚುರರಾದವರು ಎಂದರೆ ನನ್ನನ್ನೇ ಯಾವಾ ಗಲೂ ಮನಸ್ಸಿನಲ್ಲುಳ್ಳವರ; ಅಂತರ್ಯಾಮಿಯಾಗಿ ಸರ್ವೇಶ್ವರನಾದ ನಾನು ಇರುವದರಿಂದ

ಭಾ- ಮದೀಯ ಜನ್ಮಕರ್ಮ ತತ್ತ್ವಜ್ಞಾನಾಖ್ಯೇನ ತಪಸಾ ಪೂತಾ ಬಹವ ಏವಂ ಸಂವೃತ್ತಾಃ. ತಥಾ ಚ ಶ್ರುತಿಃ "ತಸ್ಯ ಧೀರಾಃ ಪರಿಜಾನಂತಿಯೋನಿಂ" ಇತಿ । ಧೀರಾಃ - ಧೀಮತಾ ಮಗ್ರೇಸರಾಃ ಏವಂ ತಸ್ಯ ಜನ್ಮಪ್ರಕಾರಂ ಜಾನನ್ತೀತ್ಯರ್ಥಃ ||೧೦||

ಮನ್ಮಯಾಃ ಎಂದು ಅರ್ಥಹೇಳಿದರೆ ಎಲ್ಲರಿಗೂ ಪಾಪಿಗೂ ಪುಣ್ಯವಂತನಿಗೂ ಮೋಕ್ಷಾರ್ಥಿಗೂ ಐಹಿಕದಲ್ಲಿ ಲಿಪ್ತನಿಗೂ ಇದು ಸಾಧಾರಣವಾದುದಾಗಿ ಅದು ಸರಿಯಾದ ಅರ್ಥವಾಗುವದಿಲ್ಲವು; ಮನ್ಮಯಾಃ ಎಂಬುದರಿಂದ ಈಶ್ವರ ಚೇತನ ಅಭೇದವು ತೋರುವಹಾಗೆ ನನ್ನ ಸ್ವರೂಪವೇ ಉಳ್ಳವರು ಎಂಬರ್ಥವಲ್ಲವು; ಇಬ್ಬರ ಸ್ವರೂಪವೂ ಒಂದೇಯಾದರೆ ಯಾರು ಯಾರಿಗೆ ಉಪದೇಶಿಸುವನು? ಗೀತಾ ಶಾಸ್ತ್ರಕ್ಕೆ ವೈಯರ್ಥ್ಯ ಉಂಟಾಗುತ್ತದೆ; ಮಾಮುಪಾಶ್ರಿತಾಃ - ನನ್ನನ್ನು ಉಪಾಸನ ಭರನ್ಯಾಸವೆಂಬ ಎರಡು ಉಪಾಯಗಳಲ್ಲಿ ಒಂದನ್ನು ಆಶ್ರಯಿಸಿದವರು, ಬಹವಃ-ಅನೇಕರು, ಜ್ಞಾನತಪಸಾ - ನನ್ನ ಅವತಾರದ ಮಾಹಾತ್ಮ್ಯೆಯ ಜ್ಞಾನ ರೂಪವಾದ ತಪಸ್ಸಿನಿಂದ, ಪೂತಾಃ - ಹಿಂದಿನ ಶ್ಲೋಕದಲ್ಲಿ ಹೇಳಿದಹಾಗೆ ಉಪಾಸನಕ್ಕೆ ವಿರೋಧಿರೂಪವಾದ ಸರ್ವಪಾಪಗಳನ್ನೂ ಕಳೆದುಕೊಂಡ ಪರಿಶುದ್ಧರು, ಮದ್ಭಾವಮಾಗತಾಃ - ಅಪಹತಪಾಪ್ಮತ್ವಾದಿ ಗುಣಗಳುಳ್ಳ ನನ್ನ ಸ್ವಭಾವವನ್ನು ಹೊಂದುವರಾಗುತ್ತಾರೆ, ಮುಂದೆ "ಮಮ ಸಾಧರ್ಮ್ಯ ಮಾಗತಾಃ" (೧೪. ೧೪. ೨.) ಎಂದು ಹೇಳುವ ಹಾಗೂ ಮತ್ತು ಶ್ರುತಿಯಲ್ಲಿ "ಪರಮಂ ಸಾಮ್ಯ ಮುಪೈತಿ" (ಮುಂ. ೩.೧.೩) ಎಂದು ಹೇಳಿರುವಹಾಗೂ, ನನ್ನ ಸ್ವಭಾವವನ್ನು ಹೊಂದುತ್ತಾರೆ. "ಮದ್ಭಾವಮಾಗತಾಃ" ಎಂಬುವದಕ್ಕೆ ಈಶ್ವರ ಸ್ವರೂಪವೆಂದರ್ಥವಾಗುವದಿಲ್ಲವು; ಏತಕ್ಕೆಂದರೆ ಮದ್ಭಾವಮಾಗತಾಃ ಎಂಬುದಕ್ಕೆ ಮುಂದೆ ಮಮ ಸಾಧರ್ಮ್ಯಮಾಗತಾಃ ಎಂದು ಶ್ರೀಕೃಷ್ಣ ಭಗವಾನವರೇ ವ್ಯಾಖ್ಯಾನಮಾಡಿ ಹೇಳುತ್ತಾರಾದುದರಿಂದ.

ಭಾಷ್ಯಾರ್ಥವು:—ಹಿಂದಿನ ಶ್ಲೋಕದಲ್ಲಿ ಪುನರ್ಜನ್ಮನೈತಿ, ಮಾಮೇತಿ ಎಂದು ಶ್ರೀವಾಸುದೇವನ ಅವತಾರ ದಿವ್ಯಚೇಷ್ಟಿತಗಳ ಯಾಥಾತ್ಮ್ಯಜ್ಞಾನವನ್ನು ತಿಳಿದವನಿಗೆ ಪುನರ್ಜನ್ಮವಿಲ್ಲವೆಂದು ತನ್ನನ್ನೇ ಹೊಂದುವರು ಎಂದು ಹೇಳಿ ಇದರ ಜ್ಞಾನವೇ ಉಪಾಯವಾದರೆ ಗೀತೆಯಲ್ಲಿ ಹೇಳುವ ಉಪಾಸನ ಶಾಸ್ತ್ರಕ್ಕೆ ವೈಯರ್ಥ್ಯ ಉಂಟಾಗುತ್ತದೆಂದು ಭಾವಿಸಿ ಶ್ರೀಕೃಷ್ಣನು ಅರ್ಜುನನಿಗೆ ಸರಿಯಾದ ತಿಳುವಳಿಕೆಯನ್ನು ಈ ಶ್ಲೋಕಮೂಲಕ ಕೊಡುತ್ತಾರೆ. ಶ್ರೀ ಯತಿವರ್ಯರು ಶ್ರೀ ಭಾಷ್ಯದಲ್ಲಿ ತದಿದ ಮುಪವರ್ಗೋಪಾಯತಯಾ ವಿಧಿತ್ಸಿತಂ, ವೇದನ ಮುಪಾಸನ ಮಿತ್ಯವಗಮ್ಯತೇ" ಎಂದೂ, "ಸರ್ವಾಸೂಪನಿಷತ್ಸು, ಮೋಕ್ಷಸಾಧನತಯಾ ವಿಹಿತಂ ವೇದನ ಮುಪಾಸನಮಿತ್ಯುಕ್ತಮ್" ಎಂದೂ ಎಲ್ಲಾ ಉಪನಿಷತ್ತುಗಳಲ್ಲೂ ಉಪಾಸನವೇ ಸಾಕ್ಷಾನುಪಾಯವೆಂದು ಹೇಳಿರುವದರಿಂದ, ಈ ಅವತಾರರಹಸ್ಯಜ್ಞಾನದೊಂದಿಗೆ ಉಪಾಸನವನ್ನೂ ಕೈಕೊಂಡರೆ ದೇಹಾವಸಾನದಲ್ಲೇ ಮೋಕ್ಷವೆಂದು ತಿಳಿಸುವದಕ್ಕಾಗಿಯೇ ಹಿಂದಿನ ಶ್ಲೋಕದಲ್ಲಿ "ಯೋ ವೇತ್ತಿ ತತ್ತ್ವತಃ ಎಂದು ಹೇಳಿದರು. ಅದನ್ನೇ ಈ ಶ್ಲೋಕದಲ್ಲಿ ವ್ಯಕ್ತಪಡಿಸುತ್ತಾರೆಂದು ತಿಳಿಯತಕ್ಕದ್ದು. "ನಾಹಂ ವೇದೈ ರಿತ್ಯಾದಿನಾ ತದ್ಭಕ್ತಿವ್ಯತಿರಿಕ್ತೋಪಾಯ ನಿಷೇಧ ಉಕ್ತೇಃ" ಮುಂದೆ "ನಾಹಂವೇದೈಃ" (೧೧. ೧೧-೫೩) ಎಂಬ ಶ್ಲೋಕದ ಮೂಲಕ ಭಕ್ತಿಯಲ್ಲದೆ ಕರ್ಮಯೋಗಾವತಾರ ರಹಸ್ಯಾದಿಗಳು ಸಾಕ್ಷಾದುಪಾಯವಲ್ಲವೆಂದು ನಿಷೇಧಿಸಿ ಹೇಳಲ್ಪಟ್ಟಿರುತ್ತದೆ. ಇಲ್ಲಿ ಭಕ್ತಿ ಎಂದರೆ "ಏವಂ ರೂಪಾಧ್ರುವಾನುಸ್ಮೃತಿರೇವ ಭಕ್ತಿಶಬ್ದೇನಾಭಿಧೀಯತೇ" ಎಂಬ ಶ್ರೀ ಭಾಷ್ಯಕಾರೋಕ್ತಿಯ ಪ್ರಕಾರ ಉಪಾಸನವೆಂದು ತಿಳಿಯತಕ್ಕದ್ದು. ಮದೀಯ ಜನ್ಮಕರ್ಮತತ್ತ್ವ ಜ್ಞಾನಾಖ್ಯೇನ ತಪಸಾ - ಇದು ಜ್ಞಾನತಪಸಾ ಎಂಬುದರ ವ್ಯಾಖ್ಯಾನವು,

**ಮದೀಯ** - ನನ್ನ ಸಂಬಂಧವಾದ, **ಜನ್ಮಕರ್ಮ** - ಅವತಾರ ಮತ್ತು ಆಗಿನ ದಿವ್ಯಚೇಷ್ಟಿತಗಳ **ತತ್ವಜ್ಞಾನಾಖ್ಯೇನ ತಪಸಾ** - ಯಥಾರ್ಥಜ್ಞಾನವೆಂಬುವ ತಪಸ್ಸಿನಿಂದ, **ಪೂತಾಃ** - ಪರಿಶುದ್ಧ ರಾದವರು, **ಬಹವಃ** - ಅನೇಕರು, **ಏವಂ ಸಂವೃತ್ತಾಃ** - ಹೀಗೆ ಆಗುವರು ಎಂದರೆ ಪುನರ್ಜನ್ಮ ವಿಲ್ಲದವರಾಗಿ ತನ್ನನ್ನೇ ಹೊಂದುವರು ಎಂಬರ್ಥವು. **ತಥಾ ಚ ಶ್ರುತಿಃ** - ಈ ಮುಂದೆ ಉದಾ ಹರಿಸಿರುವ ಶ್ರುತಿಯಾದ **"ತಸ್ಯ ಧೀರಾಃ ಪರಿಜಾನಂತಿ ಯೋನಿಮ್"** ಎಂಬ ಪುರುಷಸೂಕ್ತ ವಾಕ್ಯವು ಹಾಗೆಯೇ ಹೇಳುತ್ತದೆ. ಇಲ್ಲಿ **ಧೀರಾಃ** ಎಂದರೆ **ಧೀಮತಾಮಗ್ರೇಸರಾಃ-ಧಿಯಾ ರಮನ್ತೇ** ಎಂಬ ವ್ಯುತ್ಪತ್ತಿಯಿಂದ ಶಾಸ್ತ್ರಜ್ಞಾನವುಳ್ಳವರಲ್ಲಿ ಶ್ರೇಷ್ಠರಾಗಿ ಆ ಜ್ಞಾನದಿಂದಲೇ ರಮಿಸುವವರು, **ಏವಂ** - ಈ ಪರಿಯಲ್ಲಿ, **ತಸ್ಯ** - ಆ ಕರುಣಾನಿಧಿಯ, **ಜನ್ಮಪ್ರಕಾರಂ ಜಾನಂ ತೀತ್ಯರ್ಥಃ**-ಇದು **ಪರಿಜಾನಂತಿ ಯೋನಿಮ್** ಎಂಬುವರರ್ಥವು, ಜನ್ಮ ಪ್ರಕಾರವನ್ನು ತಿಳಿಯು ವರು,ಎಂದರೆ ಜನ್ಮಪ್ರಕಾರ ತಿಳಿದಿರುವದರಿಂದ ಅವರು ಧೀಮತಾಮಗ್ರೇಸರರು,ಏಕೆಂದರೆ ಮೋಕ್ಷ ವನ್ನು ಹೊಂದುವದು ನಿಸ್ಸಂಶಯವಾದುದರಿಂದ ಎಂಬ ಭಾವವು. **ಧೀಮತಾಮಗ್ರೇಸರಾ ಏವ** ಎಂದು ಪಾಠಾಂತರವು. ಆಗ ಇಂತಹ ಜ್ಞಾನದೀಪ್ತಿಯುಳ್ಳವರೇ ತಿಳಿಯುವರೇ ವಿನಾ, ಇತ ರರು ತಿಳಿಯಲಾರರೆಂಬ ಅರ್ಥವುಂಟಾಗುತ್ತದೆ. ಇಲ್ಲಿ ಈ ಶ್ಲೋಕಕ್ಕೆ ಭಾಷ್ಯವನ್ನು **ಏವಂ ಸಂ ವೃತ್ತಾಃ** ಎಂದು ಸಙ್ಗ್ರಹವಾಗಿ ಹೇಳಿಬಿಟ್ಟು, ಶ್ಲೋಕದ ಪೂರ್ವಾರ್ಧಕ್ಕೂ, ಉತ್ತರಾರ್ಧದ **ಮದ್ಭಾವ ಮಾಗತಾಃ** ಎಂಬುದಕ್ಕೂ, ಭಾಷ್ಯವನ್ನು ಅನುಗ್ರಹಿಸಲಿಲ್ಲವು. ಏಕೆಂದರೆ **ತದಾಹ** ಎಂದು ಅವತಾರಿಕೆಯಲ್ಲಿ ತಿಳಿಸಿರುವಹಾಗೆ ಹಿಂದಿನ ಶ್ಲೋಕದ ಭಾಷ್ಯದಲ್ಲೇ ಈ ಅರ್ಥಗಳ ನ್ನೆಲ್ಲಾ ವ್ಯಕ್ತಪಡಿಸಿರುವದರಿಂದ ಎಂದು ತಿಳಿಯತಕ್ಕದ್ದು. **ವೀತರಾಗ ಭಯಕ್ರೋಧಾಃ** ಎಂಬುದರಭಿಪ್ರಾಯವನ್ನು **ಮದೇಕಪ್ರಿಯಃ** ಎಂಬ ಹಿಂದಿನ ಶ್ಲೋಕದ ಭಾಷ್ಯ ಪ್ರಯೋಗ ದಿಂದ ವ್ಯಕ್ತಪಡಿಸಿರುತ್ತಾರೆ. ಸರ್ವೇಶ್ವರನೊಬ್ಬನೇ ಮುಮುಕ್ಷುವಿಗೆ ಪ್ರಿಯನಾದವನಾದರೆ ಆತನಿಗೆ ರಾಗಭಯ ಕ್ರೋಧಗಳೆಲ್ಲಿಯದು ? **"ನ ಕ್ರೋಧೋ ನ ಚ ಮಾತ್ಸರ್ಯಂ ನ ಲೋಭೋ ನಾಶುಭಾಮತಿಃ । ಭವಂತಿ ಕೃತಪುಣ್ಯಾನಾಂ ಭಕ್ತಾನಾಂ ಪುರುಷೋತ್ತಮೇ"** ಎಂದೂ **"ನ ಭಯಂ ಕ್ವಚಿದಾಪ್ನೋತಿ"** ಎಂದೂ ಹೇಳಿರುವ ಹಾಗೆ **ಮದೇಕಪ್ರಿಯರಿಗೆ** ಇವು ಯಾವುವೂ ಇರುವದಿಲ್ಲವು, ಈ ಶ್ಲೋಕದ **ಮನ್ಮಯಾಃ** ಎಂಬುದರರ್ಥವನ್ನು, **ಮದೇಕ ಚಿತ್ತಾಃ** ಎಂದೂ **ಮಾಮುಪಾಶ್ರಿತಾಃ** ಎಂಬುದರರ್ಥವನ್ನೂ **ಯಥೋದಿತ ಪ್ರಕಾರೇಣ ಮಾಮಾಶ್ರಿತ್ಯ** ಎಂದೂ, **ಪೂತಾಃ** ಎಂಬುದರರ್ಥವನ್ನು **ವಿಧ್ವಸ್ತ ಸಮಸ್ತ ಮತ್ಸಮಾಶ್ರಯಣ ವಿರೋಧಿಪಾಪಾಃ**, ಎಂದೂ, **ಮದ್ಭಾವ ಮಾಗತಾಃ** ಎಂಬುದರರ್ಥವನ್ನು **ಮಾಮೇವ ಪ್ರಾಪ್ನೋತಿ** ಎಂದೂ ವ್ಯಕ್ತಪಡಿಸಿರುತ್ತಾರೆ. ಆದರೆ **"ಮನ್ಮಯಾಃ** ಎಂಬುದಕ್ಕೆ **ಬ್ರಹ್ಮವಿದಃ ಈಶ್ವರಾಭೇದ ದರ್ಶಿನಃ"** ಎಂದು ಇತರರು ಮಾಡಿರುವ ಭಾಷ್ಯವು ಹೇಗೋ ತಿಳಿಯದು; ಏಕೆಂದರೆ **ಬ್ರಹ್ಮವಿದಃ** ಎಂಬು ದರಿಂದ ಪರಬ್ರಹ್ಮವನ್ನು ತಿಳಿದವರು ಎಂದಾಗುವದರಿಂದ ಪರಬ್ರಹ್ಮವೇ ಬೇರೆ, ಆತನನ್ನು ತಿಳಿಯು ವರೇ ಬೇರೆ ಎಂದು ಭೇದವು ವ್ಯಕ್ತವಾಗಿರುವಾಗ, ಇದಕ್ಕೆ ವಿರೋಧವಾಗಿ **ಈಶ್ವರಾಭೇದ ದರ್ಶಿನಃ** ಎಂಬ ವ್ಯಾಖ್ಯಾನವು ಹೇಗೆ ಸಾಧ್ಯವೋ ತಿಳಿಯದು. **ಮದ್ಭಾವ ಮಾಗತಾಃ** ಎಂದು ಹೇಳಿರುವದನ್ನು ಮುಂದೆ **ಮಮ ಸಾಧರ್ಮ್ಯ ಮಾಗತಾಃ** (ಗೀ.೧೪.೨) ಎಂದು ವ್ಯಕ್ತಪಡಿಸುವದ ರಿಂದ, ಎರಡೂ ಸಮಾನಾರ್ಥಗಳೆಂದೇ ಭಾವಿಸತಕ್ಕದ್ದು. **ಮಾಮೇವಪ್ರಾಪ್ನೋತಿ, ಮದ್ಭಾವ ಮಾಗತಾಃ, ಮಮಸಾಧರ್ಮ್ಯ ಮಾಗತಾಃ** ಇತ್ಯಾದಿ ಸ್ಥಳಗಳಲ್ಲಿ ಕರ್ಮ ಕರ್ತೃವ್ಯಪದೇಶ ಗಳಿರುವದರಿಂದ ಒಬ್ಬನು ಪ್ರಾಪ್ಯನಾಗಿಯೂ ಇನ್ನೊಬ್ಬನು ಪ್ರಾಪ್ತನಾಗಿಯೂ ಯಥಾರ್ಥವಾದ ಉಪದೇಶವಿರುವದರಿಂದ ಗೀತೋಪದೇಶಕ್ಕೆ ಅದ್ವೈತಾರ್ಥವು ಸರ್ವಾತ್ಮನಾ ಕೂಡುವದಿ

**ಮೂ. ಯೇ ಯಥಾ ಮಾಂ ಪ್ರಪದ್ಯನ್ತೇ ತಾಂ ಸ್ತಥೈವ ಭಜಾಮ್ಯಹಂ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೧೧.**

ಲ್ಲವು; ಆದುದರಿಂದ **ಮದ್ಭಾವಮಾಗತಾಃ** ಎಂದರೆ ನನ್ನ ಸ್ವಭಾವವಾದ ಅಪಹತ ಪಾಪ್ಮತ್ವಾದಿ ಗುಣಾಷ್ಟಕಗಳನ್ನುಳ್ಳವನಾಗುತ್ತಾನೆಂಬರ್ಥವು. "ಬ್ರಹ್ಮವೇದ ಬ್ರಹ್ಮೈವ ಭವತಿ" (ಮು- ೩. ೨. ೯.) ಪರಬ್ರಹ್ಮೋಪಾಸಕನು ಪರಬ್ರಹ್ಮ ಸಾಮ್ಯವನ್ನೇ ಹೊಂದುವದರಿಂದ ಪರಬ್ರಹ್ಮವೇ ಆಗುತ್ತಾನೆಂದು ಶ್ರುತಿಯಲ್ಲಿ ಹೇಳಿರುವ ಪರಮ ಸಾಮ್ಯವನ್ನೇ ಈ "ಮದ್ಭಾವಮಾಗತಾಃ" ಎಂಬ ಪ್ರಯೋಗವೂ, ಸೂಚಿಸುತ್ತದೆ. "ತಸ್ಯ ಧೀರಾಃ"ಎಂಬ ಶ್ರುತ್ಯುದಾಹರಣವು ಈ ಎರಡು ಶ್ಲೋಕಗಳಭಿಪ್ರಾಯವೂ ಶ್ರುತಿಸಿದ್ಧವಾದುದು ಎಂಬುದನ್ನು ತಿಳಿಸುತ್ತದೆ. ಇಲ್ಲಿ **ಯೋನಿಂ** ಎಂಬುದು ಉಪಲಕ್ಷಣವಾಗಿ ಅವತಾರದ ಸರ್ವ ರಹಸ್ಯವನ್ನೂ ಬೋಧಿಸುತ್ತದೆ. ಹಾಗಿಲ್ಲದಿದ್ದರೆ **ಪರಿಜಾನನ್ತಿ** ಎಂಬುದರ **ಪರಿ** ಎಂಬ ಉಪಸರ್ಗಕ್ಕೆ ಅರ್ಥವೇ ಇಲ್ಲವಾಗುತ್ತದೆ. ಅವತಾರ ರಹಸ್ಯದ ಸರ್ವವಿಷಯವನ್ನೂ ಯಥಾವತ್ತಾಗಿ ತಿಳಿದರೆ ತಾನೇ **ಪರಿಜಾನಂತಿ** ಎಂದು ಹೇಳಬಹುದು ||೧೦||

**ಮೂಲಕ್ಕೆ ಅರ್ಥವು :—** ಈ ಅವತಾರ ರಹಸ್ಯದ ಜ್ಞಾನವು ಪ್ರಾಸಙ್ಗಿಕವಾದರೂ, ಉಪಾಸನರೂಪ ಉಪಾಯಾನುಷ್ಠಾನಕ್ಕೆ ಉಪಾಸ್ಯರೂಪ ದಿವ್ಯಮಙ್ಗಳ ವಿಗ್ರಹವು ತನ್ನ ವಿಭವಾವತಾರಗಳಿಂದ ರಾಮಕೃಷ್ಣಾದಿ ರೂಪಗಳೆಂದು "ತತ್ತ್ವಂ ಪರಂ ಯೋಗಿನಾಂ" (ಭಾಗ. ೧೦-೪೩.೧೭ ಎಂದು ಮಹರ್ಷಿಯು ಹೇಳಿರುವಹಾಗೆ ತಿಳಿಸಿ, ಶ್ರೀಕೃಷ್ಣನು ತನ್ನ ಸೌಲಭ್ಯವನ್ನು ಪ್ರಕಟಿಸಿದರು. ಹಿಂದೆ ಅವತಾರೋದ್ದೇಶ್ಯವು ಸಾಧುಪರಿತ್ರಾಣ,ದುಷ್ಟನಿಗ್ರಹ, ಧರ್ಮಸಂಸ್ಥಾಪನವಾದರೂ,ಇನ್ನೂ ಇತರ ಚೇತನರು ಅನೇಕ ಇಷ್ಟಾರ್ಥಗಳನ್ನು ಪ್ರಾರ್ಥಿಸಿರುವರು, ಅವುಗಳನ್ನೆಲ್ಲಾ ಸಲ್ಲಿಸಲು ಈ ಅವತಾರ ಕಾಲವು ಸುಸಮಯವಾದುದರಿಂದ ಅವುಗಳನ್ನೂ ಕೂಡ ನಡೆಸಿಕೊಡುವೆನೆಂದು ಹೇಳುತ್ತಾರೆ. ಇವುಗಳೆಲ್ಲಾ ತನ್ನ ಅವತಾರಕ್ಕೆ ಮುಖ್ಯ ಕಾರಣವಲ್ಲದಿದ್ದರೂ ಅನೇಕ ಚೇತನರು ನಾನಾವಿಧ ಮನೋರಥಗಳಿಂದ ನನ್ನನ್ನು ಹಿಂದೆ ಆಶ್ರಯಿಸಿರುತ್ತಾರೆ. ಈಗ ಅನುವರ್ತಿಸಿ ನಡೆಯುತ್ತಿರುತ್ತಾರೆ. ಅಂತಹ ಕೋರಿಕೆಗಳನ್ನೆಲ್ಲಾ ನಡೆಸಿಕೊಡಲು ಇಂತಹ ಅವತಾರವು ಸುಸಮಯವೆಂಬಭಿಪ್ರಾಯದಿಂದ "**ಯೇ ಯಥಾ**" ಎಂದಾರಂಭಿಸಿ ಹೇಳುತ್ತಾರೆ. ಈ ಅವತಾರಗಳಮೂಲಕ ಸರ್ವೇಶ್ವರನು ತನ್ನ ನಿರುಪಾಧಿಕ ಕೃಪಾ, ಸೌಲಭ್ಯ ಸೌಶೀಲ್ಯಾದಿ ಮಹಾ ಗುಣಗಳನ್ನು ಪ್ರದರ್ಶಿಸಬೇಕೆಂದು ಸಙ್ಕಲ್ಪಿಸಿರುತ್ತಾನೆ. ಅವತಾರಗಳು ಏತಕ್ಕೆ ಎಂದು ವಾದಿಸುವವರು ಇಂತಹ ಗುಣಗಳನ್ನು ಪ್ರಕಟಿಸುವದು ಆವಶ್ಯಕವಿಲ್ಲವೆಂದು ಹೇಳಬೇಕಾಗುತ್ತದೆ. ಈ ಶ್ಲೋಕದಲ್ಲಿ ಶ್ರೀಕೃಷ್ಣ ಭಗವಾನರವರು ತಾವು ಎಂತಹ ಕೃಪಾ ಮಹೋದಧಿ ಎಂಬುದನ್ನು ತೋರಿಸಿಕೊಂಡು ತಾನು **ಶರಣಾಗತವತ್ಸಲನೆಂಬುದನ್ನು** ಸಾರಿರುತ್ತಾರೆ. ಅರ್ಚಾವತಾರಿಯಾಗಿ ನಿಂತು ಸರ್ವೇಶ್ವರನು ಈ ಬಿರುದಿಗೆಇನ್ನೂ ಹೆಚ್ಚಾದ ಮಹಿಮೆಯನ್ನು ಸ್ಥಾಪಿಸಿರುತ್ತಾನೆ. **ಯೇ**-ಯಾರು ನನ್ನನ್ನಾಶ್ರಯಿಸಿ ಮನೋರಥಗಳನ್ನು ಪಡೆಯಬೇಕೆಂದಿರುವರೋ ಅವರು, **ಯಥಾ** - ಯಾವ ಪ್ರಕಾರವಾಗಿ, "**ವಿದಿತ ಸ್ಸಹಿಧರ್ಮಜ್ಞಶ್ಶರಣಾಗತವತ್ಸಲಃ**" ಎಂದು ರಾವಣನಿಗೆ ಸೀತೆಯು ಉಪದೇಶಿಸಿದ ರೀತಿಯಲ್ಲಿ ಶರಣಾಗತರಲ್ಲಿ ನಿರತಿಶಯ ವಾತ್ಸಲ್ಯವುಳ್ಳ, **ಮಾಂ** - ನನ್ನನ್ನು, **ಪ್ರಪದ್ಯಂತೇ** - ಶರಣಾಗತಿ ಮೂಲಕ ಆಶ್ರಯಿಸುವರೋ, **ತಾನ್** - ಅವರನ್ನು, **ತಥೈವ** - ಆ ಪ್ರಕಾರವಾಗಿಯೇ, **ಭಜಾಮಿ**-ಈ ಅವತಾರಕಾಲದಲ್ಲಿ ಹೊಂದುವೆನು ಎಂದರೆ ಅವರ ಮನೋರಥ ಪೂರ್ಣವನ್ನು ಮಾಡುವೆನು. ಏಕೆಂದರೆ ಹೇ **ಪಾರ್ಥ** - ಓ ಅರ್ಜುನನೇ, **ಮನುಷ್ಯಾಃ** - ನಾನು ಈಗ ಮನುಷ್ಯನಾಗಿ ಅವತರಿಸಿರುವದರಿಂದ ಮನುಷ್ಯರು, ಇಲ್ಲಿ ಮನುಷ್ಯ ಶಬ್ದದಿಂದ ಸಾಧಾರಣರಾದವರು ಹೇಳಲ್ಪಡಲಿಲ್ಲವು; ಪ್ರಪನ್ನರಾದ

ಭಾ. ನ ಕೇವಲಂ ದೇವ ಮನುಷ್ಯಾದಿ ರೂಪೇಣಾವತೀರ್ಯ ಮತ್ಸಮಾಶ್ರಯಣಾಪೇಕ್ಷಾಣಾಂ ಪರಿತ್ರಾಣಂ ಕರೋಮಿ, ಅಪಿತು ಯೇ ಮತ್ಸಮಾಶ್ರಯಣಾಪೇಕ್ಷಾ ಯಥಾ-ಯೇನಪ್ರಕಾರೇಣ ಸ್ವಾಪೇಕ್ಷಾನುರೂಪಂ ಮಾಂ ಸಙ್ಕಲ್ಪ್ಯ ಪ್ರಪದ್ಯನ್ತೇ-ಸಮಾಶ್ರಯನ್ತೇ, ತಾನ್ ಪ್ರತಿ ತಥೈವ-ತನ್ಮನೀಷಿತ ಪ್ರಕಾರೇಣ ಭಜಾಮಿ-ಮಾಂ ದರ್ಶಯಾಮಿ;

ಸ್ತ್ರೀ ಪುರುಷರೇ ಹೇಳಲ್ಪಟ್ಟವರು, ಇದು ಪ್ರಪದ್ಯನ್ತೇ ಎಂಬ ಪದದಿಂದಲೇ ವ್ಯಕ್ತವು, ಮಮ ವರ್ತ್ಮ - ನನ್ನ ಸ್ವಭಾವವನ್ನು ನನ್ನ ಸೌಲಭ್ಯ ಸೌಶೀಲ್ಯಾದಿ ಸ್ವಭಾವವನ್ನು, ಅನುವರ್ತಂತೇ ಅನುಸರಿಸಿ ನಡೆಯುತ್ತಾರೆ ಅನುಭವಿಸಿಕೊಂಡು ಇರುತ್ತಾರೆ. ಈ ಅವತಾರಕಾಲಗಳಲ್ಲಿ ಅನೇಕರು ತಮ್ಮ ಮನೋರಥವನ್ನು ಪೂರ್ಣಮಾಡಿಕೊಳ್ಳುವರು. ಅವರುಗಳು ಸುಕೃತ ಪರಿಪಾಕದಿಂದ ನನ್ನನ್ನೇ ಹಿಂಬಾಲಿಸಿ ಅನುಸರಿಸಿ ನಡೆಯುವರು; ನನ್ನನ್ನೇ ಶರಣಹೊಂದಿ ಆಶ್ರಯಿಸುವರು; ಅಂತವರ ವಿಷಯದಲ್ಲಿ ನನ್ನ ಸೌಲಭ್ಯ ಸೌಶೀಲ್ಯ ಕೃಪೌದಾರ್ಯಾದಿ ಗುಣಗಳಿಂದ ಪ್ರೀತನಾಗಿ ಅಂತವರ ಕೋರಿಕೆಗಳನ್ನು ನಡೆಸಿಕೊಟ್ಟಿರುತ್ತೇನೆಂಬುದು ತಾತ್ಪರ್ಯವು. ಪ್ರಪದ್ಯನ್ತೇ ಎಂಬ ಪ್ರಯೋಗದಿಂದ,ಯಾರು ಯಾರು ಯಾವ ಯಾವ ಮನೋರಥಗಳಿಗಾಗಿ ನನ್ನಲ್ಲಿ ಪ್ರಪದನ ವನ್ನು ಅನುಷ್ಠಿಸುತ್ತಾರೋ ಅವರವರಿಗೆಲ್ಲಾ ಆಯಾ ಮನೋರಥಗಳನ್ನು ಪೂರ್ಣಮಾಡಿರುತ್ತೇನೆಂಬ ಭಾವವು ತೋರಿಬರುತ್ತದೆ. ಅರ್ಜುನನಾದ ನೀನು ಹೇಗೆ "ಶಾಧಿಮಾಂ" ಎಂದು ಶರಣಾಗತಿಯನ್ನನುಷ್ಠಿಸಿ ಯಥಾರ್ಥಜ್ಞಾನವನ್ನಪೇಕ್ಷಿಸಿದೆಯೋ, ಅದಕ್ಕಾಗಿ ಈ ಗುಹ್ಯತಮವಾದ ಶಾಸ್ತ್ರವನ್ನು ಹೇಗೆ ಉಪದೇಶಿಸಿದೆನೋ, ಹಾಗೆಯೇ ಶರಣಾಗತಿಯನ್ನು ಅನುಷ್ಠಿಸಿ ಬೇಡಿಕೊಳ್ಳುವವರ ಕೋರಿಕೆಗಳನ್ನು ಸಲ್ಲಿಸುವದಕ್ಕಾಗಿ ಈ ಅವತಾರ ಕಾಲಗಳಲ್ಲೂ ಕಂಕಣಬದ್ಧನಾಗಿರುವೆನೆಂಬ ಭಾವವೂ ಸ್ಪಷ್ಟವು. ಇದರಿಂದ ಪ್ರಪದನವೂ ಉಪಾಸನದಹಾಗೆ ಉಪಾಯವೆಂಬಂಶವನ್ನು ಇಲ್ಲಿ ಗ್ರಹಿಸಬಹುದು. ಮುಂದೆ ೧೮ನೆಯ ಅಧ್ಯಾಯಾಂತ್ಯದಲ್ಲಿಯೂ ಈ ಅಭಿಪ್ರಾಯವೇ ಬೋಧಿಸಲ್ಪಡುವದು. "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂಬ ಶ್ರೀ ಯತಿವರ್ಯರ ಅವೋಘೋಕ್ತಿಯಪ್ರಕಾರ ಭಕ್ತಿ ಪ್ರಪತ್ತಿಗಳೆಂಬ ಎರಡುವಿಧ ಉಪಾಯಗಳಲ್ಲೂ ಪರಮಾತ್ಮನನ್ನು ವಶಮಾಡಿಕೊಳ್ಳುವದಕ್ಕೆ ಶರಣಾಗತಿಯು ಅತ್ಯಾವಶ್ಯಕವು; ಇದು ಉಪಾಸನಕ್ಕೆ ಅಙ್ಗವಾಗಿ ಆವಶ್ಯಕವೆಂದು "ತಮೇವ ಶರಣಂಗಚ್ಛ ಸರ್ವಭಾವೇನ ಭಾರತ" (ಗೀ. ೧೮. ೬೨.) ಎಂದು ಹೇಳಲ್ಪಟ್ಟ ಪುನಃ ೬೬ನೆಯ ಶ್ಲೋಕದಲ್ಲೂ "ಮಾಮೇಕಂ ಶರಣಂ ವ್ರಜ" ಎಂಬಲ್ಲಿಯೂ ಬೋಧಿತವು. ಈ ಶ್ಲೋಕದಲ್ಲೇ ಅರ್ಥವಾಗಿ ಈ ಶರಣಾಗತಿಯೇ ಸ್ವತಂತ್ರೋಪಾಯವಾಗಬಹುದೆಂದೂ ಉಪದೇಶಿಸಲ್ಪಟ್ಟಿರುತ್ತದೆ.

ಭಾಷ್ಯಾರ್ಥವು :—ದೇವಮನುಷ್ಯಾದಿರೂಪೇಣ - ದೇವ ಮನುಷ್ಯ ಮೊದಲಾದರೂಪದಿಂದ, ಅವತೀರ್ಯ - ಅವತಾರಮಾಡಿ, ಮತ್ಸಮಾಶ್ರಯಣಾಪೇಕ್ಷಾಣಾಂ - ನನ್ನನ್ನು ಆಶ್ರಯಿಸಬೇಕೆಂಬ ಅಪೇಕ್ಷೆಯಿರುವ ಮೋಕ್ಷಾರ್ಥಿಗಳ, ಪರಿತ್ರಾಣಂ ನ ಕೇವಲಂ ಕರೋಮಿ – ಸಂರಕ್ಷಣೆಯನ್ನು ಮಾತ್ರವೇ ಮಾಡುತ್ತೇನೆ ಎಂಬುದಲ್ಲವು; ಅಪಿತು - ಮತ್ತೇನೆಂದರೆ, ಮತ್ಸಮಾಶ್ರಯಣಾಪೇಕ್ಷಾ - ನನ್ನನ್ನು ಆಶ್ರಯಿಸಬೇಕೆಂಬಪೇಕ್ಷೆಯು, ಯಥಾ - ಎಂದರೆ, ಯೇನಪ್ರಕಾರೇಣ - ಯಾವ ಪ್ರಕಾರದಿಂದ, ಸ್ವಾಪೇಕ್ಷಾನುರೂಪಂ - ತಮ್ಮ ಪ್ರಾರ್ಥನೆಗೆ ಅನುರೂಪವಾಗಿ, ಮಾಂ - ನನ್ನನ್ನು, ಸಙ್ಕಲ್ಪ್ಯ ಪ್ರಪದ್ಯನ್ತೇ - ಸಙ್ಕಲ್ಪಿಸಿಕೊಂಡು ಆಶ್ರಯಿಸುತ್ತಾರೋ ಎಂದರೆ ನನ್ನನ್ನು ತಮ್ಮ ಮನೋರಥಕ್ಕೆ ವಿಷಯವಾಗಿ ಮಾಡಿಕೊಂಡು, ಉಪಾಯಾನುಷ್ಠಾನವನ್ನು ಮಾಡುತ್ತಾರೋ ಎಂದರೆ ಭಕ್ತಿಮೂಲಕವೋ ಪ್ರಪತ್ತಿ ಮೂಲಕವೋ ಪ್ರಪದನಾನುಷ್ಠಾನ ಮಾಡು

ಭಾ. ಕಿಮತ್ರ ಬಹುನಾ, ಸರ್ವೇ ಮನುಷ್ಯಾಃ ಮದನುವರ್ತ್ಯೈಕಮನೋರಥಾ ಮಮ ವರ್ತ್ಮ-ಮತ್ಸ್ವಭಾವಂ ಸರ್ವಂ ಯೋಗಿನಾಂ ವಾಙ್ಮನಸಾ ಗೋಚರಮಪಿ ಸ್ವಕೀಯೈಶ್ಚಕ್ಷುರಾದಿ ಕರಣೈಃ ಸ್ವಸ್ವಾಪೇಕ್ಷಿತೈಃ ಸರ್ವಪ್ರಕಾರೈ ರನುಭೂಯಾನುವರ್ತನ್ತೇ ||೧೧||

ತ್ತಾರೋ, ತಾಂ ಪ್ರತಿ - ಅಂತಹ ಪ್ರಪನ್ನರನ್ನು ಕುರಿತು, ತಥೈವ ಎಂದರೆ ತನ್ಮನೀಷಿತ ಪ್ರಕಾರೇಣ - ಅವರುಗಳು ಇಷ್ಟಪಟ್ಟ ಪ್ರಕಾರವಾಗಿ ವಸುದೇವ ದೇವಕಿಯರು ಪುತ್ರನಾಗಬೇಕೆಂದು ಅಪೇಕ್ಷಿಸಿದುದರಿಂದ ಪುತ್ರನಾದೆನು ; ಎಂಟುಜನ ಮಹಿಷಿಗಳು ನನನ್ನು ಪತಿಯಾಗಿ ವರಿಸಿದುದರಿಂದ ಅವರಿಗೆ ಪತಿಯಾದೆನು. ನನ್ನೊಂದಿಗೆ ಸರಸ ಸಲ್ಲಾಪಗಳನ್ನೂ ವಿಭ್ರಮವಿಲಾಸಗಳನ್ನೂ ಅಪೇಕ್ಷಿಸಿದವರಿಗೆ ಅವುಗಳನ್ನಿತ್ತೆನು, ಹೀಗೆ ಅವರುಗಳ ನಾನಾವಿಧ ಅಪೇಕ್ಷೆಗಳನ್ನೆಲ್ಲಾ ನಡೆಸಿಕೊಟ್ಟೆನೆಂಬ ಭಾವವು ; ಅವರುಗಳು ಅಪೇಕ್ಷಿಸಿದಹಾಗೆ ಮಾಡಿದರೆ ಪಕ್ಷಪಾತಮಾಡಿದೆನೆಂಬ ಅಪವಾದವು ತನಗುಂಟಾಗುವದಿಲ್ಲನೆಂಬ ಭಾವವೂ ಇದರಿಂದ ತೋರಿಬರುತ್ತದೆ. ಭಜಾಮಿ-ನಡೆಸಿಕೊಡುವೆನು. ಈ ಅಭಿಪ್ರಾಯವನ್ನೇ ವಿವರಿಸಿ ಹೇಳುತ್ತಾರೆ. ಕಿಮತ್ರಬಹುನಾ - ಈ ಸಂದರ್ಭದಲ್ಲಿ ತುಂಬಾ ಹೇಳತಕ್ಕದ್ದೇನಿರುತ್ತದೆ, ಸರ್ವೇ ಮನುಷ್ಯಾಃ - ಸಮಸ್ತರಾದ ನನ್ನನ್ನಾಶ್ರಯಿಸಿದ ಸ್ತ್ರೀ ಪುರುಷರು, ಮದನುವರ್ತ್ಯೈಕಮನೋರಥಾಃ - ಗೋಪಿಕಾ ಸ್ತ್ರೀಯರೇ ಮೊದಲಾದವರಹಾಗೆ ನನ್ನನ್ನು ಹಿಂಬಾಲಿಸಿ ನಡೆಯುವದೇ ಮನೋರಥವಾಗಿವುಳ್ಳವರು, ಮನುವರ್ತ್ಮ ಎಂದರೆ ಮತ್ಸ್ವಭಾವಂ ಸರ್ವಂ - ನನ್ನ ಸೌಲಭ್ಯಾತಿರೇಕವನ್ನು ತೋರಿಸುವ ಸ್ವಭಾವವೆಲ್ಲವನ್ನೂ, ಯೋಗಿನಾಂ ವಾಙ್ಮನಸಾ ಗೋಚರಮಪಿ - ಯೋಗಿಗಳ ವಾಕ್ಕಿಗೂ ಮನಸ್ಸಿಗೂ ಗೋಚರವಲ್ಲವಾಗಿದ್ದರೂ ಕೂಡ, ಸ್ವಕೀಯೈಶ್ಚಕ್ಷುರಾದಿ ಕರಣೈಃ - ತಮ್ಮ ನೇತ್ರವೇ ಮೊದಲಾದ ಇಂದ್ರಿಯಗಳ ಮೂಲಕವಾಗಿ, ಸರ್ವಶಃ ಎಂದರೆ, ಸ್ವಾಪೇಕ್ಷಿತೈಃ ಸರ್ವಪ್ರಕಾರೈಃ-ತಮಗೆ ಇಷ್ಟಗಳಾದ ಸರ್ವಪ್ರಕಾರದಿಂದಲೂ, ಅನುಭೂಯಾನುವರ್ತಂತೇ - ಅನುಭವಿಸಿ ನನ್ನನ್ನೇ ಹಿಂಬಾಲಿಸಿರುವರು; ಉತ್ಸವಾದಿಕಾಲಗಳಲ್ಲೆಲ್ಲಾ ಪ್ರಜೆಗಳು ರಾಜನನ್ನು ಕಂಡರೆ ಹಿಂಬಾಲಿಸುವಹಾಗೆ ಈ ರಾಜಾಧಿರಾಜನನ್ನೂ ಭಕ್ತರು ಹಿಂಬಾಲಿಸುವರು ಎಂಬ ಭಾವವು. ಯಾವಾಗ ತನಗೆ ಶರಣಾಗತರಾಗಿ ಆಶ್ರಯಿಸಿಬಿಟ್ಟರೋ, ಅವರ ವಿಷಯದಲ್ಲಿ ಸೌಲಭ್ಯಸೌಶೀಲ್ಯವಾತ್ಸಲ್ಯಗಳು ಉಂಟಾಗಿ ಅವರಿಗೆ ಅಸ್ವತಂತ್ರನಾಗಿ ನಟಿಸುವನು ಎಂಬ ಭಾವದಿಂದ, ಭಜಾಮಿ ಎಂದು ಹೇಳಿಕೊಂಡಿರುತ್ತಾರೆ. ಇದನ್ನು ತಮ್ಮ ಸ್ನೇಹಿತನಾದ ಕುಚೇಲನಿಗೆ ಮಾಡಿದ ಸರ್ವವಿಧ ಉಪಚಾರಗಳಿಂದ ವ್ಯಕ್ತವು. ಹಾಗೆಯೇ ರಾಮಾವತಾರದಲ್ಲೂ, "ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ" ಎಂದು ಹೇಳಿದುದರಿಂದ ಬ್ರಹ್ಮವಿತ್ತಾದ ವಿಶ್ವಾಮಿತ್ರರನ್ನು ಕುರಿತು ಶ್ರೀರಾಮನು ಹೇಳುತ್ತಾರೆ:—"ಇಮೌಸ್ಮ ಮುನಿ ಶಾರ್ದೂಲ ಕಿಂಕರೌ ಸಮುಪಸ್ಥಿತೌ । ಆಜ್ಞಾಪಯ ಯಥೇಷ್ಟಂವೈ ಶಾಸನಂ ಕರವಾವಕಿಮ್" (ಬಾಲಕಾಂಡ.) ಯಾವಾಗ ಕಿಂಕರನೆಂದು ಭಾವಿಸಿ ಸರ್ವೇಶ್ವರನನ್ನು ಆಶ್ರಯಿಸಿ ಪರಮ ಭಕ್ತನೆನಿಸಿದನೋ, ಆಗ ಅಹಂ ಭಕ್ತಪರಾಧೀನನೆಂದು ಹೇಳಿಕೊಳ್ಳುವನು; ಅವನು ತನ್ನನ್ನು ಯಾವಾಗ ಹುಡುಕಲು ಸಿದ್ಧನಾದನೋ, ಆಗ ಆ ಭಕ್ತರ ಎದುರಿಗೇನೆ ಬಂದು ನಿಲ್ಲುವಂತವನು; ಆದುದರಿಂದ ಸಮುಪಸ್ಥಿತೌ ಎಂದು ಹೇಳಲ್ಪಟ್ಟಿತು. ಯಾವಾಗ ವೇದಶಾಸ್ತ್ರದ ವಿಧಿ ನಿಷೇಧವಾಕ್ಯಗಳು ಸರ್ವೇಶ್ವರನ ಆಜ್ಞೆಗಳಾಗಿ ಭಾವಿಸಿ ತನ್ನನ್ನಾಶ್ರಯಿಸಿದನೋ, ಆಗ ಅಂತಹ ಭಕ್ತನ ಅಪೇಕ್ಷಿತಗಳೆಲ್ಲಾ ತನಗೆ ಆಜ್ಞೆಯಾಗಿ ಭಾವಿಸಿ ನಡೆಸಿಕೊಡುವೆನು; ಯಾವಾಗ ಸರ್ವೇಶ್ವರನ ಇಷ್ಟಾನುಸಾರ ಭಕ್ತನು ನಡೆದನೋ, ಆಗ ಆತನ ಇಷ್ಟಾನುಸಾರವಾಗಿ ನಡೆಯುವೆನು, ಆದುದರಿಂದ ಯಥೇಷ್ಟಂವೈ ಎಂದು ಹೇಳಲ್ಪ

ಟ್ಟಿತು ; ಮಹಾನುಭಾವನ ಸೌಲಭ್ಯವು ಉಪರಿಯಾದುದು; ಆದುದರಿಂದ ತಾಂ ಸ್ತಥೈವ ಭಜಾಮ್ಯಹಂ ಎಂದು ಹೇಳಲ್ಪಟ್ಟಿತು. ಹೀಗೆ ಅವತಾರಕಾಲಗಳಲ್ಲಿ ನಾನಾವಿಧ ಮನೋರಥಗಳನ್ನು ಮನಸ್ಸಿನಲ್ಲಿಟ್ಟು ತನ್ನನ್ನುಚೇತನರು ಶರಣಾಗತಿ ಮುಖೇನ ಆಶ್ರಯಿಸುವರು; ಅಂತವರ ಕೋರಿಕೆಗಳನ್ನೆಲ್ಲಾ ಪೂರ್ತಿಮಾಡುತ್ತೇನೆಂದು ಹೇಳುವವರಮೂಲಕ ತನ್ನ ಸೌಲಭ್ಯವನ್ನು ಪ್ರಕಟಿಸಿರುತ್ತಾರೆ. ಆದುದರಿಂದ ಭಜಾಮ್ಯಹಂ ಎಂಬುದಕ್ಕೆ ಸುಲಭವಾಗಿ ದೃಗ್ಗೋಚರನಾಗುವೆನು ಎಂಬ ಅಭಿಪ್ರಾಯದಿಂದ ಮಾಂ ದರ್ಶಯಾಮಿ ಎಂದು ವ್ಯಾಖ್ಯಾನ ಮಾಡಿರುತ್ತಾರೆ.

ಗೋಪಿಕಾಸ್ತ್ರೀಯರಾಗಿ ಹುಟ್ಟಿ ತನ್ನನುಭವವನ್ನು ಪ್ರಾರ್ಥಿಸಿದುದರಿಂದ ಅವರಿಗೆ ಅಂತಹ ಆನಂದವನ್ನು ತನ್ನ ದರ್ಶನಾಲಾಪಾಲಿಂಗನಾದಿಗಳ ಮೂಲಕ ದಯಪಾಲಿಸಿರುತ್ತೇನೆ. ಹಾಗೆಯೇ ಮುಚುಕುಂದ ಚಾಂಬರ್ವಾರವರಿಗೂ ಅವರುಗಳ ಅಭಿಲಷಿತಾನುಗುಣವಾಗಿ ಕೋರಿಕೆಗಳನ್ನು ನಡೆಸಿಕೊಟ್ಟಿರುತ್ತೇನೆ. ಇನ್ನೂ ಮಾಲಾಕಾರ, ಅಕ್ರೂರ, ಉದ್ಧವ, ಕುಚೇಲ, ಭೀಷ್ಮ, ವಿದುರಾದಿಗಳ ಪ್ರಾರ್ಥನೆಯನ್ನೂ ಸಲ್ಲಿಸಿರುತ್ತೇನೆ ರಾಮಾವತಾರದಲ್ಲೂ ಗುಹ, ಆಂಜನೇಯ, ಶಬರಿ, ವಿಭೀಷಣ, ಕಾಕಾದಿಗಳ ಮನೋರಥವನ್ನೂ ಪೂರ್ಣಮಾಡಿರುತ್ತೇನೆಂಬ ಭಾವವು. ಇವರುಗಳೆಲ್ಲಾ ನನ್ನಲ್ಲಿ ಪ್ರಪದನವನ್ನೂ ನನ್ನನ್ನೇ ಹಿಂಬಾಲಿಸಿ ಆಶ್ರಯಿಸಿದವರು; ಆದಪ್ರಯುಕ್ತ ಅವರ ಇಷ್ಟಾನುಸಾರ ನಡೆಯುವದು ತನಗೆ ಕರ್ತವ್ಯವೆಂದು ತಿಳಿಸ ವದಕ್ಕಾಗಿ, ತಥೈವ ಭಜಾಮ್ಯಹಂ ಎಂದು ಹೇಳಿಕೊಂಡಿರುತ್ತಾರೆ. ವಿಭವಾವತಾರದ ಮಹಿಮೆ ಏನೆಂದರೆ ಉಪಾಸ್ಯ ದೇವತೆಯನ್ನು ತಾನು ಸಾಕ್ಷಾತ್ಕರಿಸುತ್ತಾ ಇರುವಾಗಲೇ ದೃಷ್ಟ್ವೈವ ಹಿನ ಶ್ಲೋಕೆ ಮುಪನೇಷ್ಯತಿ ರಾಘವಃ ಎಂದು ಹೇಳಿರುವಹಾಗೆ ಪುಣ್ಯಶಾಲಿಗಳಿಗೆ ಆ ಪರತತ್ವವನ್ನೇ ಮಾಂಸ ಚಕ್ಷುಸ್ಸಿನಿಂದಲೂ ನೋಡುತ್ತೇನೆಯೇ ಎಂಬ ಆನಂದವುಂಟು. ಇತರ ಅನೇಕ ಪಾಪಿಷ್ಠರು ಶ್ರೀಕೃಷ್ಣನನ್ನು ನೋಡಿದರೂ ಸಾಧಾರಣ ಮನುಷ್ಯನೆಂದು ಭಾವಿಸುವರು. ಇಂತಹ ಸುಕೃತವು ದಿವ್ಯವಾದ ಅರ್ಚಾವತಾರ ವಿಗ್ರಹವನ್ನು ನೋಡುವವರಿಗೂ ಉಂಟು. ಅಂತಹ ವಿಗ್ರಹವು ಉಪಾಸ್ಯ ದೇವತೆಯಾಗಿರುವವರಿಗೆ ಚರ್ಮ ಚಕ್ಷುಸ್ಸಿನಿಂದ ತಿರುಮಲೆ ಶ್ರೀನಿವಾಸನನ್ನೇ ನೋಡುವದು ತುಂಬಾ ಆನಂದಾವಹವು. ಈ ಅಭಿಪ್ರಾಯವನ್ನೂ ಸಹ ಈ ಶ್ಲೋಕದಿಂದ ಅಪ್ರಸ್ತುತವಾದರೂ ಊಹಿಸಬಹುದು. ಏಕೆಂದರೆ ನಮ್ಮ ಚರ್ಮ ಚಕ್ಷುಸ್ಸಿಗೆ ವಿಷಯವಾಗುವ ದಿವ್ಯ ಮಙ್ಗಳ ವಿಗ್ರಹಗಳು, ವಿಭವಾವತಾರ ವಿಗ್ರಹಗಳು, ಇವು ತತ್ಕಾಲದಲ್ಲಿ ಜನ್ಮವೆತ್ತಿದವರಿಗೆ ಮಾತ್ರವೇ ದೃಗ್ಗೋಚರವಾಗುವುವು; ಅರ್ಚಾವತಾರವಾದರೋ ಹಾಗಲ್ಲವೆ, ಹಿಂದೆ ಜನ್ಮವೆತ್ತಿದವರಿಗೂ,ಈಗಿನವರಿಗೂ, ಮುಂದೆ ಜನ್ಮವೆತ್ತುವವರಿಗೂ,ಸಹ ದೃಗ್ಗೋಚರವಾಗಿ,ತನ್ಮೂಲಕ ಸರ್ವೇಶ್ವರನು ಅವರವರುಗಳ ಇಷ್ಟಾನುಸಾರ ಫಲಗಳನ್ನು ದಯಪಾಲಿಸುವನು. ಹೀಗೆ ಈ ಶ್ಲೋಕದಿಂದ ತನ್ನ ದಿವ್ಯಮಙ್ಗಳವಿಗ್ರಹ ಸಂದರ್ಶನ, ಉಪಾಸನಗಳ ಮೂಲಕ ಚನ್ನಾಗಿ ಆಶ್ರಯಿಸಿದವರಿಗೆ ಫಲಾವಾಪ್ತಿಯುಂಟೆಂದು ತನ್ನ ಸೌಲಭ್ಯಾತಿಶಯವನ್ನು ಹೇಳಿಕೊಂಡಿರುತ್ತಾರೆ. ಹಾಗೆಂದು ಭಾವಿಸದೆ ಕಲ್ಲಿನ ಪ್ರತಿಮೆ ಎಂದು ಭಾವಿಸುವವನಿಗೆ ಕಲ್ಲೇ ಫಲವು. ಹಾಗಲ್ಲದೆ ವಾಙ್ಮನಸಾಗೋಚರನಾದ ಮಹಾನುಭಾವನು ತನಗೆ ದೃಗ್ಗೋಚರನಾದನೆಂದು ಭಾವಿಸುವವನಿಗೆ ಸರ್ವ ಮನೋರಥಾವಾಪ್ತಿಯೂ ಉಂಟೆಂಬುದೂ ತೋರಿಬರುತ್ತದೆ. ಅರ್ಚಾವತಾರವಿಗ್ರಹವೂ ದಿವ್ಯ ಮಙ್ಗಳ ವಿಗ್ರಹಯುಕ್ತವು ಎಂಬುದಕ್ಕೆ ಪ್ರಮಾಣವಾಗಿ "ಬಿಂಬಾ ಕೃತ್ಯಾತ್ಮನಾ ಬಿಂಬೇ ಸಮಾಗತ್ಯಾವತಿಷ್ಠತೇ" ಎಂದರೆ ಸುವರ್ಣ, ರಜತ, ಕಲ್ಲು ಮುಂತಾದವುಗಳಿಂದ ಮಾಡಿದ ಬಿಂಬಕ್ಕೆ ಸಮಾನವಾದ ದಿವ್ಯಮಙ್ಗಳವಿಗ್ರಹದೊಡನೆ ಬಂದು ಆ ಬಿಂಬದಲ್ಲಿ ಭಗವಂತನು ನಿಲ್ಲುತ್ತಾನೆ" ಎಂದು ಸಾತ್ವತ ಸಂಹಿತೆಯಲ್ಲಿ ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರೀ ಶೌನಕರೂ,"ಸುರೂಪಾಂ

ಪ್ರತಿಮಾಂ ವಿವಿಷ್ಣೋಃ ಪ್ರಸನ್ನವದನೇಕ್ಷಣಾಂ । ಕೃತ್ವಾತ್ಮನಃ ಪ್ರೀತಿಕರೀಂ ಸುವರ್ಣರಜತಾದಿಭಿಃ।ತಾಮರ್ಚಯೇತ್ತಾಂ ಪ್ರಣಮೇತ್ತಾಂ ಯಜೇತ್ತಾಂ ವಿಚಿನ್ತಯೇತ್ । ವಿಶತ್ಯಪಾಸ್ತದೋಷಸ್ತು ತಾಮೇವ ಬ್ರಹ್ಮರೂಪಿಣೀಂ" ಎಂದು ಹಾಗೆಯೇ ಹೇಳಿರುತ್ತಾರೆ. ೨೦ನೆಯ ಪುಟವನ್ನು ನೋಡಿ. ಅವರವರುಗಳಿಗೆ ಹೇಗೆ ಇಷ್ಟವೋ ಹಾಗೆಯೇ ನಡೆಸಿಕೊಡುತ್ತೇನೆಂದು ಹೇಳುವದಕ್ಕಾಗಿಯೇ ಸರ್ವಶಃ ಎಂಬ ಪ್ರಯೋಗವು. ಹೀಗೆ ನಡೆಸಿಕೊಡುವವರಿಂದ ಅವರುಗಳು ನನ್ನನ್ನು ಅನುಭವಿಸಿಕೊಂಡು ವರ್ತಿಸುವರು ಎಂಬ ಭಾವವು.

ಹೀಗೆ ಅವತಾರದ ಉದ್ದೇಶ್ಯವು ಯಾರು ತನ್ನನ್ನಾಶ್ರಯಿಸುತ್ತಾರೋ ಅಂತಹ ಭಕ್ತರಭೀಷ್ಟಗಳನ್ನು ಸಲ್ಲಿಸುವದಕ್ಕಾಗಿಯೇ ವಿನಾ ಅನ್ಯಥಾ ಇಲ್ಲವೆಂಬ ಶಾಸ್ತ್ರಾರ್ಥವನ್ನು ಇಲ್ಲಿ ಪ್ರಕಟಿಸಿರುತ್ತಾರೆ. ಪಾಂಡವರಿಗೂ ಕೌರವರಿಗೂ ಯುದ್ಧವು ಯಾವಾಗನಡೆಯಲೇ ಬೇಕೆಂದಾಯಿತೋ, ಆಗ ಶ್ರೀಕೃಷ್ಣನು ಶರಣಾಗತಿಯನ್ನನುಸರಿಸದೆ ತಲೆಯ ಕಡೆಯಲ್ಲಿ ತಾನು ನಿದ್ರಿಸುತ್ತಿದ್ದಾಗ ಕೂತಿದ್ದ ದುರ್ಯೋಧನನನ್ನು ತ್ಯಜಿಸಿ, ತನ್ನ ಪಾದವನ್ನಾಶ್ರಯಿಸಿ ಕೂತಿದ್ದ ಅರ್ಜುನನಿಗೆ ಸಹಾಯಮಾಡುವದಾಗಿ ಒಪ್ಪಿ, ಲೀಲಾಸಾರಥಿಯಾಗಿ ಎಲ್ಲವನ್ನೂ ನಡೆಸಿಕೊಟ್ಟ ಶ್ರೀಕೃಷ್ಣನ ಅವತಾರದ ಮಾಹಾತ್ಮ್ಯೆಯನ್ನೂ, ಆ ಮಹಾನುಭಾವನು ಕೃಪಾ ಸೌಲಭ್ಯ ಸೌಶೀಲ್ಯಾದಿಗಳನ್ನು ಪ್ರದರ್ಶಿಸಿದುದನ್ನೂ ಚಿನ್ತಿಸಿದರೆ ಅವತಾರ ವಿಷಯವಾದ ಕುತರ್ಕಗಳೆಲ್ಲಾ ತೊಲಗುವುವೆಂಬುದರಲ್ಲಿ ಸಂದೇಹವಿಲ್ಲವು. ಆದರೂ ಹಿಂದೆ ಬಹೂನಿ ಮೇ ಎಂಬ ಶ್ಲೋಕದ ಅವತಾರಿಕೆಯಲ್ಲಿ ಮಾಡಿದ ಪೂರ್ವಪಕ್ಷಗಳಿಗೆ ಈ ಅವತಾರ ರಹಸ್ಯವನ್ನು ತಿಳಿಸುವ ಈ ಭಗವದುಕ್ತಿಗಳು ಹೇಗೆ ಸಮಾಧಾನವನ್ನು ಹೇಳುತ್ತವೆ ಎಂಬುದನ್ನು ಇಲ್ಲಿ ಚರ್ಚಿಸತಕ್ಕದ್ದು ಆವಶ್ಯಕವಾಗಿರುತ್ತದೆ :—

೧. ಹೇಯಪ್ರತ್ಯನೀಕನಾದ ಸರ್ವೇಶ್ವರನು ಹೇಯವಾದ ಮಾನುಷ ತಿರ್ಯಗ್ರೂಪಗಳನ್ನು ಧರಿಸುತ್ತಾನೆಯೇ ಎಂಬ ಚೋದ್ಯವು, ರೂಪವು ಹಾಗೆ ತೋರಿದರೂ, ಶರೀರವು ಹೇಯವಲ್ಲದೆ ದಿವ್ಯಮಙ್ಗಳ ವಿಗ್ರಹವೆಂಬುದರಿಂದ ಪರಿಹೃತವು. ಈ ಶರೀರಗಳು ಕರ್ಮವಶ್ಯತೆಯಿಂದುಂಟಾದವಲ್ಲವು, ಅಪ್ರಾಕೃತವಾದವು, ಸ್ವತಂತ್ರೇಚ್ಛೆಯಿಂದುಂಟಾದವು.

೨. ಸರ್ವಜ್ಞನಾದವನು ಹಿತಾಹಿತಗಳನ್ನು ತಿಳಿಯದ ಬಾಲನಂತೆ ಸಂಸಾರದಲ್ಲಿ ಸಿಕ್ಕಿ ಬಂಧಕ್ಕೆ ಗುರಿಯಾಗಬಹುದೇ ಎಂಬ ಚೋದ್ಯವು, ಸರ್ವಜ್ಞನಿಗೆ ಇವೆಲ್ಲಾ ಲೋಕ ವಿಡಂಬನವಾದುದರಿಂದ, ಲೀಲೆಯಾಗಿ ಇವೆಲ್ಲವನ್ನೂ ಸ್ವಸಙ್ಕಲ್ಪದಿಂದಲೇ ಸ್ವತಂತ್ರಿಸಿ ನಡೆಸುತ್ತಾನೆಯೇ ವಿನಾ, ವಸ್ತುತಃ ದುಃಖಾನುಭವಾದಿಗಳಿಲ್ಲವೆಂಬುದರಿಂದ ಪರಿಹೃತವು.

೩. ಸಾಧುಪರಿತ್ರಾಣಾದಿಗಳನ್ನೆಲ್ಲಾ ಸ್ವಸಙ್ಕಲ್ಪಮಾತ್ರದಿಂದಲೇ ನಿರ್ವಹಿಸುವ ಶಕ್ತಿಇರುವಾಗ ಅವತಾರಗಳಆವಶ್ಯಕತೆಯೇನು ಎಂಬಾಕ್ಷೇಪವೂ,ಸ್ವತಂತ್ರನಾಗಿ ಪರಿಪೂರ್ಣಕಾಮನಾಗಿರುವವನನ್ನು ಅವತರಿಸಕೂಡದು,ಲೀಲಾಚೇಷ್ಟಿತಗಳು ಕೂಡದು,ಸೌಲಭ್ಯ ಸೌಶೀಲ್ಯ ಪ್ರದರ್ಶನ ಕೂಡದು, ಎಂಬ ನಿರ್ಬಂಧವೂ ಸರಿಯೇ?ಮಹಾನುಭಾವರಾದ ಸಾಧುಗಳಿಗೆ ದರ್ಶನ ಸಲ್ಲಾಪಗಳನ್ನುಕೊಡದೇ ಇದ್ದರೆ ಅವರು ಎಂದಿಗೂ ಸಹಿಸರು. ಪ್ರಶಿಥಿಲ ಸರ್ವಗಾತ್ರವುಳ್ಳವರಾಗುವರು, ಅಂತವರಿಗೆ ಜೀವವು ಬಹುಕಾಲ ಉಳಿಯುವದಿಲ್ಲವು. ಅಂತವರಿಗೆ ಕಣ್ಣುಮುಚ್ಚಿ ಕಣ್ಣು ತೆರೆಯುವಕಾಲವು ಒಂದು ಯುಗವಾಗಿ ತೋರುತ್ತದೆಂದೂ, ಭಗವಂತನ ದಿವ್ಯಸುಂದರಮುಖವನ್ನೀಕ್ಷಿಸುತ್ತಿರುವ ಕಾಲದಲ್ಲಿ ವಿಚ್ಛೇದವನ್ನುಂಟುಮಾಡುವಹಾಗೆ ಕಣ್ಣಿಗೆ ರೆಪ್ಪೆಪಾಟವನ್ನು ಏರ್ಪಡಿಸಿದ ಚತುರ್ಮುಖನು ಮಂದನೆಂದು ತೋರುತ್ತದೆ ಎಂದು ಗೋಪಿಕಾಗೀತೆಯ "ಅಟತಿಯದ್ಭವಾನ್" ಎಂಬ ಶ್ಲೋಕದಲ್ಲಿ ಭಕ್ತರು ಕ್ಷಣಮಪಿ ವಿಶ್ಲೇಷವನ್ನು ಸಹಿಸರೆಂದು ಹೇಳಲ್ಪಟ್ಟಿರುತ್ತದೆ. ಕೃಪಾ ಪೀಯೂಷ

ಜಲಧಿಯು ಅಂತಹಹೃದ್ಯರೊಂದಿಗೆ ಇದ್ದುಕೊಂಡು ದಿವ್ಯಚೇಷ್ಟಿತಗಳನ್ನೆಸಗಬೇಕೆಂಬ ಸಙ್ಕಲ್ಪವುಳ್ಳವನೆಂಬುದರಿಂದ ಪರಿಹೃತವು. ಇದಲ್ಲದೆ ಧರ್ಮಸಂಸ್ಥಾಪನೆಯನ್ನು ಇನ್ನು ಯಾರು ಮಾಡಿದರೂ ಸರಿಹೋಗುವದಿಲ್ಲವು; ತನ್ನ ಶಾಸ್ತ್ರವಾದ ವೇದಗಳ ಉಪಬ್ರಹ್ಮಣವನ್ನು ತಾನೇ ಮಾಡುವದು ಸರ್ವೋತ್ಕೃಷ್ಟವು. ಸರ್ವ ಕರ್ಮಾರಾಧ್ಯನೇ ತಾನು ಎಂದು ಗೋವರ್ಧನ ಗಿರಿಯನ್ನೆತ್ತಿದ ಸಂದರ್ಭದಲ್ಲಿ ಪ್ರದರ್ಶಿಸುವದೂ ಮುಖ್ಯವು. ಹೀಗೆ ಈ ಕಾರಣಗಳಿಂದಲೂ ಅವತಾರಗಳು ಉಪಪನ್ನವು. ಶ್ರುತಿ ಪ್ರಮಾಣಬಲವೂ ಉಂಟು :—"**ಅಜಾಯಮಾನೋ ಬಹುಧಾವಿಜಾಯತೇ**"

(೪) ಹೀಗೆ ಪ್ರಮಾಣವಿರುವದರಿಂದ ಅವತಾರಗಳನ್ನೇನೋ ಒಪ್ಪಬಹುದು. ಆದರೆ ಅವು ಸತ್ಯವಲ್ಲವು ಎಂದುವಾದಿಸುವರು; ಹೇಗೆಂದರೆ"ಈಶ್ವರನು ವಸ್ತುತಃ ಜನ್ಮಗಳಿಲ್ಲದವನು,ಏಕೆಂದರೆ ಅಕರ್ಮವಶ್ಯನಾದುದರಿಂದ, ಮುಕ್ತನಹಾಗೆ" ಎಂದು ಅನುಮಾನ ಪ್ರಮಾಣದಿಂದ ಸಾಧಿಸಲುಪ್ರಯತ್ನಿಸುವರು; ಇದು ಅನೇಕ ದೂಷಣಗಳನ್ನೊಳಗೊಂಡಿರುವದರಿಂದ ಸಾಧಿಸಲು ಸಾಧ್ಯವಲ್ಲವು ಹೇಗೆಂದರೆ

(೧) ಈ ವಾದದಲ್ಲಿ ಈಶ್ವರನನ್ನಙ್ಗೀಕರಿಸದೆ ಇದ್ದರೆ ಸಾಧಿಸತಕ್ಕದ್ದೇನೂ ಇರುವದಿಲ್ಲವು. ಈಶ್ವರನನ್ನಙ್ಗೀಕರಿಸಿಹೇಳುವ ಅನುಮಾನವೆಂದರೆ ಯಾವ ಶಬ್ದಪ್ರಮಾಣದಿಂದ ಧರ್ಮಿಯನ್ನು ಗ್ರಹಿಸುತ್ತೀರೋ ಆ ಪ್ರಮಾಣದಿಂದಲೇ ಅವತಾರಗಳುಂಟೆಂಬುದು ಸಿದ್ಧವು.

(೨) ಇಲ್ಲಿ ಸಾಧ್ಯದ ಮೂಲಕವೂ ದೋಷಗಳುಂಟಾಗುತ್ತವೆ; ವಸ್ತುತಃ ಜನ್ಮಗಳಿಲ್ಲವೆಂದರೆ (1) ಕರ್ಮಗಳಿಂದುಂಟಾದ ಜನ್ಮಾದಿಗಳಿಲ್ಲವೆಂಬರ್ಥವೇ ಅಥವಾ (2) ಕರ್ಮಗಳಿಂದುಂಟಾಗದ ಜನ್ಮಾದಿಗಳಿಲ್ಲವೆಂಬರ್ಥವೋ, ಅಥವಾ (3) ಎರಡು ಅಲ್ಲದ ಜನ್ಮಾದಿಗಳಿಲ್ಲವೆಂಬರ್ಥವೋ ಎಂದು ಕೇಳಬೇಕಾಗುತ್ತದೆ. ಮೊದಲನೆಯ ವಿಕಲ್ಪದಲ್ಲಿ ಕರ್ಮಕೃತ ಜನ್ಮವಿಲ್ಲವೆಂಬುದು ಸಿದ್ಧವಾದುದರಿಂದ ಸಿದ್ಧಸಾಧನ ದೋಷವುಂಟಾಗುತ್ತದೆ. ಎರಡನೆಯ ವಿಕಲ್ಪದಲ್ಲಿ ಅಕರ್ಮವಶ್ಯನಾದುದರಿಂದ ಎಂಬ ಹೇತುವು ಅಪ್ರಯೋಜಕವಾಗುತ್ತದೆ; ಹೇಗೆಂದರೆ ಅಕರ್ಮವಶ್ಯನಾಗಿದ್ದರೂ ಅಪ್ರಾಕೃತ ಜನ್ಮವಿರಬಹುದಷ್ಟೆ, ಹೀಗೆ ಆಗಲೂ ದೋಷ ತಪ್ಪಿದ್ದಲ್ಲವು. ಮೂರನೆಯ ವಿಕಲ್ಪದಲ್ಲಿ ಮುಕ್ತನಹಾಗೆ ಎಂಬ ದೃಷ್ಟಾಂತದಲ್ಲಿ ಸಾಧ್ಯವಾದ ಜನ್ಮ ರಹಿತತ್ವವು ಇಲ್ಲವಾಗುತ್ತದೆ. ಏಕೆಂದರೆ ಶ್ರುತಿಯಲ್ಲಿ ಮುಕ್ತನಿಗೆ ಅಪ್ರಾಕೃತ ಶರೀರ ಪರಿಗ್ರಹ ಉಂಟೆಂಬುದು "**ಸತತ್ರಪರ್ಯೇತಿ ಜಕ್ಷತ್ಕ್ರೀಡನ್ ರಮಮಾಣಃ**" (ಛಾಂ. ೮. ೧೨. ೩) ಎಂದರೆ ಸಃ - ಆ ಮುಕ್ತನು, ತತ್ರ - ಆ ಉತ್ತಮ ಪುರುಷನಲ್ಲಿ, ಪರ್ಯೇತಿ - ಸುತ್ತಲೂ ಸಂಚರಿಸುತ್ತಾನೆ, ಅನುಭವಿಸುತ್ತಾನೆ ಹೇಗೆಂದರೆ ಜಕ್ಷತ್ - ಸಮಸ್ತ ಭೋಗಗಳನ್ನು ಅನುಭವಿಸುತ್ತಲೂ, ಕ್ರೀಡಿಸುತ್ತಲೂ, ರಮಿಸುತ್ತಲೂ ಸಂಚರಿಸುವನೆಂದುಹೇಳಿರುವದರಿಂದ ಸಿದ್ಧವು. ಮತ್ತು "**ಸಏಕಧಾಭವತಿ**"ಇತ್ಯಾದಿ ಛಾಂದೋಗ್ಯವು ಮುಕ್ತನಿಗೆ ಶರೀರ ಉಂಟೆಂದು ಸಾಧಿಸುತ್ತದೆ. ಈ ಬಾಧಕಕ್ಕಾಗಿ ಮುಕ್ತನನ್ನೂಪಕ್ಷದಲ್ಲೇ ಸೇರಿಸಿದರೆ ದೃಷ್ಟಾಂತವು ಯಾವುದು ಎಂದು ಕೇಳಬೇಕಾಗುತ್ತದೆ. ಘಟಾದಿಯು ಕರ್ಮ ರಹಿತವಾಗಿಯೂ ಜನ್ಮಾದಿಗಳಿಲ್ಲದೆಯೂ ಇರುವದರಿಂದ ಘಟಾದಿಯೇ ದೃಷ್ಟಾಂತವೆಂದರೆ, ಆಗ ಅಕರ್ಮ ವಶ್ಯತ್ವರೂಪಹೇತುವು ಅಚೇತನತ್ವವೆಂಬ ಉಪಾಧಿಯಿಂದ ಕೂಡಿದಂತಾಗುತ್ತದೆ. ಆದುದರಿಂದ ದೃಷ್ಟಾಂತವು ಅಚೇತನವಾಗಿರಲು ಸಾಧ್ಯವಿಲ್ಲವು. ಹೀಗೆ ಅಕರ್ಮವಶ್ಯತ್ವವೆಂಬ ಹೇತುವಿನಲ್ಲಿ ದೋಷವಿರುವದರಿಂದ ಅದನ್ನು ಬಿಟ್ಟು (೨) ಮತ್ತೊಬ್ಬ ಈಶ್ವರಾಜ್ಞೆಗೆ ವಿಷಯನಲ್ಲದುದರಿಂದ ಎಂದಾಗಲಿ (೩) ಜನ್ಮಕಾರಣಗಳಿಲ್ಲದೇ ಇರುವದರಿಂದ ಎಂದಾಗಲಿ (೪) ಸಂಕುಚಿತವಾದ ಜ್ಞಾನಶೂನ್ಯನಾದುದರಿಂದ ಎಂದಾಗಲಿ

(೫) ಸಾಧಿಸಿಕೊಳ್ಳತಕ್ಕ ಪ್ರಯೋಜನವೇನೂ ಇಲ್ಲದುದರಿಂದ ಎಂದಾಗಲಿ ಹೇತುಗಳನ್ನಿಟ್ಟುಕೊಂಡರೂ ದೋಷಗಳು ತಪ್ಪಿದ್ದಲ್ಲವಾದುದರಿಂದ ಈ ಮೇಲಿನ ಅನುಮಾನವು ದುಷ್ಟವು. ಈ ವಿಷಯದ ತರ್ಕದಲ್ಲಿ ವಿಶೇಷ ಅಭಿಲಾಷೆಯುಳ್ಳವರು ಈ ಶ್ಲೋಕದ ತಾತ್ಪರ್ಯ ಚಂದ್ರಿಕೆಯನ್ನು ಅವಲೋಕಿಸಬಹುದು. ಆದರೆ **"ಪರಿತ್ರಾಣಾಯಸಾಧೂನಾಂ"** ಎಂಬ ಶ್ಲೋಕದಲ್ಲಿ ಅವತಾರ ಪ್ರಯೋಜನಗಳು ಮೂರು ಉಂಟೆಂದು ಹೇಳಿದರೆ, ಸರ್ವೇಶ್ವರನು ಅವಾಪ್ತ ಸಮಸ್ತಕಾಮನಾಗಿರುವಾಗ ಆತನಿಗೆ ಅವು ಹೇಗೆ ಪ್ರಯೋಜನಗಳು ಎಂದು ಆಕ್ಷೇಪಿಸಿದರೆ ಅವು ಅವನಿಗೇನೂ ಪ್ರಯೋಜನಗಳಲ್ಲದೆ ಇತರ ಚೇತನರಿಗೆ ಪ್ರಯೋಜನವಾಗಬಹುದು ; ಹೀಗೆ ಅವರಿಗೆ ಹಿತವನ್ನುಂಟುಮಾಡುವದೇ ಈ ಕರುಣಾಸಾಗರನಿಗೆ ಕರ್ತವ್ಯವಾಗಿ, ಅದನ್ನು ತನ್ನ ಪ್ರಯೋಜನವಾಗಿ ಭಾವಿಸುವನಾದುದರಿಂದ, ಅವಾಪ್ತಸಮಸ್ತ ಕಾಮತ್ವಕ್ಕೆ ಏನೊಂದೂ ಹಾನಿಯಿಲ್ಲವು. ಲೋಕದಲ್ಲಿಯೂ ಹಾಗೆ ಮಹನೀಯರು ಇತರರಿಗಾಗಿ ಸ್ವಾರ್ಥತೆಯು ಸ್ವಲ್ಪವೂ ಇಲ್ಲದೆ ಮಹತ್ತಾದಕಾರ್ಯಗಳನ್ನು ನೆರವೇರಿಸುವದುಂಟು. ಆದರೆ ಅವಾಪ್ತ ಸಮಸ್ತ ಕಾಮನಾಗಿರುವದರಿಂದ ಸಙ್ಕಲ್ಪಮಾತ್ರದಿಂದಲೇ ಇವೆಲ್ಲವೂ ಸಿದ್ಧಿಸುವಾಗ ಅವತಾರಗಳೇತಕ್ಕೆ ಎಂದರೆ, ತನಗೆ ಅತ್ಯರ್ಥಪ್ರಿಯರಾಗಿ ಪ್ರಪನ್ನರಾಗಿರುವ ಚೇತನರು, ಸರ್ವೇಶ್ವರನ ದರ್ಶನಾಲಾಪಾದಿ ಅನುಭವಗಳಿಲ್ಲದಿದ್ದರೆ ಅವರು ಶಿಥಿಲರಾಗುವರು. ಆ ಕಾರಣದಿಂದ ಸಙ್ಕಲ್ಪಮಾತ್ರದಿಂದಲೇ ನಿರ್ವಹಿಸಲು ಯೋಗ್ಯತೆಯಿದ್ದರೂ ಸರ್ವೇಶ್ವರನು ಅವತಾರಗಳನ್ನು ಎತ್ತುವನು ಎಂದು ತಿಳಿಯತಕ್ಕದ್ದು.

ಹೀಗೆ ಸಙ್ಕಲ್ಪಿಸಿ ಅವತಾರಗಳನ್ನೆತ್ತುವದು ನ್ಯಾಯವೆಂದು ಒಪ್ಪಿದರೂ, ಸಙ್ಕಲ್ಪಕ್ಕೆ ಪೂರ್ವಾವಸ್ಥೆಯಲ್ಲಿ ಕೊರತೆಯುಂಟೆಂದು ಏರ್ಪಡುವದರಿಂದ ಅವಾಪ್ತ ಸಮಸ್ತ ಕಾಮತ್ವಕ್ಕೆ ನ್ಯೂನತೆ ಬರಲಿಲ್ಲವೇ ಎಂದರೆ ಸರ್ವಥಾ ಇಲ್ಲವು. ಏಕೆಂದರೆ ಅನೇಕ ಶಕ್ತರು ಸಂತೋಷದಿಂದಲೇ ಸಙ್ಕಲ್ಪಿಸಿ ಕಾರ್ಯಗಳನ್ನು ಸಾಧಿಸಿಕೊಂಡು ಇನ್ನೂ ಹೆಚ್ಚಾಗಿ ಆನಂದಿಸುವದನ್ನು ಕಂಡಿರುವೆವು. ಮನುಷ್ಯನು ಅಹರ್ನಿಶವೂ ಸಙ್ಕಲ್ಪಿಸಿ ಕೆಲಸಗಳನ್ನು ನಿರ್ವಹಿಸುತ್ತಲೇ ಇರುತ್ತಾನೆ. ಆಕಾಲದಲ್ಲೆಲ್ಲಾ ಆತನು ದುಃಖಿತನಾಗಿಯೇ ಇರುವನೆಂದು ಹೇಳಲಾಗುವದಿಲ್ಲವು. ನಾಟಕವನ್ನು ನೋಡಲು ಹೋಗಬೇಕೆಂದು ಸಙ್ಕಲ್ಪಿಸುವರೆಲ್ಲಾ ಸಂತೋಷದಿಂದಲೇ ಹೋಗಿ ನಾಟಕವನ್ನು ನೋಡಿ ಆನಂದಪಡುವದನ್ನು ಕಂಡಿರುತ್ತೇವೆ. ಲೀಲಾಸಕ್ತನಾದ ಮಹಾನುಭಾವನಿಗೆ ಏನೊಂದೂ ಕೊರತೆಯಾಗಲಿ ದುಃಖವಾಗಲಿ ಇಲ್ಲವು.

ಆದುದರಿಂದ ಈಶ್ವರನ ಅವತಾರಗಳೆಲ್ಲವೂ ಸತ್ಯವು, ಮಿಥ್ಯೆಯಲ್ಲವು. ಆ ಅವತಾರಗಳನ್ನು ಬೋಧಿಸುವ ವಚನಗಳೆಲ್ಲಾ ಪ್ರಮಾಣಗಳೇ; ದುಃಖಭಯ ಶೋಕಾದಿಗಳ ಅಭಿನಯಗಳೆಲ್ಲಾ ಲೋಕವಿಡಂಬನಾರ್ಥವಾಗಿ ವಾಸ್ತವವಾದ ಸ್ವಸಙ್ಕಲ್ಪಕೃತವಾದುದರಿಂದ ದುಃಖಭಯ ಶೋಕಾದಿಗಳ ವಿಷಯವಲ್ಲವು. ಮಾರೀಚನೆಂಬುದು ತಿಳಿಯದೆ ಹೋಗಿ ಪತ್ನೀ ವಿಶ್ಲೇಷವೇ ಮೊದಲಾದ ದುಃಖಗಳಿಗೆ ಸಿಕ್ಕಿದನು ಎಂದಲ್ಲವು. ಸ್ವಸಙ್ಕಲ್ಪಪೂರ್ವಕವಾಗಿಯೇ ಮಂಥರೆಯನ್ನು ಪ್ರೇರಿಸಿ ಅರಣ್ಯಗಮನಕ್ಕೆ ಕಾರಣಮಾಡಿಕೊಂಡು, ತನ್ನ ಪತ್ನಿಯನ್ನು ಅಪಹರಿಸುವದರ ಮೂಲಕ ರಾವಣನು ಮಹಾಪರಾಧವನ್ನು ಮಾಡಲಿ ಎಂದು ಏರ್ಪಡಿಸಿ ಮಾರೀಚನ ವಂಚನೆಗೆ ಸಿಕ್ಕಿದಹಾಗೆ ನಟಿಸಿರುತ್ತಾನೆ. ಇದರಿಂದ ಸೀತೆಗಾಗಲಿ ತನಗಾಗಲಿ ಈಷದಪಿ ದುಃಖವಿಲ್ಲವು. **"ಸೌಮಿತ್ರಿಂ ಮಾಂಚ ರಾಮಂಚ ವ್ಯಸನೈಃ ಪಶ್ಯಮೋಹಿತಾನ್"** ಎಂಬ ಸೀತಾ ವಾಕ್ಯವು ಲೋಕವಿಡಂಬನವನ್ನು ಸೂಚಿಸುತ್ತದೆ. (ರಾಮಾ. ಸುಂ. ೩೭-೪)

**ಭಾಷ್ಯಾವತಾರಿಕೆಯ ಅರ್ಥವು:—** ಕರ್ಮಯೋಗದ ಮಾಹಾತ್ಮ್ಯೆಯನ್ನು ತಿಳಿಸಲು ಉಪಕ್ರಮಿಸಿದರು; ಮಧ್ಯೆ ಪ್ರಾಸಙ್ಗಿಕವಾಗಿ ಅವತಾರ ರಹಸ್ಯವನ್ನು ತಿಳಿಯಲು ಅಪೇಕ್ಷಿಸಲು; ಆರು

ಭಾ. ಆ. ಇದಾನೀಂ ಪ್ರಾಸಙ್ಗಿಕಂ ಪರಿಸಮಾಪ್ಯ ಪ್ರಕೃತಸ್ಯ ಕರ್ಮಯೋಗಸ್ಯ ಜ್ಞಾನಾಕಾರತಾ ಪ್ರಕಾರಂ ವಕ್ತುಮ್ ತಥಾವಿಧ ಕರ್ಮಯೋಗಾಧಿಕಾರಿಣೋ ದುರ್ಲಭತ್ವಮಾಹ—

ಮೂ. ಕಾಂಕ್ಷನ್ತಃ ಕರ್ಮಣಾಂ ಸಿದ್ಧಿಂ ಯಜನ್ತ ಇಹ ದೇವತಾಃ ।
ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨.

ಶ್ಲೋಕಗಳಿಂದ ಸವಿಸ್ತರವಾಗಿ ಅದನ್ನು ಉಪದೇಶಿಸಿ ತದನಂತರ ಪ್ರಸ್ತುತವಾದ ಕರ್ಮಯೋಗವನ್ನು ಕುರಿತು ಹೇಳಲು ಪುನಃ ಉದ್ಯುಕ್ತರಾಗಿ, ಈ ಕರ್ಮಯೋಗವು ಬರೀ ಅನುಷ್ಠಾನಮಾತ್ರವೇ ಎಂದು ಭಾವಿಸಬೇಡ, ಇದರಲ್ಲೂ ಜ್ಞಾನಭಾಗವೂ ಉಂಟು, ವಿಮರ್ಶಿಸಿ ತಿಳಿಯತಕ್ಕ ಭಾಗವು ಉಂಟು ಎಂದು ಹೇಳಲು ಹೊರಟು, ಅಂತಹ ಕರ್ಮಯೋಗಾಧಿಕಾರಿಗಳು ಸಿಕ್ಕುವದೂ ದುರ್ಲಭವೆಂದು ತಿಳಿಸುತ್ತಾರೆ. **ಪ್ರಾಸಙ್ಗಿಕಂ ಪರಿಸಮಾಪ್ಯ**-ಹೀಗೆ ಪ್ರಾಸಙ್ಗಿಕವಾಗಿ ಬಂದ ಅವತಾರ ರಹಸ್ಯ ವಿಷಯವನ್ನು ಮುಗಿಸಿ, **ಇದಾನೀಂ**-ಈಗ ಎಂದರೆ ಇನ್ನುಮುಂದೆ, **ಪ್ರಕೃತಸ್ಯ ಕರ್ಮಯೋಗಸ್ಯ**-ಪ್ರಕೃತ ಹೇಳಬೇಕಾಗಿರುವ ಕರ್ಮಯೋಗದ, **ಜ್ಞಾನಾಕಾರತಾಪ್ರಕಾರಂ**-ಅದರೊಂದಿಗಿರಬೇಕಾದ ಜ್ಞಾನಾಕಾರದ ಪ್ರಕಾರವನ್ನು, **ವಕ್ತುಂ**-ಹೇಳಲು, **ತಥಾವಿಧ ಕರ್ಮಯೋಗಾಧಿಕಾರಿಣಃ**-ಮೇಲೆ ಹೇಳಿದಹಾಗೆ ಅನುಷ್ಠಿಸುವ ಕರ್ಮಯೋಗಾಧಿಕಾರಿಯು, **ದುರ್ಲಭತ್ವಮ್** -ದೊರೆಯುವದರ ದುಸ್ತರತ್ವವನ್ನು, **ಆಹ** - ಹೇಳುತ್ತಾರೆ. ಹಿಂದೆ, ಜ್ಞಾನಯೋಗವು ದುಶ್ಶಕವಾಗಿಯೂ ಸಪ್ರಮಾದವಾಗಿಯೂ ಇರುವದರಿಂದ ಅದಕ್ಕಿಂತಲೂ ಕರ್ಮಯೋಗವೇ ಸುಕರವಾಗಿಯೂ ಪ್ರಮಾದ ರಹಿತವಾಗಿಯೂ ಆತ್ಮಜ್ಞಾನವನ್ನೊಳಗೊಂಡಿರುವದಾಗಿಯೂ ಇರುವದರಿಂದ ಶ್ರೇಷ್ಠವೆಂದು ಹೇಳಿ, ಇದನ್ನೇ ಹಿಂದೆ ವಿವಸ್ವಂತನಿಗೆ ಉಪದೇಶಿಸಿ ಅದು ಪರಂಪರಯಾ ಬಂದು ಖಿಲವಾದುದರಿಂದ ಅಂತಹ ಉತ್ತಮ ರಹಸ್ಯವನ್ನು ಅರ್ಜುನನಿಗೆ ಅತ್ಯರ್ಥಪ್ರಿಯನಾದುದರಿಂದ ಉಪದೇಶಿಸಿರುತ್ತೇನೆಂದು ಶ್ರೀಕೃಷ್ಣಭಗವಾನರವರು ಹೇಳಿದರು. ಹೀಗಿದ್ದರೂ ಕೂಡ ಕರ್ಮಯೋಗಾನುಷ್ಠಾನವನ್ನು ಲೋಕದಲ್ಲಿ ಮಾಡುವದು ದುಸ್ತರವಾದುದರಿಂದ ಅಂತವರು ಅತಿವಿರಳರೆಂದು ಈ ಶ್ಲೋಕದಲ್ಲಿ ಸಕಾರಣವಾಗಿ ಹೇಳುತ್ತಾರೆ. ಇಲ್ಲಿಂದ ಆರು ಶ್ಲೋಕಗಳಿಂದ ಕರ್ಮಯೋಗಕ್ಕೆ ಜ್ಞಾನಾಕಾರತೆಯನ್ನು, ಎಂದರೆ ಕರ್ಮಯೋಗದಲ್ಲಿ ಜ್ಞಾನಭಾಗವೂ ಎಂದರೆ ತಿಳಿಯತಕ್ಕ ಅಂಶವೂ ಉಂಟೆಂದು ತಿಳಿಸಲಾರಂಭಿಸಿ, ಮೊದಲು ನಾಲ್ಕು ಶ್ಲೋಕಗಳಿಂದ ಅಧಿಕಾರಿಯನ್ನೂ ಕುರಿತು, ಇನ್ನು ಎರಡು ಶ್ಲೋಕಗಳಿಂದ ಕರ್ಮ ಸ್ವರೂಪವನ್ನೂ ಕುರಿತು, ಹೇಳುತ್ತಾರೆ.

**ಮೂಲಕ್ಕೆ ಅರ್ಥವು :—ಕರ್ಮಣಾಂ** - ಮಾಡುವ ವೈದಿಕ ಕರ್ಮಗಳ, **ಸಿದ್ಧಿಂ** - ಫಲವನ್ನು, **ಇಹ** - ಇಲ್ಲೇ, **ಕಾಂಕ್ಷಂತಃ** - ಫಲವನ್ನು ಇತರರಿಗಾಗಿ ಅಪೇಕ್ಷಿಸುವವರು ಎಂಬರ್ಥವಲ್ಲವು, ತಮಗಾಗಿಯೇ ಅಪೇಕ್ಷಿಸುವಂತವರು ಆದುದರಿಂದ ಸಾಧಾರಣವಾಗಿ ಎಲ್ಲರೂ, **ಇಹ ದೇವತಾಃ** - ಈ ಲೋಕಕ್ಕೆ ದೇವತಾರೂಪರಾದ ಇಂದ್ರಾದಿ ದೇವತೆಗಳನ್ನು ಮಾತ್ರವೇ, **ಯಜನ್ತೇ** - ಆರಾಧಿಸುವರು ; ಫಲಾಭಿ ಸಂಧಿರಹಿತವಾಗಿ ಕರ್ಮಗಳನ್ನು ಮಾಡಿ ಅವುಗಳನ್ನು ಭಗವಂತನಲ್ಲಿ ಸಮರ್ಪಿಸುವದಕ್ಕೆ ಬದಲಾಗಿ ಸಾಧಾರಣವಾಗಿ ಎಲ್ಲರೂ ಫಲಾಪೇಕ್ಷೆಯುಳ್ಳವರಾಗಿ ಇಂದ್ರಾದಿ ದೇವತೆಗಳನ್ನು ಮಾತ್ರವೇ ಆರಾಧಿಸಿ, ಕಾಮ್ಯ ಕರ್ಮಗಳನ್ನಾಗಿ ಅನುಷ್ಠಿಸುವರು. ಇದು ಏತಕ್ಕೆಂದರೆ ಉತ್ತರಾರ್ಧದಿಂದ ಹೇಳುತ್ತಾರೆ. **ಹಿ** - ಯಾವಕಾರಣದಿಂದೆಂದರೆ, **ಮಾನುಷೇ ಲೋಕೇ**-ಈ ಮನುಷ್ಯಲೋಕದಲ್ಲಿ ಇದು ಸ್ವರ್ಗಾದಿ ಲೋಕಕ್ಕೂ ಉಪಲಕ್ಷಣವು, **ಕರ್ಮಜಾ**-ಕರ್ಮಗಳನ್ನು ಮಾಡುವವರಿಂದುಂಟಾದ, **ಸಿದ್ಧಿಃ** - ಫಲವು, **ಕ್ಷಿಪ್ರಂ** - ಅತಿ ಶೀಘ್ರವಾಗಿ ಫಲಾಭಿ

ಭಾ. ಸರ್ವ ಏವ ಪುರುಷಾಃ ಕರ್ಮಣಾಂ ಫಲಂ ಕಾಂಕ್ಷಮಾಣಾಃ ಇಂದ್ರಾದಿದೇವತಾ ಮಾತ್ರಂ ಯಜನ್ತೇ-ಆರಾಧಯನ್ತಿ, ನತು ಕಶ್ಚಿದ ನಭಿಸಂಹಿತ ಫಲಃ ಇಂದ್ರಾದಿ ದೇವತಾತ್ಮಭೂತಂ ಸರ್ವಯಜ್ಞಾನಾಂ ಭೋಕ್ತಾರಂ ಮಾಂ ಯಜನ್ತೇ; ಕುತ ಏತತ್? ಯತಃ ಕ್ಷಿಪ್ರಮಸ್ಮಿನ್ನೇವ ಮಾನುಷೇ ಲೋಕೇ, ಕರ್ಮಜಾ - ಪುತ್ರಪಶ್ವನ್ನಾದಿ ಸಿದ್ಧಿರ್ಭವತಿ, ಮನುಷ್ಯ ಲೋಕಶಬ್ದಸ್ಸ್ವರ್ಗಾದೀನಾಮಪಿ ಪ್ರದರ್ಶನಾರ್ಥಃ. ಸರ್ವ ಏವ ಲೌಕಿಕಾಃ ಪುರುಷಾ ಅಕ್ಷೀಣಾನಾದಿಕಾಲ ಪ್ರವೃತ್ತಾನಂತ ಪಾಪ ಸಂಚಯತಯಾಽವಿವೇಕಿನಃ

---

ಸಂಧಿರಹಿತವಾಗಿ ಮಾಡುವದಕ್ಕಿಂತಲೂ ಮತ್ತು ಉಪಾಸನಾದಿಗಳಿಂದುಂಟಾಗುವದಕ್ಕಿಂತಲೂ ಶೀಘ್ರವಾಗಿ, ಭವತಿ - ಉಂಟಾಗುತ್ತದೆ.

ಭಾಷ್ಯಾರ್ಥವು :—ಈ ಅಧ್ಯಾಯದಲ್ಲಿ ಹೇಳಲ್ಪಡುವ ಅರ್ಥಗಳಲ್ಲಿ ಪ್ರಾಸಂಗಿಕವಾದ ಅವತಾರ ರಹಸ್ಯವು ಮೊದಲು ಹೇಳಲ್ಪಟ್ಟಿತು. ಮುಂದೆ ಮಿಕ್ಕ ಐದು ಅಂಶಗಳೂ ಹೇಳಲ್ಪಡುವವು. ಸರ್ವೇ ಏವ ಪುರುಷಾಃ - ಸಮಸ್ತರಾದ ಪುರುಷರೂ, ಕಾಂಕ್ಷನ್ತಃ - ಎಂದು ಸಾಮಾನ್ಯವಾಗಿ ಹೇಳಿದುದರಿಂದ, ಯಾರನ್ನೂ ವಿಶೇಷಿಸಿಯೂ ಹೇಳದೇ ಇರುವದರಿಂದ, ಸಾಮಾನ್ಯವಾಗಿ ಸಮಸ್ತ ಪುರುಷರೂ, ಕರ್ಮಣಾಂ ಫಲಂ - ಇಲ್ಲಿ ಸಿದ್ಧಿ ಎಂಬುದಕ್ಕೆ ಕರ್ಮಾನುಷ್ಠಾನದ ಪೂರ್ತಿ ಎಂಬರ್ಥವಲ್ಲವಾದುದರಿಂದ, ಕರ್ಮಗಳ ಫಲವನ್ನು ಎಂದು ಅರ್ಥಮಾಡಲ್ಪಟ್ಟಿತು, ಕಾಂಕ್ಷಮಾಣಾಃ - ಅಪೇಕ್ಷಿಸುವವರು, ಇದರಿಂದ ಎಲ್ಲರೂ ಪ್ರಥಮತಃ ಮೋಕ್ಷಾರ್ಥಿಗಳು ಆಗುವದಿಲ್ಲವಾದುದರಿಂದ, ಕಾಮ್ಯ ಕರ್ಮದಹಾಗೆ ಅನುಷ್ಠಿಸುವ ಸಮಸ್ತರು ಎಂಬರ್ಥವು, ಇಂದ್ರನೇ ಮೊದಲಾದ ದೇವತೆಗಳನ್ನು ಮಾತ್ರವೇ, ಯಜನ್ತೇ ಎಂದರೆ ಯಜ-ದೇವ ಪೂಜಾಯಾಂ ಎಂದಿರುವದರಿಂದ ಆರಾಧಯನ್ತಿ - ಆರಾಧಿಸುವರು; ಆರಾಧಿಸುವದು ತಮ್ಮ ಫಲಕ್ಕಾಗಿಯೇ ಯಾದುದರಿಂದ ಆರಾಧಯನ್ತಿ ಎಂದು ವ್ಯಾಖ್ಯಾನಮಾಡಿರುತ್ತಾರೆ. ಹೇಗೆ ಆರಾಧಿಸುವರೆಂದರೆ ಯಜ್ಞದಾನ ಹೋಮಾದಿಗಳ ಮೂಲಕವೆಂಬ ಭಾವವು. ಇನ್ನು ಹೇಗೆ ಆರಾಧಿಸಬೇಕಾಗಿತ್ತು, ಹಾಗೆ ಆರಾಧಿಸುವದಿಲ್ಲವೆಂದರೆ ಹೇಳುತ್ತಾರೆ. ಕಶ್ಚಿತ್ - ಯಾವನೊಬ್ಬನೂ, ಅನಭಿಸಂಹಿತ ಫಲಃ - ಫಲಾಪೇಕ್ಷೆಯಿಲ್ಲದವನಾಗಿ, ಇಂದ್ರಾದಿ ದೇವತಾತ್ಮ ಭೂತಂ-ಇಂದ್ರಾದಿ ದೇವತೆಗಳಿಗೂ ಆತ್ಮಾವಾಗಿರುವ, ಸರ್ವ ಯಜ್ಞಾನಾಂ ಭೋಕ್ತಾರಂ-"ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ" ಎಂದೂ, (ಗೀ. ೯.೨೪) ಮತ್ತು ಭೋಕ್ತಾರಂ ಯಜ್ಞತಪಸಾಂ(ಗೀ. ೫.೨೯.) ಎಂದೂ, ಹೇಳಿರುವಹಾಗೆ ಸಮಸ್ತ ಯಜ್ಞಗಳಿಗೂ ಭೋಕ್ತಾವಾದ, ಮಾಂ - ನನ್ನನ್ನು, ನ ಯಜನ್ತೇ ಎಂದರೆ ನ ಆರಾಧಯನ್ತಿ-ಆರಾಧಿಸುವದಿಲ್ಲವು. ಎಲ್ಲರೂ ಇಹ - ಈ ಲೋಕದಲ್ಲಿ ಯಜ್ಞದೇವತೆಗಳಾದ ಇಂದ್ರಾದಿಗಳನ್ನೇ ಐಹಿಕ ಫಲಕ್ಕಾಗಿ ಆರಾಧಿಸುವರೇ ವಿನಾ ಅವರುಗಳಿಗೆ ಆತ್ಮಾವಾಗಿ ಸರ್ವ ಯಜ್ಞ ಭೋಕ್ತಾವಾದ ನನ್ನನ್ನು ಫಲಾಪೇಕ್ಷೆಯಿಲ್ಲದೆ ನನ್ನ ಪ್ರೀತ್ಯರ್ಥವಾಗಿ ಯಜ್ಞಗಳನ್ನು ಮಾಡುವದಿಲ್ಲವು. ಇದರಿಂದ ಕರ್ಮಯೋಗಾಧಿಕಾರಿಯ ದೌರ್ಲಭ್ಯವು ಹೇಳಲ್ಪಟ್ಟಿತು. ಕುತಃ ಏತತ್ - ಏನು ಕಾರಣವಿದು? ಎಂದರೆ ಮಹತ್ತಾದ ಫಲಗಳೆಲ್ಲಾ ನನ್ನ ಮೂಲಕ ಉಂಟಾಗುವದಾಗಿದ್ದರೂ, ಈ ಕ್ಷುದ್ರಫಲವನ್ನು ಏತಕ್ಕೆ ಅವರ ಮೂಲಕವಾಗಿ (ಅದನ್ನೂ ನನ್ನಿಂದಲೇ) ಪಡೆಯುವರು ಎಂದರೆ ಕಾರಣವನ್ನು ಹೇಳುತ್ತಾರೆ. ಇದು ಮೂಲದ ಹಿ ಶಬ್ದಾರ್ಥವು; ಹಿ ಶಬ್ದವು ಇಲ್ಲಿ ಹೇತು ಪರವು. ಯತಃ - ಯಾವ ಕಾರಣದಿಂದ, ಕ್ಷಿಪ್ರಂ - ಬಹು ಬೇಗನೇ, ಮಾನುಷೇ ಲೋಕೇ - ಈ ಮನುಷ್ಯಲೋಕದಲ್ಲೇ, ಕರ್ಮಜಾ - ಯಜ್ಞ ದಾನ ಹೋಮಾದಿ ಕರ್ಮಗಳಿಂದುಂಟಾದ, ಸಿದ್ಧಿಃ - ಮಾನುಷಲೋಕಕ್ಕೆ ಉಚಿತವಾದ ಮಕ್ಕಳು

**ಭಾ. ಕ್ಷಿಪ್ರಫಲಾಕಾಂಕ್ಷಿಣಃ ಪುತ್ರ ಪಶ್ವನ್ನಾದಿ ಸ್ವರ್ಗಾದ್ಯರ್ಥತಯಾ ಸರ್ವಾಣಿ ಕರ್ಮಾಣೀ ನ್ದ್ರಾದಿ ದೇವತಾರಾಧನ ಮಾತ್ರೇಣ ಕುರ್ವತೇ; ನ ತು, ಕಶ್ಚಿತ್ಸಂಸಾರೋ ದ್ವಿಗ್ನಹೃದಯೋ ಮುಮುಕ್ಷುರುಕ್ತಲಕ್ಷಣಂ ಕರ್ಮಯೋಗಂ ಮದಾರಾಧನ ಭೂತ ಮಾರಭತ ಇತ್ಯರ್ಥಃ ॥ ೧೨ ॥**

ಪಶುಗಳು, ಅನ್ನ ಪಾನಾದಿಗಳೇ ಮೊಲಾದವುಗಳ ಸಿದ್ಧಿಯು, **ಭವತಿ** - ಉಂಟಾಗುತ್ತದೋ, ಆ ಕಾರಣದಿಂದ ಈ ಫಲಗಳು ನಶ್ವರಗಳಾದಾಗ್ಯೂ ಕ್ಷಿಪ್ರದಲ್ಲಿ ಈ ಲೋಕದಲ್ಲಿ ಪ್ರಾಪ್ತ ವಾಗುವದರಿಂದ ಅಂತಹ ಫಲಗಳನ್ನೇ ಬಯಿಸಿ ಕರ್ಮಗಳನ್ನು ಮಾಡುತ್ತಾರೆಂಬ ಭಾವವು. ಇಲ್ಲಿ ಈ ದೇವತೆಗಳು ಫಲವನ್ನು ಕ್ಷಿಪ್ರದಲ್ಲೇ ಕೊಡುತ್ತಾರೆ ಎಂಬ ಸಂದರ್ಭದಲ್ಲಿ "**ವಾಯುರ್ವೈಕ್ಷೇಪಿಷ್ಠಾ ದೇವತಾ, ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ, ಸ ಏವೈನಂ ಭೂತಿಂ ಗಮಯತಿ**" ವಾಯು ದೇವತೆಯು ಕ್ಷಿಪ್ರ ಫಲಪ್ರದನು, ಆತನನ್ನು ಕುರಿತು ಯಜ್ಞವನ್ನು ಮಾಡುವವನಿಗೆ ಬೇಗನೇ ಕೋರಿದ ಐಶ್ವರ್ಯವನ್ನು ಕೊಡುವದರಲ್ಲಿ ಸಂದೇಹವಿಲ್ಲವೆಂಬಭಿಪ್ರಾಯವುಳ್ಳ ಯಾಜುಷಿ ವಾಕ್ಯವು ಅನುಸಂಧೇಯವು (೨. ೧. ೧.) ಇನ್ನೂ ಕೆಲವರು ಸ್ವರ್ಗಲೋಕ ಸುಖಕ್ಕಾಗಿಯೂ ಯಜ್ಞದಾನ ತಪಸ್ಸುಗಳನ್ನಾಚರಿಸಬಹುದು. **ಮಾನುಷೇ ಲೋಕೇ** ಎಂಬುದರಿಂದ ಉಪಲಕ್ಷಣವಾಗಿ ಸ್ವರ್ಗಭೋಗಸಿದ್ಧಿಯೂ ಸಙ್ಗ್ರಹಿಸಲ್ಪಟ್ಟಿತು, ಎಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಮನುಷ್ಯಲೋಕ ಶಬ್ದಃ** ಮನುಷ್ಯಲೋಕಶಬ್ದವು, **ಸ್ವರ್ಗಾದೀನಾಮಪಿ ಪ್ರದರ್ಶನಾರ್ಥಃ**-ಸ್ವರ್ಗವೇ ಮೊದಲಾದ ಭೋಗಗಳನ್ನೂ ಸಙ್ಗ್ರಹಿಸಿ ಹೇಳುವ ಅರ್ಥವುಳ್ಳದ್ದು; ಮುಂದಿನ **ಸರ್ವ ಏವ** ಎಂದಾರಂಭಿಸಿದ ವಾಕ್ಯದಿಂದ ಈ ಶ್ಲೋಕದ ತಾತ್ಪರ್ಯಾರ್ಥವನ್ನು ದಯಪಾಲಿಸುತ್ತಾರೆ. ಪರಮಾತ್ಮನನ್ನು ಕುರಿತು ಯಜ್ಞ ದಾನ ತಪಸ್ಸುಗಳ ಮೂಲಕವಾಗಿ ಫಲಾಭಿಸಂಧಿರಹಿತವಾಗಿ ಆರಾಧಿಸಿದರೆ, ಶಾಶ್ವತ ನಿರತಿಶಯ ಫಲವೇ ದೊರಕುವಾಗ ಇಂತಹ ಕ್ಷುದ್ರಗಳಾದ ಅಲ್ಪಾಸ್ಥಿರಫಲಗಳನ್ನು ಬಹು ಜನರು ಬಯಿಸಿ ಕಾಮ್ಯ ಕರ್ಮಗಳನ್ನು ಏಕೆ ಬಯಿಸುವರು ? ಎಂಬುದಕ್ಕೆ ಉತ್ತರವಾಗಿ ತಿಳಿಸುತ್ತಾರೆ—**ಸರ್ವೇ ಏವ ಲೌಕಿಕಾಃ ಪುರುಷಾಃ** ಸಮಸ್ತರಾದ ಲೌಕಿಕ ಪುರುಷರೂ, ಲೌಕಿಕನೆಂದು ಹೇಳಿದುದರಿಂದ ಶಾಸ್ತ್ರಜನ್ಯಜ್ಞಾನವಿಲ್ಲದೆ ಐಹಿಕದಲ್ಲೇ ಮಗ್ನರಾದವರು ಎಂಬ ಭಾವವು. ಇವರು ಧರ್ಮಾರ್ಥ ಕಾಮ ಮೂರು ಪುರುಷಾರ್ಥಗಳನ್ನು ಮಾತ್ರ ಬಯಿಸತಕ್ಕವರಾದುದರಿಂದ ತ್ರೈವರ್ಗಿಕರೆಂದು ಹೇಳಲ್ಪಡುವರು, **ಅಕ್ಷೀಣಾನಾದಿ ಕಾಲಪ್ರವೃತ್ತಾನಂತ ಪಾಪಸಂಚಯತಯಾ** - ಅನಾದಿಕಾಲದಿಂದಲೂ ಮಾಡಿದ ಪಾಪಸಮೂಹವು ಕ್ಷೀಣವಾಗದೇ ಇರುವದರಿಂದ, **ಅವಿವೇಕಿನಃ** - ಕರ್ಮಪ್ರಾಚುರ್ಯದಿಂದ ಜ್ಞಾನಸಙ್ಕೋಚವುಂಟಾಗಿ ವಿವೇಕಶೂನ್ಯರಾದವರು. ಆಕಾರಣದಿಂದಲೇ, **ಕ್ಷಿಪ್ರಫಲಾಕಾಂಕ್ಷಿಣಃ** - ಬೇಗನೆ ಉಂಟಾಗುವ ಫಲಗಳನ್ನಪೇಕ್ಷಿಸುವವರಾಗಿ ಎಂದರೆ,ಕ್ಷುದ್ರವಾಗಿ ನಶ್ವರವಾಗಿ ದುಃಖಮಿಶ್ರವಾಗಿದ್ದರೂ "**ವರಮದ್ಯಕಾಕಃಶ್ವೋಮಯೂರಾತ್**" "ನಾಳೆಯ ನವಿಲಿಗಿಂತ ಈಗಿನ ಕಾಗೆಯೇ ಲೇಸು"ಎಂಬ ಗಾದೆಗೆ ಸರಿಯಾಗಿ ಕ್ಷುದ್ರವಾದ ಸದ್ಯಃ ಫಲವನ್ನು ಬಯಿಸುವವರಾಗಿ ಎಂಬರ್ಥವು, **ಪುತ್ರಪಶ್ವನ್ನಾದಿ** - ಮಕ್ಕಳು ಪಶುಗಳು ಅನ್ನಪಾನಾದಿಗಳೇನು, **ಸ್ವರ್ಗಾದ್ಯರ್ಥ ತಯಾ**-ಸ್ವರ್ಗ ಭೋಗಾದಿಗಳೇನು ಇವುಗಳಿಗಾಗಿ, **ಸರ್ವಾಣಿಕರ್ಮಾಣಿ** – ಅವರುಗಳು ಮಾಡುವ ಯಾಗ ದಾನ ಹೋಮಾದಿ ಸಮಸ್ತ ಕರ್ಮಗಳನ್ನೂ ಇಂದ್ರಾದಿ ದೇವತೆಗಳ ಆರಾಧನರೂಪವಾಗಿ, **ಕುರುತೇ** - ಮಾಡುತ್ತಾರೆ. ಪರಮ ಪುರುಷನಾದ ತನ್ನ ಆರಾಧನರೂಪವಾಗಿ ನಡೆಸುವದಿಲ್ಲವು ಎಂದು ಮುಂದೆ ತಿಳಿಸುತ್ತಾರೆ. ಫಲಾಕಾಂಕ್ಷೆಯಿಲ್ಲದೆ ನನ್ನ ಪ್ರೀತ್ಯರ್ಥವಾಗಿ ಆ ಯಾಗದಾನ

ಭಾ- ಅವ. ಯಥೋಕ್ತ ಕರ್ಮಯೋಗಾರಂಭ ವಿರೋಧಿಪಾಪಕ್ಷಯಹೇತುಮಾಹ—

ತಪಸ್ಸುಗಳನ್ನು ಮಾಡಿ ಸಾತ್ವಿಕ ತ್ಯಾಗವನ್ನು ಮಾಡಿದ್ದರೆ ನಿರತಿಶಯವಾದ ಮೋಕ್ಷ ಫಲಕ್ಕೆ ಸಾಧನವಾದುದಾಗುತ್ತಿತ್ತು; ಮತ್ತು ಅವರುಗಳಿಗೆ ಬೇಕಾದ ಐಹಿಕ ಸುಖಗಳನ್ನೂ ಕೊಡುತ್ತಿದ್ದನು ಎಂಬ ಭಾವವೂ ಸೂಚಿತವು. ಇಂತವರು ಅತಿವಿರಳರು ಎಂಬುದು ಶ್ಲೋಕಾಭಿಪ್ರಾಯವು. ಶ್ರೀ ಪರಾಶರರು ಹೇಳುತ್ತಾರೇನೆಂದರೆ.

ತಸ್ಮಿನ್ ಪ್ರಸನ್ನೇಕಿ ಮಿಹಾಸ್ತ್ಯಲಭ್ಯಂ ಧರ್ಮಾರ್ಥಕಾಮೈ ರಲಮುಲ್ಪಕಾಸ್ತೇ।
ಸಮಾಶ್ರಿತಾ ತ್ಬ್ರಹ್ಮತರೋ ರನಂತಾತ್ ನಿಸ್ಸಂಶಯೋ ಮುಕ್ತಿಫಲಪ್ರಪಾತಃ ॥

ಆ ಮಹಾನುಭಾವನು ಪ್ರಸನ್ನನಾದರೆ ನಾಲ್ಕು ಪುರುಷಾರ್ಥಗಳಲ್ಲೂ ಯಾವುದು ತಾನೇ ಹೊಂದಲಸಾಧ್ಯವು. ಎಲ್ಲವೂ ಸಾಧ್ಯವೇ ಎಂಬ ಭಾವವು. ಆದರೆ ಧರ್ಮ ಅರ್ಥಕಾಮುಗಳಾದ ಐಹಿಕಗಳು ಸಾಕು ಏಕೆಂದರೆ ಅವು ಕ್ಷುದ್ರವಾದವುಗಳು ಕ್ಷಿಪ್ರವಾಗಿ ಸಿಕ್ಕುವಂತವು. ಪರಬ್ರಹ್ಮವೆಂಬ ಕಲ್ಪವೃಕ್ಷವನ್ನು ಚನ್ನಾಗಿ ಉಪಾಯೋಪಾಸನ್ಮಾನಗಳ ಮೂಲಕ ಆಶ್ರಯಿಸಿದರೆ, ಆ ವೃಕ್ಷದಿಂದ ಮುಕ್ತಿ ಎಂಬ ಫಲವು ಕರಗತವಾಗುವದು ನಿಸ್ಸಂಶಯವು ಎಂಬುದು ಈ ಶ್ಲೋಕಾರ್ಥವು. ಆದುದರಿಂದ ಕಶ್ಚಿತ್ - ಯಾವನೊಬ್ಬನೂ, **ಸಂಸಾರೋದ್ವಿಗ್ನ ಹೃದಯಃ** – ಸಂಸಾರದಲ್ಲಿ ಜಿಹಾಸೆಯುಳ್ಳವನಾಗಿರುವ, **ಮುಮುಕ್ಷುಃ** - ಮೋಕ್ಷಾರ್ಥಿಯು, **ಉಕ್ತಲಕ್ಷಣಂ** - ಹಿಂದೆ ವಿವರಿಸಿದ ಲಕ್ಷಣವುಳ್ಳ, **ಮದಾರಾಧನ ಭೂತಂ** - ನನ್ನ ಆರಾಧನಾರೂಪವಾದ. ಕರ್ಮಯೋಗವನ್ನು, **ನ ತ್ವಾರಭತೇ** - ಆರಂಭಿಸುವದಿಲ್ಲವಷ್ಟೆ ? ಹಾಗಾದರೆ ಯಾರೊಬ್ಬರೂ ಕರ್ಮಯೋಗದಲ್ಲಿ ಪ್ರವರ್ತಿಸುವದಿಲ್ಲವೋ ? ಅಂತಹ ಕರ್ಮಯೋಗವನ್ನುಪದೇಶಿಸಿ ಫಲವೇನು ? ಎಂದರೆ ಕರ್ಮಯೋಗದಲ್ಲಿ ಪ್ರವರ್ತಿಸುವರು ಅತಿ ವಿರಳರೆಂಬ ಭಾವವು. ಹಾಗಾದರೆ ಪ್ರವರ್ತಿಸುವವರು ಯಾರು ಎಂಬುದನ್ನು ೧೩-೧೪ ನೆಯ ಶ್ಲೋಕಗಳಿಂದ ತಿಳಿಸುತ್ತಾರೆ. ಕರ್ಮಫಲ ಸಂಗವನ್ನು ಬಿಟ್ಟು ವಿಹಿತ ಕರ್ಮಗಳನ್ನು ಮಾಡಬೇಕಾದುದು ಕರ್ಮಯೋಗಕ್ಕೆ ಆವಶ್ಯಕವು. ಕರ್ಮಯೋಗಾರಂಭಕ್ಕೆ ವಿಘ್ನರೂಪವಾಗಿ ಪಾಪಗಳಿವೆ; ಅವುಗಳು ನಿವರ್ತಿಸುವ ಬಗೆ ಹೇಗೆ ಎಂಬುದು ಮುಂದೆ ಎರಡು ಶ್ಲೋಕಗಳಿಂದ ಹೇಳಲ್ಪಡುತ್ತದೆ. ಆದುದರಿಂದ ಈ ಮುಂದಿನ ಅವತಾರಿಕೆಯು ಎರಡು ಶ್ಲೋಕಗಳಿಗೂ ಎಂದು ಭಾವಿಸತಕ್ಕದ್ದು. ಈ ಶ್ಲೋಕದಿಂದ ಗ್ರಹಿಸತಕ್ಕದ್ದೇನೆಂದರೆ ಕಾಮ್ಯ ಕರ್ಮಗಳಿಂದ ಇಂದ್ರಾದಿ ದೇವತೆಗಳನ್ನು ಆರಾಧಿಸಿದರೆ ಅಲ್ಪಾಸ್ಥಿರ ಫಲಗಳು ಕ್ಷಿಪ್ರದಲ್ಲಿ ಪ್ರಾಪ್ತವಾಗುತ್ತವೆ. ಇವು ಬಂಧಕಗಳು. ಮೋಕ್ಷಾರ್ಥಿಯಾಗಿರುವನು ಅದೇ ಕರ್ಮಗಳನ್ನೇ ವಿಹಿತಕರ್ಮಗಳೊಂದಿಗೆ ಕರ್ಮ ಫಲಗಳಲ್ಲಿ ಸಙ್ಗವನ್ನು ತೊರೆದು ಭಗವದಾರಾಧನಾರೂಪದಲ್ಲಿ ನಡೆಸತಕ್ಕದ್ದೆಂದು ಹೇಳಲ್ಪಟ್ಟಿತು. ಆದುದರಿಂದ ಕರ್ಮಯೋಗಾನುಷ್ಠಾತೃವಿಗೆ ತಾನು ಮಾಡುವ ಕರ್ಮಗಳು ಭಗವದಾರಾಧನಾರೂಪವೆಂಬ ಜ್ಞಾನವೂ, ಕರ್ಮದಲ್ಲಿ ಸಙ್ಗವೂ, ಫಲದಲ್ಲಿ ಮಮತೆಯೂ ಕೂಡದೆಂಬ ಜ್ಞಾನವೂ ಸಹ ಇರಬೇಕೆಂದು ಹೇಳಲ್ಪಟ್ಟಿತು ॥೧೨॥

ಭಾಷ್ಯಾವತಾರಿಕೆಯ ಅರ್ಥವು :—ಯಥೋಕ್ತ ಇತ್ಯಾದಿ-ಮೇಲೆ ಹೇಳಲ್ಪಟ್ಟ ಕರ್ಮಯೋಗದ ಆರಂಭಕ್ಕೆ ವಿರೋಧಿಯಾದ ಪಾಪಗಳು ನಾಶವಾಗುವದಕ್ಕೆ ಕಾರಣವನ್ನು ಹೇಳುತ್ತಾರೆ. ಅನಾದಿಕಾಲದಿಂದಲೂ ಪಾಪಸಂಚಯಗಳುಂಟಾಗಿ ಪ್ರಬಲವಾದ ಪ್ರಾರಬ್ಧಕರ್ಮದ ಬಲೆಗೆ ಸಿಕ್ಕಿ ಜ್ಞಾನ ಸಂಕೋಚವುಂಟಾಗಿ ಅವಿವೇಕಿಗಳಾಗಿರುವದರಿಂದ ಮೋಕ್ಷಾಪೇಕ್ಷೆ ಇಲ್ಲದೆ ಐಹಿಕ ಕ್ಷುದ್ರವಾದ ಕ್ಷಿಪ್ರವಾಗಿ ಲಭಿಸುವ ಫಲಗಳಲ್ಲೇ ಆಸಕ್ತಿಯುಳ್ಳವರಾಗಿರುತ್ತಾರೆ. ಈ ಅವಿವೇಕ ಕಳೆಯುವದು ಹೇಗೆ ಎಂದು ಹೇಳುತ್ತಾರೆಂಬುದು ಈ ಅವತಾರಿಕೆಯ ತಾತ್ಪರ್ಯವು.

**ಮೂ. ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯ ಕರ್ತಾರ ಮವ್ಯಯಮ್ ॥ ೧೩.**

**ಮೂಲಕ್ಕೆ ಅರ್ಥವು:—ಚಾತುರ್ವರ್ಣ್ಯಂ** - ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕುಜಾತಿಯ ಸಮೂಹವು, **ಮಯಾ** - ಲೀಲೆಯೇ ಪ್ರಯೋಜನವಾಗಿವುಳ್ಳ ಮತ್ತು ಚೇತನ ರನ್ನು ಉದ್ಧಾರಮಾಡಬೇಕೆಂಬ ಉದಾರ ಭಾವದಿಂದ ಪ್ರೇರಿತನಾದ ನನ್ನಿಂದ, **ಗುಣಕರ್ಮವಿಭಾಗಶಃ** ಮುಂದೆ ೧೮ನೆಯ ಅಧ್ಯಾಯದಲ್ಲಿ ಹೇಳಿರುವ ಹಾಗೆ ಅವರುಗಳ ಸತ್ವರಜಸ್ತಮೋಗುಣಗಳ ಆಧಿಕ್ಯದ ಮೂಲಕವಾಗಿಯೂ, ಅವರುಗಳಿಗೆ ಸ್ವಭಾವತಃ ಪ್ರಾಪ್ತವಾದ ಕರ್ಮಗಳ ಮೂಲಕ ವಾಗಿಯೂ ಇರುವ ವ್ಯತ್ಯಾಸಗಳೊಡನೆ, **ಸೃಷ್ಟಂ** - ಸೃಷ್ಟಿಸಲ್ಪಟ್ಟಿತು. **"ಸಮೋಽಹಂ ಸರ್ವ ಭೂತೇಷು"** ಎಂದು ಹೇಳಿಕೊಳ್ಳುವ ಸರ್ವೇಶ್ವರನಿಗೆ ಇಂತಹ ವ್ಯತ್ಯಸ್ತವಾದ ಸೃಷ್ಟಿಯು ನ್ಯಾಯವೋ? ಒಬ್ಬನನ್ನು ಸತ್ವಗುಣಾಧಿಕ್ಯವುಳ್ಳ ಬ್ರಾಹ್ಮಣನನ್ನಾಗಿಯೂ ಮಾಡಿ ಆತನು **"ಶಮೋ ದಮ ಸ್ತಪಶ್ಶೌಚಂ"** (ಗೀ. ೧೮. ೪೨.) ಎಂದು ಹೇಳಿರುವ ಒಳ್ಳೇ ಕರ್ಮಗಳನ್ನು ಮಾಡುವಹಾಗೂ ಸೃಷ್ಟಿಸಬಹುದೋ? ಇದರಿಂದ ಸರ್ವೇಶ್ವರನಿಗೆ ವೈಷಮ್ಯ ನೈರ್ಘೃಣ್ಯಗಳು ಉಂಟಾಗಲಿಲ್ಲವೋ ಎಂದರೆ ಈ ವಿಷಯದಲ್ಲಿ ತನ್ನದೇನೂ ದೋಷವಿರುವದಿಲ್ಲವೆಂದು ಹೇಳು ತ್ತಾರೆ. **ತಸ್ಯ** -ಅಂತಹ ಗುಣಕರ್ಮಗಳಲ್ಲಿ ವ್ಯತ್ಯಾಸವಿರುವ ಚಾತುರ್ವರ್ಣ್ಯಕ್ಕೆ, **ಕರ್ತಾರಮಪಿ**- ಕರ್ತೃವಾಗಿದ್ದರೂಕೂಡ, **ಮಾಂ** - ನನ್ನನ್ನು, **ಅಕರ್ತಾರಂ** - ವ್ಯತ್ಯಾಸಗಳಿಗೆ ತಾನು ಕರ್ತೃ ವಲ್ಲನೆಂದೂ, **ವಿದ್ಧಿ** - ತಿಳಿಯುವನಾಗು, ಚಾತುರ್ವರ್ಣ್ಯವನ್ನು ಮೊದಲು ನಿರ್ಮಿಸುವಾಗಲೂ ಬ್ರಾಹ್ಮಣ ಕ್ಷತ್ರಿಯಾದಿ ಕಳೇಬರ ಯೋಗವನ್ನು ಅವರವರುಗಳ ಪೂರ್ವಕರ್ಮಾನುಸಾರ ಸೃಷ್ಟಿ ಸಿದನೇ ಹೊರತು ನನ್ನ ಮನಸ್ಸು ಬಂದಹಾಗೆ ಸೃಷ್ಟಿಸಲಿಲ್ಲವು ಎಂಬ ಭಾವವು. ತಾನು ಸೃಷ್ಟಿಸಿ ದುದರಿಂದ ತಾನು ಕರ್ತೃವೇನೋ ನಿಶ್ಚಯವು ; ಬ್ರಾಹ್ಮಣ ಕ್ಷತ್ರಿಯಾದಿ ಭೋಕ್ತೃಗಳಲ್ಲಿರುವ ವ್ಯತ್ಯಾಸಗಳಿಗೂ ಅವರವರುಗಳ ಸುಖದುಃಖಾನುಭವಗಳಿಗೆ ಅನುಗುಣವಾಗಿ ಭೋಗ್ಯವಸ್ತುವಿ ನಲ್ಲೂ ಭೋಗಸ್ಥಾನದಲ್ಲೂ ಇರುವ ವ್ಯತ್ಯಾಸಗಳಿಗೂ ಅವರವರುಗಳ ಕರ್ಮಗಳೇ ಕಾರಣವಾದು ದರಿಂದ, ನಾನು ಅಕರ್ತೃವೆಂದು ಕರ್ತೃವಲ್ಲವೆಂದು ಭಾವಿಸತಕ್ಕದ್ದೆಂಬ ತಾತ್ಪರ್ಯವು. ಹಾಗಾದರೆ ಇವುಗಳ ವ್ಯತ್ಯಾಸಕ್ಕೆ ಕಾರಣವು ಯಾವುದೆಂದರೆ ಜೀತನರೂ, ಅವರುಗಳ ಪುಣ್ಯಪಾಪರೂಪ ಕರ್ಮಗಳೂ, ಎಂಬ ಭಾವವು. ಪೂರ್ವಜನ್ಮಗಳ ಸುಕೃತ ದುಷ್ಕೃತಗಳ ತಾರತಮ್ಯಗಳಿಗನು ಗುಣವಾಗಿ ದೇಹಪ್ರಾಪ್ತಿಯುಂಟಾಗುತ್ತದೆಂದು ಹೇಳಿದುದರಿಂದ ತಿರ್ಯಗ್ಜನ್ಮವಿಲ್ಲದೆ ಮನುಷ್ಯಜನ್ಮ ಪ್ರಾಪ್ತಿಗೆ ಸ್ವಲ್ಪ ಸುಕೃತದ ಅಂಶವೇ ಇರಬೇಕೆಂದು ಏರ್ಪಟ್ಟಿತು. ಸುಕೃತವು ಹೆಚ್ಚಾಗಿ ಸಾತ್ವಿಕ ಗುಣ ತಲೆ ಎತ್ತಿರುವವನು ಬ್ರಾಹ್ಮಣನಲ್ಲೂ ಅದು ಕಮ್ಮಿಯಾಗಿ ರಾಜಸಗುಣ ತಲೆ ಎತ್ತಿರುವ ವನು ಕ್ಷತ್ರಿಯನಲ್ಲೂ, ರಾಜಸ ತಾಮಸವೆರಡೂ ಸಮವಾಗಿರುವನು ವೈಶ್ಯನಲ್ಲೂ, ತಾಮಸಾಧಿಕ್ಯ ವಿರುವವನು ಶೂದ್ರನಲ್ಲೂ ಜನಿಸುವನು ಎಂಬ ತಾತ್ಪರ್ಯವು. ಬ್ರಾಹ್ಮಣರಲ್ಲೂ, ಕ್ಷತ್ರಿಯರಲ್ಲೂ ಜನಿಸಿದವರಿಗೆ ಇರುವ ಸಾತ್ವಿಕಾಂಶ ಮತ್ತು ರಾಜಸಾಂಶಗುಣ ತಾರತಮ್ಯದಿಂದ ಎಲ್ಲಾ ಬ್ರಾಹ್ಮ ಣರೂ ಎಲ್ಲಾ ಕ್ಷತ್ರಿಯರೂ ಪರಸ್ಪರ ಭಿನ್ನರೇ ಎಂದೂ ಹೇಳಿದಂತಾಯಿತು. ಆದುದರಿಂದ ಎಲ್ಲರೂ ಸಮವೆಂಬ ಹೇಳಿಕೆಯು ಶಾಸ್ತ್ರಜ್ಞಾನವಿಲ್ಲದ ಅಜ್ಞಾನದ ವಿಜೃಂಭಣೆಯು. ಹೀಗೆ ಭಿನ್ನ ಭಿನ್ನ ಗುಣಗಳುಳ್ಳ ದೇಹಗಳಿರುವತನಕ ಎಲ್ಲರೂ ಭಿನ್ನರೇ ; ಈ ದೇಹಗಳು ಬಿಟ್ಟುಹೋದ ಆತ್ಮರುಗಳೀಗ ಸಮವೆಂದು ತಿಳಿಯತಕ್ಕದ್ದು. ಆದರೆ ಹೀಗೆ ವ್ಯವಸ್ಥೆಮಾಡಿದರೆ ಚಾತುರ್ವರ್ಣ್ಯ ವ್ಯವಸ್ಥೆ ಇಲ್ಲದಿರುವ ಪ್ರಾಂತ್ಯಗಳಲ್ಲಿ ಹೇಗೆ ವಿವೇಚನೆಯು ಎಂದು ಕೇಳಬಹುದು.

ಭಾ. ಚಾತುರ್ವರ್ಣ್ಯಂ ಪ್ರಮುಖಂ ಬ್ರಹ್ಮಾದಿಸ್ತಂಬ ಪರ್ಯಂತಂ ಕೃತ್ಸ್ನಂ ಜಗತ್ ಸತ್ತ್ವಾದಿ ಗುಣವಿಭಾಗೇನ ತದನುಗುಣ ಶಮಾದಿ ಕರ್ಮವಿಭಾಗೇನ ಚ ವಿಭಕ್ತಂ ಮಯಾ

---

ಪಾಶ್ಚಾತ್ಯರಲ್ಲಿ ಜಾತ್ಯಾದಿ ಭೇದವಿಲ್ಲದಿದ್ದರೂ ಕುಲಭೇದವನ್ನು ಅವರೂ ಅಙ್ಗೀಕರಿಸಿಯೇ ಇರುತ್ತಾರೆ. ಇಲ್ಲಿಯೂ ಕೂಡ ಚಾತುರ್ವರ್ಣ್ಯಂ ಎಂಬುದು ಪ್ರದರ್ಶನಾರ್ಥವಾಗಿ ಹೇಳಲ್ಪಟ್ಟಿತು. ಇವುಗಳ ಸಮ್ಮೇಳನಾದಿಗಳಿಂದ ಸಾವಿರಾರು ಜಾತಿಗಳು ಏರ್ಪಟ್ಟಿವೆ. ಚಾತುರ್ವರ್ಣ್ಯವು ಆದಿಯಲ್ಲಿ ; ಈಗ ಅಸಂಖ್ಯಾತವಾದ ಪಂಗಡವು; ಗುಣಗಳಿಗೆ ಆಭಿಜಾತ್ಯವೂ ಸಂಸರ್ಗವೂ ಹೇತುವಾದುದರಿಂದ ಜನ್ಮತಃ ಭೇದವು ಹೇಳಲ್ಪಟ್ಟಿತು. ಪಾಶ್ಚಾತ್ಯರಲ್ಲೂ ಹಾಗೆಯೇ; ಆದರೆ ಬ್ರಾಹ್ಮಣಾದಿ ವ್ಯವಹಾರಗಳು ಮಾತ್ರ ಇಲ್ಲವು. ಉತ್ತಮಾಧಮ ಪಂಗಡದವರೆಂಬ ವ್ಯವಸ್ಥೆಯು ಅವರಲ್ಲೂ ಉಂಟು. ಆದರೆ ಸಾತ್ತ್ವಿಕ ಗುಣಾಭಿವೃದ್ಧಿಗೆ ಸಾತ್ತ್ವಿಕಾಹಾರವು ಮುಖ್ಯವಾಗಿ ಅವರುಗಳಲ್ಲಿ ಆಹಾರಶುದ್ಧಿಯು ಇಲ್ಲವುದರಿಂದ ಬ್ರಾಹ್ಮಣಜಾತಿಗೆ ಸಮಾನಭಾವವು ದೊರೆಯಲಾರದಾದುದರಿಂದ ರಾಜಸ ತಾಮಸ ಪಂಗಡಕ್ಕೆ ಸೇರಿದವರಾಗಿ ಭಾವಿಸತಕ್ಕದ್ದಾಗಿರುತ್ತದೆ. ಆದುದರಿಂದಲೇ ಅವರುಗಳಿಗೆಲ್ಲಾ ಐಹಿಕ ದೃಷ್ಟಿಯೇ ವಿನಾ ಆಮುಷ್ಮಿಕ ದೃಷ್ಟಿಯೇ ಇಲ್ಲವು. ಐಹಿಕ ಸುಖಾನುಭವಕ್ಕೆ ತೊಂದರೆಯುಂಟಾದರೆ ಅವರಲ್ಲಿ ಕ್ರೌರ್ಯವೂ ದೌಷ್ಟ್ಯವೂ ಹೆಚ್ಚು. ಬ್ರಾಹ್ಮಣನು ಅನೇಕ ಜನ್ಮಗಳಿಂದ ಪರಿಶುದ್ಧನಾಗುತ್ತಾಬಂದು, ಅಂತವನಲ್ಲಿ ಆಹಾರಶುದ್ಧಿಯು ಇರುವದರಿಂದ ಆತನಲ್ಲಿ ಸಾತ್ತ್ವಿಕಧರ್ಮವು ಹೆಚ್ಚಿ, ಆತನಿಗೆ ಐಹಿಕವೆಲ್ಲಾ ತೃಣವು; ಆತನಿಗೆ ಮನಶ್ಶಾಂತತೆಯೂ ಉಂಟು; ಅಹಿಂಸೆಯು ಆತನಿಗೆ ಪರಮ ಧರ್ಮವು. ಆದುದರಿಂದ ಪಾಶ್ಚಾತ್ಯರ ವಿದ್ಯೆಯನ್ನು ಸ್ವೀಕರಿಸಿದವರಿಗೆ ಐಹಿಕವೇ ಮುಖ್ಯವಾಗಿ, ಈ ಬ್ರಾಹ್ಮಣಾದಿ ಭೇದಗಳನ್ನು ಸಹಿಸರು. ಆದರೆ ಆಮುಷ್ಮಿಕ ಸುಖವೇ ಸುಖವಾದುದರಿಂದ, ಅದಕ್ಕಾಗಿ ಬ್ರಾಹ್ಮಣಾದಿ ವರ್ಣಭೇದಗಳೂ, ಅವರುಗಳಿಗೆ ನಿಯತ ಪ್ರವೃತ್ತಿಗಳೂ ಮನಶ್ಶಾಂತತೆಯನ್ನೂ ತೃಪ್ತಿಯನ್ನೂ ಉಂಟುಮಾಡುವದರಿಂದ ಎಲ್ಲಾ ನಮ್ಮಶಾಸ್ತ್ರಗಳಲ್ಲೂ ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲೂ ಈ ಭೇದವು ಉಪಪಾದಿತವು. "ರಾಮೋ ಭಾಮಿನಿ ಲೋಕಸ್ಯ ಚಾತುರ್ವರ್ಣ್ಯಸ್ಯ ರಕ್ಷಿತಾ" ಎಂಬ ಆಂಜನೇಯೋಕ್ತಿಯು ಇಲ್ಲಿ ಅನುಸಂಧೇಯವು. (ರಾ. ಸುಂ. ೩೫-೧೧).

ಭಾಷ್ಯಾರ್ಥವು:—ಸೃಷ್ಟಿಮೊದಲುಗೊಂಡು ಇದುವರೆಗೂ ಜನ್ಮಸಂತತಿಗಳನ್ನು ಹೊಂದಿ ಪಾಪರೂಪಕರ್ಮಗಳನ್ನು ಎಲ್ಲರೂ ಮಾಡಿರುತ್ತಾರೆ; ಆದುದರಿಂದ ಎಲ್ಲರೂ ಈ ವಿಷಯದಲ್ಲಿ ಸಮವಾಯಿತಲ್ಲಾ ; ಹಾಗಾದಪಕ್ಷದಲ್ಲಿ ಒಬ್ಬರೂ ಮೋಕ್ಷಕ್ಕೆ ಅರ್ಹರಲ್ಲದೆ ಮೋಕ್ಷಶಾಸ್ತ್ರಕ್ಕೇ ವೈಯರ್ಥ್ಯವಲ್ಲವೋ ? ಹಾಗಾದಪಕ್ಷದಲ್ಲಿ ಈ ಕರ್ಮಯೋಗಾದಿಗಳ ಪ್ರಶಂಸೆ ತಾನೇ ಏತಕ್ಕೆ? ಎಂಬಾಕ್ಷೇಪವು ಉಂಟಾಗಬಹುದು; ಅದರ ಸಮಾಧಾನಾರ್ಥವಾಗಿ ಹೇಳುತ್ತಾರೆ:-ಎಲ್ಲರೂ ಎಂದಿಗೂ ಸಮನಲ್ಲವು; ಕೆಲವರು ಸುಕೃತರೂಪವಾದ ಪುಣ್ಯಗಳನ್ನೂ ಮಾಡುವದುಂಟು. ಈ ಪುಣ್ಯಪಾಪಗಳಿಗನುಗುಣವಾಗಿ ಅವರಿಗೆ ಶರೀರಗಳು ಪ್ರಾಪ್ತವಾದಾಗ ಸತ್ತ್ವಗುಣ ಹೆಚ್ಚಾಗಿ ಕೆಲವರಲ್ಲೂ, ಹಾಗೆಯೇ ರಾಜಸ ತಾಮಸ ಗುಣಗಳು ಹೆಚ್ಚಾಗಿ ಇನ್ನು ಕೆಲವರಲ್ಲೂ, ಉಂಟಾಗಿರುವದರಿಂದ ಈ ಗುಣಕರ್ಮಗಳ ವ್ಯತ್ಯಾಸದಿಂದ ಭಿನ್ನಜಾತೀಯರನ್ನಾಗಿ, ಏರ್ಪಡಿಸಿರುತ್ತೇನೆಂದು ಉಪದೇಶಿಸುತ್ತಾರೆ. ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ, ಕೆಲವು ಅವಿವೇಕಿಗಳ ಅನ್ಯದೇವತಾ ಭಜನಕ್ಕೂ, ಅವರುಗಳ ಕರ್ಮಗಳೂ, ತನ್ಮೂಲವಾಗಿ ಪ್ರಾಪ್ತವಾದ ಗುಣಾಧಿಕ್ಯವೂ, ಕಾರಣವೇ ವಿನಾ ತಾನು ಕಾರಣನಲ್ಲವು ಎಂದು ಹೇಳುತ್ತಾರೆ. ಆದರೆ ಇಂತಹ ಕರ್ಮಕ್ಕೆ ಇಂತಹ ದೇಹಪ್ರಾಪ್ತಿ ಮೊದಲಾದ ಏರ್ಪಾಡಿಗೆ ಮಾತ್ರವೇ ತಾನು ಕಾರಣನು. ಅವರುಗಳ ಸುಖದುಃಖಾನುಭವಗಳಿಗೂ ಅನ್ಯದೇ

**ಭಾ. ಸೃಷ್ಟಂ. ಸೃಷ್ಟಿ ಗ್ರಹಣಂ ಪ್ರದರ್ಶನಾರ್ಥಮ್ ; ಮಯ್ಯೈವ ರಕ್ಷ್ಯತೇ, ಮಯ್ಯೈವ ಚೋಪ ಸಂಹ್ರಿಯತೇ. ತಸ್ಯ ವಿಚಿತ್ರಸೃಷ್ಟ್ಯಾದೇಃ ಕರ್ತಾರ ಮಪ್ಯಕರ್ತಾರಂ ಮಾಂ ವಿದ್ಧಿ ||೧೩||**

ವತಾ ಅಥವಾ ಪರಮಾತ್ಮ ಭಜನೆಗಳಿಗೆ ಅವರುಗಳೇ ಕಾರಣವೆಂದು ಉಪದೇಶಿಸುತ್ತಾರೆ. **ಚಾತುರ್ವರ್ಣ್ಯಂ ಪ್ರಮುಖಂ** - ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಾದ ನಾಲ್ಕು ಜಾತಿಯವರೇ ಮೊದಲಾದವು ಎಂದರೆ **ಬ್ರಹ್ಮಾದಿ ಸ್ತಂಬ ಪರ್ಯಂತಂ ಕೃತ್ಸ್ನಂಜಗತ್** - ಚತುರ್ಮುಖ ಬ್ರಹ್ಮಮೊದಲುಗೊಂಡು ಕ್ರಿಮಿಕೀಟ ಅಥವಾ ಇರುವೆ ಪರ್ಯಂತವಾದ ಸಮಸ್ತ ಜಗತ್ತೂ, ಇದು ಚಾತುರ್ವರ್ಣ್ಯಂ ಎಂಬುದರರ್ಥವು, **ಸತ್ವಾದಿ ಗುಣವಿಭಾಗೇನ** – ಸತ್ವ ರಜಸ್ತಮೋಗುಣಗಳ ವಿಭಾಗದಿಂದ ಎಂದರೆ ಈ ಗುಣಗಳಾಧಿಕ್ಯದಿಂದ, ಬ್ರಾಹ್ಮಣನಲ್ಲಿ ಸತ್ವಗುಣಹೆಚ್ಚಾಗಿಯೂ ಕ್ಷತ್ರಿಯನಲ್ಲಿ ರಜೋಗುಣ ಹೆಚ್ಚಾಗಿಯೂ, ವೈಶ್ಯನಲ್ಲಿ ರಜೋಗುಣ ತಮೋಗುಣಗಳು ಹೆಚ್ಚಾಗಿಯೂ, ಶೂದ್ರನಲ್ಲಿ ತಮೋಗುಣ ಹೆಚ್ಚಾಗಿಯೂ ಇಂತಹ ವ್ಯತ್ಯಾಸದಿಂದ ಎಂಬ ಭಾವವು. **"ತಮಃಶೂದ್ರೇ ರಜಃ ಕ್ಷತ್ರೇಬ್ರಾಹ್ಮಣೇ ಸತ್ವಮುತ್ತಮಂ । ಇತ್ಯೇವಂ ತ್ರಿಷು ವರ್ಣೇಷು ವಿವರ್ತಂತೇ ಗುಣಾಸ್ತ್ರಯಃ"** ಎಂದು ಭಾರತ ಅಶ್ವಮೇಧಕದಲ್ಲಿ ಈ ವಿಭಾಗವೇ ಉಪಪಾದಿಸಲ್ಪಟ್ಟಿರುತ್ತದೆ. ತದನು **ಗುಣ ಶಮಾದಿಕರ್ಮ ವಿಭಾಗೇನ ಚ** - ಆ ಸತ್ವಾಧಿಕ್ಯ ಮೊದಲಾದ ಗುಣಗಳ ವ್ಯತ್ಯಾಸಕ್ಕೆ ಅನುಗುಣವಾದ ಶಮವೇ ಮೊದಲಾದ ಕರ್ಮವ್ಯತ್ಯಾಸದಿಂದಲೂ ಸಹ ಎಂದರೆ ಬ್ರಾಹ್ಮಣನಲ್ಲಿ ಶಮದಮ ತಪಸ್ಸೇ ಮೊದಲಾದವುಗಳೂ,ಕ್ಷತ್ರಿಯನಲ್ಲಿ ಶೌರ್ಯತೇಜಸ್ಸೇ ಮೊದಲಾದವುಗಳೂ,ವೈಶ್ಯನಲ್ಲಿ ಕೃಷಿ ಗೋರಕ್ಷ್ಯ ಮೊದಲಾದವುಗಳೂ, ಶೂದ್ರನಲ್ಲಿ ಪರಿಚರ್ಯ ರೂಪವಾದವೂ, ಹೀಗೆ ವ್ಯತ್ಯಸ್ತವಾದ ಕರ್ಮವಿಭಾಗದಿಂದಲೂ ಕೂಡ, **ವಿಭಕ್ತಂ** - ವಿವಿಧ ವೈಚಿತ್ರ್ಯತೆಯಿಂದ ಬೇರೆಬೇರೆಯಾಗಿ, **ಮಯಾಸೃಷ್ಟಂ** - ನನ್ನಿಂದ ಸೃಷ್ಟಿಸಲ್ಪಟ್ಟಿತು. ಸೃಷ್ಟಿಗೆ ಮೊದಲು ಚೇತನರೂ ಪ್ರಕೃತಿಯೂ ಸಹ ಒಟ್ಟಿಗೆ ಸೂಕ್ಷ್ಮದೆಶೆಯಲ್ಲಿ ಇದ್ದುಬಿಟ್ಟರು. (ಹೀಗೆ ಚೇತನರು ತಮ್ಮ ಬಂಧ ದೆಶೆಯನ್ನು ನೀಗಿಕೊಳ್ಳಲು ಏನೊಂದೂ ಯತ್ನಮಾಡದೆ ಇದ್ದುಬಿಟ್ಟರಲ್ಲಾ ಎಂದು ಕರುಣೆಯಿಂದ ಪ್ರೇರಿತನಾದ ಸರ್ವೇಶ್ವರನಾದ ನಾನು, ಅವರಿಗೆ ಪ್ರಳಯ ಸಮಯದಲ್ಲಿದ್ದ ಕರ್ಮಗಳಿಗನುಸಾರವಾಗಿ ಕರಣಕಳೇಬರ ಯೋಗವನ್ನುಂಟುಮಾಡಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಜನ್ಮಗಳನ್ನುಂಟುಮಾಡಿದೆನು ಎಂಬ ತಾತ್ಪರ್ಯವು.) ಚಾತುರ್ವರ್ಣ್ಯಂ ಎಂದು ಇಷ್ಟುಮಾತ್ರ ಮೂಲದಲ್ಲಿರುವಾಗ **ಚಾತುರ್ವರ್ಣ್ಯ ಪ್ರಮುಖಂ ಕೃತ್ಸ್ನಂ ಜಗತ್** ಎಂದು ವ್ಯಾಖ್ಯಾನವನ್ನು ಮಾಡಲು ಕಾರಣವೇನೆಂದರೆ ಚೇತನರು ಭೋಕ್ತೃಗಳು, ಅವರುಗಳ ಕರ್ಮಾನುಸಾರವಾಗಿ ಸುಖದುಃಖಾನುಭವಗಳಿಗೆ ಭೋಗ್ಯವಸ್ತುವೂ ಭೋಗಸ್ಥಾನವೂ ಬೇಕಾದುದರಿಂದ ಹಾಗೆ ವ್ಯಾಖ್ಯಾನವು. ಚಾತುರ್ವರ್ಣ್ಯವನ್ನು ಸೃಷ್ಟಿಸಿದೆನು ಎಂದು ಹೇಳಿರುವದರಿಂದ ಅವರಿಗೆ ಬೇಕಾದ ಈ ಜಗತ್ತನ್ನು ವಿವಿಧ ವಿಚಿತ್ರಭೋಗ್ಯ ವಸ್ತುಗಳೊಂದಿಗೆ ಸೃಷ್ಟಿಸಿದೆನೆಂಬ ತಾತ್ಪರ್ಯವು. ಚಾತುರ್ವರ್ಣ್ಯದ ಗುಣಕರ್ಮಗಳ ವಿಭಾಗವು ಗೀತೆಯ ೧೮ ನೆಯ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ. ಹಾಗೆಯೇ ಯಾವಾಗ **ಮಯಾಸೃಷ್ಟಂ** ಎಂದು ಸೃಷ್ಟಿಯು ಹೇಳಲ್ಪಟ್ಟಿತೋ, ಆಗ ಸ್ಥಿತಿಲಯಾದಿಗಳೂ ಕೂಡ ಹೇಳಲ್ಪಟ್ಟವೆಂದೇ ಭಾವಿಸತಕ್ಕದ್ದು. ಈ ಅಭಿಪ್ರಾಯವನ್ನೇ ಮುಂದೆ ತಿಳಿಸುತ್ತಾರೆ. **ಸೃಷ್ಟಿಗ್ರಹಣಂ ಪ್ರದರ್ಶನಾರ್ಥಂ** - ಇಲ್ಲಿ ಸೃಷ್ಟಿಶಬ್ದವನ್ನು ಪ್ರಯೋಗಿಸಿರುವದು ಇತರ ರಕ್ಷಣೆ ಪ್ರಳಯಾದಿಗಳು ಶ್ರುತಿಗಳಲ್ಲಿ ಹೇಳಿರುವದನ್ನು ಸೂಚಿಸುವದಕ್ಕಾಗಿಯೂ ಎಂದು ತಿಳಿಯತಕ್ಕದ್ದು. ಅದನ್ನೇ ವಿವರಿಸುತ್ತಾರೆ. **ಮಯ್ಯೈವ ರಕ್ಷ್ಯತೇ** - ನನ್ನಿಂದಲೇ ಈ ಚಾತುರ್ವರ್ಣ್ಯದಿಂದ ಕೂಡಿದ ಜಗತ್ತು

ರಕ್ಷಿಸಲ್ಪಡುತ್ತದೆ. **ಮಯ್ಯೇವ ಚ**-ನನ್ನಿಂದಲೇನೇ, **ಉಪಸಂಹ್ರಿಯತೇ** - ಪ್ರಳಯದೆಸೆಯನ್ನು ಹೊಂದಿಸಲ್ಪಡುತ್ತದೆ. ಹೀಗೆ ವ್ಯತ್ಯಾಸದಿಂದ ಒಬ್ಬನನ್ನು ಬ್ರಾಹ್ಮಣನನ್ನಾಗಿಯೂ, ಮತ್ತೊಬ್ಬನನ್ನು ಶೂದ್ರನನ್ನಾಗಿಯೂ, ಸೃಷ್ಟಿಸಬಹುದೋ? ಒಬ್ಬನನ್ನು ಸುಖಿಯಾಗಿಯೂ, ಇನ್ನೊಬ್ಬನನ್ನು ದುಃಖಭಾಕ್ಕಾಗಿಯೂ, ಒಬ್ಬನನ್ನು ಆರೋಗಿಯಾಗಿಯೂ, ಇನ್ನೊಬ್ಬನನ್ನು ರೋಗಿಷ್ಠನನ್ನಾಗಿಯೂ, ಮಾಡಬಹುದೇ? ಇದರಿಂದ ಸರ್ವೇಶ್ವರನಾದ ತನಗೆ ವೈಷಮ್ಯನೈರ್ಘೃಣ್ಯದೋಷಗಳುಂಟಾಗುವದಿಲ್ಲವೇ? ಎಂದರೆ ಇಲ್ಲವೆಂದು."**ವೈಷಮ್ಯ ನೈರ್ಘೃಣ್ಯೇನ, ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ**" ಎಂಬ ಬ್ರಹ್ಮಸೂತ್ರದಲ್ಲಿ(೨.೧.೩೪)ಉಪಪಾದಿತವಾಗಿರುತ್ತದೆ. ಈ ಅರ್ಥವನ್ನೇ ಉತ್ತರಾರ್ಧದಿಂದ ಹೇಳುತ್ತಾರೆ. ಇಂತಹ ವೈಷಮ್ಯಗಳ ಕರ್ತಾ ತಾನಲ್ಲವೆಂದೂ, ಚೇತನರುಗಳ ಕರ್ಮಗಳೇ ಕಾರಣವಾದುದರಿಂದ ತಾನು ಅಕರ್ತಾವೆಂದೂ, ಹೇಳಿಕೊಳ್ಳುತ್ತಾರೆ:— **ತಸ್ಯ ವಿಚಿತ್ರಸೃಷ್ಟ್ಯಾದೇಃ** – ಅಂತಹ ವಿಚಿತ್ರ ಸೃಷ್ಟಿ ಮೊದಲಾದವುಗಳಿಗೆ, **ಕರ್ತಾರಮಪಿ**-ಮೂಲ ಕಾರಣನಾದರೂ, **ಅಕರ್ತಾರಂ**-ಸೃಷ್ಟಿಯ ವ್ಯತ್ಯಾಸಗಳಿಗೆ ಕಾರಣನಲ್ಲವಾದುದರಿಂದ ಕರ್ತಾವಲ್ಲವೆಂದೂ, **ಮಾಂ** - ನನ್ನನ್ನು, **ವಿದ್ಧಿ** - ತಿಳಿಯುವನಾಗು.

ಇಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯಾದಿ ವ್ಯಷ್ಟಿ ಸೃಷ್ಟಿಗೂ ಸರ್ವೇಶ್ವರನು ತಾನೇ ಕಾರಣನೆಂದು ಹೇಳಿಕೊಂಡಿರುತ್ತಾನೆ. ಬ್ರಹ್ಮಾಂಡ ಸೃಷ್ಟಿಯವರೆಗೂ ಪ್ರಕೃತಿಯು ವಿಕರಿಸುವ ಕ್ರಮವೂ ಪಂಚೀಕರಣಾದಿಗಳೂ ಇವೆಲ್ಲಾ ಸಮಷ್ಟಿಸೃಷ್ಟಿಗೆ ಸೇರಿದುದಾಗಿ ಸರ್ವೇಶ್ವರನು ತಾನೇ ಸ್ವತಃ ಕಾರಣಭೂತನು. ತದನಂತರ ನಡೆಯುವ ಸೃಷ್ಟಿಯಾದ ವ್ಯಷ್ಟಿ ಸೃಷ್ಟಿಯು, ಚತುರ್ಮುಖಬ್ರಹ್ಮನ ಮೂಲಕ ನಡೆಯುತ್ತದೆಂಬುದು ಶಾಸ್ತ್ರಗಳಲ್ಲಿ ಸಿದ್ಧವು. ಹೀಗಿರುವಾಗ ತಾನೇ ಹೇಗೆ ಈ ಸೃಷ್ಟಿಗೆ ಕಾರಣಭೂತನು ಎಂದರೆ ಚತುರ್ಮುಖ ಬ್ರಹ್ಮನಿಗೂ ಕೂಡ ಸತ್ತೆಯನ್ನು ಕೊಟ್ಟು ಸೃಷ್ಟಿಸುವ ಪ್ರಕಾರವನ್ನು ತಿಳಿಸಿ, ತನ್ನ ಆಜ್ಞಾಪ್ರಕಾರ ಸೃಷ್ಟಿಯನ್ನು ಆತನು ನಡೆಸುವಹಾಗೆ ಮಾಡುವವನೂ ತಾನಾದುದರಿಂದ, **ಚಾತುರ್ವರ್ಣ್ಯಂ ಮಯಾ ಸೃಷ್ಟಂ** ಎಂದು ಹೇಳಿಕೊಂಡಿರುತ್ತಾನೆ. ಈ ಅಭಿಪ್ರಾಯವೇ ವಿಷ್ಣು ಧರ್ಮದಲ್ಲಿ (೩೬-೫೭) ಯೂ ಉಪದೇಶಿಸಲ್ಪಟ್ಟಿರುತ್ತದೆ. ಸರ್ವೇಶ್ವರನು ಚತುರ್ಮುಖನನ್ನು ಕುರಿತು ಹೇಳುತ್ತಾನೆ:—

**(ಸೃಷ್ಟಿಂ ತತಃ ಕರಿಷ್ಯಾಮಿ ತ್ವಾಮಾವಿಶ್ಯ ಪ್ರಜಾಪತೇ ।**
**ಉತ್ಪಾದ್ಯ ಪೃಥಿವೀಂ ಸಮ್ಯಕ್ ಸ್ಥಾಪಯಿತ್ವಾ ಯಥಾಪುರಾ ॥")**

ಓ ಚತುರ್ಮುಖ ಬ್ರಹ್ಮನೇ, ನಿನ್ನಮೂಲಕವಾಗಿ ನಿನಗೆ ಅಂತರಾತ್ಮಾವಾಗಿದ್ದುಕೊಂಡು ವ್ಯಷ್ಟಿ ಸೃಷ್ಟಿಯನ್ನೆಲ್ಲಾ ಮಾಡುತ್ತೇನೆಂದು ಹೇಳಿರುತ್ತಾರೆ. **"ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್"** ಎಂಬ ಸೂತ್ರದಲ್ಲಿ ವ್ಯಾಸ ಮಹರ್ಷಿಯು ಈ ಅಭಿಪ್ರಾಯವನ್ನೇ ಸೂಚಿಸಿರುತ್ತಾರೆ. ದೇವಾದಿನಾಮರೂಪ ವ್ಯಷ್ಟಿ ಸೃಷ್ಟಿಯು ಚತುರ್ಮುಖ ಶರೀರಕನಾದ ಪರಮಾತ್ಮನಿಂದಲೇ, ಏಕೆಂದರೆ ಹಾಗೆ ಶ್ರುತಿಯಲ್ಲಿ ಉಪದೇಶಿಸಿರುವದರಿಂದ ಎಂಬುದು ಈ ಸೂತ್ರ ತಾತ್ಪರ್ಯವು. ಆದುದರಿಂದ ಈ ಚಾತುರ್ವರ್ಣ್ಯವನ್ನೂ ಅವರಿಗೆ ಬೇಕಾದ ವಿಚಿತ್ರ ಭೋಗ್ಯವಸ್ತುವುಳ್ಳ ಈ ಜಗತ್ತನ್ನೂ ಸಹ ನಾನೇ ನನ್ನ ಸಙ್ಕಲ್ಪದಿಂದ ಸೃಷ್ಟಿಸಿ ಆದರ ಸ್ಥಿತಿಲಯಾದಿ ಕಾರ್ಯಗಳನ್ನೆಲ್ಲಾ ನಡೆಸುತ್ತೇನೆ; ಈ ಕಾರಣದಿಂದ ನಾನು ಕರ್ತಾವೇನೋ ಹೌದು. ಆದರೆ ಗುಣಕರ್ಮವಿಭಾಗದಿಂದ ತೋರುವ ವ್ಯತ್ಯಾಸಕ್ಕೂ ವೈಚಿತ್ರ್ಯತೆಗೂ ನಾನು ಕಾರಣನಲ್ಲವು; ಅವರವರುಗಳ ಕರ್ಮಗಳೇ ಕಾರಣವಾದುದರಿಂದ ಆವಿಷಯದಲ್ಲಿ ನಾನು ಅಕರ್ತಾ, ಕರ್ತಾವಲ್ಲವು. ಹೀಗೆ ಪರಮಾತ್ಮನು ಈ ಸಂದರ್ಭದಲ್ಲಿ ಕರ್ತಾವು ಹೌದು, ಅಕರ್ತಾವೂ ಹೌದು ಎಂಬುದು ಹೇಗೆ ಎಂಬುದನ್ನು ಒಂದು ಲೋಕದೃಷ್ಟಾಂತದ ಮೂಲಕ ಗ್ರಹಿಸಬಹುದು. ಸುಕೃತಮಾಡಿ ಲೋಕೋಪ

ಭಾ. ಅವ- ಕಥಮಿತ್ಯತ್ರಾಹ:—

**ಮೂ. ನಮಾಂ ಕರ್ಮಾಣಿ ಲಿಂಪಂತಿ ನಮೇ ಕರ್ಮಫಲೇ ಸ್ಪೃಹಾ।**
**ಇತಿ ಮಾಂ ಯೋಭಿಜಾನಾತಿ ಕರ್ಮಭಿರ್ನಸ ಬಧ್ಯತೇ ॥ ೧೪.**

ಕಾರಕ್ಕಾಗಿ ಧನಾದಿಯನ್ನು ವ್ಯಯಮಾಡಿ ಶ್ರಮಪಡುವವರಿಗೆ ರಾಜ ಸಭೆಯಲ್ಲಿ ಸನ್ಮಾನವನ್ನೂ, ಲೋಕಕಂಟಕರಿಗೆ ಶಿಕ್ಷೆಯನ್ನೂ ಏರ್ಪಡಿಸಿರುವದರಿಂದ ಕೆಲವರು ಸನ್ಮಾನವನ್ನೂ ಕೆಲವರು ಶಿಕ್ಷೆಯನ್ನೂ ಹೊಂದುವವಕ್ಕೂ ರಾಜನು ಕಾರಣನಾಗಿ ಕರ್ತಾವೆಂದು ಹೇಳಿಸಿಕೊಳ್ಳುವನು;ಆದರೆ ಒಬ್ಬನು ಹೊಂದುವ ಸನ್ಮಾನಕ್ಕೂ ಇನ್ನೊಬ್ಬನು ಹೊಂದುವ ಶಿಕ್ಷೆಗೂ ಆವರವರುಗಳೇ ಕಾರಣವಾದುದರಿಂದ ರಾಜನು ಅಕರ್ತಾವೂ ಹೌದು. ಹಾಗೆಯೇ ಪರಮಾತ್ಮನೂ ಕರ್ತಾ ಅಕರ್ತಾ ಎರಡೂ ಹೌದು.)

ಕೆಲವರು ಅಕರ್ತಾ ಎಂದರೆ ನ ವಿದ್ಯತೇ ಕರ್ತಾ ಯಸ್ಯಸಃ ಎಂಬ ವ್ಯುತ್ಪತ್ತಿ ಮೂಲಕ ನನಗೆ ಬೇರೆ ಕರ್ತಾವಿಲ್ಲವೆಂದು ತಿಳಿ ಎಂದು ಅರ್ಥಮಾಡಿರುತ್ತಾರೆ. ಈ ಅಭಿಪ್ರಾಯವು ಅಪ್ರಸ್ತುತವು. ಪ್ರಕರಣಕ್ಕೆ ಯಾವ ಸ್ವಾರಸ್ಯವನ್ನೂ ಉಂಟುಮಾಡತಕ್ಕದ್ದಲ್ಲವು. ವ್ಯತ್ಯಸ್ತವಾದ ವೃಷ್ಟಿ ಸೃಷ್ಟಿಯನ್ನು ನಾನೇ ಮಾಡಿದೆನು ಎಂದು ಹೇಳಿದರೆ, ಹಾಗೆ ಮಾಡಬಹುದೇ ಎಂಬ ಪೂರ್ವಪಕ್ಷ ಬರುವದರಿಂದ ಸ್ವಾರಸ್ಯವಾಗಿ ವಿರೋಧಾಭಾಸಾಲಂಕಾರಮೂಲಕವಾಗಿ ತಾನು ಕರ್ತಾವೂ ಹೌದು, ಕರ್ತಾವೂ ಅಲ್ಲವು ಎಂದು. ವಿರೋಧ ತೋರಿಸಿ ಅದರ ಪರಿಹಾರ ಹೇಗೆ ಎಂದರೆ ಕರ್ಮ ಮೂಲಕವಾಗಿ ಎಂದು ಮುಂದಿನ ಶ್ಲೋಕದಿಂದ ಉಪಪಾದಿಸಿದರೆ)ಪ್ರಕರಣಕ್ಕೂ ಯುಕ್ತವಾಗಿ ಸರ್ವ ಸಮಂಜಸವಾದ ಸ್ವಾರಸ್ಯವಾದ ಅಭಿಪ್ರಾಯವಾಗುತ್ತದೆ ॥೧೩॥

**ಭಾಷ್ಯಾವತಾರಿಕೆಯ ಅರ್ಥವು:**—ತಾನೇ ಕರ್ತಾ ಮತ್ತು ತಾನೇ ಅಕರ್ತಾ, ತಾನೇ ಸೃಷ್ಟಿಸಿದುದಕ್ಕೆ ಕಾರಣವು, ತಾನೇ ಕಾರಣವೂ ಅಲ್ಲವು. ಹೀಗೆಲ್ಲಾದರೂ ಉಂಟೋ ? ಕಥಮಿತ್ಯತ್ರಾಹ ಒಂದು ಕಾರ್ಯದ ವಿಷಯದಲ್ಲಿ ತನಗೇನೇ ಕರ್ತೃತ್ವವೂ ಮತ್ತು ಅದರ ಅಭಾವವೂ ಕೂಡ ಎಂಬುದು ಹೇಗೆ ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾರೆ.—ಕರ್ತೃತ್ವ ತನಗೇನೇ ಇದ್ದರೂ ಸೃಷ್ಟಿಯಲ್ಲಿ ವೈಚಿತ್ರ್ಯತೆ ಮತ್ತು ವೈವಿಧ್ಯಕ್ಕೆ ಕಾರಣನು ತಾನಲ್ಲವೆಂದೂ, ಅದಕ್ಕೆ ಕಾರಣವು ಕ್ಷೇತ್ರಜ್ಞರ ಪುಣ್ಯಪಾಪರೂಪ ಕರ್ಮಗಳೆಂದೂ, ತಿಳಿಸುತ್ತಾರೆ.

**ಮೂಲಕ್ಕೆ ಅರ್ಥವು:**—ಕರ್ಮಾಣಿ - ನಾನು ಮಾಡುವ ಚಾತುರ್ವರ್ಣ್ಯಾದಿ ಸೃಷ್ಟ್ಯಾದಿ ವೈಚಿತ್ರ್ಯವುಳ್ಳಕರ್ಮಗಳು, ಮಾಂ - ಲೀಲಾಪ್ರಯೋಜನವಲ್ಲದೆ ಇನ್ನು ಯಾವ ಅಪೇಕ್ಷೆಯೂ ಇಲ್ಲದ ನನ್ನನ್ನು, ನ ಲಿಂಪಂತಿ-ಲೇಪಿಸುವದಿಲ್ಲವು ಎಂದರೆ ನನಗೆ ಸಂಬಂಧಿಸುವದಿಲ್ಲವು. ಹಾಗಾದರೆ ಯಾರಿಗೆ ಸಂಬಂಧಿಸಿದವು ? ಎಂದು ಕೇಳಬೇಕಾಗುತ್ತದೆ. ಕ್ಷೇತ್ರಜ್ಞರಿಗೆ ಎಂದು ಚನ್ನಾಗಿ ಭಾಷ್ಯದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಕೆಲಸ ಮಾಡುವದು ಕಾರ್ಯರೂಪ ಪ್ರಯೋಜನಕ್ಕಲ್ಲವೋ ಎಂದರೆ ನನಗೆ ಅವರಲ್ಲಿ ಯಾವ ಪ್ರಯೋಜನವೂ ಇಲ್ಲವು ಎಂದು ಹೇಳುತ್ತಾರೆ. ("ಪ್ರಯೋಜನ ಮನುದ್ದಿಶ್ಯ ನ ಮಂದೋಪಿ ಪ್ರವರ್ತತೇ" ಎಂದರೆ ಒಂದು ಪ್ರಯೋಜನವನ್ನು ಉದ್ದೇಶಿಸದೆ ಯಾವ ಮಂದ ಬುದ್ಧಿಯುಳ್ಳವನೂ ಕಾರ್ಯಕ್ಕಾಗಿ ಪ್ರಯತ್ನಿಸುವದಿಲ್ಲವು ಎಂಬುದು ವ್ಯಕ್ತವು. ಹೀಗಿರುವಾಗ ಸೃಷ್ಟ್ಯಾದಿ ಕರ್ಮಗಳನ್ನು ಮಾಡಿ ಅದರ ಫಲಗಳು ಮಾತ್ರ ಹೇಗೆ ಇಲ್ಲವು ? ಎಂಬುದಕ್ಕೆ ಸಮಾಧಾನವಾಗಿ ನ ಮೇ ಕರ್ಮಫಲೇ ಸ್ಪೃಹಾ" ಎಂದು ಹೇಳುತ್ತಾರೆ; ನನಗೆ ಆ ಚಾತುರ್ವರ್ಣ್ಯಾದಿ ಸರ್ವ ಜಗತ್ತನ್ನು ವಿಚಿತ್ರವಾಗಿ ಸೃಷ್ಟಿಸುವ ಕರ್ಮ ಫಲದಲ್ಲೂ ಆಶೆಯು ಇಲ್ಲವು. ಹಾಗಾದರೆ ಈ ಸೃಷ್ಟ್ಯಾದಿ ಕರ್ಮಗಳ ಫಲೋಪಭೋಗದಲ್ಲಿ ಯಾರಿಗೆ ಆಶೆ ಎಂದು ಕೇಳಲೇಬೇಕಾಗುತ್ತದೆ. ಭೋಕ್ತೃಗಳಾದ ಕ್ಷೇತ್ರಜ್ಞರು ತಾವು ಹಿಂದೆ ಮಾಡಿದ ಪುಣ್ಯ

ಭಾ. ಯತ ಇಮಾನಿ ವಿಚಿತ್ರಸೃಷ್ಟ್ಯಾದೀನಿ ಕರ್ಮಾಣಿ ಮಾಂ ನಲಿಂಪಂತಿ-ನಮಾಂ ಸಂಬಧ್ನಂತಿ ; ನಮತ್ಪ್ರಯುಕ್ತಾನಿ ತಾನಿ ದೇವ ಮನುಷ್ಯಾದಿ ವೈಚಿತ್ರ್ಯಾಣಿ ; ಸೃಜ್ಯಾನಾಂ

ಪಾಪಗಳಿಗನುಗುಣವಾದ ಸುಖದುಃಖರೂಪ ಫಲಗಳನ್ನು ಅನುಭವಿಸುವರಾದುದರಿಂದ ಅವರಿಗೇನೇ ಕರ್ಮಫಲವಲ್ಲಿ ಸ್ಪೃಹಾ. ತಯೋರನ್ಯಃ ಪಿಪ್ಪಲಂಸ್ವಾದ್ವತ್ತಿ (ಮುಂ.೩.೧.೧.)ಎಂಬ ಶ್ರುತ್ಯರ್ಥವು ಇಲ್ಲಿ ಬೋಧಿಸಲ್ಪಟ್ಟಿತು. ಕ್ಷೇತ್ರಜ್ಞನೇ ಭೋಗ್ಯವಸ್ತುವನ್ನೆಲ್ಲಾ ಅನುಭವಿಸುವವನು, ಇತಿ ಮಾಂ ಎಂದರೆ ಹೀಗೆ ನಾನು ಸಾಮಾನ್ಯತಃ ಕರ್ತೃವೆಂದೂ ವೈಚಿತ್ರ್ಯತೆಗಳಿಗೆಲ್ಲಾ ವಿಶೇಷತಃ ಕ್ಷೇತ್ರಜ್ಞರ ಪುಣ್ಯಪಾಪಕರ್ಮಗಳೇ ಕಾರಣವೆಂದೂ, ಯೋಭಿಜಾನಾತಿ - ಯಾವನು ತಿಳಿಯುತ್ತಾನೋ, ಸಃ - ಅವನು, ಕರ್ಮಭಿಃ - ಕರ್ಮಯೋಗಕ್ಕೆ ಪ್ರತಿಬಂಧಕವಾದ ವಿರೋಧಿರೂಪ ಪುಣ್ಯಪಾಪರೂಪ ಕರ್ಮಗಳಿಂದ, ನ ಬಧ್ಯತೇ - ಬಂಧಿಸಲ್ಪಡುವದಿಲ್ಲವು. ಇದರಿಂದ ಈ ಜ್ಞಾನವು, ಎಂದರೆ ಜೀವಾತ್ಮನಿಗೆ ಪ್ರಾಪ್ತವಾಗಿರುವ ದೇಹವೂ ಆತನ ವ್ಯಾಪಾರಗಳೂ ಸಹ ಕರ್ಮಕೃತವಾದುವು ಗುಣಕೃತವಾದುವು ಎಂಬ ಮತ್ತು ನಾವುಗಳೀಗ ಹೀಗೆ ಕರ್ಮವಶ್ಯರು ಪರಮಾತ್ಮನು ಕರ್ಮವಶ್ಯನಲ್ಲವೆಂಬ ಜ್ಞಾನವು, ಕರ್ಮಯೋಗಿಗೆ ಆವಶ್ಯಕವೆಂದಾಯಿತು. "ಅನಶ್ನನ್ ಅನ್ಯೋಽಭಿಚಾಕಶೀತಿ" ಎಂಬ ಆ ಶ್ರುತಿಯ ಮುಂದಿನ ವಾಕ್ಯಾರ್ಥವೂ,ಇಲ್ಲಿ ಬೋಧಿಸಲ್ಪಟ್ಟಿತು. ಈ ಶ್ಲೋಕದಲ್ಲೂ ಜೀವಾತ್ಮ ಪರಮಾತ್ಮ ಭೇದವೇ ಉಪಪಾದಿತವು; ದ್ವಾಸುಪರ್ಣಾ ಎಂಬ ಶ್ರುತಿಯಲ್ಲಿ ಹೇಳಿದ ಜೀವ ಪರಮಾತ್ಮ ಭೇದವು ಇಲ್ಲಿ ಉಪಪಾದಿತವಾಗಿರುವದರಿಂದ, ಅಕರ್ತೃವೆಂಬಭಿಪ್ರಾಯವೇ ಯಥಾರ್ಥವಾದುದು ಕರ್ತೃ ಎಂಬ ಅಭಿಪ್ರಾಯವು ಮಿಥ್ಯಾವಾಗಿ ಆರೋಪಣವೆಂಬಿವೇ ಮೊದಲಾದ ವ್ಯಾಖ್ಯಾನಗಳಿಗೆ ಅವಕಾಶವಿಲ್ಲವು. ||೧೪||

ಭಾಷ್ಯಾರ್ಥವು :—ಕರ್ಮಯೋಗವು ನಿತ್ಯನೈಮಿತ್ತಿಕಗಳೊಂದಿಗೆ "ದೈವಮೇವಾಪರೇ" ಎಂದಾರಂಭಿಸಿ ಹೇಳಿದ ನಾನಾ ಯಜ್ಞರೂಪಕರ್ಮಗಳಲ್ಲೊಂದನ್ನು ಅನುಷ್ಠಿಸುವ ಕರ್ಮಾನುಷ್ಠಾನದಲ್ಲಿ ಆತ್ಮಯಾಥಾತ್ಮ್ಯಜ್ಞಾನವೂ, ತಾನು ಮಾಡುವ ಸರ್ವಕರ್ಮಾನುಷ್ಠಾನದಲ್ಲೂ, ಫಲಕರ್ತೃತ್ವ ಮಮತೆಗಳು ಕೂಡದೆಂಬ ಮತ್ತು ಅವುಗಳನ್ನೆಲ್ಲಾ ಶ್ರೀ ಕೃಷ್ಣನಲ್ಲಿ ಸಮರ್ಪಿಸಿ ಕೃಷ್ಣಾರ್ಪಣಮಸ್ತು ಎಂದು ಹೇಳಲು ಬೇಕಾದ ಜ್ಞಾನಭಕ್ತಿಗಳೂ ಸಹ ಆ ಅನುಷ್ಠಾನದೊಂದಿಗೆ ಇರಬೇಕೆಂದು ಹೇಳಿದರು. ಈಗ ತನ್ನ ಪ್ರವೃತ್ತಿಗಳಿಗೂ ಪರಮಾತ್ಮನ ಪ್ರವೃತ್ತಿಗಳಿಗೂ ಇರುವ ವೈಲಕ್ಷಣ್ಯಜ್ಞಾನವೂ ಕೂಡ ಕರ್ಮಯೋಗಿಗೆ ಆವಶ್ಯಕವೆಂದು ಉಪದೇಶಿಸುತ್ತಾರೆ :—ಯತಃ - ಯಾವ ಕಾರಣದಿಂದ, ಹಿಂದೆ ತಾವು ಕರ್ತೃವಾದರೂ ಅಕರ್ತೃ ಎಂದು ಹೇಳಿದರು, ಕರ್ತೃವೇನೋ ಒಪ್ಪತಕ್ಕದ್ದು, ಅಕರ್ತೃ ಹೇಗೆ ಎಂಬ ಪ್ರಶ್ನೆಗೆ ಈ ಶ್ಲೋಕದ ಪೂರ್ವಾರ್ಧವು ಕಾರಣವನ್ನು ಹೇಳುವದರಿಂದ, ಯತಃ - ಎಂದು ಆರಂಭಿಸಿ ಕಾರಣವನ್ನು ತಿಳಿಸಿ, ಅತಃ ತಾನು ಅಕರ್ತೃ ಎಂದು ಸಾಧಿಸುತ್ತಾರೆ ; ಕರ್ಮಾಣಿ - ಎಂಬುವದಕ್ಕೆ ವ್ಯಾಖ್ಯಾನವಾಗಿ ಇಮಾನಿ ವಿಚಿತ್ರಸೃಷ್ಟ್ಯಾದೀನಿ ಎಂದು ಹೇಳಿರುತ್ತಾರೆ ; ಈ ವಿಚಿತ್ರ ಸೃಷ್ಟಿಸ್ಥಿತಿಲಯಾದಿಗಳಾದ, ಕರ್ಮಾಣಿ - ಕರ್ಮಗಳು, ಮಾಂ ನಲಿಂಪಂತಿ ಎಂದರೆ ನ ಮಾಂ ಸಂಬಧ್ನಂತಿ - ನನ್ನನ್ನು ಬಂಧಿಸುವದಿಲ್ಲವು. ತಾನು ಸಾಮಾನ್ಯ ಕರ್ತೃವಾದರೂ ವಿಶೇಷಕರ್ತೃ ತಾನಲ್ಲವೆಂಬಭಿಪ್ರಾಯವು. ಒಂದು ಕಾರ್ಯಕ್ಕೆ ಅನೇಕ ಕಾರಣಗಳಿರಬಹುದೆಂಬ ಭಾವವು. ನ ಮಾಂ ಕರ್ಮಾಣಿ - ಎಂಬಲ್ಲಿರುವ ಕರ್ಮಶಬ್ದಕ್ಕೆ ಪುಣ್ಯಪಾಪರೂಪ ಕರ್ಮಗಳೆಂಬ ಅರ್ಥವಲ್ಲವು ಚೇತನಾನುಗ್ರಹಾರ್ಥವಾಗಿಯೇ ನಡೆಸುವ ಸೃಷ್ಟಿಸ್ಥಿತಿಲಯಾದಿಗಳೂ ಚೇತನರಿಗೆ ಕರಣಕಳೇಬರ ದಾನ, ಶಾಸ್ತ್ರಪ್ರದಾನ, ಶಾಸ್ತ್ರೋಪದೇಶ, ಮೊದಲಾದ ಕಾರ್ಯಗಳೂ, (ಇದರಲ್ಲೇ ಪಾಪಾತ್ಮರಿಗೆ ಬೇಕಾದ ನಿಗ್ರಹರೂಪ ಸೃಷ್ಟಿಯೂ ಸೇರಿತು,) ಇವೆಲ್ಲಾ

ಭಾ. ಪುಣ್ಯಪಾಪರೂಪ ಕರ್ಮವಿಶೇಷ ಪ್ರಯುಕ್ತಾನೀತ್ಯರ್ಥಃ. ಅತಃಪ್ರಾಪ್ತಾ ಪ್ರಾಪ್ತ ವಿವೇಕೇನ ವಿಚಿತ್ರಸೃಷ್ಟ್ಯಾದೇ ರ್ನಾಹಂ ಕರ್ತಾ. ಯತಶ್ಚ ಸೃಷ್ಟಾಃ ಕ್ಷೇತ್ರಜ್ಞಾಃ ಸೃಷ್ಟಿ ಲಬ್ಧ ಕರಣ ಕಳೇಬರಾಃ ಸೃಷ್ಟಿಲಬ್ಧಂ ಭೋಗ್ಯಜಾತಂ ಫಲಸಙ್ಗಾದಿ ಹೇತು ಸ್ವಕರ್ಮಾನುಗುಣಂ ಭುಂಜತೇ; ಸೃಷ್ಟ್ಯಾದ್ಯಧಿ ಫಲೇ ಕರ್ಮಫಲೇಚ ತೇಷಾ ಮೇವ

ಸರ್ವೇಶ್ವರನಾದ ನನ್ನ. ಕರ್ಮಾಣಿ-ಪ್ರವೃತ್ತಿಗಳು ; ಆದುದರಿಂದ ಓ ಅರ್ಜುನನೇ ನಿನ್ನ ಕರ್ಮಗಳು ನಿನಗೆ ಲೇಪವನ್ನುಂಟುಮಾಡ.ವ ಹಾಗೆ ನನ್ನ ಕರ್ಮಗಳಲ್ಲವು. ನನ್ನ ಕರ್ಮಗಳಾದರೋ ನಮಾಂ ಲಿಮ್ಪನ್ತಿ ಎಂದು ಹೇಳಿದರು. ಇದರ ಅಭಿಪ್ರಾಯವನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ದೇವಮನುಷ್ಯಾದಿ ವೈಚಿತ್ರ್ಯಾಣಿ-ದೇವ ಮನುಷ್ಯ ತಿರ್ಯಜ್‌ಸ್ಥಾವರರೂಪ ವಿಚಿತ್ರಗಳಾದ, ತಾನಿ - ಅವುಗಳೆಲ್ಲಾ, ನಮತ್ಪ್ರಯುಕ್ತಾನಿ - ನನ್ನ ಮೂಲಕವಾದವುಗಳಲ್ಲವು. ಇದರಿಂದ ತಾನು ಅಕರ್ತಾ ಹೇಗೆ ಎಂಬುದನ್ನು ವ್ಯಕ್ತಪಡಿಸಿದರು. ಇನ್ನು ಯಾವ ಮೂಲಕವಾದುವು ಎಂದರೆ, ಸೃಜ್ಯಾನಾಂ - ಕರಣಕಳೇಬರ ಯೋಗದಿಂದ ಸೃಷ್ಟಿಸಲ್ಪಡುವ ಕ್ಷೇತ್ರಜ್ಞರ, ಪುಣ್ಯಪಾಪರೂಪಕರ್ಮವಿಶೇಷಪ್ರಯುಕ್ತಾನೀತ್ಯರ್ಥಃ - ಪುಣ್ಯಪಾಪರೂಪಗಳಾದ ಕರ್ಮವಿಶೇಷ ಮೂಲಕವಾದವು ಎಂಬ ತಾತ್ಪರ್ಯವು. ಅತಃ – ಆ ಕಾರಣದಿಂದ, ಪ್ರಾಪ್ತಾಪ್ರಾಪ್ತವಿವೇಕೇನ - ತಾರತಮ್ಯವೇ ಮೊದಲಾದವನ್ನುಳ್ಳ ಎಂದರೆ ಪುಣ್ಯಪಾಪರೂಪ ತಾರತಮ್ಯಗಳಿಗನುಗುಣವಾಗಿ ಸುಖದುಃಖ ವಿಷಮಸೃಷ್ಟಿ ಎಂದು ತಿಳಿದು ನಿಷ್ಕರ್ಷಿಸುವದರ ಮೂಲಕ, ವಿಚಿತ್ರಸೃಷ್ಟ್ಯಾದೇಃ - ಆ ವಿಚಿತ್ರವಾದ ಸೃಷ್ಟ್ಯಾದಿಗಳಿಗೆ, ನಾಹಂಕರ್ತಾ - ನಾನು ಕರ್ತಾವಲ್ಲವು. ಹೇಗೆಂದರೆ ವಿಚಿತ್ರ ಸಸ್ಯಾದಿಗಳು ಬೆಳೆಯಲು, ಗೊಬ್ಬರ, ನೀರು ಇರುವ ಕ್ಷೇತ್ರವು ಸಾಮಾನ್ಯವಾಗಿ ಕಾರಣವಾಗಬಹುದು. ಬೇರೆ ಬೇರೆ ಬೀಜಗಳು ಬೇರೆ ಬೇರೆ ವಿಚಿತ್ರ ಸಸ್ಯೋತ್ಪತ್ತಿಗೆ ಹಾಗೆ ಕಾರಣವೋ ಹಾಗೆಂಬ ಭಾವವು. ಇಲ್ಲಿ ಪ್ರಾಪ್ತಾಪ್ರಾಪ್ತವಿವೇಕೇನ ಎಂದು ಏಕೆ ಹೇಳಲ್ಪಟ್ಟಿತೆಂದರೆ ಪುಣ್ಯರೂಪ ಪ್ರಾಚೀನಕರ್ಮವಿದ್ದರೆ ಅಸಾಧುವಾದ ಜನ್ಮವೂ ಇಲ್ಲದಿದ್ದರೆ ಇಲ್ಲವು;ಹೀಗೆ ಅನ್ವಯ ವ್ಯತಿರೇಕ ಮೂಲಕ ನಿಷ್ಕರ್ಷಿಸಬಹುದೆಂಬ ಭಾವನೆಯಿಂದ ಹಾಗೆ ಪ್ರಯೋಗವು. ತಾನು ವಿಚಿತ್ರ ಸೃಷ್ಟಿಗೆ ಕರ್ತಾವಲ್ಲವೆನ್ನುವದಕ್ಕೆ ಇನ್ನೊಂದು ಕಾರಣವನ್ನು ನಮೇ ಕರ್ಮಫಲೇ ಸ್ಪೃಹಾ ಎಂಬುದರಿಂದ ತಿಳಿಸುತ್ತಾರೆ. ಯತಶ್ಚ-ಯಾವ ಕಾರಣದಿಂದ, ಸೃಷ್ಟಾಃ - ಸೃಷ್ಟಿಸಲ್ಪಟ್ಟ, ಕ್ಷೇತ್ರಜ್ಞಾಃ-ಚೇತನರು, ಸೃಷ್ಟಿಲಬ್ಧ ಕರಣಕಳೇಬರಾಃ - ಆ ಸೃಷ್ಟಿಯಿಂದ ಹೊಂದಿದ ಇಂದ್ರಿಯ ಶರೀರಗಳನ್ನುಳ್ಳವರಾಗಿ, ಸೃಷ್ಟಿಲಬ್ಧಂ ಭೋಗ್ಯಜಾತಂ - ಆ ಸೃಷ್ಟಿಯಿಂದಲೆ ಪ್ರಾಪ್ತವಾದ ಭೋಗ್ಯವಸ್ತುವಿನ ಸಮೂಹವನ್ನು, ಫಲಸಙ್ಗಾದಿ ಹೇತು ಸ್ವಕರ್ಮಾನುಗಣಂ-ಫಲಸಙ್ಗಾದಿಗಳಿಗೆ ಕಾರಣಭೂತವಾಗಿವುಳ್ಳ ಕರ್ಮಾನುಗುಣವಾಗಿ,ಭುಂಜತೇ-ಅನುಭವಿಸುತ್ತಾರೋ,ಸೃಷ್ಟ್ಯಾದಿಫಲದಲ್ಲೂ ಕರ್ಮಫಲದಲ್ಲೂ ಸಹ, ತೇಷಾಮೇವಸ್ಪೃಹೇತಿ-ಅವರುಗಳಿಗೇನೇ ಆಶೆಯು ಇರುವದರಿಂದ, ನಮೇ ಸ್ಪೃಹಾ-ನನಗೆ ಯಾವ ಆಶೆಯೂ ಇರುವದಿಲ್ಲವು. ಹೀಗೆ ಎರಡು ಕಾರಣಗಳಿಂದತಾನು ಅಕರ್ತಾ ಎಂದು ಹೇಳಿಕೊಂಡರು. (೧) ಚೇತನರಿಗೆ ದೇಹಪ್ರಾಪ್ತಿಗೆ ತಾನು ಕಾರಣನಲ್ಲವು; ಅವರುಗಳ ಪೂರ್ವಸಂಚಿತ ಕರ್ಮಗಳೇ ಎಂದು ಹೇಳಿದರು.(೨)ಅವರುಗಳಿಗೆ ಅವರ ಕರ್ಮಾನುಗುಣವಾಗಿ ದೇಹಪ್ರಾಪ್ತಿಯೊಂದಿಗೆ ಲೋಕವನ್ನು ಸೃಷ್ಟಿಸುವದರಿಂದ ಅವರಿಗೇನೇ ಭೋಕ್ತೃತ್ವವು. ಆದುದರಿಂದ ನನಗೆ ಆಗತಕ್ಕದ್ದೇನೂ ಇಲ್ಲವು, ಎಂದು ತಿಳಿಸಿದರು.) ತನಗೇನೂ ಪ್ರಯೋಜನವಿಲ್ಲವಾದರೆ ಆ ಸೃಷ್ಟ್ಯಾದಿ ಕರ್ಮಗಳಲ್ಲಿ ಏತಕ್ಕೆ ಪ್ರವರ್ತನೆಯು ? "ಪ್ರಯೋಜನಮನುದ್ದಿಶ್ಯ ನಮನ್ದೋಪಿ ಪ್ರವರ್ತತೇ" ಪ್ರಯೋಜನವಿಲ್ಲದೆ ಯಾವ ಮಂದಬುದ್ಧಿಯುಳ್ಳವನು ಪ್ರವರ್ತಿಸುವದಿಲ್ಲವು ಎಂದಲ್ಲವೇ ನಮ್ಮ

ಭಾ. ಸ್ಪೃಹೇತಿ ನಮೇ ಸ್ಪೃಹಾ. ತಥಾಽಹ ಸೂತ್ರಕಾರಃ (೧) "ವೈಷಮ್ಯನೈರ್ಘೃಣ್ಯೇ, ನ,

ಗಳ ಅನುಭವವು ? ಸ್ವಪ್ರಯೋಜನವೇನೋ ಇಲ್ಲವು, ಪರಪ್ರಯೋಜನಕ್ಕಾಗಿ ಪ್ರವೃತ್ತಿಯು ಆಗ ಬಹುದಲ್ಲಾ ಎಂಬ ಅಭಿಪ್ರಾಯವು ಮುಂದೆ ವ್ಯಕ್ತಪಡಿಸಲ್ಪಡುತ್ತದೆ. ಆ ಪರಪ್ರಯೋಜನಕ್ಕಾಗಿ ಮಾಡುವ ಪ್ರವೃತ್ತಿಯಲ್ಲಿಯೂಕೂಡ,ಪ್ರಾಣಿಹಿಂಸಕನಿಗೆ ಶಿಕ್ಷೆಯನ್ನೂ,ಪ್ರಾಣಿ ಹಿತಕರನಿಗೆ ಶ್ರೇಯ ಸ್ಸನ್ನೂ ಹೀಗೆ ಪುಣ್ಯಪಾಪಾನುಗುಣವಾಗಿ ಫಲವನ್ನುನಾನು ಅನುಗ್ರಹಿಸುವದೂ,ನನಗಾಗಿ ಅಲ್ಲವು; ಅನುಗ್ರಹ ನಿಗ್ರಹಗಳನ್ನು ನಾನು ಸ್ವತಂತ್ರಿಸಿ ನನ್ನ ಇಷ್ಟಬಂದಂತೆಯೂ ಮಾಡುವದಿಲ್ಲವು. ಲೋಕದಲ್ಲಿ ಪಾಪಿಗಳು ಹೀಗೆ ದುಃಖಿಸುತ್ತಿರುವದು ನನಗೆ ಅಭಿಮತವಾದುದು ಎಂದೂ ತಿಳಿಯ ಬೇಡ, ಇತ್ಯಾದಿ ಅಭಿಪ್ರಾಯಗಳನ್ನೆಲ್ಲಾ ಮನಸ್ಸಿನಲ್ಲಿಟ್ಟು, ನಮೇ ಕರ್ಮಫಲೇ ಸ್ಪೃಹಾ ಎಂದು ಹೇಳಲ್ಪಟ್ಟಿತು. ಹಾಗೆ ಹೇಳುವಾಗ ನಾನು ಮಾಡುವ ಕರ್ಮಗಳಲ್ಲಿ ನನಗೇನೂ ಫಲದ ಆಶೆ ಇಲ್ಲನೆಂದು ಯಾವಾಗ ಹೇಳಿಕೊಂಡರೋ ಆಗ ಸಾಮಾನ್ಯ ಕರ್ತೃತ್ವ ಉಂಟೆಂದು ಒಪ್ಪಿಕೊಂಡೇ ಹೇಳಿದ ಮಾತಾಯಿತು. ಆ ಫಲದಲ್ಲಿ ಸ್ಪೃಹಾ ಇಲ್ಲನೆಂದು ಹೇಳಿದುದರಿಂದ ಅಕ ರ್ತೃತ್ವವನ್ನು ಉಪಪಾದಿಸಿದಹಾಗಾಯಿತು. (ಕರ್ಮಫಲದಲ್ಲಿ ಸ್ಪೃಹಾರೂಪಭೋಕ್ತೃತ್ವವೇನೋ ಚೇತನನಿಗುಂಟು ; ನನಗೆ ಪುಣ್ಯಪಾಪರೂಪ ಕರ್ಮಗಳೂ ಇಲ್ಲವು ; ಆ ಕಾರಣದಿಂದಲೇ ನನಗೆ ಭೋಕ್ತೃತ್ವವೂ ಇಲ್ಲವು ; ಚೇತನನನ್ನು ಶ್ರುತಿಯು ಆ ಕಾರಣದಿಂದ ಭೋಕ್ತಾ ಎಂದು ಹೇಳಿ ಪರಮಾತ್ಮನನ್ನಾದರೋ ಸಾಮಾನ್ಯವಾಗಿ ಪ್ರೇರಿತಾ ಎಂದು "ಭೋಕ್ತಾಭೋಗ್ಯಂ ಪ್ರೇರಿತಾರಂ ಚ ಮತ್ವಾ" ಎಂಬಲ್ಲಿ ಶ್ರುತಿಯು ಬೋಧಿಸುತ್ತದೆ.) ಇದರ ಅಭಿಪ್ರಾಯವು ಇಷ್ಟೇ:--ಪರಮ ದಯೆಯಿಂದ ಪ್ರೇರಿತನಾಗಿ ಈ ಪ್ರಳಯದಲ್ಲಿ ನಾಮರೂಪಗಳಿಗೂ ಕೂಡ ಅರ್ಹತೆಇಲ್ಲದೆ ಸ್ತಬ್ಧ ರಾಗಿರುವ ಚೇತನರನ್ನು ನೋಡಿ, ಅವರು ನನ್ನನ್ನು ಹೊಂದುವ ಉಪಾಯಗಳನ್ನು ಅವಲಂಬಿಸಲಿ ಎಂಬ ಆಶಯದಿಂದ ಅವರವರುಗಳ ಕರ್ಮಾನುಗುಣವಾಗಿ ಅವರಿಗೆ ಕರಣಕಳೇಬರವನ್ನುಂಟುಮಾ ಡಿದೆನು. ಅದಕ್ಕಾಗಿಯೇ ಮನುಷ್ಯವರ್ಗದವರನ್ನು ಚತುರ್ವರ್ಣದವರಾಗಿ ಸೃಷ್ಟಿಸಿದೆನು. ಅವರುಗಳ ಸುಖ ದುಃಖಾನುಭವಗಳಿಗೆ ಬೇಕಾದ ಭೋಗ್ಯವಸ್ತುವನ್ನುಂಟುಮಾಡಿದೆನು. ಆದುದ ರಿಂದ ಆ ವಿಚಿತ್ರ ವಿವಿಧ ಸೃಷ್ಟಿಗಳಲ್ಲೂ ಅಲ್ಲಿ ನಡೆಯುವ ಕರ್ಮಫಲಾನುಭವಗಳಲ್ಲೂ ತನಗೇ ನೊಂದೂ ಆಶೆ ಇಲ್ಲದೆ, ಎಲ್ಲಾ ಆಶೆಯು ಕ್ಷೇತ್ರಜ್ಞರಿಗೇನೇ ಇರುವದರಿಂದ ನಮೇಕರ್ಮಫಲೇ ಸ್ಪೃಹಾ ಎಂಬ ಪ್ರಯೋಗವು. ಇಲ್ಲಿ ಫಲಸಙ್ಗಾದಿ ಹೇತುಕರ್ಮಾನುಗುಣಂ ಎಂದು ಹೇಳಿದುದ ರಿಂದ ಸೃಷ್ಟಿಯು ತನ್ನಿಷ್ಟಾನುಸಾರ ಸ್ವತಂತ್ರಿಸಿ ನಡಿಸಿದುದಲ್ಲವು. ಹಾಗೆ ಸ್ವತಂತ್ರಿಸಿ ನನ್ನ ಇಷ್ಟಾನುಸಾರ ನಡೆಸಿದರೆ ನನಗೆ ವೈಷಮ್ಯ ನೈರ್ಘೃಣಾದಿ ದೋಷಗಳು ಪ್ರಾಪ್ತವಾಗುವವು. ಅಂತಹ ದೋಷಗಳು ನನ್ನಲ್ಲಿ ಇಲ್ಲವಾದುದರಿಂದಲೇ ಅವರವರುಗಳ ಪುಣ್ಯಪಾಪರೂಪ ಕರ್ಮಗಳಿ ಗನುಗುಣವಾಗಿ ಅವರುಗಳಿಗೆ ವಿಚಿತ್ರವಿಚಿತ್ರಗಳಾದ ದೇಹಸಂಪತ್ತಿಯು. ಈ ಅಭಿಪ್ರಾಯವನ್ನು ಪಪಾದಿಸುವ ಸೂತ್ರವನ್ನೇ ಮುಂದೆ ಉದಾಹರಿಸುತ್ತಾರೆ. "ಅತ್ರೋಪನಿಷದಂ ಪುಣ್ಯಾಂ ಕೃಷ್ಣದ್ವೈಪಾಯಿನೋಬ್ರವೀತ್" (ಭಾ. ಆದಿ ೧.೨೭೯) ಎಂದು ಹೇಳಿರುವ ಹಾಗೆ, ಈ ಗೀತೋ ಪನಿಷತ್ತರ್ರ್ಥವೇ ಸೂತ್ರವನ್ನೂ ಬರೆದಿರುವದರಿಂದ ಸೂತ್ರಕಾರರ ಅಭಿಪ್ರಾಯವು ಹಾಗೆಯೇ ಎಂದು ತಿಳಿಸುತ್ತಾರೆ. ತಥಾಹಸೂತ್ರಕಾರಃ - ಸೂತ್ರಕಾರರಾದ ಶ್ರೀ ವ್ಯಾಸರೇ ಹಾಗೆಯೇ ಶಾರೀರಕ ಸೂತ್ರದಲ್ಲಿ ಹೇಳಿರುತ್ತಾರೆ. ವೈಷಮ್ಯ ನೈರ್ಘೃಣ್ಯೇ ನ - ಈಶ್ವರನಿಗೆ ಈ ವಿಚಿತ್ರ ವಾದ ಜಗತ್ಸೃಷ್ಟಿಯಲ್ಲಿ ದೇವ ಮನುಷ್ಯಾದಿ ದೇಹಗಳನ್ನುಂಟುಮಾಡುವದರಲ್ಲಿ ಪಕ್ಷಪಾತವೂ,

(೧) ಶಾರೀ. ಸೂ. ೨. ೧. ೩೪.

ಭಾ. ಸಾಪೇಕ್ಷತ್ವಾತ್" ಇತಿ। ತಥಾ ಚ ಭಗವಾನ್ ಪರಾಶರಃ, (೧)"ನಿಮಿತ್ತಮಾತ್ರಮೇವಾಯಂ ಸೃಜ್ಯಾನಾಂ ಸರ್ಗಕರ್ಮಣಿ। ಪ್ರಧಾನಕರಣೀಭೂತಾ ಯತೋವೈ ಸೃಜ್ಯಶಕ್ತಯಃ"॥(೨)ನಿಮಿತ್ತಮಾತ್ರಂ ಮುಕ್ತ್ವೇದಂ ನಾನ್ಯತ್ಕಿಂಚಿದಪೇಕ್ಷತೇ। ನೀಯತೇ ತಪತಾಂ ಶ್ರೇಷ್ಠ ಸ್ವಶಕ್ತ್ಯಾ ವಸ್ತು ವಸ್ತುತಾಮ್" ಇತಿ.। ಸೃಜ್ಯಾನಾಂ ದೇವಾದೀನಾಂ

ಇಲ್ಲವು, ಕೆಲವರಿಗೆ ದುಃಖವನ್ನು ಕೊಟ್ಟನೆಂಬ ನೈರ್ಘೃಣ್ಯವೂ ಸಹ ಸಂಭವಿಸುವದಿಲ್ಲವು ಏಕೆಂದರೆ ಸಾಪೇಕ್ಷತ್ವಾತ್ ಎಂದರೆ ಕರ್ಮಸಾಪೇಕ್ಷತ್ವಾತ್ - ಕ್ಷೇತ್ರಜ್ಞರ ಕರ್ಮದ ಅಪೇಕ್ಷೆಯೂ ಇರುವದರಿಂದ; ಎಂದರೆ ಕ್ಷೇತ್ರಜ್ಞರ ಕರ್ಮಾನುಗುಣವಾಗಿ ಈ ವಿಷಮವಾಗಿ ತೋರುವ ಜಗತ್ತನ್ನು ಈಶ್ವರನು ಸೃಷ್ಟಿಸುವದರಿಂದ, ಈ ವ್ಯತ್ಯಾಸಗಳಿಗೆ ಕ್ಷೇತ್ರಜ್ಞರ ಕರ್ಮವೇ ಕಾರಣವೇ ವಿನಾ ಈಶ್ವರನು ಸ್ವತಂತ್ರಿಸಿ ಸೃಷ್ಟಿಸುವದಿಲ್ಲವು. ಮುಂದೆ ಸೂತ್ರದಲ್ಲಿ "ತಥಾ ಹಿ ದರ್ಶಯತಿ" ಎಂದು ಇದೆ. ಹಾಗೆಯೇ "ಸಾಧುಕಾರೀ ಸಾಧುರ್ಭವತಿ ಪಾಪಕಾರೀ ಪಾಪೋಭವತಿ" (ಬೃ. ೬.೪.೫.) ಎಂಬ ಶ್ರುತಿವಾಕ್ಯವು. ದರ್ಶಯತಿ - ಈ ಅಭಿಪ್ರಾಯವನ್ನು ತೋರಿಸುತ್ತದೆ. ಈ ಕರ್ತೃ ಮತ್ತು ಅಕರ್ತೃ ಎಂಬ ಶಬ್ದಗಳಿಗೆ ತಾವು ಮಾಡಿರುವರ್ಥವೇ ಸಮಂಜಸವು, ಇತರ ಅರ್ಥಗಳಲ್ಲವೆಂಬುವದನ್ನು ತೋರಿಸುವದಕ್ಕಾಗಿ ಈ ವ್ಯಾಸರಭಿಪ್ರಾಯವನ್ನೇ ಸೂತ್ರಮುಖೇನ ತಿಳಿಸಿನರು. ತಥಾ ಚ ಭಗವಾನ್ ಪರಾಶರಃ-ಅಂತಹ ವ್ಯಾಸಮಹರ್ಷಿಯ ತಂದೆಗಳಾದ ವಸಿಷ್ಠಪೌತ್ರರೆನಿಸಿ ಜ್ಞಾನನಿಧಿಗಳಲ್ಲಿ ಅಗ್ರೇಸರರಾದ ಪರದೇವತಾಪಾರಮಾರ್ಥ್ಯವನ್ನು ನಿಷ್ಕರ್ಷಿಸಿ ಹೇಳಿದ ಶ್ರೀ ಪರಾಶರರ ದಿವ್ಯಸೂಕ್ತಿಯನ್ನೂ ಉದಾಹರಿಸುತ್ತಾರೆ—(೧) ಅಯಂ-ಈ ಸರ್ವೇಶ್ವರನು, ಸೃಜ್ಯಾನಾಂ - ಸೃಷ್ಟಿಸಲು ಯೋಗ್ಯವಾದವುಗಳ,ಎಂದರೆ ಸರ್ವಭೂತಗಳ ಪ್ರಾಣಿಗಳ, ಸರ್ಗಕರ್ಮಣಿ–ಸೃಷ್ಟಿ ಕ್ರಮದಲ್ಲಿ, ನಿಮಿತ್ತ ಮಾತ್ರಮೇವ-ಸಾಮಾನ್ಯನಾದ ಕಾರಣ ಮಾತ್ರವೇ ಇಲ್ಲಿ ನಿಮಿತ್ತ ಶಬ್ದದಿಂದ ಉಪಾದಾನಕಾರಣವಲ್ಲವೆಂಬ ಭಾವವಲ್ಲವು ; ಹೇಗೆ ಸಾಮಾನ್ಯ ಕಾರಣಮಾತ್ರವೇ ? ಎಂದರೆ, ಹೇಳುತ್ತಾರೆ, ಯತೋವೈ-ಯಾವಕಾರಣದಿಂದಲಾದರೋ, ಸೃಜ್ಯಶಕ್ತಯಃ, ಸೃಜ್ಯ-ಸೃಷ್ಟಿಸಲ್ಪಡುವ ಚೇತನರ,ಶಕ್ತಯಃ-ಪ್ರಾಚೀನ ಕರ್ಮರೂಪವಾದ ವಾಸನಾಗಳು,ಪ್ರಧಾನ ಕರಣೀಭೂತಾಃ-ವಿಶೇಷಕಾರಣಗಳೋ, ಆ ಕಾರಣದಿಂದ ಸರ್ವೇಶ್ವರನು ಸಾಮಾನ್ಯಕಾರಣನು,ಹೇ ತಪತಾಂ ಶ್ರೇಷ್ಠ-ಓ ತಪಸ್ವಿಗಳಲ್ಲಿ ಶ್ರೇಷ್ಠನಾದವನೇ, ನಿಮಿತ್ತಮಾತ್ರಂ ಮುಕ್ತ್ವಾ-ಹೀಗೆ ಸರ್ವೇಶ್ವರನು ಸಾಮಾನ್ಯ ಕಾರಣನೆಂಬುದನ್ನು ಬಿಟ್ಟು, ನಾನ್ಯತ್ಕಿಂಚಿದಪೇಕ್ಷತೇ - ಇನ್ನು ಯಾವುದನ್ನೂ ಸರ್ವೇಶ್ವರನಿಂದ ಅಪೇಕ್ಷಿಸುವದಿಲ್ಲವು. ಆದರೆ ಸೃಷ್ಟಿವೈಚಿತ್ರ್ಯತೆ ಇದೆಲ್ಲಾ ಸೃಜ್ಯವಾದ ಚಿದಚಿತ್ತುಗಳಲ್ಲಿ ಕಂಡಿರುವೆಯಲ್ಲವೆ ? ಅದು ಹೇಗೆ ಉಂಟಾದವು ಎಂದು ಕೇಳಿದರೆ ಹೇಳುತ್ತಾರೆ, ಇದಂ ವಸ್ತು - ಈ ಕ್ಷೇತ್ರಜ್ಞವಸ್ತುವು. ಪ್ರಕೃತಿಯಿಂದ ಕೂಡಿದ ಚೇತನನು, ಸ್ವಶಕ್ತ್ಯಾ - ತನ್ನ ಪ್ರಾಚೀನ ಕರ್ಮರೂಪ ಶಕ್ತಿಯಿಂದಲೇ, ವಸ್ತುತಾಂ-ವೈಚಿತ್ರ್ಯವಿರುವ ದೇವಮನುಷ್ಯಾದಿ ಭಾವವನ್ನು, ನೀಯತೇ - ಹೊಂದಿಸಲ್ಪಡುವನು. ಈ ಚೇತನನು ಕಣ್ಣಿಗೆ ಕಾಣದಹಾಗಿರುವ ಅಣುಸ್ವರೂಪನು, ಅಂತಹ ಚೇತನನು ತೋರಬೇಕಾದರೆ ದೇಹವನ್ನು ಹೊಂದಿದಾಗಲೇ-ಯಾದುದರಿಂದ, ವಸ್ತುತಾಂ ನೀಯತೇ ಎಂದು ಪ್ರಯೋಗವು. ಆದರೆ ಶಕ್ತಿ ಶಬ್ದಕ್ಕೆ ಕ್ಷೇತ್ರಜ್ಞಶಕ್ತಿಯಾದ ಕರ್ಮವೆಂಬರ್ಥದಲ್ಲಿ ಪ್ರಯೋಗ ಉಂಟೋ ? ಎಂದರೆ (೨) "ಅವಿದ್ಯಾಕರ್ಮಸಂಜ್ಞಾನ್ಯಾ ತೃತೀಯಾ ಶಕ್ತಿರಿಷ್ಯತೇ" ಎಂಬಲ್ಲಿ ಹಾಗೆ ಪ್ರಯೋಗಿಸಲ್ಪಟ್ಟಿರುತ್ತದೆ. ಇಲ್ಲಿ ನಿಮಿತ್ತಮಾತ್ರಮೇವ ಎಂಬಲ್ಲಿ ಈಶ್ವರನು ನಿಮಿತ್ತ ಕಾರಣನೇ, ಪ್ರಧಾನವಾದ ಉಪಾದಾನ

(೧) ವಿ. ಪು. ೧. ೪. ೫೧-೨. (೨) ವಿ. ಪು. ೬. ೭. ೬೧.

**ಭಾ. ಕ್ಷೇತ್ರಜ್ಞಾನಾಂ ಸೃಷ್ಟೇಃ ಕಾರಣಮಾತ್ರಮೇವಾಯಂ ಪರಮಪುರುಷಃ ; ದೇವಾದಿ ವೈಚಿತ್ರ್ಯೇತು ಪ್ರಧಾನ ಕಾರಣಂ ಸೃಜ್ಯಭೂತಕ್ಷೇತ್ರಜ್ಞಾನಾಂ ಪ್ರಾಚೀನ ಕರ್ಮ ಶಕ್ತಯ ಏವ ; ಅತೋ ನಿಮಿತ್ತಂ ಮಾತ್ರಂ ಮುಕ್ತ್ವಾ ಸೃಷ್ಟೇಃ ಕರ್ತಾರಂ ಪರಮಪುರುಷಂ ಮುಕ್ತ್ವಾ ಇದಂ ಕ್ಷೇತ್ರಜ್ಞವಸ್ತು ದೇವಾದಿ ವಿಚಿತ್ರಭಾವೇ**

ಕಾರಣವಲ್ಲವು ಎಂದೇ ಏಕೆ ಅರ್ಥಮಾಡಕೂಡದು ? ಎಂದರೆ, "ಸದೇವ ಸೌಮ್ಯೇದ ಮಗ್ರ ಆಸೀತ್ ಏಕಮೇವಾ ದ್ವಿತೀಯಂ" ಎಂಬ ಶ್ರುತಿಯೂ ಮತ್ತೂ "ಯಥೋರ್ಣನಾಭಿ ಸ್ಸೃಜತೇಗೃಹ್ಣತೇ ಚ" ಎಂಬ ಶ್ರುತಿಯೂ ಸಹ ಈಶ್ವರನೇ ಎರಡು ವಿಧ ಕಾರಣನು ಎಂದು ಹೇಳಿರುವದಕ್ಕೆ ವಿರೋಧವಾಗುತ್ತದೆ. ಇಲ್ಲಿ **ನಿಮಿತ್ತಮಾತ್ರಮೇವ** ಎಂಬ ಅವಧಾರಣ ವಿರುವದರಿಂದ ಅರ್ಥಮಾಡಲು ಅವಕಾಶವಿಲ್ಲದುದರಿಂದ **ಸಾಮಾನ್ಯ ಕಾರಣನು** ಎಂದೇ ಅರ್ಥ ಮಾಡಬೇಕಾಗಿದೆ. ಸಸ್ಯೋತ್ಪತ್ತಿಗೆಲ್ಲಾ ನೀರು ಹೇಗೆ ಸಾಮಾನ್ಯ ಕಾರಣವೋ ಮತ್ತು ಸಸ್ಯ ವೈವಿಧ್ಯಕ್ಕೆ ಅವುಗಳ ಬೀಜಗಳೇ ಹೇಗೆ ಕಾರಣವೋ ಹಾಗೆ ಎಂಬ ಭಾವವು. ಆದುದರಿಂದ **ಪ್ರಧಾನ ಕಾರಣೀಭೂತಾಃ** ಎಂಬಲ್ಲಿ ಪ್ರಧಾನವೆಂದರೆ ಉಪಾದಾನಕಾರಣವೆಂದು ಅರ್ಥಮಾಡಲು ಸಾಧ್ಯವಿಲ್ಲವು. ಹಾಗಾದರೆ ಸರ್ವೇಶ್ವರನಿಗೆ ಅಸ್ವಾತಂತ್ರ್ಯವನ್ನು ಕಲ್ಪಿಸಿದಹಾಗೆ ಆಗುವದಿಲ್ಲವೇ? "ಸ್ವತನ್ತ್ರಃ ಕರ್ತಾ" ಎಂಬ ಹೇಳಿಕೆಗನುಸಾರವಾಗಿ ಸರ್ವೇಶ್ವರನಿಗೆ ಸೃಷ್ಟಿಕ್ರಮದಲ್ಲಿ ಸರ್ವ ಸ್ವಾತಂತ್ರ್ಯವಿರಬೇಕಲ್ಲವೇ ಎಂದರೆ ಕೆಲವು ನಿಯಮಗಳನ್ನನುಸರಿಸಿ ನಡೆಯುವ ಪ್ರಭುವಿಗೆ ಅಸ್ವಾತಂತ್ರ್ಯವನ್ನು ಕಲ್ಪಿಸಲು ಹೇಗೆ ಸಾಧ್ಯವು. ಇಂತಹ ಅಭಿಪ್ರಾಯಗಳನ್ನೆಲ್ಲಾ ಮನಸ್ಸಿನಲ್ಲಿಟ್ಟು ತಾವೇ ಈ ಶ್ಲೋಕಗಳಿಗೆ ಅರ್ಥವನ್ನು ಹೇಳುತ್ತಾರೆ. ಲೋಕದಲ್ಲಿ ರಾಜನೂ ಕೆಲವು ನಿಯಮಗಳನ್ನು ಏರ್ಪಡಿಸಿಕೊಂಡು ಅವುಗಳಿಗನುಸಾರವಾಗಿ ಪ್ರವೃತ್ತಿಯನ್ನವಲಂಬಿಸಿದರೆ ಅದರಿಂದ ಆತನ ಸ್ವಾತಂತ್ರ್ಯಕ್ಕೆ ಭಂಗವು ಹೇಗಿಲ್ಲವೋ, ಹಾಗೆ ಎಂಬ ಭಾವವು. ಸರ್ವೇಶ್ವರನು ಕುಲಾಲನಹಾಗೆ ನಿಮಿತ್ತಕಾರಣಮಾತ್ರನೇ ಎಂದು ಹೇಳಿದರೆ ಅನೇಕ ಶ್ರುತಿ ಸ್ಮೃತಿ ಪುರಾಣ ಬ್ರಹ್ಮ ಸೂತ್ರವಾಕ್ಯಗಳಿಗೆ ವಿರೋಧವಾಗುತ್ತದೆ. "ತದನನ್ಯತ್ವಂ ಆರಂಭಣಶಬ್ದಾದಿಭ್ಯಃ" ಎಂಬ ಸೂತ್ರಕ್ಕೆ ಸರಿಯಾದ ಅರ್ಥವು ದೊರೆಯದೆ ಪ್ರಯಾಸಪಡಬೇಕಾಗುತ್ತದೆ.

ಈ ಮೇಲಿನ ಎರಡು ಶ್ಲೋಕಗಳಿಗೂ ಸಮಂಜಸವಾದ ಅರ್ಥವು ಯಾವುದೆಂದರೆ ಹೇಳುತ್ತಾರೆ.—ಸೃಜ್ಯಾನಾಂ ಎಂದರೆ, **ದೇವಾದೀನಾಂ ಕ್ಷೇತ್ರಜ್ಞಾನಾಂ** - ದೇವ ಮನುಷ್ಯರೇ ಮೊದಲಾದ ಚೇತನರ. **ಸೃಷ್ಟೇಃ ಕಾರಣಮಾತ್ರಮೇವಾಯಂ ಪರಮಪುರುಷಃ** - ಈ ಪರಮ ಪುರುಷನು ಸೃಷ್ಟಿಗೆ ಮಾತ್ರವೇ ಕಾರಣನು; ಇಲ್ಲಿ ಕಾರಣಶಬ್ದದಿಂದ ಉಪಾದಾನ ನಿಮಿತ್ತ ಎರಡು ವಿಧ ಕಾರಣಗಳು ಸಙ್ಗ್ರಹಿಸಲ್ಪಟ್ಟವು. **ದೇವಾದಿ ವೈಚಿತ್ರ್ಯೇತು** - ದೇವ ಮನುಷ್ಯಾದಿ ವಿಚಿತ್ರವಾಗಿ ತೋರುವ ವ್ಯತ್ಯಾಸದಲ್ಲಾದರೋ, **ಪ್ರಧಾನಕಾರಣಂ** - ಮುಖ್ಯ ಕಾರಣವು, **ಸೃಜ್ಯ ಭೂತಕ್ಷೇತ್ರಜ್ಞಾನಾಂ** - ಸೃಷ್ಟಿಸಲ್ಪಡುವ ಕ್ಷೇತ್ರಜ್ಞರ, ಪ್ರಾಚೀನ ಕರ್ಮಶಕ್ತಿಗಳೇ ಸರಿ; **ಅತಃ**- ಆಕಾರಣದಿಂದ, **ನಿಮಿತ್ತಮಾತ್ರಂ ಮುಕ್ತ್ವಾ** ಎಂದರೆ **ಸೃಷ್ಟೇಃ ಕರ್ತಾರಂ ಪರಮಪುರುಷಂ ಮುಕ್ತ್ವಾ** - ಸೃಷ್ಟಿಕರ್ತಾವಾದ ಪರಮ ಪುರುಷನನ್ನು ಬಿಟ್ಟು, **ಇದಂ ಕ್ಷೇತ್ರಜ್ಞವಸ್ತು**- ಈ ಕ್ಷೇತ್ರಜ್ಞರೂಪವಸ್ತುವು, **ದೇವಾದಿ ವಿಚಿತ್ರಭಾವೇ** - ದೇವಾದಿ ವಿಚಿತ್ರಭಾವದಲ್ಲಿ, **ನಾನ್ಯದಪೇಕ್ಷತೇ** – ಬೇರೆ ಯಾವುದನ್ನೂ ಪರಮ ಪುರುಷನಿಂದ ಅಪೇಕ್ಷಿಸುವದಿಲ್ಲವು; **ಸ್ವಗತ ಪ್ರಾಚೀನಕರ್ಮಶಕ್ತ್ಯೈವ ಹಿ** – ಇದು ಸ್ವಶಕ್ತ್ಯಾ ಎಂಬುದರರ್ಥವು, ತನ್ನನ್ನು (ಎಂದರೆ ಕ್ಷೇತ್ರಜ್ಞನನ್ನು) ಹೊಂದಿದ ಪ್ರಾಚೀನ ಕರ್ಮವಾದ ಶಕ್ತಿಗೆ ತಾನೇ, **ದೇವಾದಿ ವಸ್ತುಭಾವವನ್ನು** ಇದು

ಭಾ. ನಾನ್ಯದಪೇಕ್ಷತೇ ; ಸ್ವಗತಪ್ರಾಚೀನ ಕರ್ಮಶಕ್ತ್ಯೈವ ಹಿ ದೇವಾದಿ ವಸ್ತುಭಾವಂ ನೀಯತ ಇತ್ಯರ್ಥಃ. ಏವಮುಕ್ತೇನ ಪ್ರಕಾರೇಣ ಸೃಷ್ಟ್ಯಾದೇಃ ಕರ್ತಾರ ಮಪ್ಯ ಕರ್ತಾರಂ ಸೃಷ್ಟ್ಯಾದಿ ಕರ್ಮಫಲ ಸಙ್ಗರಹಿತಂ ಚ ಯೋ ಮಾ ಮಭಿಜಾನಾತಿ, ಸಕರ್ಮ ಯೋಗಾರಂಭವಿರೋಧಿಭಿಃ ಫಲಸಙ್ಗಾದಿ ಹೇತುಭಿಃ ಪ್ರಾಚೀನ ಕರ್ಮಭಿ ರ್ನಸಂಬ ಧ್ಯತೇ-ಮುಚ್ಯತ ಇತ್ಯರ್ಥಃ ||೧೪||

---

ವಸ್ತುತಾಂ ಎಂಬುದರರ್ಥವು, ನೀಯತೇ-ಹೊಂದಿಸಲ್ಪಡುತ್ತದೆ, ಇತ್ಯರ್ಥಃ - ಎಂಬದಾಗಿ ಈ ಶ್ಲೋಕಗಳರ್ಥವು. ಪ್ರಳಯವಾದನಂತರ ಸೃಷ್ಟಿಯಾಗುವಾಗ ಕರ್ಮವೆಲ್ಲಿಯದು ? ಎಂಬ ಶಙಾ ಉಂಟಾದೀತೆಂದು ಭಾವಿಸಿ, ಆಗಲೂ ಕೂಡ ಪ್ರಾಚೀನಕರ್ಮವಿತ್ತೆಂದು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವು; ಹಿಂದಿನ ಕಲ್ಪದಲ್ಲೂ ಈ ಚೇತನರಿಗೆ ಸ್ಥೂಲಶರೀರವಿದ್ದುದರಿಂದ ಪ್ರಳಯ ದಲ್ಲೂ ಪ್ರಾಚೀನ ಕರ್ಮವು "ನಾ ಭುಕ್ತಂಕ್ಷೀಯತೇ ಕರ್ಮಕಲ್ಪಕೋಟಿ ಶತೈರಪಿ" ಎಂದು ಹೇಳಿರುವಹಾಗೆ ಅನುಭವಿಸದೆ,ಇದ್ದೇ ಇತ್ತು.ಈ ಅಭಿಪ್ರಾಯವು ಶಾರೀರಕ ಸೂತ್ರವಾದ ನ ಕರ್ಮಾ ವಿಭಾಗಾದಿತಿ ಚೇನ್ನ, ಅನಾದಿತ್ವಾ ದುಪಪದ್ಯತೇ ಚಾಪ್ಯುಪಲಭ್ಯತೇಚ" (೨-೧-೩೫) ರಲ್ಲಿ ಉಪಪಾದಿತವಾಗಿರುತ್ತದೆ. ಅವಿಭಾಗಾತ್ - "ಸದೇವ ಸೋಮ್ಯೇದ ಮಗ್ರ ಆಸೀತ್ ಏಕ ಮೇವ" ಎಂಬ ಶ್ರುತಿಯಲ್ಲಿ ಏಕತ್ವವನ್ನು ಅವಧಾರಣಪೂರ್ವಕ ಹೇಳಿರುವದರಿಂದ, ಜೀವಾ ತ್ಮರೇ ಸೃಷ್ಟಿಗೆ ಮೊದಲು ಇಲ್ಲವಾದುದರಿಂದ, ನ ಕರ್ಮ - ಕರ್ಮವೂ ಸೃಷ್ಟಿಗೆ ಮೊದಲುಇಲ್ಲವು, ಇತಿ ಚೇತ್-ಹೀಗೆ ಪೂರ್ವಪಕ್ಷತಂದರೆ, ನ-ಸರಿಯಲ್ಲವು,ಏಕೆಂದರೆ ಅನಾದಿತ್ವಾತ್–ಕ್ಷೇತ್ರಜ್ಞರೂ ಮತ್ತು ಅವರಿಗೆ ಸೇರಿದ ಕರ್ಮಗಳೂ ಸಹಅನಾದಿಯಾಗಿರುವದರಿಂದ, ಉಪಪದ್ಯತೇಚ - ಕ್ಷೇತ್ರ ಜ್ಞರೂ ಅವರ ಕರ್ಮಗಳೂ ಅನಾದಿಯಾಗಿದ್ದರೂ ಕೂಡ, ಅವಿಭಾಗ ಶ್ರುತಿಯೂ ನಾಮರೂಪ ವಿಭಾಗವಿಲ್ಲವೆಂಬುದರಿಂದ ಉಪಪನ್ನವೇ ಎಂದರೆ ಸಮಂಜಸವಾದುದೇ. ಕ್ಷೇತ್ರಜ್ಞರ ಅನಾದಿತ್ವವು ಉಪಲಭ್ಯತೇಚ - ನಿತ್ಯೋ ನಿತ್ಯಾನಾಂ ಎಂಬಿವೇ ಮೊದಲಾದ ಶ್ರುತಿಗಳಿಂದ ತೋರಿಬರು ತ್ತದೆ"ಎಂಬುದು ಈ ಸೂತ್ರಾರ್ಥವು. ವಸ್ತು ವಸ್ತುತಾಂ ನೀಯತೇ ಎಂದರೆ ಒಂದವಸ್ಥೆಯನ್ನು ಬಿಟ್ಟು ಇನ್ನೊಂದು ಅವಸ್ಥೆಯನ್ನು ಹೊಂದುತ್ತದೆ ಎಂಬ ತಾತ್ಪರ್ಯವು. ವಸ್ತುವೆಂಬುವದು ಸೃಷ್ಟಿಗೆ ಮೊದಲು ಇರುವ ಅವಸ್ಥೆಯನ್ನು ಹೇಳುತ್ತದೆ, ವಸ್ತುತಾಂ ಎಂಬುದರಿಂದ ಸೃಷ್ಟ್ಯನಂ ತರಾವಸ್ಥೆಯು ಸೂಚಿಸಲ್ಪಡುತ್ತದೆ. ಹೀಗೆ ಕರ್ತೃತ್ವ ಅಕರ್ತೃತ್ವಗಳನ್ನು ಹೇಳುವದರಲ್ಲಿ ಏನೊಂದು ವಿರೋಧವು ಇರುವದಿಲ್ಲವು. ಶಾಸ್ತ್ರರೀತ್ಯಾ ಸರ್ವ ಸಮಂಜಸಾರ್ಥವನ್ನು ಹೇಳಿದಂ ತಾಗುತ್ತದೆ ಎಂಬ ತಾತ್ಪರ್ಯವು.

ಮೂಲದ ಈ ಎರಡು ಶ್ಲೋಕಗಳ ಒಟ್ಟು ತಾತ್ಪರ್ಯವನ್ನು ಸಙ್ಗ್ರಹಿಸಿ ಹೇಳುತ್ತಾರೆ. ಏವಮುಕ್ತಪ್ರಕಾರೇಣ - ಹೀಗೆ ಮೇಲೆ ಹೇಳಿದರೀತಿಯಲ್ಲಿ ಎಂದರೆ "ಚಾತುರ್ವರ್ಣ್ಯ" ಮತ್ತು ಈ ಶ್ಲೋಕಗಳಲ್ಲಿ ಹೇಳಲ್ಪಟ್ಟಹಾಗೆ, ಸೃಷ್ಟ್ಯಾದೇಃ ಕರ್ತಾರಮಪಿ - ಸರ್ವೇಶ್ವರನಾದ ನಾನು ಸೃಷ್ಟ್ಯಾದಿಗಳಿಗೆ ಕರ್ತಾವಾಗಿದ್ದರೂ, ಅಕರ್ತಾರಂ - ಸೃಷ್ಟ್ಯಾದಿ ವೈಚಿತ್ರ್ಯಗಳಿಗೆ ಕರ್ತಾವಲ್ಲ ವೆಂದೂ ಮತ್ತೂ ಸೃಷ್ಟ್ಯಾದಿಕರ್ಮಫಲಸಙ್ಗರಹಿತಂಚ - ಸೃಷ್ಟಿಸ್ಥಿತಿ ಲಯಾದಿ ಕರ್ಮಗಳ ಫಲ ದಲ್ಲಿ ಸಂಬಂಧವಿಲ್ಲದವನನ್ನಾಗಿಯೂ, ಯೋ ಮಾ ಮಭಿಜಾನಾತಿ-ಯಾರು ನನ್ನನ್ನು ತಿಳಿಯು ತ್ತಾರೋ, ಸಃ - ಅವನು, ಕರ್ಮಯೋಗಾರಂಭವಿರೋಧಿಭಿಃ - ಕರ್ಮಯೋಗಾರಂಭಕ್ಕೆ ವಿರೋ ಧಿಗಳಾದ, ಫಲಸಙ್ಗಾದಿಹೇತುಭಿಃ - ಫಲದಲ್ಲಿ ಆಶೆಯೇ ಮೊದಲಾದವುಗಳಿಗೆ ಕಾರಣಗಳಾದ ಪ್ರಾಚೀನಕರ್ಮಭಿಃ - ಪ್ರಾಚೀನಕರ್ಮಗಳಂದ ನ ಸಂಬಧ್ಯತೇ-ಎಂದರೆ, ಮುಚ್ಯತೇ ಇತ್ಯರ್ಥಃ.

ಮೂ. ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।
ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥ ೧೫.

ಬಿಡಲ್ಪಡುವನು ಎಂಬ ತಾತ್ಪರ್ಯವು. ಹೀಗೆ ಕರ್ತಾವೆಂದೂ, ಅಕರ್ತಾವೆಂದೂ, ತನ್ನನ್ನು ಸರಿಯಾಗಿ ತಿಳಿಯುವದರಿಂದ ಕರ್ಮಯೋಗಾರಂಭಕ್ಕೆ ಮಾತ್ರ ಪ್ರತಿಬಂಧಕವಾದ ಪ್ರಾಚೀನಕರ್ಮಗಳು ಕಳೆಯುತ್ತವೆಂದೂ ತಿಳಿಸುವದಕ್ಕಾಗಿ, ಕರ್ಮಯೋಗಾರಂಭವಿರೋಧಿಭಿಃ ಎಂದು ಪ್ರಯೋಗಿಸಿರುತ್ತಾರೆ, ಇದೀಗ ಮೂಲದ ಕರ್ಮಭಿರ್ನ ಸಂಬಧ್ಯತೇ ಎಂಬಲ್ಲಿರುವ ಕರ್ಮಭಿಃ ಎಂಬುದರರ್ಥವು. ಹೇಗೆ ಆ ಕರ್ಮಗಳು ಕರ್ಮಯೋಗಾರಂಭಕ್ಕೆ ವಿರೋಧಿಗಳಾಗಬಹುದು ಎಂದು ತಿಳಿಸುವದಕ್ಕಾಗಿ ಫಲಸಙ್ಗಾದಿ ಹೇತುಭಿಃ ಎಂದು ವಿಶೇಷಣವನ್ನು ಕೊಟ್ಟಿರುತ್ತಾರೆ. ಕರ್ಮಭಿರ್ನ ಸಂಬಧ್ಯತೇ ಎಂದರೆ ಯಾವ ಕರ್ಮಗಳ ಸಂಬಂಧವೂ ಇರುವದಿಲ್ಲವೆಂದು ಸರ್ವಕರ್ಮಗಳ ವಿನಾಶವೆಂದು ಅರ್ಥಮಾಡುವದು ಯುಕ್ತವಲ್ಲವು. ಹಾಗೆ ಅರ್ಥಮಾಡಿದರೆ, ಗೀತೆಯಲ್ಲಿ ಮುಂದೆ ಹೇಳುವ ಶಾಸ್ತ್ರಕ್ಕೆ ವೈಯರ್ಥ್ಯವುಂಟಾಗುತ್ತದೆ. ಭಕ್ತಿಯೋಗದಲ್ಲಿ ಪ್ರವರ್ತಿಸಿ ಯೋಗನಿಷ್ಪತ್ತಿಯಾದರಲ್ಲವೇ "ಉತ್ತರಪೂರ್ವಾಘಯೋರಶ್ಲೇಷ ವಿನಾಶೌ" ಎಂಬ ಸೂತ್ರದಲ್ಲಿ ಹೇಳಿರುವಹಾಗೆ ಸರ್ವಪಾಪ ವಿನಾಶವು. ಆದುದರಿಂದ ಕರ್ಮಯೋಗಾರಂಭವಿರೋಧಿಕರ್ಮಗಳೆಂದು ಅರ್ಥಮಾಡುವದೇ ಸಮಂಜಸವೆಂದು ಭಾವಿಸಿ, ಕರ್ಮಯೋಗಾರಂಭವಿರೋಧಿಭಿಃ ಎಂಬ ಪ್ರಯೋಗವು. ಆದುದರಿಂದ ಈ ಹಿಂದಿನ ಎರಡು ಶ್ಲೋಕಗಳಲ್ಲಿ ಹೇಳಿದ ಜ್ಞಾನವು ಕರ್ಮಯೋಗಿಗೆ ಇರಬೇಕೆಂದೂ, ಇದರಿಂದ ಕರ್ಮಯೋಗಾರಂಭಕ್ಕೆ ಪ್ರತಿಬಂಧಕ ಪಾಪಗಳು ತೊಲಗುತ್ತವೆಂದೂ ಉಪದೇಶಿಸಲ್ಪಟ್ಟಿತು. ॥೧೪॥

**ಮೂಲಕ್ಕೆ ಅರ್ಥವು:**—ಹಿಂದೆ ಶ್ಲೋಕದಲ್ಲಿ ಸರ್ವೇಶ್ವರನಿಗೆ ಸೃಷ್ಟಿಯಲ್ಲಿ ಸಾಮಾನ್ಯ ಕರ್ತೃತ್ವವೂ, ವೈಚಿತ್ರ್ಯದಲ್ಲಿ ಆತನಿಗೆ ಕರ್ತೃತ್ವವಿಲ್ಲದೆ ಕ್ಷೇತ್ರಜ್ಞರ ಕರ್ಮವು ಮೂಲ ಕಾರಣವು ಎಂದೂ, ಹೇಳಲ್ಪಟ್ಟಿತು. ಹೀಗೆ ಕರ್ತೃತ್ವವೂ ಉಂಟು, ಅಕರ್ತೃತ್ವವೂ ಉಂಟೆಂದು ಹೇಳುದರಲ್ಲಿ ಏನೊಂದೂ ಪರಸ್ಪರ ವಿರೋಧವಿಲ್ಲವು, ಪೂರ್ಣಸಮಂಜಸವೇ ಎಂಬುದು ಪ್ರದರ್ಶಿಸಲ್ಪಟ್ಟಿತು. ಹಾಗೆಯೇ ಪೂರ್ವದ ಮುಮುಕ್ಷುಗಳ ಅನುಸಂಧಾನವೆಂದು ತಿಳಿಸುತ್ತಾರೆ. ಆದುದರಿಂದ ತಾವು ಈಗ ಉಪದೇಶಿಸಿದ ಆತ್ಮ ಯಾಥಾತ್ಮ್ಯ ಜ್ಞಾನದಿಂದ ಕೂಡಿದ, ಕರ್ತೃತ್ವ ಮಮತಾ ಫಲತ್ಯಾಗ ಪೂರ್ವಕವಾಗಿ ಪರಮಾತ್ಮಾರಾಧನಾರೂಪವಲ್ಲಿ ಅನುಷ್ಠಿಸುವ ಕರ್ಮಯೋಗದಲ್ಲಿ ನಾನು ಹೀಗೆ ಕರ್ತಾ ಮತ್ತು ಅಕರ್ತಾ ಎಂಬ ಜ್ಞಾನದೊಂದಿಗೆ ಅದನ್ನು ಅನುಷ್ಠಿಸುವದರಲ್ಲಿ ಸತ್ಸಂಪ್ರದಾಯ ಸಮ್ಮತಿಯೂ ಉಂಟೆಂದು ಹೇಳುತ್ತಾರೆ. ಏವಂ - ಹೀಗೆ ನಾನು ಸೃಷ್ಟಿಕ್ರಮದಲ್ಲಿ ಒಂದು ವಿಧದಲ್ಲಿ ಕರ್ತಾವೆಂದೂ ಇನ್ನೊಂದು ವಿಧವಾಗಿ ಅಕರ್ತಾವೆಂದೂ ಜ್ಞಾತ್ವಾ - ನನ್ನನ್ನು ತಿಳಿದು ಎಂದರೆ ನಾನು ಕರ್ಮವಶ್ಯನಾಗಿ ಸೃಷ್ಟ್ಯಾದಿ ಕರ್ಮಗಳನ್ನು ನಡೆಸುವದಿಲ್ಲವೆಂದೂ, ಇಂತಹ ಭೂತಸೃಷ್ಟಿಗೆ ಕರ್ಮವಶ್ಯರಾದ ಕ್ಷೇತ್ರಜ್ಞರೇ ಕಾರಣವೆಂದೂ, ತಿಳಿದವನಾಗಿ, (ಇದರಿಂದ ಕರ್ಮಯೋಗಾನುಷ್ಠಾನಕ್ಕೆ ಎರಡು ವಿಧ ಜ್ಞಾನವು ಆವಶ್ಯಕವೆಂದು ಹೇಳಿದಂತಾಯಿತು ; (೧) ಆತ್ಮ ಯಾಥಾತ್ಮ್ಯಜ್ಞಾನವು (೨) ತನ್ನ ದೇಹ ಪ್ರಾಪ್ತಿಯು ತನ್ನ ಕರ್ಮಾನುಗುಣವಾಗಿ ಪ್ರಾಪ್ತವಾದುದು, ಸರ್ವೇಶ್ವರನು ಹೇಗೆ ತನ್ನನ್ನು ಸೃಷ್ಟಿಸಿದುದರಲ್ಲಿ ಆತನೇನೂ ತನ್ನಹಾಗೆ ಕರ್ಮವಶ್ಯನಲ್ಲವು, ತನ್ನ ಶರೀರಪ್ರಾಪ್ತಿ ಸೃಷ್ಟಿಗೆ ತಾನೇ ಕಾರಣನು ಎಂಬ ಜ್ಞಾನವೂ ಸಹ ಆವಶ್ಯಕವು ಎಂಬ ಭಾವವು;) ಏವಂ ಜ್ಞಾತ್ವಾ ಹೀಗೆ ತಿಳಿದವನಾಗಿ, ಪೂರ್ವೈರಪಿಮುಮುಕ್ಷುಭಿಃ - ಹಿಂದಿನ ಕಾಲದ ಮೋಕ್ಷಾರ್ಥಿಗಳಿಂದಲೂ, ಕರ್ಮಕೃತಂ - ಕರ್ಮಯೋಗವೇ ಅನು

ಭಾ. ಏವಂ ಮಾಂ ಜ್ಞಾತ್ವಾ ವಿಮುಕ್ತಪಾಪೈಃ ಪೂರ್ವೈರಪಿ ಮುಮುಕ್ಷುಭಿ ರುಕ್ತಲಕ್ಷಣಂ ಕರ್ಮ ಕೃತಮ್। ತಸ್ಮಾತ್ತ್ವ ಮುಕ್ತಪ್ರಕಾರಮದ್ವಿಷಯಜ್ಞಾನವಿಧೂತಪಾಪಃ ಪೂರ್ವೈಃ - ವಿವಸ್ವನ್ಮನ್ವಾದಿಭಿಃ, ಕೃತಂ, ಪೂರ್ವತರಂ - ಪುರಾತನಂ ತದಾನೀಮೇವ ಮಯೋಕ್ತಂ ವಕ್ಷ್ಯಮಾಣಾಕಾರಂ ಕರ್ಮೈವ ಕುರು ॥೧೫॥

ಷ್ಠಿಸಲ್ಪಟ್ಟಿತು. **ತಸ್ಮಾತ್** - ಆ ಕಾರಣದಿಂದ, **ತ್ವಂ** - ಶಿಷ್ಟರಮಾರ್ಗದಲ್ಲೇ ಪ್ರವೃತ್ತಿಸಬೇಕೆಂದಿರುವ, ಮತ್ತು ನನ್ನ ವಿಷಯದಲ್ಲಿ ಸರಿಯಾದ ಜ್ಞಾನವುಂಟಾಗಿರುವದರಿಂದ ಕರ್ಮಯೋಗ ವಿರೋಧಿ ಪಾಪಗಳನ್ನು ಕಳೆದುಕೊಳ್ಳಬೇಕೆಂಬ ನೀನು, **ಪೂರ್ವೈಃ** - ವಿವಸ್ವಾನ್ ಮೊದಲಾದ ಪೂರ್ವೀಕರಿಂದ, **ಕೃತಮ್** - ಹಿಂದೆ ಮಾಡಲ್ಪಟ್ಟ, **ಪೂರ್ವತರಂ** - ಪುರಾತನವಾಗಿ ಅಗಲೇ ನನ್ನಿಂದ ಹೇಳಲ್ಪಟ್ಟ, **ಕರ್ಮೈವ** - ನಾನು ಈಗ ನಿನಗೆ ಚನ್ನಾಗಿ ತಿಳಿಸಬೇಕೆಂದಿರುವ ಕರ್ಮಯೋಗವನ್ನೇ **ಕುರು** – ಅನುಷ್ಠಿಸು ॥೧೫॥

**ಭಾಷ್ಯಾರ್ಥವು:**—ಇಂತಹ ಜ್ಞಾನದಿಂದಕೂಡಿದ ಕರ್ಮಯೋಗವು ಹಿಂದೆ ಶಿಷ್ಟರೂ ಅನುಷ್ಠಿಸಿರುವದರಿಂದ ಅರ್ಜುನನನ್ನು ಕುರಿತು ನೀನೂ ಕೂಡ ವಿವಸ್ವಾನ್ ಮನು ಮುಂತಾದ ಮಹನೀಯರೂ ಉಪದೇಶಮೂಲಕ ಅನುಷ್ಠಿಸಿದ ಕರ್ಮಯೋಗವನ್ನೇ ನೀನೂ ಅನುಷ್ಠಿಸತಕ್ಕದ್ದೆಂದು ಉಪದೇಶಿಸುತ್ತಾರೆ, **ಏವಂ ಮಾಂ** - ಹೀಗೆ ಎಂದರೆ ನಾನು ಸಾಮಾನ್ಯ ಕರ್ತೃ ಮಾತ್ರವೆಂದೂ ವಿವಿಧ ವೈಚಿತ್ರ್ಯತೆಗೆ ಕಾರಣರು ಅನಾದಿ ಕರ್ಮವಾಸನಾಯುಕ್ತರಾದ ಕ್ಷೇತ್ರಜ್ಞರೆಂದೂ, **ಜ್ಞಾತ್ವಾ** - ತಿಳಿದು, **ವಿಮುಕ್ತಪಾಪೈಃ** - ಪಾಪಗಳಿಂದ ಬಿಡಲ್ಪಟ್ಟ, **ಪೂರ್ವೈರಪಿ ಮುಮುಕ್ಷುಭಿಃ** - ಹಿಂದಿನಕಾಲದ ಮೋಕ್ಷಾರ್ಥಿಗಳಿಂದಲೂ ಕೂಡ, **ಉಕ್ತಲಕ್ಷಣಂ ಕರ್ಮ**– ಇದರಿಂದ ಜ್ಞಾನವು ಕರ್ಮಾನುಷ್ಠಾನಕ್ಕೆ ಹೇತುವೆಂದು ಹೇಳಲ್ಪಟ್ಟಿತು. ಮೇಲೆ ಹೇಳಲ್ಪಟ್ಟ ಲಕ್ಷಣವುಳ್ಳ ಕರ್ಮಯೋಗವು, **ಕೃತಂ** - ಅನುಷ್ಠಿಸಲ್ಪಟ್ಟಿತು. **ತಸ್ಮಾತ್** – ಆ ಕಾರಣದಿಂದ, ಎಂದರೆ ಅನೇಕ ಮಹಾನುಭಾವರಾದ ಪ್ರಪನ್ನರಿಂದ ಗ್ರಾಹ್ಯವಾದುದರಿಂದ **ತ್ವಂ** - ನೀನೂ ಕೂಡ, ಈ ನೀನು ಎಂತವನೆಂದರೆ, **ಉಕ್ತಪ್ರಕಾರ ಮದ್ವಿಷಯಜ್ಞಾನ ವಿಧೂತ ಪಾಪಃ** - ಮೇಲೆ ಹೇಳಿದ ರೀತಿಯಲ್ಲಿ ನನ್ನ ವಿಷಯವಾದ ಜ್ಞಾನದಿಂದ ಕೊಡವಲ್ಪಟ್ಟ ಎಂದರೆ ಹೋಗಲ್ಪಟ್ಟ ಪಾಪವುಳ್ಳವನಾಗಿ, ಕರ್ತೃತ್ವಾ ಕರ್ತೃತ್ವಜ್ಞಾನವೂ ಅದರೊಂದಿಗೆ ಹಿಂದೆ ಉಪದೇಶಿಸಿದ ಅವತಾರ ರಹಸ್ಯಜ್ಞಾನ, ಇವೆರಡರಿಂದಲೂ ಕರ್ಮಯೋಗ ಪ್ರತಿಬಂಧಕವಾದ ಪಾಪಗಳಿಂದ ಬಿಡಲ್ಪಟ್ಟವನಾಗಿರುವದರಿಂದ ಎಂಬ ಭಾವವು, **ಪೂರ್ವೈಃ** ಎಂದರೆ **ವಿವಸ್ವನ್ಮನ್ವಾದಿಭಿಃ** - ಸೂರ್ಯಾಭಿಮಾನಿದೇವತೆ ಮನು ಮೊದಲಾದವರುಗಳಿಂದ, **ಪೂರ್ವತರಂ** – ಪುರಾತನವಾದ ಎಂದರೆ, **ತದಾನೀಮೇವ ಮಯೋಕ್ತಂ** - ಆಕಾಲದಲ್ಲೇ ನನ್ನಿಂದ ಉಪದೇಶಿಸಲ್ಪಟ್ಟ, **ವಕ್ಷ್ಯಮಾಣಾಕಾರಂ** - ಮುಂದೆ ನನ್ನಿಂದ ನಿನಗೆ ಉಪದೇಶಿಸಲ್ಪಡುವಂತಹ, **ಕರ್ಮೈವ** - ಕರ್ಮಯೋಗವನ್ನೇ, **ಕುರು** - ಮಾಡು, ನೀನು ಕರ್ಮಯೋಗವಿರೋಧಿ ಪಾಪಗಳನ್ನು ಕಳೆದುಕೊಂಡು ಕರ್ಮಯೋಗಾನುಷ್ಠಾನಕ್ಕೆ ಯೋಗ್ಯನಾಗು. ಇದನ್ನೇ ಹಿಂದಿನ ಮಹನೀಯರಾದ ಮೋಕ್ಷಾರ್ಥಿಗಳೂ ಅನುಷ್ಠಿಸಿರುತ್ತಾರೆ. ಆದುದರಿಂದ ನಾನು ಹಿಂದೆ ವಿವಸ್ವಂತನಿಗೆ ಉಪದೇಶಿಸಿದ, ಆತನು ಮನುವಿಗೆ ಹೀಗೆ ಪರಂಪರೆಯಿಂದ ಅನುಷ್ಠಿಸಲ್ಪಟ್ಟ, ಕರ್ಮಯೋಗಪ್ರಕಾರವನ್ನೇ ಈಗಲೂ ನಿನಗೆ ಉಪದೇಶಿಸುತ್ತೇನೆ; ಅದನ್ನೇ ನೀನೂ ಅನುಷ್ಠಿಸತಕ್ಕದ್ದು. ಇದರಿಂದ ಕರ್ಮಯೋಗಾನುಷ್ಠಾನಕ್ರಮವು ಬಹು ಕಾಲದಿಂದ ಪ್ರವಾಹದಹಾಗೆ ಶಿಷ್ಟಾಚಾರ ರೂಪದಲ್ಲಿ ಅನುಸರಿಸಿ ಬಂದಿರುತ್ತದೆಂಬ ಭಾವವು. ॥೧೫॥

ಭಾ. ಅವ. ವಕ್ಷ್ಯಮಾಣಸ್ಯ ಕರ್ಮಣೋ ದುರ್ಜ್ಞಾನತಾ ಮಾಹ—

ಮೂ. ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।
ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧೬.

ಭಾಷ್ಯಾವತಾರಿಕೆಯ ಅರ್ಥವು :—ವಕ್ಷ್ಯಮಾಣಸ್ಯ - ಮುಂದೆ ಉಪದೇಶಿಸುವ, ಕರ್ಮಣಃ - ಕರ್ಮಯೋಗದ, ದುರ್ಜ್ಞಾನತಾಂ-ದುರವಗಾಹತ್ವವನ್ನು, ತಿಳಿಯಲು ಕಷ್ಟಸಾಧ್ಯವಾಗಿರುವವನ್ನು, ಆಹ . ಈ ಮುಂದಿನ ಶ್ಲೋಕಮೂಲಕ ತಿಳಿಸುತ್ತಾರೆ. ಶ್ಲೋಕದಲ್ಲಿ ಕಿಂ ಕರ್ಮ ಕಿಂ ಅಕರ್ಮ ಎಂದು ಬೇರೆಬೇರೆಯಾದ ವಿಷಯಗಳೆಂಬ ಭ್ರಮ ಬಂದೀತೆಂದು ತಿಳಿದು ಎಲ್ಲಾ ಕರ್ಮಯೋಗದ ವಿಷಯವೇ ಆಗಿ, ಅಕರ್ಮವೂ ಕರ್ಮಯೋಗಾಂತರ್ಗತವಾದುದೆಂದು ಚೆನ್ನಾಗಿ ತಿಳಿಸುವದಕ್ಕಾಗಿ, ಇಲ್ಲಿ ವಕ್ಷ್ಯಮಾಣಸ್ಯ ಕರ್ಮಣಃ ಎಂಬ ಪ್ರಯೋಗವು. ಎರಡಂಶವೂ ಕರ್ಮಯೋಗಕ್ಕೆ ಸೇರಿದುದೇ ಎಂದು ಮುಂದೆ "ಕರ್ಮಣ್ಯಕರ್ಮಯಃ ಪಶ್ಯೇತ್" ಎಂಬ (೪-೧೮) ಶ್ಲೋಕದಲ್ಲಿ ಸುವ್ಯಕ್ತವು. ಈ ಶ್ಲೋಕದಲ್ಲೇ "ತತ್ತೇಕರ್ಮ ಪ್ರವಕ್ಷ್ಯಾಮಿ" ಎಂದು ಉತ್ತರಾರ್ಧವಿರುವದರಿಂದ, ಕರ್ಮಯೋಗಕ್ಕೆ ಅಕರ್ಮವು ವಿಶೇಷಣವು; ಅಕರ್ಮವೆಂದರೆ ಕರ್ಮಯೋಗಕ್ಕೆ ಸೇರಿ ಕರ್ಮವಲ್ಲದುದು, ಇದು ಆತ್ಮಯಾಥಾತ್ಮ್ಯಜ್ಞಾನವು.

ಮೂಲಕ್ಕೆ ಅರ್ಥವು :—ಕಿಂ ಕರ್ಮ - ಕರ್ಮಯೋಗದ ಸ್ವರೂಪವೇನು ? ಕಿಮಕರ್ಮೇತಿ- ಅದಕ್ಕೆ ಸಂಬಂಧಿಸಿದ ಅಕರ್ಮವು ಯಾವುದು ? ಅಕರ್ಮವೆಂದರೆ ಕರ್ಮವಲ್ಲದುದು ಜ್ಞಾನವು ; ಯಾವ ಜ್ಞಾನವೆಂದರೆ ಆತ್ಮಯಾಥಾತ್ಮ್ಯಜ್ಞಾನವು, ಇದು ಯಾವುದು ? ಅತ್ರ - ಈ ವಿಷಯದಲ್ಲಿ ಎಂದರೆ ಕರ್ಮಾಕರ್ಮಗಳನ್ನು ತಿಳಿಯುವುದರಲ್ಲಿ, ಕವಯೋಽಪಿ - ವಿದ್ವಾಂಸರೂಕೂಡ, ಮೋಹಿತಾಃ - ಮೋಹಗೊಂಡವರಾಗಿರುತ್ತಾರೆ ಎಂದರೆ ಸರಿಯಾದ ಜ್ಞಾನವಿಲ್ಲದಿರುತ್ತಾರೆಂಬ ಭಾವವು. ಹೀಗಿರುವಾಗ ಸಾಧಾರಣ ಜ್ಞಾನವುಳ್ಳವರು, ಈ ಕರ್ಮಾಕರ್ಮ ವಿಷಯದಲ್ಲಿ ಸರಿಯಾದ ಜ್ಞಾನವಿಲ್ಲದಿರುತ್ತಾರೆಂದು ಹೇಳತಕ್ಕದ್ದೇನಿದೆ ಎಂಬ ಭಾವವು. ಹೀಗೆ ಕವಿಗಳೂ ಮೋಹಿತರಾಗಿರುವದರಿಂದಲೇ "ಯಸ್ಸರ್ವಜ್ಞಸ್ಸರ್ವವಿತ್" ಎಂದು ಹೇಳಿಸಿಕೊಳ್ಳುವ ನಾನೇ ಪ್ರಿಯನಾದ ಪ್ರಪನ್ನನಾದ ನಿನಗೆ ಮೋಕ್ಷೋಪಾಯಭೂತವಾದ ಈ ಕರ್ಮಯೋಗದ ಸ್ವರೂಪಾದಿಗಳನ್ನು ಉಪದೇಶಿಸಬೇಕಾಗಿದೆ ; ಇನ್ನು ಯಾರೂ ಸರಿಯಾಗಿ ಉಪದೇಶಿಸಲಾರರು ; ಆದುದರಿಂದ, ತೇ-ನಿನಗೆ, ತತ್ಕರ್ಮ-ಯಾವುದು ಆತ್ಮಯಾಥಾತ್ಮ್ಯ ಜ್ಞಾನವೊಂದಿಗೆ ಸೇರಿದ ಕರ್ಮಯೋಗವೋ ಅಂತಹ ಕರ್ಮಯೋಗದ ಸ್ವರೂಪವನ್ನು ಪ್ರವಕ್ಷ್ಯಾಮಿ - ಚೆನ್ನಾಗಿ ಉಪದೇಶಿಸುವೆನು, ಯಜ್ಜ್ಞಾತ್ವಾ - ಯಾವ ಕರ್ಮಯೋಗ ಸ್ವರೂಪವನ್ನು ತಿಳಿದವನಾಗಿ, ಅದನ್ನೇ ಅನುಷ್ಠಿಸುವದರಿಂದ ಉಪಾಯಾನುಷ್ಠಾನವು ಕೊನೆಗೆ ಸಿದ್ಧಿಸುವದರಿಂದ ಅಶುಭಾತ್ – ಈ ಹೇಯಸಂಸಾರದಿಂದ, ಅಥವಾ ಈ ಹೇಯಪ್ರಕೃತಿ ಸಂಬಂಧದಿಂದ, (ಶುದ್ಧ ಸತ್ವವೀಗ ಮಂಗಳಕರವಾದುದು, ಪ್ರಕೃತಿ ಸಂಬಂಧವೀಗ ಹೇಯವಾಗಿ ಅಮಂಗಳಕರವಾದುದು,) ಮೋಕ್ಷ್ಯಸೇ - ಬಿಡಲ್ಪಡುತ್ತೀಯೇ. ಅಥವಾ ಮೋಕ್ಷ್ಯಸೇ ಅಶುಭಾತ್ ಎಂಬುವಕ್ಕೆ ಇನ್ನೊಂದು ವಿಧವಾಗಿಯೂ ಅರ್ಥವನ್ನು ಹೇಳಬಹುದು, ಹೇಗೆಂದರೆ ? ೧೪ನೆಯ ಶ್ಲೋಕದ ಅವತಾರಿಕೆಯಲ್ಲಿ ಕರ್ಮಯೋಗಾರಂಭವಿರೋಧಿ ಪಾಪಕ್ಷಯಕ್ಕೆ ಹೇತುವು ಯಾವುದೆಂಬುದು ಆ ಶ್ಲೋಕದಲ್ಲಿ ಹೇಳಲ್ಪಡುತ್ತದೆ ಎಂದಿರುವದರಿಂದ, ಸರ್ವೇಶ್ವರನು ಸೃಷ್ಟಿಕರ್ತಾ ಆದರೂ ವಿಚಿತ್ರ ವಿವಿಧ ಸೃಷ್ಟಿಗೆ ಸರ್ವೇಶ್ವರನು ಕಾರಣನಲ್ಲವು, ಜೀವಾತ್ಮರಪುಣ್ಯಪಾಪರೂಪ ಕರ್ಮಗಳೇ ಕಾರಣವು, ಎಂಬ ಜ್ಞಾನವೆಂದು ಹೇಳಿರುವ

ಭಾ ಮುಮುಕ್ಷುಣಾನುಷ್ಠೇಯಂ ಕರ್ಮ ಕಿಂ ರೂಪಂ ? ಅಕರ್ಮ ಚ ಕಿಂ ? ಅಕರ್ಮೇತಿ ಕರ್ತು ರಾತ್ಮನೋ ಯಾಥಾತ್ಮ್ಯಜ್ಞಾನ ಮುಚ್ಯತೇ ; ಅನುಷ್ಠೇಯಂ ಕರ್ಮ ತದಂತರ್ಗತಂ ಜ್ಞಾನಂ ಚ ಕಿಂ ರೂಪ ಮಿತ್ಯುಭಯತ್ರ ಕವಯಃ - ವಿದ್ವಾಂಸೋಽಪಿ, ಮೋಹಿತಾಃ-

ದರಿಂದ, ಯತ್ ಜ್ಞಾತ್ವಾ - ಇಂತಹ ಜ್ಞಾನ ಉಳ್ಳವನಾದರೆ, ಅಶುಭಾತ್ - ಉಪಾಯಾನುಷ್ಠಾನದ ಆರಂಭಕ್ಕೇ ಪ್ರತಿಬಂಧಕಗಳಾದ ಪಾಪರಾಶಿಯಿಂದ, ಮೋಕ್ಷ್ಯಸೇ - ಬಿಡಲ್ಪಡುತ್ತೀಯೇ. ||೧೬||

ಭಾಷ್ಯಾರ್ಥವು :—ಮುಮುಕ್ಷುಣಾ - ಮೋಕ್ಷಾರ್ಥಿಯಿಂದ, ಅನುಷ್ಠೇಯಂ ಕರ್ಮ – ಅನುಷ್ಠಿಸಬೇಕಾದ ಕರ್ಮಯೋಗವು, ಕಿಂ ರೂಪಂ - ಯಾವ ಸ್ವರೂಪವನ್ನು ವುಳ್ಳದು ? ಅಕರ್ಮಚ - ಅಕರ್ಮವು ಕೂಡ ಯಾವ ಸ್ವರೂಪವುಳ್ಳದು ? ಇಲ್ಲಿ ಅಕರ್ಮೇತಿ - ಅಕರ್ಮವೆಂದು, ಕರ್ತುಃ ಆತ್ಮನಃ - ಕರ್ತೃವಾದ ಜೀವಾತ್ಮನ, ಯಾಥಾತ್ಮ್ಯಜ್ಞಾನಂ - ಯಥಾರ್ಥವಾದ ಜ್ಞಾನವು ಉಚ್ಯತೇ - ಹೇಳಲ್ಪಡುತ್ತದೆ. ಅಕರ್ಮವೆಂದರೆ, ಕರ್ಮೇತರತ್ - ಕರ್ಮವಲ್ಲದುದು ಜ್ಞಾನವೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಅನುಷ್ಠೇಯಂ ಕರ್ಮ - ಅನುಷ್ಠಿಸಬೇಕಾದ ಕರ್ಮಯೋಗರೂಪವಾದುದೂ, ತದಂತರ್ಗತಂ - ಅದನ್ನು ಒಳಗೊಂಡಿರುವ, ಜ್ಞಾನಂ ಚ - ಜ್ಞಾನವೂ ಸಹ, ಕಿಂ ರೂಪಂ - ಎಂತಾದ್ದು, ಇತ್ಯುಭಯತ್ರ - ಎಂಬೀ ಎರಡು ವಿಷಯದಲ್ಲೂ, ಕವಯಃ ಎಂದರೆ ವಿದ್ವಾಂಸೋಽಪಿ - ವಿದ್ವಾಂಸರೂ ಕೂಡ, ಇಲ್ಲಿ ಕವಯಃ ಎಂಬ ಶಬ್ದಕ್ಕೆ ಕ್ರಾಂತದರ್ಶಿಗಳು ಎಂಬರ್ಥವಲ್ಲವು, ಮೋಹಿತಾಃ ಎಂದರೆ ಯಥಾವನ್ನ ಜಾನಂತಿ - ಯಥಾವತ್ತಾದ ಸ್ವರೂಪವನ್ನು ತಿಳಿಯಲಾರರು ; ಎಂದರೆ ಅಜ್ಞಾನ ಅಯಥಾ ಜ್ಞಾನಗಳನ್ನು ಉಳ್ಳವರಾಗುತ್ತಾರೆಂಬ ಭಾವವು. ಆದರೆ ಅಕರ್ಮ ಶಬ್ದಕ್ಕೆ ಅಂತರ್ಗತ ಜ್ಞಾನವೆಂಬರ್ಥವನ್ನು ಹೇಳುವದಕ್ಕಾಗಿ, ಕರ್ಮೇತರತ್ಜ್ಞಾನಂ ಎಂಬ ವ್ಯಾಖ್ಯಾನವು ಸಾಧುವೇ ? ಎಂದರೆ ಶ್ರುತಿಯಲ್ಲೇ ಅವಿದ್ಯಯಾಮೃತ್ಯುಂ ತೀರ್ತ್ವಾ ವಿದ್ಯಯಾ ಮೃತಮಶ್ನುತೇ ಎಂಬಲ್ಲಿ ವಿದ್ಯೆ ಎಂದರೆ ಜ್ಞಾನ, ಅದಲ್ಲದುದು ಅವಿದ್ಯಾ ಎಂದರೆ ಕರ್ಮವೆಂದು ಅರ್ಥ ಹೇಳಬೇಕಾಗಿರುವಾಗ, ಅಕರ್ಮ - ಕರ್ಮವಲ್ಲದುದು ಜ್ಞಾನವೆಂದು ಏಕೆ ಅರ್ಥಹೇಳಕೂಡದು? ಅದು ಸಮಂಜಸವಾದರೆ ಇದೂ ಸಮಂಜಸವೇ. ಇಲ್ಲಿ ಕರ್ಮಯೋಗ ಪ್ರಕರಣದಲ್ಲಿ ಬೇಕಾದ ಜ್ಞಾನವು ಯಾವುದೆಂದರೆ ಆತ್ಮ ಯಾಥಾತ್ಮ್ಯ ಜ್ಞಾನವೆಂದು ಸಮಂಜಸವಾಗಿ ವ್ಯಾಖ್ಯಾನಮಾಡಿರುತ್ತಾರೆ. ವ್ಯಾಸೋಕ್ತಿಯೆಲ್ಲಾ ತುಂಬಾಗುಹ್ಯವಾದುದು; ಆದುದರಿಂದ ಅಕರ್ಮವೆಂಬ ಪ್ರಯೋಗವು. ಹಾಗೆಯೇ ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ (ಗೀ. ೩. ೩೫) ಎಂಬಲ್ಲೂ ವಿಗುಣ ಶಬ್ದಕ್ಕೂ ಅರ್ಥ ಹೇಳಬೇಕೆಂದು ಹಿಂದೆಯೇ ಸೂಚಿಸಿರುವೆವು. ಇಲ್ಲಿ ಅಕರ್ಮವೆಂಬುದಕ್ಕೆ ಕರ್ಮಾಭಾವವನ್ನು ಹೇಳಿದರೆ ಹೇಗೆ ಸ್ವಾರಸ್ಯಭಂಗವೋ, ಹಾಗೆಯೇ ಸ್ವಧರ್ಮವಾದ ಎಂದರೆ ಸಹಜಧರ್ಮವಾದ ಕರ್ಮಯೋಗವು ವಿಗುಣಃ ಎಂಬಲ್ಲಿ ಗುಣಾಭಾವಾರ್ಥವನ್ನು ಹೇಳಿದರೆ ಸ್ವಾರಸ್ಯ ಭಂಗವು. ಅಲ್ಲಿವರೆಗೆ ಜ್ಞಾನಯೋಗಕ್ಕಿಂತ ಕರ್ಮಯೋಗವು ಸುಮಾರು ಹತ್ತು ಹೇತುಗಳಿಂದ ವಿಶೇಷ ಗುಣ ಉಳ್ಳದ್ದು ಎಂದು ಹೇಳಿರುವದರಿಂದಲೇ ಪರ ಧರ್ಮವಾದ ಜ್ಞಾನಯೋಗಕ್ಕಿಂತ ಸ್ವಧರ್ಮವಾದ ಕರ್ಮಯೋಗವೇ ತುಂಬಾ ಹಿತವಾದುದಾಗಿ ಶ್ರೇಷ್ಠವು, ಏತಕ್ಕೆಂದರೆ ಮೇಲೆ ಉಪಪಾದಿಸಿದ ರೀತಿಯಲ್ಲಿ ವಿಗುಣಃ ವಿಶೇಷ ಗುಣವುಳ್ಳದು, ಆದುದರಿಂದ, ಎಂಬರ್ಥವೇ ಸ್ವಾರಸ್ಯವಾದುದು. ಇಲ್ಲಿ ಕೆಲವರು ಅಕರ್ಮವೆಂದರೆ ಕರ್ಮದ ಅಭಾವವೆಂದು ಅರ್ಥಮಾಡಿರುತ್ತಾರೆ ; ಈ ಕರ್ಮಾಭಾವದಲ್ಲಿ ಪಂಡಿತರೂ ಕೂಡ ತಿಳಿಯಲು ಅಸಾಧ್ಯವಾದ ವಿಷಯವೇನಿರುತ್ತದೆ?ಮುಂದಕ್ಕೆ ಅಂತಹ ಕರ್ಮವನ್ನು ಪ

ಭಾ. ಯಥಾವನ್ನ ಜಾನಂತಿ ; ಏವಮಂತರ್ಗತ ಜ್ಞಾನಂ ಯತ್ಕರ್ಮ, ತತ್ತೇ ಪ್ರವಕ್ಷ್ಯಾಮಿ; ಯತ್ ಜ್ಞಾತ್ವಾ - ಅನುಷ್ಠಾಯ, ಅಶುಭಾತ್-ಸಂಸಾರ ಬಂಧಾತ್, ಮೋಕ್ಷ್ಯಸೇ. ಕರ್ತವ್ಯಕರ್ಮಜ್ಞಾನಂ ಹ್ಯನುಷ್ಠಾನ ಫಲಮ್. ||೧೬||

---

ದೇಶಿಸುವೆನು ಎಂದು ಇಷ್ಟುಮಾತ್ರವೇ ಹೇಳಬಹುದೋ? ಅಕರ್ಮವಿಷಯವಾದ ಉಪದೇಶವು ಬೇಡವೋ, ಆದುದರಿಂದ ಅಕರ್ಮವೂ ಕರ್ಮದಲ್ಲಿ ಅಂತರ್ಗತವಾದುದರಿಂದ ಅಕರ್ಮದಿಂದ ಸೇರಿದ ಕರ್ಮಸ್ವರೂಪವೆಂದೇ ಅರ್ಥಮಾಡಬೇಕಾಗಿರುತ್ತದೆ. ಇದನ್ನೇ ಮುಂದೆ ವ್ಯಕ್ತಪಡಿಸುತ್ತಾರೆ. **ಏವಂ**-ಈ ಪ್ರಕಾರವಾಗಿ, **ಅಂತರ್ಗತಂ ಜ್ಞಾನಂ**-ಒಳಗೊಂಡಿರುವ ಜ್ಞಾನವುಳ್ಳದು, **ಯತ್ಕರ್ಮ**-ಯಾವ ಕರ್ಮಯೋಗವೋ, **ತತ್** - ಅಂತಹ ಕರ್ಮಯೋಗವನ್ನೇ, **ಪ್ರವಕ್ಷ್ಯಾಮಿ**-ಚನ್ನಾಗಿ ಉಪದೇಶಿಸುವೆನು; **ಯತ್** - ಯಾವ ಅಂತಹ ಕರ್ಮಯೋಗವನ್ನು, **ಜ್ಞಾತ್ವಾ** - ಎಂದರೆ **ಅನುಷ್ಠಾಯ** - ಅನುಷ್ಠಿಸಿ, **ಅಶುಭಾತ್** ಎಂದರೆ ಸಂಸಾರಬಂಧದಿಂದ **ಮೋಕ್ಷ್ಯಸೇ** - ಬಿಡಲ್ಪಡುತ್ತೀಯೇ. **ಕರ್ತವ್ಯ ಕರ್ಮಜ್ಞಾನಂ ಹಿ** - ಅನುಷ್ಠಿಸಬೇಕಾದ ಕರ್ಮದ ಜ್ಞಾನವೀಗ, **ಅನುಷ್ಠಾನಫಲಮ್** - ಅನುಷ್ಠಾನವನ್ನೇ ಫಲವಾಗಿ ಉಳ್ಳದುದು. ಈ ಶ್ಲೋಕದಲ್ಲಿ ಕರ್ಮಾಕರ್ಮಗಳೆರಡರ ಸ್ವರೂಪವನ್ನೂ ತಿಳಿಯದೇ ಕವಿಗಳೂ ಕೂಡ ಮೋಹಿತರಾಗಿರುತ್ತಾರೆ ಎಂಬರ್ಥವನ್ನೇ ಮುಂದಿನಶ್ಲೋಕದಲ್ಲೂ ಉಪಪಾದಿಸಿ, **"ಗಹನಾಕರ್ಮಣೋಗತಿಃ"** ಎಂದು ಉಪಸಂಹಾರ ಮಾಡಿ ಹೇಳಿರುವದರಿಂದ, ಅಕರ್ಮವೂ ಕರ್ಮದಲ್ಲೇ ಅಡಗಿದುದೆಂದೂ, ಅಕರ್ಮವು ವಿಶೇಷಣವೆಂದೂ ಕರ್ಮವು ವಿಶೇಷ್ಯವೆಂದೂ ಅರ್ಥಮಾಡುವದೇ ಸಮಂಜಸವೆಂದು ತೋರಿ, **"ಅಂತರ್ಗತಂ ಜ್ಞಾನಮ್ ಯತ್ಕರ್ಮ"** ಎಂಬ ಪ್ರಯೋಗವು. ಇಂತಹ ಅಂತರ್ಗತ ಜ್ಞಾನದಿಂದ ಯುಕ್ತವಾದ ಕರ್ಮಯೋಗ ಸ್ವರೂಪವನ್ನು ನಿನಗೆ ಉಪದೇಶಿಸುವದರಿಂದ ನಿನಗಾಗುವ ಪ್ರಯೋಜನವೇನು ಎಂದು ಕೇಳುತ್ತೀಯೋ, **ಜ್ಞಾತ್ವಾ ಮೋಕ್ಷ್ಯಸೇಽಶುಭಾತ್** - ಈ ಉಪದೇಶವು ನಿನಗೆ ಸಂಸಾರ ಬಂಧದಿಂದ ಬಿಡಲ್ಪಡಲು ಕಾರಣವಾಗುತ್ತದೆ. ತಿಳಿಯೋಣಮಾತ್ರದಿಂದಲೇ ಸಾಕ್ಷಾತ್ತಾಗಿ ಈ ಪ್ರಕೃತಿಬಂಧವು ಬಿಟ್ಟುಹೋಗುವದಿಲ್ಲವು. ತಿಳಿಯೋಣದರಿಂದ ಕರ್ಮಾನುಷ್ಠಾನ ಉಂಟಾಗಿ, ಭಕ್ತಿಯೋಗವಲ್ಲಿಳಿದು, ಉಪಾಸನ ನಿಷ್ಪತ್ತಿಯೊಂದಿಗೆ ಮೋಕ್ಷ ಉಂಟಾಗುತ್ತದೆಂಬ ತಾತ್ಪರ್ಯವು. ಆ ಕಾರಣದಿಂದಲೇ ಜ್ಞಾತ್ವಾ ಎಂದರೆ ಅನುಷ್ಠಾಯ ಎಂದು ವ್ಯಾಖ್ಯಾನಮಾಡಿ ಆ ಅಭಿಪ್ರಾಯವನ್ನೇ ಮುಂದಿನವಾಕ್ಯವಾದ **"ಕರ್ತವ್ಯ ಕರ್ಮಜ್ಞಾನಂ ಹಿ"** ಎಂಬುದರಿಂದ, ವ್ಯಕ್ತಪಡಿಸಿರುತ್ತಾರೆ. ಕರ್ಮ ಸ್ವರೂಪದ ಜ್ಞಾನವುಂಟಾಗುವದರ ಫಲವೇನು ಎಂದರೆ ಆ ಕರ್ಮವು ಯಾವ ಫಲವನ್ನುಂಟುಮಾಡಬೇಕೋ ಹಾಗೆ ಶಾಸ್ತ್ರೋದಿತ ರೀತ್ಯಾ ಭಗವತ್ಪ್ರೀಣನ ಉಂಟಾಗುವಹಾಗೆ ಮಾಡೋಣವೇ. ಜ್ಞಾತ್ವಾ ಎಂದು ಕರ್ಮಜ್ಞಾನವು ಯಾವಾಗ ಹೇಳಲ್ಪಟ್ಟಿತೋ ಆಗ ಅಜಹಲ್ಲಕ್ಷಣೆಯ ಮೂಲಕ ಅದರನುಷ್ಠಾನವೂ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಬ್ರಾಹ್ಮಣರ ಆರಾಧನೆಗಾಗಿ ವಿಶೇಷ ಅಡಿಗೆ ನಡೆಯಿತು ಎಂದರೆ ಭೋಜನವೂ ನಡೆಯಿತು ಎಂಬರ್ಥವು ಹೇಗೆ ಉಂಟಾಗುತ್ತದೋ ಹಾಗೆ ಎಂಬ ಭಾವವು. ಜ್ಞಾನಮಾತ್ರವೇ ಸಾಕು ಎಂದರೆ ಹಿಂದಿನ ಶ್ಲೋಕದಲ್ಲಿ **"ಕುರುಕರ್ಮೈವ ತಸ್ಮಾತ್ತ್ವಂ"** ಎಂದು ಹಿಂದೆ ಹೇಳಿದ ಶ್ಲೋಕಕ್ಕೆ ವಿರುದ್ಧವಾಗುತ್ತದೆ. ಆದುದರಿಂದ ಕರ್ಮಜ್ಞಾನವು ಕರ್ಮಾನುಷ್ಠಾನಕ್ಕೆ ಸಾಧನವೆಂದೇ ಅರ್ಥಮಾಡುವದು ಯುಕ್ತವು. ಕರ್ಮಾನುಷ್ಠಾನ ವಿಧಿಗೆ ನಿಷ್ಪ್ರಯೋಜನವನ್ನುಂಟುಮಾಡಬಹುದೋ? ಜ್ಞಾನಕ್ಕೆ ಪರ್ಯವಸಾನವೆಲ್ಲಿ? ಎಂದರೆ, ಆ ಜ್ಞಾನವು ಅನುಷ್ಠಾನಕ್ಕೆ ಉಪಯುಕ್ತವಾದರೇನೆ ಆ ಜ್ಞಾನಕ್ಕೆ ಸಾರ್ಥಕ್ಯವು; ಜ್ಞಾನಸಂಪಾದನೆಯೇ ಕಷ್ಟವಾದರೆ, ಇನ್ನು

**ಭಾ. ಅವ. ಕುತೋಽಸ್ಯ ದುರ್ಜ್ಞಾನತೇತ್ಯತ್ರಾಹ—**

**ಮೂ. ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋಗತಿಃ ॥ ೧೭.**

ಅನುಷ್ಠಾನವು ದುಸ್ತರವೆಂದು ಹೇಳತಕ್ಕದ್ದೇನಿರುತ್ತದೆ. ಆದುದರಿಂದಲೇ ಮುಂದಿನ ಶ್ಲೋಕದಲ್ಲಿ **ಗಹನಾ ಕರ್ಮಣೋಗತಿಃ** ಎಂದು ಹೇಳುತ್ತಾರೆ. ಇದನ್ನನುಸರಿಸಿಯೇ ಕರ್ಮದ ದುರ್ಜ್ಞಾನತೆಯು ಮುಂದೆ ಹೇಳುತ್ತದೆಂಬ ಅವತಾರಿಕೆಯೂ ಸಹ. ॥೧೬॥

**ಭಾಷ್ಯಾವತಾರಿಕೆಯ ಅರ್ಥವು :**—ಶ್ಲೋಕದ ಪೂರ್ವಾರ್ಧದಲ್ಲಿ, ಕರ್ಮ ಮತ್ತು ಅಕರ್ಮ ಎರಡೂ ತಿಳಿಯತಕ್ಕವು ಎಂದು ಹೇಳಿ, ಉತ್ತರಾರ್ಧದಲ್ಲಿ ತತ್ತೇಕರ್ಮ ಪ್ರವಕ್ಷ್ಯಾಮಿ ಎಂದು ಕರ್ಮ ಒಂದನ್ನೇ ಹೇಳುತ್ತೇನೆ, ಎಂದು ಪ್ರತಿಜ್ಞಾವಾಕ್ಯವಾಗಿ ಹೇಳಿದೆಯಲ್ಲಾ ಎಂದರೆ, ತತ್ಕರ್ಮ ಎಂದರೆ ಆ ಕರ್ಮ ಎಂದರೆ, ಆತ್ಮಜ್ಞಾನದಿಂದ ಕೂಡಿರುವ ಕರ್ಮಾನುಷ್ಠಾನರೂಪವಾದ ಕರ್ಮಯೋಗವೆಂಬರ್ಥವಾದುದರಿಂದ, ಕರ್ಮ ಶಬ್ದವು ಅನೇಕ ಕಡೆಗಳಲ್ಲಿ, "ಕುರುಕರ್ಮೈವ" (ಗೀ.೩. ೮.) "ಗಹನಾಕರ್ಮಣೋಗತಿಃ" (ಗೀ. ೪. ೧೭) ಇತ್ಯಾದಿ ಸ್ಥಳಗಳೆಲ್ಲಾ ಅಕರ್ಮದಿಂದ ಕೂಡಿದ ಕರ್ಮಾನುಷ್ಠಾನವೆಂಬುದೇ ಅಭಿಪ್ರಾಯವೆಂಬ ಭಾವವು. ಆತ್ಮಯಾಥಾತ್ಮ್ಯಜ್ಞಾನವಿಲ್ಲದ ಕರ್ಮಾನುಷ್ಠಾನವೂ ಕರ್ಮಯೋಗವೆಂದು ಹೇಳಿಸಿಕೊಳ್ಳುವದಿಲ್ಲವು. ಅಕರ್ಮವೆಂಬ ವಿಶೇಷಣದಿಂದ ಯುಕ್ತವಾದುದು ಕರ್ಮಯೋಗವು. ಆದುದರಿಂದ ವಿಶೇಷಣವನ್ನು ಬಿಟ್ಟು ವಿಶೇಷ್ಯವನ್ನು ಹೇಳಿದರೂ, ಸವಿಶೇಷಣವಾಗಿಯೇ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಹಿಂದಿನ ಶ್ಲೋಕದಲ್ಲಿ ಕವಯೋಽಪ್ಯತ್ರಮೋಹಿತಾಃ ಎಂದು ಕರ್ಮಯೋಗಸ್ವರೂಪವನ್ನು ತಿಳಿಯುವದು ದುರ್ಲಭವೆಂದು ಹೇಳಲ್ಪಟ್ಟಿತು. ತತ್ತೇಕರ್ಮ ಪ್ರವಕ್ಷ್ಯಾಮಿ ಎಂದು ಹೇಳಿದರೂ, ಆ ಕರ್ಮಸ್ವರೂಪವನ್ನು ಚೆನ್ನಾಗಿ ಉಪದೇಶಿಸುವದಕ್ಕೆ ಮುಂಚಿತವಾಗಿ, ಆ ಕರ್ಮಜ್ಞಾನದ ದುರ್ಜ್ಞಾನತ್ವವು ಹೇಗೆ ಎಂದು ತಿಳಿಯುವದು ಆವಶ್ಯಕವಾದುದರಿಂದ ಈ ಮುಂದಿನ ಶ್ಲೋಕದಿಂದ ಆ ದುರ್ಜ್ಞಾನತ್ವವನ್ನು ವ್ಯಕ್ತಪಡಿಸುತ್ತಾರೆ. ಆದುದರಿಂದ ಅದಕ್ಕೆ ಸರಿಯಾದ ಅವತಾರಿಕೆಯನ್ನು ಕೊಡುತ್ತಾರೆ.—**ಅಸ್ಯ** - ಈ ಅಕರ್ಮಯುಕ್ತವಾದ ಕರ್ಮಯೋಗಕ್ಕೆ, **ದುರ್ಜ್ಞಾನತಾ** - ತಿಳಿಯಲಸಾಧ್ಯತೆಯು, **ಕುತಃ** - ಯಾವ ಮೂಲಕವಾದುದು, **ಇತ್ಯತ್ರಾಹ** - ಎಂಬುವ ಸಂದರ್ಭದಲ್ಲಿ ಹೇಳುತ್ತಾರೆ. ತಿಳಿಯತಕ್ಕ ಅಂಶವು ತುಂಬಾ ಇರುವದರಿಂದ, ತಿಳಿದುಕೊಳ್ಳುವದರಲ್ಲಿ ಕಷ್ಟವಿದೆ ಎಂದುಪದೇಶಿಸುತ್ತಾರೆ.

**ಮೂಲಕ್ಕೆ ಅರ್ಥವು :**—**ಹಿ** - ಯಾವ ಕಾರಣದಿಂದ, **ಕರ್ಮಣೋಽಪಿ** - ಕರ್ಮಯೋಗದ ಸ್ವರೂಪದಲ್ಲೇನೋ, **ಬೋದ್ಧವ್ಯಂ**-ನಿನಗೆ ತಿಳಿಯತಕ್ಕ ಅಂಶವು ಹೇಗೆ ಉಂಟೋ ಉಂಟೋ; **ಕರ್ಮಣಃ** ಎಂಬುದು ಸಂಬಂಧ ಸಾಮಾನ್ಯ ಷಷ್ಠಿಯಾದುದರಿಂದ ಕರ್ಮಯೋಗದಲ್ಲಿ ಎಂದು ಸಪ್ತಮ್ಯರ್ಥವನ್ನು ಹೇಳಬಹುದು; ಮುಂದಿನ ಶ್ಲೋಕದಲ್ಲಿ, ಕರ್ಮಣ್ಯಕರ್ಮಯಃ ಪಶ್ಯೇತ್ ಎಂದು ಪ್ರಯೋಗವಿರುವದರಿಂದ ಸಪ್ತಮ್ಯರ್ಥವೇ ಇಲ್ಲಿ ಅಭಿಪ್ರೇತವೆಂಬುದು ವ್ಯಕ್ತಪಡುತ್ತದೆ. ಮತ್ತು ಹಾಗೆಯೇ **ವಿಕರ್ಮಣಶ್ಚ** - ವಿವಿಧಗಳಾದ ನಿತ್ಯ ನೈಮಿತ್ತಿಕ ಕಾಮ್ಯ ಕರ್ಮಗಳಲ್ಲೂ, **ಬೋದ್ಧವ್ಯಂ** - ತಿಳಿಯತಕ್ಕ ಅಂಶವು ಉಂಟೋ; **ಅಕರ್ಮಣಶ್ಚ** - ಕರ್ಮಕ್ಕಿಂತಲೂ ಬೇರೆಯಾಗಿ ಆ ಕರ್ಮಯೋಗಕ್ಕೆ ವಿಶೇಷಣವಾದ ಜ್ಞಾನದ ವಿಷಯದಲ್ಲೂ, **ಬೋದ್ಧವ್ಯಂ** - ತಿಳಿಯತಕ್ಕ ಅಂಶವುಂಟೋ ಆ ಕಾರಣದಿಂದ, **ಕರ್ಮಣಃ ಗತಿಃ** - ಕರ್ಮಸ್ವರೂಪವನ್ನು ಚೆನ್ನಾಗಿ ಗ್ರಹಿಸುವ ಮಾರ್ಗವು, **ಗಹನಾ** - ಕಷ್ಟಸಾಧ್ಯವಾದುದು. ಈ ಶ್ಲೋಕದಮೂಲಕ ಕರ್ಮಯೋಗಸ್ವರೂಪವನ್ನು ತಿಳಿ

ಯುವದು ಕಷ್ಟವೇತಕ್ಕೆ ಎಂದರೆ ಹೇಳುತ್ತಾರೆ. ಕರ್ಮಯೋಗ ಸ್ವರೂಪದಲ್ಲೂ ತಿಳಿಯತಕ್ಕದ್ದು ಇರುತ್ತದೆ. ಕರ್ಮದಲ್ಲಿ ತಿಳಿಯತಕ್ಕ ಅಂಶವು ಯಾವುದೆಂದರೆ ಅದು ಹೇಗೆ ಸಂಸಾರ ಬಂಧ ವಿಮೋಚನೆಗೆ ಸಾಧಕವೆಂಬುದು. ಅದರೊಂದಿಗೆ ಅದಕ್ಕೆ ವಿಶೇಷಣಗಳಾದ ವಿಕರ್ಮ ಅಕರ್ಮಗಳ ಸರಿಯಾದ ಜ್ಞಾನವೂ ಆವಶ್ಯಕವೆಂದು ಹೇಳಿ, ಇಷ್ಟೆಲ್ಲಾ ತಿಳಿಯತಕ್ಕದ್ದಿರುವದರಿಂದ ಕರ್ಮಯೋಗದ ಸರಿಯಾದ ಜ್ಞಾನವು ಕಷ್ಟಸಾಧ್ಯವು; ಆದುದರಿಂದಲೇ, **ಕವಯೋಽಪ್ಯತ್ರ ಮೋಹಿತಾಃ** ಎಂದು ಹೇಳಲ್ಪಟ್ಟಿತೆಂದು ಉಪದೇಶಿಸುತ್ತಾರೆ. ಕರ್ಮಯೋಗದಲ್ಲಿ ವಿಕರ್ಮವು ಎಂದರೆ ವಿವಿಧವಾದ ನಿತ್ಯ ನೈಮಿತ್ತಿಕ ಕಾಮ್ಯಕರ್ಮಗಳು ಇವೆ, ಎಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. **ಶರೀರ ಯಾತ್ರಾಪಿ ಚ ತೇ ನ ಪ್ರಸಿಧ್ಯೇತ್**" ಎಂಬ ಸಂದರ್ಭದಲ್ಲಿ ಧನಾರ್ಜನೆ, ದೇಹಪೋಷಣಾದಿಗಳೂ ಆವಶ್ಯಕವೆಂದೂ, ಅವುಗಳೂ ಕೂಡ ಫಲಸಙ್ಗಾದಿಗಳಿಲ್ಲದ ಹಾಗೆ ಈಶ್ವರ ಪ್ರೀತ್ಯಾ ಶಾಸ್ತ್ರ ವಿಹಿತರೀತ್ಯಾ ನಡೆಸಬೇಕೆಂದು ವಿಶದವಾಗಿ ಮೂರನೆಯ ಅಧ್ಯಾಯದ ೮ನೆಯ ಶ್ಲೋಕದಿಂದ ಆರಂಭಿಸಿ, ೩೦ನೆಯ ಶ್ಲೋಕದಲ್ಲಿ ಮುಗಿಸಿರುತ್ತಾರೆ. ನಿತ್ಯ ನೈಮಿತ್ತಿಕಗಳೇನೋ ಕರ್ಮಯೋಗದಲ್ಲಿ ಉಂಟೆಂಬುದು "**ನಿಯತಂ ಕುರು ಕರ್ಮ ತ್ವಂ**" ಎಂಬುದರಿಂದಲೇ ಸ್ಪಷ್ಟವು; ಕಾಮ್ಯವೂ ಕರ್ಮಯೋಗಕ್ಕೆ ಹೇಗೆ ಆವಶ್ಯಕವು ಎಂದರೆ, ನಿತ್ಯ ನೈಮಿತ್ತಿಕಗಳೊಂದಿಗೆ ಮುಂದೆ ೨೫ನೆಯ ಶ್ಲೋಕದಿಂದಾರಂಭಿಸಿ "**ದೈವಮೇವಾ ಪರೇಯಜ್ಞಂ**" ಎಂಬಲ್ಲಿ ಹೇಳಿರುವುವುಗಳಲ್ಲಿ ಯಾವುದಾದರೂ ಒಂದು ಕಾಮ್ಯವನ್ನು ಸೇರಿಸಿ ಅನುಷ್ಠಿಸಿದರೇನೆ ಕರ್ಮಯೋಗವೆನಿಸುತ್ತದೆ. ಶ್ರೀ ನಿಗಮಾಂತ ದೇಶಿಕರವರು ಉಪಾಯ ವಿಭಾಗಾಧಿಕಾರದಲ್ಲಿ ಕರ್ಮಯೋಗವಾವುದು? ಎಂದರೆ ಕರ್ಮಯೋಗವೆಂದರೇನು? ಎಂಬ ಪ್ರಶ್ನೆಗೆ ಈ ನಿತ್ಯ ನೈಮಿತ್ತಿಕ ಕಾಮ್ಯ ಕರ್ಮಗಳು ಮೂರೂ ಅನುಷ್ಠಿಸಲ್ಪಟ್ಟರೇನೆ ಕರ್ಮಯೋಗವೆನಿಸುತ್ತದೆಂದು ಉತ್ತರವನ್ನು ಕೊಟ್ಟಿರುತ್ತಾರೆ. ಇಲ್ಲಿ ವಿಕರ್ಮಕ್ಕೆ ವಿರುದ್ಧವಾದ ಕರ್ಮವೆಂಬರ್ಥವು ಸರಿಯಾದುದಲ್ಲವು; ಏಕೆಂದರೆ ಅದು ಕರ್ಮಯೋಗದಲ್ಲಿದೆ ಎಂದು ಹೇಳಲ್ಪಟ್ಟಿರುವದರಿಂದ ವಿರುದ್ಧ ಕರ್ಮವೆಂಬ ಅರ್ಥವು ಸರಿಹೋಗುವದಿಲ್ಲವು; ವಿವಿಧ ಕರ್ಮವುಳ್ಳದು ಎಂಬರ್ಥವೇ ಸಮಂಜಸವು. ವೈವಿಧ್ಯ ಹೇಗೆಂದರೆ ನಿತ್ಯ ನೈಮಿತ್ತಿಕ ಕಾಮ್ಯ, ಹೀಗೆ ಮೂರೂ ಇರಬೇಕಾಗಿರುವದರಿಂದ ವೈವಿಧ್ಯವು, ಮತ್ತು ಇವುಗಳ ಅನುಷ್ಠಾನಗಳಿಗೆ ಬೇಕಾದ ಧನಾರ್ಜನಾದಿ ಕರ್ಮಗಳು ಬೇಕಾಗಿರುವದರಿಂದಲೂ ವೈವಿಧ್ಯವು. ಹೀಗೆ ಈ ನಿತ್ಯ ನೈಮಿತ್ತಿಕ ಕಾಮ್ಯಗಳ ವಿಷಯದಲ್ಲಿ ಬೋದ್ಧವ್ಯಾಂಶವು ಯಾವುವು ಎಂದರೆ, ಇವುಗಳ ಅನುಷ್ಠಾನವು ತನಗೆ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪ ಸಂಚಯಗಳನ್ನು ಹೇಗೆ ಹೋಗಲಾಡಿಸುತ್ತವೆ? ಅವೂ, ಅವುಗಳಿಗೆ ಸಾಧಕಗಳಾದ ಧನಾರ್ಜನೆ, ಶರೀರಯಾತ್ರಾದಿಗಳೆಲ್ಲಾ ಪ್ರವೃತ್ತಿಧರ್ಮಗಳಾಗಿ ಬಂಧಕಗಳಲ್ಲವೆ? ಬಂಧಕಗಳಲ್ಲದೇ ಇರುವದಕ್ಕಾಗಿ ಅವುಗಳನ್ನು ಹೇಗೆ ಅನುಷ್ಠಿಸತಕ್ಕದ್ದು? ಹೇಗೆ ಅನುಷ್ಠಿಸಿದರೆ ಬೇರೆ ಬೇರೆ ಬಂಧಕ ಫಲಗಳಿಲ್ಲದೆ ಒಂದೇಯಾದ ಮೋಕ್ಷಫಲಕ್ಕೆ ಹೇತುವಾಗಿ ಪರಮ ಪುರುಷನು ತನ್ನ ಆರಾಧನಾರೂಪವೆಂದು ಭಾವಿಸಿ, ಅನುಗ್ರಹಿಸುವನು? ಇಂತಹ ಜ್ಞಾನವೆಲ್ಲಾ ವಿಕರ್ಮ ವಿಷಯದಲ್ಲಿ ತಿಳಿಯತಕ್ಕದ್ದುಂಟು. ಹಾಗೆಯೇ ಅಕರ್ಮದಲ್ಲೂ ಎಂದರೆ ಆತ್ಮ ಯಾಥಾತ್ಮ್ಯವಿಷಯದಲ್ಲೂ ತಿಳಿಯತಕ್ಕದ್ದುಂಟು. ಆ ಯಾಥಾತ್ಮ್ಯ ಜ್ಞಾನಕ್ಕೆ ಬೇಕಾದ ಜೀವಾತ್ಮನಸ್ವರೂಪ ಸ್ವಭಾವಗಳು, ಪರಮಾತ್ಮನಿಗೂ ತನಗೂ ಇರುವ ಸಂಬಂಧಜ್ಞಾನವೂ, ಇವೆಲ್ಲಾ ಆವಶ್ಯಕವೆಂಬ ಭಾವವು. ಹಿಂದಿನ ಶ್ಲೋಕದಲ್ಲಿ ವಿಶದೀಕರಿಸಿರುವಹಾಗೆ ಅಕರ್ಮವೂ ಒಂದು ಅಙ್ಗವು. ಹೀಗೆ ವಿಕರ್ಮ ಅಕರ್ಮಗಳಿಂದ ಕರ್ಮಯೋಗವು ಯುಕ್ತವಾದುದೆಂದು ಯಥಾರ್ಥ ಸ್ವರೂಪವನ್ನು ತಿಳಿಯತಕ್ಕದ್ದಿರುವದರಿಂದ, **ಗಹನಾ ಕರ್ಮಣೋಗತಿಃ** ಎಂದು ಅದರ ಸ್ವರೂ

**ಭಾ.** ಯಸ್ಮಾನ್ಮೋಕ್ಷಸಾಧನಭೂತೇ ಕರ್ಮಸ್ವರೂಪೇ ಬೋದ್ಧವ್ಯಮಸ್ತಿ ; ವಿಕರ್ಮಣಿ ಚ ನಿತ್ಯನೈಮಿತ್ತಿಕ ಕಾಮ್ಯರೂಪೇಣ ತತ್ಸಾಧನ ದ್ರವ್ಯಾರ್ಜನಾ ದ್ಯಾಕಾರೇಣ ಚ ವಿವಿಧ ತಾ ಮಾಪನ್ನಂ ಕರ್ಮ-ವಿಕರ್ಮ; ಅಕರ್ಮಣಿ - ಜ್ಞಾನೇ ಚ ಬೋದ್ಧವ್ಯ ಮಸ್ತಿ; ತಸ್ಮಾತ್ ಗಹನಾ-ದುರ್ವಿಜ್ಞಾನಾ ಮುಮುಕ್ಷೋಃ ಕರ್ಮಣೋ ಗತಿಃ।ವಿಕರ್ಮಣಿ ಬೋದ್ಧವ್ಯಂ ನಿತ್ಯ ನೈಮಿತ್ತಿಕಕಾಮ್ಯ ದ್ರವ್ಯಾರ್ಜನಾದೌ ಕರ್ಮಣಿ ಫಲಭೇದಕೃತಂ ವೈವಿಧ್ಯಂ ಪರಿತ್ಯಜ್ಯ ಮೋಕ್ಷೈಕ ಫಲತಯೈಕ ಶಾಸ್ತ್ರಾರ್ಥತ್ವಾನುಸಂಧಾನಮ್ । ತದೇತತ್ (೧) "ವ್ಯವ ಸಾಯಾತ್ಮಿಕಾ ಬುದ್ಧಿ ರೇಕಾ"ಇತ್ಯತ್ರೈವೋಕ್ತಮಿತಿ ನೇಹ ಪ್ರಪಞ್ಚ್ಯತೇ ॥೧೭॥

---

ಪದ ಜ್ಞಾನವು ಕಷ್ಟಸಾಧ್ಯವೆಂದು ಹೇಳಿದರು. ಹೀಗೆ ಅಕರ್ಮ ವಿಕರ್ಮಗಳೇ ವಿಶೇಷಣಗ ಳಾಗಿ ಉಳ್ಳದ್ದು ಕರ್ಮಯೋಗವೆಂದು ಈ ಶ್ಲೋಕದಿಂದ ಹೇಳಿದುದರಿಂದ ಕರ್ಮಯೋಗ ಸ್ವ ರೂಪವನ್ನೂ ಕೂಡ ಸ್ವಲ್ಪ ಮಟ್ಟಿಗೆ ತಿಳಿಸಿದಂತಾಯಿತು.

ಭಾಷ್ಯಾರ್ಥವು—**ಯಸ್ಮಾತ್** - ಯಾವ ಕಾರಣದಿಂದ, ಇದು "ಹಿ" ಶಬ್ದಾರ್ಥವು, **ಮೋಕ್ಷಸಾಧನ ಭೂತೇ** - ಮೋಕ್ಷಕ್ಕೆ ಸಾಧನವಾದ, **ಕರ್ಮಸ್ವರೂಪೇ** - ಕರ್ಮಯೋಗದ ಸ್ವ ರೂಪದಲ್ಲಿ, **ಬೋದ್ಧವ್ಯಮಸ್ತಿ** - ಹಿಂದೆ ಮೂರನೆಯ ಅಧ್ಯಾಯದಲ್ಲೆಲ್ಲಾ ವಿಶದವಾಗಿ ಹೇಳಿದುದ ರಿಂದ ನಿನಗೆ ಮೊದಲೇ ವ್ಯಕ್ತವಾಗಿ ತಿಳಿದ ಮತ್ತು ತಿಳಿಯತಕ್ಕವಿಷಯಗಳಿವೆಯೋ, ಹಾಗೆಯೇ, **ವಿಕರ್ಮಣಿ ಚ**-ಬೋದ್ಧವ್ಯಮಸ್ತಿ ಎಂದು ಇಟ್ಟುಕೊಳ್ಳತಕ್ಕದ್ದು,ವಿಕರ್ಮದಲ್ಲೂ ಕೂಡ ತಿಳಿಯತಕ್ಕ ಅಂಶವಿದೆಯೋ, ವಿಕರ್ಮನೆಂದರೇನು?ಎಂಬುದನ್ನು ತಿಳಿಸುತ್ತಾರೆ. ನಿತ್ಯ ನೈಮಿತ್ತಿಕ ಕಾಮ್ಯರೂಪ ದಿಂದಲೂ, ಮತ್ತು ತತ್ಸಾಧನ ದ್ರವ್ಯಾರ್ಜನಾದ್ಯಾಕಾರೇಣ ಚ-ಆ ನಿತ್ಯ ನೈಮಿತ್ತಿಕಾದಿಗಳನ್ನು ಸಾಧಿಸಿಕೊಡುವ ದ್ರವ್ಯಾರ್ಜನಾದಿ ರೂಪದಿಂದಲೂ, **ವಿವಿಧತಾ ಮಾಪನ್ನಂ** - ನಾನಾವಿಧವಾ ಗಿರುವಿಕೆಯನ್ನು ಹೊಂದಿದ ಕರ್ಮವೆಲ್ಲಾ ವಿಕರ್ಮವೆನಿಸುತ್ತದೆ; ಮತ್ತು ಯಾವ ಕಾರಣದಿಂದ **ಅಕರ್ಮಣಿ** ಎಂದರೆ ಜ್ಞಾನದಲ್ಲೂ ಕೂಡ, **ಬೋದ್ಧವ್ಯ ಮಸ್ತಿ** - ತಿಳಿಯುವ ಅಂಶವಿದೆಯೋ, **ತಸ್ಮಾತ್** - ಆಕಾರಣದ್ದೆಸೆಯಿಂದ, **ಮುಮುಕ್ಷೋಃ** - ಮೋಕ್ಷಾರ್ಥಿಯ, ಎಂದರೆ ಅವನಿಂದ ತಿಳಿಯಬೇಕಾದ, **ಕರ್ಮಣೋಗತಿಃ** - ಕರ್ಮಯೋಗದ ತಿಳುವಳಿಕೆಯ ಮಾರ್ಗವು, **ಗಹನಾ** ಎಂದರೆ **ದುರ್ವಿಜ್ಞಾನಾ** - ತಿಳಿಯುವದು ಕಷ್ಟತರವಾದುದು. ಗಹನ ಶಬ್ದಕ್ಕೆ ಪ್ರವೇಶಿಸುವದು ಕಷ್ಟವೆಂಬರ್ಥವು, ಏತರಿಂದ ಪ್ರವೇಶವೆಂದರೆ ಜ್ಞಾನಮೂಲಕ ಪ್ರವೇಶವೆಂಬ ಭಾವವು; ಆದುದ ರಿಂದಲೇ ಗಹನಾ ಎಂದರೆ ದುರ್ವಿಜ್ಞಾನಾ ಎಂದು ವ್ಯಾಖ್ಯಾನಮಾಡಿರುತ್ತಾರೆ. **ವಿಕರ್ಮಣಿ ಬೋ ದ್ಧವ್ಯಂ** - ವಿಕರ್ಮದಲ್ಲಿ ತಿಳಿಯತಕ್ಕ ಅಂಶವು ಯಾವುದೆಂದರೆ, **ನಿತ್ಯನೈಮಿತ್ತಿಕಕಾಮ್ಯದ್ರವ್ಯಾ ರ್ಜನಾದೌಕರ್ಮಣಿ** - ನಿತ್ಯ ನೈಮಿತ್ತಿಕ ಕಾಮ್ಯ ದ್ರವ್ಯಾರ್ಜನೆ ಮೊದಲಾದ ಕರ್ಮದಲ್ಲಿ, **ಫಲ ಭೇದಕೃತಂ** - ಅವುಗಳನುಷ್ಠಾನದಿಂದುಂಟಾಗುವ ಬೇರೆ ಬೇರೆ ಫಲಗಳಿಂದುಂಟಾದ, **ವೈವಿಧ್ಯಂ** — ವಿವಿಧವಾಗಿರುವ ಭಾವವನ್ನು, **ಪರಿತ್ಯಜ್ಯ** - ಬಿಟ್ಟು, **ಮೋಕ್ಷೈಕ ಫಲತಯಾ** - ಮೋಕ್ಷ ಒಂದೇ ಮುಖ್ಯವಾದ ಫಲವಾಗಿರುವದರಿಂದ, **ಏಕಶಾಸ್ತ್ರಾರ್ಥತ್ವಾನುಸಂಧಾನಮ್**-ಇವೆಲ್ಲಾ ಒಂದೇ ಶಾಸ್ತ್ರ ಎಂಬ ಅನುಸಂಧಾನವು, ಅಕರ್ಮವಿಕರ್ಮಗಳಿಂದ ಕೂಡಿರುವ ಕರ್ಮಯೋಗವೂ ಯೋಗಶಾಸ್ತ್ರಕ್ಕೆ ಸೇರಿ ಒಂದೇ ಶಾಸ್ತ್ರವೆಂಬ ಭಾವವು. **ತದೇತತ್** - ವಿಕರ್ಮ ವಿಷಯದಲ್ಲಿ ತಿಳಿ ಯತಕ್ಕ ವಿಷಯವಿದು ಎಂಬುದು ಹಿಂದೆ **"ವ್ಯವಸಾಯಾತ್ಮಿಕಾಬುದ್ಧಿ ರೇಕಾ"ಇತ್ಯತ್ರೈವ**-"ವ್ಯವ

---

(೧) ಗೀ. ೨. ೪೧.

ಭಾ. ಅವ. ಕರ್ಮಾಕರ್ಮಣೋರ್ಬೋದ್ಧವ್ಯಮಾಹ :—

ಮೂ. ಕರ್ಮಣ್ಯಕರ್ಮ ಯಃ ಪಶ್ಯೇದ ಕರ್ಮಣಿ ಚ ಕರ್ಮ ಯಃ ।
ಸ ಬುದ್ಧಿಮಾನ್ ಮನುಷ್ಯೇಷು ಸಯುಕ್ತಃ ಕೃತ್ಸ್ನಕರ್ಮಕೃತ್ ॥ ೧೮.

ಸಾಯಾತ್ಮಿಕಾ" ಎಂದು ಹೇಳುವ ಸಂದರ್ಭದಲ್ಲೇ, ಉಕ್ತಮಿತಿ - ಹೇಳಲ್ಪಟ್ಟಿರುವದರಿಂದ, ನೇಹ ಪ್ರಪಂಚ್ಯತೇ - ಇಲ್ಲಿ ವಿಸ್ತರಿಸಿ ಹೇಳುವದಿಲ್ಲವು.

ಈ ಶ್ಲೋಕದಲ್ಲಿ ವಿಕರ್ಮ ಅಕರ್ಮ ಶಬ್ದಗಳಿಗೆ ಅರ್ಥಮಾಡುವದಕ್ಕೆ ಕೆಲವರು ತುಂಬಾ ಕ್ಲೇಶ ಪಟ್ಟಿರುತ್ತಾರೆ. ಶ್ರೀ ವೇದವ್ಯಾಸರ ಪ್ರಯೋಗಗಳೆಲ್ಲಾ ಗುರುಮುಖೇನ ಶಾಸ್ತ್ರಾರ್ಥವು ಉಪದೇಶ ರೂಪವಾಗಿರಲಿ, ಎಂಬ ಆಶಯದಿಂದ ಗೂಢವಾದ ಅರ್ಥವುಳ್ಳವುಗಳು. ಅವುಗಳ ಅರ್ಥವನ್ನು ಪ್ರಕರಣಾನುಗುಣವಾಗಿ ಅನ್ವಯಿಸಬೇಕೇವಿನಾ ಬರೀ ವ್ಯುತ್ಪತ್ತಿಯ ಮೂಲಕ ತೋರಿಬರುವ ಅರ್ಥಗಳನ್ನು ಹೇಳಿಬಿಟ್ಟರೆ ಸಾಮಂಜಸ್ಯಕ್ಕೆ ವಿರೋಧವು. ಕುರು ಕರ್ಮೈವ - ಕರ್ಮಯೋಗ ವನ್ನೇ ಮಾಡು ಎಂದು ಹೇಳಿ ಕರ್ಮಯೋಗದ ಸ್ವರೂಪವನ್ನು ಹೇಳುವ ಸಂದರ್ಭದಲ್ಲಿ ಅವು ಕರ್ಮಯೋಗಕ್ಕೆ ಸೇರಿದುದಾಗಿ ಅರ್ಥ ಹೇಳಬೇಕೇವಿನಾ, ವಿಕರ್ಮವೆಂದರೆ ವಿರುದ್ಧಕರ್ಮವೆಂದೂ, ಅಕರ್ಮವೆಂದರೆ ಕರ್ಮಾಭಾವವೆಂದೂ ಅರ್ಥಮಾಡಿದರೆ, ಅಪ್ರಸ್ತುತ ವಿಷಯವಾಗುವದಿಲ್ಲವೇ? ಗಹನಾ ಕರ್ಮಣೋಗತಿಃ ಎಂದು ಉಪಸಂಹಾರಮಾಡಿ ಹೇಳುವ ಸಂದರ್ಭದಲ್ಲಿ ವಿರುದ್ಧಕರ್ಮ ಮತ್ತು ಕರ್ಮಾಭಾವಗಳ ವಿಷಯಗಳು ತಿಳಿಯದೇ ಇರುವದು ಕರ್ಮಯೋಗಸ್ವರೂಪಜ್ಞಾನಕ್ಕೆ ಹೇಗೆ ದುಜ್ಞಾನತೆಯನ್ನುಂಟುಮಾಡೀತು ? ಗಹನಾ ಕರ್ಮಣೋಗತಿಃ ಎಂದು ಮುಗಿಸಿರುವದ ರಿಂದ, ವಿಕರ್ಮ ಅಕರ್ಮಗಳೆರಡೂ ಕರ್ಮಯೋಗಕ್ಕೆ ಸೇರಿದವೆಂಬುದೂ, ಅವುಗಳ ವಿಷಯವನ್ನೂ ಚನ್ನಾಗಿ ತಿಳಿಯುವದೂ ಆವಶ್ಯಕವು ಎಂಬುದೂ ಸುವ್ಯಕ್ತವು. ಗಹನಾ ಕರ್ಮಣೋ ಗತಿಃ ಎಂಬಲ್ಲಿ ಗತಿಶಬ್ದವು ಹಿಂದೆ ಹೇಳಿದ ಬೋದ್ಧವ್ಯಂ ಎಂಬ ಶಬ್ದದಲ್ಲಿ ತೋರುವ ಅರ್ಥವನ್ನೇ ಬೋಧಿಸುತ್ತದೆ. ॥೧೭॥

ಭಾಷ್ಯಾವತಾರಿಕೆಯ ಅರ್ಥವು :—ಕರ್ಮಾಕರ್ಮಣೋಃ - ಕರ್ಮಯೋಗದಲ್ಲೂ, ಅದಕ್ಕೆ ಸಂಬಂಧಿಸಿದ ಜ್ಞಾನದಲ್ಲೂ, ಬೋದ್ಧವ್ಯಂ-ತಿಳಿಯಬೇಕಾದ ಅಂಶವನ್ನು ಆಹ - ಹೇಳುತ್ತಾರೆ. ಹಿಂದೆ ಕರ್ಮಯೋಗಕ್ಕೆ ಸೇರಿದವು ಎರಡು ಎಂದು ಹೇಳಲ್ಪಟ್ಟವು. ವಿಕರ್ಮವು - ನಿತ್ಯ ನೈಮಿತ್ತಿಕ ಕಾಮ್ಯ ಕರ್ಮಗಳೂ ಮತ್ತು ಧನಾರ್ಜನಾದಿ ಐಹಿಕ ಕರ್ಮಗಳೂ, ಅಕರ್ಮ - ಕರ್ಮಯೋಗಕ್ಕೆ ಬೇಕಾದ ಆತ್ಮಯಾಥಾತ್ಮ್ಯಜ್ಞಾನವು. ಇವು ಎರಡು ವಿಶೇಷಣಗಳಿಂದಲೂ ಸೇರಿದುದು ಕರ್ಮ ಯೋಗವು. ಹೀಗೆ ಈ ಮೂರುಗಳ ವಿಷಯಗಳಲ್ಲೂ ತಿಳಿಯತಕ್ಕ ಅಂಶಗಳಿರುವಾಗ, ವಿಕರ್ಮ ವನ್ನು ಬಿಟ್ಟು, ಕರ್ಮಾಕರ್ಮಗಳೆರಡರ ವಿಷಯ ಮಾತ್ರವೇ ಏಕೆ ಹೇಳಲ್ಪಡುತ್ತದೆಂದರೆ—ಈ ವಿಕರ್ಮದ ವಿಷಯದಲ್ಲಿ ಬೋದ್ಧವ್ಯಾಂಶವು ಹಿಂದೆ "ವ್ಯವಸಾಯಾತ್ಮಿಕಾಬುದ್ಧಿಃ" ಎಂಬಲ್ಲಿ ಹಿಂದೆಯೇ ಚನ್ನಾಗಿ ಉಪಪಾದಿತವಾಗಿರುವದರಿಂದ ಅದನ್ನು ಬಿಟ್ಟು, ಈಗ ಕರ್ಮಾಕರ್ಮ ಗಳ ವಿಷಯದಲ್ಲಿ ಮಾತ್ರ ಬೋದ್ಧವ್ಯಾಂಶವು ಹೇಳಲ್ಪಡುತ್ತದೆಂಬ ಭಾವವು.

ಮೂಲಕ್ಕೆ ಅರ್ಥವು :—ಕರ್ಮಣಿ - ಕರ್ಮಯೋಗಾನುಷ್ಠಾನ ನಡೆಯುವಾಗಲೇ, ಅಕರ್ಮ- ಕರ್ಮವಲ್ಲದುದು ಜ್ಞಾನವು, ಆತ್ಮಯಾಥಾತ್ಮ್ಯಜ್ಞಾನವನ್ನು, ಯಃ - ಯಾವ ಮುಮುಕ್ಷುವು, ಪಶ್ಯೇತ್ - ನೋಡುವನೋ ಎಂದರೆ ಅನುಸಂಧಾನ ಮಾಡುವನೋ, ಮತ್ತು ಅಕರ್ಮಣಿ ಚ - ಆತ್ಮ ಯಾಥಾತ್ಮ್ಯ ಜ್ಞಾನವಿರುವಾಗಲೇ, ಕರ್ಮ-ಕರ್ಮ ಯೋಗಾನುಷ್ಠಾನವನ್ನು, ಯಃಪಶ್ಯೇತ್-

ಭಾ. ಅಕರ್ಮಶಬ್ದೇನಾತ್ರ ಕರ್ಮೇತರತ್ಪ್ರಸ್ತುತ ಮಾತ್ಮಜ್ಞಾನ ಮುಚ್ಯತೇ. ಕರ್ಮಣಿ ಕ್ರಿಯಮಾಣ ಏವಾತ್ಮಜ್ಞಾನಂ ಯಃ ಪಶ್ಯೇತ್, ಅಕರ್ಮಣಿ ಚ - ಆತ್ಮಜ್ಞಾನೇ ವರ್ತಮಾನ ಏವ ಯಃ ಕರ್ಮ ಪಶ್ಯೇತ್ ; ಕಿಮುಕ್ತಂ ಭವತಿ – ಕ್ರಿಯಮಾಣ ಮೇವ ಕರ್ಮಾತ್ಮಯಾಥಾತ್ಮ್ಯಾನುಸಂಧಾನೇನ ಜ್ಞಾನಾಕಾರಂ ಯಃ ಪಶ್ಯೇತ್, ತಚ್ಚ ಜ್ಞಾನಂ ಕರ್ಮಯೋಗಾಂತರ್ಗತತಯಾ ಕರ್ಮಾಕಾರಂ ಯಃ ಪಶ್ಯೇದಿತ್ಯುಕ್ತಂ ಭವತಿ; ಕ್ರಿಯಮಾಣೇ ಹಿ ಕರ್ಮಣಿ ಕರ್ತೃಭೂತಾತ್ಮಯಾಥಾತ್ಮ್ಯಾನುಸಂಧಾನೇನ ತದುಭಯಂ

---

ಯಾವನು ನೋಡುವನೋ ಎಂದರೆ ಅನುಷ್ಠಿಸುವನೋ, ಸಃ - ಅವನೇ, ಮನುಷ್ಯರಲ್ಲಿ ಬುದ್ಧಿವಂತನು, ಮತ್ತು ಸಃ - ಅವನೇ, ಯುಕ್ತಃ - ಯೋಗ್ಯನು ಎಂದರೆ ಯೋಗಾಭ್ಯಾಸದ ಮೂಲಕ ಉಪಾಯಾನುಷ್ಠಾನಮಾಡಿ ಮೋಕ್ಷಹೊಂದಲು ಅರ್ಹನು, ಸಃ - ಅವನೇ, ಕೃತ್ಸ್ನಕರ್ಮಕೃತ್-ಸಮಸ್ತ ಕರ್ಮಾನುಷ್ಠಾನವನ್ನೂ ತಿಳಿದವನು, ಕರ್ಮಯೋಗದ ಜ್ಞಾನಾಕಾರತೆ ಕರ್ಮಾಕಾರತೆಗಳೆರಡನ್ನೂ ತಿಳಿದವನು ಎಂಬ ತಾತ್ಪರ್ಯವು. ಇದರಿಂದ ಕರ್ಮಯೋಗದಲ್ಲಿ ಆತ್ಮಯಾಥಾತ್ಮ್ಯಜ್ಞಾನವೂ ಕರ್ಮಯೋಗಾನುಷ್ಠಾನವೂ ಒಟ್ಟಿಗೇ ಇರತಕ್ಕದ್ದೆಂಬುದು ಮುಖ್ಯಾಭಿಪ್ರಾಯವು.॥

ಭಾಷ್ಯಾರ್ಥವು:—ಹಿಂದಿನ ಶ್ಲೋಕದಲ್ಲಿ ಪ್ರತಿಜ್ಞಾವಾಕ್ಯರೂಪದಲ್ಲಿ ಬೋದ್ಧವ್ಯಾಂಶವು ಕರ್ಮ ಅಕರ್ಮ ವಿಕರ್ಮಗಳಲ್ಲೆಲ್ಲಾ ಉಂಟೆಂದು ಹೇಳಿದುದನ್ನೇ, ಈ ಶ್ಲೋಕದಿಂದ ಆರಂಭಿಸಿ ಅಂತಹ ಬೋದ್ಧವ್ಯಾಂಶವು ಯಾವುದೆಂಬುದನ್ನು ಉಪಪಾದಿಸಿ ಹೇಳುತ್ತಾರೆ.—ಅಕರ್ಮಶಬ್ದೇನ-ಅಕರ್ಮ ಶಬ್ದದಿಂದ, ಅತ್ರ - ಈ ಕರ್ಮಯೋಗವನ್ನುಪದೇಶಿಸುವ ಪ್ರಕರಣದಲ್ಲಿ, ಕರ್ಮೇತರತ್ – ಕರ್ಮಾನುಷ್ಠಾನಕ್ಕಿಂತ ಬೇರೆಯಾದುದು, ಪ್ರಸ್ತುತಂ - ಕರ್ಮಯೋಗಪ್ರಕರಣಕ್ಕೆ ಬೇಕಾದುದು, ಆತ್ಮಜ್ಞಾನಂ - ಆತ್ಮಯಾಥಾತ್ಮ್ಯ ಜ್ಞಾನವು, ಉಚ್ಯತೇ - ಹೇಳಲ್ಪಡುತ್ತದೆ, ಕರ್ಮಣಿ - ಮೂಲದ ಕರ್ಮಣಿ ಎಂಬುದಕ್ಕೆ, ಕರ್ಮಣಿಕ್ರಿಯಮಾಣೇ ಏವ ಎಂದು ವ್ಯಾಖ್ಯಾನವು, ಕರ್ಮಯೋಗದ ಕರ್ಮವು ಅನುಷ್ಠಿಸಲ್ಪಡುವಾಗಲೇ, ಆತ್ಮಜ್ಞಾನಂ ಯಃ ಪಶ್ಯೇತ್ - ಆತ್ಮಯಾಥಾತ್ಮ್ಯ ಜ್ಞಾನವನ್ನು ಯಾವನು ನೋಡುವನೋ, ಹಾಗೆಯೇ, ಅಕರ್ಮಣಿ ಚ ಆತ್ಮಜ್ಞಾನೇ ವರ್ತಮಾನಏವ-ಆತ್ಮಯಾಥಾತ್ಮ ಜ್ಞಾನವಿರುವಾಗಲೇ, ಯಃ ಕರ್ಮ ಪಶ್ಯೇತ್-ಯಾವನು ಕರ್ಮವನ್ನು ನೋಡುವನೋ ಎಂದರೆ ಅನುಷ್ಠಿಸುವನೋ; ಎಂದರೆ ಕರ್ಮಯೋಗದಲ್ಲಿ ಜ್ಞಾನಾಕಾರತೆಯೂ ಕರ್ಮಾಕಾರತೆಯೂ ಎರಡೂ ಯಾವನಿಗೆ ಉಂಟೋ ಎಂಬ ಭಾವವು; ಹೀಗೆಂದರೇನೆಂಬುದನ್ನು ವಿವರಿಸುತ್ತಾರೆ, ಕಿಮುಕ್ತಂ ಭವತಿ - ಹೀಗೆ ಹೇಳಿದುದರಭಿಪ್ರಾಯವೇನೆಂದರೆ—ಕ್ರಿಯಮಾಣ ಮೇವ ಕರ್ಮ - ಮಾಡಲ್ಪಟ್ಟ ಯಾವ ಕರ್ಮ ಉಂಟೋ ಅದು, ಆತ್ಮಯಾಥಾತ್ಮ್ಯಾನುಸಂಧಾನದಿಂದ, ಜ್ಞಾನಾಕಾರಂ - ಜ್ಞಾನದಾಕಾರವುಳ್ಳದ್ದು ಎಂದರೆ ಜ್ಞಾನವಿಶಿಷ್ಟವಾದುದೆಂದು, ಯಃ ಪಶ್ಯೇತ್ - ಯಾವನು ತಿಳಿಯುವನೋ, ಮತ್ತು ತಚ್ಚ ಜ್ಞಾನಂ - ಆ ಆತ್ಮಯಾಥಾತ್ಮ್ಯಜ್ಞಾನವೇ, ಕರ್ಮಯೋಗಾನ್ತರ್ಗತತಯಾ - ಕರ್ಮಯೋಗದಲ್ಲಿ ಅಡಗಿರುವದರಿಂದ, ಕರ್ಮಾಕಾರಂ ಯಃ ಪಶ್ಯೇತ್ - ಕರ್ಮಾಕಾರವಾದುದೆಂದು ಎಂದರೆ ಕರ್ಮವಿಶಿಷ್ಟವಾದುದೆಂದೂ ಯಾವನು ತಿಳಿಯುವನೋ, ಇತ್ಯುಕ್ತಂ ಭವತಿ - ಎಂದು ಹೇಳಿದಂತಾಯಿತು. ಕೆಲವರು ಜ್ಞಾನ ಉಂಟಾದಾಗ ಕರ್ಮವಿರಲು ಸಾಧ್ಯವಿಲ್ಲವೆಂದು ಅಭಿಪ್ರಾಯಪಡುವರು; ಆ ಅಭಿಪ್ರಾಯದ ನಿರಸನಕ್ಕಾಗಿಯೇ ಏವ ಎಂಬ ಅವಧಾರಣಾಪ್ರಯೋಗವು. ಕರ್ಮಾನುಷ್ಠಾನ ಕಾಲದಲ್ಲೇ ಜ್ಞಾನವೂ ಇರಬಹುದು. ಜ್ಞಾನವಿರುವಾಗಲೇ ಕರ್ಮಾನುಷ್ಠಾನವಿರಬಹುದೆಂದು ತೋರ್ಪಡಿಸಿದರು. ಕರ್ಮಯೋಗದಲ್ಲಿ ಫಲಾಭಿಸಂಧಿರಹಿತವಾದ ನಿತ್ಯನೈಮಿತ್ತಿಕ ಕಾಮ್ಯ

ಕರ್ಮಗಳೂ ಮತ್ತು ಫಲಾಭಿಸಂಧಿ ರಹಿತವಾದ ಯಜ್ಞ ದಾನ ತಪಸ್ಸೇ ಮೊದಲಾದವುಗಳೂ ಇವುಗಳ ಅನುಷ್ಠಾನವೂ,ಅದರೊಂದಿಗೆ ಅನುಷ್ಠಾತಾವಾದ ಆತ್ಮಾವಿನ ಯಾಥಾತ್ಮ್ಯ ಜ್ಞಾನವೂ,ಎರಡೂ ಇರಬೇಕಾದುದು ಆವಶ್ಯಕವೆಂಬ ಭಾವವು. ಇದನ್ನೇ ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ. ಕರ್ಮಯೋಗಕ್ಕೆ ಜ್ಞಾನಾಕಾರತೆಯೂ ಕರ್ಮಾಕಾರತೆಯೂ ಎರಡೂ ಉಂಟಾಗುವ ಬಗೆ ಹೇಗೆ ಎಂದರೆ ತಿಳಿಸುತ್ತಾರೆ. ಕ್ರಿಯಮಾಣೇಹಿ ಕರ್ಮಣಿ - ಕರ್ಮಯೋಗದ ಕರ್ಮಗಳು ಅನುಷ್ಠಿಸಲ್ಪಡುವಾಗಲೇ, ಕರ್ತೃಭೂತಾತ್ಮಯಾಥಾತ್ಮ್ಯಾನುಸಂಧಾನೇನ - ಕರ್ತಾವಾದ ಆತ್ಮನ ಯಾಥಾತ್ಮ್ಯಯ ಅನುಸಂಧಾನದಿಂದ, ತದುಭಯಂ - ಕರ್ಮಕ್ಕೆ ಜ್ಞಾನವಿಶಿಷ್ಟತೆಯೂ ಜ್ಞಾನಕ್ಕೆ ಕರ್ಮವಿಶಿಷ್ಟತೆಯೂ, ಸಂಪನ್ನಂ ಭವತಿ - ಸೇರಿದುದು ಎಂದರೆ ಸಿದ್ಧಿಸಿದುದಾಗುತ್ತದೆ. ಮುಂದೆ ಮೂಲದ ಉತ್ತರಾರ್ಧಕ್ಕೆ ವ್ಯಾಖ್ಯಾನಬರೆಯುತ್ತಾರೆ. ಏವಂ - ಈಪ್ರಕಾರವಾಗಿ, ಆತ್ಮಯಾಥಾತ್ಮ್ಯಾನುಸಂಧಾನಗರ್ಭಂ - ಆತ್ಮ ಯಾಥಾತ್ಮ್ಯಾನುಸಂಧಾನವನ್ನು ಒಳಗೊಂಡಿರುವದೆಂದು, ಕರ್ಮಯಃಪಶ್ಯೇತ್ - ಕರ್ಮಾನುಷ್ಠಾನವನ್ನು ಯಾವನು ತಿಳಿಯುವನೋ, ಸ ಬುದ್ಧಿಮಾನ್ - ಮತುಪ್ ಪ್ರತ್ಯಯಸ್ವಾರಸ್ಯದಿಂದ ಅವನೇ ಪ್ರಕೃಷ್ಟ ಬುದ್ಧಿವಂತನು ಎಂದರೆ, ಕೃತ್ಸ್ನ ಶಾಸ್ತ್ರಾರ್ಥವಿತ್-ಸಮಸ್ತ ಶಾಸ್ತ್ರಾಭಿಪ್ರಾಯವನ್ನೂ ತಿಳಿದವನು, ಮನುಷ್ಯರಲ್ಲಿ ಸಃ ಯುಕ್ತಃ- ಅವನೇ ಯೋಗ ನಿಷ್ಪತ್ತಿಯಿಂದ ಮೋಕ್ಷಕ್ಕೆ ಅರ್ಹನು, ಯುಕ್ತಃ - ಯೋಗ್ಯನು, ಅರ್ಹನು ಎಂದು ಇಷ್ಟು ಮಾತ್ರ ಅರ್ಥವು; ಪ್ರಕರಣಾತ್ ಯಾವುದಕ್ಕೆ ಅರ್ಹನೆಂದರೆ ಮೋಕ್ಷಶಾಸ್ತ್ರವಾದುದರಿಂದ, ಮೋಕ್ಷಾಯಾರ್ಹಃ ಎಂದು ವ್ಯಾಖ್ಯಾನಮಾಡಿರುತ್ತಾರೆ; ಸ ಏವ - ಅವನೇ, ಕೃತ್ಸ್ನಕರ್ಮಕೃತ್ - ಎಂದರೆ ಕೃತ್ಸ್ನ ಶಾಸ್ತ್ರಾರ್ಥಕೃತ್ - ಸಮಸ್ತ ಶಾಸ್ತ್ರಾಭಿಪ್ರಾಯಾನುಸಾರ ಅನುಷ್ಠಿಸುವನು, ಸ ಬುದ್ಧಿಮಾನ್, ಸಯುಕ್ತಃ ಎಂದು ಮೂಲದಲ್ಲಿ. ಎರಡು ವಾಕ್ಯವಾಗಿ ಹೇಳಲ್ಪಟ್ಟಿರುವದರಿಂದ, ಮುಂದೆ ಇರುವ ಕೃತ್ಸ್ನ ಕರ್ಮಕೃತ್ ಎಂಬುದನ್ನೂ ಮೂರನೆಯ ವಾಕ್ಯವಾಗಿ, ಸ ಏವ ಕೃತ್ಸ್ನಕರ್ಮಕೃತ್ ಎಂದು ಅನ್ವಯಿಸುವದು ಯುಕ್ತವು,ಜ್ಞಾನದಿಂದ ಕೂಡಿದ ಅನುಷ್ಠಾನವೇ ಅನುಷ್ಠಾನವೆಂದು ಸ್ಥಾಪಿಸಿ ಹೇಳುವದಕ್ಕಾಗಿ ತಚ್ಛಬ್ದದ ಆವೃತ್ತಿಯು, ಸಬುದ್ಧಿಮಾನ್ ಸಯುಕ್ತಃ, ಸ ಕೃತ್ಸ್ನಕರ್ಮಕೃತ್; ಹೀಗೆ ಈ ಅಭಿಪ್ರಾಯದಲ್ಲೇ ಕವಿಗಳ ಪ್ರಯೋಗಗಳು ಅನೇಕ ಉಂಟು; "ಸ ಶ್ಲಾಘ್ಯಸ್ಸಗುಣೀ ಧನ್ಯಸ್ಸಕುಲೀನಸ್ಸಬುದ್ಧಿಮಾನ್। ಸಶೂರಸ್ಸ ಚ ವಿಕ್ರಾಂತೋ ಯಂ ತ್ವಂ ದೇವಿ ನಿರೀಕ್ಷಸೇ" ಓ ಲಕ್ಷ್ಮಿಯೇ ಯಾವನನ್ನು ನೀನು ದಿವ್ಯಕಟಾಕ್ಷದಿಂದ ನೋಡುತ್ತೀಯೋ, ಅವನೇ ಶ್ಲಾಘ್ಯನು, ಅವನೇ ಗುಣವಂತನು, ಅವನೇ ಧನ್ಯನು, ಅವನೇ ಸತ್ಕುಲಪ್ರಸೂತನು, ಇತ್ಯಾದಿ. ಈ ಸಂದರ್ಭದಲ್ಲಿ ಪೂರ್ವಪಕ್ಷ ತರಬಹುದೇನೆಂದರೆ—ಹೀಗೆ ಎರಡೂ ಒಟ್ಟಿಗೆ ಇರತಕ್ಕದ್ದು ಅಯುಕ್ತವಲ್ಲವೋ, (೧) ಕರ್ಮಾನುಷ್ಠಾನಮಾಡುವಾಗ, ಆತ್ಮಜ್ಞಾನವು ಏತಕ್ಕೆ ? (೨) ಕರ್ಮಾನುಷ್ಠಾನ ಮಾಡುವಾಗ ಕರ್ಮದ ವಿಷಯದಲ್ಲಿ ಜ್ಞಾನವಿರುವಾಗ ಆತ್ಮಜ್ಞಾನವು ಕಷ್ಟತರವಲ್ಲವೇ? (೩) ಜ್ಞಾನವು ಆತ್ಮ ಯಾಥಾತ್ಮ್ಯವಿಷಯದಲ್ಲಿ ಪ್ರವರ್ತಿಸಿದರೆ ಆಗ ಕರ್ಮಾನುಷ್ಠಾನವು ಹೇಗೆ ಸರಿಯಾಗಿ ನಡೆದೀತು ? (೪) ಜ್ಞಾನವು ಒಂದು ವಿಷಯದಲ್ಲಿ ಪ್ರವರ್ತಿಸಿದರೆ ಇನ್ನೊಂದರಲ್ಲಿ ಪ್ರವೃತ್ತಿಯಿಲ್ಲವಾಗುತ್ತದೆ. ಇಂತಹ ಪೂರ್ವಪಕ್ಷಗಳ ಸಮಾಧಾನವಾಗಿ ಕೇಳಬೇಕಾಗುತ್ತದೇನೆಂದರೆ, ಎರಡೂ ಏಕಕಾಲದಲ್ಲಿರಲು ಅಶಕ್ಯವೆಂದರೆ, ಶಾಸ್ತ್ರರೀತ್ಯಾ ಅಶಕ್ಯವೇ ಅಥವಾ ಬೇರೇ ವಿಧವಾಗಿಯೇ ಎಂದೇ ವಿಕಲ್ಪಿಸಿದರೆ, ಜ್ಞಾನ ವಿಶಿಷ್ಟಕರ್ಮವೇ ಉಪಾಯಸಾಧನವೆಂದು ವಿಧಿಸಿರುವದರಿಂದ ಏಕಕಾಲದಲ್ಲಿ ಎರಡೂ ಇರಲು ಅಭ್ಯಂತರವಿಲ್ಲವೆಂದೇರ್ಪಡುತ್ತದೆ. ಇದರಿಂದ, ಪರಸ್ಪರ ಅವು ನಿರಪೇಕ್ಷವಾದುವು, ಮತ್ತು ಒಂದು ಇನ್ನೊಂದರ ಪ್ರವೃತ್ತಿಗೆ ಕುಂಠಕವು ಎಂಬ ಆಕ್ಷೇಪಗಳು ನಿರಸ್ತವಾದವು. ಶಾಸ್ತ್ರಾರೀತ್ಯಾ ಅಲ್ಲದೆ

**ಭಾ. ಸಂಪನ್ನಂ ಭವತಿ. ಏವಮಾತ್ಮ ಯಾಥಾತ್ಮ್ಯಾನುಸಂಧಾನಗರ್ಭಂ ಕರ್ಮ ಯಃ ಪಶ್ಯೇತ್, ಸ ಬುದ್ಧಿಮಾನ್ - ಕೃತ್ಸ್ನ ಶಾಸ್ತ್ರಾರ್ಥವಿತ್, ಮನುಷ್ಯೇಷು ಸ ಯುಕ್ತಃ - ಮೋಕ್ಷಾಯಾರ್ಹಃ, ಸ ಏವ ಕೃತ್ಸ್ನ ಕರ್ಮಕೃತ್ - ಕೃತ್ಸ್ನಶಾಸ್ತ್ರಾರ್ಥಕೃತ್ ||೧೮||**

ಬೇರೇ ಕಾರಣದಿಂದ ಎರಡೂ ಒಟ್ಟಿಗಿರಲಸಾಧ್ಯವೆಂದರೆ, ಸ್ವರೂಪಭೇದದಿಂದ ಎರಡೂ ಒಟ್ಟಿಗಿರಲಸಾಧ್ಯವೇ ? ಇಲ್ಲವೇ ಪರಸ್ಪರ ವಿರೋಧಭಾವದಿಂದಲೇ ? ಎಂದು ಪ್ರಶ್ನಿಸಬೇಕಾಗುತ್ತದೆ. ಮೊದಲನೆಯ ಕಾರಣವಲ್ಲವು, ಏಕೆಂದರೆ ಏಕಕಾಲದಲ್ಲೇ ನೋಡುವದು, ಮಾತಾಡುವದು ಎಲ್ಲಾ ಸಾಧ್ಯವಾಪುದರಿಂದ ; ವಿರುದ್ಧ ಭಾವದಿಂದ ಎಂದರೆ ಗಮನಸ್ಥಾನವೆರಡಕ್ಕೂ ಹೇಗೆ ವಿರೋಧವಿಲ್ಲವೋ ಹಾಗೆ ಜ್ಞಾನ ಕರ್ಮಗಳಿಗೆ ವಿರೋಧವಿಲ್ಲವು. ಇದೂ ಅಲ್ಲದೆ ಕರ್ಮಾನುಷ್ಠಾನವಲ್ಲಿ ಆತ್ಮಯಾಥಾತ್ಮ್ಯಜ್ಞಾನದ ಉಪಯೋಗವೇನು ? ಎಂದು ಕೇಳಬಹುದು. ಒಂದು ಕಾರ್ಯಸಿದ್ಧಿಗಾಗಿ ಮಾಡುವ ಪ್ರಯತ್ನಗಳೊಂದಿಗೆ ಈಶ್ವರ ಧ್ಯಾನವೂ ಸಹ ಹೇಗೆ ಉಪಯೋಗವೋ ಹಾಗೆ ಎಂಬ ಭಾವವು. ಸರ್ಪದಷ್ಟನಾದವನಿಗೆ ಚಿಕಿತ್ಸೆಯೊಂದಿಗೆ ಗರುಡಧ್ಯಾನವೂ ಸಹ ಹೇಗೆ ಸಮಂಜಸವೋ ಹಾಗೆಯೇ ಎಂಬ ಭಾವವು. ಮುಂದಿನ ಶ್ಲೋಕದಲ್ಲಿ ಕರ್ಮಾನುಷ್ಠಾನದೊಂದಿಗೆ ಆತ್ಮ ಯಾಥಾತ್ಮ್ಯಜ್ಞಾನವು ಹೇಗೆ ಕೂಡುತ್ತದೆಂದು ಹೇಳುವ ಸಂದರ್ಭದಲ್ಲಿ ಈ ಜ್ಞಾನದಿಂದಾಗುವ ಪ್ರಯೋಜನವೂ ಹೇಳಲ್ಪಡುತ್ತದೆ. **ಏವಂ** - ಹೀಗೆ, **ಆತ್ಮ ಯಾಥಾತ್ಮ್ಯಾನುಸಂಧಾನಗರ್ಭಂ** - ಆತ್ಮ ಯಾಥಾತ್ಮ್ಯಾನುಸಂಧಾನವನ್ನು ಒಳಗೊಂಡಿರುವದು, **ಕರ್ಮ** - ಕರ್ಮಯೋಗವು ಎಂದು, **ಯಃ ಪಶ್ಯೇತ್** - ಯಾವನು ತಿಳಿಯುವನೋ, **ಸಃ** - ಅವನು, **ಬುದ್ಧಿಮಾನ್** - ಪ್ರಕೃಷ್ಟವಾದ ಬುದ್ಧಿಯುಳ್ಳವನು, ಎಂದರೆ, **ಕೃತ್ಸ್ನ ಶಾಸ್ತ್ರಾರ್ಥವಿತ್** - ಸಮಸ್ತ ಶಾಸ್ತ್ರಾರ್ಥವನ್ನೂ ತಿಳಿದವನು, **ಮನುಷ್ಯೇಷು** - ಮನುಷ್ಯರಲ್ಲಿ, **ಸಃ** - ಅವನು, **ಯುಕ್ತಃ** – ಯೋಗ್ಯನು, ಯಾವುವಕ್ಕೆ ಯೋಗ್ಯನೆಂದು ತಿಳಿಸುವದಕ್ಕಾಗಿ, **ಮೋಕ್ಷಾಯಾರ್ಹಃ**-ಮೋಕ್ಷವನ್ನು ಭಕ್ತಿಮಾರ್ಗದಮೂಲಕ ಹೊಂದಲು ಯೋಗ್ಯನು. **ಸ ಏವ** - ಆತನೇ, ಸಃ ಎಂಬ ತಚ್ಛಬ್ದವು ಮೂಲದಲ್ಲಿ ಭಕ್ತಿಮಾನ್, ಯುಕ್ತಃ ಎಂಬೆರಡು ಪದಗಳೊಂದಿಗೂ ಪ್ರಯೋಗಿಸಲ್ಪಟ್ಟಿರುವದರಿಂದ, ಮೂರನೆಯ ಪದವಾದ, ಕೃತ್ಸ್ನಕರ್ಮಕೃತ್ ಎಂಬುವದರೊಂದಿಗೂ ಉಪಯೋಗಿಸತಕ್ಕದ್ದೆಂದು ಇಲ್ಲಿ ಸೂಚಿಸಿರುತ್ತಾರೆ, **ಕೃತ್ಸ್ನ ಕರ್ಮಕೃತ್** ಎಂದರೆ **ಕೃತ್ಸ್ನ ಶಾಸ್ತ್ರಾರ್ಥಕೃತ್** - ಸಮಸ್ತ ಶಾಸ್ತ್ರಾರ್ಥವನ್ನೂ ಅನುಷ್ಠಾನಕ್ಕೆ ತಂದಿರುವವನು, ಆತನು ಬುದ್ಧಿಮಾನ್ ಕೃತ್ಸ್ನ ಕರ್ಮಕೃತ್ ಎಂದು ಹೇಳಿರುವದರಿಂದ, ಜ್ಞಾನಾನುಷ್ಠಾನಗಳೆರಡನ್ನೂ ಹೊಂದಿದವನೆಂಬ ಭಾವವು, ಆದುದರಿಂದಲೇ ಆತನು **ಸ ಯುಕ್ತಃ** - ಭಕ್ತಿಯೋಗದ್ವಾರಾ ಮೋಕ್ಷವನ್ನು ಹೊಂದಲು ಯೋಗ್ಯನು ಅರ್ಹನು ಎಂಬ ತಾತ್ಪರ್ಯವು. ಕರ್ಮಯೋಗದಲ್ಲಿ ಜ್ಞಾನಭಾಗವೂ ಜ್ಞಾನಯೋಗದಲ್ಲಿ ಕರ್ಮವೂ ಉಂಟೆಂದೂ ಹೀಗೆ ಅನ್ಯೋನ್ಯ ಸಂಬಂಧವಿದೆ ಎಂದು ಹೇಳಿದುದರಿಂದ ಎರಡೂ ಭಿನ್ನ ಶಾಸ್ತ್ರಾರ್ಥಗಳು ಹೇಳಲ್ಪಟ್ಟಿವೆಂಬ ಕೆಲವರ ಭಾವನೆಯು ಸರಿಯಲ್ಲವು; ಏಕೆಂದರೆ ಈ ಎರಡೂ ಉಪಾಯವಾದ ಭಕ್ತಿಯೋಗಕ್ಕೆ ಸಾಧನಗಳು, ಅವೆರಡೂ ಪರಸ್ಪರ ಸಹಾಯಕಗಳೇ ವಿನಾ ಪರಸ್ಪರ ನಿರಾಕರಿಸುವಂತವುಗಳಲ್ಲವು. ಹಾಗೆಯೇ ಕೊನೆಗೆ ಉಪಾಯಾನುಷ್ಠಾನಾವಸ್ಥೆಯಲ್ಲೂ ಜ್ಞಾನ ಕರ್ಮಭಾಗಗಳಿಗೆ ಪರಸ್ಪರ ವೈತ್ರಿಯೇ ವಿನಾ ಪರಸ್ಪರ ಶತೃಭಾವವಿಲ್ಲವು. ಪಕ್ಷಿಯ ಗಮನಕ್ಕೆ ಹೇತುವಾಗಿ ಹೇಗೆ ಎರಡು ರೆಕ್ಕೆಗಳೋ ಹಾಗೆಯೇ ಉಪಾಯ ಸಾಧನಭೂತವಾದ ಕರ್ಮಯೋಗದಲ್ಲೂ ಕರ್ಮಜ್ಞಾನಗಳು ಮಿಳಿತವಾಗಿ ಸಹಾಯಭೂತವಾದುವು. ಹಾಗೆಯೇ ಮೋಕ್ಷಕ್ಕೂ ಸಹ ಎರಡೂ ಸಹಾಯವೆಂದರೆ ಯಾದವ

ಭಾ. ಅವ- ಪ್ರತ್ಯಕ್ಷೇಣ ಕ್ರಿಯಮಾಣಸ್ಯ ಕರ್ಮಣೋ ಜ್ಞಾನಾಕಾರತಾ ಕಥಮುಪಪದ್ಯತ ಇತ್ಯತ್ರಾಹ—

ಮೂ. ಯಸ್ಯ ಸರ್ವೇ ಸಮಾರಂಭಾಃ ಕಾಮ ಸಙ್ಕಲ್ಪ ವರ್ಜಿತಾಃ।
ಜ್ಞಾನಾಗ್ನಿ ದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ॥ ೧೯.

ಪ್ರಕಾಶ ಸಿದ್ಧಾನ್ತರೀತ್ಯಾ ಎರಡೂ ಉಪಾಯುಗಳೋ ಎಂದರೆ ಕರ್ಮವು ಅಙ್ಗವು ಜ್ಞಾನರೂಪ ಉಪಾಸನವು ಅಙ್ಗಿಯು. ಹೀಗೆ ಅಙ್ಗಾಙ್ಗಿಭಾವದಲ್ಲಿ ಸಹಾಯಗಳು. ಇದಕ್ಕೆ ಪ್ರಮಾಣಗಳು-"ಕಷಾಯೇ ಕರ್ಮಭಿಃಪಕ್ವೇ ತತೋಜ್ಞಾನಂ ಪ್ರವರ್ತತೇ", ತತೋಮಾಂ ತತ್ತ್ವತೋಜ್ಞಾತ್ವಾ ವಿಶತೇ ತದನನ್ತರಮ್"(ಗೀ.೧೮-೫೫) ಆ ಕಾರಣದಿಂದ ಶ್ರುತಪ್ರಕಾಶಿಕೆಯಲ್ಲಿ ಭಕ್ತಿ ಜನ್ಯಜ್ಞಾನಸ್ಯೇವಾವ್ಯವಹಿತೋಪಾಯತ್ವ ಮವಗನ್ಯತೇ" ಉಪಾಸನವೇ ಉಪಾಯವೆಂದು ಸ್ಫುಟವಾಗಿ ಹೇಳಿರುವದರಿಂದ ಕರ್ಮಯೋಗದಿಂದ ಸಾಧ್ಯವಾದ ಭಕ್ತಿಯೋಗವೇ ಉಪಾಯವಾಗಿ ಏಕಶಾಸ್ತ್ರವು. ಇದರಿಂದ ಕರ್ಮಯೋಗವೂ ಜ್ಞಾನಯೋಗವೂ ಸಹ ಉಪಾಯಗಳು ಎಂಬ ವಾದವು ಸಂಪೂರ್ಣವಾಗಿ ನಿರಸ್ತವು. ಹೀಗೆ "ಏಕಶಾಸ್ತ್ರ" ವೆಂದು ಈ"ಯೋಗಶಾಸ್ತ್ರ"ವನ್ನು ಶ್ರೀ ಯತಿವರ್ಯರು ಹೇಳಿರುವದರಿಂದ, "ಕರ್ಮಜ್ಞಾನ ಮುಪಾಸನಂಚ" ಎಂಬ ಶ್ಲೋಕದಲ್ಲಿ (ಉಪಾಯ ವಿಭಾಗ. ಪುಟ ೯೧೦) ಈ ಮೂರೂ ಉಪಾಯಗಳೆಂದು ಶ್ರೀ ದೇಶಿಕರವರು ಶ್ರೀ ಯತಿವರ್ಯರ ಅಭಿಪ್ರಾಯಕ್ಕೆ ವಿರುದ್ಧವಾಗಿ ಹೇಳಿದರೆಂದು ಕೆಲವರು ಅನ್ವಯಿಸುವದು ತುಂಬಾ ಅನ್ಯಾಯವಾದ ವಿಷಯವು. "ಸ್ವಧರ್ಮ ಜ್ಞಾನವೈರಾಗ್ಯಸಾಧ್ಯಭಕ್ತ್ಯೇಕ ಗೋಚರಃ" ಎಂಬ ಶ್ರೀ ಯಾಮುನೇಯ ದಿವ್ಯಸೂಕ್ತಿಗೂ ವಿರುದ್ಧವು.

ಭಾಷ್ಯಾವತಾರಿಕೆಯ ಅರ್ಥವು :—ಪ್ರತ್ಯಕ್ಷಕ್ಕೆ ಸಾಧ್ಯವಿಲ್ಲದುದನ್ನು ಅನುಮಾನದಿಂದಲಾಗಲಿ ಶಾಸ್ತ್ರಬಲದಿಂದಾಗಲಿ ಸಾಧಿಸಬಹುದು. ಆದರೆ ಪ್ರತ್ಯಕ್ಷವು ಪ್ರಬಲವು. ಪ್ರತ್ಯಕ್ಷವಿಷಯದಲ್ಲಿ ಶಾಸ್ತ್ರವು ಅನ್ಯಥಾ ಹೇಳಿದರೂ ಒಪ್ಪತಕ್ಕದ್ದು ಅಶಕ್ಯವು. ಹುಲ್ಲು ಕೆಂಪಗಿದೆ ಎಂದು ಶಾಸ್ತ್ರದಲ್ಲಿ ಹೇಳಿದ್ದರೂ ಒಪ್ಪತಕ್ಕದ್ದಲ್ಲವಾಗುತ್ತದೆ; ಏಕೆಂದರೆ ಹುಲ್ಲು ಹಸರಾಗಿ ಪ್ರತ್ಯಕ್ಷಕ್ಕೆ ತೋರಿ ಬರುತ್ತದೆ ಯಾದುದರಿಂದ. ಆದುದರಿಂದ ಕಣ್ಣಿಗೆ ಕಾಣುವದೆಲ್ಲಾ ಮಿಥ್ಯಾ! ಎಂಬ ಮಾತನ್ನು ಒಪ್ಪುವದು ಸಾಧ್ಯವಲ್ಲವು. ಹಾಗೆಯೇ ಕರ್ಮಯೋಗದ ಪ್ರವೃತ್ತಿಗಳೆಲ್ಲಾ ಪ್ರತ್ಯಕ್ಷಸಿದ್ಧವಾದವುಗಳು, ಅವುಗಳಿಗೆ ಜ್ಞಾನಾಕಾರತೆ ಹೇಗೆ? ಏನೊಂದೂ ತೋರಿಬರುವದಿಲ್ಲವಲ್ಲಾ ಎಂಬಾಕ್ಷೇಪಕ್ಕೆ ಮುಂದಿನ ಶ್ಲೋಕವು ಸಮಾಧಾನವನ್ನು ಹೇಳುತ್ತದೆಂದು ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಪ್ರತ್ಯಕ್ಷೇಣ ಕ್ರಿಯಮಾಣಸ್ಯ - ಪ್ರತ್ಯಕ್ಷದಲ್ಲಿ ಮಾಡುತ್ತಲೇ ಇರುವ, ಕರ್ಮಣಃ - ಕರ್ಮಯೋಗಕ್ಕೆ ಜ್ಞಾನಾಕಾರತೆಯು, ಕಥಮುಪಪದ್ಯತೆ – ಹೇಗೆ ಸಂಭವಿಸುತ್ತದೆ? ಇತ್ಯತ್ರಾಹ - ಎಂಬ ಪೂರ್ವಪಕ್ಷಕ್ಕೆ ಸಮಾಧಾನವನ್ನು ಹೇಳುತ್ತಾರೆ. ಹಿಂದೆ ಸ್ವಲ್ಪಕಾಲಕ್ಕೆ ಮುಂಚೆ ಮಾಡಲ್ಪಟ್ಟದುದಾದರೂ ಸ್ಮೃತಿರೂಪ ಜ್ಞಾನಾಕಾರತೆಯು ಉಂಟಾಗಬಹುದು. ಅದೂ ಕೂಡ ಇಲ್ಲವು ಎಂದು ತಿಳಿಸುವದಕ್ಕಾಗಿ, ಕ್ರಿಯಮಾಣಸ್ಯ ಕರ್ಮಭಿಃ ಎಂದು ಪ್ರಯೋಗಿಸಿರುತ್ತಾರೆ. ಕರ್ಮಯೋಗಾನುಷ್ಠಾನವಿರುವಾಗಲೇ ಜ್ಞಾನಾಕಾರವು ಹೇಗೆ? ಕರ್ಮವೂ ಜ್ಞಾನವೂ ಹೇಗೆ ಒಂದು ಆದೀತು? ಕರ್ಮಕ್ಕೆ ಜ್ಞಾನಾಕಾರತೆಯು ಹೇಗೆ? ಎಂದರೆ ಸಮಾಧಾನವನ್ನು ಹೇಳುತ್ತಾರೆ.

ಮೂಲಕ್ಕೆ ಅರ್ಥವು :—ಕರ್ಮಾನುಷ್ಠಾನಕಾಲದಲ್ಲೇ ಆತ್ಮಜ್ಞಾನವೂ, ಆತ್ಮಜ್ಞಾನವಿರುವಾಗಲೇ ಕರ್ಮಾನುಷ್ಠಾನವನ್ನು ಮಾಡುವವನು ಬುದ್ಧಿವರ್ನಾ ಎಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಅದು ಹೇಗೆ ಎಂದರೆ ಹೇಳುತ್ತಾರೆ:—ಕಾಮಸಙ್ಕಲ್ಪವರ್ಜಿತವಾದವು,

ಭಾ. ಯಸ್ಯ–ಮುಮುಕ್ಷೋಃ, ಸರ್ವೇ-ದ್ರವ್ಯಾರ್ಜನಾದಿ ಲೌಕಿಕ ಕರ್ಮಪೂರ್ವಕ ನಿತ್ಯನೈಮಿತ್ತಿಕ ಕಾಮ್ಯಕರ್ಮರೂಪ ಕರ್ಮಸಮಾರಂಭಾ, ಕಾಮವರ್ಜಿತಾಃ - ಫಲಸಙ್ಗರಹಿತಾಃ, ಸಙ್ಕಲ್ಪವರ್ಜಿತಾಶ್ಚ-ಪ್ರಕೃತ್ಯಾ ತದ್ಗುಣೈಶ್ಚಾತ್ಮಾನ ಮೇಕೀಕೃತ್ಯಾನುಸಂಧಾನಂ-ಸಙ್ಕಲ್ಪಃ, ಪ್ರಕೃತಿ ವಿಯುಕ್ತಾತ್ಮಸ್ವರೂಪಾನುಸಂಧಾನಯುಕ್ತತಯಾ ತದ್ರಹಿತಾಃ, ತಮೇವಂ ಕರ್ಮಕುರ್ವಾಣಂ ಪಣ್ಡಿತಂ ಕರ್ಮಾನ್ತರ್ಗತಾತ್ಮಯಾಥಾತ್ಮ್ಯಜ್ಞಾನಾಗ್ನಿನಾ ದಗ್ಧಪ್ರಾಚೀನ ಕರ್ಮಾಣ ಮಾಹು ಸ್ತತ್ವಜ್ಞಾಃ; ಅತಃ ಕರ್ಮಣೋ ಜ್ಞಾನಾಕಾರತ್ವಮುಪಪದ್ಯತೇ ॥೧೯॥

ಆತನ ಕರ್ಮಾನುಷ್ಠಾನಗಳು; ಇಂತಹ ಅನುಷ್ಠಾನವು ಆತ್ಮ ಯಾಥಾತ್ಮ್ಯಜ್ಞಾನಮೂಲವಾದುದೆಂದು ಹೇಳುತ್ತಾರೆ. ಯಸ್ಯ - ಯಾವ ಮೋಕ್ಷಾರ್ಥಿಗೆ, ಸರ್ವೇ ಸಮಾರಂಭಾಃ - ಸಮಸ್ತ ಕರ್ಮಯೋಗದ ಪ್ರವೃತ್ತಿಗಳೂ, ಕರ್ಮಯೋಗದ ಪ್ರವೃತ್ತಿಗಳಾದ ನಿತ್ಯನೈಮಿತ್ತಿಕ ಕಾಮ್ಯ ಕರ್ಮಗಳು ಮಾತ್ರವೇ ಅಲ್ಲದೆ, ದೇಹಯಾತ್ರಾದಿ ಸಮಸ್ತ ವಿಹಿತ ಲೌಕಿಕ ಕರ್ಮಗಳೂ ಸಹ, ಕಾಮಸಙ್ಕಲ್ಪ ವರ್ಜಿತಾಃ, ಕಾಮ - ಫಲಸಙ್ಗವೇನು, ಸಙ್ಕಲ್ಪ-ಸ್ವತಂತ್ರ ಕರ್ತೃತ್ವವೇನು ಇವುಗಳಿಂದ ಬಿಡಲ್ಪಟ್ಟವುಗಳಾಗಿವೆಯೋ ತಂ - ಅಂತಹ, ಪಂಡಿತಂ – ವಿಲಕ್ಷಣಜ್ಞಾನವುಳ್ಳ ಕರ್ಮಯೋಗಿಯನ್ನು, ಜ್ಞಾನಾಗ್ನಿದಗ್ಧ ಕರ್ಮಾಣಂ - ಆತ್ಮ ಯಾಥಾತ್ಮ್ಯಜ್ಞಾನವೆಂಬ ಅಗ್ನಿಯಿಂದ ಸುಟ್ಟುಹೋದ ಪಾಪಗಳನ್ನುಳ್ಳವನನ್ನಾಗಿ, ಬುಧಾಃ-ಶಾಸ್ತ್ರವಿತ್ತುಗಳು, ಆಹುಃ - ಹೇಳುತ್ತಾರೆ.

ಭಾಷ್ಯಾರ್ಥವು:—ಕರ್ಮಯೋಗಕ್ಕೆ ಜ್ಞಾನಾಕಾರತೆ ಹೇಗೆ ಉಂಟಾಗುತ್ತದೆ, ಮತ್ತು ಆ ಜ್ಞಾನಾಕಾರತೆಯಿಂದುಂಟಾಗುವ ಪ್ರಯೋಜನವೇನೆಂಬುದು ಇಲ್ಲಿ ಹೇಳಲ ಡುತ್ತದೆ. ಯಸ್ಯ – ಯಾವ ಎಂದರೆ ಮುಮುಕ್ಷೋಃ - ಯಾವ ಮೋಕ್ಷಾರ್ಥಿಗೆ, ಸರ್ವೇ - ಸಮಸ್ತಗಳಾದ ಎಂದರೆ ದ್ರವ್ಯಾರ್ಜನಾದಿಗಳಾದ ಲೌಕಿಕ ಕರ್ಮಮೊದಲುಗೊಂಡು ನಿತ್ಯನೈಮಿತ್ತಿಕ ಕಾಮ್ಯಕರ್ಮಗಳಾದ ಸಮಸ್ತ ಕರ್ಮಯೋಗೋದ್ಯೋಗಗಳು, ಕಾಮವರ್ಜಿತಾಃ - ಎಂದರೆ ಫಲಸಙ್ಗವರ್ಜಿತಾಃ – ಫಲಸಙ್ಗವಿಲ್ಲದವುಗಳೋ, ಮತ್ತು ಸಙ್ಕಲ್ಪವರ್ಜಿತಾಶ್ಚ - ಸಙ್ಕಲ್ಪವರ್ಜಿತಗಳೋ, ಇಲ್ಲಿ ಸಙ್ಕಲ್ಪವೆಂದರೆ ಪ್ರಕೃತ್ಯಾತದ್ಗುಣೈಶ್ಚಾತ್ಮಾನಂ ಏಕೀ ಕೃತ್ಯಾನುಸಂಧಾನಂ ಸಙ್ಕಲ್ಪಃ - ದೇಹದೊಂದಿಗೂ, ಅದರ ಗುಣಗಳಾದ ಸತ್ವರಜಸ್ತಮೋಗುಣಗಳೊಂದಿಗೂ ತನ್ನನ್ನು ಏಕೀಭವಿಸಿದಹಾಗೆ ತಿಳಿಯೋಣವು ಸಙ್ಕಲ್ಪವು, ಪ್ರಕೃತಿವಿಯುಕ್ತಾತ್ಮ ಸ್ವರೂಪಾನುಸಂಧಾನಯುಕ್ತತಯಾ - ಪ್ರಕೃತಿಯಿಂದ ಬಿಡಲ್ಪಟ್ಟ ಆತ್ಮಸ್ವರೂಪವು ಬಹುವಿಲಕ್ಷಣವಾದುದೆಂಬ ಅನುಸಂಧಾನದಿಂದ ಸೇರಿರುವದರಿಂದ, ತದ್ರಹಿತಾಃ - ಪ್ರಕೃತಿಯೊಂದಿಗೆ ಏಕೀಭವಿಸಿರುವಿಕೆಯಿಂದ ಬಿಡಲ್ಪಟ್ಟವರು, ತಂ ಎಂದರೆ ಏವಂ ಕುರ್ವಾಣಂ - ಹೀಗೆ ಕರ್ಮವನ್ನು ಅನುಷ್ಠಿಸುವ, ಪಂಡಿತಂ - ವಿಲಕ್ಷಣಜ್ಞಾನವುಳ್ಳವನನ್ನು, ಎಂದರೆ ಯಾವುದು ಹೇಯವಾದುದರಿಂದ ತ್ಯಾಜ್ಯವು, ಯಾವುದು ಉಪಾದೇಯವೆಂಬ ದೇಹಾತ್ಮವಿವೇಕಜ್ಞಾನವುಳ್ಳವನನ್ನು, ಕರ್ಮಾಂತರ್ಗತಾತ್ಮಯಾಥಾತ್ಮ್ಯಜ್ಞಾನಾಗ್ನಿನಾದಗ್ಧಪ್ರಾಚೀನ ಕರ್ಮಾಣಂ - ಕರ್ಮಯೋಗವನ್ನೊಳಗೊಂಡಿರುವ ಆತ್ಮನ ನಿಶ್ಚಯವಾದ ಸ್ವರೂಪದ ಜ್ಞಾನವೆಂಬ ಅಗ್ನಿಯಿಂದ, ಸುಟ್ಟುಹೋದ ಹಿಂದಿನ ಪಾಪಗಳುಳ್ಳವನೆಂದು, ಸರ್ವಜ್ಞಾಃ - ಇದು ಬುಧಾಃ ಎಂಬುದರರ್ಥವು, ಸರ್ವವನ್ನು ತಿಳಿದವರು, ಆಹುಃ - ಹೇಳುತ್ತಾರೆ; ಅತಃ - ಆಕಾರಣದ ದೆಶೆಯಿಂದ, ಕರ್ಮಣಃ– ಕರ್ಮಯೋಗಕ್ಕೆ ಜ್ಞಾನಾಕಾರತ್ವವು, ಉಪಪದ್ಯತೇ - ಸಂಭವಿಸುತ್ತದೆ. ಕಾಮಸಙ್ಕಲ್ಪ ವರ್ಜಿ

ತಾಃ ಎಂಬಲ್ಲಿ ಕಾಮರೂಪ ಸಙ್ಕಲ್ಪವೆಂದು ಸಮಾಸಮಾಡಲು ಸಾಧ್ಯವಿಲ್ಲವು, ಆಗ ಎರಡೂ ಪರ್ಯಾಯಪದವಾಗುತ್ತದೆ; ಕಾಮುಗಳ ಸಙ್ಕಲ್ಪವು ಕಾಮ ಸಙ್ಕಲ್ಪವೆಂದು ಷಷ್ಠೀತತ್ಪುರುಷವೂ ಸರಿಹೋಗುವದಿಲ್ಲವು ಏಕೆ ಎಂದರೆ ತತ್ಪುರುಷಾರ್ಥದಲ್ಲಿ ಒಂದು ಪದಕ್ಕೆ ಪ್ರಾಧಾನ್ಯವು, ದ್ವಂದ್ವ ಸಮಾಸಮಾಡಿದರೆ ಸರಸವಾದ ಎರಡು ಶಬ್ದಗಳ ಪ್ರಾಧಾನ್ಯವೂ ಉಂಟಾಗುವದರಿಂದ, ಕಾಮ ವರ್ಜಿತಾಃ, ಸಙ್ಕಲ್ಪವರ್ಜಿತಾಶ್ಚ ಎಂದು ವ್ಯಾಖ್ಯಾನಮಾಡಿ ಸಙ್ಕಲ್ಪಶಬ್ದಕ್ಕೆ ವ್ಯುತ್ಪತ್ತಿಮೂಲಕ ಅರ್ಥ ಹೇಳಿರುತ್ತಾರೆ. ಇಲ್ಲಿ ಸಙ್ಕಲ್ಪ ಶಬ್ದಕ್ಕೆ ಕರ್ಮಮಾಡಬೇಕೆಂಬ ಸಙ್ಕಲ್ಪವೆಂಬರ್ಥವಲ್ಲವು. ಆಗ ಸಙ್ಕಲ್ಪವೇ ಇಲ್ಲದಿರುವದರಿಂದ ಕರ್ಮವೇ ಇಲ್ಲವಾಗುತ್ತದೆ. ಇಲ್ಲಿ ಸಂ ಎಂದರೆ ಏಕೀಕಾರವು, ಕಲ್ಪವೆಂದರೆ ಭ್ರಾಂತಿ ಜ್ಞಾನವು, ಆದುದರಿಂದಲೇ ಪ್ರಕೃತಿಯಿಂದಲೂ ಪ್ರಕೃತಿಯ ಗುಣಗಳಿಂದಲೂ ಆತ್ಮನನ್ನು ಏಕೀಕರಿಸೋಣವು. ದೇಹವೇ ಆತ್ಮಾ ಎಂಬ ಭ್ರಮೆಯು ಕರ್ಮಕರ್ತೃತ್ವದಲ್ಲಿ ಸ್ವತಂತ್ರನೆಂಬ ಜ್ಞಾನವೂ. ಕರ್ಮಪ್ರಕರಣದಲ್ಲಿ ಕಾಮವೆಂದರೆ ಫಲ ಸಂಗವಾದುದರಿಂದ ಕಾಮ ವರ್ಜಿತಾಃ ಎಂಬುದರಿಂದ ಫಲಸಙ್ಗವಿವರ್ಜಿತಾಃ ಎಂದು ವ್ಯಾಖ್ಯಾನಮಾಡಿರುತ್ತಾರೆ; ಇಂತಹ ಭ್ರಮೆಯುಳ್ಳ ಜ್ಞಾನವಿಲ್ಲದಿದ್ದರೆ ಆತನು ಪಂಡಿತನೆನಿಸುವ ನೆಂಬ ಭಾವವು. ಹಾಗಾದರೆ ಅಂತಹ ಭ್ರಮಾರಹಿತ ಜ್ಞಾನವೆಂತಾದ್ದೆಂದರೆ, ಪ್ರಕೃತಿವಿಯುಕ್ತ ಆತ್ಮಸ್ವರೂಪವು ಜ್ಞಾನತ್ವ, ಆನಂದತ್ವಾದಿಗಳಿಂದ ಮಹಾಪರಿಶುದ್ಧವಾದುದು. ಆತ್ಮ ನಿಗೆ ಪುಮರ್ಥ ಎಂದು ಹೆಸರು; ಏಕೆಂದರೆ ಆತನು ಮಹಾಪರಿಶುದ್ಧನು, ಆತನು "ನ ದೇವೋ ನನರೋನತಿರ್ಯಙ್ನ ಚ ಪಾದಪಃ" ದೇವನೂ ಅಲ್ಲವು, ಮನುಷ್ಯನಲ್ಲವು, ಇತರ ಪ್ರಾಣಿಯೂ ಅಲ್ಲವು, ಗಿಡವೂ ಅಲ್ಲವು, ಹಾಗಾದರೆ ಇವುಗಳೆಲ್ಲಾ ಏನು ಎಂದರೆ ಶರೀರ ಗಳು, ಕರ್ಮಯೋನಯಃ - ಕರ್ಮ ಮೂಲಕವಾಗಿ ಬಂದವು ಎಂದು ಮಹರ್ಷಿಯು ಹೇಳಿರುತ್ತಾರೆ. ಹೀಗೆ ಆತ್ಮಸ್ವರೂಪದ ಯಾಥಾತ್ಮ್ಯವನ್ನು ಬಲ್ಲವನು ಪಂಡಿತನು; ದೇಹವು ಹೇಯ ವಾದುದು, ಆತ್ಮನು ಪವಿತ್ರನು ಎಂಬ ವಿವೇಕ ಜ್ಞಾನಯುಕ್ತನು. ಊಹಾಪೋಹ| ಬುದ್ಧಿಗೆ ಪಂಡಾ ಎಂಬ ಹೆಸರು, ಅದನ್ನುಳ್ಳವನು ಪಂಡಿತನು. ಇಂತಹ ಜ್ಞಾನದಿಂದುಂಟಾಗುವ ಪ್ರಯೋಜನವೇನು ಎಂಬುದನ್ನು ತಿಳಿಸುವದಕ್ಕಾಗಿ ತತ್ವಜ್ಞರು ಅಂತಹ ಪಂಡಿತನನ್ನು ಜ್ಞಾನಾಗ್ನಿದಗ್ಧ ಕರ್ಮಾಣನೆಂದು ಹೇಳುತ್ತಾರೆಂದು ಉಪದೇಶಿಸಲ್ಪಟ್ಟಿತು. ಈ ಆತ್ಮ ಯಾಥಾತ್ಮ್ಯಜ್ಞಾನವೆಂಬ ಅಗ್ನಿಯಿಂದ ಸುಟ್ಟುಹೋದ ಸಮಸ್ತ ಪ್ರಾಚೀನ ಕರ್ಮಗಳುಳ್ಳವನೆಂದು ಶಾಸ್ತ್ರಜ್ಞರು ಹೇಳುತ್ತಾರೆಂದು ತಿಳಿಸಲ್ಪಟ್ಟಿತು. ಇಲ್ಲಿ ಕರ್ಮಶಬ್ದಕ್ಕೆ ಕರ್ಮಯೋಗಾರಂಭಕ ಕರ್ಮವೆಂಬರ್ಥವಲ್ಲವು, ಆಗ ಕರ್ಮಯೋಗವೇ ಇಲ್ಲವಾಗಿ ನಿಷ್ಫಲವಾದುದಾಗುತ್ತದೆ. ಮುಂದೆ ಮಾಡುವ! ಪಾಪಕರ್ಮ ವೆಂದೂ ಈ ಕರ್ಮ ಶಬ್ದಕ್ಕೆ ಹೇಳಲಾಗುವದಿಲ್ಲವು; ಈ ವಿದ್ಯಾ ಮಾಹಾತ್ಮ್ಯೆಯಿಂದ ಉತ್ತರಾಘವು ಉಂಟಾಗದೆಯೇ ಇರಬಹುದು; ಆದುದರಿಂದಲೇ ದಗ್ಧ ಕರ್ಮಾಣಂ ಎಂಬಲ್ಲಿ ಕರ್ಮ ಶಬ್ದಕ್ಕೆ ಪ್ರಾಚೀನಕರ್ಮವೆಂದು ವ್ಯಾಖ್ಯಾನಮಾಡಿರುತ್ತಾರೆ. ಈ ಪ್ರಾಚೀನಕರ್ಮಗಳು, ಈತನ ಕರ್ಮಯೋಗಾರಂಭಕ್ಕೆ ಪ್ರತಿಬಂಧಕಗಳಾದ ಪ್ರಾಚೀನಕರ್ಮಗಳೆಂದು ಅರ್ಥ ಹೇಳಬಹುದು. ಯಾವಾಗ ಆತ್ಮಯಾಥಾತ್ಮ್ಯಜ್ಞಾನದೊಂದಿಗೆ ಕರ್ಮಯೋಗವು ಆರಂಭಿಸಲ್ಪಟ್ಟಿತೋ ಆಗ ಯೋಗಾರಂಭನಿಷ್ಪತ್ತಿಗಳುಂಟಾಗಿ ಪ್ರಾಚೀನ ಸರ್ವಕರ್ಮಗಳ ನಾಶವು ಉಂಟಾಗುತ್ತದೆಂದಾದರೂ ಅರ್ಥಮಾಡಬಹುದು. ಇಲ್ಲಿ ಬುಧಾಃ ಎಂಬುದಕ್ಕೆ ತತ್ವಜ್ಞಾಃ ಎಂದು ವ್ಯಾಖ್ಯಾನಮಾಡಿರುತ್ತಾರೆ. ಪ್ರಾಪ್ಯ ಸ್ವರೂಪವನ್ನೂ, ಪ್ರಾಪ್ತಾವಿನ ಸ್ವರೂಪವನ್ನೂ, ಪ್ರಾಪ್ತಾವಾದವನು ಪ್ರಾಪ್ಯವನ್ನು ಹೊಂದುವ ಉಪಾಯವನ್ನೂ, ಅದರಿಂದುಂಟಾಗುವ ಫಲವನ್ನೂ, ಆ ಫಲಕ್ಕೆ ವಿರೋಧಿಗಳು ಯಾವುವು ಎಂಬುದನ್ನೂ, ಹೀಗೆ ಶಾಸ್ತ್ರಗಳಲ್ಲಿ ಹೇಳಿರುವ ಐದು ವಿಷಯಗಳನ್ನು ಚನ್ನಾಗಿ

ಭಾ. ಅವ. ಏತದೇವ ವಿವೃಣೋತಿ—

ಮೂ. ತ್ಯಕ್ತ್ವಾ ಕರ್ಮಫಲಾಸಙ್ಗಂ ನಿತ್ಯತೃಪ್ತೋ ನಿರಾಶ್ರಯಃ ।
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ ೨೦.

ಪರಿಶೀಲಿಸಿ ತಿಳಿದವರು. ಹೀಗೆ ಕರ್ಮಯೋಗಕ್ಕೆ ಜ್ಞಾನಾಕಾರತೆಯೂ ಉಂಟು ಎಂದೂ ಅದರಿಂದ ಪ್ರಾಚೀನಕರ್ಮಗಳೆಲ್ಲಾ ಕ್ರಮೇಣ ತೊಲಗುವುವೆಂದೂ ಹೇಳಲ್ಪಟ್ಟಿತೆಂದು "ಅತಃ" ಎಂದಾರಂಭಿಸಿ ನಿಗಮನಮಾಡಿ ಹೇಳುತ್ತಾರೆ. ಅತಃ - ಆ ಕಾರಣದಿಂದ, ಕರ್ಮಣಃ - ಕರ್ಮಯೋಗಕ್ಕೆ, ಜ್ಞಾನಾಕಾರತ್ವಂ - ಜ್ಞಾನಾಕಾರತೆಯು, ಉಪಪದ್ಯತೇ - ಸಲ್ಲುತ್ತದೆ. ॥೧೯॥

ಭಾಷ್ಯಾವತಾರಿಕೆಯ ಅರ್ಥವು:—ಹಿಂದಿನ ಶ್ಲೋಕದಿಂದಲೂ, ಈ ಶ್ಲೋಕದಿಂದಲೂ ಮುಂದಿನ ಶ್ಲೋಕದಿಂದಲೂ ಕರ್ಮಯೋಗಕ್ಕೆ ಜ್ಞಾನಾಕಾರತೆಯೇ ಸಾಧಿಸಲ್ಪಡುವದರಿಂದ, ಏತದೇವ ವಿವೃಣೋತಿ - ಕರ್ಮಯೋಗಕ್ಕೆ ಜ್ಞಾನಾಕಾರತೆಯುಂಟೆಂಬುದನ್ನೇ, ವಿವೃಣೋತಿ - ಈ ಶ್ಲೋಕದಿಂದಲೂ ವಿವರಿಸುತ್ತಾರೆ, ಎಂಬದಾಗಿ ಅವತಾರಿಕೆಯನ್ನು ಕೊಟ್ಟಿರುತ್ತಾರೆ.

ಮೂಲಕ್ಕೆ ಅರ್ಥವು:—ಹಿಂದಿನ ಶ್ಲೋಕದ ವಿವರಣೆಯು ಹೇಗೆಂದರೆ—ಹಿಂದಿನ ಶ್ಲೋಕದಲ್ಲಿ ಕಾಮಸಙ್ಕಲ್ಪ ವರ್ಜಿತ ಕರ್ಮಗಳುಳ್ಳವರೆಂದು ಇಷ್ಟುಮಾತ್ರ ಹೇಳಲ್ಪಟ್ಟದುದನ್ನೇ ಈ ಶ್ಲೋಕದ ಪೂರ್ವಾರ್ಧದಿಂದ ವಿವರಿಸುತ್ತಾರೆ. ಕರ್ಮಫಲಾಸಙ್ಗಂ-ತಾನು ಮಾಡುವ ಕರ್ಮಗಳ ಫಲದಲ್ಲಿ ಹೆಚ್ಚಾದ ಸಙ್ಗವು ಆಸಙ್ಗವೆನಿಸುತ್ತದೆ, ಅದನ್ನು ತ್ಯಕ್ತ್ವಾ-ಬಿಟ್ಟವನಾಗಿ, ನಿರಾಶ್ರಯಃ-ಇದು ಸಙ್ಕಲ್ಪ ವರ್ಜಿತವೆಂಬುದರರ್ಥವು, ಅಸ್ಥಿರವಾದ ದೇಹದಲ್ಲಿ ಆಶ್ರಯ ರಹಿತನಾಗಿ ಎಂದರೆ ಅದರಲ್ಲಿ ಸ್ಥಿರತ್ವ ಬುದ್ಧಿಯಿಲ್ಲದವನಾಗಿ, ಹಾಗಾದರೆ ಸ್ಥಿರತ್ವ ಬುದ್ಧಿ ಯಾತರಲ್ಲಿರತಕ್ಕದ್ದೆಂದರೆ, ನಿತ್ಯತೃಪ್ತಃ - ನಿತ್ಯನಾದ ಆತ್ಮನಲ್ಲಿ ತೃಪ್ತನಾಗಿ, ಆತ್ಮಸ್ವರೂಪವನ್ನು ಚನ್ನಾಗಿ ತಿಳಿಯುವದರಿಂದ ಆ ಆತ್ಮಸ್ವರೂಪವು ಎಂತಹ ಮಹತ್ತಾದುದು ಎಂಬುವ ಜ್ಞಾನದಿಂದ ತೃಪ್ತನಾಗಿ ಎಂಬರ್ಥವು, ಕರ್ಮಣ್ಯಭಿಪ್ರವೃತ್ತೋಽಪಿ - ಕರ್ಮಯೋಗೋದ್ಯೋಗಗಳಿಗೆ ಅಭಿಮುಖವಾಗಿ ಪ್ರವೃತ್ತಿಯುಳ್ಳವನಾದರೂ, ನೈವ ಕಿಂಚಿತ್ಕರೋತಿ - ಯಾವುದರಲ್ಲೂ ಕರ್ತೃತ್ವವುಳ್ಳವನಾಗುವದಿಲ್ಲವು. ಅವನು ಮಾಡಿದವನೇ ಅಲ್ಲವು ಎಂಬುದರಿಂದ ಕರ್ತೃತ್ವವೇ ಇಲ್ಲವೆಂಬರ್ಥವಲ್ಲವು. ಕರ್ತಾ ಶಾಸ್ತ್ರಾರ್ಥವತ್ತ್ವಾತ್, ಪರಾತ್ತು ತಚ್ಛ್ರುತೇಃ ಎಂಬ ಸೂತ್ರಗಳ ಪ್ರಕಾರ ಇವನಿಗೆ ಪರಾಯತ್ತ ಕರ್ತೃತ್ವವಿದ್ದೇಇರುತ್ತದೆ. ಹಾಗಾದರೆ ನೈವ ಕಿಂಚಿತ್ಕರೋತಿ ಎಂಬುದರಿಂದ ಉಂಟಾಗುವ ಅಭಿಪ್ರಾಯವೇನೆಂದರೆ. (೧)ಕರ್ಮಯೋಗಾನುಷ್ಠಾನಮಾಡುವಾಗಲೂ ಅದು ಬರೀ ಕರ್ಮವೇ ಆಗುವದಿಲ್ಲವು, ಜ್ಞಾನಾಕಾರತೆಯೂ ಉಂಟಾಗುತ್ತದೆಂಬುವದೊಂದು ಅಭಿಪ್ರಾಯವು. ಇನ್ನೊಂದು ಏನೆಂದರೆ (೨) ಕರ್ಮಯೋಗಾನುಷ್ಠಾನದ ಜ್ಞಾನಾಕಾರತೆಯ ಮೂಲಕ ಪ್ರಾಚೀನಕರ್ಮವೆಲ್ಲವೂ ನಶಿಸಿ ಹೋಗುತ್ತದೆಂದು "ಜ್ಞಾನಾಗ್ನಿ ದಗ್ಧಕರ್ಮಾಣಂ" ಎಂಬುದರ ಮೂಲಕ ತಿಳಿಸಲ್ಪಟ್ಟಿತು. ಈ ಶ್ಲೋಕದಲ್ಲಿ ಆ ಆತ್ಮ ಯಾಥಾತ್ಮ್ಯಜ್ಞಾನವಿರುವದರಿಂದಲೇ ನೈವಕಿಂಚಿತ್ಕರೋತಿ ಸಃ-ಯಾವ ಕರ್ಮಪ್ರವೃತ್ತಿಯೂ ಈತನಿಗೆ ಅಂಟುವದಿಲ್ಲವಾದುದರಿಂದ ಮುಂದೆ ಕರ್ಮಲೇಪಕ್ಕೆ ಕಾರಣವೇ ಇಲ್ಲವೆಂದೂ ಹೇಳಲ್ಪಟ್ಟಿತು. ಹೀಗೆ ಆತ್ಮ ಯಾಥಾತ್ಮ್ಯಜ್ಞಾನದಿಂದಕೂಡಿದ ಕರ್ಮಯೋಗದಿಂದ ಉಪಾಸನ ನಿಷ್ಪತ್ತಿಯಮೂಲಕ ಪ್ರಾಚೀನಕರ್ಮಗಳ ನಾಶವೂ ಉತ್ತರಕರ್ಮಗಳ ನಿರ್ಲೇಪವೂ ಉಂಟಾಗುತ್ತದೆಂದೂ ಸೂಚಿಸಿದಂತಾಯಿತು.

ಭಾ. ಕರ್ಮಫಲಸಙ್ಗಂ ತ್ಯಕ್ತ್ವಾ ನಿತ್ಯತೃಪ್ತಃ-ನಿತ್ಯೇ ಸ್ವಾತ್ಮನ್ಯೇವ ತೃಪ್ತಃ, ನಿರಾಶ್ರಯಃ ಅಸ್ಥಿರಪ್ರಕೃತಾ ವಾಶ್ರಯಬುದ್ಧಿ ರಹಿತೋ, ಯಃ ಕರ್ಮಾಣಿ ಕರೋತಿ, ಸ ಕರ್ಮಣ್ಯಾಭಿಮುಖ್ಯೇನ ಪ್ರವೃತ್ತೋಽಪಿ ನೈವ ಕಿಂಚಿತ್ಕರ್ಮ ಕರೋತಿ, ಕರ್ಮಾಪದೇಶೇನ ಜ್ಞಾನಾಭ್ಯಾಸಮೇವ ಕರೋತೀತ್ಯರ್ಥಃ ॥೨೦॥

ಭಾ. ಅವ. ಪುನರಪಿ ಕರ್ಮಣೋ ಜ್ಞಾನಾಕಾರತೈವ ವಿಶೋಧ್ಯತೇ.

**ಭಾಷ್ಯಾರ್ಥವು :—ಕರ್ಮಫಲಸಙ್ಗಂ** – ಇದು ಕರ್ಮಫಲಾಸಙ್ಗವೆಂಬುದರರ್ಥವು, ಕರ್ಮಯೋಗದಲ್ಲಿ ಮಾಡುವ ಕರ್ಮಗಳ ಫಲದಲ್ಲಿ ಸ್ನೇಹವನ್ನು ತ್ಯಕ್ತ್ವಾ - ಬಿಟ್ಟು. ನಿತ್ಯತೃಪ್ತಃ – ಎಂದರೆ ನಿತ್ಯೇ ಸ್ವಾತ್ಮನ್ಯೇವ - ನಿತ್ಯನಾದ ತನ್ನ ಆತ್ಮನಲ್ಲೇ, ತೃಪ್ತಃ - ಅವರ ಸ್ವರೂಪಜ್ಞಾನದಿಂದ ತೃಪ್ತನಾಗಿ, ಇಲ್ಲಿ ನಿತ್ಯಂ ತೃಪ್ತಃ ಸದಾ ತೃಪ್ತನಾಗಿ ಎಂಬರ್ಥವಲ್ಲವು; ಹಾಗೆ ಅರ್ಥ ಮಾಡಲು ಯಾವ ಹೇತುವೂ ಇಲ್ಲವು, ಆತ್ಮಯಾಥಾತ್ಮ್ಯ ಜ್ಞಾನವು ಕರ್ಮಯೋಗಕ್ಕೆ ಅತ್ಯಾವಶ್ಯಕವೆಂದು ಸ್ಥಾಪಿಸುವುದು ಅಪೇಕ್ಷಿತವಾಗಿರುವಾಗ, ನಿತ್ಯೇ ತೃಪ್ತಃ ಎಂವರ್ಥವಾಡುವದೇ ಸಮಂಜಸವು. ನಿರಾಶ್ರಯಃ ಎಂದರೆ ಅಸ್ಥಿರಪ್ರಕೃತಾ ವಾಶ್ರಯಬುದ್ಧಿ ರಹಿತಃ - ಅಸ್ಥಿರವಾದ ದೇಹದಲ್ಲಿ ಆಶ್ರಯಬುದ್ಧಿಯಿಲ್ಲದವನಾಗಿ, ದೇಹವಸ್ಥಿರವೆಂದೂ, ಆತ್ಮನು ನಿತ್ಯವೆಂದೂ, ಹೀಗೆ ದೇಹಕ್ಕಿಂತ ಆತ್ಮಾ ವಿಲಕ್ಷಣನೆಂಬ ಜ್ಞಾನವುಳ್ಳವನಾಗಿ ಎಂಬ ಭಾವವು. ಸಃ ಎಂಬ ಪಾಗಿ ಮೂಲದಲ್ಲಿರುವ ತಚ್ಛಬ್ದವು ಯಚ್ಛಬ್ದವನ್ನು ಅಪೇಕ್ಷಿಸುತ್ತದೆ, ಯಃ ಕರ್ಮಾಣಿ ಕರೋತಿ- ಯಾವನು ಕರ್ಮವನ್ನು ಮಾಡುತ್ತಾನೋ ಎಂದು ವ್ಯಾಖ್ಯಾನವು, ಸಃ-ಅಂತಹ ಕರ್ಮಯೋಗಿಯು, ಕರ್ಮಣ್ಯಾಭಿಮುಖ್ಯೇನ ಪ್ರವೃತ್ತೋಽಪಿ-ಇದು ಕರ್ಮಣ್ಯಭಿಪ್ರವೃತ್ತೋಽಪಿ ಎಂಬುದರ ವ್ಯಾಖ್ಯಾನವು, ಕರ್ಮವನ್ನೇ ಮಾಡಬೇಕೆಂದು ಪ್ರವೃತ್ತನಾದರೂ ನೈವಕಿಂಚಿತ್ ಕರ್ಮ ಕರೋತಿ - ಏನೊಂದು ಕರ್ಮವನ್ನೂ ಮಾಡುವದಿಲ್ಲವು; ಏಕೆಂದರೆ ಆ ಕರ್ಮವೂ ಆತ್ಮಜ್ಞಾನದೊಂದಿಗೆ ಸೇರಿ ಜ್ಞಾನರೂಪವಾದುದರಿಂದ,ಬರೀ ಪ್ರವೃತ್ತಿಯೇ ಅಲ್ಲವು; ಏಕೆಂದರೆ ಆ ಜ್ಞಾನದ ಮಾಹಾತ್ಮ್ಯೆಯಿಂದ ಆ ಕರ್ಮವು ಯಾವುದೂ ಇವನಿಗೆ ಅಂಟುವದಿಲ್ಲವು. ಮೂಲದಲ್ಲಿ ನೈವ ಕಿಂಚಿತ್ಕರೋತಿ - ಎಂದು ಇರುವದಕ್ಕೆ ನೈವಕಿಂಚಿತ್ಕರ್ಮ ಕರೋತಿ ಎಂದು ವ್ಯಾಖ್ಯಾನಮಾಡಿರುತ್ತಾರೆ, ಕರ್ಮಮಾಡಿದರೂ, ಅದು ವ್ಯಾಜರೂಪವಾದುದೇವಿನಾ ಅದು ಕರ್ಮವಲ್ಲವು; ಫಲಸಙ್ಗವನ್ನು ಬಿಟ್ಟಿದ್ದಾಗಿಯೂ ಆತ್ಮಯಾಥಾತ್ಮ್ಯಜ್ಞಾನವನ್ನು ಒಳಗೊಂಡದ್ದಾಗಿಯೂ ಇರುವದರಿಂದ ಅದು ಕರ್ಮವಲ್ಲವೆಂದು ಹೇಳಲ್ಪಟ್ಟಿತು. ಇಲ್ಲಿಯೂ ಕರ್ಮಯೋಗದ ಜ್ಞಾನಾಕಾರತೆಯು ವಿವರಿಸಲ್ಪಟ್ಟಿತು, ಹೀಗೆ ಫಲಸಙ್ಗಾದಿಗಳನ್ನು ಬಿಟ್ಟು ಅಕರ್ಮವೆಂದರೆ ಆತ್ಮ ಯಾಥಾತ್ಮ ಜ್ಞಾನದೊಂದಿಗೆ ವಿಕರ್ಮದೊಂದಿಗೆ ನಿತ್ಯನೈಮಿತ್ತಿಕ ದೇಹಯಾತ್ರಾದಿ ಕರ್ಮಗಳಿಂದ ಸೇರಿದ ಕರ್ಮಯೋಗವನ್ನನುಷ್ಠಿಸಿದರೆ ಮಾಡಿದ ಕರ್ಮಗಳು ಬಂಧಕಗಳಾಗುವದಿಲ್ಲವು. ಆದುದರಿಂದಲೇ, ನೈವ ಕಿಂಚಿತ್ಕರೋತಿ ಸಃ ಎಂದು ಹೇಳಲ್ಪಟ್ಟಿತು. ಈ ಆತ್ಮಯಾಥಾತ್ಮ್ಯಜ್ಞಾನವು ಕರ್ಮಯೋಗಕ್ಕೆ ಸೇರಿರುವದರಿಂದ ಆಗುವ ಮುಖ್ಯ ಪ್ರಯೋಜನವೇನು ಎಂದರೆ ಇಂದ್ರಿಯಗಳಿಗೆ ವಿಪರೀತ ಪ್ರವೃತ್ತಿಗಳಿಲ್ಲದೆ, ಅನುಕೂಲಪ್ರವೃತ್ತಿಗಳುಂಟಾಗುವದರಿಂದ ಈತನು ಮಾಡುವ ಯಾವ ಕರ್ಮಗಳೂ ಮುಂದಕ್ಕೆ ಪಾಪಪುಣ್ಯರೂಪದಲ್ಲಿ ಬಂಧಿಸುವದಿಲ್ಲವು. ಆದುದರಿಂದ ಮೋಕ್ಷಾರ್ಥಿಗೆ ಈ ಅಕರ್ಮದಿಂದ ಕೂಡಿದ ಎಂದರೆ ಆತ್ಮಯಾಥಾತ್ಮ್ಯಜ್ಞಾನದಿಂದ ಕೂಡಿದ ಕರ್ಮಯೋಗವು ಉಪಾಯಾಙ್ಗವಾಗಿ ವಿಧಿಸಲ್ಪಟ್ಟಿರುತ್ತದೆ ಎಂಬುದು ತಾತ್ಪರ್ಯವು.

**ಭಾಷ್ಯಾವತಾರಿಕೆಯ ಅರ್ಥವು:—ಪುನರಪಿ** - ಇನ್ನೊಂದು ಸಲವೂ, ಕರ್ಮಣಃ -ಕರ್ಮ

**ಮೂ. ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥** ೨೧.

ಯೋಗಕ್ಕೆ, ಜ್ಞಾನಾಕಾರತೆಯೇ, ವಿಶೋಧ್ಯತೇ - ಶೋಧಿಸಲ್ಪಡುತ್ತದೆ, ಈ ಶ್ಲೋಕಕ್ಕೂ ಮುಂದಿನಶ್ಲೋಕಗಳಿಗೂ ಎರಡಕ್ಕೂ ಇದೇ ಅವತಾರಿಕೆಯು, ಈ ಮೂರು ಶ್ಲೋಕಗಳಿಂದಲೂ ಹೇಳಲ್ಪಡುವವು ಒಂದೇ ವಿಷಯವು.

ಮೂಲಕ್ಕೆ ಅರ್ಥವು:—ಹಿಂದಿನ ಎರಡು ಶ್ಲೋಕಗಳಿಂದ ಕರ್ಮಯೋಗದಲ್ಲಿ ಆತ್ಮಯಾಥಾತ್ಮ್ಯಜ್ಞಾನವು ಅಂತರ್ಗತವಾದುದರಿಂದ ಪ್ರಾಚೀನಕರ್ಮವು ನಶಿಸಿ ಹೋಗುತ್ತದೆಂದೂ, ಮುಂದೆ ಮಾಡುವ ಕರ್ಮವು ಲೇಪಿಸುವುದಿಲ್ಲವೆಂದೂ ಹೇಳಲ್ಪಟ್ಟವು. ಆದರೆ ಶಾರೀರ ಸಂಬಂಧ ಕರ್ಮವು ತಪ್ಪಿಸಲ್ಲವಾಗಿರುವಾಗ, ನೈವ ಕಿಂಚಿತ್ಕರೋತಿ ಸಃ ಕರ್ಮವು ಉಂಟುವದೇ ಇಲ್ಲವು, ಅದೂ ಜ್ಞಾನರೂಪವಾದುದೇ ಎಂದು ಹೇಗೆ ಹೇಳಲು ಸಾಧ್ಯವು, ಎಂಬಾಕ್ಷೇಪಕ್ಕೆ ಇಲ್ಲಿ ಸಮಾಧಾನವು ಹೇಳಲ್ಪಡುತ್ತದೆ. ನಿರಾಶೀಃ. ಆಶೆಯಿಲ್ಲದವನು ಎಂಬರ್ಥವು, ಎಲ್ಲಾದರಲ್ಲೂ ಆಶೆಯಿಲ್ಲದವನೆಂದು ಅರ್ಥಮಾಡಿದರೆ, ಕರ್ಮಯೋಗದಲ್ಲೂ ಆಶೆಯಿಲ್ಲದವನೆಂಬರ್ಥವುಂಟಾಗುವದರಿಂದ, ಕರ್ಮ ಫಲದಲ್ಲಿ ಆಶೆಯಿಲ್ಲದವನಾಗಿ, ಎಂಬ ಅರ್ಥವು, **ಯತಚಿತ್ತಾತ್ಮಾ** - ನಿಯಮಿಸಲ್ಪಟ್ಟ ಚಿತ್ತ ಮತ್ತು ಮನಸ್ಸುಳ್ಳವನಾಗಿ, ಚಿತ್ತವು ಬುದ್ಧ್ಯಹಂಕಾರಾದಿ ಶಬ್ದಗಳಿಂದ ಬೋಧಿತವಾಗುವ ಮನಸ್ಸಿನ ಅವಸ್ಥಾ ವಿಶೇಷವು, ಇಲ್ಲಿ ಆತ್ಮಾ ಎಂದರೆ ಸ್ವರೂಪವೆಂದರ್ಥಮಾಡಿದರೆ, ಆ ಪದವು ಆಗ ನಿರರ್ಥಕವಾದುದಾಗುತ್ತದೆ; ಏಕೆಂದರೆ ಆಗ ಯತಚಿತ್ತನೆಂಬುವದರಿಂದಲೇ ಆ ಅರ್ಥವುಂಟಾಗುತ್ತದೆ. **ಯತಚಿತ್ತಾತ್ಮಾ** ಎಂದು ಎರಡು ಮಾತ್ರ ಹೇಳಿರುವದು, ಸರ್ವ ವಶೀಕರಣ ವರ್ಗವಾದ ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿ, ಆತ್ಮಾ ಎಲ್ಲಾದಕ್ಕೂ ಉಪಲಕ್ಷಣವು. ಅಥವಾ ಆತ್ಮಾ ಎಂದರೆ ಜೀವಾತ್ಮನೆಂದೇ ಅರ್ಥಮಾಡಬಹುದು, ತನ್ನ ಆತ್ಮಾವನ್ನೂ ಸಹ ವಶೀಕರಣಮಾಡತಕ್ಕದ್ದೆಂದು ವಶೀಕರಣ ಪರಂಪರೆಯನ್ನು ಬೋಧಿಸುವ "ಇಂದ್ರಿಯಾಣಿ ಪರಾಣ್ಯಾಹುಃ" ಎಂಬುದರಲ್ಲಿ ಹೇಳಲ್ಪಟ್ಟಿರುತ್ತದೆ. ಹಾಗೆಯೇ ಭಾಗವತದಲ್ಲಿ (೧೧. ೧೬. ೪೩) ಶ್ರೀ ಕೃಷ್ಣರು ಉದ್ಧವರಿಗೆ ಉಪದೇಶಿಸುತ್ತಾರೆ. **"ವಾಚಂ ಯಚ್ಛ ಮನೋ ಯಚ್ಛ ಯಚ್ಛ ಪ್ರಾಣೇಂದ್ರಿಯಾಣಿ ಚ । ಆತ್ಮಾನಮಾತ್ಮನಾ ಯಚ್ಛ ನ ಭೂಯಃ ಕಲ್ಪಸೇಽಧ್ವನೇ" ॥** ವಾಕ್ಕನ್ನು ಅಸಮಾಲಾಪವಿಲ್ಲದಹಾಗೆ ವಶಮಾಡಿಕೊಳ್ಳಬೇಕು, ಮನಸ್ಸನ್ನು ದುಷ್ಟಾಲೋಚನೆಗೆ ಕಾರಣವಿಲ್ಲದಹಾಗೆ ನಿಯಮಿಸಬೇಕು, ಪ್ರಾಣವನ್ನು ಜಾತ್ಯಾಶ್ರಯ ನಿಮಿತ್ತ ದುಷ್ಟಾನ್ನವನ್ನು ತ್ಯಜಿಸುವ ಹಾಗೆ ನಿಯಮಿಸಬೇಕು. ಅಥವಾ ಪೂರಕ ಕುಂಭಕ ರೇಚಕ ರೂಪ ಶ್ವಾಸ ಧಾರಣ ಮೂಲಕ ಪ್ರಾಣವನ್ನು ವಶಮಾಡಿಕೊಳ್ಳಬೇಕು. ಇಂದ್ರಿಯಗಳು ದುಷ್ಟವಿಷಯಗಳಲ್ಲಿ ಪ್ರವರ್ತಿಸದಹಾಗೆ ನಿಯಮಿಸಬೇಕು, ಹೀಗೆಲ್ಲಾ ವಶಮಾಡಿಕೊಳ್ಳುವದರಿಂದ ತನ್ನನ್ನು ಸ್ವತಃ ವಶಮಾಡಿಕೊಳ್ಳಬೇಕು, ಹೀಗೆ ಸರ್ವವನ್ನು ನಿಯಮಿಸುವ ಶಕ್ತಿಯುಳ್ಳವನು, **ನ ಭೂಯಃ ಕಲ್ಪಸೇಽಧ್ವನೇ** - ಪುನಃ ಸಂಸಾರ ಭ್ರಮಣೆಗೆ ವಶನಾಗುವದಿಲ್ಲವು. ಹೀಗೆ ಆತ್ಮನಿಯಮನವೂ ಹೇಳಲ್ಪಟ್ಟಿತೆಂದು ಭಾವಿಸಬಹುದು. ಹೀಗೆ ಯತಚಿತ್ತಾತ್ಮಾವಾದುದರಿಂದಲೇ, **ತ್ಯಕ್ತಸರ್ವ ಪರಿಗ್ರಹಃ**- ಬಿಡಲ್ಪಟ್ಟ ಸಮಸ್ತ ಐಹಿಕ ವಸ್ತುಗಳಲ್ಲೂ ಸ್ವೀಕಾರ ಬುದ್ಧಿಯುಳ್ಳವನು. ಐಹಿಕ ವಿಷಯೋಪಗಳನ್ನೆಲ್ಲಾ ತೊರದವನು ಇಂತವನು. **ಕೇವಲಂ ಶಾರೀರಂ ಕರ್ಮ** - ಕೇವಲ ಶರೀರ ಧಾರಣಾದಿಗಳಿಗೆ ಬೇಕಾದ ಕರ್ಮವನ್ನು, **ಕುರ್ವನ್** ಎಂದರೆ ಕುರ್ವನ್ನಪಿ ಎಂಬಭಿಪ್ರಾಯವು, ಮಾಡಿದರೂ ಕೂಡ, **ನಾಪ್ನೋತಿ ಕಿಲ್ಬಿಷಂ** - ಪುನಃ ಬಂಧಕವಾದ ದೋಷವನ್ನು ಎಂದಿಗೂ ಹೊಂದುವ

ಭಾ. ನಿರಾಶೀಃ - ನಿರ್ಗತಫಲಾಭಿಸಂಧಿಃ, ಯತಚಿತ್ತಾತ್ಮಾ - ಯತಚಿತ್ತಮನಾಃ, ತ್ಯಕ್ತ ಸರ್ವಪರಿಗ್ರಹಃ - ಆತ್ಮೈಕಪ್ರಯೋಜನತಯಾ ಪ್ರಕೃತಿ ಪ್ರಾಕೃತವಸ್ತುನಿ ಮಮತಾ ರಹಿತಃ, ಯಾವಜ್ಜೀವಂ ಕೇವಲಂ ಶಾರೀರಮೇವ ಕರ್ಮ ಕುರ್ವನ್ ಕಿಲ್ಬಿಷಂ- ಸಂಸಾರಂ

---

ದಿಲ್ಲವು. ಈತನು ದೇಹೇಂದ್ರಿಯಾದಿಗಳಿಗೆ ವಶನಾಗದೆ ಫಲಾಭಿಸಂಧಿರಹಿತನಾಗಿ ಐಹಿಕ ವಿಷಯಾಸಕ್ತನಾಗದೆ ಶರೀರ ಧಾರಣಾದಿಗಳಿಗೆ ಯೋಗ್ಯವಾದ ಕರ್ಮಗಳನ್ನು ಮಾಡಿದರೂ ಅವುಗಳಲ್ಲಿ ಲಿಪ್ತನಾಗದೆ ಮಾಡುವದರಿಂದ ಈತನಿಗೆ ಪಾಪ ಸಂಬಂಧವು ಉಂಟಾಗುವದಿಲ್ಲವು, ಆ ಕಾರಣದಿಂದ ಭಕ್ತಿಯೋಗ ಉಪಾಸನ ನಿಷ್ಪತ್ತಿಗಳ ಮೂಲಕ ಪುನಃ ಸಂಸಾರ ಬಂಧವಿಲ್ಲದಂತೆ ಮಾಡಿಕೊಳ್ಳುವನೆಂಬ ಭಾವವು.

ಭಾಷ್ಯಾರ್ಥವು :—ಜ್ಞಾನಯೋಗಕ್ಕಿಂತ ಕರ್ಮಯೋಗವು ಸುಕರವು, ಪ್ರಮಾದ ರಹಿತವೆಂದು ಹೇಳಲ್ಪಟ್ಟರೂ ಕರ್ಮಯೋಗದಲ್ಲಿ ಜ್ಞಾನಾಂಶವು, ತಿಳಿಯತಕ್ಕ ವಿಷಯವು ತುಂಬಾ ಉಂಟು, ಇವನ್ನು ಎಲ್ಲರೂ, ಪಂಡಿತರೂ ಸಹ, ಗ್ರಹಿಸಲಾರರು ಎಂದಲ್ಲವೇ ಹಿಂದೆ ಹೇಳಲ್ಪಟ್ಟಿತು. ಈ ದುಜ್ಞ್ಞಾನತಾ ಚನ್ನಾಗಿ ಮನಸ್ಸಿಗೆ ಹಿಡಿಯುವದಕ್ಕಾಗಿ ಅದನ್ನೇ ಚನ್ನಾಗಿ ಉಪಪಾದಿಸಿ ಹೇಳಿ ಅಂತಹ ಜ್ಞಾನದಿಂದಾಗುವ ಪರಮ ಪ್ರಯೋಜನವನ್ನು ತಿಳಿಸುತ್ತಾರೆ. ಈ ಆತ್ಮಜ್ಞಾನದೊಂದಿಗೆ ಅನುಷ್ಠಿಸಿದ ಈ ಕರ್ಮಯೋಗದ ಮಾಹಾತ್ಮ್ಯೆಯಿಂದ, ನಿರಾಶೀಃ ಎಂದರೆ **ನಿರ್ಗತ ಫಲಾಭಿಸಂಧಿಃ** - ಕರ್ಮಫಲದಲ್ಲಿ ಆಶೆಯಿಲ್ಲದವನಾಗಿ, **ಯತಚಿತ್ತಾತ್ಮಾ** ಎಂದರೆ **ಯತಚಿತ್ತಮನಾಃ** - ನಿಯಮಿಸಲ್ಪಟ್ಟ ಬುದ್ಧಿ ಅಹಂಕಾರಾದಿಗಳನ್ನು ಮತ್ತು ಮನಸ್ಸನ್ನೂ ಉಳ್ಳವನು ಎಂದರೆ ಬೇರೇ ವಿಷಯಗಳ ಚಿಂತೆಯಿಲ್ಲದ ಮನಸ್ಸುಳ್ಳವನಾಗಿ, ನಿಯಮಿಸಲ್ಪಟ್ಟ ಚಿತ್ತ ಮತ್ತು ಮನಸ್ಸುಳ್ಳವನು ಎಂದರ್ಥಮಾಡಿ ಚಿತ್ತವೆಂದರೇನು ಮನಸ್ಸೆಂದರೇನು ಎಂದು ಪ್ರಶ್ನಿಸಿದರೆ ಶ್ರೀ ಯತಿವರ್ಯರು ೨.೩೪. ೫.ನೆಯ ಸೂತ್ರಭಾಷ್ಯದಲ್ಲಿ "ಅಧ್ಯವಸಾಯಾಭಿಮಾನ ಚಿಂತಾ ವೃತ್ತಿ ಭೇದಾನ್ಮನ ಏವ ಬುದ್ಧ್ಯಹಂಕಾರ ಚಿತ್ತಶಬ್ದೈರ್ವ್ಯಪದಿಶ್ಯತೇ" ಎಂದು ವ್ಯಾಖ್ಯಾನಮಾಡಿರುತ್ತಾರೆ. ಬುದ್ಧಿ ಅಹಂಕಾರ ಚಿತ್ತ ಇವೇ ಮೊದಲಾದ ವ್ಯವಹಾರಗಳು ಮನಸ್ಸಿನ ವೃತ್ತಿಭೇದ ವಿಷಯಗಳೆಂದು ಭಾವಿಸತಕ್ಕದ್ದು. ಆದುದರಿಂದ **ಯತಚಿತ್ತಾತ್ಮಾ** ಎಂದರೆ ನಿಯಮಿಸಲ್ಪಟ್ಟ ಮನಸ್ಸೂ ಅದರ ವೃತ್ತಿ ಭೇದಗಳನ್ನುಳ್ಳವನಾಗಿ ಎಂಬರ್ಥವು, ಇದು ಮನಸ್ಸಿಗೆ ಅಧೀನವಾದ ಸರ್ವೇಂದ್ರಿಯ ನಿಯಮನಕ್ಕು ಉಪಲಕ್ಷಣವು, ತ್ಯಕ್ತಸರ್ವಪರಿಗ್ರಹಃ ಎಂದರೆ **ಆತ್ಮೈಕ ಪ್ರಯೋಜನತಯಾ ಪ್ರಕೃತಿ ಪ್ರಾಕೃತವಸ್ತುನಿ ಮಮತಾ ರಹಿತಃ** - ಜೀವಾತ್ಮ ಸ್ವರೂಪ ಜ್ಞಾನವೇ ಮುಖ್ಯ ಪ್ರಯೋಜನವಾಗಿರುವ್ಹೋದರಿಂದ ದೇಹದಲ್ಲೂ ಮತ್ತು ಇತರ ಲೋಕದ ವಸ್ತುಗಳಲ್ಲೂ ಮಮತಾರಹಿತನಾಗಿ, ಭೋಗ್ಯ ಭೋಗೋಪಕರಣ ಭೋಗಸ್ಥಾನಗಳಲ್ಲಿ ಮಮತೆ ಯಿಲ್ಲದವನಾಗಿ ಎಂಬರ್ಥವು, ತ್ಯಕ್ತ ಸರ್ವಪರಿಗ್ರಹಃ ಎಂಬಲ್ಲಿ ಪರಿಗ್ರಹ ಶಬ್ದವು ಐಹಿಕ ವಿಷಯವನ್ನು ಬೋಧಿಸುತ್ತದೆ; ಆದುದರಿಂದ ಸಮಸ್ತ ಐಹಿಕಗಳಲ್ಲೂ ಸ್ವಕೀಯ ಭಾವವನ್ನು ಎಂದರೆ ಮಮತೆಯನ್ನು ತೊರೆದವನಾಗಿ ಎಂಬರ್ಥವು. ಹೀಗೆ ಕರ್ಮಯೋಗದ ಆತ್ಮಯಾಥಾತ್ಮ್ಯಜ್ಞಾನದ ಮಹಿಮೆಯಿಂದ, ಈ ಕರ್ಮಯೋಗನಿಷ್ಠನು ನಿರಾಶೀಃ, ಯತಚಿತ್ತಾತ್ಮಾ, ತ್ಯಕ್ತಸರ್ವ ಪರಿಗ್ರಹಃ ಎಂಬ ಮೂರು ಪದಗಳಿಂದ ಹೇಳಲ್ಪಟ್ಟ ಪರಿಶುದ್ಧಿಯನ್ನು ಕ್ರಮೇಣ ಹೊಂದುವನೆಂಬ ಭಾವವು. **ಯಾವಜ್ಜೀವಂ**-ಜೀವವಿರುವವರೆವಿಗೂ, **ಕೇವಲಂ ಶಾರೀರಮೇವ ಕರ್ಮ ಕುರ್ವನ್** - ತಾನು ಶರೀರಯಾದುದರಿಂದ ಬಿಡಲಸಾಧ್ಯವಾದ ಶರೀರ ಧಾರಣ ಪೋಷಣರೂಪ ಕರ್ಮವನ್ನು ಮಾಡಿದರೂ ಕೂಡ, ಕಿಲ್ಬಿಷಂ ಎಂದರೆ ಸಂಸಾರವನ್ನು, ಪಾಪದಿಂ

ಭಾ. ನಾಪ್ನೋತಿ, ಜ್ಞಾನನಿಷ್ಠಾವ್ಯವಧಾನರಹಿತ ಕೇವಲ ಕರ್ಮಯೋಗೇನೈವಂ ರೂಪೇಣಾತ್ಮಾನಂ ಪಶ್ಯತೀತ್ಯರ್ಥಃ.

ದಾಗಲಿ ಪಾಪಮಾಡುವವರಿಂದಾಗಲಿ ಪ್ರಾಪ್ತವಾಗುವ ಪುನಸ್ಸಂಸಾರವನ್ನು, ನಾಪ್ನೋತಿ - ಹೊಂದುವದಿಲ್ಲವು, ಅಥವಾ ಶಾರೀರಂ ಕೇವಲಂ ಕರ್ಮವೆಂದು ಹೇಳಿರುವದು ಫಲಾಭಿಸಂಧಿ ಇಲ್ಲದಿರುವದರಿಂದ ಕರ್ಮವು ಶರೀರಸಂಬಂಧಮಾತ್ರವುಳ್ಳದೇವಿನಾ, ಫಲಸಂಬಂಧವುಳ್ಳದಲ್ಲವೆಂಬದಾಗಿಯೂ ಆಗಬಹುದು. ಅಥವಾ ದೇಹಯಾತ್ರಾದಿ ವ್ಯಾಪಾರಗಳು ತಪ್ಪಿದ್ದಲ್ಲವೆಂದು ತಿಳಿಸುವದಕ್ಕಾಗಿಯಾಗಲಿ, ಶಾರೀರಂ ಕೇವಲಂ ಕರ್ಮ ವೆಂಬ ಪ್ರಯೋಗವು; ಅಥವಾ ಸ್ವರ್ಗಾದಿ ಪ್ರಾಪ್ತಿಗಾಗಿ ಕರ್ಮವಲ್ಲದೆ ಕೇವಲ ದೇಹಧಾರಣೆಗಾಗಿ ಮಾಡಿದ ಕರ್ಮವೆಂದಾದರೂ ಅರ್ಥಮಾಡಬಹುದು, ಆದರೆ ಜ್ಞಾನಯೋಗ ವ್ಯವಚ್ಛೇದದಿಂದ ಕರ್ಮಯೋಗವನ್ನೇ ಮಾಡು ಎಂದು ಪದೇ ಪದೇ ಉಪದೇಶಿಸುತ್ತಿರುವದರಿಂದ, ಆ ಅಭಿಪ್ರಾಯಕ್ಕೆ ಅನುಕೂಲವಾಗಿ, ಕೇವಲಂ ಶಾರೀರಕರ್ಮ - ಇಂದ್ರಿಯಗಳಿಂದ ಕೂಡಿದ ಶರೀರಕ್ಕೆ ಉಚಿತವಾದ ಜ್ಞಾನಯೋಗ ನಿರಪೇಕ್ಷವಾದ ಕೇವಲ ಕರ್ಮಯೋಗವನ್ನು ಮಾಡಿದರೂ, ನಾಪ್ನೋತಿ ಕಿಲ್ಬಿಷಂ - ಪುನಸ್ಸಂಸಾರವನ್ನು ಹೊಂದುವದಿಲ್ಲವೆಂದು ಹೇಳಲ್ಪಟ್ಟಿತು. ಈ ಅಭಿಪ್ರಾಯವೇ ಹಿಂದೆ "ಕರ್ಮಭಿರ್ನಸಬಧ್ಯತೇ"ಎಂದೂ (೧೪) "ಮೋಕ್ಷ್ಯಸೇಽಶುಭಾತ್"ಎಂದೂ (೧೬) ಹೇಳಲ್ಪಟ್ಟಿತು. ಇಲ್ಲಿ ಮೂಲದಲ್ಲಿಲ್ಲದಿರುವ ಯಾವಜ್ಜೀವಂ ಎಂಬ ಪದವನ್ನು ಏಕೆ ಉಪಯೋಗಿಸಿದರು ಎಂದರೆ, ಕೇವಲಂ ಶಾರೀರ ಕರ್ಮ ಎಂಬಲ್ಲಿ ಶರೀರವು ಯಾವಜ್ಜೀವವೂ ಇರುವದರಿಂದ ಹಾಗೆ ಪ್ರಯೋಗವು. ಹೀಗೆ ಕರ್ಮಯೋಗದಿಂದಲೇ ಉಪಾಸನ ನಿಷ್ಪತ್ತಿ ಮೂಲಕ ಮುಕ್ತಿಯಾಗುವದರಿಂದ, ಕುರ್ವನ್ನಾಪ್ನೋತಿ ಕಿಲ್ಬಿಷಂ ಎಂದರೆ ಪುನಸ್ಸಂಸಾರ ಪ್ರಾಪ್ತಿಯಿಲ್ಲವೆಂದು [ಅರ್ಥಮಾಡಿದರು. ಈ ಅಭಿಪ್ರಾಯವನ್ನೇ ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ. ಜ್ಞಾನನಿಷ್ಠಾ ವ್ಯವಧಾನ ರಹಿತ- ಜ್ಞಾನಯೋಗವು ಮಧ್ಯೆ ಇರಬೇಕಾದ ಆವಶ್ಯಕತೆಯಿಲ್ಲದೆ, ಕೇವಲ ಕರ್ಮ ಯೋಗೇನೈವಂ- ಬರೀ ಕರ್ಮಯೋಗದಿಂದ ಹಿಂದೆ ಉಪಪಾದಿಸಿದ ರೀತಿಯಲ್ಲಿ, ಆತ್ಮಾನಂ ಪಶ್ಯತೀತ್ಯರ್ಥಃ-ಜೀವಾತ್ಮ ಸಾಕ್ಷಾತ್ಕಾರವನ್ನು ಹೊಂದುವನೆಂಬ ಭಾವವು, ಕೇವಲಂ ಶಾರೀರಂ ಕರ್ಮವೆಂದಿರುವದರಿಂದ ಕರ್ಮಯೋಗಕ್ಕೆ ಬೇಕಾದ ಯಜ್ಞಯಾಗಾದಿಗಳು ಬೇಡವೆಂಬರ್ಥ ಬಂದೀತಾಗಿ ಜ್ಞಾನಯೋಗದ ಆವಶ್ಯಕತೆ ಯಿಲ್ಲದೆ ಬರೀ ಕರ್ಮಯೋಗದಿಂದಲೇ ಆತ್ಮಸಾಕ್ಷಾತ್ಕಾರವನ್ನು ಹೊಂದಬಹುದೆಂಬ ಭಾವದಿಂದ ಶಾರೀರಂ ಕೇವಲಂ ಕರ್ಮವೆಂದು ಹೇಳಲ್ಪಟ್ಟಿತು. ಈ ಅಭಿಪ್ರಾಯವು ಹಿಂದೆಯೇ "ಕರ್ಮಣೈವ ಹಿ ಸಂಸಿದ್ಧಿ ಮಾಸ್ಥಿತಾಜನಕಾದಯಃ" (ಗೀ. ೩. ೨೦) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಅದೇ ಇಲ್ಲಿಯೂ ಸೂಚಿತವು. ಅನುದಿಂದ ಆತ್ಮ ಯಾಥಾತ್ಮ್ಯಜ್ಞಾನದಿಂದ ಪ್ರಾಚೀನ ಕರ್ಮಗಳ ವಿನಾಶವೂ, ಮುಂದೆ ಪಾಪ ಪ್ರವೃತ್ತಿಗೆ ಕಾರಣವೂ ಇಲ್ಲದೆ ಇರುತ್ತದೆ. ಹೀಗೆ ಉತ್ತರೋತ್ತರ ಅನಿಷ್ಟ ನಿವೃತ್ತಿಮೂಲಕ ಇಷ್ಟಪ್ರಾಪ್ತಿಯುಂಟಾಗುತ್ತದೆಂದು ಹೇಳಲ್ಪಟ್ಟಿತು. ಇಲ್ಲಿ ನಾಪ್ನೋತಿ ಕಿಲ್ಬಿಷಂ ಎಂಬಲ್ಲಿ ಪುನಸ್ಸಂಸಾರಕ್ಕೆ ಹೇತುವಾದ ಪಾಪರೂಪಕರ್ಮ ಅಥವಾ ಪುಣ್ಯರೂಪಕರ್ಮ ಅಷ್ಟು ಮಾತ್ರವೇ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು; ಪುಣ್ಯವೂ ಬಂಧಕವಾದುದರಿಂದ ಫಲಸಙ್ಗಾದಿಗಳಿಂದ ಮಾಡಿದರೆ ಅದೂ ಬಂಧಕವಾದುದರಿಂದ, ಪುಣ್ಯವೂ ಈ ಕಿಲ್ಬಿಷ ಶಬ್ದದಲ್ಲೇ ಅಂತರ್ಗತವು. ಪಾಪವು ಕಬ್ಬಿಣದ ಬೇಡಿಗೆ ಸಮಾನವಾದರೆ ಪುಣ್ಯವು ಚಿನ್ನದ ಬೇಡಿಯು, ಅಂತೂ ಅದೂ ಬಂಧಕವೇ ಎಂದು ಶ್ರೀ ನಿಗಮಾನ್ತದೇಶಿಕರವರು ಹೇಳಿರುತ್ತಾರೆ. ಪುಣ್ಯವೂ ಬಂಧಕವೆಂದೇ "ಪುಣ್ಯಪಾಪೇವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" ಎಂಬ ಶ್ರುತಿಯು ಹೇಳುತ್ತದೆ. (ಮುಂ. ೩. ೧. ೩)

ಮೂ. ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
ಸಮಸ್ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥ ೨೨.

ಭಾ. ಯದೃಚ್ಛೋಪನತ ಶರೀರಧಾರಣ ಹೇತು ವಸ್ತುಸನ್ತುಷ್ಟಃ, ದ್ವಂದ್ವಾತೀತಃ-ಯಾವತ್ಸಾಧನ ಸಮಾಪ್ತ್ಯ ವರ್ಜನೀಯ ಶೀತೋಷ್ಣಾದಿ ಸಹಃ ; ವಿಮತ್ಸರಃ-ಅನಿಷ್ಟೋಪ

ಅವತಾರಿಕೆಯು:—ಹಿಂದೆ ಕೇವಲ ಶಾರೀರ ಕರ್ಮಗಳನ್ನು ಮಾಡುವವನಾಗಿ, ಕಿಲ್ಬಿಷಂ ನಾಪ್ನೋತಿ-ಪಾಪಗಳಿಗೆ ಗುರಿಯಾಗುವದಿಲ್ಲವೆಂದು ಹೇಳಲ್ಪಟ್ಟಿತು. ಕೇವಲ ಶಾರೀರ ಕರ್ಮಗಳಾದರೂ ಶರೀರ ಧಾರಣಾದಿಗಳಿಗೆ ಬೇಕಾದ ದ್ರವ್ಯಾರ್ಜನೆ ಮುಂತಾದವುಗಳಲ್ಲಿ ಪ್ರವೃತ್ತಿಯುಂಟಾಗುತ್ತದೆ; ಅಂತಹ ಪ್ರವೃತ್ತಿಗಳಲ್ಲಿ ಪ್ರತಿಬಂಧಕಾದಿಗಳು ಪ್ರಾಪ್ತವಾಗಬಹುದು, ಕ್ಷತ್ರಿಯನಾದುದರಿಂದ ಯುದ್ಧಾದಿಗಳುಂಟಾಗಿ ಶಸ್ತ್ರಪಾತಾದಿಗಳಿಂದ ಸುಖದುಃಖಗಳುಂಟಾಗಬಹುದು. ಅಂತಹ ಪ್ರವೃತ್ತಿಗಳಿಗೆ ವಿಘಾತಉಂಟಾದಾಗ ಕ್ರೋಧಾದಿಗಳೂ ತನ್ಮೂಲಕ ಮಾತ್ಸರ್ಯವೂ ಪ್ರಾಪ್ತವಾಗಬಹುದು. ಹೀಗೆಲ್ಲಾ ಇರುವಾಗ ಹಿಂದೆ ಕುರ್ವನ್ನಾಪ್ನೋತಿ ಕಿಲ್ಬಿಷಂ ಎಂದು ಹೇಳಲ್ಪಟ್ಟಿತಲ್ಲಾ, ಅದು ಹೇಗೆ ಎಂಬ ಶಙ್ಕಾ ತೋರಬಹುದು. ಅಂತಹ ಶಂಕೆಗೆ ಕಾರಣವಿಲ್ಲವೆಂದು ತಿಳಿಸಿ, ಕುರ್ವನ್ನಾಪ್ನೋತಿ ಕಿಲ್ಬಿಷಂ ಎಂದು ಹೇಳಿದುದನ್ನೇ ಈ ಶ್ಲೋಕದ ಮೂಲಕ ಕೃತ್ವಾಪಿ ನನಿಬಧ್ಯತೇ ಎಂದು ಹೇಳಿ ಸ್ಥಾಪಿಸುತ್ತಾರೆ. ಇವೇದಮೂ ನ ಕರ್ಮ ಲಿಪ್ಯತೇ ನರೇ - (ಈಶಾ. ೨) ಎಂಬ ಶ್ರುತ್ಯರ್ಥವನ್ನು ಬೋಧಿಸುತ್ತವೆ. ವಿದ್ಯಾಙ್ಗವಾಗಿ ಮಾಡುವ ಕರ್ಮಯೋಗ ಕರ್ಮಗಳು, ನರೇ - ಮೋಕ್ಷಾರ್ಥಿಯಲ್ಲಿ, ಲೇಪಿಸುವುದಿಲ್ಲವು.

ಮೂಲಕ್ಕೆ ಅರ್ಥವು :—ಯದೃಚ್ಛಾಲಾಭಸಂತುಷ್ಟಃ - ಸರ್ವೇಶ್ವರನ ಇಷ್ಟಾನುಸಾರ ಪ್ರಾಪ್ತವಾದುದಲ್ಲೇ ಸಂತುಷ್ಟನಾಗಿ, ಹಾಗೆ ಪ್ರಾಪ್ತವಾಗುವ ಸಂದರ್ಭವಲ್ಲಿ ಅನುಕೂಲ ಪ್ರತಿಕೂಲ ಭಾವಗಳು ತಪ್ಪಿದ್ದಲ್ಲವು, ಅನುಕೂಲಭಾವವೇ ಸುಖವು, ಪ್ರತಿಕೂಲಭಾವವೇ ದುಃಖವು, ಹೀಗೆ "ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರ ಸುಖಂ" ಎಂದು ಪರಂಪರಯಾ ಪ್ರಾಪ್ತವಾಗುವಾಗಲೂ ಇವನಿಗೆ ಆತ್ಮಯಾಥಾತ್ಮ್ಯಜ್ಞಾನವು ಹುಟ್ಟಿರುವದರಿಂದ ದ್ವಂದ್ವಾತೀತಃ - ಶೀತೋಷ್ಣ ಸುಖದುಃಖಾನುಭವಗಳಿಗೂ ಅತೀತನು, ದಾಟಿದವನು, ಅವುಗಳನ್ನು ಪರಿಗಣಿಸದೇ ಇರುವವನೆಂಬರ್ಥವು, ಪ್ರತಿಕೂಲರಾಗಿ ಯಾರಾದರೂ ಆಚರಿಸಿದರೆ ಸಾಧಾರಣ ಮನುಷ್ಯನಿಗೆ ಅವರಲ್ಲಿ ಮಾತ್ಸರ್ಯ ಉಂಟಾಗುತ್ತದೆ, ಈತನಿಗೆ ಆತ್ಮ ಯಾಥಾತ್ಮ್ಯಸ್ವರೂಪ ಜ್ಞಾನವಿರುವದರಿಂದ, ಇದಕ್ಕೆ ಅವರುಗಳು ಕಾರಣವಲ್ಲವು, ತನ್ನ ಕರ್ಮವೇ ಕಾರಣವೆಂದು ಭಾವಿಸಿ, ಅವರುಗಳಲ್ಲಿ ವಿಮತ್ಸರಃ - ಮಾತ್ಸರ್ಯವಿಲ್ಲದವನು, ಹೀಗೆ ಸಿದ್ಧೌ ಅಸಿದ್ಧೌ ಚ - ತಾನು ಪ್ರವರ್ತಿಸಿದ ಕೆಲಸದಿಂದ ಫಲಸಿದ್ಧಿಯುಂಟಾಗಲಿ ಯುಂಟಾಗದೇ ಇರಲಿ, ಫಲಸಿದ್ಧಿಯಿಂದ ಹರ್ಷವೂ ಅಸಿದ್ಧಿಯಿಂದ ಶೋಕವೂ ಇಲ್ಲದೆ, ಸಮಃ - ಸಮ ಮನಸ್ಕನಾಗಿರುವವನು, ಇಂತಾವನು, ಕೃತ್ವಾಪಿ - ಇದಕ್ಕೆ ಕರ್ಮವು ಹೇಳಲ್ಪಡಲಿಲ್ಲವಾಗಿ, ಹಿಂದಿನ ಶ್ಲೋಕದ ಶಾರೀರಂ ಕೇವಲಂ ಕರ್ಮ - ಕರ್ಮಯೋಗದಲ್ಲಿ ಶರೀರಯಾತ್ರೆಗೆ ಬೇಕಾದ ಕರ್ಮಗಳನ್ನೂ ಮಾಡಿದರೂ ಕೂಡ, ಇದರಿಂದ ಜ್ಞಾನಯೋಗದ ಆವಶ್ಯಕತೆಯಿಲ್ಲದೆ ಕರ್ಮಯೋಗದ ಕರ್ಮಗಳನ್ನು ಮಾತ್ರವೇ ಅನುಷ್ಠಿಸಿದರೂ ಕೂಡ, ನನಿಬಧ್ಯತೇ - ಸಂಸಾರಬಂಧಕ್ಕೆ ಸಿಕ್ಕುವದಿಲ್ಲವು. ॥೨೨॥

ಭಾಷ್ಯಾರ್ಥವು:—ಈ ಆತ್ಮಯಾಥಾತ್ಮ್ಯಜ್ಞಾನದ ಮೂಲಕ, ಯದೃಚ್ಛೋಪನತ-ದೇವರು ಕೊಟ್ಟಿದ್ದರಿಂದ ಪ್ರಾಪ್ತವಾದ, ಶರೀರಧಾರಣಹೇತು ವಸ್ತು-ಶರೀರಧಾರಣೆಗೆ ಬೇಕಾದ ವಸ್ತುವಿನಿಂದ, ಸಂತುಷ್ಟಃ-ಹರ್ಷಗೊಂಡವನಾಗಿ, ಇದು ಯದೃಚ್ಛಾಲಾಭ ಸಂತುಷ್ಟಃ ಎಂಬುದರರ್ಥವು,

ಭಾ. ನಿಪಾತಹೇತುಭೂತ ಸ್ವಕರ್ಮ ನಿರೂಪಣೇನ ಪರೇಷು ವಿಗತಮತ್ಸರಃ, ಸಮಸ್ಸಿದ್ಧಾವ ಸಿದ್ಧೌ ಚ - ಯುದ್ಧಾದಿ ಕರ್ಮಸು ಜಯಾದಿ ಸಿದ್ಧ್ಯಸಿದ್ಧ್ಯೋಸ್ಸಮಚಿತ್ತಃ ಕರ್ಮೈವ ಕೃತ್ವಾಪಿ ಜ್ಞಾನನಿಷ್ಠಾಂ ವಿನಾಪಿ, ನ ನಿಬಧ್ಯತೇ-ನ ಸಂಸಾರಂ ಪ್ರತಿಪದ್ಯತೇ ||೨೨||

ದ್ವಂದ್ವಾತೀತಃ ಎಂದರೆ ಯಾವತ್ಸಾಧನ ಸಮಾಪ್ತಿ ಅವರ್ಜನೀಯ ಶೀತೋಷ್ಣಾದಿ ಸಹಃ - ಕರ್ಮಸಾಧನೆಯು ಸಮಾಪ್ತಿಯನ್ನು ಹೊಂದುವವರೆಗೂ ತಪ್ಪಿದ್ದಲ್ಲವಾದ ಶೀತೋಷ್ಣ ಮೊದಲಾದ ಸುಖದುಃಖಗಳನ್ನು ಸಹಿಸುವವನಾಗಿ, ಹಿಂದೆ ಗೀತಾ ೨.೧೪ ರಲ್ಲಿ "ಮಾತ್ರಾಸ್ಪರ್ಶಾಸ್ತು" ಎಂಬಲ್ಲಿ ಹೇಳಿದಭಿಪ್ರಾಯವೇ ಇಲ್ಲಿ ಸೂಚಿಸಲ್ಪಟ್ಟಿತು. ವಿಮತ್ಸರಃ-ಎಂದರೆ ಅನಿಷ್ಟೋಪನಿಪಾತ ಹೇತು ಭೂತಸ್ವಕರ್ಮ ನಿರೂಪಣೇನ ಪರೇಷು ವಿಗತಮತ್ಸರಃ-ಅನಿಷ್ಟವಾದುದು ಉಂಟಾಗುವುದಕ್ಕೆ ಕಾರಣಭೂತವಾದುದು ತನ್ನ ಪ್ರಾರಬ್ಧ ಕರ್ಮವು ಎಂದು ಹೇಳುವದರಿಂದ ಆ ಅನಿಷ್ಟಕ್ಕೆ ಕಾರಣ ರಾಗಿ ತೋರುವ ಇತರರಲ್ಲಿ ಹೋಗಲ್ಪಟ್ಟ ಮಾತ್ಸರ್ಯವುಳ್ಳವನು, ಸಮಸ್ಸಿದ್ಧಾವ ಸಿದ್ಧೌ ಚ ಎಂದರೆ ಯುದ್ಧಾದಿ ಕರ್ಮಸು ಜಯಾದಿ ಸಿದ್ಧ್ಯಸಿದ್ಧ್ಯೋಸ್ಸಮಚಿತ್ತಃ - ಯುದ್ಧವೇ ಮೊದ ಲಾದ ಕರ್ಮಗಳಲ್ಲಿ ಜಯವೇ ಮೊದಲಾದ ಸಿದ್ಧಿಯಾಗಲಿ ಅಸಿದ್ಧಿಯಾಗಲಿ ಉಂಟಾದರೂ ಮನಸ್ಸು ಪರಿತಾಪಾದಿಗಳನ್ನು ಹೊಂದದೆ ಸಮವಾಗಿರುವ ಮನಸ್ಸುಳ್ಳವನು, ಈ ಅಭಿಪ್ರಾ ಯವು ಹಿಂದೆಯೂ "ಸುಖದುಃಖೇ ಸಮೇಕೃತ್ವಾ" ಎಂಬ (೨. ೩೮.) ಶ್ಲೋಕದಲ್ಲೂ, "ಸಿದ್ಧ್ಯ ಸಿದ್ಧ್ಯೋಸ್ಸಮೋಭೂತ್ವಾ" ಎಂಬ (೨. ೪೮) ಶ್ಲೋಕದಲ್ಲೂ ಉಪಪಾದಿತವು. ಸಿದ್ಧಾವ ಸಿದ್ಧೌ ಚ ಎಂದು ಸಾಮಾನ್ಯವಾಗಿ ಹೇಳಲ್ಪಟ್ಟಿದ್ದರೂ, ಕ್ಷತ್ರಿಯನಾದ ಅರ್ಜುನನಿಗೆ ಉಪದೇಶಿ ಸುವ ಪ್ರಕರಣವಾದುದರಿಂದ ಯುದ್ಧಾದಿ ಕರ್ಮಸು ಜಯಾದಿ ಸಿದ್ಧ್ಯಸಿದ್ಧ್ಯೋಃ ಎಂದು ಭಾಷ್ಯವು. ಆದರೆ ಬ್ರಾಹ್ಮಣಾದಿ ಇತರರಿಗೂ ಅನ್ವಯಿಸುವದಕ್ಕಾಗಿ, ಆದಿಶಬ್ದ ಪ್ರಯೋಗವು. ಕರ್ಮೈವಕೃತ್ವಾಪಿ - ಕೃತ್ವಾಪಿ ಎಂಬುದು ಕರ್ಮವನ್ನಪೇಕ್ಷಿಸುತ್ತದೆ, ಆದುದರಿಂದ ಕರ್ಮೈವ ಕೃತ್ವಾಪಿ ಎಂದು ವ್ಯಾಖ್ಯಾನಮಾಡಿರುತ್ತಾರೆ, ಕರ್ಮಯೋಗಾಂತರ್ಗತ ಶಾರೀರಾದಿ ಕರ್ಮಗ ಳನ್ನು ಮಾಡಿದರೂ ಕೂಡ, ಜ್ಞಾನನಿಷ್ಠಾಂವಿನಾಪಿ - ಜ್ಞಾನಯೋಗದ ನಿಷ್ಠೆಯಿಲ್ಲದಿದ್ದರೂ ಕೂಡ, ನನಿಬಧ್ಯತೇ ಎಂದರೆ ನ ಸಂಸಾರಂ ಪ್ರತಿಪದ್ಯತೇ - ಪುನಃ ಸಂಸಾರವನ್ನು ಹೊಂದು ವದಿಲ್ಲವು. ಆತ್ಮಯಾಥಾತ್ಮ್ಯಸ್ವರೂಪಜ್ಞಾನದ ಮಹಿಮೆಯಿಂದ, ಈ ಕರ್ಮಯೋಗಾರಂಭ ಕನು ಶರೀರಧಾರಣೆಗೆ ಬೇಕಾದ ವಸ್ತುಗಳನ್ನು ದೇವರು ಕೊಟ್ಟಿದ್ದರಲ್ಲೇ ತೃಪ್ತನಾಗಿ, ಇನ್ನೂ ಬೇಕು, ಇನ್ನೂ ಬೇಕು ಎಂಬ ದುರಾಶೆ ಕ್ಲೇಶಗಳಿಗೆ ಒಳಗಾಗುವದಿಲ್ಲವು. ಇವನ ಪ್ರವೃತ್ತಿಗಳಲ್ಲಿ ಕೆಲವು ಅನುಕೂಲವಾಗಿಯೂ ಕೆಲವು ಪ್ರತಿಕೂಲವಾಗಿಯೂ ಪರಿಣಮಿಸುವುವು. ಇವುಗಳು ಹೇಗೆ ಪರಿಣಮಿಸಿದರೂ ಸಹಿಸಿಕೊಳ್ಳುವನು; ಯಾರ ಮೂಲಕವಾಗಿಯಾಗಲಿ ಪ್ರತಿಕೂಲವಾದ ಅನಿಷ್ಟವು ಪ್ರಾಪ್ತವಾದರೂ ತನ್ನ ಪ್ರಾರಬ್ಧಾನುಗುಣವಾಗಿ ಉಂಟಾಯಿತೆಂದು ತಿಳಿದವನಾಗಿ ಆ ಅನಿಷ್ಟಕ್ಕೆ ಹೇತುಭೂತರಾದವರಲ್ಲಿ ಮಾತ್ಸರ್ಯವಿಲ್ಲದೇ ಇರುವನು, ಮತ್ತು ಅದರಿಂದ ತಪ್ಪಿಸಿಕೊಳ್ಳಲು ಯಾವ ಪ್ರಯತ್ನವೋ ಅದನ್ನು ಮಾಡುವನು; ಸೂರ್ಯನ ತಾಪವು ಹೆಚ್ಚಾ ದಾಗ ಸೂರ್ಯನಮೇಲೆ ಕೋಪಿಸಿ ಫಲವೇನು? ಅದರ ನಿವಾರಣೆಗಾಗಿ ಛತ್ರವನ್ನು ಹಿಡಿದು ಕೊಳ್ಳುವದು ಹೇಗೆ ಯುಕ್ತವೋ, ಹಾಗೆಯೇ ಇತರರಿಂದ ನಮಗೆ ತೊಂದರೆಯಾದರೆ, ಅದಕ್ಕೆ ಕಾರಣವು ನಮ್ಮ ಪ್ರಾರಬ್ಧ ಕರ್ಮವಾದುದರಿಂದ ಅವರನ್ನು ದ್ವೇಷಿಸದೆ, ಅವರಿಗೆ ಪ್ರತೀಕಾರವನ್ನು ಮಾಡದೇ, ಅದರಿಂದ ತಪ್ಪಿಸಿಕೊಳ್ಳಲು ಯತ್ನಿಸುವನು. ಕಾರ್ಯಸಿದ್ಧಿಯುಂಟಾಗಲಿ ಉಂಟಾಗದೆ ಇರಲಿ ಸಮಚಿತ್ತನಾಗಿರುವನು. ಹೀಗೆ ಕರ್ಮಯೋಗದಲ್ಲಿ ಪ್ರವರ್ತಿಸಿದವನಿಗೆ ಕರ್ಮಯೋಗಾ

ಮೂ. ಗತಸಙ್ಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತ ಚೇತಸಃ ।
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩.

ನಂತರ ಜ್ಞಾನಯೋಗದ ಆವಶ್ಯಕತೆಯಿಲ್ಲದೆ ಭಕ್ತಿಯೋಗದಮೂಲಕ ಬಂಧವನ್ನು ನೀಗಿಕೊಳ್ಳುವನು ಎಂಬ ತಾತ್ಪರ್ಯವು. ಜ್ಞಾನಯೋಗದಿಂದುಂಟಾಗುವ ಆತ್ಮಸಾಕ್ಷಾತ್ಕಾರದ ಫಲವನ್ನು ಕರ್ಮಯೋಗ ಭಕ್ತಿಯೋಗ ನಿಷ್ಠೆಗಳಿಂದಲೇ ಹೊಂದುವನೆಂಬ ಭಾವವೂ ಸೂಚಿತವು. ||೨೨||

ಅವತಾರಿಕೆ.—ಆತ್ಮಯಾಥಾತ್ಮ್ಯಜ್ಞಾನದೊಂದಿಗೆ ಕರ್ಮಯೋಗವನ್ನನುಷ್ಠಿಸುವವನಿಗೆ ಆ ಜ್ಞಾನಮಾಹಾತ್ಮ್ಯದಿಂದ ಕರ್ಮಯೋಗ ಪ್ರತಿಬಂಧಕಗಳಾದ ಸಕಲ ಕರ್ಮಗಳೂ ತೊಲಗಿ, ಉಪಾಯ ನಿಷ್ಪತ್ತಿಮೂಲಕ ಸಮಸ್ತ ಕರ್ಮಗಳೂ ನಾಶವಾಗುವುವು. ಹೀಗೆ ಸರ್ವಾನಿಷ್ಟ ನಿವೃತ್ತಿಯುಂಟಾಗುವ ದ್ವಾರಾ ಇಷ್ಟಪ್ರಾಪ್ತಿಯುಂಟಾಗುತ್ತದೆಂದು ಹೇಳುತ್ತಾರೆ. ಹೀಗೆ ೨೧, ೨೨, ೨೩ ಈ ಮೂರು ಶ್ಲೋಕಗಳಮೂಲಕ ಆತ್ಮಯಾಥಾತ್ಮ್ಯಜ್ಞಾನದ ಮಹಿಮೆಯೂ ಅದರಿಂದ ತಾತ್ಕಾಲಿಕ ಮತ್ತು ಉತ್ತರೋತ್ತರ ಉಂಟಾಗುವ ಪ್ರಯೋಜನಗಳೆಲ್ಲಾ ಉಪಪಾದಿಸಲ್ಪಟ್ಟವು. ಸ್ಯಮಂತಕ ತೀರ್ಥದಲ್ಲಿ ವಸುದೇವನು ಅಲ್ಲಿ ನೆರೆದಿರುವ ಋಷಿಗಳನ್ನು ಕುರಿತು ಪ್ರಶ್ನಿಸುತ್ತಾನೆ ಏನೆಂದರೆ,—"ಕರ್ಮಣಾಕರ್ಮನಿರ್ಹಾರೋ ಯಥಾಸ್ಯಾನ್ನಸ್ತದುಚ್ಯತಾಂ" ಕರ್ಮದಿಂದ ಎಂದರೆ ಕರ್ಮಯೋಗದಿಂದ ಕರ್ಮನಾಶವು; ಭಕ್ತಿಯೋಗವಾದ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪ್ರಾಚೀನ ಕರ್ಮಗಳ ನಾಶವು ಹೇಗೆ ಉಂಟಾಗುತ್ತದೋ ಅದನ್ನು ನಮಗೆ ದಯಮಾಡಿ ಉಪದೇಶಿಸತಕ್ಕದ್ದು, ಎನ್ನಲು, ಅದಕ್ಕೆ ಋಷಿಗಳು "ಅಯಂ ಸ್ವಸ್ತ್ಯಯನಃಪಂಥಾಃ" ಇದೀಗ ಶ್ರೇಯಃಪ್ರಾಪಕ ಮಾರ್ಗವು, ಅದು ಯಾವುದೆಂದರೆ.—"ಯಚ್ಛ್ರದ್ಧಯಾಪ್ತವಿತ್ತೇನ ಶುಕ್ಲೇನೇಜ್ಯೇತ ಪೂರುಷಃ" ಶುದ್ಧವಾಗಿ ಆರ್ಜಿಸಿದ ಧನದಿಂದ ಎಂದರೆ ಪರಪೀಡಾದಿಗಳಿಲ್ಲದೆ ಧರ್ಮದಿಂದ ಸಂಪಾದಿಸಲ್ಪಟ್ಟ ಧನದಿಂದ ಪರಮ ಪುರುಷನನ್ನು ಶ್ರದ್ಧೆಯಿಂದ ಆರಾಧಿಸೋಣವು ಯಾವುದೋ ಅದು ಎಂದು ಉಪದೇಶಿಸಿದರು. ಭಾಗವತ ದಶಮಸ್ಕಂಧ ೮೪ನೆಯ ಅಧ್ಯಾಯವನ್ನು ನೋಡಿ; ಆದುದರಿಂದ ಆತ್ಮಯಾಥಾತ್ಮ್ಯಜ್ಞಾನದಿಂದ ಪರಮ ಪುರುಷಾರಾಧನರೂಪವಾದ ಯಜ್ಞಗಳುಳ್ಳ ಕರ್ಮಯೋಗವನ್ನು ಫಲಾಭಿಸಂಧಿರಹಿತನಾಗಿ ಅನುಷ್ಠಿಸಿದರೆ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳೆಲ್ಲಾ ತೊಲಗಿ ಉಪಾಯನಿಷ್ಪತ್ತಿಯುಂಟಾಗಿ ಅನಿಷ್ಟನಿವೃತ್ತಿಯೊಂದಿಗೆ ಇಷ್ಟಪ್ರಾಪ್ತಿಯುಂಟಾಗುತ್ತದೆಂದು ಈ ಮೂರು ಶ್ಲೋಕಗಳಿಂದಲೂ ಹೇಳಲ್ಪಟ್ಟವು.

ಮೂಲಕ್ಕೆ ಅರ್ಥವು:—ಜ್ಞಾನಾವಸ್ಥಿತ ಚೇತಸಃ-ಜೀವಾತ್ಮನ ಯಥಾರ್ಥ ಸ್ವರೂಪಾನುಸಂಧಾನದಲ್ಲಿರುವ ಮನಸ್ಸುಳ್ಳವನಾದುದರಿಂದಲೇ, ಗತಸಂಗಸ್ಯ - ಆತ್ಮಯಾಥಾತ್ಮ್ಯಜ್ಞಾನ ಮಹಿಮೆಯ ಮುಂದೆ, ಐಹಿಕ ವಸ್ತುಗಳೆಲ್ಲಾ ತುಚ್ಛವಾಗಿ ತೋರುವದರಿಂದ ಅವುಗಳಲ್ಲಿ ಕಾಮನೆ ಇಲ್ಲದಿರುವ, ಮುಕ್ತಸ್ಯ - ಆ ಕಾರಣದಿಂದ, ಐಹಿಕಗಳಿಂದ ಬಿಡಲ್ಪಟ್ಟ ಪುರುಷನ, ಯಜ್ಞಾಯ-ಪರಮ ಪುರುಷಾರಾಧನರೂಪವಾದ ಕರ್ಮಯೋಗದ ಯಜ್ಞಗಳಿಗಾಗಿ, ಇಲ್ಲಿನ ಯಜ್ಞ ಶಬ್ದವು ಎಲ್ಲಾ ಕರ್ಮಯೋಗಪ್ರಭೇದಗಳಿಗೂ ಉಪಲಕ್ಷಣವು, ಆಚರತಃ - ಅನುಷ್ಠಿಸುವ ಮೋಕ್ಷಾರ್ಥಿಗೆ, ಕರ್ಮ ಸಮಗ್ರಂ - ಪ್ರಥಮತಃ ಉಪಾಯ ಪ್ರತಿಬಂಧಕ ಪ್ರಾಚೀನಕರ್ಮಗಳೂ ತದನಂತರ ಉಪಾಯ ನಿಷ್ಪತ್ತಿಯಿಂದ ಮಿಕ್ಕ ಎಲ್ಲಾ ಪುಣ್ಯಪಾಪರೂಪ ಕರ್ಮಗಳೂ ಪ್ರವಿಲೀಯತೇ - ಹೀಗೆ ಕ್ರಮೇಣ ಎಲ್ಲವೂ ಸಂಪೂರ್ಣವಾಗಿ ಕ್ಷೀಣವಾಗುತ್ತವೆ. ||೨೩||

ಭಾಷ್ಯಾರ್ಥವು:—ಕರ್ಮಯೋಗದಲ್ಲಿ "ತ್ಯಕ್ತ್ವಾ ಕರ್ಮಫಲಾಸಙ್ಗಂ" "ಯತಚಿತ್ತಾತ್ಮಾ" ತ್ಯಕ್ತಸರ್ವಪರಿಗ್ರಹಃ ಎಂಬಿವೇ ಮೊದಲಾದವುಗಳಿಂದ ಬುದ್ಧಿ ಪೂರ್ವಕವಾದ ಸಙ್ಗವು ಕೂಡದೆಂದು ಹಿಂದೆ ಹೇಳಲ್ಪಟ್ಟಿತು. ಈಗಲಾದರೋ ಯಜ್ಞಾದಿಗಳಿಗಾಗಿ ದ್ರವ್ಯಾರ್ಜ

ಭಾ. ಆತ್ಮವಿಷಯಜ್ಞಾನಾವಸ್ಥಿತಮನಸ್ತ್ವೇನ ನಿರ್ಗತತದಿತರಸಙ್ಗಸ್ಯ, ತತ ಏವ ನಿಖಿಲ ಪರಿಗ್ರಹವಿನಿರ್ಮುಕ್ತಸ್ಯ, ಉಕ್ತಲಕ್ಷಣಯಜ್ಞಾದಿ ಕರ್ಮನಿರ್ವೃತ್ತಯೇ ವರ್ತಮಾನಸ್ಯ ಪುರುಷಸ್ಯ ಬಂಧಹೇತುಭೂತಂ ಪ್ರಾಚೀನಂ ಕರ್ಮ ಸಮಗ್ರಂ ಪ್ರವಿಲೀಯತೇ - ನಿಶ್ಶೇಷಂ ಕ್ಷೀಯತೇ ||೨೩||

ನಾದಿ ಪ್ರವೃತ್ತಿಯಲ್ಲಿದ್ದರೂ ಈ ಕರ್ಮಯೋಗಿಗೆ ಕರ್ಮಯೋಗದ ಪ್ರಭಾವದಿಂದ ಅವುಗಳಲ್ಲಿ ಸಙ್ಗವಿಲ್ಲದೆ ಭಗವದರ್ಪಣ ಬುದ್ಧ್ಯಾ ಮಾಡುವದರಿಂದ, ಸಮಸ್ತ ವಿರೋಧಿರೂಪ ಕರ್ಮಗಳಿಂದಲೂ ಬಿಡಲ್ಪಡುವನೆಂದು ಹೇಳಲ್ಪಡುತ್ತದೆ:—ಆತ್ಮವಿಷಯ ಜ್ಞಾನಾವಸ್ಥಿತ ಮನಸ್ತ್ವೇನ ಇದು ಜ್ಞಾನಾವಸ್ಥಿತ ಚೇತಸಃ ಎಂಬುದರ ವ್ಯಾಖ್ಯಾನವು, ಆದರೆ ಷಷ್ಠ್ಯಂತ ಪದಕ್ಕೆ ತೃತೀಯಾರ್ಥವು ಹೇಗೆ ಎಂದರೆ, ಜ್ಞಾನಾವಸ್ಥಿತ ಚೇತಸನಾಗಿರುವದರಿಂದಲೇ ಗತಸಙ್ಗನೂ ಮುಕ್ತನೂ ಆಗಿರುವನು ಎಂಬ ಭಾವದಿಂದ ಹಾಗೆ ಪ್ರಯೋಗಿಸಿರುತ್ತಾರೆ; ತನ್ನ ಆತ್ಮವಿಷಯವಾದ ಜ್ಞಾನದಲ್ಲಿರುವ ಮನಸ್ಸುಳ್ಳವನಾದುದರಿಂದ, ನಿರ್ಗತ ತದಿತರಸಙ್ಗಸ್ಯ - ಇದು ಗತಸಂಗಸ್ಯ ಎಂಬುದರರ್ಥವು, ಹೋಗಲ್ಪಟ್ಟ ಆತ್ಮ ವ್ಯತಿರಿಕ್ತ ವಸ್ತುಗಳಲ್ಲಿ ಸಙ್ಗವುಳ್ಳ, ತತಏವ - ಆಕಾರಣದಿಂದಲೇ, ನಿಖಿಲಪರಿಗ್ರಹ ವಿನಿರ್ಮುಕ್ತಸ್ಯ - ಇದು ಮುಕ್ತಸ್ಯ ಎಂಬುದರ ವ್ಯಾಖ್ಯಾನವು, ಸಮಸ್ತ ಐಹಿಕ ವಸ್ತುಗಳನ್ನು ಸ್ವೀಕರಿಸಬೇಕೆಂಬ ಬುದ್ಧಿಯಿಂದ ಬಿಡಲ್ಪಟ್ಟ, ಯಾವಾಗ ಐಹಿಕ ವಸ್ತುಗಳಲ್ಲಿ ಸಂಗವಿಲ್ಲವೋ, ಆಗ ಭೋಗ್ಯವಸ್ತುಗಳು ಎದುರಿಗಿದ್ದರೂ ಅವುಗಳನ್ನು ಸ್ವೀಕರಿಸಬೇಕೆಂಬ ಬುದ್ಧಿಯು ಉತ್ಪನ್ನವಾಗುವದೇ ಇಲ್ಲವು, ಆಗ ಆ ಐಹಿಕಗಳಿಂದಲೇ ಈತನು ಬಿಡಲ್ಪಡುವನಾದುದರಿಂದ ಮುಕ್ತಸ್ಯ ಎಂಬ ಪ್ರಯೋಗವು, ಹೀಗೆ ಗತಸಂಗನಾಗಿಯೂ ಐಹಿಕಗಳಿಂದ ಬಿಡಲ್ಪಟ್ಟವನಾಗಿಯೂ ಆಗಲು ಕಾರಣವೇನೆಂದರೆ,ಜ್ಞಾನಾವಸ್ಥಿತಚೇತಸಃ ಎಂಬಭಿಪ್ರಾಯವು.ಆತ್ಮಜ್ಞಾನದೊಂದಿಗೆ ಕರ್ಮಯೋಗವನ್ನು ಅನುಷ್ಠಿಸುವದರ ಮಾಹಾತ್ಮ್ಯವು ಇಷ್ಟು ಅಮೋಘವಾದುದೆಂಬ ಭಾವವು. ಜ್ಞಾನಯೋಗದಲ್ಲಿ ಉಂಟಾಗುವ ಸಿದ್ಧಿಯೆಲ್ಲಾ ಈ ಕರ್ಮಯೋಗದಲ್ಲೇ ಲಭಿಸುತ್ತದೆ:ಆತ್ಮದ ಯಥಾವತ್ತಾದ ಜ್ಞಾನವು; ಐಹಿಕದಲ್ಲಿ ಜಿಹಾಸೆಯು; ಇಂದ್ರಿಯಗಳಿಗೆ ಐಹಿಕವಿಷಯಗಳಲ್ಲಿ ವಿರಾಗವೂ; ಇವೆಲ್ಲವೂ ಲಭಿಸುವದರಿಂದ ಭಕ್ತಿಯೋಗದಲ್ಲಿ ಪ್ರವೃತ್ತಿಯೂ, ಯೋಗನಿಷ್ಪತ್ತಿಯೂ ಎಲ್ಲವೂ ಸಿದ್ಧಿಸುವದರಿಂದ"ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷವಿನಾಶೌ" (೪-೧.೧೩) ಎಂಬ ಸೂತ್ರದಲ್ಲಿ ಹೇಳಿರುವಹಾಗೆ ಬಂಧಕಗಳಾಗಿದ್ದ ಸಕಲ ಪುಣ್ಯಪಾಪರೂಪ ಕರ್ಮಗಳೂ ಕ್ರಮೇಣ ನಾಶವಾಗುತ್ತವೆ. ಹೀಗೆ ಆತ್ಮಜ್ಞಾನವುಳ್ಳವನಿಗೆ ಸಂಪೂರ್ಣವಾಗಿ ಮನಸ್ಸು ಆತ್ಮಸ್ವರೂಪದಲ್ಲೇಯಾದುದರಿಂದ ಐಹಿಕಗಳನ್ನೆಲ್ಲಾ ತೊರೆಯುವದರಿಂದ ಇಲ್ಲಿಯೇ ಮುಕ್ತನಹಾಗೆ ಇರುವನೆಂದು ಭಾವವನ್ನೂ ತೋರಿಸುವದಕ್ಕಾಗಿ ಮುಕ್ತಸ್ಯ ಎಂಬ ಪ್ರಯೋಗವು. ಕೆಲವರು ಕರ್ಮ ಸಮಗ್ರಂ ಪ್ರವಿಲೀಯತೇ ಎಂಬ ಪ್ರಯೋಗವಿರುವದರಿಂದ, ಈ ಕರ್ಮಯೋಗಮಾತ್ರದಿಂದಲೇ ಪುಣ್ಯಪಾಪಗಳೆಲ್ಲಾ ಕಳೆದು ಹೋಗುವುವೆಂದೂ ಯಾವಾಗ ಪುಣ್ಯಪಾಪಗಳೆಲ್ಲಾ ಸಮಗ್ರವಾಗಿ ಹೋಯಿತೋ ಆವಾಗ "ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" ಎಂಬ ಶ್ರುತ್ಯನುಸಾರ ಮೋಕ್ಷಪ್ರಾಪ್ತಿಯೇ ಯಾದುದರಿಂದ ಕರ್ಮಯೋಗವೇ ಸಾಕ್ಷಾತ್ತಾಗಿ ಮೋಕ್ಷಸಾಧಕವೆಂದು ಭ್ರಮಿಸುವರು. ಇದಕ್ಕೆ ಸಹಾಯಕವಾಗಿ ಹಿಂದೆಯೂ ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾ ಜನಕಾದಯಃ ಎಂಬಲ್ಲಿಯೂ ಏವಕಾರದೊಂದಿಗೆ ಸಂಸಿದ್ಧಿ ಎಂದರೆ ಮೋಕ್ಷ ಉಂಟೆಂದು ಉಪದೇಶಿಸಲ್ಪಟ್ಟಿದೆ ಎಂದು ಹೇಳುವರು. ಅಲ್ಲಿ ಕರ್ಮಯೋಗವೇ ಜ್ಞಾನಯೋಗಕ್ಕಿಂತ ಶ್ರೇಯಾನ್ ಎಂದು ಹೇಳುವ ಪ್ರಕರಣವಾದುದರಿಂದ, ಕರ್ಮಣೈವ ಹಿ

ಭಾ. ಅವ. ಪ್ರಕೃತಿ ವಿಯುಕ್ತಾತ್ಮಸ್ವರೂಪಾನುಸಂಧಾನಯುಕ್ತತಯಾ ಕರ್ಮಣೋ ಜ್ಞಾನಾಕಾರತ್ವಮುಕ್ತಮ್ ; ಇದಾನೀಂ ಸರ್ವಸ್ಯ ಸಪರಿಕರಸ್ಯ ಕರ್ಮಣಃ ಪರಬ್ರಹ್ಮಭೂತ ಪರಮಪುರುಷಾತ್ಮಕತ್ವಾನುಸಂಧಾನ ಯುಕ್ತತಯಾ ಜ್ಞಾನಾಕಾರತ್ವಮಾಹ—

ಎಂಬಲ್ಲಿ ಏವಕಾರವು ಜ್ಞಾನಯೋಗವನ್ನು ವ್ಯಾವರ್ತಿಸಿ ಹೇಳುತ್ತದೆ ವಿನಾ ಭಕ್ತಿಯೋಗವನ್ನಲ್ಲವು. ಭಕ್ತಿಯೋಗದ ಪ್ರಸಕ್ತಿಯೇ ಇನ್ನೂ ಬಂದಿರುವದಿಲ್ಲವು. ಕರ್ಮಯೋಗವು ಭಕ್ತಿಯೋಗಕ್ಕೆ ಅಙ್ಗವು, ಭಕ್ತಿಯೋಗವು ಅಙ್ಗಿಯು. ಅಙ್ಗಿಯ ಫಲಕ್ಕೆ ಅಙ್ಗವೂ ಮುಖ್ಯಸಾಧಕವಾದುದರಿಂದ ಅಙ್ಗಿಯು ಕೊಡತಕ್ಕ ಫಲವನ್ನೇ ಅಙ್ಗಕ್ಕೂ ಔಪಚಾರಿಕವಾಗಿ ಹೇಳುವ ವಾಡಿಕೆಯುಂಟು. ೩೩೨ನೆಯ ಪುಟ ನೋಡಿ. ಮುಂದೆ ಯಜ್ಞಾಯಾಚರತಃ ಎಂಬುವಕ್ಕೆ ಭಾಷ್ಯವನ್ನು ಬರೆಯುತ್ತಾರೆ ; ಉಕ್ತಲಕ್ಷಣ ಯಜ್ಞಾದಿ ಕರ್ಮನಿರ್ವೃತ್ತ್ಯೈವ ವರ್ತಮಾನಸ್ಯ - ಮೇಲೆ ಹೇಳಲ್ಪಟ್ಟ ಲಕ್ಷಣಗಳಿಂದಕೂಡಿ ಯಜ್ಞಾದಿ ಕರ್ಮಗಳನ್ನನುಷ್ಠಿಸಬೇಕೆಂದಿರುವ, ಎಂದರೆ ಕರ್ಮಯೋಗದ ಕರ್ಮಗಳಲ್ಲಿ ಕರ್ತೃತ್ವ ಫಲತ್ಯಾಗಮಾಡಿ ಪರಮ ಪುರುಷಾರಾಧನವೆಂದು ನಡೆಸಬೇಕೆಂದಿರುವ ಪುರುಷನಿಗೆ, ಬಂಧಹೇತು ಭೂತಂ ಪ್ರಾಚೀನಂ ಕರ್ಮ - ಇದು ಮೂಲದ ಕರ್ಮಶಬ್ದ ವ್ಯಾಖ್ಯಾನವು, ಬಂಧಕ್ಕೆ ಕಾರಣವಾದ ಪ್ರಾಚೀನ ಕರ್ಮವು, ಇಲ್ಲಿ ಕರ್ಮಶಬ್ದವನ್ನು ಆಚರತಃ ಎಂಬುವರೊಂದಿಗೆ ಅನ್ವಯಿಸಿ ದ್ವಿತೀಯಾಂತಪದವಾಗಿ ಭಾವಿಸತಕ್ಕದ್ದಲ್ಲವು; ಪ್ರಥಮಾಂತ ಪದವಾಗಿ ಪ್ರವಿಲೀಯತೇ ಎಂಬುವರೊಂದಿಗೆ ಅನ್ವಯಿಸತಕ್ಕದ್ದು. ಹಿಂದೆ ಬುದ್ಧಿಪೂರ್ವಕವಾದ ಸಙ್ಗತ್ಯಾಗಾದಿಗಳಿಂದ ಆತ್ಮಸ್ವರೂಪದಲ್ಲಿ ಮನಸ್ಸು ಇಡಲ್ಪಟ್ಟಿರುವದೆಂದು ಹೇಳಲ್ಪಟ್ಟಿರುವದರಿಂದ ಈಗ ಅದರ ನಿಯಮನಾದಿಗಳನ್ನೇನೂ ಇಲ್ಲಿ ಹೇಳಬೇಕಾದ ಆವಶ್ಯಕತೆಯಿಲ್ಲವು. ಯಾವಾಗ ನಿರತಿಶಯಭೋಗ್ಯಭೂತವಾದ ಆತ್ಮಾವಿನಲ್ಲಿ ಮನಸ್ಸು ಇಡಲ್ಪಟ್ಟಿತೋ, ತದಿತರ ವಿಷಯದಲ್ಲಿ ಮನಸ್ಸು ತಾನಾಗಿಯೇ ನಿವೃತ್ತಿಸಿ ಹೋಯಿತು. ಯಾವಾಗ ಹೀಗೆ ಸಙ್ಗವು ನಿವೃತ್ತಿಸಿ ಹೋಯಿತೋ, ತಾನಾಗಿಯೇ ಸರ್ವ ಪರಿಗ್ರಹಗಳನ್ನು ಬಿಡತಕ್ಕವು ಯಾವುವೂ ಇಲ್ಲವು. ಮತ್ತೇನೆಂದರೆ ಅವುಗಳಿಂದಲೇ ತಾನಾಗಿಯೇ ತಾನು ಮುಕ್ತಃ, ಬಿಡಲ್ಪಟ್ಟವನಾಗುವನು. ಹೀಗೆ ಗತಸಙ್ಗನಾಗಿರುವವರಿಂದ, ಆತ್ಮಜ್ಞಾನಾವಸ್ಥಿತಚೇತಸನಾಗಿ ಸಮಸ್ತ ಐಹಿಕಗಳಿಂದಲೂ ಮುಕ್ತನಾಗಿರುವ ಕರ್ಮಯೋಗಿಗೆ ಆತ್ಮಸಾಕ್ಷಾತ್ಕಾರವೂ ಭಕ್ತಿಯೋಗರೂಪವಾದ ಉಪಾಯಾನುಷ್ಠಾನದ ಮೂಲಕ ಪೂರ್ವಾರ್ಜಿತಪುಣ್ಯಪಾಪರೂಪವಾದ ಸಮಸ್ತ ಕರ್ಮಗಳ ನಾಶವೂ ಲಭಿಸುತ್ತವೆಂಬುದು ಮುಖ್ಯ ತಾತ್ಪರ್ಯವು.

ಭಾಷ್ಯಾವತಾರಿಕೆಯ ಅರ್ಥವು:—ಪ್ರಕೃತಿವಿಯುಕ್ತಾತ್ಮ ಸ್ವರೂಪಾನುಸಂಧಾನಯುಕ್ತತಯಾ - ಪ್ರಾಕೃತ ಶರೀರದಿಂದ ಬಿಡಲ್ಪಟ್ಟ ಸ್ವಸ್ವರೂಪಾವಿರ್ಭಾವವುಳ್ಳ ಆತ್ಮಸ್ವರೂಪವು ಎಷ್ಟು ಮಹತ್ತಾದುದೆಂಬ ಅನುಸಂಧಾನದಿಂದ ಸೇರಿರುವದರಿಂದ, ಕರ್ಮಣಃ - ಕರ್ಮಯೋಗಕ್ಕೆ ಜ್ಞಾನಾಕಾರತ್ವವು, ಉಕ್ತಮ್ - ಹೇಳಲ್ಪಟ್ಟಿತು. ಆತ್ಮನ ಜ್ಞಾನವೂ ಗುಣಾಷ್ಟಕಗಳೂ ಎಲ್ಲವೂ ಈ ಗುಣತ್ರಯದಿಂದ ಕೂಡಿದ ಸ್ಥೂಲಶರೀರದಿಂದ ಮಾಲಿನ್ಯವನ್ನು ಹೊಂದಿವೆ. ಯಾವಾಗ ಸ್ಥೂಲ ಶರೀರದಿಂದ ಈ ಆತ್ಮನು ಬಿಡುಗಡೆಯನ್ನು ಹೊಂದುತ್ತಾನೋ, ಆಗ ಆತ್ಮನಿಗೆ ಸ್ವಸ್ವರೂಪಾವಿರ್ಭಾವವುಂಟಾಗಿ ಸ್ವಯಂಪ್ರಕಾಶವಾದ ಜ್ಞಾನದೀಪ್ತಿಯಿಂದಲೂ ಗುಣಾಷ್ಟಕಗಳಿಂದಲೂ ವಿರಾಜಿಸುವನು. ಈ ಅಭಿಪ್ರಾಯವು "ಸಂಪದ್ಯಾವಿರ್ಭಾವಃ ಸ್ವೇನಶಬ್ದಾತ್" ಎಂಬ ಬ್ರಹ್ಮಸೂತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗೆ ತನ್ನ ಸ್ವರೂಪವು ಮಹತ್ತಾದುದೆಂಬ ಅನುಸಂಧಾನವು ಕರ್ಮಯೋಗದಲ್ಲಿ ಜ್ಞಾನಾಕಾರರೂಪವಾಗಿ ಉಂಟೆಂದು ಹಿಂದೆ ಸ್ಥಾಪಿಸಲ್ಪಟ್ಟಿತು.

**ಮೂ. ಬ್ರಹ್ಮಾರ್ಪಣಂ ಬ್ರಹ್ಮ ಹವಿ ರ್ಬ್ರಹ್ಮಾಗ್ನೌ ಬ್ರಹ್ಮಣಾಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮ ಸಮಾಧಿನಾ ॥ ೨೪.**

ಇದಾನೀಂ-ಈ ಬ್ರಹ್ಮಾರ್ಪಣಂ ಎಂಬುವ ಶ್ಲೋಕದಲ್ಲಾದರೋ, ಸರ್ವಸ್ಯ ಸಪರಿಕರಸ್ಯ ಕರ್ಮಣಃ- ಪರಿಕರಗಳಿಂದಕೂಡಿದ ಸಮಸ್ತ ಕರ್ಮಯೋಗಾನುಷ್ಠಾನಕ್ಕೂ, ಪರಬ್ರಹ್ಮಭೂತ ಪರಮಪುರು ಷಾತ್ಮಕತ್ವ - ಪರಬ್ರಹ್ಮವೆನಿಸುವ ಪರಮ ಪುರುಷನ ಕಾರ್ಯರೂಪವಾಗಿರುವದರಿಂದ ಪರಬ್ರಹ್ಮಾ ತ್ಮಕವೆಂಬ ಅನುಸಂಧಾನ ಯುಕ್ತ ತಯಾ - ಅನುಸಂಧಾನದಿಂದ, ಜ್ಞಾನಕಾರತ್ವವನ್ನು ಹೇಳುತ್ತಾರೆ, ಕರ್ಮಯೋಗಕ್ಕೆ ಜ್ಞಾನಾಕಾರತೆಯು ಎರಡುವಿಧವೆಂದು ಹೇಳುತ್ತಾರೆ. (೧) ಕರ್ಮಯೋಗ ಕರ್ತಾವಾದ ತನ್ನ ಸ್ವರೂಪವು ಪ್ರಕೃತಿಯಿಂದ ಬಿಡುಗಡೆಯನ್ನು ಹೊಂದಿದಾಗ ಬಹಳ ಅಮೋಘವಾದುದೆಂಬ ಅನುಸಂಧಾನಮೂಲಕ ಜ್ಞಾನಾಕಾರತೆಯು. (೨) ತಾನು ಮಾಡುವ ಯಜ್ಞ ಪರಿಕರಗಳೂ ಯಜ್ಞವೂ ಪರಬ್ರಹ್ಮಕಾರ್ಯವಾಗಿ ಪರಬ್ರಹ್ಮಾತ್ಮಕವೆಂಬ ಅನುಸಂಧಾನದ ಮೂಲಕವೂ ಜ್ಞಾನಾಕಾರತೆಯೂ ಇರತಕ್ಕದ್ದೆಂಬ ಉಪದೇಶವು; ಹೀಗೆ ಜ್ಞಾನಾಕಾರತೆಯು ಕರ್ಮಯೋಗಕ್ಕೆ ಎರಡು ವಿಧವೆಂದು ಹೇಳಲ್ಪಟ್ಟಿತು.

**ಮೂಲಕ್ಕೆ ಅರ್ಥವು:—**ಹಿಂದೆ ಜ್ಞಾನಯೋಗದ ಆವಶ್ಯಕತೆಯಿಲ್ಲದೆ, ಜ್ಞಾನಯೋಗದಿಂ ದುಂಟಾಗುವ ಆತ್ಮಾವಲೋಕನವು,ಕರ್ಮಯೋಗದಿಂದಲೇ ಸಿದ್ಧಿಸುತ್ತದೆ ಎಂದು ಹೇಳಲ್ಪಟ್ಟಿತು. ಅದು ಸಿದ್ಧಿಸಬೇಕಾದರೆ, ಶ್ರುತಿ ಸ್ಮೃತಿ ಪುರಾಣೇತಿಹಾಸಾದಿಗಳಲ್ಲೆಲ್ಲಾ ಐಕ ಕಂಠ್ಯದಿಂದ ಹೇಳಲ್ಪಟ್ಟಿ ರುವ ಈ ಜಗತ್ತಿನ ಸಮಸ್ತವೂ ಪರಬ್ರಹ್ಮನಿಗೆ ಶರೀರವು,ಪರಬ್ರಹ್ಮನೇ ಸರ್ವಕ್ಕೂ ಆತ್ಮಾ ಎಂಬ ಜ್ಞಾನವು ಆವಶ್ಯಕವು; ಈ ಅಮೋಘಜ್ಞಾನವೂ ಕರ್ಮಯೋಗನಿಷ್ಠನಿಗೆ ಇದ್ದು, ತಾನು ಸಮರ್ಪಿ ಸುವ ಹವಿಸ್ಸು, ಅದಕ್ಕೆ ಬೇಕಾದ ಸೌಟು, ಹವಿಸ್ಸಮರ್ಪಣೆಗೆ ಬೇಕಾದ ಅಗ್ನಿಯೂ, ಅದನ್ನು ಸಮ ರ್ಪಿಸುವ ಅಧಿಕಾರಿಯೂ,ಕರ್ಮಯೋಗದ ವಿವಿಧ ಕರ್ಮಗಳೂ, ತಾನು ಹೊಂದತಕ್ಕ ದಿವ್ಯವಾದ ಆತ್ಮ ಸ್ವರೂಪವೂ, ಎಲ್ಲವೂ ಬ್ರಹ್ಮಾತ್ಮಕವೆಂಬ ಜ್ಞಾನವಿರಬೇಕು. ಹೀಗೆ ಕರ್ಮಯೋಗವು ಅನುಷ್ಠಿಸ ಲ್ಪಟ್ಟರೆ ಜ್ಞಾನಯೋಗದ ಆವಶ್ಯಕತೆ ಇಲ್ಲವೆಂದು ಹೇಳಿ ಕರ್ಮಯೋಗಕ್ಕೇನೇ ಎರಡು ವಿಧವಾದ ಜ್ಞಾನಾಕಾರತೆಯುಂಟೆಂದು ಉಪದೇಶಿಸುತ್ತಾರೆ. ಈ ಶ್ಲೋಕದಲ್ಲಿ ಬ್ರಹ್ಮ ಶಬ್ದವು ಅನೇಕಸಲ ಪ್ರ ಯೋಗಿಸಲ್ಪಟ್ಟಿರುತ್ತದೆ. ಬ್ರಹ್ಮ ಶಬ್ದಕ್ಕೆ ಪರಬ್ರಹ್ಮವೆಂಬುದು ಮುಖ್ಯಾರ್ಥವು. ಪ್ರಕೃತಿ ಎಂದೂ, ಚೇತನವೆಂದೂ, ವೇದವೆಂದೂ ಬ್ರಹ್ಮ ಶಬ್ದಕ್ಕೆ ಅರ್ಥವುಂಟು. ಅವೆಲ್ಲವೂ ಲಾಕ್ಷಣಿಕಾರ್ಥಗಳು. ಯಾವಾಗಲೂ ಶಬ್ದಕ್ಕೆ ಮುಖ್ಯಾರ್ಥವನ್ನೇ ಹೇಳತಕ್ಕದ್ದು ನ್ಯಾಯವು. ಮುಖ್ಯಾರ್ಥಹೇಳಲು ಸಾಧ್ಯವೇ ಇಲ್ಲದಿದ್ದರೆ ಆಗ ಲಾಕ್ಷಣಿಕಾರ್ಥವನ್ನು ಹೇಳಬೇಕಾಗಿದೆ. ಈ ಶ್ಲೋಕದಲ್ಲಾದರೋ ಮುಖ್ಯಾರ್ಥವೇ ಸರಿಹೋಗುವದರಿಂದ ಲಾಕ್ಷಣಿಕಾರ್ಥವು ಸರಿಯಲ್ಲವು. **ತದನನ್ಯತ್ವಂ ಆರಂ ಭಣ ಶಬ್ದಾದಿಭ್ಯಃ** ಎಂಬ ಬ್ರಹ್ಮಸೂತ್ರದಲ್ಲಿ ಕಾರಣಕ್ಕೂ ಕಾರ್ಯಕ್ಕೂ ಅನನ್ಯತ್ವಂ ಎಂದರೆ ಅಭಿನ್ನತೆಯನ್ನು ಹೇಳುವದರಿಂದ ಬ್ರಹ್ಮಶಬ್ದವು ಈ ಶ್ಲೋಕದಲ್ಲಿ ಕಾರ್ಯರೂಪವಾದ ಪರಬ್ರಹ್ಮ ವನ್ನು ಬೋಧಿಸುತ್ತದೆ. ಆದುದರಿಂದ ಯಜ್ಞದಲ್ಲಿ ಉಪಯೋಗಿಸುವ ಅಗ್ನಿ, ಸ್ರುಕ್ಸ್ರುವಾದಿಗಳೂ, ಹವಿಸ್ಸೂ,ಯಜ್ಞಕರ್ತಾ ಎಲ್ಲಾ ಪರಬ್ರಹ್ಮನ ಕಾರ್ಯರೂಪವಾದವುಗಳಾಗಿ ಅವುಗಳಿಗೆಲ್ಲಾ ಬ್ರಹ್ಮವೆಂದೇ ವ್ಯವಹಾರವು. ಆದುದರಿಂದ ಹೇಳುತ್ತಾರೆ—ಬ್ರಹ್ಮಾರ್ಪಣಂ-ಯಾವುದರಿಂದ ಹವಿಸ್ಸನ್ನು ಅರ್ಪಿಸು ತ್ತೇವೋ ಅದಕ್ಕೆ ಅರ್ಪಣವೆಂದು ಹೆಸರು, ಪರಬ್ರಹ್ಮಕಾರ್ಯರೂಪವಾದ ಸ್ರುಗಾದಿ (ಸೌಟು)ಗ ಳುಳ್ಳ, **ಬ್ರಹ್ಮಹವಿಃ** - ಪರಬ್ರಹ್ಮಕಾರ್ಯರೂಪವಾದ ಹವಿಸ್ಸು, **ಬ್ರಹ್ಮಾಗ್ನೌ** - ಪರಬ್ರಹ್ಮಕಾರ್ಯ ರೂಪವಾದ ಅಗ್ನಿಯಲ್ಲಿ, **ಬ್ರಹ್ಮಣಾ** - ಪರಬ್ರಹ್ಮ ಕಾರ್ಯವಾದ ಕರ್ತಾವಿನಿಂದ, **ಹುತಮ್** -

ಹೋಮ ಮಾಡಲ್ಪಟ್ಟಿತು, ಇತಿ ಎಂದು ಇಟ್ಟುಕೊಳ್ಳತಕ್ಕದ್ದು, ಇತಿ - ಎಂಬದಾಗಿ, ಅಂತಹ ಬ್ರಹ್ಮಕರ್ಮ ಸಮಾಧಿನಾ - ಸರ್ವ ಕರ್ಮವೂ ಪರಬ್ರಹ್ಮಾತ್ಮಕವೆಂದು ಚಿತ್ತದಲ್ಲಿಟ್ಟಿರುವ, ತೇನ ಅಂತಹ ಕರ್ತೃವಿನಿಂದ, ಬ್ರಹ್ಮೈವ ಗಂತವ್ಯಂ - ಪರಬ್ರಹ್ಮ ಕಾರ್ಯರೂಪವಾದ ತನ್ನ ನೈಜ ಸ್ವರೂಪವನ್ನೇ ಹೊಂದತಕ್ಕದ್ದು; ಇಂತಹ ಜ್ಞಾನವುಳ್ಳ ಕರ್ಮಯೋಗನಿಷ್ಠನು ತನ್ನ ನೈಜ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸತಕ್ಕದ್ದು; ಎಂದರೆ ಅಂತವನಿಗೆ ಆತ್ಮಾವಲೋಕನವು ಉಂಟಾಗುತ್ತದೆ ಎಂಬ ತಾತ್ಪರ್ಯವು. ಅಂತಹ ಕರ್ಮಯೋಗಿಯಿಂದಲೇ, ಬ್ರಹ್ಮೈವ ಗಂತವ್ಯಂ– ಎಂದು ಏವಕಾರವಿರುವದರಿಂದ ಜ್ಞಾನಯೋಗದ ಆವಶ್ಯಕತೆ ಅಂತವನಿಗೇನೂ ಬೇಕಿಲ್ಲವೆಂಬಭಿಪ್ರಾಯವೂ ತೋರಿಬರುತ್ತದೆ. ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ ಎಂಬಲ್ಲೂ ಈ ಅಭಿಪ್ರಾಯವೇ ಉಪಪಾದಿಸಲ್ಪಟ್ಟಿತು. ನಾವು ಕಣ್ಣಿನಿಂದ ನೋಡುವ ಈ ಜಗತ್ತೆಲ್ಲಾ ಬ್ರಹ್ಮಾತ್ಮಕವೆಂದು ತಿಳಿಯತಕ್ಕದ್ದು. ಹೇಗೆಂದರೆ ಛಾಂದೋಗ್ಯ ಬೃಹದಾರಣ್ಯಕಾದಿ ಶ್ರುತಿಗಳೆಲ್ಲಾ ಸರ್ವಚಿದಚಿತ್ತುಗಳೂ "ಯಸ್ಯ ಪೃಥಿವೀ ಶರೀರಂ" "ಯಸ್ಯಾತ್ಮಾ ಶರೀರಂ" (ಬೃ. ೫–೭. ೩) ಎಂಬಲ್ಲೂ ಮತ್ತು "ಯಃ ಪೃಥಿವ್ಯಾಂ ತಿಷ್ಠನ್" ಮತ್ತು "ಯ ಆತ್ಮನಿ ತಿಷ್ಠನ್" (ಬೃ. ೫. ೭. ೨೨) ಎಂಬಲ್ಲೂ "ಯಸ್ಯ ಸರ್ವಾಣಿ ಭೂತಾನಿ ಶರೀರಂ" ಇತ್ಯಾದಿ ಪ್ರಮಾಣಗಳ ಮೂಲಕ (ಬೃ. ೫. ೭. ೧೫) ಪರಬ್ರಹ್ಮನಿಗೆ ಶರೀರವೆಂದೂ ಅವುಗಳಿಗೆಲ್ಲಾ ಈತನು ಆತ್ಮಾವೆಂದೂ ಹೇಳುತ್ತವೆ. ಹಾಗೆಯೇ ಪುರಾಣೇತಿಹಾಸಗಳೂ ಕೂಡ ಶರೀರವನ್ನು ಹೇಳುವ ಸ್ಥಳದಲ್ಲೆಲ್ಲಾ ಶರೀರಿ ಎಂದರೆ ಆತ್ಮಾವಾದ ಪರಬ್ರಹ್ಮನನ್ನು ಹೇಳುವ ಪದ್ಧತಿಯುಂಟು; ಹಾಗೆಯೇ ಶ್ರೀ ಪರಾಶರರು "ತತ್ಸರ್ವಂ ವೈ ಹರೇ ಸ್ತನುಃ" ಎಂದು ಕಾರ್ಯರೂಪವಾದ ಸರ್ವ ಜಗತ್ತೂ ಶ್ರೀ ಮಹಾವಿಷ್ಣುವಿಗೆ ಶರೀರವೆಂದು ಶ್ರೀ ಮೈತ್ರೇಯರಿಗೆ ಉಪದೇಶಿಸಿ, ಸಾಮಾನಾಧಿಕರಣ್ಯದಿಂದ ಎಲ್ಲವೂ ವಿಷ್ಣ್ವಾತ್ಮಕವೆಂದು ಹೇಳುತ್ತಾರೆ:—

"ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯೋ ದಿಶಶ್ಚ |
ನದ್ಯಸ್ಸಮುದ್ರಾಶ್ಚ ಸ ಏವ ಸರ್ವಂ ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ" ವಿ. ಪು. ೨.೧೨.೩೮.

ಹೀಗೆ ಪ್ರತ್ಯೇಕವಾಗಿ ಎಲ್ಲಾ ವಿಷ್ಣ್ವಾತ್ಮಕವೆಂದು ಹೇಳಿ, ಕೊನೆಯಲ್ಲಿ ಯದಸ್ತಿ ಎಂಬುದರಿಂದ ಸ್ವರೂಪನಾಶವಿಲ್ಲದೆ ಇರುವ ಸಮಸ್ತ ಚೇತನ ವರ್ಗವೂ, ಯನ್ನಾಸ್ತಿ ಚ ಎಂಬುದರಿಂದ ಸ್ವರೂಪವಿಕಾರವುಳ್ಳ ಸಮಸ್ತ ಅಚಿತ್ತೂ ಸಹ ವಿಷ್ಣುವೇ ಎಂದು ಸಾಮಾನಾಧಿಕರಣ್ಯದಿಂದ ತಿಳಿಸಿರುತ್ತಾರೆ. ಹಾಗೆಯೇ ಇಲ್ಲಿಯೂ ಸಹ ಯಜ್ಞೋವೈ ವಿಷ್ಣುಃ ಎಂದು ಹೇಳಿರುವಹಾಗೆ, ಯಜ್ಞವೂ, ಯಜ್ಞಕ್ಕೆ ಬೇಕಾದ ಅಗ್ನಿಯೂ, ಸಮಿತ್ತೂ, ಹೋಮ ಸಾಧನವೂ, ಹವಿಸ್ಸೂ ಹಾಗೆಯೇ ಯಜ್ಞಮಾಡುವ ಕರ್ತಾ ಎಲ್ಲಾ ಪರಬ್ರಹ್ಮಶರೀರವಾದುದರಿಂದ ಪರಬ್ರಹ್ಮವೆಂದೇ ಸಾಮಾನಾಧಿಕರಣ್ಯದಿಂದ ಹೇಳುವದಕ್ಕಾಗಿ ಬ್ರಹ್ಮಹವಿಃ, ಬಹ್ಮಾಗ್ನಿಃ, ಇತ್ಯಾದಿ ಪ್ರಯೋಗಗಳು ಎಂಬ ಭಾವವು. ಹೀಗೆ ಸಮಸ್ತವೂ ಪರಮಾತ್ಮನಿಗೆ ಶರೀರವೂ, ಆತನು ಎಲ್ಲಕ್ಕೂ ಆತ್ಮಾ ಎಂಬ ಉಪದೇಶವು ಈ ಗೀತೆಯಲ್ಲೇ ಮುಂದೆ "ಇಯಂ ಮೇ ಪ್ರಕೃತಿರಷ್ಟಧಾ। ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್।ಜೀವಭೂತಾಂ" (ಗೀ. ೭.೪.೫) ಎಂಬಲ್ಲೂ "ಮಯಿ ಸರ್ವಮಿದಂಪ್ರೋತಂ" (ಗೀ.೭.೭.) ಎಂಬಲ್ಲೂ "ಮಯಾತತ ಮಿದಂ ಸರ್ವಂ" (ಗೀ.೯.೪.) ಎಂಬಲ್ಲೂ, "ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್" (ಗೀ. ೧೦. ೪೨) "ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ (ಗೀ. ೧೦. ೨೦) ಎಂಬಲ್ಲೂ, "ಕ್ಷೇತ್ರಜ್ಞಂ ಚಾಪಿಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ" (ಗೀ. ೧೩. ೨) ಎಂಬಲ್ಲೂ ಹೇಳಲ್ಪಟ್ಟಿರುತ್ತದೆ. ಇಲ್ಲಿ ಎಲ್ಲವೂ ಬ್ರಹ್ಮಾತ್ಮಕವೆಂಬ ಉಪದೇಶವೂ, ಇವೆಲ್ಲಾ ಮಿಥ್ಯೆಯು ಬ್ರಹ್ಮೈವ ಸತ್ಯವು ಎಂಬ

ಭಾ. ಬ್ರಹ್ಮಾರ್ಪಣಮಿತಿ ಹವಿ ರ್ವಿಶೇಷ್ಯತೇ, ಅರ್ಪ್ಯತೇಽನೇನೇತ್ಯರ್ಪಣಂ - ಸ್ರುಗಾದಿ, ತದ್ಬ್ರಹ್ಮಕಾರ್ಯತ್ವಾದ್ಬ್ರಹ್ಮ, ಬ್ರಹ್ಮಯಸ್ಯ ಹವಿಷೋಽರ್ಪಣಂ ತದ್ಬ್ರಹ್ಮಾರ್ಪಣಂ, ಬ್ರಹ್ಮಹವಿಃ-ಬ್ರಹ್ಮಾರ್ಪಣಂಹವಿಸ್ಸ್ವಯಂಚ ಬ್ರಹ್ಮಭೂತಂ,ಬ್ರಹ್ಮಾಗ್ನೌ,ಬ್ರಹ್ಮಣಾ-ಕರ್ತ್ರಾ, ಹುತಮಿತಿ, ಸರ್ವಂ ಕರ್ಮ ಬ್ರಹ್ಮಾತ್ಮಕತಯಾ ಬ್ರಹ್ಮಮಯಮಿತಿ ಯಸ್ಸಮಾ

ಉಪದೇಶವೂ, ಪರಸ್ಪರ ವಿರುದ್ಧವಾದವು; ಪರಬ್ರಹ್ಮೇತರವಸ್ತುವಿದ್ದರಲ್ಲವೇ ಪರಬ್ರಹ್ಮಾತ್ಮಕತ್ವವನ್ನು ಉಪದೇಶಿಸಬಹುದು. ಎಲ್ಲವೂ ಮಿಥ್ಯೆಯಾದರೆ ಜಗದಾತ್ಮಕತ್ವವನ್ನು ಉಪದೇಶಿಸುವ ಈ ಶ್ಲೋಕವು ಅಸಙ್ಗತವಾಮುದಾಗುತ್ತದೆ. ಆದುದರಿಂದ ಈ ಶ್ಲೋಕವು ಮಿಥ್ಯಾವಾದಕ್ಕೆ ಅನುಕೂಲವಿಲ್ಲವು. ಅದೂ ಅಲ್ಲದೆ ಬ್ರಹ್ಮಣಾಹುತಮ್ ಎಂಬಲ್ಲೂ, ಬ್ರಹ್ಮೈವ ತೇನ ಗನ್ತವ್ಯಂ ಎಂಬಲ್ಲಿ ತೋರುವ ಜೀವಾತ್ಮ ಪರಮಾತ್ಮ ಸಾಮಾನಾಧಿಕರಣ್ಯವು ಜೀವಾತ್ಮ ಪರಮಾತ್ಮಭೇದವಿಲ್ಲದೆ ಶಾಸ್ತ್ರ ಸಾಮಂಜಸ್ಯ ದೊಂದಿಗೆ ಏರ್ಪಡುವದಿಲ್ಲವು.

ಭಾಷ್ಯಾರ್ಥವು:—ಬ್ರಹ್ಮಾರ್ಪಣಮಿತಿ ಹವಿ ರ್ವಿಶೇಷ್ಯತೇ-ಬ್ರಹ್ಮಾರ್ಪಣವೆಂದು ಹವಿಶ್ಶಬ್ದಕ್ಕೆ ವಿಶೇಷಣವಾಗಿ ಪ್ರಯೋಗಿಸಲ್ಪಟ್ಟಿರುತ್ತದೆ; ಅರ್ಪ್ಯತೇ ಅನೇನೇತ್ಯರ್ಪಣಂ-ಇದರಿಂದ ಹವಿಸ್ಸು ಅರ್ಪಿಸಲ್ಪಡುವದರಿಂದ ಅರ್ಪಣ ವೆನಿಸಲ್ಪಡುತ್ತದೆ, ಅದು ಯಾವುದೆಂದರೆ ಸ್ರುಗಾದಿ-ಹವಿಸ್ಸಮರ್ಪಿಸುವ ಸೌಟು ಮೊದಲಾದವು; ತದ್ಬ್ರಹ್ಮಕಾರ್ಯತ್ವಾತ್‌ಬ್ರಹ್ಮ-ಅದು ಪರಬ್ರಹ್ಮ ಕಾರ್ಯವಾಮುದರಿಂದ ಕಾರಣವೂ ಕಾರ್ಯವೂ ಒಂದೇಯಾದುದರಿಂದ ಬ್ರಹ್ಮವೆಂದೇ ಹೇಳಿಸಿಕೊಳ್ಳುತ್ತದೆ; ಬ್ರಹ್ಮ ಯಸ್ಯ ಹವಿಷೋ ಅರ್ಪಣಂ ತದ್ಬ್ರಹ್ಮಾರ್ಪಣಂ - ಬ್ರಹ್ಮಶಬ್ದದಿಂದ ಹೇಳಿಸಿಕೊಳ್ಳುವ ಸ್ರುಗಾದಿಯೇ ಯಾವ ಹವಿಸ್ಸಿಗೆ ಸಮರ್ಪಣವಾಗಿ ವುಳ್ಳದೋ, ತತ್ - ಅದು ಬ್ರಹ್ಮಾರ್ಪಣಂ - ಬ್ರಹ್ಮಾರ್ಪಣವೆಂದು ಹೇಳಿಸಿಕೊಳ್ಳುತ್ತದೆ ; ಬ್ರಹ್ಮಾರ್ಪಣಂ - ಪರಬ್ರಹ್ಮ ಕಾರ್ಯವಲ್ಲಿ ಸಮರ್ಪಣವುಳ್ಳದು ಎಂದು ಸಮಾಸ ಮಾಡಿದರೆ ವ್ಯಧಿಕರಣ ಬಹುವ್ರೀಹಿಯಾಗುತ್ತದೆಯಾದುದರಿಂದ ಸರಿಯಲ್ಲವು; ಮುಂದೆ ಬ್ರಹ್ಮಾಗ್ನೌ ಎಂದಿರುವದರಿಂದ ಪುನರುಕ್ತಿದೋಷವೂ ಸಹ ಉಂಟಾಗುತ್ತದೆ; ಆದುದರಿಂದ ಸಮಾನಾಧಿಕರಣ ಬಹುವ್ರೀಹಿ ಎಂದು ತೋರಿಸಿರುತ್ತಾರೆ. ಅರ್ಪಣಶಬ್ದವು ಕರಣ ವ್ಯುತ್ಪತ್ತಿಯಿಂದ ಸ್ರುಗಾದಿ ವಿಷಯವೆಂದು ತೋರಿಸಿರುತ್ತಾರೆ. ಈ ಶ್ಲೋಕದಲ್ಲಿ ಬ್ರಹ್ಮಶಬ್ದವು ಆರು ಸಲ ಪ್ರಯೋಗಿಸಲ್ಪಟ್ಟಿರುತ್ತದೆ. ಅಲ್ಲೆಲ್ಲಾ ಬ್ರಹ್ಮಶಬ್ದಕ್ಕೆ ಬ್ರಹ್ಮಕಾರ್ಯವೆಂದೇ ಅರ್ಥಹೇಳತಕ್ಕದ್ದೆಂಬ ಭಾವವು; ಬ್ರಹ್ಮಹವಿಃ ಎಂದರೆ ಬ್ರಹ್ಮಾರ್ಪಣಂ ಹವಿಃ - ಪರಬ್ರಹ್ಮಕಾರ್ಯರೂಪವಾದ ಸ್ರುಗಾದಿಗಳುಳ್ಳ ಹವಿಸ್ಸು, ಸ್ವಯಂ ಚ ಬ್ರಹ್ಮಭೂತಂ-ಅದೂ ಸಹ ಪರಬ್ರಹ್ಮ ಕಾರ್ಯವಾಗಿ, ಬ್ರಹ್ಮಾಗ್ನೌ ಎಂದರೆ ಬ್ರಹ್ಮಭೂತೇ ಅಗ್ನೌ - ಪರಬ್ರಹ್ಮ ಕಾರ್ಯರೂಪವಾದ ಅಗ್ನಿಯಲ್ಲಿ, ಬ್ರಹ್ಮಣಾ ಎಂದರೆ ಕರ್ತ್ರಾ - ಪರಬ್ರಹ್ಮ ಕಾರ್ಯಭೂತವಾದ ಕ್ಷೇತ್ರಜ್ಞನಾದ ಕರ್ತೃವಿನಿಂದ, ಹುತಮಿತಿ - ಹೋಮ ಮಾಡಲ್ಪಟ್ಟಿತೆಂದು-ಇಲ್ಲಿ ಇತಿ ಎಂದು ಮೂಲದಲ್ಲಿ ಇಲ್ಲದಿರುವದನ್ನು ಅಧ್ಯಾಹಾರವನ್ನು ಮಾಡಿಕೊಳ್ಳತಕ್ಕದ್ದೆಂದು ತೋರಿಸಿರುವದು ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ಇರುವ ಸಂಬಂಧವನ್ನು ವ್ಯಕ್ತಪಡಿಸುವದಕ್ಕಾಗಿ ಎಂದು ತಿಳಿಯತಕ್ಕದ್ದು, ಬ್ರಹ್ಮಕರ್ಮಸಮಾಧಿನಾ ಎಂದು ಉತ್ತರಾರ್ಧದಲ್ಲಿರುವದರಿಂದ, ಈ ಬ್ರಹ್ಮಕರ್ಮಸಮಾಧಿಯನ್ನು ಪೂರ್ವಾರ್ಧವು ವಿವರಿಸಿರುವದರಿಂದ ಇತಿ ಎಂದು ಅಧ್ಯಾಹಾರವು ದ್ಯೋತಿತವು. ಸಮಸ್ತ ಯಜ್ಞದಲ್ಲೂ, ಕರ್ತೃವಾದ ತಾನೂ, ಅಗ್ನಿಯೂ, ಯಜ್ಞಸಾಧನಗಳು ಎಲ್ಲವೂ ಪರಬ್ರಹ್ಮಾತ್ಮಕವೆಂದು ಭಾವಿಸಿ ಹೀಗೆ, ಸರ್ವಂಕರ್ಮ-ಸಮಸ್ತ ಕರ್ಮವೂ, ಬ್ರಹ್ಮಾತ್ಮಕತಯಾ-ಬ್ರಹ್ಮಕಾರ್ಯವಾಗಿ, ಬ್ರಹ್ಮಮಯಮಿತಿ-ಪರಬ್ರಹ್ಮಾತ್ಮಕವೆಂದು, ಯಸ್ಸಮಾಧತ್ತೇ-

ಭಾ. ಧತ್ರೇ ಸಃ ಬ್ರಹ್ಮಕರ್ಮಸಮಾಧಿಃ; ತೇನ ಬ್ರಹ್ಮಕರ್ಮ ಸಮಾಧಿನಾ, ಬ್ರಹ್ಮೈವಗಂತವ್ಯಂ-ಬ್ರಹ್ಮಾತ್ಮಕತಯಾ ಬ್ರಹ್ಮಭೂತಾತ್ಮಸ್ವರೂಪಂ ಗಂತವ್ಯಮ್. ಮುಮುಕ್ಷುಣಾ ಕ್ರಿಯಮಾಣಂ ಕರ್ಮ ಪರಬ್ರಹ್ಮಾತ್ಮಕ ಮೇವೇತ್ಯನುಸಂಧಾನ ಯುಕ್ತತಯಾ ಜ್ಞಾನಾಕಾರಂ ಸಾಕ್ಷಾದಾತ್ಮಾವಲೋಕನಸಾಧನಂ, ನಜ್ಞಾನನಿಷ್ಠಾವ್ಯವಧಾನೇನೇತ್ಯರ್ಥಃ ||೨೪||

---

ಯಾವನು ಮನಸ್ಸಿನಲ್ಲಿ ಭಾವಿಸುತ್ತಾನೋ, ಸಃ - ಅವನು, ಬ್ರಹ್ಮಕರ್ಮಸಮಾಧಿಯು ಎಂದು ಹೇಳಲ್ಪಡುವನು, ತೇನ - ಅಂತಹ ಬ್ರಹ್ಮಕರ್ಮ ಸಮಾಧಿಯಿಂದ, ಬ್ರಹ್ಮೈವಗಂತವ್ಯಂ ಎಂದರೆ ಬ್ರಹ್ಮಾತ್ಮಕತಯಾ - ಪರಬ್ರಹ್ಮಕಾರ್ಯವಾಗಿ ಜೀವಾತ್ಮನೂ ಆತನಿಗೆ ಶರೀರವಾಗಿರುವದರಿಂದ, ಬ್ರಹ್ಮಭೂತನಾತ್ಮಸ್ವರೂಪಂ - ಪರಬ್ರಹ್ಮಾತ್ಮಕವಾದ ಜೀವಾತ್ಮಸ್ವರೂಪವನ್ನು ಹೊಂದತಕ್ಕದ್ದು. ಇಲ್ಲಿ ತೇನ ಗಂತವ್ಯಂ ಎಂದಿರುವದರಿಂದ, ಪೂರ್ವಾರ್ಧದಲ್ಲಿ ಹೇಳಲ್ಪಟ್ಟವನು ಯಾವನೋ ಅವನಿಂದ ಎಂಬರ್ಥವು ತೋರಿಬರುವದರಿಂದ, ಯಃ ಸಃ ಎಂದು ವ್ಯಾಖ್ಯಾನಮಾಡಿ, ತೇನ ಎಂದು ಅರ್ಥಮಾಡಿರುತ್ತಾರೆ. ಕರ್ಮಯೋಗದಲ್ಲಿ ಪ್ರವರ್ತಿಸಿರುವ ಪ್ರತಿಯೊಬ್ಬ ಮೋಕ್ಷಾರ್ಥಿಗೂ ತಾನುಮಾಡುವ ಯಜ್ಞರೂಪ ಕರ್ಮವಲ್ಲಿ ಭಾವನೆಯು, ಸರ್ವವೂ ಬ್ರಹ್ಮಾತ್ಮಕವೆಂದು ಇರಬೇಕೆಂದು ಬೋಧಿಸಿ, ಈ ವಿಧವಾದ ಜ್ಞಾನಾಕಾರತೆಯು ಕರ್ಮಯೋಗಕ್ಕಿರಬೇಕೆಂದು ಹೇಳಲ್ಪಟ್ಟಿತು. ಕರ್ಮಯೋಗದಲ್ಲಿ ಜ್ಞಾನಾಕಾರತೆಯು ಎರಡು ವಿಧವು. (೧) ತನ್ನ ಸ್ವರೂಪವು ದೇಹಕ್ಕಿಂತ ವಿಲಕ್ಷಣವಾದುದಾಗಿ ಅಮೋಘವಾದುದೆಂಬ ಜ್ಞಾನವಿರಬೇಕು. (೨) ತಾನು ಮಾಡುವ ಸರ್ವ ಕರ್ಮವೂ, ಬ್ರಹ್ಮಾತ್ಮಕವಾಗಿ, ಸರ್ವ ಕರ್ಮೋಪಕರಣಗಳೂ ತಾನೂ ಸಹ ಬ್ರಹ್ಮಕಾರ್ಯವಾಗಿ ಬ್ರಹ್ಮಶರೀರವಾಗಿರುತ್ತದೆಂದೂ, ಆದುದರಿಂದ ಆ ಕರ್ಮಗಳೆಲ್ಲಾ ಭಗವಂತನಿಗೇಯಾದುದರಿಂದ ಅವುಗಳ ಫಲಗಳಲ್ಲಿ ತನಗೆ ಅನ್ವಯವಿಲ್ಲವೆಂದೂ, ಭಾವಿಸತಕ್ಕದ್ದು. ಹೀಗೆ ಕರ್ಮಯೋಗಕ್ಕೆ ಎರಡು ವಿಧವಾದ ಜ್ಞಾನಾಕಾರತೆ ಇರುವದರಿಂದ ಜ್ಞಾನಯೋಗದಿಂದ ಲಭಿಸಬೇಕಾದ ಆತ್ಮಸ್ವರೂಪ ಸಾಕ್ಷಾತ್ಕಾರವು ಈ ಬರೀ ಕರ್ಮಯೋಗದಿಂದಲೇ ಲಭಿಸುತ್ತದೆಂದು ಬ್ರಹ್ಮೈವಗಂತವ್ಯಂ ಎಂಬಲ್ಲಿರುವ ಅವಧಾರಣದಿಂದ ಕರ್ಮಣೈವಹಿ ಸಂಸಿದ್ಧಿಂ ಎಂಬಲ್ಲಿ ಹೇಳಲ್ಪಟ್ಟ ಅರ್ಥವೇ ಉಪದೇಶಿಸಲ್ಪಟ್ಟಿತು. ಈ ತಾತ್ಪರ್ಯಗಳನ್ನೇ ಮುಂದಿನ ವಾಕ್ಯದಿಂದ ತೋರಿಸುತ್ತಾರೆ. ಮುಮುಕ್ಷುಣಾ - ಮೋಕ್ಷಾರ್ಥಿಯಿಂದ, ಕ್ರಿಯಮಾಣಂ ಕರ್ಮ - ಮಾಡಲ್ಪಡುವ ಕರ್ಮವು, ಪರಬ್ರಹ್ಮಾತ್ಮಕಮೇವ - ಪರಬ್ರಹ್ಮಕಾರ್ಯರೂಪವಾದುದೇ ಎಂಬ, ಅನುಸಂಧಾನ ಯುಕ್ತತಯಾ - ಎಂಬ ಭಾವನೆಯುಳ್ಳದಾದುದರಿಂದ, ಜ್ಞಾನಾಕಾರಂ-ಜ್ಞಾನಾಕಾರವುಳ್ಳದಾಗಿ, ಸಾಕ್ಷಾದಾತ್ಮಾವಲೋಕನ ಸಾಧನಂ - ಸಾಕ್ಷಾತ್ತಾಗಿ ಆತ್ಮಾವಲೋಕನಕ್ಕೆ ಸಾಧನರೂಪವಾದುದಾಗುತ್ತದೆ; ನ ಜ್ಞಾನನಿಷ್ಠಾವ್ಯವಧಾನೇನೇತ್ಯರ್ಥಃ - ಜ್ಞಾನಯೋಗನಿಷ್ಠೆಯ ಮೂಲಕವಾಗಿಯೇ ಆಗಬೇಕೆಂಬ ಆವಶ್ಯಕತೆ ಇಲ್ಲವೆಂಬ ತಾತ್ಪರ್ಯವು. ಕರ್ಮಯೋಗದ ಮೂಲಕ ಜ್ಞಾನಯೋಗವನ್ನವಲಂಬಿಸಿಯೇ ಆತ್ಮಾವಲೋಕನ ಉಂಟಾಗಬೇಕೆಂಬ ಆವಶ್ಯಕತೆಯು ಇಲ್ಲವು. ಹೀಗೆ ಎರಡುವಿಧವಾದ ಜ್ಞಾನಾಕಾರತೆಯುಳ್ಳ ಕರ್ಮಯೋಗವೇ ಆತ್ಮಾವಲೋಕನವನ್ನುಂಟುಮಾಡಬಲ್ಲದೆಂದು, ಬ್ರಹ್ಮೈವತೇನ ಗಂತವ್ಯಂ ಎಂಬುದರಿಂದ ಹೇಳಲ್ಪಟ್ಟಿತು. ಇಲ್ಲಿ ಬ್ರಹ್ಮೈವ ತೇನ ಗಂತವ್ಯಂ ಎಂಬಲ್ಲಿ ಬ್ರಹ್ಮಶಬ್ದಕ್ಕೆ ಪರಬ್ರಹ್ಮವೆಂದು ಅರ್ಥಮಾಡಿರುತ್ತಾರೆ. ಕರ್ಮಯೋಗದಿಂದಾಗಲಿ ಜ್ಞಾನಯೋಗದಿಂದಾಗಲಿ ಲಭಿಸತಕ್ಕದ್ದು ಜೀವಾತ್ಮಸಾಕ್ಷಾತ್ಕಾರವು. ಇದು ಆತ್ಮಾವಲೋಕನವೆಂದೂ ಹೇಳಲ್ಪಟ್ಟಿರುತ್ತದೆ.

**ಭಾ.ಅವ. ಏವಂ ಕರ್ಮಣೋ ಜ್ಞಾನಾಕಾರತಾಂ ಪ್ರತಿಪಾದ್ಯ,ಕರ್ಮಯೋಗ ಭೇದಾನಾಹ-**

ಆದುದರಿಂದ ಪ್ರಕರಣಾನುಗುಣವಾಗಿ ಅರ್ಥಮಾಡುವದು ಯುಕ್ತವೇ ಅಲ್ಲದೆ, ಶಬ್ದದಿಂದ ಮೇಲೆ ಮಾತ್ರ ತೋರಿಬರುವ ಅರ್ಥವನ್ನು ಮಾತ್ರ ಮಾಡುವದು ಯುಕ್ತವಲ್ಲವು. ವ್ಯಾಸಮಹರ್ಷಿಯು ಅಭಿಪ್ರಾಯಗಳನ್ನು ಗೂಢವಾಗಿ ಇಟ್ಟು ಉಪದೇಶಿಸುತ್ತಾರೇವಿನಾ ವ್ಯಕ್ತವಾಗಿ ಹೇಳುವದಿಲ್ಲವು. ಪೂರ್ವಾಪರಸಙ್ಗತಿ, ಪ್ರಕರಣ, ಇವುಗಳನ್ನು ಬಿಟ್ಟು, ಮೇಲೆ ತೋರುವ ಅರ್ಥಗಳನ್ನು ಹೇಳಿ ಬಿಟ್ಟರೆ,ಅನನ್ವಯವಾಗುತ್ತದೆ, ಈ ಶ್ಲೋಕದಲ್ಲೇ ಬ್ರಹ್ಮಶಬ್ದವನ್ನು ಆರು ಸ್ಥಳದಲ್ಲಿ ಪ್ರಯೋಗಿಸಿರುವದರಿಂದ ಒಂದೊಂದು ಕಡೆಯಲ್ಲಿ ಒಂದೊಂದರ್ಥವನ್ನು ಹೇಳಿ ನಾನಾವಿಧವಾದ ಅಭಿಪ್ರಾಯವನ್ನು ಹೇಳಬಹುದು. ಹಾಗೆಯೇ ಮುಂದಿನ ಶ್ಲೋಕದಲ್ಲಿ **ಯಜ್ಞಂ ಯಜ್ಞೇನೈವೋಪಜುಹ್ವತಿ** ಎಂಬ ಸ್ಥಳದಲ್ಲಿ ಯಜ್ಞಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳುವದರಲ್ಲಿ ಭಿನ್ನಾಭಿಪ್ರಾಯಗಳು ಉಂಟಾಗುತ್ತವೆ. ಆದುದರಿಂದ ಪೂರ್ವಶ್ಲೋಕಕ್ಕೂ ಉತ್ತರಶ್ಲೋಕಕ್ಕೂ ಸಮಂಜಸವಾದ ಸಙ್ಗತಿ ಮತ್ತು ಪ್ರಕರಣಗಳನ್ನು ಮನಸ್ಸಿನಲ್ಲಿಟ್ಟೇ ಅರ್ಥಮಾಡಬೇಕಾದುದು ಆವಶ್ಯಕವು. ಆದುದರಿಂದ ಬ್ರಹ್ಮಶಬ್ದಕ್ಕೆ ಆರು ಕಡೆಯಲ್ಲೂ, ಬ್ರಹ್ಮಕಾರ್ಯವಾದುದರಿಂದ ಬ್ರಹ್ಮವೆಂದು, ಅರ್ಥಮಾಡಿದರೆ ಸರ್ವಸಾಮಂಜಸ್ಯವು ದೊರಕುತ್ತದೆ; ಇಲ್ಲದಿದ್ದರೆ ಇಲ್ಲವು. ಕರ್ಮಯೋಗಾನುಷ್ಠಾನಾನಂತರ ಜ್ಞಾನಯೋಗವನ್ನವಲಂಬಿಸುವ ಆವಶ್ಯಕತೆಯಿಲ್ಲದೆ, ಜ್ಞಾನಯೋಗದಿಂದುಂಟಾಗುವ ಸಿದ್ಧಿಯಾದ ಆತ್ಮಾವಲೋಕನವನ್ನು, ಈ ಕರ್ಮಯೋಗಾನುಷ್ಠಾನವನ್ನು ಈ ಎರಡು ವಿಧ ಜ್ಞಾನಾಕಾರತೆಯುಳ್ಳದೆಂದು ಭಾವಿಸಿ ಅನುಷ್ಠಿಸುವದರಿಂದಲೇ ಹೊಂದಬಹುದೆಂದು ಇಲ್ಲಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು.

**ಭಾಷ್ಯಾವತಾರಿಕೆಯ ಅರ್ಥವು :—ಏವಂ** - ಹಿಂದಿನ ಶ್ಲೋಕದಲ್ಲಿ ಉಪಪಾದಿಸಿದರೀತ್ಯಾ **ಕರ್ಮಣಃ** - ಕರ್ಮಯೋಗಕ್ಕೆ ಎಂದರೆ ಕರ್ಮಯೋಗಾನುಷ್ಠಾನದ ಸಮಸ್ತಕರ್ಮಗಳಿಗೂ, **ಜ್ಞಾನಾಕಾರತಾಂ** - ಜ್ಞಾನಾಕಾರವನ್ನು, **ಪ್ರತಿಪಾದ್ಯ** - ಉಪಪಾದನೆ ಮಾಡಿ, ಈ ಮುಂದಿನ ಶ್ಲೋಕವನ್ನಾರಂಭಿಸಿ, ೩೦ ನೆಯ ಶ್ಲೋಕದಲ್ಲಿರುವ **ಪ್ರಾಣಾನ್ಪ್ರಾಣೇಷು ಜುಹ್ವತಿ** ಎಂಬುವವರೆಗೂ, **ಕರ್ಮಯೋಗ ಭೇದಾನಾಹ** - ಕರ್ಮಯೋಗದ ಪ್ರಭೇದಗಳನ್ನು ಹೇಳುತ್ತಾರೆ. ಈ ಅವತಾರಿಕೆಯಿಂದ, ಹಿಂದಿನ ಶ್ಲೋಕವೂ ಕೂಡ ಕರ್ಮಯೋಗ ಪ್ರಭೇದವೆಂದು ಭಾವಿಸುವ ಅಭಿಪ್ರಾಯವು ಸರಿಯಲ್ಲವೆಂದು ಹೇಳಿದಂತಾಯಿತು. ಕರ್ಮಯೋಗದಲ್ಲಿ ಅನೇಕವಿಧ ಕರ್ಮಾನುಷ್ಠಾನದಲ್ಲೂ ಸಾಧಾರಣವಾಗಿ ಅನುಸಂಧಾನವು ಯಾವರೀತಿಯಲ್ಲಿರಬೇಕೆಂದು ಹೇಳಿಬಿಟ್ಟು ಈಗ ಕರ್ಮಯೋಗ ಪ್ರಭೇದಗಳನ್ನು ಹೇಳುತ್ತಾರೆ. **"ಬ್ರಹ್ಮಾರ್ಪಣಂ"** ಎಂಬ ಶ್ಲೋಕದ ಮೂಲಕ ಒಳ್ಳೇ ಜ್ಞಾನಯಜ್ಞ ಪ್ರಕಾರವನ್ನು ತಿಳಿಸಿ, ಅದರ ಮಾಹಾತ್ಮ್ಯೆಗೋಸ್ಕರ ಕೆಲವು ಕರ್ಮಯೋಗಿಗಳ ಕರ್ಮ ಪ್ರಭೇದಗಳನ್ನು ಮುಂದೆ ಹೇಳುತ್ತಾರೆಂದು ಅಭಿಪ್ರಾಯ ಪಡುವರು; ಉತ್ಕರ್ಷಾಪಕರ್ಷಗಳನ್ನು ವ್ಯಕ್ತಪಡಿಸುವ ಪ್ರಯೋಗಗಳೇ ಇಲ್ಲವು. ಅದೂ ಅಲ್ಲದೆ **"ಕರ್ಮಜ್ಯಾಯೋಹ್ಯಕರ್ಮಣಃ"** (ಗೀ. ೩. ೮.) ಎಂದು ಹಿಂದೆ ಹೇಳಿದುದಕ್ಕೆ ವಿರೋಧವಾದಭಿಪ್ರಾಯವಾಗುತ್ತದೆ.

**ಮೂಲಕ್ಕೆ ಅರ್ಥವು :**—ಪರಮ ಪುರುಷಾರಾಧನರೂಪದಲ್ಲಿ, ಫಲಸಙ್ಗ ಕರ್ತೃತ್ವಗಳನ್ನು ತ್ಯಜಿಸಿ ಮಾಡುವ ಕರ್ಮಯೋಗಕ್ಕೆ ಜ್ಞಾನಾಕಾರತೆಯನ್ನು ವ್ಯಕ್ತಪಡಿಸಿ, ಕರ್ಮಯೋಗದ ವಿಕರ್ಮಗಳಾದ ನಿತ್ಯನೈಮಿತ್ತಿಕ ಕಾಮ್ಯಗಳಲ್ಲಿ, ಕಾಮ್ಯವಾಗಿ ಐಚ್ಛಿಕವಾದ ಕರ್ಮಗಳ ಪ್ರಭೇದಗಳು ಯಾವುವು ಎಂಬುದು ಮುಂದೆ ಹೇಳಲ್ಪಡುತ್ತವೆ ಕರ್ಮಯೋಗಾನುಷ್ಠಾನಕಾಲದಲ್ಲಿ ನಿತ್ಯ

ಮೂ. ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತೀ ॥ ೨೫.

ನೈಮಿತ್ತಿಕಗಳಲ್ಲದೆ ಈ ಮುಂದೆ ಹೇಳಲ್ಪಡುವ ಐಚ್ಛಿಕ ಪ್ರಭೇದಗಳಲ್ಲಿ ಒಂದನ್ನು ಅವಲಂಬಿಸತಕ್ಕದ್ದೆಂದು ಹೇಳುತ್ತಾರೆ. **ಅಪರೇ ಯೋಗಿನಃ** - ಕೆಲವು ಕರ್ಮಯೋಗಿಗಳು, ದ್ವಿವಿಧಾನಿಷ್ಠೆಯನ್ನು ವಿಭಾಗಿಸುವಾಗ (ಗೀ. ೩. ೩.) ಕರ್ಮಯೋಗೇನ ಯೋಗಿನಾಂ ಎಂದು ಹೇಳಲ್ಪಟ್ಟಿರುವದರಿಂದ, ಯೋಗಿನಃ ಎಂದರೆ ಇಲ್ಲಿ ಕರ್ಮಯೋಗಿಗಳೆಂದೇ ಅರ್ಥಮಾಡುವದು ಪ್ರಕರಣಾನುಗುಣವಾದುದು; ಇಲ್ಲಿ ಅಪರೇ ಎಂಬ ಪ್ರಯೋಗ ವಿರುವದರಿಂದ ಹಿಂದಿನ ಶ್ಲೋಕದಲ್ಲಿ ಕೇಚಿತ್ ಹೇಳಲ್ಪಟ್ಟರೆಂದು ಕೆಲವರು ಭಾವಿಸುವರು. ಪರಸ್ಪರ ಭೇದವಿರುವ, ಸಂಗಡದವರನ್ನು ಹೇಳುವಾಗ ಇಬ್ಬರನ್ನೂ ಅಪರೇ ಎಂಬ ಪ್ರಯೋಗದಿಂದ ಹೇಳುವದು ಯುಕ್ತವಾದುದೇ. **ದೈವಂ ಯಜ್ಞಂ** - ಪರಮ ಪುರುಷ ಸಂಬಂಧವಾದ ಯಜ್ಞವನ್ನು ಎಂದರೆ ದೇವತಾರ್ಚನೆಯನ್ನು, **ಪರ್ಯುಪಾಸತೇ** - ಶ್ರದ್ಧೆಯಿಂದ ಅನುಷ್ಠಿಸುವರು, ಇಲ್ಲಿ ಉಪಾಸತೇ ಎಂದಿರುವದರಿಂದ ಏಕಾಗ್ರಚಿತ್ತದಿಂದ ನಡೆಸುವರೆಂಬ ಭಾವವು. ದೇವತಾರ್ಚನೆ ಮಾಡುವಾಗ ಮನಸ್ಸನ್ನು ಗೃಹಕೃತ್ಯಗಳಲ್ಲಿಟ್ಟು ಗೃಹಕೃತ್ಯದ ಮಾತುಗಳನ್ನಾಡುತ್ತಾ ಮಾಡುವ ದೇವತಾರ್ಚನೆಯು ಕರ್ಮಯೋಗಿಯ ದೈವಯಜ್ಞವಾಗುವದಿಲ್ಲವು. ಇಲ್ಲಿ ದೈವ ಶಬ್ದವು ಇಂದ್ರಾದಿ ದೇವತೆಗಳನ್ನು ಬೋಧಿಸುವದಿಲ್ಲವು, ಯೋಗಿನಃ ಎಂದರೆ ಕರ್ಮಯೋಗಿ ಎಂದು ಒಪ್ಪಿಕೊಳ್ಳುವ ಪಕ್ಷದಲ್ಲಿ, ಆತನು ಮೋಕ್ಷಾರ್ಥಿಯಾದುದರಿಂದ ಇಂದ್ರಾದಿ ಅನ್ಯದೇವತಾ ಭಜನವು ಆತನಿಗೆ ಬೇಕಿಲ್ಲವು. ಅಥವಾ ನಿತ್ಯನೈಮಿತ್ತಿಕಗಳ ಮೂಲಕ ಅದು ಪ್ರಾಪ್ತವಾದರೂ ಪರಬ್ರಹ್ಮನೇ ಪ್ರೀತನಾಗುವನು ಎಂಬಭಿಪ್ರಾಯದಿಂದ ಅನುಷ್ಠಿಸತಕ್ಕದ್ದೆಂದು ಹಿಂದೆಯೇ "ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ" (ಗೀ. ೩. ೩೦.) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ, **ಅಪರೇ** ಇನ್ನೂ ಕೆಲವರು, **ಬ್ರಹ್ಮಾಗ್ನೌ** - ಪರಬ್ರಹ್ಮ ಕಾರ್ಯರೂಪವಾದ ಅಗ್ನಿಯಲ್ಲಿ, **ಯಜ್ಞಂ** - ಯಜ್ಞವನ್ನು ಇದು ಯಜ್ಞಯಾಗಾದಿಗಳಿಗೆಲ್ಲಾ ಉಪಲಕ್ಷಣವು, **ಯಜ್ಞೇನೈವ** - ಯಜ್ಞಸಾಧನಗಳ ಮೂಲಕವಾಗಿಯೇ, **ಉಪಜುಹ್ವತಿ** - ಹವಿಸ್ಸಮರ್ಪಣರೂಪದಿಂದ ಹೋಮ ಮಾಡುತ್ತಾರೆ. ಇವರೂ ಮೋಕ್ಷಾರ್ಥಿಗಳಾದ ಕರ್ಮಯೋಗಿಗಳಾದುದರಿಂದ ಮೇಲೆಹೇಳಿದ ಎರಡುವಿಧವಾದ ಜ್ಞಾನಾಕಾರತೆಯನ್ನು ಮನಸ್ಸಿನಲ್ಲಿಟ್ಟೇ ಮಾಡುತ್ತಾರೆಂಬ ಭಾವವು. ಬಂಧಕ್ಕೆ ವಶವಾಗುವ ಹಾಗೆ ಮಾಡುವದಿಲ್ಲವು. ಮೇಲೆ ಹೇಳಿದ ರೀತಿಯಲ್ಲಿ ಮಾಡುವದರಿಂದ ಭಗವದನುಗ್ರಹವು ಉಂಟಾಗಿ ರಜಸ್ಸು ತಮಸ್ಸುಗಳು ಅಡಗಿ, ಸತ್ವವು ತಲೆ ಎತ್ತುವದರಿಂದ ಬಂಧವುಂಟಾಗುವದಕ್ಕೆ ಕಾರಣವಿಲ್ಲವೆಂಬ ತಾತ್ಪರ್ಯವು. ಕರ್ಮಯೋಗದಲ್ಲಿ ನಿತ್ಯ ನೈಮಿತ್ತಿಕಗಳೂ ಮತ್ತು ಈಗ ಈ ಶ್ಲೋಕದಿಂದಾರಂಭಿಸಿ "ಪ್ರಾಣೇ ಪ್ರಾಣೇನ ಜುಹ್ವತಿ" (ಗೀ. ೪. ೩೦) ಎಂಬುವ ವರೆಗೂ ಹೇಳಿರುವುಗಳಲ್ಲಿ ಒಂದೂ ಸಹ ಇರತಕ್ಕದ್ದು. ಇವುಗಳಲ್ಲಿ ನಿತ್ಯ ನೈಮಿತ್ತಿಕಗಳು ಅಜ್ಗಗಳು, ಆ ಐಚ್ಛಿಕ ಭಾಗದಲ್ಲಿ ಒಂದು ಅಜ್ಗಿಯು. ಇವುಗಳನ್ನು ಪರಮ ಪುರುಷಾರಾಧನಾರೂಪದಲ್ಲಿ ಉಕ್ತವಾದ ಜ್ಞಾನಾಕಾರತೆಯಿಂದ ಅನುಷ್ಠಿಸುವದರಿಂದ ಭಗವತ್ಪ್ರೀತಿಯನ್ನುಂಟುಮಾಡಿ, ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳು ತೊಲಗಿ ಆತ್ಮಾವಲೋಕನವು ಸಿದ್ಧಿಸಿ, ಉಪಾಸನವು ಕೈಗೂಡುತ್ತದೆಂಬ ಭಾವವು ಸೂಚಿತವು. ಈ ಆತ್ಮಾವಲೋಕನ ಸಿದ್ಧಿಯುಂಟಾಗುವವರೆಗೂ ಕರ್ಮಯೋಗದ ಐಚ್ಛಿಕಭಾಗದ ಆವಶ್ಯಕತೆಯು; ತದನಂತರ ಆ ಪ್ರಯಾಣಾತ್ ನಿತ್ಯ ನೈಮಿತ್ತಿಕಗಳನ್ನು ಉಪಾಸನಕ್ಕೆ ಅಜ್ಗವಾಗಿ, ನಡೆಸತಕ್ಕದ್ದೆಂದು ೧೮ ನೆಯ ಅಧ್ಯಾಯದಲ್ಲಿ ವ್ಯಕ್ತವು.

ಭಾ॰ ದೈವಂ - ದೇವತಾರ್ಚನರೂಪಂ, ಯಜ್ಞಂ ಅಪರೇ ಕರ್ಮಯೋಗಿನಃ, ಪರ್ಯುಪಾಸತೇ –ಸೇವಂತೇ, ತತ್ರೈವ ನಿಷ್ಠಾಂಕುರ್ವಂತೀತ್ಯರ್ಥಃ. ಅಪರೇ ಬ್ರಹ್ಮಾಗ್ನೌ ಯಜ್ಞಂ ಯಜ್ಞೇನೈವೋಪಜುಹ್ವತಿ ; ಅತ್ರಯಜ್ಞಶಬ್ದೋ ಹವಿಸ್ಸ್ರುಗಾದಿ ಯಜ್ಞಸಾಧನೇ ವರ್ತತೇ ; "ಬ್ರಹ್ಮಾರ್ಪಣಂ ಬ್ರಹ್ಮಹವಿಃ" ಇತಿನ್ಯಾಯೇನ ಯಾಗಹೋಮಯೋಃ ನಿಷ್ಠಾಂ ಕುರ್ವನ್ತಿ ||೨೫||

ಹಾಗೆಯೇ ಹಿಂದೆಯೂ ೪ನೆಯ ಅಧ್ಯಾಯದ ೧೭ನೆಯ ಶ್ಲೋಕದಲ್ಲೂ "ಅಕರ್ಮಣಶ್ಚ ಬೋದ್ಧವ್ಯಮ್" ಎಂಬಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿರುತ್ತದೆ. ಶ್ರೀ ಯತಿವರ್ಯರೂ ಭಾಷ್ಯದಲ್ಲಿ "ಯಾವತ್ಸಾಧನ ಸಮಾಪ್ತಿ ಮಹಾ ಯಜ್ಞಾದಿ ನಿತ್ಯನೈಮಿತ್ತಿಕಂ ಕರ್ಮಾವಶ್ಯಂ ಕರ್ತವ್ಯಮ್" ಎಂದು ಸುಸ್ಪಷ್ಟವಾಗಿ ಹೇಳಿರುತ್ತಾರೆ. ಈ ಅಭಿಪ್ರಾಯವೇ ಮುಂದೆ ಈ ಅಧ್ಯಾಯದ ೩೨ನೆಯ ಶ್ಲೋಕದಲ್ಲೂ ಉಪಪಾದಿತವು.

ಭಾಷ್ಯಾರ್ಥವು:—ದೈವಂ - ದೇವಸಂಬಂಧನಾದ ಎಂದರೆ ದೇವತಾರ್ಚನರೂಪಂ - ಭಗವಂತನ ಅರ್ಚನೆ ರೂಪವಾದ, ಯಜ್ಞವನ್ನು, ಅಪರೇ ಕರ್ಮಯೋಗಿನಃ - ಕೆಲವು ಕರ್ಮಯೋಗಿಗಳು,ಇಲ್ಲಿಕರ್ಮಯೋಗಿಗಳ ಪ್ರಭೇದಗಳನ್ನು ಹೇಳುವ ಪ್ರಕರಣವಾಗಿರುವದರಿಂದ, ಯೋಗಿ ಶಬ್ದಕ್ಕೆ ಕರ್ಮಯೋಗಿ ಎಂದೇ ಅರ್ಥವು. ಹಿಂದೆ ಕರ್ಮ ಯೋಗೇನ ಯೋಗಿನಾಂ ಎಂಬ ಪ್ರಯೋಗವಿರುವದರಿಂದ ಮೂಲದ ಯೋಗಿ ಶಬ್ದಕ್ಕೆಯತಿ ಎಂದು ಅರ್ಥಮಾಡುವದು ಸರಿಯಾಗಿ ತೋರುವದಿಲ್ಲವು. ಪರ್ಯುಪಾಸತೇ-ಎಂದರೆ,ಇಲ್ಲಿ ಉಪಾಸನೆ ಯಾವುದೂಇಲ್ಲವಾದುದರಿಂದ, ಸೇವಂತೇ-ಸೇವಿಸುತ್ತಾರೆ; "ಸೇವಾಭಕ್ತಿರುಪಾಸ್ತಿಃ" ಎಂಬ ವಾಕ್ಯವನ್ನನುಸರಿಸಿ ಉಪಾಸತೇ ಎಂಬುದಕ್ಕೆ ಸೇವನ್ತೇ ಎಂಬ ಭಾಷ್ಯವು; ಹೀಗೆ ಹೇಳಿದುದರಿಂದ ದೇವತಾರ್ಚನೆಯಲ್ಲಿ ಕರಣತ್ರಯದ ಅನುಕೂಲವೃತ್ತಿಯು ನಿರಂತರವಿರಬೇಕೆಂದು ಹೇಳಿದಂತಾಯಿತು. ಭಗವತಾರ್ಚನೆಯನ್ನು ಶ್ರದ್ಧೆಯಿಂದಲೂ ಇದು ಒಂದು ಯಜ್ಞವೆಂದುಭಾವಿಸಿ ನಿಷ್ಠೆಯಿಂದಲೂ ಪ್ರತಿದಿನವೂ ತಪ್ಪದೆ ಮಾಡುತ್ತಾರೆಂಬ ಭಾವವು ; ಅದನ್ನೇ ತಿಳಿಸುತ್ತಾರೆ:—ತತ್ರೈವ-ಆ ಭಗವತಾರ್ಚನಾರೂಪ ಯಜ್ಞದಲ್ಲೇ, ನಿಷ್ಠಾಂ ಕುರ್ವಂತೀತ್ಯರ್ಥಃ - ನಿಷ್ಠೆಯನ್ನುಳ್ಳವರಾಗುತ್ತಾರೆಂಬ ಭಾವವು. ದೇವತಾರ್ಚನೆಯನ್ನು ಎಲ್ಲರೂ ಮಾಡತಕ್ಕದ್ದಾಗಿರುತ್ತದೆ ಹಾಗಿರುವಾಗ ಈ ಕರ್ಮಯೋಗಿಗಳ ವಿಷಯದಲ್ಲಿ ದೇವತಾರ್ಚನೆಯು ಒಂದು ಯಜ್ಞವೆಂದು ಹೇಳುವದರಲ್ಲೇನು ಅತಿಶಯವು ಎಂದರೆ ತುಂಬಾ ನಿಷ್ಠೆಯಿಂದ ಶಾಸ್ತ್ರೋಕ್ತರೀತ್ಯಾ ನಡೆಸುವರೆಂದು ವೈಲಕ್ಷಣ್ಯವನ್ನು ಹೇಳುವದಕ್ಕಾಗಿ, ತತ್ರೈವ ನಿಷ್ಠಾಂಕುರ್ವಂತಿ ಎಂದು ಹೇಳಿರುತ್ತಾರೆ. ಹಿಂದಿನ ಶ್ಲೋಕದಲ್ಲಿ ನಿವೃತ್ತಿ ಲಕ್ಷಣ ರೂಪ ಯಜ್ಞವನ್ನು ಉಪದೇಶಿಸಿದರು ಎಂದೂ, ದೈವ ಮೇವಾಪರೇ ಎಂಬುದರಿಂದ ತಾರತಮ್ಯವನ್ನು ತೋರಿಸುವದಕ್ಕಾಗಿ ಇಂದ್ರಾದಿ ದೇವತಾಸಂಬಂಧ ಯಜ್ಞವೆಂದೂ, ಕೆಲವರು ಅಭಿಪ್ರಾಯಪಡುವರು. ಹಿಂದಿನ ಶ್ಲೋಕದಲ್ಲಿ ನಿವೃತ್ತಿಲಕ್ಷಣರೂಪ ಯಜ್ಞವೂ, ಇಲ್ಲಿ ಪ್ರವೃತ್ತಿ ಲಕ್ಷಣ ರೂಪ ಯಜ್ಞವೂ ಹೇಳಲ್ಪಟ್ಟಿತೆಂದು ತಾರತಮ್ಯವನ್ನು ಕೆಲವರು ಕಲ್ಪಿಸುವರು. ಹಿಂದಿನ ಶ್ಲೋಕವು ಕರ್ಮಯೋಗ ಪ್ರಭೇದವನ್ನು ಬೋಧಿಸುವದಿಲ್ಲವು. ಎಲ್ಲಾವಿಧ ಕರ್ಮಯೋಗದಲ್ಲೂ ಬ್ರಹ್ಮಾತ್ಮಕತ್ವ ಅನುಸಂಧಾನವಿರಬೇಕೆಂಬ ಸಾಧಾರಣೋಪದೇಶವು. ಎಲ್ಲಾ ಕರ್ಮಯೋಗಿಗಳ ಕರ್ಮಾನುಷ್ಠಾನವೆಲ್ಲಾ ಭಗವದಾತ್ಮಕವಾದ ಯಜ್ಞರೂಪವೆಂದು ಹೇಳಲು ಹೊರಟು ಅವುಗಳಲ್ಲೆಲ್ಲಾ ಅಗ್ನಿ, ಹವಿಸ್ಸುಗಳು ಯಾವುವು ಎಂದು ಹೇಳಲು ಉಪಕ್ರಮಿಸಿರುತ್ತಾರೆ:—ಆದುದರಿಂದ ಬಂಧಕ ಯಜ್ಞಗಳ ವಿಷಯವು ಈ ಶ್ಲೋಕದಲ್ಲಿ ಹೇಳಲ್ಪಡಲಿಲ್ಲವು.

ಮೂ. ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।
ಶಬ್ದಾದೀನ್ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ॥ ೨೬.

ಮೋಕ್ಷದಾಯಕವಾದುವೇ ಹೇಳಲ್ಪಟ್ಟವು. ಅಪರೇ - ಇನ್ನು ಕೆಲವರು, ಬ್ರಹ್ಮಾಗ್ನೌ - ಹಿಂದಿನ ಶ್ಲೋಕದಲ್ಲಿ ಹೇಳಿದಹಾಗೆ ಪರಬ್ರಹ್ಮ ಕಾರ್ಯರೂಪವಾದ ಅಗ್ನಿಯಲ್ಲಿ, ಯಜ್ಞಂ- ಶಾಸ್ತ್ರೋಕ್ತವಾದ ಯಜ್ಞ ಹವಿಸ್ಸನ್ನು, ಯಜ್ಞೇನೈವ - ಯಜ್ಞಸಾಧನಗಳಿಂದಲೇ, ಉಪ ಜುಹ್ವತಿ - ಹೋಮಮಾಡುತ್ತಾರೆ; ಅತ್ರ - ಈ ಸ್ಥಳದಲ್ಲಿ, ಯಜ್ಞಶಬ್ದವು ಹವಿ ಸ್ಸ್ರುಗಾದಿ ಯಜ್ಞ ಸಾಧನವೆಂಬರ್ಥದಲ್ಲಿ, ವರ್ತತೇ - ಇರುತ್ತದೆ ಎಂದರೆ ಉಪಯೋಗಿಸ ಲ್ಪಟ್ಟಿರುತ್ತದೆ; ಮೊದಲಿನ ಯಜ್ಞಶಬ್ದವು ಹವಿಸ್ಸೆಂಬರ್ಥದಲ್ಲೂ, ಎರಡನೆಯ ಯಜ್ಞ ಶಬ್ದವು ಸ್ರುಗಾದಿ ಎಂಬರ್ಥದಲ್ಲೂ ಪ್ರಯೋಗಿಸಲ್ಪಟ್ಟಿರುತ್ತದೆಂಬ ತಾತ್ಪರ್ಯವು. ಇದರಿಂದ ಮೊದಲಿನ ಯಜ್ಞಶಬ್ದವು ಜೀವಾತ್ಮರನ್ನೂ, ಎರಡನೆಯ ಯಜ್ಞಶಬ್ದವು ಪರಮಾತ್ಮನನ್ನು ಬೋಧಿಸುತ್ತವೆ ಎಂಬಭಿಪ್ರಾಯಗಳು ಸರಿಹೋಗುವದಿಲ್ಲವು ಬ್ರಹ್ಮಾರ್ಪಣಂ ಬ್ರಹ್ಮಹವಿಃ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ ನ್ಯಾಯದಿಂದ, ಯಾಗಹೋಮಗಳಲ್ಲಿ ನಿಷ್ಠಾಂಕುರ್ವಂತಿ- ನಿಷ್ಠೆಯುಳ್ಳವರಾಗುತ್ತಾರೆ. ಅಗ್ನಿಯಲ್ಲಿ ಯಜ್ಞವನ್ನೇ ಹೋಮಮಾಡುತ್ತಾರೆಂದು ಹೇಳಲು ಸಾಧ್ಯ ವಿಲ್ಲದುದರಿಂದ, ಯಜ್ಞಂ ಎಂದರೆ ಯಜ್ಞದಲ್ಲಿ ಹೋಮಮಾಡುವ ಹವಿಸ್ಸೆಂದೇ ಅರ್ಥ ಮಾಡಬೇಕಾಗಿರುತ್ತದೆ, ಯಜ್ಞೇನೈವ ಎಂದು ಕರಣವಿಭಕ್ತಿ ಇರುವದರಿಂದ ಇಲ್ಲಿ ಯಜ್ಞ ಶಬ್ದಕ್ಕೆ ಸ್ರುಗಾದಿಗಳು ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. ಆಗಲಿ ಹಿಂದಿನ ಶ್ಲೋಕದಲ್ಲಿ "ಬ್ರಹ್ಮಾಗ್ನೌ ಬ್ರಹ್ಮಣಾಹುತಮ್" ಎಂದು ಹೇಳಲ್ಪಟ್ಟಿತು; ಈ ಶ್ಲೋಕದಲ್ಲಾದರೋ ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪ ಜುಹ್ವತಿ" ಎಂದು ಇರುತ್ತದೆ; ಎರಡೂ ಸಮಾನಾರ್ಥಕಗಳಾದರೆ ಪುನರುಕ್ತಿದೋಷ ಉಂಟಾಗುತ್ತದೆ; ಆದುದರಿಂದ ಯಜ್ಞಂ ಯಜ್ಞೇ ನೈವೋಪ ಜುಹ್ವತಿ ಎಂಬುದಕ್ಕೆ ಬೇರೆ ವಿಧವಾಗಿ ಅರ್ಥಮಾಡುವದು ಯುಕ್ತವಾಗಿ ಇಲ್ಲಿ ಬ್ರಹ್ಮ ಕಾರ್ಯವಾದ ಯಜ್ಞದಲ್ಲಿ ಶಾಸ್ತ್ರದಲ್ಲಿ ಹೇಳಿರುವ ಯಾಗಹೋಮಗಳಲ್ಲಿ ನಿಷ್ಠೆಯನ್ನು ಮಾಡು ತ್ತಾರೆಂಬ ವ್ಯಾಖ್ಯಾನವು.

ಮೂಲಕ್ಕೆ ಅರ್ಥವು:—ಇನ್ನೂ ಇತರ ಕರ್ಮಯೋಗಿಗಳು ಮಾಡುವ ಅನುಷ್ಠಾನ ಕ್ರಮವನ್ನು ಉಪದೇಶಿಸುತ್ತಾರೆ. ಅನ್ಯೇ - ಇನ್ನು ಕೆಲವು ಕರ್ಮಯೋಗಿಗಳು, ಶ್ರೋತ್ರಾ ದೀನಿ - ಶ್ರೋತ್ರವೇ ಮೊದಲಾದ, ಇಂದ್ರಿಯಾಣಿ - ಇಂದ್ರಿಯಗಳನ್ನು, ಸಂಯಮಾಗ್ನಿಷು- ನಿಗ್ರಹವೆಂಬ ಅಗ್ನಿಗಳಲ್ಲಿ, ಜುಹ್ವತಿ - ಹೋಮಮಾಡುತ್ತಾರೆ; ಎಂದರೆ ಇಂದ್ರಿಯ ನಿಗ್ರಹ ನಿಷ್ಠೆಯಲ್ಲೇ ಆಸಕ್ತರಾಗಿರುತ್ತಾರೆಂಬ ಭಾವವು; ಅನ್ಯೇ - ಇನ್ನು ಕೆಲವರು, ಶಬ್ದಾದೀನ್ ವಿಷ ಯಾನ್ - ಶಬ್ದಾದಿ ವಿಷಯಗಳನ್ನು, ಇಂದ್ರಿಯಾಗ್ನಿಷು - ಇಂದ್ರಿಯಗಳೆಂಬ ಅಗ್ನಿಗಳಲ್ಲಿ, ಜುಹ್ವತಿ - ಹೋಮಮಾಡುತ್ತಾರೆ, ಎಂದರೆ ವಿಷಯ ನಿಗ್ರಹ ವ್ಯಾಪಾರನಿಷ್ಠೆಯಲ್ಲೇ ಆಸಕ್ತ ರಾಗಿರುತ್ತಾರೆ; ಎಂದರೆ ವಿಷಯಗಳು ಇಂದ್ರಿಯಗಳನ್ನು ಬಾಧಿಸದಹಾಗೆ ವಿಷಯತ್ಯಾಗ ಮಾಡಿರು ತ್ತಾರೆಂಬ ಭಾವವು; ಶಬ್ದಾದಿಗಳನ್ನು ಇಂದ್ರಿಯಗಳೆಂಬ ಅಗ್ನಿಯಲ್ಲಿ ಹೋಮ ಮಾಡುತ್ತಾರೆ, ಎಂದರೆ ಇಂದ್ರಿಯಗಳಿಗೆ ವಿಷಯಗಳ ಸಂಬಂಧವನ್ನುಂಟುಮಾಡುತ್ತಾರೆಂಬರ್ಥವಲ್ಲವು. ಕೆಲ ವರು ವಿಷಯಾನುಭವವನ್ನು ಮಾಡುತ್ತಾರೆ ಎಂದು ಅರ್ಥವನ್ನು ಮಾಡಿರುತ್ತಾರೆ: ಇದು ಸರಿ ಯಲ್ಲವು. ಹೋಮಮಾಡುವದರಿಂದ ಅದು ಭಸ್ಮವಾಗುತ್ತದೆ,ನಿರರ್ಥಕವಾದುದಾಗುತ್ತದೆಂದು ಅರ್ಥ ಮಾಡುವದೇ ಯುಕ್ತವು. ಅಗ್ನಿ ಶಬ್ದದಿಂದ ಹೋಮಮಾಡಲ್ಪಟ್ಟದುದು ತಳೆ ಎತ್ತದೆ ಇರಬೇಕು.

ಭಾ. ಅನ್ಯೇ ಶ್ರೋತ್ರಾದೀನಾ ಮಿಂದ್ರಿಯಾಣಾಂ ಸಂಯಮನೇ ಪ್ರಯತನ್ತೇ. ಅನ್ಯೇಯೋಗಿನಃ ಇಂದ್ರಿಯಾಣಾಂ ಶಬ್ದಾದಿ ವಿಷಯ ಪ್ರವಣತಾ ನಿವಾರಣೇ ಪ್ರಯತನ್ತೇ ||೨೬||

ಆದುದರಿಂದ ಮೊದಲನೆಯ ಕರ್ಮಯೋಗಿಗಳಲ್ಲಿ ಇಂದ್ರಿಯಗಳಿಗೆ ಸ್ವವ್ಯಾಪಾರವೇ ಇಲ್ಲವು. ಎರಡನೆಯ ಕರ್ಮಯೋಗಿಗಳಲ್ಲಿ ವಿಷಯಗಳಿಗೆ ಸ್ವವ್ಯಾಪಾರಗಳಾದ ಇಂದ್ರಿಯಗಳ ಪ್ರವಣತೆಯೇ ಇಲ್ಲವು ಎಂಬ ಭಾವವು. ಅಥವಾ ಮೊದಲನೆಯ ಕರ್ಮಯೋಗಿಗಳು ವಿಷಯ ಸಾನ್ನಿಧ್ಯ ಉಂಟಾಗದಹಾಗೆ ಇಂದ್ರಿಯಗಳು ವಿಷಯಗಳಿಂದ ದೂರವಾಗಿರುವಹಾಗೆ ಮಾಡುತ್ತಾರೆಂಬ ಭಾವವು. ಎರಡನೆಯವರು ವಿಷಯ ಸಾನ್ನಿಧ್ಯವಿದ್ದರೂ ಅವುಗಳಲ್ಲಿ ಪ್ರವಣತೆಯುಂಟಾಗದಹಾಗೆ ಪ್ರಯತ್ನಿಸುವರೆಂಬುದು ತಾತ್ಪರ್ಯವು. ಹೀಗೆ ಎರಡುವಿಧ ಕರ್ಮಯೋಗಿಗಳಿಗೂ ವ್ಯತ್ಯಾಸವನ್ನು ಕಲ್ಪಿಸಬಹುದು. ಆದರೆ ಇಂದ್ರಿಯಗಳಿಗೆ ವಿಷಯ ಸಂಬಂಧವನ್ನು ತಪ್ಪಿಸುತ್ತಿದ್ದರು ಎಂಬುದರಭಿಪ್ರಾಯವು ಇಷ್ಟೇ—ಸಂಪೂರ್ಣ ವಿಷಯಗಳ ನಿವಾರಣವು ಸಾಧ್ಯವೇ ಇಲ್ಲವು. ದುಷ್ಟವಿಷಯಗಳಲ್ಲಿ ಸಂಪೂರ್ಣ ಪ್ರವಣತೆ ಇಲ್ಲದಿರೋಣವೂ, ಅಧರ್ಮಗಳಲ್ಲದ ವಿಷಯಗಳಲ್ಲಿ ಅತ್ಯಂತಾಸಕ್ತಿ ಇಲ್ಲದಿರೋಣವೂ ಇಲ್ಲಿ ವಿವಕ್ಷಿತವು.

**ಭಾಷ್ಯಾರ್ಥವು :—ಅನ್ಯೇ** - ಇತರ ಕರ್ಮಯೋಗಿಗಳು, **ಶ್ರೋತ್ರಾದೀನಾಂ ಇಂದ್ರಿಯಾಣಾಂ** - ಕಿವಿಯೇ ಮೊದಲಾದ ಇಂದ್ರಿಯಗಳ, **ಸಂಯಮನೇ**-ನಿಗ್ರಹದಲ್ಲಿ, **ಪ್ರಯತಂತೇ**-ಪ್ರಯತ್ನಿಸುತ್ತಾರೆ. **ಅನ್ಯೇ ಯೋಗಿನಃ** - ಇನ್ನೂ ಇತರ ಕರ್ಮಯೋಗಿಗಳು, **ಇಂದ್ರಿಯಾಣಾಂ**-ಇಂದ್ರಿಯಗಳ, **ಶಬ್ದಾದಿ ವಿಷಯಪ್ರವಣತಾ ನಿವಾರಣೇ** - ಶಬ್ದಾದಿವಿಷಯಗಳಲ್ಲಿರುವ ಆಸಕ್ತಿಯನ್ನು ನಿವಾರಣೆ ಮಾಡುವವದರಲ್ಲಿ, **ಪ್ರಯತನ್ತೇ**-ಪ್ರಯತ್ನಿಸುತ್ತಾರೆ. ಇಂದ್ರಿಯ ನಿಗ್ರಹವು ಸರ್ವ ಕರ್ಮಯೋಗ ಸಾಧಾರಣವಾಗಿರುವಾಗ, ಇಲ್ಲಿ ಮುಖ್ಯವಾಗಿ ಹೇಳಿರುವದೇನು ಎಂದರೆ, ಸಾಧಾರಣ ನಿಗ್ರಹವು ಎಲ್ಲಾ ಕರ್ಮಯೋಗಿಗಳಿಗೂ ಆವಶ್ಯಕವೆಂದು ಹಿಂದೆ ಹೇಳಲ್ಪಟ್ಟಿತು. ಇಲ್ಲಿಯಾವರೋ ಇಂದ್ರಿಯಗಳಿಗೆ ವಿಷಯ ಸಂಬಂಧವೇ ಇಲ್ಲದಹಾಗೆ **ಪ್ರಯತಂತೇ** - ಪ್ರಯತ್ನಿಸುತ್ತಾರೆ. ಪ್ರತೀಂದ್ರಿಯಕ್ಕೂ ಸಂಯಮವು ಭಿನ್ನವಾದುದರಿಂದ, **ಸಂಯಮಾಗ್ನಿಷು** ಎಂದು ಬಹುವಚನವು. ಇಂದ್ರಿಯೇಭ್ಯಃ ಪರಾಹ್ಯರ್ಥಾಃ **ಅರ್ಥೇಭ್ಯಶ್ಚ ಪರಂಮನಃ** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಪೂರ್ವಾರ್ಧದಿಂದ, ಇಂದ್ರಿಯಗಳ ನಿಯಮನವೂ, ಉತ್ತರಾರ್ಧದಿಂದ ವಿಷಯಗಳ ನಿಯಮನವೂ ಹೇಳಲ್ಪಟ್ಟ ಮುಂದಿನ ಶ್ಲೋಕದಿಂದ ಮನಸ್ಸಿನ ನಿಯಮನವೂ ಹೇಳಲ್ಪಡುವುದು. ಇಲ್ಲಿ ಅಗ್ನೌ ಜುಹ್ವತಿ ಎಂಬ ಪ್ರಯೋಗಗಳಿಂದ, ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡುವಹಾಗೆ ಇವುಗಳೂ ಕೂಡ ಒಂದು ಯಾಗವೆಂದು ರೂಪಕವಾಗಿ ಹೇಳಲ್ಪಟ್ಟಿರುತ್ತದೆ. ಹವಿಸ್ಸನ್ನು ಅಗ್ನಿಯಲ್ಲಿ ಹೋಮ ಮಾಡುವದರಿಂದ ಹವಿಸ್ಸು ಭಸ್ಮೀಭೂತವಾಗುತ್ತದೆ. ಹಾಗೆಯೇ ಇಲ್ಲಿ ಇಂದ್ರಿಯಗಳನ್ನು ನಿಗ್ರಹರೂಪ ಅಗ್ನಿಗಳಲ್ಲಿ ಹೋಮಮಾಡುವದರಿಂದ ಇಂದ್ರಿಯಗಳೂ ಭಸ್ಮೀಭೂತವಾಗುತ್ತವೆ ಎಂಬುದರಭಿಪ್ರಾಯವೇನೆಂದರೆ, ಅವುಗಳಿಗೆ ಶಬ್ದಾದಿಗಳ ವಿಷಯಗಳಲ್ಲಿ ಆಶಿಪಡುವ ಶಕ್ತಿಯೇ ಇಲ್ಲವಾಗುತ್ತದೆ ಎಂಬ ಭಾವವು. ಹಾಗೆಯೇ ವಿಷಯಗಳೆಂಬ ಹವಿಸ್ಸೂ, ಇಂದ್ರಿಯಾಗ್ನಿಗಳಲ್ಲಿ ಭಸ್ಮೀಭೂತವಾಗುತ್ತವೆ. ಅಂತಹ ಕರ್ಮಯೋಗಿಗೆ ಅವು ನಿರರ್ಥಕಗಳಾಗುವದರಿಂದ ಇಂದ್ರಿಯಗಳು ಅವುಗಳನ್ನು ಬಯಸುವದೇ ಇಲ್ಲವು ಎಂಬ ಭಾವವು ತೋರಿಬರುತ್ತದೆ.

**ಮೂಲಕ್ಕೆ ಅರ್ಥವು:—ಅಪರೇ**-ಇನ್ನೂ ಕೆಲವು ಕರ್ಮ ಯೋಗಿಗಳು, **ಸರ್ವಾಣೀಂದ್ರಿಯ ಕರ್ಮಾಣಿ** - ಸಮಸ್ತ ಇಂದ್ರಿಯಗಳ ವ್ಯಾಪಾರಗಳನ್ನೂ, ಹಿಂದೆ ಜ್ಞಾನೇಂದ್ರಿಯಗಳು ಹೇಳಲ್ಪ

**ಮೂ.** ಸರ್ವಾಣೀಂದ್ರಿಯ ಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ।
ಆತ್ಮಸಂಯಮ ಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭.

**ಭಾ.** ಅನ್ಯೇ ಜ್ಞಾನದೀಪಿತೇ ಮನಸ್ಸಂಯಮ ಯೋಗಾಗ್ನೌ ಸರ್ವಾಣಿ ಇಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚ ಜುಹ್ವತಿ ; ಮನಸ ಇಂದ್ರಿಯ ಪ್ರಾಣಕರ್ಮ ಪ್ರವಣತಾ ನಿವಾರಣೇ ಪ್ರಯತನ್ತ ಇತ್ಯರ್ಥಃ ॥೨೭॥

ಟ್ಟಿದುದರಿಂದ ಗೋಬಲೀವರ್ದನ್ಯಾಯದಪ್ರಕಾರ ಇಲ್ಲಿ ಕರ್ಮೇಂದ್ರಿಯಗಳ ವ್ಯಾಪಾರಗಳನ್ನೂ ಎಂದು ಅರ್ಥಮಾಡಬಹುದು; ಅಥವಾ ಎಲ್ಲಾ ಇಂದ್ರಿಯ ವ್ಯಾಪಾರಗಳನ್ನೂ, ಪ್ರಾಣ ಕರ್ಮಾಣಿ-ಪ್ರಾಣಸಂಬಂಧವಾದ ವ್ಯಾಪಾರಗಳನ್ನೂ, ಜ್ಞಾನದೀಪಿತೇ - ಮೇಲೆ ಹೇಳಿದ ಎರಡು ವಿಧವಾದ ಜ್ಞಾನಾಕಾರತೆಯಿಂದ ಪ್ರಜ್ವಲಿಸುವ, ಅಥವಾ ಇದು ಉಪಾದೇಯವಾದುದು ಇದು ಉಪಾದೇಯವಲ್ಲವೆಂದು ವಿವೇಚನಮಾಡುವ ವಿವೇಕರೂಪ ಜ್ಞಾನದಿಂದ ಪ್ರಕಾಶಿಸುವ, ಆತ್ಮಸಂಯಮ ಯೋಗಾಗ್ನೌ - ಮನಸ್ಸನ್ನು ನಿಯಮಿಸುವದೇ ಒಂದು ಯೋಗ, ತದ್ರೂಪವಾದ ಅಗ್ನಿಯಲ್ಲಿ, ಅಥವಾ ಮನಸ್ಸನ್ನು ನಿಯಮಿಸುವದರ ಪ್ರಾಪ್ತಿರೂಪವಾದ ಅಗ್ನಿಯಲ್ಲಿ, ಜುಹ್ವತಿ - ಹೋಮಮಾಡುತ್ತಾರೆ, ವಿವೇಕರೂಪಜ್ಞಾನವುಳ್ಳವರಾದುದರಿಂದಾಗಲಿ, ಅಥವಾ ತಾನು ದೇಹಕ್ಕಿಂತ ವಿಲಕ್ಷಣನು ತಾನು ಮಾಡುವ ಕಾರ್ಯವೆಲ್ಲಾ ಬ್ರಹ್ಮಾತ್ಮಕವೆಂಬ ಜ್ಞಾನವುಳ್ಳವರಾದುದರಿಂದಲಾಗಲಿ, ಇಂದ್ರಿಯವ್ಯಾಪಾರಗಳನ್ನೂ ಪ್ರಾಣ ಕರ್ಮಗಳನ್ನೂ ವಿವೇಚನಮಾಡಿ ದುಷ್ಟವ್ಯಾಪಾರಗಳನ್ನು ಆತ್ಮಸಂಯಮವೆಂಬ ಅಗ್ನಿಯಲ್ಲಿ ಹೋಮಮಾಡುವಂತಹವರು ಎಂಬ ಭಾವವು.

**ಭಾಷ್ಯಾರ್ಥವು :**—ಹಿಂದಿನ ಶ್ಲೋಕದಲ್ಲಿ "ಇನ್ದ್ರಿಯೇಭ್ಯಃ ಪರಾಹ್ಯರ್ಥಾಃ" ಎಂಬ ಶ್ರುತ್ಯರ್ಥದ ರೂಪದಲ್ಲಿ ನಿಯಮನವು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ "ಅರ್ಥೇಭ್ಯಶ್ಚ ಪರಂ ಮನಃ" ಎಂಬ ಶ್ರುತ್ಯರ್ಥವನ್ನು ಉಪಪಾದಿಸುವ ಕರ್ಮಯೋಗನಿಷ್ಠೆಯು ಹೇಳಲ್ಪಡುತ್ತದೆ. "ಆತ್ಮಸಂಯಮ ಯೋಗಾಗ್ನೌ" ಎಂಬಲ್ಲಿರುವ ಆತ್ಮ ಶಬ್ದವು ಮನಸ್ಸನ್ನು ಬೋಧಿಸುತ್ತದೆ. ಅನ್ಯೇ - ಇನ್ನು ಕೆಲವು ಕರ್ಮಯೋಗಿಗಳು, ಜ್ಞಾನದೀಪಿತೇ - ಜ್ಞಾನದಿಂದ ಪ್ರಕಾಶಿಸಲ್ಪಟ್ಟ ಮನಸ್ಸಂಯಮ ಯೋಗಾಗ್ನೌ - ಮನಸ್ಸನ್ನು ನಿಗ್ರಹಿಸುವದೇ ಒಂದು ಯೋಗವು, ತದ್ರೂಪವಾದ ಅಗ್ನಿಯಲ್ಲಿ (ಅಗ್ನಿಯು ಆಜ್ಯದಿಂದ ಹೇಗೆ ಪ್ರಕಾಶಿಸುತ್ತದೆಯೋ ಹಾಗೆ ಮನಸ್ಸಂಯಮವೆಂಬಗ್ನಿಯು ಮೇಲೆ ಹೇಳಿದ ಎರಡು ವಿಧ ಜ್ಞಾನಾಕಾರತೆಯಿಂದಲೂ ಪ್ರಕಾಶವನ್ನು ಹೊಂದಿರುವದು ಎಂಬ ಭಾವವು.) ಇಲ್ಲಿ ಇಂದ್ರಿಯ ಕರ್ಮಗಳೆಂದು ಹೇಳಲ್ಪಟ್ಟಿರುವದು ದರ್ಶನ, ಸ್ಪರ್ಶನ, ಮೊದಲಾದವೂ, ಭಾಷಣ ದಾನ ಮೊದಲಾದವುಗಳೂ; ಪ್ರಾಣ ಕರ್ಮಗಳು—ಉಚ್ಛ್ವಾಸ ನಿಶ್ವಾಸಗಳೂ, ಆಹಾರ ಸೇವನಾದಿಗಳು ಮೊದಲಾದವು ; ಇವು ಪ್ರಾಣೇಂದ್ರಿಯಗಳ ಸಂವಾದದಲ್ಲಿ ತೋರಿಬರುವ ಹಾಗೆ ಇಂದ್ರಿಯವ್ಯಾಪಾರಗಳಿಗೂ ಹೇತುಭೂತವಾದವು. ಸರ್ವಾಣಿ ಇಂದ್ರಿಯ ಕರ್ಮಾಣಿ - ಸಮಸ್ತ ಇಂದ್ರಿಯ ಕರ್ಮಗಳನ್ನೂ, ಪ್ರಾಣ ಕರ್ಮಾಣಿ ಚ - ಪ್ರಾಣವಾಯುವಿನ ಚೇಷ್ಟಿತಗಳನ್ನೂ ಕೂಡ, ಜುಹ್ವತಿ - ಹೋಮಮಾಡುತ್ತಾರೆ ಇವರ ತಾತ್ಪರ್ಯವೇನೆಂಬುವನ್ನು ತಿಳಿಸುತ್ತಾರೆ.—ಮನಸಃ - ಮನಸ್ಸಿಗೆ, ಇಂದ್ರಿಯಪ್ರಾಣ ಕರ್ಮ ಪ್ರವಣತಾ ನಿವಾರಣೇ – ಇಂದ್ರಿಯಗಳಿಗೂ ಮತ್ತು ಪ್ರಾಣಕ್ಕೂ ಅವುಗಳ ಕರ್ಮಗಳಲ್ಲಿ ಆಸೆಯನ್ನು ತಪ್ಪಿಸುವದರಲ್ಲಿ, ಪ್ರಯತನ್ತೇ ಇತ್ಯರ್ಥಃ – ಪ್ರಯತ್ನಪಡುತ್ತಾರೆಂಬ ತಾತ್ಪರ್ಯವು. ॥೨೭॥

**ಮೂಲಕ್ಕೆ ಅರ್ಥವು :**—ಈ ಶ್ಲೋಕದಲ್ಲಿ ಅನೇಕವಿಧ ಕರ್ಮಯೋಗಿಗಳನ್ನು ಸಙ್ಗ್ರಹಿಸಿ

**ಮೂ. ದ್ರವ್ಯಯಜ್ಞಾ ಸ್ತಪೋಯಜ್ಞಾ ಯೋಗಯಜ್ಞಾ ಸ್ತಥಾಪರೇ ।**
**ಸ್ವಾಧ್ಯಾಯ ಜ್ಞಾನ ಯಜ್ಞಾಶ್ಚ ಯತಯ ಸ್ಸಂಶಿತ ವ್ರತಾಃ ॥ ೨೮.**

ಹೇಳುತ್ತಾರೆ. ಅವರುಗಳ ಪ್ರವೃತ್ತಿಗಳನ್ನು ಯಜ್ಞಗಳಹಾಗೆ ರೂಪಕಮಾಡಿ ಹೇಳುತ್ತಾರೆ. **ಅಪರೇ** - ಇನ್ನು ಕೆಲವು ಕರ್ಮಯೋಗಗಳು ಇವನ್ನು ಎಲ್ಲಾದರೊಂದಿಗೂ ಅನ್ವಯಿಸತಕ್ಕದ್ದು; ಕೆಲವರು ದ್ರವ್ಯ ಯಜ್ಞರು, ಕೆಲವರು ತಪೋಯಜ್ಞರು, ಇತ್ಯಾದಿ, **ದ್ರವ್ಯಯಜ್ಞಾಃ** - ಧರ್ಮದಿಂದ ಗಳಿಸಿದ ದ್ರವ್ಯದಿಂದ ಭಗವದ್ಭಾಗವತ ಕೈಙ್ಕರ್ಯಗಳನ್ನೂ ಯಜ್ಞ ಯಾಗ ದಾನಾದಿಗಳನ್ನೂ ಮಾಡುವವರು; ಧರ್ಮ ದ್ರವ್ಯದಿಂದ ಯಜ್ಞಗಳು ಯಾರಿಗೋ ಅವರು ದ್ರವ್ಯಯಜ್ಞರು. ಅಥವಾ ದ್ರವ್ಯದಾನವನ್ನು ಮಾಡುವದೇ ಅವರುಗಳಿಗೆ ಯಜ್ಞಗಳೂ ಎಂದೂ ಅರ್ಥಮಾಡಬಹುದು. ಇನ್ನೂ ಕೆಲವರು **ತಪೋ ಯಜ್ಞಾಃ** - ಕೃಛ್ರ ಚಾಂದ್ರಾಯಣ ಉಪವಾಸಾದಿಗಳನ್ನು ಕೈಕೊಂಡವರು, ಶಾಸ್ತ್ರೀಯರೀತಿಯಲ್ಲಿ ಭೋಗತ್ಯಾಗವು ತಪಸ್ಸು ಎಂಬದಾಗಿ ಹೇಳಲ್ಪಡುತ್ತದೆ; ಅಂತಹ ತಪಸ್ಸಿನ ಅನುಷ್ಠಾನರೂಪವಾದ ಯಜ್ಞವುಳ್ಳವರು ತಪೋ ಯಜ್ಞರು ಎಂಬ ಭಾವವು. ಕೆಲವರು **ಯೋಗಯಜ್ಞಾಃ** - ಯೋಗವೆಂದರೆ ಮನಸ್ಸನ್ನು ಭಗವಂತನಲ್ಲೇ ಸಕ್ತವಾಗುವಹಾಗೆ ಮಾಡುವದು, ಆದುದರಿಂದ ಪುಣ್ಯಕ್ಷೇತ್ರಗಳಲ್ಲಿರುವ ದಿವ್ಯ ಮಙ್ಗಳವಿಗ್ರಹಗಳಲ್ಲಿ ಸಕ್ತವಾದ ಮನಸ್ಸುಳ್ಳವರು, ಕೆಲವರು **ಸ್ವಾಧ್ಯಾಯಜ್ಞಾನಯಜ್ಞಾಶ್ಚ** - ಸ್ವಾಧ್ಯಾಯಯಜ್ಞಾಃ ಎಂದರೆ, ವೇದಾಧ್ಯಯನವನ್ನು ಕ್ರಮವಾಗಿ ಮಾಡುವವರು, **ಸ್ವಾಧ್ಯಾಯಜ್ಞಾನಯಜ್ಞಾಶ್ಚ** - ವೇದಾರ್ಥಗಳ ಜ್ಞಾನಪೂರ್ವಕವಾಗಿ ಅಭ್ಯಾಸಮಾಡುವವರು, ಇವರುಗಳೆಲ್ಲಾ, **ಯತಯಃ** - ಯತನ ಶೀಲರಾಗಿಯೂ, **ಸಂಶಿತವ್ರತಾಃ** - ದೃಢಸಂಕಲ್ಪವುಳ್ಳವರಾಗಿಯೂ ಇರುತ್ತಾರೆ. **ಯತಯಃ ಸಂಶಿತವ್ರತಾಃ** - ಈ ಎರಡು ಪದಗಳು ವಿಧೇಯಾಂಶವನ್ನು ಬೋಧಿಸುವಹಾಗೆ ಅರ್ಥಮಾಡಬಹುದು. ಅಥವಾ **ಯತಯಶ್ಚ ಸಂಶ್ರಿತವ್ರತಾಶ್ಚ** ಎಂದಿಟ್ಟುಕೊಂಡು ಇವರುಗಳೂ ಕರ್ಮಯೋಗಿಗಳೆಂದೂ ಅರ್ಥಮಾಡಬಹುದು. ಯತಿಗಳು ಐಹಿಕವನ್ನು ತೊರೆದು ಇಂದ್ರಿಯಗಳನ್ನು ಜಯಿಸಿರುವದರಿಂದ ಕರ್ಮಯೋಗಿಗಳೆಂದು ಹೇಳಿಸಿಕೊಳ್ಳಲು ಯೋಗ್ಯರಾದುದರಿಂದ ಅವರನ್ನು ಕರ್ಮಯೋಗಿಗಳಲ್ಲೇ ಸೇರಿಸುವದು ಸರಿಯಾದುದೇ; ಮತ್ತು ಇನ್ನು ಕೆಲವರು **ಸಂಶಿತವ್ರತಾಃ**-ಫಲಕಾಮನೆಗಳಿಲ್ಲದೆ ತೀಕ್ಷ್ಣವಾದ ವ್ರತಗಳನ್ನು ಆಚರಿಸುವವರು, ಲಕ್ಷ್ಮೀವ್ರತ ಸತ್ಯ ನಾರಾಯಣ ವ್ರತ ಇತ್ಯಾದಿಗಳನ್ನು ಆಚರಿಸುವವರು, ಎಂದಾದರೂ ಅರ್ಥಮಾಡಬಹುದು. ಶ್ರೀಮದ್ರಾಮಾಯಣದಲ್ಲಿ ಶ್ರಮಣೀಂ ಸಂಶಿತವ್ರತಾಂ (ಕಿಷ್ಕಿಂಧಾ. ೭೪. ೩೧) ಎಂದು ಶಬರಿಯು ಸಂಶಿತವ್ರತಳೆಂಬದಾಗಿ ಹೇಳಲ್ಪಟ್ಟಿರುತ್ತದೆ. ಆಕೆಯು ಜಾತ್ಯನುಗುಣವಾದ ಆಚಾರ್ಯ ಪರಿಚರ್ಯಾರೂಪನಿಷ್ಠೆಯಲ್ಲಿ ದೃಢಸಂಕಲ್ಪಳೆಂಬ ಭಾವದಿಂದ ಹಾಗೆ ಹೇಳಲ್ಪಟ್ಟಿರುತ್ತದೆ. ಆಕೆಗೆ ಈ ಆಚಾರ್ಯ ಪರಿಚರ್ಯೆಯೇ ಕರ್ಮಯೋಗವೆಂದು ಭಾವಿಸಿ, ಈಕೆಯು ಮಾಡುತ್ತಿದ್ದ ಆತ್ಮ ಸಮಾಧಿಯೇ ಉಪಾಸನವು ; ಇದರಿಂದ ಮೋಕ್ಷವನ್ನು ಶಬರಿಯು ಹೊಂದಿದಳೆಂದು ಕೆಲವರು ವ್ಯಾಖ್ಯಾನಮಾಡಿರುತ್ತಾರೆ. ಹೀಗೆ ಭಾವಿಸುವದು ಶಾಸ್ತ್ರಾನುಗುಣವಾದುದಲ್ಲವು. **ಆತ್ಮಸಮಾಧಿನಾ** ಎಂದರೆ ಬ್ರಹ್ಮ ಚಿನ್ತನದಿಂದ ಎಂಬರ್ಥವು. ಪರಮಾತ್ಮ ಚಿಂತನವು ಉಪಾಸನವಾಗುವದಿಲ್ಲವು. ಅಥವಾ ತನ್ನ ದಿವ್ಯಾತ್ಮಸ್ವರೂಪವನ್ನು ಚಿನ್ತಿಸುವದರಿಂದ ಎಂದರ್ಥವನ್ನೂ ಮಾಡಬಹುದು. ಶಬರೀ ವಿದುರಾದಿಗಳಿಗೆಲ್ಲಾ ಅವರು ಹಿಂದಿನ ಜನ್ಮಗಳಲ್ಲಿ ಮಾಡಿದ ಉಪಾಸನೆಗಳಿಂದಲೇ ಮೋಕ್ಷವು. ಆದರೆ ಪ್ರಾರಬ್ಧವು ಕಳೆಯದೇ ಇದ್ದುದರಿಂದ ಹೀನಜನ್ಮ ಪ್ರಾಪ್ತಿ ಉಂಟಾಯಿತೆಂದೂ ಆ ಹೀನ ಜನ್ಮಕ್ಕೆ ಅನುಗುಣವಾದ ಆಚಾರ್ಯ

ಭಾ. ಕೇಚಿತ್ಕರ್ಮಯೋಗಿನೋ ದ್ರವ್ಯಯಜ್ಞಾಃ - ನ್ಯಾಯತೋ ದ್ರವ್ಯಾಣ್ಯುಪಾದಾಯ ದೇವತಾರ್ಚನೇ ಪ್ರಯತನ್ತೇ, ಕೇಚಿಚ್ಚ ದಾನೇಷು, ಕೇಚಿಚ್ಚ ಯಾಗೇಷು, ಕೇಚಿಚ್ಚ ಹೋಮೇಷು, ಏತೇ ಸರ್ವೇ ದ್ರವ್ಯಯಜ್ಞಾಃ. ಕೇಚಿತ್ತಪೋಯಜ್ಞಾಃ ಕೃಚ್ಛ್ರಚಾಂದ್ರಾಯಣೋಪವಾಸಾದಿಷು ನಿಷ್ಠಾಂ ಕುರ್ವಂತಿ. ಯೋಗಯಜ್ಞಾಶ್ಚಾಪರೇ ಪುಣ್ಯತೀರ್ಥ ಪುಣ್ಯಸ್ಥಾನಪ್ರಾಪ್ತಿಷು ನಿಷ್ಠಾಂ ಕುರ್ವಂತಿ ; ಇಹಯೋಗಶಬ್ದಃ ಕರ್ಮ

---

ಸಂಶ್ರಯಣದಿಂದಲೇ ಮೋಕ್ಷವೆಂದು ಭಾವಿಸುವದು ಶಾಸ್ತ್ರಸಮಂಜಸವಾದ ವಿಷಯವು. ಇದಕ್ಕೆ ಪ್ರಮಾಣವು :—“ಧರ್ಮವ್ಯಾಧಾದಯೋಽಪ್ಯನ್ಯೇ ಪೂರ್ವಾಭ್ಯಾಸಾಜ್ಜುಗುಪ್ಸಿತೇ। ವರ್ಣಾವರತ್ವೇ ಸಂಪ್ರಾಪ್ತಾ ಸ್ಸಂಸಿದ್ಧಿಂ ಶ್ರಮಣೀಯಥಾ” ಧರ್ಮವ್ಯಾಧರು, ಆದಿಶಬ್ದದಿಂದ ವಿದುರರೂ ಜುಗುಪ್ಸಿತವಾದ ಹೀನ ವರ್ಣವು ಪ್ರಾಪ್ತವಾಗಿದ್ದರೂ, ಪೂರ್ವಾಭ್ಯಾಸಾತ್ - ಹಿಂದಿನ ಜನ್ಮದಲ್ಲಿ ಮಾಡಿದ ಉಪಾಸನಾಭ್ಯಾಸದ ಬಲದಿಂದಲೇ ಮೋಕ್ಷವನ್ನು ಹೊಂದಿದರು ಎಂಬರ್ಥವು. ಶಾಸ್ತ್ರಾನುಗುಣವಾಗಿ ಉಪಪಾದಿಸಲು ಸಾಧ್ಯವಿರುವ ಸಂದರ್ಭದಲ್ಲಿ, ಶಾಸ್ತ್ರವಿರುದ್ಧವಾಗಿ ಅನ್ವಯಿಸಿ ಅಧಿಕಾರಿ ವಿಶೇಷರು ಇವರುಗಳು ಎಂದು ಸಮಾಧಾನವು ಅನಾವಶ್ಯಕವು. ಆದುದರಿಂದ ಅವರಿಗೆ ಯೋಗಾಧಿಕಾರವಿಲ್ಲೆಂದು ಭಾವಿಸಿ ಅಲ್ಲಿ ಸಂಶಿತವ್ರತಳು ಎಂದು ಹೇಳಿರುವದರಿಂದ ಕರ್ಮಯೋಗಕ್ಕೆ ಬದಲಾಗಿ, “ತದಂಗ ಯಜ್ಞಾದಿಕರ್ಮಸ್ಥಾನೇ ಗುರುಶುಶ್ರೂಷಾ” ಎಂಬ ವ್ಯಾಖ್ಯಾನವು ಸಮರ್ಪಕವಾಗಿ ತೋರುವದಿಲ್ಲವು. ಆದುದರಿಂದ ಶ್ರೀ ಯತಿವರ್ಯರ ವ್ಯಾಖ್ಯಾನಾನುಸಾರ ಸಂಶಿತ ವ್ರತಳು ಎಂದರೆ ಆಚಾರ್ಯ ಪರಿಚರ್ಯೆಯಲ್ಲಿ ದೃಢಸಂಕಲ್ಪಳು ಎಂಬದಾಗಿಯೇ ತಾತ್ಪರ್ಯವು. “ಅಹಂ ಚ ಪರಿಚಾರಿಣೀ” ಎಂದು ಶಬರಿಯು ತಾನೆ ಹೇಳಿಕೊಂಡಿರುತ್ತಾಳೆ. ಅಥವಾ ಸಂಶಿತವ್ರತಾಃ - ಕರ್ಮಾನುಷ್ಠಾನಗಳಲ್ಲಿ ದೃಢಸಂಕಲ್ಪರಾದುದರಿಂದಲೇ, ಯತಯಶ್ಚ - ಯತಿಗಳೂ ಕೂಡ ಕರ್ಮಯೋಗಿಗಳೇ ಎಂಬ ಭಾವವಾದರೂ ಆಗಬಹುದು. ಹೀಗೆ ಅರ್ಥ ಮಾಡುವಾಗ ಅಪರೇ ದ್ರವ್ಯಯಜ್ಞಾಃ ಭವಂತಿ, ಅಪರೇ ತಪೋ ಯಜ್ಞಾಃ ಭವಂತಿ, ಅಪರೇ ಯತಯಶ್ಚ ಭವಂತಿ, ಅಪರೇ ಸಂಶಿತವ್ರತಾಶ್ಚ ಭವಂತಿ ಎಂದು ಅಧ್ಯಾಹಾರ ಮಾಡಿಕೊಳ್ಳಬಹುದು.

ಭಾಷಾರ್ಥವು :—ಕೇಚಿತ್ಕರ್ಮಯೋಗಿನಃ – ಕೆಲವು ಕರ್ಮಯೋಗಿಗಳು, ದ್ರವ್ಯಯಜ್ಞರು ಎಂದರೆ ನ್ಯಾಯತಃ ದ್ರವ್ಯಾಣ್ಯುಪಾದಾಯ - ನ್ಯಾಯದಿಂದ ದ್ರವ್ಯವನ್ನು ಸಂಪಾದಿಸಿದವರಾಗಿ, ದೇವತಾರ್ಚನೇ ಪ್ರಯತಂತೇ - ಭಗವಂತನನ್ನು ಪೂಜಿಸುವದರಲ್ಲಿ ಪ್ರಯತ್ನಿಸುವರು; ಕೇಚಿಚ್ಚ - ಕೆಲವರಾದರೋ ಆ ದ್ರವ್ಯವನ್ನು ದಾನೇಷು-ದಾನಮಾಡುವದರಲ್ಲಿಯೂ, ಕೇಚಿಚ್ಚ - ಇನ್ನು ಕೆಲವರು, ಯಾಗಗಳಲ್ಲಿಯೂ, ಇನ್ನು ಕೆಲವರು ಹೋಮಗಳಲ್ಲೂ ಪ್ರಯತ್ನಿಸುವರು ; ಏತೇ ಸರ್ವೇ - ಇವರೆಲ್ಲರೂ, ದ್ರವ್ಯಯಜ್ಞಾಃ - ದ್ರವ್ಯಾತ್ಮಕವಾದ ಯಜ್ಞವನ್ನುಳ್ಳವರು ; ಧರ್ಮದಿಂದ ಸಂಪಾದಿಸಿದ ದ್ರವ್ಯಮೂಲಕವಾಗಿ ಅನೇಕವಿಧವಾದ ಅರ್ಚನೆ ದಾನಯಾಗ ಹೋಮಾದಿಗಳನ್ನು ನಡೆಸುವವರು. ಆದರೆ ಹಿಂದೆಯೇ ದೈವಮೇವಾಪರೇಯಜ್ಞಂ ಎಂಬಲ್ಲಿ ದೇವತಾರ್ಚನೆಯೆಂದು ಅರ್ಥಮಾಡಿ ಇಲ್ಲಿಯೂ ನ್ಯಾಯಾರ್ಜಿತ ದ್ರವ್ಯದಿಂದ ದೇವತಾರ್ಚನೆ ಮಾಡುವವರು ಎಂದು ಅರ್ಥಮಾಡಿದರೆ ಪುನರುಕ್ತಿಯಾಗಲಿಲ್ಲವೇ ? ಎಂದರೆ ಅರ್ಚನೆಗಳಲ್ಲಿ ತುಂಬಾ ದ್ರವ್ಯವನ್ನು ಉಪಯೋಗಿಸಿ ಮಾಡುವ ಅರ್ಚನೆಗಳು ಅನೇಕ ಇರುವವು. ಹೂವಿನ ತೋಟವನ್ನು ಏರ್ಪಾಡುಮಾಡಿ ಹೂವಿನ ಮಾಲೆಗಳನ್ನು ರಚಿಸಿ ಸ್ವಾಮಿಗೆ ಸಮರ್ಪಿಸುವದು, ಹಾಗೆಯೇ ತುಳಸೀಮಾಲಿಕೆಗಳನ್ನು ರಚಿಸಿ ಸಮರ್ಪಿಸುವದು ; ಕ್ಷೇತ್ರಾದಿಗಳಲ್ಲಿ ದೀಪಾತೋಪಣ,

ಭಾ. ನಿಷ್ಕಾಭೇದ ಪ್ರಕರಣಾತ್ತದ್ವಿಷಯಃ. ಕೇಚಿತ್ಸ್ವಾಧ್ಯಾಯಾಭ್ಯಾಸಪರಾಃ, ಕೇಚಿತ್ತದರ್ಥ ಜ್ಞಾನಾಭ್ಯಾಸಪರಾಃ, ಯ . ಯೋ- ಯತನಶೀಲಾಃ, ಸಂಶಿತವ್ರತಾಃ- ದೃಢಸಙ್ಕಲ್ಪಾಃ.

ಉತ್ಸವಾದಿಗಳನ್ನು ನಡೆಸುವದು ಮೊದಲಾದವು ದ್ರವ್ಯ ಮೂಲಕ ನಡೆಯುವ ಅರ್ಚನೆಗಳು, ಇಂತವುಗಳು ಮಾತ್ರ ಇಲ್ಲಿ ಹೇಳಲ್ಪಟ್ಟವೆಂಬುದರಿಂದ ಪೌನರುಕ್ತಿಯಿಲ್ಲವು, ಕೇಚಿಚ್ಚ - ಇನ್ನು ಕೆಲವರಾದರೋ, ತಪೋ ಯಜ್ಞಾಃ ಎಂದರೆ ಕೃಛ್ರ ಚಾಂದ್ರಾಯಣ ಉಪವಾಸಮೊದಲಾ ದವುಗಳಲ್ಲಿ ನಿಷ್ಠೆಯನ್ನು ಮಾಡುವವರು, ಯೋಗಯಜ್ಞಾಸ್ತಥಾಪರೇ ಎಂದರೆ ಕೆಲವರು ಪುಣ್ಯ ತೀರ್ಥ ಪುಣ್ಯಸ್ಥಳಗಳ ಪ್ರಾಪ್ತಿಗಳಲ್ಲಿ ನಿಷ್ಠೆಯನ್ನು ಮಾಡುವವರು; ಹೀಗೆ ಅರ್ಥಮಾಡಲು ಕಾರಣವೇನು ? ಸಾಧಾರಣವಾಗಿ ಯೋಗವೆಂದರೆ ಉಪಾಸನೆ ಎಂದರ್ಥವಾಗುತ್ತದೆ, ಆ ಅರ್ಥ ವನ್ನು ಹೇಳಬೇಡವೋ? ಎಂದರೆ ಕಾರಣವನ್ನು ತಿಳಿಸುತ್ತಾರೆ, ಇಹ - ಈ ಶ್ಲೋಕದಲ್ಲಿ, ಯೋಗಶಬ್ದವು ಕರ್ಮಯೋಗಗಳ ನಿಷ್ಠಾಭೇದಪ್ರಕರಣಾತ್ - ನಿಷ್ಠಾಭೇದಗಳನ್ನು ಹೇಳುವ ಪ್ರಕರಣವಾದುದರಿಂದ, ತದ್ವಿಷಯಃ - ಪುಣ್ಯಸ್ಥಳಾದಿ ಪ್ರಾಪ್ತಿಯನ್ನು ಬೋಧಿಸುವಂತಾದ್ದು, ಇಲ್ಲಿ ಯೋಗ ಶಬ್ದವು ಪ್ರಾಪ್ತಿ ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆಯಾದುದರಿಂದ ಭಗವ ತ್ಪ್ರಾಪ್ತಿಯು, ಪುಣ್ಯಸ್ಥಳಗಳಲ್ಲಿ ಉಂಟಾಗುವದು ಬೋಧಿಸಲ್ಪಟ್ಟಿತೆಂದು ವ್ಯಾಖ್ಯಾನಮಾಡಿರು ತ್ತಾರೆ. ಹೀಗೆ ವ್ಯಾಖ್ಯಾನಮಾಡಲು ಇನ್ನೊಂದು ಕಾರಣವೂ ಉಂಟು. ಶ್ರೀ ಯಾಮುನೇ ಯರು ಗೀತಾ ಸಙ್ಗ್ರಹ ೨೩ನೆಯ ಶ್ಲೋಕದಲ್ಲಿ ಕರ್ಮಯೋಗವು ಯಾವುದೆಂದು ನಿರೂಪಿ ಸುವ ಸಂದರ್ಭದಲ್ಲಿ, "ಕರ್ಮಯೋಗ ಸ್ತಪಸ್ತೀರ್ಥದಾನ ಯಜ್ಞಾದಿಸೇವನಮ್" ಎಂದು ಹೇಳಿ ರುವದಕ್ಕನುಸಾರವಾಗಿ ದಾನ ಯಜ್ಞವನ್ನು ದ್ರವ್ಯ ಯಜ್ಞದಲ್ಲೂ, ತೀರ್ಥಸೇವನವನ್ನು ಈ ಯೋಗ ಯಜ್ಞದಲ್ಲೂ ಸೇರಿಸಿ ವ್ಯಾಖ್ಯಾನಮಾಡಿರುತ್ತಾರೆ. ಕೇಚಿತ್ - ಇನ್ನು ಕೆಲವರು ಸ್ವಾಧ್ಯಾಯಾಭ್ಯಾಸ ಪರಾಃ - ವೇದಾಧ್ಯಯನದ ಅಭ್ಯಾಸದಲ್ಲೇ ಆಸಕ್ತರಾಗಿರುವವರು ಕೇಚಿತ್ - ಇನ್ನು ಕೆಲವರು, ತದರ್ಥಜ್ಞಾನಾಭ್ಯಾಸಪರಾಃ - ವೇದಾರ್ಥಜ್ಞಾನದ ಅಭ್ಯಾಸದಲ್ಲೇ ನಿರತರಾಗಿರುವವರು, ಸ್ವಾಧ್ಯಾಯಜ್ಞಾನಯಜ್ಞಾಶ್ಚ ಎಂಬಲ್ಲಿ ಸ್ವಾಧ್ಯಾಯ ಯಜ್ಞವೆಂದೂ, ಆ ಸ್ವಾಧ್ಯಾಯದ ಜ್ಞಾನಯಜ್ಞವೆಂದೂ, ದ್ವಂದ್ವಮಾಡಿ ಅರ್ಥವನ್ನು ಬರೆದಿರುತ್ತಾರೆ, ಸ್ವಾಧ್ಯಾ ಯಜ್ಞಾನವೆಂದು ಅರ್ಥಮಾಡಿದರೆ ಸ್ವಾಧ್ಯಾಯಾಧ್ಯಯನವನ್ನು ವ್ಯವಚ್ಛೇದಿಸಿ ಅರ್ಥಹೇಳಿದ ಹಾಗಾಗುತ್ತದಾದುದರಿಂದ ಸರಿಯಲ್ಲವೆಂಬ ಭಾವವು. ಈ ಮೇಲೆ ಹೇಳಿದ ಕರ್ಮಯೋಗಿಗ ಳೆಲ್ಲಾ, ಯತಯಃ - ಎಂದರೆ ಯತನ ಶೀಲರು ಮತ್ತು ಸಂಶಿತವ್ರತಾಃ ಎಂದರೆ ದೃಢಸಙ್ಕ ಲ್ಪರೂ ಆಗಿರುತ್ತಾರೆ; ಯತಿ ಶಬ್ದಕ್ಕೆ ಯತ್ಯಾಶ್ರಮಿ ಎಂಬರ್ಥವು ಸಾಧಾರಣವಾಗಿದ್ದರೂ, ಇಲ್ಲಿ ಅಪ್ರಸ್ತುತವಾಗಿ, ಎಲ್ಲಾ ಕರ್ಮಯೋಗಿಗಳಿಗೂ ಅನ್ವಯಿಸುವದು ಯುಕ್ತವಾದುದ ರಿಂದಲೂ ಹಾಗೆ ಅರ್ಥಮಾಡಿರುತ್ತಾರೆಂದು ಶ್ರೀ ನಿಗಮಾಂತ ದೇಶಿಕರವರು ಅಭಿಪ್ರಾಯ ಪಟ್ಟಿರುತ್ತಾರೆ. ॥೨೮॥

**ಮೂಲಕ್ಕೆ ಅರ್ಥವು** :—ಇನ್ನು ಕೆಲವು ಕರ್ಮಯೋಗಿಗಳು ಪ್ರಾಣಾಯಾಮ ನಿಷ್ಠೆ ಯನ್ನು ಮಾಡುವದರಲ್ಲಿ ಆಸಕ್ತಿಯುಳ್ಳವರಾಗುತ್ತಾರೆಂದು ಹೇಳುತ್ತಾರೆ. ಪ್ರಾಣಾಯಾಮವು ರೇಚಕ ಪೂರಕ ಕುಂಭಕವೆಂಬ ಅವಸ್ಥಾತ್ರಯವುಳ್ಳದುದು; ಕನಿಷ್ಠಿಕಾನಾಮಿಕಾ ಬೆರಳುಗಳಿಂದ ಎಡಗಡೆಯ ಮೂಗಿನ ಸೊಳ್ಳೆಯನ್ನು ತಡೆದು ಬಲಗಡೆ ಮೂಗಿನ ಸೊಳ್ಳೆಯ ಮೂಲಕ ಪ್ರಾಣ ವಾಯುವನ್ನು ನಿಶ್ವಾಸದಮೂಲಕ ಹೊರಗೆ ಕಳುಹಿಸುವದೇ ರೇಚಕವು. ಅಂಗುಷ್ಠದಿಂದ ಬಲ ಗಡೆಯ ಮೂಗಿನ ಸೊಳ್ಳೆಯನ್ನು ಅಮುಕಿ ಹಿಡಿದು ಎಡಗಡೆಯ ಸೊಳ್ಳೆಯ ಮೂಲಕ ಉಚ್ಛ್ವಾಸ

ಮೂ. ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।
ಪ್ರಾಣಾಪಾನಗತೀರುದ್ಧ್ವಾ ಪ್ರಾಣಾಯಾಮ ಪರಾಯಣಾಃ ॥ ೨೯.
ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ ।

ಸದಮೂಲಕ ಶ್ವಾಸಕೋಶವನ್ನು ಪೂರಾ ತುಂಬುವದೇ ಪೂರಕವು. ಅನಂತರ ಎರಡು ಸೊಳ್ಳೆಗಳನ್ನು ಅಮುಕಿ ಹಿಡಿದು ಶ್ವಾಸ ನಿರೋಧ ಮಾಡುವದೇ ಕುಂಭಕವು. ಈ ಶ್ವಾಸ ನಿರೋಧ ಕಾಲದಲ್ಲೇ ಪ್ರಾಣಾಯಾಮ ಮಂತ್ರವನ್ನು ತ್ರಿರಾವೃತ್ತಿ ಜಪಿಸತಕ್ಕದ್ದು. ಹೀಗೆ ಮಾಡತಕ್ಕವರು ಕೆಲವು ಪ್ರಾಣಾಯಾಮ ನಿರತರಾದ ಕರ್ಮಯೋಗಿಗಳೆಂದು ಹೇಳುತ್ತಾರೆ. ಶ್ರೀ ಭಾಷ್ಯಕಾರರವರು ರೇಚಕರು ಪೂರಕರು ಕುಂಭಕರೆಂದು ಈ ಪ್ರಾಣಾಯಾಮ ನಿಷ್ಠರು, ಆ ಆ ಅವಸ್ಥೆಯ ಆಧಿಕ್ಯದಿಂದ, ಮೂರು ವಿಧವೆಂದು ಅರ್ಥಮಾಡಿರುತ್ತಾರೆ. ಶ್ರೀ ಶಂಕರಾಚಾರ್ಯರವರ ಅಭಿಪ್ರಾಯವೂ ಹಾಗೆಯೇ, ಶ್ರೀ ಆನಂದ ತೀರ್ಥೀಯರು ರೇಚಕ ಪೂರಕಗಳಿಂದ ಯುಕ್ತವಾದ ಕುಂಭಕ ಪ್ರಾಣಾಯಾಮ ನಿಷ್ಠರು ಕೆಲವು ಕರ್ಮಯೋಗಿಗಳೆಂದು ಅರ್ಥಮಾಡಿರುತ್ತಾರೆ. ಶ್ರೀ ಭಾಷ್ಯಕಾರರ ಭಾಷ್ಯದ ಪ್ರಕಾರ ಅನ್ವಯವು ಹೇಗೆಂದರೆ ಅಪರೇ-ಕೆಲವು ಪ್ರಾಣಾಯಾಮ ಪರಾಯಣಾಃ - ಪ್ರಾಣಾಯಾಮ ನಿರತರಾದ, ನಿಯತಾಹಾರಾಃ - ಪ್ರಾಣಾಯಾಮ ಮಂತ್ರಜಪಕ್ಕೆ ಅನುಕೂಲವಾಗಿ ಮಿತಾಹಾರವುಳ್ಳವರಾಗಿರುವ, ಕರ್ಮಯೋಗಿಗಳು, ಈ ನಿಯತಾಹಾರತ್ವವು ಎಲ್ಲಾ ಪ್ರಾಣಾಯಾಮಪರಾಯಣರಿಗೂ ಆವಶ್ಯಕವಾದುದರಿಂದ ಮೂರು ವಿಧ ನಿಷ್ಠರಿಗೂ ಅನ್ವಯಿಸುತ್ತದೆ. ಅಪಾನೇ ಜುಹ್ವತಿ ಪ್ರಾಣಂ - ಪ್ರಾಣವಾಯುವನ್ನು ಎಂದರೆ ನಿಶ್ವಾಸ ವಾಯುವನ್ನು ಅಪಾನದಲ್ಲಿ ಎಂದರೆ ಉಚ್ಛ್ವಾಸದಲ್ಲಿ ಅಡಗಿಸುವರು ಎಂದರೆ ವಾಯುವನ್ನು ಎಳೆದುಕೊಳ್ಳುವ ಪೂರಕರಾಗುತ್ತಾರೆ. ತಥಾ - ಹಾಗೆಯೇ ಅಪರೇ - ಇನ್ನು ಕೆಲವರು ಪ್ರಾಣೇ - ನಿಶ್ವಾಸವಾಯುವಿನಲ್ಲಿ ಅಪಾನಂ . ಉಚ್ಛ್ವಾಸ ವಾಯುವನ್ನು ಹೋಮಮಾಡುತ್ತಾರೆ ಎಂದರೆ ಅಧೋಗತಿಯನ್ನು ಹೊಂದಿದ್ದ ವಾಯುವನ್ನು ಊರ್ಧ್ವಕ್ಕೆ ಕಳುಹಿಸುತ್ತಾರೆ, ಎಂದರೆ ರೇಚಕ ಪ್ರಾಣಾಯಾಮ ಪರರಾಗುತ್ತಾರೆ, ಅಪರೇ - ಇನ್ನು ಕೆಲವು ನಿಯತಾಹಾರರಾದ ಪ್ರಾಣಾಯಾಮ ಪರರು ಪ್ರಾಣಾಪಾನ ಗತೀರುದ್ಧ್ವಾ - ಪ್ರಾಣಾಪಾನಗಳೆಂಬ ಎರಡು ವಾಯುಗಳನ್ನೂ ನಿರೋಧಿಸಿ, ಪ್ರಾಣಾನ್ ಪ್ರಾಣೇಷು ಜುಹ್ವತಿ-ಪ್ರಾಣವೃತ್ತಿ ಭೇದಗಳನ್ನು ಅವುಗಳಲ್ಲೇ ಹೋಮ ಮಾಡುತ್ತಾರೆಂದರೆ, ನಿರೋಧಿಸಿ ಕುಂಭಕಾವಸ್ಥೆಯುಳ್ಳವರಾಗುತ್ತಾರೆಂಬ ಭಾವವು. ಇದಕ್ಕೆ ಪ್ರಾಣಾಯಾಮ ವ್ಯವಹಾರ ಹೇಗೆಂದರೆ "ಪ್ರಾಣಸ್ಸ್ವದೇಹಜೋವಾಯುರಾಯಾಮಸ್ತನ್ನಿರೋಧನಂ" ದೇಹದಲ್ಲಿರುವ ವಾಯುವಿನ ನಿರೋಧವು ಇರುವದರಿಂದ ಇದಕ್ಕೆ ಹಾಗೆ ವ್ಯವಹಾರವು. "ತದ್ರೇಚಕಃ ಪೂರಕಶ್ಚ ಕುಂಭಕಶ್ಚ ತ್ರಿಧೋಽಚ್ಯತೇ । ನಾಸಿಕಾಪುಟ ಮಙ್ಗುಳ್ಯಾ ನಿಪೀಡ್ಯೈಕಂ ಪರೇಣತು। ಔದರಂ ರೇಚಯೇದ್ವಾಯುಂ ತದಾಯಂರೇಚಕಸ್ಸ್ಮೃತಃ । ಬಾಹ್ಯೇನ ವಾಯುನಾದೇಹಂಧೃತಿ ವತ್ಪರಿಪೂರಯೇತ್ । ನಾಸಾ ಪುಟೇನಾಪರೇಣ ಪೂರಣಾತ್ಪೂರಕೋಮತಃ । ನ ಮುಂಚತಿ ನ ಗೃಹ್ಣಾತಿ ವಾಯುಮಂತರ್ಬಹಿಸ್ಸ್ಥಿತಮ್ । ಸಂಪೂರ್ಣ ಕುಂಭವತ್ತಿಷ್ಠೇದ ಚಲಸ್ಸ ತು ಕುಂಭಕಃ। ರೇಚಕಾದಿ ತ್ರಯಾ ಭ್ಯಾಸೋನಾಸಾಶೋಧನ ಪೂರ್ವಕಃ । ಸ್ವೇದೋತ್ಕ್ರಮಣ ಪರ್ಯಂತಃಪ್ರೋಕ್ತೋಯೋಗಾನುಶಾಸನೇ" ಈ ಪ್ರಾಣಾಯಾಮಗಳನ್ನು ದೇಹದಲ್ಲಿ ಬೆವರು ಉಂಟಾಗುವ ತನಕ ಮಾಡತಕ್ಕದೆಂದು ಯೋಗಶಾಸ್ತ್ರವಿಧಿಯು. ಹೀಗೆ ಮೂರು ವಿಧವಾದ ಪ್ರಾಣಾಯಾಮಗಳೂ ಅಗರ್ಭವೆಂದೂ ಸಗರ್ಭವೆಂದೂ ಎರಡು ವಿಧವೆಂದು ಮುಂದೆ ಹೇಳಲ್ಪಡುತ್ತದೆ. ಅಗರ್ಭಶ್ಚ ಸಗರ್ಭಶ್ಚ ಪ್ರಾಣಾಯಾಮೋದ್ವಿಧಾಪುನಃ ।

ಭಾ. ಅಪರೇ ಕರ್ಮಯೋಗಿನಃ ಪ್ರಾಣಾಯಾಮೇಷು ನಿಷ್ಠಾಂ ಕುರ್ವಂತಿ. ತೇ ಚ ತ್ರಿವಿಧಾಃ ಪೂರಕ ರೇಚಕ ಕುಂಭಕ ಭೇದೇನ ; ಅಪಾನೇ ಜುಹ್ವತಿ ಪ್ರಾಣಮಿತಿ ಪೂರಕಃ, ಪ್ರಾಣೇಪಾನಮಿತಿರೇಚಕಃ; ಪ್ರಾಣಾಪಾನಗತೀರುದ್ಧ್ವಾ....ಪ್ರಾಣಾನ್ ಪ್ರಾಣೇಷು ಜುಹ್ವತಿ ಇತಿ ಕುಂಭಕಃ ; ಪ್ರಾಣಾಯಾಮಪರೇಷು ತ್ರಿಷ್ವಪ್ಯನುಷಜ್ಯತೇ ನಿಯತಾ ಹಾರಾ ಇತಿ ||೨೯||

ಜಪಧ್ಯಾನಂ ವಿನಾಽಗರ್ಭಃ ಸಗರ್ಭಸ್ತತ್ಸಮನ್ವಯಾತ್'|ಪರಮಾತ್ಮ ಜಪಧ್ಯಾನವಿಲ್ಲದೆ ಮಾಡುವದು ಅಗರ್ಭವು. ಜಪಧ್ಯಾನದೊಂದಿಗೆ ಮಾಡುವದು ಸಗರ್ಭವು, ಇವುಗಳಿಗಿರುವ ತಾರತಮ್ಯವೇನು ಎಂದರೆ ಅಗರ್ಭಾದ್ಗರ್ಭಸಂಯುಕ್ತಃ ಪ್ರಾಣಾಯಾಮಶ್ಶತಾಧಿಕಃ" ಸಗರ್ಭವು ಅಗರ್ಭಕ್ಕಿಂತ ನೂರುಪಾಲು ಮೇಲಾದುದು ಎಂದು ಹೇಳಲ್ಪಟ್ಟಿರುತ್ತದೆ. ಪ್ರಾಣಾನ್ ಪ್ರಾಣೇಷು ಜುಹ್ವತಿ - ಇಂದ್ರಿಯಗಳು ಶರೀರದಲ್ಲೇ ಹೋಮ ಮಾಡಲ್ಪಡುತ್ತವೆ ಎಂಬ ಭಾವವು. ಆನಂದ ತೀರ್ಥೀಯರು "ಅಪರೇನಿಯತಾಹಾರಾಃ" ಎಂಬುದು ಬೇರೆ ಕರ್ಮಯೋಗಿಗಳ ವಿಷಯಗಳೆಂದು ಹೇಳಿದುದರಿಂದ ಭಿನ್ನವಾಯಿತೇ ವಿನಾ, ಪ್ರಾಣಾಯಾಮ ಪರಾಯಣರಾದ ಕರ್ಮಯೋಗಿಗಳ ವಿಷಯದಲ್ಲಿ ಮೂರು ಸಿದ್ಧಾಂತಿಗಳಿಗೂ ಏನೊಂದೂ ವ್ಯತ್ಯಾಸವಿಲ್ಲವೆಂದು ಹೇಳಬಹುದು. ಶ್ರೀ ಆನಂದ ತೀರ್ಥೀಯರು ಪೂರಕ ಕುಂಭಕ ರೇಚಕಾವಸ್ಥೆಗಳುಳ್ಳವರು ಪ್ರಾಣಾಯಾಮ ಪರಾಯಣರೆಂದು ಹೇಳಿದರು. ಶ್ರೀ ಶಂಕರಾಚಾರ್ಯರೂ ಭಾಷ್ಯಕಾರರೂ ಸಹ ರೇಚಕರು ಕುಂಭಕರು ಪೂರಕರೆಂದು ಆಯಾ ಅವಸ್ಥೆಯ ಪ್ರಾಣಾಯಾಮವನ್ನು ಮುಖ್ಯವಾಗಿ ಭಾವಿಸಿದುದರಿಂದ ಆಯಾ ಹೆಸರುಗಳೆಂದು ಹೇಳಿದುದರಿಂದ, ಮಿಕ್ಕ ಎರಡು ವಿಧ ಅವಸ್ಥೆಗಳು ಅವರುಗಳಲ್ಲಿ ನಡೆಯಲೇ ಇಲ್ಲವೆಂಬ ಅಭಿಪ್ರಾಯವಲ್ಲವು, ಅಪ್ರಧಾನವಾಗಿ ಅವುಗಳೂ ನಡೆದವು ಎಂಬ ಭಾವವು. ಯಾವಾಗ ರೇಚಕವು ನಡೆಯಿತೋ, ಪೂರಕ ಕುಂಭಕವೂ ಸಹ ನಡೆಯಲೇ ಬೇಕೆಂಬುದು ಏರ್ಪಟ್ಟಿತು.

ಭಾಷ್ಯಾರ್ಥವು:—ಅಪರೇ ಕರ್ಮಯೋಗಿನಃ - ಇತರರಾದ ಕರ್ಮಯೋಗಿಗಳು ಪ್ರಾಣಾಯಾಮೇಷು ನಿಷ್ಠಾಂ ಕುರ್ವಂತಿ - ಪ್ರಾಣಾಯಾಮಗಳಲ್ಲಿ ನಿಷ್ಠೆಯನ್ನು ಮಾಡುತ್ತಾರೆ, ಇದು ಮುಂದೆ ಹೇಳುವ ಮೂರು ವಿಧ ನಿಷ್ಠೆಯನ್ನೂ ಸಙ್ಗ್ರಹಿಸಿ ಹೇಳುವ ವಾಕ್ಯವಾಗಿರುತ್ತದೆ, ತೇ ಚ-ಆ ಪ್ರಾಣಾಯಾಮಗಳಾದರೋ ಪೂರಕ ರೇಚಕ ಕುಂಭಕ ಭೇದದಿಂದ ಮೂರು ಪ್ರಕಾರವಾಗಿರುವದು, ಅಪಾನೇ ಜುಹ್ವತಿ ಪ್ರಾಣಮಿತಿ ಪೂರಕಃ-ಅಪಾನೇ ಜುಹ್ವತಿ ಪ್ರಾಣಂ ಎಂಬುದರಿಂದ ಪೂರಕ ಪ್ರಾಣಾಯಾಮವೂ, ಪ್ರಾಣೇಪಾನಮಿತಿ ರೇಚಕಃ-ಪ್ರಾಣೇಪಾನಂ ಎಂಬುದರಿಂದ ರೇಚಕ ಪ್ರಾಣಾಯಾಮವೂ, "ಪ್ರಾಣಾಪಾನಗತೀರುದ್ಧ್ವಾಪ್ರಾಣಾನ್‌ಪ್ರಾಣೇಷು ಜುಹ್ವತಿ" ಎಂಬುದರಿಂದ ಕುಂಭಕ ಪ್ರಾಣಾಯಾಮವೂ ಹೇಳಲ್ಪಟ್ಟಿರುವ ಊರ್ಧ್ವಪ್ರವೃತ್ತಿ ಇರುವ ಪ್ರಾಣವಾಯುವಿಗೆ ಅಧಃಪ್ರವೇಶವಾಗುವಹಾಗೆ ಸೆಳದುಕೊಳ್ಳುವದು ಪೂರಕವು. ಅದನ್ನೇ ಅಪಾನೇ ಜುಹ್ವತಿ ಪ್ರಾಣಂ ಎಂಬುದರಿಂದ ತಿಳಿಸಿರುತ್ತಾರೆ. ಹಾಗೆಯೇ ಅಧಃಪ್ರದೇಶದಲ್ಲಿರುವದನ್ನು ಊರ್ಧ್ವಕ್ಕೆ ಸೆಳದು ಹೊರಗೆ ಬಿಡುವದು ರೇಚಕವು; ಇದು ಪ್ರಾಣೇಪಾನಂ ಎಂಬುದರಿಂದ ಹೇಳಲ್ಪಟ್ಟಿತು. ಎರಡು ವಾಯುಗಳನ್ನು ತಡೆಯುವದು ಕುಂಭಕವು, ಇದು ಪ್ರಾಣಾಪಾನಗತೀರುದ್ಧ್ವಾ ಎಂಬುದರಿಂದ ಹೇಳಲ್ಪಟ್ಟಿತು. ಪ್ರಾಣಾಯಾಮಪರೇಷು ತ್ರಿಷು-ಮೂರು ವಿಧ ಪ್ರಾಣಾಯಾಮನಿಷ್ಠರಲ್ಲೂ ಮಿತಾಹಾರವು ಆವಶ್ಯಕವಾದುದರಿಂದ, ನಿಯತಾಹಾರಾಃ ತಿಷ್ವಪ್ಯನುಷಜ್ಯತೇ - ಮಿತಾಹಾರವುಳ್ಳವರೆಂಬುದು ಮೂರು ವಿಧ ನಿಷ್ಠರಿಗೂ ಸಂಬಂಧಿಸುತ್ತದೆ. ||೨೯||

**ಮೂ. ಸರ್ವೇಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತ ಕಲ್ಮಷಾಃ ||** **೩೦.**
**ಯಜ್ಞಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಂ |**

**ಮೂಲಕ್ಕೆ ಅರ್ಥವು:**—ಇಲ್ಲಿಗೆ ಕರ್ಮಯೋಗಿ ಪ್ರಭೇದಗಳು ಮುಗಿದವು. **ಸರ್ವೇಪ್ಯೇತೇ** ಎಂದು ಆರಂಭಿಸಿ ಇವರುಗಳಿಗೆಲ್ಲಾ ನಿಷ್ಠೆಯು ಬೇರೆ ಬೇರೆಯಾದುದರಿಂದ ಫಲವೆಲ್ಲಾ ಒಂದೆಯೋ ಅಥವಾ ಬೇರೆಬೇರೆಯೋ ಎಂಬ ಶಙ್ಕಾವಿಗೆ ಸಮಾಧಾನವಾಗಿ ನಿಷ್ಠೆಯಲ್ಲಿ ವ್ಯತ್ಯಾಸವಿದ್ದರೂ ಭಕ್ತಿ ಯೋಗದ ಅನೇಕವಿಧ ಉಪಾಸನೆಗಳಿಗೂ ಫಲದಲ್ಲಿ ಹೇಗೆ ವ್ಯತ್ಯಾಸವಿಲ್ಲವೋ ಹಾಗೆಯೇ ಕರ್ಮ ಯೋಗ ಪ್ರಭೇದಗಳಲ್ಲಿಯೂ ಫಲದಲ್ಲಿ ವ್ಯತ್ಯಾಸವಿಲ್ಲವೆಂದು **ಯಾನ್ತಿ ಬ್ರಹ್ಮ ಸನಾತನಂ** ಎಂದು ಹೇಳಲ್ಪಡುತ್ತದೆ. ಈ ಅಭಿಪ್ರಾಯವು ವಿಕಲ್ಪೋಽವಿಶಿಷ್ಟ ಫಲತ್ವಾತ್ ಎಂಬುವ ಬ್ರಹ್ಮ ಸೂತ್ರದಲ್ಲಿ ಉಪಪಾದಿತವು. **ಏತೇ ಸರ್ವೇಽಪಿ** - ಈ ಸಮಸ್ತರೂ ಕೂಡ, **ಯಜ್ಞವಿದಃ** -- ನಿತ್ಯ ನೈಮಿತ್ತಿಕರೂಪ ಯಜ್ಞಗಳ, ಮತ್ತು ಮೇಲೆ ಹೇಳಲ್ಪಟ್ಟ ಕರ್ಮಯೋಗಕ್ಕೆ ಸೇರಿದ ಯಜ್ಞ ಗಳ ಮಾಹಾತ್ಮ್ಯೆಯನ್ನು ತಿಳಿದವರು ಎಂದರೆ ಅನುಷ್ಠಿಸಿದವರು, ಮತ್ತು **ಯಜ್ಞಶಿಷ್ಟಾಮೃತ ಭುಜಃ** - ದೇವತಾರ್ಚನೆಯನ್ನು ಮಾಡಿ ಭಗವಂತನಿಗೆ ನಿವೇದಿತವಾದ ಅನ್ನಕ್ಕೂ ಮತ್ತು ಇತರ ಯಜ್ಞಶಿಷ್ಟವಾದ ಅನ್ನಕ್ಕೂ ಅಮೃತವೆಂದು ಹೆಸರು, ಇಂತಹ ಸಂಸ್ಕಾರ ಹೊಂದಿದ ಅನ್ನವನ್ನು ಸೇವಿಸುವರು, ಇಂತಹ ಯಜ್ಞಗಳ ಅನುಷ್ಠಾನದಿಂದಲೂ, ಇಂತಹ ಸಂಸ್ಕಾರಹೊಂದಿದ ಅನ್ನದ ಸೇವನೆಯಿಂದ ದೇಹಧಾರಣೆಯನ್ನು ಮಾಡುವವರಿಂದಲೂ, **ಯಜ್ಞಕ್ಷಪಿತ ಕಲ್ಮಷಾಃ** - ಯಜ್ಞಾನುಷ್ಠಾನಗಳಿಂದ ಹೋಗಲಾಡಿಸಿಕೊಂಡ ಪಾಪಗಳುಳ್ಳವರಾಗಿ, **ಬ್ರಹ್ಮ ಸನಾತನಂ** - ಅನಾದಿಯಾಗಿ ನಿತ್ಯವಾಗಿರುವ ತಮ್ಮ ತಮ್ಮ ಆತ್ಮವನ್ನೇ, **ಯಾನ್ತಿ**—ಹೊಂದುವರು ಎಂದರೆ ತಮ್ಮ ಅನಾದಿಯಾದ, ಮಹಾ ಪರಿಶುದ್ಧವಾದ, ಗುಣಾಷ್ಟಕಗಳಿಂದ ಪರಬ್ರಹ್ಮ ಸ್ವರೂಪಕ್ಕೆ ಸಮಾನ ವಾದ, ತಮ್ಮ ಪರಿಶುದ್ಧಾತ್ಮ ಸ್ವರೂಪವನ್ನೇ ಸಾಕ್ಷಾತ್ಕರಿಸುವರು. ಹಿಂದೆ ೨೪ನೆಯ ಶ್ಲೋಕದಲ್ಲಿ, ಬ್ರಹ್ಮೈವತೇನಗಂತವ್ಯಂ ಎಂದು ಕರ್ಮಯೋಗ ಪ್ರಯೋಜನವಾಗಿ ವಿಧಿಸಲ್ಪಟ್ಟ ಸ್ವಸ್ವರೂಪ ಸಾಕ್ಷಾತ್ಕಾರವೇ ಇಲ್ಲೂ **ಯಾನ್ತಿಬ್ರಹ್ಮಸನಾತನಮ್** ಎಂದು ಉಪಸಂಹಾರಮಾಡಿ ಹೇಳಲ್ಪಟ್ಟಿದೆ ಎಂದು ಭಾವಿಸತಕ್ಕದ್ದು. ಸಾಧಾರಣವಾಗಿ ಗೀತೆಯಲ್ಲಿ "ಬ್ರಹ್ಮನಿರ್ವಾಣಮೃಚ್ಛತಿ" "ಬ್ರಹ್ಮಭೂ ಯಾಯ ಕಲ್ಪತೇ" "ಬ್ರಹ್ಮಭೂತಃ" ಇತ್ಯಾದಿ ಅನೇಕ ಕಡೆಗಳಲ್ಲಿ ಪ್ರಕೃತಿ ವಿಯುಕ್ತ ಶುದ್ಧಾತ್ಮ ಸ್ವರೂಪವೆಂಬರ್ಥದಲ್ಲೇ ಬ್ರಹ್ಮಶಬ್ದಪ್ರಯೋಗವು. **ಯಾನ್ತಿ ಬ್ರಹ್ಮಸನಾತನಂ** ಎಂಬಲ್ಲಿ ಬ್ರಹ್ಮ ಶಬ್ದಕ್ಕೆ ಪರಬ್ರಹ್ಮವೆಂದು ಅರ್ಥ ಹೇಳಬೇಕೆಂಬ ಅಪೇಕ್ಷೆ ಇದ್ದುದಾದರೆ ಆಗಲೂ ಏನೂ ವಿರೋಧ ವಿಲ್ಲವು, ಆಗ ಅಭಿಪ್ರಾಯವೇನೆಂದರೆ ಕರ್ಮಯೋಗದಿಂದಲೇ ಆತ್ಮಸಾಕ್ಷಾತ್ಕಾರವು ಉಂಟಾಗು ವದರಿಂದ ಭಕ್ತಿಯೋಗದಲ್ಲನುಪ್ರವೇಶವೂ ಉಪಾಸನ ನಿಷ್ಪತ್ತಿಯೂ ಉಂಟಾಗುವದರ ಮೂಲಕ ಪರಬ್ರಹ್ಮಪ್ರಾಪ್ತಿಯನ್ನು ಇವರೆಲ್ಲಾ ಕ್ರಮೇಣ ಹೊಂದುತ್ತಾರೆಂದು ಅರ್ಥ ಹೇಳಬಹುದು. ೩೩ನೆಯ ಶ್ಲೋಕದಲ್ಲಿ, ಏವಂ ಜ್ಞಾತ್ವಾ ವಿಮೋಕ್ಷ್ಯಸೇ ಎಂದು ಇರುವದರಿಂದ ಈ ಅರ್ಥವೂ ಸಮಂಜಸವಾದುದೇ.

**ಭಾಷ್ಯಾರ್ಥವು :**—ಕರ್ಮಯೋಗಗಳಲ್ಲಿ ಕೆಲವು ಕಷ್ಟತರವಾದುವು, ಕೆಲವು ಸುಲಭವಾ ದುವು, ಕೆಲವು ಉತ್ಕೃಷ್ಟವಾದವು, ಕೆಲವು ಸಾಧಾರಣವಾದವು ಹೀಗೆ ಕರ್ಮಯೋಗ ನಿಷ್ಠರಲ್ಲಿ ಭೇದವಿರುವಾಗ ಫಲವು ಎಲ್ಲರಿಗೂ ಒಂದೆಯೇ ಎಂಬ ಸಂದೇಹದಲ್ಲಿ ಒಂದೇ ಎಂದು ಹೇಳಲ್ಪಡು ತ್ತದೆ. ಪ್ರಾಣಾಯಾಮ ಪರಾಯಣರೇ ಮೊದಲಾದ ಕರ್ಮಯೋಗ ನಿಷ್ಠರಿಗೂ ನಿತ್ಯನೈಮಿತ್ತಿಕ ಪಂಚಮಹಾ ಯಜ್ಞಗಳೂ ಆವಶ್ಯಕವೇ ? ಎಂಬ ಸಂದೇಹದಲ್ಲಿ ಆವಶ್ಯಕವೆಂದೂ ಹೇಳಲ್ಪಡು

ಭಾ. ದ್ರವ್ಯಯಜ್ಞಪ್ರಭೃತಿ ಪ್ರಾಣಾಯಾಮ ಪರ್ಯಂತೇಷು ಕರ್ಮಯೋಗ ಭೇದೇಷು ಸ್ವಸಮೀಹಿತೇಷು ಪ್ರವೃತ್ತಾ ಏತೇ ಸರ್ವೇ"ಸಹಯಜ್ಞಾಃ ಪ್ರಜಾಸ್ಸೃಷ್ಟ್ವಾ" ಇತ್ಯಭಿಹಿತ ಮಹಾಯಜ್ಞಪೂರ್ವಕ ನಿತ್ಯನೈಮಿತ್ತಿಕ ಕರ್ಮರೂಪ ಯಜ್ಞವಿದಃ ತನ್ನಿಷ್ಠಾಃ, ತತ ಏವ ಕ್ಷಪಿತ ಕಲ್ಮಷಾಃ - ಯಜ್ಞಶಿಷ್ಟಾಮೃತೇನ ಶರೀರಧಾರಣಂ ಕುರ್ವನ್ತ ಏವ ಕರ್ಮಯೋಗೇ ವ್ಯಾಪೃತಾಃ ಸನಾತನಂ ಬ್ರಹ್ಮ ಯಾನ್ತಿ ||೩೦||

ತ್ತಾ.ದೆ. ದ್ರವ್ಯ ಯಜ್ಞಪ್ರಭೃತಿ ಪ್ರಾಣಾಯಾಮ ಪರ್ಯಂತೇಷು - ದ್ರವ್ಯ ಯಜ್ಞವೇ ಮೊದಲುಗೊಂಡು ಪ್ರಾಣಾಯಾಮದವರೆಗೂ ಹೇಳಲ್ಪಟ್ಟವುಗಳಾದ, ಕರ್ಮಯೋಗದ ಭೇದಗಳಲ್ಲಿ, ಸ್ವಸಮೀಹಿತೇಷು-ಅವುಗಳಲ್ಲಿ ತಮಗೆ ಇಷ್ಟವಾದವುಗಳಲ್ಲಿ, ಪ್ರವೃತ್ತಾ ಏತೇ ಸರ್ವೇ-ಪ್ರವರ್ತಿಸಿದ ಈ ಸಮಸ್ತ ಕರ್ಮಯೋಗಿಗಳೂ, ಮೂಲದ ಏತೇ ಸರ್ವೇ-ಎಂಬ ಪದಗಳಲ್ಲಿ ಸೂಚಿತವಾದ ಅರ್ಥವನ್ನು ವಿವರಿಸಿದರು, ಮುಂದೆ ಯಜ್ಞವಿದಃ ಎಂಬ ಪದದಿಂದ ತೋರಿಬರುವ ಅರ್ಥವನ್ನು ವಿವರಿಸುತ್ತಾರೆ—"ಸಹಯಜ್ಞಾಃ ಪ್ರಜಾಸ್ಸೃಷ್ಟ್ವಾ" ಎಂದು ಹಿಂದೆ ಗೀ. ೩. ೧೦. ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ ಪಂಚಮಹಾಯಜ್ಞ ಪೂರ್ವಕಗಳಾದ, ನಿತ್ಯ ನೈಮಿತ್ತಿಕ ಕರ್ಮರೂಪಗಳಾದ ಯಜ್ಞಗಳ ಮಹಿಮೆಯನ್ನರಿತವರು, ಎಂದರೆ ತನ್ನಿಷ್ಠಾಃ - ಅಂತಹ ಕರ್ಮಾನುಷ್ಠಾನಪರರು, ತತ ಏವ - ಆ ಕಾರಣದಿಂದಲೇ ಎಂದರೆ ಈ ರೀತಿಯಲ್ಲಿ ಯಜ್ಞಾನುಷ್ಠಾನಮಾಡುವದರಿಂದಲೇ, ಕ್ಷಪಿತಕಲ್ಮಷಾಃ - ಹೋಗಲಾಡಿಸಿಕೊಂಡ ಪಾಪವುಳ್ಳವರಾಗಿ, ಯಜ್ಞಶಿಷ್ಟಾಮೃತೇನ ಶರೀರಧಾರಣಂ ಕುರ್ವಂತ ಏವ - ಇದು ಯಜ್ಞಶಿಷ್ಟಾಮೃತಭುಜಃ ಎಂಬುದರ ವ್ಯಾಖ್ಯಾನವು, ಯಜ್ಞ ಹವಿಶ್ಶೇಷವಾಗಿ ಅಮೃತಶಬ್ದವಾಚ್ಯವಾದ ಅನ್ನದಿಂದ, ಅಥವಾ ದೇವತಾರಾಧನ ರೂಪ ಯಜ್ಞದಲ್ಲಿ ಭಗವನ್ನಿವೇದನವಾಗಿರುವದರಿಂದ ಸಂಸ್ಕಾರವನ್ನು ಹೊಂದಿ ಅಮೃತ ಶಬ್ದ ವಾಚ್ಯವಾದ ಅನ್ನದಿಂದ ಶರೀರ ಧಾರಣವನ್ನು ಮಾಡುವವರಾಗಿಯೇ, ಕರ್ಮಯೋಗೇ ವ್ಯಾಪೃತಾಃ-ಕರ್ಮಯೋಗದಲ್ಲಿ ಚನ್ನಾಗಿ ಪ್ರವೇಶವುಳ್ಳವರಾಗಿ, ಸನಾತನಂ ಬ್ರಹ್ಮ ಯಾನ್ತಿ - ಹಿಂದೆ ಬ್ರಹ್ಮೈವ ತೇನ ಗಂತವ್ಯಂ ಎಂದು ಆತ್ಮಾವಲೋಕನವು ವಿಧೇಯವಾಗಿರುವದರಿಂದ ಈ ಉಪಸಂಹಾರ ವಾಕ್ಯದಲ್ಲೂ ತದನುಗುಣವಾಗಿ ಅನಾದಿಯಾಗಿರುವ ತಮ್ಮ ಆತ್ಮಸ್ವರೂಪವನ್ನು ಹೊಂದುವರು ಎಂದರೆ ಸಾಕ್ಷಾತ್ಕರಿಸುವರು ಎಂದೇ ಅರ್ಥಮಾಡುವದು ಯುಕ್ತವು. ಆದರೆ ಮುಂದೆ ಇರುವ ಶ್ಲೋಕಾರ್ಧದಲ್ಲಿ ನಾಯಂ ಲೋಕೋಸ್ತ್ಯಯಜ್ಞಸ್ಯ ಕುತೋನ್ಯಃ ಎಂದಿರುವದರಿಂದ ಅಯಜ್ಞನಿಗೆ ಅನ್ಯಲೋಕವಿಲ್ಲವೆಂದು ಹೇಳಲ್ಪಟ್ಟಿರುವದರಿಂದ ಪಂಚಮಹಾಯಜ್ಞಾದಿ ನಿತ್ಯನೈಮಿತ್ತಿಕಗಳೊಂದಿಗೆ ಅನುಷ್ಠಿಸುವ ಕರ್ಮಯೋಗಿಗೆ ಈ ಲೋಕವೂ ಉಂಟು ಅನ್ಯಲೋಕವೂ ಉಂಟು ಎಂದಾಗುವದರಿಂದ, ಯಾತಿ ಬ್ರಹ್ಮ ಸನಾತನಂ ಎಂದರೆ ಪರಬ್ರಹ್ಮಪ್ರಾಪ್ತಿಯುಂಟೆಂದೂ ಅರ್ಥಮಾಡಬಹುದು. ಆಗ ಅಭಿಪ್ರಾಯವು ಏನೆಂದರೆ ಭಕ್ತಿಯೋಗದಲ್ಲಿ ಅರ್ಹತೆಯುಂಟಾಗಿ ಉಪಾಸನಾ ದ್ವಾರಾ ಪರಬ್ರಹ್ಮಪ್ರಾಪ್ತಿ ಎಂದೂ ಅರ್ಥಹೇಳಬೇಕಾಗುತ್ತದೆ. ಅಙ್ಗಿಯಿಂದುಂಟಾಗುವ ಫಲವು ಮುಖ್ಯವಾದ ಅಙ್ಗದ ವಿಷಯದಲ್ಲೂ ಹೇಳುವದು ಶಾಸ್ತ್ರಗಳಲ್ಲಿ ವಾಡಿಕೆಯುಂಟೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಈ ಶ್ಲೋಕದಲ್ಲಿ ಗ್ರಹಿಸತಕ್ಕ ಮುಖ್ಯ ವಿಷಯಗಳು ಯಾವುವೆಂದರೆ:-- ೧. ಕರ್ಮಯೋಗಗಳಲ್ಲಿ ಅನೇಕ ಪ್ರಭೇದಗಳು ೨೫ ನೆಯ ಶ್ಲೋಕದಿಂದ ಆರಂಭಿಸಿ ೨೯ನೆಯ ಶ್ಲೋಕದವರೆಗೂ ಹೇಳಲ್ಪಟ್ಟರೂ, ಅವುಗಳಲ್ಲಿ ಯಾವುದು ಇಷ್ಟವೋ ಅದೊಂದನ್ನು ಕರ್ಮಯೋಗವಾಗಿ ಅನುಷ್ಠಿಸತಕ್ಕದ್ದೆಂದೂ, ಅವುಗಳ ಅನುಷ್ಠಾನಗಳಲ್ಲಿ ಎಷ್ಟು ವ್ಯತ್ಯಾಸವಿದ್ದರೂ ಫಲದಲ್ಲಿ ಮಾತ್ರ ಏನೊಂದೂ ವ್ಯತ್ಯಾಸವಿಲ್ಲವೆಂಬುದು.

**ಮೂ. ನಾಯಂ ಲೋಕೋ ಸ್ತ್ಯಯಜ್ಞಸ್ಯ ಕುತೋನ್ಯಃ ಕುರುಸತ್ತಮ॥ ೩೧.**

೨. ಈ ಕರ್ಮಯೋಗದಲ್ಲಿ ಈ ಐಚ್ಛಿಕ ಭಾಗವು ಒಂದೇಯಲ್ಲದೆ, ಅದರೊಂದಿಗೆ ನಿತ್ಯನೈಮಿತ್ತಿಕಗಳೂ ಪಂಚಮಹಾ ಯಜ್ಞಗಳೂ ಇರತಕ್ಕದ್ದು. ೩. ಇಂತಹ ಕರ್ಮಯೋಗಕ್ಕೆ ಫಲವು, ತನ್ನ ಆತ್ಮಾವಿನ ಯಥಾವಸ್ಥಿತ ಸ್ವರೂಪದ ಜ್ಞಾನವೂ, ಮತ್ತು ಭಕ್ತಿಯೋಗಕ್ಕೆ ಪ್ರತಿಬಂಧಕಗಳಾದ ಪಾಪಗಳ ನಾಶವೂ, ಹೀಗೆ ಸರ್ವವಿಧ ಕರ್ಮಯೋಗಿಗಳಿಗೂ ಫಲದಲ್ಲೇನೂ ವ್ಯತ್ಯಾಸವಿಲ್ಲವೆಂದು **"ಯಾನ್ತಿಬ್ರಹ್ಮಸನಾತನಂ"** ಎಂದು ಹೇಳಲ್ಪಟ್ಟಿತು. **ಸರ್ವೇಪ್ಯೈತೇ** ಎಂದು ಹೇಳಿರುವದರಿಂದ ಯಾರಿಗೆ ಯಾವ ಕರ್ಮಯೋಗದಲ್ಲಿ ಇಷ್ಟವೋ ಅದನ್ನು ಅನುಷ್ಠಿಸಬಹುದೆಂಬ ಭಾವವು ತೋರಿಬರುವದರಿಂದ ಅದು ಐಚ್ಛಿಕವೆಂದು ತೋರಿಸುವದಕ್ಕಾಗಿ **ಕರ್ಮಯೋಗಭೇದೇಷು ಸ್ವಸಮೀಹಿತೇಷು** ಎಂದು ಪ್ರಯೋಗಿಸಿರುತ್ತಾರೆ. ಕರ್ಮಯೋಗ ಪ್ರಭೇದಗಳು ಐಚ್ಛಿಕವಾದರೂ ನಿತ್ಯ ನೈಮಿತ್ತಿಕಗಳು ಹಾಗೆ ಐಚ್ಛಿಕವಲ್ಲವು, ಅನುಷ್ಠಿಸಲೇಬೇಕೆಂಬ ನಿರ್ಬಂಧವುಂಟೆಂದು **ಯಜ್ಞವಿದಃ** ಎಂಬುದರಿಂದ ತೋರಿಬರುವದರಿಂದ **"ಮಹಾ ಯಜ್ಞಪೂರ್ವಕ ನಿತ್ಯನೈಮಿತ್ತಿಕ ಕರ್ಮರೂಪ ಯಜ್ಞವಿದಃ"** ಎಂದು ವ್ಯಾಖ್ಯಾನಮಾಡಿರುತ್ತಾರೆ. ಹಿಂದೆ **ಯಜ್ಞಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ"** (೩-೧೩) ಎಂದು ಹೇಳಲ್ಪಟ್ಟು, ಹೀಗೆ ಸಂಸ್ಕಾರ ಹೊಂದಿದ ಅನ್ನವು, ಸತ್ವೋದ್ರೇಕ ಸಾತ್ವಿಕ ಸಂಭಾಷಣೆ ಗುರೂಪಸದನ ಪೂರ್ವಕ ಉಪಾಯಾನುಷ್ಠಾನಕ್ಕೆ ಅತ್ಯಂತ ಉಪಕಾರಕವೆಂದು ಭಾವಿಸಿ, ಈ ನಿಗಮನ ಪ್ರಕರಣದಲ್ಲೂ ಜ್ಞಾಪಕ ಕೊಡುವದಕ್ಕಾಗಿ **ಯಜ್ಞಶಿಷ್ಟಾಮೃತಭುಜಃ, ಯಜ್ಞ ಕ್ಷಪಿತಕಲ್ಮಷಾಃ** ಎಂಬ ಪ್ರಯೋಗಗಳು. ಇಂತಹ ಶಾಸ್ತ್ರವಿಹಿತವಾದ ಸಂಸ್ಕಾರ ಹೊಂದಿದ ಅನ್ನದಿಂದ ಶರೀರಧಾರಣೆಯನ್ನು ಮಾಡದೆ ಹೋಟಲುಗಳಲ್ಲಿ ತಿಂಡಿಯೂ, ಮನೆಗಳಲ್ಲಿಯೂ ದೇವತಾರ್ಚನೆಯೇ ಇಲ್ಲದೆ ದೇವರ ಮುಂದೆ ಇಡದೆ ಸಂಸ್ಕಾರವಿಲ್ಲದ ಅನ್ನದ ಸೇವನೆಯೂ, **"ತೇತ್ವಘಂ ಭುಂಜತೇ ಪಾಪಾಃ"** ಎಂಬಲ್ಲಿ ಹೇಳಿರುವಹಾಗೆ ಮನುಷ್ಯನ ಘೋರವ್ಯಾಪಾರಗಳಿಗೆ ಹೇತುವಾಗುತ್ತವೆ.

**ಮೂಲಕ್ಕೆ ಅರ್ಥವು:**—ಹಿಂದಿನ ಶ್ಲೋಕದಲ್ಲಿ ನಿತ್ಯನೈಮಿತ್ತಿಕ ಕರ್ಮಗಳೊಂದಿಗೆ ಸೇರಿದ ಕರ್ಮಯೋಗಾನುಷ್ಠಾನದಿಂದ ಆತ್ಮಾವಲೋಕನವು ಸಿದ್ಧಿಸುತ್ತದೆಂದು ಹೇಳಲ್ಪಟ್ಟಿತು. ಯಾವಾಗ ಆತ್ಮಾವಲೋಕನ ಉಂಟಾಯಿತೋ ಆಗ ಪರಭಕ್ತಿಯುಂಟಾಗಿ ಭಗವದುಪಾಸನವು ಕೈಗೂಡಿ ಮೋಕ್ಷಪ್ರಾಪ್ತಿಯುಂಟಾಗುವದರಲ್ಲಿ ಸಂದೇಹವಿಲ್ಲವು. ಪರಬ್ರಹ್ಮ ಪ್ರಾಪ್ತಿಯು ಕ್ರಮೇಣ ಲಭಿಸುತ್ತದೆಂದು ಹೇಳಲ್ಪಟ್ಟಿತು. ಅಂತಹ ಕರ್ಮಾನುಷ್ಠಾನವಿಲ್ಲದವನ ಗತಿ ಎಂತಾದ್ದೆಂಬ ವಿಚಾರದಲ್ಲಿ, ಅಂತವನು ಸಕಲ ಐಹಿಕಾಮುಷ್ಮಿಕ ಪುರುಷಾರ್ಥಗಳಿಗೂ ಅನರ್ಹನೆಂದು ತಿಳಿಸುತ್ತಾರೆ. **ಅಯಜ್ಞಸ್ಯ** - ನಿತ್ಯ ನೈಮಿತ್ತಿಕಗಳಿಂದ ಕೂಡಿದ ಕರ್ಮಯೋಗಾನುಷ್ಠಾನಮಾಡದವನಿಗೆ, **ನಾಯಂ ಲೋಕೋಸ್ತಿ** - ಈ ಲೋಕವೇ ಇಲ್ಲವು, ಎಂದರೆ ಇಹಲೋಕದ ಪುರುಷಾರ್ಥಗಳೇ ಇಲ್ಲವು; ಹೀಗಿರುವಾಗ, **ಕುರುಸತ್ತಮ** - ಕುರುವಂಶಶ್ರೇಷ್ಠನಾದ ಅರ್ಜುನನೇ, **ಕುತೋನ್ಯಃ** - ಬೇರೆಯಾದ ದಿವ್ಯ ವೈಕುಂಠಲೋಕವು, ಅಥವಾ ಪರಮ ಪುರುಷಾರ್ಥವಾದ ಮೋಕ್ಷವು, **ಕುತಃ** - ಎಲ್ಲಿಯದು? ಇದರಿಂದ ಕರ್ಮಯೋಗಿಗೂ ನಿತ್ಯನೈಮಿತ್ತಿಕಾನುಷ್ಠಾನವು ಅಜ್ಞವಾಗಿ ಆವಶ್ಯಕವೆಂದೂ, ಅವುಗಳನ್ನು ಪರಿತ್ಯಾಗಮಾಡಿದರೆ ಪ್ರತ್ಯವಾಯವೆಂದೂ, ಆ ಕಾರಣದಿಂದ ಅಂತವನಿಗೆ ಯಾವ ಪುರುಷಾರ್ಥವೂ ಇಲ್ಲವೆಂದು ಹೇಳಲ್ಪಟ್ಟಿತು. ಅಂತವನಿಗೆ ಇಲ್ಲಿಯೂ ಶ್ರೇಯಸ್ಸಿಲ್ಲವು. ಪರಮ ಪದದ ಶ್ರೇಯಸ್ಸೂ ಇಲ್ಲವು ಎಂಬ ಭಾವವು.

**ಭಾ.** ಅಯಜ್ಞಸ್ಯ - ಮ.ಹಾಯಜ್ಞಾದಿ ಪೂರ್ವಕ ನಿತ್ಯನೈಮಿತ್ತಿಕ ಕರ್ಮರಹಿತಸ್ಯ, ನಾಯಂ ಲೋಕಃ-ನ ಪ್ರಾಕೃತ ಲೋಕಃ, ಪ್ರಾಕೃತಲೋಕ ಸಂಬಂಧಿ ಧರ್ಮಾರ್ಥ ಕಾಮಾಖ್ಯಃ ಪುರುಷಾರ್ಥೋ ನ ಸಿದ್ಧ್ಯತಿ ; ಕುತ ಇತೋಽನ್ಯೋ ಮೋಕ್ಷಾಖ್ಯಃ ಪುರುಷಾರ್ಥಃ ? ಪರಮಪುರುಷಾರ್ಥತಯಾ ಮೋಕ್ಷಸ್ಯ ಪ್ರಸ್ತುತತ್ವಾತ್ತದಿತರಪುರುಷಾರ್ಥಃ "ಅಯಂ ಲೋಕ" ಇತಿ ನಿರ್ದಿಶ್ಯತೇ ; ಸ ಹಿ ಪ್ರಾಕೃತಃ ॥೩೧॥

**ಮೂ.** ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥ ೩೨.

**ಭಾಷ್ಯಾರ್ಥವು —ಅಯಜ್ಞಸ್ಯ** - ಎಂದರೆ ಮಹಾಯಜ್ಞಾದಿ ಪೂರ್ವಕ ನಿತ್ಯನೈಮಿತ್ತಿಕ ಕರ್ಮರಹಿತಸ್ಯ - ಪಂಚಮಹಾಯಜ್ಞಾದಿ ಪೂರ್ವಕವಾದ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನ ವಿಲ್ಲದವನಿಗೆ, ಈ ಕರ್ಮಯೋಗ ಪ್ರಭೇದಗಳಲ್ಲಿ ಒಂದರನುಷ್ಠಾನವು ತನಗುಂಟೆಂಬ ಹೆಮ್ಮೆಯಿಂದ ನಿತ್ಯ ನೈಮಿತ್ತಿಕ ಮ.ಹಾ ಯಜ್ಞಾದಿಗಳನ್ನು ಪರಿತ್ಯಾಗಮಾಡುವವನಿಗೆ, ನಾಯಂ ಲೋಕಃ - ಎಂದರೆ ನ ಪ್ರಾಕೃತಲೋಕಃ-ಈ ಪ್ರಕೃತಿಸಂಬಂಧವುಳ್ಳ ಲೋಕವೂ ಇಲ್ಲವು, ಪ್ರಾಕೃತ ಲೋಕ ಸಂಬಂಧಿ - ಈ ಪ್ರಾಕೃತಲೋಕ ಸಂಬಂಧವುಳ್ಳ, ಧರ್ಮಾರ್ಥಕಾಮವೆಂದು ಹೆಸರುಳ್ಳ ಪುರುಷಾರ್ಥವು, ನ ಸಿದ್ಧ್ಯತಿ - ಸಿದ್ಧಿಸುವದಿಲ್ಲವು ; ಹೀಗಿರುವಾಗ ಇತಃ - ಈ ಪ್ರಾಕೃತ ಪುರುಷಾರ್ಥಗಳಿಗಿಂತಲೂ, ಅನ್ಯಃ - ಪರಮ ಪುರುಷಾರ್ಥವಾಗಿ ಬೇರೆಯಾದ ಮೋಕ್ಷಾಖ್ಯಃ ಪುರುಷಾರ್ಥಃ- ಮೋಕ್ಷವೆಂಬ ಪುರುಷಾರ್ಥವು, ಕುತಃ - ಎಲ್ಲಿಯದು ? ಈ ಐಹಿಕ ಪುರುಷಾರ್ಥಗಳಾದ, ನಶ್ವರಗಳಾದ ಧರ್ಮಾರ್ಥ ಕಾಮಗಳೇ ಇಲ್ಲದಿರುವಾಗ, ನಿರತಿಶಯವಾದ ಪರಮ ನಿಶ್ರೇಯಸ್ಸು ಎಲ್ಲಿಯದು ಎಂಬ ಭಾವವು. ಇದು ಕೈಮುತಿಕ ನ್ಯಾಯಸಿದ್ಧವೆಂಬ ಭಾವವು. ನಾಯಂಲೋಕಃ ಈ ಲೋಕವೇ ಇಲ್ಲವೆಂದು ಹೇಳಿದರೆ ಈ ಲೋಕಾಭಾವವು ಹೇಳಲ್ಪಡಲಿಲ್ಲವೆಂದು ತೋರಿಸುವದಕ್ಕಾಗಿ ತಾತ್ಪರ್ಯಾರ್ಥವಾದ ಈ ಲೋಕದ ಶ್ರೇಯಸ್ಸುಗಳು ಯಾವುವೂ ಇಲ್ಲವೆಂಬರ್ಥವೆಂದು ಉಪಪಾದಿಸಿ ಹೇಳಿದರು. ಪರಮಪುರುಷಾರ್ಥ ತಯಾ ಮೋಕ್ಷಸ್ಯ ಪ್ರಸ್ತುತತ್ವಾತ್ - ಮೋಕ್ಷವೇ ಪರಮ ಪುರುಷಾರ್ಥವೆಂದು ಹೇಳುವ ಪ್ರಕರಣವಾದುದರಿಂದ, ತದಿತರ ಪುರುಷಾರ್ಥಃ - ಆ ಮೋಕ್ಷಕ್ಕಿಂತಲೂ ಬೇರೆಯಾದ ಪುರುಷಾರ್ಥವು, "ಅಯಂಲೋಕ",ವೆಂದು ನಿರ್ದಿಶ್ಯತೇ - ಇಲ್ಲಿ ಹೇಳಲ್ಪಟ್ಟಿರುತ್ತದೆ; ಸ ಹಿ - ಅಂತಹ ಪುರುಷಾರ್ಥವೇ, ಪ್ರಾಕೃತಃ - ಈ ಪ್ರಕೃತಿಸಂಬಂಧವಾದ ಧರ್ಮಾರ್ಥ ಕಾಮವು. ಇವು ಮೂರೂ ಪ್ರಾಕೃತವು, ಮೋಕ್ಷವು ಅಪ್ರಾಕೃತವು ಎಂಬ ಭಾವವು.

**ಮೂಲಕ್ಕೆ ಅರ್ಥವು :—**ಹಿಂದಿನ ಶ್ಲೋಕದಲ್ಲಿ ನಿತ್ಯ ನೈಮಿತ್ತಿಕಗಳೊಂದಿಗೆ ಕರ್ಮಯೋಗಾನುಷ್ಠಾನಮಾಡುವವನಿಗೆ ಇಹಲೋಕದಲ್ಲಿ ಸರ್ವಶ್ರೇಯಸ್ಸೂ, ಅನಂತರ ಪರಮ ಶ್ರೇಯಸ್ಸೂ ಲಭಿಸುತ್ತವೆಂದೂ, ಅದಿಲ್ಲದವನಿಗೆ ಯಾವವಿಧ ಪುರುಷಾರ್ಥವೂ ಇಲ್ಲವೆಂದೂ ಹೇಳಲ್ಪಟ್ಟಿತು. ಈ ಶ್ಲೋಕದಲ್ಲೂ ಆ ಅಭಿಪ್ರಾಯಗಳನ್ನೇ ಉಪಸಂಹಾರ ರೂಪದಲ್ಲಿ ಹೇಳುತ್ತಾರೆ. ಏವಂ - ಹಿಂದೆ ಉಪಪಾದಿಸಿದ ರೀತಿಯಲ್ಲಿ, ಬಹು ವಿಧಾಃ - ಅನೇಕ ವಿಧಗಳಾದ, ಯಜ್ಞಾಃ - ಕರ್ಮಯೋಗ ಪ್ರಭೇದಗಳು, ಬ್ರಹ್ಮಣೋಮುಖೇ - ಬ್ರಹ್ಮಶಬ್ದವಾಚ್ಯನಾದ ಜೀವಾತ್ಮನನ್ನು ಹೊಂದುವ ಎಂದರೆ ಸಾಕ್ಷಾತ್ಕರಿಸುವ ಉಪಾಯದಲ್ಲಿ, ವಿತತಾಃ - ವಿಸ್ತರಿಸಲ್ಪಟ್ಟಿವೆ ; ಜೀವಾತ್ಮ ಸ್ವರೂಪ ಸಾಕ್ಷಾತ್ಕಾರಕ್ಕಾಗಿ, "ದೈವಮೇವಾಪರೇ" ಎಂಬ ಶ್ಲೋಕ ಮೊದಲುಗೊಂಡು "ಪ್ರಾಣಾನ್ ಪ್ರಾಣೇಷು ಜುಹ್ವತಿ" ಎಂದು ಹೇಳುವವರೆಗೂ ಬಹುವಿಧವಾದ ಕರ್ಮಯೋಗ

ಗಳು ಹೇಳಲ್ಪಟ್ಟಿವೆ ಎಂಬ ಭಾವವು. ಯಜ್ಞ ಹವಿಸ್ಸನ್ನೂ ಪರಬ್ರಹ್ಮನೇ ಪರಿಗ್ರಹಿಸುವದರಿಂದ **ಬ್ರಹ್ಮಣೋಮುಖೇ**-ಎಂದರೆ ಪರಬ್ರಹ್ಮನ ಮುಖದಲ್ಲಿ, **ವಿತತಾಃ**-ವಿಸ್ತರಿಸಲ್ಪಟ್ಟಿವೆ. ಪರಬ್ರಹ್ಮ ಪ್ರೀತ್ಯರ್ಥವಾಗಿ ವಿಸ್ತರವಾಗಿ ಹೇಳಲ್ಪಟ್ಟಿವೆ ಎಂದಾಗಲಿ ಅರ್ಥಮಾಡಬಹುದು. ಶ್ರೀಮಚ್ಛಂಕರಾಚಾರ್ಯರು, **ಬ್ರಹ್ಮಣೋಮುಖೇ** - ವೇದಗಳ ದ್ವಾರವಾಗಿ, **ವಿತತಾಃ** - ವಿಸ್ತರಿಸಲ್ಪಟ್ಟಿವೆ ಎಂದು ಅರ್ಥಮಾಡಿರುತ್ತಾರೆ, **ತಾನ್ಸರ್ವಾನ್** - ಮೇಲೆ ಹೇಳಿದ ಭೇದಗಳೇನು, ಮೇಲೆ ಹೇಳಿದ ಲಕ್ಷಣಗಳಾದ ಜ್ಞಾನಾಕಾರತೆ ಮೊದಲಾದವುಗಳೇನು, ಇವುಗಳನ್ನೆಲ್ಲ ಈ ಎಲ್ಲಾ ಕರ್ಮಯೋಗ ಪ್ರಭೇದಗಳನ್ನೂ, **ಕರ್ಮಜಾನ್** - ಕರ್ಮಗಳಿಂದುಂಟಾದವು ಎಂದರೆ ತಾನು ಅವಶ್ಯಕವಾಗಿ ಅನುಷ್ಠಿಸಬೇಕಾದ ನಿತ್ಯನೈಮಿತ್ತಿಕ ಕರ್ಮಾನುಷ್ಠಾನದಿಂದ ಉಂಟಾದವುಗಳನ್ನಾಗಿ, **ವಿದ್ಧಿ** - ತಿಳಿ. **ಏವಂ ಜ್ಞಾತ್ವಾ** - ಹೀಗೆ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನದಿಂದಲೇ ಕರ್ಮಯೋಗನಿಷ್ಪತ್ತಿಯು ಎಂದು ತಿಳಿದವನಾದರೆ, ಎಂದರೆ ತಿಳಿದು, ಅಂತಹ ಜ್ಞಾನದೊಂದಿಗೆ ಅನುಷ್ಠಿಸಿದರೆ, **ವಿಮೋಕ್ಷ್ಯಸೇ** - ಉಪಾಯಸಿದ್ಧಿಯುಂಟಾಗಿ ಪರಮಾತ್ಮ ಸಾಕ್ಷಾತ್ಕಾರರೂಪ ಮೋಕ್ಷವನ್ನು ಹೊಂದುತ್ತೀಯೆ. ಈ ಶ್ಲೋಕದಲ್ಲಿ ಹೇಳಲ್ಪಟ್ಟಿರುವುದು ಏನೆಂದರೆ:—(೧) ಕರ್ಮಯೋಗದ ಪ್ರಭೇದಗಳಲ್ಲಿ ಒಂದರಸಿದ್ಧಿಯುಂಟಾಗಬೇಕಾದರೆ ನಿತ್ಯ ನೈಮಿತ್ತಿಕಗಳ ಅಹರಹರನುಷ್ಠಾನವು ಆವಶ್ಯಕವು; ಆದುದರಿಂದಲೇ **ಕರ್ಮಜಾನ್** ಎಂದು ಹೇಳಲ್ಪಟ್ಟಿತು. ಇದರಿಂದ ಆ ಕರ್ಮಯೋಗಕ್ಕೆ ನಿತ್ಯನೈಮಿತ್ತಿಕಗಳು ಅಙ್ಗವೆಂದು ಹೇಳಿದಂತಾಯಿತು. ಮುಂದೆ ಉಪಾಯವಾದ ಭಕ್ತಿಯೋಗಕ್ಕೂ ಸಹ ಇವು ಅಙ್ಗಗಳೆಂದು ಹೇಳಲ್ಪಡುತ್ತದೆ. (೨) ಆ ಕರ್ಮಯೋಗ ಪ್ರಭೇದದ ಅನುಷ್ಠಾನದಿಂದ ಉಂಟಾಗುವ ಪ್ರಯೋಜನವೇನು ಎಂಬುದು ಹಿಂದೆಯೇ **ಯಾತಿ ಬ್ರಹ್ಮಸನಾತನಂ** ಎಂಬುದರಿಂದ ಆತ್ಮಾವಲೋಕನ ಪ್ರಾಪ್ತಿ ಎಂದು ಹೇಳಲ್ಪಟ್ಟಿದುದು **ಬ್ರಹ್ಮಣೋಮುಖೇ ವಿತತಾಃ** ಆತ್ಮಾವಲೋಕನಕ್ಕಾಗಿ ವಿತತಾಃ ಎಂದು ಉಪಪಾದಿಸಲ್ಪಟ್ಟಿದುದರಿಂದ ಆ ಕರ್ಮಯೋಗ ಪ್ರಭೇದಾನುಷ್ಠಾನವನ್ನು ತತ್ಸಿದ್ಧಿಯಾದ ಆತ್ಮಾವಲೋಕನ ಉಂಟಾಗುವತನಕ, ಅನುಷ್ಠಿಸತಕ್ಕದ್ದೆಂಬುದು ಸೂಚಿತವು. (೩) ಯಾವಾಗ ಆತ್ಮಾವಲೋಕನ ಸಿದ್ಧಿಯುಂಟಾಯಿತೋ ಆಗ ಭಕ್ತಿಯೋಗವು ಲಭಿಸಿ, ಮೋಕ್ಷಪ್ರಾಪ್ತಿಯುಂಟಾಗುತ್ತದೆಂದು ಮುಂದೆ ೧೮ ನೆಯ ಅಧ್ಯಾಯದ ೫೪ನೆಯ ಶ್ಲೋಕದಲ್ಲಿ **ಮದ್ಭಕ್ತಿಂ ಲಭತೇ ಪರಾಂ** ಎಂದು ಹೇಳಿ, ಅದರ ಮುಂದಿನ ಶ್ಲೋಕದಲ್ಲಿ ಅದಕ್ಕೆ ಫಲವಾಗಿ "ವಿಶತೇತದನಂತರಂ" ಎಂದು ಇಲ್ಲಿರುವ **ವಿಮೋಕ್ಷ್ಯಸೇ** ಎಂಬುದರ ಅರ್ಥವು ಉಪದೇಶಿಸಲ್ಪಟ್ಟಿರುತ್ತದೆ. ಆದುದರಿಂದ **ಏವಂ ಜ್ಞಾತ್ವಾ ವಿಮೋಕ್ಷ್ಯಸೇ** ಎಂದರೆ **ಏವಂ** - ಹೀಗೆ ಕರ್ಮಯೋಗವನ್ನು ಉಕ್ತಜ್ಞಾನಗಳೊಂದಿಗೆ ಅನುಷ್ಠಿಸಿ, ಅನಂತರ, **ಜ್ಞಾತ್ವಾ** - ಭಕ್ತಿಯೋಗ ಮೂಲಕ ನನ್ನನ್ನು ಸಾಕ್ಷಾತ್ಕರಿಸಿ, ಹೀಗೆ ತಿಳಿದು, **ವಿಮೋಕ್ಷ್ಯಸೇ**-ಸಂಸಾರಬಂಧದಿಂದ ಬಿಡಲ್ಪಟ್ಟು, ಮುಕ್ತಿಯನ್ನು ಹೊಂದುತ್ತೀಯೆ ಎಂಬರ್ಥವೂ ಧ್ವನ್ಯರ್ಥವಾಗಿ ತೋರಿಬರುತ್ತದೆ. ಜ್ಞಾನಂ, ಜ್ಞಾತ್ವಾ ಇತ್ಯಾದಿ ಪದಗಳು, ಶಾಸ್ತ್ರಗಳಲ್ಲಿ ಭಗವದುಪಾಸನವನ್ನೂ ತತ್ಸಾಕ್ಷಾತ್ಕಾರವನ್ನೂ ಬೋಧಿಸುತ್ತವೆ. ||೩೨||

**ಭಾಷ್ಯಾರ್ಥವು**:—ಹೀಗೆ ಕರ್ಮಯೋಗದ ಅವಾನ್ತರ ಪ್ರಭೇದಗಳನ್ನೆಲ್ಲಾ ಉಪದೇಶಿಸಿ, ಅವುಗಳಿಗೆ ಸಾಧನಗಳಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಆವಶ್ಯಕವಾಗಿ ಅನುಷ್ಠಿಸತಕ್ಕದ್ದೆಂದೂ ಅವುಗಳ ಪರಿತ್ಯಾಗದಲ್ಲಿ ಯಾವವಿಧ ಶ್ರೇಯಸ್ಸುಗಳೂ ಇಲ್ಲದೆ ಭಗವನ್ನಿಗ್ರಹರೂಪ ಪ್ರತ್ಯವಾಯವೂ ಉಂಟಾಗುತ್ತದೆಂದೂ ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಅವುಗಳೊಂದಿಗೆ ಕರ್ಮಯೋಗವನ್ನನುಷ್ಠಿಸುವವನಿಗೆ ಉಂಟಾಗುವ ಪರಮ ಶ್ರೇಯಸ್ಸನ್ನು ಹೇಳುತ್ತಾರೆ. **ಏವಂ ಬಹುವಿಧಾಯಜ್ಞಾಃ** ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ. **ಏವಂ ಹಿ ಬಹುಪ್ರ**

ಭಾ. ಏವಂ ಹಿ ಬಹುಪ್ರಕಾರಾಃ ಕರ್ಮಯೋಗಾಃ, ಬ್ರಹ್ಮಣೋಮುಖೇ ವಿತತಾಃ – ಆತ್ಮಯಾಥಾತ್ಮ್ಯಾವಾಪ್ತಿ ಸಾಧನತಯಾ ಸ್ಥಿತಾಃ ; ತಾನ್ - ಉಕ್ತಲಕ್ಷಣಾನುಕ್ತಭೇದಾನ್ ಕರ್ಮಯೋಗಾನ್ಸರ್ವಾನ್, ಕರ್ಮಜಾನ್ ವಿದ್ಧಿ - ಅಹರಹನುಷ್ಠೀಯಮಾನ ನಿತ್ಯನೈಮಿತ್ತಿಕ ಕರ್ಮಜಾನ್ ವಿದ್ಧಿ ; ಏವಂ ಜ್ಞಾತ್ವಾ – ಯಥೋಕ್ತಪ್ರಕಾರೇಣ ಅನುಷ್ಠಾಯ ಮೋಕ್ಷ್ಯಸೇ ॥೩೨॥

ಭಾ. ಅವ. ಅಂತರ್ಗತಜ್ಞಾನತಯಾ ಕರ್ಮಣೋ ಜ್ಞಾನಾಕಾರತ್ವ ಮುಕ್ತಮ್ ; ತತ್ರಾಂತರ್ಗತಜ್ಞಾನೇ ಕರ್ಮಣಿ ಜ್ಞಾನಾಂಶಸ್ಯ ಪ್ರಾಧಾನ್ಯಮಾಹ—

ಕಾರಾಃ ಕರ್ಮಯೋಗಾಃ - ಹೀಗೀಗ ಹಿಂದೆ ಹೇಳಲ್ಪಟ್ಟ ಬಹು ಪ್ರಕಾರವಾಗಿರುವ ಕರ್ಮಯೋಗಗಳು, ಇಲ್ಲಿ ಯಜ್ಞಶಬ್ದ ದಿಂದ ಐಚ್ಛಿಕ ಕರ್ಮಯೋಗ ಪ್ರಭೇದಗಳೇ ಹೇಳಲ್ಪಟ್ಟವು, ಬ್ರಹ್ಮಣೋ ಮುಖೇ ವಿತತಾಃ ಎಂದರೆ ಆತ್ಮಯಾಥಾತ್ಮ್ಯಾವಾಪ್ತಿಸಾಧನತಯಾಸ್ಥಿತಾಃ- ಆತ್ಮ ಯಾಥಾತ್ಮ್ಯವನ್ನು ಹೊಂದಲು ಸಾಧನವೆಂದು ಸ್ಥಾಪಿಸಿ ಹೇಳಲ್ಪಟ್ಟವು. ಇಲ್ಲಿ ಮುಖವೆಂದರೆ ಉಪಾಯವೆಂಬರ್ಥಕ್ಕೆ ನಿಘಂಟು ಇರುವದರಿಂದ ಸಾಧನವೆಂದು ಅರ್ಥಮಾಡಿರುತ್ತಾರೆ. ಆದುದರಿಂದ ಬ್ರಹ್ಮಣೋಮುಖೇ ಎಂದರೆ ಆತ್ಮಪ್ರಾಪ್ತ್ಯುಪಾಯೇ ಎಂದು ವ್ಯಾಖ್ಯಾನ ಮಾಡಿರುತ್ತಾರೆ, ಬ್ರಹ್ಮ ಶಬ್ದವು ಯಥಾವಸ್ಥಿತ ಆತ್ಮಸ್ವರೂಪವನ್ನು ಬೋಧಿಸುತ್ತದೆ; ತಾನ್ ಎಂದರೆ ಉಕ್ತಲಕ್ಷಣಾನ್ ಉಕ್ತಭೇದಾನ್ ಮೇಲೆ ಹೇಳಲ್ಪಟ್ಟ ಎರಡುವಿಧ ಜ್ಞಾನಾಕಾರತ್ವವುಳ್ಳ ಲಕ್ಷಣಗಳನ್ನೂ ಭೇದಗಳನ್ನೂ ಉಳ್ಳ, ಸರ್ವಾನ್ ಎಂದರೆ ಸರ್ವಾನ್ ಕರ್ಮಯೋಗಾನ್ - ಸಮಸ್ತ ಕರ್ಮಯೋಗಗಳನ್ನೂ, ಕರ್ಮಜಾನ್ ವಿದ್ಧಿ ಎಂದರೆ ಅಹರಹರನುಷ್ಠೀಯಮಾನ ನಿತ್ಯನೈಮಿತ್ತಿಕ ಕರ್ಮಜಾನ್ ವಿದ್ಧಿ - ಪ್ರತಿದಿನವೂ ಅನುಷ್ಠಿಸಲ್ಪಡುವ ನಿತ್ಯನೈಮಿತ್ತಿಕ ಕರ್ಮಗಳಿಂದುಂಟಾದವೆಂದು ತಿಳಿ; ಏವಂ ಜ್ಞಾತ್ವಾ ಎಂದರೆ ಯಥೋಕ್ತಪ್ರಕಾರೇಣ ಅನುಷ್ಠಾಯ-ಹಿಂದೆ ಉಪದೇಶಿಸಿದ ಪ್ರಕಾರ ಅನುಷ್ಠಿಸಿ, ಜ್ಞಾನವೇತಕ್ಕೆಂದರೆ ಅನುಷ್ಠಾನಕ್ಕಾಗಿ ಎಂಬ ಭಾವನೆಯಿಂದ ಹಾಗೆ ವ್ಯಾಖ್ಯಾನವು, ಮೋಕ್ಷ್ಯಸೇ - ಮೋಕ್ಷವನ್ನು ಹೊಂದುತ್ತೀಯೆ. ನಾನಾವಿಧ ಕರ್ಮಯೋಗಗಳೆಲ್ಲಾ, ಕರ್ಮಜಾನ್ - ಕರ್ಮಗಳಿಂದ, ಉತ್ಪನ್ನವಾದವು ಎಂದು ಹೇಳಿರುವದರಿಂದ ಕರ್ಮ ಶಬ್ದಕ್ಕೆ ನಿತ್ಯನೈಮಿತ್ತಿಕ ಕರ್ಮಗಳೆಂದೇ ಅರ್ಥಮಾಡಬೇಕಾಗಿದೆ. ಅಹ ರಹಸ್ಸಂಧ್ಯಾಮುಪಾಸೀತ ಇತ್ಯಾದಿ ವಿಧಿವಾಕ್ಯಗಳಿರುವದರಿಂದ ನಿತ್ಯ ನೈಮಿತ್ತಿಕ ಕರ್ಮಗಳನ್ನು ಅನುಷ್ಠಿಸಲೇಬೇಕೆಂಬುದು ಏರ್ಪಟ್ಟಿತು. ಹಾಗೆ ಅನುಷ್ಠಿಸುವದರಿಂದ ಕರ್ಮಯೋಗನಿಷ್ಪತ್ತಿಯುಂಟಾಗುತ್ತದೆ. ಪಾಪಗಳೆಲ್ಲಾ ನಶಿಸಿ ಹೋಗುತ್ತವೆ. ಸತ್ತ್ವೋನ್ಮೇಷ ಉಂಟಾಗುತ್ತದೆ. ಅನಂತರ ಭಕ್ತಿಯೋಗದಲ್ಲಿ ಅನ್ವಯವೂ ಯೋಗ ಸಂಸಿದ್ಧಿಯೂ ಒದಗಿ ಮೋಕ್ಷಪ್ರಾಪ್ತಿಗೆ ಕಾರಣಭೂತವಾಗುತ್ತದೆ. ಹಾಗೆ ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನವಿಲ್ಲದಿದ್ದರೆ ಕರ್ಮಯೋಗಕ್ಕೆ ಅರ್ಹತೆಯೇ ಇಲ್ಲದೇ ಹೋಗುತ್ತದೆ. ಯಾವವಿಧವಾದ ಪುರುಷಾರ್ಥವೂ ಇಲ್ಲವು. ಇದಲ್ಲದೆ ಭಗವದಾಜ್ಞಾತಿಲಂಘನ ಮಾಡಿದುದರಿಂದ ಭಗವನ್ನಿಗ್ರಹಕ್ಕೆ ಗುರಿಯಾಗುವ ಪ್ರತ್ಯವಾಯವೂ ಉಂಟೆಂಬುದೂ ಸೂಚಿತವು.

ಭಾಷ್ಯಾವತಾರಿಕೆಯ ಅರ್ಥವು :—ಕರ್ಮಣಃ - ಕರ್ಮಯೋಗಕ್ಕೆ, ಅಂತರ್ಗತಜ್ಞಾನತಯಾ - ಆದು ಎರಡು ವಿಧವಾದ ಜ್ಞಾನವನ್ನು ಒಳಗೊಂಡಿರುವದರಿಂದ, ಜ್ಞಾನಾಕಾರತ್ವ ಮುಕ್ತಮ್ - ಜ್ಞಾನಾಕಾರವೂ ಉಂಟೆಂಬುದು, ಉಕ್ತಂ - ಹೇಳಲ್ಪಟ್ಟಿತು. ಆ ಸಂದರ್ಭದಲ್ಲಿ, ಅಂತರ್ಗತಜ್ಞಾನೇಕರ್ಮಣಿ - ಜ್ಞಾನವನ್ನು ಒಳಗೊಂಡಿರುವ ಕರ್ಮಯೋಗದಲ್ಲಿ, ಜ್ಞಾನಾಂ

**ಮೂ. ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥** ೩೩.

ಶಸ್ಯ - ಜ್ಞಾನಭಾಗಕ್ಕೇನೇ, ಪ್ರಾಧಾನ್ಯ ಮಾಹ - ಪ್ರಾಧಾನ್ಯವನ್ನು ಈಗ ಹೇಳುತ್ತಾರೆ. ಹಿಂದೆ ಕರ್ಮಯೋಗಿಗೆ ಎರಡು ವಿಧವಾದ ಜ್ಞಾನವು ಆವಶ್ಯಕವೆಂದು ಹೇಳಿದರು. ಹಾಗೆ ಜ್ಞಾನಾಭ್ಯಾಸ ವನ್ನು ಪ್ರತಿದಿನವೂ ನಡೆಸುವದರಿಂದ ಆತ್ಮಾವಲೋಕನವು ಲಭಿಸುತ್ತದೆ. ಅದು ಹೇಗೆ ಆತ್ಮಾ ವಲೋಕನ ಸಿದ್ಧಿಗೆ ಉಪಯೋಗವಾಗುತ್ತದೆಂಬುದನ್ನು ಈ ಶ್ಲೋಕವೊದಲುಗೊಂಡು ಅಧ್ಯಾಯ ಪರಿಸಮಾಪ್ತಿಯವರೆಗೂ ಉಪಪಾದಿಸಿ ಹೇಳುತ್ತಾರೆ.

**ಮೂಲಕ್ಕೆ ಅರ್ಥವು:**—ಯಜ್ಞಾನುಷ್ಠಾನಗಳಲ್ಲಿ ಎರಡು ವಿಧವಾದ ಆಕಾರ ಉಂಟು.— (೧) ಈ ಮೇಲೆ ಹೇಳಿದ ಎರಡುವಿಧವಾದ ಜ್ಞಾನಾಂಶ ಉಂಟು; ಕರ್ತಾವಾದ ಆತ್ಮಾ ದೇಹ ಕ್ಕಿಂತ ತುಂಬಾ ವಿಲಕ್ಷಣನು; ಆತನು ಮಾಡುವ ಕರ್ಮವೂ ತಾನೂ ಇತರ ಸಾಧನಗಳೂ ಎಲ್ಲವೂ ಪರಬ್ರಹ್ಮಾತ್ಮಕವು; ಆದುದರಿಂದ ತಾನು ಮಾಡುವ ಈ ಕರ್ಮಗಳೆಲ್ಲಾ ಪರಮ ಪುರುಷಾರಾ ಧನರೂಪವು; ತನಗೆ ಅವುಗಳಲ್ಲಿ ಫಲ, ಕರ್ತೃತ್ವ ಮಮತೆಗಳು ಯಾವುವೂ ಇಲ್ಲವೆಂಬ ಜ್ಞಾನಾಂಶವು, (೨) ಆ ಯಜ್ಞಾನುಷ್ಠಾನಕ್ಕೆ ಬೇಕಾದ, ದ್ರವ್ಯ ಮತ್ತು ಯಜ್ಞಸಾಧನಗ ಳಾದ ಆಜ್ಯ, ಅಗ್ನಿ, ಮೊದಲಾದವುಗಳ ಮೂಲಕ ಪ್ರವೃತ್ತಿಯು. ಇದು ಕರ್ಮಾಂಶವು. ಇವೆರಡ ರಲ್ಲಿ ಮುಖ್ಯಾಂಶವು ಯಾವುದೆಂದರೆ ಜ್ಞಾನಾಂಶವೆಂದು ಹೇಳುತ್ತಾರೆ. **ದ್ರವ್ಯಮಯಾತ್ ಯ ಜ್ಞಾತ್** - ಯಜ್ಞಕ್ಕಿಂತಲೂ ಎಂದರೆ ಯಜ್ಞಾನುಷ್ಠಾನಕ್ಕಿಂತಲೂ, **ಜ್ಞಾನಯಜ್ಞಃ**-ಯಜ್ಞದಲ್ಲಿನ ಜ್ಞಾನಾಂಶವು ಎಂದರೆ ಆತ್ಮಾ ದೇಹಕ್ಕಿಂತ ವಿಲಕ್ಷಣವು, ತಾನು ಮಾಡುವ ಕರ್ಮಯೋಗದ್ರವ್ಯ ಗಳೂ ತಾನೂ ಎಲ್ಲವೂ ಪರಬ್ರಹ್ಮಾತ್ಮಕವು, ಈ ಕರ್ಮಗಳಿಂದ ತನಗೆ ಫಲ ಮೊದಲಾದವುಗಳು ಯಾವುವೂ ಇಲ್ಲವು, ಇದರಿಂದ ತನಗೆ ಶೇಷಿಯಾದ ಪರಮ ಪುರುಷನು ಆರಾಧಿಸಲ್ಪಡುವನು ಎಂಬ ಜ್ಞಾನಾಂಶವೇ, **ಹೇ ಪರಂತಪ** - ಓ ಶತ್ರುನಾಶಕನಾದ ಅರ್ಜುನನೇ, **ಶ್ರೇಯಾನ್** - ಪ್ರಧಾನ ವಾದುದು. ಕರ್ಮಯೋಗರೂಪ ಯಜ್ಞದಲ್ಲಿ, ದ್ರವ್ಯ ಸ್ರುಕ್ಸ್ರುವಹವಿಸ್ಸೇ ಮೊದಲಾವುದಗಳೊಂ ದಿಗೆ ಅನುಷ್ಠಿಸುವ ಕರ್ಮಾಂಶವೂ, ಜ್ಞಾನಾಂಶವೂ ಎರಡೂ ಉಂಟು, ಇವೆರಡರಲ್ಲಿ ಯಾವುದಕ್ಕೆ ಪ್ರಾಧಾನ್ಯವೆಂದರೆ ಜ್ಞಾನಾಂಶಕ್ಕೇ; ಇಲ್ಲಿ ಯಜ್ಞದ ಅಂಶಗಳೂ ಯಜ್ಞವೆಂದೇ ವ್ಯವಹರಿಸಲ್ಪಟ್ಟಿವೆ. ಅದು ಹೇಗೆ ಪ್ರಾಧಾನ್ಯವೆಂದರೆ ಹೇಳುತ್ತಾರೆ. **ಸರ್ವಂ ಕರ್ಮಾಖಿಲಂ**-ಸಮಸ್ತ ಕರ್ಮಯೋಗ ಪ್ರಭೇ ದದ ಕರ್ಮಗಳೂ ಮತ್ತು ಅದಕ್ಕಿಂತ ಬೇರೆಯಾಗಿ ಪ್ರಾಪ್ತವಾಗುವ ಫಲವೂ, **ಹೇ ಪಾರ್ಥ** - ಓ ಅರ್ಜುನನೇ, **ಜ್ಞಾನೇ** - ಅದರಲ್ಲಡಗಿರುವ ಆತ್ಮಾವಲೋಕನಸಾಧನವಾದ ಜ್ಞಾನಾಂಶದಲ್ಲೇ **ಪರಿಸಮಾಪ್ಯತೇ** - ಪರ್ಯವಸಾನವನ್ನು ಹೊಂದುತ್ತದೆ; ಎಲ್ಲವೂ ಕೊನೆಗೆ ಸ್ವಸ್ವರೂಪಜ್ಞಾನಕ್ಕೆ ಸಾಧನವಾದುದಾಗಬೇಕೆಂದೂ ಮತ್ತು ಆತ್ಮಾವಲೋಕನವೇ ಪ್ರಧಾನಾಂಶವೆಂದೂ ಹೇಳಿದಂತಾ ಯಿತು. ಕರ್ಮಯೋಗದ ಫಲವು ಆತ್ಮಸ್ವರೂಪ ಸಾಕ್ಷಾತ್ಕಾರವು, ಇದಕ್ಕೆ ಸಾಕ್ಷಾತ್ತಾದ ಕಾರ ಣವು ಕರ್ಮಯೋಗದ ಜ್ಞಾನಾಂಶವಾದುದರಿಂದ ಅದಕ್ಕೇ ಪ್ರಾಧಾನ್ಯವು ಹೇಳಲ್ಪಟ್ಟಿರುತ್ತದೆ. ಅದನ್ನೇ ಪ್ರತಿದಿನವೂ ಅಭ್ಯಾಸಮಾಡುವದರಿಂದ ಆತ್ಮ ಸಾಕ್ಷಾತ್ಕಾರಪ್ರಾಪ್ತವಾಗುತ್ತದೆಂಬ ಭಾ ವವು. ಈ ಅಧ್ಯಾಯದಲ್ಲಿ ಕರ್ಮಯೋಗದ ಜ್ಞಾನಾಂಶಕ್ಕೆ ಪ್ರಾಧಾನ್ಯವು ಇಲ್ಲಿಯೂ ಮತ್ತು ಮುಂ ದಿನ ಶ್ಲೋಕಗಳಲ್ಲಿಯೂ ಹೇಳಲ್ಪಡುವದರಿಂದ ಇದಕ್ಕೆ ಜ್ಞಾನಯೋಗವೆಂಬ ಹೆಸರು ಕೊಡಲ್ಪ ಟ್ಟಿರುತ್ತದೆ. ಈ ಅಧ್ಯಾಯವು ಕರ್ಮಯೋಗದ ಜ್ಞಾನವಿಷಯವಾದುದು ಎಂಬ ತಾತ್ಪರ್ಯವು.

**ಭಾಷ್ಯಾರ್ಥವು:**—ಪ್ರತಿಯೊಂದು ವಿಧವಾದ ಕರ್ಮಯೋಗಾನುಷ್ಠಾನದಲ್ಲೂ ಎರಡು ವಿಧ

ಭಾ. ಉಭಯಾಕಾರೇ ಕರ್ಮಣಿ ದ್ರವ್ಯಮಯಾದಂಶಾತ್ ಜ್ಞಾನಮಯೋಂಶ ಶ್ಶ್ರೇಯಾನ್.
ಸರ್ವಸ್ಯ ಕರ್ಮಣ ಸ್ತದಿತರಸ್ಯ ಚಾಖಿಲಸ್ಯೋಪಾದೇಯಸ್ಯ ಜ್ಞಾನೇಪರಿಸಮಾಪ್ತೇಃ
ತದೇವ ಸರ್ವೈ ಸ್ಸಾಧನೈಃ ಪ್ರಾಪ್ಯಭೂತಂ ಜ್ಞಾನಂಕರ್ಮಾನ್ತರ್ಗತತ್ವೇನಾ ಭ್ಯಸ್ಯತೇ.
ತದೇವ ಅಭ್ಯಸ್ಯಮಾನಂ ಕ್ರಮೇಣ ಪ್ರಾಪ್ಯದಶಾಂ ಪ್ರತಿಪದ್ಯತೇ ॥೩೩॥

ಸಾಧನಗಳುಂಟು. (೧) ದ್ರವ್ಯ, ಹವಿಸ್ಸು, ಸ್ರುಕ್ಸ್ರುವಾದಿ,ಹೀಗೆ ದ್ರವ್ಯರೂಪ ಸಾಧನಗಳೂ (೨) ಜ್ಞಾನರೂಪವಾದ ಸಾಧನಗಳೂ, ಇವೆರಡರಲ್ಲಿ ಜ್ಞಾನಾಂಶಕ್ಕೇ ಪ್ರಾಧಾನ್ಯವೆಂದು ಹೇಳುತ್ತಾರೆ. ಯಜ್ಞರೂಪವಾದ ಕರ್ಮಯೋಗದ ಈ ಎರಡು ಅಂಶಗಳೂ ಯಜ್ಞಗಳೆಂದೇ ವ್ಯವಹರಿಸಲ್ಪಟ್ಟವೆ. **ಉಭಯಾಕಾರೇ ಕರ್ಮಣಿ** - ಎರಡು ವಿಧವಾದ ಆಕಾರಗಳುಳ್ಳ ಈ (ಪ್ರತಿಯೊಂದು) ಕರ್ಮಯೋಗದಲ್ಲಿ ಅಥವಾ ಕರ್ಮಯೋಗಾನುಷ್ಠಾನದಲ್ಲಿ, **ದ್ರವ್ಯಮಯಾದಂಶಾತ್** - ಹವಿಸ್ಸು ಸ್ರುಕ್ಸ್ರುವಗಳಾದ ಪರಿಕರಗಳ ಅಂಶಗಳಿಗಿಂತ, **ಜ್ಞಾನಮಯೋಂಶಃ** - ಜ್ಞಾನರೂಪವಾದ ಭಾಗವು, **ಶ್ರೇಯಾನ್** - ಶ್ರೇಯಸ್ಕರವಾದುದು, ಮುಖ್ಯವಾದುದು; ಮೂಲದಲ್ಲಿ **ದ್ರವ್ಯಮಯಾದ್ಯಜ್ಞಾತ್** ಎಂದು ಇರುವದರಿಂದ, **ಜ್ಞಾನಯಜ್ಞಃ** ಎಂದರೆ **ಜ್ಞಾನಮಯ ಯಜ್ಞಃ** ಎಂದು ಇಟ್ಟುಕೊಳ್ಳಬೇಕೆಂದು ತಿಳಿಸುವದಕ್ಕಾಗಿ ಇಲ್ಲಿ **ಜ್ಞಾನ ಮಯಾಂಶಃ** ಎಂದು ಪ್ರಯೋಗಿಸಿರುತ್ತಾರೆ. ಇಲ್ಲಿ ಯಜ್ಞಾಂಶವು ಯಜ್ಞವೆಂದೇ ಹೇಳಲ್ಪಟ್ಟಿರುತ್ತದೆ. ಆದರೆ **ಕರ್ಮಜ್ಯಾಯೋಹ್ಯ ಕರ್ಮಣಃ** ಎಂದು ಹೇಳಿರುವದಕ್ಕೆ ಇದು ವಿರುದ್ಧವಲ್ಲವೇ ಎಂದರೆ ಅಲ್ಲವು. ಅಲ್ಲಿ ಕರ್ಮಯೋಗವು, ಕರ್ಮಯೋಗವನ್ನು ಬಿಟ್ಟ ಜ್ಞಾನಯೋಗಕ್ಕಿಂತ ಶ್ರೇಷ್ಠವೆಂದು ಹೇಳಲ್ಪಟ್ಟಿತು. ಇಲ್ಲಿಯಾದರೋ ಆ ಶ್ರೇಷ್ಠವಾದ ಕರ್ಮಯೋಗವೇ ಕರ್ತವ್ಯವೆಂದು ಸಾಧಿಸಿ, ಅದರಲ್ಲಿ ದ್ರವ್ಯರೂಪವಾಗಿ ಜ್ಞಾನರೂಪವಾಗಿ ಎರಡು ವಿಧವಾದ ಆಕಾರ ಉಂಟೆಂದೂ ಅವೆರಡರಲ್ಲಿ ಜ್ಞಾನರೂಪವಾದುದೇ ಶ್ರೇಷ್ಠವೆಂದೂ ಹೇಳಲ್ಪಟ್ಟಿತು. ಹಾಗೆ ಜ್ಞಾನಾಂಶಕ್ಕೇನೆ ಪ್ರಾಧಾನ್ಯ ಏತಕ್ಕೆಂದರೆ ಉತ್ತರಾರ್ಧದ ವ್ಯಾಖ್ಯಾನದಿಂದ ತಿಳಿಸುತ್ತಾರೆ. **ಸರ್ವಂ ಕರ್ಮಾಖಿಲಂ** ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ:—**ಸರ್ವಸ್ಯಕರ್ಮಣಃ** - ಸಮಸ್ತ ಕರ್ಮಯೋಗ ಪ್ರಭೇದಗಳೂ, **ತದಿತರಸ್ಯ ಚಾಖಿಲಸ್ಯೋಪಾದೇಯಸ್ಯ** - ಅವುಗಳಿಗಿಂತ ಬೇರೆಯಾಗಿ ಅವುಗಳಿಂದ ನಮಗೆ ಬೇಕಾಗಿರುವ ಸಮಸ್ತ ಫಲವೂ, **ಜ್ಞಾನೇಪರಿಸಮಾಪ್ತೇಃ** - ಜ್ಞಾನದಲ್ಲೇ ಪರ್ಯವಸಾನವನ್ನು ಹೊಂದುವದರಿಂದ, **ತದೇವ** - ಆ ಜ್ಞಾನವೇ, **ಸರ್ವೈಸ್ಸಾಧನೈಃ** - ಸಮಸ್ತ ಸಾಧನಗಳಿಂದಲೂ, **ಪ್ರಾಪ್ಯಭೂತಂ ಜ್ಞಾನಂ** - ಹೊಂದಬೇಕಾದ ಈ ಜ್ಞಾನವು, **ಕರ್ಮಾನ್ತರ್ಗತತ್ವೇನ** . ಕರ್ಮಯೋಗಾನುಷ್ಠಾನದಲ್ಲೇ ಸೇರಿರುವದರಿಂದ, **ಅಭ್ಯಸ್ಯತೇ**-ಅಭ್ಯಾಸಮಾಡಲ್ಪಡುತ್ತದೆ ; ಎಂದರೆ ಕರ್ಮಯೋಗಾನುಷ್ಠಾನಕಾಲದಲ್ಲೆಲ್ಲಾ ಚಿಂತಿಸತಕ್ಕದ್ದಾಗಿದೆ. ಇದರಿಂದ ಉಪಾಯಾನುಷ್ಠಾನಕ್ಕೆ ಯೋಗ್ಯತೆಯನ್ನುಂಟುಮಾಡುವ ಪರಿಪಾಕದೆಶೆಯನ್ನು ಹೊಂದುತ್ತದೆಂಬುದು ತಾತ್ಪರ್ಯವು. **ಅಭ್ಯಸ್ಯಮಾನಂ** - ಪ್ರತಿ ದಿನವೂ ಅಭ್ಯಸಿಸಲ್ಪಟ್ಟದಾಗಿ **ಕ್ರಮೇಣ ಪ್ರಾಪ್ಯದಶಾಂ** - ಪ್ರಾಪ್ಯದಶೆಯನ್ನು, **ಪ್ರತಿಪದ್ಯತೇ** . ಹೊಂದುತ್ತದೆ, **ಸರ್ವಂ ಅಖಿಲಂ** ಎಂಬುದರಲ್ಲಿ ತೋರಿಬರುವ ಅರ್ಥಭೇದವನ್ನು ಇಲ್ಲಿ ತೋರಿಸಿರುತ್ತಾರೆ, **ಸರ್ವಂಕರ್ಮ** ಎಂಬುದರಿಂದ ಕರ್ಮಯೋಗದ ಸಮಸ್ತ ಪ್ರಭೇದಗಳೂ **ಕರ್ಮಾಖಿಲಂ** ಎಂಬುದರಿಂದ ಅದರಿಂದುಂಟಾಗುವ ಸಮಸ್ತ ಫಲವೂ ಹೇಳಲ್ಪಟ್ಟಿತು. ದೇಹಾದ್ವಿಲಕ್ಷಣನು ಈ ಆತ್ಮನು, ಕರ್ಮಯೋಗದಲ್ಲಿ ತಾನೂ, ತಾನು ಮಾಡುವ ದ್ರವ್ಯಮಯ ಯಜ್ಞವೂ, ಎಲ್ಲವೂ ಬ್ರಹ್ಮಾತ್ಮಕವು, ಎಂಬೀ ಅಂತರ್ಗತ ಜ್ಞಾನಭಾಗವೇ ಪ್ರಾಧಾನ್ಯವಾದುದು. ಇದರ ಅನುಸಂಧಾನವನ್ನು ನಿತ್ಯವೂ ಮಾಡುತ್ತಾ ಬಂದರೆ ಕ್ರಮೇಣ ಆ ಜ್ಞಾನವು

ಪ್ರಾಪ್ಯದೆಶೆಯನ್ನು ಹೊಂದುತ್ತದೆ, ಎಂದರೆ ತನ್ನ ಸ್ವರೂಪ ಯಾಥಾತ್ಮ್ಯ ಸಾಕ್ಷಾತ್ಕಾರವು ಲಭಿಸುತ್ತದೆಂಬರ್ಥವು.

ಹಿಂದಿನ ಶ್ಲೋಕದಲ್ಲಿ ಏವಂ ಬಹುವಿಧಾ ಯಜ್ಞಾಃ ಎಂದು ಕರ್ಮಯೋಗಪ್ರಭೇದಗಳು ಅನೇಕವೆಂದು ಹೇಳಿ ಈ ಶ್ಲೋಕದಲ್ಲಾದರೋ ಕೆಲವು ದ್ರವ್ಯಮಯವಾಗಿಯೂ, ಕೆಲವು ಜ್ಞಾನಮಯವಾಗಿಯೂ ಇರುವದರಿಂದ ಜ್ಞಾನಕ್ಕೆ ಪ್ರಾಧಾನ್ಯವಿರುವದರಿಂದ ಜ್ಞಾನಯಜ್ಞವೇ ಶ್ರೇಷ್ಠವೆಂದು ಹೇಳಲ್ಪಟ್ಟಿತೆಂದು ಕೆಲವರು ಭಾವಿಸುವರು. ಎಲ್ಲಾ ಕರ್ಮಯೋಗಗಳಲ್ಲೂ ಜ್ಞಾನಾಕಾರತೆ ಆವಶ್ಯಕವೆಂದು ಹೇಳಿರುವಾಗ, ದ್ರವ್ಯ ಯಜ್ಞ, ಜ್ಞಾನಯಜ್ಞವೆಂಬ ವ್ಯತ್ಯಾಸಗಳು ಸರ್ವಾತ್ಮನಾ ಕೂಡುವದಿಲ್ಲವು. ಎಲ್ಲಾದರಲ್ಲೂ ದ್ರವ್ಯಭಾಗವೂ ಜ್ಞಾನಭಾಗವೂ ಎರಡೂ ಉಂಟು. ಇನ್ನು ಕೆಲವರು ಈ ಶ್ಲೋಕವು ಆತ್ಮಸಾಕ್ಷಾತ್ಕಾರಕ್ಕೆ ಉಪಯುಕ್ತವಾದ ಜ್ಞಾನಯೋಗವನ್ನು ಪ್ರಶಂಸಿಸುತ್ತದೆಂದು ಹೇಳುವರು. ಇದಕ್ಕೆ ಕಾರಣವೇನೆಂದರೆ (೧) **ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ** ಎಂದು ಹೇಳಿರುವದರಿಂದ ಸರ್ವ ಕರ್ಮವೂ ಜ್ಞಾನದಲ್ಲೇ ಅಂತರ್ಗತವೆಂದು ಹೇಳಿರುವದರಿಂದ ಜ್ಞಾನಯೋಗದ ಪ್ರಶಂಸೆಯು ಹಾಗೆ ತೋರುತ್ತದೆ; (೨) ಮುಂದೆ "**ಅಪಿಚೇದಸಿ ಸರ್ವೇಭ್ಯಃ ಪಾಪೇಭ್ಯಃ ಪಾಪಕೃತ್ತಮಃ । ಸರ್ವಂ ಜ್ಞಾನ ಪ್ಲವೇನೈವ ವೃಜಿನಂ ಸಂತರಿಷ್ಯಸಿ**"(ಗೀ. ೪.೩೬) ಜ್ಞಾನವೆಂಬ ತೆಪ್ಪದಿಂದಲೇ ಈ ಪಾಪರೂಪ ಸಮುದ್ರವನ್ನು ದಾಟಬಹುದು ಎಂಬುದರಿಂದಲೂ ಜ್ಞಾನಯೋಗ ಪ್ರಶಂಸೆಯೇ ತೋರುತ್ತದೆ, (೩) ಮತ್ತು ಅದರ ಮುಂದಿನ ಶ್ಲೋಕದಲ್ಲಿ "**ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ**" ಎಂದು ಜ್ಞಾನವು ಸಮಸ್ತ ಕರ್ಮಗಳನ್ನು ಭಸ್ಮಮಾಡುತ್ತದೆಂದು ಹೇಳಿರುತ್ತದೆ; ಅಲ್ಲಿಂದ (೪) ೪೧ನೆಯ ಶ್ಲೋಕದಲ್ಲಿ "**ಯೋಗಸನ್ನ್ಯಸ್ತಕರ್ಮಾಣಂ ಜ್ಞಾನಸಂಛಿನ್ನ ಸಂಶಯಂ**" ಜ್ಞಾನವೇ ಸರ್ವ ಸಂಶಯಗಳನ್ನು ಕತ್ತರಿಸುವಂತಾದ್ದೆಂದು ಹೇಳಿರುತ್ತದೆ. ಹೀಗೆಲ್ಲಾ ಉಪದೇಶವಿರುವದರಿಂದ ಕರ್ಮಯೋಗಕ್ಕಿಂತ ಜ್ಞಾನಯೋಗವೇ ಉತ್ತಮವೆಂದು ತೋರಿಬರುತ್ತದೆ. (೫) ಇದೂ ಅಲ್ಲದೆ ೩೮ನೆಯ ಶ್ಲೋಕದಲ್ಲಿ "**ನ ಹಿ ಜ್ಞಾನೇನ ಸದೃಶಂ ಪವಿತ್ರ ಮಿಹವಿದ್ಯತೇ**" ಎಂದು ಹೇಳಲ್ಪಡುವದರಿಂದ ಕರ್ಮಾನುಷ್ಠಾನಕ್ಕಿಂತಲೂ ಜ್ಞಾನಕ್ಕೇನೆ ಪಾವನತ್ವವು ಹೇಳಲ್ಪಟ್ಟ ಹಾಗೆ ತೋರಿಬರುತ್ತದೆ; (೬) ೩೯ನೆಯ ಶ್ಲೋಕದಲ್ಲಿ "**ಜ್ಞಾನಂ ಲಬ್ಧ್ವಾ ಪರಾಂ ಶಾಂತಿ ಮಚಿರೇಣಾಧಿಗಚ್ಛತಿ**" ಎಂದು ಜ್ಞಾನಯೋಗದಲ್ಲಿ ಶೀಘ್ರ ಫಲಪ್ರಾಪ್ತಿಯನ್ನು ಹೇಳಿರುವದರಿಂದ ಕರ್ಮಯೋಗಕ್ಕೆ ವಿಳಂಬಿತ ಫಲಪ್ರಾಪ್ತಿಯು ಎಂದು ಏರ್ಪಡುತ್ತದೆ; "**ಸ್ವಾಧ್ಯಾಯ ಜ್ಞಾನಯಜ್ಞಾಶ್ಚ**" (ಗೀ. ೪. ೨೮) ಎಂಬಲ್ಲಿ ದ್ರವ್ಯ ಯಜ್ಞಗಳನ್ನೂ ಹೇಳಿ ಆಮೇಲೆ ಜ್ಞಾನಯಜ್ಞಗಳನ್ನೂ ಪೃಥಕ್ಕರಿಸಿ ಹೇಳಿರುತ್ತದೆ; ಈ ಕಾರಣಗಳಿಂದ ಇದು ಜ್ಞಾನಯೋಗ ಪ್ರಶಂಸಾ ವಿಷಯವೇ ವಿನಾ ಕರ್ಮಯೋಗಾಂತರ್ಗತ ಜ್ಞಾನವಿಷಯವಲ್ಲವು. ಹೀಗೆ ಪೂರ್ವಪಕ್ಷತಂದರೆ ಅದಕ್ಕೆ ಸಮಾಧಾನವು ಹೇಗೆಂದರೆ.—**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್** ಎಂಬೀಶ್ಲೋಕದಲ್ಲಿ ಜ್ಞಾನಪ್ರಾಧಾನ್ಯ ಹೇಳಿದಮಾತ್ರದಿಂದಲೇ ಜ್ಞಾನಯೋಗವು ಪೃಥಕ್ಕಾಗಿ ಇಲ್ಲಿ ಹೇಳಲ್ಪಟ್ಟಿತೆಂದು ಭಾವಿಸಲು ಸಾಧ್ಯವಿಲ್ಲವು. ಏಕೆಂದರೆ ಹಿಂದೆ ಗೀತಾ ೩. ೮ನೆಯ "**ಕರ್ಮ ಜ್ಯಾಯೋಹ್ಯಕರ್ಮಣಃ**" ಎಂಬ ಶ್ಲೋಕವೊದಲಾದವುಗಳಲ್ಲಿ ಬರೀ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಶ್ರೇಷ್ಠವಾದುದೆಂದು ಹೇಳಿದಬಳಿಕ,ಅದಕ್ಕೆ ವಿರುದ್ಧವಾಗಿ ಇಲ್ಲಿ ಅರ್ಥಮಾಡಬಹುದೇ?"**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ**" ಎಂಬ ವಾಕ್ಯಕ್ಕೂ ವಿರೋಧವಾಗುವದಿಲ್ಲವೇ? ಮುಂದೆ ಐದನೆಯ ಅಧ್ಯಾಯದಲ್ಲೂ **ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ**" (ಗೀ. ೫. ೨.) ಕರ್ಮಯೋಗಕ್ಕೇನೆ ಪ್ರಾಶಸ್ತ್ಯವು ಹೇಳಲ್ಪಟ್ಟಿರುತ್ತದೆ. ಹೀಗಿರುವಾಗ ಇಲ್ಲಿ ಶ್ರೀಕೃಷ್ಣಭಗವಾನ್

ರವರು ತಮ್ಮ ಹಿಂದಿನ ಮತ್ತು ಮುಂದಿನ ಉಪದೇಶಗಳಿಗೆ ವಿರುದ್ಧವಾಗಿ ಇಲ್ಲಿ ಹೇಳುವರೇ ? ಮುಂದೆ ೧೮ನೆಯ ಅಧ್ಯಾಯದಲ್ಲೂ ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್" ಕರ್ಮಯೋಗವೇ ಜ್ಞಾನಯೋಗಕ್ಕಿಂತ ನಿನಗೆ ತುಂಬಾ ಶ್ರೇಯಸ್ಕರವಾದುದೆಂಬ ಭಾವವನ್ನು ಜ್ಞಾಪಕಕ್ಕೆ ತರುತ್ತಾರೆ. (ಗೀ. ೧೮. ೪೭.) ಹೇಗಾದರೂ ಮಾಡಿ ಅರ್ಜುನನ ಕೈಯಲ್ಲಿ ಯುದ್ಧಮಾಡಿಸಬೇಕೆಂದಿರುವಾಗ ಕರ್ಮಯೋಗಕ್ಕೆ ವಿರುದ್ಧವಾದ ಉಪದೇಶವನ್ನು ಎಂದಿಗಾದರೂ ಮಾಡುವರೋ? ಆದುದರಿಂದ ಇಲ್ಲಿನ ಜ್ಞಾನ ಶಬ್ದಕ್ಕೆಲ್ಲಾ ಕರ್ಮಯೋಗಕ್ಕೆ ಆವಶ್ಯಕವಾದ, ದೇಹಾತಿರಿಕ್ತ ಆತ್ಮಯಾಥಾತ್ಮ್ಯ ಜ್ಞಾನವೂ, ತಾನೂ, ತಾನು ಮಾಡುವ ಕರ್ಮವೂ, ಪರಿಕರ ಮೊದಲಾದವುಗಳೂ ಹೀಗೆ ಎಲ್ಲವೂ ಪರಬ್ರಹ್ಮಾತ್ಮಕವು ಎಂಬ ಜ್ಞಾನವೂ ವಿವಕ್ಷಿತವು. "ಸ್ವಾಧ್ಯಾಯ ಜ್ಞಾನಯಜ್ಞಾಶ್ಚ" ಎಂಬಲ್ಲಾದರೋ, ವೇದಾರ್ಥಾಭ್ಯಾಸರೂಪ ಜ್ಞಾನ ಯಜ್ಞವು ಹೇಳಲ್ಪಟ್ಟಿತೇ ವಿನಾ ಜ್ಞಾನಯೋಗವಲ್ಲವು. ಆತ್ಮ ಯಾಥಾತ್ಮ್ಯವೂ ಸ್ವಾಧ್ಯಾಯಾರ್ಥವಾದುದರಿಂದ ಅಲ್ಲಿ ಹೇಳಿರುವದಕ್ಕೂ ಇಲ್ಲಿ ಹೇಳಿರುವದಕ್ಕೂ ಏನೂ ವ್ಯತ್ಯಾಸವಿಲ್ಲವು. ಹೀಗೆ ಹೇಳಲು ಇನ್ನೇನಾದರೂ ಸಾಧನ ಉಂಟೋ ಎಂದರೆ, ಈ ನಾಲ್ಕನೆಯ ಅಧ್ಯಾಯದ ಉಪಸಂಹಾರ ಶ್ಲೋಕವಾದ "ತಸ್ಮಾದಜ್ಞಾನ ಸಂಭೂತಂ" (ಗೀ. ೪. ೪೨) ಎಂಬಲ್ಲಿ ಈ ಜ್ಞಾನವೆಂಬ ಕತ್ತಿಯಿಂದ ಸರ್ವ ಸಂಶಯವನ್ನೂ ಛೇದಿಸಿ ನಾನು ಉಪದೇಶಿಸಿದ ಕರ್ಮಯೋಗವನ್ನವಲಂಬಿಸು ಎಂದು ಹೇಳಿ ಮುಗಿಸುವದರಿಂದ ಕರ್ಮಯೋಗಕ್ಕೆ ಬೇಕಾದ ಈ ಎರಡು ಅಂಶಗಳನ್ನೊಳಗೊಂಡ ಜ್ಞಾನವೇ ಹೇಳಲ್ಪಟ್ಟಿತೆಂಬುದು ಸುವ್ಯಕ್ತವು. ಹಾಗಲ್ಲದೆ ಬರೀಜ್ಞಾನಯೋಗ ಪ್ರಶಂಸೆಯೇ ಇಲ್ಲಿ ಹೇಳಲ್ಪಟ್ಟಿತೆಂದರೆ ಯುದ್ಧಕ್ಕಾಗಿ ಯೋಗಮಾತಿಷ್ಠೋತ್ತಿಷ್ಠ ಎಂಬ ಉಪದೇಶವು ಸಂಗತವಾಗುವದಿಲ್ಲವು ; ಆದುದರಿಂದ ಸರ್ವಂ ಕರ್ಮಾಖಿಲಂ ಪಾರ್ಥ ಎಂಬ ಶ್ಲೋಕದ ಉತ್ತರಾರ್ಧದಲ್ಲಿನ ಉಪದೇಶವು ಕರ್ಮಯೋಗದ ಜ್ಞಾನಾಂಶದ ಪ್ರಾಧಾನ್ಯಪರವೆಂಬುದೇ ಸರಿಯಾದ ವ್ಯಾಖ್ಯಾನವು. ಮುಂದೆ "ಅಪಿ ಚೇದಸಿ ಪಾಪೇಭ್ಯಃ" ಎಂದಾರಂಭಿಸಿ ಸರ್ವಂ ಜ್ಞಾನ ಪ್ಲವೇನೈವ ವೃಜಿನಂ ಸನ್ತರಿಷ್ಯಸಿ" (ಗೀ. ೪. ೩೬) ಎಂಬಲ್ಲೂ "ಜ್ಞಾನಾಗ್ನಿಃ ಸರ್ವ ಕರ್ಮಾಣಿ" (ಗೀ. ೪. ೩೭) ಎಂಬಲ್ಲೂ "ನ ಹಿ ಜ್ಞಾನೇನ ಸದೃಶಂ" (ಗೀ. ೪. ೩೮) ಎಂಬಲ್ಲೂ ಜ್ಞಾನಯೋಗವು ಹೇಳಲ್ಪಡಲಿಲ್ಲವು; ಕರ್ಮಯೋಗದ ಜ್ಞಾನಾಂಶಕ್ಕೇ ಪಾಪನಿವಾರಕತ್ವವು ಸ್ಥಾಪಿಸಲ್ಪಟ್ಟಿತು. ಆದುದರಿಂದ ಕರ್ಮಯೋಗದಲ್ಲಿ ಈ ಜ್ಞಾನಕ್ಕೆ ಪ್ರಾಧಾನ್ಯವನ್ನು ಹೇಳಬೇಕಾಗಿರುವದು ಆವಶ್ಯಕವಾದುದರಿಂದ ಈ ಶ್ಲೋಕ ಮೊದಲುಗೊಂಡು ಅಧ್ಯಾಯ ಸಮಾಪ್ತಿವರೆಗೂ ಈ ಜ್ಞಾನವೇ ಪ್ರಶಂಸಿಸಲ್ಪಡುವದರಿಂದಲೂ, ಈ ಜ್ಞಾನದಿಂದಲೇ ಮುಂದೆ ೩೫ನೆಯ ಶ್ಲೋಕದಲ್ಲಿ "ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ" ಎಂಬುದರಿಂದ ಆತ್ಮಾವಲೋಕನವೂ ಲಭಿಸುವದರಿಂದಲೂ, ಈ ಅಧ್ಯಾಯಕ್ಕೆ ಜ್ಞಾನಯೋಗವೆಂಬ ಹೆಸರು ಕೊಡಲ್ಪಟ್ಟಿರುತ್ತದೆ. ಆದುದರಿಂದ ಈ ಶ್ಲೋಕ ಮೊದಲುಗೊಂಡು ಅಧ್ಯಾಯ ಪರಿಸಮಾಪ್ತಿಯವರೆಗೂ ಜ್ಞಾನಶಬ್ದವು ಎಲ್ಲೆಲ್ಲಿ ಪ್ರಯೋಗಿಸಲ್ಪಟ್ಟಿರುವದೋ, ಅಲ್ಲೆಲ್ಲಾ ಕರ್ಮಯೋಗಕ್ಕೆ ಬೇಕಾದ ಜ್ಞಾನಾಂಶವೇ ಹೇಳಲ್ಪಟ್ಟಿತೆಂದು ತಿಳಿಯತಕ್ಕದ್ದು. ಮುಂದೆ ೪೧ನೆಯ ಶ್ಲೋಕದಲ್ಲಿ "ಜ್ಞಾನಂ ಲಬ್ಧ್ವಾ ಪರಾಂ ಶಾಂತಿ ಮಚಿರೇಣಾಧಿಗಚ್ಛತಿ" ಎಂದು ಹೇಳಿದೆಯಲ್ಲಾ ಜ್ಞಾನ ಶಬ್ದಕ್ಕೆ ಮೋಕ್ಷದಾಯಕ ಜ್ಞಾನವಾದ ಪರಮಾತ್ಮ ಸಾಕ್ಷಾತ್ಕಾರವೆಂಬರ್ಥವನ್ನು ಹೇಳಬೇಡವೇ ಎಂದರೆ, ಇನ್ನೂ ಕರ್ಮಯೋಗದ ಪರಿಪಾಕಾವಸ್ಥೆಯನ್ನು ಹೊಂದದ ಅರ್ಜುನನಿಗೆ ಪರಮಾತ್ಮ ಸಾಕ್ಷಾತ್ಕಾರ ವಿಷಯವು ಸದ್ಯಕ್ಕೆ ಅಪ್ರಸ್ತುತವಿಷಯವು. ಇಲ್ಲಿಯೂ ಜ್ಞಾನಶಬ್ದದಿಂದ ಕರ್ಮಯೋಗಕ್ಕೆ ಸೇರಿದ ಜ್ಞಾನದ ಪರಿಪಾಕಾವಸ್ಥೆಯು ಬೋಧಿಸಲ್ಪಟ್ಟಿತು. ಇಂತಹ ಕರ್ಮಯೋಗದ ಜ್ಞಾನ ಪರಿಪಾಕಾವಸ್ಥೆಯೇ "ತತ್ಸ್ವಯಂ ಯೋಗ

ಮೂ. ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನ ಸ್ತತ್ತ್ವದರ್ಶಿನಃ ॥ ೩೪.

ಸಂಸಿದ್ಧಃ ಕಾಲೇನಾತ್ಮನಿ ವಿಂದತಿ"(ಗೀ. ೪. ೩೮) ಎಂಬಲ್ಲೂ "ಶ್ರದ್ಧಾವಾನ್ ಲಭತೇ ಜ್ಞಾನಂ" (ಗೀ.೪.೩೯) ಎಂಬಲ್ಲೂ ವ್ಯಕ್ತವಾಗಿ ಹೇಳಲ್ಪಡುತ್ತದೆ. ಇದು, ಭಕ್ತಿಯೋಗದಲ್ಲಿ ಅನ್ವಯವನ್ನೂ, ಹಾಗೆಯೇ ಶೀಘ್ರದಲ್ಲಿಯೇ ಭಕ್ತಿಯೋಗನಿಷ್ಪತ್ತಿಯನ್ನೂ ಉಂಟುಮಾಡಿ ದೇಹಾವಸಾನಾನಂತರ ಮೋಕ್ಷವನ್ನು ಕೊಡುತ್ತದೆಂದು ತಿಳಿಸುವದಕ್ಕಾಗಿ ಶಾಂತಿ ಮಚಿರೇಣಾಧಿಗಚ್ಛತಿ ಎಂದು ಹೇಳಲ್ಪಟ್ಟಿರುತ್ತದೆ. "ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ"ಎಂದು ಹಿಂದಿನ ೩೮ನೆಯ ಶ್ಲೋಕದಲ್ಲಿ ವಿಶದೀಕರಿಸಿರುವದರಿಂದ, ಆತ್ಮಯಾಥಾತ್ಮ್ಯಾದಿ ಜ್ಞಾನಾಕಾರವುಳ್ಳ ಕರ್ಮಯೋಗದಿಂದ ಸಂಸಿದ್ಧಿಯನ್ನು ಹೊಂದಿದವನಾಗಿ,ಕಾಲೇನ-ಒಡನೆಯೇ ಅಲ್ಲದೆ ಕ್ರಮೇಣ ಇಂತಹ ಆತ್ಮಸಾಕ್ಷಾತ್ಕಾರ ರೂಪ ಪರಿಪಾಕ ದಶಾವನ್ನು ಹೊಂದುವನು ಎಂದೇ ಅರ್ಥ ಹೇಳುವುದು ಸಂಗತವು. ಇದನ್ನೆಲ್ಲಾ ಮನಸ್ಸಿನಲ್ಲಿಟ್ಟೇ ಶ್ರೀ ಭಾಷ್ಯಕಾರರವರು ಈ ಶ್ಲೋಕ ವ್ಯಾಖ್ಯಾನದಲ್ಲಿ ಉಭಯಾಕಾರೇಕರ್ಮಣಿ ಎಂದು ಕರ್ಮಯೋಗದ ಅನುಷ್ಠಾನದಲ್ಲಿ ಎರಡು ಅಂಶಗಳಿವೆ ಎಂದೂ, ಅದರಲ್ಲಿ ದ್ರವ್ಯಮಯವಾದ ಅಂಶಕ್ಕಿಂತ ಜ್ಞಾನಮಯವಾದ ಅಂಶಕ್ಕೇ ಪ್ರಾಧಾನ್ಯವೆಂದು ಹೇಳಲ್ಪಟ್ಟಿತೇವಿನಾ, ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಎಂಬುದರಿಂದ ಕರ್ಮಯೋಗಕ್ಕಿಂತಲು ಜ್ಞಾನಯೋಗ ಶ್ರೇಷ್ಠವೆಂದು, ಪೂರ್ವೋಪದೇಶಕ್ಕೆ ವಿರುದ್ಧವಾಗಿ, ಅರ್ಥವನ್ನು ಮಾಡಲಿಲ್ಲವು. ॥೩೩॥

ಮೂಲಕ್ಕೆ ಅರ್ಥವು:—ಈಗ ಸರ್ವೇಶ್ವರನಾದ ನಾನೇನೋ ಕರ್ಮಯೋಗವೇ ಶ್ರೇಷ್ಠವೆಂದೂ, ಅದರಲ್ಲಡಗಿರುವ ಜ್ಞಾನ ಭಾಗಕ್ಕೇ ಪ್ರಾಧಾನ್ಯವೆಂದೂ ಉಪದೇಶಿಸಿದೆನು. ಜ್ಞಾನೇಪರಿಸಮಾಪ್ಯತೇ - ಆತ್ಮಸಾಕ್ಷಾತ್ಕಾರ ರೂಪ ಪರಿಪಾಕಾವಸ್ಥೆಯಲ್ಲಿ ಅದು ಪರ್ಯವಸಾನವನ್ನೂ ಹೊಂದುತ್ತದೆ ಎಂದೂ ಹೇಳಿದೆನು. ಆ ಪರಿಪಾಕಾವಸ್ಥೆಯು ಉಂಟಾಗುವ ಬಗೆ ಹೇಗೆ ಎಂದು ಕೇಳುತ್ತೀಯೋ, ಹೇಳುತ್ತೇನೆ ಕೇಳು ಎಂದು ಈ ತದ್ವಿದ್ಧಿ ಎಂಬ ಶ್ಲೋಕದ ಮೂಲಕ ತಿಳಿಸುತ್ತಾರೆ. ತಾನು ಈಗ ಯುದ್ಧಪ್ರಾರಂಭಕಾಲದಲ್ಲಿ ಸಕೃತ್ ಉಪದೇಶಮಾಡುವದರಿಂದ ಆ ಪರಿಪಾಕಾವಸ್ಥೆಯು ಲಭಿಸತಕ್ಕದ್ದಲ್ಲವು ; ಈಗ ನಿನಗೆ ಉಪದೇಶಕ್ಕೆ ಕಾಲವು ಮಿತವಾಗಿರುವದರಿಂದ ಸಙ್ಗ್ರಹವಾಗಿ ಉಪದೇಶಿಸಿರುವೆನು. ನೀನು ವಿಸ್ತರವಾಗಿ ತಿಳಿಯಬೇಕೆಂಬ ಅಪೇಕ್ಷೆಯಿದ್ದುದಾದರೆ ಜ್ಞಾನಿಗಳನ್ನು ನೀನು ಹೇಗೆ ಆಶ್ರಯಿಸಬೇಕೋ ಹಾಗೆ ಆಶ್ರಯಿಸಿದರೆ ನಿನಗೆ ಯಥಾವಸ್ಥಿತ ಜ್ಞಾನವು ದೊರೆಯುತ್ತದೆಂದು ಹೇಳುತ್ತಾರೆ. ತತ್ತ್ವದರ್ಶಿಗಳಾದ ಜ್ಞಾನಿಗಳ ಪದೇ ಪದೇ ಉಪದೇಶದಿಂದ ಪ್ರಾಪ್ತವಾಗುತ್ತದೆಂದು ಹೇಳುತ್ತಾರೆ, ತತ್ - ನಾನೇ ನಿನಗೆ ಹಿಂದೆ ಉಪದೇಶಿಸಿರುವ ಆತ್ಮಯಾಥಾತ್ಮ್ಯ ಜ್ಞಾನವನ್ನು, ಅದರಿಂದ ಸೇರಿದ ಕರ್ಮಾನುಷ್ಠಾನದಲ್ಲಿರುವ ನೀನು, ವಿದ್ಧಿ - ಚನ್ನಾಗಿ ತಿಳಿಯತಕ್ಕದ್ದು. ಹೇಗೆಂದರೆ ಹೇಳುತ್ತಾರೆ. ಪ್ರಣಿಪಾತೇನ - ಚನ್ನಾಗಿ ತಿಳಿದ ಜ್ಞಾನಿಗಳನ್ನಾಶ್ರಯಿಸಿ ಅವರಿಗೆ, ಚನ್ನಾಗಿ ಅಡ್ಡಬಿದ್ದು ನಮಸ್ಕಾರ ಮಾಡುವದರಿಂದಲೂ ಪರಿಪ್ರಶ್ನೇನ - ಪರಿತಃ ಪ್ರಶ್ನಿಸುವದರಿಂದಲೂ, ಎಂದರೆ ಕೇಳತಕ್ಕದ್ದನ್ನು ಸಾಕ್ಷಾತ್ತಾಗಿ ಕೇಳದೆ ಮೊದಲು ಗುರುವಿನ ಪ್ರೀತಿ ಸಂಪಾದಕಗಳಾದ ಮಾತುಗಳನ್ನಾಡಿ ಅನಂತರ ತನಗಿರುವ ಸಂದೇಹವನ್ನು ತಿಳಿಸಿ, ಉಪದೇಶವನ್ನು ಪ್ರಾರ್ಥಿಸತಕ್ಕದ್ದೆಂಬ ಭಾವವು; ಏಕಾ ಏಕಿ ತನ್ನ ಸಂದೇಹವನ್ನು ಕುರಿತು ಪ್ರಶ್ನಿಸಬಾರದು. ಪ್ರಶ್ನಭಾಗವೂ ಕೂಡ ಒಳಗೊಂಡಿರುವಹಾಗೆ ಪ್ರಶ್ನಿಸುವದರಿಂದಲೂ, ಸೇವಯಾ - ಶುಶ್ರೂಷಾದಿಗಳಿಂದಲೂ, ವಿದ್ಧಿ–

ತಿಳಿಯತಕ್ಕದ್ದು ; ತತ್ತ್ವದರ್ಶಿನಃ - ಆತ್ಮ ಯಾಥಾತ್ಮ್ಯಾದಿ ತತ್ವಗಳನ್ನೆಲ್ಲಾ ಚೆನ್ನಾಗಿ ತಿಳಿದ, ಜ್ಞಾನಿನಃ - ಜ್ಞಾನಿಗಳು, ತೇ - ಕರ್ಮಯೋಗದಲ್ಲಿ ಸಂಬಂಧವಿರುವ ನಿನಗೆ, ಜ್ಞಾನಂ - ಆ ಯೋಗದ ಪರಿಸಕ್ಷ್ವಾವಸ್ಥೆಗೆ ಉಚಿತವಾದ ಜ್ಞಾನವನ್ನು, ಉಪದೇಕ್ಷ್ಯಂತಿ - ಉಪದೇಶಿಸು ವರು ; ಎಂದರೆ ಅಂತಹ ಜ್ಞಾನವನ್ನು ಹೊಂದುವ ಉಪಾಯವನ್ನು ಉಪದೇಶಿಸುವರು ಎಂಬ ರ್ಥವು. ಈ ಶ್ಲೋಕದಿಂದ ತಾವು ಸಕೃದುಪದೇಶಮಾಡಿದುದು ಸಾಲದೆಂದೂ ಆ ಕಾರಣದಿಂದ ತಾನು ಚೇತನರ ಉಜ್ಜೀವನಾರ್ಥವಾಗಿಯೇ ಲೋಕದಲ್ಲಿ ಅನೇಕ ತತ್ತ್ವದರ್ಶಿಗಳಾದ ಜ್ಞಾನಿಗಳು ಸಂಚರಿಸುವಹಾಗೆ ಮಾಡಿರುವೆನಾದುದರಿಂದ ಅಂತವರನ್ನು ಪ್ರಣಾಮ, ಸೇವಾದಿಗಳ ಮೂಲಕ ಆಶ್ರಯಿಸಿ, ಪರಿಪ್ರಶ್ನಿಸಿ ತಿಳಿಯತಕ್ಕದ್ದೆಂದು ಉಪದೇಶಿಸಲ್ಪಟ್ಟಿತು. ಸದ್ಗುರುವಿನ ಕೃಪೆಯಿಲ್ಲದ ವನಿಗೆ ಪರಮ ಶ್ರೇಯಸ್ಸು ಲಭಿಸದು ಎಂಬ ಶಾಸ್ತ್ರಾರ್ಥವು ಬೋಧಿತವು. ಇವರಲ್ಲಿ ನಾವುಗಳು ಆಶ್ರಯಿಸುವ ಆಚಾರ್ಯರು ಸಾಮಾನ್ಯರಾದವರು ಕೂಡದೆಂದೂ, ಜ್ಞಾನಿಗಳಾಗಿ ತತ್ವದರ್ಶಿಗ ಳಾಗಿರಬೇಕೆಂಬುದು ಹೇಳಲ್ಪಟ್ಟಿತು. ಇಂತಹ ಜ್ಞಾನಿಗಳು, ಎಲ್ಲಾ ಕಾಲದಲ್ಲೂ ಆಶ್ರಯಿಸಿ ತಿಳಿಯಬೇಕೆಂಬ ಶ್ರದ್ಧಾ ಭಕ್ತಿಗಳಿರುವ ಮೋಕ್ಷಾರ್ಥಿಗಳಿಗೆ ಸಿಕ್ಕುತ್ತಾರೆಯೋ ? ತದ್ವಿದ್ಧಿ ಎಂದು ಶ್ರೀಕೃಷ್ಣಭಗವಾನರವರ ಆಜ್ಞೆಯಾಯಿತಲ್ಲಾ ಎಂದರೆ ಅಂತಹ ಮೋಕ್ಷಾರ್ಥಿಗಳಿಗೆ ಜ್ಞಾನಪ್ರದಾ ನಕ್ಕಾಗಿಯೇ ಜ್ಞಾನಿಗಳು ಎಲ್ಲಾ ಕಾಲದಲ್ಲೂ ಭೂಮಿಯನ್ನು ಅಲಂಕರಿಸುವಹಾಗೆ ಮಾಡಿ ಸರ್ವೇ ಶ್ವರನು ತನ್ನ ನಿರತಿಶಯ ಕೃಪಾಪ್ರವಾಹದ ಪ್ರಭಾವವನ್ನು ತೋರ್ಪಡಿಸಿರುತ್ತಾನೆಂದು ಮಹರ್ಷಿ ಯು ಹೇಳುತ್ತಾರೆ.—"ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾದ ಧರ್ಮಶೀಲಸ್ಯ ಸುದುಃಖಿತಸ್ಯ। ಅನುಗ್ರಹಾ ಯೇಹ ಚರನ್ತಿ ನೂನಂ ಭೂತಾನಿ ಭವ್ಯಾನಿ ಜನಾರ್ದನಸ್ಯ ॥ ಕರ್ಮವಾಸನಾ ಬಲದಿಂದ ಸರ್ವೇಶ್ವರನಿಂದ ವಿಮುಖರಾಗಿ, ಆಕಾರಣದಿಂದ ಅಧರ್ಮವನ್ನೇ ಮಾಡುವ ಸ್ವಭಾವ ವುಳ್ಳವರಾಗಿ, ತನ್ಮೂಲಕವಾಗಿ ಅನೇಕ ದುಃಖಪರಂಪರೆಗಳನ್ನು ಅನುಭವಿಸುತ್ತಿರುವ ಚೇತನರಿಗೆ ಅನುಗ್ರಹಮಾಡುವದಕ್ಕಾಗಿಯೇ ಜನಾರ್ದನನ ಭಕ್ತರಾದ ಜ್ಞಾನಿಗಳು ಈ ಲೋಕದಲ್ಲಿ ಸಂಚರಿ ಸುತ್ತಿದ್ದಾರೆಂಬುದು ನಿಶ್ಚಯವು ಎಂಬುದು ಈ ಶ್ಲೋಕಾಭಿಪ್ರಾಯವು. ಶಾಸ್ತ್ರವನ್ನು ಕೊಟ್ಟ ಕೃಪಾಸಾಗರನು ಶಾಸ್ತ್ರೋಪದೇಶಿಕರನ್ನು ಕೊಡದೇ ಇರುವನೇ ? ಅಂತಹ ಜ್ಞಾನಿಗಳು ಹೀಗೆ ಪ್ರಣಿಪಾತ ಸೇವೆಗಳ ಮೂಲಕ ಪರಿಪ್ರಶ್ನೆಮಾಡಿದರೂ ಉಪದೇಶಿಸದೆ ಹೋಗಬಹುದೋ ಎಂದರೆ ಅಂತಹ ದೇಶಿಕರೆಲ್ಲಾ ಪರಮ ದಯಾಳುಗಳಾಗಿ ಡಂಭಾಸೂಯಾದಿಗಳಿಲ್ಲದವರಾಗಿ, ದೀರ್ಘಬಂಧುಗಳಾಗಿ ಇರುವದರಿಂದ ಶಿಷ್ಯವೃತ್ತಿಗೆ ಯೋಗ್ಯನಾದವನು ಬಂದರೆ "ತತ್ತ್ವದರ್ಶಿ ಕ್ಷ ಣೀಯಃ" ಎಂಬ ಉಕ್ತಿಗೆ ಅನುಸಾರವಾಗಿ ಪರಮ ಸಂತೋಷದಿಂದ ಉಪದೇಶಿಸುವರೇ ವಿನಾ ಅನ್ಯಥಾ ಇಲ್ಲವೆಂಬ ಭಾವವು. ಇದನ್ನು ಅಮೋಘವಾದ "ಪಕ್ಷೀಚ ಶಾಖಾ ನಿಲಯಂ ಪ್ರವಿಷ್ಟಃ" ಎಂಬ (ರಾಮಾ. ಸುಂದರ. ೩೭-೫೧) ಶ್ಲೋಕದ ಅರ್ಥದಲ್ಲಿ ಕಾಣಬಹುದು.। ಮುಂಡಕದಲ್ಲಿ ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್ಪ್ರಶಾನ್ತಚಿತ್ತಾಯ ಶಮಾನ್ವಿತಾಯ ಯೇನಾಕ್ಷರಂ ಪುರುಷಂ ವೇದಸತ್ಯಂ ಪ್ರೋವಾಚತಾಂ ತತ್ತ್ವತೋ ಬ್ರಹ್ಮವಿದ್ಯಾಮ್ ॥ " (ಮುಂ. ೧-೨.೧೩). ಹೀಗೆ ಸಚ್ಛಿಷ್ಯನಿಗೆ ಸದ್ಗುರುವು ಬ್ರಹ್ಮವಿದ್ಯೆಯನ್ನುಪದೇಶಿಸತಕ್ಕದ್ದೆಂದು ವಿಧಿಸಿರುತ್ತದೆ; ಇಲ್ಲಿ ಪ್ರೋವಾಚ ಎಂದರೆ ಪ್ರಬ್ರೂಯಾತ್ ಎಂದು ಶ್ರೀ ಭಾಷ್ಯಕಾರರು ವ್ಯಾಖ್ಯಾನಮಾಡಿರುತ್ತಾರೆ. ॥೩೪॥

**ಭಾಷ್ಯಾರ್ಥವು:**—ಈಗ ಲೋಕ ಗುರುವಾದ ತಾನು ಉಪದೇಶಿಸಿರುವ ಆತ್ಮವಿಷಯ ಜ್ಞಾನವನ್ನೇ ಅದು ಚೆನ್ನಾಗಿ ವಿಶದವಾಗಿ ಮನಸ್ಸಿನಲ್ಲಿ ನಿಂತು ಆತ್ಮಸಾಕ್ಷಾತ್ಕಾರ ಸಿದ್ಧಿಸುವದ ಕ್ಕಾಗಿ ಇಂತಹ ತತ್ತ್ವಾರ್ಥಗಳನ್ನು ಚೆನ್ನಾಗಿ ತಿಳಿದಿರುವ ಜ್ಞಾನಿಗಳ ಮೂಲಕ ಪುನಃ ಪುನಃ

ಭಾ. ತತ್-ಆತ್ಮವಿಷಯಂ ಜ್ಞಾನಂ (೧) "ಅವಿನಾಶಿತು ತದ್ವಿದ್ಧಿ" ಇತ್ಯಾರಭ್ಯ (೨) "ಏಷಾ ತೇಽಭಿಹಿತಾ" ಇತ್ಯನ್ತೇನ ಮಯೋಪದಿಷ್ಟಮ್, ತದ್ಯುಕ್ತಕರ್ಮಣಿ ವರ್ತಮಾನಸ್ತ್ವಂ ವಿಪಾಕಾನುಗುಣಂ ಕಾಲೇಕಾಲೇ ಪ್ರಣಿಪಾತ ಪರಿಪ್ರಶ್ನ ಸೇವಾದಿಭಿರ್ವಿಶದಾಕಾರಂ ಜ್ಞಾನಿಭ್ಯೋವಿದ್ಧಿ ; ಸಾಕ್ಷಾತ್ಕೃತಂ ತ್ಮಸ್ವರೂಪಾಸ್ತು ಜ್ಞಾನಿನಃ ಪ್ರಣಿಪಾತಾದಿಭಿಸ್ಸೇವಿತಃ ಜ್ಞಾನಬುಭುತ್ಸಯಾ ಪರಿತಃ ಪೃಚ್ಛತ ಸ್ತವಾಶಯ ಮಾಲಕ್ಷ್ಯ ಜ್ಞಾನ ಮುಪದೇಕ್ಷ್ಯನ್ತಿ ॥೩೪॥

ಸಂಶಯ ವಿಪರ್ಯಯಾದಿಗಳು ತೊಲಗುವಹಾಗೆ ಕೇಳಿ ತಿಳಿಯತಕ್ಕದ್ದೆಂದು ಶ್ರೀಕೃಷ್ಣಭಗವಾನರವರು ಉಪದೇಶಿಸುತ್ತಾರೆ. ತತ್ ಎಂದರೆ ಆತ್ಮವಿಷಯಂ ಜ್ಞಾನಂ - ಆತ್ಮವಿಷಯವಾದ ಜ್ಞಾನವನ್ನು, ಅದು ಯಾವುದು ಎಂದರೆ ವ್ಯಕ್ತಪಡಿಸುತ್ತಾರೆ.—ಈಗಲೂ ಕೂಡ ಹೇಳುತ್ತಿರುವದಕ್ಕೆ ತತ್ ಎಂದು ಪರೋಕ್ಷದಲ್ಲಿ ಹೇಳಿದಹಾಗೆ ಪ್ರಯೋಗವು ಏಕೆಂದರೆ ಹಿಂದೆ "ಅವಿನಾಶಿತು ತದ್ವಿದ್ಧಿ" ಎಂದು ಹಿಂದಿನಿಂದ ಆರಂಭಿಸಿ ಹೇಳಿರುವದರಿಂದ ತತ್ ಎಂಬ ಪ್ರಯೋಗವು ; "ಅವಿನಾಶಿತು ತದ್ವಿದ್ಧಿ" ಎಂದು ಗೀ. ೨. ೧೭ರಲ್ಲಿ ಆರಂಭಿಸಿ "ಏಷಾ ತೇಽಭಿಹಿತಾ" ಎಂದು (ಗೀ. ೨. ೩೯)ರಲ್ಲಿ ಮುಗಿಸಿ, ಮಯೋಪದಿಷ್ಟಮ್-ನನ್ನಿಂದ ಉಪದೇಶಿಸಲ್ಪಟ್ಟ ಜ್ಞಾನವನ್ನು, ತದ್ಯುಕ್ತ ಕರ್ಮಣಿ ವರ್ತಮಾನಸ್ತ್ವಂ - ಅಂತಹ ಜ್ಞಾನದಿಂದ ಸೇರಿದ ಕರ್ಮಯೋಗದಲ್ಲಿರುವ ನೀನು, ವಿಪಾಕಾನುಗುಣಂ-ನಿನ್ನ ಪುಣ್ಯಪರಿಪಾಕಕ್ಕೆ ಅನುಗುಣವಾಗಿ, ಕಾಲೇಕಾಲೇ-ಪ್ರಾಪ್ತಕಾಲಗಳಲ್ಲಿ, ಅಥವಾಯೋಗ್ಯವಾದ ಕಾಲಗಳಲ್ಲಿ, ಪ್ರಣಿಪಾತ ಪರಿಪ್ರಶ್ನಸೇವಾದಿಗಳ ಮೂಲಕವಾಗಿ, ವಿಶದಾಕಾರಂ - ವಿಶದರೂಪವಾದ ಜ್ಞಾನವನ್ನು, ಜ್ಞಾನಿಭ್ಯೋವಿದ್ಧಿ-ಜ್ಞಾನಿಗಳ ಮೂಲಕ ತಿಳಿ ಎಂದರೆ ಅವರ ಉಪದೇಶಗಳನ್ನು ಸಾವಧಾನದಿಂದ ಕೇಳತಕ್ಕದ್ದೆಂಬ ಭಾವವು : ಜ್ಞಾನಿನಃ ಎಂದರೆ ಸಾಕ್ಷಾತ್ಕೃತಾತ್ಮಸ್ವರೂಪಾಸ್ತು - ಸಾಕ್ಷಾತ್ಕರಿಸಲ್ಪಟ್ಟ ತಮ್ಮ ಆತ್ಮಸ್ವರೂಪಗಳನ್ನುಳ್ಳವರಾದವರೋ, ಪ್ರಣಿಪಾತಾದಿಭಿಸ್ಸೇವಿತಃ - ಈ ನೀನು ಮಾಡಿದ ನಮಸ್ಕಾರಾದಿಗಳಿಂದ ಸೇವಿಸಲ್ಪಟ್ಟವರಾಗಿ, ಜ್ಞಾನ ಬುಭುತ್ಸಯಾ - ಜ್ಞಾನವನ್ನು ಪಡೆಯಬೇಕೆಂಬಪೇಕ್ಷೆಯಿಂದ ಪರಿತಃ ಪೃಚ್ಛತಃ - ಸಾಕ್ಷಾತ್ತಾಗಿ ಕೇಳಬೇಕಾದ ಅರ್ಥವು ಉಪದೇಶಿಸಲ್ಪಡುವಹಾಗೆ ಪೂರ್ವ ಪಕ್ಷರೀತಿಯಲ್ಲಿ ಕೇಳದೆ, ತನಗೆ ವಿಷಯವು ತಿಳಿಯದೆಂದು ಅಜ್ಞಾನದಲ್ಲಿ ಮುಳುಗಿರುವ ಭಾವವನ್ನು ಪ್ರದರ್ಶಿಸಿ, ಅವರ ಪ್ರೀತಿ ದಯೆಯನ್ನು ಸಂಪಾದಿಸಿ ಕೇಳುವ, ತವ ನಿನ್ನ, (ಅರ್ಜುನನ) ಆಶಯ ಮಾಲಕ್ಷ್ಯ - ಮನೋಗತವನ್ನರಿತವರಾಗಿ, ಜ್ಞಾನ ಮುಪದೇಕ್ಷ್ಯನ್ತಿ - ಆತ್ಮಯಾಥಾತ್ಮ್ಯಜ್ಞಾನದ ಪರಿಪಾಕಾವಸ್ಥೆಗೆ ಬೇಕಾದ ಜ್ಞಾನವನ್ನು, ಉಪದೇಕ್ಷ್ಯನ್ತಿ - ಉಪದೇಶಿಸುತ್ತಾರೆ. ಮುಂದೆ [ಶ್ರೀ] ಭೀಷ್ಮರು [] ಹೀಗೆಯೇ ಉಪದೇಶಿಸುವರೆಂಬ ಧ್ವನ್ಯರ್ಥವು ಸೂಚಿತವು. ಈಗ ಶ್ರೀಕೃಷ್ಣಭಗವಾನರವರು ಆತ್ಮಯಾಥಾತ್ಮ್ಯ ಜ್ಞಾನವನ್ನು ವಿಶದವಾಗಿ ಉಪದೇಶಿಸುವದಕ್ಕೆ ಅನುಕೂಲವಿಲ್ಲದುದರಿಂದೇನಾದರೂ ಜ್ಞಾನಿಗಳ ಮೂಲಕ ಈ ಜ್ಞಾನ ವಿಷಯದಲ್ಲಿ ಪದೇ ಪದೇ ಜ್ಞಾನಿಗಳಿಂದ ಉಪದೇಶವನ್ನು ಹೊಂದತಕ್ಕದ್ದೆಂದು ವಿಧಿಸುತ್ತಾರೆಯೇ? ಅಥವಾ ತಾವು ಉಪದೇಶಿಸದೇ ಇರುವ ಹೊಸ ವಿಷಯಗಳನ್ನು ಅರ್ಜುನನು ಗುರುಮುಖೇನ ಕೇಳಿ ತಿಳಿಯಬೇಕೆಂಬ ಆಶಯದಿಂದ ಹಾಗೇನಾದರೂ ಆಜ್ಞಾಪಿಸಿದರೇ ? ಅಥವಾ ಅರ್ಜುನನು ಸಾವಧಾನದಿಂದ ಶ್ರೀಕೃಷ್ಣನ ಉಪದೇಶವನ್ನು ಕೇಳದಿರುವದರಿಂದ ಗುರುಗಳಿಂದ ಸಾವಧಾನವಾಗಿ ಕೇಳಿ ಜ್ಞಾನವನ್ನು ಹೊಂದತಕ್ಕದ್ದೆಂದು ವಿಧಿಸುತ್ತಾರೆಯೇ? ಎಂದರೆ ಸರ್ವೇಶ್ವರನು

(೧) ಗೀ. ೨. ೧೭. (೨) ಗೀ. ೨. ೩೯.

ಬಹುವಿಶದವಾಗಿ ಅರ್ಜುನನಿಗೆ ಉಪದೇಶಿಸಿಯೇ ಇರುತ್ತಾರೆ, ಮತ್ತು ಅರ್ಜುನನು ಅದನ್ನು ಸಾವಧಾನವಾಗಿಯೇ ಕೇಳಿರುತ್ತಾನೆ, ತಾನು ಮೇಲೆ ಉಪದೇಶಿಸಿರುವದಕ್ಕಿಂತ ಹೊಸದಾಗಿ ಏನೂ ತಿಳಿಯಬೇಕೆಂಬ ಅಭಿಪ್ರಾಯದಿಂದ ಅಲ್ಲವು. ತಾನು ಹೇಳಿದುದನ್ನೇ ಗುರುಗಳಿಂದ ಪದೇ ಪದೇ ಉಪದೇಶರೀತ್ಯಾ ಗ್ರಹಿಸತಕ್ಕದೆಂಬುದನ್ನು ತಿಳಿಸುವದಕ್ಕಾಗಿ ಮಯೋಪದಿಷ್ಟಂ ಎಂಬ ಪ್ರಯೋಗವು, ಆದರೂ ಜ್ಞಾನವು ಪಕ್ವಾವಸ್ಥೆಯನ್ನು ಹೊಂದಬೇಕಾದರೆ ಮಹಾಜ್ಞಾನಿಗಳ "ಅರುಳ್ ಕೆಂಡೀರ್ ಇವ್ವುಲಗಿನಲ್ ಮಿಕ್ಕದೇ" ಎಂದು ಹೇಳಿರುವಹಾಗೆ, ಕೃಪಾಪೂರ್ವಕವಾದ ಪದೇ ಪದೇ ಗುರುವಿನ ಉಪದೇಶವೂ ಅದರಿಂದುಂಟಾಗುವ ಸಂಸ್ಕಾರವೂ ಪರಮ ಶ್ರೇಯಸ್ಕರವಾದುದು. ಇಂತಹ ಸಂಸ್ಕಾರವಿಲ್ಲದ ಜ್ಞಾನವು ದುಷ್ಟ ಹಯವು ಸವಾರಿಮಾಡುವನನ್ನು ಅಪಾಯಕರವಾದ ಮಾರ್ಗಕ್ಕೆ ಕೊಂಡುಹೋಗಿ ಬೀಳಿಸುವಹಾಗೆ, ಆತ್ಮನಾಶವನ್ನುಂಟು ಮಾಡುತ್ತದೆ. ಆದುದರಿಂದ ಗುರೂಪಸದನವೂ ಜ್ಞಾನ ಸಂಪಾದನೆಯೂ ಅದರಿಂದುಂಟಾಗುವ ಸಂಸ್ಕಾರವೂ ಅತ್ಯಾವಶ್ಯಕವೆಂದು ತೋರಿಸುವದಕ್ಕಾಗಿ ವಿದ್ಧಿ ಎಂಬ ವಿಧಿವಾಕ್ಯವು. ಅಂತಹ ಸದ್ಗುರುವಿನ ಉಪದೇಶ ಮತ್ತು ಕಟಾಕ್ಷವಿಲ್ಲದವರಿಗೆ ಭಗವದ್ಗೀತಾರ್ಥವು ಯಥಾವತ್ತಾಗಿ ಜ್ಞಾತವಾಗುವದಿಲ್ಲವೆಂಬುದೂ ಇದರಿಂದ ಸೂಚಿತವು.

ಕರ್ಮಯೋಗದ ಪ್ರಸ್ತುತವಾದ ಆತ್ಮಯಾಥಾತ್ಮ್ಯ ಜ್ಞಾನವನ್ನೂ ಕರ್ಮಯೋಗದ ಸಮಸ್ತವೂ ಬ್ರಹ್ಮಾತ್ಮಕವೆಂಬ ಜ್ಞಾನವನ್ನೂ ನಿರ್ದೇಶಿಸುವ ಸಂದರ್ಭದಲ್ಲಿ "ಏತತ್ ವಿದ್ಧಿ" ಎಂದು ವಿಧಿಸದೆ, ತದ್ವಿದ್ಧಿ ಎಂದು ಇಲ್ಲಿ ಹೇಳಲು ಕಾರಣವೇನು ಎಂದರೆ ಶ್ರೀಕೃಷ್ಣನು ತಾನೇ ಹಿಂದೆ ವಿಶದವಾಗಿ ಉಪದೇಶಿಸಿರುವದನ್ನೆಲ್ಲಾ ಗುರುಮುಖೇನ ಕೇಳುವದು ಆವಶ್ಯಕವೆಂದು ತೋರಿಸುವದಕ್ಕಾಗಿ "ಅವಿನಾಶಿತು ತದ್ವಿದ್ಧಿ" ಎಂಬ ಶ್ಲೋಕದಲ್ಲಿ ತದ್ವಿದ್ಧಿ ಎಂದು ಆರಂಭಿಸಿ "ಏಷಾ ತೇಽಭಿಹಿತಾ" ಎಂದು ಮುಗಿಸಿ ಹೇಳಿದುದನ್ನೆಲ್ಲಾ ಅರ್ಜುನನು ಗುರುಮುಖೇನ ತಿಳಿಯತಕ್ಕದ್ದೆಂದು ಹೇಳುತ್ತಾರೆ. ಆದರೆ ಗುರುವಾದವನು ಯಾರಾದರೂ ಬಂದು ಕೇಳಿದರೆ ಸಾಕು, ಶಿಷ್ಯನೆಂತವನಾದರೂ ಉಪದೇಶಿಸಬಹುದೋ? ಎಂದರೆ ಹಾಗಲ್ಲವು. (೧) "ಸದ್ಬುದ್ಧಿಸ್ಸಾಧುಸೇವೀ" ಎಂಬ ಶ್ಲೋಕದಲ್ಲಿ ಹೇಳಿರುವಹಾಗೆ ಶಿಷ್ಯ ಗುಣಪೂರ್ತಿ ಇರುವವನಿಗೇನೇ ಉಪದೇಶಿಸತಕ್ಕದ್ದೆಂಬುದು ಸೂಚಿಸುವದಕ್ಕಾಗಿಯೂ, ಹಾಗೆಯೇ ಈ ಗ್ರಂಥಾನ್ತ್ಯದಲ್ಲೂ "ಇದನ್ತೇನಾತಪಸ್ಕಾಯ" (ಗೀ. ೧೮. ೬೭) ಎಂಬಲ್ಲಿ ಹೇಳಿರುವಹಾಗೆಯೂ, ಶಿಷ್ಯನು ಗುರುಭಕ್ತಿಯುಕ್ತನಾಗಿ, ಮುಂದೆ ೩೯ನೆಯ ಶ್ಲೋಕದಲ್ಲಿ ಹೇಳಿರುವಹಾಗೆ ಶ್ರದ್ಧಾನ್ವಿತನಾಗಿಯೂ, ಜ್ಞಾನ ತತ್ಪರನಾಗಿಯೂ, ಸಂಯತೇಂದ್ರಿಯನಾಗಿಯೂ ಇದ್ದುಕೊಂಡು, ಪ್ರದಕ್ಷಿಣ ನಮಸ್ಕಾರಗಳನ್ನು ಗುರುಗಳಿಗೆ ಮಾಡಿ, ಅವರ ಶುಶ್ರೂಷೆಯನ್ನು ಕೈಕೊಂಡು, ಪರಿಪ್ರಶ್ನಾದಿಗಳ ಮೂಲಕ ಅವರುಗಳಿಂದ ಉಪದೇಶವನ್ನು ಹೊಂದತಕ್ಕದ್ದು. ಮೂಲದಲ್ಲಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ಎಂದು ಬೇರೆಬೇರೆ ಹೇಳಿರುವದರಿಂದ ಯಾವುದಾದರೂ ಒಂದೇ ಸಾಕೆಂದು ಭಾವಿಸ ತಕ್ಕದ್ದಲ್ಲವು. ಮೂರೂ ಆವಶ್ಯಕವೆಂದೂ ಇಷ್ಟುಮಾತ್ರವೇ ಅಲ್ಲದೆ ಇನ್ನೂ ಇತರ ಗುರು ಕೃಪೆಯನ್ನಾಕರ್ಷಿಸುವ ವ್ಯಾಪಾರಗಳೂ ಕೂಡ ಆವಶ್ಯಕವೆಂದೂ ಸೂಚಿಸುವದಕ್ಕಾಗಿ ಮೂರನ್ನೂ ಸೇರಿಸಿ ಸಮಾಸ ಮಾಡಿರುವದಿಂದಲೂ ಆದಿ ಪದದಿಂದಲೂ ಭಾಷ್ಯದಲ್ಲಿ ವ್ಯಕ್ತಪಡಿಸಿರುತ್ತಾರೆ. ಹಾಗೆಯೇ ಶ್ರೀ ವಿಷ್ಣುಪುರಾಣದ ಆದಿ ಶ್ಲೋಕವಾದ

(೧) ನ್ಯಾಸವಿಂಶತಿ. ೩.

ಭಾ. ಅ. ಆತ್ಮಯಾಥಾತ್ಮ್ಯ ವಿಷಯಸ್ಯ ಜ್ಞಾನಸ್ಯ ಸಾಕ್ಷಾತ್ಕಾರರೂಪಸ್ಯ ಲಕ್ಷಣಮಾಹ-

ಪರಾಶರಂ ಮುನಿವರಂ ಕೃತಪೌರ್ವಾಹ್ಣಿಕಕ್ರಿಯಂ ।
ಮೈತ್ರೇಯಃ ಪರಿಪಪ್ರಚ್ಛ ಪ್ರಣಿಪತ್ಯಾಭಿವಾದ್ಯ ಚ ॥

ಎಂಬಲ್ಲಿ ಪ್ರಣಿಪಾತ ಪರಿಪ್ರಶ್ನಾದಿಗಳು ದ್ಯೋತಿತವು. ಹಾಗೆಯೇ ಶ್ರೀಮದ್ರಾಮಾಯಣದಲ್ಲೂ "ನಾರದಂ ಪರಿಪಪ್ರಚ್ಛ" ಎಂಬ ಪ್ರಯೋಗವೇ ಇದೆ. ಈ ಗುರೂಪಸದನವೂ ಪ್ರಣಿಪಾತ ಸೇವಾಪರಿಪ್ರಶ್ನಾದಿಗಳೂ ಸಾಧಾರಣವಾಗಿ ಎಲ್ಲರಿಗೂ ಲಭಿಸದು; ಸುಕೃತಶಾಲಿಗಳಿಗೆ ಮಾತ್ರ ಆ ಸುಕೃತ ಪರಿಪಾಕಕಾಲದಲ್ಲಿ ಲಭಿಸುತ್ತದೆಂದು ತಿಳಿಸುವದಕ್ಕಾಗಿ ಮೂಲದಲ್ಲಿಲ್ಲದಿದ್ದರೂ, ವಿಪಾಕಾನುಗುಣಂ ಕಾಲೇ ಕಾಲೇ ಎಂದು ಪ್ರಯೋಗಿಸಿರುತ್ತಾರೆ. ಅಥವಾ ಗುರೂಪದೇಶಕ್ಕೆ ಪ್ರತಿದಿನದಲ್ಲೂ ಯಾವುದು ಉಚಿತಕಾಲವೋ, ಆ ಕಾಲಗಳಲ್ಲಿ ಉಪದೇಶವನ್ನು ಸಙ್ಗ್ರಹಿಸತಕ್ಕದ್ದೆಂದು ಕಾಲೇ ಕಾಲೇ ಎಂಬ ಪ್ರಯೋಗವೆಂದಾಗಲಿ ಭಾವಿಸಬಹುದು. ನಾವು ಆಶ್ರಯಿಸಬೇಕಾದ ಜ್ಞಾನಿಯು ತತ್ತ್ವದರ್ಶಿಯಾಗಿರತಕ್ಕದ್ದೆಂದು ಮೂಲದಲ್ಲಿ ಹೇಳಿರುತ್ತದೆ. "ತತ್ತ್ವೇನ ಯಃ" ಎಂದು ಯಾಮುನೇಯರ ಸ್ತೋತ್ರರತ್ನದಲ್ಲಿ ಹೇಳಿರುವಹಾಗೆ, "ಚಿದಚಿದೀಶ್ವರ ತತ್ಸ್ವಭಾವ ಭೋಗಾಪವರ್ಗತದುಪಾಯಗತೀಃ" ಇವಗಳನ್ನೆಲ್ಲಾ ಚನ್ನಾಗಿ ಗುರೂಪದೇಶಮೂಲಕ ವಿಮರ್ಶಿಸಿ ತಿಳಿದವರಾಗಿರಬೇಕು; ಇವೆಲ್ಲಾ ಚನ್ನಾಗಿ ತಿಳಿದಿದ್ದರೆ ಅವರು ಜ್ಞಾನಿಗಳೆಂದರೆ ಸಾಕ್ಷಾತ್ಕೃತಾತ್ಮಸ್ವರೂಪ ಉಳ್ಳವರಾಗಿರುವದೂ ಅಲ್ಲದೆ ಪರಮಾತ್ಮ ಸಾಕ್ಷಾತ್ಕಾರವನ್ನೂ ಹೊಂದಿರುವವರಾಗಿರುತ್ತಾರೆಂದು ಭಾವಿಸತಕ್ಕದ್ದು. ಈ ಶ್ಲೋಕವು ಮುಂಡಕ ಶ್ರುತಿಯಾದ "ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್" ಎಂಬುದನ್ನನುಸರಿಸಿ ವಿಧಿಸಿದ ಅಭಿಪ್ರಾಯವಾಗಿರುತ್ತದೆ. ಪ್ರತಿಯೊಬ್ಬ ಮೋಕ್ಷಾರ್ಥಿಗೂ ಗುರೂಪಸದನವು ಅತ್ಯಾವಶ್ಯಕವು; ಹೇಗೆಂದರೆ:—

ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ ।
ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್ ॥" ಎಂದು ಹೇಳಿರುವ

ಹಾಗೆ ಪಾಪಿಷ್ಠನಾದ ಕ್ಷತ್ರಬಂಧುವೂ, ಸುಕೃತಶಾಲಿಯಾದ ಪುಂಡರೀಕರೂ ಇಬ್ಬರೂ ಆಚಾರ್ಯರಾದ ನಾರದರನ್ನು ಆಶ್ರಯಿಸಿದುದರಿಂದಲೇ ಮುಕ್ತಿಯನ್ನು ಹೊಂದಿದರು; ಆದುದರಿಂದ ಸದಾಚಾರ್ಯನನ್ನು ಆಶ್ರಯಿಸತಕ್ಕದ್ದೆಂದು ವಿಧಿಸಿರುವಹಾಗೆ, ಇಲ್ಲಿಯೂ ಶ್ರೀಕೃಷ್ಣ ಭಗವಾನರವರೂ ಉಪದೇಶಿಸಿರುತ್ತಾರೆ. ಆದರೆ ಶಾಸ್ತ್ರಗಳಿವೆ ಅವುಗಳಿಂದ ನಾನೇ ತಿಳಿಯುತ್ತೇನೆ, ಆಚಾರ್ಯರು ಏತಕ್ಕೆ ಎಂದರೆ ಅಂತಹ ಜ್ಞಾನವು ಯಥಾರ್ಥವಲ್ಲವಾದುದರಿಂದ ಕಾರ್ಯಕಾರಿಯಾಗುವದಿಲ್ಲವು. "ಶಾಸ್ತ್ರಾದಿಷು ಸುದೃಷ್ಟಾಪಿ ಸಾಙ್ಗಾ ಸಹ ಫಲೋದಯಾ । ನಪ್ರಸೀದತಿ ವೈವಿದ್ಯಾ ವಿನಾ ಸದುಪದೇಶತಃ" ಎಂದು ಹೇಳಲ್ಪಟ್ಟಿರುತ್ತದೆ. ॥೩೪॥

ಭಾಷ್ಯಾವತಾರಿಕೆಯ ಅರ್ಥವು :—ಸುಕೃತಪರಿಪಾಕಾನುಗುಣವಾಗಿ ಲಭಿಸುವ ಗುರೂಪಸದನ ಮೂಲಕ ಪ್ರಾಪ್ತಕಾಲಗಳಲ್ಲಿ ಉಪದೇಶವನ್ನು ಪದೇಪದೇ ಹೊಂದಿದರೆ ಜೀವಾತ್ಮ ಸಾಕ್ಷಾತ್ಕಾರವು ಲಭಿಸುತ್ತದೆಂದು ಹಿಂದಿನ ಶ್ಲೋಕದಲ್ಲಿ ಹೇಳಿದರು. ಈ ಶ್ಲೋಕದಲ್ಲಿ ಅಂತಹ ಶಿಷ್ಯನಿಗೆ ಶ್ರೋತ್ರಿಯನಾದ ಬ್ರಹ್ಮನಿಷ್ಠನಾದ ಗುರುವಿನ ಉಪದೇಶಮೂಲಕ ಕರ್ಮಬದ್ಧನಾಗಿದ್ದರೂ ಆತ್ಮಸಾಕ್ಷಾತ್ಕಾರವು ದೊರೆಯುತ್ತದೆ. ಹಾಗೆ ದೊರೆಯಿತು ಎಂಬುದಕ್ಕೆ ಚಿಹ್ನೆ ಏನು ಎಂಬುದನ್ನು ವ್ಯಕ್ತಪಡಿಸುತ್ತಾರೆಂದು ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಆತ್ಮಯಾಥಾತ್ಮ್ಯ ವಿಷಯಸ್ಯ - ಜೀವಾತ್ಮ ಯಾಥಾತ್ಮ್ಯವೇ ವಿಷಯವಾಗಿವುಳ್ಳ, ಸಾಕ್ಷಾತ್ಕಾರರೂ

**ಮೂ. ಯಜ್ಜ್ಞಾತ್ವಾ ನ ಪುನರ್ಮೋಹ ಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯ ಶೇಷೇಣ ದ್ರಕ್ಷ್ಯಸ್ಯಾ ತ್ಮನ್ಯಥೋ ಮಯಿ ॥ ೩೫.**

**ಭಾ. ಯತ್ ಜ್ಞಾನಂ, ಜ್ಞಾತ್ವಾ ಪುನರೇವಂ - ದೇಹಾದ್ಯಾತ್ಮಾಭಿಮಾನರೂಪಂ, ತತ್ಕೃತಂ**

**ಚ** ಸ್ಯ - ಆತ್ಮಸಾಕ್ಷಾತ್ಕಾರವೆಂದು ಹೇಳಿಸಿಕೊಳ್ಳುವ **ಜ್ಞಾನಸ್ಯ** - ಜ್ಞಾನದ, **ಲಕ್ಷಣಮಾಹ**- ಲಕ್ಷಣವೆಂತಾದ್ದೆಂಬುದನ್ನು ಹೇಳುತ್ತಾರೆ. ಪ್ರಕೃತಿಯಿಂದ ಬಿಡಲ್ಪಟ್ಟ ಸಮಸ್ತ ಜೀವಾತ್ಮರುಗಳೂ ಜ್ಞಾನೈಕಾಕಾರತೆಯಿಂದ ಸಮರೆಂಬ ಜ್ಞಾನವೂ ಮತ್ತು ಅಂತಹ ಆತ್ಮವಸ್ತುಗಳೆಲ್ಲರೂ ತನ್ನ ಪರಿಶುದ್ಧ ಜ್ಞಾನತ್ವಾದಿ ಮೂಲಕ ಪರಮಾತ್ಮನಿಗೂ ಸಮವೆಂಬ ಜ್ಞಾನವೂ ಚೆನ್ನಾಗಿ ಸ್ಥಾಪಿತವಾದರೆ ಆಗ ಆತ್ಮಸಾಕ್ಷಾತ್ಕಾರ ಉಂಟಾಗಿದೆ ಎಂದು ಭಾವಿಸಬಹುದೆಂಬ ಲಕ್ಷಣವನ್ನು ಹೇಳುತ್ತಾರೆ.

**ಮೂಲಕ್ಕೆ ಅರ್ಥವು :—**ಹೇ **ಪಾಂಡವ** - ಓ ಪಾಂಡುಪುತ್ರನಾದ ಅರ್ಜುನನೇ, **ಯತ್** - ಯಾವ ಮಹತ್ತಾದ ಆತ್ಮಯಾಥಾತ್ಮ್ಯಜ್ಞಾನವನ್ನು, **ಜ್ಞಾತ್ವಾ** - ಹೊಂದಿದವನಾಗಿ, **ಏವಂ** - ಈಗ ನೀನು ಪ್ರದರ್ಶಿಸಿರುವ ದೇಹಾತ್ಮಾಭಿಮಾನದಿಂದುಂಟಾದ ಅಹಂಕಾರ ಮಮಕಾರರೂಪನಾದ, **ಮೋಹಂ** - ಮೋಹವನ್ನು, **ನಯಾಸ್ಯಸಿ** - ಹೊಂದುವದಿಲ್ಲವು, ಇಲ್ಲಿ ಮೋಹವು ಯಾವುದು ಎಂದರೆ ದೇಹ ವ್ಯತಿರಿಕ್ತ ಆತ್ಮಾ ಒಂದುಂಟು; ದೇಹಸಂಬಂಧವಿಲ್ಲದ ಅವಸ್ಥೆಯಲ್ಲಿ ಎಲ್ಲಾ ಆತ್ಮರೂ ಜ್ಞಾನೈಕಾಕಾರತೆಯಿಂದ ಸಮವೆಂಬ ಯಥಾರ್ಥಜ್ಞಾನವಿಲ್ಲದೆ, ಶತ್ರುಪಕ್ಷದಲ್ಲಿರುವ ಕೆಲವರು ನನಗೆ ಸಂಬಂಧಪಟ್ಟವರು, ಎಂದು ತಿಳಿದಿರುವದೀಗ ಮೋಹವು. ಆತ್ಮಯಾಥಾತ್ಮ್ಯಜ್ಞಾನವುಂಟಾದರೆ ಈ ಮೋಹವು ದೂರೀಕೃತವಾಗುತ್ತದೆಂಬ ಭಾವವು. **ಯೇನ**- ಯಾವ ಈ ಮಹಿಮೆಯುಳ್ಳ ಆತ್ಮ ಸಾಕ್ಷಾತ್ಕಾರರೂಪ ಜ್ಞಾನದಿಂದ, **ಅಶೇಷೇಣ**-ನಿಶ್ಶೇಷವಾಗಿ, ಇರುವ (ಅಭೇದೇತ್ಥತೀಯೆಯು) ಎಂದರೆ ಸಮಸ್ತ, **ಭೂತಾನಿ**-ಪ್ರಕೃತಿಸಂಬಂಧವಿರುವ ಚೇತನ ವರ್ಗವನ್ನೆಲ್ಲಾ,**ಆತ್ಮನಿ**-ತನ್ನಲ್ಲಿ **ದ್ರಕ್ಷ್ಯಸಿ**-ನೋಡುತ್ತೀಯೇ,ಎಂದರೆ ನಿನ್ನ ಆತ್ಮಾವಿಗೆ ಸಮನಾಗಿ ಎಲ್ಲರ ಆತ್ಮಾವನ್ನು ನೋಡುತ್ತೀಯೇ ; ಆತ್ಮಾವೆಲ್ಲಾ ಜ್ಞಾನಸ್ವರೂಪ ಉಳ್ಳದ್ದಾಗಿಯೂ ಜ್ಞಾನ ಸ್ವಭಾವವುಳ್ಳದ್ದಾಗಿಯೂ ಇರುವದರಿಂದ, ಹೀಗೆ ಜ್ಞಾನೈಕಾಕಾರತೆಯಿಂದ ಎಲ್ಲವೂ ಸಮವೆಂದು ನೋಡುತ್ತೀಯೋ ಎಂಬ ಭಾವವು ; **ಅಥೋ**-ಅನಂತರದಲ್ಲಿ, **ಮಯಿ**-ನನ್ನಲ್ಲೂ, ಎಲ್ಲಾ ಚೇತನ ವರ್ಗವನ್ನೂ, **ದ್ರಕ್ಷ್ಯಸಿ** - ನೋಡುವಿ. ಪರಮಾತ್ಮನೂ ಸಹ ಜ್ಞಾನಸ್ವರೂಪನಾಗಿ ಜ್ಞಾನ ಗುಣಕನಾಗಿರುವದರಿಂದ, ಪ್ರಕೃತಿವಿಯುಕ್ತ ಜೀವಾತ್ಮರೆಲ್ಲಾ ಪರಮಾತ್ಮನಿಗೂ ಸಮವೆಂಬ ಭಾವವು. ಈ ಸಮತ್ವವು ಎಲ್ಲಾ ವಿಷಯದಲ್ಲೂ ಉಂಟೆಂದು ಭಾವಿಸತಕ್ಕದ್ದಲ್ಲವು. ಎರಡು ಭಿನ್ನವಸ್ತುಗಳಿಗೇ ಸಮತ್ವವನ್ನು ಹೇಳುವ ವಾಡಿಕೆಯು; ಇದರಿಂದ ಕೆಲವು ವಿಷಯಗಳಲ್ಲಿ ಮಾತ್ರ ಸಮತ್ವವೂ ಇನ್ನು ಮಿಕ್ಕ ವಿಷಯಗಳಲ್ಲಿ ಅಸಮತ್ವವೆಂಬುದು ಸಿದ್ಧವು; ಜ್ಞಾನೈಕಾಕಾರತೆಯಿಂದ ಜೀವಾತ್ಮ ಪರಮಾತ್ಮರಿಗೆ ಸಮತ್ವವಿದ್ದರೂ "ಜಗದ್ವ್ಯಾಪಾರ ವರ್ಜಂ" ಎಂದು ಹೇಳಿರುವ ಹಾಗೆ, ಅನೇಕ ವಿಷಯಗಳಲ್ಲಿ ಅಸಮತ್ವವು ಉಂಟೇ ಉಂಟು. ॥೩೫॥

**ಭಾಷ್ಯಾರ್ಥವು :—**ಹೀಗೆ ಕರ್ಮ ಬದ್ಧನಾಗಿ ಜ್ಞಾನ ತಿರೋಹಿತತ್ವವುಂಟಾದವನಿಗೆ ಆತ್ಮ ಯಾಥಾತ್ಮ್ಯಜ್ಞಾನವು ಉಂಟಾಗಿದೆ ಎಂದು ಯಾವಾಗ ತಿಳಿಯಬಹುದು ಎಂದರೆ ಹೇಳುತ್ತಾರೆ. **ಯತ್** - ಎಂದರೆ, **ಜ್ಞಾನಂ** - ಯಾವ ಆತ್ಮ ಯಾಥಾತ್ಮ್ಯ ಜ್ಞಾನವನ್ನು, **ಜ್ಞಾತ್ವಾ**- ತಿಳಿದು, **ಪುನಃ ಏವಂ** ಎಂದರೆ, **ದೇಹಾದ್ಯಾತ್ಮಾಭಿ ಮಾನರೂಪಂ** - ಈಗ ನೀನು ಯುದ್ಧ

ಭಾ. ಮನುತಾದ್ಯಾಸ್ಪದಂಚ ಮೋಹಂ ನ ಯಾಸ್ಯಸಿ, ಯೇನಚ ದೇವಮನುಷ್ಯಾದ್ಯಾಕಾರೇಣಾನುಸಂಹಿತಾನಿ ಸರ್ವಾಣಿ ಭೂತಾನಿ ಸ್ವಾತ್ಮನ್ಯೇವ ದ್ರಕ್ಷ್ಯಸಿ ; ಯತಸ್ತ್ವಾನ್ಯೇಷಾಂಚ ಭೂತಾನಾಂ ಪ್ರಕೃತಿ ವಿಯುಕ್ತಾನಾಂ ಜ್ಞಾನೈಕಾಕಾರತಯಾ ಸಾಮ್ಯಂ, ಪ್ರಕೃತಿ ಸಂಸರ್ಗ ದೋಷ ವಿನಿರ್ಮುಕ್ತ ಮಾತ್ಮಸ್ವರೂಪಂ ಸರ್ವಂ ಸಮಮಿತಿ ಚ ವಕ್ಷ್ಯತೇ-

---

ಮಾಡುವದಿಲ್ಲವೆಂದು ಗಾಂಡೀವವನ್ನು ಕೆಳಗೆ ಹಾಕಿ ತಟಸ್ಥನಾಗಿ ದೇಹವೇ ಮೊದಲಾದವುಗಳಲ್ಲಿ, ಆದಿ ಶಬ್ದದಿಂದ ಇಂದ್ರಿಯ, ಮನಸ್ಸು, ಪ್ರಾಣಾದಿಗಳು, ಹೇಳಲ್ಪಟ್ಟವು. ಇವುಗಳಲ್ಲಿ ಆತ್ಮಾ ಎಂಬ ಅಭಿಮಾನರೂಪವಾದ, ಮತ್ತು, ತತ್ಕೃತಂ – ಅವರಿಂದುಂಟಾದ, ಮಮತಾದ್ಯಾಸ್ಪದಂಚ - ಮಮತೆಯೇ ಮೊದಲಾದವುಗಳಿಗೆ ಕಾರಣವಾದ, ಮೋಹವನ್ನು, ನಯಾಸ್ಯಸಿ – ಹೊಂದುವದಿಲ್ಲವು. ಯೇನಚ - ಮತ್ತು ಯಾವ ಈ ಆತ್ಮಯಾಥಾತ್ಮ್ಯ ಜ್ಞಾನಮೂಲಕವಾಗಿಯೇ, ದೇವ ಮನುಷ್ಯಮೊದಲಾದ ಆಕಾರದಿಂದ ತೋರುವ, ಸರ್ವಾಣಿ ಭೂತಾನಿ-ಸಮಸ್ತ ಚೇತನರನ್ನೂ, ಇದು ಅಶೇಷೇಣ ಎಂದು ಮೂಲದಲ್ಲಿರುವದರ ತಾತ್ಪರ್ಯವು, ಸ್ವಾತ್ಮನ್ಯೇವ ದ್ರಕ್ಷ್ಯಸಿ - ನಿನ್ನ ಆತ್ಮಾವಿನಲ್ಲೇ ನೋಡುವಿ, ಎಂದರೆ ನಿನ್ನ ಆತ್ಮಾ ಹೇಗೆ ಜ್ಞಾನ ಸ್ವರೂಪವೋ, ಜ್ಞಾನ ಗುಣವನ್ನೂ ಹೊಂದಿದೆಯೋ, ಹಾಗೆಯೇ ಇತರ ಜೀವಾತ್ಮರೂ ಸಹ ಎಂಬ ಭಾವವು. ಹೀಗೆ ಜ್ಞಾನಾಕಾರತೆಯಿಂದ ಎಲ್ಲಾ ಜೀವಾತ್ಮರೂ ಸಮವು ಎಂಬ ತಾತ್ಪರ್ಯವನ್ನು ಸ್ಥಾಲೀಪುಲಾಕನ್ಯಾಯದ ಪ್ರಕಾರ ಗ್ರಹಿಸಬಹುದು. ಅನ್ನವೆಲ್ಲಾ ಬೆಂದಿವೆಯೋ ಎಂದು ತಿಳಿಯಲು ಕೆಲವು ಅಗಳನ್ನು ಹಿಸಿಕಿ ಹೇಗೆ ತಿಳಿಯಬಹುದೋ ಹಾಗೆ ಎಂಬ ಭಾವವು. ಈ ಅಭಿಪ್ರಾಯವು ಮುಂದೆ ಗೀ. ೫. ೧೮ ರಲ್ಲಿ "ವಿದ್ಯಾವಿನಯಸಂಪನ್ನೇ" ಎಂಬ ಶ್ಲೋಕದಲ್ಲಿ ತನ್ನ ಆತ್ಮಾ ಹೇಗೆ ಜ್ಞಾನಾಕಾರವುಳ್ಳದೋ ಹಾಗೆಯೇ ಎಲ್ಲಾ ಆತ್ಮರುಗಳೂ ಭಿನ್ನಭಿನ್ನಗಳಾದ ಶರೀರವನ್ನು ಹೊಂದಿದ್ದರೂ ಅಂತಹ ಜ್ಞಾನೈಕಾಕಾರತೆಯಿಂದ ಸಮವೆಂದು ಹೇಳಲ್ಪಡುತ್ತದೆ. ಇದನ್ನೇ ಮುಂದಿನ ವಾಕ್ಯದಿಂದ ವಿಶದೀಕರಿಸುತ್ತಾರೆ.—ಯತಃ - ಯಾವ ಕಾರಣದಿಂದ, ತವ-ನಿನ್ನ, ಅನ್ಯೇಷಾಂ ಚ - ಮತ್ತು ಇತರವಾದ, ಭೂತಾನಾಂ - ಅಚಿತ್ಸಂಬಂಧ ಹೊಂದಿದ ಚೇತನರುಗಳಿಗೆಲ್ಲಾ, ಪ್ರಕೃತಿ ವಿಯುಕ್ತಾನಾಂ - ಪ್ರಕೃತಿಯಿಂದ ಬಿಡಲ್ಪಟ್ಟವರಾಗಲಾಗಿ, ಜ್ಞಾನೈಕಾಕಾರತಯಾ-ಒಂದೇ ವಿಧವಾದ,ಜ್ಞಾನಸ್ವರೂಪಾದಿಗಳನ್ನು ಹೊಂದಿರುವದರಿಂದ, ಸಾಮ್ಯಂ ವಕ್ಷ್ಯತೇ-ಸಮಭಾವವು ಹೇಳಲ್ಪಡುತ್ತದೆ. ಚೇತನರುಗಳಿಗೆ ಪ್ರಾರಬ್ಧ ಕರ್ಮಾನುಗುಣವಾಗಿ ಶರೀರ ಪ್ರಾಪ್ತಿಯುಂಟಾಗಿರುವದರಿಂದ ಅವರುಗಳ ಜ್ಞಾನದಲ್ಲಿ ವಿಶೇಷ ವ್ಯತ್ಯಾಸವು ತೋರಬರುತ್ತದೆ. ಒಬ್ಬನು ಬಹಳ ಮೇಧಾವಿಯಾಗಿರುವನು ; ಇನ್ನೊಬ್ಬನು ಬಹು ದಡ್ಡನಾಗಿರುವನು. ಆದರೆ ಉಪಾಯಾನುಷ್ಠಾನವನ್ನು ಮಾಡಿದ ಪ್ರಪನ್ನನು ದೇಹಾವಸಾನವಾದನಂತರವೂ ಸೂಕ್ಷ್ಮದೇಹಯಲ್ಲಿ ಇಂದ್ರಿಯ ಮನಃಪ್ರಾಣಗಳೊಂದಿಗೆ ಹೋಗಿ ಅರ್ಚಿರಾದಿ ಮಾರ್ಗವನ್ನು ಸೇರುವನು. ಅಲ್ಲಿ ಆ ದೇವತೆಗಳಿಂದ ಸತ್ಕೃತನಾಗಿ ವಿರಜೆಯಲ್ಲಿ ಅವಗಾಹನವಮಾಡಿದ ಒಡನೆಯೇ ಆ ಸೂಕ್ಷ್ಮಪ್ರಾಕೃತ ಶರೀರವೆಲ್ಲಾ ಹೋಗಿ ತನ್ನ ನೈಜವಾದ ಜ್ಞಾನಸ್ವರೂಪದಿಂದ ಪ್ರಕಾಶಿಸುವನು. ಆ ಅವಸ್ಥೆಯಲ್ಲಿ ಎಲ್ಲಾ ಜೀವಾತ್ಮರೂ ಒಂದೇಯಾಗಿ ತೋರುವವೆಂಬ ಅಭಿಪ್ರಾಯವು. ಈಗ ಶರೀರವು ಪ್ರಾಪ್ತವಾಗಿರುವ ಅವಸ್ಥೆಯಲ್ಲೂ ಜ್ಞಾನಸ್ವರೂಪದಲ್ಲೇನೂ ವ್ಯತ್ಯಾಸವಿಲ್ಲವು. ಆದರೆ ಸ್ವಭಾವವು ವ್ಯತ್ಯಸ್ತವಾಗಿರುವದರಿಂದ ಅದು ವ್ಯಕ್ತವಲ್ಲವು. ವಜ್ರವು ಕೆಸರಿನಲ್ಲಿ ಬಿದ್ದಾಗ ಹೇಗೆ ಪ್ರಕಾಶಿಸುವದಿಲ್ಲವೋ ಹಾಗೆ. ಈ ಆತ್ಮಯಾಥಾತ್ಮ್ಯಜ್ಞಾನದಿಂದ ಈ ಅಭಿಪ್ರಾಯವು ಉಂಟಾಗುತ್ತದೆಂಬುದು ಮುಖ್ಯ ತಾತ್ಪರ್ಯವು. ಹೀಗೆ ಎಲ್ಲಾ ಜೀವಾತ್ಮರೂ ಸ್ವರೂಪತಃ

ಭಾ. (೧)"ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ" ಇತಿ. ಅಥೋ ಮಯಿ ಸರ್ವಭೂತಾನ್ಯಶೇಷೇಣ ದ್ರಕ್ಷ್ಯಸಿ, ಮತ್ಸ್ವರೂಪ ಸಾಮ್ಯಾತ್ ಪರಿಶುದ್ಧಸ್ಯ

ಸಮವೆಂಬುದಕ್ಕೆ ಪ್ರಮಾಣವಾಗಿ, ಮುಂದಿನ ಅಧ್ಯಾಯದಲ್ಲೇ ಉಪದೇಶಿಸಲ್ಪಡುತ್ತದೆಂದು ತಿಳಿಸುತ್ತಾರೆ. ಪ್ರಕೃತಿ ಸಂಸರ್ಗದೋಷ ವಿನಿರ್ಮುಕ್ತಂ - ಪ್ರಕೃತಿಯ ಸಂಬಂಧರೂಪ ದೋಷದಿಂದ ಬಿಡಲ್ಪಟ್ಟ, ಆತ್ಮಸ್ವರೂಪವನ್ ಸರ್ವಸ್ - ಸಮಸ್ತ ಜೀವಾತ್ಮರ ಸ್ವರೂಪವು, ಸಮಮಿತಿ - ಸಮವಾದುದೆಂದು, ವಕ್ಷ್ಯತೇ - ಈ ಮುಂದಿನ ಪ್ರಮಾಣದಲ್ಲಿ ಹೇಳಲ್ಪಡುತ್ತದೆ. ಹೇಗೆಂದರೆ, "ನಿರ್ದೋಷಂ ಹಿ ಸಮಂ ಬ್ರಹ್ಮ"-ಆತ್ಮವಸ್ತುವು ಪ್ರಕೃತಿ ಸಂಬಂಧರೂಪ ದೋಷವಿಲ್ಲದುದಾದರೆ ಬ್ರಹ್ಮಶಬ್ದವಾಚ್ಯವಾಗಿ, ಸಮಂ - ಜ್ಞಾನೈಕಾಕಾರತೆಯಿಂದ ಎಲ್ಲವೂ ಸಮವು, ತಸ್ಮಾದ್ಬ್ರಹ್ಮಣಿ ತೇಸ್ಥಿತಾಃ - ಹೀಗೆ ಆತ್ಮರುಗಳ ಸಮತ್ವರೂಪ ಅನುಸಂಧಾನವಿರುವದರಿಂದಲೇ, ಅವರುಗಳು ಬ್ರಹ್ಮಣಿಸ್ಥಿತಾಃ ಎಂದು ಹೇಳಿಸಿಕೊಳ್ಳುವರು, ಬ್ರಹ್ಮಣಿಸ್ಥಿತಿ ಎಂಬುದೇ ಸಂಸಾರ ಜಯವು ಇತಿವಕ್ಷ್ಯತೇ ಎಂದು ಮುಂದೆ ಹೇಳಲ್ಪಡುತ್ತದೆ. ಹೀಗೆ ಜೀವಾತ್ಮರುಗಳೆಲ್ಲಾ ಜ್ಞಾನೈಕಾಕಾರತೆಯಿಂದ ಸಮವೆಂಬ ಅನುಸಂಧಾನವಿರುವವರೇ ಮುಕ್ತರಿಗೆ ಸಮಾನರು ಎಂಬ ಭಾವವು. ಜ್ಞಾನೈಕಾಕಾರತೆಯಿಂದ ಅಥೋಮಯಿ - ಅನಂತರದಲ್ಲಿ ನನ್ನಲ್ಲೂ ಸಹ, ಸರ್ವಭೂತಾನ್ಯಶೇಷೇಣ - ದೇವಮನುಷ್ಯಾದ್ಯಾಕಾರದಿಂದಿರುವ ಸಮಸ್ತ ಚೇತನರನ್ನೂ, ದ್ರಕ್ಷ್ಯಸಿ - ನೋಡುವಿ. ಪರಸ್ಪರ ನಿಮ್ಮಲ್ಲಿ ಪ್ರಕೃತಿ ವಿಯುಕ್ತದೆಶೆಯಲ್ಲಿ ಹೇಗೆ ಸಮತ್ವವನ್ನು ನೋಡುವಿರೋ, ಹಾಗೆಯೇ ಮುಕ್ತದೆಶೆಯಲ್ಲಿ ಆ ಜ್ಞಾನೈಕಾಕಾರತೆಯಿಂದ ನನ್ನಲ್ಲೂ ಸಹ ಸಮಭಾವವನ್ನು ನೋಡುವಿ ಎಂದರೆ ಹೊಂದುವಿ ಎಂಬರ್ಥವು. ಹೀಗೆ ಪೃಥಕ್ಕರಿಸಿ ಹೇಳಿರುವದರಿಂದ, ಅದ್ವೈತಿಗಳ ಸ್ವರೂಪೈಕ್ಯಭಾವಕ್ಕೆ ಅನುಕೂಲವಿಲ್ಲವು. ಜೀವಾತ್ಮರುಗಳೆಲ್ಲಾ ಪ್ರಕೃತಿ ಮೂಲಕ ಉಂಟಾದ ಉಪಾಧಿಯು ತೊಲಗಿದರೆ ಎಲ್ಲರೂ ಪರಸ್ಪರಭಿನ್ನರಾದರೂ ಉಪಾಧಿ ನಿವೃತ್ತಿಯಿಂದ ಎಲ್ಲರೂ ಪರಿಶುದ್ಧರಾಗಿ "ಸಂಪದ್ಯಾವಿರ್ಭಾವಃ ಸ್ವೇನಶಬ್ದಾತ್" ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವಹಾಗೆ ಜ್ಞಾನರೂಪವಾದ ಸ್ವಸ್ವರೂಪಾವಿರ್ಭಾವ ಉಂಟಾಗುವದರಿಂದ ಸಮವೆಂಬ ಭಾವವು.

"ಪುಮಾನ್ನದೇವೋ ನ ನರೋ ನ ಪಶುರ್ನಚ ಪಾದಪಃ ।
ಶರೀರಾಕೃತಿ ಭೇದಾಸ್ತು ಭೂಪೈತೇ ಕರ್ಮಯೋನಯಃ" ವಿ ಪು. ೨. ೧೩. ೯೮.

"ಈ ಜೀವಾತ್ಮನ, ಪುಮಾನ್ - ಜ್ಞಾನಸ್ವರೂಪನಾದುದರಿಂದ ಮಹಾ ಪರಿಶುದ್ಧನು, ಆತನು ದೇವನೂ ಅಲ್ಲವು, ಮನುಷ್ಯನೂ ಅಲ್ಲವು, ಪಶುವೂ ಅಲ್ಲವು, ವೃಕ್ಷವೂ ಅಲ್ಲವು; ಆದರೆ ಹೀಗೆಲ್ಲಾ ಜೀವನು ತೋರಿಬರುತ್ತಾನಲ್ಲ ಅದೇಕೆ ಎಂದರೆ ಆದಿ ಭರತರು ಕಾರಣವನ್ನು ಹೇಳುತ್ತಾರೆ—ಶರೀರಾಕೃತಿ ಭೇದಗಳು ತೋರಿಬರುವದೇನೋ ಸತ್ಯವು; ಆದರೆ ಭೂಪಾಲನಾದ ರಹೋಗಣನೇ, ಏತೇ - ಈ ಶರೀರಗಳೆಲ್ಲವೂ, ಕರ್ಮಯೋನಯಃ - ಕರ್ಮಮೂಲಕ ಉಂಟಾಗತಕ್ಕವು" ಹಾಗೆಯೇ (೨) "ಯದಾತು ಶುದ್ಧಂ ನಿಜರೂಪಿ ಸರ್ವ ಕರ್ಮಕ್ಷಯೇ ಜ್ಞಾನ ಮಪಾಸ್ತದೋಷಮ್" ಈ ಜ್ಞಾನೈಕಾಕಾರವಾದ ಆತ್ಮವಸ್ತುವು ದೇವ ಮನುಷ್ಯಾದಿ ಆಕಾರದಿಂದ, ವಿವಿಧವೆಂಬ ಮೋಹಜ್ಞಾನವನ್ನುಂಟುಮಾಡುವ ಸಮಸ್ತಕರ್ಮವೂ ನಾಶವಾದನಂತರ ಎಂದರೆ ಪ್ರಕೃತಿ ವಿಯೋಗವಾದನಂತರ ನಿರ್ದೋಷನಾಗಿ ಪರಿಶುದ್ಧನಾಗಿ ತನ್ನ ನೈಜವಾದ ಸ್ವರೂಪದಿಂದ ಕಂಗೊಳಿಸುವನು ಎಂದು ಇಲ್ಲಿ ಹೇಳಲ್ಪಟ್ಟಿರುತ್ತದೆ. ಹಾಗೆಯೇ

(೧) ಗೀ. ೫. ೧೯. (೨) ವಿ. ಪು. ೨. ೧. ೨೪.

ಭಾ. ಸರ್ವಸ್ಯಾತ್ಮವಸ್ತುನಃ; (೧) "ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ" ಇತಿ ಹಿ ವಕ್ಷ್ಯತೇ. ತಥಾ (೨) "ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" ಇತ್ಯೇವ ಮಾದಿಷು ನಾನುರೂಪ ವಿನಿರ್ಮುಕ್ತಸ್ಯಾತ್ಮ

"ನಾಯಂ ದೇವೋ ನ ಮರ್ತ್ಯೋ ವಾ ನ ತಿರ್ಯಕ್ ಸ್ಥಾವರೋಽಪಿ ವಾ ।
ಜ್ಞಾನಾನಂದ ಮಯಸ್ತ್ವಾತ್ಮಾ ಶೇಷೋ ಹಿ ಪರಮಾತ್ಮನಃ ॥"

ಈ ಜೀವಾತ್ಮನು ದೇವನೂ ಅಲ್ಲವು, ಮನುಷ್ಯನೂ ಅಲ್ಲವು, ತಿರ್ಯಗ್ಜಂತುವೂ ಅಲ್ಲವು, ವೃಕ್ಷವೂ ಅಲ್ಲವು, ಈತನು ಸ್ವಯಂ ಪ್ರಕಾಶವಾದ ಧರ್ಮಭೂತಜ್ಞಾನದಿಂದ ಎಲ್ಲವನ್ನೂ ವ್ಯಾಪಿಸುವದರಿಂದ ಆತ್ಮಾ ಎಂದು ಹೇಳಿಸಿಕೊಳ್ಳುವನು, ದೇವ ಮನುಷ್ಯಾದಿ ಶರೀರಗಳಂತಾಗೆ ಜಡವಲ್ಲದೆ ಜ್ಞಾನಾನಂದಮಯನು, ಪರಮಾತ್ಮನಿಗೇನೇ ಶೇಷಭೂತನು" ಎಂದೂ ಹೇಳಲ್ಪಟ್ಟಿರುತ್ತದೆ.

ಯಾವಾಗ ಎಲ್ಲಾ ಜೀವಾತ್ಮರುಗಳೂ ಪ್ರಕೃತಿ ವಿಯುಕ್ತದಶೆಯಲ್ಲಿ ಸಮರಾಗಿ ಸ್ವಯಂ ಪ್ರಕಾಶರಾಗಿ ಜ್ಞಾನೈಕಾಕಾರತೆಯಿಂದ ಪರಸ್ಪರ ಸಮರೆಂಬ ಜ್ಞಾನ ತನಗೆ ಉಂಟಾಯಿತೋ, ಅನಂತರ ತಾನೂ, ಇತರ ಜೀವಾತ್ಮರೂ ಸಹ ಪರಮಾತ್ಮನಿಗೆ ಈ ಜ್ಞಾನೈಕಾಕಾರತೆಯಿಂದ ಸಮರೆಂಬ ಜ್ಞಾನ ಉಂಟಾಗುತ್ತದೆಂದು ತಿಳಿಸುವದಕ್ಕಾಗಿ ಭಾಷ್ಯದಲ್ಲಿ, "ಅಥೋ ಮಯಿ ಸರ್ವಭೂತಾನ್ಯ ಶೇಷೇಣ ದ್ರಕ್ಷ್ಯಸಿ" ಎಂದು ಹೇಳಲ್ಪಟ್ಟಿರುತ್ತದೆ; ಈ ಸಮಸ್ತ ಜೀವಾತ್ಮರುಗಳನ್ನೆಲ್ಲಾ ನನಗೆ ಸಮರೆಂದು ನೋಡುವಿ.' ಏಕೆಂದರೆ ಹೇಳುತ್ತಾರೆ, ಮತ್ಸ್ವರೂಪಸಾಮ್ಯಾತ್ ಪರಿಶುದ್ಧಸ್ಯ ಸರ್ವಸ್ಯಾತ್ಮವಸ್ತುನಃ-ಪ್ರಕೃತಿಯಿಂದ ಬಿಡಲ್ಪಡುವದರ ಮೂಲಕ ಪರಿಶುದ್ಧವಾದ ಸಮಸ್ತ ಆತ್ಮವಸ್ತುವೂ ನನ್ನ ಸ್ವರೂಪಕ್ಕೂ ಸಮವಾಗಿರುವದರಿಂದ. ಹಾಗೆ ಎಲ್ಲಿ ಹೇಳಿದೆ? ಪ್ರಮಾಣವುಂಟೋ? ಎಂದರೆ ಮುಂದೆ ಹೇಳಲ್ಪಡುತ್ತದೆಂದು ತಿಳಿಸುತ್ತಾರೆ:—(೧) "ಇದಂ ಜ್ಞಾನಂ - ಈ ಮುಂದೆ ಹೇಳುವ ಜ್ಞಾನವನ್ನು, ಎಂದರೆ ಭಕ್ತಿಯೋಗವನ್ನು ಉಪಾಶ್ರಿತ್ಯ-ಆಶ್ರಯಿಸಿ. ಮಮ ಸಾಧರ್ಮ್ಯಂ-ಗುಣಾಷ್ಟಕಗಳೊಂದಿಗೆ ಸೇರಿದ ಜ್ಞಾನಸ್ವರೂಪದಿಂದ ನನಗೆ ಸಮಾನವಾದ ಧರ್ಮವನ್ನು, ಆಗತಾಃ-ಹೊಂದುವರು" ಎಂ , ಇತಿ ಹಿ ವಕ್ಷ್ಯತೇ - ಎಂದಲ್ಲವೇ ಮುಂದೆ ಹೇಳಲ್ಪಡುತ್ತದೆ. ಮುಂದೆ ಶ್ರುತಿ ಪ್ರಮಾಣವನ್ನು ಉದಾಹರಿಸುತ್ತಾರೆ—"ತದಾ - ಯಾವಾಗ ಉಪಾಸಕನಿಗೆ ದೇದೀಪ್ಯಮಾನನಾದ ಪರಮ ಪುರುಷನನ್ನು ಸಾಕ್ಷಾತ್ಕರಿಸುವ ಯೋಗನಿಷ್ಪತ್ತಿಯುಂಟಾಯಿತೋ ಆಗ, ವಿದ್ವಾನ್ - ಉಪಾಸಕನು, ಪುಣ್ಯಪಾಪೇ ವಿಧೂಯ - ಪುಣ್ಯಪಾಪಗಳೆರಡನ್ನೂ ಕೊಡವಿಕೊಂಡವನಾಗಿ, ಎಂದರೆ ಕಳೆದುಕೊಂಡವನಾಗಿ, ನಿರಂಜನಃ – ಪ್ರಕೃತಿ ಸಂಬಂಧರೂಪ ದೋಷರಹಿತನಾಗಿ, ಪರಮಂ ಸಾಮ್ಯಂ ಉಪೈತಿ-ಉಚ್ಚ್ರಾದ ಸಮಭಾವವನ್ನು ಎಂದರೆ ಉಚ್ಚ್ರಾದ ಸಾದೃಶ್ಯವನ್ನು, ಹೊಂದುವನು; ಇದರಿಂದ ಸ್ವರೂಪೈಕ್ಯವೆಂಬ ಭಾವವು ವ್ಯಾವರ್ತಿಸಿ ಹೇಳಲ್ಪಟ್ಟಿತು. ಯಾವಾಗ ಎರಡು ವಸ್ತುಗಳು ಸಮವೆಂದು ಹೇಳಲ್ಪಟ್ಟಿತೋ, ಆಗ ಅವು ಎರಡೂ ಕೆಲವು ಧರ್ಮಗಳಲ್ಲಿ ಮಾತ್ರ ಸಮವೆಂದೂ, ಮಿಕ್ಕ ಧರ್ಮಗಳಲ್ಲಿ ಸಮವಲ್ಲವೆಂದೂ ಹೇಳಿದಂತಾಯಿತು. ಜೀವಾತ್ಮನಿಗೂ ಪರಮಾತ್ಮನಿಗೂ ಸಾಮ್ಯವು ಜ್ಞಾನೈಕಾಕಾರತೆಯಲ್ಲಿಯಾದುದರಿಂದ, ಪರಮಂ ಸಾಮ್ಯಂ - ಎಂದು ಹೇಳಲ್ಪಟ್ಟಿತು; ಸೂತ್ರಕಾರರು ಯಾವ ಸಂದರ್ಭದಲ್ಲಿ ಸಾಮ್ಯವಿಲ್ಲವೆಂಬುದನ್ನು, ಜಗದ್ವ್ಯಾಪಾರವರ್ಜಮ್ ಇತ್ಯಾದಿ ಸೂತ್ರಗಳಿಂದ ವ್ಯಕ್ತಪಡಿಸಿರುತ್ತಾರೆ. ಆದುದರಿಂದ ಇಂತಹ ಸ್ಥಳಗಳಲ್ಲಿ ಅದ್ವೈತಾಭಿಪ್ರಾಯವು ಸಮಂಜಸವಾಗಲು ಶಕ್ಯವಿಲ್ಲ; ಮಮ ಸಾಧರ್ಮ್ಯಮ್ ಎಂಬುದರಿಂದ ನನಗೆ ಸಮಾನವಾದ ಧರ್ಮವುಳ್ಳವರಾಗುತ್ತಾರೆಂದು ಹೇಳಲ್ಪ

(೧) ಗೀ. ೧೪. ೨. (೨) ಮು. ಉ. ೩. ೧. ೩.

**ಭಾ. ವಸ್ತುನಃ ಪರಸ್ವರೂಪ ಸಾಮ್ಯಮವಗಮ್ಯತೇ; ಅತಃ ಪ್ರಕೃತಿ ವಿನಿರ್ಮುಕ್ತಂ ಸರ್ವ ಮಾತ್ಮವಸ್ತು ಪರಸ್ಪರಂ ಸಮಂ, ಸರ್ವೇಶ್ವರೇಣ ಚ ಸಮಮ್ ॥ ೩೫ ॥**

ಟ್ಟತೇ ವಿನಾ ಸ್ವರೂಪೈಕ್ಯವೇಂದು ಅರ್ಥಹೇಳಲು ಸಾಧ್ಯವೇ ಇಲ್ಲವು. ಇದೂ ಅಲ್ಲದೆ ಪರಮಾತ್ಮನೂ ಧರ್ಮಯುಕ್ತನೆಂದು ಹೇಳುವವರಿಂದ ಪರಬ್ರಹ್ಮವು ನಿರ್ವಿಶೇಷವೆಂಬ ವಾದಕ್ಕೆ ಇಲ್ಲಿ ಅನುಕೂಲವಿಲ್ಲವು. ಇಂತಹ ಪರಮ ಸಾದೃಶ್ಯವನ್ನು, **ಉಪೈತಿ** - ಹೊಂದುವನು" ಇತ್ಯೇವ **ಮಾದಿಷು** - ಎಂಬಿವೇ ಮೊದಲಾದ ಪ್ರಮಾಣಗಳಲ್ಲಿ, **ನಾಮರೂಪ ವಿನಿರ್ಮುಕ್ತಸ್ಯ** - ಪ್ರಕೃತಿ ಸಂಬಂಧವಿಲ್ಲದಿರುವದರಿಂದ ನಾಮರೂಪಗಳಿಲ್ಲದಿರುವ, **ಆತ್ಮವಸ್ತುನಃ** - ಜೀವಾತ್ಮನಿಗೆ, **ಪರಸ್ವರೂಪಸಾಮ್ಯಂ** - ಪರಮಾತ್ಮನ ಸ್ವರೂಪದ ಸಾದೃಶ್ಯವು, **ಅವಗಮ್ಯತೇ** - ತೋರಿಬರುತ್ತದೆ. ದಾಸತ್ವವೇ ಸ್ವರೂಪ ನಿರೂಪಕಧರ್ಮವಾಗಿ ಕರ್ಮವಶ್ಯರಾಗಿರುವ ಜೀವಾತ್ಮರುಗಳಿಗೆ ಹೇಗೆ ಪರಮಾತ್ಮ ಸಾಮ್ಯ'ನಿದರ್ಶನದಿಂದ ಸಮತ್ವವು ಕೂಡುತ್ತದೆ, ಎಂದರೆ **"ಮತ್ಸ್ವರೂಪ ಸಾಮ್ಯಾತ್ ಪರಿಶುದ್ಧಸ್ಯ ಸರ್ವಸ್ಯಾತ್ಮವಸ್ತುನಃ"** ಎಂದು ವಿವರಿಸಿ, ಪರಿಶುದ್ಧವಾದ ಸ್ವಾಭಾವಿಕವಾದ ಜ್ಞಾನಸ್ವರೂಪವುಳ್ಳವನಾಗಿ ನನ್ನ ಸ್ವರೂಪಕ್ಕೆ ಸದೃಶವಾದ ಸ್ವರೂಪವುಳ್ಳವನೆಂಬ ಹೇತು ಮೂಲಕ ಸಮಾಧಾನವನ್ನು ಹೇಳಿರುತ್ತಾರೆ. ಮುಂಡಕದಲ್ಲಿ **"ಯಥಾ ನದ್ಯಸ್ಸ್ಯಂದಮಾನಾಸ್ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ"** ಗಂಗಾ ಯಮುನಾ ಸರಸ್ವತೀ ನದಿಗಳು ಹೇಗೆ ಗಂಗಾ ಯಮುನಾದಿ ಹೆಸರುಗಳನ್ನೂ ಶುಕ್ಲಕೃಷ್ಣಾದಿರೂಪಗಳನ್ನೂ ಕಳೆದುಕೊಂಡು ಸಮುದ್ರದಲ್ಲಿ ಏಕೀಭವಿಸುತ್ತವೋ, ಹಾಗೆಯೇ ಪರಬ್ರಹ್ಮೋಪಾಸಕನೂ ಕೂಡ, ನಾಮರೂಪಗಳಿಂದ ಬಿಡಲ್ಪಟ್ಟವನಾಗಿ ಹಿಂದೆ **ಪರಾತ್ಪರಂ** ಎಂದು ನಿರ್ದೇಶಿಸಲ್ಪಟ್ಟ ಪರಮ ಪುರುಷನನ್ನು ಹೊಂದುವನು ಎಂಬುದು ಈ ಶ್ರುತ್ಯರ್ಥವು. ಇಲ್ಲಿ ಸ್ವರೂಪೈಕ್ಯವು ಹೇಳಲ್ಪಡಲಿಲ್ಲವು. ನದೀ ಜಲವೂ ಸಮುದ್ರ ಜಲವೂ ಪೃಥಕ್ಕಾಗಿಯೇ ಇದ್ದುಕೊಂಡೇ ಐಕ್ಯವು. ಇಲ್ಲಿ ಉಪಮಾ ಸಾದೃಶ್ಯವು ಎಷ್ಟರ ಮಟ್ಟಿಗೆ ಎಂದರೆ ನಾಮರೂಪ ವಿನಿರ್ಮುಕ್ತತೆಗೆ ಮಾತ್ರವೇ ಎಂದು ಭಾವಿಸತಕ್ಕದ್ದು. ಈ ಶ್ರುತಿಯನ್ನೇ ಮನಸ್ಸಿನಲ್ಲಿಟ್ಟು ಶ್ರೀ ಭಾಷ್ಯಕಾರರು ಇಲ್ಲಿ **"ನಾಮರೂಪ ವಿನಿರ್ಮುಕ್ತಸ್ಯಾತ್ಮವಸ್ತುನಃ"** ಎಂದು ಪ್ರಯೋಗಿಸಿ,, **ಅಥೋಮಯಿ** ಎಂದು ಮೂಲದಲ್ಲಿರುವದಕ್ಕೆ ಅರ್ಥವನ್ನು ಉಪಪಾದಿಸಿರುತ್ತಾರೆ. ಹೀಗೆ ಶ್ರುತಿ ಸ್ಮೃತಿಗಳ ಅಭಿಪ್ರಾಯವೆಲ್ಲಾ ಒಂದೇಯಾಗಿರುವದರಿಂದ, ಮುಂದೆ **ಅತಃ** ಎಂದಾರಂಭಿಸಿ ಈ ಶ್ಲೋಕದ ಮುಖ್ಯಾಭಿಪ್ರಾಯವನ್ನು ಉಪದೇಶಿಸುತ್ತಾರೆ.— **ಅತಃ** - ಆ ಕಾರಣದ ದೆಸೆಯಿಂದ," **ಪ್ರಕೃತಿ ವಿನಿರ್ಮುಕ್ತಂ ಸರ್ವಂ ಆತ್ಮವಸ್ತು**"- ಪ್ರಕೃತಿಸಂಬಂಧದಿಂದ ಬಿಡಲ್ಪಟ್ಟ ಸಮಸ್ತ ಜೀವಾತ್ಮ ವರ್ಗವೂ, **ಪರಸ್ಪರಂ ಸಮಂ** - ಒಂದಕ್ಕೊಂದು ಸಮನಾದುದು; **ಸರ್ವೇಶ್ವರೇಣ ಚ** - ಸರ್ವೇಶ್ವರನೊಂದಿಗೂ ಸಹ, **ಸಮಂ**-ಸಮನಾದುದು; ಪ್ರಾಕೃತ ಶರೀರಗಳು ತೊಲಗಿದ ಅವಸ್ಥೆಯಲ್ಲಿ ಜ್ಞಾನಸ್ವರೂಪರಾಗಿ, ಜ್ಞಾನ ಗುಣಕರಾಗಿ, ಎಲ್ಲಾ ಜೀವಾತ್ಮರೂ ಪರಸ್ಪರ ಸಮರೆಂದೂ, ಹಾಗೆಯೇ ಸರ್ವೇಶ್ವರನೂ ಜ್ಞಾನಸ್ವರೂಪನಾಗಿ ಜ್ಞಾನಗುಣಕನಾಗಿರುವದರಿಂದ ಆತನೊಂದಿಗೂ ಸಮರೆಂದು ಹೇಳಲ್ಪಟ್ಟಿತು. ಮುಕ್ತಾವಸ್ಥೆಯಲ್ಲಿ ಯಾವಾಗ ಎಲ್ಲಾ ಜೀವಾತ್ಮರೂ ಪರಮಾತ್ಮನಿಗೆ ಸಮವೆಂದು ಶ್ರುತಿಯಲ್ಲಿ ಹೇಳಲ್ಪಟ್ಟರೋ ಆಗ ಎಲ್ಲಾ ಜೀವಾತ್ಮರೂ ಪರಸ್ಪರ ಸಮರೆಂದೂ ಹೇಳಿದಂತಾಯಿತು ಎಂಬ ಭಾವವು. ಈ ಶ್ಲೋಕದಲ್ಲಿ ಪರಿಶುದ್ಧಾವಸ್ಥೆಯಲ್ಲಿ ತನ್ನ ಆತ್ಮವು ಇತರ ಆತ್ಮರುಗಳಿಗೂ ಸಮವೆಂದೂ, ಪರಮಾತ್ಮನಿಗೂ ಸಮನೆಂದೂ, ಹೀಗೆ ಬೇರೆಬೇರೆಯಾಗಿ ಹೇಳುವದರಿಂದ ಅದ್ವೈತವಾದಕ್ಕೆ ಈ ಶ್ಲೋಕವು ಅನು

ಮೂ. ಅಪಿಚೇದಸಿ ಪಾಪೇಭ್ಯಸ್ಸರ್ವೇಭ್ಯಃ ಪಾಪಕೃತ್ತಮಃ।
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬.

ಗೊಳಿಸುವದಿಲ್ಲವು. ಅಥೋ ಮಯಿ ಸರ್ವಭೂತಾನಿ ದ್ರಕ್ಷ್ಯಸಿ ಎಂಬುದರಿಂದ ಸರ್ವೇಶ್ವರನು ಸರ್ವಕ್ಕೂ ಆಧಾರವಾಗಿರುವ ಭಾವವು ಬೋಧಿಸಲ್ಪಟ್ಟಿತೆಂದು ಕೆಲವರು ಭಾವಿಸುವರು. ಇದರಿಂದ ಆದರ ಹಾಗೆ ಜೀವಾತ್ಮರಿಗೂ ಪರಸ್ಪರ ಆಧಾರಾಧೇಯತ್ವ ಉಂಟೆಂಬ ಭಾವವು ತೋರಿಬರುವದರಿಂದ ಆ ಅರ್ಥವು ಸಮಂಜಸವಾಗಿ ತೋರಿಬರುವದಿಲ್ಲವು. ಈ ಪ್ರಕರಣವು ಆತ್ಮಸ್ವರೂಪದ ಯಥಾರ್ಥ ಜ್ಞಾನ ವಿಷಯವಾದುದರಿಂದ, ತನ್ನಲ್ಲಿ ಇತರರ ದರ್ಶನವೆಂದರೆ, ಸರ್ವರೂ ಜ್ಞಾನಸ್ವರೂಪರಾಗಿ ಸಮರೆಂಬ ಅನುಸಂಧಾನವಿರಬೇಕೆಂದು ಭಾವಿಸತಕ್ಕದ್ದು. ॥೩೫॥

ಮೂಲಕ್ಕೆ ಅರ್ಥವು:—ಹಿಂದೆ ಆತ್ಮಸ್ವರೂಪದ ಯಥಾರ್ಥಜ್ಞಾನಕ್ಕೆ ಪ್ರಾಧಾನ್ಯವನ್ನೂ, ಕಾಲಕಾಲದಲ್ಲಿ ತತ್ವಜ್ಞರಿಂದ ಉಪದೇಶರೀತಿಯಲ್ಲಿ ಅದನ್ನು ಸತ್ವೋದ್ರೇಕದಿಂದ ಹೊಂದತಕ್ಕದ್ದೆಂಬುದನ್ನೂ, ಅದರ ಪರಿಪಾಕಾವಸ್ಥೆಯ ಲಕ್ಷಣವನ್ನೂ ಅರ್ಜುನನಿಗೆ ಉಪದೇಶಿಸಿದವರಾಗಿ ಈಗ ಆ ಜ್ಞಾನಕ್ಕೆ ವಿರೋಧಿ ನಿವೃತ್ತಿಯನ್ನುಂಟುಮಾಡುವ ಮಾಹಾತ್ಮ್ಯೆಯುಂಟೆಂದು ಹೊಗಳುತ್ತಾರೆ. ಸರ್ವೇಭ್ಯಃ ಪಾಪೇಭ್ಯಃ ಇಲ್ಲಿ ಪಾಪ ಶಬ್ದವು ಪಾಪವಿಶಿಷ್ಟ ಪುರುಷನನ್ನು ಬೋಧಿಸುತ್ತದೆ.ಸಮಸ್ತ ಪಾಪಿಷ್ಠರಿಗಿಂತ,ಪಾಪಕೃತ್ತಮಃ-ಅತಿಶಯವಾದ ಪಾಪಮಾಡಿದವನು, ಅಪಿಚೇದಸಿ ಒಂದುವೇಳೆ ಆಗಿದ್ದರೂ ಕೂಡ, ಸರ್ವಂ ವೃಜಿನಂ - ಈ ಸಮುದ್ರದಹಾಗೆ ಇರುವ ಸಮಸ್ತ ಪಾಪವನ್ನೂ, ಜ್ಞಾನಪ್ಲವೇನೈವ - ಜ್ಞಾನರೂಪವಾದ ನಾವೆಯಿಂದಲೇ, ಸಂತರಿಷ್ಯಸಿ-ದಾಟುವಿ. ಇಲ್ಲಿ ಪ್ಲವ ಶಬ್ದ ಸ್ವಾರಸ್ಯದಿಂದ ಈತನು ಮಾಡಿರುವ ಪಾಪಗಳೆಲ್ಲಾ ಒಂದು ಅಗಾಧ ಸಮುದ್ರವೆಂದೂ, ದಾಟಲು ತುಂಬಾ ದುಸ್ತರವಾಗಿದ್ದರೂ, ಈ ಜ್ಞಾನವೆಂಬ ಪ್ಲವದಿಂದ ಸುಲಭವಾಗಿ ದಾಟಬಹುದೆಂದೂ ಹೇಳಲ್ಪಟ್ಟಿತು. ನೀನು ಸಮಸ್ತ ಅಪರಾಧಿಗಳಿಗೂ ಹೆಚ್ಚಾದ ಅಪರಾಧಿಯಾಗಿ "ಅಪರಾಧಚಕ್ರವರ್ತಿ" ಯಾಗಿದ್ದರೂ ಕೂಡ ಪರಮಾತ್ಮಶೇಷತ್ವಾದಿ ಆತ್ಮ ಯಾಥಾತ್ಮ್ಯಜ್ಞಾನದಿಂದ ನೀನು ಪಾಪಗಳನ್ನೆಲ್ಲಾ ನೀಗಿಕೊಳ್ಳಲು ಸಾಧ್ಯವೆಂದು ಆ ಜ್ಞಾನದ ಮಾಹಾತ್ಮ್ಯೆಯನ್ನು ಉಪದೇಶಿಸಿದರು. ಈ ಶ್ಲೋಕದಲ್ಲಿ ಅರ್ಜುನನನ್ನು ಅಪಿಚೇತ್ ಪಾಪಕೃತ್ತಮಃ ಎಂದು ಹೇಳಿರುವದು ನ್ಯಾಯವೋ? ಎಂದರೆ ಸರಾವತಾರಿಯಾದ ಅರ್ಜುನನು ಎಂದಿಗೂ ಪಾಪಕೃತ್ತಮನಲ್ಲವು. ದುಷ್ಟರಾಗಿದ್ದರೂ ತನ್ನ ಬಂಧುಗಳನ್ನು ಸಂಹರಿಸಲಾರನೆಂದು ಪರಿತಾಪದಿಂದಿರುವವನು ಹೇಗೆ ಪಾಪಕೃತ್ತಮನಾದಾನು? ಸ್ವಾಮಿಯು ಸರ್ವಜ್ಞನಾಗಿರುವಾಗ ಆತನಿಗೆ ಪಾಪಕೃತ್ತಮನು ಹೌದೇ ಅಲ್ಲವೇ ಎಂಬುದು ತಿಳಿಯದೇ ಹೇಳಿದುದೂ ಅಲ್ಲವು. ಹಾಗೆ ಅಲ್ಲವೆಂದು ತಿಳಿದೂ,ಲೋಕ ಶಿಕ್ಷೆಗಾಗಿ ಆಡಿದ ಮಾತೇ ವಿನಾ ಅನ್ಯಥಾ ಇಲ್ಲವು. ಮುಂದೆ ಶ್ರೀಕೃಷ್ಣ ಭಗವಾನರವರೇ ಅರ್ಜುನನನ್ನು ಕುರಿತು "ಮಾಶುಚ ಸ್ಸಂಪದಂ ದೈವೀ ಮಭಿಜಾತೋಸಿ ಪಾಂಡವ" ದೇವೀ ಸಂಪತ್ತುಳ್ಳವನು ನೀನು ಎಂದು ಸಮಾಧಾನ ಮಾಡುವದರಿಂದ ಅರ್ಜುನನು ಪಾಪಕೃತ್ತಮನು ಎಂದಿಗೂ ಅಲ್ಲವು. ಆದುದರಿಂದ ಇಲ್ಲಿ ಅರ್ಥ ಹೇಗೆಂದರೆ:—ನೀನು ಎಂದಿಗೂ ಪಾಪಕೃತ್ತಮನಲ್ಲವು, ಒಂದುವೇಳೆ ಪಾಪಕೃತ್ತಮನಾಗಿದ್ದರೂಕೂಡ ಚಿಂತೆಯಿಲ್ಲವು, ಆಗಲೂ ಕೂಡ ಈ ಜ್ಞಾನವೆಂಬ ದೋಣಿಯು ಈ ಅನಾದಿಕಾಲದಿಂದಲೂ ಅನಂತವಾಗಿ ಮಾಡಿರುವ ಪಾಪಸಮುದ್ರವನ್ನೂ ದಾಟಿಸಬಲ್ಲದು ಎಂದು ಲೋಕ ಶಿಕ್ಷಣಾರ್ಥವಾಗಿ ಹೇಳಿದ ಅಮೋಘೋಕ್ತಿ ಎಂದು ಭಾವಿಸತಕ್ಕದ್ದು. ಈ ಅರ್ಥವು ಅಪಿಚೇತ್ ಎಂಬ ಪ್ರಯೋಗದಿಂದಲೇ ದ್ಯೋತಿತವು. ನಿಶ್ಚಯವಾಗಿಯೂ ಪಾಪಕೃತ್ತಮನಾಗಿದ್ದ ಪಕ್ಷದಲ್ಲಿ ಅಪಿಚೇತ್ ಶಬ್ದಗಳು ನಿರರ್ಥಕಗಳು. ಪೂರಾ ದಾಟದೆ ನಡುನೀರಿನಲ್ಲಿ ಕೈ

ಭಾ. ಯದ್ಯಪಿ ಸರ್ವೇಭ್ಯಃ ಪಾಪೇಭ್ಯಃ ಪಾಪಕೃತ್ತಮೋಽಸಿ, ಸರ್ವಂ ಪೂರ್ವಾರ್ಜಿತಂ ವೃಜಿನರೂಪಂ ಸಮುದ್ರಮಾತ್ಮವಿಷಯಜ್ಞಾನರೂಪಪ್ಲವೇನೈವ ಸಂತರಿಷ್ಯಸಿ॥೩೬॥

ಮೂ. ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥ ೩೭.

ಬಿಟ್ಟಹಾಗೆ ಏನಾದರೂ ನಿಲ್ಲಿಸಿ ಬಿಟ್ಟೀತೋ ಎಂಬ ಸಂದೇಹಕ್ಕೆ ಕಾರಣವೇ ಇಲ್ಲವೆಂದು **ಸಂತರಿಷ್ಯಸಿ** ಎಂಬಲ್ಲಿನ ಉಪಸರ್ಗದಿಂದ ವ್ಯಕ್ತಪಡುತ್ತದೆ. ಇಲ್ಲಿನ ಸಮ್ಯಕ್ ಎಂಬ ಉಪಸರ್ಗವು ಹಿಂದೆ ೩೪ ನೆಯ ಶ್ಲೋಕದಲ್ಲಿ "ತದ್ವಿದ್ಧಿ ಪ್ರಣಿಪಾತೇನ" ಎಂಬಲ್ಲಿ ಹೇಳಿದ ಶ್ಲೋಕಾರ್ಥವನ್ನು ಸೂಚಿಸಿ ಗುರೂಪಸದನ ಗುರೂಪದೇಶಗಳನ್ನು ಹೊಂದಿದ ಸುಕೃತಿಗೆ, **ಸಂತರಿಷ್ಯಸಿ** ಎಂದು ಹೇಳಿರುವುದು ನ್ಯಾಯವಾದುದೆಂಬುದೂ ಸ್ಥಾಪಿತವು. ಈ ಶ್ಲೋಕದಲ್ಲಿರುವ **ಪಾಪಕೃತ್** ಎಂಬ ಶಬ್ದವು **ಪುಣ್ಯಕೃತ್** ಎಂಬುದಕ್ಕೂ ಉಪಲಕ್ಷಣವು. ಪುಣ್ಯವು ಹೇಗೆ ಬಂಧಕವೋ ಪಾಪವೂ ಬಂಧಕವು. ಪುಣ್ಯವು ಸ್ವರ್ಗಾದಿ ಭೋಗವನ್ನುಂಟುಮಾಡಿ **ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶನ್ತಿ** ಎಂದು ಹೇಳಿರುವ ಹಾಗೆ ಪುನಃ ಈ ಲೋಕಕ್ಕೇ ಬರುವಹಾಗೆ ಮಾಡುತ್ತದೆ. ಪುನಃಪುನಃ ಜನ್ಮಗಳನ್ನೆತ್ತುವದಕ್ಕಾಗಲಿ ನರಕಪ್ರಾಪ್ತಿಗಾಗಲಿ ಕಾರಣವಾಗುತ್ತದೆ. ಆದುದರಿಂದ "**ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ**" ಎಂದು ಶ್ರುತಿಯು ಪುಣ್ಯಪಾಪಗಳೆರಡನ್ನೂ ಕಳೆದುಕೊಂಡವನಿಗೇ ಮೋಕ್ಷವೆಂದು ಹೇಳುತ್ತದೆ. ॥೩೬॥

**ಭಾಷ್ಯಾರ್ಥವು :—ಯದ್ಯಪಿ........ಪಾಪಕೃತ್ತಮೋಽಸಿ** - ಸಮಸ್ತವಾದ ಪಾಪಗಳ ದೆಸೆಯಿಂದ (ಹೇತ್ವರ್ಥದಲ್ಲಿ ಪಂಚಮಿ) ತುಂಬಾ ಪಾಪಿಷ್ಠನಾಗಿದ್ದರೂ ಇರಬಹುದು, ಅಥವಾ ಸಮಸ್ತ ಪಾಪಿಗಳಿಗಿಂತ ಹೆಚ್ಚು ಪಾಪಿಷ್ಠನಾಗಿದ್ದರೂ ಕೂಡ, **ಸರ್ವಂ** – ಸಮಸ್ತವಾದ ಎಂದರೆ, **ಪೂರ್ವಾರ್ಜಿತಂ** - ಹಿಂದೆ ಸಂಪಾದಿಸಿದ, **ವೃಜಿನರೂಪಂ ಸಮುದ್ರಂ** - ಪಾಪರೂಪ ಸಮುದ್ರವನ್ನು, **ಆತ್ಮವಿಷಯವಾದ ಜ್ಞಾನರೂಪವಾದ ನಾವೆಯಿಂದ, ಸಂತರಿಷ್ಯಸಿ** - ದಾಟುವಿ. ಮೂಲದಲ್ಲಿ "**ಜ್ಞಾನಪ್ಲವೇನ**" "**ಸಂತರಿಷ್ಯಸಿ**" ಎಂದು ಪ್ರಯೋಗಗಳಿರುವುದರಿಂದ, ಪಾಪವೆಂಬುದು ಅನಾದಿಯಾಗಿ ಪೂರ್ವಾರ್ಜಿತವಾಗಿ ಬೆಳೆದು ಅಪಾರವಾದ ಸಮುದ್ರದಹಾಗೆ ದಾಟಲಸಾಧ್ಯವಾಗಿದೆ ಎಂಬ ಭಾವವು ತೋರಿ ಬರುವುದರಿಂದ ಮೂಲದಲ್ಲಿಲ್ಲದಿದ್ದರೂ **ವೃಜಿನರೂಪಂ ಸಮುದ್ರಂ** ಎಂದು ವ್ಯಾಖ್ಯಾನಮಾಡಲ್ಪಟ್ಟಿತು. ಅಂತಹ ದುಸ್ತರವಾದ ಸಮುದ್ರವನ್ನು ದಾಟಿಸುವ ಮಹಾತ್ಮ್ಯೆಯುಳ್ಳದು, ಈ ಕರ್ಮಯೋಗದಲ್ಲಿ ಅಂತರ್ಗತವಾಗಿ ಆತ್ಮಸ್ವರೂಪದ ಯಥಾರ್ಥಜ್ಞಾನವೆಂಬ ದೋಣಿಯು ಎಂದು ಭಾವಿಸತಕ್ಕದ್ದು. ಇದನ್ನೇ ಜ್ಞಾನನಿಷ್ಠೆ ಆಚಾರನಿಷ್ಠೆಗಳಿರುವ ಸದ್ಗುರುಗಳಮೂಲಕ ಪದೇ ಪದೇ ಉಪದೇಶಮುಖೇನ ತಿಳಿಯಬೇಕೆಂದೂ ಹೇಳಲ್ಪಟ್ಟಿತು. ॥ ೩೬ ॥

**ಮೂಲಕ್ಕೆ ಅರ್ಥವು :**—ಹಿಂದೆ ಅನಾದಿಕಾಲ ಸಂಚಿತ ಪಾಪವನ್ನು ಒಂದು ಸಮುದ್ರಕ್ಕೆ ಹೋಲಿಸಿ, ಈ ಆತ್ಮವಿಷಯವಾದ ಜ್ಞಾನವು ಆ ಸಮುದ್ರವನ್ನು ದಾಟಿಸುವ ನಾವೆ ಎಂದು ಹೇಳಲ್ಪಟ್ಟಿತು. ಹಾಗೆ ಹೇಳಿದರೆ ಪಾಪ ನಾಶವನ್ನು ಹೇಳಿದಂತಾಗಲಿಲ್ಲವು. "**ನಾ ಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ**" "**ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ**" ಹೀಗೆಲ್ಲಾ ಹೇಳಿರುವುದರಿಂದ ಪುನಃ ವಿರೋಧಿಯಾಗಿ ಪರಿಣಮಿಸಲಾರದೋ ಎಂದರೆ ಹಾಗಲ್ಲವು. ಎಲ್ಲಾ ಪಾಪಗಳನ್ನೂ ಕ್ರಮೇಣ ಭಸ್ಮೀಭೂತವಾಗಿ ಮಾಡುವ ಶಕ್ತಿಯುಂಟೆಂದು ಹೇಳುತ್ತಾರೆ. **ಹೇ ಅರ್ಜುನ** - ಓ ಅರ್ಜುನನೇ, **ಯಥಾ** - ಹೇಗೆ, **ಸಮಿದ್ಧಃ** - ಚೆನ್ನಾಗಿ ಪ್ರಜ್ವಲಿಸುತ್ತಿ

ಭಾ. ಸಮ್ಯಕ್ಪ್ರವೃದ್ಧೋಽಗ್ನಿರಿನ್ಧನಸಂಚಯ ಮಿವಾತ್ಮಯಾಥಾತ್ಮ್ಯಜ್ಞಾನರೂಪೋಽಗ್ನಿರ್ಜೀವಾತ್ಮಗತ ಮನಾದಿಕಾಲಪ್ರವೃತ್ತಾನಂತಕರ್ಮಸಂಚಯಂ ಭಸ್ಮೀಕರೋತಿ ॥೩೭॥

ರುವ, ಅಗ್ನಿಃ - ಅಗ್ನಿಯು, ಏಧಾಂಸಿ - ಕಟ್ಟಿಗೆಗಳನ್ನು, ಭಸ್ಮಸಾತ್ಕುರುತೇ - ಭಸ್ಮೀಭೂತಗಳಾಗಿ ಮಾಡುತ್ತದೋ, ತಥಾ - ಹಾಗೆಯೇ, ಜ್ಞಾನಾಗ್ನಿಃ-ಈ ಆತ್ಮವಿಷಯಕವಾದ ಯಥಾರ್ಥಜ್ಞಾನವು, ಸರ್ವಕರ್ಮಾಣಿ - ಸಮಸ್ತ ಪುಣ್ಯಪಾಪರೂಪ ಕರ್ಮಗಳನ್ನೆಲ್ಲಾ, ಭಸ್ಮಸಾತ್ಕುರುತೇ-ಭಸ್ಮಮಾಡುತ್ತದೆ ಎಂದರೆ ಉಪಾಯಾನುಷ್ಠಾನಕ್ಕೆ ಹೇತುವಾಗುವಹಾಗೆ, ಸನಾಶನವಾಗಿ ನಾಶಮಾಡುತ್ತದೆಂಬ ಭಾವವು. ॥೩೭॥

ಭಾಷ್ಯಾರ್ಥವು :—ಸಮ್ಯಕ್ಪ್ರವೃದ್ಧೋಽಗ್ನಿಃ - ಚೆನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯು, ಇದು ಸಮಿದ್ಧೋಽಗ್ನಿಃ ಎಂಬುದರರ್ಥವು, ಇಂಧನ ಸಂಚಯಮಿವ - ಕಟ್ಟಿಗೆ ಸಮೂಹವನ್ನು ದಹಿಸುವಹಾಗೆ, ಏಧಾಂಸಿ ಎಂದು ಮೂಲದಲ್ಲಿ ಬಹುವಚನವಿರುವುದರಿಂದ, ಇಂಧನ ಸಂಚಯಂ-ಕಟ್ಟಿಗೆಯ ಸಮೂಹವೆಂದು ವ್ಯಾಖ್ಯಾನಮಾಡಿರುತ್ತಾರೆ; ಆತ್ಮಯಾಥಾತ್ಮ್ಯ ಜ್ಞಾನರೂಪವಾದ ಅಗ್ನಿಯು, ಜೀವಾತ್ಮಗತಂ - ಜೀವಾತ್ಮನನ್ನು ಹೊಂದಿದ, ಅನಾದಿ.......ಸಂಚಯಂ - ಅನಾದಿಕಾಲದಿಂದಲೂ ಅನುಸರಿಸಿಬಂದ ಪುಣ್ಯಪಾಪರೂಪ ಕರ್ಮಗಳ ಸಮೂಹವನ್ನು, ಭಸ್ಮೀಕರೋತಿ - ಭಸ್ಮವನ್ನು ಮಾಡುತ್ತದೆ. ಹಿಂದೆ ೧೯ನೆಯ ಶ್ಲೋಕದಲ್ಲಿ "ಜ್ಞಾನಾಗ್ನಿ ದಗ್ಧ ಕರ್ಮಾಣಂ" ಎಂದು ಸಂಗ್ರಹವಾಗಿ ಹೇಳಿದರ್ಥವೇ ಇಲ್ಲಿ ವಿಸ್ತರಿಸಲ್ಪಟ್ಟಿರುತ್ತದೆ. ಆದರೆ ಮೇಲೆ ಉದಾಹರಿಸಿದ "ನಾಭುಕ್ತಂ ಕ್ಷೀಯತೇ ಕರ್ಮ" ಎಂಬ ವಚನವು ಇಲ್ಲಿಗೆ ಅನ್ವಯಿಸುವದಿಲ್ಲವು. ಉಪಾಯಾನುಷ್ಠಾನಪ್ರಾಯಶ್ಚಿತ್ತಾದಿಗಳನ್ನಾಚರಿಸದೇ ಇರುವವನಿಗೆ ಅನ್ವಯಿಸುತ್ತದೇ ವಿನಾ ಕರ್ಮಯೋಗಭಕ್ತಿಯೋಗನಿಷ್ಠನಿಗೆ ಹೇಳಿದುದಲ್ಲವು. ಹಾಗಲ್ಲದೇ ಹೋದರೆ ಉಪಾಯ ಪ್ರಾಯಶ್ಚಿತ್ತಗಳನ್ನು ವಿಧಿಸುವ ಶಾಸ್ತ್ರಗಳಿಗೆ ವೈಯರ್ಥ್ಯವುಂಟಾಗುತ್ತದೆ. ಅಗ್ನಿಯಲ್ಲಿ ಕಾಷ್ಠಾದಿಗಳು ಭಸ್ಮವಾಗುವ ಹಾಗೆ ಮೋಕ್ಷೋಪಾಯನಿಷ್ಠನ ಪುಣ್ಯಪಾಪಗಳು ಭಸ್ಮವಾಗುತ್ತವೆ ಎಂಬುದು ಶ್ರುತಿಯಲ್ಲೂ ಪ್ರತಿಪಾದ್ಯವು :—"ಯಥೇಷೀಕಾ ತೂಲಮಗ್ನೌ ಪ್ರೋತಂ ಪ್ರದೂಯೇತ, ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ" ಎಂಬ ವಾಕ್ಯವು ಇಲ್ಲಿ ಅನುಸಂಧೇಯವು. ಈ ಅಭಿಪ್ರಾಯವು ೧೮-೬೬ನೆಯ ಗೀತಾ ಚರಮಶ್ಲೋಕದಲ್ಲಿ ಸ್ಫುಟವಾಗಿ ಹೇಳಲ್ಪಟ್ಟಿರುತ್ತದೆ. ಅರ್ಜುನನಿಗೆ ಸರ್ವಪಾಪಗಳಿಂದ ಬಿಡುಗಡೆಯು ಎಂದಿಗಾದರೂ ಉಂಟೇ ಎಂದು ಶೋಕಾಕ್ರಾಂತನಾಗಿರುವಾಗ, ಅಂತಹ ಸರ್ವ ಪಾಪಗಳಿಂದ ಬಿಡುಗಡೆಯನ್ನು ಹೊಂದಲು ಉಪಾಯಕ್ಕೆ ಅಂಗವಾಗಿ ಶರಣಾಗತಿಯು ವಿಧಿಸಲ್ಪಟ್ಟಿರುತ್ತದೆ. ॥೩೭॥

ಮೂಲಕ್ಕೆ ಅರ್ಥವು :—ಹಿಂದಿನ ಶ್ಲೋಕದಲ್ಲಿ ಲೋಕಸಿದ್ಧವಾದ ಅಗ್ನಿದೃಷ್ಟಾಂತದಿಂದ ಇಂತಹ ಜ್ಞಾನಾಗ್ನಿಯು ಸರ್ವ ಪುಣ್ಯಪಾಪಗಳನ್ನೂ ಭಸ್ಮಮಾಡುತ್ತದೆಂದು ಹೇಳಿದರು. ಅಗ್ನಿಯು ಕಣ್ಣಿಗೆ ಕಾಣುವ ಇಂಧನವನ್ನು ಸುಡುತ್ತದೆ. ಈ ಜ್ಞಾನಾಗ್ನಿಯಾದರೋ ಕಣ್ಣಿಗೆ ಕಾಣದ ಸರ್ವ ಪಾಪರಾಶಿಯನ್ನು ಭಸ್ಮಮಾಡುತ್ತದೆಯಾದುದರಿಂದ, ಈ ಜ್ಞಾನವು ಈ ಜೀವಾತ್ಮನನ್ನು ಪರಿಶುದ್ಧನನ್ನಾಗಿ ಮಾಡುತ್ತದೆ. ಅಶುದ್ಧ ಸುವರ್ಣವು ಅಗ್ನಿಯಲ್ಲಿ ಪರಿಶುದ್ಧತೆಯನ್ನು ಹೊಂದುವ ಹಾಗೆ ಈ ಆತ್ಮಯಾಥಾತ್ಮ್ಯಜ್ಞಾನದಿಂದ ಜೀವಾತ್ಮನು ಪರಿಶುದ್ಧನಾಗುವನಾದುದರಿಂದ, ಜ್ಞಾನಕ್ಕಿಂತಲೂ ಪವಿತ್ರೀಕರಿಸುವ ವಸ್ತುವು ಬೇರೆಯಿಲ್ಲವೆಂದು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಹಿಂದಿನ ಶ್ಲೋಕದಲ್ಲಿ ಆತ್ಮಯಾಥಾತ್ಮ್ಯಜ್ಞಾನವೆಂಬ ಅಗ್ನಿಯು ಪಾಪಗಳನ್ನೆಲ್ಲಾ ಸುಟ್ಟುಬಿಡುತ್ತದೆಂದು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಾದರೋ ಆತ್ಮನೇ ಸ್ವಯಂ ಪರಿಶುದ್ಧನಾದವನಾಗುತ್ತಾ

**ಮೂ. ನಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೇ ।**
**ತತ್ಸ್ವಯಂ ಯೋಗ ಸಂಸಿದ್ಧಃ ಕಾಲೇನಾತ್ಮನಿ ವಿನ್ದತಿ ॥ ೩೮.**

ನೆಂದು ಉಪದೇಶಿಸಲ್ಪಟ್ಟಿರುತ್ತದೆ. **ಜ್ಞಾನೇನ ಸದೃಶಂ**-ಈ ಆತ್ಮಯಾಥಾತ್ಮ್ಯಜ್ಞಾನಕ್ಕೆ ಸಮಾನ ವಾದುದಾಗಿ, **ಪವಿತ್ರಂ** - ಪವಿತ್ರಕರವಾದ ಬೇರೆ ವಸ್ತುವು, **ಇಹ** - ಈ ಜಗತ್ತಿನಲ್ಲಿ ಅಥವಾ ಈ ಸಂದರ್ಭದಲ್ಲಿ ಎಂದರೆ ಮೋಕ್ಷೋಪಾಯಾನುಷ್ಠಾನ ಸಂದರ್ಭದಲ್ಲಿ, **ನ ವಿದ್ಯತೇ ಹಿ**-ಇರುವ ದಿಲ್ಲವಷ್ಟೇ, **ತತ್** - ಅಂತಹ ಮಾಹಾತ್ಮ್ಯೆಯುಳ್ಳ ಜ್ಞಾನವನ್ನು, **ಯೋಗಸಂಸಿದ್ಧಃ** - ಕರ್ಮ ಯೋಗದಿಂದ ಸಿದ್ಧಿಯನ್ನು ಹೊಂದಿರುವವನು, **ಕಾಲೇನ** - ಯೋಗದ ಪರಿಪಕ್ವಾವಸ್ಥೆಯನ್ನು ಹೊಂದುವ ಕಾಲದಲ್ಲಿ, ಅಥವಾ ಆ ಜ್ಞಾನದ ಅನುಸಂಧಾನವು ಗುರುಮುಖೇನ ಉಂಟಾಗಿ ಪರಿ ಪಕ್ವಾವಸ್ಥೆಯು ಪ್ರಾಪ್ತವಾದ ಕಾಲದಲ್ಲಿ, **ಆತ್ಮನಿ ಸ್ವಯಂ ವಿಂದತಿ** - ತನ್ನ ಆತ್ಮನಲ್ಲೇ ತಾನೇ ಹೊಂದುತ್ತಾನೆ ಎಂದರೆ ತನ್ನ ಆತ್ಮಾವೇ ಇಂತಹ ಪರಿಶುದ್ಧಸ್ವರೂಪವುಳ್ಳದೆಂಬುದು ತನಗೇನೇ ತೋರಿಬರುತ್ತದೆ. ಅನುಭವವು ತನ್ನಿಂದಲೇ ಉಂಟಾಗತಕ್ಕದ್ದಾದುದರಿಂದ ಹಾಗೆ ಹೇಳಲ್ಪಟ್ಟಿತು. ಜ್ಞಾನಸ್ವರೂಪನಾಗಿ ಜ್ಞಾನಗುಣಕನಾಗಿ ಚಿತ್ತೆಂದೂ ಚೇತನನೆಂದೂ ಹೇಳಿಸಿಕೊಳ್ಳುವ ಕ್ಷೇತ್ರಜ್ಞನು ತನಗೆ ಪ್ರಕೃತಿ ಸಂಬಂಧದಿಂದ ಪ್ರಾಪ್ತವಾಗಿರುವ ಜ್ಞಾನತಿರೋಹಿತತ್ವವನ್ನು ಹೋಗಲಾಡಿಸಿಕೊಳ್ಳುವಪು ಮುಖ್ಯವಾದುದರಿಂದ ಪ್ರಥಮತಃ ತನ್ನ ಸ್ವರೂಪಯಾಥಾತ್ಮ್ಯೆ ವನ್ನು ತಿಳಿಯುವದು ಅತ್ಯಾವಶ್ಯಕವಾಗಿ, ಇದರ ಜ್ಞಾನವಿಲ್ಲದೆ ಪರಮಾತ್ಮಯಾಥಾತ್ಮ್ಯೆ ಜ್ಞಾನಸಾಕ್ಷಾತ್ಕಾರಗಳು ಲಭಿಸದಿರುವವರಿಂದ, **ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ** ಎಂಪು ಹೇಳಲ್ಪಟ್ಟಿತು. ದೇಹಕ್ಕೆ ಆಹಾರವು ಹೇಗೆ ಧಾರಕ ಪೋಷಕ ಭೋಗ್ಯ ವಾದುದೋ, ಹಾಗೆ ಆತ್ಮಾವಿಗೆ ಜ್ಞಾನವೇ ಧಾರಕಪೋಷಕಭೋಗ್ಯವೆಂದು ಭಾವಿಸತಕ್ಕದ್ದು. ಮನಸ್ಸು ಎಲ್ಲಿವರೆಗೂ ಮಲಯುಕ್ತವಾಗಿರುತ್ತದೋ, ಅದುವರೆಗೂ ಈತನಿಗೆ ಶ್ರೇಯಸ್ಸು ದೊರೆ ಯುವದಿಲ್ಲವು; ಅಂತಹ ಮನಸ್ಸು ನಿರ್ಮಲವಾಗಿ ಪವಿತ್ರತೆಯನ್ನು ಹೊಂದಬೇಕಾದರೆ ಸದ್ಗುರುವಿನ ಉಪದೇಶದಿಂದುಂಟಾದ ಆತ್ಮಯಾಥಾತ್ಮ್ಯಜ್ಞಾನದಿಂದಲೇಯಾದುದರಿಂದ 'ಇಲ್ಲಿ **ನಹಿ ಜ್ಞಾನೇನ ಸದೃಶಂ ಪವಿತ್ರಂ** ಎಂದು ಹೇಳಲ್ಪಟ್ಟಿರುತ್ತದೆ. ಮನಸ್ಸಿನ ಮಲಗಳನ್ನು ಆತ್ಮಜ್ಞಾನವು ಹೋಗ ಲಾಡಿಸಿ ಪವಿತ್ರೀಕರಿಸುತ್ತದೆಂಬ ಭಾವವು. ಯಾವಾಗ ಮನಸ್ಸು ಪಾಪಗಳ ನಾಶದಿಂದ ಪರಿಶುದ್ಧ ವಾಯಿತೋ ತತ್ಸಂಬಂಧವುಳ್ಳ ಆತ್ಮನೂ ಸಹ ಪವಿತ್ರತೆಯನ್ನು ಕ್ರಮೇಣ ಹೊಂದು ವನು. ಮನಸ್ಸು ಪವಿತ್ರವಲ್ಲದೇ ಇರುವತನಕ ಆತ್ಮಾವಿಗೆ ಬಂಧಕವು; ಪವಿತ್ರತೆಯನ್ನು ಹೊಂದಿದ ಒಡನೆಯೇ ಮೋಕ್ಷಸಿದ್ಧಿಯು. ಮಹರ್ಷಿಯು ಈ ಅಭಿಪ್ರಾಯವನ್ನೇ **"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ । ಬಂಧಾಯ ವಿಷಯಾಸಙ್ಗೀ ಮುಕ್ತ್ಯೈ ನಿರ್ವಿಷಯಂ ಮನಃ"** ಪಾಪವಾಸನಾಮೂಲಕ ಪ್ರಾಪ್ತವಾದ ವಿಷಯಾಸಙ್ಗವಿರುವ ಅವಸ್ಥೆಯೇ, ಅಪವಿತ್ರವಾಗಿ ಮಲಯುಕ್ತವಾಗಿರುವ ಅವಸ್ಥೆಯು; ಅದು ಪಾಪಗಳ ನಿವೃತ್ತಿಮೂಲಕ ವಿಷಯಾ ಸಕ್ತಿಯನ್ನು ತೊರೆದು ತನ್ನ ಆತ್ಮಯಾಥಾತ್ಮ್ಯಸ್ವರೂಪದಲ್ಲಿ ನಿಲ್ಲುತ್ತದೋ ಆಗ ಅದು ಮೋ ಕ್ಷಕ್ಕೆ ಸಾಧನಭೂತವಾಗುತ್ತದೆ. 'ಆದುದರಿಂದ ಯಾವಾಗ' ಇಂತಹ ಆತ್ಮಜ್ಞಾನದೊಂದಿಗೆ, ಕರ್ಮಯೋಗನಿಷ್ಠಾನಿರತನಾಗಿರುವನೋ ಆಗ ಮೋಕ್ಷಕ್ಕೆ ಸಾಧನವಾದ ಪರಮಾತ್ಮನಲ್ಲಿ ಪರಭಕ್ತಿ ಯುಳ್ಳವನಾಗಿ, ದೇಹಾವಸಾನದಲ್ಲಿ ತನ್ನ ಸ್ವಸ್ವರೂಪಾವಿರ್ಭಾವದೆಶೆಯನ್ನು ಹೊಂದುವನೆಂದು **"ಕಾಲೇನ ಸ್ವಯಂ ಆತ್ಮನಿ ವಿಂದತಿ"** ಎಂಬ ಪ್ರಯೋಗದಿಂದ ಹೇಳಲ್ಪಟ್ಟಿತು. ಇಲ್ಲಿ **ಯೋಗ ಸಂಸಿದ್ಧಃ** ಎಂಬುದಕ್ಕೆ ಇಂತಹ ಪವಿತ್ರವಾದ ಆತ್ಮಜ್ಞಾನಯುಕ್ತವಾದ ಕರ್ಮಯೋಗವನ್ನು ಅನು

ಭಾ. ಯಸ್ಮಾದಾತ್ಮಜ್ಞಾನೇನ ಸದೃಶಂ ಪವಿತ್ರಂ ಶುದ್ಧಿಕರಂ, ಇಹ-ಜಗತಿ, ವಸ್ತ್ವಂತರಂ ನವಿದ್ಯತೇ, ತಸ್ಮಾದಾತ್ಮಜ್ಞಾನಂ ಸರ್ವಪಾಪಂ ನಾಶಯತೀತ್ಯರ್ಥಃ ; ತತ್-ತಥಾವಿಧಂ ಜ್ಞಾನಂ ಯಥೋಪದೇಶಮಹರಹ ರನುಷ್ಠೀಯಮಾನ ಜ್ಞಾನಾಕಾರಕರ್ಮಯೋಗೇನ ಸಂಸಿದ್ಧಃ ಕಾಲೇನ ಸ್ವಾತ್ಮನಿ ಸ್ವಯಮೇವ ಲಭತೇ ||೩೮||

ಷ್ಠಿಸುವನು ಎಂಬುವೇ ಅರ್ಥವಾದರೂ, ಕಾಲೇನ ಎಂಬ ಪದಸ್ವಾರಸ್ಯದಿಂದ ಕರ್ಮಯೋಗದಿಂದ ನಿಷ್ಪಾದ್ಯವಾದ ಭಕ್ತಿಯೋಗದ ಸಂಸಿದ್ಧಿಯನ್ನು ಹೊಂದಿದವನು ಎಂಬ ಅರ್ಥವೂ ಸೂಚಿತವು. ಕರ್ಮಯೋಗದಿಂದ ಉಂಟಾಗುವ ಸಂಸಿದ್ಧಿಯು, ಭಕ್ತಿಯೋಗಪ್ರಾಪ್ತಿ ಮತ್ತು ಅದರಿಂದುಂಟಾಗುವ ಫಲವೂ ; ಇವುಗಳು ಪರಂಪರಯಾ ಲಭಿಸುವದರಿಂದ ಕಾಲೇನ ಎಂಬ ಪ್ರಯೋಗವು. ಸ್ವಯಂ ಆತ್ಮನಿವಿನ್ದತಿ ಎಂಬುದರಿಂದ "ಏವಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ" ಎಂಬ (ಛಾಂ.೮.೧೨.೨) ಶ್ರುತ್ಯರ್ಥವು ಇಲ್ಲಿ ಜ್ಞಾಪಿಸಲ್ಪಟ್ಟಿತು. ಈಗ ಕ್ಷೇತ್ರಜ್ಞನಿಗೆ ಪ್ರಾಪ್ತವಾಗಿರುವ ಜ್ಞಾನತಿರೋಧಾನವು ನಿವೃತ್ತಿಸುವದರಿಂದ ಸ್ವಯಂ ಆತ್ಮನಿ ವಿಂದತಿ ತಾನಾಗಿಯೇ ತನ್ನ ಆತ್ಮವಿನಲ್ಲೇ ಅಂತಹ ಪವಿತ್ರವಾಗಿರುವ ಅವಸ್ಥೆಯೇ ಲಭಿಸುತ್ತದೆ ಎಂದು ಹೇಳಲ್ಪಟ್ಟಿರುತ್ತದೆ. ||೩೮||

**ಭಾಷ್ಯಾರ್ಥವು :**—ಹಿಂದಿನ ಶ್ಲೋಕದಲ್ಲಿ ಜ್ಞಾನಾಗ್ನಿಯು ಸರ್ವಪಾಪ ಸಮೂಹವನ್ನೂ ದಹಿಸಿಬಿಡುತ್ತದೆಂದು ಹೇಳಿದರು. ಅದರಿಂದುಂಟಾಗುವ ಫಲವೇನೆಂಬುದು ಈ ಶ್ಲೋಕದಲ್ಲಿ ಉಪಪಾದಿಸಲ್ಪಡುತ್ತದೆ. ತನ್ನ ಆತ್ಮವೇ, ತನ್ನ ನೈಜವಾದ "ಪುನರ್ಗ"ಎಂದು ಹೇಳಿಕೊಳ್ಳಲು ನನ್ನ ಕೃಪೆಯಿಂದ ಅರ್ಹವಾದ ಪರಿಶುದ್ಧಾವಸ್ಥೆಯನ್ನು ತಾನಾಗಿಯೇ ಹೊಂದುತ್ತಾನೆಂದು ಹೇಳುತ್ತಾರೆ. ಆದುದರಿಂದಲೇ ಯಸ್ಮಾತ್ ತಸ್ಮಾತ್ ಎಂಬದಾಗಿ ವ್ಯಾಖ್ಯಾನವು. ಯಸ್ಮಾತ್-ಯಾವಕಾರಣದ ದೆಶೆಯಿಂದ, ಆತ್ಮಜ್ಞಾನೇನ ಸದೃಶಂ - ಆತ್ಮಜ್ಞಾನಕ್ಕೆ ಸಮಾನವಾದ, ಪವಿತ್ರಂ ಎಂದರೆ ಶುದ್ಧಿಕರಂ - ಶುದ್ಧಿಮಾಡುವಂಥಾದ್ದು, ಇಹ ಎಂದರೆ ಜಗತಿ - ಜಗತ್ತಿನಲ್ಲಿ, ವಸ್ತ್ವಂತರಂ - ಬೇರೇ ವಸ್ತುವು, ನ ವಿದ್ಯತೇ-ಇಲ್ಲವೋ, ತಸ್ಮಾತ್ - ಆ ಕಾರಣದ ದೆಶೆಯಿಂದ, ಆತ್ಮಜ್ಞಾನಂ-ಜೀವಾತ್ಮಸ್ವರೂಪದ ಯಥಾರ್ಥಜ್ಞಾನವು, ಸರ್ವಪಾಪಂ ನಾಶಯತೀತ್ಯರ್ಥಃ - ಸಮಸ್ತಪಾಪವನ್ನೂ ನಾಶಗೊಳಿಸುತ್ತದೆಂಬರ್ಥವು. ಯಸ್ಮಾತ್ ತಸ್ಮಾತ್ - ಎಂದು ವ್ಯಾಖ್ಯಾನಮಾಡಿರುವದರಿಂದ ಹಿಂದಿನ ಶ್ಲೋಕಕ್ಕೂ ಈ ಶ್ಲೋಕಕ್ಕೂ ಇರುವ ಸಂಗತಿಯನ್ನು ವ್ಯಕ್ತಪಡಿಸಿರುತ್ತಾರೆ. ಈ ಆತ್ಮಯಾಥಾತ್ಮ್ಯಜ್ಞಾನಕ್ಕೆ ಪವಿತ್ರಮಾಡುವ ಮಾಹಾತ್ಮ್ಯೆಯಿರುವದರಿಂದಲೇ ಎಲ್ಲಾ ಪಾಪಗಳೂ ನಾಶಹೊಂದುತ್ತವೆ. ಅಥವಾ ಎಲ್ಲಾ ಪಾಪಗಳೂ ಈ ಜ್ಞಾನದಿಂದ ನಾಶಹೊಂದುವದರಿಂದ, ಇದು ತುಂಬಾ ಪವಿತ್ರೀಕರಿಸುವ ಮಾಹಾತ್ಮ್ಯೆಯುಳ್ಳದೆಂದೂ ಹೇಳಬಹುದು. ಇಲ್ಲಿಜ್ಞಾನಕ್ಕಿಂತಲೂ ಶುದ್ಧಿಕರವಾದ ವಸ್ತ್ವಂತರವು ಬೇರೆಯಿಲ್ಲವೆಂದು ಹೇಳಿದುದರಿಂದ ಜ್ಞಾನವೂ ಕೂಡ ನಮ್ಮಸಿದ್ಧಾಂತರೀತ್ಯಾ ದ್ರವ್ಯನೆಂದು ಹೇಳಲ್ಪಟ್ಟಿತು. ಅವಸ್ಥಾಶ್ರಯತ್ವವೂ ಜ್ಞಾನಕ್ಕೆ ಇರುವದರಿಂದ ದ್ರವ್ಯವೆಂದು ಹೇಳಿಕೊಳ್ಳಲು ಅಭ್ಯಂತರವಿಲ್ಲವು. ಇಲ್ಲಿ ವಸ್ತ್ವಂತರವಿಲ್ಲವೆಂದು ಹೇಳಿರುವದು ಸರಿಯೇ ? ಯಾಜ್ಞವಲ್ಕ್ಯ ಸ್ಮೃತಿಯಲ್ಲಿ "ಕ್ಷೇತ್ರಜ್ಞಸ್ಯೇಶ್ವರ ಜ್ಞಾನಾದ್ವಿಶುದ್ಧಿಃ ಪರಮಾಮತಾ" (೩. ೧) ಈಶ್ವರಜ್ಞಾನವು ಕ್ಷೇತ್ರಜ್ಞನಿಗೆ ಸರ್ವಶ್ರೇಷ್ಠವಾದ ಪಾವನವಾದುದು ಎಂದು ಹೇಳಿದೆಯಲ್ಲಾ ? ಎಂದರೆ, ಈಶ್ವರಜ್ಞಾನಕ್ಕೆ ಪೂರ್ವಭಾವಿಯಾಗಿ ಸಾಧಕವಾಗಿರುವದರಿಂದ ಈ ಆತ್ಮಯಾಥಾತ್ಮ್ಯಜ್ಞಾನವು ಪಾಪನಿವಾರಣೆಯ ಮೂಲಕವಾಗಿ ಪವಿತ್ರಕರವಾದುದೆಂದೂ ಇದಕ್ಕೆ ಸಮಾನವಾದುದು ಪೃಥಿವಿಯಲ್ಲಿ ಯಾವುದೂ ಇಲ್ಲವೆಂದೂ ಹೇಳಲ್ಪಟ್ಟಿತು.

ಭಾ. ಅನ. ತದೇವ ವಿಸ್ಪಷ್ಟಮಾಹ—

ಮೂ. ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇನ್ದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂ ಶಾನ್ತಿಮಚಿರೇಣಾಧಿಗಚ್ಛತಿ ॥ ೩೯.

ಉತ್ತರಾರ್ಧಕ್ಕೆ ವ್ಯಾಖ್ಯಾನ ಬರೆಯುತ್ತಾರೆ.—ಇಂತಹ ಆತ್ಮ ಯಾಥಾತ್ಮ್ಯಜ್ಞಾನವು ಉಂಟಾಗುವ ಬಗೆ ಹೇಗೆ? ಇಂತಹ ಜ್ಞಾನವು ಆವಶ್ಯಕವು, ಅದನ್ನು ಹೊಂದಬೇಕೆಂಬ ಅಭಿಸಂಧಿಯೇ ಇಲ್ಲದಿರುವಾಗ ಅದು ಹೇಗೆ ಉಂಟಾದೀತು ಎಂಬ ಶಙ್ಕ್ಯೆಯಲ್ಲಿ ಕರ್ಮಯೋಗವನ್ನು ಅನುಷ್ಠಿಸುತ್ತಾ ಬರುವವನಿಗೆ ಸ್ವಯಂ-ತಾನಾಗಿಯೇ ಉಂಟಾಗುತ್ತದೆಂದು ಶ್ರೀಕೃಷ್ಣಭಗವಾನರವರು ಉಪದೇಶಿಸುತ್ತಾರೆ. **ತತ್** - ಎಂದು, **ತಥಾವಿಧಂ ಜ್ಞಾನಂ** - ಸರ್ವ ಪಾಪಗಳನ್ನೂ ಹೋಗಲಾಡಿಸುವ ಅಂತಹ ಮಾಹಾತ್ಮೆಯುಳ್ಳ ಈ ಜ್ಞಾನವನ್ನು, **ಯಥೋಪದೇಶಂ** - ಗುರುಗಳಿಂದ ಹೊಂದಿದ ಉಪದೇಶಕ್ಕನುಗುಣವಾಗಿ ಅಥವಾ ಲೋಕಗುರುವಾದ ತಾನು ಉಪದೇಶಿಸಿದ ರೀತಿಯಲ್ಲಿ, **ಅಹರಹರನುಷ್ಠೀಯಮಾನ ಜ್ಞಾನಾಕಾರ ಕರ್ಮಯೋಗೇನ** - ಪ್ರತಿ ದಿನದಲ್ಲೂ ಅನುಷ್ಠಿಸಲ್ಪಟ್ಟ ಜ್ಞಾನಾಕಾರವುಳ್ಳ ಕರ್ಮಯೋಗದಿಂದ, **ಸಂಸಿದ್ಧಃ** - ಸಿದ್ಧಿಯನ್ನು ಹೊಂದಿದವನಾಗಿ, **ಕಾಲೇನ** - ಕಾಲಕ್ರಮದಿಂದ, **ಸ್ವಾತ್ಮನಿ** – ತನ್ನ ಆತ್ಮವಿನವಿಷಯದಲ್ಲೇ, ಆತ್ಮಸಾಕ್ಷಿಕವಾಗಿಯೇ, **ಸ್ವಯಮೇವ** - ಇನ್ನು ಯಾವುದರ ಸಹಾಯವೂ ಬೇಕಿಲ್ಲದೆ **ಲಭತೇ** - ಹೊಂದುತ್ತಾನೆಂಬ ಭಾವವು, **ಕಷಾಯೇ ಕರ್ಮಭಿಃಪಕ್ವೇ ತತೋಜ್ಞಾನಂಪ್ರವರ್ತತೇ"** ಎಂದು ಹೇಳಿರುವಹಾಗೆ ಕರ್ಮಯೋಗಾನುಷ್ಠಾನದಿಂದ ಪಾಪಗಳು ಕಳೆದಹಾಗೆಲ್ಲಾ ಜ್ಞಾನೋತ್ಪತ್ತಿಯಾಗುತ್ತಾ ಕೊನೆಗೆ ಪರಭಕ್ತಿಯೂ ಕೂಡ ಲಭಿಸುತ್ತದೆಂಬ ಭಾವವು.

**ಭಾಷ್ಯಾವತಾರಿಕೆಯ ಅರ್ಥವು:—ತದೇವ** - ಆ ಆತ್ಮ ಸಾಕ್ಷಾತ್ಕಾರ ರೂಪವಾದ ವಿಪಾಕಾವಸ್ಥೆಯ ಜ್ಞಾನವನ್ನು ಕುರಿತೇ, **ವಿಸ್ಪಷ್ಟಮಾಹ** - ವಿಶೇಷ ಸ್ಪಷ್ಟವಾಗಿ ಹೇಳುತ್ತಾರೆ. ಹಿಂದಿನ ಶ್ಲೋಕದ ಪೂರ್ವಾರ್ಧವು ಈ ಮುಂದಿನ ಶ್ಲೋಕದ ಉತ್ತರಾರ್ಧದಲ್ಲೂ, ಉತ್ತರಾರ್ಧವು ಪೂರ್ವಾರ್ಧದಲ್ಲೂ ಚನ್ನಾಗಿ ಉಪಪಾದಿತವಾಗಿವೆ ಎಂಬ ಭಾವವು. ಈ ವಿಪಾಕಾವಸ್ಥೆಯ ಜ್ಞಾನವು ಪರಮ ಪವಿತ್ರವೆಂದು ಹೇಳಿದುದರಭಿಪ್ರಾಯವು, ಸರ್ವಪಾಪ ನಾಶಮೂಲಕ ಮೋಕ್ಷಪ್ರಾಪ್ತಿಗೆ ಸಹಾಯಕವಾಗುತ್ತದೆಂದು **ಪರಾಂ ಶಾನ್ತಿಮಧಿಗಚ್ಛತಿ** ಎಂದು ಹೇಳಲ್ಪಡುತ್ತದೆಂಬ ತಾತ್ಪರ್ಯವು. ಯೋಗ ಸಂಸಿದ್ಧನಾಗಿ ಕಾಲಕ್ರಮದಿಂದ **ಆತ್ಮನಿ ವಿಂದತಿ** ಎಂದು ಹೇಳಿದ ತಾತ್ಪರ್ಯವನ್ನು **ಲಭತೇ ಜ್ಞಾನಂ** ಎಂಬುದರಿಂದ ಹೇಳಿ, ಅದಕ್ಕೆ ಬೇಕಾದ ಶ್ರದ್ಧಾ, ಆಸಕ್ತಿ, ಸಂಯತೇಂದ್ರಿಯವುಳ್ಳವನಾಗಿರಬೇಕೆಂದು ಉಪದೇಶಿಸುತ್ತಾರೆ.

**ಮೂಲಕ್ಕೆ ಅರ್ಥವು:**—ಅಂತಹ ಆತ್ಮಸಾಕ್ಷಾತ್ಕಾರರೂಪ ವಿಪಾಕದೆಶೆಯನ್ನು ಹೊಂದಿದ ಜ್ಞಾನವನ್ನು ಪಡೆಯಲು ಬೇಕಾದ ಗುಣಗಳನ್ನು ಹೇಳಿ, ಅಂತಹ ಜ್ಞಾನವು ಹೇಗೆ ಅತ್ಯಂತ ಪವಿತ್ರವೆಂಬುದನ್ನು ಉಪದೇಶಿಸಿ, ಅದರಿಂದುಂಟಾಗುವ ಫಲವನ್ನು ತಿಳಿಸುತ್ತಾರೆ. **ಶ್ರದ್ಧಾವಾನ್** – ಅಂತಹ ಜ್ಞಾನವನ್ನು ಹೊಂದುವದರಲ್ಲಿ ತ್ವರೆಯುಳ್ಳವನು, ಹೇಗೆಂದರೆ ಸದ್ಗುರುವು ಶಾಸ್ತ್ರರೀತ್ಯಾ ಉಪದೇಶಿಸುವನಾದುದರಿಂದ ಅಂತಹ ಉಪದೇಶವನ್ನು ಗಮನಿಸಿ ಕೇಳಿ, ಅಂತಹ ಜ್ಞಾನವನ್ನು ಹೊಂದುವದರಲ್ಲಿ ತ್ವರೆಯುಳ್ಳವನಾಗಿ ಎಂಬ ಭಾವವು, ಅಂತಹ ಶ್ರದ್ಧೆಯುಳ್ಳವನು ಮಾತ್ರವೇ ಅಲ್ಲದೆ, ಅಂತಹ ಶ್ರದ್ಧೆಯಿರುವದರಿಂದಲೇ, **ತತ್ಪರಃ** - ಅಂತಹ ವಿಪಾಕಾವಸ್ಥೆಯ ಜ್ಞಾನವನ್ನು ಸಂಪಾದಿಸಿಕೊಳ್ಳುವದರಲ್ಲೇ ಆಸಕ್ತಿಯುಳ್ಳವನಾಗಿ, ಕೆಲವರು, **ಮತ್ಪರಃ** - ಎಂಬ ಪಾಠಾಂತರವನ್ನು ಸ್ವೀಕರಿಸಿರುತ್ತಾರೆ; ಆತ್ಮ ಯಾಥಾತ್ಮ್ಯಸಾಕ್ಷಾತ್ಕಾರ ಪ್ರಕರಣವಾದುದ

ಭಾ. ಏವಮುಪದೇಶಾತ್ ಜ್ಞಾನಂ ಲಬ್ಧ್ವಾ ಚೋಪದಿಷ್ಟಜ್ಞಾನವೃದ್ಧೌ ಶ್ರದ್ಧಾವಾ ತತ್ಪರಃ - ತತ್ರೈವ ನಿಯತಮನಾ, ತ್ತದಿತರ ವಿಷಯಾತ್ಸಂಯತೇಂದ್ರಿಯೋಽಚಿರೇಣಕಾಲೇನೋಕ್ತಲಕ್ಷಣ ವಿಪಾಕದಶಾಪನ್ನಂ ಜ್ಞಾನಂ ಲಭತೇ, ತಥಾವಿಧಂಜ್ಞಾನಂ

---

ರಿಂದ, ಪರಮಾತ್ಮ ಜ್ಞಾನವು ಅಪ್ರಸ್ತುತವಾದುದು, ತತ್ಪರಃ ಎಂಬ ಪಾಠವೇ ಸಮಂಜಸವಾದುದು. ಇದು ಇನ್ನೂ ಕರ್ಮಯೋಗದ ಜ್ಞಾನಾಕಾರದ ಪ್ರಶಂಸೆಯಾದುದರಿಂದ ಅದಕ್ಕನುಗುಣವಾದ ಅರ್ಥವನ್ನು ಹೇಳುವದು ನ್ಯಾಯವು. ಭಕ್ತಿಯೋಗ ಪ್ರಶಂಸೆಯಲ್ಲೀಗ ಮತ್ಪರತ್ವವು ಯುಕ್ತವು. ಸಂಯತೇನ್ದ್ರಿಯಃ - ಯಾವಾಗ ಅದರಲ್ಲೇ ಆಸಕ್ತಿಯುಂಟಾಯಿತೋ ಆಗ ಇತರ ವಿಷಯಗಳಿಂದ ನಿಗ್ರಹಿಸಿದ ಮನಸ್ಸು ಮೊದಲಾದ ಇಂದ್ರಿಯಗಳುಳ್ಳವನು, ಯಾವನ ಇಂದ್ರಿಯಗಳು ವಿಷಯಗಳಿಂದ ನಿವರ್ತಿಸಲ್ಪಟ್ಟವೋ ಅವನು ಸಂಯತೇಂದ್ರಿಯನು, ಜ್ಞಾನಂ - ಇಂತಹ ವಿಪಾಕಾವಸ್ಥೆಯ ಜ್ಞಾನವನ್ನು, ಲಭತೇ - ಹೊಂದುತ್ತಾನೆ. ಆತ್ಮಸಾಕ್ಷಾತ್ಕಾರರೂಪ ಜ್ಞಾನವನ್ನು ಈ ಕರ್ಮಯೋಗದಿಂದಲೇ ಹೊಂದಬೇಕಾದರೆ ಸದ್ಗುರುವಿನ ಉಪದೇಶವನ್ನು ಕೇಳಿ ತಿಳಿಯುವದರಲ್ಲಿ ತ್ವರೆಯೂ, ಅವರ ಉಪದೇಶರೀತ್ಯಾ ಜ್ಞಾನಹೊಂದುವದರಲ್ಲಿ ತುಂಬಾ ಆಸಕ್ತಿಯೂ, ಆಕಾರಣದಿಂದ ಮನಸ್ಸನ್ನು ಇತರ ವಿಷಯಗಳಿಂದ ನಿಗ್ರಹಿಸಿ ಅದರಲ್ಲೇ ಸಕ್ತವಾಗಿರುವಹಾಗೆ ಮಾಡುವದೂ ಆವಶ್ಯಕವೆಂದು ಇಲ್ಲಿ ಹೇಳಲ್ಪಟ್ಟಿತು. ಹೀಗೆ ಇಂತಹ ಪರಿಪಕ್ವ ಆತ್ಮ ಯಾಥಾತ್ಮ್ಯ ಜ್ಞಾನವು ಲಭಿಸಿದರೆ ಅದರಿಂದುಂಟಾಗುವ ಫಲವನ್ನು ಉತ್ತರಾರ್ಧದಿಂದ ಹೇಳುತ್ತಾರೆ.—ಜ್ಞಾನಂ ಲಬ್ಧ್ವಾ - ಇಂತಹ ವಿಪಾಕದೆಶೆಯ ಜ್ಞಾನವನ್ನು ಹೊಂದಿ, ಪರಾಂ ಶಾಂತಿಂ-ಕ್ಲೇಶಗಳೊಂದೂ ಇಲ್ಲದ ಸುಖರೂಪವಾದ ಉತ್ಕೃಷ್ಟವಾದ ಆನಂದವನ್ನು, ಅಚಿರೇಣ-ಕ್ಷಿಪ್ರದಲ್ಲೇ ಎಂದರೆ ದೇಹಾವಸಾನದಲ್ಲೇ, ಅಧಿಗಚ್ಛತಿ - ಹೊಂದುವನು. ಇಂತಹ ಆತ್ಮ ಯಾಥಾತ್ಮ್ಯಜ್ಞಾನವು ಕ್ಷಿಪ್ರದಲ್ಲೇ ಭಕ್ತಿಯೋಗವನ್ನಾಶ್ರಯಿಸುವಹಾಗೆ ಮಾಡಿ, ಪರಭಕ್ತಿ ಪರಜ್ಞಾನ ಪರಮ ಭಕ್ತಿಗಳನ್ನುಂಟುಮಾಡಿ ಅನಭ್ಯುಪಗತ ಪ್ರಾರಬ್ಧ ಕರ್ಮವಿದ್ದರೂ ಜನ್ಮಾಂತರಕ್ಕೆ ಹೇತುವಾಗದೆ ದೇಹಾವಸಾನದಲ್ಲೇ ಮೋಕ್ಷವನ್ನು ಹೊಂದುವನು ಎಂಬ ಭಾವವು.

ಭಾಷ್ಯಾರ್ಥವು:—ಏವಂ ನಾನು ಈಗ ನಿನಗೆ ಉಪದೇಶಿಸಿದ ರೀತಿಯಲ್ಲಿ, ಉಪದೇಶಾತ್ - ಸದ್ಗುರುವಿನ ಉಪದೇಶದಿಂದ, ಜ್ಞಾನಂ ಲಬ್ಧ್ವಾ - ಆತ್ಮ ಯಾಥಾತ್ಮ್ಯಜ್ಞಾನವನ್ನು ಹೊಂದಿದವನಾಗಿ, ಉಪದಿಷ್ಟಜ್ಞಾನವೃದ್ಧೌ - ಉಪದೇಶಿಸಿದ ಜ್ಞಾನಾಭಿವೃದ್ಧಿಯಲ್ಲಿ, ಶ್ರದ್ಧಾವಾ - ತ್ವರೆಯುಳ್ಳವನಾಗಿ, ತತ್ಪರಃ - ಎಂದರೆ ತತ್ರೈವ ನಿಯತ ಮನಾಃ - ಆ ಜ್ಞಾನಾಭಿವೃದ್ಧಿಯಲ್ಲೇ ನಿಯಮಿಸಲ್ಪಟ್ಟ ಮನಸ್ಸುಳ್ಳವನಾಗಿ, ತದಿತರ ವಿಷಯಾತ್ಸಂಯತೇನ್ದ್ರಿಯಃ-ಆ ಜ್ಞಾನಕ್ಕಿಂತ ಬೇರೆಯಾದ ವಿಷಯಗಳ ದೆಶೆಯಿಂದ ನಿಗ್ರಹಿಸಲ್ಪಟ್ಟ ಇಂದ್ರಿಯಗಳುಳ್ಳವನು, ಅಚಿರೇಣ ಕಾಲೇನ - ವಿಳಂಬವಿಲ್ಲದೆ ಕ್ಷಿಪ್ರದಲ್ಲಿಯೇ ಎಂದರೆ ಈ ಜನ್ಮದಲ್ಲೇ, ಉಕ್ತಲಕ್ಷಣ ವಿಪಾಕ ದಶಾಪನ್ನಂಜ್ಞಾನಂ - ಹಿಂದೆ ೩೪ನೆಯ ಶ್ಲೋಕದಲ್ಲಿ ಹೇಳಿದ ಲಕ್ಷಣವುಳ್ಳ ಪರಿಪಕ್ವ ದೆಶೆಯನ್ನು ಹೊಂದಿದ ಜ್ಞಾನವನ್ನು ಎಂದರೆ ಆತ್ಮ ಸಾಕ್ಷಾತ್ಕಾರ ರೂಪಜ್ಞಾನವನ್ನು, ಲಭತೇ - ಹೊಂದುತ್ತಾನೆ. ತಥಾವಿಧಂ ಜ್ಞಾನಂ-ಅಂತಹ ಎಂದರೆ ಆತ್ಮ ಸಾಕ್ಷಾತ್ಕಾರರೂಪವಾಗಿ ಈ ಆತ್ಮಯಾಥಾತ್ಮ್ಯಯ ವಿಪಾಕದೆಶೆಯ ಜ್ಞಾನವನ್ನು, ಲಬ್ಧ್ವಾ - ಹೊಂದಿದವನಾಗಿ, ಅಚಿರೇಣಾಧಿಗಚ್ಛತಿ ಎಂದರೆ ಪರಾಂ ನಿರ್ವಾಣಮಾಪ್ನೋತಿ - ಕ್ಷಿಪ್ರದಲ್ಲೇ ಶ್ರೇಷ್ಠವಾದ ಮೋಕ್ಷವನ್ನು ಹೊಂದುವನು. ೩೮ನೆಯ ಶ್ಲೋಕದಲ್ಲಿ ಕಾಲೇನಾತ್ಮನಿ ವಿಂದತಿ ಎಂಬಲ್ಲಿ ಕಾಲೇನ ಎಂಬುದರಿಂದ ವಿಳಂಬವು ತೋರುವಹಾಗೆ ಇದೆ. ಇಲ್ಲಿ ಶಾನ್ತಿಮಚಿರೇಣಾಧಿಗಚ್ಛತಿ ಎಂಬುದರಿಂದ

ಭಾ. ಲಬ್ಧ್ವಾ ಪರಾಂ ಶಾನ್ತಿ ಮಚಿರೇಣಾಧಿಗಚ್ಛತಿ-ಪರಂ ನಿರ್ವಾಣ ಮಾಪ್ನೋತಿ ||೪೦||

ಮೂ. ಅಜ್ಞಶ್ಚಾಽಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ |
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ || ೪೦.

ವಿಳಂಬವಿಲ್ಲದ ಹಾಗೆ ತೋರುತ್ತದೆ. ಇದು ಪರಸ್ಪರ ವಿರೋಧವಲ್ಲವೋ ಎಂದರೆ ಏನೂ ಇಲ್ಲವು. ಹಿಂದಿನ ಶ್ಲೋಕದಲ್ಲಿ ಆತ್ಮ ಸಾಕ್ಷಾತ್ಕಾರರೂಪ ಜ್ಞಾನವು ಎರಡು ಮೂರು ದಿನಗಳಲ್ಲಿ ಲಭಿಸುವ ದಿಲ್ಲವೆಂದೂ, ಅಭ್ಯಾಸದಿಂದ ಕಾಲಕ್ರಮೇಣ ಲಭಿಸತಕ್ಕದ್ದೆಂದು ಕಾಲೇನ ಎಂದು ಹೇಳಲ್ಪಟ್ಟಿತು. ಇಲ್ಲಿ ಅಚಿರೇಣಾಧಿಗಚ್ಛತಿ ಎಂಬುದರಿಂದ ಜ್ಞಾನಯೋಗದ ಆವಶ್ಯಕತೆಯಿಲ್ಲದೆ ಕ್ಷಿಪ್ರದಲ್ಲೇ ಭಕ್ತಿಯೋಗವೂ ಯೋಗ ನಿಷ್ಪತ್ತಿಯೂ ಲಭಿಸಿ, ಅನಭ್ಯುಪಗತ ಪ್ರಾರಬ್ಧಕರ್ಮವು ಇದ್ದರೂ, ಅದೂ ಕೂಡ ನಾಶಹೊಂದಿ ಈ ಜನ್ಮದಲ್ಲೇ ದೇಹಾವಸಾನಾನಂತರ ಹೊಂದುವನೆಂಬಭಿಪ್ರಾಯ ದಿಂದ, ಅಚಿರೇಣಾಧಿಗಚ್ಛತಿ ಎಂದು ಪ್ರಯೋಗಿಸಿರುತ್ತಾರೆ. ಹಿಂದೆ ಎರಡನೆಯ ಅಧ್ಯಾಯದ ೭೦, ೭೧, ೭೨ ನೆಯ ಶ್ಲೋಕಗಳಲ್ಲಿ "ಸಶಾನ್ತಿಮಾಪ್ನೋತಿ ನ ಕಾಮ ಕಾಮೀ" ಎಂದೂ, "ಸಶಾನ್ತಿ ಮಧಿಗಚ್ಛತಿ" ಎಂದೂ, "ಬ್ರಹ್ಮನಿರ್ವಾಣಮೃಚ್ಛತಿ ಎಂದೂ ಹೇಳಿರುವದಕ್ಕನು ಸಾರವಾಗಿ, ಪರಾಂಶಾನ್ತಿ ಮಚಿರೇಣಾಧಿಗಚ್ಛತಿ ಎಂದರೆ ಪರಂ ನಿರ್ವಾಣ ಮಾಪ್ನೋತಿ ಎಂದು ವ್ಯಾಖ್ಯಾನಮಾಡಿರುತ್ತಾರೆ. ಆದುದರಿಂದ ಶಾನ್ತಿ ಶಬ್ದವು ಮನಶ್ಶಾಂತಿಯನ್ನು ಬೋಧಿ ಸುವದಿಲ್ಲವು. ಇಲ್ಲಿ ಶಾನ್ತಿ ಶಬ್ದವು ಉಪಾಯದ ಸಂಪೂರ್ಣ ನಿಷ್ಪತ್ತಿಯನ್ನೇ ಬೋಧಿಸುತ್ತದೆ. ಅದೇ ಅಭಿಪ್ರಾಯವೆಂದು ಸೂಚಿಸುವದಕ್ಕಾಗಿ ಒಂದು ಶ್ಲೋಕದ ನಿರ್ವಾಣ ಪದವನ್ನೂ ಇನ್ನೊಂದು ಶ್ಲೋಕದ ಆಪ್ನೋತಿ ಪದವನ್ನೂ ಸೇರಿಸಿ ಪರಂ ನಿರ್ವಾಣ ಮಾಪ್ನೋತಿ ಎಂದು ವ್ಯಾಖ್ಯಾನಮಾಡಿರುತ್ತಾರೆ; ಈ ಜ್ಞಾನದಿಂದಲೇ ಸಾಕ್ಷಾತ್ತಾಗಿಯೇ ಮೋಕ್ಷವೆಂದು ಕೆಲವರು ಅಭಿ ಪ್ರಾಯಪಡುವರು, ಹಾಗಲ್ಲವು. ಇಂತಹ ಜ್ಞಾನವು ಮೋಕ್ಷಕ್ಕೆ ಸಹಕಾರಿಯು, ಹೇಗೆಂದರೆ ಭಕ್ತಿಯೋಗಕ್ಕೂ ಪರಮಾತ್ಮಸಾಕ್ಷಾತ್ಕಾರಕ್ಕೂ ಸಹಕಾರಿಯು,ತನ್ಮೂಲಕ ಮೋಕ್ಷವೆಂಬ ಭಾವವು.

**ಮೂಲಕ್ಕೆ ಅರ್ಥವು :**—ಹಿಂದಿನ ಶ್ಲೋಕದಲ್ಲಿ ಗುರೂಪದೇಶದಲ್ಲೂ ಶಾಸ್ತ್ರೋಪದೇಶ ದಲ್ಲೂ ತುಂಬಾ ನಂಬಿಕೆ ಆಸಕ್ತಿಯುಳ್ಳವನಾಗಿ ಗುರೂಪದೇಶವಿನಾ ಅನ್ಯವಿಷಯಗಳಲ್ಲಿ ಆಸಕ್ತಿ ಇಲ್ಲದೆ ಆತ್ಮ ಜ್ಞಾನವನ್ನು ವೃದ್ಧಿಗೊಳಿಸುವದರಲ್ಲಿ ತ್ವರೆಯುಳ್ಳವನಾಗಿ, ಆತ್ಮ ಸಾಕ್ಷಾತ್ಕಾರರೂಪ ಪರಿಪಕ್ವದೆಶೆಯನ್ನು ಹೊಂದಿದವನು ಕೊನೆಗೆ ಮುಕ್ತಿಯನ್ನು ಹೊಂದುವನೆಂದು ಹೇಳಿದರು, ಈ ಶ್ಲೋಕದಲ್ಲಾದರೋ ಗುರೂಪದೇಶದಲ್ಲಿ ದೃಢವಾದ ನಂಬಿಕೆ ಇಲ್ಲದೆಯೂ, ಶಾಸ್ತ್ರದಲ್ಲಿ ವಿಶ್ವಾಸ ವಿಲ್ಲದೆಯೂ, ಆ ಕಾರಣದಿಂದ ಆತ್ಮಜ್ಞಾನವನ್ನು ವೃದ್ಧಿಗೊಳಿಸುವದರಲ್ಲಿ ತ್ವರೆಯಿಲ್ಲದೆಯೂ, ಆಕಾರಣದಿಂದ ಅಂತಹ ಪರಿಪಕ್ವಾವಸ್ಥೆಯನ್ನು ಹೊಂದದ ಅಜ್ಞಾನಿಗಾದರೋ ಈ ಲೋಕದ, ಸ್ವರ್ಗಲೋಕದ, ವೈಕುಂಠಲೋಕದ ಯಾವವಿಧ ಸುಖವೂ ಇಲ್ಲವೆಂದು ಹೇಳುತ್ತಾರೆ. ಅಜ್ಞಶ್ಚ - ಹಿಂದಿನ ಶ್ಲೋಕದಲ್ಲಿ ಹೇಳಿದವನು ಜ್ಞಃ - ಜ್ಞಾನಯುಕ್ತನು. ಹಾಗಲ್ಲದೆ ಅಜ್ಞಶ್ಚ ಎಂದರೆ ಸದ್ಗುರೂಪದೇಶರೂಪ ಸಂಸ್ಕಾರಹೊಂದಿದ ಜ್ಞಾನವಿಲ್ಲದವನಾಗಿಯೂ, ಇಲ್ಲಿ ಅಜ್ಞನೆಂದರೆ ಸರ್ವಜ್ಞಾನ ಶೂನ್ಯನೆಂಬ ಅರ್ಥವಲ್ಲವು, ಗುರೂಪದೇಶರೂಪ ಜ್ಞಾನವಿಲ್ಲದವನೆಂಬರ್ಥವು, ಯಾವಕಾರಣದಿಂದ ಎಂದರೆ, ಅಶ್ರದ್ದಧಾನಶ್ಚ - ಉಪದಿಷ್ಟ ಜ್ಞಾನವನ್ನು ವೃದ್ಧಿಪಡಿಸಿಕೊ ಳ್ಳಲು ತ್ವರೆಯಿಲ್ಲದವನಾಗಿಯೂ, ಇದು ಏತರಿಂದೆಂದರೆ, ಸಂಶಯಾತ್ಮಾ - ಸದ್ಗುರುವಿನ ಉಪ ದೇಶದಲ್ಲಿ ದೃಢನಂಬಿಕೆ ಇಲ್ಲದ ಸಂಶಯ ಮನಸ್ಸನಾಗಿರುವವನು, ವಿನಶ್ಯತಿ - ನಷ್ಟನಾಗುವನು ಎಂದರೆ ಯಾವ ಪುರುಷಾರ್ಥವನ್ನೂ ಹೊಂದಲಾರನು, ತದ್ವಿದ್ಧಿ ಪ್ರಣಿಪಾತೇನ ಎಂಬುದರಿಂದ

**ಭಾ. ಅಜ್ಞಃ — ಏವಮುಪದೇಶಲಬ್ಧಜ್ಞಾನರಹಿತಃ, ಉಪದಿಷ್ಟಜ್ಞಾನವೃದ್ಧ್ಯುಪಾಯೇ ಚಾಽಶ್ರದ್ಧಧಾನಾಃ-ಅತ್ವರಮಾಣಃ, ಉಪದಿಷ್ಟೇಚ ಜ್ಞಾನೇ ಸಂಶಯಾತ್ಮಾ-ಸಂಶಯಮನಾ ವಿನಶ್ಯತಿ-ನಷ್ಟೋಽಭವತಿ; ಅಸ್ಮಿನ್ನುಪದಿಷ್ಟೇ ಆತ್ಮಯಾಥಾತ್ಮ್ಯವಿಷಯೇ ಜ್ಞಾನೇ ಸಂಶಯಾತ್ಮನೋಽಯಮಪಿ ಪ್ರಾಕೃತೋ ಲೋಕೋ ನಾಸ್ತಿ ; ನಚ ಪರಃ, ಧರ್ಮಾರ್ಥಕಾಮರೂಪ ಪುರುಷಾರ್ಥಾಶ್ಚ ನ ಸಿದ್ಧ್ಯನ್ತಿ, ಕುತೋಮೋಕ್ಷ ಇತ್ಯರ್ಥಃ.**

---

ಆತ್ಮ ಯಾಥಾತ್ಮ್ಯಜ್ಞಾನದ ಪರಿಪಕ್ವ ದಶೆಯಾದ ಆತ್ಮ ಸಾಕ್ಷಾತ್ಕಾರಕ್ಕೆ ಗುರೂಪದೇಶವು ಆವಶ್ಯಕವೆಂದು ಹೇಳಿ, ಅನಂತರ ಅದರ ಮಾಹಾತ್ಮ್ಯವನ್ನು ಕೊಂಡಾಡಿ, ಅದರ ಲಕ್ಷಣವನ್ನು ಹೇಳಿ ಅನಂತರ ಗುರೂಪದೇಶವು ಕಾರ್ಯಕಾರಿಯಾಗಲು ಅದರಲ್ಲಿ ನಂಬಿಕೆಯೂ, ಇತರ ವಿಷಯದಲ್ಲಿ ಮನಸ್ಸು ಪ್ರವರ್ತಿಸದೇ ಇರುವಿಕೆಯೂ, ಆ ಜ್ಞಾನಾಭಿವೃದ್ಧಿಯಲ್ಲಿ ತ್ವರೆಯೂ, ಆವಶ್ಯಕವೆಂದು ಹೇಳಿ, ಅಂತಹವನಿಗೆ ದೇಹಾವಸಾನದಲ್ಲಿ ಕ್ಷಿಪ್ರವಲ್ಲಿ ಸದ್ಗತಿಯುಂಟೆಂದು ಉಪದೇಶಿಸಿ, ಹಾಗೆ ಉಪದೇಶದಲ್ಲಿ ದೃಢನಂಬಿಕೆಯಿಲ್ಲದೆ, ಅಂತಹ ಜ್ಞಾನಾಭಿವೃದ್ಧಿಯಲ್ಲಿ ತ್ವರೆಯಿಲ್ಲದವನಾಗಿರುವ ಅಜ್ಞನಿಗೆ ಯಾವ ಪುರುಷಾರ್ಥವೂ ಇಲ್ಲವೆಂದು ಹೇಳಿದರು. ಅಂತವನ ದುರ್ಗತಿ ಎಂತಾದ್ದೆಂಬುದನ್ನು ಉತ್ತರಾರ್ಧದಿಂದ ಉಪಪಾದಿಸುತ್ತಾರೆ. ಅಂತವನಿಗೆ, **ಅಯಂ ಲೋಕಃ** - ಈ ಲೋಕವೇ, **ನಾಸ್ತಿ** - ಇಲ್ಲವು ಎಂದರೆ ಈ ಲೋಕದ ಯಾವ ವಿಧ ಪುರುಷಾರ್ಥವೂ ಇಲ್ಲವು, ಹೀಗಿರುವಾಗ, **ನ ಪರಃ** - ಸ್ವರ್ಗಾದಿ ಭೋಗವಾಗಲಿ ಕೈವಲ್ಯವಾಗಲಿ, ಮೋಕ್ಷವಾಗಲಿ, ಇಲ್ಲವೇ ಇಲ್ಲವು ಎಂಬ ತಾತ್ಪರ್ಯವು. ಆದುದರಿಂದ, **ಸಂಶಯಾತ್ಮನಃ** - ಆತ್ಮಯಾಥಾತ್ಮ್ಯ ವಿಷಯದ ಉಪದೇಶದಲ್ಲಿ ಸಂಶಯವಿರುವವನಿಗೆ, **ನ ಸುಖಂ** - ಐಹಿಕಾಮುಷ್ಮಿಕ ಯಾವ ವಿಧವಾದ ಸುಖಲೇಶವೂ ಇಲ್ಲವು. ||೪೦||

**ಭಾಷ್ಯಾರ್ಥವು:—ಅಜ್ಞಶ್ಚ** - ಎಂದರೆ, **ಏವಮುಪದೇಶ ಲಬ್ಧಜ್ಞಾನರಹಿತಃ** - ಮೇಲೆ ಹೇಳಿದ ರೀತಿಯಲ್ಲಿ ಸದ್ಗುರುವಿನ ಉಪದೇಶದಿಂದ ಪ್ರಾಪ್ತವಾಗುವ ಜ್ಞಾನವಿಲ್ಲದವನಾಗಿಯೂ ಮುಂದೆ ಅಶ್ರದ್ದಧಾನಶ್ಚ ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ, **ಉಪದಿಷ್ಟಜ್ಞಾನವೃದ್ಧ್ಯುಪಾಯೇ ಚ**-ಉಪದೇಶಿಸಲ್ಪಟ್ಟ ಜ್ಞಾನವನ್ನು ವೃದ್ಧಿ ಮಾಡುವ ಉಪಾಯದಲ್ಲಿ, **ಅಶ್ರದ್ದಧಾನಃ**- ಎಂದರೆ, **ಅತ್ವರಮಾಣಃ** - ತ್ವರೆ ಇಲ್ಲದವನಾಗಿಯೂ, **ಉಪದಿಷ್ಟೇಚ ಜ್ಞಾನೇ** - ಉಪದೇಶಿಸಲ್ಪಟ್ಟ ಜ್ಞಾನದಲ್ಲಿ, **ಸಂಶಯಾತ್ಮಾ** ಎಂದರೆ **ಸಂಶಯಮನಾಃ** - ಸಂಶಯ ಮನಸ್ಸುಳ್ಳವನಾಗಿಯೂ ಇರುವವನು, ವಿನಶ್ಯತಿ ಎಂದರೆ **ನಷ್ಟೋಽಭವತಿ** - ನಷ್ಟನಾದವನಾಗುವನು, ಉತ್ತರಾರ್ಧವು ಹೇಗೆ ನಷ್ಟನಾಗುವನೆಂಬುದನ್ನು ವಿವರಿಸುತ್ತದೆ. ಅಂತವನಿಗೆ ಸರ್ವ ಪುರುಷಾರ್ಥಗಳೂ ಇಲ್ಲವೆಂದು ಹೇಳುತ್ತಾರೆ. ಪುರುಷಾರ್ಥಗಳಿಲ್ಲದಿರೋಣವೇ ನಷ್ಟನಾಗುವನೆಂಬುದರಭಿಪ್ರಾಯವು. **ಅಸ್ಮಿನ್ ಉಪದಿಷ್ಟೇ** - ಜ್ಞಾನಿಗಳಿಂದ ಈ ಉಪದೇಶಿಸಲ್ಪಟ್ಟ ಆತ್ಮಯಾಥಾತ್ಮ್ಯವಿಷಯವಾದ ಜ್ಞಾನದಲ್ಲಿ, **ಸಂಶಯಾತ್ಮನಃ** - ಸಂಶಯ ಮನಸ್ಕನಿಗೆ, **ಅಯಮಪಿ ಪ್ರಾಕೃತ ಲೋಕೋನಾಸ್ತಿ** - ಈ ಪ್ರಾಕೃತ ಲೋಕವೂ ಇಲ್ಲವು. ಅಯಂ-ಎಂದು ಪ್ರಯೋಗಿಸಿರುವದರಿಂದ ಐಹಿಕವೆಲ್ಲಾ ಕ್ಷುದ್ರಫಲವುಳ್ಳದ್ದು ಎಂಬುದು ಸೂಚಿಸಲ್ಪಟ್ಟಿತು; ಅಲ್ಪಾಸ್ಥಿರಪ್ರಯೋಜನವೇ ಇಲ್ಲವು. **ನ ಚ ಪರಃ** - ಅದಕ್ಕೂ ಉತ್ತಮವಾದುದೂ ಇಲ್ಲವು, ಎಂದರೆ ಧರ್ಮಾರ್ಥಕಾಮರೂಪವಾದ ಪುರುಷಾರ್ಥಗಳೂ ಕೂಡ, **ನ ಸಿಧ್ಯನ್ತಿ** - ಸಿದ್ಧಿಸುವದಿಲ್ಲವು, **ಕುತೋಮೋಕ್ಷ ಇತ್ಯರ್ಥಃ** - ಹೀಗಿರುವಾಗ ಮೋಕ್ಷವೆಲ್ಲಿಯದು ಎಂಬ ಅರ್ಥವು. ಹಿಂದೆ ೪. ೩೧ರಲ್ಲಿ **"ನಾಯಂ ಲೋಕೋಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ"** ಎಂಬಲ್ಲಿ ಲೋಕಶಬ್ದವು ಹೇಗೆ ಪುರುಷಾರ್ಥವಾಚಿಯೋ ಹಾಗೆಯೇ ಇಲ್ಲಿಯೂ ಎಂದು ಹೇಳುವದಕ್ಕಾಗಿ **"ಧರ್ಮಾರ್ಥ ಕಾಮರೂಪ"**

ಭಾ. ಶಾಸ್ತ್ರೀಯಕರ್ಮಸಿದ್ಧಿ ರೂಪತ್ವಾತ್ಸರ್ವೇಷಾಂ ಪುರುಷಾರ್ಥಾನಾಂ, ಶಾಸ್ತ್ರೀಯಕರ್ಮಜನ್ಯಸಿದ್ಧೇಶ್ಚ ದೇಹಾತಿರಿಕ್ತಾತ್ಮನಿಶ್ಚಯ ಪೂರ್ವಕತ್ವಾತ್ । ಅತಸ್ಸುಖಲವ ಭಾಗಿತ್ವಮಾತ್ಮನಿ ಸಂಶಯಾತ್ಮನೋ ನ ಸಂಭವತಿ. ||೪೦||

ಮೂ. ಯೋಗ ಸನ್ಯಸ್ತಕರ್ಮಾಣಂ ಜ್ಞಾನ ಸಂಛಿನ್ನ ಸಂಶಯಂ ।
ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧.

ವೆಂದು ವ್ಯಾಖ್ಯಾನಮಾಡಿರುತ್ತಾರೆ. ಯಾವ ಪುರುಷಾರ್ಥವೂ ಇಲ್ಲವೆಂದು ಹೇಳಿದುದನ್ನು ನಂಬುವದು ಹೇಗೆ ಎಂದರೆ ಅದಕ್ಕೆ ಹೇತುವನ್ನು ಹೇಳುತ್ತಾರೆ. ಏಕೆಂದರೆ ಶಾಸ್ತ್ರೀಯ ಕರ್ಮಸಿದ್ಧಿ ರೂಪತ್ವಾತ್ಸರ್ವೇಷಾಂ ಪುರುಷಾರ್ಥಾನಾಂ - ಸಮಸ್ತ ಪುರುಷಾರ್ಥಗಳೂ ಶಾಸ್ತ್ರೀಯವಾದ ಕರ್ಮಾನುಷ್ಠಾನದಿಂದುಂಟಾಗುವುದರಿಂದಲೂ, ಮತ್ತು ಶಾಸ್ತ್ರೀಯ ಕರ್ಮಜನ್ಯ ಸಿದ್ಧೇಶ್ಚ ದೇಹಾತಿರಿಕ್ತ ಆತ್ಮನಿಶ್ಚಯ ಪೂರ್ವಕತ್ವಾತ್ - ಶಾಸ್ತ್ರೀಯ ಕರ್ಮಾನುಷ್ಠಾನದಿಂದುಂಟಾಗುವ ಸಿದ್ಧಿಯಾದರೋ ದೇಹಕ್ಕಿಂತ ಬೇರೆಯಾದುದು ಆತ್ಮವು ಎಂಬ ನಿಶ್ಚಯಜ್ಞಾನಪೂರ್ವಕವಾದುದರಿಂದ ; ಎಂದರೆ ಯಾವಾಗ ಅಜ್ಞನಾಗಿ ದೇಹಾತಿರಿಕ್ತವಾದ ಆತ್ಮವುಂಟು ಎಂಬ ನಿಶ್ಚಯಜ್ಞಾನವಿಲ್ಲವೋ ಆಗ ಶಾಸ್ತ್ರೀಯ ಕರ್ಮಾನುಷ್ಠಾನವೂ ಅದರಿಂದುಂಟಾಗುವ ಫಲಸಿದ್ಧಿರೂಪ ಪುರುಷಾರ್ಥವೂ ಇಲ್ಲವೆಂಬ ಭಾವವು. ದೇಹಕ್ಕಿಂತಲೂ ಬೇರೆಯಾಗಿ ಫಲಾನುಭವಮಾಡುವ ಒಬ್ಬ ಆತ್ಮನುಂಟು ಎಂಬ ಜ್ಞಾನವಿದ್ದರೆ ತಾನೇ ಪುರುಷಾರ್ಥಗಳು ಬೇಕೆಂದು ಕರ್ಮಾನುಷ್ಠಾನವನ್ನು ಮಾಡುವನು. ಅಂತಹ ಜ್ಞಾನವಿಲ್ಲದೆಯೇ ಇದ್ದರೂ ಅಥವಾ ಆ ವಿಷಯದಲ್ಲಿ ನಿಶ್ಚಯಜ್ಞಾನವಿಲ್ಲದೆ ಸಂಶಯವಿರುವನಾದರೂ ಪುರುಷಾರ್ಥಗಳಿಗಾಗಿ ಕರ್ಮಾನುಷ್ಠಾನವನ್ನೂ ಮಾಡನು, ಯಾವ ಪುರುಷಾರ್ಥವೂ ಅಂತವನಿಗಿಲ್ಲವೆಂಬ ಭಾವವು. ಮುಂದೆ ನಿಗಮನಮಾಡಿಹೇಳುತ್ತಾರೆ. **ಅತಃ** - ಆ ಕಾರಣದಿಂದ, **ಸುಖಲವ ಭಾಗಿತ್ವಂ** - ಈಷದಪಿ ಸುಖಾನುಭವವೂ, **ಆತ್ಮನಿ ಸಂಶಯಾತ್ಮನಃ**- ದೇಹಾತಿರಿಕ್ತ ಆತ್ಮಾವುಂಟು ಎಂಬುದರಲ್ಲಿ ಸಂಶಯಪಡುವವನಿಗೆ, **ನ ಸಂಭವತಿ** - ಉಂಟಾಗುವದಿಲ್ಲವು. ಅಂತವನಿಗೆ ಐಹಿಕಾಮುಷ್ಮಿಕ ಸರ್ವವಿಧ ಸುಖವೂ ಇಲ್ಲವೆಂದು ಹೇಳಲ್ಪಟ್ಟಿತು. ದೇಹಾತಿರಿಕ್ತವಾದ ಒಬ್ಬ ಆತ್ಮನಿದ್ದಾನೆಂದು ಒಪ್ಪಿದರಲ್ಲವೇ ಸ್ವರ್ಗ ವೈಕುಂಠ ಲೋಕಗಳಲ್ಲಿ ಸುಖವನ್ನು ಪಡೆಯಬೇಕೆಂದು ಯತ್ನಿಸುವನು ; ಅದರಲ್ಲೇ ಸಂಶಯವಿದ್ದರೆ ಅದಕ್ಕಾಗಿ ಪ್ರಯತ್ನವೆಲ್ಲಿಯದು ? ಆದುದರಿಂದ ಗುರೂಪದೇಶದಲ್ಲಿ ಸಂಪೂರ್ಣವಿಶ್ವಾಸವಿಟ್ಟು ಅವರುಪದೇಶಿಸುವ ಆತ್ಮಯಾಥಾತ್ಮ್ಯಜ್ಞಾನದಲ್ಲಿ ಸಂಶಯವಿಲ್ಲದೆ ದೃಢನಂಬಿಕೆಯುಳ್ಳವನಾಗಿ, ಆ ಜ್ಞಾನಾಭಿವೃದ್ಧಿಯಲ್ಲಿ ತ್ವರೆಯುಳ್ಳವನೇ ಐಹಿಕಾಮುಷ್ಮಿಕ ಸರ್ವವಿಧ ಸುಖವನ್ನೂ ಹೊಂದುವನು ಎಂಬ ಭಾವವು||

**ಮೂಲಕ್ಕೆ ಅರ್ಥವು** :—ಈ ಅಧ್ಯಾಯದಲ್ಲೂ ಕರ್ಮಯೋಗಕ್ಕೇ ಪ್ರಾಶಸ್ತ್ಯವು ಹೇಳಲ್ಪಟ್ಟು, ಅದರಲ್ಲಿ ಕರ್ಮಾಂಶ ಜ್ಞಾನಾಂಶವೆಂಬದಾಗಿ ಎರಡು ಆಕಾರಗಳೆಂದೂ ಇವೆರಡರಲ್ಲಿ ಜ್ಞಾನಾಂಶಕ್ಕೇ ಪ್ರಾಧಾನ್ಯವೆಂದೂ, ಹೇಳಿದುವನ್ನೇ ಈ ಶ್ಲೋಕದಲ್ಲೂ ಸೂಚಿಸಿ ಉಪಸಂಹಾರಮಾಡಿ ಹೇಳುತ್ತಾರೆ. **ಯೋಗಸನ್ಯಸ್ತ ಕರ್ಮಾಣಂ** - ಈಗ ಉಪದೇಶಿಸಿದ ಕರ್ಮಯೋಗದಲ್ಲಿ ತ್ಯಜಿಸಿದ ಕರ್ಮಾಂಶವುಳ್ಳ, ಎಂದರೆ ಕರ್ಮಾಂಶಕ್ಕೆ ಪ್ರಾಧಾನ್ಯವನ್ನು ತ್ಯಜಿಸಿ ಜ್ಞಾನಾಂಶಕ್ಕೇ ಪ್ರಾಧಾನ್ಯವನ್ನು ಕೊಟ್ಟಿರುವ, ಅಥವಾ **ಯೋಗಸನ್ಯಸ್ತ ಕರ್ಮಾಣಂ** ಈಗ ಹೇಳಲ್ಪಟ್ಟ ಆತ್ಮಯಾಥಾತ್ಮ್ಯ ಜ್ಞಾನರೂಪ ಬುದ್ಧಿಯೋಗದಿಂದ ಕರ್ಮದಲ್ಲಿ ಫಲ, ಕರ್ತೃತ್ವ ಮಮತೆಗಳನ್ನು ತ್ಯಾಗಮಾಡಿದ, **ಜ್ಞಾನಸಂಛಿನ್ನ ಸಂಶಯಂ** - ಆತ್ಮ ಯಾಥಾತ್ಮ್ಯಜ್ಞಾನದಿಂದ ಸರ್ವ ಸಂಶಯ

ಭಾ. **ಯಥೋಪದಿಷ್ಟಯೋಗೇನ ಸನ್ನ್ಯಸ್ತಕರ್ಮಾಣಂ – ಜ್ಞಾನಾಕಾರತಾಪನ್ನಕರ್ಮಾಣಂ,**

ವನ್ನೂ ಕಳೆದುಕೊಂಡ, ಇಲ್ಲಿ ಸಂಶಯವು ಯಾವುದೆಂದರೆ ಅರ್ಜುನನಿಗೆ ಈಗ ಮೋಹಜ್ಞಾನವೇ ಸಂಶಯವು, ಆತನಿಗಿರುವ ದೇಹಾತ್ಮಭ್ರಮವೇ ಸಂಶಯವು; **ಆತ್ಮವಂತಂ** - ಮನಸ್ಸುಳ್ಳವನನ್ನು, ಏತರಲ್ಲಿ ಮನಸ್ಸು ಎಂದರೆ ಉಪದೇಶಿಸಲ್ಪಟ್ಟ ಆತ್ಮಜ್ಞಾನದಲ್ಲಿ ದೃಢವಾದ ಮನಸ್ಸುಳ್ಳವನನ್ನು, **ಕರ್ಮಾಣಿ** - ಪೂರ್ವಾರ್ಜಿತ ಕರ್ಮಗಳು, **ನ ನಿಬಧ್ನಂತಿ** - ಬಂಧಿಸುವದಿಲ್ಲವು, ಕೆಲವರು **ಕರ್ಮಾಣಿ** ಎಂಬುದಕ್ಕೆ ಈ ಕರ್ಮಯೋಗ ಪ್ರವೃತ್ತಿಗಳು ಬಂಧಿಸುವದಿಲ್ಲವು ಎಂದು ಅರ್ಥ ಮಾಡಿರುತ್ತಾರೆ. ಹಾಗೆ ಅರ್ಥಮಾಡಿದರೆ "**ನ ಕರ್ಮಲಿಪ್ಯತೇ ನರೇ**" ಐಹಿಕದಲ್ಲಿ ನರಮತೀತಿನರಃ ಎಂಬ ವ್ಯುತ್ಪತ್ತಿಯು ಮೂಲಕ ನರೇ ಎಂದರೆ ಮೋಕ್ಷಾರ್ಥಿಯಲ್ಲಿ, **ಕರ್ಮ** - ಅನುಷ್ಠಿಸುವ ನಿತ್ಯನೈಮಿತ್ತಿಕ ಕಾಮ್ಯ ಕರ್ಮವರ್ಗವು, **ನ ಲಿಪ್ಯತೇ** - ಲೇಪಿಸುವದಿಲ್ಲವು ಎಂದರೆ ಬಂಧಕವಾಗುವದಿಲ್ಲವು. ಎಂಬ ಶ್ರುತ್ಯರ್ಥದ ಉಪಪಾದನೆಯಾಗುತ್ತದೆ. ಈ ಶ್ಲೋಕದಲ್ಲಿ, ಕೆಲವರು **ಯೋಗಸನ್ನ್ಯಸ್ತಕರ್ಮಾಣಂ** ಎಂಬಲ್ಲಿ ಯೋಗಶಬ್ದಕ್ಕೆ ಪರಮಾರ್ಥ ದರ್ಶನರೂಪ ಜ್ಞಾನಯೋಗವೆಂದೂ, ಇಲ್ಲಿ ಕರ್ಮಸ್ವರೂಪ ತ್ಯಾಗವು ಹೇಳಲ್ಪಟ್ಟಿತೆಂದೂ, **ಜ್ಞಾನ ಸಂಛಿನ್ನಸಂಶಯಂ** ಎಂಬಲ್ಲಿ ಜ್ಞಾನಶಬ್ದಕ್ಕೆ ಆತ್ಮಪರಮಾತ್ಮೈಕ್ಯ ಜ್ಞಾನವೆಂದೂ ಅಭಿಪ್ರಾಯಪಡುತ್ತಾರೆ. ಮುಂದಿನ ಶ್ಲೋಕದಲ್ಲಿ **ಯೋಗಮಾತಿಷ್ಠೋತ್ತಿಷ್ಠ** ಎಂದು ಹೇಳಿ ಉತ್ತಿಷ್ಠ ಶಬ್ದದಿಂದ ಯುದ್ಧ ಕರ್ಮವನ್ನೇ ಮಾಡತಕ್ಕದ್ದೆಂಬ ಉಪದೇಶವಿರುವದರಿಂದ ಯುದ್ಧವನ್ನು ಮಾಡಲೇಬೇಕೆಂದು ಹೇಳುತ್ತಿರುವಾಗ ಕರ್ಮಸ್ವರೂಪತ್ಯಾಗವು ಹೇಗೆ ಸಮಂಜಸವು? ಜೀವಪರಮಾತ್ಮೈಕ್ಯ ಜ್ಞಾನವು ಎಂದು ಅರ್ಥಮಾಡಲು ಪ್ರಕರಣವೇ ಇಲ್ಲವು. ಇದೇ ಅಧ್ಯಾಯದ ೩೫ನೆಯ ಶ್ಲೋಕದಲ್ಲಿ ಆತ್ಮರುಗಳ ಸಮಭಾವಕ್ಕೆ ಪರಮಾತ್ಮನಿಗೂ ಜೀವಾತ್ಮನಿಗೂ ಇರುವ ಶ್ರುತಿ ಪ್ರತಿಪಾದ್ಯವಾದ ಸಮಭಾವವು ನಿದರ್ಶನವಾಗಿ ಪೃಥಕ್ಕರಿಸಿ ಹೇಳಿರುವದರಿಂದ ಸ್ವರೂಪೈಕ್ಯವು ಕೂಡುವುದೂ ಇಲ್ಲವು. ಜೀವಪರಮಾತ್ಮಭೇದವೇ ಹೇಳಲ್ಪಟ್ಟಿತು. ಮುಂದೆ ೧೫ನೆಯ ಅಧ್ಯಾಯದಲ್ಲಿ **ಉತ್ತಮಪುರುಷಸ್ತ್ವನ್ಯಃ** ಎಂದು ಭೇದವು ಕಂಠೋಕ್ತವಾಗಿ ಹೇಳಲ್ಪಟ್ಟಿರುತ್ತದೆ. ಹಾಗಾದರೆ ಇಲ್ಲಿ ಜ್ಞಾನ ಶಬ್ದವು ಏನನ್ನು ಬೋಧಿಸುತ್ತದೆ ಎಂದು ಪ್ರಶ್ನಿಸಿದರೆ ಅದಕ್ಕೆ ಉತ್ತರವು ಮುಂದಿನ ಶ್ಲೋಕದಲ್ಲಿ ವ್ಯಕ್ತವು; **ಜ್ಞಾನಾಸಿನಾತ್ಮನಃ** ಎಂದು ಹೇಳಿರುವದರಿಂದ ಜೀವಾತ್ಮವಿಷಯವಾದ ಜ್ಞಾನವು; ಅರ್ಜುನನಿಂದ ಯುದ್ಧಮಾಡಿಸುವದಕ್ಕೆ ಬೇಕಾದ ಆತ್ಮಯಾಥಾತ್ಮ್ಯಜ್ಞಾನವು; ಇದರಿಂದ ಕೂಡಿದ ಕರ್ಮಯೋಗಾನುಷ್ಠಾನವೇ, **ಯೋಗಮಾತಿಷ್ಠ** ಎಂದಿರುವ ಮುಂದಿನ ಶ್ಲೋಕವಾಕ್ಯದಿಂದ ಉಪದೇಶಿಸಲ್ಪಟ್ಟು, **ಉತ್ತಿಷ್ಠ** - ಯುದ್ಧಕ್ಕೆ ಏಳು ಎಂದು ಹಿತವನ್ನು ಬೋಧಿಸುತ್ತಾರೆ.

**ಭಾಷ್ಯಾರ್ಥವು**:—ಈ ಶ್ಲೋಕದಲ್ಲಿ ಈ ಅಧ್ಯಾಯವನ್ನು ಮುಗಿಸುವ ಸಂದರ್ಭದಲ್ಲಿ ಅಧ್ಯಾಯದ ಪ್ರಧಾನಾರ್ಥವನ್ನು ಬೋಧಿಸುತ್ತಾರೆ ಏನೆಂದರೆ:—**ಯಥೋಪದಿಷ್ಟ ಯೋಗೇನ ಸನ್ನ್ಯಸ್ತಕರ್ಮಾಣಂ** - ಈಗ ಉಪದೇಶಿಸಲ್ಪಟ್ಟ ಕರ್ಮಯೋಗದಿಂದ ಬಿಡಲ್ಪಟ್ಟ ಕರ್ಮಾಂಶವುಳ್ಳವನನ್ನು ಎಂದರೆ **ಜ್ಞಾನಾಕಾರತಾಪನ್ನ ಕರ್ಮಾಣಂ** - ಜ್ಞಾನಾಕಾರತೆಯನ್ನು ಹೊಂದಿದ ಕರ್ಮಯೋಗವುಳ್ಳವನನ್ನು, ಕರ್ಮಯೋಗದಲ್ಲಿ ಉಭಯರೂಪ ಆಕಾರತೆಯುಂಟು, ಒಂದು ಕರ್ಮಾಕಾರತೆಯು ಇನ್ನೊಂದು ಜ್ಞಾನಾಕಾರತೆಯು; ಕರ್ಮಾಕಾರತೆಯನ್ನು ತ್ಯಜಿಸಿ ಪ್ರಧಾನವಾದ ಜ್ಞಾನಾಕಾರತೆಯುಳ್ಳವನನ್ನು, ಅಥವಾ ಇಲ್ಲಿ ಯೋಗ ಶಬ್ದದಿಂದ **ಕರ್ಮಣ್ಯ ಕರ್ಮಯಃಪಶ್ಯೇತ್** (ಗೀ. ೪.೧೮) ಎಂಬ ಶ್ಲೋಕದಲ್ಲಿ ಹೇಳಿರುವ ಬುದ್ಧಿಯೋಗವು ಹೇಳಲ್ಪಟ್ಟಿತು, ಈ ಬುದ್ಧಿಯೋಗದಿಂದ, **ಸನ್ನ್ಯಸ್ತ ಕರ್ಮಾಣಂ**-ಕರ್ತೃತ್ವಾದಿ ತ್ಯಾಗಪೂರ್ವಕ ಜ್ಞಾನಾಕಾರತೆಯನ್ನು ಹೊಂದಿದ

ಭಾ. **ಯಥೋಪದಿಷ್ಟೇನ ಚಾತ್ಮಜ್ಞಾನೇನಾತ್ಮನಿ ಸಂಛಿನ್ನಸಂಶಯಂ, ಆತ್ಮವಂತಂ ಮನಸ್ವಿನಂ - ಉಪದಿಷ್ಟಾರ್ಥೇ ದೃಢಾವಸ್ಥಿತ ಮನಸಂ, ಬಂಧಹೇತುಭೂತ ಪ್ರಾಚೀನಾನಂತಕರ್ಮಾಣಿ ನನಿಬಧ್ನಂತಿ ॥ ೪೧ ॥**

ಕರ್ಮಯೋಗಿಯನ್ನೂ, ಆತನು ಇನ್ನೂ ಎಂತವನೆಂದರೆ **ಯಥೋಪದಿಷ್ಟೇನ ಚಾತ್ಮ ಜ್ಞಾನೇನ**- ಹೇಗೆ ಉಪದೇಶಿಸಲ್ಪಟ್ಟಿತೋ ಅಂತಹ ಆತ್ಮಜ್ಞಾನದಿಂದ, **ಆತ್ಮನಿ** - ಆತ್ಮವಿಷಯದಲ್ಲಿ, **ಸಂಛಿನ್ನ ಸಂಶಯಂ**- ಚನ್ನಾಗಿ ಕತ್ತರಿಸಲ್ಪಟ್ಟ ಎಂದರೆ ಹೋಗಲಾಡಿಸಿಕೊಂಡ ಸಂಶಯವುಳ್ಳವನನ್ನು, ಇನ್ನು ಎಂತವನೆಂದರೆ, **ಮನಸ್ವಿನಂ**- ಇದು **ಆತ್ಮವಂತಂ** ಎಂಬುದರ ಅರ್ಥವು, ಎಂದರೆ **ಉಪದಿಷ್ಟಾರ್ಥೇ ದೃಢಾವಸ್ಥಿತ ಮನಸಂ** - ಉಪದೇಶಿಸಲ್ಪಟ್ಟ ವಿಷಯದಲ್ಲಿ ದೃಢವಾದ ನಂಬಿಕೆಯುಳ್ಳ ಮನಸ್ಸುಳ್ಳವನನ್ನು, ಫಲೋದ್ದೇಶ್ಯಕಾರ್ಯಾರ್ಥಿಯಾಗಿ ಅಚಾಂಚಲ್ಯವಾದ ದೃಢಮನಸ್ಸುಳ್ಳವನೇ ಮನಸ್ವೀ ಎಂದು ಹೇಳಲ್ಪಡುವನು; ಅಂತವನು ಇಲ್ಲಿ ಹೇಳಲ್ಪಟ್ಟವನೆಂದು **ಆತ್ಮವಂತಂ** ಎಂಬುದಕ್ಕೆ **ಮನಸ್ವಿನಂ** ಎಂದು ವ್ಯಾಖ್ಯಾನಮಾಡಿ, ಅದರ ವಿವರಣವಾಗಿ, **ಉಪದಿಷ್ಟಾರ್ಥೇ ದೃಢಾವಸ್ಥಿತ ಮನಸಂ** ಎಂದು ಭಾಷ್ಯವನ್ನು ಅನುಗ್ರಹಿಸಿರುತ್ತಾರೆ ; **ಬಂಧಹೇತುಭೂತ ಪ್ರಾಚೀನಾನಂತ ಕರ್ಮಾಣಿ** - ಬಂಧಕ್ಕೆ ಎಂದರೆ ಪುನಸ್ಸಂಸಾರಕ್ಕೆ ಕಾರಣವಾದ ಅನಂತಗಳಾದ ಪ್ರಾಚೀನ ಪುಣ್ಯ ಪಾಪರೂಪ ಕರ್ಮಗಳು, **ನ ನಿಬಧ್ನಂತಿ** - ಬಂಧಿಸಲಾರವು, ಇದರಿಂದ ಇಂತಹ ಜ್ಞಾನಿಗೆ ಅಪುನ ರಾವೃತ್ತಿ ರೂಪವೋಕ್ಷವು ಹೇಳಲ್ಪಟ್ಟಿತು. ಇಲ್ಲಿ **ಯೋಗಸನ್ನ್ಯಸ್ತ ಕರ್ಮಾಣಂ** ಎಂಬಲ್ಲಿ ಯೋಗ ಶಬ್ದಕ್ಕೆ ಕರ್ಮಯೋಗವೆಂದಾಗಲಿ ಭಕ್ತಿಯೋಗವೆಂದಾಗಲಿ ಅರ್ಥವಾಗುವಾಗ, ಬುದ್ಧಿಯೋಗ ವೆಂದು ಅರ್ಥಮಾಡಿದುದು ಹೇಗೆ ಸಮಂಜಸವು ಎಂದರೆ ಶ್ರೀ ವೇದವ್ಯಾಸರು ಮೊದಲು ಗೂಢ ವಾಗಿ ಹೇಳಿ, ಅದರರ್ಥವು ಎಲ್ಲಿ ತಿಳಿಯದೆ ವಿಪರೀತಾರ್ಥವನ್ನು ಮಾಡುತ್ತಾರೋ ಎಂಬ ಭೀತಿ ಯಿಂದ ಅದನ್ನೇ ಮುಂದೆ ವ್ಯಕ್ತಪಡಿಸುವ ಪದ್ಧತಿಯ ಪ್ರಕಾರ, ಈ ಶ್ಲೋಕದಲ್ಲಿ **ಯೋಗಸನ್ನ್ಯಸ್ತ ಕರ್ಮಾಣಂ ಯೋಗಸಂಛಿನ್ನ ಸಂಶಯಂ** ಎಂದು ಹೇಳಬಹುದಾದುದಕ್ಕೆ ಬದಲಾಗಿ **ಜ್ಞಾನ ಸಂಛಿನ್ನ ಸಂಶಯಂ** ಎಂದು ಹೇಳಿರುವದರಿಂದ ಯೋಗಶಬ್ದವು ಜ್ಞಾನಾರ್ಥದಲ್ಲಿ ಪ್ರಯೋಗಿಸ ಲ್ಪಟ್ಟಿರುತ್ತದೆ. ಹೀಗೆ ಗೂಢೋಕ್ತಿಯನ್ನು ಅನಂತರ ವ್ಯಕ್ತಪಡಿಸುವ ಶ್ರುತಿಪ್ರಯೋಗಗಳೂ ಉಂಟು; ಒಂದನ್ನು ನಿದರ್ಶನಾರ್ಥವಾಗಿ ಸೂಚಿಸುವೆವು. ಶ್ವೇತಾಶ್ವತರದಲ್ಲಿ "**ಕ್ಷರಂ ಪ್ರಧಾನಂ, (೧)ಅಮೃತಾಕ್ಷರಂ ಹರಃ, ಕ್ಷರಾತ್ಮಾನಾ ವೀಶತೇ ದೇವ ಏಕಃ**" ತತ್ವತ್ರಯ ನಿರೂಪಣದಲ್ಲಿ ಕ್ಷರ, ಅಕ್ಷರ, ಈಶ ಶಬ್ದಗಳು ಪ್ರಯೋಗಿಸಲ್ಪಟ್ಟಿರುತ್ತವೆ ; **ಕ್ಷರಂ ಪ್ರಧಾನಂ** ಎಂಬುದರಿಂದ ಪ್ರಕೃತಿಯು ಹೇಳಲ್ಪಟ್ಟಿತು ; ಇದರ ಅರ್ಥವು ವ್ಯಕ್ತವು, ಅದರೆ ಅಕ್ಷರ ಶಬ್ದದಿಂದ ಹೇಳಲ್ಪಟ್ಟವನನ್ನು **ಹರಃ** ಎಂದು ನಿರ್ದೇಶಿಸಿ ಹೇಳಿತು ; ಈತ ನೇನು ರುದ್ರನೋ ಇನ್ನ್ಯಾರೋ ಎಂಬ ಶಙ್ಕಾನಿವಾರಣೆಗಾಗಿ ಮುಂದಿನ ವಾಕ್ಯದಲ್ಲಿ **ಕ್ಷರಾ ಕ್ಷರೇ ಈಶತೇದೇವ** ಏಕಃ ಎಂದು ಹೇಳದೆ, **ಕ್ಷರಾತ್ಮಾನೌ** ಎಂದು ಹೇಳಿರುವದರಿಂದ ಅಕ್ಷರ ಶಬ್ದವಾಚ್ಯನು ಆತ್ಮಾ ಎಂದು ಶ್ರುತಿಯೇ ವ್ಯಾಖ್ಯಾನಮಾಡಿ ಹೇಳಿತು;ಆತನೇ ಹರನು ಎಂದರೆ ಈ ಪ್ರಕೃತಿಯ ವಸ್ತುಗಳನ್ನು ತನಗೆ ಬಹು ಭೋಗ್ಯವಾಗಿ **ಹರತೀತಿ ಹರಃ** ಅಪಹರಿಸುವವನು ಸ್ವೀ ಕರಿಸುವನು; ಅವನೇ ಭೋಕ್ತಾ ಎಂದು ಹೇಳಲ್ಪಟ್ಟಿತು. ಈ ಶ್ರುತ್ಯರ್ಥವು **ಭೋಕ್ತಾಭೋಗ್ಯಂ ಪ್ರೇರಿತಾರಂಚಮತ್ವಾ** ಎಂಬ ಶ್ರುತ್ಯರ್ಥದ ಉಪಪಾದನೆಯು (ಶ್ವೇ. ೧. ೧೨.) ಹಾಗೆಯೇ ಇಲ್ಲೂ **ಯೋಗಸನ್ನ್ಯಸ್ತಕರ್ಮಾಣಂ** ಎಂದು ಹೇಳಿ ಅದೇ ಯೋಗಮಹಿಮೆಯಿಂದಲೇ **ಯೋಗ**

(೧) ಗೀ. ೪. ೧೪.

ಮೂ. ತಸ್ಮಾದಜ್ಞಾನ ಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।
ಛಿತ್ವೈನಂ ಸಂಶಯಂ ಯೋಗ ಮಾತಿಷ್ಠೋತ್ತಿಷ್ಠ ಭಾರತ ॥ ೪೨.

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನ ಸಂವಾದೇ ಜ್ಞಾನಯೋಗೋನಾಮ ಚತುರ್ಥೋಽಧ್ಯಾಯಃ.
ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.

ಸಂಛಿನ್ನ ಸಂಶಯಂ ಎಂದು ಹೇಳುವದಕ್ಕೆ ಬದಲಾಗಿ, ಜ್ಞಾನಸಂಛಿನ್ನ ಸಂಶಯಂ ಎಂದಿರುವದರಿಂದ ಯೋಗ ಶಬ್ದಕ್ಕೆ ಕರ್ಮಯೋಗದ ಜ್ಞಾನಾಂಶವೇ ಅರ್ಥವೆಂಬುದು ಸುಸ್ಪಷ್ಟವು ಆದುದರಿಂದ ಯೋಗ ಶಬ್ದಕ್ಕೆ ಆತ್ಮಾವಲೋಕನವೆಂಬರ್ಥವೂ ಅಲ್ಲವು, ಉಪಾಸನವೆಂಬರ್ಥವೂ ಅಲ್ಲವು. ಆ ಕಾರಣದಿಂದಲೇ ಯೋಗಸನ್ನ್ಯಸ್ತ ಕರ್ಮಾಣಂ ಎಂಬಲ್ಲಿ ಕರ್ಮದ ಸ್ವರೂಪತ್ಯಾಗವೆಂಬರ್ಥವು ಕೂಡುವುದೇ ಇಲ್ಲವು. ಇದನ್ನು ವ್ಯಾವರ್ತಿಸಿ ಹೇಳುವದಕ್ಕಾಗಿಯೇ "ಜ್ಞಾನಾಕಾರತಾಪನ್ನ ಕರ್ಮಾಣಂ" ಎಂಬ ಭಾಷ್ಯವು. ಇಲ್ಲಿ ಕರ್ಮಾನುಷ್ಠಾನವನ್ನು ಮಾಡುವವನೇ ಹೇಳಲ್ಪಟ್ಟನೇ ವಿನಾ ಕರ್ಮತ್ಯಾಗಿಯು ಹೇಳಲ್ಪಡಲಿಲ್ಲವು ; ಆಗಲಿ, ಯೋಗ ಶಬ್ದವು ಜ್ಞಾನಯೋಗವನ್ನು ಬೋಧಿಸುತ್ತದೆಂದು ಏಕೆ ಹೇಳಕೂಡದೆಂದು ಆಕ್ಷೇಪಿಸಿದರೆ, ಈಗ ಜ್ಞಾನಯೋಗದ ಪ್ರಶಂಸೆಯ ಪ್ರಕರಣವಲ್ಲವು. ಕರ್ಮಯೋಗದ ಪ್ರಶಂಸೆಯೇ ಪ್ರಕರಣವು; ಏಕೆಂದರೆ ಯೋಗಮಾತಿಷ್ಠೋತ್ತಿಷ್ಠ ಎಂದು ನಿಗಮನದಲ್ಲಿ ಯುದ್ಧಕ್ಕೆ ಏಳು ನಾವಕಾಶ ಬೇಡ, ಎಂದು ಹೇಳುವದರಿಂದ ಜ್ಞಾನಯೋಗಾರ್ಥವನ್ನು ನಿರಾಕರಿಸಿ ಹೇಳುವದಕ್ಕಾಗಿ "ಯಥೋಪದಿಷ್ಟೇನಚಾತ್ಮಜ್ಞಾನೇನ" ಎಂಬ ಭಾಷ್ಯವು.

ಮೂಲಕ್ಕೆ ಅರ್ಥವು:—ಹೀಗೆ ವಿಸ್ತರವಾಗಿ ಕರ್ಮಯೋಗದ ಸ್ವರೂಪಭೇದ ಜ್ಞಾನಾಕಾರತೆ ಫಲವೊದಲಾದವುಗಳನ್ನೆಲ್ಲಾ ಉಪಪಾದಿಸಿ ಹೇಳಿದುದನ್ನು ಹಿಂದಿನ ಶ್ಲೋಕದಲ್ಲಿ ನಿಗಮನಮಾಡಿ ಹೇಳಿ, ಈ ಶ್ಲೋಕದಿಂದ ಅರ್ಜುನನಿಗೆ ಆ ಉಪದೇಶಗಳನ್ನು ಅನ್ವಯಿಸಿ ಆತನು ಏನು ಮಾಡತಕ್ಕದ್ದೆಂಬುದನ್ನು ತಿಳಿಸುತ್ತಾರೆ. ತಸ್ಮಾತ್ - ಹೀಗೆ ಕರ್ಮಯೋಗವೇ ಅವಶ್ಯಾನುಷ್ಠೇಯವಾಗಿ ಅದರಲ್ಲಿ ಜ್ಞಾನಾಂಶವೇ ಪ್ರಧಾನವಾಗಿ ಮುಕ್ತಿಗೆ ಹೇತುವಾಗುವದರಿಂದ, ಅಜ್ಞಾನಸಂಭೂತಂ - ಅನಾದಿ ಕರ್ಮವಾಸನೆಯಿಂದುಂಟಾದ ಅಜ್ಞಾನದಿಂದ ಹುಟ್ಟಿದ, ಹೃತ್ಸ್ಥಂ – ಹೃದಯದಲ್ಲಿ ಅಡಗಿರುವ, ಏನಂ ಸಂಶಯಂ-ಈ ಆತ್ಮ ಜ್ಞಾನವಿಷಯದಲ್ಲಿರುವ ಸಂದೇಹವನ್ನು, ಸಂಶಯಕ್ಕೆ ಕಾರಣವು ವಿಶೇಷ ಜ್ಞಾನವಿಲ್ಲದಿರುವಿಕೆಯು, ಆದುದರಿಂದ ಅಜ್ಞಾನಸಂಭೂತವೆಂದು ಹೇಳಲ್ಪಟ್ಟಿತು, ಅರ್ಜುನನಿಗೆ ಈಗ ಸಂಶಯವು ಯಾವುದೆಂದರೆ ಯುದ್ಧಮಾಡಿ ಭೀಷ್ಮದ್ರೋಣಾದಿಗಳನ್ನೂ ದುರ್ಯೋಧನಾದಿ ಜ್ಞಾತಿಗಳನ್ನೂ ಕೊಲ್ಲುವದು ಧರ್ಮವೋ ಅಧರ್ಮವೋ ಎಂಬ ಸಂಶಯವು, ಆತ್ಮನಃ - ಜೀವಾತ್ಮನ ವಿಷಯವಾದ, ಜ್ಞಾನಾಸಿನಾ–ಯಥಾರ್ಥಜ್ಞಾನವೆಂಬ ಕತ್ತಿಯಿಂದ, ಛಿತ್ವಾ - ಭೇದಿಸಿ, ಯೋಗಮಾತಿಷ್ಠ - ಈ ಕರ್ಮಯೋಗಾನುಷ್ಠಾನವನ್ನೇ ಮಾಡು, ಹೇ ಭಾರತ - ಓ ಭರತನ ವಂಶದಲ್ಲಿ ಜನಿಸಿದವನೇ, ಉತ್ತಿಷ್ಠ - ಅಂತಹ ಭರತರಾಜನ ಪ್ರವೃತ್ತಿಗನುಗುಣನಾಗಿ, ಉತ್ತಿಷ್ಠ - ಯುದ್ಧಕ್ಕೆ ಏಳು. ಹಾಗೆ ಭಾರತನೆಂದು ಹೇಳಿಸಿಕೊಳ್ಳಬೇಕಾದರೆ ನೀನು ಎದ್ದು ಯುದ್ಧಮಾಡತಕ್ಕದ್ದೇ ನ್ಯಾಯವೆಂಬ ಭಾವವು ಜ್ಞಾನಾಸಿನಾ ಛಿತ್ವಾ ಎಂದು ಹೇಳಿರುವದರಿಂದ ಸಂಶಯವನ್ನು ಕವಳೀ ಮೊದಲಾದ ಒಂದು ವೃಕ್ಷವಾಗಿ ರೂಪಕಮಾಡಿ ಹೇಳಿ, ಜ್ಞಾನವೆಂಬ ಕತ್ತಿಯಿಂದ ಭೇದಿಸತಕ್ಕದ್ದೆಂದು ಹೇಳಿದಂತಾಯಿತು. ॥ ೪೨ ॥

ಭಾ. ತಸ್ಮಾದನಾದ್ಯಜ್ಞಾನಸಂಭೂತಂ, ಹೃತ್ಸ್ಥಂ ಆತ್ಮವಿಷಯಂ ಸಂಶಯಂ ಮಯೋಪದಿಷ್ಟೇನಾತ್ಮಜ್ಞಾನಾಸಿನಾ ಛಿತ್ವಾ ಮಯೋಪದಿಷ್ಟಂ ಕರ್ಮಯೋಗಮಾತಿಷ್ಠ, ತದರ್ಥಮುತ್ತಿಷ್ಠ ಭಾರತೇತಿ ॥ ೪೨ ॥

ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ ಚತುರ್ಥೋಽಧ್ಯಾಯಃ ॥೪॥

ಶ್ರೀಮತೇ ರಾಮಾನುಜಾಯನಮಃ.

ಭಾಷ್ಯಾರ್ಥವು:—ತಸ್ಮಾತ್ - ಆ ಕಾರಣದ ದೆಸೆಯಿಂದ ಎಂದರೆ ಕರ್ಮಯೋಗವೇ ಸರ್ವಶ್ರೇಷ್ಠವಾಗಿ, ಅಂತರ್ಗತ ಆತ್ಮಜ್ಞಾನವುಳ್ಳದ್ದಾಗಿ, ಗುರೂಪದೇಶದಿಂದ ಪರಿಪಾಕಾವಸ್ಥೆಯನ್ನು ಹೊಂದಿ ಆತ್ಮಸಾಕ್ಷಾತ್ಕಾರಕ್ಕೆ ಹೇತುವಾಗಿರುವದರಿಂದ, ಅನಾದ್ಯಜ್ಞಾನ ಸಂಭೂತಂ - ಅನಾದಿಯಾದ ಕರ್ಮವಾಸನೆಯಿಂದುಂಟಾದ ಅಜ್ಞಾನದಿಂದ ಹುಟ್ಟಿದ, ಹೃತ್ಸ್ಥಂ. ಹೃದಯಕ್ಕೆ ಅಂಟಿದ, ಆತ್ಮವಿಷಯಂ ಸಂಶಯಂ - ಆತ್ಮ ಸಂಬಂಧವಾದ ಸಂಶಯವನ್ನು, ಮಯೋಪದಿಷ್ಟೇನಾತ್ಮಜ್ಞಾನಾಸಿನಾ - ನನ್ನಿಂದ ಉಪದೇಶಿಸಲ್ಪಟ್ಟ ಆತ್ಮಜ್ಞಾನವೆಂಬ ಕತ್ತಿಯಿಂದ, ಇಲ್ಲಿ ಸರ್ವೇಶ್ವರನಾಗಿ ಸರ್ವಜ್ಞನಾಗಿ ಪರಮ ಕಾರುಣಿಕನಾಗಿರುವದರಿಂದ ಪರಮ ಹಿತವಾದುದೆಂಬಭಿಪ್ರಾಯದಿಂದ ಮಯೋಪದಿಷ್ಟೇನ ಆತ್ಮಜ್ಞಾನಾಸಿನಾ ಎಂದು ಹೇಳಲ್ಪಟ್ಟಿತು. ಆತ್ಮನಃ ಜ್ಞಾನಾಸಿನಾ ಆತ್ಮನಃ ಸಂಶಯಂ ಛಿತ್ವಾ ಎಂದೂ ಆತ್ಮನಃ ಎಂಬುದನ್ನು ಕಾಕಾಕ್ಷಿನ್ಯಾಯದಿಂದ ಅನ್ವಯಿಸಬಹುದು; ಆತ್ಮಾವಿನ ಧರ್ಮಭೂತಜ್ಞಾನವಿಕಾಸರೂಪ ಕತ್ತಿಯಿಂದ ಆತ್ಮವಿಷಯವಾದ ಸಂಶಯವೆಂಬ ವೃಕ್ಷವನ್ನು ಛೇದಿಸಿ ಎಂದೂ ಅರ್ಥಮಾಡಬಹುದು, ಛಿತ್ವಾ - ಕತ್ತರಿಸಿ, ಮಯೋಪದಿಷ್ಟಂ ಕರ್ಮಯೋಗಂ - ನನ್ನಿಂದ ಉಪದೇಶಿಸಲ್ಪಟ್ಟ ಕರ್ಮಯೋಗವನ್ನು, ಉಭಯವಿಧ ಜ್ಞಾನಾಕಾರತೆಯುಳ್ಳದ್ದು ಎಂಬದಾಗಿ ಉಪದೇಶಿಸಲ್ಪಟ್ಟದ್ದನ್ನು, ಆತಿಷ್ಠ - ಅನುಷ್ಠಿಸು, ಹೇಗೆ ಅನುಷ್ಠಿಸತಕ್ಕದ್ದೆಂದರೆ ಕರ್ತೃತ್ವ ಫಲಸಙ್ಗಗಳನ್ನು ಬಿಟ್ಟು ಅನುಷ್ಠಿಸು ಎಂಬ ಭಾವವು. ಇಲ್ಲಿ ಯೋಗ ಶಬ್ದಕ್ಕೆ ಪ್ರಕರಣಾತ್ ಕರ್ಮಯೋಗ ನಿಗಮನವನ್ನು ಮಾಡಿ ಹೇಳುವದರಿಂದ ಕರ್ಮಯೋಗವೆಂದು ಅರ್ಥಮಾಡಿರುತ್ತಾರೆ. ಶ್ರೀಮಚ್ಛಂಕರಾಚಾರ್ಯರೂ ಕರ್ಮಯೋಗವೆಂದೇ ಅರ್ಥಮಾಡಿರುತ್ತಾರೆ. ತದರ್ಥಂ - ಅದಕ್ಕಾಗಿ, ಉತ್ತಿಷ್ಠ ಭಾರತ - ಓ ಭರತನಾದ ಯೋಗಿಯ ವಂಶದಲ್ಲಿ ಹುಟ್ಟಿರುವದರಿಂದ ಮೋಕ್ಷಾರ್ಹನಾದ ಅರ್ಜುನನೇ, ಉತ್ತಿಷ್ಠ - ಯುದ್ಧಕ್ಕಾಗಿ ಏಳು; ಇತಿ - ಎಂದು ಅಧ್ಯಾಯ ಸಮಾಪ್ತಿಯು. ಹೀಗೆ ನಾನು ಹೇಳಿದ ರೀತಿಯಲ್ಲಿ ಭಗವತ್ಪ್ರೀತಿಗೋಸ್ಕರವಾಗಿ ನಿನ್ನ ವರ್ಣಕ್ಕೆ ಉಚಿತವಾದ ಧರ್ಮವನ್ನು ಭಗವತ್ಪ್ರೀತಿಗಾಗಿ ಆಚರಿಸು ಎಂಬ ಭಾವದಿಂದ ಯುದ್ಧಮಾಡು ಎಂಬುದು ಬೋಧಿಸಲ್ಪಟ್ಟಿತು.

ಇಂತು ಜ್ಞಾನಯೋಗವೆಂಬ ಶ್ರೀಮದ್ಭಗವದ್ಗೀತೆಯ ನಾಲ್ಕನೆಯ ಅಧ್ಯಾಯಕ್ಕೆ

ಚುಂ. ಮೇ. ವಿಜಯರಾಘವಶರ್ಮನಿಂದ ರಚಿಸಲ್ಪಟ್ಟ ಆಚಾರ್ಯಹೃದಯಾನ್ವೇಷಿಣೀ

ಎಂಬ ಅರ್ಥ ತಾತ್ಪರ್ಯಾದಿಗಳು ಸಮಾಪ್ತವಾದವು.

ಶ್ರೀಮತೇ ನಿಗಮಾನ್ತ ಮಹಾದೇಶಿಕಾಯನಮಃ

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯನಮಃ

## ಶ್ರೀಮದ್ಗೀತಾರ್ಥಸಙ್ಗ್ರಹೇ ಚತುರ್ಥಾಧ್ಯಾಯಸ್ಯ ಸಙ್ಗ್ರಹಶ್ಲೋಕಃ

ಪ್ರಸಙ್ಗಾತ್ಸ್ವಸ್ವಭಾವೋಕ್ತಿಃ, ಕರ್ಮಣೋಽಕರ್ಮತಾ, ಸ್ಯ ಚ ।
ಭೇದಾ, ಜ್ಞಾನಸ್ಯ ಮಾಹಾತ್ಮ್ಯಂ, ಚತುರ್ಥಾಧ್ಯಾಯ ಉಚ್ಯತೇ ॥ ೮ ॥

ಶ್ರೀಮದ್ಯಾಮುನಮುನಯೇನಮಃ

ಅರ್ಥ (೧) ಪ್ರಸಙ್ಗಾತ್ - ಪ್ರಕರಣಕ್ಕೆ ಸಾಕ್ಷಾತ್ತಾಗಿ ಸಂಬಂಧವಿಲ್ಲದಿದ್ದರೂ "ಸ್ಮೃತಸ್ಯ ಉಪೇಕ್ಷಾನರ್ಹತ್ವಂ ಪ್ರಸಙ್ಗಃ" ಎಂದು ಹೇಳಿರುವಪ್ರಕಾರ ಪ್ರಶ್ನೆಗೆ ಉತ್ತರವನ್ನು ಹೇಳದಿರಲು ಸಾಧ್ಯವಿಲ್ಲದಿರುವ ವಿಷಯವಾದುದರಿಂದ, ಸ್ವಸ್ವಭಾವೋಕ್ತಿಃ - ಅವತಾರಾವಸ್ಥೆಯಲ್ಲಿನ ತನಗೇನೇ ಅಸಾಧಾರಣವಾದ ಸ್ವರೂಪಾದಿಗಳ ಉಪದೇಶವೂ (೨) ಕರ್ಮಣಃ - ಕರ್ಮಯೋಗದ, ಅಕರ್ಮತಾ - ಕರ್ಮವಲ್ಲದೆ ಜೇರೆಯಾದ ಅಂಶವೂ ಎಂದರೆ ಜ್ಞಾನಾಕಾರತೆಯೂ (೩) ಅಸ್ಯ ಚ - ಈ ಕರ್ಮಯೋಗದ, ಭೇದಾಃ - ಭೇದಗಳೂ (೪) ಜ್ಞಾನಸ್ಯ-ಆ ಕರ್ಮಯೋಗದಲ್ಲಿನ ಜ್ಞಾನಾಂಶಕ್ಕೇನೆ, ಮಾಹಾತ್ಮ್ಯಂ - ಮಾಹಾತ್ಮ್ಯೆಯೂ ಸಹ, ಚತುರ್ಥಾಧ್ಯಾಯೇ - ಈ ನಾಲ್ಕನೆಯ ಅಧ್ಯಾಯದಲ್ಲಿ, ಉಚ್ಯತೇ - ಹೇಳಲ್ಪಡುತ್ತದೆ ॥ ೮ ॥

(೧) ಪ್ರಸಙ್ಗಾತ್ ಸ್ವಸ್ವಭಾವೋಕ್ತಿಃ - ಅವತಾರ ರಹಸ್ಯಗಳು ಪ್ರಾಸಙ್ಗಿಕವಾಗಿ ಹೇಳಲ್ಪಟ್ಟವು. ಕರ್ಮಯೋಗದ ಮಾಹಾತ್ಮ್ಯೆಯನ್ನು ಶ್ರೀ ಕೃಷ್ಣ ಭಗವಾನರವರು ಉಪದೇಶಿಸಲು ಪ್ರಾರಂಭಿಸಿ ನಾನೇ ಹಿಂದೆ ಇದನ್ನು ಸೂರ್ಯನಿಗೆ ಉಪದೇಶಿಸಿದೆನೆಂದು ಹೇಳಲು, ಸೂರ್ಯನ ಜನ್ಮವು ಬಹು ಹಿಂದನಕಾಲದಲ್ಲೂ, ನೀನು ಈಗಿರುವದು ಈಚಿನಕಾಲದಲ್ಲೂ ಇರುವಾಗ, ನೀನೇ ಹಿಂದೆಯೂ ಉಪದೇಶಿಸಿದಿ ಎಂಬ ವಿಷಯವನ್ನು ತಿಳಿಯುವ ಬಗೆ ಹೇಗೆ ಎಂದು ಯಾವಾಗ ಅರ್ಜುನನು ಪ್ರಶ್ನಿಸಿದನೋ, ಆಗ ಅದನ್ನು ಉಪದೇಶಿಸಲೇ ಜೇಕಾದುದರಿಂದ "ಬಹೂನಿಮೇ" ಎಂದಾರಂಭಿಸಿ ಐದು ಶ್ಲೋಕಗಳಿಂದ, ಅವತಾರ ರಹಸ್ಯಗಳನ್ನೆಲ್ಲಾ ಉಪದೇಶಿಸಬೇಕಾಗಿ ಬಂತು. ಆದರೆ ಮೋಕ್ಷಾರ್ಥಿಗೆ ಸಂಪೂರ್ಣವಾಗಿ ಅನಾವಶ್ಯಕವಾದ ಪಕ್ಷದಲ್ಲಿ, ಇದು ಪ್ರಕರಣಕ್ಕೆ ಅನಾವಶ್ಯಕವೆಂದು ತಿರಸ್ಕಾರಮಾಡಬಹುದಾಗಿತ್ತು. ಆದರೆ ಮೋಕ್ಷಾರ್ಥಿಗೂ ಆವಶ್ಯಕವಾದ ವಿಷಯವಾದುದರಿಂದ (ಶ್ಲೋ. ೯.) "ತ್ಯಕ್ತ್ವಾದೇಹಂ ಪುನರ್ಜನ್ಮ ನೈತಿ" ಎಂದುಪದೇಶಿಸಿ ಅವತಾರವಿಷಯವೆಲ್ಲವೂ ಸವಿಸ್ತರವಾಗಿ ಹೇಳಲ್ಪಟ್ಟಿತು. ಇಲ್ಲಿ ಹೇಳಿರುವದು ಸಙ್ಗ್ರಹವಾಗಿ ಏನೆಂದರೆ—ಅಖಿಲ ಹೇಯ ಪ್ರತ್ಯನೀಕನಾಗಿ ಕಲ್ಯಾಣಗುಣಾಕರನಾಗಿರುವ ಸರ್ವೇಶ್ವರನ ಜನ್ಮವು ಇಂದ್ರಜಾಲದಹಾಗೆ ಮಿಥ್ಯೆಯಲ್ಲವು. ಸತ್ಯವಾದುದು(ಶ್ಲೋ.೫) ಎಂದೂ, ಅವತರಿಸುವಾಗ ನಮ್ಮಗಳಹಾಗೆಜ್ಞಾನ ಸಙ್ಕೋಚ ಸ್ವಲ್ಪವೂ ಇಲ್ಲದೆ, ಸರ್ವಜ್ಞತ್ವ, ಸತ್ಯಸಙ್ಕಲ್ಪತ್ವ, ಅಜತ್ವ, ಅವ್ಯಯತ್ವ, ಸರ್ವೇಶ್ವರತ್ವ ಮೊದಲಾದ ಸಮಸ್ತ ಸಹಜವಾದ ಪಾರಮೈಶ್ವರ್ಯವನ್ನು ಈಷಪಿ ಬಿಡದೆ ಹುಟ್ಟುವನೆಂದೂ(ಶ್ಲೋ.೬), ಅವತರಿಸುವನ್ನತನ್ನ ಶರೀರವು, ನಮ್ಮಗಳಹಾಗೆ ದೋಷಯುಕ್ತವಾಗಿ ತ್ರಿಗುಣಾತ್ಮಕವಾಗಿ ಪ್ರಾಕೃತವಾದುದಲ್ಲವು,ಅಪ್ರಾಕೃತವಾದ ಶುದ್ಧ ಸತ್ವಮಯವಾದುದೆಂದೂ (ಶ್ಲೋ.೭), ತನ್ನ ಜನ್ಮವು ನಮ್ಮಗಳಹಾಗೆ ಪ್ರಾರಬ್ಧ ಕರ್ಮಾನುಗುಣ ಉಂಟಾದುದಲ್ಲವೆಂದೂ ಸ್ವಸಙ್ಕಲ್ಪದಿಂದಲೇ ಉಂಟಾಗುವದೆಂದೂ (ಶ್ಲೋ.೮), ಅವತಾರಕ್ಕೆ ಕಾಲವು, ನಮ್ಮಗಳಹಾಗೆ ಕರ್ಮವಿಪಾಕ ಕಾಲವಲ್ಲದೆ, ಧರ್ಮಕ್ಕೆ ಗ್ಲಾನಿಯೂ ಅಧರ್ಮಕ್ಕೆ ಏಳಿಗೆಯೂ ಪ್ರಾಪ್ತವಾದಾಗವೆಂದೂ (ಶ್ಲೋ.೯), ನಮ್ಮಗಳಹಾಗೆ ಸುಖದುಃಖಾನುಭವಕ್ಕಲ್ಲದೆ ಸಾಧು ಪರಿತ್ರಾಣಕ್ಕಾಗಿಯೂ ದುಷ್ಟನಿಗ್ರಹಕ್ಕಾಗಿಯೂ ಧರ್ಮ ಸಂಸ್ಥಾಪನೆಗಾಗಿಯೂ ಅವತಾರವೆಂದೂ (ಶ್ಲೋ. ೧೦),

ಹೀಗೆ ಸ್ವರೂಪದಿಂದಲೂ, ಪ್ರಕಾರದಿಂದಲೂ, ದ್ರವ್ಯದಿಂದಲೂ, ಕಾರಣದಿಂದಲೂ, ಕಾಲದಿಂದಲೂ, ಪ್ರಯೋಜನದಿಂದಲೂ ತಮ್ಮ ಅವತಾರಗಳಿಗೆ ದಿವ್ಯತ್ವವು ಸ್ಥಾಪಿಸಲ್ಪಟ್ಟಿತು. ಆದುದರಿಂದಲೇ ವಾಲ್ಮೀಕಿ ಪರಾಶರ ವ್ಯಾಸ ಶುಕ ಶೌನಕಾದಿ ಮಹರ್ಷಿಗಳು ಈ ಅವತಾರ ರಹಸ್ಯಾದಿಗಳನ್ನು ಲೋಕ ಹಿತಾರ್ಥವಾಗಿ ವ್ಯಕ್ತಪಡಿಸುವದರಲ್ಲಿಯೇ ವಿಶೇಷ ಆದರವನ್ನು ಪ್ರಕಟಿಸಿರುತ್ತಾರೆ.

(೨) ಕರ್ಮಣೋಽಕರ್ಮತಾ - ಕರ್ಮಯೋಗಕ್ಕೆ ಜ್ಞಾನಾಕಾರತೆಯನ್ನು ಹೇಳಲು ೧೨ನೆಯ ಶ್ಲೋಕದಿಂದುಪಕ್ರಮಿಸಿ ೨೩ನೆಯ ಶ್ಲೋಕದವರೆಗೂ, ಆತ್ಮ ಸ್ವರೂಪವು ಪ್ರಕೃತಿ ವಿಯುಕ್ತ ದೆಶೆಯಲ್ಲಿ ಪರಮ ಮಹತ್ತಾದುದೆಂದು ಉಪದೇಶಿಸಿರುತ್ತಾರೆ. ೧೬ನೆಯ ಮತ್ತು ೧೮ನೆಯ ಶ್ಲೋಕಗಳಲ್ಲಿ "ಕರ್ಮಣ್ಯ ಕರ್ಮಯಃ ಪಶ್ಯೇತ್" ಎಂಬಲ್ಲಿ ಇದು ವ್ಯಕ್ತವು. ಈ ಜೀವಾತ್ಮನಿಗೆ ಪ್ರಕೃತಿ ಸಂಬಂಧದಿಂದ ಜ್ಞಾನ ಸಂಕೋಚವುಂಟಾಗಿರುವದಕ್ಕೆ ಕಾರಣವು ಸೃಷ್ಟಿಕರ್ತನಾಗಿ ತಾನೆಯೋ ಅಥವಾ ಜೀವಾತ್ಮನೇ ಎಂಬುದು ಚರ್ಚಿಸಲ್ಪಟ್ಟು ತಾನೇ ಮೂಲಕಾರಣನಾದರೂ ತನಗೆ ಸಂಬಂಧಿಸಿದುದಲ್ಲವೆಂದೂ ಜೀವಾತ್ಮರ ಕರ್ಮಗಳೇ ಕಾರಣವೆಂದೂ ತಿಳಿಸಿ, ತನಗೆ ವೈಷಮ್ಯ ನೈರ್ಘೃಣ್ಯ ದೋಷವಿಲ್ಲವೆಂದು ಹೇಳಿಕೊಂಡರು (೧೩-೧೪). ೧೯, ೨೦, ೨೧ಮೂರು ಶ್ಲೋಕಗಳಿಂದ ಕರ್ಮಕ್ಕೆ ಅಕರ್ಮತಾ, ಕರ್ಮವಲ್ಲದೇ ಇರುವ ಭಾವವು ಎಂದರೆ ಜ್ಞಾನಾಕಾರತೆಯು ಸಂಭವಿಸುತ್ತದೆಂದು ಉಪಪಾದಿಸಿರುತ್ತಾರೆ. ಕರ್ಮಯೋಗಕ್ಕೆ ಆತ್ಮಯಾಥಾತ್ಮ್ಯಾನುಸಂಧಾನವು ಅತ್ಯಾವಶ್ಯಕವೆಂದು ಹೇಳಲ್ಪಟ್ಟಿರುತ್ತದೆ. ಕರ್ಮಗಳಲ್ಲಿ ಫಲಸಙ್ಗಾದಿಗಳನ್ನು ತ್ಯಜಿಸಿ, ತಾನು ಮಾಡುವ ಕರ್ಮವೆಲ್ಲವೂ ಪರಾಯತ್ತವಾದುದೆಂದು ತಿಳಿದು, ಫಲಾಭಿಸಂಧಿರಹಿತನಾಗಿ ಯಾವನು ಕರ್ಮವನ್ನೆಸಗುವನೋ, ಅವನು ಜ್ಞಾನಾಭ್ಯಾಸವನ್ನೇ ಮಾಡುವನೆಂದೂ ಹೇಳಲ್ಪಟ್ಟಿತು. ಇಂತಹ ಜ್ಞಾನದಿಂದ ಮಾಡಿದ ಕರ್ಮಾನುಷ್ಠಾನದಿಂದ ಪ್ರಾಚೀನಕರ್ಮಗಳೆಲ್ಲಾ ನಶಿಸಿ ಹೋಗುತ್ತವೆ ಎಂದು ೨೧, ೨೨, ೨೩ನೇ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುತ್ತದೆ. ಅದರ ಮುಂದಿನ ಶ್ಲೋಕದಲ್ಲಿ ಕರ್ಮಯೋಗದ ಜ್ಞಾನಾಕಾರತೆಯು ಎರಡು ವಿಧವೆಂದು ಹೇಳಲ್ಪಟ್ಟಿರುತ್ತದೆ. ಒಂದನೇದು ಪ್ರಕೃತಿ ವಿಯುಕ್ತ ದೆಶೆಯಲ್ಲಿ ಆತ್ಮಸ್ವರೂಪವು ಅಮೋಘನೆಂದೂ ಅಂತಹ ಸ್ಥಿತಿಯಲ್ಲಿ ಸರ್ವ ಜೀವಾತ್ಮರೂ ಸಮವೆಂದೂ ಅವರು ಆಗ ಪರಮಾತ್ಮನಿಗೂ ಸಮರೆಂದೂ (೩೫) ತಿಳಿಯ ತಕ್ಕದ್ದು. ಎರಡನೆಯದು, ಕರ್ಮಯೋಗಿಯೂ ಆತನು ಮಾಡುವ ಕರ್ಮಗಳೂ, ಕರ್ಮ ಸಂಕರಗಳೂ, ಎಲ್ಲವೂ ಬ್ರಹ್ಮಾತ್ಮಕವೆಂದೂ, ಫಲವೂ ಪರಮಾತ್ಮನದೇ ಎಂದೂ, ಹೀಗೆ ಸರ್ವ ಕರ್ಮಗಳೂ ಪರಬ್ರಹ್ಮಾತ್ಮಕವೆಂದೂ ತಿಳಿಯತಕ್ಕದ್ದು. (೨೪)

೩. ಅಸ್ಯ ಚ ಭೇದಾಃ. ಅಲ್ಲಿಂದ ಮುಂದಕ್ಕೆ (೨೫ರಿಂದ೩೨)ರವರೆಗೆ ಆ ಕರ್ಮಯೋಗದ ಭೇದಗಳು ಹೇಳಲ್ಪಟ್ಟವು. ದೇವಾರ್ಚನ, ಇನ್ದ್ರಿಯ ನಿರೋಧ, ಪ್ರಾಣಾಯಾಮ, ಯಾಗ, ದಾನ, ಹೋಮ, ತಪಸ್ಸು, ತೀರ್ಥಯಾತ್ರೆ, ಸ್ವಾಧ್ಯಾಯ, ಅದರ ಅರ್ಥಾಭ್ಯಾಸ, ಇವುಗಳಲ್ಲಿ ಒಂದನ್ನು ವರ್ಣಾಶ್ರಮ ಧರ್ಮಗಳೊಂದಿಗೆ, ತನ್ನ ಜ್ಞಾನ ಶಕ್ತಿ ರುಚಿಗಳಿಗನುಗುಣವಾಗಿ ಪ್ರಾಧಾನ್ಯವಾಗಿ ಅನುಷ್ಠಿಸಬಹುದಾದ ಕರ್ಮಯೋಗ ಪ್ರಭೇದಗಳು ಎಂಬ ಭಾವವು. ಹೀಗೆ ಅನೇಕ ಪ್ರಭೇದಗಳಿದ್ದರೂ ಎಲ್ಲಕ್ಕೂ ಫಲವು ಒಂದೇ ಎಂದೂ ಹೀಗೆ ಯಜ್ಞಾನುಷ್ಠಾನಮಾಡುವರು ಯಜ್ಞಶಿಷ್ಟಾಮೃತವನ್ನು ತೆಗೆದುಕೊಳ್ಳುವವರಿಂದ ೩೦ನೆಯ ಶ್ಲೋಕದಲ್ಲಿ "ಯಾಂತಿ ಬ್ರಹ್ಮಸನಾತನಂ" ಎಂದು ಹೇಳಲ್ಪಟ್ಟಿತು. ಹೀಗೆ ಯಜ್ಞಾನುಷ್ಠಾನವಿಲ್ಲದವನಿಗೆ ದುರ್ಗತಿಯುಂಟೆಂದು ೩೧ನೆಯ ಶ್ಲೋಕದಲ್ಲಿ ಹೇಳಿದರು.

೪. ಜ್ಞಾನಸ್ಯ ಮಾಹಾತ್ಮ್ಯಂ. ಅನಂತರ ಕರ್ಮಯೋಗದಲ್ಲಿ ಕರ್ಮಾಕಾರತೆಯೂ, ಜ್ಞಾನಾಕಾರತೆಯೂ ಹೀಗೆ ಎರಡು ಅಂಶಗಳಿರುವದರಿಂದ, ಅವುಗಳಲ್ಲಿ ಜ್ಞಾನಾಂಶಕ್ಕೇ ಮಾಹಾ

ಶ್ರೈಷ್ಠ್ಯವು ಎಂದರೆ ಪ್ರಾಧಾನ್ಯತೆಯು ಎಂದು ೩೩ನೆಯ ಶ್ಲೋಕದಲ್ಲಿ "ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್" ಎಂಬಲ್ಲಿ ಉಪಪಾದಿಸಿರುತ್ತಾರೆ. ಈ ಅಭಿಪ್ರಾಯಗಳನ್ನೇ ಶ್ರೀ ಯತಿವರ್ಯರು ನಾಲ್ಕನೆಯ ಅಧ್ಯಾಯದ ಅವತಾರಿಕೆಯಲ್ಲಿ "ತೃತೀಯೇಽಧ್ಯಾಯೇ ಪ್ರಕೃತಿಸಂಸೃಷ್ಟಸ್ಯ ಮುಮುಕ್ಷೋಃ ಸಹಸಾ ಜ್ಞಾನಯೋಗೇಽನಧಿಕಾರಾತ್ಕರ್ಮಯೋಗ ಏವಕಾರ್ಯಃ; ಜ್ಞಾನಯೋಗಾಧಿಕಾರಿಣೋಽಪಿ ಅಕರ್ತೃತ್ವಾನುಸಂಧಾನಪೂರ್ವಕಃ ಕರ್ಮಯೋಗ ಏವ ಶ್ರೇಯಾನಿತಿ ಸಹೇತುಕ ಮುಕ್ತಮ್; "ಶಿಷ್ಟತಯಾ ವ್ಯಪದೇಶ್ಯಸ್ಯತು ವಿಶೇಷತಃ ಕರ್ಮಯೋಗ ಏವಕಾರ್ಯ ಇತಿ ಚೋಕ್ತಮ್; ಚತುರ್ಥೇನ ಇದಾನೀಂ" ಎಂಬುದರ ಮೂಲಕ ಸಙ್ಗ್ರಹವಾಗಿ ಹೇಳಿರುತ್ತಾರೆ. ಆ ಜ್ಞಾನಾಂಶದ ಪರಿಪಾಕಾವಸ್ಥೆಯು ಲಭಿಸಬೇಕಾದರೆ ಒಳ್ಳೇ ಗುರುವನ್ನಾಶ್ರಯಿಸಿ ಪ್ರತಿನಿತ್ಯವೂ ಉಪದೇಶಮೂಲಕ ಲಭಿಸುವ ಈ ಆತ್ಮಾನುಸಂಧಾನದಿಂದ ಆತ್ಮಸಾಕ್ಷಾತ್ಕಾರವು ಉಂಟಾಗುತ್ತದೆಂದು ಹೇಳಿರುತ್ತಾರೆ. (೩೪) ಇಂತಹ ಜ್ಞಾನ ಉಂಟಾದರೆ ಭ್ರಮಾದಿಗಳೆಲ್ಲಾ ತೊಲಗುವವೆಂದು ಮುಂದಿನ ಶ್ಲೋಕದಲ್ಲಿ ಉಪದೇಶಿಸಿ ಇಂತಹ ಜ್ಞಾನವು ಪರಮಪವಿತ್ರವೆಂದು ಅದರ ಮಾಹಾತ್ಮ್ಯವನ್ನು ಮುಂದಿನ ಮೂರು ಶ್ಲೋಕಗಳಿಂದ ಉಪಪಾದಿಸಿ ಆ ಜ್ಞಾನವು ಸಮಸ್ತ ಪ್ರಾಚೀನ ಕರ್ಮಗಳನ್ನೂ ಭಸ್ಮಮಾಡುತ್ತದೆಂದು ಹೇಳಿರುತ್ತಾರೆ. ಇಂತಹ ಜ್ಞಾನದ ಪರಿಪಕ್ವಾವಸ್ಥೆಯು ಉಂಟಾಗಬೇಕಾದರೆ ಶ್ರದ್ಧೆಯೂ ಆಸಕ್ತಿಯೂ, ಆ ಜ್ಞಾನವಲ್ಲದೆ ಇತರ ವಿಷಯಗಳಲ್ಲಿ ವೈರಾಗ್ಯವೂ ಆವಶ್ಯಕವೆಂದು ೩೯ರಲ್ಲಿ ಹೇಳಿರುತ್ತಾರೆ. ಹಾಗಲ್ಲದೆ ಆತ್ಮಜ್ಞಾನದಲ್ಲಿ ಸಂಶಯವಿರುವವನಿಗೆ ಯಾವ ಪುರುಷಾರ್ಥವೂ ಇಲ್ಲವೆಂದು ೪೦ರಲ್ಲಿ ನಿಷೇಧಿಸಿರುತ್ತಾರೆ. ಇಂತಹ ಕರ್ಮಯೋಗದ ಜ್ಞಾನಾಂಶ ಮಾಹಾತ್ಮ್ಯವನ್ನು ತಿಳಿದು ಅದರ ಪರಿಪಕ್ವಾವಸ್ಥೆಯನ್ನು ಗುರುಮುಖೇನ ಹೊಂದಿದವನಿಗೆ ಫಲವನ್ನು ಹೇಳಿ, ಆದುದರಿಂದ ಕರ್ಮಯೋಗವು ಸರ್ವಶ್ರೇಷ್ಠವಾದುದರಿಂದ ಕ್ಷತ್ರಿಯನಿಗೆ ಯುದ್ಧಮಾಡುವದು ಯಜ್ಞರೂಪ ಕರ್ಮಯೋಗವಾದುದರಿಂದ ಮನಸ್ಸಿನ ಸರ್ವ ಸಂಶಯವನ್ನೂ ಬಿಟ್ಟು ಯುದ್ಧಕ್ಕೆ ಸನ್ನದ್ಧನಾಗಯ್ಯಾ ಎಂದು ಅರ್ಜುನನಿಗೆ ಶ್ರೀ ಕೃಷ್ಣಭಗವಾನರವರು ಉಪದೇಶಿಸಿರುತ್ತಾರೆ.

ಈ ಅಧ್ಯಾಯದಲ್ಲಿ ಕರ್ಮಯೋಗದ ಜ್ಞಾನಭಾಗಕ್ಕೆ ಪ್ರಾಧಾನ್ಯವನ್ನು ಹೇಳಿ, ಅದರ ಮಾಹಾತ್ಮ್ಯವನ್ನು ತಿಳಿಸಿ, ಅಂತಹ ಜ್ಞಾನದ ಯೋಗದಿಂದ ಆತ್ಮಸಾಕ್ಷಾತ್ಕಾರವು ಲಭಿಸುವದರಿಂದ ಈ ಅಧ್ಯಾಯಕ್ಕೆ ಜ್ಞಾನಯೋಗವೆಂಬ ಹೆಸರು. ಈ ಅಧ್ಯಾಯದಲ್ಲಿ ಜ್ಞಾನಯೋಗವೇ ಹೇಳಲ್ಪಟ್ಟಿತೆಂದರೆ, ಎರಡನೆಯ ಅಧ್ಯಾಯವೂ ಸಾಂಖ್ಯಯೋಗವೆಂದು ಹೇಳಲ್ಪಟ್ಟಿರುವದರಿಂದ ಜ್ಞಾನಯೋಗವು ಎರಡು ಅಧ್ಯಾಯಗಳಲ್ಲಿ ಹೇಳಲ್ಪಟ್ಟಿತೆಂಬ ತಪ್ಪು ಅಭಿಪ್ರಾಯವಾಗುತ್ತದೆ. ಶ್ರೀ ಕೃಷ್ಣಭಗವಾನರವರೆ ಉಪದೇಶವು ಜ್ಞಾನಯೋಗ ನಿರಪೇಕ್ಷವಾಗಿಯೇ ಮಾಡು ಎಂದು ಮುಂದೆ ಹೇಳುವದಕ್ಕೆ ವಿರೋಧವಾಗಿ ಅರ್ಥಮಾಡಿದಹಾಗಾಗುತ್ತದೆ.

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯನಮಃ

# ಶ್ರೀಮದ್ಭಗವದ್ಗೀತಾಯಾಂ

## ಪಂಚಮೋಽಧ್ಯಾಯಃ

ಭಾ. ಚತುರ್ಥೇಽಧ್ಯಾಯೇ ಕರ್ಮಯೋಗಸ್ಯ ಜ್ಞಾನಾಕಾರತಾಪೂರ್ವಕ ಸ್ವರೂಪಭೇದೋ
ಜ್ಞಾನಾಂಶಸ್ಯ ಚ ಪ್ರಾಧಾನ್ಯಮುಕ್ತಮ್. ಜ್ಞಾನಯೋಗಾಧಿಕಾರಿಣೋಽಪಿ ಕರ್ಮ
ಯೋಗಸ್ಯಾನ್ತರ್ಗತಾತ್ಮಜ್ಞಾನತ್ವಾದಪ್ರಮಾದತ್ವಾತ್ಸುಕರತ್ವಾನ್ನಿರಪೇಕ್ಷತ್ವಾಚ್ಚ
ಜ್ಯಾಯಸ್ತ್ವಂ ತೃತೀಯ ಏವೋಕ್ತಮ್. ಇದಾನೀಂ ಕರ್ಮಯೋಗಸ್ಯಾತ್ಮಪ್ರಾಪ್ತಿ

---

ಭಾಷ್ಯಾರ್ಥವು :—ಈ ಅಧ್ಯಾಯಾರಂಭದಲ್ಲಿ ಅಧ್ಯಾಯಾರ್ಥಗಳಿಗಿರುವ ಪರಸ್ಪರ ಸಂಬಂ
ಧವನ್ನು ತೋರಿಸಿ ಈ ಅಧ್ಯಾಯಕ್ಕೂ ಹಿಂದಿನ ಮೂರುನಾಲ್ಕನೆಯ ಅಧ್ಯಾಯಗಳಿಗೂ ಸಙ್ಗ
ತಿಯು ಹೇಗೆಂಬುದನ್ನು ವ್ಯಕ್ತಪಡಿಸುತ್ತಾರೆ. ಈ ಐದನೆಯ ಅಧ್ಯಾಯದಲ್ಲಿ ಏನು ಹೇಳಲ್ಪಡು
ತ್ತದೆಂಬುದನ್ನು ತಿಳಿಸುವಾಗ ಶ್ರೀ ಯಾಮುನೇಯರವರ ಗೀತಾರ್ಥ ಸಙ್ಗ್ರಹವನ್ನೇ ಮನಸ್ಸಿ
ನಲ್ಲಿಟ್ಟು ಉಪದೇಶಿಸುತ್ತಾರೆ. ಚತುರ್ಥಾಧ್ಯಾಯೇ - ಹಿಂದೆ ಹೇಳಿದ ನಾಲ್ಕನೆಯ ಅಧ್ಯಾಯ
ದಲ್ಲಿ, ಕರ್ಮಯೋಗದ, ಜ್ಞಾನಾಕಾರತಾ ಪೂರ್ವಕ ಸ್ವರೂಪಭೇದಃ - ಅದಕ್ಕಿರುವ ಉಭಯ
ವಿಧ ಜ್ಞಾನಾಕಾರತೆಯ ಮೂಲಕ ಉಂಟಾದ ಸ್ವರೂಪಭೇದವೂ, ಜ್ಞಾನಾಂಶಸ್ಯ ಚ - ಆ ಕರ್ಮ
ಯೋಗಕ್ಕಿರುವ ಕರ್ಮಾಂಶ ಜ್ಞಾನಾಂಶಗಳಲ್ಲಿ ಜ್ಞಾನಾಂಶಕ್ಕೇನೆ ಪ್ರಾಧಾನ್ಯವೂ ಸಹ, ಉಕ್ತಂ-
ಹೇಳಲ್ಪಟ್ಟವು. ಇಲ್ಲಿ ಮುಖ್ಯವಾಗಿ ನಾಲ್ಕನೆಯ ಅಧ್ಯಾಯದಲ್ಲಿ ಹೇಳಿದುದು ಕರ್ಮಯೋಗಕ್ಕೆ
ಜ್ಞಾನಾಕಾರತೆಯುಂಟೆಂದೂ ಅದು ಯದ್ರೂಪವಾದುದೂ ಎಂದು ಹೇಳಿ, ಅದರ ಲಕ್ಷಣವನ್ನು
ತಿಳಿಸಿ, ಆ ಜ್ಞಾನದಿಂದಲೇ ಗುರೂಪದೇಶಮೂಲಕ ವಿಪಾಕದೆಶೆಯಾದ ಆತ್ಮಾವಲೋಕನವು
ಉಂಟಾಗುವದೆಂಬಂಶವು ; ಇದರಿಂದಲೇ ಈ ನಾಲ್ಕನೆಯ ಅಧ್ಯಾಯಕ್ಕೆ ಜ್ಞಾನಯೋಗವೆಂಬ
ಹೆಸರು ಕೊಡಲ್ಪಟ್ಟಿರುತ್ತದೆ. ಮೂರನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟದುದೇನೆಂದರೆ ಜ್ಞಾಪ
ಕಕ್ಕೆ ಕೊಡುತ್ತಾರೆ:--ಈ ನಾಲ್ಕನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಇಂತಹ ಜ್ಞಾನಯೋಗಾಧಿ
ಕಾರಿಣೋಽಪಿ - ಜ್ಞಾನಯೋಗಾಧಿಕಾರಿಗೂ ಕೂಡ, ಕರ್ಮಯೋಗಸ್ಯ - ಕರ್ಮಯೋಗದ,
ಜ್ಯಾಯಸ್ತ್ವಂ - ಶ್ರೇಷ್ಠತೆಯೇ, ತೃತೀಯ ಏವೋಕ್ತಮ್ - ಮೂರನೆಯ ಅಧ್ಯಾಯದಲ್ಲೇ
ಹೇಳಲ್ಪಟ್ಟಿತು. ಆದುದರಿಂದ ಮೂರು ನಾಲ್ಕನೆಯ ಅಧ್ಯಾಯಗಳಲ್ಲಿ ಬೇರೆ ಬೇರೆ ವಿಷಯ
ಗಳು ಹೇಳಲ್ಪಡಲಿಲ್ಲವು ಮೂರನೆಯ ಅಧ್ಯಾಯದಲ್ಲಿ ಹೇಳಿದುದನ್ನೇ ನಾಲ್ಕನೆಯ ಅಧ್ಯಾಯ
ದಲ್ಲೂ ಉಪಪಾದಿಸಿ, ಅದರಿಂದಲೇ ಆತ್ಮ ಸಾಕ್ಷಾತ್ಕಾರ ಉಂಟಾಗಬಹುದೆಂದು ತೋರ್ಪ
ಡಿಸಿದರು ; ಮೂರನೆಯ ಅಧ್ಯಾಯದಲ್ಲಿ ಕರ್ಮಯೋಗವೇ ಮಾಡತಕ್ಕದ್ದೆಂದೂ, ನಾಲ್ಕನೆಯ
ಅಧ್ಯಾಯದಲ್ಲಿ ಕರ್ತವ್ಯವಾದ ಕರ್ಮಯೋಗದ ಜ್ಞಾನಾಂಶಕ್ಕೇ ಪ್ರಾಧಾನ್ಯವೆಂದೂ ಹೇಳಲ್ಪಟ್ಟ
ದೆಂಬ ತಾತ್ಪರ್ಯವು. ಹಾಗೆಯೇ ಐದು ಮತ್ತು ಆರನೆಯ ಅಧ್ಯಾಯಗಳೂ ಕೂಡ ಕರ್ಮ
ಯೋಗವಿಷಯವಾದವುಗಳೇ. ಹಾಗೆ ಕರ್ಮಯೋಗಕ್ಕೆ ಜ್ಯಾಯಸ್ತ್ವವನ್ನು ಯಾವಕಾರಣ
ಗಳಿಂದ ಉಪಪಾದಿಸಲ್ಪಟ್ಟಿತೆಂದು ನಾಲ್ಕು ಹೇತುಗಳಿಂದ ಎಂದು ಜ್ಞಾಪಿಸುತ್ತಾರೆ:—ಅನ್ತರ್ಗ

ಭಾ. ಸಾಧನತ್ವೇ ಜ್ಞಾನನಿಷ್ಠಾಯಾ ಶ್ಯೈಘ್ರ್ಯಂ, ಕರ್ಮಯೋಗಾನ್ತರ್ಗತಾಕರ್ತೃತ್ವಾನುಸಂಧಾನ ಪ್ರಕಾರಂಚ ಪ್ರತಿಪಾದ್ಯ, ತನ್ಮೂಲಂ ಜ್ಞಾನಂಚ ವಿಶೋಧ್ಯತೇ.

ತಾತ್ಮಜ್ಞಾನತ್ವಾತ್ - ಕರ್ಮಯೋಗದಲ್ಲೇ ಆತ್ಮಜ್ಞಾನವೂ ಅಡಗಿರುವದರಿಂದ, ಮತ್ತು ಅಪ್ರಮಾದತ್ವಾತ್ - ಪ್ರಮಾದವಿಲ್ಲದಿರುವದರಿಂದಲೂ, ಮತ್ತು ಸುಕರತ್ವಾತ್ - ಕರ್ಮಮಾಡುವದೇ ನೈಜ ಸ್ವಭಾವವಾಗಿ ಸುಕರವಾಗಿರುವವರಿಂದಲೂ, ನಿರಪೇಕ್ಷತ್ವಾತ್ - ಅದಕ್ಕೆ ಯಾವುದರ ಅಪೇಕ್ಷೆಯೂ ಇಲ್ಲದುದರಿಂದಲೂ, ಕರ್ಮಯೋಗದ ಜ್ಯಾಯಸ್ತ್ವವು ತಿಳಿಸಲ್ಪಟ್ಟಿತು. ಆದುದರಿಂದ ಮೂರು ನಾಲ್ಕನೆಯ ಅಧ್ಯಾಯಗಳಲ್ಲಿ ಕರ್ಮಯೋಗದಲ್ಲೇ ಅಂತರ್ಗತ ಜ್ಞಾನಾಂಶವಿರುವದರಿಂದ ಕರ್ಮಯೋಗವೇ ಶ್ರೇಷ್ಠವೆಂದು ಹೇಳಲ್ಪಟ್ಟಿತು. ಈ ಜ್ಯಾಯಸ್ತ್ವವು ಯಾವ ಕಾರಣದಿಂದೆಂದರೆ ನಾಲ್ಕು ಹೇತುಗಳಿಂದ ತಿಳಿಸುತ್ತಾರೆ. (೧) ಅದರಲ್ಲಡಗಿರುವ ಆತ್ಮಜ್ಞಾನದಿಂದಲೂ (೨) ಪ್ರಮಾದವಿಲ್ಲದುದರಿಂದಲೂ (೩) ಸುಕರವಾಗಿರುವದರಿಂದಲೂ (೪) ಜ್ಞಾನಯೋಗವೇ ಮೊದಲಾದ ಇತರ ಯಾವುದರ ಸಹಾಯವು ಬೇಡದಿರುವದರಿಂದಲೂ ಎಂದು ಹೇಳಿರುತ್ತಾರೆ. ಆದರೆ ನಾಲ್ಕನೆಯ ಅಧ್ಯಾಯದಲ್ಲಿ ಮುಖ್ಯವಾಗಿ ಹೇಳಿದುದೇನು ಎಂದರೆ ಕರ್ಮಯೋಗದಲ್ಲಿರುವ ಜ್ಞಾನಾಂಶಕ್ಕೇನೆ ಪ್ರಾಶಸ್ತ್ಯವನ್ನು ಹೇಳಿ, ಆ ಜ್ಞಾನಭಾಗದ ಪದೇಪದೇ ಅನುಸಂಧಾನವೇ ಆತ್ಮಾವಲೋಕನವನ್ನುಂಟುಮಾಡುತ್ತದೆ ಎಂಬುದು. ಮುಂದೆ ಈ ಐದನೆಯ ಅಧ್ಯಾಯದಲ್ಲಿ ಉಪದೇಶಿಸಲ್ಪಡುವದು ಏನು ಎಂದರೆ ತಿಳಿಸುತ್ತಾರೆ. ಇದಾನೀಂ - ಈ ಐದನೆಯ ಅಧ್ಯಾಯದಲ್ಲಾದರೋ, ಆತ್ಮಪ್ರಾಪ್ತಿ ಸಾಧನತ್ವೇ-ಈ ಆತ್ಮ ಸಾಕ್ಷಾತ್ಕಾರವನ್ನು ಸಾಧಿಸಿ ಕೊಡುವದರಲ್ಲಿ, ಜ್ಞಾನನಿಷ್ಠಾಯಾಃ - ಜ್ಞಾನಯೋಗಕ್ಕಿಂತಲೂ, ಕರ್ಮಯೋಗಸ್ಯ - ಕರ್ಮಯೋಗಕ್ಕೆ, ಶ್ಯೈಘ್ರ್ಯಂ - ಶೈಘ್ರುವನ್ನೂ, ಕರ್ಮಯೋಗಾನ್ತರ್ಗತಾ ಕರ್ತೃತ್ವಾನುಸಂಧಾನ ಪ್ರಕಾರಂಚ ಮತ್ತು ಕರ್ಮಯೋಗದಲ್ಲೇ ಅಡಗಿರುವ, ತನಗೆ ಕರ್ತೃತ್ವವಿಲ್ಲವೆಂಬ ಅನುಸಂಧಾನ ಮಾಡುವ ಪ್ರಕಾರವನ್ನೂ ಸಹ ಪ್ರತಿಪಾದಿಸಿ, ತನ್ಮೂಲಂ ಜ್ಞಾನಂಚ - ಅಂತಹ ಅನುಸಂಧಾನಮೂಲಕವಾಗಿ ಉಂಟಾಗುವ ಜ್ಞಾನವೂ ಸಹ, ವಿಪಾಕದೆಶೆಯನ್ನು ಹೊಂದಿದ ಜ್ಞಾನವು ಇಲ್ಲಿ ಹೇಳಲ್ಪಟ್ಟಿತು, ವಿಶೋಧ್ಯತೇ - ಶೋಧಿಸಲ್ಪಡುತ್ತದೆ, ಎಂದರೆ ವಿಮರ್ಶಿಸಲ್ಪಡುತ್ತದೆ. ಆದುದರಿಂದ ಈ ಐದನೆಯ ಅಧ್ಯಾಯವೂ ಕರ್ಮಯೋಗದ ವಿಷಯವಾದುದೆಂದೇ ಭಾವಿಸತಕ್ಕದ್ದು. ಶ್ರೀ ಯಾಮುನೇಯರ ಸಙ್ಗ್ರಹ ಶ್ಲೋಕದಲ್ಲೂ "ಕರ್ಮಯೋಗಸ್ಯಸೌಕರ್ಯಂ ಶೈಘ್ರ್ಯಂ ಕಾಶ್ಚನ ತದ್ವಿಧಾಃ" ಎಂದು ಹಾಗೆಯೇ ಹೇಳಿರುತ್ತಾರೆ. ಜ್ಞಾನನಿಷ್ಠಾಯಾಃ ಶೈಘ್ರ್ಯಂ ಎಂದು ಹೇಳಿರುವದರಿಂದ ಕರ್ಮಯೋಗವನ್ನು ಮಾಡಿ ಜ್ಞಾನಯೋಗವನ್ನವಲಂಬಿಸುವದಕ್ಕಿಂತ, ಬರೀ ಕರ್ಮಯೋಗದಲ್ಲಂತರ್ಗತವಾದ ಜ್ಞಾನಾಂಶಮೂಲಕವಾಗಿಯೇ ಆತ್ಮ ಸಾಕ್ಷಾತ್ಕಾರವು ಶೀಘ್ರವಾಗಿ ಲಭಿಸುತ್ತದೆಂಬ ಭಾವವು.

**ಮೂಲಕ್ಕೆ ಅರ್ಥವು**:—ಅರ್ಜುನನು ಹೇಳುತ್ತಾನೆ:—ಈ ಶ್ಲೋಕದಲ್ಲಿ ಸರ್ವ ಕರ್ಮಸನ್ಯಾಸವು, ಸನ್ಯಾಸಂ ಕರ್ಮಣಾಂ ಎಂಬುದರಿಂದ ಹೇಳಲ್ಪಟ್ಟಿತೆಂದು ಕೆಲವರು ಹೇಳುವರು. ಹಾಗೆ ಹೇಳಿದರೆ ಸರ್ವಜ್ಞನು ಚೆನ್ನಾಗಿ ವಿಶದವಾಗಿ ಉಪದೇಶಿಸಿದರೂ, ಅರ್ಜುನನು ಅದನ್ನು ಗ್ರಹಿಸಲಿಲ್ಲವಾದುದರಿಂದ ಆತನು ಅಲ್ಪಜ್ಞನು ಮಂದಬುದ್ಧಿಯುಕ್ತನು, ಉಪದೇಶಿಸಿದುದನ್ನು ಸರಿಯಾಗಿ ಗ್ರಹಿಸುವ ಯೋಗ್ಯತೆ ಇಲ್ಲವೆಂದು ಹೇಳದಂತಾಗುವದು. ಹಾಗಲ್ಲದಪಕ್ಷದಲ್ಲಿ ಸರ್ವೇಶ್ವರನೇ ಪರಸ್ಪರ ವಿರುದ್ಧವಾದ ಉಪದೇಶವನ್ನು ಮಾಡಿದನೆಂದಾಗುವದು. ಸರ್ವೇಶ್ವರನು ಪರಸ್ಪರ ವಿರುದ್ಧವಲ್ಲದಹಾಗೆಯೇ ಉಪದೇಶಿಸಿರುತ್ತಾನೆ. ಅರ್ಜುನನು ಮಂದಬುದ್ಧಿಯುಳ್ಳವನಲ್ಲವು. ಆತನು

ಅರ್ಜುನ ಉವಾಚ—

ಮೂ. ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥ ೧.

---

ಗಾಂಡೀವವನ್ನು ಬಿಸಾಡಿ ರಥದಲ್ಲಿ ಸುಮ್ಮನೆ ಕೂತುಕೊಳ್ಳುವಾಗ ಯುದ್ಧಾರಂಭದಲ್ಲಿ ಇಷ್ಟವಿಲ್ಲದಿರುವದಕ್ಕೆ ಹೇಳಿದ ಶಾಸ್ತ್ರ ಗರ್ಭಿತಗಳಾದ ಮಾತುಗಳಿಂದ ತುಂಬಾ ಜ್ಞಾನಿಯೆಂದೂ ವಿವೇಕಿಯೆಂದೂ ಏರ್ಪಡುತ್ತದೆ. ಸರ್ವೇಶ್ವರನಿಗೆ ಭ್ರಮಯುಕ್ತವಾದ ಉಪದೇಶವು ಎಂದಿಗೂ ಸರ್ವಾತ್ಮನಾ ಕೂಡುವದಿಲ್ಲವು. ಈ ಶ್ಲೋಕಕ್ಕೆ ಅರ್ಥಮಾಡುವಾಗ ಇಬ್ಬರಿಗೂ ಯಾವುದೊಂದೂ ಭ್ರಮೆ ಇಲ್ಲದಂತೆ ಅರ್ಥಮಾಡುವದು ಯುಕ್ತವು. ಹಿಂದೆ ಎರಡನೆಯ ಅಧ್ಯಾಯದಲ್ಲಿ ಕರ್ಮಯೋಗದ ಸಹಾಯದಿಂದ ಜ್ಞಾನಯೋಗಕ್ಕೆ ಅರ್ಹತೆಯುಂಟಾಗಿ ಆಗ ಕರ್ಮಯೋಗದ ಸನ್ಯಾಸವು ಉಂಟಾಗುತ್ತದೆ, ಇದರಿಂದ ಆತ್ಮಸಾಕ್ಷಾತ್ಕಾರ ಉಂಟಾಗುತ್ತದೆಂದು ಹೇಳಲ್ಪಟ್ಟಿತು. ಅನಂತರ ನಾಲ್ಕನೆಯ ಅಧ್ಯಾಯದಲ್ಲಾದರೋ ಬರೀ ಕರ್ಮಯೋಗದಿಂದಲೇ ತದಂತರ್ಗತ ಆತ್ಮಜ್ಞಾನದಿಂದಲೇ ಅದರ ವಿಪಾಕದೆಶೆಯಾದ ಆತ್ಮಸಾಕ್ಷಾತ್ಕಾರದೆಶೆಯು ಉಂಟಾಗುತ್ತದೆಂದೂ ಹೇಳಲ್ಪಟ್ಟಿತು. ಹೀಗೆ ಎರಡುವಿಧವಾಗಿ ಆತ್ಮಸಾಕ್ಷಾತ್ಕಾರ ಉಂಟಾಗಬಹುದು ಎಂಬದಾಗಿ ಯಾವಾಗ ಹೇಳಲ್ಪಟ್ಟಿತೋ, ಆಗ ವಿವೇಕಿಯಾದ ಪ್ರಾಜ್ಞನಾದ ಅರ್ಜುನನು ಕೇಳುತ್ತಾನೆ ಏನೆಂದರೆ, ತಾವು ಕರ್ಮಯೋಗದ ಸಹಾಯದಿಂದುಂಟಾದ ಜ್ಞಾನಯೋಗದ ಮೂಲಕ ಕರ್ಮಯೋಗ ಸನ್ಯಾಸದದ್ವಾರಾ ಆತ್ಮಸಾಕ್ಷಾತ್ಕಾರ ಉಂಟಾಗುತ್ತದೆಂದು ಪ್ರಥಮತಃ ಹೇಳಿದಿರಿ; ಅನಂತರ ಈಗಲಾದರೋ ಕರ್ಮಯೋಗದ ಮೂಲಕವೂ ಉಂಟಾಗುತ್ತದೆಂದು ಉಪದೇಶಿಸಿದಿರಿ. ಇವೆರಡು ಮಾರ್ಗಗಳಲ್ಲಿ ಯಾವುದೊಂದು ತನಗೆ ಶ್ರೇಯಸ್ಕರವೋ ಅದನ್ನು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸುತ್ತಾನೆ. ಹೀಗೆ ಕೇಳುವದು ಸಮಂಜಸವೇ ವಿನಾ, ಸರ್ವ ಕರ್ಮ ಸನ್ಯಾಸವನ್ನು ಶ್ರೀಕೃಷ್ಣ ಭಗವಾನರವರು ಉಪದೇಶಿಸಿದರೆ, ಅರ್ಜುನನೇ ಏಳ್ಳಯ್ಯಾ ಯುದ್ಧಕ್ಕೆ ಎಂದು ಹೇಳಲು ಅವರಿಗೆ ಬಾಯಿ ಎಲ್ಲಿಯದು? ಹಾಗೆ ಪ್ರೋತ್ಸಾಹಿಸಿದರೆ, ಸರ್ವ ಕರ್ಮ ಸನ್ಯಾಸವನ್ನು ಬೋಧಿಸಿಬಿಟ್ಟು, ಕರ್ಮ ಮಾಡು ಎಂದು ಹೇಳಬಹುದೋ ಎಂದು ಅರ್ಜುನನು ಮೂದಲಿಸಬಹುದು. "**ಯುಧ್ಯಸ್ವ ವಿಗತಜ್ವರಃ**" ಎಂದೂ "**ಕುರು ಕರ್ಮೈವತಸ್ಮಾ**" ಎಂದೂ, "**ಯೋಗಮಾತಿಷ್ಠೋತ್ತಿಷ್ಠ ಭಾರತ**" ಎಂದೂ, ಹೀಗೆಲ್ಲಾ ಉಪದೇಶಿಸುವದು ಹೇಗೆ ಸಮಂಜಸವಾದೀತು? ಆದುದರಿಂದ ಅರ್ಜುನನಿಗೆ ಉಪದೇಶ ಹೇಗೆಂದರೆ ಕರ್ಮಯೋಗವನ್ನೇ ಅನುಷ್ಠಿಸು ಅದರ ಜ್ಞಾನಾಂಶದಿಂದಲೇ ಆತ್ಮಸಾಕ್ಷಾತ್ಕಾರವು ಲಭಿಸುತ್ತದೆ. ಜ್ಞಾನಯೋಗವು ಸಪ್ರಮಾದವಾಗಿ ದುರ್ಲಭವಾದುದಾಗಿ ನಿನಗೆ ಆವಶ್ಯಕವಿಲ್ಲವು. ಅದರಿಂದುಂಟಾಗುವ ಫಲವು ಈ ಕರ್ಮಯೋಗದ ಜ್ಞಾನಾಂಶದಿಂದಲೇ ಲಭಿಸುತ್ತದೆಂದು ಹೇಳಿದರು. ಎರಡೂ ಒಂದೇಫಲವನ್ನುಂಟುಮಾಡುವದಾದರೆ ಸುಕರವಾಗಿಯೂ ಶೀಘ್ರವಾಗಿಯೂ ಲಭಿಸುವ ಮಾರ್ಗವು ಯಾವುದೆಂದು ತಿಳಿಯುವದಕ್ಕಾಗಿ ಪ್ರಾಜ್ಞನಾದ ಅರ್ಜುನನ ಪ್ರಶ್ನೆಯು. ಮುಖ್ಯವಾಗಿ ಅರ್ಜುನನಿಗೆ ಯುದ್ಧಮಾಡುವದು ಇಷ್ಟವಿಲ್ಲವು, ಜ್ಞಾನಯೋಗದಲ್ಲಿ ಕರ್ಮಯೋಗವನ್ನು ತ್ಯಜಿಸಬಹುದಾದುದರಿಂದ, ಜ್ಞಾನಯೋಗದಿಂದ ಶೀಘ್ರಫಲವುಂಟು ಎಂದು ಹೇಳಿಬಿಟ್ಟರೆ ಆಗ ಯುದ್ಧ ಪರಿತ್ಯಾಗವನ್ನು ಮಾಡಬಹುದೆಂದು ಯೋಚಿಸಿ ಪ್ರಶ್ನಿಸುತ್ತಾನೆ, ಎಂದರೆ ಹಿಂದೆ ಜ್ಞಾನಯೋಗಕ್ಕೂ ಕೂಡ ಕರ್ಮಯೋಗವು ಆವಶ್ಯಕವೆಂದು ಉಪದೇಶಿಸಿದ್ದರು; ಅರ್ಜುನನ ವಿಷಯದಲ್ಲಿ ಉದಾಸಿಗಳಲ್ಲದವರು ಈ ಮೇಲಿನ ಉಪದೇಶ

ಭಾ- ಕರ್ಮಣಾಂ ಸನ್ಯಾಸಂ – ಜ್ಞಾನಯೋಗಂ, ಪುನಃ ಕರ್ಮಯೋಗಂ ಚ ಶಂಸಸಿ ; ಏತ

ವನ್ನು ಕುರಿತು ಪ್ರಶ್ನಿಸಿದನೆಂದು ಹೇಳಬಹುದು; ಉದಾರಿಗಳಾದವರಾದರೋ, ಅದನ್ನೆಲ್ಲಾ ಜ್ಞಾಪಕದಲ್ಲೇ ಇಟ್ಟು, ಜ್ಞಾನಯೋಗದ್ವಾರ ಶೀಘ್ರವಾಗಿ ಆತ್ಮಸಾಕ್ಷಾತ್ಕಾರಪ್ರಾಪ್ತಿಯೋ? ಇಲ್ಲವೇ ಕರ್ಮಯೋಗವನ್ನೇ ಮಾಡುತ್ತಾ ಬಂದರೆ ಆತ್ಮಸಾಕ್ಷಾತ್ಕಾರ ಪ್ರಾಪ್ತಿಯು ಶೀಘ್ರದಲ್ಲಿ ಲಭಿಸುತ್ತದೆಯೇ? ಎಂಬುದು. ಆದುದರಿಂದ ಅರ್ಥವು ಹೇಗೆಂದರೆ:—ಹೇ ಕೃಷ್ಣ - ಈ ಭೂಮಿಯಲ್ಲಿರುವ ಸರ್ವ ಚೇತನರಿಗೂ ಸುಖವನ್ನುಂಟುಮಾಡಬೇಕೆಂದಿರುವ ಶ್ರೀಕೃಷ್ಣನೇ, ಕರ್ಮಣಾಂ ಸನ್ಯಾಸಂ-ಸಮಸ್ತೇಂದ್ರಿಯೋಪರತಿರೂಪವಾಗಿ ಇಂದ್ರಿಯ ಪ್ರವೃತ್ತಿಗಳಿಲ್ಲದ ಆತ್ಮಸಾಕ್ಷಾತ್ಕಾರ ಫಲದಾಯಕವಾದ ಜ್ಞಾನಯೋಗವನ್ನೂ, ಎಂದರೆ ದ್ವಿತೀಯಾಧ್ಯಾಯದಲ್ಲಿ ಕರ್ಮಯೋಗದ ಬಲದಿಂದ ಜ್ಞಾನಯೋಗಾಧಿಕಾರಿಯಾಗುವನೆಂದೂ, ಅದರಿಂದ ಆತ್ಮಸಾಕ್ಷಾತ್ಕಾರ ಉಂಟಾಗುವದೆಂದೂ, ಪುನಃ - ಈಗ ನಾಲ್ಕನೆಯ ಅಧ್ಯಾಯದಲ್ಲಿ, ಕರ್ಮಣಾಂ ಎಂಬುವನ್ನು ಯೋಗಂ – ಎಂಬುದರೊಂದಿಗೂ ಅನ್ವಯಿಸಿ, ಕರ್ಮಣಾಂ ಯೋಗಂ ಎಂದು ಅರ್ಥಮಾಡಬಹುದು, ಅಥವಾ ಯೋಗಂ - ಇಂದ್ರಿಯ ಪ್ರವೃತ್ತಿಗಳುಳ್ಳ ಕರ್ಮಯೋಗವನ್ನೇ ಎಂದರೆ ಆ ಕರ್ಮಯೋಗದಿಂದಲೇ ಆತ್ಮ ಸಾಕ್ಷಾತ್ಕಾರ ಉಂಟಾಗುವದೆಂದೂ, ಶಂಸಸಿ - ಉಪದೇಶಿಸಿರುತ್ತೀರಿ, ಏತಯೋಃ- ಈ ಎರಡು ವಿಧ ಉಪಾಯಗಳಲ್ಲಿ, ಯತ್ - ಯಾವುದು, ಏಕಂ - ಒಂದು, ಶ್ರೇಯಃ – ಆತ್ಮಸಾಕ್ಷಾತ್ಕಾರ ಸಾಧಕವಾಗಿ ಶ್ರೇಯಸ್ಕರವಾದುದೆಂದು, ಸುನಿಶ್ಚಿತಂ - ನೀವು ನಿಷ್ಕರಿಸುವಂಥಾ ತತ್ - ಆ ಒಂದನ್ನು, ಮೇ - ಶಾಧಿಮಾಂ ಎಂದು ನಿಮ್ಮನ್ನಾಶ್ರಯಿಸಿದ ನಿಮ್ಮ ಭಕ್ತನಾದ ನನಗೆ, ದಯವಿಟ್ಟು, ಬ್ರೂಹಿ - ತಿಳಿಸಿ ಎಂದು ಅರ್ಜುನನು ಪ್ರಾರ್ಥಿಸಿದನು. ಈ ಅಧ್ಯಾಯದ ನಾಲ್ಕನೆಯ ಶ್ಲೋಕದಲ್ಲಿ, ಈ ಜ್ಞಾನಯೋಗ ಕರ್ಮಯೋಗಗಳೆರಡೂ ಒಂದೇಯಾದ ಆತ್ಮಸಾಕ್ಷಾತ್ಕಾರ ರೂಪಫಲವನ್ನು ಸಾಧಿಸಿಕೊಡುತ್ತದೆ ಎಂಬ ಭಾವವು ವ್ಯಕ್ತವು. ಶ್ರೇಯಃ- ಎಂಬುದರಿಂದ ಯಾವುದು ಶೀಘ್ರವಾಗಿಯೂ ಸುಕರವಾಗಿಯೂ ಸಾಧಿಸಿ ಕೊಡುತ್ತದೋ, ಅದನ್ನು ನೀವು ನಿಷ್ಕರ್ಷೆಯಿಂದ ತಿಳಿದಿರುವಿರಿಯಾದುದರಿಂದ ನನಗೆ ದಯವಿಟ್ಟು ಹೇಳಿ ಎಂಬ ಭಾವವು. ಶ್ರೇಯಃ ಎಂಬುದರಿಂದ ಯಾವುದು ನಿಮಗೆ ಸುಕರವಾಗಿ ಶೀಘ್ರ ಫಲದಾಯಕವಾಗಿ ಹಿತವಾದುದೋ ಅದನ್ನು ತಿಳಿಸಿ ಎಂಬ ಭಾವವು ತೋರಿಬರುತ್ತದೆ. ಹೀಗೆ ಪ್ರಶ್ನಿಸುವದರಲ್ಲಿ ಅರ್ಜುನನಿಗೆ ಸಂದೇಹವಾಗಲಿ ಭ್ರಮೆಯಾಗಲಿ ಉಂಟೋ ಎಂದರೆ ಅವುಗಳಲ್ಲಿ ಈ ವಿಧವಾಗಿ ಆತನಿಗೆ ಯಾವ ಸಂದೇಹವಾಗಲಿ ಭ್ರಮೆಯಾಗಲಿ ಇಲ್ಲವು. ತಿಳಿಯುದ ವಿಷಯದಲ್ಲಿ ಪ್ರಶ್ನೆಯು.

ಭಾಷ್ಯಾರ್ಥವು :—ಕರ್ಮಣಾಂ ಸನ್ಯಾಸಂ - ಕರ್ಮವನ್ನು ತ್ಯಜಿಸುವದು ಎಂದರೆ ಸರ್ವೇಂದ್ರಿಯೋಪರತಿರೂಪವಾಗಿ, ಇದರಿಂದ ಜ್ಞಾನಯೋಗ ಉಂಟಾದಾಗ ಸರ್ವ ಕರ್ಮಗಳ ಸನ್ಯಾಸವು ಆಗಬಹುದೆಂಬರ್ಥವಲ್ಲವು; ನಿತ್ಯನೈಮಿತ್ತಿಕಾನುಷ್ಠಾನಗಳು ಆಜ್ಞಾ ಕೈಂಕರ್ಯಗಳಾಗಿ ಎಂದಿಗೂ ತ್ಯಜಿಸತಕ್ಕವಲ್ಲದುದರಿಂದ, ಅವುಗಳಲ್ಲದೆ ಮಿಕ್ಕ ಕರ್ಮಯೋಗ ಪ್ರಭೇದಗಳು ದ್ವೈವಮೇವ ಎಂದಾರಂಭಿಸಿ ಹೇಳಿದವುಗಳನ್ನು ತ್ಯಜಿಸಬಹುದೆಂಬ ತಾತ್ಪರ್ಯವು; ಹೀಗೆ ಈ ಕರ್ಮ ಸನ್ಯಾಸದಿಂದ ಜ್ಞಾನಯೋಗವು ಹೇಳಲ್ಪಟ್ಟಿತೆಂಬ ಭಾವವು. ಆದುದರಿಂದ ಕರ್ಮಣಾಂ ಸನ್ಯಾಸಂ ಎಂದರೆ ಜ್ಞಾನ ಯೋಗವನ್ನೂ, ಪುನಃ - ಅನಂತರ ಕರ್ಮಯೋಗವನ್ನೂಸಹ, ಶಂಸಸಿ - ಶ್ಲಾಘಿಸಿ ಹೇಳಿರುತ್ತೀಯೇ. ಆತ್ಮಾವಲೋಕನವನ್ನು ಎರಡು ವಿಧವಾಗಿಯೂ ಹೊಂದಬಹುದೆಂದು ಹೇಳಿರುತ್ತೀಯೆ ಎಂಬ ತಾತ್ಪರ್ಯವು. ತಾತ್ಪರ್ಯವು ಈ ಮೇಲಿನ ವಾಕ್ಯದಿಂದ ವ್ಯಕ್ತವಲ್ಲದುದರಿಂದ "ಏತದುಕ್ತಂ ಭವತಿ" ಇದೀಗ ಅಭಿಪ್ರಾಯವು ಎಂದು ಹೇಳಿ ವಿವರಿಸಿ

ಭಾ. ದುಕ್ತಂ ಭವತಿ - ದ್ವಿತೀಯೇಽಧ್ಯಾಯೇ ಮುಮುಕ್ಷೋಃ ಪ್ರಥಮಂ ಕರ್ಮಯೋಗ ಏವ ಕಾರ್ಯಃ; ಕರ್ಮಯೋಗೇನ ಮೃದಿತಾಂತಃಕರಣಕಷಾಯಸ್ಯ ಜ್ಞಾನಯೋಗೇನಾತ್ಮದರ್ಶನಂ ಕಾರ್ಯಮಿತಿ ಪ್ರತಿಪಾದ್ಯ, ಪುನಸ್ತೃತೀಯ ಚತುರ್ಥಯೋರ್ಜ್ಞಾನಯೋಗಾಧಿಕಾರದಶಾಪನ್ನಸ್ಯಾಪಿ ಕರ್ಮನಿಷ್ಠೈವ ಜ್ಯಾಯಸೀ, ಸೈವ ಜ್ಞಾನನಿಷ್ಠಾನಿರಪೇಕ್ಷಾ, ಆತ್ಮಪ್ರಾಪ್ತೌ ಸಾಧನಮಿತಿ ಕರ್ಮನಿಷ್ಠಾಂ ಪ್ರಶಂಸಸಿ - ಇತಿ। ತತ್ರೈತಯೋರ್ಜ್ಞಾನಯೋಗಕರ್ಮಯೋಗಯೋರಾತ್ಮಪ್ರಾಪ್ತಿಸಾಧನಭಾವೇ ಯದೇಕಂ ಸೌಕರ್ಯಾಚ್ಛೈಘ್ರ್ಯಾಚ್ಚ ಶ್ರೇಯಃ - ಶ್ರೇಷ್ಠಮಿತಿ ಸುನಿಶ್ಚಿತಂ, ತನ್ಮೇ ಬ್ರೂಹಿ ॥೧॥

---

ತಾತ್ಪರ್ಯ :- ದ್ವಿತೀಯೋಽಧ್ಯಾಯೇ - ಎರಡನೆಯ ಅಧ್ಯಾಯದಲ್ಲಿ, ಮುಮುಕ್ಷೋಃ - ಮೋಕ್ಷಾರ್ಥಿಗೆ, ಪ್ರಥಮಂ - ಮೊದಲು, ಕರ್ಮಯೋಗ ಏವಕಾರ್ಯಃ - ಕರ್ಮಯೋಗವೇ ಮುಖ್ಯವಾಗಿ ಅನುಷ್ಠೇಯವು ಎಂದೂ, ಕರ್ಮಯೋಗದಿಂದ, ಮೃದಿತಾಂತಃಕರಣ ಕಷಾಯಸ್ಯ - ಮನಸ್ಸಿನ ಮಲಗಳನ್ನು ಅಥವಾ ಎಂದರೆ ಪಾಪಗಳನ್ನು ಕಳೆದುಕೊಂಡವನಿಗೆ, ಜ್ಞಾನಯೋಗೇನ ಆತ್ಮದರ್ಶನಂ - ಜ್ಞಾನಯೋಗದಿಂದ ಆತ್ಮದರ್ಶನವು, ಕಾರ್ಯಮಿತಿ - ಮಾಡತಕ್ಕದ್ದೆಂದೂ, ಪ್ರತಿಪಾದ್ಯ - ಪ್ರತಿಪಾದಿಸಿ, ಪುನಃ ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ, ಜ್ಞಾನಯೋಗಾಧಿಕಾರದಶಾಪನ್ನಸ್ಯಾಪಿ - ಜ್ಞಾನಯೋಗಾಧಿಕಾರಿಯಾಗಲು ಅರ್ಹನಾಗಿರುವವನಿಗೂ ಕೂಡ, ಕರ್ಮನಿಷ್ಠೈವ ಜ್ಯಾಯಸೀ - ಕರ್ಮನಿಷ್ಠೆಯೇ ಎಂದರೆ ಕರ್ಮಯೋಗವೇ ಶ್ರೇಷ್ಠವು ಎಂದೂ, ಸೈವ - ಆ ಕರ್ಮನಿಷ್ಠೆಯೇ, ಜ್ಞಾನನಿಷ್ಠಾ ನಿರಪೇಕ್ಷಾ - ಜ್ಞಾನಯೋಗದ ಅವಶ್ಯಕತೆ ಇಲ್ಲದೇನೇ, ಆತ್ಮಪ್ರಾಪ್ತಿಯಲ್ಲಿ, ಸಾಧನಮಿತಿ - ಸಾಧನವೆಂದೂ, ಕರ್ಮನಿಷ್ಠಾಂ ಪ್ರಶಂಸಸಿ - ಕರ್ಮನಿಷ್ಠೆಯನ್ನು ಪ್ರಶಂಸಿಸುತ್ತೀಯೆ ಇತಿ - ಎಂಬುದಾಗಿ ತಾತ್ಪರ್ಯವು. ಮೊದಲು ಕರ್ಮಯೋಗವೇ ಪ್ರತಿಯೊಬ್ಬ ಮೋಕ್ಷಾರ್ಥಿಗೂ ಕರ್ತವ್ಯವಾದುದು, ಅದರಿಂದ ಪ್ರತಿಬಂಧಕ ಪಾಪಗಳು ಕಳೆದು ಹೋಗುತ್ತವೆ. "ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ" ಎಂದು ಹೇಳಿರುವ ನ್ಯಾಯದಲ್ಲಿ, ಜ್ಞಾನಯೋಗದಲ್ಲಿ ಪ್ರವೃತ್ತಿಯುಂಟಾಗುತ್ತದೆ, ಆಗ ಸರ್ವೇಂದ್ರಿಯೋಪರತಿರೂಪ ಕರ್ಮಸನ್ಯಾಸವು ಉಂಟಾಗುತ್ತದೆ ಎಂದು ಮೊದಲು ಉಪದೇಶಿಸಿದಿರಿ; ಅನಂತರ ಜ್ಞಾನಯೋಗಕ್ಕೆ ಯೋಗ್ಯತೆ ಇರುವವನೂ ಕೂಡ, ಕರ್ಮಯೋಗವನ್ನೇ ಪ್ರಾರಂಭಿಸಬೇಕಾಗಿರುವುದರಿಂದ ಆ ಕರ್ಮಯೋಗದ ಮಹಿಮೆಯಿಂದಲೇ ಆತ್ಮಸಾಕ್ಷಾತ್ಕಾರ ಉಂಟಾಗುವುದರಿಂದ ಅಂತವನಿಗೂ ಕೂಡ ಕರ್ಮಯೋಗವೇ ಶ್ರೇಷ್ಠವೆಂದು ಹೇಳಿದಿರಿ ಎಂಬ ತಾತ್ಪರ್ಯವು. ಹೀಗೆ ಶ್ರೇಷ್ಠವೆಂದು ಹೇಳಲ್ಪಟ್ಟಿರುವುದರಿಂದಲೇ, ಶಂಸಸಿ ಎಂಬುದಕ್ಕೆ ಪ್ರಶಂಸಸಿ ಎಂದು ವ್ಯಾಖ್ಯಾನಮಾಡಿರುತ್ತಾರೆ. ತತ್ರ - ಆ ಸಂದರ್ಭದಲ್ಲಿ, ಏತಯೋಃ - ಈ ಎರಡು, ಜ್ಞಾನಯೋಗ ಕರ್ಮಯೋಗಗಳ, ಆತ್ಮಪ್ರಾಪ್ತಿ ಸಾಧನಭಾವೇ - ಆತ್ಮಸಾಕ್ಷಾತ್ಕಾರವನ್ನು ಸಾಧಿಸಿ ಕೊಡುವುದರಲ್ಲಿ, ಯದೇಕಂ - ಯಾವುದು ಒಂದು, ಸೌಕರ್ಯದಿಂದಲೂ, ಶೀಘ್ರದಿಂದಲೂ ಸಹ, ಶ್ರೇಯಃ ಎಂದರೆ ಶ್ರೇಷ್ಠಮಿತಿ - ಶ್ರೇಷ್ಠವಾದುದೆಂದು, ಸುನಿಶ್ಚಿತಂ - ನಿಮ್ಮಿಂದ ನಿಶ್ಚಯಿಸಲ್ಪಟ್ಟಿತೋ, ತತ್ - ಅಂತಹ ಒಂದನ್ನು, ಮೇ - ನಿಮ್ಮ ಶಿಷ್ಯನಾದ ನನಗೆ, ಬ್ರೂಹಿ - ಹೇಳಿ ಎಂದರೆ ಉಪದೇಶಿಸಿ ಎಂಬ ಭಾವವು. ಇವೆರಡರಲ್ಲಿ ಯಾವುದು ಹೆಚ್ಚು ಮಹಿಮೆಯುಳ್ಳದ್ದೆಂದಾಗಲಿ, ಫಲವತ್ತ್ವದಿಂದ ಮಹಿಮೆಯುಳ್ಳದ್ದೆಂದಾಗಲಿ, ಶ್ರೇಯಸ್ಕರವಾದುದೆಂದು ಕೇಳಲ್ಪಡಲಿಲ್ಲವು. ಮತ್ತೇನೆಂದರೆ ಜ್ಞಾನಯೋಗದ್ವಾರಾ ಆತ್ಮಸಾಕ್ಷಾತ್ಕಾರ ಪ್ರಾಪ್ತಿಯು ಸುಕರವೇ ಮತ್ತು ಶೀಘ್ರವೇ ಅಥವಾ ಕರ್ಮಯೋಗವನ್ನೇ ಜ್ಞಾನಾಂಶ ಪ್ರಾಧಾನ್ಯದಿಂದ ಅನುಷ್ಠಿಸುವುದರಿಂದ ಆತ್ಮಸಾಕ್ಷಾತ್ಕಾರ ಪ್ರಾಪ್ತಿಯು ಸುಕರವೇ,

ಶ್ರೀ ಭಗವಾನುವಾಚ—

ಮೂ. ಸನ್ಯಾಸಃ ಕರ್ಮಯೋಗಶ್ಚ ನಿಶ್ಶ್ರೇಯಸಕರಾವುಭೌ ।
ತಯೋಸ್ತು ಕರ್ಮಸನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥ ೨.

ಶೀಘ್ರವೇ ಎಂಬ ಭಾವವು. ಇಲ್ಲಿ ಮೂಲದಲ್ಲಿರುವ ಯೋಗ ಶಬ್ದಕ್ಕೆ ಕರ್ಮಯೋಗನೆಂದೇ ಅರ್ಥವಾದನಂತರ. ಕರ್ಮಣಾಂ ಸನ್ಯಾಸಂ ಎಂಬುದರಿಂದ ಅದರ ಪ್ರತಿದ್ವಂದ್ವಿಯಾದ ಜ್ಞಾನ ಯೋಗನೆಂಬುದು ವ್ಯಕ್ತವಾದುದರಿಂದ, ಕರ್ಮಣಾಂ ಸನ್ಯಾಸಂ ಎಂಬುದಕ್ಕೆ ಸರ್ವೇಂದ್ರಿಯೋಪ ರತಿಯುಳ್ಳ, ಜ್ಞಾನ ಯೋಗಂ ಎಂದು ವ್ಯಾಖ್ಯಾನಮಾಡಲ್ಪಟ್ಟಿತು. ಸನ್ಯಾಸಂ ಕರ್ಮಣಾಂ ಎಂಬುಗಳ ಅರ್ಥವನ್ನು, "ದ್ವಿತೀಯೇಽಧ್ಯಾಯೇ ಮುಮುಕ್ಷೋಃ ಪ್ರಥಮಂ ಕರ್ಮಯೋಗ ಏವ ಕಾರ್ಯಃ, ಕರ್ಮಯೋಗೇನ ಮೃದಿತಾನ್ತಃಕರಣಕಷಾಯಸ್ಯ ಜ್ಞಾನಯೋಗೇನಾ ತ್ಮದ ರ್ಶನಂ ಕಾರ್ಯ ಮಿತಿ ಪ್ರತಿಪಾದ್ಯ" ಎಂಬುವವರೆಗೂ ಉಪಪಾದಿಸಿರುತ್ತಾರೆ. ಯಚ್ಛ್ರೇಯಃ ಏತಯೋರೇಕಂ ಬ್ರೂಹಿ ಎಂದು ಎರಡು ಮಾರ್ಗಗಳಲ್ಲಿ ಯಾವುದೊಂದು ಒಳ್ಳೆಯದು ಹೇಳು ಎಂದು ಯಾವಾಗ ಕೇಳಲ್ಪಟ್ಟಿತೋ, ಪ್ರಶ್ನಿಸುವನು ಪ್ರಾಜ್ಞನಾದಪಕ್ಷದಲ್ಲಿ ಎರಡಕ್ಕೂ ಒಂದೇ ಫಲವಾದ ಪಕ್ಷದಲ್ಲೇ ಯಚ್ಛ್ರೇಯಃ ಎಂಬುದು ಕೂಡುತ್ತದೆಯೇ ವಿನಾ ಅನ್ಯಥಾ ಇಲ್ಲವು. ಈಗ ಕರ್ಮಸನ್ಯಾಸದಿಂದ ಎಂದರೆ ಜ್ಞಾನಯೋಗದಿಂದ ಆಗುವ ಫಲವೂ ಆತ್ಮ ಸಾಕ್ಷಾತ್ಕಾರವು ; ಕರ್ಮಯೋಗವನ್ನೇ ಜ್ಞಾನಯೋಗನಿರಪೇಕ್ಷವಾಗಿ ಅನುಷ್ಠಿಸುವುದರಿಂದಲೂ ಉಂಟಾಗುವ ಫಲವು ಆತ್ಮ ಸಾಕ್ಷಾತ್ಕಾರವು; ಆದುದರಿಂದ ಪ್ರಾಜ್ಞನಾದ ಅರ್ಜುನನಿಗೆ ಪ್ರಶ್ನೆಗೆ ಅವಕಾಶವು ದೊರೆಯಿತು.

ಮೂಲಕ್ಕೆ ಅರ್ಥವು :—ಲಕ್ಷ್ಮೀಯುಕ್ತನಾದ ಕೃಷ್ಣಭಗವಾನರವರು ಅರ್ಜುನನ ಪ್ರಶ್ನೆಗೆ ಉತ್ತರವನ್ನು ಹೇಳುವವರಾಗಿ ಕರ್ಮಯೋಗೋ ವಿಶಿಷ್ಯತೇ ಎಂದು ಪ್ರತಿಜ್ಞಾ ವಾಕ್ಯವನ್ನು ಹೇಳಿ, ಅದಕ್ಕೆ ಹೇತುಗಳನ್ನು ಮುಂದಿನ ಶ್ಲೋಕಗಳಲ್ಲಿ ತಿಳಿಸುತ್ತಾರೆ. ಸನ್ಯಾಸಃ - ಇಲ್ಲಿ ಯತಿ ಧರ್ಮವು ಹೇಳಲ್ಪಡಲಿಲ್ಲವು, ಸನ್ಯಾಸವೆಂದರೇನೆಂಬುದನ್ನು ಉತ್ತರಾರ್ಧದಲ್ಲಿ ಕರ್ಮಸನ್ಯಾಸ ನೆಂದು ವಿವರಿಸುತ್ತಾರೆ—ಕರ್ಮಸನ್ಯಾಸವೆಂದರೆ ಸರ್ವ ಕರ್ಮ ಪರಿತ್ಯಾಗನೆಂಬರ್ಥವಲ್ಲನೆಂದು ಹಿಂದೆಯೇ ಸೂಚಿಸಲ್ಪಟ್ಟಿರುತ್ತದೆ. ಸರ್ವೇಂದ್ರಿಯೋಪರತಿರೂಪ ಸನ್ಯಾಸವು ಜ್ಞಾನಯೋಗಿಗೆ ಹೇಳಿರುವುದರಿಂದ, ಸನ್ಯಾಸವೆಂದರೆ ಜ್ಞಾನಯೋಗವು, ಕರ್ಮಯೋಗಶ್ಚ - ಕರ್ಮಯೋಗವೂ ಸಹ, ಉಭೌ - ಎರಡೂ ಒಂದೇ ವಿಧ ಫಲದಾಯಕಗಳಾಗಿ, ಆತ್ಮಸಾಕ್ಷಾತ್ಕಾರವನ್ನುಂಟುಮಾಡು ವವುಗಳಾಗಿ, ನಿಶ್ಶ್ರೇಯಸಕರೌ - ಉತ್ತರೋತ್ತರ ಉಪಾಸನಾ ನಿಷ್ಪತ್ತಿಮೂಲಕ ಮೋಕ್ಷ ದಾಯಕಗಳು, ಜ್ಞಾನಯೋಗಕ್ಕೆ ಅಧಿಕಾರಿಯಾದಾಗ ಕರ್ಮಯೋಗ ಬೇಡವೆಂದೂ ಕರ್ಮ ಯೋಗಕ್ಕೆ ಜ್ಞಾನಯೋಗದಪೇಕ್ಷೆ ಇಲ್ಲವೆಂದೂ ಹೀಗೆ ಎರಡೂ ನಿರಪೇಕ್ಷಗಳಾಗಿ ಕೊನೆಗೆ ಮೋಕ್ಷ ದಾಯಕಗಳೆಂದು ಹೇಳಲ್ಪಟ್ಟವು; ಆದರೂ ಅವುಗಳಿಗೆ ವೈಲಕ್ಷಣ್ಯವುಂಟೆಂದು ತು ಶಬ್ದವು ತಯೋಸ್ತು - ಆವೆರಡರಲ್ಲಾದರೋ, ಕರ್ಮಸನ್ಯಾಸಾತ್ - ಜ್ಞಾನಯೋಗಕ್ಕಿಂತಲೂ, ಕರ್ಮ ಯೋಗವು, ವಿಶಿಷ್ಯತೇ - ವಿಲಕ್ಷಣವಾದುದು, ಕರ್ಮಯೋಗವು ವಿಶೇಷವುಳ್ಳದ್ದು, ಆ ಕಾರಣ ದಿಂದ ಆ ಮಾರ್ಗವೇ ಎಲ್ಲರಿಗೂ ಉಪಾದೇಯವು, ಜ್ಞಾನಾಧಿಕಾರಿಗೂ ಕೂಡ ಉಪಾದೇಯ ವೆಂಬ ಭಾವವು. ಇದು ವಿಶಿಷ್ಯತೇ ಎಂಬ ಪದದಿಂದ ತೋರಿ ಬರುತ್ತದೆ. ಕರ್ಮಯೋಗ ಮೂಲಕವಾಗಿಯೇ ಆತ್ಮಸಾಕ್ಷಾತ್ಕಾರವು ಸುಕರವಾಗಿಯೂ ಶೀಘ್ರವಾಗಿಯೂ ಉಂಟಾಗುತ್ತ ದೆಂದು ಒಡನೆಯೇ ಉತ್ತರವನ್ನು ದಯಪಾಲಿಸಿದರು. ॥೨॥

ಭಾ. ಸನ್ಯಾಸೋ-ಜ್ಞಾನಯೋಗಃ, ಕರ್ಮಯೋಗಶ್ಚ ಜ್ಞಾನಯೋಗಶಕ್ತಸ್ಯಾಪ್ಯುಭೌ ನಿರಪೇಕ್ಷೌ ನಿಶ್ಶ್ರೇಯಸಕರೌ । ತಯೋಸ್ತು, ಕರ್ಮಸನ್ಯಸಾತ್ - ಜ್ಞಾನಯೋಗಾತ್ ಕರ್ಮಯೋಗ ಏವ ವಿಶಿಷ್ಯತೇ ॥೨॥

ಭಾಷ್ಯಾರ್ಥವು :—ಹಿಂದೆ ಕರ್ಮಯೋಗದ ಮೂಲಕ ಜ್ಞಾನಯೋಗ ಪ್ರಾಪ್ತವಾದಾಗ ಮುಂದಕ್ಕೆ ಕರ್ಮಯೋಗದಪೇಕ್ಷೆಯಿಲ್ಲದೆ ಆತ್ಮಸಾಕ್ಷಾತ್ಕಾರ ಉಂಟಾಗುತ್ತದೆಂದು ಜ್ಞಾನಯೋಗವು ಪ್ರಶಂಸಿಸಲ್ಪಟ್ಟಿತು. ಅನಂತರ ಜ್ಞಾನಾಧಿಕಾರಿಗೂ ಕರ್ಮಯೋಗವೇ ಶ್ರೇಷ್ಠವೆಂದೂ ಜ್ಞಾನಯೋಗ ನಿರಪೇಕ್ಷವಾಗಿಯೇ ಅಂತರ್ಗತ ಆತ್ಮಜ್ಞಾನಾದಿಗಳಿಂದಲೂ ಆತ್ಮ ಸಾಕ್ಷಾತ್ಕಾರವು ಲಭಿಸುತ್ತದೆಂದೂ, ಹೇಳಲ್ಪಟ್ಟಿತು. ಅರ್ಜುನ ಪ್ರಶ್ನೆಯು ಇವೆರಡರಲ್ಲಿ ಯಾವುದು ಉತ್ತಮವೆಂದಾದುದರಿಂದ, ಅದಕ್ಕೆ ಉತ್ತರವಾಗಿ ಪ್ರತಿಜ್ಞಾ ವಾಕ್ಯರೂಪದಲ್ಲಿ ಕರ್ಮಯೋಗವೇ ಉತ್ತಮವೆಂದು ತಿಳಿಸುತ್ತಾರೆ. ಸನ್ಯಾಸವೆಂದರೆ ಜ್ಞಾನಯೋಗವು. ಇಲ್ಲಿ ಸನ್ಯಾಸ ಶಬ್ದಕ್ಕೆ ಕರ್ಮಸನ್ಯಾಸವು ಅರ್ಥವೆಂಬುದು ಉತ್ತರಾರ್ಧದಿಂದ ವ್ಯಕ್ತವು. ಕರ್ಮ ಸನ್ಯಾಸವೆಂಬ ಪದವು ಸರ್ವೇಂದ್ರಿಯೋಪರತಿ ರೂಪವಾಗಿ ಇಂದ್ರಿಯ ಪ್ರವೃತ್ತಿಗಳೇ ಇಲ್ಲದ ಎಂಬರ್ಥದಲ್ಲಿ ಪ್ರಯೋಗಿಸಿರುವದರಿಂದ ಜ್ಞಾನಯೋಗವೆಂದು ಭಾಷ್ಯವನ್ನು ಬರೆದರು. ಯತಿ ಧರ್ಮವೆಂಬರ್ಥವಲ್ಲವು, ಅದು ಅಪ್ರಸ್ತುತವಾದುದು, ಕರ್ಮಯೋಗಶ್ಚ - ಕರ್ಮಯೋಗವೂ ಕೂಡ, ಜ್ಞಾನಯೋಗಶಕ್ತಸ್ಯಾಪಿ - ಜ್ಞಾನಯೋಗಕ್ಕೆ ಶಕ್ತಿಯಿರುವವನಿಗೂ ಕೂಡ, ನಿರಪೇಕ್ಷೌ - ಒಂದಕ್ಕೊಂದರಪೇಕ್ಷೆ ಇಲ್ಲದವುಗಳಾಗಿ, ಜ್ಞಾನಯೋಗಾನುಷ್ಠಾನಕಾಲದಲ್ಲಿ ಕರ್ಮಯೋಗದ ಅಪೇಕ್ಷೆಯೂ, ಕರ್ಮಯೋಗಕ್ಕೆ ಜ್ಞಾನಯೋಗದಪೇಕ್ಷೆಯೂ, ಬೇಡವೆಂಬ ಭಾವವು; ಹೇಗೆ ನಿರಪೇಕ್ಷವಾದವೆಂಬುದು, ಮುಂದೆ ನಾಲ್ಕನೆಯ ಶ್ಲೋಕದಲ್ಲಿ ಉಪಪಾದಿತವು ; ಮೂಲದಲ್ಲಿರುವ ಚ ಕಾರವನ್ನೂ ಮುಂದಿನ ಶ್ಲೋಕವನ್ನೂ ಮನಸ್ಸಿನಲ್ಲಿಟ್ಟು ನಿರಪೇಕ್ಷೌ ಎಂಬ ಪ್ರಯೋಗವು, ನಿಶ್ಶ್ರೇಯಸಕರೌ - ಮೋಕ್ಷದಾಯಕವು ; ಇವುಗಳೇ ಸಾಕ್ಷಾತ್ತಾಗಿ ಮೋಕ್ಷದಾಯಗಳಾಗುವದಿಲ್ಲವು, ಭಕ್ತಿಯೋಗಕ್ಕೆ ಸಹಕಾರಿಗಳಾಗಿ ಉತ್ತರೋತ್ತರ ಮೋಕ್ಷದಾಯಕವೆಂಬ ಭಾವವು. ಹೇಗೆಂದರೆ–ಎರಡೂ ಆತ್ಮಸಾಕ್ಷಾತ್ಕಾರವನ್ನುಂಟುಮಾಡುವುಗಳಾಗಿ, ಎರಡೂ ಭಕ್ತಿಯೋಗವನ್ನುಂಟುಮಾಡುವುಗಳಾಗಿ, ಎರಡೂ ಪರಮಾತ್ಮಸಾಕ್ಷಾತ್ಕಾರಮೂಲಕ ದೇಹಾವಸಾನದಲ್ಲಿ ಮೋಕ್ಷದಾಯಕಗಳೆಂಬ ಭಾವವು. ಎರಡಕ್ಕೂ ಫಲವು ಒಂದೇಯಾದುದರಿಂದ ಮೂಲದಲ್ಲಿ ನಿಶ್ಶ್ರೇಯಸಕರಾವುಭೌ ಎಂದು ಹೇಳಲ್ಪಟ್ಟಿತು. ಹಾಗಾದರೆ ಎರಡರಲ್ಲಿ ಯಾವುದಾದರೂ ಒಂದನ್ನು ಅವಲಂಬಿಸಬಹುದಲ್ಲಾ, ಏಕೆಂದರೆ ವಿಕಲ್ಪೋಽವಿಶಿಷ್ಟ ಫಲತ್ವಾತ್ ಎಂಬ ಸೂತ್ರದಲ್ಲಿ ಹೇಳಿದೆಯಲ್ಲಾ ಎಂದರೆ, ಅವಲಂಬಿಸಬಹುದು, ಆದರೆ ಎರಡಕ್ಕೂ ಸ್ವಲ್ಪ ವೈಲಕ್ಷಣ್ಯ ಉಂಟೆಂದು ತಿಳಿಸುತ್ತಾರೆ. ಮುಂದಿನ ತಯೋಸ್ತು ಎಂಬಲ್ಲಿನ ತು ಶಬ್ದವು ವೈಲಕ್ಷಣ್ಯವನ್ನು ಜೋಧಿಸುತ್ತದೆ, ಅವೆರಡರಲ್ಲಾದರೋ, ಜ್ಞಾನಯೋಗಾತ್ - ಜ್ಞಾನಯೋಗಕ್ಕಿಂತಲೂ, ಕರ್ಮಯೋಗವೇನೆ, ವಿಶಿಷ್ಯತೇ - ವಿಶೇಷವುಳ್ಳದ್ದಾಗಿರುತ್ತದೆ, ಆ ವಿಶೇಷಗಳು ಯಾವುವೆಂಬುದನ್ನು ಮುಂದೆ ಹೇಳುತ್ತಾರೆ. ಹಾಗೆ ಕರ್ಮಯೋಗಕ್ಕೆ ವೈಲಕ್ಷಣ್ಯವಿರುವದರಿಂದಲೇ, ಏವ ಕಾರವನ್ನು ಪ್ರಯೋಗಿಸಿರುತ್ತಾರೆ. ಇಲ್ಲಿ ಕರ್ಮಸನ್ಯಾಸವೆಂದರೆ ಕರ್ಮತ್ಯಾಗವೆಂದು ಹೇಳಿದರೆ ಕರ್ಮ ತ್ಯಾಗಕ್ಕೂ ಕರ್ಮಯೋಗಕ್ಕೂ ವ್ಯತ್ಯಾಸವು ಶಬ್ದದಿಂದಲೇ ತೋರಿಬರುತ್ತದೆ. ಈ ವ್ಯತ್ಯಾಸವನ್ನು ಹೇಳಲು ಸರ್ವೇಶ್ವರನೇ ಬೇಕೇ. ಹೀಗೆ ನಿಸ್ಸಾರವಾದ ಅಭಿಪ್ರಾಯವಾಗುತ್ತದೆ. ಪ್ರಕರಣಕ್ಕೂ ವಿರುದ್ಧವಾದುದಾಗುತ್ತದೆ. ಕರ್ಮ ಪರಿತ್ಯಾಗವೂ, ಕರ್ಮಾನುಷ್ಠಾನವೂ, ಎರಡೂ ಹೇಗೆ ಒಂದೇ ಫಲವನ್ನುಂಟುಮಾಡೀತು?

ಭಾ. ಕುತ ಇತ್ಯತ್ರಾಹ—

ಮೂ. ಜ್ಞೇಯಸ್ಸ ನಿತ್ಯಸನ್ನ್ಯಾಸೀ ಯೋ ನ ದ್ವೇಷ್ಟಿ ನ ಕಾಙ್ಕ್ಷತಿ ।
ನಿರ್ದ್ವನ್ದ್ವೋ ಹಿ ಮಹಾಬಾಹೋ ಸುಖಂ ಬನ್ಧಾತ್ಪ್ರಮುಚ್ಯತೇ ॥ ೩.

ಇವೆರಡೂ ಪರಸ್ಪರ ವಿರುದ್ಧವು; ಪರಸ್ಪರ ವಿರುದ್ಧವಾದವುಗಳಿಗೆ ಒಂದೇ ಫಲವೇ ? ಹಿಂದೆ ಎಲ್ಲಿಯೂ ಈ ತುರೀಯಾಶ್ರಮ ವಿಷಯವು ಹೇಳಲ್ಪಡಲಿಲ್ಲವು. ಜ್ಞಾನಯೋಗವೆಂಬರ್ಥವೇ ಸಮಂಜಸವಾದುದಾಗುತ್ತದೆ. ಸನ್ನ್ಯಾಸ ಶಬ್ದದಿಂದ ಜ್ಞಾನಯೋಗವು ಹೇಳಲ್ಪಟ್ಟಿರುವದು ಹೇಗೆ ಎಂದರೆ ಇಂದ್ರಿಯ ಪ್ರವೃತ್ತಿಗಳು ಇಲ್ಲದೆ ಸರ್ವೇಂದ್ರಿಯೋಪರತಿಯುಳ್ಳದಾದುದರಿಂದ. ಜ್ಞಾನ ಯೋಗವು ಸನ್ನ್ಯಾಸ ಮತ್ತು ಕರ್ಮಸನ್ನ್ಯಾಸ ಶಬ್ದಗಳಿಂದ ಹೇಳಲ್ಪಟ್ಟಿರುತ್ತದೆ. ಕರ್ಮಯೋಗ ಜ್ಞಾನಯೋಗಗಳಲ್ಲಿ ಯಾವುದನ್ನು ಅನುಷ್ಠಿಸಬೇಕೋ ಅದೊಂದನ್ನು ಹೇಳು ಎಂದು ಅರ್ಜುನನು ಪ್ರಶ್ನಿಸಲಿಲ್ಲವು; ಎರಡೂ ಆತ್ಮಸಾಕ್ಷಾತ್ಕಾರರೂಪ ಫಲವನ್ನೇ ಸಾಧಿಸುತ್ತವೆ ಎಂದೂ, ಮತ್ತು ಕರ್ಮಯೋಗಕ್ಕೇನೆ ಕರ್ಮ ಜ್ಯಾಯೋಹ್ಯ ಕರ್ಮಣಃ (ಗೀ. ೩.೮) ಎಂದೂ, ಹಿಂದೆ ಮೂರನೆಯ ಅಧ್ಯಾಯದಲ್ಲೇ ಜ್ಯಾಯಸ್ತ್ವವೂ ಹೇಳಲ್ಪಟ್ಟಿರುತ್ತದೆ. ಈಗ ಅರ್ಜುನನ ಪ್ರಶ್ನೆಯಲ್ಲಿ ಯಾವುದೊಂದು ಶ್ರೇಷ್ಠವೋ ಅದೊಂದನ್ನು ಹೇಳು ಎಂಬುದರಿಂದ ಸೌಕರ್ಯದಿಂದಲೂ ಶೈಘ್ರ್ಯದಿಂದಲೂ ಇವೆರಡು ಮಾರ್ಗದಲ್ಲಿ ಯಾವುದು ಉತ್ತಮವೋ ಅದನ್ನು ತಿಳಿಸಿ ಎಂಬ ಪ್ರಾರ್ಥನೆಯು. ಸುನಿಶ್ಚಿತಂ ಎಂಬುದು ಕ್ರಿಯಾವಿಶೇಷಣವಲ್ಲವು; ಕ್ರಿಯಾ ವಿಶೇಷಣವಾದರೆ ಶ್ರೀಕೃಷ್ಣನು ಹಿಂದೆ ನಿಶ್ಚಯ ಬುದ್ಧಿ ಉಂಟಾಗುವ ಹಾಗೆ ಹೇಳಲಿಲ್ಲವೆಂಬ ದೋಷಾರೋಪಣೆಮಾಡಿದ ಹಾಗೆ ಆಗುತ್ತದೆ. ಆದುದರಿಂದ ಶ್ರೇಷ್ಠಮಿತಿ ಸುನಿಶ್ಚಿತಂ ಎಂದು ಅನ್ವಯವನ್ನು ತೋರಿಸಿರುತ್ತಾರೆ. ಜ್ಞಾನಯೋಗ ಶಕ್ತನಿಗೂ ಕೂಡ ಕರ್ಮಯೋಗವೇ ಜ್ಞಾನಯೋಗಾಧಿಕಾರವುಂಟಾಗುವವರೆಗೂ ಬೇಕಾದುದು, ಹೀಗಿರುವದರಿಂದ ಕರ್ಮಯೋಗವೇ ಅನುಕೂಲವು, ಅದರಲ್ಲೇ ಶೀಘ್ರವಾಗಿ ಸುಕರವಾಗಿ ಫಲವಾದ ಆತ್ಮಸಾಕ್ಷಾತ್ಕಾರವು ದೊರೆಯುತ್ತದೆ ಎಂಬ ಭಾವವು. ॥೧॥

**ಭಾಷ್ಯಾವತಾರಿಕೆಯ ಅರ್ಥವು:—** ಹಿಂದಿನ ಶ್ಲೋಕದಲ್ಲಿ ಜ್ಞಾನಯೋಗಕ್ಕಿಂತಲೂ ಕರ್ಮಯೋಗೋವಿಶಿಷ್ಯತೇ, ಎಂದು ಹೇಳಿದರು. ಪ್ರತಿಜ್ಞಾ ವಾಕ್ಯರೂಪದಲ್ಲಿ ಅರ್ಜುನನ ವಾಕ್ಯಕ್ಕೆ ಸುನಿಶ್ಚಿತವಾದ ಉತ್ತರವನ್ನು ದಯಪಾಲಿಸಿ, ಅದಕ್ಕೆ ಕಾರಣವೇನೆಂಬುದನ್ನು ಈ ಶ್ಲೋಕವು ತಿಳಿಸುವದೆಂದು ಕುತ ಇತ್ಯತ್ರಾಹ ಎಂಬದಾಗಿ ಅವತಾರಿಕೆಯು. ಹೇಗೆ ಶ್ರೇಷ್ಠವು ಎಂಬ ಸಂದರ್ಭದಲ್ಲಿ ಹೇಳುತ್ತಾರೆ ಏನೆಂದರೆ.—

**ಮೂಲಕ್ಕೆ ಅರ್ಥವು :—ಯಃ** - ಯಾವ ಕರ್ಮಯೋಗಿಯು, ಆತ್ಮ ತೃಪ್ತನಾಗಿರುವದರಿಂದ, **ನ ಕಾಙ್ಕ್ಷತಿ** - ಆತ್ಮೇತರವಾದ ಯಾವುದನ್ನೂ ಅನುಕೂಲವೆಂದು ಭಾವಿಸಿ ಅಪೇಕ್ಷಿಸುವದಿಲ್ಲವೋ, ಆದುದರಿಂದ **ನ ದ್ವೇಷ್ಟಿ** - ಯಾವುದನ್ನೂ ಪ್ರತಿಕೂಲವೆಂದು ಭಾವಿಸಿ ದ್ವೇಷಿಸುವದಿಲ್ಲವೋ ಆ ಕಾರಣದಿಂದಲೇ, **ನಿರ್ದ್ವನ್ದ್ವಃ** - ಹೀಗೆ ಅನುಕೂಲ ಪ್ರತಿಕೂಲಗಳೆಂಬ ಭಾವನೆಯಿಲ್ಲದಿರುವದರಿಂದಲೇ ಸುಖ ದುಃಖವೆಂಬ ಭಾವವಿಲ್ಲದವನೋ, **ಸಃ** - ಅವನು, **ನಿತ್ಯಸನ್ನ್ಯಾಸೀ ಇತಿ ಜ್ಞೇಯಃ** - ಯಾವಾಗಲೂ ಜ್ಞಾನನಿಷ್ಠೆಯುಳ್ಳವನೆಂದೇ ತಿಳಿಯತಕ್ಕದ್ದು. ಜ್ಞಾನಯೋಗಿಗೆ ಸದಾ ಸಮನೆಂದೇ ಭಾವಿಸತಕ್ಕದ್ದೆಂಬ ತಾತ್ಪರ್ಯವು, ಇದಕ್ಕೆ ಕಾರಣವೇನೆಂದರೆ **ನ ದ್ವೇಷ್ಟಿ, ನ ಕಾಙ್ಕ್ಷತಿ, ನಿರ್ದ್ವನ್ದ್ವಃ** ಎಂದು ಹೇಳಲ್ಪಟ್ಟಿತು. ಜ್ಞಾನಯೋಗ ನಿಷ್ಠನೂ ಹೀಗೆಯೇ

ಭಾ. ಯಃ ಕರ್ಮಯೋಗೀ ತದಂತರ್ಗತಾತ್ಮಾನುಭವ ತೃಪ್ತಸ್ತದ್ವ್ಯತಿರಿಕ್ತಂ ಕಿಮಪಿ ನ ಕಾಂಕ್ಷತಿ, ತತ ಏವ ಕಿಮಪಿ ನ ದ್ವೇಷ್ಟಿ, ತತ ಏವ ದ್ವಂದ್ವಸಹಶ್ಚ ; ಸಃ ನಿತ್ಯ ಸನ್ಯಾಸೀ – ನಿತ್ಯಜ್ಞಾನನಿಷ್ಠ, ಇತಿ ಜ್ಞೇಯಃ ; ಸಹಿ ಸುಕರಕರ್ಮಯೋಗನಿಷ್ಠತಯಾ ಸುಖಂ ಬಂಧಾತ್ಪ್ರಮುಚ್ಯತೇ ||೩||

ಇರುವನಾದುದರಿಂದ ಆತನಿಗೆ ಈ ಕರ್ಮಯೋಗಿಯು ಏನೂ ಕಮ್ಮಿ ಇಲ್ಲವು, ಹಾಗೆ ನೋಡಿದರೆ ಇನ್ನೂ ಮೇಲು ಈತನು; ಈತನು ನಿತ್ಯಸನ್ಯಾಸಿಯು ಎಂದು ಹೇಳಲ್ಪಟ್ಟನೆಂಬ ಭಾವವು. ಸ ಹಿ-ಇಂತಹ ಕರ್ಮಯೋಗಿಯಾದವನೋ, ಬಂಧಾತ್-ಈ ಬಂಧದಿಂದ, ಸುಖಂ ಯಥಾತಥಾ - ಸುಕರವಾಗಿರೋಣ ಹೇಗೋ ಹಾಗೆ, ಬಂಧಾತ್ - ಸಂಸಾರಬಂಧದಿಂದ, ಪ್ರಮುಚ್ಯತೇ - ನಿಶ್ಶೇಷವಾಗಿ ಬಿಡಲ್ಪಡುವನು. ಆತ್ಮಜ್ಞಾನಾನುಸಂಧಾನಯುಕ್ತವಾದ ಕರ್ಮಯೋಗವು ಸುಕರವಾದುದರಿಂದ ಜ್ಞಾನಯೋಗಕ್ಕಿಂತಲೂ ಅನುಕೂಲವಾದ ಸಾಧನವೆಂದು ಅಪ್ಪಣೆಕೊಡಿಸಿರುತ್ತಾರೆ.

ಭಾಷ್ಯಾರ್ಥವು :—ಜ್ಞಾನಯೋಗಕ್ಕಿಂತ ಕರ್ಮಯೋಗವೇ ವಿಲಕ್ಷಣವಾದುದಾಗಿ ಉತ್ತಮವೆಂದು ಹಿಂದೆ ಹೇಳಿದುದಕ್ಕೆ, ಕಾರಣವನ್ನು ಉಪದೇಶಿಸುತ್ತಾರೆ. ಯಃ ಎಂದರೆ ಯಾವ ಕರ್ಮಯೋಗಿಯು, ತದಂತರ್ಗತಾತ್ಮಾನುಭವ ತೃಪ್ತಃ - ಆ ಕರ್ಮಯೋಗದಲ್ಲೇ ಅಡಗಿರುವ ಆತ್ಮಾನುಭವದಿಂದ ತೃಪ್ತನಾಗಿ, ತದ್ವ್ಯತಿರಿಕ್ತಂ - ಆ ಆತ್ಮಾನುಭವಕ್ಕೆ ವ್ಯತಿರಿಕ್ತವಾದ, ಕಿಮಪಿ ನ ಕಾಂಕ್ಷತಿ-ಯಾವುದನ್ನೂ ಅಪೇಕ್ಷಿಸುವದಿಲ್ಲವ; ತತ ಏವ - ಆ ಕಾರಣದಿಂದಲೇ, ಆ ಕಾಮನೆಯು ಪರಿಪೂರ್ಣವಾಗದ ಸಂದರ್ಭದಲ್ಲಿ ಎಂದರೆ ಪ್ರತಿಕೂಲ ಸಂಭವಿಸಿದರೂ, ನದ್ವೇಷ್ಟಿ - ಯಾವುದನ್ನೂ ದ್ವೇಷಿಸುವದಿಲ್ಲವು. ಹೀಗೆ ಯಾವುದರಲ್ಲೂ ಅನುಕೂಲಭಾವದಿಂದ ಕಾಮನೆಯಿಲ್ಲವೋ, ಯಾವದರಲ್ಲೂ ಪ್ರತಿಕೂಲಭಾವದಿಂದ ದ್ವೇಷವಿಲ್ಲವೋ, ತತ ಏವ - ಆ ಕಾರಣದಿಂದಲೇ, ದ್ವಂದ್ವ ಸಹಶ್ಚ - ಸುಖ ದುಃಖ ಶೀತೋಷ್ಣಾದಿಗಳನ್ನೂ ಸಹಿಸುವನೋ, ಸುಖ ದುಃಖ ಸ್ವರೂಪವೇ ಇಲ್ಲವೆಂಬ ಭಾವವಲ್ಲವು, ಅನುಕೂಲ ಪ್ರತಿಕೂಲಗಳು ಈ ಜಗತ್ತಿನಲ್ಲಿರುವವರಿಗೂ ಉಂಟು ; ಆದರೆ ಅವುಗಳನ್ನು ಸಹಿಸಿಕೊಳ್ಳುವನೆಂಬ ಭಾವವು ; ಸಃ - ಅಂತಹ ಕರ್ಮಯೋಗಿಯು, ನಿತ್ಯ ಸನ್ಯಾಸೀ - ಸದಾ ಜ್ಞಾನನಿಷ್ಠೆಯುಳ್ಳವನು, ಇತಿಜ್ಞೇಯಃ - ಎಂದು ತಿಳಿಯತಕ್ಕದ್ದು ; ಇಲ್ಲಿ ನಿತ್ಯ ಸನ್ಯಾಸೀ ಎಂಬುದರಿಂದ ಜ್ಞಾನಯೋಗ ನಿಷ್ಠನು ಹೇಳಲ್ಪಡಲಿಲ್ಲವು. ಹಿಂದೆ ಜ್ಞಾನಯೋಗಕ್ಕಿಂತಲೂ ಕರ್ಮಯೋಗವು ವಿಶಿಷ್ಯತೇ ಎಂದು ಹೇಳಿ, ಆ ಕರ್ಮಯೋಗಿಯಲ್ಲಿ ಹೆಚ್ಚಾದ ವೈಲಕ್ಷಣ್ಯವೇನೆಂಬುದನ್ನು ಉಪಪಾದಿಸುವ ಸ್ಥಳದಲ್ಲಿ, ಅಂತಹ ಕರ್ಮಯೋಗಿಯು ನಿತ್ಯ ಸನ್ಯಾಸಿಯು ಎಂದು ಸ್ತೋತ್ರವಾಗಿ ಹೇಳಿದೆ, ನಿತ್ಯಸನ್ಯಾಸೀ ಎಂಬುದರಿಂದ ಯತಿಯು ಹೇಳಲ್ಪಟ್ಟನೆಂದೂ, ಜ್ಞಾನಯೋಗಿಯು ಹೇಳಲ್ಪಟ್ಟನೆಂದೂ, ಅರ್ಥಮಾಡುವದು ಸರಿಯಲ್ಲವು. ಪ್ರಕರಣಾನುಗುಣವಾಗಿ ಅರ್ಥಮಾಡುವಿಕೆಗೆ ಯುಕ್ತವು, ಸಮಂಜಸವು; ಆದುದರಿಂದ ನಿತ್ಯಸನ್ಯಾಸೀ ಎಂಬುದಕ್ಕೆ ಅರ್ಥ ಹೇಗೆಂದರೆ ಈ ಕರ್ಮಯೋಗಿಯನ್ನು ಸದಾ ಜ್ಞಾನಯೋಗನಿಷ್ಠನಿಗೆ ಸಮಾನವೆಂದೇ ಭಾವಿಸತಕ್ಕದ್ದೆಂಬರ್ಥವು.' ಜ್ಞಾನಯೋಗಿಗೆ ಕಾಮಕ್ರೋಧಗಳಿಂದ ಚಿತ್ತ ಚ್ಯುತಿಯುಂಟು, ಕರ್ಮಯೋಗಿಗೆ ಅದಿಲ್ಲವಾದುದರಿಂದಲೂ ನಿತ್ಯ ಸನ್ಯಾಸಿಯು. ಮುಂದೆ ಸುಖಂ ಬಂಧಾತ್ ಪ್ರಮುಚ್ಯತೇ ಎಂಬ ಕರ್ಮಯೋಗಪ್ರಶಂಸೆಯು ಅಭಿಪ್ರಾಯಕ್ಕೂ ಸರಿಹೋಗುವದಿಲ್ಲವು. ಜ್ಞಾನಯೋಗದ ಮೂಲಕ ಎಂದಿಗೂ ಸುಖದಿಂದ ಫಲಸಿದ್ಧಿಯುಲ್ಲವು. ಆ ಮಾರ್ಗವು ದುಷ್ಕರವು. ಕರ್ಮಯೋಗವೇ ಸುಕರವು. ಮುಂದೆ ದುಷ್ಕರವೆಂದು ಆರನೆಯ ಶ್ಲೋಕದಲ್ಲಿ 'ಸನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ' ಎಂದು ಹೇಳಿರುವದಕ್ಕೂ ವಿರೋಧವಾಗು

-ತ್ತಾನೆ. ಆದುದರಿಂದ ಇದು ಕರ್ಮಯೋಗಿಯ ಪ್ರಶಂಸಾಪರವಾದುದರಿಂದ ಯತಿ ಎಂದರೆ ಯಾವ ಕರ್ಮಯೋಗಿಯು ಎಂದು ವ್ಯಾಖ್ಯಾನಮಾಡಿರುತ್ತಾರೆ, ಸಃ-ಅಂತಹ ಕರ್ಮಯೋಗಿಯು, ಸುಕರಕರ್ಮಯೋಗನಿಷ್ಠತಯಾ-ಸುಲಭವಾದಕರ್ಮಯೋಗಾನುಷ್ಠಾನಪರನಾದದರಿಂದ, ಸುಖಂ-ಸುಲಭವಾಗಿ, ಬಂಧಾತ್ಪ್ರಮುಚ್ಯತೆ - ಬಂಧದಿಂದ ಬಿಡಲ್ಪಡುವನು. ಇಲ್ಲಿ ಸುಖ ಶಬ್ದವು ಸೌಕರ್ಯವನ್ನು ಸೂಚಿಸುವದರಿಂದ, ಸುಕರಕರ್ಮಯೋಗ ನಿಷ್ಠತಯಾ ಎಂಬ ಪ್ರಯೋಗವು. ಕೆಲವರು ಈ ಶ್ಲೋಕವು ಕಾಮ್ಯಕರ್ಮದಲ್ಲಿ ಸಕ್ತನಲ್ಲದವನನ್ನು ಹೇಳುತ್ತದೆಂದು ಅಭಿಪ್ರಾಯಪಡುವರು. ಇದು ಪ್ರಕರಣಕ್ಕೆ ದೂರವಾದ ಅಭಿಪ್ರಾಯವು. ಈಗ ಕಾಮ್ಯಕರ್ಮದ ಸುಕರತ್ವ ದುಷ್ಕರತ್ವವನ್ನು ಹೇಳುವ ಪ್ರಕರಣವಲ್ಲವು. ಶ್ರೀಕೃಷ್ಣನು ಅರ್ಜುನನ ಕೈಯಲ್ಲಿ ಕರಿಷ್ಯೇ ವಚನಂತವ ಎಂದು ಕಡೆಗೆ ಒಪ್ಪಿಸುವುದನ್ನು ಮಧ್ಯದ ಧರ್ಮೋಪದೇಶವು. ಅದಕ್ಕನುಗುಣವಾದ ಉಪದೇಶವೇ ವಿನಾ, ಕರ್ಮ ಸ್ವರೂಪ ತ್ಯಾಗದ ವಿಷಯವಾಗಿ ಗೀತೆಯಲ್ಲಿ ಎಲ್ಲೂ ಉಪದೇಶವಿಲ್ಲವು. ಸರ್ವಧರ್ಮಾನ್ ಪರಿತ್ಯಜ್ಯ ಎಂದು ಹೇಳುವ ಸಂದರ್ಭದಲ್ಲೂ ಇಲ್ಲವು. ಪ್ರಾರಂಭದಲ್ಲೂ ಅಂತ್ಯದಲ್ಲೂ ಸಿಗುವುದರಲ್ಲೂ ಉಪದೇಶಗಳು ಒಂದೇ ವಿಧವಾಗಿಯೇ ಇರಬೇಕೇ ವಿನಾ, ಪರಸ್ಪರ ವಿರುದ್ಧವಾಗಿ ಅನ್ವಯಿಸುವುದು ನ್ಯಾಯವಲ್ಲವು. ಇಲ್ಲಿ ಸುಖಂ ಬಂಧಾತ್ ಪ್ರಮುಚ್ಯತೇ ಎಂದು ಸಂಸಾರ ಬಂಧ ವಿಮೋಚನೆಯನ್ನು ಕರ್ಮಯೋಗಕ್ಕೆ ಹೇಳುವನಂತರವೂ, ಉಭಯೋರ್ವಿಂದತೇ ಫಲಂ ಎಂದೂ ಹೇಳಿದನಂತರವೂ ಅದೇ ಸಾಕ್ಷಾತ್ ಉಪಾಯವೆಂದು ಹೇಳಿದಂತಾಗಲಿಲ್ಲವೇ, ಎಂದಾಕ್ಷೇಪಿಸಿದರೆ, ಕರ್ಮಯೋಗವು ಅವ್ಯವಹಿತೋಪಾಯವಾದ ಉಪಾಸನಕ್ಕೆ ಮುಖ್ಯವಾದ ಅಂಗವಾದುದರಿಂದ ಅದಕ್ಕೆ ಹೇಳುವ ಫಲವನ್ನೇ ಮುಖ್ಯಾಂಗಕ್ಕೂ ಹೇಳುವ ಸಂಪ್ರದಾಯವು ಶಾಸ್ತ್ರಗಳಲ್ಲಿರುವದರಿಂದ ಹಾಗೆ ಹೇಳಲ್ಪಟ್ಟಿತು. ಕರ್ಮಯೋಗವೇ ಸಾಕ್ಷಾತ್ತಾಗಿ ಉಪಾಯವಾಗುವದಿಲ್ಲವೆಂದು ಗೀತೆಯ ಅಧ್ಯಾಯದ ಕಡೆಯ ಶ್ಲೋಕವಾದ "ನಾಹಂ ವೇದೈರ್ನತಪಸಾನದಾನೇನ ನ ಚೇಜ್ಯಯಾ" ಎಂಬುದರಿಂದ ತಿಳಿಸಿ. ಇನ್ನು ಯಾವುದರಿಂದ ಮುಕ್ತಿಯು ಎಂಬಲ್ಲಿ "ಭಕ್ತ್ಯಾತ್ವನನ್ಯಯಾ ಶಕ್ಯಃ" ಎಂದು ಉಪಾಸನರೂಪ ಭಕ್ತಿಯೋಗದಿಂದಲೇ ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುತ್ತದೆ. ಹಾಗಾದರೆ ಕರ್ಮಯೋಗದಿಂದಾಗುವ ಫಲಗಳು ಯಾವುವು ಎಂದರೆ (೧) ಉಪಾಯಾನುಷ್ಠಾನಕ್ಕೆ ವಿರೋಧಿ ಪಾಪ ನಿರಸನವೂ, (೨) ಆದುದರಿಂದ ಉಪಾಯವಾದ ಉಪಾಸನಕ್ಕೆ ಅರ್ಹತೆಯನ್ನುಂಟುಮಾಡೋಣವೂ, (೩) ಕ್ರಮೇಣ ಆತ್ಮಸಾಕ್ಷಾತ್ಕಾರವೂ. ದೊರೆಯುತ್ತವೆ. ಹಾಗೆ ಎಲ್ಲಿ ಹೇಳಿದೆ ಎಂದರೆ ಶ್ರೀ ಯತಿವರ್ಯರು ಪ್ರಥಮಸೂತ್ರಭಾಷ್ಯದಲ್ಲಿ "ಧ್ರುವಾ ನುಸ್ಮೃತೇ ಸ್ಸಾಧನಾನಿ ಯಜ್ಞಾದೀನಿ ಕರ್ಮಾಣಿ" ಎಂದು ಹೇಳಿರುತ್ತಾರೆ. ಇಲ್ಲಿ ಧ್ರುವಾನುಸ್ಮೃತಿ ಎಂದರೆ ಉಪಾಸನವೆಂದು ಅವರೇ ಏವಂರೂಪಾ ಧ್ರುವಾನುಸ್ಮೃತಿ ರೇವ ಭಕ್ತಿ ಶಬ್ದೇನಾಭಿಧೀಯತೇ, ಉಪಾಸನ ಪರ್ಯಾಯತ್ವಾತ್ಭಕ್ತಿಶಬ್ದಸ್ಯ" ಎಂದು ಅಲ್ಲೇ ಹೇಳಿರುತ್ತಾರೆ. ಶ್ರುತ ಪ್ರಕಾಶಿಕೆಯಲ್ಲಿ "ನಾಹಂವೇದೈ ರಿತ್ಯಾದಿನಾ ಭಕ್ತ್ಯವ್ಯತಿರಿಕ್ತ ಉಪಾಯ ನಿಷೇಧ ಉಕ್ತಃ" ಎಂದೂ "ಭಕ್ತಿ ಜನ್ಯಜ್ಞಾನಸ್ಯೈವಾ ವ್ಯವಹಿತೋಪಾಯತ್ವಮುಪಗಮ್ಯತೇ" ಎಂದೂ ಸ್ಪಷ್ಟವಾಗಿ ಹೇಳಿರುತ್ತಾರೆ. ಕರ್ಮಯೋಗಕ್ಕೆ ಪಾಪನಿವಾರಕತ್ವವನ್ನು ಶ್ರುತಿಗಳೇ ಹೇಳುತ್ತವೆ. "ಕಷಾಯೇ ಕರ್ಮಭಿಃಪಕ್ವೇ ತತೋ ಜ್ಞಾನಂ ಪ್ರವರ್ತತೇ" "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಮೃತ ಮಶ್ನುತೇ"; ಇವೆರಡೂ ಸಮಾನಾರ್ಥಕಗಳು. ಅವಿದ್ಯಾ ಎಂದರೆ ಕರ್ಮವು, ವಿದ್ಯಾ ಎಂದರೂ, ಜ್ಞಾನವೆಂದರೂ, ಪರಬ್ರಹ್ಮೋಪಾಸನೆಯು. ಈ ಶ್ರುತಿಗಳಿಗೆ ವ್ಯಾಖ್ಯಾನಮಾಡುವ ಸಂದರ್ಭದಲ್ಲಿ ಶ್ರುತಪ್ರಕಾಶಾಚಾರ್ಯರು "ಉಪಾಯ ವಿರೋಧಿ ನಿರಾಸಕತ್ವಂ ಕರ್ಮಣಃ ಸ್ಪಷ್ಟಯತಿ" ಎಂದೂ "ಕರ್ಮಣಃ ಉಪಾಯ

ಭಾ. ಅವ. ಜ್ಞಾನಯೋಗಕರ್ಮಯೋಗಯೋ ರಾತ್ಮಪ್ರಾಪ್ತಿ ಸಾಧನಭಾವೇಽನ್ಯೋನ್ಯನೈರ ಪೇಕ್ಷ್ಯಮಾಹ—

ಹೇತುತ್ವಸ್ಯ ಕಂಠೋಕ್ತಿಃ" ಎಂದೂ, ಅಪ್ಪಣೆ ಕೊಡಿಸಿರುತ್ತಾರೆ. ಈ ಗೀತೆಯಲ್ಲಿಯೂ ಹಾಗೆಯೇ ಹೇಳಲ್ಪಟ್ಟಿರುತ್ತದೆ. "ಯಜ್ಞೋದಾನಂ ತಪಃ ಕರ್ಮನತ್ಯಾಜ್ಯಂ ಕಾರ್ಯಮೇವತತ್ । ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ" ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿಯೂ ೫-ನೆಯ ಶ್ಲೋಕ ಭಾಷ್ಯದಲ್ಲಿ, ಕರ್ಮಯೋಗೇನ ಮೃದಿತಾಂತಃಕರಣ ಕಷಾಯಸ್ಯ ಎಂಬ ಪ್ರಯೋಗದಿಂದ ಮನಸ್ಸಿನ ಕಲ್ಮಷಗಳೆಲ್ಲಾ ಕಳೆದು ಅದು ನಿರ್ಮಲವಾಗುತ್ತದೆಂದು ಹೇಳಿರುತ್ತಾರೆ. ಕರ್ಮಯೋಗದಿಂದಲೇ ಆತ್ಮದರ್ಶನವೂ ಉಂಟಾಗುತ್ತದೆಂದು ಅದೇ ಭಾಷ್ಯದಲ್ಲೇ"ಸೈವ ಆತ್ಮ ಪ್ರಾಪ್ತೌ ಸಾಧನಮ್"ಎಂದು ಹೇಳಿರುತ್ತಾರೆ. ಹಾಗೆಯೇ ಮೂರನೆಯ ಅಧ್ಯಾಯದ ಅವತಾರಿಕೆಯಲ್ಲಿ ಪರಮಪುರುಷ ಪ್ರಾಪ್ತ್ಯುಪಾಯಭೂತ ವಾದುದು, ಉಪಾಸನವೆಂದೂ ಅದಕ್ಕೆ ಸಾಧನವು ಕರ್ಮಯೋಗದಿಂದ ನಿಷ್ಪಾದ್ಯವಾದ "ಪ್ರಾಪ್ತುಃ ಪ್ರತ್ಯಗಾತ್ಮನ ದರ್ಶನಂ" ಎಂದು ಹೇಳಿರುವವರಿಂದಲೂ ಕರ್ಮಯೋಗವು ಸದ್ವಾರಕವಾಗಿ ಭಕ್ತಿಯೋಗ ಮೂಲಕವಾಗಿಯೇ ಬಂಧಾತ್ಪ್ರಮುಚ್ಯತೇ ಎಂದು ಇಲ್ಲಿ ಹೇಳಲ್ಪಟ್ಟಿತು. ಮುಂದಿನ ಶ್ಲೋಕದ ಅವತಾರಿಕೆಯಲ್ಲೂ, "ಜ್ಞಾನಯೋಗಕರ್ಮಯೋಗಯೋರಾ ತ್ಮಪ್ರಾಪ್ತಿಸಾಧನಭಾವೇ" ಎಂಬ ಪ್ರಯೋಗವನ್ನು ಕಾಣಬಹುದು.

ಭಾಷ್ಯಾವತಾರಿಕೆಯು :—ಅರ್ಜುನನ ಪ್ರಶ್ನೆಗೆ ಜ್ಞಾನಯೋಗ ಕರ್ಮಯೋಗಗಳು "ನಿಶ್ಶ್ರೇಯಸ ಕರಾವುಭೌ" ಎಂದು ಎರಡನೆಯ ಶ್ಲೋಕದಲ್ಲಿ ಕ್ರಮೇಣ ಬರುವ ಫಲದಲ್ಲಿ ಎರಡೂ ಒಂದೇ ಎಂದು ತೋರುವ ಅಭಿಪ್ರಾಯವನ್ನು ಹೇಳಿ, ಕರ್ಮಯೋಗವಲ್ಲಿ ವಿಶೇಷ ಉಂಟೆಂದು ಹೇಳಿದರು. ಆ ವಿಶೇಷವೇನು ಎಂದು ಕೇಳಿದರೆ, ಕರ್ಮಯೋಗದಲ್ಲಿ, ಸುಖಂ ಬಂಧಾತ್ಪ್ರಮುಚ್ಯತೇ ಎಂದು ಸುಕರವಾಗಿ ಆಫಲವು ಉಂಟಾಗುತ್ತದೆಂದು ಹೇಳಿದರು. ಹಿಂದೆ ಎರಡನೆಯ ಅಧ್ಯಾಯದಲ್ಲಿ ಜ್ಞಾನಯೋಗಕ್ಕೆ ಕರ್ಮಯೋಗವನ್ನು ಸಾಧನವಾಗಿ ಹೇಳಿದರು. ಮತ್ತು ನಾಲ್ಕನೆಯ ಅಧ್ಯಾಯದಲ್ಲಿ ಕರ್ಮಯೋಗಕ್ಕೆ ಜ್ಞಾನಾಕಾರತೆಯನ್ನು ಹೇಳಿದರು. ಇದರಿಂದೇನಾದರೂ ಪರಸ್ಪರ ಸಾಪೇಕ್ಷತ್ವ ಉಂಟೇ ಎಂಬ ಶಜ್ಕಾ ಶಿಷ್ಯನಲ್ಲಿ ಉಂಟಾದೀತೆಂದು ಭಾವಿಸಿ, ಇವುಗಳಿಗೆ ಪರಸ್ಪರ ನಿರಪೇಕ್ಷತ್ವವನ್ನು ಹಿಂದೆ ಹೇಳಿರುವವದನ್ನೇ ಪುನಃ ಸಮರ್ಥಿಸಿ ಹೇಳುತ್ತಾರೆಂದು ತಿಳಿಸುವದಕ್ಕಾಗಿ ಶ್ರೀ ಭಾಷ್ಯಕಾರರು ಈ ಮುಂದಿನ ಅವತಾರಿಕೆಯನ್ನು ಕೊಟ್ಟಿರುತ್ತಾರೆ— ಜ್ಞಾನಯೋಗ ಕರ್ಮಯೋಗ ಗಳಲ್ಲಿ, ಆತ್ಮಪ್ರಾಪ್ತಿ ಸಾಧನಭಾವೇ ತನ್ನ ಆತ್ಮ ಸಾಕ್ಷಾತ್ಕಾರದ ಸಾಧನವಲ್ಲಿ, ಅನ್ಯೋನ್ಯ ನೈರಪೇಕ್ಷ್ಯಮಾಹ—ಪರಸ್ಪರ ನಿರಪೇಕ್ಷವಾದ ಭಾವ ಉಂಟೆಂದು ಎಂದರೆ ಒಂದರೊಂದಿಗೆ ಇನ್ನೊಂದು ಸೇರಿಯೇ ಇರಬೇಕೆಂಬುವದಿಲ್ಲವೆಂದು ಹೇಳುತ್ತಾರೆ. ಕರ್ಮಯೋಗದೊಂದಿಗೆ ಜ್ಞಾನಯೋಗವಿರಬೇಕೆಂಬ, ಜ್ಞಾನ ಯೋಗದೊಂದಿಗೆ ಕರ್ಮ ಯೋಗವಿರಬೇಕೆಂಬ ಆವಶ್ಯಕತೆ ಇಲ್ಲವೆಂಬ ಭಾವವು. ಕರ್ಮಣೈವಹಿ ಸಂಸಿದ್ಧಿಂ ಎಂದು ಏವಕಾರ ವಿರುವದರಿಂದ ಕರ್ಮಯೋಗಕ್ಕೆ ಜ್ಞಾನಯೋಗಬೇಕೆಂಬ ನಿಯಮವಿಲ್ಲವು, ಎಂದು ಹೇಳಲ್ಪಟ್ಟಿತು. "ಆತ್ಮನ್ಯೇವಚ ಸಂತುಷ್ಟಃ ತಸ್ಯಕಾರ್ಯಂ ನವಿದ್ಯತೇ"ಎಂಬಲ್ಲಿ ಜ್ಞಾನಯೋಗವಲ್ಲಿ ಅಧಿಕಾರಿತ್ವ ಏರ್ಪಟ್ಟ ನಂತರ, ಕರ್ಮಯೋಗದ ಆವಶ್ಯಕತೆಯು ಬೇಕಿಲ್ಲವೆಂದು ಹೇಳಿದರು. ಇದರಿಂದ ನಿತ್ಯ ನೈಮಿತ್ತಿಕ ಕರ್ಮಗಳ ಆವಶ್ಯಕತೆಯೂ ಬೇಡವಿಲ್ಲವೆಂಬರ್ಥವಲ್ಲವು. ಇವುಗಳೊಂದಿಗೆ ಕರ್ಮಯೋಗವೆಂದು ಅನುಷ್ಠಿಸುತ್ತಿದ್ದ "ದೈವಮೇವಾ ಪರೇಯಜ್ಞಂ" (೪-೨೫) ಎಂದಾರಂಭಿಸಿ

**ಮೂ. ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದನ್ತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತ ಸ್ಸಮ್ಯಗುಭಯೋ ರ್ವಿಂದತೇ ಫಲಮ್ ॥ ೪.**

ಹೇಳಲ್ಪಟ್ಟ ಕರ್ಮಪ್ರಭೇದವು ಬೇಕಿಲ್ಲವೆಂಬ ಭಾವವು. ಈ ಅವತಾರಿಕೆಯಲ್ಲಿ ಜ್ಞಾನಯೋಗ ಕರ್ಮಯೋಗಯೋ ರಾತ್ಮ ಪ್ರಾಪ್ತಿಸಾಧನಭಾವೇ ಎಂದು ಪ್ರಯೋಗವಿರುವದರಿಂದ ಜ್ಞಾನ ಯೋಗ ಕರ್ಮಯೋಗಗಳೆರಡೂ ತುಲ್ಯ ಫಲವುಳ್ಳವೆಂದೂ, ಅದುಯಾವುದೆಂದರೆ ಆತ್ಮಪ್ರಾಪ್ತಿ ಸಾಧನವೆಂದೂ ಇಲ್ಲಿ ಹೇಳಲ್ಪಟ್ಟಿತೆಂಬುದನ್ನು ಜ್ಞಾಪಕದಲ್ಲಿಡತಕ್ಕ ವಿಷಯವಾಗಿರುತ್ತದೆ.

**ಮೂಲಕ್ಕೆ ಅರ್ಥವು :—ಸಾಂಖ್ಯಯೋಗೌ** - ಜ್ಞಾನಯೋಗ ಕರ್ಮಯೋಗಗಳು, ಇಲ್ಲಿ ಸಾಂಖ್ಯಯೋಗ ಶಬ್ದಗಳಿಂದ ಹಿಂದೆ ೩-೩ನೆಯ ಶ್ಲೋಕದ "**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ**" ಎಂಬುದರಿಂದ ಜ್ಞಾನಯೋಗ ಕರ್ಮಯೋಗಗಳೆಂಬುದು ವ್ಯಕ್ತವು. ಸಾಂಖ್ಯಶಬ್ದಕ್ಕೆ ಜ್ಞಾನವೆಂಬರ್ಥವಾದುದರಿಂದ, ಜ್ಞಾನಯೋಗವೆಂಬರ್ಥವು. ಅಥವಾ ಸಾಂಖ್ಯಶಬ್ದಕ್ಕೆ ಆತ್ಮಾವೆಂಬರ್ಥವು, ಅದನ್ನು ತಿಳಿಯುವ ಉಪಾಯವು ಜ್ಞಾನಯೋಗವೇ ; ಯೋಗವೆಂದರೆ ಕರ್ಮಯೋಗವೆಂಬುದು ಸಿದ್ಧವು. ಇವೆರಡೂ, **ಪೃಥಕ್** - ಫಲಭೇದ ದಿಂದ ಬೇರೆಯೆಂದು, **ಬಾಲಾಃ** - ವಿವೇಕಜ್ಞಾನಶೂನ್ಯರಾದವರೀಗ, **ಪ್ರವದಂತಿ** - ನಿಷ್ಕರ್ಷಿಸಿಯೇ ಹೇಳಿಬಿಡುವರು, ಏಕೆಂದರೆ ಅವರು ಶಾಸ್ತ್ರಜ್ಞಾನವುಳ್ಳವರಲ್ಲವು ; ಆದುದರಿಂದ ವಿವೇಕೋತ್ಥಜ್ಞಾನವನ್ನು ಹೊಂದಿದವರಲ್ಲವು. ಶಾಸ್ತ್ರಜ್ಞಾನವಿದ್ದುದಾವರೆ, ವಿವೇಕ ದಿಂದುಂಟಾದ ಜ್ಞಾನವೂ ಇರುತ್ತಿತ್ತು ಎಂಬ ಭಾವವು. "**ಅಜ್ಞಂಚ ಬಾಲ ಇತ್ಯಾಹುಃ**" ಎಂಬ ಧರ್ಮಶಾಸ್ತ್ರೋಕ್ತಿಯಪ್ರಕಾರ ಶಾಸ್ತ್ರಜ್ಞಾನವಿಲ್ಲದವನಿಗೇನೆ ಬಾಲನೆಂಬ ಪ್ರಯೋಗವು. **ನಪಂಡಿತಾಃ** - ಶಾಸ್ತ್ರ ಜ್ಞಾನವುಳ್ಳವರೆಂದಿಗೂ ಬೇರೆಬೇರೆ ಎಂದು ಹೇಳಲಾರರು. ವಿವೇಕ ವುಳ್ಳವರೂ ಎಂದಿಗೂ ಹೇಳಲಾರರು, ಅದೇಕೆ ಹೇಳಲಾರರು ಎಂದರೆ, ಅವರಿಗೆ ಶಾಸ್ತ್ರಜ್ಞಾನದ ಬಲವಿದ್ದು ಪಂಡಿತರಾಗಿರುವದರಿಂದ ಹೇಳಲಾರರು. ಒಳ್ಳೇ ಜ್ಞಾನವು ಎರಡು ವಿಧವು. ಮೊದಲು ಶಾಸ್ತ್ರಜ್ಞಾನಬೇಕು. ಇದಕ್ಕೆ ಆಗಮೋತ್ಥಜ್ಞಾನವೆಂದು ಹೆಸರು. ಇದರಿಂದ ವಿವೇಕ ಉಂಟಾಗುತ್ತದೆ ; ಇದಕ್ಕೆ ವಿವೇಕೋತ್ಥ ಜ್ಞಾನವೆಂದು ಹೆಸರು ; ಈ ಎರಡು ವಿಧ ಜ್ಞಾನಗಳೂ ಆವಶ್ಯಕ ವೆಂದು ಮುಂದೆಯೂ **ತಸ್ಮಾಚ್ಛಾಸ್ತ್ರಂ ಪ್ರಮಾಣಂತೇಕಾರ್ಯಾಕಾರ್ಯವ್ಯವಸ್ಥಿತೌ** ಎಂಬಲ್ಲಿ ಇವೆರಡು ಜ್ಞಾನವೂ ಆವಶ್ಯಕವೆಂದೂ, ಅದರಿಂದ ಕಾರ್ಯಾಕಾರ್ಯವ್ಯವಸ್ಥಿತಿಗೆ ಬೇಕಾದ ವಿವೇಕಜ್ಞಾನವೂ ಉಂಟಾಗುತ್ತದೆಂದೂ, ಹೇಳಲ್ಪಟ್ಟಿರುತ್ತದೆ. ಶಾಸ್ತ್ರಜ್ಞಾರಲ್ಲದವರಾಗಿ ಅದರಿಂದ ವಿವೇಕ ವಿಲ್ಲದಾಗಿರುವವರು ಹೀಗೆ ಪೃಥಕ್ಕೆಂದು ಹೇಳಬಹುದು ಎಂದರೆ, ಕರ್ಮಯೋಗವು ಜ್ಞಾನಯೋಗ ವನ್ನು ಸಾಧಿಸಿಕೊಡುವ ಫಲವೆಂದೂ, ಜ್ಞಾನಯೋಗವೇ ಆತ್ಮಸಾಕ್ಷಾತ್ಕಾರವನ್ನು ಸಾಧಿಸಿ ಕೊಡುವಂತಾದ್ದೆಂದೂ ಹೇಳುವರು ಎಂಬ ಭಾವವು. ಇದು ತಪ್ಪಾದ ಅಭಿಪ್ರಾಯವೆಂಬ ತಾತ್ಪರ್ಯವು; ಏಕೆಂದರೆ, ಜ್ಞಾನಯೋಗದಿಂದುಂಟಾಗುವ ಆತ್ಮಸಾಕ್ಷಾತ್ಕಾರವು ಕರ್ಮಯೋಗಮಾತ್ರ ದಿಂದಲೂ ಸಿದ್ಧಿಸುತ್ತದೆ. ಹಾಗಾದರೆ ಶಾಸ್ತ್ರಜ್ಞಾನವೂ ವಿವೇಕ ಜ್ಞಾನವೂ ಸಹ ಇರುವವರು ಏನನ್ನು ಹೇಳುತ್ತಾರೆಂದರೆ ಉತ್ತರಾರ್ಧದಿಂದ ಹೇಳುತ್ತಾರೆ.—**ಉಭಯೋಃ** - ಈ ಜ್ಞಾನ ಯೋಗ ಕರ್ಮಯೋಗಗಳಲ್ಲಿ, **ಏಕಮಪಿ** - ಯಾವದನ್ನೊಂದನ್ನಾಗಲಿ, **ಸಮ್ಯಕ್**-ಚನ್ನಾಗಿ, **ಆಸ್ಥಿತಃ** - ಅನುಷ್ಠಿಸಿದವನು, **ಫಲಮ್** - ಮೇಲೆ ಫಲ ಒಂದೇ ಎಂದು ಹೇಳಿದ ಆತ್ಮಸಾಕ್ಷಾತ್ಕಾರವನ್ನು ಮತ್ತು ಭಕ್ತಿಯೋಗದಲ್ಲಿ ಅರ್ಹತೆಯನ್ನೂ, **ವಿಂದತೇ** - ಹೊಂದುತ್ತಾನೆ ; ಇಲ್ಲಿ **ಉಭಯೋಃ** ಎಂಬುದನ್ನು ಏಕಂ ಎಂಬುದರೊಂದಿಗೆ ಅನ್ವಯಿಸಬೇಕೇ ವಿನಾ,

ಭಾ. ಜ್ಞಾನಯೋಗ ಕರ್ಮಯೋಗೌ ಫಲಭೇದಾತ್ಪೃಥಗ್ಭೂತೌ ಯೇ ಪ್ರವದನ್ತಿ ತೇ ಬಾಲಾಃ ಅನಿಷ್ಪನ್ನಜ್ಞಾನಾಃ ; ನಪಂಡಿತಾಃ - ಅಕೃತ್ಸ್ನವಿದಃ; ಕರ್ಮಯೋಗೋ ಜ್ಞಾನಯೋಗ

ಅನ್ಯಥಾ ಅನ್ವಯಿಸಿದರೆ ವಿರುದ್ಧಾರ್ಥವುಂಟಾಗುತ್ತದೆ, ಉಭಯೋಃ ಫಲಂ ವಿಂದತೇ - ಒಂದನ್ನನುಷ್ಠಿಸಿದರೆ ಎರಡರ ಫಲವೂ ಬರುತ್ತದೆ ಎಂದರೆ, ಎರಡೂ ಭಿನ್ನ ಫಲಗಳುಳ್ಳವೆಂದು ಹೇಳಿದಂತಾಗಿ ಹಿಂದೆ ನಿಶ್ಶ್ರೇಯಸ ಕರಾವುಭೌ ಎಂದು ಎರಡನೆಯಶ್ಲೋಕಾಭಿಪ್ರಾಯಕ್ಕೆ ವಿರುದ್ಧಾರ್ಥವಾಗುತ್ತದೆ. ಎರಡೂ ಒಂದೇ ಫಲವುಳ್ಳವುಗಳಾಗಿರುವಾಗ, ಪೃಥಕ್ ಎಂದರೆ ಒಂದೇ ಫಲವುಳ್ಳವುಗಳಲ್ಲದೇ ಬೇರೆ ಬೇರೇ ಫಲಗಳುಳ್ಳವೆಂದು ಶಾಸ್ತ್ರಜ್ಞಾನರಹಿತರೂ ಅದರಿಂದವಿವೇಕಶೂನ್ಯರೂ ಹೇಳುತ್ತಾರೆಂಬ ಭಾವವು; ಹೀಗೆ ಅರ್ಥಹೇಳದೆ ಕೆಲವರು ಸಾಧ್ಯ ಸಾಧನ ಭಾವಉಂಟೆಂದು ಅಭಿಪ್ರಾಯಪಡುವರು. ಮುಂದನೆಯ ಶ್ಲೋಕವು ಈ ಅಭಿಪ್ರಾಯಕ್ಕೆ ಪೂರಾ ವಿರುದ್ಧವು. ಸಾಂಖ್ಯರಾದ ಜ್ಞಾನಯೋಗಿಗಳಿಂದ ಹೊಂದುವ ಫಲವೇ ಕರ್ಮಯೋಗಿಗಳಿಂದಲೂ ಹೊಂದಲ್ಪಡುತ್ತದೆಂದೂ ಆ ಕಾರಣದಿಂದ ಏಕಂ ಸಾಂಖ್ಯಂಚ ಯೋಗಂಚ, ಜ್ಞಾನಯೋಗವೂ ಕರ್ಮಯೋಗವೂ ಸಹ ಒಂದೇ ಫಲವುಳ್ಳದ್ದೆಂದೂ ಹೇಳಲ್ಪಟ್ಟಿರುತ್ತದೆ. ಜ್ಞಾನಯೋಗಕ್ಕೆ ಕರ್ಮಯೋಗದ ಸಾಪೇಕ್ಷತ್ವವಿರುವದರಿಂದ ಅಲ್ಲಿ ಮಾತ್ರ ಸಾಧ್ಯಸಾಧನಭಾವ ಉಂಟು. ಆದರೆ ಜ್ಞಾನಯೋಗವನ್ನವಲಂಬಿಸಿದ ನಂತರ ಕರ್ಮಯೋಗದ ಆವಶ್ಯಕವಿರುವದಿಲ್ಲವಾದುದರಿಂದಲೂ, ಹಾಗೆಯೇ ಕರ್ಮಯೋಗಕ್ಕೂ ಜ್ಞಾನಯೋಗದ ಅವಶ್ಯಕತೆ ಇಲ್ಲದುದರಿಂದಲೂ ಪರಸ್ಪರ ನಿರಪೇಕ್ಷವಾದವುಗಳೇ. ಈ ಅರ್ಥವೇ ಈ ಶ್ಲೋಕದಲ್ಲಿ ಮುಖ್ಯವಾಗಿ ಉಪಪಾದಿಸಲ್ಪಟ್ಟಿರುತ್ತದೆ. ಆದುದರಿಂದ ವಿಕಲ್ಪವು ಇಲ್ಲಿ ಹೇಳಲ್ಪಟ್ಟಿರುವದರಿಂದ ಅಧಿಕಾರಿಯು ಯಾವುದನ್ನಾದರೂ ಅವಲಂಬಿಸಬಹುದು. ಫಲವೇನೋ ಒಂದೇ, ಆದರೆ ಈಗ ಪ್ರಸ್ತುತವಿಷಯವೇನು ಎಂದರೆ, ಕರ್ಮಯೋಗವು ಸುಕರವಾಗಿ ಸುಲಭಸಾಧ್ಯವಾದುದರಿಂದ (ಇದು ೬ನೆಯ ಶ್ಲೋಕದಲ್ಲಿ ಉಪಪಾದಿತವು); ಅರ್ಜುನನಿಗೆ ಕರ್ಮಯೋಗವನ್ನೇ ತಾವು ಹೇಳಿದರೀತ್ಯಾ ಅವಲಂಬಿಸು ಎಂದು ಹಿತೋಪದೇಶವನ್ನು ಮಾಡಿರುತ್ತಾರೆ.

ಭಾಷ್ಯಾರ್ಥವು:—ಕರ್ಮಯೋಗ ಜ್ಞಾನಯೋಗಗಳೆರಡೂ "ನಿಶ್ಶ್ರೇಯಸ ಕರಾವುಭೌ" ಎಂದು ಹೇಳಲ್ಪಟ್ಟಿದುದನ್ನೇ ಉಪಪಾದಿಸುತ್ತಾರೆ; ಇವೆರಡರಿಂದಲೂ ಉಂಟಾಗತಕ್ಕ ಫಲವು ಒಂದೇ; ಅದು ಯಾವುದು ಎಂದರೆ ಆತ್ಮ ಪ್ರಾಪ್ತಿಯು. ಇದನ್ನು ಅನ್ಯೋನ್ಯ ನೈರಪೇಕ್ಷ್ಯೆಯಿಂದ ಅವು ಸಾಧಿಸಿ ಕೊಡಬಲ್ಲವೆಂಬ ಭಾವವನ್ನು ಹೇಳುತ್ತಾರೆ. ಜ್ಞಾನಯೋಗ ಕರ್ಮಯೋಗಗಳು ಇದು ಸಾಂಖ್ಯಯೋಗೌ ಎಂದು ಮೂಲದಲ್ಲಿರುವದರ ಅರ್ಥವು, ಫಲಭೇದಾತ್ಪೃಥಗ್ಭೂತೌ - ಫಲಭೇದದಿಂದ ಬೇರೆಬೇರೆಯಾದುವೆಂದು, ಯೇ ಪ್ರವದನ್ತಿ - ಯಾರು ಹೇಳುವರೋ, ತೇ . ಅವರು, ಬಾಲಾಃ - ಎಂದರೆ ಅನಿಷ್ಪನ್ನ ಜ್ಞಾನಾಃ - ಬಾಲಕರಹಾಗೆ ಇನ್ನೂ ಸರಿಯಾದ ಜ್ಞಾನವುಂಟಾದವರಲ್ಲವು ; ಇಲ್ಲಿ ಬಾಲಶಬ್ದವು ಔಪಚಾರಿಕಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ. ಮತ್ತು ಅವರು, ನ ಪಂಡಿತಾಃ ಎಂದರೆ ಅಕೃತ್ಸ್ನ ವಿದಃ - ಶಾಸ್ತ್ರಜ್ಞಾನವನ್ನು ಸಂಪೂರ್ಣವಾಗಿ ಹೊಂದಿದವರಲ್ಲವು ; ಇದರಿಂದ ಸದಾಚಾರ್ಯೋಪದೇಶ ಜ್ಞಾನಶೂನ್ಯರೆಂಬ ಭಾವವು ತೋರಿಬರುತ್ತದೆ. ಮೂಲದಲ್ಲಿ ಪೃಥಕ್ ಎಂದು ಇಷ್ಟೇ ಇರುತ್ತದೆ. ಇದಕ್ಕೆ ಫಲಭೇದಾತ್ಪೃಥಕ್ ಎಂದು ವ್ಯಾಖ್ಯಾನಮಾಡಿರುತ್ತಾರೆ. ಸ್ವರೂಪತಃ ಪೃಥಕ್ ಎಂದು ಬಾಲರು ಹೇಳುತ್ತಾರೆಂದು ಹೇಳಲು ಸಾಧ್ಯವಿಲ್ಲವು; ಅವು ಸ್ವರೂಪತಃ ಬೇರೆಯೇ; ಅದರಲ್ಲಿ ವಿವಾದತೋರಲಿಲ್ಲವು. ಪೃಥಕ್ ಎಂದರೆ ಅನುಷ್ಠಾನದಿಂದ ಪೃಥಕ್

ಎಂದು ಅರ್ಥಹೇಳಿ ಎರಡೂ ಒಟ್ಟಿಗೆ ಅನುಷ್ಠೇಯಗಳೆಂದೂ, ಕರ್ಮಯೋಗವು ಜ್ಞಾನಯೋಗವನ್ನು ಮಾತ್ರ ಸಾಧಿಸಿಕೊಡುತ್ತದೆಂದೂ, ಜ್ಞಾನಯೋಗವು ಆತ್ಮಸಾಕ್ಷಾತ್ಕಾರವನ್ನು ಸಾಧಿಸಿಕೊಡುತ್ತದೆಂದೂ, ಹೀಗೆ ಎರಡನ್ನೂ ಅನುಷ್ಠಿಸತಕ್ಕದ್ದೆಂದೂ, ಅವುಗಳು ಬೇರೆ ಬೇರೆ ಫಲವುಳ್ಳವೆಂದೂ ಅಭಿಪ್ರಾಯಪಡುವರು. ಇದು ಹಿಂದಿನ ಉಪದೇಶಕ್ಕೆ ಪ್ರತ್ಯುತ ವಿರುದ್ಧವಾದುದಾಗುತ್ತದೆ. ಹೇಗೆಂದರೆ ಮೂರು ನಾಲ್ಕನೆಯ ಅಧ್ಯಾಯಗಳಲ್ಲಿ ಕರ್ಮಯೋಗನೇ ಜ್ಞಾನಯೋಗದ ಆವಶ್ಯಕತೆ ಇಲ್ಲದೆ ಆತ್ಮಸಾಕ್ಷಾತ್ಕಾರವನ್ನುಂಟುಮಾಡುತ್ತದೆಂದು ಹೇಳಿರುತ್ತದೆ. ಇದಕ್ಕೆ ಪ್ರಮಾಣಗಳು "ಕರ್ಮಣೈವ ಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ" (ಗೀ. ೩. ೨೦) ಎಂಬಲ್ಲಿ ಶ್ರೀ ಭಾಷ್ಯಕಾರರು ಸಂಸಿದ್ಧಿಂ ಎಂಬ ಶಬ್ದಕ್ಕೆ ಮೋಕ್ಷವೆಂಬರ್ಥವು ಸಾಮಾನ್ಯವಾಗಿದ್ದರೂ, ಎಲ್ಲಿ ಅದೇ ಉಪಾಯವೆಂದು ಅಜ್ಞರು ತಿಳಿಯುತ್ತಾರೋ ಎಂಬ ಭಯದಿಂದ ಸಂಸಿದ್ಧಿ ಮಾಸ್ಥಿತಾಃ ಎಂಬುದಕ್ಕೆ ಆತ್ಮಾನಂ ಪ್ರಾಪ್ತುವಂತಃ ಎಂದು ವ್ಯಾಖ್ಯಾನಮಾಡಿರುತ್ತಾರೆ. "ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ" (ಗೀ. ೪. ೩೮.) ಮತ್ತು ಒಂದನ್ನೇ ಅನುಷ್ಠಿಸಿದರೂ ಆತ್ಮಪ್ರಾಪ್ತಿಯುಂಟೆಂದೂ ಅನೇಕ ಕಡೆಗಳಲ್ಲಿ ಹೇಳಿರುತ್ತದೆ ಹೇಗೆಂದರೆ.—"ಲೋಕೇಸ್ಮಿನ್ ದ್ವಿವಿಧಾನಿಷ್ಠಾ" (೩. ೩) ಸಾಧ್ಯ ಸಾಧನ ಭಾವದಲ್ಲಿ ಎರಡೂ ಬೇಕಾದ ಪಕ್ಷದಲ್ಲಿ, ದ್ವಿವಿಧಾನಿಷ್ಠಾ ಹೇಗಾಯಿತು? ಏಕಮಪ್ಯಾಸ್ಥಿತಃ—ಒಂದರನುಷ್ಠಾನವೇ ಸಾಕೆಂದು ಈ ಶ್ಲೋಕದಲ್ಲೇ ಹೇಳಿರುತ್ತದೆ. ಇದರ ಮುಂದಿನ ಶ್ಲೋಕದಲ್ಲೂ "ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ" ಎಂಬುದರಿಂದಲೂ ವ್ಯಕ್ತವು. ಅದುದರಿಂದ ಸಮುಚ್ಚಯಾಭಿಪ್ರಾಯದಿಂದಲೂ ಏಕತ್ವವು ಕೂಡುವದಿಲ್ಲವು. ಆ ಕಾರಣದಿಂದಲೇ "ಫಲಭೇದದಿಂದ ಪೃಥಕ್ ಎಂದು ಅರ್ಥಮಾಡಿ ಹಾಗೆ ಹೇಳುವವರು ವಿವೇಕ ಜ್ಞಾನವಿಲ್ಲದ ಬಾಲರೆಂದು ಹೇಳಲ್ಪಟ್ಟಿತು. ಎರಡಕ್ಕೂ ಫಲ ಒಂದೇ ಎಂಬುದು ಮುಂದಿನ ಶ್ಲೋಕದಲ್ಲೂ ವ್ಯಕ್ತವು, ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ । ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ಎಂಬಲ್ಲಿ ಫಲವು ಒಂದೇ ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ಬಾಲಾಃ ನ ಪಂಡಿತಾಃ ಎಂಬ ಪ್ರಯೋಗಗಳಿರುವದರಿಂದಲೂ, ಮುಂದಿನ ಶ್ಲೋಕದಲ್ಲಿ ಮುನಿ ಎಂದಿರುವದರಿಂದಲೂ, ಕೆಲವರು ಈ ಮೂರು ಪದಗಳ ಪ್ರಯೋಗವಿರುವ ಶ್ರುತಿಯಾದ "ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್, ಬಾಲ್ಯಂಚ ಪಾಂಡಿತ್ಯಂ ಚ ನಿರ್ವಿದ್ಯಾಥಮುನಿಃ, ಅಮೌನಂ ಚ ಮೌನಂ ಚ ನಿರ್ವಿದ್ಯಾಥ ಬ್ರಾಹ್ಮಣಃ" (ಬೃ.೫.೫.೧) ಎಂಬುದರ ಉಪಪಾದನವೆಂದು ಶಂಕಿಸಬಹುದು. ಈ ಶ್ಲೋಕಕ್ಕೂ ಈ ಶ್ರುತಿಗೂ ಏನೊಂದೂ ಸಂಬಂಧವಿಲ್ಲವು. ಹಿಂದೆ ೩. ೪೨ನೇಯ ಶ್ಲೋಕದಲ್ಲೂ ಕೆಲವರು, ಅಪರಹಾಗಿರುವ ಶ್ರುತಿಗೂ ಶ್ಲೋಕಕ್ಕೂ ಸಂಬಂಧವುಂಟೆಂದು ಹೇಗೆ ಕಲ್ಪಿಸಿರುವರೋ ಹಾಗೆ ಇಲ್ಲಿಯೂ ಕಲ್ಪಿಸುವರು. ಈ ಶ್ರುತಿಯ ತಾತ್ಪರ್ಯವೇನೆಂದರೆ:—ತಸ್ಮಾತ್-ಯಾವ ಕಾರಣದಿಂದ ಹಿಂದೆ ಪುತ್ರೇಷಣ, ವಿತ್ತೇಷಣ, ಲೋಕೇಷಣಗಳನ್ನು ತಿರಸ್ಕರಿಸಿ ಭಿಕ್ಷಾಚರ್ಯವನ್ನು ಅವಲಂಬಿಸಿರುವರೋ, ಆ ಕಾರಣದಿಂದ, ಬ್ರಾಹ್ಮಣಃ-ಬ್ರಹ್ಮವಿತ್ತಾದವನು, ಪಾಂಡಿತ್ಯಂ, ಊಹಾಪೋಹಗಳಿಗೆ ಯೋಗ್ಯವಾದ ಬುದ್ಧಿಗೆ ಪಂಡಾ ಎಂದು ಹೆಸರು, ಅಂತಹ ಬುದ್ಧಿ ಹುಟ್ಟಿರುವದರಿಂದ ಪಂಡಿತನೆನಿಸುವವನು, ಅಂತವನ ಕರ್ಮವು ಪಾಂಡಿತ್ಯವು, ಇದರಿಂದ ವಿವೇಕ ನಿರ್ವೇದ ವಿರಕ್ತಿಗಳೇ ಫಲವಾಗಿವುಳ್ಳ ಉಪದೇಶವನ್ನು, ನಿರ್ವಿದ್ಯ - ಹೊಂದಿ, ಬಾಲ್ಯೇನ - ತನ್ನ ಮಾಹಾತ್ಮ್ಯವನ್ನು ವಿಮರ್ಶಿಸಿ ತಿಳಿಯುವ ಶಕ್ತಿಯಿಲ್ಲದ ಬಾಲ್ಯ ಸ್ವಭಾವದಿಂದ, ತಿಷ್ಠಾಸೇತ್ - ಬ್ರಹ್ಮವಿದ್ಯೆಯಲ್ಲಿ ನಿಷ್ಠೆಯೊಂದಿಗೆ ಇರತಕ್ಕದ್ದು; ಇಂತಹ ಬಾಲ್ಯ ಭಾವವನ್ನೂ, ಪಾಂಡಿತ್ಯವನ್ನೂ ಸಹ, ನಿರ್ವಿದ್ಯ-ಹೊಂದಿ,

ಭಾ. ಮೇವ ಸಾಧಯತಿ, ಜ್ಞಾನಯೋಗಸ್ತ್ವೇಕ ಆತ್ಮಾವಲೋಕನಂ ಸಾಧಯತೀತಿ, ತಯೋಃ ಫಲಭೇದೇನ ಪೃಥಕ್ತ್ವಂ ವದನ್ತೋನ ಪಂಡಿತಾ ಇತ್ಯರ್ಥಃ। ಉಭಯೋ ರಾತ್ಮಾವಲೋಕನೈಕ ಫಲಯೋ ರೇಕಫಲತ್ವೇನ ಏಕಮಪ್ಯಾಸ್ಥಿತ ಸ್ತದೇವ ಫಲಂ ಲಭತೇ ॥ ೪ ॥

---

**ಅಥಮುನಿಃ** - ಪರಬ್ರಹ್ಮ ದಿವ್ಯ ಮಂಗಳ ವಿಗ್ರಹವನ್ನು ಮನನಮಾಡುವ ಶೀಲವುಳ್ಳವನಾಗ ತಕ್ಕದ್ದು, ಇತ್ಯಾದಿ; ಪ್ರಸ್ತುತ ವಿಷಯವು ಜ್ಞಾನಯೋಗಕ್ಕಿಂತಲೂ ಕರ್ಮಯೋಗವು ಸುಕರ ವೆಂದು ಹೇಳುವ ವಿಷಯಕ್ಕೆ ಈ ಶ್ರುತಿಯು ಅಪ್ರಸ್ತುತವು. ಹೀಗೆ ಗುರೂಪದೇಶದ ಸಂಸ್ಕಾರ ರಹಿತರಾಗಿ ಪೂರ್ಣ ಶಾಸ್ತ್ರಜ್ಞಾನವಿಲ್ಲದ ಅಪಂಡಿತರೂ ಅದರಿಂದ ವಿವೇಕಶೂನ್ಯರೂ ಆದ ಬಾಲ ಸಮಾನರು ಜ್ಞಾನಯೋಗ ಕರ್ಮಯೋಗಗಳೆರಡೂ ಪೃಥಕ್ಕೆಂದು ಹೇಗೆ ಹೇಳುವರೆಂದರೆ, ಮುಂದಿನ ವಾಕ್ಯದಿಂದ ಉಪಪಾದಿಸಿ ತಿಳಿಸುತ್ತಾರೆ—**ಕರ್ಮಯೋಗೋ....ಸಾಧಯತಿ** - ಕರ್ಮ ಯೋಗವು ಜ್ಞಾನಯೋಗವನ್ನು ಮಾತ್ರವೇ ಸಾಧಿಸಿ ಕೊಡುತ್ತದೆ; ಎಂದರೆ ಆತ್ಮಾವಲೋಕನ ವನ್ನು ತಾನೇ ಸ್ವತಂತ್ರವಾಗಿ ಸಾಧಿಸಿಕೊಡಲಾರದೆಂಬುದು ಅವರ ತಪ್ಪಾದ ಅಭಿಪ್ರಾಯವು. ನಾಲ್ಕನೆಯ ಅಧ್ಯಾಯದಲ್ಲಿ ಕರ್ಮಯೋಗವೇ ಆತ್ಮಾವಲೋಕನಕ್ಕೆ ಸಾಧಕವಾಗುತ್ತದೆಂದು ಉಪದೇಶಿಸಿರುತ್ತಾರೆ. **ಜ್ಞಾನಯೋಗಸ್ತ್ವೇಕಃ** - ಜ್ಞಾನಯೋಗವಾದರೋ ಅದು ಒಂದೇ, **ಆತ್ಮಾವಲೋಕನಮ್ ಸಾಧಯತೀತಿ** - ಆತ್ಮಾವಲೋಕನವನ್ನು ಸಾಧಿಸುತ್ತದೆಂದು, ಹೀಗೆ **ತಯೋಃ** - ಆ ಕರ್ಮಯೋಗ ಜ್ಞಾನಯೋಗಗಳ, **ಫಲಭೇದೇನ**- ಫಲಭೇದದಿಂದ **ಪೃಥಕ್ತ್ವಂ ವದನ್ತಃ** - ಬೇರೆ ಬೇರೆ ಎಂದು ಹೇಳುವವರು, **ನ ಪಂಡಿತಾಃ** - ಪಂಡಿತರಲ್ಲವು, **ಇತ್ಯರ್ಥಃ**— ಎಂಬ ತಾತ್ಪರ್ಯವು, ಕರ್ಮಯೋಗವು ಜ್ಞಾನಯೋಗ ಒಂದನ್ನೇ ಸಾಧಿಸುತ್ತದೆಂದೂ, ಜ್ಞಾನ ಯೋಗ ಒಂದೇ ಆತ್ಮಾವಲೋಕನಕ್ಕೆ ಸಾಧನವೆಂದೂ ಪಂಡಿತರಲ್ಲದವರ ಅಭಿಪ್ರಾಯವೆಂಬ ಭಾವವು. ಸರಿಯಾದ ಅಭಿಪ್ರಾಯವೇನೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸು ತ್ತಾರೆ.—**ಉಭಯೋಃ** - ಈ ಕರ್ಮಯೋಗ ಜ್ಞಾನಯೋಗಗಳೆರಡೂ, **ಆತ್ಮಾವಲೋಕನೈಕ ಫಲಯೋಃ** - ಆತ್ಮಾವಲೋಕನವಾದ ಒಂದೇ ಫಲವುಳ್ಳವುಗಳಾಮದರಿಂದ, ಎರಡಕ್ಕೂ **ಏಕ ಫಲತ್ವೇನ** - ಒಂದೇ ಫಲವಿರುವದರಿಂದ, **ಏಕಮಪ್ಯಾಸ್ಥಿತಃ** - ಯಾವ ಒಂದನ್ನೇಯಾ ಗಲಿ ಅನುಷ್ಠಿಸಿದವನು, **ತದೇವ ಫಲಂ** - ಆ ಒಂದೇಯಾದ ಆತ್ಮಾವಲೋಕನರೂಪ ಫಲವನ್ನೇ, **ಲಭತೇ** - ಹೊಂದುತ್ತಾನೆ. ಕರ್ಮಯೋಗ ಜ್ಞಾನಯೋಗಗಳಿಂದ ಸಾಕ್ಷಾತ್ತಾಗಿ ಉಂಟಾಗುವ ಫಲವು ಆತ್ಮಾವಲೋಕನವಾದುದರಿಂದ ಆತ್ಮಾವಲೋಕನೈಕ ಫಲಯೋಃ ಎಂಬ ಪ್ರಯೋ ಗವು. ಆದುದರಿಂದ ಈಗ ಗ್ರಹಿಸತಕ್ಕ ವಿಷಯವೇನೆಂದರೆ ಕರ್ಮಯೋಗದ ಆವಶ್ಯಕತೆಯೆನೋ ಜ್ಞಾನಯೋಗವನ್ನವಲಂಬಿಸುವ ತನಕ ಬೇಕು. ಜ್ಞಾನಯೋಗದಲ್ಲಿ ಪ್ರವೇಶ ಉಂಟಾದನಂತರ ಬೇಕಿಲ್ಲವು. ಇದಕ್ಕೆ ಫಲವು ಆತ್ಮಾವಲೋಕನವು. ಕರ್ಮಯೋಗಕ್ಕಾದರೋ ಜ್ಞಾನಯೋಗದ ಆವಶ್ಯಕತೆಯೇ ಬೇಕಿಲ್ಲವು. ತದಂತರ್ಗತ ಆತ್ಮಸ್ವರೂಪ ಜ್ಞಾನದಿಂದಲೇ ಗುರೂಪದೇಶದ ಮೂಲಕ ಆತ್ಮಾವಲೋಕನ ಉಂಟಾಗುತ್ತದೆ ಎಂಬುದು. ಈ ಶ್ಲೋಕದ ಸಾಂಖ್ಯಯೋಗಶಬ್ದ ಗಳು ಸಾಂಖ್ಯ ಸಿದ್ಧಾಂತಿಗಳನ್ನೂ ಯೋಗಾಚಾರ್ಯ ಸಿದ್ಧಾಂತಿಗಳನ್ನೂ ಬೋಧಿಸುತ್ತವೆ ಎಂದು ತಿಳಿಯಕೂಡದು. ಇವರ ಸಿದ್ಧಾಂತಗಳನ್ನು ಶ್ರೀ ವ್ಯಾಸರೇ ಸೂತ್ರಗಳಲ್ಲಿ ಖಂಡಿಸಿರುತ್ತಾರೆ. "ರಚನಾನುಪತ್ತೇಶ್ಚ ನಾನುಮಾನಂ ಪ್ರವೃತ್ತೇಶ್ಚ" ಎಂಬಲ್ಲಿ ಸಾಂಖ್ಯರ ವಾದವಾದ ಪ್ರಧಾ ನವೇ ಜಗತ್ಕಾರಣವೆಂಬ ಕಾಪಿಲವಾದವು ಖಂಡಿಸಲ್ಪಟ್ಟಿರುತ್ತದೆ. (ಶಾ. ೨. ೨. ೧) "ಏತೇನ

ಭಾ, ಅವ. ಏತದೇವ ವಿವೃಣೋತಿ.

ಮೂ. ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸಪಶ್ಯತಿ ॥ ೫.

ಯೋಗಃ ಪ್ರತ್ಯುಕ್ತಃ" ಎಂಬ ಸೂತ್ರದಲ್ಲಿ ಹಿರಣ್ಯ ಗರ್ಭಪ್ರಣೀತವಾದ ಯೋಗಶಾಸ್ತ್ರವು ಖಂಡಿಸಲ್ಪಟ್ಟಿರುತ್ತದೆ. ಭಾರತ ಶಾನ್ತಿಪರ್ವದಲ್ಲೂ "ಬಹವಃ ಪುರುಷಾ ರಾಜನ್ ಸಾಂಖ್ಯಯೋಗವಿಚಾರಿಣಃ । ನೈತ ಇಚ್ಛಂತಿ ಪುರುಷಮೇಕಂ ಕುರುಕುಲೋದ್ವಹ" ॥ (ಶಾನ್ತಿ. ೩೫೧. ೨) ಇವರಿಬ್ಬರೂ ಜೀವಶಬ್ದವಾಚ್ಯನಾದವನಿಗಿಂತ ಬೇರೆಯಾದ ಸರ್ವೇಶ್ವರನನ್ನು ಅಙ್ಗೀಕರಿಸದೇ ಇರುವದರಿಂದ ಇವರಿಬ್ಬರನ್ನೂ ದೂಷಿಸಿರುತ್ತಾರೆ. ಆ ಸಿದ್ಧಾಂತಗಳು ಉಪಾದೇಯಗಳಲ್ಲವಾದುದರಿಂದ ಅವು ಇಲ್ಲಿ ಹೇಳಲ್ಪಟ್ಟವೆಂದು ಅಭಿಪ್ರಾಯಪಡಲು ಸಾಧ್ಯವಲ್ಲವು. ಆದುದರಿಂದ ಇಲ್ಲಿ "ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ" ಎಂದು ಹಿಂದೆ ಹೇಳಿರುವದರಿಂದ, ಸಾಂಖ್ಯರು ಎಂದರೆ ಆತ್ಮ ಯಾಥಾತ್ಮ್ಯವನ್ನು ಸಾಕ್ಷಾತ್ಕರಿಸುವ ಜ್ಞಾನಯೋಗನಿಷ್ಠರು, ಯೋಗಿಗಳೆಂದರೆ, ಕರ್ಮಯೋಗ ನಿಷ್ಠರು.

ಭಾಷ್ಯಾವತಾರಿಕೆಯು :—ಏತದೇವ - ಇದನ್ನೇ ಹಿಂದಿನ ಶ್ಲೋಕದಲ್ಲಿ ಎರಡಕ್ಕೂ ಫಲವು ಒಂದು ಎಂದು ಹೇಳಿದುದನ್ನೇ, ವಿವೃಣೋತಿ - ವಿವರಿಸಿ ಹೇಳುತ್ತಾರೆ. ಹಿಂದಿನ ಶ್ಲೋಕದಲ್ಲಿ ಫಲ ಬೇರೆ ಬೇರೆ ಎಂದು ಹೇಳಿದವರನ್ನು ನಿಂದಿಸಿ ಫಲ ಒಂದೇ ಎಂದು ಹೇಳಿದರು. ಈ ಶ್ಲೋಕದಲ್ಲಿ ಫಲ ಒಂದೇ ಎಂದು ಹೇಳುವವರನ್ನು ಪ್ರಶಂಸಿಸಿ ಹೇಳುತ್ತಾರೆ. ಹಿಂದೆ ವ್ಯತಿರೇಕರೂಪದಲ್ಲಿ ಭಿನ್ನ ಫಲದಾಯಕಗಳೆಂದು ಹೇಳುವದು ಸರಿಯಲ್ಲವೆಂದು ತಿಳಿಸಿದರು. ಈಗ ಅನ್ವಯರೂಪದಲ್ಲಿ ಒಂದೇ ಫಲವುಳ್ಳವೆಂದು ಹೇಳುವದು ಸಮಂಜಸವಾದ ವಿಷಯವೆಂದು ಹೇಳುತ್ತಾರೆ. ಭಿನ್ನ ಫಲವುಳ್ಳವೆಂದು ಹೇಳುವವರು ಸಂಪೂರ್ಣ ಶಾಸ್ತ್ರಜ್ಞಾನವಿರುವ ಪಂಡಿತರೂ ಅಲ್ಲವು. ವಿವೇಕವಿರುವವರೂ ಅಲ್ಲದೆ ಬಾಲರಿಗೆ ಸಮಾನರು. ಈ ಶ್ಲೋಕದಲ್ಲಿ ಏಕ ಫಲವುಳ್ಳವೆಂದು ತಿಳಿಯುವವನು ಪಂಡಿತನೂ ಹೌದು, ವಿವೇಕಿಯೂ ಹೌದು, ಎಂದು ಹೇಳುತ್ತಾರೆಂಬ ಭಾವವು.

ಮೂಲಕ್ಕೆ ಅರ್ಥವು :—ಸಾಂಖ್ಯೈಃ - ಜ್ಞಾನಯೋಗನಿಷ್ಠರಿಂದ, ಯತ್ - ಯಾವ, ಸ್ಥಾನಂ - ಪರಿಪಕ್ವವಾದ ಕಾರ್ಯಾವಸ್ಥಾ ರೂಪವಾದ ಫಲವು, ಅಥವಾ ಆ ಕಾರ್ಯದ ಎಲ್ಲಿಯಾದ ಫಲವು ಅದು ಯಾವುದೆಂದರೆ ಆತ್ಮಸಾಕ್ಷಾತ್ಕಾರವು, ಪ್ರಾಪ್ಯತೇ-ಹೊಂದಲ್ಪಡುತ್ತದೋ, ತತ್ - ಅಂತಹ ಫಲವು, ಯೋಗೈರಪಿ - ಕರ್ಮಯೋಗ ನಿಷ್ಠರಿಂದಲೂ ಕೂಡ, ಗಮ್ಯತೇ – ಹೊಂದಲ್ಪಡುತ್ತದೆ. ಆತ್ಮಸಾಕ್ಷಾತ್ಕಾರ ರೂಪ ಫಲವು ಜ್ಞಾನಯೋಗಿಗಳಿಂದಲೂ ಹೊಂದಲ್ಪಡುತ್ತದೆ, ಕರ್ಮಯೋಗಿಗಳಿಂದಲೂ ಹೊಂದಲ್ಪಡುತ್ತದೆ ಎಂಬ ಭಾವವು. ಇಲ್ಲಿ ಸ್ಥಾನಂ ಎಂಬುದಕ್ಕೆ ಫಲವೆಂಬರ್ಥವನ್ನು ಹೇಳಿ ಆತ್ಮಸಾಕ್ಷಾತ್ಕಾರ ಫಲವು ಎರಡಕ್ಕೂ ಒಂದೇ ಎಂದು ಉಪದೇಶಿಸಲ್ಪಟ್ಟಿತು. ಹಿಂದಿನ ಶ್ಲೋಕದಲ್ಲಿ ವಿನ್ದತೇ ಫಲಂ - ಎಂದು ಹೇಳಿದುದೇ ಇಲ್ಲಿ ಪ್ರಾಪ್ಯತೇಸ್ಥಾನಂ ಎಂಬುದರಿಂದ ಹೇಳಲ್ಪಟ್ಟಿತು. ಇದೇ ಸರ್ವಸಮಂಜಸಾರ್ಥವು. ಆದರೆ ಸ್ಥಾನ ಶಬ್ದಕ್ಕೆ ಪ್ರದೇಶ ಅಥವಾ ಎಲ್ಲೆಯೆಂಬ ಮುಖ್ಯಾರ್ಥವನ್ನು ಬಿಟ್ಟು, ಔಪಚಾರಿಕವಾಗಿ ಫಲ ಮಾಡಬಹುದೋ ಎಂದು ಆಕ್ಷೇಪಿಸಿದರೆ, ಇಲ್ಲಿ ಸ್ಥಾನ ಶಬ್ದಕ್ಕೆ ದಿವ್ಯ ವೈಕುಂಠವೆಂದು ಅರ್ಥವೆಂದೂ ಅರ್ಥ ಹೇಳಬಹುದು ; ಜ್ಞಾನಯೋಗ ಕರ್ಮಯೋಗಗಳು ಪೃಥಕ್ಕಾಗಿದ್ದರೂ ಎರಡೂ ಆತ್ಮಸಾಕ್ಷಾತ್ಕಾರವನ್ನುಂಟುಮಾಡಿ, ಭಕ್ತಿಯೋಗಕ್ಕೆ ಅರ್ಹನನ್ನಾಗಿ ಮಾಡಿ ಯೋಗ ನಿಷ್ಪತ್ತಿ

**ಭಾ. ಸಾಂಖ್ಯೈಃ - ಜ್ಞಾನನಿಷ್ಠೈಃ, ಯದಾತ್ಮಾವಲೋಕನರೂಪಂ ಫಲಂ ಪ್ರಾಪ್ಯತೇ, ತದೇವ, ಕರ್ಮಯೋಗನಿಷ್ಠೈರಪಿ ಪ್ರಾಪ್ಯತೇ । ಏವಮೇಕಫಲತ್ವೇನೈಕಂ ವೈಕಲ್ಪಿಕಂ ಸಾಂಖ್ಯಂ ಯೋಗಂ ಚ ಯಃ ಪಶ್ಯತಿ, ಸ ಏವ ಪಂಡಿತ ಇತ್ಯರ್ಥಃ ॥ ೫ ॥**

---

ದ್ವಾರಾ ಎರಡೂ ದಿವ್ಯ ವೈಕುಂಠಲೋಕ ಪ್ರಾಪ್ತಿಯನ್ನುಂಟುಮಾಡುತ್ತವೆಂದೂ ಅರ್ಥ ಹೇಳಬಹುದು. ಆಗ ಹಿಂದಿನ ಶ್ಲೋಕವು ಆಯೋಗಗಳಿಗೆ ತುಂಬಾ ಸನ್ನಿಕರ್ಷಫಲವಾದ ಆತ್ಮಸಾಕ್ಷಾತ್ಕಾರರೂಪ ಫಲವು ಒಂದೇ ಎಂದು ಹೇಳಿತೆಂದೂ, ಈ ಶ್ಲೋಕವು ಅಂತಿಮಫಲವೂ ಕೂಡ ಒಂದೇ ಎಂದೂ, ಎರಡರಿಂದಲೂ ದಿವ್ಯ ವೈಕುಂಠಪ್ರಾಪ್ತಿ ಉಂಟಾಗುತ್ತದೆಂದು ಹೇಳಿತೆಂದೂ, ಹೀಗೆ ಈ ಎರಡು ಶ್ಲೋಕಗಳಿಗೂ ವಿವೇಕವನ್ನು ಕಲ್ಪಿಸಿತು ಎಂದು ಇಟ್ಟುಕೊಂಡರೂ ಬಾಧಕವೇನೂ ಇಲ್ಲವು. ಶ್ರೀಮಚ್ಛಂಕರಾಚಾರ್ಯರು ಈ ಅರ್ಥವನ್ನು ಬೋಧಿಸಿದರು. ಮೋಕ್ಷಾರ್ಥಿಯು ಜ್ಞಾನಯೋಗವನ್ನನುಷ್ಠಿಸಿದರೂ, ಕರ್ಮಯೋಗವನ್ನನುಷ್ಠಿಸಿದರೂ ಆಂತರಾಳಿಕ ಫಲವಾದ ಆತ್ಮಸಾಕ್ಷಾತ್ಕಾರವೂ ಒಂದೇ, ಕೊನೆಯ ಫಲವಾದ ವೈಕುಂಠಪ್ರಾಪ್ತಿಯೂ ಒಂದೇ, ಎಂದುಪದೇಶಿಸಲ್ಪಟ್ಟಿತೆಂದು ಭಾವಿಸಬಹುದು. ಆದುದರಿಂದ ಎಲ್ಲಾ ಫಲಪ್ರಾಪ್ತಿಯಿಂದಲೂ ಎರಡೂ ಒಂದೇ ಎಂದು ಭಾವಿಸುವವನು ಪಂಡಿತನು, ವಿವೇಕಿಯು ಎಂದು ಉಪದೇಶಿಸುತ್ತಾರೆ. ಹೀಗೆ ಫಲಪ್ರಾಪ್ತಿಯು ಒಂದೇಯಾದುದರಿಂದ, ಸಾಂಖ್ಯಂ ಚ - ಜ್ಞಾನಯೋಗವನ್ನೂ, ಯೋಗಂ ಚ - ಕರ್ಮಯೋಗವನ್ನೂ ಸಹ, ಏಕಂ - ಒಂದೇವಿಧ ಫಲ ಕೊಡುವುವೆಂದು, ಯಃ ಪಶ್ಯತಿ - ಯಾವನು ಗುರೂಪದೇಶ ಮುಂತಾದವುಗಳಿಂದ ವಿಮರ್ಶಿಸಿ ತಿಳಿಯುವನೋ, ಸಪಶ್ಯತಿ - ಅವನೇಗ ಸರಿಯಾದ ಶಾಸ್ತ್ರಜ್ಞನು, ವಿವೇಕಿಯು, ಇಲ್ಲಿ ಏಕಂ ಎಂಬುದರಿಂದ ಜ್ಞಾನಯೋಗ ಕರ್ಮಯೋಗಗಳು ಎರಡೂ ಸ್ವರೂಪತಃ ಏಕಶಾಸ್ತ್ರವೆಂದು ಅರ್ಥಮಾಡತಕ್ಕದ್ದು ಸರಿಯಲ್ಲವು. ಸಾಂಖ್ಯಂಚ ಯೋಗಂ ಚ ಎಂದು ಎರಡು ಕಡೆಯಲ್ಲೂ ಚಕಾರವಿರುವದರಿಂದ ಭಿನ್ನ ಸಾಧನಗಳಾಗಿ ಉಪಾಯಕ್ಕೆ ಹೇತುವೆಂಬುದು ಸ್ಪಷ್ಟವು. ಎರಡೂ ಆತ್ಮಾವಲೋಕನವನ್ನುಂಟುಮಾಡುವುವುಗಳಾಗಿ ಫಲದಲ್ಲಿ ಏಕವಾದುದರಿಂದ ವಿಕಲ್ಪವು ಕೂಡ ಏರ್ಪಟ್ಟಿತು.

**ಭಾಷ್ಯಾರ್ಥವು:**—**ಸಾಂಖ್ಯೈಃ** ಎಂದರೆ ಜ್ಞಾನನಿಷ್ಠೈಃ, ಜ್ಞಾನಯೋಗನಿಷ್ಠರಿಂದ, **ಯತ್** - ಯಾವ, ಆತ್ಮಾವಲೋಕನರೂಪವಾದ ಫಲವು, ಇದು ಸ್ಥಾನಂ ಎಂಬುದರ ತಾತ್ಪರ್ಯವು, ಜ್ಞಾನಯೋಗಕ್ಕೆ ಪರಿಸಮಾಪ್ತಿರೂಪವಾದ ಎಲ್ಲೆಯು ಯಾವುದು ಎಂದರೆ, ಆತ್ಮಸಾಕ್ಷಾತ್ಕಾರವು, ಆದುದರಿಂದ ಇದು ಸ್ಥಾನಂ ಎಂದು ವ್ಯವಹರಿಸಲ್ಪಟ್ಟಿರುತ್ತದೆ. ಇಂತಹ ಫಲವು, **ಪ್ರಾಪ್ಯತೇ** . ಹೊಂದಲ್ಪಡುತ್ತದೋ, **ತದೇವ** - ಆ ಫಲವು ಕರ್ಮಯೋಗನಿಷ್ಠರಿಂದಲೂ ಕೂಡ, **ಪ್ರಾಪ್ಯತೇ** - ಇದು ಗಮ್ಯತೇ ಎಂಬುದರ್ಥವು, ಹೊಂದಲ್ಪಡುತ್ತದೆ. ಜ್ಞಾನಯೋಗ ಕರ್ಮಯೋಗಗಳೆರಡೂ ಎಲ್ಲಿಹೋಗಿ ನಿಲ್ಲುತ್ತವೆ ಎಂದರೆ ಆತ್ಮ ಸಾಕ್ಷಾತ್ಕಾರವನ್ನು ಹೊಂದಿಸುವದರಲ್ಲಿ ಎಂಬ ಭಾವವು, **ಏವ ಮೇಕ ಫಲತ್ವೇನ** - ಎರಡೂ ಒಂದೇ ಫಲವುಳ್ಳವುಗಳಾದುದರಿಂದ **ಸಾಂಖ್ಯಂ ಯೋಗಂ ಚ** - ಜ್ಞಾನಯೋಗವನ್ನೂ ಕರ್ಮಯೋಗವನ್ನೂ ಸಹ, **ಏಕಂವೈಕಲ್ಪಿಕಂ** - ವಿಕಲ್ಪವನ್ನು ಹೊಂದಿದ ಒಂದೇ ಎಂದು, **ಯಃ ಪಶ್ಯತಿ** - ಯಾವನು ವಿಮರ್ಶಿಸಿ ತಿಳಿಯುವನೋ, **ಸ ಏವ ಪಂಡಿತಇತ್ಯರ್ಥಃ** - ಅವನೇ ಶಾಸ್ತ್ರಜ್ಞನು ವಿವೇಕಿಯು ಎಂಬ ತಾತ್ಪರ್ಯವು. ಹಿಂದೆ ಭಿನ್ನ ಫಲಗಳುಳ್ಳವೆಂದು ತಿಳಿದವನು ಪಂಡಿತನಲ್ಲವೆಂದೂ ವಿವೇಕಶೂನ್ಯನೆಂದೂ ಹೇಳಿದರು; ಎರಡೂ ಏಕಫಲಗಳುಳ್ಳವೆಂದು ತಿಳಿದವನಿಗೆ ಪಂಡಿತನೆಂದು ಇಲ್ಲಿ ಹೇಳಲ್ಪಟ್ಟಿತು. ಇಲ್ಲಿ ಸಾಂಖ್ಯೈಃ ಯೋಗೈಃ ಎಂದು ಬಹುವಚನಗಳಿರುವದರಿಂದ ಜ್ಞಾನ

ಭಾ. ಅ. ಇಯರ್ಸ್ತು ವಿಶೇಷ ಇತ್ಯಾಹ—

ಮೂ. ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।
ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥ ೬.

ಯೋಗ ಕರ್ಮಯೋಗಗಳಲ್ಲದೆ, ತನ್ನಿಷ್ಠರು ಹೇಳಲ್ಪಟ್ಟರೆಂದು ತಿಳಿಸುವದಕ್ಕಾಗಿ, ಜ್ಞಾನನಿಷ್ಠೈಃ ಎಂದೂ, ಕರ್ಮಯೋಗನಿಷ್ಠೈಃ ಎಂಬ ಪ್ರಯೋಗಗಳು. ಸಾಂಖ್ಯವೂ ಯೋಗವೂ ಏಕಂ ಒಂದೇ ಎಂದು ಹೇಳುವದರಭಿಪ್ರಾಯವು; ಫಲವು ಒಂದೇಯಾಗಿರುವದರಮೂಲಕವೆಂದು ತಿಳಿಸುವದಕ್ಕಾಗಿ, ಏಕಮೇಕಫಲತ್ವೇನ ಎಂಬ ಪ್ರಯೋಗವು: ಪ್ರತ್ಯೇಕವಾಗಿ ಎರಡೂ ಒಂದೇ ಫಲವನ್ನು ಸಾಧಿಸಿ ಕೊಡುವದರಿಂದ ಏಕಂ ನೈಕಲ್ಪಿಕಂ ಎಂಬ ಭಾಷ್ಯವು. ಹಾಗೆಯೇ ಶಾರೀರಕ ಸೂತ್ರವಾದ, ಏಕತ್ವೋಽವಿಶಿಷ್ಟ ಫಲಕತ್ವಾತ್ ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಸಪಶ್ಯತಿ ಎಂಬುವಕ್ಕೆ ಸ ಏವ ಪಂಡಿತಃ ಎಂಬ ವ್ಯಾಖ್ಯಾನವು ಹಿಂದಿನ ಶ್ಲೋಕದಲ್ಲಿ ಬಾಲರು ಪಂಡಿತರಲ್ಲದವರು ಯಾರು ಎಂದು ಹೇಳಿದುದಕ್ಕೆ ಪ್ರತಿದ್ವಂದಿಯಾಗಿ ಇಲ್ಲಿ ಹೇಳಲ್ಪಟ್ಟಿತೆಂಬ ತಾತ್ಪರ್ಯವು. ಕೆಲವರು ಇಲ್ಲಿ ಸಾಂಖ್ಯಂ ಚ ಯೋಗಂ ಚ ಏಕಂ ಸಾಧ್ಯಸಾಧನ ಭಾವದಿಂದ ಎರಡೂ ಒಂದು ಎಂದು ಬರೆದಿರುತ್ತಾರೆ; ಈ ಅಭಿಪ್ರಾಯವು ಹಿಂದಿನ ಶ್ಲೋಕದ ಉತ್ತರಾರ್ಧಾಭಿಪ್ರಾಯಕ್ಕೆ ವಿರುದ್ಧವಾಗುತ್ತದೆ.

ಭಾಷ್ಯಾವತಾರಿಕೆಯು:—ಅರ್ಜುನನ ಪ್ರಶ್ನೆಗೆ ಪ್ರತಿಜ್ಞಾವಾಕ್ಯರೂಪದಲ್ಲಿ ಜ್ಞಾನಯೋಗಕ್ಕಿಂತ ಕರ್ಮಯೋಗದಲ್ಲಿ ವಿಶೇಷ ಉಂಟೆಂದು "ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ" ಎಂಬದಾಗಿ ಹಿಂದೆ ಎರಡನೆಯ ಶ್ಲೋಕದಲ್ಲಿ ಹೇಳಿ, ಎರಡೂ ಸಮಾನ ಫಲಗಳುಳ್ಳವೆಂದೂ ಉಪದೇಶಿಸಿದ ನಂತರ ಅವುಗಳಿಗೆ ವಿಕಲ್ಪಭಾವವನ್ನು ಕಲ್ಪಿಸುವದು ಹೇಗೆ ಯುಕ್ತವು ಎಂದರೆ ಕರ್ಮಯೋಗದಲ್ಲಿ ಸೌಕರ್ಯವೂ ಶೈಘ್ರ್ಯವೂ ಇರುವದರಿಂದ ಕರ್ಮಯೋಗಕ್ಕೆ ಮಾಹಾತ್ಮ್ಯವೂ, ಫಲದಲ್ಲಿ ಮಾತ್ರ ಎರಡು ಸಂದರ್ಭದಲ್ಲೂ ಸಮಾನತ್ವವಿರುವದರಿಂದ ವಿಕಲ್ಪವೂ, ಹೀಗೆ ಎರಡೂ ಸಮಂಜಸವಾದವುಗಳೇ. ಹೀಗೆ ಏರ್ಪಟ್ಟ ವಿಕಲ್ಪವೇನು ಶಾಸ್ತ್ರನಿಯತವಾದ ಅಧಿಕಾರ ಭೇದದಿಂದಲೇ? ಎಂದರೆ ಹಾಗಲ್ಲವು ಎಂದು ಎರಡಕ್ಕೂ ಇರುವ ವ್ಯತ್ಯಾಸವನ್ನು ವ್ಯಕ್ತಪಡಿಸುತ್ತಾರೆ. ಕರ್ಮಯೋಗವು ಸುಕರವು ಶೀಘ್ರ ಫಲಕಾರಿಯು, ಜ್ಞಾನಯೋಗವಾದರೋ ದುಷ್ಕರವು, ವಿಳಂಬ ಫಲಕಾರಿಯು; ಹೀಗೆ ಎರಡಕ್ಕೂ ವ್ಯತ್ಯಾಸ ಉಂಟೆಂದು ಈ ಶ್ಲೋಕವು ತಿಳಿಸುತ್ತದೆಂಬಭಿಪ್ರಾಯದಿಂದ, ಇಯಸ್ತು ವಿಶೇಷ ಇತ್ಯಾಹ - ಇದೀಗ ಇವೆರಡಕ್ಕೂ ಇರುವ ವ್ಯತ್ಯಾಸವು ಎಂದುಪದೇಶಿಸುತ್ತಾರೆ ಎಂಬದಾಗಿ ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಹೀಗೆ ಒಂದು ಸುಕರವಾಗಿಯೂ ಶೀಘ್ರಫಲಕಾರಿಯಾಗಿಯೂ, ಇನ್ನೊಂದು ದುಷ್ಕರವಾಗಿಯೂ ವಿಳಂಬ ಫಲಕಾರಿಯಾಗಿಯೂ ಇದ್ದರೆ, ಸುಕರವಾದುದೇ ಉಪಾದೇಯವಾಗಿ ದುಷ್ಕರವಾದುದು ನಿರರ್ಥಕವಾಗುವದಿಲ್ಲವೋ ಎಂದರೆ ಹಾಗಲ್ಲವು. ಜ್ಞಾನಯೋಗವು ದುಷ್ಕರವಾದರೂ ಆತ್ಮಸಾಕ್ಷಾತ್ಕಾರದಿಂದಾಗುವ ಆನಂದವು ವಿಪುಳವಾದುದರಿಂದ ಅದಕ್ಕೆ ಯೋಗ್ಯತೆಯಿರುವವರು ಅಂಗೀಕರಿಸಬಹುದು. ಆದರೆ ಕರ್ಮಯೋಗವು ಸುಕರವಾಗಿಯೂ ಶೀಘ್ರ ಫಲದಾಯಕವಾಗಿಯೂ ಇರುವದರಿಂದ ಇದನ್ನೇ ಅವಲಂಬಿಸು ಎಂದು ಅರ್ಜುನನಿಗೆ ಸ್ವಾಮಿ ಶ್ರೀಕೃಷ್ಣಭಗವಾನರವರ ಹಿತೋಪದೇಶವು.

ಮೂಲಕ್ಕೆ ಅರ್ಥವು:—ಸನ್ಯಾಸಸ್ತು - ಕರ್ಮಸನ್ಯಾಸವಾದರೋ ಎಂದರೆ, ಜ್ಞಾನಯೋಗವಾದರೋ, ಅಯೋಗತಃ - ಕರ್ಮಯೋಗಾಪೇಕ್ಷೆಯಿಲ್ಲದೆ, ಹೇ ಮಹಾಬಾಹೋ -

ಭಾ. ಸನ್ನ್ಯಾಸಃ - ಜ್ಞಾನಯೋಗಸ್ತು, ಅಯೋಗತಃ - ಕರ್ಮಯೋಗಾದೃತೇ ಪ್ರಾಪ್ತುಮಶಕ್ಯಃ ; ಯೋಗಯುಕ್ತಃ - ಕರ್ಮಯೋಗ ಯುಕ್ತಃ ಸ್ವಯಮೇವ ಮುನಿಃ - ಆತ್ಮ

---

ಓ ಪರಾಕ್ರಮವುಳ್ಳ ಬಾಹು ಬಲದಿಂದ ಯುಕ್ತನಾದ ಅರ್ಜುನನೇ, ಆಪ್ತುಂ - ಹೊಂದಲು, ದುಃಖಂ - ಅಸಾಧ್ಯವು, ಇಲ್ಲಿ ತು ಶಬ್ದವು ಜ್ಞಾನಯೋಗಕ್ಕೂ ಕರ್ಮಯೋಗಕ್ಕೂ ಇರುವ ಪರಸ್ಪರ ವ್ಯತ್ಯಾಸವನ್ನು ಬೋಧಿಸುತ್ತದೆ, ಯೋಗಯುಕ್ತಸ್ತು - ಕರ್ಮನಿಷ್ಠನಾದರೋ, ಮುನಿಃ - ಆತ್ಮ ಸ್ವರೂಪವನ್ನೇ ಮನನ ಮಾಡುವವನಾಗಿ, ಬ್ರಹ್ಮ - ಆತ್ಮಸ್ವರೂಪವನ್ನೇ, ನ ಚಿರೇಣ - ದೀರ್ಘಕಾಲವಿಲ್ಲದೆ ಎಂದರೆ, ಶೀಘ್ರವಾಗಿಯೇ, ಅಧಿಗಚ್ಛತಿ - ಹೊಂದುವನು, ಇಲ್ಲಿ ಸನ್ನ್ಯಾಸ ಶಬ್ದವು ಯತ್ಯಾಶ್ರಮ ಧರ್ಮವನ್ನು ಬೋಧಿಸುವದಿಲ್ಲವು. ಅದು ಅಪ್ರಸ್ತುತವಿಷಯವು. ಸಂನ್ಯಾಸವೆಂದರೆ, ಕರ್ಮಸನ್ನ್ಯಾಸವು ಎಂದು ಎರಡನೆಯ ಶ್ಲೋಕದಲ್ಲಿಯೇ ಹೇಳಲ್ಪಟ್ಟಿರುತ್ತದೆಯಾದುದರಿಂದ ಜ್ಞಾನಯೋಗವು.

**ಭಾಷ್ಯಾರ್ಥವು :—ಸನ್ನ್ಯಾಸಸ್ತು** ಎಂದರೆ, ಜ್ಞಾನಯೋಗವಾದರೋ, ಸನ್ನ್ಯಾಸಕ್ಕೆ ಕರ್ಮ ಸನ್ನ್ಯಾಸವೆಂಬರ್ಥವನ್ನು ಎರಡನೆಯ ಶ್ಲೋಕದಲ್ಲಿ ಹೇಳಿರುವದರಿಂದ ಜ್ಞಾನಯೋಗವೆಂದು ವ್ಯಾಖ್ಯಾನಮಾಡಿರುತ್ತಾರೆ, **ಅಯೋಗತಃ** ಎಂದರೆ **ಕರ್ಮ ಯೋಗಾದೃತೇ** - ಕರ್ಮಯೋಗ ವಿಲ್ಲದೇ, **ಪ್ರಾಪ್ತುಮಶಕ್ಯಃ** - ಹೊಂದಲಶಾಧ್ಯವು. ಹೀಗೆ ಹೇಳಿರುವದರಿಂದ ಜ್ಞಾನಯೋಗಾಧಿಕಾರಿಯಾಹುವದಕ್ಕೂ ಕೂಡ ಕರ್ಮಯೋಗವು ಆವಶ್ಯಕವು; ಆದರೆ ಹಿಂದೆ ಪರಸ್ಪರ ನಿರಪೇಕ್ಷಗಳೆಂದು ಹೇಳಲ್ಪಟ್ಟಿತಲ್ಲಾ ಅದು ಹೇಗೆ ಎಂದು ಕೇಳಬಹುದು. ಜ್ಞಾನಯೋಗಾಧಿಕಾರಿಯಾದ ನಂತರ ಕರ್ಮಯೋಗದ ಆವಶ್ಯಕವಿಲ್ಲವೆಂದೂ, ಆಗ ಪರಸ್ಪರ ನಿರಪೇಕ್ಷವಾದವುಗಳೆಂದೂ ಹೇಳಲ್ಪಟ್ಟಿತು. ಆದುದರಿಂದ ಈ ಶ್ಲೋಕಕ್ಕೂ ಳನೆಯ ಶ್ಲೋಕಕ್ಕೂ ಏನೊಂದೂ ವಿರೋಧವಿಲ್ಲವು. **ಯೋಗಯುಕ್ತಃ** - ಎಂದರೆ **ಕರ್ಮಯೋಗಯುಕ್ತನಾದರೋ**, **ಸ್ವಯಮೇವ** - ತಾನಾಗಿಯೇ ಎಂದರೆ ಜ್ಞಾನಯೋಗದ ಅಪೇಕ್ಷೆ ಇಲ್ಲದೇನೆ, **ಮುನಿಃ** ಎಂದರೆ, ಆತ್ಮಮನನ ಶೀಲಃ-ಜೀವಾತ್ಮ ಸ್ವರೂಪವನ್ನು ಮನನಮಾಡುವ ಸ್ವಭಾವವುಳ್ಳವನಾಗಿ, **ಸುಖೇನ ಕರ್ಮಯೋಗಂ ಸಾಧಯಿತ್ವಾ** - ಸುಖವಾಗಿ ಕರ್ಮಯೋಗವನ್ನು ಸಾಧಿಸಿ, **ನಚಿರೇಣ** ಎಂದರೆ, **ಅಲ್ಪೇನೈವಕಾಲೇನ**– ಸ್ವಲ್ಪಕಾಲದಲ್ಲಿಯೇ, **ಬ್ರಹ್ಮಾಧಿಗಚ್ಛತಿ** ಎಂದರೆ, **ಆತ್ಮಾನಂ ಪ್ರಾಪ್ನೋತಿ** - ಆತ್ಮಸಾಕ್ಷಾತ್ಕಾರವನ್ನು ಹೊಂದುವನು, ಇಲ್ಲಿ ನ ಎಂಬುದನ್ನು ಬೇರೆ ಪದವಾಗಿ ಮಾಡಿದರೆ, ಆಗ ಕ್ರಿಯಾಪದದೊಂದಿಗೆ ಅನ್ವಯ ಉಂಟಾಗಿ, **ಚಿರೇಣನಾಧಿಗಚ್ಛತಿ** - ಬಹುಕಾಲದಿಂದಲೂ ಆತ್ಮಸಾಕ್ಷಾತ್ಕಾರವು ಉಂಟಾಗುವದಿಲ್ಲವೆಂಬ ವಿಪರೀತಾರ್ಥವು ಉಂಟಾಗುತ್ತದೆ; ಇದನ್ನು ತಪ್ಪಿಸುವದಕ್ಕಾಗಿ **ನಚಿರೇಣವೆಂದು** ಒಂದೇ ಪದವಾಗಿ ಭಾವಿಸಿ, **ಅಲ್ಪೇನೈವ ಕಾಲೇನವೆಂದು** ಅರ್ಥ ಬರಿದಿರುತ್ತಾರೆ. ಹಾಗಾದರೆ, **ನಚಿರೇಣ** ಎಂಬುದಕ್ಕೆ ಬದಲಾಗಿ ಅಚಿರೇಣವೆಂದು ಪ್ರಯೋಗವಿರಬೇಕೆಂದಾಕ್ಷೇಪಿಸಿದರೆ, **ನೈಕಾದಿ** ಶಬ್ದಗಳಂತೆ **ನಚಿರೇಣವೆಂಬ** ಪ್ರಯೋಗವು. **ಬ್ರಹ್ಮ** ಶಬ್ದಕ್ಕೆ ಪ್ರಕೃತಿ, ಜೀವಾತ್ಮ, ಪರಮಾತ್ಮಾ ವೇದವೆಂಬ ಅರ್ಥಗಳುಂಟು. ಇದು ಆತ್ಮ ಸಾಕ್ಷಾತ್ಕಾರ ಪ್ರಕರಣವಾದುದರಿಂದ ಬ್ರಹ್ಮ ಶಬ್ದವು ಇಲ್ಲಿ ಜೀವಾತ್ಮ ಪರವು. ಬ್ರಹ್ಮ ಶಬ್ದಕ್ಕೆ ಜೀವಾತ್ಮನೆಂದೇ ಅರ್ಥಮಾಡಬೇಕೆಂಬ ನಿರ್ಬಂಧವೇನೆಂದು ಕೇಳಬಹುದು. **"ಸಾಂಖ್ಯಯೋಗೌಪೃಥಗ್ಬಾಲಾಃ"** ಎಂಬ ಶ್ಲೋಕದಿಂದಲೂ **"ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿಗಮ್ಯತೇ"** ಎಂಬುದರಿಂದಲೂ ಎರಡಕ್ಕೂ ಒಂದೇ ಫಲವೆಂದು ಹೇಳಲ್ಪಟ್ಟಿತು. ಆ ಫಲವು ಯಾವುದೆಂಬುದನ್ನು ಇಲ್ಲಿ ಸ್ಪಷ್ಟಪಡಿಸಿ, ಬ್ರಹ್ಮಾಧಿಗಚ್ಛತಿ ಎಂದು ಹೇಳಲ್ಪಟ್ಟಿರುತ್ತದೆ..

ಭಾ. ಮನನಶೀಲಃ, ಸುಖೇನ ಕರ್ಮಯೋಗಂ ಸಾಧಯಿತ್ವಾ, ನ ಚಿರೇಣ - ಅಲ್ಪೇನೈವ ಕಾಲೇನ, ಬ್ರಹ್ಮಾಧಿಗಚ್ಛತಿ - ಆತ್ಮಾನಂ ಪ್ರಾಪ್ನೋತಿ । ಜ್ಞಾನಯೋಗಯುಕ್ತಸ್ತು ಮಹತಾ ದುಃಖೇನ ಜ್ಞಾನಯೋಗಂ ಸಾಧಯತಿ ; ದುಃಖಸಾಧ್ಯತ್ವಾದಾತ್ಮಾನಂ ಚಿರೇಣ ಪ್ರಾಪ್ನೋತೀತ್ಯರ್ಥಃ ॥ ೬ ॥

ಇವುಗಳಿಂದ ಸಾಕ್ಷಾತ್ತಾಗಿ ಉಂಟಾಗುವ ಫಲವು ಆತ್ಮ ಸಾಕ್ಷಾತ್ಕಾರವು. ಆದುದರಿಂದ ಬ್ರಹ್ಮ ಶಬ್ದಕ್ಕೆ ಜೀವಾತ್ಮನೆಂಬೇ ಅರ್ಥ ಹೇಳತಕ್ಕದ್ದು. ಪರಮಾತ್ಮಸಾಕ್ಷಾತ್ಕಾರವೆಂದು ಅರ್ಥಮಾಡಿ, ಬ್ರಹ್ಮ ಶಬ್ದಕ್ಕೆ ಪರಮಾತ್ಮನೆಂದು ಏಕೆ ಅರ್ಥಮಾಡಕೂಡದು ಎಂದರೆ ಅದು ಸಾಕ್ಷಾತ್ತಾಗಿ ಅಚಿರೇಣ ಉಂಟಾಗುವದಿಲ್ಲವು; ಭಕ್ತಿಯೋಗಪ್ರಾಪ್ತಿಯುಂಟಾದನಂತರ ಅದು ಲಭ್ಯವು. ಇಲ್ಲಿ ಬ್ರಹ್ಮ ಶಬ್ದವು ಸನ್ಯಾಸವನ್ನು ಬೋಧಿಸುತ್ತದೆಂಬ ಶ್ರೀ ಶಾಂಕರಾಭಿಪ್ರಾಯಕ್ಕೆ ಪ್ರಕರಣವೇ ಇಲ್ಲವು. ಇಲ್ಲಿ ಪ್ರಕರಣವು ಜ್ಞಾನಯೋಗಕ್ಕೆ ದುಃಖ ಸಾಧ್ಯತ್ವವನ್ನೂ ವಿಳಂಬಿತ ಫಲತ್ವವನ್ನೂ ಹೇಳತಕ್ಕದ್ದಾಗಿಯೂ, ಕರ್ಮಯೋಗಕ್ಕಾದರೋ ಸುಖ ಸಾಧ್ಯತ್ವವನ್ನೂ ಶೀಘ್ರಫಲತ್ವವನ್ನೂ ಹೇಳತಕ್ಕದ್ದಾಗಿಯೂ, ಇರುತ್ತದೆ. ಹೀಗೆ ಹೇಳುವದರಿಂದ ಅರ್ಜುನನಿಗೆ ದುಃಖಸಾಧ್ಯವಾಗಿಯೂ ವಿಳಂಬಿತ ಫಲದಾಯಕವಾಗಿಯೂ ಇರುವ ಜ್ಞಾನಯೋಗವನ್ನು ಬಿಟ್ಟು ಸುಖಸಾಧ್ಯವಾಗಿಯೂ ಶೀಘ್ರ ಫಲದಾಯಕವಾಗಿಯೂ ಇರುವ ಕರ್ಮ ಯೋಗವನ್ನೇ ಅವಲಂಬಿಸಿ ಯುದ್ಧ ಸನ್ನದ್ಧನಾಗು ಎಂದು ಉಪದೇಶಿಸಿರುತ್ತಾರೆ. ಮುನಿ ಶಬ್ದದ ಪ್ರಕೃತಿ ಪ್ರತ್ಯಯಾರ್ಥಗಳನ್ನು ಮನದಲ್ಲಿಟ್ಟು ಮನನಶೀಲಃ ಎಂದು ವ್ಯಾಖ್ಯಾನಮಾಡಿರುತ್ತಾರೆ; ಸುಖೇನಕರ್ಮಯೋಗಂ ಸಾಧಯಿತ್ವಾ- ಎಂಬುದು ಮೂಲದಲ್ಲಿಲ್ಲವು; ನಚಿರೇಣ ಬ್ರಹ್ಮಾಧಿಗಚ್ಛತಿ ಎಂಬುದರಲ್ಲಿ ತೋರಿಬರುವ ತಾತ್ಪರ್ಯಾರ್ಥವನ್ನು ಬರೆದಿರುತ್ತಾರೆ ; ಶೀಘ್ರದಲ್ಲಿ ತನ್ನ ಆತ್ಮಸಾಕ್ಷಾತ್ಕಾರವು ಸುಖದಿಂದ ಲಭಿಸಬೇಕಾದರೆ ಕರ್ಮಯೋಗವನ್ನು ಸಾಧಿಸಬೇಕೆಂಬ ಭಾವವು. ಮತ್ತು ಜ್ಞಾನಯೋಗವು, ದುಃಖಮಾಪ್ತುಂ ಎಂದು ಹೇಳಿರುವದರಿಂದ, ಅದಕ್ಕೆ ಪ್ರತಿದ್ವಂದ್ವಿಯಾಗಿ ಕರ್ಮಯೋಗವನ್ನು ಸುಖದಿಂದ ಸಾಧಿಸಬಹುದೆಂಬುದೂ ತೋರಿಬರುತ್ತದೆ. ಜ್ಞಾನಯೋಗ ಯುಕ್ತಸ್ತು - ಜ್ಞಾನಯೋಗದಿಂದ ಕೂಡಿದವನಾದರೋ, ಮಹತಾ ದುಃಖೇನ - ತುಂಬಾ ದುಃಖದಿಂದ, ಎಂದರೆ ಕಷ್ಟದಿಂದ, ಜ್ಞಾನಯೋಗಂ ಸಾಧಯತಿ - ಜ್ಞಾನಯೋಗವನ್ನು ಸಾಧಿಸುತ್ತಾನೆ; ದುಃಖ ಸಾಧ್ಯತ್ವಾತ್ - ಬಹು ಕಷ್ಟ ಸಾಧ್ಯವಾದುದರಿಂದ, ಆತ್ಮಾನಂ - ತನ್ನ ಆತ್ಮಸಾಕ್ಷಾತ್ಕಾರವನ್ನು ಚಿರೇಣ - ವಿಳಂಬವಾಗಿ ಬಹುಕಾಲಕ್ಕೆ, ಪ್ರಾಪ್ನೋತೀತ್ಯರ್ಥಃ - ಹೊಂದುವನೆಂಬ ತಾತ್ಪರ್ಯವು. ಜ್ಞಾನಯೋಗಕ್ಕೆ ಪ್ರಥಮತಃ ಕರ್ಮಯೋಗದಪೇಕ್ಷೆಯುಂಟು ಮತ್ತು ಆತ್ಮಸಾಕ್ಷಾತ್ಕಾರವನ್ನು ಹೊಂದುವದು ದುಷ್ಕರವಾಗಿ ವಿಳಂಬವು; ಕರ್ಮಯೋಗಕ್ಕಾದರೋ, ಜ್ಞಾನಯೋಗದಾವಶ್ಯಕತೆಯೂ ಇಲ್ಲವು, ಸುಲಭವಾಗಿ ಆತ್ಮಸಾಕ್ಷಾತ್ಕಾರವೂ ಲಭಿಸುವದರಿಂದ ವಿಳಂಬವಿಲ್ಲವು; ಎಂಬುದು ಈ ಶ್ಲೋಕದ ತಾತ್ಪರ್ಯವು. ಹೀಗಾದಪಕ್ಷದಲ್ಲಿ ಯಾರಾದರೂ ಜ್ಞಾನಯೋಗವನ್ನು ಅವಲಂಬಿಸುವರೋ ? ಸುಲಭವಾಗಿ ಶೀಘ್ರವಾಗಿ ಫಲಪ್ರದವಾದ ಕರ್ಮಯೋಗವನ್ನೇ ಎಲ್ಲರೂ ಅವಲಂಬಿಸುವರು, ಆಗ ಜ್ಞಾನಯೋಗವು ನಿರರ್ಥಕವಾದ ಸಾಧನವಲ್ಲವೋ ? ಎಂದರೆ, ಜ್ಞಾನ ಯೋಗವು ಕಷ್ಟತರವಾದರೂ ಧ್ಯಾನದಲ್ಲಿರುವ ಆನಂದವು ಮಹತ್ತಾದುದರಿಂದ ಶಕ್ತನು ಅವಲಂಬಿಸುವನು. ಸಾಧನ ನೈರರ್ಥಕ್ಯವಿಲ್ಲವು ಎಂದು ಹಿಂದೆಯೇ ಎರಡನೆಯ ಅಧ್ಯಾಯದಲ್ಲೇ ಹೇಳಲ್ಪಟ್ಟಿತು. ॥೬॥

ಮೂಲಕ್ಕೆ ಅರ್ಥವು:—ಹಿಂದಿನ ಶ್ಲೋಕದಿಂದ, ಕರ್ಮಯೋಗವೇ ಕ್ಷಿಪ್ರ ಫಲಕಾರಿಯೂ

**ಮೂ. ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭.**

ಭಾ. ಕರ್ಮಯೋಗಯುಕ್ತಸ್ತು ಶಾಸ್ತ್ರೀಯೇ ಪರಮ ಪುರುಷಾರಾಧನರೂಪೇ ವಿಶುದ್ಧೇ ಕರ್ಮಣಿ ವರ್ತಮಾನಃ ತೇನ ವಿಶುದ್ಧಮನಾಃ, ವಿಜಿತಾತ್ಮಾ – ಸ್ವಾಭ್ಯಸ್ತೇ ಕರ್ಮಣಿ

ಸುಕರವೂ ಎಂದು ಹೇಳಲ್ಪಟ್ಟಿತು. ಅದಕ್ಕೆ ಕಾರಣಗಳನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ.— **ಯೋಗಯುಕ್ತಃ** - ಕರ್ಮಯೋಗನಿಷ್ಠನಾದರೋ, ವಿಶುದ್ಧಾತ್ಮಾ–**"ಯಜ್ಞಶಿಷ್ಟಾಶಿನ ಭುಕ್"** ಆಗಿರುವದರಿಂದ, ಆಹಾರಶುದ್ಧೌ ಸತ್ವಶುದ್ಧಿಃ ಎಂದು ಹೇಳಿರುವಹಾಗೆ ಸತ್ವೋದ್ರೇಕದಿಂದ ಪರಿಶುದ್ಧವಾದ ದೇಹವುಳ್ಳವನು, ಆ ಕಾರಣದಿಂದಲೇ, ವಿಜಿತಾತ್ಮಾ - ಜಯಿಸಲ್ಪಟ್ಟ ಮನಸ್ಸುಳ್ಳವನು, ಜಿತೇಂದ್ರಿಯಃ-ಆ ಕಾರಣದಿಂದ ಜಯಿಸಲ್ಪಟ್ಟ ಇಂದ್ರಿಯಗಳುಳ್ಳವನು, ಸರ್ವಭೂತಾತ್ಮಭೂತಾತ್ಮಾ-ಸಮಸ್ತ ದೇವಾದಿ ಚೇತನರಿಗೂ ಆತ್ಮಭೂತ-ತಾನಾಗಿರುವ ಎಂದರೆ, ತನ್ನ ಹಾಗೆಯೇ ತೋರುವ, ಆತ್ಮಾ - ಆತ್ಮನಾಗಿವುಳ್ಳವನೆಂದರೆ, ಸ್ವಸ್ವರೂಪವುಳ್ಳವನು, ಅವರ ಆತ್ಮಾವೆಲ್ಲಾ ತನ್ನ ಆತ್ಮಾವೆಂತಲೇ ಭಾವಿಸುವವನು, ಜ್ಞಾನೈಕಾಕಾರತೆಯಿಂದ ಎಲ್ಲಾ ಆತ್ಮರೂ ಸಮರೆಂದು ಭಾವಿಸಿ, ಸರ್ವಚೇತನರ ವಿಷಯದಲ್ಲೂ ಅನುಕೂಲನಾಗಿರುವವನು, ಮತ್ತು ಆತನು ಕುರ್ವನ್ನಪಿ - ಕರ್ಮಯೋಗದ ಪ್ರವೃತ್ತಿ ಧರ್ಮಗಳನ್ನನುಷ್ಠಿಸುತ್ತಿದ್ದರೂ, ನ ಲಿಪ್ಯತೇ-ಬ್ರಹ್ಮಾರ್ಪಣಂ ಬ್ರಹ್ಮಹವಿಃ ಎಂಬ ಶ್ಲೋಕದಲ್ಲಿ ಹೇಳಿರುವಹಾಗೆ ಅನುಷ್ಠಿಸುವವನಾದುದರಿಂದ ಅವುಗಳಿಂದ ಲೇಪಿಸಲ್ಪಡುವದಿಲ್ಲವು. ಈ ನಾಲ್ಕು ಪದಗಳಿಂದ ಕರ್ಮಯೋಗದ ಮಾಹಾತ್ಮ್ಯೆಯು ಹೇಳಲ್ಪಟ್ಟಿತು. ಆದುದರಿಂದ ಕರ್ಮ ಯೋಗವು ಮೇಲೆ ಹೇಳಿದ ಕಾರಣಗಳಿಂದ ಸುಕರವು ಶೀಘ್ರ ಫಲದಾಯಕವೆಂಬ ಭಾವವು. ಶೀಘ್ರ ಫಲದಾಯಕಕ್ಕೆ ಕಾರಣವೇನೆಂದರೆ:—ವಿಶುದ್ಧಾತ್ಮಾ ಎಂಬುದರಿಂದ ಕಾಯಪರಿಶುದ್ಧತೆಯೂ, ವಿಜಿತಾತ್ಮಾ ಎಂಬುದರಿಂದ ಮನೋ ಪರಿಶುದ್ಧತೆಯೂ, ಜಿತೇಂದ್ರಿಯಃ - ಇಂದ್ರಿಯಗಳ ಪರಿಶುದ್ಧತೆಯೂ, ಸರ್ವಭೂತಾತ್ಮ ಭೂತಾತ್ಮಾ ಎಂಬುದರಿಂದ ಬುದ್ಧಿಯ ಪರಿಶುದ್ಧತೆಯೂ ಇರುವದರಿಂದ ಈನಾಲ್ಕರ ಪರಿಶುದ್ಧತೆಯೂ ಆವಶ್ಯಕವೆಂಬುದು ಮುಂದೆ ೧೧ನೆಯ ಶ್ಲೋಕದಲ್ಲೂ ವ್ಯಕ್ತವು. ಈ ಶ್ಲೋಕವು ಕಠಶ್ರುತಿಯಲ್ಲಿ ಹೇಳಿರುವಹಾಗೆ ಕರ್ಮಯೋಗವೇ ಬಹ್ಮವಿದ್ಯಾನಿಷ್ಠನಿಗೆ ವಿಧಿಸಲ್ಪಟ್ಟು ಅಲ್ಲಿ **"ನ ಕರ್ಮ ಲಿಪ್ಯತೇ ನರೇ"** ಮೋಕ್ಷಾರ್ಥಿಯ ಕರ್ಮಾನುಷ್ಠಾನಗಳು, ಆತನಿಗೆ ಬಂಧಕವೆಂದಿಗೂ ಅಲ್ಲವು ಎಂದು ಹೇಳಿರುವ ಅಭಿಪ್ರಾಯವನ್ನೇ ಉಪಪಾದಿಸುತ್ತದೆ.

**ಭಾಷ್ಯಾರ್ಥವು** :—ಹಿಂದಿನ ಶ್ಲೋಕದಲ್ಲಿ ಜ್ಞಾನಯೋಗವು ವಿಳಂಬಿತ ಫಲವುಳ್ಳದ್ದಾಗಿಯೂ ದುಷ್ಕರವಾದುದಾಗಿಯೂ ಇದೆ ಎಂದೂ, ಕರ್ಮಯೋಗವು ಶೀಘ್ರ ಫಲದಾಯಕವಾಗಿಯೂ ಸುಕರವಾಗಿಯೂ ಇದೆ ಎಂದೂ ಹೇಳಲ್ಪಟ್ಟಿತು. ಹೀಗೆ ಕರ್ಮಯೋಗವು ಸುಕರವಾಗಿಯೂ ಶೀಘ್ರಫಲದಾಯಕವಾಗಿಯೂ ಇರಲು ಕಾರಣವೇನೆಂಬಪೇಕ್ಷೆಯಲ್ಲಿ, ಅದಕ್ಕೆ ಕಾರಣವನ್ನು ಹೇಳುವ ಸಂದರ್ಭದಲ್ಲಿ ಅದನ್ನೇ ಪ್ರಶಂಸಿಸಿ ಹೇಳುತ್ತಾರೆ. **ಕರ್ಮಯೋಗಯುಕ್ತಸ್ತು**-ಕರ್ಮಯೋಗಾನುಷ್ಠಾನದಿಂದ ಕೂಡಿದವನಾದರೋ ಶಾಸ್ತ್ರೀಯವಾಗಿ ಪರಮ ಪುರುಷನ ಆರಾಧನ ರೂಪವಾದ, ಆ ಕಾರಣದಿಂದ ವಿಶುದ್ಧೇ ಕರ್ಮಣಿ - ಪರಿಶುದ್ಧವಾದ ಕರ್ಮದಲ್ಲಿ, ಎಂದರೆ, ರಜಸ್ತಮೋಗುಣಗಳ ನಿವೃತ್ತಿಮೂಲಕ ರಾಗದ್ವೇಷಾದಿಗಳಿಗೆ ಕಾರಣವಿಲ್ಲದಹಾಗೆ ಪರಿಶುದ್ಧವಾದ ಕರ್ಮದಲ್ಲಿ, ವರ್ತಮಾನಃ-ಇರುವವನಾಗಿ, ತೇನ-ಅದರಿಂದ, ಎಂದರೆ, ಹಾಗೆ ಪರಿಶುದ್ಧ ಕರ್ಮದಲ್ಲಿರುವದರಿಂದ, **ವಿಶುದ್ಧಮನಾಃ** - ಕಾಮಕ್ರೋಧಾದಿಮಲಗಳಿಗೆ ಆಸ್ಪದವಿಲ್ಲದಹಾಗೆ ಪರಿಶುದ್ಧ

ಭಾ. ವ್ಯಾಪೃತ ಮನಸ್ತ್ವೇನ ಸುಖೇನ ವಿಜಿತಮನಾಃ, ತತ ಏವ ಜಿತೇನ್ದ್ರಿಯಃ, ಕರ್ತುರಾತ್ಮನೋ ಯಾಥಾತ್ಮ್ಯಾನುಸಂಧಾನ ನಿಷ್ಠತಯಾ. ಸರ್ವಭೂತಾತ್ಮ ಭೂತಾತ್ಮಾ ಸರ್ವೇಷಾಂ ದೇವಾದಿ ಭೂತಾನಾಂ ಆತ್ಮಭೂತ ಆತ್ಮಾಯಸ್ಯಾಸೌ ಸರ್ವಭೂತಾತ್ಮಭೂತಾತ್ಮಾ, ಆತ್ಮಯಾಥಾತ್ಮ್ಯಾನುಸಂಧಾನಸ್ಯ ಹಿ ದೇವಾದೀನಾಂ ಸ್ವಸ್ಯಚೈಕಾಕಾರ ಆತ್ಮಾ; ದೇವಾದಿಭೇದಾನಾಂ ಪ್ರಕೃತಿ ಪರಿಣಾಮವಿಶೇಷರೂಪತಯಾತ್ಮಾಕಾರತ್ವಾಸಂಭವಾತ್ ಪ್ರಕೃತಿವಿಯುಕ್ತಸ್ಸರ್ವತ್ರ ದೇವಾದಿದೇಹೇಷು ಜ್ಞಾನೈಕಾಕಾರ

---

ಮನಸ್ಸುಳ್ಳವನಾಗಿ, ವಿಜಿತಾತ್ಮಾ ಎಂದರೆ, ಸ್ವಾಭ್ಯಸ್ತೇ ಕರ್ಮಣಿ - ತನ್ನಿಂದ ಅಭ್ಯಾಸ ಮಾಡಲ್ಪಟ್ಟ ಕರ್ಮದಲ್ಲಿ, ವ್ಯಾಪೃತ ಮನಸ್ತ್ವೇನ-ಸಕ್ತವಾದ ಮನಸ್ಸುಳ್ಳವನಾದುದರಿಂದ, ಸುಖೇನ-ಬಹು ಸುಲಭವಾಗಿ, ವಿಜಿತಮನಾಃ - ಜಯಿಸಲ್ಪಟ್ಟ ಮನಸ್ಸುಳ್ಳವನಾಗಿ, ತತ ಏವ – ಆಕಾರಣದಿಂದಲೇ, ಎಂದರೆ, ಹಾಗೆ ಮನಸ್ಸು ಜಿತವಾದುದರಿಂದಲೇ, ಜಿತೇಂದ್ರಿಯಃ - ಜಯಿಸಲ್ಪಟ್ಟ ಇಂದ್ರಿಯಗಳುಳ್ಳವನಾಗಿ, ಕರ್ತುರಾತ್ಮನಃ - ಕರ್ತೃವಾದ ಆತ್ಮನ, ಯಾಥಾತ್ಮ್ಯಾನುಸಂಧಾನ ನಿಷ್ಠತಯಾ-ಯಥಾರ್ಥವಾದ ಸ್ವರೂಪದ ಅನುಸಂಧಾನದಲ್ಲೇ ನಿರತನಾಗಿರುವದರಿಂದ, ಸರ್ವಭೂತಾತ್ಮಭೂತಾತ್ಮಾ ಎಂದರೆ ಸರ್ವೇಷಾಂ ದೇವಾದಿಭೂತಾನಾಂ - ಸಮಸ್ತ ದೇವಾದಿ ಕ್ಷೇತ್ರಜ್ಞರಿಗೂ, ಆತ್ಮಭೂತ ಆತ್ಮಾಯಸ್ಯಾಸೌ ಸರ್ವಭೂತಾತ್ಮಭೂತಾತ್ಮಾ-ಆತ್ಮಾವಾಗಿರುವವುಗಳಿಗೆ ಸಮಾನವಾದ ಆತ್ಮಾ ಯಾರಿಗೋ ಅವನು, ಎಂದರೆ ಜ್ಞಾನೈಕಾಕಾರತ್ವದಿಂದ ಎಲ್ಲರ ಆತ್ಮಗಳನ್ನೂ ತನಗೆ ಸಮಾನವಾದುದಾಗಿ ಉಳ್ಳವನೆಂಬರ್ಥವು; ಈ ಜ್ಞಾನವು ತನ್ನ ಆತ್ಮದ ಯಥಾರ್ಥಸ್ವರೂಪಾನುಸಂಧಾನದಿಂದ ಉಂಟಾಗುವದೆಂದು ತಿಳಿಸುವದಕ್ಕಾಗಿಯೇ ಇಲ್ಲಿ"ಆತ್ಮನೋ ಯಾಥಾತ್ಮ್ಯಾನುಸಂಧಾನನಿಷ್ಠತಯಾ ಎಂಬ ಪ್ರಯೋಗವು; ಈ ಅಭಿಪ್ರಾಯವನ್ನೇ ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ.—ಆತ್ಮಯಾಥಾತ್ಮ್ಯಾನುಸಂಧಾನಸ್ಯ ಹಿ-ಜೀವಾತ್ಮನ ಯಥಾರ್ಥವಾದ ಸ್ವರೂಪವನ್ನು ಅನುಸಂಧಾನಮಾಡುವವನಿಗೀಗ, ದೇವಾದೀನಾಂ-ದೇವತೆಗಳೇ ಮೊದಲಾದವರ ಮತ್ತು ಸ್ವಸ್ಯಚ . ತನ್ನ, ಆತ್ಮಾ, ಏಕಾಕಾರ..ಜ್ಞಾನೈಕಾಕಾರವಾದುದು, ದೇವಾದಿಭೇದಾನಾಂ - ದೇವ ಮನುಷ್ಯ ಮೊದಲಾದ ಭೇದಗಳು, ಪ್ರಕೃತಿ ಪರಿಣಾಮ ವಿಶೇಷರೂಪತಯಾ - ಪ್ರಕೃತಿಯ ಅವಸ್ಥಾ ಭೇದಗಳಿಂದುಂಟಾಗುವದರಿಂದ, ಆತ್ಮಾಕಾರತ್ವಾಸಂಭವಾತ್-ಆತ್ಮಾವಿನ ಆಕಾರವಾದ ಜ್ಞಾನ ಸತ್ವವು ಸಂಭವಿಸಲಾರದಾದುದರಿಂದ,ಆತ್ಮರುಗಳೆಲ್ಲಾ ಜ್ಞಾನೈಕಾಕಾರತೆಯಿಂದ, ಸಮಾನವೆಂದು ಹೇಳವರ, ಆದರೆ ದೇವ ಮನುಷ್ಯಾದಿ ಭೇದಗಳು ವ್ಯಕ್ತವಾಗಿ ತೋರಿ ಬರುತ್ತವೆಯಲ್ಲಾ ಅದು ಹೇಗೆ ಎಂದರೆ, ದೇಹದ ಪರಿಣಾಮದಿಂದ ಬೇರೆ ಬೇರೆಯಾಗಿ ತೋರುತ್ತವೆಯೇ ವಿನಾ ಸ್ವರೂಪ ಪ್ರಯುಕ್ತವಲ್ಲವು ಎಂದು ಹೇಳಲ್ಪಟ್ಟಿತು. ವಿಷ್ಣು ಪುರಾಣದಲ್ಲಿ "ಪುಮಾನ್ ನ ದೇವೋ ನ ನರೋ ನ ಪಶುರ್ನಚಪಾದಪಃ। ಶರೀರಾಕೃತಿಭೇದಾಸ್ತು ಭೂಪೈತೇ ಕರ್ಮಯೋನಯಃ॥" (ವಿ. ಪು. ೨. ೧೩. ೯೮) ಎಂದು ಹೇಳಿರುತ್ತದೆ. ಈ ಆತ್ಮನು ಮಹಾ ಪರಿಶುದ್ಧ ಸ್ವರೂಪನೆಂದು, ಪುಮಾನ್ ಎಂದು ಹೇಳಲ್ಪಟ್ಟಿರುತ್ತಾನೆ. ಆತನು ದೇವನೂ ಅಲ್ಲವು, ಮನುಷ್ಯನೂ ಅಲ್ಲವು, ತಿರ್ಯಗ್ಜಂತುವೂ ಅಲ್ಲವು, ವೃಕ್ಷವೂ ಅಲ್ಲವು, ಶರೀರಾಕೃತಿ ಭೇದಗಳನ್ನು ಹೊಂದಿರುವದರಿಂದ ಬೇರೆ ಬೇರೆ ಯಲ್ಲವೋ, ಎಂದರೆ ಅಲ್ಲವು, ಏಕೆಂದರೆ, ಅವೆಲ್ಲಾ ಕರ್ಮ ಮೂಲಕ ಬಂದ ಶರೀರಗಳ ಮೂಲಕ ಉಂಟಾದ ಭೇದಗಳೆಂದು ಹೇಳಲ್ಪಟ್ಟಿರುತ್ತದೆ; ಪ್ರಕೃತಿ ವಿಯುಕ್ತಃ – ಈ ಆತ್ಮನು ದೇಹರೂಪ ಪ್ರಕೃತಿಯಿಂದ ಬಿಡಲ್ಪಟ್ಟವನಾದರೆ, ಸರ್ವತ್ರ ದೇವಾದಿ ದೇಹೇಷು - ದೇವ, ಅವಿಶಬ್ದದಿಂದ ಮನುಷ್ಯ, ತಿರ್ಯಕ್, ವೃಕ್ಷ ಶರೀರಗಳಲ್ಲಿ

ಭಾ. ತಯಾ ಸಮಾನಾಕಾರ ಇತಿ "ನಿರ್ದೋಷಂ ಹಿ ಸಮಂಬ್ರಹ್ಮ" ಇತ್ಯನನ್ತರ ಮೇವ ವಕ್ಷ್ಯತೇ. ಸ ಏವಂ ಭೂತಃ ಕರ್ಮಕುರ್ವನ್ನಪಿ ಅನಾತ್ಮನ್ಯಾತ್ಮಾಭಿಮಾನೇನ ಸ ಲಿಪ್ಯತೇ – ನ ಸಂಬಧ್ಯತೇ. ಅತೋಽಚಿರೇಣಾತ್ಮಾನಂ ಪ್ರಾಪ್ನೋತೀತ್ಯರ್ಥಃ ॥ ೭ ॥

ಹೀಗೆ ಎಲ್ಲಾ ಕಡೆಯಲ್ಲೂ, ಜ್ಞಾನೈಕಾಕಾರತಯಾ - ಜ್ಞಾನ ಸ್ವರೂಪನಾಗಿಯೂ ಜ್ಞಾನ ಗುಣಕನಾಗಿಯೂ, ಸಮಾನಾಕಾರ ಇತಿ - ಸಮಾನವಾದ ಸ್ವರೂಪಾದಿಗಳನ್ನುಳ್ಳವನೆಂದು "ನಿರ್ದೋಷಂ ಹಿ ಸಮಂ ಬ್ರಹ್ಮ" (ಗೀ. ೫. ೧೯) ಆತ್ಮವಸ್ತುವು, ನಿರ್ದೋಷಂ–ಪ್ರಕೃತಿ ಎಂದರೆ, ದೇಹ ಸಂಬಂಧಬಿಟ್ಟು ಹೋಗಿ ಸಮವಾದುದಾದರೆ ಜ್ಞಾನೈಕಾಕಾರತಯಾ ಸಮವಾಗಿ ತೋರಿಬರುತ್ತದೆಂದು, ಅನನ್ತರ ಮೇವವಕ್ಷ್ಯತೇ - ಒಡನೆ ಮುಂದೆಯೇ, ಹೇಳಲ್ಪಡುತ್ತದೆ. ಇಲ್ಲಿ ಸರ್ವಭೂತಾತ್ಮಭೂತಾತ್ಮಾ ಎಂಬುದರಿಂದ ಹೇಳಲ್ಪಟ್ಟ ಐಕ್ಯವು ಎಂಥಾದ್ದೆಂದು ವಿಚಾರಿಸತಕ್ಕದ್ದು ಆವಶ್ಯಕವು, ಸ್ವರೂಪೈಕ್ಯವು ಪ್ರತ್ಯಕ್ಷಾನುಮಾನ ಆಗಮ ಪ್ರಮಾಣಗಳಿಗೆಲ್ಲಾ ವಿರುದ್ಧವೆಂದು ಶ್ರೀ ಭಾಷ್ಯದಲ್ಲಿ ವಿಪುಳವಾಗಿ ಉಪಪಾದಿಸಲ್ಪಟ್ಟಿರುತ್ತದೆ. ಇದೇ ಗ್ರಂಥೋಪದೇಶದ ಆದಿ ಶ್ಲೋಕವಾದ, ನತ್ವೇವಾಹಂ ಎಂಬುವ ಸ್ಥಳದಲ್ಲಿ ದೇಹಾತ್ಮ ಭ್ರಮಯುಕ್ತನಾಗಿ ಶರಣಾಗತನಾಗಿರುವ ಅರ್ಜುನನಿಗೆ ಆತ್ಮ ಯಾಥಾತ್ಮ್ಯೋಪದೇಶಸಮಯದಲ್ಲೂ, ಅಹಂ ತ್ವಂ ಇಮೇ ಎಂಬ ಪ್ರಯೋಗವಿರುವದರಿಂದ, "ನಿತ್ಯೋ ನಿತ್ಯಾನಾಂ" ಎಂಬ ಶ್ರುತ್ಯನುಸಾರವಾಗಿ ಚೇತನರ ಬಹುತ್ವವನ್ನು ಒಪ್ಪತಕ್ಕದ್ದಾಗಿರುತ್ತದೆ. ಆದುದರಿಂದ ಇಲ್ಲಿ ಐಕ್ಯ ಹೇಗೆಂದರೆ, ಅನೇಕರ ಮನೆಯಲ್ಲಿರುವ ಭತ್ತವೂ ಇದೇ ಎಂದರೆ, ಹೇಗೆ ಒಂದೇಜಾತಿಯ ಅಕ್ಕಿಯನ್ನು, ಕೋಯಿಮತ್ತೂರು ಸಣ್ಣವೆಂದು ಹೇಳುತ್ತೇವೋ ಹಾಗೆ, ಎಂದು ಭಾವಿಸತಕ್ಕದ್ದಾಗಿರುತ್ತದೆ. ಹಾಗೆಯೇ ಸರ್ವ ದೇಹಗಳಲ್ಲೂ ಇರುವ ಆತ್ಮನ ಸ್ವರೂಪವು ಜ್ಞಾನೈಕಾಕಾರತೆಯಿಂದ ಒಂದೇ ಎಂಬ ಭಾವವು. ಅಕ್ಕಿ ಕಾಳುಗಳೆಲ್ಲಾ ಹೇಗೆ ಭಿನ್ನವೋ ಹಾಗೆಯೇ ಆತ್ಮರೆಲ್ಲಾ ಭಿನ್ನರು. ಆದರೆ ಸ್ವರೂಪವೆಲ್ಲಾ ಒಂದೇಯಾದುದರಿಂದ ಆತ್ಮರೆಲ್ಲಾ ಒಂದೇ ಎಂಬ ವ್ಯವಹಾರವು ಕೂಡುತ್ತದೆ. ಆದರೆ ಸರ್ವಭೂತಾತ್ಮಭೂತಾತ್ಮಾ ಎಂಬುದರಿಂದ ಎಲ್ಲಾ ಭೂತಗಳಿಗೂ ಅಂತರಾತ್ಮಾವಾದ ಪರಮಾತ್ಮನೆಂದು ಅರ್ಥ ಮಾಡುವದು ಅಪ್ರಸ್ತುತವು, ಪ್ರಕರಣವು ಜೀವಾತ್ಮವಿಷಯವಾದುದರಿಂದ; ಕೇವಲ ಕುರ್ವನ್ನಪಿ ಎಂದು ಇರುವದಕ್ಕೆ ಲೋಕಸಙ್ಗ್ರಹಕ್ಕಾಗಿ ಮಾತ್ರ ಕುರ್ವನ್ನಪಿ ಎಂದು ಹೇಗೆ ಅರ್ಥ ಮಾಡಬಹುದೋ ತಿಳಿಯದು. ಆದರೆ ಸಮಾನರೆಂಬ ವ್ಯವಹಾರವು ಪ್ರತ್ಯಕ್ಷ ವಿರುದ್ಧವಲ್ಲವೋ ? ಏಕೆಂದರೆ ದೇವ ಮನುಷ್ಯನೆಂದೂ, ಬ್ರಾಹ್ಮಣ ಕ್ಷತ್ರಿಯನೆಂದೂ, ಬ್ರಹ್ಮಚಾರಿ ಗೃಹಸ್ಥನೆಂದೂ, ಪಂಡಿತ ಅಪಂಡಿತನೆಂದೂ, ಧನಿಕ ದರಿದ್ರನೆಂದೂ, ಮುದುಕ ಬಾಲನೆಂದೂ, ಹೀಗೆಲ್ಲಾ ವ್ಯತ್ಯಾಸವೇ ಪ್ರತ್ಯಕ್ಷಸಿದ್ಧವಾಗಿರುವಾಗ ಜ್ಞಾನೈಕಾಕಾರತೆಯಿಂದ ಐಕ್ಯ ತಾನೆ ಹೇಗೆ ಕೂಡುತ್ತದೆ ಎಂದು ಆಕ್ಷೇಪಿಸಬಹುದಾಗಿ ಅದಕ್ಕಾಗಿ ದೇವಾದಿ ಭೇದಾನಾಂ ಎಂದಾರಂಭಿಸಿ ಅಸಂಭವಾತ್ ಎನ್ನುವವರೆಗೂ ಸಮಾಧಾನವನ್ನು ಹೇಳಿರುತ್ತಾರೆ. ದೇವಾದಿ ಭೇದರೂಪ ಶರೀರಗಳ ಮೂಲಕವಾಗಿಯೂ ಅವುಗಳ ಪರಿಣಾಮಮೂಲಕವಾಗಿಯೂ. ಅಂತಹ ವ್ಯತ್ಯಾಸಗಳೇ ವಿನಾ, ಅವು ಆತ್ಮಮೂಲಕವಾದ ವ್ಯತ್ಯಾಸಗಳಾಗುವದಿಲ್ಲವು. ಒಂದೇ ವಿಧಚೈತನ್ಯವಿರುವ ಗೊಂಬೆಗಳಿಗೆ ವಿಧವಿಧವಾಗಿ ಬಟ್ಟೆ ಅಲಂಕಾರಗಳನ್ನು ತೊಡಿಸುವದರಿಂದ ಹೇಗೆ ಬೇರೆಬೇರೆಯಾಗಿ ತೋರುತ್ತವೋ ಹಾಗೆ ಎಂಬ ಭಾವವು. ಈ ದೇವಾದಿ ಭೇದಗಳೂ ಕೂಡ ಅಸತ್ಯವೆಂಬ ಭಾವವಲ್ಲವು, ಅವುಗಳೂ ಸತ್ಯವಾದುವೇ. ಆದರೆ ಅವು ಆತ್ಮರುಗಳ ಸ್ವರೂಪ ಮೂಲಕವಾದ ಭೇದಗಳಲ್ಲವು, ಕರ್ಮ ಮೂಲಕವಾಗಿ ಧರಿಸಿಕೊಳ್ಳಬೇಕಾಗಿ ಬಂದ

ಪ್ರಕೃತಿರೂಪ ಶರೀರ ಮೂಲಕವಾದ ಭೇದಗಳೆಂದು ಭಾವಿಸತಕ್ಕದ್ದು. ಹೀಗೆ ಆತ್ಮರುಗಳೆಲ್ಲಾ ಸ್ವರೂಪತಃ ಒಂದೇ ಜಾತಿ ಎಂಬುದು ಮುಂದೆ "ನಿರ್ದೋಷಂ ಹಿ ಸಮಂ ಬ್ರಹ್ಮ" ಎಂಬ ಶ್ಲೋಕದಲ್ಲೂ, ಅದರ ಹಿಂದಿನ ಶ್ಲೋಕವಾದ "ವಿದ್ಯಾ ವಿನಯಸಂಪನ್ನೇ" (ಗೀ. ೫. ೧೮.) ಎಂಬುದರಲ್ಲೂ ಚನ್ನಾಗಿ ಉಪಪಾದಿತವು. ಅಲ್ಲೆಲ್ಲಾ ಸಾಮ್ಯ ಹೇಳಲ್ಪಟ್ಟಿತೇ ವಿನಾ ಸ್ವರೂಪೈಕ್ಯವು ಹೇಳಲ್ಪಡಲಿಲ್ಲವು. ಈ ಸಾಮ್ಯವು ಹಿಂದೆ (ಗೀ. ೩. ೬೫) ರಲ್ಲೂ ಉಪಪಾದಿತವು.

ವಿಸಂಭೂತಃ - ಈ ಮೇಲೆ ಹೇಳಿದ ವಿಶುದ್ಧಾತ್ಮಾದಿ ಗುಣಗಳುಳ್ಳ, ಸಃ - ಅಂತಹ ಕರ್ಮಯೋಗಿಯು, ಕುರ್ವನ್ನಪಿ - ಆ ಯೋಗಕ್ಕೆ ಉಚಿತವಾದ ಯಾವ ಕರ್ಮಗಳನ್ನು ಮಾಡಿದರೂ ಕೂಡ, ಅನಾತ್ಮನಿ - ದೇಹೇಂದ್ರಿಯಾದಿಗಳಲ್ಲಿ, ಆತ್ಮಾಭಿಮಾನೇನ-ಆತ್ಮಾ ಎಂಬ ಅಹಂಕಾರದಿಂದ, ನ ಲಿಪ್ಯತೇ ಎಂದರೆ, ನ ಸಂಬಧ್ಯತೇ-ಲೇಪಿಸಲ್ಪಡುವದಿಲ್ಲವು, ಸದಾ ಸನವಾಗಿ ಸಂಬಂಧವಿರುವದಿಲ್ಲವು. ಪ್ರಸ್ತುತಾರ್ಥವನ್ನು ನಿಗಮನಮಾಡಿ ಹೇಳುತ್ತಾರೆ. ಅತಃ - ಆ ಕಾರಣದಿಂದ, ಅಚಿರೇಣ-ಶೀಘ್ರವಾಗಿ, ಆತ್ಮಾನಂ ಪ್ರಾಪ್ನೋತೀತ್ಯರ್ಥಃ-ಆತ್ಮ ಸಾಕ್ಷಾತ್ಕಾರವನ್ನು ಹೊಂದುವನೆಂಬುದು ತಾತ್ಪರ್ಯವು. ಇದೇಕೆ ಲೇಪಿಸುವದಿಲ್ಲವು ಎಂದರೆ, ಕರ್ಮಯೋಗಿಯು, ತನ್ನ ಕರ್ಮಗಳಿಗೆ ಬೇಕಾದ ಸಲಕರಣೆಗಳೂ ತಾನೂ ಸಹ ಬ್ರಹ್ಮಾತ್ಮಕವೆಂದು ತಿಳಿದು, ಪರಮ ಪುರುಷನ ಪ್ರೀತಿಗೋಸ್ಕರವಾಗಿ ಫಲಕರ್ತೃತ್ವ ಮಮತೆಗಳನ್ನು ತ್ಯಾಗಮಾಡಿ, ಅವುಗಳನ್ನೆಲ್ಲಾ ಪರಮ ಪುರುಷನಲ್ಲಿ ಸಮರ್ಪಿಸುವದರಿಂದ, ಎಂದಿಗೂ ಈತನನ್ನು ಲೇಪಿಸುವದಿಲ್ಲವು. ಹೀಗೆ ಕರ್ಮಾನುಷ್ಠಾನಮಾಡಿದವರಿಗಾದರೋ, ಕರ್ಮವು ಲಿಪ್ಯತೇ, ಎಂದರೆ ಬಂಧಕವೇ. ಆದರೆ ಶ್ರುತಿಯು ನ ಕರ್ಮ ಲಿಪ್ಯತೇ ನರೇ ಎಂದು (ಈಶಾ ೨.) ಹೇಳುತ್ತದೆಯಲ್ಲಾ ಎಂದರೆ, ನರನೆಂದರೆ, ಐಹಿಕದಲ್ಲಿ ನ ರಮತ ಇತಿ ನರಃ ಎಂಬ ವ್ಯುತ್ಪತ್ತಿಯು ಮೂಲಕ ಮೋಕ್ಷಾರ್ಥಿಯಾದ ಕರ್ಮಯೋಗ ನಿಷ್ಠನೇ ಇಲ್ಲಿ ಹೇಳಲ್ಪಟ್ಟನೆಂದು ತಿಳಿಯತಕ್ಕದ್ದು. ಇಲ್ಲಿ ಕುರ್ವನ್ನಪಿ ನಲಿಪ್ಯತೇ ಎಂಬುದರಿಂದ ದುಷ್ಕರ್ಮವನ್ನು ಮಾಡಿದರೂ ಪಾಪವು ಸಂಘಟಿಸುವದಿಲ್ಲವೆಂಬರ್ಥವಲ್ಲವು. ದೇಹವೇ ಆತ್ಮಾ, ಎಂಬ ವಸ್ತು ತಾನೇ ಸ್ವತಂತ್ರನಾದ ಪರಮಾತ್ಮಾ ಎಂಬಿವೇ ಮೊದಲಾದ ಭ್ರಮರೂಪ ಪಾಪಗಳು ಮಹಾಪಾತಕಕ್ಕೆ ಸಮಾನವಾಗಿ ಬಂಧಕಗಳು. ಇಂತಹ ಬಂಧಕ ಭ್ರಮಗಳು ಅಂತಹ ಯೋಗನಿಷ್ಠನಿಗೆ ಎಂದರೆ, ವಿಶುದ್ಧಾತ್ಮನಾಗಿ, ವಿಜಿತಾತ್ಮನಾಗಿ, ಜಿತೇಂದ್ರಿಯನಾಗಿ, ಸರ್ವಭೂತಾತ್ಮಭೂತಾತ್ಮನಾಗಿ ಇರುವ ಯೋಗನಿಷ್ಠನಿಗೆ ಉಂಟಾಗುವದಿಲ್ಲವೆಂಬುದು ತಾತ್ಪರ್ಯವು. ಮುಂದೆ ಮೂರು ಶ್ಲೋಕಗಳಿಂದಲೂ ಈ ಅಭಿಪ್ರಾಯವೇ "ನೈವಕಿಂಚಿತ್ಕರೋಮಿ", "ಲಿಪ್ಯತೇನ ಸಪಾಪೇನ" ಇತ್ಯಾದಿ ಪ್ರಯೋಗಗಳಿಂದ ಉಪಪಾದಿಸಲ್ಪಟ್ಟಿರುತ್ತದೆ. ನ ಲಿಪ್ಯತೇ ಎಂಬುದರಿಂದ ಅಂತಹ ಭ್ರಮಗಳ ಸ್ಪೃಕ್ಕೇ ಇಲ್ಲವೆಂದು ತಿಳಿಸುವದಕ್ಕಾಗಿ ನ ಸಂಬಧ್ಯತೇ ಎಂದು ವ್ಯಾಖ್ಯಾನಮಾಡಿರುತ್ತಾರೆ. ಈ ಶ್ಲೋಕವು ಏತಕ್ಕಾಗಿ ಉಪದೇಶಿಸಲ್ಪಟ್ಟಿತೆಂಬುದನ್ನು ಸೂಚಿಸುವದಕ್ಕಾಗಿ ಅಚಿರೇಣಾತ್ಮಾನಂ ಪ್ರಾಪ್ನೋತಿ ಎಂಬ ತಾತ್ಪರ್ಯವನ್ನೂ ಪ್ರದರ್ಶಿಸಿರುತ್ತಾರೆ. ಜ್ಞಾನಯೋಗದ ಆವಶ್ಯಕತೆ ಇಲ್ಲದೇನೆ ಆತ್ಮಾವಲೋಕನವು ಶೀಘ್ರವಲ್ಲೇ ಸಿದ್ಧಿಸುತ್ತದೆ ಎಂಬ ಭಾವವು. ||೭||

**ಭಾಷ್ಯಾವತಾರಿಕೆಯ ಅರ್ಥವು:—**ಯಚ್ಛ್ರೇಯ ಏತಯೋರೇಕಂ, ಜ್ಞಾನಯೋಗ ಕರ್ಮಯೋಗಗಳಲ್ಲಿ ಯಾವುದು ತನಗೆ ಅನುಷ್ಠೇಯವೆಂದು ಕೇಳಿದ ಅರ್ಜುನ ಪರಿಪ್ರಶ್ನೆಗೆ ಸಾಕ್ಷಾತ್ತಾಗಿ, ಕರ್ಮಯೋಗೋವಿಶಿಷ್ಯತೇ ಎಂದು ಪ್ರತಿಜ್ಞಾರೂಪ ವಾಕ್ಯಮೂಲಕ ಉತ್ತರವನ್ನು ಹೇಳಿ ಅದನ್ನು ಇದುವರೆಗೂ ಉಪಪಾದಿಸಿ ಹೇಳಿದರು. ಹಿಂದೆ ಹೇಳುವದಕ್ಕೂ ಮುಂದೆ ಹೇಳುವದಕ್ಕೂ ಆವಶ್ಯಕವಾಗಿ ಸಙ್ಗತಿ ಬೇಕಾದುದರಿಂದ ಆ ಕರ್ಮಾನುಷ್ಠಾನಕಾಲದಲ್ಲಿರಬೇಕಾದ

ಭಾ. ಅ. ಯತ ಸೌಕರ್ಯಾಚ್ಛೈಘ್ರ್ಯಾಚ್ಚ ಕರ್ಮಯೋಗ ಏವ ಶ್ರೇಯಾನ್, ಅತಸ್ತದಪೇಕ್ಷಿತಂ ಶೃಣು—

ಮೂ. ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್॥
ಪ್ರಲಪನ್ ವಿಸೃಜನ್ ಗೃಹ್ಣನ್ ಉನ್ಮಿಷನ್ ನಿಮಿಷನ್ನಪಿ ।
ಇಂದ್ರಿಯಾಣೀನ್ದ್ರಿಯಾರ್ಥೇಷು ವರ್ತನ್ತ ಇತಿಧಾರಯನ್ ॥ ೯.

ಅನುಸಂಧಾನಪ್ರಕಾರವನ್ನು ಹೇಳುತ್ತಾರೆ.—ಯತಃ - ಯಾವಕಾರಣದಿಂದ, ಸೌಕರ್ಯಾತ್-ಸೌಕರ್ಯದಿಂದಲೂ, ಶೈಘ್ರ್ಯಾಚ್ಚ - ಶೀಘ್ರ ಫಲದಾಯಕವಾದುದರಿಂದಲೂ, ಕರ್ಮಯೋಗವೇ, ಶ್ರೇಯಾನ್ - ಜ್ಞಾನಯೋಗಕ್ಕಿಂತಲೂ ಶ್ರೇಷ್ಠವೋ ಅತಃ - ಆ ಕಾರಣದಿಂದ, ತದಪೇಕ್ಷಿತಂ - ಆ ಕರ್ಮಯೋಗಕ್ಕೆ ಬೇಕಾದುದನ್ನು, ಶೃಣು - ಹೇಳುವೆನು ಕೇಳು ಎಂದು ಶ್ರೀಕೃಷ್ಣ ಭಗವಾನರವರು ಉಪದೇಶಿಸುತ್ತಾರೆ.

ಮೂಲಕ್ಕೆ ಅರ್ಥವು :—ಹಿಂದೆ ಕುರ್ವನ್ನಪಿ ನಲಿಪ್ಯತೇ ಎಂದು ಹೇಳಲ್ಪಟ್ಟಿತು. ಯೋಗನಿಷ್ಠನು ಯೋಗಕ್ಕೆ ಆವಶ್ಯಕವಾದ ಕರ್ಮಗಳನ್ನೂ ಮಾಡಬೇಕಾಗುತ್ತದೆ. ದೇಹೇಂದ್ರಿಯಾದಿಗಳಿಂದ ಯುಕ್ತನಾಗಿರುವದರಿಂದ ದೋಷಸಹಿತಗಳಾದ ಧನಾರ್ಜನಾದಿ ಅನೇಕ ಕರ್ಮಗಳನ್ನೂ ಶರೀರ ಯಾತ್ರೆಗೆ ಬೇಕಾದ ಕರ್ಮಗಳನ್ನೂ ಮಾಡಬೇಕಾಗುತ್ತದೆ. ಕುರ್ವನ್ನಪಿ ನ ಲಿಪ್ಯತೆ ಎಂದು ಹೇಳಲ್ಪಟ್ಟಿತಲ್ಲಾ ಅದು ಹೇಗೆ ? ಕರ್ಮಮಾಡುವದೂ ಕರ್ಮ ಲೇಪವಿಲ್ಲದಿರುವದೂ ಹೇಗೆ ಸಾಧ್ಯವು ? ಕೆಸರನ್ನು ತುಳಿಯಲೇಬೇಕು; ಹಾಗೆ ತುಳಿದರೂ ಕಾಲು ಕೆಸರಾಗಲಿಲ್ಲವೆಂಬುದು ಹೇಗೆ? ಇಂತಹ ಶಙ್ಕೆಗೆ ಸಮಾಧಾನವನ್ನು ಹೇಳುತ್ತಾರೆ. ಕರ್ಮಯೋಗಕ್ಕೆ ಇದು ಅಪೇಕ್ಷಿತವಾದ ವಿಷಯವಾದುದರಿಂದ ಅದನ್ನೇ ವ್ಯಕ್ತಪಡಿಸುತ್ತಾರೆ. ಹೇಗೆ ಈತನಿಗೆ ಭಾವನೆಯಿದ್ದುದಾದರೆ, ಕರ್ಮವು ಲೇಪಿಸುದದಿಲ್ಲವೆಂಬುದನ್ನು ಈ ಸಂದರ್ಭದಲ್ಲಿ ಆವಶ್ಯಕವೆಂದು ತಿಳಿದು ಉಪದೇಶಿಸುತ್ತಾರೆ. ತತ್ತ್ವವಿತ್ - ಹಿಂದಿನ ಶ್ಲೋಕದಲ್ಲಿ ಸರ್ವಭೂತಾತ್ಮಭೂತಾತ್ಮಾ ಎಂಬಲ್ಲಿ ಉಪಪಾದಿಸಿದ ಹಾಗೆ ಆತ್ಮಯಾಥಾತ್ಮ್ಯಸ್ವರೂಪವನ್ನು ಚನ್ನಾಗಿ ತಿಳಿದ, ಯುಕ್ತಃ – ಕರ್ಮಯೋಗನಿಷ್ಠನು, ಪಶ್ಯನ್ನಪಿ, ಅಪಿ ಎಂಬುದು ನಿಮಿಷನ್ನಪಿ ಎಂದು ಕೊನೆಯವರೆಗೂ, ಇವೆಲ್ಲಕ್ಕೂ ಸೇರಿಸಿ ಅನ್ವಯಿಸತಕ್ಕದ್ದು, ಕಣ್ಣಿನಿಂದ ನೋಡಿದರೂ, ಶೃಣ್ವನ್ - ಕಿವಿಯಿಂದ ಕೇಳಿದರೂ, ಸ್ಪೃಶನ್ - ತ್ವಗಿಂದ್ರಿಯದಿಂದ ಮುಟ್ಟಿದರೂ, ಜಿಘ್ರನ್ - ಘ್ರಾಣೇಂದ್ರಿಯದಿಂದ ಮೂಸಿನೋಡಿದರೂ, ಅಶ್ನನ್-ರಸನೇಂದ್ರಿಯದ ಮೂಲಕ ರುಚಿನೋಡಿ ತಿಂದರೂ, ಹೀಗೆ ಪಂಚ ಜ್ಞಾನೇಂದ್ರಿಯಗಳ ವ್ಯಾಪಾರಗಳು ಹೇಳಲ್ಪಟ್ಟವು, ಗಚ್ಛನ್ - ಪಾದಗಳಿಂದ ನಡೆದರೂ, ಸ್ವಪನ್ - ಪ್ರಾಣವ್ಯಾಪಾರವಾದ ನಿದ್ರೆಯನ್ನು ಮಾಡಿದರೂ, ಶ್ವಸನ್ - ಪ್ರಾಣವ್ಯಾಪಾರವಾದ ಶ್ವಾಸವನ್ನು ಬಿಟ್ಟರೂ, ಪ್ರಲಪನ್-ವಾಗಿಂದ್ರಿಯದಿಂದ ಕೂಗಿ ಹೇಳಿದರೂ, ವಿಸೃಜನ್-ಪಾಯೂಪಸ್ಥಗಳ ಮೂಲಕ ವಿಸರ್ಜನೆಮಾಡಿದರೂ, ಗೃಹ್ಣನ್ - ಕರ್ಮೇಂದ್ರಿಯವಾದ ಕೈಯಿಂದ ಹಿಡುಕೊಂಡರೂ, ಉನ್ಮಿಷನ್ನಿಮಿಷನ್ನಪಿ - ಪ್ರಾಣವ್ಯಾಪಾರವಾದ ಕಣ್ಣು ತೆರದು ಮುಚ್ಚುವದು ಇವುಗಳನ್ನು ನಡೆಸಿದರೂ, (ಇವುಗಳಿಂದ ಐದು ಕರ್ಮೇಂದ್ರಿಯಗಳ ವ್ಯಾಪಾರಗಳೂ ಮತ್ತು ಪ್ರಾಣ ವ್ಯಾಪಾರಗಳೂ ಹೇಳಲ್ಪಟ್ಟವು), ಇಂದ್ರಿಯಾಣಿ - ಈ ಮೇಲಿನ ಇಂದ್ರಿಯಗಳೆಲ್ಲಾ, ಪ್ರಾಣವ್ಯಾಪಾರಗಳೂ ಇದರಲ್ಲೇ ಸೇರಿದವು, ಇಂದ್ರಿಯಾರ್ಥೇಷು - ಅವವುಗಳಿಗೆ

ಭಾ. ಏವ ಮಾತ್ಮತತ್ತ್ವವಿತ್ ಶ್ರೋತ್ರಾದೀನಿ ಜ್ಞಾನೇಂದ್ರಿಯಾಣಿ, ವಾಗಾದೀನಿ ಚ ಕರ್ಮೇಂದ್ರಿಯಾಣಿ, ಪ್ರಾಣಾಶ್ಚ ಸ್ವವಿಷಯೇಷು ವರ್ತನ್ತೇ ಇತಿ ಧಾರಯನ್ - ಅನುಸನ್ದಧಾನೋ ನಾಹಂ ಕಿಂಚಿತ್ಕರೋಮೀತಿ ಮನ್ಯೇತ ; ಜ್ಞಾನೈಕ ಸ್ವಭಾವಸ್ಯ ಮಮ ಕರ್ಮಮೂಲೇನ್ದ್ರಿಯಪ್ರಾಣಸಂಬಂಧಕೃತ ಮೀದೃಶಂ ಕರ್ತೃತ್ವಂ ನ ಸ್ವರೂಪ ಪ್ರಯುಕ್ತ ಮಿತಿ ಮನ್ಯೇತೇತ್ಯರ್ಥಃ ॥ ೯ ॥

ಸಂಬಂಧಿಸಿದ ವಿಷಯಗಳಲ್ಲಿ, ವರ್ತನ್ತೇ-ಪ್ರವರ್ತಿಸುತ್ತವೆ, ಇತಿ ಧಾರಯನ್ - ಹೀಗೆ ಮನಸ್ಸು ಬುದ್ಧಿವಿವೇಕಗಳ ಮೂಲಕ ಅನುಸಂಧಾನಮಾಡುವವನಾಗಿ, ನೈವಕಿಂಚಿತ್ಕರೋಮೀತಿ - ನಾನಾಗಿಯೇ ಎಂದರೆ, ನಾನೇ ಸ್ವರೂಪತಃ ಏನನ್ನೂ ಮಾಡುವದಿಲ್ಲವೆಂಬದಾಗಿ, ವಸ್ತುತಃ ದೇಹೇಂದ್ರಿಯಾದಿಗಳಿಲ್ಲದೆ ತಾನೊಬ್ಬನೇ ಅಣುರೂಪವಲ್ಲಿರುವವನು ಏನನ್ನೂ ಮಾಡಲು ಅಸಮರ್ಥನೆಂಬ ಭಾವವು, ಮನ್ಯೇತ - ತಿಳಿಯತಕ್ಕದ್ದು. ಈ ವ್ಯಾಪಾರಗಳೆಲ್ಲಾ ಆತ್ಮಸ್ವರೂಪಕ್ಕೆ ಸೇರಿದವಲ್ಲವು ಎಂಬ,ತನಗೆ ಪ್ರಾರಬ್ಧ ಕರ್ಮಗಳ ಮೂಲಕವಾಗಿ ಪ್ರಾಪ್ತವಾದ ಶರೀರೇನ್ದ್ರಿಯ ಮೂಲಕವೆಂಬ, ತನ್ನ ಸ್ವರೂಪವು ಜ್ಞಾನಾಕಾರವಾಗಿ ಮಹಾ ಪರಿಶುದ್ಧವಾದುದು, ಎಂಬ, ಆತ್ಮಯಾಥಾತ್ಮ್ಯಾನುಸಂಧಾನವಿರಬೇಕೆಂಬ ತಾತ್ಪರ್ಯವು ; ಕರ್ಮಯೋಗಿಗೆ ಇದೀಗ ಅಪೇಕ್ಷಿತವಾದುದು.

ಭಾಷ್ಯಾರ್ಥವು :— ಏವಂ - ಈ ಮೇಲೆ ಉಪಪಾದಿಸಿದ ಪ್ರಕಾರ, ಆತ್ಮತತ್ತ್ವವಿತ್ - ಮೂಲದ, ತತ್ತ್ವವಿತ್ ಶಬ್ದದ ವ್ಯಾಖ್ಯಾನವು. ಜೀವಾತ್ಮನ ಯಥಾರ್ಥವಾದ ಸ್ವರೂಪವನ್ನು ತಿಳಿದವನು, ಶ್ರೋತ್ರಮೊದಲಾದ ಮನಸ್ಸೂ ಸೇರಿ ಆರು ಜ್ಞಾನೇಂದ್ರಿಯಗಳೂ, ವಾಗಾದೀನಿ ಚ - ವಾಕ್ಕು ಮೊದಲಾದ, ಐದು ಕರ್ಮೇಂದ್ರಿಯಗಳೂ ಪ್ರಾಣಗಳೂ ಸಹ, ಸ್ವವಿಷಯೇಷು ವರ್ತನ್ತೇ - ತಮ್ಮ ತಮ್ಮ ವಿಷಯಗಳಲ್ಲಿ ಪ್ರವರ್ತಿಸುತ್ತವೆ, ಇತಿ - ಎಂಬದಾಗಿ, ಧಾರಯನ್ ಎಂದರೆ ಅನುಸಂದಧಾನಃ-ಅನುಸಂಧಾನಮಾಡುವವನಾಗಿ, ನಾಹಂಕಿಂಚಿತ್ಕರೋಮೀತಿ – ನಾನು ಏನೊಂದನ್ನೂ ಸ್ವಲ್ಪವೂ ಮಾಡುವದಿಲ್ಲವೆಂದು, ಮನ್ಯೇತ - ತಿಳಿಯತಕ್ಕದ್ದು, ತಾನೇ ತನಗೆ ಪ್ರಾಪ್ತವಾಗಿರುವ ಶರೀರೇಂದ್ರಿಯ ಪ್ರಾಣಗಳ ಮೂಲಕ ನಡೆಸುವ ಕರ್ಮಗಳು, ಇಂದ್ರಿಯಗಳು ಮಾಡಿದವು ಎಂಬ ಅನುಸಂಧಾನವು ಹೇಗೆ ? ಎಂದರೆ, ಅದನ್ನು ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ. ಜ್ಞಾನೈಕ ಸ್ವಭಾವಸ್ಯ– ಜ್ಞಾನವೇ ಮುಖ್ಯಸ್ವರೂಪವಾಗಿವುಳ್ಳ, ಮಮ-ನನಗೆ, ಕರ್ಮಮೂಲೇಂದ್ರಿಯ ಪ್ರಾಣಸಂಬಂಧ ಕೃತಮ್ - ತಾನು ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮವಾಗಿ ಈಗ ಪ್ರಾರಬ್ಧ ಕರ್ಮವೆಂಬೆನಿಸಿರುವದರ ಮೂಲಕ ಪ್ರಾಪ್ತವಾದ ಶರೀರೇಂದ್ರಿಯಗಳ ಮತ್ತು ಪ್ರಾಣಗಳ ಸಂಬಂಧದಿಂದುಂಟಾದ, ಈದೃಶಂ - ಈ ಪುಣ್ಯಪಾಪರೂಪ ಕರ್ಮಗಳನ್ನು ಮಾಡುವ, ಕರ್ತೃತ್ವವು, ನಸ್ವರೂಪ ಪ್ರಯುಕ್ತಮಿತಿ - ಸ್ವರೂಪ ಪ್ರಯುಕ್ತವಾಗಿ ಉಂಟಾದುದಲ್ಲವೆಂದು, ಮನ್ಯೇತೇ ತ್ಯರ್ಥಃ - ತಿಳಿಯತಕ್ಕದ್ದೆಂಬ ತಾತ್ಪರ್ಯವು; ನಾನು ಮಾಡುವದೆಲ್ಲಾ ನನಗೆ ಕರ್ಮಮೂಲವಾಗಿ ಬಂದ ದೇಹೇಂದ್ರಿಯಾದಿಗಳ ಕೆಲಸವು,ನಾನು ಸ್ವರೂಪತಃ ಮಾಡತಕ್ಕದ್ದಲ್ಲವು. ನನ್ನ ಸ್ವರೂಪವಾದರೋ, ಜ್ಞಾನರೂಪವಾದುದಾಗಿ ತುಂಬಾ ಪರಿಶುದ್ಧವಾದುದು ಎಂಬ ಭಾವವು. ಇವರ ತಾತ್ಪರ್ಯವೇನೆಂದರೆ.—ಒಂದು ಕಾರ್ಯವನ್ನು ಆತ್ಮನು ತಾನೇ ಮಾಡಲಾರನು. ದೇಹೇಂದ್ರಿಯ ಪ್ರಾಣಗಳ ಸಹಾಯದಿಂದ ತನ್ನ ಸಙ್ಕಲ್ಪ ಇಚ್ಛಾ ಮೊದಲಾದವುಗಳ ಮೂಲಕ ಮಾಡುತ್ತಾನೆ. ಮುಂದೆ ೧೮ನೆಯ ಅಧ್ಯಾಯದ ೧೪ನೆಯ ಶ್ಲೋಕವಾದ "ಅಧಿಷ್ಠಾನಂ ತಥಾ ಕರ್ತಾ" ಎಂಬ ಶ್ಲೋಕದಲ್ಲಿ ಐದು ಸೇರಿದರೇನೇ ಒಂದು ಕೆಲಸವಾಗುತ್ತದೆಂದು ಉಪಪಾದಿಸಲ್ಪಡುತ್ತದೆ, ಈ ಆತ್ಮನು ದೇಹೇಂದ್ರಿಯಗಳ ಮೂಲಕವೇ

ಕೆಲಸಮಾಡುತ್ತಾನೆಂದಾದನಂತರ, ನೈವಕಿಂಚಿತ್ಕರೋಮಿ ಎಂಬ ಅನುಸಂಧಾನ ತಾನೆ ಹೇಗೆ? "ಕರ್ತ್ತಾ ಶಾಸ್ತ್ರಾರ್ಥವತ್ವಾತ್" ಎಂಬ ಬ್ರಹ್ಮಸೂತ್ರದಲ್ಲೂ ಜೀವಾತ್ಮನಿಗೆ ಕರ್ತೃತ್ವವು ಹೇಳಲ್ಪಟ್ಟಿರುತ್ತದೆ. ದೇಹೇಂದ್ರಿಯಗಳು ತಾವೇ ಕೆಲಸಮಾಡಲು ಸಾಮರ್ಥ್ಯವಿಲ್ಲವು. ಹಾಗೆಯೇ ದೇಹವಿಯುಕ್ತ ಆತ್ಮನೂ ಕೆಲಸಮಾಡಲಾರನು. ಯಥಾರ್ಥವಾಗಿಯೂ ದೇಹವಿಶಿಷ್ಟ ಆತ್ಮನೇ ಕೆಲಸಮಾಡುವವನು. ಆದರೂ ಅನುಸಂಧಾನಮಾತ್ರ ಹೇಗಿರಬೇಕೆಂದರೆ, ಪ್ರಾರಬ್ಧ ಕರ್ಮಾನುಗುಣವಾಗಿ ಬಂದ ದೇಹ ಮೂಲಕವಾಗಿ ಈ ಕೆಲಸಗಳು ಸರ್ವೇಶ್ವರನ ಸಙ್ಕಲ್ಪಾನುಸಾರ ನಡೆದು ಹೋಗುತ್ತವೆ. ಆಮುಷ್ಮಿಂಪ ಅವುಗಳಲ್ಲಿ ತನಗೆ ಸ್ವಾತಂತ್ರ್ಯವಿಲ್ಲವೆಂಬನುಸಂಧಾನವಿರಬೇಕೆಂಬ ತಾತ್ಪರ್ಯವು. ಕೆಲವರು ತಾನು ಮಾಡುವದೆಲ್ಲ ಮಿಥ್ಯಾ ಎಂಬನುಸಂಧಾನವಿರಬೇಕೆಂದುವ್ಯಾಖ್ಯಾನ ಮಾಡಿರುತ್ತಾರೆ. ತನಗೆ ಸಂಬಂಧವಿಲ್ಲದೆ ತನಗೆ ಕರ್ಮಾನುಗುಣವಾಗಿ ಪ್ರಾಪ್ತವಾದ ದೇಹೇಂದ್ರಿಯ ಪ್ರಾಣಗಳಮೂಲಕ ಸ್ವಾಮಿ ಸಙ್ಕಲ್ಪಾನುಸಾರವಾಗಿ ನಡೆದು ಹೋಗುವ ಕೆಲಸಗಳಲ್ಲಿ ಮಿಥ್ಯಾತ್ವಾರೋಪಣೆಗೆ ಆವಶ್ಯಕವೇನಿದೆ ? ಹಾಗೆ ಮಿಥ್ಯೆಯಾದರೆ, ಇವನಿಗೆ ಉಂಟಾಗುವ ಸುಖ ದುಃಖಗಳೂ ಮಿಥ್ಯೆಯೇ ? ಇಂದ್ರಿಯಗಳು **ಇಂದ್ರಿಯಾರ್ಥೇಷು ವರ್ತಂತೇ** ಎಂಬ ಅನುಸಂಧಾನವಿಟ್ಟುಕೋ ಎಂದು ಮಾತ್ರ ಹೇಳಲ್ಪಟ್ಟಿರುತ್ತದೆ. ಮಿಥ್ಯೆಯಾದರೆ, ಆ ಅನುಸಂಧಾನವು ಹೇಗೆ? ಸೂತ್ರವು "ಕರ್ತಾ ಶಾಸ್ತ್ರಾರ್ಥವತ್ವಾತ್" ಎಂದು ಕರ್ತೃತ್ವವನ್ನು ಜೀವಾತ್ಮನಿಗೆ ಸ್ಥಾಪಿಸುವ ಶಾಸ್ತ್ರಾರ್ಥವೂ ಮಿಥ್ಯೆಯೇ ? ಆದುದರಿಂದ ಮಿಥ್ಯಾತ್ವ ಪ್ರಸಙ್ಗವು ಸರ್ವಥಾ ಅಯುಕ್ತವು. ದೇಹ ವಿಯೋಗವಾದನಂತರ ಮುಕ್ತದಶೆಯಲ್ಲಿ ಈ ಆತ್ಮನಿಂದ ಏನಾದರೂ ಕೆಲಸ ನಡೆಯುತ್ತದೋ ಎಂಬ ಪ್ರಶ್ನೆಯು ಪ್ರಾಸಙ್ಗಿಕವಾಗಿ ಉಂಟಾಗುತ್ತದೆ. ಆಗ ಕರ್ಮವಿಲ್ಲದೆ ಇರುವದರಿಂದ ತನಗೆ ಪ್ರಾಪ್ತವಾದ ದಿವ್ಯಮಙ್ಗಳ ವಿಗ್ರಹಮೂಲಕ ತನ್ನ ಸ್ವಾಮಿಯಾದ ಶ್ರೀ ಪರವಾಸುದೇವನಿಗೆ ಸರ್ವವಿಧ ಕೈಙ್ಕರ್ಯಗಳೂ ನಡೆಯುತ್ತವೆ ಎಂಬ ಭಾವನೆ ಇರತಕ್ಕದ್ದು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟೇ "ಕರ್ಮಮೂಲೇಂದ್ರಿಯ ಪ್ರಾಣ ಸಂಬಂಧಕೃತ ಮೀದೃಶಂ ಕರ್ತೃತ್ವಂ" ಎಂದು ಬರೆದಿರುತ್ತಾರೆ; ಈದೃಶಂ ಎಂಬುದರಿಂದ ಈ ಪುಣ್ಯಪಾಪ ರೂಪ ಕರ್ಮವು ನಿರ್ದೇಶಿಸಲ್ಪಟ್ಟಿತು. ಇವೆರಡೂ ಬಂಧಕಗಳು. ಬಂಧಕಗಳಾಗದೇ ಇರುವದಕ್ಕಾಗಿಯೇ, ನೈವ ಕಿಂಚಿತ್ಕರೋಮಿ ಎಂಬ ಅನುಸಂಧಾನವಿರಬೇಕೆಂಬ ಭಾವವು. ಯಾವಾಗ ನಾನೇನನ್ನೂ ಮಾಡಲಿಲ್ಲವೆಂಬ ಅನುಸಂಧಾನ ಉಂಟಾಯಿತೋ, ಆಗ ಫಲಕ್ಕೂ ತಾನು ಭಾಗಿಯಲ್ಲವೆಂಬನುಸಂಧಾನವಿರಬೇಕೆಂದು ಏರ್ಪಟ್ಟಿತು. ಇದನ್ನೇ ಮುಂದಿನ ಶ್ಲೋಕದಲ್ಲಿ **ಸಙ್ಗಂ ತ್ಯಕ್ತ್ವಾ ಕರೋತಿ** ಎಂದು ಹೇಳಿರುತ್ತಾರೆ. ಆದುದರಿಂದ ತಾನು ಮಾಡುವದೆಲ್ಲಾ ಕರ್ಮ ಮೂಲಕವಾಗಿಯೇ ಎಂಬ, ತಾನಾದರೋ ಸ್ವರೂಪತಃ ಮಹಾಪರಿಶುದ್ಧನೆಂಬ, ಅನುಸಂಧಾನ ವಿರಬೇಕೆಂದು ತೋರಿಸುವದಕ್ಕಾಗಿ ಜ್ಞಾನೈಕಸ್ವಭಾವಸ್ಯ ಮಮ ಎಂದು ವ್ಯಾಖ್ಯಾನಮಾಡಿರುತ್ತಾರೆ. ಇನ್ನೊಂದು ಶಙ್ಕಾ ಉತ್ಪನ್ನವಾಗಬಹುದು;—ನೈವ ಕಿಂಚಿತ್ಕರೋಮಿ ಎಂಬ ಅನುಸಂಧಾನವಿರಬೇಕೆಂದು ಹೇಳಿದನಂತರ,ದುಷ್ಕೃತವನ್ನೂ ಮಾಡಿಬಿಟ್ಟು ಹಾಗೆ ಅನುಸಂಧಾನ ತಾನೇ ಏಕೆ ಕೂಡದು ? ಎಂದರೆ, ಯುಕ್ತನಾಗಿಯೂ ತತ್ವವಿತ್ತಾಗಿಯೂ ಇರುವದರಿಂದ ಶಾಸ್ತ್ರನಿಷಿದ್ಧ ಕರ್ಮಾಚರಣೆಗೆ ಅವಕಾಶವಿಲ್ಲವು. ಯಜ್ಞಶಿಷ್ಟಾಶನನಾಗಿ ನಿರ್ಮಲಾಂತಃಕರಣನಾಗಿರುವವನಿಗೆ ಶಾಸ್ತ್ರನಿಷಿದ್ಧ ಕರ್ಮದಲ್ಲಿ ಪ್ರವೃತ್ತಿ ಎಂದಿಗೂ ಉಂಟಾಗದೆಂದು ಭಾವಿಸತಕ್ಕದ್ದು. ಶಾಸ್ತ್ರವಿಹಿತವಾದ ಮತ್ತು ಶಾಸ್ತ್ರನಿಷಿದ್ಧವಲ್ಲದ ಕಾಮ್ಯಕರ್ಮಗಳೆಲ್ಲವೂ ಬಂಧಕಗಳೇ, ಹಾಗೆ ಬಂಧಕಗಳಾಗದಿರುವದಕ್ಕಾಗಿ ತನ್ನ ಆತ್ಮದ ಯಥಾರ್ಥಸ್ವರೂಪಜ್ಞಾನವನ್ನು ಹೊಂದಿದವನಾಗಿ, ಈಗ ತಾನು ಮಾಡುವ ವಿಹಿತಕರ್ಮಗಳೆಲ್ಲಾ ತನ್ನ ಪ್ರಾರಬ್ಧಕರ್ಮಾನುಗುಣವಾಗಿ ಉಂಟಾದ ದೇಹೇಂದ್ರಿಯ

ಮೂ. ಬ್ರಹ್ಮಣ್ಯಾಧಾಯ ಕರ್ಮಾಣಿ ಸಙ್ಗಂತ್ಯಕ್ತ್ವಾ ಕರೋತಿಯಃ |
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ || ೧೦.

ಪ್ರಾಣಗಳ ಕರ್ಮಗಳೇ ವಿನಾ, ತನ್ನ ಸ್ವರೂಪ ಪ್ರಯುಕ್ತವಾದವಲ್ಲವೆಂಬ ಅನುಸಂಧಾನವಿರಬೇಕೆಂದು ಹೇಳಲ್ಪಟ್ಟಿತು. || ೯ ||

**ಮೂಲಕ್ಕೆ ಅರ್ಥವು**:—ದೇಹೇಂದ್ರಿಯಪ್ರಾಣಾದಿಗಳಿಗೆ ಆತ್ಮನಿಲ್ಲದೆ ಸತ್ತೆಯೇ ಇಲ್ಲವು. ಆತ್ಮನೇ ಯಥಾರ್ಥವಾಗಿಯೂ ಇವುಗಳ ಮೂಲಕ ಕೆಲಸಮಾಡುವವನು; ಫಲವನ್ನನುಭವಿಸುವವನೂ ಆತ್ಮನೇ. ಹೀಗಿರುವಾಗ ನೈವಕಿಂಚಿತ್ಕರೋಮಿ ನಾನು ಸ್ವಲ್ಪವೂ ಏನನ್ನೂ ಮಾಡುವದಿಲ್ಲವೆಂಬ ಅನುಸಂಧಾನದಿಂದುಂಟಾಗುವ ಪ್ರಯೋಜನವೇನು? ಎಂಬ ಶಙ್ಕಾಪಿಗೆ ಈ ಶ್ಲೋಕವು ಹಿಂದೆ ಮೂರು ಶ್ಲೋಕಗಳಿಂದ ಹೇಳಲ್ಪಟ್ಟರ್ಥವನ್ನೇ ಉಪಪಾದಿಸುವದಾಗಿ, ಒಂದು ಸ್ವಾರಸ್ಯವಾದ ದೃಷ್ಟಾಂತದ ಮೂಲಕ ಈತನಿಗೆ ವಸ್ತುತಃ ಕರ್ತೃತ್ವವಿದ್ದರೂ, ಆ ಕರ್ಮಗಳ ಲೇಪವು ಇವನಿಗಿರುವದಿಲ್ಲವೆಂಬಂಶವನ್ನು ವ್ಯಕ್ತಗೊಳಿಸುತ್ತದೆ. **ಯಃ**-ಯಾವ ಕರ್ಮಯೋಗಿಯು, **ಬ್ರಹ್ಮಣಿ**-ದೇಹೇಂದ್ರಿಯ ಪ್ರಾಣರೂಪವಾದ ಪ್ರಕೃತಿಯಲ್ಲಿ, **ಕರ್ಮಾಣಿ**-ತಾನುಮಾಡುವ ಮೇಲೆ ಪಶ್ಯನ್, ಶೃಣ್ವನ್, ಸ್ಪೃಶನ್, ಎಂದು ಹೇಳಲ್ಪಟ್ಟ ವಿವಿಧವಾದ ಕರ್ಮಗಳನ್ನೆಲ್ಲಾ, **ಆಧಾಯ** - ಸಮರ್ಪಿಸಿ ಎಂದರೆ ಇಟ್ಟು, **ಸಙ್ಗಂತ್ಯಕ್ತ್ವಾ** - ಫಲದಲ್ಲಿ ಸಂಬಂಧವನ್ನು ತ್ಯಜಿಸಿ, **ಕರೋತಿ** - ಆ ಕರ್ಮಗಳನ್ನು ಮಾಡುತ್ತಾನೋ, **ಸಃ** - ಅಂತಹ ಕರ್ಮಯೋಗಿಯು, **ಪದ್ಮಪತ್ರಂ** - ಕಮಲದ ಎಲೆಯು, **ಅಂಭಸಾ ಇವ** - ತಾನು ಉತ್ಪನ್ನವಾಗಿ ವೃದ್ಧಿಹೊಂದಿ ಜೀವಿಸಿಕೊಂಡಿರುವ ಉದಕದಿಂದ, ಹೇಗೆ **ನ ಲಿಪ್ಯತೇ** – ಲೇಪಿಸಲ್ಪಡುವದಿಲ್ಲವೋ ಹಾಗೆ, **ಪಾಪೇನ**-ಬಂಧ ಹೇತುಕವಾದ ಪಾಪಪುಣ್ಯರೂಪಕರ್ಮದಿಂದ, **ನ ಲಿಪ್ಯತೇ** - ಲೇಪಿಸಲ್ಪಡುವದಿಲ್ಲವು. ಅಂತವನಿಗೆ ಬಂಧಕರೂಪವಾದ ಪುಣ್ಯಪಾಪರೂಪಕರ್ಮಸಂಬಂಧವು ಇರುವದಿಲ್ಲವೆಂಬ ಭಾವವು. ಇಲ್ಲಿ ಪಾಪ ಶಬ್ದವು ಪುಣ್ಯವನ್ನೂ ಬೋಧಿಸುತ್ತದೆಂದು ಅರ್ಥಮಾಡಲ್ಪಟ್ಟಿರುತ್ತದೆ. "**ನ ಸುಕೃತಂ ನ ದುಷ್ಕೃತಂ ಸರ್ವೇ ಪಾಪ್ಮಾನೋಽತೋ ನಿವರ್ತನ್ತೇ**" (ಛಾಂ. ೮. ೪. ೧) ಎಂಬ ಶ್ರುತಿಯಲ್ಲೂ ಸುಕೃತ ದುಷ್ಕೃತಗಳಾದ ಸಮಸ್ತವಾದ, ಪಾಪ್ಮಾನಃ ಎಂಬ ಪ್ರಯೋಗವಿರುತ್ತದೆ. ಮುಮುಕ್ಷುವಿಗೆ ಪುಣ್ಯವೂ ಬಂಧಕವೇ. ಪಾಪವು ಕಬ್ಬಿಣದ ಬೇಡಿಯಾದರೆ, ಪುಣ್ಯವು ಚಿನ್ನದ ಬೇಡಿಯು; ಅಂತೂ ಎರಡೂ ಬೇಡಿಯೇ ಆದುದರಿಂದ ಶ್ರುತಿಯು "**ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ**" ಎಂಬ ಶ್ರುತಿಯಲ್ಲಿ ಉಪಾಯಾನುಷ್ಠಾನದಿಂದ ಈ ಪುಣ್ಯಪಾಪಗಳನ್ನೆಲ್ಲಾ ಕಳೆದುಕೊಂಡರೇನೆ ಮೋಕ್ಷಪ್ರಾಪ್ತಿಯೆಂದು ಹೇಳಲ್ಪಟ್ಟಿರುತ್ತದೆ.

**ಭಾಷ್ಯಾರ್ಥವು**:—ಯಾವಾಗ ನೈವಕಿಂಚಿತ್ಕರೋಮಿ ಎಂಬ ಅನುಸಂಧಾನವಿರಬೇಕೆಂದು ಹೇಳಲ್ಪಟ್ಟಿತೋ, ಆಗ ಫಲಾಭಿಸಂಧಿಯಿಂದ ಕರ್ಮಗಳು ಮಾಡಲ್ಪಟ್ಟರೂ ದೋಷವೇನು? ಮತ್ತು ಯಥಾರ್ಥವಾಗಿಯೂ ದೇಹವು ಆತ್ಮನಿಲ್ಲದೆ ಕರ್ಮವನ್ನು ಮಾಡಲಾರದು,ಹೀಗಿರುವಾಗ ನಾನು ಏನನ್ನೂ ಮಾಡುವದಿಲ್ಲವು, ದೇಹವೇ ಎಲ್ಲವನ್ನೂ ಮಾಡುವದು ಎಂಬ ಅನುಸಂಧಾನದಿಂದ ತಾನೆ ಏನು ಪ್ರಯೋಜನವು; ಹಾಗೆ ಅನುಸಂಧಾನವಿದ್ದರೂ ಈ ಆತ್ಮಾವನ್ನು ದೇಹಾತ್ಮಭ್ರಮೆಯಲ್ಲಿ ಮುಳುಗಿಸಲಾರದೋ ಎಂದರೆ ಅಂತಹ ಶಙ್ಕ ನಿರಾಕರಿಸಲ್ಪಡುತ್ತದೆ. **ಬ್ರಹ್ಮಶಬ್ದೇನ** - ಬ್ರಹ್ಮ ಶಬ್ದದಿಂದ ಪ್ರಕೃತಿಯು, **ಇಹೋಚ್ಯತೇ** - ಈ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. ಹಿಂದಿನ ಶ್ಲೋಕಕ್ಕೂ, ಮುಂದಿನ ಶ್ಲೋಕಕ್ಕೂ, ಸಙ್ಗತಿಯು ಸರಿಹೋಗಬೇಕು. ಹಿಂದೆ **ಇನ್ದ್ರಿಯಾಣಿ ಇನ್ದ್ರಿಯಾರ್ಥೇಷು ವರ್ತಂತೇ** ಎಂದು ಹೇಳಲ್ಪಟ್ಟ, ಇಲ್ಲಿ, ಬ್ರಹ್ಮಣ್ಯಾ

**ಭಾ. ಬ್ರಹ್ಮಶಬ್ದೇನ ಪ್ರಕೃತಿರಿಹೋಚ್ಯತೇ; (೧)"ಮಮಯೋನಿರ್ಮಹದ್ಬ್ರಹ್ಮ"ಇತಿಹಿ ವಕ್ಷ್ಯತೇ। ಇನ್ದ್ರಿಯಾಣಾಂ ಪ್ರಕೃತಿ ಪರಿಣಾಮವಿಶೇಷರೂಪತ್ವೇನ ಇನ್ದ್ರಿಯಾಕಾರೇಣಾವಸ್ಥಿತಾಯಾಂ ಪ್ರಕೃತೌ "ಪಶ್ಯಂಚ್ಛೃಣ್ವನ್" ಇತ್ಯಾದ್ಯುಕ್ತಪ್ರಕಾರೇಣ**

**ಧಾಯ** ಕರ್ಮಾಣಿ ಎಂದು ಹೇಳಲ್ಪಟ್ಟಿರುವದರಿಂದ ಹಿಂದೆ ಹೇಳಿರುವದರ ಉಪಪಾದನವೇ; ಆದುದರಿಂದ ಇಲ್ಲಿ ಬ್ರಹ್ಮ ಶಬ್ದಕ್ಕೆ ಪ್ರಕೃತಿಯೆಂದರ್ಥಮಾಡುವದು ಯುಕ್ತವಾಗಿ ತೋರುತ್ತದೆ. ಬ್ರಹ್ಮ ಶಬ್ದವು ಜೀವಾತ್ಮನನ್ನೂ ಬೋಧಿಸುತ್ತದೆ, ಇಲ್ಲಿ ಜೀವಾತ್ಮನಲ್ಲಿ ಕರ್ಮಗಳನ್ನು ಅರ್ಪಿಸಿ ಎಂದರ್ಥಮಾಡಿದರೆ ಹಿಂದೆ ಹೇಳಿದುದಕ್ಕೆ ವಿರುದ್ಧವಾದ ಅರ್ಥವುಂಟಾಗುವದರಿಂದ, ಜೀವಾತ್ಮನೆಂದು ಅರ್ಥಮಾಡುವದು ಸಾಧ್ಯವಿಲ್ಲವು. ಬ್ರಹ್ಮ ಶಬ್ದಕ್ಕೆ ಮುಖ್ಯ ವೃತ್ತಿಯು ಪರಮಾತ್ಮನಲ್ಲೇ; ಹಾಗಾದರೆ ಪರಮಾತ್ಮನೆಂದರ್ಥಮಾಡೋಣವೇ ಎಂದರೆ, ಪ್ರಕರಣವು ಆತ್ಮನಿಗೆ ಎಷ್ಟರ ಮಟ್ಟಿಗೆ ಕರ್ತೃತ್ವವು, ಸ್ವರೂಪತಃ ಕರ್ತೃತ್ವವೇ, ಕರ್ಮೋಪಾಧಿಕಸಂಬಂಧವುಳ್ಳ ಕರ್ತೃತ್ವವೇ ಎಂದು ಹೇಳಿರುವ ಪ್ರಕರಣದಲ್ಲಿ ಪರಮಾತ್ಮನೆಂಬರ್ಥವು ಅನಪೇಕ್ಷಿತವು. ಅರ್ಥವೇನೋ ಸರಿ ಹೋಗುತ್ತದೆ. ಆದರೆ ಪ್ರಕರಣವನ್ನು ದೂರೀಕರಿಸುತ್ತದೆ. ಮುಂದೆ ೧೩ನೆಯ ಶ್ಲೋಕದಲ್ಲಿ ದೇಹಾಕಾರವಾದ ಪ್ರಕೃತಿಯಲ್ಲೇ ಮನಸ್ಸಿನ ಮೂಲಕ ಕರ್ಮವನ್ನು ನ್ಯಾಸಮಾಡಬೇಕೆಂಬ ಈ ಅಭಿಪ್ರಾಯವೇ ಹೇಳಲ್ಪಟ್ಟಿರುವದರಿಂದ, ಪ್ರಕೃತಿಯೇ ಕರ್ಮಗಳನ್ನು ನಡೆಸುತ್ತದೆಂಬ ಅನುಸಂಧಾನವೇ ಪ್ರಕರಣವಾದುದರಿಂದ ಬ್ರಹ್ಮ ಶಬ್ದಕ್ಕೆ ಪರಮಾತ್ಮನೆಂಬರ್ಥವು ಸರ್ವಾತ್ಮನಾ ಕೂಡುವದಿಲ್ಲವು. ಇದು ಕರ್ಮ ಸಂನ್ಯಾಸ ಪ್ರಕರಣವಾದುದರಿಂದ ಬ್ರಹ್ಮ ಶಬ್ದಕ್ಕೆ ಪ್ರಕೃತಿಯೆಂದು ಅರ್ಥ ಮಾಡುವದೇ ಸಮಂಜಸವಾದುದು. ಹಾಗಾದರೆ ಬ್ರಹ್ಮ ಶಬ್ದಕ್ಕೆ ಹಾಗೆ ಪ್ರಯೋಗ ಉಂಟೋ? ಎಂದರೆ, ಈ ಗೀತೆಯಲ್ಲೇ ಹಾಗೆ ಅನೇಕ ಕಡೆಯಲ್ಲಿ ಪ್ರಯೋಗ ಉಂಟೆಂದು ಒಂದನ್ನು ಉದಾಹರಿಸುತ್ತಾರೆ; "ಮಮ ಯೋನಿರ್ಮಹದ್ಬ್ರಹ್ಮ" ಎಂಬಲ್ಲಿ ಬ್ರಹ್ಮ ಶಬ್ದವು ಪ್ರಕೃತಿಯನ್ನು ಬೋಧಿಸುವದಾಗಿ, ಇತಿ ಹಿ ವಕ್ಷ್ಯತೇ-ಮುಂದೆ ಹೇಳಲ್ಪಡುತ್ತದೆ. ಅದರ ಮುಂದಿನ ಶ್ಲೋಕದಲ್ಲೂ, "ತಾಸಾಂ ಬ್ರಹ್ಮ ಮಹದ್ಯೋನಿಃ" ಎಂಬಲ್ಲೂ, ಬ್ರಹ್ಮ ಶಬ್ದವು ಪ್ರಕೃತಿಯನ್ನು ಬೋಧಿಸುತ್ತದೆ. ಹಿಂದೆಯೂ ಕೂಡ "ಕರ್ಮಬ್ರಹ್ಮೋದ್ಭವಂ ವಿದ್ಧಿ" (೩. ೧೫) ಎಂಬಲ್ಲಿ ಬ್ರಹ್ಮ ಶಬ್ದವು ಪ್ರಕೃತಿಯನ್ನು ಹೇಳುವದಲ್ಲದೆ, ಕರ್ಮಕ್ಕೆ ಶರೀರೇಂದ್ರಿಯ ಪ್ರಾಣರೂಪ ಪ್ರಕೃತಿಯು ಕಾರಣವೆಂದು ಇಲ್ಲಿ ಹೇಳಿರುವ ಅಭಿಪ್ರಾಯವೇ ಅಲ್ಲಿಯೂ ಹೇಳಿರುತ್ತದೆ. ಅಲ್ಲೇ ಭಾಷ್ಯದಲ್ಲಿ, "ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತೇ" ಎಂಬ ಶ್ರುತಿಯನ್ನು ಉದಾಹರಿಸಿ ಶ್ರುತಿಯಲ್ಲೂ ಪ್ರಯೋಗವನ್ನು ತೋರಿಸಿರುತ್ತಾರೆ. ಆದುದರಿಂದ ಇಲ್ಲಿ ಬ್ರಹ್ಮ ಶಬ್ದಕ್ಕೆ ದೇಹೇಂದ್ರಿಯ ಪ್ರಾಣರೂಪವಾದ ಪ್ರಕೃತಿಯೆಂದೇ ಅರ್ಥವನ್ನು ಮಾಡಿರುತ್ತಾರೆ. ಹಿಂದಿನ ಶ್ಲೋಕಕ್ಕೂ ಈ ಶ್ಲೋಕಕ್ಕೂ ಸಙ್ಗತಿಯೊಡನೆ ವ್ಯಾಖ್ಯಾನಮಾಡುತ್ತಾರೆ. **ಇಂದ್ರಿಯಾಣಾಂ** - ಇಂದ್ರಿಯಗಳಿಗೆ, **ಪ್ರಕೃತಿ ಪರಿಣಾಮ ವಿಶೇಷ ರೂಪತ್ವೇನ** - ಪ್ರಕೃತಿಯ ಪರಿಣಾಮಹೊಂದಿರುವ ವಿಶೇಷಣ ರೂಪವಾಗಿರುವದರಿಂದ **ಇಂದ್ರಿಯಾಕಾರೇಣ**-ಇಂದ್ರಿಯರೂಪದಲ್ಲಿ **ಅವಸ್ಥಿತಾಯಾಂ** - ಇರುವ, **ಪ್ರಕೃತೌ** - ಪ್ರಕೃತಿ ವಿಶೇಷದಲ್ಲಿ, **ಪಶ್ಯನ್, ಶೃಣ್ವನ್, ಇತ್ಯಾದ್ಯುಕ್ತಪ್ರಕಾರೇಣ** - ಎಂದು ಹೇಳಲ್ಪಟ್ಟ ರೀತಿಯಲ್ಲಿ ಕರ್ಮವನ್ನು, **ಬ್ರಹ್ಮಣ್ಯಾಧಾಯ** - ಹೀಗೆ ದೇಹೇಂದ್ರಿಯ ಪ್ರಾಣರೂಪದಲ್ಲಿರುವ ಪ್ರಕೃತಿಯಲ್ಲಿ ಸಮರ್ಪಿಸಿ ಎಂದರೆ, ಇಟ್ಟು, ಇಲ್ಲಿ **ಇಂದ್ರಿಯಾಕಾರೇಣಾವಸ್ಥಿತಾಯಾಂ**

(೧) ಗೀ. ೧೪. ೩.

ಭಾ. ಕರ್ಮ ಬ್ರಹ್ಮಣ್ಯಾಧಾಯ ಫಲಸಙ್ಗಂತ್ಯಕ್ತ್ವಾ ನೈವ ಕಿಂಚಿತ್ಕರೋಮೀತಿ ಯಃ ಕರ್ಮಾಣಿ ಕರೋತಿ, ಸಃ ಪ್ರಕೃತಿಸಂಸೃಷ್ಟತಯಾ ವರ್ತಮಾನೋಽಪಿ ಪ್ರಕೃತ್ಯಾತ್ಮಾಭಿಮಾನರೂಪೇಣ ಬಂಧಹೇತುನಾ ಪಾಪೇನ ನ ಲಿಪ್ಯತೇ। ಪದ್ಮಪತ್ರಮಿವಾಂಭಸಾ-ಯಥಾ ಪದ್ಮಪತ್ರ ಮಂಭಸಾ ಸಂಸೃಷ್ಟಮಪಿ ನ ಲಿಪ್ಯತೇ, ತಥಾ ನ ಲಿಪ್ಯತೇ ಇತ್ಯರ್ಥಃ ||೧೦||

ಪ್ರಕೃತೌ ಎಂದು ಏತಕ್ಕೆ ಹೇಳಲ್ಪಟ್ಟಿತೆಂದರೆ, ಬ್ರಹ್ಮ ಶಬ್ದಕ್ಕೆ ಮೂಲಪ್ರಕೃತಿ ಎಂದು ಅದಕ್ಕೆ ಬೃಹತ್ತ್ವ ಗುಣವಿರುವ ಮೂಲಕ ಅನೇಕ ಕಡೆ ಪ್ರಯೋಗವಿದ್ದರೂ ಅದೇ ಇಂದ್ರಿಯ ರೂಪ ವಿಕಾರವನ್ನೂ ಪರಿಣಾಮವನ್ನೂ ಹೊಂದಲಾರದು; ತ್ರಿವೃತ್ಕರಣಾದಿಗಳಿಂದ ವಿಕೃತಿಯಾಗಿ ಕೊನೆಗೆ ಇಂದ್ರಿಯಗಳಾಗಿ ಪರಿಣಮಿಸಬೇಕು. ಇದನ್ನು ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು; ಫಲ ಸಙ್ಗಂ ತ್ಯಕ್ತ್ವಾ - ಫಲದಲ್ಲಿ ಸಂಬಂಧವನ್ನು ತ್ಯಜಿಸಿ, ನೈವಕಿಂಚಿತ್ಕರೋಮೀತಿ - ನಾನು ಏನೊಂದು ಕಾರ್ಯವನ್ನೂ ಮಾಡುವದಿಲ್ಲವೆಂದು, ಯಃ ಕರ್ಮಾಣಿ ಕರೋತಿ - ಯಾವ ಕರ್ಮಯೋಗಿಯು ಕರ್ಮಗಳನ್ನು ಮಾಡುತ್ತಾನೋ, ಇಲ್ಲಿ ಕರ್ಮಾಣಿ ಕರೋತಿ ಎಂದು ಹೇಳಿದುದರಿಂದ, "ಕರ್ತಾ ಶಾಸ್ತ್ರಾರ್ಥವತ್ವಾತ್" ಎಂಬ ಶಾರೀರಕ ಸೂತ್ರದಲ್ಲಿ ಹೇಳಿರುವ ಅರ್ಥದ ಪ್ರಕಾರ ಈ ಆತ್ಮನಿಗೆ ಕರ್ತೃತ್ವವೇನೂ ತಪ್ಪಿದ್ದಲ್ಲವು; ಆದರೂ ಅನುಸಂಧಾನ ಮಾತ್ರ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ತನ್ನ ಕರ್ಮಾನುಸಾರ ಪ್ರವರ್ತಿಸುತ್ತವೆ; ಇದು ತನ್ನ ಸ್ವರೂಪತಃ ನಡೆದುದಲ್ಲವೆಂಬ ಭಾವನೆ ಮಾತ್ರವಿರಬೇಕೆಂಬ ತಾತ್ಪರ್ಯವು. ಮೂಲದಲ್ಲಿ ಕರ್ಮ ಕರೋಮಿ ಎಂದು ಏಕವಚನವು, ಹಿಂದಿನ ಶ್ಲೋಕಗಳಲ್ಲಿ ಹೇಳಿದ ಪಶ್ಯನ್, ಶೃಣ್ವನ್, ಸ್ಪೃಶನ್, ಜಿಘ್ರನ್ ಇತ್ಯಾದಿ ಸಮಸ್ತ ವ್ಯಾಪಾರಗಳನ್ನೂ ಒಟ್ಟು ಕೂಡಿಸಿ ಹೇಳಿದ ಜಾತ್ಯೇಕ ವಚನವೆಂದು ತೋರಿಸುವದಕ್ಕಾಗಿ ವ್ಯಾಖ್ಯಾನದಲ್ಲಿ ಯಃ ಕರ್ಮಾಣಿ ಕರೋತಿ ಎಂದು ಬಹುವಚನ ಪ್ರಯೋಗವು. ನೈವ ಕಿಂಚಿತ್ಕರೋಮೀತಿ ಯಃ ಕರ್ಮಾಣಿ ಕರೋತಿ ಎಂಬಲ್ಲಿ ನೈವ ಕಿಂಚಿತ್ಕರೋಮಿ ಎಂದು ಹಿಂದೆ ಹೇಳಿದುದನ್ನು ಇಲ್ಲಿ ತರಲು ಕಾರಣವೇನು ಎಂದರೆ, ಬ್ರಹ್ಮಣ್ಯಾಧಾಯಕರ್ಮಾಣಿ ಎಂಬುದರಿಂದಲೇ ಅರ್ಥವಾಗಿ ತೋರುವದೆಂದೂ, ಪ್ರಕರಣವೆಲ್ಲಾ ಅಂತಹ ಅನುಸಂಧಾನ ವಿಷಯವೆಂದೂ, ಪ್ರದರ್ಶಿಸುವದಕ್ಕಾಗಿ ಹಾಗೆ ಅನುವಾದವು. ಹೀಗೆ ಯಃ ಕರ್ಮಾಣಿ ಕರೋತಿ, ಸಃ - ಅವನು, ಪ್ರಕೃತಿ ಸಂಸೃಷ್ಟತಯಾ ವರ್ತಮಾನೋಽಪಿ – ಶರೀರೇಂದ್ರಿಯಾದಿಗಳ ರೂಪ ಪ್ರಕೃತಿಯಿಂದ ಸಂಬಂಧಿಸಿಕೊಂಡು ಇರುವವನಾದರೂ, ಪ್ರಕೃತ್ಯಾತ್ಮಾಭಿಮಾನರೂಪೇಣ - ಪ್ರಕೃತಿಯೇ ಆತ್ಮ ಎಂಬ ಅಭಿಮಾನರೂಪವಾದ, ಬನ್ಧಹೇತುನಾ ಪಾಪೇನ - ಸಂಸಾರಬಂಧಕ್ಕೆ ಕಾರಣಭೂತವಾದ ಪಾಪದಿಂದ, ನ ಲಿಪ್ಯತೇ - ಲೇಪಿಸಲ್ಪಡುವದಿಲ್ಲವು. ಹೇಗೆಂದರೆ.—ಪದ್ಮಪತ್ರಮಿವಾಂಭಸಾ ಎಂದರೆ ಯಥಾ - ಹೇಗೆ, ಪದ್ಮ ಪತ್ರಂ ಕಮಲದ ಎಲೆಯು ಅಂಭಸಾ ಸಂಸೃಷ್ಟಮಪಿ - ನೀರಿನೊಂದಿಗೆ ಸಂಬಂಧಿಸಿಕೊಂಡೇ ಇದ್ದರೂ ನ ಲಿಪ್ಯತೇ – ನೀರಿನಿಂದ ಲೇಪಿಸಲ್ಪಡುವದಿಲ್ಲವೋ, ತಥಾ - ಹಾಗೆಯೇ ಈ ಆತ್ಮನೂ ಕೂಡ, ನ ಲಿಪ್ಯತೇ - ಅಂತಹ ದೇಹಾತ್ಮಾಭಿಮಾನದಿಂದ ಬಂಧಕರೂಪವಾಗಿರುವ ಕರ್ಮಗಳಿಂದ ಲೇಪಿಸಲ್ಪಡುವದಿಲ್ಲವೆಂಬರ್ಥವು. ದೇಹವೇ ಆತ್ಮ ಎಂಬ ಅಭಿಮಾನವಿರುವವನು ಮಾಡುವ ಕರ್ಮವೆಲ್ಲಾ ಪಾಪಕರ್ಮರೂಪವಾದುದೆಂಬುದಕ್ಕೆ ಶ್ರೀ ದೇಶಿಕರವರು "ಯೋಽನ್ಯಥಾ ಸನ್ತಮಾತ್ಮಾನಮನ್ಯಥಾ ಪ್ರತಿಪದ್ಯತೇ। ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ"(ಭಾರ. ಆದಿ. ೭೪. ೨೮,) ಎಂಬುದನ್ನು ಉದಾಹರಿಸಿರುತ್ತಾರೆ. ಆತ್ಮನ ಯಥಾರ್ಥವಾದ ಸ್ವರೂಪವನ್ನು ತಿಳಿದುಕೊಳ್ಳದೆ ದೇಹದಲ್ಲೇ ಆತ್ಮಾಭಿಮಾನವಿರುವವನು ಯಾವ ಪಾಪವನ್ನು ತಾನೇ

ಮಾಡಲಾರನೆಂದೂ ಸರ್ವೇಶ್ವರನ ಸ್ವತ್ತಾದ ಈ ಆತ್ಮ ವಿಷಯದಲ್ಲಿ ತಾನು ಸ್ವತಂತ್ರನೆಂದು ಭ್ರಮಿಸುವವನು ಆತ್ಮಾಪಹಾರಿಯಾದ ಚೋರನೆಂದೂ ಹೇಳಲ್ಪಟ್ಟಿರುತ್ತದೆ. ಆ ಕಾರಣದಿಂದಲೇ ಭಾಷ್ಯದಲ್ಲಿ ಪಾಪೇನ ಎಂಬ ಶಬ್ದಕ್ಕೆ ಪ್ರಕೃತ್ಯಾತ್ಮಾಭಿಮಾನರೂಪೇಣ ಬನ್ಧಹೇತುನಾ ಪಾಪೇನ ಎಂಬ ವ್ಯಾಖ್ಯಾನವು. ಹಾಗಲ್ಲದೆ ಜ್ಞಾನಸ್ವರೂಪನಾಗಿ ತಾನು ಮಹಾಪರಿಶುದ್ಧನು,ತನಗೆ ಪ್ರಾಪ್ತವಾಗಿರುವ ಪ್ರಾರಬ್ಧಕರ್ಮಾನುಗುಣವಾಗಿ ಬಂದ ದೇಹೇಂದ್ರಿಯ ಪ್ರಾಣಗಳು ಈ ಕರ್ಮಗಳನ್ನು ನಡೆಸುತ್ತವೆ ಎಂಬ ಅನುಸಂಧಾನವಿರುವನೀಗ ತಾನು ಮಾಡುವ ಕರ್ಮಗಳಿಂದ ಲಿಪ್ತನಾಗುವದಿಲ್ಲವು. ಅದಕ್ಕೆ ತುಂಬಾ ಸಮಂಜಸವಾದ ಒಂದು ದೃಷ್ಟಾಂತವು ಹೇಳಲ್ಪಟ್ಟಿರುತ್ತದೆ. ಪದ್ಮಪತ್ರ ಮಿವ ಅಂಭಸಾ, ಪದ್ಮ ಪತ್ರಕ್ಕೆ ಜನ್ಮವು, ವೃದ್ಧಿ ಮೊದಲಾದವುಗಳೆಲ್ಲಾ ನೀರಿನ ಮಧ್ಯೆ ಇದ್ದುಕೊಂಡೇ ನೀರಿನ ಸಂಬಂಧದಿಂದಲೇ ಉಂಟಾದರೂ, ನೀರಿನಿಂದ ಹೇಗೆ ತೋಯಿಸಲ್ಪಡುವದಿಲ್ಲವೋ, ಹಾಗೆಯೇ ಕರ್ಮಯೋಗಿಯು,ದೇಹರೂಪ ಪ್ರಕೃತಿಸಂಬಂಧವು ಇವನಿಗೆ ಅನಾದಿಯಾಗಿ ಬಂದು ಮುಕ್ತನಾಗುವವರೆಗೂ ತಪ್ಪಿದ್ದಲ್ಲವಾಗಿ,ಅದರಿಂದಲೇ ಜನ್ಮವೆತ್ತಿ,ಅದರೊಂದಿಗೇನೆ ಬೆಳೆದು, ಅದರ ಮೂಲಕವಾಗಿ ಎಲ್ಲಾ ಕೆಲಸಗಳನ್ನು ಮಾಡಿದರೂ, ಆ ಕರ್ಮಫಲವು ಇವನಿಗೆ ಅಂಟುವದಿಲ್ಲವೆಂಬ ಭಾವವು. ಇಲ್ಲಿ ಪ್ರಕೃತಿ ಸಂಸರ್ಗವೇ ನಿಂದಿಸಲ್ಪಡಲಿಲ್ಲವು. ಕರುಣಾಸಾಗರನು ಬಹು ಕೃಪೆಯಿಂದ ನಮಗೆ ಕರಣ ಕಳೇಬರಯೋಗವನ್ನು ದಯಪಾಲಿಸಿರುತ್ತಾನೆ. ತನ್ಮೂಲಕವಾಗಿ ಪ್ರಾರಬ್ಧಕರ್ಮವನ್ನು ಕಳೆದುಕೊಂಡು ಉಪಾಯಾನುಷ್ಠಾನಮಾಡಿ, ತನ್ನನ್ನು ಹೊಂದಲಿ ಎಂಬ ಪ್ರೇಮಾತಿಶಯದಿಂದ ದಯಪಾಲಿಸಿರುತ್ತಾನೆ. ಸಂಸಾರಸಾಗರವನ್ನು ದಾಟುವದಕ್ಕಾಗಿ ಬಹು ಪ್ರೀತಿಯಿಂದ ದಯಪಾಲಿಸಿದುದು, ಕಾಯನೌಃ ಶರೀರವೆಂಬ ನಾವೆಯು; ಈ ಬಂಧದಿಂದ ತಪ್ಪಿಸಿಕೊಳ್ಳುವವದಕ್ಕಾಗಿ ಅದನ್ನು ಕೊಟ್ಟಿರುವದರಿಂದ, ನಮಗೆ ದೇಹವು ನಿಂದ್ಯವಲ್ಲವು. ಹೀಗೆ ಪ್ರಕೃತಿಯ ಸಂಬಂಧವು ನಮಗೆ ಆವಶ್ಯಕವಾಗಿದ್ದರೂ, ಅದು ನಮ್ಮನ್ನು ಲೇಪಿಸದ ಹಾಗೆ ನಾವು ವರ್ತಿಸತಕ್ಕದ್ದಾಗಿರುತ್ತದೆ. ಪದ್ಮಪತ್ರಕ್ಕೆ ಸ್ವಾಭಾವಿಕವಾಗಿ ನೀರು ಅಂಟುವದೇ ಇಲ್ಲವು. ನಮಗಾದರೋ ಹಾಗಲ್ಲವು. ಪ್ರಕೃತಿಯು ನಮ್ಮನ್ನು ಬಹು ಸುಲಭವಾಗಿ ಲೇಪಿಸಿ ಬಿಡುತ್ತದೆ. ಆದುದರಿಂದ ಜಾಗರೂಕರಾಗಿ ಅದರ ಪ್ರವೃತ್ತಿಗಳು ನಮಗೆ ಅಂಟದಹಾಗೆ ನೋಡಿಕೊಳ್ಳಬೇಕು. ಇದಕ್ಕೆ ಆತ್ಮನ ಯಥಾರ್ಥ ಸ್ವರೂಪಾನುಸಂಧಾನವೂ, ನಾವು ಮಾಡುವ ಕರ್ಮಗಳಲ್ಲಿ ಫಲಾಭಿಸಂಧಿರಾಹಿತ್ಯವೂ, ಇವೆಲ್ಲಾ ಪ್ರಕೃತಿ ಕೃತ ಕರ್ಮವು ಲೇಪಿಸದಿರುವದಕ್ಕೆ ಪರಮೌಷಧವೆಂದು ಹೇಳುವ ಪ್ರಕರಣವಾಗಿರುತ್ತದೆ. ಈ ಅಭಿಪ್ರಾಯವೇ ಮುಂದಿನ ಶ್ಲೋಕದಿಂದಲೂ ವ್ಯಕ್ತವು ||೧೦||

**ಮೂಲಕ್ಕೆ ಅರ್ಥವು:—** ಹಿಂದೆ ಏಳನೆಯ ಶ್ಲೋಕವಾದ "ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ । ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ಎಂಬುದರಲ್ಲಿ ಕರ್ಮಯೋಗ ನಿಷ್ಠನಿಗೆ ಕರ್ಮವು ಲೇಪಿಸುವದಿಲ್ಲವು; ಏತರಿಂದೆಂದರೆ, ಕಾಯಪರಿಶುದ್ಧಿಯೂ ಮನೋಜಯವೂ ಇಂದ್ರಿಯ ಜಯವೂ ಆತ್ಮ ಸಮತ್ವ ಬುದ್ಧಿಯೂ ಇರುವದರಿಂದ ಎಂದು ಹೇಳಲ್ಪಟ್ಟಿತು. ಈ ಶ್ಲೋಕದಿಂದ ಅಂತಹ ದೇಹಪಾರಿಶುದ್ಧ್ಯವೂ ಮನೋಜಯವೂ, ಇಂದ್ರಿಯಗಳ ಜಯವೂ ಆತ್ಮ ಸಮತ್ವರೂಪ ಬುದ್ಧಿಯೂ ಇರತಕ್ಕ ಕರ್ಮಯೋಗಿಯು ಫಲಸಙ್ಗತ್ಯಾಗಪೂರ್ವಕವಾದ ಕರ್ಮಾನುಷ್ಠಾನದಿಂದುಂಟಾಗುವ ಪ್ರಯೋಜನವೇನೆಂಬುದು ಹೇಳಲ್ಪಡುತ್ತದೆ. ಆ ಶ್ಲೋಕದಲ್ಲಿ ಈಗಿನ ಕರ್ಮಗಳು ಲೇಪಿಸುವದಿಲ್ಲವೆಂದು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಾದರೋ ಅನಾದಿಯಾಗಿ ಬಂದ ಪ್ರಾಚೀನಕರ್ಮಗಳು ಈ ಕರ್ಮಯೋಗ ಮಾಹಾತ್ಮ್ಯೆಯಿಂದ ತೊಲಗುತ್ತವೆಂದು ಹೇಳಿ ಕರ್ಮಯೋಗವನ್ನೇ ಪ್ರಶಂಸಿಸುತ್ತಾರೆ. ಕೇವಲೈ

ಮೂ. ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।
ಯೋಗಿನಃ ಕರ್ಮ ಕುರ್ವನ್ತಿ ಸಙ್ಗಂತ್ಯಕ್ತ್ವಾತ್ಮ ಶುದ್ಧಯೇ ॥ ೧೧.

ಭಾ. ಕಾಯಮನೋಬುದ್ಧೀನ್ದ್ರಿಯ ಸಾಧ್ಯಂ ಕರ್ಮ ಸ್ವರ್ಗಾದಿಫಲಸಙ್ಗಂತ್ಯಕ್ತ್ವಾಯೋಗಿನ ಆತ್ಮಶುದ್ಧಯೇ ಕುರ್ವನ್ತಿ - ಆತ್ಮಗತಪ್ರಾಚೀನ ಕರ್ಮಬಂಧ ವಿನಾಶಾಯ ಕುರ್ವನ್ತೀತ್ಯರ್ಥಃ ॥ ೧೧ ॥

ಕಾಯೇನ-ಸಾಮಾನ್ಯವಾಗಿ ಬರೀ ದೇಹದಿಂದ, ಅಲ್ಲಿ ಹೇಳಿದಹಾಗೆ ಪರಿಶುದ್ಧವಾದ ದೇಹದಿಂದ, ಕೇವಲಂ ಎಂಬುದರಿಂದ ಕರ್ತೃತ್ವಬುದ್ಧಿ ಇಲ್ಲದೇ ಇರುವ ಎಂಬಭಿಪ್ರಾಯವು, ಈ ಕೇವಲಂ ಎಂಬುವನ್ನು ಬುದ್ಧ್ಯಾ ಎಂಬುದಕ್ಕೂ ಅನ್ವಯಿಸಿಕೊಳ್ಳತಕ್ಕದ್ದು. ಮನಸಾ - ಜಯಿಸಲ್ಪಟ್ಟ ಮನಸ್ಸಿನಿಂದ, ಬುದ್ಧ್ಯಾ - ಎಲ್ಲಾ ಆತ್ಮರುಗಳೂ ಜ್ಞಾನೈಕಾಕಾರತಯಾ ಸಮರು ಎಂಬ ಬುದ್ಧಿಯಿಂದ ಅಥವಾ ಕಾರ್ಯಮಾಡಬೇಕೆಂಬ ವ್ಯವಸಾಯದಿಂದ, ಕೇವಲೈರಿಂದ್ರಿಯೈರಪಿ - ಕೇವಲ ಜಿತಗಳಾದ ಇಂದ್ರಿಯಗಳಿಂದಲೂ ಕೂಡ, ಕೇವಲ ಶಬ್ದದಿಂದ ಕರ್ತೃತ್ವಾಭಿಮಾನವಿಲ್ಲದೆ ಬರೀ ಇಂದ್ರಿಯಗಳಿಂದಲೂಕೂಡ ಎಂಬರ್ಥವು, ಹಿಂದೆ ಕಾಯೇನ ಎಂಬ ಶಬ್ದದಿಂದಲೇ ಶರೀರಕ್ಕೆ ಸೇರಿದ ಕರ್ಮೇಂದ್ರಿಯಗಳೂ ಹೇಳಲ್ಪಟ್ಟವೆಂದು ಭಾವಿಸಿದರೆ, ಇಲ್ಲಿ ಇಂದ್ರಿಯೈಃ ಎಂಬುದರಿಂದ ಮಿಕ್ಕ ಜ್ಞಾನೇಂದ್ರಿಯಗಳು ಹೇಳಲ್ಪಟ್ಟವೆಂದು ಅರ್ಥ ಮಾಡಬಹುದು. ಯೋಗಿನಃ-ಕರ್ಮಯೋಗನಿಷ್ಠರು, ಸಙ್ಗಂ ತ್ಯಕ್ತ್ವಾ-ಕರ್ತೃತ್ವದಲ್ಲೂ ಫಲದಲ್ಲೂ ಸಂಬಂಧವನ್ನು ಬಿಟ್ಟು, ಆತ್ಮ ಶುದ್ಧಯೇ - ಆತ್ಮವನ್ನು ಹೊಂದಿದ ಹಿಂದಿನ ಬಂಧರೂಪವಾದ ಕರ್ಮಗಳೆಲ್ಲಾ ತೊಲಗಿ ಪರಿಶುದ್ಧವಾಗುವದಕ್ಕಾಗಿ, ಕರ್ಮಕುರ್ವನ್ತಿ - ಕರ್ಮವನ್ನು ಮಾಡುತ್ತಾರೆ. ಹಿಂದೆ ಏಳನೆಯ ಶ್ಲೋಕದಲ್ಲಿ ಹೇಳಿದಹಾಗೆ ಕಾಯವೂ, ಮನಸ್ಸೂ, ಇಂದ್ರಿಯಗಳೂ, ಬುದ್ಧಿಯೂ ಸಹ ಯಾವಾಗ ಕರ್ಮಯೋಗಿಗೆ ಪರಿಶುದ್ಧವಾದವು ಆದವೋ, ಆಗ ಆತನ ಅನುಸಂಧಾನವು ಕೇವಲ ಇವುಗಳೇ ತನ್ನ ಪ್ರಾಚೀನ ಕರ್ಮಾನುಸಾರ ಕರ್ಮಗಳನ್ನು ಮಾಡುತ್ತವೆಯೇವಿನಾ, ಇವು ತನ್ನ ಸ್ವರೂಪ ಪ್ರಯುಕ್ತವಾದವಲ್ಲವೆಂದೂ,ತನ್ನ ಸ್ವರೂಪವು ಜ್ಞಾನಸರೂಪವಾಗಿ ಪರಿಶುದ್ಧವಾದುದೆಂದೂ, ಆದುದರಿಂದ ಆತನು ಮುಂದಕ್ಕೆ ಬಂಧಕ್ಕೆ ಸಿಕ್ಕದೆ ಆತ್ಮ ಪರಿಶುದ್ಧತೆಯನ್ನು ಹೊಂದುವನೆಂಬ ಭಾವವು. ಹೀಗೆ ಕರ್ಮಾನುಷ್ಠಾನವನ್ನು ಕರ್ಮಯೋಗಿಗಳು ಏತಕ್ಕೆ ಮಾಡುತ್ತಾರೆಂದರೆ, ಆತ್ಮಾವಿಗೆ ಸಂಬಂಧಿಸಿಕೊಂಡಿರುವ ಬಂಧಕಗಳಾದ ಸಂಚಿತ ಕರ್ಮಗಳು ತೊಲಗುವದಕ್ಕಾಗಿ ಎಂದು ಹೇಳಲ್ಪಟ್ಟಿತು. ಮುಂದೆ ೧೮-ಐನೆಯ ಶ್ಲೋಕದಲ್ಲೂ ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ ಎಂದು ಪಾಪ ನಿವಾರಕತ್ವೇನ ಪಾವನಾನಿ ಪ್ರಾಚೀನ ಕರ್ಮಗಳಿಂದ ಪರಿಶುದ್ಧಮಾಡುವುವು ಎಂದು ಹೇಳಲ್ಪಟ್ಟಿರುತ್ತದೆ. "ಕಷಾಯಪಕ್ತಿಃ ಕರ್ಮಾಣಿ" "ಧರ್ಮೇಣಪಾಪ ಮಪನುದತಿ" ಇತ್ಯಾದಿಗಳು ಅನುಸಂಧೇಯಗಳು.

ಭಾಷ್ಯಾರ್ಥವು :—ಕಾಯಮನೋಬುದ್ಧೀನ್ದ್ರಿಯ ಸಾಧ್ಯಂ - ಶರೀರ, ಮನಸ್ಸು, ಬುದ್ಧಿ, ಇಂದ್ರಿಯಗಳಿಂದ ಸಾಧ್ಯವಾದ, ಕರ್ಮವನ್ನು, ಕಾಯ ಮನೋಬುದ್ಧೀಂದ್ರಿಯಗಳಿಂದ ಮಾಡಲ್ಪಟ್ಟ ಕರ್ಮವನ್ನು ಎಂದು ಹೇಳುವುದರಿಂದ ಅವುಗಳಿಗೆ ವಶನಾಗಿ ಮಾಡುವ ಬಂಧಕಗಳಾದ ಕರ್ಮಗಳು ಇಲ್ಲಿ ಹೇಳಲ್ಪಡಲಿಲ್ಲವು. ಹಿಂದೆ ೭ನೆಯ ಶ್ಲೋಕದಲ್ಲಿ ಹೇಳಿದಹಾಗೆ ಪರಿಶುದ್ಧಗಳಾದ ಕಾಯ, ಮನಸ್ಸು ಮೊದಲಾದವುಗಳಿಂದ ಮಾಡಿದ ಕರ್ಮವೆಂಬಭಿಪ್ರಾಯವು. ಇಲ್ಲಿ ಶ್ರೀಮದಾಚಾರ್ಯರವರು ಬುದ್ಧಿ ಶಬ್ದಕ್ಕೆ ಕೃತ್ಯಕೃತ್ಯವಸಾಯವೆಂದರೆ ಕಾರ್ಯಮಾಡಬೇಕೆಂಬ

ದೃಢಸಙ್ಕಲ್ಪನೆಂದು ಅರ್ಥಮಾಡಿರುತ್ತಾರೆ ; ಸ್ವರ್ಗಾದಿ ಫಲಸಙ್ಗಂ ತ್ಯಕ್ತ್ವಾ - ಸ್ವರ್ಗವೇ ಮೊದಲಾದ ಫಲಗಳ ಸಂಬಂಧವನ್ನು ತ್ಯಜಿಸಿ, ಯೋಗಿನಃ - ಕರ್ಮ ಯೋಗಿಗಳು, ಆತ್ಮ **ಶುದ್ಧಯೇ ಕುರ್ವನ್ತಿ** ಎಂದರೆ, ಆತ್ಮಗತ ಪ್ರಾಚೀನ ಕರ್ಮಬಂಧ ವಿನಾಶಾಯ ಕುರ್ವನ್ತೀ ತ್ಯರ್ಥಃ - ಆತ್ಮಾವನ್ನು ಹೊಂದಿದ ಹಿಂದಿನಿಂದ ಅನುಸರಿಸಿಬಂದ ಕರ್ಮಬಂಧನ ನಾಶಕ್ಕೋ ಸ್ಕರವಾಗಿ ಮಾಡುತ್ತಾರೆ ಎಂಬರ್ಥವು. ಇಲ್ಲಿ ಕರ್ಮಯೋಗಿಯು ಮೋಕ್ಷಾರ್ಥಿಯಾಗಿರುವದ ರಿಂದಲೂ, ಮೋಕ್ಷೇತರ ಫಲಗಳೆಲ್ಲಾ ಬಂಧಕಗಳಾದುದರಿಂದಲೂ, ಕರ್ಮಯೋಗದ ಕರ್ಮಾ ನುಷ್ಠಾನಗಳನ್ನು ಮಾಡುವಾಗ ಎಂದಿಗೂ ಸ್ವರ್ಗಾದಿ ಫಲಗಳನ್ನು ಅಪೇಕ್ಷಿಸುವದಿಲ್ಲವು. ಆದು ದರಿಂದ ಸ್ವರ್ಗಾದಿ ಫಲಸಙ್ಗಂತ್ಯಕ್ತ್ವಾ ಎಂದು ವ್ಯಾಖ್ಯಾನಮಾಡಿರುತ್ತಾರೆ. "ನ ನಾಕ ಪೃಷ್ಠಂ ನ ಚ ಸಾರ್ವಭೌಮಂ ನ ಪಾರಮೇಷ್ಠ್ಯಂ ನರಸಾಧಿಪತ್ಯಂ । ನಯೋಗಸಿದ್ಧೀ ರಪುನ ರ್ಭವಂವಾ ವಾಂಛನ್ತಿ ಯತ್ಪಾದರಜಃ ಪ್ರಪನ್ನಾಃ"(ಭಾ. ೧೦. ೧೬. ೩೭) ಪ್ರಪನ್ನರಾದವರು ಸ್ವರ್ಗವನ್ನಾಗಲಿ, ಈ ಲೋಕದಲ್ಲಿ ರಾಜ್ಯಪದವಿಯನ್ನಾಗಲಿ, ಬ್ರಹ್ಮಲೋಕಾಧಿಪತ್ಯವನ್ನಾಗಲಿ, ಪಾತಾಳ ಲೋಕಾಧಿಪತ್ಯವನ್ನಾಗಲಿ, ಕುಬೇರನ ಐಶ್ವರ್ಯವನ್ನಾಗಲಿ, ಅಪುನರ್ಭವಂವಾ- ಕೈವಲ್ಯವನ್ನಾಗಲಿ, ಅಪೇಕ್ಷಿಸುವದಿಲ್ಲವು ಎಂದು ಹೇಳಲ್ಪಟ್ಟಿರುತ್ತದೆ. ಪ್ರಪನ್ನನಾದವನು ಉಪಾಯಾನುಷ್ಠಾನವನ್ನು ಮಾಡಿ ಕೃತಕೃತ್ಯನಾದವನು. ಕರ್ಮಯೋಗಿಯಾದರೋ ಉಪಾಯಾ ನುಷ್ಠಾನವನ್ನಾರಂಭಿಸಿದವನು ; ಆತನೂ ಸ್ವರ್ಗಫಲವನ್ನು ಅಪೇಕ್ಷಿಸುವದಿಲ್ಲವಾದುದರಿಂದ ಸ್ವರ್ಗಾದಿಫಲ ಸಙ್ಗಂ ತ್ಯಕ್ತ್ವಾ ಎಂಬ ಪ್ರಯೋಗವು. ಹೀಗೆ ಕರ್ಮಯೋಗಕ್ಕೆ ಆತ್ಮಶುದ್ಧಿ ಯನ್ನು ಮಾಡುವ ಮಾಹಾತ್ಮ್ಯವುಂಟೋ ಎಂದರೆ, "ಧರ್ಮಃ ಶ್ರುತೋವಾ ದೃಷ್ಟೋವಾ ಕಥಿತೋವಾ ಕೃತೋಪಿವಾ । ಅನುಮೋದಿತೋವಾ ರಾಜೇಂದ್ರ ಪುನಾತಿ ಪುರುಷಂ ಸದಾ" (ಭಾರತ. ಆಶ್ವಮೇಧಿಕ) ಭಗವದಾರಾಧನರೂಪವಾದ ಕರ್ಮಾನುಷ್ಠಾನವನ್ನು ಕೇಳಿದರಾಗಲಿ, ನೋಡಿದರಾಗಲಿ, ಕೊಂಡಾಡಿದರಾಗಲಿ, ಮಾಡಿದರಾಗಲಿ, ಅನುಮೋದಿಸಿದರಾಗಲಿ, ಪುರುಷ ನನ್ನು ಪರಿಶುದ್ಧನನ್ನಾಗಿ ಮಾಡುತ್ತದೆ ಎಂದು ಭಾರತದಲ್ಲಿ ಹೇಳಲ್ಪಟ್ಟಿರುತ್ತದೆ. ಆದುದ ರಿಂದ ಕರ್ಮಯೋಗದಿಂದ ಈಗ ಮಾಡುವ ಲೌಕಿಕ ಕರ್ಮಗಳೂ ವೈದಿಕ ಧರ್ಮಗಳೂ ಅವುಗಳ ಫಲಗಳೂ ಲೇಪಿಸುವದಿಲ್ಲವು. ಪ್ರಾಚೀನ ಕರ್ಮಗಳೂ ತೊಲಗುವದರಿಂದ ಪರಿಶುದ್ಧನಾಗುವನು ಎಂಬ ಭಾವವು. ಇಲ್ಲಿ ಯೋಗಿಗಳು ಕರ್ಮ ಮಾಡುವದರಿಂದ ಪ್ರಯೋಜನವು, ಅವರ ಆತ್ಮ ಶುದ್ಧಿಯು, ಎಂದು ಹೇಳಿರುವದರಿಂದ, ಹಿಂದೆ ತಾನು ಮುಮುಕ್ಷುವಾಗದೆ ಕರ್ಮಯೋಗಾನು ಷ್ಠಾನವನ್ನು ಮಾಡದೆ ಇದ್ದುದರಿಂದ ಅನಾದಿಕಾಲದಿಂದಲೂ ಪ್ರಾಚೀನಕರ್ಮಗಳ ದೋಷದಿಂದ ದೂಷಿತನಾಗಿದ್ದನೆಂದು ತೋರಿಬರುತ್ತದೆ. ಆದರೆ ಪ್ರಾಚೀನಕರ್ಮಾನುಗುಣವಾಗಿ ಈ ಆತ್ಮ ನಿಗೆ ದೇವ ಮನುಷ್ಯ ಶರೀರ ಉಂಟಾಗಿ ತನ್ಮೂಲಕವಾಗಿ ಪ್ರವೃತ್ತಿಗಳುಂಟಾದರೆ, ಅವುಗಳು ಆತ್ಮ ಗತವಾಗುವದು ಹೇಗೆ? ಶರೀರಮಾಡಿದ ಕರ್ಮಗಳಿಗೆ ಆತ್ಮನು ಹೇಗೆ ಗುರಿಯು ಎಂದಾಕ್ಷೇ ಪಿಸಬಹುದು ; ಇಲ್ಲಿ ಆತ್ಮಗತ ಪ್ರಾಚೀನಕರ್ಮವೆಂಬ ಪ್ರಯೋಗವು ಹೇಗೆ ಕೂಡುತ್ತದೆ ಎಂದರೆ, ಆತ್ಮಾವಿಗೆ ಸರ್ವೇಶ್ವರನು ಆತನ ಕರ್ಮಾನುಗುಣವಾಗಿ ದೇಹವನ್ನು ಕಲ್ಪಿಸಿ ಪ್ರಾರಬ್ಧ ಕರ್ಮ ಫಲಾನುಭವಕ್ಕಾಗಿಯೂ ತನ್ನನ್ನು ಹೊಂದುವ ಸಾಧನಾನುಷ್ಠಾನಮಾಡುವದಕ್ಕಾಗಿಯೂ ಅದನ್ನು ಏರ್ಪಡಿಸಿರುತ್ತಾನೆ. ಹೀಗೆ ಎರಡು ವಿಧವಾಗಿಯೂ ಕರ್ತೃತ್ವವಿರುವದರಿಂದ, ಇಲ್ಲಿ ಆತ್ಮಗತಪ್ರಾಚೀನಕರ್ಮವೆಂಬ ಪ್ರಯೋಗವು. **ಆತ್ಮಗತ ಪ್ರಾಚೀನ ಕರ್ಮಬಂಧ ವಿನಾ ಶಾಯ** ಎಂಬ ಪ್ರಯೋಗದಿಂದ ಯಾವ ಪಾಪಗಳು ವಿನಾಶವನ್ನು ಹೊಂದುತ್ತವೆ ಎಂದರೆ, ಆತ್ಮಸಾಕ್ಷಾತ್ಕಾರಕ್ಕೂ ಉಪಾಯಾನುಷ್ಠಾನಕ್ಕೂ ಪ್ರತಿಬಂಧಕಗಳಾದ ಪ್ರಾಚೀನ ಕರ್ಮಗಳು

ಮೂ. ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾನ್ತಿಮಾಪ್ನೋತಿ ನೈಷ್ಠಿಕೀಂ ।
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨.

ಭಾ. ಯುಕ್ತಃ - ಆತ್ಮವ್ಯತಿರಿಕ್ತ ಫಲೇಷ್ವಚಪಲಃ ಆತ್ಮೈಕ ಪ್ರವಣಃ, ಕರ್ಮಫಲಂ ತ್ಯಕ್ತ್ವಾ ಕೇವಲ ಮಾತ್ಮಶುದ್ಧಯೇ ಕರ್ಮಾನುಷ್ಠಾಯ, ನೈಷ್ಠಿಕೀಂ ಶಾನ್ತಿಮಾಪ್ನೋತಿ-

ತೊಲಗುತ್ತವೆ. ಉಪಾಯಾನುಷ್ಠಾನಾರಂಭದಲ್ಲಿ ಮಾಡುವ ಶರಣಾಗತಿಯಿಂದಲೂ ಭಕ್ತಿಯೋಗ ನಿಷ್ಪತ್ತಿಯಿಂದಲೂ ಮಿಕ್ಕ ಸಮಸ್ತ ಪಾಪಗಳೂ ತೊಲಗುತ್ತವೆಂದು ತಿಳಿಯತಕ್ಕದ್ದು.

**ಮೂಲಕ್ಕೆ ಅರ್ಥವು**:—ಹಿಂದಿನ ಶ್ಲೋಕಗಳಲ್ಲಿ ಫಲಸಙ್ಗರಹಿತನಾಗಿ ಮಾಡುವ ಕರ್ಮಗಳು ಸಂಬಂಧಿಸದೇ ಇರುವುವೆಂದೂ, ಆತ್ಮಾವಲೋಕನಕ್ಕೂ ಭಕ್ತ್ಯುಪಾಯಾರಂಭಕ್ಕೂ ಪ್ರತಿಬಂಧಕಗಳಾದ ಪೂರ್ವಾರ್ಜಿತ ಕರ್ಮಗಳೂ ನಾಶವಾಗಿ ಆತ್ಮನು ಪರಿಶುದ್ಧನಾಗುವನೆಂದೂ, ಕರ್ಮಯೋಗ ಮಾಹಾತ್ಮ್ಯವು ಹೇಳಲ್ಪಟ್ಟಿತು. ಅನಾದಿ ಕರ್ಮಗಳು ಹಿಂದೆ ಬಂಧಕಗಳಾಗಿ ಪರಿಣಮಿಸಿರುವಲ್ಲಾ ಈಗ ಕರ್ಮಗಳಿಂದಲೇ ತೊಲಗುತ್ತವೆಂದರೆ, ಕರ್ಮಗಳೇ ಬಂಧಕಗಳಾಗಿಯೂ ಬಂಧ ನಾಶಕಗಳಾಗಿಯೂ ಆಗುವದು ಹೇಗೆ ಎಂಬ ಪೂರ್ವ ಪಕ್ಷಕ್ಕೆ ಸಮಾಧಾನವು ಇಲ್ಲಿ ಹೇಳಲ್ಪಡುತ್ತದೆ.—**ಯುಕ್ತಃ** - ಕರ್ಮಯೋಗಿಯು, ಆದುದರಿಂದ ಆತ್ಮಜ್ಞಾನವುಳ್ಳವನಾದುದರಿಂದ ಆತ್ಮವ್ಯತಿರಿಕ್ತ ಫಲವಲ್ಲಿ ಚಾಪಲ್ಯವಿಲ್ಲದವನೆಂಬ ಭಾವವು, **ಕರ್ಮಫಲಂ ತ್ಯಕ್ತ್ವಾ** - ತಾನು ಮಾಡುವ ಕರ್ಮಗಳ ಫಲವನ್ನು ಬಿಟ್ಟು, **ನೈಷ್ಠಿಕೀಂ ಶಾನ್ತಿಂ** - ಆತ್ಮಾನುಭವರೂಪವಾದ ಆನಂದವನ್ನು ಅಥವಾ ಮನಶ್ಶಾಂತಿಯನ್ನು, **ಆಪ್ನೋತಿ** - ಹೊಂದುತ್ತಾನೆ. **ಅಯುಕ್ತಃ** - ಕರ್ಮಯೋಗ ನಿಷ್ಠನಲ್ಲದವನಾದರೋ ಎಂದರೆ, ಆತ್ಮವ್ಯತಿರಿಕ್ತ ವಿಷಯಗಳಲ್ಲಿ ಚಪಲನಾದರೋ, **ಕಾಮಕಾರೇಣ** - ಆಶೆಯ ಪ್ರೇರಣೆಯಿಂದ, **ಫಲೇಸಕ್ತಃ** - ಕರ್ಮಫಲದಲ್ಲಿ ಅಭಿಲಾಷೆಯುಳ್ಳವನಾಗಿ, ಇರುವದರಿಂದ ಆಕಾರಣದಿಂದ ಆತ್ಮಾವಲೋಕನದಿಂದ ವಿಮುಖನಾಗಿ, **ನಿಬಧ್ಯತೇ** - ಸಂಪೂರ್ಣ ಸಂಸಾರಿಯಾಗುತ್ತಾನೆ. ಆತ್ಮಸ್ವರೂಪ ಜ್ಞಾನವುಳ್ಳ ಕರ್ಮಯೋಗಿಯು ಆತ್ಮವ್ಯತಿರಿಕ್ತ ವಿಷಯಗಳಲ್ಲಿ ವೈರಾಗ್ಯವುಳ್ಳವನಾಗುವದರಿಂದ ಕರ್ಮಗಳಲ್ಲಿ ಫಲಸಙ್ಗವನ್ನು ಬಿಡುವದರಿಂದ ಮೋಕ್ಷೋಪಯುಕ್ತವಾದ ಆತ್ಮ ಸಾಕ್ಷಾತ್ಕಾರವನ್ನು ಹೊಂದುವನು; ಹಾಗೆ ಆತ್ಮಸ್ವರೂಪ ಜ್ಞಾನಶೂನ್ಯನಾಗಿರುವ ಕರ್ಮಯೋಗಿಯಲ್ಲದವನು ವಿಷಯಾನುಭವಗಳಲ್ಲಿ ಚಪಲನಾಗಿರುವದರಿಂದ ಕರ್ಮ ಫಲಗಳಲ್ಲಿ ಆಸಕ್ತಿಯುಳ್ಳವನಾಗಿ ಪುನಃ ಪುನಃ ಸಂಸಾರಿಯಾಗುವನೆಂಬ ತಾತ್ಪರ್ಯವು.

**ಭಾಷ್ಯಾರ್ಥವು**:—ಒಂದೇ ಕರ್ಮಕ್ಕೆ ಬಂಧ ಹೇತುವಾಗೋಣವೂ ಬಂಧಮೋಕ್ಷಕ್ಕೆ ಹೇತುವಾಗೋಣವೂ ಸಹ ಸಹಕಾರಿವಿಶೇಷದಿಂದ ಕೂಡುತ್ತದೆ, ಹೇಗೆಂದರೆ, ಫಲಾಭಿಸಂಧಿಯುಕ್ತವಾಗಿ ಅನುಷ್ಠಿಸಿದರೆ ಬಂಧಕ್ಕೂ, ಫಲಾಭಿಸಂಧಿರಹಿತವಾಗಿ ಈಶ್ವರಪ್ರೀತಿಗಾಗಿ ನಡೆಸಿ ತಾನು ಮಾಡಲಿಲ್ಲವೆಂಬ ಅನುಸಂಧಾನವಿದ್ದರೆ ಬಂಧಕ ನಿವೃತ್ತಿಗೂ, ಸಹಕಾರಿಯಾಗುತ್ತದೆಂಬುದನ್ನು ವಿಶದೀಕರಿಸುತ್ತಾರೆ. **ಯುಕ್ತಃ** ಎಂದರೆ, **ಅತ್ಮವ್ಯತಿರಿಕ್ತ ಫಲೇಷ್ವಚಪಲಃ** - ಆತ್ಮನಲ್ಲದೆ ಬೇರೆ ಐಹಿಕ ಫಲಗಳಲ್ಲಿ ಚಪಲನಲ್ಲದೆ ಸಮಾಹಿತ ಮನಸ್ಕನು ಎಂದರೆ, **ಆತ್ಮೈಕ ಪ್ರವಣಃ** - ಆತ್ಮಸ್ವರೂಪಾನುಸಂಧಾನದಲ್ಲೇ ನಿರತನಾದವನು, **ಕರ್ಮಫಲಂ ತ್ಯಕ್ತ್ವಾ** - ಕರ್ಮಫಲವನ್ನು ಬಿಟ್ಟು, **ಕೇವಲ ಮಾತ್ಮಶುದ್ಧಯೇ** - ಮುಖ್ಯವಾಗಿ ಪ್ರತಿಬಂಧಕ ಪ್ರಾಚೀನ ಕರ್ಮಗಳೆಲ್ಲಾ ನಾಶವಾಗುವದಕ್ಕಾಗಿ, **ಕರ್ಮಾನುಷ್ಠಾಯ** – ಕರ್ಮವನ್ನು ಮಾಡಿ, **ನೈಷ್ಠಿಕೀಂ ಶಾನ್ತಿ**

ಭಾ. ಸ್ಥಿರಾ ಮಾತ್ಮಾನುಭವರೂಪಾಂ ನಿರ್ವೃತಿ ಮಾಪ್ನೋತಿ । ಅಯುಕ್ತಃ ಆತ್ಮವ್ಯತಿರಿಕ್ತ ಫಲೇಷು ಚಪಲಃ ಆತ್ಮಾವಲೋಕನ ವಿಮುಖಃ, ಕಾಮಕಾರೇಣ ಫಲೇಸಕ್ತಃ ಕರ್ಮಾಣಿ ಕುರ್ವನ್ ನಿತ್ಯಂ ಕರ್ಮಭಿ ರ್ಬಧ್ಯತೇ - ನಿತ್ಯಸಂಸಾರೀ ಭವತಿ. ಅತಃ ಫಲಸಙ್ಗರಹಿತ ಇಂದ್ರಿಯಾಕಾರೇಣ ಪರಿಣತಾಯಾಂ ಪ್ರಕೃತೌ ಕರ್ಮಾಣಿ ಸನ್ಯಸ್ಯ ಆತ್ಮನಃ ಬಂಧ ಮೋಚನಾಯೈವ ಕರ್ಮಾಣಿ ಕುರ್ವೀತೇತ್ಯುಕ್ತಂ ಭವತಿ ॥೧೨॥

---

ಮಾಪ್ನೋತಿ-ಎಂದರೆ, ಸ್ಥಿರಾಂ--ಸ್ಥಿರವಾದ ಆತ್ಮಾನುಭವರೂಪವಾದ, ನಿರ್ವೃತಿ ಮಾಪ್ನೋತಿ-ಸುಖವನ್ನು ಹೊಂದುವನು, ಭಗವದುಪಾಸನಕ್ಕೆ ಅರ್ಹನಾಗುವನೆಂಬ ಭಾವವು. ನೈಷ್ಠಿಕೀಂ ಶಾನ್ತಿಂ ಎಂದು ಮೂಲದಲ್ಲಿರುವದಕ್ಕೆ ಸಾಕ್ಷಾನ್ಮೋಕ್ಷವನ್ನೇ ಕರ್ಮಯೋಗನಿಷ್ಠನು ಹೊಂದುವನು ಎಂಬ ಭ್ರಮ ನಿವಾರಣಕ್ಕಾಗಿ ಅದಕ್ಕೆ ವ್ಯಾಖ್ಯಾನವಾಗಿ, ಸ್ಥಿರಾಂ ಆತ್ಮಾನುಭವರೂಪಾಂ ನಿರ್ವೃತಿಮಾಪ್ನೋತಿ ಎಂದು ಶ್ರೀ ಯತಿವರ್ಯರು ವ್ಯಾಖ್ಯಾನಮಾಡಿರುತ್ತಾರೆ; ಕರ್ಮಯೋಗವನ್ನು ಹೀಗೆ ಅನುಷ್ಠಿಸುವದರಿಂದ ಸ್ಥಿರವಾದ ಆತ್ಮಾನುಭವರೂಪವಾದ ಸುಖವನ್ನು ಹೊಂದುವನೆಂದು ಅರ್ಥಮಾಡಿರುತ್ತಾರೆ. ಅಯುಕ್ತಃ-ಎಂದರೆ, ಆತ್ಮವ್ಯತಿರಿಕ್ತ ಫಲಗಳಲ್ಲಿ ಚಪಲನಾಗಿರುವವನು, ಅಕಾರಣದಿಂದಲೇ, ಆತ್ಮಾವಲೋಕನ ವಿಮುಖಃ - ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸುವದಕ್ಕೆ ವಿಮುಖನಾಗಿ, ಕಾಮಕಾರೇಣ - ಆಶೆಯ ಪ್ರೇರಣೆಯಿಂದ, ಫಲೇಸಕ್ತಃ-ಫಲದಲ್ಲಿ ಸಂಬಂಧವುಳ್ಳವನಾಗಿ, ಕರ್ಮಾಣಿ ಕುರ್ವನ್ - ಕರ್ಮಗಳನ್ನು ಮಾಡುವವನಾಗಿ, ನಿತ್ಯಂ-ಯಾವಾಗಲೂ, ಕರ್ಮಭಿ ರ್ಬಧ್ಯತೇ - ಕರ್ಮಗಳಿಂದ ಬಂಧಿಸಲ್ಪಡುತ್ತಾನೆ ಎಂದರೆ, ನಿತ್ಯಸಂಸಾರೀ ಭವತಿ - ಯಾವಾಗಲೂ ಸಂಸಾರಬಂಧದಲ್ಲಿರುವವನೇ ಆಗುವನು. ತಾನೇ ನಿತ್ಯಸಂಸಾರಿಯಾಗುವಹಾಗೆ ಮಾಡಿಕೊಳ್ಳುವನೆಂಬ ಭಾವವು. ನಿಬಧ್ಯತೇ ಎಂಬುದಕ್ಕೆ ನಿತರಾಂಬಧ್ಯತೇ ಎಂಬರ್ಥವು ತೋರಿಬರುವದರಿಂದ ನಿತ್ಯಸಂಸಾರೀ ಭವತಿ ಎಂಬ ಪ್ರಯೋಗವು. ಹೀಗೆ ಮೋಕ್ಷಾರ್ಥಿಯಾಗಿ ಫಲಾಭಿಸಂಧಿರಹಿತನಾಗಿ ಕರ್ಮಗಳನ್ನನುಷ್ಠಿಸಿ, ಪರಮ ಪುರುಷಾರಾಧನ ರೂಪದಲ್ಲಿ ಆತನಲ್ಲಿ ಸಮರ್ಪಿಸಿ, ಮಾಡುವದಿಲ್ಲವು; ತನಗೆ ಪ್ರಾಪ್ತವಾದ ಕರಣ ಕಳೇಬರಗಳಿಂದ ನಡೆದುದು ಎಂಬ ಅನುಸಂಧಾನ ಬರುವತನಕವೂ ನಿತ್ಯಸಂಸಾರೀ ಎಂಬ ಭಾವವು. ಆತ್ಮಸ್ವರೂಪ ಯಾಥಾತ್ಮ್ಯವನ್ನರಿತವನು ಆತ್ಮೇತರ ವಸ್ತುಗಳಲ್ಲಿ ಮಮತೆಯನ್ನಿಡದೆ ಫಲದಲ್ಲೂ ಸಙ್ಗವಿಡದೆ ಕರ್ಮಮಾಡುತ್ತಾನಾದುದರಿಂದ, ಮೋಕ್ಷಕ್ಕೆ ಸಾಧನಭೂತವಾದ ಆತ್ಮಸಾಕ್ಷಾತ್ಕಾರವನ್ನು ಹೊಂದುತ್ತಾನೆ. ಹಾಗೆ ಆತ್ಮಸ್ವರೂಪ ಯಥಾರ್ಥಜ್ಞಾನವಿಲ್ಲದವನು, ಆತ್ಮವ್ಯತಿರಿಕ್ತ ವಿಷಯಗಳಲ್ಲಿ ಲಂಪಟನಾಗುವದರಿಂದ ಆತ್ಮಸಾಕ್ಷಾತ್ಕಾರವಿಲ್ಲದವನಾಗಿ, ಸಂಸಾರಬಂಧದಲ್ಲಿ ಬಿದ್ದು ತೊಳಲುವನೆಂದು ಹೇಳಲ್ಪಟ್ಟಿತು. ಹಿಂದೆ ಎಂಟನೆಯ ಶ್ಲೋಕವ ನೈವಕಿಂಚಿತ್ಕರೋಮಿ ಎಂದಾರಂಭಿಸಿ ಈ ಶ್ಲೋಕಾಂತ್ಯದವರೆಗೂ ಮಾಡಲ್ಪಟ್ಟ ಉಪದೇಶದ ಮುಖ್ಯಸಾರಾಂಶವನ್ನು ಈ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ — ಅತಃ - ಆ ಕಾರಣದಿಂದ, ಫಲಸಙ್ಗರಹಿತಃ-ಅನುಷ್ಠಿಸುವ ಕರ್ಮಫಲದಸಂಬಂಧವಿಲ್ಲದವನಾಗಿ, ಇಂದ್ರಿಯಾಕಾರೇಣ ಪರಿಣತಾಯಾಂ-ಇಂದ್ರಿಯಗಳ ರೂಪದಿಂದ ಪರಿಣಾಮವನ್ನು ಹೊಂದಿದ, ಪ್ರಕೃತೌ - ಪ್ರಕೃತಿಯಲ್ಲಿ, ಕರ್ಮಾಣಿಸಂನ್ಯಸ್ಯ – ಕರ್ಮಗಳನ್ನು ಇಟ್ಟು ಎಂದರೆ, ಪ್ರಾರಬ್ಧ ಕರ್ಮಾನುಗುಣವಾಗಿ ದೇಹವು ಕೆಲಸಗಳನ್ನು ನಡೆಸುತ್ತವೆ ಎಂಬ ಅನುಸಂಧಾನವುಳ್ಳವನಾಗಿ, ಕರ್ಮಾಣಿ ಕುರ್ವೀತ - ಕರ್ಮಗಳನ್ನು ಮಾಡತಕ್ಕದ್ದು. ಇತ್ಯುಕ್ತಂ ಭವತಿ - ಎಂಬಭಿಪ್ರಾಯವು ಉಪದೇಶಿಸಲ್ಪಟ್ಟಂತಾಯಿತು.

ಭಾ. ಅ. ಅಥ ದೇಹಾಕಾರೇಣ ಪರಿಣತಾಯಾಂ ಪ್ರಕೃತೌ ಕರ್ತೃತ್ವ ಸನ್ಯಾಸ ಉಚ್ಯತೇ–

ಮೂ. ಸರ್ವಕರ್ಮಾಣಿ ಮನಸಾ ಸನ್ನ್ಯಸ್ಯಾಸ್ತೇ ಸುಖಂ ವಶೀ ।
ನವದ್ವಾರೇ ಪುರೇ ದೇಹೀ ನೈವ ಕುರ್ವ ನ್ನಕಾರಯನ್ ॥ ೧೩.

ಭಾ. ಆತ್ಮನಃ ಪ್ರಾಚೀನ ಕರ್ಮಮೂಲದೇಹಸಂಬಂಧಪ್ರಯುಕ್ತ ಮಿದಂ ಕರ್ಮಣಾಂ ಕರ್ತೃತ್ವಂ ನ ಸ್ವರೂಪ ಪ್ರಯುಕ್ತಮಿತಿ ವಿವೇಕವಿಷಯೇಣ ಮನಸಾ ಸರ್ವಾಣಿ

ಭಾಷ್ಯಾವತಾರಿಕೆಯು :—ಅಥ - ಅನಂತರದಲ್ಲಿ, ಎಂದರೆ, ಈ ಶ್ಲೋಕದಲ್ಲಿ, ದೇಹಾಕಾರೇಣ - ದೇಹರೂಪದಿಂದ, ಪರಿಣತಾಯಾಂ ಪ್ರಕೃತೌ - ಪರಿಣಾಮವನ್ನು ಹೊಂದಿದ ಪ್ರಕೃತಿಯಲ್ಲಿ, ಕರ್ತೃತ್ವದ ಸನ್ಯಾಸವು ಎಂದರೆ, ಕರ್ತೃತ್ವವನ್ನಿಡುವದು ಮತ್ತು ತನಗೆ ಕರ್ತೃತ್ವವಿಲ್ಲವೆಂಬ ಭಾವನೆಯೂ, ಉಚ್ಯತೇ - ಹೇಳಲ್ಪಡುತ್ತದೆ. ಕರ್ತೃತ್ವವು ತನ್ನಲ್ಲಿಲ್ಲವು. ತಾನು ಮಾಡುವ ಕರ್ಮಗಳೆಲ್ಲಾ ಪ್ರಾರಬ್ಧ ಕರ್ಮಾನುಗುಣವಾಗಿ ಬಂದ ದೇಹಪ್ರಯುಕ್ತವಾದುದರಿಂದ ದೇಹಕೃತವೆಂದು ಭಾವಿಸೋಣವು. ಇದು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆಂಬ ತಾತ್ಪರ್ಯವು. ಇಲ್ಲಿ ದೇಹಶಬ್ದದಿಂದ ಮನಸ್ಸು, ಇಂದ್ರಿಯಪ್ರಾಣವೂ ಸಹ ಹೇಳಲ್ಪಟ್ಟವು.

ಮೂಲಕ್ಕೆ ಅರ್ಥವು :—ಹಿಂದೆ ಒಂಬತ್ತನೆಯ ಶ್ಲೋಕದಲ್ಲಿ "ಇಂದ್ರಿಯಾಣಿ ಇಂದ್ರಿಯಾರ್ಥೇಷು ವರ್ತನ್ತ ಇತಿಧಾರಯನ್" ಎಂಬಲ್ಲಿ ಇಂದ್ರಿಯಗಳಲ್ಲಿ ಕರ್ಮಸನ್ಯಾಸವನ್ನು ಹೇಳಿದರು. ಆ ಇಂದ್ರಿಯ.ಗಳಿಗೆ ಶರೀರವು ಆಶ್ರಯವಾದುದರಿಂದ ಶರೀರದಲ್ಲಿ ಕರ್ಮಸನ್ಯಾಸವು ಹೇಳಲ್ಪಡುತ್ತದೆ. ದೇಹೀ - ಈ ಶರೀರವನ್ನೇ ಆಶ್ರಯವಾಗಿಹೊಂದಿರುವ ಆತ್ಮನು, ಸರ್ವಕರ್ಮಾಣಿ - ತನಗೆ ಈಗ ಪ್ರಾರಬ್ಧಕರ್ಮಾನುಗುಣವಾಗಿ ಬಂದಿರುವ ದೇಹಮೂಲಕ ಮಾಡುವ ಸರ್ವ ಕರ್ಮಗಳನ್ನೂ, ನವದ್ವಾರೇ - ಎರಡು ಕಣ್ಣು, ಎರಡು ಮೂಗಿನ ಸೊಳ್ಳೆ, ಎರಡು ಕಿವಿ, ಬಾಯಿ, ಮಲಮೂತ್ರದ್ವಾರಗಳು, ಹೀಗೆ ಒಂಬತ್ತು ಬಾಗಿಲುಗಳಿರುವ, ಪುರೇ - ಆತ್ಮನ ರಾಜಧಾನಿಯಾದ ಈ ಪಟ್ಟಣರೂಪವಾದ ಶರೀರದಲ್ಲಿ, ಮನಸಾ ಸನ್ನ್ಯಸ್ಯ-ಮನಸ್ಸಿನಿಂದ ಯುಕ್ತನಾಗಿ ಇಟ್ಟು, ಎಂತಹ ಮನಸ್ಸಿನಿಂದ ಇಟ್ಟು ಎಂದರೆ, ತನ್ನ ಆತ್ಮನ ಸ್ವರೂಪವು ಅಣುವಾಗಿ ಜ್ಞಾನರೂಪವಾಗಿರುವದರಿಂದ, ಈಗ ತನಗೆ ಪ್ರಾಚೀನ ಕರ್ಮಮೂಲಕ ಬಂದಿರುವ ಕರ್ತೃತ್ವವು ತನ್ನ ಸ್ವರೂಪ ಪ್ರಯುಕ್ತವಾದುದಲ್ಲವು, ತಾನು ಈಗ ಪ್ರಾರಬ್ಧಕರ್ಮದ ಉಪಭೋಗಕ್ಕಾಗಿ ಧರಿಸಿಕೊಂಡಿರುವ ಶರೀರ ಪ್ರಯುಕ್ತವಾದುದು ಎಂಬ ಅನುಸಂಧಾನದಿಂದ ಕೂಡಿದ ಮನಸ್ಸಿನಿಂದ, ವಶೀ – ಇಂದ್ರಿಯಗಳನ್ನು ಜಯಿಸಿದವನಾಗಿ ಎಂದರೆ, ಅವುಗಳ ಉಪಭೋಗಗಳಲ್ಲಿ ಮನಸ್ಸನ್ನಿಡದೆ, ಆ ಕಾರಣದಿಂದಲೇ, ನೈವ ಕುರ್ವನ್ - ದೇಹವು ನನಗೆ ಆಶ್ರಯವಾಗಿ ಅದೇ ಮಾಡುವದರಿಂದ ನಾನು ಮಾಡುತ್ತೇನೆಂಬ ಅನುಸಂಧಾನವಿಲ್ಲದೆಯೂ, ನೈವ ಕಾರಯನ್ - ದೇಹವೇ ಕರ್ಮವನ್ನು ಮಾಡುತ್ತಿರಲು ನಾನೇ ಮಾಡಿಸುವನೆಂದು ಭಾವಿಸದೆಯೂ, ಸುಖಮಾಸ್ತೇ- ಸ್ವಸ್ಥಚಿತ್ತನಾಗಿ ಇರುವನು.

ಭಾಷ್ಯಾರ್ಥವು:—ಈತನು ತನಗೆ ಪ್ರಾರಬ್ಧ ಕರ್ಮಮೂಲಕ ಬಂದ ಕರ್ತೃತ್ವವನ್ನು ದೇಹದಲ್ಲಿ ಮನಸ್ಸಿನಮೂಲಕ ಇಡತಕ್ಕದ್ದು ಎಂದು ಮೂಲದಲ್ಲಿ ಹೇಳಿರುತ್ತದೆ. ಹಾಗೆ ಮನಸ್ಸಿನಲ್ಲಿಡುವದು ಹೇಗೆ ಎಂದರೆ, ಹೇಳುತ್ತಾರೆ.—ಆತ್ಮನಃ - ಜೀವಾತ್ಮನ, ಪ್ರಾಚೀನ ಕರ್ಮಮೂಲಕವಾಗಿ ಪ್ರಾಪ್ತವಾದ, ದೇಹಸಂಬಂಧಪ್ರಯುಕ್ತಂ-ತನಗಿರುವ ಈ ದೇಹಸಂಬಂಧ ಮೂಲಕವಾದುದು,

**ಭಾ. ಕರ್ಮಾಣಿ ನವ ದ್ವಾರೇ ಪುರೇ ಸನ್ನ್ಯಸ್ಯ ದೇಹೀ ಸ್ವಯಂ ವಶೀ ದೇಹಾಧಿಷ್ಠಾನ ಪ್ರಯತ್ನಮಕುರ್ವ್ವನ್, ದೇಹಂ ಚ ನೈವ ಕಾರಯನ್ ಸುಖಮಾಸ್ತೇ ॥೧೩॥**

**ಇದಂ ಕರ್ಮಣಾಂ ಕರ್ತೃತ್ವಂ** - ಈ ಕರ್ಮಗಳ ಕರ್ತೃತ್ವವು, **ನ ಸ್ವರೂಪ ಪ್ರಯುಕ್ತಂ** - ತನ್ನ ಸ್ವರೂಪ ಮೂಲಕವಾದುದು ಅಲ್ಲವು, **ಇತಿ ವಿವೇಕ ವಿಷಯೇಣ ಮನಸಾ**-ಎಂಬ ವಿವೇಕಯುಕ್ತವಾದ ಮನಸ್ಸಿನಿಂದ ಎಂದರೆ, ವಿವೇಕವುಳ್ಳ ಮನಸ್ಸಿನಿಂದ, **ಸರ್ವಾಣಿ ಕರ್ಮಾಣಿ** - ಸಮಸ್ತ ಕರ್ಮಗಳನ್ನೂ, **ನವದ್ವಾರೇ ಪುರೇ ಸಂನ್ಯಸ್ಯ**-ಈ ಒಂಬತ್ತು ಬಾಗಲುಗಳುಳ್ಳ ದೇಹವೆಂಬುವ ಪಟ್ಟಣದಲ್ಲಿ ಇಟ್ಟುಬಿಟ್ಟು **ದೇಹೀ** – ಶರೀರಸ್ಥನಾದ ಜೀವಾತ್ಮನು, **ಸ್ವಯಂ ವಶೀ** - ತಾನೇ ಇಂದ್ರಿಯಗಳನ್ನೆಲ್ಲಾ ವಶದಲ್ಲಿಟ್ಟವನಾಗಿ, ಜಯಿಸಿದವನಾಗಿ, **ದೇಹಾಧಿಷ್ಠಾನ ಪ್ರಯತ್ನಮಕುರ್ವ್ವನ್** - ತನಗೆ ದೇಹವಾಶ್ರಯವು, ಆದುದರಿಂದ ತಾನು ಪ್ರಯತ್ನಪಡಬೇಕೆಂಬ ಅಭಿಮಾನವಿಲ್ಲದವನಾಗಿಯೂ, **ದೇಹಂ ಚ ನೈವ ಕಾರಯನ್**-ದೇಹವು ತನಗೆ ಅಧೀನವು, ಆ ಕಾರಣದಿಂದ ತಾನು ದೇಹವನ್ನು ಮಾಡುವಹಾಗೆ ಪ್ರೇರಿಸಬೇಕೆಂಬಭಿಮಾನವನ್ನು ಬಿಟ್ಟವನಾಗಿ, **ಸುಖಮಾಸ್ತೇ** - ನಿಶ್ಚಂಚಲಬುದ್ಧಿಯುಳ್ಳವನಾಗಿ ಎಂದರೆ, ಸ್ಥಿರಬುದ್ಧಿಯುಳ್ಳವನಾಗಿರುತ್ತಾನೆ. ಆತ್ಮಯಾಥಾತ್ಮ್ಯವನ್ನು ತಿಳಿದ ವಿವೇಕ ಮನಸ್ಕನು ಮೇಲೆ ಹೇಳಿದಹಾಗೆ ದೇಹದಿಂದಾಗುವ ಕರ್ಮಗಳಲ್ಲಿ ಯಾವವಿಧವಾದ ಸಂಬಂಧವನ್ನಾಗಲಿ, ಮಮತೆಯನ್ನಾಗಲಿ, ಇಡುವದಿಲ್ಲವು. ತಾನೇ ದೇಹದ ಮೂಲಕ ಮಾಡುತ್ತೇನೆಂದಾಗಲಿ, ತನ್ನ ಸಹಾಯದಿಂದ ದೇಹವು ಕೆಲಸಗಳನ್ನು ನಡೆಸುತ್ತದೆಂದಾಗಲಿ ಭಾವಿಸುವದಿಲ್ಲವೆಂಬ ತಾತ್ಪರ್ಯವು. ಏಕೆಂದರೆ, ಕರ್ಮಗಳ ಕರ್ತೃತ್ವವು ಆತ್ಮನಾದ ತನ್ನ ಸ್ವರೂಪಕ್ಕೆ ಸೇರಿದುದಲ್ಲವು; ಪ್ರಾರಬ್ಧ ಕರ್ಮ ಪ್ರಯುಕ್ತವಾಗಿ ಬಂದ ದೇಹಕ್ಕೆ ಸಂಬಂಧಿಸಿದುದು ಎಂಬ ಭಾವವು. ನವದ್ವಾರೇ ಪುರೇ ಎಂದು ದೇಹವನ್ನು ಕುರಿತು ಇಲ್ಲಿ ಏಕೆ ಹೇಳಲ್ಪಟ್ಟಿತೆಂದರೆ, ಈ ನವ ದ್ವಾರಗಳು ಈ ದೇಹಕ್ಕಿರುವದು ಈ ಲೋಕದ ಸರ್ವಾನುಭವಗಳಿಗೂ ಉಪಭೋಗಗಳಿಗೂ ಸಾಧನವಾಗಿ ಎಂಬ ಭಾವವು. ಪ್ರಾರಬ್ಧಕರ್ಮಾನುಗುಣವಾಗಿ ಸುಖ ದುಃಖೋಪಭೋಗಗಳಿಗೆ ಯೋಗ್ಯವಾದುದು ಎಂಬುದು ಭಾವವು. ಈ ಒಂಬತ್ತು ಬಾಗಿಲುಗಳುಳ್ಳ ಪಟ್ಟಣಕ್ಕೆ ತಾನು ಅಧಿಪತಿಯಾಗಿರುವೆನೆಂಬ ಹೆಮ್ಮೆಯಿಂದ ದೇಹದಿಂದಾಗತಕ್ಕ ಕೆಲಸಗಳನ್ನು ತನ್ನಲ್ಲಿ ಆರೋಪಿಸಿಕೊಳ್ಳಕೂಡದೆಂಬುದು ತಾತ್ಪರ್ಯವು. ಅದೂ ಅಲ್ಲದೆ ಅನೇಕ ತಿರ್ಯಕ್‌ಪಾದಪಾದಿ ಜನ್ಮಗಳಲ್ಲಿ ಈ ಒಂಬತ್ತು ದ್ವಾರಗಳೂ ಶರೀರಕ್ಕಿರುವದಿಲ್ಲವು. ಮನುಷ್ಯ ಶರೀರಕ್ಕೆ ಇವುಗಳುಂಟಾಗಿ ಇಂತಹ ಉತ್ಕೃಷ್ಟ ಜನ್ಮದಲ್ಲಿ ಬುದ್ಧಿ ವಿವೇಕಗಳನ್ನು ಸರ್ವೇಶ್ವರನು ಕೊಟ್ಟಿರುವಾಗಲೇ ಮನಸ್ಸಿನಲ್ಲಿ ವಿವೇಕವನ್ನು ತಂದುಕೊಂಡವನಾಗಿ, ಆತ್ಮಯಾಥಾತ್ಮ್ಯಜ್ಞಾನದಮೂಲಕ ದೇಹದಲ್ಲೇ ಸರ್ವಕರ್ತೃತ್ವವನ್ನು ಇಟ್ಟು ಕರ್ಮಾಭಿಮಾನಿಯಾಗದೆ ಮೋಕ್ಷೋಪಾಯಕ್ಕೆ ಬೇಕಾದ ಆತ್ಮಸಾಕ್ಷಾತ್ಕಾರವನ್ನು ಹೊಂದತಕ್ಕದ್ದು ಎಂಬುದು ತಾತ್ಪರ್ಯವು. ಇಂತಹ ಮೋಕ್ಷಸಾಧನಗಳಾದ ಜ್ಞಾನ ವಿಜ್ಞಾನಗಳ ಪ್ರಾಪ್ತಿಯೂ ಅಂತಹ ಜ್ಞಾನಸಾಧನವಾದ ಜ್ಞಾನೇಂದ್ರಿಯಗಳ ಮೂಲಕವೇ ಎಂದು ತಿಳಿಸುವದಕ್ಕಾಗಿಯೂ ನವದ್ವಾರವೆಂಬ ಪ್ರಯೋಗವು. ಇದಕ್ಕಾಗಿಯೇ ಈ ಕಾಯವೆಂಬ ನೌಕ-ನಾವೆಯು ತನಗೆ ಪ್ರಾಪ್ತವಾಗಿವೆ ಯೆಂದೂ ಇವರಿಂದ ಬಂಧಕವಾದ ಸಮುದ್ರವನ್ನು ದಾಟುವ ಸರ್ವ ಪ್ರಯತ್ನವನ್ನೂ ಮಾಡತಕ್ಕದ್ದು ಎಂಬುದು ಭಾವವು. ಆದುದರಿಂದಲೇ ಈ ಕ್ಷೇತ್ರವು ಕರ್ಮಯೋಗಾದಿಗಳನ್ನು ಅನುಷ್ಠಿಸಲು ಸಾಧನವಾದ ಧರ್ಮಕ್ಷೇತ್ರವೆಂದೂ ತುಂಬಾ ಪವಿತ್ರವಾದುದಾಗಿ ಕುರುಕ್ಷೇತ್ರವೆಂದೂ ಆದಿಯಲ್ಲೇ ಹೇಳಲ್ಪಟ್ಟಿತು. ಹೀಗೆ ಈ ಧರ್ಮಕ್ಷೇತ್ರವನ್ನು ಉಪಯೋಗಿಸಿಕೊಳ್ಳುವನನ್ನು **ಯುಕ್ತ**ನೆಂದು ಶ್ಲಾಘಿಸಿ, ಹಾಗೆ ಉಪ

ಯೋಗಿಸಿಕೊಳ್ಳದ ನಿರ್ಭಾಗ್ಯನನ್ನು ಅಯುಕ್ತನೆಂದೂ ನಿಂದಿಸಿತು. ಈ ಸಂದರ್ಭದಲ್ಲಿ ಶ್ರೀ ಕೃಷ್ಣಭಗವಾನರವರು ಉದ್ಧವನಿಗೆ ಉಪದೇಶಿಸಿದ ಶ್ಲೋಕವು ಅನುಸಂಧೇಯವು. ನೃದೇಹ ಮಾದ್ಯಂ ಸುಲಭಂ ಸುದುರ್ಲಭಂ ಪ್ಲವಂ ಸುಕಲ್ಪಂ ಗುರುಕರ್ಣಧಾರಮ್ । ಮಯಾ ನುಕೂಲೇನ ನಭಸ್ವತೇ ರಿತಂ ಪುಮಾ ನ್ಭವಾಬ್ಧಿಂ ನತರೇತ್ಸ ಆತ್ಮಹಾ॥ಭಾಗ.(೧೧. ೨೦. ೧೭) ಹೀಗೆ ಮೇಲೆ ಹೇಳಿದ ಹಾಗೆ ಯುಕ್ತನಾಗಿ ಶ್ರೇಯಸ್ಸಾಧನವನ್ನು ಮಾಡಿಕೊಳ್ಳುವದಕ್ಕಾಗಿ ಭಗವಂತನು ಕರುಣೆಯಿಂದ ದಯಪಾಲಿಸಿದುದು ಈ ನವದ್ವಾರದೇಹವು. ಅಂತಹ ದೇಹಪ್ರಾಪ್ತಿಯುಂಟಾದ ಸುಸಮಯವು ಒದಗಿದ್ದರೂ ಈ ಮನುಷ್ಯನು ಸಂಸಾರಸಮುದ್ರವನ್ನು ದಾಟುವದಿಲ್ಲವೇ, ಎಂತಹ ನಿರ್ಭಾಗ್ಯನಿವನು ಎಂದು ನಿಂದಿಸುತ್ತಾರೆ,—ಈ ನೃದೇಹವು, ಆದ್ಯಂ - ಸರ್ವ ಪುರುಷಾರ್ಥಕ್ಕೂ ಸಾಧನಭೂತವಾದುದು, ಸುದುರ್ಲಭಂ - ಮನುಷ್ಯ ದೇಹಬೇಕು ಎಂದು ಎಷ್ಟು ಪ್ರಯತ್ನಪಟ್ಟರೂ ಕಷ್ಟದಿಂದ ಪ್ರಾಪ್ತವಾಗುವಂಥಾದ್ದು, ಸಮಸ್ತ ಸಾಧನಗಳಿಗೂ ಉಪಯುಕ್ತವಾದುದು, ಗುರುಕರ್ಣಧಾರಂ - ಆಶ್ರಯಿಸಲ್ಪಟ್ಟ ಸದ್ಗುರುವೇ ನಾವಿಕನಾಗಿ ಉಳ್ಳದು, ಇಂತಹ, ಪ್ಲವಂ - ತೆಪ್ಪವೆಂದರೆ ನಾವೆಯನ್ನು, ಲಬ್ಧ್ವಾ - ಪರಮ ಪುರುಷನ ಅನುಗ್ರಹದಿಂದ ಪ್ರಾಪ್ತವಾಗಿದ್ದರೂ,ಪುನರ್ಹ-ಹೀಗೆ ದೇಹಸಂಬಂಧವಿದ್ದರೂ ಮಹಾಪರಿಶುದ್ಧನಾದ ಜೀವಾತ್ಮನು ಪ್ರಯತ್ನಪಟ್ಟು, ನ ತರೇತ್ - ದಾಟದೇ ಇದ್ದರೆ, ಸಃ - ಅವನು, ಆತ್ಮಹಾ - ನಿರ್ಭಾಗ್ಯನಾಗಿ, ಆತ್ಮನಾಶವನ್ನು ಮಾಡಿಕೊಂಡವನೆಂದು ಭಾವಿಸತಕ್ಕದ್ದು. ಆಗಲಿ ಆ ನಾವೆಯಲ್ಲಿ ಕೂತು ದಾಟುವದಕ್ಕೇನೋ ಪ್ರಯತ್ನ ಮಾಡಬಹುದು; ಕರ್ಮವಾಸನಾರೂಪ ಬಿರುಗಾಳಿ ಬಂದು ಈತನನ್ನು ಮುಳಿಗಿಸಲಾರದೋ ಎಂದರೆ, ಕರುಣಾಸಾಗರನು ಹೇಳುತ್ತಾನೇನೆಂದರೆ, ಅಂತಹ ಭಯವೇನೂ ಇರುವದಿಲ್ಲವು; ಯಾವಾಗ ಎಂದರೆ ಹೇಳುತ್ತಾರೆ, ಮಯಾನುಕೂಲೇನ ನಭಸ್ವತೇರಿತಂ - ನನ್ನನ್ನು ಆಶ್ರಯಿಸಿ, ಎಲ್ಲಾ ಧರ್ಮಯುಕ್ತವಾದ ಪ್ರವೃತ್ತಿಗಳನ್ನೂ ನನ್ನಲ್ಲಿ ಸಮರ್ಪಿಸಿಬಿಟ್ಟು, ನನ್ನನ್ನು ಸಿದ್ಧೋಪಾಯನಾಗಿ ವರಿಸಿ, ಅನುಕೂಲವಾದ ಗಾಳಿಯಾದ ನನ್ನಿಂದ ಯಾವಾಗ ಆ ನಾವೆಯು ಪ್ರೇರಿತವಾಯಿತೋ, ಆಗ ಯಾವ ಬಿರುಗಾಳಿಯ ಭಯವೂ ಇಲ್ಲದೆ ಸಂಸಾರಸಾಗರದ ಆಚೆಯ ದಡವನ್ನು ಹೋಗಿ ಸೇರಬಹುದೆಂಬುದು ಈ ಶ್ಲೋಕ ತಾತ್ಪರ್ಯವು. ವಶೀ ಎಂದು ಹೇಳಿರುವದರಿಂದ ಐಹಿಕ ಭೋಗಗಳಿಗೂ ಮಮತೆಗಳಿಗೂ ವಶನಾಗಬಾರದೆಂಬುದು ತೋರಿಬರುತ್ತದೆ. ಕರ್ತೃತ್ವಾಭಿಮಾನವಿದ್ದುದಾದರೆ, ಸರ್ವ ವಿಧ ಕ್ಲೇಶಗಳುಂಟಾಗುವುವು. ಆ ಅಭಿಮಾನವಿಲ್ಲದಿದ್ದರೆ, ಸುಖವಾಗಿ ಚಿತ್ತಸ್ವಾಸ್ಥ್ಯದಿಂದಿರಬಹುದೆಂದು ತಿಳಿಸಲು ಸುಖಮಾಸ್ತೇ ಎಂದು ಹೇಳಲ್ಪಟ್ಟಿರುತ್ತದೆ. ಯಾವನು ಈ ಶರೀರವನ್ನೇ ಒಂದು ಪಟ್ಟಣವನ್ನಾಗಿ ಭಾವಿಸಿ, ಅದರಲ್ಲಿ ಇಂದ್ರಿಯ ಪ್ರಾಣಾದಿಗಳು ಪರಮಾತ್ಮನಿಗಾಗಿ ಕಾರ್ಯನಿರ್ವಾಹಕ ಪೌರರೆಂದೂ, ಪರಮಾತ್ಮನೇ ಸಾರ್ವಭೌಮನೆಂದೂ, ತಾನು ಅವನಿಗೆ ಭೃತ್ಯನೆಂದೂ ಭಾವಿಸುವನೋ ಅಂತವನು, ಸುಖಮಾಸ್ತೇ - ಚಿತ್ತ ಸ್ವಾಸ್ಥ್ಯವನ್ನು ಹೊಂದಿ, ನಿರತಿಶಯ ಸುಖಕ್ಕೆ ಉತ್ತರೋತ್ತರ ಭಾಗಿಯಾಗುವನು. ಹಾಗಲ್ಲದೆ, ಈ ಪುರದಲ್ಲಿ, ಅಹಂ ಎಂದು ತಾನೇ ರಾಜನೆಂದೂ, ಭೋಗಾನುಭವಕ್ಕಾಗಿ ಈ ಇಂದ್ರಿಯ ಪ್ರಾಣಾದಿಗಳೆಂದೂ ಭಾವಿಸುವವನು ಚಿತ್ತಸ್ವಾಸ್ಥ್ಯವಿಲ್ಲದವನಾಗಿ ಬಂಧದಲ್ಲೇ ತೊಳಲುವನೆಂಬ ಭಾವವೂ ಸೂಚಿತವು. ಅದೇಕೆಂದರೆ, ತಾನು ಈ ದೇಹಕ್ಕೆ ರಾಜನು, ತನಗೆ ಪಟ್ಟಮಹಿಷಿಯು ಮನಸ್ಸು, ಇಂದ್ರಿಯಗಳು ತನ್ನ ಕ್ರೀಡೆಗೆ ಯೋಗ್ಯರಾದ ಇತರ ಮಹಿಷಿಯರು; ಅವರೊಂದಿಗೆಲ್ಲಾ ತಾನು ಉಪಭೋಗ ಸುಖಾದಿಗಳನ್ನು ಹೊಂದಬೇಕು ಎಂಬ ಭಾವನೆ ಇದ್ದುದಾದರೆ, "ಬಹ್ವಸ್ಸಪತ್ನ್ಯ ಇವಗೇಹ ಪತಿಂ ಲುನನ್ತಿ" ಅನೇಕ ಹೆಂಡರು ಒಟ್ಟಿಗೆ ಸೇರಿ, ಈ ದೇಹಕ್ಕೆ ಯಜಮಾನನಾದವನನ್ನು ನಾಶಮಾಡಿಬಿಡುತ್ತಾರೆಂಬ

ಭಾ. ಅ. ಸಾಕ್ಷಾದಾತ್ಮನಸ್ಸ್ವಾಭಾವಿಕಂ ರೂಪಮಾಹ—

ಮೂ. ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮ ಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪.

ಭಾವವೂ ತೋರಿಬರುತ್ತದೆ ; ಹಾಗಲ್ಲದೆ ಈ ದೇಹವು ಧರ್ಮಕ್ಷೇತ್ರವು, ಪವಿತ್ರವಾದ ಕುರುಕ್ಷೇತ್ರವೆಂದು ಭಾವಿಸಿ ಪರಮಾತ್ಮನಿಗೆ ಆಯತನಂ ಮಹತ್ ಇದೊಂದು ದೇವಾಲಯವು, ಪರಮಾತ್ಮನ ಸೇವಕನು ತಾನು, ತನಗೆ ಪ್ರೇರಕನಾಗಿ ಈ ದೇಹದ ಮೂಲಕ ತನಗಾಗಿ ಎಲ್ಲವನ್ನೂ ನಡೆಸಿಕೊಳ್ಳುತ್ತಾನೆ, ತನ್ನದೇನೂ ಇರುವದಿಲ್ಲವೆಂಬ ಅನುಸಂಧಾನವಿದ್ದರೆ ಮತ್ತು ಪರಮಾತ್ಮ ಪ್ರಾಪ್ತಿಗಾಗಿಯೇ ಈ ಯಂತ್ರವು ತನಗೆ ಪರಮಾತ್ಮನಿಂದ ಕೊಡಲ್ಪಟ್ಟಿತೆಂದು ಭಾವಿಸಿ, ಐಹಿಕಾದಿ ಭೋಗಗಳಲ್ಲಿ ಲಿಪ್ತನಾಗದೆ ಕರ್ಮಯೋಗಾದಿಗಳನ್ನು ಫಲ ಕರ್ತೃತ್ವ ಮಮತಾರಹಿತನಾಗಿ ಅನುಷ್ಠಿಸುತ್ತಾ, ಅವುಗಳನ್ನು ತಾನು ಅನುಷ್ಠಿಸಲಿಲ್ಲವು, ತನಗೆ ಪ್ರಾಪ್ತವಾದ ದೇಹದಮೂಲಕ ನಡೆಯಿತು ಎಂಬ ಅನುಸಂಧಾನವಿದ್ದರೆ ಪರಮಶ್ರೇಯಸ್ಸನ್ನು ಕ್ರಮೇಣ ದೈವಾನುಗ್ರಹದಿಂದ ಹೊಂದುವನು ಎಂಬುದು ತಾತ್ಪರ್ಯವು. ಈ ನವದ್ವಾರೇಪುರೇ ಎಂಬಲ್ಲಿ ತೋರಿಬರುವ ಅಭಿಪ್ರಾಯವೆಲ್ಲಾ ಶ್ರೀ ಭಾಗವತದ ಪುರಂಜನೋಪಾಖ್ಯಾನದಲ್ಲಿ ಬಹು ವಿಸ್ತರವಾಗಿ ಉಪಪಾದಿತವಾಗಿರುತ್ತದೆ.

**ಭಾಷ್ಯಾವತಾರಿಕೆಯ ಅರ್ಥವು :**—ಜೀವಾತ್ಮನ ಮಹಾ ಪರಿಶುದ್ಧವಾದ ಜ್ಞಾನಮಯವಾದ ಅಮೋಘಸ್ವರೂಪವು ಈ ಪ್ರಾರಬ್ಧಾನುಭವಕ್ಕಾಗಿ ಕೊಟ್ಟ ಕರಣಕಳೇಬರಗಳಿಂದ ತಿರೋಹಿತವಾಗಿರುವದರಿಂದ ದೇಹಸಂಬಂಧವಾದ ಕರ್ತೃತ್ವಾದಿಗಳಲ್ಲಿ ಮಮತಾಶೂನ್ಯನಾಗಿರತಕ್ಕದ್ದೆಂದೂ, ಆದುದರಿಂದ ಕರ್ತೃತ್ವವನ್ನು ದೇಹದಲ್ಲಿ ಸನ್ನ್ಯಾಸಮಾಡತಕ್ಕದ್ದೆಂದೂ,ಹೇಳಲ್ಪಟ್ಟಿತು. ಹಾಗಾದರೆ, ಆತ್ಮನ ನೈಜವಾದ ಸ್ವರೂಪವೆಂಥಾದ್ದೆಂಬದಾಗಿ ಈ ಮುಂದಿನ ಶ್ಲೋಕವು ತಿಳಿಸುತ್ತದೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಸಾಕ್ಷಾದಾತ್ಮನಃ ಸ್ವಾಭಾವಿಕಂ ರೂಪಮಾಹ. ಆತ್ಮನಿಗೆ ಈ ದೇಹೋಪಾಧಿಯು ಇಲ್ಲದಿರುವ ಸಂದರ್ಭದಲ್ಲಿನ ಸಾಕ್ಷಾತ್ತಾದ ನೈಜವಾದ ಸ್ವರೂಪವನ್ನು ಹೇಳುತ್ತಾರೇನೆಂದರೆ.—

**ಮೂಲಕ್ಕೆ ಅರ್ಥವು :**—ಪ್ರಭುಃ - ಜ್ಞಾನಸ್ವರೂಪನಾಗಿಯೂ, ಜ್ಞಾನಗುಣಕನಾಗಿಯೂ ಇರುವದರಿಂದ;ಬಹು ಸಮರ್ಥನಾದ ಈ ಜೀವಾತ್ಮನು, ಲೋಕಸ್ಯ-ದೇವ ತಿರ್ಯಙ್ಮನುಷ್ಯ ಸ್ಥಾವರಗಳಿಗೆ ಶರೀರವಾಗಿರುವ ಈ ಪ್ರಕೃತಿ ಸಂಬಂಧವಿರುವ ಲೋಕದ, ಕರ್ತೃತ್ವಂ-ಕರ್ತೃತ್ವವನ್ನು, ನ ಸೃಜತಿ- ಉಂಟುಮಾಡಲು ಶಕ್ತಿಯಿಲ್ಲವು, ಹಾಗೆಯೇ, ಕರ್ಮಾಣಿ - ಲೋಕದ ಕರ್ಮಗಳನ್ನೂ, ನ ಸೃಜತಿ - ಉಂಟುಮಾಡುವದಿಲ್ಲವು. ಮತ್ತು ನ ಕರ್ಮಫಲಸಂಯೋಗಂ - ಆ ಕರ್ಮಗಳ ಫಲಾನುಭವವನ್ನೂ ಉಂಟುಮಾಡಲು ಸಾಮರ್ಥ್ಯವಿಲ್ಲವು. ಹೀಗೆ ಸಮರ್ಥನಲ್ಲದಿದ್ದರೂ, ಪ್ರಭುಃ ಎಂದು ಹೇಳಲ್ಪಟ್ಟಿರುವನು. ವಿರೋಧಾಭಾಸಾಲಂಕಾರವು ತೋರಿಬರುತ್ತದೆ. ಆದರೂ, ಈತನು ಪ್ರಭುಃ ತುಂಬಾ ಸಮರ್ಥನು. ಈ ಹೇಯವಾದ ಪ್ರಕೃತಿಸಂಬಂಧದ ಕರ್ತೃತ್ವ, ಕರ್ಮಾನುಷ್ಠಾನ, ಕರ್ಮ ಫಲಾನುಭವಗಳು ಇವೆಲ್ಲವೂ ಇವನ ನೈಜವಾದ ಸ್ವರೂಪ ಪ್ರಯುಕ್ತವಲ್ಲವು. ಸ್ವರೂಪವು ಜ್ಞಾನರೂಪವಾದುದರಿಂದ ತುಂಬಾ ಅಮೋಘವಾದುದು, ಬಹು ಸಾಮರ್ಥ್ಯವುಳ್ಳದ್ದು. ಇನ್ನು ಯಾವುದರಿಂದಲೂ ಸಾಧ್ಯವಿಲ್ಲದ ಪ್ರಾಪ್ಯಪ್ರಾಪ್ತಿಯು ತನಗೆ ಈ ಅಸಾಧಾರಣವಾದ ಜ್ಞಾನದಿಂದ ಲಭಿಸುವದರಿಂದ ಪ್ರಭುಃ. ತನ್ನ ನೈಜಸ್ವರೂಪಪ್ರಾಪ್ತಿಯು ಮುಕ್ತಿದೆಶೆಯಲ್ಲುಂಟಾದಾಗ, ಕರ್ಮವಶ್ಯತೆಯು ತಪ್ಪಿಹೋಗುವದರಿಂದ, ಇಂತಹ ಕರ್ಮವಶ್ಯತೆ

ಭಾ. ಅಸ್ಯ ದೇವ ತಿರ್ಯಙ್ಮನುಷ್ಯಸ್ಥಾವರಾತ್ಮನಾ ಪ್ರಕೃತಿ ಸಂಸರ್ಗೇಣ ವರ್ತಮಾನಸ್ಯ ಲೋಕಸ್ಯ ದೇವಾದ್ಯಸಾಧಾರಣಂ ಕರ್ತೃತ್ವಂ, ತತ್ತದಸಾಧಾರಣಾನಿ ಕರ್ಮಾಣಿ ತತ್ತತ್ಕರ್ಮಜನ್ಯ ದೇವಾದಿ ಫಲ ಸಂಯೋಗಂ ಚ,ಅಯಂ ಪ್ರಭು ರ ಕರ್ಮವಶ್ಯಃ ಸ್ವಾಭಾವಿಕ

---

ಯಿಂದುಂಟಾದ ಹೇಯವಾದ ಕರ್ತೃತ್ವವೂ, ಕರ್ಮಾನುಷ್ಠಾನವೂ, ಕರ್ಮಫಲಭೋಕ್ತೃತ್ವವೂ, ಯಾವುದೂ ಇಲ್ಲವೆಂಬ ಭಾವವು. ಈ ಲೀಲಾ ವಿಭೂತಿಗೆ ಸಂಬಂಧಿಸಿದ ಕರ್ತೃತ್ವಾದಿಗಳಲ್ಲವೆಂದು ಹೇಳಿದುದರಿಂದ ನಿತ್ಯವಿಭೂತಿಯಲ್ಲೇನು ಕರ್ತೃತ್ವಾದಿಗಳು ಉಂಟೋ? ಇಲ್ಲವೋ? ಎಂದರೆ, ಅಲ್ಲಿ ಕರ್ಮವಶ್ಯತೆಯಿಲ್ಲವೇ ವಿನಾ ಕರ್ತೃತ್ವಾದಿಗಳೇನೋ ಉಂಟೆಂಬ ಭಾವವೂ ಸೂಚಿತವು. ಈ ಲೋಕದಲ್ಲಿಯಾದರೋ ಪ್ರಾರಬ್ಧಕರ್ಮಾನುಭವಕ್ಕಾಗಿ ಔಪಾಧಿಕವಾಗಿ ಈ ಪ್ರಕೃತಿ ಸಂಬಂಧವು ಪ್ರಾಪ್ತವಾಗಿದೆಯೇ.ವಿನಾ ಸ್ವರೂಪಪ್ರಯುಕ್ತವಾದುದಲ್ಲವೆಂಬ ತಾತ್ಪರ್ಯವು. ಹಾಗಾದರೆ ಈ ಕರ್ತೃತ್ವಾದಿಗಳೆಲ್ಲಾ ಹೇಗೆ ಉಂಟಾದವು ? ಎಂದರೆ, ಹೇಳುತ್ತಾರೆ.—ಸ್ವಭಾವಸ್ತು ಪ್ರವರ್ತತೇ - ಕರ್ಮವಾಸನಾಮೂಲಕ ಸಹಜವಾಗಿ ಪ್ರಾಪ್ತವಾದ ಈ ಪ್ರಕೃತಿರೂಪ ದೇಹ ಸಂಬಂಧವು, ಪ್ರವರ್ತತೇ - ಈ ಕರ್ತೃತ್ವದಲ್ಲೂ, ಕರ್ಮಾನುಷ್ಠಾನದಲ್ಲೂ, ಕರ್ಮಫಲೋಪಭೋಗದಲ್ಲೂ ಪ್ರವರ್ತಿಸುತ್ತದೆ. ಇವೆಲ್ಲಾ ಪ್ರಾರಬ್ಧ ಕರ್ಮಫಲಾನುಭವಕ್ಕಾಗಿ ಉಂಟಾದವು ಎಂಬ ಭಾವವು. ಆದುದರಿಂದ ಇವು ಮೂರನ್ನೂ ದೇಹವು ನಡೆಸುವದರಿಂದ ವಿವೇಕಿಯು ಅವು ಮೂರನ್ನೂ ದೇಹದಲ್ಲಿ ಇಟ್ಟು, ತನ್ನ ಸ್ವರೂಪಕ್ಕೆ ಇವು ಸಂಬಂಧಿಸಿದಲ್ಲವೆಂಬ ವಿವೇಕ ಜ್ಞಾನವಿರಬೇಕೆಂಬ ತಾತ್ಪರ್ಯವು. ಈತನು ಪ್ರಭು ವೆಂದುಹೇಳಿಸಿಕೊಳ್ಳಲು ಈ ಚೇತನನು ತನ್ನ ಧರ್ಮಭೂತ ಜ್ಞಾನದ ವಿಕಾಸದಿಂದ ಈ ಪ್ರಕೃತಿಸಂಬಂಧವಿರುವ ದೆಶೆಯಲ್ಲೇ ನಾನಾವಿಧ ವಿಚಿತ್ರವಿಷಯಗಳನ್ನು ಕಂಡು ಹಿಡಿದು ತಮ್ಮಗಳ ಸುಖಾನುಭವಕ್ಕೂ, ಯುದ್ಧಗಳಲ್ಲಿ ಶತ್ರು ಪಕ್ಷದ ನಾಶಕ್ಕೂ ಉಪಯೋಗಿಸಿಕೊಂಡಿರುತ್ತಾನೆ. ನಾಲ್ಕುಸಾವಿರ ಮೈಲಿಗೆ ಆಚೆ ನಡೆಯುವ ಸಂಗೀತವನ್ನು ತಾನೇ ಪ್ರತ್ಯಕ್ಷದಲ್ಲಿ ಕೇಳುವನು. ನಾಲ್ಕುಸಾವಿರ ಮೈಲಿಗಳನ್ನು ೨೪ ಘಂಟೆಗಳಲ್ಲಿ ಎಲ್ಲಿಯೂ ನಿಲ್ಲದೆ ಆಕಾಶದಲ್ಲಿ ವಿಮಾನದಲ್ಲಿ ಸಂಚರಿಸಬಲ್ಲನು. ಸಂಗೀತಗಾರರ ಹಾಡುಗಳನ್ನು ಪ್ಲೇಟುಗಳಲ್ಲಿ ಹಿಡಿದು ತನಗೆ ಬೇಕಾದಾಗ ಅವರುಗಳೇ ಹಾಡಿದಹಾಗೆ ಕೇಳುವನು. ದೂರದಲ್ಲಿರುವವರ ಚಿತ್ರವನ್ನು ತಾನಿರುವಲ್ಲಿ ನೋಡಬಲ್ಲನು; ಹಾಗೆಯೇ ನಾನಾವಿಧ ಯಂತ್ರಗಳನ್ನು ರಚಿಸಿ, ತನಗೆ ಸರ್ವವಿಧ ಅನುಕೂಲಗಳನ್ನೂ ಒದಗಿಸಿಕೊಳ್ಳಬಲ್ಲನು. ಆದುದರಿಂದ ಅಂತಹ ಜ್ಞಾನಭಾಗವು ಈ ಅಣುವಾದ ಜೀವಾತ್ಮನಲ್ಲಿರುವದರಿಂದ ಈತನು ಪ್ರಭುವೆಂದು ಹೇಳಿಸಿಕೊಳ್ಳಲು ಏನೊಂದೂ ನ್ಯೂನತೆಯಿಲ್ಲವು. ಈ ಬದ್ಧದೆಶೆಯಲ್ಲೇ ಇಂತಹ ಸಾಮರ್ಥ್ಯವಿರುವಾಗ, ಇನ್ನು ಮುಕ್ತದೆಶೆಯಲ್ಲಿ ಅತ್ಯದ್ಭುತ ಸಾಮರ್ಥ್ಯವನ್ನು ಹೊಂದಿರುವನೆಂದುಹೇಳುವ ಆವಶ್ಯಕವಿಲ್ಲವು. ಆದರೆ, ಈ ಲೋಕದಲ್ಲಿ ಇಂತಹ ಕೆಲಸಗಳನ್ನೆಲ್ಲಾ ನಡೆಸಬೇಕಾದರೆ, ಈ ಶರೀರ ಇಂದ್ರಿಯಗಳಿಲ್ಲದೆ ಈ ಅಣುಸ್ವರೂಪನು ಏನನ್ನೂ ಮಾಡಲಾರನು. ಆದುದರಿಂದ ನ ಕರ್ತೃತ್ವಂ ನ ಕರ್ಮಾಣಿ ಸೃಜತಿ ಎಂದು ನಿಷೇಧಿಸಿ ಸ್ವಭಾವಸ್ತುಪ್ರವರ್ತತೇ ಎಂದು ಹೇಳಲ್ಪಟ್ಟಿತು.

ಭಾಷಾರ್ಥವು:—ಅಸ್ಯ-ಈ, ದೇವ ತಿರ್ಯಙ್ಮನುಷ್ಯ ಸ್ಥಾವರಾತ್ಮನಾ-ದೇವತೆಗಳೆಂದೂ, ಮನುಷ್ಯರೆಂದೂ, ತಿರ್ಯಕ್ಕೆಂದೂ, ವೃಕ್ಷಾದಿಗಳೆಂದೂ ಎನಿಸುವ ನಾಲ್ಕುವಿಧ ಪ್ರಾಣಿಗಳ ರೂಪದಲ್ಲಿ, ಪ್ರಕೃತಿ ಸಂಸರ್ಗೇಣ ವರ್ತಮಾನಸ್ಯ-ಪ್ರಕೃತಿಸಂಬಂಧವಿರುವ, ಲೋಕಸ್ಯ-ಲೋಕದ, ದೇವಾದಿ ಶರೀರಗಳಿಗೆಅಸಾಧಾರಣವಾದ,ಕರ್ತೃತ್ವಂ-ಪ್ರಯತ್ನರೂಪಕರ್ತೃತ್ವವನ್ನೂ,ತತ್ತದಸಾಧಾರಣಾನಿ ಕರ್ಮಾಣಿ-ಆ ದೇವಾದಿ ಶರೀರಗಳಿಗೆ ಅಸಾಧಾರಣಗಳಾದ ಕರ್ಮಗಳನ್ನೂ,ಎಂದರೆ.ಶರೀರೇಂದ್ರಿಯ

ಭಾ. ಸ್ವರೂಪೇಣಾವಸ್ಥಿತ ಆತ್ಮಾ ನ ಸೃಜತಿ - ನೋತ್ಪಾತಯತಿ ; ಕಸ್ತರ್ಹಿ? ಸ್ವಭಾವಸ್ತು ಪ್ರವರ್ತತೇ ; ಸ್ವಭಾವಃ – ಪ್ರಕೃತಿವಾಸನಾ; ಅನಾದಿಕಾಲ ಪ್ರವೃತ್ತಪೂರ್ವ ಪೂರ್ವ ಕರ್ಮ ಜನಿತ ದೇವಾದ್ಯಾಕಾರ ಪ್ರಕೃತಿ ಸಂಸರ್ಗ ಕೃತ ತತ್ತದಾತ್ಮಾಭಿಮಾನ

ಪ್ರಾಣಚೇಷ್ಟೆಗಳನ್ನೂ, ತತ್ತತ್ಕರ್ಮ ಜನ್ಯ ದೇವಾದಿ ಫಲಸಂಯೋಗಂ ಚ-ಅವರವರುಗಳ ಹಿಂದೆ ಮಾಡಿದ ಕರ್ಮಗಳಿಂದುಂಟಾದ ದೇವಾದಿರೂಪದಲ್ಲಿ ಉಂಟಾಗುವ ಫಲಾನುಭವಗಳನ್ನೂ ಕೂಡ, **ಅಯಂ ಪ್ರಭುಃ** - ಈ ಸಮರ್ಥನಾದ ಎಂದರೆ, **ಅಕರ್ಮವಶ್ಯಃ** - ನೈಜಸ್ವರೂಪದಲ್ಲಿ ಕರ್ಮವಶ್ಯನಲ್ಲದ ಆತ್ಮನು, ಇದರಿಂದ ಮುಕ್ತದೆಶೆಯಲ್ಲಿ ಪ್ರಕೃತಿಸಂಬಂಧವಿಲ್ಲದಿರುವ ದೆಶೆಯಲ್ಲಿ ಈ ಜೀವಾತ್ಮನು ಕರ್ಮವಶ್ಯತೆ ಇಲ್ಲದವನೆಂದು ಶ್ರುತಿಯಲ್ಲಿ **"ಸಸ್ಸ್ವರಾಟ್ಭವತಿ"** (ಛಾಂ. ೭-೨೫.೨) ಎಂದು ಹೇಳಿರುವದನ್ನುಮನಸ್ಸಿನಲ್ಲಿಟ್ಟು, ಪ್ರಭುಃ ಎಂಬುದಕ್ಕೆ **ಅಕರ್ಮವಶ್ಯಃ**ಎಂದು ಅರ್ಥಮಾಡಿರುತ್ತಾರೆ; ಏಕೆಂದರೆ, ಆಂತಹ ಅಕರ್ಮವಶ್ಯದೆಶೆಯಲ್ಲಿ ಜೀವಾತ್ಮನ ಜ್ಞಾನವು ವಿಶೇಷ ವಿಕಾಸದಿಂದ ಕಂಗೊಳಿಸುತ್ತದೆ ಎಂಬುದನ್ನು ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. **ಸ್ವಾಭಾವಿಕೆ ಸ್ವರೂಪೇಣಾವಸ್ಥಿತಃ** - ತನಗೆ ನೈಜವಾದ ಜ್ಞಾನಾದಿ ಸ್ವರೂಪದಿಂದ ಇರುವ ಇಂತಹ, **ಆತ್ಮಾ, ನ ಸೃಜತಿ** ಎಂದರೆ, **ನೋತ್ಪಾದಯತಿ** - ಉಂಟುಮಾಡಿಕೊಳ್ಳುವದಿಲ್ಲವು. ಈ ಕರ್ತೃತ್ವಾದಿಗಳು ಏಕರೂಪದಲ್ಲಿ ಜ್ಞಾನೈಕಾಕಾರತೆಯಿಂದ ಇರುವ ಆತ್ಮರ ಸ್ವರೂಪಕ್ಕೆ ಸಂಬಂಧಿಸಿದವುಗಳಾದರೆ, ಕರ್ತೃತ್ವಾದಿಗಳೆಲ್ಲಾ ಏಕರೂಪವಾಗಿಯೇ ಇರಬೇಕಾಗುತ್ತದೆ. ಹಾಗಲ್ಲದೆ ವಿವಿಧ ವಿಚಿತ್ರತೆ ಇರುವದಾಗಿ ಪ್ರತಿ ಜೀವನಿಗೂ ಭಿನ್ನ ಭಿನ್ನವಾಗಿ ಇದೆ ಎಂದು ತಿಳಿಸುವದಕ್ಕಾಗಿ **ದೇವಾದ್ಯ ಸಾಧಾರಣಕರ್ತೃತ್ವಂ** ಎಂಬ ಪ್ರಯೋಗವು. ಆಯಾಯಾ ಜಾತಿರೂಪ ಶರೀರ ಹೊಂದಿರುವದರಿಂದ, ಬೇರೆಬೇರೆ ವಿಧವಾದ ಕರ್ತೃತ್ವವೆಂಬ ಭಾವವು. ಇಲ್ಲಿ ಪ್ರಭು ಶಬ್ದವು ಜೀವಾತ್ಮನನ್ನೇ ಬೋಧಿಸುತ್ತದೆಂದು ತಿಳಿಸುವದಕ್ಕಾಗಿ ಭಾಷ್ಯದಲ್ಲಿ **ಅಯಂ ಪ್ರಭುಃ ಆತ್ಮಾ** ಎಂಬ ಪ್ರಯೋಗವು. ಜೀವನು ಹೇಗೆ ಪ್ರಭುವು ಎಂದು ಪ್ರಶ್ನಿಸಿದರೆ, ಸ್ವಾರಸ್ಯ ತೋರುವದಕ್ಕಾಗಿ ಹೀಗೆ ಕರ್ತೃತ್ವವನ್ನೂ, ಕರ್ಮವನ್ನೂ, ಕರ್ಮಫಲಾನುಭವವನ್ನೂ, ಉಂಟುಮಾಡಿಕೊಳ್ಳಲು ಅಸಮರ್ಥನಾದರೂ, ಈ ಜೀವಾತ್ಮನು ಸ್ವಸ್ವರೂಪಾವಿರ್ಭಾವದಲ್ಲಿ ಜ್ಞಾನಸ್ವರೂಪನಾಗಿ, ಗುಣಾಷ್ಟಕಗಳಿಂದ ಕಂಗೊಳಿಸುವನಾಗಿ **"ಕಾಮಚಾರೋಭವತಿ"** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಬಹು ಸಮರ್ಥನೆಂಬುದು ಈ ಪ್ರಭು ಶಬ್ದದಿಂದ ವ್ಯಕ್ತಗೊಳಿಸಲ್ಪಟ್ಟಿತೆಂದು ತೋರಿಸುವದಕ್ಕಾಗಿ, **ಅಕರ್ಮವಶ್ಯಃ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಆದುದರಿಂದ ಪ್ರಕರಣಾನುಗುಣವಾಗಿ ಈ ಪ್ರಭುಶಬ್ದವು ಜೀವಾತ್ಮನನ್ನೇ ಬೋಧಿಸುತ್ತದೇ ವಿನಾ ಪರಮಾತ್ಮನನ್ನು ಬೋಧಿಸುವದಿಲ್ಲವು. ಇಲ್ಲಿಯೂ ಕೂಡ ಪ್ರಾರಬ್ಧಕರ್ಮದಿಂದ ತುಂಬಾ ಜ್ಞಾನತಿರೋಧಾನವಿಲ್ಲದವರು ಜ್ಞಾನವಿಕಾಸದಿಂದ ಕಂಗೊಳಸುವವರಾಗಿ ಈ ಲೋಕದಲ್ಲೇ ಅನೇಕಗಳಾದ ಅತ್ಯದ್ಭುತ ಕರ್ಮಗಳನ್ನು ಎಸಗಿರುವದನ್ನು ಕಂಡಿರುವೆವು. ಕಾವೇರಿನದಿಯ ನೀರು ಪಟ್ಟಣ ಹಳ್ಳಿಗಳಿಗೆ ಬೆಳಕನ್ನು ಕೊಡುವ ಹಾಗೂ ದೂರದಲ್ಲಿರುವ ಚಿನ್ನದ ಗಣಿಯಲ್ಲಿ ಕೆಲಸ ನಡೆದು ಕಲ್ಲುಗಳ ಮಧ್ಯೆ ಅಲ್ಪವಾಗಿರುವ ಚಿನ್ನವನ್ನೆಲ್ಲಾ ಒಟ್ಟುಸೇರಿಸಿ ತೆಗೆಯುವದಕ್ಕೆ ಸಹಾಯವಾಗುವಹಾಗೆ ಮಾಡುವದೂ, ಹಾಗೆಯೇ ನಮ್ಮ ಮಹರ್ಷಿಗಳು ಅಧ್ಯಾತ್ಮವಿದ್ಯೆಯ ಸಾರಭೂತಾಂಶಗಳನ್ನೆಲ್ಲಾ ಆರಿಸಿ ವ್ಯಕ್ತಗೊಳಿಸಿರುವದೂ, ಎಲ್ಲವೂ ಜ್ಞಾನದೀಪ್ತಿಯ ಪ್ರಭುತ್ವದ ವಿಜೃಂಭಣೆಯೇ. ಇಲ್ಲಿ **ನ ಸೃಜತಿ** ಎಂಬುದಕ್ಕೆ **ನೋತ್ಪಾದಯತಿ** ಎಂದು ವ್ಯಾಖ್ಯಾನವು ಹೇಗೆ? ಸೃಜವಿಸರ್ಗೇ ಎಂಬ ಧಾತುವಿನ ಪ್ರಕಾರ ಅರ್ಥಮಾಡಿದರೆ ಕರ್ತೃತ್ವಾದಿಗಳನ್ನು ಬಿಡುವದಿಲ್ಲವೆಂಬ ವಿರುದ್ಧಾರ್ಥವುಂಟಾಗುವದರಿಂದ **ನೋತ್ಪಾದಯತಿ**

ಭಾ. ಜನಿತವಾಸನಾಕೃತ ಮೀದೃಶಂ ಕರ್ತೃತ್ವಾದಿಕಂ ಸರ್ವಂ, ನ ಸ್ವರೂಪ ಪ್ರಯುಕ್ತ ಮಿತ್ಯರ್ಥಃ ||೧೪||

ಮೂ. ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ |
ಅಜ್ಞಾನೇನಾ ವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ || ೧೫.

ಎಂದು ಅರ್ಥಮಾಡಿರುತ್ತಾರೆ. ಹೀಗೆ ಈ ಆತ್ಮನಿಗೆ ಕರ್ತೃತ್ವಾದಿಗಳು ಸ್ವರೂಪತಃ ಇಲ್ಲವಾದರೆ, ಇನ್ನು ಯಾವುದಕ್ಕೆ ಕರ್ತೃತ್ವವೆಂಬ ಶಙ್ಕಾ ಉಂಟಾಗುವದರಿಂದ ಕಸ್ತರ್ಹಿ ಎಂದು ಆಕಾಂಕ್ಷಿಸಿ ಅದಕ್ಕೆ ಉತ್ತರವಾಗಿ, ಸ್ವಭಾವಸ್ತು ಪ್ರವರ್ತತೆ ಎಂದು ವ್ಯಾಖ್ಯಾನಮಾಡಲ್ಪಟ್ಟಿತು. ಇಲ್ಲಿ ಪ್ರಕರಣಾನುಗುಣವಾಗಿ ಸ್ವಭಾವಃ ಎಂದರೆ, ಪ್ರಕೃತಿವಾಸನಾ - ದೇಹಸಂಬಂಧದಿಂದ ಪ್ರಾಪ್ತವಾದ ವಾಸನೆಯು; ಇದರ ತಾತ್ಪರ್ಯವನ್ನು ವಿವರಿಸುತ್ತಾರೆ.—ಅನಾದಿಕಾಲಪ್ರವೃತ್ತ- ಅನಾದಿಕಾಲದಿಂದಲೂ ಮಾಡಲ್ಪಟ್ಟ, ಪೂರ್ವಪೂರ್ವ ಕರ್ಮಜನಿತ - ಮೊದಲು ಮೊದಲಿನ ಕರ್ಮ ಗಳಿಂದುಂಟಾದ, ದೇವಾದ್ಯಾಕಾರ ಪ್ರಕೃತಿಸಂಸರ್ಗಕೃತ . ದೇವಾದಿ ರೂಪದದಲ್ಲಿ ಪ್ರಕೃತಿ ಸಂಬಂಧದಿಂದುಂಟಾದ, ತತ್ರದಾತ್ಮಾಭಿಮಾನ ಜನಿತ ವಾಸನಾಕೃತಂ - ಆಯಾಯಾ ಶರೀರ ಗಳಲ್ಲಿ ಉಂಟಾದ ಅಭಿಮಾನದಿಂದ ಹುಟ್ಟಿದ ವಾಸನೆಯಿಂದ ಮಾಡಲ್ಪಟ್ಟದುದು, ಈದೃಶಂ ಕರ್ತೃತ್ವಾದಿಕಂ ಸರ್ವಂ - ಈ ಮೇಲೆ ಹೇಳಿದ ಕರ್ತೃತ್ವವೇ ಮೊದಲಾದವೆಲ್ಲವೂ; ನ ಸ್ವರೂಪಪ್ರಯುಕ್ತಮಿತ್ಯರ್ಥಃ - ತನ್ನ ಸ್ವರೂಪಮೂಲಕ ಬಂದವಲ್ಲವು ಎಂಬ ತಾತ್ಪರ್ಯವು. ವಹ್ನಿಯಿಂದ ತಪ್ತವಾದ ಅಯಃಪಿಂಡದಲ್ಲಿ ಹೇಗೆ ವಹ್ನಿ ಎಂಬ ಬುದ್ಧಿಯುಂಟಾಗುತ್ತದೋ ಹಾಗೆ ವಾಸನಾ ಜನಿತ ಕರ್ತೃತ್ವವನ್ನು ತನ್ನಲ್ಲೇ ಆರೋಪಿಸಿಕೊಳ್ಳುವನೆಂಬ ಭಾವವು ಸೂಚಿತವು. ಅನಾದಿಕಾಲದಿಂದಲೂ ಪ್ರಕೃತಿಸಂಬಂಧ ಉಂಟಾಗಿ, ದೇವಾದಿ ಶರೀರಗಳುಂಟಾಗಿ, ಆ ಶರೀರಾಭಿ ಮಾನಗಳಿಂದ ಕರ್ಮಗಳನ್ನು ಮಾಡುತ್ತಾ ಈಗ ಒದಗಿದ ಶರೀರದೊಂದಿಗೆ ಬಂದ ಕರ್ಮವಾಸನಾಪ್ರಯುಕ್ತವಾದ ಈ ಕರ್ತೃತ್ವಾದಿಗಳೇ ವಿನಾ ತನ್ನ ನೈಜವಾದ ಸ್ವರೂಪ ಮೂಲಕವಲ್ಲವೆಂಬ ಭಾವವು. ಇದರಿಂದ ಮುಕ್ತದೆಶೆಯಲ್ಲಿ ಜ್ಞಾನದೀಪ್ತಿಯ ಪ್ರಕಾಶತ್ವವೂ ಕರ್ತೃತ್ವಾದಿಗಳೂ ಇಲ್ಲವೆಂದು ಭಾವಿಸತಕ್ಕದ್ದಲ್ಲವು. "ಪರಂಜ್ಯೋತಿ ರುಪಸಂಪದ್ಯ ಸ್ವೇನರೂ ಪೇಣಾಭಿನಿಷ್ಪದ್ಯತೇ" ಎಂಬ ಛಾಂದೋಗ್ಯ ಶ್ರುತಿಯಲ್ಲಿ (೮. ೧೨. ೨) ಆ ಸಂದರ್ಭದಲ್ಲಿ ಜ್ಞಾನವಿಕಾಸವು ಅತ್ಯದ್ಭುತವಾಗುವದೆಂದೂ, ಈಗಿನ ಸ್ಥಿತಿಗಿಂತಲೂ ಹೆಚ್ಚು ವಿಕಾಸವುಳ್ಳದ್ದಾಗು ವದೆಂದೂ ಹೇಳಿ "ಕಾಮಚಾರೋ ಭವತಿ" ಎಂದು ಮುಗಿಸಿ ಹೇಳಿರುತ್ತದೆ. ಇಂತಹ ಪ್ರಕೃಷ್ಟ ಸ್ವರೂಪದಲ್ಲಿರುವವನಾದುದರಿಂದಲೇ, ಪ್ರಭುಃ ಎಂಬ ಪ್ರಯೋಗವು. ||೧೪||

ಮೂಲಕ್ಕೆ ಅರ್ಥವು:—ಹಿಂದಿನ ಶ್ಲೋಕದಲ್ಲಿ ಪ್ರಾರಬ್ಧ ಕರ್ಮಗಳ ವಿಷಯದಲ್ಲಿ ಈತನು ಏನನ್ನೂ ಮಾಡಲಾರನು, ಆ ವಿಷಯದಲ್ಲಿ ಈತನಿಗೆ ಕರ್ತೃತ್ವ ಕರ್ಮಾನುಷ್ಠಾನ ಕರ್ಮೋಪ ಭೋಗಗಳು ಯಾವುದೂ ಇಲ್ಲವೆಂದು ತಿಳಿಸಿದರು. ಹೀಗೆ ತನ್ನ ಪ್ರಾರಬ್ಧಕರ್ಮವಿಷಯದಲ್ಲಿ ನಡೆಯುವದೆಲ್ಲಾ ದೇಹಮೂಲಕವಾಗಿಯೇ ಆಗಿ, ತನ್ನ ಸ್ವರೂಪಪ್ರಯುಕ್ತ ಯಾವಾಗ ಅಲ್ಲವೋ, ಆಗ ಈತನು ತನ್ನ ಅನುಬಂಧಿಗಳಾದ ದಾರ ಪುತ್ರಾದಿಗಳಿಗೆ ಮಾಡುವ ದುಃಖೋಪಶಮನರೂಪ ಕರ್ಮಗಳೂ ತನ್ನ ಶತ್ರುಗಳಿಗೆ ಮಾಡುವ ಸುಖ ವಿಘಾತ ಕರ್ಮಗಳೂ ಎಲ್ಲವೂ ಈತನ ಕರ್ಮ ವಾಸನಾಮೂಲಕ ಪ್ರಾಪ್ತವಾದ ದೇಹಸಂಬಂಧಪ್ರಯುಕ್ತವಾದವೇ ವಿನಾ ದಿವ್ಯಾತ್ಮಸ್ವರೂಪ ಪ್ರಯುಕ್ತವಾದವಲ್ಲವೆಂದು ಹೇಳುತ್ತಾರೆ. ಆದರೆ, ಅನೇಕರು ತಾವು ಮಾಡುವ ಈ ಕರ್ಮಗ

ಳೆಲ್ಲಾ ತಾನು ಮಾಡಿದವೆಂದೇ ಭಾವಿಸುತ್ತಾರೆ; ಅದೇಕೆ ಎಂದರೆ, ಜ್ಞಾನಸ್ವರೂಪವು ಕರ್ಮವಾಸನೆಯಿಂದ ತಿರೋಹಿತವಾಗಿ ಹಾಗೆ ಭ್ರಮೆಯು ಎಂದು ಹೇಳುತ್ತಾರೆ. ಹಿಂದಿನ ಶ್ಲೋಕದಲ್ಲಿ ಪ್ರಭು ಶಬ್ದವು ಪರಮಾತ್ಮಪರವಲ್ಲದೆ ಹೇಗೆ ಜೀವಪರವೋ, ಹಾಗೆಯೇ ಇಲ್ಲಿ ವಿಭು ಶಬ್ದವು ಪರಮಾತ್ಮ ಪರವಲ್ಲವು, ಪ್ರಕರಣಾನುಗುಣವಾಗಿ ಜೀವಪರವೇ. ಈ ಶ್ಲೋಕದ ಉತ್ತರಾರ್ಧದಲ್ಲಿ ತೇನ ಮುಹ್ಯಂತಿ ಜಂತವಃ ಎಂಬದಾಗಿ ಜಂತು ಶಬ್ದವನ್ನುಪಯೋಗಿಸಿರುವದರಿಂದ ವಿಭು ಶಬ್ದಕ್ಕೆ ಜೀವಾತ್ಮನಲ್ಲೇ ಅನ್ವಯವು. ಜೀವಾತ್ಮನು ಅಣುವು, ನೈಯಾಯಿಕನು ಹೇಳುವಹಾಗೆ ಆತನು ಹೇಗೆ ವಿಭುವಾದಾನು ? ಆತನಿಗೆ ಪರಮಾತ್ಮನಹಾಗೆ ಸರ್ವವ್ಯಾಪಕತ್ವವಿಲ್ಲವೇ ? ಎಂದರೆ, ಇಲ್ಲಿ ವಿಭು ಶಬ್ದವು ಗೌಣವಾಗಿಯೂ ಸ್ವಾರಸ್ಯವಾಗಿಯೂ ಉಪಯೋಗಿಸಲ್ಪಟ್ಟಿರುತ್ತದೆ ; ಈತನು ನೈಯಾಯಿಕನು ಹೇಳುವಹಾಗೆ ವಿಭುವಾಗಿದ್ದರೆ, ಒಬ್ಬ ಜೀವಾತ್ಮನಿಗೆ ಎಲ್ಲರ ದೇಹವನ್ನೂ ವ್ಯಾಪಿಸುವ ವಿಭುತ್ವವಿರಬೇಕಾಗುತ್ತದೆ, ಒಬ್ಬನ ಸುಖದುಃಖಗಳು ಇನ್ನೊಬ್ಬನಿಗೂ ವೇದ್ಯವಾಗಬೇಕು. ಈ ಶ್ಲೋಕದಲ್ಲೇ ಹಾಗೆ ವೇದ್ಯವಲ್ಲವೆಂಬುದು ತೋರಿ ಬರುವದರಿಂದ ವಿಭು ಶಬ್ದವು ನೈಯಾಯಿಕನ ಅಭಿಪ್ರಾಯದಂತೆ ಉಪಯೋಗಿಸಲ್ಪಡಲಿಲ್ಲವು. ಈತನು ಅನೇಕ ಜನ್ಮಗಳನ್ನೆತ್ತಿ ಅನೇಕ ಪ್ರದೇಶಗಳಲ್ಲಿರುವದರ ಮೂಲಕ ವಿಭುವು, ಅಥವಾ ಈತನು ತನ್ನ ವಿಭುವಾದ ಧರ್ಮಭೂತ ಜ್ಞಾನಮೂಲಕ ವಿಭುವು.ಎರಡು ಅರ್ಥವೂ ಸ್ವಾರಸ್ಯವಾದುವೇ ; ಹೀಗೆ ವಿಭುವಾದ ಜೀವಾತ್ಮನಾದುದರಿಂದ ಕಸ್ಯಚಿತ್ಪಾಪಂ-ಯಾವನೊಬ್ಬ ದೇಹಾನುಬಂಧಿಯ ಪಾಪವನ್ನಾಗಲಿ ಎಂದರೆ, ಅದರ ಫಲವಾದ ದುಃಖವನ್ನಾಗಲಿ, ಹಾಗೆಯೇ ಕಸ್ಯಚಿತ್ ಸುಕೃತಂ ಯಾವನೊಬ್ಬನ ಸುಕೃತವನ್ನೇಯಾಗಲಿ ಎಂದರೆ,ಅದರ ಫಲವಾದ ಸುಖವನ್ನೇಯಾಗಲಿ,ನಾದತ್ತೇ-ತೆಗದುಕೊಳ್ಳಲಾರನು. ಪಾಪವನ್ನಾಗಲಿ ಸುಕೃತವನ್ನಾಗಲಿ ಸ್ವೀಕರಿಸಲಾರನು ; ಎಂದರೆ, ದುಃಖವನ್ನಾಗಲಿ ಸುಖವನ್ನಾಗಲಿ ತೆಗದುಕೊಳ್ಳಲಾರನು ಎಂಬರ್ಥವು. ಒಂದುವೇಳೆ ದೇಹಾನುಬಂಧಿಯ ದುಃಖವನ್ನೂ, ಶತ್ರುವಿನ ಸುಖವನ್ನೂ ಹೋಗಲಾಡಿಸಿದರೂ ಅದು ದೇಹ ಪ್ರಯುಕ್ತವಾದುದೇವಿನಾ, ಆತ್ಮನ ಸ್ವರೂಪಪ್ರಯುಕ್ತ ಬಂದುದಲ್ಲವೆಂಬ ಅನುಸಂಧಾನವಿರಬೇಕೆಂಬ ತಾತ್ಪರ್ಯವು. ಆದರೆ, ಎಲ್ಲರಿಗೂ ಹೀಗೆ ಅನುಸಂಧಾನವು ಇರುವದಿಲ್ಲವಲ್ಲಾ ಆದೇಕೆ ಎಂದರೆ, ಮುಂದೆ ಸಮಾಧಾನವು ಹೇಳಲ್ಪಡುತ್ತದೆ. ಜ್ಞಾನಂ - ಈ ಆತ್ಮನ ಸ್ವಯಂಪ್ರಕಾಶವಾದ ಧರ್ಮ ಭೂತಜ್ಞಾನವು, ಅಜ್ಞಾನೇನ - ಕರ್ಮವಾಸನಾ ಪ್ರಯುಕ್ತ ಒದಗಿದ ಅಜ್ಞಾನದಿಂದ, ಆವೃತಂ - ಆವರಿಸಲ್ಪಟ್ಟಿದೆ, ತೇನ - ಅಂತಹ ಅಜ್ಞಾನದಿಂದ, ಜಂತವಃ - ಪ್ರಾಣಿಗಳೆಲ್ಲರೂ, ಮುಹ್ಯಂತಿ - ಭ್ರಮೆಯನ್ನು ಹೊಂದುವರಾಗುತ್ತಾರೆ; ಎಂದರೆ, ಕಳತ್ರ ಪುತ್ರ ಮಿತ್ರಾದಿ ಅನುಬಂಧಿಗಳ ಪೂರ್ವಕರ್ಮ ವಾಸನೆಯಿಂದುಂಟಾದ ಪಾಪ ಪುಣ್ಯಗಳಲ್ಲೂ ಇವನಿಗೆ ಸಂಬಂಧವಿರುವದಿಲ್ಲವು. ಈ ಜನ್ಮದಲ್ಲಿ ಮನುಷ್ಯನಾಗಿರಬಹುದು. ಹಿಂದಿನ ಜನ್ಮಗಳಲ್ಲಿ ದೇವ ತಿರ್ಯಕ್ ಸ್ಥಾವರಗಳಾಗಿ ಹೀಗೆ ಅನೇಕ ಸ್ಥಳಗಳಲ್ಲಿ ವಿಭುವೆಂದು ಹೇಳಿಸಿಕೊಳ್ಳಲು ಯೋಗ್ಯನಾಗಿರುವವನಿಗೆ, ಕಳತ್ರ ಮಿತ್ರ ಸುತಾದಿ ಅನುಬಂಧಿಗಳೆಂಬುವರು ಯಾರು? ಹೀಗೆ ಅಣುವಾದರೂ ಅನೇಕ ಕಡೆ ಸುತ್ತಿ ಸುತ್ತಿ ಬಂದಿರುವದರಿಂದ ವಿಭುವು ಎಂದು ಹೇಳಲ್ಪಟ್ಟಿತು. ಹೀಗೆ ಅಸಂಖ್ಯಾಕವಾದ ಪ್ರದೇಶದಲ್ಲಿದ್ದು ಅಸಂಖ್ಯಾಕ ಜನ್ಮಗಳನ್ನೆತ್ತಿರುವಾಗ ಅನುಬಂಧಿಗಳು ಯಾರು ? ಈತನ ಸ್ವರೂಪವಾದರೋ ಜ್ಞಾನರೂಪವಾಗಿ ಮಹತ್ತಾದುದು. ಅದು ಈಗ ಅಜ್ಞಾನದಿಂದ ಆವೃತವಾಗಿರುವದರಿಂದ ತನ್ನವರೆಂಬ ಭ್ರಮ ಬುದ್ಧಿಯೆಂದು ಹೇಳುತ್ತಾರೆ. ಇದು ಕ್ಷತ್ರಬಂಧು ವೃತ್ತಾಂತದಲ್ಲಿ ವ್ಯಕ್ತವು; ಆತ್ಮನು ಹೆಂಡತಿಮಕ್ಕಳಿಗಾಗಿ ಭ್ರಮ ಬುದ್ಧಿಯಿಂದ ಪಾಪಮಾಡಿ ಜೀವಿಸುತ್ತಿದ್ದನು. ಆತನ ಹೆಂಡತಿ ಮಕ್ಕಳು ಆತನ ಪಾಪಸಮೂಹಕ್ಕೆ ತಾವು ಭಾಗಿಗಳಾಗುವದಿಲ್ಲವೆಂದು ಹೇಳಿದುದು ಅತನಿಗೆ ಬುದ್ಧಿಯನ್ನು ಕಲಿಸಿತು. ಇಲ್ಲಿ ಮುಹ್ಯಂತಿ

ಭಾ. ಕಸ್ಯಚಿತ್-ಸ್ವಸಂಬಂಧಿತಯಾಽಭಿಮತಸ್ಯ ಪುತ್ರಾದೇಃ, ಪಾಪಂ-ದುಃಖಂ,ನಾದತ್ತೇ-ನಾಪನುದತಿ, ಕಸ್ಯಚಿತ್-ಪ್ರತಿಕೂಲತಯಾಽಭಿಮತಸ್ಯ, ಸುಕೃತಂ - ಸುಖಂ ಚ, ನಾದತ್ತೇ - ನಾಪನುದತಿ ; ಯತೋಽಯಂ ವಿಭುಃ-ನ ಕ್ವಾಚಿತ್ಕಃ ನ ದೇವಾದಿದೇಹಾದ್ಯಸಾಧಾರಣ ದೇಶಃ, ಅತ ಏವ ನ ಕಸ್ಯ ಚಿತ್ಸಂಬಂಧೀ, ನ ಕಸ್ಯಚಿತ್ ಪ್ರತಿಕೂಲಶ್ಚ; ಸರ್ವಮಿದಂ ವಾಸನಾಕೃತಂ । ಏವಂ ಸ್ವಭಾವಸ್ಯ ಕಥಮಿಯಂ ವಿಪರೀತ ವಾಸನೋತ್ಪದ್ಯತೇ ? ಅಜ್ಞಾನೇನಾವೃತಂ ಜ್ಞಾನಂ-ಜ್ಞಾನವಿರೋಧಿನಾ ಪೂರ್ವಪೂರ್ವಕರ್ಮಣಾ ಸ್ವಫಲಾನುಭವ ಯೋಗ್ಯತ್ವಾಯ ಅಸ್ಯ ಜ್ಞಾನ ಮಾವೃತಂ - ಸಙ್ಕುಚಿತಮ್ ; ತೇನ

---

ಜಂತವಃ ಎಂಬ ಪ್ರಯೋಗದಿಂದ ಜನ್ಮಾದಿಗಳು ಉಂಟಾಗಿ ಶರೀರವನ್ನು ಈ ಆತ್ಮನು ಯಾವಾಗ ಧರಿಸಿದನೋ, ಆಗ ಸ್ವಯಂ ಪ್ರಕಾಶನಾದ, ಜ್ಞಾನಸ್ವರೂಪನಾಗಿ ಜ್ಞಾನಗುಣಕನಾದ ಆತ್ಮನು ಕೆಸರಲ್ಲಿ ಬಿದ್ದ ವಜ್ರದಹಾಗೆ ಅಜ್ಞಾನದಿಂದ ಜ್ಞಾನಸಙ್ಕೋಚವನ್ನು ಹೊಂದಿರುತ್ತಾನೆಂಬುದು ಸೂಚಿತವು.

ಭಾಷ್ಯಾರ್ಥವು :—ಕಸ್ಯಚಿತ್ - ಯಾವನೊಬ್ಬನ ಎಂದರೆ, ಸ್ವಸಂಬಂಧಿತಯಾ ಅಭಿಮತಸ್ಯ ಪುತ್ರಾದೇಃ - ತನಗೆ ಅನುಬಂಧಿಗಳಾಗಿರುವದರಿಂದ ತುಂಬಾ ಪ್ರಿಯರಾದ ಪುತ್ರನೇ ಮೊದಲಾದವರ, ಪಾಪಂ - ಎಂದರೆ, ಅದರ ಫಲವಾದ ದುಃಖವನ್ನು, ದೇಹಜನ್ಯ ದುಃಖವನ್ನು, ನಾದತ್ತೇ ಎಂದರೆ, ನಾಪನುದತಿ - ತಾನು ಹೋಗಲಾಡಿಸುವದಿಲ್ಲವೋ ಹಾಗೆಯೇ, ಕಸ್ಯಚಿತ್-ಯಾರೊಬ್ಬರ ಎಂದರೆ, ಪ್ರತಿಕೂಲತಯಾ ಅಭಿಮತಸ್ಯ - ತನಗೆ ಪ್ರತಿಕೂಲರಾಗಿರುವದರಿಂದ, ಸುಖಂ ಚ - ಸುಖವನ್ನೂ ಕೂಡ, ನಾದತ್ತೇ ಎಂದರೆ, ನಾಪನುದತಿ - ಹೋಗಲಾಡಿಸಲಾರನೋ, ಯತಃ - ಯಾವಕಾರಣದಿಂದ, ಅಯಂ – ಈ ವಿಭುಃ ಎಂದರೆ, ನ ಕ್ವಾಚಿತ್ಕಃ - ಒಂದು ಪ್ರದೇಶದಲ್ಲೇ ಯಾವಾಗಲೂ ಇಲ್ಲದವನು ಎಂದರೆ, ನ ದೇವಾದಿ ದೇಹಾದ್ಯ ಸಾಧಾರಣದೇಶಃ-ದೇವಾದಿ ದೇಹವೇ ಮೊದಲಾದವುಗಳೇ ನಿಯತವಾದ ದೇಶಗಳನ್ನಾಗಿ ಹೊಂದಿದವನಲ್ಲವೋ, ಪ್ರತಿ ನಿಯತವಾದ ಪ್ರದೇಶದಲ್ಲಿ ದೇಹಗಳಿಲ್ಲದವನು ಎಂಬುದು ತಾತ್ಪರ್ಯವು. ಅತ ಏವ - ಆ ಕಾರಣದಿಂದಲೇ, ನ ಕಸ್ಯಚಿತ್ಸಂಬಂಧೀ - ಈ ಆತ್ಮನಿಗೆ ಯಾರೂ ಸಂಬಂಧಿಯಲ್ಲವು; ನ ಕಸ್ಯಚಿತ್ಪ್ರತಿಕೂಲಶ್ಚ - ಯಾವನು ಪ್ರತಿಕೂಲನೂ ಅಲ್ಲವು. ಸರ್ವಮಿದಂ - ಇವೆಲ್ಲಾ ಈತನಿಗೆ ಉಂಟಾಗಿರುವದು, ವಾಸನಾಕೃತಂ - ಈತನ ಕರ್ಮವಾಸನೆಯ ಮೂಲಕವಾಗಿ ಉಂಟಾದುದು, ಏವಂ ಸ್ವಭಾವಸ್ಯ - ಇಂತಹ ಪರಿಶುದ್ಧವಾದ ಜ್ಞಾನ ಸ್ವರೂಪನಾದ ಆತ್ಮನಿಗೆ, ಕಥಮಿದಂ ವಿಪರೀತ ವಾಸನಾ ಉತ್ಪದ್ಯತೇ - ಹೇಗೆ ಈ ಸ್ವಭಾವಕ್ಕೆ ವಿರುದ್ಧವಾದ ವಿಪರೀತ ವಾಸನೆಯು ಉಂಟಾಗುತ್ತದೆ ? ಎಂದರೆ, ಉತ್ತರವು ಹೇಳಲ್ಪಡುತ್ತದೆ. ಅಜ್ಞಾನೇನಾ ವೃತಂ ಜ್ಞಾನಂ ಎಂದರೆ, ಜ್ಞಾನ ವಿರೋಧಿನಾ - ಜ್ಞಾನಕ್ಕೆ ವಿರೋಧಿಯಾದ, ಪೂರ್ವಪೂರ್ವ ಕರ್ಮಣಾ - ಮೊದಲು ಮೊದಲು ಜನ್ಮಗಳಲ್ಲಿ ಮಾಡಿದ ಕರ್ಮದಿಂದ, ಸ್ವಫಲಾನುಭವ ಯೋಗ್ಯತ್ವಾಯ - ಅಯಾ ಕರ್ಮಫಲವನ್ನನುಭವಿಸಲು ಯೋಗ್ಯತೆಯುಂಟಾಗುವದಕ್ಕಾಗಿ, ಅಸ್ಯ ಜ್ಞಾನಂ - ಈ ಜೀವಾತ್ಮನ ಜ್ಞಾನವು, ಆವೃತಂ - ಆವರಿಸಲ್ಪಟ್ಟಿರುತ್ತದೆ ಎಂದರೆ, ಸಙ್ಕುಚಿತಮ್ - ಸಂಕೋಚವನ್ನು ಹೊಂದಿದ್ದಾಗಿರುತ್ತದೆ. ಇಲ್ಲಿ ಜ್ಞಾನಕ್ಕೆ ಆವರಣವುಂಟೆಂದೂ ಸಙ್ಕೋಚ ಉಂಟಾಗುತ್ತದೆಂದೂ ಹೇಳಲ್ಪಟ್ಟಿರುವದರಿಂದ ಆತ್ಮನ ಜ್ಞಾನವು ನಿತ್ಯವಾಗಿ ಶಾಶ್ವತವಾಗಿದೆ ಎಂಬ ಭಾವವು ತೋರಿಬರುತ್ತದೆ. ಆದರೆ ಸುಸುಪ್ತಿಯಲ್ಲಿ ಜ್ಞಾನವಿರುವಹಾಗೆ ತೋರಿ ಬರುವದಿಲ್ಲವೇ ? ಆಗ ಬಾಹ್ಯಾಂತರಜ್ಞಾನವೇ ಇಲ್ಲವಲ್ಲಾ ಎಂಬ ಆಕ್ಷೇಪ ತಂದರೆ, ಶ್ರುತಿಯು ಈ ಸಂದರ್ಭದಲ್ಲಿ ಹೇಳು

ಭಾ. ಜ್ಞಾನಾವರಣರೂಪೇಣ ಕರ್ಮಣಾ ದೇವಾದಿದೇಹ ಸಂಯೋಗ ಸ್ತತ್ತದಾತ್ಮಾಭಿಮಾನ ರೂಪಮೋಹಶ್ಚ ಜಾಯತೇ।ತತಶ್ಚ ತಥಾವಿಧಾತ್ಮಾಭಿಮಾನ ವಾಸನಾ,ತದುಚಿತ ಕರ್ಮ ವಾಸನಾಚ; ವಾಸನಾತೋ ವಿಪರೀತಾತ್ಮಾಭಿಮಾನಃ ಕರ್ಮಾರಂಭಶ್ಚ ಉಪಪದ್ಯತೇ.

---

ತ್ತದೇನೆಂದರೆ.—"ಯದ್ವೈ ತನ್ನವಿಜಾನಾತಿ ವಿಜಾನನ್ವೈ ತನ್ನವಿಜಾನಾತಿ ನಹಿವಿಜ್ಞಾತು ರ್ವಿಜ್ಞಾತೇ ರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನತು ತದ್ವಿತೀಯಮಸ್ತಿ ತತೋಽನ್ಯದ್ವಿ ಭಕ್ತಂ ಯದ್ವಿಜಾನೀಯಾತ್" (ಬೃ. ೬. ೩. ೩೦) ಸುಷುಪ್ತಿಯಲ್ಲಿ ಬಾಹ್ಯಾನ್ತರ ವಿಷಯಜ್ಞಾನ ವಿರುವದಿಲ್ಲವು, ಹಾಗೆ ವಿಷಯೀಕರಿಸಿ ತಿಳಿಯುವ ಜ್ಞಾನಶಕ್ತಿಯಿದ್ದರೂ ತಿಳಿಯುವದಿಲ್ಲವು. ಹೀಗೆ ತಿಳಿಯದೇ ಇರುವವರಿಂದ. ಜ್ಞಾನವೇ ನಾಶವಾಗಿದೆ ಎಂದು ಭಾವಿಸತಕ್ಕದ್ದಲ್ಲವು, ಆತ್ಮಸ್ವರೂಪಕ್ಕೆ ಎಂದಿಗೂ ಚ್ಯುತಿಯಿಲ್ಲವೆಂಬುದು ಸಿದ್ಧವು, ಅದರಿಂಗಲೇ ಆತನ ಧರ್ಮಭೂತ ಜ್ಞಾನವೂ ನಿತ್ಯ ವಾದುದರಿಂದ ನಾಶವಿಲ್ಲವು, ಆ ಸುಷುಪ್ತಿಯಲ್ಲಿ ತಾನಲ್ಲದೆ ಇನ್ನು ಯಾವ ಬಾಹ್ಯಾನ್ತರವಸ್ತು ವಿನ ಜ್ಞಾನವಿಲ್ಲದ ಮಾತ್ರದಿಂದಲೆ ಧರ್ಮಭೂತಜ್ಞಾನಕ್ಕೆ ನಾಶವನ್ನು ಹೇಳಲಾಗುವದಿಲ್ಲವು, ಏಕೆಂದರೆ ಆಗ ಧರ್ಮಭೂತಜ್ಞಾನಪ್ರಸರಣಕ್ಕೆ ಬೇಕಾದ ಮನಸ್ಸಿನ ಮತ್ತು ಇಂದ್ರಿಯಗಳ ವ್ಯಾಪಾರೋಪರತಿ ಇರುವದರಿಂದ ಜ್ಞಾನ ಪ್ರಸರಣೆಗೆ ಅವಕಾಶವಿಲ್ಲವೆಂದು ತಿಳಿಯತಕ್ಕದ್ದು, ಸ್ವಪ್ನದಲ್ಲಾದರೋ ಮನಸ್ಸು ಮತ್ತು ಇಂದ್ರಿಯಗಳ ವ್ಯಾಪಾರ ಉಂಟಾಗುವದರಿಂದ ಜ್ಞಾನ ಪ್ರಸ ರಣವು ಸಂಭವಿಸುತ್ತದೆ. ತೇನ - ಅದರಿಂದ ಎಂದರೆ ಜ್ಞಾನಾವರಣ ರೂಪೇಣ ಕರ್ಮಣಾ- ಜ್ಞಾನಕ್ಕೆ ಆಚ್ಛಾದನವನ್ನುಂಟುಮಾಡುವ ಕರ್ಮದಿಂದ, ದೇವಾದಿ ದೇಹ ಸಂಯೋಗಃ - ದೇವ ಮನುಷ್ಯಮೊದಲಾದ ದೇಹಪ್ರಾಪ್ತಿಯೂ, ತತ್ತದಾತ್ಮಾಭಿಮಾನರೂಪ ಮೋಹಶ್ಚ - ಆ ಆ ದೇಹಗಳ ಅಭಿಮಾನರೂಪವಾದ ಮೋಹವೂ ಕೂಡ, ಜಾಯತೇ - ಉಂಟಾಗುತ್ತದೆ; ಆ ಕರ್ಮ ಸಂಬಂಧದಿಂದುಂಟಾದುದೇ ಈ ಜೀವನಿಗೆ ಉಂಟಾದ ದೇಹವೂ,ಆ ದೇಹಾಭಿಮಾನದಿಂದುಂಟಾದ ಮೋಹವೂ ಎಂಬ ಭಾವವು. ಇದರಿಂದ ಇವು ಈ ಜೀವಾತ್ಮನ ಪರಿಶುದ್ಧಸ್ವರೂಪ ಪ್ರಯುಕ್ತ ವಲ್ಲವೆಂಬುದೂ ಸೂಚಿತವು. ತನಗೆ ಬೇಕಾದವನಿಗೆ ದುಃಖೋಪಶಮನವನ್ನು ಮಾಡುವದೂ ತನ್ನ ಶತ್ರುವಿಗೆ ಸುಖಗಳನ್ನು ಹೋಗಲಾಡಿಸುವದೂ ಕೂಡ ಹಿಂದಿನ ಶ್ಲೋಕದಲ್ಲಿ ಹೇಳಿದಹಾಗೆ ಕರ್ಮಮೂಲಕ ಉಂಟಾದ ದೇಹದ ವ್ಯಾಪಾರವೇ ವಿನಾ ತನ್ನ ಸ್ವರೂಪ ಪ್ರಯುಕ್ತವಲ್ಲವು. ಈ ಕರ್ಮವಾಸನೆಯು ತನ್ನ ಸ್ವರೂಪಜ್ಞಾನವನ್ನು ಸಂಕೋಚಪಡಿಸುವದರಿಂದ ತಾನು ಮಾಡಿದೆ ನೆಂಬ ಭ್ರಮೆಯು ಉಂಟಾಗುತ್ತದೆ. ತತಶ್ಚ - ಅದರ ಮೂಲಕವಾಗಿಯೇ, ತಥಾವಿಧಾತ್ಮಾಭಿ ಮಾನವಾಸನಾ - ಅಂತಹ ಭ್ರಮರೂಪವಾದ ಆತ್ಮಾಭಿಮಾನರೂಪವಾದ ವಾಸನಾ ಎಂದರೆ ತನ್ನ ಹೆಂಡತಿ ಮಕ್ಕಳು ತನಗೆ ಸೇರಿದವರೆಂಬ ಭ್ರಮರೂಪವಾಸನಾ, ತದುಚಿತ ಕರ್ಮವಾಸನಾ- ಅದಕ್ಕೆ ಯೋಗ್ಯವಾದ ತಾನೇ ಕರ್ಮಗಳನ್ನು ಮಾಡಿದೆನೆಂಬ ವಾಸನೆಯೂ ಕೂಡ ಉಂಟಾಗು ತ್ತದೆ. ವಾಸನಾತಃ - ಈ ಎರಡು ವಿಧ ವಾಸನೆಯ ದೆಸೆಯಿಂದ, ವಿಪರೀತಾತ್ಮಾಭಿಮಾನಃ-ತನ್ನ ಜ್ಞಾನಸ್ವರೂಪಕ್ಕೆ ವಿರುದ್ಧವಾದ ತನ್ನವರೆಂಬ ಅಭಿಮಾನವು, ಕರ್ಮಾರಂಭಶ್ಚ - ಅದಕ್ಕಾಗಿ ಕರ್ಮಗಳ ಆರಂಭವೂ ಸಹ, ಉಪಪದ್ಯತೇ-ಉಂಟಾಗುತ್ತದೆ. ಇಲ್ಲಿ ಅಜ್ಞಾನ ಶಬ್ದಕ್ಕೆ ಜ್ಞಾನಕ್ಕೆ ವಿರೋಧಿಯಾದ ಪೂರ್ವಾರ್ಜಿತ ಕರ್ಮವೆಂಬರ್ಥವನ್ನು ಬರೆದಿರುತ್ತಾರೆ. ಹಾಗೆ ಬರೆಯಲು ಶ್ರೀ ಪರಾಶರವಾಕ್ಯವೇ ಆಧಾರವಾಗಿರುತ್ತದೆ.

ಅವಿದ್ಯಾ ಕರ್ಮಸಂಜ್ಞಾನ್ಯಾ ತೃತೀಯಾ ಶಕ್ತಿರಿಷ್ಯತೇ ।
ಯಯಾ ಕ್ಷೇತ್ರಜ್ಞ ಶಕ್ತಿಸ್ಸಾ ವೇಷ್ಟಿತಾ ನೃಪಸರ್ವಗಾ ।

ಭಾ. ಅ. "(೧) "ಸರ್ವಂ ಜ್ಞಾನ ಪ್ಲವೇನೈವ ವೃಜಿನಂ ಸಂತರಿಷ್ಯಸಿ", (೨) ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ, (೩) "ನಹಿಜ್ಞಾನೇನ ಸದೃಶಂ ಪವಿತ್ರಮ್" ಇತಿ ಪೂರ್ವೋಕ್ತಮ್ ಸ್ವಕಾಲೇ ಸಙ್ಗಮಯತಿ.

ಸಂಸಾರ ತಾಪಾ ನಖಿಲಾ ನವಾಪ್ನೋತ್ಯ ತಿಸಂತತಾ |
ತಯಾ ತಿರೋಹಿತತ್ವಾಚ್ಚ ಶಕ್ತಿಃ ಕ್ಷೇತ್ರಜ್ಞಸಂಜ್ಞಿತಾ |
ಸರ್ವಭೂತೇಷು ಭೂಪಾಲ ತಾರತಮ್ಯೇನ ವರ್ತತೇ ||

ಈ ಶ್ಲೋಕದಲ್ಲಿರುವ ಶಕ್ತಿ ಶಬ್ದಕ್ಕೆ ಶರೀರ ಅಥವಾ ಅಂಶವೆಂಬರ್ಥವು. ವಿಷ್ಣುಶಕ್ತಿಯು ಮೂರು ವಿಧವಾದುದೆಂದೂ ಅದರಲ್ಲಿ ಅಮೂರ್ತವಾದ ಬ್ರಹ್ಮಸಜ್ಞಿತವಾದುದು ಪಂಚ ವಿಕಾರಗ ಳಿಂದಲೂ ಶೂನ್ಯವಾದುದು, ರೂಪವಲ್ಲದುದು ಸ್ವಯಂ ಪ್ರಕಾಶವಾಗಿ ಜ್ಞಾನಗುಣದಿಂದ ನಿರೂಪಣೀಯವಾದುದೆಂದು ಹೇಳಲ್ಪಟ್ಟಿತು. ಈ ಚರಾಚರ ಜಗತ್ತೆಲ್ಲಾ ಈ ಶಕ್ತಿಯಿಂದ ಕೂಡಿದುದು. ಎರಡನೆಯದು ಕ್ಷೇತ್ರಜ್ಞಾಖ್ಯಶಕ್ತಿಯು. ಮೂರನೆಯದು ಅವಿದ್ಯಾ ಕರ್ಮವೆಂಬುದು; ಈ ಸಮಸ್ತ ಶರೀರವನ್ನೂ ಆಕ್ರಮಿಸುವ ಅವಿದ್ಯಾ ಕರ್ಮದಿಂದ ಯಾವಾಗ ಕ್ಷೇತ್ರಜ್ಞಶಕ್ತಿಯು ಆವರಿಸಲ್ಪಡುತ್ತದೋ ಪ್ರವಾಹರೂಪದಿಂದ ಬರುವ ಸಮಸ್ತ ಸಂಸಾರ ತಾಪವನ್ನೂ ಹೊಂದುತ್ತದೆ. ಆ ಅವಿದ್ಯಾ ಕರ್ಮಶಕ್ತಿಯಿಂದ ಈ ಕ್ಷೇತ್ರಜ್ಞ ಶಕ್ತಿಯ ಜ್ಞಾನವು ತಿರೋಹಿತವಾಗುವದರಿಂದ ಸರ್ವ ಭೂತಗಳಲ್ಲೂ ತರತಮ ಭಾವವು ತೋರಿಬರುತ್ತದೆ. ಆದುದರಿಂದ ಈ ಅಜ್ಞಾನವೆಂದರೆ ಜ್ಞಾನ ವಿರೋಧಿಯಾದ ಅವಿದ್ಯೆಯಿಂದ ಜ್ಞಾನವು ಸಂಕುಚಿತವಾಗಿರುತ್ತದೆಂಬುದು ಭಾವವು. ಆದರೆ ಈ ಆತ್ಮಸ್ವರೂಪವು ಜ್ಞಾನರೂಪವಾಗಿ ಅಮೋಘವಾದುದರಿಂದ ಇಂತಹ ಸಂಸಾರ ತಾಪಗಳನ್ನು ಹೊಂದುವುದಕ್ಕೂ ಆತ್ಮಾಭಿಮಾನ ಕರ್ಮಾಭಿಮಾನಗಳಿಗೂ ಯೋಗ್ಯನಲ್ಲವೆಂಬ ಭಾವವು.

ಭಾಷ್ಯಾವತಾರಿಕೆಯ ಅರ್ಥವು:—"ಸರ್ವಂ ಜ್ಞಾನ ಪ್ಲವೇನೈವ" ಸಮಸ್ತ ಪಾಪರೂಪ ಸಮುದ್ರವನ್ನೂ ಜ್ಞಾನವೆಂಬ ತೆಪ್ಪದಿಂದ ದಾಟುವಿ, ಎಂಬ, ಮತ್ತು "ಜ್ಞಾನಾಗ್ನಿಸ್ಸರ್ವಕರ್ಮಾಣಿ". ಜ್ಞಾನವೆಂಬ ಅಗ್ನಿಯು ಸಮಸ್ತ ಪಾಪಗಳನ್ನು ದಹಿಸಿಬಿಡುತ್ತದೆ, ಮತ್ತು "ನಹಿ ಜ್ಞಾನೇನ ಸದೃಶಂ" ಇತಿ, ಜ್ಞಾನಕ್ಕಿಂತ ಪರಿಶುದ್ಧವಾದುದು ಯಾವುದೂ ಇಲ್ಲವು, ಎಂದು ಹಿಂದೆ ೪ನೆಯ ಅಂತ್ಯಭಾಗದಲ್ಲಿ ೩೬, ೩೭, ೩೮ನೆಯ ಶ್ಲೋಕಗಳಲ್ಲಿ ಕರ್ಮಯೋಗದಲ್ಲಿ ಲಭಿಸುವ ಜ್ಞಾನ ಪ್ರಶಂಸಾ ವಿಷಯವಾದ, ಪೂರ್ವೋಕ್ತಂ - ಹಿಂದೆ ಹೇಳಿದುದನ್ನೇ ಸ್ವಕಾಲೇ - ಅದನ್ನೇ ಪುನಃ ಪ್ರಶಂಸಿಸಿ ಹೇಳಬೇಕಾಗಿ ಒದಗಿದ ಸ್ವಕಾಲದಲ್ಲಿ, ಸ್ವಕಾಲ ಹೇಗೆಂದರೆ, ಅಕರ್ತೃತ್ವಾನು ಸಂಧಾನಪ್ರಕರಣಕ್ಕೆ ಆತ್ಮಜ್ಞಾನ ಸ್ವರೂಪ ಕಥನವು ಆವಶ್ಯಕವಾಗಿರುವ ಕಾಲದಲ್ಲಿ ಅಥವಾ ತದ್ವಿದ್ಧಿ ಪ್ರಣಿಪಾತೇನ (ಗೀ. ೪. ೧೨) ಎಂಬ ಸಂದರ್ಭದಲ್ಲಿ "ಉಪದೇಕ್ಷ್ಯಂತಿ" (ಗೀ. ೪ ೩೪) ಎಂಬದಾಗಿ ಈಚಿಗೆ ಹೇಳಿರುವಹಾಗೆ, ಗುರುಮುಖೇನ ಜ್ಞಾನಪರಿಪಕ್ವವಾಗುವ ಸಮಯದಲ್ಲಿ, ಸಙ್ಗಮ ಯತಿ-ಜ್ಞಾಪಕಕ್ಕೆ ಕೊಡುತ್ತಾರೆ:—ಮೂರನೆಯ ಅಧ್ಯಾಯದಲ್ಲಿ ಅಕರ್ತೃತ್ವಾನುಸಂಧಾನ ವಿಷಯವೂ ನಾಲ್ಕನೆಯ ಅಧ್ಯಾಯದಲ್ಲಿ ಕರ್ಮಯೋಗದಲ್ಲಿ ಬೇಕಾದ ಆತ್ಮಸ್ವರೂಪಜ್ಞಾನವೂ ಹೇಳಲ್ಪಟ್ಟಿವೆ. ಈಗ ಈ ಐದನೆಯ ಅಧ್ಯಾಯದಲ್ಲಿ ಇಲ್ಲಿಯವರೆಗೂ ಆ ಅಕರ್ತೃತ್ವಾನುಸಂಧಾನದ ಪ್ರಕಾರವು ಉಪಪಾದಿಸಲ್ಪಟ್ಟಿತು. ಇಲ್ಲಿಂದ ಮುಂದಕ್ಕೆ ಹಿಂದೆ ಹೇಳಿದ ಜ್ಞಾನದ ವಿಶೋಧನೆಯು ಮಾಡಲ್ಪಡುತ್ತದೆ ಎಂಬುದು ಅಧ್ಯಾಯ ವಿಷಯವಾದ ಸಙ್ಗತಿಗಳು, ಆದರೆ ಹಿಂದಿನ ಶ್ಲೋಕಕ್ಕೂ ಈ ಮುಂದಿನ ಶ್ಲೋಕಕ್ಕೆ ಸಙ್ಗತಿ ಏನು ಎಂದು ಪ್ರಶ್ನಿಸಿದರೆ, ಹಿಂದೆ ಅಜ್ಞಾನೇ

(೧) ಗೀ. ೪. ೩೬ (೨) ಗೀ. ೪. ೩೭ (೩) ಗೀ. ೪. ೩೮.

**ಮೂ. ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾ ಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥ ೧೬.**

ನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ, ಆತ್ಮದ ಜ್ಞಾನವು ಅವಿದ್ಯಾಖ್ಯವಾದ ಅಜ್ಞಾನದಿಂದ ಸಙ್ಕುಚಿತವಾಗಿದೆ ಎಂದೂ ಆದರಿಂದ ಆತ್ಮಾಭಿಮಾನ ಕರ್ಮಾಭಿಮಾನರೂಪ ಮೋಹಗಳುಂಟಾಗುತ್ತವೆಂದೂ ಹೇಳಲ್ಪಟ್ಟಿತು. ಈ ಸಙ್ಕೋಚಾದಿಗಳು ಇಂತಹ ಆತ್ಮಜ್ಞಾನ ದಿಂದ ತಪ್ಪಿದ ಸಂದರ್ಭದಲ್ಲಿ ಆತ್ಮನ ಧರ್ಮಭೂತ ಜ್ಞಾನದ ಪ್ರಕಾಶ ಉಂಟಾಗುತ್ತದೆಂದು ಈ ಮುಂದಿನಶ್ಲೋಕವು ತಿಳಿಸುತ್ತದೆ. ಧರ್ಮಿಯಾದ ಆತ್ಮನ ಸ್ವರೂಪವೂ ಜ್ಞಾನವು,ಆತನ ಧರ್ಮವೂ ಜ್ಞಾನರೂಪವಾದುದು. ಅದು ಸೂರ್ಯನಹಾಗೆ ಜಾಜ್ವಲ್ಯಮಾನವಾಗಿ ಸ್ವಯಂಪ್ರಕಾಶವಾದುದೂ ಅಲ್ಲದೆ ಎಲ್ಲವನ್ನೂ ಏಕಕಾಲದಲ್ಲೇ ಪ್ರಕಾಶಗೊಳಿಸುತ್ತದೆ ಎಂದುಪದೇಶಿಸುತ್ತಾರೆ.

**ಮೂಲಕ್ಕೆ ಅರ್ಥವು :—ಯೇಷಾಂ** - ಯಾವ ಆತ್ಮರುಗಳಿಗೆ ಎಂದರೆ, ಹಿಂದಿನ ಶ್ಲೋಕದಲ್ಲಿ ಅಜ್ಞಾನದಿಂದ ಜ್ಞಾನವು ಆವೃತವಾಗಿ ಮೋಹಿಸುವವರಲ್ಲಿ ಯಾರಿಗೆ, **ಆತ್ಮನಃ ಜ್ಞಾನೇನತು** – ಹಿಂದೆ ೪ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಹಾಗೆ, ಆತ್ಮ ಯಾಥಾತ್ಮ್ಯವನ್ನು ಬೋಧಿಸುವ ಗುರುಗಳಿಂದುಪದೇಶಿಸಲ್ಪಟ್ಟು ಪದೇಪದೇ ಅದನ್ನೇ ಅನುಸಂಧಾನಮಾಡುತ್ತಿರುವ, ಮತ್ತು ಹೀಗೆ ವಿಲಕ್ಷಣವಾಗಿ ತನ್ನ ಅಕರ್ತೃತ್ವಾನುಸಂಧಾನರೂಪಜ್ಞಾನದಿಂದಲಾದರೋ, **ತದಜ್ಞಾನಂ** - ಹಿಂದಿನ ಶ್ಲೋಕದಲ್ಲಿ ಹೇಳಿದ ಜ್ಞಾನವಿರೋಧಿಯಾಗಿ ಜ್ಞಾನ ಸಙ್ಕೋಚವನ್ನುಂಟುಮಾಡಿರುವ ಅಜ್ಞಾನವು, **ನಾಶಿತಂ** . ನಾಶಮಾಡಲ್ಪಟ್ಟಿತೋ, ಯಾರಿಗೆ ಇಂತಹ ಪ್ರಕೃತಿಸಂಬಂಧದಿಂದುಂಟಾದ ಜ್ಞಾನ ಸಙ್ಕೋಚವು ದೂರೀಕೃತವಾಯಿತೋ, **ತೇಷಾಂ** - ಅಂತಹ ಆತ್ಮರುಗಳಿಗೆ, **ತತ್ ಪರಂ** - ಆ ವಿಲಕ್ಷಣವಾದ ಅಮೋಘವಾದ, **ಜ್ಞಾನಂ**- ಜ್ಞಾನವು (ಧರ್ಮಭೂತಜ್ಞಾನವು), **ಆದಿತ್ಯವತ್** - ಸೂರ್ಯನಹಾಗೆ **ಪ್ರಕಾಶಯತಿ** - ಪ್ರಕಾಶ ಗೊಳಿಸುತ್ತದೆ. **ಯಾವುದನ್ನು** ಎಂದು ಕರ್ಮವನ್ನು ಹೇಳಲಿಲ್ಲವು. ಸಮಸ್ತ ವಿಷಯ ವನ್ನೂ ಪ್ರಕಾಶಗೊಳಿಸುತ್ತದೆ. ಅದನ್ನು ಅತ್ಮನಿಗೂ ಪ್ರಕಾಶಗೊಳಿಸುತ್ತದೆ. ಅದಕ್ಕೆ ಪ್ರಕಾಶಗೊಳಿಸುವ ಶಕ್ತಿಮಾತ್ರವೇ ಇರುವದರಿಂದ **ಪ್ರಕಾಶಯತಿ** ಎಂಬ ಪ್ರಯೋಗವು. ಅದಕ್ಕೆ ಪ್ರತ್ಯಕ್ತ್ವರೂಪವಾದ ತನಗೆ ತಾನೇ ಪ್ರಕಾಶಿಸುವ ಯೋಗ್ಯತೆ - ಸ್ವಸ್ಮೈಭಾಸಮಾನತ್ವವು ಇಲ್ಲದುದರಿಂದ, **ಪ್ರಕಾಶತೇ** ಎಂಬ ಪ್ರಯೋಗವನ್ನು ಇಲ್ಲಿ ಉಪಯೋಗಿಸಲಿಲ್ಲವು, ಆತ್ಮಾವಿಗೆ ಈ ಸಸ್ಮೈ ಭಾಸಮಾನತ್ವವಿರುವದರಿಂದ ತನಗೆ ತಾನೇ ಅಹಂ ಎಂದು ತೋರುವದು. ಇದು ಆತ್ಮನ ಧರ್ಮಭೂತಜ್ಞಾನಕ್ಕಿಲ್ಲವು. ಈ ಅಭಿಪ್ರಾಯವು ತೋಚದೆ **ಪ್ರಕಾಶಯತಿ** ಎಂಬುದಕ್ಕೆ ಒಂದು ಕರ್ಮವು ಆವಶ್ಯಕವಾದುದರಿಂದ ಕೆಲವರು ಪ್ರಕಾಶಮಾಡುವದು ಜ್ಞೇಯ ವಸ್ತುವನ್ನೂ ಎಂದೂ, ಆ ಜ್ಞೇಯವು ಯಾವುದೆಂದರೆ ಪರಮಾರ್ಥತತ್ವವೆಂದೂ,ತತ್ಪರಂ ಎಂಬು ದಕ್ಕೆ ಅರ್ಥಮಾಡಿದ್ದಾರೆ. ಇದು ಅಪ್ರಸ್ತುತ ವಿಷಯವು. ಜ್ಞಾನವು ಸಂಕುಚಿತವಾಗಿ ಇದ್ದುದು ಈ ಕರ್ಮಯೋಗದಲ್ಲಿ ಅಂತರ್ಗತವಾದ ಮತ್ತು ಗುರೂಪದೇಶದಿಂದುಂಟಾದ ಆತ್ಮಯಾಥಾರ್ಥ್ಯ ಜ್ಞಾನದಿಂದ ಪಾಪಗಳು ಕಳೆಯುವದರಿಂದ ಅಜ್ಞಾನವು ತೊಲಗಿ ಹೋಗಿ, ಜ್ಞಾನವು ಜಾಜ್ವಲ್ಯ ಮಾನವಾಗಿ ಪ್ರಕಾಶಗೊಳಿಸುವ ಶಕ್ತಿಯನ್ನು ಹೊಂದುತ್ತದೆ ಎಂಬುದು ತಾತ್ಪರ್ಯವು. ಸರ್ವವನ್ನೂ ಆತ್ಮಾವಿಗೆ ತಿಳಿಸುವ ಅಮೋಘ ಸಾಮರ್ಥ್ಯವನ್ನು ಹೊಂದುತ್ತದೆ. ಅಂತಹ ಸಾಮರ್ಥ್ಯವು ಈ ಬದ್ಧ ದೆಶೆಯಲ್ಲಿ ಆತ್ಮನಿಗೆ ಇಲ್ಲವೆಂಬುದೂ ಸಹ ಸೂಚಿತವು. ಹೀಗೆ ಬದ್ಧ ದೆಶೆಯಲ್ಲೇ ತುಂಬಾ ಜ್ಞಾನವಿಕಾಸವು ಉಂಟಾದರೆ, ಮುಕ್ತದೆಶೆಯಲ್ಲಿ ಕೈಮುತಿಕನ್ಯಾಯದ

ಭಾ. ಏವಂ ವರ್ತಮಾನೇಷು ಸರ್ವೇಷ್ವಾತ್ಮಸು ಯೇಷಾ ಮಾತ್ಮನಾ ಮುಕ್ತಲಕ್ಷಣೇನಾ

ಪ್ರಕಾರ ಸರ್ವವನ್ನೂ ಏಕಕಾಲದಲ್ಲಿ ಆತ್ಮಾವಿಗೆ ತಿಳಿಸುವ ಶಕ್ತಿಯನ್ನು ಹೊಂದುತ್ತದೆಂದು ಹೇಳಿದಂತಾಯಿತು. ಆದುದರಿಂದ ಈ ಶ್ಲೋಕದಲ್ಲಿ ಅದ್ವೈತ ಸಿದ್ಧಾಂತಕ್ಕೆ ಅನುಕೂಲವೇ ಇಲ್ಲವು. ಹೇಗೆಂದರೆ.—ಘಟ ಮ.ಹಂ ಜಾನಾಮಿ ಎಂಬ ವಾಕ್ಯದಲ್ಲಿ ಜ್ಞಾತಾ, ಜ್ಞಾನಂ, ಜ್ಞೇಯವಸ್ತು ಹೀಗೆ ಮೂರು ತೋರುತ್ತದೆ. ಜ್ಞಾತಾವೂ ಜ್ಞಾನವೇ ಎಂದೂ, ಜ್ಞೇಯವೆಲ್ಲಾ ಮಿಥ್ಯೆ ಎಂದೂ ಹೇಳಿ, ಜ್ಞಾನ ಒಂದೇ ಉಳಿಯಿತೆಂಬ ಅದ್ವೈತಸಾಧನೆಗೆ ಈ ಶ್ಲೋಕದಲ್ಲಿ ಅವಕಾಶವೇ ಇಲ್ಲವು. ಈ ಶ್ಲೋಕದ ಉತ್ತರಾರ್ಧದಲ್ಲಿ ಪ್ರಯೋಗವಿರುವುದು, ತೇಷಾಂ ಜ್ಞಾನಂ ಪ್ರಕಾಶಯತಿ ಎಂಬದಾಗಿ. ತೇಷಾಂ ಎಂಬುದರಿಂದ ಜ್ಞಾತಾಗಳಾದ ಆತ್ಮರೂ, ಜ್ಞಾನಂ ಎಂಬುದರಿಂದ ಅವರಿಗೆ ಸಂಬಂಧಿಸಿದ ಧರ್ಮಭೂತ ಜ್ಞಾನವೂ, ಪ್ರಕಾಶಯತಿ ಎಂಬುದಕ್ಕೆ ಕರ್ಮವಾದ ಜ್ಞೇಯವೂ, ಮೂರೂ ಇರಬೇಕೆಂದಾಯಿತು. ಇವು ಮೂರೂ ಪ್ರಕೃತಿ ವಿಯುಕ್ತನಾದ ಅವಿದ್ಯಾರಹಿತವಾದ ದೆಶೆಯಲ್ಲೂ ಇರಬೇಕೆಂದಾಯಿತು. ಇದೂ ಅಲ್ಲದೆ ಜ್ಞಾನವಿಕಾಸಹೊಂದಿದ ಆತ್ಮರುಗಳನ್ನು ಬೋಧಿಸುವಾಗಲೂ ತೇಷಾಂ ಎಂದು ಬಹುವಚನವಿರುವದರಿಂದ ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ಎಂಬ ಶ್ರುತಿಯಲ್ಲಿ ತೋರಿ ಬರುವ ಜೀವಾತ್ಮರುಗಳ ಬಹುತ್ವವನ್ನೂ ಉಪಪಾದಿಸಿದಂತಾಯಿತು. ತೇಷಾಂ ಎಂಬುದಕ್ಕೆ ತೇಷಾಂ ಜನ್ತೂನಾಂ ಎಂದು ಅರ್ಥಹೇಳಿ ಶರೀರೋಪಾಧಿಯಿಂದ ಬಹುತ್ವವನ್ನು ಸ್ಥಾಪಿಸಲು ಸಾಧ್ಯವಿಲ್ಲವು. ಏಕೆಂದರೆ, ತೇಷಾಂ ಎಂಬುದು ಅವಿದ್ಯಾತಿರೋಹಿತತ್ವವು ಹೋಗಿ ಜ್ಞಾನವಿಕಾಸಹೊಂದಿದ ದೆಶೆಯುಳ್ಳ ಆತ್ಮರುಗಳನ್ನೂ, ಯೇಷಾಂ ಎಂಬುದು ಜ್ಞಾನವಿಕಾಸವಿಲ್ಲದ ಆತ್ಮರುಗಳನ್ನೂ ಬೋಧಿಸುತ್ತವೆ; ಆದುದರಿಂದ ಜನ್ತೂನಾಂ ಎಂದು ತೇಷಾಂ ಎಂಬುದಕ್ಕೆ ಅರ್ಥಮಾಡಲು ಸಾಧ್ಯವಿಲ್ಲವು; ಏಷಾಂ ಎಂಬುದಕ್ಕೆ ಬೇಕಾದರೆ ಅರ್ಥ ಮಾಡಬಹುದು. ತೇಷಾಂ ಎಂಬುದು ಪ್ರಕೃತಿ ವಿಯುಕ್ತವಾದ, ಅವಿದ್ಯಾ ತಿರೋಹಿತತ್ವವಿಲ್ಲದ ದೆಶೆಯನ್ನು ಬೋಧಿಸುತ್ತದೆ. ಹಾಗೆಯೇ ಮುಂದೆಯೂ (೧) "ಇದಂ ಜ್ಞಾನಮುಪಾಶ್ರಿತ್ಯ ಮಮಸಾಧರ್ಮ್ಯ ಮಾಗತಾಃ" ಎಂಬಲ್ಲೂ ಸಹ ಸಾಧರ್ಮ್ಯ ಉಂಟಾದ ಅವಸ್ಥೆಯಲ್ಲೂ ಸಹ ಬಹುತ್ವವು ಹೇಳಿರುವದರಿಂದ ಅದ್ವೈತಕ್ಕೆ ಅನುಕೂಲವಿಲ್ಲವು. ಉಪದೇಶಾರಂಭದಲ್ಲೂ ನತ್ವೇವಾಹಂ ಜಾತುನಾಸಂ ನ ತ್ವಂ ನೇಮೇ ಜನಾಧಿಪಾಃ ಎಂದು ಅಜ್ಞಾನದಿಂದ ಮೋಹಗೊಂಡ ಪಾರ್ಥನಿಗೆ ಯಥಾರ್ಥಜ್ಞಾನೋಪದೇಶವೇಳೆಯಲ್ಲೂ ಬಹುವಚನವನ್ನೇ ಉಪದೇಶಿಸಿರುವದರಿಂದ ಜೀವಾತ್ಮ ಬಹುತ್ವವು ಹೇಳಲ್ಪಟ್ಟಿರುತ್ತದೆ. ಮುಂದೆ ೧೫ನೆಯ ಅಧ್ಯಾಯದಲ್ಲಿ, "ಕ್ಷರಸ್ಸರ್ವಾಣಿಭೂತಾನಿ" ಎಂಬುದರಿಂದ ಕ್ಷರಶಬ್ದವು ಜಾತ್ಯೇಕವಚನವೆಂದು ಬೋಧಿಸಿ ಈ ಬಹುವಾದ ಜೀವಾತ್ಮರುಗಳಿಗಿಂತ ಪರಮಾತ್ಮನು ವಿಲಕ್ಷಣನಾಗಿ ಬೇರೆಯಾದವನೆಂದು ಉತ್ತಮ ಪುರುಷಸ್ತ್ವನ್ಯಃ ಎಂದು ನಿಸ್ಸಂದೇಹವಾಗಿ ಹೇಳಲ್ಪಟ್ಟಿರುತ್ತದೆ. ಆದುದರಿಂದ ಗೀತೆಯಲ್ಲಿ ಅದ್ವೈತ ಸಿದ್ಧಾಂತಕ್ಕೆ ಅವಕಾಶವೇ ಇಲ್ಲವು. ||೧೬||

ಭಾಷ್ಯಾರ್ಥವು :—ಏವಂ ವರ್ತಮಾನೇಷು ಸರ್ವೇಷ್ವಾತ್ಮಸು-ಹೀಗೆ ಇರುವ ಸಮಸ್ತ ಆತ್ಮರುಗಳಲ್ಲಿ ಎಂದರೆ, ಜ್ಞಾನವು ಪ್ರಕೃತಿಸಂಬಂಧದಿಂದುಂಟಾದ ಅಜ್ಞಾನದಿಂದ ಆವೃತವಾಗಿ ಮೋಹಗೊಂಡು ಇರುತ್ತಿರುವ ಸಮಸ್ತ ಆತ್ಮರುಗಳಲ್ಲಿ, ಅಥವಾ ಕರ್ಮಯೋಗನಿಷ್ಠೆಯಲ್ಲಿರುತ್ತಿರುವ ಸಮಸ್ತ ಆತ್ಮರುಗಳಲ್ಲಿ, ಯೇಷಾಮಾತ್ಮನಾಂ - ಯಾವ ಆತ್ಮರುಗಳ, ಉಕ್ತ ಲಕ್ಷ

(೧) ಗೀ. ೧೪.

ಭಾ. ತ್ಮಯಾಥಾತ್ಮ್ಯೋಪದೇಶ ಜನಿತೇನ ಆತ್ಮವಿಷಯೇಣ ಅಹರಹ ರಭ್ಯಾಸಾಧೇಯಾತಿಶಯೇನ ನಿರತಿಶಯಪವಿತ್ರೇಣ ಜ್ಞಾನೇನ, ತಜ್ಜ್ಞಾನಾವರಣ ಮನಾದಿಕಾಲ ಪ್ರವೃತ್ತಾನಂತ ಕರ್ಮ ಸಂಚಯ ರೂಪಮಜ್ಞಾನಂ ನಾಶಿತಂ, ತೇಷಾಂ ತತ್ಸ್ವಾಭಾವಿಕಂ ಪರಂ ಜ್ಞಾನಂ - ಅಪರಿಮಿತ ಮಸಙ್ಕುಚಿತ ಮಾದಿತ್ಯವತ್ ಸರ್ವಂ ಯಥಾವಸ್ಥಿತಂ ಪ್ರಕಾಶಯತಿ.

ಣೇನ - ಹಿಂದೆ ಉಪದೇಶಿಸಿದ ಲಕ್ಷಣವುಳ್ಳ, ಆತ್ಮಯಾಥಾತ್ಮ್ಯೋಪದೇಶ ಜನಿತೇನ - ಜೀವಾತ್ಮನ ಯಥಾರ್ಥವಾದ ಸ್ವರೂಪದ ಉಪದೇಶದಿಂದ ಹುಟ್ಟಿದ, ಆತ್ಮವಿಷಯೇಣ-ಜೀವಾತ್ಮ ಸಂಬಂಧವಾದ, ಅಹರಹಃ - ಪ್ರತಿದಿನದಲ್ಲೂ, ಅಭ್ಯಾಸಾಧೇಯಾತಿಶಯೇನ - ಗುರುವಿನ ಉಪದೇಶ ಮತ್ತು ಅಭ್ಯಾಸ ಇವುಗಳಿಂದುಂಟಾದ ಅತಿಶಯವುಳ್ಳ, ನಿರತಿಶಯ ಪವಿತ್ರೇಣ - "ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ" ಎಂದು ಹಿಂದೆ ಹೇಳಲ್ಪಟ್ಟಿರುವದರಿಂದ ತುಂಬಾ ಹೆಚ್ಚಾಗಿ ಪವಿತ್ರವಾದ, ಜ್ಞಾನೇನ - ಜ್ಞಾನದಿಂದ, ಇದು ಮೂಲದಲ್ಲಿರುವ, ಆತ್ಮನಃ ಜ್ಞಾನೇನ ಎಂಬುದರ ವ್ಯಾಖ್ಯಾನವು, ಆತ್ಮನಃ ಜ್ಞಾನಂ ಎಂದರೆ, ಆತ್ಮನ ಜ್ಞಾನವೆಂಬರ್ಥವಲ್ಲವು, ಆತ್ಮವಿಷಯವಾದ ಜ್ಞಾನವೆಂಬರ್ಥವು, ತತ್ ಅಜ್ಞಾನಂ ಎಂಬುದಕ್ಕೆ ಅರ್ಥವನ್ನು ಬರೆಯುತ್ತಾರೆ, ತತ್ - ಆ, ಎಂದರೆ, ಜ್ಞಾನಾವರಣಂ - ಜ್ಞಾನಕ್ಕೆ ಆಚ್ಛಾದಕವಾಗಿರುವ, ಅನಾದಿಕಾಲಪ್ರವೃತ್ತಾನಂತ ಕರ್ಮಸಂಚಯ ರೂಪಂ - ಅನಾದಿಕಾಲದಿಂದಲೂ ಅನುಸರಿಸಿ ಬಂದ ಅನಂತವಾದ ಕರ್ಮ ಸಮೂಹರೂಪವಾದ, ಅಜ್ಞಾನಂ - ಅಜ್ಞಾನವು, ನಾಶಿತಂ - ನಾಶಮಾಡಲ್ಪಟ್ಟಿತೋ, ತೇಷಾಂ - ಅಂತಹ ಕರ್ಮ ಸಂಚಯರೂಪವಾದ ಅಜ್ಞಾನವೆಲ್ಲಾ ತೊಲಗಿದ ಅವರುಗಳಿಗೆ, ತತ್ಪರಂ, ತತ್ ಎಂದರೆ, ಆ ಸ್ವಾಭಾವಿಕವಾದ, ಪರಂ ಎಂದರೆ, ಅಪರಿಮಿತ ಮಸಙ್ಕುಚಿತಂ ಜ್ಞಾನಂ - ಪರಿಚ್ಛಿನ್ನವಲ್ಲದೆ ಸರ್ವಜ್ಞತೆಯುಳ್ಳದ್ದಾಗಿ ಸ್ವಲ್ಪವೂ ಸಙ್ಕೋಚವಿಲ್ಲದೆ ಹೀಗೆ ಶ್ರೇಷ್ಠವಾದ ಜ್ಞಾನವು, ಆದಿತ್ಯವತ್ - ತೇಜಸ್ಸಿನಿಂದ ಸರ್ವವನ್ನೂ ಪ್ರಕಾಶಗೊಳಿಸುವ ಸೂರ್ಯನಹಾಗೆ, ಸರ್ವಂ ಯಥಾವಸ್ಥಿತಮ್ - ಎಲ್ಲವೂ ಹೇಗಿದೆಯೋ ಹಾಗೆಯೇ ಎಲ್ಲವನ್ನೂ, ಪ್ರಕಾಶಯತಿ - ಆತ್ಮನಿಗೆ ಪ್ರಕಾಶಗೊಳಿಸುತ್ತದೆ. ಪ್ರಕಾಶಯತಿ ಎಂಬುದಕ್ಕೆ ಕರ್ಮವು ಮೂಲದಲ್ಲಿಲ್ಲದೇ ಇರುವದರಿಂದ ಪ್ರಕಾಶಯತಿ ಎಂಬುದರಲ್ಲೇ ಸೂಚಿತವಾದ ಕರ್ಮವಾದ ಸರ್ವಂಯಥಾವಸ್ಥಿತಂ ಎಂದು ಪ್ರಯೋಗಿಸಲ್ಪಟ್ಟಿರುತ್ತದೆ. ಹೀಗೆ ಜ್ಞಾನಕ್ಕೆ ಆವರಣ ರೂಪವಾಗಿರುವ ಅಜ್ಞಾನವು ಸಾಧಾರಣವಲ್ಲವು. ಆ ಅಜ್ಞಾನವು ನಾಶವಾಗುವದು ಅತಿದುರ್ಲಭವೆಂದು ಸೂಚಿಸುವದಕ್ಕಾಗಿ ಅನಾದಿಕಾಲ ಪ್ರವೃತ್ತಾನಂತ ಕರ್ಮ ಸಂಚಯ ರೂಪಂ ಎಂಬ ವಿಶೇಷಣವನ್ನು ಕೊಟ್ಟಿರುತ್ತಾರೆ. ಇಂತಹ ಅಜ್ಞಾನವು ತೊಲಗುವ ಬಗೆ ಹೇಗೆಂದರೆ, ಆತ್ಮನಃ ಜ್ಞಾನೇನ ಎಂದು ಹೇಳಲ್ಪಟ್ಟಿರುತ್ತದೆ; ಆತ್ಮಯಾಥಾತ್ಮ್ಯಸ್ವರೂಪ ಜ್ಞಾನದಿಂದ ಅಜ್ಞಾನವು ತೊಲಗುತ್ತದೆ. ಅಜ್ಞಾನಾಂಧಕಾರವನ್ನು ಜ್ಞಾನದೀಪ್ತಿಯು ನುಂಗಿಬಿಡುವ ಶಕ್ತಿಯುಂಟೆಂದು ಇಲ್ಲಿ ಉಪಪಾದಿಸಲ್ಪಟ್ಟಿತು.. ಇದು ಹಿಂದೆ ಚೆನ್ನಾಗಿ ಉಪದೇಶಿಸಲ್ಪಟ್ಟಿರುವದರಿಂದ, ಉಕ್ತ ಲಕ್ಷಣೇನಾತ್ಮಯಾಥಾತ್ಮ್ಯೋಪದೇಶ ಜನಿತೇನಜ್ಞಾನೇನ ಎಂಬ ಪ್ರಯೋಗವು. ಈ ಜ್ಞಾನವು ಸುಮ್ಮನೆ ಉಂಟಾಗತಕ್ಕದ್ದಲ್ಲವೆಂದು ತಿಳಿಸುವದಕ್ಕಾಗಿ, ಅಹರಹ ರಭ್ಯಾಸಾಧೇಯಾತಿಶಯೇನ ಎಂದು ಪ್ರಯೋಗಿಸಿರುತ್ತಾರೆ. ಹೀಗೆ ಅಜ್ಞಾನವು ಆತ್ಮಯಾಥಾತ್ಮ್ಯಜ್ಞಾನದ ಅನುಸಂಧಾನದಿಂದ ತೊಲಗಿದರೆ ಆಗ ಆತ್ಮಸ್ವರೂಪವು ಹೇಗೆ ಕಂಗೊಳಿಸುತ್ತದೆ ಎಂದರೆ, ಸಮಸ್ತವನ್ನೂ ಈ ಧರ್ಮವಾದ ಜ್ಞಾನವು ಜ್ಞಾನಸ್ವರೂಪನಾದ ಆತ್ಮನಿಗೆ ಪ್ರಕಾಶಗೊಳಿಸುತ್ತದೆ. ಧರ್ಮವಾದ

ಜ್ಞಾನವು ಧರ್ಮಿಯಾದ ಆತ್ಮನ ಜ್ಞಾನಸ್ವರೂಪಕ್ಕಿಂತ ಬೇರೆಯಾದುದು. ಧರ್ಮಜ್ಞಾನಕ್ಕೆ ಇತರವಾದುವನ್ನು ಪ್ರಕಾಶಗೊಳಿಸುವ ಶಕ್ತಿಯಾದ ಪರಾಕ್ತ್ವಮಾತ್ರವೇ ಉಂಟು. ತನಗೆತಾನೇ ಪ್ರಕಾಶಿಸುವ ಸ್ವಸ್ಮೈಭಾಸಮಾನತ್ವವು ಇಲ್ಲವು; ಇದಕ್ಕೆ ಪ್ರತ್ಯಕ್ತ್ವವೆಂದು ಹೆಸರು ; ಇದು ಆತ್ಮಸ್ವರೂಪಕ್ಕೆ ಮಾತ್ರವೇ ಉಂಟು ಆದುದರಿಂದಲೇ ಪ್ರಕಾಶಯತಿ ಎಂದು ಪ್ರಯೋಗವು. ಹೀಗೆ ಜ್ಞಾತಾವಿಗೆ ಜ್ಞಾನ ಧರ್ಮವು ಯಾವಾಗಲೂ ಅಪೃಥಕ್ಸಿದ್ಧ ವಿಶೇಷಣವಾಗಿ ಉಂಟೆಂಬುದು "ನಹಿವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ" ಜ್ಞಾತಾವಿಗೆ ಜ್ಞಾನದಿಂದ ವಿಶ್ಲೇಷೆ ಎಂಬುದು ಎಂದಿಗೂ ಇಲ್ಲವೆಂಬರ್ಥವುಳ್ಳ (ಬೃ. ೬. ೩. ೩೦) ಶ್ರುತಿಯಿಂದ ಸಿದ್ಧವು. ಇದರಿಂದ ಜ್ಞಾನಕ್ಕಿಂತ ಬೇರೆಯಾಗಿ ಜ್ಞಾತಾವಿಲ್ಲವೆಂಬ ವಾದವು ನಿರಸ್ತವು. ಇವೆಲ್ಲವನ್ನೂ ತಿಳಿಸುವದಕ್ಕಾಗಿಯೇ ಆದಿತ್ಯವತ್ ಎಂಬ ದೃಷ್ಟಾಂತವು. ಆದಿತ್ಯನು ಹೇಗೆ ತೇಜಸ್ಸ್ವರೂಪನಾಗಿರುವದರಿಂದ ಆತನ ತೇಜೋರೂಪವಾದ ಕಿರಣಗಳು ಎಲ್ಲವನ್ನೂ ಪ್ರಕಾಶಿಸುವ ಹಾಗೆ ಮಾಡುತ್ತವೋ, ಹಾಗೆಯೇ ಈ ಜ್ಞಾನಸ್ವರೂಪನಾದ ಆತ್ಮನ ಧರ್ಮವಾದ ಜ್ಞಾನವು ಎಲ್ಲವನ್ನೂ ಪ್ರಕಾಶಗೊಳಿಸುತ್ತದೆಂಬ ತಾತ್ಪರ್ಯವು. ಈಗ ಪ್ರಸ್ತುತವಾದುದು ಇಂತಹ ಜ್ಞಾನದ ಮಾಹಾತ್ಮ್ಯವಾದುದರಿಂದ ತತ್ ಎಂಬ ಶಬ್ದದಿಂದಲೂ, ಪರಂ ಎಂಬ ಶಬ್ದದಿಂದಲೂ ಜ್ಞಾನವು ಪ್ರಶಂಸಿಸಲ್ಪಟ್ಟಿತೆಂದು ಭಾವಿಸುವದೇ ಯುಕ್ತವಾದುದರಿಂದ, ಇತರರು ತತ್ ಪರಂ ಎಂಬುದನ್ನು ಪರಮಾರ್ಥತತ್ವವೆಂದರ್ಥಮಾಡಿ, ಪ್ರಕಾಶಯತಿ ಎಂಬುದಕ್ಕೆ ಕರ್ಮವಾಗಿ ಅರ್ಥಮಾಡಿರುವದು, ಅಪ್ರಸ್ತುತವಿಷಯಮಾತ್ರವೇ ಅಲ್ಲದೆ ಸ್ವಾರಸ್ಯ ಭಂಗವೂ ಎಂದು ತಿಳಿಸುವದಕ್ಕಾಗಿ "ಅಪರಿಮಿತ ಮಸಙ್ಕುಚಿತಂ" ಎಂದು ಭಾಷ್ಯವನ್ನು ಬರೆದಿರುತ್ತಾರೆ. ತತ್ ಪರಂ ಎಂಬಲ್ಲಿ ತಚ್ಛಬ್ದಕ್ಕೆ ಸ್ವಾಭಾವಿಕಂ ಎಂದರ್ಥಮಾಡಿರುತ್ತಾರೆ. ಪ್ರಕಾಶಯತಿ ಎಂಬುದಕ್ಕೆ ಕರ್ಮಬೇಕಾದುದರಿಂದಲೂ, ಜ್ಞಾನತಿರೋಹಿತತ್ವವು ನಾಶವಾದುದರಿಂದಲೂ, ಆಸಂದರ್ಭದಲ್ಲಿ ಆತ್ಮನ ಧರ್ಮಭೂತ ಜ್ಞಾನವು ಸರ್ವವನ್ನೂ ಪ್ರಕಾಶಿಸುವ ಶಕ್ತಿಯುಳ್ಳದಾಗುವದರಿಂದ ಸರ್ವಂ ಪ್ರಕಾಶಯತಿ ಎಂಬ ಸರಸವಾದ ವ್ಯಾಖ್ಯಾನವು. ಆತ್ಮನು ಜ್ಞಾನಸ್ವರೂಪನಾಗಿ ಜ್ಞಾನಧರ್ಮವನ್ನು ಹೊಂದಿರುವದು ಅಜ್ಞಾನ ನಿವೃತ್ತಿಯಿಂದ ಜನ್ಯವೇ, ಅಥವಾ ಸ್ವಾಭಾವಿಕವಾಗಿ ಮೊದಲೇ ಇದ್ದುದು ಈಗ ವ್ಯಕ್ತವಾಯಿತೇ ಎಂಬ ಸಂದೇಹದಲ್ಲಿ ಜನ್ಯವಲ್ಲವೆಂದೂ, ಮೊದಲು ಮರೆಸಿ ಹೋಗಿದ್ದುದು ಈಗ ಪ್ರಕಾಶವಾಯಿತೆಂದೂ ಸೂಚಿಸುವದಕ್ಕಾಗಿಯೂ, ತತ್ ಎಂಬುದಕ್ಕೆ ಸ್ವಾಭಾವಿಕಂ ಎಂಬ ವ್ಯಾಖ್ಯಾನವು. ಶ್ರುತಿಯೂ "ಸ್ವೇನರೂಪೇಣಾಭಿ ನಿಷ್ಪದ್ಯತೇ" ಸ್ವಸ್ವರೂಪಾವಿರ್ಭಾವ ಉಂಟಾಗುತ್ತದೆಂದು ಹೇಳಿರುತ್ತದೆ. ಬ್ರಹ್ಮಸೂತ್ರವಾದ ಸಂಪದ್ಯಾವಿರ್ಭಾವಃ ಸ್ವೇನ ಶಬ್ದಾತ್ ಎಂಬಲ್ಲಿ ಇದು ಉಪಪಾದಿತವು. ಯಥಾ ನಕ್ರಿಯತೇ ಜ್ಯೋತ್ಸ್ನಾ ಮಲ ಪ್ರಕ್ಷಾಳನಾನ್ಮಣೇಃ। ದೋಷಪ್ರಹಾಣಾ ನ್ನಜ್ಞಾನ ಮಾತ್ಮನಃ ಕ್ರಿಯತೇ ತಥಾ ॥ ತಥಾ ಹೇಯ ಗುಣಧ್ವಂಸಾ ದವಬೋಧಾದಯೋಗುಣಾಃ। ಪ್ರಕಾಶ್ಯನ್ತೇ ನ ಜನ್ಯನ್ತೇ ನಿತ್ಯಾ ಏವಾತ್ಮನೋ ಹಿತೇ" (ವಿಷ್ಣು ಧರ್ಮ ೧೦೪. ೫೫. ೫೭) ಎಂಬ ಪ್ರಮಾಣವು ಬಹು ಸ್ಫುಟವಾಗಿ ಈ ಶ್ಲೋಕಾಭಿಪ್ರಾಯವನ್ನು ಉಪಪಾದಿಸುತ್ತದೆ. ಒಂದು ಮಹಾ ತೇಜಸ್ಸುಳ್ಳ ರತ್ನವನ್ನು ಮಣ್ಣಿನಿಂದ ತೆಗೆದಾಗ ಕೊಳೆಯಿಂದ ಮರೆಸಿ ಹೋದ ಅದರ ಕಾಂತಿಯು, ಅದನ್ನೇ ಚನ್ನಾಗಿ ತೊಳೆದನಂತರ ಹೇಗೆ ಅದಕ್ಕೆ ಮೊದಲಿದ್ದ ಪ್ರಕಾಶವೇ ಭಾಸಮಾನವಾಗುತ್ತದೋ, ಹೊಸದಾಗಿ ಏನೂ ಉತ್ಪತ್ತಿಯನ್ನು ಹೊಂದುವದಿಲ್ಲವೋ, ಹಾಗೆಯೇ ಈ ಆತ್ಮನಿಗೆ ಪ್ರಕೃತಿ ಸಂಬಂಧ ಕರ್ಮ ಅಜ್ಞಾನಗಳಿಂದ ಮರೆಸಿ ಹೋಗಿದ್ದ ಜ್ಞಾನಾದಿ ಗುಣಗಳು, ಈ ಪ್ರಕೃತಿ ಸಂಬಂಧ, ಕರ್ಮ, ಅಜ್ಞಾನಾದಿಗಳು ನಾಶವಾದ ಒಡನೆಯೇ ಪ್ರಜ್ವಲಿಸುತ್ತವೆ ಎಂಬುದು ಈ ಶ್ಲೋಕ

ಭಾ. ತೇಷಾ ಮಿತಿ ನಷ್ಟಜ್ಞಾನಾನಾಂ ಬಹುತ್ವಾಭಿದಾನಾದಾತ್ಮಸ್ವರೂಪ ಬಹುತ್ವಂ, (೧) " ನತ್ವೇವಾಹಂ ಜಾತುನಾಸಂ " ಇತ್ಯುಪಕ್ರಮಾವಗತ ಮತ್ರ ಸ್ಪಷ್ಟತರ ಮುಕ್ತಮ್; ನ ಚೇದಂ ಬಹುತ್ವಮುಪಾಧಿಕೃತಂ, ವಿನಷ್ಟಾಜ್ಞಾನಾನಾ ಮುಪಾಧಿಗನ್ಧಾಭಾವಾತ್, "ತೇಷಾಂ ಮಾದಿತ್ಯ ವಜ್ಜ್ಞಾನಮ್" ಇತಿ ವ್ಯತಿರೇಕ ನಿರ್ದೇಶಾತ್, ಜ್ಞಾನಸ್ಯ ಸ್ವರೂಪಾನುಬಂಧಿಧರ್ಮತ್ವ ಮುಕ್ತಮ್ ; ಆದಿತ್ಯದೃಷ್ಟಾಂತೇನಚ ಜ್ಞಾತೃ

ಗಳ ತಾತ್ಪರ್ಯವು. ಈ ಕಾರಣಗಳಿಂದ ತತ್ ಪರಂ ಎಂಬ ಶಬ್ದಗಳನ್ನು ಜ್ಞಾನಂ ಎಂಬ ಪದವಿಶೇಷಣವಾಗಿ ಸ್ವೀಕರಿಸೋಣವೇ ತುಂಬಾ ಸ್ವಾರಸ್ಯವು. ಅಪರಿಚ್ಛಿನ್ನವಿಷಯತ್ವವು ಜ್ಞಾನಕ್ಕೆ ಉಂಟಾದರೇನೆ ಅದಕ್ಕೆ ಪರತ್ವವು ಉಂಟಾಯಿತೆಂದು ಭಾವಿಸಬಹುದು. ಅಂತಹ ಉತ್ಕೃಷ್ಟ ಜ್ಞಾನವೇ ಇಲ್ಲಿ ಹೇಳಲ್ಪಟ್ಟಿತು. ಹಾಗೆ ಅಪರಿಚ್ಛಿನ್ನ ವಿಷಯತ್ವವುಂಟಾಗಬೇಕಾದರೆ ಅದು ಅಸಂಕುಚಿತವಾಗಬೇಕು ಎಂದು ಹೇಳಲ್ಪಟ್ಟಿತು. ಮುಂದೆ ಈ ಶ್ಲೋಕದಲ್ಲಿ ಅದ್ವೈತಾಭಿಪ್ರಾಯಕ್ಕೆ ಇನ್ನೂ ವಿರುದ್ಧವಾದ ಸಙ್ಗತಿಯುಂಟೆಂದು ಪ್ರದರ್ಶಿಸುತ್ತಾರೆ.

**ತೇಷಾಮಿತಿ ನಷ್ಟ ಜ್ಞಾನಾನಾಂ** - ಮೂಲದಲ್ಲಿ, **ತೇಷಾಂ** ಎಂದು ಅಜ್ಞಾನ ನಷ್ಟವಾದ ಆತ್ಮರುಗಳ, **ಬಹುತ್ವಾಭಿದಾನಾತ್** - ಬಹುತ್ವವನ್ನು ಹೇಳಿರುವದರಿಂದ, **ಆತ್ಮಸ್ವರೂಪದ ಬಹುತ್ವವು**, **ನತ್ವೇವಾಹಂ ಜಾತುನಾಸಂ** ಎಂದು ಹಿಂದೆ ಎರಡನೆಯ ಅಧ್ಯಾಯದಲ್ಲಿ, **ಉಪಕ್ರಮಾವಗತಂ** - ಉಪದೇಶದ ಆರಂಭದಲ್ಲಿ ತೋರಿಬಂದುದು, **ಅತ್ರ** - ಈ ಶ್ಲೋಕದಲ್ಲಿ, **ಸ್ಪಷ್ಟತರ ಮುಕ್ತಮ್** - ಇಲ್ಲಿ ತುಂಬಾ ಸ್ಪಷ್ಟವಾಗಿ ಉಪದೇಶಿಸಲ್ಪಟ್ಟಿತು. ಆದರೆ ಬಹುತ್ವವು ಉಪಾಧಿ ಮೂಲಕವಾಗಿ ಪ್ರಕೃತಿ ಸಂಬಂಧದಿಂದುಂಟಾದುದು, ಅದು ನಿವೃತ್ತಿಯಾದ ಒಡನೆಯೇ ಏಕತ್ವವು ಎಂಬ ವಾದಕ್ಕೂ ಅನುಕೂಲವಿಲ್ಲವೆಂದು ಮುಂದೆ ತಿಳಿಸುತ್ತಾರೆ. **ಇದಂ ಬಹುತ್ವಂ** - ಈ ಆತ್ಮರುಗಳ ಬಹುತ್ವವು, **ನೋಪಾಧಿಕೃತಂ** - ಉಪಾಧಿಕೃತವಾದುದೆಂದು ಹೇಳಲು ಸಾಧ್ಯವಿಲ್ಲವು. ಭಾಸ್ಕರರು ಹೇಳುವಹಾಗೆ ಸತ್ಯವಾದ ಉಪಾಧಿಯಿಂದಲಾಗಲಿ, ಅದ್ವೈತಿಗಳು ಹೇಳುವ ಹಾಗೆ ಮಿಥ್ಯೆಯಾದ ಉಪಾಧಿಯಿಂದಲಾಗಲಿ ಈ ಬಹುತ್ವ ಉಂಟಾದುದು ಎಂದು ಈ ಶ್ಲೋಕದಲ್ಲಿ ವಾದಿಸಲು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಅದು ಏಕೆಂದರೆ.— **ವಿನಷ್ಟಾಜ್ಞಾನಾನಾಂ** - ತೇಷಾಂ ಎಂಬ ಶಬ್ದದಲ್ಲಿ ತೋರುವ, ಅಜ್ಞಾನವೆಲ್ಲಾ ನಷ್ಟವಾದ ಆತ್ಮರುಗಳಿಗೆ, **ಉಪಾಧಿ ಗನ್ಧಾಭಾವಾತ್** - ಸತ್ಯವಾದ ಅಥವಾ ಮಿಥ್ಯೆಯಾದ ಉಪಾಧಿಯ ಅಲ್ಪ ಸಂಬಂಧವಾಗಲಿ ಇಲ್ಲವಾದುದುರಿಂದ, ಉಪಾಧಿ ಇಲ್ಲದೆ ಅಜ್ಞಾನದ ಗಂಧವೇ ಇಲ್ಲದೇ ಇರುವ ಆತ್ಮರುಗಳೇ ಇಲ್ಲಿ ತೇಷಾಂ ಎಂಬ ಪದದಿಂದ ಹೇಳಿರುವದು ಎಂಬ ಭಾವವು. ಅದ್ವೈತಸಿದ್ಧಾನ್ತಕ್ಕೆ ಇನ್ನೊಂದು ವಿರೋಧವೂ ತೋರಿಬರುತ್ತದೆಂದು ಹೇಳುತ್ತಾರೆ. **ತೇಷಾಮಾದಿತ್ಯವತ್ ಜ್ಞಾನಂ ಇತಿ** - ಎಂದು ಮೂಲದಲ್ಲಿ, **ವ್ಯತಿರೇಕ ನಿರ್ದೇಶಾತ್** - ಆತ್ಮರುಗಳಿಗೆ ಸಂಬಂಧಿಸಿದ ಜ್ಞಾನವೆಂದು, ಆತ್ಮರೇ ಜ್ಞಾತಾವಾಗಿ ಬೇರೆ, ಅವರ ಜ್ಞಾನವು ಅವರಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಬೇರೆ ಎಂದು ಹೀಗೆ ಪ್ರತ್ಯೇಕಿಸಿ ಮೂಲದಲ್ಲಿ ಹೇಳಿರುವದರಿಂದ, **ಜ್ಞಾನಸ್ಯ** - ಈ ಶ್ಲೋಕದಲ್ಲಿ ಹೇಳಿರುವ ಜ್ಞಾನಶಬ್ದಕ್ಕೆ, **ಸ್ವರೂಪಾನುಬಂಧಿ ಧರ್ಮತ್ವಮುಕ್ತಮ್** - ಆತ್ಮ ಸ್ವರೂಪವನ್ನು ಬಿಡದೆ ಸಂಬಂಧಿಸಿಕೊಂಡೇ ಇರುವ ಧರ್ಮವಾದ ಜ್ಞಾನವೆಂದು ಅರ್ಥಮಾಡಲ್ಪಟ್ಟಿತು. ಧರ್ಮಿಯಾದ ಆತ್ಮಸ್ವರೂಪವೂ ಜ್ಞಾನವು, ಅದರ ಧರ್ಮವೂ ಜ್ಞಾನವೇ ಎಂಬ ಭಾವವು. ಜ್ಞಾತಾವಿಗೆ ಜ್ಞಾನಸಂಬಂಧ ಯಾವಾಗಲೂ ಇದ್ದೇ ಇರುತ್ತದೆ ಎಂದೂ ಹೇಳಲ್ಪಟ್ಟಿತು. ಆದುದ

(೧) ಗೀ. ೨. ೧೨

ಭಾ. ಜ್ಞಾನಯೋಃ ಪ್ರಭಾ ಪ್ರಭಾವತೋರಿವಾವಸ್ಥಾನಂ ಚ । ತತ ಏವ ಸಂಸಾರ ದಶಾಯಾಂ ಜ್ಞಾನಸ್ಯ ಕರ್ಮಣಾ ಸಙ್ಕೋಚೋ, ಮೋಕ್ಷದಶಾಯಾಂ ವಿಕಾಸ ಶ್ಚೋಪಪನ್ನಃ ॥೧೬॥

ರಿಂದ ತೇಷಾಮಾದಿತ್ಯವಜ್ಜ್ಞಾನಂ ಎಂಬ ಪ್ರಯೋಗವು. ಮುಕ್ತದೆಶೆಯಲ್ಲಿ ಆತ್ಮನಿಗೆ ಜ್ಞಾನ ವಿಕಾಸ ಉಂಟಾದ ದೆಶೆಯಲ್ಲಿ ಜ್ಞಾತೃವಿಗೆ ಸಂಬಂಧಿಸಿದ ಜ್ಞಾನವೆಂದು ಹೇಳಿರುವದು, ನಿರ್ವಿಶೇಷ ಚಿನ್ಮಾತ್ರನೆಂದು ಹೇಳುವದಕ್ಕೆ ವಿರೋಧವೂ, ಆತನು ಜ್ಞಾತೃವಲ್ಲವು, ಬರೀ ಜ್ಞಾನಸ್ವರೂಪವು ಎಂಬ ಹೇಳಿಕೆಗೆ ವಿರೋಧವೂ ಈ ಶ್ಲೋಕದಲ್ಲಿ ವ್ಯಕ್ತವು; ಏತಕ್ಕೆಂದರೆ ವ್ಯತಿರೇಕ ನಿರ್ದೇಶವಿರುವದರಿಂದ ; ಆದಿತ್ಯದೃಷ್ಟಾಂತೇನ ಚ - ಸೂರ್ಯನ ದೃಷ್ಟಾಂತದಿಂದಲಾದರೋ, ಜ್ಞಾತೃಜ್ಞಾನಯೋಃ - ಜ್ಞಾತಾ ಮತ್ತು ಆತನ ಧರ್ಮವಾದ ಜ್ಞಾನಕ್ಕೂ ಸಹ, ಪ್ರಭಾ ಪ್ರಭವತೋರಿವ - ಪ್ರಭೆ ಮತ್ತು ಆ ಪ್ರಭೆಯನ್ನು ಹೊಂದಿರುವ ಸೂರ್ಯ, ಇವುಗಳ ಹಾಗೆ, ಅವಸ್ಥಾನಂ ಚ ಉಕ್ತಮ್-ಇರುವಿಕೆಯೂ ಕೂಡ ಹೇಳಲ್ಪಟ್ಟಿತು. ಇಲ್ಲಿ ಜ್ಞಾನವು ಜ್ಞಾತಾವಿನೊಂದಿಗೆ ಸೇರಿಯೇ ಇರುತ್ತದೆಂದು ಹೇಳಿದುದರಿಂದ, ಚಾರ್ವಾಕನು ಹೊಸದಾಗಿ ಚೈತನ್ಯ ಪ್ರಾಪ್ತಿಯುಂಟಾಗುತ್ತದೆಂದು ಹೇಳುವ ವಾದವು ನಿರಸನ ಮಾಡಲ್ಪಟ್ಟಿತು. ಮತ್ತು ಆದಿತ್ಯ ಪ್ರಭೆಯೂ ಆದಿತ್ಯನೊಂದಿಗೆ ಯಾವಾಗಲೂ ಇದ್ದುಕೊಂಡು ಎರಡೂ ಹೇಗೆ ದ್ರವ್ಯವೋ, ಹಾಗೆಯೇ ಇಲ್ಲಿಯೂ ಜ್ಞಾತಾವಾದ ಆತ್ಮಾ ಆತ್ಮನೊಂದಿಗೇ ಇರುವ ಧರ್ಮವಾದ ಜ್ಞಾನವೂ ಎರಡೂ ದ್ರವ್ಯವೇ ಎಂಬ ಭಾವವನ್ನೂ ಊಹಿಸಬಹುದು. ಆಗಲಿ, ಈಗ ಮುಖ್ಯವಾಗಿ ಹೇಳಬೇಕಾದ ವಿಷಯವು ಯಾವುದೆಂದರೆ, ಮುಂದಿನವಾಕ್ಯದಿಂದ ತಿಳಿಸುತ್ತಾರೆ.—ತತ ಏವ - ಆ ಕಾರಣದಿಂದಲೇ, ಸಂಸಾರ ದಶಾಯಾಂ - ಸಂಸಾರಾವಸ್ಥೆಯಲ್ಲಿ, ಜ್ಞಾನಸ್ಯ - ಜ್ಞಾನಕ್ಕೆ, ಕರ್ಮಣಾ ಸಙ್ಕೋಚಃ-ಮಾಡಿದ ಕರ್ಮಗಳಿಂದ ಸಙ್ಕೋಚವೂ, ಮೋಕ್ಷದೆಶೆಯಲ್ಲಿ ಜ್ಞಾನದ ವಿಕಾಸವೂ ಎಂದರೆ, ಪ್ರಕಾಶವೂ ಸಹ,ಉಪಪನ್ನಃ-ಸಮಂಜಸವಾದುದೇ. ಸೂರ್ಯನ ತೇಜಸ್ಸಿಗೆ ಅಡ್ಡಲಾಗಿ ಯಾವುದಾದರೂ ಬಂದರೆ ಹೇಗೆ ತೇಜಸ್ಸಿಗೆ ಸಂಕೋಚವೋ, ಅದು ನಿವೃತ್ತಿಯಾದರೆ ಹೇಗೆ ತೇಜಸ್ಸಿಗೆ ವಿಕಾಸವೋ, ಹಾಗೆಯೇ ಈ ಆತ್ಮನ ಧರ್ಮಭೂತ ಜ್ಞಾನಕ್ಕೆ ಕರ್ಮದಿಂದ ಸಂಕೋಚವೂ, ತನ್ನಿವೃತ್ತಿಯಿಂದ ವಿಕಾಸವೂ ಸಹ ಉಪಪನ್ನವೇ ಎಂಬ ತಾತ್ಪರ್ಯವು ॥೧೬॥

**ಮೂಲಕ್ಕೆ ಅರ್ಥವು**:—ಅಜ್ಞಾನದಿಂದ ಬಿಡಲ್ಪಟ್ಟ ಜ್ಞಾನಮಾಹಾತ್ಮ್ಯೆಯು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಹಾಗೆ ಅಜ್ಞಾನವು ತೊಲಗಬೇಕಾದರೆ ಆತ್ಮಯಾಥಾತ್ಮ್ಯ ಜ್ಞಾನವೂ ಅಕರ್ತೃತ್ವಾನುಸಂಧಾನವೂ ಆವಶ್ಯಕವೆಂದೂ ಹೇಳಲ್ಪಟ್ಟಿತು. ಹಿಂದಿನ ಶ್ಲೋಕದಲ್ಲಿ ಮುಖ್ಯವಾಗಿ ಹೇಳಲ್ಪಟ್ಟದುದು :—ತನ್ನ ಆತ್ಮಸ್ವರೂಪದ ಯಾಥಾತ್ಮ್ಯವನ್ನು ಚನ್ನಾಗಿ ಅರಿತು, ಅನಂತರ ಭಕ್ತಿಯೋಗವನ್ನು ಅನುಷ್ಠಿಸಿ, ಮೋಕ್ಷವನ್ನು ಹೊಂದುವ ಸಂದರ್ಭದಲ್ಲಿ ತನ್ನ ಆತ್ಮಾವಿಗೆ ಪ್ರಕೃತಿಸಂಬಂಧವು ತೊಲಗುವವರ ಮೂಲಕ ವಿಭುವಾದ ಧರ್ಮಭೂತಜ್ಞಾನದ ಮೂಲಕ ವಿರಾಜಿಸುವನು ಎಂಬುದು. ಈ ಶ್ಲೋಕದಲ್ಲೂ ಅದನ್ನೇ ಉಪಪಾದಿಸುವವರಾಗಿ ಅದರಿಂದುಂಟಾಗುವ ಫಲಗಳನ್ನು ಹೇಳುತ್ತಾರೆ. ಆತ್ಮಾವಲೋಕನವೆಂಬ ಸೌಧದ ಆರೋಹಣಕ್ಕೆ ನಾಲ್ಕು ಸೋಪಾನಗಳೆಂದು ತಿಳಿಸಿ, ಆ ಆತ್ಮಾವಲೋಕನವು, ಸರ್ವಪಾಪವಿನಿರ್ಮುಕ್ತತೆಯನ್ನುಂಟುಮಾಡಿ ಭಕ್ತಿಯೋಗದ್ವಾರಾ ಪರಮಾತ್ಮ ಸಾಕ್ಷಾತ್ಕಾರ ರೂಪ ಪರಜ್ಞಾನ ಪ್ರಾಪ್ತಿಗೆ ಹೇತುವಾಗಿ ಕ್ರಮೇಣ ಅಪುನರಾವೃತ್ತಿಯು ಲಭಿಸುವಹಾಗೆ ಮಾಡುತ್ತದೆಂದು ಹೇಳಲ್ಪಡುತ್ತದೆ.

ಮೂ. ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭.

ಭಾ. ತದ್ಬುದ್ಧಯಃ - ತಥಾವಿಧಾತ್ಮದರ್ಶನಾರ್ಥವ್ಯವಸಾಯಾಃ, ತದಾತ್ಮಾನಃ - ತದ್ವಿಷಯಮನಸಃ, ತನ್ನಿಷ್ಠಾಃ - ತದಭ್ಯಾಸನಿರತಾಃ, ತತ್ಪರಾಯಣಾಃ - ತದೇವ ಪರಮಪ್ರಯೋಜನಮಿತಿ ಮನ್ವಾನಾಃ, ಏವಮಭ್ಯಸ್ಯಮಾನೇನ ಜ್ಞಾನೇನ ನಿರ್ಧೂತಪ್ರಾಚೀನಕಲ್ಮಷಾಃ

ತದ್ಬುದ್ಧಯಃ - ಗುರೂಪದೇಶದ ಮೂಲಕ ಆತ್ಮಯಾಥಾತ್ಮ್ಯದಲ್ಲಿ ನಿಶ್ಚಯಬುದ್ಧಿಯುಳ್ಳವರು ಎಂದರೆ, ಆತ್ಮಯಾಥಾತ್ಮ್ಯವನ್ನು ಹೊಂದಬೇಕೆಂಬ ದೃಢಸಙ್ಕಲ್ಪವುಳ್ಳವರು, ಅಲ್ಲಿಂದ ಮುಂದಕ್ಕೆ, ತದಾತ್ಮಾನಃ - ಆ ಗುರೂಪದೇಶದಿಂದುಂಟಾದ ಆತ್ಮಯಾಥಾತ್ಮ್ಯಸ್ವರೂಪವನ್ನೇ ಮನಸ್ಸಿನಲ್ಲಿಟ್ಟವರಾಗಿ ಎಂದರೆ, ಮನನಮಾಡುವವರಾಗಿ, ತನ್ನಿಷ್ಠಾಃ - ಅಲ್ಲಿಂದ ಮುಂದಕ್ಕೆ ಹಾಗೆಯೇ ಮನನ ಮಾಡುವುದರಿಂದ ಅದರಲ್ಲೇ ಅಭ್ಯಾಸವುಳ್ಳವರಾಗಿ, ತತ್ಪರಾಯಣಾಃ - ಅಲ್ಲಿಂದ ಮುಂದಕ್ಕೆ, ಅದೇ ಪ್ರಾಪ್ಯವಾಗಿ ಪರಮಪ್ರಯೋಜನವೆಂದು ಚೆನ್ನಾಗಿ ಅರಿತವರಾಗಿ, ಹೀಗೆ "ದ್ರಷ್ಟವ್ಯೋ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ" ಎಂಬ ಶ್ರುತಿಯಲ್ಲಿ ತೋರಿಬರುವ ನಾಲ್ಕು ವಿಧ ಆರೋಹಣಸೋಪಾನಗಳು ಇಲ್ಲಿಯೂ ಹೇಳಲ್ಪಟ್ಟವು. ಕೊನೆಗೆ ಜ್ಞಾನನಿರ್ಧೂತಕಲ್ಮಷಾಃ - ಹಿಂದಿನ ಶ್ಲೋಕದಲ್ಲಿ ತತ್ಪರಂ ಜ್ಞಾನಂ ಎಂದು ಕೊಂಡಾಡಲ್ಪಟ್ಟ ಪರಜ್ಞಾನವನ್ನು ಕ್ರಮೇಣ ಭಕ್ತಿಯೋಗದ್ವಾರಾ ಹೊಂದಿ, ಅದರಿಂದ ಸರ್ವಪಾಪ ವಿನಿರ್ಮುಕ್ತತೆಯನ್ನು ಹೊಂದಿದವರಾಗಿ, ಅಪುನರಾವೃತ್ತಿಂ - ಪುನಸ್ಸಂಸಾರವಿಲ್ಲದಿರುವ ಸ್ಥಿತಿಗೆ ಹೇತುವಾದ ತನ್ನ ನೈಜ ಸ್ವರೂಪವಾದ ಜ್ಞಾನಾಕಾರತೆಯುಳ್ಳ ಆತ್ಮವನ್ನು, ಗಚ್ಛಂತಿ - ಕುರಿತುಹೋಗುತ್ತಾರೆ ಎಂದರೆ ಪ್ರಾಪ್ಯವಾಗಿ ಹೊಂದುತ್ತಾರೆ. ಇಲ್ಲಿ ತದ್ಬುದ್ಧಯಸ್ತದಾತ್ಮಾನಃ ಎಂಬಲ್ಲಿರುವ ತಚ್ಛಬ್ದದಲ್ಲಿ ತೋರಿಬರುವುದು ಆತ್ಮಯಾಥಾತ್ಮ್ಯಜ್ಞಾನವು; ಜ್ಞಾನನಿರ್ಧೂತ ಕಲ್ಮಷಾಃ ಎಂಬಲ್ಲಿರುವ ಜ್ಞಾನ ಶಬ್ದವು, ಆತ್ಮಯಾಥಾತ್ಮ್ಯಜ್ಞಾನದಿಂದ ಅಜ್ಞಾನನಿವೃತ್ತಿಯಾದ ನಂತರ ಉಂಟಾಗುವ ತತ್ ಪರಂ ಜ್ಞಾನಂ ಎಂದು ಹಿಂದಿನ ಶ್ಲೋಕದಲ್ಲಿ ನಿರ್ದೇಶಿಸಲ್ಪಟ್ಟ ಪರಜ್ಞಾನವಾಗಿ ತೋರಿಬರುತ್ತದೆ. ಹೀಗೆ ಪ್ರಾಪ್ತವಾದ ನೈಜಸ್ವರೂಪವು ಶಾಶ್ವತವಾದುದಾಗಿ ಎಂದಿಗೂ ಹೋಗತಕ್ಕದ್ದಲ್ಲವೆಂಬ ಭಾವವು, ಅಪುನರಾವೃತ್ತಿ ಶಬ್ದದಿಂದ ತೋರಿಬರುತ್ತದೆ. ಈ ಶ್ಲೋಕದಲ್ಲಿ "ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ" ಎಂಬ ಶ್ರುತ್ಯರ್ಥವು ಉಪಪಾದಿಸಲ್ಪಟ್ಟಿತು.

ಭಾಷ್ಯಾರ್ಥವು:—ನಾಲ್ಕನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಕರ್ಮಯೋಗದಲ್ಲಿರುವ ಜ್ಞಾನಾಂಶವು ಇಲ್ಲಿ ವಿಶೋಧಿಸಲ್ಪಡುತ್ತದೆ. ತದ್ಬುದ್ಧಯಃ - ಇಲ್ಲಿ ತಚ್ಛಬ್ದದಿಂದ, ಆತ್ಮಸ್ವರೂಪವಾಗಲಿ, ಅಥವಾ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಆತ್ಮಯಾಥಾತ್ಮ್ಯಸ್ವರೂಪ ಜ್ಞಾನವಾಗಲಿ ಹೇಳಲ್ಪಟ್ಟಿತೆಂದು ಭಾವಿಸಬಹುದು, ತದ್ಬುದ್ಧಯಃ ಎಂದರೆ, ತಥಾವಿಧಾತ್ಮದರ್ಶನಾರ್ಥವ್ಯವಸಾಯಾಃ—ಹಿಂದೆ ಉಪಪಾದಿಸಲ್ಪಟ್ಟ ಆತ್ಮದರ್ಶನದಲ್ಲಿ ನಿಶ್ಚಯಬುದ್ಧಿಯುಳ್ಳವರು, ಅನಂತರ ತದಾತ್ಮಾನಃ ಎಂದರೆ, ತದ್ವಿಷಯಮನಸಃ - ಆತ್ಮದರ್ಶನ ವಿಷಯವಾದ ಮನಸ್ಸುಳ್ಳವರು, ಇದರಿಂದ ಆತ್ಮದರ್ಶನದರೂಪ ಯೋಗವು ಹೇಳಲ್ಪಟ್ಟಿತು. ತದನಂತರ, ತನ್ನಿಷ್ಠಾಃ- ಎಂದರೆ, ಇತರ ವಿಷಯ ವ್ಯಾವೃತ್ತಿಯಿಂದ ಆತ್ಮದರ್ಶನದ ಅಭ್ಯಾಸದಲ್ಲೇ ನಿರತರಾದವರು, ತದನಂತರ ತತ್ಪರಾಯಣಾಃ - ಎಂದರೆ, ತದೇವ-ಆ ಆತ್ಮದರ್ಶನವೇ, ಪರಮ ಪ್ರಯೋಜನಮಿತಿ ಮನ್ವಾನಾಃ -ಪರಮ ಪ್ರಯೋಜನವೆಂದು ತಿಳಿದವರು ಎಂದರೆ, ಪ್ರಾಪ್ಯವಾದ ಆತ್ಮ

ಭಾ. ತಥಾ ವಿಧಮಾತ್ಮಾನಂ - ಅಪುನರಾವೃತ್ತಿಂ ಗಚ್ಛನ್ತಿ. ಯದವಸ್ಥಾದಾತ್ಮನಃ ಪುನರಾವೃತ್ತಿರ್ನವಿದ್ಯತೇ, ಸ ಆತ್ಮಾ ಅಪುನರಾವೃತ್ತಿಃ ; ಸ್ವೇನರೂಪೇಣಾವಸ್ಥಿತಮಾತ್ಮಾನಂ ಗಚ್ಛನ್ತೀತ್ಯರ್ಥಃ ॥೧೭॥

ದರ್ಶನವೇ ಪರಮ ಪ್ರಯೋಜನವೆಂದು ತಿಳಿದವರು, ಇಂತಹ ಕರ್ಮಯೋಗಿಗಳು, ಏವಮಭ್ಯಸ್ತ ಮಾನೇನ ಜ್ಞಾನೇನ - ಹೀಗೆ ಪ್ರತಿದಿನವೂ ಅಭ್ಯಾಸಮಾಡುವದರಿಂದುಂಟಾದ ಜ್ಞಾನದಿಂದ, ಇದರಿಂದ ಬರೀ ವಾಕ್ಯಜನ್ಯ ಜ್ಞಾನ ಸಾಲದೆಂದು ಹೇಳಿದಂತಾಯಿತು, ನಿರ್ಧೂತಪ್ರಾಚೀನಕಲ್ಮಷಾಃ - ಕೊಡಹಲ್ಪಟ್ಟ ಹಿಂದಿನ ಪಾಪಗಳುಳ್ಳವರಾಗಿ, ಇದು ಜ್ಞಾನನಿರ್ಧೂತಕಲ್ಮಷಾಃ ಎಂಬುದರ ವ್ಯಾಖ್ಯಾನವು. ಅಪುನರಾವೃತ್ತಿಂ ಎಂದರೆ, ತಥಾವಿಧಮಾತ್ಮಾನಂ ಅಂತಹ ಎಂದರೆ ಪುನರಾವೃತ್ತಿ ತನ್ನ ಆತ್ಮಸ್ವರೂಪವನ್ನೇ, ಗಚ್ಛನ್ತಿ - ಹೊಂದುತ್ತಾರೆ. ಇಲ್ಲಿ ಅಪುನರಾವೃತ್ತಿಂ ಗಚ್ಛಂತಿ ಎಂಬುದಕ್ಕೆ, ಇತರರು ಮಾಡಿದಹಾಗೆ ಮೋಕ್ಷಪ್ರಾಪ್ತಿ ಎಂದು ವ್ಯಾಖ್ಯಾನ ಮಾಡದೆ ಪ್ರಾಪ್ಯವಾದ ಆತ್ಮನನ್ನು ಹೊಂದುವರೆಂದು ಅರ್ಥಮಾಡಿದುದಕ್ಕೆ ಕಾರಣವನ್ನು ಹೇಳುತ್ತಾರೆ:—ಯದವಸ್ಥಾತ್ - ಯಾವ ಅವಸ್ಥೆಯಿಂದ, ಎಂದರೆ ಯಾವ ಅವಸ್ಥೆಯನ್ನು ಹೊಂದಿದ ನಂತರ, ಆತ್ಮನಃ ಪುನರಾವೃತ್ತಿರ್ನ ವಿದ್ಯತೇ - ಆತ್ಮನಿಗೆ ಪುನರಾವೃತ್ತಿಯು ಎಂದರೆ, ಪುನಸ್ಸಂಸಾರವು ಇಲ್ಲವೋ, ಸಃ ಆತ್ಮಾ - ಅಂತಹ ಆತ್ಮನು, ಅಪುನರಾವೃತ್ತಿಃ-ಪುನರಾವೃತ್ತಿ ಇಲ್ಲದವನೆಂದು ಹೇಳಿಸಿಕೊಳ್ಳುವನು ; ಸ್ವೇನರೂಪೇಣಾವಸ್ಥಿತಂ - ತನ್ನ ಸ್ವೈಜವಾದ ಜ್ಞಾನದಿಂದ ಜಾಜ್ವಲ್ಯಮಾನನಾಗಿರುವ, ಆತ್ಮಾನಂ - ಆತ್ಮನನ್ನು, ಗಚ್ಛಂತೀತ್ಯರ್ಥಃ – ಹೊಂದುವರೆಂಬ ತಾತ್ಪರ್ಯವು. ಹೀಗೆ ತದ್ಬುದ್ಧಯಸ್ತದಾತ್ಮಾನಃ - ಎಂದು ಹೇಳಿರುವಹಾಗೆ ಆತ್ಮಯಾಥಾತ್ಮ್ಯಸ್ವರೂಪವನ್ನು ಗುರುಮುಖೇನ ತಿಳಿದು ಅದರಲ್ಲೇ ನಿಶ್ಚಯಬುದ್ಧಿಯನ್ನು ಹೊಂದಿ ಅದನ್ನೇ ಮನಸ್ಸಿನಲ್ಲಿಟ್ಟು, ಇತರ ವಿಷಯಗಳಲ್ಲಿ ಮನಸ್ಸನ್ನಿಡದೆ, ಅದನ್ನೇ ಸಾಕ್ಷಾತ್ಕರಿಸುವದನ್ನ ಅಭ್ಯಾಸ ಮಾಡುವವನಾಗಿ, ಅಂತಹ ಆತ್ಮಸಾಕ್ಷಾತ್ಕಾರವೇ ಪರಮ ಪ್ರಯೋಜನವೆಂದು ಭಾವಿಸುವವನಾಗಿ, ಅಂತಹ ಆತ್ಮಜ್ಞಾನದಿಂದ ಪ್ರಾಚೀನ ಕರ್ಮಗಳಿಂದ ಬಿಡಲ್ಪಟ್ಟವನಾಗಿ, ತನ್ನ ಸ್ವೈಜ ಸ್ವರೂಪವನ್ನೇ ಸಾಕ್ಷಾತ್ಕರಿಸುವನಾದುದರಿಂದ ಪುನಃ ಸಂಸಾರದ ಭಯವಿಲ್ಲದಿರುವ ತನ್ನ ಸ್ವೈಜ ಸ್ವರೂಪವನ್ನೇ ಹೊಂದುವನು ಎಂಬರ್ಥವು. ಇಲ್ಲಿ ಅಪುನರಾವೃತ್ತಿ ಶಬ್ದಕ್ಕೆ ಬಹುವ್ರೀಹಿಯ ಅರ್ಥ ಮಾಡಿ ಪ್ರಾಪ್ಯನಾದ ಆತ್ಮನು ನಿರ್ದೇಶಿಸಲ್ಪಟ್ಟನೆಂದು ಹೇಳಿದರೆ. ರೂಢಿಯಾದ ಮೋಕ್ಷವೆಂಬರ್ಥಪರಿತ್ಯಾಗವು ಯುಕ್ತವೇ ಎಂದು ಆಕ್ಷೇಪಿಸಬಹುದು, ಆದರೆ ಪ್ರಕರಣಾನುಗುಣವಾಗಿಯೇ ಅರ್ಥಮಾಡುವದು ಯುಕ್ತವಾದುದರಿಂದಲೂ, ಪ್ರಕೃತ ವಿಷಯವು ಆತ್ಮಸಾಕ್ಷಾತ್ಕಾರವಾದುದರಿಂದಲೂ, ಈ ಆತ್ಮಸ್ವರೂಪ ಧ್ಯಾನದಲ್ಲಿ ಪ್ರಾಪ್ಯವು ಆತ್ಮನೇಯಾದುದರಿಂದಲೂ, ಅಪುನರಾವೃತ್ತಿ ಶಬ್ದಕ್ಕೆ ಹಾಗೆ ಭಾಷ್ಯವು ಬರೆಯಲ್ಪಟ್ಟಿತು. ಅಪುನರಾವೃತ್ತಿ ಶಬ್ದಕ್ಕೆ ರೂಢಿಯಾದ ಮೋಕ್ಷವೆಂಬರ್ಥವನ್ನೇ ಹೇಳತಕ್ಕದ್ದೆಂದು ನಿರ್ಬಂಧಿಸಿದರೆ, ಅದೂ ಕೂಡ ನಮಗೇನೂ ವಿರೋಧವಲ್ಲವು. ಕ್ರಮೇಣ ಭಕ್ತಿಯೋಗದ್ವಾರಾ ಪರಭಕ್ತಿಯಿಂದ ಸಮಸ್ತ ಪಾಪಗಳನ್ನೂ ಕಳೆದುಕೊಂಡವರಾಗಿ ಮೋಕ್ಷದವರೆಯನ್ನು ಕುರಿತು ಹೋಗುವರೆಂದು ಮೂಲದ ಅರ್ಥದಲ್ಲಿ ತೋರಿಸಿದಹಾಗೆ ಅರ್ಥಮಾಡಿದರೂ ಬಾಧಕವಿಲ್ಲವು. ॥೧೭॥

ಮೂಲಕ್ಕೆ ಅರ್ಥವು:—ಹಿಂದಿನ ಶ್ಲೋಕದಲ್ಲಿ ಕರ್ಮಯೋಗಿಗೆ ಆತ್ಮ ಸಾಕ್ಷಾತ್ಕಾರ ಉಂಟಾಗುವ ಪ್ರಕಾರವು ಹೇಳಲ್ಪಟ್ಟು, ಅದರಿಂದುಂಟಾಗುವ ಮಹತ್ಪ್ರಯೋಜನವೂ ಸೂಚಿಸಲ್ಪಟ್ಟಿತು. ಈ ಶ್ಲೋಕದಿಂದಲಾದರೋ ಆ ಆತ್ಮ ಸಾಕ್ಷಾತ್ಕಾರವೆಂಬುದು ಎಂಥಾದ್ದೆಂಬಪೇಕ್ಷೆ

ಮೂ. ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ ೧೮.

ಯಲ್ಲಿ ಎಲ್ಲಾ ಜೀವಜಂತುಗಳಲ್ಲೂ ಇರುವ ಆತ್ಮರುಗಳು ಜ್ಞಾನೈಕಾಕಾರತೆಯಿಂದ ಸಮರೆಂದು ತಿಳಿಯುವ ಸಮದರ್ಶಿತ್ವವೇ ಎಂದು ತಿಳಿಸುತ್ತಾರೆ. ಹಿಂದೆ ಸೂಕ್ಷ್ಮವಾಗಿ "ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋಮಯಿ" (ಗೀ. ೪. ೩೫) ಎಂಬುದರಿಂದ ಹೇಳಲ್ಪಟ್ಟ ಸಮಸ್ತ ಚೇತನರ ಆತ್ಮ ಸಮತ್ವವು ಇಲ್ಲಿ ಸ್ಪಷ್ಟತರವಾಗಿ ಉಪಪಾದಿಸಲ್ಪಡುತ್ತದೆ. ವಿದ್ಯಾವಿನಯಸಂಪನ್ನೇ - ಇಲ್ಲಿ ವಿದ್ಯಾಶಬ್ದವು ಬ್ರಹ್ಮವಿದ್ಯೆಯನ್ನು ಬೋಧಿಸುತ್ತದೆ, ಸಾಧಾರಣವಾಗಿ ಇಂತಹ ಅಮೋಘವಿದ್ಯೆಯಿದ್ದರೂ ವಿನಯವಿರುವದಿಲ್ಲವು; ಬ್ರಹ್ಮವಿದ್ಯಾ ನಿಪುಣನೆಂಬ ಅಹಂಕಾರವಿರುತ್ತದೆ; ಹಾಗಲ್ಲದೆ ವಿದ್ಯೆಯೂ ಅದಕ್ಕೆ ಭೂಷಣವಾದ ವಿನಯವೂ ಇವೆರಡರಿಂದಲೂ ಕೂಡಿರುವವನಲ್ಲೂ, ವಿದ್ಯಾವಿನಯಗಳಿಗಿಂತಲೂ ಹೆಚ್ಚಾದ ಸಂಪತ್ತು ಬೇರೆ ಇಲ್ಲವೆಂಬ ಭಾವದಿಂದ ಸಂಪನ್ನೇ ಎಂದು ಪ್ರಯೋಗಿಸಿರುತ್ತಾರೆ, ಅಂತವನಲ್ಲೂ, ಬ್ರಾಹ್ಮಣೇ - ಕೇವಲ ಬ್ರಾಹ್ಮಣ ಯೋನಿಯಲ್ಲಿ ಹುಟ್ಟಿದವನಲ್ಲೂ, ಬ್ರಾಹ್ಮಣ ಶಬ್ದಕ್ಕೆ ಸರಿಯಾದ ಅರ್ಥವು, ಪರಬ್ರಹ್ಮವನ್ನು ಶಾಸ್ತ್ರಗಳ ಮೂಲಕ ಹುಡುಕಿ ತಿಳಿದವನು, ಬ್ರಹ್ಮವಿತ್ತೆಂಬರ್ಥವು; ಈ ಅಭಿಪ್ರಾಯವು ವಿದ್ಯಾವಿನಯಸಂಪನ್ನೇ ಎಂಬುವದರಲ್ಲೇ ಅಂತರ್ಗತವಾಗಿರುವದರಿಂದ ಬ್ರಾಹ್ಮಣ ಶಬ್ದಕ್ಕೆ ಕೇವಲ ಬ್ರಾಹ್ಮಣಯೋನಿಯಲ್ಲಿ ಹುಟ್ಟಿದವನೆಂದು ಅರ್ಥಮಾಡಲ್ಪಟ್ಟಿತು. ಇದು ಕ್ಷತ್ರಿಯ ಶೂದ್ರಾದಿ ಸರ್ವ ಮನುಷ್ಯರಿಗೂ ಸ್ತ್ರೀಯರಿಗೂ ಸಹ ಉಪಲಕ್ಷಣವು, ಗವಿ - ಗೋವಿನಲ್ಲೂ ಇದು ಎತ್ತಿಗೂ ಉಪಲಕ್ಷಣವು, ಹಸ್ತಿನಿ - ಆನೆಯಲ್ಲಿಯೂ, ಶುನಿಚೈವ - ನಾಯಿಯಲ್ಲಿಯೂ ಕೂಡ, ಶ್ವಪಾಕೇಚ - ನಾಯಿಯ ಮಾಂಸವನ್ನು ಆಹಾರವಾಗಿ ಉಪಯೋಗಿಸುವನಲ್ಲೂ ಸಹ, ಪಂಡಿತಾಃ - ಆತ್ಮ ಯಾಥಾತ್ಮ್ಯ ಜ್ಞಾನವುಳ್ಳ ಪಂಡಿತರು, ಸಮದರ್ಶಿನಃ - ಎಲ್ಲಾ ಆತ್ಮರು ಸಮರೆಂಬ ಬುದ್ಧಿಯುಳ್ಳವರಾಗುತ್ತಾರೆ. ಈ ಆತ್ಮರುಗಳೆಲ್ಲಾ ಜ್ಞಾನಸ್ವರೂಪರಾಗಿ ಜ್ಞಾನಗುಣಕರಾಗಿ ಎಲ್ಲರೂ ಸಮರು, ಇಂತವರಿಗೆ ಕರ್ಮೋಪಾಧಿಯಿಂದ ಬಂದ ಬೇರೆ ಬೇರೆ ಶರೀರಗಳಿಂದ ಇಲ್ಲಿ ಬೇರೆಬೇರೆಯಾಗಿಯೂ, ಬೇರೆ ಬೇರೆ ಗುಣವುಳ್ಳವರಾಗಿಯೂ ಇರುತ್ತಾರೆಂಬ ಭಾವವು. ಇದರಿಂದಲೇ ಕ್ಷೇತ್ರಜ್ಞರಲ್ಲಿ ವೈವಿಧ್ಯವೂ ವೈಚಿತ್ರ್ಯವೂ ಉಂಟೆಂಬ ತಾತ್ಪರ್ಯವೂ ಸೂಚಿತವು. ಆದುದರಿಂದ ಇಲ್ಲಿ ಇವುಗಳಿಗೆ ಶರೀರವಿರುವಾಗಲೇ ಸಮತ್ವವೆಂಬಭಿಪ್ರಾಯವಲ್ಲವು. ಬ್ರಾಹ್ಮಣೇತರ ಪಕ್ಷಪಾತಿಗಳೂ, ಸೋಷಲ್ ರಿಫಾರ್ಮರುಗಳೂ, ಈ ವಿಷಯವನ್ನು ಮುಖ್ಯವಾಗಿ ಗ್ರಹಿಸತಕ್ಕದ್ದಾಗಿರುತ್ತದೆ. ಪ್ರಕೃತಿ ವಿಯುಕ್ತ ಆತ್ಮರುಗಳೆಲ್ಲಾ ಜ್ಞಾನೈಕಾಕಾರತೆಯಿಂದ ಸಮರೆಂದು ಹೇಳಿತೇ ವಿನಾ, ದೇಹದೊಂದಿಗೆ ಸೇರಿರುವಾಗ ವ್ಯತ್ಯಾಸವು ತಪ್ಪಿಸಲ್ಲವು. ಋಷಿಯೂ ಕಟುಕರವನೂ ಇಬ್ಬರು ಸಮರೆಂದರೆ ಒಪ್ಪತಕ್ಕ ಮಾತೇ? ಶಾಸ್ತ್ರವು ಎಂದಿಗೂ ಇಂತಹ ಪ್ರತ್ಯಕ್ಷವಿರುದ್ಧವಾದ ವಿಷಯವನ್ನು ಬೋಧಿಸಲಾರದು, ಈ ಶ್ಲೋಕದಲ್ಲಿ ಬರೀ ಮನುಷ್ಯರನ್ನು ಮಾತ್ರವೇ ಹೇಳಲಿಲ್ಲವು; ಗೋ, ಹಸ್ತಿ, ಶ್ವಾನಾದಿ ತಿರ್ಯಕ್ಕುಗಳೂ ಹೇಳಲ್ಪಟ್ಟಿರುತ್ತವೆ. ಇವೆಲ್ಲವೂ ಸಮವೆಂದರೇನಭಿಪ್ರಾಯವಾಗುತ್ತದೆ? ದೇಹದೊಂದಿಗೇನೇ ಇವೆಲ್ಲಾ ಸಮವಾದವೇ? ಸಮಭಾವನೆಯೂ ಸಮ ವ್ಯವಹಾರವೂ ನ್ಯಾಯವೇ? ಎಂದಿಗೂ ಸಮವಾಗುವದಿಲ್ಲವು. ಸಮವೆಂದು ಭಾವಿಸಿದರೆ ಒಬ್ಬ ಕವಿಯು ಅಮೋಘ ಕವಿತ್ವವನ್ನು ಮಾಡಿದುದಕ್ಕಾಗಿ ಮರ್ಯಾದೆ ಮಾಡುವದರ ಉದ್ದೇಶ್ಯವಾಗಿ ಆನೆಯಮೇಲೆ ಕೂಡಿಸಿ ಮೆರವಣಿಗೆ ಮಾಡಿಸುವದಕ್ಕಾಗಿ ಬದಲಾಗಿ ಎಲ್ಲಾ ಸಮವಾದುದರಿಂದ ಕತ್ತೆಯ ಮೇಲಾಗಲಿ ಶ್ವಾನದ ಮೇಲಾಗಲಿ ಕೂಡಿಸಿ ಮೆರವಣಿಗೆ ಮಾಡಿಸಲಾಗುತ್ತದೋ? ಒಂದೇ ಜಾತಿಯ ವಸ್ತುವಿನಲ್ಲೇ ಅನೇಕ ವೈವಿಧ್ಯವುಂಟು.

ನಾಯಿಗಳಲ್ಲಿ ಸಾವಿರಾರು ವಿಧವುಂಟು. ಮಾವಿನ ಮರಗಳಲ್ಲೂ ಸುಮಾರು ೫೦೦ ಜಾತಿಗಳುಂಟು. ಅವುಗಳ ಹಣ್ಣುಗಳೆಲ್ಲಾ ಬೇರೆ ಬೇರೆ ವಿಧವು. ಮನುಷ್ಯರಲ್ಲೂ ಹಾಗೆಯೇ. ಹೀಗೆಯೇ ಎಲ್ಲಿ ನೋಡಿದರೂ ವ್ಯತ್ಯಾಸವೂ ತರತಮ ಭಾವವೂ ಇರುವಾಗ ಎಲ್ಲಾ ಒಂದೇ ಎಂಬ ಮಾತು ಹೇಗೆ ಸಮಂಜಸವೋ ತಿಳಿಯದು. ಎಲ್ಲಾದರೂ ೪೦೦೦ ಮಂದಿ ನೆರೆದಿರುವ ಸಂಘದಲ್ಲಿ ಒಬ್ಬನ ಸಹೋದರನು ಸೇರಿಬಿಟ್ಟಿದ್ದರೆ ಈತನೇ ನನ್ನ ಸಹೋದರನೆಂದು ಅನಂತರ ಹುಡುಕಿ ಹೇಗೆ ಗುರ್ತಿಸಿ ಕರೆದುಕೊಂಡು ಹೋಗುವನೆಂದು ಕೇಳುವೆವು. ಎರಡು ಕಿವಿ, ಎರಡು ಕಣ್ಣು, ಎರಡು ಮೂಗು ಹೀಗೆ ಎಲ್ಲರಿಗೂ ಸಾಮಾನ್ಯವಾಗಿ ಇರುವಹಾಗೆಯೇ ಈತನಿಗೂ ಇರುವಾಗ, ಹೇಗೆ ಆತನು ಗುರ್ತಿಸಿದನು? ಆಗ ತನ್ನ ಸಹೋದರನಿಗೂ ಇತರರಿಗೂ ಏನೋ ವ್ಯತ್ಯಾಸವಿದೆ ಎಂಬುದು ವ್ಯಕ್ತವು. ಹೀಗೆ ವ್ಯತ್ಯಾಸವೇ ಲೋಕದಲ್ಲಿ ತೋರಿಬರುತ್ತದೆಂಬುದಕ್ಕೆ ನಿದರ್ಶನವಾಗಿ ಈ ವಿಷಯವು ಹೇಳಲ್ಪಟ್ಟಿತು. ಪ್ರಕೃತಿ ವಿಯುಕ್ತ ದೆಶೆಯಲ್ಲಿ ಎಲ್ಲಾ ಒಂದೇ ಎಂದು ಹೇಳಿದರೆ, ಪ್ರಕೃತಿಯೊಂದಿಗಿರುವ ಅವಸ್ಥೆಯಲ್ಲಿ ಎಲ್ಲಾ ಬೇರೆ ಬೇರೆಯಾಗಿ ವ್ಯತ್ಯಸ್ತವಾದುವೆಂಬುದು ಸ್ಪಷ್ಟವು. ಇನ್ನೊಂದು ಶಾಸ್ತ್ರಪರಿತ್ಯಾಗಮಾಡಿದ ಹೇಳಿಕೆ ಏನೆಂದರೆ:—ಗೀತೆಯಲ್ಲಿ ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ ಎಂದು ಸ್ವಾಮಿಯು ನಾಲ್ಕೇ ವರ್ಣಗಳನ್ನು ಏರ್ಪಡಿಸಿರುವಾಗ ನಾಲ್ಕಕ್ಕೆ ಹೆಚ್ಚಾದ ವರ್ಣಗಳು ಎಲ್ಲಿಂದ ಬಂದವು? ಇದು ಬ್ರಾಹ್ಮಣಾದಿಗಳ ನವೀನ ಏರ್ಪಾಡು ಎಂದು ಹೇಳಿ, ಐದನೆಯ ಜಾತಿಯೇ ಗೀತೆಯಲ್ಲಿ ಹೇಳಿರುವದಿಲ್ಲವೆಂದು ವಾದಿಸುವರು. ಇಲ್ಲಿನ ಶ್ವಪಾಕ ಶಬ್ದವು ಹಾಗೆಯೇ ಉಪನಿಷತ್ತಿನಲ್ಲಿರುವ ಚಂಡಾಲಶಬ್ದವೂ, ಇಂತಹ ಪೂರ್ವಪಕ್ಷಗಳನ್ನೆಲ್ಲಾ ದೂರೀಕೃತಮಾಡುತ್ತದೆ. ಮುಖ್ಯವಾದವು ನಾಲ್ಕು ಜಾತಿಗಳಾದರೂ ವರ್ಣಸಾಂಕರ್ಯದಿಂದಲೂ, ಬಹುಜನಸಮ್ಮತವಲ್ಲದ ಕೆಲಸಗಳನ್ನು ಮಾಡುವುದರಿಂದ ಆ ಪಂಗಡದವರಿಂದ ದೂರೀಕೃತಮಾಡಲ್ಪಡುವುದರಿಂದಲೂ, ಮಹಾ ಋಷಿಗಳ ಶಾಪಗಳಿಂದಲೂ ಅಥವಾ ಕೆಲವರು ಮಾಡುವ ಪಶುಜೀವನ, ಮಾಂಸ ವಿಕ್ರಯ, ಮನೆಯ ಚಿತ್ತಲುಗಳನ್ನು ಗುಡಿಸೋಣ ವಿಸರ್ಜಿಸಿದ ಮಲಮೂತ್ರಾದಿಗಳನ್ನು ತೆಗೆದುಹಾಕೋಣ, ಮೊದಲಾದ ಪ್ರವೃತ್ತಿಗಳಿಂದಲೂ ಇತರ ಅನೇಕ ಪಂಗಡಗಳು ಉಂಟು. ಅವೆಲ್ಲಾ ಈ ಕಾರಣದಿಂದ ದೋಷಾವಹವಾದವು. ಈಗ ಈ ಕೆಲಸವನ್ನು ಮಾಡುವವರನ್ನು ಉತ್ತಮಸ್ಥಿತಿಗೆ ತಂದುಬಿಟ್ಟು, ಇತರರು ಈ ಕೆಲಸಗಳನ್ನು ಮಾಡಿದರೂ, ಇವರೂ ದೋಷಾವಹರೇ ಆಗುವರು; ಹೀಗಿರುವದರಿಂದ ಸರ್ವ ಮನುಷ್ಯರೂ ಸಮವೆಂಬ ಭಾವನೆಯೂ, ಅದಕ್ಕೆ ಜನಮುಖಂಡರಿಂದಲೂ, ಮಂಡಲಿಗಳ ಮುಖಂಡರಿಂದಲೂ, ಸರ್ಕಾರಗಳಿಂದಲೂ, ಅನುಮತಿಯೂ, ಸಹ ಶಾಸ್ತ್ರಸಮ್ಮತಿಯಿಲ್ಲದ ತುಂಬಾ ಅನರ್ಥಕರವಾಗಿ ಪರಸ್ಪರ ದ್ವೇಷವನ್ನುಂಟುಮಾಡುವ ವಿಷಯವಾಗಿರುತ್ತದೆ. ನಿಪುಣತೆಯೊಂದೇ ಪ್ರೋತ್ಸಾಹಕ್ಕೆ ಕಾರಣವೆಂದು ಎಲ್ಲರೂ ಹೇಳಿಬಿಟ್ಟರೆ ಯಾವ ಅನರ್ಥಗಳೂ ಉಂಟಾಗುವದಿಲ್ಲವು. ವೈವಿಧ್ಯವೂ ವೈಚಿತ್ರ್ಯವೂ ಈ ಲೋಕವನ್ನಲಂಕರಿಸಿ ಆಳುತ್ತಿರುವಾಗ, ಈ ಧರ್ಮಗಳಿಗೆ ವಿರುದ್ಧವಾದ ಸಮತ್ವವು ಎಲ್ಲಿಯೂ ಇಲ್ಲವು. ಉತ್ಕೃಷ್ಟ ನಿಕೃಷ್ಟ ಭಾವಗಳು ತಪ್ಪಿದಲ್ಲವೆಂದು, ಶ್ರೀ ಕೃಷ್ಣ ಭಗವಾನರವರೇ ಈ ಶ್ಲೋಕದಲ್ಲಿ ಸಾತ್ವಿಕನಾದ ಉತ್ಕೃಷ್ಟ ಪ್ರಾಣಿಗಳನ್ನು ಮೊದಲುಮಾಡಿಕೊಂಡು ತುಂಬಾ ನಿಕೃಷ್ಟಪ್ರಾಣಿಯವರೆಗೂ ಹೇಳಿರುತ್ತಾರೆ. ಅದೂ ಅಲ್ಲದೆ ಜ್ಞಾನವಿದ್ದೂ ಕೂಡ ಶ್ವಪಾಕನಾಗುವವನು ಶುನಕಕ್ಕಿಂತ ಕಡೆ ಎಂದು ತೋರಿಸುವದಕ್ಕಾಗಿ ಮೊದಲು ಶುನಿಚೈವ ಎಂದು ಹೇಳಿ, ಶ್ವಪಾಕೇ ಚ ಎಂದು ಕಡೆಯಲ್ಲಿ ಹೇಳಿರುತ್ತಾರೆ. ಇದರಿಂದ ಅಭಕ್ಷ್ಯಭಕ್ಷಣೆಯು ರಾಜಸ ತಾಮಸ ಗುಣಾಭಿವೃದ್ಧಿಗೂ, ಬಹು ಹೇಯಪಾತಕಗಳ ಆಚರಣೆಗೂ, ಕಾರಣವಾಗುವದರಿಂದ ಅವನ್ನು ಖಂಡಿಸುವದಕ್ಕಾಗಿ ಎಲ್ಲಾ ಜಾತಿಯ ಪ್ರಾಣಿಗಳಿಗಿಂತಲೂ ಕಡೆಯಾಗಿ ಕೊಡ

---

ಭಾ. ವಿದ್ಯಾವಿನಯಸಂಪನ್ನೇ, ಕೇವಲಬ್ರಾಹ್ಮಣೇ, ಗೋಹಸ್ತಿಶ್ವಶ್ವಪಚಾದಿಷು ಚ ಅತ್ಯಂತ ವಿಷಮಾಕಾರತಯಾ ಪ್ರತೀಯಮಾನೇಷ್ವಾತ್ಮಸು ಪಂಡಿತಾಃ- ಆತ್ಮಯಾಥಾತ್ಮ್ಯವಿದಃ,

---

ಯಲ್ಲಿ ಪ್ರಕಾಶನು ಹೇಳಲ್ಪಟ್ಟಿರುತ್ತಾನೆ. ಈ ಸಂದರ್ಭದಲ್ಲಿ "ತತೋ ವರ್ಣಾಶ್ಚ ಚತ್ವಾರಸ್ತೇಷಾಂ ಬ್ರಾಹ್ಮಣ ಉತ್ತಮಃ। ಬ್ರಾಹ್ಮಣೇಷ್ವಪಿ ವೇದಜ್ಞೋ ಹ್ಯರ್ಥಜ್ಞೋಽಭ್ಯಧಿಕಸ್ತತಃ। ಅರ್ಥಜ್ಞಾತ್ಸಂಶಯಚ್ಛೇತ್ತಾ ತತಃ ಶ್ರೇಯಾನ್ ಸ್ವಕರ್ಮಕೃತ್। ಮುಕ್ತಸಂಗಸ್ತತೋ ಭೂಯಾನದೋಗ್ಧಾ ಧರ್ಮಮಾತ್ಮನಃ।ತಸ್ಮಾನ್ಮಯ್ಯರ್ಪಿತಾಶೇಷಕ್ರಿಯಾರ್ಥಾತ್ಮಾ ನಿರಂತರಃ ಮಯ್ಯರ್ಪಿತಾತ್ಮನಃ ಪುಂಸೋ ಮಯಿ ಸಂನ್ಯಸ್ತಕರ್ಮಣಃ। ನ ಪಶ್ಯಾಮಿ ಪರಂ ಭೂತಮಕರ್ತುಃ ಸಮದರ್ಶನಾತ್" ಎಂಬುದು ಅನುಸಂಧೇಯವು. (ಭಾಗ ೨೯. ೩೧-೩೩) ಸರ್ವೇಶ್ವರನು ತನ್ನ ತಾಯಿಯಾದ ದೇವಹೂತಿಗೆ ಹೇಳಿದ ಉಪದೇಶವೆಂದು ಮಹರ್ಷಿಯು ಹೇಳಿರುತ್ತಾರೆ. ಈ ಕಾಲಕ್ಕೆ ಇದು ಸದುಪದೇಶವಲ್ಲವೆಂದು ತಿರಸ್ಕರಿಸಿದರೆ ನಾವು ಹೇಳತಕ್ಕದ್ದೇನಿರುತ್ತದೆ? ಹೀಗೆ ಪರಸ್ಪರ ವ್ಯತ್ಯಾಸವಿದ್ದರೂ ಅಂತವರನ್ನು ದ್ವೇಷಿಸಕೂಡದೆಂಬ "ಮನಸೈತಾನಿ ಭೂತಾನಿ ಪ್ರಣಮೇದ್ಬಹುಮಾನಯನ್।ಈಶ್ವರೋ ಜೀವಕಲಯಾ ಪ್ರವಿಷ್ಟೋ ಭಗವಾನಿತಿ"ಎಂಬ ಅಮೋಘವಾದ ಉಪದೇಶವಿರುತ್ತದೆ; ಈ ಜೀವಾತ್ಮರಿಗೆಲ್ಲಾ ಅನ್ತರ್ಯಾಮಿಯಾಗಿ ಭಗವಾನ್ ಇರುವದರಿಂದ ಆತನ ಶರೀರವನ್ನು ದ್ವೇಷಿಸಬಹುದೋ ಎಂಬ ವಿವೇಕದಿಂದ ಅವರನ್ನೆಲ್ಲಾ ಸನ್ಮಾನಿಸಬೇಕೆಂಬ ಉಪದೇಶವು. (ಭಾಗ. ೩-೨೯. ೩೪.) ಮುಂದೆಯೂ ೨೫ನೆಯ ಶ್ಲೋಕದಲ್ಲಿ ಈ ಸಮತ್ವಬುದ್ಧಿಯಿಂದ ಸರ್ವಭೂತಹಿತದಲ್ಲಿ ನಿರತರಾಗಿರಬೇಕೆಂಬ ಉಪದೇಶವಿರುತ್ತದೆ. ಅದುದರಿಂದ ಸಮತ್ವವು ಎಲ್ಲಿ? ಮತ್ತು ಯಾರಿಗೆ ಅದು ತೋರಿಬರುತ್ತದೆ? ಎಂದರೆ, ಪಂಡಿತಾಸ್ಸಮದರ್ಶಿನಃ - ಆತ್ಮಸ್ವರೂಪದ ಯಥಾರ್ಥಜ್ಞಾನ ಯಾರಿಗೆ ಉಂಟೋ ಅಂತಹ ಪಂಡಿತರೇ, ಆತ್ಮಸ್ವರೂಪದಲ್ಲಿ ಸಮತ್ವವನ್ನು ಕಾಣುತ್ತಾರೆ. ಜ್ಞಾನೈಕಾಕಾರತೆಯಿಂದ ಎಲ್ಲಾ ಆತ್ಮರೂ ಸಮರು. ಈ ಸಮತ್ವವು ಯಾವಾಗ ಎಂದರೆ,ಈ ದೇಹಸಂಬಂಧವು ತಪ್ಪಿದ ಮುಕ್ತಿದೆಶೆಯಲ್ಲಿಯೋ ವಿನಾ ಬದ್ಧದೆಶೆಯಲ್ಲಿ ಎಂದಿಗೂ ಇಲ್ಲವೆಂದು ತಿಳಿಯತಕ್ಕದ್ದು. ಸಮದರ್ಶಿತ್ವವು ಅವಶ್ಯಕವೆಂದು ಹೇಳಿದುದರಿಂದ ಅಂತಹ ಯಾರನ್ನೂ ದ್ವೇಷಿಸಬಾರದೆಂಬುದು ಮುಖ್ಯವಾಗಿ ಹೇಳಿದಂತಾಯಿತು

ಭಾಷ್ಯಾರ್ಥವು :—ವಿದ್ಯಾವಿನಯ ಸಂಪನ್ನೇ - ಕೆಲವರು ಇದನ್ನು ಬ್ರಾಹ್ಮಣೇ ಎಂಬ ಶಬ್ದಕ್ಕೆ ವಿಶೇಷಣವಾಗಿ ಅನ್ವಯಿಸುತ್ತಾರೆ. ಮುಂದೆ ಇರುವ ಎಲ್ಲಾ ಶಬ್ದಗಳಿಗೂ ವಿಶೇಷಣವಿಲ್ಲದಿರುವಾಗ ಈ ಬ್ರಾಹ್ಮಣ ಶಬ್ದಕ್ಕೆ ಮಾತ್ರ ಏಕೆ ವಿಶೇಷಣವೋ ತಿಳಿಯದು. ಆದುದರಿಂದ ಬೇರೆ ಪದವಾಗಿ ಸರ್ವೋತ್ಕೃಷ್ಟ ಚೇತನವನ್ನು ಮೊದಲು ಹೇಳುತ್ತಾರೆ. ಹಾಗೆ ಬ್ರಾಹ್ಮಣ ಶಬ್ದಕ್ಕೆ ವಿಶೇಷಣವೆಂದು ಭಾವಿಸಿದರೆ, ವಿದ್ಯಾವಿನಯಸಂಪನ್ನನಲ್ಲದ ಬ್ರಾಹ್ಮಣನ ಆತ್ಮವು ಸಮವಲ್ಲವೋ ಎಂಬಾಕ್ಷೇಪಕ್ಕೆ ಆ ಅನ್ವಯವು ಗುರಿಯಾಗುತ್ತದೆ. ಆದುದರಿಂದ ಶ್ರೀ ಭಾಷ್ಯಕಾರರು ಇದನ್ನೇ ಬೇರೆ ಪದವಾಗಿ ವ್ಯಾಖ್ಯಾನಮಾಡಿರುತ್ತಾರೆ. ಬ್ರಹ್ಮವಿದ್ಯಾ ಸಂಪನ್ನನಾಗಿ ಅದಕ್ಕೆ ಯೋಗ್ಯವಾದ ವಿನಯಸಂಪನ್ನತೆಯನ್ನು ಹೊಂದಿದವನಲ್ಲಿರುವ ಆತ್ಮನಲ್ಲೂ, ಕೇವಲ ಬ್ರಾಹ್ಮಣೇ-ಜಾತಿ ಬ್ರಾಹ್ಮಣನಲ್ಲಿರುವ ಆತ್ಮನಲ್ಲೂ, ವಿದ್ಯಾವಿನಯ ಸಂಪನ್ನನಾಗಿರಬೇಕೆಂಬ ಅವಶ್ಯಕತೆ ಏನೂ ಇಲ್ಲವೆಂದು ತೋರಿಸುವದಕ್ಕಾಗಿ ಕೇವಲ ಶಬ್ದವು, ಈ ಎರಡು ಶಬ್ದಗಳಿಂದ ಕ್ಷತ್ರಿಯ ವೈಶ್ಯಾದಿ ಸಮಸ್ತ ಜಾತಿಯ ಜನಗಳಲ್ಲಿರುವ ಆತ್ಮರೂ ಹೇಳಲ್ಪಟ್ಟರು. ಜಾತ್ಯಾಕಾರ ಭೇದಗಳಿರುವ ಸಮಸ್ತರೂ ಹೇಳಲ್ಪಟ್ಟರು; ಗವಿ, ಹಸ್ತಿನಿ, ಶುನಿ ಎಂಬುದರಿಂದ ಸಮಸ್ತ ತಿರ್ಯಗ್ಜಾತಿಗಳಲ್ಲಿರುವ ಆತ್ಮರೂ ಹೇಳಲ್ಪಟ್ಟರು, ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಎಂಬ

ಭಾ. ಜ್ಞಾನೈಕಾಕಾರತಯಾ ಸರ್ವತ್ರ ಸಮದರ್ಶಿನಃ ; ವಿಷಮಾಕಾರಸ್ತು ಪ್ರಕೃತೇಃ ನಾತ್ಮನಃ ; ಆತ್ಮಾ ತು ಸರ್ವತ್ರ ಜ್ಞಾನೈಕಾಕಾರತಯಾ ಸಮ ಇತಿ ಪಶ್ಯಂತೀತ್ಯರ್ಥಃ ॥೧೮॥

ದರಿಂದ ಸಾತ್ವಿಕಾದಿ ಗುಣವೈಷಮ್ಯವು ಬೋಧಿತವು, ಗವಿ ಹಸ್ತಿನಿ ಶುನಿ ಎಂಬುದರಿಂದ ಆಕಾರ ಮತ್ತು ಗುಣವೈಷಮ್ಯವು ಬೋಧಿತವು. ಶ್ವಪಾಕೇ ಚ ಎಂಬುದರಿಂದ ಗುಣಭೇದ ಪ್ರವೃತ್ತಿಭೇದಗಳುಳ್ಳ ಸಮಸ್ತ ಮನುಷ್ಯರಲ್ಲಿಯ ಆತ್ಮರುಗಳು ಹೇಳಲ್ಪಟ್ಟರು; ಗೋ ಹಸ್ತಿ ಶ್ವಪ್ರಭೃತಿ ಅತ್ಯಂತ ವಿಷಮಾಕಾರತಯಾ ಪ್ರತೀಯಮಾನೇಷು ಆತ್ಮಸು - ಗೋವು, ಆನೆ, ನಾಯಿ, ನಾಯಿ ಬೇಯಿಸಿ ತಿನ್ನುವವನು, ಇವರೇ ಮೊದಲಾದವರಲ್ಲಿ, ಸಾತ್ವಿಕ ರಾಜಸ ತಾಮಸ ಗುಣಭೇದದಿಂದ ಅತ್ಯಂತ ವ್ಯತ್ಯಾಸದಿಂದ ಆಕಾರಗಳಲ್ಲಿ ತೋರಿಬರುವ ಆತ್ಮರುಗಳಲ್ಲೂ ಸಹ, ಪಂಡಿತಾಃ ಎಂದರೆ, ಆತ್ಮಯಾಥಾತ್ಮ್ಯವಿದಃ - ಆತ್ಮಸ್ವರೂಪದ ನಿಜಸ್ಥಿತಿಯನ್ನರಿತವರು, ಇಂತಹ ಕರ್ಮಯೋಗಿಗಳು ಎಂಬ ಭಾವವು. ಇಲ್ಲಿ ಪ್ರಕರಣಕ್ಕೆ ಬೇಕಾದ ಪಾಂಡಿತ್ಯವು ಇದರಿಂದ ಹೇಳಲ್ಪಟ್ಟಿತು, ಪಣ್ಡಾ ಎಂದರೆ, ಊಹಾಪೋಹ ಶಕ್ತಿಯು, ಅದಿರುವವನಿಗೆ ಪಂಡಿತನೆಂದು ಹೆಸರು, ಜ್ಞಾನೈಕಾಕಾರತಯಾ - ಜ್ಞಾನವೇ ಮುಖ್ಯ ಸ್ವರೂಪವಾಗಿರುವದರಿಂದ, ಸರ್ವತ್ರ - ಇವೆಲ್ಲಾ ಪ್ರಾಣಿಗಳಲ್ಲಿರುವ ಆತ್ಮರುಗಳಲ್ಲೆಲ್ಲಾ, ಸಮದರ್ಶಿನಃ - ಸಮತ್ವವನ್ನು ಕಾಣುವ ಶೀಲವುಳ್ಳವರಾಗಿರುತ್ತಾರೆ. ವಿಷಮಾಕಾರಸ್ತು - ವ್ಯತ್ಯಸ್ತವಾಗಿ ತೋರಿಬರುವ ಆಕಾರವಾದರೋ, ಪ್ರಕೃತೇಃ - "ಶರೀರಾಕೃತಿಭೇದಾಸ್ತು ಭೂಪೈತೇ ಕರ್ಮಯೋನಯಃ" ಎಂದು ಹೇಳಿರುವಹಾಗೆ ಪ್ರಕೃತಿರೂಪವಾದ ದೇಹಕ್ಕೆ ಸಂಬಂಧಿಸಿದುದು, ನಾತ್ಮನಃ - ಆತ್ಮನಿಗೆ (ಜಾತ್ಯೇಕ ವಚನವು) ಸಂಬಂಧಿಸಿದುದಲ್ಲವು. ಶರೀರವಿದ್ದಾದರೆ, ಭೇದವು ತಪ್ಪಿದ್ದಲ್ಲವೆಂಬ ಭಾವವು, ಹಾಗೆಯೇ ಆ ಶರೀರದ ಸಾತ್ವಿಕ ರಾಜಸ ತಾಮಸ ಭೇದದಿಂದ, ಜ್ಞಾನದಲ್ಲೂ, ಗುಣದಲ್ಲೂ ತಾರತಮ್ಯವು ತಪ್ಪಿದ್ದಲ್ಲವೆಂಬ ಭಾವವು. ಶರೀರಗಳಿಲ್ಲದೆ ಪ್ರಕೃತಿವಿಯುಕ್ತನಾದ ಆತ್ಮನ ಸ್ವರೂಪವೆಂತಹುದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಆತ್ಮಾತು - ಆತ್ಮನಾದರೋ, ಸರ್ವತ್ರ - ಎಲ್ಲಾ ಪ್ರಾಣಿಗಳಲ್ಲೂ, ಜ್ಞಾನೈಕಾಕಾರತಯಾ - ಜ್ಞಾನ ಸ್ವರೂಪವುಳ್ಳವನಾಗಿ ಒಂದೇ ವಿಧನಾಗಿರುವದರಿಂದ, ಸಮಃ - ಸಮನಾದುದು, ಇತಿ - ಎಂದು, ಪಶ್ಯಂತೀತ್ಯರ್ಥಃ - ನೋಡುವರೆಂಬಭಿಪ್ರಾಯವು. ಆತ್ಮರೆಲ್ಲಾ ಸಮರೆಂದು ಹೇಳಿದುದರಿಂದ, ಇಲ್ಲಿಯೂ ಆತ್ಮಬಹುತ್ವವನ್ನು ಒಪ್ಪಿಕೊಂಡಹಾಗಾಯಿತು. ಸಮ ಶಬ್ದವನ್ನು ಪ್ರಯೋಗಿಸಬೇಕಾದರೆ, ಪರಸ್ಪರ ಸಮವೆಂಬಭಿಪ್ರಾಯವು ಉಂಟಾಗುವದರಿಂದ ಅದ್ವೈತಾಭಿಪ್ರಾಯಕ್ಕೆ ಅನುಕೂಲವಿಲ್ಲವು. ಒಂದೇ ಆತ್ಮನಿದ್ದಾದರೆ ಆತ್ಮರುಗಳಿಗೆ ಏಕತ್ವ ಹೇಳಬೇಕೇವಿನಾ ಸಮತ್ವವನ್ನು ಹೇಳಕೂಡದು. ಲೋಕದಲ್ಲಿರುವದೆಲ್ಲಾ ಒಂದೇ ಆತ್ಮಾ, ಮಿಕ್ಕದ್ದೆಲ್ಲವೂ ಮಿಥ್ಯಾ ಎಂದು ಹೇಳುವವರಿಗೆ ಸಮತ್ವವು ಇಲ್ಲವೇ ಇಲ್ಲವು. ಜೀವಸಮಾನಾಧಿಕರಣ್ಯವೇ ಕೂಡುವದಿಲ್ಲವು. ತತ್ತ್ವಂ ಅಸಿ ಎಂಬಲ್ಲಿ ಸಮಾನಾಧಿಕರಣ್ಯವು, ಅದಕ್ಕೆ ಮೊದಲೇ ಇಲ್ಲವು. ಎರಡೂ ಒಂದೇಯಾದನಂತರ ಸಮತ್ವ ಎಲ್ಲಿಯದು ? ॥೧೮॥

ಮೂಲಕ್ಕೆ ಅರ್ಥವು :—ಪೂರ್ವಶ್ಲೋಕಗಳಲ್ಲಿ ಕರ್ಮಯೋಗಿಗೆ ಜ್ಞಾನಯೋಗದ ಅಪೇಕ್ಷೆಯಿಲ್ಲದೇನೆ ಆತ್ಮಸಾಕ್ಷಾತ್ಕಾರವುಂಟಾಗುತ್ತದೆಂದು ಆ ಆತ್ಮ ಸಾಕ್ಷಾತ್ಕಾರದಲ್ಲಿ ಕರ್ಮಯೋಗಿಗೆ ಎಂತಹ ಜ್ಞಾನವಿರುತ್ತದೆ ಎಂಬ ಅಪೇಕ್ಷೆಯಲ್ಲಿ, ಗುರುಗಳಿಂದುಂಟಾಗುವ ಉಪದೇಶದ ಮೂಲಕ ಎಲ್ಲಾ ಆತ್ಮರುಗಳ ಸ್ವರೂಪವೂ ಜ್ಞಾನಸ್ವರೂಪವಾಗಿ, ಜ್ಞಾನೈಕಾಕಾರತಯಾ ಸಮವೆಂಬ ಅನುಸಂಧಾನವು ಅಭ್ಯಾಸದ ಮೂಲಕ ಪ್ರಾಪ್ತವಾಗುತ್ತದೆಂದು ಹಿಂದಿನ ಶ್ಲೋಕದಲ್ಲಿ

ಮೂ. ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥ ೧೯.

ಭಾ. ಇಹೈವ-ಸಾಧನಾನುಷ್ಠಾನ ದಶಾಯಾಮೇವ, ತೈಃ, ಸರ್ಗೋಜಿತಃ - ಸಂಸಾರೋ ಜಿತಃ; ಯೇಷಾ ಮುಕ್ತರೀತ್ಯಾ ಸರ್ವೇಷ್ವಾತ್ಮಸು ಸಾಮ್ಯೇ ಸ್ಥಿತಂ ಮನಃ ನಿರ್ದೋಷಂ

ಸಮದರ್ಶಿತ್ವವು ಹೇಳಲ್ಪಟ್ಟಿತು. ಈ ಸಮದರ್ಶಿತ್ವವು ಭಕ್ತಿಯೋಗದ್ವಾರಾ ಕಾಲಾನ್ತರಭಾವಿಯಾದ ಫಲಸಾಧನವನ್ನು ಮಾಡಿಕೊಡುವದೂ ಅಲ್ಲದೆ, ಈಗಲೂ ಕೂಡ ಕರ್ಮಯೋಗ ನಿಷ್ಠೆಯಲ್ಲಿದ್ದು ಮೋಕ್ಷಸಾಧನಾವಸ್ಥೆಯಲ್ಲಿಯೇ ಆ ಮೋಕ್ಷಕ್ಕೆ ಸಮಾನವಾದ ಕ್ಲೇಶಾದಿಗಳಿಲ್ಲದ ಸ್ಥಿತಿಯು ಉಂಟಾಗುತ್ತದೆಂದು ಸಮದರ್ಶಿತ್ವವನ್ನು ಪ್ರಶಂಸಿಸುತ್ತಾರೆ. **ಯೇಷಾಂ** - ಯಾವ ಮಹಾನುಭಾವರಾದ ಕರ್ಮಯೋಗ ನಿಷ್ಠರಿಗೆ, **ಮನಃ** - ಮನಸ್ಸು, **ಸಾಮ್ಯೇ** – ಹಿಂದೆ ಹೇಳಿದ ಹಾಗೆ ಜೀವಾತ್ಮರ ಸ್ವರೂಪ ಸಾಮ್ಯದಲ್ಲಿ, **ಸ್ಥಿತಂ** - ಇರುತ್ತದೋ ಎಂದರೆ, ಅಂತಹ ಅನುಸಂಧಾನವು ಅಭ್ಯಾಸದಿಂದುಂಟಾಗುತ್ತದೋ, **ತೈಃ** - ಅಂತಹ ಕರ್ಮಯೋಗಿಗಳಿಂದ, **ಇಹೈವ** - ಮೋಕ್ಷಸಾಧನಾನುಷ್ಠಾನಕ್ಕೆ ಪೂರ್ವಭಾವಿಯಾದ ಕರ್ಮಯೋಗಾನುಷ್ಠಾನಕಾಲದಲ್ಲೇ, **ಸರ್ಗಃ** - ಸಂಸಾರವು, **ಜಿತಃ** - ಜಯಿಸಲ್ಪಟ್ಟಿತು; ಎಂದರೆ ಅಂತವರಿಂದ ಸಂಸಾರ ಕ್ಲೇಶಾದಿಗಳು ಜಯಿಸಲ್ಪಟ್ಟವೆಂಬ ತಾತ್ಪರ್ಯವು. ಈ ಲೋಕದಲ್ಲಿದ್ದರೂ ಮುಕ್ತರಿಗೆ ಸಮಾನವಾಗಿರುತ್ತಾರೆ. ಐಹಿಕ ಸುಖದುಃಖಗಳಿಂದ ಕ್ಲೇಶಪಡುವದಿಲ್ಲವೆಂಬ ಭಾವವು. ಇದನ್ನೇ ಶ್ರೀ ಕೃಷ್ಣಭಗವಾನರವರು ಮುಂದಿನ ಶ್ಲೋಕದಲ್ಲಿ ಉಪದೇಶಿಸುತ್ತಾರೆ. ಇಂತಹ ಕರ್ಮಯೋಗದಿಂದ ಭಕ್ತಿಯೋಗದ ಅನುಪ್ರವೇಶ ಉಂಟಾಗುವವರಿಂದ ಅಂತವರಿಗೆ ಪುನಸ್ಸಂಸಾರವೂ ಇಲ್ಲವೆಂಬ ಭಾವವೂ ತೋರಿಬರುತ್ತದೆ. ಇಂತಹ ಕರ್ಮಯೋಗಿಗೆ ಸಂಸಾರ ಜಯವುಂಟಾಗುವದು ಆತ್ಮಯಾಥಾತ್ಮ್ಯ ಸ್ವರೂಪಾನುಸಂಧಾನದಿಂದಲ್ಲವೋ? ಹಾಗಾದರೆ ಆತ್ಮ ಸಮದರ್ಶಿತ್ವವೇಕೆ ? ಎಂದರೆ ಸಮಾಧಾನವನ್ನು ಹೇಳುತ್ತಾರೆ. **ನಿರ್ದೋಷಂ ಹಿ ಸಮಂ**-ಪ್ರಕೃತಿ ಸಂಸರ್ಗವು ತಪ್ಪಿಹೋಗಿ ದೋಷರಹಿತವಾಗಿ ಎಲ್ಲವೂ ಜ್ಞಾನೈಕಾಕಾರತೆಯಿಂದ ಸಮವಾದ ಆತ್ಮವಸ್ತುವಲ್ಲವೇ, **ಬ್ರಹ್ಮ** - ಬ್ರಹ್ಮಶಬ್ದದಿಂದ ಹೇಳಿಸಿಕೊಳ್ಳುವ ಜೀವತತ್ವವು ? **ತಸ್ಮಾತ್** - ಆಕಾರಣದಿಂದಲೇ, **ಬ್ರಹ್ಮಣಿ ತೇಸ್ಥಿತಾಃ**– ಆವರುಗಳು ಅಂತಹ ಪರಿಶುದ್ಧವಾದ ಜೀವತತ್ವವನ್ನೇ ಸದಾ ಅನುಸಂಧಾನಮಾಡುತ್ತಲಿರುವರು.

**ಭಾಷಾರ್ಥವು:**—ಹಿಂದಿನ ಶ್ಲೋಕದಲ್ಲಿ ಉಪಪಾದಿಸಲ್ಪಟ್ಟ ಆತ್ಮ ಸಮದರ್ಶಿತ್ವವು ಕಾಲಾನ್ತರ ಭಾವಿಯಾದ ಫಲವನ್ನು ಸಾಧಿಸಿಕೊಡುವದು ಮಾತ್ರವೇ ಅಲ್ಲವು; ಮತ್ತೇನೆಂದರೆ ಈಗಲೇ ಮೋಕ್ಷಕ್ಕೆ ಸಮಾನವಾದ ಕ್ಲೇಶವಿಲ್ಲದ ಉತ್ತಮಾವಸ್ಥೆಯನ್ನು ಉಂಟುಮಾಡುತ್ತದೆಂದು ಹೇಳುವವರ ಮೂಲಕ ಅಂತಹ ಸಮದರ್ಶಿತ್ವವನ್ನು ಪ್ರಶಂಸಿಸಿ ಹೇಳುತ್ತಾರೆ. **ಇಹೈವ** – ಎಂದರೆ **ಸಾಧನಾನುಷ್ಠಾನ ದಶಾಯಾಮೇವ** - ಉಪಾಯಾನುಷ್ಠಾನದ ಸಾಧನದ ದಶೆಯಲ್ಲಿಯೇ **ತೈಃ**– ಆ ಕರ್ಮಯೋಗಿಗಳಿಂದ, **ಸರ್ಗೋಜಿತಃ** ಎಂದರೆ **ಸಂಸಾರೋಜಿತಃ** - ಸಂಸಾರವು ಜಯಿಸಲ್ಪಟ್ಟಿತು, ಎಂದರೆ ಅವರುಗಳು ಮುಕ್ತಪ್ರಾಯರಾಗಿರುತ್ತಾರೆಂಬ ಭಾವವು, ಇಲ್ಲಿ ಕೆಲವರು ಇಹೈವ-ಎಂಬುದಕ್ಕೆ ಈ ಲೋಕದಲ್ಲೇ ಎಂದರ್ಥವನ್ನು ಮಾಡಿರುತ್ತಾರೆ; **ಸಾಧನಾನುಷ್ಠಾನವೇಳೆಯಲ್ಲೆ** ಎಂದು ಅರ್ಥಮಾಡುವವರಿಂದ ಈ ಲೋಕದಲ್ಲೇ ಎಂಬರ್ಥವೂ ಅಲ್ಲದೆ ಸಾಧನಾನುಷ್ಠಾನ ದಶೆಯೆಂಬ ಹೆಚ್ಚು ಸ್ವಾರಸ್ಯ ಉಂಟಾಗುವವರಿಂದ ಹಾಗೆ ಅರ್ಥಮಾಡಿರುತ್ತಾರೆ, ಇಲ್ಲಿ ಸರ್ಗ ಶಬ್ದಕ್ಕೆ ಸೃಷ್ಟಿ ಎಂಬ ಅರ್ಥವಾದರೆ ಅನನ್ವಯವಾಗುವವರಿಂದ ಜೀವಾತ್ಮನ ವಿಷಯದಲ್ಲಿ ಸರ್ಗವೆಂದರೆ **ಸೃಜ್ಯತ ಇತಿ** ಎಂಬ ವ್ಯುತ್ಪತ್ತಿಯ ಮೂಲಕ ಸಂಸಾರವೇ ಎಂಬ ಭಾವವು. ಇನ್ನೂ

ಭಾ. ಹಿ ಸಮಂ ಬ್ರಹ್ಮ - ಪ್ರಕೃತಿ ಸಂಸರ್ಗ ದೋಷ ವಿಯುಕ್ತತಯಾ ಸಮ ಮಾತ್ಮವಸ್ತು ಹಿ ಬ್ರಹ್ಮ। ಆತ್ಮಸಾಮ್ಯೇ ಸ್ಥಿತಾ ಶ್ಚೇದ್ಬ್ರಹ್ಮಣಿ ಸ್ಥಿತಾ ಏವ ತೇ; ಬ್ರಹ್ಮಣಿ ಸ್ಥಿತಿರೇವ ಹಿ ಸಂಸಾರ ಜಯಃ. ಆತ್ಮಸು ಜ್ಞಾನೈಕಾಕಾರತಯಾ ಸಾಮ್ಯಮೇವಾನು ಸಂದಧಾನಾಃ ಮುಕ್ತಾ ಏವೇತ್ಯರ್ಥಃ ॥೧೯॥

ಸಂಸಾರ ದೆಶೆಯಲ್ಲೇ ಉಪಾಯ ಸಾಧನಾನುಷ್ಠಾನ ದೆಶೆಯಲ್ಲೇ ಇರುವದರಿಂದ, ಸಂಸಾರ ಸಂಬಂಧ ಕ್ಲೇಶಗಳಾದ ಸುಖದುಃಖಾನುಭವಗಳು ಜಯಿಸಲ್ಪಟ್ಟವೆಂಬ ತಾತ್ಪರ್ಯವು. ಪ್ರಕೃತಿ ಸಂಬಂಧವಿನ್ನೂ ತಪ್ಪದೇ ಇದ್ದರೂ ವಿಷಯಾನುಭವ ಕ್ಲೇಶಗಳೆಲ್ಲಾ ತಪ್ಪಿದ ವೆಂಬ ಭಾವವು; ತೈಃ - ಆ ಕರ್ಮಯೋಗಿಗಳಿಂದ ಸಂಸಾರವು ಜಯಿಸಲ್ಪಟ್ಟಿತೆಂದು ಹೇಳಿದರು, ಎಂತಹ ಕರ್ಮಯೋಗಿಗಳಿಂದ ಜಿತಃ ಎಂದರೆ ಹೇಳುತ್ತಾರೆ:—ಯೇಷಾಂ - ಯಾವ ಕರ್ಮ ಯೋಗಿಗಳಿಗೆ, ಉಕ್ತರೀತ್ಯಾ-ಹಿಂದಿನ ಶ್ಲೋಕದಲ್ಲಿ ಹೇಳಿದ ರೀತ್ಯಾ ಎಂದರೆ ದೇಹಯುಕ್ತನಾದ ಬದ್ಧದೆಶೆಯಲ್ಲಿ ಎಲ್ಲರೂ ಸಮವೆಂದಲ್ಲದೆ ದೇಹವಿಯುಕ್ತದೆಶೆಯಲ್ಲಿ ಆತ್ಮರುಗಳು ಸ್ವರೂಪತಃ ಸ್ವಭಾವತಃ ಸಮರೆಂದು ಹೇಳಿದಮೇರಿಗೆ, ಮನಃ-ಮನಸ್ಸು, ಸರ್ವೇಷು ಆತ್ಮಸು - ಸಮಸ್ತ ಆತ್ಮರುಗ ಳಲ್ಲಿ, ಸಾಮ್ಯೇ - ಸ್ವರೂಪತಃ ಜ್ಞಾನೈಕಾಕಾರತಯಾ ಸಮವೆಂಬುವ ಬುದ್ಧಿಯಲ್ಲಿ, ಸ್ಥಿತಂ- ಅಭ್ಯಾಸಮೂಲಕ ಮಾಡುವ ಅನುಸಂಧಾನದಿಂದ ಸ್ಥಿರವಾಗಿ ನಿಂತಿತೋ. ಅಂತವರಿಂದ ಸಂಸಾ ರವು ಜಯಿಸಲ್ಪಟ್ಟಿತೆಂಬ ಭಾವವು. ಇಲ್ಲಿ ಉಕ್ತರೀತ್ಯಾ ಎಂದು ಹೇಳಿರುವದರಭಿಪ್ರಾಯವೇನೆಂ ದರೆ, ಕೆಲವರು ಹೇಳುವಹಾಗೆ ವಿದ್ಯಾವಿನಯ ಸಂಪನ್ನನೂ ಶ್ವಪಾಕನೂ ಶರೀರದಿಂದಿರುವಾ ಗಲೇ ಸಮವೆಂಬರ್ಥವು ಸರಿಯಲ್ಲವೆಂಬುವನ್ನು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವು. ಪ್ರಕೃತಿ ವಿಯುಕ್ತದೆಶೆಯಲ್ಲಿ ಸ್ವರೂಪತಃ ಮಾತ್ರ ಸಮರೇವಿನಾ ದೇಹಗಳಿಂದಿರುವಾಗ ಜ್ಞಾನಸಂಕೋಚ ತಾರತಮ್ಯದಿಂದ ಸಮರಲ್ಲವೆಂಬ ಭಾವವು. ಆದರೆ ಆತ್ಮಸ್ವರೂಪಾನುಸಂಧಾನವೀಗ ಕರ್ಮಯೋಗಿಗೆ ವಿಹಿತವಾದುದು; ಇದರಿಂದಲೇ ಸಂಸಾರವು ಜಯಿಸಲ್ಪಡುತ್ತದೆ. ಹೀಗಿರುವಾಗ ಆತ್ಮ ಸಮತ್ವ ಜ್ಞಾನವು ಹೇಗೆ ಉಪಕಾರಕವು ? ಎಂದರೆ ಉತ್ತರಾರ್ಧದಿಂದ ಉತ್ತರವನ್ನು ಹೇಳುತ್ತಾರೆ. ನಿರ್ದೋ ಷಂ ಹಿ ಸಮಂಬ್ರಹ್ಮ ಎಂದರೆ ಪ್ರಕೃತಿ ಸಂಸರ್ಗದೋಷ ವಿಯುಕ್ತತಯಾ ಸಮಂ-ಪ್ರಕೃತಿಯ ಸಂಬಂಧರೂಪದೋಷವು ಕಳೆದು ಹೋಗುವದರಿಂದ ಸಮವಾದ, ಆತ್ಮವಸ್ತು ಹಿ ಬ್ರಹ್ಮ-ಆತ್ಮ ವಸ್ತುವಲ್ಲವೇ, ಬ್ರಹ್ಮಶಬ್ದವಾಚ್ಯನಾದ ಜೀವಾತ್ಮನು ? ಜೀವಾತ್ಮನು ಬ್ರಹ್ಮಶಬ್ದವಾಚ್ಯನು ಹೇಗೆ ಎಂದರೆ, ಅಂತಹ ಸ್ಥಿತಿಯಲ್ಲಿ ಪರಬ್ರಹ್ಮನಿಗೆ ಜೀವಾತ್ಮನು ಸಮನಾಗುವದರಿಂದ ಎಂದು ಭಾವಿಸತಕ್ಕದ್ದು. ತಸ್ಮಾತ್ - ಆ ಕಾರಣದಿಂದಲೇ, ಬ್ರಹ್ಮಣಿತೇಸ್ಥಿತಾಃ - ಅಂತಹಜೀವಾತ್ಮ ಸ್ವರೂಪದಲ್ಲೇ ಅವರಿರುತ್ತಾರೆ ಎಂದರೆ, ಸದಾ ಅನುಸಂಧಾನಮಾಡುತ್ತಲೇ ಇರುತ್ತಾರೆಂಬ ಭಾವವು. ಈಗ ಹೇಳಲು ಉದ್ದೇಶಿಸಿರುವದು ಜೀವತತ್ತ್ವವು ಬ್ರಹ್ಮಶಬ್ದವಾಚ್ಯವು ಎಂಬದಾಗಿ; ಹಾಗೆ ಅದಕ್ಕೆ ಅನ್ವಯಿಸಬೇಕಾದರೆ, ಪ್ರಕೃತಿ ವಿಯುಕ್ತದೆಶೆಯಲ್ಲಿ ಸರ್ವಾತ್ಮರೂ ಸ್ವರೂಪತಃ ಸ್ವಭಾವತಃ ಸಮವಾಗಿರುವಾಗಲೇ ಹಾಗೆ ಪ್ರಯೋಗವು; ಅಂತಹ ಬ್ರಹ್ಮದ ಸಾಕ್ಷಾತ್ಕಾರದಲ್ಲೇ ಕರ್ಮ ಯೋಗಿಯು ಅಭ್ಯಾಸಮಾಡುತ್ತಿರುವನೆಂಬ ಭಾವವು. ಸಮದರ್ಶಿಗಳೀಗ ಬ್ರಹ್ಮವೆನಿಸುವ ಆತ್ಮನ ಅನುಸಂಧಾನದಲ್ಲಿ ನಿರತರಾಗಿರುವವರು. ಪರಸ್ಪರ ಸಮವಾದ ಆತ್ಮಕ್ಕೇನೆ ಬ್ರಹ್ಮಶಬ್ದ ವಾಚಕತ್ವವು. ಆದುದರಿಂದ ನಿರ್ದೋಷಂ ಹಿ ಸಮಂ ಬ್ರಹ್ಮ ಎಂಬುದರ ತಾತ್ಪರ್ಯವೇ ನೆಂದರೆ, ವಿವರಿಸುತ್ತಾರೆ. ಆತ್ಮಸಾಮ್ಯೇ ಸ್ಥಿತಶ್ಚೇತ್ - ಎಲ್ಲಾ ಆತ್ಮರುಗಳೂ ಪರಸ್ಪರ ಸಮವೆಂಬ ಅನುಸಂಧಾನದಲ್ಲಿ ಇದ್ದವನಾದರೆ, ಬ್ರಹ್ಮಣಿ ಸ್ಥಿತಾ ಏವತೇ - ಹಾಗೆ ಎಲ್ಲಾ ಸಮವಾದ ಜೀವ

೭೬

ಭಾ. ಅವ. ಯೇನ ಪ್ರಕಾರೇಣಾವಸ್ಥಿತಸ್ಯ ಕರ್ಮಯೋಗಿನಃ ಸಮದರ್ಶನರೂಪೋ ಜ್ಞಾನ ವಿಪಾಕೋ ಭವತಿ, ತಂ ಪ್ರಕಾರ ಮುಪದಿಶತಿ—

ಮೂ. ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಂ ।
ಸ್ಥಿರಬುದ್ಧಿ ರಸಮ್ಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ ೨೦.

ತತ್ತ್ವದ ಯಥಾತ್ಮ್ಯಾನುಸಂಧಾನದಲ್ಲೇ ಇರುವವರೇ ಅದರೆಂದು ಭಾವಿಸಬಹುದು. ಹಾಗೆ ಬ್ರಹ್ಮಣಿ ಸ್ಥಿತಿರೇವ ಹಿ ಸಂಸಾರಜಯಃ - ಸರ್ವ ಸಮವಾದ ಆತ್ಮ ವಸ್ತುವಿನ ಅನುಸಂಧಾನದ ಅಭ್ಯಾಸದಲ್ಲಿರುವದು ತಾನೇ ಸಂಸಾರ ಜಯವೆನ್ನುವದು. ಈ ವಾಕ್ಯದ ಮುಖ್ಯತಾತ್ಪರ್ಯವನ್ನು ಶ್ಲೋಕತಾತ್ಪರ್ಯವನ್ನು ಮುಂದಿನ ವಾಕ್ಯದಿಂದ ನಿಗಮನಮಾಡಿ ಹೇಳುತ್ತಾರೆ. ಆತ್ಮಸು - ಜೀವಾತ್ಮರುಗಳಲ್ಲಿ, ಜ್ಞಾನೈಕಾಕಾರತಯಾ - ಎಲ್ಲಾ ಆತ್ಮರ ಸ್ವರೂಪವೂ ಒಂದೆ ಯಾದ ಜ್ಞಾನರೂಪವಾಗಿರುವದರಿಂದ, ಸಾಮ್ಯಮೇವಾನುಸಂದಧಾನಾಃ - ಆತ್ಮಸಾಮ್ಯವನ್ನು ಅನುಸಂಧಾನಮಾಡುವವರು, ಮುಕ್ತಾ ಏವೇತ್ಯರ್ಥಃ - ಮುಕ್ತರಿಗೆ ಸಮಾನರೇ ಸರಿ ಎಂಬ ತಾತ್ಪರ್ಯವು. ಪ್ರಕೃತಿವಿಯುಕ್ತನಾದ ಆತ್ಮನು ಜ್ಞಾನಸ್ವರೂಪನು ; ಜ್ಞಾನಗುಣಕನು ; ಹಾಗೆಯೇ ಎಲ್ಲರ ಆತ್ಮಸ್ವರೂಪವು ಸ್ವಭಾವವೆಂದು ಹೀಗೆ ಆತ್ಮಸಮತ್ವವು ತೋರಿಬಂದರೆ ಆತ್ಮೇತರ ವಿಷಯಗಳಲ್ಲಿ ಮಮತೆ ಇಲ್ಲದೆ, ಆತ್ಮ ಸ್ವರೂಪವನ್ನೇ ಅನುಸಂಧಾನಮಾಡುತ್ತಾ, ಅದರಿಂದಲೇ ಆನಂದಿಸುತ್ತಾ ಇರುವನಾದುದರಿಂದ ಮುಕ್ತತುಲ್ಯನಾಗುವನೆಂಬ ತಾತ್ಪರ್ಯವು. ಜೀವನ್ಮುಕ್ತಿಯು ಉಂಟಾಗುತ್ತದೆಂಬ ತಾತ್ಪರ್ಯವಲ್ಲವು. ಇದೇ ಜೀವನ್ಮುಕ್ತಿಯಾದರೆ, ಅಂತವನಿಗೆ ಮರಣವು ಹೇಗೆ ? ಬೇರೆ ಭಗವಲ್ಲೋಕವು ಏತಕ್ಕೆ ? ಅದುದರಿಂದ ಅಮೃತ ಇಹ ಭವತಿ ಎಂಬ ವಾಕ್ಯಕ್ಕೆ ಮುಕ್ತತುಲ್ಯನಾಗುತ್ತಾನೆಂಬರ್ಥವೇ ಉಚಿತವು. ಅದೇ ಈ ಶ್ಲೋಕದಲ್ಲೂ ಹೇಳಲ್ಪಟ್ಟಿತು.

ಭಾಷ್ಯಾವತಾರಿಕೆಯ ಅರ್ಥವು :—ಹಿಂದಿನ ಶ್ಲೋಕದಲ್ಲಿ ಕರ್ಮಯೋಗಿಗುಂಟಾಗುವ ಆತ್ಮಸಾಕ್ಷಾತ್ಕಾರಕ್ಕೂ ಸಮಸ್ತ ಜೀವಾತ್ಮಸ್ವರೂಪ ಸಾಮ್ಯಜ್ಞಾನವು ಆವಶ್ಯಕವೆಂದು ಹೇಳಲ್ಪಟ್ಟಿತು. ಅಂತವನು ಮುಕ್ತತುಲ್ಯನಾಗಿರುವನೆಂದೂ ಹೇಳಲ್ಪಟ್ಟಿತು. ಹೀಗೆ ಸಮದರ್ಶಿತ್ವಬುದ್ಧಿಯು ಉಂಟಾಗಬೇಕಾದರೆ, ಕರ್ಮಯೋಗಿಯು ಹೇಗೆ ಇರತಕ್ಕದ್ದೆಂಬುದು ಮುಂದಿನ ಶ್ಲೋಕದಲ್ಲಿ ಉಪದೇಶಿಸಲ್ಪಡುತ್ತದೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಹಾಗೆ ಇರುವವನೀಗ ಮುಕ್ತನಿಗೆ ಸಮಾನನೆಂಬುದು ಭಾವವು. ಯೇನಪ್ರಕಾರೇಣಾವಸ್ಥಿತಸ್ಯ ಕರ್ಮಯೋಗಿನಃ– ಯಾವ ಪ್ರಕಾರದಿಂದಿರುವ ಕರ್ಮಯೋಗಿಗೆ, ಸಮದರ್ಶನರೂಪವಾದ ಜ್ಞಾನವಿಪಾಕಃ – ಜ್ಞಾನ ಪರಿಪಕ್ವವು, ಭವತಿ - ಉಂಟಾಗುತ್ತದೋ, ತಂ ಪ್ರಕಾರಮುಪದಿಶತಿ - ಆಪ್ರಕಾರವನ್ನು ಶ್ರೀಕೃಷ್ಣ ಭಗವಾನ್‌ರವರು ಉಪದೇಶಿಸುತ್ತಾರೆ.

ಮೂಲಕ್ಕೆ ಅರ್ಥವು:—ಇದುವರೆಗೂ ಆತ್ಮಸ್ವರೂಪವು ಹೇಗೆ ಪರಿಶುದ್ಧವೆಂಬುದನ್ನೂ, ಜ್ಞಾನೈಕಾಕಾರತೆಯಿಂದ ಎಲ್ಲಾ ಆತ್ಮರು ಸಮರೆಂದೂ ಭಾವಿಸಿ. ಅಂತಹ ಆತ್ಮಾವಲೋಕನಕ್ಕಾಗಿ ಗುರೂಪದೇಶವನ್ನು ಹೊಂದಿ ಅಭ್ಯಾಸಮೂಲಕ ಆತ್ಮಸ್ವರೂಪದ ಅನುಸಂಧಾನಮಾಡಬೇಕೆಂಬುದನ್ನೂ, ಹೇಳಿದನು. ಇಂತಹ ಸಮದರ್ಶಿತ್ವ ಬುದ್ಧಿಯಿಂದ ಕೂಡಿದ ಆತ್ಮಾನುಸಂಧಾನದಲ್ಲಿ ನಿರತನಾಗಬೇಕಾದರೆ, ಆತನ ಪ್ರವೃತ್ತಿಯು ಮುಖ್ಯವಾಗಿ ಹೇಗಿರಬೇಕೆಂಬುದನ್ನು ವಿಧಿರೂಪದಲ್ಲಿ ಉಪದೇಶಿಸುತ್ತಾರೆ. ಪ್ರಿಯಂ ಪ್ರಾಪ್ಯ - ತನಗೆ ಅನುಕೂಲವಾಗಿ ಇಷ್ಟವಾದುದಾಗಿ ತೋರುವದನ್ನು ಹೊಂದಿ, ನ ಪ್ರಹೃಷ್ಯೇತ್ - ಆನಂದಿಸಕೂಡದು; ಅಪ್ರಿಯಂ ಚ-ತನಗೆ ಪ್ರತಿಕೂಲವಾಗಿ ಇಷ್ಟವಲ್ಲದುದನ್ನು ಹೊಂದಿ, ನೋದ್ವಿಜೇತ್ - ದುಃಖಿಸಕೂಡದು; ಅನುಕೂಲಾ

**ಭಾ. ಯಾದೃಶ ದೇಹಸ್ಥಸ್ಯ ಯದವಸ್ಥಸ್ಯ ಪ್ರಾಚೀನ ಕರ್ಮವಾಸನಯಾ ಯತ್ಪ್ರಿಯಂ ಭವತಿ, ಯಚ್ಚಾಪ್ರಿಯಂ, ತದುಭಯಂ ಪ್ರಾಪ್ಯ ಹರ್ಷೋದ್ವೇಗೌ ನ ಕುರ್ಯಾತ್**

ನುಭವವೇ ಸುಖವು, ಪ್ರತಿಕೂಲಾನುಭವವೇ ದುಃಖವು; ಹೀಗಿರುವಾಗ ಸುಖದುಃಖಾನುಭವಗಳು ಪ್ರಾರಬ್ಧಕರ್ಮಾನುಗುಣವಾಗಿ ಪ್ರಾಪ್ತವಾಗುವಾಗ ಹರ್ಷಶೋಕಗಳು ಬೇಡವೆಂದರೆ, ಸಾಧ್ಯವೋ ಎಂದರೆ, ಸಾಧ್ಯವೆಂದುಪದೇಶಿಸುತ್ತಾರೆ. ಸ್ಥಿರಬುದ್ಧಿಯಾಗಿಯೂ, ಅಸಮ್ಮೂಢನಾಗಿಯೂ, ಬ್ರಹ್ಮವಿದ್ಬ್ರಹ್ಮಣಿಸ್ಥಿತನಾಗಿಯೂ ಇದ್ದರೆ, ಸಾಧ್ಯವೆಂದು ಉತ್ತರಾರ್ಧದಿಂದ ಹೇಳುತ್ತಾರೆ. **ಸ್ಥಿರ ಬುದ್ಧಿಃ** - ಸ್ಥಿರವಾದ ಎಂದರೆ ನಿತ್ಯನಾದ ಆತ್ಮನಲ್ಲಿ, ಬುದ್ಧಿಃ. ಬುದ್ಧಿಯುಳ್ಳವನಾದರೆ ಸಾಧ್ಯವು. ಅಸ್ಥಿರವಾದ ದೇಹದಲ್ಲಿ ಬುದ್ಧಿ ಇರುವವನಿಗಾದರೋ ಪ್ರಿಯಾಪ್ರಿಯಗಳ ಭಾವನೆಯಿಂದ ಸುಖದುಃಖಗಳು ತಪ್ಪುವುದಿಲ್ಲವೆಂಬುದೂ ಇದರಿಂದ ಸೂಚಿತವು. ದೇಹಾತ್ಮಭ್ರಮದಿಂದ ಕೂಡಿದ ಸಮ್ಮೂಢನಿಗೂ ಸುಖದುಃಖಗಳು ತಪ್ಪಿದ್ದಲ್ಲವು. ಸ್ಥಿರಬುದ್ಧಿಯಾಗಿ ಅಸಮ್ಮೂಢನಾಗಿ ಇದ್ದರೀಗ ಸುಖದುಃಖಗಳಿಂದ ವಿಕಾರವನ್ನು ಹೊಂದುವದಿಲ್ಲವು ಎಂಬುದು ತಾತ್ಪರ್ಯವು. ನಿತ್ಯವಾದ ಆತ್ಮಸ್ವರೂಪದಲ್ಲೇ ಮನಸ್ಸು ನಿಶ್ಚಲವಾದುದಾಗಿ ಮತ್ತು **ಅಸಮ್ಮೂಢಃ**-ಸಂಪೂರ್ಣ ಮೂಢನು, ಯಾರೆಂದರೆ, ದೇಹಾತ್ಮಭ್ರಮೆಯುಳ್ಳವನು, ಹಾಗೆ ಭ್ರಮೆಯಿಲ್ಲದವನಾಗಿಯೂ ಇದ್ದರೆ, ಸಾಧ್ಯವೆಂಬ ಭಾವವು. ಇದು ತಾನೆ ಹೇಗೆ ಉಂಟಾಗುತ್ತದೆ ಎಂದರೆ ಹೇಳುತ್ತಾರೆ. **ಬ್ರಹ್ಮವಿದ್ಬ್ರಹ್ಮಣಿಸ್ಥಿತಃ** - ಗುರೂಪದೇಶದಿಂದ ಆತ್ಮನ ಪ್ರಕೃತಿ ವಿಯುಕ್ತಸ್ವರೂಪವನ್ನು ತಿಳಿದು ಆತ್ಮರೆಲ್ಲಾ ಜ್ಞಾನೈಕಾಕಾರತೆಯಿಂದ ಸಮವೆಂಬುದನ್ನರಿತು ಅಂತಹ ಆತ್ಮದರ್ಶನಕ್ಕಾಗಿ ಅಭ್ಯಾಸಮಾಡುತ್ತಿರುವವನಿಗೆ ಸಾಧ್ಯವು. ಹೀಗಿರುವದರಿಂದ ಸ್ಥಿರಬುದ್ಧಿಯುಂಟಾಗುತ್ತದೆ. ದೇಹಾತ್ಮಭ್ರಮ ತೊಲಗುತ್ತದೆ. ಆಗ ಪ್ರಿಯಾಪ್ರಿಯಗಳೆಲ್ಲಾ ತನ್ನ ಪ್ರಾರಬ್ಧಕರ್ಮಮೂಲಕವಾಗಿ ಉಂಟಾದವು, ಇವುಗಳಲ್ಲಿ ಅನುಕೂಲ ಪ್ರತಿಕೂಲ ಬುದ್ಧಿಗಳನ್ನು ಮಾಡಿ ಸುಖದುಃಖಾನುಭವಗಳನ್ನು ಮಾಡತಕ್ಕದ್ದಲ್ಲವೆಂಬುದು ತೋರಿಬರುತ್ತದೆ. ||೨೦||

**ಭಾಷ್ಯಾರ್ಥವು:—ಯಾದೃಶ ದೇಹಸ್ಥಸ್ಯ** - ಎಂತಹ ದೇಹದಲ್ಲಿರುವ, ಮತ್ತು **ಯದವಸ್ಥಸ್ಯ** - ಯಾವ ಅವಸ್ಥೆಯನ್ನು ಹೊಂದಿರುವವನಿಗೆ, **ಪ್ರಾಚೀನ** ಕರ್ಮವಾಸನಾಮೂಲಕವಾಗಿ **ಯತ್ಪ್ರಿಯಂ ಭವತಿ** - ಯಾವುದು ಪ್ರಿಯವಾಗಿ ತೋರುತ್ತದೋ, **ಯಚ್ಚಾಪ್ರಿಯಂ** ಮತ್ತು ಯಾವುದು ಅಪ್ರಿಯವಾಗಿ ತೋರುತ್ತದೋ, **ತದುಭಯಂ ಪ್ರಾಪ್ಯ** - ಅವೆರಡನ್ನೂ ಹೊಂದಿದವನಾಗಿ, **ಹರ್ಷೋದ್ವೇಗೌ ನ ಕುರ್ಯಾತ್** - ಹರ್ಷಶೋಕಗಳನ್ನು ಮಾಡಬಾರದು. ಶ್ಲೋಕದಲ್ಲಿ ಹೇಳಿರುವ ಪ್ರಿಯಾಪ್ರಿಯಗಳು, ಆಯಾ ಚೇತನನ ದೇಹ, ಅವಸ್ಥೆಗಳಮೂಲಕವಾಗಿ ಉಪಾಧಿಮೂಲಕ ಉಂಟಾಗುತ್ತವೆಂಬುದನ್ನು ವ್ಯಕ್ತಪಡಿಸುವದಕ್ಕಾಗಿ, **ಯಾದೃಶ ದೇಹಸ್ಥಸ್ಯ ಯದವಸ್ಥಸ್ಯ** ಎಂಬ ಪ್ರಯೋಗವು. ಅವುಗಳು ಪ್ರಾಚೀನಮೂಲಕವಾಗಿ ಸುಖದುಃಖಗಳಾಗಿ ಪರಿಣಮಿಸುತ್ತವೆಂದು ತೋರಿಸುವದಕ್ಕಾಗಿ, **ಪ್ರಾಚೀನ** ಕರ್ಮವಾಸನಯಾ ಎಂಬ ಪ್ರಯೋಗವು. ಒಂಟೆಯ ಶರೀರಕ್ಕೆ ಬೇವು ಹಿತವು; ಆಕಳಿಗೆ ಹುಲ್ಲು ಹಿತವು. ಇವೆರಡೂ ಮನುಷ್ಯನಿಗೆ ಅಹಿತವು. ಒಬ್ಬನಿಗೆ ಖಾರವು ಹಿತವು, ಇನ್ನೊಬ್ಬನಿಗೆ ಅದು ಕ್ಲೇಶಪ್ರದವು. ದೇಹವೇ ಯೌವನಾವಸ್ಥೆಯಲ್ಲಿ ವಿಷಯೋಪಭೋಗಕ್ಕನುಕೂಲವಾಗಿ ಸುಖವಾಗಿ ತೋರಬಹುದು. ಅದೇ ವೃದ್ಧಾಪ್ಯದಲ್ಲಿ ಪರಿಣಾಮಶೂಲೆ ಮೊದಲಾದ ರೋಗಗಳಿಗೆ ಕಾರಣವಾಗಿ ದುಃಖಕರವಾಗಬಹುದು. ಹಾಗೆಯೇ ಪ್ರಾಚೀನ ಕರ್ಮಾನುಸಾರ ಒಬ್ಬನಿಗೆ ಕುವರನು ತನ್ನ ಸಚ್ಚಾರಿತ್ರ್ಯದಿಂದ ಸಂತೋಷಕ್ಕೆ ಹೇತುವು, ಇನ್ನೊಬ್ಬನಿಗೆ ದುಷ್ಪುತ್ರನಾಗಿ ತನ್ನ ದುಶ್ಚರಿತ್ರೆಯಿಂದ ಮೃತ್ಯುರೂಪ

ಭಾ. ಕಥಮ್ ? ಸ್ಥಿರಬುದ್ಧಿಃ– ಸ್ಥಿರೇ ಆತ್ಮನಿ ಬುದ್ಧಿರ್ಯಸ್ಯ ಸಃ ಸ್ಥಿರಬುದ್ಧಿಃ, ಅಸಮ್ಮೂಢಃ-ಅಸ್ಥಿರೇಣ ಶರೀರೇಣ ಸ್ಥಿರಮಾತ್ಮಾನಮೇಕೀಕೃತ್ಯ,ಮೋಹಃ-ಸಮ್ಮೋಹಃ ತದ್ರಹಿತಃ; ತಚ್ಚ ಕಥಮ್ ? ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ - ಉಪದೇಶೇನ ಬ್ರಹ್ಮವಿತ್ಸನ್ ತಸ್ಮಿನ್ ಬ್ರಹ್ಮಣ್ಯಭ್ಯಾಸಯುಕ್ತಃ । ಏತದುಕ್ತಂ ಭವತಿ-ತತ್ತ್ವವಿದಾಮುಪದೇಶೇನ ಆತ್ಮಯಾಥಾತ್ಮ್ಯವಿದ್ಭೂತ್ವಾ ತತ್ರೈವ ಯತಮಾನೋ ದೇಹಾತ್ಮಾಭಿಮಾನಂ

ನಾಗಿ ಅನೇಕ ದುಃಖಗಳಿಗೆ ಕಾರಣವು. ಹೀಗೆ ದೇಹವ್ಯತ್ಯಾಸದಿಂದಲೂ, ಅವಸ್ಥಾವ್ಯತ್ಯಾಸದಿಂದಲೂ ಅಥವಾ ಅದರಿಂದುಂಟಾದ ಜ್ಞಾನಸಙ್ಕೋಚದ ವ್ಯತ್ಯಾಸದಿಂದಲೂ, ಕರ್ಮಾನುಗುಣವಾಗಿ ಪ್ರಿಯಾಪ್ರಿಯಗಳು ಪ್ರಾಪ್ತವಾಗುತ್ತವೆ. ಈ ಪ್ರಿಯಾಪ್ರಿಯಗಳಿಗಾಗಿ ಹರ್ಷಶೋಕಗಳು ಕೂಡದೆಂಬ ತಾತ್ಪರ್ಯವು. ಕಥಮ್ - ಹೀಗೆ ಹರ್ಷೋದ್ವೇಗಗಳಿಗೆ ವಶನಾಗದಿರುವದು ಹೇಗೆ? ಎಂದರೆ, ಇದು ಸಾಧ್ಯವೇ ? ಎಂಬ ಭಾವವು. ಇದಕ್ಕೆ ಉತ್ತರವಾದರೋ ಸ್ಥಿರಬುದ್ಧಿರಸಮ್ಮೂಢನಾದರೆ ಸಾಧ್ಯವೆಂದು ಹೇಳುತ್ತಾರೆ. ಸ್ಥಿರಬುದ್ಧಿಃ ಎಂದರೆ, ಸ್ಥಿರೇ ಆತ್ಮನಿ ಬುದ್ಧಿರ್ಯಸ್ಯ ಸಃ - ಯಾವನಿಗೆ ಸ್ಥಿರನಾದ ಎಂದರೆ ನಿತ್ಯನಾದ ಆತ್ಮನಲ್ಲಿ ಬುದ್ಧಿಯೋ ಆತನು ಸ್ಥಿರಬುದ್ಧಿ ಎನಿಸುವನು. ಅಸಮ್ಮೂಢಃ–ಅಸ್ಥಿರೇಣ ಶರೀರೇಣ ಸ್ಥಿರಮಾತ್ಮಾನಂ ಏಕೀಕೃತ್ಯ ಮೋಹಃ ಸಮ್ಮೋಹಃ-ಅನಿತ್ಯವಾದ ಶರೀರದೊಂದಿಗೆ ನಿತ್ಯನಾದ ಆತ್ಮನನ್ನು ಒಂದೇಮಾಡಿ ಭ್ರಮಿಸುವದಕ್ಕೆ ಸಮ್ಮೋಹವೆಂದು ಹೆಸರು, ತದ್ರಹಿತಃ - ಅಂತಹ ಮೋಹವಿಲ್ಲದಿರುವವನು ಅಸಮ್ಮೂಢನು. ಹೀಗೆ ದೇಹಾತ್ಮ ಭ್ರಮವನ್ನು ತ್ಯಜಿಸಿ, ನಿತ್ಯನಾದ ಆತ್ಮೈಕರತನಿಗೆ ಸಾಧ್ಯವು ಎಂದು ಹೇಳಲ್ಪಟ್ಟಿತು. ಸ್ಥಿರಬುದ್ಧಿಃ ಎಂಬಲ್ಲಿ ಸ್ಥಿರವಾದ ಬುದ್ಧಿಯುಳ್ಳವನೆಂಬ ಅರ್ಥವುಳ್ಳ ಸಮಾನಾಧಿಕರಣ ಸಮಾಸವನ್ನು ಬಿಟ್ಟು, ವ್ಯಧಿಕರಣ ಸಮಾಸವಾದ ಸ್ಥಿರವಾದ ಆತ್ಮನಲ್ಲೇ ಬುದ್ಧಿಯುಳ್ಳವನು ಎಂಬರ್ಥವು ಹೇಗೆ ಎಂದರೆ, ಹೆಚ್ಚಾದ ಸ್ವಾರಸ್ಯ ಉಂಟಾಗುವದರಿಂದ ವ್ಯಧಿಕರಣ ಸಮಾಸವು ಅನ್ಯಾಯವಲ್ಲವು. ಅಸಮ್ಮೂಢಃ ಎಂಬುದಕ್ಕೆ ಅನಿತ್ಯನಾದ ದೇಹದೊಂದಿಗೆ ಆತ್ಮನನ್ನು ಏಕೀಭವಿಸದೆ ಇರುವಿಕೆ ಎಂದು ಹೇಗೆ ಅರ್ಥವು ಎಂದು ಆಕ್ಷೇಪಿಸಿದರೆ, ಸಮಿತಿ ಏಕೀಕಾರೇ ಎಂದಿರುವದರಿಂದ ಉಪಸರ್ಗದಿಂದ ಆ ಅರ್ಥವು ದ್ಯೋತಿತವು. ದೇಹಾತ್ಮ ಭ್ರಮವೂ ಇಲ್ಲದೆ ಆತ್ಮನ ನಿಜಸ್ಥಿತಿಯ ಜ್ಞಾನವಿರುವವರೂ ಕೂಡ ಹರ್ಷೋದ್ವೇಗಗಳಿಗೆ ವಶರಾಗಿರುವದನ್ನು ಕಂಡಿರುವೆವು. ಅಂತಹರಿಗೆ ತಾನೇ ಹೇಗೆ ಸಾಧ್ಯವೆಂದು ಶಂಕಿಸಿ, ಅದಕ್ಕೆ ಉತ್ತರವು ಹೇಳಲ್ಪಡುತ್ತದೆ. ತಚ್ಚ ಕಥಂ - ಅದೂ ಕೂಡ ಹೇಗೆ? ಇಲ್ಲಿ ತತ್ ಎಂದರೆ ಸ್ಥಿರಬುದ್ಧಿತ್ವ ಅಸಮ್ಮೂಢತ್ವ ಎರಡನ್ನೂ ಉಂಟಾಗಿರುವಿಕೆಯು. ಇದಕ್ಕೆ ಉತ್ತರವು:--ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ಎಂದರೆ, ಉಪದೇಶೇನ ಬ್ರಹ್ಮವಿತ್ಸನ್ ತಸ್ಮಿನ್ ಬ್ರಹ್ಮಣ್ಯಭ್ಯಾಸಯುಕ್ತಃ - ಗುರುವಿನ ಉಪದೇಶದಿಂದ ಪ್ರಕೃತಿವಿಯುಕ್ತ ಆತ್ಮಸ್ವರೂಪಜ್ಞಾನವನ್ನು ಹೊಂದಿದವನಾಗಿ, ತಸ್ಮಿನ್ ಬ್ರಹ್ಮಣಿ - ಆ ಪ್ರಕೃತಿವಿಯುಕ್ತ ಜೀವಸ್ವರೂಪದಲ್ಲಿ, ಅಭ್ಯಾಸಯುಕ್ತಃ-ಅನುಸಂಧಾನದ ಮೂಲಕ, ಅಭ್ಯಾಸವುಳ್ಳವನಾಗಿರತಕ್ಕದ್ದು. ಏತದುಕ್ತಂ ಭವತಿ - ಈ ಶ್ಲೋಕದಲ್ಲಿ ಈ ಅಭಿಪ್ರಾಯವೀಗ ಬೋಧಿಸಲ್ಪಟ್ಟಿತು, ಏನೆಂದರೆ, ತತ್ತ್ವವಿದಾಮುಪದೇಶೇನ - ಯಾವ ಕುದೃಷ್ಟಿಗಳ ಉಪದೇಶಕ್ಕೆ ಮನವನ್ನು ಕೊಡದೆ, ಆತ್ಮತತ್ತ್ವ ವಿಷಯವನ್ನು ವಿಮರ್ಶಿಸಿ ತಿಳಿದ ಜ್ಞಾನಿಗಳ ಉಪದೇಶದಿಂದ, ಆತ್ಮಯಾಥಾತ್ಮ್ಯವಿದ್ಭೂತ್ವಾ - ಆತ್ಮಸ್ವರೂಪದ ಯಾಥಾತ್ಮ್ಯವನ್ನು ತಿಳಿದವನಾಗಿ, ತತ್ರೈವ ಯತಮಾನಃ - ಅಂತಹ ಜ್ಞಾನಾಭ್ಯಾಸ ಉಳ್ಳವನಾಗಿ, ದೇಹಾತ್ಮಾಭಿಮಾನಂ ಪರಿ

ಭಾ. ಏವಮುಕ್ತೇನ ಪ್ರಕಾರೇಣ ಬಾಹ್ಯಸ್ಪರ್ಶೇಷು - ಆತ್ಮವ್ಯತಿರಿಕ್ತ ವಿಷಯಾನುಭವೇಷು ಅಸಕ್ತಮನಾಃ, ಅನ್ತರಾತ್ಮನ್ಯೇವ ಯಸ್ಸುಖಂ ವಿನ್ದತಿ - ಲಭತೇ, ಸ ಪ್ರಕೃತ್ಯಭ್ಯಾಸಂ ವಿಹಾಯ ಬ್ರಹ್ಮಯೋಗ ಯುಕ್ತಾತ್ಮಾ-ಬ್ರಹ್ಮಾಭ್ಯಾಸ ಯುಕ್ತಮನಾಃ ಬ್ರಹ್ಮಾನುಭವ ರೂಪ ಮಕ್ಷಯಂ ಸುಖಂ ಪ್ರಾಪ್ನೋತಿ ॥೨೧॥

ಭಾ. ಅವ. ಪ್ರಾಕೃತಸ್ಯ ಭೋಗಸ್ಯ ಸುತ್ಯಜತಾಮಾಹ —

ಪರವಲ್ಲವು. ಐಹಿಕ ಸುಖವು, "ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ" ಎಂದೂ "ಸುಖಾತ್ಸಂಜಾಯತೇ ದುಃಖಂ ದುಃಖಾತ್ಸಂಜಾಯತೇ ಸುಖಂ" ಎಂದೂ (ಮೋಕ್ಷ. ೧೭೩. ೧೯. ೨೦)ಹೇಳಿರುವಹಾಗೆ ಅನಿತ್ಯವೂ ದುಃಖ ಮಿಶ್ರವೂ. ಆತ್ಮಾನುಭವರೂಪ ಆನಂದ ವಾವರೋ ಹಾಗೆ ಕ್ಷಯವಾಗುವದಿಲ್ಲವೆಂದು ಅಕ್ಷಯ ಶಬ್ದದಿಂದ ಹೇಳಲ್ಪಟ್ಟಿರುತ್ತದೆ. ॥೨೧॥

ಭಾಷ್ಯಾರ್ಥವು :— ಏವಮುಕ್ತೇನಪ್ರಕಾರೇಣ - ಹೀಗೆ ಹಿಂದಿನ ಶ್ಲೋಕದಲ್ಲಿ ಹೇಳಿದ ರೀತಿಯಲ್ಲಿ, ಬಾಹ್ಯಸ್ಪರ್ಶೇಷು - ಬಾಹ್ಯ ಸ್ಪರ್ಶಗಳೆಂದರೆ, ಬಾಹ್ಯ ವಿಷಯಗಳು, ವಿಷಯಗಳ ಸ್ಪರ್ಶವು ಇಂದ್ರಿಯಗಳಿಗೆ ಆದರೆ ಆಗ ಅನುಭವ ಉಂಟಾಗುತ್ತದೆಯಾದುದರಿಂದ, ಬಾಹ್ಯಸ್ಪರ್ಶೇಷು ಎಂದರೆ, ಆತ್ಮವ್ಯತಿರಿಕ್ತ ವಿಷಯಾನುಭವೇಷು-ಜೀವಾತ್ಮನಿಗಿಂತ ಬೇರೆಯಾದ ವಿಷಯಾನುಭವಗಳಲ್ಲಿ, ಅಸಕ್ತಮನಾಃ - ಸಂಬಂಧಿಸದೇ ಇರುವ ಮನಸ್ಸುಳ್ಳವನಾಗಿ, ಅನ್ತರಾತ್ಮನ್ಯೇವ-ದೇಹದ ಒಳಗಿರುವ ಆತ್ಮನಲ್ಲೇ, ಬಾಹ್ಯವಿಷಯಾನುಭವ ಎಂದು ಬಾಹ್ಯ ಶಬ್ದಕ್ಕೆ ಪ್ರತಿದ್ವಂದಿಯಾಗಿ, ಇಲ್ಲಿ ಅನ್ತರಾತ್ಮನ್ಯೇವ ಎಂದು ಪ್ರಯೋಗಿಸಿರುತ್ತಾರೆ. ಹೀಗೆ ಬಾಹ್ಯವಿಷಯಾನುಭವದಲ್ಲಿ ಮನಸ್ಸನ್ನು ತ್ಯಜಿಸಿ ಒಳಗಿರುವ ಆತ್ಮನ ಅನುಭವದಿಂದ ಯಾವ ಕರ್ಮಯೋಗಿಯು ಸುಖವನ್ನು ಹೊಂದುವನೋ ಎಂಬ ತಾತ್ಪರ್ಯವು ; ಸಃ - ಅಂತಹ ಕರ್ಮಯೋಗಿಯು, ಪ್ರಕೃತ್ಯಭ್ಯಾಸಂ ವಿಹಾಯ-ಪ್ರಾಕೃತ ಶಬ್ದಾದಿ ವಿಷಯಗಳು ಭೋಗ್ಯವಾದವು ಎಂದು ಅದರಲ್ಲಿ ಪುನಃ ಚಿಂತೆಯನ್ನು ತ್ಯಜಿಸಿ, ಬ್ರಹ್ಮಯೋಗಯುಕ್ತಾತ್ಮಾ ಎಂದರೆ, ಬ್ರಹ್ಮಾಭ್ಯಾಸಯುಕ್ತಮನಾಃ-ಪ್ರಕೃತಿ ವಿಯುಕ್ತ ಆತ್ಮಸ್ವರೂಪವು ಎಷ್ಟು ಮಹತ್ತಾದ್ದೆಂದು ಅದರ ಧ್ಯಾನದಲ್ಲೇ ಸಂಬಂಧಿಸಿದ ಮನಸ್ಸುಳ್ಳವನಾಗಿ, ಬ್ರಹ್ಮಾನುಭವರೂಪಂ - ಇಂತಹ ಆತ್ಮಾನುಭವರೂಪವಾದ, ಅಕ್ಷಯಂ ಸುಖಂ - ನಾಶರಹಿತವಾದ ಆನಂದವನ್ನು. ಪ್ರಾಪ್ನೋತಿ - ಹೊಂದುತ್ತಾನೆ. ಪ್ರಕೃತಿ ವಿಯುಕ್ತ ಜೀವಾತ್ಮಸಾಕ್ಷಾತ್ಕಾರ ಜನಿತಾನಂದವು ತುಂಬಾ ನಿರತಿಶಯವಾದುದು ಎಂಬ ತಾತ್ಪರ್ಯವು॥೨೧॥

ಭಾಷ್ಯಾವತಾರಿಕೆಯ ಅರ್ಥವು :—ಹಿಂದಿನ ಶ್ಲೋಕದಲ್ಲಿ ಬಾಹ್ಯವಿಷಯಾನುಭವಗಳಲ್ಲಿ ಭೋಗ್ಯಭಾವವನ್ನು ತ್ಯಜಿಸತಕ್ಕದ್ದೆಂದು ಹೇಳಲ್ಪಟ್ಟಿತು. ಶ್ರುತಿಯು ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಎಂಬಲ್ಲಿ ಜೀವಾತ್ಮನಿಗೆ ಭೋಕ್ತೃತ್ವವನ್ನು ಉಪದೇಶಿಸಿರುತ್ತದೆ. ಆದರೆ ಈ ಕರ್ಮಯೋಗಿಗೆ ಭೋಕ್ತೃತ್ವವು ನಿಂದಿಸಲ್ಪಟ್ಟಿರುತ್ತದೆ. ಹೀಗಿರುವಾಗ ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ಆಗಿರಬೇಕೆಂದು ಹೇಳಲ್ಪಟ್ಟಿತಲ್ಲಾ, ಇದು ಸಾಧ್ಯವೇ ಎಂಬ ಶಙ್ಕೆಗೆ ಸಮಾಧಾನವಾಗಿ ಮುಂದಿನ ಶ್ಲೋಕದಲ್ಲಿ ಪ್ರಾಕೃತಭೋಗಗಳನ್ನು ಸುಲಭವಾಗಿ ಬಿಡಲು ಸಾಧ್ಯವೆಂದು ಹೇಳುತ್ತಾರೆಂಬ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಅವು ನಿರಂತರ ದುಃಖಕ್ಕೆ ಕಾರಣಗಳಾದುದರಿಂದ ಪರಿಕಿಸಿದ ಈ ಕರ್ಮಯೋಗಿಯು ಆ ಭೋಗಗಳಲ್ಲಿ ಮನಸ್ಸನ್ನಿಡುವದಿಲ್ಲವಾಗಿ ಅವುಗಳನ್ನು ಸುಲಭವಾಗಿ ಪರಿತ್ಯಾಗಮಾಡುವನೆಂದು ಹೇಳಲ್ಪಡುತ್ತದೆ. ಪ್ರಾಕೃತಸ್ಯ ಭೋಗಸ್ಯ - ಪ್ರಕೃತಿ ಸಂಬಂಧವಾದ ವಿಷಯೋಪಭೋಗವನ್ನು, ಸುತ್ಯಜತಾಂ - ಸುಕರವಾಗಿ ಬಿಡಬಹುದೆಂಬುದನ್ನು, ಆಹ - ಹೇಳುತ್ತಾರೆ.

ಮೂ. ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖ ಯೋನಯ ಏವತೇ ।
ಆದ್ಯನ್ತವನ್ತಃ ಕೌನ್ತೇಯ ನ ತೇಷು ರಮತೇ ಬುಧಃ ॥ ೨೨.

ಭಾ. ವಿಷಯೇನ್ದ್ರಿಯ ಸ್ಪರ್ಶಜಾಃ ಯೇ ಭೋಗಾಃ ದುಃಖಯೋನಯಸ್ತೇ-ದುಃಖೋದರ್ಕಾಃ, ಆದ್ಯನ್ತವಂತಃ – ಅಲ್ಪಕಾಲವರ್ತಿನೋ ಹ್ಯುಪಲಭ್ಯನ್ತೇ. ನ ತೇಷು ತದ್ಯಾಥಾತ್ಮ್ಯವಿದ್ರಮತೇ ॥೨೨॥

ಮೂಲಕ್ಕೆ ಅರ್ಥವು:—ಅನಾದಿಕಾಲದಿಂದಲೂ ಬಾಹ್ಯ ವಿಷಯೋಪಭೋಗದಲ್ಲೇ ರಸಿಕನಾದವನಿಗೆ ಭೋಗಗಳ ಪರಿತ್ಯಾಗವು ಹೇಗೆ ಲಭಿಸೀತು ಎಂಬ ಶಙ್ಕೆಯಿರುವದರಿಂದ ಅದಕ್ಕೆ ಉತ್ತರವು ಹೇಳಲ್ಪಡುತ್ತದೆ. ಆ ಭೋಗ ದ್ರವ್ಯಗಳ ಸಂಪಾದನೆ ರಕ್ಷಣೆ ಮೊದಲಾದವುಗಳಲ್ಲಿ ನಾನಾವಿಧ ಕ್ಲೇಶಗಳೇ ತೋರಿಬರುವದರಿಂದ ತತ್ತ್ವ ತತ್ತ್ವವನ್ನು ತಿಳಿದ ಜ್ಞಾನಿಯು ಸುಲಭವಾಗಿ ಪರಿತ್ಯಾಗ ಮಾಡುವನೆಂದು ಹೇಳುತ್ತಾರೆ. ಹೇ ಕೌನ್ತೇಯ - ಓ ಕುನ್ತೀಪುತ್ರನಾದ ಅರ್ಜುನನೇ, ಹಿ - ಯಾವಕಾರಣದಿಂದ, ಯೇ - ಯಾವ, ಸಂಸ್ಪರ್ಶಜಾಃ - ವಿಷಯೇಂದ್ರಿಯ ಸಂಯೋಗದಿಂದುಂಟಾದ, ಭೋಗಾಃ - ಭೋಗಗಳೋ, ತೇ - ಅವು, ಆ ಕಾರಣದಿಂದ, ದುಃಖಯೋನಯಃ - ದುಃಖಕ್ಕೆ ಕಾರಣಭೂತಗಳಾದವುಗಳು, ಮತ್ತು ಆದ್ಯನ್ತವಂತ ಏವ - ಆದಿ ಮತ್ತು ಅಂತಗಳಿರುವದರಿಂದ, ಅಸ್ಥಿರವಾದವುಗಳೇ; ಆಗಲಿ, ಸ್ವರ್ಗಲೋಕಾದಿ ಭೋಗಗಳೂ, ದುಃಖಯೋನಿಗಳೋ ? ಎಂದರೆ, ಯಾವಾಗ ಆ ಭೋಗಗಳು ಮುಗಿದು ಹೋಗುತ್ತವೋ ಪುನಃ ಭೂಲೋಕಕ್ಕೆ ಯಾವಾಗ ಹೋಗಬೇಕಾಗುತ್ತದೋ ಎಂಬ ಭಯವಿರುವದರಿಂದ ಅವು ಹಾಗೆಯೇ ಎಂದು ತಿಳಿಸುವದಕ್ಕಾಗಿ, ದುಃಖಯೋನಯ ಏವ ಎಂದು ಏವಕಾರವು. ಬುಧಃ - ತತ್ತ್ವವಿತ್ತಾದ ಕರ್ಮಯೋಗಿಯು, ತೇಷು-ಅವುಗಳಲ್ಲಿ, ನ ರಮತೇ-ರಮಿಸುವದಿಲ್ಲವು ಅಂತಹ ದುಃಖಗಳಿಗೆ ಕಾರಣಗಳಾಗಿಯೂ,ನಶ್ವರಗಳಾಗಿಯೂ, ಇರುವ ವಿಷಯೋಪಭೋಗಗಳಲ್ಲಿ ಮನಸ್ಸನ್ನು ಇಡುವದಿಲ್ಲವು. ಆದುದರಿಂದ ಬುಧನಾದ ಈ ಕರ್ಮಯೋಗಿಗೆ ಈ ಭೋಗಗಳಲ್ಲಿ, ಮನಸ್ಸನ್ನಿಡದೇ ಇರುವದು ಸುಲಭವೇ; ಇದರಿಂದ ತತ್ತ್ವವಿತ್ತಾದ ಕರ್ಮಯೋಗಿಗೇನೋ, ಇದು ಸಾಧ್ಯವು; ಬುಧನಲ್ಲದವನಿಗಾದರೋ ಇದು ಅಸಾಧ್ಯವೇ ಎಂಬ ಭಾವವೂ ತೋರಿಬರುತ್ತದೆ. "ಅನ್ತೇಷು ರೇಮಿರೇ ಧೀರಾಃ ನ ತೇ ಮಧ್ಯೇಷುರೇಮಿರೆ"(೧೭೪. ೨೫)ಎಂಬ ಮೋಕ್ಷಧರ್ಮವಾಕ್ಯವು ಅನುಸಂಧೇಯವು. ಈ ಶ್ಲೋಕದಿಂದ ಭೋಗರೂಪವಾದ ಅನುಭವವು ಹೇಗೆ ಉಂಟಾಗುತ್ತದೆಂಬುವದನ್ನು ಗ್ರಹಿಸಬಹುದು:—ವಿಷಯಗಳ ಸ್ಪರ್ಶವು ಇಂದ್ರಿಯಗಳಿಗುಂಟಾದರೆ ಮನಸ್ಸು ಧರ್ಮಭೂತಜ್ಞಾನಗಳ ಮೂಲಕ ಆತ್ಮನಿಗೆ ಅನುಭವವು ಉಂಟಾಗುತ್ತದೆ ಎಂಬುದು॥೨೨॥

ಭಾಷ್ಯಾರ್ಥವು:—ಅನಾದಿಕಾಲದಿಂದಲೂ ಬಾಹ್ಯಸ್ಪರ್ಶದಲ್ಲೇ ಆಸಕ್ತಿಯುಳ್ಳವನಿಗೆ ಅದರ ಪರಿತ್ಯಾಗವು ಹೇಗೆ?ಎಂಬ ಶಙ್ಕಾವಿಷಯದಲ್ಲಿ, ಅವುಗಳ ಸಂಪಾದನೆ, ರಕ್ಷಣೆ ಮೊದಲಾದ ಅನೇಕ ಕ್ಲೇಶಗಳುಂಟೆಂಬುದು ತೋರುವದರಿಂದ, ಪ್ರಾಜ್ಞನಿಗೆ ಅಂತಹ ಪರಿತ್ಯಾಗವು ಸಾಧ್ಯವೆಂದು ಹೇಳುತ್ತಾರೆ. ವಿಷಯೇನ್ದ್ರಿಯ ಸ್ಪರ್ಶಜಾಃ - ವಿಷಯೇಂದ್ರಿಯಗಳ ಸಂಬಂಧದಿಂದುಂಟಾದ, ಯೇ ಭೋಗಾಃ - ಯಾವ ಭೋಗಗಳುಂಟೋ, ದುಃಖಯೋನಯಸ್ತೇ ಎಂದರೆ ದುಃಖೋದರ್ಕಾಃ-ದುಃಖವನ್ನೇ ಉತ್ತರ ಫಲಗಳಾಗಿ ಉಳ್ಳವು; "ಉದರ್ಕಃ ಫಲಮುತ್ತರಂ" ಎಂದು ಅಮರವು. ಮೂಲದಲ್ಲಿ ಸುಮ್ಮನೆ ಸ್ಪರ್ಶಜಾಃ ಎಂದಿರುತ್ತದೆ, ಯಾವ ಯಾವುವುಗಳಿಗೆ ಸ್ಪರ್ಶವೆಂದರೆ ವಿಷಯೇಂದ್ರಿಯಗಳ ಸ್ಪರ್ಶ ಮತ್ತು ಅವುಗಳಿಂದುಂಟಾಗುವ ಅನುಭವವೂ ಹೇಳಲ್ಪಟ್ಟಿತೆಂದು ತೋರಿಸುವದಕ್ಕಾಗಿ, ವಿಷಯೇನ್ದ್ರಿಯಸ್ಪರ್ಶಜಾಃ ಎಂದು ವ್ಯಾಖ್ಯಾನಮಾಡಿರುತ್ತಾರೆ.

Funding: Tattva Heritage Foundation,Kolkata. Digitization: eGangotri.



ತಾತ್ಕಾಲಿಕ ಸ್ಪರ್ಶ ಉಂಟಾಗುವದರಿಂದ ಅಂತಹ ಅನುಭವಗಳ ತುಚ್ಛತ್ವವೂ ಅನಿತ್ಯತ್ವವೂ ವ್ಯಕ್ತವು. ಆದ್ಯನ್ತವಂತಃ-ಈ ಭೋಗಗಳಿಗೆ ಆದಿ ಮತ್ತು ಅಂತವೂ ಇರುವದರಿಂದ ಅಲ್ಪಕಾಲ ವರ್ತಿನೋ ಹಿ - ಸ್ವಲ್ಪಕಾಲ ಮಾತ್ರ ಇರತಕ್ಕವುಗಳು. ಹಾಗೆ ತಾನೇ ಉಪಲಭ್ಯನ್ತೇ - ತೋರಿಬರುತ್ತವೆ. ಐಹಿಕಗಳೆಲ್ಲಾ ಆದ್ಯಂತವಂತಗಳೆಂಬುದು ಪ್ರತ್ಯಕ್ಷಾನುಮಾನ ಪ್ರಮಾಣಗಳಿಂದಲೇ ವ್ಯಕ್ತವಾಗುವದರಿಂದ, ಉಪಲಭ್ಯನ್ತೇ ಎಂಬ ಪ್ರಯೋಗವು ಈ ವಿಷಯದಲ್ಲಿ ಶಾಸ್ತ್ರೀಯವೇ ಆದ ಅವಶ್ಯಕವಿಲ್ಲವು. ಸ್ವರ್ಗಾದಿ ಭೋಗಗಳ ವಿಷಯದಲ್ಲಾದರೋ ಶಾಸ್ತ್ರ ಪ್ರಮಾಣದಿಂದ ವ್ಯಕ್ತವಾದುದರಿಂದ ಆಗಲೂ ಶಾಸ್ತ್ರದ್ವಾರಾ ಉಪಲಭ್ಯನ್ತೇ ಎಂಬುದು ಭಾವವು. ಸ್ವರ್ಗಲೋಕ ಬ್ರಹ್ಮಲೋಕ, ರುದ್ರಲೋಕ ಭೋಗಗಳೂ ಸಹ, ಆದ್ಯಂತವಂತಗಳು, ಆದರೆ ಸ್ವಲ್ಪ ಹೆಚ್ಚು ಕಾಲವಿರುವಂತಹ ಅಷ್ಟುಮಾತ್ರವೇ. ಅವುಗಳು ಕೂಡ ದುಃಖಮಿಶ್ರವಾದವುಗಳೇ, ಏಕೆಂದರೆ "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂದೂ "ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ" ಎಂದೂ ಮುಂದೆ ಹೇಳಲ್ಪಡುತ್ತವೆ. ಆದುದರಿಂದ ಪ್ರಾಕೃತಭೋಗಗಳೆಲ್ಲಾ ಕ್ಷುದ್ರವಾದವೆಂದೂ, ದುಃಖಫಲವುಳ್ಳವೆಂದೂ, ಅನಿತ್ಯವೆಂದೂ ಹೇಳಲ್ಪಟ್ಟವು. ಇವುಗಳು ಪ್ರತ್ಯಕ್ಷಸಿದ್ಧವಾಗಿ ಎಲ್ಲರೂ ತಿಳಿದವಿಷಯವೇ ಎಂದು ತಿಳಿಸುವದಕ್ಕೆ ಮೂಲದಲ್ಲಿ ಸಿದ್ಧ ಶಬ್ದವೂ, ವ್ಯಾಖ್ಯಾನದಲ್ಲಿ ಉಪಲಭ್ಯನ್ತೇ ಎಂಬ ಪ್ರಯೋಗವೂ ಇವೆ. ಹೀಗಿರುವದರಿಂದ,ಶೇಷ-ಅಂತಹ ಭೋಗಗಳಲ್ಲಿ ವಿದ್ಯಾಭ್ಯಾಸವಿತ್-ಈ ಅಲ್ಪಭೋಗಗಳ ನಿಜಸ್ಥಿತಿಯನ್ನರಿತ ಜ್ಞಾನಿಯು, ಇದು ಮೂಲದ ಬುಧಃ ಎಂಬುದರರ್ಥವು, ನ ರಮತೇ - ರಮಿಸುವದಿಲ್ಲವು. ಮತ್ತೇನು ಮಾಡುವರೆಂದರೆ, ಕಿನ್ತು ಉಪರಮನ್ತೇ ಅವುಗಳಲ್ಲಿ ವಿರಕ್ತಿ ತೋರಿ ತ್ಯಾಗಮಾಡುವರೆಂಬ ಭಾವವು. ಈ ಪಂಡಿತರು ಈ ಭೋಗಗಳ ನಿಜಸ್ಥಿತಿಯನ್ನು ಹೇಗೆ ಅರಿತವರು, ಎಂಬ ಸ್ಥಳದಲ್ಲಿ ಶ್ರೀ ದೇಶಿಕರವರು ಪಂಚವಿಧವಾದವುಗಳಲ್ಲಿ ಉಪರಮವನ್ನು ಹೊಂದಲು ಯೋಗ್ಯವಾದ ವಿವೇಕ ಜ್ಞಾನವುಳ್ಳವರೆಂದು ವ್ಯಾಖ್ಯಾನಮಾಡಿರುತ್ತಾರೆ. ಆ ಐದು ವಿಷಯಗಳು ದೋಷಯುಕ್ತಗಳಾಗಿ ದುಃಖೋದರ್ಕವುಳ್ಳವುಗಳಾಗಿರುವದರಿಂದ ತ್ಯಾಜ್ಯಗಳಾಗಿರುವುವು; ಅವು ಯಾವುವೆಂದರೆ:—(೧) ಅರ್ಜನ ದೋಷಗಳೆಂದೂ, (೨) ರಕ್ಷಣಾ ದೋಷಗಳೆಂದೂ, (೩) ಕ್ಷಯ ದೋಷಗಳೆಂದೂ, (೪) ಭೋಗದೋಷಗಳೆಂದೂ, (೫) ಹಿಂಸಾ ದೋಷಗಳೆಂದೂ, ವಿಭಾಗಿಸಲ್ಪಟ್ಟು "ಬಾಹ್ಯಾ ವಿಷಯೋಪರಮಾಃ ಪಂಚ" ಎಂಬ ಸಾಂಖ್ಯ ಕಾರಿಕೆಯಲ್ಲಿ ಹೇಳಲ್ಪಟ್ಟಿವೆ. (೧) ಭೋಗೋಪಕರಣಗಳ ಆರ್ಜನದಲ್ಲಿ ಅನೇಕದುಃಖಗಳುಂಟೆಂಬುದು ಪ್ರತ್ಯಕ್ಷಸಿದ್ಧವು. ಧನಾರ್ಜನೆ ಗೃಹನಿರ್ಮಾಣ ಕ್ಷೇತ್ರ ಸಂಪಾದನೆ ಮುಂತಾದವುಗಳಲ್ಲಿರುವ ಕಷ್ಟವನ್ನು ಹೇಳತೀರದು. ಶರೀರ ನಾಶಪರ್ಯಂತವಾದ ದುಃಖಗಳುಂಟು. (೨) ಹಾಗೆಯೇ ರಕ್ಷಣೆ ದುಃಖಗಳು ಅನೇಕ ಉಂಟು, ಆ ರಕ್ಷ್ಯವಾದ ಉಪಕರಣಗಳನ್ನು ಎಷ್ಟು ಭದ್ರವಾದ ಸ್ಥಳದಲ್ಲಿಟ್ಟಿದ್ದರೂ ಬಲಿಷ್ಠರು, ಅಗ್ನಿ, ಚೋರ, ಮೂಷಿಕಾದಿಗಳಿಂದುಂಟಾಗುವ ಭಯವನ್ನು ನಿವಾರಣೆಮಾಡಿಕೊಳ್ಳುವ ದುಃಖಗಳು ಅಪರಿಮಿತವಾದವು; ಇವು ರಕ್ಷಣೆಯ ದೋಷಗಳು. (೩) "ಸ್ವರ್ಗೇಽಪಿ ಪಾತಭೀತಸ್ಯ ಕ್ಷಯಿಷ್ಣೋರ್ನಾಸ್ತಿ ನಿರ್ವೃತಿಃ"(ವಿಷ್ಣು ಪು. ೬. ೫. ೫೦) ಸ್ವರ್ಗದಲ್ಲಿರುವವರಿಗೂ ಸ್ವರ್ಗವಾಸವು ಶೀಘ್ರದಲ್ಲಿ ಕಳೆದು ಹೋಗುತ್ತದೆಯೋ ಎಂಬ ಅಸೌಖ್ಯವು; ಹಾಗೆಯೇ ಸಂಪಾದಿಸಿದ ಧನವು ವ್ಯಯವಾಗುವ ಸಂದರ್ಭದಲ್ಲಿ ಅನೇಕ ದುಃಖ ಪರಂಪರೆಯೇ ತೋರಿಬರುವವು; ಇವು ಕ್ಷಯ ದೋಷಗಳು. (೪) "ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ। ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ" (ವಿ. ಪು. ೪. ೧೦. ೨೩) ಕಾಮಗಳ ಉಪಭೋಗಗಳಿಂದ ಅಗ್ನಿಗೆ ಆಜ್ಯಾಹುತಿ ನೀಡಿದಂತೆ ಅವು ಇನ್ನೂ ಅಭಿವೃದ್ಧಿಯನ್ನು ಹೊಂದಿ, ಆದರಿಂದ ನಿರ್ಲಕ್ಷ್ಯವೆಂಬ ಪ್ರಸಕ್ತಿ

**ಮೂ.** ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರ ವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ ೨೩.

ಗಳೂ, ದೇಹಾಸೌಖ್ಯ ಉಂಟಾಗುವದರಿಂದ ದುಃಖಗಳೂ ಹೀಗೆ ಪ್ರಾಪ್ತವಾಗುವ ಭೋಗದೋಷಗಳು ಸಾವಿರಾರು ಉಂಟು. (೫) ಭೋಗ ಪರಿಕರಾರ್ಜನೆ, ರಕ್ಷಣೆ, ಕ್ಷಯ, ಉಪಭೋಗ ಇವುಗಳಲ್ಲೆಲ್ಲಾ ಪ್ರಾಪ್ತವಾಗುವ ಪರಹಿಂಸಾರೂಪ ದೋಷಗಳೂ, ಅದರಿಂದುಂಟಾಗುವ ದುಃಖಗಳೂ ಬಹಳವಾಗಿವೆ. ಹೀಗಿರುವದರಿಂದ,ದುಃಖ ಯೋನಯ ಏವತೇ ಎಂದು ಮೂಲದಲ್ಲಿ ಹೇಳಲ್ಪಟ್ಟ ಭಾಷ್ಯದಲ್ಲಿ, ದುಃಖೋದರ್ಕಾಃ ಎಂದು ವ್ಯಾಖ್ಯಾನಮಾಡಲ್ಪಟ್ಟಿರುತ್ತದೆ. ಹೀಗೆ ಅಲ್ಪಾಸ್ಥಿರಗಳಾಗಿಯೂ ನಾನಾವಿಧ ದುಃಖಗಳಿಗೆ ಕಾರಣವಾಗಿರುವವು ಪ್ರತ್ಯಕ್ಷ ಸಿದ್ಧವಾಗಿರುವದರಿಂದ ಐಹಿಕ ಭೋಗಗಳಲ್ಲಿ ಆತ್ಮರತಿಯುಳ್ಳ ವಿವೇಕಿಯಾದ ಪಂಡಿತನು ಮನಸ್ಸನ್ನು ಇಡನು; ಇಂತಹ ಕರ್ಮಯೋಗಿಗೆ ಇದು ಸುಲಭವು ಎಂಬ ಭಾವವು. ||೨೨||

**ಮೂಲಕ್ಕೆ ಅರ್ಥವು :**—ಹಿಂದಿನ ಶ್ಲೋಕದಲ್ಲಿ ಆತ್ಮಯಾಥಾತ್ಮ್ಯ ಜ್ಞಾನವಿರುವ ವಿವೇಕಿಯಾದ ಪಂಡಿತನು, ಅಲ್ಪಾಸ್ಥಿರಗಳಾದ ಐಹಿಕ ಭೋಗಗಳಲ್ಲಿ ಮನಸ್ಸನ್ನಿಡುವದಿಲ್ಲವೆಂದು ಹೇಳಿದರು. ಈ ಶ್ಲೋಕದಲ್ಲಿಯಾದರೋ ಅಂತಹ ಕರ್ಮಯೋಗಿಯು ಲಭಿಸುವದು ಸುಲಭವಲ್ಲವು. ಎಷ್ಟು ಪಂಡಿತನಾಗಿದ್ದರೂ ಕಾಮಕ್ರೋಧಗಳ ವೇಗವು ಪ್ರವಾಹದಹಾಗೆ ಬರುವಾಗ ಅವುಗಳನ್ನು ತಡೆಯುವದು ತುಂಬಾ ಕಷ್ಟವು ಎಂದು ಹೇಳಿ, ಹಾಗೆ ಕಾಮಕ್ರೋಧಗಳ ವೇಗವನ್ನು ನಿರಸನ ಮಾಡುವ ಶಕ್ತಿಯು ಈ ಆತ್ಮೈಕ ರಸಿಕನಾದ ಕರ್ಮಯೋಗಿಗೆ ದೈವ ವಶಾತ್ ಈ ದೇಹ ವಿಯೋಗವಾಗುವದರೊಳಗೇ ಲಭಿಸಿದರೆ, ಆತನಿಗೆ ಆತ್ಮ ಸಾಕ್ಷಾತ್ಕಾರರೂಪ ಸುಖಪ್ರಾಪ್ತಿಯುಂಟೆಂದು ಉಪದೇಶಿಸುತ್ತಾರೆ. ಶರೀರ ವಿಮೋಕ್ಷಣಾತ್ - ಶರೀರದವಿಯೋಗ ಉಂಟಾಗುವದಕ್ಕೆ, ಪ್ರಾಕ್ - ಮೊದಲೇ, ಇಹೈವ - ಈ ಕರ್ಮಯೋಗವಾದ ಉಪಾಯಾನುಷ್ಠಾನದಶೆಯಲ್ಲಿಯೇ, ಯಃ - ಯಾವ ಕರ್ಮಯೋಗಿಯು, ಕಾಮಕ್ರೋಧೋದ್ಭವಂ ವೇಗಂ - ಕಾಮಕ್ರೋಧಗಳಿಂದುಂಟಾದ ವೇಗವನ್ನು, ವೇಗವು ಯಾವುದೆಂದರೆ, ಈ ಕಾಮಕ್ರೋಧಗಳಿಂದ ಪ್ರಾಪ್ತವಾದ ಮನೋವಾಕ್ಕಾಯಗಳ ಬಹುತ್ವರೆಯುಳ್ಳ ಪ್ರವೃತ್ತಿಯು. ಯುಕ್ತಾಯುಕ್ತಗಳನ್ನು ವಿವೇಕದಿಂದ ಪರಿಶೀಲಿಸಿ ತಿಳಿಯುವದಕ್ಕೆ ಬೇಕಾದ ಕಾಲ ದೊರೆಯದಹಾಗೆ ತ್ವರೆಯು, ಸೋಢುಂ - ಸಹಿಸುವದಕ್ಕೆ ಎಂದರೆ ತಡೆಯುವದಕ್ಕೆ, ಶಕ್ನೋತಿ-ಸಮರ್ಥನಾಗುತ್ತಾನೋ, ಸಃ ಯುಕ್ತಃ- ಅವನೀಗ ಆತ್ಮಧ್ಯಾನಪರನಾದ ಕರ್ಮಯೋಗಿ ಎನಿಸುವದಕ್ಕೆ ಅರ್ಹನು, ಸಃ ಸುಖೀ - ಅವನೀಗ ಆತ್ಮ ಸಾಕ್ಷಾತ್ಕಾರರೂಪ ನಿರತಿಶಯ ಸುಖವನ್ನು ಹೊಂದುವವನು, ಮತ್ತು ನರಃ - ರೀಙ್ ಕ್ಷಯೇ ಎಂಬ ಧಾತುವಿನಿಂದ, ನರಃ ಎಂದರೆ, ಉತ್ತರೋತ್ತರ ಭಕ್ತಿಯೋಗದ್ವಾರಾ ಕ್ಷರಣರೂಪ ನಾಶದಿಂದ ರಹಿತನಾಗುವನು. ಜರಾ ಮರಣಾದಿಗಳಿಲ್ಲದವನಾಗುವನು ಎಂಬ ತಾತ್ಪರ್ಯವು. ನರಃ ಎಂಬುದಕ್ಕೆ ಹೀಗೆಯೇ ತಾತ್ಪರ್ಯವಿಟ್ಟು ಪ್ರಯೋಗಿಸಿರಬಹುದು. ಏಕೆಂದರೆ, ಸಃ ಯುಕ್ತಃ ಸುಖೀ ಇತ್ಯಾದಿಗಳಿಂದ ಮನುಷ್ಯನೆಂಬುದು ವ್ಯಕ್ತವಾಗಿರುವಾಗ ನರಃ ಎಂದರೆ, ಮನುಷ್ಯನೆಂಬರ್ಥವಾದರೆ ಸ್ವಾರಸ್ಯವೂ ಇಲ್ಲವಾಗಿ ಅನಾವಶ್ಯಕವಾದ ಪದವಾಗುತ್ತದೆ. ಸಃ ಸುಖೀ ನರಶ್ಚ ಎಂಬ ಭಾವವು. ಅಥವಾ ನರಮತೆ ಇತಿ ನರಃ ಎಂಬ ವ್ಯುತ್ಪತ್ತಿಯ ಮೂಲಕ ಐಹಿಕ ಭೋಗಗಳಲ್ಲಿ ರಮಿಸದ ವೈರಾಗ್ಯಶಿಖಾಮಣಿಯೆಂದಾಗಬಹುದು. ಇಲ್ಲಿ ಇಹೈವ ಎಂಬುದಕ್ಕೆ ಈ ಲೋಕದಲ್ಲೇ-ಈ ಮಾನುಷ ಜನ್ಮದಲ್ಲೇ ಹೀಗೆಲ್ಲಾ ಅರ್ಥಮಾಡಿರುತ್ತಾರೆ. ಬ್ರಹ್ಮಸೂತ್ರದಲ್ಲಿ ದೇವತೆಗಳಿಗೂ ಕೂಡ ಉಪಾಸನಾದಿ ಅಧಿಕಾರ ಉಂಟೆಂದು ವ್ಯಕ್ತವಾಗಿ ಹೇಳಿರುವದರಿಂದ, ಅವರಿಗೂ

ಮೂ॰ ಯೋಽನ್ತಸ್ಸುಖೋಽನ್ತರಾರಾಮಸ್ತಥಾನ್ತರ್ಜ್ಯೋತಿರೇವ ಯಃ ।
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪.

ಆತ್ಮನ ನೈಜಸ್ವರೂಪ ಪ್ರಾಪ್ತಿದ್ವಾರಾ ಆತ್ಮಾನುಭವ ಸುಖಪ್ರಾಪ್ತಿಯುಂಟಾಗುವದು, ಇತರರು ಭಾವಿಸುವಹಾಗೆ ಇಲ್ಲಿಯೇ ಅಲ್ಲವೆಂದೂ, ಜೀವಿಸಿಕೊಂಡಿರುವಾಗಲೇ ಅಂತಹ ಅನುಭವವು ಇಲ್ಲವೆಂದು ತಿಳಿಸುವದಕ್ಕಾಗಿ, ಶರೀರವಿಮೋಕ್ಷಣೋತ್ತರಕಾಲಂ ಎಂಬ ಪ್ರಯೋಗವು. ಆದುದರಿಂದ ಮೂಲದಲ್ಲಿ ಸ ಸುಖೀ ಎಂಬಲ್ಲಿ ಹೇಳಿರುವ ಸುಖವು, ಪ್ರಾಕೃತವಾದುದಲ್ಲವು, ಹಿಂದೆ "ಸುಖ ಮಕ್ಷಯ ಮಶ್ನುತೇ" (೨೧ನೆಯ ಶ್ಲೋಕ) ಎಂಬಲ್ಲಿ ಹೇಳಲ್ಪಟ್ಟ ನಿರತಿಶಯ ಸುಖವೇ ಹೇಳಲ್ಪಟ್ಟಿತೆಂದು ಭಾವಿಸಿ, ಆತ್ಮಾನುಭವೈಕಸುಖಃ ಎಂಬ ಪ್ರಯೋಗವು. ॥೨೩॥

ಮೂಲಕ್ಕೆ ಅರ್ಥವು :—ಹಿಂದೆ ಆತ್ಮಯಾಥಾತ್ಮ್ಯಾನುಸಂಧಾನದಲ್ಲಿರುವ ಕರ್ಮಯೋಗಿಯು, ಐಹಿಕ ಭೋಗಗಳೆಲ್ಲಾ ಅಲ್ಪಾಸ್ಥಿರ ಫಲದಾಯಿಕಗಳೆಂಬುದು ಆತನಿಗೆ ಪ್ರತ್ಯಕ್ಷ ಸಿದ್ಧವಾದುದರಿಂದ, ಬಹು ಸುಲಭವಾಗಿ ಅವುಗಳಲ್ಲಿ ರಮಿಸುವದಿಲ್ಲವೆಂದು ಹೇಳಿ, ಆದರೆ ಅಂತಹ ಆತ್ಮಯಾಥಾತ್ಮ್ಯಾನುಸಂಧಾನದಲ್ಲೇ ಇರುವವನು ದೊರೆಯುವದು ಸಾಮಾನ್ಯವಲ್ಲವು, ಏಕೆಂದರೆ, ಕಾಮಕ್ರೋಧಗಳ ವೇಗವು ಬೆನ್ನಟ್ಟಿ ಬರುವದರಿಂದ, ಅದರ ಹತಿಯಿಂದ ತಪ್ಪಿಸಿಕೊಳ್ಳುವದು ಕಷ್ಟವೆಂದೂ, ಆತನ ಪುರುಷಾಯುಸ್ಸಿನೊಳಗೇನೆ ಅವುಗಳ ವೇಗವನ್ನು ಯಾವಾಗ ತಡೆದು ಬಿಟ್ಟನೋ, ಆತನೇ ಧನ್ಯನು, ಆತನಿಗೆ ಆತ್ಮಸಾಕ್ಷಾತ್ಕಾರರೂಪ ನಿರತಿಶಯ ಸುಖವು ಉಂಟಾಗುತ್ತದೆಂದೂ ಸ ಸುಖೀ ಸ ನರಃ ಎಂದು ಹೇಳಲ್ಪಟ್ಟಿತು. ಆ ಆತ್ಮಸಾಕ್ಷಾತ್ಕಾರದಲ್ಲಿ ದೊರೆಯುವ ಸುಖಪ್ರಕಾರವೆಂಥಾದ್ದು? ಈತನು ಹೇಗೆ ಸುಖೀ? ಎಂಬುದು ಇಲ್ಲಿ ಉಪಪಾದಿಸಲ್ಪಡುತ್ತದೆ. ಯಃ - ಯಾವ ಕರ್ಮಯೋಗಿಯು, ಅನ್ತಸ್ಸುಖ ಏವ-ಏವ ಎಂಬವಧಾರಣವನ್ನು ಪ್ರತಿಯೊಂದು ವಿಶೇಷಣಕ್ಕೂ ಅನ್ವಯಿಸಿಕೊಳ್ಳತಕ್ಕದ್ದು ; ಬಾಹ್ಯ ಸುಖಗಳನ್ನೆಲ್ಲಾ ತ್ಯಜಿಸಿ ಆತ್ಮಾನುಭವದ ಸುಖವನ್ನು ಮಾತ್ರ ಉಳ್ಳವನಾಗಿ ಎಂದರೆ, ತನಗೆ ಭೋಗ್ಯವಸ್ತುವು ತನ್ನ ಆತ್ಮವಸ್ತು ಒಂದೇ ಎಂದು ಭಾವಿಸುವವನಾಗಿ, ಅನ್ತರಾರಾಮ ಏವ ಬಾಹ್ಯ ಉದ್ಯಾನಾದಿ ಕ್ರೀಡಾ ಸ್ಥಾನಗಳು ಯಾವುವೂ ಬೇಕಿಲ್ಲದೆ ಆತ್ಮವಸ್ತು ಒಂದೇ ತನಗೆ ಕ್ರೀಡಾಸ್ಥಾನವೆಂದು ಭಾವಿಸುವವನಾಗಿ, ಯಾವ ಕರ್ಮಯೋಗಿಗೆ ಭೋಗ್ಯವಸ್ತುವೂ, ಭೋಗಸ್ಥಾನವೂ ಸಹ ಎಲ್ಲಾ ಆತ್ಮವೋ ಎಂಬರ್ಥವು. ಯಃ - ಯಾವ ಕರ್ಮಯೋಗಿಗೆ, ಅನ್ತರ್ಜ್ಯೋತಿರೇವ - ತನ್ನ ಆತ್ಮಾ ಒಂದೇ ಎಲ್ಲಾದಕ್ಕೂ ತನ್ನ ಧರ್ಮಭೂತ ಜ್ಞಾನದ ಮೂಲಕ ಪ್ರಕಾಶಕವೋ. ಅಥವಾ ತನ್ನ ಆತ್ಮನಿಗೆ ಬೇರೆ ಪ್ರಕಾಶಕದ ಅಪೇಕ್ಷೆಯಿಲ್ಲದೆ ಸ್ವಸ್ಮೈಭಾಸಮಾನವಾಗಿ, ಅಹಂ ಅಹಂ ಎಂದು ಸ್ವಪ್ರಕಾಶವೋ, ಅಥವಾ ತನ್ನ ಆತ್ಮಾ ಒಂದರಲ್ಲೇ ಸದಾ ತನಗೆ ಜ್ಞಾನವೋ, ಇದರಿಂದ ಆತನಿಗೆ ಸರ್ವಭೋಗೋಪಕರಣವೂ ಆತ್ಮನೇ ಎಂದು ಹೇಳಲ್ಪಟ್ಟಿತು. ಸಃ - ಅಂತವನೀಗ, ಯೋಗೀ - ತನ್ನ ಆತ್ಮಾನುಭವವನ್ನು ಹೊಂದಲು ಯೋಗ್ಯನಾದ ಕರ್ಮಯೋಗಿಯು, ಬ್ರಹ್ಮಭೂತಃ - ಆತನೀಗ ಹಿಂದೆ ದೇವ ಮನುಷ್ಯಾದಿ ಶರೀರ ಭಾವದಿಂದ ದೇಹಭೂತನಾಗಿದ್ದವನು, ಈಗ ತಾನು ವಿಲಕ್ಷಣನಾಗಿ ಜ್ಞಾನಾದಿ ಸ್ವರೂಪದಿಂದಿರುವೆನೆಂಬ ಯಥಾರ್ಥಜ್ಞಾನ ಉಂಟಾದುದರಿಂದ ಈಗ ಬ್ರಹ್ಮಭೂತನು ಆತ್ಮಭೂತನು ಎಂಬ ಜ್ಞಾನ ಉಳ್ಳವನಾಗಿ, ಬ್ರಹ್ಮನಿರ್ವಾಣಂ - ಆತ್ಮ ಸಾಕ್ಷಾತ್ಕಾರದಿಂದುಂಟಾಗುವ ನಿರತಿಶಯ ಸುಖವನ್ನು, ಅಧಿಗಚ್ಛತಿ- ಹೊಂದುವನು. ಕಾಮಕ್ರೋಧಗಳನ್ನೆಲ್ಲಾ ತ್ಯಜಿಸಿದ ಕರ್ಮಯೋಗಿಯು ಎಂತಹ ಸುಖವನ್ನು ಹೊಂದುವನು; ಎಂದರೆ ಆತನಿಗೆ ಭೋಗ್ಯವಸ್ತುವೂ ಆತ್ಮನೇ ವಿನಾ ಹೊರಗಿನ ಭೋಗ್ಯವಸ್ತು

ಭಾ. ಯೋ ಬಾಹ್ಯವಿಷಯಾನುಭವಂ ಸರ್ವಂ ವಿಹಾಯ ಅನ್ತಸ್ಸುಖಃ - ಆತ್ಮಾನುಭವೈಕ ಸುಖಃ, ಅನ್ತರಾರಾಮಃ-ಆತ್ಮೈಕೋದ್ಯಾನಃ, ಸ್ವಗುಣೈರಾತ್ಮೈವ ಸುಖ ವರ್ಧಕೋ ಯಸ್ಯ ಸಃ ತಥೋಕ್ತಃ, ತಥಾನ್ತರ್ಜ್ಯೋತಿಃ - ಆತ್ಮೈಕ ಜ್ಞಾನೋ, ಯೋವರ್ತತೇ ಸಬ್ರಹ್ಮಭೂತೋ ಯೋಗೀ ಬ್ರಹ್ಮ ನಿರ್ವಾಣಂ- ಆತ್ಮಾನುಭವಸುಖಂ, ಪ್ರಾಪ್ನೋತಿ॥೨೪॥

ಗಳಲ್ಲವು. ಆತನಿಗೆ ಎಲ್ಲಾಭೋಗಸ್ಥಾನವೂ ಆತ್ಮನೇವಿನಾ ಹೊರಗಿನ ಉದ್ಯಾನಾದಿಗಳಲ್ಲವು. ಆತನಿಗೆ ಎಲ್ಲಾ ಭೋಗೋಪಕರಣಗಳೂ ಆತ್ಮನೇ ವಿನಾ, ಹೊರಗಿನ ಭೋಗೋಪಕರಣಗಳಲ್ಲವು. ಅಂತವನೀಗ ಈ ಜನ್ಮದಲ್ಲೇ ಆತ್ಮಸಾಕ್ಷಾತ್ಕಾರವನ್ನು ಹೊಂದಿ, ನಿರತಿಶಯಸುಖೀ ಎಂದೆನಿಸುವನು; ಮುಂದೆ ಭಕ್ತಿಯೋಗಕ್ಕೂ ಅರ್ಹನೆನಿಸುವನು ಎಂಬ ಭಾವವು.

ಭಾಷ್ಯಾರ್ಥವು :—ಪ್ರಾಕೃತ ಭೋಗ್ಯವಸ್ತು, ಭೋಗಸ್ಥಾನ ಭೋಗೋಪಕರಣಗಳನ್ನೆಲ್ಲಾ ಪರಿತ್ಯಾಗಮಾಡಿ, ಇವೆಲ್ಲವನ್ನೂ ಆತ್ಮಾನುಸಂಧಾನದಲ್ಲೇ ಕಾಣುವ ಕರ್ಮಯೋಗಿಯು ಸಾಧನಾವಸ್ಥೆಯಲ್ಲಿರುವಾಗ ಹೇಗಿರುವನೆಂಬುದನ್ನು ಹೇಳುವರಾಗಿ, ಹಿಂದೆ "ವಿಂದತ್ಯಾತ್ಮನಿಯತ್ಸುಖಂ" ಎಂಬಲ್ಲಿ ಹೇಳಲ್ಪಟ್ಟ ಅಭಿಪ್ರಾಯವನ್ನೇ ಇಲ್ಲಿ ಉಪಪಾದಿಸಿ ಹೇಳುತ್ತಾರೆ. ಯಃ-ಯಾವ ಕರ್ಮಯೋಗಿಯು, ಬಾಹ್ಯವಿಷಯಾನುಭವಂ ವಿಹಾಯ-ಹೊರಗಿನ ವಿಷಯಾನುಭವಗಳನ್ನೆಲ್ಲಾ ಬಿಟ್ಟು, ಅನ್ತಸ್ಸುಖಃ ಎಂದರೆ, ಇಲ್ಲಿ ಅನ್ತಃ ಎಂದರೆ ಒಳಗಿರುವ ಆತ್ಮಾ, ಅಂತಹ ಆತ್ಮನೇ ಸುಖವು, ಯಾರಿಗೋ, ಅಥವಾ ಅಂತಹ ಆತ್ಮನಲ್ಲಿ ಸುಖವು ಯಾರಿಗೋ ಎಂಬರ್ಥವಾಗುವದರಿಂದ ಆತ್ಮಾನುಭವೈಕಸುಖಃ ಎಂಬ ವ್ಯಾಖ್ಯಾನವು. ಆತ್ಮಾನುಭವೈಕ ಸುಖಃ - ಆತ್ಮಾನುಭವ ಒಂದನ್ನೇ ಸುಖವಾಗಿ ಉಳ್ಳವನಾಗಿ, ಇಲ್ಲಿನ ಏಕಶಬ್ದವು ಅವಧಾರಣವಾದ ಏವ ಎಂಬುದರ ಅರ್ಥವು; ಅದನ್ನು ವಿಶೇಷಣಗಳಿಗೆಲ್ಲಾ ಸೇರಿಸತಕ್ಕದ್ದೆಂಬುದನ್ನು ಸೂಚಿಸುತ್ತದೆ. ಅನ್ತರಾರಾಮಃ ಎಂದರೆ, ಆತ್ಮೈಕೋದ್ಯಾನಃ- ಆತ್ಮಾ ಒಂದನ್ನೇ ಭೋಗಸ್ಥಾನವಾದ ಉದ್ಯಾನವಾಗಿ ಉಳ್ಳವನಾಗಿ, ಬಾಹ್ಯ ವಿಹಾರ ಸ್ಥಾನಗಳು ಅನೇಕ ಉಂಟು, ಅವುಗಳನ್ನೆಲ್ಲಾ ತ್ಯಜಿಸಿ ಆತ್ಮಾವಿನಲ್ಲೇ ವಿಹರಿಸುವವನಾಗಿ ಎಂಬರ್ಥವು, ಇದನ್ನೇ ಮುಂದೆ ವಿವರಿಸುತ್ತಾರೆ; ಸ್ವಗುಣೈರಾತ್ಮೈವ ಸುಖವರ್ಧಕೋ ಯಸ್ಯ ಸಃ-ತನ್ನ ನೈಜ ಗುಣಗಳಿಂದಲೇ ಎಂದರೆ ಅವುಗಳ ಅನುಸಂಧಾನದಿಂದ ತನಗೆತಾನೇ ಸುಖವನ್ನು ಅಭಿವೃದ್ಧಿಮಾಡಿಕೊಳ್ಳುವವನು ಯಾವನೋ ಅವನು, ತಥೋಕ್ತಃ ಹಾಗೆ ಹೇಳಲ್ಪಟ್ಟವನು. ಉದ್ಯಾನವು ಹೇಗೆ ತನ್ನ ವಿಶೇಷಣಗಳಾಗಿ ತನ್ನಲ್ಲಿರುವ ನೀರು, ನೆರಳು, ಚಿಗುರು, ಕಾಯಿ, ಹಣ್ಣುಗಳುಳ್ಳದ್ದಾಗಿ ಆನಂದಕರವೋ, ಹಾಗೆಯೇ ಈ ಆತ್ಮನೂ ತನ್ನಲ್ಲಿರುವ ಅಪಹತಪಾಪ್ಮತ್ವಾದಿ ಗುಣಾಷ್ಟಕಗಳಿಂದ ಶೋಭಿಸುವನು; ಆತ್ಮಸ್ವರೂಪವಿಷಯಕವಾದವೇನು ಗ್ರಂಥ ರಚನೆ ಯೇನುಂಟವುಗಳಿಂದ ಆನಂದವನ್ನು ಹೊಂದಬಹುದೆಂಬಭಾವವು. ತಥಾನ್ತರ್ಜ್ಯೋತಿಃ ಎಂದರೆ ಹಾಗೆಯೇ ಆತ್ಮೈಕ ಜ್ಞಾನಃ-ಬಾಹ್ಯಜ್ಞಾನವಿಲ್ಲದೆ ಆತ್ಮಾ ಒಂದರ ಜ್ಞಾನವನ್ನೇ ಉಳ್ಳವನಾಗಿ, ಅಥವಾ ಆತ್ಮಾ ಒಂದೇ ಸದಾ ಪ್ರಕಾಶಿಸುವದಾಗಿ, ಅಥವಾ ತನ್ನ ಆತ್ಮಾ ಸ್ವಯಂಪ್ರಕಾಶವು ಎಂಬ ಜ್ಞಾನವುಳ್ಳವನಾಗಿ, ಬಾಹ್ಯವಿಷಯಗಳ ಪ್ರಕಾಶಕ್ಕೆ ಬೇರೆಯಾದ ಜ್ಯೋತಿಸ್ಸು ಬೇಕು, ಸೂರ್ಯನಬೆಳಕಾಗಲಿ ದೀಪದ ಬೆಳಕಾಗಲಿ ಅವಶ್ಯಕವು, ಆತ್ಮಾನುಸಂಧಾನಕ್ಕೆ ಪ್ರಕಾಶವು ಅದರಲ್ಲೇ ಉಂಟೇ ವಿನಾ ಹೊರಗಿನ ಜ್ಯೋತಿಸ್ಸು ಕಾರ್ಯಕಾರಿಯಲ್ಲವು; ಆತ್ಮನನ್ನು ತಿಳಿಯಬೇಕಾದರೆ ಅಹಂ ಅಹಂ ಎಂಬದಾಗಿ ತೋರಿಬರುವದರಿಂದ ಈ ಕರ್ಮಯೋಗಿಯು ಅಂತರ್ಜ್ಯೋತಿಯು ಎಂದು ಹೇಳಲ್ಪಟ್ಟಿತು, ಹೀಗೆಲ್ಲಾ, ಯೋವರ್ತತೇ-ಯಾವ ಕರ್ಮಯೋಗಿಯು ವರ್ತಿಸುತ್ತಾನೋ, ಬ್ರಹ್ಮ

ಮೂ. ಲಭನ್ತೇ ಬ್ರಹ್ಮನಿರ್ವಾಣ ಮೃಷಯಃ ಕ್ಷೀಣಕಲ್ಮಷಾಃ ।
ಛಿನ್ನದ್ವೈಧಾ ಯತಾತ್ಮಾನಸ್ಸರ್ವಭೂತ ಹಿತೇ ರತಾಃ ॥ ೨೫.

ಭೂತಃ – ಇದುವರೆಗೂ ಅನುಸರಿಸಿಬಂದ ದೇಹಾತ್ಮಭ್ರಮವು ಕಳೆದುಹೋಗಿ ತಾನು ಅಪಹತ ಪಾಪ್ಮತ್ವಾದಿ ಗುಣಗಳಿಂದ ಶೋಭಿಸುವ ಮಹಾ ಪರಿಶುದ್ಧನಾದ ಆತ್ಮನೆಂಬ ಭಾವವುಳ್ಳವನಾದ, ಯೋಗೀ - ಕರ್ಮಯೋಗಿಯು, ಬ್ರಹ್ಮ ನಿರ್ವಾಣಂ ಎಂದರೆ ಇಲ್ಲಿ ಬ್ರಹ್ಮವೆಂದರೆ, ಪ್ರಕೃತಿ ವಿಮುಕ್ತನಾದ ಪರಿಶುದ್ಧನಾದ ಆತ್ಮನು, ಆದುದರಿಂದ ಬ್ರಹ್ಮನಿರ್ವಾಣಂ ಎಂಬುದಕ್ಕೆ ಬ್ರಹ್ಮವೆಂದರೆ, ಅಂತಹ ಆತ್ಮವೇ ನಿರ್ವಾಣಂ ಸುಖವೆಂದಾಗಲಿ ಅಥವಾ ಅಂತಹ ಆತ್ಮನಲ್ಲಿ ಸುಖದಿಂದಾಗಲಿ ಅರ್ಥಮಾಡಬಹುದಾದುದರಿಂದ, ಆತ್ಮಾನುಭವ ಸುಖಂ ಎಂದು ವ್ಯಾಖ್ಯಾನವು, ಆದುದರಿಂದ ಆತ್ಮಾನುಭವ ಸುಖವನ್ನು, ಪ್ರಾಪ್ನೋತಿ - ಹೊಂದುವನು, ಕಾಮಕ್ರೋಧಗಳನ್ನು ಜಯಿಸಿದ ಕರ್ಮಯೋಗಿಗೆ ಭೋಗ್ಯವಸ್ತುವೂ ಭೋಗಸ್ಥಾನವೂ ಭೋಗೋಪಕರಣಗಳೂ ಯಾವ ಬಾಹ್ಯ ವಸ್ತುಗಳಾಗುವದಿಲ್ಲವು. ಇವೆಲ್ಲವೂ ಆತನಿಗೆ ಆತ್ಮನೇ ವಿನಾ ಬೇರೆಯಲ್ಲವು. ಇಂತಹವನೀಗ ಸುಖಿಯು ಎಂದು ಹೇಳಲ್ಪಟ್ಟಿತು. ಬ್ರಹ್ಮನಿರ್ವಾಣವೆನಿಸುವ ಆತ್ಮಾನುಭವರೂಪವಾದ ನಿರತಿಶಯ ಸುಖವನ್ನು ಹೊಂದುವನೆಂಬ ತಾತ್ಪರ್ಯವು. ಈ ಬ್ರಹ್ಮನಿರ್ವಾಣ ಶಬ್ದವು ಎರಡನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲೂ, ಈ ಶ್ಲೋಕದ ಮುಂದಿನಶ್ಲೋಕಗಳಲ್ಲೂ ಪ್ರಯೋಗಿಸಲ್ಪಟ್ಟಿರುತ್ತದೆ. ಅಲ್ಲೆಲ್ಲಾ ಆತ್ಮಾನುಭವವೆಂದೇ ಅರ್ಥಮಾಡಿರುತ್ತಾರೆ. ಇಲ್ಲಿ ನಿರ್ವಾಣ ಶಬ್ದಕ್ಕೆ ಇತರರು ಶಾನ್ತಿ ಎಂಬರ್ಥವನ್ನು ಹೇಳಿರುತ್ತಾರೆ. ಆತ್ಮಾನುಭವಸುಖವೇ ಪ್ರಕರಣವಾದುದರಿಂದ, ಆ ಅರ್ಥವು ಸರಿಹೋಗುವದಿಲ್ಲವು. ಬ್ರಹ್ಮನಿರ್ವಾಣಂ ಎಂಬುವಕ್ಕೆ ಮೋಕ್ಷವೆಂದೂ ಅರ್ಥಮಾಡಿರುತ್ತಾರೆ. ಹಾಗೆ ಅರ್ಥಮಾಡಿದರೆ ಕರ್ಮಯೋಗಿಗೇನೇ ಸಾಕ್ಷಾತ್ತಾಗಿ ಮೋಕ್ಷಪ್ರಾಪ್ತಿಯುಂಟೆಂಬ ತಪ್ಪಾದ ಅಭಿಪ್ರಾಯವುಂಟಾಗುತ್ತದೆ. ಮುಂದೆ "ನಾಹಂ ವೇದೈರ್ನತಪಸಾ" (ಗೀ. ೧೧) ಇತ್ಯಾದಿ ಪ್ರಮಾಣಗಳಿಗೂ ಶ್ರುತಿ ಸೂತ್ರಾಭಿಪ್ರಾಯಗಳಿಗೂವಿರುದ್ಧವಾಗುತ್ತದೆ,

ಮೂಲಕ್ಕೆ ಅರ್ಥವು:—ಹೀಗೆ ಅಂತಸ್ಸುಖನಾಗಿ ಅಂತರಾರಾಮನಾಗಿ, ಅಂತರ್ಜ್ಯೋತಿಯಾಗಿ ಬ್ರಹ್ಮಭೂತನಾಗಿದ್ದುಕೊಂಡು ಆತ್ಮಸಾಕ್ಷಾತ್ಕಾರವನ್ನು ಹೊಂದುವದು, ಕಷ್ಟವಾಗಿತೋರುತ್ತದಲ್ಲಾ, ಶೀಘ್ರವಾಗಿಯೂ ಸುಕರವಾಗಿಯೂ ಹೊಂದಬಹುದೆಂದು ಹಿಂದೆ ಹೇಳಲ್ಪಟ್ಟಿತಲ್ಲಾ, ಹಾಗೆ ಶೈಘ್ರ್ಯವೂ ಸುಕರತ್ವವೂ ಇದ್ದ ಪಕ್ಷದಲ್ಲಿ ಬಹುಜನಗಳು ಹಾಗೆ ಬ್ರಹ್ಮ ನಿರ್ವಾಣವನ್ನು ಹೊಂದುವರೋ ಎಂಬಾಶಙ್ಕೆಗೆ ಅನೇಕರಾದ ಆತ್ಮಾವಲೋಕನ ಪರರಾದವರು, ಅವರಲ್ಲಿ ಸಮದೃಷ್ಟಿತ್ವವಿರುವದರಿಂದ, ಸರ್ವ ಚೇತನರಿಗೂ ಅನುಕೂಲರಾಗಿ ಪ್ರತಿಕೂಲರಾಗದೆ, ಬ್ರಹ್ಮನಿರ್ವಾಣವನ್ನು ಹೊಂದುವರೆಂದು ಹೇಳುತ್ತಾರೆ. ಛಿನ್ನದ್ವೈಧಾಃ - ಕತ್ತರಿಸಲ್ಪಟ್ಟ ಶೀತೋಷ್ಣ ಸುಖ ದುಃಖ ಮೊದಲಾದ ದ್ವಂದ್ವಭಾವವುಳ್ಳವರಾಗಿಯೂ, ಯತಾತ್ಮಾನಃ-"ಮನೋಯಚ್ಛ" ಎಂದು ಹೇಳಿರುವಹಾಗೆ ನಿಯಮಿಸಲ್ಪಟ್ಟ ಮನಸ್ಸುಳ್ಳವರಾಗಿಯೂ ಎಂದರೆ ಬಾಹ್ಯವಸ್ತುಗಳಲ್ಲಿ ಮನಸ್ಸನ್ನು ಬಿಡದೆ ಆತ್ಮಾವಿನಲ್ಲೇ ನಿಯಮಿಸಲ್ಪಟ್ಟ ಮನಸ್ಸುಳ್ಳವರಾಗಿ ಎಂಬರ್ಥವು, ಸರ್ವಭೂತ ಹಿತೇರತಾಃ - ತನ್ನ ಆತ್ಮಾವೂ ಇತರರ ಆತ್ಮರುಗಳೂ ಸಮರಾದುದರಿಂದ ಸಮಸ್ತ ಚೇತನರಿಗೂ ಹಿತಮಾಡುವವದರಲ್ಲೇ ನಿರತರಾಗಿಯೂ ಇರುವ, ಋಷಯಃ - ಆತ್ಮಸಾಕ್ಷಾತ್ಕಾರ ಪರರಾದುದರಿಂದ ಋಷಿಗಳೆನ್ನಿಸಿಕೊಳ್ಳುವ ಕರ್ಮಯೋಗಿಗಳು, ಕ್ಷೀಣ ಕಲ್ಮಷಾಃ - ಆತ್ಮಾವಲೋಕನಕ್ಕೆ ವಿರೋಧವಾದ ಪಾಪಗಳನ್ನು ಕಳೆದುಕೊಂಡವರಾಗಿ, ಬ್ರಹ್ಮನಿರ್ವಾಣಂ - ಆತ್ಮಾನುಭವ ಸುಖರೂಪಾನಂದವನ್ನು, ಲಭನ್ತೇ - ಹೊಂದುವರು. ಹೀಗೆ ಬ್ರಹ್ಮಾನುಭವವನ್ನು ಹೊಂದುವದು

ಭಾ. ಛಿನ್ನದ್ವೈಧಾಃ - ಶೀತೋಷ್ಣಾದಿ ದ್ವಂದ್ವೈರ್ವಿಮುಕ್ತಾಃ, ಯತಾತ್ಮನಃ-ಆತ್ಮನ್ಯೇವ ನಿಯಮಿತ ಮನಸಃ, ಸರ್ವಭೂತಹಿತೇ ರತಾಃ - ಆತ್ಮವತ್ಸರ್ವೇಷಾಂ ಭೂತಾನಾಂ ಹಿತೇಷ್ವೇವ ನಿರತಾಃ, ಋಷಯಃ - ದ್ರಷ್ಟಾರಃ, ಆತ್ಮಾವಲೋಕನಪರಾಃ, ಯ ಏವಂ ಭೂತಾ ಸ್ತೇ ಕ್ಷೀಣಾಶೇಷಾತ್ಮಪ್ರಾಪ್ತಿ ವಿರೋಧಿಕಲ್ಮಷಾಃ ಬ್ರಹ್ಮನಿರ್ವಾಣಂ ಲಭನ್ತೇ ||೨೫||

---

ಕಷ್ಟವಲ್ಲವು, ಸುಕರವು, ಅನೇಕ ಆತ್ಮಾವಲೋಕನ ನಿರತರು ಅಂತಹ ಆನಂದವನ್ನು ಹೊಂದು ರುತ್ತಾರೆ ಎಂಬ ಭಾವವು. ||೨೫||

ಭಾಷ್ಯಾರ್ಥವು :—ಹಿಂದೆ ಸಮದರ್ಶಿತ್ವರೂಪಜ್ಞಾನದ ವಿಪಾಕದೆಶೆಯುಂಟಾಗುವ ಪ್ರಕಾರವು ನಪ್ರಹೃಷ್ಯೇತ್ ಎಂದು ಹಿಂದೆ ೨೦ನೆಯ ಶ್ಲೋಕದಿಂದಾರಂಭಿಸಿ ಐದು ಶ್ಲೋಕಗಳಿಂದ ಹೇಳಲ್ಪಟ್ಟಿತು. ಪ್ರಿಯಾಪ್ರಿಯಗಳಲ್ಲಿ ಹರ್ಷ ಶೋಕಗಳ ತ್ಯಾಗವೂ, ಬಾಹ್ಯ ಸ್ಪರ್ಶಗಳಲ್ಲಿ ಅಸಕ್ತತೆಯೂ, ಭೋಗಗಳಲ್ಲಿ ದೋಷ ದರ್ಶನವೂ, ಕಾಮಕ್ರೋಧಗಳ ವೇಗನಿರೋಧವೂ, ಆತ್ಮನಲ್ಲೇ ಸರ್ವವಿಧ ಭೋಗ್ಯಭಾವವೂ, ಕ್ರಮವಾಗಿ ಹೇಳಲ್ಪಟ್ಟವು. ಈಗ ಈ ಶ್ಲೋಕದಲ್ಲಿ ಹಿಂದೆಹೇಳಿದ್ದುದೇ ಅನುವಾದ ಮಾಡಲ್ಪಟ್ಟ ಅಂತಹ ಬ್ರಹ್ಮನಿರ್ವಾಣವನ್ನು ಆತ್ಮದ್ರಷ್ಟೃಗಳಾದವರು ಹೊಂದುತ್ತಾರೆ ಎಂದು ಹೇಳುತ್ತಾರೆ. ಛಿನ್ನದ್ವೈಧಾಃ ಎಂದರೆ ಶೀತೋಷ್ಣಾದಿ ದ್ವಂದ್ವೈರ್ವಿಮುಕ್ತಾಃ - ಶೀತೋಷ್ಣ, ಆದಿಪದದಿಂದ ಸುಖದುಃಖಗಳು ಹೇಳಲ್ಪಟ್ಟವು, ಇವುಗಳಿಂದ ಬಿಡಲ್ಪಟ್ಟವರಾದ, ಯತಾತ್ಮನಃ ಎಂದರೆ ಆತ್ಮನ್ಯೇವ ನಿಯಮಿತ ಮನಸಃ - ಬಾಹ್ಯಸ್ಪರ್ಶಗಳಲ್ಲಿ ಆಸಕ್ತಿ ಬಾರದಹಾಗೆ ಮನಸ್ಸನ್ನು ಆತ್ಮಾವಿನಲ್ಲೇ ನಿಯಮಿಸಿ ಇರುವವರಾದ, ಸರ್ವಭೂತ ಹಿತೇ ರತಾಃ ಎಂದರೆ, ಆತ್ಮವತ್ಸರ್ವೇಷಾಂ ಭೂತಾನಾಂ ಹಿತೇಷ್ವೇವ ನಿರತಾಃ - ತನ್ನ ಹಾಗೆ ಸಮಸ್ತ ಪ್ರಾಣಿಗಳಿಗೂ ಹಿತಮಾಡುವದರಲ್ಲೇ ಆಸಕ್ತರಾದವರಾದ, ಋಷಯಃ ಎಂದರೆ ದ್ರಷ್ಟಾರಃ - ಸಾಕ್ಷಾತ್ಕರಿಸುವವರು, ಈ ಸಂದರ್ಭದಲ್ಲಿ ಆತ್ಮಾವಲೋಕನದಲ್ಲಿ ಆಸಕ್ತರಾದವರು, ಯೇ - ಯಾರು, ಏವಂಭೂತಾಃ - ಹೀಗೆ ಇರುವವರೋ, ತೇ - ಅವರು, ಕ್ಷೀಣಾಶೇಷಾತ್ಮ ಪ್ರಾಪ್ತಿ ವಿರೋಧಿ ಕಲ್ಮಷಾಃ - ಇದು ಕ್ಷೀಣಕಲ್ಮಷಾಃ ಎಂಬುದರ ತಾತ್ಪರ್ಯವು, ನಾಶವಾದ ಆತ್ಮಪ್ರಾಪ್ತಿ ವಿರೋಧಿರೂಪ ಸಮಸ್ತ ಪಾಪಗಳುಳ್ಳವರಾಗಿ, ಬ್ರಹ್ಮನಿರ್ವಾಣಂ - ಆತ್ಮಾನುಭವಸುಖರೂಪಾನಂದವನ್ನು, ಲಭನ್ತೇ - ಹೊಂದುತ್ತಾರೆ. ಇಲ್ಲಿ ಋಷಯಃ ಎಂಬ ಶಬ್ದಕ್ಕೆ ಸನ್ಯಾಸಿಗಳೆಂದು ಕೆಲವರು ಅರ್ಥಮಾಡಿರುತ್ತಾರೆ, ಅನೇಕ ಋಷಿಗಳು ಗೃಹಸ್ಥಾಶ್ರಮವನ್ನೇ ಅವಲಂಬಿಸಿರುವದಕ್ಕೆ ವಸಿಷ್ಠಾದಿಗಳೇ ನಿದರ್ಶನವು. ಪ್ರಕರಣವು ಕರ್ಮಯೋಗಿ ಪ್ರಶಂಸಾಪಾಗಿರುವದರಿಂದ, ಹಾಗೆ ಅರ್ಥಮಾಡಲು ಆಗುವದಿಲ್ಲವು, ಆದುದರಿಂದ ದ್ರಷ್ಟಾರಃ ಎಂದು ವ್ಯುತ್ಪತ್ತಿಯಿಂದುಂಟಾಗುವ ಅರ್ಥವನ್ನು ಪ್ರದರ್ಶಿಸಿ, ಆತ್ಮಾವಲೋಕನಪರಾಃ ಎಂದು ಅರ್ಥ ಮಾಡಿರುತ್ತಾರೆ. ಹಾಗೆಯೇ ಛಿನ್ನದ್ವೈಧಾಃ ಎಂದರೆ ಭೇದ ಸ್ವರೂಪ ನಿಷೇಧಿಸಲ್ಪಟ್ಟಿತೆಂಬ ಭಾವವಲ್ಲವೆಂದು, ಛಿನ್ನ ಸಂಶಯಾಃ ಎಂದು ಅರ್ಥಮಾಡಿರುತ್ತಾರೆ. ಛಿನ್ನದ್ವೈಧಾಃ ಎಂಬುದು ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯಚಾಪ್ರಿಯಂ ಎಂಬುದರ ಸಂಗ್ರಹವಾದುದರಿಂದ ಪ್ರಿಯಾಪ್ರಿಯವಾದ ಶೀತೋಷ್ಣ ಸುಖದುಃಖಾದಿ ದ್ವಂದ್ವಗಳಿಂದ ವಿಮುಕ್ತಾಃ ಎಂದು ಅರ್ಥಮಾಡಿರುತ್ತಾರೆ, ಯತಾತ್ಮಾನಃ ಎಂಬುದು ಮುಂದಿನ ಮೂರು ಶ್ಲೋಕಗಳ ಸಂಗ್ರಹವು; ಮನಸ್ಸಿಗೆ ಸರ್ವೇಂದ್ರಿಯಗಳು ಅಧೀನವಾದುದರಿಂದ ಮನಸ್ಸು ಜಿತವಾದರೆ ಎಲ್ಲಾ ಇಂದ್ರಿಯಗಳು ಜಿತವೆಂಬ ಭಾವನೆಯಿಂದ ಯತಾತ್ಮಾನಃ ಎಂಬುವಕ್ಕೆ ನಿಯಮಿತಮನಸಃ ಎಂಬ

ಭಾ. ಅವ. ಉಕ್ತಲಕ್ಷಣಾನಾಂ ಬ್ರಹ್ಮಾತ್ಯನ್ತ ಸುಲಭಮಿತ್ಯಾಹ—

ವ್ಯಾಖ್ಯಾನವು. ಹಾಗೆ ನಿಯಮಿತವಾದ ಮನಸ್ಸು ಉಚಿತವಾದ ಆತ್ಮಸ್ವರೂಪ ವಿಷಯದಲ್ಲಿ ಸ್ಥಾಪಿಸಲ್ಪಡುತ್ತದೆಂಬ ಅಭಿಪ್ರಾಯದಿಂದ, ಆತ್ಮನ್ಯೇವ ನಿಯಮಿತ ಮನಸಃ ಎಂಬ ವ್ಯಾಖ್ಯಾನವು ಎಂದು ಗ್ರಹಿಸತಕ್ಕದ್ದಾಗಿರುತ್ತದೆ. ಹೀಗಿರುವಾಗ ಇವನ್ನು ಬಿಟ್ಟು ಆಯತಾತ್ಮನಃ ಎಂದು ಪದವನ್ನು ಮಾಡಿರುತ್ತಾರೆ. ಹಾಗೆಯೇ ಬ್ರಹ್ಮನಿರ್ವಾಣಂ ಎಂದು ಒಂದೇ ಪದವಾಗಿ ಅನೇಕ ಕಡೆ ಉಪಯೋಗಿಸಿದ್ದರೂ, ನಿರ್ವಾಣಂ ಬ್ರಹ್ಮ ಎಂದು ವಿಙ್ಗಡಿಸಿ, ನಿರ್ವಾಣ ಶಬ್ದವನ್ನು ಬ್ರಹ್ಮಶಬ್ದಕ್ಕೆ ವಿಶೇಷಣ ಮಾಡಿರುತ್ತಾರೆ. ಈ ಅಭಿಪ್ರಾಯವೆಲ್ಲಾ ಪ್ರಕರಣದಿಂದ ದೂರವಾದವು, ಸರ್ವಭೂತ ಹಿತೇ ರತಾಃ ಎಂಬುದು ೧೮-೧೯ನೆಯ ಶ್ಲೋಕಗಳ ಸಂಗ್ರಹವು. ಕ್ಷೀಣ ಕಲ್ಮಷಾಃ ಎಂಬುದು ೧೭ನೆಯ ಶ್ಲೋಕ ಸಙ್ಗ್ರಹವು. ಇಂತವರು ಋಷಿಗಳೆಂದು ಹೇಳಿಸಿಕೊಳ್ಳುವವರು ಅನೇಕರುಂಟು, ಅವರೆಲ್ಲರೂ ಬ್ರಹ್ಮನಿರ್ವಾಣವನ್ನು ಹೊಂದುವರೆಂದು ಹೇಳಲ್ಪಟ್ಟಿತು. ಈ ಋಷಿಗಳು ಸರ್ವಭೂತ ಹಿತೇ ರತಾಃ ಎಂದು ಹೇಳಲ್ಪಟ್ಟರು. ಹೀಗೆ ತನ್ನ ಹಾಗೆ ಇತರರನ್ನೂ ನೋಡತಕ್ಕದ್ದೇ ಪರಮಧರ್ಮರಹಸ್ಯವೆಂದು ಪಂಚಮವೇದವನ್ನು ಬರೆದ ಪರಮ ಮಹರ್ಷಿಯಿಂದ ಹೇಳಲ್ಪಟ್ಟಿರುತ್ತದೆ.—"ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚಾಪ್ಯವಧಾರ್ಯತಾಂ। ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್" ಇದೀಗ ಧರ್ಮದ ಪರಾಕಾಷ್ಠೆಯಾಗಿ ಸಮಸ್ತವು, ಅದನ್ನು ಲಾಲಿಸಿ ಕೇಳಯ್ಯಾ, ಕೇಳಿದನಂತರ ಮನಸ್ಸಿನಲ್ಲಿ ಚನ್ನಾಗಿ ಜ್ಞಾಪಕದಲ್ಲಿಡು, ಏನೆಂದರೆ ನಿನಗೆ ಯಾವುದು ಪ್ರತಿಕೂಲವಾದವೋ ಅದನ್ನು ಮಾತ್ರ ಇತರರ ವಿಷಯದಲ್ಲೂ ಆಚರಿಸಬೇಡ." ಹೀಗೆ ಪ್ರತಿಕೂಲವಲ್ಲದೇ ಇರುವದುಮಾತ್ರವೇ ಅಲ್ಲದೆ ತನಗೆ ಸಾಧ್ಯವಾದಷ್ಟು ಅವರಿಗೆ ಉಪಕಾರವನ್ನೂ ಮಾಡೋಣವೂ ಕೂಡ ಇದ್ದರೆ ಅದು ಸರ್ವಭೂತ ಹಿತತ್ವವೆಂದು ಹೇಳಿಸಿಕೊಳ್ಳುತ್ತದೆ. ಪರೋಪಕಾರವು ಸರ್ವೇಶ್ವರನಿಗೆ ಪರಮಹಿತವು. ಆದುದರಿಂದ ತಾನು ತುಂಬಾ ಪ್ರೀತನಾಗುವನೆಂದು "ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ" ಎಂಬ ಮಹರ್ಷಿಯ ವಾಕ್ಯದಲ್ಲಿ ಪರಮ ಪುರುಷನಿಗೆ ಮಾಡುವ ಉಪಕಾರಮಾತ್ರವೇ ಉಪಕಾರವಲ್ಲವು; ತದೀಯರಿಗೂ ಮುಖ್ಯವಾಗಿ ಮಾಡುವ ಉಪಕಾರವೂ ಪರಮ ಪುರುಷನು ತನಗಾಗಿ ಮಾಡಲ್ಪಟ್ಟಿತೆಂದೇ ಭಾವಿಸುವನೆಂಬ ಭಾವವು. ತನಗೆ ಏನನ್ನು ಮಾಡಿದರೆ ಹಿತವಾಗುತ್ತದೋ, ಅಂಥಾದ್ದನ್ನೇ ಇತರ ಪ್ರಾಣಿಗಳಿಗೂ ಮಾಡತಕ್ಕದ್ದು. ಇದರಿಂದ ಸರ್ವೇಶ್ವರನು ಪ್ರೀತನಾಗುವನು ಎಂಬ ಭಾವವು. ಅಂತವರಿಗೆ ಆತನ ಅನುಗ್ರಹದಿಂದ ಪರಿಶುದ್ಧಾತ್ಮ ಸ್ವರೂಪ ಪ್ರಾಪ್ತಿಯುಂಟಾಗುತ್ತದೆಂಬ ಭಾವವು. ಬ್ರಹ್ಮ ಶಬ್ದವು ಈ ಗ್ರಂಥದಲ್ಲಿ ಇತರ ಅರ್ಥಗಳಾದ ಪ್ರಕೃತಿ, ವೇದ, ಪರಬ್ರಹ್ಮವೆಂಬ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿದ್ದರೂ, ಅನೇಕ ಕಡೆಗಳಲ್ಲಿ ಪ್ರಕೃತಿ ವಿಯುಕ್ತನಾದ ಜೀವಾತ್ಮನನ್ನೇ ಬೋಧಿಸುತ್ತದೆಂಬ ಅಂಶವನ್ನು ಮನಸ್ಸಿನಲ್ಲಿಡತಕ್ಕದ್ದಾಗಿರುತ್ತದೆ.

ಭಾಷ್ಯಾವತಾರಿಕೆಯ ಅರ್ಥವು:—ಉಕ್ತಲಕ್ಷಣಾನಾಂ - ಈಗ ಹಿಂದೆ ಹೇಳಲ್ಪಟ್ಟ ಲಕ್ಷಣಗಳುಳ್ಳ ಕರ್ಮ ಯೋಗಿಗಳಿಗೆ, ಬ್ರಹ್ಮಾತ್ಯನ್ತ ಸುಲಭಂ. ಎಲ್ಲಾ ಆತ್ಮರುಗಳೂ ಸಮವೆಂಬ ಆತ್ಮಸ್ವರೂಪ ಸಾಕ್ಷಾತ್ಕಾರವು, ಅತ್ಯನ್ತ ಸುಲಭವು, ಇತ್ಯಾಹ - ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ. ಆ ಉಕ್ತಲಕ್ಷಣಗಳು ಯಾವುವೆಂದರೆ.—(೧) ೨೦ನೆಯ ಶ್ಲೋಕದಲ್ಲಿ ಹೇಳಿರುವಹಾಗೆ ಪ್ರಿಯಪ್ರಾಪ್ತಿಯಿಂದ ಹಿಗ್ಗದೆ ಅಪ್ರಿಯಪ್ರಾಪ್ತಿಯಿಂದ ಶೋಕಿಸದೇ ಇರೋಣವು. (೨) ಆತ್ಮೈಕ ಚಿಂತಕನಾಗಿ ವಿಷಯಚಿಂತೆ ಇಲ್ಲದಿರೋಣವು ೨೧ನೆಯ ಶ್ಲೋಕವು.

**ಮೂ. ಕಾಮಕ್ರೋಧ ವಿಯುಕ್ತಾನಾಂ ಯತೀನಾಂ ಯತಚೇತಸಾಂ ।**
**ಅಭಿತೋ ಬ್ರಹ್ಮ ನಿರ್ವಾಣಂ ವರ್ತತೇ ವಿಜಿತಾತ್ಮನಾಂ ॥** ೨೬.

**ಭಾ.** ಕಾಮಕ್ರೋಧ ವಿಯುಕ್ತಾನಾಂ, ಯತೀನಾಂ-ಯತನಶೀಲಾನಾಂ, ಯತಚೇತಸಾಂ-(೨೨) ವಿಷಯ ಸುಖಗಳ ಅನುಭವವೆಲ್ಲಾ ದುಃಖಕ್ಕೆ ಕಾರಣವೆಂದು ಭಾವಿಸಿ ಅವುಗಳಲ್ಲಿ ಮಮತೆಯನ್ನು ತ್ಯಾಗಮಾಡೋಣವೂ ೨೨ನೆಯ ಶ್ಲೋಕವು. (೨೩) ಕಾಮಕ್ರೋಧಗಳ ವೇಗವನ್ನು ಅಡಗಿಸೋಣವು. ೨೩ನೆಯ ಶ್ಲೋಕವು. (೨೪) ಪರಿಶುದ್ಧಾತ್ಮ ಸ್ವರೂಪಾನುಭವವೇ ಪರಮಾನಂದವೆಂದು ಭಾವಿಸೋಣವು. ೨೪ನೆಯ ಶ್ಲೋಕವು. (೨೫) ಆತ್ಮರುಗಳ ಸಮದರ್ಶಿತ್ವದಿಂದ ಸರ್ವಪ್ರಾಣಿಗಳಿಗೂ ಪ್ರತಿಕೂಲನಾಗದೆ ಅನುಕೂಲನಾಗಿರೋಣವು. ಹೀಗೆ ೨೦ರಿಂದ ೨೫ನೆಯ ಶ್ಲೋಕದವರೆಗೂ ಹೇಳಲ್ಪಟ್ಟ ಲಕ್ಷಣಗಳುಳ್ಳ ಕರ್ಮಯೋಗಿಗಳೆಂಬ ಅಭಿಪ್ರಾಯದಿಂದ **ಉಕ್ತಲಕ್ಷಣಾನಾಂ** ಎಂಬ ಪ್ರಯೋಗವು.

**ಮೂಲಕ್ಕೆ ಅರ್ಥವು:**—ಹಿಂದಿನ ಆರು ಶ್ಲೋಕಗಳಲ್ಲಿ ಉಪದೇಶಿಸಿದ ಅರ್ಥವನ್ನೇ ಸಙ್ಗ್ರಹಿಸಿ ಹೇಳುತ್ತಾರೆ. **ಕಾಮಕ್ರೋಧವಿಯುಕ್ತಾನಾಂ** - ಇದು ೨೩ನೆಯ ಶ್ಲೋಕ ಸಙ್ಗ್ರಹವು, ಕಾಮಕ್ರೋಧಗಳ ಸಂಬಂಧವಿಲ್ಲದೆ ಇರುವ, **ಯತೀನಾಂ**-ಎಂದರೆ **ಯತನಶೀಲಾನಾಂ**, ಆತ್ಮಾವಲೋಕನವನ್ನು ಗುರುಗಳ ಮೂಲಕ ಅಭ್ಯಾಸಮಾಡುವವರ, ಮತ್ತು **ಯತ ಚೇತಸಾಂ** - ಇತರ ವಿಷಯಗಳಲ್ಲಿ ಪ್ರವರ್ತಿಸದೆ ಆತ್ಮನಲ್ಲೇ ಪ್ರವರ್ತಿಸುವಹಾಗೆ ನಿಯಮಿಸಿದ ಮನಸ್ಸನ್ನು ಹೊಂದಿರುವ ಇದು ೨೫ನೆಯ ಶ್ಲೋಕದ ಸಙ್ಗ್ರಹವು; ಮತ್ತು **ವಿಜಿತಾತ್ಮನಾಂ** - ಬರೀ ನಿಯಮನ ಮಾತ್ರವಲ್ಲದೆ, ಚೆನ್ನಾಗಿ ಜಯಿಸಲ್ಪಟ್ಟ ಮನಸ್ಸುಳ್ಳವರಾಗಿರುವ ಕರ್ಮಯೋಗಿಗಳ, **ಅಭಿತಃ**.ಎದುರಿಗೇನೇ ಎಂದರೆ ಅವರಿಗೆ ಕರಗತವಾಗಿಯೇ, **ಬ್ರಹ್ಮನಿರ್ವಾಣಂ**-ಆತ್ಮಾನುಭವರೂಪವಾದ ಆನಂದವು, **ವರ್ತತೇ** - ನಿಲ್ಲುತ್ತದೆ, ಅಭಿತಃ ಎಂದರೆ ಪಾರ್ಶ್ವತಃಎಂಬ ಅರ್ಥಮಾಡುವದರಲ್ಲಿ ಸ್ವಾರಸ್ಯವಿಲ್ಲವು. ಕೆಲವರು ಯತಿ ಶಬ್ದಕ್ಕೆ ಸನ್ಯಾಸಿಗಳು ಎಂದು ಅರ್ಥಮಾಡಿರುತ್ತಾರೆ, ಬ್ರಹ್ಮಚರ್ಯ ಗೃಹಸ್ತ ಸನ್ಯಾಸಾಶ್ರಮಗಳ ವಿಚಾರವೆಲ್ಲಿಯದು? ಪ್ರಕರಣವು ಕರ್ಮಯೋಗಿಯನ್ನು ಕುರಿತದ್ದು ; ಅರ್ಜುನನ ಪ್ರಶ್ನೆಯಲ್ಲಿ ಸಂನ್ಯಾಸಂ ಕರ್ಮಣಾಂ ಕೃಷ್ಣ ಎಂದು ಕರ್ಮಸಂನ್ಯಾಸದ ವಿಷಯದಲ್ಲಿ ಸಂನ್ಯಾಸ ಶಬ್ದವನ್ನುಪಯೋಗಿಸಿದುದನ್ನೇ, ಸಙ್ಗ್ರಹವಾಗಿ ಶ್ರೀಕೃಷ್ಣಭಗವಾನರವರು ಸನ್ನ್ಯಾಸಃ ಕರ್ಮಯೋಗಶ್ಚ ಎಂದು ಪ್ರಯೋಗಿಸಿರುತ್ತಾರೆ; ಹೀಗಿರುವಾಗ ಈ ಅಧ್ಯಾಯದಲ್ಲಿ ಸಂನ್ಯಾಸಿಯ ವಿಷಯವೇ ಹೇಳಲ್ಪಡಲಿಲ್ಲವು. **"ಯೋಗಯುಕ್ತಃ"**(ಶ್ಲೋ.೬.೭) **"ಯುಕ್ತಃ"** (೮) **"ಯೋಗಿನಃ"** (೧೧) **ಯುಕ್ತಃ** (೧೨) **ಯುಕ್ತಃ** (೨೩) **ಯೋಗೀ** (೨೪) ಇತ್ಯಾದಿ ಪ್ರಯೋಗಗಳೇ ಇರುವದರಿಂದ ಈ ಅಧ್ಯಾಯವೆಲ್ಲಾ ಕರ್ಮಯೋಗವಿಷಯವೇ ಎಂಬುದು ಸಿದ್ಧವು. ಸನ್ಯಾಸ ಶಬ್ದಮಾತ್ರದಿಂದಲೇ ಸನ್ಯಾಸಿಯನ್ನು ಕುರಿತು ಹೇಳಲ್ಪಟ್ಟಿತೆಂದು ಪ್ರಕರಣವನ್ನು ಬಿಟ್ಟು ಹೇಳಲು ಸಾಧ್ಯವಿಲ್ಲವು. ॥೨೬॥

**ಭಾಷಾರ್ಥವು:**—ಹಿಂದೆ ಆರು ಶ್ಲೋಕಗಳಿಂದಲೂ ಜೀವಾತ್ಮ ಸಮದರ್ಶಿತ್ವವನ್ನು ಸಾಧಿಸಿಕೊಡುವ ಅನುಷ್ಠಾನ ಪ್ರಕಾರವನ್ನು ಉಪದೇಶಿಸಿ, ಆ ಸಂದರ್ಭದಲ್ಲಿ ಫಲವು ವಿಳಂಬವಿಲ್ಲದೆ ಶೀಘ್ರನಾಗಿ ಸಿದ್ಧಿಸುತ್ತದೆಂದು ಹೇಳುತ್ತಾರೆ. **ಕಾಮಕ್ರೋಧವಿಯುಕ್ತಾನಾಂ** - ಕಾಮಕ್ರೋಧಗಳಿಂದ ಬಿಡಲ್ಪಟ್ಟ, **ಯತೀನಾಂ** ಎಂದರೆ **ಯತನ ಶೀಲಾನಾಂ** ಕರ್ಮಯೋಗಾಭ್ಯಾಸ ನಿರತರಾದ, **ಯತ ಚೇತಸಾಂ** ಎಂದರೆ **ನಿಯಮಿತ ಮನಸಾಂ**-ಬಾಹ್ಯವಸ್ತುಗಳಕಡೆ ಓಡದೆ ಆತ್ಮಾವಿನಲ್ಲೇ ಸಕ್ತವಾಗುವಹಾಗೆ ನಿಯಮಿಸಲ್ಪಟ್ಟ ಮನಸ್ಸುಳ್ಳ, **ವಿಜಿತಾ**

**ಭಾ. ನಿಯಮಿತ ಮನಸಾಂ, ವಿಜಿತಾತ್ಮನಾಂ ಬ್ರಹ್ಮ ನಿರ್ವಾಣ ಮಭಿತೋ ವರ್ತತೇ- ಏವಂ ಭೂತಾನಾಂ ಹಸ್ತಸ್ಥಂ ಬ್ರಹ್ಮನಿರ್ವಾಣ ಮಿತ್ಯರ್ಥಃ ॥೨೬॥**

**ತ್ಮನಾಂ** - ಆ ಕಾರಣದಿಂದ ಜಯಿಸಲ್ಪಟ್ಟ ಮನಸ್ಸುಳ್ಳವರಿಗೆ, **ಬ್ರಹ್ಮನಿರ್ವಾಣಂ** - ಆತ್ಮಾನುಭವರೂಪ ನಿರುಪಮ ಸುಖವು, **ಅಭಿತೋ ವರ್ತತೇ** - ಎದುರಿಗೇನೇ ಇರುತ್ತದೆ ಎಂದರೆ, **ಏವಂ ಭೂತಾನಾಂ** - ಇಂತಹ ಕರ್ಮಯೋಗಿಗಳಿಗೆ, ಬ್ರಹ್ಮನಿರ್ವಾಣವು, **ಹಸ್ತಸ್ಥಂ** - ಕೈಯಲ್ಲೇ ಇರುವಂಥಾದ್ದು, ಕರಗತವಾದುದೆಂಬ ಭಾವವು. ಕರ್ಮಯೋಗದಿಂದ ಆತ್ಮಾನುಭವಾನಂದವು ಸುಲಭವಾಗಿಯೇ ಲಭಿಸುತ್ತದೆ ಎಂಬ ಭಾವವು. **"ಕಾಮಕ್ರೋಧ ವಿಯುಕ್ತಾನಾಂ"** ಎಂಬುದು ಶಕ್ನೋತೀಹೈವ ಎಂಬ ೨೩ನೆಯ ಶ್ಲೋಕಾನುವಾದವು; ಸಮದರ್ಶಿತ್ವವು, ಉಂಟಾಗಿದ್ದ ಪಕ್ಷದಲ್ಲಿ ಎಲ್ಲಾ ಆತ್ಮರೂ ಈತನಿಗೆ ಸಮವಾಗಿ ತೋರುವದರಿಂದ ಯಾರನ್ನು ಕಂಡರೂ **ಕ್ರೋಧ** ಉಂಟಾಗುವದಿಲ್ಲವು. ಯಾವಾಗ ಪ್ರತಿಕೂಲಭಾವನೆಯಂದ ಕ್ರೋಧವಿಲ್ಲವೋ, ಹಿಂದಿನ ಶ್ಲೋಕದಲ್ಲೇ ಹೇಳಿರುವಹಾಗೆ ಸರ್ವಭೂತ ಹಿತವೂ ಮತ್ತು ಅವರಲ್ಲಿ ಅನುಕಂಪಾ ಸಹ ಉಂಟಾಗುತ್ತವೆ. ಇಲ್ಲಿ ಯತೀನಾಂ ಎಂಬುವಕ್ಕೆ ರೂಢಿಯಲ್ಲಿರುವ ಸನ್ಯಾಸಿಗಳೆಂಬ ಅರ್ಥವನ್ನು ಪರಿತ್ಯಾಗಮಾಡಿ **ಯತನ ಶೀಲಾನಾಂ** ಎಂಬ ವ್ಯಾಖ್ಯಾನವು ಹೇಗೆ? ಎಂದರೆ ಸನ್ಯಾಸಾಶ್ರಮಿಯ ವಿಷಯವಾಗಿ ಹೇಳುವ ಸಂದರ್ಭವಲ್ಲವುದರಿಂದ ಪ್ರಕೃತಿ ಪ್ರತ್ಯಯಗಳ ಅರ್ಥವನ್ನು ಮನಸ್ಸಿನಲ್ಲಿಟ್ಟು ಪ್ರಕರಣಾನುಗುಣವಾಗಿ ಹಾಗೆ ಅರ್ಥಮಾಡಲ್ಪಟ್ಟಿತು, ಹೀಗೆ ವ್ಯಾಖ್ಯಾನಮಾಡುವುದೇ ಸರಿಯು; ಏಕೆಂದರೆ ಇದರಿಂದ **"ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ"** (೫. ೨೦) ಮತ್ತು **"ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ** (೫. ೨೧) ಎಂಬೆರಡು ಶ್ಲೋಕಗಳ ಅನುವಾದವೇ **"ಯತನ ಶೀಲಾನಾಂ"** ಎಂಬುದರಿಂದ ಹೇಳಲ್ಪಟ್ಟಿತು. ವಿಜಿತಾತ್ಮನಾಂ ಎಂದಿದ್ದರೆ **ಯತಚೇತಸಾಂ** ಎಂಬುದರ ಪೌನರುಕ್ತಿಯು ಪ್ರಾಪ್ತವಾಗುತ್ತದೆಂದು ಭಾವಿಸಿ, ವಿದಿತಾತ್ಮನಾಂ ಎಂಬ ಪಾಠವನ್ನು ಕೆಲವರು ಅಙ್ಗೀಕರಿಸಿರುತ್ತಾರೆ. ಇಲ್ಲಿ ಪೌನರುಕ್ತಿದೋಷವೇನೂ ಇಲ್ಲವು. ವಿಜಿತಾತ್ಮನಾಂ ಎಂಬುದರಿಂದ **"ಯೇ ಹಿ ಸಂಸ್ಪರ್ಶಜಾಃ"** ಎಂಬ ೨೨ನೆಯ ಶ್ಲೋಕವು ಅನುವಾದ ಮಾಡಲ್ಪಟ್ಟಿತು; **ಯತಚೇತಸಾಂ** ಎಂಬುದರಲ್ಲಿ ತೋರುವ ಮನೋ ನಿಯಮನದಿಂದ ಸರ್ವವೂ ತನಗೆ ಆತ್ಮವೇ ಎಂಬ **ಯೋಽನ್ತಃಸುಖೋಽನ್ತರಾರಾಮಃ"** ಎಂಬ ೨೪ನೆಯ ಶ್ಲೋಕಾರ್ಥಾನುವಾದವು ಮಾಡಲ್ಪಟ್ಟಿತು. ಆದುದರಿಂದ ಪೌನರುಕ್ತಿಗೆ ಕಾರಣವೇ ಇಲ್ಲವು. ಕರ್ಮಯೋಗದ ಫಲವಾಗಿ ಬ್ರಹ್ಮ ನಿರ್ವಾಣಂ ಎಂದು ಹೇಳಿದರೆ ಪರಬ್ರಹ್ಮಪ್ರಾಪ್ತಿರೂಪ ಮೋಕ್ಷವೆಂದರ್ಥಮಾಡುವದು ಹೇಗೋ ತಿಳಿಯದು. ಇನ್ನೂ ಕರ್ಮಯೋಗದಲ್ಲೇ ಇರುವವನಾಗಿ ಭಕ್ತಿಯೋಗ ಪ್ರವೇಶನೇ ಇಲ್ಲದ ಅವಸ್ಥೆಯಲ್ಲೇ ಪರಬ್ರಹ್ಮಪ್ರಾಪ್ತಿರೂಪ ಮೋಕ್ಷವೆಂದರ್ಥವು ಹೇಗಾಗುತ್ತದೋ ತಿಳಿಯದು. ಹಸ್ತಸ್ಥಂ ಎಂದು ಅಭಿ**ತೋ ವರ್ತತೇ** ಎಂಬುದಕ್ಕೆ ತಾತ್ಪರ್ಯಾರ್ಥವಾಗಿ ವ್ಯಾಖ್ಯಾನವು ಪುನಸ್ಸಂಸಾರಾದಿಗಳ ವಿಳಂಬವಿಲ್ಲದೆ ಶೀಘ್ರಪ್ರಾಪ್ತಿಯನ್ನು ಬೋಧಿಸುತ್ತದೇ ವಿನಾ ಆಗಲೇ ಫಲವೇ ಲಭಿಸಿತು ಎಂಬ ಅಭಿಪ್ರಾಯವಲ್ಲವು. ಅಂತವನಿಗೆ ಸಾಕ್ಷಾದುಪಾಯವಾದ ಭಕ್ತಿಯೋಗಾನುಷ್ಠಾನಕ್ಕೆ ಅನುಗ್ರಹ ಉಂಟಾಗಿ ಮೋಕ್ಷಪ್ರಾಪ್ತಿಯು ದೂರವಲ್ಲ, ಸನ್ನಿಹಿತವೆಂಬ ಭಾವವು. ಇಲ್ಲಿ ಬ್ರಹ್ಮನಿರ್ವಾಣಂ ಎಂಬುದಕ್ಕೆ ಸಾಕ್ಷಾತ್ತಾಗಿ ಮೋಕ್ಷವೆಂದೇ ಕೆಲವರು ಅರ್ಥಮಾಡಿರುತ್ತಾರೆ. ಹಾಗೆ ಅರ್ಥಮಾಡಿದರೆ ಕರ್ಮಯೋಗವೇ ಸಾಕ್ಷಾತ್ತಾಗಿಯೇ ಮೋಕ್ಷೋಪಾಯವೆಂದಾಗಿ ಶಾಸ್ತ್ರವಿರುದ್ಧವಾದಮಾತಾಗುತ್ತದೆ. ಇದೇ ಗ್ರಂಥದಲ್ಲಿ**"ನಾಹಂ ವೇದೈಃ"**(ಗೀ ೧೧.೫೩) ಎಂದೂ, **"ಯಜ್ಞೋದಾನ ತಪಶ್ಚೈವ ಪಾವನಾನಿ ಮನೀಷಿಣಾಂ"** (ಗೀ. ೧೮.೫) ಎಂದೂ, ಹೇಳಿರುವದಕ್ಕೂ, **"ಕಷಾಯೇಕರ್ಮಭಿಃ**

ಭಾ. ಅ. ಉಕ್ತಂ ಕರ್ಮಯೋಗಂ ಸ್ವಲಕ್ಷ್ಯಭೂತಯೋಗ ಶಿರಸ್ಕ ಮುಪಸಂಹರತಿ —

ಮೂ. ಸ್ಪರ್ಶಾನ್ ಕೃತ್ವಾ ಬಹಿ ರ್ಬಾಹ್ಯಾಂಶ್ಚಕ್ಷು ಶ್ಚೈವಾನ್ತರೇ ಭ್ರುವೋಃ ।
ಪ್ರಾಣಾಪಾನೌ ಸಮೌ ಕೃತ್ವಾನಾಸಾಭ್ಯನ್ತರ ಚಾರಿಣೌ ॥ ೨೭.
ಯತೇನ್ದ್ರಿಯಮನೋಬುದ್ಧಿ ರ್ಮುನಿ ರ್ಮೋಕ್ಷಪರಾಯಣಃ ।
ವಿಗತೇಚ್ಛಾ ಭಯಕ್ರೋಧೋ ಯ ಸ್ಸದಾ ಮುಕ್ತ ಏವ ಸಃ ॥ ೨೮.

ಪಕ್ವೇ ತತೋಜ್ಞಾನಂ ಪ್ರವರ್ತತೇ", "ಅವಿದ್ಯಯಾ ಮೃತ್ಯುಂ ತೀರ್ತ್ವಾ" ಇತ್ಯಾದಿ ಶ್ರುತ್ಯರ್ಥಗಳಿಗೂ ವಿರುದ್ಧವಾಗುತ್ತದೆ. ಸರಿಯಾದ ತಿಳುವಳಿಕೆಯುಂಟಾಗುವದಕ್ಕಾಗಿ ಇನ್ನೊಂದು ಸಲ ಹೇಳುವೆವು.—ಕರ್ಮಯೋಗದಿಂದುಂಟಾಗುವ ಅನಿಷ್ಟ ನಿವೃತ್ತಿಯು ಯಾವುದು ಎಂದರೆ ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕಗಳಾದ ಪಾಪಗಳ ನಿವೃತ್ತಿಯು, ಇಷ್ಟಪ್ರಾಪ್ತಿಯು ಯಾವುದೆಂದರೆ ಆತ್ಮಸ್ವರೂಪದ ಯಥಾರ್ಥಜ್ಞಾನವು, ಅದರಿಂದ ಭಕ್ತಿಯೋಗದಲ್ಲಿ ಅನುಪ್ರವೇಶವು ಎಂಬುದು- ಆದುದರಿಂದ ಬ್ರಹ್ಮನಿರ್ವಾಣ ಎಂದರೆ ಆತ್ಮಾವಲೋಕನದಿಂದ ಉಂಟಾಗುವ ಆನಂದವೆಂಬ ಅರ್ಥವು. ॥ ೨೬ ॥

ಭಾಷ್ಯಾವತಾರಿಕೆಯ ಅರ್ಥವು :—ಕರ್ಮಯೋಗದಿಂದುಂಟಾಗುವ ಫಲಸಿದ್ಧಿಯು ಆತ್ಮಾವಲೋಕನವೆಂದು ಹೇಳಿ,ಕರ್ಮಯೋಗದ ವಿಷಯದ ಉಪನ್ಯಾಸವನ್ನು ಈ ಅಧ್ಯಾಯದಲ್ಲಿ ಮುಗಿಸುತ್ತಾರೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. ಉಕ್ತಂ-ಹಿಂದೆ ಉಪದೇಶಿಸಲ್ಪಟ್ಟ ಲಕ್ಷಣವೂ ಜ್ಞಾನವೂ ಇರಬೇಕೆಂದು ಹೇಳಿದ, ಕರ್ಮಯೋಗವನ್ನು, ಅದು ಎಂತಾದ್ದೆಂದರೆ.- ಸ್ವಲಕ್ಷ್ಯಭೂತಯೋಗ ಶಿರಸ್ಕಂ-ಆ ಕರ್ಮಯೋಗಕ್ಕೆ ಉದ್ದಿಶ್ಯವಾದ ಆತ್ಮಾವಲೋಕನರೂಪ ಯೋಗವೇ ಪ್ರಾಧಾನ್ಯವಾಗಿ ಉಳ್ಳದುದು; ಎಂದರೆ ಆತ್ಮಾವಲೋಕನವನ್ನೇ ಪ್ರಧಾನವಾಗಿ ಉಳ್ಳದುದು ಈ ಕರ್ಮಯೋಗವೆಂಬ ತಾತ್ಪರ್ಯವು ; ಅಂತಹ ಆತ್ಮಾವಲೋಕನಕ್ಕೆ ಬೇಕಾದ ಆತ್ಮಧ್ಯಾನವನ್ನು ಮಾಡುವ ಕ್ರಮವನ್ನು ಸಙ್ಗ್ರಹವಾಗಿ ಈ ಎರಡು ಶ್ಲೋಕಗಳಿಂದ ಉಪದೇಶಿಸುತ್ತಾರೆ—ಭಕ್ತಿಯೋಗದಲ್ಲಾದರೋ ಪರಮಪುರುಷನ ದಿವ್ಯಮಙ್ಗಳವಿಗ್ರಹವನ್ನು ಕುರಿತ ಉಪಾಸನವು ಉಪದೇಶಿಸಲ್ಪಟ್ಟಿರುತ್ತದೆ. ಇಲ್ಲಿ ಹೇಳಿರುವದೇನೆಂದರೆ.—ಜೀವಾತ್ಮ ಸ್ವರೂಪ ಚಿಂತನವು. ಪರಮಾತ್ಮೋಪಾಸನೆಗೂ ಇದಕ್ಕೂ ವ್ಯತ್ಯಾಸವುಂಟು. ಪರಮಾತ್ಮೋಪಾಸನೆಯಲ್ಲಾದರೋ, ತೈಲಧಾರೆಯಹಾಗೆ ಸ್ಮೃತಿ ಸಂತತಿರೂಪವಾಗಿ, ಧ್ರುವಾನುಸ್ಮೃತಿ ಎಂದು ಹೇಳಿಸಿಕೊಳ್ಳುವ ಪರಮಾತ್ಮಸಾಕ್ಷಾತ್ಕಾರವು. ಜೀವಾತ್ಮನಿಗೇನೇ ಅಸಾಧಾರಣವಾದ ದಿವ್ಯಮಙ್ಗಳ ವಿಗ್ರಹವಿಲ್ಲವು, ಆದರೆ ತನ್ನ ಆತ್ಮವು ಜ್ಞಾನಾಕಾರವಾಗಿ ಅಮೋಘಸ್ವರೂಪವುಳ್ಳದೆಂದು ತಿಳಿದು ಅಂತಹ ಆತ್ಮಪ್ರಾಪ್ತಿಗಾಗಿ ಚಿಂತನವೀಗ ಇಲ್ಲಿ ಹೇಳಲ್ಪಟ್ಟಿತು. ಹೀಗೆ ಎರಡಕ್ಕೂ ಭೇದ ಉಂಟು.

ಮೂಲಕ್ಕೆ ಅರ್ಥವು :—ಬಾಹ್ಯಾನ್ ಸ್ಪರ್ಶಾನ್ - ಹೊರಗಿನ ವಿಷಯಗಳನ್ನೆಲ್ಲಾ ಎಂದರೆ ವಿಷಯಾನುಭವಗಳನ್ನೆಲ್ಲಾ, ಬಹಿಃಕೃತ್ವಾ - ಹೊರಗೇನೇ ಇರುವಹಾಗೆ ಮಾಡಿ, ಅವುಗಳು ಆತ್ಮನಿಗೆ ಸಂಬಂಧಿಸಿದಲ್ಲವು,ಹೊರಗೆ ಇರುವುವಾದುದರಿಂದ ಹೊರಗೇನೆ ಇರಲು ಅರ್ಹವು,ಆದುದರಿಂದ ಅವುಗಳನ್ನೆಲ್ಲಾ ದೂರೀಕರಿಸಿ ಎಂಬ ಭಾವವು, ಭ್ರುವೋಃ ಅನ್ತರಂ - ಹುಬ್ಬುಗಳ ಮಧ್ಯದಲ್ಲಿ, ಚಕ್ಷುಃ ಕೃತ್ವಾ-ದೃಷ್ಟಿಯನ್ನು ಇಟ್ಟು, ದೃಷ್ಟಿಯನ್ನು ಹುಬ್ಬಿನ ಮಧ್ಯೆಯಿರುವ ಮೇಲುಭಾಗದಲ್ಲಿಟ್ಟು, ಚಕ್ಷುಃ ಎಂದು ಒಂದು ಕಣ್ಣನ್ನು ಹೇಳಿದ್ದರೂ ಎರಡಕ್ಕೂ ಉಪಲಕ್ಷಣವು, ಹಾಗೆ ದೃಷ್ಟಿಯನ್ನು ಭ್ರೂಮಧ್ಯೆ ಇಡುವದರ ಅಭಿಪ್ರಾಯವು, ಮುಂದೆ ದಿಕಜ್ಞಾನವಲೋಕಯೇತ್, ಅಲ್ಲಿ

ಇಲ್ಲಿ ದಿಕ್ಕುಗಳನ್ನೂ ಇತರ ವಸ್ತುಗಳನ್ನೂ ನೋಡುತ್ತಿದ್ದರೆ ಆತ್ಮ ಚಿನ್ತನಕ್ಕೆ ಹಾನಿಯುಂಟಾಗುತ್ತದೆಂಬ ಭಾವವು; ಏಕಾ ಏಕೀ ಎರಡು ಕಣ್ಣನ್ನೂ ಭ್ರೂಮಧ್ಯೆ ನಾಸಾಗ್ರದಲ್ಲಿಡಲು ಸಾಧ್ಯವಿಲ್ಲದಿದ್ದರೆ ಒಂದು ಕಣ್ಣನ್ನಿಟ್ಟು ಇನ್ನೊಂದನ್ನು ಮುಚ್ಚಿ ಅಭ್ಯಾಸವನ್ನು ಮಾಡಿಕೊಳ್ಳಬಹುದೆಂಬ ಭಾವದಿಂದ ಚಕ್ಷುಃ ಎಂದು ಏಕವಚನಪ್ರಯೋಗವೆಂದಾದರೂ ಭಾವಿಸಬಹುದು. ಸ್ವನಾಸಾಗ್ರಾವಲೋಕನದಿಂದ ಪರಮಾತ್ಮೋಪಾಸನವನ್ನೂ ಮಾಡಬೇಕೆಂದು ಮುಂದೆಹೇಳಲ್ಪಟ್ಟಿರುತ್ತದೆ ; ಹಾಗೆಯೇ ಈ ಆತ್ಮಸ್ವರೂಪ ಚಿನ್ತನವನ್ನೂ ಸಹ ಮಾಡಬೇಕೆಂದು ವಿಧಿಸಲ್ಪಟ್ಟಿತು; ಪ್ರಾಣಾಪಾನೌ ಸಮೌಕೃತ್ವಾ - ರೇಚಕ ಪೂರಕದಹಾಗೆ ಅಸಮನಾಗದಹಾಗೆ, ಪ್ರಾಣವೆಂದರೆ ನಿಶ್ವಾಸವನ್ನೂ, ಅಪಾನ ವೆಂದರೆ ಉಚ್ಛ್ವಾಸವನ್ನು ಸಮಕಾಲವರ್ತಿಯಾಗಿ ಮಾಡಿಕೊಂಡು, ಮತ್ತು ನಾಸಾಭ್ಯನ್ತರ ಚಾರಿಣೌ - ಮೂಗಿನ ಸೊಳ್ಳೆಗಳಲ್ಲೇ ಚಲಿಸುವಂತವುಗಳಾಗಿಯೂ, ಕೃತ್ವಾ - ಮಾಡಿಕೊಂಡು, ಯತೇನ್ದ್ರಿಯ ಮನೋಬುದ್ಧಿಃ - ವಿಷಯಗಳಿಂದ ನಿಯಮಿಸಲ್ಪಟ್ಟ ಇಂದ್ರಿಯ ಮನಸ್ಸು ಮತ್ತು ಆತ್ಮನ ಧರ್ಮಭೂತಜ್ಞಾನವುಳ್ಳವನಾಗಿ, ಇದರಿಂದ ಆತ್ಮನಿಗೆ ವಿಷಯಾನುಭವ ಉಂಟಾಗುವ ಮಾರ್ಗವು ಹೇಳಲ್ಪಟ್ಟಿತು; ವಿಷಯಗಳ ಜ್ಞಾನವು, ಇಂದ್ರಿಯಗಳಮೂಲಕ ಮನಸ್ಸಿಗೂ, ಮನಸ್ಸಿನಿಂದ ಆತ್ಮನ ಧರ್ಮಭೂತಜ್ಞಾನಕ್ಕೂ, ಧರ್ಮಭೂತಜ್ಞಾನದ್ವಾರಾ ಆತ್ಮನಿಗೂ ಉಂಟಾಗುತ್ತದೆಂದು, ತಿಳಿಸುವವಕ್ಕಾಗಿ, ಯತೇನ್ದ್ರಿಯ ಮನೋಬುದ್ಧಿಃ ಎಂಬ ಪ್ರಯೋಗವು; ಹೀಗೆ ವಿಷಯಗಳಲ್ಲಿ ಇಂದ್ರಿಯಗಳೂ ಮನಸ್ಸೂ ಮತ್ತು ಬುದ್ಧಿಯೂ ಪ್ರವರ್ತಿಸದ ಹಾಗೆ ನಿಗ್ರಹಿಸಿದವನಾಗಿ, (ಹಿಂದೆ ೩. ೪೦ನೆಯ ಶ್ಲೋಕವನ್ನು ಪರಾಂಬರಿಸಿ) ಮುನಿಃ-ತನ್ನ ಆತ್ಮಸ್ವರೂಪವನ್ನೇ ಚಿಂತಿಸುತ್ತಾ ಮನನ ಶೀಲನಾಗಿ, ಮೋಕ್ಷ ಪರಾಯಣಃ - ನಿರತಿಶಯ ಸುಖಪ್ರದವಾದ ಅವಸ್ಥೆಯನ್ನು ಹೊಂದುವದರಲ್ಲಿ ನಿರತನಾಗಿ, ಅಥವಾ ತನ್ನ ಜ್ಞಾನತಿರೋಧಾನಕ್ಕೆ ಹೇತುಭೂತವಾದ ಹೇಯಪ್ರಕೃತಿಯಿಂದ ಬಿಡುಗಡೆಯನ್ನು ಹೊಂದುವದರಲ್ಲಿ ನಿರತನಾಗಿ, ಸದಾ-ಯಾವಾಗಲೂ ಎಂದರೆ ಉಪಾಯಾನುಷ್ಠಾನಕ್ಕೆ ಪೂರ್ವ ಭಾವಿಯಾಗಿಯೂ ಅನಂತರವೂ ಹೀಗೆ ಯಾವಾಗಲೂ, ವಿಗತೇಚ್ಛಾ ಭಯಕ್ರೋಧಃ - ಹೋಗಲ್ಪಟ್ಟ ಆಶೆ, ಭಯ ಮತ್ತು ಕೋಪಗಳುಳ್ಳವನಾಗಿ, ಯಃ - ಯಾವ ಕರ್ಮಯೋಗಿರುವನೋ, ಸಃ - ಅವನು, ಮುಕ್ತ ಏವ - ಇನ್ನೂ ಉಪಾಯಾನುಷ್ಠಾನಕಾಲಕ್ಕೆ ಮುಂಚೆಯೇ ಮುಕ್ತನಿಗೆ ಸಮಾನನಾಗಿರುವನು; ಮುಕ್ತನೇ ಅಲ್ಲವು; ಮುಕ್ತಪ್ರಾಯನಾಗುವನೆಂಬರ್ಥವು. ಕರ್ಮಯೋಗಾನುಷ್ಠಾನಕಾಲವಲ್ಲೇ ಹಾಗಾದನಂತರ ಉಪಾಯಾನುಷ್ಠಾನಕಾಲವಲ್ಲಾದರೋ ಮುಕ್ತನಹಾಗಿರುವದು ಕೈಮುತಿಕ ನ್ಯಾಯದಪ್ರಕಾರ, "ತಮೇವಂ ವಿದ್ವಾನಮೃತ ಇಹ ಭವತಿ" (ಪುರುಷ ಸೂಕ್ತ) ಎಂಬ ಶ್ರುತಿ ಪ್ರಸಿದ್ಧವಾಗಿರುವಹಾಗೆ, ಸಿದ್ಧವೆಂಬ ಭಾವವು. ಮುಕ್ತ ಏವ ಎಂದರೆ ಮುಕ್ತನಾಗುವದಕ್ಕೆ ಇನ್ನು ಯಾವಸಾಧನಾನುಷ್ಠಾನವೂ ಬೇಡವೆಂಬ ಅಭಿಪ್ರಾಯವಲ್ಲವು ; ಆತ್ಮಚಿಂತನದಲ್ಲಿ ಉಂಟಾಗುವ ಆನಂದವು ಮುಕ್ತನಾಗಿರುವ ಆನಂದಕ್ಕೆ ಸಮಾನವೆಂಬ ಭಾವವು. ತೈತ್ತರೀಯದಲ್ಲಿ ತಸ್ಮಾತ್ಸತ್ಯೇರಮಂತೇ ತಪಸಿ ರಮಂತೇ ದಮೇರಮನ್ತೇ ಯಜ್ಞೇ ರಮನ್ತೇ ಎಂದು ಹೇಳುತ್ತಾ ಹೋಗಿ ಕೊನೆಗೆ ಮಾನಸೇ ರಮನ್ತೇ ಎಂದು ಮುಗಿಸಿರುವದರಿಂದ, ಆತ್ಮಚಿನ್ತನದಲ್ಲೇ ಮನಸ್ಸು ರಮಿಸುವದರಿಂದ ಮುಕ್ತಾನಂದಕ್ಕೆ ಸಮಾನವಾದುದೆಂದು ಹೇಳಲ್ಪಟ್ಟಿತು. ಕರ್ಮಯೋಗಿಯೇ ಸಾಕ್ಷಾತ್ತಾಗಿ ಮುಕ್ತಿಯನ್ನು ಹೊಂದುವನೆಂದು ಇಲ್ಲಿ ಹೇಳಲ್ಪಟ್ಟಿತೆಂಬ ಸಂದೇಹಬೇಕಿಲ್ಲವು. ಕರ್ಮಯೋಗವು ಸಾಕ್ಷಾದುಪಾಯಕ್ಕೆ ಅಙ್ಗಮಾತ್ರವೇ, ಭಕ್ತಿಯೋಗವೇ ಸಾಕ್ಷಾದುಪಾಯವು, ಕರ್ಮಯೋಗವಿಲ್ಲದೇ ಭಕ್ತಿಯೋಗವೇ ಇಲ್ಲವಾದುದರಿಂದ ಕರ್ಮಯೋಗವನ್ನು ವ್ಯವಹಿತೋಪಾಯವೆಂದೂ, ಭಕ್ತಿಯೋಗವನ್ನು ಅವ್ಯವಹಿತ ಉಪಾಯವೆಂದೂ ಶಾಸ್ತ್ರಜ್ಞರು

ಭಾ. ಬಾಹ್ಯಾನ್ ವಿಷಯ ಸ್ಪರ್ಶಾನ್ ಬಹಿಃಕೃತ್ವಾ-ಬಾಹ್ಯೇನ್ದ್ರಿಯ ವ್ಯಾಪಾರಂ ಸರ್ವಮುಪಸಂಹೃತ್ಯ, ಯೋಗ ಯೋಗ್ಯಾಸನೇ ಋಜುಕಾಯ ಉಪವಿಶ್ಯ, ಚಕ್ಷುಷೀ ಭ್ರುವೋರನ್ತರೇ – ನಾಸಾಗ್ರೇ ವಿನ್ಯಸ್ಯ, ನಾಸಾಭ್ಯನ್ತರ ಚಾರಿಣೌ ಪ್ರಾಣಾಪಾನೌ ಸಮೌ ಕೃತ್ವಾ - ಉಚ್ಛ್ವಾಸನಿಶ್ವಾಸೌ ಸಮಗತೀ ಕೃತ್ವಾ, ಆತ್ಮಾವಲೋಕನಾದನ್ಯತ್ರ ಪ್ರವೃ

ಹೇಳುವ ವಾಡಿಕೆಯುಂಟು, ಇದನ್ನನುಸರಿಸಿಯೇ ಶ್ರೀ ನಿಗಮಾನ್ತ ದೇಶಿಕರವರು ಕರ್ಮಯೋಗವನ್ನು ಸದ್ವಾರಕೋಪಾಯವೆಂದೂ, ಭಕ್ತಿಯೋಗವನ್ನು ಅದ್ವಾರಕೋಪಾಯವೆಂದೂ ಹೇಳಿರುತ್ತಾರೆ. ಶ್ರೀಮದ್ರಹಸ್ಯತ್ರಯಸಾರದ ಉಪಾಯ ವಿಭಾಗಾಧಿಕಾರಾಂತ್ಯದಲ್ಲಿ ೯೧೦ನೆಯ ಪುಟವನ್ನು ನೋಡಿ. ಭಕ್ತಿಯೋಗನೇ ಅವ್ಯವಹಿತವಾದ ಉಪಾಯವೆಂದು ಪದೇ ಪದೇ ನಾವು ಹೇಳುತ್ತಿರುವದು ಏಕೆಂದರೆ ಕೆಲವರು ಕರ್ಮಯೋಗವೇ ಸಾಕ್ಷಾತ್ತಾಗಿ ಮೋಕ್ಷಹೇತುವೆಂದು ಹೇಳುವರು. ಇಲ್ಲಿ ಮುಕ್ತ ಏವಸಃ ಎಂದು ಹೇಳಿರುವದರಿಂದ ಹಾಗೆ ವ್ಯಾಖ್ಯಾನ ಮಾಡಿರುತ್ತಾರೆ. ಇಂತವನೇ ಸನ್ನ್ಯಾಸಿಯು, ಅಂತವನಿಗೆ ಕರ್ಮಸನ್ನ್ಯಾಸವೂ ಸಹ ಇಲ್ಲಿ ಹೇಳಲ್ಪಟ್ಟಿತೆಂದು ಭಾವಿಸುವರು. "ನತಸ್ಯ ಮೋಕ್ಷಾಯ ಅನ್ಯಃ ಕರ್ತವ್ಯಃ ಅಸ್ತಿ" ಎಂದು ವ್ಯಾಖ್ಯಾನವನ್ನು ಬರೆದಿರುತ್ತಾರೆ. ಈ ವ್ಯಾಖ್ಯಾನಕ್ಕೆ ಪ್ರಥಮ ಷಟ್ಕದ ಅಂತ್ಯಶ್ಲೋಕವು ಪರಮ ವಿರುದ್ಧವಾಗುತ್ತದೆ, ಅದರ ಹಿಂದಿನ ಶ್ಲೋಕದಲ್ಲಿ "ಕರ್ಮಿಭ್ಯಶ್ಚಾಧಿಕೋಯೋಗೀ" ಎಂದು ಹೇಳಿರುವದಕ್ಕೂ ವಿರುದ್ಧವು. ಮತ್ತು ೭ನೆಯ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ, ಈಶ ನಿನಗೆ ಹೇಳಿರುವದಕ್ಕೂ ವಿಲಕ್ಷಣವಾದ "ಜ್ಞಾತವ್ಯ"ವೊಂದುಂಟೆಂದು "ಯಜ್ಜ್ಞಾತ್ವಾನೇಹ ಭೂಯೋಽನ್ಯತ್ ಜ್ಞಾತವ್ಯ ಮವಶಿಷ್ಯತೇ" ಎಂದು ಉಪದೇಶಿಸಿರುವದರಿಂದ ವ್ಯಕ್ತವು. ಇಲ್ಲಿಯೂ ಜ್ಞಾತವ್ಯ ಪರಿಶೇಷ ಉಂಟೆಂಬುದು ಮುಂದಿನ ಶ್ಲೋಕದಲ್ಲಿ ವ್ಯಕ್ತವು.

ಭಾಷ್ಯಾರ್ಥವು:—ಬಾಹ್ಯಾನ್ ವಿಷಯಸ್ಪರ್ಶಾನ್ ಬಹಿಃ ಕೃತ್ವಾ ಎಂದರೆ ಬಾಹ್ಯೇಂದ್ರಿಯ ವ್ಯಾಪಾರಂ ಸರ್ವಮುಪಸಂಹೃತ್ಯ - ಬಾಹ್ಯೇನ್ದ್ರಿಯಗಳ ಸಮಸ್ತ ವ್ಯಾಪಾರವನ್ನೂ ಅಡಗಿಸಿ, ಯೋಗ ಯೋಗ್ಯಾಸನೇ - ಆತ್ಮ ಚಿಂತನೆಗೆ ಯೋಗ್ಯವಾದ ಆಸನದಲ್ಲಿ, ಇದು ಮೂಲದಲ್ಲಿಲ್ಲದಿದ್ದರೂ ಮುಂದೆ ೬ನೆಯ ಅಧ್ಯಾಯದ ೧೧ನೆಯ ಶ್ಲೋಕದಲ್ಲಿ ಹೇಳಲ್ಪಡುವದರಿಂದ ಇಲ್ಲಿಯೇ ಸೂಚಿಸಿರುತ್ತಾರೆ, ಋಜುಕಾಯ ಉಪವಿಶ್ಯ - ಮುಂದೆ ೬ನೆಯ ಅಧ್ಯಾಯದ ೧೩ನೆಯ ಶ್ಲೋಕದಲ್ಲಿ "ಸಮಂ ಕಾಯಶಿರೋಗ್ರೀವಂ ಧಾರಯನ್ನ ಚಲಂ ಸ್ಥಿರಃ" ಎಂದು ಹೇಳಿರುವಹಾಗೆ ಶರೀರವನ್ನು ನೆಟ್ಟಗಿಟ್ಟು ಕೂತುಕೊಂಡವನಾಗಿ, ಚಕ್ಷುಷೀ - ಕಣ್ಣುಗಳನ್ನು, ಭ್ರುವೋರನ್ತರೇ - ಹುಬ್ಬುಗಳ ಮಧ್ಯೆ ಎಂದರೆ ನಾಸಾಗ್ರೇವಿನ್ಯಸ್ಯ - ಮೂಗಿನ ತುದಿಯಲ್ಲಿಟ್ಟು, ಇದರಿಂದ ದಿಕ್ಕುಗಳನ್ನೂ ಬಾಹ್ಯವಿಷಯಗಳನ್ನೂ ನೋಡಬಾರದೆಂತಾಯಿತು; ಮುಂದೆ ಗೀ. ೬. ೧೩ರಲ್ಲಿ "ಸಂಪ್ರೇಕ್ಷ್ಯ ನಾಸಿಕಾಗ್ರಂ" ಎಂದು ಈ ಅಭಿಪ್ರಾಯವೇ ಹೇಳಲ್ಪಟ್ಟಿರುತ್ತದೆ. ನಾಸಾಭ್ಯನ್ತರಚಾರಿಣೌ - ಮೂಗಿನ ಹೊಳ್ಳೆಗಳಲ್ಲೇ ಸಂಚರಿಸುವ, ಬಾಯಿಯೊಳಗಿಂದ ವಾಯು ಸಂಚಾರವು ಕೂಡದೆಂಬ ಭಾವವು, ಪ್ರಾಣಾಪಾನೌ ಸಮೌಕೃತ್ವಾ ಎಂದರೆ ಉಚ್ಛ್ವಾಸ ನಿಶ್ವಾಸೌ ಸಮಗತೀ ಕೃತ್ವಾ - ನಿಶ್ವಾಸವೆನಿಸುವ ಪ್ರಾಣವಾಯುವನ್ನು ಉಚ್ಛ್ವಾಸವೆನಿಸುವ ಅಪಾನ ವಾಯುವನ್ನೂ ಸಮವಾದ ವ್ಯಾಪಾರವುಳ್ಳವುಗಳನ್ನಾಗಿಮಾಡಿ, ಇದರಿಂದ ದೀರ್ಘಗಳಾದ ಉಚ್ಛ್ವಾಸ ನಿಶ್ವಾಸಗಳು ಕೂಡದೆಂತಾಯಿತು, ಆತ್ಮಾವಲೋಕನಾದನ್ಯತ್ರ ಪ್ರವೃತ್ತ್ಯನರ್ಹೇನ್ದ್ರಿಯ ಮನೋಬುದ್ಧಿಃ - ಆತ್ಮಾವಲೋಕನಕ್ಕಿಂತ ಬೇರೆವಿಷಯಗಳಲ್ಲಿ ಪ್ರವರ್ತಿಸಲು ಅನರ್ಹವಾದ ಇಂದ್ರಿಯ ಮನೋಬುದ್ಧಿಗಳನ್ನುಳ್ಳವನಾಗಿ, ತತ ಏವ - ಆ ಕಾರಣದಿಂದಲೇ, ವಿಗತೇ

ಭಾ. ತ್ಯಕ್ತಸರ್ವೇಂದ್ರಿಯ ಮನೋಬುದ್ಧಿಃ, ಅತ ಏವ ವಿಗತೇಚ್ಛಾ ಭಯಕ್ರೋಧಃ, ಮೋಕ್ಷಪರಾಯಣಃ - ಮೋಕ್ಷೈಕಪ್ರಯೋಜನಃ, ಮುನಿಃ - ಆತ್ಮಾವಲೋಕನ ಶೀಲಃ ಯಃ, ಸದಾ ಮುಕ್ತ ಏವ ಸಃ - ಸಾಧ್ಯದಶಾಯಾಮಿವ ಸಾಧನ ದಶಾಯಾಮಪಿ ಮುಕ್ತ ಏವ ಸ ಇತ್ಯರ್ಥಃ ||೨೭, ೨೮||

---

ಚ್ಛಾಭಯಕ್ರೋಧಃ - ಕಾಮಕ್ರೋಧ ಭಯಗಳಿಂದ ಬಿಡಲ್ಪಟ್ಟವನಾಗಿ, ಮೋಕ್ಷ ಪರಾಯಣಃ ಎಂದರೆ ಮೋಕ್ಷೈಕ ಪ್ರಯೋಜನಃ - ಮೋಕ್ಷವೇ ಮುಖ್ಯ ಪ್ರಯೋಜನವುಳ್ಳವನಾಗಿ, ಮುನಿಃ ಎಂದರೆ ಆತ್ಮಾವಲೋಕನ ಶೀಲಃ – ಆತ್ಮಾವಲೋಕನ ಸ್ವಭಾವವುಳ್ಳವನಾಗಿ ಎಂದರೆ ಆತ್ಮಾವಲೋಕನ ನಿರತನಾಗಿ, ಇರುವವನು ಯಃ - ಯಾರೋ ಎಂದರೆ ಯಾವ ಕರ್ಮಯೋಗಿಯೋ, ಸದಾ ಮುಕ್ತ ಏವ ಸಃ ಎಂದರೆ ಸಾಧ್ಯ ದಶಾಯಾಮಿವ-ಫಲಪ್ರಾಪ್ತಿ ಎಂದರೆ ಮೋಕ್ಷದೆಶೆಯಲ್ಲಿ ಹೇಗೋ ಹಾಗೆ ಸಾಧನ ದಶಯಾಮಪಿ - ಉಪಾಯಾನುಷ್ಠಾನ ಮಾಡುವ ದೆಶೆಯಲ್ಲಿಯೂ, ಈ ಕರ್ಮಯೋಗಾಭ್ಯಾಸದೆಶೆಯಲ್ಲಿಯೂ ಸಹ, ಮುಕ್ತನೇ ಸರಿ ಎಂದರೆ ಮುಕ್ತನಿಗೆ ಸಮಾನನು ಎಂಬ ತಾತ್ಪರ್ಯವು. ಇಲ್ಲಿ ಭ್ರುವೋಃ ಅನ್ತರೇ ಎಂಬುದಕ್ಕೆ ನಾಸಾಗ್ರವೆಂದು ವ್ಯಾಖ್ಯಾನಮಾಡಿರುವದರಿಂದ ಈ ಪ್ರಕರಣಕ್ಕೆ ಆವಶ್ಯಕವಿಲ್ಲದ ಒಂದಂಶವನ್ನೂ ಕೂಡ ಗ್ರಹಿಸಬಹುದು. ನಾಮವನ್ನು ಹಣೆಯಲ್ಲಿ ಧರಿಸುವದಕ್ಕೆ ಶಾಸ್ತ್ರವು ನಾಸಿಕಾಮೂಲದಿಂದ ಕೇಶಪರ್ಯಂತವೆಂದು ಹೇಳುವದರಿಂದ ಶ್ರೀಭಾಷ್ಯಕಾರರಿಗೆ ಅಭಿಮತವಾದ ನಾಸಾಗ್ರವು ಭ್ರುವೋರ್ಮಧ್ಯವಾಗಿ ನಾಸಿಕಾಮೂಲವದುದರಿಂದ ಪೀಠವನ್ನು ಅವರು ಧರಿಸಿರಲಾರರೆಂದು ತೋರಿಬರುತ್ತದೆ. ಏಕೆಂದರೆ "ನಾಸಿಕಾಮೂಲಮಾರಭ್ಯ ಲಲಾಟೇ ಪ್ರಥಮಂ ನ್ಯಸೇತ್" ಮತ್ತು । "ಭ್ರುವೋರಧಸ್ತಾದಾರಭ್ಯ ಕೇಶಾನ್ತಂ ಧಾರಯೇದ್ಬುಧಃ" ಎರಡು ಪ್ರಮಾಣಗಳ ಐಕಕಂಠ್ಯದಿಂದ ಭ್ರೂಮಧ್ಯಕ್ಕೆ ಸ್ವಲ್ಪ ಕೆಳಗಿನ ಪ್ರದೇಶವೇ ನಾಸಿಕಾಮೂಲವು. ಇದನ್ನೇ ನಾಸಾಗ್ರವೆಂದು ಶ್ರೀ ಯತಿವರ್ಯರು ಹೇಳಿರುವಹು. ಮೂಗಿನ ತುದಿಯಲ್ಲವು. ಮೂಲದ ಸ್ಪರ್ಶಾ ಎಂಬ ಪದಕ್ಕೆ ವಿಷಯಸ್ಪರ್ಶಾ ಎಂದು ವಾಖ್ಯಾನಮಾಡಿರುವದು ಸ್ಪರ್ಶ ಶಬ್ದವು ಅನುಭವವನ್ನೂ ಬೋಧಿಸುವದರಿಂದ ಆ ಅನುಭವಕ್ಕೆ ವಿಷಯೇಂದ್ರಿಯಗಳ ಸಂಬಂಧವು ಆವಶ್ಯಕವೆಂಬುದನ್ನು ಸೂಚಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಬಾಹ್ಯಾ ಸ್ಪರ್ಶಾ ಬಹಿಃಕೃತ್ವಾ ಎಂಬುದರ ತಾತ್ಪರ್ಯವೇನೆಂಬುದನ್ನು ತಿಳಿಸುವದಕ್ಕಾಗಿ ಬಾಹ್ಯೇಂದ್ರಿಯ ವ್ಯಾಪಾರಮುಪಸಂಹೃತ್ಯವೆಂಬ ಭಾಷ್ಯವು. ಮೂಲದಲ್ಲಿ ಯತೇನ್ದ್ರಿಯ ಮನೋಬುದ್ಧಿಯಾದರೇನೇ ವಿಗತೇಚ್ಛಾಭಯಕ್ರೋಧನಾಗುವನು ಎಂಬಭಿಪ್ರಾಯದಿಂದ ಎರಡು ಪ್ರಯೋಗಗಳೂ ಸರಿಯೇ; ಪೌನರುಕ್ತಿದೋಷವೇನೂ ಇಲ್ಲವೆಂದು ಭಾವಿಸತಕ್ಕದ್ದು. ಕಾರ್ಯಕಾರಣಭಾವವಿರುವದರಿಂದ, ಮೂಲದಲ್ಲಿಲ್ಲದೇ ಇರುವ ಅತ ಏವ ಎಂಬ ಪ್ರಯೋಗವು. ಸಾಧಾರಣವಾಗಿ ಮುನಿ ಶಬ್ದದಿಂದ ಮೌನದಿಂದಿರುವನೆಂಬರ್ಥಹೇಳುವದಕ್ಕಿಂತ ಶ್ರೀ ಯತಿವರ್ಯರು ಮಾಡಿರುವ ಅರ್ಥದಲ್ಲಿ ಹೆಚ್ಚು ಸ್ವಾರಸ್ಯವೂ ಪ್ರಕರಣಾನುಗುಣ್ಯವೂ ತೋರಿಬರುತ್ತದೆ. ಮುನಿ ಶಬ್ದಕ್ಕೆ ಮನನ ಶೀಲಃ ಎಂದರ್ಥವೆಂದು ಭಾಷ್ಯ ಬರೆಯಬೇಕಾಗಿತ್ತು, ಅದಕ್ಕೆ ಬದಲಾಗಿ, ಆತ್ಮಾವಲೋಕನ ಶೀಲಃ ಎಂದು ಅರ್ಥಮಾಡಿರುವದರಲ್ಲಿ ಏನೂ ವ್ಯತ್ಯಾಸವಿಲ್ಲವು, ಮುನಿ ಶಬ್ದದಲ್ಲಿ ಜ್ಞಾನಾರ್ಥ ಧಾತುವಿರುವದರಿಂದ, ಈಗ ಪ್ರಕರಣಾನುಗುಣವಾಗಿ ಯಾವುದರ ಜ್ಞಾನವೆಂದರೆ ಆತ್ಮಾವಲೋಕನವು, ಅದರಲ್ಲಿ ನಿರತನೆಂಬರ್ಥವು. ಹೀಗೆ ಈ ಎರಡು ಶ್ಲೋಕಗಳಿಂದ ಜೀವಾತ್ಮನನ್ನು ಚಿನ್ತನ ಮಾಡುವ ಪ್ರಕಾರವನ್ನು ಸಙ್ಗ್ರಹವಾಗಿ ಹೇಳಿ, ಹೀಗೆ ಇಂದ್ರಿಯ ಮನೋಬುದ್ಧಿಗಳನ್ನು ನಿಗ್ರ

**ಭಾ. ಅ. ಉಕ್ತಸ್ಯನಿತ್ಯನೈಮಿತ್ತಿಕಕರ್ಮೇತಿಕರ್ತವ್ಯತಾಕಸ್ಯಕರ್ಮಯೋಗಸ್ಯ ಯೋಗಶಿರಸ್ಕಸ್ಯ ಸುಶಕತಾ ಮಾಹ—**

ಹಿಸಿ, ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸುವ ಅಭ್ಯಾಸಮಾಡುವವನು ಮುಕ್ತನಿಗೆ ಸಮಾನನು ಎಂದು ಹೇಳಲ್ಪಟ್ಟಿತು. ಹೀಗೆ ಈ ಆತ್ಮಚಿನ್ತನದಲ್ಲಿ ವಿಲಕ್ಷಣವಾದ ಆನಂದವಿರುವದರಿಂದಲೇ ಶ್ರೀ ಯಾಮುನೇಯರು ಕರ್ಮಯೋಗವು ಸಾಕ್ಷಾತ್ತಾಗಿಯಾಗಲಿ ಅಥವಾ ಜ್ಞಾನಯೋಗ ಮೂಲಕವಾಗಲಿ ಆತ್ಮಾನುಭೂತಿ ಯನ್ನು ಸಾಧಿಸಿಕೊಡುತ್ತದೆಂದು ಹೇಳಿರುತ್ತಾರೆ.

ಭಾಷ್ಯಾವತಾರಿಕೆಯ ಅರ್ಥವು:—ಅರ್ಜುನನ ಪ್ರಶ್ನೆಯು ಕರ್ಮಸನ್ಯಾಸವಾದ ಜ್ಞಾನಯೋಗ ಮತ್ತು ಕರ್ಮಯೋಗಗಳಲ್ಲಿ ಯಾವುದು ತನಗೆ ಉತ್ತಮವೋ ಅದನ್ನುಪದೇಶಿಸು ಎಂದು ಕೇಳಿದುದರಿಂದ, ಜ್ಞಾನಯೋಗಕ್ಕಿಂತಲೂ ಕರ್ಮಯೋಗವೇ ಶೀಘ್ರ ಫಲದಾಯಕವಾಗಿಯೂ ಸುಕರವಾಗಿಯೂ ಜ್ಞಾನಾಕಾರವನ್ನುಳ್ಳದ್ದಾಗಿಯೂ ಇರುವದರಿಂದ ಶ್ರೇಷ್ಠವೆಂದೂ, ಜ್ಞಾನಯೋಗವು ದುಷ್ಕರವಾಗಿ ವಿಳಂಬದಿಂದ ಫಲಕಾರಿಯಾದುದರಿಂದ ಅದರ ಅಪೇಕ್ಷೆಯನ್ನು ತ್ಯಜಿಸಬಹುದೆಂದೂ, ಅಧ್ಯಾಯಾದಿಯಲ್ಲಿ ಹೇಳಲ್ಪಟ್ಟ ಅಭಿಪ್ರಾಯವನ್ನೇ ನಿಗಮನದಲ್ಲೂ ೨೭, ೨೮, ೨೯ನೆಯ ಶ್ಲೋಕದಲ್ಲಿ ಉಪಪಾದಿಸಿ ಹೇಳಿ ಕರ್ಮಯೋಗಕ್ಕೇನೇ ಸುಶಕತ್ವವನ್ನು ಇನ್ನೊಂದುಸಲ ಅನುವಾದಮಾಡಿ ಹೇಳುತ್ತಾರೆಂದು ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಉಕ್ತಸ್ಯ - ಹಿಂದೆ ಹೇಳಲ್ಪಟ್ಟ, ನಿತ್ಯ ನೈಮಿತ್ತಿಕಕರ್ಮೇತಿಕರ್ತವ್ಯತಾಕಸ್ಯ - ನಿತ್ಯ ನೈಮಿತ್ತಿಕ ಕರ್ಮಗಳು ಅವಶ್ಯಕವಾಗಿ ಅನುಷ್ಠಿಸಲ್ಪಡಲೇಬೇಕೆಂಬ ಅಭಿಪ್ರಾಯವುಳ್ಳ ಮತ್ತು ಯೋಗ ಶಿರಸ್ಕಸ್ಯ - ಆತ್ಮಚಿನ್ತನವೇ ಪ್ರಧಾನವಾಗಿವುಳ್ಳ ಕರ್ಮಯೋಗದ, ಸುಶಕತಾಂ - ಸುಲಭ ಸಾಧ್ಯತೆಯನ್ನು. ಎಂದರೆ ಬೇಸರವಿಲ್ಲದೆ ಪ್ರವರ್ತಿಸಲು ಯೋಗ್ಯವಾಗಿರೋಣವನ್ನು, ಆಹ - ಹೇಳುತ್ತಾರೆ, ಈತನಿಗೆ ಕರ್ಮಯೋಗದಿಂದ ಮನಶ್ಶಾಂತಿ ರೂಪ ಸುಖವು ತನ್ನ ಕರುಣೆಯಿಂದ ಸುಲಭಸಾಧ್ಯವೆಂದು ಈ ಅಧ್ಯಾಯ ಸಮಾಪ್ತಿಯಲ್ಲಿ ಶ್ರೀಕೃಷ್ಣಭಗವಾನರವರು ಉಪದೇಶಿಸಿದರೆಂಬ ಭಾವವು. ಇಲ್ಲಿ ನಿತ್ಯನೈಮತ್ತಿಕಕರ್ಮೇತಿಕರ್ತವ್ಯತಾಕಸ್ಯ ಕರ್ಮಯೋಗಸ್ಯ ಎಂಬ ಪ್ರಯೋಗದಿಂದ ಕರ್ಮಯೋಗಕ್ಕೂ, ನಿತ್ಯ ನೈಮಿತ್ತಿಕಗಳಿಗೂ, ಏನೂ ಸಂಬಂಧವಿಲ್ಲವೆಂದೂ, ಕರ್ಮಯೋಗಕ್ಕೆ ನಿತ್ಯ ನೈಮಿತ್ತಿಕಗಳು ಬೇಕಾಗಿಲ್ಲವೆಂದೂ,, ಹೇಳುವ ಕೆಲವರ ಭ್ರಮರೂಪಾಭಿಪ್ರಾಯಗಳು ನಿರಸ್ತವು. ನಿತ್ಯ ನೈಮಿತ್ತಿಕಗಳು ಕರ್ಮಯೋಗಕ್ಕೂ ಅಙ್ಗವು, ಭಕ್ತಿಯೋಗಕ್ಕೂ ಅಙ್ಗವು. ನಿತ್ಯ ನೈಮಿತ್ತಿಕಗಳಿಂದ ಸೇರಿದ ಯಾವುದಾದರೂ ಯಜ್ಞ ದಾನ ತಪಸ್ಸೇ ಮೊದಲಾದವುಗಳಿಂದ ಸೇರಿದ ಅನುಷ್ಠಾನಕ್ಕೇ ಕರ್ಮಯೋಗವೆಂದು ಹೆಸರು. ನಿತ್ಯನೈಮಿತ್ತಿಕ ಐಚ್ಛಿಕಾಂಶಗಳಿಂದ ಕೂಡಿದ ಅನುಷ್ಠಾನವೇ ಕರ್ಮಯೋಗವೆನಿಸುತ್ತದೆಂದು ಶ್ರೀನಿಗಮಾನ್ತದೇಶಿಕರವರು ಉಪಾಯವಿಭಾಗಾಧಿಕಾರದಲ್ಲಿ"ಕರ್ಮಯೋಗಮಾವುದು?"ಎಂಬುದಕ್ಕೆ ಉತ್ತರದಲ್ಲಿ ಹೇಳಿರುತ್ತಾರೆ. (೬೬೩ನೆಯ ಪುಟ ನೋಡಿ) ಅಲ್ಲಿ ಫಲಸಙ್ಗಾದಿ ರಹಿತಙ್ಗಳಾನ ಕಾಮ್ಯಕರ್ಮಙ್ಗಳೋಡುಮ್ ನಿತ್ಯನೈಮಿತ್ತಿಕಙ್ಗಳೋಡುಮ್ ಪರಿಗೃಹೀತವಾಯಿರುಕ್ಕುಮ್ ಕರ್ಮವಿಶೇಷಮ್"ಎಂದು ಸ್ಪಷ್ಟವಾಗಿ ಹೇಳಿರುತ್ತಾರೆ. ಗೀತೆಯಲ್ಲಿ ಪ್ರಾಧಾನ್ಯದಿಂದ ಹೇಳಿರುವದೇ ಇತಿಕರ್ತವ್ಯತಾಂಶವನ್ನು ತ್ಯಜಿಸಕೂಡದೆಂಬ ಅರ್ಥವು. ಭಕ್ತಿಯೋಗಾವಸ್ಥೆಯಲ್ಲಿ, ಕರ್ಮಯೋಗದ ಐಚ್ಛಿಕಾಂಶ ಬೇಕಾಗಿಲ್ಲದಿದ್ದರೂ, ನಿತ್ಯ ನೈಮಿತ್ತಿಕಗಳನ್ನೂ ಅಙ್ಗವಾಗಿ ಅನುಷ್ಠಿಸಿ, ಉಪಾಸನೆಯನ್ನು ಮಾಡಬೇಕಾದುದರಿಂದ,ಈ ನಿತ್ಯನೈಮಿತ್ತಿಕಗಳು ದೇಹಾವಸಾನದವರೆಗೂ ಅನುಷ್ಠಿಸತಕ್ಕದ್ದೆಂಬ ಅರ್ಥದಲ್ಲಿ ಕರ್ಮಯೋಗವನ್ನು ಯಾವಜ್ಜೀವವೂ ಅನುಷ್ಠಿಸತಕ್ಕದ್ದೆಂದು ಶ್ರೀ ಯತಿವರ್ಯರು ಅಪ್ಪಣೆಕೊಡಿಸಿ

ಮೂ. ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ ॥ ೨೯.

ಇತಿ ಶ್ರೀ ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನ ಸಂವಾದೇ ಕರ್ಮಸನ್ಯಾಸಯೋಗೋನಾಮ ಪಂಚಮೋಽಧ್ಯಾಯಃ.
ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.

ರುತ್ತಾರೆ. ೧೮-೬ನೆಯ ಶ್ಲೋಕದ ಭಾಷ್ಯವನ್ನು ಪರಾಂಬರಿಸಿ; ಇಷ್ಟೇ ಅಲ್ಲವು. ಇತಿಕರ್ತವ್ಯತಾರೂಪ ಕಾಮ್ಯಕರ್ಮಗಳು, ತನಗೆ ಸಂಬಂಧಪಟ್ಟ ಮಾತಾಪಿತೃಗಳು, ಕಳತ್ರ ಪುತ್ರ ಭೃತ್ಯಾದಿಗಳು ಇವರೇ ಮೊದಲಾದವರ ಸಂರಕ್ಷಣಾದಿ ರೂಪನಾದವುಗಳೂ ಕೂಡ ಆವಶ್ಯಕವಾಗಿ ಆ ಪ್ರಯಾಣದವ ರೆಗೂ ಫಲಸಙ್ಗಾದಿಗಳನ್ನು ತೊರೆದು ಅನುಷ್ಠಿಸತಕ್ಕವುಗಳೇ. ಇವುಗಳನ್ನೂ ಗೃಹಸ್ಥನು ಬಿಡಲು ಸಾಧ್ಯವಿಲ್ಲವೆಂದೂ ಸಹ ಮುಂದೆ ೧೮ - ೬ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗಿರುವಾಗ ಕರ್ಮಯೋಗಕ್ಕೆ ನಿತ್ಯನೈಮಿತ್ತಿಕಗಳು ಸಂಬಂಧಿಸಿದವಲ್ಲವೆಂಬ ಭಾವವು ಶಾಸ್ತ್ರ ವಿರುದ್ಧವಾದುದು. ಇದನ್ನು ತಿಳಿಸುವದಕ್ಕಾಗಿಯೇ ನಿತ್ಯನೈಮಿತ್ತಿಕಕರ್ಮೇತಿಕರ್ತವ್ಯತಾಕಸ್ಯ ಕರ್ಮಯೋಗಸ್ಯ ಎಂಬ ಪ್ರಯೋಗವು. ಇಂತಹ ಕರ್ಮಯೋಗವು, ಯೋಗ ಶಿರಸ್ಕ ವಾದುದು ಎಂದು ಹೇಳಲ್ಪಟ್ಟಿತು. ಆತ್ಮಚಿನ್ತನದಿಂದ ಪ್ರಾಪ್ತವಾಗುವ ಆತ್ಮಾವಲೋಕನ ವನ್ನೇ ಪ್ರಾಧಾನ್ಯವಾಗಿ ಉಳ್ಳದು ಎಂದು ಹೇಳಲ್ಪಟ್ಟಿತು. ಆದುದರಿಂದ ಕರ್ಮಯೋಗಕ್ಕೇನೆ ಜ್ಞಾನಯೋಗಾಪೇಕ್ಷೆಯಿಲ್ಲದೆ ಈ ಆತ್ಮಾವಲೋಕನ ಸಿದ್ಧಿಪ್ರಾಪ್ತಿಯಲ್ಲಿ ಸುಶಕತ್ವವನ್ನು ಸ್ಥಾಪಿಸಿ ಹೇಳುತ್ತಾರೆ ಎಂಬುದು ಅವತಾರಿಕೆಯ ಅಭಿಪ್ರಾಯವು. ಅಧ್ಯಾಯಾದಿಯಲ್ಲಿ ಹೇಳಿದ ವಿಷ ಯವೇ ಈಗ ನಿಗಮನವಮಾಡಲ್ಪಡುತ್ತದೆ. ಈ ನಿತ್ಯ ನೈಮಿತ್ತಿಕಗಳು ಭಕ್ತಿಯೋಗಕ್ಕೆ ಅಙ್ಗ ವಾಗಿ ದೇಹಾವಸಾನದವರೆಗೂ ಅನುಷ್ಠಿಸತಕ್ಕದ್ದೆಂದು ಶ್ರುತಿಸ್ಮೃತಿಗಳಲ್ಲೂ ಹಾಗೆಯೇ ಮುಂದೆ ಇದೇ ಗ್ರಂಥದಲ್ಲೇ ೧೮ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದ್ದರೂ ಉಪಾಸಕನಿಗೆ ಇದು ಬೇಕಿಲ್ಲ ವೆಂಬ ಕೆಲವರಭಿಪ್ರಾಯವು ಶಾಸ್ತ್ರ ಸಮ್ಮತವಾಗುವದಿಲ್ಲವು. ಆದರೆ ಹಾಗೆ ಹೇಳುವ ಮಹ ನೀಯರೇ ನಿತ್ಯ ನೈಮಿತ್ತಿಕಾನುಷ್ಠಾನಗಳಲ್ಲಿ ವಿಶೇಷ ಶ್ರದ್ಧೆಯುಳ್ಳವರಾಗಿರುವದನ್ನು ಕಂಡಿರು ವೆವು. ಬಾಯಲ್ಲಿಮಾತ್ರ ಜ್ಞಾನಿಗೆ ಕರ್ಮಾನುಷ್ಠಾನವು ಬೇಕಿಲ್ಲವೆಂದು ಹೇಳುತ್ತಾರೆ. ಅನುಷ್ಠಾ ನವೇ ಮುಖ್ಯವಾದುದರಿಂದ ಅಂತವರಲ್ಲಿ ನಮಗೆ ವಿಶೇಷ ಗೌರವವೇ ವಿನಾ ಅನ್ಯಥಾ ಇಲ್ಲವು.

**ಮೂಲಕ್ಕೆ ಅರ್ಥವು:**—ಹಿಂದೆ ಅನೇಕ ಶ್ಲೋಕಗಳಲ್ಲಿ ಈ ಮೇಲೆ ಹೇಳಿದ ಲಕ್ಷಣಗಳನ್ನುಳ್ಳ ಕರ್ಮಯೋಗವನ್ನು ಅನುಷ್ಠಿಸಿದವನು ಸುಲಭವಾಗಿಯೂ ಶೀಘ್ರವಾಗಿಯೂ ಬ್ರಹ್ಮನಿರ್ವಾಣ ವನ್ನು ಹೊಂದುವನೆಂದೂ, ಈ ಆತ್ಮೋಪಾಸನೆಯಲ್ಲಿ ಉಂಟಾಗುವ ಸುಖವು ನಿರತಿಶಯ ವಾದುದೆಂದೂ ಹೇಳಿ, ಮುಕ್ತೆ ವಿಗತಃ - ಆತನು ಮುಕ್ತನಿಗೂ ಕೂಡ ಸಮಾನನೇ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದರು. ಆ ಸುಖಪ್ರಾಪ್ತಿಯಲ್ಲಿ ಅರ್ಜುನನಿಗೆ ಪೂರ್ಣನಂಬಿಕೆಯ ನ್ನುಂಟುಮಾಡುವದಕ್ಕಾಗಿ, ಹಾಗೆ ಶಾನ್ತಿಯನ್ನುಂಟುಮಾಡುವವನು ಕರ್ಮಯೋಗಕ್ಕೆ ಸೇರಿದ ಸಮಸ್ತ ಯಜ್ಞತಪಸ್ಸುಗಳಿಗೂ ಇತರವಾದ ಯಜ್ಞತಪಸ್ಸುಗಳಿಗೂ ಭೋಕ್ತಾವಾದ ತಾನೇ; ತನ್ನ ಪ್ರೀತ್ಯರ್ಥವಾಗಿ ಅವುಗಳನ್ನು ಮಾಡುವದರಿಂದ ಅದರಿಂದ ಪ್ರೀತನಾದವನು ತಾನೇಯಾದುದರಿಂದ ಅಂತಹ ಸುಖರೂಪವಾದ ಮನಶ್ಶಾಂತತೆಯನ್ನು ಸುಲಭವಾಗಿ ತನ್ನ ಅನುಗ್ರಹದಿಂದ ಹೊಂದು ತ್ತಾನೆಂದು ಉಪದೇಶಿಸಿ ಈ ಅಧ್ಯಾಯವನ್ನು ಮುಗಿಸುತ್ತಾರೆ. **ಯಜ್ಞತಪಸಾಂ** - ಪಂಚಮಹಾ

ಯಜ್ಞಗಳೇನು ಮತ್ತು ಶಾಸ್ತ್ರಚೋದಿತಗಳಾದ ಇತರ ಯಜ್ಞಗಳೇನು, ಕೃಚ್ಛ್ರ ಚಾಂದ್ರಾಯಣ ಉಪವಾಸಾದಿ ತಪಸ್ಸುಗಳೇನು, ಇವುಗಳನ್ನು, ಭೋಕ್ತಾರಂ - ಭೋಗ್ಯವಾದುದಾಗಿ ಅನುಭವಿಸುವ, ಸರ್ವಲೋಕಮಹೇಶ್ವರಮ್ - ಸಮಸ್ತ ಚಿದಚಿದ್ವರ್ಗಕ್ಕೂ ನಿಯಂತೃವಾಗಿರುವ, ಇದರಿಂದ ಬ್ರಹ್ಮರುದ್ರೇಂದ್ರ ಸೂರ್ಯಾಗ್ನಿಗಳಿಗೂ ಕೂಡ ನಿಯಂತೃವೆಂದು ಹೇಳಿದಂತಾಯಿತು; ಮಹೇಶ್ವರ ಶಬ್ದದಿಂದ ಈಶ್ವರರಿಗೂ ಈಶ್ವರನೆಂದು ತೋರಿಬರುತ್ತದೆ, ಸರ್ವಭೂತಾನಾಂ- ಸರ್ವಪ್ರಾಣಿಗಳಿಗೂ, ಸುಹೃದಂ - ಪರಮ ಸುಹೃತ್ತಾಗಿರುವ, ಮಾಂ - ನನ್ನನ್ನು, ಜ್ಞಾತ್ವಾ- ತಿಳಿದು, ಕರ್ಮಯೋಗವನ್ನು ಅನುಷ್ಠಿಸಿದರೆ, ಶಾನ್ತಿಂ - ಮನಶ್ಶಾಂತಿಯನ್ನು, ನಿರತಿಶಯಾನಂದವನ್ನು, ಋಚ್ಛತಿ - ಪ್ರೀತನಾದ ನನ್ನ ಮೂಲಕವಾಗಿ ಹೊಂದುತ್ತಾನೆ. ಹಿಂದೆ ೩ನೆಯ ಅಧ್ಯಾಯದ ೩೦ನೆಯ ಶ್ಲೋಕದಲ್ಲಿ ಕರ್ಮಯೋಗಕ್ಕೆ ಪ್ರಾಶಸ್ತ್ಯವು ಏತರಿಂದೆಂದರೆ, ಕರ್ತೃತ್ವ ಫಲಮಮತೆಗಳ ತ್ಯಾಗಪೂರ್ವಕ ಅನುಷ್ಠಾನಗಳನ್ನೆಲ್ಲಾ "ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮ ಚೇತಸಾ" ಎಂದು ಹೇಳಿರುವಹಾಗೆ ಪರಮ ಪುರುಷನಲ್ಲಿ ಸಮರ್ಪಿಸುವದರಿಂದ ಎಂದು ಹೇಳಲ್ಪಟ್ಟಿತು. ಅದನ್ನೇ ಇಲ್ಲಿಯೂ ಹೇಳಿ, ಹಾಗೆ ಸಮರ್ಪಿಸಲು ತಾನು ಎಂತಹನೆಂದು ಹೇಳಲು ಹೊರಟು, ತಾನು ಸರ್ವಯಜ್ಞ ಭೋಕ್ತೃವೆಂದೂ ಸರ್ವಲೋಕ ಮಹೇಶ್ವರನೆಂದೂ ಸುಹೃದಂ ಸರ್ವಭೂತಾನಾಂ ಎಂದೂ, ಮೂರು ವಿಶೇಷಣಗಳನ್ನು ತನಗೆ ಕೊಟ್ಟುಕೊಂಡಿದ್ದಾರೆ. ಇಲ್ಲಿ ಯಜ್ಞ ತಪಸ್ಸುಗಳಿಗೆ ಶ್ರೀಕೃಷ್ಣನು ಭೋಕ್ತಾ ಎಂದು ಹೇಳಿರುವದರಿಂದ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ವರ್ಣಾಶ್ರಮಧರ್ಮಗಳಾಗಿರುವ, ಮತ್ತು ಕರ್ಮಯೋಗಿಯು ತನ್ನ ಉಪಾಯ ಸಾಧನೆಗೆ ಅಂಗವಾದ, ನಿತ್ಯ ನೈಮಿತ್ತಿಕಾನುಷ್ಠಾನಗಳನ್ನು ಅವಶ್ಯಕವಾಗಿ ಅನುಷ್ಠಿಸತಕ್ಕದ್ದೆಂದೂ, ಅಂತಹ ಅನುಷ್ಠಾನಗಳಿಂದ ಶ್ರೀಕೃಷ್ಣನೇ ಭೋಕ್ತೃವಾಗಿ ಸುಪ್ರೀತನಾಗುವನೆಂದೂ, ಹೇಳಿದಂತಾಯಿತು. ಮೋಕ್ಷಾರ್ಥಿಯು ಸರ್ವಾಭೀಷ್ಟಪ್ರದನಾದ ಸರ್ವೇಶ್ವರನನ್ನೇ ಆಶ್ರಯಿಸತಕ್ಕದ್ದು ; ನಿತ್ಯನೈಮಿತ್ತಿಕಗಳಲ್ಲಾದರೋ ಅನ್ಯದೇವತಾಭಜನ ಉಂಟಾಗುವದಿಲ್ಲವೇ? ಅನ್ಯದೇವತಾಭಜನೆಯು ಐಹಿಕಾಪೇಕ್ಷೆ ಇರುವವನಿಗೆ ಒಂದುವೇಳೆ ಯುಕ್ತವು ; ಮೋಕ್ಷಾರ್ಥಿಗೆ ಸರಿಯೋ? ಎಂದರೆ, ಅಹರಹಸ್ಸಂಧ್ಯಾಮುಪಾಸೀತ ಇತ್ಯಾದಿ ವಿಧಿಗಳಿಗನುಸಾರವಾಗಿ ಮುಮುಕ್ಷುವಾಗಲಿ ಅಥವಾ ಪ್ರಪನ್ನನೇ ಆಗಲಿ, ಅಧಿಕಾರಿಯು ಅನುಷ್ಠಿಸುವದು ಅತ್ಯಾವಶ್ಯಕವು ; ಇದರಿಂದಲೇ ಶ್ರೀ ಭಾಷ್ಯಕಾರರ ಅವತಾರಿಕೆಯಲ್ಲಿ "ನಿತ್ಯನೈಮಿತ್ತಿಕಕರ್ಮೇತಿಕರ್ತವ್ಯತಾಕಸ್ಯ" ಎಂಬ ಪ್ರಯೋಗವು. ಈ ಅನುಷ್ಠಾನದಿಂದ ಆಜ್ಞಾ ಕೈಂಕರ್ಯವು ನೆರವೇರಿದುದರಿಂದ ಭಗವನ್ನಿಗ್ರಹವು ತಪ್ಪಿತು. ಅನುಷ್ಠಾನಾನಂತರ ತ್ಯಾಗವನ್ನು ಹೇಳುವದರಿಂದ ಅನ್ಯದೇವತಾ ಸಂಬಂಧವನ್ನು ನೀಗಿಕೊಂಡು ಶ್ರೀಮನ್ನಾರಾಯಣ ಪ್ರೀತ್ಯರ್ಥಂ ಎಂದಾರಂಭಿಸಿ "ಅನೇನ ಕರ್ಮಣಾ ಭಗವಾನ್ ಪ್ರಿಯತಾಂ ವಾಸುದೇವಃ" ಎಂದು ಹೇಳುವದರಿಂದ ಸರ್ವಲೋಕ ಮಹೇಶ್ವರನು ಸುಪ್ರೀತನಾಗುವನು. ನಿತ್ಯ ನೈಮಿತ್ತಿಕಾದಿಗಳಲ್ಲಿ ಸೂರ್ಯಾಗ್ನಿಗಳೂ ಬ್ರಹ್ಮರುದ್ರೇಂದ್ರಾದಿಗಳೂ ಆರಾಧಿಸಲ್ಪಟ್ಟರೂ ಸರ್ವ ಕರ್ಮಾರಾಧ್ಯನಾದ ಶ್ರೀ ಹರಿಯೇ ಅರ್ಚಿಸಲ್ಪಡುವನು. ಈ ದೇವತೆಗಳ ಮೂಲಕವಾಗಿ ತತ್ತಚ್ಛರೀರಕನಾಗಿರುವ ಶ್ರೀ ಹರಿಗೇನೆ ಸಮಸ್ತ ಹವಿಸ್ಸೂ, ಮರ್ಯಾದೆಗಳೂ ಹೋಗಿ ಸೇರುತ್ತವೆ. "ಅಹಂ ಹಿ ಸರ್ವ ಯಜ್ಞಾನಾಂ ಭೋಕ್ತಾಚ ಪ್ರಭುರೇವ ಚ" ಎಂದು ಸ್ವಾಮಿಯೇ ಹೇಳಿಕೊಂಡಿರುತ್ತಾರೆ. ಆದುದರಿಂದ ಸರ್ವಲೋಕ ಮಹೇಶ್ವರನೆಂಬ ಪ್ರಯೋಗವು. ಸೂರ್ಯ, ಮಿತ್ರ, ಅಗ್ನಿ, ವೈಶ್ವಾನರ, ಇಂದ್ರಾದಿ ಶಬ್ದಗಳು ವ್ಯುತ್ಪತ್ತಿಮೂಲಕ ಸರ್ವಲೋಕ ಮಹೇಶ್ವರನನ್ನೇ ಬೋಧಿಸುತ್ತವೆ ಎಂದು ಶ್ರೀ ವ್ಯಾಸಶಿಷ್ಯರಾದ ಜೈಮಿನ್ಯಾಚಾರ್ಯರು ಹೇಳಿರುತ್ತಾರೆ. ಇದು "ಸಾಕ್ಷಾದಪ್ಯವಿರೋಧಂ ಜೈಮಿನಿಃ" ಎಂಬ ಬ್ರಹ್ಮಸೂತ್ರದಲ್ಲಿ ವ್ಯಕ್ತವು. ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಾಧಿಕಾರಿ

ಛಾ. ಯಜ್ಞತಪಸಾಂ ಭೋಕ್ತಾರಂ ಸರ್ವಲೋಕಮಹೇಶ್ವರಂ ಸರ್ವಭೂತಾನಾಂ ಸುಹೃದಂ ಮಾಂ ಜ್ಞಾತ್ವಾ ಶಾನ್ತಿಂ ಮೃಚ್ಛತಿ - ಕರ್ಮಯೋಗಕರಣ ಏವ ಸುಖ ಮೃಚ್ಛತಿ

ಗಳೆಲ್ಲರಿಗೂ ಈ ನಿತ್ಯನೈಮಿತ್ತಿಕಾನುಷ್ಠಾನವು ತಪ್ಪಿದ್ದಲ್ಲವು. ಆದರೆ ಯೋಗಕಾಲದಲ್ಲಿ ಮಾತ್ರ ಅದಕ್ಕೆ ತಾತ್ಕಾಲಿಕ ಉಪರಮ ಉಂಟು. ಆ ಅವಸ್ಥೆ ಕಳೆದನಂತರ ಆವಶ್ಯಕವಾಗಿ ಅನುಷ್ಠೇಯ ಗಳೇ. ಲೋಕದಲ್ಲಿ ಸಾಧಾರಣ ಸುಹೃತ್ತುಗಳಿಗಾಗಿ ಅನೇಕ ಕಾರ್ಯಗಳನ್ನು ಕಷ್ಟಪಟ್ಟು ಮಾಡಿದರೂ ಅವನ್ನು ಕ್ಲೇಶವೆಂದು ಭಾವಿಸುವದಿಲ್ಲವು. ಲೋಕದಲ್ಲಿ ದೊರೆಯುವ ಎಲ್ಲಾ ದೊಡ್ಡ ಮನುಷ್ಯರಿಗಿಂತಲೂ ದೊಡ್ಡವನಾಗಿ, ಎಲ್ಲಾ ಸುಹೃತ್ತುಗಳಿಗಿಂತ ಪರಮ ಸುಹೃತ್ತಾಗಿರುವವನಿಗೆ ಮಾಡುವ ಆರಾಧನಾರೂಪ ಕರ್ಮಯೋಗವು ಎಂದಿಗಾದರೂ ಕಷ್ಟವಾಗಿ ಕ್ಲೇಶಕರವಾಗಿ ತೋರೀತೆ? ಮುಮುಕ್ಷುವು ಇಂತಹ ಕರ್ಮಯೋಗಕೈಂಕರ್ಯವನ್ನೆಸಗಿ ಪರಮಾನಂದವನ್ನು ಹೊಂದುವನಾದುದರಿಂದ ಶಾನ್ತಿಮೃಚ್ಛತಿ ಎಂದು ಹೇಳಲ್ಪಟ್ಟಿತು. ಈತನು ಸಾಧಾರಣ ಸುಹೃತ್ತಲ್ಲವು. ಸುಹೃದಂ ಸರ್ವಭೂತಾನಾಂ ತಾನು ಸರ್ವ ಪ್ರಾಣಿಗಳಿಗೂ ಸುಹೃತ್ತೆಂದು ಸರ್ವಸ್ಯ ಶರಣಂ ಸುಹೃತ್ತೆಂಬ ಶ್ವೇತಾಶ್ವತರ ಉಪನಿಷತ್ತಿನ ಮತ್ತು "ಸರ್ವಲೋಕ ಶರಣ್ಯಾಯ" (ರಾ. ಯು.) ಎಂಬ ಇತಿಹಾಸೋಕ್ತಿಯ ಅರ್ಥವೂ ಇಲ್ಲಿ ಉಪಪಾದಿಸಲ್ಪಟ್ಟಿತು. ಗಜ, ಕಾಳೀಯ ಸರ್ಪ, ಕಾಕ ಇವುಗಳಿಗೆಲ್ಲಾ ಅನುಗ್ರಹಿಸಿದವನು ಬುದ್ಧಿಮತ್ತ್ವನರಾಶ್ರೇಷ್ಠಾಃ ಎಂದು ಹೇಳಿರುವಹಾಗೆ ಬುದ್ಧಿಯಿಲ್ಲದ ತಿರ್ಯಗ್ಜಂತುವಿಗಿಂತ ಮನುಷ್ಯನು ಶ್ರೇಷ್ಠನಾದುದರಿಂದ ಆತನು ಮಾಡುವ ಯತ್ಕಿಂಚಿತ್ ಸುಕೃತರೂಪವಾದ ಉಪಾಯಾನುಷ್ಠಾನದಿಂದ ಪ್ರೀತನಾಗಿ ಅನುಗ್ರಹಿಸುವದಕ್ಕಾಗಿ ನಿರೀಕ್ಷಣೆಮಾಡುವದರಿಂದ ತಾನು ಪರಮ ಸುಹೃತ್ತೆಂದು ಹೇಳಿಕೊಂಡಿರುತ್ತಾನೆ. ಪರಮಸುಹೃತ್ತಾದುದರಿಂದ ಮುಮುಕ್ಷುವಿನ ಕರ್ಮಯೋಗರೂಪಸಾಧನವು ಎಂದಿಗೂ ವಿತಥವಾಗದು ಎಂಬ ಅಭಿಪ್ರಾಯವು. ಇಂತಹ ವಿಷಯಗಳನ್ನೆಲ್ಲಾ ಜ್ಞಾಪಕದಲ್ಲಿಟ್ಟು ಈ ಸಾಧನಾನುಷ್ಠಾನವನ್ನು ಮಾಡಿದರೆ, ಅದರಿಂದ ಪ್ರೀತನಾದ ತನ್ನ ಮೂಲಕ ಪರಮಾನಂದವನ್ನು ಹೊಂದುವನೆಂದು ಶಾಂತಿ ಮೃಚ್ಛತಿ ಎಂದು ಹೇಳಲ್ಪಟ್ಟಿತು.

ಭಾಷ್ಯಾರ್ಥವು:— ಈ ಅಧ್ಯಾಯಾದಿಯಲ್ಲಿ "ಸಂನ್ಯಾಸಂ ಕರ್ಮಣಾಂ ಕೃಷ್ಣ" ಇತ್ಯಾದಿಯಿಂದ ಆತ್ಮಾವಲೋಕನ ಸಿದ್ಧಿಗೆ ಜ್ಞಾನಯೋಗವು ಸುಕರವೋ ಕರ್ಮಯೋಗವು ಸುಕರವೋ ಎಂಬ ಅರ್ಜುನನ ಪ್ರಶ್ನೆಗೆ ಕರ್ಮಯೋಗವೇ ಸುಕರವು ಎಂದು ಹಿಂದೆ ಉಪಪಾದಿಸಿ ಹೇಳಿದ ಅರ್ಥವನ್ನೇ ಈ ಶ್ಲೋಕದಲ್ಲೂ ನಿಗಮನಮಾಡಿ ಹೇಳುವವರಾಗಿ, ಇದಕ್ಕೆ ಸುಶಕತಾ ಹೇಗೆ ಎಂದರೆ, ಇದರಲ್ಲಿ ಭಗವದನುಗ್ರಹವನ್ನು ಹೊಂದುವದು ಸುಲಭವೆಂದು ಸಕಾರಣವಾಗಿ ತಿಳಿಸುತ್ತಾರೆ. ಮೊದಲು ಅನ್ವಯ ಕ್ರಮವನ್ನು ತೋರ್ಪಡಿಸುತ್ತಾರೆ, ಯಜ್ಞತಪಸಾಂ - ನಿತ್ಯ ನೈಮಿತ್ತಿಕ ರೂಪಗಳಾದ ಪಂಚಮಹಾ ಯಜ್ಞಗಳ, ಯಜ್ಞಯಾಗಾದಿಗಳ, ಮತ್ತು ಕೃಛ್ರಚಾಂದ್ರಾಯಣಾದಿಗಳ, ಭೋಕ್ತಾರಂ - ಭೋಕ್ತಾವಾದ ಸರ್ವಲೋಕಮಹೇಶ್ವರನ್ - ಸಮಸ್ತ ಲೋಕೇಶ್ವರರುಗಳಿಗೂ ಆತ್ಮವಾಗಿ ನಿಯಂತಾವಾಗಿರುವದರಿಂದ ಸರ್ವ ಶ್ರೇಷ್ಠನಾಗಿ ನಿಯಾಮಕನಾಗಿರುವ, ಸರ್ವಭೂತಾನಾಂ - ಸರ್ವ ಪ್ರಾಣಿಗಳಿಗೂ, ಸುಹೃದಂ ಮಾಂ - ಹಿತವನ್ನುಂಟುಮಾಡುವನಾಗಿರುವ, ನನ್ನನ್ನು, ಜ್ಞಾತ್ವಾ - ತಿಳಿದು, ಎಂದರೆ, ತಿಳಿಯೋಣದರಿಂದ, ಶಾನ್ತಿ ಮೃಚ್ಛತಿ - ಎಂದರೆ, ಕರ್ಮಯೋಗ ಕರಣ ಏವ - ಕರ್ಮಯೋಗಾನುಷ್ಠಾನ ದೆಶೆಯಲ್ಲಿಯೇ, ಸುಖ ಮೃಚ್ಛತಿ - ಸುಖವನ್ನು ಹೊಂದುವನು. ಇಲ್ಲಿ ಶಾನ್ತಿ ಎಂದರೆ, ಮೋಕ್ಷವೆಂಬರ್ಥವಲ್ಲವು ; ಏಕೆಂದರೆ, ಇದು ಜೀವಾತ್ಮ ಚಿನ್ತನ ಪ್ರಕರಣವಾದುದರಿಂದ ಇನ್ನೂ ಕರ್ಮಯೋಗದಲ್ಲೇ ಇರುವವನಿಗೆ ಮೋಕ್ಷಾನಂದವೆಲ್ಲಿಯದು ? ಆದುದರಿಂದ ಸುಖಮೃಚ್ಛತಿ-ಸುಖ

ವನ್ನು ಹೊಂದುವನು ಎಂಬ ಪ್ರಯೋಗವು; ಆ ಸುಖವೆಂಥಾದ್ದೆಂದರೆ, ಹಿಂದೆ "ಸುಖಂಬಂಧಾತ್ತು ಮುಚ್ಯತೇ" (ಗೀ. ಅ. ೩) ಎಂಬಿವೇ ಮೊದಲಾದವುಗಳಿಂದ ಹೇಳಲ್ಪಟ್ಟ ಮನಃಕ್ಲೇಶವಿಲ್ಲದ ಸ್ಥಿತಿಯು. ಇದು ಕರ್ಮಯೋಗಾನುಷ್ಠಾನಕಾಲದಲ್ಲೇ ಪ್ರಾಪ್ತವಾಗುವದಾದುದರಿಂದ ಕರ್ಮ ಯೋಗಕರಣೇ ಏವ ಸುಖಪ್ರವೃತ್ತಿ ಎಂದು ವ್ಯಾಖ್ಯಾನಮಾಡಿರುತ್ತಾರೆ. ಆದರೆ ಕರ್ಮ ಯೋಗಾನುಷ್ಠಾನವು ಕ್ಲೇಶಕರವಲ್ಲವೇ? ಎಂದರೆ, ಕ್ಲೇಶಾವಹವಲ್ಲವೆಂದು ಹೇಳುವದಕ್ಕಾಗಿಯೇ (೧) ಭೋಕ್ತಾರಂ ಯಜ್ಞತಪಸಾಂ (೨) ಸರ್ವಲೋಕ ಮಹೇಶ್ವರಂ (೩) ಸುಹೃದಂ ಸರ್ವ ಭೂತಾನಾಂ ಎಂದು ಮೂರು ವಿಶೇಷಣಗಳು. ದೊಡ್ಡ ಮನುಷ್ಯನನ್ನು ಮನೆಗೆ ಔತನಕ್ಕೆ ಕರೆದ ವೇಳೆಯಲ್ಲೇ ಉಂಟಾಗುವ ದೇಹಾಯಾಸವೇ ನಮಗೆ ತುಂಬಾ ಹಿತಕರವಾಗಿ ಮನಶ್ಶಾಂತಿಯ ನ್ನುಂಟುಮಾಡುವದು ನಮಗೇನೇ ಪ್ರತ್ಯಕ್ಷಸಿದ್ಧವು. ಆತನು ನಮಗೆ ಪರಮ ಸುಹೃತ್ತಾಗಿ ನಿರತಿಶಯ ಸುಖವನ್ನುಂಟುಮಾಡುವ ಯೋಗ್ಯತೆಯುಳ್ಳವನಲ್ಲವು. ಆದರೂ ಅವನಿಗಾಗಿ ಪಟ್ಟ ದೇಹಾಯಾಸವು ಆಯಾಸವಾಗದೆಯೂ ಮನಶ್ಶಾಂತಿಯನ್ನು ಉಂಟುಮಾಡುವದಾಗಿರುತ್ತದೆ. ಅದಕ್ಕೆ ಬದಲಾಗಿ,ಯಜ್ಞಾದಿ ಹವಿಸ್ಸಿನ ಭೋಕ್ತೃವಾಗಿ ಊಟಮಾಡುವವನೂ,ಅವುಗಳಿಂದ ಪ್ರೀತ ನಾಗಿ ಆರಾಧ್ಯನೂ, ಆದರಿಂದ ನಮ್ಮ ನಿರತಿಶಯ ಸುಖವನ್ನೇ ಉಂಟುಮಾಡಬೇಕೆಂದು ಕಾದಿರುವ ವನೂ, ಹೀಗಿರುವವನು ಸಮಸ್ತಲೋಕಾಧಿಪನಿಗೂ ಈಶ್ವರನಾಗಿರುವ ಶ್ರೀಕೃಷ್ಣನೇ ಆದರೆ, ನಮಗೆ ಆಯಾಸವೆಲ್ಲಿಯದು? ಕ್ಲೇಶವೆಲ್ಲಿಯದು? ಸಂಪೂರ್ಣ ಮನಶ್ಶಾಂತಿಯುಂಟೆಂಬುದು ಸಿದ್ಧವು. ಆದುದರಿಂದ ಈ ಕರ್ಮಯೋಗದಿಂದ, ಆರಾಧ್ಯನು, ಹವಿರ್ಭೋಕ್ತಾವಾದವನು ನಮಗೆ ಪರಮ ಹಿತವನ್ನುಂಟುಮಾಡುವ ಪರಮಸುಹೃತ್ತಾಗಿರುವ, ಸರ್ವಲೋಕಾಧೀಶನಾದ ಶ್ರೀಕೃಷ್ಣಭಗವಾನ್ ಎಂಬ ಜ್ಞಾನದಿಂದ ಕರ್ಮಯೋಗವನ್ನು ಅನುಷ್ಠಿಸತಕ್ಕದ್ದೆಂದು "ಜ್ಞಾತ್ವಾ" ಎಂದು ಮೂಲ ದಲ್ಲಿ ಹೇಳಲ್ಪಟ್ಟಿತು. ಆದುದರಿಂದ ಜ್ಞಾತ್ವಾ ಎಂದರೆ, ತಿಳಿದು ಕರ್ಮಯೋಗವನ್ನು ಅನುಷ್ಠಿಸಿ ದರೆ ಎಂಬರ್ಥವು. ಕರ್ಮಯೋಗವು ಇಂತಹ ಸಾರ್ವಭೌಮ ಸೇವೆ ಎಂಬ ಜ್ಞಾನವಿದ್ದರೆ ಆಯಾಸವೆಲ್ಲಿಯದು? ಸರ್ವಲೋಕ ಮಹೇಶ್ವರಂ ಎಂದರೆ, ಸರ್ವೇಷಾಂ ಲೋಕೇಶ್ವರಾಣಾ ಮಪೀಶ್ವರಂ ಸಮಸ್ತ ಲೋಕಗಳಲ್ಲಿರುವ ಈಶ್ವರರಿಗೂ ಕೂಡ ಈಶ್ವರನು ಎಂಬುದಕ್ಕೆ ಪ್ರಮಾಣ ವನ್ನು ಉದಾಹರಿಸುತ್ತಾರೆ. "ಈಶ್ವರಾಣಾಂ-ಲೋಕದಲ್ಲಿ ನಿಯಾಮ್ಯವರ್ಗವಾದ ವಿಭೂತಿಯನ್ನೂ ಐಶ್ವರ್ಯವನ್ನೂ ಹೊಂದಿರುವರೆಲ್ಲರಿಗಿಂತಲೂ ಪರಮಂ ಮಹೇಶ್ವರನ್ ಸರ್ವೋತ್ಕೃಷ್ಟನಾಗಿ ತನ ಗಿಂತಲೂ ಅಧಿಕನಿಲ್ಲದಿರುವ ಮಹೇಶ್ವರನು ಶ್ರೀಮನ್ನಾರಾಯಣನಾದ ತಾನೇ ಎಂಬರ್ಥವು ; ಪರ ಮಂ ಎಂಬ ಶಬ್ದಕ್ಕೆ ಪರಾ ಮಾ ಯಸ್ಯ ಸಃ ಎಂಬ ವ್ಯುತ್ಪತ್ತಿಯಿಂದ ಶ್ರೇಷ್ಠಳಾದ ಲಕ್ಷ್ಮಿಯು ಯಾರಿಗೆ ಪತ್ನಿಯೋ ಅಂತಹ ಮಹೇಶ್ವರನೆಂದೂ ಅರ್ಥಮಾಡಬಹುದು;ಇದರಿಂದ ಪುರುಷಸೂಕ್ತ ದಲ್ಲಿ ಪ್ರತಿಪಾದಿಸಿರುವನಾಗಿ ಪರತತ್ವ,ಪರಮಾತ್ಮ,ಪರಂಜ್ಯೋತಿ ಇತ್ಯಾದಿ ಶಬ್ದಗಳಿಗೆ,ಎಲ್ಲಿ ಅನ್ವ ಯವೆಂದರೆ, "ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ" ಎಂಬರ್ಥವು, ಈ ಪರಮಂ ಎಂಬ ಶಬ್ದದಿಂದ ಬೋಧಿಸಲ್ಪಟ್ಟಿತೆಂದೂ ಭಾವಿಸಬಹುದು. ಈ ಶ್ರುತಿಯನ್ನು ಉದಾಹರಿಸಿರುವದು ಸರ್ವಲೋಕ ಮಹೇಶ್ವರಂ ಎಂಬುದು, ಅಂತರ್ಯಾಮಿಯಾಗಿ ಪ್ರಳಯ ಕಾರ್ಯದಲ್ಲಿ ಸರ್ವೇಶ್ವರನಿಂದ ನಿಯ ಮಿಸಲ್ಪಟ್ಟಿರುವ, ದೇವತೆಗಳಹಾಗೆ ಜೀವಕೋಟಿಗೆ ಸೇರಿದ, ರುದ್ರನನ್ನು ಬೋಧಿಸುವದಿಲ್ಲ ವೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು; ಈ ಶ್ರುತಿಯು ಮುಂದಕ್ಕೆ "ತಂದೇವತಾನಾಂ ಪರಮಂ ಚ ದೈವತಂ, ಪತಿಂ ಯತೀನಾಂ ಪರಮಂ ಪರಸ್ತಾತ್, ವಿದಾಮ ದೇವಂ ಭುವ ನೇಶಮೀಡ್ಯಂ" ಎಂದು ಇರುತ್ತದೆ. ಈ ಅಭಿಪ್ರಾಯವು ವಾರ್ಹೋತ್ತರ ಪುರಾಣದಲ್ಲಿ ಸುವ್ಯ ಕ್ತವು. ರುದ್ರಭಗವಾನನೇ ಅಲ್ಲಿ ಹೇಳುವದೇನೆಂದರೆ.

"ಯೋಸಾ ವಕಾರ ವಾಚ್ಯೋಽಸ್ಮೈ ವಿಷ್ಣುರ್ನಾರಾಯಣೋ ಹರಿಃ ।
ಸ ಏವ ಪುರುಷೋ ನಿತ್ಯಃ ಪರಮಾತ್ಮಾ ಮಹೇಶ್ವರಃ ॥
ತಸ್ಯಾಂಶ ಭೂತ ಮೈಶ್ವರ್ಯಂ ಯಸ್ಮಿನ್ ಕಸ್ಮಿನ್ ಹಿ ವರ್ತತೇ ।
ತಸ್ಮಿನ್ನೀಶ್ವರ ಶಬ್ದಾದಿಃ ಪ್ರೋಚ್ಯತೇ ಮುನಿಭಿಸ್ತಥಾ ॥
ನಿರುಪಾಧೀಶ್ವರತ್ವಂ ತು ವಾಸುದೇವೇ ಪ್ರತಿಷ್ಠಿತಮ್ ।
ಆತ್ಮೇಶ್ವರ ಇತಿ ಪ್ರೋಕ್ತೋ ವೇದವಾಕ್ಯೈಸ್ಸನಾತನೈಃ ॥
ತಸ್ಮಾನ್ಮಹೇಶ್ವರತ್ವಂ ತು ವಾಸುದೇವೇ ಪ್ರತಿಷ್ಠಿತಮ್ ।
ಅಸೌ ತ್ರಿಪಾದ್ವಿಭೂತೇಸ್ತು ಲೀಲಾಯಾ ಅಪಿ ಚೇಶ್ವರಃ ॥
ವಿಭೂತಿದ್ವಯಮೈಶ್ವರ್ಯಂ ತಸ್ಯೈವ ಸಕಲಾತ್ಮನಃ ।
ಶ್ರೀ ಭೂ ನೀಳಾ ಪತಿ ರ್ಯೋಽಸೌ ಈಶ್ವರಃ ಸಮುದಾಹೃತಃ ॥
ತಸ್ಮಾತ್ ಮಹೇಶ್ವರತ್ವಸ್ತು ವಾಸುದೇವೇ ಪ್ರತಿಷ್ಠಿತಮ್ ॥

ಇಲ್ಲಿ ಮಹೇಶ್ವರತ್ವವು ಶ್ರೀ ಭೂಮಿ ನೀಳಾಪತಿಯಾದ ವಾಸುದೇವನಿಗೆ ಸಲ್ಲುತ್ತದೇ ವಿನಾ ಇನ್ನು ಯಾರಿಗೂ ಇಲ್ಲವೆಂದು ಶ್ರೀ ರುದ್ರ ಭಗವಾನ್ ಹೇಳುತ್ತಾನೆ. ಮೂರು ಕಾರಣಗಳಿಂದ ಶ್ರೀಮನ್ನಾರಾಯಣನೇ ಮಹೇಶ್ವರನು. ಮುಂದೆ ೧೫ನೆಯ ಅಧ್ಯಾಯದಲ್ಲಿ ಮಹೇಶ್ವರ ಶಬ್ದ ಸಲ್ಲಬೇಕಾದರೆ ಎಲ್ಲಕ್ಕೂ ಆತ್ಮನಾಗಿ ವ್ಯಾಪಿಸುವ, ಎಲ್ಲವನ್ನೂ ಭರಿಸುವ, ಎಲ್ಲವೂ ತನ್ನ ಸ್ವಂ ಸ್ವತ್ತಾಗಿ ತಾನು ಎಲ್ಲಾದಕ್ಕೂ ನಿಯಮಿಸುವ ಶಕ್ತಿ ಇರಬೇಕು. ಈ ಮೇಲಿನ ಶ್ಲೋಕಗಳಲ್ಲಿ ಜಗತ್ತಿನ ಐಶ್ವರ್ಯಗಳೆಲ್ಲಾ ಅವನದೇ ಎಂದೂ, ಆತನಿಗೆ ಎಲ್ಲವೂ ಶರೀರವಾಗಿ ಆತನು ಅವುಗಳನ್ನೆಲ್ಲಾ ವ್ಯಾಪಿಸಿ ಆತ್ಮನಾಗಿದ್ದಾನೆಂದೂ, ಮತ್ತು ಆತನೇ ಉಭಯ ವಿಭೂತಿಗಳಾದ ನಿತ್ಯವಿಭೂತಿ ಲೀಲಾವಿಭೂತಿಗಳಿಗೆ ಸ್ವಾಮಿಯೂ ನಿಯಾಮಕನೂ ಎಂದೂ ಹೇಳಲ್ಪಟ್ಟಿರುತ್ತದೆ. ಆದುದರಿಂದ ಇಲ್ಲಿನ ಮಹೇಶ್ವರ ಶಬ್ದಕ್ಕೆ ರುದ್ರಾದಿಗಳಲ್ಲಿ ಅನ್ವಯವಿಲ್ಲವು. ಈ ಸರ್ವೇಶ್ವರೇಶ್ವರ ಶಬ್ದವು ಶ್ರೀಕೃಷ್ಣಭಗವಾನರಲ್ಲೂ ಭಗವದವತಾರವಾದುದರಿಂದ ಸತ್ಯವಾಗಿಯೇ ಅನ್ವಯಿಸುತ್ತದೆಂದೂ ಕವಿಯ ಆರೋಪ ರೂಪ ಸ್ತೋತ್ರವೇನೂ ಅಲ್ಲವೆಂದೂ ವಿಷ್ಣು ಧರ್ಮ ಪ್ರಮಾಣವುಂಟು. (ವಿ. ಧ. ೭೪. ೪೪)

ಸರ್ವೇಶ್ವರೇಶ್ವರಃ ಕೃಷ್ಣಃ ಪ್ರೋಚ್ಯತೇ ಯದಿ ಪಣ್ಡಿತೈಃ ।
ತಥಾಪಿ ಸ್ವಲ್ಪಮೇವೋಕ್ತಂ ಭೂತಾರ್ಥೇ ಕೇತವಾಸ್ತುತಿಃ ॥

ಬ್ರಹ್ಮರುದ್ರಾದಿ ಲೋಕಾಧಿಪತಿಗಳಿಗೂ ಈಶ್ವರನು ನಿಯಾಮಕನು ಶ್ರೀಕೃಷ್ಣನು ಎಂದು ಪಂಡಿತರಿಂದ ಹೇಳಲ್ಪಟ್ಟರೂ, ಅಗಲೂ ಸ್ವಲ್ಪಮಟ್ಟಿಗೆ ಹೇಳಿದಂತಾಯಿತೇ ವಿನಾ, ಸ್ತೋತ್ರವೇನೂ ಆಗುವದಿಲ್ಲವು; ಅತಿಶಯೋಕ್ತಿ ಏನೂ ಆಗುವದಿಲ್ಲವು. ಏಕೆಂದರೆ ಸತ್ಯವಾದ ವಿಷಯದಲ್ಲಿ ಸ್ತುತಿ ಎಂದು ಹೇಳಲು ಸಾಧ್ಯವಿಲ್ಲವು; ಇಲ್ಲದೇ ಇರುವದನ್ನು ಆರೋಪಿಸಿ ಹೇಳುವದು ಬೇಕಾದರೆ ಸ್ತುತಿಯಾಗಬಹುದು. ಶ್ರೀಕೃಷ್ಣಭಗವಾನನ ವಿಷಯದಲ್ಲಿ ಸರ್ವೇಶ್ವರೇಶ್ವರಃ ಎಂಬ ಪ್ರಯೋಗವು ಅಲ್ಪವನ್ನೇ ಬೋಧಿಸುತ್ತದೆ ಎಂಬ ತಾತ್ಪರ್ಯವು.

ಭಾಷ್ಯಾರ್ಥವು :—ಪ್ರತಿದಿನದಲ್ಲೂ ಪ್ರಯಾಸಪೂರ್ವಕವಾಗಿ ಬಹುಕಾಲ ಅನುಷ್ಠಿಸತಕ್ಕ ಕರ್ಮಯೋಗವು ಸುಖ ರೂಪವಾದುದು ಹೇಗೆ ಎಂದರೆ, ಹೇಳುತ್ತಾರೆ:—ಸರ್ವಲೋಕ ಮಹೇಶ್ವರಂ ಎಂದರೆ ಸರ್ವೇಷಾಂ ಲೋಕೇಶ್ವರಾಣಾಮಪಿ ಈಶ್ವರಂ - ಸಮಸ್ತ ಲೋಕೇಶ್ವರರಾದ, ಸತ್ಯಲೋಕ, ಕೈಲಾಸ, ಸ್ವರ್ಗಲೋಕಾದಿಗಳಿಗೆ ಅಧಿಪತಿಯಾದ ಬ್ರಹ್ಮರುದ್ರೇಂದ್ರಾದಿಗಳಿಗೂ ನಿಯಾಮಕನಾದ, "ತಮೀಶ್ವರಾಣಾಂ ಪರಮಂ ಮಹೇಶ್ವರಮ್" ಇತಿಹಿ ಶ್ರೂಯತೇ - ಎಂದಲ್ಲವೇ ಶ್ರುತಿಯು ಹೇಳುವದು, ಮಾಂ ಸರ್ವಲೋಕ ಮಹೇಶ್ವರಂ

ಭಾ. ಸರ್ವಲೋಕಮಹೇಶ್ವರಂ–ಸರ್ವೇಷಾಂ ಲೋಕೇಶ್ವರಾಣಾಮಪೀಶ್ವರಮ್,(೧)"ತಮೀಶ್ವರಾಣಾಂ ಪರಮಂ ಮಹೇಶ್ವರಮ್" ಇತಿಹಿ ಶ್ರೂಯತೇ। ಮಾಂ ಸರ್ವಲೋಕಮಹೇಶ್ವರಮ್ ಸರ್ವಸುಹೃದಂ ಜ್ಞಾತ್ವಾ ಮದಾರಾಧನರೂಪಃ ಕರ್ಮಯೋಗ ಇತಿ ಸುಖೇನ ತತ್ರ ಪ್ರವರ್ತತೇ ಇತ್ಯರ್ಥಃ; ಸುಹೃದ ಆರಾಧನಾಯಹಿ ಸರ್ವೇ ಪ್ರಯತನ್ತೇ ॥೨೯॥

ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ ಪಂಚಮೋಽಧ್ಯಾಯಃ
ಶ್ರೀಮತೇ ರಾಮಾನುಜಾಯನಮಃ.

ಸರ್ವ ಸುಹೃದಂ - ಹೀಗೆ ಸರ್ವಲೋಕವನ್ನೂ ವ್ಯಾಪಿಸಿ ಅವುಗಳಿಗೆ ಆತ್ಮಾವಾಗಿ ನಿಯಾಮಕನಾಗಿ, ಸಮಸ್ತ ಪ್ರಾಣಿವರ್ಗಕ್ಕೂ ಶ್ರುತಿಯಲ್ಲಿ ಸರ್ವಸ್ಯ ಶರಣಂ ಸುಹೃತ್ ಎಂದು ಹೇಳಿರುವಹಾಗೆ ಪರಮೋಪಕಾರಿಯಾಗಿರುವುದರಿಂದ ಸುಹೃತ್ತೆಂದೆನಿಸಿರುವ ನನ್ನನ್ನು, ಜ್ಞಾತ್ವಾ - ತಿಳಿದವನಾಗಿ, ಮದಾರಾಧನ ರೂಪಃ ಕರ್ಮಯೋಗಃ - "ಮಯಿ ಕರ್ಮಾಣಿ ಸಂನ್ಯಸ್ಯ" ಎಂದು ಹಿಂದೆ ಉಪದೇಶಿಸಿರುವಹಾಗೆ ನನ್ನ ಆರಾಧನರೂಪವಾದುದು ಈ ಕರ್ಮಯೋಗವು, ಇತಿ - ಎಂದು ಭಾವಿಸಿ, ತತ್ರ ಪ್ರವರ್ತತೇ ಇತ್ಯರ್ಥಃ - ಅದರಲ್ಲಿ ಕರ್ಮಯೋಗಿಯು ಪ್ರವರ್ತಿಸುತ್ತಾನೆ ಎಂಬ ತಾತ್ಪರ್ಯವು. ಮದಾರಾಧನರೂಪಃ ಕರ್ಮಯೋಗಃ ಎಂಬುದು ಭೋಕ್ತಾರಂ ಯಜ್ಞ ತಪಸಾಂ ಎಂಬುದರ ಅಭಿಪ್ರಾಯವು. ಭೋಕ್ತಾ ಎಂಬ ಶಬ್ದದಿಂದ ಕರ್ಮಯೋಗಿಯು ಮಾಡುವ ಆರಾಧನೆಯಿಂದ ಸುಪ್ರೀತನಾಗಿ ಆ ಆರಾಧನೆಯನ್ನು ಅನುಭವಿಸುವನು ಎಂಬ ಭಾವವು. ಸುಹೃದಃ - ಪರಮ ಮಿತ್ರನ, ಆರಾಧನಾಯ ಹಿ ಆರಾಧನೆಗೋಸ್ಕರವಲ್ಲವೇ, ಸರ್ವೇ ಪ್ರಯತನ್ತೇ - ಸಮಸ್ತರೂ ಪ್ರಯತ್ನಿಸುತ್ತಾರೆ. ಈ ಕರ್ಮಯೋಗವು ಮಹೋದಾರನಾದ ಸಾರ್ವಭೌಮನ ಸೇವಾರೂಪವಲ್ಲವೇ ಎಂದು ತಿಳಿದವನಾಗಿ ಯಾವಾಗ ಪ್ರವರ್ತಿಸಿದನೋ, ಆ ಪರಮೋದಾರಿಯಾದ ಪ್ರಿಯಮಿತ್ರನು ಸರ್ವವಿಧ ಶಾಂತಿಯನ್ನೂ ಉಂಟುಮಾಡುವನೆಂಬ ಭಾವವು. "ಯಜ್ಞೋವೈ ವಿಷ್ಣುಃ" ಎಂದು ಹೇಳಿರುವ ಹಾಗೆ ಸರ್ವ ಶಾಸ್ತ್ರೀಯ ಕರ್ಮಾರಾಧ್ಯನು ಶ್ರೀಮನ್ನಾರಾಯಣನು; ಆತನೇ ಈಗ ಶ್ರೀಕೃಷ್ಣನಾಗಿ ಅವತರಿಸಿರುವುದರಿಂದ ಜ್ಞಾತ್ವಾ ಮಾಂ ಎಂಬ ಪ್ರಯೋಗವು. ಸುಹೃತ್ತಾಗಿರುವುದಕ್ಕೆ "ಉಪಕಾರ ಫಲಂ ಮೈತ್ರಂ" (ರಾಮಾ) ಎಂದು ಹೇಳಿರುವಹಾಗೆ ಪರಸ್ಪರೋಪಕಾರವಿರಬೇಕು. ಕೃತೇ ಚ ಪ್ರತಿಕರ್ತವ್ಯಂ ಏಷ ಧರ್ಮಸ್ಸನಾತನಃ (ರಾಮಾ. ಸುಂದರ. ೧) ಎಂದೂ ಹೇಳಲ್ಪಟ್ಟಿರುತ್ತದೆ. ಐಹಿಕ ಮಿತ್ರರು ಕೆಲವರು ಉಪಕಾರಮಾಡುವಾಗ ತಮಗೆ ಪ್ರತಿ ಪ್ರಯೋಜನಾಕಾಂಕ್ಷಿಗಳಾಗಿರಬಹುದು. ಈ ಪರಮ ಸುಹೃತ್ತಾದರೋ, ತನಗೇನೊಂದೂ ಪ್ರತಿಫಲವನ್ನಪೇಕ್ಷಿಸದೆ ಸಾಧನಾನುಷ್ಠಾನಮಾಡಿದರೆ ಸಾಕು ಎಂದು ಸಮಯ ನಿರೀಕ್ಷಣೆಯನ್ನು ಮಾಡುವವನಾಗಿ, ತನ್ನ ಉದಾರ ಮನಸ್ಸಿನಿಂದ ಈ ಸಾಧನಾನುಷ್ಠಾನಿಯೂ ಕೂಡ ಉದಾರಾ ಸರ್ವ ಏವೈ ತೇ ಎಂದು ಹೇಳಿರುವಹಾಗೆ ಉದಾರಿ ಎಂದು ಹೇಳಿ, ಪರಮ ಕೃಪಯಾ ಅನುಗ್ರಹಿಸುವನು, ಆದುದರಿಂದ ಪರಮ ಸುಹೃತ್ತು. ಇದೂ ಅಲ್ಲದೆ, ನಮಗೆ ಕರಣ ಕಳೇಬರ ಜ್ಞಾನ ವಿವೇಕಾದಿಗಳನ್ನು ಕೊಟ್ಟು, ಶಾಸ್ತ್ರವನ್ನೂ ಕೊಟ್ಟು, ಶಾಸ್ತ್ರಗಳ ಉಪದೇಶಿಕರಾದ ಮಹಾ ಗುರುಗಳನ್ನೂ ಕೊಟ್ಟು ಹೀಗೆ ಸರ್ವವಿಧದಲ್ಲೂ ಉಪಕರಿಸಿ, ಸಾಧನಾನುಷ್ಠಾನಮಾಡಿದ ಬಳಿಕ ಪ್ರೀತನಾಗಿ ತನಗೆ ಸಮಾನವಾದ ಆನಂದವನ್ನು, ಪರಮಂ ಸಾಮ್ಯ ಮುಪೈತಿ ಎಂಬ ಶ್ರುತ್ಯನುಸಾರ ದಯಪಾಲಿ

(೧) ಶ್ವೇ. ೬. ೭.

ಸುವದರಿಂದಲೂ, ಆತನು ಪರಮ ಸುಹೃತ್ತು. ಈ ಲೋಕದ ಸುಹೃತ್ತು ಇಷ್ಟೆಲ್ಲಾ ಎಂದಿಗೂ ಮಾಡನು, ಪರಮ ಸುಹೃತ್ತಾದುದರಿಂದಲೇ ನೀರಕ್ಷೀರನ್ಯಾಯದಿಂದ ತನಗೆ ಸಮಾನವಾದ ಆನಂದ ವನ್ನು ಕೊಡುವನೆಂಬ ಭಾವವು. ಅಂತಹ ಸುಹೃತ್ತಿನ ಆರಾಧನೆಯು ಈ ಕರ್ಮಯೋಗವು ಎಂಬ ತಾತ್ಪರ್ಯವು. ಇನ್ನೂ ಒಂದು ವಿಧವಾಗಿಯೂ ಶ್ರಿಯಃಪತಿಯು ಪರಮ ಸುಹೃತ್ತು, ಹೇಗೆಂದರೆ- ಭಕ್ತಿಯಿಂದ ಐಹಿಕ ಸುಖವನ್ನು ಬೇಡಿದರೂ ಅದನ್ನೂ ಪರಮೋದಾರ ಭಾವದಿಂದ ಕೊಟ್ಟುಬಿಡುವನು; ಅದರಲ್ಲಿ ಸುಖದೊಂದಿಗೆ ದುಃಖವು ಮಿಶ್ರವಾಗಿರುತ್ತದೆ. ಆದುದರಿಂದ ನಮಗೆ ಹಿತವು ಯಾವುದು ಅಹಿತವು ಯಾವುದು ಎಂಬುದು ತಿಳಿಯದು. ಸ್ವಾಮಿಯನ್ನಾಶ್ರಯಿಸಿ ಸಮಸ್ತ ಭರವನ್ನೂ ಆತನಲ್ಲಿಟ್ಟುಬಿಟ್ಟರೆ, "ಯದ್ಧಿತಂ ಮಮ ದೇವೇಶ ತದಾಜ್ಞಾಪಯ ಮಾಧವ" ಎಂದು ಪ್ರಾರ್ಥಿಸಿದರೆ, ತಾನೇ ನಮಗೆ ಸರ್ವ ಹಿತವನ್ನೂ ತಾನೇ ಏನೊಂದೂ ಪ್ರತಿ ಪ್ರಯೋಜನಾಪೇಕ್ಷೆಯಿಲ್ಲದೇನೇ ಮಾಡುವನು. ಹಾಗೆಯೂ ಪರಮ ಸುಹೃತ್ತೆಂಬ ಭಾವವು. ಹೀಗೆ ಮಾಡದೆ ಐಹಿಕವನ್ನು ಕೋರಿದರೂ, ಆ ಭಗವಂತನನ್ನು ಆಶ್ರಯಿಸಿದ ಸುಕೃತವು ಉತ್ತರೋತ್ತರ ಪರಮನಿಶ್ಶ್ರೇಯಸ್ಸಿಗೇನೇ ಕಾರಣವಾಗುತ್ತದೆ; ಆದುದರಿಂದಲೂ ಪರಮ ಸುಹೃತ್ತು.

ಈ ಅಧ್ಯಾಯವು ಕರ್ಮ ಸಂನ್ಯಾಸ ವಿಷಯವಾದುದೆಂದು ಹೇಳಲ್ಪಟ್ಟಿರುತ್ತದೆ. ಕರ್ಮಸಂನ್ಯಾಸ ವೆಂದರೆ, ವಿಹಿತವಾಗಿ ಇತಿಕರ್ತವ್ಯತಾರೂಪಗಳಾದ ಕರ್ಮಗಳ ಸಂನ್ಯಾಸವು ಎಂಬರ್ಥವು ಎಂದಿಗೂ ಅಲ್ಲವು. ಅಂತಹ ಕೃತ್ಯಾಕರಣ ದೋಷವು ಭಗವನ್ನಿಗ್ರಹಕ್ಕೆ ಗುರಿಮಾಡುತ್ತದೆ. ಆದುದರಿಂದಲೇ ಮಾಡಲೇಬೇಕೆಂದು ಮುಂದೆ ೧೮ನೆಯ ಅಧ್ಯಾಯದಲ್ಲಿ "ಯಜ್ಞೋ ದಾನ ತಪಶ್ಚೈವ ನ ತ್ಯಾಜ್ಯಂ ಕಾರ್ಯಮೇವ ತತ್" ಎಂದೂ "ನ ಹಿ ದೇಹ ಭೃತಾಂ ಶಕ್ಯಂ ತ್ಯಕ್ತುಂ ಕರ್ಮಾಣ್ಯ ಶೇಷತಃ" ಎಂದೂ ಹೇಳಿರುವದರಿಂದಲೂ ಕರ್ಮಸಂನ್ಯಾಸ ಶಬ್ದಕ್ಕೆ ಕರ್ಮಗಳ ಸ್ವರೂಪ ಪರಿತ್ಯಾಗವೆಂಬರ್ಥವು ಎಂದಿಗೂ ಅಲ್ಲವು. ಏಕೆಂದರೆ ಶ್ರೀ ಯಾಜ್ಞ್ಯವಲ್ಕ್ಯರು "ವಿಹಿತಸ್ಯಾನನುಷ್ಠಾನಾನ್ನಿನ್ದಿತಸ್ಯ ನಿಷೇವಣಾತ್ । ಅನಿಗ್ರಹಾಚ್ಚೇನ್ದ್ರಿಯಾಣಾಂ ನರಃ ಪತನ ಮೃಚ್ಛತಿ" ಎಂದು ಹೇಳಿರುತ್ತಾರೆ. ಹಾಗೆಯೇ ಇನ್ನೂ ಅನೇಕ ಪ್ರಮಾಣಗಳುಂಟು; ಅವುಗಳಲ್ಲಿ ಕೆಲವನ್ನು ಉದಾಹರಿಸುವೆವು :—"ವೇದೋದಿತಂ ಸ್ವಕಂ ಕರ್ಮ ನಿತ್ಯಂ ಕುರ್ಯಾದ ತನ್ದ್ರಿತಃ । ತದ್ಧಿ ಕುರ್ವನ್ ಯಥಾ ಶಕ್ತಿ ಪ್ರಾಪ್ನೋತಿ ಪರಮಾಂ ಗತಿಂ" (ಮನುಃ); ವೇದೋದಿತಾನಿ ಕರ್ಮಾಣಿ ನ ಕರೋತಿ ದಿನೇ ದಿನೇ । ಚಾಂಡಾಲೀಂ ಯೋನಿ ಮಾಪ್ನೋತಿ ಶ್ವಯೋನಿಷು ಚ ಜಾಯತೇ" (ಬೃಹಸ್ಪತಿಃ); "ನಿತ್ಯಂ ನೈಮಿತ್ತಿಕಂ ಕರ್ಮ ಯೋ ದೂಷಯತಿ ಮೂಢಧೀಃ । ಅಹಂ ತು ನ ವಿಜಾನಾಮಿ ಕಾಂ ಕಾಂ ಯೋನಿಂ ಸ ಗಚ್ಛತಿ"(ಕಾತ್ಯಾಯನಃ); "ವರ್ಣಾನಾ ಮಾಶ್ರಮಾಣಾಂ ಚ ಯತ್ಕರ್ತವ್ಯಂ ಪುರಾತನಮ್ । ಕರ್ತಯಃ ಕುರುತೇ ನಿತ್ಯಂ ಸಯಾತಿ ಪರಮಾಂ ಗತಿಮ್" (ಹಾರೀತಃ); "ವರ್ಣಾಶ್ರಮ ಪರಿಭ್ರಷ್ಟಃ ಪತಿತಃ ಪರಿಕೀರ್ತಿತಃ । ತಸ್ಮಾತ್ಸರ್ವ ಪ್ರಯತ್ನೇನ ವರ್ಣಧರ್ಮಂ ಸಮಾಚರೇತ್"(ಮನುಃ); "ವರ್ಣಾಶ್ರಮೋಕ್ತಂ ಕರ್ಮೈವ ವಿಧ್ಯುಕ್ತಂ ಕಾಮಪೂರ್ವಕಂ । ಯೇನ ಯತ್ಕ್ರಿಯತೇ ಗಾರ್ಗಿ ಬಂಧ ಸ್ತಸ್ಯ ಕರೇ ಸ್ಥಿತಃ । ವರ್ಣಾಶ್ರಮೋಕ್ತಂ ಯಃಕುರ್ಯಾದ್ವಿಧ್ಯುಕ್ತಂ ಕಾಮವರ್ಜಿತಂ । ವಿಧಿವತ್ಕುರ್ವತಸ್ತಸ್ಯ 'ಮುಕ್ತಿರ್ಗಾರ್ಗಿ ಕರೇ ಸ್ಥಿತಾ ॥" (ಯೋಗ ಯಾಜ್ಞವಲ್ಕ್ಯಃ); "ನಾಸ್ತಿಕ್ಯಾದಥವಾಲಸ್ಯಾಚ್ಛಾಸ್ತ್ರೋಕ್ತಂ ನಕರೋತಿಯಃ।ಸಯಾತಿ ನರಕಾನ್ಘೋರಾಂಸ್ತಿರ್ಯಗ್ಯೋನಿಷು ಜಾಯತೇ॥" (ವ್ಯಾಸಃ); ಹೀಗೆ ಅನೇಕ ಜ್ಞಾನಾಗ್ರೇಸರ ಉಕ್ತಿಗಳಿರುತ್ತವೆ- ಸ್ಮೃತಿ ರತ್ನಾಕರವನ್ನು ನೋಡಿ. ನಿತ್ಯ ನೈಮಿತ್ತಿಕಾನುಷ್ಠಾನ ನಿರತರಿಗೆ ರೋಗವು ಇಲ್ಲದಿರುವದನ್ನೂ ಬಹುಕಾಲ ಬದುಕುವವನ್ನೂ ಸಾತ್ವಿಕ ಶಿಖಾಮಣಿಗಳಾಗಿ ಪಾಪಭೀರುಗಳಾಗಿರುವದನ್ನೂ

ನಾವು ಪ್ರತ್ಯಕ್ಷದಲ್ಲೇ ಕಂಡಿರುವೆವು ; ಹೀಗಿದ್ದರೂ ಅದ್ವೈತ ಸಿದ್ಧಾನ್ತಿಗಳು ಒಂದಾನೊಂದು ಅವಸ್ಥೆಯಲ್ಲಿ ವಿಹಿತ ಕರ್ಮಗಳ ಪರಿತ್ಯಾಗವನ್ನೂ ಮಾಡಬಹುದೆಂಬ ಅನುಮತಿಯನ್ನಿತ್ತಿರುತ್ತಾರೆ; ಆಚಾರದಲ್ಲಿ ಅನೇಕರಿಗೆ ಮೊದಲೇ ಮಮತೆಯೇ ಇಲ್ಲವು; ಹೀಗಿರುವಾಗ ಈ ಅಭಿಪ್ರಾಯವು ಕುಣಿಯುವ ಕಾಲಿಗೆ ಗೆಜ್ಜೆಯನ್ನು ಕಟ್ಟಿದಹಾಗಾಗುವದಿಲ್ಲವೇ? ಇಷ್ಟು ದೂರ ಇಲ್ಲಿ ಬರಯಲು ಕಾರಣವೇನು ಎಂದು ಕೇಳಬಹುದು. ಮುಂದೆ ೧೮ನೆಯ ಅಧ್ಯಾಯದಲ್ಲಿ ಕರ್ಮ ಸಂನ್ಯಾಸ ಶಬ್ದಕ್ಕೆ ಹೀಗೆ ಅರ್ಥವನ್ನು ಕೆಲವರು ಮಾಡಿರುತ್ತಾರೆ. ಅದು ಸರ್ವಾತ್ಮನಾ ಶಾಸ್ತ್ರ ಸಮ್ಮತವಾದ ಅರ್ಥವಲ್ಲವು. ಅದನ್ನೇ ಇಲ್ಲಿ ಸ್ವಲ್ಪ ಮಟ್ಟಿಗೆ ಉಪಪಾದಿಸಿ ಹೇಳಿರುವೆವು. ಹಾಗಾದರೆ ಈ ಅಧ್ಯಾಯಕ್ಕೆ ಕರ್ಮಸಂನ್ಯಾಸನೆಂಬ ಹೆಸರು ಏತಕ್ಕೆ? ಎಂದರೆ- ಕರ್ಮಯೋಗಕ್ಕೆ ಪ್ರತಿದ್ವಂದ್ವಿಯಾಗಿ "ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ". ಎಂಬ ಅರ್ಜುನನ ಪ್ರಶ್ನೆಯಿಂದಲೂ "ತಯೋಸ್ತು ಕರ್ಮ ಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ" ಎಂಬ ಭಗವದುತ್ತರದಿಂದಲೂ ಹೀಗೆ ಪ್ರಯೋಗಗಳಿರುವದರಿಂದ ಜ್ಞಾನಯೋಗವೆಂಬುದೇ ಅರ್ಥವು; ಇದರಲ್ಲಿ ಅನುಮಾನವಿಲ್ಲವು. ಈ ಜ್ಞಾನಯೋಗವು ಆತ್ಮಾನುಭವ ಫಲವನ್ನು ಕ್ಷಿಪ್ರದಲ್ಲಿ ಕೊಡುವದಿಲ್ಲವೆಂದು ಇದರಲ್ಲಿ ನಿರಾಕರಿಸಿರುವದರಿಂದ ಕರ್ಮಸಂನ್ಯಾಸವೆಂಬ ಹೆಸರನ್ನು ಈ ಅಧ್ಯಾಯಕ್ಕೆ ಕೊಟ್ಟಿರುತ್ತಾರೆಂದು ಹೇಳಬೇಕಾಗುತ್ತದೆ. ಆದರೆ ಈ ಅಧ್ಯಾಯವು ಜ್ಞಾನಯೋಗವನ್ನು ನಿರಾಕರಿಸಿ ಕರ್ಮಯೋಗದ ಪ್ರಶಂಸೆಯಾಗಿರುವಾಗ ಕರ್ಮಯೋಗ ಪ್ರಶಂಸಾ ಯೋಗವೆಂಬ ಹೆಸರನ್ನು ಕೊಡತಕ್ಕದ್ದೇ ಅಥವಾ ನಿರಾಕರಿಸಿದ ಕರ್ಮ ಸಂನ್ಯಾಸವಾದ ಜ್ಞಾನಯೋಗವೆಂಬ ಹೆಸರನ್ನು ಕೊಡತಕ್ಕದ್ದೇ ಎಂಬ ಆಕ್ಷೇಪವು ನಿರುತ್ತರವಾಗುತ್ತದೆ. ಹಾಗಾದರೆ ಈ ಅಧ್ಯಾಯಗಳಿಗೆ ನಾಮಕರಣವನ್ನು ಮಾಡಿದವರು ಶ್ರೀ ವ್ಯಾಸರೇ ಊಚಿಸವರೇ ಎಂಬ ಸಂದೇಹವೂ ಉಂಟಾಗುತ್ತದೆ. ಆದರೆ ಅನೇಕ ವಿಶಿಷ್ಟಾದ್ವೈತ ಸಿದ್ಧಾನ್ತಿಗಳು ಅಚ್ಚುಹಾಕಿರುವ ಗ್ರಂಥಗಳಲ್ಲೂ "ಕರ್ಮಸಂನ್ಯಾಸ ಯೋಗೋನಾಮ" ಎಂದೇ ಇರುವದರಿಂದ ಈ ನಾಮಕರಣವನ್ನೇ ಅಙ್ಗೀಕರಿಸಿ ಅರ್ಥವನ್ನು ಹೇಳಬೇಕಾಗಿರುವದರಿಂದ ಕರ್ಮಸಂನ್ಯಾಸವೆಂಬುದರಿಂದ ಪ್ರಾಜ್ಞನಾದ ಕರ್ಮಯೋಗಿಯ ಅನುಸಂಧಾನಪ್ರಕಾರವನ್ನು ಹೇಳುವ ಅಧ್ಯಾಯವೆಂದು ಅರ್ಥಮಾಡಿ, ಪ್ರಕೃತಿಯಾದ ದೇಹವು ಮಾಡುತ್ತದೇವಿನಾ ತಾನು ಮಾಡುವದಿಲ್ಲವೆಂಬ ಜ್ಞಾನವು ಕರ್ಮಯೋಗಿಗೆ ಮುಖ್ಯವಾಗಿ ಇರಬೇಕೆಂಬ ಅರ್ಥವು ಈ ಅಧ್ಯಾಯದಲ್ಲಿ "ನೈವಕಿಂಚಿತ್ಕರೋಮಿ" ಎಂದು ೮ನೆಯ ಶ್ಲೋಕದಿಂದಾರಂಭಿಸಿ "ಯೋಗಿನಃ ಕರ್ಮ ಕುರ್ವನ್ತಿ ಸಙ್ಗಂತ್ಯಕ್ತ್ವಾ" ಎಂದು ೧೧ನೆಯ ಶ್ಲೋಕದಲ್ಲೂ, "ಯುಕ್ತಃ ಕರ್ಮಫಲಂ ತ್ಯಕ್ತ್ವಾ" ಎಂದು ೧೨ನೆಯ ಶ್ಲೋಕದಲ್ಲೂ "ಸರ್ವ ಕರ್ಮಾಣಿ ಮನಸಾ ಸನ್ನ್ಯಸ್ಯಾಸ್ತೇ ಸುಖಂ ವಶೀ" ಎಂದು ೧೩ನೆಯ ಶ್ಲೋಕದಲ್ಲೂ, ನ ಕರ್ಮ ಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ಎಂದು ೧೪ನೆಯ ಶ್ಲೋಕದಲ್ಲೂ, ಹೀಗೆಲ್ಲಾ ಹೇಳಿ, ಕರ್ತೃತ್ವಫಲ ಮಮತಾತ್ಯಾಗಮಾಡಿ ವಿಹಿತ ಕರ್ಮಗಳನ್ನು ವಿಧಿವತ್ ನಡೆಸೋಣವೇ ಕರ್ಮ ಸಂನ್ಯಾಸವೂ ಎಂದು ಹೇಳಲ್ಪಡುವದರಿಂದ ಈ ಅಧ್ಯಾಯಕ್ಕೆ ಕರ್ಮ ಸನ್ನ್ಯಾಸಯೋಗವೆಂಬ ನಾಮಧೇಯವು. ಇದರಿಂದ ಜ್ಞಾನಿಯು ವಿಹಿತ ಕರ್ಮವನ್ನೂ ಪರಿತ್ಯಾಗಮಾಡಬಹುದೆಂಬ ಅರ್ಥವನ್ನು ಕರ್ಮ ಸಂನ್ಯಾಸ ಶಬ್ದಕ್ಕೆ ಹೇಳುವದು ಸರಿಯಲ್ಲವೆಂದೂ ಹೇಳಿದಂತಾಯಿತು.

ಇತಿ ಪಂಚಮಾಧ್ಯಾಯದ ಗೀತಾಭಾಷ್ಯಕ್ಕೆ<br>
ಚುಂ. ಮೇ. ವಿಜಯರಾಘವಶರ್ಮನಿಂದ ರಚಿಸಲ್ಪಟ್ಟ<br>
**ಆಚಾರ್ಯ ಹೃದಯಾನ್ವೇಷಿಣೀ**<br>
ಎಂಬ ಅರ್ಥ ತಾತ್ಪರ್ಯಾದಿಗಳು ಸಮಾಪ್ತವಾದುವು.<br>
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯನಮಃ<br>
ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯನಮಃ

ಶ್ರೀಮದ್ಯಾಮುನಮುನಯೇನಮಃ

## ಶ್ರೀಮದ್ಯಾಮುನಮುನಿಪ್ರಣೀತ ಗೀತಾರ್ಥಸಙ್ಗ್ರಹೇ

## ಪಂಚಮೋಽಧ್ಯಾಯ ಸಙ್ಗ್ರಹ ಶ್ಲೋಕಃ

ಕರ್ಮಯೋಗಸ್ಯ ಸೌಕರ್ಯಂ ಶೈಘ್ರ್ಯಂ ಕಾಶ್ಚನ ತದ್ವಿಧಾಃ।
ಬ್ರಹ್ಮಜ್ಞಾನ ಪ್ರಕಾರಶ್ಚ ಪಂಚಮಾಧ್ಯಾಯ ಉಚ್ಯತೇ ॥ ೯.

---

ಕರ್ಮಯೋಗಸ್ಯ ಸೌಕರ್ಯಂ - ಕರ್ಮಯೋಗಾನುಷ್ಠಾನದ ಸೌಕರ್ಯವೂ, ಶೈಘ್ರ್ಯಂ - ಶೀಘ್ರವಾಗಿ ಆತ್ಮಾನುಭವವನ್ನುಂಟುಮಾಡುತ್ತದೆಂಬುದೂ, ಕಾಶ್ಚನ - ಕೆಲವು, ತದ್ವಿಧಾಃ - ಆ ಕರ್ಮಯೋಗವನ್ನನುಷ್ಠಿಸುವ ಪ್ರಕಾರಗಳೂ, ಬ್ರಹ್ಮಜ್ಞಾನ ಪ್ರಕಾರಶ್ಚ - ಇಲ್ಲಿ ಬ್ರಹ್ಮ ಶಬ್ದದಿಂದ ಪ್ರಕೃತಿ ವಿಯುಕ್ತ ದೆಶೆಯಲ್ಲಿ ಜ್ಞಾನೈಕಾಕಾರತೆಯಿಂದ ಸಮವಾಗಿ ತೋರುವ ಜೀವಾತ್ಮನು ಹೇಳಲ್ಪಟ್ಟನು, ಅಂತಹ ಆತ್ಮಜ್ಞಾನದ ಪ್ರಕಾರವೂ ಸಹ ಪಂಚಮಾಧ್ಯಾಯದಲ್ಲಿ ಹೇಳಲ್ಪಟ್ಟಿರುತ್ತದೆ. ಕರ್ಮಯೋಗವು ಅಂತರ್ಗತ ಆತ್ಮಸ್ವರೂಪ ಜ್ಞಾನವುಳ್ಳದಾದುದರಿಂದಲೂ, ಸುಲಭವಾಗಿ ಅನುಷ್ಠೇಯವಾದುದರಿಂದಲೂ, ಪ್ರಮಾದ ಶೂನ್ಯವಾದುದರಿಂದಲೂ, ಜ್ಞಾನಯೋಗಕ್ಕಿಂತಲೂ ಶ್ರೇಷ್ಠವಾದುದೆಂದು ಮೂರನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿತು. ನಾಲ್ಕನೆಯ ಅಧ್ಯಾಯದಲ್ಲಾದರೋ ಕರ್ಮಯೋಗದಲ್ಲಿ ಎರಡು ಅಂಶಗಳುಂಟೆಂದೂ, ಕರ್ಮಾಕಾರತೆಯೂ ಜ್ಞಾನಾಕಾರತೆಯೂ ಎರಡು ಉಂಟೆಂದು ಹೇಳಿ, ಜ್ಞಾನಾಕಾರತೆಗೆ ಪ್ರಾಧಾನ್ಯವು ಹೇಳಲ್ಪಟ್ಟಿತು. ಈ ಐದನೆಯ ಅಧ್ಯಾಯದಲ್ಲಾದರೋ ಆತ್ಮಾವಲೋಕನವನ್ನುಂಟುಮಾಡುವದರಲ್ಲಿ ಜ್ಞಾನಯೋಗಕ್ಕಿಂತ ಕರ್ಮಯೋಗವು ಶೀಘ್ರದಲ್ಲೇ ಉಂಟುಮಾಡುತ್ತದೆಂದೂ, ಅಂತರ್ಗತ ಆತ್ಮಯಾಥಾತ್ಮ್ಯಜ್ಞಾನದಿಂದ ಕರ್ಮಸಂನ್ಯಾಸರೂಪವಾದ ಅಕರ್ತೃತ್ವವೂ, ಆತ್ಮಗಳ ಜ್ಞಾನೈಕಾಕಾರತ್ವವೂ, ತನ್ಮೂಲಕ ಸಮದರ್ಶಿತ್ವವೂ ಅದರಿಂದ ಶೀಘ್ರದಲ್ಲಿ ಆತ್ಮಾನುಭವ ಸುಖವೂ ಲಭಿಸುತ್ತವೆಂದು ಹೇಳಲ್ಪಟ್ಟವು. ಕರ್ಮಯೋಗದ ಸೌಕರ್ಯವು (೧) "ಸುಖಂ ಬಂಧಾತ್ಪ್ರಮುಚ್ಯತೇ" ಎಂಬಲ್ಲಿ ತೋರಿಬರುತ್ತದೆ; ಶೈಘ್ರ್ಯವು (೨) "ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ" ಎಂಬಲ್ಲಿ ಹೇಳಲ್ಪಟ್ಟಿತು. ಕಾಶ್ಚನ ತದ್ವಿಧಾಃ" ಎಂಬುದರಿಂದ (೩) "ನೈವಕಿಂಚಿತ್ಕರೋಮೀತಿ, ಯುಕ್ತೋ ಮನ್ಯೇತ ತತ್ತ್ವವಿತ್। ಇಂದ್ರಿಯಾಣೀಂದ್ರಿಯಾರ್ಥೇಷು ವರ್ತನ್ತೇ ಇತಿ ಧಾರಯನ್॥ (೪) ಬ್ರಹ್ಮಣ್ಯಾಧಾಯ ಕರ್ಮಾಣಿ ಸಙ್ಗಂತ್ಯಕ್ತ್ವಾ ಕರೋತಿಯಃ" ಎಂಬ ಶ್ಲೋಕಗಳಲ್ಲಿ ಹೇಳಲ್ಪಟ್ಟ ಇತಿ ಕರ್ತವ್ಯತಾ ಪ್ರಕಾರಗಳು ಹೇಳಲ್ಪಟ್ಟವು. ಹಾಗೆಯೇ "ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ। ನವದ್ವಾರೇ ಪುರೇದೇಹೀ ನೈವಕುರ್ವನ್ನಕಾರಯನ್" ಇವುಗಳಲ್ಲೆಲ್ಲಾ ಕರ್ಮಯೋಗಾನುಷ್ಠಾನಪ್ರಕಾರವು ಹೇಳಲ್ಪಟ್ಟಿತು. ಬ್ರಹ್ಮಜ್ಞಾನ ಪ್ರಕಾರಶ್ಚ ಎಂಬಲ್ಲಿ ಬ್ರಹ್ಮಶಬ್ದವು ಜ್ಞಾನಸಮಾನಾಕಾರ ಸ್ವರೂಪವುಳ್ಳ ಪ್ರಕೃತಿ ವಿಯುಕ್ತ ವಿಶುದ್ಧಾತ್ಮ ಪರವು; ಜ್ಞಾನ ಶಬ್ದದಿಂದ (೫) "ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇಗವಿಹಸ್ತಿನಿ" ಎಂಬ ಶ್ಲೋಕದಲ್ಲಿ ಹೇಳಿದ ಸಮದರ್ಶಿತ್ವವು ವಿವಕ್ಷಿತವು. ಆದುದರಿಂದಲೇ ಇದರ ಮುಂದಿನ ಶ್ಲೋಕದ ಭಾಷ್ಯದಲ್ಲಿ ಯೇನಪ್ರಕಾರೇಣ

---

(೧) ಗೀ. ೫. ೩ (೨) ಗೀ. ೫. ೬. (೩) ಗೀ. ೫. ೭. ೮. (೪) ಗೀ. ೫ ೧೦. (೫) ಗೀ. ೫. ೧೮.

ವಸ್ಥಿತಸ್ಯ ಕರ್ಮಯೋಗಿನ ಸ್ಸಮದರ್ಶಿನರೂಪೋ ಜ್ಞಾನವಿಪಾಕೋಭವತಿ, ತಂಪ್ರಕಾರ ಮುಪದಿಶತಿ" ಎಂದು ಹೇಳಲ್ಪಟ್ಟಿತು. ಆ ಕಾರಣದಿಂದ ಇಲ್ಲಿ ಜ್ಞಾನಶಬ್ದದಿಂದ ಜ್ಞಾನ ವಿಪಾಕ ದೆಶೆಯು ಉದ್ದೇಶ್ಯವು ಎಂದು ಹೇಳಿ, "ನಪ್ರಹೃಷ್ಯೇತ್" ಎಂಬ ಶ್ಲೋಕಾರ್ಥವು ಉಪದೇಶಿಸಲ್ಪಟ್ಟಿತು. ||೯||

ಶ್ರೀಮತೇ ಶಿಗಮೂಪ್ತ ಮಹಾದೇಶಿಕಾಯ ನಮಃ

---

ಈ ಅಧ್ಯಾಯದ ಶ್ಲೋಕಗಳ ಸಙ್ಗ್ರಹಾರ್ಥವು.

೧. ಈ ಶ್ಲೋಕದಲ್ಲಿ ಜ್ಞಾನಯೋಗ ಕರ್ಮಯೋಗಗಳಲ್ಲಿ ಯಾವುದು ಸುಕರವಾಗಿ ಶೀಘ್ರವಾಗಿ ಆತ್ಮಪ್ರಾಪ್ತಿಸಾಧನವನ್ನುಂಟುಮಾಡುತ್ತದೆಂಬ ಅರ್ಜುನ ಪ್ರಶ್ನೆಯು.

೨. ಕರ್ಮಯೋಗವೇ ಜ್ಞಾನಯೋಗಕ್ಕಿಂತ ಶೀಘ್ರವಾಗಿಯೂ ಸುಕರವಾಗಿಯೂ ಆತ್ಮಾವಲೋಕನವನ್ನುಂಟುಮಾಡುತ್ತದೆ.

೩. ಏತಕ್ಕೆಂದರೆ ಕರ್ಮಯೋಗಿಯು ಆತ್ಮಾನುಭವ ತೃಪ್ತನಾದುದರಿಂದ, ಆ ಆತ್ಮಾನುಭವಕ್ಕಿಂತ ಬೇರೆ ಯಾವುದರಲ್ಲೂ ಅಪೇಕ್ಷೆ ಮತ್ತು ದ್ವೇಷವೂ ಇಲ್ಲದುದರಿಂದ,ಪ್ರಾಜ್ಞನಾಗಿ ಬಂಧದಿಂದ ಆತನಿಗೆ ಶೀಘ್ರವಾಗಿ ಬಿಡುಗಡೆಯುಂಟು.

೪. ಕರ್ಮಯೋಗದಿಂದಲೂ ಜ್ಞಾನಯೋಗದಿಂದಲೂ ಉಂಟಾಗುವ ಫಲವು ಒಂದೇ. ಅದು ಆತ್ಮಾವಲೋಕನವು; ಆದುದರಿಂದ ಎರಡೂ ಒಂದೇ.

೫. ಹೀಗೆ ತಿಳಿದವನೇ ಪ್ರಾಜ್ಞನು.

೬. ಆದರೆ ಅವುಗಳಲ್ಲಿ ಜ್ಞಾನಯೋಗದಿಂದ ಸಿದ್ಧಿಯು ಕಷ್ಟವು; ಕರ್ಮಯೋಗದಿಂದ ಆತ್ಮಾವಲೋಕನವು ಶೀಘ್ರವಾಗಿ ಲಭಿಸುತ್ತದೆ.

೭. ಕರ್ಮಯೋಗಿಯು ಶುದ್ಧಾಂತಃಕರಣನಾಗಿ ಮನಸ್ಸನ್ನೂ ಇಂದ್ರಿಯಗಳನ್ನೂ ಜಯಿಸಿದವನಾದ ಪ್ರಯುಕ್ತ ಎಲ್ಲರನ್ನೂ ಸಮವಾಗಿ ಭಾವಿಸುವನಾಗಿ ಪರಮಪುರುಷಾರಾಧನರೂಪದಲ್ಲಿ ಕರ್ಮಗಳನ್ನೆಸಗುವದರಿಂದ ಕರ್ಮವು ಬಂಧಕವಾಗುವದಿಲ್ಲವು; ಆತ್ಮಾವಲೋಕನದ ಕ್ಷಿಪ್ರಸಿದ್ಧಿಯು.

೮-೯. ಕರ್ಮಯೋಗವು ಕ್ಷಿಪ್ರದಲ್ಲಿ ಸುಕರವಾಗಿ ಫಲಸಿದ್ಧಿಯನ್ನುಂಟುಮಾಡುವದಕ್ಕೆ ಈತನು ಏನನ್ನೂ ಮಾಡುವದಿಲ್ಲವು, ತನ್ನ ಇಂದ್ರಿಯಗಳೂ ಮನಸ್ಸೂ ಸಹ ಪೂರ್ವ ಕರ್ಮಾನುಸಾರ ನಡೆಸುತ್ತವೆಂಬ ಅನುಸಂಧಾನವು ಆವಶ್ಯಕವು.

೧೦. ಹೀಗೆ ಫಲಸಙ್ಗವನ್ನು ತೊರೆದು ವಿಹಿತ ಕರ್ಮಗಳನ್ನು ಮಾಡುವವನಿಗೆ ಕರ್ಮಲೇಪವಿಲ್ಲವು.

೧೧. ಹೀಗೆ ವಿಹಿತಕರ್ಮಾನುಷ್ಠಾನಗಳು ಏತಕ್ಕೆಂದರೆ—ಆತ್ಮಶುದ್ಧಿಗಾಗಿ ಪ್ರಾಚೀನಕರ್ಮಗಳು ತೊಲಗುವದಕ್ಕಾಗಿ.

೧೨. ಕರ್ಮವು ಇತರರಿಗೆ ಬಂಧಕವು; ಈ ಕರ್ಮಯೋಗಿಯು ಕರ್ತೃತ್ವ ಫಲಸಙ್ಗಾದಿಗಳನ್ನು ಬಿಟ್ಟು ಮಾಡುವದರಿಂದ ಬಂಧಕವಲ್ಲವು.

೧೩. ಹಾಗಾದರೆ ಕರ್ತೃತ್ವದ ಅನುಸಂಧಾನವು ಎಲ್ಲಿ? ಎಂದರೆ—ನವದ್ವಾರಯುಕ್ತವಾದ ಪುರವೆನಿಸುವ ದೇಹದಲ್ಲಿ.

೧೪. ಆ ದೇಹಕ್ಕೆ ಕರ್ತೃತ್ವವು ಹೇಗೆ? ಆತ್ಮಾ ಅಣುವಾಗಿ ದೇಹವಿಲ್ಲದೆ ಏನನ್ನೂ ಮಾಡಲಾರನು; ಆದುದರಿಂದ ಕರ್ಮಾನುಗುಣವಾಗಿ, ದೇಹಪ್ರವೃತ್ತಿಯಿಂದಲೇ ಆಗುವದರಿಂದ ದೇಹಕ್ಕೇ ಕರ್ತೃತ್ವವೆಂಬ ಅನುಸಂಧಾನವು.

೮೦

೧೫. ಅದು ಹೇಗೆ ಎಂದರೆ, ಒಬ್ಬನ ಸುಖ ವಿಘಾತಕ್ಕಾಗಿಯಾಗಲಿ ದುಃಖನಿವೃತ್ತಿಗಾಗಲಿ ತಾನು ಕಾರಣವಲ್ಲವು. ಸುಖದುಃಖಗಳು ಕರ್ಮವಾಸನಾಮೂಲಕ ಪ್ರಾಪ್ತವಾಗಿಯೇ ಆಗುತ್ತವೆ. ತಾನು ಹೀಗೆ ಮಾಡಿದೆನೆಂಬ ಭಾವವು, ಭ್ರಮೆಯಿಂದುಂಟಾದುದು.

೧೬. ಭ್ರಮೆಯು ಏತರಿಂದ ಎಂದರೆ—ಆತನ ಸೂರ್ಯನಹಾಗಿರುವ ಸ್ವಯಂಪ್ರಕಾಶವಾದ ಜ್ಞಾನವು ಈ ಶರೀರ ಸಂಬಂಧದಿಂದ ತಿರೋಹಿತವಾಗಿರುವದರಿಂದ.

೧೭. ಹೀಗೆ ಕರ್ಮಾನುಗುಣವಾಗಿ ಶರೀರಮೂಲಕ ಎಲ್ಲವೂ ನಡೆಯುತ್ತವೆ ಎಂದು ತಿಳಿದು ಆತ್ಮ ಸ್ವರೂಪವು ತುಂಬಾ ಪರಿಶುದ್ಧವಾದುದೆಂದು ಸದಾ ಚಿನ್ತನಮಾಡಿ, ಅಂತಹ ಆತ್ಮಸ್ವರೂಪ ವನ್ನು ಹೊಂದಬೇಕೆಂಬ ಸಙ್ಕಲ್ಪದಿಂದ ಕರ್ಮಯೋಗಿಗಳು ಶೀಘ್ರವಾಗಿ ಉಪಾಯಾನು ಷ್ಠಾನವನ್ನು ಮಾಡಿ ಮೋಕ್ಷವನ್ನು ಹೊಂದುವರು.

೧೮. ಇಂತಹ ಪಂಡಿತರು ಉಚ್ಚನೀಚ ಎಲ್ಲಾ ದೇಹಗಳಲ್ಲಿಲ್ಲಾ ಆತ್ಮರೆಲ್ಲಾ ಜ್ಞಾನಸ್ವರೂಪ ಜ್ಞಾನಗುಣವುಳ್ಳವರಾಗಿ ಸಮವೆಂದು ಭಾವಿಸುವರು.

೧೯. ಅಂತವರು ಈ ಕರ್ಮಾನುಷ್ಠಾನವೇಳೆಯಲ್ಲಿಯೇ ಸಂಸಾರದಲ್ಲಿ ಮಮತೆಯನ್ನು ಕಳೆದು ಕೊಂಡು ಮುಕ್ತರಹಾಗೆ ಸುಖಿಗಳು.

೨೦ ಅದು ಹೇಗೆ ಎಂದರೆ, ಸುಖ ಬಂದರೆ ಹಿಗ್ಗುವದಿಲ್ಲವು, ದುಃಖ ಬಂದರೆ ಕುಗ್ಗುವದಿಲ್ಲವು. ಅವರು ಯಾವಾಗಲೂ ತಮ್ಮ ಆತ್ಮ ಅಮೋಘಸ್ವರೂಪವಾದುದೆಂಬ ಚಿನ್ತನದಲ್ಲೇ ಇರುವರಾದುದರಿಂದ.

೨೧ ಹೀಗೆ ವಿಷಯಾಭಿಲಾಷೆಗಳಿಲ್ಲದೆ ಯಾವ ಕರ್ಮಯೋಗಿಯು ಆತ್ಮಾನುಸಂಧಾನದಲ್ಲೇ ಆನಂದ ವನ್ನು ಹೊಂದುವನೋ ಆತನೇ ಕಡೆಗೆ ನಿರತಿಶಯ ಸುಖವನ್ನು ಹೊಂದುವನು.

೨೨ ಐಹಿಕ ವಿಷಯ ಭೋಗಗಳೆಲ್ಲಾ ಕೊನೆಗೆ ದುಃಖಫಲಗಳುಳ್ಳವಾದುದರಿಂದ ಪಂಡಿತನು ಅವುಗಳಲ್ಲಿ ರಮಿಸುವದಿಲ್ಲವು.

೨೩ ಆದುದರಿಂದ ಯಾವ ಮೋಕ್ಷಾರ್ಥಿಗೆ ಕಾಮಕ್ರೋಧಗಳ ವೇಗವನ್ನು ನಿರಸನಮಾಡಲು ಶಕ್ತಿಯುಂಟೋ, ಅವನೇ ಪರಮ ಸುಖಿಯು.

೨೪. ಹೀಗೆ ಐಹಿಕೋಪಭೋಗಗಳನ್ನು ನಿರಾಕರಿಸಿ, ಆತ್ಮಾನುಭವವೇ ಸುಖವಾಗಿ ಭಾವಿಸಿ ಅದರ ಅನುಸಂಧಾನದಲ್ಲೇ ಯಾವನು ವಿಹರಿಸುವವನಾಗಿದ್ದಾನೋ ಅಂತಹ ಕರ್ಮಯೋಗಿಯು ಆತ್ಮಾವಲೋಕನ ಸುಖವನ್ನು ಹೊಂದಿವನೆಂದು ಹೇಳಬಹುದು.

೨೫. ಹೀಗೆ ಸುಖದುಃಖಗಳಿಗೆ ಮನಕೊಡದೆ, ಆತ್ಮಾನುಸಂಧಾನವನ್ನೇ ಮಾಡುತ್ತಿರುವವರು ಸರ್ವಭೂತ ಹಿತರಾಗಿದ್ದುಕೊಂಡು, ಉಪಾಯಾನುಷ್ಠಾನಕ್ಕೆ ವಿರೋಧಿ ಪಾಪಗಳನ್ನು ಕಳೆದುಕೊಂಡು ಆತ್ಮಾವಲೋಕನವನ್ನು ಹೊಂದುವರು.

೨೬. ಇಂತಹ ಕರ್ಮಯೋಗಿಗಳಿಗೆ ದಿವ್ಯಾತ್ಮಸ್ವರೂಪ ಪ್ರಾಪ್ತಿ ಎಂಬುದು ಎದುರಿಗೆ ನಿಂತಹಾಗೆ.

೨೭. ೨೮. ಇಂತಹ ಸ್ವರೂಪ ಚಿಂತನೆಯನ್ನು ಮಾಡತಕ್ಕ ಕ್ರಮವು—ಸರಿಯಾದ ಆಸನ; ದೇಹ ವನ್ನು ಸಮವಾಗಿಡೋಣವು, ಭ್ರೂಮಧ್ಯವನ್ನೇ ನೋಡೋಣ; ಪ್ರಾಣಾಪಾನಗಳಸಮತ್ವ; ಇಂದ್ರಿಯ ಮನಸ್ಸುಗಳ ಜಯ; ಹೀಗೆ ಚಿನ್ತನೆಯನ್ನು ಮಾಡುವವನು ಮುಕ್ತ ತುಲ್ಯನು.

೨೯. ಅದೇನು ಎಂದರೆ ಅಂತಹ ಕರ್ಮಯೋಗಿಯು ಅನುಷ್ಠಿಸುವ ಯಜ್ಞರೂಪ ಕರ್ಮಗಳೆಲ್ಲಾ ಫಲ, ಕರ್ತೃತ್ವ ಮಮತಾ ತ್ಯಾಗಪೂರ್ವಕವಾಗಿ ಭಗವಂತನಲ್ಲಿ ಸಮರ್ಪಿಸುವದರಿಂದ ಕ್ಷಿಪ್ರ ದಲ್ಲೇ ಸುಕರವಾಗಿ ಶಾಂತಿಯನ್ನು ಹೊಂದುವನು.

ಶ್ರಿಯೈ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾನ್ತಮಹಾದೇಶಿಕಾಯ ನಮಃ

# ಶ್ರೀಮದ್ಭಗವದ್ಗೀತಾ

## ಷಷ್ಠೋಽಧ್ಯಾಯಃ

ಶ್ರೀ ಭಗವಾನುವಾಚ—

ಮೂ. ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ।
ಸ ಸನ್ನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥ ೧.

---

ಹಿಂದಿನ ಅಧ್ಯಾಯಗಳಲ್ಲಿ ಜ್ಞಾನಯೋಗಕ್ಕೂ ಕರ್ಮಯೋಗಕ್ಕೂ ಇರುವ ವ್ಯತ್ಯಾಸಗಳನ್ನು ವಿಶದವಾಗಿ ತಿಳಿಯಪಡಿಸಿ, ಅಭ್ಯಾಸದಿಂದ ಸುಕರವಾದುದರಿಂದಲೂ, ಪ್ರಮಾದ ರಹಿತವಾದುವರಿಂದಲೂ, ಅಂತರ್ಗತ ಆತ್ಮ ಯಾಥಾತ್ಮ್ಯ ಜ್ಞಾನವುಳ್ಳದ್ದಾದುದರಿಂದಲೂ, ಕರ್ಮಯೋಗವೇ ಶ್ರೇಷ್ಠವೆಂದು ಹೇಳಿ, ಅದಕ್ಕೆ ನಿತ್ಯನೈಮಿತ್ತಿಕಾನುಷ್ಠಾನಗಳು ದೇಹಪ್ರಯುಕ್ತವಾಗಿ ಬಂದಿರುವದರಿಂದ ಅವುಗಳು ಮುಖ್ಯವಾಗಿ ಅಜ್ಗವಾಗಿ ಅನುಷ್ಠಿಸತಕ್ಕದ್ದೆಂದೂ, ಆಕರ್ಮಯೋಗಪ್ರಕಾರಗಳನ್ನೆಲ್ಲಾ ಉಪದೇಶಿಸಿ, ಅದನ್ನನುಷ್ಠಿಸುವ ಪ್ರಕಾರವನ್ನು ಹೇಳಲು ಹೊರಟು, ಅದರಲ್ಲಿ ಅಡಗಿರುವ ಕರ್ಮಜ್ಞಾನಾಂಶಗಳಲ್ಲಿ, ಕರ್ಮಭಾಗದಲ್ಲಿ ಅಕರ್ತೃತ್ವಾನುಸಂಧಾನವೂ ಜ್ಞಾನಭಾಗದಲ್ಲಿ ಸಮದರ್ಶಿತ್ವವೂ ಆವಶ್ಯಕವೆಂದು ಹೇಳಿ ಅನಂತರ ಆತ್ಮಚಿಂತನ ಕ್ರಮವನ್ನು ಸಜ್ಗ್ರಹವಾಗಿ ಹೇಳಿ ಮುಗಿಸಿದರು. ಶ್ರೀಕೃಷ್ಣ ಭಗವರ್ನಾರವರ ಉಪದೇಶದಲ್ಲಿ ತನ್ನ ವರ್ಣಾಶ್ರಮಧರ್ಮವಾದ ದುಷ್ಟನಿಗ್ರಹವನ್ನು ತ್ಯಜಿಸಿದ ಅರ್ಜುನನಿಗೆ ಅಂತಹ ಪ್ರವೃತ್ತಿಯು ಶಾಸ್ತ್ರವಿರುದ್ಧವೆಂದು ಹೇಳುವದಕ್ಕಾಗಿಯೇ ಕರ್ಮಯೋಗ ಪ್ರಶಂಸೆಯನ್ನೇ ಬಹಳವಾಗಿ ಮಾಡಿರುತ್ತಾರೆ. ಮುಂದೆ ಆರನೆಯ ಅಧ್ಯಾಯದಲ್ಲೂ ಅಂತಹ ಪ್ರಶಂಸೆಯೇ ನಡೆಯುತ್ತದೆ. ಮೊದಲು ಒಂಭತ್ತು ಶ್ಲೋಕಗಳಿಂದ ಹಿಂದೆ ಹೇಳಿದ ಅಭಿಪ್ರಾಯಗಳನ್ನೇ ಅನುವಾದಮಾಡಿ ಸ್ಥಿರಪಡಿಸಿ, ಮುಖ್ಯವಾಗಿ ಕರ್ಮಯೋಗಿಯು ಮಾಡುವ ಆತ್ಮಚಿಂತನ ಪ್ರಕಾರವು ಹೇಳಲ್ಪಡುತ್ತದೆ. ಇದಲ್ಲದೆ ಯೋಗವಿಪಾಕದೆಶೆಯು ನಾಲ್ಕುವಿಧವೆಂದೂ, ಯೋಗಕ್ಕೆ ಸಾಧನಗಳಾದ ವೈರಾಗ್ಯಾದಿಗಳೂ, ಯೋಗಸಿದ್ಧಿಯೂ, ಯೋಗಭ್ರಷ್ಟನಿಗೂಕೂಡ ಮುಂದೆ ಒಳ್ಳೇ ಗತಿಯೂ, ಆ ಕರ್ಮಯೋಗದಲ್ಲೂ ಶ್ರೀಕೃಷ್ಣನ ಭಜನವೂ ಸಹ ಇರುವದರಿಂದ ಅದಕ್ಕೆ ಪಾರಮ್ಯವೂ ಸಹ ಕರ್ಮಯೋಗಕ್ಕೆ ಸಂಬಂಧಪಟ್ಟ ವಿಷಯಗಳಾಗಿ ಹೇಳಲ್ಪಡುತ್ತವೆ.

ಶ್ರೀಕೃಷ್ಣಭಗವರ್ನಾರವರು ಹೇಳುತ್ತಾರೆ.—

ಮೂಲಕ್ಕೆ ಅರ್ಥವು:—ಕರ್ಮಫಲಂ - ಕರ್ಮಯೋಗಾನುಷ್ಠಾನ ಪ್ರಭೇದಗಳಿಗೆ ಹೇಳಿರುವ ಸ್ವರ್ಗಾದಿಫಲವನ್ನು, ಅನಾಶ್ರಿತಃ - ಆಶ್ರಯಿಸದೆ ಎಂದರೆ ಅಪೇಕ್ಷಿಸದೇ, ಕರ್ಮ ಎಂಬುದು ಪೂರ್ವಾರ್ಧದ ಮಧ್ಯದಲ್ಲಿರುವದರಿಂದ ಕಾಕಾಕ್ಷಿನ್ಯಾಯ ಪ್ರಕಾರ ಎರಡು ಕಡೆಗೂ

ಅನ್ವಯಿಸಬಹುದು; ಕರ್ಮ ಕಾರ್ಯಂ - ಕರ್ಮಾನುಷ್ಠಾನವನ್ನು ಮಾಡತಕ್ಕದ್ದು ಎಂದು, ಯಃ- ಯಾವ ಕರ್ಮಯೋಗಿಯು, ಕರ್ಮ ಕರೋತಿ - ತನ್ನ ಕರ್ಮಯೋಗಕ್ಕೆ ಸಂಬಂಧಿಸಿದ ನಿತ್ಯನೈಮಿತ್ತಿಕ ಐಚ್ಛಿಕ ಕರ್ಮಾನುಷ್ಠಾನವನ್ನು ಮಾಡುವನೋ, ಸಃ - ಅವನೇ, ಸನ್ಯಾಸೀ ಚ - ಪ್ರಕೃತಿಯಲ್ಲಿ ಆತ್ಮಭ್ರಮೆ ಇಲ್ಲದೆ, ಕರ್ಮವನ್ನು ಪ್ರಕೃತಿಯಲ್ಲಿಟ್ಟು ಅಕರ್ತೃತ್ವಾನುಸಂಧಾನಮಾಡುವ, ಜ್ಞಾನನಿಷ್ಠನೂ ಹೌದು ; ಯೋಗೀ ಚ - ಕರ್ಮಯೋಗನಿಷ್ಠನೂ ಹೌದು ; ಈ ಸಂನ್ಯಾಸಿಯೂ ಯೋಗಿಯೂ ಆದವನು ಆಶ್ರಮ ಸಂನ್ಯಾಸಿಯು ಹಾಗಲ್ಲವೆಂದು ಮುಂದೆ ಹೇಳುತ್ತಾರೆ; ಸಾಧಾರಣ ಸಂನ್ಯಾಸಿಯಾದರೋ ನಿರಗ್ನಿಯು, ಅಕ್ರಿಯನು ; ಸಂನ್ಯಾಸಿಗೆ ಪತ್ನೀಯಿಲ್ಲದುದರಿಂದ ಔಪಾಸನ ವೈಶ್ವದೇವಾದಿಗಳಿಗೆ ಅಗ್ನಿ ಇಲ್ಲದವನಾಗಿ ಅವುಗಳಲ್ಲಿ ಅಧಿಕಾರವಿಲ್ಲವು, ದ್ರವ್ಯಸಾಧ್ಯ ಕರ್ಮಗಳಲ್ಲೂ ಅಧಿಕಾರವಿಲ್ಲವು. ಮನುಸ್ಮೃತಿಯು ಹಾಗೆಯೇ ಹೇಳಿರುತ್ತದೆ. ಈತನಾದರೋ ವಿಲಕ್ಷಣನಾದ ಸಂನ್ಯಾಸಿಯೂ ಹೌದು, ಕರ್ಮಯೋಗಿಯೂ ಹೌದು ; ಜ್ಞಾನನಿಷ್ಠೆ ಕರ್ಮನಿಷ್ಠೆಗಳೆರಡೂ ಈತನಿಗೆ ಉಂಟೆಂಬ ಭಾವವು. ಈತನು ನ ನಿರಗ್ನಿಃ - ಈತನು ಪತ್ನಿಯೊಂದಿಗೆ ಔಪಾಸನಾದಿ ಕರ್ಮಗಳಿಗೆ ಯೋಗ್ಯನಾಗಿರುವದರಿಂದ ನಿರಗ್ನಿಯೂ ಅಲ್ಲವು ; ಭಗವದ್ಭಾಗವತ ಕೈಂಕರ್ಯಾದಿಗಳಿಗೂ ಕರ್ಮಯೋಗ ಧರ್ಮಾನುಷ್ಠಾನಗಳಿಗೂ, ಯಜ್ಞಶಿಷ್ಟಾಶನ ಪ್ರಾಪ್ತಿಗಳಿಗೂ ಬೇಕಾದ ಧನಾರ್ಜನಾದಿ ಕರ್ಮಗಳನ್ನನುಷ್ಠಿಸುವನಾದುದರಿಂದ, ನಾಕ್ರಿಯಃ - ನ ಅಕ್ರಿಯಃ ಅಕ್ರಿಯನೂ ಅಲ್ಲವು, ಹೀಗೆ ಈ ಕರ್ಮಯೋಗಿಯು ವಿಲಕ್ಷಣ ಸಂನ್ಯಾಸಿಯು ಎಂದು ಉಪದೇಶಿಸಿರುತ್ತಾರೆ. ಈ ಸಂನ್ಯಾಸ ಶಬ್ದಕ್ಕೆ ಹಿಂದೆಯೇ ೫ನೆಯ ಅಧ್ಯಾಯದಲ್ಲಿ ಕರ್ಮ ಸಂನ್ಯಾಸವೆಂಬ ಅಭಿಪ್ರಾಯವೆಂದು ಸೂಚಿಸುವದಕ್ಕಾಗಿ, ಮೊದಲನೆಯ ಶ್ಲೋಕದಲ್ಲಿ ಕರ್ಮಸಂನ್ಯಾಸವೆಂದು ಪ್ರಯೋಗಿಸಿ, ಅದನ್ನೇ ಎರಡನೆಯ ಶ್ಲೋಕದಲ್ಲಿ ಕೇವಲ ಸಂನ್ಯಾಸ ಶಬ್ದದಿಂದಲೇ ಹೇಳಿರುತ್ತಾರೆ. ಹಾಗೆಯೇ ಇಲ್ಲಿಯೂ ಈ ಆರನೆಯ ಅಧ್ಯಾಯದ ಪ್ರಥಮ ಶ್ಲೋಕದಲ್ಲಿ ಸಂನ್ಯಾಸೀ ಎಂದು ಪ್ರಯೋಗಿಸಿ, ಈ ಸಂನ್ಯಾಸಿಯು ಯಾರು ಎಂಬಪೇಕ್ಷೆಯಲ್ಲಿ ಎರಡನೆಯ ಶ್ಲೋಕದಲ್ಲಿ ಸನ್ಯಸ್ತಸಙ್ಕಲ್ಪನೆಂದು ತಾವೇ ವ್ಯಾಖ್ಯಾನಮಾಡಿ ವ್ಯಕ್ತಪಡಿಸಿರುತ್ತಾರೆ. ಈ ಜ್ಞಾನನಿಧಿಯಾದ ಶ್ರೀ ವ್ಯಾಸಮಹರ್ಷಿಯು, ತಮ್ಮ ದಿವ್ಯಸೂಕ್ತಿಗಳಲ್ಲಿ ಮೊದಲು ಗೂಢವಾಗಿ ಪದಗಳನ್ನು ಪ್ರಯೋಗಿಸಿ, ಎಲ್ಲಿ ಸರಿಯಾಗಿ ಅರ್ಥಮಾಡಿಕೊಳ್ಳದೆ ಹೋಗುತ್ತಾರೋ ಎಂಬ ಪರಿತಾಪದಿಂದ ಅದನ್ನೇ ಮುಂದೆ ವ್ಯಕ್ತಪಡಿಸುವ ವಾಡಿಕೆಯು ಅವರಲ್ಲಿ ಸಾಧಾರಣವಾಗಿ ಉಂಟು ; ಪ್ರಾಪ್ತ ಸ್ಥಳಗಳಲ್ಲಿ ಇದನ್ನು ಪ್ರದರ್ಶಿಸುವೆವು. ಶ್ರುತಿಯಲ್ಲೂ ಸಹ ಈ ವಾಡಿಕೆಯೇ ಉಂಟು. ಸನ್ಯಸ್ತಸಙ್ಕಲ್ಪನು ಯಾರೆಂದರೆ ಆತ್ಮಯಾಥಾತ್ಮ್ಯವು ಈ ಕರ್ಮಯೋಗಿಗೆ ಉಂಟಾಗಿರುವದರಿಂದ, ದೇಹದಲ್ಲಿ ಆತ್ಮಾವೆಂಬ ಸಙ್ಕಲ್ಪವರ್ಜಿತನು; ಅಥವಾ ಪ್ರಕೃತಿಯಲ್ಲೇ ಚನ್ನಾಗಿ ಇಡಲ್ಪಟ್ಟ ಕರ್ಮ ಸಙ್ಕಲ್ಪವುಳ್ಳವನು, ಅಕರ್ತೃತ್ವಾನುಸಂಧಾನಮಾಡುವ ಜ್ಞಾನನಿಷ್ಠೆಯುಳ್ಳ ಕರ್ಮಸಂನ್ಯಾಸಿಯು ಎಂಬ ಭಾವವು. ಆದುದರಿಂದ ಕರ್ಮಯೋಗವನ್ನು ಸಪತ್ನೀಕನಾದ ಅರ್ಜುನನಿಗೆ ಬೋಧಿಸುವ ಪ್ರಕರಣದಲ್ಲಿ ಇಲ್ಲಿ ಸಂನ್ಯಾಸೀ ಎಂಬುದರಿಂದ ಸಂನ್ಯಾಸಾಶ್ರಮಿಯೇ ಹೇಳಲ್ಪಟ್ಟನೆಂದು ಅರ್ಥಮಾಡುವದು ಉಚಿತವಾಗಿ ತೋರುವದಿಲ್ಲವು. ಸಂನ್ಯಾಸಿ ಎಂದು ಅರ್ಥಮಾಡಿ, ಅಗ್ನಿ ಕ್ರಿಯಾರಹಿತನಾದ ಸಂನ್ಯಾಸಿಗೂ ಇದರಿಂದ ಅಗ್ನಿಯೂ ಉಂಟು, ಕ್ರಿಯೆಯೂ ಉಂಟು ಎಂದು ಅರ್ಥಮಾಡುವದು ತುಂಬಾ ಬಲಾತ್ಕಾರದ ವಿಷಯವು. ಸಂನ್ಯಾಸಿಯ ಪ್ರಕರಣವೇ ಇಲ್ಲದಿರುವಾಗ ಆತನನ್ನು ಕುರಿತು ಹೇಳಲ್ಪಟ್ಟಿತೆಂಬುದು ಬಲಾತ್ಕಾರವಿಷಯವೇ. ಮೋಕ್ಷಶಾಸ್ತ್ರವು ಹಾಗಾದರೆ ಸಂನ್ಯಾಸಾಶ್ರಮಿಗೆ ಮಾತ್ರವೇ ? ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥರುಗಳಿಗೆ ಇಲ್ಲವೇ ? ಶ್ರುತಿಯೂ ಬ್ರಹ್ಮಸೂತ್ರವೂ ನಾಲ್ಕು ಆಶ್ರಮಿಗಳಿಗೂ ಉಂಟೆಂದು ಹೇಳಿರುತ್ತದೆ.

**ಭಾ.** ಉಕ್ತಃ ಕರ್ಮಯೋಗಸ್ಸಪರಿಕರಃ, ಇದಾನೀಂ ಜ್ಞಾನಯೋಗ ಕರ್ಮಯೋಗ ಸಾಧ್ಯಾತ್ಮಾವಲೋಕನ ರೂಪಯೋಗಾಭ್ಯಾಸ ವಿಧಿ ರುಚ್ಯತೇ ; ತತ್ರ ಕರ್ಮಯೋಗಸ್ಯ ನಿರಪೇಕ್ಷಸಾಧನತ್ವಂ ದ್ರಢಯಿತುಂ ಜ್ಞಾನಾಕಾರಃ ಕರ್ಮಯೋಗೋ ಯೋಗ ಶಿರಸ್ಕೋಽನೂದ್ಯತೇ. ಕರ್ಮಫಲಂ – ಸ್ವರ್ಗಾದಿಕಂ, ಅನಾಶ್ರಿತಃ, ಕರ್ಮಾನುಷ್ಠಾನಮೇವ ಕಾರ್ಯಂ; ಸರ್ವಾತ್ಮನಾಽಸ್ಮತ್ಸುಹೃದ್ಭೂತಪರಮಪುರುಷಾರಾಧನ ರೂಪತಯಾ ಕರ್ಮೈವ ಮಮ

**ಭಾಷ್ಯಾರ್ಥವು :—ಉಕ್ತಃ ಕರ್ಮಯೋಗಸ್ಸಪರಿಕರಃ** - ಸಮಸ್ತ ಸಾಧನ ಪ್ರಕಾರಗಳಿಂದ ಸೇರಿದ ಕರ್ಮಯೋಗವು ಹಿಂದಿನ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿತು. ಅದರಲ್ಲಿರಬೇಕಾದ ಕರ್ಮಾಂಶಗಳೂ ಜ್ಞಾನಾಂಶಗಳೂ ಅನುಷ್ಠಿಸುವ ಪ್ರಕಾರಗಳೂ ಸಹ ಹಿಂದೆ ಹೇಳಲ್ಪಟ್ಟವು. ಎಂಬ ತಾತ್ಪರ್ಯವು. ಹೀಗೆ ಹಿಂದೆ ಹೇಳಿದುದನ್ನು ಸೂಚಿಸಿ ಮುಂದೆ ಹೇಳುವದನ್ನು ತಿಳಿಸುತ್ತಾರೆ. **ಇದಾನೀಂ** - ಈಗ ಈ ಅಧ್ಯಾಯದಲ್ಲಾದರೋ, **ಜ್ಞಾನಯೋಗ ಕರ್ಮಯೋಗ ಸಾಧ್ಯಾತ್ಮಾವಲೋಕನ ರೂಪ ಯೋಗಾಭ್ಯಾಸವಿಧಿಃ**-ಜ್ಞಾನಯೋಗ ಮತ್ತು ಕರ್ಮಯೋಗಗಳಿಂದ ಸಾಧ್ಯವಾದ ಆತ್ಮಾವಲೋಕನರೂಪವಾದ ಆತ್ಮಚಿಂತನದ ಅಭ್ಯಾಸದ ವಿಧಿಯು, **ಉಚ್ಯತೇ** - ಹೇಳಲ್ಪಡುತ್ತದೆ. ಇಲ್ಲಿ ಆತ್ಮ ಚಿಂತನ ಪ್ರಕಾರವನ್ನು ಹೇಳುವ ಸಂದರ್ಭದಲ್ಲಿ **ಯೋಗಾಭ್ಯಾಸವಿಧಿ ರುಚ್ಯತೇ** ಎಂದು ಹೇಳಿರುವದು ಶ್ರೀ ಯಾಮುನೇಯರವರ ಈ ಆರನೆಯ ಅಧ್ಯಾಯದ ಸಙ್ಗ್ರಹ ಶ್ಲೋಕವನ್ನು ಮನಸ್ಸಿನಲ್ಲಿಟ್ಟು ಹೇಳಿದ ಪ್ರಯೋಗವಾಗಿರುತ್ತದೆ. ಇಲ್ಲಿ ಯೋಗವು ಯಾವುದು ಎಂದರೆ ಪ್ರಕೃತಿವಿಯುಕ್ತ ದಿವ್ಯಾತ್ಮಸ್ವರೂಪದ ಅನುಸಂಧಾನವೇ. ಅಭ್ಯಾಸವೆಂದರೆ ಇಲ್ಲಿ ಆತ್ಮಧ್ಯಾನವು. ಒಂದೇ ಹೇಳಲ್ಪಡುವದು ಇನ್ನೇನು ಇಲ್ಲವೋ ಎಂದು, ಇದು ಮುಖ್ಯವಾದುದರಿಂದ ಇದೇ ಮುಖ್ಯವಾಗಿ ಹೇಳಲ್ಪಟ್ಟಿತು. ಅದಕ್ಕೆ ಸಂಬಂಧಿಸಿದ ಇತರ ವಿಷಯಗಳೂ ಹೇಳಲ್ಪಟ್ಟವೆಂದು ತಿಳಿಸುತ್ತಾರೆ. **ತತ್ರ**-ಆ ಸಂದರ್ಭದಲ್ಲಿ, **ಕರ್ಮಯೋಗಸ್ಯ ನಿರಪೇಕ್ಷ ಸಾಧನತ್ವಂ** - ಕರ್ಮಯೋಗವನ್ನು ಇನ್ನು ಯಾವುದರ ಅಪೇಕ್ಷೆಯಿಲ್ಲದೆ ಸಾಧಿಸಬಹುದೆಂಬುದನ್ನು, ಮುಖ್ಯವಾಗಿ ಇಲ್ಲಿ ಹೇಳಬೇಕಾದುದು ಜ್ಞಾನಯೋಗದ ಅಪೇಕ್ಷೆ ಇಲ್ಲದೇನೆ ಸಾಧಿಸಬಹುದೆಂಬುದನ್ನು, **ದ್ರಢಯಿತುಂ** - ಸಮರ್ಥನೆಮಾಡುವದಕ್ಕಾಗಿ, **ಜ್ಞಾನಾಕಾರಃ** - ಅಂತರ್ಗತ ಆತ್ಮ ಯಾಥಾತ್ಮ್ಯಾದಿರೂಪ ಜ್ಞಾನವನ್ನು ಒಳಗೊಂಡ, **ಕರ್ಮಯೋಗವು, ಯೋಗ ಶಿರಸ್ಕಃ** - ಆತ್ಮ ಚಿಂತನವೇ ಪ್ರಧಾನವಾದುದಾಗಿ, **ಅನೂದ್ಯತೇ** - ಅನುವಾದಮಾಡಲ್ಪಡುತ್ತದೆ. ಈ ಅಧ್ಯಾಯದಲ್ಲಿ ಹೇಳಲ್ಪಡುವದೆಲ್ಲವನ್ನೂ ಹೇಳದೆ ಈ ಅಧ್ಯಾಯಾವತಾರಿಕೆಯಲ್ಲಿ, ಮುಖ್ಯವಾದುದು ಆತ್ಮಚಿಂತನ ವಿಧಿಯಾದುದರಿಂದ ಅದು ಮಾತ್ರವೇ ಹೇಳಲ್ಪಟ್ಟಿತು. ಮೊದಲು ಒಂಭತ್ತು ಶ್ಲೋಕಗಳಲ್ಲಿ ಹಿಂದೆ ಹೇಳಿದರ್ಥವೇ ಅನುವಾದಮಾಡಲ್ಪಡುತ್ತದೆಂದು, **ತತ್ರ** ಎಂದಾರಂಭಿಸಿ ಹೇಳುತ್ತಾರೆ. ಈ ಪ್ರಥಮಶ್ಲೋಕದ ಪೂರ್ವಾರ್ಧದಿಂದ ಜ್ಞಾನಾಕಾರವನ್ನೊಳಗೊಂಡ ಕರ್ಮಯೋಗದ ಅನುವಾದವೂ, ಉತ್ತರಾರ್ಧದಿಂದ ನೈರಪೇಕ್ಷ್ಯವೂ ಹೇಳಲ್ಪಡುತ್ತದೆ. **ಕರ್ಮಫಲಂ** ಎಂದರೆ, **ಸ್ವರ್ಗಾದಿಕಂ** - ಸ್ವರ್ಗವೇ ಮೊದಲಾದ ಫಲವನ್ನು, **ಅನಾಶ್ರಿತಃ** - ಆಶ್ರಯಿಸದವನಾಗಿ, ಅಪೇಕ್ಷಿಸದವನಾಗಿ, **ಕಾರ್ಯಂ** ಎಂದರೆ **ಕರ್ಮಾನುಷ್ಠಾನಮೇವ ಕಾರ್ಯಂ**–ಕರ್ಮಯೋಗಾನುಷ್ಠಾನವನ್ನು ಮಾಡುವವೇ ಉಚಿತವು; **ಸರ್ವಾತ್ಮನಾ** - ಸರ್ವಪ್ರಕಾರದಿಂದಲೂ, **ಅಸ್ಮತ್ಸುಹೃದ್ಭೂತ ಪರಮ ಪುರುಷಾರಾಧನತಯಾ**-ನಮಗೆ ಪರಮ ಸುಹೃತ್ತಾಗಿರುವ ಪರಮ ಪುರುಷನ ಆರಾಧನೆಯಾಗುವದರಿಂದ ಹಿಂದಿನ ಅಧ್ಯಾಯದ ಕೊನೆಯ ಶ್ಲೋಕದ(ಅನುವಾದವು) **ಕರ್ಮೈವ ಮಮ ಪ್ರಯೋಜನಂ** - ಕರ್ಮಾನುಷ್ಠಾನವೇ ನನಗೆ ಪ್ರಯೋಜನವೇ ವಿನಾ, ನ

ಭಾ. ಪ್ರಯೋಜನಂ, ನ ತತ್ಸಾಧ್ಯಂ ಕಿಂಚಿದಿತಿ ಯಃಕರ್ಮ ಕರೋತಿ, ಸ ಸನ್ನ್ಯಾಸೀ ಚ ಕರ್ಮಯೋಗ ನಿಷ್ಠಶ್ಚ ; ಆತ್ಮಾವಲೋಕನ ರೂಪಯೋಗ ಸಾಧನಭೂತೋಽಭಯ ನಿಷ್ಠ ಇತ್ಯರ್ಥಃ।ನ ನಿರಗ್ನಿ ರ್ನಚಾಕ್ರಿಯಃ-ನ ಚೋದಿತ ಯಜ್ಞಾದಿ ಕರ್ಮಸ್ವ ಪ್ರವೃತ್ತಃ ನ ಚ ಕೇವಲ ಜ್ಞಾನನಿಷ್ಠಃ, ತಸ್ಯ ಹಿ ಜ್ಞಾನನಿಷ್ಠೈವ, ಕರ್ಮಯೋಗ ನಿಷ್ಠಸ್ಯ ತೂ ಭಯಮಸ್ತೀತ್ಯಭಿಪ್ರಾಯಃ ॥ ೧ ॥

ಭಾ. ಅವ. ಉಕ್ತಲಕ್ಷಣ ಕರ್ಮಯೋಗೇ ಜ್ಞಾನ ಮಪ್ಯಸ್ತೀತ್ಯಾಹ— .

ತತ್ಸಾಧ್ಯಂ ಕಿಂಚಿದಿತಿ - ಆ ಕರ್ಮಾನುಷ್ಠಾನದಿಂದ ಸಾಧ್ಯವಾಗಿ ಫಲರೂಪವಾಗಿ ಯಾವುದೂ ಇಲ್ಲವೆಂದು, ಯಃ ಕರ್ಮ ಕರೋತಿ - ಯಾವ ಕರ್ಮಯೋಗಿಯು ಕರ್ಮಾನುಷ್ಠಾನವನ್ನು ಮಾಡುವನೋ, ಸ ಸನ್ನ್ಯಾಸೀ ಚ ಎಂದರೆ ಕರ್ಮಸನ್ನ್ಯಾಸಮಾಡಿದ ಜ್ಞಾನನಿಷ್ಠನೂ ಹೌದು, ಯೋಗೀ ಚ-ಕರ್ಮಯೋಗನಿಷ್ಠನೂಹೌದು, ಆತ್ಮಾವಲೋಕನರೂಪವಾದ ಯೋಗಸಾಧನಭೂತ-ಎಂದರೆ ಆತ್ಮಚಿಂತನಕ್ಕೆ ಸಾಧನಭೂತವಾದ,ಉಭಯನಿಷ್ಠ ಇತ್ಯರ್ಥಃ ಎರಡು ನಿಷ್ಠೆಯುಳ್ಳವನೆಂಬಭಿಪ್ರಾಯವು. ಒಬ್ಬನೇ ಏಕಕಾಲದಲ್ಲಿ ಜ್ಞಾನಯೋಗಕ್ಕೂ ಕರ್ಮಯೋಗಕ್ಕೂ ಅಧಿಕಾರಿ ಹೇಗೆ ಎಂಬ ಶಙ್ಕಾ ನಿವೃತ್ತ್ಯರ್ಥವಾಗಿ ಆತ್ಮಾವಲೋಕನಕ್ಕೆ ಬೇಕಾದ ಜ್ಞಾನನಿಷ್ಠೆ,ಕರ್ಮನಿಷ್ಠೆ ಎರಡೂ ಇರುವವನೆಂದು ಹೇಳಲ್ಪಟ್ಟಿತು. ಇದರಿಂದ ಜ್ಞಾನಯೋಗದ ಅಪೇಕ್ಷೆಯಿಲ್ಲದೇ ಕರ್ಮಯೋಗದ ಜ್ಞಾನಾಕಾರದಿಂದಲೇ ಆತ್ಮಾವಲೋಕನವು ಸಿದ್ಧಿಸುತ್ತದೆಂಬುದೂ ಸೂಚಿತವು. ನ ನಿರಗ್ನಿ ರ್ನಚಾಕ್ರಿಯಃ ಎಂದರೆ ನ ಚೋದಿತ ಯಜ್ಞಾದಿ ಕರ್ಮಸ್ವಪ್ರವೃತ್ತಃ-ಶಾಸ್ತ್ರದಲ್ಲಿ ವಿಧಿಸಲ್ಪಟ್ಟ ಅಗ್ನಿಮೂಲಕವಾಗಿ ನಡೆಯಬೇಕಾದ ಪಂಚಮಹಾಯಜ್ಞಗಳಿಂದ ಕೂಡಿದ ಯಜ್ಞಯಾಗಾದಿ ಕರ್ಮಗಳಲ್ಲಿ ಪ್ರವೃತ್ತಿ ಇಲ್ಲದವನೂ ಅಲ್ಲವು ಎಂದರೆ ಅಗ್ನಿ ಮೂಲಕವಾಗಿ ನಡೆಯುವ ಯಜ್ಞ ಯಾಗಾದಿ ಕರ್ಮಗಳಲ್ಲಿ ಅಧಿಕಾರವೂ ಉಂಟೆಂಬ ಭಾವವು,ನ ಚ ಕೇವಲ ಜ್ಞಾನನಿಷ್ಠಃ-ಆತನು ಬರೀ ಜ್ಞಾನನಿಷ್ಠೆಯುಳ್ಳವನು ಮಾತ್ರವೇ ಅಲ್ಲವು. ತಸ್ಯ ಹಿ ಜ್ಞಾನನಿಷ್ಠೈವ - ಅವನಿಗಾದರೋ ಎಂದರೆ ಜ್ಞಾನಯೋಗಿಗಾದರೋ, ಜ್ಞಾನ ನಿಷ್ಠೇ ಮಾತ್ರವೇ, ಕರ್ಮಯೋಗನಿಷ್ಠಸ್ಯತು-ಕರ್ಮಯೋಗ ನಿಷ್ಠನಿಗಾದರೋ, ಉಭಯಮಸ್ತೀತ್ಯಭಿಪ್ರಾಯಃ - ಜ್ಞಾನನಿಷ್ಠೆ ಕರ್ಮನಿಷ್ಠೆ ಎರಡೂ ಉಂಟೆಂಬಭಿಪ್ರಾಯವು. ಜ್ಞಾನಯೋಗನಿಷ್ಠನಿಗಾದರೋ ಒಂದುಮಾತ್ರವೇ ಉಂಟು, ಕರ್ಮಯೋಗನಿಷ್ಠನಿಗಾದರೋ ಎರಡೂ ಉಂಟೆಂಬ ಭಾವವು. ಕರ್ಮಸ್ವರೂಪತ್ಯಾಗಮಾಡದೆ ಕರ್ಮಫಲತ್ಯಾಗ ಮಾಡಿದ ಕರ್ಮಯೋಗಿ ಈಗ ಜ್ಞಾನಯೋಗನಿಷ್ಠನೂ ಹೌದು, ಕರ್ಮಯೋಗನಿಷ್ಠನೂ ಹೌದೆಂದು ಇದರಿಂದ ಹೇಳಲ್ಪಟ್ಟಿತು. ಕರ್ಮಯೋಗಿಯನ್ನೇ ಸನ್ನ್ಯಾಸೀ ಎಂದು ಹೇಳಿರುವದರಿಂದ ಸನ್ನ್ಯಾಸಾಶ್ರಮಿಯು ಎಂದು ಅರ್ಥಮಾಡಲು ಸಾಧ್ಯವೇ ಇಲ್ಲವು. ಕರ್ಮಯೋಗಿಯು ಕರ್ಮಫಲತ್ಯಾಗಮಾಡಿರುವದರಿಂದಲೂ ಆತ್ಮಾನುಸಂಧಾನದಲ್ಲೇ ನಿರತನಾಗಿರುವದರಿಂದಲೂ ವಿಷಯೋಪಭೋಗಗಳಲ್ಲಿ ಸನ್ನ್ಯಸ್ತ ಸಙ್ಕಲ್ಪವುಳ್ಳವನಾದುದ ರಿಂದಲೂ ಸನ್ನ್ಯಾಸಿಯು ಎಂಬ ಭಾವವು.

ಭಾಷ್ಯಾವತಾರಿಕೆಯ ಅರ್ಥವು :—ಉಕ್ತಲಕ್ಷಣ ಕರ್ಮಯೋಗೇ ಜ್ಞಾನಮಪ್ಯಸ್ತೀತ್ಯಾಹ - ಹಿಂದೆ ಹೇಳಿದ ಲಕ್ಷಣಗಳುಳ್ಳ ಕರ್ಮಯೋಗದಲ್ಲಿ, ಜ್ಞಾನಮಪ್ಯಸ್ತೀತ್ಯಾಹ-ಜ್ಞಾನಾಕಾರತೆಯೂ ಕೂಡ ಉಂಟೆಂದು ಹೇಳುತ್ತಾರೆ. ಹಿಂದೆಯೇ ಇದು ಹೇಳಲ್ಪಟ್ಟಿರುತ್ತದೆ. (೪. ೧೮) ಇಲ್ಲಿ ಅದರ ಅನುವಾದವು. ಹಿಂದೆ ಹೇಳಲ್ಪಟ್ಟ ಲಕ್ಷಣಗಳುಳ್ಳ ಕರ್ಮಯೋಗದಲ್ಲಿ ಜ್ಞಾನಾಂಶವೂ ಕೂಡ ಇದೆ ಎಂದು ಹೇಳುತ್ತಾರೆ. ಶ್ಲೋಕದ ಪೂರ್ವಾರ್ಧವಿಷಯದಲ್ಲಿ ಅರ್ಥಮಾಡುವಾಗ ಪ್ರಕರಣವನ್ನು ಬಿಟ್ಟು ಜ್ಞಾನಯೋಗದಲ್ಲಿ ಕರ್ಮ ಯೋಗವೂ ಉಂಟೆಂದು ಎಲ್ಲಿ ಅರ್ಥ

ಮೂ॰ ಯಂ ಸನ್ನ್ಯಾಸ ಇತಿ ಪ್ರಾಹು ರ್ಯೋಗಂ ತಂ ವಿದ್ಧಿ ಪಾಂಡವ ।
ನ ಹ್ಯಸನ್ನ್ಯಸ್ತ ಸಙ್ಕಲ್ಪೋ ಯೋಗೀ ಭವತಿ ಕಶ್ಚನ ॥ ೨.

ಭಾ. ಯಂ ಸನ್ನ್ಯಾಸ ಇತಿ - ಜ್ಞಾನಯೋಗ ಇತಿ, ಆತ್ಮಯಾಥಾತ್ಮ್ಯಜ್ಞಾನಮಿತಿ, ಪ್ರಾಹು ಸ್ತಂ ಕರ್ಮಯೋಗಮೇವ ವಿದ್ಧಿ । ತದುಪಪಾದಯತಿ - ನಹ್ಯಸನ್ನ್ಯಸ್ತ ಸಙ್ಕಲ್ಪೋ

ಮಾಡುವರೋ ಎಂದು ಹೀಗೆ ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಹಾಗೆ ಅರ್ಥಮಾಡಿದರೆ (೧) ಪ್ರಕರಣವಿರೋಧವೂ (೨) ಉತ್ತರಾರ್ಧದಲ್ಲಿ ಕರ್ಮಯೋಗಿಯು ಸಂನ್ಯಸ್ತ ಸಙ್ಕಲ್ಪನಾದ ರೀನೆ ನಿಷ್ಪನ್ನ ಕರ್ಮಯೋಗಿ ಎಂದು ಹೇಳಿಸಿಕೊಳ್ಳುವನೆಂದು ಹೇಳಿರುವದಕ್ಕೂ ವಿರೋಧವೂ, (೩) ಅನುಪಯುಕ್ತ ವಿಷಯುವಾಗುವದರಿಂದಲೂ ವಿರೋಧವೂ, ಉಂಟಾಗುತ್ತದೆಂಬ ಅಭಿಪ್ರಾಯದಿಂದ ಹೀಗೆ ಅವತಾರಿಕೆಯನ್ನು ಕೊಟ್ಟಿರುತ್ತಾರೆ.

ಮೂಲಕ್ಕೆ ಅರ್ಥವು :—ಕೆಲವರು "ಯಂ ಸನ್ನ್ಯಾಸ ಮಿತಿಪ್ರಾಹುಃ" ಎಂಬ ಪಾಠಾಂತರವನ್ನು ಸ್ವೀಕರಿಸಿರುತ್ತಾರೆ. ಯಂ ಸನ್ನ್ಯಾಸ ಇತಿ ಪ್ರಾಹುಃ ಎಂಬುದೇ ವ್ಯಾಕರಣಕ್ಕನುಗುಣವಾದ ಪಾಠವು, ಹೇ ಪಾಂಡವ ಓ ಪಾಂಡುಪುತ್ರನಾದ ಅರ್ಜುನನೇ, ಯಂ - ಯಾವುದನ್ನು, ಸನ್ನ್ಯಾಸ ಇತಿ ಪ್ರಾಹುಃ - ಆತ್ಮ ಯಾಥಾತ್ಮ್ಯರೂಪ ಜ್ಞಾನ ನಿಷ್ಠೆ ಎಂದು ಪಂಡಿತರು ಹೇಳದರೋ, ತಂ - ಅದನ್ನೇ, ಯೋಗಂ - ಕರ್ಮಯೋಗ ನಿಷ್ಠೆ ಎಂದು, ವಿದ್ಧಿ - ತಿಳಿ, ಉತ್ತರಾರ್ಧದಿಂದ ಕಾರಣವನ್ನು ಹೇಳಿ, ಆ ಅಭಿಪ್ರಾಯವನ್ನೇ ವ್ಯಕ್ತಪಡಿಸುತ್ತಾರೆ, ಹಿ - ಯಾವಕಾರಣದಿಂದ, ಅಸನ್ನ್ಯಸ್ತ ಸಙ್ಕಲ್ಪಃ ಕಶ್ಚನ - ಸನ್ನ್ಯಸ್ತ ಸಙ್ಕಲ್ಪನಲ್ಲದಿರುವ ಯಾವ ಕರ್ಮಯೋಗಿಯಾಗಲಿ, ಯೋಗೀ ನ ಭವತಿ - ಕರ್ಮಯೋಗಿ ಎಂದು ಹೇಳಿಸಿಕೊಳ್ಳಲು ಅರ್ಹನಾಗುವದಿಲ್ಲವು, ಸನ್ನ್ಯಸ್ತ ಸಙ್ಕಲ್ಪನೆಂದರೆ, ಆತ್ಮ ಯಾಥಾತ್ಮ್ಯಜ್ಞಾನದಿಂದ, ದೇಹವನ್ನು ಆತ್ಮಾ ಎಂದು ಭಾವಿಸದೆ, ಕಾಮ ಸಙ್ಕಲ್ಪಗಳನ್ನು ಪರಿತ್ಯಜಿಸಿದವನು; ಹೀಗಲ್ಲದೆ ಆತ್ಮ ಯಾಥಾತ್ಮ್ಯಜ್ಞಾನ ಶೂನ್ಯನಾಗಿ ದೇಹವೇ ಆತ್ಮಾ ಎಂದು ಭ್ರಮಿಸಿ, ಕಾಮ ಸಙ್ಕಲ್ಪಗಳನ್ನು ಪರಿತ್ಯಾಗಮಾಡದವನು, ಅಸನ್ನ್ಯಸ್ತ ಸಙ್ಕಲ್ಪನು ; ಅವನು ಕರ್ಮಯೋಗಿ ಎಂದು ಹೇಳಿಸಿಕೊಳ್ಳಲು ಅನರ್ಹನು ; ಆದುದರಿಂದ ಕರ್ಮಯೋಗಿಯು ಆತ್ಮಯಾಥಾತ್ಮ್ಯ ಜ್ಞಾನವನ್ನು ಅನುಸಂಧಾನಮಾಡುವವನಾಗಿ ಕಾಮ ಸಙ್ಕಲ್ಪ ವರ್ಜಿತನಾಗಿರಬೇಕು. ಅಂತವನು ಸಂನ್ಯಾಸಿಗೆ ಸಮಾನನಾಗಿ ಜ್ಞಾನನಿಷ್ಠೆಯುಳ್ಳವನೆಂದು ಹೇಳಿಸಿಕೊಳ್ಳುವನೆಂಬುದು ತಾತ್ಪರ್ಯವು. ಹಿಂದೆ ಳನೆಯ ಅಧ್ಯಾಯದ ೧ನೆಯ ಶ್ಲೋಕದಲ್ಲಿ ಉಪಪಾದಿತವಾದುದೇ ಇಲ್ಲಿ ಅನುವಾದ ಮಾಡಲ್ಪಟ್ಟಿತೆಂದು ಭಾಷ್ಯದಲ್ಲಿ ಹೇಳಲ್ಪಡುವದು ||೨||

ಭಾಷ್ಯಾರ್ಥವು :—ಯಂ - ಯಾವುದನ್ನು, ಸಂನ್ಯಾಸ ಇತಿ ಎಂದರೆ ಜ್ಞಾನ ಯೋಗ ಇತಿ–ಜ್ಞಾನ ಯೋಗವೆಂದು ಎಂವರೆ ಇಲ್ಲಿ ಜ್ಞಾನಯೋಗವೇ ಹೇಳಲ್ಪಡಲಿಲ್ಲವು, ಔಪಚಾರಿಕವಾಗಿ ಹಾಗೆ ಹೇಳಲ್ಪಟ್ಟಿತೆಂದು ತೀಸುವದಕ್ಕಾಗಿ ಹೇಳುತ್ತಾರೆ:—ಆತ್ಮಯಾಥಾತ್ಮ್ಯಜ್ಞಾನಮಿತಿ- ಆತ್ಮ ಯಾಥಾತ್ಮ್ಯಜ್ಞಾನವೆಂದು, ಪ್ರಾಹುಃ - ಪಂಡಿತರು ಹೇಳುತ್ತಾರೋ, ತಂ - ಅದನ್ನೇ, ಕರ್ಮಯೋಗಮೇವ - ಕರ್ಮಯೋಗವೆಂದೇ, ವಿದ್ಧಿ - ತಿಳಿ ಎಂದರೆ ಆ ಜ್ಞಾನನಿಷ್ಠೆಯೂ ಕರ್ಮಯೋಗಾಂತರ್ಗತವಾದುದೇ ಎಂದು ತಿಳಿ ; ಸಂನ್ಯಾಸಿ ಶಬ್ದಕ್ಕೆ ಎಲ್ಲಾದರೂ ಜ್ಞಾನಯೋಗವೆಂಬರ್ಥ ಉಂಟೇ ? ಎಂದು ಆಕ್ಷೇಪಿಸಿದರೆ ಜ್ಞಾನಯೋಗದಲ್ಲಿ ಕರ್ಮ ಸಂನ್ಯಾಸವಿರುವದರಿಂದ ಪ್ರಕರಣಾನುಗುಣವಾಗಿ ಹಾಗೆ ವ್ಯಾಖ್ಯಾನವು. ನಾಲ್ಕನೇ ಆಶ್ರಮವೆಂಬರ್ಥಕ್ಕೆ ಪ್ರಕರಣವೇ ಇಲ್ಲವಾದುದರಿಂದ ರೂಢವಾದ ಅರ್ಥವನ್ನು ತ್ಯಜಿಸಿವ್ಯುತ್ಪತ್ತಿಯಿಂದುಂಟಾದ ಅರ್ಥವನ್ನೇ ಹೇಳಬೇ

ಭಾ. ಯೋಗೀ ಭವತಿ ಕಶ್ಚನೇತಿ ; ಆತ್ಮಯಾಥಾತ್ಮ್ಯಾನುಸಂಧಾನೇನ ಅನಾತ್ಮನಿ ಪ್ರಕೃತಾವಾತ್ಮಸಙ್ಕಲ್ಪಃ ಸನ್ನ್ಯಸ್ತಃ-ಪರಿತ್ಯಕ್ತೋ ಯೇನ ಸ ಸನ್ನ್ಯಸ್ತ ಸಙ್ಕಲ್ಪಃ, ಅನೇವಂಭೂತಃ - ಅಸನ್ನ್ಯಸ್ತ ಸಙ್ಕಲ್ಪಃ, ನಹ್ಯುಕ್ತೇಷು ಕರ್ಮಯೋಗಿಷ್ವನೇವಂಭೂತಃ ಕಶ್ಚನ ಕರ್ಮಯೋಗೀಭವತಿ ; (೧) "ಯಸ್ಯಸರ್ವೇ ಸಮಾರಂಭಾಃ ಕಾಮಸಙ್ಕಲ್ಪವರ್ಜಿತಾಃ" ಇತಿ ಹ್ಯುಕ್ತಮ್ ||೨||

ಕಾಗಿದೆ. ಅದುಹರಿಂದ ಅಂತಹ ಅರ್ಥವನ್ನು ವಿವರಿಸಿದರು. ತದುಪಪಾದಯತಿ ಅದನ್ನೇ "ನಹ್ಯಸನ್ನ್ಯಸ್ತಸಙ್ಕಲ್ಪೋ ಯೋಗೀ ಭವತಿ ಕಶ್ಚನ" ವೆಂಬದಾಗಿ ಉಪಪಾದಿಸುತ್ತಾರೆ—ಆತ್ಮಯಾಥಾತ್ಮ್ಯಾನುಸಂಧಾನದಿಂದ, ಅನಾತ್ಮನಿ ಪ್ರಕೃತೌ-ಆತ್ಮವಲ್ಲದಿರುವ ಪ್ರಕೃತಿಯಲ್ಲಿ,ಆತ್ಮಸಙ್ಕಲ್ಪಃ-ಪ್ರಕೃತಿಯೂ ಆತ್ಮಾ ಒಂದೇ ಎಂಬ ಅಭಿಪ್ರಾಯವು,ಸನ್ನ್ಯಸ್ತಃಎಂದರೆಪರಿತ್ಯಕ್ತಃ-ಬಿಡಲ್ಪಟ್ಟುದುದು, ಯೇನಸಃ-ಯಾವನಿಂದಲೋ, ಅವನು ಸನ್ನ್ಯಸ್ತ ಸಙ್ಕಲ್ಪನೆನಿಸುವನು ; ಅನೇವಂಭೂತಃ - ಹೀಗಿಲ್ಲದಿರುವನು ನಸನ್ನ್ಯಸ್ತ ಸಙ್ಕಲ್ಪನೆನಿಸುವನು, ಇಂತವನು ಕರ್ಮಯೋಗಿ ಎನಿಸಲು ಅರ್ಹನಾಗುವದಿಲ್ಲವೆಂಬ ತಾತ್ಪರ್ಯವು, ಇದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ, ಉಕ್ತೇಷು ಕರ್ಮಯೋಗಿಷು - ಮೇಲೆ ಹೇಳಲ್ಪಟ್ಟ ವಿವಿಧ ಕರ್ಮಯೋಗಿಗಳಲ್ಲಿ, ಅನೇವಂಭೂತಃ - ಹೀಗೆ ಅಲ್ಲದಿರುವವನು ಎಂದರೆ ಕಾಮ ಸಙ್ಕಲ್ಪವನ್ನು ಪರಿತ್ಯಾಗಮಾಡದೇ ಇರುವವನು,ಕಶ್ಚನ-ಯಾವನೊಬ್ಬನೂ, ನಹಿ ಕರ್ಮಯೋಗೀಭವತಿ-ಕರ್ಮಯೋಗಿಯಾಗಲು ಅನರ್ಹನು, "ಯಸ್ಯಸರ್ವೇ ಸಮಾರಂಭಾಃ ಕಾಮಸಂಕಲ್ಪ ವರ್ಜಿತಾಃ"(ಗೀ.೪.೧೯) ಇತಿ ಹ್ಯುಕ್ತಂ-ಎಂಬದಾಗಿಯಲ್ಲವೇ ಹಿಂದೆ ಹೇಳಲ್ಪಟ್ಟಿರುತ್ತದೆ. ಇಲ್ಲಿನ ಹಿ ಶಬ್ದದಿಂದ ಹಿಂದೆ ಸ್ಥಾಪಿತವಾದುದೇ ಪುನಃ ಅನುವಾದಲ್ಪಡುತ್ತದೆಂಬ ಭಾವವು ಸೂಚಿತವು. ಯಾವ ಮೋಕ್ಷಾರ್ಥಿಗೆ ಸಮಸ್ತ ಕರ್ಮಯೋಗದ ಪ್ರವೃತ್ತಿಗಳೂ, ವಿಷಯಗಳೊಂದಿಗೆ ಏಕೀಭವಿಸಿದ ಭಾವವಿಲ್ಲದೆ ಇರುತ್ತದೋ ಅಂತಹ ವಿಲಕ್ಷಣ ಜ್ಞಾನವುಳ್ಳ ಕರ್ಮಯೋಗಿಯನ್ನು ಆತ್ಮ ಯಾಥಾತ್ಮ್ಯ ಜ್ಞಾನದಿಂದ ಸುಟ್ಟುಹೋದ ಕರ್ಮಯೋಗದ ಪ್ರತಿಬಂಧಕ ಪಾಪಗಳುಳ್ಳವನೆಂದೂ, ಶಾಸ್ತ್ರಜ್ಞರು ಹೇಳುತ್ತಾರೆಂಬುದು ಈ ಶ್ಲೋಕಾರ್ಥವು. ಇಲ್ಲಿ ಸಙ್ಕಲ್ಪ ಶಬ್ದಕ್ಕೆ ಕರ್ಮಮಾಡಬೇಕೆಂಬ ಮನೋನಿಷ್ಕರ್ಷೆಯೆಂಬರ್ಥವಲ್ಲವು,ಹಾಗೆ ಅರ್ಥಮಾಡಿದರೆ ಕರ್ಮಯೋಗಿಗೆ ಯಾವ ಕರ್ಮವೂ ಇಲ್ಲವಾಗುತ್ತದೆ, ಫಲಾಭಿಸಂಧಿ ಎಂಬರ್ಥವನ್ನೂ ಸಙ್ಕಲ್ಪ ಶಬ್ದಕ್ಕೆ ಹೇಳಲಾಗುವದಿಲ್ಲವು; ಹಾಗೆ ಅರ್ಥಮಾಡಿದರೆ ಈಗ ಉಪಪಾದಿಸಬೇಕಾದ ಕರ್ಮಯೋಗಾಂತರ್ಗತ ಜ್ಞಾನನಿಷ್ಠೆಯು ಕೈಬಿಟ್ಟು ಹೋಗುತ್ತದೆ. ಶ್ಲೋಕದ ಉತ್ತರಾರ್ಧವು ಪೂರ್ವಾರ್ಧದ ಉಪಪಾದನೆಯು. ಹಿಂದೆ ಕಾಮಸಙ್ಕಲ್ಪವರ್ಜಿತಾಃ ಎಂಬಲ್ಲಿ ಯಾವ ಅರ್ಥವೋ, ಆ ಅರ್ಥವೇ ಇಲ್ಲಿಯೂ ಎಂದು ತಿಳಿಯತಕ್ಕದ್ದು. ಸಙ್ಕಲ್ಪವೆಂದರೆ ಸಮ್ಯಕ್ ಕಲ್ಪವು, ಪ್ರಕೃತಿಯೊಂದಿಗೆ ಏಕೀಭವಿಸಿದ ಕಲ್ಪವು; ಪ್ರಕೃತಿಯು ಆತ್ಮಾ ಎಂದು ಏಕೀಭವಿಸೋಣವು; "ಸಙ್ಕಲ್ಪ ಮೂಲಃ ಕಾಮೋಹಿ" ಎಂದು ಮನುಸ್ಮೃತಿಯಲ್ಲಿ ಹೇಳಿರುವಹಾಗೆ ಇಂತಹ ಏಕೀಭವಿಸೋಣವೇ ಕಾಮಕ್ಕೂ ಆ ಕಾಮಕಾರ್ಯಗಳಿಗೂ ಕಾರಣವಾದುದು. ಅದುದರಿಂದಲೇ ಭಾಷ್ಯದಲ್ಲಿ, "ಅನಾತ್ಮನಿ ಪ್ರಕೃತೌ ಆತ್ಮ ಸಙ್ಕಲ್ಪಃ ಪರಿತ್ಯಕ್ತೋ ಯೇನಸಃ-ಸನ್ನ್ಯಸ್ತ ಸಙ್ಕಲ್ಪಃ" ಎಂದು ಹೇಳಿರುತ್ತಾರೆ, ಹೀಗೆ ದೇಹದೊಂದಿಗೆ ಏಕೀಭವಿಸದೇ ಇರಬೇಕಾದರೆ ತತ್ವಜ್ಞಾನಬೇಕು. ಅಂತಹ ಜ್ಞಾನವುಳ್ಳ ಕರ್ಮಯೋಗಿಯೇ ಸನ್ನ್ಯಾಸೀ ಎಂದು ಔಪಚಾರಿಕವಾಗಿ ಹೇಳಲ್ಪಟ್ಟನು. ಮೂಲದ ಕಶ್ಚನ ಎಂಬ ಶಬ್ದದಲ್ಲಿ

(೧) ಗೀ. ೪. ೧೯.

ಭಾ. ಅ. ಕರ್ಮಯೋಗ ಏವಾ ಪ್ರಮಾದೇನ ಯೋಗಂ ಸಾಧಯತೀತ್ಯಾಹ—

ಮೂ. ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣ ಮುಚ್ಯತೇ ।
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣ ಮುಚ್ಯತೇ ॥ ೩.

ತೋರುವ ಅಭಿಪ್ರಾಯವನ್ನು, ನ ಹ್ಯಕ್ಲೇಷಃ ಕರ್ಮಯೋಗಿಷು ಎಂಬುದರಿಂದ ತೋರಿಸಿರುತ್ತಾರೆ. ಕಃ ಎಂಬುದು ಸಾರ್ವತ್ರಿಕವಾಗಿ ಯಾರೇಯಾಗಲಿ ಎಂಬರ್ಥವಲ್ಲವು. ಪ್ರಕರಣಾನುಗುಣವಾಗಿ ಮೇಲೆಹೇಳಿದ ಅಷ್ಟುವಿಧ ಕರ್ಮಯೋಗಿಗಳಲ್ಲಿ ಯಾವ ಕರ್ಮಯೋಗಿಯಾಗಲಿ ಎಂದೇ ಅರ್ಥಮಾಡತಕ್ಕದ್ದು. ಮೂಲದಲ್ಲಿ ಉತ್ತರಾರ್ಧದಲ್ಲಿರುವ ಹಿ ಶಬ್ದವು ಪೂರ್ವಾರ್ಧದಲ್ಲಿ ಹೇಳಿರುವದಕ್ಕೆ ಹೇತುವಾಗಬಹುದು; ಅಥವಾ "ಯಸ್ಯ ಸರ್ವೇ ಸಮಾರಂಭಾಃ" ಎಂದು ಹಿಂದೆಯೇ ಹೇಳಲ್ಪಟ್ಟಿರುವದರಿಂದಲಾಗಲಿ ವ್ಯಕ್ತವೆಂಬರ್ಥವಾಗಲಿ ಆಗಬಹುದು.

**ಭಾಷ್ಯಾವತಾರಿಕೆಯ ಅರ್ಥವು:—** ಕರ್ಮಯೋಗ ಏವ - ಕರ್ಮಯೋಗವೇ **ಅಪ್ರಮಾದೇನ** - ಪ್ರಮಾದವೇನೂ ಇಲ್ಲದಿರುವದರಿಂದ, ಯೋಗಂ ಸಾಧಯತಿ - ಆತ್ಮಸ್ವರೂಪಚಿನ್ತನ ಮೂಲಕ ಆತ್ಮಾವಲೋಕನವನ್ನು ಸಾಧಿಸುತ್ತದೆ, ಇತ್ಯಾಹ - ಎಂಬದಾಗಿ ಈ ಶ್ಲೋಕದಿಂದ ಹೇಳುತ್ತಾರೆ. ಇದರಿಂದ ಜ್ಞಾನಯೋಗವು ಹಾಗೆ ಪ್ರಮಾದದ ಭಯವಿಲ್ಲದೆ ಸಾಧಿಸಲಾರದೆಂಬುದು ಸೂಚಿತವು. ಈ ಗ್ರಂಥದಲ್ಲಿ ಯೋಗ ಶಬ್ದವು ನಾನಾವಿಧ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುತ್ತದೆ. ಪ್ರಕರಣಾನುಗುಣವಾಗಿ ಆ ಶಬ್ದವು ಬ್ರಹ್ಮ ಶಬ್ದದ ಹಾಗೂ ಆತ್ಮಾ ಎಂಬ ಶಬ್ದದಹಾಗೂ ಅನ್ವಯಿಸಲ್ಪಡತಕ್ಕದ್ದಾಗಿರುತ್ತದೆ.

**ಮೂಲಕ್ಕೆ ಅರ್ಥವು:—ಯೋಗಂ** - ಆತ್ಮಾವಲೋಕನವನ್ನು, ಶ್ರೀ ವ್ಯಾಸ ಮಹರ್ಷಿಯ ಉಕ್ತಿಯ ವಿಷಯದಲ್ಲಿ ಜಾಗರೂಕರಾಗಿ ಅರ್ಥವನ್ನು ಹೇಳಬೇಕು. ಹಾಗಲ್ಲದಿದ್ದರೆ ಅಪಾರ್ಥಗಳಿಗೆ ಕಾರಣವಾಗುತ್ತದೆ. **ಆರುರುಕ್ಷೋಃ** - ಹತ್ತಬೇಕೆಂಬಪೇಕ್ಷೆಯುಳ್ಳ ಎಂದರೆ ಹೊಂದಲು ಅಪೇಕ್ಷೆಯುಳ್ಳ, **ಮುನೇಃ** - ಆತ್ಮಯಾಥಾತ್ಮ್ಯ ಸ್ವರೂಪ ಮನನಶೀಲನಿಗೆ, **ಕರ್ಮ** - ಕರ್ಮಯೋಗವೇ, **ಕಾರಣಂ** - ಪ್ರಮಾದ ಮೊದಲಾದವು ಯಾವುದೂ ಇಲ್ಲದ ಸರಿಯಾದಕಾರಣವೆಂದು, **ಉಚ್ಯತೇ** - ಜ್ಞಾನಿಗಳಿಂದ ಹೇಳಲ್ಪಡುತ್ತದೆ. **ತಸ್ಯೈವ ಯೋಗಾರೂಢಸ್ಯ** - ಆ ಆರುರುಕ್ಷುವೇ ಯೋಗಾರೂಢವೆಂದರೆ ಯೋಗದ ವಿಪಾಕದೆಶೆಯನ್ನು ಹೊಂದುವನಾಗಬೇಕಾದರೆ, **ಶಮಃ** - ಅಂತರಿಂದ್ರಿಯ ನಿಗ್ರಹವು, ಯಾವಾಗ ಅಂತರಿಂದ್ರಿಯವು ನಿಗ್ರಹಿಸಲ್ಪಟ್ಟಿತೋ, ಆಗ ಬಾಹ್ಯೇಂದ್ರಿಯಗಳೂ ನಿಗ್ರಹಿಸಲ್ಪಟ್ಟವು ಎಂಬ ಭಾವವು, ಆದುದರಿಂದ ಆತ್ಮಯಾಥಾತ್ಮ್ಯಾನುಸಂಧಾನದಿಂದಲೂ, ತನ್ಮೂಲಕ ಮನೋನಿಗ್ರಹದಿಂದಲೂ ಉಂಟಾಗುವ ಸರ್ವರಾಗದ್ವೇಷಾದಿ ಕರ್ಮ ಪರಿತ್ಯಾಗನೇ, ಎಂದರೆ ಮುಂದಿನ ಶ್ಲೋಕದಲ್ಲಿ ಹೇಳುವ ಸರ್ವಕಾಮ ಸಙ್ಕಲ್ಪ ಪರಿತ್ಯಾಗವೇ, **ಕಾರಣ ಮುಚ್ಯತೇ** - ಕಾರಣವೆಂದು ಹೇಳಲ್ಪಡುತ್ತದೆ. ಇದರಿಂದ ಮೋಕ್ಷಾಪೇಕ್ಷೆಯುಳ್ಳವನು ಮೊದಲು ಕರ್ಮಯೋಗವನ್ನೇ ಅವಲಂಬಿಸಿ, ಆತ್ಮಯಾಥಾತ್ಮ್ಯ ಸ್ವರೂಪವನ್ನು ಮನನಮಾಡುವವನಾಗಿ, ಆ ಆತ್ಮಯಾಥಾತ್ಮ್ಯಾನುಸಂಧಾನದಲ್ಲಿ ಅಭ್ಯಾಸಮುಖೇನ ನಿರತನಾಗಿ ಸರ್ವಕಾಮ ಸಙ್ಕಲ್ಪಗಳನ್ನು ಪರಿತ್ಯಾಗಮಾಡಿದರೆ, ಆಗ ಯೋಗಾರೂಢನಾಗುವನೆಂಬ ಭಾವವು. ಇದೇ ವಿಶದವಾಗಿ ಮುಂದಿನ ಶ್ಲೋಕದಲ್ಲಿ ಯಾವಾಗ ಕರ್ಮಯೋಗಿಯು ಯೋಗಾರೂಢನಾಗುವನೆಂಬುದು ಉಪಪಾದಿಸಲ್ಪಡುತ್ತದೆ.

**ಭಾಷ್ಯಾರ್ಥವು:—ಯೋಗಮ್**-ಆತ್ಮಾವಲೋಕನವನ್ನು, ಇಲ್ಲಿ ಯೋಗ ಶಬ್ದವು ಈ ಪ್ರಕರಣದ ಅನೇಕ ಕಡೆಗಳಲ್ಲಿ ಹೇಳಿರವಹಾಗೆ ಕರ್ಮಯೋಗ ಸಾಧ್ಯವಾದ ಆತ್ಮಾವಲೋಕನವನ್ನು

ಭಾ. ಯೋಗಮ್-ಆತ್ಮಾವಲೋಕನಂ, ಪ್ರಾಪ್ತುಮಿಚ್ಛೋರ್ಮುಮುಕ್ಷೋಃ ಕರ್ಮಯೋಗ ಏವ ಕಾರಣ ಮುಚ್ಯತೇ । ತಸ್ಯೈವ ಯೋಗಾರೂಢಸ್ಯ - ಪ್ರತಿಷ್ಠಿತ ಯೋಗಸ್ಯೈವ ಶಮಃ-ಕರ್ಮನಿವೃತ್ತಿಃ, ಕಾರಣಮುಚ್ಯತೇ। ಯಾವದಾತ್ಮಾವಲೋಕನರೂಪ ಮೋಕ್ಷಾವಾಪ್ತಿ ಕರ್ಮ ಕಾರ್ಯಮಿತ್ಯರ್ಥಃ ॥೩॥

ಹೇಳುತ್ತದೆಯೇ ವಿನಾ ಭಕ್ತಿಯೋಗ ಸಾಧ್ಯವಾದ ಪರಮಾತ್ಮಾವಲೋಕನವನ್ನು ಬೋಧಿಸುವದಿಲ್ಲವು. ಭಕ್ತಿಯೋಗವಿಷಯವೇ ಇನ್ನೂ ಆರಂಭಿಸಲಿಲ್ಲವು. ಪ್ರಕರಣವು ಕರ್ಮಯೋಗ ವಿಷಯವೇ ಆಗಿರುತ್ತದೆ; ಪ್ರಾಪ್ತುಮಿಚ್ಛೋರ್ಮುಮುಕ್ಷೋಃ - ಇದು ಆರುರುಕ್ಷೋರ್ಮುನೇಃ ಎಂಬುದರ ವ್ಯಾಖ್ಯಾನವು, ಹೊಂದಬೇಕೆಂಬಪೇಕ್ಷೆಯುಳ್ಳ ಮೋಕ್ಷಾರ್ಥಿಗೆ, ಆತ್ಮಯಾಥಾತ್ಮ್ಯಾನುಸಂಧಾನವು ಆವಶ್ಯಕವಾದುದರಿಂದ ಮುನಿ ಶಬ್ದವು ಅಂತಹ ಮನನಶೀಲನೇ ಮೋಕ್ಷಾರ್ಥಿಯಾದುದರಿಂದ ಮುಮುಕ್ಷೋಃ ಎಂಬ ಪ್ರಯೋಗವು, ಅಂತಹ ಮೋಕ್ಷಾರ್ಥಿಗೆ ಕರ್ಮಯೋಗ ಏವ ಕಾರಣಮುಚ್ಯತೇ - ಕರ್ಮಯೋಗವೇ ಕಾರಣವೆಂದು ಹೇಳಲ್ಪಡುತ್ತದೆ; ಜ್ಞಾನಿಗಳಿಂದ ಎಂದಾಗಲಿ, ಅಥವಾ ಶಾಸ್ತ್ರದಲ್ಲಿ ಎಂದಾಗಲಿ ಇಟ್ಟುಕೊಳ್ಳತಕ್ಕದ್ದು. ಇಲ್ಲಿ ಏವ ಎಂಬ ಅವಧಾರಣವು ಕಾರಣ ಮುಚ್ಯತೇ ಎಂಬುವ ವಿಶೇಷ ವಿಧಿಯಿಂದ ಸೂಚಿತವು; ಇದರಿಂದ ಪ್ರಮಾದ ರಹಿತವಾದುದೆಂದಾಗಲಿ, ಅಥವಾ ಜ್ಞಾನಯೋಗ ನಿರಪೇಕ್ಷವಾಗಿಯಾಗಲಿ, ಕಾರಣವು ಎಂಬ ಭಾವವು, ತಸ್ಯೈವ - ಆ ಆರುರುಕ್ಷುವೇ, ಯೋಗಾರೂಢಸ್ಯ ಎಂದರೆ, ಪ್ರತಿಷ್ಠಿತ ಯೋಗಸ್ಯೈವ-ಯೋಗನಿಷ್ಪತ್ತಿಯುಂಟವನಾದರೇ, ಶಮಃ ಎಂದರೆ ಕಾಮಸಙ್ಕಲ್ಪರೂಪ ಕರ್ಮಗಳಿಂದ ನಿವೃತ್ತಿಯು, ಕಾರಣ ಮುಚ್ಯತೇ-ಕಾರಣವೆಂದು ಹೇಳಲ್ಪಡುತ್ತದೆ. ಇಲ್ಲಿ ಕೆಲವರು ಸರ್ವಕರ್ಮ ಪರಿತ್ಯಾಗವೇ ಯೋಗಾರೂಢತ್ವಕ್ಕೆ ಕಾರಣವೆಂದು ಅಭಿಪ್ರಾಯಪಡುತ್ತಾರೆ. ಆಗ ನಿತ್ಯನೈಮಿತ್ತಿಕಗಳನ್ನೂ ತ್ಯಾಗಮಾಡಬಹುದೆಂದಾಗುತ್ತದೆ. ಇವುಗಳು ಆಜ್ಞಾ ಕೈಙ್ಕರ್ಯಗಳಾಗುವದರಿಂದ ಶರೀರವಿರುವವರೆಗೂ ಬಿಟ್ಟದ್ದಲ್ಲವು. ಹಾಗೆ ಪರಿತ್ಯಾಗಮಾಡಿದರೆ, ಆಜ್ಞಾಚ್ಛೇದೀಮಮದ್ರೋಹೀ ಎಂದು ಹೇಳಿರುವಹಾಗೆ ಭಗವನ್ನಿಗ್ರಹಕ್ಕೆ ಸಿಕ್ಕುತ್ತಾನೆ, ಆದುದರಿಂದ ಕಾಮಸಙ್ಕಲ್ಪರೂಪ ಕರ್ಮಗಳಿಂದ ಶಮಃ ಎಂದರೆ ಉಪಶಮವೆಂದು ಅರ್ಥಮಾಡಬೇಕಾಗಿರುತ್ತದೆ. ಶಮ ಶಬ್ದದ ಅರ್ಥವೇನೆಂಬುದು ಮುಂದಿನ ಶ್ಲೋಕದಲ್ಲಿ ಸರ್ವಸಙ್ಕಲ್ಪ ಸನ್ಯಾಸತ್ವವೆಂದು "ತತಸ್ತತಶ್ಶೋಪಶಮಃ ಕ್ರಿಯಾಭ್ಯಃ" ಎಂಬ ವ್ಯಾಸೋಕ್ತಿಯಿಂದ ಗ್ರಹಿಸಬಹುದು. "ಕರ್ಮ" ಶಬ್ದಕ್ಕೆ ಪ್ರತಿದ್ವಂದ್ವಿಯಾಗಿ "ಶಮ"ವನ್ನು ಪಯೋಗಿಸಿದರೆ ಕಾಮಸಙ್ಕಲ್ಪ ಪ್ರವೃತ್ತಿಯ ಉಪರಮವೆಂದೇ ಅರ್ಥಮಾಡುವದು ಯುಕ್ತವಲ್ಲವೇ ? ಯಾವದಾತ್ಮಾವಲೋಕನ ಮೋಕ್ಷಾವಾಪ್ತಿ-ಎಲ್ಲಿವರೆಗೆ ಈ ಕರ್ಮಯೋಗಿಗೆ ಆತ್ಮಾವಲೋಕನರೂಪವಾದ ಆತ್ಮಾನುಭವಾನಂದವು ಉಂಟಾಗುತ್ತದೋ, ಮತ್ತು ಸಮಸ್ತ ಕಾಮ ಸಙ್ಕಲ್ಪ ಪ್ರವೃತ್ತಿಗಳಿಂದ ಬಿಡುಗಡೆಯು ಉಂಟಾಗುತ್ತದೋ, ಅಲ್ಲಿವರೆಗೂ, ಕರ್ಮಕಾರ್ಯಮಿತ್ಯರ್ಥಃ ಕರ್ಮಯೋಗವನ್ನೇ ಅನುಷ್ಠಿಸತಕ್ಕದ್ದೆಂಬ ತಾತ್ಪರ್ಯವು. ಇಲ್ಲಿ ಮುನಿ ಎಂಬುದರಿಂದ ಪರಿವ್ರಾಜಕನು, ಸಂನ್ಯಾಸಿಯು ಹೇಳಲ್ಪಟ್ಟನೆಂದು ಅರ್ಥಮಾಡುವದಕ್ಕೆ ಕಾರಣವೇ ಇಲ್ಲವು. ಪೂರ್ವಾಪರ ಸಙ್ಗತಿಯೂ ಇಲ್ಲವು. ಪ್ರಕರಣವೂ ಇಲ್ಲವು. ಇಲ್ಲಿ ಮೋಕ್ಷ ಶಬ್ದವು, ಔಪಚಾರಿಕವಾಗಿ ಆತ್ಮಾವಲೋಕನ ಸುಖವು ಮೋಕ್ಷ ತುಲ್ಯವೇ ಎಂದು ಅತಿಶಯವನ್ನು ಸೂಚಿಸುವದಕ್ಕಾಗಿ ಪ್ರಯೋಗಿಸಲ್ಪಟ್ಟಿರುತ್ತದೆ. ನಿಷಿದ್ಧ, ವಿಹಿತ, ಅನುಭಯವೆಂದು ಕರ್ಮಗಳು ಮೂರು ವಿಧವು ; ಶ್ರುತಿಯಲ್ಲೂ ಧರ್ಮಶಾಸ್ತ್ರಗಳಲ್ಲೂ ವಿಧಿಸಿರುವ ಕರ್ಮಗಳು ವಿಹಿತಗಳು ; ಕೂಡದೆಂದು ನಿಷೇಧಿಸಿರುವುವು ನಿಷಿದ್ಧ ಕರ್ಮಗಳು; ವಿಹಿತಗಳನ್ನು

ಭಾ. ಅವ. ಕದಾ ಪ್ರತಿಷ್ಠಿತಯೋಗೋ ಭವತೀತ್ಯತ್ರಾಹ—

ಮೂ. ಯದಾಹಿ ನೇಂದ್ರಿಯಾರ್ಥೇಷು ನಕರ್ಮಸ್ವ ನುಷಜ್ಜತೇ ।
ಸರ್ವಸಙ್ಕಲ್ಪ ಸನ್ಯಾಸೀ ಯೋಗಾರೂಢ ಸ್ತದೋಚ್ಯತೇ ॥ ೪.

ಮಾಡಲೇಬೇಕು, ನಿಷಿದ್ಧಗಳನ್ನು ಮಾಡಲೇ ಕೂಡದು ; ಅನುಭಯಗಳು ಯಾವುವು ಎಂದರೆ ವಿಷಯೋಪ ಭೋಗಕ್ಕಾಗಿ ಪ್ರವೃತ್ತಿಯೂ, ಪರೋಪಕಾರಮೊದಲಾದವುಗಳೂ ; ಪರೋಪಕಾರ ರೂಪವಾದುವನ್ನು ಕೆಲವರು ವಿಹಿತವೆಂದೇ ಹೇಳುವರು ಕರ್ಮಯೋಗವನ್ನವಲಂಬಿಸಬೇಕೆಂಬ ಅಪೇಕ್ಷೆಯುಳ್ಳವನು ನಿಷಿದ್ಧ ಕರ್ಮಗಳನ್ನು ಪರಿತ್ಯಾಗಮಾಡುವನು. ಕರ್ಮಯೋಗದಮಹಿಮೆ ಯಿಂದ ನಿಷಿದ್ಧ ಕರ್ಮಗಳೂ ವಿಷಯೋಪ ಭೋಗರೂಪ ಕರ್ಮಗಳೂ ಇವೆಲ್ಲಾ ನಾಶವಾಗಿ, ಆತ್ಮಾನುಸಂಧಾನದಲ್ಲಿ ಅಭಿರುಚಿಯುಂಟಾಗುತ್ತದೆ. ಇಂತಹ ಸಂಸ್ಕಾರದಿಂದ ಮನೋನಿಗ್ರಹ ಉಂಟಾಗಿ ಬಾಹ್ಯಸ್ಪರ್ಶಗಳಲ್ಲಿ ಪ್ರವರ್ತಿಸದೇ ಯಾವಾಗ ಇರುತ್ತಾನೋ, ಆಗ ಶಮಃ ಉಂಟಾ ಯಿತೆಂದರಿಯಬೇಕು. ಆತ್ಮೋಪಾಸನೆಯಲ್ಲಿ ಹೀಗೆ ಪ್ರವರ್ತಿಸುತ್ತಾ ಬಂದವನಿಗೆ ಶಮವು ಯಾವಾಗ ಪ್ರಾಪ್ತವಾಯಿತೋ, ಆಗ ಯೋಗಾರೂಢನೆನಿಸುವನು ಎಂಬುದು ತಾತ್ಪರ್ಯವು, ಇಲ್ಲಿ ಕರ್ಮಶಬ್ದಕ್ಕೆ ಕರ್ಮಯೋಗವೆಂದು ಅರ್ಥವಾದನಂತರ, ಅದರ ಪ್ರತಿದ್ವಂದ್ವಿಯಾಗಿ ಉಪ ಯೋಗಿಸಿದ ಶಮ ಶಬ್ದಕ್ಕೆ ಕರ್ಮಯೋಗದ ಉಪರಮವೆಂದು ಅರ್ಥಮಾಡಬೇಕಲ್ಲವೇ ? ಎಂದರೆ, ಹಾಗೆಯೂ ಅರ್ಥಮಾಡಬಹುದು. ಕರ್ಮಯೋಗವು ಯಜ್ಞದಾನ ತಪಸ್ಸುಗಳಲ್ಲಿ ಒಂದನ್ನು ನಿತ್ಯನೈಮಿತ್ತಿಕಗಳೊಂದಿಗೆ ಅನುಷ್ಠಿಸೋಣವೇ ಎಂಬು ಶ್ರೀ ನಿಗಮಾನ್ತ ದೇಶಿಕರು ಉಪದೇಶಿಸಿರು ತ್ತಾರೆ. ಆತ್ಮಾವಲೋಕನ ಉಂಟಾದನಂತರ ಕರ್ಮಯೋಗದ ಐಚ್ಛಿಕಾಂಶವು ಬೇಕಾಗಿಲ್ಲವು. ಇದರ ತಾತ್ಪರ್ಯವೇನೆಂದರೆ,ಯಜ್ಞದಾನ ತಪಸ್ಸುಗಳಲ್ಲಿ ಐಚ್ಛಿಕವಾಗಿ ಅನುಷ್ಠಿಸಲ್ಪಟ್ಟ ಒಂದನ್ನು ಮಾತ್ರ ತ್ಯಾಗಮಾಡಬಹುದೆಂಬ ಭಾವವು ; ನಿತ್ಯ ನೈಮಿತ್ತಿಕಗಳು ಭಕ್ತಿಯೋಗಕ್ಕೂ ಅಙ್ಗಗಳಾದುದ ರಿಂದಲೂ, ವಿಹಿತಕರ್ಮಗಳಾದುದರಿಂದಲೂ ಬಿಡತಕ್ಕವುಗಳಲ್ಲವು. ಆದರೆ ಮುಂದಿನ ಶ್ಲೋಕಾ ರ್ಥವನ್ನು ಮನಸ್ಸಿನಲ್ಲಿಟ್ಟರೆ ಈ ಶಮ ಶಬ್ದಕ್ಕೆ ಈಗ ನಾವು ಉಪಪಾದಿಸಿದ ಅಭಿಪ್ರಾಯವು ಸರಿ ಯಲ್ಲವೆಂದು ತೋರುತ್ತದೆ. ಏಕೆಂದರೆ, ಯೋಗಾರೂಢನು ಸರ್ವಸಙ್ಕಲ್ಪ ಸನ್ಯಾಸಿ ಎಂದು ಹೇಳಿ, ಆತನು ಹೇಗೆ ಸರ್ವಸಙ್ಕಲ್ಪ ಸನ್ಯಾಸಿ ಎಂಬುದನ್ನು ಪೂರ್ವಾರ್ಧದಿಂದ ಇಂದ್ರಿಯಾರ್ಥ ಗಳಲ್ಲೂ ತತ್ಸಂಬಂಧ ಕರ್ಮಗಳಲ್ಲೂ ಆಸ್ಥೆಯಿಲ್ಲದಿರುವನೆಂದು ಹೇಳಿರುವುದರಿಂದ ಶಮ ಶಬ್ದಕ್ಕೆ ಮೊದಲಿನ ಅರ್ಥವಾದ ಕಾಮಸಙ್ಕಲ್ಪಪ್ರವೃತ್ತಿಯ ಉಪರಮವೆಂಬುದೇ ಸರಿಯಾದ ಅರ್ಥವು. ಇಲ್ಲಿ ಶಮ ಶಬ್ದವು ಗೂಢವಾಗಿ ಉಪಯೋಗಿಸಲ್ಪಟ್ಟು, ಮುಂದಿನ ಶ್ಲೋಕದಲ್ಲಿ ಅರ್ಥವು ವ್ಯಕ್ತಪಡಿಸಲ್ಪಟ್ಟಿರುತ್ತದೆ.

ಭಾಷ್ಯಾವತಾರಿಕೆಯ ಅರ್ಥವು :—ಹಿಂದಿನ ಶ್ಲೋಕದಲ್ಲಿ ಯೋಗಾರೂಢನಾಗಲು ಶಮವು ಕಾರಣವೆಂದು ಹೇಳಲ್ಪಟ್ಟಿತು. ಅದನ್ನೇ ಉಪಪಾದಿಸುವರಾಗಿ ಕರ್ಮಯೋಗಿಯು ಯಾವಾಗ ಯೋಗಾರೂಢನಾದನು ಎಂಬುದನ್ನು ತಿಳಿಸುತ್ತಾರೆಂಬ ಅವತಾರಿಕೆಯನ್ನು ದಯಪಾಲಿ ಸಿರುತ್ತಾರೆ. ಆರುರುಕ್ಷುವಾದ ಈ ಕರ್ಮಯೋಗಿಯು, ಕದಾ - ಯಾವಾಗ, ಪ್ರತಿಷ್ಠಿತ ಯೋಗಃ - ಆತ್ಮಚಿನ್ತನದಿಂದ ಕರ್ಮಯೋಗದ ಪರಿಪಕ್ವ ದೆಶೆಯನ್ನು ಹೊಂದಿದವನು, ಭವತಿ - ಆಗುವನು, ಇತ್ಯತ್ರಾಹ - ಎಂಬ ಸಂದರ್ಭದಲ್ಲಿ ಹೇಳುತ್ತಾರೆ.

ಮೂಲಕ್ಕೆ ಅರ್ಥವು :—ಆತ್ಮಚಿನ್ತನದಿಂದ ಆತ್ಮಾವಲೋಕನ ಪ್ರಾಪ್ತಿಗಾಗಿ ಕರ್ಮಯೋಗವೇ ಮಾಡತಕ್ಕದ್ದೆಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಆ ಆತ್ಮಾ

ಭಾ. ಯದಾಽಯಂ ಯೋಗೀ ತ್ವಾತ್ಮೈಕಾನುಭವಸ್ವಭಾವತಯಾ ಇಂದ್ರಿಯಾರ್ಥೇಷು-ಆತ್ಮವ್ಯತಿರಿಕ್ತ ಪ್ರಾಕೃತ ವಿಷಯೇಷು, ತತ್ಸಂಬಂಧಿಷು ಚ ಕರ್ಮಸು, ನಾನುಷಜ್ಜತೇ-ನ ಸಙ್ಗಮರ್ಹತಿ, ತದಾ ಹಿ ಸರ್ವಸಙ್ಕಲ್ಪಸನ್ನ್ಯಾಸೀ ಯೋಗಾರೂಢ ಇತ್ಯುಚ್ಯತೇ। ತಸ್ಮಾದಾ ರುರುಕ್ಷೋ ರ್ವಿಷಯಾನುಭವಾರ್ಹತಯಾ ತದನುನುಷಙ್ಗಾಭ್ಯಾಸರೂಪಃ ಕರ್ಮಯೋಗ ಏವ ಯೋಗ ನಿಷ್ಪತ್ತಿ ಕಾರಣಮ್। ಅತೋ ವಿಷಯಾಽನನುಷಙ್ಗಾಭ್ಯಾಸ ರೂಪಂ ಕರ್ಮಯೋಗ ಮೇವಾ ರುರುಕ್ಷುಃ ಕುರ್ಯಾತ್ ॥೪॥

---

ವಲೋಕನಕ್ಕಾದರೋ ಶಮವೇ ಕಾರಣವೆಂದು "ಶಮಃಕಾರಣಮುಚ್ಯತೇ" ಎಂದೂ ಹಿಂದೆ ಹೇಳಲ್ಪಟ್ಟಿತು. ಈ ಆತ್ಮಾವಲೋಕನದೆಶೆಗೆ ಕಾರಣವಾದ ಶಮವು ಯಾವಾಗ ಪ್ರಾಪ್ತನಾಯಿತೆಂದರಿಯಬಹುದೆಂದರೆ ಹೇಳುತ್ತಾರೆ:—ಯದಾ ಹಿ - ಯಾವಾಗಲಾದರೋ, ಈ ಕರ್ಮಯೋಗಿಯು, ಇಂದ್ರಿಯಾರ್ಥೇಷು - ಇಂದ್ರಿಯಗಳಿಗೆ ಪ್ರಯೋಜನವಾದ ವಿಷಯಗಳಲ್ಲಿ ಎಂದರೆ, ಅವುಗಳ ಉಪಭೋಗಗಳಲ್ಲಿ, ನಾನುಷಜ್ಜತೇ – ಸಂಬಂಧವಿಡುವದಿಲ್ಲವೋ, ಮತ್ತು ನ ಕರ್ಮಸು-ಆ ವಿಷಯೋಪ ಭೋಗಗಳಿಗೆ ಸಂಬಂಧಪಟ್ಟ ಪ್ರವೃತ್ತಿಗಳಲ್ಲೂ, ನಾನುಷಜ್ಜತೇ - ಸಂಬಂಧ ವಿಡುವದಿಲ್ಲವೋ, ತದಾ . ಆಗ, ಸರ್ವಸಙ್ಕಲ್ಪ ಸನ್ನ್ಯಾಸೀ - ಹೀಗೆ ಸಮಸ್ತ ಕಾಮ ಸಙ್ಕಲ್ಪಗಳನ್ನೆಲ್ಲಾ ಪರಿತ್ಯಾಗಮಾಡುವನಾಗುವದರಿಂದಲೇ, ಯೋಗಾರೂಢ ಉಚ್ಯತೇ - ಯೋಗಾರೂಢನೆಂದು ಎಂದರೆ, ನಿಷ್ಪನ್ನ ಆತ್ಮಾವಲೋಕನನೆಂದು ಹೇಳಿಸಿಕೊಳ್ಳುತ್ತಾನೆ ಕರ್ಮಯೋಗಿಗೆ ಶಮವು ಉಂಟಾಗಬೇಕು, ಉಂಟಾದರೇನೇ ಯೋಗಾರೂಢನೆನಿಸುವನು ಎಂದರೆ ಪ್ರತಿಷ್ಠಿತ ಯೋಗನೆಂದೆನಿಸುವನು. ಶಮವೆಂದರೇನೆಂಬಾಶಯದಲ್ಲಿ ಹೇಳುತ್ತಾರೆ:—ಸರ್ವ ಸಙ್ಕಲ್ಪ ಸನ್ನ್ಯಾಸತ್ವವೆಂಬದಾಗಿ; ಸಮಸ್ತಕಾಮ ಸಙ್ಕಲ್ಪಗಳಿಂದಲೂ ಬಿಟ್ಟವನಾಗಿರಬೇಕೆಂಬ ತಾತ್ಪರ್ಯವು.

ಭಾಷ್ಯಾರ್ಥವು:—ಕರ್ಮಯೋಗನಿಷ್ಪತ್ತಿಯಿಂದ ಯೋಗಾರೂಢನಾಗಿ ಶಮವನ್ನು ಸಂಪಾದಿಸಿದವನಾದನು ಎಂಬುದು ಯಾವಾಗ ಎಂದರೆ ತಿಳಿಸುತ್ತಾರೆ:—ಯದಾ-ಯಾವಾಗ,ಅಯಂಕರ್ಮಯೋಗೀ ತು - ಈ ಆರುರುಕ್ಷುವಾಗಿರುವ ಕರ್ಮಯೋಗಿಯಾದರೋ, ಆತ್ಮಾನುಭವಸ್ವಭಾವತಯಾ - ಆತ್ಮಾನುಭವ ಮಾಡುವ ಸ್ವಭಾವವುಳ್ಳವನಾದುದರಿಂದ, ಇಂದ್ರಿಯಾರ್ಥೇಷು – ಎಂದರೆ, ಆತ್ಮವ್ಯತಿರಿಕ್ತ ಪ್ರಾಕೃತ ವಿಷಯೇಷು - ಆತ್ಮಾವಿಗಿಂತ ಬೇರೆಯಾದ ಅಲ್ಪಾಸ್ಥಿರಗಳಾದ ಐಹಿಕ ವಿಷಯಗಳಲ್ಲಿ, ಮತ್ತು ತತ್ಸಂಬಂಧಿಷು ಚ ಕರ್ಮಸು - ಆ ಐಹಿಕಗಳಿಗೆ ಸಂಬಂಧಪಟ್ಟ ವಿಹಿತ, ನಿಷಿದ್ಧ ಅನುಭಯರೂಪಗಳಾದ ಕರ್ಮಗಳಲ್ಲಿ, ನಾನುಷಜ್ಜತೇ ಎಂದರೆ ನ ಸಙ್ಗ ಮರ್ಹತಿ-ಸಙ್ಗವನ್ನಿಡಲು ಯೋಗ್ಯನಾಗುವದಿಲ್ಲವೋ, ತದಾ ಹಿ - ಆಗೀಗ ಸರ್ವಸಙ್ಕಲ್ಪಸನ್ನ್ಯಾಸೀ - ಸಮಸ್ತ ಕಾಮ ಸಙ್ಕಲ್ಪಗಳಿಂದ ಬಿಡಲ್ಪಟ್ಟವನಾಗಿ, ಯೋಗಾರೂಢ ಇತ್ಯುಚ್ಯತೇ - ಯೋಗ ನಿಷ್ಪತ್ತಿಯನ್ನು ಹೊಂದಿದವನೆಂದು ಹೇಳಿಸಿಕೊಳ್ಳುವನು. ಆತ್ಮಾನುಭವಸ್ವಭಾವತಯಾ ಎಂಬು ಮೂಲದಲ್ಲಿಲ್ಲದುದನ್ನು ಪ್ರಯೋಗಿಸಿರುವುದು ಏತಕ್ಕೆಂದರೆ ಇಂದ್ರಿಯಾರ್ಥಗಳಲ್ಲೂ, ಅದಕ್ಕೆ ಸಂಬಂಧಪಟ್ಟ ಕರ್ಮಗಳಲ್ಲೂ ಅನುಷಙ್ಗವಿಲ್ಲದೇ ಹೋಗಬೇಕಾದರೆ ಅದಕ್ಕೆ ಹೇತುವು ಆತ್ಮಾನುಭವಸ್ವಭಾವವೆಂಬು ತಿಳಿಸುವದಕ್ಕಾಗಿ ಎಂದು ತಿಳಿಯತಕ್ಕದ್ದು. ಮೂಲದಲ್ಲಿರುವ ನಕರ್ಮಸು ಎಂಬಲ್ಲಿ ಕರ್ಮ ಶಬ್ದಕ್ಕೆ ಕರ್ಮಯೋಗಕ್ಕೆ ವಿಹಿತ ಕರ್ಮವೆಂದರ್ಥ ಮಾಡಿದರೆ ವಿರುದ್ಧವಾಗುತ್ತದೆ. ನಿತ್ಯನೈಮಿತ್ತಿಕ ಕರ್ಮಗಳೆಂದು ಅರ್ಥಮಾಡಿದರೆ ಶಾಸ್ತ್ರ ವಿರುದ್ಧವಾಗುತ್ತದೆ. ನಿತ್ಯನೈಮಿತ್ತಿಕ ಕರ್ಮಗಳನುಷ್ಠಾನದಿಂದ ಸಙ್ಗವೇನೂ ಪ್ರಾಪ್ತವಾಗುವದಿಲ್ಲವು. ಅವುಗಳು ಸರ್ವೇಶ್ವರ ಪ್ರೀತ್ಯರ್ಥವಾಗಿ ತದಾರಾಧನರೂಪವಾಗಿ ನಡೆದು, ಅವು

**ಭಾ. ಅ- ತದೇವಾಹ—**

ಗಳನ್ನು ಸರ್ವೇಶ್ವರನಲ್ಲೇ ಅರ್ಪಿಸುವದರಿಂದ, ಅಂತಹ ಕರ್ಮಾನುಷ್ಠಾನಮಾಡುವವನಿಗೆ ಯಾವ ವಿಧ ಸಙ್ಗವೂ ಇಲ್ಲವು. ಆದುದರಿಂದ ನಿಷಿದ್ಧ ಕಾಮ್ಯ ಕರ್ಮಗಳೆರಡೂ ಅಲ್ಲದ ಕರ್ಮಗಳು ಕರ್ಮಸು ಎಂಬ ಪದದಿಂದ ವಿವಕ್ಷಿತವು, ನಾನುಷಜ್ಜತೇ ಎಂಬುದಕ್ಕೆ ಕರ್ಮಯೋಗ ಮಾಹಾತ್ಮ್ಯೆಯಿಂದ ಪ್ರಾಕೃತಗಳಾದ ಅಲ್ಪಾಸ್ಥಿರಗಳಾದ ಕರ್ಮಗಳಲ್ಲಿ ಮನಸ್ಸೇ ಪ್ರವರ್ತಿಸಲಾರದು ಎಂಬುದನ್ನು ಸೂಚಿಸುವದಕ್ಕಾಗಿ ನ ಸಙ್ಗಮರ್ಹತಿ ಎಂಬ ವ್ಯಾಖ್ಯಾನವು. ಸಙ್ಗವು ಆತ್ಮಾನುಸಂಧಾನಸ್ವಭಾವದಿಂದಲೇ ಹುಟ್ಟಲೇಲಾರದು ಎಂಬ ತಾತ್ಪರ್ಯವು. ಮೂಲದಲ್ಲಿ ಯದಾಹಿ ಎಂಬ ಪ್ರಯೋಗವಿರುವದರಿಂದ, ಉತ್ತರಾರ್ಧದಲ್ಲಿ ತದಾ ಹಿ ಎಂದು ಇಟ್ಟುಕೊಳ್ಳಬೇಕೆಂದು ಸೂಚಿಸಿರುತ್ತಾರೆ. ಆಗೀಗ ಸರ್ವಸಙ್ಕಲ್ಪ ಸನ್ಯಾಸರೂಪ ಶಮವು ಉಂಟಾಗಿ ಯೋಗಾರೂಢನಾಗುವನೆಂದು ಹೇಳರುತ್ತಾರೆ. ಇದರಿಂದ ಅಂತಹ ಸಙ್ಗವಿರುವತನಕ ಇವನು ಯೋಗಾರೂಢನಾಗುವದಿಲ್ಲನೆಂಬುದೂ ಅಭಿಪ್ರಾಯವು. ಈ ಶ್ಲೋಕ ಮತ್ತು ಹಿಂದಿನ ಶ್ಲೋಕ ಇವುಗಳಿಂದುಂಟಾಗುವ ತಾತ್ಪರ್ಯಾರ್ಥವನ್ನು ಮುಂದಿನ ವಾಕ್ಯದಿಂದ ವಿಮುಪಾದಿಸುತ್ತಾರೆ. ತಸ್ಮಾತ್- ಆ ಕಾರಣದಿಂದ, ಆರುರುಕ್ಷೋಃ - ಕರ್ಮ ಯೋಗಾರಂಭವಮಾಡುವವನು, ವಿಷಯಾನುಭವಾರ್ಹತಯಾ - ಇನ್ನೂ ವಿಷಯಾನುಭವವನ್ನುಮಾಡಲು ಯೋಗ್ಯನಾಗಿರುವದರಿಂದ, ತದನನುಷಙ್ಗಾಭ್ಯಾಸರೂಪಃ - ಅಂತಹ ವಿಷಯಾನುಭವರೂಪ ಕರ್ಮಗಳ ಸಂಬಂಧವಿಲ್ಲದಿರುವ ಹಾಗೆ ಅಭ್ಯಾಸರೂಪವಾದ ಕರ್ಮಯೋಗವೇ, ಯೋಗ ನಿಷ್ಪತ್ತಿ ಕಾರಣಮ್ - ಆತ್ಮಾವಲೋಕನ ರೂಪವಾದ ಯೋಗದ ವಿಪಾಕದೆಶೆಗೆ ಕಾರಣವು. ಹೀಗೆ ಶ್ರೀ ಕೃಷ್ಣಭಗವಾನರವರ ಉಪದೇಶಾಭಿಪ್ರಾಯವನ್ನು ತಿಳಿಸಿ, ಪ್ರಕೃತ ಅರ್ಜುನನು ಗ್ರಹಿಸತಕ್ಕ ವಿಷಯವೇನೆಂಬುದನ್ನು ಮುಂದಿನ ವಾಕ್ಯದಿಂದ ವ್ಯಕ್ತಗೊಳಿಸುತ್ತಾರೆ. ಅತಃ - ಆ ಕಾರಣದಿಂದ, ವಿಷಯಾನನುಷಙ್ಗಾಭ್ಯಾಸರೂಪಂ ಕರ್ಮಯೋಗಮೇವ - ವಿಷಯಗಳಲ್ಲಿ ಸಂಬಂಧವಿಲ್ಲದೇ ಇರುವ ಅಭ್ಯಾಸರೂಪವಾಗಿರುವ ಕರ್ಮಯೋಗವನ್ನೇ, ಆರುರುಕ್ಷುವು, ಕುರ್ಯಾತ್ - ಮಾಡತಕ್ಕದ್ದು. ಹೀಗೆ ವಿಷಯಗಳ ಅನನುಷಙ್ಗಾಭ್ಯಾಸವನ್ನು ಮಾಡುವದರಿಂದ ಕೊನೆಗೆ ವಿಷಯಗಳಲ್ಲಿ ಸಂಪೂರ್ಣವನುಷಙ್ಗವೇ ಪ್ರಾಪ್ತವಾಗುತ್ತದೆ. ಇದೇ ಹಿಂದಿನ ಶ್ಲೋಕದಲ್ಲಿ ಶಮಶಬ್ದದಿಂದ ಹೇಳಲ್ಪಟ್ಟಿತು. ಸರ್ವಸಙ್ಕಲ್ಪಸಂನ್ಯಾಸ ದೆಶೆಯು ಪ್ರಾಪ್ತವಾಗಬೇಕು, ಆಗೀಗ ಯೋಗಾರೂಢನೆನಿಸುವನು ; ಒಂದು ಎರಡನೆಯ ಶ್ಲೋಕಗಳಲ್ಲಿನ "ಸನ್ಯಾಸ" ಶಬ್ದಕ್ಕೂ ಸರ್ವಸಙ್ಕಲ್ಪ ಸನ್ಯಾಸತತ್ವದಲ್ಲಿಯೇ ತಾತ್ಪರ್ಯವು ಎಂಬುದನ್ನೂ ಇದರಿಂದ ಗ್ರಹಿಸತಕ್ಕದ್ದು. ಹೀಗೆ ಆತ್ಮಾವಲೋಕನದಲ್ಲೇ ಮನಸ್ಸನ್ನಿಡುವದರಿಂದ ಬಾಹ್ಯವಿಷಯಗಳಲ್ಲೂ ಅವುಗಳ ಅನುಭವಕ್ಕಾಗಿ ಪ್ರವೃತ್ತಿಗಳಲ್ಲೂ ಮನಸ್ಸು ಹೋಗದೆ ಇರುವದೇ, ಶಮವೆಂದು ಹೇಳಿದುದರ ಅಭಿಪ್ರಾಯವೇನೆಂದರೆ ಅಂತವನಿಗೆ ದೇಹಾತ್ಮ ಭ್ರಮೆಯು ಸಂಪೂರ್ಣವಾಗಿ ತೊಲಗಿತು ಎಂಬ ಭಾವವು.

**ಭಾಷ್ಯಾವತಾರಿಕೆಯ ಅರ್ಥವು :—**ಹಿಂದೆ ಹೇಳಿದ ಎರಡು ಶ್ಲೋಕಗಳಿಂದಲೂ ಶಮವೇ ಕಾರಣವಾದ ಯೋಗ ನಿಷ್ಪತ್ತಿಯುಂಟಾಗಿರುವ ಯೋಗಾರೂಢದೆಶೆಯನ್ನೇ ಮುಖ್ಯವಾಗಿ ಕರ್ಮಯೋಗಿಯು ಹೊಂದತಕ್ಕದ್ದೆಂದು ವಿಧಿಸಿರುತ್ತಾರೆಂದು ಸೂಚಿಸುವದಕ್ಕಾಗಿ, **ತದೇವಾಹ** - ಆ ಅಭಿಪ್ರಾಯವನ್ನೇ ಉಪಪಾದಿಸಿ ಹೇಳುತ್ತಾರೆಂದು ಅವತಾರಿಕೆಯನ್ನು ಕೊಟ್ಟಿರುತ್ತಾರೆ.

**ಮೂಲಕ್ಕೆ ಅರ್ಥವು—ಆತ್ಮನಾ** - ಮನಸಾ, ಎಂತಹ ಮನಸ್ಸಿನಿಂದ ಎಂದರೆ ವಿಷಯಗಳಲ್ಲಿ ಪ್ರವರ್ತಿಸದೆ ವಿಮಲವಾದ ಮನಸ್ಸಿನಿಂದ, ಶಮಯುಕ್ತವಾದ ಮನಸ್ಸಿನಿಂದ, **ಆತ್ಮಾನಂ** -

ಮೂ॰ ಉದ್ಧರೇದಾತ್ಮನಾಽತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧು ರಾತ್ಮೈವ ರಿಪು ರಾತ್ಮನಃ ॥ ೫.

ಆತ್ಮವನ್ನು, ಉದ್ಧರೇತ್ - ಸಂಸಾರಸಾಗರದಲ್ಲಿ ಮುಳುಗಿರುವವರಿಂದ, ಎತ್ತತಕ್ಕದ್ದು; ಯೋಗಾರೂಢದಶೆಯನ್ನು ಹೊಂದುವಹಾಗೆ ಮಾಡಿಕೊಳ್ಳಬೇಕೆಂಬ ತಾತ್ಪರ್ಯವು. ಆತ್ಮಾನಂ - ಆತ್ಮನನ್ನು, ನಾವಸಾದಯೇತ್ - ವಿಷಯಾಸಕ್ತಿಯಿಂದ ಅಪರಿಶುದ್ಧವಾದ ಮನಸ್ಸಿನಿಂದ, ವಿಷಾದವನ್ನು ಹೊಂದುವಹಾಗೆ ಮಾಡಿಕೊಳ್ಳಬಾರದು. ಮನಸ್ಸಿಗೇನು ಪ್ರಾಶಸ್ತ್ಯವೆಂದರೆ ಹೇಳುತ್ತಾರೆ.—ಹಿಂದೆ ಹೇಳಿದ ಶಮಾವಸ್ಥೆಯ ಮೂಲಕ ಯೋಗಾರೂಢದಶೆಯು ಬರುವದಕ್ಕೆ ಮನಸ್ಸೇ ಮುಖ್ಯಕಾರಣವು, ಅದೇ ಪರಮ ಹಿತೈಷಿಯಾದ ಬಂಧುವೂ ಆಗಬಹುದು; ಅದೇ ತುಂಬಾ ಕ್ರೂರವಾದ ದ್ವೇಷಿಯಾದ ಶತ್ರುವೂ ಆಗಬಹುದೆಂದು ಹೇಳುತ್ತಾರೆ. ಆತ್ಮೈವ - ಇಂತಹ ವಿಷಯಗಳಲ್ಲಿ ಪ್ರವರ್ತಿಸದ ಮಹಾ ಪವಿತ್ರವಾದ ಮನಸ್ಸೇ, ಆತ್ಮನಃ - ಆತ್ಮನಿಗೆ, ಬಂಧುಃ-ತುಂಬಾ ಹಿತವನ್ನು ಮಾಡುವ ಬಂಧುವಾಗುತ್ತದೆ. ಗುರುಗಳಲ್ಲದ ಇತರ ಸಾಧಾರಣ ಬಂಧುಗಳಾದರೋ, ಇಂತಹ ಪರಮೋಪಕಾರವನ್ನು ಮಾಡಲಾರರು. ಉಪಾಯ ನಿಷ್ಪತ್ತಿಮೂಲಕ ನಿಶ್ಶ್ರೇಯಸಪ್ರಾಪ್ತಿಗೆ ಮನಸ್ಸೇ ಮುಖ್ಯವಾದ ಹೇತುವು. ಮನಸ್ಸು ವಶವಲ್ಲದಿರುವ ಅವಸ್ಥೆಯಲ್ಲಿ ಗುರುಗಳೂ ಕೂಡ ಏನೂ ಮಾಡಲಾರರು. ಪರಮ ಪುರುಷನ ಕೃಪೆಯಿಂದ ಮನಸ್ಸು ವಶವಾಗಿ ಪರಿಶುದ್ಧವಾಮದಾದರೆ ಮಹೋಪಕಾರವನ್ನು ಮಾಡುವ ಬಂಧುವಾಗಿ ಪರಿಣಮಿಸುತ್ತದೆ. ಕರ್ಮಯೋಗಿಯು ಅಂತಹ ಮನಸ್ಸಿನ ಮೂಲಕವಾಗಿ ಯೋಗಾರೂಢನಾಗುವನು. ಹಾಗೆಯೇ ಆತ್ಮೈವ - ವಿಷಯ ಚಾಪಲ್ಯವುಳ್ಳ ಮನಸ್ಸೇ ಆತ್ಮನಃ ಆತ್ಮನಿಗೆ, ರಿಪುಃ - ಶತ್ರುವಾಗುತ್ತದೆ. ಬಾಹ್ಯಶತ್ರುವಿನಿಂದಾಗುವ ಕ್ಲೇಶಗಳನ್ನಾದರೂ ಸುಲಭದಿಂದ ನಿವಾರಣೆಮಾಡಿಕೊಳ್ಳಬಹುದು. ಈ ಮನೆಯೊಳಗಿನ ಶತ್ರುವಾದರೋ, ಬಹು ಕ್ಲೇಶಗಳಿಗೆ ಈ ಆತ್ಮನಿಗೆ ತಿಳಿಯದೇನೇ ಆತನನ್ನು ಗುರಿಮಾಡಿ ಬಿಡುವದೆಂಬ ಭಾವವು ತೋರಿಬರುತ್ತದೆ. ಅಂತರಿಂದ್ರಿಯ ನಿಗ್ರಹವು ಅತ್ಯಾವಶ್ಯಕವು. ಅದು ವಿಷಯಗಳಲ್ಲಿ ಪ್ರವರ್ತಿಸದಹಾಗೆ ಪವಿತ್ರವಾಗಿಟ್ಟುಕೊಂಡರೆ ಪರಮ ಹಿತವನ್ನುಂಟುಮಾಡುವ ಬಂಧುವಾಗುತ್ತದೆ. ಉಪಾಯ ಪೂರ್ತಿಯಿಂದ ಪರಮ ನಿಶ್ಶ್ರೇಯಸ್ಸು ಪ್ರಾಪ್ಯವಾಗುವಹಾಗೆ ಮಾಡಿಕೊಡುತ್ತದೆಂಬ ತಾತ್ಪರ್ಯವು. ಶ್ರೀ ಪರಾಶರರು ಹಾಗೆಯೇ ಹೇಳಿರುತ್ತಾರೆ:—

(೧) ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।
ಬಂಧಾಯ ವಿಷಯಾ ಸಙ್ಗಿ ಮುಕ್ತ್ಯೈ ನಿರ್ವಿಷಯಂ ಮನಃ ॥

ಪುನಃ ಪುನಃ ಜನ್ಮಗಳಿಗೂ, ಮೋಕ್ಷಪ್ರಾಪ್ತಿಗೂ ಮನಸ್ಸೇ ಕಾರಣವು; ಮನಸ್ಸು ವಿಷಯೋಪಭೋಗಗಳಲ್ಲಿ ಸಕ್ತವಾದರೆ ಬಂಧಕ್ಕೆ ಕಾರಣವು. ಅದೇ ವಿಷಯಗಳ ದೆಶೆಯಿಂದ ನಿವೃತ್ತಿಸಿದರೆ ಮೋಕ್ಷಕ್ಕೆ ಹೇತುವಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಮನಸ್ಸು ರಾಗದ್ವೇಷಾದಿ ಪ್ರವೃತ್ತಿಗಳಲ್ಲಿ ಹೋಗದಿದ್ದರೆ, ಅದನ್ನು ಈ ಆತ್ಮನಿಗೆ ಮಹಾಪತಿವ್ರತೆಯಾದ ಪತ್ನಿಯನ್ನಾಗಿ ಭಾವಿಸಿರುತ್ತಾರೆ. ಏಕೆಂದರೆ ಪರಮ ನಿಶ್ಶ್ರೇಯಸಿಗೆ ಸಾಧನಭೂತವಾದ ಧರ್ಮಾನುಷ್ಠಾನಕ್ಕೆ ಸಹ ಧರ್ಮಚರೀ ಎಂದು ಹೇಳಿದಹಾಗೆ ಈ ಮನಸ್ಸು ಸಾಧನವಾಗುತ್ತದೆ. ಹಾಗಲ್ಲದೆ ಮನಸ್ಸು ಪ್ರತಿಕೂಲವಾಗಿದ್ದರೆ ಮನೆಯ ಯಜಮಾನನಾದ ಆತ್ಮನನ್ನು ಹಾಳುಮಾಡುವ ಜಾರಸ್ತ್ರೀ ಎಂದು ಹೇಳಲ್ಪಟ್ಟಿರುತ್ತದೆ. ಆತ್ಮನೆಂಬ ಸೀತೆಯನ್ನು ಸಂಸಾರಸಮುದ್ರದಿಂದ ಸುತ್ತಲ್ಪಟ್ಟ ದೇಹವೆಂಬ

(೧) ವಿ. ಪು.

ಭಾ. ಆತ್ಮನಾ - ಮನಸಾ, ವಿಷಯಾನನುಷಕ್ತೇನ ಮನಸಾ, ಆತ್ಮಾನಮುದ್ಧರೇತ್ । ತದ್ವಿಪರೀತೇನ ಮನಸಾ ಆತ್ಮಾನಂ ನಾವಸಾದಯೇತ್। ಆತ್ಮೈವ - ಮನ ಏವ ಹ್ಯಾತ್ಮನೋ ಬಂಧುಸ್ತದೇವಾತ್ಮನೋ ರಿಪುಃ ॥ ೫ ॥

ಮೂ. ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್॥ ೬.

ಲಂಕೆಯಲ್ಲಿ ಬಂಧಿಸಿ ನಾನಾವಿಧ ತೊಂದರೆಗೆ ಗುರಿಮಾಡಿದ ದಶೇಂದ್ರಿಯಗಳೆಂಬ ಹತ್ತು ತಲೆಗಳುಳ್ಳ ರಾವಣನಿಗೆ ಈ ಮನಸ್ಸನ್ನು ಹೋಲಿಸಿರುತ್ತಾರೆ. "ದರ್ಪೋದಗ್ರ ದಶೇನ್ದ್ರಿಯಾನನಮನೋ ನಕ್ತಂಚರಾಧಿಷ್ಠಿತೇ ದೇಹೇ ಸ್ಮಿನ್ಭವಸಿಂಧುನಾ ಪರಿಗತೇ ದೀನಾಂ ದಶಾಮಾಸ್ಥಿತಃ" ಎಂದು (ಸಙ್ಕಲ್ಪ ಸೂರ್ಯೋದಯ) ಹೇಳಲ್ಪಟ್ಟಿರುತ್ತದೆ. ||೫||

ಭಾಷ್ಯಾರ್ಥವು:—ಹಿಂದೆ ಎರಡು ಶ್ಲೋಕಗಳಿಂದ ಹೇಳಲ್ಪಟ್ಟ ಅರ್ಥವನ್ನೇ ಉಪಪಾದಿಸಿ ಹೇಳುತ್ತಾರೆ. ಆತ್ಮನಾ ಎಂದರೆ ಮನಸಾ, ಎಂತಹ ಮನಸ್ಸಿನಿಂದ ಎಂದರೆ, ವಿಷಯಾನನುಷಕ್ತೇನ ಮನಸಾ - ವಿಷಯಗಳಲ್ಲಿ ಸಂಬಂಧಿಸದ ಮನಸ್ಸಿನಿಂದ, ಆತ್ಮಾನಮುದ್ಧರೇತ್ - ಆತ್ಮಾವನ್ನು ಸಂಸಾರಸಾಗರದಿಂದ ಎತ್ತತಕ್ಕದ್ದು. ತದ್ವಿಪರೀತೇನ ಮನಸಾ - ಅದಕ್ಕೆ ವಿರುದ್ಧವಾದ ಎಂದರೆ, ವಿಷಯಗಳಲ್ಲಿ ಸಕ್ತವಾದ ಮನಸ್ಸಿನಿಂದ, ಆತ್ಮಾನಂ ನಾವಸಾದಯೇತ್ - ಆತ್ಮಾವನ್ನು ಕ್ಲೇಶಪಡುವಹಾಗೆ ಮಾಡತಕ್ಕದ್ದಲ್ಲವು. ಇಲ್ಲಿ ಆತ್ಮನಾ ಎಂಬಾಪ ತೃತೀಯೆಯಿಂದ ಕರಣವು ಬೋಧಿತವಾಗುವದರಿಂದ ಅಂತರಿಂದ್ರಿಯವಾದ ಮನಸ್ಸಿನಿಂದ ಎಂದು ಅರ್ಥಮಾಡಿರುತ್ತಾರೆ. ಅದೇನು ಮನಸ್ಸಿನ ವಿಷಯದಲ್ಲಿ ಉಪದೇಶವು ಎಂದರೆ ಹೇಳುತ್ತಾರೆ. ಆತ್ಮೈವ ಎಂದರೆ, ಮನ ಏವ - ಮನಸ್ಸೇ, ಹ್ಯಾತ್ಮನೋ ಬಂಧುಃ - ಆತ್ಮಾವಿಗೆ ಬಂಧುವಷ್ಟೇ; ಅದು ಪರಿಶುದ್ಧವಾಗಿ ತನ್ನ ಸ್ವಾಧೀನದಲ್ಲಿದ್ದರೆ ಬಂಧುವಾಗುತ್ತದೆ. ಈತನಿಗೆ ಮನಸ್ಸೇ ಪರಮ ಹಿತವನ್ನುಂಟುಮಾಡುವ ಬಂಧುವಾಗಿಯಾದರೂ ಆಗಬಹುದು. ತುಂಬಾ ಪ್ರಬಲವಾದ ಶತ್ರುವಾದರೂ ಆಗಬಹುದು ಅದುದರಿಂದ ಏವ ಕಾರವು. ಹೊರಗಿನ ಬಂಧುಗಳು ಯಾರೂ 'ಮನಸ್ಸು ಮಾಡುವ ಪರಮ ಹಿತವನ್ನು ಮಾಡಲಾರರು. ಮನಸ್ಸಿಗೆ ನಿರತಿಶಯ ಮೋಕ್ಷಸುಖವನ್ನು ಕೊಡಿಸುವ ಶಕ್ತಿಯುಂಟು. ಇತರರು ಯಾರೂ ಇಂತಹ ಪುರುಷಾರ್ಥಗಳನ್ನು ಕೊಡಿಸುವ ಶಕ್ತಿಯುಳ್ಳವರಲ್ಲವು. ಗುರುಗಳಲ್ಲವೋ? ಎಂದರೆ ಗುರುಗಳೂ ಕೂಡ ಮನಸ್ಸಿನ ಮೂಲಕವೇ ಕೊಡಿಸಬಲ್ಲರು. ಹಾಗೆಯೇ ಮನಸ್ಸು ಕರ್ಮಪರಿಪಾಕದಿಂದ ಪರಿಶುದ್ಧವಲ್ಲದೇ ಹೋದರೆ ಅದು ಮಾಡುವಷ್ಟು ಅನರ್ಥವನ್ನು ಇನ್ನು ಯಾರೂ ಮಾಡಲಾರರೆಂಬ ಭಾವವು ಅದರಿಂದಲೇ, ಆತ್ಮೈವ ಎಂಬ ಅವಧಾರಣವು. ತದೇವ - ಆ ಮನಸ್ಸೇ, ಆತ್ಮಾವಿಗೆ,ರಿಪುಃ- ವಿಷಯಾಸಕ್ತತೆಯಿಂದ ಚಂಚಲವಾಗಿ ಅಪರಿಶುದ್ಧವಾಗಿ ದುಷ್ಟವಾದುದಾಗಿ ಶತ್ರುವಾಗುತ್ತದೆ.

ಮೂಲಕ್ಕೆ ಅರ್ಥವು:—ಯೋಗಾರೂಢ ದೆಶೆಗೆ ಕಾರಣವಾದುದು ಶಮವು, ಅಂತರಿಂದ್ರಿಯವಾದ ಮನಸ್ಸಿನ ನಿಗ್ರಹವು, ಆದುದರಿಂದ ಮನಸ್ಸನ್ನು ವಶದಲ್ಲಿಟ್ಟುಕೊಂಡು ಆತ್ಮಾವಿಗೆ ನಿಶ್ಶ್ರೇಯಸ್ಸು ಉಂಟಾಗುವಹಾಗೆ ಈ ಸಂಸಾರಸಮುದ್ರದಿಂದ ಎತ್ತಬೇಕೆಂದು ಉಪದೇಶಿಸಿ, ಹಾಗೆ ಮಾಡಿದರೆ ಮನಸ್ಸು ಆತ್ಮಾವಿಗೆ ಪರಮಹಿತಮಾಡುವ ಬಂಧುವಾಗುತ್ತದೆಂದೂ, ಇದಕ್ಕೆ ವ್ಯತ್ಯಸ್ತವಾಗಿ ಮನಸ್ಸನ್ನು ನಿಗ್ರಹಿಸದೇಹೋದರೆ ಅದೇ ಅತಿ ಕ್ರೂರಶತ್ರುವಾಗುತ್ತದೆಂದೂ, ಹೇಳಿದರು. ಹೇಗೆ ಬಂಧುವಾಗಿಯಾಗಲಿ ಶತ್ರುವಾಗಿಯಾಗಲಿ ಮನಸ್ಸು ಪರಿಣಮಿಸಬಹುದೆಂಬುದನ್ನು ಈ ಶ್ಲೋಕದಲ್ಲಿ ವ್ಯಕ್ತಪಡಿಸುತ್ತಾರೆ.—ಯೇನ - ಯಾವ, ಆತ್ಮನಾ - ಈ ಶರೀರದಲ್ಲಿರುವ

ಭಾ. ಯೇನ ಪುರುಷೇಣ ಸ್ವೇನೈವ ಸ್ವಮನೋ ವಿಷಯೇಭ್ಯೋ ಜಿತಂ, ತನ್ಮನ ಸ್ತಸ್ಯ ಬಂಧುಃ । ಅನಾತ್ಮನಃ-ಅಜಿತಮನಸಃ, ಸ್ವಕೀಯಮೇವ ಮನಃ ಶತ್ರುವತ್ ಶತ್ರುತ್ವೇ

ಚೇತನನಿಂದ, ಆತ್ಮೈವ – ತನ್ನ ಮನಸ್ಸೇ, ಜಿತಃ – ಜಯಿಸಲ್ಪಟ್ಟಿತೋ ಎಂದರೆ, ವಿಷಯೋಪಭೋಗಗಳಲ್ಲಿ ಪ್ರಸಕ್ತಿಸದಹಾಗೆ ಮಾಡಲ್ಪಟ್ಟಿತೋ, ತಸ್ಯ ಆತ್ಮನಃ – ಅಂತಹ ಚೇತನನಿಗೆ ಆತ್ಮಾ – ಮನಸ್ಸು, ಬಂಧುಃ - ಬಂಧುವಾಗುತ್ತದೆ. ಹಾಗಲ್ಲದೆ, ಅನಾತ್ಮನಸ್ತು – ಮನಸ್ಸು ಹೀಗೆ ಜಯಿಸಲ್ಪಡದೇ ಇರುವ ಚೇತನನಿಗಾವರೋ, ಆತ್ಮೈವ - ತನ್ನ ಮನಸ್ಸೇ, ಶತ್ರುವತ್-ಶತ್ರುವಿನಹಾಗೆ, ಶತ್ರುತ್ವೇ ವರ್ತೇತ - ಶತ್ರುಭಾವದಲ್ಲೇ ಇರುತ್ತದೆ. ಆತ್ಮಾ ಜ್ಞಾನಸ್ವರೂಪನು, ಜ್ಞಾನ ಗುಣಕನು, ಆದುದರಿಂದ ಶಾಸ್ತ್ರಜನ್ಯಜ್ಞಾನದಿಂದಲೂ, ವಿವೇಕಜನ್ಯಜ್ಞಾನದಿಂದಲೂ, ಮನಸ್ಸನ್ನು ನಿಗ್ರಹಿಸಿ ತನ್ನ ವಶದಲ್ಲಿಟ್ಟು ಕೊಳ್ಳಬೇಕು, ಮನಸ್ಸು ವಶವಾದರೆ ಬಾಹ್ಯೇಂದ್ರಿಯಗಳೂ ವಶವಾಗುವದರಿಂದ, ಇಲ್ಲಿ ಮನಸ್ಸು ಒಂದೇ ಹೇಳಲ್ಪಟ್ಟಿತು ; ಹಿಂದೆ ನಾಲ್ಕನೆಯ ಶ್ಲೋಕದಲ್ಲಿ ಎಲ್ಲಾ ಇಂದ್ರಿಯಗಳೂ ಹೇಳಲ್ಪಟ್ಟವು. ಯಾವನಿಗೆ ಮನಸ್ಸು ವಶವಾಗಿ ದುಷ್ಟೇಂದ್ರಿಯಗಳ ಪ್ರವರ್ತನೆಯಿಲ್ಲವೋ, ಆತನಿಗೆ ಮನಸ್ಸು ಪರಮೋಪಕಾರಿಯಾದ ಬಂಧುವು. ಹಾಗಲ್ಲದೆ ವಿಪರೀತವಾಗಿ ಮನಸ್ಸು ಅಧೀನದಲ್ಲಿಲ್ಲವೇಹೋದರೆ ಕ್ರೂರ ಶತ್ರುವಾಗಿ ಪರಿಣಮಿಸುತ್ತದೆ ಎಂಬ ತಾತ್ಪರ್ಯವು. ಶ್ರುತಿಯು, ಇಂದ್ರಿಯಗಳೆಂಬ ಕುದುರೆಗಳಿಗೆ ಮನಸ್ಸು ಲಗಾಮು ಎಂದು ಹೇಳುತ್ತದೆ. ಆತ್ಮಾವಿಗೆ ಸಾರಥಿಯಾದ ಬುದ್ಧಿಯು ಈ ಲಗಾಮನ್ನು ಬಿಗಿದು ಹಿಡಿದಿರಬೇಕು, ಸಡಲಿಬಿಟ್ಟರೆ ರಥದಲ್ಲಿ ಕೂತಿರುವ ಆತ್ಮಾವನ್ನು ಹಳ್ಳಕ್ಕೆ ತಳ್ಳಿ ಬಿಡುತ್ತದೆಂಬ ತಾತ್ಪರ್ಯವು. ಈ ಅಭಿಪ್ರಾಯವುಳ್ಳ ಶ್ರುತಿಯು ಯಾವುದೆಂದರೆ. “ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು । ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹ ಏವ ಚ. ಇನ್ದ್ರಿಯಾಣಿ ಹಯಾನಾಹುಃ” (ಕಠ. ೩. ೩, ೪) ||೬||

**ಭಾಷ್ಯಾರ್ಥವು :**—ಈ ಮನಸ್ಸೇ ಒಬ್ಬನಿಗೆ ಬಂಧುವಾಗಿಯೂ ಇನ್ನೊಬ್ಬನಿಗೆ ಶತ್ರುವಾಗಿಯೂ ಪರಿಣಮಿಸಬಹುದು, ಒಬ್ಬನಿಗೇನೇ ಒಂದುಕಾಲದಲ್ಲಿ ಶತ್ರುವಾಗಬಹುದು, ಇನ್ನೊಂದು ಕಾಲದಲ್ಲಿ ಹಿತೈಷಿಯಾದ ಬಂಧುವಾಗಬಹುದೆಂದು ಹಿಂದಿನ ಶ್ಲೋಕದಲ್ಲಿ ಹೇಳಿದರು. ಹೀಗೆ ಒಂದೇಯಾದ ಮನಸ್ಸೇ ಬಂಧುವಾಗಿಯಾಗಲಿ ಶತ್ರುವಾಗಿಯಾಗಲಿ ಹೇಗೆ ಪರಿಣಮಿಸಬಹುದು? ಎಂಬ ಶಙ್ಕಾವಿಗೆ ಈ ಶ್ಲೋಕವು ಸಮಾಧಾನವನ್ನು ಹೇಳುತ್ತದೆ. **ಯೇನ ಪುರುಷೇಣ** - ಇದು ಮೂಲದ ಯೇನ ಆತ್ಮನಾ ಎಂಬುದರ ವ್ಯಾಖ್ಯಾನವು, ಯಾವ ದೇಹಿಯಿಂದ, ಹಿಂದೆ ೫.೧೩ನೆಯ ಶ್ಲೋಕದಲ್ಲಿ “ನವದ್ವಾರೇ ಪುರೇದೇಹೀ” ಎಂಬುದರನ್ನು ಜ್ಞಾಪಕ ಕೊಡುವದಕ್ಕಾಗಿ, **ಪುರುಷೇಣ** – ಎಂಬ ಪ್ರಯೋಗವು, ಯಾವ ಚೇತನನಿಂದ, **ಸ್ವೇನೈವ** - ತನ್ನಿಂದಲೇ ಎಂದರೆ ತನ್ನ ಶಾಸ್ತ್ರಜನ್ಯ ವಿವೇಕಜನ್ಯ ಜ್ಞಾನವನ್ನು ಹೊಂದಿದ ತನ್ನಿಂದಲೇ, **ಸ್ವಮನಃ**- ತನ್ನ ಮನಸ್ಸು, **ವಿಷಯೇಭ್ಯಃ** - ವಿಷಯ:ಗಳ ದೆಸೆಯಿಂದ, **ಜಿತಂ** - ಜಯಿಸಲ್ಪಟ್ಟಿತೋ, **ತನ್ಮನಃ** - ಅಂತಹ ಮನಸ್ಸು, **ಬಂಧುಃ** - ಪರಮೋಪಕಾರಿಯಾಗಿ ನಿಶ್ಶ್ರೇಯಸರೂಪ ಫಲವನ್ನು ಸಾಧಿಸಿಕೊಡುವ ಬಂಧುವು ; **ಅನಾತ್ಮನಸ್ತು** ಎಂದರೆ **ಅಜಿತ ಮನಸಃ** - ಅಜಿತ ಮನಸ್ಸುಳ್ಳವನ, **ಸ್ವಕೀಯಮೇವ ಮನಃ** . ತನ್ನ ಮನಸ್ಸೇ, **ಶತ್ರುವತ್** - ಬಾಹ್ಯ ಶತ್ರುವಿನಹಾಗೆ, **ಶತ್ರುತ್ವೇವರ್ತೇತ**-ಶತ್ರುಭಾವದಲ್ಲೇ ಇರುತ್ತದೆ, ಎಂದರೆ **ಸ್ವನಿಶ್ಶ್ರೇಯಸ ವಿಪರೀತೇ ವರ್ತೇತೇತ್ಯರ್ಥಃ** - ತನ್ನ ಶ್ರೇಯಸ್ಸಿಗೇ ವಿರೋಧವಾಗಿರುವದಲ್ಲೇ ಇರುತ್ತದೆ ಎಂಬ ಭಾವವು. ಮನಸ್ಸು ಜಿತವಾಗುವದು ಎಂದರೆ ದುಷ್ಕೃತ್ಯಗಳು ಉಂಟಾಗದಹಾಗೆ, ಇಂದ್ರಿಯಗಳು ವಿಷಯ ಸುಖಗಳಲ್ಲಿ ಪ್ರವರ್ತಿಸದ

ಭಾ. ವರ್ತೇತ - ಸ್ವನಿಶ್ಶ್ರೇಯಸ ವಿಪರೀತೇ ವರ್ತೇತೇತ್ಯರ್ಥಃ । ಯಥೋಕ್ತಂ ಭಗವತಾ ಪರಾಶರೇಣಾಪಿ (೧) "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ । ಬಂಧಾಯ ವಿಷಯಾಸಙ್ಗಿ ಮುಕ್ತ್ಯೈ ನಿರ್ವಿಷಯಂ ಮನಃ" ಇತಿ ||೬||

ಹಾಗೆ ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳುವದು. ಆದುದರಿಂದ ವಿಷಯೇಭ್ಯೋಜಿತಂ ಎಂದು ಪ್ರಯೋಗವು. ಇಲ್ಲಿ ಅಂತರಿಂದ್ರಿಯವಾದ ಮನಸ್ಸು ಮಾತ್ರವೇ ಹೇಳಲ್ಪಟ್ಟಿತು,ಬಹಿರಿಂದ್ರಿಯಗಳು ಹೇಳಲ್ಪಡಲಿಲ್ಲವು; ಏಕೆಂದರೆ ಅಂತರಿಂದ್ರಿಯ ಒಂದನ್ನು ನಿಗ್ರಹಿಸಿ ಸ್ವಾಧೀನದಲ್ಲಿಟ್ಟರೆ, ಸರ್ವೇಂದ್ರಿಯಗಳೂ ಮನಸ್ಸಿಗೆ ಅಧೀನವಾದುದರಿಂದ,ಅವುಗಳೆಲ್ಲವೂ ಜಿತವೇಎಂಬ ಅಭಿಪ್ರಾಯವು. ಮೂಲದಲ್ಲಿ ಆತ್ಮೈವ ಎಂಬ ಏವಕಾರದ ಅಭಿಪ್ರಾಯವು, ಸ್ವಕೀಯಮೇವಮನಃ ಎಂದು ವ್ಯಾಖ್ಯಾನಮಾಡಲ್ಪಟ್ಟಿತು. ತನಗೆ ಶೇಷಭೂತವಾದ ಮನಸ್ಸೇ ತನಗೆ ಹೇಗೆ ವಿರೋಧವಾಗುತ್ತದೆ ಎಂಬ ಶಙ್ಕಾ ನಿವೃತ್ತಿಗಾಗಿ ಸ್ವನಿಶ್ಶ್ರೇಯಸ ವಿಪರೀತೇ ವರ್ತೇತ ಎಂದು ವ್ಯಾಖ್ಯಾನ ಮಾಡಲ್ಪಟ್ಟಿತು. ವಿಭೀಷಣನ ಮನಸ್ಸು ಶಾಸ್ತ್ರಜನ್ಯ ವಿವೇಕ ಜನ್ಯ ಜ್ಞಾನದಿಂದ ಸುಕೃತ ಪರಿಪಾಕ ಮೂಲಕವಾಗಿ ಬಂಧುವಾಗಿ ಪರಿಣಮಿಸಿತು. ರಾವಣನ ಮನಸ್ಸು ತದ್ವಿಪರೀತತ್ವೇನ ಆತನಿಗೆ ಶತ್ರುವಾಗಿ ಪರಿಣಮಿಸಿತು. ಪ್ರಕೃತದಲ್ಲಿ ಅರ್ಜುನನನ್ನು ಕುರಿತು ನಿನ್ನ ಮನಸ್ಸು ನಿನಗೆ ಬಂಧುವು. ದುರ್ಯೋಧನನ ಮನಸ್ಸಾದರೋ ಆತನಿಗೆ ಶತ್ರುವು ಎಂಬ ಭಾವವೂ ಈ ಶ್ಲೋಕದಿಂದ ದ್ಯೋತಿತವಾಗುವಹಾಗೆ ಇದೆ. ಈ ಶ್ಲೋಕದಲ್ಲಿ ಕೆಲವರು, ಆತ್ಮಾ ಎಂಬ ಶಬ್ದವು ಕಾರ್ಯಕಾರಣ ಸಂಘಾತವನ್ನು ಬೋಧಿಸುತ್ತದೆ ಎಂದು ಹೇಳಿ, ಆತ್ಮವೆಂಬ ಶಬ್ದವೆಲ್ಲಾ ಒಂದೇ ಅರ್ಥವುಳ್ಳದೆಂದು ಏಕೆ ಭಾವಿಸಕೂಡದು ಎಂದಾಕ್ಷೇಪಿಸಿದರೆ, ಆಗ ಕರ್ಮಕರ್ತೃಭೇದ ವ್ಯಪದೇಶ ವಿಲ್ಲವಾಗುತ್ತದೆ. ಒಂದೇ ಅರ್ಥ ಹೇಳಿದರೆ, ಕರ್ಮ ಕರ್ತೃಗಳಿಗೆ ಐಕ್ಯ ಹೇಳಿದಂತಾಗುತ್ತದೆ. ಇದು ವಿರುದ್ಧವು. ಜಯಿಸುವ ಅಧಿಕಾರಿಯೂ ಜಯಿಸಲ್ಪಡುವ ವಸ್ತುವೂ ಬೇರೆಬೇರೆಯಾಗಿ ಕರ್ತೃ ಕರ್ಮಗಳಾದುದರಿಂದ ಕರ್ತೃವು ಆತ್ಮಾವಾದ ಚೇತನನೆಂದೂ, ಕರ್ಮವು ಆತ್ಮಾವಾದ ಮನಸ್ಸೆಂದು ಅರ್ಥಮಾಡುವದೇ ಸರಸವು. ಕರ್ಮಕರ್ತೃಗಳು ಇಲ್ಲಿ ಬೇರೆ ಬೇರೆಯೆಂದೂ, ಮನಸ್ಸು ಆತ್ಮನಿಂದ ಜಿತವಾದರೆ ಬಂಧುವಾಗುತ್ತದೆ, ಜಿತವಾಗದೆ ಹೋದರೆ ಶತ್ರುವಾಗುತ್ತದೆಂದು ಅರ್ಥ ಹೇಳುವದೇ ಸಮಂಜಸವೆಂದು ತೋರಿಸುವದಕ್ಕೆ ಶ್ರೀ ಪರಾಶರವಾಕ್ಯವನ್ನು ಉದಾಹರಿಸುತ್ತಾರೆ. (೧) "ಮನುಷ್ಯಾಣಾಂ - ಮನುಷ್ಯರಿಗೆ, ಮನಸ್ಸೇ, ಬಂಧಮೋಕ್ಷಯೋಃ-ಬಂಧಕ್ಕೂ ಎಂದರೆ ಪುನಃ ಪುನಃ ಜನ್ಮ ಮೂಲಕ ಸಂಸಾರ ಪ್ರಾಪ್ತಿಗೂ ಮೋಕ್ಷಕ್ಕೂ ಸಹ, ಕಾರಣವು. ಯಾವಾಗ ಬಂಧಕ್ಕೂ ಯಾವಾಗ ಮುಕ್ತಿಗೂ ಕಾರಣವಾಗುತ್ತದೆ ಎಂದರೆ ಹೇಳುತ್ತಾರೆ. ಮನಸ್ಸು ಯಾವಾಗ ವಿಷಯಾಸಙ್ಗಿ - ವಿಷಯಗಳಲ್ಲಿ ಎಂದರೆ ವಿಷಯಾನುಭವಗಳಲ್ಲಿ ಸಙ್ಗವುಳ್ಳದು ಆಗುತ್ತದೋ ಆಗ, ಬಂಧಾಯ ಭವತಿ - ಬಂಧಕ್ಕೆಕಾರಣವಾಗುತ್ತದೆ, ಅದೇ ಮನಸ್ಸೇ, ನಿರ್ವಿಷಯಂ - ವಿಷಯಾನುಭವರತಿ ಇಲ್ಲದುದು ಯಾವಾಗ ಆಯಿತೋ, ಆಗ, ಮುಕ್ತ್ಯೈಭವತಿ - ಮುಕ್ತಿಗೆ ಕಾರಣವಾಗುತ್ತದೆ" ಇತಿ - ಎಂದು ಶ್ರೀ ವ್ಯಾಸಮಹರ್ಷಿಯ ತಂದೆಗಳಾದ ಶ್ರೀಪರಾಶರ ಮುನಿವರರು ಹೇಳಿರುತ್ತಾರೆ. ಸರ್ವೇಶ್ವರನು ಈ ಚೇತನನ ಕರ್ಮಾನುಗುಣ ದಯಪಾಲಿಸಿದ ಈ ಮನುಷ್ಯ ದೇಹದ ಮನಸ್ಸನ್ನೇ ವಿಷಯೋಪಭೋಗಗಳಲ್ಲಿ ಪ್ರವರ್ತಿಸುವಹಾಗೆ ಮಾಡಿದರೆ ಬಂಧಕ್ಕೆ ಕಾರಣವು. ಆ ಮನಸ್ಸನ್ನೇ ವಿಷಯೋಪ ಭೋಗಗಳಲ್ಲಿ ಹೋಗದಹಾಗೆ ವಶದಲ್ಲಿಟ್ಟುಕೊಂಡರೆ,

(೧) ವಿ. ಪು. ೬. ೭- ೨೮

**ಭಾ. ಅವ. ಯೋಗಾರಂಭ ಯೋಗ್ಯಾವಸ್ಥೋಚ್ಯತೇ—**

**ಮೂ. ಜಿತಾತ್ಮನಃ ಪ್ರಶಾನ್ತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾವಮಾನಯೋಃ ॥** ೭.

ಮೋಕ್ಷಕ್ಕೆ ಕಾರಣವಾಗುತ್ತದೆಂಬ ತಾತ್ಪರ್ಯವು. ಆದುದರಿಂದ ಈ ಶ್ಲೋಕದಲ್ಲಿ ಆತ್ಮಾವೆಂಬ ಶಬ್ದಕ್ಕೆ ಒಂದೇ ಅರ್ಥಮಾಡಿ ಕಾರ್ಯಕಾರಣ ಸಂಘಾತವೆಂದು ಅರ್ಥಮಾಡುವದು ಉಚಿತವಲ್ಲವು. ಆದುದರಿಂದ ಪೂರ್ವಾರ್ಧದಲ್ಲಿರುವ ತೃತೀಯಾಂತ ಆತ್ಮಶಬ್ದವನ್ನು ಮನಸ್ಸೆಂದೂ, ಪ್ರಥಮಾಂತವನ್ನು ಚೇತನನೆಂದೂ ಭಾಷ್ಯಕಾರರು ಅರ್ಥಮಾಡಿರುತ್ತಾರೆ. ಹೀಗೆ ಅರ್ಥಮಾಡುವದು ಶ್ರುತ್ಯರ್ಥಕ್ಕೆ ಅನುಗುಣವಾಗಿದೆ. ಈ ದೇಹವೆಂಬ ರಥದಲ್ಲಿರುವ ಆತ್ಮನು ತನ್ನ ಸಾರಥಿಯಾದ ಬುದ್ಧಿಯಮೂಲಕ ಕುದುರೆಗಳಾದ ಇಂದ್ರಿಯಗಳನ್ನು ಮನಸ್ಸೆಂಬ ಲಗಾಮಿನಿಂದ ಘಟ್ಟಿಯಾಗಿ ಹಿಡಿದು ವಶದಲ್ಲಿಟ್ಟುಕೊಳ್ಳಬೇಕೆಂದು ಹೇಳಿರುತ್ತದೆ. ಹೀಗೆ ಶ್ರೀ ಪರಾಶರರ ವಾಕ್ಯವನ್ನು ಪ್ರಮಾಣವಾಗಿ ಉದಾಹರಿಸಿ, ತಮ್ಮ ಅಭಿಪ್ರಾಯವನ್ನು ಸ್ಥಾಪಿಸಿರುತ್ತಾರೆ. ಪರಾಶರೇಣಾಪಿ ಎಂಬಲ್ಲಿ ಅಪಿ ಶಬ್ದ ಸ್ವಾರಸ್ಯದಿಂದ ಭಗವಂತನಾದ ಶ್ರೀಕೃಷ್ಣನ ಅಭಿಪ್ರಾಯಮಾತ್ರವೇ ಹಾಗಲ್ಲವು. ಮಹಾ ಜ್ಞಾನಿಗಳಾಗಿ ಸರ್ವಜ್ಞರಾಗಿರುವ ಭಾಗವತೋತ್ತಮರ ಅಭಿಪ್ರಾಯವೂ ಹಾಗೆಯೇ ಎಂದು ತಿಳಿಸುವದಕ್ಕಾಗಿ ಅಪಿ ಶಬ್ದವೆಂದು ಭಾವಿಸತಕ್ಕದ್ದು, ಅಥವಾ ಇದು ವ್ಯಾಸೋಕ್ತಿಯಾಗಿರುವದರಿಂದ ಮಹಾ ಪ್ರಾಜ್ಞರಾಗಿ ಶಾಸ್ತ್ರಜ್ಞರ ಅಭಿಪ್ರಾಯಕ್ಕೆಲ್ಲಾ ಐಕಕಂಠ್ಯವೇ ಯಾವಾಗಲೂ ಇರುತ್ತದೆಯಾದುದರಿಂದ ಪ್ರಾಜ್ಞರಾಗಿರುವ ಅವರ ತಂದೆಗಳ ಅಭಿಪ್ರಾಯವೂ ಹಾಗೆಯೇ ಎಂದು ತೋರಿಸುವದಕ್ಕಾಗಿಯಾಗಲಿ ಅಪಿ ಶಬ್ದವು. ||೬||

**ಭಾಷ್ಯಾವತಾರಿಕೆಯ ಅರ್ಥವು:**—ಮೂರನೆಯ ಶ್ಲೋಕದ ಮೊದಲು ಈ ಆರನೆಯ ಶ್ಲೋಕಾಂತ್ಯದವರೆಗೂ ಯೋಗಾರೂಢತ್ವವೆಂದರೆ ಯೋಗಪರಿಪಾಕವೂ, ಅದರ ಅವಸ್ಥೆಯೂ, ಎಂಥಾದ್ದೆಂದೂ, ಅದು ಯಾವಾಗ ಉಂಟಾಗುತ್ತದೆಂದೂ ಹೇಳಲು ಹೊರಟು, ಅದನ್ನು ಹೊಂದಲು ಮನಸ್ಸನ್ನು ತನ್ನ ವಶದಲ್ಲಿಟ್ಟುಕೊಂಡು ಐಹಿಕ ವಿಷಯಾನುರಾಗಗಳಲ್ಲಿ ಜಿಹಾಸೆಯುಂಟಾಗುವ ಹಾಗೆ ಮಾಡಿಕೊಳ್ಳತಕ್ಕದ್ದೆಂದು ಹೇಳಲ್ಪಟ್ಟಿತು. ಇನ್ನುಮುಂದೆ ಯೋಗವನ್ನು ಹೇಗೆ ಅನುಷ್ಠಿಸಬೇಕೆಂಬುದೂ, ಆ ಯೋಗವನ್ನು ಪ್ರಾರಂಭಿಸುವದಕ್ಕೆ ಯೋಗ್ಯವಾದ ಅವಸ್ಥೆ ಯಾವುದೆಂಬುದೂ, ಹೇಳಲ್ಪಡುತ್ತವೆ.

**ಮೂಲಕ್ಕೆ ಅರ್ಥವು:**—ಒಬ್ಬ ಚೇತನನಿಗೇನೇ ತನ್ನ ಮನಸ್ಸೇ ಶಾಸ್ತ್ರಜನ್ಯಜ್ಞಾನ ವಿವೇಕಜನ್ಯ ಜ್ಞಾನದಮೂಲಕ ವಶದಲ್ಲಿದ್ದರೆ, ಅದೇ ಬಂಧುವಾಗಿ ಪರಮ ನಿಶ್ಶ್ರೇಯಸ ಪ್ರಾಪ್ತಿಗೆ ಹೇತುವಾಗುತ್ತದೆ. ಹಾಗಲ್ಲದೆ ತನ್ನ ವಶದಲ್ಲಿರದೆ ಹೋದರೆ, ಶತ್ರುವಾಗಿ ಪರಿಣಮಿಸಿ ಪುನಃ ಪುನಃ ಸಂಸಾರ ಮೊದಲಾದ ಅಧೋಗತಿಗೆ ಕಾರಣವಾಗುತ್ತದೆಂದುಹೇಳಿ,ಈ ಶ್ಲೋಕದಲ್ಲಾದರೋ ಮನಸ್ಸು ಮೇಲೆ ಹೇಳಿದ ಹಾಗೆ ಜಯಿಸಲ್ಪಟ್ಟು, ಶೀತೋಷ್ಣಾದಿ ದ್ವಂದ್ವಗಳಲ್ಲಿ ವಿಕಾರವಿಲ್ಲದಿರುವ ಸಮಾಹಿತ ದೆಶೆಯನ್ನು ಯಾವಾಗ ಹೊಂದುತ್ತದೋ, ಆಗ ಯೋಗವನ್ನಾರಂಭಿಸಲು ಯೋಗ್ಯನಾಗುತ್ತಾನೆಂದು ಹೇಳುತ್ತಾರೆ:—ಶೀತೋಷ್ಣ ಸುಖದುಃಖಗಳಲ್ಲಿ, ತಥಾ-ಹಾಗೆಯೇ, ಮಾನಾವಮಾನಗಳಲ್ಲೂ, ಜಿತಾತ್ಮನಃ - ಜಯಿಸಲ್ಪಟ್ಟ ಮನಸ್ಸುಳ್ಳ, ಪ್ರಶಾನ್ತಸ್ಯ - ಆ ಕಾರಣದಿಂದಲೇ ಇಂದ್ರಿಯಗಳ ಹಾವಳಿ ಎಲ್ಲವೂ ಪ್ರಶಾಂತವಾದವನಿಗೆ, ಆತ್ಮಾ-ಆತ್ಮವು, ಪರಂ-ವಿಶೇಷವಾಗಿ, ಅಧಿಕವಾಗಿ, ಸಮಾಹಿತಃ - ಮನಸ್ಸಿನಲ್ಲಿ ಇಡಲ್ಪಟ್ಟದ್ದಾಗುತ್ತದೆ. ಮನಸ್ಸು ಚಾಂಚಲ್ಯ

ಭಾ. ಶೀತೋಷ್ಣ ಸುಖದುಃಖೇಷು ಮಾನಾಪಮಾನಯೋಶ್ಚ ಜಿತಾತ್ಮನಃ-ಜಿತಮನಸಃ ವಿಕಾರರಹಿತ ಮನಸಃ, ಪ್ರಶಾನ್ತಸ್ಯ ಮನಸಿ ಪರಮಾತ್ಮಾ ಸಮಾಹಿತಃ - ಸಮ್ಯಗಾಹಿತಃ, ಸ್ವರೂಪೇಣಾವಸ್ಥಿತಃ ; ಪ್ರತ್ಯಗಾತ್ಮಾತ್ರ ಪರಮಾತ್ಮೇತ್ಯುಚ್ಯತೇ, ತಸ್ಯೈವ

---

ವಿಲ್ಲದುದಾಗಿ ಸ್ಥಿಮಿತವಾದುದಾಗುತ್ತದೆ. "ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾ ಪ್ರಿಯಂ" ಎಂದು ಹಿಂದೆ (ಗೀ. ೫.೨೦) ಹೇಳಿರುವಹಾಗೆ ಸ್ಥಿಮಿತ ಭಾವವನ್ನು ಹೊಂದಿದವನಾಗುತ್ತಾನೆ. ಇಂತಹ ಯೋಗಿಯು "ಯುಕ್ತ ಇತ್ಯುಚ್ಯತೇ ಯುಕ್ತನಾಗಲು ಅರ್ಹನಾಗುವನು ಎಂದು ಮುಂದಿನ ಶ್ಲೋಕದಲ್ಲಿ ಇದೆ, ಎಂದರೆ ಆತ್ಮ ಚಿನ್ತನೆಯನ್ನಾರಂಭಿಸಲು ಯೋಗ್ಯನಾಗುವನೆಂಬ ಭಾವವು ; ಅಥವಾ ಪರಮಾತ್ಮಾ ಎಂದು ಜ್ಞಾನಾದಿ ಗುಣಗಳಿಂದ ಪ್ರಕಾಶಿಸುತ್ತಾ ಹಿಂದೆ ಇಷ್ಟು ಅಧ್ಯಾಯಗಳಿಂದಲೂ ಕೊಂಡಾಡಲ್ಪಟ್ಟ ಶ್ರೇಷ್ಠನಾದ ಜೀವಾತ್ಮನು ಎಂಬ ಭಾವದಿಂದ ಪರಮಾತ್ಮಾ ಎಂದು ಪ್ರಯೋಗಿಸಿರುತ್ತಾರೆ. ಐದನೆಯ ಅಧ್ಯಾಯ ೧೪ನೆಯ ಶ್ಲೋಕದಲ್ಲಿ ಈ ಜೀವಾತ್ಮನನ್ನೇ ಪ್ರಭುಃ ಎಂದು ಹೇಳಿರುತ್ತಾರೆ. ಅದರ ಮುಂದಿನ ಶ್ಲೋಕದಲ್ಲಿ ವಿಭುಃ ಎಂದು ಹೇಳಿರುತ್ತಾರೆ. ಪ್ರಕರಣವು ಜೀವಾತ್ಮ ವಿಷಯವಾದುದರಿಂದ ಪರಮಾತ್ಮಾ ಶಬ್ದವನ್ನು ಹಾಗೆಯೇ ಅನ್ವಯಿಸಬೇಕಾಗಿದೆ. ಆದರೆ ಪರಮಾತ್ಮ ಶಬ್ದಕ್ಕೆ ಮುಖ್ಯ ವೃತ್ತಿಯು ಪರಬ್ರಹ್ಮನಲ್ಲೇಯಾದುದರಿಂದಲೂ, ಪರೋಮಾ ಅಸ್ಮಾತ್ ಎಂದು ಪರಮಶಬ್ದಕ್ಕೆ ವ್ಯುತ್ಪತ್ತಿಯಾದುದರಿಂದಲೂ, ನಿಸ್ಸಮಾಭ್ಯಧಿಕನಾದ ಸರ್ವೇಶ್ವರನೆಂದು ಹೇಳುವದು ಯುಕ್ತವೇ ವಿನಾ ಜೀವಾತ್ಮನೆಂದು ಹೇಳುವದು ನ್ಯಾಯವಲ್ಲವು ಎಂದರೆ, ಜೀವಾತ್ಮನು ದೇಹದಲ್ಲಿರುವಾಗಲೇ ಶಾಸ್ತ್ರ ಜನ್ಯಜ್ಞಾನ ವಿವೇಕಜನ್ಯ ಜ್ಞಾನಗಳನ್ನು ಹೊಂದುತ್ತಾ ಹೊಂದುತ್ತಾ ಮಹರ್ಷಿಗಳಹಾಗೆ ಜ್ಞಾನನಿಧಿಯಾಗಿ ಕಂಗೊಳಿಸುತ್ತಾ ಅನಂತರ ಪ್ರಕೃತಿ ವಿಯುಕ್ತ ದೆಶೆಯಲ್ಲಿ ಪರಮಾತ್ಮನಿಗೆ ಸಮನಾಗುವದರಿಂದ ಪರಮಾತ್ಮಾ ಎಂಬ ಶಬ್ದವನ್ನು, ಪರಂ ಆತ್ಮಾ ಎಂದು ವಿಭಾಗಿಸಿ, ಶ್ರೇಷ್ಠನಾದ ಆತ್ಮಾ ಎಂದು ಅರ್ಥ ಹೇಳಬಹುದು. ಅಥವಾ ಆತ್ಮಾ ದೇಹಕ್ಕಿಂತ ವಿಲಕ್ಷಣನಾಗಿ ಜ್ಞಾನಸ್ವರೂಪನಾಗಿ ಜ್ಞಾನ ಗುಣಕನಾಗಿ ಹೀಗೆ ಉತ್ಕೃಷ್ಟದೆಶೆಯಿಂದಲಾಗಲಿ ಪರಂ ಆತ್ಮಾ ಎಂಬ ಪ್ರಯೋಗವು ; ಅಥವಾ ಮೇಲೆ ಹೇಳಿದರೀತಿಯಲ್ಲಿ ಪರಂ ಎಂಬ ಅವ್ಯಯವನ್ನು ಸಮಾಹಿತಃ ಎಂಬುದರೊಂದಿಗೂ ಅನ್ವಯಿಸಬಹುದು. ಹೀಗೆ ಶೀತೋಷ್ಣ ಸುಖದುಃಖಗಳಲ್ಲಿ ಮನೋವಿಕಾರವಿಲ್ಲದೆ ಸಮಾಹಿತ ಮನಸ್ಕನು ಯಾವಾಗ ಆಗುತ್ತಾನೋ ಆಗ ಆತನು "ಯುಕ್ತ ಇತ್ಯುಚ್ಯತೇ ಯೋಗೀ" ಯೋಗಾರಂಭಕ್ಕೆ ಅರ್ಹನಾಗುತ್ತಾನೆಂದು ಮುಂದೆ ಹೇಳಲ್ಪಡುತ್ತದೆ.

ಭಾಷ್ಯಾರ್ಥವು :—ಶೀತೋಷ್ಣ ಸುಖದುಃಖಗಳಲ್ಲೂ ಮಾನಾಪಮಾನಗಳಲ್ಲೂ ಸಹ ಜಿತಾತ್ಮನಃ ಎಂದರೆ ಜಿತವಾದ ಮನಸ್ಸನ್ನುಳ್ಳವನಾದ, ವಿಕಾರ ರಹಿತ ಮನಸಃ - ವಿಕಾರವಿಲ್ಲದ ಮನಸ್ಸನ್ನು ಹೊಂದಿದವನಾದ. ಪ್ರಶಾನ್ತಸ್ಯ - ಬಾಹ್ಯೇಂದ್ರಿಯಗಳ ಗಲಾಟೆಯೆಲ್ಲಾ ಶಮನವಾದವನಿಗೆ, ಪರಮಾತ್ಮಾ - ಶ್ರೇಷ್ಠನಾದ ಜೀವಾತ್ಮನು, ಮನಸಿ ಸಮಾಹಿತಃ ಎಂದರೆ ಮನಸ್ಸಿನಲ್ಲಿ, ಸಮ್ಯಕ್ ಆಹಿತಃ - ಚೆನ್ನಾಗಿ ಇಡಲ್ಪಟ್ಟವನಾಗುವನು ಎಂದರೆ ವಿಶದವಾಗಿ ಅನುಸಂಧಾನಮಾಡಲು ಯೋಗ್ಯನಾಗುವನು, ಅಥವಾ ಶಾಂತ ಚಿತ್ತತೆಯುಳ್ಳವನಾಗುವನು, ಸ್ವರೂಪೇಣಾವಸ್ಥಿತಃ-ತನ್ನ ಸ್ವರೂಪದಿಂದ ಇರುವ ಪ್ರತ್ಯಗಾತ್ಮನಾದ ಜೀವಾತ್ಮನು, ಅತ್ರ- ಈ ಸಂದರ್ಭದಲ್ಲಿ ಪರಮಾತ್ಮೇತ್ಯುಚ್ಯತೇ-ಪರಮಾತ್ಮಾ ಎಂದು ಹೇಳಲ್ಪಟ್ಟಿರುತ್ತಾನೆ, ಏಕೆಂದರೆ ತಸ್ಯೈವ ಅತ್ರ ಪ್ರಕೃತತ್ವಾತ್ - ಅಂತಹ ಜೀವಾತ್ಮನೇ ಪ್ರಕರಣದಲ್ಲಿ ಉದ್ದಿಷ್ಟನಾಗಿರುವದರಿಂದ

ಭಾ. ಪ್ರಕೃತತ್ವಾತ್ ; ತಸ್ಯಾಪಿ ಪೂರ್ವಪೂರ್ವಾವಸ್ಥಾಪೇಕ್ಷಯಾ ಪರಮಾತ್ಮತ್ವಾತ್ ।
ಆತ್ಮಾ ಪರಂ ಸಮಾಹಿತ ಇತಿವಾನ್ವಯಃ ॥ ೭ ॥

ಮೂ. ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ ೮.

ಹೇಳಲ್ಪಟ್ಟಿರುತ್ತಾನೆ; ಮತ್ತು ತಸ್ಯಾಪಿ ಆ ಜೀವಾತ್ಮನಿಗೂ ಕೂಡ, ಪೂರ್ವಪೂರ್ವಾವಸ್ಥಾಪೇಕ್ಷಯಾ - ಮೊದಲು ಮೊದಲು ಇದ್ದ ಅವಸ್ಥೆಗಿಂತಲೂ ಶ್ರೇಷ್ಠವಾದ ಅವಸ್ಥಾಪ್ರಾಪ್ತಿಯಿಂದಲೂ ಪರಮಾತ್ಮಾವೆನಿಸುವನು ಎಂಬ ತಾತ್ಪರ್ಯವು. ಆದರೆ ಶ್ರೀ ಕೃಷ್ಣನು ಅವತಾರ ರಹಸ್ಯವನ್ನು ನಾಲ್ಕನೆಯ ಅಧ್ಯಾಯದಲ್ಲಿ ಹೇಳಿರುತ್ತಾನಲ್ಲಾ,ಹಾಗಾದರೆ ಜೀವಾತ್ಮಪ್ರಕರಣವೆಂದು ಹೇಗೆ ಹೇಳಲು ಸಾಧ್ಯವು? ಎಂದರೆ ಅದು ಅರ್ಜುನನ ಪ್ರಶ್ನೆಯನ್ನನುಸರಿಸಿಪ್ರಾಸಙ್ಗಿಕವಾಗಿ ಅಲ್ಲಿ ಮಾತ್ರವೇ ಹೇಳಲ್ಪಟ್ಟಿತು. ಪರಮಾತ್ಮವಿಷಯವು ಭಕ್ತಿಯೋಗವನ್ನು ಹೇಳುವ ಸಂದರ್ಭದಲ್ಲಿ ವಿಸ್ತರವಾಗಿ ಏಳನೆಯ ಅಧ್ಯಾಯದಿಂದ ಆರಂಭಿಸಿ ಹೇಳಲ್ಪಡುತ್ತದೆ. ಜೀವಾತ್ಮನನ್ನು ಪರಮಾತ್ಮಾ ಎಂದು ಹೇಗೆ ಹೇಳಲಾಗುತ್ತದೆ? ಎಂದರೆ ಆತನ ಸ್ವರೂಪವು ತುಂಬಾ ಉತ್ಕೃಷ್ಟವಾದುದರಿಂದ ಹಾಗೆ ಪ್ರಯೋಗವು ಎಂದು ತಿಳಿಸುವದಕ್ಕಾಗಿ,ಸ್ವರೂಪೇಣಾವಸ್ಥಿತಃ ಎಂಬ ವಾಕ್ಯವು. ಹಿಂದೆ ಇದ್ದ ಸ್ಥಿತಿಗಿಂತಲೂ ಈ ಆತ್ಮಯಾಥಾತ್ಮ್ಯಜ್ಞಾನ,ಆತ್ಮ ಸಮತ್ವ ಜ್ಞಾನ, ಐಹಿಕೋಪಭೋಗಗಳ ಅಲ್ಪಾಸ್ಥಿರ ಜ್ಞಾನ, ಇವುಗಳು,ಉಂಟಾಗುತ್ತಾ ಉಂಟಾಗುತ್ತಾ ಪರಮಾತ್ಮನಿಗೆ ಸಮಾನನಾಗುವುದರಿಂದಲೂ ಪರಮಾತ್ಮ ಶಬ್ದಪ್ರಯೋಗವು. ಇದನ್ನು ಇನ್ನೊಂದು ವಿಧವಾಗಿಯೂ ಅನ್ವಯಿಸಬಹುದೆಂದು ಪರಮಾತ್ಮಾ ಶಬ್ದವನ್ನು, ಪರಂ ಆತ್ಮಾ ಎಂದು ಪದಚ್ಛೇದಮಾಡಿ ಪರಂ ಎಂಬುದನ್ನು ಸಮಾಹಿತಃ ಎಂಬುವದರೊಂದಿಗೆ ಅನ್ವಯಿಸಬಹುದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಈ ರೀತಿಯಲ್ಲಿ ಆತ್ಮಾ ಜೀವಾತ್ಮನು, ಪರಂ ಸಮಾಹಿತಃ ಇತಿ ವಾನ್ವಯಃ - ತುಂಬಾ ಸಮಾಹಿತ ಚಿತ್ತನಾಗುವನೆಂದಾಗಲಿ ಅನ್ವಯವಾಗಬಹುದು, ಕೇವಲ ಆತ್ಮಾವಿನಲ್ಲೇ ಇಡಲ್ಪಟ್ಟ ಮನಸ್ಸುಳ್ಳವನಾಗುವನೆಂಬ ಭಾವವು, ಆದುದರಿಂದಲೇ ಆತ್ಮಧ್ಯಾನಕ್ಕೆ ಅರ್ಹನಾಗುವನು ಎಂಬ ತಾತ್ಪರ್ಯವು. ||೭||

**ಮೂಲಕ್ಕೆ ಅರ್ಥವು :**—ಕರ್ಮಯೋಗಿಯು ಯೋಗಾಭ್ಯಾಸಕ್ಕೆ ಅರ್ಹನಾಗಬೇಕಾದರೆ ಎಂತಹ ಅವಸ್ಥೆಯನ್ನು ಹೊಂದಬೇಕೆಂಬುದನ್ನು ಉಪಪಾದಿಸುತ್ತಾರೆ. ಹಿಂದೆ ಸಮಸ್ತ ಇಂದ್ರಿಯಗಳೊಂದಿಗೆ ಮನೋಜಯವೂ, ದ್ವಂದ್ವ ಸಹತ್ವವೂ ಯೋಗಾಭ್ಯಾಸಾರ್ಹನಾಗಲು ಆವಶ್ಯಕವೆಂದು ಹೇಳಲ್ಪಟ್ಟಿತು. ಇಂತಹ ಅವಸ್ಥೆಯುಂಟಾಯಿತೆಂದು ಯಾವಾಗ ತಿಳಿಯಬಹುದು ಎಂದರೆ ಮಣ್ಣು, ಕಲ್ಲೂ, ಚಿನ್ನ ಮೊದಲಾದವುಗಳಲ್ಲಿ ಸಮಪ್ರಯೋಜನಭಾವ ಉಳ್ಳವನಾಗಿರಬೇಕು, ಎಂದರೆ ಐಹಿಕಾಂಶಗಳನ್ನು ತೃಣವಾಗಿ ಭಾವಿಸುವ ಸ್ಥಿತಿಯನ್ನು ಹೊಂದಿರಬೇಕೆಂದು ಹೇಳುತ್ತಾರೆ. **ಜ್ಞಾನ ವಿಜ್ಞಾನ ತೃಪ್ತಾತ್ಮಾ** - ಕರ್ಮಯೋಗಿಯ ಪ್ರಕರಣವಾದುದರಿಂದ, ಜ್ಞಾನ ಶಬ್ದಕ್ಕೆ ಆತ್ಮ ಯಾಥಾತ್ಮ್ಯಜ್ಞಾನವೆಂದು ಅರ್ಥವು, ವಿಜ್ಞಾನ ಶಬ್ದದಿಂದ ತಾನು ದೇಹಕ್ಕಿಂತ ವಿಲಕ್ಷಣನಾಗಿ ಜ್ಞಾನಾಕಾರನೆಂಬ, ಎಲ್ಲಾ ಆತ್ಮರ ಜ್ಞಾನವೂ ಸಮವೆಂಬ ಆತ್ಮಸಮತ್ವ ಜ್ಞಾನವೂ ಹೇಳಲ್ಪಟ್ಟಿತು, ಇವುಗಳಿಂದ ತೃಪ್ತಿಯನ್ನು ಹೊಂದಿದ ಮನಸ್ಸುಳ್ಳವನಾದ, ಅದರಿಂದಲೇ **ಕೂಟಸ್ಥಃ** - ಕೂಟವೆಂದರೆ ಅಡಿಗಲ್ಲು, ಅದರಮೇಲೆ ಕಾಸಿ ಇಟ್ಟು ಹೊಡೆದ ಕಬ್ಬಿಣಗಳು ನಾನಾಪರಿಣಾಮ ಹೊಂದಿದರೂ, ಅದು ಹೇಗೆ ವಿಕಾರವನ್ನು ಹೊಂದದೆ ಇರುತ್ತದೋ ಹಾಗೆ ನಿತ್ಯವಾಗಿರುವವನಾದ, ಅದರಿಂದಲೇ, **ವಿಜಿತೇಂದ್ರಿಯಃ**-ಎಲ್ಲಾ ಇಂದ್ರಿಯಗಳನ್ನು ಎಂದರೆ

ಭಾ. ಜ್ಞಾನವಿಜ್ಞಾನ ತೃಪ್ತಾತ್ಮಾ - ಆತ್ಮಸ್ವರೂಪ ವಿಷಯೇಣ ಜ್ಞಾನೇನ, ತಸ್ಯ ಚ ಪ್ರಕೃತಿ ವಿಸಜಾತೀಯಾಕಾರ ವಿಷಯೇಣ-ವಿಜ್ಞಾನೇನ ಚ, ತೃಪ್ತಮನಾಃ, ಕೂಟಸ್ಥಃ- ದೇವಾದ್ಯವಸ್ಥಾಸ್ವನುವರ್ತಮಾನ ಸರ್ವಸಾಧಾರಣ ಜ್ಞಾನೈಕಾಕಾರಾತ್ಮನಿಸ್ಥಿತಃ,ತತ ಏವ ವಿಜಿತೇನ್ದ್ರಿಯಃ, ಸಮಲೋಷ್ಟಾಶ್ಮಕಾಂಚನಃ - ಪ್ರಕೃತಿವಿವಿಕ್ತಸ್ವರೂಪನಿಷ್ಠತಯಾ ಪ್ರಾಕೃತೇಷು ವಸ್ತು ವಿಶೇಷೇಷು ಭೋಗ್ಯತ್ವಾಭಾವಾ ಲ್ಲೋಷ್ಟಾಶ್ಮಕಾಂಚನೇಷು

---

ಆವುಗಳ ಉಪಭೋಗಗಳನ್ನೆಲ್ಲಾ ಜಯಿಸಿದವನಾದ, ಆ ಕಾರಣದಿಂದಲೇ, ಸಮಲೋಷ್ಟಾಶ್ಮಕಾಂಚನಃ-ಮಣ್ಣು, ಕಲ್ಲು, ಚಿನ್ನ ಇವುಗಳನ್ನೆಲ್ಲಾ ಸಮವಾಗಿ ಕಾಣುವ ಎಂದರೆ ಇವುಗಳನ್ನೆಲ್ಲಾ ತೃಣದಂತಾಗಿ ಕಾಣುವ, ಯೋಗೀ-ಕರ್ಮಯೋಗಿಯು,' ಯುಕ್ತ ಇತ್ಯುಚ್ಯತೇ - ಅರ್ಹನೆಂದು ಹೇಳಿಸಿಕೊಳ್ಳುತ್ತಾನೆ. ಏತಕ್ಕೆ ಅರ್ಹನೆಂದರೆ ಪ್ರಕರಣಾನುಗುಣವಾಗಿ ಆತ್ಮಧ್ಯಾನಕ್ಕೆ ಅರ್ಹನೆಂದು ಹೇಳಿಸಿಕೊಳ್ಳುತ್ತಾನೆಂಬ ಭಾವವು, ಅಥವಾ ಪ್ರಕೃತಿ ಪ್ರತ್ಯಯಾರ್ಥಗಳ ಅನುಗುಣವಾಗಿಯೇ ಆತ್ಮಧ್ಯಾನಾರ್ಹನೆಂದೆನಿಸುವನೆಂಬರ್ಥವು. ಮುಮುಕ್ಷುವಾಗಿ ಕರ್ಮಯೋಗವನ್ನಾರಂಭಿಸಲು ಯೋಗ್ಯನಾಗಬೇಕಾದರೆ ಆತ್ಮಸ್ವರೂಪಜ್ಞಾನವೂ, ಐಹಿಕವಿಷಯಗಳಲ್ಲಿ ವೈರಾಗ್ಯವೂ ಆವಶ್ಯಕವೆಂದು ಹೇಳಿದಂತಾಯಿತು. ಕರ್ಮ ಯೋಗಾರ್ಹನಾದ ಮುಮುಕ್ಷುವಾಗಬೇಕಾದರೆ ಹಿಂದಿನ ಅಧ್ಯಾಯಗಳಲ್ಲಿ ಹೇಳಿದ ಆತ್ಮವಿಷಯವಾದ ಜ್ಞಾನ ವಿಜ್ಞಾನಗಳಿರಬೇಕು. "ಅಣುತ್ವ, ನಿತ್ಯತ್ವ, ನಿರವಯವತ್ವ, ಛೇದನ ದಹನ ಕ್ಲೇದನ ಶೋಷಣಾದ್ಯನರ್ಹತ್ವ, ವೃದ್ಧಿಹ್ರಾಸ ರಹಿತತ್ವ, ಸ್ವಯಂ ಪ್ರಕಾಶತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ ದೇಹೇನ್ದ್ರಿಯಾದಿ ವಿಲಕ್ಷಣತ್ವ ಇತ್ಯಾದಿ ಜ್ಞಾನಗಳೂ ಇರುವದಲ್ಲದೆ, ಎಲ್ಲಾ ಆತ್ಮರೂ ಜ್ಞಾನೈಕಾಕಾರತೆಯಿಂದ ಸಮ ವೆಂಬಿಜ್ಞಾನವಿರಬೇಕು. ಐಹಿಕ ಫಲಗಳು ಅಲ್ಪಾಸ್ಥಿರಗಳು, ಮೋಕ್ಷವು ನಿತ್ಯ ನಿರತಿಶಯವೆಂಬ ಜ್ಞಾನಬೇಕು. ಶೀತೋಷ್ಣ ಸುಖದುಃಖಗಳನ್ನು ಸಹಿಸುವ ಯೋಗ್ಯತೆಯೂ,ಲೋಷ್ಟಾಶ್ಮಕಾಂಚನಗಳನ್ನು ಸಮವಾಗಿ ನೋಡುವ ವೈರಾಗ್ಯವೂ ಇವೆಲ್ಲಾ ಮುಮುಕ್ಷುವಿಗಿರಬೇಕೆಂದು ಹೇಳಲ್ಪಟ್ಟಿತು. ಇಂತಹ ಜ್ಞಾನಾಕಾರದಿಂದ ಕೂಡಿದ್ದ ಕರ್ಮಯೋಗದಿಂದ ಅನುಗೃಹೀತವಾದುದು ಭಕ್ತಿಯೋಗವೆಂದು ಹೇಳುವದಕ್ಕಾಗಿ ಶ್ರೀ ಯತಿವರ್ಯರು ಅವತಾರಿಕೆಯಲ್ಲಿ ಜ್ಞಾನಕರ್ಮಾನುಗೃಹೀತಂ ಭಕ್ತಿಯೋಗಂ ಅವತಾರಯಾಮಾಸ" ಎಂದು ಪ್ರಯೋಗಿಸಿರುತ್ತಾರೆ.

ಭಾಷ್ಯಾರ್ಥವು :—ಯೋಗಾರಂಭ ಯೋಗ್ಯಾವಸ್ಥೆಯು ಪ್ರಾಪ್ತವಾಗಿದೆ ಎಂದು ಯಾವಾಗ ನಂಬಬಹುದೆಂದರೆ ಹೇಳುತ್ತಾರೆ. ಜ್ಞಾನವಿಜ್ಞಾನ ತೃಪ್ತಾತ್ಮಾ ಎಂಬುದರ ಅರ್ಥವನ್ನು ವ್ಯಕ್ತಪಡಿಸುತ್ತಾರೆ ಆತ್ಮಸ್ವರೂಪ ವಿಷಯೇಣ ಜ್ಞಾನೇನ - ಆತ್ಮಸ್ವರೂಪ ವಿಷಯವಾದ ಜ್ಞಾನದಿಂದ, ತಸ್ಯ ಚ - ಆ ಆತ್ಮ ಯಥಾರ್ಥ ಜ್ಞಾನಕ್ಕಾದರೋ ಆವಶ್ಯಕವಾದ, ಪ್ರಕೃತಿ ವಿಸಜಾತೀಯಾಕಾರ ವಿಷಯೇಣ - ಪ್ರಕೃತಿಗಿಂತಲೂ ವಿಲಕ್ಷಣವಾದ ಜ್ಞಾನಾಕಾರವುಳ್ಳವನೆಂಬ, ವಿಜ್ಞಾನೇನ ಚ - ವಿಜ್ಞಾನದಿಂದಲೂ ಸಹ, ತೃಪ್ತ ಮನಾಃ - ತುಷ್ಟಿಯನ್ನು ಹೊಂದಿದ ಮನಸ್ಸುಳ್ಳವನಾದ, ಕೂಟಸ್ಥಃ ಎಂದರೆ ದೇವಾದ್ಯವಸ್ಥಾ ಸ್ವನುವರ್ತಮಾನ ಸರ್ವಸಾಧಾರಣ ಜ್ಞಾನೈಕಾಕಾರಾತ್ಮನಿ ಸ್ಥಿತಃ - ತಾತ್ಪರ್ಯಾರ್ಥವನ್ನುಪದೇಶಿಸುತ್ತಾರೆ, ದೇವ ಮನುಷ್ಯ ಮೊದಲಾದ ಅವಸ್ಥೆಗಳಲ್ಲೆಲ್ಲಾ ಅನುವರ್ತಿಸಿ ಬರುವ ಸಮಸ್ತ ಆತ್ಮರುಗಳಿಗೂ ಸಾಧಾರಣವಾದ ಜ್ಞಾನೈಕಾಕಾರತೆಯುಳ್ಳವನು ಆತ್ಮಾ ಎಂಬ ಅಭಿಪ್ರಾಯವುಳ್ಳವನಾಗಿ ಇರುವ, ತತ ಏವ-ಆಕಾರಣದಿಂದಲೇ, ವಿಜಿತೇನ್ದ್ರಿಯಃ-ಜಯಿಸಲ್ಪಟ್ಟ ಇಂದ್ರಿಯಗಳುಳ್ಳವನಾಗಿ, ಸಮಲೋಷ್ಟಾಶ್ಮಕಾಂಚನಃ - ಮಣ್ಣಿನಹೆಂಟೆ, ಕಲ್ಲು, ಚಿನ್ನ ಇವುಗಳಲ್ಲಿ ಸಮಭಾವವುಳ್ಳ ಎಂದರೆ

ಭಾ. ಸಮಪ್ರಯೋಜನೋ ಯಃ ಕರ್ಮಯೋಗೀ ಸ ಯುಕ್ತ ಇತ್ಯುಚ್ಯತೇ - ಆತ್ಮಾವಲೋಕನ ರೂಪ ಯೋಗಾಭ್ಯಾಸಾರ್ಹ ಇತ್ಯುಚ್ಯತೇ ॥೮॥

ಪ್ರಕೃತಿ ವಿವಿಕ್ತ ಸ್ವರೂಪ ನಿಷ್ಠತಯಾ ಪ್ರಾಕೃತವಸ್ತು ವಿಶೇಷೇಷು ಭೋಗ್ಯತ್ವಾಭಾವಾಲ್ಲೋಷ್ಟಾಶ್ಮ ಕಾಂಚನೇಷು ಸಮ ಪ್ರಯೋಜನಃ - ಪ್ರಕೃತಿಗಿಂತಲೂ ವಿಲಕ್ಷಣವಾದ ಸ್ವರೂಪವು ಆತ್ಮನಿಗುಂಟೆಂಬ ಅನುಸಂಧಾನದಿಂದ ಪ್ರಾಕೃತವಸ್ತು ವಿಶೇಷಗಳಲ್ಲಿ ಎಂದರೆ ಐಹಿಕ ಭೋಗ್ಯ ವಸ್ತುಗಳಲ್ಲಿ ಅಂತಹವನಿಗೆ ಭೋಗ್ಯತ್ವ ಬುದ್ಧಿಯಿಲ್ಲದುದರಿಂದ ಮಣ್ಣು ಹೆಂಟೆ ಕಲ್ಲು ಚಿನ್ನ ಇವುಗಳಲ್ಲಿ ಸಮವಾದ ಪ್ರಯೋಜನವುಳ್ಳವನಾಗಿ, ಎಲ್ಲವನ್ನೂ ತೃಣವಾಗಿ ಭಾವಿಸಿ, ಯಃ ಕರ್ಮಯೋಗೀ - ಯಾವ ಕರ್ಮಯೋಗಿಯು ಇರುವನೋ, ಸಃ – ಅವನು, ಯುಕ್ತನೆಂದು ಹೇಳಿಸಿಕೊಳ್ಳುತ್ತಾನೆ ಎಂದರೆ ಆತ್ಮಾವಲೋಕನ ರೂಪಯೋಗಾಭ್ಯಾಸಾರ್ಹ ಇತ್ಯುಚ್ಯತೇ - ಆತ್ಮಾವಲೋಕನ ರೂಪಯೋಗಾಭ್ಯಾಸಕ್ಕೆ ಅರ್ಹನೆಂದು ಹೇಳಿಸಿಕೊಳ್ಳುತ್ತಾನೆಂಬ ತಾತ್ಪರ್ಯವು. ಇಲ್ಲಿ ಜ್ಞಾನ ಶಬ್ದವು ಆತ್ಮವಿಷಯಕವಾದ ಸಾಮಾನ್ಯ ಜ್ಞಾನವನ್ನೂ, ವಿಜ್ಞಾನ ಶಬ್ದವು ವಿಶೇಷ ಜ್ಞಾನವಾದ, ಆತ್ಮನು ಪ್ರಕೃತಿಗಿಂತ ವಿಲಕ್ಷಣನೆಂಬ ಜ್ಞಾನವನ್ನೂ ಬೋಧಿಸುತ್ತವೆ. ಈ ಶ್ಲೋಕದಲ್ಲಿ ಕೂಟಸ್ಥ ಶಬ್ದಕ್ಕೆ ಕೂಟೇ ತಿಷ್ಠತಿ ಎಂಬ ವ್ಯುತ್ಪತ್ತಿಯಿಂದ ಔಪಚಾರಿಕ ತಾತ್ಪರ್ಯಾರ್ಥವಾಗಿ ವಿಕಾರ ರಹಿತನಾಗಿರುವ ಆತ್ಮಸ್ವರೂಪದಲ್ಲಿರುವವನೆಂದು ಭಾಷ್ಯವನ್ನು ಬರೆದಿರುತ್ತಾರೆ. ಕೂಟ ಶಬ್ದಕ್ಕೆ ಅಡಿಗಲ್ಲೆಂಬರ್ಥವನ್ನು ಮೇಲೆಯೇ ವಿವರಿಸಿರುತ್ತದೆ. ಆ ಅಡಿಗಲ್ಲಿನಮೇಲೆ ಅನೇಕ ಕಾಸಿದ ಕಬ್ಬಿಣಗಳು ಬಡಿಯಲ್ಪಟ್ಟು ಬಂದು ಹೋದರೂ, ಅಡಿಗಲ್ಲು ಹೇಗೆ ವಿಕಾರ ರಹಿತವಾಗಿರುತ್ತದೋ ಹಾಗೆಯೇ ದೇವ ಮನುಷ್ಯಾದಿ ಅನೇಕ ಶರೀರಗಳು ಪ್ರಾಪ್ತವಾದರೂ ಜ್ಞಾನಾಕಾರತೆಯಿಂದ ಸದಾ ಏಕರೂಪವಲ್ಲಿರುವದರಿಂದ "ನ ಜಾಯತೇ ಮ್ರಿಯತೇ" ಎಂದು ಹೇಳಿರುವ ಮೇರೆಗೆ ನಿತ್ಯನಾದ ಆತ್ಮನನ್ನು ತಿಳಿದಿರುವದರಿಂದ ಕೂಟಸ್ಥಃ ಎಂದರೆ ಆತ್ಮನಿಷ್ಠಿತಃ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಕೂಟ ಶಬ್ದಕ್ಕೆ ಪರ್ವತ ಶೃಙ್ಗವೆಂದಾಗಲಿ ಅರ್ಥಮಾಡಬಹುದು. ಆಗಲೂ ಇದೇ ಅಭಿಪ್ರಾಯವೇ; ಕೂಟವು ಹೇಗೆ ಪರ್ವತದ ಇತರ ಪ್ರದೇಶಕ್ಕಿಂತಲೂ ವಿಲಕ್ಷಣವಾಗಿ ಉನ್ನತ ಪದವಿಯನ್ನಾಶ್ರಯಿಸಿರುತ್ತದೆಯೋ, ಹಾಗೆಯೇ ಆ ಆತ್ಮನೂ ದೇಹಾದಿಗಳಿಗಿಂತಲೂ ವಿಲಕ್ಷಣನಾಗಿ ವಿಕಾರ ಶೂನ್ಯನು ; ಅಥವಾ ಒಂದು ಕುಲದ ಮುಖ್ಯಸ್ಥನು ಪ್ರಧಾನನಾದವನಾಗಿ ಹೇಗೆ ಕೂಟಸ್ಥನೆನಿಸುವವನೋ, ಹಾಗೆಯೇ ಈ ಜೀವಾತ್ಮನೂ ಕೂಡ ತನ್ನ ಯಾವಾಗಲೂ ಸಾಧಾರಣರೂಪವಾದ ಜ್ಞಾನಾಕಾರತೆಯಿಂದ ದೇವಾದ್ಯಾಕಾರಗಳಲ್ಲೂ ತನ್ನ ಜ್ಞಾನಾಕಾರಸ್ವಭಾವದಿಂದ ಸಮನಾಗಿ ಪರಿಶುದ್ಧನಾಗಿರುವವನು; ಅಥವಾ ಕೂಟವೆಂದರೆ ಆಕಾಶವು, ಆಕಾಶದಹಾಗೆ ನಿರ್ವಿಕಾರನು ಆತ್ಮನು ಎಂಬ ಭಾವವು. ಆಕಾಶದ ನಿರ್ವಿಕಾರತ್ವ ನಿರ್ಲೇಪತ್ವಗಳು ಭಾಗವತ ಏಕಾದಶಸ್ಕಂಧದಲ್ಲಿ ಉಪಪಾದಿತವು, ಹೀಗೆ ಕೂಟಸ್ಥ ಶಬ್ದಕ್ಕೆ ಪ್ರಕೃತಿ ವಿಯುಕ್ತ ದಿವ್ಯಾತ್ಮಸ್ವರೂಪವೇ ಅರ್ಥವಾದುದರಿಂದ ೧೫ನೆಯ ಅಧ್ಯಾಯದಲ್ಲಿ ಕೂಟಸ್ಥೋಕ್ಷರ ಉಚ್ಯತೇ (೧೫. ಶ್ಲೋ·) ಎಂಬಲ್ಲಿ ಅಕ್ಷರನು ಯಾರೆಂದರೆ ಮುಕ್ತಾತ್ಮನೆಂದು ತಿಳಿಸುವದಕ್ಕಾಗಿ ಕೂಟಸ್ಥ ಶಬ್ದಪ್ರಯೋಗವು. "ಪ್ರಕೃತಿಸ್ಥೋಽಹಿ ಪುರುಷೋ ನಾಜ್ಯತೇ ಪ್ರಾಕೃತೈರ್ಗುಣೈಃ । ಅವಿಕಾರಾದಕರ್ತೃತ್ವಾನ್ನಿರ್ಗುಣತ್ವಾ ಜ್ಜಲಾರ್ಕವತ್"- ಈ ಜೀವಾತ್ಮನು ದೇಹದಲ್ಲಿದ್ದರೂ ಪ್ರಾಕೃತಗುಣಗಳಿಂದ ಆತನ ಸ್ವರೂಪವು ವಿಕಾರವನ್ನು ಹೊಂದುವದಿಲ್ಲವು, ಎಂದು ಶ್ರೀ ಕಪಿಲರು ತಮ್ಮ ತಾಯಿಗೆ ಉಪದೇಶಿಸುತ್ತಾರೆ. ಆತ್ಮಾವಲೋಕನರೂಪಯೋಗಕ್ಕೆ ಅರ್ಹನಾಗಬೇಕಾದರೆ ಸಮಲೋಷ್ಟಾಶ್ಮಕಾಂಚನನಾಗಬೇಕೆಂದು ಹೇಳಲ್ಪಟ್ಟಿತು. ಹಾಗೆ ಸಮ

ಭಾ. ಅವ. ತಥಾಚ—

ಮೂ॰ ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥ ದ್ವೇಷ್ಯ ಬನ್ಧುಷು ।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿ ರ್ವಿಶಿಷ್ಯತೇ ॥ ೯.

ಲೋಷ್ಟಾಶ್ಮ ಕಾಂಚನಗಳಲ್ಲಿ ಸಮಪ್ರಯೋಜನವುಳ್ಳವನಾಗುವದು ಹೇಗೆ ಎಂಬ ಶಙ್ಕಾ ನಿರಾಕರಣಕ್ಕಾಗಿ ಪ್ರಕೃತಿ ವಿವಿಕ್ತ ಸ್ವರೂಪ ನಿಷ್ಠತಯಾ ಪ್ರಾಕೃತ ವಸ್ತು ವಿಶೇಷೇಷುಭೋಗ್ಯತ್ವಾಭಾವಾತ್ ಎಂದು ಹೇತುವನ್ನು ಪಪಾದಿಸಿರುತ್ತಾರೆ. ಮೂಲದಲ್ಲಿಲ್ಲದೇ ಇರುವ ಯಚ್ಛಬ್ದ ತಚ್ಛಬ್ದಗಳನ್ನು ಪಯೋಗಿಸಿರುವದು, ಈ ಸಂದರ್ಭದಲ್ಲಿ ಹೇಯಾಂಶ ಉಪಾದೇಯಾಂಶಗಳನ್ನು ವ್ಯಕ್ತಪಡಿಸುವದಕ್ಕೆಂಬದಾಗಿ ತಿಳಿಯತಕ್ಕದ್ದು. ॥೮॥

ಭಾಷ್ಯಾವತಾರಿಕೆಯ ಅರ್ಥವು:—ಹಿಂದೆ ಕರ್ಮಯೋಗಿಯು ಯೋಗಾಭ್ಯಾಸಾರ್ಹನಾಗಲು ಲೋಷ್ಟಾಶ್ಮಕಾಂಚನಾದಿ ಭೋಗ್ಯವಸ್ತುಗಳನ್ನು ಸಮವಾಗಿ ಎಂದರೆ ಎಲ್ಲವನ್ನು ತೃಣಪ್ರಾಯವಾಗಿ ನೋಡುವನಾಗಿರಬೇಕೆಂದು ಹೇಳಲ್ಪಟ್ಟಿತು, ಇಷ್ಟೇಯಲ್ಲವು. ಹಾಗೆಯೇ ಬರೀ ಅಚಿತ್ತುಗಳ ವಿಷಯದಲ್ಲೂ ಅಲ್ಲದೆ ಚೇತನರ ವಿಷಯದಲ್ಲೂ ಸಹ|ಅಂತಹ ಸಮತ್ವ ಬುದ್ಧಿಯು ಶತ್ರುಮಿತ್ರಾದಿಗಳಲ್ಲೂ ಸಾಧುಜನ ಪಾಪಿಷ್ಠರಲ್ಲೂ ಹೀಗೆ ಎಲ್ಲಾ ಚೇತನರುಗಳಲ್ಲೂ ಇರತಕ್ಕದ್ದೆಂದು ಹೇಳಿ ।ಅಂತಹ ಕರ್ಮಯೋಗಿಯೇ ಆತ್ಮಚಿನ್ತನಕ್ಕೆ ಅರ್ಹನೆಂದೂ ಉಪದೇಶಿಸುತ್ತಾರೆ. ಆದುದರಿಂದ ಹಾಗೆಯೇ ಇನ್ನೂ ಉಪದೇಶಿಸುತ್ತಾರೆಂದು ತಥಾಚ ಎಂಬ ಅವತಾರಿಕೆಯು.

ಮೂಲಕ್ಕೆ ಅರ್ಥವು:—ಪೂರ್ವಾರ್ಧವೆಲ್ಲಾ ಒಂದೇ ಸಮಾಸ ಪದವು. ಸುಹೃತ್ - ತಾನಾಗಿಯೇ ಪ್ರತಿಫಲವನ್ನಪೇಕ್ಷಿಸದೆ ಹಿತವನ್ನುಂಟುಮಾಡಬೇಕೆಂಬ ಒಳ್ಳೇ ಹೃದಯವನ್ನು ಹೊಂದಿರುವವನು, ಮಿತ್ರನು ಉಪಕಾರವನ್ನು ಪಡೆದು, ಕೃತಜ್ಞತಾಭಾವದಿಂದ ಉಪಕಾರಮಾಡುವ ಸಮವಯಸ್ಕನು, ಅರಿ - ಅಪಕಾರಮಾಡಬೇಕೆಂದಿರುವ ಶತ್ರುವು, ಉದಾಸೀನಃ . ಉಪಕಾರವೂ ಅಪಕಾರವೂ ಇಲ್ಲದೆ ಉದಾಸೀನನಾಗಿರುವವನು, ಮಧ್ಯಸ್ಥಃ - ಜನ್ಮದಿಂದಲೇ ಇನ್ನು ಯಾವ ಕಾರಣವೂ ಇಲ್ಲದೆ ಹಿತಾಹಿತಗಳನ್ನು ಮಾಡದಿರುವವನು, ತನ್ನ ಪಂಗಡಕ್ಕೂ ತನ್ನ ವಿರೋಧಿ ಪಂಗಡಕ್ಕೂ ಸೇರದೇ ಇರುವ ಮಧ್ಯಸ್ಥನು, ದ್ವೇಷ್ಯಃ - ಜನ್ಮದಿಂದಲೇ ತನ್ನ ಜಾತಿ ಕುಲಕ್ಕೆ ಸೇರದಿರುವದರಿಂದಲಾಗಲಿ,"ಜ್ಞಾತಿಶ್ಚೇದನ ಲೇನ ಕಿಂ"ಎಂದೂ,"ವಿದ್ಯತೇ ಜ್ಞಾತಿತೋ ಭಯಂ"ಎಂದೂ ಹೇಳಿರುವಹಾಗೆ ಜ್ಞಾತಿಯಾದುದರಿಂದಲಾಗಲಿ ದ್ವೇಷಿಸಲು ಅರ್ಹನು,ಬನ್ಧುಷು- ಜನ್ಮದಿಂದ ತನಗೆ ಹಿತೈಷಿಯಾಗಿ ಅನುಬಂಧಿಗಳಾಗಿರುವವರು, ಅವರುಗಳಲ್ಲೆಲ್ಲಾ, ಮತ್ತು ಸಾಧುಷ್ವಪಿ - ಶಾಸ್ತ್ರಬೋಧಿತ ಧರ್ಮಗಳನ್ನು ಅನುಷ್ಠಿಸುವವರಲ್ಲೂ, ಪಾಪೇಷು ಚ – ಹಾಗೆ ನಡೆಯದ ಪಾಪಮಾಡುವವರಲ್ಲಿ ಇಷ್ಟವಿರುವವರಲ್ಲೂ ಸಹ, ಸಮಬುದ್ಧಿಃ - ಉಪಕಾರಾಪಕಾರಾದಿಗಳನ್ನೆಣಿಸದ ಸಮಬುದ್ಧಿಯುಳ್ಳವನು, ವಿಶಿಷ್ಯತೇ - ಅಂತಹ ಕರ್ಮಯೋಗಿಯಲ್ಲಿ ಹೆಚ್ಚು ಅತಿಶಯವನ್ನು ಹೊಂದಿರುವನಾಗುತ್ತಾನೆ. ಆ ಕಾರಣದಿಂದ ಇಂತಹ ಕರ್ಮಯೋಗಿಯು, ಕೈಮುತಿಕ ನ್ಯಾಯಪ್ರಕಾರ "ಯುಕ್ತಇತ್ಯುಚ್ಯತೇಯೋಗೀ" ಎಂದು ಹೇಳಿದಪ್ರಕಾರ ಯೋಗಾಭ್ಯಾಸಕ್ಕೆ ಅರ್ಹನಾಗಲು ಸಂದೇಹವೇ ಇಲ್ಲವೆಂಬ ಭಾವವು. ಅಚಿತ್ತುಗಳಾದ ಲೋಷ್ಟ, ಅಶ್ಮ, ಕಾಂಚನಗಳಲ್ಲಿ ಸಮ ಬುದ್ಧಿಯೇ ದುರ್ಲಭವು. ಅಂತಹ ಸಮತ್ವ ಬುದ್ಧಿ ಯಿದ್ದರೆ ಆತ್ಮದರ್ಶನಕ್ಕಾಗಿ ಯೋಗಾಭ್ಯಾಸಕ್ಕೆ ಅರ್ಹನು ಎಂದು ಮೊದಲು ಹೇಳಿದರು. ಅನಂತರ ಹಿತೈಷಿಗಳಲ್ಲೂ ಉಪಕಾರಿಗಳಲ್ಲೂ ಅಪಕಾರಿಗಳಲ್ಲೂ ಸಮಬುದ್ಧಿ ಇರುವದು ಇನ್ನೂ ದುರ್ಲಭವು,

ಭಾ. ವಯೋವಿಶೇಷಾನಙ್ಗೀಕಾರೇಣ ಸ್ವಹಿತೈಷಿಣ – ಸ್ಸುಹೃದಃ, ಸವಯಸೋಃ ಹಿತೈಷಿಣೋ-ಮಿತ್ರಾಣಿ, ಅರಯೋಃ – ನಿಮಿತ್ತತೋಽನರ್ಥೇಚ್ಛವಃ, ಉಭಯ ಹೇತ್ವಭಾವಾತ್ ಉಭಯ ರಹಿತಾ-ಉದಾಸೀನಾಃ, ಜನ್ಮತ ಏವೋಃ ಭಯರಹಿತಾ-ಮಧ್ಯಸ್ಥಾಃ, ಜನ್ಮತ ಏವಾ ನಿಷ್ಟೇಚ್ಛವೋ-ದ್ವೇಷ್ಯಾಃ, ಜನ್ಮತ ಏವ ಹಿತೈಷಿಣೋ-ಬಂಧವಃ, ಸಾಧವೋ- ಧರ್ಮಶೀಲಾಃ, ಪಾಪಾಃ - ಪಾಪಶೀಲಾಃ, ಆತ್ಮೈಕಪ್ರಯೋಜನತಯಾ ಸುಹೃನ್ಮಿತ್ರಾದಿಭಿಃ ಪ್ರಯೋಜನಾಭಾವಾ ದ್ವಿರೋಧಾಭಾವಾಚ್ಚ, ತೇಷು ಸಮಬುದ್ಧಿ ರ್ಯೋಗಾಭ್ಯಾಸಾರ್ಹ ಶ್ರೇ ವಿಶಿಷ್ಯತೇ ॥೯॥

ಹಾಗೆ ಸಮಬುದ್ಧಿ ಇದ್ದವನಾದರೆ ಆತ್ಮಾವಲೋಕನ ಸಿದ್ಧಿಗೆ ಅರ್ಹನೆಂದು ಹೇಳತಕ್ಕದ್ದೇನಿದೆ ಎಂಬ ಭಾವವು.

ಭಾಷ್ಯಾರ್ಥವು :—ವಯೋ ವಿಶೇಷಾನಙ್ಗೀಕಾರೇಣ ಸ್ವ ಹಿತೈಷಿಣಃ - ವಯಸ್ಸಿನ ನಿಯಮವಿಲ್ಲದೆ ತನಗೆ ಹಿತವನ್ನು ಮಾಡುವವರು ಸುಹೃತ್ತುಗಳು, ಸವಯಸೋಃ ಹಿತೈಷಿಣೋ ಮಿತ್ರಾಣಿ - ಸಮಾನ ವಯಸ್ಕರಾಗಿ ಹಿತೈಷಿಗಳಾಗಿರುವವರು ಮಿತ್ರರು, ಮಿತ್ರಶಬ್ದವು ಸಮಾನವಯಸ್ಕರಲ್ಲಿ ಅನ್ವಯಿಸುವದರಿಂದ, ಸುಹೃಚ್ಛಬ್ದಾರ್ಥದಲ್ಲಿ, ವಯೋ ವಿಶೇಷಾನಙ್ಗೀಕಾರೇಣ ಎಂದು ಭಾಷ್ಯ ಬರೆದಿರುತ್ತಾರೆ, ಅರಯಃ ಎಂದರೆ ನಿಮಿತ್ತತೋಽನರ್ಥೇಚ್ಛವಃ - ಕಾರಣಾಂತರದಿಂದ ಅನರ್ಥವನ್ನು ಬಯಸುವವರು, ಉಪಕಾರ ಫಲಂ ಮೈತ್ರಮಪಕಾರೋರಿ ಲಕ್ಷಣಂ (ರಾ. ) ಎಂದು ವಾಲ್ಮೀಕಿ ಮಹರ್ಷಿಯು, ಮೈತ್ರಿಯು ಉಪಕಾರವನ್ನೇ ಫಲವಾಗಿ ಉಳ್ಳದೆಂದೂ, ಅಪಕಾರವು ಶತ್ರುಲಕ್ಷಣವೆಂದೂ, ಹೇಳಿರುತ್ತಾರೆ, ಉಭಯ ಹೇತ್ವಭಾವಾತ್ ಉಭಯರಹಿತಾ ಉದಾಸೀನಾಃ – ಹಿತಾಹಿತವನ್ನು ಬಯಿಸಲು ಕಾರಣವಿಲ್ಲವುದರಿಂದ ಹಿತೈಷಿಯೂ ಅಲ್ಲದೆ ಅನರ್ಥವನ್ನು ಬಯಿಸದೆ ಉದಾಸೀನಭಾವದಿಂದಿರುವವರು, ಮಧ್ಯಸ್ಥಾಃ- ಎಂದರೆ ಜನ್ಮತ ಏವ ಉಭಯ ರಹಿತಾಃ - ಜನ್ಮದಿಂದಲೇ ಹಿತಾಹಿತಗಳನ್ನು ಬಯಿಸದೇ ಇರುವವರು, ದೇಹಾನುಬಂಧಿಗಳಲ್ಲದ ಒಂದೇ ಪಂಗಡದವರು ಮಧ್ಯಸ್ಥರಾಗಬಹುದು, ದ್ವೇಷ್ಯಾಃ ಎಂದರೆ ಜನ್ಮತ ಏವಾ ನಿಷ್ಟೇಚ್ಛವಃ - ಜನ್ಮದಿಂದಲೇ ಅನಿಷ್ಟವನ್ನು ಬಯಿಸುವವರು, ಜನ್ಮತಃ ದ್ವೇಷ್ಯರು ಯಾರೆಂದರೆ ಭಿನ್ನ ಭಿನ್ನ ಪಂಗಡದಲ್ಲಿ ಹುಟ್ಟಿದವರೂ, ಭಿನ್ನ ಮತಸ್ಥರೂ, ಒಂದೇ ಪಂಗಡದಲ್ಲೇ ಜ್ಞಾತಿಗಳು ; ಭಿನ್ನ ಪಂಗಡದವರೂ ಭಿನ್ನ ಮತಸ್ಥರೂ ಮೈತ್ರಿಯಿಂದ ಇರಬೇಕಾದರೆ, ಜ್ಞಾನವಿಜ್ಞಾನಸಂಪತ್ತು ಬೇಕು; ಅದು ಇರುವದು ತುಂಬಾ ಅಪರೂಪವಾದುದರಿಂದ ಇವರುಗಳು ಜನ್ಮತಃ ಪರಸ್ಪರ ದ್ವೇಷಿಗಳು. ಬಂಧವಃ ಎಂದರೆ ಜನ್ಮತಏವ ಹಿತೈಷಿಣಃ - ಜನ್ಮದಿಂದಲೇ ಹಿತವನ್ನು ಬಯಿಸುವವರು, ಸಹೋದರರೂ, ತಂದೆತಾಯಿಗಳೂ ಮಕ್ಕಳೂ ಜನ್ಮತಃ ಬಂಧುಗಳು. ಸಾಧವಃ ಎಂದರೆ ಧರ್ಮಶೀಲಾಃ-ಶಾಸ್ತ್ರ ವಿಧಿ ನಿಷೇಧ ವಾಕ್ಯಗಳಿಗನುಸಾರವಾಗಿ ನಡೆಯುವ ಸ್ವಭಾವವುಳ್ಳವರು, ಪಾಪಾಃ ಎಂದರೆ ಪಾಪಶೀಲಾಃ - ಅದಕ್ಕೆ ವಿಪರೀತವಾಗಿ ಅಧರ್ಮಾನುಷ್ಠಾನದಿಂದ ಪಾಪ ಮಾಡುವದರಲ್ಲೇ ಇಷ್ಟವುಳ್ಳವರು ; ಆತ್ಮೈಕ ಪ್ರಯೋಜನತಯಾ - ಆತ್ಮಾನುಸಂಧಾನ ಒಂದನ್ನು ಮಾತ್ರವೇ ಈ ಕರ್ಮಯೋಗಿಯು ಪ್ರಯೋಜನವೆಂದು ಭಾವಿಸುವದರಿಂದ, ಸುಹೃನ್ಮಿತ್ರಾದಿಭಿಃ - ಈ ಮೇಲೆ ಹೇಳಿದ ಸುಹೃನ್ಮಿತ್ರ ಮೊದಲುಗೊಂಡು ಪಾಪೇಷು ಎಂದು ಮುಗಿಸಿರುವ ಸರ್ವರುಗಳಿಂದಲೂ, ಪ್ರಯೋಜನಾಭಾವಾದ್ವಿರೋಧಾ ಭಾವಾಚ್ಚ -ಪ್ರಯೋಜನವೂ ಇಲ್ಲವುದರಿಂದಲೂ ವಿರೋಧವೂ ಇಲ್ಲದುದರಿಂದಲೂ, ತೇಷು - ಅವರುಗಳಲ್ಲೆಲ್ಲಾ, ಸಮಬುದ್ಧಿಃ - ಇಷ್ಟಾನಿಷ್ಟಗಳಿಲ್ಲದ ಸಮಬುದ್ಧಿಯುಳ್ಳ

**ಮೂ. ಯೋಗೀ ಯುಂಜೀತ ಸತತ ಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀ ರಪರಿಗ್ರಹಃ ॥ ೧೦.**

ವನಾದವನು, **ಯೋಗಾಭ್ಯಾಸಾರ್ಥತ್ವೇ** - ಆತ್ಮಾವಲೋಕನದ ಅಭ್ಯಾಸಕ್ಕೆ ಯೋಗ್ಯಾಧಿಕಾರಿಯಾಗುವವರಲ್ಲಿ, ವಿಶಿಷ್ಯತೇ ಅತಿಶಯವನ್ನು ಹೊಂದಿದವನಾಗುತ್ತಾನೆ. ಅಚೇತನವಾದ ಕಾಂಚನ ಮಣ್ಣು ಹೆಂಟೆ, ಇವುಗಳನ್ನು ಸಮವಾಗಿ ನೋಡುವವನೇ ದುರ್ಲಭವು. ಹೀಗೆ ಶತ್ರು ಮಿತ್ರರಲ್ಲೂ, ಸಾಧು ಪಾಪಿಗಳಲ್ಲೂ, ಸಮ ಬುದ್ಧಿ ಇರುವವನೂ ಇನ್ನೂ ದುರ್ಲಭವು ಎಂದು ಹೇಳುವದಕ್ಕಾಗಿ ವಿಶಿಷ್ಯತೇ ಎಂದು ಪ್ರಯೋಗಿಸಿರುತ್ತಾರೆ. ಹೀಗೆ ಎರಡರಲ್ಲೂ ಸಮಬುದ್ಧಿಯುಳ್ಳ ಕರ್ಮಯೋಗಿಯು ಆಗ ಆತ್ಮಾವಲೋಕನದ ಅಭ್ಯಾಸಕ್ಕೆ ಅರ್ಹನೆಂದು, ಅಧಿಕಾರಿವಿಶೇಷಣವು ಹೇಳಲ್ಪಟ್ಟಿತು. ಮಿತ್ರಶತ್ರುಗಳಲ್ಲೂ, ದ್ವೇಷ್ಯಬಂಧುಗಳಲ್ಲೂ, ಸಾಧುಪಾಪಿಗಳಲ್ಲೂ, ಸಮವಾಗಿ ವರ್ತಿಸುವದು ತುಂಬಾ ಕಷ್ಟವು. ಆದರೆ ಈ ಶ್ಲೋಕದಲ್ಲಿ ಸಾಧುಗಳಲ್ಲಿ ಪ್ರಯೋಜನದ ಅಭಾವವಿರುವದರಿಂದಲೂ, ಪಾಪಿಷ್ಠರಿಂದ ಈತನಿಗೆ ವಿರೋಧವಿಲ್ಲದುದರಿಂದಲೂ ಸಮಬುದ್ಧಿ ಇರಬೇಕೆಂದು ಹೇಳಲ್ಪಟ್ಟಿತಲ್ಲಾ, ಕರ್ಮಯೋಗಿಗೆ ಸತ್ಸಙ್ಗಬೇಡವೇ ? ಜ್ಞಾನವೃದ್ಧಿಗೆ ಅಂತವರ ಸಙ್ಗವೂ, ಆದರಿಂದ ಪ್ರಯೋಜನವೂ ಆವಶ್ಯಕವಲ್ಲವೋ ಎಂದರೆ, ಇಲ್ಲಿ ಪ್ರಕೃತವಾದುದು, ತಾನು ಜ್ಞಾನವನ್ನು ಸಂಪಾದಿಸತಕ್ಕ ಗುರು ಮೊಲಾದವರುಗಳ ವಿಷಯವಲ್ಲವು, ಸಾಮಾನ್ಯರಾದ ಸಾಧುಗಳ ವಿಷಯವು, ಅದೂ ಅಲ್ಲದೆ ಈಗ ಹೇಳಲ್ಪಡುವದು, ಜ್ಞಾನವನ್ನು ಹೊಂದಿ ಕರ್ಮಯೋಗದ ಪರಾಕಾಷ್ಠಾದೆಶೆಯನ್ನು ಹೊಂದಿದ ಅಧಿಕಾರಿಯನ್ನು ಕುರಿತದ್ದಾದುದರಿಂದ ಆ ಚೋದ್ಯಕ್ಕೆ ಅವಕಾಶವಿಲ್ಲವು. ಇಂತಹ ನಿಷ್ಠೆಯುಂಟಾದರೆ ಆತನು ಆತ್ಮಸಾಕ್ಷಾತ್ಕಾರವನ್ನು ಹೊಂದಿ, ಭಕ್ತಿಯೋಗ ನಿಷ್ಠನಾಗಲು ಸಂದೇಹವಿಲ್ಲವೆಂಬ ಭಾವವು. ಈ ಶ್ಲೋಕದಲ್ಲಿ ವಿಶಿಷ್ಯತೇ ಎಂಬುದಕ್ಕೆ ಬದಲಾಗಿ, ವಿಮುಚ್ಯತೇ ಎಂಬ ಪಾಠಾಂತರವನ್ನು ಅಙ್ಗೀಕರಿಸಿರುತ್ತಾರೆ. ಈ ಶ್ಲೋಕೆ ಮತ್ತು ಹಿಂದಿನ ಶ್ಲೋಕಗಳೆರಡರಿಂದಲೂ, ಆತ್ಮೋಪಾಸನೆಗೆ ಯಾರು ಅಧಿಕಾರಿ ಎಂಬುದನ್ನು ಹೇಳಿ, ಆತ್ಮಚಿನ್ತನಕ್ರಮವು ಮುಂದಿನ ಶ್ಲೋಕಗಳಿಂದ ಹೇಳಲ್ಪಡುವದರಿಂದ, ಸಮಬುದ್ಧಿಯು, ಲೋಷ್ಟಾಶ್ಮ ಕಾಂಚನದಲ್ಲೂ ಹಾಗೆಯೇ ಮಿತ್ರ ಶತ್ರುಗಳು, ದ್ವೇಷ್ಯಬಂಧುಗಳು, ಸಾಧು ಪಾಪಿಗಳು ಇವರುಗಳಲ್ಲೂ ಸಹ, ಕರ್ಮಯೋಗಿಗೆ ಇದ್ದುದಾದರೆ, ಅವನೀಗ ಆತ್ಮಾವಲೋಕನದ ಅಭ್ಯಾಸಕ್ಕೆ ಅರ್ಹನೆಂದು ಹೇಳುವ ಪ್ರಕರಣವು. ಆದುದರಿಂದ ವಿಶಿಷ್ಯತೇ ಎಂಬ ಪಾಠವೇ ಸಾಧುವಾಗಿ ತೋರುತ್ತದೆ. ಹಿಂದಿನ ಮೂರು ಶ್ಲೋಕಗಳಿಂದಲೂ ಆತ್ಮಾವಿನ ಯಾಥಾತ್ಮ್ಯಜ್ಞಾನವು ಸ್ಥಿರವಾಗಿ ಉಂಟಾಗಿದೆ ಎಂಬುದಕ್ಕೆ ಲಕ್ಷಣಗಳು ಯಾವುವು ಎಂಬುದು ಹೇಳಲ್ಪಟ್ಟವು. ೭ನೆಯ ಶ್ಲೋಕದಲ್ಲಿ ಮನಸ್ಸಿನ ಜಯವೂ, ೮ನೆಯ ಶ್ಲೋಕದಲ್ಲಿ ಇಂದ್ರಿಯಜಯದಿಂದ ಲೋಷ್ಟಾಶ್ಮಕಾಂಚನದಲ್ಲಿ ಸಮತ್ವವೂ, ಐಹಿಕಗಳಾಶೆಯ ಜಯವೂ, ೯ನೆಯ ಶ್ಲೋಕದಲ್ಲಿ ಎಲ್ಲಾ ಜನರಲ್ಲೂ ಸಮಭಾವದಿಂದ ದ್ವೇಷಾಸೂಯೆಗಳ ಮತ್ತು ಮಮತೆಯ ಜಯವೂ ಹೇಳಲ್ಪಟ್ಟವು. ಈ ಕೊನೆಯ ಜಯವು ತುಂಬಾ ದುರ್ಲಭವಾದುದು ಎಂಬ ಭಾವವು.

**ಮೂಲಕ್ಕೆ ಅರ್ಥವು :**—ಕರ್ಮಯೋಗಿಗೆ ಲಕ್ಷಣಗಳನ್ನೆಲ್ಲಾ ಸವಿಸ್ತರವಾಗಿ ಹೇಳಿ, ಎಂತಹ ಅವಸ್ಥೆಯನ್ನು ಹೊಂದಿದರೆ ಯೋಗಾಭ್ಯಾಸಕ್ಕೆ ಅರ್ಹವಾದ ಪರಾಕಾಷ್ಠಾದೆಶೆಯನ್ನು ಹೊಂದುವನು ಎಂದು ತಿಳಿಸಿ, ಇನ್ನು ಮುಂದೆ ಈ ಅಧ್ಯಾಯದಲ್ಲಿ ಮುಖ್ಯವಾಗಿ ಉಪದೇಶಿಸಬೇಕಾಗಿರುವ ಆತ್ಮಚಿಂತನ ಕ್ರಮವನ್ನು ಈ ಮುಂದಿನ ಶ್ಲೋಕಗಳಿಂದ ಉಪದೇಶಿಸುತ್ತಾರೆ.— **ಯೋಗೀ** - ಇಂತಹ ಅಧಿಕಾರಿಯಾದ ಕರ್ಮಯೋಗನಿಷ್ಠನು, **ಸತತಂ** - ಪ್ರತಿದಿನವೂ ಕ್ಲಿಷ್ಟ

ಭಾ. ಯೋಗೀ - ಉಕ್ತ ಪ್ರಕಾರ ಕರ್ಮಯೋಗ ನಿಷ್ಠಃ, ಸತತಮ್ - ಅಹರಹರ್ಯೋಗ ಕಾಲೇ, ಆತ್ಮಾನಂ ಯುಂಜೀತ – ಆತ್ಮಾನಂ ಯುಕ್ತಂ ಕುರ್ವೀತ, ಸ್ವದರ್ಶನನಿಷ್ಠಂ ಕುರ್ವೀತೇತ್ಯರ್ಥಃ; ರಹಸಿ – ಜನವರ್ಜಿತೇ ನಿಶ್ಶಬ್ದೇ ದೇಶೇ, ಸ್ಥಿತಃ, ಏಕಾಕೀ

ಕಾಲಗಳಲ್ಲಿ ಹೀಗೆ ಯಾವಾಗಲೂ, ರಹಸಿ ಸ್ಥಿತಃ - ನಿಶ್ಶಬ್ದವಾಗಿರುವ ಸ್ಥಳದಲ್ಲಿ ಕುಳಿತವನಾಗಿ, ಏಕಾಕೀ-ಶಿಷ್ಯರು, ಸಹಾಧ್ಯಾಯಿಗಳು ಕೂಡ ಯಾರೂ ಇಲ್ಲದೆ ಒಬ್ಬಂಟಿಗನಾಗಿ, ಯತಚಿತ್ತಾತ್ಮಾ- ನಿಯಮಿಸಲ್ಪಟ್ಟ ಎಂದರೆ ನಿಗ್ರಹಿಸಲ್ಪಟ್ಟ ಬುದ್ಧಿ ಮನಸ್ಸುಗಳನ್ನುಳ್ಳವನಾಗಿ, ಚಿದಂಶದ ಧರ್ಮವು ಚಿತ್ತವು, ಆದುದರಿಂದ ಬುದ್ಧಿ ಎಂದು ಅರ್ಥಹೇಳಬಹುದು, ಚಿತ್ತಶಬ್ದಕ್ಕೆ ಅಮರನಿಘಂಟಿನ ಪ್ರಕಾರ ಮನಸ್ಸೆಂದೇ ಅರ್ಥಮಾಡಿದರೆ ಆಗ ಆತ್ಮಾ ಎಂಬ ಶಬ್ದಕ್ಕೆ ದೇಹವೆಂದು ಅರ್ಥಮಾಡ ಬೇಕಾಗುತ್ತದೆ. ಚಿತ್ತ ಶಬ್ದಕ್ಕೆ ಚೇತಯತೇ ಅನೇನ ಎಂಬ ವ್ಯುತ್ಪತ್ತಿಯ ಮೂಲಕ ಆತ್ಮನು ಈ ಬುದ್ಧಿಯ ಮೂಲಕ ತಿಳಿಯುವನಾದದರಿಂದ ಬುದ್ಧಿ ಎಂದು ಅರ್ಥಮಾಡಿ, ಆತ್ಮಾ ಎಂದರೆ ಮನಸ್ಸೆಂದು ಅರ್ಥಮಾಡುವುದು ಯುಕ್ತವಾಗಿ ತೋರುತ್ತದೆ. ಮನಸ್ಸನ್ನು ವಶಮಾಡಿಕೊಳ್ಳುವ ದಕ್ಕಿಂತ ಬುದ್ಧಿಯನ್ನು ವಶಮಾಡಿಕೊಳ್ಳುವದು ಇನ್ನೂ ಮೇಲಾದುದೆಂದು ಶ್ರುತಿಯು ಹೇಳುವದ ರಿಂದ, ಯತಚಿತ್ತಾತ್ಮಾ ನಿಯಮಿಸಲ್ಪಟ್ಟ ಎಂದರೆ ನಿಗ್ರಹಿಸಲ್ಪಟ್ಟ ಬುದ್ಧಿ ಮನಸ್ಸುಗಳನ್ನುಳ್ಳವ ನಾಗಿ ಎಂದರೆ ಅವುಗಳನ್ನ ವಶಮಾಡಿಕೊಂಡವನಾಗಿ, ನಿರಾಶೀಃ-ಆತ್ಮಸಾಕ್ಷಾತ್ಕಾರವಲ್ಲದೆ ಇನ್ನು ಯಾವುದರಲ್ಲೂ ಆಶಾರಹಿತನಾಗಿ, ಆದುದರಿಂದಲೇ, ಅಪರಿಗ್ರಹಃ - ಯಾವುದರಲ್ಲೂ ಆಶೆ ಇಲ್ಲ ದುದರಿಂದ ಯಾವುದನ್ನೂ ಸ್ವೀಕರಿಸದವನಾಗಿ ಎಂದರೆ ಯಾವುದರಲ್ಲೂ ಮಮತೆ ಇಲ್ಲದವನಾಗಿ, ಆತ್ಮಾನಂ ಯುಂಜೀತ - ತನ್ನ ಆತ್ಮ ಸ್ವರೂಪವನ್ನು ಕುರಿತು ಯೋಗದಲ್ಲಿರತಕ್ಕದ್ದು; ಏಕಾಗ್ರ ಚಿತ್ತತೆಯಿಂದ ಚಿನ್ತಿಸತಕ್ಕದ್ದೆಂಬ ಭಾವವು. ಆತ್ಮಾ ಎಂದರೆ ಮನಸ್ಸೆಂದು ಅರ್ಥಮಾಡಿದರೆ ಮನಸ್ಸನ್ನು ಆತ್ಮಸ್ವರೂಪದ ಧ್ಯಾನದಲ್ಲೇ ಸೇರಿಸತಕ್ಕದ್ದು ಎಂಬಭಿಪ್ರಾಯವಾಗುತ್ತದೆ. ॥೧೦॥

**ಭಾಷ್ಯಾರ್ಥವು:**—ಈ ಅಧ್ಯಾಯದಲ್ಲಿ ಮುಖ್ಯವಾಗಿ ಹೇಳಲ್ಪಡುವ ಕರ್ಮಯೋಗಿಯ ಆತ್ಮ ಚಿಂತನೆಯು ಈ ಶ್ಲೋಕನೊಡಲಾಗೊಂಡು ವಿಧಿಸಲ್ಪಡುತ್ತದೆ. ಯೋಗೀ ಎಂದರೆ ಉಕ್ತ ಪ್ರಕಾರ ಕರ್ಮಯೋಗನಿಷ್ಠಃ - ಹಿಂದೆ ಹೇಳಿದ ಲಕ್ಷಣಗಳನ್ನುಳ್ಳ ಕರ್ಮಯೋಗನಿಷ್ಠನು, ಹಿಂದೆ ಅನೇಕ ಕಡೆಗಳಲ್ಲಿ ಯೋಗೀ ಎಂಬ ಶಬ್ದವು ಕರ್ಮಯೋಗ ನಿಷ್ಠನನ್ನೇ ಬೋಧಿಸುವದರಿಂದ ಕರ್ಮಯೋಗನಿಷ್ಠನೆಂದೇ ಭಾಷ್ಯವು. ಆದುದರಿಂದ ಯೋಗೀ ಶಬ್ದವು ಸನ್ಯಾಸಿಯನ್ನು ಬೋಧಿಸು ತ್ತದೆಂಬ ಅಭಿಪ್ರಾಯಕ್ಕೆ ಕಾರಣವಿಲ್ಲವು, ಸತತಂ ಎಂದರೆ ಯಾವಾಗಲೂ ಎಂಬರ್ಥವಲ್ಲವು; ಪ್ರತಿದಿನವೂ ಕ್ಲಿಪ್ತವಾಗಿ ಮಾಡಬೇಕಾದುದರಿಂದ, ಅಹರಹರ್ಯೋಗಕಾಲೇ - ಪ್ರತಿದಿನದಲ್ಲೂ ಯೋಗಾಭ್ಯಾಸಕಾಲದಲ್ಲಿ, ಆತ್ಮಾನಂ ಯುಂಜೀತ ಎಂದರೆ ಆತ್ಮಾನಂ ಯುಕ್ತಂ ಕುರ್ವೀತ ತ- ಆತ್ಮವನ್ನು ಕುರಿತ ಸಮಾಧಿಯನ್ನು ಅನುಷ್ಠಿಸತಕ್ಕದ್ದು ಎಂದರೆ ತಾತ್ಪರ್ಯವನ್ನು ವ್ಯುತ್ಪತ್ತಿಗನುಗುಣವಾಗಿ ತಿಳಿಸುತ್ತಾರೆ, ಸ್ವದರ್ಶನ ನಿಷ್ಠಂ ಕುರ್ವೀತೇತ್ಯರ್ಥಃ - ತನ್ನ ಸಾಕ್ಷಾತ್ಕಾರನಿಷ್ಠನಾಗಿ ಮಾಡತಕ್ಕದ್ದು ಎಂಬ ತಾತ್ಪರ್ಯವು. ಸಾಕ್ಷಾತ್ಕಾರವು ಅಭ್ಯಾಸ ದಿಂದ ಉಂಟಾಗತಕ್ಕದ್ದು. ಮೊದಲು ಧ್ಯಾನಮಾಡುತ್ತಾ ಮಾಡುತ್ತಾ ಬಂದರೆ ಸಾಕ್ಷಾತ್ಕಾರವು ಅನಂತರ ಸಿದ್ಧಿಸುತ್ತದೆ. ಸಾಕ್ಷಾತ್ಕಾರವು ಲಭಿಸಿದನಂತರ ಮುಂದಕ್ಕೆ ಧ್ಯಾನಕಾಲಗಳಲ್ಲಿ ಸುಲಭನಾಗಿ ಸಾಕ್ಷಾತ್ಕಾರವು ಶೀಘ್ರನಾಗಿ ಉಂಟಾಗುತ್ತದೆ. ಇಲ್ಲಿ ಆತ್ಮಾನಂ ಎಂದರೆ ಮನ ಸ್ಸೆಂದರ್ಥಮಾಡಿದರೂ ಸರಿಹೋಗುತ್ತದೆ. ವಾಕ್ಯದಲ್ಲಿ ಕರ್ತೃ ಕರ್ಮ ಕ್ರಿಯಾಪದಗಳ ಅನ್ವಯ ವನ್ನು ಯೋಗೀ ಸತತಂ ಆತ್ಮಾನಂ ಯುಂಜೀತ ಎಂಬುದರಿಂದ ತೋರಿಸಿರುತ್ತಾರೆ; ಹೇಗೆ

ಭಾ. ತತ್ರಾಪಿ ನ ಸದ್ವಿತೀಯಃ, ಯತ ಚಿತ್ತಾತ್ಮಾ - ಯತಚಿತ್ತ ಮನಸ್ಕಃ, ನಿರಾಶೀಃ - ಆತ್ಮವ್ಯತಿರಿಕ್ತೇ ಕೃತ್ಸ್ನೇ ವಸ್ತುನಿ ನಿರಪೇಕ್ಷಃ, ಅಪರಿಗ್ರಹಃ-ತದ್ವ್ಯತಿರಿಕ್ತೇ ಕಸ್ಮಿಂಶ್ಚಿದಪಿ ಮಮತಾರಹಿತಃ ||೧೦||

---

ಧ್ಯಾನಿಸತಕ್ಕದ್ದೆಂದರೆ ಹೇಳಲ್ಪಡುತ್ತದೆ. ರಹಸಿ ಎಂದರೆ ಜನವರ್ಜಿತೇ ನಿಶ್ಶಬ್ದೇ ದೇಶೇ - ಜನಗಳು ಯಾರೂ ಇಲ್ಲದಿರುವವರಿಂದ ನಿಶ್ಶಬ್ದವಾದ ಸ್ಥಳದಲ್ಲಿ, ಜನಗಳು ಯಾರೂ ಈತನು ಧ್ಯಾನಿಸುವ ಸ್ಥಳದಲ್ಲಿ ಇಲ್ಲದೇ ಇರಬಹುದು; ಆದರೆ ಹೊರಗೆ ಗದ್ದಲವಾದರೆ ಆಗಲೂ ಧ್ಯಾನವು ಕೈಗೂಡುವದಿಲ್ಲವು; ಆದುದರಿಂದ ಹೊರಗೂ ಒಳಗೂ ನಿಶ್ಶಬ್ದವಾಗಿರಬೆ ಕೆಂಬುದು ರಹಸಿ ಎಂಬುದರ ಅರ್ಥವಾದುದರಿಂದ, ಜನವರ್ಜಿತೇ ನಿಶ್ಶಬ್ದೇ ಎಂಬೆರಡು ವಿಶೇಷಣಗಳನ್ನು ಕೊಟ್ಟಿರುತ್ತಾರೆ. ಸ್ಥಿತಃ - ಕೂತುಕೊಂಡವನಾಗಿ, ಏಕಾಕೀ - ಇತರರು ಇಲ್ಲದಿದ್ದರೂ ತನಗೆ ಬೇಕಾದವರು ಯಾರಾದರೂ ಇರಬಹುದೋ ಎಂದರೆ ಉಪಾಸನಕ್ಕೆ ಬೇಕಾದ ಏಕಾಂತ್ಯವು ಆವಶ್ಯಕವಾದುದರಿಂದ, ತತ್ರಾಪಿ ನ ಸದ್ವಿತೀಯಃ ಎಂದು ಅರ್ಥಮಾಡಿರುತ್ತಾರೆ. ಆ ನಿರ್ಜನ ಪ್ರದೇಶದಲ್ಲೂಕೂಡ ತನಗೆ ಬೇಕಾದ ಸಹಾಧ್ಯಾಯಿಗಳೇ ಆಗಲಿ, ಶಿಷ್ಯನೇಯಾಗಲಿ ಎರಡನೆಯವರು ಯಾರೂ ಇಲ್ಲದವನಾಗಿ, ಯತಚಿತ್ತಾತ್ಮಾ-ಧ್ಯಾನರೂಪವೃತ್ತಿಯಿಂದ ನಿಗ್ರಹಿಸಿದ ಮನಸ್ಸುಳ್ಳವನಾಗಿಯೂ ಮತ್ತು ಇನ್ನೂ ಯಾವುದನ್ನೂ ಸ್ಮರಿಸದಹಾಗೆ ನಿಗ್ರಹಿಸಿದ ಮನಸ್ಸುಳ್ಳವನಾಗಿಯೂ, ಇಲ್ಲಿ ಆತ್ಮಾ ಎಂದರೆ ಮನಸ್ಸು, ಚಿತ್ತನೆಂದರೆ ಸ್ಮರಿಸುವ ಅವಸ್ಥೆಯಲ್ಲಿರುವ ಮನಸ್ಸು; ನಿರಾಶೀಃ - ಎಂದರೆ, ಆತ್ಮವ್ಯತಿರಿಕ್ತೇ ಕೃತ್ಸ್ನೇ ವಸ್ತುನಿ ನಿರಪೇಕ್ಷಃ - ಆತ್ಮವ್ಯತಿರಿಕ್ತವಾದ ಸಮಸ್ತ ವಸ್ತುಗಳಲ್ಲೂ ಆಶೆಯಿಲ್ಲದವನಾಗಿ, ಅಪರಿಗ್ರಹಃ ಎಂದರೆ ತದ್ವ್ಯತಿರಿಕ್ತೇ ಕಸ್ಮಿಂಶ್ಚಿದಪಿ ಮಮತಾ ರಹಿತಃ - ಆ ಆತ್ಮವ್ಯತಿರಿಕ್ತವಾದ ಯಾವ ವಸ್ತುವಿನಲ್ಲೂ ಮಮತೆ ಇಲ್ಲದವನಾಗಿ, ಆತ್ಮಾನಂ ಯುಂಜೀತ ಎಂಬ ತಾತ್ಪರ್ಯವು. ಇಲ್ಲಿ ರಹಸಿ ಏಕಾಕೀ ಎಂಬ ಪದಗಳಿಂದ ಪೌನರುಕ್ತ್ಯ ಏನೂ ಇಲ್ಲವು; ರಹಸಿ ಎಂಬುದರಿಂದ ನಿಶ್ಶಬ್ದವಾಗಿರುವವರಲ್ಲೂ, ಏಕಾಕೀ ಎಂಬುದರಿಂದ ಮತ್ತೊಬ್ಬರು ಯಾರೂ ಇಲ್ಲದಿರುವದರಲ್ಲೂ ತಾತ್ಪರ್ಯವು. ಶಬ್ದವೂ ಇನ್ನೊಬ್ಬರ ಸಾನ್ನಿಧ್ಯವೂ ಎರಡೂ ಯೋಗಾಭ್ಯಾಸಕ್ಕೆ ಭಂಗಗಳು ಎಂಬ ತಾತ್ಪರ್ಯವು. ಈ ಎರಡು ಪದಗಳಿಂದಲೂ ಸನ್ಯಾಸಿಯು ಇಲ್ಲಿ ಹೇಳಲ್ಪಡಲಿಲ್ಲವೆಂಬುದು ವ್ಯಕ್ತಪಡುತ್ತದೆ. ಯೋಗಾಭ್ಯಾಸೇತರಕಾಲಗಳಲ್ಲಿ ಏಕಾಕಿ ಇಲ್ಲದೆಯೂ ರಹಸ್ಯದ ಆವಶ್ಯಕತೆಯು ಬೇಕಿಲ್ಲದೆಯೂ ಇರಬಹುದೆಂದು ತೋರಿಬರುವದರಿಂದ ಯೋಗೀ ಶಬ್ದದಿಂದ ಸನ್ಯಾಸಿಯು ಹೇಳಲ್ಪಡಲಿಲ್ಲವು. ಏಕೆಂದರೆ ಸನ್ಯಾಸಿಯು ಶಿಷ್ಯೋಪದೇಶ ವ್ಯತಿರಿಕ್ತ ಕಾಲಗಳಲ್ಲಿ ಏಕಾಕಿಯಾಗಿಯೂ ರಹಸ್ಯದಲ್ಲೂ ಯಾವಾಗಲೂ ಇರುತ್ತಾನೆ. ಈ ಶ್ಲೋಕದಲ್ಲಿ ಸತತಂ ಎಂದರೆ ಯಾವಾಗಲೂ ಎಂಬ ಅರ್ಥವಾಗಿರುವಾಗ, ಅಹರಹರ್ಯೋಗಕಾಲೇ ಎಂಬ ಭಾಷ್ಯವು ಹೇಗೆ ಸಮಂಜಸವೆಂದರೆ, ಯಾವಾಗಲೂ ಕರ್ಮಯೋಗಿಯು ಆತ್ಮಧ್ಯಾನ ನಿರತನಾಗಿರುವದು ಅಶಕ್ಯವಾದುದೂ ಅಲ್ಲದೆ, ಯೋಗಶಾಸ್ತ್ರದಲ್ಲಿ ಹಾಗೆ ವಿಧಿಸಿಯೂ ಇರುವದಿಲ್ಲವು. ಅದು, ಕ್ಲಿಪ್ತಕಾಲದಲ್ಲಿ ಸತ್ವಗುಣಾಭಿವೃದ್ಧಿಯುಂಟಾಗುವ ಪೂರ್ವಾಹ್ಣದಲ್ಲಿ ನಿಯಮಾನುಸಾರ ಪ್ರತಿದಿನವೂ ನಡೆಯತಕ್ಕದ್ದಾಗಿರುವದರಿಂದ ಹಾಗೆ ಭಾಷ್ಯವನ್ನು ಬರೆದಿರುತ್ತಾರೆ.

ಮೂಲಕ್ಕೆ ಅರ್ಥವು :—ಯಾವ ಬಾಹ್ಯೋಪಕರಣಗಳನ್ನು ಒದಗಿಸಿಕೊಂಡು ಯಾವ ರೀತಿಯಲ್ಲಿ ಆತ್ಮಚಿನ್ತನೆಯನ್ನು ಮಾಡತಕ್ಕದ್ದೆಂಬುದನ್ನು ಉಪದೇಶಿಸುತ್ತಾರೆ. ಪ್ರದೇಶವೆಂಥಾದ್ದಾಗಿರಬೇಕು, ಆಸನವೆಂಥಾದ್ದಾಗಿರಬೇಕು ಎಂಬಿವೇ ಮೊದಲಾದವು ಹೇಳಲ್ಪಡುತ್ತವೆ.

ಮೂ. ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರ ಮಾಸನ ಮಾತ್ಮನಃ ।
ನಾತ್ಯುಚ್ಛ್ರಿತಂ ನಾತಿ ನೀಚಂ ಚೇಲಾಜಿನ ಕುಶೋತ್ತರಮ್ ॥ ೧೧.
ತತ್ರೈಕಾಗ್ರ್ಯಂ ಮನಃಕೃತ್ವಾ ಯತ ಚಿತ್ತೇಂದ್ರಿಯ ಕ್ರಿಯಃ ।
ಉಪವಿಶ್ಯಾಸನೇ ಯುಂಜ್ಯಾ ದ್ಯೋಗ ಮಾತ್ಮವಿಶುದ್ಧಯೇ ॥ ೧೨.

ಭಾ. ಶುಚೌದೇಶೇ - ಅಶುಚಿಭಿಃ ಪುರುಷೈ ರನಧಿಷ್ಠಿತೇ ಅಪರಿಗೃಹೀತೇಽಚಾ ಶುಚಿಭಿ ರ್ವಸ್ತುಭಿ ರಸಂ ಸ್ಪೃಷ್ಟೇ ಚ ಪವಿತ್ರಭೂತೇ ದೇಶೇ, ದಾರ್ವಾದಿ ನಿರ್ಮಿತಂ ನಾತ್ಯುಚ್ಛ್ರಿ

ಆತ್ಮನಃ - ತನಗೆ, ಶುಚೌ ದೇಶೇ - ಪರಿಶುದ್ಧವಾದ ಪ್ರದೇಶದಲ್ಲಿ, ಸ್ಥಿರಂ . ದಾರು (ಮರ) ಮೊದಲಾದವುಗಳಿಂದ ಮಾಡಲ್ಪಟ್ಟು ಅಲ್ಲಾಡದೇ ಇರುವ, ನಾತ್ಯುಚ್ಛ್ರಿತಂ – ತುಂಬಾ ಎತ್ತರವಾಗಿಯೂ ಇಲ್ಲದೆ, ನಾತಿನೀಚಂ - ತುಂಬಾ ತಗ್ಗಾಗಿಯೂ ಇಲ್ಲದೆ, ಇದರಿಂದ ಭೂಮಿ ಗಿಂತ ಸ್ವಲ್ಪ ಎತ್ತರವಾಗಿಯೇ ಇರಬೇಕೆಂದು ಏರ್ಪಟ್ಟಿತು; ಇರುವೆ ಕ್ರಿಮಿ ಕೀಟಗಳ ತೊಂದರೆ ಇಲ್ಲದಹಾಗೆ ಆಸನವು ಸ್ವಲ್ಪ ಎತ್ತರವಾಗಿರಬೇಕೆಂದು ಹೇಳಿದಂತಾಯಿತು; ಚೇಲಾಜಿನಕುಶೋತ್ತರಮ್ - ಬಟ್ಟೇ ಕೃಷ್ಣಾಜಿನ, ದರ್ಭೆಗಳೇ ಪರಸ್ಪರೋತ್ತರಗಳಾಗಿರುವ ಎಂದರೆ ಮಣೆಯ ಮೇಲೆ ದರ್ಭೆಯಿಂದ ಮಾಡಿದ ಆಸನವೂ, ಅದರಮೇಲೆ ಕೃಷ್ಣಾಜಿನವೂ, ಅವರಮೇಲೆ ಬಟ್ಟೆಯೂ ಇರಬೇಕೆಂಬ ಭಾವವು, ದರ್ಭೆಯು ಸಂಸ್ಕಾರರೂಪದಲ್ಲಿ ಪವಿತ್ರತೆಗಾಗಿಯೂ ಅಜಿನವು ಶೈತ್ಯದ ಬಾಧೆ ಮತ್ತು ಪವಿತ್ರತೆಗಾಗಿಯೂ, ಬಟ್ಟೆಯು ಮೃದುವಾಗಿದ್ದು ಐಕಾಂತ್ಯಕ್ಕೆ ಭಂಗವಿಲ್ಲದಿರುವದಕ್ಕಾಗಿಯೂ ಆಸನವನ್ನು ಹೀಗೆ ರಚಿಸಿಕೊಳ್ಳತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ, ಇಂತಹ ಆಸನಂ ಪ್ರತಿಷ್ಠಾಪ್ಯ ಆಸನವನ್ನು ಮಂತ್ರಪೂರ್ವಕವಾಗಿ ಪವಿತ್ರೀಕರಿಸಿ ರಚಿಸಿಕೊಂಡು, ಹೀಗೆಲ್ಲಾ ಆಸನವು ಏತಕ್ಕೆಂದರೆ ಐಕಾಗ್ರ್ಯವು ಕೆಡದೇ ಇರುವದಕ್ಕಾಗಿ ಎಂದು ಮುಂದೆ ಹೇಳುತ್ತಾರೆ.—ಮನಃ - ಮನಸ್ಸನ್ನು, ಐಕಾಗ್ರ್ಯಂ ಕೃತ್ವಾ–ಏಕಾಗ್ರವುಳ್ಳದ್ದನ್ನಾಗಿ ಮಾಡಿಕೊಂಡು, ಯತ ಚಿತ್ತೇಂದ್ರಿಯ ಕ್ರಿಯಃ - ನಿಯಮಿಸಲ್ಪಟ್ಟ ಬುದ್ಧಿ ಇಂದ್ರಿಯಗಳ ವ್ಯಾಪಾರವುಳ್ಳವನಾಗಿ, ಇಲ್ಲಿಯೂ ಮನಸ್ಸನ್ನು ಐಕಾಗ್ರ್ಯಂ ಕೃತ್ವಾ ಎಂದು ಹೇಳಿ, ಅನಂತರ ಯತ ಚಿತ್ತೇಂದ್ರಿಯ ಕ್ರಿಯಃ ಎಂದು ಪುನಃ ಹೇಳಿದರೆ, ಚಿತ್ತ ಶಬ್ದಕ್ಕೆ ಮನಸ್ಸೆಂದು ಅರ್ಥಮಾಡಲು ಸಾಧ್ಯವಿಲ್ಲವು. ಮನಸ್ಸೂ ಇಂದ್ರಿಯಗಳೂ ಹೇಳಲ್ಪಟ್ಟನಂತರ, ಚಿತ್ತಶಬ್ದದಿಂದ, ಪರಿಶೇಷವಾದ ಬುದ್ಧಿಯೆಂದು ಅರ್ಥಮಾಡುವದು ಯುಕ್ತವು. ಪ್ರಯೋಗವನ್ನು ಔಪಚಾರಿಕವಾಗಿ ಭಾವಿಸಬೇಕಾಗುತ್ತದೆ. ತ್ರತ್ರಾಸನೇ - ಆ ಆಸನದಲ್ಲಿ, ಉಪವಿಶ್ಯ - ಕೂತುಕೊಂಡು, ಆತ್ಮ ವಿಶುದ್ಧಯೇ - ತನ್ನ ಆತ್ಮಾವಿನ ಪ್ರಕೃತಿ ಸಂಬಂಧದಿಂದುಂಟಾದ ಅಪವಿತ್ರತೆಯು ಹೋಗುವದಕ್ಕಾಗಿ ಪುನಃ ಸಂಸಾರಪ್ರಾಪ್ತಿಯಿಲ್ಲದಿರುವದಕ್ಕಾಗಿ, ಯೋಗಂ ಯುಂಜ್ಯಾತ್ - ಆತ್ಮಾವಲೋಕನ ಪ್ರಾಪ್ತಿಗಾಗಿ ಆತ್ಮಚಿಂತನರೂಪ ಅಭ್ಯಾಸವನ್ನು ಮಾಡತಕ್ಕದ್ದು. ಇಲ್ಲಿಯೂ ಕೂಡ ಮನಸ್ಸನ್ನು ಪೃಥಕ್ಕರಿಸಿ ಐಕಾಗ್ರ್ಯಂ ಕೃತ್ವಾ ಎಂದು ಹೇಳಿರುವವರಿಂದ, ಯತಚಿತ್ತೇನ್ದ್ರಿಯಕ್ರಿಯಃ ಎಂಬಲ್ಲಿ ಚಿತ್ತಶಬ್ದದಿಂದ ಮನಸ್ಸಿಗಿಂತಲೂ ವ್ಯತಿರಿಕ್ತವಾದ ಅರ್ಥವನ್ನು ಹೇಳಬೇಕಾಗಿರುವದರಿಂದ ಹಿಂದಿನ ಶ್ಲೋಕದಲ್ಲಿನಹಾಗೆ ಔಪಚಾರಿಕವಾಗಿ ಬುದ್ಧಿ ಎಂದು ಅರ್ಥ ಹೇಳುವದು ಉಚಿತವು.

ಭಾಷ್ಯಾರ್ಥವು :—ಶುಚೌ ದೇಶೇ ಎಂದರೆ ಪವಿತ್ರಭೂತೇ ದೇಶೇ - ಪವಿತ್ರವಾದ ಪ್ರದೇಶದಲ್ಲಿ, ಪವಿತ್ರವಾಗಿರಬೇಕೆಂದು ಹೇಳಿದುದರಿಂದ ಅಪವಿತ್ರತೆ ಕೂಡದೆಂದು ಹೇಳಿದಂತಾಯಿತು ಎಂಬ ಅಭಿಪ್ರಾಯದಿಂದ ವ್ಯಕ್ತಪಡಿಸುತ್ತಾರೆ, ಅಶುಚಿಭಿಃ ಪುರುಷೈ ರನಧಿಷ್ಠಿತೇ -

ಭಾ. ತಂ ನಾತಿನೀಚಂ ಚೇಲಾಜಿನಕುಶೋತ್ತರ ಮಾಸನಂ ಪ್ರತಿಷ್ಠಾಪ್ಯ ತಸ್ಮಿನ್ ಮನಃ ಪ್ರಸಾದಕರೇ ಸಾಪಾಶ್ರಯ ಉಪವಿಶ್ಯ ಯೋಗೈಕಾಗ್ರ್ಯಂ ಮನಃ ಕೃತ್ವಾ, ಯತಚಿತ್ತೇ

ಅಶುಚಿಗಳಾದ ಪುರುಷರುಗಳ ಸಂಸರ್ಗವಿಲ್ಲದೇ ಇರತಕ್ಕದ್ದು, ಪಾಷಂಡಿ ಪತಿತರು ಇಲ್ಲಿರಕೂಡದೆಂಬ ತಾತ್ಪರ್ಯವು, ಪಾಷಂಡಿಗಳು ಯಾರೆಂದರೆ, ಶ್ರೀ ಪರಾಶರರು ವಿಷ್ಣುಪುರಾಣದ ಆರನೆಯ ಅಂಶದಲ್ಲಿ ಹೇಳಿರುತ್ತಾರೆ, ಅಲ್ಲಿ ತಿಳಿಯಬಹುದು, ಮತ್ತು ಅಪರಿಗೃಹೀತೇ ಚ - ಮತ್ತು ಸ್ವಕೀಯವೆಂಬ ಅಭಿಮಾನವಿಲ್ಲದಿರುವ ಸ್ಥಳವಾಗಿರಬೇಕು, ಇಷ್ಟುಮಾತ್ರವೇ ಅಲ್ಲದೆ, ಸ್ಥಳವು ಶಾಸ್ತ್ರರೀತ್ಯಾ ಸಂಸ್ಕಾರವನ್ನೂ ಹೊಂದಿರಬೇಕೆಂಬ ಭಾವದಿಂದ ಪವಿತ್ರಭೂತೇ ದೇಶೇ ಎಂದು ಹೇಳಲ್ಪಟ್ಟಿತು. ಮತ್ತು ಅಶುಚಿಭಿ ರ್ವಸ್ತುಭಿಃ ಅಸಂಸ್ಪೃಷ್ಟೇ ಚ - ಅಶುಚಿಗಳಾದ ವಸ್ತುಗಳ ಸಂಬಂಧವಿಲ್ಲದೇ ಇರತಕ್ಕದ್ದಾಗಿರಬೇಕು; ಎಂಜಲು, ಮುಸುರೆ ಮೊದಲಾದ ಪದಾರ್ಥಗಳ ಮತ್ತು ಹೇಯ ವಸ್ತುಗಳ ಸಂಬಂಧವಿಲ್ಲದೆ ಪರಿಶುದ್ಧವಾದ ಸ್ಥಳವಾಗಿರಬೇಕು; ಆಸನವನ್ನು ಕಲ್ಪಿಸಿಕೊಳ್ಳಬೇಕು, ಅದು ಹೇಗೆ ಇರತಕ್ಕದ್ದೆಂದರೆ ಹೇಳುತ್ತಾರೆ, ದಾರ್ವಾದಿ ನಿರ್ಮಿತಂ - ಮರ ಮೊದಲಾದವುಗಳಿಂದ ಮಾಡಲ್ಪಟ್ಟದ್ದಾಗಿರಬೇಕು, ಅದು ಮೂಲದಲ್ಲಿ ಎಲ್ಲಿ ಹೇಳಿದೆ ಎಂದರೆ ಸ್ಥಿರಂ ಎಂಬುದರ ವಿವರಣವು; ನಾತ್ಯುಚ್ಛ್ರಿತಂ ನಾತಿ ನೀಚಂ - ಸೌಕರ್ಯಾರ್ಥವಾಗಿ ತುಂಬಾ ಎತ್ತರವೂ ಅಲ್ಲದೆ ತುಂಬಾ ತಗ್ಗಾಗಿಯೂ ಅಲ್ಲದೆ, ಚೇಲಾಜಿನ ಕುಶೋತ್ತರಂ - ಬಟ್ಟೆ, ಕೃಷ್ಣಾಜಿನ, ದರ್ಭಾಸನವೇ ಉತ್ತರೋತ್ತರವೆಂದರೆ ಮೇಲೆಮೇಲೆ ಯಾಗಿಯುಳ್ಳ, ಆಸನಂ ಪ್ರತಿಷ್ಠಾಪ್ಯ ಆಸನವನ್ನು ನಿರ್ಮಿಸಿಕೊಂಡು, ಪ್ರತಿಷ್ಠಾಪ್ಯ ಎಂಬುದರಿಂದ ಶಾಸ್ತ್ರೋಕ್ತ ಮಂತ್ರಮೂಲಕ ಸಂಸ್ಕರಿಸಲ್ಪಟ್ಟದ್ದೆಂಬ ಭಾವವೂ ತೋರಿಬರುತ್ತದೆ, ಸ್ಥಿರವಾದ ಆಸನವೆಂದು ಹೇಳಿದುದರಿಂದ ಮೆತ್ತೆ ಚಾಪೆ ಮೊದಲಾದವುಗಳು ಕೂಡದೆಂಬುದು ತೋರಿಬರುತ್ತದೆ; ಅದಕ್ಕಾಗಿಯೇ ದಾರ್ವಾದಿ ನಿರ್ಮಿತಂ ಎಂದು ವ್ಯಾಖ್ಯಾನಮಾಡಿದರು. ದಾರ್ವಾದಿ ನಿರ್ಮಿತ ಆಸನದಿಂದ ನೆಲದ ಶೈತ್ಯ ಮೊದಲಾದವು ಕೂಡದೆಂದೂ, ಶೈತ್ಯಾದಿಗಳಿಂದ ಏಕಾಂತ್ಯ ಭಂಗವುಂಟಾಗಬಹುದೆಂಬ ಭಾವವೂ ತೋರಿಬರುತ್ತದೆ; ನಾತ್ಯುಚ್ಛ್ರಿತಂ ಎಂದು ಹೇಳಿದುದು ಸೌಕರ್ಯಕ್ಕಾಗಿ ಎಂದು ಭಾವಿಸತಕ್ಕದ್ದು; ಇದರಿಂದ ಕುರ್ಚಿ ಬೆಂಚುಗಳಲ್ಲಿ ಕೂತು ಯೋಗಾಭ್ಯಾಸವು ಕೂಡದೆಂದು ತೋರಿ ಬರುತ್ತದೆ. ನಾತಿ ನೀಚವೆಂದು ಏಕೆ ಹೇಳಲ್ಪಟ್ಟಿತೆಂದರೆ, ಅತಿ ನೀಚವಾದರೆ ಕ್ರಿಮಿ, ಕೀಟ, ಇರುವೆಗಳ ತೊಂದರೆಯುಂಟಾಗಿ ಏಕಾಂತ್ಯಕ್ಕೆ ಹಾನಿ ಬಂದೀತೆಂಬ ಭಯದಿಂದ ಹಾಗೆ ನಿರ್ದೇಶಿಸಲ್ಪಟ್ಟಿತು. ದಾರ್ವಾದಿ ಆಸನದ ಕಾಠಿಣ್ಯ ನಿವೃತ್ತಿಗಾಗಿ ಚೇಲಾಜಿನ ಕುಶೋತ್ತರಂ ಎಂದು ಹೇಳಲ್ಪಟ್ಟಿತು. ಚೇಲಾಜಿನ ಕುಶೋತ್ತರಂ ಎಂಬುದಕ್ಕೆ ಕೆಲವರಿಗೆ ಭಿನ್ನಕ್ರಮದಲ್ಲಿ ತಾತ್ಪರ್ಯವು; ಅಂತವರು ಕುಶಾಜಿನ ಚೇಲೋತ್ತರಂ ಎಂಬ ಪಾಠವನ್ನು ಪರಿಗ್ರಹಿಸಿರುತ್ತಾರೆ. ಮಣೆಯಮೇಲೆ ಬಟ್ಟೆಯೂ, ಅದರಮೇಲೆ ಅಜಿನವೂ, ಅದರಮೇಲೆ ಕುಶವೂ ಇರತಕ್ಕದ್ದೆಂದು ಹೇಳುವರು; ಕುಶದಮೇಲೆ ಕೂತುಕೊಂಡರೆ ಐಕಾಗ್ರ್ಯಕ್ಕೆ ಹಾನಿ ಯುಂಟಾಗಬಹುದು, ಏಕೆಂದರೆ ದರ್ಭೆಯು ಚುಚ್ಚುತ್ತದೆಯಾದುದರಿಂದ; ಮನಸ್ಸಿಗೆಏನೊಂದೂ ತಾನು ಕೂತುಕೊಂಡಿರುವ ಆಸನದ ಮೂಲಕವಾಗಿ ಕ್ಲೇಶವು ಕೂಡದೆಂಬ ಭಾವದಿಂದಲೇ ಮನಃ ಪ್ರಸಾದಕರೇ ಎಂಬ ಪ್ರಯೋಗವು. ತಸ್ಮಿನ್ ಮನಃ ಪ್ರಸಾದಕರೇ ಸಾಪಾಶ್ರಯ ಉಪವಿಶ್ಯ - ಮನಸ್ಸಿನ ಪ್ರಸನ್ನತೆಗೆ ಅನುಕೂಲವಾಗಿ ಒರಗಿಕೊಳ್ಳುವದಕ್ಕೆ ಹಿಂದೆ ಗೋಡೆಯೋ, ಮಣೆಯೋ ಇರುವ ಅಂತಹ ಆಸನದಲ್ಲಿ ಕೂತುಕೊಂಡು, ಯೋಗವನ್ನು ಅಭ್ಯಸಿಸತಕ್ಕದ್ದೆಂಬ ಭಾವವು; ಬೆನ್ನಿಗೆ ಹಾಗೆ ಆಶ್ರಯ ಯಾವುದೂ ಇಲ್ಲದೆ ಮಧ್ಯೆ ಕೂತು ಸಮಾಧಿ

ಭಾ. ನ್ದ್ರಿಯ ಕ್ರಿಯಃ - ಸರ್ವಾತ್ಮನೋಪಸಂಹೃತ ಚಿತ್ತೇಂದ್ರಿಯಕ್ರಿಯಃ, ಆತ್ಮವಿಶುದ್ಧಯೇ - ಬನ್ಧನಿವೃತ್ತಯೇ ಯೋಗಂಯುಂಜ್ಯಾತ್ - ಆತ್ಮಾವಲೋಕನಂ ಕುರ್ವೀತ ॥ ೧೧, ೧೨ ॥

---

ಯಲ್ಲಿದ್ದರೆ, ಅದಕ್ಕೆ ವಿರೋಧ ಉಂಟಾದೀತೆಂಬ ಭಾವವು. ಇದರಿಂದ ಮಲಗಿಕೊಂಡಾಗಲಿ ನಡೆಯುತ್ತಾಗಲಿ ಯೋಗವು ಕೂಡದೆಂದು ಹೇಳಲ್ಪಟ್ಟಿತು. ಏಕೆಂದರೆ ನಡೆಯುತ್ತಿದ್ದರೆ ಆಯಾಸವೂ, ಮಲಗಿಕೊಂಡಾದರೆ ನಿದ್ರೆಯೂ, ಪ್ರಾಪ್ತವಾಗಬಹುದು. ಆದುದರಿಂದ ಬ್ರಹ್ಮಸೂತ್ರವಾದ "ಆಸೀನಸ್ಸಂಭವಾತ್" (೪. ೧ ೭) ಎಂಬಲ್ಲಿ ಕೂತುಕೊಂಡೇ ಉಪಾಸನವನ್ನು ಮಾಡತಕ್ಕದ್ದೆಂದು ಹೇಳಿರುತ್ತದೆ; ಏಕೆಂದರೆ ಅಂತವನಿಗೇನೇ ಏಕಾಗ್ರ್ಯವು ಉಂಟಾಗುತ್ತದೆಂದು ಹೇತುವು ಹೇಳಲ್ಪಟ್ಟಿರುತ್ತದೆ. ಮೇಲೆ ಹೇಳಿದಹಾಗೆ ಆಸನವನ್ನು ನಿರ್ಮಿಸಿಕೊಂಡು ಯೋಗಕ್ಕೆ ಕುಳಿತರೆ ಮನಸ್ಸು ಪ್ರಸಾದಕರವಾಗಿರುತ್ತದೆಂಬಭಿಪ್ರಾಯದಿಂದ ಮನಃ ಪ್ರಸಾದಕಲೇ ಎಂಬ ಪ್ರಯೋಗವು; ಯೋಗೈಕಾಗ್ರ್ಯಂ ಮನಃಕೃತ್ವಾ - ಯೋಗದಲ್ಲೇ ಐಕಾಗ್ರತೆಯಿರುವಹಾಗೆ ಮನಸ್ಸನ್ನು ಮಾಡಿ, ಎಂದರೆ ಮನಸ್ಸಿಗೆ ಬೇರೆ ಪ್ರವೃತ್ತಿಯಿಲ್ಲದಹಾಗೆ ನಿರೋಧಿಸಿ, ಯೋಗ ಒಂದರಲ್ಲೇ ಇರುವಹಾಗೆ ಮಾಡಿಕೊಂಡು ಯೋಗಾಧಿಕಾರಿಗೆ ಮನಸ್ಸನ್ನು ಧ್ಯೇಯವಸ್ತುವಿನಲ್ಲಿಡುವದೇ ಮುಖ್ಯವಾದುದರಿಂದ ಏಕಾಗ್ರ್ಯಂ ಮನಃಕೃತ್ವಾ ಎಂಬ ಪ್ರಯೋಗವು. ಮೂಲದಲ್ಲಿ "ತತ್ರ ಏಕಾಗ್ರ್ಯಂ ಮನಃಕೃತ್ವಾ" ಎಂದಿರುವದಕ್ಕೆ, ಆ ಆಸನದಲ್ಲೇ ಮನಸ್ಸನ್ನಿಟ್ಟು ಎಂಬ ಅಪಾರ್ಥವನ್ನು ತಪ್ಪಿಸುವದಕ್ಕಾಗಿ ತತ್ರ ಎಂದರೆ ತಸ್ಮಿನ್ ಆಸನೇ ಉಪವಿಶ್ಯ ಎಂದರ್ಥವಮಾಡಿ, ಐಕಾಗ್ರ್ಯವು ಏತರಲ್ಲಿ ಎಂದರೆ ಯೋಗೈಕಾಗ್ರ್ಯಂ ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ. ಯತಚಿತ್ತೇನ್ದ್ರಿಯ ಕ್ರಿಯಃ ಎಂದರೆ ಸರ್ವಾತ್ಮನೋಪಸಂಹೃತ ಚಿತ್ತೇನ್ದ್ರಿಯ ಕ್ರಿಯಃ - ದೇಹದಲ್ಲಿ ಮನಸ್ಸಿನ ಚಿಧಿಪತ್ಯವೇ ವಿಶೇಷವಾದುದರಿಂದ ಸರ್ವವಿಧದಲ್ಲೂ ನಿಲ್ಲಿಸಲ್ಪಟ್ಟ ಚಿತ್ತ, ಇಂದ್ರಿಯ ಇವುಗಳ ವ್ಯಾಪಾರವುಳ್ಳವನಾಗಿ, ಆತ್ಮವಿಶುದ್ಧಯೇ ಎಂದರೆ ಬಂಧ ನಿವೃತ್ತಯೇ - ಈಗ ಆತ್ಮಾ ಅಶುದ್ಧನಾಗಿರುವದು ಆತನಿಗೆ ಒದಗಿರುವ ದೇಹ ಸಂಬಂಧರೂಪ ಬಂಧಮೂಲಕವಾಗಿ, ಅದು ನಿವೃತ್ತಿಸಿದರೆ ಈತನು ಪರಿಶುದ್ಧನಾಗಿ ಪುರುಷಾ ಎಂದೆನಿಸುವನು; ಆದುದರಿಂದ ಆತ್ಮ ವಿಶುದ್ಧಯೇ ಎಂದರೆ ಬಂಧ ನಿವೃತ್ತಯೇ ಎಂದು ವ್ಯಾಖ್ಯಾನಮಾಡಿರುತ್ತಾರೆ. ಇಲ್ಲಿ ಆತ್ಮ ವಿಶುದ್ಧಯೇ ಎಂದರೆ ಮನಸ್ಸಿನ ಶುದ್ಧಿಗಾಗಿ ಎಂಬರ್ಥವಲ್ಲವು, ಏಕೆಂದರೆ ಮನಸ್ಸು ಸ್ವಲ್ಪವು ಟ್ಟಿಗೆ ಶುದ್ಧವಾಗಿರುವದರಿಂದಲೇ ಈ ಆತ್ಮಧ್ಯಾನಮಾಡಬೇಕೆಂಬ ಸಙ್ಕಲ್ಪವು; ಹಾಗೆ ಶುದ್ಧ ವಲ್ಲದೇ ಇದ್ದರೆ ಈ ಆತ್ಮಾವಲೋಕನಮಾಡಬೇಕೆಂಬ ಆಸೆಯೇ ಹುಟ್ಟುವದಿಲ್ಲವು; ಆದುದರಿಂ ದಲೇ ಆತ್ಮವಿಶುದ್ಧಯೇ ಎಂಬುದಕ್ಕೆ ಬಂಧ ನಿವೃತ್ತಯೇ ಎಂಬ ವ್ಯಾಖ್ಯಾನವು. ಯೋಗಂ ಯುಂಜ್ಯಾತ್ - ಯೋಗವನ್ನು ಮಾಡತಕ್ಕದ್ದು ಎಂದರೆ ಆತ್ಮಾವಲೋಕನಂ ಕುರ್ವೀತ - ಆತ್ಮಾ ವಲೋಕನವನ್ನು ಮಾಡತಕ್ಕದ್ದು. ಯೋಗಂ ಯುಂಜೀತ ಎಂಬುದು, ಪಾಕಂ ಪಚತಿ ಎಂಬ ಪ್ರಯೋಗದಹಾಗಾದುದರಿಂದ ಕುರ್ವೀತ ಎಂಬರ್ಥವು, ಯೋಗ ವೆಂದರೆ ಮನಸ್ಸನ್ನು ನಿರಂತರವಾಗಿ ಧ್ಯೇಯವಸ್ತುವಿನಲ್ಲಿಡುವಿಕೆಯು, ಇದಕ್ಕೆ ಸಮಾಧಿ ಎಂದೂ ಹೆಸರು. ಯೋಗಂ ಯುಂಜೀತ ಎಂಬುದರಿಂದ ಆತ್ಮನನ್ನು ಯಥಾವತ್ತಾಗಿ ನೋಡುವದು ಕಷ್ಟವು; ಆರಂಭ ದೆಶೆ ಯಲ್ಲಿ ಹೀಗೆ ಒಂದುಸಲ ಕಾಣುವದಕ್ಕೆ ಆತ್ಮಾವಲೋಕನವೆಂಬ ಹೆಸರು. ಅದರಲ್ಲೇ ಅಭ್ಯಾಸ ಉಂಟಾಗಿ ಸುಲಭವಾಗಿ ಕಾಣುವದನ್ನು ಆತ್ಮಸಾಕ್ಷಾತ್ಕಾರವೆನ್ನುವರು. ದೇಹವಿರುವತನಕ ಆತ್ಮಾ ಅಪರಿಶುದ್ಧನೆಂಬುದಕ್ಕೆ ಶ್ರೀ ದೇಶಿಕರವರು ಶ್ರೀ ಪರಾಶರ ವಾಕ್ಯವನ್ನು ಉದಾಹರಿಸಿರುತ್ತಾರೆ.—

ಅನ್ಯೇತು ಪುರುಷ ವ್ಯಾಘ್ರ, ಚೇತಸೋ ಯೇ ವ್ಯಪಾಶ್ರಯಾಃ ।
ಅಶುದ್ಧಾಸ್ತೇ ಸಮಸ್ತಾಸ್ತು ದೇವಾದ್ಯಾಃ ಕರ್ಮಯೋನಯಃ ॥

(ವಿ. ಪು. ೬. ೭. ೭೬) ಸರ್ವೇಶ್ವರನ ದಿವ್ಯಮಂಗಳ ವಿಗ್ರಹಕ್ಕೆ ಎಂದರೆ ಶರೀರಕ್ಕೆ ಶುಭಾಶ್ರಯತ್ವವುಂಟು. ಶುಭವೆಂದರೆ ಅದನ್ನು ವೀಕ್ಷಿಸುವದರಿಂದ ಪಾವನತ್ವವೂ ಆಶ್ರಯವೆಂದರೆ ಧ್ಯೇಯಾರ್ಹತೆಯೂ ಇವೆರಡೂ ಇರೋಣವು; ಇದು ಸರ್ವೇಶ್ವರನ ಪರ ವ್ಯೂಹ ಅವತಾರ ಹಾರ್ದ ಅರ್ಚಾವತಾರರೂಪಗಳಿಗೆ ಉಂಟು. ಈ ಶುಭಾಶ್ರಯವಾದ ಧ್ಯೇಯ ವಸ್ತುವಿನ ಉಪಾಸನದಿಂದಲೇ ಮೋಕ್ಷವೆಂಬುದು "ಅಪ್ರತೀಕಾಲಂಬನಾನ್ನಯತಿ" (ಶಾ. ಸೂ. ೪.೩.೧೪) ಎಂಬಲ್ಲಿ ಉಪಪಾದಿತವು. ಇವುಗಳಿಗಿಂತ ಬೇರೆಯಾದ ಬದ್ಧಮುಕ್ತರಾದ ಜೀವಾತ್ಮರೂಪಗಳಿಗಾದರೋ ಶುಭಾಶ್ರಯತ್ವವಿಲ್ಲವು. ಅವರು ಅಶುಭಾಶ್ರಯರು; ಆದುದರಿಂದ ಮುಕ್ತಿಗಾಗಿ ಧ್ಯೇಯರಲ್ಲವೆಂದು ಕೇಶಿಧ್ವಜರು ಖಾಂಡಿಕ್ಯರಿಗೆ ಉಪದೇಶಿಸಿರುತ್ತಾರೆ, ಹೇ ಪುರುಷವ್ಯಾಘ್ರ - ಓ ಖಾಂಡಿಕ್ಯನೇ, ಚೇತಸೋ ಯೇ ವ್ಯಪಾಶ್ರಯಾ-ಮನಸ್ಸಿಗೆ ಯಾರು ಶುಭಾಶ್ರಯರಲ್ಲವೋ, ತೇ ದೇವಾದ್ಯಾಃ ಕರ್ಮಯೋನಯಃ-ಅವರು ಬ್ರಹ್ಮರುದ್ರೇಂದ್ರಾದಿದೇವಾದಿಗಳು,ಕರ್ಮ ಮೂಲವಾಗಿ ಬಂದ ರೂಪವುಳ್ಳವರು, ಅಶುದ್ಧಾಃ - ಅಪರಿಶುದ್ಧರು, ಕರ್ಮಕೃತ ದೇಹವುಳ್ಳವರಾದುದರಿಂದ ಅಶುದ್ಧರು. ಬಂಧರೂಪವಾದ ದೇಹವು ಹೋಗಿ ಮುಕ್ತದೆಶೆಯನ್ನು ಹೊಂದಿದ್ದರೆ ಆಗ ಶುದ್ಧರಾಗುವರು. ಆದರೆ ಆಗಲೂ ಅವರುಗಳು ಧ್ಯೇಯವಸ್ತುವಲ್ಲದುದರಿಂದ ಅಶುಭಾಶ್ರಯರೇ; ಹಾಗಾದರೆ ಇಲ್ಲಿ ಒಂದು ಪೂರ್ವಪಕ್ಷವುಂಟಾಗಬಹುದು ಏನೆಂದರೆ ಕರ್ಮಯೋಗಿಗೆ ತನ್ನ ಆತ್ಮವೇ ಹೇಗೆ ಧ್ಯೇಯವಸ್ತುವಾದೀತು? ಅಶುಭಾಶ್ರಯವಾದುದಕ್ಕೆ ಆತ್ಮಾವಲೋಕನರೂಪ ಸಮಾಧಿಯು ಹೇಗೆ ವಿಹಿತವು? ಎಂದರೆ ಇಲ್ಲಿ ಯೋಗ ಶಬ್ದಕ್ಕೆ ಉಪಾಸನವೆಂಬರ್ಥವಲ್ಲವು, ಆತ್ಮಚಿಂತನವೆಂಬರ್ಥವು. ಕರ್ಮಯೋಗಿಯು ಪ್ರಕೃತಿ ವಿಯುಕ್ತವಾಗಿರುವ ಶುದ್ಧ ಜೀವಸ್ವರೂಪವನ್ನು ಧ್ಯಾನಿಸತಕ್ಕದ್ದೆಂದು ಎಂದರೆ ಚಿಂತಿಸತಕ್ಕದ್ದೆಂದು ಹೇಳಿರತ್ತದೆ. ಆದುದರಿಂದ ಯೋಗಂಯುಂಜ್ಯಾತ್ ಎಂಬುದರಿಂದ ಇತರರು ಅಭಿಪ್ರಾಯಪಡುವಹಾಗೆ ಪರಬ್ರಹ್ಮಸ್ವರೂಪವು ಇಲ್ಲಿ ಧ್ಯೇಯವಾಗಿ ವಿಧಿಸಲಿಲ್ಲವು ಭಕ್ತಿಯೋಗದಲ್ಲಾದರೋ ಶುಭಾಶ್ರಯವೇ ಧ್ಯೇಯವೇ ವಿನಾ ಅಶುಭಾಶ್ರಯವು ಧ್ಯೇಯವಲ್ಲವೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಇಲ್ಲಿ ಯೋಗವೆಂದರೆ ಪರಮಾತ್ಮಸಾಕ್ಷಾತ್ಕಾರಕ್ಕಾಗಿ ಉಪಾಸನವಲ್ಲವು, ಆತ್ಮಯಾಥಾತ್ಮ್ಯ ಸ್ವರೂಪ ಚಿಂತನವು, ಶ್ರೀ ಯತಿವರ್ಯರು ಹಿಂದಿನೆಯ ಶ್ಲೋಕದಲ್ಲೇ **ಯೋಗಂ** ಎಂದರೆ **ಆತ್ಮಾವಲೋಕನಂ** ಎಂದೆ ಭಾಷ್ಯವನ್ನು ಬರೆದಿರುತ್ತಾರೆ; ಅದಕ್ಕನುಸಾರವಾಗಿಯೇ ಇಲ್ಲಿಯೂ **ಯೋಗಂ ಯುಂಜ್ಯಾತ್** ಎಂದರೆ **ಆತ್ಮಾವಲೋಕನಂ ಕುರ್ವೀತ** ಎಂಬ ವ್ಯಾಖ್ಯಾನವು. ಇಲ್ಲಿ ಆಸನ ಮೊದಲಾದವುಗಳೂ, ಐಕಾಗ್ರ್ಯವೂ ಎಲ್ಲವೂ ಹೇಳಿದ್ದರೂ ಪರಮಾತ್ಮೋಪಾಸನೆಯು ಪ್ರಕರಣವಲ್ಲವು; ಎಲ್ಲಾವಿಧ ಚಿಂತನೆಗೂ ಐಕಾಗ್ರ್ಯವು ಅವಶ್ಯಕವು; ಈ ಐಕಾಗ್ರ್ಯವು, ಪರಮಾತ್ಮೋಪಾಸನೆಯು ಅವಶ್ಯಕವಿಲ್ಲದ ಪ್ರಪತ್ತಿನಿಷ್ಠರನಿಗೂ ಬೇಕೆಂದು ಶ್ರೀ ದೇಶಿಕ ವರ್ಯರು "ಯತ್ರೈಕಾಗ್ರ್ಯಂ ಭವತಿ ಭಗವತ್ಪಾದ ಸೇವಾರ್ಚನಾದೇಃ" ಎಂಬ ಶ್ಲೋಕದಲ್ಲಿ ಹೇಳಿರುತ್ತಾರೆ. ಕೃತಕೃತ್ಯನಾದ ಪ್ರಪನ್ನನು ಎಲ್ಲಿ ವಸಿಸಬೇಕೆಂದರೆ ಹೇಳುತ್ತಾರೆ—ಭಗವಂತನ ಪಾದಸೇವೆ ಅರ್ಚನೆ ಮೂಲಮಂತ್ರಾದಿ ಮಂತ್ರಗಳ ಜಪ ಮೊದಲಾದವುಗಳಿಗೆ ಎಲ್ಲಿ ಐಕಾಗ್ರ್ಯವುಂಟಾಗುತ್ತದೋ ಅಂತಹ ಸ್ಥಳದಲ್ಲಿ ಈ ಕೃತಕೃತ್ಯನು ವಸಿಸಬೇಕು ಎಂದು ಹೇಳಿದರೆ ಉಪಾಸನೆಯನ್ನು ಮಾಡಬೇಕೆಂಬ ಅರ್ಥವು ಹೇಗೆ ಬೋಧಿತವಲ್ಲವೋ, ಹಾಗೆಯೇ ಇಲ್ಲಿಯೂ ಎಂದು ಭಾವಿಸತಕ್ಕದ್ದು. ಇಲ್ಲಿ ಯೋಗಶಬ್ದದಿಂದ ಪರಮಾತ್ಮೋಪಾಸನೆಯು ಹೇಳಲ್ಪಡಲಿಲ್ಲವು; ಏಕೆಂದರೆ ಈ ಆತ್ಮ ಚಿಂತನಕ್ಕಿಂತ ಉತ್ಕೃಷ್ಟವಾಗಿರುವ

**ಮೂ. ಸಮಂ ಕಾಯ ಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥** ೧೩.

ಇನ್ನೊಂದು ಯೋಗವು ಪರಮಾತ್ಮೋಪಾಸನೆಯುಂಟು ಎಂದು ಮುಂದೆ ಕೊನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. ಹಾಗಾದರೆ ಇದೇನು ಜೀವಾತ್ಮೋಪಾಸನವೇ ಈ ಯೋಗಶಬ್ದದಿಂದ ಹೇಳಿರುವದು; ಎಂದರೆ, ಪುನರಾವೃತ್ತಿರೂಪವಾದ ಪ್ರತೀಕಾಲಂಬನವನ್ನು ಎಂದಿಗೂ ಇಲ್ಲಿ ಉಪದೇಶಿಸಲ್ಪಡಲು ಕಾರಣವಿಲ್ಲವು; ಆದುದರಿಂದ ಇಲ್ಲಿ ಯೋಗ ಶಬ್ದದಿಂದ ಹೇಳಿದುದು ಏನೆಂದರೆ— ಆತ್ಮಯಾಥಾತ್ಮ್ಯಾನುಸಂಧಾನರೂಪ ಆತ್ಮಧ್ಯಾನವು. ಇಂತಹ ಧ್ಯಾನಕ್ಕೂ ಐಕಾಗ್ರ್ಯವು ಆವಶ್ಯಕವು; ಆ ಐಕಾಗ್ರ್ಯಪ್ರಾಪ್ತಿಗಾಗಿ ಆತ್ಮ ಚಿಂತನಕಾಲದಲ್ಲಿ ಬೇಕಾದ ಪರಿಕರಗಳು ಯಾವುವೆಂದರೆ ಶುಚಿಯಾದ ಸ್ಥಳ, ಇತರರ ಬಾಧೆಯಿಲ್ಲದೆ ಇರೋಣವು, ಸರಿಯಾದ ಏಕಾಂತ್ಯಕ್ಕೆ ಭಂಗ ಬಾರದಂತಹ ಆಸನವು, ಇವೆಲ್ಲವೂ ಹೇಳಲ್ಪಟ್ಟವೆಂಬ ಭಾವವು. ಆದರೆ ಜ್ಞಾನಯೋಗದಲ್ಲಿ ಈ ಪ್ರತೀಕಾಲಂಬನರೂಪ ಆತ್ಮೋಪಾಸನೆಯು ಹೇಳಲ್ಪಟ್ಟಿಲ್ಲವೋ? ಎಂದರೆ ಹೌದು, ಆದರೆ ಆತನು ಅಲ್ಲಿಗೇನೇ ನಿಂತುಬಿಡದೆ ಮುಂದೆ ಪರಮಾತ್ಮೋಪಾಸನೆಯನ್ನೂ ಮಾಡುವದರಿಂದ ಆ ಪ್ರತೀಕಾಲಂಬನರೂಪ ಉಪಾಸನೆಯು ಜ್ಞಾನಯೋಗನಿಷ್ಠನಿಗೆ ಬಂಧಕವಲ್ಲವು ಅಥವಾ ತನ್ನ ಆತ್ಮವು ಪರಮಾತ್ಮನಿಗೆ ಶರೀರವೆಂದು ಆತ್ಮಪ್ರಾಪ್ತಿಗಾಗಿ ಪರಮಾತ್ಮೋಪಾಸನೆಯನ್ನಾಗಲಿ ತನ್ನ ಆತ್ಮೋಪಾಸನೆಯನ್ನಾಗಲಿ ಮಾಡಿದರೆ, ಆಗ ಅದೂ ಅಪ್ರತೀಕಾಲಂಬನವೇ ಆಗುವದರಿಂದ ಆತ್ಮಪ್ರಾಪ್ತಿಯುಂಟಾಗುವ ಕೈವಲ್ಯದ ಮೂಲಕ ಮೋಕ್ಷಪ್ರಾಪ್ತಿಯು ಎಂಬುವನ್ನೂ ಗ್ರಹಿಸಬಹುದು. ಬ್ರಹ್ಮಸೂತ್ರ (೪.೩.೧೪) "ಅಪ್ರತೀಕಾಲಂಬನಾನ್ನಯತಿ" ಎಂಬುದರ ಭಾಷ್ಯವನ್ನು ಪರಾಂಬರಿಸಿ. "ತದ್ಯ ಇತ್ಥಂ ವಿದುಃ" ಎಂಬ ಶ್ರುತಿಯೂ ಅನುಸಂಧೇಯವು. (ಛಾಂ. ೫-೧೦ ೧)

**ಮೂಲಕ್ಕೆ ಅರ್ಥವು:**—ಹಿಂದಿನ ಶ್ಲೋಕಗಳಲ್ಲಿ ಈ ಆತ್ಮಾವಲೋಕನರೂಪವಾದ ಅಭ್ಯಾಸಕ್ಕೆ ಬೇಕಾದ ಆಸನಾದಿ ಸಾಮಗ್ರಿಗಳನ್ನು ಒದಗಿಸಿಕೊಳ್ಳುವ ಪ್ರಕಾರವೂ, ಮನಸ್ಸಿನ ಐಕಾಗ್ರ್ಯವೂ, ಇಂದ್ರಿಯಾದಿಗಳ ನಿಯಮನವೂ, ಆವಶ್ಯಕವೆಂದು ಹೇಳಲ್ಪಟ್ಟಿತು. ಈ ಮುಂದಿನ ಎರಡು ಶ್ಲೋಕಗಳಿಂದಲೂ ಧ್ಯಾನಕ್ರಮವು ಉಪದೇಶಿಸಲ್ಪಡುತ್ತದೆ. ಆತ್ಮಾವಲೋಕನವು ಕೈಗೂಡುವದಕ್ಕೆ ಏಕಾಂತ್ಯವು ಆವಶ್ಯಕವಾದುದರಿಂದ ಆ ಏಕಾಂತ್ಯವು ಸಿದ್ಧಿಸುವದಕ್ಕಾಗಿ ದೇಹವನ್ನು ಹೇಗೆ ಇಟ್ಟುಕೊಳ್ಳತಕ್ಕದ್ದೆಂದು ಹೇಳಿ, ಇಂದ್ರಿಯಗಳಲ್ಲಿ ಕಣ್ಣು ಮುಖ್ಯವಾಗಿ ಮನಶ್ಚಾಂಚಲ್ಯಕ್ಕೆ ಕಾರಣವಾದುದರಿಂದ, ಅದನ್ನು ಇತರ ವಸ್ತುಗಳಲ್ಲಿ ಪ್ರವರ್ತಿಸದಹಾಗೆ ಇಟ್ಟುಕೊಳ್ಳಬೇಕೆಂದೂ, ಮನಸ್ಸು ಭೋಗಾದಿಗಳಲ್ಲಿ ಪ್ರವರ್ತಿಸದಹಾಗೆ ಜಾಗರೂಕನಾಗಿರಬೇಕೆಂದೂ, ಆತ್ಮಾವಲೋಕನವು ನಿರ್ವಿಘ್ನವಾಗಿ ಸಿದ್ಧಿಸುವದಕ್ಕಾಗಿ ತನ್ನನ್ನು ಧ್ಯಾನಿಸತಕ್ಕದ್ದೆಂದು ಶ್ರೀಕೃಷ್ಣಭಗವಾನರವರು ಉಪದೇಶಿಸುತ್ತಾರೆ. **ಕಾಯ ಶಿರೋಗ್ರೀವಂ** - ಇಲ್ಲಿ ಶಿರಸ್ಸು ಗ್ರೀವವು ಬೇರೆ ಬೇರೆಯಾಗಿ ಹೇಳಿರುವದರಿಂದ ಕಾಯಶಬ್ದಕ್ಕೆ ಮುಂಡವೆಂಬರ್ಥವನ್ನು ಹೇಳತಕ್ಕದ್ದು, ಹೀಗೆ ಮುಂಡ, ತಲೆ, ಕುತ್ತಿಗೆ ಇವುಗಳು, ಪದ್ಮಾಸನಕ್ಕೆ ಮೇಲಿರುವ ಭಾಗವು. ಇವುಗಳನ್ನು **ಸಮಂ** – ನೆಟ್ಟಗೆ ಇಟ್ಟುಕೊಂಡು, ಮುಂದಕ್ಕೂ ಬಗ್ಗದೆ, ಹಿಂದಕ್ಕೆ ತುಂಬಾ ಒರಗಿಕೊಂಡೂ ಕೂತುಕೊಳ್ಳದೇ ಇರಬೇಕೆಂದು ಹೇಳಲ್ಪಟ್ಟಿತು, ಮುಂದಕ್ಕೆ ಬಗ್ಗಿದ್ದರೆ ಶೀಘ್ರಾಯಾಸವೂ, ಹಿಂದಕ್ಕೆ ಬಗ್ಗಿದ್ದರೆ ನಿದ್ರೆಯೂ ಉಂಟಾಗಬಹುದು; ಹಾಗೆ ನೆಟ್ಟಗೆ ಇಟ್ಟಿರುವದರಿಂದ, **ಅಚಲಂ** . ಅಲ್ಲಾಡದೇ ಇರುವಹಾಗೂ, **ಸ್ಥಿರಂ** - ಸ್ಥಿರವಾಗಿ ಇರುವದಕ್ಕಾಗಿ ಸ್ವಲ್ಪ ಸಾಪಾಶ್ರಯವಾಗಿರುವಹಾಗೆ ಮಾಡಿಕೊಂಡು ಆ ಒರಗು

ಮೂ. ಪ್ರಶಾನ್ತಾತ್ಮಾ ವಿಗತಭೀಃ ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪.

ಭಾ. ಕಾಯಶಿರೋಗ್ರೀವಂ ಸಮಂ, ಅಚಲಂ, ಸಾಪಾಶ್ರಯತಯಾ ಸ್ಥಿರಂ ಧಾರಯನ್ ದಿಶಶ್ಚಾನವಲೋಕಯನ್, ಸ್ವನಾಸಿಕಾಗ್ರಂ ಸಂಪ್ರೇಕ್ಷ್ಯ, ಪ್ರಶಾಂತಾತ್ಮಾ-ಅತ್ಯಂತ

ಪೂರಾ ಒರಗಿಕೊಂಡಿರುವವಕ್ಕಾಗಿ ಅಲ್ಲವು, ಸಮತ್ವ ಅಚಲತ್ವಾದಿಗಳು ಕೆಡವಷ್ಟು ಮಾತ್ರಕ್ಕೆಂದು ಭಾವಿಸತಕ್ಕದ್ದು, ಹೀಗೆ, ಧಾರಯನ್ - ಆ ಕಾಯಶಿರೋಗ್ರೀವ ಸಮು ದಾಯವನ್ನು ನಿಲ್ಲಿಸಿದವನಾಗಿ, ಸ್ವಂ - ತನ್ನ, ನಾಸಿಕಾಗ್ರಂ - ಭ್ರೂಮಧ್ಯದ ನಾಸಿಕದ ಮೇಲಿನ ತುದಿಯನ್ನು, ಸಂಪ್ರೇಕ್ಷ್ಯ - ನೋಡಿಕೊಂಡು, ಇದು ಏತಕ್ಕೆಂದರೆ ದಿಶಶ್ಚಾನವ ಲೋಕಯನ್-ನಾಲ್ಕು ದಿಕ್ಕುಗಳ ಕಡೆಗೂ ತಿರುಗಿ ನೋಡದೆ, ನಾಲ್ಕು ದಿಕ್ಕುಗಳ ಕಡೆಗೂ ನೋಡಿ ದರೇನಾಗುತ್ತದೆ ಎಂದರೆ ಐಕಾಂತ್ಯಕ್ಕೆ ಹಾನಿ ಉಂಟಾಗುತ್ತದೆ ಎಂಬ ಭಾವನೆಯಿಂದ ಹಾಗೆ ಹೇಳಲ್ಪಟ್ಟಿತು. ಆದರೆ ರಹಸಿ, ಏಕಾಕೀ ಯಾಗಿ ಯೋಗವನ್ನಾಚರಿಸತಕ್ಕದ್ದೆಂದು ಹಿಂದೆ ಹೇಳಿ ರುವಾಗ ನಾಲ್ಕು ದಿಕ್ಕುಗಳನ್ನೂ ನೋಡಿದರೇನಾಗುತ್ತದೆ ಎಂದರೆ, ಅಲ್ಲಿರುವ ಅಚೇತನ ಪದಾರ್ಥ ಗಳ ಮೇಲೆ ದೃಷ್ಟಿಯು ಬಿದ್ದರೂ ಬೇರೇ ಸ್ಮೃತಿಯುಂಟಾಗಿ, ಧ್ಯಾನಕ್ಕೆ ವಿಚ್ಛೇದ ಉಂಟಾ ದೀತು, ಹೀಗೆ ಬಾಹ್ಯೇಂದ್ರಿಯ ನಿರೋಧವನ್ನು ಹೇಳಿ, ಮುಂದೆ ಅಂತರಿಂದ್ರಿಯ ನಿರೋಧದ ಆವ ಶ್ಯಕತೆಯನ್ನು ಹೇಳುತ್ತಾರೆ; ಪ್ರಶಾಂತಾತ್ಮಾ - ಯಾವುದರಲ್ಲೂ ಸಂಗವೂ, ಆಶೆಯೂ ಇಲ್ಲದಿರು ವದರಿಂದ ತುಂಬಾ ಉಪಶಾಂತತೆಯನ್ನು ಹೊಂದಿದ ಮನಸ್ಸುಳ್ಳವನಾಗಿ, ಬ್ರಹ್ಮಚಾರಿ ವ್ರತೇ ಸ್ಥಿತಃ - ಬ್ರಹ್ಮಚಾರಿಯ ವ್ರತದಲ್ಲಿರುವವನಾಗಿ, ಕರ್ಮಯೋಗಿಗೆ ವಿಷಯಲಂಪಟತ್ವ ಕೂಡ ದೆಂಬ ಭಾವವು, ಪತ್ನಿಯು ಮನೆಯಲ್ಲೇ ಇರುವಾಗ, ಬ್ರಹ್ಮಚಾರಿವ್ರತ ಸಾಧ್ಯವೋ ಎಂದರೆ, ಆದಕ್ಕಾಗಿ ಮನಸ್ಸಂಯಮ್ಯ - ಮನಸ್ಸನ್ನು ನಿಗ್ರಹಿಸಿ, ವಿಗತಭೀಃ - ಯೋಗಾಭ್ಯಾಸವು ನೆರ ವೇರುತ್ತದೋ ಇಲ್ಲವೋ ಎಂಬ ಭಯಶೂನ್ಯನಾಗಿ, ಅದು ಹೇಗೆ ಎಂದರೆ, ಮಚ್ಚಿತ್ತಃ ಮತ್ಪರಃ ನಿರ್ವಿಘ್ನ ಪರಿಸಮಾಪ್ತಿಗಾಗಿ ನನ್ನನ್ನು ಧ್ಯಾನಿಸಿದವನಾಗಿಯೂ, ನಾನಲ್ಲದೆ ಇನ್ನು ಯಾರೂ ನಿನಗೆ ಸಹಾಯಕರಾಗಲಾರರೆಂದು ನನ್ನಲ್ಲಿ ಸ್ಥಿರನಂಬಿಕೆಯುಳ್ಳವನಾಗಿಯೂ, ಯುಕ್ತ ಆಸೀತ - ಆತ್ಮಚಿನ್ತನೆಯಲ್ಲಿ ಇರುವವನಾಗು, ಎಂದರೆ ಆತ್ಮಚಿನ್ತನ ಕಾಲದಲ್ಲಿ ಹೀಗೆ ಜಾಗರೂಕನಾ ಗಿರು ಎಂಬರ್ಥವು. ಈ ಶ್ಲೋಕಗಳಿಂದ ಯೋಗಕ್ಕೆ ಬೇಕಾದ ಯಮನಿಯಮಗಳು ಹೇಳಲ್ಪಟ್ಟವು. ||೧೩, ೧೪||

ಭಾಷ್ಯಾರ್ಥವು:—ಕಾಯಶಿರೋ ಗ್ರೀವಂ - ದ್ವಂದ್ವ ಸಮಾಸವು, ಮುಂಡ, ಶಿರಸ್ಸು, ಕುತ್ತಿಗೆ ಮೂರನ್ನೂ, ಸಮಂ-ನೆಟ್ಟಗೂ, ಅಚಲಂ - ಅಲ್ಲಾಡಸದೆಯೂ, ಸಾಪಾಶ್ರಯತಯಾ ಸ್ಥಿರಂ - ಹಿಂದೆ ಸ್ವಲ್ಪ ಆಶ್ರಯವಿರುವಹಾಗೆ ಆಸನವಿರುವದರಿಂದ, ದೃಢವಾಗಿರುವ, ಈ ಸಮಂ, ಅಚಲಂ, ಸ್ಥಿರಂ ಎಂಬೀ ಮೂರೂ ಧಾರಯನ್ ಎಂಬುವಕ್ಕೆ ಕ್ರಿಯಾವಿಶೇಷಣಗಳು, ಧಾರಯನ್ - ಧರಿಸಿರುವವನಾಗಿ ಎಂದರೆ ಇಟ್ಟುಕೊಂಡವನಾಗಿ ಬಹಳ ಹೊತ್ತು ಅಲ್ಲಾಡದೆ ಆತ್ಮಚಿನ್ತನದಲ್ಲಿ ಕೂತುಕೊಂಡಿರಬೇಕಾಗಿರುವದರಿಂದ ಸ್ಥಿರಶಬ್ದ ಪ್ರಯೋಗವು, ದಿಶಶ್ಚಾ ನವಲೋಕಯನ್ - ದಿಕ್ಕುಗಳನ್ನು ನೋಡದವನಾಗಿ, ಅದಕ್ಕಾಗಿ ಸ್ವನಾಸಿಕಾಗ್ರಂ ಸಂಪ್ರೇಕ್ಷ್ಯ - ತನ್ನ ಮೂಗಿನ ಅಗ್ರಭಾವವನ್ನು ನೋಡುವವನಾಗಿ, ಕಣ್ಣು ಸುಮ್ಮನಿರುವದಿಲ್ಲವು, ಯಾವುದಾದರೂ ಒಂದನ್ನು ನೋಡುತ್ತಿರುವುದು ಅದರ ಧರ್ಮವು, ಅದಕ್ಕಾಗಿ ಹುಬ್ಬುಗಳ

ಭಾ. ನಿರ್ವೃತಮನಾಃ, ವಿಗತಭೀಃ, ಬ್ರಹ್ಮಚರ್ಯಯುಕ್ತಃ, ಮನಸ್ಸಂಯಮ್ಯ, ಮಚ್ಚಿತ್ತೋ ಯುಕ್ತಃ-ಅವಹಿತೋ, ಮತ್ಪರ ಆಸೀತ-ಮಾಮೇವ ಚಿಂತಯನ್ನಾಸೀತ ||೧೩, ೧೪||

ಮಧ್ಯದ ನಾಸಿಕಾಗ್ರವನ್ನು ನೋಡುತ್ತಿರಬೇಕೆಂದು ಹೇಳಿದರು. ಏನನ್ನೂ ನೋಡದೆ ಸುಮ್ಮನೆ ಕಣ್ಣನ್ನು ಮುಚ್ಚಿಕೊಂಡಿರಬಹುದಲ್ಲಾ ಎಂದರೆ ಕಣ್ಣುಮುಚ್ಚಿ ಕೊಳ್ಳುವುದು ನಿದ್ರೆಗೆ ಕಾರಣವಾಗುವದರಿಂದ ಅದು ಸರಿಯಾದುದಲ್ಲವೆಂಬ ತಾತ್ಪರ್ಯವು. ಮೂಲದಲ್ಲಿರುವ ಕ್ರಮಕ್ಕೆ ವ್ಯತ್ಯಸ್ತವಾಗಿ ದಿಶಶ್ಚಾನವಲೋಕಯನ್ ಎಂಬುದನ್ನು ಮೊದಲೂ, ಅನಂತರ ಸ್ವನಾಸಿಕಾಗ್ರಂ ಸಂಪ್ರೇಕ್ಷ್ಯ ಎಂದು ಅನಂತರವೂ, ಹೇಳಿರುವದರಭಿಪ್ರಾಯವು ದಿಕ್ಕುಗಳನ್ನು ನೋಡುವದು ಸರಿಯಲ್ಲವಾದುದರಿಂದ ಅದನ್ನು ತಪ್ಪಿಸುವದಕ್ಕಾಗಿ ಸ್ವನಾಸಿಕಾಗ್ರಂ ಸಂಪ್ರೇಕ್ಷ್ಯವು ವಿಧಿಸಿರುತ್ತದೆ ಎಂಬುದು; ಅಲ್ಲಿ ಇಲ್ಲಿ ನೋಡುವದು ಯೋಗೈಕಾಂತ್ಯಕ್ಕೆ ಬಾಧಕವಾದುದರಿಂದ ಬಾಹ್ಯವಸ್ತುಗಳನ್ನು ನೋಡದಿರಲಿ ಎಂಬುದಕ್ಕಾಗಿ ಸ್ವನಾಸಾಗ್ರದಲ್ಲಿ ದೃಷ್ಟಿಯನ್ನಿಡಬೇಕೆಂದು ಹೇಳಲ್ಪಟ್ಟಿತು. ಆದುದರಿಂದಲೇ ಶ್ರೀಮಚ್ಛಂಕರಾಚಾರ್ಯರು, ನಾಸಿಕಾಗ್ರಂ ಸಂಪ್ರೇಕ್ಷ್ಯ ಎಂಬಲ್ಲಿ ಇವ ಶಬ್ದವು ಲುಪ್ತವಾಗಿರುವನಾಗೆ ಭಾವಿಸಬಹುದೆಂದು ಭಾಷ್ಯ ಬರೆದಿರುತ್ತಾರೆ. ಇಲ್ಲಿ ನಾಸಿಕಾಗ್ರವೆಂಬುದರಿಂದ, ಮೂಗಿನ ಮೇಲಿನ ಸೂಕ್ಷ್ಮ ಭಾಗವು ಹೇಳಲ್ಪಟ್ಟಿತು; ಮೂಗಿನ ಕೆಳಗಿನ ಅಗ್ರವೆಂದು ಅರ್ಥಮಾಡಿದರೆ "ಭ್ರುವೋರನ್ತರೇ" (ಗೀ. ೫.೨೭) ಎಂಬುದಕ್ಕೆ ಮುಖ್ಯಾರ್ಥವನ್ನು ಪರಿತ್ಯಾಗಮಾಡಬೇಕಾಗುತ್ತದೆ. ಪ್ರಶಾಂತಾತ್ಮಾ ಎಂದರೆ ಅತ್ಯಂತ ನಿರ್ವೃತಮನಾಃ - ತುಂಬಾ ಸುಖಿತವಾದ ಮನಸ್ಸುಳ್ಳವನಾಗಿ, ವಿಗತಭೀಃ-ಯೋಗಕ್ಕೆ ವಿಘ್ನಗಳ ಭಯವೇನೂ ಇಲ್ಲದವನಾಗಿ ಬ್ರಹ್ಮಚಾರಿವ್ರತೇ ಸ್ಥಿತಃ - ಬ್ರಹ್ಮಚಾರಿಯ ವ್ರತದಲ್ಲಿರುವವನಾಗಿ, ಇಲ್ಲಿ ಭಿಕ್ಷಾಟನಾದಿಗಳು ಹೇಳಲ್ಪಡಲಿಲ್ಲವು, ಬ್ರಹ್ಮಚಾರಿಯ ವ್ರತದಲ್ಲಿರಬೇಕು ಎಂದರೆ ಈ ಕರ್ಮಯೋಗಿಯು ಯಥಾವತ್ತಾದ ಬ್ರಹ್ಮಚಾರಿಯಲ್ಲನೆಂಬುದು ವ್ಯಕ್ತವು. ಈ ಯೋಗಿಯು ಸನ್ಯಾಸಿಯೇಯಾಗಿರಬೇಕೆಂದು ಕೆಲವರು ಹೇಳುವನಾಗೆ ಅಂತಹ ನಿಯಮವೂ ಇಲ್ಲನೆಂಬುದೂ ತೋರಿಬರುತ್ತದೆ. ಸನ್ಯಾಸಿಯಾಗಿದ್ದಪಕ್ಷದಲ್ಲಿ ಬ್ರಹ್ಮಚಾರಿಯುವ್ರತದಲ್ಲಿರಬೇಕೆಂಬ ಉಪದೇಶವು ನಿರರ್ಥಕವು; ಸನ್ಯಾಸಿಯ ವ್ರತವು ಬ್ರಹ್ಮಚಾರಿಯುವ್ರತಕ್ಕಿಂತ ಅತಿಶಯವಾದುದೇ; ಆದುದರಿಂದ ಇದಕ್ಕೆ ಭಾಷ್ಯವಾಗಿ ಬ್ರಹ್ಮಚರ್ಯಯುಕ್ತಃ ಎಂದು ಮಾಡಿರುತ್ತಾರೆ, ಬ್ರಹ್ಮಚಾರಿಯೇ ಅಲ್ಲನು, ಆತನ ಅನುಷ್ಠಾನಯುಕ್ತನು ಎಂಬ ಭಾವವು. ಬ್ರಹ್ಮಚರ್ಯವೆಂದರೇನೆಂಬುವ ಸಂದರ್ಭದಲ್ಲಿ, "ಬ್ರಹ್ಮಚರ್ಯಂ ಚ ಯೋಷಿತ್ಸು ಭೋಗ್ಯತಾ ಬುದ್ಧಿವರ್ಜನಂ" ಎಂಬ ಪ್ರಮಾಣವು ಅನುಸಂಧೇಯವು, ಮತ್ತು ಆಗ್ನೇಯ ಪುರಾಣದಲ್ಲಿ (೩೭೨ ೧೦, ೧೧), "ಸ್ಮರಣಂ ಕೀರ್ತನಂ ಕೇಳಿಃ ಪ್ರೇಕ್ಷಣಂ ಗುಹ್ಯಭಾಷಣಂ। ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತ್ತಿರೇವ ಚ। ಏತನ್ಮೈಥುನ ಮಷ್ಟಾಂಗಂ ಪ್ರವದಂತಿ ಮನೀಷಿಣಃ। ವಿಪರೀತಂ ಬ್ರಹ್ಮಚರ್ಯ ಮೇತದೇವಾಷ್ಟಲಕ್ಷಣಂ" ಮೈಥುನವು ಅಷ್ಟಾಂಗಯುಕ್ತವಾದುದೆಂದೂ ಇವೆಲ್ಲಾ ಇಲ್ಲದುದೇ ಬ್ರಹ್ಮಚರ್ಯವೆಂದೂ ಹೇಳಲ್ಪಟ್ಟಿರುತ್ತದೆ. ಹಾಗೆಯೇ ವಿಷ್ಣುಪುರಾಣದ ವಿಷ್ಣುಚಿತ್ತೀಯವ್ಯಾಖ್ಯಾನದಲ್ಲೂ "ಬ್ರಹ್ಮಚರ್ಯಂ ಮೈಥುನತ್ಯಾಗಃ" ಎಂದು ಹೇಳಲ್ಪಟ್ಟಿರುತ್ತದೆ. (ವಿ. ಪು. ೬. ೭. ೩೬) ಮನಸ್ಸಂಯಮ್ಯ - ಮನಸ್ಸನ್ನು ನಿರೋಧಿಸಿ ಬಿಗಿಹಿಡಿದವನಾಗಿ, ಮಚ್ಚಿತ್ತಃ - ನನ್ನನ್ನೇ ಸ್ಮರಿಸುವವನಾಗಿ, ಯುಕ್ತಃ - ಎಂದರೆ ಅವಹಿತಃ - ಜಾಗರೂಕನಾಗಿ, ಮತ್ಪರಃ - ನಾನೇ ಸರ್ವಶ್ರೇಷ್ಠ ಸಹಾಯಕನೆಂದು ನನ್ನನ್ನೇ ನಂಬಿದವನಾಗಿ, ಆಸೀತ ಎಂದರೆ ಮಾಮೇವ ಚಿಂತಯನ್ನಾಸೀತ - ನನ್ನನ್ನೇ ಚಿಂತಿಸುತ್ತಾ, ಇರು ಎಂದರೆ ಯೋಗಾರಂಭವನು

ಮೂ. ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತ ಮಾನಸಃ ।
ಶಾನ್ತಿಂ ನಿರ್ವಾಣ ಪರಮಾಂ ಮತ್ಸಂಸ್ಥಾ ಮಧಿಗಚ್ಛತಿ ॥ ೧೫.

ಭಾ. ಏವಂ-ಮಯಿ ಪರಸ್ಮಿನ್ ಬ್ರಹ್ಮಣಿ ಪುರುಷೋತ್ತಮೇ ಮನಸ ಶ್ಶುಭಾಶ್ರಯೇ ಸದಾ ಆತ್ಮಾನಂ - ಮನೋ ಯುಂಜನ್, ನಿಯತ ಮಾನಸಃ - ಮತ್ಸ್ಪರ್ಶ ಪವಿತ್ರೀಕೃತ ಮಾನಸತಯಾ ನಿಶ್ಚಲಮಾನಸಃ, ಮತ್ಸಂಸ್ಥಾಂ ನಿರ್ವಾಣ ಪರಮಾಂ ಶಾನ್ತಿ ಮಧಿ

ಮಾಡು ಎಂಬ ತಾತ್ಪರ್ಯವು. ಇಲ್ಲಿ ಯುಕ್ತ ಆಸೀತ ಎಂದರೆ ಆತ್ಮಾನುಸಂಧಾನರೂಪದಲ್ಲಿ ರುವದೆಂಬರ್ಥವು ಪ್ರಕರಣಕ್ಕೆ ಅನುಗುಣವಾಗಿದ್ದರೂ, ಯೋಗಾಭ್ಯಾಸಕ್ಕೆ ಬೇಕಾದ ಮುಖ್ಯ ಪರಿಕರಗಳೊಂದಿಗೆ ಇರತಕ್ಕದ್ದು ಸರ್ವಾಂತರಾಯ ನಿವೃತ್ತಿಗೆ ಆವಶ್ಯಕವಾದುದರಿಂದ ಯುಕ್ತಃ ಎಂಬುವಕ್ಕೆ ಆಸೀತವೆಂದು ವ್ಯಾಖ್ಯಾನಮಾಡಿರುತ್ತಾರೆ, ಮಚ್ಚಿತ್ತಃ ಮತ್ಪರಃ ಎಂಬುದರಿಂದ ಪೌನರುಕ್ತಿಯೇನೂ ಇಲ್ಲವು. ಮಚ್ಚಿತ್ತಃ ಎಂಬುದರಿಂದ ಸರ್ವೇಶ್ವರನಲ್ಲಿ ಮನಸ್ಸಿನ ಅನುಪ್ರವೇಶವೂ, ಮತ್ಪರಃ ಎಂಬುದರಿಂದ ಸರ್ವೇಶ್ವರನಲ್ಲಿ ಯೋಗಪೂರ್ತಿಯನ್ನು ಮಾಡಿಕೊಡುವ ದೃಢ ನಂಬಿಕೆಯೂ, ಹೇಳಲ್ಪಟ್ಟವು.

ಮೂಲಕ್ಕೆ ಅರ್ಥವು:—ಯೋಗಕ್ಕೆ ಕೂತುಕೊಂಡು ಯೋಗಾರಂಭಕ್ಕೆ ಮುಂಚೆ ಮಾಡುವ ಸರ್ವೇಶ್ವರಧ್ಯಾನದಿಂದುಂಟಾಗುವ ಪ್ರಯೋಜನವನ್ನು "ಯುಂಜನ್ನೇವಂ" ಎಂಬೀ ಶ್ಲೋಕದಿಂದ ತಿಳಿಸುತ್ತಾರೆ. ಯಾವಾಗ ಪರಮ ಕೃಪಾಕರನಾದ ತನ್ನನ್ನು ಧ್ಯಾನಿಸಿಯೇ ಪ್ರತಿನಿತ್ಯವೂ ಯೋಗಾರಂಭವು ಮಾಡಲ್ಪಡುತ್ತದೋ ಆಗ ನಿಶ್ಚಲವಾದ ಮನಸ್ಸುಂಟಾಗಿ ನಿರ್ವಿಘ್ನವಾಗಿ ಕರ್ಮಯೋಗದ ಪರಾಕಾಷ್ಠಾ ದೆಶೆಯು ಪ್ರಾಪ್ತವಾಗುತ್ತದೆ. ಈ ಅವಸ್ಥೆಯು ಆತ್ಮಸಾಕ್ಷಾತ್ಕಾರವೆಂದು ಹೇಳಲ್ಪಡುತ್ತದೆ. ಅನಂತರ ಕ್ರಮೇಣ ಭಕ್ತಿಯೋಗದ್ವಾರಾ ಪರಮ ನಿಶ್ಶ್ರೇಯಸ್ಸೂ ಲಭಿಸ ಸಿದ್ಧಿಸುತ್ತದೆಂದು ತಿಳಿಸುತ್ತಾರೆ—ಯೋಗೀ - ಕರ್ಮಯೋಗಿಯು, ಆತ್ಮಾನಂ - ತನ್ನ ಮನಸ್ಸನ್ನು, ಸದಾ - ಯಾವಾಗಲೂ ಎಂದರೆ ಪ್ರತಿ ದಿನವೂ ಮಾಡುವ ಯೋಗಾರಂಭಕ್ಕೆ ಪೂರ್ವಭಾವಿಯಾಗಿ, ಏವಂ-ಮೇಲೆ ಹೇಳಿದ ರೀತ್ಯಾ, ಯುಂಜನ್ ಪರಮಾತ್ಮನಲ್ಲಿ ನಿಲ್ಲಿಸುವವನಾಗಿ, ಆ ಕಾರಣದಿಂದಲೇ, ನಿಯತಮಾನಸಃ - ನಿಯಮಿಸಲ್ಪಟ್ಟ ಅಥವಾ ನಿಶ್ಚಂಚಲವಾದ ಮನಸ್ಸುಳ್ಳವನಾಗಿ, ಪರಮಾತ್ಮಧ್ಯಾನವು ಮನಸ್ಸಿನ ನಿಶ್ಚಂಚಲತ್ವಕ್ಕೆ ಕಾರಣವಾಗುತ್ತದೆಂದೂ ತನ್ಮೂಲಕ ಕರ್ಮಯೋಗದ ವಿಪಾಕದೆಶೆಯು ಪ್ರಾಪ್ತವಾಗುತ್ತದೆಂದೂ ಹೇಳಿದಂತಾಯಿತು, ಮತ್ಸಂಸ್ಥಾಂ - ನನ್ನಲ್ಲಿರುವ, ನನ್ನ ಅಧೀನವಾಗಿರುವ, ನಿರ್ವಾಣ ಪರಮಾಂ - ನಿರತಿಶಯ ಸುಖರೂಪವಾದ, ಶಾನ್ತಿಯನ್ನು ಅಧಿಗಚ್ಛತಿ - ಹೊಂದುತ್ತಾನೆ. ॥೧೫॥

ಭಾಷ್ಯಾರ್ಥವು:—ಜೀವಾತ್ಮಯೋಗಪ್ರಕರಣದಲ್ಲಿ "ಮಚ್ಚಿತ್ತೋಮತ್ಪರಃ" ಎಂಬದಾಗಿ ಪರಮಾತ್ಮ ಚಿಂತನವನ್ನು ಏಕೆ ಹೇಳಲ್ಪಟ್ಟಿತೆಂದರೆ ಹೇಳುತ್ತಾರೆ.—ಏವಂ ಎಂಬುದು ಹಿಂದೆ ಹೇಳಿದುದರ ಅನುವಾದವು. ಆ ಅನುವಾದವು ಹೇಗೆಂದರೆ ತಿಳಿಸುತ್ತಾರೆ, ಮಯಿ ಪರಸ್ಮಿನ್ ಬ್ರಹ್ಮಣಿ ಪುರುಷೋತ್ತಮೇ ಮನಸಶ್ಶುಭಾಶ್ರಯೇ ಪರಬ್ರಹ್ಮನಾಗಿಯೂ, ಶರೀರಹೊಂದಿದ ಆತ್ಮರುಗಳೆಲ್ಲೆಲ್ಲಾ ವಿಲಕ್ಷಣನಾಗಿ ಸರ್ವೋತ್ಕೃಷ್ಟನಾಗಿರುವ ಆಕಾರಣದಿಂದಲೇ ಮನಸ್ಸಿಗೆ ಶುಭಾಶ್ರಯರೂಪ ಆಲಂಬನವಾಗಿರುವ ನನ್ನಲ್ಲಿ, ಶುಭಾಶ್ರಯ ಶಬ್ದಾರ್ಥಕ್ಕೆ ಹಿಂದೆ ೧೧-೧೨ನೆಯ ಶ್ಲೋಕಗಳ ಭಾಷ್ಯವನ್ನು ನೋಡಿ. ಪುರುಷೋತ್ತಮನು ಶ್ರೀ ಕೃಷ್ಣನು ಹೇಗೆ ಎಂಬುದು ಮುಂದೆ ೧೫, ೧೭, ೧೮ನೆಯ ಶ್ಲೋಕಗಳಲ್ಲಿ ಉಪಪಾದಿತವು. ಸದಾ-ಯಾವಾಗಲೂ ಎಂದರೆ ಪ್ರತಿದಿನವೂ ಪೂರ್ವಾಹ್ಣದಲ್ಲಿ ಮಾಡುವಯೋಗಾರಂಭಕ್ಕೆ ಮೊದಲು, ಆತ್ಮಾನಂ - ಮನಸ್ಸನ್ನು, ಯುಂಜನ್—

ಭಾ. ಗಚ್ಛತಿ-ನಿರ್ವಾಣಕಾಷ್ಠಾರೂಪಾಂ, ಮತ್ಸಂಸ್ಥಾಂ-ಮಯಿ ಸಂಸ್ಥಿತಾಂ, ಶಾನ್ತಿಮಧಿಗಚ್ಛತಿ॥

ಭಾ.ಅವ. ಏವ ಮಾತ್ಮಯೋಗ ಮಾರಭಮಾಣಸ್ಯ ಮನೋನೈರ್ಮಲ್ಯಹೇತುಭೂತಾಂ ಮನಸೋ ಭಗವತಿ ಶುಭಾಶ್ರಯೇಸ್ಥಿತಿ ಮಭಿದಾಯಾ ನ್ಯದಪಿ ಯೋಗೋಪಕರಣಮಾಹ-

ಸೇರಿಸಿದವನಾಗಿ, ಆ ಕಾರಣದಿಂದಲೇ, ನಿಯತಮಾನಸಃ ಎಂದರೆ ಮತ್ಸ್ಪರ್ಶ ಪವಿತ್ರೀಕೃತ ಮಾನಸತಯಾ ನಿಶ್ಚಲಮಾನಸಃ - ಮನಸ್ಸಿಗೆ ನನ್ನ ಸಂಬಂಧ ದೊರೆತುದರಿಂದ ಪವಿತ್ರೀಕರಿಸಲ್ಪಟ್ಟ ಆದರಿಂದ ನಿಶ್ಚಂಚಲವಾದ ಮನಸ್ಸುಳ್ಳವನಾಗಿ, ನಿರ್ವಾಣ ಪರಮಾಂ ಎಂದರೆ ನಿರ್ವಾಣ ಕಾಷ್ಠಾರೂಪಂ – ನಿರತಿಶಯ ಸುಖದ ಸರ್ವೋತ್ತಮ ದೆಶೆರೂಪವಾದ, ಮತ್ಸಂಸ್ಥಾಂ ಎಂದರೆ ಮಯಿಸಂಸ್ಥಿತಾಂ ನನ್ನಲ್ಲಿರುವ, ಶಾನ್ತಿಂ - ಶಾಂತಿಯನ್ನು, ಅಧಿಗಚ್ಛತಿ - ಹೊಂದುವನು. ಇಲ್ಲಿ ಆತ್ಮಾನಂ ಎಂದರೆ ಪ್ರಕರಣಾನುಗುಣವಾಗಿ ಮನಸ್ಸನ್ನು ಎಂದು ಅರ್ಥಮಾಡಿರುತ್ತಾರೆ. ಪರಮಾತ್ಮನನ್ನು ಎಂದು ಕೆಲವರು ಅರ್ಥಮಾಡಿರುವದು ಪ್ರಕರಣವನ್ನು ತ್ಯಜಿಸಿದುದೂ ಅಲ್ಲದೆ ಪರಮಾತ್ಮನನ್ನು ಯುಂಜನ್ ಎಂದು ಹೇಳಿದರೆ, ಯಾವುದರೊಂದಿಗೆ ಸೇರಿಸಿ ಎಂಬ ಪ್ರಶ್ನೆಯ ಸಮಾಧಾನಾರ್ಥವಾಗಿ ಮನಸ್ಸಿನೊಂದಿಗೆ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಇಲ್ಲಿ ಮತ್ಸಂಸ್ಥಾಂ ನಿರ್ವಾಣ ಪರಮಾಂ ಶಾನ್ತಿಂ ಎಂದು ಹೇಳಲ್ಪಟ್ಟಿತಲ್ಲಾ ಅದು ಯಾವುದು ಎಂದರೆ ಕೊನೆಗೆ ಪರಿಣಾಮದಲ್ಲಿ ಪ್ರಾಪ್ತವಾಗುವ ಅಶನಪಿಪಾಸಾದಿ ಊರ್ಮಿ ಷಟ್ಕಗಳು ಇಲ್ಲದ ದೆಶೆಯು ಎಂದು ಭಾವಿಸತಕ್ಕದ್ದು. ಕರ್ಮಯೋಗದ ಆತ್ಮ ಚಿನ್ತನದ ಆರಂಭದಲ್ಲಿ ಮಾಡುವ ಪರಮಾತ್ಮನ ಚಿನ್ತನದಿಂದ ನಿರ್ವಿಘ್ನವಾಗಿ ಯೋಗ ನಿಷ್ಪತ್ತಿಗೆ ಬೇಕಾದ ಮನಸ್ಸಿನ ನಿಶ್ಚಂಚಲತ್ವವೂ, ಆತ್ಮ ಸಾಕ್ಷಾತ್ಕಾರವೂ ಲಭಿಸುತ್ತವೆಂಬ ಭಾವವು. ಅನಂತರ ತನ್ಮೂಲಕವಾಗಿ ಮೋಕ್ಷೋಪಾಯ ಪೂರ್ತಿಯಿಂದ ಊರ್ಮಿಷಟ್ಕಗಳಿಲ್ಲದ ಪರಾಕಾಷ್ಠಾದಶೆಯೂ ಉಂಟಾಗುತ್ತದೆಂದು ಹೇಳಲ್ಪಟ್ಟಿತು.

**ಭಾಷ್ಯಾವತಾರಿಕೆಯ ಅರ್ಥವು :—** ಏವಂ – ಈ ಪ್ರಕಾರವಾಗಿ, ಆತ್ಮಯೋಗಮಾರಭಮಾಣಸ್ಯ - ತನ್ನ ಆತ್ಮಚಿನ್ತನವನ್ನು ಪ್ರಾರಂಭಿಸುವ ಕರ್ಮಯೋಗಿಗೆ, ಮನೋನೈರ್ಮಲ್ಯ ಹೇತು ಭೂತಾಂ-ಮನಸ್ಸಿನ ನೈರ್ಮಲ್ಯಕ್ಕೆ ಕಾರಣವಾದ, ಮನಸೋ ಭಗವತಿ ಶುಭಾಶ್ರಯೇ ಸ್ಥಿತಿಂ - ಭಗವಂತನಲ್ಲಿ ಎಂದರೆ ಶುಭಾಶ್ರಯವಾದ ಆತನ ದಿವ್ಯಮಂಗಳ ವಿಗ್ರಹದಲ್ಲಿ ಮನಸ್ಸನ್ನಿಡಬೇಕೆಂಬುದನ್ನು, ಅಭಿಧಾಯ - ಹಿಂದಿನ ಶ್ಲೋಕಗಳಲ್ಲಿ ಹೇಳಿ, ಅನ್ಯದಪಿ – ಇನ್ನೂ ಬೇರೇ, ಯೋಗೋಪಕರಣ ಮಾಹ - ಯೋಗಕ್ಕೆ ಉಪಕಾರಕಗಳಾದವನ್ನು ಹೇಳುತ್ತಾರೆ. ಇಲ್ಲಿ ಇತರ ಯೋಗೋಪಕರಣಗಳನ್ನು ಹೇಳುತ್ತಾರೆ ಎಂಬ ಪ್ರಯೋಗದಿಂದ "ಶುಚೌದೇಶೇ" ಎಂದು ಹನ್ನೊಂದನೆಯ ಶ್ಲೋಕವೊದಲು ೧೫ನೆಯ ಶ್ಲೋಕಾಂತ್ಯದವರೆಗೂ ಹೇಳಿದನೆಲ್ಲಾ ಯೋಗೋಪಕಾರಕಗಳೆಂದೂ ಮುಂದೆ ೧೬, ೧೭ನೆಯ ಶ್ಲೋಕಗಳಿಂದ ಹೇಳಲ್ಪಡುವದೂ ಕೂಡ ಬೇರೇ ಯೋಗೋಪಕಾರಕಗಳೇ ಎಂದು ತಿಳಿಸುವದಕ್ಕಾಗಿ ಅನ್ಯದಪಿ ಯೋಗೋಪಕರಣಂ ಎಂಬ ಪ್ರಯೋಗವು. ಇದರಿಂದ ಹಿಂದೆ ಹೇಳಿದ ಪರಮಾತ್ಮ ಚಿಂತನವು ಪರಮಾತ್ಮೋಪಾಸನ ವಿಷಯವಲ್ಲವು, ಈ ಪ್ರಕರಣವು ಜೀವಾತ್ಮಾವಲೋಕನವು. ಪರಮಾತ್ಮಚಿನ್ತನವೇತಕ್ಕೆ ಎಂದರೆ ಕರ್ಮಯೋಗ ಸಿದ್ಧಿಗೋಸ್ಕರವೆಂದು ಭಾವಿಸತಕ್ಕದ್ದು. ಇದು ಅಲ್ಪಕಾಲಿಕ ಚಿನ್ತನವು. ದೀರ್ಘಕಾಲ ಚಿಂತನೀಯವಾದುದು ಪ್ರಕೃತ ಕರ್ಮಯೋಗ ವಿಪಾಕದಶೆ ಉಂಟಾಗುವದಕ್ಕೆ ಬೇಕಾದ ಜೀವಾತ್ಮಾವಲೋಕನವು.

**ಮೂಲಕ್ಕೆ ಅರ್ಥವು—** ಆಹಾರ, ವಿಹಾರ, ಚೇಷ್ಟೆ, ನಿದ್ರೆ ಮೊದಲಾದವುಗಳಲ್ಲಿ ಕರ್ಮಯೋಗಿಯು ಆತ್ಮಾವಲೋಕನಸಿದ್ಧಿಗಾಗಿ ಹೇಗೆ ಇರಬೇಕೆಂಬುದನ್ನು ಮುಂದಿನ ಎರಡು ಶ್ಲೋಕ

ಮೂ. ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾನ್ತ ಮನಶ್ನತಃ ।
ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬.
ಯುಕ್ತಾಹಾರ ವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭.

ಗಳಿಂದ ತಿಳಿಸುತ್ತಾರೆ—ವ್ಯತಿರೇಕದಿಂದ ಹೇಗೆ ಇದ್ದವನಿಗೆ ಯೋಗವು ಸಿದ್ಧಿಸುವದಿಲ್ಲವೆಂಬುದನ್ನು ಮೊದಲು ಹೇಳಿ, ಎರಡನೆಯ ಶ್ಲೋಕದಿಂದ ಎಂತವನಿಗೆ ಯೋಗವು ಸಿದ್ಧಿಸುತ್ತದೆಂಬುದನ್ನು ತಿಳಿಸುತ್ತಾರೆ.—ಅತ್ಯಶ್ನತಸ್ತು - ಎಷ್ಟು ಬೇಕೋ ಅದಕ್ಕಿಂತ ಹೆಚ್ಚಾಗಿ ಊಟಮಾಡುವವನಿಗಾದರೋ, ಯೋಗಃ - ಈ ಆತ್ಮಯೋಗವು, ನಾಸ್ತಿ - ಸಿದ್ಧಿಸುವದಿಲ್ಲವು; ಮಿತಿಮೀರಿ ಊಟಮಾಡುವದು ಯೋಗಸಿದ್ಧಿಗೆ ವಿರೋಧವೆಂಬ ಭಾವವು ; ಅನಶ್ನತಸ್ತು - ಊಟವನ್ನೇ ಮಾಡದೆ ಉಪವಾಸವಿರುವವನಿಗಾದರೋ, ಸಾಕಾದಷ್ಟು ಊಟಮಾಡದೆ ಅಲ್ಪಾಹಾರಿಯೂ ಇದರಲ್ಲೇ ಸೇರಿದನೆಂದೂ ಭಾವಿಸಬಹುದು, ಏಕೆಂದರೆ ಅತ್ಯಶ್ನತಃ ಎಂಬುದಕ್ಕೆ ಪ್ರತಿದ್ವಂದಿಯಾಗಿ ಅನಶ್ನತಃ ಎಂಬ ಪ್ರಯೋಗವಿರುವದರಿಂದ ಆ ಅರ್ಥವು ಸೂಚಿತವು, ಅನಶ್ನತಃ - ಊಟಮಾಡದೆ ಹಸಿದಿರುವವನಿಗೆ, ನಚೈಕಾನ್ತಂ - ಯೋಗಸಿದ್ಧಿಗೆ ಬೇಕಾದ ಏಕಾನ್ತ್ಯವಿರುವದಿಲ್ಲವು, ಅತಿಸ್ವಪ್ನಶೀಲಸ್ಯಚ-ಸಾಧಾರಣವಾಗಿ ಒಬ್ಬ ಮನುಷ್ಯನಿಗೆ ಏಳು ಘಂಟೆಯ ನಿದ್ರೆಯು ಸಾಕಾಗಿರುತ್ತದೆ, ಅದಕ್ಕಿಂತ ಹೆಚ್ಚಾಗಿ ನಿದ್ರೆಮಾಡುವ ಸ್ವಭಾವವುಳ್ಳವನಿಗೂಕೂಡ, ಯೋಗೋನಾಸ್ತಿ. ಓ ಅರ್ಜುನನೇ, ನೈವಜಾಗ್ರತಶ್ಚ-ನಿದ್ರೆಯು ಮಾಡದೇ ಎಚ್ಚರವಾಗಿಯೇ ಇರುವವನಿಗೂ, ಅರ್ಥಾತ್ ತುಂಬಾ ಕಮ್ಮಿ ನಿದ್ರೆಮಾಡುವವನಿಗೂ, ಇಲ್ಲಿಯೂ ನೈವಾತಿಜಾಗ್ರತಃ ಎಂಬಲ್ಲಿ ಅತಿ ಎಂಬ ಉಪಸರ್ಗವನ್ನು ಇಟ್ಟುಕೊಳ್ಳತಕ್ಕದ್ದು, ನ ಯೋಗೋಽಸ್ತಿ - ತುಂಬಾ ಮಲಗುವ ಸ್ವಭಾವದಿಂದ ತಮೋಗುಣಾಭಿವೃದ್ಧಿಯಿಂದ ಯೋಗಕ್ಕೆ ವಿಘ್ನವು. ಸರಿಯಾಗಿ ನಿದ್ರೆಯನ್ನು ಮಾಡದಿದ್ದರೆ ತೂಗಡಿಕೆಯುಂಟಾಗುವದರಿಂದಲೂ ಯೋಗಕ್ಕೆ ವಿಘ್ನವು ಎಂಬ ಭಾವವು. ಆದುದರಿಂದ, ಯುಕ್ತಾಹಾರ ವಿಹಾರಸ್ಯ - ನ್ಯೂನಾಧಿಕಗಳಿಲ್ಲದೆ ದೇಹಕ್ಕೆ ಎಷ್ಟು ಉಚಿತವೋ ಅಷ್ಟುಮಾತ್ರವೇ ಆಹಾರ ವಿಹಾರವುಳ್ಳವನಿಗೂ, ಮೇಲಿನ ಶ್ಲೋಕದಲ್ಲಿ ವಿಹಾರದ ವಿಷಯವು ಹೇಳಲ್ಪಡದಿದ್ದರೂ, ವಿಹಾರವು ಮಿತವಾಗಿ ಉಚಿತವಾಗಿರಬೇಕೆಂದು ಹೇಳಿರುವದರಿಂದ, ಅತಿವಿಹಾರವೂ ಕೂಡಯೋಗಸಿದ್ಧಿಗೆ ಪ್ರತ್ಯವಾಯವೆಂದು ಭಾವಿಸತಕ್ಕದ್ದು ; ವಿಹಾರವು ಉಚಿತವಾಗಿರಬೇಕೆಂದು ಹೇಳಿರುವದರಿಂದ ದೇಹಾರೋಗ್ಯಕ್ಕೆ ಬೇಕಾದಷ್ಟು ಸುತ್ತುವದೇ ಮೊದಲಾದ ವ್ಯಾಯಾಮುಗಳನ್ನಾಗಲಿ, ಆಟವನ್ನಾಗಲಿ ಅವಲಂಬಿಸಬಹುದೆಂದು ಹೇಳಿದಂತಾಯಿತು, ಮತ್ತು ಕರ್ಮಸು - ಭಗವದ್ಭಾಗವತ ಕೈಂಕರ್ಯಗಳಿಗೆ ಸಂಬಂಧಿಸಿದ ಕರ್ಮಗಳಲ್ಲಿ, ಯುಕ್ತಚೇಷ್ಟಸ್ಯ - ಮಿತವಾದ ಆಯಾಸವನ್ನುಂಟುಮಾಡುವ ವ್ಯಾಪಾರಗಳುಳ್ಳವನಿಗೂ, ಇದರಿಂದ ಅಧಿಕ ವಿಹಾರಚೇಷ್ಟೆಗಳಿಂದ ವಿಶೇಷ ದೇಹಾಯಾಸ ಉಂಟಾಗಿ ಯೋಗದಲ್ಲಿ ಕುಳಿತುಕೊಳ್ಳಲು ಅಸಮರ್ಥನಾಗಬಹುದೆಂಬ ಭಾವವು ಸೂಚಿತವು; ಹೀಗೆ ಯುಕ್ತವಿಹಾರ ಮತ್ತು ಯುಕ್ತಚೇಷ್ಟೆಗಳಿಗೆ ಅನುಮತಿಯನ್ನು ಯೋಗಿಗೆ ಕೊಟ್ಟಿರುವದರಿಂದ ಈ ಯೋಗಿಯು ಸನ್ಯಾಸಿಯು ಯತಿಯು, ಎಂದು ಹೇಳಲು ಸಾಧ್ಯವಿಲ್ಲವು. ಯತಿಯು ಹೇಳಲ್ಪಟ್ಟಿದ್ದರೆ ಅಂತವನಿಗೆ ವಿಹಾರವು ಕೂಡದು ; ಮತ್ತು ಆತನು ಬ್ರಹ್ಮಚರ್ಯ ವ್ರತದಲ್ಲೇ ಇರುವವನಾದುದರಿಂದ ಬ್ರಹ್ಮಚಾರಿವ್ರತೇಸ್ಥಿತಃ ಎಂದು ಮುಖ್ಯವಾಗಿ ಹೇಳತಕ್ಕ ಆವಶ್ಯಕವೂ ಇರಲಿಲ್ಲವು. ಮತ್ತು ಯುಕ್ತ ಸ್ವಪ್ನಾವಬೋಧಸ್ಯ–ಹೀಗೆ ದೇಹಕ್ಕೆ ಬೇಕಾದಷ್ಟು ಮಾತ್ರ ನಿದ್ರೆ ಮತ್ತು ಜಾಗರವುಳ್ಳವನಿಗೂ, ಯೋಗಃ - ಆತ್ಮ

ಭಾ. ಅತ್ಯಶನಾನಶನೇ ಯೋಗವಿರೋಧಿನೀ ; ಅತಿವಿಹಾರಾವಿಹಾರೌ ಚ; ತಥಾತಿಮಾತ್ರ ಸ್ವಪ್ನ ಜಾಗರ್ಯೇ ; ತಥಾ ಚ ಆತ್ಮಾಯಾಸಾ ನಾಯಾಸೌ ; ಮಿತಾಹಾರ ವಿಹಾರಸ್ಯ ಮಿತಾಯಾಸಸ್ಯ ಮಿತಸ್ವಪ್ನಾವಬೋಧಸ್ಯ ಸಕಲ ದುಃಖಹಾ-ಬಂಧನಾಶನೋ ಯೋಗ ಸ್ಸಂಪನ್ನೋ ಭವತಿ ||೧೬, ೧೭||

ಧ್ಯಾನವು, ದುಃಖಹಾ - ಇಹಪರ ಶ್ರೇಯಸ್ಸುಗಳಿಗೆ ವಿಘ್ನಗಳಾದ ದುಃಖಗಳನ್ನು ನಾಶಮಾಡು ವಂಥಾದ್ದು, ಭವತಿ - ಆಗುತ್ತದೆ. ದುಃಖಗಳೆಲ್ಲಾ ಸಂಸಾರಬಂಧದಿಂದಲೇ ಉಂಟಾಗತಕ್ಕವು, ಸಂಸಾರವೇ ದೊಡ್ಡ ದುಃಖವು,ಅದರ ನಿವೃತ್ತಿಯುಂಟಾಗುತ್ತದೆಂಬ ಭಾವವು. ||೧೬, ೧೭||

ಭಾಷ್ಯಾರ್ಥವು :— ಅತ್ಯಶನಾನಶನೇ - ಹೊಟ್ಟೆಗೆ ಹೆಚ್ಚಾಗಿ ಊಟಮಾಡುವದು, ಉಪ ವಾಸವಿರುವದು ಅಥವಾ ತುಂಬಾ ಕಮ್ಮಿಯಾಗಿ ಊಟಮಾಡುವದು ಇವೆರಡೂ, ಯೋಗವಿರೋ ಧಿನೀ - ಆತ್ಮ ಚಿಂತನಕ್ಕೆ ವಿರೋಧವಾದುವು,ಹಾಗೆಯೇ ಅತಿ ವಿಹಾರಾ ವಿಹಾರೌ ಚ - ತುಂಬಾ ವ್ಯಾಯಾಮವನ್ನು ತೆಗದುಕೊಳ್ಳುವದೂ ವ್ಯಾಯಾಮುವನ್ನು ತೆಗದುಕೊಳ್ಳದೇ ಇರುವದೂ ಎರಡೂ ಯೋಗವಿರೋಧಿನೌ ಎಂದು ಇಟ್ಟುಕೊಳ್ಳತಕ್ಕದ್ದು, ಯೋಗಾಭ್ಯಾಸಕ್ಕೆ ಪ್ರತಿಬಂಧಕಗಳೂ; ಯುಕ್ತವಿಹಾರವು ಯೋಗಸಾಧಕವೆಂದು ಹೇಳಿರುವದರಿಂದ ಅತಿವಿಹಾರಾ ವಿಹಾರಗಳು ಯೋಗ ಪ್ರತಿಬಂಧಕಗಳೆಂಬುದು ಅರ್ಥಾತ್ಸಿದ್ಧವು. ತಥಾತಿ ಮಾತ್ರ ಸ್ವಪ್ನ ಜಾಗರ್ಯೇ ಯೋಗವಿರೋ ಧಿನೀ - ಹಾಗೆಯೇ ತುಂಬಾ ನಿದ್ರೆಯೂ, ತುಂಬಾ ನಿದ್ರೆ ಇಲ್ಲದಿರೋಣವೂ, ಸಹ ಯೋಗಕ್ಕೆ ವಿರೋಧವಾದವುಗಳು, ತಥಾ ಚ ಆತ್ಮಾಯಾಸಾನಾಯಾಸೌ ಯೋಗವಿರೋಧಿನೌ-ಹಾಗೆಯೇ ದೇಹಕ್ಕೆ ತುಂಬಾ ಆಯಾಸ ಅನಾಯಾಸಗಳೂ ಸಹ ಯೋಗಕ್ಕೆ ವಿರೋಧಿಗಳು, ಮುಂದೆ ಎರಡ ನೆಯ ಶ್ಲೋಕಕ್ಕೆ ಭಾಷ್ಯ ಬರೆಯುತ್ತಾರೆ, ಮಿತಾಹಾರಸ್ಯ – ಇಲ್ಲಿ ಯುಕ್ತವಾದ ಎಂಬುದಕ್ಕೆ ಮಿತವೆಂದು ಅರ್ಥಮಾಡಿರುತ್ತಾರೆ, ಇಲ್ಲಿ ಉಚಿತವಾದುವು ಮಿತಾಹಾರಾದಿಗಳು, ಮಿತವಾದ ಆಹಾರವುಳ್ಳವನಿಗೂ, ಮಿತಾಯಾಸಸ್ಯ - ಮಿತವಾದ ದೇಹಾಯಾಸವುಳ್ಳವನಿಗೂ, ಮಿತಸ್ವಪ್ನಾ ವಬೋಧಸ್ಯ - ಮಿತವಾದ ನಿದ್ರೆ ಜಾಗರವುಳ್ಳವನಿಗೂ, ಸಕಲದುಃಖಹಾ ಎಂದರೆ ಬಂಧನಾ ಶನಃ - ಸಂಸಾರವನ್ನು ನಾಶಮಾಡುವಂತಹ ಅಥವಾ ಆದಕ್ಕೆ ಹೇತುಭೂತವಾಗುವ, ಯೋಗಃ-ಯೋಗವು, ಸಂಪನ್ನೋ ಭವತಿ-ಪೂರ್ಣವಾದುದಾಗುತ್ತದೆ. ಮಿತಾಹಾರವಿಷಯದಲ್ಲಿ ಶ್ರುತಿಯು ಹೇಳುತ್ತದೆ, "ಯದು ಹವಾ ಆತ್ಮ ಸಮ್ಮಿತಂ ಅನ್ನಂ ತದವತಿ, ತನ್ನ ಹಿನಸ್ತಿ, ಯದ್ಭೂಯೋ ಹಿನಸ್ತಿ, ತದ್ಯತ್ ಕನೀಯೋನ್ನಂ ನ ತದವತಿ" ದೇಹಪರಿಮಾಣಕ್ಕನುಗುಣವಾಗಿ ಮಿತವಾಗಿ ಅನ್ನವನ್ನು ಉಂಡರೆ ಅದು ರಕ್ಷಿಸುತ್ತದೆ, ಹಿಂಸಿಸುವದಿಲ್ಲವು, ಹೆಚ್ಚಾಗಿ ಉಂಡರೆ ಹಿಂಸೆ ಮಾಡುತ್ತದೆ, ಕಮ್ಮಿಯಾಗಿ ಉಂಡರೂ ರಕ್ಷಿಸುವದಿಲ್ಲವು ಎಂಬದಾಗಿ" ಹಾಗೆಯೇ ಸ್ಮೃತಿ ಪ್ರಮಾಣವೂ ಉಂಟು—"ಉದರಸ್ಯಾರ್ಧ ಮನ್ನಸ್ಯ ತೃತೀಯ ಮುದಕಸ್ಯ ತುವಾಯೋಸ್ಸಂ ಚರಣಾರ್ಥಂತು ಚತುರ್ಥ ಮವಶೇಷಯೇತ್" ತನ್ನ ಉದರದ ಅವಕಾಶದ ನಾಲ್ಕು ಭಾಗ ಗಳಲ್ಲಿ ಎರಡು ಭಾಗಗಳು ಅನ್ನಕ್ಕೂ ಮೂರನೆಯಭಾಗವನ್ನೂ ಉದಕಕ್ಕೂ ಕೊಟ್ಟು, ನಾಲ್ಕ ನೆಯ ಭಾಗವನ್ನು ವಾಯು ಸಂಚಾರಕ್ಕಾಗಿ ಬಿಟ್ಟಿರತಕ್ಕದ್ದೆಂಬುದು ಈ ಶ್ಲೋಕತಾತ್ಪರ್ಯವು. ಮೂಲದಲ್ಲಿ ಯುಕ್ತಶಬ್ದವನ್ನು ಪ್ರಯೋಗಿಸಿರುವದೂ ಭಾಷ್ಯದಲ್ಲಿ ಮಿತವೆಂದು ಹೇಳಿರುವದೂ ದೇಹಕ್ಕೆ ಬೇಕಾದುದಕ್ಕಿಂತ ನ್ಯೂನಾಧಿಕಗಳು ಯುಕ್ತವಲ್ಲವೆಂಬ ತಾತ್ಪರ್ಯದಲ್ಲಿ ಎಂದು ಭಾವಿ ಸತಕ್ಕದ್ದು. ಯೋಗಿಗೆ ಯೋಗ್ಯವಾದ ವಿಹಾರವು ದೇಹಕ್ಕನುಗುಣವಾದ ಸಂಚಾರವೆಂದು ಊಹಿಸಬಹುದು. ಯುಕ್ತಾಹಾರ ವಿಹಾರ ನಿದ್ರಾದಿಗಳೆಲ್ಲವೂ ಮನುಷ್ಯನು ಆರೋಗ್ಯದಲ್ಲಿರುವ

ಮೂ. ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।
ನಿಸ್ಪೃಹ ಸ್ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮.

ಭಾ. ಯದಾ ಪ್ರಯೋಜನ ವಿಷಯಂ ಚಿತ್ತ ಮಾತ್ಮನ್ಯೇವ ವಿನಿಯತಂ - ವಿಶೇಷೇಣ ನಿಯತಂ, ನಿರತಿಶಯಪ್ರಯೋಜನತಯಾ ತತ್ರೈವ ನಿಯತಂ - ನಿಶ್ಚಲಂ, ಅವತಿಷ್ಠತೇ, ತದಾ ಸರ್ವಕಾಮೇಭ್ಯೋ ನಿಸ್ಪೃಹಸ್ಸನ್ ಯುಕ್ತ ಇತ್ಯುಚ್ಯತೇ-ಯೋಗಾರ್ಹ ಇತ್ಯುಚ್ಯತೇ ॥ ೧೮ ॥

ದಕ್ಕೆ ಅತ್ಯಾವಶ್ಯಕಗಳಾದವು. ಅಂತವನೀಗ ದೇಹಾರೋಗ್ಯವನ್ನು ಕಾಪಾಡಿಕೊಂಡು ಆತ್ಮಾವಲೋಕನ ಸಿದ್ಧಿಯನ್ನು ಸಾಧಿಸಿಕೊಳ್ಳಬಹುದು. ಹಾಗಿಲ್ಲದಿದ್ದರೆ ಆರೋಗ್ಯವೂ ಕೆಡುತ್ತದೆ, ಯೋಗಸಿದ್ಧಿಯೂ ಇಲ್ಲವೆಂಬುದು ತಾತ್ಪರ್ಯವು. ಯುಕ್ತಾಹಾರ ಶಬ್ದವು ಮಿತವಾದ ಆಹಾರವನ್ನು ಮುಖ್ಯವಾಗಿ ಹಿಂದಿನ ಶ್ಲೋಕದ ಅತಿ ಶಬ್ದಕ್ಕೆ ಪ್ರತಿದ್ವಂದ್ವಿಯಾಗಿ ತೋರಿಬರುವದೇನೋ ನ್ಯಾಯವಾದುದೇ; ಇದೂ ಅಲ್ಲದೆ, ಯುಕ್ತ ಶಬ್ದದಿಂದ ಆಹಾರವು ದೋಷದುಷ್ಟವಾಗದೆ, ರಾಜಸ ತಾಮಸಗಳಲ್ಲದೆ ಸಾತ್ವಿಕವಾಗಿರಬೇಕೆಂಬ ಭಾವವನ್ನೂ ಸಹ ಗ್ರಹಿಸಬಹುದು.॥೧೬, ೧೭॥

ಮೂಲಕ್ಕೆ ಅರ್ಥವು :—ಹೀಗೆ ಯೋಗೋಪಕಾರಕಗಳನ್ನೆಲ್ಲಾ ಹೇಳಿ, ಈ ಶ್ಲೋಕದಲ್ಲಿ ಧ್ಯೇಯ ವಸ್ತುವಿನಲ್ಲೇ ಐಕಾಂತ್ಯವು ಆವಶ್ಯಕವೆಂದೂ, ಅಂತವನೇ ಯೋಗಾಭ್ಯಾಸಕ್ಕೆ ಅರ್ಹನೆಂದೂ ಹೇಳುತ್ತಾರೆ—ಯದಾ - ಯಾವಾಗ, ಚಿತ್ತಂ – ವಿವೇಕಯುಕ್ತವಾಗಿ ಪ್ರವೃತ್ತ್ಯಭಿಮುಖವಾಗಿ ಪ್ರಯೋಜನವನ್ನು ಕೋರುವ ಮನಸ್ಸು, ವಿನಿಯತಂ - ವಿಶೇಷವಾಗಿ ನಿಯತವಾಗೋಣ ಹೇಗೋ ಹಾಗೆ, ಎಂದರೆ ಆತ್ಮಚಿಂತನವೇ ಪರಮಪ್ರಯೋಜನವೆಂದು ನಿಯತವಾಗೋಣ ಹೇಗೋ ಹಾಗೆ, ಸ್ಥಿರವಾಗಿರೋಣ ಹೇಗೋ ಹಾಗೆ, ಆತ್ಮನ್ಯೇವ - ಆತ್ಮಾವಿನಲ್ಲೇ, ಏವ ಕಾರದಿಂದಲೂ, ವಿನಿಯತಂ ಎಂಬುದರಿಂದಲೂ ಐಕಾಂತ್ಯವು ಹೇಳಲ್ಪಟ್ಟಿತು, ಅವತಿಷ್ಠತೇ - ಸ್ಥಿರವಾಗಿ ನಿಲ್ಲುತ್ತದೋ, ತದಾ-ಆಗ, ಸರ್ವಕಾಮೇಭ್ಯಃ- ಸಮಸ್ತ ಕೋರಿಕೆಗಳಿಂದಲೂ, ನಿಸ್ಪೃಹಃ - ತೊಲಗಿದ ಆಶೆಯುಳ್ಳವನಾಗಿ, ಯುಕ್ತಃ-ಆತ್ಮಾವಲೋಕನಕ್ಕರ್ಹನೆಂದು, ಉಚ್ಯತೇ - ಹೇಳಲ್ಪಡುವನು. ಯಾರಿಂದ ಎಂದರೆ ತತ್ವಜ್ಞರಿಂದ ಎಂದು ಇಟ್ಟುಕೊಳ್ಳತಕ್ಕದ್ದು. ಇತರ ಪ್ರಯೋಜನಗಳಲ್ಲಿ ಆಶೆಯನ್ನು ತೊರೆದು, ಆತ್ಮಾವಲೋಕನವೇ ಪರಮ ಪ್ರಯೋಜನವೆಂದು ಭಾವಿಸಿ, ಯಾವಾಗ ಚಿತ್ತವನ್ನು ಆತ್ಮನಲ್ಲೇ ಇಟ್ಟು ಐಕಾಂತ್ಯವುಳ್ಳವನಾಗುತ್ತಾನೋ, ಆಗೀಗ ಆತ್ಮಾವಲೋಕನವನ್ನು ಆರಂಭಿಸಲು ಯೋಗ್ಯನಾಗುವನೆಂಬ ಭಾವವು.

ಭಾಷ್ಯಾರ್ಥವು :—ಆತ್ಮಚಿಂತನಕ್ಕೆ ಉಪಕಾರಕಗಳನ್ನು ತಿಳಿಯಪಡಿಸಿ ಈ ಶ್ಲೋಕದಿಂದ ಯೋಗಾರ್ಹದೆಶೆಯನ್ನುಪದೇಶಿಸುತ್ತಾರೆ—ಯದಾ - ಯಾವಾಗ, ಪ್ರಯೋಜನ ವಿಷಯಂ ಚಿತ್ತಂ - ಪ್ರಯೋಜನವೇ ವಿಷಯವಾಗಿವುಳ್ಳ ಹೀಗೆ ವಿವೇಕವುಳ್ಳ ಮನಸ್ಸು, ಆತ್ಮನ್ಯೇವ – ಜೀವಾತ್ಮನಲ್ಲೇ, ಇಲ್ಲಿ ಏವಕಾರದಿಂದ ಪ್ರಯೋಜನಾಂಶವು ಆತ್ಮಾವಲೋಕನದಲ್ಲೇ ಎಂಬುದು ವಿವೇಕ ಜ್ಞಾನದಿಂದುಂಟಾದುದೆಂಬಂಶವು ತೋರಿಬರುತ್ತದೆ, ವಿನಿಯತಂ ಎಂದರೆ ವಿಶೇಷೇಣ ನಿಯತಂ, ಇದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ, ನಿರತಿಶಯ ಪ್ರಯೋಜನತಯಾ ತತ್ರೈವ ನಿಯತಂ ಎಂದರೆ ನಿಶ್ಚಲಂ - ನಿರತಿಶಯ ಪ್ರಯೋಜನ ಉಂಟೆಂಬ ಭಾವದಿಂದ

**ಮೂ. ಯಥಾದೀಪೋ ನಿವಾತಸ್ಥೋ ನೇಙ್ಗತೇ ಸೋಪಮಾ ಸ್ಮೃತಾ ।
ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗ ಮಾತ್ಮನಃ ॥ ೧೯.**

ಆತ್ಮನಲ್ಲೇ ನಿಯತವಾಗುವಹಾಗೆ ಎಂದರೆ ನಿಶ್ಚಲವಾಗಿ, ಸ್ಥಿರವಾಗಿ, **ಅವತಿಷ್ಠತೇ** - ನಿಲ್ಲುತ್ತದೋ, **ತದಾ** - ಆಗ, **ಸರ್ವಕಾಮೇಭ್ಯಃ** - ಸಮಸ್ತ ಅಭಿಲಾಷೆಗಳಿಂದಲೂ, **ನಿಸ್ಸ್ಪೃಹಸ್ಸನ್**-ತೊಲಗಿದ ಆಶೆಯುಳ್ಳವನಾಗಿ, **ಯುಕ್ತ ಇತ್ಯುಚ್ಯತೇ** ಎಂದರೆ, **ಯೋಗಾರ್ಹ ಇತ್ಯುಚ್ಯತೇ** – ಆತ್ಮಾವಲೋಕನದ ಅಭ್ಯಾಸಕ್ಕೆ ಅರ್ಹನೆಂದು ಹೇಳಲ್ಪಡುವನು. ಕೆಲವರು, **ಆತ್ಮನ್ಯೇವ** – ಎಂದರೆ ಪರಮಾತ್ಮನಲ್ಲೇ ಎಂದು ಅರ್ಥಮಾಡಿರುತ್ತಾರೆ, ಹಿಂದೆ **ಮಚ್ಚಿತ್ತಃ ಮತ್ಪರಃ** ಎಂದು ಹೀಗೆಲ್ಲಾ ಹೇಳಿರುವಾಗ, ಬರೀ **ಆತ್ಮನ್ಯೇವ** ಎಂಬ ಪ್ರಯೋಗದಿಂದ ಪರಮಾತ್ಮನು ಹೇಳಲ್ಪಡುವನೇ ? ಇದು ಕರ್ಮಯೋಗಕ್ಕೆ ಸೇರಿದ ಆತ್ಮಧ್ಯಾನವು, ಆದುದರಿಂದ ಭಕ್ತಿಯೋಗಕ್ಕೆ ಅಙ್ಗರೂಪವಾದ ಆತ್ಮಾವಲೋಕನವು ಇಲ್ಲಿ ಹೇಳಲ್ಪಟ್ಟಿತು. ಭಕ್ತಿಯೋಗವು ಮುಂದೆ ಹೇಳಲ್ಪಡುತ್ತದೆ; ಅಲ್ಲೀಗ ಪರಮಾತ್ಮನ ಶುಭಾಶ್ರಯವೇ ಉಪಾಸ್ಯವು. ಅಙ್ಗವಾಗಿ ವಿಧಿಸಲ್ಪಟ್ಟ ಆತ್ಮಚಿನ್ತನೆಗೆ ಶುಭಾಶ್ರಯತ್ವದ ಆವಶ್ಯಕತೆಯಿಲ್ಲವು. ಬ್ರಹ್ಮವಿದ್ಯೆಗಳಲ್ಲಿ ಈ ಕ್ರಮವು ಉಂಟು.

**ಮೂಲಕ್ಕೆ ಅರ್ಥವು** :—ಅನಂತರ ಯೋಗದೆಶೆಯನ್ನು ಹೇಳುವವರಾಗಿ ಆತ್ಮನು ಜ್ಞಾನಸ್ವರೂಪವಾಗಿ ಜ್ಞಾನ ಧರ್ಮವನ್ನು ಹೊಂದಿರುವದರಿಂದ, ಯೋಗಿಯ ಮನಸ್ಸು ಐಹಿಕಗಳಲ್ಲಿ ಪ್ರವರ್ತಿಸದೇ ಇರುವದರಿಂದ, ಈ ಆತ್ಮನ ಜ್ಞಾನವನ್ನು ಕದಲಿಸಲಾರದೆಂದು ಹೇಳಿ, ಅದಕ್ಕೆ ವೇದಾಂತಿಗಳು ಕೊಡುವ ಒಂದು ಒಳ್ಳೇ ದೃಷ್ಟಾಂತವನ್ನು ಕೊಟ್ಟಿರುತ್ತಾರೆ. **ಯೋಗಿನಃ**-ಇಂದ್ರಿಯ ನಿಗ್ರಹಾದಿಗಳನ್ನು ಮಾಡಿ ಕರ್ಮಯೋಗಿಯಾಗಿರುವ, ಮತ್ತು **ಯತಚಿತ್ತಸ್ಯ** - ನಿಯಮಿಸಲ್ಪಟ್ಟ ಚಿತ್ತವೃತ್ತಿಯುಳ್ಳ, ಅಥವಾ ಆತ್ಮಾ ಒಂದರಲ್ಲೇ ಇಡಲ್ಪಟ್ಟ ಚಿತ್ತವೃತ್ತಿಯುನ್ನುಳ್ಳ, **ಯೋಗಂ ಯುಂಜತಃ** - ಆತ್ಮಧ್ಯಾನವನ್ನು ಅನುಷ್ಠಿಸುತ್ತಿರುವವನ, **ಆತ್ಮನಃ**-ಆತ್ಮಾವಿಗೆ, ಕದಲದೇ ಪ್ರಕಾಶಿಸುತ್ತಿರುವ ದೀಪವು ದೃಷ್ಟಾಂತವೆಂದು ಹೇಳುತ್ತಾರೆ. **ನಿವಾತಸ್ಥಃ ದೀಪಃ** - ಗಾಳಿ ಬೀಸದಿರುವ ಸ್ಥಳದಲ್ಲಿರುವ ದೀಪವು, **ಯಥಾ** - ಹೇಗೆ, **ನೇಙ್ಗತೇ** - ಅಲ್ಲಾಡುವದಿಲ್ಲವೋ, **ಸಃ** – ಅಂತಹ, **ಉಪಮಾ** - ದೃಷ್ಟಾಂತವು, **ಸ್ಮೃತಾ** - ವೇದಾಂತಿಗಳಿಂದ ಹೇಳಲ್ಪಟ್ಟಿರುತ್ತದೆ. ಅಥವಾ ಆದಿತ್ಯದೃಷ್ಟಾಂತ ಮೊದಲಾದವುಗಳಿಂದ, ಸ್ಮೃತಿಯಾದ ಈ ಗ್ರಂಥದಲ್ಲೇ ಹೇಳಲ್ಪಟ್ಟದೆ ಎಂಬ ಭಾವವಾಗಲಿ ಆಗಬಹುದು. ಯೋಗಶಾಸ್ತ್ರವನ್ನರಿತಿರುವ ಪ್ರಾಜ್ಞರು, ಯೋಗದೆಶೆಯಲ್ಲಿರುವ ಕರ್ಮಯೋಗಿಯ ಧರ್ಮಭೂತಜ್ಞಾನ ವಿಶಿಷ್ಟ ಆತ್ಮಸ್ವರೂಪವು, ಇಂದ್ರಿಯಮನಸ್ಸುಗಳೆಲ್ಲವೂ ಆತನಿಗೆ ವಶವಾಗಿರುವದರಿಂದ ಗಾಳಿಯಿಲ್ಲದ ಪ್ರದೇಶದಲ್ಲಿ ದೀಪವು ಹೇಗೆ ಅಲ್ಲಾಡದೇಇರುತ್ತದೋ,ಹಾಗೆ ನಿಶ್ಚಲವಾಗಿ ಪ್ರಕಾಶಿಸುತ್ತದೆ ಎಂಬ ಭಾವವು. ತೇಜಸ್ಸುಳ್ಳ ದೀಪಕ್ಕೂ ಜ್ಞಾನ ಪ್ರಭೆಯನ್ನು ಹೊಂದಿದ ಕರ್ಮಯೋಗಿಯ ಆತ್ಮಾವಿಗೂ, ಗಾಳಿಯಿಲ್ಲದ ದೆಶೆಗೂ ಯತಚಿತ್ತದೆಶೆಗೂ, ದೃಷ್ಟಾಂತ ದಾರ್ಷ್ಟಾಂತಿಕಗಳೆಂದು ಭಾವಿಸತಕ್ಕದ್ದು. ಗಾಳಿಯು ಹೇಗೆ ದೀಪವನ್ನು ಕದಲಿಸಿ ಅದರ ಪ್ರಭೆಗೆ ಕುಂದಕ ಮಾಡುತ್ತದೋ, ಹಾಗೆಯೇ ಮನೋ ವ್ಯಾಪಾರಗಳೂಕೂಡ ಜ್ಞಾನಸ್ವರೂಪನಾದ ಆತ್ಮಾವನ್ನು ಕದಲಿಸಿ ಧರ್ಮಭೂತಜ್ಞಾನ ವಿಕಾಸಕ್ಕೆ ನ್ಯೂನತೆಯನ್ನುಂಟುಮಾಡುತ್ತದೆಂಬರ್ಥವನ್ನೂ ಊಹಿಸಬಹುದು. ಆದರೆ ಕರ್ಮಯೋಗಿಯಾಗಿ ಯತಚಿತ್ತನಾದವನಿಗೆ ಇಂತಹ ಮರ್ದಶೆಯಿಲ್ಲದೆ ಜ್ಞಾನವಿಕಾಸಕ್ಕೆ ನ್ಯೂನತೆಯಿಲ್ಲದೆ ನಿಶ್ಚಲನಾಗಿ ಪ್ರಕಾಶಿಸುತ್ತಿರುವನೆಂದು ಹೇಳಲ್ಪಟ್ಟಿತು. ॥೧೯॥

ಭಾ. ನಿವಾತಸ್ಥೋ ದೀಪೋ ಯಥಾ ನೇಙ್ಗತೇ-ನ ಚಲತಿ, ಅಚಲ ಸ್ಸಪ್ರಭ ಸ್ತಿಷ್ಠತಿ, ಯತಚಿತ್ತಸ್ಯ – ನಿವೃತ್ತ ಸಕಲೇತರ ಮನೋವೃತ್ತೇಃ, ಯೋಗಿನಃ, ಆತ್ಮನಿ ಯೋಗಂ ಯುಂಜತಃ, ಆತ್ಮಸ್ವರೂಪಸ್ಯ ಸೋಪಮಾ ; ನಿವಾತಸ್ಥತಯಾ ನಿಶ್ಚಲ ಸಪ್ರಭ ದೀಪವ ನ್ನಿವೃತ್ತ ಸಕಲೇತರ ಮನೋವೃತ್ತಿತಯಾ ನಿಶ್ಚಲೋ ಜ್ಞಾನ ಪ್ರಭ ಆತ್ಮಾತಿಷ್ಠತೀತ್ಯರ್ಥಃ ॥ ೧೯ ॥

---

ಭಾಷ್ಯಾರ್ಥವು:—ಈಗ ಯೋಗದೆಶೆಯು ಹೇಳಲ್ಪಡುತ್ತದೆ. ನಿವಾತಸ್ಥೋ ದೀಪಃ – ಗಾಳಿ ಬೀಸದಿರುವ ಸ್ಥಳದಲ್ಲಿರುವ ದೀಪವು, ಯಥಾ ನೇಙ್ಗತೇ ಎಂದರೆ ನ ಚಲತಿ-ಕದಲುವದಿಲ್ಲವೋ, ಅಚಲ ಸ್ಸಪ್ರಭ ಸ್ತಿಷ್ಠತಿ - ಚಲಿಸದೆ ಪ್ರಕಾಶದಿಂದ ಕೂಡಿದುದಾಗಿರುತ್ತದೋ, ಯತಚಿತ್ತಸ್ಯ ಎಂದರೆ ನಿವೃತ್ತ ಸಕಲೇತರ ಮನೋವೃತ್ತೇಃ - ಆತ್ಮಾವಲ್ಲದೆ ಇತರ ಸಮಸ್ತಗಳಲ್ಲೂ ಆಶೆಯು ತೊರೆದುಹೋದ ಮನೋ ವ್ಯಾಪಾರವುಳ್ಳ, ಇಲ್ಲಿ ಯತಚಿತ್ತಸ್ಯ ಎಂದರೆ ಪ್ರಯತ್ನಿಸಿದ ಚಿತ್ತವುಳ್ಳ ಎಂಬರ್ಥವಲ್ಲವು, ಸಂಯತ ಚಿತ್ತಸ್ಯ ಎಂಬುದು ಅರ್ಥವಾದುದರಿಂದ, ನಿವೃತ್ತ ಸಕಲೇತರ ಮನೋವೃತ್ತಿಃ ಎಂಬ ಭಾಷ್ಯವು; ಅಥವಾ ಆತ್ಮಚಿಂತನ ಪ್ರಯತ್ನದಲ್ಲಿ ಮಾತ್ರವೇ ಚಿತ್ತವೃತ್ತಿಯುಳ್ಳ, ಎಂಬರ್ಥವಾಗಲಿ ಆಗಬಹುದು. ಯೋಗಿನಃ - ಕರ್ಮಯೋಗಿಯಾದ, ಆತ್ಮನಿ ಯೋಗಂ ಯುಂಜತಃ - ಆತ್ಮಧ್ಯಾನವನ್ನೇ ಅನುಷ್ಠಿಸುತ್ತಿರುವವನಿಗೆ, ಆತ್ಮಸ್ವರೂಪಸ್ಯ-ಇದು ಮೂಲದ ಆತ್ಮನಃ ಎಂಬುದರ ವ್ಯಾಖ್ಯಾನವು, ಧರ್ಮಭೂತ ಜ್ಞಾನದಿಂದಕೂಡಿ ಜ್ಞಾನಸ್ವರೂಪನಾಗಿರುವ ಆತ್ಮಸ್ವರೂಪಕ್ಕೆ, ಸೋಪಮಾ - ಅದು ಒಳ್ಳೇ ದೃಷ್ಟಾಂತವು. ದೃಷ್ಟಾಂತದಾರ್ಷ್ಟಾಂತಿಕಗಳನ್ನು ಚನ್ನಾಗಿ ಉಪಪಾದಿಸಿ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ:—ನಿವಾತಸ್ಥತಯಾ - ಗಾಳಿ ಬೀಸದೇ ಇರುವ ಸ್ಥಳದಲ್ಲಿರುವದರಿಂದ, ನಿಶ್ಚಲ ಸಪ್ರಭ ದೀಪವತ್-ಕದಲದಿರುವದರಿಂದ ಪ್ರಕಾಶದಿಂದ ಕೂಡಿರುವ ದೀಪದಹಾಗೆ, ನಿವೃತ್ತ ಸಕಲೇತರ ಮನೋವೃತ್ತಿತಯಾ - ಆತ್ಮಾವಲ್ಲದೆ ಸಮಸ್ತ ಇತರ ವಸ್ತುಗಳಿಂದಲೂ ನಿವರ್ತಿಸಿ ಹೋದ ಮನೋವ್ಯಾಪಾರವನ್ನು ಹೊಂದಿರುವದರಿಂದ, ಆತ್ಮಾ, ನಿಶ್ಚಲನಾಗಿಯೂ, ಜ್ಞಾನಪ್ರಭಃ - ಜ್ಞಾನಪ್ರಕಾಶವನ್ನುಳ್ಳವನಾಗಿಯೂ, ತಿಷ್ಠತೀತ್ಯರ್ಥಃ - ಇರುತ್ತಾನೆಂಬ ತಾತ್ಪರ್ಯವು ; ವ್ಯಾಸಸೂತ್ರದಲ್ಲಿ ಆತ್ಮನ ಜ್ಞಾನದ ನಿಶ್ಚಲತ್ವಕ್ಕೆ ದೀಪದೃಷ್ಟಾಂತವನ್ನು ಕೊಟ್ಟಿರುವದು ದೀಪವು ಹೇಗೆ ತೇಜೋರೂಪವಾಗಿ ತೇಜೋರೂಪಗುಣವನ್ನೂ ಹೊಂದಿರುತ್ತದೋ, ಹಾಗೆಯೇ ಆತ್ಮನೂ ಸ್ವಯಂಪ್ರಕಾಶವಾದ ಜ್ಞಾನಸ್ವರೂಪನಾಗಿ ಸ್ವಯಂಪ್ರಕಾಶವಾದ ಜ್ಞಾನಗುಣವನ್ನು ಹೊಂದಿರುವನೆಂದು ಭಾವಿಸತಕ್ಕದ್ದು. ಆಕಾರಣದಿಂದಲೇ ಹಿಂದೆ (ಅ. ೧೬) ನೆಯ ಶ್ಲೋಕದಲ್ಲಿ ಆತ್ಮಾವಿಗೆ ಆದಿತ್ಯದೃಷ್ಟಾಂತವು ಕೊಡಲ್ಪಟ್ಟಿರುತ್ತದೆ. ಸೂರ್ಯನ ಸ್ವರೂಪವೂ ತೇಜಸ್ಸೂ; ವಿಶೇಷಣವಾದ ಕಿರಣಗಳೂ ತೇಜಸ್ಸೂ; ಹೀಗೆ ಆದಿತ್ಯ ದೃಷ್ಟಾಂತವೂಕೂಡ ಆತ್ಮಾವಿಗೆ ಸಮಂಜಸವಾದುದು; ಹಾಗಲ್ಲದೆ ನಿಶ್ಚಲತ್ವಕ್ಕೆ ಮಾತ್ರವೇ ದೃಷ್ಟಾಂತ ಬೇಕಾಗಿದ್ದರೆ ಪರ್ವತವು ಉತ್ತಮ ದೃಷ್ಟಾಂತವಾಗುತ್ತಿತ್ತು. ಯತಚಿತ್ತಸ್ಯ ಎಂಬಲ್ಲಿ ತೋರಿಬರುವ ಚಿಂತನರೂಪ ಪ್ರವೃತ್ತಿಯು ಆತ್ಮಾವಿನಲ್ಲಿ ಮಾತ್ರವೇ ಇರಬೇಕೆಂಬ ಮತ್ತು ಆತ್ಮೇತರ ವಸ್ತುಗಳಲ್ಲಿ ಯಾವುದರಲ್ಲೂ ಇರಕೂಡದೆಂಬಭಿಪ್ರಾಯದಿಂದ, ನಿವೃತ್ತ ಸಕಲೇತರ ಮನೋವೃತ್ತಿತಯಾ ಎಂದು ವ್ಯಾಖ್ಯಾನಮಾಡಲ್ಪಟ್ಟಿತು. ಆತ್ಮನಃ ಸೋಪಮಾ, ಎಂಬಲ್ಲಿ ದೇಹದ ನಿಷ್ಕಂಪತ್ವವು ಇಲ್ಲಿ ಉಪೇಕ್ಷ್ಯವಲ್ಲವೆಂದು ತಿಳಿಸಲು, ಆತ್ಮಶಬ್ದವು ಜೀವಾತ್ಮಸ್ವರೂಪವನ್ನು ಬೋಧಿಸುತ್ತದೆಂದು ವ್ಯಾಖ್ಯಾನಮಾಡಿದರು. ಆತ್ಮಸ್ವರೂಪವೆಂದು ಹೇಳುವದರಲ್ಲಿ ಇನ್ನೊಂದು ಅಭಿಪ್ರಾಯವುಂಟು. ಇಲ್ಲಿ ಯಾವುದರ ನಿಷ್ಕಂಪತ್ವವು

ಮೂ. ಯತ್ರೋಪರಮತೇ ಚಿತ್ತಂ ನಿರುದ್ಧಂಯೋಗ ಸೇವಯಾ ।
ಯತ್ರ ಚೈವಾತ್ಮನಾಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦.
ಸುಖಮಾತ್ಯನ್ತಿಕಂ ಯತ್ತದ್ಬುದ್ಧಿಗ್ರಾಹ್ಯ ಮತೀನ್ದ್ರಿಯಮ್ ।
ವೇತ್ತಿ ಯತ್ರ ನಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧.
ಯಂ ಲಬ್ಧ್ವಾ ಚಾಪರಂ ಲಾಭಂಮನ್ಯತೇ ನಾಧಿಕಂತತಃ ।
ಯಸ್ಮಿನ್ ಸ್ಥಿತೋ ನದುಃಖೇನ ಗುರುಣಾಪಿ ವಿಚಾಲ್ಯತೇ ॥ ೨೨.
ತಂ ವಿದ್ಯಾ ದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।
ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥ ೨೩.

ಹೇಳಲ್ಪಟ್ಟಿತೆಂದು ನಾವು ಚನ್ನಾಗಿ ವಿಮರ್ಶಿಸಿ ನೋಡಿದರೆ ಮನಸ್ಸಿನ ಮೂಲಕ ಬುದ್ಧಿಯ ನಿಷ್ಕಂಪತ್ವವು. ಗಾಳಿಯ ಸ್ಥಾನದಲ್ಲಿರುವ ಈ ಮನಸ್ಸೇ ಬುದ್ಧಿಯ ಕಂಪನಕ್ಕೆ ಹೇತುವು, ಆತ್ಮಾವಿನ ಕಂಪನತ್ವವಲ್ಲವು. ಅದು ಯಾವಾಗಲೂ ಸ್ಥಿರವಾದುದೇ, ಅದಕ್ಕೆ ಕಂಪನವಿಲ್ಲವು. ಆದುದರಿಂದ ಆತ್ಮಾವಿನ ಸ್ವರೂಪಕ್ಕೇ ಸೇರಿದ ಧರ್ಮಭೂತಜ್ಞಾನದ ಸಂಕೋಚ ವಿಕಾಸ ಮೂಲಕ ಕಂಪನವು. ಇದು ಇಲ್ಲದಿರುವ ಆತ್ಮಸ್ವರೂಪವೇ ಉದ್ದೇಶ್ಯವಾದುದರಿಂದ, ಆತ್ಮನಃ ಸೋಪಮಾ ಎಂಬುದಕ್ಕೆ ಆತ್ಮಸ್ವರೂಪಸ್ಯ ಎಂದು ವ್ಯಾಖ್ಯಾನಮಾಡಿರುತ್ತಾರೆ. ಉಪಮಾ ಎಂಬುದಕ್ಕೆ ದೃಷ್ಟಾಂತವನ್ನು ಹೊಂದಿದ ಸಾಧರ್ಮ್ಯವೆಂಬರ್ಥವು. ಈ ಅಭಿಪ್ರಾಯವನ್ನೇ ವ್ಯಕ್ತಪಡಿಸುವದಕ್ಕಾಗಿ ಭಾಷ್ಯದ ಕೊನೆಯವಾಕ್ಯದಿಂದ ದೃಷ್ಟಾಂತ ದಾರ್ಷ್ಟಾಂತಿಕ ನಿರ್ಧಾರಣೆ ಯೆಂದು ಭಾವಿಸತಕ್ಕದ್ದು.

**ಮೂಲಕ್ಕೆ ಅರ್ಥವು:—** ಯೋಗಸಿದ್ಧಿಯು ಎಂಥಾದ್ದೆಂಬುವನ್ನು ಮುಂದಿನ ಮೂರು ಶ್ಲೋಕದಿಂದ ಕೊಂಡಾಡುವವರಾಗಿ, ನಾಲ್ಕನೆಯ ಶ್ಲೋಕದಲ್ಲಿ ಅಂತಹ ಯೋಗವನ್ನೀಗ ಅಭ್ಯಸಿಸತಕ್ಕದ್ದೆಂದು ಉಪದೇಶಿಸಿರುತ್ತಾರೆ. ಮೂರು ಶ್ಲೋಕಗಳಲ್ಲಿಯೂ ಯೋಗಮಾಹಾತ್ಮ್ಯೆ ಎಂತಾದ್ದೆಂದು ತಿಳಿಸುವದಕ್ಕಾಗಿ ಯಚ್ಛಬ್ದವೂ, ನಾಲ್ಕನೆಯದರಲ್ಲಿ ಅಂತಹ ಯೋಗವನ್ನು ಅಭ್ಯಸಿಸತಕ್ಕದ್ದೆಂದು ತಚ್ಛಬ್ದವೂ ಇರುವವರಿಂದ ಈ ನಾಲ್ಕು ಶ್ಲೋಕಗಳೂ ಒಟ್ಟಿಗೆ ವ್ಯಾಖ್ಯಾನ ಮಾಡಲ್ಪಟ್ಟಿವೆ. **ಯತ್ರ** - ಯಾವ ಯೋಗದಲ್ಲಿ, **ಯೋಗ ಸೇವಯಾ** ಇದು ಕರಣ ತೃತೀಯೆ ಯಲ್ಲವು, ಹೇತು ತೃತೀಯೆಯು, ಯೋಗವನ್ನು ಸೇವಿಸುವ ಕಾರಣದಿಂದ ಎಂದರೆ ಯೋಗ ಸೇವಿಸುವದಕ್ಕಾಗಿ, **ನಿರುದ್ಧಂ ಚಿತ್ತಂ** - ನಿರೋಧಿಸಲ್ಪಟ್ಟ ಮನಸ್ಸು, **ಯತ್ರ** - ಯಾವಯೋಗದಲ್ಲಿ, **ಉಪರಮತೇ** - ಹೆಚ್ಚಾಗಿ ರಮಿಸುತ್ತದೋ ಎಂದರೆ ಯೋಗವೇ ಪರಮ ಸುಖರೂಪವಾದುದೆಂದು ಅದರಲ್ಲೇ ರಮಿಸುತ್ತದೋ, ಮತ್ತು **ಯತ್ರ ಚ** - ಯಾವ ಯೋಗದಲ್ಲಾದರೋ, **ಆತ್ಮನಾ** - ಮನಸ್ಸಿನಿಂದ, **ಆತ್ಮಾನಂ ಪಶ್ಯನ್** - ತನ್ನ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸುವವನಾಗಿ, **ಆತ್ಮನಿ** - ಅಂತಹ ಪರಿಶುದ್ಧ ಜ್ಞಾನಸ್ವರೂಪನಲ್ಲೇ. **ತುಷ್ಯತಿ** - ಹರ್ಷಿಸುವನೋ; **ಯತ್ರ ಚ**-ಯಾವ ಯೋಗದಲ್ಲೇ, **ಯತ್ತತ್**-ಯಾವ ತುಂಬಾ ಪ್ರಸಿದ್ಧವಾದ,ಅಂತಹ **ಅತೀಂದ್ರಿಯಂ** - ಯಾವ ಇಂದ್ರಿಯಗಳ ಆವಶ್ಯಕತೆಯು ಬೇಕಾಗದೆ ಅವುಗಳಿಂದುಂಟಾಗುವ ಸುಖಕ್ಕಿಂತಲೂ ಮೇಲಾದುದಾಗಿ, **ಬುದ್ಧಿಗ್ರಾಹ್ಯಂ** - ಧರ್ಮಭೂತ ಜ್ಞಾನದ ಮೂಲಕವೇ ಅನುಭವಿಸಬಹುದಾದ, **ಆತ್ಯನ್ತಿಕಂ ಸುಖಂ** - ಪುನಃ ದುಃಖ ಸಂಬಂಧವೇ ಇಲ್ಲದ ಪರಮಸುಖವನ್ನು, **ವೇತ್ತಿ** - ತಿಳಿಯುವನೋ, ಎಂದರೆ ಅನುಭವಿಸುವನೋ, **ಯತ್ರ ಚ** - ಯಾವ ಯೋಗ

ಭಾ. ಯೋಗಸೇವಯಾ ಹೇತುನಾ ಸರ್ವತ್ರ ನಿರುದ್ಧಂ ಚಿತ್ತಂ ಯತ್ರಯೋಗೇ ಉಪ ರಮತೇ – ಅತಿಶಯಿತ ಸುಖ ಮಿದ ಮಿತಿ ರಮತೇ ; ಯತ್ರ ಚ ಯೋಗೇ ಆತ್ಮನಾ-

ದಲ್ಲೇ ಇಲ್ಲಿ ಯತ್ರ ಶಬ್ದವು ಶ್ಲೋಕದ ಎರಡು ವಾಕ್ಯಗಳಿಗೂ ಮಧ್ಯೆ ಇರುವದರಿಂದ ಎರಡು ವಾಕ್ಯಗಳಿಗೂ ಅನ್ವಯಿಸತಕ್ಕದ್ದು,ಸ್ಥಿತಃ ಇರುವವನಾಗಿ, ಅಯಂ-ಈ ಯೋಗಿಯು,ತತ್ತ್ವತಃ-ಆ ಯಥಾರ್ಥ ಸರವು ಸುಖಾವಸ್ಥೆಯಿಂದ, ನ ಚಲತಿ-ಕದಲುವದಿಲ್ಲವೋ, ಯಂ-ಯಾವ ಇಂತಹ ಯೋಗವನ್ನು, ಲಬ್ಧ್ವಾ - ಪಡೆದು, ತತಃ - ಆ ಅತ್ಯನ್ತಿಕ ಸುಖರೂಪವಾದ ಯೋಗಕ್ಕಿಂತಲೂ, ಅಪರಂ – ಬೇರೆಯಾಗಿ, ಅಧಿಕಂ - ಹೆಚ್ಚಾದ, ಲಾಭಂ - ಪ್ರಯೋಜನ ಉಂಟೆಂದು, ನ ಮನ್ಯತೇ – ಎಣಿಸುವದಿಲ್ಲವೋ; ಯಸ್ಮಿನ್ - ಯಾವ ಈ ಯೋಗದಲ್ಲಿ, ಸ್ಥಿತಃ – ಇರುವವನಾಗಿ, ಗುರುಣಾಪಿ ದುಃಖೇನ - ಮಹತ್ತರವಾದ ದುಃಖದಿಂದಲೂ ಕೂಡ, ನ ವಿಚಾಲ್ಯತೇ-ಮನೋವಿಕಾರವನ್ನು ಹೊಂದದಹಾಗೆ ಕದಲುವದಿಲ್ಲವೋ, ದುಃಖಸಂಯೋಗ ವಿಯೋಗಮ್-ದುಃಖ ಸಂಬಂಧಕ್ಕೆ ಅವಕಾಶವೇ ಇಲ್ಲದಿರುವ, ತಂ - ಅಂತಹ ಯೋಗವನ್ನೀಗ, ಯೋಗ ಸಞ್ಜಿತಂ - ಯೋಗ ಶಬ್ದದಿಂದ ಹೇಳಲ್ಪಡುತ್ತದೆಂದು, ವಿದ್ಯಾತ್ - ತಿಳಿಯತಕ್ಕದ್ದು, ಇಂತಹ ಯೋಗವೀಗ ಯೋಗಶಬ್ದದಿಂದ ಹೇಳಲ್ಪಡಲು ಯೋಗ್ಯವಾದುದು; ಇಂತಹ ಲಕ್ಷಣಗಳಿಲ್ಲದ ಯೋಗವು ಯೋಗವೆಂದು ಹೇಳಿಸಿಕೊಳ್ಳಲು ಅರ್ಹವಲ್ಲವೆಂಬ ಭಾವವು. ಸಃ ಯೋಗಃ-ಅಂತಹ ಯೋಗವೀಗ, ನಿಶ್ಚಯೇನ – ಈ ಮೇಲೆ ಹೇಳಿದ ಲಕ್ಷಣವುಳ್ಳದ್ದೆಂಬ ನಿಶ್ಚಯ ಜ್ಞಾನದಿಂದ, ಅನಿರ್ವಿಣ್ಣಚೇತಸಾ - ಉತ್ಸಾಹಯುಕ್ತವಾದ ಮನಸ್ಸಿನಿಂದ, ಯೋಕ್ತವ್ಯಃ - ಅಭ್ಯಾಸಮಾಡತಕ್ಕದ್ದು. ೨೦. ೨೧. ೨೨ ಈ ಮೂರು ಶ್ಲೋಕಗಳಿಂದಲೂ, ಯೋಗದ ಸರಿಯಾದ ಲಕ್ಷಣಗಳು ಹೇಳಲ್ಪಟ್ಟವು.—

೧. ಮನಸ್ಸು ವಿಷಯಗಳಿಂದ ನಿರೋಧಿಸಲ್ಪಟ್ಟು ಯಾವ ಯೋಗದಲ್ಲೇ ರಮಿಸುತ್ತದೋ,

೨. ಯಾವ ಯೋಗದಲ್ಲಿ ಧರ್ಮಭೂತ ಜ್ಞಾನದಿಂದ ತನ್ನ ಆತ್ಮಾವನ್ನು ಸಾಕ್ಷಾತ್ಕರಿಸಲು ಯತ್ನಿಸುವನಾಗಿ, ಆ ಆತ್ಮನಲ್ಲೇ ತುಷ್ಟಿಯು ಲಭಿಸುತ್ತದೋ,

೩. ಐಹಿಕ ಸುಖಗಳಿಗಿಂತಲೂ ವಿಲಕ್ಷಣವಾಗಿ ಇಂದ್ರಿಯ ಮನಸ್ಸುಗಳಿಗೂ ಮೀರಿದ ಸುಖಾತಿಶಯವು ಯಾವುದರಲ್ಲಿ ಧರ್ಮಭೂತ ಜ್ಞಾನದಮೂಲಕ ಗ್ರಹಿಸಲ್ಪಡುತ್ತದೋ,

೪. ಯಾವ ಯೋಗದಲ್ಲಿರುವವನಿಗೆ ಅದರಲ್ಲಿರುವ ಸುಖಾತಿರೇಕದಿಂದ ಅದರಿಂದ ಕದಲುವದಿಲ್ಲವೋ,

೫. ಯಾವ ಯೋಗದಲ್ಲಿ ಆತ್ಮಾನುಭವಕ್ಕಿಂತ ಮೇಲಾದ ಪ್ರಯೋಜನವು ಇಲ್ಲವೆಂದು ತಿಳಿಯಲ್ಪಟ್ಟಿರುತ್ತದೋ,

೬. ಯಾವ ಯೋಗಾಭ್ಯಾಸದಲ್ಲಿರುವವನಿಗೆ ಎಂತಹ ಹೆಚ್ಚಾದ ದುಃಖಪ್ರಾಪ್ತವಾದರೂ ಮನೋವಿಕಾರ ಉಂಟಾಗುವದಿಲ್ಲವೋ,

ಇಂತಹ ಆರು ಲಕ್ಷಣಗಳುಳ್ಳದ್ದೇ ಯೋಗವೆಂಬ ಶಬ್ದದಿಂದ ಹೇಳಲ್ಪಡಲು ಅರ್ಹವೆಂದು ಹೇಳಿ, ಅಂತಹ ಯೋಗವೀಗ ಅಭ್ಯಸಿಸತಕ್ಕದ್ದೆಂದು ಉಪದೇಶಿಸಿರುತ್ತಾರೆ.

ಭಾಷ್ಯಾರ್ಥವು :—ಯೋಗದೆಶೆಯ ಮಾಹಾತ್ಮ್ಯೆಯನ್ನುಪಪಾದಿಸುವವರಾಗಿ ಪರಮ ಪುರುಷಾರ್ಥಕ್ಕೆ ಅದು ಸಾಧನವೂ ಅಲ್ಲದೆ, ಅದರಲ್ಲಿರುವ ನಿರತಿಶಯಾನಂದವು ಮಹತ್ತಾದುದೆಂದು ಆರು ವಾಕ್ಯಗಳ ಮೂಲಕ ಉಪದೇಶಿಸುತ್ತಾರೆ.—(೧) ಯೋಗಸೇವಯಾ - ಎಂಬುದು ಕರಣ ತೃತೀಯೆಯಲ್ಲವ, ಹೇತ್ವರ್ಥವಾದುದೆಂದು ತಿಳಿಸುವದಕ್ಕಾಗಿ, ಯೋಗ ಸೇವಯಾ ಹೇತುನಾ ಎಂಬ ವ್ಯಾಖ್ಯಾನವು ಎಂದರೆ ಯೋಗಸೇವಾಕಾರಣಕ್ಕಾಗಿ, ಯೋಗಸೇವೆಗಾಗಿ,

ಭಾ. ಮನಸಾ ಆತ್ಮಾನಂ ಪಶ್ಯನ್ ಅನ್ಯನಿರಪೇಕ್ಷ ಮಾತ್ಮನ್ಯೇವ ತುಷ್ಯತಿ ; ಯತ್ತದ ತೀಂದ್ರಿಯ-ಮಾತ್ಮಬುದ್ಧ್ಯೈಕಗ್ರಾಹ್ಯ ಮಾತ್ಯನ್ತಿಕಂ ಸುಖಂ ಯತ್ರ ಚ ಯೋಗೇ ವೇತ್ತಿ - ಅನುಭವತಿ ; ಯತ್ರ ಚ ಯೋಗೇ ಸ್ಥಿತಃ ಸುಖಾತಿರೇಕೇಣ ತತ್ತ್ವತಃ -

---

ಎಂಬ ತಾತ್ಪರ್ಯವು; ಸರ್ವತ್ರ ನಿರುದ್ಧಂ ಚಿತ್ತಂ - ಸಮಸ್ತ ವಿಷಯಗಳಲ್ಲೂ ನಿರೋಧಿಸಲ್ಪಟ್ಟ ಎಂದರೆ ತಡೆಯಲ್ಪಟ್ಟ ಮನಸ್ಸು, ಯತ್ರ ಯೋಗೇ - ಯಾವ ಆತ್ಮ ಚಿನ್ತನೆಯಲ್ಲಿ, ಉಪರ ಮತೇ ಎಂದರೆ ಅತಿಶಯಿತ ಸುಖಮಿದ ಮಿತಿ ರಮತೇ - ಅತಿಶಯವಾದ ಸುಖವಿದು ಎಂದು ರಮಿಸುತ್ತದೋ, ಉಪ ಎಂಬ ಉಪಸರ್ಗದ ಅರ್ಥವು ಸಮೀಪದಲ್ಲಿ ಎಂದಾಗುವದರಿಂದ, ಆತ್ಮ ಸಮೀಪದಲ್ಲೇ ರಮಿಸುತ್ತದೋ, ಎಂದರೆ ಅದೇ ಅತಿಶಯ ಸುಖವೆಂದು ರಮಿಸುತ್ತದೋ ಎಂಬ ಭಾವವು; ಇಲ್ಲಿ ಯತ್ರ ಶಬ್ದಕ್ಕೆ ಯಸ್ಮಿನ್ ಕಾಲೇ ಎಂದು ಕೆಲವರು ವ್ಯಾಖ್ಯಾನಮಾಡಿರುತ್ತಾರೆ, ಆದರೆ ಯಚ್ಛಬ್ದದ ಪ್ರತಿದ್ವಂದಿಯು, ತಂ ಯೋಗ ಸಂಜ್ಞಿತಂ ಎಂದಿರುವದರಿಂದ, ಯತ್ರ ಎಂಬುದಕ್ಕೆ ಯತ್ರಯೋಗೇ ಎಂದು ವ್ಯಾಖ್ಯಾನಮಾಡಿರುವದೇ ಸಮಂಜಸವು; ಉಪರ ಮತೇ ಎಂಬುದಕ್ಕೆ ಇತರ ವಿಷಯಗಳಿಂದ ಉಪರತಿಂ ಗಚ್ಛತಿ - ವಿರಾಮವನ್ನು ಹೊಂದುತ್ತ ದೆಂಬರ್ಥವು ಸ್ವಾರಸ್ಯವಲ್ಲವು, ಏಕೆಂದರೆ ಇತರ ವಿಷಯಗಳಿಂದ ಎಂಬುದನ್ನು ಅಧ್ಯಾಹಾರಮಾಡ ಬೇಕಾದುದರಿಂದಲೂ, ನಿರುದ್ಧಂ ಎಂಬುದರ ಪುನರುಕ್ತಿಯಾಗುವದರಿಂದಲೂ ಉಚಿತವಾದ ಅರ್ಥವಾಗುವದಿಲ್ಲವು, ಪ್ರಕರಣವು ಯೋಗಾಭ್ಯಾಸದಿಂದುಂಟಾಗುವ "ಭಜನಸುಖಂ ವಿಪುಲಂ" ಎಂದು ಹೇಳಿರುವ ಆನಂದವು ತುಂಬಾ ಅತಿಶಯವಾದುದೆಂಬ ಸ್ತೋತ್ರರೂಪವಾದುದರಿಂದ ಉಪ ವೆಂಬುದನ್ನು ಉಪಸರ್ಗವಾಗಿ ಭಾವಿಸಿ, ರಮತೇ ಎಂಬುದನ್ನು ಮುಖ್ಯ ಕ್ರಿಯೆಯಾಗಿ ಭಾವಿಸು ವದು ಸರಸವು:(೨) ಯತ್ರ ಚ ಯೋಗೇ-ಯಾವ ಆತ್ಮಚಿನ್ತನದಲ್ಲಿ, ಆತ್ಮನಾ ಎಂದರೆ, ಮನಸಾ- ಮನಸ್ಸಿನಿಂದ, ಆತ್ಮಾನಂ ಪಶ್ಯನ್ - ಜೀವಾತ್ಮ ಸ್ವರೂಪವನ್ನು ಸಾಕ್ಷಾತ್ಕರಿಸುವವನಾಗಿ, ಆತ್ಮ ನ್ಯೇವ ಅನ್ಯ ನಿರಪೇಕ್ಷಂ - ಆತ್ಮಾವಿನಲ್ಲೇ ಎಂದರೆ ಆತ್ಮ ವ್ಯತಿರಿಕ್ತ ಯಾವ ವಿಷಯಗಳಲ್ಲೂ ಅಪೇಕ್ಷೆಯಿಲ್ಲದೆ, ತುಷ್ಯತಿ - ಸಂತೋಷಪಡುವನೋ; ಕೆಲವರು ಆತ್ಮಾನಂ ಪಶ್ಯನ್ ಎಂಬುದರಿಂದ ಭಗವಂತನ ಉಪಾಸನೆ ಮತ್ತು ಸಾಕ್ಷಾತ್ಕಾರವು ಹೇಳಲ್ಪಟ್ಟಿತೆಂದು ಅಭಿಪ್ರಾಯ ಪಡುವರು; ಇದು ಪ್ರಕರಣ ವಿರುದ್ಧವು; ಈಗ ಹೇಳಲ್ಪಡುವದು ಆತ್ಮಚಿನ್ತನೆಯು, ಇದು ಭಕ್ತಿ ಯೋಗದ ಪರಮಾತ್ಮೋಪಾಸನೆಗೆ ಅಙ್ಗವೆಂದು ತಿಳಿಯತಕ್ಕದ್ದು. ಯತ್ರಚೈವ ಎಂಬಲ್ಲಿರುವ ಅವಧಾರಣವು ಆತ್ಮ ವ್ಯತಿರಿಕ್ತವಾದ ಬಾಹ್ಯವಿಷಯಗಳಲ್ಲಿ ಮನಸ್ಸಿರಕೂಡದೆಂಬ ವ್ಯಾವೃತ್ತಿ ಯಿಂದ ಚಿತ್ತಂ ನಿರುದ್ಧಂ ಎಂಬಲ್ಲಿ ತೋರಿಬರುವ ಅರ್ಥವನ್ನೇ ಸಮರ್ಥಿಸಿ ಹೇಳಿರುವದರಿಂದ ಆತ್ಮನಿ ಎಂಬುದರೊಂದಿಗೆ ಸೇರಿಸಿ, ಆತ್ಮನ್ಯೇವ ಎಂದು ವ್ಯಾಖ್ಯಾನಮಾಡಿರುತ್ತಾರೆ. ತುಷ್ಯತಿ ಎಂಬ ಕ್ರಿಯಾಪದದಿಂದಲೂ, ಅವಧಾರಣದಿಂದಲೂ ಹೀಗೆ ತೋರಿಬರುವ ಅರ್ಥವನ್ನೇ ಅನ್ಯ ನಿರಪೇಕ್ಷಂ ಎಂಬುದರಿಂದ ವ್ಯಕ್ತಪಡಿಸಿರುತ್ತಾರೆ (೩) ಯತ್ರ ಎಂದು ೨೧ನೆಯ ಶ್ಲೋಕದಲ್ಲಿ ಎರಡು ವಾಕ್ಯಗಳಿಗೂ ಮಧ್ಯದಲ್ಲಿರುವದರಿಂದ ಕಾಕಾಕ್ಷಿನ್ಯಾಯಪ್ರಕಾರ ಎರಡು ವಾಕ್ಯಗಳಿಗೂ ಅನ್ವಯಿಸತಕ್ಕದ್ದು. ಯತ್ರ - ಯಾವ ಯೋಗದಲ್ಲಿ, ಯತ್ತತ್ - ಯಾವುದು, ತುಷ್ಯತಿ ರಮತೇ ಇತ್ಯಾದಿ ಪದಗಳಿಂದ ಸುಖರೂಪವಾದುದೆಂದು ಸ್ತುತಿಸಲ್ಪಟ್ಟಿತೋ ಅಂತಹ ಮಹಿಮೆಯುಳ್ಳ; ಅತೀಂದ್ರಿಯಂ - ಇಂದ್ರಿಯಗಳೂ, ಮನಸ್ಸೂ ಇವುಗಳಿಂದಲೂ ಗ್ರಾಹ್ಯವಲ್ಲದೆ, ಬುದ್ಧ್ಯೈಕ ಗ್ರಾಹ್ಯಂ - ಆತ್ಮಾವಿನ ಧರ್ಮಭೂತ ಜ್ಞಾನ ಎಂದರೆ ಮೂಲಕವಾಗಿಯೇ ಗ್ರಹಿಸಬಹುದಾದ, ಆತ್ಯನ್ತಿಕಂ ಸುಖಂ - ಬರೀ ನಿರತಿಶಯಾನಂದರೂಪ ಸುಖವನ್ನು ಎಂದರೆ ದುಃಖ ಗಂಧವೇ

ಭಾ॰ ತತ್ತ್ವಾನ್ನ ಚಲತಿ, ಯಂ ಯೋಗಂ ಲಬ್ಧ್ವಾ ಯೋಗಾದ್ವಿರತಸ್ತಮೇವ ಕಾಂಕ್ಷಮಾಣೋ ನಾಪರಂ ಲಾಭಂ ಮನ್ಯತೇ, ಯಸ್ಮಿಂಶ್ಚ ಯೋಗೇ ಸ್ಥಿತೋ ವಿರತೋಽಪಿ ಗುಣವತ್ಪುತ್ರ ವಿಯೋಗಾದಿನಾ ಗುರುಣಾಪಿ ದುಃಖೇನ ನವಿಚಾಲ್ಯತೇ, ತಂ ದುಃಖ ಸಂಯೋಗ ವಿಯೋಗಂ - ದುಃಖಸಂಯೋಗ ಪ್ರತ್ಯನೀಕಾಕಾರಂ, ಯೋಗಶಬ್ದಾಭಿ

ಇಲ್ಲದಹಾಗೆ, ವೇತ್ತಿ - ಅನುಭವಿಸುವನೋ, ಬುದ್ಧಿಗ್ರಾಹ್ಯ ಕಗ್ರಾಹ್ಯಂ ಎಂಬ ಪ್ರಯೋಗದಿಂದ ಸುಖವು ಆತ್ಮಗುಣವೇ ವಿನಾದೇಹಮಾತ್ರದಿಂದುಂಟಾಗುವ ಗುಣವಲ್ಲವೆಂದುಬೋಧಿಸಲ್ಪಟ್ಟಿತು ; ಸುಖಶಬ್ದದಿಂದ ಪರಮ ಪದದ ಸುಖವು ಇಲ್ಲಿ ಬೋಧಿಸಲ್ಪಟ್ಟಿತು ಎಂಬ ಅಭಿಪ್ರಾಯದ ನಿರಾಸಕ್ಕಾಗಿ ವೇತ್ತಿ ಎಂದರೆ ಅನುಭವತಿ ಎಂದು ವ್ಯಾಖ್ಯಾನಮಾಡಲ್ಪಟ್ಟಿತು. ಇಲ್ಲಿ ಸುಖವು ಯಾವುದು ಎಂದರೆ ತನ್ನ ಆತ್ಮಸ್ವರೂಪಾನುಭವವೇ ಎಂದು ಹಿಂದೆ ಎರಡನೆಯ ವಾಕ್ಯದಲ್ಲಿ ಆತ್ಮನ್ಯೇವತುಷ್ಯತಿ ಎಂದು ಹೇಳಿ, ಇಲ್ಲಿ ಮೂರನೆಯ ವಾಕ್ಯದಲ್ಲಿ ಆತ್ಯಂತಿಕಂ ಸುಖಂವೇತ್ತಿ ಎಂದರೆ ಪುನರುಕ್ತಿಯು ಉಂಟಾಗಲಿಲ್ಲವೇ ಎಂದರೆ ಹಿಂದಿನ ವಾಕ್ಯದಲ್ಲಿ ಬಾಹ್ಯವಿಷಯಗಳಿಂದುಂಟಾದ ಸುಖ ವ್ಯವಚ್ಛೇದವು ಹೇಳಲ್ಪಟ್ಟು. ಇವರಲ್ಲಿ ಆತ್ಮಗುಣವಾದ ಅತಿಶಯಾನಂದವು ಬೋಧಿಸಲ್ಪಟ್ಟಿದುದರಿಂದ ಪುನರುಕ್ತಿಯಿಲ್ಲವು ; ಬಾಹ್ಯವಿಷಯ ಸುಖಕ್ಕೂ, ಈ ಆನಂದಕ್ಕೂ ವೈಲಕ್ಷಣ್ಯ ಉಂಟೆಂದು ಸುಖಮಾತ್ಯಂತಿಕಂ ಎಂಬುದರಿಂದ ಹೇಳಲ್ಪಟ್ಟಿತು. ಅದಾದರೋ ದುಃಖಮಿಶ್ರವಾದುದು, ಇದಾದರೋ ದುಃಖ ಗಂಧವೇ ಇಲ್ಲವು ; ಇದನ್ನೇ ಮುಂದೆ ದುಃಖ ಸಂಯೋಗ ವಿಯೋಗಂ ಎಂಬ ಮತ್ತು ನ ದುಃಖೇನ ಗುರುಣಾಪಿ ವಿಚಾಲ್ಯತೇ ಎಂಬ ಪ್ರಯೋಗಗಳಿಂದ ವಿಸ್ತರಿಸುತ್ತಾರೆ; (೪) ಯತ್ರ ಚ ಯೋಗೇ ಸ್ಥಿತಃ - ಮತ್ತು ಯಾವ ಈ ಯೋಗದಲ್ಲಿರುವವನಾಗಿ, ಸುಖಾತಿರೇಕೇಣ - ಈ ಅತಿಶಯವಾದ, ಸುಖದಿಂದ, ತತ್ತ್ವತಃ ಎಂದರೆ ತದ್ಭಾವಾತ್ - ಆ ಆತ್ಮ ಚಿನ್ತನದಲ್ಲಿರುವದೇ ಆನಂದಕರವಾಗಿ ಆತನಿಗೆ ತೋರುವದರಿಂದ ಅದರಲ್ಲಿರುವದನ್ನು ಬಿಟ್ಟು, ನ ಚಲತಿ - ಕದಲುವದಿಲ್ಲವೋ, (೫) ಯಂ ಯೋಗಂ ಲಬ್ಧ್ವಾ-ಯಾವ ಈ ಯೋಗವನ್ನು ಹೊಂದಿದವನಾಗಿ, ಎಂದರೆ ಅಭ್ಯಾಸಮಾಡುವನಾಗಿ ಎಂಬರ್ಥವು, ಯೋಗಾದ್ವಿರತಃ - ಆ ಯೋಗದೆಶೆಯನ್ನು ಬಿಟ್ಟ ಅವಸ್ಥೆಯನ್ನು ಹೊಂದಿದವನಾಗಿ, ತಮೇವ ಕಾಂಕ್ಷಮಾಣಃ - ಅದರಲ್ಲಿರುವ ಸುಖಾತಿರೇಕದಿಂದ ಆ ಯೋಗವನ್ನೇ ಅಪೇಕ್ಷಿಸುವವನಾಗಿ, ನಾಪರಂ ಲಾಭಂ ಮನ್ಯತೇ - ಅದಕ್ಕಿಂತ ಉತ್ಕೃಷ್ಟವಾದುದುಂಟೆಂದು ತಿಳಿಯುವದಿಲ್ಲವೋ, ಅಪರಂ ಲಾಭಂ - ಆತ್ಮೋಪಾಸನದಿಂದುಂಟಾಗುವ ಆನಂದಕ್ಕಿಂತ ಹೆಚ್ಚಾದ ಸುಖ ಬೇರೆಯಿಲ್ಲವೆಂದು ಹೇಳಿರುವದರಿಂದಲೂ, ಬಾಹ್ಯವಿಷಯಗಳಿಂದಾಗುವ ಸುಖವು ಅದಕ್ಕಿಂತ ಅಧಿಕವಾದುದಲ್ಲವೆಂದು ತೋರಿಬರುವದರಿಂದಲೂ,ಯೋಗಾವಸ್ಥೆಯಿಲ್ಲದ ಕಾಲದಲ್ಲೇ ವಿಷಯಾನುಭವವು ಆತ್ಮಾನುಭವದಷ್ಟು ಸುಖಾತಿರೇಕವಲ್ಲವೆಂದು ತೋರಿಬರುವದರಿಂದಲೂ, ಯೋಗದೆಶೆಯಲ್ಲಾದರೋ ಆತ್ಮಾನುಭವವಲ್ಲದೆ ಬೇರೆ ಅನುಭವವೇ ಇಲ್ಲದೆ ತಂತಮ ಭಾವವೇ ಉಂಟಾಗದೇ ಇರುವದರಿಂದಲೂ, ಯೋಗಾದ್ವಿರತಃ ತಮೇವ ಕಾಂಕ್ಷಮಾಣಃ ಎಂದು ಭಾಷ್ಯವನ್ನು ಬರೆದಿರುತ್ತಾರೆ. ಈ ಆರನೆಯ ಮತ್ತು ಮುಂದಿನ ೬ನೆಯ ವಾಕ್ಯಗಳು ಈ ಯೋಗವನ್ನು ಬಿಟ್ಟ ಅವಸ್ಥೆಯಲ್ಲಿ ತೋರುವದನ್ನು ವ್ಯಕ್ತಪಡಿಸುತ್ತವೆ, (೬) ಯಸ್ಮಿಂಶ್ಚ ಯೋಗೇ ಸ್ಥಿತಃ - ಯಾವ ಈ ಯೋಗದಲ್ಲಿರುವವನು, ವಿರತೋಽಪಿ - ಆ ಯೋಗದಿಂದ ಬಿಟ್ಟವನಾದರೂ ಎಂದರೆ ಅಂತಹ ಕಾಲದಲ್ಲೂ ಕೂಡ ಎಂಬ ಭಾವವು, ಗುರುಣಾಪಿ ದುಃಖೇನ - ಮಹತ್ತಾದ ದುಃಖದಿಂದಲೂ ಕೂಡ, ಅದಕ್ಕೆ ಒಂದು ನಿದರ್ಶನವನ್ನು ಕೊಡುತ್ತಾರೆ, ಗುಣವತ್ಪುತ್ರ ವಿಯೋಗಾದಿನಾ - ಬಹು ಗುಣಾಢ್ಯನಾದ ಪುತ್ರನ

ಭಾ. ದೇಯಂ ವಿದ್ಯಾತ್ ; ಸ ಏವಂ ರೂಪೋ ಯೋಗ ಇತ್ಯಾರಂಭ ದಶಾಯಾಂ ನಿಶ್ಚ ಯೇನಾ ನಿರ್ವಿಣ್ಣ ಚೇತಸಾ - ಹೃಷ್ಟ ಚೇತಸಾ, ಯೋಗೋ ಯೋಕ್ತವ್ಯಃ ॥೨೦-೨೩॥

ಮರಣವೇ ಮೊದಲಾದ ಮಹತ್ತಾದ ದುಃಖಗಳಿಂದಲೂ ಕೂಡ, ನ ವಿಚಾಲ್ಯತೇ - ಕದಲುವದಿಲ್ಲವೋ, ಎಂದರೆ ಆ ಯೋಗದಿಂದ ಕದಲುವದಿಲ್ಲವೋ ಎಂಬ ಭಾವವು, ಈ ದುಃಖದಿಂದ ಅವಸಾದ ಉಂಟಾಗಿ ಯೋಗವನ್ನು ತ್ಯಜಿಸುವದಿಲ್ಲವೆಂಬ ತಾತ್ಪರ್ಯವು ತೋರಿಬರುತ್ತದೆ; ಸಾಧಾರಣವಾಗಿ ದುಷ್ಟನಾಗಿ, ಲೋಕ ಕಂಟಕನಾಗಿರುವ ಪುತ್ರವಿಯೋಗಕ್ಕಾಗಿ ಸನ್ಮಾರ್ಗದಲ್ಲಿರುವ ತಂದೆಯು ಅಷ್ಟು ಶೋಕಿಸನು, ಪುತ್ರನು ತನ್ನ ಸಚ್ಚರಿತ್ರೆಯಿಂದ ತಂದೆಗೆ ಆಹ್ಲಾದವನ್ನುಂಟುಮಾಡುವನಾಗಿದ್ದರೆ, ಆತನ ವಿಯೋಗವು ತಂದೆಗೆ ಪುತ್ರಶೋಕಂ ನಿರಂತರಂ ಎಂದು ಹೇಳಿರುವ ಮೇರಿಗೆ ಮರಣಾವಧಿ ಸಾಧಾರಣ ಮನುಷ್ಯನಿಗೆ ದುಃಖಹೇತುವಾದುದರಿಂದ, ಗುರುಣಾ ಎಂಬುದಕ್ಕೆ ಆ ನಿದರ್ಶನವನ್ನು ಕೊಟ್ಟಿರುತ್ತಾರೆ. ನಿರತಿಶಯ ಕಲ್ಯಾಣ ಗುಣಗಳಿಂದ ಪರಿಪೂರ್ಣನಾದ ಶ್ರೀರಾಮನ ಅಲ್ಪಕಾಲಿಕ ವಿಯೋಗವು ಕೂಡ ತಂದೆಯಾದ ದಶರಥನಿಗೆ ಗುರುವಾದ ದುಃಖವನ್ನುಂಟುಮಾಡಿ, ಆತನ ಮರಣಕ್ಕೆ ಹೇತುವಾಗಿ ಪರಿಣಮಿಸಿತು ; ಪುತ್ರಜನ್ಮ ವಿಪತ್ತಿಭ್ಯಾಂ ನ ಪರಂ ಸುಖದುಃಖಯೋಃ" ಪುತ್ರೋತ್ಪತ್ತಿಗಿಂತಲೂ ಹೆಚ್ಚಿನ ಸುಖವಿಲ್ಲ, ಪುತ್ರನಿಗುಂಟಾಗುವ ವಿಪತ್ತು ಅಥವಾ ನಾಶಕ್ಕಿಂತಲೂ, ಅಧಿಕವಾದ ದುಃಖವಿಲ್ಲವೆಂದೂ ಹೇಳಲ್ಪಟ್ಟಿರುತ್ತದೆ. ತಂ - ಅಂತಹ, ಈ ಮೇಲೆ ಹೇಳಿದ ಆರು ಲಕ್ಷಣಗಳುಳ್ಳ, ದುಃಖಸಂಯೋಗವಿಯೋಗಂ ಎಂದರೆ ದುಃಖ ಸಂಯೋಗಪ್ರತ್ಯನೀಕಾಕಾರಂ - ದುಃಖಸಂಬಂಧಕ್ಕೆ ಪ್ರತಿಭಟ ರೂಪವಾದ ಗುಣವುಳ್ಳ, ಎಂದರೆ ದುಃಖ ಸಂಬಂಧದ ಗಂಧವೇ ಯಿಲ್ಲದುದನ್ನೀಗ, ದುಃಖ ಸಂಯೋಗಕ್ಕೆ ವಿಯೋಗವು ಎಲ್ಲಿಯೋ ಅದು ದುಃಖ ಸಂಯೋಗ ವಿಯೋಗರೂಪವಾದುದು ಎಂಬ ತಾತ್ಪರ್ಯವು; ಇದರಿಂದ ಇಲ್ಲಿ ದುಃಖಸಂಯೋಗ ಉಂಟೆಂಬುದು ಸ್ಥಾಪಿತವು. ಯೋಗಾಶಬ್ದಾಭಿಧೇಯಃ ವಿದ್ಯಾತ್ - ಈ ಯೋಗಶಬ್ದದಿಂದ ಹೇಳಲ್ಪಟ್ಟತೆಂದು ತಿಳಿಯತಕ್ಕದ್ದು; ಸ ಏವಂ ರೂಪೋ ಯೋಗಃ-ಹೀಗೆ ಈ ಮೇಲೆ ಹೇಳಲ್ಪಟ್ಟ ಲಕ್ಷಣವುಳ್ಳದುದು, ಈ ಯೋಗವು ನಿರತಿಶಯ ಪುರುಷಾರ್ಥರೂಪವಾದುದು ಎಂಬ ಭಾವವು, ಇತ್ಯಾರಂಭದಶಾಯಾಂ - ಎಂದು ಈ ಆರಂಭ ದೆಶೆಯಲ್ಲೇ, ನಿಶ್ಚಯೇನ - ನಿರ್ಣಯುಮಾಡಿಕೊಂಡ ಕಾರಣದಿಂದ, ಅನಿರ್ವಿಣ್ಣ ಚೇತಸಾ ಎಂದರೆ ಹೃಷ್ಟಚೇತಸಾ - ಉತ್ಸಾಹದಿಂದ ಕೂಡಿದ ಎಂದರೆ ಸಂತೋಷಯುಕ್ತವಾದ ಮನಸ್ಸಿನಿಂದ, ಯೋಗೋ ಯೋಕ್ತವ್ಯಃ - ಅಂತಹ ಯೋಗವೀಗ ಅನುಷ್ಠಿಸತಕ್ಕದ್ದು. ಯೋಗಸಿದ್ಧಿಗೆ ಹೃಷ್ಟ ಚೇತಸ್ಸು ಅತ್ಯಾವಶ್ಯಕವು, ಕ್ಲಿಷ್ಟವಾದ ಚೇತಸ್ಸಿಗೆ ಯೋಗಸಿದ್ಧಿ ಇಲ್ಲವು. "ಮನಸಾ ಕ್ಲಿಶ್ಯಮಾನಸ್ತು ಸಮಾಧಾನಂ ಚ ಕಾಮಯೇತ್ । ಅನಿರ್ವೇದಂ ಮುನಿರ್ಗಚ್ಛೇ ಕುರ್ಯಾದೇವಾತ್ಮನೋ ಹಿತಂ" ಎಂಬುದು ಅನುಸಂಧೇಯವು. ಹೃಷ್ಟ ಚೇತಸ್ಸು ಯೋಗಸಿದ್ಧಿಗೆ ಮಾತ್ರವೇ ಅಲ್ಲವು. ಸಮಸ್ತ ಸುಕೃತ ಫಲಸಿದ್ಧಿಗೂ ಅನಿರ್ವೇದವು ಮುಖ್ಯವು. ಹಾಗೆಯೇ ಮಹರ್ಷಿಯು ಹೇಳಿರುತ್ತಾರೆ. ಅನಿರ್ವೇದ ಶ್ರಿಯೋ ಮೂಲ ಮನಿರ್ವೇದಃ ಪರಂಸುಖಂ । ಅನಿರ್ವೇದೋ ಹಿ ಸತತಂ ಸರ್ವಾರ್ಥೇಷು ಪ್ರವರ್ತಕಃ ॥" ಎಂದು ಸರ್ವಸಿದ್ಧಿಗೂ ಅನಿರ್ವೇದವು ಆವಶ್ಯಕವೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೂ ಇನ್ನೊಂದುಕಡೆಯಲ್ಲೂ "ಅನಿರ್ವೇದಂ ಚ ದಾಕ್ಷ್ಯಂ ಚ ಮನಸಶ್ಚಾಪರಾಜಯಃ। ಕಾರ್ಯಸಿದ್ಧಿ ಕರಾಣ್ಯಾಹು" (ರಾಮಾ. ಕಿಷ್ಕಿಂಧಾ. ೪೯ ೬) ಅನಿರ್ವೇದ ಉತ್ಸಾಹ ಧೈರ್ಯಗಳು ಕಾರ್ಯ ಸಾಧಕಗಳೆಂದು ಹೇಳಲ್ಪಟ್ಟಿರುತ್ತವೆ. ಆದುದರಿಂದ ಯೋಗಸಿದ್ಧಿಗೆ ಹೃಷ್ಟ ಚೇತಸ್ತ್ವವಾದ ಅನಿರ್ವೇದವು ಆವಶ್ಯ

ಮೂ. ಸಙ್ಕಲ್ಪ ಪ್ರಭವಾನ್ ಕಾಮಾಂ ಸ್ತ್ಯಕ್ತ್ವಾ ಸರ್ವಾನಶೇಷತಃ।
ಮನಸೈವೇನ್ದ್ರಿಯಗ್ರಾಮಂ ವಿನಿಯಮ್ಯ ಸಮನ್ತತಃ ॥ ೨೪.
ಶನೈಶ್ಶನೈ ರುಪರಮೇದ್ಬುದ್ಧ್ಯಾ ಧೃತಿ ಗೃಹೀತಯಾ।
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿನ್ತಯೇತ್ ॥ ೨೫.

ಕವು. ಸರಿಯಾದ ಯೋಗಾಭ್ಯಾಸದಲ್ಲಿರುವವನ ಯೋಗದೆಶೆಯಲ್ಲಿ ಹೇಗೆ ಇರುವನೆಂಬುದನ್ನು ೨೦. ೨೧ನೆಯ ಶ್ಲೋಕಗಳಲ್ಲಿ ನಾಲ್ಕು ವಾಕ್ಯಗಳಿಂದ ತಿಳಿಸಿ, ಯೋಗಾಭ್ಯಾಸವನ್ನು ಬಿಟ್ಟ ಕಾಲದಲ್ಲಿ ಹೇಗೆ ಇರುವವನೆಂಬುದನ್ನು ೨೨ ನೆಯ ಶ್ಲೋಕದಲ್ಲಿ ಹೇಳಿ, ಅಂತಹ ಯೋಗವನ್ನೀಗ ಅನುಷ್ಠಿಸತಕ್ಕದ್ದೆಂದು ೨೩ನೆಯ ಶ್ಲೋಕದಲ್ಲಿ ಉಪದೇಶಿಸಿರುತ್ತಾರೆ. ಯೋಗದಲ್ಲಿರುವಾಗ ಹೇಗೆ ಇರುವನೆಂದರೆ–ಬಾಹ್ಯವಿಷಯಗಳಿಂದ ಮನಸ್ಸು ನಿರೋಧಿಸಲ್ಪಟ್ಟು ಆತ್ಮನಲ್ಲೇ ರಮಿಸುತ್ತದೆಂದೂ, ಆತ್ಮಾವನ್ನು ಸಾಕ್ಷಾತ್ಕರಿಸುತ್ತಾ ಆತನು ಆತ್ಮಾನುಸಂಧಾನದಲ್ಲೇ ಸಂತೋಷಯುಕ್ತನಾಗಿರುವನೆಂದೂ, ಅನಂತರ ಆ ಆತ್ಮಸಾಕ್ಷಾತ್ಕಾರವುಂಟಾಗುವಾಗ ಇಂದ್ರಿಯಗಳ ವ್ಯಾಪಾರವೇ ಇಲ್ಲದೆ ಅತಿಶಯವಾದ ಆನಂದವನ್ನು ಹೊಂದುವನೆಂದೂ, ಅಂತಹ ಯೋಗದೆಶೆಯನ್ನು ಹೊಂದಿರುವಾಗ ಅದರಿಂದ ಕದಲುವದೇ ಇಲ್ಲವೆಂದೂ ಹೇಳಲ್ಪಟ್ಟಿತು. ಆ ಯೋಗದೆಶೆಯನ್ನು ಬಿಟ್ಟಿರುವಾಗಲೂ ಆ ಯೋಗಾಭ್ಯಾಸಕ್ಕಿಂತಲೂ ಅಧಿಕವಾದ ಪ್ರಯೋಜನವೇ ಇಲ್ಲವೆಂದೂ, ಅಂತಹ ಆನಂದವನ್ನು ತಾನು ಹೊಂದುವದರಿಂದ ಪ್ರಾರಬ್ಧವಶಾತ್ ಇವನಿಗೆ ಪ್ರಾಪ್ತವಾಗುವ ಎಂತಹ ಮಹದ್ದುಃಖದಿಂದಲೂ ಈಷದಪಿ ವಿಕಾರವನ್ನು ಹೊಂದುವದಿಲ್ಲವೆಂದೂ ಹೇಳಲ್ಪಟ್ಟಿತು. ಅಂತಹ ಮಹತ್ತಾದ ಯೋಗದೆಶೆಯನ್ನು ಪ್ರತಿಯೊಬ್ಬ ಕರ್ಮಯೋಗಿಯು ಹೊಂದತಕ್ಕದ್ದೆಂಬ ತಾತ್ಪರ್ಯವು.

ಮೂಲಕ್ಕೆ ಅರ್ಥವು :—ಯೋಗ ದೆಶೆಯು ಸಿದ್ಧಿಸುವದಕ್ಕೆ ಚಿತ್ತವು ಬಾಹ್ಯಗಳಿಂದ ನಿರುದ್ಧವಾಗಿರತಕ್ಕದ್ದು ಮುಖ್ಯವೆಂದು ೨೦ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಆ ಮನಸ್ಸನ್ನು ಅವುಗಳಿಂದ ನಿವರ್ತಿಸಿ, ಬಹಿರ್ಮುಖವಾದುದನ್ನು ಅಂತರ್ಮುಖವಾದುದನ್ನಾಗಿಮಾಡಿ ಆತ್ಮಾವಿನಲ್ಲೇ ರಮಿಸುವಹಾಗೆ ಮಾಡತಕ್ಕದ್ದು. ಇದು ಸುಲಭ ಸಾಧ್ಯವಲ್ಲವೆಂದು ಹಿಂದೆ ಹೇಳಲ್ಪಟ್ಟಿತು. "ಕಾಮ ಏಷಃ ಕ್ರೋಧ ಏಷಃ" ಎಂಬಲ್ಲಿ ಕಾಮವೇ ಈತನಿಗೆ ಬಲವಾದ ಶತ್ರುವಾದುದರಿಂದ ಆ ಕಾಮವನ್ನು ಜಯಿಸುವದು ಕಷ್ಟವಾದುದರಿಂದ, ಹಿಂದೆ ಹೇಳಿದುದನ್ನೇ ಪುನಃ ಜ್ಞಾಪಿಸಿ, ಯಾವುದೂ ತನ್ನದಲ್ಲವೆಂಬ ವಿವೇಕಜ್ಞಾನದಿಂದ, ಇಂದ್ರಿಯಗಳನ್ನೂ ಮನಸ್ಸನ್ನೂ ನಿಗ್ರಹಿಸಿ, ಬಾಹ್ಯಕಾಮಗಳಲ್ಲಿ ಹೋಗದೆ ತನ್ನ ಆತ್ಮಾವಿನಲ್ಲೇ ಇರುವಹಾಗೆ ಮಾಡಿಕೊಳ್ಳಬೇಕೆಂದು ಈ ಎರಡು ಶ್ಲೋಕಗಳಿಂದ ಉಪದೇಶಿಸುತ್ತಾರೆ.— **ಸಙ್ಕಲ್ಪ ಪ್ರಭವಾನ್** - ಸಙ್ಕಲ್ಪಗಳಿಂದ ಉತ್ಪನ್ನಗಳಾದ, **ಅಶೇಷತಃ** - ಏನೂ ಉಳಿಯದಹಾಗೆ, **ಸರ್ವಾನ್** - ಸಮಸ್ತವಾದ, ಇದರಿಂದ ಸ್ಪರ್ಶದಿಂದ ಉತ್ಪನ್ನವಾದವುಗಳೂ ಹೇಳಲ್ಪಟ್ಟವು, **ಕಾಮಾನ್** - ಅಭಿಲಾಷೆಗಳನ್ನೆಲ್ಲಾ, **ಮನಸೈವ** - ಮನಸ್ಸಿನಿಂದಲೇ, **ತ್ಯಕ್ತ್ವಾ** - ಪರಿತ್ಯಾಗಮಾಡಿ, **ಇಂದ್ರಿಯಗ್ರಾಮಂ** - ಇಂದ್ರಿಯಗಳ ಸಮೂಹವನ್ನು, **ಸಮಂತತಃ** - ಎಲ್ಲಾಕಡೆಯಿಂದಲೂ ಎಂದರೆ ಎಲ್ಲಾ ಬಾಹ್ಯವಿಷಯಗಳಿಂದಲೂ, **ಮನಸೈವ** - ಮನಸ್ಸಿನಿಂದಲೇ, **ವಿನಿಯಮ್ಯ** - ನಿಗ್ರಹಿಸಿ, **ಧೃತಿಗೃಹೀತಯಾ** - ಬಾಹ್ಯಗಳ ವಂಚನೆಗೆ ಸಿಲುಕದಹಾಗೆ ಸ್ಥೈರ್ಯದಿಂದ ಗ್ರಹಿಸಲ್ಪಟ್ಟ, **ಬುದ್ಧ್ಯಾ** - ಶಾಸ್ತ್ರ ಮತ್ತು ವಿವೇಕಜನ್ಯ ಜ್ಞಾನದಿಂದ, **ಶನೈಶ್ಶನೈಃ** - ಸ್ವಲ್ಪಸ್ವಲ್ಪವಾಗಿ, **ಉಪರಮೇತ್** - ನಿವರ್ತಿಸತಕ್ಕದ್ದು; **ಮನಃ** - ಮನಸ್ಸನ್ನು, **ಆತ್ಮಸಂಸ್ಥಂ**-ಆತ್ಮಾವಿನಲ್ಲೇ ಸಕ್ತವಾಗಿರುವದನ್ನಾಗಿ, **ಕೃತ್ವಾ**-

ಭಾ. ಸ್ಪರ್ಶಜಾ ಸಙ್ಕಲ್ಪಜಾಶ್ಚೇತಿ ದ್ವಿವಿಧಾಃ ಕಾಮಾಃ, ಸ್ಪರ್ಶಜಾಃ– ಶೀತೋಷ್ಣಾದಯಃ, ಸಙ್ಕಲ್ಪಜಾಃ-ಪುತ್ರಕ್ಷೇತ್ರಾದಯಃ, ತತ್ರ ಸಙ್ಕಲ್ಪ ಪ್ರಭವಾಃ ಸ್ವರೂಪೇಣೈವ ತ್ಯಕ್ತುಂ

ಮಾಡಿ, ಕಿಂಚಿದಪಿ - ಮಿಕ್ಕ ಇನ್ನು ಯಾವುದನ್ನೂ, ನಚಿಂತಯೇತ್ - ಚಿಂತಿಸತಕ್ಕದ್ದಲ್ಲವು ; ಸಙ್ಕಲ್ಪ, ಅಭಿಲಾಷೆ ಇವು ಆತ್ಮಗುಣಗಳು, ಇವು ಬಾಹ್ಯ ವಿಷಯಗಳಲ್ಲಿ ಪ್ರಸರಿಸುವದಕ್ಕೂ, ಪ್ರಸರಿಸದಹಾಗೆ ತಡೆಮಾಡುವದಕ್ಕೂ ಮನಸ್ಸು ಅವಶ್ಯಕವು, ಆದುದರಿಂದ, ಮನಸೈವ ಎಂಬುದು ಶ್ಲೋಕಮಧ್ಯದಲ್ಲಿರುವಟರಿಂದ ಕಾಕಾಕ್ಷಿನ್ಯಾಯಪ್ರಕಾರ ಎರಡು ಕಡೆಗೂ ಅನ್ವಯಿಸತಕ್ಕದ್ದಾಗಿರುತ್ತದೆ. ಶಾಸ್ತ್ರಜನ್ಯಜ್ಞಾನವೆಷ್ಟೇ ಇರಲಿ, ವಿಷಯ ಸುಖಾನುಭವಗಳಲ್ಲಿ ಮನಸ್ಸು ಪ್ರವರ್ತಿಸುತ್ತದೆ. ಇಂದ್ರಿಯಗ್ರಾಮವು ಅದಕ್ಕೆ ವಶವಾಗಿ ವಿಷಯಗಳಲ್ಲೇ ಪ್ರವರ್ತಿಸುತ್ತದೆ. ಅವುಗಳನ್ನು ಹಾಗೆಯೇ ನಿಗ್ರಹಿಸುವದಕ್ಕೂ ಮನಸ್ಸೇ ಮುಖ್ಯವು. "ಮುಕ್ತೈ ನಿರ್ವಿಷಯಂ ಮನಃ ಎಂದು ಹೇಳಿರುವಹಾಗೆ ನಿಗ್ರಹಿಸತಕ್ಕದ್ದೆಂಗು "ವಿನಿಯಮ್ಯ ಸಮಂತತಃ" ಎಂಬ ಪ್ರಯೋಗವು. ಮಹರ್ಷಿಗಳೂ ಧರ್ಮತಪೋಧಿಕಾಮರಾದರೂ ಕೂಡ ಐಹಿಕಾಭಿಲಾಷೆಯಿಂದ ಬದ್ಧರಾಗಿ ತಮ್ಮನಿಷ್ಠೆಗಳನ್ನೆಲ್ಲಾ ಕಳೆದುಕೊಂಡಿರುತ್ತಾರೆ. ವಿಶ್ವಾಮಿತ್ರಋಷಿ ತೊಂಡರಡಿಪ್ಪೊಡಿ ಆಳ್ವಾರ್ ಮೊದಲಾದವರು ಅದಕ್ಕೆ ನಿದರ್ಶನಗಳು ಆದ ಪ್ರಯುಕ್ತ ಅವುಗಳನ್ನು ಜಯಿಸಲು ಮನಸ್ಸಿನ ಸ್ಥೈರ್ಯಬೇಕೆಂದು "ಧೃತಿ ಗೃಹೀತಯಾ" ಎಂಬುದರಿಂದ ತಿಳಿಸಿರುತ್ತಾರೆ; ಅಂತಹ ಮನಸ್ಸಿನ ಸ್ಥೈರ್ಯವುಂಟಾಗುವದಕ್ಕೆ ಇವನ ಪ್ರಾರಬ್ಧಾನುಗುಣವಾಗಿ ಸ್ವಾಮಿದತ್ತ ವಿವೇಕಜ್ಞಾನವಾವಶ್ಯಕವೆಂಬುದನ್ನು, ಬುದ್ಧ್ಯಾ ಉಪರಮೇತ್ ಎಂಬುದರಿಂದ ಸೂಚಿಸಿರುತ್ತಾರೆ. ಇಲ್ಲಿನ ಉಪರಮೇತ್ ಶಬ್ದವು ೨೦ನೆಯ ಶ್ಲೋಕದ ಉಪರಮತೇ ಎಂಬ ಶಬ್ದಕ್ಕಿಂತ ಭಿನ್ನಾರ್ಥವುಳ್ಳದು ; ವಿಷಯಗಳ ವ್ಯಾಪ್ತಿಯಿಂದ ವಿರಾಮವನ್ನು ಹೊಂದತಕ್ಕದ್ದೆಂಬ ಭಾವವು. ಇದು ಏಕಾ ಏಕೀ ಸಿದ್ಧಿಸುವದಿಲ್ಲವು, ಸ್ವಲ್ಪ ಅಭ್ಯಾಸದಿಂದಲೂ ಕಷ್ಟದಿಂದಲೂ ಪ್ರಾಪ್ತವಾಗತಕ್ಕದ್ದೆಂದು ಶನೈ ಶ್ಶನೈಃ ಎಂಬುದರಿಂದ ವ್ಯಕ್ತಪಡಿಸಿರುತ್ತಾರೆ. ಆದುದರಿಂದ ಮನಸ್ಸಿಗೆ ಬಹಿರ್ವಿಷಯವ್ಯಾಪ್ತಿಯನ್ನು ತಪ್ಪಿಸಿ ಅಂತಃ ಆತ್ಮವ್ಯಾಪ್ತಿಯುಂಟಾಗುವಹಾಗೆ ಮಾಡತಕ್ಕದ್ದೆಂದು ಆತ್ಮ ಸಂಸ್ಥಂ ಎಂಬ ಪ್ರಯೋಗದಿಂದುಪದೇಶಿಸಿರುತ್ತಾರೆ. ಅಂತಹ ಬಹಿರ್ವ್ಯಾಪ್ತಿಯು ಮನಸ್ಸಿಗೆ ಸುತರಾಂ ಉಂಟಾಗಕೂಡದೆಂದು ಆತ್ಮಾನನ್ನು ಬಿಟ್ಟು ಇನ್ನ್ಯಾವದನ್ನು ಚಿಂತಿಸಬೇಡವೆಂದು ನ ಕಿಂಚಿದಪಿ ಚಿನ್ತಯೇತ್ ಎಂದು ಹೇಳಿರುತ್ತಾರೆ.

**ಭಾಷ್ಯಾರ್ಥವು:—**ಈ ಅತಿಶಯ ಸುಖಾನುಭವರೂಪವಾದ ಯೋಗಸಿದ್ಧಿಗೆ ಮನಸ್ಸು ಚಂಚಲವಾಗಿ ಬಾಹ್ಯವಿಷಯಗಳಲ್ಲಿ ಪ್ರವರ್ತಿಸದೇ ಇರುವದು ಅತ್ಯಂತಾವಶ್ಯಕವು. ಆದರೆ ಅದನ್ನು ಪ್ರವರ್ತಿಸದೇ ಮಾಡಿಕೊಳ್ಳುವದು ಸುಲಭವಲ್ಲವೆಂದೂ ಆದಕ್ಕಾಗಿ ಸ್ವಲ್ಪಸ್ವಲ್ಪವಾಗಿ ಅಭ್ಯಾಸಮೂಲಕವಾಗಿ ವಶಮಾಡಿಕೊಂಡು, ಆತ್ಮಯೋಗದಲ್ಲಿ ನಿಲ್ಲುವಹಾಗೆ ಮಾಡಿಕೊಳ್ಳಬೇಕೆಂದು ಉಪದೇಶಿಸುತ್ತಾರೆ. ಕಾಮಾಃ - ಅಭಿಲಾಷೆಗಳು, ಸ್ಪರ್ಶಜಾಃ – ಸ್ಪರ್ಶದಿಂದ ಹುಟ್ಟತಕ್ಕವೆಂದೂ, ಸಙ್ಕಲ್ಪಜಾಶ್ಚೇತಿ – ಮತ್ತು ಸಙ್ಕಲ್ಪದಿಂದಲೂ ಹುಟ್ಟತಕ್ಕವುಗಳೆಂದೂ, ದ್ವಿವಿಧಾಃ - ಎರಡು ವಿಧಗಳು ; ಸ್ಪರ್ಶಜಗಳು ಯಾವುವೆಂದರೆ ಶೀತೋಷ್ಣಾದಿಗಳು, ಸಙ್ಕಲ್ಪಜಗಳು ಯಾವುವೆಂದರೆ ಪುತ್ರ ಕ್ಷೇತ್ರಾದಿಗಳು; ತತ್ರ - ಆ ಸಂದರ್ಭದಲ್ಲಿ, ಅವುಗಳಲ್ಲಿ ಎಂಬರ್ಥವು, ಸಙ್ಕಲ್ಪಪ್ರಭವಾಃ - ಸಙ್ಕಲ್ಪದಿಂದುಂಟಾಗುವ ಕಾಮಗಳು, ಸ್ವರೂಪೇಣೈವ ತ್ಯಕ್ತುಂ ಶಕ್ಯಾಃ - ಸ್ವರೂಪದಿಂದಲೇ ಬಿಡಲು ಶಕ್ಯವಾದವು, ಸಂಪೂರ್ಣವಾಗಿ ದೂರತಃ ತ್ಯಜಿಸಿ ಬಿಡಲು

ಭಾ. ಶಕ್ಯಾಃ, ತಾನ್ ಸರ್ವಾನ್ ಮನಸೈವ ತದನನ್ವಯಾನುಸಂಧಾನೇನ ತ್ಯಕ್ತ್ವಾ, ಸ್ಪರ್ಶಜೇಷ್ವವರ್ಜನೀಯೇಷು ತನ್ನಿಮಿತ್ತ ಹರ್ಷೋದ್ವೇಗೌ ತ್ಯಕ್ತ್ವಾ, ಸಮನ್ತತಃ - ಸರ್ವಸ್ಮಾದ್ವಿಷಯಾತ್, ಸರ್ವಮಿನ್ದ್ರಿಯಗ್ರಾಮಂ ವಿನಿಯಮ್ಯ ಶನೈಶ್ಶನೈಃ ಧೃತಿಗೃಹೀತಯಾ ವಿವೇಕ ವಿಷಯಯಾ-ಬುದ್ಧ್ಯಾ, ಸರ್ವಸ್ಮಾದಾತ್ಮವ್ಯತಿರಿಕ್ತಾದುಪರಮ್ಯ, ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿನ್ತಯೇತ್ ॥ ೨೪, ೨೫ ॥

ಸಾಧ್ಯವು, ತಾನ್ ಸರ್ವಾನ್ - ಅಂತಹ ಸಙ್ಕಲ್ಪದಿಂದುಂಟಾದ ಅಭಿಲಾಷೆಗಳನ್ನೆಲ್ಲಾ, ಮನಸೈವ-ಮನಸ್ಸಿನಿಂದಲೇ, ತದನನ್ವಯಾನುಸಂಧಾನೇನ - ಅವುಗಳಿಗೂ ತನಗೂ ಸಹ ಏನೂ ಸಂಬಂಧವಿಲ್ಲವೆಂಬ ಅನುಸಂಧಾನದಿಂದ, ತ್ಯಕ್ತ್ವಾ - ಬಿಟ್ಟು, ಅವರ್ಜನೀಯೇಷು - ಸಂಬಂಧವನ್ನು ತ್ಯಜಿಸಲು ಸಾಧ್ಯವಲ್ಲದ, ಸ್ಪರ್ಶಜೇಷು - ಸ್ಪರ್ಶದಿಂದುಂಟಾಗುವ ಅಭಿಲಾಷೆಗಳಲ್ಲಿ, ತನ್ನಿಮಿತ್ತ ಹರ್ಷೋದ್ವೇಗೌ - ಅವುಗಳ ಮೂಲಕ ಉಂಟಾಗುವ ಸುಖ ದುಃಖಗಳನ್ನು, ತ್ಯಕ್ತ್ವಾ - ಬಿಟ್ಟು, ಸಮನ್ತತಃ ಎಂದರೆ ಸರ್ವಸ್ಮಾದ್ವಿಷಯಾತ್ - ಸಮಸ್ತವಿಷಯಗಳ ದೆಶೆಯಿಂದಲೂ. ಸರ್ವೇಂದ್ರಿಯಗ್ರಾಮಂ - ಸಮಸ್ತ ಇಂದ್ರಿಯಗಳ ಸಮೂಹವನ್ನು, ನಿಯಮ್ಯ - ನಿರೋಧಿಸಿ, ಶನೈಶ್ಶನೈಃ - ಸ್ವಲ್ಪಸ್ವಲ್ಪವಾಗಿ ಅಭ್ಯಾಸದಿಂದ, ಧೃತಿ ಗೃಹೀತಯಾ - ಮನಸ್ಸಿನ ಸ್ಥೈರ್ಯದಿಂದ ಗ್ರಹಿಸಲ್ಪಟ್ಟ, ವಿವೇಕ ವಿಷಯಯಾ ಬುದ್ಧ್ಯಾ - ವಿವೇಕ ವಿಷಯಕವಾದ ಬುದ್ಧಿಯಿಂದ ಎಂದರೆ ವಿವೇಕಜ್ಞಾನದಿಂದ, ಸರ್ವಸ್ಮಾದಾತ್ಮವ್ಯತಿರಿಕ್ತಾತ್ - ಆತ್ಮಕ್ಕಿಂತ ಬೇರೆಯಾದ ಸಮಸ್ತ ವಿಷಯಗಳಿಂದಲೂ, ಉಪರಮ್ಯ - ವಿರಾಮವನ್ನು ಹೊಂದಿ, ಆತ್ಮಸಂಸ್ಥಂ ಮನಃ ಕೃತ್ವಾ-ಮನಸ್ಸನ್ನು ಆತ್ಮನಲ್ಲೇ ನಿಲ್ಲುವಹಾಗೆ ಮಾಡಿ, ನ ಕಿಂಚಿದಪಿ ಚಿನ್ತಯೇತ್ - ಏನೊಂದನ್ನೂ ಚಿಂತಿಸತಕ್ಕದ್ದಲ್ಲವು. ಮೊದಲು ಸಙ್ಕಲ್ಪ ಪ್ರಭವಾನ್ ಕಾಮಾನ್ ಎಂದು ಹೇಳಿ, ಅನಂತರ ಸರ್ವಾನ್ ಅಶೇಷತಃ ಎಂದು ಹೇಳಿರುವದರಿಂದ ಗೋಬಲೀವರ್ದ ನ್ಯಾಯದಿಂದ ಸಙ್ಕಲ್ಪದಿಂದುಂಟಾದ ಕಾಮಗಳಿಗಿಂತ ಬೇರೆಯಾದ ಇತರ ಸಮಸ್ತ ಕಾಮಗಳೂ ಹೇಳಲ್ಪಟ್ಟವಾದುದರಿಂದ ಎರಡು ವಿಧ ಕಾಮಗಳಲ್ಲಿ ಸಂಸ್ಪರ್ಶಜಗಳೂ ಹೇಳಲ್ಪಟ್ಟವೆಂಬ ಅಭಿಪ್ರಾಯವು. ಆದುದರಿಂದ ಕಾಮಗಳು ಎರಡು ವಿಧಗಳು ಎಂದು ಆರಂಭಿಸಿ ಶ್ಲೋಕಕ್ಕೆ ವ್ಯಾಖ್ಯಾನ ಮಾಡಿರುತ್ತಾರೆ. ಮೂಲದಲ್ಲೂ ಎರಡುವಿಧ ಕಾಮಗಳೂ ಹೇಳಲ್ಪಟ್ಟು ಅವುಗಳನ್ನು "ತ್ಯಕ್ತ್ವಾ" ಎಂದು ಹೇಳಿರುವದರಿಂದ, ಬಿಡತಕ್ಕ ವಿಧಾನದಲ್ಲಿ ವ್ಯತ್ಯಾಸವಿರುವದರಿಂದ, ಅವುಗಳ ಪರಿತ್ಯಾಗ ಹೇಗೆ ಎಂಬುದನ್ನು ವಿಶದವಾಗಿ ತಿಳಿಸುತ್ತಾರೆ—ಸಙ್ಕಲ್ಪದಿಂದುಂಟಾದ ಕಾಮಗಳನ್ನು ಸಂಪೂರ್ಣವಾಗಿ ಸ್ವರೂಪತಃ ತ್ಯಜಿಸೋಣವು ಸಾಧ್ಯವೆಂದೂ, ಸ್ಪರ್ಶಜಗಳಾದ ಕಾಮಗಳನ್ನು ಸಂಪೂರ್ಣವಾಗಿ ಸ್ವರೂಪತಃ ತ್ಯಜಿಸೋಣವು ಸಾಧ್ಯವಲ್ಲವೆಂದೂ, ಹೇಳುತ್ತಾರೆ. ಆ ಕಾರಣದಿಂದ ಸ್ಪರ್ಶಜಗಳ ಸಂಬಂಧವು ಅವರ್ಜನೀಯವೆಂದು ತಿಳಿಸಿರುತ್ತಾರೆ. ಅಂತಹ ಸಂಬಂಧದಲ್ಲಿ ಅವುಗಳ ಪರಿತ್ಯಾಗ ಹೇಗೆ ಎಂದರೆ ಅವುಗಳಿಂದುಂಟಾಗುವ ಹರ್ಷೋದ್ವೇಗಗಳ ಪರಿತ್ಯಾಗವೇ ತ್ಯಾಗವೆಂಬ ಭಾವವು. ಹೀಗೆ ಅಭಿಲಾಷೆಗಳನ್ನು ಪರಿತ್ಯಾಗಮಾಡುವದಕ್ಕೂ ಇಂದ್ರಿಯಗಳನ್ನೆಲ್ಲಾ ನಿಗ್ರಹಿಸಿ, ವಶದಲ್ಲಿ ಇಟ್ಟುಕೊಳ್ಳುವದಕ್ಕೂ ಮನಸ್ಸೇ ಕಾರಣವೆಂದು ತಿಳಿಸುವದಕ್ಕಾಗಿ ಮನಸೈವ ಎಂದು ಅವಧಾರಣಯುಕ್ತವಾಗಿ ಪ್ರಯೋಗಿಸಲ್ಪಟ್ಟಿರುತ್ತದೆ. ಮನಸ್ಸಿಗೆ ನಾನಾಕಡೆಯಿಂದಲೂ ವಿಷಯಗಳ ಉಪಹತಿಯುಂಟು, ಅದರಿಂದ ತಪ್ಪಿಸಿಕೊಳ್ಳುವದರಲ್ಲಿ ಜಾಗರೂಕನಾಗಿರಬೇಕೆಂಬಂಶಕ್ಕಾಗಿ ಸಮನ್ತತಃ ಎಂಬುದಕ್ಕೆ ಸರ್ವಸ್ಮಾದ್ವಿಷಯಾತ್ ಎಂಬ ವ್ಯಾಖ್ಯಾನವು. ಹೀಗೆ ಮನಸ್ಸನ್ನು ವಿಷಯಪ್ರವಣತೆಯಿರದೆ ತಪ್ಪಿಸಿ, ಆತ್ಮನಲ್ಲಿಡತಕ್ಕದ್ದು ಏಕಾಏಕೀ ಲಭಿ

ಲಿ

ಸುವದಿಲ್ಲವೆಂದೂ, ಅಭ್ಯಾಸದಿಂದ ಬರತಕ್ಕದ್ದೆಂದೂ, ಅದಕ್ಕೆ ವಿವೇಕಜ್ಞಾನವು ಆವಶ್ಯಕವೆಂದೂ ತಿಳಿಸುವದಕ್ಕಾಗಿ, ಬುದ್ಧ್ಯಾ ಧೃತಿಗೃಹೀತಯಾ ಎಂದು ಹೇಳಲ್ಪಟ್ಟಿತು. ಮನಸ್ಸಿಗೆ ವಿಷಯಗಳ ಕಡೆಗೇನೆ ಸ್ವಾಭಾವಿಕವಾದ ಆಕರ್ಷಣೆಯು, ಹಾಗೆ ಮನಸ್ಸಿನ ಆಕರ್ಷಣೆಯನ್ನು ವಿವೇಕಜ್ಞಾನದಿಂದ ತಪ್ಪಿಸಬೇಕೆಂಬುದು ಉಪರಮೇತ್ ಎಂಬ ಪದಪ್ರಯೋಗದಿಂದ ಸೂಚಿಸಲ್ಪಟ್ಟಿರುತ್ತದೆ. ನ ಕಿಂಚಿದಪಿ ಚಿನ್ತಯೇತ್ - ಆತ್ಮವ್ಯತಿರಿಕ್ತವಾಗಿರುವ ಯಾವುದನ್ನೂ ಚಿನ್ತಿಸಬೇಡವೆಂದರೆ, ಅನುಕೂಲವಾದವುಗಳನ್ನೇಯಾಗಲಿ, ಪ್ರತಿಕೂಲವಾದವುಗಳನ್ನೇಯಾಗಲಿ, ಎರಡೂ ಅಲ್ಲದೆ ಉದಾಸೀನವಾದವುಗಳನ್ನೇಯಾಗಲಿ ಯಾವುದನ್ನೂ ಚಿನ್ತಿಸಬೇಡವೆಂಬಭಾವವು.

ಈ ಅಧ್ಯಾಯದ ಶ್ಲೋಕಗಳಲ್ಲಿ ಗ್ರಹಿಸತಕ್ಕ ಇನ್ನೊಂದು ವಿಷಯ ಉಂಟು.—ಏನೆಂದರೆ ಕರ್ಮಯೋಗಿಗೆ ಆತ್ಮಚಿನ್ತನರೂಪಯೋಗವು ಆವಶ್ಯಕವು; ಜ್ಞಾನಯೋಗಿಗೆ ತನ್ನ ಆತ್ಮೋಪಾಸನರೂಪಯೋಗವು ; ಭಕ್ತಿಯೋಗಿಗೆ ಪರಮಾತ್ಮೋಪಾಸನರೂಪಯೋಗವು. ಹೀಗೆ ಮೂರರಲ್ಲೂ ಚಿನ್ತನರೂಪವಾದ ಅಭ್ಯಾಸವಿರುವದರಿಂದ ಯೋಗವೆಂಬ ಪ್ರಯೋಗವು. ಈ ಭಕ್ತಿಯೋಗವು ಮುಂದೆ ೯ನೆಯ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ. ಇಂತಹ ಎಲ್ಲಾವಿಧವಾದ ಯೋಗಗಳಿಗೂ ೭ ಅಙ್ಗಗಳೂ ಒಂದು ಅಙ್ಗಿಯೂ ಉಂಟು ; ಅವು ಯಾವುವೆಂದರೆ (೧) ಯಮ (೨) ನಿಯಮ (೩) ಆಸನ (೪) ಪ್ರಾಣಾಯಾಮ (೫) ಪ್ರತ್ಯಾಹಾರ (೬) ಧಾರಣ (೭) ಧ್ಯಾನಗಳು; (೮) ನಿಧಿಧ್ಯಾಸನ ಅಥವಾ ಸಮಾಧಿಯಾದ ಅಂಗಿಯು ಎಂಬದಾಗಿ. ಈ ಆತ್ಮಚಿಂತನರೂಪಯೋಗಕ್ಕೂ ಯಮ ನಿಯಮಗಳು ಆವಶ್ಯಕವೆಂದು ಈ ಅಧ್ಯಾಯದ ೩ನೆಯ ಶ್ಲೋಕ ಮೊದಲುಗೊಂಡು ೧೦ನೆಯ ಶ್ಲೋಕಾಂತ್ಯದ ವರೆಗೂ ಹೇಳಲ್ಪಟ್ಟಿತು; ೧೧, ೧೨, ೧೩ನೆಯ ಶ್ಲೋಕಗಳಿಂದ ಆಸನವು ಹೇಳಲ್ಪಟ್ಟಿತು. ಯಮ ನಿಯಮಗಳಲ್ಲೇ ಅಂತರ್ಭೂತವಾದವು ಸಾಧನ ಸಪ್ತಕಗಳು, ಭಕ್ತಿಯೋಗದಲ್ಲಿ ಆರುರುಕ್ಷುವಿಗೆ ಇವೂ ಸಹಾಯಭೂತವಾದವು. ಹಾಗೆಯೇ ಶ್ರೀ ಯತಿವರರು ಪ್ರಥಮಸೂತ್ರ ಭಾಷ್ಯದಲ್ಲಿ ಹೇಳುತ್ತಾರೆ.—"ವಾಕ್ಯಕಾರಶ್ಚ ಧ್ರುವಾನುಸ್ಮೃತೇಃ ವಿವೇಕಾದಿಭ್ಯ ಏವ ನಿಷ್ಪತ್ತಿಮಾಹ" ಎಂದು ಹೇಳಿ, ಆ ಸಾಧನ ಸಪ್ತಕಗಳು ಯಾವುವೆಂದರೆ—(೧) ವಿವೇಕ (೨) ವಿಮೋಕ (೩) ಅಭ್ಯಾಸ (೪) ಕ್ರಿಯಾ (೫) ಕಲ್ಯಾಣ (೬) ಅನವಸಾದ (೭) ಅನುದ್ಧರ್ಷಗಳು. ವಿವೇಕವೆಂದರೆ ಜಾತಿ, ಆಶ್ರಯ, ನಿಮಿತ್ತ ಈ ಕಾರಣಗಳಿಂದ ದುಷ್ಟವಾದ ಆಹಾರವನ್ನು ಸೇವಿಸದೆ ಶುದ್ಧಾಹಾರ ಸೇವನೆಯಿಂದುಂಟಾದ ಕಾಯಶುದ್ಧಿಯು. ಇದು "ಯುಕ್ತಾಹಾರವಿಹಾರಸ್ಯ" ಎಂದು ೧೭ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಯುಕ್ತಾಹಾರವೆಂದರೆ ಯುಕ್ತವಾದ ಪರಿಮಿತಿಯುಳ್ಳ ಆಹಾರ [illegible] ಅಷ್ಟುಮಾತ್ರವೇ ಅರ್ಥವಲ್ಲವು. ಜಾತಿ, ಆಶ್ರಯ, ನಿಮಿತ್ತರೂಪ ದೋಷಗಳು [illegible] ದೋಷಗಳೂ ಇಲ್ಲದಿರುವ ಆಹಾರವೂ ಸಹ ಯುಕ್ತಾಹಾರ ಶಬ್ದದಿಂದ ಹೇಳಲ್ಪಟ್ಟಿತು. ಈ ದೋಷಗಳಿರುವ ಆಹಾರಗಳು ಯಾವುವು ಎಂಬುದನ್ನು ಶ್ರೀಮದ್ರಹಸ್ಯತ್ರಯಸಾರದ ಪ್ರಭಾವವ್ಯವಸ್ಥಾಧಿಕಾರದಲ್ಲಿ ಕಾಣಬಹುದು. (೨) ವಿಮೋಕವೆಂದರೆ ಕಾಮಾಸಕ್ತಿಯಿಲ್ಲದೆ ಕಾಮಗಳಿಲ್ಲದಿರೋಣವು, ಇದು ೧೮ನೆಯ ಶ್ಲೋಕದಲ್ಲಿ ನಿಸ್ಪೃಹಸ್ಸರ್ವಕಾಮೇಭ್ಯಃ ಎಂಬಲ್ಲೂ ೨೪ನೆಯ ಶ್ಲೋಕದ ಪೂರ್ವಾರ್ಧವಾದ "ಸಙ್ಕಲ್ಪಪ್ರಭವಾನ್ ಕಾಮಾನ್ ತ್ಯಕ್ತ್ವಾ ಸರ್ವಾನಶೇಷತಃ" ಎಂಬಲ್ಲೂ. ಹಾಗೆಯೇ ಮುಂದೆ ೨೭ನೆಯ ಶ್ಲೋಕದಲ್ಲಿ ಪ್ರಶಾನ್ತಮನಸಂ ಶಾನ್ತರಜಸಂ ಬ್ರಹ್ಮಭೂತಮಕಲ್ಮಷಂ ಎಂಬಲ್ಲೂ, ಇನ್ನೂ ಇತರ ಶ್ಲೋಕಗಳಲ್ಲೂ ಹೇಳಲ್ಪಟ್ಟಿತು. (೩) ಅಭ್ಯಾಸವು ವ್ಯಕ್ತಿಯ ಚಿನ್ತನವು, ಇದು ಪರಮಾತ್ಮೋಪಾಸನೆಯಲ್ಲಿ ಅವನ ದಿವ್ಯಮಙ್ಗಳವಿಗ್ರಹ ಚಿನ್ತನವು. ಇಲ್ಲಿ ಆತ್ಮಚಿನ್ತನವು. ಇದೂ ೧೫ನೆಯ ಶ್ಲೋಕದ ಪೂರ್ವಾರ್ಧದಲ್ಲಿ ಹೇಳಲ್ಪಟ್ಟಿತು. ಮುಂದೆ ೩೫ನೆಯ ಶ್ಲೋಕದಲ್ಲೂ ಉಪಪಾದಿತವು. (೪) ಕ್ರಿಯಾ - ಇದು ವಿಹಿತ ಕರ್ಮಾನುಷ್ಠಾನವು.

ಇದು ಮೂರು ನಾಲು ಐದನೇ ಅಧ್ಯಾಯಗಳಲ್ಲಿ ವಿಸ್ತರವಾಗಿ ಉಪಪಾದಿತವಾದುದು, ಹಿಂದಿನ ಅಧ್ಯಾಯದ ಕೊನೆಯ ಶ್ಲೋಕದ "ಭೋಕ್ತಾರಂ ಯಜ್ಞತಪಸಾಂ" ಎಂಬಲ್ಲಿ ಸ್ಮರಿಸಲ್ಪಟ್ಟಿತು. (೫) ಕಲ್ಯಾಣವು-ಸತ್ಯ, ಆರ್ಜವ, ದಯಾ, ದಾನ, ಅಹಿಂಸಾ ಅನಭಿಧ್ಯಾ-ಎಂದರೆ ಪರಕೃತಾಪರಾಧ ಚಿಂತೆ ಯಿಲ್ಲದಿರೋಣವು, ಈ ಗುಣಗಳಿರಬೇಕು. ಇದು ೭, ೮, ೯ನೆಯ ಶ್ಲೋಕಗಳಲ್ಲಿ ಹೇಳಿ, ಸಮಬುದ್ಧಿ ರ್ವಿಶಿಷ್ಯತೇ ಎಂಬಲ್ಲಿ ಉಪಪಾದಿತವು (೬) ಅನವಸಾದವು ಎಂದರೆ ನಿರ್ವೇದವಿಲ್ಲದ ಅನಿರ್ವೇದಾವಸ್ಥೆಯು. ಇದು ೨೩ನೆಯ ಶ್ಲೋಕದಲ್ಲಿ ಉಪಪಾದಿತವು, (೭) ಅನುದ್ಧರ್ಷವು, ಉದ್ಧರ್ಷವೆಂದರೆ ಸಂತೋಷವು; ಅಂತಹ ಅತಿ ಸಂತೋಷವಿಲ್ಲದ ಅವಸ್ಥೆಯು ಅನುದ್ಧರ್ಷವು. ಇದು ೨೨ನೆಯ ಶ್ಲೋಕವಾದ "ಯಂ ಲಬ್ಧ್ವಾ ಚಾ ಪರಂ ಲಾಭಂ ಮನ್ಯತೇ ನಾಧಿಕಂ ತತಃ" ಇದಕ್ಕಿಂತ ಹೆಚ್ಚಾದ ಲಾಭವಿಲ್ಲವೆಂದು ಯಾವನು ತಿಳಿಯುವನೋ ಅವನು ಇನ್ನು ಯಾವುದರಲ್ಲೂ ಅತ್ಯಂತ ಸುಖವುಂಟೆಂದು ಭಾವಿಸುವವನಲ್ಲವೆಂಬ ಅನುದ್ಧರ್ಷವು ಸೂಚಿತವು. ಹೀಗೆ ಸಾಧಕ ಸಪ್ತಕಗಳೆಲ್ಲಾ ಈ ಯೋಗಕ್ಕೆ ಸಹಕಾರಿಗಳಾಗಿ ಉಪಪಾದಿಸಲ್ಪಟ್ಟಿವೆ ಎಂದು ತಿಳಿಯತಕ್ಕದ್ದಾಗಿರುತ್ತದೆ. ಮೂರನೆಯ ಅಙ್ಗವಾದ ಆಸನವು "ಶುಚೌದೇಶೇ" ಎಂದಾರಂಭಿಸಿ ೧೧, ೧೨, ೧೩ನೆಯ ಶ್ಲೋಕಗಳಲ್ಲಿ ಉಪಪಾದಿತವು. ಯೋಗದ ೪ನೆಯ ಅಙ್ಗವಾದ ಪ್ರಾಣಾಯಾಮವು ಸಮವಾಗಿ ಇಟ್ಟುಕೊಳ್ಳತಕ್ಕದ್ದೆಂದು ೫ನೆಯ ಅಧ್ಯಾಯದ ೨೭ನೆಯ ಶ್ಲೋಕದಲ್ಲಿ ಪ್ರಾಣಾಪಾನೌ ಸಮೌಕೃತ್ವಾ ಎಂಬಲ್ಲಿ ಹೇಳಲ್ಪಟ್ಟಿತು. ೫ನೆಯ ಅಙ್ಗವಾದ ಪ್ರತ್ಯಾಹಾರವೆಂದರೆ ಇಂದ್ರಿಯಗಳಿಗೆ ವಿಷಯಸಂಬಂಧವುಂಟಾದರೂ ಅವುಗಳಿಗೆ ಮನಸ್ಸನ್ನು ಕೊಡದೆ, ಅವುಗಳಿಂದ ಸೆಳೆದುಕೊಳ್ಳುವದು. ಇದು ಈ ೨೪ ೨೫ನೆಯ ಶ್ಲೋಕದ ಉತ್ತರಾರ್ಧವಾದ "ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ । ಶನೈಶ್ಶನೈ ರುಪರಮೇತ್ ಬುದ್ಧ್ಯಾ ಧೃತಿಗೃಹೀತಯಾ" ಎಂಬಲ್ಲಿ ಹೇಳಲ್ಪಟ್ಟಿತು. ಕಾಮದಿಂದ ಇಂದ್ರಿಯಗಳು ಹಿಂತಿಗೆಯುವ ಹಾಗೆ ಮಾಡುವದೇ ಪ್ರತ್ಯಾಹಾರವು. (೬) ಧಾರಣವೂ ಸಹ "ಆತ್ಮಸಂಸ್ಥಂ ಮನಃಕೃತ್ವಾ ನ ಕಿಂಚಿದಪಿ ಚಿನ್ತಯೇತ್" (೨೫ನೆಯ ಶ್ಲೋಕವು) ಎಂದು ಇಲ್ಲೇ ಹೇಳಲ್ಪಟ್ಟಿತು. (೭) ನೆಯ ಧ್ಯಾನವು "ಯುಕ್ತ ಆಸೀತ ಮತ್ಪರಃ" ೧೪ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು. ೮ನೆಯ ನಿದಿಧ್ಯಾಸನವು ೨೦ನೆಯ ಶ್ಲೋಕದಿಂದಾರಂಭಿಸಿ, ನಾಲ್ಕು ಶ್ಲೋಕಗಳಿಂದ ಹಿಂದೆ ಹೇಳಲ್ಪಟ್ಟಿತು. ಆದರೆ ಮೊದಲು ಧ್ಯಾನ ನಿದಿಧ್ಯಾಸನಗಳನ್ನು ಹೇಳಿ ಅನಂತರ ಪ್ರತ್ಯಾಹಾರ ಧಾರಣಗಳನ್ನು ಹೇಳಬಹುದೇ? ಎಂದರೆ, ಮೊದಲು ಅಙ್ಗಿಯನ್ನು ಹೇಳಿ ಅನಂತರ ಅಙ್ಗಗಳನ್ನು ಹೇಳಬಹುದು. ಅದರಲ್ಲೇನೂ ವಿರೋಧವಿಲ್ಲವು. ಅಷ್ಟಾಂಗಯೋಗವೆಂಬ ಪ್ರಯೋಗವಿರುವಾಗ ೭ ಅಙ್ಗಗಳೂ ೧ ಅಙ್ಗಿಯೂ ಎಂದು ಹೇಳಿದುದು ಹೇಗೆ? ಎಂದರೆ, ಅಷ್ಟಾಙ್ಗಯೋಗ ಪ್ರಯೋಗದ ಅರ್ಥವು ಯೋಗವು ಎಂಟು ಅಂಶಗಳುಳ್ಳದ್ದೆಂದೂ, ಅವುಗಳಲ್ಲಿ ೭ ಅಙ್ಗಗಳೂ ೮ನೆಯದು ಅಙ್ಗಿ ಎಂಬರ್ಥವು; ಹೇಗೆಂದರೆ ಷಡ್ವಿಧಾ ಶರಣಾಗತಿಃ ಎಂಬ ಪ್ರಯೋಗದಲ್ಲಿ ಐದು ಅಙ್ಗಗಳಾಗಿ ೬ನೆಯದಾದ ಆತ್ಮನಿಕ್ಷೇಪವೇ ಅಙ್ಗಿ ಎಂಬರ್ಥವಾಗಿ ಶರಣಾಗತಿಯು ಆರು ಅಂಶಗಳುಳ್ಳದೆಂಬರ್ಥವು ಹೇಗೋ, ಹಾಗೆಯೇ ಯೋಗವೂ ೮ ಅಂಶಗಳುಳ್ಳದೆಂದೂ ೮ನೆಯದು ಅಙ್ಗಿ ಎಂದೂ ಭಾವವು. ||೨೪-೨೫||

ಮೂಲಕ್ಕೆ ಅರ್ಥವು:—ಹಿಂದಿನ ಶ್ಲೋಕದಲ್ಲಿ ನ ಕಿಂಚಿದಪಿ ಚಿನ್ತಯೇತ್ ಎಂದು ಆತ್ಮವ್ಯತಿರಿಕ್ತ ವಿಷಯ ಚಿಂತನವು ಬೇಡವೆಂದು ಉಪದೇಶಿಸಲ್ಪಟ್ಟಿತು. ಆದರೆ ಮನಸ್ಸಿಗೆ ವಿಷಯಗಳಲ್ಲಿ ತೊಳಲುವದು ಅದರ ಸಾಧಾರಣ ಧರ್ಮವಾಯಿತಲ್ಲಾ, ಹಾಗಾದರೆ ಅದನ್ನು ವಿಷಯಪ್ರವೃತ್ತಿಯಿಂದ ಸೆಳೆದು ಆತ್ಮನಲ್ಲಿ ನಿಲ್ಲಿಸುವ ಬಗೆ ಹೇಗೆ ಎಂಬುದನ್ನು ತಿಳಿಸುತ್ತಾರೆ. ಇಲ್ಲಿಯೂ ಪ್ರತ್ಯಾಹಾರ ಧಾರಣಕ್ರಮಗಳು ಹೇಳಲ್ಪಡುತ್ತವೆ. ಅಸ್ಥಿರಂ - ಆತ್ಮನಲ್ಲೇ ಸ್ಥಿರವಾಗಿ

ಮೂ. ಯತೋ ಯತೋ ನಿಶ್ಚರತಿ ಮನಶ್ಚಂಚಲ ಮಸ್ಥಿರಮ್ ।
ತತಸ್ತತೋ ನಿಯಮ್ಯೈತದಾ ತ್ಮನ್ಯೇವ ವಶಂ ನಯೇತ್ ॥ ೨೬.

ಭಾ. ಚಲಸ್ವಭಾವತಯಾ ಆತ್ಮನ್ಯಸ್ಥಿರಂ ಮನಃ ಯತೋ ಯತೋ ವಿಷಯ ಪ್ರಾವಣ್ಯಹೇತೋ ರ್ಬಹಿ ರ್ನಿಶ್ಚ ರತಿ, ತತಸ್ತತೋ ಯತ್ನೇನ ಮನೋ ನಿಯಮ್ಯಾತ್ಮನ್ಯೇವ ಅತಿಶಯಿತ ಸುಖಭಾವನಯಾ ವಶಂ ನಯೇತ್ ॥ ೨೬ ॥

ನಿಲ್ಲದ, ಚಂಚಲಂ-ಸಾಧಾರಣವಾಗಿ ಚಂಚಲ ಸ್ವಭಾವವುಳ್ಳ, ಮನಃ-ಮನಸ್ಸು. ಯತಃ ಯತಃ-ಯಾವ ಯಾವ ವಿಷಯಗಳ ಮೂಲಕವಾಗಿ, ಯಾವ ಯಾವ ಇಂದ್ರಿಯದ್ವಾರಾ, ನಿಶ್ಚರತಿ, ನಿತರಾಂಚರತಿ – ಚನ್ನಾಗಿ ಚಲಿಸುತ್ತದೋ, ತತಸ್ತತಃ - ಆಯಾಯಾ ವಿಷಯಗಳಿಂದ, ಏತತ್ - ಈ ಮನಸ್ಸನ್ನು, ನಿಯಮ್ಯ - ನಿಗ್ರಹಿಸಿ, ತಡೆದು, ಆತ್ಮನ್ಯೇವ - ಆತ್ಮನಲ್ಲೇ ಇರುವ ಹಾಗೆ, ಎಂದರೆ ಅಲ್ಲಿರುವಾಗ ಉಂಟಾಗುವ ಸುಖವು ಉತ್ತಮರೂಪವಾದುದರಿಂದ, ವಶಂ ನಯೇತ್ - ವಶವನ್ನು ಹೊಂದಿಸತಕ್ಕದ್ದು. ಯಾವ ಯಾವ ವಿಷಯಾನುಭವ ಸುಖಕ್ಕಾಗಿ ಈ ಚಂಚಲವಾದ ಮನಸ್ಸು ಆತ್ಮಾವಿನಲ್ಲಿ ನಿಲ್ಲದೆ, ವಿಷಯಗಳಲ್ಲಿ ಪ್ರವರ್ತಿಸುತ್ತದೋ, ಅಂತಹ ವಿಷಯಗಳಿಂದ ಬಲಾತ್ಕರಿಸಿ ಮನಸ್ಸನ್ನು ಸೆಳೆದು, ಆತ್ಮಾನುಭವ ಸುಖವು ಉತ್ತಮವಾದುದರಿಂದ ಆತ್ಮಾವಿನಲ್ಲೇ ನಿಲ್ಲುವಹಾಗೆ ಮಾಡತಕ್ಕದ್ದೆಂಬ ಭಾವವು. ಇಲ್ಲಿ ಆತ್ಮನ್ಯೇವ ವಶಂ ನಯೇತ್ - ಮನಸ್ಸನ್ನು ಭಗವಂತನಲ್ಲಿಡತಕ್ಕದ್ದೆಂದು ಅರ್ಥಮಾಡುವದು ಪ್ರಕರಣವಿರೋಧವು. ಇದು ಇನ್ನೂ ಕರ್ಮಯೋಗವನ್ನು ಕುರಿತೇ ಹೇಳುವದಾಗಿ, ಭಕ್ತಿಯೋಗದಲ್ಲಿ ಪರಮಾತ್ಮೋಪಾಸನೆಯು ಮುಂದೆ ಹೇಳುವದರಿಂದ ಪ್ರಕರಣಕ್ಕೆ ಅನುಗುಣವಾದ ಅರ್ಥವಲ್ಲವು.

ಭಾಷ್ಯಾರ್ಥವು:—ಹಿಂದಿನ ಶ್ಲೋಕದಲ್ಲಿ ಮನಸ್ಸನ್ನು ವಿವೇಕಬುದ್ಧಿಯಿಂದ ಸ್ವಲ್ಪಸ್ವಲ್ಪವಾಗಿ ವಿಷಯಗಳಿಂದ ತಪ್ಪಿಸಿ ಆತ್ಮನಲ್ಲಿ ನಿಲ್ಲುವಹಾಗೆ ಮಾಡತಕ್ಕದ್ದೆಂದು ಹೇಳಿದರು, ಹಾಗೆ ಮಾಡುವದು ಕಷ್ಟತರವಾದುದು, ಏಕೆಂದರೆ ಮನಸ್ಸು ಚಂಚಲ ಸ್ವಭಾವವಾದುದು, ಆದುದರಿಂದ ಸ್ವಲ್ಪ ಕಷ್ಟಪಟ್ಟು ಅದಕ್ಕೆ ವಿಷಯಪ್ರಾವಣ್ಯತೆಯನ್ನು ತಪ್ಪಿಸಿ, ಆತ್ಮಾನುಭವಾನಂದವು ಆ ವಿಷಯ ಸುಖಗಳಿಗಿಂತ ಉತ್ಕೃಷ್ಟವಾದುದರಿಂದ ಆತ್ಮನಲ್ಲೇ ನಿಲ್ಲುವಹಾಗೆ ಸ್ವಾಧೀನಪಡಿಸಿಕೊಳ್ಳಬೇಕೆಂದು ಹೇಳುತ್ತಾರೆ.—ಚಲಸ್ವಭಾವತಯಾ - ಸ್ಥಿರವಾಗಿ ಒಂದರಲ್ಲೇ ನಿಲ್ಲದೆ ಚಲಿಸುವ ಸ್ವಭಾವವಿರೋಣದರಿಂದ, ಆತ್ಮನಿ ಅಸ್ಥಿರಂ ಮನಃ - ಆತ್ಮನಲ್ಲೇ ಸ್ಥಿರವಾಗಿ ನಿಲ್ಲದಮನಸ್ಸು, ಯತೋಯತೋ ಎಂದರೆ ವಿಷಯ ಪ್ರಾವಣ್ಯ ಹೇತೋಃ – ಅದಕ್ಕಿರುವ ನಾನಾ ವಿಷಯಾಭಿಲಾಷೆಯಿರುವ ಕಾರಣದಿಂದ, ಯಾವ ಇಂದ್ರಿಯಗಳದ್ವಾರಾ ಯಾವಯಾವ ಕಾಮಾನುಭವ ಪ್ರಯೋಜನಕ್ಕಾಗಿ, ಬಹಿರ್ನಿಶ್ಚರತಿ - ಹೊರಕ್ಕೆ ಎಂದರೆ ಒಳಗಿರುವ ಆತ್ಮನನ್ನು ಬಿಟ್ಟು ಹೊರಗಿರುವ ವಿಷಯಗಳ ಕಡೆಗೆ ಇಂದ್ರಿಯಗಳದ್ವಾರಾ ಚಲಿಸುತ್ತದೋ, ತತಸ್ತತಃ - ಆಯಾವಿಷಯಗಳ ದೆಶೆಯಿಂದ, ಅಪ್ರಯೋಜನಗಳ ದೆಶೆಯಿಂದ, ಯತ್ನೇನ – ಪ್ರಯತ್ನಪೂರ್ವಕವಾಗಿ, ಮನೋ ನಿಯಮ್ಯ - ಮನಸ್ಸನ್ನು ನಿಗ್ರಹಿಸಿ, ಆತ್ಮನ್ಯೇವ – ಆತ್ಮಾವಿನಲ್ಲೇ, ಅತಿಶಯಿತ ಸುಖಭಾವನಯಾ – ಅತಿಶಯವಾದ ಸುಖವುಂಟೆಂಬ ಭಾವನೆಯಿಂದ, ವಶಂ ನಯೇತ್ - ವಶವನ್ನು ಹೊಂದಿಸತಕ್ಕದ್ದು ಈ ಶ್ಲೋಕದಲ್ಲಿ, ಚಂಚಲಂ ಅಸ್ಥಿರಂ ಎಂಬೆರಡು ವಿಶೇಷಣಗಳು ಮನಃ ಎಂಬುದಕ್ಕೆ ಕೊಟ್ಟಿರುತ್ತವೆ. ಇವುಗಳಲ್ಲಿ ಪುನರುಕ್ತಿಯಿಲ್ಲವೆಂದು ತೋರಿಸುವದಕ್ಕಾಗಿ, ಚಲಸ್ವಭಾವವು ಅದಕ್ಕೆ ಸಾಧಾರಣ ಗುಣವೆಂದೂ, ಪ್ರಕೃತ ಆತ್ಮಾವಿನಲ್ಲಿ ಸ್ಥಿರಮಾಡಿಕೊಳ್ಳುವದು ವಿಶೇಷ ಗುಣವೆಂದೂ ವ್ಯಾಖ್ಯಾನಮಾಡಿರುತ್ತಾರೆ. ಯತೋ ಯತೋತತಸ್ತತಃ ಎಂದು

**ಮೂ. ಪ್ರಶಾನ್ತ ಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾನ್ತರಜಸಂ ಬ್ರಹ್ಮಭೂತ ಮಕಲ್ಮಷಮ್ ॥ ೨೭.**

ಎರಡೆರಡುಸಲ ಹೇಳಿರುವುದು ಮನಸ್ಸಿನ ಚಲಸ್ವಭಾವಕ್ಕನುಗುಣವಾಗಿ ಮನಸ್ಸು ಓಡಿಹೋಗುವ ದ್ವಾರಗಳು ಅನೇಕವೆಂಬುದನ್ನೂ ದಶೇಂದ್ರಿಯಗಳ ದ್ವಾರಾ ಪ್ರವರ್ತಿಸುವ ವಿಷಯಗಳು ಅಸಂಖ್ಯೇಯವೆಂಬುದನ್ನೂ ಸೂಚಿಸುವದಕ್ಕೆಂದು ತಿಳಿಯತಕ್ಕದ್ದು. ಮನಸ್ಸನ್ನು ಸಡಲವಾಗಿ ಬಿಟ್ಟುಬಿಟ್ಟರೆ ಅದನ್ನು ಅನಂತರ ನಿಗ್ರಹಿಸುವದು ದುಸ್ತರವೆಂಬ ಭಾವವು. ಇದು **ನಿತರಾಂ ಚರತಿ ನಿಶ್ಚರತಿ** ಎಂಬ ಪದದಿಂದ ತೋರಿಬರುತ್ತದೆ. ಹಾಗೆ ಮನಸ್ಸು ಓಡಿಹೋಗುವದು ಯಾವಕಾರಣದಿಂದೆಂದರೆ **ವಿಷಯಪ್ರಾವಣ್ಯ ಹೇತೋಃ** ಎಂದು ವ್ಯಕ್ತಪಡಿಸಿರುತ್ತಾರೆ. ಆದುದರಿಂದ ಆಗಾಗಲೇ ಅವನ್ನು ಪ್ರಯಾಸಪಟ್ಟು ತಡೆಯುವದು ಯುಕ್ತವೆಂದು ತೋರಿಸುವದಕ್ಕಾಗಿ **ಯತ್ನೇನ ನಿಯಮ್ಯ** ಎಂಬ ವ್ಯಾಖ್ಯಾನವು. ಹಾಗೆ ನಾನಾಕಡೆಗೂ ಹರಿದು ಹೋಗುವದು ವಿಷಯ ಪ್ರಾವಣ್ಯತೆಯಿಂದಾದರೆ ಅದನ್ನು ನಿಗ್ರಹಿಸಿ ವಶಮಾಡಿಕೊಳ್ಳುವದು ಸಾಧ್ಯವೋ ಎಂದರೆ ವಿಷಯಾನುಭವ ಸುಖಕ್ಕಿಂತ ಮೇಲಾದ ಸುಖವು ಪ್ರಾಪ್ತವಾಗುವದಾದರೆ ಸಾಧ್ಯವಾಗುವದರಿಂದ, **ವಶಂ ನಯೇತ್** ಎಂಬುದರ ವ್ಯಾಖ್ಯಾನದಲ್ಲಿ **ಅತಿಶಯಿತ ಸುಖಭಾವನಯಾ** ಎಂದು ಹೇಳಿರುತ್ತಾರೆ. ಮೂಲದಲ್ಲಿ ಈ ಅರ್ಥವು ಎಲ್ಲಿ ಸೂಚಿತವೆಂದರೆ **ಆತ್ಮನ್ಯೇವ** ಎಂಬ ಅವಧಾರಣದಿಂದ ತೋರಿಬರುತ್ತದೆ. ಅದರಲ್ಲಿ ಅತಿಶಯಿತ ಸುಖವಿಲ್ಲದಿದ್ದರೆ ಮನಸ್ಸು ಆತ್ಮನಕಡೆಗೆ ಹೇಗೆ ತಿರುಗೀತು ಎಂಬ ತಾತ್ಪರ್ಯವು. ಹೆಚ್ಚು ಪ್ರಯೋಜನ ಉಂಟೆಂಬ ವಿವೇಕವಿದ್ದರೆ ಅದನ್ನು ವಿಷಯಗಳಿಂದ ಹಿಂತಿರುಗಿಸಿ ಆತ್ಮನಲ್ಲಿರುವಹಾಗೆ ವಶಮಾಡಿಕೊಳ್ಳಬಹುದು. ಇದು ಮುಂದಿನ ಶ್ಲೋಕದಲ್ಲಿ **ಸುಖಮುತ್ತಮಂ** ಎಂಬ ಪ್ರಯೋಗದಿಂದಲೂ, ವ್ಯಕ್ತವು. **ವಶಂ ನಯೇತ್**-ವಶವನ್ನು ಮಾಡಿಕೊಳ್ಳತಕ್ಕದ್ದು, ಇದು ಯಾವುದಕ್ಕೆ ಹೇಳಿದ ಬುದ್ಧಿವಾದವೆಂದರೆ, ಆತ್ಮಾವಿಗೆ; ವಿವೇಕರೂಪ ಬುದ್ಧಿಮೂಲಕವಾಗಿ ಮಾಡಿಕೊಳ್ಳತಕ್ಕದ್ದೆಂಬುದು ಉಪದೇಶವು. **"ವಾಚಂ ಯಚ್ಛ ಮನೋ ಯಚ್ಛ ಯಚ್ಛ ಪ್ರಾಣೇಂದ್ರಿಯಾಣಿ ಚ । ಆತ್ಮಾನಂ ಆತ್ಮನಾ ಯಚ್ಛ ನ ಭೂಯಃ ಕಲ್ಪಸೇಽಧ್ವನೇ ॥** (ಭಾಗ. ೧೧. ೧೬. ೪೨) ಎಂಬುದು ಅನುಸಂಧೇಯವು. **ಆತ್ಮಾನಂ ಆತ್ಮನಾ ಯಚ್ಛ** - ತನ್ನನ್ನು ತಾನೇ ನಿಗ್ರಹಿಸಿಕೊಳ್ಳಬೇಕು ಎಂದರೆ **ಸಙ್ಕಲ್ಪ ಪ್ರಭವಗಳಾದ ಕಾಮ**ಗಳನ್ನು ತನ್ನ ವಿವೇಕಜನ್ಯ ಜ್ಞಾನದಿಂದ ನಿಗ್ರಹಿಸಿ ಉಪಾಸನೆ ಮಾಡಿದರೆ **ಪುನಸ್ಸಂಸಾರ**ವಿಲ್ಲವೆಂಬುದು ಶ್ಲೋಕಾಭಿಪ್ರಾಯವು.

**ಮೂಲಕ್ಕೆ ಅರ್ಥವು:**—ಹೊರಗೆ ಸಂಚರಿಸುವ ಮನಸ್ಸನ್ನು ಆತ್ಮನಲ್ಲೇ ನಿಲ್ಲುವಹಾಗೆ ವಶಮಾಡಿಕೊಳ್ಳುವದರಿಂದುಂಟಾಗುವ ಪ್ರಯೋಜನಗಳನ್ನು ಹೇತುಗರ್ಭ ವಿಶೇಷಣಗಳಮೂಲಕ ಕ್ರಮವಾಗಿ ತಿಳಿಸುತ್ತಾರೆ. ಹೀಗೆ ಪ್ರತ್ಯಾಹಾರ ಧಾರಣಾದಿಗಳಿಂದ ಸಮಾಧಿಯಲ್ಲಿರುವವನಿಗೆ ನಿರತಿಶಯಾನಂದವು ಲಭಿಸುತ್ತದೆಂದು ಹೇಳಲ್ಪಡುತ್ತದೆ. **ಯೋಗಿನಂ** - ಇಂತಹ ಆತ್ಮಚಿನ್ತನೆಯಲ್ಲಿ ನಿರತನಾದ ಕರ್ಮಯೋಗಿಯನ್ನು, **ಸುಖಮುತ್ತಮಂ** - ವಿಷಯಾನುಭವ ಸುಖಗಳ ಹಾಗೆ ಅಸ್ಥಿರವಾಗಿಯೂ, ದುಃಖಮಿಶ್ರವಾಗಿಯೂ, ಇರುವ ಸುಖದ ಹಾಗಲ್ಲದೆ ಸ್ಥಿರವಾಗಿಯೂ, ದುಃಖ ಗಂಧವಿಲ್ಲದೆಯೂ ಇರುವದರಿಂದ ನಿರತಿಶಯವಾಗಿ ಉತ್ತಮವಾದ ಆತ್ಮಚಿನ್ತನದ ಆನಂದವು, **ಉಪೈತಿ** - ಹೊಂದುತ್ತದೆ. ಆ ಯೋಗಿಯನ್ನು ನಿರತಿಶಯಾನಂದವು ಹೊಂದಲು ಕಾರಣವೇನೆಂದು ತಿಳಿಸುವದಕ್ಕಾಗಿ, ಆ ಯೋಗಿಯು ಎಂತಹ ಅವಸ್ಥೆಯನ್ನು ಕೊನೆಯಲ್ಲಿ ಹೊಂದುವನೆಂಬುದನ್ನು ಉಪದೇಶಿಸುತ್ತಾರೆ. **ಪ್ರಶಾನ್ತ ಮನಸಂ** - ಮೇಲಿನ ಶ್ಲೋಕದಲ್ಲಿ ಹೇಳಿದಹಾಗೆ

ಭಾ. ಪ್ರಶಾನ್ತಮನಸಂ-ಆತ್ಮನಿ ನಿಶ್ಚಲಮನಸಂ-ಆತ್ಮನ್ಯಸ್ತಮನಸಂ, ತತ ಏವ ದೇಹೋ ದಗ್ಧಾಶೇಷ ಕಲ್ಮಷಂ, ತತ ಏವ ಶಾನ್ತರಜಸಂ - ವಿನಷ್ಟರಜೋಗುಣಾಮ್, ತತ ಏವ ಬ್ರಹ್ಮ ಭೂತಂ - ಸ್ವಸ್ವರೂಪೇಣಾವಸ್ಥಿತಮೇನಂ ಯೋಗಿನಂ, ಆತ್ಮಾನುಭವ ರೂಪಮುತ್ತಮಂ ಸುಖಮುಪೈತಿ. ಹೀತಿ ಹೇತೌ, ಉತ್ತಮ ಸುಖರೂಪತ್ವಾದಾತ್ಮ ಸ್ವರೂಪಸ್ಯೇತ್ಯರ್ಥಃ ॥೨೭॥

---

ವಿಷಯ ಪ್ರಾವಣ್ಯತೆ ಮೂಲಕ ಬಹಿಶ್ಚಲನೆಯಿಲ್ಲದೆ ಶಾನ್ತವಾದ ಮನಸ್ಸುಳ್ಳವನು ಎಂದರೆ ಆತ್ಮನಲ್ಲೇ ಸಕ್ತನಾದ ಮನಸ್ಸುಳ್ಳವನು ; ಆ ಕಾರಣದಿಂದಲೇ ಅಕಲ್ಮಷಂ - ಯೋಗಪ್ರತಿಬಂಧಕಗಳಾದ ಸಮಸ್ತದೋಷಗಳಿಲ್ಲದವನು, ಆ ಕಾರಣದಿಂದಲೇ ಶಾನ್ತರಜಸಂ - ರಜಸ್ತಮೋಗುಣಗಳಿಂದ ಬಿಡಲ್ಪಟ್ಟವನು, ಅಥವಾ ಕರ್ಮಯೋಗಿಗೆ ತಮೋಗುಣವಿರುವದಿಲ್ಲವೆಂದು ಶಾನ್ತರಜಸಂ, ಆ ಕಾರಣದಿಂದಲೇ, ಬ್ರಹ್ಮಭೂತಂ - ಆತ್ಮಯಾಥಾತ್ಮ್ಯಸ್ವರೂಪಚಿನ್ತನದಿಂದ ತಾನು ಅಂತಹ ದಿವ್ಯ ಸ್ವರೂಪವನ್ನು ಸಾಕ್ಷಾತ್ಕರಿಸಿದವನನ್ನು ; ಇಲ್ಲಿ ಬ್ರಹ್ಮ ಶಬ್ದವು ಪ್ರಕೃತಿಯ ಹೇಯ ಗುಣಗಳಿಂದ ಬಿಡಲ್ಪಟ್ಟ ಆತ್ಮಸ್ವರೂಪವನ್ನು ಬೋಧಿಸುತ್ತದೆ, ಆ ಕಾಲದಲ್ಲಿ ಧರ್ಮಭೂತಜ್ಞಾನಕ್ಕೆ ಸಂಕೋಚವಿಲ್ಲವು. ಇಂತಹ ವಿಭುವಾದ ಧರ್ಮಭೂತಜ್ಞಾನಯುಕ್ತನಾಗಿ ಬೃಹತ್ತ್ವವನ್ನು ಹೊಂದಿರುವದರಿಂದ ಶುದ್ಧಾತ್ಮಸ್ವರೂಪವನ್ನು ಹೊಂದಿದವನು, ತಾನು ಎಂಬ ಭಾವನೆಯುಳ್ಳ ಯೋಗಿಯನ್ನು, ಉತ್ತಮಂ ಸುಖಂ ಉಪೈತಿ ಎಂಬ ತಾತ್ಪರ್ಯವು.

ಭಾಷ್ಯಾರ್ಥವು :— ಪ್ರಯತ್ನ ಪಟ್ಟು ಆತ್ಮನಲ್ಲೇ ಮನಸ್ಸು ಇರುವಹಾಗೆ ಮಾಡಿಕೊಂಡರೆ ಪ್ರಯೋಜನಗಳು ಕ್ರಮಕ್ರಮವಾಗಿ ಯಾವುವೆಂಬುದನ್ನು ಈ ಶ್ಲೋಕದಲ್ಲಿ ಉಪಪಾದಿಸುತ್ತಾರೆ. ಧ್ಯಾನವು ಬಲಿಸಿ ಅಂಗವಾದ ಸಮಾಧಿಸ್ಥಿತಿಯುಂಟಾಗಿ ಅಂತಹ ಆತ್ಮಸ್ವರೂಪದ ಜ್ಞಾನದಲ್ಲೇ ಮಗ್ನನಾದವನಿಗೆ ಅತ್ಯಂತಾನಂದವು ಲಭಿಸುತ್ತದೆಂದು ಹೇಳುತ್ತಾರೆ. ಈ ಸಂದರ್ಭದಲ್ಲಿ "ತಸ್ಮಾತ್ ನ್ಯಾಸಂ ಏಷಾಂ ತಪಸಾಮತಿರಿಕ್ತಮಾಹುಃ" ಎಂಬ ತೈತ್ತಿರೀಯ ವಾಕ್ಯವು ಅನುಸಂಧೇಯವು. ಈ ವಾಕ್ಯವು ಭಗವತ್ಪರವಾದ ಮನಸ್ಸನ್ನು ಬೋಧಿಸಿದರೂ, ಉತ್ಕೃಷ್ಟವೆಂಬ ಭಾವನೆಯಿಂದ ಮಾಡಿದ ಆತ್ಮ ಚಿನ್ತನದಲ್ಲೂ ನಿರತಿಶಯಾನಂದ ಉಂಟೆಂಬುದು ವ್ಯಕ್ತವು. ಪ್ರಶಾನ್ತಮನಸಂ ಎಂದರೆ ಆತ್ಮನಿ ನಿಶ್ಚಲ ಮನಸಂ - ಆತ್ಮನಿಂದ ಕದಲದ ಮನಸ್ಸುಳ್ಳ ಎಂದರೆ ಆತ್ಮನ್ಯಸ್ತ ಮನಸಂ - ಇನ್ನು ಯಾವುದರಲ್ಲೂ ಇಲ್ಲದ ಆತ್ಮನಲ್ಲೇ ಇಟ್ಟ ಮನಸ್ಸುಳ್ಳ, ತತ ಏವ ದೇಹೋ - ಆ ಕಾರಣದಿಂದಲೇ, ದಗ್ಧಾ ಶೇಷ ಕಲ್ಮಷಂ - ಭಸ್ಮಮಾಡಲ್ಪಟ್ಟ ಸಮಸ್ತ ಪಾಪಗಳುಳ್ಳ, ತತ ಏವ - ಆ ಕಾರಣದಿಂದಲೇ, ಶಾನ್ತರಜಸಂ ಎಂದರೆ ವಿನಷ್ಟ ರಜೋಗುಣಂ - ನಷ್ಟ ಹೊಂದಿದ ರಜೋಗುಣಗಳುಳ್ಳ, ತತ ಏವ - ಆ ಕಾರಣದಿಂದಲೇ, ಬ್ರಹ್ಮಭೂತಂ ಎಂದರೆ ಸ್ವಸ್ವರೂಪೇಣಾವಸ್ಥಿತಂ - ತನ್ನ ಯಥಾರ್ಥಸ್ವರೂಪವನ್ನು ಸಾಕ್ಷಾತ್ಕರಿಸಿ ಇರುವ, ಏನಂ ಯೋಗಿನಂ - ಈ ಕರ್ಮಯೋಗಿಯನ್ನು, ಉತ್ತಮಂ ಸುಖಮುಪೈತಿ - ವೈಷಯಿಕ ಸುಖವಾಗಿ ದುಃಖ ಸಂಬಂಧವೂ ಅಸ್ಥಿರತ್ವವೂ ಇಲ್ಲದೆ ಉತ್ಕೃಷ್ಟರೂಪವಾಗಿ, ಹಿಂದೆ ಸುಖಮಾತ್ಯನ್ತಿಕಂ ಎಂದು ಹೇಳಲ್ಪಟ್ಟ ಆನಂದವು ಹೊಂದುತ್ತದೆ; "ಹೀತಿ ಹೇತೌ" ಈ ಶ್ಲೋಕದಲ್ಲಿರುವ ಹಿ ಶಬ್ದವು ವಿಶೇಷಣಗಳಿಗೆ ಹೇತು ಹೇತುಮದ್ಭಾವವಿರುವದರಿಂದ, ಹೇತುವನ್ನು ಬೋಧಿಸುತ್ತದೆ. ಹಿಂದಿನ ಶ್ಲೋಕದಲ್ಲಿ ಮನಸ್ಸನ್ನು ವಶಮಾಡಿಕೊಂಡ ಹೇತು ಪರವಾಗಲಿ, ಅಥವಾ ಈ ಶ್ಲೋಕದಲ್ಲಿ ಹೇಳುವ ಉತ್ತಮ ಸುಖಪ್ರಾಪ್ತಿಯ ಹೇತುಪರವಾಗಲಿ ಹಿ ಶಬ್ದವು ಎಂದು ಭಾವಿಸಬಹುದು, ಇದನ್ನೇ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಉತ್ತಮ ಸುಖರೂಪತ್ವಾ

ದಾತ್ಮಸ್ವರೂಪಸ್ಯೇತ್ಯರ್ಥಃ - ಆತ್ಮಸ್ವರೂಪಕ್ಕೆ ಶ್ರೇಷ್ಠವಾದ ಸುಖರೂಪತ್ವವು ಇರುವದರಿಂದ ಎಂಬಭಿಪ್ರಾಯವು. ಕೆಲವರು ಹಿ ಎಂಬುದು ಶಾಸ್ತ್ರಗಳಿಂದ ತೋರುವ ಪ್ರಸಿದ್ಧಿಯನ್ನು ತೋರಿಸುತ್ತದೆ ಎಂದು ಬರೆದಿರುತ್ತಾರೆ. ಇದಕ್ಕಿಂತ, ಹೇತುವನ್ನು ಬೋಧಿಸುತ್ತದೆಂಬರ್ಥದಲ್ಲಿ ಸ್ವಾರಸ್ಯವು ತೋರುತ್ತದೆ. ಈ ಶ್ಲೋಕದಲ್ಲಿ ಭಾಷ್ಯಕಾರರು ಅನ್ವಯ ಕ್ರಮವನ್ನು ಪ್ರದರ್ಶಿಸಿರುತ್ತಾರೆ, ಹೇಗೆಂದರೆ ಪ್ರಶಾಂತಮನಸಂ, ಆ ಕಾರಣದಿಂದ ಅಕಲ್ಮಷಂ, ಆ ಕಾರಣದಿಂದ ಶಾಂತರಜಸಂ, ಆ ಕಾರಣದಿಂದ ಬ್ರಹ್ಮಭೂತಂ, ಏನಂ ಯೋಗಿನಂ, ಉತ್ತಮಂ ಸುಖಮುಪೈತಿ ಎಂಬದಾಗಿ.

ಬ್ರಹ್ಮಭೂತಂ ಎಂಬುದು ಕೆಲವರು ಜೀವನ್ಮುಕ್ತನನ್ನು ಬೋಧಿಸುತ್ತದೆಂದು ಅಭಿಪ್ರಾಯಪಡುವರು. ಬದ್ಧದೆಶೆಯಲ್ಲೇ ಮುಕ್ತದೆಶೆಯು ಸಾಧ್ಯವಲ್ಲವೆಂಬುದು ಶ್ರೀ ಭಾಷ್ಯಾದಿಗಳಲ್ಲಿ ವಿಸ್ತರವಾಗಿ ಉಪಪಾದಿಸಲ್ಪಟ್ಟಿರುತ್ತದೆ. ಈ ಪರ್ಯಾಯೋಗದೆಶೆಯಲ್ಲೇ ಜೀವನ್ಮುಕ್ತನಾದರೆ, ಆತನು ಕೃತಕೃತ್ಯನಾದನು, ಅಂತವನಿಗೆ ಭಕ್ತಿಯೋಗಾದಿ ಮುಂದಿನ ಉಪದೇಶಗಳು ಆಗ ಅನಾವಶ್ಯಕವೆಂಬಾಕ್ಷೇಪಣೆಗೆ ಕಾರಣವಾಗುತ್ತದೆ. ಜೀವನ್ಮುಕ್ತಿ ಎಂಬ ಅಭಿಪ್ರಾಯವು ಪ್ರಾಮಾಣಿಕವಾಗಿ ತೋರಿಬರುವದಿಲ್ಲವು; ಏಕೆಂದರೆ ಮುಕ್ತಿ ಎಂಬುದು ಈ ಪ್ರಾಕೃತ ಶರೀರತ್ಯಾಗದಿಂದಲೇ ಆದರೆ, ಶರೀರವಿರುವಾಗಲೇ ಮುಕ್ತಿಯು ಹೇಗೆ? ಮೋಕ್ಷವೆಂದರೆ ಮುಕ್ತಿದೆಶೆಯಲ್ಲಿ ದುಃಖಸಂಬಂಧವೇ ಇಲ್ಲದ ನಿರತಿಶಯ ಸುಖವು. ಜೀವನ್ಮುಕ್ತನೆಂದು ಹೇಳುವವನಿಗೇನೆ ದುಸ್ಸಹವಾದ ಶರೀರಸಂಬಂಧ ಕ್ಲೇಶವು ಒದಗುವದಿಲ್ಲವೇ? ಶರೀರಹೊಂದಿಗಿರುವದೇ ಬಂಧವು,ಶರೀರವು ಕಳೆದನಂತರವೇ ಉಂಟಾಗುವದರಿಂದಲೇ ಮೋಕ್ಷವೆಂಬ ವ್ಯವಹಾರವಿರುವಾಗ ಜೀವನ್ಮುಕ್ತಿ ಎಂಬುದು ಎಂತಾದ್ದೋ ತಿಳಿಯದು. "ಅನ್ಯತ ಇವ ಭವತಿ" ಮುಕ್ತತುಲ್ಯನಾಗಿರುತ್ತಾನೆಂದು ಹೇಳುವದು ನ್ಯಾಯವು; ಮಗನು ಕಣ್ಣೆದುರಿಗೇನೇ ಇರುವಾಗ ತಾಯಿಯು ಬಂಜೆಯು ಎಂಬ ಹೇಳಿಕೆಗೆ ಈ ಅಭಿಪ್ರಾಯವು ತುಲ್ಯವು. ಶ್ರುತಿಯೂ ಸಹ ಜೀವನ್ಮುಕ್ತಿಯ ಅಭಿಪ್ರಾಯವನ್ನು ಖಂಡಿಸಿರುತ್ತದೆ. "ನಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ, ಅಶರೀರಂ ವಾ ವಸನ್ತಂ ನ ಪ್ರಿಯಾಪ್ರಿಯೇ ಸ್ಪೃಶತಃ" (ಛಾಂ. ೮. ೧೨. ೧.)ಪ್ರಾರಬ್ಧಕರ್ಮಾನುಭವಕ್ಕಾಗಿ ಏರ್ಪಟ್ಟ ಶರೀರದಿಂದಿರುವವನಿಗೆ ಸುಖದುಃಖರೂಪ ಪ್ರಾರಬ್ಧಗಳು ತಪ್ಪಿದ್ದಲ್ಲವು, ಈ ಪ್ರಾಕೃತಶರೀರವು ಉಪಾಸನಾನುಷ್ಠಾನವನ್ನು ಮಾಡಿ, ದೇಹತ್ಯಾಗಮಾಡಿದವನಿಗೆ ಕೊಲಗಿಹೋದರೆ ಆಗೀಗ ಸುಖದುಃಖಗಳ ಸ್ಪರ್ಶವೇ ಇರುವದಿಲ್ಲವು ಎಂಬುದು ಶ್ರುತ್ಯರ್ಥವು. ಮೋಕ್ಷಸುಖವು ನಿಷ್ಪನ್ನಯೋಗಿಯಾಗಿ, ದೇಹೋತ್ಕ್ರಮಣವು ಮೂರ್ಧನ್ಯನಾಡೀವಿಶೇಷಮೂಲಕ ಉಂಟಾಗಿ, ಅರ್ಚಿರಾದಿ ಮಾರ್ಗವು ಲಭಿಸಿ, ವಿರಜಾ ನದಿಯಲ್ಲಿ ಈ ಪ್ರಾಕೃತ ದೇಹದ ವಿಯೋಗವು ಅಮಾನವ ಕರಸ್ಪರ್ಶದಿಂದುಂಟಾದನಂತರವೇ ಲಭಿಸುತ್ತದೆಂದು ಅನೇಕ ಶ್ರುತಿಗಳು ಹೇಳುತ್ತವೆ. ಇವುಗಳಿಗೆಲ್ಲಾ ಜೀವನ್ಮುಕ್ತ್ಯಭಿಪ್ರಾಯವು ವಿರುದ್ಧವು. ಹಾಗೆಯೇ ಇನ್ನೊಂದು ಛಾಂದೋಗ್ಯ ಶ್ರುತಿಯು."ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ" (ಛಾಂ. ೬. ೧೪. ೨) "ಸದ್ವಿದ್ಯಾನಿಷ್ಠನಿಗೆ (ಇದು ಎಲ್ಲಾ ವಿದ್ಯಾನಿಷ್ಠರಿಗೂ ಉಪಲಕ್ಷಣವು) ಶರೀರವಿಯೋಗ ಎಲ್ಲಿವರೆಗೂ ಇಲ್ಲವೋ, ಅಲ್ಲಿವರೆಗೆ ಮೋಕ್ಷಕ್ಕೆ ಅವಕಾಶವು, ಅದು ಉಂಟಾಯಿತೋ ಇಲ್ಲವೋ ಒಡನೆಯೇ ಮೋಕ್ಷವು" ಎಂದು ಮೋಕ್ಷಪ್ರಾಪ್ತಿಗೆ ಶರೀರ ನಿವೃತ್ತಿಯು ಅಪೇಕ್ಷಿತವೆಂದು ಹೇಳಿರುತ್ತದೆ. ಶ್ರುತಿಮಾತ್ರವಲ್ಲದೆ ಆಪಸ್ತಂಭ ಸ್ಮೃತಿಯೂ ಸಹ ಈ ಅಭಿಪ್ರಾಯವನ್ನು ಖಂಡಿಸಿರುತ್ತದೆ. "ವೇದಾನಿಮಂ ಲೋಕಮಮುಂಚ ಪರಿತ್ಯಜ್ಯಾತ್ಮಾನಮನ್ವಿಚ್ಛೇತ್। ಬುದ್ಧೇ ಕ್ಷೇಮಪ್ರಾಪಣಂ ತಚ್ಛಾಸ್ತ್ರೈರ್ವಿಪ್ರತಿಷಿದ್ಧಮ್। ಬುದ್ಧೇ ಚೇತ್ ಕ್ಷೇಮಪ್ರಾಪಣ

ಮಿಹೈವ ನ ದುಃಖಮುಪಲಭೇತ । ಏತೇನ ಪರಂ ವ್ಯಾಖ್ಯಾತಮಿತಿ॥ ಕರ್ಮಗಳನ್ನೂ ತತ್ಫಲಗಳನ್ನೂ ತ್ಯಜಿಸಿ, ಬುದ್ಧೇಃ ಕ್ಷೇಮಪ್ರಾಪಣಂ - ತತ್ತ್ವಮಸ್ಯಾದಿ ವಾಕ್ಯಾರ್ಥಜ್ಞಾನ ಉಂಟಾದರೆ, ಮೋಕ್ಷವು ಎಂಬ ಅಭಿಪ್ರಾಯವು ಶಾಸ್ತ್ರಗಳಿಗೆ ತುಂಬಾ ವಿರುದ್ಧವಾದುದು. ಹಾಗೆ ವಾಕ್ಯಾರ್ಥಜ್ಞಾನದಿಂದ ಮೋಕ್ಷವಾದರೆ ದುಃಖಾನುಭವವು ಈಗ ಆಗಬಾರದಷ್ಟೇ. ಆದುದರಿಂದ ಉಪಾಸನಾದಿಗಳು ಬೇಕಿಲ್ಲದೆ, ಬರೀ ಜ್ಞಾನಮಾತ್ರದಿಂದ ಮೋಕ್ಷನೆಂಬ ಅಭಿಪ್ರಾಯವು ಸರಿಯಲ್ಲವೆಂದು ಹೇಳಿದಂತಾಯಿತು. ಇನ್ನು ಕೆಲವರು ಬ್ರಹ್ಮಭೂತ ಶಬ್ದಕ್ಕೆ ಪರಮಾತ್ಮನಲ್ಲೇ ಇಡಲ್ಪಟ್ಟ ಮನಸ್ಸುಳ್ಳವರೆಂದು ಅರ್ಥಮಾಡಿರುತ್ತಾರೆ. ಇಲ್ಲಿ ಪರಮಾತ್ಮೋಪಾಸನೆಯು ವಿಧಿಸಲ್ಪಟ್ಟಿತೆಂಬುದು ಅವರುಗಳ ತಾತ್ಪರ್ಯವು. ಇಲ್ಲೆಲ್ಲಾ ಯೋಗೀ ಎಂಬ ಶಬ್ದವು ಕರ್ಮಯೋಗಿಯನ್ನು ಹೇಳುತ್ತದೆಯೇವಿನಾ ಭಕ್ತಿಯೋಗಿಯನ್ನಲ್ಲವು. ಭಕ್ತಿಯೋಗಿಯ ವಿಷಯವು ಮುಂದೆ ಏಳರಿಂದ ಒಂಭತ್ತನೆಯ ಅಧ್ಯಾಯಾಂತ್ಯದವರೆಗೂ ಹೇಳಲ್ಪಡುತ್ತದೆ. ಬ್ರಹ್ಮ ಶಬ್ದಕ್ಕೆ ಬೃಹತ್ವದಲ್ಲಿ ಅನ್ವಯವಿರುವದರಿಂದ ಪರಮಾತ್ಮಾ, ಜೀವಾತ್ಮ, ವೇದ, ಅಚಿತ್ಪ್ರಕೃತಿಯನ್ನು ಆ ಶಬ್ದವು ಬೋಧಿಸುತ್ತದೆ. ಪರಮಾತ್ಮನಲ್ಲಿ ವಿಭುತ್ವವೂ ಕಲ್ಯಾಣ ಗುಣಾಕರತ್ವವೂ ಇರುವದರಿಂದಲೂ, ಮುಖ್ಯ ವೃತ್ತಿಯೇ ಆಯಿತು. ಜೀವಾತ್ಮಾನಂತ್ಯದಿಂದಲೂ ಧರ್ಮಭೂತ ಜ್ಞಾನ ದ್ವಾರಾ ವಿಭುತ್ವವೂ ಇರುವದರಿಂದಲೂ ಮತ್ತೂ ಜಗತ್ತಿಗೆಲ್ಲಾ ಜೀವತತ್ತ್ವವು ಅಸಂಖ್ಯೇಯವಾಗಿರುವದರಿಂದಲೂ ಬ್ರಹ್ಮ ಶಬ್ದವು ಔಪಚಾರಿಕವಾಗಿ ಅನ್ವಯಿಸುತ್ತದೆ. ವೇದಾನನ್ತ್ಯದಿಂದಲೂ, ಪ್ರಕೃತ್ಯಾನನ್ತ್ಯದಿಂದಲೂ, ಬ್ರಹ್ಮ ಶಬ್ದವು ಔಪಚಾರಿಕವಾಗಿ ಇವುಗಳಿಗೂ, ಅನ್ವಯಿಸುತ್ತದೆ. ಇಲ್ಲಿ ಜೀವಾತ್ಮ ಚಿನ್ತನೆಯು ವಿಧಿಸಲ್ಪಟ್ಟಿರುವದರಿಂದ ಬ್ರಹ್ಮಭೂತ ವೆಂದರೆ ಸ್ವಸ್ವರೂಪೇಣಾವಸ್ಥಿತಂ ಎಂಬ ಭಾಷ್ಯವೇ ಯುಕ್ತವಾದುದು. ಇಲ್ಲಿ ಅಕಲ್ಮಷಂ ಎಂಬುದಕ್ಕೆ ಆತ್ಮನಲ್ಲಿಟ್ಟ ಮನಸ್ಸುಳ್ಳವನಾದುದರಿಂದ ದಗ್ಧಾಶೇಷ ಕಲ್ಮಷಂ ಎಂದು ಭಾಷ್ಯವನ್ನು ಬರೆಯುವದರಲ್ಲಿ ಪಂಚಗವ್ಯ ಪ್ರಾಶನದಿಂದ ಪಾಪನಿವಾರಣೆಯೂ ಪರಮಾತ್ಮನಮೂಲಕವೇ ಹೇಗೋ, ಹಾಗೆಯೇ ಇಲ್ಲೂ ಆತ್ಮನಲ್ಲಿಟ್ಟ ಮನಸ್ಸಿನಿಂದ ಪವಿತ್ರತೆಯೂ ಸಹ ಪರಮಾತ್ಮಾನುಗ್ರಹದಿಂದಲೇ ಎಂದು ಭಾವಿಸತಕ್ಕದ್ದು. ಇಲ್ಲಿ ಬ್ರಹ್ಮಭೂತ ಶಬ್ದದಿಂದ ದೇಹಾತ್ಮ ಸ್ವತಂತ್ರಾತ್ಮ ಭ್ರಮಾದಿಗಳಿಲ್ಲದ ಆತ್ಮಯಾಥಾತ್ಮ್ಯಸ್ವರೂಪದ ತಿಳುವಳಿಕೆಯಿಂದಿರುವನೆಂಬ ಭಾವದಿಂದ ಸ್ವಸ್ವರೂಪೇಣಾವಸ್ಥಿತಂ ಎಂಬ ವ್ಯಾಖ್ಯಾನವು ಎಂದೂ ಭಾವಿಸಬಹುದು. ಸುಖಮುತ್ತಮಂ ಎಂದು ಹೇಳಿರುವದರ ಅಭಿಪ್ರಾಯವು ಏನೆಂದರೆ ಅಂತಹ ಸ್ವಸ್ವರೂಪೇಣಾವಸ್ಥಿತನಾದ ಸಂದರ್ಭಗಳಲ್ಲಿ ದುಃಖವು ಪ್ರಾಪ್ತವಾದರೂ ಮನಸ್ಸು ವಿಕಾರವನ್ನು ಹೊಂದದಿರುವದರಿಂದ ಉತ್ತಮ ಸುಖವೆಂದು ನಿರ್ದೇಶಿಸಲ್ಪಟ್ಟಿತು. ಇಂತಹ ಆತ್ಮಾನುಭವವಿಲ್ಲದವರಿಗೆ ದುಃಖವು ಪ್ರಾಪ್ತವಾದರೆ ಕ್ಷಿಪ್ರದಲ್ಲೇ ದೈನ್ಯವನ್ನು ಹೊಂದುವನು. ಈತನು ಹಾಗಲ್ಲವು; ದುಃಖಗಳನ್ನು ಪರಿಗಣಿಸದೆ ಇರುವವನಾದುದರಿಂದ ಈತನ ಅನುಭವವು ಉತ್ತಮ ಸುಖರೂಪವಾದುದೆಂಬ ಭಾವವು. ಇದಕ್ಕೆ ಉತ್ತಮವು ಏತರಿಂದ ಎಂದರೆ ವೈಷಯಿಕ ಸುಖಕ್ಕಿಂತಲೂ ವಿಲಕ್ಷಣವಾದ ಸುಖವಾದುದರಿಂದ ಎಂದು ಭಾವಿಸತಕ್ಕದ್ದು.

**ಮೂಲಕ್ಕೆ ಅರ್ಥವು** :—ಹಿಂದಿನ ಶ್ಲೋಕದಲ್ಲಿ ಉಕ್ತಲಕ್ಷಣ ಆತ್ಮ ಚಿನ್ತನದಲ್ಲಿ ನಿರತನಾದ ಕರ್ಮಯೋಗಿಯು ಬ್ರಹ್ಮಭೂತನಾಗುವದರಿಂದ ಉತ್ತಮಸುಖವನ್ನು ಹೊಂದುವನೆಂದು ಹೇಳಲ್ಪಟ್ಟಿತು. ಅರ್ಜುನನು ಅದನ್ನು ಹೊಂದುವದರಲ್ಲಿ ಆಪಸಾದವನ್ನು ಹೊಂದದೇ ಇರಲಿ ಎಂಬ ಆಶಯದಿಂದ ಅಂತಹ ಸುಖವನ್ನು ನಿರಾಯಾಸದಿಂದ ಹೊಂದಬಹುದೆಂದು ಹೇಳುತ್ತಾರೆ, ಏನೆಂ - ಹಿಂದೆ ೯ನೆಯ ಶ್ಲೋಕವೊದಲುಗೊಂಡು ಇದುವರೆಗೂ ಉಪಪಾದಿಸಲ್ಪಟ್ಟ ಯೋಗಿ

ಮೂ. ಏವಂ ಯುಂಜನ್ ಸದಾತ್ಮಾನಂ ಯೋಗೀ ವಿಗತಕಲ್ಮಷಃ।
ಸುಖೇನ ಬ್ರಹ್ಮಸಂಸ್ಪರ್ಶಮತ್ಯನ್ತಂ ಸುಖ ಮಶ್ನುತೇ॥　　೨೮.

ಭಾ. ಏವಂ-ಉಕ್ತಪ್ರಕಾರೇಣಾತ್ಮಾನಂ ಯುಂಜನ್ ತೇನೈವ ವಿಗತಪ್ರಾಚೀನ ಸಮಸ್ತ

ಯೋಗೀ - ಕರ್ಮಯೋಗಿಯು, ಆತ್ಮಾನಂ ಯುಂಜನ್ - ಆತ್ಮ ಚಿನ್ತನವನ್ನು ಅಭ್ಯಾಸ ಮಾಡುವವನಾಗಿ, ವಿಗತ ಕಲ್ಮಷಃ - ಆ ಕಾರಣದಿಂದಲೇ ನಷ್ಟವಾದ ಯೋಗವಿರೋಧಿ ಪಾಪ ವರ್ಗವನ್ನೆಲ್ಲಾ ಕಳೆದುಕೊಂಡವನಾಗಿ, **ಸುಖೇನ** - ಅನಾಯಾಸದಿಂದ, ಬ್ರಹ್ಮಸಂಸ್ಪರ್ಶಂ - ಬ್ರಹ್ಮವೆಂದರೆ ಪರಿಶುದ್ಧಾತ್ಮಸ್ವರೂಪವು,ಅದರ ಸಂಬಂಧವುಳ್ಳವನಾಗಿ,ಇದು ಹಿಂದಿನ ಶ್ಲೋಕದಲ್ಲಿನ "ಬ್ರಹ್ಮಭೂತ" ಶಬ್ದಾರ್ಥವು, ಎಂದರೆ ಆತ್ಮಾನುಭವವುಳ್ಳವನಾಗಿ, ಅತ್ಯಂತಸುಖಂ-ಉತ್ತಮ ಮವಾದ ಆನಂದವನ್ನು, ಸದಾ - ಯಾವಾಗಲೂ, ಯೋಗದೆಶೆಯಲ್ಲೇನೋ ಆನಂದಾನುಭವವು ಉತ್ಕೃಷ್ಟವೆಂಬುದು ವ್ಯಕ್ತವು, ಯೊಗದಲ್ಲಿಲ್ಲದ ಕಾಲದಲ್ಲೂ ವಿಷಯಾನುಭವಸುಖಕ್ಕಿಂತಲೂ ಆ ಯೋಗದೆಶೆಯ ಆನಂದವು ಉತ್ಕೃಷ್ಟವಾದುದೆಂಬುದು ಗೋಚರವಾಗುತ್ತದೆಂಬ ಭಾವವು. ಅಶ್ನುತೇ - ಅನುಭವಿಸುತ್ತಾನೆ; ಯಾವಾಗ ಮೇಲೆಹೇಳಿದ ಯೋಗಲಕ್ಷಣಗಳನ್ನೆಲ್ಲಾ ಚನ್ನಾಗಿ ತಿಳಿದು ಮೇಲೆಹೇಳಿದ ಪರಿಕರಗಳೊಂದಿಗೆ ಅಭ್ಯಾಸವಮಾಡುತ್ತಾನೋ, ಆಗ ವಿಗತಕಲ್ಮಷನಾಗಿ ನಿರತಿಶಯ ಸುಖರೂಪವಾದ ಆನಂದವನ್ನು ನಿರಾಯಾಸದಿಂದ ಹೊಂದುವನೆಂಬ ತಾತ್ಪರ್ಯವು. ಈ ಶ್ಲೋಕದಲ್ಲಿ ಇತರರು ತಮ್ಮ ಸಿದ್ಧಾನ್ತಾನುಸಾರವಾಗಿ ಬ್ರಹ್ಮಸಂಸ್ಪರ್ಶಂ ಎಂಬುದಕ್ಕೆ ಪರ ಬ್ರಹ್ಮದೊಂದಿಗೆ ಸಂಬಂಧವೆಂದು ಅರ್ಥಮಾಡಿರುತ್ತಾರೆ. ಇದು ಪ್ರಕರಣಾನುಗುಣ ಅರ್ಥವಲ್ಲ ವೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಈ ಶ್ಲೋಕದಲ್ಲಿರುವ ವಿಗತ ಕಲ್ಮಷಃ ಎಂಬುದಕ್ಕೆ ಉಪಾಯವಿರೋಧಿ ಪಾಪಗಳ ನಿವೃತ್ತಿಯೆಂದು ಸಙ್ಕುಚಿತಾರ್ಥವು ಬರೆಯಲ್ಪಟ್ಟಿರುತ್ತದೆ. ಕರ್ಮ ಯೋಗದಿಂದುಂಟಾಗುವ ಆತ್ಮಾವಲೋಕನದಿಂದ ಸರ್ವಪಾಪ ನಿವೃತ್ತಿಯುಂಟಾಗುವದಿಲ್ಲವು. ಉಪಾಯವಾದ ಭಕ್ತಿಯೋಗಕ್ಕೆ ಪ್ರತಿಬಂಧಕವಾದ ಪಾಪಗಳು ಮಾತ್ರ ನಿವೃತ್ತಿಸುವುವು. ಮಿಕ್ಕ ಪಾಪಗಳ ನಿವೃತ್ತಿಯಾದರೋ ಶರಣಾಗತಿಯೇ ಅಂಗವಾಗಿವುಳ್ಳ ಉಪಾಸನದ ಮೂಲಕ ಉಂಟಾ ಗುವ ಪರಮಾತ್ಮ ಸಾಕ್ಷಾತ್ಕಾರದ ಮೂಲಕವಾಗಿಯೇ ಎಂದು ಭಾವಿಸತಕ್ಕದ್ದು. "ಕಷಾಯೇ ಕರ್ಮ ಭಿಃ ಪಕ್ವೇ ತತೋಜ್ಞಾನಂ ಪ್ರವರ್ತತೇ", "ಅವಿದ್ಯಯಾಮೃತ್ಯುಂತೀರ್ತ್ವಾ ವಿದ್ಯಯಾಮೃತ ಮಶ್ನುತೇ" ಇತ್ಯಾದಿಗಳು ಉಪಾಯವಿರೋಧಿ ಪಾಪಗಳ ನಿವೃತ್ತಿಯಲ್ಲಿ ಪ್ರಮಾಣಗಳು. ಮಿಕ್ಕ ಎಲ್ಲಾ ಪಾಪಗಳೂ ಯಾವಾಗ ತೊಲಗುತ್ತವೆ ಎಂಬ ಸಂದರ್ಭದಲ್ಲಿ ಮುಂಡಕೋಪನಿಷತ್ತು ಪ್ರಮಾಣವು. "ಯದಾಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರ ಮೀಶಂ ಪುರುಷಂ ಬ್ರಹ್ಮ ಯೋನಿಮ್।ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯ ಮುಪೈತಿ" ಉಪಾಸನದಿಂದ ಪರಮಾತ್ಮ ಸಾಕ್ಷಾತ್ಕಾರ ಯಾವಾಗ ಉಂಟಾಗುತ್ತದೋ ಆಗ ಪರಮಾತ್ಮೋ ಪಾಸಕನು ಪುಣ್ಯಪಾಪಗಳನ್ನೆಲ್ಲಾ ಕೊಡವಿಕೊಂಡವನಾಗಿ ಪರಮಾತ್ಮನಿಗೆ ಸಮಾನಧರ್ಮ ವಾಗಿರುವ ಮುಕ್ತಾವಸ್ಥೆಯನ್ನು ಹೊಂದುವನೆಂದು ಹೇಳಲ್ಪಟ್ಟಿರುತ್ತದೆ.

**ಭಾಷ್ಯಾರ್ಥವು:**—ವಿಷಯಸುಖಾನುಭವಗಳಿಗಿಂತ ವಿಲಕ್ಷಣವಾದುದಾಗಿ ಉತ್ಕೃಷ್ಟರೂಪ ವಾದ ಈ ಆತ್ಮಾನುಭವರೂಪ ಆನಂದವು ನಿರಾಯಾಸವಾಗಿಯೇ ಸರಿಯಾಗಿ ಮೇಲೆ ಹೇಳಿದ ರೀತಿಯಲ್ಲಿ ಆತ್ಮ ಚಿನ್ತನಾಭ್ಯಾಸಮಾಡುವ ಈ ಕರ್ಮಯೋಗಿಗೆ ಲಭಿಸುತ್ತದೆಂದು ಹೇಳುತ್ತಾರೆ:- ಏವಂ-ಎಂದರೆ ಉಕ್ತಪ್ರಕಾರೇಣ, ಹಿಂದೆ "ಯೋಗೀಯುಂಜೀತ" ವೆಂದು ೧೦ನೆಯ ಶ್ಲೋಕ

ಭಾ. ಕಲ್ಮಷೋ ಬ್ರಹ್ಮಸಂಸ್ಪರ್ಶಂ – ಬ್ರಹ್ಮಾನುಭವರೂಪಂ ಸುಖ, ಮತ್ಯನ್ತ - ಮಪರಿಮಿತಂ, ಸುಖೇನ - ಅನಾಯಾಸೇನ, ಸದಾಶ್ನುತೇ ||೨೮||

---

ಭಾ. ಅವ. ಅಥಯೋಗ ವಿಪಾಕದಶಾ ಚತುಷ್ಪ್ರಕಾರೋಽಚ್ಯತೇ ||

---

ಮೂ. ಸರ್ವಭೂತಸ್ಥ ಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ || ೨೯.

---

ದಿಂದಾರಂಭಿಸಿ ಹೇಳಿದರೀತಿಯಲ್ಲಿ, ಆತ್ಮಾನಂ ಯುಂಜನ್ - ಕರ್ಮಯೋಗಿಯು, ತನ್ನ ಆತ್ಮ ಚಿನ್ತನೆಯನ್ನು ಮಾಡುವವನಾಗಿ, ತೇನೈವ - ಆ ಕಾರಣದಿಂದಲೇ, ವಿಗತ ಪ್ರಾಚೀನ ಸಮಸ್ತ ಕಲ್ಮಷಃ - ನಷ್ಟವಾದ ಉಪಾಸನ ವಿರೋಧಿಯಾದ ಸಮಸ್ತ ಪ್ರಾಚೀನ ಕರ್ಮಗಳುಳ್ಳವನಾಗಿ, ಬ್ರಹ್ಮ ಸಂಸ್ಪರ್ಶಂ ಎಂದರೆ ಬ್ರಹ್ಮಾನುಭವ ರೂಪಂ - ಪರಿಶುದ್ಧ ಸ್ವರೂಪವುಳ್ಳ ಆತ್ಮಾನುಭವರೂಪವಾದ, ಇಲ್ಲಿ ಸಂಸ್ಪರ್ಶ ಶಬ್ದವು ಅನುಭವ ಪರವು ಅಥವಾ ಬುದ್ಧಿಮೂಲಕವಾದ ಸಂಬಂಧ ಪರವೆಂದಾಗಲಿ ಅರ್ಥವನ್ನು ಹೇಳಬಹುದು. ಅತ್ಯನ್ತಂ ಎಂದರೆ ಅಪರಿಮಿತವಾದ ಸುಖಂ - ಸುಖವನ್ನು, ಸುಖೇನ ಎಂದರೆ ಅನಾಯಾಸದಿಂದ, ಸದಾ-ಯಾವಾಗಲೂ, ಯೋಗ ದೆಶೆಯಲ್ಲೂ ಮತ್ತು ಯೋಗದಲ್ಲಿಲ್ಲದ ಕಾಲದಲ್ಲೂ ಸಹ, ಅಶ್ನುತೇ - ಅನುಭವಿಸುತ್ತಾನೆ. ಹೀಗೆ ಅನಾಯಾಸದಿಂದಲೇ ಲಭಿಸುತ್ತದೆಂದು ಅರ್ಜುನನಿಗೆ ಧೈರ್ಯ ಹೇಳಿದರೂ, ಮನಸ್ಸು ಅತಿ ಚಂಚಲವೇ ಎಂದು ೩೩-೩೪ನೆಯ ಶ್ಲೋಕಗಳಲ್ಲಿ ಧೈರ್ಯಗುಂದಿ ಪುನಃ ಪ್ರಶ್ನಿಸುವನು.

ಭಾಷ್ಯಾವತಾರಿಕೆಯ ಅರ್ಥವು:—ಮುಂದಿನ ನಾಲ್ಕು ಶ್ಲೋಕಗಳಿಂದ ಯೋಗಸಿದ್ಧಿಯುಂಟಾದವನ ಅವಸ್ಥೆಯು ನಾಲ್ಕುವಿಧವಾದುವೆಂದೂ, ಅವು ಒಂದಕ್ಕಿಂತ ಒಂದು ಉತ್ಕೃಷ್ಟ ದಶೆಯೆಂದೂ, ಹೇಳುವದಕ್ಕಾಗಿ ಈ ಶ್ಲೋಕಕ್ಕೆ ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಅದರಲ್ಲಿ ಮೊದಲನೆಯ ಮೆಟ್ಟಲನ್ನು ಆರೋಹಣಮಾಡಿದವನ ದಶೆಯು ಎಂತಾದ್ದೆಂಬುದನ್ನು "ಸರ್ವ ಭೂತಸ್ಥಂ" ಎಂಬೀಶ್ಲೋಕದಿಂದ ಉಪದೇಶಿಸುತ್ತಾರೆ. ಅಥ - ಅನಂತರದಲ್ಲಿ, ಯೋಗವಿಪಾಕ ದಶಾ - ಯೋಗವು ಸಿದ್ಧಿಸುವ ದಶೆಯು, ಚತುಷ್ಪ್ರಕಾರಾ - ನಾಲ್ಕು ಉತ್ತರೋತ್ತರ ಉತ್ಕರ್ಷೆಯುಳ್ಳ ಅವಸ್ಥೆಯುಳ್ಳದೆಂದು, ಉಚ್ಯತೇ - ಹೇಳಲ್ಪಡುತ್ತದೆ.

ಮೂಲಕ್ಕೆ ಅರ್ಥವು:—ಯೋಗಾಭ್ಯಾಸವು ಉಕ್ತಲಕ್ಷಣ ಪರಿಕರಗಳಿಂದ ನಿಯತವಾಗಿ ಮಾಡತಕ್ಕದ್ದೆಂದು ಹೇಳಿ, ಮನಸ್ಸು ಬಾಹ್ಯದಲ್ಲಿ ಪ್ರವರ್ತಿಸಬಹುದಾದುದರಿಂದ ಅದನ್ನು ನಿಗ್ರಹಿಸಿ ಆತ್ಮನಲ್ಲೇ ಸಕ್ತವಾಗುವಹಾಗೆ ಮಾಡಿಕೊಳ್ಳತಕ್ಕದ್ದೆಂದೂ, ಬಾಹ್ಯವಿಷಯಗಳಿಂದುಂಟಾಗುವ ಸುಖಕ್ಕೂ ಆತ್ಮಾನುಭವ ಸುಖಕ್ಕೂ ತುಂಬಾ ತಾರತಮ್ಯವಿರುವದರಿಂದ ಈ ಉತ್ಕೃಷ್ಟ ಸುಖಾನುಭವಕ್ಕಾಗಿ ನಿರಾಯಾಸದಿಂದ ಮನಸ್ಸನ್ನು ಆತ್ಮನಲ್ಲಿ ನಿಲ್ಲಿಸಬಹುದೆಂದು ಉಪದೇಶಿಸಿದರು. ಹೀಗೆ ಯೋಗಾಭ್ಯಾಸ ನಿರತನಾದವನಿಗೆ ಯೋಗಸಿದ್ಧಿಯುಂಟಾಗುತ್ತದೆಂದೂ ಹೇಳಿ, ಅಂತಹ ಯೋಗಸಿದ್ಧಿಯುಂಟಾದವರನ್ನು ನಾಲ್ಕುವಿಧವಾಗಿ ವಿಂಗಡಿಸಬಹುದೆಂದು ಮುಂದೆ ನಾಲ್ಕು ಶ್ಲೋಕಗಳಿಂದ ಹೇಳುತ್ತಾರೆ. ಪ್ರಥಮ ಪರ್ವದಲ್ಲುಂಟಾಗುವ ಅವಸ್ಥೆಯಲ್ಲಿ ಎಲ್ಲಾ ಪ್ರಾಣಿಗಳಲ್ಲೂ ಇರುವ ಆತ್ಮರ ಸಮತ್ವವನ್ನು ಗ್ರಹಿಸುವನೆಂದು ಹೇಳುತ್ತಾರೆ, ಯೋಗಯುಕ್ತಾತ್ಮಾ - ಯೋಗದಲ್ಲೇ ಸಕ್ತವಾದ ಮನಸ್ಸುಳ್ಳವನು ಎಂದರೆ ಯೋಗಾಭ್ಯಾಸ ನಿರತನಾಗಿ ಯೋಗನಿಷ್ಪತ್ತಿಯುಂಟಾಗಿರುವವನು, ಅಥವಾ ಯೋಗಸಮಾಧಿಯನ್ನು ಹೊಂದಿದ ಆತ್ಮಸ್ವರೂಪ

ವುಳ್ಳವನು, ಹೀಗೆ ಯೋಗನಿಷ್ಪತ್ತಿಯುಂಟಾಗಿರುವದರಿಂದಲೇ, ಆತ್ಮಾನಂ - ತನ್ನನ್ನು, ಸರ್ವಭೂತಸ್ಥಂ - ಎಲ್ಲಾ ಚೇತನರಲ್ಲಿರುವಹಾಗೂ ಎಂದರೆ ತಾನೂ ಇತರ ದೇಹಗಳಲ್ಲಿರುವ ಆತ್ಮರುಗಳೂ ಸಹ ಜ್ಞಾನೈಕಾಕಾರತೆಯಿಂದ ಸಮವೆಂದು ಭಾವಿಸುವನೋ, ಸರ್ವಭೂತಾನಿಚ-ಸಮಸ್ತ ಚೇತನರನ್ನೂ ಆತ್ಮನಿ - ತನ್ನಲ್ಲಿಯೂ, ಎಂದರೆ ಆ ಚೇತನರ ಆತ್ಮರುಗಳೂ ತಾನೂ ಸಹ ಜ್ಞಾನೈಕಾಕಾರತೆಯಿಂದ ಸಮರೆಂದು ಸರ್ವತ್ರಸಮದರ್ಶನಃ-ಎಲ್ಲಾ ಚೇತನರೂ ಜ್ಞಾನೈಕಾಕಾರತೆಯಿಂದ ಸಮರೆಂಬ ಭಾವನೆಯುಳ್ಳವನಾಗಿ, ಈಕ್ಷತೇ-ನೋಡುವನು. ಇಲ್ಲಿ ಸರ್ವಭೂತಸ್ಥಮಾತ್ಮಾನಂ ಎಂಬಲ್ಲಿ ತೋರಿಬರುವ ಅರ್ಥವೂ ಮತ್ತು ಸರ್ವಭೂತಾನಿ ಚಾತ್ಮನಿ ಎಂಬಲ್ಲಿ ತೋರಿಬರುವ ಅರ್ಥವೂ ಎರಡೂ ಒಂದೇ; ಪ್ರತಿಯೋಗಿ ಅನುಯೋಗಿ ಭಾವವ್ಯತ್ಯಾಸವೇ ವಿನಾ ಅರ್ಥವ್ಯತ್ಯಾಸವಿಲ್ಲವು. ಪೂರ್ವಾರ್ಧದ ಅರ್ಥವನ್ನೇ ಸಙ್ಗ್ರಹಿಸಿ ಸರ್ವತ್ರಸಮದರ್ಶನಃ ಎಂದು ಹೇಳಲ್ಪಟ್ಟಿರುತ್ತದೆ. ಆ ಭಾವನೆಯು ಯೋಗಪರಿಪಾಕ ದೆಶೆಯನ್ನು ಹೊಂದಿದ ಪಂಡಿತನಿಗೆ ಲಭಿಸುತ್ತದೆ. "ವಿದ್ಯಾವಿನಯಸಂಪನ್ನೇ" ಎಂಬ (ಗೀ. ೫.೧೮) ಶ್ಲೋಕವನ್ನು ಪರಾಂಬರಿಸಿ. ಜ್ಞಾನೈಕಾಕಾರತೆಯಿಂದ ಎಲ್ಲಾ ಆತ್ಮರು ಸಮರೆಂಬ ಜ್ಞಾನವೇನೋ ಉಂಟಾಗಬಹುದು; ಆದರೆ ತದನುಗುಣವಾದ ಪ್ರವೃತ್ತಿಯು ದುರ್ಲಭವು. ಅದು ಯೋಗವಿಪಾಕದೆಶೆಯನ್ನು ಹೊಂದಿದ ಕರ್ಮಯೋಗಿಗೆ ಸುಲಭವಾದುದು ಎಂಬ ಭಾವವು. ಆದುದರಿಂದಲೇ ಹಿಂದೆ ವ್ಯಕ್ತವಾಗಿ ಇದು ಹೇಳಲ್ಪಟ್ಟಿದ್ದರೂ, ಇದು ಆತ್ಮಚಿನ್ತನ ನಿರತನಿಗೆ ನಿರಾಯಾಸವಾಗಿ ಲಭಿಸುತ್ತದೆ ಎಂಬುದನ್ನು ತಿಳಿಸುವದಕ್ಕಾಗಿ ಅದರ ಅನುವಾದವೆಂದು ಭಾವಿಸತಕ್ಕದ್ದು. ಈ ಶ್ಲೋಕವು ಅದ್ವೈತಾಭಿಪ್ರಾಯವನ್ನು ವ್ಯಕ್ತಪಡಿಸುತ್ತದೆಂದು ಭಾವಿಸತಕ್ಕದ್ದಲ್ಲವು. ಸಮದರ್ಶನಃ ಎಂಬ ಪ್ರಯೋಗವು ಈ ಅದ್ವೈತಾಭಿಪ್ರಾಯಕ್ಕೆ ಪರಮ ವಿರುದ್ಧವು, ಏಕೆಂದರೆ ಕೆಲವು ಗುಣಗಳಲ್ಲಿ ಸಮತ್ವವು ಎಲ್ಲಿ ಕೂಡುತ್ತದೆಂದರೆ, ಇತರ ಧರ್ಮಗಳಿಂದ ಅಸಮತ್ವವಿರುವ ವಸ್ತುಗಳಲ್ಲೇ ಎಂದು ಭಾವಿಸತಕ್ಕದ್ದು. ಹೀಗೆಯೇ ಜೀವ ಪರಮಾತ್ಮಸಾಮ್ಯಶ್ರುತಿಯಿಂದ ಜೀವಪರಮಾತ್ಮಭೇದವೇ ವ್ಯಕ್ತವೆಂದು ಭಾವಿಸತಕ್ಕದ್ದು. ಸರ್ವಭೂತಸ್ಥಮಾತ್ಮಾನಂ ಎಂಬಲ್ಲಿರುವ ಆತ್ಮಶಬ್ದವು ಜೀವತತ್ವವನ್ನು ಬೋಧಿಸಿ, "ಏಷೋಣುರಾತ್ಮಾ" "ವಾಲಾಗ್ರ ಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ।" ಎಂಬಿವೇ ಮೊದಲಾದ ಶ್ರುತಿಗಳಿಂದಲೂ, ಈಗ್ರಂಥದಲ್ಲೇ ಅಚ್ಛೇದ್ಯತ್ವ ಅದಾಹ್ಯತ್ವಾದಿ ಗುಣವರ್ಣನೆಗಳಿಂದಲೂ ಅಣುತ್ವವು ಜೀವಾತ್ಮನಿಗೆ ಸ್ಥಾಪಿತವಾಗಿರುವಾಗ, ಸರ್ವಭೂತಸ್ಥನಾಗಿ ಭಾವಿಸತಕ್ಕದ್ದೆಂದೂ ಸರ್ವಭೂತಗಳನ್ನು ತನ್ನ ಆತ್ಮನಲ್ಲೂ ಭಾವಿಸತಕ್ಕದ್ದೆಂದೂ ಹೇಳಿದರೆ ಸ್ವರೂಪತಃ ಅರ್ಥಮಾಡುವದು ಸರ್ವಾತ್ಮನಾ ಕೂಡುವದಿಲ್ಲವಾದುದರಿಂದ, ಜ್ಞಾನೈಕಾರತಾರೂಪ ಧರ್ಮಮೂಲಕವಾಗಿ ಹಾಗೆ ಭಾವಿಸಬಹುದಾದರಿಂದ, ಹಾಗೆಯೇ ಅರ್ಥಹೇಳಬೇಕೆಂಬುದು ಸ್ಥಾಪಿತವು. ಇಲ್ಲಿ ನಿರ್ವಿಶೇಷಬ್ರಹ್ಮವೇ ಬ್ರಹ್ಮಾದಿ ಸ್ಥಾವರಾಂತಾದಿಗಳಲ್ಲಿರುವದೆಂಬ ಜ್ಞಾನವುಳ್ಳವರೇ ಸಮದರ್ಶಿಗಳೆಂದು ಅರ್ಥಮಾಡಿರುವವರಿಗೆ ಸವಿಶೇಷ ಬ್ರಹ್ಮಜ್ಞಾನವು ಯಾವುದೆಂದೂ, ಆ ಜ್ಞಾನವು ಫಲಕಾರಿಯೋ ಅಥವಾ ಅಲ್ಲವೇ ಎಂದು ಕೇಳಬೇಕಾಗುತ್ತದೆ.

**ಭಾಷ್ಯಾರ್ಥವು :**—ಹಿಂದೆ ಯೋಗಾಭ್ಯಾಸವಿಧಿಯು ಹೇಳಲ್ಪಟ್ಟು, "ಆತ್ಮಲಾಭ ಸುಖಂ ಯಾವತ್ತಾವಧ್ಧ್ಯಾನ ಮುದಾಹೃತಂ" ಎಂದು ಹೇಳಿದುವಹಾಗೆ ಆತ್ಮಸಾಕ್ಷಾತ್ಕಾರ ಉಂಟಾಗುವವರೆಗೂ ಯೋಗಾಭ್ಯಾಸನಿರತನಾಗಬೇಕೆಂದೂ ಉಪದೇಶಿಸಲ್ಪಟ್ಟಿತು. ಮುಂದೆ ನಾಲ್ಕು ಶ್ಲೋಕಗಳಿಂದ ಹಾಗೆ ಯೋಗನಿಷ್ಪತ್ತಿಯುಂಟಾಗಿರುವ ವಿಪಾಕದೆಶೆಯಲ್ಲಿರುವವರನ್ನು ತರತಮಭಾವದಿಂದ ನಾಲ್ಕುವಿಧವಾಗಿ ವಿಂಗಡಿಸಬಹುದೆಂದು ಹೇಳಲು ಹೊರಟು ವಿಪಾಕದೆಶೆಯ ಮೊದಲು ಮೆಟ್ಟಲಿನಲ್ಲಿರುವ ಅಧಿಕಾರಿಯದೆಶೆಯು ಹೇಳಲ್ಪಡುತ್ತದೆ. ಸಮದರ್ಶಿತ್ವರೂಪಯೋಗ ನಿಷ್ಠಾ

ಭಾ. ಸ್ವಾತ್ಮನಃ ಪರೇಷಾಂಚ ಭೂತಾನಾಂ ಪ್ರಕೃತಿವಿಯುಕ್ತ ಸ್ವರೂಪಾಣಾಂ ಜ್ಞಾನೈಕಾಕಾರತಯಾ ಸಾಮ್ಯಾ ದ್ವೈಷಮ್ಯಸ್ಯ ಚ ಪ್ರಕೃತಿಗತತ್ವಾದ್ಯೋಗಯುಕ್ತಾತ್ಮಾ ಪ್ರಕೃತಿವಿಯುಕ್ತೇ ಷ್ವಾತ್ಮಸು ಸರ್ವತ್ರ ಜ್ಞಾನೈಕಾಕಾರತಯಾ ಸಮದರ್ಶನಃ ಸರ್ವ ಭೂತಸ್ಥಂ ಸ್ವಾತ್ಮಾನಂ, ಸರ್ವಭೂತಾನಿಚ ಸ್ವಾತ್ಮನೀಕ್ಷತೇ । ಸರ್ವಭೂತಸಮಾನಾಕಾರಂ ಸ್ವಾತ್ಮಾನಂ, ಸ್ವಾತ್ಮಸಮಾನಾಕಾರಾಣಿ ಚ ಸರ್ವಭೂತಾನಿ ಪಶ್ಯತೀತ್ಯರ್ಥಃ ; ಏತಸ್ಮಿನ್ನಾತ್ಮನಿ ದೃಷ್ಟೇ ಸರ್ವಸ್ಯಾತ್ಮವಸ್ತುನ ಸ್ತತ್ಸಾಮ್ಯಾತ್ಸರ್ವಮಾತ್ಮವಸ್ತು ದೃಷ್ಟಂ

ಕವು ಪರ್ವಕ್ರಮದಿಂದಲೂ ತಾರತಮ್ಯದಿಂದಲೂ ನಾಲ್ಕುವಿಧವೆಂದು ಹೇಳಲು ಹೊರಟು ಮೊದಲು ಈ ಶ್ಲೋಕದಲ್ಲಿ ಪ್ರಥಮ ದಶೆಯು ಹೇಳಲ್ಪಡುತ್ತದೆ. ಮೊದಲು ಸಮದರ್ಶನಃ ಎಂಬ ಪ್ರಯೋಗದ ಅಭಿಪ್ರಾಯವನ್ನು ವಿವರಿಸುತ್ತಾರೆ—ಸ್ವಾತ್ಮನಃ - ತನ್ನ ಆತ್ಮನಿಗೂ, ಪರೇಷಾಂ ಚ ಭೂತಾನಾಂ-ಇತರರ ಆತ್ಮರುಗಳಿಗೂ ಸಹ, ಭೂತ ಶಬ್ದವು ಸಾಧಾರಣವಾಗಿ ದೇಹವನ್ನು ಹೊಂದಿರುವ ಆತ್ಮನನ್ನು ಬೋಧಿಸಿದರೂ ಈ ಸಂದರ್ಭದಲ್ಲಿ "ಸತ್ಯಂ ಭೂತಹಿತಂ ಪ್ರೋಕ್ತಂ" ಎಂಬಲ್ಲಿ ಆತ್ಮಾ ಎಂಬರ್ಥವು ಹೇಗೋ ಹಾಗೆ ಎಂದು ಭಾವಿಸತಕ್ಕದ್ದು ; ಪ್ರಕೃತಿ ವಿಯುಕ್ತ ಸ್ವರೂಪಾಣಾಂ-ಪ್ರಕೃತಿಯಿಂದ ಬಿಡಲ್ಪಟ್ಟ ದಶೆಯಲ್ಲಿರುವ ಆತ್ಮರುಗಳಿಗೆಲ್ಲಾ, ಜ್ಞಾನೈಕಾಕಾರತಯಾ ಸಾಮ್ಯಾತ್ - ಎಲ್ಲಾ ಆತ್ಮರು ಜ್ಞಾನಸ್ವರೂಪರೂ ಜ್ಞಾನವುಳ್ಳವರೂ ಆಗಿ ಅವರಿಗೆ ಸಮಭಾವವಿರುವದರಿಂದ, ಎಂದರೆ ಸ್ವರೂಪತಃ ಗುಣತಃ ಎಲ್ಲಾ ಸಮವಾದುದರಿಂದಲೂ, ಮತ್ತು ವೈಷಮ್ಯಸ್ಯಚ-ಅವರುಗಳಿಗೆ ಈಗಿರುವ ಸ್ಥಿತಿಯಲ್ಲಿರುವ ತಾರತಮ್ಯರೂಪವ್ಯತ್ಯಾಸವು, ಪ್ರಕೃತಿಗತತ್ವಾತ್-ಕರ್ಮಾನುಸಾರ ಬಂದ ಪ್ರಕೃತಿಯೆಂದರೇ ದೇಹವನ್ನು ಹೊಂದಿರುವುದರಿಂದಲೂ, ಯೋಗಯುಕ್ತಾತ್ಮಾ–ಯೋಗದಲ್ಲೇ ಸಂಬಂಧಿಸಿದ ಮನಸ್ಸುಳ್ಳವನು, ಅಥವಾ ಯೋಗದಿಂದ ಆತ್ಮ ಸ್ವರೂಪ ಜ್ಞಾನವನ್ನು ಹೊಂದಿದವನು,ಆ ಕಾರಣದಿಂದಲೇ,ಪ್ರಕೃತಿವಿಯುಕ್ತೇಷು-ದೇಹದಿಂದ ಬಿಡಲ್ಪಟ್ಟ ಆತ್ಮಸು - ಆತ್ಮರಲ್ಲಿ, ಸರ್ವತ್ರ - ಸಾರ್ವತ್ರಿಕವಾಗಿ, ಜ್ಞಾನೈಕಾಕಾರತಯಾ - ಜ್ಞಾನರೂಪಗಳಾಗಿರುವದರಿಂದ, ಸಮದರ್ಶನಃ - ಸಮವಾದ ದೃಷ್ಟಿಯುಳ್ಳವನು, ಸರ್ವಭೂತಸ್ಥಂ - ಸಮಸ್ತ ದೇಹಿಗಳಲ್ಲಿರುವ ಆತ್ಮರುಗಳನ್ನು, ಆತ್ಮಾನಂ - ತನ್ನ ಆತ್ಮವನ್ನಾಗಿ, ಈಕ್ಷತೇ - ನೋಡುವನು ಎಂದರೆ, ಅವರ ಆತ್ಮರುಗಳೂ ತನ್ನ ಆತ್ಮನಿಗೆ ಸಮಾನವಾದುದೆಂದು ಕಾಣುವನು, ಮತ್ತು ಸರ್ವಭೂತಾನಿಚ – ಇತರ ದೇಹಿಗಳಲ್ಲಿರುವ ಆತ್ಮರುಗಳನ್ನು, ಸ್ವಾತ್ಮನಿ - ತನ್ನ ಆತ್ಮನಲ್ಲೇ, ಈಕ್ಷತೇ - ಕಾಣುವನು ಎಂದರೆ ತನ್ನ ಆತ್ಮವು ಅವರುಗಳ ಆತ್ಮಾವಿಗೆ ಸಮವೆಂದು ಭಾವಿಸುವನು ಎಂಬರ್ಥವು. ಈ ವಾಕ್ಯಗಳ ಅಭಿಪ್ರಾಯವೇನೆಂಬುದನ್ನು ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ. ಸರ್ವಭೂತ ಸಮನಾಕಾರಂ ಸ್ವಾತ್ಮಾನಂ - ತನ್ನ ಆತ್ಮವನ್ನು ಇತರ ಸಮಸ್ತ ದೇಹಿಗಳಲ್ಲಿರುವ ಆತ್ಮರುಗಳಿಗೆ ಸಮಾನವಾದ ಸ್ವರೂಪಗುಣವುಳ್ಳದ್ದಾಗಿಯೂ, ಇತರ ಸಮಸ್ತ ದೇಹದಲ್ಲಿರುವ ಆತ್ಮರುಗಳನ್ನು ತನ್ನ ಆತ್ಮಾವಿಗೆ ಸಮಾನವಾದ ಸ್ವರೂಪಾದಿಗಳುಳ್ಳವಾಗಿಯೂ, ಪಶ್ಯತೀತ್ಯರ್ಥಃ - ಕಾಣುವನು ಎಂಬರ್ಥವು. ಆ ಅಭಿಪ್ರಾಯವನ್ನೇ ಸಮರ್ಥನೆಮಾಡಿ ಹೇಳುತ್ತಾರೆ. ಏಕಸ್ಮಿನ್ ಆತ್ಮನಿ ದೃಷ್ಟೇ - ಒಂದು ಆತ್ಮಸ್ವರೂಪವು ತಿಳಿಯಲ್ಪಡಲು, ಸರ್ವಸ್ಯ ಆತ್ಮವಸ್ತುನಃ - ಸಮಸ್ತ ಆತ್ಮವಸ್ತುಗಳಿಗೂ, ತತ್ಸಾಮ್ಯಾತ್ - ಆಒಂದರ ಸಾಮ್ಯವೇ ಇರುವದರಿಂದ, ಸರ್ವಂ ಆತ್ಮವಸ್ತು ದೃಷ್ಟಂ ಭವತೀತ್ಯರ್ಥಃ-ಸಮಸ್ತ ಆತ್ಮವಸ್ತುವಿನ ಸ್ವರೂಪವೂ ತಿಳಿದಹಾಗಾಗುತ್ತದೆ ಎಂಬ ಅಭಿಪ್ರಾಯವು. ಎಲ್ಲಾ ಆತ್ಮರ ಸ್ವರೂಪವೂ ಒಂದೇ ಥ್ಯಾಗಿರುವದರಿಂದ ಸ್ಥಾಲೀಪುಲಾಕನ್ಯಾಯದ ಪ್ರಕಾರ ಒಂದರ ಸ್ವರೂಪವು ತಿಳಿದರೆ ಎಲ್ಲಾದರ

ಭಾ. ಭವತೀತ್ಯರ್ಥಃ (೧) "ಸರ್ವತ್ರ ಸಮದರ್ಶನಃ" ಇತಿ ವಚನಾತ್ (೨) "ಯೋಽಯಂ ಯೋಗಸ್ತ್ವಯಾ ಪ್ರೋಕ್ತಸ್ಸಾಮ್ಯೇನ" ಇತ್ಯನುಭಾಷಣಾಚ್ಚ, (೩) ನಿರ್ದೋಷಂ ಹಿ ಸಮಂ ಬ್ರಹ್ಮ" ಇತಿ ವಚನಾಚ್ಚ ||೨೯||

ಸ್ವರೂಪವು ತಿಳಿದಹಾಗೆ ಎಂಬಭಿಪ್ರಾಯವು. ಏಕೆಂದರೆ "ಸರ್ವತ್ರ ಸಮದರ್ಶಿನಃ" ಇತಿ ವಚನಾತ್, ಯೋಗ ಯಾಜ್ಞ್ಯವಲ್ಕ್ಯ ಸ್ಮೃತಿಯಲ್ಲೂ ಇಲ್ಲಿಯೂ ಹಿಂದೆ (ಗೀ. ೫-೧೮) ರಲ್ಲೂ ಹೇಳಿರುವದರಿಂದಲೂ, ಮತ್ತು ಮುಂದೆ ೩೩ನೆಯ ಶ್ಲೋಕವಾದ "ಯೋಽಯಂ ಯೋಗ ಸ್ತ್ವಯಾ ಪ್ರೋಕ್ತಃ" ಎಂಬಲ್ಲಿ ಅನುವಾದಮಾಡಿ ಹೇಳಿರುವದರಿಂದಲೂ, ಮತ್ತು ಈ ಅಭಿಪ್ರಾಯವೇ ಹಿಂದೆ "ನಿರ್ದೋಷಂ ಹಿ ಸಮಂ ಬ್ರಹ್ಮ" ಇತಿ ವಚನಾಚ್ಚ-ಎಂದು ಹೇಳಿರುವದರಿಂದಲೂ, ಆತ್ಮರುಗಳೆಲ್ಲಾ ಜ್ಞಾನೈಕಾಕಾರತೆಯಿಂದ ಸಮರು. ಇದರಿಂದ ತನ್ನ ಮತ್ತು ಇತರರ ಆತ್ಮರುಗಳೆಲ್ಲಾ ಸ್ವರೂಪತಃ ಎಲ್ಲಾ ಸಮವೆಂದು ಹೇಳಲ್ಪಟ್ಟಿತು. ಆ ಸ್ವರೂಪವೆಂತಾದ್ದೆಂದರೆ ಜ್ಞಾನೈಕಾಕಾರತಯಾ ಎಂಬುದರಿಂದ ಜ್ಞಾನರೂಪವಾದುದೆಂದು ಹೇಳಿರುತ್ತಾರೆ. ಆದರೆ ಲೋಕದಲ್ಲಿ ಸಾಮ್ಯತೋರದೆ ಪರಸ್ಪರ ಭೇದವೇ ತೋರುತ್ತದೆಯಲ್ಲಾ, ಕಾರಣವೇನೆಂದರೆ ಪ್ರಕೃತಿಗತತ್ವಾತ್ ಎಂದು ವ್ಯಕ್ತಪಡಿಸಿರುತ್ತಾರೆ; ಕರ್ಮಮೂಲಕವಾಗಿ ಬಂದ ದೇಹದಿಂದುಂಟಾದುದರಿಂದ ಪ್ರಕೃತಿಗತತ್ವಾತ್ ಎಂಬ ಪ್ರಯೋಗವು. ಈ ಸಂದರ್ಭದಲ್ಲಿ ಶ್ರೀಪರಾಶರೋಕ್ತಿಯು ಸ್ಫೂರ್ತಿಗೆ ಬರುತ್ತದೆ. ಪುಮಾನ್ನದೇವೋ ನನರೋ ನ ಪಶುರ್ನಚ ಪಾದಪಃ । ಶರೀರಾಕೃತಿ ಭೇದಾಸ್ತು ಭೂಪೈತೇ ಕರ್ಮಯೋನಯಃ" (ವಿ. ಪು. ೨. ೧೩. ೯೮.) "ನಾಯಂದೇವೋ ನಮರ್ತ್ಯೋವಾ ನತಿರ್ಯಕ್‌ಸ್ಥಾವರೋಽಪಿವಾ । ಜ್ಞಾನಾನಂದ ಮಯಸ್ತ್ವಾತ್ಮಾ ಶೇಷೋಹಿ ಪರಮಾತ್ಮನಃ ॥ ಎಂಬ ಪ್ರಮಾಣವೂ ಅನುಸಂಧೇಯವು. ಉಪಾಧಿ ಮೂಲಕ ಬೇರೆಬೇರೆಯಾಗಿ ತೋರುತ್ತಾರೆಯೇ ವಿನಾ, ಎಲ್ಲರ ಆತ್ಮಸ್ವರೂಪವೂ ಸಮಾನವಾದುದೇ. ಎಲ್ಲಾ ಆತ್ಮರೂ ಜ್ಞಾನಸ್ವರೂಪವಾದ ಅಣುರೂಪರಾಗಿ, ವಿಭುವಾದ ಧರ್ಮಭೂತಜ್ಞಾನದಿಂದ ಯುಕ್ತರಾದವರು. ಸರ್ವಭೂತಸ್ಥಂ ಎಂಬಲ್ಲಿರುವ ಭೂತಶಬ್ದವು ಸಾಮಾನ್ಯವಾಗಿ ಪ್ರಕೃತಿಯಿಂದ ಸೇರಿದ ಆತ್ಮಾವನ್ನು ಬೋಧಿಸಿದರೂ, ಇಲ್ಲಿ ಆತ್ಮವೇ ಉದ್ದೇಶ್ಯವಾದುದರಿಂದ ಚೇತನಾಂಶವೇ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಯೋಗಯುಕ್ತಾತ್ಮಾ ಎಂದರೆ ಯೋಗದಲ್ಲಿ ನಿಯಮಿಸಲ್ಪಟ್ಟ ಮನಸ್ಸುಳ್ಳವರೆಂದಾಗಲಿ, ಅಥವಾ ಯೋಗ ಸಮಾಧಿಯನ್ನು ಹೊಂದಿದ ಆತ್ಮಸ್ವರೂಪವುಳ್ಳವರೆಂದಾಗಲಿ ಅರ್ಥಮಾಡಬಹುದು. ಇಲ್ಲಿ ಕೆಲವರು ಆತ್ಮಶಬ್ದಕ್ಕೆ ಪರಮಾತ್ಮನೆಂದು ಅರ್ಥ ಮಾಡಿರುತ್ತಾರೆ. ಸರ್ವಭೂತಗಳಲ್ಲೂ ಪರಮಾತ್ಮನಿದ್ದಾನೆಂದೂ, ಪರಮಾತ್ಮನಲ್ಲಿ ಸರ್ವ ಭೂತಗಳಿವೆ ಎಂಬರ್ಥದಿಂದ ಸಮದರ್ಶಿತ್ವವೂ ಸಿದ್ಧಿಸುವದರಿಂದ ಹಾಗೆ ಅರ್ಥಮಾಡಿರುತ್ತಾರೆ; ಇದೂ ಅಲ್ಲದೆ, ಆತ್ಮನು ಸರ್ವಭೂತಗಳಲ್ಲೂ, ಸರ್ವಭೂತಗಳು ಆತ್ಮನಲ್ಲೂ ಇದೆ ಎಂದು ನೋಡತಕ್ಕದ್ದೆಂದು ಆಧಾರಾಧೇಯಭಾವಗಳು ಬದ್ಧಾತ್ಮರಾದ ಆತ್ಮರಿಗೆ ಹೇಗೆ ಕೂಡುತ್ತವೆ? ಈ ಆತ್ಮರುಗಳು ಅಣುವಾದರೆ ತನ್ನ ಆತ್ಮಾ ಇತರ ಭೂತಗಳಲ್ಲೂ, ಇತರ ಭೂತಗಳು ತನ್ನಾತ್ಮಾವಿನಲ್ಲೂ ಹೇಗೆ ಇದ್ದೀತು? ಆದುದರಿಂದ ಇಲ್ಲಿ ಆತ್ಮಶಬ್ದವು ಪರಮಾತ್ಮ ಪರವೇ ಎಂದು ಸಾಧಿಸುವರು; ಶ್ರೀ ವ್ಯಾಸೋಕ್ತಿಯಲ್ಲಿ ಮೇಲೆ ತೋರುವಹಾಗೆ ಮಾತ್ರ ಅರ್ಥಮಾಡಿಬಿಟ್ಟರೆ ಪ್ರಕರಣವು ದೂರೀಕೃತವಾಗುತ್ತದೆ; ಅವರ ಉಕ್ತಿಯಲ್ಲಿ ಪರಮರಹಸ್ಯವುಂಟು; ಆದುದರಿಂದ ಸಾವಧಾನದಿಂದ ಅರ್ಥಮಾಡತಕ್ಕದ್ದಾಗಿರುತ್ತದೆ.

(೧) ಯೋಗ ಯಾಜ್ಞವಲ್ಕ್ಯ ಸ್ಮೃತಿ. (೨) ಗೀ, ೬. ೩೩. (೩) ಗೀ. ೫. ೧೯.

ಇಲ್ಲಿನ ಸಮದರ್ಶಿತ್ವವು ಯದ್ರೂಪವಾದುದೆಂಬುದನ್ನು ನಾವು ವಿವೇಚನೆ ಮಾಡತಕ್ಕದ್ದು. ಹಿಂದೆ "ವಿದ್ಯಾ ವಿನಯ ಸಂಪನ್ನೇ" (ಗೀ. ೫.೧೮) ಎಂಬ ಶ್ಲೋಕದಲ್ಲಿ ಪಂಡಿತಾಸ್ಸಮದರ್ಶಿನಃ ಎಂದು ಹೇಳಿದ ಸಮದರ್ಶಿತ್ವವೇ ಇಲ್ಲೂ ಹೇಳಲ್ಪಟ್ಟಿರುತ್ತದೆ. ಅದು ಯಾರಿಗೆ ಸುಲಭವಾಗಿ ಸಿದ್ಧಿಸುತ್ತದೆಂದರೆ ಯೋಗವಿಪಾಕ ದಶೆಯನ್ನು ಹೊಂದಿದವನಿಗೆ ಎಂದು ಇಲ್ಲಿ ಹೇಳಿರುತ್ತಾರೆ. ಇಷ್ಟು ದೂರ ಅಭಿಪ್ರಾಯಗಳನ್ನೇ ಮನಸ್ಸಿನಲ್ಲಿಟ್ಟು, ಆತ್ಮಾನಂ ಎಂದರೆ ಸ್ವಾತ್ಮಾನಂ ಎಂದೂ, ಆತ್ಮನಿ ಎಂದರೆ ಸ್ವಾತ್ಮನಿ ಎಂದೂ, ವ್ಯಾಖ್ಯಾನ ಮಾಡಿರುತ್ತಾರೆ. ಮೂಲದಲ್ಲಿ ಶ್ರೀ ವ್ಯಾಸರೇ ತಮ್ಮ ಶ್ಲೋಕದ ಪೂರ್ವಾರ್ಧದ ಅರ್ಥವನ್ನು, ಉತ್ತರಾರ್ಧದಲ್ಲಿ ಸರ್ವತ್ರ ಸಮದರ್ಶನಃ ಎಂಬುದರಿಂದ ವ್ಯಕ್ತವಡಿಸಿರುತ್ತಾರೆ. ಆಗಲಿ ಇನ್ನೊಂದು ಪೂರ್ವಪಕ್ಷವೂ ಉಂಟಾಗ ಬಹುದು, ಏನೆಂದರೆ, ಈ ಕರ್ಮಯೋಗಿಯು ತನ್ನ ಆತ್ಮೋಪಾಸನೆಯಲ್ಲಿ ಮಗ್ನನಾಗಿ ತನಗೆ ಆತ್ಮ ಒಂದೇ ದೃಷ್ಟವಾಗಿರುವಾಗ ಎಲ್ಲಾ ಆತ್ಮರೂ ಸಮವೆಂಬ ಜ್ಞಾನವು ತಾನೆ ಹೇಗೆ ? ಎಂದರೆ,-ಯಾ ವಾಗ ತನ್ನ ಒಂದು ಆತ್ಮಸ್ವರೂಪವು ಸಾಕ್ಷಾತ್ಕರಿಸಲ್ಪಟ್ಟಿತೋ. ಅನಂತರ ಬೇರೆಕಾಲದಲ್ಲಿ ಎಲ್ಲಾ ಚೇತನರ ಆತ್ಮರುಗಳೂ ಈದೃಶವಾದುದೇ ಎಂಬ ಜ್ಞಾನವುಂಟಾಗುತ್ತದೆಂದು ತಿಳಿಸುವದಕ್ಕಾಗಿ "ಏಕಸ್ಮಿನ್ದೃಷ್ಟೇ ಸತಿ" ಎಂಬ ವಾಕ್ಯವು. ಪಾತ್ರೆಯಲ್ಲಿರುವ ಅಕ್ಕಿ ಎಲ್ಲಾ ಬೆಂದಿದಯೇ ಎಂದು ನೋಡುವದಕ್ಕಾಗಿ ಒಂದಗಳನ್ನು ಹಿಸಿಕಿನೋಡುವದರಿಂದ ಹೇಗೆ ವ್ಯಕ್ತವಾಗುತ್ತದೋ ಹಾಗೆ ಎಂಬ ಭಾವವು. ಇಲ್ಲಿ ಹೇಳಿದ ಅಭಿಪ್ರಾಯವೇ ಇತರಕಡೆಯಲ್ಲೂ ಈ ಗ್ರಂಥದಲ್ಲೇ ಉಪಪಾದಿತವಾಗಿದೆ ಎಂದು ಹೇಳುವದಕ್ಕಾಗಿ, ಹಿಂದೆ ಹೇಳಿದ ಪ್ರಮಾಣದಲ್ಲೊಂದನ್ನೂ ಉದಾಹರಿಸಿ, ಮುಂದೆಯೂ ಈ ಅಭಿಪ್ರಾಯವೇ ಅನುವಾದ ಮಾಡಲ್ಪಟ್ಟಿರುತ್ತದೆಂದು ತಿಳಿಸುತ್ತಾರೆ. ಆದುದರಿಂದ ಇದು ಪರಮಾತ್ಮಯೋಗ ಪ್ರಕರಣವೂ ಅಲ್ಲವು. ಆಧಾರಾಧೇಯಭಾವವೂ ಇಲ್ಲಿ ಹೇಳಲ್ಪಡಲಿಲ್ಲವು ; ಜೀವ ಪರಮಾತ್ಮೈಕ್ಯವು ಹೇಳಲ್ಪಡಲಿಲ್ಲವು; ಎಲ್ಲಾ ಆತ್ಮರುಗಳೂ ಒಂದೇ ಎಂಬ ಆತ್ಮೈಕ್ಯವಾದವು ಇಲ್ಲಿ ಹೇಳಲ್ಪಟ್ಟಿತೆಂಬ ಅದ್ವೈತಾಭಿಪ್ರಾಯಕ್ಕೆ ಅನುಕೂಲವಿಲ್ಲವು; ಏಕೆಂದರೆ.—ಸರ್ವತ್ರ ಸಮದರ್ಶನಃ ಎಂಬ ಪ್ರಯೋಗವು ಆ ಅಭಿಪ್ರಾಯಕ್ಕೆ ವಿರುದ್ಧವು. ಸರ್ವತ್ರೈಕತ್ವ ದರ್ಶನಃ ಎಂಬ ಪ್ರಯೋಗವಿದ್ದರಾದರೂ ಸ್ವಲ್ಪಮಟ್ಟಿಗೆ ವಾದಕ್ಕೆ ಬಲವಿರುತ್ತಿತ್ತು. ಸಮತ್ವವು ವಸ್ತುಗಳಿಗೆ ಯಾವಾಗ ಹೇಳಲ್ಪಟ್ಟಿತೋ, ಅವುಗಳಿಗೆ ಅಸಮತ್ವವು ಇದ್ದೇ ಇರುತ್ತದೆ. ಕರ್ಮವಾಸನ ದೇಹಪ್ರಾಪ್ತಿ ಮುಂತಾದವುಗಳಿಂದ ಭಿನ್ನವು. ಮುಂದೆ ೩೨ನೆಯ ಶ್ಲೋಕದಲ್ಲೂ ಯೋಗಂ ಪ್ರೋಕ್ತಸ್ಸಾಮ್ಯೇನ ಎಂಬ ಪ್ರಯೋಗದಿಂದಲೂ ಆತ್ಮರಿಲ್ಲರೂ ಸ್ವರೂಪತಃ ಒಂದೇಯಾದರೂ ಎಲ್ಲರೂ ಭಿನ್ನರಾದುದರಿಂದಲೇ ಸಾಮ್ಯೇನ ಎಂಬ ಪ್ರಯೋಗವು. ಈ ಅಭಿಪ್ರಾಯವು "ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ" ಎಂಬ ಶ್ರುತಿಯನ್ನೂ, ಮತ್ತು ಮುಕ್ತ ದೆಶೆಯಲ್ಲೂ ಅನೇಕರೆಂದು ಶ್ರುತಿಗಳಲ್ಲಿ ಹೇಳಲ್ಪಟ್ಟಿರುವದರಿಂದಲೂ, ನಿತ್ಯರೂಕೂಡ ಅನೇಕರೆಂದು "ಸದಾಪಶ್ಯನ್ತಿ ಸೂರಯಃ" ಇತ್ಯಾದಿ ಸ್ಥಳಗಳಲ್ಲಿ ಹೇಳಿರುವದರಿಂದಲೂ ಜೀವಾನನ್ತ್ಯವು ವ್ಯಕ್ತವು. ಇಲ್ಲಿಯೂ, ೧೪ನೆಯ ಅಧ್ಯಾಯದ ೧೯ನೆಯ ಶ್ಲೋಕದಲ್ಲೂ ಯೇಷಾಂ ಸಾಮ್ಯೇ ಎಂದು ಹೇಳಿದರೇ ವಿನಾ ಯೇಷಾಂ ಐಕ್ಯೇ ಎಂದು ಹೇಳಲಿಲ್ಲವು ; ಮತ್ತು ನಿರ್ದೋಷವಾದ ಬ್ರಹ್ಮದ ಸಮತ್ವವೂ,! ಅವುಗಳ ಸ್ಥಿತಿಯಲ್ಲಿರುವವರೂ ತೇಷಾಂ ಎಂದು ಬಹುವಚನದಿಂದ ಹೇಳಲ್ಪಟ್ಟಿರುವದರಿಂದಲೂ, ಆತ್ಮೈಕ್ಯವಾಕ್ಯಕ್ಕೆ ಅನುಕೂಲವಿಲ್ಲವು ; ಮತ್ತು ಮುಂದೆ ದ್ವಾವಿಮೌ ಪುರುಷೌಲೋಕೇ ಎಂದು ಹೇಳಿ ಉತ್ತಮಃಪುರುಷಸ್ತ್ವನ್ಯಃ ಎಂದು ಜೀವಾತ್ಮರಲ್ಲೇ ಭೇದವನ್ನೂ ಪರಮಾತ್ಮನು ಜೀವಾತ್ಮರಿಗಿಂತ ಬೇರೆ ಎಂದೂ ಹೇಳಿರುವದರಿಂದ ಆತ್ಮೈಕ್ಯವಾದಕ್ಕೆ ಅನುಕೂಲವಿಲ್ಲವು. ಸಾಮ್ಯವೆಲ್ಲಿದೆಯೋ ಅಲ್ಲಿ ವೈಷಮ್ಯವಿದ್ದೇ ಇರಬೇಕು

ಮೂ॰ ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦.

ಎಂದು ಮೇಲೆ ಹೇಳಿದ ಅಭಿಪ್ರಾಯವನ್ನೇ ವ್ಯಕ್ತವಾಗಿ ಶ್ರೀ ಯತಿವರ್ಯರು "ಸ್ವಾತ್ಮನಃ" ಎಂದಾರಂಭಿಸಿ, ಪ್ರಕೃತಿಗತತ್ವಾತ್ ಎಂಬುದರ ಅಂತ್ಯದವರೆಗೂ ಸಮತ್ವವೆಲ್ಲಿ, ವೈಷಮ್ಯವೆಲ್ಲಿ ಎಂಬುದನ್ನು ವಿಶದೀಕರಿಸಿರುತ್ತಾರೆ; ಉಪಾಧಿಯಿಂದ ವೈಷಮ್ಯವೂ, ಸ್ವರೂಪತಃ ಸಾಮ್ಯವೂ ಎಂದು ಭಾವಿಸತಕ್ಕದ್ದು.

ಆಗಲಿ ತನ್ನ ಆತ್ಮಾ ಇತರ ಭೂತಗಳಲ್ಲೂ, ಇತರ ಭೂತಗಳಲ್ಲಿರುವ ಆತ್ಮಾ ತನ್ನಲ್ಲೂ, ನೋಡತಕ್ಕದ್ದೆಂದು ವ್ಯಕ್ತವಾಗಿ ಮೂಲದಲ್ಲಿ ಹೇಳಿರುವಾಗ, ನಿಮ್ಮ ಅರ್ಥವು ಹೇಗೆ ಸಮಂಜಸವೆಂದಾಕ್ಷೇಪಿಸಿದರೆ, ಜೀವಾತ್ಮನು ಸ್ವರೂಪತಃ ಅಣುವಾಗಿರುವವನು ; ಇಂತವನು ಎಲ್ಲಾ ಭೂತಗಳಲ್ಲೂ, ಮತ್ತು ಎಲ್ಲಾ ಭೂತಗಳಲ್ಲಿರುವ ಆತ್ಮರು ತನ್ನ ಆತ್ಮನಲ್ಲೂ ಇದ್ದಾನೆಂದು ಹೇಳುವದು ಅಸಮಂಜಸವಾದುದರಿಂದ ಆ ಪ್ರಯೋಗಗಳಿಗೆ ಅಂತಹ ಸಮತ್ವದಲ್ಲೇ ಅಭಿಪ್ರಾಯವೆಂದು ತಿಳಿಸುವದಕ್ಕಾಗಿ ಮೂಲದಲ್ಲೇ ಸರ್ವತ್ರಸಮದರ್ಶನಃ ಎಂಬ ಪ್ರಯೋಗವಿದುತ್ತದೆ. ಆಗಲಿ ಪರಮಾತ್ಮನು ವಿಭುವಾದುದರಿಂದ ಹಾಗೆ ಅರ್ಥ ಹೇಳಕೂಡದೇ ಎಂದರೆ ಪ್ರಕರಣವಿರೋಧವು ಆಗ ಉಂಟಾಗುತ್ತದೆ. ಈಗ ಹೇಳುತ್ತಿರುವದು ಭಕ್ತಿಯೋಗಾಙ್ಗವಾದ ಆತ್ಮಚಿನ್ತನವು, ಹಾಗಲ್ಲವು ಪರಮಾತ್ಮೋಪಾಸನವೇ ಎಂದರೆ ಅಧ್ಯಾಯಾಂತ್ಯದಲ್ಲಿ ಇದಕ್ಕಿಂತ ಹೆಚ್ಚಿನ ಯೋಗ ಒಂದುಂಟು ಎಂದು ಹೇಳಿರುವದಕ್ಕೆ ಸಾಮಂಜಸ್ಯವು ದೂರೀಕೃತವಾಗುತ್ತದೆ. ಇದೂ ಅಲ್ಲದೆ ಮುಂದಿನ ಶ್ಲೋಕದಲ್ಲಿ ಪುನರುಕ್ತಿದೋಷವು ಪ್ರಾಪ್ತವಾಗುತ್ತದೆ. ಮುಂದೆ ೩೩ನೆಯ ಶ್ಲೋಕದಲ್ಲಿ ಅರ್ಜುನ ಪ್ರಶ್ನೆಯಲ್ಲಿ ಸಾಮ್ಯ ಮಾತ್ರವೇ ತೋರುತ್ತದೇ ವಿನಾ, ಪರಮಾತ್ಮನ ಪರಸ್ಪರಾಧಾರಾಧೇಯ ಭಾವವು ಎಂದರೆ ಐಕ್ಯವು ತೋರಿಬರುವದಿಲ್ಲವು. ಆದುದರಿಂದ ಜೀವಾತ್ಮರುಗಳ ಪ್ರಕೃತಿವಿಯುಕ್ತ ದಶೆಯಲ್ಲಿರುವ ಸ್ವರೂಪವೂ ಜ್ಞಾನೈಕಾಕಾರತೆಯಿಂದ ಸಮವಾದ ಪ್ರಯುಕ್ತ ಅವರುಗಳ ಸಾಮ್ಯ ಮಾತ್ರವು ಇಲ್ಲಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಈಕ್ಷತೇ ಎಂಬ ಕ್ರಿಯಾಪದವಿರುವದರಿಂದ ತನ್ನ ಆತ್ಮಚಿನ್ತನದಿಂದ ತನ್ನ ಆತ್ಮಸ್ವರೂಪವು ಯಾವಾಗ ದೃಷ್ಟವಾಯಿತೋ, ಆಗ ಇತರರ ಆತ್ಮಸ್ವರೂಪವೂ ಸಹ ಹಾಗೆಯೇ ಊಹಿಸಬಹುದೆಂಬ ಭಾವವು ಇಲ್ಲಿ ತೋರಿಬರುತ್ತದೆ. ||೨೯||

**ಮೂಲಕ್ಕೆ ಅರ್ಥವು:**—ಯೋಗನಿರತನಾಗಿರುವ ಕರ್ಮಯೋಗಿಗೆ ವಿಪಾಕದೆಶೆಯಲ್ಲಿ ಸಮಸ್ತ ಆತ್ಮವರ್ಗ ವಿಷಯದಲ್ಲೂ ಸಮದರ್ಶಿತ್ವವುಂಟಾಗುತ್ತದೆಂದು ಹಿಂದಿನ ಶ್ಲೋಕದಲ್ಲಿ ಹೇಳಿದರು. ಎಲ್ಲಾ ಆತ್ಮರೂ ಪ್ರಕೃತಿ ಸಂಬಂಧದಿಂದ ದೇವಮನುಷ್ಯಾದಿ ಆಕಾರಗಳಿಂದ ಭಿನ್ನರಾಗಿ ತೋರುತ್ತಾರೆಂದೂ, ಪ್ರಕೃತಿವಿಯುಕ್ತ ದೆಶೆಯಲ್ಲಿ ಎಲ್ಲಾ ಜ್ಞಾನದ್ರವ್ಯಮಯರಾದುದರಿಂದ ಸಮರೆಂಬ ಜ್ಞಾನವು ವಿಪಾಕದೆಶೆಯಲ್ಲಿ ಉಂಟಾಗುತ್ತದೆಂದೂ, ಹೇಳಲ್ಪಟ್ಟಿತು. ತದನಂತರ ಈತನಿಗೆ ಎರಡನೆಯ ಅವಸ್ಥೆಯಲ್ಲಿ ಇನ್ನೊಂದು ವಿಧವಾದ ಸಮತ್ವಜ್ಞಾನವು ಉಂಟಾಗುತ್ತದೆಂದು ಹೇಳುತ್ತಾರೆ. ಪರಮಾತ್ಮನೂ ಜೀವಾತ್ಮನಹಾಗೆಯೇ ಜ್ಞಾನಸ್ವರೂಪನಾದುದರಿಂದ ಈ ಕರ್ಮಯೋಗಿಯು ತಾನೂ ಮತ್ತು ಇತರ ಆತ್ಮರುಗಳೂ ಕೂಡ ಪರಮಾತ್ಮನೊಂದಿಗೆ ಸಮಾನರೆಂದು ಭಾವಿಸುವನೆಂದು ಉಪದೇಶಿಸುತ್ತಾರೆ—ಯಃ - ಯಾವ ಆತ್ಮಚಿನ್ತನೆಯಲ್ಲಿ ನಿರತನಾಗಿ ಆತ್ಮಾವಲೋಕನವನ್ನು ಹೊಂದಿರುವ ಕರ್ಮಯೋಗಿಯು, ಸರ್ವತ್ರ - ಸಮಸ್ತ ಚೇತನರಲ್ಲೂ, ಮಾಂ ಪಶ್ಯತಿ - ನನ್ನ ಸಮಾನಾಕಾರತೆಯನ್ನು ನೋಡುವನೋ, ಮತ್ತು ಮಯಿ - ನನ್ನಲ್ಲಿ, ಸರ್ವಂಚ - ಸಮಸ

ಭಾ. ತತೋ ವಿಪಾಕದಶಾಪನ್ನೋ ಮಮ ಸಾಧರ್ಮ್ಯಮುಪಾಗತಃ (೧) "ನಿರಞ್ಜನಃ ಪರಮಂ ಸಾಮ್ಯಮುಪೈತಿ" ಇತ್ಯುಚ್ಯಮಾನಂ ಸರ್ವಸ್ಯಾತ್ಮವಸ್ತುನೋ ವಿಧೂತಪುಣ್ಯ ಪಾಪಸ್ಯ ಸ್ವರೂಪೇಣಾವಸ್ಥಿತಸ್ಯ ಮತ್ಸಾಮ್ಯಂ ಪಶ್ಯತಿ ಯ ಸ್ಸರ್ವತ್ರಾತ್ಮವಸ್ತುನಿ

---

ಆತ್ಮವರ್ಗದ ಸಮಾನಾಕಾರತೆಯನ್ನು, ಪಶ್ಯತಿ - ನೋಡುವನೋ, ತಸ್ಯ - ಅಂತಹ ಉಪಾಸನ ನಿಷ್ಪತ್ತಿಯನ್ನು ಹೊಂದಿದ ಕರ್ಮಯೋಗಿಗೆ, ಅಹಂ - ನಾನು, ನ ಪ್ರಣಶ್ಯಾಮಿ - ಹಾಗೆ ನನ್ನಲ್ಲಿ ಸಾಮ್ಯವನ್ನು ಸಾಕ್ಷಾತ್ಕರಿಸಿದನಾದುದರಿಂದ ಆ ಸಾಮ್ಯದಿಂದ ಅವನಿಗೆ ಅದರ್ಶನವನ್ನು ಹೊಂದುವದಿಲ್ಲವು, ಎಂದರೆ ಅದರ್ಶನನಾಗುವದಿಲ್ಲವೆಂಬ ಭಾವವು; ಆತನ ಯೋಗಕ್ಷೇಮವನ್ನು ವಹಿಸುವನಾಗುವೆನು, ಆತನಿಗೆ ಉಪಾಯಪೂರ್ತಿಯನ್ನುಂಟುಮಾಡಿಕೊಡುವೆನು ಎಂಬ ಭಾವವು, ಸಚ - ಅಂತಹ ಕರ್ಮಯೋಗಿಯೂ ಕೂಡ, ಮೇ - ಆತನು ಸಾಮ್ಯವನ್ನು ಸಾಕ್ಷಾತ್ಕರಿಸಿರುವನೆಂದು ತಿಳಿದಿರುವ ಸರ್ವಜ್ಞನಾದ ನನಗೆ, ನ ಪ್ರಣಶ್ಯತಿ-ಸದಾ ಅದರ್ಶನವಿಲ್ಲದಿರುವನು. ಆತನೂ ಎಲ್ಲಾ ಆತ್ಮರುಗಳೂ ಪರಸ್ಪರ ಸಮವೆಂದೂ ಹಾಗೆಯೇ ಆ ಜೀವಾತ್ಮರೆಲ್ಲಾ ನನಗೂ ಸಮರೆಂದೂ ಆತನು ತಿಳಿದವನಾಗುವನು ಎಂಬ ಭಾವವು. ಅದು ಹೇಗೆಂದರೆ, ನಾನು ಸರ್ವಜ್ಞನಾದುದರಿಂದ ಎಲ್ಲಾ ಆತ್ಮರೂ ನನಗೆ ಸಮವೆಂಬ ಭಾವದಿಂದ ನನಗೆ ಯಾರೂ ಅದರ್ಶನೀಯರಲ್ಲವೋ, ಹಾಗೆಯೇ ಆತನೂ ಎಲ್ಲಾ ಆತ್ಮರುಗಳೂ ನನಗೆ ಜ್ಞಾನಾಕಾರತೆಯಿಂದ ಸಮವೆಂದು ಯಾವಾಗ ತಿಳಿದನೋ ಆವಾಗ ಆತನಿಗೂ ನಾನು ಅದರ್ಶನೀಯನಲ್ಲವು ಎಂಬ ತಾತ್ಪರ್ಯವು. ಈ ಅಭಿಪ್ರಾಯವು ಹಿಂದೆಯೇ ೬ನೇ ಅಧ್ಯಾಯದ ೩೫ನೆಯ ಶ್ಲೋಕದಲ್ಲಿ "ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋಮಯಿ" ಎಂಬುವದರಿಂದ ಹೇಳಲ್ಪಟ್ಟಿತು. ಅದರ ವ್ಯಾಖ್ಯಾನವನ್ನು ಪರಾಂಬರಿಸಬಹುದು. ಈ ಅಭಿಪ್ರಾಯವು ಮುಂದೆ ಮಮಸಾಧರ್ಮ್ಯಮಾಗತಾಃ (ಗೀ. ೧೪.೨) ಎಂಬಲ್ಲೂ ವ್ಯಕ್ತವು.

ಭಾಷ್ಯಾರ್ಥವು :—ತತಃ - ಅದಕ್ಕಿಂತಲೂ ಎಂದರೆ ಹಿಂದಿನ ಶ್ಲೋಕದಲ್ಲಿ ಹೇಳಿರುವದಕ್ಕಿಂತಲೂ, ವಿಪಾಕ ದಶಾಪನ್ನಃ. ಪರಿಪಕ್ವದಶೆಯನ್ನು ಹೊಂದಿದ ಕರ್ಮಯೋಗಿಯು "ನಿರಞ್ಜನಃ ಪರಮಂ ಸಾಮ್ಯ ಮುಪೈತಿ" ಪರಮಾತ್ಮನ ದಿವ್ಯಮಂಗಳವಿಗ್ರಹೋಪಾಸಕನು ಸಮಸ್ತ ಪುಣ್ಯಪಾಪಗಳಿಂದ ಬಿಡಲ್ಪಟ್ಟವನಾಗಿ, ದೋಷಗಂಧರಹಿತನಾಗಿ ಪರಮಾತ್ಮನೊಂದಿಗೆ ಪರಮಸಾಮ್ಯವನ್ನು ಹೊಂದುವನು." ಈ ಶ್ರುತ್ಯರ್ಥಕ್ಕೆ ೩ನೆಯ ಅಧ್ಯಾಯದ ಭಾಷ್ಯದ ಅವತಾರಿಕೆಯನ್ನು ಪರಾಂಬರಿಸಿ; ಇತ್ಯುಚ್ಯಮಾನಂ - ಎಂದು ಹೇಳಲ್ಪಟ್ಟಿರುವ, ಮಮಸಾಧರ್ಮ್ಯಂ - ನನ್ನೊಂದಿಗೆ ಜ್ಞಾನಾಕಾರತೆ ಮೊದಲಾದವುಗಳಿಂದ ಸಮಾನ ಧರ್ಮವನ್ನು ಉಪಾಗತಃ - ಹೊಂದಿದವನಾಗಿ, ಶಾಸ್ತ್ರ ಮತ್ತು ವಿವೇಕಜನ್ಯಜ್ಞಾನವನ್ನು ಹೊಂದಿದವನಾಗಿ, ವಿಧೂತ ಪುಣ್ಯಪಾಪಸ್ಯ - ನಷ್ಟವಾದ ಪುಣ್ಯಪಾಪಗಳುಳ್ಳ, ಸ್ವರೂಪೇಣಾವಸ್ಥಿತಸ್ಯ - ತನ್ನ ನೈಜಸ್ವರೂಪದಿಂದಿರುವ ಎಂದರೆ ತನ್ನ ನೈಜಸ್ವರೂಪಾವಿರ್ಭಾವ ಉಂಟಾದ, ಆತ್ಮವಸ್ತುನಃ - ಆತ್ಮವಸ್ತುವಿಗೆ ಎಂದರೆ ಆತ್ಮವಸ್ತುವಿನಲ್ಲಿ, ಮತ್ಸಾಮ್ಯಂ ಪಶ್ಯತಿ - ನನ್ನೊಂದಿಗೆ ಸಮಭಾವವನ್ನು ಕಾಣುವವನಾಗಿ, ಯಃ - ಯಾವ ವಿಪಾಕದಶೆಯ ಕರ್ಮಯೋಗಿಯು, ಸರ್ವತ್ರಾತ್ಮವಸ್ತುನಿ - ಎಲ್ಲಾ ಕಡೆಯಲ್ಲೂ ಇರುವ ಆತ್ಮವಸ್ತುವಿನಲ್ಲಿ, ಮಾಂ - ನನ್ನನ್ನು ಎಂದರೆ ನನ್ನ ಸಮಾನಾಕಾರತೆಯನ್ನು ಕಾಣುವನೋ ಮತ್ತು ಸರ್ವಮಾತ್ಮವಸ್ತು ಚ - ಸಮಸ್ತ ಆತ್ಮವಸ್ತು

---

೧. ಮುಂಡಕ. ೩-೧.೩.

ಭಾ. ಮಾಂ ಪಶ್ಯತಿ, ಸರ್ವಮಾತ್ಮವಸ್ತು ಚ ಮಯಿಪಶ್ಯತಿ ; ಅನ್ಯೋನ್ಯಸಾಮ್ಯಾದನ್ಯತರ ದರ್ಶನೇನ ಅನ್ಯತರದಪೀದೃಶಮಿತಿಪಶ್ಯತಿ, ತಸ್ಯ ಸ್ವಾತ್ಮರೂಪಂ ಪಶ್ಯತೋಹಂ ತತ್ಸಾಮ್ಯಾನ್ನಪ್ರಣಶ್ಯಾಮಿ - ನಾದರ್ಶನ ಮುಪಯಾಮಿ ; ಮಮಾಪಿ ಮಾಂ ಪಶ್ಯತೋ ಮತ್ಸಾಮ್ಯಾತ್ ಸ್ವಾತ್ಮಾನಂ ಮತ್ಸಮಮುಪಲೋಕಯನ್ ಸದಾ ಉಪಯಾತಿ ||೩೦||

ವನ್ನು, ಮಯಿಪಶ್ಯತಿ - ನನ್ನಲ್ಲಿ ಕಾಣುವನೋ ಎಂದರೆ ನನಗೆ ಸಮಾನ ಭಾವದಲ್ಲಿರುವ ಹಾಗೆ ಕಾಣುವನೋ, ಇದರಭಿಪ್ರಾಯವೇನೆಂಬುವದನ್ನು ಉಪದೇಶಿಸುತ್ತಾರೆ.— ಅನ್ಯೋನ್ಯಸಾಮ್ಯಾತ್ - ಪರಸ್ಪರ ಸಮಭಾವವಿರುವದರಿಂದ, ಅನ್ಯತರದರ್ಶನೇನ - ಒಂದನ್ನು ನೋಡುವದರಿಂದ, ಅನ್ಯತರದಪಿ - ಇನ್ನೊಂದೂ ಕೂಡ, ಈದೃಶಮಿತಿ - ಹೀಗೆಯೇ ಎಂದು ನೋಡುತ್ತಾನೋ, ಸ್ವಾತ್ಮರೂಪಂ ಪಶ್ಯತಃ - ತನ್ನ ಆತ್ಮಸ್ವರೂಪವನ್ನೇ ಸಾಕ್ಷಾತ್ಕರಿಸುವ, ತಸ್ಯ - ಅಂತಹ, ವಿಪಾಕದಶೆಯ ಕರ್ಮಯೋಗಿಗೆ, ಅಹಂ – ನಾನು, ತತ್ಸಾಮ್ಯಾತ್ - ಆತನಿಗೆ ಸಮಾನವಾದ ಆಕಾರವುಳ್ಳವನಾಗಿರುವದರಿಂದ, ನಪ್ರಣಶ್ಯಾಮಿ ಎಂದರೆ ನಾದರ್ಶನಮುಪಯಾಮಿ - ಅದರ್ಶನವನ್ನು ಹೊಂದುವದಿಲ್ಲವು, ಹಾಗೆಯೇ ಮಮಾಪಿ - ನನಗೂ ಕೂಡ, ಮಾಂಪಶ್ಯತಃ – ನನ್ನನ್ನು ನೋಡುತ್ತಿರುವ, ಮತ್ಸಮ ಮುಪಲೋಕಯನ್ - ನನಗೆ ಸಮಾನವಾದ ಸ್ವರೂಪವುಳ್ಳದ್ದೆಂದು ತಿಳಿದವನಾಗಿ, ಸದಾದರ್ಶನಮುಪಯಾತಿ – ಯಾವಾಗಲೂ ಆವನು ಎಂದರೆ ಆ ಕರ್ಮಯೋಗಿಯು ದರ್ಶನವನ್ನು ಕೊಡುವನು. ಆವನು ನನ್ನ ಕೃಪೆಗೆ ಒಳಗಾಗುವನು. ಈ ಕೊನೆಯ ವಾಕ್ಯವು ಸಚಮೇ ನ ಪ್ರಣಶ್ಯತಿ – ಎಂಬುದರ ತಾತ್ಪರ್ಯವು.

ಇದರ ಹಿಂದಿನ ಶ್ಲೋಕದಲ್ಲಿ ದೇವ ಮನುಷ್ಯಾದಿ ಪ್ರಕೃತಿಪರಿಣಾಮ ವಿಶೇಷ ಭೇದವು ತೊಲಗುವದರಿಂದ ಸಮಸ್ತ ಆತ್ಮವರ್ಗವೂ ಜ್ಞಾನದ್ರವ್ಯರೂಪವಾಗಿ ಒಂದೇ ವಿಧವಾಗಿರುವದರಿಂದ ಆತ್ಮರುಗಳಿಗೆ ಸಮಭಾವವುಂಟೆಂದೂ, ಇದು ವಿಪಾಕದೆಶೆಯಲ್ಲಿ ನಿಷ್ಪನ್ನ ಕರ್ಮಯೋಗಿಗೆ ತೋರಿಬರುತ್ತದೆಂದೂ ಹೇಳಲ್ಪಟ್ಟಿತು. ಈ ಆತ್ಮವರ್ಗವೇ ಪುಣ್ಯಪಾಪಗಳನ್ನೆಲ್ಲಾ ಕಳೆದುಕೊಂಡಿರುವ ಅವಸ್ಥೆಯಲ್ಲಿ ಪರಮಾತ್ಮನೊಂದಿಗೆ ಪರಮಸಾಮ್ಯವನ್ನು ಹೊಂದುತ್ತದೆಂದೂ, ಆ ಭಾವವು ನಿಷ್ಪನ್ನ ಕರ್ಮಯೋಗಿಯ ಎರಡನೆಯ ಅವಸ್ಥೆಯಲ್ಲಿ ತೋರುತ್ತದೆಂದೂ, ಆದುದರಿಂದ ಪರಸ್ಪರ ಆತ್ಮ ಸಾಮ್ಯವೂ, ಮತ್ತು ಪರಮಾತ್ಮನೊಂದಿಗೆ ಸಾಮ್ಯವೂ, ಎರಡೂ ಆಗ ತೋರಿಬರುತ್ತದೆಂದೂ ಉಪದೇಶಿಸುತ್ತಾರೆ. ಭಾಷ್ಯದಲ್ಲಿ " ಮಮಸಾಧರ್ಮ್ಯಮುಪಾಗತಃ " ಎಂದಿರುವದರಿಂದ, ಮುಂದೆ ಗೀ. ೧೪-೨ನೆಯ ಶ್ಲೋಕದಲ್ಲಿ " ಇದಂ ಜ್ಞಾನಮುಪಾಶ್ರಿತ್ಯ ಮಮಸಾಧರ್ಮ್ಯಮಾಗತಾಃ " ಹೇಳುವ ಅಭಿಪ್ರಾಯವು ಸೂಚಿತವು. ಈ ವಿಪಾಕದೆಶೆಯನ್ನು ಹೊಂದಿದ ಕರ್ಮಯೋಗಿಯು ಪರಮಾತ್ಮನೊಂದಿಗೆ ಸಾಮ್ಯವನ್ನು ಕಾಣುತ್ತಾನೆ ಎಂದು ಹೇಳಿದರೆ, ಒಡನೆಯೇ ಜೀವನ್ಮುಕ್ತನಾದನೆಂಬರ್ಥವಲ್ಲವು. ಭಕ್ತಿಯೋಗದಲ್ಲಿಳಿದು ಪರಮಾತ್ಮೋಪಾಸನೆಯನ್ನು ಮಾಡಿ, ಪುಣ್ಯಪಾಪಗಳೆಲ್ಲಾ ದಹಿಸಿಹೋದನಂತರ ಪ್ರಕೃತಿಯಿಂದ ಬಿಡಲ್ಪಡುವನು ; ಆಗ ಆತನು ಪರಮಾತ್ಮನೊಂದಿಗೆ ಪರಮಸಾಮ್ಯವನ್ನು ಹೊಂದುವನು. ಶ್ರುತಿಸಿದ್ಧವಾದ ಈ ಅಭಿಪ್ರಾಯವನ್ನು, ಕರ್ಮವಿಪಾಕದಶೆಯಲ್ಲಿ, ಯಾವಾಗ ತನ್ನ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿ, ಎಲ್ಲಾ ಆತ್ಮರೂ ಹೀಗೆ ಪರಸ್ಪರ ಸಮವೆಂಬುದು ತೋರಿತೋ, ಮುಂದಕ್ಕೆ ಇವೆಲ್ಲವೂ ಪರಮಾತ್ಮನೊಂದಿಗೆ ಸಾಮ್ಯವುಳ್ಳದ್ದೆಂಬುದು ತೋರಿಬರುತ್ತದೆಂಬಭಿಪ್ರಾಯವು. ಈ ಶ್ಲೋಕದ ಪೂರ್ವಾರ್ಧದಲ್ಲಿ ಯೋ ಮಾಂ ಪಶ್ಯತಿ ಸರ್ವತ್ರ ಎಂಬುವದರಿಂದ ಪರಮಾತ್ಮನ ಸರ್ವವ್ಯಾಪಕತ್ವವೂ ಎಲ್ಲಾ ಆತ್ಮರುಗಳಿಗೂ ಆತ್ಮಾವಾಗಿರುವ ಭಾವವೂ ಸಾಧಾರಣವಾಗಿ ತೋರಿಬರುತ್ತವೆ; ಮತ್ತು ಸರ್ವಂಚ ಮಯಿ ಪಶ್ಯತಿ ಎಂಬುವದರಿಂದ ಪರಮಾತ್ಮನು ಸಕಲಕ್ಕೂ ಆಧಾರಭೂತನು, ಸಮಸ್ತವೂ ಆತನಿಗೆ

ಅಥೇಯವು ಎಂಬ ತಾತ್ಪರ್ಯವು ತೋರಿಬರುತ್ತದೆ; ಆದರೆ ಇವು ಮೇಲೆಮೇಲೆ ತೋರುವ ಅರ್ಥಗಳಾದರೂ ಪ್ರಕರಣಕ್ಕೆ ಉಪಯುಕ್ತವಾದವುಗಳು ಅಲ್ಲವು- ಹಿಂದಿನ ಶ್ಲೋಕಕ್ಕೂ ಈ ಶ್ಲೋಕಕ್ಕೂ ಸಙ್ಗತಿಯು ಆಗ ದೊರೆಯುವದು ದುರ್ಲಭವು. ತಸ್ಯ ಎಂಬುವದು ಈ ಯೋಗಿಯನ್ನು ಕುರಿತ ವಿಷಯವು. ಅದ್ವೈತಿಗಳು ಆತ್ಮೈಕ್ಯವನ್ನು ಹೇಳಿ ಈ ಮೇಲಿನ ಅರ್ಥವನ್ನು ಸಮರ್ಥನೆ ಮಾಡುತ್ತಾರೆ. ಹಿಂದಿನ ಶ್ಲೋಕದಲ್ಲಿ ಸಮದರ್ಶಿತ್ವವು ಹೇಳಲ್ಪಟ್ಟಿತೇ ವಿನಾ ಆತ್ಮೈಕ್ಯವಲ್ಲವು. ಸಮಭಾವವೆಂದು ಹೇಳಿದುದರಿಂದ ಪೃಥಗ್ಭಾವ ಉಂಟೆಂಬುದು ಸಿದ್ಧವು. ಇದೂ ಅಲ್ಲದೆ **ನತ್ವೇವಾಹಂ** ಎಂಬ ಶ್ಲೋಕದಲ್ಲಿ ಈ ಆತ್ಮರೂ ಸರ್ವೇಶ್ವರನೂ ಸಹ ಹಿಂದೆಯೇ ಇದ್ದರ, ಈಗಲೂ ಇದ್ದಾರೆ, ಮುಂದೆಯೂ ಇರುವರು ಎಂದು ಹೇಳಿದುದರಿಂದ, ಆತ್ಮೈಕತ್ವವು ಗೀತಾಪ್ರಮಾಣದಲ್ಲಿ ಸಿದ್ಧಿಸುವದು ಕಷ್ಟವು. ಈ " **ನತ್ವೇವಾಹಂ** " ಎಂಬ ಶ್ಲೋಕವೇ ಉಪದೇಶಕ್ಕೆ ಆದಿಯಾದುದರಿಂದ ಸಿದ್ಧಾಂತವನ್ನು ಪ್ರತಿಜ್ಞಾ ವಾಕ್ಯರೂಪದಲ್ಲಿ ಹೇಳುವದು ಸಂಪ್ರದಾಯವಾಗಿರುವಾಗ, ಅದ್ವೈತ ಸಿದ್ಧಾಂತವನ್ನು ಹೇಳದೆ ಆತ್ಮಭಿನ್ನತ್ವವು ಹೇಳಿದೆ ಎಂದು ಶ್ರೀ ಯತಿವರ್ಯರು ನ್ಯಾಯವಾಗಿ ಸಮಂಜಸವಾಗಿ ತಿಳಿಸಿರುವಾಗ ಶ್ರೀ ತಿಲಕರವರು ಪ್ರಕರಣವಿಲ್ಲದೆ"ಸಾಂಪ್ರದಾಯಕವಾದ ಆಗ್ರಹ ಮೂಲವಾದುದೆ"ಂದು ನಿಂದಿಸಿರುತ್ತಾರೆ. ಪ್ರಥಮಶ್ಲೋಕದ ಪ್ರತಿಜ್ಞಾವಾಕ್ಯದಲ್ಲಿ ಪ್ರಕರಣವಿಲ್ಲವೆಂಬ ದೂಷಣೆಯು ಅಸಙ್ಗತವು. "**ನಿತ್ಯೋನಿತ್ಯಾನಾಂ**" ಎಂಬ ಶ್ರುತ್ಯನುಸಾರ ನಿತ್ಯತ್ವವನ್ನು ಸ್ಥಾಪಿಸುವ ಪ್ರಕರಣವೆಂಬುದನ್ನು ಒಪ್ಪುವೆವು. ಅದ್ವೈತಖಂಡನವನ್ನು ಶ್ರೀ ಯತಿವರ್ಯರು ನಿಪುಣತರವಾಗಿ ಮಾಡಿದರೇ ಎಂಬ ಕೋಪದಿಂದ ಶ್ರೀ ತಿಲಕರವರು ಹಾಗೆ ನಿಂದಿಸಿರಬಹುದು. (ಗೀ. ೮-೪, ಗೀ. ೧೩-೩೧) ಈ ಶ್ಲೋಕಗಳು ಅವರು ಹೇಳಿರುವ ಹಾಗೆ ಅದ್ವೈತವನ್ನು ಸ್ಥಾಪಿಸುವದಿಲ್ಲವು; ಆ ಶ್ಲೋಕವ್ಯಾಖ್ಯಾನಗಳನ್ನು ಪರಾಂಬರಿಸಬಹುದು. ಆದುದರಿಂದ ಹಿಂದಿನ ಶ್ಲೋಕದಲ್ಲಿ ಜೀವಾತ್ಮರುಗಳಿಗೆ ಪ್ರಕೃತಿ ವಿಯುಕ್ತದಶೆಯಲ್ಲಿ ಪರಸ್ಪರ ಸಾಮ್ಯವು ತೋರಿಬರುತ್ತದೆಂದೂ ಆದಕ್ಕೆ ಮುಂದಿನ ವಿಪಾಕದಶೆಯಲ್ಲಿ ಆ ಪರಸ್ಪರ ಸಾಮ್ಯದೊಂದಿಗೆ ಪರಮಾತ್ಮನೊಂದಿಗೆ ಸಾಮ್ಯವೂ ತೋರಿಬರುತ್ತದೆಂದು ಹೇಳುವದೇ ಸಮಂಜಸವಾಗಿ ತೋರುತ್ತವೆ. ಆ ಸಾಮ್ಯವು ಹೇಗೆ ತೋರಿಬರುತ್ತದೆ ಎಂಬಪೇಕ್ಷೆಯಲ್ಲಿ "**ಅನ್ಯೋನ್ಯಸಾಮ್ಯಾತ್**" ಎಂಬ ವಾಕ್ಯದಿಂದ ಸಮಾಧಾನವನ್ನು ಹೇಳಿರುತ್ತಾರೆ. ಕರ್ಮಯೋಗಿಯು ತನ್ನ ಆತ್ಮನನ್ನು ಸಾಕ್ಷಾತ್ಕರಿಸಿದಾಗ ಹೇಗೆಯೇ ಜ್ಞಾನೈಕಾಕಾರತೆಯಿಂದ ಸಮಸ್ತ ಆತ್ಮರುಗಳೂ ತನ್ನ ಹಾಗೆ ಎಂದು ಹೇಗೆ ತಿಳಿಯುವನೋ, ಹಾಗೆಯೇ ಶ್ರುತಿಪ್ರಮಾಣ ಬಲದಿಂದ ತನ್ನ ಆತ್ಮವೂ ಪ್ರಕೃತಿ ವಿಯುಕ್ತ ದಶೆಯಲ್ಲಿ ಪರಮಾತ್ಮನಿಗೆ ಸಮವೂ ಎಂದೂ ಆತನಿಗೆ ತೋರಿಬರುತ್ತದೆಂಬ ಭಾವವು. ಒಂದು ವ್ಯಕ್ತಿಯ ದರ್ಶನದಿಂದ ಸರ್ವವ್ಯಕ್ತಿದರ್ಶನ ಉಂಟಾಗುತ್ತದೆಂಬ ಭಾವವು. ಇಂತಹ ಕರ್ಮಯೋಗಿಗೆ ಶ್ರೀ ಕೃಷ್ಣನು ತಾನು ಮಾಡುವ ಅನುಗ್ರಹವನ್ನು ಉತ್ತರಾರ್ಧದಿಂದ ತಿಳಿಸುತ್ತಾರೆ. ಹೀಗೆ ಆತ್ಮರುಗಳಿಗೆ ಪರಮಾತ್ಮನೊಂದಿಗೆ ಸಮಭಾವವನ್ನು ತಿಳಿದವನಿಗೆ ಸರ್ವಜ್ಞನಾದ ನಾನು ಅದರ್ಶನವನ್ನು ಹೊಂದುವದಿಲ್ಲವು. ಎಂದರೆ ಅವನಿಗೆ ನಾನು ಸದಾ ದರ್ಶನವನ್ನು ಕೊಡುತ್ತಿರುವೆನು. ಭಕ್ತಿಯೋಗದಲ್ಲಿ ನನ್ನನ್ನು ಸಾಕ್ಷಾತ್ಕರಿಸುವದಕ್ಕೆ ಅರ್ಹನಾಗಿ ಮಾಡುವೆನೆಂಬ ಭಾವವು. ಹಾಗೆಯೇ ಆ ವಿಪಾಕದಶೆಯನ್ನು ಹೊಂದಿದ ಯೋಗಿಯು ನನಗೆ ಅದರ್ಶನವನ್ನು ಹೊಂದುವದಿಲ್ಲವು. ಇಲ್ಲಿ ಪ್ರಣಶ್ಯಾಮಿ, ಪ್ರಣಶ್ಯತಿ, ಎಂಬ ಪದಗಳಿಗೆ ಸಾಧಾರಣವಾಗಿ ತೋರುವ ನಷ್ಟವಾಗುವದು ಎಂಬರ್ಥವಲ್ಲವು. ನಶಿ ಧಾತುವಿಗೆ ಅದರ್ಶನವೆಂಬರ್ಥವು. ಈ ವ್ಯುತ್ಪತ್ತಿಮೂಲಕ ಉಂಟಾಗುವ ಅರ್ಥವನ್ನೇ ಶ್ರೀಮಚ್ಛಂಕರಾಚಾರ್ಯರೂ ಶ್ರೀಭಾಷ್ಯಕಾರರೂ ಇಬ್ಬರೂ ಬೋಧಿಸಿರುತ್ತಾರೆ || ೩೦ ||

ಭಾ. ಅ. ತತೋಽಪಿ ವಿಪಾಕದಶಾಮಾಹ—

ಮೂ. ಸರ್ವಭೂತಸ್ಥಿತಂ ಯೋಮಾಂ ಭಜತ್ಯೇಕತ್ವ ಮಾಸ್ಥಿತಃ।
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ॥ ೩೧.

ಭಾಷ್ಯಾವತಾರಿಕೆಯ ಅರ್ಥವು:—ತತೋಽಪಿ - ಹಿಂದೆ ಹೇಳಿದ ಪರಮಾತ್ಮನೊಡನೆ ಸಮಸ್ತ ಚೇತನಸಾಮ್ಯವನ್ನು ನೋಡುವ ದಶೆಗಿಂತಲೂ, ವಿಪಾಕದಶಾಮಹ - ಹೆಚ್ಚು ಪರಿಪಕ್ವ ದಶೆಯನ್ನು ಕುರಿತು ಹೇಳುತ್ತಾರೆ. ಈ ದಶೆಯಲ್ಲಿ ಈ ಮೇಲೆ ಹೇಳಿದ ಸಾಮ್ಯವು ಯೋಗದಶೆಯಲ್ಲಿ ಮಾತ್ರವೇ ಅಲ್ಲದೆ, ಯೋಗದಿಂದ ಎದ್ದ ಸ್ಥಿತಿಯಲ್ಲಿಯೂ ಅನುವರ್ತಿಸುತ್ತಾ ಬಂದು ಪರಮಾತ್ಮನು ಎಲ್ಲಾ ಭೂತಗಳಲ್ಲೂ ಇದ್ದು ಅವುಗಳಿಗೆ ಆತ್ಮಾವಾಗಿರುವದರಿಂದ, ಜ್ಞಾನಾಕಾರದಿಂದ ಪರಸ್ಪರ ಸಮತ್ವವೂ ; ಪ್ರಕೃತಿಯಿಂದ ವಿಯುಕ್ತವಾಗಿ ಅಕರ್ಮವಶ್ಯತಾದಶೆಯುಂಟಾದಾಗ ಪರಮಾತ್ಮ ಸಾಮ್ಯವೂ ಉಳ್ಳ ಈ ಆತ್ಮರುಗಳೆಲ್ಲಾ ಪರಮಾತ್ಮನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿರುವ ಸಮತ್ವವು ಎಲ್ಲಾ ಆತ್ಮರಿಗೂ ಉಂಟೆಂಬ ಅನುಸಂಧಾನವು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ.

ಮೂಲಕ್ಕೆ ಅರ್ಥವು:—ಯಃ-ಯಾವ ವಿಪಾಕದಶೆಯ ಕರ್ಮಯೋಗಿಯು, ಸರ್ವಭೂತಸ್ಥಿತಂ-ಸಮಸ್ತ ಪ್ರಾಣಿವರ್ಗಕ್ಕೂ ಅಂತರಾತ್ಮಾವಾಗಿರುವ, ಎಂದರೆ " ಯಸ್ಯಾತ್ಮಾಶರೀರಮ್.... ಯ ಆತ್ಮಾನ ಮಂತರೋ ಯಮಯತಿ" ಇತ್ಯಾದಿ ಶ್ರುತ್ಯನುಸಾರವಾಗಿ ಸಮಸ್ತ ಚೇತನರನ್ನೂ ಶರೀರವಾಗಿಯೂ ಅವರುಗಳಿಗೆಲ್ಲಾ ಆತ್ಮಾವಾಗಿಯೂ ಇರುವ,ಮಾಂ-ವಿಶ್ವವ್ಯಾಪಿಯಾದ ನನ್ನನ್ನು, ಏಕತ್ವಮಾಸ್ಥಿತಃ-ಪ್ರಕೃತಿವಿಯುಕ್ತದಶೆಯಲ್ಲಿ ಅಕರ್ಮವಶ್ಯತೆ, ಜ್ಞಾನೈಕಾಕಾರತೆಗಳಿಂದ ಸಮತ್ವದೊಂದಿಗೆ ಅಪೃಥಕ್ಸಿದ್ಧ ವಿಶೇಷಣವಾಗಿರುವರೀಂದ ಏಕತ್ವವನ್ನೂ ಕೂಡ ಯಾವಾಗಲೂ ಎಂದರೆ ಬದ್ಧ ದಶೆಯಲ್ಲೂ ಮತ್ತು ಮುಕ್ತದಶೆಯಲ್ಲೂ ಆತನಿಗೆ ಶರೀರವಾಗಿ ಸ್ಥಿರವಾಗಿ ಹೊಂದಿರುವೆನೆಂದು ಭಜತಿ - ಧ್ಯಾನಿಸುವನೋ, ಸ ಯೋಗೀ - ಅಂತಹ ವಿಪಾಕದಶೆಯನ್ನು ಹೊಂದಿದ, ಕರ್ಮಯೋಗಿಯು, ಸರ್ವಥಾ - ಯೋಗದಶೆಯಲ್ಲೂ ಮತ್ತು ಯೋಗವನ್ನು ಬಿಟ್ಟಾಗಲೂ ಹೀಗೆ ಎಲ್ಲಾ ಕಾಲದಲ್ಲೂ, ವರ್ತಮಾನೋಽಪಿ - ಇರುವವನಾದರೂ, ಮಯಿವರ್ತತೇ - ನನ್ನಲ್ಲೇ ಇರುವನು ಎಂದರೆ ನನ್ನನ್ನು ತನ್ನೊಂದಿಗೆ ಯಾವಾಗಲೂ ಸೇರಿ ಇರುವವನಾಗಿ ಸಮತ್ವದೊಂದಿಗೆ ಏಕತ್ವವನ್ನೂ ಕೂಡ ನೋಡುವನೆಂದು ಭಾವವು. ಜ್ಞಾನೈಕಾಕಾರತೆಯಿಂದ ಸಮರಾದ ಎಲ್ಲಾ ಆತ್ಮರುಗಳೂ, ಪರಮಾತ್ಮನೊಂದಿಗೂ ಸಮರಾಗಿ ಆತನಿಗೆ ಶರೀರವಾಗಿ ಆತನು ಆತ್ಮಾವಾಗಿ, ಆತನೊಂದಿಗೆ ಏಕೀಭವಿಸಿ ಇರುವವರಾಗಿ ನೋಡುವನು ಎಂಬುದು ತಾತ್ಪರ್ಯವು. ಮಾರೀಚನು " ವೃಕ್ಷೇ ವೃಕ್ಷೇ ಚ ಪಶ್ಯಾಮಿ ಚೀರ ಕೃಷ್ಣಾ ಜಿನಾಂಬರಂ " (೧) ಎಂದು ಹೇಳಿದಹಾಗೆ ಈ ಯೋಗಿಯು ಎಲ್ಲಾ ಆತ್ಮರಲ್ಲೂ ತನ್ನಲ್ಲೂ ಸಹ ಪರಮಾತ್ಮನನ್ನೇ ನೋಡುವನೆಂಬ ಭಾವವು. ಇಲ್ಲಿ ಹೇಳಿರುವ ಏಕತ್ವವು ಶರೀರಾತ್ಮಭಾವದಿಂದ ವಿಶಿಷ್ಟಾದ್ವೈತವನ್ನು ಬೋಧಿಸುತ್ತದೆ.

ಭಾಷ್ಯಾರ್ಥವು.—ಮೂರನೆಯ ಯೋಗದ ಉತ್ಕೃಷ್ಟ ದಶೆಯನ್ನು ಹೇಳುತ್ತಾರೆ, ಈ ದಶೆಯಲ್ಲಿನ ಸಾಮ್ಯಾನುಸಂಧಾನ ಹೇಗೆಂದರೆ:—ತನಗೆ ಪರಮಾತ್ಮನಹಾಗೆ ಅಕರ್ಮವಶ್ಯತ್ವ ಸರ್ವಜ್ಞತ್ವಗಳು ಪ್ರಾಪ್ತವಾಗುವದರಿಂದಲೂ ಪರಮಾತ್ಮನಿಗೆ ಎಲ್ಲಾ ಆತ್ಮರು ಶರೀರವಾಗಿ, ಎಲ್ಲರಿಗೂ ಆತ್ಮಾವಾಗಿರುವದರಿಂದಲೂ ಹೀಗೆ ಏಕತ್ವ ಉಂಟೆಂಬ ಭಾವನೆಯುಂಟಾಗಿ ಈ ಸಂದರ್ಭದಲ್ಲಿ

(೧) ರಾಮಾ. ಕಿಷ್ಕಿಂಧಾ.

ಭಾ. ಯೋಗದಶಾಯಾಂ ಸರ್ವಭೂತಸ್ಥಿತಂ ಮಾ ಮಸಙ್ಕುಚಿತ ಜ್ಞಾನೈಕಾಕಾರತಯಾ ಏಕತ್ವಮಾಸ್ಥಿತಃ - ಪ್ರಾಕೃತ ಭೇದ ಪರಿತ್ಯಾಗೇನ, ಸುದೃಢಂ ಯೋ ಭಜತೇ, ಸ ಯೋಗೀ ವ್ಯುತ್ಥಾನ ಕಾಲೇಪಿ ಯಥಾ ತಥಾ ವರ್ತಮಾನಃ ಸ್ವಾತ್ಮಾನಂ ಸರ್ವ ಭೂತಾನಿ ಚ ಪಶ್ಯ್ನ ಮಯಿ ವರ್ತತೇ – ಮಾಮೇವ ಪಶ್ಯತಿ, ಸ್ವಾತ್ಮನಿ ಸರ್ವ ಭೂತೇಷು ಚ ಸರ್ವದಾ ಮತ್ಸಾಮ್ಯಮೇವ ಪಶ್ಯತೀತ್ಯರ್ಥಃ ||೩೧||

---

ಎಲ್ಲಾ ಆತ್ಮರೂ ಪರಸ್ಪರ ಸಮವೆಂದೂ ಪರಮಾತ್ಮನೊಂದಿಗೂ ಸಮವೆಂದೂ ಅನುಸಂಧಾನಉಂಟಾಗುವ ದಶೆಯೆಂದು ಹೇಳುತ್ತಾರೆ. ಯೋಗದಶೆಯಲ್ಲಿ ಸರ್ವಭೂತಸ್ಥಿತಂ - ಸಮಸ್ತ ಚೇತನರಿಗೂ ಅಂತರಾತ್ಮಾವಾಗಿರುವ ಮಾಂ – ಸರ್ವಶರೀರಕನಾಗಿ ಸರ್ವವ್ಯಾಪಿಯಾಗಿರುವ ನನ್ನನ್ನು, ಅಸಙ್ಕುಚಿತಜ್ಞಾನೈಕಾಕಾರತಯಾ - ಸ್ವಲ್ಪವೂ ಸಂಕೋಚ ಹೊಂದದ ಜ್ಞಾನವೇ ಮುಖ್ಯಾಕಾರವಾಗಿರುವದರಿಂದ, ಏಕತ್ವಮಾಸ್ಥಿತಃ - ಜೀವಾತ್ಮನು ಅಪೃಥಕ್ಸಿದ್ಧ ವಿಶೇಷಣವಾಗಿ ಶರೀರವಾಗಿ ಪರಮಾತ್ಮನೊಂದಿಗೆ ಏಕೀಭವಿಸಿರುವನಾಗಿ, ಸುಧೃಡಂ ಯೋ ಭಜತೇ - ಸ್ಥಿರವಾಗಿ ಯಾವ ಕರ್ಮಯೋಗಿಯು ಧ್ಯಾನಿಸುವನೋ, ಸಯೋಗೀ - ಅಂತಹ ವಿಪಾಕದಶೆಯನ್ನು ಹೊಂದಿದ ಕರ್ಮಯೋಗಿಯು, ವ್ಯುತ್ಥಾನಕಾಲೇಪಿ - ಯೋಗದಿಂದ ಎದ್ದಕಾಲದಲ್ಲೂ ಕೂಡ ಯಥಾ ತಥಾ ವರ್ತಮಾನಃ - ಯಾವ ಕೆಲಸದಲ್ಲೇಯಾಗಲಿ ಪ್ರವೃತ್ತನಾಗಿದ್ದರೂ (ಇದು ಸರ್ವಥಾ ಎಂಬುವದರ ಅರ್ಥವು.) ಸ್ವಾತ್ಮಾನಂ - ತನ್ನ ಆತ್ಮವನ್ನೂ ಮತ್ತು ಸರ್ವಭೂತಾನಿ ಚ - ಇತರ ಪ್ರಾಣಿಗಳನ್ನೂ ಸಹ, ಪಶ್ಯನ್ - ನೋಡುವವನಾಗಿ, ಮಯಿ ವರ್ತತೇ - ಎಂದರೆ ಮಾಮೇವ ಪಶ್ಯತಿ-ನನ್ನನ್ನೇ ನೋಡುವವನಾಗುತ್ತಾನೆ ; ಎಂದರೆ ತನ್ನಲ್ಲೂ, ಸರ್ವಭೂತೇಷು ಚ – ಸಮಸ್ತ ಇತರ ಪ್ರಾಣಿಗಳಲ್ಲೂ ಸಹ, ಸರ್ವದಾ - ಯಾವಾಗಲೂ ಯೋಗದಶೆಯಲ್ಲಾಗಲಿ ಅಥವಾ ಯೋಗವಿಲ್ಲದ ಕಾಲದಲ್ಲಾಗಲಿ, ಮತ್ಸಾಮ್ಯಮೇವ - ನನ್ನೊಂದಿಗೆ ಸಮಾನಭಾವವನ್ನೇ, ಪಶ್ಯತೀತ್ಯರ್ಥಃ – ನೋಡುತ್ತಾನೆಂಬರ್ಥವು. ಜೀವಾತ್ಮನು ಪ್ರಕೃತಿಯಿಂದ ಬಿಟ್ಟ ಅವಸ್ಥೆಯಲ್ಲಿ ಸ್ವಸ್ವರೂಪಾವಿರ್ಭಾವ ಉಂಟಾಗಿ ಜ್ಞಾನಪ್ರಕಾಶಕ್ಕೆ ಯಾವುದೊಂದು ಪ್ರತಿಬಂಧಕವೂ ಇಲ್ಲದುದರಿಂದ ಪರಮಾತ್ಮನೊಂದಿಗೆ ಸಮಭಾವವನ್ನು ಹೊಂದಿರುವ ಅನುಸಂಧಾನವು, ಕರ್ಮಯೋಗಿಗೆ ವಿಪಾಕದಶೆಯಲ್ಲಿ ಉಂಟಾಗುತ್ತದೆಂದು ಹಿಂದೆ ಹೇಳಲ್ಪಟ್ಟಿತು. ಈ ಮಾದರಿಯ ಅವಸ್ಥೆಯಲ್ಲಾದರೋ ಈ ಪರಮಾತ್ಮಸಾಮ್ಯವು ತನಗೆ ಉಂಟೆಂಬುದು ಯೋಗದಶೆಯಲ್ಲಿ ಮಾತ್ರವೇ ಅಲ್ಲದೆ ಯೋಗದಿಂದ ಎದ್ದ ಕಾಲದಲ್ಲೂ ಅನುವರ್ತಿಸುತ್ತಾ ಬರುತ್ತದೆಂದೂ ಆ ಸಾಮ್ಯದೊಂದಿಗೆ ಪರಮಾತ್ಮನಿಗೆ ತಾನು ಶರೀರವಾಗಿ ಪರಮಾತ್ಮನು ತನಗೆ ಆತ್ಮಾವಾಗಿ ಹೀಗೆ ಪರಮಾತ್ಮನೊಂದಿಗೆ ತಾನೂ ಇತರ ಆತ್ಮರೂ ಸಹ ಏಕೀಭವಿಸಿರುವರೆಂಬ ಅನುಸಂಧಾನ ಉಂಟಾಗುತ್ತದೆಂದು ಹೇಳಲ್ಪಟ್ಟಿತು. ಯೋಗದಶೆಯಲ್ಲಿ ಬಹು ಸ್ಥಿರವಾಗಿ ಈ ಅನುಸಂಧಾನವಿರುತ್ತದೆಂದು ತಿಳಿಸುವದಕ್ಕಾಗಿ ಸುದೃಢಂ ಎಂಬ ಪ್ರಯೋಗವು ; ಅದರಿಂದಲೇ ಯೋಗವನ್ನು ಬಿಟ್ಟ ಕಾಲದಲ್ಲೂ ಅನುವರ್ತಿಸಿ ಬರುತ್ತದೆಂದು ಹೇಳಲ್ಪಟ್ಟಿತು. ತಾನೂ ಇತರರೂ ಸಹ ಪರಮಾತ್ಮನೊಂದಿಗೆ ಏಕೀಭವಿಸಿರುವ ಜ್ಞಾನವುಂಟಾಗುತ್ತದೆ ಎಂಬುದರಿಂದ, ತಾನು ಎಲ್ಲಾ ಆತ್ಮರಲ್ಲೂ ವ್ಯಾಪಿಸಿರುವದರಿಂದ ಅಂತಹ ಜ್ಞಾನವು ಉಂಟಾಗುತ್ತದೆಂದು ಹೇಳಬೇಕಾಗುತ್ತದೆ. ಆತ್ಮಾ ಅಣುವು ಸ್ವರೂಪತಃ ವ್ಯಾಪ್ತಿಯು ಸಾಧ್ಯವೇ ಇಲ್ಲವು. ಆದುದರಿಂದ ವ್ಯಾಪ್ತಿಯು ಹೇಗೆ ಎಂದರೆ ಮುಕ್ತದಶೆಯಲ್ಲಿ ಧರ್ಮಭೂತಜ್ಞಾನವು ಸ್ವಯಂಪ್ರಕಾಶವಾಗಿಯೂ, ವಿಭುವಾಗಿಯೂ ಆಗುವದರಿಂದ ತದ್ದ್ವಾರಾ ವ್ಯಾಪ್ತಿಯುಂಟಾಗಿ, ಈ ಶಾಸ್ತ್ರಬೋಧವು ಆಗ ಪ್ರತ್ಯಕ್ಷ ಸಿದ್ಧವಾಗುತ್ತದೆಂಬ ಭಾವವು.

ಭಾ. ಅವ. ತತೋಽಪಿ ಕಾಷ್ಠಾಮಾಹ—

ಈ ಅಭಿಪ್ರಾಯವು ಶ್ವೇತಾಶ್ವತರ (೫-೯) ದಲ್ಲಿ ವ್ಯಕ್ತವು. "ವಾಲಾಗ್ರ ಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಭಾಗೋ ಜೀವ ಸ್ಸ ವಿಜ್ಞೇಯ ಸ್ಸಚಾ ನನ್ತ್ಯಾಯ ಕಲ್ಪತೇ ॥" ಕೂದಲು ತುದಿಯನ್ನು ೧೦೦ ಭಾಗಮಾಡಿ, ಅದರ ಒಂದು ಭಾಗವನ್ನು ೧೦೦ ಭಾಗ ಮಾಡಿದ ಒಂದು ಭಾಗವು ಜೀವನಪ್ರಮಾಣವೆಂದಾಗಲಿ ಊಹಿಸಬಹುದು; ಹೀಗೆ ಅಣುವಾಗಿದ್ದರೂ ಆತನು ತನ್ನ ಧರ್ಮಭೂತಜ್ಞಾನದ್ವಾರಾ ಮುಕ್ತದಶೆಯಲ್ಲಿ ಸರ್ವವನ್ನೂ ವ್ಯಾಪಿಸಿ ತಿಳಿಯುವ ಶಕ್ತಿ ಇರುವದರಿಂದ ಅನನ್ತ್ಯಾಯ ಕಲ್ಪತೇ ಎಂದು ಹೇಳಲ್ಪಟ್ಟಿತು. ಈ ಅಭಿಪ್ರಾಯವೇ "ಪ್ರದೀಪವತ್ ಆವೇಶಃ ತಥಾ ಹಿ ದರ್ಶಯತಿ" ಎಂಬ ಶಾರೀರಕ ಸೂತ್ರದಲ್ಲಿ (೪-೪.೧೫) ದೀಪವು ಒಂದೇ ಸ್ಥಳದಲ್ಲಿದ್ದರೂ ಅದರ ಪ್ರಭೆಯು ಹೇಗೆ ಇತರ ಪ್ರದೇಶಗಳನ್ನು ವ್ಯಾಪಿಸುತ್ತದೋ, ಹಾಗೆಯೇ ಒಂದು ಸ್ಥಳದಲ್ಲಿರುವ ಅಣುರೂಪನಾದ ಆತ್ಮನು ಪ್ರಭಾ ಸದೃಶವಾದ ತನ್ನ ಧರ್ಮಭೂತಜ್ಞಾನದ ಮೂಲಕ ಎಲ್ಲಾ ಪ್ರದೇಶವನ್ನೂ ವ್ಯಾಪಿಸಬಲ್ಲನು ; ಮೇಲೆ ಉದಾಹರಿಸಿರುವ ಶ್ರುತಿಯೂ ಹಾಗೆಯೇ ಹೇಳುತ್ತದೆ. ಈ ದೀಪ ದೃಷ್ಟಾಂತವೇ ಹಿಂದೆ ೧೯ನೆಯ ಶ್ಲೋಕದಲ್ಲಿ ಆತ್ಮನಿಗೆ ಕೊಟ್ಟಿರುತ್ತದೆ. ಇವುಗಳನ್ನೆಲ್ಲಾ ಮನಸ್ಸಿನಲ್ಲಿಟ್ಟೇ ಶ್ರೀ ಯತಿವರ್ಯರು ಅಸಙ್ಕುಚಿತ ಜ್ಞಾನಾಕಾರತಯಾ ವಿಕಿತ್ಸ್ವಮಾಸ್ಥಿತಃ ಎಂದು ವ್ಯಾಖ್ಯಾನ ಮಾಡಿದರು. ಬದ್ಧದಶೆಯಲ್ಲಿ ಕರ್ಮ ಮೂಲಕ ಸಙ್ಕುಚಿತ ಜ್ಞಾನವು; ಮುಕ್ತದಶೆಯಲ್ಲಾದರೋ ಅಸಙ್ಕುಚಿತವು. ಮೂಲದಲ್ಲಿ "ಮಾಂ ಭಜತಿ" ಎಂಬುದರಿಂದ ನನಗೆ ಸಮವಾದ ಎಂದರೆ ಶ್ರೀ ಕೃಷ್ಣಭಗವಾನರಿಗೆ ಸಮವಾದ ಆತ್ಮಾವಲೋಕನವೆಂಬರ್ಥವು ತೋರಿಬರುತ್ತದೆ. ಈ ಶ್ಲೋಕದಲ್ಲಿ ಸರ್ವಥಾ ವರ್ತಮಾನೋಽಪಿ ಎಂದಿರುವದರಿಂದ ಕಾಲಭೇದವು ಸಿದ್ಧವೆಂದು ಭಾವಿಸಿ, ವ್ಯುತ್ಥಾನಕಾಲೇಽಪಿ ಯಥಾಕಥಾವರ್ತಮಾನಃ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಇಲ್ಲಿ ಮಯಿವರ್ತತೇ-ನನ್ನಲ್ಲೇ ಇರುತ್ತಾನೆ ಎಂದು ಆಧಾರಾಧೇಯ ಭಾವವು ಯೋಗಿಗೂ ಯೋಗಿಯಲ್ಲದವನಿಗೂ ಸರ್ವರಿಗೂ ಸಾಧಾರಣವಾದುದು. ಆದುದರಿಂದ ಇಲ್ಲಿ ವರ್ತತೇ ಎಂದು ಹೇಳಲ್ಪಟ್ಟ ವರ್ತನವು, ಬುದ್ಧಿವೃತ್ತಿ ಎಂದು ಊಹಿಸಿ, ಮಾಮೇವಪಶ್ಯತಿ-ಎಂದು ವ್ಯಾಖ್ಯಾನಮಾಡಿ ಅಪರರ್ಥವನ್ನು ಸ್ವಾತ್ಮನಿ ಎಂದಾರಂಭಿಸಿದ ವಾಕ್ಯದಿಂದ ತಿಳಿಸಿರುತ್ತಾರೆ. ಹಿಂದಿನ ಶ್ಲೋಕದಲ್ಲಿ ಹೇಳಿದ ವಿಪಾಕದಶೆಯು ಹೇಗೆಂದರೆ—ಅಲ್ಲಿ ಯೋಗದೆಶೆಯಲ್ಲಿ ಪ್ರಕೃತಿ ಸಂಬಂಧ ಕಳೆದು ಅವಿದ್ಯಾನಿವೃತ್ತಿಯಾಗಿರುವಾಗ ಪರಮಾತ್ಮನೊಂದಿಗೆ ತಾನು ಜ್ಞಾನೈಕಾಕಾರತಯಾ ಸಮವೆಂಬ ಅನುಸಂಧಾನವು; ಈ ಶ್ಲೋಕದಲ್ಲಿ ಹೇಳಿರುವ ವಿಪಾಕದಶೆಯಲ್ಲಾದರೋ ಯೋಗಾಭ್ಯಾಸದಲ್ಲಿಲ್ಲದ ಕಾಲದಲ್ಲೂ ಆ ಅನುಸಂಧಾನವು ಅನುವರ್ತಿಸಿ ಬರುತ್ತದೆಂದು ಹೇಳಿರುವದರಿಂದಲೂ, ಮತ್ತು ತಾನೂ ಇತರ ಆತ್ಮರೂ ಸಹ ಪರಮಾತ್ಮನಿಗೆ ಶರೀರವಾಗಿ, ಆತನು ಆತ್ಮನಾಗಿರುವದರಿಂದ ಪರಮಾತ್ಮನೊಂದಿಗೆ ತಾನೂ ಮತ್ತು ಇತರರೂ ಸಹ ಶರೀರಾತ್ಮಭಾವದಿಂದ ಏಕೀಭವಿಸಿರುವ ಅನುಸಂಧಾನವು ಉಂಟಾಗುವದರಿಂದಲೂ, ಈ ಮೂರನೆಯ ಅವಸ್ಥೆಯಲ್ಲಿ ತೋರುವ ಸಾಮ್ಯವು ಅತಿಶಯವಾದ ವಿಪಾಕದಶೆಯು ಎಂಬ ಭಾವವು. ಈ ಶ್ಲೋಕದಲ್ಲಿ ಹೇಳಿರುವ ಸಾಮ್ಯವು ಹಿಂದೆ ಹೇಳಿದ ಎರಡು ವಿಧ ಸಾಮ್ಯಕ್ಕಿಂತಲೂ ಅತಿಶಯವಾದುದು, ಹೇಗೆಂದರೆ ಪರಮಾತ್ಮನಿಗೆ ಶರೀರವಾಗಿ ಅಪೃಥಕ್ಸಿದ್ಧವಿಶೇಷಣವಾಗಿರುವದರಿಂದ ತೋರುವ ಏಕತ್ವದಿಂದ ಎಲ್ಲಾ ಆತ್ಮರೂ ಸಮವು ಎಂಬ ಸಾಮ್ಯವು.

ಭಾಷ್ಯಾವತಾರಿಕೆಯ ಅರ್ಥವು :—ತತೋಽಪಿ – ಅದಕ್ಕಿಂತಲೂ ಎಂದರೆ ಹಿಂದೆ ಹೇಳಿದುದಕ್ಕಿಂತಲೂ, ಕಾಷ್ಠಾಮಾಹ - ಸರ್ವೋತ್ಕೃಷ್ಟದಶೆ ಯಾವುದೆಂಬುದನ್ನು ತಿಳಿಸುತ್ತಾರೆ,

ಮೂ. ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ।
ಸುಖಂ ವಾ ಯದಿವಾ ದುಃಖಂ ಸಯೋಗೀ ಪರಮೋ ಮತಃ॥ ೩೨.

ಭಾ. ಸ್ವಾತ್ಮನಶ್ಚಾನ್ಯೇಷಾಂಚಾ ತ್ಮನಾ ಮಸಙ್ಕುಚಿತ ಜ್ಞಾನೈಕಾಕಾರತ ಯೌಪಮ್ಯೇನ ಸ್ವಾತ್ಮನಿ ಅನ್ಯೇಷು ಚ - ಸರ್ವತ್ರ ವರ್ತಮಾನಂ ಪುತ್ರಜನ್ಮಾದಿರೂಪಂ ಸುಖಂ, ತನ್ಮರಣಾದಿರೂಪಂ ಚ ದುಃಖಂ ಅಸಂಬಂಧ ಸಾಮ್ಯಾತ್ಸಮಂ ಯಃ ಪಶ್ಯತಿ, ಪರಪುತ್ರ ಜನ್ಮ ಮರಣಾದಿ ಸಮಂ ಸ್ವಪುತ್ರಜನ್ಮ ಮರಣಾದಿಕಂ ಯಃಪಶ್ಯತೀತ್ಯರ್ಥಃ, ಸ ಯೋಗೀ ಪರಮೋಮತಃ - ಯೋಗಕಾಷ್ಠಾಂ ಗತೋ ಮತಃ ॥೩೨॥

ಈ ನಾಲ್ಕನೆಯ ಸಾಮ್ಯದಶೆಯು ಸಂಪೂರ್ಣ ಪರಿಪಕ್ವದಶೆ ಎಂದೂ, ಆ ದಶೆಯಲ್ಲಿ ಈತನಿಗೆ ಇದು ದುಃಖ ಇದು ಸುಖವೆಂಬ ವಿವೇಚನೆಯೇ ಇಲ್ಲದೆ ಸಂಪೂರ್ಣ ನಿರ್ವಿಕಾರಸ್ಥಿತಿಯಲ್ಲಿರುವ ಸಾಮ್ಯವೆಂದು ಹೇಳಲ್ಪಡುತ್ತದೆ; ಆದುದರಿಂದ ಕಾಷ್ಠಾಶಬ್ದದಿಂದ ತೋರಿಬರುವುದು ಇಂತಹ ನಿರ್ವಿಕಾರತ್ವ ಉಂಟಾಗುವ ದಶೆಯು.

**ಮೂಲಕ್ಕೆ ಅರ್ಥವು** :—ಹಿಂದೆ ಅನೇಕ ಶ್ಲೋಕಗಳಲ್ಲೂ ಸಂಬೋಧನೆ ಇಲ್ಲದೆ ಇಲ್ಲಿಮಾತ್ರ ಅರ್ಜುನ ಎಂದು ಸಂಬೋಧಿಸಿರುವವರಿಂದ, ಇಲ್ಲಿಗೆ ಕರ್ಮಯೋಗದ ಸಂಪೂರ್ಣ ಪರಿಪಕ್ವದಶೆಯೂ ಮುಗಿಯುವದರಿಂದ, ಕರ್ಮಯೋಗದ ಮಾಹಾತ್ಮ್ಯೆಯ ಉಪದೇಶವು ನಿಗಮನಮಾಡಲ್ಪಟ್ಟಿತೆಂದು ಸೂಚಿಸುವವಕ್ಕಾಗಿ ಹಾಗೆ ಸಂಬೋಧನೆಯೊಂದಿಗೆ ನಿಗಮನವು ಎಂದು ಭಾವಿಸತಕ್ಕದ್ದು. **ಯಃ**- ಯಾವ ಕರ್ಮಯೋಗಿಯು ವಿಪಾಕದಶೆಯಲ್ಲಿ ಸರ್ವತ್ರ-ತನ್ನಲ್ಲೂ ಇತರರಲ್ಲೂ ಸಹ ಎಲ್ಲರಲ್ಲೂ, **ಆತ್ಮೌಪಮ್ಯೇನ** ಆತ್ಮಾವಿಗೆ ಪ್ರಕೃತಿ ಸಂಬಂಧವಿಲ್ಲದಿರುವಾಗ ಎಲ್ಲಾ ಆತ್ಮರು ಅಸಙ್ಕುಚಿತ ಜ್ಞಾನೈಕಾಕಾರತೆಯಿಂದ ಸಮರಾಗಿರುವವರಿಂದ, **ಸರ್ವತ್ರ** ಎಂಬುದು ಕಾಕಾಕ್ಷಿನ್ಯಾಯದಿಂದ ಎರಡು ಕಡೆಗೂ ಅನ್ವಯಿಸತಕ್ಕದ್ದು; **ಸರ್ವತ್ರ** - ಎಲ್ಲಾ ಕಡೆಯಲ್ಲೂ ಎಂದರೆ ತನ್ನಲ್ಲೂ ಇತರರಲ್ಲೂ, **ಸುಖಂ ವಾ** . ಸುಖವನ್ನೇಯಾಗಲಿ, **ದುಃಖಂ ವಾ** - ದುಃಖವನ್ನೇಯಾಗಲಿ, ಪ್ರಕೃತಿಯಾವ ದೇಹಕ್ಕೇ ಸಂಬಂಧಿಸಿದುದೇ ವಿನಾ ಆತ್ಮಾವಿಗೆ ಸಂಬಂಧಿಸಿದುದಲ್ಲವೆಂದೂ, ಈ ವಿಷಯದಲ್ಲಿ ಎಲ್ಲಾ ಆತ್ಮರೂ ಸಮರೆಂದು, **ಸರ್ವತ್ರ** - ಎಲ್ಲಾ ಆತ್ಮರಲ್ಲೂ, ನೋಡುತ್ತಾನೋ, **ಸ ಯೋಗೀ** - ಅಂತಹ ಯೋಗೀಗ, **ಪರಮೋ ಮತಃ** ಯೋಗದ ಪರಮ ಕಾಷ್ಠಾದಶೆಯನ್ನು ಹೊಂದಿರುವವರಿಂದ ಸರ್ವೋತ್ಕೃಷ್ಟನೆಂಬುದು ನನ್ನ ಅಭಿಪ್ರಾಯವು" ಎಂದು ಶ್ರೀ ಕೃಷ್ಣನು ಉಪದೇಶಿಸಿದನು. ಯೋಗದಲ್ಲೇ ಮಗ್ನನಾದವನಿಗೆ ಇದು ಸುಖ ಇದು ದುಃಖವೆಂಬ ವಿವೇಕಜ್ಞಾನವೇ ಇರುವದಿಲ್ಲವು. ತನಗೆ ಪ್ರಾಪ್ತವಾದುವುಗಳ ವಿಷಯದಲ್ಲಿ ಇತರರಿಗೆ ಪ್ರಾಪ್ತವಾದಾಗ ಹೇಗೆ ನಿರ್ವಿಕಾರವೋ ಹಾಗೆ ಎಂಬ ಭಾವವು. ಪ್ರಹ್ಲಾದನು ಪರಮಾತ್ಮನನ್ನು ಧ್ಯಾನಿಸುವಾಗ ಹಾಗೆ ಇದ್ದನೆಂದು ಹೇಳಲ್ಪಟ್ಟಿರುತ್ತದೆ. ಸುಖದುಃಖಗಳಿಂದ ವಿಕಾರ ಹೊಂದದ ಸ್ಥಿತಿಯು ಧ್ಯಾನವನ್ನು ಬಿಟ್ಟಾಗಲೂ ಕೂಡ ಅನುವರ್ತಿಸಿ ಬರುತ್ತದೆಂಬ ತಾತ್ಪರ್ಯವು.

**ಭಾಷ್ಯಾರ್ಥವು** :—**ಸ್ವಾತ್ಮನಶ್ಚ** - ತನ್ನ ಆತ್ಮಾವಿಗೂ, **ಅನ್ಯೇಷಾಂ ಚ ಆತ್ಮನಾಂ** - ಇತರ ಆತ್ಮರುಗಳಿಗೂ, **ಅಸಙ್ಕುಚಿತ ಜ್ಞಾನೈಕಾಕಾರತಯಾ** - ಸಂಕೋಚವಿಲ್ಲದಿರುವ ಜ್ಞಾನೈಕಾಕಾರತೆಯು ಇರುವದರಿಂದ, **ಔಪಮ್ಯೇನ** - ದೃಷ್ಟಾಂತವಿರುವದರಿಂದ ಎಂದರೆ ಸಮತ್ವವಿರುವದರಿಂದ, **ಸ್ವಾತ್ಮನಿ ಅನ್ಯೇಷು ಚ ಸರ್ವತ್ರ**-ತನ್ನ ಆತ್ಮಾವಿನಲ್ಲೂ ಇತರರ ಆತ್ಮರುಗಳಲ್ಲೂ ಹೀಗೆ ಎಲ್ಲಾ ಕಡೆಯಲ್ಲೂ, **ವರ್ತಮಾನಂ** - ಇರುತ್ತಿರುವ, **ಪುತ್ರಜನ್ಮಾದಿ ರೂಪಂ ಸುಖಂ** - ಪುತ್ರೋ

ತೃಪ್ತಿಯುಂಟಾಗುವದೇ ಮೊದಲಾದ ಸುಖವನ್ನೂ, ತನ್ನ ಮರಣಾದಿ ರೂಪಂಚ ದುಃಖಂ-ಅಂತಹ ಮಗನ ಮರಣವೇ ಮೊದಲಾದ ದುಃಖವನ್ನೂ, ಅಸಂಬಂಧ ಸಾಮ್ಯಾತ್ - ತನಗೂ ಅವರಿಗೂ ಏನೊಂದೂ ಸಂಬಂಧವಿಲ್ಲವಾಗಿ, ಅವರೂ ತಾನೂ ಹೀಗೆ ಸಮರಾದುದರಿಂದ, ಸಮಂ ಪಶ್ಯತಿ - ಸಮವಾಗಿ ನೋಡುತ್ತಾನೋ ಎಂದರೆ ಸುಖವೆಂದು ಹಿಗ್ಗದೆ ದುಃಖವೆಂದು ಖೇದ ಹೊಂದದೆ ನಿರ್ವಿಕಾರನಾಗಿರುತ್ತಾನೋ, ಅವರ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ—ಸ್ವಪುತ್ರಜನ್ಮ ಮರಣಾದಿಕಂ ತನ್ನ ಸ್ವಂತ ಪುತ್ರನ ಜನ್ಮ ಮರಣಾದಿಗಳನ್ನು, ಪರಪುತ್ರಜನ್ಮಮರಣಾದಿ ಸಮಂ - ಇತರರ ಪುತ್ರಜನ್ಮ ಮರಣಾದಿಗಳಿಗೆ ಸಮವಾದುದಾಗಿ, ಯಃಪಶ್ಯತೀತ್ಯರ್ಥಃ - ಯಾವ ಕರ್ಮಯೋಗಿಯು ಭಾವಿಸುವನೋ, ಎಂಬ ತಾತ್ಪರ್ಯವು. ಸ ಯೋಗೀ ಪರಮೋ ಮತಃ ಎಂದರೆ ಯೋಗಕಾಷ್ಠಾಂಗತೋ ಮತಃ - ಅಂತಹ ಯೋಗಿಯು ಯೋಗದ ಪರ ಮೋತ್ಕೃಷ್ಟದಶೆಯನ್ನು ಹೊಂದಿದವನೆಂಬುದು ನನ್ನಭಿಪ್ರಾಯವು.

ಪ್ರಾರಬ್ಧಕರ್ಮತಾರತಮ್ಯದಿಂದಲೂ, ಪ್ರಕೃತಿಸಂಬಂಧಮೂಲಕ ಉಂಟಾದ ಜ್ಞಾನ ತಾರ ತಮ್ಯದಿಂದಲೂ, ಈ ಚೇತನನಿಗೆ ಸುಖದುಃಖಾನುಭವರೂಪ ತಾರತಮ್ಯ ಉಂಟಾಗುತ್ತದೆ. ಕರ್ಮ ಯೋಗಿಗೆ ಕ್ರಮೇಣ ಈ ಆತ್ಮಯಾಥಾತ್ಮ್ಯ ಸ್ವರೂಪಚಿನ್ತನದಿಂದ ಸುಖದುಃಖ ತಾರತಮ್ಯ ನಿವೃ ತ್ತಿಯು ಸಂಪೂರ್ಣವಾಗಿ ಉಂಟಾಗುತ್ತದೆಂದೂ, ಅಂತಹ ಅವಸ್ಥೆಯೇ ಕರ್ಮಯೋಗದ ಪರಮ ಕಾಷ್ಠಾದಶೆಯೆಂದೂ ಹೇಳಿ,ಕರ್ಮಯೋಗದ ಮಾಹಾತ್ಮ್ಯೆಯನ್ನು ನಿಗಮನಮಾಡಿ ಹೇಳಿದ ಶ್ಲೋಕ ವು ಇದು. ಈ ಶ್ಲೋಕದಲ್ಲಿ ಕೆಲವರು "ಸುಖಂ ವಾ ಯದಿವಾ ದುಃಖಂ ಸಮಂ ಪಶ್ಯತಿ" ಎಂಬುವದಕ್ಕೆ ಸುಖವನ್ನು ದುಃಖವನ್ನೂ ಸಮವಾಗಿ ಯಾವ ಕರ್ಮಯೋಗಿ ನೋಡುತ್ತಾನೋ ಎಂಬರ್ಥವನ್ನೂ ಹೇಳುವರು; ಇನ್ನು ಕೆಲವರು ಸುಖವು ತನಗೆ ಹೇಗೆ ಪ್ರಿಯವೋ, ದುಃಖವು ಹೇಗೆ ಅಪ್ರಿಯವೋ, ಹಾಗೆಯೇ ಭಗವದ್ಭಕ್ತರಲ್ಲೂ ಯಾವನು ಭಾವಿಸುವನೋ ಎಂಬರ್ಥ ವನ್ನೂ ಹೇಳುವರು. ಈ ಎರಡು ಅರ್ಥಗಳೂ ಸರಿಯಲ್ಲವು. ಏಕೆಂದರೆ ಕರ್ಮಯೋಗಿಗೆ ಯೋಗದಶೆಯಲ್ಲಿ ಆತ್ಮಾನುಭವ, ಸಾಮ್ಯಾನುಸಂಧಾನ ಇವುಗಳು ವಿನಾ ಸುಖದುಃಖಾನು ಭವಗಳ ಗಂಧವೇ ಇಲ್ಲವು; ಹೀಗಿರುವಾಗ ಕರ್ಮಯೋಗಿಯು ವಿಪಾಕದಶೆಯಲ್ಲಿರುವಾಗ ಸುಖವು ಹೇಗೆ ಪ್ರಿಯವೋ, ದುಃಖವು ಅಪ್ರಿಯವೋ ಎಂದು ಅರ್ಥಮಾಡುವದು ಸಮಂಜಸವಲ್ಲವು. ಆದುದರಿಂದ ಈ ಶ್ಲೋಕದಲ್ಲಿ ಹೇಳಲ್ಪಡುವ ಸಾಮ್ಯವು ಅಸಂಬಂಧಸಾಮ್ಯವೆಂದು ಹೇಳಲ್ಪ ಟ್ಟಿತು. ಶ್ರೀಮಚ್ಛಂಕರಾಚಾರ್ಯರು ಆತ್ಮೌಪಮ್ಯೇನ ಎಂಬಲ್ಲಿರುವ ಉಪಮಾ ಶಬ್ದಕ್ಕೆ ತುಲ್ಯತ್ವವೆಂದು ಅರ್ಥಮಾಡಿರುತ್ತಾರೆ. ಆತ್ಮೌಪಮ್ಯೇನ ಎಂಬುವದಕ್ಕೆ ಮುಂದೆ ಸಮಂಪಶ್ಯತಿ ಎಂದು ವಿವರಣೆಯಿರುವದರಿಂದ ಆತ್ಮತುಲ್ಯತ್ವೇನ ಎಂಬುವದೇ ಸರಿಯಾದ ಅರ್ಥವು: ಅದನ್ನೇ ಸ್ವಾತ್ಮನ ಶ್ಚಾನ್ಯೇಷಾಂಚಾತ್ಮನಾಂ ಅಸಙ್ಕುಚಿತ ಜ್ಞಾನೈಕಾಕರತಯೌಪಮ್ಯೇನ ಎಂದು ವಿವರಿಸಿರುತ್ತಾರೆ. ತುಲ್ಯತ್ವ ಹೇಗೆ ಎಂದರೆ ಅಸಙ್ಕುಚಿತವಾದ ಜ್ಞಾನೈಕಾಕಾರತೆಯಿಂದ ಎಂದು ವ್ಯಕ್ತಪಡಿಸಿರುತ್ತಾರೆ. ಆದರೆ ತನಗೆ ಸುಖವು ಹೇಗೆ ಇಷ್ಟವೋ ದುಃಖವು ಅನಿಷ್ಟವೋ ಹಾಗೆಯೇ ಇತರರಿಗೂ ಎಂದು ಭಾವಿಸತಕ್ಕದ್ದೆಂಬ ಅಭಿಪ್ರಾಯವು ಸರಿಯಾಗಿ ತೋರುವದಿಲ್ಲ ವೆಂದು ತಿಳಿಸುವದಕ್ಕಾಗಿಯೂ ಈ ಶ್ಲೋಕದಲ್ಲಿ ಹೇಳಲ್ಪಡುವದು ಅಸಂಬಂಧ ಸಾಮ್ಯವೆಂದು ಹೇಳಿ ಅದನ್ನು ವ್ಯಕ್ತಪಡಿಸುತ್ತಾರೆ. ಕರ್ಮಯೋಗಾಭ್ಯಾಸನಿರತನಿಗೆ ತನ್ನ ಆತ್ಮನಲ್ಲೇ ರತಿ ಯುಂಟಾಗಿರುವ ಪರಮಕಾಷ್ಠಾವಸ್ಥೆಯಲ್ಲಿ, ಈತನಿಗೆ ಸುಖದುಃಖಗಳೆಂಬ ವಿವೇಚನೆಯೇ ಇರುವ ದಿಲ್ಲವೆಂದೂ, ಹಾಗೆ ನೋಡಿದರೆ ತನಗೆ ಪ್ರಾಪ್ತವಾದ ಸುಖದುಃಖಗಳು ಇನ್ನು ಯಾರಿಗಾದರೂ ಉಂಟಾದರೆ ಹೇಗೆ ಅವಿಕಾರನಾಗಿರುವನೋ ಹಾಗೆ ಇರುವನೆಂಬ ಭಾವವು. ಅಹಿಂಸಕತ್ವ ಈ

ಪರಮಕಾಷ್ಠಾದಶೆಯಿಂದ ಬೋಧಿಸಲ್ಪಡಲಿಲ್ಲವು. ಅಹಿಂಸಕತ್ವವೇನೋ ಹಿತೋಪದೇಶವಾಗಿ ಗ್ರಾಹ್ಯವಾದರೂ ಪ್ರಕರಣಕ್ಕೆ ಅನುಗುಣವಲ್ಲವು. ಗಾಂಡೀವನನ್ನು ಬಿಸಾಡಿದ ಅರ್ಜುನನ ಕೈಯಿಂದ ಗಾಂಡೀವವನ್ನು ಧರಿಸುವ ಹಾಗೆ ಮಾಡುವ ಪ್ರಕರಣದಲ್ಲಿ ಅಹಿಂಸಕತ್ವೋಪದೇಶವು ಕಾರ್ಯಕಾರಿಯಾಗದು. ಅಸಂಬಂಧಸಾಮ್ಯವು ಹೇಗೆ ಎಂದರೆ ಅದನ್ನು ಸರ್ವತ್ರ'ವರ್ತಮಾನಂ ಪುತ್ರಜನ್ಮಾದಿರೂಪಂ ಸುಖಂ ತನ್ಮರಣಾದಿ ರೂಪಂಚ ದುಃಖಂ ಎಂದು ವಿವರಿಸಿರುತ್ತಾರೆ. ಸರಿಯಾಗಿ ನೋಡಿದರೆ ಯಾರಿಗೇ ಆಗಲಿ ಪ್ರಕೃತಿಗತವಾದ ಸುಖದುಃಖಗಳು ಆತ್ಮರುಗಳಿಗೆ ಸಂಬಂಧಿಸಿದುದಲ್ಲವು. ಕರ್ಮಯೋಗಿಯಾಗಿ ಸ್ವಾತ್ಮಚಿನ್ತನನಿರತನ ಅನುಸಂಧಾನವು ಹಾಗೆ ಎಂಬ ಭಾವವು. ಈ ಆರು ಅಧ್ಯಾಯಗಳಲ್ಲೂ ಜೀವಾತ್ಮವಿಷಯವೇ ಹೇಳಲ್ಪಟ್ಟು ಕರ್ಮಯೋಗಪ್ರಶಂಸೆಯೇ ಯಾಗಿರುತ್ತದೆ. ಇಲ್ಲಿ ಹೇಳಲ್ಪಟ್ಟ ಯೋಗಕ್ಕೆ ಧ್ಯೇಯವು ಸ್ವಾತ್ಮವೇ ಹೊರತು ಪರಮಾತ್ಮನಲ್ಲವು. ಪರಮಾತ್ಮನು ಧ್ಯೇಯವಸ್ತುವಾಗಿ ಮುಂದೆ ಭಕ್ತಿಯೋಗ ಪ್ರಕರಣದಲ್ಲಿ ಹೇಳಲ್ಪಡುತ್ತದೆ.

ಈ ನಾಲ್ಕು ಶ್ಲೋಕಗಳಲ್ಲೂ ಜೀವಾತ್ಮರಲ್ಲಿ ಸಾಮ್ಯಾನುಸಂಧಾನವೇ ಹೇಳಲ್ಪಟ್ಟಿತು.
೨೯ನೆಯ ಶ್ಲೋಕದಲ್ಲಿ ಜ್ಞಾನಾಕಾರತೆಯಿಂದ ಎಲ್ಲಾ ಆತ್ಮರಿಗೂ ಸಾಮ್ಯವೂ,
೩೦ರಲ್ಲಿ ಪ್ರಕೃತಿವಿಯುಕ್ತದಶೆಯಲ್ಲಿ ಎಲ್ಲಾ ಆತ್ಮರಿಗೂ ಪರಮಾತ್ಮನೊಂದಿಗೆ ಸಾಮ್ಯವೂ,
೩೧ರಲ್ಲಿ ಎಲ್ಲಾ ಆತ್ಮರೂ ಪರಮಾತ್ಮಶರೀರವಾಗಿ ಪರಮಾತ್ಮನೊಂದಿಗೆ ಏಕೀಭವಿಸಿದ ಸಾಮ್ಯವೂ,
೩೨ರಲ್ಲಿ ಪ್ರಕೃತಿವಿಯುಕ್ತದಶೆಯಲ್ಲಿ ಸುಖದುಃಖಗಳು ಯಾವ ಆತ್ಮರಿಗೂ ಸಂಬಂಧಿಸಿದವಲ್ಲವು ಎಂಬ ಅಸಂಬಂಧ ಸಾಮ್ಯವೂ,

ಹೀಗೆ ನಾಲ್ಕು ವಿಧ ಸಾಮ್ಯಗಳು ಹೇಳಲ್ಪಟ್ಟವು. ಅವುಗಳಲ್ಲಿ ಉತ್ತರೋತ್ತರವಾದುವು ಅತಿಶಯವಾದುವೆಂದು ಹೇಳಿ ಪರಾಕಾಷ್ಠಾದಶೆಯಲ್ಲಿ ಸುಖದುಃಖಗಳ ಗಂಧವೇ ಇಲ್ಲದ ನಿರ್ವಿಕಾರ ದಶೆಯು ಉಪದೇಶಿಸಲ್ಪಟ್ಟಿತು. ಇಂತಹ ಸಾಮ್ಯಾನುಸಂಧಾನವು ಜೀವಭೇದವನ್ನೂ ಜೀವೇ ಶ್ವರಭೇದವನ್ನೂ ಹೇಳುವ ವಿಶಿಷ್ಟಾದ್ವೈತಿಗಳಿಗೆ ಸಲ್ಲುತ್ತದೇ ವಿನಾ ಅದ್ವೈತಿಗಳಿಗೆ ಸಲ್ಲುವ ದಿಲ್ಲವು. ಭಿನ್ನವಾಗಿರುವವರುಗಳಿಗೇನೇ ಸಮಂಜಸವಾದುದು. ಎಲ್ಲಾ ಒಂದೇಯಾಗಿದ್ದಪಕ್ಷ ದಲ್ಲಿ ಸಮತ್ವೋಪದೇಶವು ಅಸಮಂಜಸವು, ಆಗ ಏಕತ್ವೋಪದೇಶವೇ ಸಾಧುವು. ಆಗಲಿ, ೩೧ ನೆಯ ಶ್ಲೋಕದಲ್ಲ ಭಜತ್ಯೇಕತ್ವಮಾಸ್ಥಿತಃ ಎಂದು ಇದೆಯಲ್ಲಾ ಎಂದಾಕ್ಷೇಪಿಸಿದರೆ, ಏಕತ್ವವು ಇಲ್ಲಿ ಅಪೃಥಕ್ಸಿದ್ಧವಿಶೇಷಣವಾಗಿ ವಿಶೇಷಣ ವಿಶೇಷ್ಯ, ಪ್ರಕಾರ ಪ್ರಕಾರಿ ರೂಪದಲ್ಲಿ ಏಕತ್ವವೆಂದು ಭಾವಿಸತಕ್ಕದ್ದು. ಐಕ್ಯಭಾವವೇ ಉಪದಿಷ್ಟವೆಂದು ಮುಷ್ಕರ ಹಿಡಿದರೆ ಮುಂದಿನ ಸರ್ವದಾ ವರ್ತಮಾನೋಽಪಿ ಎಂಬಲ್ಲಿ ಭೇದವೇ ತೋರುತ್ತದೆಯಲ್ಲಾ ಎಂದು ಸಮಾಧಾನವನ್ನು ಹೇಳುವೆವು. ಅದೂ ಅಲ್ಲದೆ ಮಾಂ ಭಜತಿ ಎಂಬಲ್ಲಿ ಭಜನಮಾಡುವವನು ಮಾಂ ಎಂಬುವನಿಗಿಂತ ಬೇರೆ ಯಲ್ಲವೇ ಎಂದು ಕೇಳುವೆವು.

ಇಲ್ಲಿ ಪೂರ್ವಪಕ್ಷಿಯು ಪ್ರಶ್ನಿಸಬಹುದೇನೆಂದರೆ,-ಈ ನಾಲ್ಕು ಶ್ಲೋಕಗಳಲ್ಲೂ ನಾಲ್ಕು ವಿಧ ಸಮತ್ವವು ಬೋಧಿಸಲ್ಪಟ್ಟವೆಂದು ಹೇಗೆ ಹೇಳುತ್ತೀರಿ ಎಂಬದಾಗಿ ; ಸಾಮ್ಯವೇ ಹೇಳಲ್ಪಟ್ಟ ತೆಂಬುವನು ಮುಂದಿನ ಶ್ಲೋಕದಲ್ಲಿ "ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ" ಎಂದಿರುವ ಸಾಮ್ಯೇನ ಎಂಬುದರಿಂದ ವ್ಯಕ್ತವು ಎಂದು ಹೇಳುವೆವು. ಹಿಂದೆಯೂ ೨೯ನೆಯ ಶ್ಲೋಕದಲ್ಲಿರುವ "ಸರ್ವತ್ರ ಸಮದರ್ಶಿನಃ" ಎಂಬ ಯೋಗಮಾಹಾತ್ಮ್ಯ ವಿಷಯನ್ನು ಹೇಳಿ ಶ್ರೀ ಕೃಷ್ಣ ಭಗವಾನರವರು ಅರ್ಜುನನ ಕೈಯಿಂದ ಯುದ್ಧವನ್ನೇ ಮಾಡಿಸಬೇಕೆಂದೂ, ಅದೇ ಶಾಸ್ತ್ರಾ ರ್ಥವೆಂದೂ ತಿಳಿಸುವದಕ್ಕಾಗಿ ಕರ್ಮಯೋಗದ ಮಾಹಾತ್ಮ್ಯೆಯನ್ನೆಲ್ಲಾ ವಿಶದವಾಗಿ ತಿಳಿಸಿದರು. ಲೋಕಕಂಟಕರಾದ ಕ್ಷತ್ರಿಯರನ್ನು ವಧಿಸುವ ಧರ್ಮಯುದ್ಧವು ಕ್ಷತ್ರಿಯನ ಇತಿಕರ್ತವ್ಯತೆ

ಅರ್ಜುನ ಉವಾಚ—

ಮೂ. ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ।
ಏತಸ್ಯಾಹಂ ನಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥ ೩೩.
ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪.

ಯಲ್ಲೇ ಸೇರಿತು ಎಂಬ ಭಾವವು ಉಂಟಾಗಬೇಕಾದರೆ, ಈ ಅಸಂಬಂಧಸಾಮ್ಯರೂಪವಾದ ಸುಖ ದುಃಖಗಳಲ್ಲಿ ನಿರ್ವಿಕಾರತ್ವದಶೆಯು ಆವಶ್ಯಕವು. ಆಗ ಚಿಪ್ಪ ಕ್ಷುದ್ರ ಕ್ಷತ್ರಿಯಾಧಮರು ಮಡಿದರೇ ಎಂಬ ದುಃಖಕ್ಕೆ ಅವಕಾಶವಿಲ್ಲವು. ಈಗ ಜರ್ಮ ದೇಶದವರೂ ಅಧರ್ಮಗಳನ್ನು ನಡೆಸಿ ದುಃಖ ವಿಲ್ಲದೆ ನಿರ್ವಿಕಾರತ್ವವನ್ನು ಹೊಂದಿಲ್ಲವೋ ಎಂದರೆ ಇದು ರಾಜಸತಾಮಸಿಯ ನಿರ್ವಿಕಾರತ್ವವು. ಇಲ್ಲಿ ಹೇಳಿರುವದಾವದೋ, ಸಾತ್ವಿಕನಾದ ಶಾಸ್ತ್ರಧರ್ಮಪರನಾದವನ ನಿರ್ವಿಕಾರತ್ವವು. ಸುಖದುಃಖ ನಿರ್ವಿಕಾರತ್ವರೂಪಯೋಗಪರಾಕಾಷ್ಠಾ ದಶೆಯನ್ನು ಹೇಳಿ ಯಾವಾಗ ಶ್ರೀ ಕೃಷ್ಣ ಭಗವಾನರವರು ಸುಮ್ಮನಾದರೋ, ಆಗ ಅದನ್ನು ಹೊಂದಬೇಕಾದರೆ ಮನಸ್ಸು ಪ್ರಬಲ ವಿರೋಧಿ ಯಾಯಿತಲ್ಲಾ; ಬಾಹ್ಯವಿಷಯಾನುಭವಗಳು ಮನಸ್ಸಿನ ದ್ವಾರಾ ಉಂಟಾಗಿ, ಅಂತಹ ನಿರ್ವಿಕಾರ ದಶೆಯ ಪ್ರಾಪ್ತಿಗೆ ಮನಸ್ಸು ವಿರೋಧಿಯಾಗಿ ಪರಿಣಮಿಸುತ್ತದಲ್ಲಾ ಎಂದು ಯೋಚಿಸಿ, ಅಂತಹ ಮನಸ್ಸಿನ ಜಯಕ್ಕೆ ಸರಿಯಾದ ಉಪಾಯವೇನೆಂದು ತಿಳಿಯಬೇಕೆಂಬ ಆಶೆಯಿಂದ ಅರ್ಜುನನು ಪುನಃ ಮುಂದಿನ ಎರಡು ಶ್ಲೋಕಗಳ ಮೂಲಕ ಪ್ರಶ್ನಿಸುತ್ತಾನೆ.

**ಮೂಲಕ್ಕೆ ಅರ್ಥವು**--ಅರ್ಜುನನು ಹೇಳುತ್ತಾನೆ ಎಂದರೆ ಪ್ರಶ್ನಿಸುತ್ತಾನೆ ಎಂಬ ಭಾವವು. ಪ್ರಶ್ನೆಗೆ ಕಾರಣವೇನೆಂದರೆ—ಶ್ರೀಕೃಷ್ಣಭಗವಾನರವರು ಉಪದೇಶಿಸಿರುವದು, ಓ ಅರ್ಜುನನೇ, ನೀನು ಕರ್ಮಯೋಗಿಯಾಗಿ ಈ ನಾಲ್ಕುವಿಧ ಸಾಮ್ಯಬುದ್ಧಿಯನ್ನು ಹೊಂದಬೇಕು ಎಂಬದಾಗಿ; ಇಂತಹ ಸಾಮ್ಯಬುದ್ಧಿಯು ಹೇಗೆ ಸಾಧ್ಯವು? ಸಾಧಾರಣವಾಗಿ ನಮಗೆ ಇರುವದೆಲ್ಲಾ ಭೇದಬುದ್ಧಿಯೇ. ಅವನು ಶಕ್ತನು ಇವನು ಅಶಕ್ತನು, ಇವನು ಕೃಶನು ಅವನು ಸ್ಥೂಲನು, ಇವನು ಜ್ಞಾನಿಯು ಅವನು ಅಜ್ಞಾನಿಯು, ಇತ್ಯಾದಿ ಭೇದಬುದ್ಧಿಯೇ. ಇಂತಹ ಸಮಬುದ್ಧಿಯು ಸರ್ವಜ್ಞರಾದ ತಮಗೇ ಸಾಧ್ಯವು; ನಮಗೆ ಸಾಧ್ಯವೇ? ಅದೂ ಅಲ್ಲದೆ ೫, ೬ನೆಯ ಶ್ಲೋಕಗಳಲ್ಲಿ ಮನಸ್ಸೇ ಆತ್ಮನಿಗೆ ಬಂಧುವಾಗಿ ಮನಸ್ಸೇ ಆತ್ಮನಿಗೆ ಶತ್ರುವಾಗಬಹುದು ಎಂದೂ, ಆ ಮನಸ್ಸನ್ನು ಜಯಿಸಬೇಕು ಎಂದು ಉಪದೇಶಿಸಿ ಅಂತಹ ಮನಸ್ಸಿಗೆ ಈ ಯೋಗವನ್ನು ನಿರ್ವಹಿಸತಕ್ಕದ್ದೆಂದು ತಿಳಿಸಿದಿರಿ. ಆದುದರಿಂದ ನನ್ನ ಮನಸ್ಸು ಶತ್ರುವಾಗಿ ಪರಿಣಮಿಸದೆ, ಬಂಧುವಾಗಿ ಹಿತವನ್ನುಂಟುಮಾಡುವಹಾಗೆ ಮಾಡಿಕೊಳ್ಳಲು ಉಪಾಯವನ್ನು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸುವ ಪ್ರಕರಣವು. ಹೇ ಮಧುಸೂದನ - ಮಧುವೆಂಬ ರಾಕ್ಷಸನನ್ನು ಕೊಂದವನೇ, ಹಾಗೆಯೇ ಶರಣಾಗತರ ರಜಸ್ತಮೋಗುಣಗಳನ್ನು ನಾಶಮಾಡುವನೇ, ಎಂಬ ಭಾವವೂ ಸೂಚಿತವು. ಯಃ - ಯಾವ ಪ್ರಸಿದ್ಧವಾದ ಮಾಹಾತ್ಮ್ಯೆಯುಳ್ಳದೆಂದು ಉಪದೇಶಿಸಲ್ಪಟ್ಟ, ಅಯಂಯೋಗಃ - ಈ ಆತ್ಮಚಿಂತನವೇ ಮುಖ್ಯವಾಗಿವುಳ್ಳ ಕರ್ಮಯೋಗವು ಸುಕರವೆಂದೂ, ಅಪ್ರಮಾದನಾದುದೆಂದೂ, ಶೀಘ್ರನಿಷ್ಪತ್ತಿಯುಂಟಾಗುವದೆಂದೂ, ಉಪಾಯವಿರೋಧಿಸರ್ವಪಾಪನಾಶಕರವೆಂದೂ, ಅಂತರ್ಗತ ಆತ್ಮಜ್ಞಾನವುಳ್ಳುದೆಂದೂ, ಆತ್ಮರೆಲ್ಲಾ ಜ್ಞಾನೈಕಾಕಾರತೆಯಿಂದ ಪರಸ್ಪರ ಸಮವೆಂದೂ ಮತ್ತು ಪರಮಾತ್ಮನಿಗೂ

ಸಮರೆಂದೂ, ಪರಮಾತ್ಮಶರೀರವಾಗಿ ಅಪೃಥಕ್ಸಿದ್ಧವಿಶೇಷಣವಾಗಿ ಪರಮಾತ್ಮನೊಂದಿಗೆ ಏಕೀಭವಿಸಿರುವರೆಂದೂ, ಪೂರ್ಣಪರಿಪಕ್ವದೆಶೆಯಲ್ಲಿ ಸುಖದುಃಖಗಳು ಆತ್ಮನಿಗೆ ಸಂಬಂಧಿಸವವಲ್ಲ ದುದರಿಂದ ಈ ವಿಷಯದಲ್ಲಿ ಎಲ್ಲರೂ ಸಮರೆಂದೂ, ಯಾವ ಕರ್ಮಯೋಗವು ಸ್ತುತಿಸಲ್ಪಟ್ಟಿತೋ, ಅಯಂಯೋಗಃ - ಅಂತಹ ಯೋಗವು, ತ್ವಯಾ - ನಿನ್ನಿಂದ, ಸಾಮ್ಯೇನ - ಮೇಲೆ ಉಪ ಪಾದಿಸಲ್ಪಟ್ಟ ಸಮಭಾವದಿಂದ, ಪ್ರೋಕ್ತಃ-ಬಹು ವಿಶದವಾಗಿ ಉಪದೇಶಿಸಲ್ಪಟ್ಟಿತೋ, ಏತಸ್ಯ- ಅಂತಹ ಈ ಕರ್ಮಯೋಗದ, ಸ್ಥಿರಾಂ ಸ್ಥಿತಿಂ - ಅಪ್ರಕಂಪ್ಯವಾದ ಸ್ಥಿತಿಯನ್ನೂ, ಅಹಂ - ಪ್ರಕೃತಿಸಂಬಂಧದಿಂದ ಕರ್ಮ ಬಂಧಕ್ಕೆ ಸಿಲುಕಿರುವ ನಾನು, ಚಂಚಲತ್ವಾತ್ - ಮನಸ್ಸಿನ ಚಂಚಲಸ್ವಭಾವದಿಂದ, ನಪಶ್ಯಾಮಿ - ಕಾಣೆನು ಯೋಗದ ದೃಢವಾದ ಸ್ಥಿತಿಯನ್ನು ಹೊಂದು ವದು ಕರ್ಮವಶ್ಯನಾಗಿ ಮನಸ್ಸಿಗೆ ವಶವಾಗಿರುವ ತನಗೆ ಸುಲಭಸಾಧ್ಯವಲ್ಲವೆಂಬ ಭಾವವು. ಸೀತೆಯು ಹೇಗೆ ಹತ್ತುತಲೆಯುಳ್ಳ ರಾವಣನ ವಶಳಾಗಿ ಕ್ಲೇಶವನ್ನು ಅನುಭವಿಸಿದಳೋ, ಹಾಗೆಯೇ ಈ ಜೀವನೂ ಹತ್ತು ಇಂದ್ರಿಯಗಳೇ ತಲೆಯಾಗಿವುಳ್ಳ ಮನಸ್ಸೆಂಬ ರಾವಣ ನಿಗೆ ವಶವಾಗಿ ಕ್ಲೇಶಪಡುವದರಿಂದ ಯೋಗದ ದೃಢವಾದ ನೆಲೆಯನ್ನು ತಾನು ಕಾಣಲಿಲ್ಲವೆಂದು ಅರ್ಜುನನು ಹೇಳುತ್ತಾನೆ. (೧) " ದಶೇಂದ್ರಿಯಾನನಂ ಘೋರಂ ಯೋ ಮನೋರಜನೀ ಚರಂ। ವಿವೇಕಶರಜಾಲೇನ ಶಮಂ ನಯತಿ ಯೋಗಿನಾಂ " ಎಂಬ (೨) " ದಶ್ಯೋ ದಗ್ರದಶೇಂದ್ರಿಯಾನನಮನೋನಕ್ತಂಚರಾಧಿಷ್ಠಿತೇ ದೇಹೇಸ್ಮಿನ್ ಭವಸಿಂಧುನಾ ಪರಿಗತೇ ದೀನಾಂ ದಶಾ ಮಾಸ್ಥಿತಃ।" ಎಂಬ ಶ್ಲೋಕಗಳು ಅನುಸಂಧೇಯಗಳು; ಯಾವ ಶುಭಾ ಶಯವುಳ್ಳ ಸರ್ವೇಶ್ವರನು ಯೋಗಿಗಳಿಗೆ ಅನುಗ್ರಹಮಾಡುವದಕ್ಕಾಗಿ ಹತ್ತು ಇಂದ್ರಿಯಗಳನ್ನೇ ಹತ್ತು ಮುಖಗಳನ್ನಾಗಿವುಳ್ಳ ಮನಸ್ಸೆಂಬ ರಾವಣನನ್ನು ವಿವೇಕವೆಂಬ ಬಾಣಸಮೂಹದಿಂದ ನಿಗ್ರಹಿಸುವ ಹಾಗೆ ಮಾಡುತ್ತಾನೋ, ಸಭ್ಯೋಯಃ ಎಂದು ಮುಂದೆ ಇವೆ. ಮತ್ತು ಅಹಂಕಾರ ದಿಂದ ಮದಿಸಿದ ಹತ್ತು ಇಂದ್ರಿಯಗಳನ್ನೇ ಹತ್ತು ಮುಖಗಳಾಗಿವುಳ್ಳ ರಾವಣನಿಂದ ಅಧಿಷ್ಟಿತವಾದ ಈ ದೇಹವೆಂಬ ಲಂಕೆಯಲ್ಲಿ ಇರುವವನಾಗಿ ಈ ಆತ್ಮನು ದೀನದಶೆಯನ್ನು ಹೊಂದಿರುತ್ತಾನೆ " ಎಂಬುದು ಈ ಶ್ಲೋಕಗಳ ಅರ್ಥಗಳು.

ಹೇ ಕೃಷ್ಣ—ಅಂತಹ ದುರುಳ ಮನಸ್ಸನ್ನೂ ಕೂಡ, ಭಕ್ತರ ವಿಷಯದಲ್ಲಿ ಆಕರ್ಷಿಸಿ - ವಿವೇಕವನ್ನು ಕೊಟ್ಟು ಹದವಾಗಿ ಮಾಡುವ ಶಕ್ತಿಯುಳ್ಳ ಶ್ರೀ ಕೃಷ್ಣನೇ, ಮನಃ - ಮನಸ್ಸು ಚಂಚಲಂ ಹಿ - ಚಂಚಲವೆಂಬುದು ಸಿದ್ಧವು, ಬಲವತ್ - ಬಲಿಷ್ಟವಾದುದಾಗಿ, ಅಥವಾ ಬಲಾತ್ - ಬಲಾತ್ಕಾರವಾಗಿ, ದೃಢಮ್ - ದೃಢವಾಗಿಯೂ, ಪ್ರಮಾಥೀ – ವ್ಯಾಕುಲವನ್ನುಂ ಟುಮಾಡುವ ಶೀಲವುಳ್ಳದು, ಮನಸ್ಸಿನ ದಾರ್ಢ್ಯವು ಏತರಲ್ಲಿ ಎಂದರೆ ಇಂದ್ರಿಯಗಳನ್ನು "ಜಿಹ್ವೈ ಕತೋ ಮುಮುಪಕರ್ಷತಿ " (ಭಾಗ. ೧೧-೮.೨೨) ಎಂದು ಹೇಳಿರುವಹಾಗೆ, ವಿಷಯಗಳಲ್ಲಿ ಪ್ರವರ್ತಿಸುವಹಾಗೆ ಮಾಡೋಣವರಲ್ಲಿ ಎಂಬ ಭಾವವು, ತಸ್ಯ-ಅಂತಹ ಪ್ರಬಲಸ್ವೈರಿಯಾದ ಮನ ಸ್ಸಿಗೆ, ನಿಗ್ರಹಂ - ನಿಗ್ರಹವು, ವಾಯೋರಿವ-ಪ್ರಬಲಜಂಝಾಮಾರುತಕ್ಕೆ ಹೇಗೆ ತಡೆಯು, ಸುದು ಷ್ಕರಂ-ಬಹಳ ಕಷ್ಟಸಾಧ್ಯವೋ ಹಾಗೆ ತುಂಬಾ ಕಷ್ಟಸಾಧ್ಯವು ; ತುಂಬಾ ಕಷ್ಟಸಾಧ್ಯವೆಂಬಭಿ ಪ್ರಾಯದಿಂದ, ಸುದುಷ್ಕರಂ ಎಂಬ ಪ್ರಯೋಗವು ಪ್ರಯಾಸದಿಂದ ತಡೆದರೂ ಪುನಃ ವಿಷಯ ಗಳ ಕಡೆಗೇನೇ ಓಡಿಹೋಗುತ್ತದೆಂಬ ಭಾವವು ಅದನ್ನು ತಡೆಯುವದು ಸಾಧ್ಯವೇ ಇಲ್ಲವೆಂಬ ಭಾವದಿಂದ ಹೇಳಿರುವದಲ್ಲವು. ಮನಸ್ಸನ್ನು ನಿಗ್ರಹಿಸುವ ಉಪಾಯವು ಕಷ್ಟತರವಾದುದು; ಆದುದ

(೧) ವಿ. ಪು. (೨) ಸಜ್ಜಲ್ಪಸೂರ್ಯೋದಯ.

ಭಾ. ಯೋಽಯಂ - ದೇವಮನುಷ್ಯಾದಿಭೇದೇನ ಜೀವೇಶ್ವರಭೇದೇನ ಚಾ ತ್ಯನ್ತ ಭಿನ್ನತಯೈ ತಾವನ್ತಂ ಕಾಲ ಮನುಭೂತೇಷು ಸರ್ವೇಷ್ವಾತ್ಮಸು ಜ್ಞಾನೈಕಾ ಕಾರತಯಾ ಪರಸ್ಪರ ಸಾಮ್ಯೇನ ಅಕರ್ಮವಶ್ಯತಯಾ ಚ ಈಶ್ವರಸಾಮ್ಯೇನ ಸರ್ವತ್ರ ದರ್ಶನರೂಪೋ, ಯೋಗ ಸ್ತ್ವಯಾ ಪ್ರೋಕ್ತಃ; ಏತಸ್ಯ ಯೋಗಸ್ಯ ಸ್ಥಿರಾಂ ಸ್ಥಿತಿಂ ನ ಪಶ್ಯಾಮಿ,ಮನಸ ಶ್ಚಂಚಲತ್ವಾತ್;ತಥಾ ಹ್ಯನವರತಾ ಭ್ಯಸ್ತ ವಿಷಯೇಷ್ವಪಿ ಸ್ವತ ಏವ ಚಂಚಲಂ ಪುರುಷೇಣೈಕತ್ರಾ ವಸ್ಥಾಪಯಿತು ಮಶಕ್ಯಂ ಮನಃ ಪುರುಷಂ ಬಲಾ

ರಿಂದ ಈ ವಿಷಯದಲ್ಲಿ ಏನು ಮಾಡಬೇಕೆಂಬುದನ್ನು ದಯವಿಟ್ಟು ತಿಳಿಸಬೇಕೆಂಬ ಅಭಿಪ್ರಾಯವು.

ಭಾಷ್ಯಾರ್ಥವು:—ಯೋಗದ ಮಾಹಾತ್ಮ್ಯೆಯನ್ನು ನಿಗಮನಮಾಡಿ ಹೇಳುವ ಸಂದರ್ಭದಲ್ಲಿ ಸುಖದುಃಖಗಳಿಂದ ನಿರ್ವಿಕಾರತ್ವವು ಉಪದೇಶಿಸಲ್ಪಟ್ಟಿತು. ಯೋಗಾಭ್ಯಾಸದಲ್ಲಿ ಮಗ್ನನಾಗಿ ರುವಾಗ ಚಿತ್ತವೃತ್ತಿಯು ಬಹಿಃ ವ್ಯಾಪಿಸದೇ ಇರಬಹುದು ಆದರೆ ಯೋಗಾಭ್ಯಾಸವನ್ನು ಬಿಟ್ಟ ಕಾಲದಲ್ಲಿ ದೇಹವ್ಯಾಪಾರಾದಿಗಳು ನಡೆಯುವಾಗ ಮನಸ್ಸು ಚಂಚಿಸಿ, ಈತನನ್ನು ವಿಷಯಗಳಲ್ಲಿ ಪ್ರವರ್ತಿಸುವಹಾಗೆ ಮಾಡಿಬಿಟ್ಟೀತಲ್ಲಾ ಎಂಬ ಭಯದಿಂದ ಮನಸ್ಸನ್ನು ಜಯಿಸಲು ಏನು ಉಪಾ ಯವೆಂದು ಈ ಎರಡು ಶ್ಲೋಕಗಳಿಂದ ಅರ್ಜುನನು ಪ್ರಶ್ನಿಸುತ್ತಾನೆ. **ಯೋಽಯಂ ಯೋಗಃ** - ಯಾವ ಪ್ರಸಿದ್ಧ ಮಾಹಾತ್ಮ್ಯೆಯುಳ್ಳ ಈ ಯೋಗವು, ಹೇಗೆ ಪ್ರಸಿದ್ಧ ಮಾಹಾತ್ಮ್ಯೆ ಎಂಬುವದನ್ನು ಹಿಂದೆ ಹೇಳಿದುದನ್ನೇ ಜ್ಞಾಪಿಸುತ್ತಾರೆ ; ದೇವ ಮನುಷ್ಯ ಮೊದಲಾದ ಭೇದದಿಂದಲೂ, ಜೀವಾತ್ಮ ಪರಮಾತ್ಮ ಭೇದದಿಂದಲೂ, ಅತ್ಯನ್ತಭಿನ್ನತಯಾ - ಭಿನ್ನಭಿನ್ನ ಶರೀರಧಾರಣದಿಂದ ಭಿನ್ನರೂಪ ಸ್ವಭಾವಗಳಿಂದ, ಏತಾವನ್ತಂಕಾಲಂ - ಈ ಕರ್ಮಯೋಗಾನುಷ್ಠಾನಕ್ಕೆ ಪೂರ್ವಭಾವಿಯಾದ ಇಷ್ಟುಕಾಲವೂ, ಅನುಭೂತೇಷು-ಅನಾದಿಕರ್ಮವಾಸನಾನುಗುಣವಾಗಿ ಅನುಭವನಮಾಡುತ್ತಿರುವ **ಸರ್ವೇಷು ಆತ್ಮಸು** - ಸಮಸ್ತ ಜೀವಾತ್ಮರುಗಳಲ್ಲೂ, **ಜ್ಞಾನೈಕಾಕಾರತೆಯಿಂದ, ಪರಸ್ಪರಸಾ ಮ್ಯೇನ** - ಪರಸ್ಪರ ಸಮಭಾವವಿರುವದರಿಂದಲೂ, ಅಕರ್ಮವಶ್ಯತಯಾಚ - ಪ್ರಕೃತಿವಿಮುಕ್ತದಶೆ ಯಲ್ಲಿ ಕರ್ಮವಶ್ಯತೆಯಿಲ್ಲದಿರುವದರಿಂದ, ಈಶ್ವರಸಾಮ್ಯೇನ - ಪರಮಾತ್ಮನೊಂದಿಗೆ ಸಮಭಾವ ವಿರುವದರಿಂದಲೂ ಸಹ, ಸರ್ವತ್ರ - ಎಲ್ಲಾ ಚೇತನರ ವಿಷಯದಲ್ಲೂ ಸಮದರ್ಶನರೂಪವಾದ ಈ ಆತ್ಮಚಿನ್ತನರೂಪಯೋಗವು, ತ್ವಯಾಪ್ರೋಕ್ತಃ - ನಿನ್ನಿಂದ ಹೇಳಲ್ಪಟ್ಟಿತೋ, ನೀನು ಸರ್ವಜ್ಞನಾದುದರಿಂದಲೂ, ಸರ್ವಶಕ್ತನಾದುದರಿಂದಲೂ, ಪ್ರಕೃತಿಯ ಚಂಚಲತೆ ಮೋಹ ಮೊದ ಲಾದವುಗಳ ಸಂಬಂಧವೇ ಇಲ್ಲದೆ ಇರುವದರಿಂದ ಸುಲಭವಾಗಿ ಉಪದೇಶಿಸಿಬಿಟ್ಟೆಯೋ, ಆದರೆ ನಮಗೆ ಪ್ರಬಲವೈರಿಯು ಮನಸ್ಸು ; ಯೋಗದಿಂದ ಎದ್ದ ಕಾಲದಲ್ಲಿ ಅದು ವಿಷಯಗಳ ಕಡೆಗೆ ಬಲಾತ್ಕರಿಸಿ, ಪ್ರಬಲವೇಗದಿಂದ ಚಲಿಸುತ್ತದೆಯಲ್ಲಾ, ಅದರ ವೇಗವನ್ನು ತಡೆಯುವ ಬಗೆ ಹೇಗೆ ? ಎಂದು ಪ್ರಶ್ನಿಸುತ್ತಾನೆ. ಏತಸ್ಯಯೋಗಸ್ಯ – ಇಂತಹ ಮಹಾತ್ಮ್ಯೆಯುಳ್ಳ ಯೋಗದ ಸ್ಥಿರಾಂ ಸ್ಥಿತಿಂ - ದೃಢವಾದ ನೆಲೆಯನ್ನು, ನಪಶ್ಯಾಮಿ - ನಾನು ಕಾಣೆನು. ಪ್ರಕೃತಿಯನ್ನೇ ಅನವರತ ಅನುಭವಿಸಿ, ಸುಖದುಃಖಾದಿಗಳಿಗೆ ಒಳಗಾಗಿರುವದರಿಂದ, ಯೋಗಮಹಾತ್ಮ್ಯೆಯಿಂದ ಇಂತಹ ಮನಸ್ಸಿನ ನಿರ್ವಿಕಾರಸ್ಥಿತಿಯನ್ನು ಸ್ಥಿರವಾಗಿ ಹೊಂದುವದು ಸಾಧ್ಯವಲ್ಲವೆಂದು ತೋರು ತ್ತದೆಂಬ ಭಾವವು; ಏಕೆಂದರೆ, ಮನಸಶ್ಚಂಚಲತ್ವಾತ್ - ಮನಸ್ಸು ಚಂಚಲಸ್ವಭಾವವುಳ್ಳದು, ಆದುದರಿಂದ, ಮೂಲದಲ್ಲಿ ಚಂಚಲತ್ವಾತ್ ಎಂದು ಇಷ್ಟೇ ಇದೆ; ಮನಸ್ಸಿನ ಚಂಚಲತ್ವವೆಂ ಬುವದು ಸಿದ್ಧವಾದುದರಿಂದ, ಹಾಗೆ ವ್ಯಾಖ್ಯಾನವು. ಅದೂ ಅಲ್ಲದೆ, ಮುಂದಿನ ಶ್ಲೋಕದಲ್ಲೇ ಅದನ್ನೇ ಚಂಚಲಂ ಹಿ ಮನಃ ಎಂದು ವ್ಯಕ್ತಪಡಿಸಿರುತ್ತಾರೆ. ಹೇ ಮಧುಸೂದನನೆಂಬ

ಭಾ. ಪ್ರಮಥ್ಯ ದೃಢ ಮನ್ಯತ್ರ ಚರತಿ. ತಸ್ಯ ಸ್ವಾಭ್ಯಸ್ತ ವಿಷಯೇಷ್ವಪಿ ಚಂಚಲಸ್ವಭಾವಸ್ಯ ಮನಸ ಸ್ತದ್ವಿಪರೀತಾಕಾರಾತ್ಮನಿ ಸ್ಥಾಪಯಿತುಂ ನಿಗ್ರಹಂ ಪ್ರತಿಕೂಲಗತೇರ್ಮಹಾವಾತಸ್ಯ ವ್ಯಜನಾದಿನೇವ ಸುದುಷ್ಕರ ಮಹಂ ಮನ್ಯೇ; ಮನೋನಿಗ್ರಹೋಪಾಯೋ ವಕ್ತವ್ಯ ಇತ್ಯಭಿಪ್ರಾಯಃ || ೩೩-೩೪ ||

---

ಸಂಬೋಧನೆಯಿರುವದರಿಂದ ರಾಜಸತಾಮಸಯುಕ್ತರಾದ ಮಧು ಮೊದಲಾದ ರಾಕ್ಷಸರನ್ನೇ ಕೊಂದವನಿಗೆ ವೈರಾಗ್ಯ ವೈರಿಯಾದ, ರಾಜಸ ತಾಮಸಗಳಿಗೆ ವಶವಾದ, ಮನಸ್ಸಿನ ನಿಗ್ರಹೋಪಾಯವನ್ನು ಉಪದೇಶಿಸುವದು ನಿನಗೊಂದು ಕಷ್ಟವೇ ಎಂಬ ಭಾವವು ಸೂಚಿತವು. ಅದೂ ಅಲ್ಲದೆ, ನಿನ್ನನ್ನು ಕೃಷ್ಣನೆಂದು ಕರೆಯುವದು; ಏತಕ್ಕೆಂದರೆ "ಭಕ್ತಜನ ಪಾಪಾದಿದೋಷಕರ್ಷಣಾತ್" ಭಕ್ತಜನರ ಪಾಪ ಮೊದಲಾದ ದೋಷಗಳನ್ನೆಲ್ಲಾ ಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ ಎಂದು ಮುಂದೆ ಹೇಳಿರುವ ರೀತ್ಯಾ, ಆಕರ್ಷಿಸತಕ್ಕವನು. ಆದುದರಿಂದ ಮನಸ್ಸಿನ ಚಾಂಚಲ್ಯಕ್ಕೆ ಸರಿಯಾದ ಭೇಷಜವನ್ನು ತಿಳಿದವನು, ಈ ಚಾಂಚಲ್ಯದಿಂದುಂಟಾಗುವ ಭವರೋಗಕ್ಕೆ ಒಳ್ಳೇ ಔಷಧವನ್ನು ಬಲ್ಲವನು ಎಂಬ ಭಾವವೂ ತೋರಿಬರುತ್ತದೆ. ತಥಾ ಹಿ-ಮನಸ್ಸು ಹಾಗೆ ತುಂಬ ಚಂಚಲವೆಂಬುದು ವ್ಯಕ್ತವೇ ಸರಿ, ಅನವರತಾಭ್ಯಸ್ತ ವಿಷಯೇಷ್ವಪಿ - ಯಾವಾಗಲೂ ಅಭ್ಯಾಸವುಳ್ಳ ವಿಷಯಪ್ರವರ್ತನೆಗಳಲ್ಲೂ ಕೂಡ, ಸ್ವತ ಏವ-ತಾನಾಗಿಯೇ, ಚಂಚಲಂ-ಚಂಚಲವಾಗಿ, ಆ ಕಾರಣದಿಂದ, ಏಕತ್ರಾವಸ್ಥಾಪಯಿತುಂ - ಒಂದೇ ಕಡೆಯಲ್ಲೇ ನಿಲ್ಲಿಸಲು ಅಶಕ್ಯಂ ಮನಃ - ಅಶಕ್ಯವಾದ ಮನಸ್ಸು, ಪುರುಷನನ್ನು ಬಲಾತ್ಪ್ರಮಥ್ಯ - ಬಲವಂತವಾಗಿ ವ್ಯಾಕುಲಪಡಿಸಿ, ದೃಢಂ - ದೃಢವಾಗಿ, ಅನ್ಯತ್ರಚರತಿ - ಬೇರೆ ಕಡೆಗೆ ಪ್ರವರ್ತಿಸುತ್ತದೆ. ಮೂಲದಲ್ಲಿರುವ ಬಲವತ್ ಶಬ್ದವನ್ನು ಪ್ರಮಾಥಿ ಎಂಬುದರೊಂದಿಗೆ ಸೇರಿಸಿ ಪ್ರಾಪ್ತವಾಗುವ ಅರ್ಥವನ್ನು ಬಲಾತ್ಪ್ರಮಥ್ಯ ಎಂದು ವ್ಯಾಖ್ಯಾನಮಾಡಿದರು, ಅಥವಾ ಬಲವತ್ ಎಂಬುದು ಪ್ರಮಾಥೀ ಎಂಬುದಕ್ಕೆ ಕ್ರಿಯಾವಿಶೇಷಣವನ್ನಾಗಿಯಾದರೂ ಭಾವಿಸಬಹುದು. ಮನಸ್ಸಿನ ಸ್ವಭಾವವೇ ಚಂಚಲವಾದುದರಿಂದ ಒಂದೇ ಕಡೆ ನಿಲ್ಲಿಸಲು ಸಾಧ್ಯವಿಲ್ಲವೆಂಬ ಭಾವವು. ಯೋಗಾಭ್ಯಾಸಕ್ಕೆ ಐಕಾಂತ್ಯವು ಆವಶ್ಯಕವು; ಮನಸ್ಸು ಆತ್ಮನಲ್ಲೇ ಸಕ್ತವಾಗಿರಬೇಕು; ಹಾಗಿರುವದು ಕಷ್ಟವೇ; ಅದರ ನಿಗ್ರಹಕ್ಕೆ ಒಂದು ಉಪಾಯವನ್ನು ಹೇಳಲಾರೆಯಾ ಎಂಬ ಭಾವವು, ಇದನ್ನೇ ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ. ಹೀಗೆ ಸ್ವಾಭ್ಯಸ್ತ ವಿಷಯೇಷ್ವಪಿ-ಅದಕ್ಕೆ ಅಭ್ಯಾಸವಿರುವ ವಿಷಯಾನುಭವಗಳಲ್ಲೂ ಕೂಡ, ಚಂಚಲಸ್ವಭಾವಸ್ಯ-ಚಂಚಲಸ್ವಭಾವಯುಕ್ತವಾದ, ತಸ್ಯ ಮನಸಃ-ಆ ಮನಸ್ಸಿಗೆ, ತದ್ವಿಪರೀತಾಕಾರಾತ್ಮನಿ-ಅದರ ಲಕ್ಷಣಕ್ಕೆ ವಿಪರೀತ ಸ್ವಭಾವವುಳ್ಳ, ಅಥವಾ ಪೂರ್ವದಲ್ಲಿ ಅಭ್ಯಾಸವಿಲ್ಲದಿರುವ ಆತ್ಮನಲ್ಲಿ, ಸ್ಥಾಪಯಿತುಂ-ನಿಲ್ಲಿಸಲು ಬೇಕಾದ,ನಿಗ್ರಹಂ-ನಿಗ್ರಹವು,ಪ್ರಕೃತದಲ್ಲಿ ನಿಗ್ರಹವು ಯಮುಪ್ರಸನವಾದ. ಎಂದರೆ ವಿಷಯಗಳನ್ನು ತ್ಯಜಿಸಿ,ಆತ್ಮನಲ್ಲೇ ನಿಲ್ಲುವಹಾಗೆ ಮಾಡೋಣವು, ಆದುದರಿಂದಲೇ ತದ್ವಿಪರೀತಾಕಾರಾತ್ಮನಿ ಸ್ಥಾಪಯಿತುಂ ನಿಗ್ರಹಂ ಎಂಬ ವ್ಯಾಖ್ಯಾನವು, ಪ್ರತಿಕೂಲಗತೇಃ - ಪ್ರತಿಕೂಲವಾದ ಸಂಚಾರವುಳ್ಳ, ಮಹಾವಾತಸ್ಯ - ದೊಡ್ಡ ಬಿರುಗಾಳಿಯ, ವ್ಯಜನಾದಿನಾ - ಬೀಸಣಿಗೆಯ ಗಾಳಿ ಮೊದಲಾದುದರಿಂದ ಆದಿ ಶಬ್ದದಿಂದ ಬಟ್ಟೆ ಕಾಗದ ಮೊದಲಾದವು ಹೇಳಲ್ಪಟ್ಟವು, ನಿಗ್ರಹವು ಸುದುಷ್ಕರಂ - ತುಂಬಾ ಕಷ್ಟಸಾಧ್ಯವೆಂದು, ಅಹಂ ಮನ್ಯೇ - ನಾನು ತಿಳಿಯುತ್ತೇನೆ. ಮನಸ್ಸು ಚಂಚಲ ಸ್ವಭಾವವುಳ್ಳದ್ದರಿಂದ ವಿಷಯಗಳಲ್ಲೇ ಅದಕ್ಕೆ ಪ್ರವರ್ತನೆಯು. ಒಂದೇ ವಿಷಯದಲ್ಲೂ ಸ್ಥಿರವಾಗಿ ನಿಲ್ಲುವದಿಲ್ಲವು. ಒಂದನ್ನು ಬಿಟ್ಟು ಇನ್ನೊಂದರಲ್ಲಿ ಪ್ರವರ್ತಿಸುವದರಲ್ಲಿ ಅದಕ್ಕೆ

ಶ್ರೀ ಭಗವಾನುವಾಚ—

ಮೂ. ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫.
ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।
ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ ೩೬.

---

ಅಪೇಕ್ಷೆಯು. ಹೀಗಿರುವದರಿಂದ ವಿಷಯಗಳನ್ನು ತ್ಯಜಿಸಿ, ಆತ್ಮನಲ್ಲಿ ನಿಲ್ಲಿಸುವದು ಬಹು ಕಷ್ಟ ಸಾಧ್ಯವಾಗಿ ತೋರುತ್ತದೆ. ಚಂಡಮಾರುತದ ವೇಗವನ್ನು ಒಂದು ಬೀಸಣಿಗೆಯ ಗಾಳಿಯಿಂದ ತಡೆಯುವದು ಹೇಗೆ ಕಷ್ಟಸಾಧ್ಯವೋ, ಹಾಗೆ ವಿಷಯಗಳಲ್ಲಿ ಮನಸ್ಸು ಅತಿ ವೇಗದಿಂದ ಓಡಿ ಹೋಗುವಾಗ ಅದನ್ನು ತಡೆದು ಆತ್ಮನಲ್ಲಿ ನಿಲ್ಲಿಸುವದು ತುಂಬಾ ಕಷ್ಟವೆಂಬ ಭಾವವು. ಹೀಗೆ ಹೇಳುವದರಿಂದ ಅರ್ಜುನನ ಮನೋಗತವಾದುದೇನೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ— ಮನೋನಿಗ್ರಹೋಪಾಯೋ ವಕ್ತವ್ಯ ಇತ್ಯಭಿಪ್ರಾಯಃ-ದಯವಿಟ್ಟು ತಮ್ಮನ್ನೇ ನಂಬಿರುವ ನನಗೆ ಮನಸ್ಸನ್ನು ನಿಗ್ರಹಿಸುವ ಉಪಾಯವನ್ನು ಹೇಳಬೇಕೆಂದು ಪ್ರಾರ್ಥಿಸುತ್ತೇನೆಂಬ ತಾತ್ಪರ್ಯವು. ॥ ೩೩., ೩೪ ॥

ಮೂಲಕ್ಕೆ ಅರ್ಥವು :—ಶ್ರೀ ಭಗವಾನುವಾಚ - ನಿತ್ಯಾನಪಾಯಿನಿಯಾದ ಲಕ್ಷ್ಮಿಯೊಂದಿಗೇನೇ ಇರುವ ಭಗವಂತನಾದ ಶ್ರೀ ಕೃಷ್ಣನು ಹೇಳುತ್ತಾನೆ. ಮನೋನಿಗ್ರಹೋಪಾಯವನ್ನು ದಯಮಾಡಿ ಹೇಳಬೇಕೆಂದು ಹಿಂದಿನ ಎರಡು ಶ್ಲೋಕಗಳಿಂದ ಪ್ರಾರ್ಥಿಸಿದನು. ಭಕ್ತವತ್ಸಲನಾದುದರಿಂದ ಉಪಾಯವೇನೆಂಬುದನ್ನು ತಿಳಿಸುತ್ತಾರೆ. ಮನಸ್ಸು ಚಂಚಲವೆಂದೂ, ಅದನ್ನು ವಿಷಯಗಳಲ್ಲಿ ಪ್ರವರ್ತಿಸದಹಾಗೆ ಮಾಡಿ ಆತ್ಮನಲ್ಲಿ ನಿಲ್ಲಿಸುವದು ತುಂಬಾ ಕಷ್ಟವೆಂದೂ, ಹೇಳಿದನು. ಆತನ ಮಾತನ್ನು ಒಪ್ಪಿಕೊಂಡು ಮನಸ್ಸು ಚಂಚಲವು, ಅದರನಿಗ್ರಹವು ಕಷ್ಟವು, ಎಂಬುದನ್ನೇನೋಒಪ್ಪತಕ್ಕದ್ದೇ ; ಆದರೆ ಸರ್ವಥಾ ಅದನ್ನು ಜಯಿಸುವದು ಅಸಾಧ್ಯವೆಂದು ತಿಳಿಯಬೇಡ, ಜಯಿಸುವ ಉಪಾಯವನ್ನು ಹೇಳುವೆನು ಕೇಳು ಎಂದು ಅರ್ಧಾಂಗೀಕಾರವಾಗಿ **ಅಸಂಶಯಂ** ಎಂದು ಉತ್ತರವನ್ನು ಶ್ರೀಕೃಷ್ಣಭಗವಾನರು ಹೇಳುತ್ತಾರೆ. **ಸತ್ಯಂ** ಎಂಬ ಪದವು ಪೂರ್ವಪಕ್ಷಕ್ಕೇ ಸಮಾಧಾನವನ್ನು ಹೇಳುವಾಗ ಹೇಗೆ ಅರ್ಧಾಂಗೀಕಾರ ಸೂಚಕವೋ, ಹಾಗೆ ಇಲ್ಲಿ **ಅಸಂಶಯಂ** ಎಂಬ ಪದವು ಸತ್ಯಂ ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿರುತ್ತದೆ. **ಹೇಮಹಾಬಾಹೋ**-ಶತ್ರುಗಳನ್ನು ಸುಲಭವಾಗಿ ಗೆಲ್ಲುವ ಮಹತ್ತಾದ ಬಾಹು ಪರಾಕ್ರಮವನ್ನುಳ್ಳವನೇ, ಪರಮ ಶತ್ರುವಾದ ಮನಸ್ಸನ್ನು ಗೆಲ್ಲುವ ಮನೋನಿಗ್ರಹವು ಅಷ್ಟು ಸುಲಭವಲ್ಲವೆಂಬ ಭಾವವು ಸೂಚಿತವು, **ಮನಃ** - ಮನಸ್ಸು ನೀನು ಹೇಳಿದ ಹಾಗೆ, **ಚಲಂ** - ಚಂಚಲವಾದುದು, ಆದುದರಿಂದಲೇ **ದುರ್ನಿಗ್ರಹಂ** - ಜಯಿಸಲು ಕಷ್ಟತರವಾದುದು, ವಿಷಯಪ್ರಾವಣ್ಯವನ್ನು ತಪ್ಪಿಸಿ ಆತ್ಮನಲ್ಲಿ ಸ್ಥಿರವಾಗಿ ನಿಲ್ಲಿಸುವದು ಕಷ್ಟವೆಂಬುದು. **ಅಸಂಶಯಂ** - ನಿಸ್ಸಂದೇಹವು. ಆದರೆ ಅದನ್ನು ನಿಗ್ರಹಿಸುವ ಉಪಾಯವೇ ಇಲ್ಲವೆಂಬುದಲ್ಲವು. ಉಪಾಯವನ್ನು ಉತ್ತರಾರ್ಧದಿಂದ ಹೇಳುತ್ತಾರೆ—**ಹೇ ಕೌನ್ತೇಯ** - ನನ್ನ ಅತ್ತೆಯ ಪುತ್ರನಾಗಿ ಧರ್ಮಿಷ್ಠನಾಗಿರುವದರಿಂದ ನಿನಗೆ ಹಿತೋಪದೇಶ ಮಾಡುವದು ಯುಕ್ತವಾದುದರಿಂದ ಓಅರ್ಜುನನೇ, **ಅಭ್ಯಾಸೇನ ತು** - ಆತ್ಮಚಿನ್ತನದಲ್ಲೇ ಮನಸ್ಸನ್ನು ಇಡುವ ಅಭ್ಯಾಸದಿಂದಲೇ, ಮತ್ತು **ವೈರಾಗ್ಯೇಣ ಚ**- ಐಹಿಕ ವಿಷಯಗಳಲ್ಲಿ ಆಶೆಯನ್ನು ತೊರೆಯುವದರಿಂದಲೂ ಸಹ, **ಗೃಹ್ಯತೇ** - ನಿಗ್ರಹಿಸಲ್ಪಡುತ್ತದೆ. ಬಾಹ್ಯ

ಭಾ. ಚಲಸ್ವಭಾವತಯಾ ಮನೋ ದುರ್ನಿಗ್ರಹ ಮೇವೇತ್ಯತ್ರ ನ ಸಂಶಯಃ ; ತಥಾ

ಸುಖಗಳು ಅಲ್ಪಾಸ್ಥಿರಗಳು, ದುಃಖಮಿಶ್ರಗಳು, ದುಃಖೋದರ್ಕಗಳು ಇತ್ಯಾದಿ ಅವಗುಣಗಳು ಅವುಗಳಲ್ಲಿರುವವದರಿಂದಲೂ, ಆತ್ಮನು ನಿತ್ಯತ್ವ, ಜ್ಞಾನತ್ವ, ಆನಂದತ್ವ, ಅಮಲತ್ವ, ಅಕರ್ಮವಶ್ಯತ್ವವೇ ಮೊದಲಾದ ಗುಣಾಷ್ಟಕಗಳ ಮೂಲಕ ಸುಗುಣಾಕರತ್ವವಿರುವದರಿಂದ ತದ್ಧ್ಯಾನವು ನಿರತಿಶಯಾನಂದಾವಹವಾದುದರಿಂದಲೂ, ಮನಸ್ಸನ್ನು ಬಾಹ್ಯದಲ್ಲಿ ಪ್ರವರ್ತಿಸದಹಾಗೆ ಮಾಡಿ ವೈರಾಗ್ಯವನ್ನು ಹೊಂದಬಹುದಾದುದರಿಂದಲೂ, ಮನಸ್ಸನ್ನು ಅಂತಹ ಆತ್ಮನಲ್ಲಿ ನಿಲ್ಲಿಸುವ ಅಭ್ಯಾಸದಿಂದಲೂ, ಜಯಿಸಬಹುದು ಎಂಬ ತಾತ್ಪರ್ಯವು. ಆದುದರಿಂದ ಯೋಗಸಿದ್ಧಿಯು ಯಾರಿಗೆ ಅಸಾಧ್ಯವು, ಯಾರಿಗೆ ಸಾಧ್ಯವೆಂಬುದನ್ನು ತಿಳಿಸುತ್ತಾರೆ—ಅಸಂಯತಾತ್ಮನಾ - ಹೀಗೆ ಅಭ್ಯಾಸ ವೈರಾಗ್ಯಗಳಿಂದ ನಿಗ್ರಹಿಸಲ್ಪಡದೇ ಇರುವ ಮನಸ್ಸುಳ್ಳವನಿಂದ, ಯೋಗಃ-ಆತ್ಮಾವಲೋಕನವು, ಎಂದರೆ ಯೋಗಶಬ್ದಕ್ಕೆ ಯೋಗಸಿದ್ಧಿ ಎಂದರ್ಥ ಹೇಳಲು ಕಾರಣವೇನೆಂದರೆ:- ಪ್ರಕರಣದಿಂದಲೂ, ಯೋಗಸಂಸಿದ್ಧಿಯ ವಿಷಯದಲ್ಲೇ ಸಂದೇಹವನ್ನು ಪ್ರಕಟಿಸಿದುದರಿಂದಲೂ, ಮತ್ತು ಮುಂದಿನ ಶ್ಲೋಕದಲ್ಲಿ "ಅಪ್ರಾಪ್ಯಯೋಗಸಂಸಿದ್ಧಿಂ" ಎಂಬ ಪ್ರಯೋಗದಿಂದ ವ್ಯಕ್ತಪಡುವದರಿಂದಲೂ, ಯೋಗಸಿದ್ಧಿಯೇ ಅಭಿಪ್ರೇತವು. ದುಷ್ಪ್ರಾಪಃ . ಹೊಂದಲಸಾಧ್ಯವು, ಇತಿ ಮೇ ಮತಿಃ ಎಂಬುದು ನನ್ನ ಅಭಿಪ್ರಾಯವು ; ಯತತಾ - ಈ ಪ್ರಯೋಗವು ಆರ್ಷವು, ವ್ಯಾಕರಣಾನುಗುಣವಾಗಿ ಯತಮಾನೇನ ಎಂದಿರತಕ್ಕದ್ದು, ಹೀಗೆ ಅಭ್ಯಾಸಮೂಲಕ ಸರಿಯಾಗಿ ಪ್ರಯತ್ನಪಡುವ, ವಶ್ಯಾತ್ಮನಾತು - ಬಾಹ್ಯವಸ್ತುಗಳಲ್ಲಿ ತೊಳಲದ ಹಾಗೆ ವಶಮಾಡಿಕೊಂಡಿರುವ ಮನಸ್ಸುಳ್ಳ ಯೋಗಿಗಾದರೋ, ಉಪಾಯತಃ - ಉಪಾಯವಾಗಿ, ಮನಸ್ಸು ಪ್ರಬಲವಾದರೂ ಹೀಗೆ ಉಪಾಯದಿಂದ, ಅವಾಪ್ತುಂ ಶಕ್ಯಃ - ಯೋಗಸಿದ್ಧಿಯನ್ನು ಹೊಂದಲು ಸಾಧ್ಯವು. ಮನಸ್ಸೇನೋ ನೀನು ಹೇಳಿದಹಾಗೆ ಪ್ರಮಾಥಿ ಬಲವದ್ದೃಢವಾಗಿರಬಹುದು. ಆದರೂ ಉಪಾಯದಿಂದ ಮನಸ್ಸನ್ನು ಗೆಲ್ಲಬಹುದು, ಹೇಗೆಂದರೆ ಕರ್ಮಯೋಗವನ್ನಾರಂಭಿಸಿ ಅಭ್ಯಾಸದಿಂದ ಮನಸ್ಸು ಆತ್ಮನಲ್ಲೇ ಇರುವಹಾಗೂ, ಬಾಹ್ಯ ವಿಷಯಗಳಲ್ಲಿ ಪ್ರವರ್ತಿಸದ ಹಾಗೂ ಮಾಡಿಕೊಂಡರೆ, ಇಂತಹ ವೈರಾಗ್ಯದಿಂದ ಸಾಧ್ಯವೆಂದು ಹೇಳಿದರು. ಅಂತವನಿಗೆ ಯೋಗಸಿದ್ಧಿಯುಂಟೆಂದೂ, ಹಾಗೆ ಉಪಾಯವಾಗಿ ಮನಸ್ಸನ್ನು ಜಯಿಸದವನಿಗೆ ಯೋಗಸಿದ್ಧಿ ಇಲ್ಲವೆಂದೂ ಉಪದೇಶಿಸಿದರು.

ಭಾಷ್ಯಾರ್ಥವು:—ಅರ್ಜುನನು ಯಾವ ಕಾರಣಗಳಿಂದ ಯೋಗ ಸಿದ್ಧಿಯು ಅಸಾಧ್ಯವೆಂದು ಹೇಳಿದನೋ, ಅವನ್ನೇ ಅನುವಾದಮಾಡಿ, ಹೇತು ಹೇತುಮದ್ಭಾವಗಳನ್ನು ತಿಳಿಸಿ, ಆದರೂ ಯೋಗಸಿದ್ಧಿಯನ್ನು ಸ್ವಲ್ಪಕಷ್ಟದಿಂದ ಸಾಧಿಸಬಹುದೆಂದು ತಿಳಿಸಿ, ಅಂತಹ ಉಪಾಯವನ್ನು ಈ ಎರಡು ಶ್ಲೋಕಗಳಿಂದ ಶ್ರೀ ಕೃಷ್ಣಭಗವಾನ್ನವರು ಹೇಳುತ್ತಾರೆ. ಚಲಸ್ವಭಾವತಯಾ - ಚಂಚಲಸ್ವಭಾವ ಉಳ್ಳದಾದುದರಿಂದ, ಮನಸ್ಸು ದುರ್ನಿಗ್ರಹಮೇವೇತ್ಯತ್ರ - ಜಯಿಸಲಸಾಧ್ಯವೆಂಬ ಸಂದರ್ಭದಲ್ಲಿ, ನಸಂಶಯಃ – ಸಂದೇಹವಿಲ್ಲವು. ಅರ್ಜುನನು ತನ್ನ ಪ್ರಶ್ನೆಯಲ್ಲಿ ಮನಸ್ಸು ಚಂಚಲವೆಂದೂ,ಅದರ ನಿಗ್ರಹವು ಸದುಷ್ಕರವೆಂದೂ ಹೇಳಿದನು. ಆದುದರಿಂದ ಇಲ್ಲಿ ದುರ್ನಿಗ್ರಹಂ ಚಲಂ - ಎಂಬುದರಿಂದ ಆತನ ಅಭಿಪ್ರಾಯವನ್ನು ಒಪ್ಪಿಕೊಂಡು ಸಮಾಧಾನವನ್ನು ಹೇಳುತ್ತಾರೆ—ದುರ್ನಿಗ್ರಹವಾಗಿರುವದರಿಂದ ಚಲಸ್ವಭಾವ ಉಳ್ಳದ್ದೇ ಅಥವಾ ಚಲಸ್ವಭಾವ ಉಳ್ಳದಾದುದರಿಂದ ದುರ್ನಿಗ್ರಹವೇ ? ಎಂಬ ಸಂದೇಹದಲ್ಲಿ, ಚಲಸ್ವಭಾವವೇ ಇಲ್ಲಿ ದುರ್ನಿಗ್ರಹವಾಗಿರುವದಕ್ಕೆ ಹೇತುವೆಂದು ತಿಳಿಸುವದಕ್ಕಾಗಿ ಚಲಸ್ವಭಾವತಯಾ ಎಂಬ ವ್ಯಾಖ್ಯಾನವು.

ಭಾ. ಪ್ಯಾತ್ಮನೋ ಗುಣಾಕರತ್ವಾಭ್ಯಾಸ ಜನಿತಾಭಿಮುಖ್ಯೇನಾ ತ್ಮವ್ಯತಿರಿಕ್ತೇಷು ದೋಷಾಕರತ್ವ ದರ್ಶನ ಜನಿತ ವೈತೃಷ್ಣ್ಯೇನ ಚ ಕಥಂಚಿದ್ಗೃಹ್ಯತೇ. ಅಸಂಯತಾತ್ಮನಾ ಅಜಿತ ಮನಸಾ ಮಹತಾಪಿ ಬಲೇನ ಯೋಗೋ ದುಷ್ಪ್ರಾಪ ಏವ ; ಉಪಾಯತಸ್ತು ವಶ್ಯಾತ್ಮನಾ – ಪೂರ್ವೋಕ್ತೇನ ಮದಾರಾಧನ ರೂಪೇಣಾಂತರ್ಗತಜ್ಞಾನೇನ ಕರ್ಮಣಾ ಜಿತಮನಸಾ ಯತಮಾನೇನಾ ಯಮೇನ ಸಮದರ್ಶನ ರೂಪೋ ಯೋಗೋಽವಾಪ್ತುಮ್ ಶಕ್ಯಃ || ೩೫, ೩೬ ||

---

ಮನೋನಿಗ್ರಹದ ಉಪಾಯವನ್ನು ಉತ್ತರಾರ್ಧದಿಂದ ವ್ಯಕ್ತಪಡಿಸುತ್ತಾರೆ. ತಥಾಪಿ - ಹೀಗೆ ದುರ್ನಿಗ್ರಹವಾದರೂ ಕೂಡ, ಆತ್ಮನಃ - ಆತ್ಮಾವಿನ, ಗುಣಾಕರತ್ವಾಭ್ಯಾಸ ಜನಿತ – ನಿತ್ಯತ್ವ, ಸರ್ವಜ್ಞತ್ವ, ಅನಂದತ್ವ, ಅಮಲತ್ವಾದಿ ಕಲ್ಯಾಣಗುಣಗಳಿಗೆ ಆಕರವಾಗಿರುವಿಕೆಯ ಚಿನ್ತನದ ಅಭ್ಯಾಸದಿಂದ ಹುಟ್ಟಿದ, ಆಭಿಮುಖ್ಯೇನ – ಆತ್ಮಾವಿಗೆ ಅಭಿಮುಖವಾಗಿರೋಣದರಿಂದಲೂ ಇದು ಅಭ್ಯಾಸೇನ ಎಂಬ ಪದದಿಂದ ಸೂಚಿತಾರ್ಥವು, ಮತ್ತು ದೋಷಾಕರತ್ವದರ್ಶನ ಜನಿತ ವೈತೃಷ್ಣ್ಯೇನ ಚ - ಐಹಿಕ ವಿಷಯ ಭೋಗಗಳೆಲ್ಲಾ ದೋಷಗಳಿಗೆ ಆಕರವೆಂಬುದನ್ನು ತಿಳಿಯುವದರಿಂದ ಹುಟ್ಟಿದ ವೈರಾಗ್ಯದಿಂದಲೂ ಸಹ, ಕಥಂಚಿತ್-ಕಷ್ಟದಿಂದ ಹೇಗಾದರೂ ಎಂದರೆ ಸ್ವಲ್ಪ ಶ್ರಮದಿಂದ, ಗೃಹ್ಯತೇ - ಮನಸ್ಸು ನಿಗ್ರಹಿಸಲ್ಪಡುತ್ತದೆ. ಹಿಂದೆ ಅರ್ಜುನನು "ಏತಸ್ಯಾಹಂ ನಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಂ" ಎಂದು ೩೩ನೆಯ ಶ್ಲೋಕದಲ್ಲಿ ಹೇಳಿದ್ದನು. ಆದರೆ ಅದು ಸಾಧ್ಯವೇ ಅಲ್ಲವೆಂದು ನಿರುತ್ಸಾಹಿಯಾಗಿ ದೀನನಾಗಿ ಇರುವದು ಸರಿಯಲ್ಲವು. ಕಷ್ಟಪಟ್ಟು ಮನಸ್ಸನ್ನು ಬಾಹ್ಯವಿಷಯಗಳಲ್ಲಿ ಅನೇಕ ದೋಷಗಳಿರುವದರಿಂದ ಅವುಗಳಿಂದ ಹಿಂತಿರುಗಿಸಿ ವೈರಾಗ್ಯವನ್ನು ಹೊಂದಿ, ಆತ್ಮನಲ್ಲಿರುವ ಕಲ್ಯಾಣಗುಣಗಳಿಂದ ಆನಂದಿಸಿ ಅದರಲ್ಲೇ ಮನಸ್ಸನ್ನಿಡುವ ಅಭ್ಯಾಸಮೂಲಕವಾಗಿ ಯೋಗಸಿದ್ಧಿಯನ್ನು ಹೊಂದತಕ್ಕದ್ದೆಂಬ ತಾತ್ಪರ್ಯವು. ಆದರೆ ನೀನು "ಏತಸ್ಯಾಹಂ ನಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಂ" ಎಂದು ೩೩ನೆಯ ಶ್ಲೋಕದಲ್ಲೂ ಮತ್ತು "ತಸ್ಯಾಹಂ ನಿಗ್ರಹಂ ಮನ್ಯೇವಾಯೋ ರಿವ ಸುದುಷ್ಕರಮ್" ಎಂದು ೩೪ನೆಯ ಶ್ಲೋಕದಲ್ಲೂ ಅಧೈರ್ಯದಿಂದ ಹೇಳಿದುದು ಯಾವ ಅಧಿಕಾರಿಯ ವಿಷಯದಲ್ಲಿ ಎಂದರೆ ಹೇಳುತ್ತೇನೆ ಕೇಳೆಂದು ಮುಂದೆ ತಿಳಿಸುತ್ತಾರೆ—ಅಸಂಯತಾತ್ಮನಾ - ಎಂದರೆ ಅಜಿತಮನಸಾ - ಜಯಿಸಲ್ಪಡದ ಮನಸ್ಸುಳ್ಳವನಿಂದೀಗ, ಮಹತಾ ಬಲೇನ - ಮಹತ್ತಾದ ಪ್ರಬಲ ಪ್ರಯತ್ನದಿಂದಲೂ, ಯೋಗಃ-ಯೋಗಸಿದ್ಧಿಯು,ಆತ್ಮಾವಲೋಕನವು, ದುಷ್ಪ್ರಾಪ ಏವ-ನೀನು ಹೇಳಿದ ಹಾಗೆ ಹೊಂದಲು ಅಸಾಧ್ಯವೇ ಸರಿ. ಈ ಅಭಿಪ್ರಾಯವು ದುಷ್ಪ್ರಾಪ ವೆಂಬ ಪದದಿಂದಲೂ,ಮುಂದೆ ಉಪಾಯತಃ-ಎಂಬುದಕ್ಕೆಪ್ರತಿದ್ವಂದಿರೂಪ ಅರ್ಥದಿಂದಲೂ ಸೂಚಿತವು; ಮಹಾಬಾಹೋ ಎಂಬ ಸಂಬೋಧನೆಯಿಂದಲೂ ಸಹ ಈ ಅರ್ಥವು ಸೂಚಿತವು. ನಿನ್ನ ಬಾಹು ಪರಾಕ್ರಮವು ಇಲ್ಲೇನೂಕಾರ್ಯಕಾರಿಯಾಗದು. ಪರಾಕ್ರಮವು ಏತರಲ್ಲಿರಬೇಕೆಂದರೆ ಮನಸ್ಸು ಇಂದ್ರಿಯಗಳನ್ನುನಿಗ್ರಹಿಸುವದರಲ್ಲೀಗ ಬೇಕಾದುದು ಎಂಬಭಿಪ್ರಾಯವು; ಆದುದರಿಂದ ಉಪಾಯದಿಂದ ನಿಗ್ರಹಿಸತಕ್ಕದ್ದಾಗಿರುತ್ತದೆವಿನಾ ಇಲ್ಲಿ ಬಲವು ಕಾರ್ಯಕಾರಿಯಲ್ಲವೆಂಬುದುತಾತ್ಪರ್ಯವು. ಆದರೆ ಇನ್ನು ಯಾರಿಗೆ ಹೇಗೆ ಸಾಧ್ಯವೆಂದರೆ ಹೇಳುತ್ತಾರೆ ಉಪಾಯತಸ್ತು-ಉಪಾಯ ಮೂಲಕವಾಗಿಯಾದರೋ, ಆ ಉಪಾಯವು ಯಾವುದೆಂದರೆ ಅಭ್ಯಾಸವೂ ಮತ್ತು ವೈರಾಗ್ಯವೂ, ವಶ್ಯಾತ್ಮನಾ-ವಶವಾಡಿಕೊಂಡ ಮನಸ್ಸುಳ್ಳ, ಪೂರ್ವೋಕ್ತೇನ-ಹಿಂದೆ ಹೇಳಲ್ಪಟ್ಟ (೩-೦ನೆಯ ೫-೩ನೆಯ ಶ್ಲೋಕಗಳನ್ನು ಪರಾಂಬರಿಸಿ) ಮದಾರಾಧನರೂಪೇಣ-ನನ್ನ ಆರಾಧನರೂಪವಾದ,ಅಂತರ್ಗತ ಜ್ಞಾನೇನ-

ಭಾ ಅವ. (೧) "ಅಥನೇಹಾಭಿಕ್ರಮನಾಶೋಽಸ್ತಿ" ಇತ್ಯಾದಾವೇವ ಶ್ರುತಂ ಯೋಗ ಮಾಹಾತ್ಮ್ಯಂ ಯಥಾವಚ್ಛ್ರೋತುಮರ್ಜುನೋ ಪೃಚ್ಛತಿ ; ಅಂತರ್ಗತಾತ್ಮಜ್ಞಾನ ತಯಾ ಯೋಗಶಿರಸ್ಕತಯಾಚ ಹಿ ಕರ್ಮಯೋಗಸ್ಯ ಮಾಹಾತ್ಮ್ಯಂ ತತ್ರೋದಿತಂ, ತಚ್ಚ ಯೋಗಮಾಹಾತ್ಮ್ಯಮೇವ.—

ಒಳಗೊಂಡ ಆತ್ಮಯಾಥಾತ್ಮ್ಯಜ್ಞಾನವುಳ್ಳ, ಕರ್ಮಣಾ ಕರ್ಮಯೋಗದಿಂದ, ಜಿತಮನಸಾ-ಜಯಿಸಲ್ಪಟ್ಟ ಮನಸ್ಸುಳ್ಳ, ಯತಮಾನೇನ-ಇದು ಯತತಾ ಎಂಬುವರ ವ್ಯಾಖ್ಯಾನವು, ಪ್ರಯತ್ನಿಸುವ ಕರ್ಮಯೋಗಾಭ್ಯಾಸ ನಿರತನಿಂದ, ಅಯಮೇವ-ಈ ತುಂಬಾ ಕಷ್ಟವೆಂದು ನಿನ್ನಿಂದ ಹೇಳಲ್ಪಟ್ಟ ಸಮದರ್ಶನರೂಪೋ ಯೋಗಃ-ನಾಲ್ಕು ವಿಧ ಸಮದರ್ಶನ ಭಾವವನ್ನು ಒಳಗೊಂಡಿರುವ ಯೋಗಾಭ್ಯಾಸವು ಎಂದರೆ ಅದರ ಪರಿಪಕ್ವ ದಶೆಯಾದ ಆತ್ಮಾವಲೋಕನವು, ಅವಾಪ್ತುಂ ಶಕ್ಯಃ-ಹೊಂದಲು ಸಾಧ್ಯವು. ಮಹಾ ಬಲದಿಂದಲೂ ಶಕ್ಯವಾಗದಿರುವದು ಉಪಾಯದಿಂದ ಶಕ್ಯವೆಂಬುದು ಲೋಕಸಿದ್ಧವು. "ಉಪಾಯೇನತು ಯಚ್ಛಕ್ಯಂ ನ ತಚ್ಛಕ್ಯಂ ಪರಾಕ್ರಮೈಃ । ಕಾಕ್ಯಾ ಕನಕ ಸೂತ್ರೇಣ ಕೃಷ್ಣಸರ್ಪೋ ನಿಪಾತಿತಃ"ಎಂಬಹಿತೋಪದೇಶ ಶ್ಲೋಕವು ಇಲ್ಲಿ ಅನುಸಂಧೇಯವು. ಉಪಾಯದಿಂದಲಾದರೋ ಯಾವುದು ಸಾಧ್ಯವೋ ಅದು ಪರಾಕ್ರಮದಿಂದಲೂ ಸಾಧ್ಯವಲ್ಲದಿರಬಹುದು. ಹೇಗೆಂದರೆ, ತಾನಿಟ್ಟ ಮೊಟ್ಟೆಗಳನ್ನು ತಿಂದು ಹೋಗುತ್ತಿದ್ದ ಕೃಷ್ಣಸರ್ಪವನ್ನು ಪರಾಕ್ರಮದಿಂದ ಕೊಂದುಹಾಕಲು ಸಾಧ್ಯವಿಲ್ಲದೆ, ಕಾಗೆಯು ರಾಜಪತ್ನಿಯ ಹಾರವನ್ನು ಕೊಕ್ಕಿನಿಂದ ಕಚ್ಚಿಕೊಂಡು ಹೋಗಿ, ಆ ಹಾವಿನ ಹುತ್ತವಲ್ಲಿ ಬೀಳಿಸಲು, ಆಗ ರಾಜಪತ್ನಿಯ ಭಟರು ಆ ಹಾರವನ್ನು ಅನುಸರಿಸಿ ಬಂದು ಹಾರವನ್ನು ತೆಗೆದುಕೊಂಡು ಅಲ್ಲಿದ್ದ ಸರ್ಪವನ್ನು ಕೊಂದರು. ಹೀಗೆ ಕಾಗೆಯು ಆ ಕೃಷ್ಣಸರ್ಪವನ್ನು ಉಪಾಯದಿಂದ ಕೊಲ್ಲಿಸಿತು. ಹೀಗೆ ಪರಾಕ್ರಮದಿಂದ ಸಾಧ್ಯವಲ್ಲದುದು ಉಪಾಯದಿಂದ ಸಾಧ್ಯವಾಗುತ್ತದೆಂಬುದು ತಾತ್ಪರ್ಯವು ಅಜಿತ ಮನಸ್ಕನಿಗೆ ಯೋಗವಿಪಾಕದಶೆಯು ಅಸಾಧ್ಯವೆಂಬಲ್ಲಿ ಮೇಮತಿಃ - ಎಂದು ಶ್ರೀ ಕೃಷ್ಣನು ಹೇಳರುವದರಿಂದ ನಿಸ್ಸಂದೇಹತ್ವವು ಸೂಚಿಸಲ್ಪಟ್ಟಿತು. ಕರ್ಮಯೋಗವು ತನ್ನ ಆರಾಧನ ರೂಪವು, ಆತ್ಮಸ್ವರೂಪ ಜ್ಞಾನಾಂತರ್ಗತವು ಎಂಬ ಜ್ಞಾನವು ಮನೋನಿಗ್ರಹಕ್ಕೆ ಉಪಾಯವು ; ಹೀಗೆ ಅಭ್ಯಾಸ ವೈರಾಗ್ಯಗಳಾದರೋ ಯೋಗಾಭ್ಯಾಸಸಿದ್ಧಿಗೆ ಅಙ್ಗಗಳಾಗಿ ಉಪಾಯಗಳು ಎಂದು ಭಾವಿಸತಕ್ಕದ್ದು. ಈ ಅಭಿಪ್ರಾಯವು ಹಿಂದೆ ೩೬ನೆಯ ಶ್ಲೋಕದಲ್ಲಿಯೇ ಉಪದೇಶಿಸಲ್ಪಟ್ಟಿತ್ತು. ಆದರೆ ಅರ್ಜುನನು ಸಂದೇಹದಿಂದ ಪುನಃ ಪ್ರಶ್ನಿಸಿರುತ್ತಾನೆ. ಆದುದರಿಂದ ತನ್ನ ಸಂದೇಹವನ್ನು ತಾನೇ ವ್ಯಕ್ತಪಡಿಸಿರುತ್ತಾನೆ. ಛಿನ್ನಾಭ್ರದಹಾಗೆ ಉಭಯ ಭ್ರಷ್ಟನಾಗುವನೇ ಎಂಬುದು ಸಂದೇಹವು. ತನ್ನಿವೃತ್ತಿಗಾಗಿ ಪ್ರಶ್ನೆಯು. ॥ ೩೭-೩೯ ॥

**ಭಾಷ್ಯಾವತಾರಿಕೆಯ ಅರ್ಥವು :**—ಅಥ-ಅನಂತರದಲ್ಲಿ ಎಂದರೆ ಮುಂದಿನ ಶ್ಲೋಕಗಳ ಮೂಲಕ "ನೇಹಾಭಿಕ್ರಮನಾಶೋಽಸ್ತಿ" ಇತ್ಯಾದಾವೇವ-ಎಂಬದಾಗಿ ಮೊದಲೇ, ಶ್ರುತಂ-ಉಪದೇಶಿಸಲ್ಪಟ್ಟ, ಯೋಗಮಾಹಾತ್ಮ್ಯಂ - ಯೋಗಾಭ್ಯಾಸದ ಮಾಹಾತ್ಮ್ಯೆಯನ್ನು, ಯಥಾವಚ್ಛ್ರೋತುಂ-ಯಥಾರ್ಥವಾಗಿ ಹೇಗಿದೆಯೋ ಹಾಗೆಯೇ ಕೇಳಬೇಕೆಂಬ ಅಪೇಕ್ಷೆಯುಳ್ಳವನಾಗಿ, ಅರ್ಜುನನು, ಪೃಚ್ಛತಿ–ಪ್ರಶ್ನಿಸುತ್ತಾನೆ. ಅಂತರ್ಗತಜ್ಞಾನತಯಾ-ಆತ್ಮಯಾಥಾತ್ಮ್ಯಜ್ಞಾನವನ್ನು ಒಳಗೊಂಡಿರುವದರಿಂದಲೂ, ಯೋಗಶಿರಸ್ಕತಯಾ ಚ-ಯೋಗಾಭ್ಯಾಸವನ್ನೇ ಪ್ರಧಾನವಾಗಿ ಅಂಗಿಯಾಗಿ ಉಳ್ಳೋಣದರಿಂದಲೂ ಸಹ, ಕರ್ಮಯೋಗಸ್ಯ - ಕರ್ಮಯೋಗಕ್ಕೆ ಮಾಹಾ

(೧) ಗೀ. ೨-೪೦.

ಅರ್ಜುನ ಉವಾಚ—

ಮೂ. ಅಯತಿ ಶ್ಶ್ರದ್ಧಯೋ ಪೇತೋ ಯೋಗಾ ಚ್ಚಲಿತಮಾನಸಃ |
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ || ೩೭.
ಕಚ್ಚಿನ್ನೋ ಭಯವಿಭ್ರಷ್ಟಶ್ಛಿನ್ನಾಭ್ರ ಮಿವ ನಶ್ಯತಿ |
ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ || ೩೮.
ಏತಂ ಮೇ ಸಂಶಯಂ ಕೃಷ್ಣ ಚ್ಛೇತ್ತು ಮರ್ಹಸ್ಯ ಶೇಷತಃ |
ತ್ವದನ್ಯಃ ಸಂಶಯಸ್ಯಾ ಸ್ಯ ಚ್ಛೇತ್ತಾ ನ ಹ್ಯು ಪಪದ್ಯತೇ || ೩೯.

ತ್ಮ್ಯೆಯು, ತತ್ರೋದಿತಂ - ಆ ಸಂದರ್ಭದಲ್ಲಿ ಹೇಳಲ್ಪಟ್ಟದುದು, ತಚ್ಚ - ಅದೂ ಕೂಡ, ಯೋಗ ಮಾಹಾತ್ಮ್ಯಮೇವ- ಈ ಯೋಗಾಭ್ಯಾಸದ ಮಾಹಾತ್ಮ್ಯೆಯೇ; ಹಿಂದೆ "ನೇಹಾಭಿಕ್ರಮನಾಶೋಸ್ತಿ" ಎಂಬಲ್ಲಿ ಹೇಳಲ್ಪಟ್ಟಿರುವದು ಯಾವುದೆಂದರೆ ಕರ್ಮಯೋಗದ ಮಾಹಾತ್ಮ್ಯೆಯು. ಈಗ ಇಲ್ಲಿ ಹೇಳಲ್ಪಟ್ಟಿರುವದಾದರೋ, ಕರ್ಮಯೋಗದ ಸಿದ್ಧಿ ಅಥವಾ ಫಲವಾದ ಆತ್ಮಾವಲೋಕನವು. ಇದೇ ಹಿಂದೆಯೇ ಸೂಚಿಸಲ್ಪಟ್ಟಿತ್ತು ಎಂದು ಹೇಗೆ ಹೇಳಲಾದೀತು? ಎಂದರೆ ಆತ್ಮಯಾಥಾತ್ಮ್ಯಜ್ಞಾನವೂ ಆತ್ಮ ಸಾಕ್ಷಾತ್ಕಾರವೂ ಇವೆರಡೂ ಕರ್ಮಯೋಗದ ಮಾಹಾತ್ಮ್ಯೆಗಳೇ; ಇವು ಆತ್ಮಧ್ಯಾನದಿಂದ ಲಭಿಸತಕ್ಕವುಗಳೇ. ಇಲ್ಲಿ ಯೋಗಶಬ್ದದಿಂದ ಯೋಗಸಿದ್ಧಿಗೆ ಬೇಕಾದ ಆತ್ಮಚಿನ್ತನವು ಹೇಳಲ್ಪಟ್ಟಿತು ಆದರೆ ಯೋಗಭ್ರಷ್ಟಾವಸ್ಥೆಯಲ್ಲಿ ಸಿದ್ಧಿ ಯಾವುದು ಎಂದರೆ ಬಹಳದಿನ ಪುಣ್ಯಲೋಕಾವಾಪ್ತಿಯು, ಅನಂತರ ಯೋಗಯೋಗ್ಯನ ಮನೆಯಲ್ಲಿ ಜನ್ಮವು, ಪುನಃ ಯೋಗಪೂರ್ಣವು, ಅನಂತರ ಮೋಕ್ಷವು ಇತ್ಯಾದಿ. ಇವೆಲ್ಲವೂ ಯೋಗಮಾಹಾತ್ಮ್ಯೆಯಿಂದಲೇ ಲಭಿಸುತ್ತವೆ ಎಂಬ ಭಾವವು. ನೇಹಾಭಿಕ್ರಮನಾಶೋಸ್ತಿ ಎಂಬಲ್ಲಿ ಕರ್ಮಯೋಗದ ಮಾಹಾತ್ಮ್ಯೆಯು ಹೇಳಲ್ಪಟ್ಟಿತು. ಇಲ್ಲಿಯಾದರೋ ಯೋಗದಿಂದುಂಟಾಗುವ ಸಿದ್ಧಿಯ ಮಾಹಾತ್ಮ್ಯೆಯು ಎಂದು ವೈಲಕ್ಷಣ್ಯವು.

ಮೂಲಕ್ಕೆ ಅರ್ಥವು:—ಮನಸ್ಸು ಚಂಚಲವಾಯಿತಲ್ಲಾ, ಅದರ ಚಾಂಚಲ್ಯವನ್ನು ಹೋಗಲಾಡಿಸಿ ಆತ್ಮನಲ್ಲಿ ಸ್ಥಿರವಾಗಿ ನಿಲ್ಲುವಹಾಗೆ ಮಾಡಲು ಉಪಾಯವೇನೆಂದು ಅರ್ಜುನನು ಕೇಳಿದನು. ಅದಕ್ಕೆ ಶ್ರೀಕೃಷ್ಣಭಗವಾನರವರು ಅಭ್ಯಾಸದಿಂದಲೂ, ವೈರಾಗ್ಯದಿಂದಲೂ ಮನಸ್ಸನ್ನು ಸ್ವಲ್ಪಸ್ವಲ್ಪವಾಗಿ ವಶಮಾಡಿಕೊಂಡರೆ ಆಗುತ್ತದೆಂದು ಹೇಳಿದರು. ಒಂದುವೇಳೆ ಇಂತಹ ಅಭ್ಯಾಸ ವೈರಾಗ್ಯಗಳು ಉಂಟಾಗದೆ ಯೋಗಭ್ರಷ್ಟನಾದರೆ ಅಂತವನಿಗೆ ಯಾವ ಗತಿಯು ಎಂಬ ಪ್ರಶ್ನೆಯು. ಹಿಂದೆ "ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್" (ಗೀ. ೨-೪೦) ಎಂದು ಹೇಳಿದ್ದಿರಿ; ಇಂತಹ ಯೋಗಭ್ರಷ್ಟನಿಗೆ ಹಿಂದೆ ಹೇಳಿದಹಾಗೆ ಸದ್ಗತಿಯು ಕಾಲಕ್ರಮೇಣವಾದರೂ ಉಂಟೋ? ಇಲ್ಲವೇ ಅಂತವನಿಗೆ ದುರ್ಗತಿಯೋ ? ಎಂದು ಪ್ರಶ್ನಿಸುತ್ತಾನೆ. ಮೂರು ವಿಧವಾಗಿ ವಿಕಲ್ಪಿಸಿ ಕೇಳುತ್ತಾನೆ. (೧) ಆತನೇನು ನಷ್ಟನಾಗಿ ಹೋಗುವನೋ ? ಇಲ್ಲವೇ (೨) ಪುನಃ ಕರ್ಮಯೋಗಕ್ಕೆ ಅನರ್ಹನಾಗಿ ಪುನಃ ಪುನಃ ಸಂಸಾರದಲ್ಲೇ ತೊಳಲುವನೋ ಅಥವಾ (೩) ಎಂದಿಗೂ ಮೋಕ್ಷಹೊಂದುವದೇ ಇಲ್ಲವೇ ? ಎಂಬದಾಗಿ. ಶ್ರದ್ಧಯೋಪೇತಃ-ಶ್ರದ್ಧೆಯಿಂದ ಕೂಡಿಕೊಂಡವನಾಗಿದ್ದರೂ ಎಂದರೆ ಯೋಗಾಭ್ಯಾಸದಲ್ಲಿ ಶ್ರದ್ಧೆಯಿಂದ ಪ್ರವೃತ್ತಿಯುಳ್ಳವನಾಗಿದ್ದರೂ, ಅಯತಿಃ – ಸರಿಯಾದ ಅಭ್ಯಾಸರೂಪ ಪ್ರಯತ್ನವಿಲ್ಲದವನಾಗಿ, ಆ ಕಾರಣದಿಂದ, ಯೋಗಾಚ್ಚಲಿತಮಾನಸಃ - ಯೋಗಾಭ್ಯಾಸದಿಂದ ಚಲಿಸಲ್ಪಟ್ಟ

ಎಂದರೆ ಬಿಡಲ್ಪಟ್ಟ ಮನಸ್ಸುಳ್ಳವನಾಗಿ ಇತರ ಅಭಿಲಾಷೆಗಳಲ್ಲಿ ಪ್ರವರ್ತಿಸುವನಾಗಿ ಎಂಬ ಭಾವವು, ಹೀಗೆ, **ಯೋಗ ಸಂಸಿದ್ಧಿಂ** - ಯೋಗಪರಿಪಕ್ವದಶೆಯನ್ನು ಎಂದರೆ ಆತ್ಮ ಸಾಕ್ಷಾತ್ಕಾರ ವನ್ನು, **ಅಪ್ರಾಪ್ಯ** - ಹೊಂದದೆ ಇದ್ದರೆ, **ಹೇ ಕೃಷ್ಣ** - ಓ ಕೃಷ್ಣನೇ, **ಕಾಂಗತಿಂ** - ಯಾವಗತಿ ಯನ್ನು ಎಂದರೆ ಯಾವ ದುರವಸ್ಥೆಯನ್ನು ಎಂಬುದು ಅರ್ಜುನನ ಅಭಿಪ್ರಾಯವು, ಏಕೆಂದರೆ ಮುಂದಿನ ಶ್ಲೋಕದಲ್ಲಿರುವ ವಿವರಣೆಯಲ್ಲಿ **"ಛಿನ್ನಾಭ್ರಮಿವ ನ ನಶ್ಯತಿ ಕಚ್ಚಿತ್"** ಎಂದು ಪ್ರಶ್ನಿಸುವದರಿಂದ ಹಾಗೆ ಅರ್ಜುನನ ಶಂಕೆಯು, **ಗಚ್ಛತಿ** - ಹೊಂದುವನು? ಕರ್ಮಯೋಗಿಯು ಕರ್ಮಾನುಷ್ಠಾನವನ್ನೇನೋ ನಡೆಸಿರುತ್ತಾನೆ. ಆದರೆ ಅದನ್ನು ಫಲಾಭಿಸಂಧಿರಹಿತವಾಗಿ ಮೋಕ್ಷಾರ್ಥಿಯಾಗಿ ಮಾಡಿರುತ್ತಾನೆ. ಆದುದರಿಂದ ಆ ಕರ್ಮಫಲವೂ ಈತನಿಗೆ ಇಲ್ಲವು. ಯೋಗಾ ಭ್ಯಾಸದಿಂದ ಜಾರಿದವನಾದ ಪ್ರಯುಕ್ತ ಮೋಕ್ಷವೂ ಇಲ್ಲವು. ಹೀಗಿರುವದರಿಂದ ಆತನಿಗೆ ದುರ್ಗತಿಯುಂಟೆಂದು ತನಗೆ ತೋರುತ್ತದೆಂದು ಶಂಕಿಸಿ, **ಕಾಂಗತಿಂ ಕೃಷ್ಣ ಗಚ್ಛತಿ** ಎಂದು ಪ್ರಶ್ನಿಸಿರುತ್ತಾನೆ. **ಶ್ರದ್ಧಯೋಪೇತಃ** - ಎಂಬುದರಿಂದ ಕರ್ಮಯೋಗವನ್ನು ಶ್ರದ್ಧೆಯಿಂದ ಅನುಷ್ಠಿಸಿದ್ದಾನೆಂಬುದು ವ್ಯಕ್ತವು. ಈಗ ಯೋಗಾಭ್ಯಾಸವನ್ನು ಮಾಡಲು ಉಪಕ್ರಮಿಸಿರು ತ್ತಾನೆ. ಅದು ಪೂರ್ತಿಯಾಗಲು ಅಭ್ಯಾಸವೂ, ವೈರಾಗ್ಯವೂ ಆವಶ್ಯಕವೆಂದು ಹಿಂದೆ ಹೇಳಲ್ಪ ಟ್ಟಿತು. ಇವುಗಳಲ್ಲಿ ಕೊರತೆಯುಂಟಾದುದರಿಂದ **ಅಯತಿಃ** ಎಂದು ಹೇಳಲ್ಪಟ್ಟಿತು. **ಯೋಗಾ ಚ್ಚಲಿತ ಮಾನಸಃ** ಎಂಬುದರಿಂದ ವೈರಾಗ್ಯಶೂನ್ಯತೆಯೂ ಕೂಡ ಹೇಳಲ್ಪಟ್ಟಿತು. ಹೀಗೆ ಯೋಗಾಭ್ಯಾಸದಿಂದ ಭ್ರಷ್ಟನಾದವನು ಉಭಯಭ್ರಷ್ಟನಾದನೆಂದು ಅರ್ಜುನನು ಮುಂದಿನ ಶ್ಲೋಕದಲ್ಲಿ ಉಪಪಾದಿಸುತ್ತಾನೆ, ಅದರಲ್ಲಿ ತನ್ನ ಅಭಿಪ್ರಾಯವೇನೆಂಬುದನ್ನು ವ್ಯಕ್ತಪಡಿಸು ತ್ತಾನೆ. **ಹೇ ಮಹಾಬಾಹೋ** – ಶಂಖಚಕ್ರಾದಿ ದಿವ್ಯಾಯುಧಗಳನ್ನು ಭಕ್ತರಕ್ಷಣೆಗಾಗಿ ಧರಿಸಿ ರುವದರಿಂದ ಮಹಾಬಾಹು ಪರಾಕ್ರಮವುಳ್ಳವನೇ, **ಉಭಯ ವಿಭ್ರಷ್ಟಃ** - ಹೀಗೆ ಎರಡು ವಿಧ ದಲ್ಲೂ ಭ್ರಷ್ಟನಾಗಿ ಎಂದರೆ, ಕರ್ಮಯೋಗದ ಕರ್ಮಫಲವೂ ಇಲ್ಲದೆ, ಮೋಕ್ಷಸಾಧನೆಗಾಗಿ ಆತ್ಮಸಾಕ್ಷಾತ್ಕಾರವೂ ಇಲ್ಲದೆ ಇರುವದರಿಂದ ಉಭಯಭ್ರಷ್ಟನಾಗಿ, ಎಂಬ ಭಾವವು. ಹೇಗೆ ಉಭಯ ಭ್ರಷ್ಟನೆಂಬುದನ್ನು ಅರ್ಜುನನೇ ಮುಂದೆ ವ್ಯಕ್ತಪಡಿಸುತ್ತಾನೆ ; **ಅಪ್ರತಿಷ್ಠಃ** – ಕರ್ಮಯೋಗದ ಕರ್ಮಾನುಷ್ಠಾನದಿಂದ ಫಲರೂಪವಾಗಿ ಪ್ರಾಪ್ತವಾಗುವ ಆತ್ಮಾವಲೋಕನ ಪ್ರತಿಷ್ಠಾರಹಿತನು, ಫಲಾಭಿಸಂಧಿಯಿಂದ ಆ ಕರ್ಮಗಳನ್ನು ಮಾಡಿದ್ದರೆ, ಸ್ವರ್ಗಾದಿಲೋಕ ಪ್ರಾಪ್ತಿರೂಪ ಪ್ರತಿಷ್ಠೆ ಯಾವರೂ ಉಂಟಾಗುತ್ತಿತ್ತು, ತದ್ರಹಿತನಾಗಿಯೂ ಮತ್ತು **ವಿಮೂಢೋ ಬ್ರಹ್ಮಣಃಪಥಿ** – ಈಗ ಪ್ರಾರಂಭಿಸಲ್ಪಟ್ಟ ಬ್ರಹ್ಮಪ್ರಾಪ್ತಿಗೆ ಸಾಧಕವಾದ ಆತ್ಮೋಪಾಸನೆಯಿಂದಲೂ ಜಾರಿದವನಾದ ಪ್ರಯುಕ್ತ ಆ ವಿಷಯದಲ್ಲಿ ವಿಶೇಷಮೌಢ್ಯವುಳ್ಳವನಾಗಿಯೂ, **ನ ನಶ್ಯತಿ ಕಚ್ಚಿತ್**-ನಾಶವನ್ನೇನೂ ಹೊಂದುವದಿಲ್ಲವೋ? ಆದಕ್ಕೆ ಒಂದು ಒಳ್ಳೇ ದೃಷ್ಟಾಂತವನ್ನು ಅರ್ಜುನನು ಕೊಡುತ್ತಾನೆ. ಅಂತ ವನಿಗೆ ದುರ್ಗತಿಯು ಪ್ರಾಪ್ತವಾದೀತೆಂಬ ಶಙ್ಕಾ ಉಂಟಾಗಿರುವದರಿಂದ, ಅರ್ಜುನನು ಅಂತಹ ದೃಷ್ಟಾಂತವನ್ನೇ ಕೊಟ್ಟಿರುತ್ತಾನೆ. **ಛಿನ್ನಾಭ್ರಮಿವ**-ಒಂದು ದೊಡ್ಡ ಮೇಘವನ್ನು ಬಿಟ್ಟು ಅಗಲಿದ ಮೇಘದ ಶಕಲವು (ತುಂಡು), ಇನ್ನೊಂದು ಮೇಘವು ಸಿಕ್ಕದೆ ಗಾಳಿಯಲ್ಲಿ ಅದೃಶ್ಯವಾಗಿ ಹೇಗೆ ಶೋಷಿಸಲ್ಪಟ್ಟು ನಾಶಹೊಂದುತ್ತದೆಯೋ ಹಾಗೆ ಈ ಆತ್ಮಧ್ಯಾನವನ್ನು ಬಿಟ್ಟವನು ದುರ್ಗತಿಯನ್ನು ಹೊಂದುವನೋ ಎಂಬ ತಾತ್ಪರ್ಯವು, **ಕಚ್ಚಿತ್** ಎಂದು ಕೇಳಿದುದರಿಂದ ತನ ಗೇನೋ ಸಂದೇಹವುಂಟು, ಅಂತವನೇನು ದುರ್ಗತಿಯನ್ನು ಹೊಂದುವನೋ ಇಲ್ಲವೋ ಎಂಬು ದನ್ನು ಕೃಪೆಯಾ ತಿಳಿಸಬೇಕೆಂಬ ತಾತ್ಪರ್ಯವು. ಅದನ್ನೇ ಮುಂದಿನ ಶ್ಲೋಕದಿಂದ ಪ್ರಾರ್ಥಿಸು ತ್ತಾನೆ—**ಹೇ ಕೃಷ್ಣ** - ಓ ಕೃಷ್ಣನೇ, **ಏತಂ ಮೇ ಸಂಶಯಂ** - ಈ ನನ್ನ ಸಂಶಯವನ್ನು

ಭಾ. ಶ್ರದ್ಧಯಾ ಯೋಗೇ ಪ್ರವೃತ್ತೋ ದೃಢತರಾಭ್ಯಾಸ ರೂಪ ಯತನ ವೈಕಲ್ಯೇನ ಯೋಗಸಂಸಿದ್ಧಿ ಮಪ್ರಾಪ್ಯ ಯೋಗಾಚ್ಚಲಿತಮಾನಸಃ ಕಾಂಗತಿಂ ಗಚ್ಛತಿ? ಉಭಯ ವಿಭ್ರಷ್ಟೋಽಯಂ ಛಿನ್ನಾಭ್ರಮಿವ ಕಶ್ಚಿನ್ನ ನಶ್ಯತಿ? ಯಥಾ ಮೇಘಶಕಲಃ ಪೂರ್ವಸ್ಮಾತ್ ಬೃಹತೋ ಮೇಘಾಚ್ಛಿನ್ನಃ ಪರಂ ಬೃಹನ್ತಂ ಮೇಘ ಮಪ್ರಾಪ್ಯ ಮಧ್ಯೇ ವಿನಷ್ಟೋ ಭವತಿ, ತಥೈವ ಕಚ್ಚಿನ್ನ ನಶ್ಯತಿ? ಕಥಮುಭಯ ವಿಭ್ರಷ್ಟತಾ?

ಸಂಶಯ ಯಾವುದು ಎಂದರೆ ಅಂತವನೇನು ನಾಶವನ್ನು ಹೊಂದುವನೋ, ಹೊಂದುವದಿಲ್ಲವೋ ಎಂಬುದು, ಅಂತಹ ಸಂಶಯವನ್ನು, ಅಶೇಷತಃ - ಶೇಷವಿಲ್ಲದಹಾಗೆ, ಛೇತ್ತುಮರ್ಹಸಿ - ಕತ್ತರಿಸಲು ಯೋಗ್ಯನಾಗಿದ್ದೀಯೇ ; ಅಸ್ಯ ಸಂಶಯಸ್ಯ-ಇಂತಹ ಸಂಶಯವನ್ನು ಛೇತ್ತಾ - ಹೋಗಲಾಡಿಸುವವನು, ನಿವಾರಣೆಮಾಡುವವನು, ತ್ವದನ್ಯಃ - ನಿನಗಿಂತ ಬೇರೆಯಾದವನು ಯಾರೂ, ನ ಹ್ಯುಪಪದ್ಯತೇ – ಸಂಭವಿಸಲಾರರಷ್ಟೇ. ಅದೇನು ಹಾಗೆ ಎಂದರೆ ನೀನು ಸರ್ವಜ್ಞನಾಗಿ, ಪರಮ ಕಾರುಣಿಕನಾಗಿ ಪ್ರಿಯಸಖನಾಗಿರುವದರಿಂದ ನೀನಲ್ಲದೆ ಇನ್ನು ಯಾರೂ ಈ ಸಂದೇಹವನ್ನು ನಿವಾರಣೆ ಮಾಡಲಾರರೆಂಬ ಭಾವವು. "ತಸ್ಯತ್ವಂ ತಮಸೋಽನ್ಧಸ್ಯ ದುಷ್ಪಾರಸ್ಯಾದ್ಯಪಾರಗಃ। ಸಚ್ಚಕ್ಷುರ್ಜನ್ಮನಾ ಮನ್ತ್ರೇ ಲಬ್ಧಂ ಮೇ ತ್ವದನುಗ್ರಹಾತ್" (ಭಾಗ. ೩.೨೫.೮) ಅಪಾರವಾದ ಅಜ್ಞಾನರೂಪ ಸಮುದ್ರವನ್ನು ದಾಟಿಸುವನು ನೀನು, ಹೀಗೆ ಅಜ್ಞಾನದಿಂದ ಕಣ್ಣು ಕಾಣದಿರುವ ನನಗೆ ಶ್ರೇಷ್ಠವಾದ ಕಣ್ಣಾಗಿ ದೊರಕಿರುತ್ತೀಯೇ ಎಂದು ದೇವಹೂತಿಯು ಹೇಳುತ್ತಾಳೆ. ಮುಂದೆ ಇರುವ "ದದಾಮಿ ಬುದ್ಧಿಯೋಗಂ" ಗೀ. ೧೦-೧೦) ದಿವ್ಯಂದದಾಮಿ ತೇ ಚಕ್ಷುಃ" ಎಂಬ ಉಕ್ತಿಗಳೂ ಅನುಸಂಧೇಯಗಳು.

ಭಾಷ್ಯಾರ್ಥವು :—ಅಯತಿಯಾದನಂತರ ಶ್ರದ್ಧಯೋಪೇತವಾಗುವದಿಲ್ಲವು, ಶ್ರದ್ಧಯೋಪೇತನಾಗಿ ಅನಂತರ ಅಯತಿಯಾಗಬಹುದೆಂದು ಊಹಿಸಿ ಮೊದಲು ಶ್ರದ್ಧಯೋಪೇತಃ ಎಂಬುದರ ಅರ್ಥವನ್ನೂ ಅನಂತರ ಅಯತಿ ಎಂಬುದರ ಭಾಷ್ಯವನ್ನೂ ವಿವರಿಸುತ್ತಾರೆ. ಶ್ರದ್ಧಯಾ-ಶ್ರದ್ಧೆಯಿಂದ, ಯೋಗೇ ಪ್ರವೃತ್ತಃ - ಯೋಗಾಭ್ಯಾಸದಲ್ಲಿ ಪ್ರವೃತ್ತಿಯುಳ್ಳವನಾಗಿ, ದೃಢತರಾಭ್ಯಾಸರೂಪ ಯತನ ವೈಕಲ್ಯೇನ - ಸ್ಥಿರವಾದ ಯೋಗಾಭ್ಯಾಸರೂಪವಾದ, ಪ್ರಯತ್ನದ ನ್ಯೂನತೆಯಿಂದ, ಯೋಗಸಂಸಿದ್ಧಿಂ - ಯೋಗಪರಿಪಕ್ವದಶೆಯಾದ ಆತ್ಮಸಾಕ್ಷಾತ್ಕಾರವನ್ನು, ಅಪ್ರಾಪ್ಯ - ಹೊಂದದೆ, ಹೊಂದುವವಕ್ಕೆ ಮುಂಚೆಯೇ ಎಂಬ ತಾತ್ಪರ್ಯವು, ಯೋಗಾಚ್ಚಲಿತ ಮಾನಸಃ - ಆತ್ಮ ಚಿನ್ತನದಿಂದ ಚಲಿಸಲ್ಪಟ್ಟ ಎಂದರೆ ಬಿಡಲ್ಪಟ್ಟ ಮನಸ್ಸುಳ್ಳವನಾಗಿ, ಆತ್ಮಚಿನ್ತನವನ್ನು ಮುಂದಕ್ಕೆ ಅನುಷ್ಠಿಸಲು ಯೋಗ್ಯವಾದ ಚಿತ್ತವೃತ್ತಿಯಿಲ್ಲದವನಾಗಿ ಎಂಬ ಭಾವವು, ಕಾಂ ಗತಿಂ ಗಚ್ಛತಿ? ಎಂತಹ ದಶೆಯನ್ನು ಹೊಂದುವನು? ಆ ದಶೆ ಯೇನು ಒಳ್ಳೆಯದೇ ಕೆಟ್ಟದೇ ಎಂಬ ಅಭಿಪ್ರಾಯವು. ಕಾಂಗತಿಂ ಎಂಬುದರಿಂದ ಆತನಿಗೇನು, ನಿರಯವೇ, ಕಾಮೋಪಭೋಗವೇ, ಸ್ವರ್ಗ ಫಲವೇ? ಎಂಬ ಭಾವವು. ಯಾವಾಗ ಯೋಗಭ್ರಷ್ಟನಾದನೋ ಆಗ ಅದರಿಂದಲೇ ಒಡನೆ ಮೋಕ್ಷವಿಲ್ಲವೆಂಬುದು ವ್ಯಕ್ತವು ಎಂಬ ಭಾವವು. ತನ್ನ ಅಭಿಪ್ರಾಯವು ವ್ಯಕ್ತವಾಗುವಹಾಗೆ ಮುಂದೆ ಹೇಳುತ್ತಾನೆ. ಉಭಯ ವಿಭ್ರಷ್ಟೋ – ಎರಡು ವಿಧದಲ್ಲೂ ಭ್ರಷ್ಟನಾಗಿರುವ ಈ ಯೋಗಭ್ರಷ್ಟನು, " ಛಿನ್ನಾಭ್ರಮಿವನಶ್ಯತಿ? - ಬೇರೆಯಾದ ಅಲ್ಪಮೇಘದ ಹಾಗೆ ಏನಾದರೂ ನಾಶಹೊಂದುತ್ತಾನೆಯೇ? ಈ ದೃಷ್ಟಾಂತ ದಾರ್ಷ್ಟಾಂತವನ್ನು ವ್ಯಕ್ತಪಡಿಸುತ್ತಾರೆ. ಯಥಾಮೇಘ ಶಕಲಃ – ಆಕಾಶದಲ್ಲಿ ದೊಡ್ಡ ಮೇಘದಿಂದ ಪ್ರತ್ಯೇಕಿಸಲ್ಪಟ್ಟ ಮೇಘದ ತುಂಡು ಎಂದರೆ ಅಲ್ಪಭಾಗವು, ಅದನ್ನೇ ವಿಶದೀಕರಿಸು

ಭಾ. ಅಪ್ರತಿಷ್ಠೋ ವಿಮೂಢೋ ಬ್ರಹ್ಮಣಃ ಪಥೀತಿ, ಯಥಾವಸ್ಥಿತಂ ಸ್ವರ್ಗಾದಿ ಸಾಧನ ಭೂತಂ ಕರ್ಮ ಫಲಾಭಿಸನ್ಧಿ ರಹಿತಸ್ಯಾಸ್ಯ ಸ್ವಫಲಸಾಧನತ್ವೇನ ಪ್ರತಿಷ್ಠಾ ನ ಭವ ತೀತ್ಯ ಪ್ರತಿಷ್ಠಃ ; ಪ್ರಕ್ರಾನ್ತೇ ಬ್ರಹ್ಮಣಃಪಥಿ ವಿಮೂಢಃ ತಸ್ಮಾತ್ಪಥಃ ಪ್ರಚ್ಯುತಃ ; ಅತ ಉಭಯ ವಿಭ್ರಷ್ಟ ತಯಾ ಕಿಮಯಂ ನಶ್ಯತ್ಯೇವ, ಉತನ ನಶ್ಯತಿ? ತನೋಣಂ

ತ್ತಾರೆ—ಪೂರ್ವ್ವಸಾತ್ಮಾತ್ ಬೃಹತೋ ಮೇಘಾತ್ ಛಿನ್ನಃ - ಮೊದಲು ತಾನು ಸೇರಿದ್ದ ದೊಡ್ಡ ಮೇಘದಿಂದ ಪ್ರತ್ಯೇಕಿಸಲ್ಪಟ್ಟದುದಾಗಿ, ಪರಂ ಬೃಹನ್ತಂ ಮೇಘ ಮಪ್ರಾಪ್ಯ - ಇನ್ನೊಂದು ದೊಡ್ಡ ಮೇಘವನ್ನು ಹೊಂದದೆ, ಮಧ್ಯೇ ವಿನಷ್ಟೋ ಭವತಿ - ಮಧ್ಯದಲ್ಲಿ ಹೇಗೆ ನಷ್ಟವಾಗುತ್ತದೋ, ತಥೈವ ಕಚ್ಚಿನ್ನ ನಶ್ಯತಿ - ಅವರಹಾಗೇನೂ ನಾಶವಾಗುವದಿ ಲ್ಲವೋ ? ಎಂದರೆ ಕರ್ಮಗಳಿಗೆ ಫಲಾಪೇಕ್ಷೆಯನ್ನು ತೊರೆದುದರಿಂದ, ಕರ್ಮಫಲವೂ ಇಲ್ಲ ವಾಯಿತು; ಮೋಕ್ಷಸಾಧನಭೂತವಾದ ಆತ್ಮ ಸಾಕ್ಷಾತ್ಕಾರವೂ ಇಲ್ಲವಾಯಿತು; ಹೀಗೆ ಉಭಯ ಭ್ರಷ್ಟನಾಗಿ ನಷ್ಟನಾಗುವನೇ ಎಂಬ ಸಂದೇಹವು. ಛಿನ್ನಾಭ್ರಮಿವ ನಶ್ಯತಿ ಎಂಬಲ್ಲಿ ಪ್ರಾಪ್ಯ ಪ್ರಾಪ್ತ್ಯಭಾವಗಳು ವಿಶದವಾಗಿ ತೋರಿಬರುವದರಿಂದ ಆತ್ಮೈಕತ್ವವಾದವನ್ನೊಳಗೊಂಡಿರುವ ಅದ್ವೈತಕ್ಕೆ ಈ ಶ್ಲೋಕವು ಅನುಕೂಲಿಸುವದಿಲ್ಲವು. ಆದರೆ ಅಭ್ರವು ಅಭ್ರದೊಂದಿಗೆ ಸೇರುತ್ತ ದೆಂಬ ಸ್ವರೂಪೈಕ್ಯವು ತೋರಿಬರುತ್ತದಲ್ಲಾ ಎಂದರೆ ಜ್ಞಾನೈಕಾಕಾರತೆಯಿಂದ ಎರಡೂ ಸಮ ರೂಪ ಧರ್ಮಿಗಳೆಂದು ಹೇಳಬಹುದು. ಐಕ್ಯವನ್ನು ಧರ್ಮ ಧರ್ಮಿಗಳಿಗೆ ವಿಶೇಷಣ ವಿಶೇಷ್ಯ ಭಾವದಿಂದ ಹೇಳಬಹುದೇ ವಿನಾ ಎರಡು ಧರ್ಮಿಗಳಿಗೆ ಐಕ್ಯವೆಂದಿಗೂ ಕೂಡುವದಿಲ್ಲವು. ಒಂದು ಬಾಳೇಹಣ್ಣೂ ಇನ್ನೊಂದು ಅತ್ಯುತ್ತಮವಾದುದೂ ಸಹ ಎರಡೂ ಒಂದೇ ವಿಧ ಧರ್ಮಿ ಎಂದು ಹೇಳಿದಂತಾಗುತ್ತದೆ. ಇಲ್ಲಿ ಐಕ್ಯವು ಕೂಡುವದಿಲ್ಲವು, "ಯಥಾನದ್ಯಃ ಸ್ಯಂದಮಾನೇ ಸಮು ದ್ರೇ" (ಮುಂ.೩.೨.೮.) ಎಂಬ ಉಪನಿಷದ್ವಾಕ್ಯವು ಇಲ್ಲಿ ಅನುಸಂಧೇಯವು. ಆದುದರಿಂದಲೇ ಉಪನಿಷದ್ವಾಕ್ಯವು ಪರಮಂ ಸಾಮ್ಯ ಮುಪೈತಿ" ಎಂದಿರುತ್ತದೆ. ಇಲ್ಲಿ ನದ್ಯಃ ಎಂಬ ಬಹುವಚನದಿಂದ ಆತ್ಮ ಭಿನ್ನತ್ವವು ವ್ಯಕ್ತವು. ಹಾಗೆಯೇ ಘಟಾಕಾಶವು ಘಟವು ಒಡೆದು ಹೋಗುವದರಿಂದ ಹೊರಗಿನಾಕಾಶವಲ್ಲಿ ಸೇರುವದೂ ಸಹ ಸ್ವರೂಪೈಕ್ಯವಾಗುವದಿಲ್ಲವು.

ಮುಂದೆ ಉಭಯ ಭ್ರಷ್ಟತೆ ಹೇಗೆ ಎಂಬುದರ ವಿವರಣೆಯು. ಕಥ ಮುಭಯ ವಿಭ್ರಷ್ಟತಾ ? ಹೇಗೆ ಎರಡುವಿಧವಾದ ಭ್ರಷ್ಟತೆಯು ? ಅದಕ್ಕೆ ಉತ್ತರವಾಗಿ "ಅಪ್ರತಿಷ್ಠೋ ವಿಮೂಢೋ ಬ್ರಹ್ಮಣಃ ಪಥೀತಿ" - ಎಂದು ಮೂಲದಲ್ಲಿ ಹೇಳಲ್ಪಟ್ಟಿರುತ್ತದೆ. ಇದರ ಅರ್ಥವೇನೆಂದರೆ ಮೊದಲು ಅಪ್ರತಿಷ್ಠಃ ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ. ಯಥಾವಸ್ಥಿತಂ ಸ್ವರ್ಗಾದಿ ಸಾಧನಭೂತಂ ಕರ್ಮ - ಯಥಾವತ್ತಾಗಿ ಸ್ವರ್ಗಾದಿಗಳಿಗೆ ಸಾಧನಭೂತವಾದ ಕರ್ಮವು, ಫಲಾಭಿಸಂಧಿರಹಿತಸ್ಯ ಅಸ್ಯ ಪುರುಷಸ್ಯ - ಅದರ ಫಲದಲ್ಲಿ ಅಪೇಕ್ಷೆಯಿಲ್ಲದ ಈ ಪುರುಷನಿಗೆ, ಈ ಯೋಗ ಭ್ರಷ್ಟನಿಗೆ ಎಂಬ ಭಾವವು, ಸ್ವಫಲಸಾಧನ ತ್ವೇನ ಪ್ರತಿಷ್ಠಾ ನ ಭವತೀತಿ - ಆ ಕರ್ಮವು ತನ್ನ ಫಲವನ್ನು ಸಾಧಿಸಿಕೊಡುವಂತಹ ಪ್ರತಿ ಷ್ಠೆಯು ಉಂಟಾಗುವದಿಲ್ಲವಾದುದರಿಂದ, ಅವನು ಅಪ್ರತಿಷ್ಠಃ ಎನಿಸುವನು. ಕರ್ಮವು ತನ್ನ ಫಲರೂಪ ಪ್ರತಿಷ್ಠೆಯನ್ನು ಯಾರಿಗೆ ಸಾಧಿಸಿಕೊಡುವದಿಲ್ಲವೋ ಅವನು ಅಪ್ರತಿಷ್ಠನೆನಿಸುವ ನೆಂಬ ಭಾವವು; ಮತ್ತು ಪ್ರಕ್ರಾಂತೇ-ಈಗ ಆರಂಭಿಸಲ್ಪಟ್ಟ, ಬ್ರಹ್ಮಣಃ ಪಥಿ-ಆತ್ಮಾವಲೋಕನ ವನ್ನು ಹೊಂದುವ ಮಾರ್ಗದಲ್ಲಿ, ವಿಮೂಢಃ - ಅಜ್ಞನಾಗಿ ಎಂದರೆ ತಸ್ಮಾತ್ಪಥಃ - ಆ ಬ್ರಹ್ಮ ವಿದ್ಯೆಯ ಮಾರ್ಗದಿಂದ, ಪ್ರಚ್ಯುತಃ - ಜಾರಿದವನಾಗಿ, ಅತಃ – ಆ ಕಾರಣದಿಂದ, ಹೀಗೆ

ಭಾ. ಸಂಶಯ ಮಶೇಷತಶ್ಛೇತ್ತು ಮರ್ಹಸಿ; ಸ್ವತಃ ಪ್ರತ್ಯಕ್ಷೇಣ ಯುಗಪತ್ಸರ್ವಂ ಸರ್ವದಾ ಪಶ್ಯತ ಸ್ತ್ವತ್ತೋಽನ್ಯ ಸ್ಸಂಶಯಸ್ಯಾ ಸ್ಯ ಛೇತ್ತಾ ನಹ್ಯುಪಪದ್ಯತೇ||೩೭, ೩೮, ೩೯||

ಉಭಯ ವಿಭ್ರಷ್ಟತಯಾ - ಎರಡು ವಿಧದಲ್ಲೂ ಭ್ರಷ್ಟತೆಯನ್ನು ಹೊಂದುವವರಿಂದ ಕಿಮಯಂ ನಶ್ಯತ್ಯೇವ, ಉತ ನನಶ್ಯತಿ ? - ಈತನೇನು ನಾಶವನ್ನೇ ಹೊಂದುವನೋ, ಇಲ್ಲವೇ ನಾಶವನ್ನು ಹೊಂದುವದಿಲ್ಲವೋ? ಬ್ರಹ್ಮಣಃಪಥಿ ಎಂಬುದರಿಂದ ಇಲ್ಲಿ ಆತ್ಮಾವಲೋಕನಕ್ಕೆ ಸಾಧನಭೂತವಾದ ಯೋಗಾಭ್ಯಾಸವು ಹೇಳಲ್ಪಟ್ಟಿತು. ವಿಮೂಢ ಶಬ್ದದಿಂದ ವಿಮೋಹಕಾರ್ಯವಾದ ಆತ್ಮಧ್ಯಾನದ ತ್ಯಾಗವು ಸೂಚಿತವು. ಉಭಯ ಭ್ರಷ್ಟತೆ ಹೇಗೆ ಎಂಬುದನ್ನು ಅರ್ಜುನನೇ ಹೀಗೆ ವಿವರಿಸಿ ಹೇಳಿದ್ದರೂ ಕೂಡ ಕೆಲವರು, ಇಹಲೋಕ ಪರಲೋಕಗಳ ಪುರುಷಾರ್ಥವೆಂದು ಅರ್ಥಮಾಡಿರುತ್ತಾರೆ. ಇದು ಸರಿಯಲ್ಲವು: 'ಅಪ್ರತಿಷ್ಠ ಶಬ್ದದಿಂದ ಮೋಕ್ಷೇತರ ಇಹಲೋಕ ಪರಲೋಕ ಪುರುಷಾರ್ಥಗಳು ಸಙ್ಗ್ರಹಿಸಲ್ಪಟ್ಟವು, ವಿಮೂಢೋ ಬ್ರಹ್ಮಣಃಪಥಿ ಎಂಬುವದರಿಂದ ಮೋಕ್ಷಸಾಧನವಾದ ಆತ್ಮಾವಲೋಕನವು, ಹೇಳಲ್ಪಟ್ಟಿತು. ಶ್ರೀಮಚ್ಛಂಕರಾಚಾರ್ಯರವರ ಅರ್ಥವೂ, ಶ್ರೀ ಭಾಷ್ಯಕಾರರ ಅರ್ಥವೂ ಎರಡೂ ಒಂದೇಯಾಗಿರುತ್ತದೆ. ಈ ಅಪ್ರತಿಷ್ಠಃ, ವಿಮೂಢಃ ಎಂಬ ಪದಗಳಲ್ಲಿ ತೋರುವ ಅರ್ಥವನ್ನು ಮನಸ್ಸಿನಲ್ಲಿಟ್ಟು ೪೦ನೆಯ ಶ್ಲೋಕದ ಇಹಾಮುತ್ರ ಶಬ್ದಗಳಿಗೂ ಅರ್ಥ ಮಾಡತಕ್ಕದ್ದು. ತಮೇನಂ ಸಂಶಯಂ - ಅಂತಹ ಈಗ ನನಗುಂಟಾಗಿರುವ ಸಂಶಯವನ್ನು, ಅಶೇಷತಃ - ನಿಶ್ಶೇಷವಾಗಿ, ಛೇತ್ತು ಮರ್ಹಸಿ - ನಾಶಮಾಡಲು ಅರ್ಹನಾಗಿರುತ್ತೀಯೋ, ಹೇಗೆ ಅರ್ಹನು ಎಂದರೆ ಹೇಳುತ್ತಾರೆ. ನೀನು ಸರ್ವಜ್ಞನಾದುದರಿಂದ ಅರ್ಹನು, ಸರ್ವಜ್ಞ ಶಬ್ದಕ್ಕೆ ನಾಥಮುನಿಗಳವರು ದಯಪಾಲಿಸಿದ ಅರ್ಥವನ್ನು ವಿವರಿಸುತ್ತಾರೆ:—ಸ್ವತಃ - ತಾನಾಗಿಯೇ, ಇನ್ನು ಯಾವ ಸಹಾಯವೂ ಬೇಕಿಲ್ಲದೆ, ಪ್ರತ್ಯಕ್ಷೇಣ - ಪ್ರತ್ಯಕ್ಷವಾಗಿಯೇ, ಯುಗಪತ್-ಏಕಕಾಲದಲ್ಲೇ, ಸರ್ವಂ - ಸಮಸ್ತವನ್ನೂ, ಪಶ್ಯತಃ - ನೋಡುವ ಶಕ್ತಿಯುಳ್ಳ, ತ್ವತ್ತಃ - ನಿನಗಿಂತಲೂ, ಅನ್ಯಃ - ಬೇರೆಯಾವವನು, ಅಸ್ಯಸಂಶಯಸ್ಯ - ಈ ಸಂದೇಹವನ್ನು, ಛೇತ್ತಾ-ಕತ್ತರಿಸತಕ್ಕವನು, ಎಂದರೆ ನಿವಾರಣೆಮಾಡುವವನು, ನ ಹ್ಯುಪಪದ್ಯತೇ - ಸಿಕ್ಕಲಾರನಷ್ಟೇ, ಸರ್ವೇಶ್ವರನಾದ ನೀನು ಪೃಥಿವಿಯಲ್ಲಿ ಅವತರಿಸಿದರೂ ನಿನ್ನ ಸ್ವಭಾವವನ್ನು ಬಿಡದೆ ಸರ್ವಜ್ಞನಾಗಿರುವದರಿಂದಲೂ, ಪರಮಕಾರುಣಿಕನಾಗಿಯೂ, ಪ್ರಿಯಬಂಧುವೂ, ಸಖನೂ ಆಗಿಯೂ ಇರುವದರಿಂದಲೂ, ನೀನು ಈ ಸಂಶಯವನ್ನು ನಿವಾರಣೆಮಾಡಬಹುದು. ಇನ್ನು ಯಾರಿಗೂ ಈ ಸಾಮರ್ಥ್ಯವಿಲ್ಲದುದರಿಂದ, ಅವರು ಸಂಶಯವನ್ನು ಹೋಗಲಾಡಿಸಲಾರರೆಂಬ ಭಾವವು. ಇತರರಾದರೋ, ಪ್ರಕೃತಿಸಂಬಂಧವುಳ್ಳವರಾಗಿ, ಕರ್ಮಾಧೀನರಾಗಿ, ಇಂದ್ರಿಯ ಮನಗಳಿಗೆ ವಶ್ಯರಾಗಿ, ಜ್ಞಾನ ತಿರೋಧಾನವುಳ್ಳವರು, ಇಂತವರು ಹೇಗೆ ಸಮರ್ಥರಾದಾರು ಎಂಬ ಭಾವವು. ಇವರು ಎಲ್ಲವನ್ನೂ ಏಕಕಾಲದಲ್ಲಿ ಸಾಕ್ಷಾತ್ಕರಿಸಲಾರರು, ಒಂದರ ಜ್ಞಾನ ಉಂಟಾದಾಗ ಇನ್ನೊಂದರ ಜ್ಞಾನವಿರುವದಿಲ್ಲವು. ಇಂತಹ ದೀನದಶೆಯಲ್ಲಿರುವವರು ಸಂಶಯ ಛೇತ್ತಾ ಆಗಲು ಹೇಗೆ ಯೋಗ್ಯರಾದಾರು? ಶ್ರೀ ನಾಥಮುನಿಗಳವರು ರಚಿಸಿರುವ ನ್ಯಾಯತತ್ವವೆಂಬ ಗ್ರಂಥದ ಮಙ್ಗಳಶ್ಲೋಕದಲ್ಲಿ "ಯೋ ವೇತ್ತಿಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾಸ್ವತಃ। ತಂ ಪ್ರಣಮ್ಯ ಹರಿಂ ಶಾಸ್ತ್ರಂ ನ್ಯಾಯತತ್ವಂ ಪ್ರಚಕ್ಷ್ಮಹೇ" ಎಂದು ಪೂರ್ವಾರ್ಧದಿಂದ ಸರ್ವಜ್ಞತೆಯನ್ನು ಕೊಂಡಾಡಿರುತ್ತಾರೆ. ಅದನ್ನು ಮನಸ್ಸಿನಲ್ಲಿಟ್ಟು "ಸ್ವತಃ ಪ್ರತ್ಯಕ್ಷೇಣ ಯುಗಪತ್ಸರ್ವಂ ಸದಾಪಶ್ಯತಃ" ಎಂದು ಪ್ರಯೋಗಿಸಿರುತ್ತಾರೆ. ಸಂಶಯವು ಯಾವುದೆಂದು ತಿಳಿದು ಉಪದೇಶಿಸುವದು ಸರ್ವಜ್ಞ

ಶ್ರೀ ಭಗವಾನುವಾಚ—

ಮೂ. ಪಾರ್ಥ ನೈವೇಹ ನಾಮುತ್ರ ವಿನಾಶ ಸ್ತಸ್ಯ ವಿದ್ಯತೇ ।
ನಹಿ ಕಲ್ಯಾಣಕೃತ್ಕಶ್ಚಿ ದ್ದುರ್ಗತಿಂ ತಾತ ಗಚ್ಛತಿ ॥ ೪೦.

ನಿಗೆ ಸಲ್ಲುತ್ತೆಯೇ ವಿನಾ ಇತರರಿಗೆ ಅಂತಹ ಸಾಮರ್ಥ್ಯವಿಲ್ಲವೆಂಬ ಭಾವವು. ಇಲ್ಲಿಯೂ ಕೃಷ್ಣ ಶಬ್ದವನ್ನುಪಯೋಗಿಸಿರುವದರಿಂದ ಜ್ಞಾನ ತಿರೋಧಾನಕ್ಕೆ ಕಾರಣಭೂತಗಳಾದ ಸರ್ವ ದೋಷಗಳನ್ನೂ ಆಕರ್ಷಿಸುವ ಶಕ್ತಿಯಿರುವದರಿಂದ ನೀನು ಸಂಶಯಸ್ಯಛೇತ್ತಾ ಎಂಬುದು ನಿಸ್ಸಂದೇಹವು ಎಂದು ಹೇಳಿದಂತಾಯಿತು. ಸರ್ವೇಶ್ವರನು ಅಜ್ಞಾನಾಂಧಕಾರವನ್ನು ತೊಲಗಿಸಿ, ಕೊನೆಗೆ ಸ್ವಸ್ವರೂಪಾವಿರ್ಭಾವವನ್ನುಂಟುಮಾಡುವನೆಂಬುದು ಸೂಚಿತವು.

ಮೂಲಕ್ಕೆ ಅರ್ಥವು :—ಹಿಂದೆ ಅರ್ಜುನನು ಛಿನ್ನಾಭ್ರದಹಾಗೆ ಏನಾದರೂ ವಿನಾಶವನ್ನು ಹೊಂದುವನೋ ಎಂದು ಕೇಳಿದ್ದನು. ಈ ಯೋಗಭ್ರಷ್ಟನಿಗೆ ಉಭಯ ಭ್ರಷ್ಟತೆ ಒದಗಿ ಬಹುಶಃ ಈತನು ದುರ್ಗತಿಯನ್ನು ಹೊಂದಬಹುದೆಂಬ ಸಂಶಯಾವಿಷ್ಟನಾಗಿದ್ದನು. ಆ ಸಂಶಯವನ್ನು ಮೊದಲು ಶ್ರೀ ಕೃಷ್ಣ ಭಗವಾನರವರು ಹೋಗಲಾಡಿಸುತ್ತಾರೆ. ಯೋಗಾಭ್ಯಾಸ ದಿಂದ ಭ್ರಷ್ಟತೆಯು ಯೋಗಾಭ್ಯಾಸದ ಆರಂಭದ ದಶೆಯಲ್ಲಾದರೂ ಉಂಟಾಗಬಹುದು. ಅಥವಾ ಕೆಲವು ಕಾಲ ಯೋಗಾಭ್ಯಾಸ ನಿರತನಾಗಿ ಆನಂತರ ಉಂಟಾಗಬಹುದು. ಇಬ್ಬರಿಗೂ ದುರ್ಗತಿ ಎಂಬುದು ಎಂದಿಗೂ ಇಲ್ಲವು ಎಂದು ಹೇಳುತ್ತಾರೆ. ಇಬ್ಬರಿಗೂ ಶುಭ ಫಲವೇ, ಆ ಫಲಗಳಲ್ಲಿ ತರತಮಭಾವವಿರುವದರಿಂದ ಮೊದಲನೆಯ ವಿಧ ಯೋಗಭ್ರಷ್ಟನಿಗೆ ಮುಂದೆ ಉಂಟಾಗುವ ಸುಕೃತವನ್ನು ೪೧ನೆಯ ಶ್ಲೋಕದಲ್ಲೂ, ಎರಡನೆಯವಿಧ ಯೋಗಭ್ರಷ್ಟ ನಿಗೆ ಉಂಟಾಗುವ ಸುಕೃತವನ್ನು ೪೨ನೆಯ ಶ್ಲೋಕದಲ್ಲೂ ಹೇಳುತ್ತಾರೆ. ಹೇ ಪಾರ್ಥ - ಓ ಅರ್ಜುನನೇ, ತಸ್ಯ - ಆ ಯೋಗಭ್ರಷ್ಟನಿಗೆ, ಇಹ - ಈ ಕರ್ಮಯೋಗಾನುಷ್ಠಾನದ ಸಂದರ್ಭ ದಲ್ಲೂ, ಅಮುತ್ರ ಚ-ಪ್ರಾಕೃತ ಸ್ವರ್ಗಪ್ರಾಪ್ತಿಯಲ್ಲೂ ಮತ್ತು ಮೋಕ್ಷಾನುಭವದಲ್ಲೂ ವಿನಾಶಃ- ಯಾವ ವಿಧವಾದ ನಷ್ಟವೂ, ನ ವಿದ್ಯತೇ - ಇರುವದಿಲ್ಲವು; ನಾಶವು ಯಾವುದು ಎಂದರೆ ಹಿಂದಿನ ಅವಸ್ಥೆಗಿಂತ ನಿಕೃಷ್ಟವಾದ ಅವಸ್ಥೆಯು; ಇಲ್ಲಿ "ವಿನಾಶೋ ನ ವಿದ್ಯತೇ" ಎಂಬ ಪ್ರಯೋಗವು, ಹಿಂದೆ ೨. ೪೦ನೆಯ ಶ್ಲೋಕದಲ್ಲಿ "ನೇಹಾಭಿಕ್ರಮನಾಶೋಸ್ತಿ ಪ್ರತ್ಯವಾಯೋ ನ ವಿದ್ಯತೇ" ಎಂದು ಉಪದೇಶಿಸಿರುವದನ್ನೇ ಸ್ಮೃತಿಪಥಕ್ಕೆ ತರುತ್ತೇನೆಂಬ ಭಾವ ವನ್ನು ಸೂಚಿಸುತ್ತದೆ. ಅದು ಹೇಗೆ ಎಂಬುದನ್ನು ವಿಸ್ತರಿಸಿ ಮುಂದಿನ ಎರಡು ಶ್ಲೋಕ ಗಳಿಂದಲೂ ತಿಳಿಸುತ್ತಾರೆ:—ಪ್ರಕೃತದಲ್ಲಿ ಈ ಯೋಗಭ್ರಷ್ಟನು, ಯೋಗಾಭ್ಯಾಸಾರಂಭ ದಶೆಯಲ್ಲೇಯಾಗಲಿ, ಯೋಗಪರಿಪಕ್ವವಾಗುವ ದಶೆಯಲ್ಲೇಯಾಗಲಿ, ಯೋಗಾಭ್ಯಾಸದಿಂದ ಚ್ಯುತ ನಾದರೆ, ಕರ್ಮಯೋಗದ ಕರ್ಮಾನುಷ್ಠಾನಗಳನ್ನು ಶ್ರದ್ಧೆಯಿಂದ ಅನುಷ್ಠಿಸಿ, ಕಲ್ಯಾಣಕೃತ್ ಸುಕೃತಾನುಷ್ಠಾನಮಾಡಿರುವದರಿಂದ ಅಂತವನಿಗೆ ಎಂದಿಗೂ ದುರ್ಗತಿ ಎಂಬುವದಿಲ್ಲವೆಂದು ಉತ್ತ ರಾರ್ಧದಿಂದ ಹೇಳುತ್ತಾರೆ. ಹೇ ತಾತ - ಓ ಅಪ್ಪನೇ, ಎಂದರೆ ಅತ್ಯರ್ಥಪ್ರಿಯನಾದ ಅರ್ಜು ನನೇ ಎಂಬ ಭಾವವು ; ತಾತ ಶಬ್ದವು ಸಾಧಾರಣವಾಗಿ ಪ್ರೀತಿಸೂಚಕವಾದುದ ರಿಂದ, ಗುರುವು ಪ್ರಿಯನಾದ ಶಿಷ್ಯನಲ್ಲೂ, ಪಿತಾ ಪ್ರಿಯನಾದ ಪುತ್ರನಲ್ಲೂ, ಜ್ಯೇಷ್ಠ ಭ್ರಾತಾ ಕನಿಷ್ಠನಲ್ಲೂ ಪ್ರಯೋಗಿಸುವದುಂಟು ; ಇಲ್ಲಿ ಲೋಕಗುರುವು ತನ್ನ ಪ್ರಿಯಶಿಷ್ಯನಿಗೆ ಉಪ ಯೋಗಿಸಿರುತ್ತಾರೆ. ಕಲ್ಯಾಣ ಕೃತ್ಕಶ್ಚಿತ್ - ಶುಭಕಾರ್ಯಗಳನ್ನೆ ಸಗಿದ ಯಾವನೂ, ದುರ್ಗತಿ ಯನ್ನು, ಎಂದರೆ ಅನಿಷ್ಟ ಫಲವನ್ನು, ನ ಗಚ್ಛತಿ - ಹೊಂದುವದಿಲ್ಲವು. ಒಳ್ಳೇ ಗತಿಯನ್ನೇ

ಭಾ. ಶ್ರದ್ಧಯಾ ಯೋಗೇ ಪ್ರಕ್ರಾನ್ತಸ್ಯ ತಸ್ಮಾತ್ಪ್ರಚ್ಯುತಸ್ಯೇಹ ಚಾ ಮುತ್ರ ಚ ವಿನಾಶೋ ನವಿದ್ಯತೇ ; ಪ್ರಾಕೃತಸ್ವರ್ಗಾದಿ ಭೋಗಾನುಭವೇ ಬ್ರಹ್ಮಾನುಭವೇಚ ಅಭಿಲಷಿತಾನವಾಪ್ತಿರೂಪಃ ಪ್ರತ್ಯವಾಯಾಖ್ಯಾನಿಷ್ಟಾವಾಪ್ತಿರೂಪಶ್ಚ ವಿನಾಶೋ ನವಿದ್ಯತ ಇತ್ಯರ್ಥಃ ; ನಹಿ ನಿರತಿಶಯ ಕಲ್ಯಾಣರೂಪ ಯೋಗಕೃತ್ಕಶ್ಚಿತ್ಕಾಲತ್ರಯೇಪಿ ದುರ್ಗತಿಂ ಗಚ್ಛತಿ ||೪೦||

ಹೊಂದುವನು ಎಂಬ ಭಾವವು. ದುರ್ಗತಿ ಶಬ್ದದಿಂದ ಯಾವಾಗಲೂ ಬದ್ಧ ದಶೆಯಲ್ಲೇ ಇರುವದನ್ನಾಗಲಿ, ಅಥವಾ ನರಕ ಪ್ರಾಪ್ತಿಯನ್ನಾಗಲಿ ಊಹಿಸಬಹುದು. ಇಂತಹ ದುರ್ಗತಿಯು ಈ ಕರ್ಮಯೋಗ ಭ್ರಷ್ಟನಿಗೆ ಇರುವದಿಲ್ಲವು. ಏಕೆಂದರೆ ಸರ್ವೇಶ್ವರ ಕೃಪೆಯಿಂದ ಮುಂದೆಯಾದರೂ ಕರ್ಮಯೋಗ ಪೂರ್ತಿಯಿಂದ ಅನುಗ್ರಹವನ್ನು ಹೊಂದುವನೆಂಬ ಭಾವವು.

ಭಾಷ್ಯಾರ್ಥವು:—ಉಭಯವಿಧ ಪುರುಷಾರ್ಥದಲ್ಲಿ ಅಂತವನಿಗೂ ಕೂಡ[?] ಅನ್ವಯ ಉಂಟೆಂದು ಹೇಳುವದರ ಮೂಲಕ ಉಭಯಭ್ರಷ್ಟತ್ವ ಶಙ್ಕೆಯನ್ನು ಪರಿಹರಿಸುತ್ತಾರೆ. ಶ್ರದ್ಧಯಾ-ಶ್ರದ್ಧೆಯಿಂದ, ಯೋಗೇ ಪ್ರಕ್ರಾನ್ತಸ್ಯ-ಯೋಗಾಭ್ಯಾಸವನ್ನು ಆರಂಭಿಸಿರುವ, ಮತ್ತು ತಸ್ಮಾತ್ - ಆ ಯೋಗಾಭ್ಯಾಸದಿಂದ, ಪ್ರಚ್ಯುತಸ್ಯ - ಜಾರಿದವನಿಗೆ ಎಂದರೆ ಯೋಗಭ್ರಷ್ಟನಿಗೆ, ಇದು ತಸ್ಯ ಎಂಬುದರರ್ಥವು, ಇಹ ಚ ಅಮುತ್ರ ಚ ವಿನಾಶವೆಂಬುವದಿರುವದಿಲ್ಲವು. ಈ ಪದಗಳಿಗೆ ಕ್ರಮವಾಗಿ ಭಾಷ್ಯವನ್ನು ಬರೆಯುತ್ತಾರೆ. ಇಹವೆಂದರೆ ಪ್ರಾಕೃತ ಸ್ವರ್ಗಾದಿ ಭೋಗಾನುಭವೇ - ಪ್ರಕೃತಿ ಸಂಬಂಧದಲ್ಲಿರುವಾಗ ಪ್ರಾಪ್ತವಾಗುವ ಸ್ವರ್ಗಾದಿ ಲೋಕಗಳ ಭೋಗಗಳೂ, ಮತ್ತು ಇಹಲೋಕದ ಭೋಗಗಳೂ, ಇವುಗಳ ಅನುಭವದಲ್ಲೂ, ಇಷ್ಟುದೂರ ಹೀಗೆ ವ್ಯಾಖ್ಯಾನಮಾಡಲು ಕಾರಣವೇನೆಂದರೆ, ಅರ್ಜುನನು ಆತನೇನು ಉಭಯಭ್ರಷ್ಟನೇ ಎಂದು ಕೇಳಿದ್ದನು; ಕರ್ಮಯೋಗದ ಕರ್ಮಾನುಷ್ಠಾನಗಳ ಫಲವೂ ಇಲ್ಲವು, ಮೋಕ್ಷಸಾಧನವಾದ ಯೋಗಫಲವೂ ಇಲ್ಲವು. ಹೀಗೆ ಉಭಯ ಭ್ರಷ್ಟನೇ ಎಂಬ ಪ್ರಶ್ನೆಯು; ಅದಕ್ಕೆ ಅನುಗುಣವಾದ ಉತ್ತರವಾಗಿ ಇಹ ಚ ಅಮುತ್ರ ಚ ವಿನಾಶೋ ನ ವಿದ್ಯತೇ'ಎಂದು ಹೇಳಿದರೆ ಅದಕ್ಕೆ ಅನುಗುಣವಾಗಿಯೇ ವ್ಯಾಖ್ಯಾನವು ಸಮಂಜಸವೆಂದು ಹಾಗೆ ಬರೆದಿರುತ್ತಾರೆ ; ಮೋಕ್ಷಾರ್ಥಿಗೆ ಪುಣ್ಯವೂ ಕೂಡ ಪಾಪರೂಪವಾದುದೇ, ಆದುದರಿಂದ ಪ್ರಕೃತಿ ಸಂಬಂಧದಲ್ಲಿ ಉಂಟಾಗುವ ಸ್ವರ್ಗಾದಿ ಐಶ್ವರ್ಯವೆಲ್ಲಾ ನಶ್ವರವಾದವು. ಇವೆಲ್ಲವೂ ಇಹ ಶಬ್ದದಿಂದ ಬೋಧಿತವು. ಬ್ರಹ್ಮಾನುಭವೇ ಚ-ಇದು ಅಮುತ್ರ ಶಬ್ದಾರ್ಥವು, ಯೋಗ ಪೂರ್ತಿಯಿಂದ ಆತ್ಮಾವಲೋಕನ, ಉಪಾಯಾನುಷ್ಠಾನಾದಿಗಳಿಗೂ, ವಿನಾಶವಿಲ್ಲವೆಂದು ಹೇಳುತ್ತಾರೆ. ಮುಂದೆ ವಿನಾಶ ಶಬ್ದದ ತಾತ್ಪರ್ಯವನ್ನು ಸೂಚಿಸುತ್ತಾರೆ. ಅಭಿಲಷಿತಾನವಾಪ್ತಿರೂಪಃ - ತನ್ನ ಇಷ್ಟಾರ್ಥವನ್ನು ಹೊಂದದೇ ಇರುವಂತಹ, ಪ್ರತ್ಯವಾಯಾಖ್ಯಾನಿಷ್ಟಾವಾಪ್ತಿರೂಪಶ್ಚ-ಮತ್ತು ಅದಕ್ಕೆ ಪ್ರತ್ಯವಾಯವೆಂದು ಹೇಳಿಸಿಕೊಳ್ಳುವ ಅನಿಷ್ಟವನ್ನು ಹೊಂದುವಂತಹ, ವಿನಾಶವು, ನ ಭವತೀತ್ಯರ್ಥಃ - ಉಂಟಾಗುವದಿಲ್ಲವೆಂಬ ತಾತ್ಪರ್ಯವು. ಈತನಿಗೆ ಬೇಕಾದುದು, ಇಷ್ಟಾವಾಪ್ತಿಯು, ಇದು ಮೋಕ್ಷಪ್ರಾಪ್ತಿಗೆ ಬೇಕಾದ ಆತ್ಮಾವಲೋಕನ, ಉಪಾಸನಾದಿಗಳು, ಮತ್ತು ಅನಿಷ್ಟ ನಿವೃತ್ತಿಯು, ಸಂಸಾರಬಂಧ ವಿಮೋಚನೆಯು, ಇವೆರಡೂ ಇಲ್ಲದೆ ಹೋಗುವದೇ ವಿನಾಶವು, ಅಂತಹ ಉಭಯ ಭ್ರಷ್ಟತೆಯೂ ಈ ಯೋಗಭ್ರಷ್ಟನಿಗೆ ಇಲ್ಲವೆಂದು ಸಮಾಧಾನವನ್ನುಹೇಳಿದರು, ಇದಕ್ಕೆ ಕಾರಣವನ್ನು ಹೇಳುತ್ತಾರೆ. ನಿರತಿಶಯವಾದ ಕಲ್ಯಾಣರೂಪವಾದ, ಯೋಗಕೃತ್ - ಯೋಗಾಭ್ಯಾಸಮಾಡಿದವನು, ಕಶ್ಚಿತ್-ಯಾವನೂ,ಕಾಲತ್ರಯೇಪಿ - ಭೂತವರ್ತಮಾನ ಭವಿಷ್ಯತ್ಕಾಲಗಳಲ್ಲೂ

ಭಾ. ಅವ. ಕಥ ಮಯಂ ಭವಿಷ್ಯತೀತ್ಯತ್ರಾಹ—

ಕೂಡ, ದುರ್ಗತಿಂ ನ ಗಚ್ಛತಿ–ಇಷ್ಟಾವಾಪ್ತಿ ಅನಿಷ್ಟ ನಿವೃತ್ತಿಗಳು ಲಭಿಸದ ದುರ್ಗತಿಯನ್ನು ಹೊಂದುವದಿಲ್ಲವು. ಮೂಲದಲ್ಲಿ ಕಾಲತ್ರಯ ರೂಪದ ಭಾವವು ಇಲ್ಲದಿದ್ದರೂ ಗಚ್ಛತಿ ಎಂಬುದು ಅನವಚ್ಛಿನ್ನ ವರ್ತಮಾನ ನಿರ್ದೇಶವಾದುದರಿಂದ,ಅದನ್ನು ತಿಳಿಸುವದಕ್ಕಾಗಿ ಕಾಲತ್ರಯೇಪಿ ಎಂಬ ವ್ಯಾಖ್ಯಾನವು. ಅಂತವನಿಗೆ ಎಂದಿಗೂ ವಿನಾಶವಿಲ್ಲವೆಂದು ಹೇಳುವದಕ್ಕಾಗಿ ಕಾಲತ್ರಯೇಪಿ ಎಂದುಪ ಯೋಗಿಸಿರುತ್ತಾರೆ. ಹಿಂದಿನ ಕಾಲದಲ್ಲೂ ಸುಕೃತಿಯು; ಆದುದರಿಂದಲೇ ಕರ್ಮಯೋಗದಲ್ಲಿ ಆತ ನಿಗೆ ಅಭಿನಿವೇಶ ಉಂಟಾಯಿತು. ವರ್ತಮಾನದಲ್ಲೂ ಕರ್ಮಯೋಗ ಪ್ರವೃತ್ತಿ ಇರುವದರಿಂದ ಸುಕೃತಿಯು, ಮುಂದಕ್ಕೂ ಕೂಡ ಸುಕೃತಿಯೇ, ಹೇಗೆ ಎಂಬುವದನ್ನು ಮುಂದಿನ ಶ್ಲೋಕದಿಂದ ಉಪಪಾದಿಸುತ್ತಾರೆ; ಆದುದರಿಂದಲೇ ಕಾಲತ್ರಯೇಪಿ ಎಂಬ ಪ್ರಯೋಗವು, ಮೂರು ಕಾಲದಲ್ಲೂ ದುರ್ಗತಿಯ ಸಂಭವವಿಲ್ಲವೆಂಬ ಭಾವವು. ಆದುದರಿಂದಲೇ ನಿರತಿಶಯ ಕಲ್ಯಾಣರೂಪ ಯೋಗ ಕೃತ್ತೆಂಬ ಪ್ರಯೋಗವು. ಮಂಡೋದರಿಯು ಹೇಳಿರುವಹಾಗೆ "ಶುಭಕೃಚ್ಛುಭಮಾಪ್ನೋತಿ" ಎಂಬ ವಾಕ್ಯವೂ ಅದಕ್ಕೆ ನಿದರ್ಶನವಾಗಿ, ವಿಭೀಷಣಸ್ಸುಖಂಪ್ರಾಪ್ತಃ ಎಂಬ ವಾಕ್ಯವೂ ಇಲ್ಲಿ ಅನುಸಂಧೇಯಗಳು. ಈ ಶ್ಲೋಕದ ಹಿ ಶಬ್ದವು ಕಾರಣವನ್ನಾಗಲಿ, ಅಥವಾ ಪ್ರಸಿದ್ಧಿ ಯನ್ನಾಗಲಿ ಸೂಚಿಸುತ್ತದೆಂದು ಭಾವಿಸಬಹುದು. ಕಶ್ಚಿತ್ ಎಂದು ಹೇಳಿರುವದು ಸಾರ್ವತ್ರಿಕ ವಾಗಿ ಯಾರೇ ಆಗಲಿ ಯೋಗಮಾಡಬಹುದೆಂಬ ಅಪಶೂದ್ರಾಧಿಕರಣವನ್ನು ನಿರಾಕರಿಸಿ ಹೇಳಿದ ಅಭಿಪ್ರಾಯವಲ್ಲವು. ಯೋಗಾಧಿಕಾರಿಗಳಲ್ಲಿ ಯಾರೇ ಆಗಲಿ ಎಂದು ಕಶ್ಚಿತ್ ಎಂಬ ಶಬ್ದಕ್ಕೆ ಅರ್ಥ ಹೇಳತಕ್ಕದ್ದು. ಈ ಸಂದರ್ಭದಲ್ಲಿ ವಾಚಕರು ಒಂದು ಪೂರ್ವಪಕ್ಷವನ್ನು ತರಬಹುದು ; ಏನೆಂದರೆ—ಗೀತಾ ಶಾಸ್ತ್ರವೇನು ತ್ರಿವರ್ಣದವರಿಗೆ ಮಾತ್ರ ಉಪಯುಕ್ತವಾದ ಶಾಸ್ತ್ರವೇ ? ಇಲ್ಲವೇ, ಎಲ್ಲರಿಗೂ ಉಪಯುಕ್ತವಾದುದೇ ? ಎಂದು ಕೇಳಬಹುದು. ಮೊದಲು ಅಪಶೂದ್ರಾಧಿ ಕರಣವನ್ನನುಸರಿಸಿ, ಮೂರು ವರ್ಣದವರಿಗೆ ಕರ್ಮಯೋಗಾದಿಗಳಿಂದ ಅನುಗೃಹೀತವಾದ ಭಗವದುಪಾಸನೆಯೇ ಎಂದು ಹೇಳಿ, ಅನಂತರ ಅದಕ್ಕೆ ಅಸಮರ್ಥರಾದ ಶೂದ್ರಾದಿ ಸಮಸ್ತ ವರ್ಣದವರಿಗೂ ಯೋಗ್ಯವಾದ ಭರನ್ಯಾಸವನ್ನು ಮುಂದೆ ೧೮ನೆಯ ಅಧ್ಯಾಯದಲ್ಲೂ ಇತರ ಕಡೆ ಯಲ್ಲೂ ವ್ಯಕ್ತಪಡಿಸುವದರಿಂದ ಸಮರ್ಥನಿಗೆ ಉಪಾಸನವೂ, ಅಸಮರ್ಥನಿಗೆ ಶರಣಾಗತಿಯೂ ಹೀಗೆ ಎರಡು ವಿಧ ಉಪಾಯಗಳೂ ಉಪದೇಶಿಸಲ್ಪಟ್ಟಿವೆ ಎಂದು ಸಮಾಧಾನವನ್ನು ಹೇಳು ವೆವು. ಅದನ್ನು ಪ್ರಾಪ್ತ ಸ್ಥಳಗಳಲ್ಲಿ ಸೂಚಿಸುವೆವು.

**ಭಾಷ್ಯಾವತಾರಿಕೆಯ ಅರ್ಥವು:**—ಹಿಂದಿನ ಶ್ಲೋಕದಲ್ಲಿ ಅರ್ಜುನ ಪ್ರಶ್ನೆಗೆ ಒಟ್ಟಿನಲ್ಲಿ ಯೋಗಭ್ರಷ್ಟನಿಗೆ ಉಭಯಭ್ರಷ್ಟತೆಯಿಲ್ಲವೆಂದೂ ಇಷ್ಟುಮಾತ್ರ ಹೇಳಲ್ಪಟ್ಟಿತು. ಯಾವ ವಿಧವಾದ ದುರ್ಗತಿಯೂ ಇಲ್ಲವೆಂದು ಹೇಳಿದುದರಿಂದ, ಆತನಿಗೆ ಸದ್ಗತಿಯು ಉಂಟೇ ಉಂಟು ಎಂಬ ಭಾವವು ತೋರಿಬರುವದರಿಂದ, ಅದು ಯಾವರೀತಿಯಲ್ಲಿ ಪ್ರಾಪ್ತವಾಗುತ್ತದೆಂಬುದನ್ನು ಉಪಪಾದಿಸಿ ಹೇಳುತ್ತಾರೆ. ಅದನ್ನೇ ವಿಸ್ತರವಾಗಿ ಮುಂದೆ ಐದು ಶ್ಲೋಕಗಳಿಂದ ತಿಳಿಸುತ್ತಾರೆ. ಆದುದರಿಂದ ಕಥಮಯಂ ಭವಿಷ್ಯತೀತ್ಯತ್ರಾಹ ಎಂಬ ಅವತಾರಿಕೆಯು. ಅಯಂ–ಈ ಉಭಯ ಭ್ರಷ್ಟತೆಯಿಲ್ಲದಿರೋಣವು, ಇಹ ಅಮುತ್ರ ವಿನಾಶವಿಲ್ಲದಿರೋಣವು, ಹೇಗೆ ಉಂಟಾಗುತ್ತದೆ ಎಂಬ ಸಂದರ್ಭದಲ್ಲಿ ಹೇಳುತ್ತಾರೆ. ಈ ಶ್ಲೋಕಗಳಿಂದ ಯೋಗಭ್ರಷ್ಟನು ಆಚರಿಸಿದ ಅಲ್ಪ ಕಾಲದ ಯೋಗಾಭ್ಯಾಸ ಮಾಹಾತ್ಮ್ಯೆಯಿಂದಲೇ ಏನೇನು ಶ್ರೇಯಸ್ಸುಗಳನ್ನು ಹೊಂದಬಹು ದೆಂಬುದನ್ನು ಉಪದೇಶಿಸುತ್ತಾರೆ.

**ಮೂ. ಪ್ರಾಪ್ಯ ಪುಣ್ಯಕೃತಾಂ ಲೋಕಾ ನುಷಿತ್ವಾ ಶಾಶ್ವತೀ ಸ್ಸಮಾಃ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ೪೧.**

**ಮೂಲಕ್ಕೆ ಅರ್ಥವು**:—**ಯೋಗಭ್ರಷ್ಟಃ** - ಯೋಗಾಭ್ಯಾಸವನ್ನಾರಂಭಿಸಿ ಅದರಿಂದ ಚ್ಯುತನಾದ ಕರ್ಮಯೋಗಿಯು, **ಪುಣ್ಯಕೃತಾಂ** - ತನ್ನ ಅಭಿಲಾಷೆಗನುಸಾರವಾಗಿ ಪುಣ್ಯ ಮಾಡಿದವರಿಗೆ ಲಭಿಸುವ, **ಲೋಕಾನ್**-ಸ್ವರ್ಗಾದಿ ಲೋಕಗಳನ್ನು, **ಪ್ರಾಪ್ಯ**-ಅದಕ್ಕಾಗಿ ಬೇರೆ ಯಾವಕರ್ಮವನ್ನೂ ಮಾಡದೇ ಇರುವುದರಿಂದ ಯೋಗಮಾಹಾತ್ಮೆಯಿಂದಲೇ ಹೊಂದಿ, ಅಲ್ಲಿ **ಶಾಶ್ವತೀಸ್ಸಮಾಃ** - ಶಾಶ್ವತವಾಗಿ ಅನೇಕ ವರ್ಷಗಳು, **ಉಷಿತ್ವಾ** - ವಾಸಮಾಡಿದವನಾಗಿ, ಕಡೆಗೆ ಆ ಯೋಗಮಾಹಾತ್ಮ್ಯೆಯಿಂದಲೇ, **ಶುಚೀನಾಂ** - ಸದಾಚಾರಶೀಲರಾದ, **ಶ್ರೀಮತಾಂ**-ಕರ್ಮಯೋಗ ಉಪಾಸನ ಧರ್ಮಗಳನ್ನು ಚೆನ್ನಾಗಿ ಅನುಷ್ಠಿಸಲು ಬೇಕಾದ ದ್ರವ್ಯಸಂಪತ್ತಿನಿಂದ ಯೋಗದಲ್ಲಿ ಪ್ರವೃತ್ತರಾದ ಶ್ರೀಮಂತರ, **ಗೇಹೇ** - ಮನೆಯಲ್ಲಿ, ಎಂದರೆ ಯೋಗಾಭ್ಯಾಸಮಾಡಲು ಬೇಕಾದ ಕರ್ಮಜ್ಞಾನ ನಿಷ್ಠೆಗಳನ್ನೂ ದ್ರವ್ಯಸಹಾಯವನ್ನೂ ಹೊಂದಿರುವವರ ಮನೆಯಲ್ಲಿ, **ಅಭಿಜಾಯತೇ** - ಹುಟ್ಟುತ್ತಾನೆ. ಇಲ್ಲಿ ಮುಖ್ಯವಾದ ಅಭಿಪ್ರಾಯವೇನೆಂದರೆ ಆತನಗೆ ಬೇರೆ ಅಭಿಲಾಷೆ ಯಿಂದಲ್ಲವೇ ಯೋಗಭ್ರಷ್ಟತೆ ಪ್ರಾಪ್ತವಾಯಿತು, ಆ ಅಭಿಲಾಷೆಯ ಪ್ರಕಾರ ಭೋಗಗಳನ್ನನು ಭವಿಸಿ, ಅನಂತರ ಅದರಲ್ಲಿ ವೈರಾಗ್ಯ ಹುಟ್ಟಿ, ಆತನು ಹಿಂದಿನ ಜನ್ಮದಲ್ಲಿ ಬಿಟ್ಟಿದ್ದ ಯೋಗಾಭ್ಯಾಸವನ್ನು ಪುನಃ ಪ್ರಾರಂಭಿಸುವದಕ್ಕಾಗಿ, ಯೋಗಾಭ್ಯಾಸಮಾಡಲು ಸರ್ವಸೌಕರ್ಯವಿರುವವರ ಮನೆಯಲ್ಲಿ ಪುನಃ ಜನಿಸುತ್ತಾನೆಂಬ ತಾತ್ಪರ್ಯವು. ಸುಮ್ಮನೆ **ಶ್ರೀಮತಾಂ** ಎಂದು ಹೇಳದೆ **ಶುಚೀನಾಂ ಶ್ರೀಮತಾಂ** ಎಂದು ಹೇಳಿರುವದರಲ್ಲಿ ಸ್ವಾರಸ್ಯವೇನೆಂದರೆ, ಅನೇಕ ಶ್ರೀಮಂತರ ಮನೆಗಳಲ್ಲಿ ಸಂಪತ್ತು ಸರ್ವ ಸಮೃದ್ಧಿರೂಪದಲ್ಲಿ ಇರಬಹುದು. ಆದರೆ ಶುಚಿತ್ವವಿಲ್ಲದಿರಬಹುದು. ಅಂತಹ ಮನೆಯು ಈ ಕರ್ಮಯೋಗಭ್ರಷ್ಟನಿಗೆ ಮುಂದಕ್ಕೆ ಕರ್ಮಯೋಗಾನುಷ್ಠಾನಮಾಡುವದಕ್ಕೆ ಅನುಕೂಲವಿಲ್ಲದೆ ಹೋಗಬಹುದು. ಆದುದರಿಂದ **ಶುಚೀನಾಂ ಶ್ರೀಮತಾಂಗೇಹೇ** ಎಂಬ ಪ್ರಯೋಗವು. ವಿಹಿತ ಕರ್ಮಾನುಷ್ಠಾನ, ವಿಹಿತಧರ್ಮ ಮಾರ್ಗಗಳಿಂದ ಧನಾರ್ಜನೆ, ಸತ್ಸಂಪ್ರದಾಯಾನುಗುಣವೃತ್ತಿ, ಭಗವನ್ನಿವೇದಿತವಾಗಿ ಸಂಸ್ಕಾರಹೊಂದಿದ ಸಾತ್ವಿಕಾಹಾರ ಸೇವನೆ, ಕಾಮಕ್ರೋಧಾದಿದುರ್ವೃತ್ತಿರಾಹಿತ್ಯವು, ವಾಙ್ಮನಸ್ಸಿನ ಪರಿಶುದ್ಧತೆಯು, ಇವೆಲ್ಲವೂ ಶುಚಿತ್ವದಲ್ಲಿ ತೋರುವ ಅಭಿಪ್ರಾಯಗಳು. **"ಮಾನಿಷಾದ ಪ್ರತಿಷ್ಠಾಂತ್ವ ಮಗಮ ಶ್ಶಾಶ್ವತೀಸ್ಸಮಾಃ"** ಎಂದು ಶ್ರೀಮದ್ರಾಮಾಯಣ ಮಙ್ಗಳಶ್ಲೋಕದಲ್ಲಿ, ಓ ಲಕ್ಷ್ಮೀ ನಿವಾಸನೇ, ನೀನು ಸರ್ವಕಾಲದಲ್ಲೂ ಪ್ರತಿಷ್ಠೆಯನ್ನು ಹೊಂದುವನಾಗು ಎಂದು ಹೇಳಿರುವಹಾಗೆ, **ಶಾಶ್ವತೀಸ್ಸಮಾಃ** ಎಂಬುದು ಸಾರ್ವಕಾಲಿಕ ಅರ್ಥವುಳ್ಳದ್ದಲ್ಲವು; ಅನೇಕ ವರ್ಷಗಳು ಆ ಭೋಗದಲ್ಲಿ ವೈತೃಷ್ಣ್ಯಯುಂಟಾಗುವತನಕ ಎಂದು ಪರಿಚ್ಛಿನ್ನಾರ್ಥವನ್ನು ಹೇಳತಕ್ಕದ್ದಾಗಿರುತ್ತದೆ; **ಉಷಿತ್ವಾ ಅಭಿಜಾಯತೇ** ಎಂಬುದರಿಂದಲೇ ಈ ಪರಿಚ್ಛಿನ್ನಾರ್ಥವು ವ್ಯಕ್ತವು. ಆದುದರಿಂದ ಬಹು ಸಂವತ್ಸರಗಳು ವಿಚ್ಯುತಿ ಇಲ್ಲದೆ ವಾಸಮಾಡಿ ಎಂಬ ತಾತ್ಪರ್ಯವು.

**ಭಾಷ್ಯಾರ್ಥವು**: —ಉಭಯ ಭ್ರಷ್ಟತೆಯನ್ನು ಪರಿಹರಿಸುವದಕ್ಕಾಗಿ ಹಿಂದೆ ಹೇಳಿದ ಅಭಿಪ್ರಾಯವನ್ನು ಉಪಪಾದಿಸಿ ಹೇಳುತ್ತಾರೆ. **"ಪ್ರಾಪ್ಯ"** ಎಂದು ಈ ಶ್ಲೋಕದಿಂದಾರಂಭಿಸಿ ೪೫ನೆಯ ಶ್ಲೋಕದಲ್ಲಿ **"ಪರಾಂಗತಿಂ"** ಎಂದಿರುವವರೆಗೂ ಉಪಪಾದನೆಯು ಎಂಬ ಭಾವವು. ಯೋಗಭ್ರಂಶಕ್ಕೆ ಕಾರಣವು, ಈ ಯೋಗಿಗೆ ಐಹಿಕಾದಿ ಪುರುಷಾರ್ಥಗಳಲ್ಲಿ ಅಭಿಲಾಷೆಯು; ಆದುದರಿಂದ ತದನುಭವಕ್ಕಾಗಿ ಯೋಗ್ಯವಾದವರ ಮನೆಯಲ್ಲಿ ಜನ್ಮವು; ಅದನ್ನು ಅನುಭವಿಸಿದನಂತರ

ಭಾ. ಯಜ್ಜಾತೀಯಭೋಗಾಭಿಕಾಂಕ್ಷಯಾ ಯೋಗಾತ್ಪ್ರಚ್ಯುತೋಽಯಮತಿ ಪುಣ್ಯಕೃತಾಂ ಪ್ರಾಪ್ಯಾನ್ ಲೋಕಾನ್ ಪ್ರಾಪ್ಯ, ತಜ್ಜಾತೀಯಾನತಿಕಲ್ಯಾಣಾನ್ ಭೋಗಾನ್ ಯೋಗಮಾಹಾತ್ಮ್ಯಾದೇವ ಭುಂಜಾನೋ ಯಾವತ್ತದ್ಭೋಗತೃಷ್ಣಾವಸಾನಂ, ಶಾಶ್ವತೀಸ್ಸಮಾಸ್ತತ್ರೋಷಿತ್ವಾ, ತಸ್ಮಿನ್ ಭೋಗೇ ವಿತೃಷ್ಣಃ, ಶುಚೀನಾಂ ಶ್ರೀಮತಾಂ - ಯೋಗೋಪಕ್ರಮ ಯೋಗ್ಯಾನಾಂ ಕುಲೇ, ಯೋಗೋಪಕ್ರಮೇ ಭ್ರಷ್ಟೋ ಯೋಗಮಾಹಾತ್ಮ್ಯಾಜ್ಜಾಯತೇ ॥೪೧॥

ಆದರಲ್ಲಿ ವೈರಾಗ್ಯವುಂಟಾಗಿ, ಪುನಃ ಕರ್ಮಯೋಗಾನುಷ್ಠಾನಕ್ಕೆ ಅವಕಾಶವು ದೊರೆಯುವಂತಹ ಶ್ರೀಮತಾಂಗೇಹೇ ಹುಟ್ಟುವನೆಂದು ತಿಳಿಸುತ್ತಾರೆ. ಯಜ್ಜಾತೀಯ ಭೋಗಾಭಿಕಾಂಕ್ಷಯಾ - ಯಾವವಿಧವಾದ ಭೋಗದ ಅಪೇಕ್ಷೆಯಿಂದ, ಯೋಗಾತ್ಪ್ರಚ್ಯುತಃ-ಯೋಗದಿಂದ ಜಾರಿದವನಾಗಿ, ಅಯಂ-ಈ ಕರ್ಮಯೋಗಿಯು, ಅತಿ ಪುಣ್ಯಕೃತಾಂ-ತುಂಬಾ ಪುಣ್ಯಮಾಡಿದವರಿಗೆ, ಪ್ರಾಪ್ಯಾನ್-ಹೊಂದಲು ಸಾಧ್ಯವಾದ, ಲೋಕಾನ್ ಪ್ರಾಪ್ಯ - ಲೋಕಗಳನ್ನು ಹೊಂದಿ, ತಜ್ಜಾತೀಯಾನ್-ಆ ವಿಧಗಳಾದ, ಅತಿಕಲ್ಯಾಣಾನ್ - ಶುಭತರಗಳಾದ, ಅಲ್ಲಿ ಈತನಿಗೆ ಪ್ರಾಪ್ತವಾಗುವ ಭೋಗಗಳು ಅತಿಶಯವಾಗುವಹಾಗೆ ಕೃಪೌದಾರ್ಯಗಳಿಂದ ಪ್ರೇರಿತನಾದ ಭಗವಂತನು ಅವುಗಳನ್ನು ಕೊಡುವನೆಂಬ ಭಾವವನ್ನು ಸೂಚಿಸುವದಕ್ಕಾಗಿ, ಅತಿ ಕಲ್ಯಾಣಾನ್ ಭೋಗಾನ್ ಎಂಬ ಪ್ರಯೋಗವು; ಭೋಗಾನ್-ಭೋಗಗಳನ್ನು, ಯೋಗ ಮಾಹಾತ್ಮ್ಯಾದೇವ-ಫಲಕಾರಿಗಳಾಗಲು ಯಾವ ಕರ್ಮಗಳನ್ನೂ ಫಲಾಭಿಸಂಧಿಪೂರ್ವಕವಾಗಿ ಅನುಷ್ಠಿಸದೇ ಇರುವವನರಿಂದ ಯೋಗದ ಮಾಹಾತ್ಮ್ಯೆಯಿಂದಲೇ, ಯಾವದ್ಭೋಗತೃಷ್ಣಾವಸಾನಂ - ಎಲ್ಲಿವರೆಗೂ ಆ ಭೋಗದಲ್ಲಿ ಆಶೆಯು ಕೊನೆಗಾಣುತ್ತದೋ ಆವರೆಗೂ, ಶಾಶ್ವತೀ ಸಮಾಸ್ತತ್ರೋಷಿತ್ವಾ-ಅನೇಕ ಸಂವತ್ಸರಗಳು ಅಲ್ಲಿ ವಾಸ ಮಾಡಿ, ತಸ್ಮಿನ್ ಭೋಗೇ ವಿತೃಷ್ಣಃ-ಅನಂತರ ಆ ಭೋಗದಲ್ಲಿ ಆಶೆಯಿಲ್ಲದವನಾಗಿ, ಶುಚೀನಾಂ ಶ್ರೀಮತಾಂ ಎಂದರೆ ಯೋಗೋಪಕ್ರಮ ಯೋಗ್ಯಾನಾಂ-ಸದಾಚಾರ ಸಂಪನ್ನತೆ ಧನಸಮೃದ್ಧಿ ಇವುಗಳಿಂದ ಯೋಗಾಭ್ಯಾಸವನ್ನು ಉಪಕ್ರಮಿಸಲು ಯೋಗ್ಯರಾದ, ಕುಲೇ - ಮನೆಯಲ್ಲಿ, ಇದು ಗೇಹೇ ಎಂಬುವವರರ್ಥವು, ಯಾವಾಗ ಅಂತವರ ಮನೆಯಲ್ಲಿ ಹುಟ್ಟಿದನೋ, ಆಗ ಯೋಗಾಭ್ಯಾಸವನ್ನು ಉಪಕ್ರಮಿಸಲು ಯೋಗ್ಯತೆಯನ್ನು ಹೊಂದುವನೆಂಬ ಭಾವವು, ಯೋಗೋಪಕ್ರಮೇ ಭ್ರಷ್ಟಃ - ಯೋಗಾಭ್ಯಾಸವನ್ನು ಪ್ರಾರಂಭಿಸಿ ಭ್ರಷ್ಟನಾದವನು, ಯೋಗಮಾಹಾತ್ಮ್ಯಾತ್ - ಸ್ವಲ್ಪಕಾಲ ಅನುಷ್ಠಿಸಿದಯೋಗಮಾಹಾತ್ಮ್ಯೆಯಿಂದಲೇ, ಜಾಯತೇ - ಹುಟ್ಟುತ್ತಾನೆ. ಯೋಗಭ್ರಷ್ಟನೇನು ಉಭಯಭ್ರಷ್ಟನೇ, ಅವನ ಮುಂದಿನಗತಿ ಎಂತಾದ್ದೆಂಬ ಪ್ರಶ್ನೆಗೆ ಶ್ರೀಕೃಷ್ಣಭಗವಾನರವರು ಅವನಿಗೆ ಎಂದಿಗೂ ದುರ್ಗತಿ ಇಲ್ಲವೆಂದೂ, ತ್ರಿಕಾಲದಲ್ಲೂ ದುರ್ಗತಿ ಇಲ್ಲವೆಂದೂ ಮೊದಲು ಹೇಳಿಬಿಟ್ಟು, ಯೋಗಾಭ್ಯಾಸದ ಉಪಕ್ರಮದಲ್ಲಿ ವಿಚ್ಯುತಿಯುಂಟಾದವನಿಗೆ ಪ್ರಾಪ್ತವಾಗುವ ಸದ್ಗತಿಗಳನ್ನು ಈ ಶ್ಲೋಕದಲ್ಲಿ ಉಪಪಾದಿಸಿ, ಯೋಗನಿಷ್ಪತ್ತಿಯುಂಟಾಗುವ ಕಾಲದಲ್ಲಿ ಯೋಗಭ್ರಷ್ಟತೆಯುಂಟಾದರೆ ಅವನಿಗೆ ಪ್ರಾಪ್ತವಾಗುವ ಸದ್ಗತಿಗಳು ೪೨-೪೩ನೆಯ ಪೂರ್ವಾರ್ಧ ಇವುಗಳಿಂದ ಹೇಳಲ್ಪಟ್ಟು, ಒಂದುವೇಳೆ ಯೋಗಾಭ್ಯಾಸೋಪಕ್ರಮವೇ ಇನ್ನೂ ಆಗದೇ ಇದ್ದರೂ ಕೂಡ, ಯೋಗಸಙ್ಕಲ್ಪವುಳ್ಳವನಿಗೂ ಸದ್ಗತಿಯುಂಟೆಂದು ೪೩ನೆಯ ಉತ್ತರಾರ್ಧದಿಂದ ತಿಳಿಸುತ್ತಾರೆ. ಇವುಗಳಲ್ಲೆಲ್ಲಾ ಯೋಗಾಭ್ಯಾಸಕ್ಕೆ ವಿಘ್ನವಾಗಿ ಪ್ರಾಕೃತ ಭೋಗಾಸಕ್ತಿಯುಂಟಾದುದರಿಂದ ಸರ್ವೇಶ್ವರನು ಆ ಪ್ರಾಕೃತ ಭೋಗಗಳನ್ನು ಈ ಲೋಕದಲ್ಲಾಗಲಿ, ಸ್ವರ್ಗಾದಿ ಲೋಕಗಳಲ್ಲಾಗಲಿ, ಆತನ ಮನೋರಥಾನುಗುಣವಾಗಿ ಅನುಭವಿಸುವಹಾಗೆ ಮಾಡಿ, ಕೊನೆಗೆ

ಅವುಗಳಲ್ಲಿ ಜಿಜ್ಞಾಸೆಯನ್ನು ಹುಟ್ಟಿಸಿ, ಪುನಃ ಈ ಲೋಕದಲ್ಲೇ ಯೋಗವನ್ನು ಅನುಷ್ಠಿಸುವುದಕ್ಕೆ ಯೋಗ್ಯವಾಗುವಹಾಗೆ, ಸರಿಯಾದ ಅಧಿಕಾರಿಗಳ ಕುಲದಲ್ಲಿ ಜನಿಸುವನೆಂಬುದು ಈ ಶ್ಲೋಕಗಳಿಂದ ತೋರಿಬರುವ ಮುಖ್ಯ ತಾತ್ಪರ್ಯವು. ಇವನು ತನ್ನ ಅಭಿಲಷಿತಗಳಾದ ಭೋಗಗಳನ್ನನುಭವಿಸುವದೂ, ಅನಂತರ ಯೋಗಪೂರ್ತಿಗೆ ಸಾಧನವನ್ನು ಮಾಡಿಕೊಳ್ಳುವದೂ, ಎಲ್ಲವೂ ಹಿಂದಿನ ಯೋಗಮಾಹಾತ್ಮ್ಯ ಎಂದೇ ಭಾವಿಸತಕ್ಕದ್ದೆಂಬುದು ಅಭಿಪ್ರಾಯವು. ಪ್ರಕೃತ ಈ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ವಿಷಯಗಳು ಯಾವುವೆಂದರೆ—ಯೋಗಾಭ್ಯಾಸದ ಆರಂಭದಶೆಯಲ್ಲಿ ವಿಚ್ಯುತಿಯುಂಟಾದುದು ತನ್ನ ಪ್ರಾಕೃತಭೋಗಾಭಿಲಾಷೆಯಾದುದರಿಂದ, ತದ್ಭೋಗಾನುಭವಕ್ಕಾಗಿ (೧) ಪುಣ್ಯಮಾಡಿದವರಿಗೆ ಯಾವ ಲೋಕಗಳು ಪ್ರಾಪ್ತವಾಗುತ್ತವೋ, ತನ್ನ ಅಭಿಲಷಿತ ಭೋಗಾನುಭವಕ್ಕೆ ಅನುಗುಣವಾದ ಲೋಕಪ್ರಾಪ್ತಿಯೂ (೨)ಹೀಗೆ ಪ್ರಾಪ್ತವಾಗುವದಕ್ಕೆ ಫಲಾಭಿಕಾಂಕ್ಷಿಯಾಗಿ ಯಾವ ಕರ್ಮಗಳನ್ನೂ ನಡೆಸದೇ ಇರುವದರಿಂದ ಕರ್ಮಯೋಗವನ್ನು ಪ್ರಾರಂಭಿಸಿ ಬಂದ ಯೋಗಾಭ್ಯಾಸದ ಮಾಹಾತ್ಮ್ಯೆಯಿಂದಲೇ ಲಭಿಸುತ್ತದೆಂಬುದೂ (೩) ಅನಂತರ ತನ್ನ ಅಭಿಲಷಿತ ಮನೋರಥದಲ್ಲಿ ಜಿಹಾಸೆಯೂ (ಇದು ಎಲ್ಲಿವರೆಗೆ ಎಂದರೆ **ಶಾಶ್ವತೀಸ್ಸಮಾಃ ಉಷಿತ್ವಾ ತಸ್ಮಿನ್ಭೋಗೇ ವಿತೃಷ್ಣಃ** ಎಂದರೆ, ವೈರಾಗ್ಯವುಂಟಾಗುವತನಕವೆಂಬುದು ಫಲಿತಾರ್ಥವು.) (೪) ತದನಂತರ ತಾನು ಬಿಟ್ಟ ಯೋಗಾಭ್ಯಾಸವನ್ನು ಪೂರ್ತಿಮಾಡುವದಕ್ಕೆ **ಶುಚೀನಾಂ ಶ್ರೀಮತಾಂ** ಯವರ ಗೃಹದಲ್ಲಿ ಜನ್ಮವೂ ಸಹ ಪ್ರಾಪ್ತವಾಗುತ್ತವೆಂಬ ತಾತ್ಪರ್ಯವು. ಇಲ್ಲಿ ಶುಚಿತ್ವ ಶ್ರೀಮತ್ವವಿರುವವರ ಮನೆಯೆಂದು ಹೇಳಿರುವದರಿಂದ,ಅವುಗಳು ಯೋಗೋಪಕಾರಕಗಳು ಎಂಬಭಿಪ್ರಾಯದಿಂದ **ಯೋಗೋಪಕ್ರಮ ಯೋಗ್ಯಾನಾಂ** ಎಂದು ವ್ಯಾಖ್ಯಾನಮಾಡಲ್ಪಟ್ಟಿತು. ಯೋಗಭ್ರಷ್ಟನು ಯೋಗವನ್ನು ಬಿಟ್ಟಮುದರಿಂದ ಮುಂದಿನ ಜನ್ಮದಲ್ಲಿ ಯೋಗಾಭ್ಯಾಸಕ್ಕೆ ಉಪಕಾರಕರಾಗುವವರ ಮನೆಯಲ್ಲಿ ಹುಟ್ಟುತ್ತಾನೆಂಬ ತಾತ್ಪರ್ಯವು. ಇದು ಯೋಗೋಪಕ್ರಮದಶೆಯಲ್ಲಿ ಯೋಗಭ್ರಷ್ಟನಾದವನನ್ನು ಕುರಿತ ಅಧಿಕಾರಿಯ ವಿಷಯವೆಂದು ಹೇಳಲು ಸಾಧ್ಯವೇನು? ಎಂದು ಪ್ರಶ್ನಿಸಬಹುದು; ಇದಕ್ಕೆ ಸಮಾಧಾನವು—ಮುಂದಿನ ಶ್ಲೋಕದಲ್ಲಿ"**ಅಥವಾ ಯೋಗಿನಾಮೇವ ಕುಲೇ ಮಹತಿ ಧೀಮತಾಂ**"ಇದಕ್ಕಿಂತ ಅತಿಶಯಿತ ಜನ್ಮವಾಗಿ, ಅದು ದುರ್ಲಭತರಂ ಜನ್ಮವೆಂದು ಇನ್ನೊಂದುವಿಧ ಯೋಗಭ್ರಷ್ಟನಿಗೆ ಹೇಳಿರುವದರಿಂದ, ಇವೆರಡುವಿಧ ಅಧಿಕಾರಿಗಳಿಗೂ ವೈಲಕ್ಷಣ್ಯವನ್ನು ಕಲ್ಪಿಸಬೇಕಾಗಿರುತ್ತದೆಯಾದುದರಿಂದ, ಈ ಶ್ಲೋಕದಲ್ಲಿ ಹೇಳಿರುವ ದಶೆಯು ಯೋಗೋಪಕ್ರಮ ದಶೆಯಲ್ಲುಂಟಾದ ಯೋಗಭ್ರಷ್ಟತೆಯೆಂದೂ, ಮುಂದಿನ ಶ್ಲೋಕದಲ್ಲಿ ಉಕ್ತವಾದ ದಶೆಯು ಯೋಗವಿಪಾಕದಶೆಯೆಂದೂ ಅರ್ಥಮಾಡುವದು ಉಚಿತವೆಂದೂ, ವ್ಯಾಖ್ಯಾನ ಮಾಡಿರುತ್ತಾರೆ. ಕೆಲವರು ಇದು ಯೋಗಭ್ರಷ್ಟನಾದ ಸನ್ಯಾಸಿಯ ವಿಷಯವೆಂದು ಹೇಳುವರು. ಇದು ಕರ್ಮಯೋಗಾಧಿಕಾರಿಯನ್ನು ಕುರಿತು ಹೇಳಿದ ಉಪದೇಶವೆಂದು ಅನೇಕಸಲ ಹೇಳಿರುತ್ತೇವೆ. ಸನ್ಯಾಸಿಯನ್ನು ಮಾತ್ರ ಕುರಿತು ಹೇಳಿದುದು ಎಂದರೆ ಗೀತೆಯ ಉಪದೇಶಕ್ಕೆ ತುಂಬಾ ನ್ಯೂನತೆಯುಳ್ಳ ಅನ್ವಯವನ್ನು ಹೇಳಿ,ಅದಕ್ಕೆ ತುಂಬಾ ಸಙ್ಕೋಚವನ್ನುಂಟುಮಾಡಿದಹಾಗಾಗುತ್ತದೆ||೪೧||

**ಮೂಲಕ್ಕೆ ಅರ್ಥವು:**—ಹಿಂದೆ ಹೇಳಿದುದಕ್ಕೆ ವಿಕಲ್ಪಿಸಿ, **ಅಥವಾ** ಎಂದಾರಂಭಿಸಿ ಹೇಳುತ್ತಾರೆ. ಇಲ್ಲಿ ಪೂರ್ವಕ್ಕಿಂತ ಅತಿಶಯಿತ ಜನ್ಮ ಉಂಟಾಗುತ್ತದೆಂದೂ,ಅದು ಎಲ್ಲರಿಗೂ ಲಭಿಸಲಾರದೆಂದೂ ಹೇಳುವದರಿಂದ ಈ ಅಧಿಕಾರಿಯಲ್ಲಿ ಹಿಂದಿನ ಅಧಿಕಾರಿಗಿಂತ ಸ್ವಲ್ಪ ಅತಿಶಯಿತ ಸುಕೃತವಿರಬೇಕೆಂಬುದು ಸಿದ್ಧವು. ಈ ಸಂದರ್ಭದಲ್ಲಿ ಅಥವಾ ಎಂದರೆ ಹಾಗಲ್ಲದಿದ್ದರೆ ಎಂಬರ್ಥವಲ್ಲವು; ಹಿಂದೆ ಹೇಳಿದ ಅಧಿಕಾರಿಗೆ ಶುಚೀನಾಂ ಶ್ರೀಮತಾಂಗೇಹದಲ್ಲಿ ಜನ್ಮ ಉಂಟಾಗುತ್ತದೆಂದು ಹೇಳಿ, **ಅಥವಾ** ಎಂಬುದರಿಂದ ಅದೇ ಅಧಿಕಾರಿಗೇನೇ ಬೇರೆವಿಧ ಸುಕೃತ ಉಂಟಾಗುತ್ತದೆಂದು

**ಮೂ. ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಂ ॥ ೪೨.**

**ಭಾ. ಪರಿಪಕ್ವಯೋಗಶ್ಚಲಿತಶ್ಚೇತ್, ಯೋಗಿನಾಂ ಧೀಮತಾಂ – ಯೋಗಂ ಕುರ್ವತಾಂ ಸ್ವಯಮೇವ ಯೋಗೋಪದೇಶಕ್ಷಮಾಣಾಂ, ಕುಲೇ ಭವತಿ. ತದೇತದುಭಯ**

ಹೇಳಿದರೆ ಸಾಮಂಜಸ್ಯಕ್ಕೆ ಹಾನಿಯು. ಕೆಲವರು ಒಬ್ಬ ಅಧಿಕಾರಿಗೇನೆ ವಿಕಲ್ಪ ಫಲವನ್ನು ಏಕೆ ಹೇಳಕೂಡದೆನ್ನುವರು; ಆಸಂದರ್ಭದಲ್ಲಿ ಒಂದು ಅನುಷ್ಠಾನಕ್ಕೇನೇ ಒಂದಕ್ಕಿಂತ ಅತಿಶಯಿತ ಜನ್ಮರೂಪವಾದ ತರತಮ ಫಲವನ್ನು ಹೇಳಿದಂತಾಗುವದಿಲ್ಲವೇ ? ದುರ್ಲಭತರಂ ಎಂಬಲ್ಲಿರುವ ತರ ಶಬ್ದಕ್ಕೆ ಸ್ವಾರಸ್ಯವಿಲ್ಲವಾಗುತ್ತದೆ. ಶುಚೀನಾಂ ಶ್ರೀಮತಾಂಗೇಹೇ ಜನ್ಮವು ದುರ್ಲಭವೆಂದೂ ಯೋಗಿನಾಂ ಧೀಮತಾಂ ಕುಲೇ ಜನ್ಮ ದುರ್ಲಭತರಂ ಎಂದು ಗ್ರಹಿಸುವದು ತುಂಬಾ ಸ್ವಾರಸ್ಯವು. ಎರಡು ಅನುಷ್ಠಾನಗಳಿಗಾದರೋ ವಿಕಲ್ಪಿಸಿ ಒಂದೇ ಫಲವು ಅನೇಕ ಕಡೆಗಳಲ್ಲಿ ಹೇಳಲ್ಪಟ್ಟಿವೆ. ಆದರೆ, ಒಂದು ಅನುಷ್ಠಾನಕ್ಕೇನೆ ಉತ್ಕೃಷ್ಟ ನಿಕೃಷ್ಟರೂಪ ಎರಡು ಫಲಗಳನ್ನು ಹೇಳುವದು ಅಶಾಸ್ತ್ರೀಯವು. ಆದುದರಿಂದಲೇ ಶ್ರೀ ಭಾಷ್ಯಕಾರರು ಭಿನ್ನಾಧಿಕಾರಿಗಳಾಗಿ ವಿಕಲ್ಪಿಸಿ ಅರ್ಥ ಮಾಡಿರುತ್ತಾರೆ. ಹಿಂದೆ ಹೇಳಿದುದೂ ಅಲ್ಲದೆ ಬೇರೆ ಹೇಳತಕ್ಕ ವಿಷಯ ಉಂಟೆಂಬುದು ಅಥವಾ ಶಬ್ದಾರ್ಥವು. ಆಗಲಿ, ನಿತ್ಯನೈಮಿತ್ತಿಕಗಳಿಗೆ ಸ್ವರ್ಗಾದಿಫಲವೂ, ಮೋಕ್ಷೋಪಯೋಗವಾದ ಅನನ್ಯಭಕ್ತಿಜನಕತ್ವವೂ ಉಂಟಲ್ಲಾ ಎಂದರೆ, ಅಲ್ಲಿಯೂ ಫಲಾಭಿಸಂಧಿಯೂ ಮತ್ತು ತದ್ರಾಹಿತ್ಯರೂಪವಾದ ಅನುಷ್ಠಾನ ಭೇದಗಳು ಉಂಟೆಂದು ಸಮಾಧಾನವನ್ನು ಹೇಳುವೆವು. **ಧೀಮತಾಂ** - ಯೋಗವನ್ನು ಉಪದೇಶಿಸಲು ಯೋಗ್ಯವಾದ ಜ್ಞಾನವುಳ್ಳ, **ಯೋಗಿನಾಮೇವ** - ಯೋಗಾಭ್ಯಾಸದಲ್ಲಿರುವವರ, **ಕುಲೇ** – ಮನೆಯಲ್ಲಿ, **ಲೋಕೇ** - ಲೋಕದಲ್ಲಿ ಎಂದರೆ ಇಂತಹ, ಯೋಗದಮಾಹಾತ್ಮ್ಯೆ ಇಲ್ಲದಿರುವ, ಚೇತನರ ವಿಷಯದಲ್ಲಿ ಎಂಬರ್ಥವು. **ಜನ್ಮ**-ಜನ್ಮವು, **ಭವತಿ** - ಪ್ರಾಪ್ತವಾಗುತ್ತದೆ· **ಈದೃಶಂ** – ಇಂತಹ ಅಮೋಘವಾದ, **ಜನ್ಮ** - ಜನ್ಮವೆಂಬುದು ಎಂತಹ ಅಮೋಘವಾದುದು ಎಂದರೆ ತಾನೇ ಯೋಗಿಯಾಗಿ ಯೋಗಾಭ್ಯಾಸನಿರತನಾಗಿಯೂ, ಆ ಯೋಗಾಭ್ಯಾಸವನ್ನುಪದೇಶಿಸುವ ಯೋಗ್ಯತೆಯುಳ್ಳವನಾಗಿಯೂ ಇರುವಂತವನ ಮನೆಯಲ್ಲಿ ಪುತ್ರನೇ ಮೊದಲಾದ ಸಂಬಂಧವುಳ್ಳ ಜನ್ಮ ಎಂಬರ್ಥವು. **ಯತ್**-ಯಾವುದೋ **ಏತತ್** - ಇದು, **ದುರ್ಲಭ ತರಂ ಹಿ** - ತುಂಬಾ ದುರ್ಲಭವಾದುದಷ್ಟೇ, ಇಲ್ಲಿ ಹಿ ಎಂಬುದು ಪ್ರಸಿದ್ಧಾರ್ಥವನ್ನು ಸೂಚಿಸುತ್ತದೆ. ಹಿಂದಿನ ಶ್ಲೋಕದಲ್ಲಿ ಕರ್ಮಾನುಷ್ಠಾನಕ್ಕೆ ಅನುಕೂಲ ಮಾತ್ರವಿರುವವನ ಮನೆಯಲ್ಲಿ ಜನ್ಮವು. ಇಲ್ಲಿಯಾದರೋ, ಆ ಅನುಕೂಲವೂ ಅಲ್ಲದೆ ಉಪದೇಶಮಾಡಲು ಯೋಗ್ಯತೆ ಇರುವವನ ಮನೆಯಲ್ಲಿ ಜನ್ಮವು.

**ಭಾಷ್ಯಾರ್ಥವು:—**ಇಲ್ಲಿ ಅಥವಾ ಎಂದು ವಿಕಲ್ಪಿಸಿ, ಹೇಳುವದಕ್ಕೆ ಕಾರಣವು, ಬೇರೇ ಯೋಗನಿಷ್ಪನ್ನಾವಸ್ಥೆಯಲ್ಲಿ ಎಂಬ ಅಭಿಪ್ರಾಯದಿಂದ,"ಪರಿಪಕ್ವೇ ಯೋಗಶ್ಚಲಿತಶ್ಚೇತ್"ಎಂಬ ಪೀಠಿಕೆಯೊಂದಿಗೆ ವ್ಯಾಖ್ಯಾನಮಾಡಿರುತ್ತಾರೆ. ಹಿಂದಿನ ಶ್ಲೋಕದಲ್ಲಿ ಯೋಗಭ್ರಷ್ಟನಿಗೆ ಶುಚೀನಾಂ ಶ್ರೀಮತಾಂಗೇಹೇ ಜನ್ಮವೆಂದು ಹೇಳಿರುವದರಿಂದ ಯೋಗೋಪಕ್ರಮಾಧಿಕಾರಿಗೆ ಸಾಧನತ್ವವು ತೋರಿಬರುವಹಾಗೆ ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿಯಾದರೋ ಧೀಮತಾಂ ಯೋಗಿನಾಂ, ಕುಲೇ ಎಂದರೆ ಗೇಹೇ ಜನ್ಮವೆಂದೂ, ಅದು ದುರ್ಲಭತರವಾದ ಜನ್ಮವೆಂದೂ ಹೇಳಿರುವದರಿಂದ, ಈ ಯೋಗಭ್ರಷ್ಟನು ಹಿಂದಿನ ಯೋಗಭ್ರಷ್ಟನಿಗಿಂತ ಹೆಚ್ಚು ಸುಕೃತಿಯು ಎಂಬ ಭಾವವು ತೋರಿಬರುತ್ತದೆ. ಆದುದರಿಂದ ಪರಿಪಕ್ವಯೋಗಶ್ಚಲಿತಶ್ಚೇತ್ ಎಂದು ವ್ಯವ

ಭಾ. ವಿಧಂ ಯೋಗಯೋಗ್ಯಾನಾಂ ಯೋಗಿನಾಂ ಚ ಕುಲೇ ಜನ್ಮ, ಲೋಕೇ - ಪ್ರಾಕೃತಾನಾಂ ದುರ್ಲಭತರಂ. ಏತತ್ತು ಯೋಗಮಾಹಾತ್ಮ್ಯಕೃತಂ ॥೪೨॥

ಸ್ಥಿತ ವಿಕಲ್ಪಪರವಾಗಿ ಅರ್ಥಮಾಡಿದರು. ಆದುದರಿಂದ ಪರಿಪಕ್ವಾವಸ್ಥೆಗೆ ಬರುವವನು ಅದರಿಂದ ಚಲಿಸಿದವನಾಗಿ ಯೋಗಭ್ರಷ್ಟನಾದರೆ,ಯೋಗಿನಾಂ ಧೀಮತಾಂ ಎಂದರೆ ಯೋಗಂಕುರ್ವತಾಂ ಸ್ವಯಮೇವ ಯೋಗೋಪದೇಶ ಕ್ಷಮಾಣಾಂ-ತಾವೇ ಯೋಗಾಭ್ಯಾಸವನ್ನು ಅನುಷ್ಠಿಸುತ್ತಾ (ಇದು ಯೋಗಿನಾಂ ಎಂಬುದರರ್ಥವು)ಮತ್ತು ಯೋಗೋಪದೇಶವನ್ನುಪದೇಶಿಸಲು ಯೋಗ್ಯರಾದ (ಧೀಮತಾಂ ಎಂಬುದರ ಅರ್ಥವು) ಕುಲೇ-ಮನೆಯಲ್ಲಿ, ಭವತಿ-ಉಂಟಾಗುತ್ತದೆ. ಇಲ್ಲಿ ಕೆಲವರು ಕುಲೇ ಎಂಬುದಕ್ಕೆ ವಂಶದಲ್ಲಿ ಎಂದು ಅರ್ಥಮಾಡಿರುತ್ತಾರೆ ; ಕುಲದಲ್ಲಿಎಲ್ಲಾದರೂ ಹುಟ್ಟಿದರೆ, ಯೋಗೋಪದೇಶಕ್ಕೂ, ಯೋಗಾನುಷ್ಠಾನಕ್ಕೂ ಅಷ್ಟು ಉಪಕಾರಕವಾಗುವದಿಲ್ಲವು. "ಧೀಮಾನ್" ಆಗಿ ಯೋಗಿಯಾಗಿರುವವನ ಮನೆಯಲ್ಲಿ ಹುಟ್ಟಿದರೆ ಯೋಗಾಭ್ಯಾಸದ ಅಭ್ಯಾಸಾನುಷ್ಠಾನಗಳಿಗೆ ಸಹಾಯವುಂಟು ; ಆದುದರಿಂದ "ಯೋಗಂ ಕುರ್ವತಾಂ ಸ್ವಯಮೇವ ಯೋಗೋಪದೇಶ ಕ್ಷಮಾಣಾಂ ಕುಲೇ" ಎಂಬ ಪ್ರಯೋಗವು. ಒಬ್ಬನು ಎಷ್ಟು ಜನಗಳ!ಮನೆಯಲ್ಲಿ ಹುಟ್ಟುವದು ಎಂದಾಕ್ಷೇಪಿಸಿದರೆ, ಅಂತಹ ಯೋಗಿಗಳಲ್ಲಿ ಯಾರಾದರೂ ಒಬ್ಬರ ಮನೆ ಎಂದು ಸಮಾಧಾನವು, ಅಥವಾ ಒಂದು ಮನೆಯಲ್ಲೇ ಯಜಮಾನನೂ, ಆತನ ಎರಡು ಮೂರು ಜನ ಭ್ರಾತೃಗಳೂ ಮಕ್ಕಳೂ. ಹೀಗೆ ಅನೇಕ ಯೋಗಿಗಳು ಒಂದು ಮನೆಯಲ್ಲಿ ಇದ್ದರೂ ಇರಬಹುದು. ಮುಂದೆ "ಏತತ್" ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ. ತದೇತತ್ - ಅಂತಹ ಮಾಹಾತ್ಮ್ಯಯುಳ್ಳ ಇದು ಎಂದರೆ ಉಭಯವಿಧಂ ಯೋಗಯೋಗ್ಯಾನಾಂ ಯೋಗಿನಾಂ ಚ-ಎರಡು ವಿಧವಾಗಿಯೂ, ಯೋಗೋಪದೇಶ ಮಾಡುವದಕ್ಕೂ ಯೋಗ್ಯತೆಯುಳ್ಳವರಾಗಿ ತಾವೇ ಯೋಗಾಭ್ಯಾಸವನ್ನೂ, ಅನುಷ್ಠಿಸುತ್ತಿರುವವರ, ಕುಲೇ - ಮನೆಯಲ್ಲಿ, ಜನ್ಮವು. ಲೋಕೇ - ಲೋಕದಲ್ಲಿ, ಎಂದರೆ, ಪ್ರಾಕೃತಾನಾಂ - ಹೀಗೆ ಯೋಗಾಭ್ಯಾಸದಿಂದ ಚಲಿತರಲ್ಲದ ಸಾಧಾರಣ ಜನರಿಗೆ ಎಂದರೆ ಮೋಕ್ಷಾಧಿಕಾರಿಗಳಲ್ಲದವರಿಗೆ, ದುರ್ಲಭತರಂ-ಹೊಂದಲು ಕಷ್ಟತರವಾದುದು ಎಂದರೆ ಸಾಧ್ಯವಿಲ್ಲ ವೆಂಬರ್ಥವು ; ಹಾಗಾದರೆ ಇನ್ನು ಯಾವುದರಿಂದ ಸಾಧ್ಯವೆಂದರೆ, ಹೇಳುತ್ತಾರೆ, ಏತತ್ತು – ಇಂತಹ ಯೋಗನಿಷ್ಠರಾದ ಆಚಾರ್ಯರ ಮನೆಯಲ್ಲಿ ಜನ್ಮವಾದರೋ, ಯೋಗಮಾಹಾತ್ಮ್ಯ ಕೃತಂ - ಹಿಂದೆ ಮಾಡಿದ ಕರ್ಮ ಯೋಗಮಾಹಾತ್ಮೆಯಿಂದ ಉಂಟಾದುದು. ವಿಪಾಕ ದಶೆಯ ವರೆಗೂ ಮಾಡಿದ ಯೋಗಾಭ್ಯಾಸದ ಮಾಹಾತ್ಮ್ಯಯಿಂದ ಇದು ಲಭಿಸುತ್ತದೆ ಎಂಬ ಭಾವವು. ಯೋಗನಿಷ್ಪತ್ತಿಯುಂಟಾಗುವದಕ್ಕೆ ಸ್ವಲ್ಪ ಮುಂದಿನ ಅವಸ್ಥೆಯಲ್ಲಿ ಯೋಗದಿಂದ ಚಲಿತ ನಾದವನು ಮುಂದೆ ಉಂಟಾಗುವ ಜನ್ಮದಲ್ಲಿ, ಯೋಗಾಭ್ಯಾಸವನ್ನು ಬಿಟ್ಟ ದಶೆಗೆ ಬರುವತನಕ ಬೇಕಾದ ಜ್ಞಾನಾನುಷ್ಠಾನಗಳನ್ನು ಸಂಪಾದಿಸಿಕೊಂಡು ಮುಂದಕ್ಕೆ ಯೋಗಾಭ್ಯಾಸ ನಿಷ್ಪತ್ತಿ ಯುಂಟಾಗುವದಕ್ಕೆ ಯೋಗ್ಯರಾದವರ ಮನೆಯಲ್ಲೇ ಹುಟ್ಟುವನು ಎಂಬುದು ಮುಖ್ಯ ತಾತ್ಪರ್ಯವು. ಹಾಗೆ ಯೋಗೋಪದೇಶ ಯೋಗಾನುಷ್ಠಾನಗಳೆರಡಕ್ಕೂಯೋಗ್ಯರಾದವರ ಮಾಹಾತ್ಮ್ಯೆಯು ಬರೀ ಮನುಷ್ಯರಿಗೆ ಮಾತ್ರವೇ ಶ್ರೇಯಸ್ಕರವೆಂದಲ್ಲವು. ಇತರ ಕ್ರಿಮಿ ಕೀಟಾದಿಗಳಿಗೂ ಕೂಡ ಪರಮ ಶ್ರೇಯಸ್ಕರವೆಂದೂ, ಅದರಿಂದ ಉತ್ಕೃಷ್ಟ ಜನ್ಮಪ್ರಾಪ್ತಿಯೂ ಅಂತಹ ಜನ್ಮದಲ್ಲಿ ಮಾಡುವ ಸಾಧನಾನುಷ್ಠಾನದಿಂದ ಪರಮಪದ ಪ್ರಾಪ್ತಿಯೂ ಉಂಟೆಂದು ಹೇಳಲ್ಪಟ್ಟಿರುತ್ತದೆ.

ಪಶುರ್ಮನುಷ್ಯಃ ಪಕ್ಷೀವಾ ಯೇ ಚ ವೈಷ್ಣವ ಸಂಶ್ರಯಾಃ ।
ತೇನೈವ ತೇ ಪ್ರಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಂ ॥

Funding: Tattva Heritage Foundation,Kolkata. Digitization: eGangotri.



ಮೂ. ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಮ್ ।
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩.

ಪಶುವೇಯಾಗಲಿ, ಮನುಷ್ಯನೇಯಾಗಲಿ, ಪಕ್ಷಿಯೇಯಾಗಲಿ, ಯಾವುವು ಬ್ರಹ್ಮವಿತ್ತಾದ ಸದಾಚಾರ್ಯನನ್ನು ಆಶ್ರಯಿಸಿ ಇರುತ್ತವೋ, ಅವುಗಳೆಲ್ಲಾ ಆ ಕಾರಣದಿಂದಲೇ ಆ ಮಹಾವಿಷ್ಣುವಿನ ಪರಮಪದವನ್ನು ಕುರಿತು, ಹೊರಟುಹೋಗುತ್ತಾರೆ, ಎಂಬುದು ಈ ಶ್ಲೋಕಾರ್ಥವು. ಹಾಗೆಯೇ ಸ್ತೋತ್ರರತ್ನದಲ್ಲೂ,

ತವ ದಾಸ್ಯಸುಖೈಕಸಙ್ಗಿನಾಂ ಭವನೇಷ್ವಸ್ತ್ವಪಿ ಕೀಟ ಜನ್ಮ ಮೇ ।
ಇತರಾವಸಥೇಷು ಮಾಸ್ಮಭೂದ ಪಿ ಮೇ ಜನ್ಮ ಚತುರ್ಮುಖಾತ್ಮನಾ ॥೫೫॥

ಓ ಭಗವಂತನೇ, ನಿನ್ನಲ್ಲಿ ಭಕ್ತಿಯುಂಟಾಗುವದಕ್ಕಾಗಿ, ನಿನಗೆ ದಾಸ್ಯಮಾಡಬೇಕೆಂಬ ಶೇಷತ್ವಜ್ಞಾನದಲ್ಲೇ ಸಕ್ತರಾಗಿರುವವರ, ಇದರಿಂದ ಬಾಹ್ಯವಿಷಯಾನುಭವಗಳಲ್ಲಿ ವೈರಾಗ್ಯವುಳ್ಳ ನಿನ್ನ ಭಕ್ತರ ಮನೆಗಳಲ್ಲಿ ಒಂದು ಹುಳದ ಜನ್ಮವಾಗಲಿ ಉಂಟಾಗಲಿ. ಕೀಟಜನ್ಮವನ್ನು ಮುಖ್ಯವಾಗಿ ಏಕೆ ಹೇಳಲ್ಪಟ್ಟಿತೆಂದರೆ, ಮಾರ್ಜಾಲಾದಿ ಜನ್ಮವಾದರೆ ಆಸ್ಥಳದಿಂದ ಹೊರಟುಹೋಗಬಹುದು, ಹಲ್ಲಿ, ಜಿರಳೆ ಅಥವಾ ಬೇರೆ ಸಣ್ಣ ಹುಳವಾದರೆ ಆ ಮನೆಯನ್ನು ಬಿಟ್ಟು ಭಾಗವತ ಸಂಸರ್ಗದಿಂದ ದೂರವಾಗಿ ತೆರಳುವದಿಲ್ಲವೆಂಬಭಿಪ್ರಾಯದಿಂದ ಹೇಳಲ್ಪಟ್ಟಿತು. ಭಗವದ್ಭಕ್ತನಾಗದ ಇತರರ ಮನೆಯಲ್ಲಾದರೋ, ಅತನು ಚತುರ್ಮುಖನಾಗಿದ್ದರೂ, ಈ ಕೀಟಜನ್ಮಕ್ಕಿಂತ ಉತ್ಕೃಷ್ಟಜನ್ಮವೂ ನನಗೆ ಬೇಕಿಲ್ಲವೆಂಬ ತಾತ್ಪರ್ಯವು ; ನಿನ್ನ ನಾಭೀಕಮಲಸಂಬಂಧವುಳ್ಳ ಚತುರ್ಮುಖನು ಒಂದುವೇಳೆ ಅಭಾಗವತನಾದರೆ, ಅಂತವನ ಮನೆಯಲ್ಲಿ, ಕೀಟಕ್ಕಿಂತ ಉತ್ತಮ ಜನ್ಮವೂ ಕೂಡ ನನಗೆ ಆಗದಿರಲಿ; ಬೇಕಾದವರಿಗೆ ನಿನ್ನ ಇಷ್ಟ ಹೇಗೋ ಹಾಗೆ ಮಾಡಿಕೋ ನನ್ನ ಅಭ್ಯಂತರವಿಲ್ಲವು ; ನಿನ್ನ ಭಕ್ತನಾದ ನನಗಾದರೋ ಅಂತಹ ರಾಜಸಾಧಿಕಾರಿಗಳ ಮನೆಯಲ್ಲಿ ಉತ್ಕೃಷ್ಟವಾದ ದೇವಾದಿಜನ್ಮವೂ ಬೇಕಿಲ್ಲವು. ನಿನ್ನ ಪರಮ ಭಾಗವತಾಗ್ರೇಸರರ ಮನೆಯಲ್ಲಿ ಕೀಟಜನ್ಮವೇ ನನಗೆ ಪರಮ ಶ್ರೇಯಸ್ಕರವೆಂಬುದು ಈ ಶ್ಲೋಕ ತಾತ್ಪರ್ಯವು.

ಈ ಶ್ಲೋಕವ್ಯಾಖ್ಯಾನದಲ್ಲಿ ಶ್ರೀ ಯತಿರಾಜರು ಪರಿಪಕ್ವಯೋಗ ಶ್ಚಲಿತಶ್ಚೇತ್ ಎಂದು ಹೇಳಿ, ಅಂತಹ ಪರಿಪಕ್ವ ಯೋಗಿಯೂಕೂಡ,ಯೋಗಯೋಗ್ಯಾನಾಂ ಯೋಗಿನಾಂ ಚ ಕುಲೇ ಜನ್ಮಭವತಿ ಎಂದು ಹೇಳಿರುವದರಿಂದ, ಅಂತವರ ಮನೆಯಲ್ಲಿ ಹುಟ್ಟಿ ಪುನಃ ಕರ್ಮಯೋಗಾಧಿಕಾರಿಯಾಗುವನೆಂದು ಹೇಳಲ್ಪಟ್ಟಿರುವದರಿಂದ, ಪರಿಪಕ್ವಯೋಗಿಗೆ ಮುಂದಿನ ಜನ್ಮದಲ್ಲಿ ಕರ್ಮಯೋಗ ಮಾಡದೆ ಜ್ಞಾನಯೋಗ ಭಕ್ತಿಯೋಗಗಳನ್ನು ಅವಲಂಬಿಸಬಹುದೆಂಬ ಅಶಾಸ್ತ್ರೀಯವಾದವು ನಿರಸನಮಾಡಲ್ಪಟ್ಟಿತು. ಪರಿಪಕ್ವಯೋಗಿಯು ಪುನಃ ಜನ್ಮವೆತ್ತಿ ಕರ್ಮಯೋಗವನ್ನವಲಂಬಿಸಿದರೆ ಪರಿಪಕ್ವಯೋಗದಶೆಯು ಹಿಂದಿನ ಯೋಗ ಮಾಹಾತ್ಮ್ಯೆಯಿಂದ ಶೀಘ್ರನಾಗಿ ಲಭಿಸುತ್ತದೆಂದು ಹೇಳಿದರೆ ಒಪ್ಪತಕ್ಕ ಮಾತಾಗಿರುತ್ತದೆ. ಅಂತವನು ಕರ್ಮಯೋಗವನ್ನು ತ್ಯಜಿಸಿಜ್ಞಾನಯೋಗವನ್ನಾಗಲಿ, ಭಕ್ತಿಯೋಗವನ್ನಾಲಿ, ಅವಲಂಬಿಸಬಹುದೆಂಬುದನ್ನು ಒಪ್ಪಿದರೆ, ಶಾಸ್ತ್ರಮರ್ಯಾದೋಲ್ಲಂಘನೆಗೆ ಅನುಮತಿಯನ್ನು ಕೊಟ್ಟದೋಷಕ್ಕೆ ಕಾರಣವಾಗುತ್ತದೆ. ನಮ್ಮ ಸಿದ್ಧಾನ್ತ ಸ್ಥಾಪಕರ ಅಭಿಪ್ರಾಯವಾದ ಯೋಗಯೋಗ್ಯಾನಾಂ ಎಂಬ ಪ್ರಯೋಗಕ್ಕೂ ವಿರುದ್ಧವಾಗುತ್ತದೆ.॥೪೨॥

ಮೂಲಕ್ಕೆ ಅರ್ಥವು :—ಯೋಗಭ್ರಷ್ಟಾಧಿಕಾರಿಗಳನ್ನು ಎರಡು ವಿಧವಾಗಿ ವಿಂಗಡಿಸಿ, ಉಪಕ್ರಮದಶೆಯಲ್ಲಿಯೂ ವಿಪಾಕ ದಶೆಯಲ್ಲಿಯೂ ಭ್ರಷ್ಟತೆಯುಂಟಾಗುವವರಿಗೆ ಪ್ರಾಪ್ತವಾಗುವ ಜನ್ಮಗಳಲ್ಲಿ ತಾರತಮ್ಯವನ್ನು ತೋರಿಸಿ ಹಾಗೆ ಜನ್ಮಗಳು ಪ್ರಾಪ್ತವಾಗುವದರಿಂದ ಉಂಟಾಗುವ

ಮೂ. ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ || ೪೪||.

ಭಾ. ತತ್ರ - ಜನ್ಮನಿ, ತಮೇವ ಪೌರ್ವದೈಹಿಕಂ ಯೋಗವಿಷಯಂ ಬುದ್ಧಿಸಂಯೋಗಂ ಲಭತೇ । ತತಸ್ಸುಪ್ತಃ ಪ್ರಬುದ್ಧವತ್ಭೂಯಃ ಸ್ಸಂಸಿದ್ಧೌ ಯತತೇ । ಯಥಾ ನಾನ್ತ

ಫಲವನ್ನು ಈ ಶ್ಲೋಕ ಮತ್ತು ಮುಂದಿನ ಶ್ಲೋಕದ ಅರ್ಥದಿಂದ, ವ್ಯಕ್ತಪಡಿಸುತ್ತಾರೆ. ಹೇ ಕುರುನಂದನ - ಓ ಕುರುವಂಶೋತ್ಪನ್ನನಾದ ಅರ್ಜುನನೇ. ತತ್ರ - ಹಾಗೆ ಪ್ರಾಪ್ತವಾಗುವ ಜನ್ಮದಲ್ಲಿ, ಪೌರ್ವದೈಹಿಕಂ - ಹಿಂದಿನ ಜನ್ಮಸಂಬಂಧವಾದ, ತಂ - ಆ ಯೋಗಾಭ್ಯಾಸವನ್ನು ಕುರಿತು, ಬುದ್ಧಿಸಂಯೋಗಂ - ಜ್ಞಾನಪ್ರಾಪ್ತಿಯನ್ನು, ಲಭತೇ - ಆ ಯೋಗಭ್ರಷ್ಟನು, ಹೊಂದುವನು, ತತಃ - ಅನಂತರ ಅಥವಾ ಅಲ್ಲಿಂದ ಮುಂದಕ್ಕೆ ಎಂದರೆ ಯೋಗಾಭ್ಯಾಸದಬುದ್ಧಿ ಸಂಯೋಗ ಉಂಟಾದನಂತರ, ಭೂಯಃ - ಪುನಃ, ತತೋ ಭೂಯಃ – ಹಿಂದಿನ ಜನ್ಮದಲ್ಲಿ ಮಾಡಿದುದಕ್ಕಿಂತ ಅಧಿಕವಾಗಿ ಎಂದು ಕೆಲವರು ಅರ್ಥಮಾಡಿರುತ್ತಾರೆ. ಸಂಸಿದ್ಧೌ- ನಿರ್ವಿಘ್ನವಾದ ಯೋಗಸಿದ್ಧಿಯುಂಟಾಗುವವರೆಗಾಗಿ ಎಂದರೆ ಹಿಂದೆ ವಿಘ್ನ ಬಂದಹಾಗೆ ಈಗ ವಿಘ್ನಗಳು ಯಾವುದು ಉಂಟಾಗದ ಹಾಗೆ ಇದು ಸಂ ಎಂಬ ಉಪಸರ್ಗದ ಅರ್ಥವು, ಯತತೇ ಚ-ಪ್ರಯತ್ನವನ್ನೂ ಕೂಡ ಮಾಡುತ್ತಾನೆ; ಅದೇನು ಹಿಂದೆ ವಿಘ್ನಉಂಟಾಗಿ ಯೋಗಭ್ರಷ್ಟನಾಗಲಿಲ್ಲವೇ ? ಈಗಲೂ ಏಕೆ ಹಾಗೆಯೇ ಈ ಜನ್ಮದಲ್ಲೂ ಕೂಡ ಯೋಗಭ್ರಷ್ಟನಾಗಕೂಡದು,? ಎಂಬ ಪೂರ್ವಪಕ್ಷಕ್ಕೆ ಸಮಾಧಾನವನ್ನು ಹೇಳುತ್ತಾರೆ. ಸಃ-ಆ ಯೋಗಭ್ರಷ್ಟನು, ತೇನೈವ ಪೂರ್ವಾಭ್ಯಾಸೇನ-ಆ ಹಿಂದಿನ ಜನ್ಮದಲ್ಲಿ ಮಾಡಿದ ಪೂರ್ವದ ಸ್ವಲ್ಪಮಟ್ಟಿಗೆ ಆಚರಿಸಿದ ಯೋಗಾಭ್ಯಾಸದಿಂದಲೇ, ಅವಶೋಽಪಿ-ಅಸ್ವತಂತ್ರನಾಗಿ ಆ ವಿಷಯದಲ್ಲಿ ಆತನು ಮನಸ್ಸನ್ನಿಡದಿದ್ದರೂ ಕೂಡ, ಹ್ರಿಯತೇ - ಸೆಳೆಯಲ್ಪಡುತ್ತಾನೆ, ಅದರಲ್ಲಿ ಮನಸ್ಸನ್ನಿಡುವ ಹಾಗೆ ಪ್ರೇರಿಸಲ್ಪಡುತ್ತಾನೆಂಬ ಭಾವವು. ಅವನು ಬೇಡವೆಂದಿದ್ದರೂ ಕೂಡ ಆ ಯೋಗ ಮಾಹಾತ್ಮ್ಯ ಯಿಂದುಂಟಾದ ಬುದ್ಧಿ ಸಂಯೋಗದ ಬಲದಿಂದ ಅದರಲ್ಲೇ ಪ್ರವರ್ತಿಸುತ್ತಾನೆ. ಹಿಂದೆ ಬಿಟ್ಟಿದ್ದ ಯೋಗಾಭ್ಯಾಸವನ್ನು ಅನುಷ್ಠಿಸಿ ನಿರ್ವಿಘ್ನವಾಗಿ ಯೋಗ ಪೂರ್ತಿಯನ್ನು ಹೊಂದುವನು. ಇದರಲ್ಲಿ ಈಷದಪಿ ಸಂದೇಹವಿಲ್ಲವು ಎಂದು ಹಿ ಶಬ್ದವನ್ನು ಪ್ರಯೋಗಿಸಿರುತ್ತಾರೆ. ಇದಕ್ಕೆ ಬೇಕಾದಷ್ಟು ನಿದರ್ಶನ ಉಂಟೆಂಬ ಭಾವವು. ||೪೩||

ಭಾಷ್ಯಾರ್ಥವು:—ಹಾಗೆ ಶ್ರೀಮಂತರ ಅಥವಾ ಯೋಗಿಗಳ ಗೃಹದಲ್ಲಿ ಜನ್ಮಗಳುಂಟಾಗಿದ್ದುದರಿಂದ ಬಂದದ್ದೇನು? ಮೊದಲುಮಾಡಿದ ಯೋಗವೇನೋ ಶಿಥಿಲವಾಗಲಿಲ್ಲವೇ ? ಯಾವಾಗ ಉಪಾಯಾನುಷ್ಠಾನವಿಲ್ಲವೋ ಆಗ ಸದ್ಗತಿ ಎಲ್ಲಿಯದು? ಅಂತವನಿಗೆ ಉಭಯಭ್ರಷ್ಟತೆಯಿಲ್ಲವೆಂದು ಹೇಳಿದುದು ಹೇಗೆ? ಇತ್ಯಾದ್ಯಾಕ್ಷೇಪಗಳಿಗೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. ಅಂತವನಿಗೆ ಉತ್ತರೋತ್ತರ ಮೋಕ್ಷಸಾಧನಕ್ಕೆ ಅನುಕೂಲ ಉಂಟೋ ಎಂದರೆ ಉಂಟೆಂದು ಹೇಳುತ್ತಾರೆ. ತತ್ರ ಎಂಬುದಕ್ಕೆ ಆ ಗೇಹದಲ್ಲಿ ಎಂದು ಎಲ್ಲಿಯಾದರೂ ಭ್ರಾಂತಿಯಿಂದ ಅರ್ಥಮಾಡಬಹುದೆಂದು ಭಾವಿಸಿ, ತತ್ರ ಜನ್ಮನಿ ಎಂದು ವ್ಯಾಖ್ಯಾನ ಮಾಡಿರುತ್ತಾರೆ, ಆಜನ್ಮದಲ್ಲಿ, ತಮೇವ - ಅದನ್ನೇ ಎಂದರೆ, ಯೋಗ ವಿಷಯಂ - ಯೋಗ ವಿಷಯವಾದ, ಯಾವ ಯೋಗವಿಷಯವಾದ ಎಂದರೆ, ಪೌರ್ವದೈಹಿಕಂ - ಮೊದಲಿನದೇಹ ಎಂದರೆ ಜನ್ಮಕ್ಕೆ ಸಂಬಂಧಿಸಿದ, ಬುದ್ಧಿ ಸಂಯೋಗಂ - ಜ್ಞಾನಪ್ರಾಪ್ತಿಯನ್ನು, ಲಭತೇ – ಹೊಂದುತ್ತಾನೆ, ತತಃ - ಆ ಬುದ್ಧಿ ಸಂಯೋಗದ ಬಲದಿಂದ, ಸಂಸಿದ್ಧೌ - ಆ ಯೋಗವು ಚನ್ನಾಗಿ ಸಿದ್ಧಿಸುವದರಲ್ಲಿ, ಭೂಯಃ - ಪುನಃ, ಯತತೇ - ಪ್ರಯತ್ನಿಸುತ್ತಾನೆ ಎಂದರೆ ಯೋಗ

**ಭಾ. ರಾಯ ಹತೋ ಭವತಿ,ತಥಾ ಯತತೇ । ತೇನ ಪೂರ್ವಾಭ್ಯಾಸೇನ–ಪೂರ್ವೇಣ ಯೋಗ ವಿಷಯೇಣಾ ಭ್ಯಾಸೇನ ಸಃ ಯೋಗಭ್ರಷ್ಟೋ ಹ್ಯವಶೋಪಿಯೋಗಏವ ಹ್ರಿಯತೇ. ಪ್ರಸಿದ್ಧಂ ಹ್ಯೇತದ್ಯೋಗಮಾಹಾತ್ಮ್ಯ ಮಿತ್ಯರ್ಥಃ ॥ ೪೩॥ ॥**

ಸಿದ್ಧಿಯುಂಟಾಗುವದಕ್ಕಾಗಿ ಯೋಗವನ್ನಾರಂಭಿಸಿ ಅದರ ಅಭ್ಯಾಸಕ್ಕಾಗಿ ಚನ್ನಾಗಿ ಯತ್ನಿಸುವನು, ಇದಕ್ಕೆ ಒಂದು ಒಳ್ಳೆ ನಿದರ್ಶನವನ್ನು ಕೊಡುತ್ತಾರೆ. ಹಿಂದೆ ಯೋಗದ ವಿಚ್ಛೇದ ಉಂಟಾಯಿತು, ಸಂಸ್ಕಾರವೆಲ್ಲಾ ಹೊರಟು ಹೋಯಿತು, ಹೀಗಿದ್ದರೂ ಹೇಗೆ ಯೋಗಸಿದ್ಧಿಗೆ ಪ್ರಯತ್ನಿಸುವನು ಎಂಬ ಶಙ್ಕಾ ಪರಿಹಾರಕ್ಕಾಗಿ ಹೇಳುತ್ತಾರೆ, **ಸುಪ್ತಃ ಪ್ರಬುದ್ಧವತ್** - ಮಲಗಿದ್ದವನು ಎಚ್ಚರಗೊಂಡಹಾಗೂ, ಹಿಂದೆ ವಿಷಯಾಸಕ್ತಿಯು ಈ ಯೋಗಿಗೆ ಉಂಟಾದುದರಿಂದ ಯೋಗವನ್ನು ಬಿಟ್ಟು ನಿದ್ರಿಸಿದಹಾಗೂ, ಅನಂತರ ಅದರಲ್ಲಿ ಜಿಹಾಸೆಯುಂಟಾಗಿ ನಿದ್ರೆಯನ್ನು ಬಿಟ್ಟು ಯೋಗ ಮಾಡುವದಕ್ಕಾಗಿ ಎಚ್ಚೆತ್ತಹಾಗೂ ಭಾವಿಸಬಹುದು. ಹಿಂದಿನ ಜನ್ಮದಲ್ಲಿ ಯೋಗಾಭ್ಯಾಸಕ್ಕೆ ವಿಘ್ನ ಬಂದಹಾಗೆ ಈ ಜನ್ಮದಲ್ಲೂ ವಿಘ್ನ ಬರಬಹುದಲ್ಲಾ, ಹಾಗಾದರೆ ಸಿದ್ಧಿಯನ್ನು ಹೊಂದುವನೆಂದು ಹೇಗೆ ಹೇಳಲಾಗುತ್ತದೆ ಎಂಬ ಶಙ್ಕಾ ಉಂಟಾಗಬಹುದು; ಈ ಜನ್ಮದಲ್ಲಿ ಅಂತಹ ವಿಘ್ನಕ್ಕೆ ಅವಕಾಶವಿಲ್ಲದಹಾಗೆ ಒಳ್ಳೇ ಯೋಗಿಗಳ ಮನೆಯಲ್ಲಿ ಜನ್ಮವನ್ನೆತ್ತುತ್ತಾನೆಂದು ಹೇಳಿ, ಸಂಸಿದ್ಧಿಂ ಲಭತೇ ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ಸಂ ಎಂಬ ಉಪಸರ್ಗದ ಅರ್ಥವನ್ನು ವ್ಯಕ್ತಪಡಿಸುತ್ತಾರೆ- **ಯಥಾ ನಾನ್ತರಾಯ ಹತೋ ಭವತಿ ತಥಾ ಯತತೇ**-ಹೇಗೆ ವಿಘ್ನಗಳಿಂದ ಹೊಡೆಯಲ್ಪಡದಿರಬೇಕೋ ಹಾಗೆ ಪ್ರಯತ್ನಿಸುವನು. ವಿಘ್ನಗಳು ಬಾಧಿಸದಹಾಗೆ ಪ್ರಯತ್ನಿಸುವನು ಎಂದು ಉಪಪಾದಿಸುತ್ತಾರೆ-**ತೇನ ಪೂರ್ವಾಭ್ಯಾಸೇನ** - ಆ ಪೂರ್ವಾಭ್ಯಾಸದಿಂದ ಎಂದರೆ **ಪೂರ್ವೇಣ ಯೋಗ ವಿಷಯೇಣ ಅಭ್ಯಾಸೇನ**-ಹಿಂದಿನ ಜನ್ಮದಲ್ಲಿ ಮಾಡಿದ್ದ ಯೋಗವಿಷಯವಾದ ಅಭ್ಯಾಸದಿಂದ,**ಸಃ**-ಆತನು ಎಂದರೆ, **ಯೋಗಭ್ರಷ್ಟೋ ಹಿ**-ಯೋಗಭ್ರಷ್ಟನಾದರೋ, **ಅವಶೋಪಿ** - ತಾನು ಅಪೇಕ್ಷಿಸದೇ ಇದ್ದರೂಕೂಡ ಈ ಜನ್ಮದಲ್ಲಿ ಅವನಿಗೆ ಪುನಃ ವಿಘ್ನವಿರುವದಿಲ್ಲವೆಂದು ಹೇಳುತ್ತಾರೆ. **ಯಥಾನಾನ್ತರಾಯಹತೋ ಭವತಿ** - ಹೇಗೆ ವಿಘ್ನದಿಂದ ತೊಂದರೆಯಿಲ್ಲದವನಾಗಿರಬೇಕೋ, **ತಥಾಯತತೇ**-ಹಾಗೆ ಪುನಃ ಯೋಗಮಾಡಲು ಪ್ರಯತ್ನಿಸುವನು. **ತೇನ ಪೂರ್ವಾಭ್ಯಾಸೇನ** ಎಂದರೆ **ಪೂರ್ವೇಣ ಯೋಗವಿಷಯೇಣಾಭ್ಯಾಸೇನ**-ಮೊದಲಿನ ಆತ್ಮಚಿನ್ತನರೂಪಯೋಗವಿಷಯವಾದ ಅಭ್ಯಾಸದಿಂದ, **ಸಃ ಯೋಗಭ್ರಷ್ಟಃ**-ಆ ಯೋಗಭ್ರಷ್ಟನು, **ಅವಶೋಪಿ**-ಅಸ್ವತಂತ್ರನಾಗಿಯೂ ಕೂಡ, **ಯೋಗೇ ಏವ**-ಯೋಗದಲ್ಲೇ ಎಂದರೆ ಆತ್ಮ ಚಿನ್ತನದಲ್ಲೇ, **ಹ್ರಿಯತೇ ಹಿ**-ಎಳೆಯುಲ್ಪಡುವನಷ್ಟೇ! ಇದು ಪ್ರಸಿದ್ಧವು. ಹಿ ಎಂಬುದರಿಂದ ತೋರುವರ್ಥವನ್ನು ಸೂಚಿಸುತ್ತಾರೆ:- **ಪ್ರಸಿದ್ಧಂ ಹ್ಯೇತದ್ಯೋಗ ಮಾಹಾತ್ಮ್ಯ ಮಿತ್ಯರ್ಥಃ** - ಈ ಯೋಗಮಾಹಾತ್ಮ್ಯೆಯು ಪ್ರಸಿದ್ಧವಾದುದಷ್ಟೇ ಎಂಬಭಿಪ್ರಾಯವು. ಪ್ರಸಿದ್ಧವು ಹೇಗೆಂದರೆ, ಆದಿ ಭರತ ವಿದುರ ಭೀಷ್ಮ ಸೌಭರಿ ವೃತ್ತಾಂತಗಳಿಂದ ಪ್ರಸಿದ್ಧವೆಂಬ ಭಾವವು. ಕುರುನಂದನ ಶಬ್ದದಿಂದ ಅರ್ಜುನನು ಕುರುನಂದನನಾಗಿ ಕರ್ಮಭ್ರಷ್ಟನಲ್ಲದಿದ್ದರೂ, ಶುಚೀನಾಂ ಶ್ರೀಮತಾಂಗೇಹೇ ಜನ್ಮವನ್ನು ಎತ್ತಿರುವದರಿಂದ, ಈಶ್ವರನಾದ ತಾನು ಮಾಡುವ ಉಪದೇಶಕ್ಕನುಗುಣವಾಗಿ ಬುದ್ಧಿ ಸಂಯೋಗವನ್ನೂ ಹೊಂದುವದರಿಂದ ಕರ್ಮಯೋಗವನ್ನವಲಂಬಿಸಿ ಯೋಗಸಿದ್ಧಿಯನ್ನು ಹೊಂದಲು ಸಾಧ್ಯವೆಂಬ ಭಾವವು ಇಲ್ಲಿ ಸೂಚಿತವು.

**ಮೂಲಕ್ಕೆ ಅರ್ಥವು** :—ಈ ಅರ್ಥ ಶ್ಲೋಕಕ್ಕೆ ಮೂರು ಭಾಷ್ಯಕಾರರೂ ಮೂರುವಿಧವಾಗಿ ಅರ್ಥಮಾಡಿರುತ್ತಾರೆ. ಇವುಗಳಲ್ಲಿ ಸರಿಯಾದರ್ಥವು ಯಾವುದೆಂದು ಗ್ರಹಿಸಬೇಕಾದರೆ

ಮೂ. ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥　　　　೪೪.

ಪ್ರಕರಣಾನುಗುಣವಾಗಿ ಪೂರ್ವಶ್ಲೋಕಗಳಿಗೂ ಇದಕ್ಕೂ ಸಙ್ಗತಿ ಹೇಗೆ ಎಂಬುವನ್ನು ನಿರ್ಧರಿಸಿ ಕೊಳ್ಳಬೇಕು. ಸಙ್ಗತಿಯು ಹೇಗೆಂದರೆ, ಯೋಗಭ್ರಷ್ಟನೇನು ಉಭಯಭ್ರಷ್ಟನೇ ? ಅವನಿ ಗೇನು ಗತಿ ಎಂದು ಅರ್ಜುನನು ಪ್ರಶ್ನಿಸಿದನು ; ಆತನು ಉಭಯಭ್ರಷ್ಟನಲ್ಲವು, ಎರಡು ವಿಧ ದಲ್ಲೂ ಆತನಿಗೆ ಶ್ರೇಯಸ್ಸುಂಟೆಂದು ಹೇಳಿ, ಆ ಯೋಗ ಭ್ರಷ್ಟತೆಯು, ಯೋಗದ ಪೂರ್ವದಶೆ ಯಲ್ಲಿ ಉಂಟಾದರೆ, ಶುಚೀನಾಂ ಶ್ರೀಮತಾಂ ಗೇಹೇ ಜನ್ಮವೆಂದೂ, ಯೋಗದ ಉತ್ತರದಶೆಯಲ್ಲಿ ಪ್ರಾಪ್ತವಾದರೆ ಧೀಮತಾಂ ಯೋಗಿನಾಂ ಕುಲೇ ಜನ್ಮ ವೆಂದೂ ಹೇಳಿ, ಹಾಗೆ ಜನ್ಮ ಉಂಟಾಗು ವದರಿಂದ ಯೋಗವನ್ನು ಆರಂಭಿಸಿ ಯೋಗಸಿದ್ಧಿಗಾಗಿ ಚೆನ್ನಾಗಿ ಪ್ರಯತ್ನಿಸಿ ನಿರ್ವಿಘ್ನವಾಗಿ ಯೋಗಸಿದ್ಧಿಯನ್ನು ಹೊಂದುವನೆಂದು ಹೇಳಿದರು. ಇಷ್ಟೇ ಅಲ್ಲವು, ಇನ್ನೂ ಯೋಗಾಭ್ಯಾಸ ವನ್ನು ಪ್ರಾರಂಭಿಸದೇನೇ ಯೋಗಾಭ್ಯಾಸದ ಮಾಹಾತ್ಮ್ಯೆಯನ್ನು ತಿಳಿಯಬೇಕೆಂದಿರುವ ಜಿಜ್ಞಾ ಸುವಿಗೇನೇ ಮನಶ್ಚಾಂಚಲ್ಯವುಂಟಾಗಿ ಅಲ್ಲಿಗೇನೇ ಕೈಬಿಟ್ಟರೆ, ಪುನಃ ಜನ್ಮವನ್ನೆತ್ತಿ, ಅವನಿಗೂ ಕೂಡ ಐಹಿಕವಾದ ಇಷ್ಟಾನುಭವದಲ್ಲಿ ವೈರಾಗ್ಯ ಉಂಟಾಗಿ, ಆತನಿಗೂ ಹಾಗೆಯೇ ಬುದ್ಧಿ ಸಂಯೋಗ ಉಂಟಾಗುವದರಿಂದ ಯೋಗಸಿದ್ಧಿಯುಂಟಾಗುತ್ತದೆಂದು ಈಗ ಹೇಳುತ್ತಾರೆ. ಯೋಗ ಮಾಹಾತ್ಮ್ಯೆಯನ್ನು ಚಿಂತಿಸುತ್ತಿರುವವನಿಗೂ ಕೂಡ, ಯೋಗಭ್ರಷ್ಟನಿಗೆ ಹೇಗೋ ಹಾಗೆಯೇ ಶ್ರೇಯಸ್ಸುಂಟೆಂದು ಹೇಳುವ ಸಂದರ್ಭವು. ಅರ್ಜುನನು ಕೇಳಿದ ಪ್ರಶ್ನೆಯು ಯೋಗವನ್ನಾರಂಭಿಸಿ ಬಿಟ್ಟವನ ವಿಷಯವು; ಸರ್ವೇಶ್ವರನು ಯೋಗಭ್ರಷ್ಟನಿಗೆ ಎರಡು ವಿಧದಲ್ಲೂ ಸದ್ಗತಿಯೇ, ಎಂದು ತಿಳಿಸಿ, ಕರ್ಮಯೋಗವನ್ನವಲಂಬಿಸುವದಕ್ಕಾಗಿ ಇನ್ನೂ ಯೋಗಾಭ್ಯಾಸಮಾಹಾತ್ಮ್ಯೆಯನ್ನು ಚಿಂತಿ ಸುತ್ತಿರುವವನಿಗೂ ಕೂಡ ಅಂತಹ ಸದ್ಗತಿಯೇ ಎಂದು ಹೇಳಿ, ಈ ಮೂರುವಿಧ ಚಲಿತ ಮನಸ್ಕ ರಾದ ಅಧಿಕಾರಿಗಳಿಗೂ ಒಂದೇ ವಿಧವಾದ ಫಲವೆಂದು ಉಪದೇಶಿಸುತ್ತಾರೆಂಬುದು ಸಂಗತಿಯು.

ಯೋಗಸ್ಯ - ಯೋಗಾಭ್ಯಾಸದ, ಜಿಜ್ಞಾಸು ರಪಿ - ಮಾಹಾತ್ಮ್ಯೆಯನ್ನು ತಿಳಿಯಬೇಕೆಂ ಬಪೇಕ್ಷೆಯುಳ್ಳವನೂಕೂಡ, ಯೋಗಾಭ್ಯಾಸದ ಆರಂಭವು ಇನ್ನೂ ಇಲ್ಲದೆ ಆರಂಭಿಸಬೇಕೆಂದಿರುವ ವನೂ ಕೂಡ, ಇಲ್ಲಿ ಅಪಿ ಶಬ್ದದಿಂದ, ಯೋಗಭ್ರಷ್ಟನ ಮಾತು ಹಾಗಿರಲಿ, ಯೋಗಾಭ್ಯಾಸ ಮಾಡಬೇಕೆಂದಿರುವವನಾಗಿ, ಮನಶ್ಚಾಂಚಲ್ಯದಿಂದ ಭ್ರಷ್ಟನಾದರೂ ಕೂಡ, ಮೇಲೆ ಯೋಗ ಭ್ರಷ್ಟನಿಗೆ ಯಾವ ಸುಕೃತಗಳು ಉಂಟಾಗುತ್ತವೆಂದು ಹೇಳಿದವೋ, ಆ ಸುಕೃತಗಳೇ ಈ ಅಧಿ ಕಾರಿಗೂ ಸಹ ಉಂಟಾಗುತ್ತವೆಂದು ಉಪದೇಶಿಸುತ್ತಾರೆ. ಕರ್ಮಯೋಗಾಭ್ಯಾಸದ ಮಾಹಾತ್ಮ್ಯೆಯು ಅಷ್ಟು ಉತ್ಕೃಷ್ಟವಾದುದು ಎಂದು ಪ್ರಶಂಸಿಸಿ ಹೇಳುವ ಪ್ರಕರಣವು. ಶಬ್ದ ಬ್ರಹ್ಮ - ಶಬ್ದವೆಂದರೆ ವ್ಯವಹಾರವನ್ನುಂಟುಮಾಡುವ, ಬ್ರಹ್ಮ - ಪ್ರಕೃತಿಯನ್ನು ಎಂದರೆ ಅದರ ಸಂಬಂಧವನ್ನು, ಅತಿವರ್ತತೇ - ಮೀರುತ್ತಾನೆ ಎಂದರೆ ದಾಟುತ್ತಾನೆ; ಪ್ರಕೃತಿ ವಿಯುಕ್ತ ಜೀವಾತ್ಮಸ್ವರೂಪ ಯಾಥಾತ್ಮ್ಯವನ್ನು ಹೊಂದುತ್ತಾನೆಂಬ ಭಾವವು. ಪ್ರಕೃತಿಗೂ ಅನಂತ್ಯ ವಿರುವದರಿಂದ ಲಾಕ್ಷಣಿಕವಾಗಿ ಬ್ರಹ್ಮಶಬ್ದವು ಇಲ್ಲಿ ಪ್ರಕೃತಿಯನ್ನು ಬೋಧಿಸುತ್ತದೆ. ಈ ಪ್ರಕೃ ತಿಯ ಸಂಬಂಧದಿಂದಲೇ ಜ್ಞಾನೈಕಾಕಾರತೆಯಿಂದ ಸಮರಾಗಿ ಅಣುರೂಪರಾಗಿರುವ ಆತ್ಮರುಗ ಳಿಗೆ ವ್ಯವಹಾರವು. ಈ ಪ್ರಕೃತಿ ಸಂಬಂಧದಿಂದಲೇ ಈ ಆತ್ಮನಿಗೆ ನಾಮರೂಪಗಳು ಉಂಟಾಗು ತ್ತವೆ. ಈ ನಾಮರೂಪವನ್ನು ಕೊಡುವ ಪ್ರಕೃತಿಯನ್ನು ಅತಿಕ್ರಮಿಸಿದವನು ತಾನು ಎಂಬ ಜ್ಞಾನ ಉಂಟಾಗುತ್ತದೆಂಬ ಭಾವವು. ಬ್ರಹ್ಮ ಶಬ್ದಕ್ಕೆ ಪ್ರಕೃತಿ ಎಂಬರ್ಥವು ಉಪನಿಷತ್ತುಗ ಳಲ್ಲೂ ಪುರಾಣಗಳಲ್ಲೂ ಈ ಗೀತೆಯಲ್ಲೇ ಕೆಲವು ಕಡೆಯಲ್ಲೂ ಉಂಟು "ಮಮಯೋನಿರ್ಮಹ

ಭಾ. ಅಪ್ರವೃತ್ತಯೋಗೋ ಯೋಗೇ ಜಿಜ್ಞಾಸುರಪಿ, ತತಶ್ಚಲಿತಮಾನಸಃ ಪುನರಪಿ ತಾಮೇವ ಜಿಜ್ಞಾಸಾಂ ಪ್ರಾಪ್ಯ ಕರ್ಮಯೋಗಾದಿಕಂ ಯೋಗ ಮನುಷ್ಠಾಯ, ಶಬ್ದ ಬ್ರಹ್ಮಾತಿ ವರ್ತತೇ. ಶಬ್ದಬ್ರಹ್ಮ-ದೇವ ಮನುಷ್ಯ ಪೃಥಿವ್ಯಂತರಿಕ್ಷ ಸ್ವರ್ಗಾದಿ ಶಬ್ದಾಭಿ ಲಾಪಯೋಗ್ಯಂ ಬ್ರಹ್ಮ-ಪ್ರಕೃತಿಃ; ಪ್ರಕೃತಿಬಂಧಾದ್ವಿಮುಕ್ತೋ ದೇವಮನುಷ್ಯಾದಿ

---

ದ್ಬ್ರಹ್ಮ" ಗೀ. (೧೪.೩) ಎಂಬುದೊಂದು ಉದಾಹರಣವು. ಈ ಅರ್ಧ ಶ್ಲೋಕದ ಮೂಲಕ ಶ್ರೀಕೃಷ್ಣಭಗವಾನರವರು ತಮ್ಮ ಕೃಪಾಮಾಹಾತ್ಮ್ಯವನ್ನು ಪ್ರದರ್ಶಿಸಿರುತ್ತಾರೆ. ಯೋಗಾರಂಭದಲ್ಲಾಗಲಿ, ಯೋಗಾನುಷ್ಠಾನದ ವಿಪಾಕದಶೆಯಲ್ಲಾಗಲಿ ವಿಚ್ಛಿತಿಯುಂಟಾದ ರೇನೋ ಧರ್ಮಾನುಷ್ಠಾನಕ್ಕೆ ವಿಚ್ಛಿತಿಯುಂಟಾಯಿತೇ ಎಂಬ ಪರಿತಾಪದಿಂದ ಆ ಯೋಗಭ್ರಷ್ಟ ನಿಗೆ ಪುನಃ ಯೋಗದಲ್ಲಿ ಪ್ರವೃತ್ತಿಯನ್ನುಂಟುಮಾಡುವದೇನೋ ಸಹಜವು. ಜಿಜ್ಞಾಸುವಾಗಿ ಆತ್ಮಚಿಂತನ ವಿಷಯದ ಚರ್ಚೆಯಲ್ಲಿರುವನ ವಿಷಯದಲ್ಲೂ ಅಂತಹ ಸಮವಾದ ಅನುಗ್ರಹ ವೀಗ ಶ್ರೀಕೃಷ್ಣಭಗವಾನರವರ ಕೃಪಾಪ್ರಭಾವವೆಂದು ಗ್ರಹಿಸತಕ್ಕದ್ದು. ಸುಕೃತವಿಷಯವಾದ ಜಿಜ್ಞಾಸೆಯೂ ಕೂಡ ಭಗವದನುಗ್ರಹಸಂಪಾದಕವು. "ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್" (ಗೀ. ೨-೪೦) ಎಂಬಲ್ಲಿಯೇ ಈ ತಮ್ಮ ಕೃಪಾಪ್ರಭಾವವನ್ನು ಹೊರಪಡಿಸಿದರು. ||೪೪||

ಭಾಷ್ಯಾರ್ಥವು :—ಅಲ್ಪವಾದ ಸುಕೃತಕ್ಕೂ ಕೂಡ ವಿಚ್ಛಿತ್ತಿಯು ಎಂದಿಗೂ ಇಲ್ಲವೆಂದೂ, ವಿಚ್ಛಿತ್ತಿಯಾದುದನ್ನು ಪುನಃ ಸಂಘಟನೆಯನ್ನು ಮಾಡುವ ಕೃಪಾ ಮತ್ತು ಶಕ್ತಿಯೂ ತಮ್ಮಲ್ಲಿ ಉಂಟೆಂದು ಹೇಳಿಕೊಳ್ಳುತ್ತಾರೆ. ಯೋಗಾರಂಭ ಅಥವಾ ಯೋಗಾಂತ್ಯದಲ್ಲಿ ವಿಚ್ಛಿತ್ತಿಯುಂಟಾ ದವನಿಗೂ ಶ್ರೇಯಸ್ಸುಂಟೆಂದು ಹೇಳಿದುದು ಹಾಗಿರಲಿ ; ಯೋಗವಿಷಯಜಿಜ್ಞಾಸುವೂ ಕೂಡ ಅಂತಹ ಶ್ರೇಯಸ್ಸನ್ನೇ ತಮ್ಮ ಕೃಪಾಪ್ರಭಾವದಿಂದ ಹೊಂದುವನೆಂದು ಹೇಳುತ್ತಾರೆ. ಈ ಅಧಿಕಾರಿಯು ಯಾರು ಎಂಬುದನ್ನು ಮೊದಲು ತಿಳಿಸುತ್ತಾರೆ. ಹಾಗೆಯೇ ಜಿಜ್ಞಾಸು ಶಬ್ದಾಭಿಪ್ರೇತವಾದುದನ್ನು ತಿಳಿಸುತ್ತಾರೆ. ಅಪ್ರವೃತ್ತಯೋಗಃ – ಇನ್ನು ಯೋಗಾಭ್ಯಾಸದಲ್ಲಿ ಪ್ರವರ್ತಿಸದೇ, ಯೋಗೇಜಿಜ್ಞಾಸು ರಪಿ - ಯೋಗಮೂಲಕ ಜೀವಾತ್ಮಸ್ವರೂಪದ ಮಾಹಾತ್ಮೆ ಯನ್ನು ತಿಳಿಯಬೇಕೆಂಬಪೇಕ್ಷೆಯುಳ್ಳವನೂ ಕೂಡ, ಈ ಜಿಜ್ಞಾಸು ಶಬ್ದವು ಇದೇ ಅರ್ಥದಲ್ಲೇ ಮುಂದೆಯೂ "ಆರ್ತೋ ಜಿಜ್ಞಾಸುರರ್ಥಾರ್ಥೀ"(ಗೀ. ೭-೧೬) ಎಂಬಲ್ಲಿಯೂ ಪ್ರಯೋಗಿಸಲ್ಪಟ್ಟಿ ರುತ್ತದೆ. ತತಶ್ಚಲಿತ ಮಾನಸಃ - ಅದರಿಂದ ಚಲಿಸಲ್ಪಟ್ಟ ಮನಸ್ಸುಳ್ಳವನಾದರೆ, ಪುನರಪಿ - ಮುಂದಿನ ಜನ್ಮದಲ್ಲಿ, ತಾಮೇವ ಜಿಜ್ಞಾಸಾಂ ಪ್ರಾಪ್ಯ - ತನಗೆ ಉಂಟಾದ ಬುದ್ಧಿ ಸಂಯೋಗ ಮೂಲಕ ಆ ಯೋಗವನ್ನು ಕುರಿತು ಚಿಂತಿಸುವ ಅವಸ್ಥೆಯನ್ನೇ ಹೊಂದಿ, ಕರ್ಮಯೋಗಾದಿಕಂ- ಕರ್ಮಯೋಗವನ್ನೇ ಉಪಕ್ರಮವಾಗಿವುಳ್ಳ, ಯೋಗ ಮನುಷ್ಠಾಯ - ಯೋಗವನ್ನು ಮಾಡಿ ಎಂದರೆ, ಆತ್ಮಚಿಂತನವನ್ನು ಮಾಡಿ, ಶಬ್ದಬ್ರಹ್ಮಾತಿ ವರ್ತತೇ - ಶಬ್ದ ಬ್ರಹ್ಮವನ್ನು ಅತಿಕ್ರಮಿ ಸುತ್ತಾನೆ. ಇದರಭಿಪ್ರಾಯವೇನೆಂಬುದನ್ನು ಉಪಪಾದಿಸುತ್ತಾರೆ. ಈ ಪದಗಳಿಗೇನೇ ಭಿನ್ನಾರ್ಥ ಗಳು ಏರ್ಪಟ್ಟವೆ. ಶಬ್ದ ವೆಂದರೆ ದೇವಮನುಷ್ಯ ಪೃಥಿವ್ಯಂತರಿಕ್ಷಸ್ವರ್ಗಾದಿ ಶಬ್ದಾಭಿಲಾಪ ಯೋಗ್ಯಂ - ಇವನು ದೇವತೆ, ಇವನು ಮನುಷ್ಯ, ಇದು ಭೂಮಿ, ಇದು ಅಂತರಿಕ್ಷ, ಇದು ಸ್ವರ್ಗವು ಇವೇ ಮೊದಲಾದ ಶಬ್ದಗಳಿಂದ ಹೇಳಿಸಿಕೊಳ್ಳಲು ಯೋಗ್ಯವಾದ, ಬ್ರಹ್ಮ ವೆಂದರೆ ಪ್ರಕೃತಿಯು. ಶಬ್ದಬ್ರಹ್ಮವೆಂದರೆ ಪ್ರಕೃತಿ ಎಂಬರ್ಥವಾದರೆ, ಶಬ್ದಬ್ರಹ್ಮಾತಿವರ್ತತೇ-ಪ್ರಕೃತಿ ಯನ್ನು ಮೀರುತ್ತಾನೆಂದರ್ಥವಾಗುತ್ತದೆ. ಇವರರ್ಥವೇನೆಂಬುದನ್ನು ಮುಂದಿನ ವಾಕ್ಯದಿಂದ

ಭಾ: ಶಬ್ದಾಭಿಲಾಪಾನರ್ಹಂ ಜ್ಞಾನಾನನ್ದೈಕತಾನ ಮಾತ್ಮಾನಂ ಪ್ರಾಪ್ನೋತೀತ್ಯರ್ಥಃ॥೪೪॥

ತಿಳಿಸುತ್ತಾರೆ. ಪ್ರಕೃತಿಬಂಧಾದ್ವಿಮುಕ್ತಃ - ದೇಹದ ಬಂಧದಿಂದ ಬಿಡಲ್ಪಟ್ಟ, ದೇವಮನುಷ್ಯಾದಿ ಶಬ್ದಾಭಿಲಾಪಾನರ್ಹಂ - ಆ ದಶೆಯಲ್ಲಿ ಈ ಆತ್ಮನು ದೇವತೆಯು, ಈ ಆತ್ಮನು ಮನುಷ್ಯನೇ ಮೊದಲಾದ ಶಬ್ದಗಳಿಂದ ಹೇಳಿಸಿಕೊಳ್ಳಲು ಅನರ್ಹವಾಗಿರುವ; ಜ್ಞಾನಾನಂದೈಕತಾನಂ - ಜ್ಞಾನಾನಂದಾದಿಗುಣಗಳಿಗೆ ಮುಖ್ಯವೃತ್ತಿಯಾಗಿರುವ, ಆತ್ಮಾನಂ-ಜೀವಾತ್ಮಸ್ವರೂಪವನ್ನು, ಪ್ರಾಪ್ನೋತೀತ್ಯರ್ಥಃ-ಹೊಂದುವನು ಎಂಬರ್ಥವು; ಆತ್ಮಸಾಕ್ಷಾತ್ಕಾರರೂಪ ಯೋಗಸಿದ್ಧಿಯನ್ನು ಹೊಂದುವನೆಂಬ ಭಾವವು. ಆತ್ಮನು ಜ್ಞಾನಾನಂದ ಸ್ವರೂಪನೆಂಬುದಕ್ಕೆ "ನಾಯಂ ದೇವೋ ನಮರ್ತ್ಯೋವಾ ನ ತಿರ್ಯಕ್ಸ್ಥಾವರೋಽಪಿವಾ। ಜ್ಞಾನಾನನ್ದಮಯ ಸ್ತ್ವಾತ್ಮಾ ಶೇಷೋಹಿ ಪರಮಾತ್ಮನಃ"॥ ಎಂಬ ಪ್ರಮಾಣವು ಅನುಸಂಧೇಯವು. ಭಾಷ್ಯದಲ್ಲಿ ಕರ್ಮಯೋಗಾದಿಕಂ ಯೋಗಮನುಷ್ಠಾಯ ಎಂಬಲ್ಲಿನ ಆದಿ ಶಬ್ದದಿಂದ ಕರ್ಮಯೋಗಾನಂತರ ಮಾಡಬಹುದಾದ ಜ್ಞಾನಯೋಗವೂ ಹೇಳಲ್ಪಟ್ಟಿತು. ಜ್ಞಾನಯೋಗದಲ್ಲಿಳಿದು ಆತ್ಮ ಚಿಂತನ ಮಾಡಲು ಶಕ್ತಿ ಇದ್ದ ಪಕ್ಷದಲ್ಲಿ ಅದನ್ನೂ ಅನುಷ್ಠಿಸುವನೆಂಬ ತಾತ್ಪರ್ಯವು.

ಈ ಶ್ಲೋಕಾರ್ಥದಲ್ಲಿ ತೋರಿಬರುವ ಅಧಿಕಾರಿಯು ಅಪ್ರವೃತ್ತಯೋಗನೆಂದು ಹೇಳಲು ಸಾಧನವೇನೆಂದರೆ, ಯೋಗಭ್ರಷ್ಟನ ವಿಷಯವನ್ನು ಹೇಳಿ, ಅನಂತರ ಅಪಿ ಶಬ್ದದೊಂದಿಗೆ ಜಿಜ್ಞಾಸುಃ ಎಂದು ಸನ್ ಪ್ರತ್ಯಯವಿರುವದರಿಂದಲೂ, ಯಾವ ವಿಷಯದಲ್ಲಿ ಜಿಜ್ಞಾಸುಃ ಎಂದರೆ ಯೋಗಸ್ಯ ಎಂದು ಹೇಳಿರುವದರಿಂದಲೂ,ಅಪ್ರವೃತ್ತಯೋಗನು;ಹೀಗೆ ಆತ್ಮಚಿಂತನರೂಪ ಯೋಗ ವಿಷಯವಾದ ಜಿಜ್ಞಾಸುವಿಗೂ ಕೂಡ, ಯೋಗಭ್ರಷ್ಟನಿಗೆ ಯಾವ ಸುಕೃತಗಳುಂಟೆಂದು ಹೇಳಿದೆನೋ, ಅವು ಇವನಿಗೂ ಕೂಡ ಉಂಟೆಂದು ಹೇಳುವ ಸಙ್ಗತಿಯೇ ಸಾಧನವು. ಇಲ್ಲಿ ಯೋಗಸ್ಯ ಜಿಜ್ಞಾಸುಃ ಎಂಬಲ್ಲಿ ಕರ್ಮಣಿ ಷಷ್ಠಿ ಯಲ್ಲವು, ಸಂಬಂಧ ಸಾಮಾನ್ಯ ಷಷ್ಠಿ ಎಂದು ತಿಳಿಸುವವಕ್ಕಾಗಿ, ಯೋಗೇ ಜಿಜ್ಞಾಸುರಪಿ ಎಂಬ ವ್ಯಾಖ್ಯಾನವು. ಹಿಂದಿನ ಜನ್ಮದಲ್ಲಿ ಮಾಡಿದ ಸುಕೃತ ದುಷ್ಕೃತಗಳಿಗೆ ಮುಂದಿನ ಜನ್ಮದಲ್ಲಿ ಭಗವದನುಗ್ರಹ ನಿಗ್ರಹರೂಪ ಫಲಗಳು ತಪ್ಪಿದ್ದಲ್ಲವಾದುದರಿಂದ, ಅಂತಹ ಫಲಗಳನ್ನುಂಟುಮಾಡುವ ಶಕ್ತಿಯು ಈ ಅಧಿಕಾರಿಯನ್ನನುಸರಿಸಿ ಬರುತ್ತವೆಂಬುದನ್ನು ತಿಳಿಸುವದಕ್ಕಾಗಿ ಸಂಸ್ಕಾರ ವಾಸನಾ ಶಬ್ದಗಳನ್ನು ಪ್ರಯೋಗಿಸುವ ವಾಡಿಕೆಯುಂಟು; ಸಂಸ್ಕಾರ ಶಬ್ದವನ್ನು ಸುಕೃತದ ಸಂದರ್ಭದಲ್ಲೂ, ವಾಸನಾಶಬ್ದವನ್ನು ದುಷ್ಕೃತದಲ್ಲೂ, ಅಥವಾ ಸುಕೃತ ದುಷ್ಕೃತವೆರಡರ ಸಂದರ್ಭದಲ್ಲೂ ಪ್ರಯೋಗಿಸುತ್ತಾರೆ. ಆತ್ಮಾನುಭವ ವಿಷಯವಾದ ಜಿಜ್ಞಾಸೆಯೂ ಕೂಡ ಸುಕೃತವಾದುದರಿಂದ ಅಂತಹ ಜಿಜ್ಞಾಸದ ಸಂಸ್ಕಾರಬಲದಿಂದ ಭಗವದನುಗ್ರಹರೂಪವಾದ ಯೋಗದಲ್ಲಿ ಪ್ರವೃತ್ತಿಯುಂಟಾಗುತ್ತದೆಂಬುದು ತಾತ್ಪರ್ಯವು. ಈ ಶ್ಲೋಕದಲ್ಲಿರುವ ಶಬ್ದಬ್ರಹ್ಮವೆಂಬುವಕ್ಕೆ ಒಬ್ಬ ಭಾಷ್ಯಕಾರರು ವೇದೋಕ್ತ ಕರ್ಮಾನುಷ್ಠಾನಫಲವೆಂದೂ, ಇನ್ನೊಬ್ಬರು ಪರಬ್ರಹ್ಮವೆಂದೂ, ಇನ್ನೊಬ್ಬರು ವಿಧಿನಿಷೇಧರೂಪಶಾಸ್ತ್ರನಿರ್ಬಂಧವೆಂದೂ ಅರ್ಥಮಾಡಿರುತ್ತಾರೆ ಪರಬ್ರಹ್ಮವೆಂದು ಅರ್ಥಮಾಡಿದರೆ ಅತಿವರ್ತತೇ ಎಂದು ಹೇಳುವ ಅರ್ಥವು ಕೂಡುವದಿಲ್ಲವು, ಆಗ ಸುಮ್ಮನೆ ಬ್ರಹ್ಮವೆಂದು ಹೇಳಿದರೇನೇ ಸಾಕಾಗಿತ್ತು; ಶಬ್ದವೆಂದರೆ ವೇದದಲ್ಲಿ ಪ್ರತಿಪಾದಿತನಾದ ಪರಬ್ರಹ್ಮವೆಂದು ಹೇಳುವದರಿಂದಲೂ ಏನೊಂದು ಸ್ವಾರಸ್ಯವೂ ಉಂಟಾಗಲಿಲ್ಲವು; ಯೋಗಭ್ರಷ್ಟನಿಗೆ ಯೋಗಸಂಸಿದ್ಧಿ ಫಲವೆಂದು ಹೇಳಿ, ಯೋಗಾಭ್ಯಾಸವನ್ನು ಇನ್ನೂ ಪ್ರಾರಂಭಿಸದೇ ಇರುವವನಿಗೆ ಪರಬ್ರಹ್ಮಪ್ರಾಪ್ತಿಯು ಫಲವೆಂದು ಹೇಳಿದರೆ ಅವ್ಯವಸ್ಥೆಗೆ ಕಾರಣಭೂತವಾಗುತ್ತದೆ. ಶಬ್ದಬ್ರಹ್ಮ ಶಬ್ದದಿಂದ ವೇದವು ಕೆಲವು

ಸಂದರ್ಭದಲ್ಲಿ ಹೇಳಲ್ಪಡುವದ್ರಿಂದ, ಶಬ್ದಬ್ರಹ್ಮ ವೆಂದರೆ ವೇದವು ಎಂದೂ ಹೇಳಲಾಗುವದಿಲ್ಲವು. ಆದಕ್ಕೂ ಅತಿವರ್ತತೇ ಎಂಬ ಭಾವವು ಅಸಂಗತವು. ವೇದ ಪ್ರತಿಪಾದ್ಯವಾದ ಕರ್ಮವೆಂದಾಗಲಿ, ಅದರ ಫಲವೆಂದಾಗಲಿ ಅರ್ಥಹೇಳಲು ಸಾಧ್ಯವಿಲ್ಲವು. ಯೋಗಭ್ರಷ್ಟನು ಕರ್ಮಾನುಷ್ಠಾನವನ್ನು ಮಾಡುವದು, ಈ ಜಿಜ್ಞಾಸುವು ಅದನ್ನು ಮೀರುವದು, ಎಂಬರ್ಥದಿಂದ ಅಸಂಗತವು; ಫಲವನ್ನು ಅತಿವರ್ತತೇ ಎಂದು ಹೇಳಿದರೆ ಎಲ್ಲಾ ಮುಮುಕ್ಷುವೂ ಕರ್ಮಫಲವನ್ನು ತ್ಯಾಗ ಮಾಡತಕ್ಕದ್ದಾಗಿರುವಾಗ ಜಿಜ್ಞಾಸುವಿನ ವಿಷಯದಲ್ಲಿ ವಿಶೇಷಿಸಿ ಹೇಳಲು ಕಾರಣವಿರುವದಿಲ್ಲವು. ಶಬ್ದಜನ್ಯ ಜ್ಞಾನಮಾತ್ರ ಶಬ್ದಬ್ರಹ್ಮದಿಂದ ಹೇಳಲ್ಪಟ್ಟಿತು ಎಂದರೆ ಅಂತಹ ಜ್ಞಾನ ಬೇಕೆಂಬುವವಂಗೆ ಅತಿವರ್ತತೇ ಎಂದು ಹೇಳುವದು ವಿರುದ್ಧವಲ್ಲವೇ ? ಹೀಗೆ ಇತರ ಅರ್ಥಗಳು ಯಾವುವೂ ಕೂಡುವದಿಲ್ಲವು. ಶಬ್ದಬ್ರಹ್ಮ ವೆಂದರೆ ವ್ಯವಹಾರವನ್ನುಂಟುಮಾಡುವ ಪ್ರಕೃತಿ ಎಂದು ಅರ್ಥ ಮಾಡಿದರೆ, ಅದಕ್ಕೆ ಅತಿವರ್ತತೇ ಎಂದು ಹೇಳುವದು ಸಮಂಜಸವಾಗುತ್ತದೆ. ಆದುದರಿಂದ ಶಬ್ದ ಬ್ರಹ್ಮಕ್ಕೆ ದೇವ ಮನುಷ್ಯಪೃಥಿವ್ಯಂತರಿಕ್ಷ ಸ್ವರ್ಗಾದಿ ಶಬ್ದಾಭಿಲಾಪಯೋಗ್ಯಂ ಬ್ರಹ್ಮ-ಪ್ರಕೃತಿಃ ಎಂದು ವ್ಯಾಖ್ಯಾನವನಾಡಿರುತ್ತಾರೆ. ಪ್ರಕೃತಿಯೇ ಸರ್ವಕ್ಕೂ ಶಬ್ದಯೋಗ್ಯತೆ ಎಂದರೆ ವ್ಯವಹಾರ ಯೋಗ್ಯತೆ ಯನ್ನುಂಟುಮಾಡುತ್ತದೆ; ಭೋಗ್ಯ, ಭೋಗೋಪಕರಣ ಭೋಗಸ್ಥಾನಾದಿಗಳೆಲ್ಲಾ ಪ್ರಕೃತಿಯುಕ್ತವಾಗಿ ವ್ಯವಹಾರಕ್ಕೆ ಯೋಗ್ಯವಾಗಿರುವದರಿಂದ ಶಬ್ದ ಬ್ರಹ್ಮ ವೆಂದರೆ ನಾಮರೂಪಗಳನ್ನುಂಟುಮಾಡಿ ವ್ಯವಹರಿಸಲು ಯೋಗ್ಯತೆಯನ್ನುಂಟುಮಾಡುವ ಪ್ರಕೃತಿಯು ಎಂಬರ್ಥವು. "ಸರ್ವಾಣಿ ರೂಪಾಣಿ ವಿಚಿತ್ಯಧೀರಃ, ನಾಮಾನಿ ಕೃತ್ವಾ" ಎಂಬಿವೇ ಮೊದಲಾದ ಶ್ರುತಿಮೂಲಕವಾಗಿ ವಿಭಕ್ತವಾದ ನಾಮರೂಪ ಪ್ರಾಪ್ತಿಯೂ--ದೇವ ಮನುಷ್ಯ, ಪೃಥಿವೀ, ಅಂತರಿಕ್ಷ, ಸ್ವರ್ಗಾದಿ ವ್ಯವಹಾರಗಳೂ ಪ್ರಕೃತಿಯ ಮೂಲಕವಾದುದರಿಂದ ಶಬ್ದಬ್ರಹ್ಮಕ್ಕೆ ವ್ಯಾಖ್ಯಾನವಾಗಿ, ದೇವ ಮನುಷ್ಯ ಪೃಥಿವ್ಯಂತರಿಕ್ಷ ಸ್ವರ್ಗಾದಿ ಶಬ್ದಾಭಿಲಾಪಯೋಗ್ಯಂ ಬ್ರಹ್ಮ-ಪ್ರಕೃತಿಃ, ಎಂಬದಾಗಿ ವಿವರಿಸಲ್ಪಟ್ಟಿತು. ಇದನ್ನು ಅತಿವರ್ತತೇ ಎಂದರೆ ಪ್ರಕೃತಿ ವಿಯುಕ್ತ ಆತ್ಮಸಾಕ್ಷಾತ್ಕಾರ ದಶೆಯನ್ನು ಹೊಂದುತ್ತಾನೆಂಬ ಅರ್ಥವು. ಇಂತಹ ಯೋಗಸಂಸಿದ್ಧಿಯನ್ನು ಹೊಂದುವದು ಯೋಗದ ಆರಂಭದ ದಶೆಯಲ್ಲಾಗಲಿ ವಿಪಾಕಾವಸ್ಥೆಯ ಸ್ವಲ್ಪ ಪೂರ್ವದಶೆಯಲ್ಲಾಗಲಿ ಯೋಗಭ್ರಷ್ಟನಾದವನು ಹೊಂದುವನು ಎಂಬುದು ಮಾತ್ರವೇ ಅಲ್ಲವು ; ಇನ್ನೂ ಯೋಗಾಭ್ಯಾಸವನ್ನು ಆರಂಭಿಸದೆ ಯೋಗದಲ್ಲಿ ಪ್ರವರ್ತಿಸಬೇಕೆಂಬ ಜಿಜ್ಞಾಸವೂ ಕೂಡ ಮುಂದಿನ ಜನ್ಮದಲ್ಲಿ ಯೋಗ ಸಂಸಿದ್ಧಿಯನ್ನು ಹೊಂದುವನೆಂಬುದು ಸರಿಯಾದ ಅರ್ಥವಾಗಿ ತೋರುತ್ತದೆ. ಪ್ರಕರಣಕ್ಕೂ ಸಙ್ಗತಿಗೂ ಸಮಂಜಸವಾದುದಾಗುತ್ತದೆ. ಶ್ರೀ ಕೃಷ್ಣನು ಕರುಣಾಮಹೋದಧಿ ಎಂದೂ ಆಗುತ್ತದೆ. ಬ್ರಹ್ಮಶಬ್ದಕ್ಕೆ ಪ್ರಕೃತಿಯೆಂಬರ್ಥದಲ್ಲಿ ಈ ಗೀತೆಯಲ್ಲೇ ಪ್ರಯೋಗವಿರುತ್ತದೆ ಎಂದು ಮೇಲೆ ತಿಳಿಸಿರುತ್ತೇವೆ. ಅಥವಾ, "ಬ್ರಾಹ್ಮಣೇಷು ಚ ವಿದ್ವಾಂಸೋ ವಿದ್ವತ್ಸುಕೃತಬುದ್ಧಯಃ।ಕೃತಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವಾದಿನಃ"॥ ಎಂದು ಹೇಳಿರುವ ಹಾಗೆ ಜಿಜ್ಞಾಸುಃ ಎಂದರೆ ಬ್ರಹ್ಮಜಿಜ್ಞಾಸುವು ಎಂದು ಅರ್ಥಮಾಡಿ, ಆತನು ಎಲ್ಲರಿಗಿಂತಲೂ ಅಧಿಕನೆಂದು ಅತಿವರ್ತತೇ ಎಂಬ ಪ್ರಯೋಗವು ಎಂದು ಅರ್ಥಮಾಡುತ್ತೇವೆ, ಎಂದರೆ ಅರ್ಥವೇನೋ ಚನ್ನಾಗಿ ತೋರುತ್ತದೆ, ಆದರೆ ಶಬ್ದಬ್ರಹ್ಮ ವೆಂಬಲ್ಲಿ ಶಬ್ದಬ್ರಹ್ಮವಾದಿಯು ಎಂದು ಅಧ್ಯಾಹಾರಮಾಡಿಕೊಳ್ಳಬೇಕಾದುದೂ, ಅಪ್ರಸ್ತುತಪ್ರಕರಣವೂ, ಪೂರ್ವೋತ್ತರ ಶ್ಲೋಕಗಳಿಗೆ ಸಙ್ಗತಿ ಇಲ್ಲದಿರೋಣವೂ, ಇತ್ಯಾದಿ ದೋಷಗಳುಂಟಾಗುತ್ತವೆ. ||೪೪||

ಮೂಲಕ್ಕೆ ಅರ್ಥವು—ಹಿಂದಿನ ಶ್ಲೋಕಗಳಿಗೂ ಈ ಶ್ಲೋಕಕ್ಕೂ ಸಙ್ಗತಿ ಏನೆಂಬುದಕ್ಕೆ ಶ್ರೀ ಭಾಷ್ಯಕಾರರು ಅವತಾರಿಕೆಯನ್ನು ಕೊಡಲಿಲ್ಲವಾಗಿ ಶ್ರೀ ನಿಗಮಾಂತದೇಶಿಕರು ಅವತಾ

**ಮೂ. ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ।**
**ಅನೇಕ ಜನ್ಮಸಂಸಿದ್ಧ ಸ್ತತೋ ಯಾತಿ ಪರಾಂ ಗತಿಮ್ ॥ ೪೫.**

ರಿಕೆಯನ್ನು ಮಾಡುಪಾಲಿಸಿರುತ್ತಾರೆ. ಹಿಂದೆ ಯೋಗಭ್ರಷ್ಟನು ತನಗೆ ಭ್ರಷ್ಟತೆಯನ್ನುಂಟುಮಾಡಿದ ಕಾಮನೆಯನ್ನು ಅನುಭವಿಸಿ, ಪುನಃ ಮನುಷ್ಯಜನ್ಮವು ಯೋಗಪೂರ್ತಿಗೆ ಅನುಗುಣವಾಗಿ ಪ್ರಾಪ್ತವಾಗಿ, ಯೋಗಸಂಸಿದ್ಧಿಗಾಗಿ ಪ್ರಯತ್ನಿಸುವನೆಂದು ಹೇಳಲ್ಪಟ್ಟಿತು. ಅವನಿಗೇನೇ ಈ ಶ್ಲೋಕದಲ್ಲಿ ಹೇಗೆ ಯೋಗಪೂರ್ತಿಯು ಲಭಿಸಿ ಪರಾಂಗತಿಂ ಎಂಬ ಶಬ್ದದಿಂದ ಹೇಳಲ್ಪಟ್ಟ ಶ್ರೇಷ್ಠ ಪುರುಷಾರ್ಥರೂಪವಾದ ಆತ್ಮಸಾಕ್ಷಾತ್ಕಾರವು ಲಭಿಸುತ್ತದೆಂಬ ಅವತಾರಿಕೆಯನ್ನು ಕೊಟ್ಟರುತ್ತಾರೆ. ಮೂಲದಲ್ಲಿ ಪ್ರಯತ್ನಾದ್ಯತಮಾನಸ್ತು ಎಂಬಲ್ಲಿ ತು ಶಬ್ದವು ಶಙ್ಕಾವನ್ನು ವ್ಯಾವರ್ತಿಸಿ ಹೇಳುತ್ತದೆ. ಈ ಮೇಲಿನ ಅವತಾರಿಕೆಗೆ ಅನುಗುಣವಾದ ಶಙ್ಕಾ ಏನೆಂದರೆ, ಶುಚೀನಾಂ ಶ್ರೀಮತಾಂ ಗೇಹೇ: ಅಥವಾ ಧೀಮತಾಂ ಯೋಗಿನಾಂ ಕುಲೇ ಜನ್ಮಗಳೇನೋ ಯೋಗ ಮಾಹಾತ್ಮ್ಯದಿಂದ ಯೋಗಸಿದ್ಧಿಗೆ ಉಪಕಾರಕಗಳಾಗಿ ಪ್ರಾಪ್ತವಾಗಬಹುದು; ಆದರೆ ಆ ಜನ್ಮಗಳಲ್ಲೂ ಯೋಗಚಲಿತನಾಗಿ ಏಕೆ ಆಗಕೂಡದು? ಎಂಬ ಶಙ್ಕಾ ಉಂಟಾಗಬಹುದು. ಪ್ರಯತ್ನಾತ್ ಯತಮಾನಸ್ತು - ಕಷ್ಟಪಟ್ಟು ಮನಸ್ಸನ್ನು ನಿಗ್ರಹಿಸಿ ಪ್ರಯತ್ನಿಸಿದವನು ಯೋಗ ಸಂಸಿದ್ಧಿಯನ್ನು ಹೊಂದುವನೆಂದು ಸಮಾಧಾನವನ್ನು ಹೇಳುತ್ತಾರೆ. ಅಥವಾ ಇನ್ನೊಂದು ವಿಧವಾಗಿಯೂ ಅವತಾರಿಕೆಯನ್ನು ಕೊಡಬಹುದು. ಹೇಗೆಂದರೆ— ಅರ್ಜುನನು ಮನಸ್ಸಿನ ಚಾಂಚಲ್ಯದಿಂದ ಯೋಗಭ್ರಷ್ಟನಾದರೆ ಆತನಿಗೆ ಯಾವಗತಿಯು ಎಂದು ಪ್ರಶ್ನಿಸಿಸುದುದಕ್ಕೆ ಇಷ್ಟು ದೂರ ಉತ್ತರವನ್ನು ಹೇಳಿದರು. ಅನಂತರ ಹಿಂದೆ ಹೇಳಿದಹಾಗೆ ಏನೊಂದು ವಿಘ್ನಗಳುಂಟಾಗದೆ ಮನಸ್ಸನ್ನು ಪ್ರಯತ್ನಾತ್-ನಿಗ್ರಹಿಸಿ, ಯತಮಾನನಿಗೋ ಎಂದರೆ, ಆತನಿಗೆ ಕಾರಣಸಹಿತವಾಗಿ ಪರಾಗತಿ ರೂಪವಾದ ಯೋಗ ಸಂಸಿದ್ಧಿಯಾದ ಆತ್ಮಾವಲೋಕನವು ಲಭಿಸುತ್ತದೆಂದು ಹೇಳುತ್ತಾರೆಂದಾಗಲಿ ಅವತಾರಿಕೆಯನ್ನು ಕೊಡಬಹುದು. ಯೋಗಭ್ರಷ್ಟನಿಗೇನೋ ಮೇಲೆ ಹೇಳಿದ ರೀತಿಯಲ್ಲಿ ಜನ್ಮಗಳೂ ಯೋಗಸಿದ್ಧಿಯೂ, ಉಂಟೆಂದು ಹೇಳಿ, ಹಾಗೆ ಯೋಗಭ್ರಷ್ಟತೆಯಿಲ್ಲದೆ ಮನಸ್ಸನ್ನು ನಿಗ್ರಹಿಸಿದವನಿಗೆ ಅಜನ್ಮಗಳೊಂದೂ ಇಲ್ಲದೆ ಪರಾಗತಿಯುಂಟಾಗುತ್ತದೆಂದಾಗಲಿ ಅರ್ಥ ಹೇಳಬಹುದು. ಹಿಂದೆ "ಅಯತಿ ಶ್ಶ್ರದ್ಧಯೋಪೇತಃ" ಎಂಬಲ್ಲಿ ಅಯತಿಃ ಎಂಬ ಶಬ್ದದಿಂದ ಸರಿಯಾಗಿ ಪ್ರಯತ್ನ ಮಾಡದವನಿಗೆ ಯೋಗಸ್ಖಾಲಿತ್ಯವುಂಟಾಗುತ್ತದೆಂದೂ, ಅಂತವನಿಗೂ ಜನ್ಮಾನ್ತರದಲ್ಲಿ ಶ್ರೇಯಸ್ಸುಂಟೆಂದೂ, ಹೇಳಿದರು. ಈಗ ಪ್ರಯತ್ನಾದ್ಯತಮಾನಸ್ತು ಎಂಬುದರಿಂದ ಅದನ್ನು ವ್ಯಾವರ್ತಿಸಿ ಹಾಗೆ ಸ್ಖಾಲಿತ್ಯವಿಲ್ಲದೆ ಸರಿಯಾಗಿ ಪ್ರಯತ್ನಿಸುವವನ ವಿಷಯದಲ್ಲಾದರೋ ಎಂದರ್ಥವನ್ನು ಹೇಳಬಹುದು; ಆದರೆ ಶ್ರೀ ಭಾಷ್ಯಕಾರರ ವ್ಯಾಖ್ಯಾನದಲ್ಲಿ ಪ್ರಯತ್ನಾದ್ಯತಮಾನಸ್ತು ಯೋಗೀತತೋ ಪರಾಂಗತಿಂ ಯಾತ್ಯೇವ" ಎಂದಿರುವದರಿಂದ ಮೊದಲು ಹೇಳಿದ ಅವತಾರಿಕೆಯಲ್ಲೇ ಶ್ರೀ ಯತಿವರ್ಯರಿಗೆ ಅಭಿಪ್ರಾಯವೆಂದು, ಊಹಿಸಬಹುದು. ತತಃ - ಆ ಕಾರಣದಿಂದ, ಯೋಗಮಾಹಾತ್ಮ್ಯೆಯು ಹೀಗಿರುವದರಿಂದ, ಪ್ರಯತ್ನಾತ್ ಯತಮಾನಸ್ತು-ಮನಸ್ಸನ್ನು ಪ್ರಯತ್ನದಿಂದ ನಿಗ್ರಹಿಸಿ ಯೋಗದಲ್ಲಿ ಪ್ರಯತ್ನಮಾಡುವ, ಯೋಗೀ-ಯೋಗಿಯಾದರೋ, ಅನೇಕ ಜನ್ಮ ಸಂಸಿದ್ಧಃ - ಹೀಗೆ ಯೋಗದಲ್ಲಿ ಪ್ರಯತ್ನಿಸಬೇಕಾದರೆ ಅನೇಕ ಜನ್ಮಾರ್ಜಿತ ಪುಣ್ಯವುಳ್ಳವನಾಗಿ, ಆ ಕಾರಣದಿಂದಲೇ, ಸಂಶುದ್ಧ ಕಿಲ್ಬಿಷಃ - ಉಪಾಯಾನುಷ್ಠಾನಕ್ಕೆ ವಿಘ್ನರೂಪಗಳಾದ ಯಾವದೊಂದುಪಾಪಗಳಿಲ್ಲದೆ ಪರಿಶುದ್ಧನಾಗಿ, ಪರಾಂಗತಿಂ - ಯೋಗಕ್ಕೆ ಶ್ರೇಷ್ಠಫಲವಾದ

ಭ. ಯತಃ ಏವಂ ಯೋಗಮಾಹಾತ್ಮ್ಯಂ, ತತೋಽನೇಕ ಜನ್ಮಾರ್ಜಿತ ಪುಣ್ಯಸಂಚಯೈಃ ಸಂಶುದ್ಧ ಕಿಲ್ಬಿಷಃ, ಸಂಸಿದ್ಧ - ಸ್ಸಂಜಾತಃ ಪ್ರಯತ್ನಾದ್ಯತಮಾನಸ್ತು ಯೋಗೀ ಚಲಿತೋಽಪಿ ಪುನಃ ಪರಾಂ ಗತಿಂ ಯಾತ್ಯೇವ ||೪೫||

ತನ್ನ ಆತ್ಮ ಸಾಕ್ಷಾತ್ಕಾರವನ್ನು, ಯಾತಿ - ಹೊಂದುತ್ತಾನೆ. "ಅಯತಿಃ ಶ್ರದ್ಧಯೋಪೇತಃ ಯೋಗಾಚ್ಚಲಿತ ಮಾನಸಃ" ಯೋಗಾಭ್ಯಾಸದಲ್ಲಿ ಸರಿಯಾದ ಯತ್ನವಿಲ್ಲದೆ ಯೋಗಾತ್ ಚಲಿತಮಾನಸನೇನು, ಉಭಯ ಭ್ರಷ್ಟನೇ ಎಂದು ಅರ್ಜುನನು ಪ್ರಶ್ನಿಸಿದುದಕ್ಕೆ ಉಭಯ ವಿಧ ದಲ್ಲೂ ಆತನಿಗೆ ಮಂಗಳ ಉಂಟೆಂದೂ ಅತನು ಯಾವ ಅವಸ್ಥೆಯಲ್ಲಿ ಯೋಗಭ್ರಷ್ಟನಾದರೂ ಯೋಗಾರಂಭದಲ್ಲೇಯಾಗಲಿ, ಯೋಗದ ಅಂತ್ಯದಶೆಯಲ್ಲಾಗಲಿ, ಆತನು ಕೊನೆಗೆ ಯೋಗಸಿದ್ಧಿ ಯನ್ನೇ ಹೊಂದುವನೆಂದು ಹೇಳಿ, ಯೊಗಾಭ್ಯಾಸವನ್ನು ಆರಂಭಿಸಬೇಕೆಂದಿರುವವನಿಗೂ ಕೂಡ ಅಲ್ಲಿಂದ ಮುಂದಕ್ಕೆ ಯೋಗಸಿದ್ಧಿಯಾಗುತ್ತದೆಂದೂ ಉಪದೇಶಿಸಿ, ಹೀಗೆ ಯೋಗಮಾಹಾತ್ಮ್ಯೆಯು ನ್ನುಪದೇಶಿಸಿದರು. ಈ ಪ್ರಕಾರ ಯೋಗದಲ್ಲಿ ಸರಿಯಾದ ಪ್ರಯತ್ನಗಳಿಲ್ಲದುದರಿಂದ ಯೋಗ ಭ್ರಷ್ಟತೆಯು ಪ್ರಾಪ್ತವಾಯಿತು; ಸರಿಯಾದ ಪ್ರಯತ್ನವಿದ್ದುದಾದರೆ ಯೋಗಿಗೆ ಯೋಗಫಲವಾದ ಆತ್ಮಸಾಕ್ಷಾತ್ಕಾರ ಸಿದ್ಧಿಯು ಉಂಟಾಗುತ್ತದೆಂದು ನಿಗಮನಮಾಡಿ ಹೇಳುತ್ತಾರೆ.. ಆದರೆ ಸರಿಯಾದ ಪ್ರಯತ್ನಮಾಡಬೇಕಾದರೆ ಅನೇಕ ಜನ್ಮಗಳ ಸುಕೃತವಿರಬೇಕು. ಅಂತಹ ಸುಕೃತ ವಿದ್ದರೆ ವಿಘ್ನರೂಪ ಕಿಲ್ಬಿಷಗಳೆಲ್ಲಾ ತೊಲಗಿ ನಿರ್ವಿಘ್ನವಾಗಿ ಯೋಗನಿಷ್ಪತ್ತಿಯುಂಟಾಗುತ್ತ ದೆಂದು ಹೇಳಲ್ಪಟ್ಟಿತು.

**ಭಾಷ್ಯಾರ್ಥವು:**—ಮೊದಲಿನ ಶಙ್ಕಾನುಸಾರವಾಗಿ ಶ್ರೀ ಭಾಷ್ಯಕಾರರು ವ್ಯಾಖ್ಯಾನಮಾಡಿ ರುತ್ತಾರೆ. ಶಙ್ಕಾ ಏನೆಂದರೆ ಯೋಗಭ್ರಷ್ಟನಿಗೇನೋ ಕಡೆಗೆ ಒಳ್ಳೇ ಮಾನುಷಜನ್ಮವು ಯೋಗ ಪೂರ್ತಿಗನುಕೂಲವಾಗಿ ಉಂಟಾಗಬಹುದು. ಆದರೆ ಈ ಉತ್ತರ ಜನ್ಮದಲ್ಲೂ, ಏಕೆ ಯೋಗ ಭ್ರಷ್ಟತೆಯು ಉಂಟಾಗಕೂಡದು? ಎಂದರೆ ಅನೇಕ ಜನ್ಮಾರ್ಜಿತ ಸುಕೃತದ ಬಲದಿಂದ ವಿಘ್ನ ಗಳೆಲ್ಲಾ ತೊಲಗಿ ಸರಿಯಾದ ಪ್ರಯತ್ನವು ಉಂಟಾಗುವದರಿಂದ ಯೋಗಸಿದ್ಧಿಯುಂಟು ಎಂದು ಹೇಳುತ್ತಾರೆ. ಮೊದಲು ತತ ಶ್ಶಬ್ದಕ್ಕೆ ಅರ್ಥ ಬರೆಯುತ್ತಾರೆ. ತತಃ ಎಂಬ ಶಬ್ದವು ಯತಃ ಎಂಬುದರ ಅರ್ಥ ಸಾಪೇಕ್ಷೆಯನ್ನು ನಿರೀಕ್ಷಿಸುತ್ತದಾದುದರಿಂದ, ಯತಃ ಎಂದಾರಂ ಭವು, ಯತಃ ಏವಂ ಯೋಗಮಾಹಾತ್ಮ್ಯಂ - ಯಾವ ಕಾರಣದಿಂದ ಯೋಗಾಭ್ಯಾಸದ ಮಾಹಾತ್ಮ್ಯೆಯು ಇಂತಾದ್ದೋ, ತತಃ - ಆ ಕಾರಣದಿಂದ, ಅನೇಕ ಜನ್ಮಾರ್ಜಿತ ಪುಣ್ಯ ಸಂಚಯೈಃ - ಇದು ಅನೇಕ ಜನ್ಮಸಂಸಿದ್ಧಃ ಎಂಬುದರ ವ್ಯಾಖ್ಯಾನವು, ಅನೇಕ ಜನ್ಮಗ ಳಲ್ಲಿ ಸಂಪಾದಿಸಲ್ಪಟ್ಟ ಪುಣ್ಯಗಳ ಸಮೂಹದಿಂದ (ಇದು ಹೇತುಗರ್ಭವಿಶೇಷಣವೆಂಬಭಿಪ್ರಾಯ ದಿಂದ ತೃತೀಯಾವಿಭಕ್ತಿಯಿಂದ ವ್ಯಾಖ್ಯಾನವು,) ಅನೇಕ ಜನ್ಮಗಳಲ್ಲಿ ಸಂಪಾದಿಸಲ್ಪಟ್ಟ ಪುಣ್ಯ ಸಮೂಹದಿಂದ, ಸಂಸಿದ್ಧ ಕಿಲ್ಬಿಷಃ - ಯೋಗಸಿದ್ಧಿಗೆ ವಿರೋಧಿಗಳಾದ ಸಮಸ್ತ ಪಾಪಗಳಿಂ ದಲೂ ಬಿಡಲ್ಪಟ್ಟ ಎಂದರೆ ವಿಘ್ನಗಳ ಹತಿ ಏನೊಂದೂ ಇಲ್ಲದೆ, ಸಂಸಿದ್ಧಃ ಎಂದರೆ ಸಂಜಾತಃ ಜನ್ಮವೆತ್ತಿದವನಾಗಿ, ಪ್ರಯತ್ನಾದ್ಯತಮಾನಸ್ತು - ಪ್ರಯತ್ನಪಟ್ಟು ಇಂದ್ರಿಯನಿಗ್ರಹಮಾಡಿ ಯೋಗಾಭ್ಯಾಸದಲ್ಲಿ ಯತ್ನಮಾಡುವನಿಗಾದರೋ ಅಥವಾ ಅತ್ಯಧಿಕವಾಗಿ ಪ್ರಯತ್ನಮಾಡುವವನಿ ಗಾದರೋ, ಯೋಗೀ ಚಲಿತೋಽಪಿ - ಯೋಗಿಯು ಯೋಗದಿಂದ ಚಲನೆಯನ್ನು ಹೊಂದಿ ದರೂ ಎಂದರೆ ಯೋಗಿಯು ಯೋಗಭ್ರಷ್ಟನಾದರೂ, ಪುನಃ ಪರಾಂಗತಿಂ ಯಾತ್ಯೇವ–ಯೋಗಿಗೆ ಉತ್ತಮವಾದ ಗತಿಯಾದ ಆತ್ಮ ಸಾಕ್ಷಾತ್ಕಾರವನ್ನು ಹೊಂದಿಯೇ ಹೊಂದುವನು. ||೪೫||

ಭಾ. ಅ. ಅತಿಶಯಿತ ಪುರುಷಾರ್ಥ ನಿಷ್ಠತಯಾ ಯೋಗಿನ ಸ್ಸರ್ವಸ್ಮಾದಾಧಿಕ್ಯಮಾಹ—

ಮೂ. ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥ ೪೬.

ಹೀಗೆ ಯೋಗವಮಾಡುವ ರೀತಿಯನ್ನೂ ಅದರಿಂದುಂಟಾಗುವ ಸಿದ್ಧಿಯನ್ನೂ ಹೇಳಿ ಮುಗಿಸಿದರು. ಹೀಗೆ ಮುಗಿಸುವ ಸಂದರ್ಭದಲ್ಲಿ ಯೋಗವು ಎಲ್ಲಾ ಧರ್ಮಗಳಿಗಿಂತಲೂ ಮಾಹಾತ್ಮ್ಯಶಿಯಲ್ಲಿ ಅಧಿಕವಾದುದ್ದೆಂದು ಹೇಳುವದು ಅತ್ಯಾವಶ್ಯಕವು ಎಂದು ತೋರಿ, ಅದನ್ನು ಅತ್ಯಂತ ಶ್ಲಾಘಿಸುತ್ತಾರೆ. ತಪಸ್ವಿಗಳೂ ಜ್ಞಾನನಿಷ್ಠರೂ ಇತರ ಕರ್ಮನಿಷ್ಠರು ಇವರೆಲ್ಲರಿಗಿಂತಲೂ ಆತ್ಮನ ಅಮೋಘವಾದ ಸ್ವರೂಪ ಚಿನ್ತನ ಮಾಡುವ ಕರ್ಮಯೋಗಿಯು ಶ್ರೇಷ್ಠನಾದುದರಿಂದ ನೀನು ಕರ್ಮಯೋಗವನ್ನಾರಂಭಿಸಿ ಯೋಗಿಯಾಗು, ಎಂದು ಮುಂದಿನ ಶ್ಲೋಕದಲ್ಲಿ ಹಿತೋಪದೇಶವನ್ನು ಮಾಡುತ್ತಾರೆ.

ಭಾಷ್ಯಾವತಾರಿಕೆಯ ಅರ್ಥವು :—ಮುಖ್ಯವಾಗಿ ಮನುಷ್ಯನು ಚನ್ನಾಗಿ ಮೋಕ್ಷೋಪಾಯಾನುಷ್ಠಾನಕ್ಕಾಗಿ ತಿಳಿಯತಕ್ಕವು, (೧) ತನ್ನ ನೈಜಸ್ವರೂಪವೂ (೨) ಪರಮಾತ್ಮನ ಸ್ವರೂಪವೂ, ಆದುದರಿಂದ ತನ್ನ ನೈಜಸ್ವರೂಪ ಚಿನ್ತನವೂ ಪರಮಾತ್ಮೋಪಾಸನವೂ ಹೀಗೆ ಎರಡೂ ಮುಮುಕ್ಷುವಿಗೆ ವಿಧಿಸಲ್ಪಟ್ಟಿರುತ್ತವೆ. ಪ್ರಥಮತಃ ತನ್ನ ಆತ್ಮಚಿನ್ತನವು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿತ. ಪ್ರಕೃತಿವಿಮುಕ್ತದಶೆಯಲ್ಲಿ ತಾನು ಎಷ್ಟು ಪರಿಶುದ್ಧವಾಗಿ ಪರಮಾತ್ಮನಿಗೆ ಸಮಾನವಾದ ಸ್ವರೂಪವುಳ್ಳವನೆಂಬ ಅನುಸನ್ಧಾನವು, ಆತ್ಮಚಿನ್ತನವು. ಇದು ಸಿದ್ಧಿಸಿದ ನಂತರ ಭಕ್ತಿಯೋಗದಲ್ಲಿಳಿದು ಪರಮಾತ್ಮೋಪಾಸನೆಯು. ಹೀಗೆ ಜೀವಾತ್ಮ ಚಿನ್ತನವೂ ಪರಮಾತ್ಮೋಪಾಸನೆಗಳೆರಡೂ ಆವಶ್ಯಕಗಳು; ಎರಡನೆಯದು ಪ್ರಾಧಾನ್ಯವಾಗಿ ಅಙ್ಗಿಯು, ಮೊದಲನೆಯದು ಅಙ್ಗವು. ಹೀಗಿರುವದರಿಂದ ಆತ್ಮಚಿನ್ತನ ರೂಪಯೋಗವು ಸರ್ವಶ್ರೇಷ್ಠವಾದ ಅನುಷ್ಠಾನವೆಂದು ಹೇಳುತ್ತಾರೆಂದು ಅವತಾರಿಕೆಯನ್ನು ಅತಿಶಯಿತ ಇತ್ಯಾದಿಯಿಂದ ದಯಪಾಲಿಸಿರುತ್ತಾರೆ. ಅತಿಶಯಿತ ಪುರುಷಾರ್ಥನಿಷ್ಠತಯಾ - ತುಂಬಾ ಉತ್ಕೃಷ್ಟವಾದ ಪ್ರಯೋಜನವಾದ ಪರಮಾತ್ಮ ಸಾಕ್ಷಾತ್ಕಾರಕ್ಕೆ ಸಾಧನವಾಗಿರುವದರಿಂದ, ಯೋಗಿನಃ - ಆತ್ಮಾವಲೋಕನಕ್ಕಾಗಿ ಆತ್ಮಚಿನ್ತನವನ್ನು ಮಾಡುವವನ, ಸರ್ವಸ್ಮಾದಾಧಿಕ್ಯಮಾಹ- ಇನ್ನು ಇತರ ಧರ್ಮಾನುಷ್ಠಾತೃಗಳಿಗಿಂತ, ಶ್ರೇಷ್ಠತೆಯನ್ನು, ಆಹ - ಹೇಳುತ್ತಾರೆ. ಸಾಧಾರಣವಾಗಿ ಫಲಕ್ಕಾಗಿ ಮಾಡುವ ತಪಸ್ಸೇ ಮೊದಲಾದವುಗಳಿಗಿಂತ ಫಲಾಕಾಂಕ್ಷೆಯಿಲ್ಲದೆ ಕರ್ಮಯೋಗಕ್ಕೆ ಅಙ್ಗಿಯಾಗಿ ಮಾಡುವ ತಪಸ್ಸೇ ಮೊದಲಾದವುಗಳಾದರೋ ಅತಿಶಯಿತ ಫಲದಾಯಿಕಗಳಾಗಿ ಅಂತಹ ಕರ್ಮಯೋಗವು ಮೋಕ್ಷೋಪಾಯಕ್ಕೆ ಹೇತುವಾಗುವದರಿಂದ, ಇಂತಹ ಕರ್ಮಯೋಗನಿಷ್ಠನಾದ ಯೋಗಿಯಾಗು. ಆದಕ್ಕೆ ಸರ್ವೋತ್ಕೃಷ್ಟ ಫಲವುಂಟೆಂದು ಹೇಳಿ ಕರ್ಮಯೋಗಮಾಹಾತ್ಮ್ಯೋಪದೇಶವನ್ನು ಉಪಸಂಹಾರಮಾಡುತ್ತಾರೆ.

ಮೂಲಕ್ಕೆ ಅರ್ಥವು:—ತಪಸ್ವಿಭ್ಯಃ – ಕರ್ಮಯೋಗಪ್ರಭೇದವಾಗಿ ಅನುಷ್ಠಿಸತಕ್ಕ, ತಪೋಯಜ್ಞಾಧಿಕಾರಿಗಳಿಗಿಂತ ಬೇರೆಯಾಗಿ ಫಲಕಾಮನೆಯಿಂದ ಮಾಡುವ ತಪೋನಿಷ್ಠರೇ ಮೊದಲಾದವರುಗಳಿಗಿಂತಲೂ, (ಇವರು ಯಾರೆಂದರೆ ಫಲಕಾಮನೆಯಿಂದ ಮಾಡುವ ಕೃಚ್ಛ್ರ ಚಾಂದ್ರಾಯಣೋಪವಾಸಾದಿಗಳ ಅನುಷ್ಠಾತೃಗಳು, ಕರ್ಮಯೋಗಿಯಾದರೋ ಫಲಕಾಮನೆಯಿಲ್ಲದೆ ಭಗವದರ್ಪಣಬುದ್ಧ್ಯಾ ಇವುಗಳನ್ನು ಮಾಡುವವನು,) ಯೋಗೀ - ಈ ಫಲಾಪೇಕ್ಷೆ ಇಲ್ಲದ ಆತ್ಮಧ್ಯಾನಮಾಡುವ ಯೋಗಿಯು, ಅಧಿಕಃ-ಶ್ರೇಷ್ಠನು; ಜ್ಞಾನಿಭ್ಯೋಽಪಿ–ಕರ್ಮಯೋಗದ

ಭಾ. ಕೇವಲ ತಪೋಭಿರ್ಯಃ ಪುರುಷಾರ್ಥಃ ಸ್ಸಾಧ್ಯತೇ, ಆತ್ಮವ್ಯತಿರಿಕ್ತಜ್ಞಾನೈಶ್ಚ

ಜ್ಞಾನಯಜ್ಞಗಳಲ್ಲದೆ, ಎಂದರೆ ಆತ್ಮಜ್ಞಾನಿಗಿಂತ ಬೇರೆಯಾದ ಜ್ಞಾನನಿಷ್ಠನಿಗಿಂತಲೂ ಈ ಯೋಗಿಯು, ಅಧಿಕನು - ಶ್ಲಾಘ್ಯನು ಎಂಬುದು, ಮತಃ-ನನ್ನಭಿಪ್ರಾಯವು; ಕರ್ಮಿಭ್ಯಶ್ಚ-ಸ್ವರ್ಗಾದಿ ಫಲಗಳಿಗಾಗಿ ಯಜ್ಞಯಾಗಾನುಷ್ಠಾನಮಾಡುವವರಿಗಿಂತಲೂ, ಈ ಯೋಗಿಯು, ಅಧಿಕಃ - ಉತ್ತಮನು; ತಸ್ಮಾತ್ - ಆ ಕಾರಣದಿಂದ, ಹೀಗೆ ಯೋಗಿಯು ಇವೆಲ್ಲರಿಗಿಂತಲೂ ಅಧಿಕನಾದುದರಿಂದ, ಹೇ ಅರ್ಜುನ, ಯೋಗೀಭವ – ಕರ್ಮಯೋಗವನ್ನು ಅನುಷ್ಠಿಸಿ, ಆತ್ಮಧ್ಯಾನಪರನಾಗು. ೪ನೆಯ ಅಧ್ಯಾಯದ ೨೮ನೆಯ ಶ್ಲೋಕದಲ್ಲಿ ಕರ್ಮಯೋಗ ಪ್ರಭೇದಗಳನ್ನೆಲ್ಲಾ ಸಙ್ಗ್ರಹಿಸಿ ಹೇಳುವಾಗ, "ದ್ರವ್ಯಯಜ್ಞಾಸ್ತಪೋಯಜ್ಞಾಃ ಯೋಗಯಜ್ಞಾಸ್ತಥಾಪರೇ। ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಸ್ಸಂಶಿತವ್ರತಾಃ"ಎಂಬಲ್ಲಿ ತಪಸ್ವಿಗಳೂ, ಜ್ಞಾನನಿಷ್ಠರೂ, ಕರ್ಮನಿಷ್ಠರೂ, ಹೇಳಲ್ಪಟ್ಟಿರುವದರಿಂದ, ಇವರುಗಳಲ್ಲದ ಇತರ ಕೇವಲ ತಪಸ್ಸು, ಜ್ಞಾನ, ಕರ್ಮನಿಷ್ಠರುಗಳಾಗಿ ಫಲಕಾಮನೆಯುಳ್ಳವರು ಇಲ್ಲಿ ಹೇಳಲ್ಪಟ್ಟು, ಇವರುಗಳಿಗಿಂತ ಯೋಗಿಯು ಇವುಗಳನ್ನೇ ಫಲಾಭಿಸಂಧಿ ಇಲ್ಲದೆ, ಅನುಷ್ಠಿಸುವದರಿಂದ ಶ್ರೇಷ್ಠನು, ಆದುದರಿಂದ ಹೇ ಅರ್ಜುನ, ಯೋಗೀಭವ ಎಂದು ಅರ್ಥ ಹೇಳುವದೇ ಉಚಿತವು. ಆದರೆ ಕೇವಲ ತಪಸ್ವಿ, ಜ್ಞಾನಿ, ಕರ್ಮಿಗಳಿಗಿಂತ ಕರ್ಮಯೋಗಕ್ಕೆ ಸೇರಿದ ತಪಸ್ವೀ, ಜ್ಞಾನೀ, ಕರ್ಮೀ ಇವರುಗಳು ಹೇಗೆ ಶ್ರೇಷ್ಠರೆಂದು ಪ್ರಶ್ನಿಸಬಹುದು : ಕೇವಲ ತಪಸ್ವಿ ಮೊದಲಾದವರು ಫಲಕಾಮನೆಯಿಂದ ಅವುಗಳನ್ನನುಷ್ಠಿಸುವದರಿಂದ ಪ್ರವೃತ್ತಿ ಧರ್ಮನಿಷ್ಠರು. ಇವರಾದರೋ ಫಲಾಪೇಕ್ಷೆಯಿಲ್ಲದೆ ಭಗವನ್ಮುಖೋಲ್ಲಾಸಕ್ಕಾಗಿ ಅನುಷ್ಠಿಸುವದರಿಂದ ನಿವೃತ್ತಿ ಧರ್ಮನಿಷ್ಠರು; ಶ್ರೀ ವ್ಯಾಸರು "ಪ್ರವೃತ್ತಿ ರ್ಪುನರಾವೃತ್ತಿಃ ನಿವೃತ್ತಿ ರ್ಪರಮಾಗತಿಃ" ಎಂದು ಮೋಕ್ಷಧರ್ಮದಲ್ಲಿ ಪ್ರವೃತ್ತಿಧರ್ಮವು ಪುನಃ ಸಂಸಾರಪ್ರದವೆಂದೂ ನಿವೃತ್ತಿ ಧರ್ಮಗಳು ಸರ್ವೋತ್ಕೃಷ್ಟಫಲವಾದ ಮೋಕ್ಷವನ್ನು ಕೊಡುವುದೆಂದೂ ಹೇಳಿದರು. ಈ ಪ್ರವೃತ್ತಿಧರ್ಮಗಳಿಗಿಂತಲೂ ಆತ್ಮಧ್ಯಾನರೂಪಯೋಗವು ಶ್ರೇಷ್ಠವೆಂದೂ ಇಲ್ಲಿ ಹೇಳಿ, ಮುಂದಿನ ಶ್ಲೋಕದಲ್ಲಿ ಈ ಯೋಗಕ್ಕಿಂತಲೂ ಭಕ್ತಿಯೋಗವೆನಿಸುವ ಪರಮಾತ್ಮೋಪಾಸನೆಯೇ ಶ್ರೇಷ್ಠತಮವೆಂದು ಉಪದೇಶಿಸುತ್ತಾರೆ. ಈ ಶ್ಲೋಕಕ್ಕೆ ಇನ್ನೊಂದು ವಿಧವಾಗಿಯೂ ಅರ್ಥವನ್ನು ಹೇಳಬಹುದು; ಹೇಗೆಂದರೆ.—ಈ ತಪೋನಿಷ್ಠರೂ ಜ್ಞಾನನಿಷ್ಠರೂ ಕರ್ಮನಿಷ್ಠರೂ ಸಹ ಫಲಕಾಮನೆಯಿಲ್ಲದೆ ಕರ್ಮಯೋಗಾನುಷ್ಠಾನಮಾಡಿ ಕೇವಲ ಅವುಗಳಲ್ಲೇ ನಿಂತು ಬಿಟ್ಟು ಭಕ್ತಿಯೋಗವಾದ ಪರಮಾತ್ಮೋಪಾಸನದಲ್ಲಿ ಪ್ರವರ್ತಿಸದೇ ಹೋದರೆ, ಈ ಅನುಷ್ಠಾನಗಳು ನಿವೃತ್ತಿಧರ್ಮಗಳಾಗಿ ಶ್ಲಾಘ್ಯವಾದುವಾದರೂ, ಭಕ್ತಿಯೋಗಾಭ್ಯಾಸದಷ್ಟು ಶ್ರೇಷ್ಠವಾಗುವದಿಲ್ಲವೆಂದು ತಪಸ್ವಿಭ್ಯೋಧಿಕೋಯೋಗೀ ಇತ್ಯಾದಿಗಳಿಗೆ ಅರ್ಥ ಹೇಳಬಹುದು. ಆಗ ಯೋಗೀ ಎಂದರೆ ಭಕ್ತಿಯೋಗನಿಷ್ಠನೆಂದು ಅರ್ಥ ಹೇಳತಕ್ಕದ್ದು. ಆತ್ಮೋಪಾಸನೆಯೂ ಯಾವಾಗ ನಿವೃತ್ತಿ ಧರ್ಮಗಳಾದ ತಪಸ್ಸು ಮೊದಲಾದವುಗಳಿಗಿಂತ ಶ್ರೇಷ್ಠವೆಂದು ಹೇಳಲ್ಪಟ್ಟಿತೋ, ಆಗ ಪ್ರವೃತ್ತಿಧರ್ಮಗಳಾದ ತಪಸ್ಸು ಮೊದಲಾದವುಗಳಿಗಿಂತ ಶ್ರೇಷ್ಠವೆಂಬುವು ಕೈಮುತಿಕನ್ಯಾಯಸಿದ್ಧವೆಂಬರ್ಥವೂ ದ್ಯೋತಿತವು. ಆಗ ಮುಂದಿನ ಶ್ಲೋಕವು ಇದರ ಉಪಪಾದನೆಯೆಂದು ಹೇಳಬೇಕಾಗುತ್ತದೆ. ಆದರೆ ಈ ಅಧ್ಯಾಯದಲ್ಲೆಲ್ಲಾ ಯೋಗೀ ಎಂಬ ಶಬ್ದವು ಕರ್ಮಯೋಗನಿಷ್ಠನನ್ನೇ ಹೇಳುವದರಿಂದ ಮೊದಲನೆಯ ಅರ್ಥವೇ ಸಾಧುವು.

ಭಾಷ್ಯಾರ್ಥವು:—ಕೇವಲ ತಪೋಭಿಃ-ಕರ್ಮಯೋಗದಲ್ಲಿ ನಿಷ್ಕಾಮನೆಯಿಂದ ಮಾಡಲ್ಪಡುವ ಕೃಚ್ಛ್ರ ಚಾಂದ್ರಾಯಣ ಉಪವಾಸಾದಿ ರೂಪ ತಪಸ್ಸುಗಳಲ್ಲದೆ ಫಲಾಪೇಕ್ಷೆಯಿಂದ ಬರೀ ಅಂತಹ

ಭಾ. ಯಃ, ಯಶ್ಚ ಕೇವಲ್ಯೈ ರಶ್ವಮೇಧಾದಿಭಿಃ ಕರ್ಮಭಿಃ, ತೇಭ್ಯಸ್ಸರ್ವೇಭ್ಯೋಽಧಿಕ ಪುರುಷಾರ್ಥ ಸಾಧನತ್ವಾದ್ಯೋಗಸ್ಯ, ತಪಸ್ವಿಭ್ಯೋ ಜ್ಞಾನಿಭ್ಯಃ ಕರ್ಮಿಭ್ಯಶ್ಚ ಅಧಿಕೋ ಯೋಗೀ; ತಸ್ಮಾದ್ಯೋಗೀ ಭವಾರ್ಜುನ ॥೪೬॥

ತಪೋಽನುಷ್ಠಾನವೇ ಮೊದಲಾದವುಗಳಿಂದ, ಆತ್ಮವ್ಯತಿರಿಕ್ತಜ್ಞಾನೈಃ-ಕರ್ಮಯೋಗಕ್ಕೆ ಬೇಕಾದ ಆತ್ಮಸ್ವರೂಪಜ್ಞಾನವಲ್ಲದೆ ಅದಕ್ಕಿಂತಲೂ ಬೇರೆಯಾದ ಅನ್ಯದೇವತೆಗಳನ್ನು ಕುರಿತು ಫಲಾಪೇಕ್ಷೆಯಿಂದ ಮಾಡುವ ತಪಸ್ಸೇ ಮೊದಲಾದವುಗಳಾದ ಬೇರೇ ಜ್ಞಾನಗಳಿಂದ ಎಂಬ ಭಾವವು; ಯಃ-ಯಾವ ಪುರುಷಾರ್ಥವು, ಸಾಧ್ಯತೇ-ಸಾಧಿಸಲ್ಪಡುತ್ತದೋ, ಕೇವಲ್ಯೈರಶ್ವಮೇಧಾದಿಭಿಃ ಕರ್ಮಭಿಃ-ಕರ್ಮಯೋಗಕ್ಕೆ ಬೇಕಾದ ಯಜ್ಞರೂಪಗಳಾದ ಕರ್ಮಗಳಲ್ಲದೆ ಬರೀ ಫಲೋದ್ದೇಶ್ಯದಿಂದ ಮಾಡಿದ ಅಶ್ವಮೇಧಾದಿ ಕರ್ಮಗಳಿಂದಲೂ, ಯಶ್ಚ ಪುರುಷಾರ್ಥಃ ಸಾಧ್ಯತೇ-ಯಾವ ಪುರುಷಾರ್ಥವು ಸಾಧಿಸಲ್ಪಡುತ್ತದೋ, ತೇಭ್ಯಸ್ಸರ್ವೇಭ್ಯಃ-ಆ ಎಲ್ಲಾ ಅನುಷ್ಠಾನಗಳಿಗಿಂತಲೂ, ಯೋಗಸ್ಯ ಅಧಿಕ ಪುರುಷಾರ್ಥ ಸಾಧನತ್ವಾತ್ - ಆತ್ಮಚಿನ್ತನರೂಪ ಯೋಗವು ಹೀಗೆ ಹೆಚ್ಚಾದ ಪುರುಷಾರ್ಥವಾದ ಭಕ್ತಿಯೋಗಕ್ಕೆ ಬೇಕಾದ ಆತ್ಮಾವಲೋಕನವನ್ನು ಸಾಧಿಸಿಕೊಡುವದರಿಂದ, ಈ ಮೇಲೆ ಹೇಳಿದ ತಪಸ್ವಿಗಳಿಗಿಂತಲೂ ಜ್ಞಾನಿಗಳಿಗಿಂತಲೂ ಕರ್ಮಿಗಳಿಗಿಂತಲೂ, ಯೋಗೀ ಅಧಿಕಃ - ಫಲಾಭಿಸಂಧಿ ರಹಿತಯೋಗಿಯು ಅಧಿಕನು ಎಂದರೆ ಶ್ರೇಷ್ಠನು. ಯೋಗಿಯೂ ಕೂಡ ಕರ್ಮಿಯಲ್ಲವೋ? ಕರ್ಮಿಭ್ಯಶ್ಚಾಧಿಕೋಯೋಗಿ ಎಂದರೆ ಅರ್ಥವೇನು? ಎಂದರೆ ಅದಕ್ಕೆ ಸಮಾಧಾನವಾಗಿ ಕೇವಲ್ಯೈರಶ್ವಮೇಧಾಭಿರ್ಕರ್ಮಭಿಃ ಎಂಬ ವ್ಯಾಖ್ಯಾನವು, ಕೇವಲ ಫಲಕ್ಕಾಗಿ ಅಶ್ವಮೇಧಾದಿಗಳನ್ನು ಅನುಷ್ಠಿಸುವವನು ಕರ್ಮಿಯು; ಅಂತಹ ಕರ್ಮಿಗಿಂತ ಕರ್ಮಯೋಗನಿಷ್ಠನು ಫಲಾಭಿಸಂಧಿರಹಿತನಾಗಿ ಅಂತಹ ಕರ್ಮವನ್ನನುಷ್ಠಿಸುವದರಿಂದ ಶ್ರೇಷ್ಠನೆಂಬ ಭಾವವು. ತಸ್ಮಾತ್ - ಆ ಕಾರಣದಿಂದ, ಹೇ ಅರ್ಜುನ - ಓ ಅರ್ಜುನನೇ, ಯೋಗೀಭವ-ಕರ್ಮಯೋಗವನ್ನನುಷ್ಠಿಸಿ, ಆತ್ಮಚಿನ್ತನೆಯನ್ನು ಮಾಡುವನಾಗು. ಇಲ್ಲಿ ತಪಸ್ಸು, ಜ್ಞಾನ, ಕರ್ಮನಿಷ್ಠೆಯವರು ನಿಂದಿಸಲ್ಪಡಲಿಲ್ಲವು. ಅವರುಗಳು ನಶ್ವರವಾದ ಸ್ವರ್ಗಾದಿ ಫಲಾಪೇಕ್ಷೆಯುಳ್ಳವರಾದುದರಿಂದ ನಿಕೃಷ್ಟರು; ಅವರುಗಳೇ ನಶ್ವರವಾದ ಈ ಫಲಗಳಲ್ಲಿ ಅಪೇಕ್ಷೆಯಿಲ್ಲದೆ ಇವುಗಳನ್ನೇ ಮುಮುಕ್ಷುಗಳಾಗಿ ನಡೆಸಿದರೆ, ನಿರತಿಶಯ ಫಲವನ್ನು ಹೊಂದುವದರಿಂದ ಅಧಿಕರು ಎಂಬ ಭಾವವೂ ಸೂಚಿತವು. ಹೀಗೆ ಅರ್ಥ ಹೇಳಿ ಸಾಮಂಜಸ್ಯವನ್ನುಂಟುಮಾಡಿದರೇನೇ, ಈ ಶ್ಲೋಕಕ್ಕೂ ದ್ರವ್ಯಯಜ್ಞಾಸ್ತಪೋಯಜ್ಞಾಃ ಎಂಬ ಶ್ಲೋಕಕ್ಕೂ ಪರಸ್ಪರ ವಿರೋಧವಿರುವದಿಲ್ಲವು. ಇಲ್ಲಿ ಯೋಗೀ ಎಂಬ ಶಬ್ದಕ್ಕೆ ಪ್ರಕರಣಕ್ಕೆ ಗಮನಕೊಡದೆ ಪರಮಾತ್ಮೋಪಾಸನೆಯೆಂದು ಇತರರು ಅರ್ಥಮಾಡಿರುತ್ತಾರೆ. ಮುಂದಿನ ಶ್ಲೋಕದಲ್ಲಿ ಹೇಳಿರುವುದು, ಈ ಯೋಗಕ್ಕಿಂತಲೂ ಇನ್ನೊಂದು ಉತ್ಕೃಷ್ಟವಾದ ಯೋಗವುಂಟು ಎಂಬುದು. ಭಕ್ತಿಯೋಗದಲ್ಲಿ ಉಪಪಾದಿತವಾದುದು ಪರಮಾತ್ಮೋಪಾಸನೆಯು ಎಂದು ಮುಂದೆ ದ್ವಿತೀಯಷಟ್ಕದಲ್ಲಿ ಹೇಳುವದನ್ನು ಸೂಚಿಸಿರುವದರಿಂದ, ಇದು ಪರಮಾತ್ಮೋಪಾಸನೆಯಾಗುವದಿಲ್ಲವು. ಪ್ರಥಮ ಷಟ್ಕದಲ್ಲಿ ಉಪಪಾದಿತವಾಗಿರುವದು ಬ್ರಹ್ಮವಿದ್ಯೆಯಾದ ಪರಮಾತ್ಮೋಪಾಸನೆಗೆ ಅಙ್ಗವಾಗಿ ಛಾಂದೋಗ್ಯದಲ್ಲಿ ಪ್ರಜಾಪತಿ ವಾಕ್ಯದಿಂದ ಹೇಳಿರುವ ಜೀವಾತ್ಮಚಿನ್ತನವು. ಇಲ್ಲಿವರೆಗೂ ಕರ್ಮಯೋಗವೂ ಅದರಲ್ಲಿ ಅಡಗಿರುವ ಜೀವಾತ್ಮ ಚಿನ್ತನವೂ ಇವೇ ಹೇಳಲ್ಪಟ್ಟವೆಂದು ತಿಳಿಯತಕ್ಕದ್ದು; ಗಾಂಡೀವವನ್ನು ಬಿಸಾಡಿ ತನ್ನ ಗುರು ಅನುಬಂಧಿಗಳನ್ನು ಕೊಲ್ಲುವ ಯುದ್ಧವು ತನಗೆ ಬೇಡವೆಂದು ಹೇಳಿದವನ ಕೈಯಲ್ಲೇ ಯುದ್ಧಮಾಡಿಸಲು ಯೋಗ್ಯವಾದುದು ಕರ್ಮ

ಭಾ. ಅ. ತದೇವಂ ಪರವಿದ್ಯಾಙ್ಗಭೂತಂ ಪ್ರಜಾಪತಿವಾಕ್ಯೋದಿತಂ ಪ್ರತ್ಯಗಾತ್ಮದರ್ಶನ ಮುಕ್ತಮ್. ಅಥ ಪರವಿದ್ಯಾಂ ಪ್ರಸ್ತೌತಿ.

ಯೋಗವೂ, ಆತ್ಮಚಿನ್ತನವೂ, ಎಂದು ಭಾವಿಸಿ ಉಪದೇಶಿಸಿದನೆಂದು ತಾತ್ಪರ್ಯವು. ಕೇವಲ ತಪೋಭಿಃ ಎಂದು ಭಾಷ್ಯವನ್ನು ಆರಂಭಿಸಿರುವದು ಏಕೆಂದರೆ ಕರ್ಮಯೋಗದಲ್ಲೂ ಯಜ್ಞ, ದಾನ, ತಪಸ್ಸುಗಳುಂಟು; ಇವುಗಳನ್ನು ಫಲಾಭಿಸಂಧಿಯಿಂದ ಮಾಡಿದರೆ ನಶ್ವರಫಲವು; ಫಲಾಭಿಸಂಧಿರಹಿತವಾಗಿ ಅನುಷ್ಠಿಸಿದರೆ ಆಗ ಅತಿಶಯಿತವಾದ ಆತ್ಮಾವ ಲೋಕನಸಿದ್ಧಿಯುಂಟಾಗುವದರಿಂದ, ಕೇವಲ ಫಲಾಭಿಸಂಧಿಯಿಂದ ಮಾಡಿದ ಎಂಬ ಅರ್ಥ ವನ್ನು ಬೋಧಿಸುವದಕ್ಕಾಗಿ ಕೇವಲ ಶಬ್ದವು. ಕರ್ಮಯೋಗಿಗಳಲ್ಲೂ ತಪಸ್ಸು, ಜ್ಞಾನ, ಕರ್ಮ ಅನುಷ್ಠಾತೃಗಳುಂಟು. ಅಂತವರನ್ನು ವ್ಯವಚ್ಛೇದಿಸಿ ಹೇಳುವದಕ್ಕಾಗಿ ಇಲ್ಲಿ ಕೇವಲ ವೆಂಬ ಶಬ್ದವೆಂದು ತಿಳಿಯತಕ್ಕದ್ದು.

ಭಾಷ್ಯಾವತಾರಿಕೆಯ ಅರ್ಥವು:—ಹೀಗೆ ಹಿಂದಿನ ಶ್ಲೋಕದ ಮೂಲಕ ಪ್ರಥಮಷಟ್ಕದಲ್ಲಿ ಉಪಪಾದಿಸಬೇಕಾದುದು ಭೂವನ ವಿದ್ಯೆಯಲ್ಲಿ ಹೇಳಿರುವ ಪ್ರತ್ಯಗಾತ್ಮ ದರ್ಶನವು ಇತರ ಕರ್ಮಾ ನುಷ್ಠಾನಗಳಿಗಿಂತ ಅಧಿಕವಾದುದು, ಆದುದರಿಂದ ನೀನೂ ಯೋಗಿಯಾಗು ; (ತಂಗಿಯ ಗಂಡ ನಿಗೆ ಸನ್ಯಾಸಿಯಾಗು ಎಂದು ಉಪದೇಶಿಸಲಿಲ್ಲವು.) ಪ್ರತ್ಯಗಾತ್ಮೋಪಾಸಕನಾಗು ಎಂದು ಉಪ ದೇಶಿಸಿದರೆ, ಈ ಅಜಾತ್ಮೋಪಾಸನೆಯೇ ಪರವು ಪುರುಷಾರ್ಥದಾಯಕವೆಂದು ಎಲ್ಲಿ ಅರ್ಜುನನು ಭಾವಿಸುವನೋ ಎಂದು ಶ್ರೀ ಕೃಷ್ಣನು ತಿಳಿದವನಾಗಿ, ಈಗ ತಾನು ಇಷ್ಟುದೂರ ಆರು ಅಧ್ಯಾಯ ಗಳಿಂದಲೂ ಉಪಪಾದಿಸಿ, ಅದರ ಕೊನೆಯ ಮೆಟ್ಟಿಲಾಗಿ ಆತ್ಮಚಿನ್ತನವನ್ನು ಹೇಳಿದುದು, ಇನ್ನೊಂದು ಅಙ್ಗಿಯಾದ ಸರ್ವೋತ್ಕೃಷ್ಟವಾದ ಉಪಾಸನೆಗೆ ಸಾಧನವು ಎಂದು ಒಡನೆಯೇ ಸೂಚಿಸುವದು ಆಶಙ್ಕಾ ನಿವೃತ್ತಿಗೆ ಆವಶ್ಯಕವೆಂದು ತಿಳಿದು, ತನ್ನ ಉಪಾಸನವೇ ಸರ್ವೋ ತ್ಕೃಷ್ಟವಾದುದೆಂದು ಪ್ರಸ್ತಾವರೂಪದಲ್ಲಿ, ಮುಂದೆ ಮಧ್ಯಮ ಷಟ್ಕದಲ್ಲಿ ಹೇಳುವದನ್ನು ಇಲ್ಲಿ ಸೂಚಿಸಿರುತ್ತಾರೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. ಏವಂ - ಈ ಪ್ರಕಾರದಿಂದ, ಎಂದರೆ ಹಿಂದೆ ಹೇಳಲ್ಪಟ್ಟ ಪ್ರಮಾಣಗಳೇನು, ವಾದಗಳೇನು ಈ ಮೂಲಕವಾಗಿ ಪ್ರತಿಪಾದಿ ಸಲ್ಪಟ್ಟ ಪ್ರಕಾರದಿಂದ, ತತ್-ಪ್ರಸಿದ್ಧವಾದ ಪರವಿದ್ಯಾಙ್ಗಭೂತಂ "ಅಥ ಪರಾಯಯಾ ತದಕ್ಷರ ಮಧಿಗಮ್ಯತೇ" ಎಂದು ಮುಂಡಕೋಪನಿಷತ್ತಿನಲ್ಲಿ ಹೇಳಿರುವಹಾಗೆ ಪರಾ ವಿದ್ಯಾ ಪರಜ್ಞಾನರೂಪವಾಗಿರುವ ಪರಮಾತ್ಮಪ್ರಾಪ್ತಿಯನ್ನು ಹೊಂದಿಸುವ ಪರಮಾತ್ಮೋಪಾಸನೆಗೆ ಅಙ್ಗಭೂತವಾದ, ಪ್ರಜಾಪತಿ ವಾಕ್ಯೋದಿತಂ - ಪ್ರಜಾಪತಿಯ ವಾಕ್ಯ ಮೂಲಕ ಹೇಳಲ್ಪಟ್ಟ, ಪ್ರತ್ಯಗಾತ್ಮ ದರ್ಶನಂ-ಜೀವಾತ್ಮ ಸಾಕ್ಷಾತ್ಕಾರವು, ಉಕ್ತಮ್-ಹೇಳಲ್ಪಟ್ಟಿತು. ಈ ಆತ್ಮದರ್ಶ ನವು ಎಲ್ಲಾ ಪರವಿದ್ಯೆಗೂ ಅಙ್ಗವೆಂದು ಹಿಂದೆಯೂ ಛಾಂದೋಗ್ಯದಲ್ಲಿ (೮-೭.೧) "ಯ ಆತ್ಮಾಪಹತಪಾಪ್ಮಾ" ಇತ್ಯಾದಿ ದಹರ ವಿದ್ಯೆಗೆ ಅಙ್ಗವಾಗಿ ಹೇಳಲ್ಪಟ್ಟ ಪ್ರಜಾಪತಿವಾಕ್ಯದಿಂದ ಉಪಪಾದಿತವೆಂದು ತೃತೀಯಾಧ್ಯಾಯದ ಅವತಾರಿಕೆಯಲ್ಲಿ ಶ್ರೀ ಯತಿವರ್ಯರು ವ್ಯಕ್ತಪಡಿಸಿರುವದನ್ನೇ ಇಲ್ಲಿಯೂ ಅನುವಾದಮಾಡಿ ಹೇಳಿರುತ್ತಾರೆ. ಇದರಿಂದ ಗೀತೆಯಲ್ಲಿರುವ ಸಮಸ್ತಾಭಿಪ್ರಾಯಗಳೂ ಉಪನಿಷದರ್ಥಗಳೇ ಎಂದು ಭಾವಿಸತಕ್ಕ ದ್ದಾಗಿರುತ್ತದೆ. ಅಥ - ಮುಂದೆ, ಪರವಿದ್ಯಾಂ - ಬ್ರಹ್ಮವಿದ್ಯೆಯನ್ನು, ಪರಬ್ರಹ್ಮ ಕುರಿತ ವಿದ್ಯೆ ಯನ್ನು ಅಥವಾ ಪರಬ್ರಹ್ಮಪ್ರಾಪಕ ವಿದ್ಯೆಯನ್ನು, ಪ್ರಸ್ತೌತಿ - ಸಮ್ಯಕ್ಕೆ ಪ್ರಸ್ತಾಪಿಸಿ ಹೇಳು ತ್ತಾರೆ. ಇಲ್ಲಿ ಸೂಕ್ಷ್ಮವಾಗಿ ಸೂಚಿಸಿದರು, ಮುಂದೆ ವಿಸ್ತರಿಸಿ ಹೇಳುತ್ತಾರೆಂಬ ಭಾವವು. ಪರ

ಮೂ. ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ।
ಶ್ರದ್ಧಾವಾನ್ ಭಜತೇ ಯೋಮಾಂ ಸಮೇ ಯುಕ್ತತಮೋ ಮತಃ॥ ೪೭.

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನ ಸಂವಾದೇ ಯೋಗಾಭ್ಯಾಸ ಯೋಗೋನಾಮ ಷಷ್ಠೋಽಧ್ಯಾಯಃ.
ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.

---

ಮಾತ್ಮನೆಂತವನೆಂಬುದೂ, ಆತನನ್ನು ಹೊಂದುವ ಅಜ್ಗರೂಪವಾದ ಭಕ್ತಿಯೋಗವೆಂತಾದು ಎಂಬುದೂ, ಮುಂದೆ ಹೇಳಲ್ಪಡುವುವು ಎಂಬ ತಾತ್ಪರ್ಯವು. ದ್ವೇ ವಿದ್ಯೇ ವೇದಿತವ್ಯೇ ಎಂದು ಮುಂಡಕವಲ್ಲಿ ಪರಾ ವಿದ್ಯಾ, ಅಪರಾ ವಿದ್ಯಾ ಎಂಬ ಎರಡು ವಿಧಜ್ಞಾನಗಳು ಪರಬ್ರಹ್ಮಪ್ರಾಪ್ತಿಗೆ ಆವಶ್ಯಕವೆಂದು ಹೇಳಿರುತ್ತದೆ, ಅಪರಾಜ್ಞಾನವು, ನಿಕೃಷ್ಟಜ್ಞಾನವೆಂಬರ್ಥವಲ್ಲವು, ಪರಾ ಅಲ್ಲ ದುದು ಎಂಬರ್ಥವು ; ಇದು ವೇದವೇದಾಜ್ಗ ಉಪನಿಷತ್, ಇತಿಹಾಸ ಪುರಾಣಗಳಿಂದ ಉಂಟಾ ಗುವ ಶಾಸ್ತ್ರಜನ್ಯಜ್ಞಾನವು ; ಪರಾಜ್ಞಾನವಾದರೋ ವಿವೇಕ ಜನ್ಯವಾಗಿ, ಸಾಧನ ಸಪ್ತಕಗಳಿಂದ ಪುಷ್ಟಿತವಾದ, ಪರಮಾತ್ಮದರ್ಶನ ಸಮಾನಾಕಾರವಾದ ಯೋಗಾನುಷ್ಠಾನವು, ಇದರಿಂದ ಪರ ಮಾತ್ಮನು ಹೊಂದಲ್ಪಡುವನು. ಆದುದರಿಂದ ಅಂತಹ ಭಕ್ತಿಯೋಗಕ್ಕೆ ಸೇರಿದ ಪರವಿದ್ಯಾ ಎಂದರೆ ಪರಬ್ರಹ್ಮಪ್ರಾಪಕವಾದ ಜ್ಞಾನರೂಪವಾದ ಉಪಾಸನೆಯು ಮುಂದಿನ ಷಟ್ಕದಮೂಲಕ ಹೇಳಲ್ಪಡುತ್ತದೆ ಎಂಬ ತಾತ್ಪರ್ಯವು. ಅಥವಾ ಪರವಿದ್ಯಾ ಎಂದರೆ ಪರಮಾತ್ಮನ ವಿಷಯವಾದ ವಿದ್ಯಾ, ಬ್ರಹ್ಮವಿದ್ಯಾ ಎಂದಾಗಲಿ ಅರ್ಥ ಹೇಳಬಹುದು.

**ಮೂಲಕ್ಕೆ ಅರ್ಥವು:**—ಹೀಗೆ ಯೋಗಿಗಳಲ್ಲಿ ಕರ್ಮಯೋಗನಿಷ್ಠನಾದ ಆತ್ಮೋಪಾಸ ಕನೇ ಶ್ರೇಷ್ಠನೆಂದು ಸಿದ್ಧಾಂತಿಸಿದರು, ಮುಮುಕ್ಷುವಿಗೆ ಇನ್ನೊಂದು ಉಪಾಸನೆಯೂ ಆವಶ್ಯಕವು, ಅದು ಶ್ರಿಯಃಪತಿಯ ಉಪಾಸನೆಯು ; ಭಕ್ತಿಯೋಗದಲ್ಲಿ ಪ್ರವರ್ತಿಸಿ ಅಂತಹ ಯೋಗಿಯಾದರೆ ಆತನು ಸರ್ವೋತ್ಕೃಷ್ಟನು, ಎಲ್ಲಾ ಯೋಗಿಗಳಿಗಿಂತ ಯುಕ್ತತಮನು ಎಂದು ಹೇಳಿ ಈ ಅಧ್ಯಾ ಯವನ್ನೂ ಕರ್ಮಯೋಗಯೋಗಾಭ್ಯಾಸಗಳ ಮಾಹಾತ್ಮ್ಯೆಯನ್ನು ಉಪಪಾದಿಸುವ ಪ್ರಥಮ ಷಟ್ಕ ವನ್ನೂ ಸಹ ಮುಗಿಸುತ್ತಾರೆ. ಮುಂದೆ ಹೀಗೆ ಆತ್ಮೋಪಾಸನೆ ಸಿದ್ಧಿಯಾದವನಿಗೆ ಮುಂದಿನ ಕರ್ತವ್ಯವೇನು ಎಂಬುದನ್ನು ತಿಳಿಸುವದಕ್ಕಾಗಿ ಮುಂದೆ ಹೇಳತಕ್ಕದ್ದು ಭಕ್ತಿಯೋಗವೆಂದು ಸೂಚಿಸುತ್ತಾರೆ. ಹೀಗೆ ಅಧ್ಯಾಯ ಸಮಾಪ್ತಿಯಲ್ಲಿ ಮುಂದೆ ಹೇಳುವದನ್ನು ಸೂಚಿಸುವದು ಉತ್ತಮ ಗ್ರಂಥದ ಲಕ್ಷಣವಾಗಿರುತ್ತದೆ.

ಹಿಂದೆ ೩, ೪, ೫ನೆಯ ಅಧ್ಯಾಯಗಳಲ್ಲಿ ಹೇಳಲ್ಪಟ್ಟದುದು ಕರ್ಮಯೋಗವೆಂದೂ, ಈ ಅಧ್ಯಾಯದಲ್ಲಿ ಅದರ ಮಾಹಾತ್ಮ್ಯೆಯು ವಿಶೇಷವಾದುದೆಂದೂ ಈ ಯೋಗಿಯು ಶ್ರೇಷ್ಠನೆಂದೂ ಹೇಳಲ್ಪಟ್ಟಿತು. ಮುಂದಿನ ಷಟ್ಕದಲ್ಲಿ ಉಪಪಾದಿತವಾಗಿರುವ ಭಕ್ತಿಯೋಗವು ಇದಕ್ಕೂ ಶ್ರೇಷ್ಠವಾದುದೆಂದೂ ಅಂತಹ ಯೋಗವನ್ನನುಷ್ಠಿಸುವವನು ಸರ್ವಯೋಗಿಗಳಲ್ಲೂ ಅತ್ಯಂತ ಶ್ರೇಷ್ಠನೆಂದೂ ಯುಕ್ತತಮನೆಂಬ ಪ್ರಯೋಗದಿಂದ ಉಪದೇಶಿಸುತ್ತಾರೆ. **ಯೋಗಿನಾಮಪಿ ಸರ್ವೇಷಾಂ** - ಈಗ ಮೇಲೆ ಹೇಳಿದ ಸರ್ವ ವಿಧ ಆತ್ಮಚಿಂತನಮಾಡುವ ಯೋಗಿಗಳಿಗಿಂತಲೂ ಅಥವಾ, **ಯೋಗಿನಾಂ** - ಮೇಲೆ ಹೇಳಿದ ನಾಲ್ಕು ವಿಧ ಸಮತ್ವ ಬುದ್ಧಿಯುಳ್ಳ ಆತ್ಮಚಿಂತಕರಿಗಿಂತಲೂ ಮತ್ತು ಅಪಿಸರ್ವೇಷಾಂ - ಕೈಮುತಿಕನ್ಯಾಯರೀತ್ಯಾ ಹಿಂದೆ ಹೇಳಿದ ಕೇವಲ ಫಲಕ್ಕಾಗಿ ಮಾಡುವ ತಪಸ್ಸು, ಜ್ಞಾನ, ಕರ್ಮನಿಷ್ಠೆಯುಳ್ಳವರಿಗಿಂತಲೂ, **ಮದ್ಗತೇನಾಂ ತರಾತ್ಮನಾ**-ಮುಕುಂದನಾಗಿ ಪರಮಪದವನ್ನು ಕೊಡುವ, ನನ್ನನ್ನು ಹೊಂದಿದ ಮನಸ್ಸಿನಿಂದ,

ಭಾ. "ಯೋಗಿನಾಂ" ಇತಿ ಪಂಚಮ್ಯರ್ಥೇ ಷಷ್ಠೀ (೧) "ಸರ್ವಭೂತಸ್ಥಮಾತ್ಮಾನಂ" ಇತ್ಯಾದಿನಾ ಚತುರ್ವಿಧಾ ಯೋಗಿನಃ ಪ್ರತಿಪಾದಿತಾಃ । ತೇಷ್ವನನ್ತರ್ಗತತ್ವಾದ್ವಿಷ್ಟ್ಯ

ಯಃ · ಯಾವ ಮೋಕ್ಷಾರ್ಥಿಯು, ಶ್ರದ್ಧಾವಾನ್-ಆ ನಿರತಿಶಯ ಶ್ರೇಯಸ್ಸನ್ನು ಹೊಂದಬೇಕೆಂಬ ಶ್ರದ್ಧಾ ಎಂದರೆ ತ್ವರೆಯುಳ್ಳವನಾಗಿ, ಮಾಂ - ಉಪಾಯಾನುಷ್ಠಾನಮಾಡಿ ಆಶ್ರಯಿಸಿದರೆ ಸಾಕು ಅಂತವರಿಗೆ ಮೋಕ್ಷವನ್ನು ಕೊಟ್ಟೇನೆಂದು ಅವಸರ ಪ್ರತೀಕ್ಷೆಯನ್ನು ಮಾಡುತ್ತಿರುವ ನನ್ನನ್ನು, ಭಜತೇ - ಉಪಾಸನಾದಿಗಳ ಮೂಲಕ ಸೇವಿಸುತ್ತಾನೋ, ಸಃ - ಅಂತಹ ಉಪಾಸಕನು, ಯುಕ್ತತಮಃ ಯೋಗಿಗಳಲ್ಲೆಲ್ಲಾ ಸರ್ವಾಧಿಕನು ಎಂಬುದು, ಮೇಮತಃ - ನನ್ನ ಅಭಿಪ್ರಾಯವು. ಓ ಅರ್ಜುನನೇ ಈಗ ನಾನು ಇಷ್ಟು ದೂರ ನಿನಗೆ ಉಪದೇಶಿಸಿದುದು ಮುಂದೆ ಹೇಳುವ ಬ್ರಹ್ಮವಿದ್ಯಾರೂಪವಾದ ಪರಮಾತ್ಮೋಪಾಸನೆಗೆ ಅಙ್ಗಭೂತವಾದುದು ; ಇದು ತುಂಬಾ ಮಹಿಮೆಯುಳ್ಳದೆಂದು ಹೇಳಿದೆನು ; ಇದು ಶ್ರುತಿಯಲ್ಲಿ ಪ್ರಜಾಪತಿವಾಕ್ಯದಿಂದ ಹೇಳಲ್ಪಟ್ಟ ಜೀವಾತ್ಮ ಸಾಕ್ಷಾತ್ಕಾರವು, ಇವರಿಂದ ಸಾಧ್ಯವಾಗಿ ಇದಕ್ಕೂ ತುಂಬ ಮೇಲಾಗಿ ಸರ್ವೋತ್ಕೃಷ್ಟವೆಂದೆನಿಸಿರುವ ಉಪಾಸನೆಯು ಬ್ರಹ್ಮವಿದ್ಯೆ ಎಂದೆನಿಸಿರುವ ನನ್ನ ಉಪಾಸನೆಯು. ಇದು ಮುಂದಿನ ಷಟ್ಕದಲ್ಲಿ ಉಪದೇಶಿಸಲ್ಪಡುತ್ತದೆ. ಇದಕ್ಕೆ ಅಙ್ಗವಾದ ಪ್ರತ್ಯಗಾತ್ಮೋಪಾಸನೆಯು ನಿವೃತ್ತಿ ಧರ್ಮವಾದುದರಿಂದ ಪ್ರವೃತ್ತಿಧರ್ಮರೂಪವಾದ ತಪಸ್ಸು, ಜ್ಞಾನಕರ್ಮಗಳಿಗಿಂತ ಶ್ರೇಷ್ಠವಾದುದೆಂದು ಹಿಂದಿನ ಶ್ಲೋಕದಲ್ಲಿ ಹೇಳಿ, ಈ ಅಙ್ಗಿಯಾದ ಪರಮಾತ್ಮೋಪಾಸನೆಯು ಸರ್ವಶ್ರೇಷ್ಠವೆಂದು ಮುಂದಿನಶ್ಲೋಕದಲ್ಲಿ ಹೇಳಲ್ಪಡುತ್ತದೆ. ಮುಂದಿನ ಷಟ್ಕದಲ್ಲಿ ಉಪಪಾದಿಸುವ ಭಕ್ತಿಯೋಗೋಪಾಸನೆಯು ಇಲ್ಲಿ ಸೂಕ್ಷ್ಮವಾಗಿ ಸೂಚಿಸಲ್ಪಟ್ಟಿತೆಂಬ ಭಾವವು. ಇತರರ ಅಭಿಪ್ರಾಯಾನುಗುಣವಾಗಿ ಇವೆಲ್ಲಾ ಪರಮಾತ್ಮೋಪಾಸನೆಯೇ ಎಂದೂ, ಮತ್ತು ಯೋಗೀ ಎಂಬ ಶಬ್ದದಿಂದ ಪರಮಾತ್ಮೋಪಾಸಕನೇ ಬೋಧಿತನು ಎಂದೂ ಅಭಿಪ್ರಾಯಪಟ್ಟರೆ, ತರತಮ ಭಾವಗಳಿಂದ ತಪಸ್ವಿಭ್ಯೋಧಿಕೋ ಯೋಗೀ ಎಂದು ಹೇಳಿ ಯೋಗೀಭವ ಎಂದು ಇಷ್ಟುಮಾತ್ರ ಹೇಳಿಬಿಟ್ಟು, ಅನಂತರ ಇದರಿಂದ ಈ ಯೋಗಿಗೆ ಆಧಿಕ್ಯವನ್ನು ಸೂಚಿಸಿ, ತನ್ನನ್ನು ಕುರಿತು ಯೋಗಮಾಡುವವನು ಯುಕ್ತತಮನು, ಸರ್ವಾಧಿಕನು ಎಂದು ಹೇಳುವದಕ್ಕೆ ಸ್ವಾರಸ್ಯವೇ ದೂರೀಕೃತವಾಗುತ್ತದೆ. ಈಗ ಶ್ರೀಕೃಷ್ಣಭಗವಾನರವರು ಮಾಡುವ ಸಾಕ್ಷಾದುಪಾಯವಾದ ಬ್ರಹ್ಮವಿದ್ಯೆಯ ಉಪದೇಶಕ್ಕೆ ಎರಡುವಿಧ ಯೋಗವುಂಟು—ಒಂದನೆಯದು ಕರ್ಮಯೋಗದಲ್ಲಿರುವ ಪ್ರತ್ಯಗಾತ್ಮಚಿನ್ತನವು. ಇದು ಅಙ್ಗರೂಪವಾದ ಯೋಗವು, ಇದೂ ಆವಶ್ಯಕವು; ಇದು ಮಿಕ್ಕ ಎಲ್ಲಾ ಪ್ರವೃತ್ತಿ ನಿವೃತ್ತಿರೂಪ ಕರ್ಮಾನುಷ್ಠಾನಗಳಿಗಿಂತ ಮೇಲಾದುದು. ಎರಡನೆಯದು ಭಕ್ತಿಯೋಗರೂಪವಾದ ಪರಮಾತ್ಮೋಪಾಸನೆಯು; ಇದೂ ಆವಶ್ಯಕವು, ಇದು ಸರ್ವಶ್ರೇಷ್ಠವು. ಇದನ್ನು ಮುಂದಿನ ಷಟ್ಕದಲ್ಲಿ ನಿನಗೆ ಉಪದೇಶಿಸುವೆನು ಎಂದು ಶ್ರೀ ಕೃಷ್ಣನು ಹೇಳಿದನೆಂದು ಅರ್ಥಮಾಡುವದು ಸರ್ವ ಸಮಂಜಸವಾದುದಾಗಿ ಪೂರ್ವಾಪರ ವಿರೋಧವಿಲ್ಲದಿರುವದು ಆಗುತ್ತದೆ.

ಭಾಷ್ಯಾರ್ಥವು:— "ಯೋಗಿನಾಂ ಇತಿ" - ಯೋಗಿನಾಂ ಎಂಬುದು ಪಂಚಮ್ಯರ್ಥೇ ಷಷ್ಠೀ - ಪಂಚಮೀ ವಿಭಕ್ತ್ಯರ್ಥದಲ್ಲಿ ಷಷ್ಠೀ ವಿಭಕ್ತಿಯ ಪ್ರಯೋಗವು. ಹೀಗೆ ಅಭಿಪ್ರಾಯಪಡಲು ಕಾರಣವೇನೆಂಬುದನ್ನು ತಿಳಿಸುತ್ತಾರೆ. "ಸರ್ವಭೂತಸ್ಥಮಾತ್ಮಾನಂ" ಎಂದು ಹಿಂದೆ ೨೯ನೆಯ ಶ್ಲೋಕ ಮೊದಲು ನಾಲ್ಕು ಶ್ಲೋಕದಿಂದ ಚತುರ್ವಿಧಾ ಯೋಗಿನಃ - ನಾಲ್ಕು ವಿಧ

(೧) ಗೀ. ೬.೨೯

ಭಾ. ಮಾಣಸ್ಯ ಯೋಗಿನಃ, ನ ನಿರ್ಧಾರಣೇ ಷಷ್ಠೀ ಸಂಭವತಿ । "ಅಪಿಸರ್ವೇಷಾಂ" ಇತಿ ಸರ್ವಶಬ್ದ ನಿರ್ದಿಷ್ಟಾ ಸ್ತಪಸ್ವಿ ಪ್ರಭೃತಯಃ । ತತ್ರಾಪಿ ಉಕ್ತೇನ ನ್ಯಾಯೇನ ಪಂಚಮ್ಯರ್ಥೇ ಗ್ರಹೀತವ್ಯಃ । ಯೋಗಿಭ್ಯೋಪಿ ಸರ್ವೇಭ್ಯೋ ವಕ್ಷ್ಯಮಾಣೋ

---

ಪರಿಪಾಕ ದಶೆಯನ್ನು ಹೊಂದಿದ ಜೀವಾತ್ಮೋಪಾಸಕರು, ಪ್ರತಿಪಾದಿತಾಃ - ಪ್ರತಿಪಾದಿಸಲ್ಪಟ್ಟರು ; ತೇಷು - ಅವರುಗಳಲ್ಲಿ, ವಕ್ಷ್ಯಮಾಣಸ್ಯಯೋಗಿನಃ - ಈ ಮುಂದೆ ಹೇಳುವ, ಈಗ ಸಜ್ಞಾಹವಾಗಿ ಸೂಚಿಸಲ್ಪಟ್ಟ ಯೋಗಿಯು, (ಭಕ್ತಿ ಯೋಗಿಯು) ಅನನ್ತರ್ಗತತ್ವಾತ್ - ಅವರಲ್ಲಿ ಸೇರಲಿಲ್ಲನಾದುದರಿಂದ, ಹಿಂದೆ ಹೇಳಿದುದೆಲ್ಲಾ ಜೀವಾತ್ಮಸ್ವರೂಪಚಿನ್ತಕರ ವಿಷಯವು, ಈ ಶ್ಲೋಕವಲ್ಲೂ ಮುಂದಿನ ಷಟ್ಕದಲ್ಲೂ ಹೇಳುವದು ಪರಮಾತ್ಮೋಪಾಸಕನ ವಿಷಯವು,ಆದುದರಿಂದ ಈತನು ಹಿಂದೆ ಹೇಳಿದ ಯೋಗಿಗಳಲ್ಲಿ ಸೇರದೇ ಇರುವದರಿಂದ, ನ ನಿರ್ಧಾರಣೇ ಷಷ್ಠೀ ಸಂಭವತಿ - ಅವರುಗಳಲ್ಲಿ ಈತನು ಶ್ರೇಷ್ಠನು ಎಂದು ಹೇಳುವ ನಿರ್ಧಾರಣ ಷಷ್ಠೀ ಎಂದು ಹೇಳುವದು ಅಸಂಗತವು. ಆದುದರಿಂದ ಸರ್ವೇಷಾಂ ಯೋಗಿನಾಂಮಧ್ಯೇ - ಎಂದು ಅರ್ಥ ಮಾಡಲು ಸಾಧ್ಯವಿಲ್ಲನೆಂಬ ಭಾವವು. ಇನ್ನು ಕೆಲವರು ಬ್ರಹ್ಮರುದ್ರೇಂದ್ರಾದಿ ಅನ್ಯದೇವತಾ ಯೋಗಗಳು ವ್ಯವಚ್ಛೇದಮಾಡಲ್ಪಟ್ಟವೆಂದು ಅಭಿಪ್ರಾಯಪಡುವರು, ಅದಕ್ಕೆ ಪ್ರಕರಣವಿಲ್ಲವು. ಆಗಲೂ ನಿರ್ಧಾರಣ ಷಷ್ಠೀ ಆಗುವದಿಲ್ಲವು. ಸಂಬಂಧ ಸಾಮಾನ್ಯ ಷಷ್ಠಿಯೇ ಸರಿ ಎಂಬಭಿಪ್ರಾಯದಿಂದ ಪಂಚಮ್ಯರ್ಥೇ ಷಷ್ಠೀ ಎಂದು ಹೇಳಿ, ಯೋಗಿಭ್ಯೋಪಿ ಸರ್ವೇಭ್ಯಃ - ಎಂದು ವ್ಯಾಖ್ಯಾನಮಾಡಿರುತ್ತಾರೆ. ಈ ಯೋಗಿಯು ಅವರಲ್ಲೇ ಅಂತರ್ಗತರಾಗಿದ್ದರೆ ಎಂದರೆ ಸೇರಿದ್ದರೆ ಆಗ ನಿರ್ಧಾರಣ ಷಷ್ಠ್ಯರ್ಥವನ್ನು ಹೇಳಬಹುದಾಗಿತ್ತು ಎಂಬ ಭಾವವು. ಆದರೆ ಹಿಂದಿನ ಶ್ಲೋಕದಲ್ಲಿ ಹೇಳಿದ ನಾಲ್ಕು ವಿಧ ಆತ್ಮಯೋಗಿಗಳ ವ್ಯವಚ್ಛೇದವು ಇಲ್ಲಿ ಹೇಳಲ್ಪಟ್ಟಿತೆಂದು ಭಾವಿಸಲು, ಹಿಂದಿನ ಶ್ಲೋಕದಲ್ಲಿ ಏಕವಚನವಿದೆಯಲ್ಲಾ ಎಂದರೆ ಅದು ಜಾತ್ಯೇಕ ವಚನವು. ಹಿಂದೆ ಯೋಗಿಗಳ ವಿಷಯವಿರುವದರಿಂದ, ಯೋಗಿನಾಮಪಿ ಸರ್ವೇಷಾಂ ಎಂಬಲ್ಲಿ ಹಿಂದೆ ಹೇಳಿದ ಯೋಗಿಗಳೆಂದು ಅರ್ಥಮಾಡುವದೇ ಸಮಂಜಸವು. ಅವರೆಲ್ಲಾ ಜೀವಾತ್ಮಯೋಗಿಗಳೇ. ಪರಮಾತ್ಮೋಪಾಸನವು ಹಿಂದೆ ಹೇಳಲ್ಪಡಲಿಲ್ಲವು. ಆಗಲಿ, "ಸರ್ವಭೂತಸ್ಥಿತೋ ಯೋ ಮಾಂ" (ಗೀ. ೬. ೩೧) ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿದೆಯಲ್ಲಾ ಎಂದರೆ ಅದು ಪರಮಾತ್ಮೋಪಾಸನ ವಿಷಯವಲ್ಲವು. ತಾನೂ ಎಲ್ಲಾ ಜೀವಾತ್ಮರೂ ಪರಮಾತ್ಮ ಸಾಮ್ಯರೆಂಬ ಬುದ್ಧಿಯಿಂದ ಜೀವಾತ್ಮಚಿನ್ತನೆಯನ್ನು ಮಾಡುವ ಯೋಗಿಯವಿಷಯವೆಂದು ಹಿಂದೆಯೇ ಸೂಚಿಸಲ್ಪಟ್ಟಿರುತ್ತದೆ. ಅದು ಪರಮಾತ್ಮೋಪಾಸನೆಯ ವಿಷಯವೆಂದರೆ ಮುಂದಿನ ಶ್ಲೋಕವಲ್ಲಿ ಅದಕ್ಕೂ ಉತ್ತಮ ಯೋಗಿಯನ್ನು ಹೇಳಿ, ಆತನು ಯೋಗೀ ಪರಮೋಮತಃ ಎಂದು ತಿಳಿಸಿರುವದು, ವಿರುದ್ಧವಾಗುತ್ತದೆ. ಸರ್ವೋತ್ಕೃಷ್ಟ ಯೋಗಿಗೂ ಇನ್ನೊಬ್ಬ ಶ್ರೇಷ್ಠನಾದಯೋಗಿಯುಂಟೆಂದು ಹೇಳಿದಂತಾಗುತ್ತದೆ. ಆದರೆ ಸರ್ವ ಶಬ್ದವಿರುವದರಿಂದ ಹಿಂದೆ ಹೇಳಲ್ಪಟ್ಟ ಯೋಗಿಗಳು ಎಲ್ಲರನ್ನೂ ಸೇರಿಸಿಕೊಂಡು ಏಕೆ ನಿರ್ಧಾರಣಷಷ್ಠ್ಯರ್ಥವನ್ನು ಹೇಳಕೂಡದು ? ಎಂದರೆ, ಮುಂದೆ ಯಾವ ಯೋಗಿಗಳ ವಿಷಯವು ಹೇಳಲ್ಪಡುತ್ತದೆ ಎಂಬುವದೇ ತಿಳಿಯದೇ ಇರುವ ಸಂದರ್ಭದಲ್ಲಿ ಶ್ರೀಕೃಷ್ಣಭಗವಾನವರು ಅವ್ಯವಸ್ಥತೆಯಿಂದ, ಹಿಂದೆ ಹೇಳಿದುದು ಮುಂದೆ ಹೇಳುವದು ಎಲ್ಲವನ್ನೂ ಸೇರಿಸಿ, ಅವರುಗಳಲ್ಲೆಲ್ಲಾ ಪರಮಾತ್ಮೋಪಾಸಕನು ಸರ್ವಶ್ರೇಷ್ಠನೆಂದು ಹೇಳುವರೋ? ನಿರ್ಧಾರಣೆಗೆ ಹಿಂದೆ ಹೇಳಿದುದರಲ್ಲೇ ತಾನೇ ನಿರ್ಧರಿಸಬೇಕಾದುದು?ಈ ಅಭಿಪ್ರಾಯವನ್ನೇ ವಕ್ಷ್ಯಮಾಣಸ್ಯ ಯೋಗಿನಃ ನ ನಿರ್ಧಾರಣೇ ಷಷ್ಠೀ ಸಂಭವತಿ ಎಂಬುದರಿಂದ ವ್ಯಕ್ತಪಡಿಸಿರು

ಭಾ. ಯೋಗೀ ಯುಕ್ತತಮಃ । ತದಪೇಕ್ಷಯಾ ಅವರತ್ವೇ ತಪಸ್ವಿ ಪ್ರಭೃತೀನಾಂ ಯೋಗಿನಾಂ ಚ ನ ಕಶ್ಚಿದ್ವಿಶೇಷ ಇತ್ಯರ್ಥಃ। ಮೇರ್ವಪೇಕ್ಷಯಾ ಸರ್ಷಪಾಣಾಮಿವ।ಯದ್ಯಪಿ ಸರ್ಷಪೇಷ್ವನ್ಯೋನ್ಯ ನ್ಯೂನಾಧಿಕ ಭಾವೋ ವಿದ್ಯತೇ ; ತಥಾಪಿ ಮೇರ್ವಪೇಕ್ಷಯಾ

ತ್ತಾರೆ. ಹೀಗೆ ನಾಲ್ಕುವಿಧ ಯೋಗಿಗಳು ಮಾತ್ರವೇ ಯೋಗಿನಾಂ ಎಂಬ ಪದದಿಂದ ಹೇಳಲ್ಪಟ್ಟರೆ, ಅಪಿಸರ್ವೇಷಾಂ ಎಂಬ ಪದಗಳ ಪ್ರಯೋಜನವೇನೆಂದು ಆಕ್ಷೇಪಿಸಬಹುದು ; ಅಪಿ ಶಬ್ದವು ಇಲ್ಲಿ ಸಮುಚ್ಚಯಾರ್ಥಕವೆಂದು ಭಾವಿಸಬಹುದು; ಯೋಗಿನಾಂ, ಸರ್ವೇಷಾಂ ಚ ಎಂಬ ರ್ಥವು. ಹಿಂದೆಯೇ ಕೇವಲ ತಪಸ್ವಿಗಳೂ ಜ್ಞಾನಿಗಳೂ ಕರ್ಮಿಗಳೂ ಇವರೆಲ್ಲರಿಗಿಂತಲೂ ಕರ್ಮಯೋಗತಪಸ್ವೀ ಮೊದಲಾದ ಜೀವಾತ್ಮೋಪಾಸಕನು ಅಧಿಕನು ಎಂದು ಹೇಳಿದ್ದರೂ, ಇವರೆಲ್ಲರಿಗಿಂತಲೂ ಈ ಪರಮಾತ್ಮೋಪಾಸಕನು ಸರ್ವಶ್ರೇಷ್ಠನು ಎಂದು ಹೇಳಿರುವವರಲ್ಲೇನೂ ಅಸಂಗತವಿಲ್ಲವೆಂಭಿಪ್ರಾಯದಿಂದ "ಅಪಿಸರ್ವೇಷಾಂ ಇತಿ ಸರ್ವಶಬ್ದನಿರ್ದಿಷ್ಟಾಸ್ತಪಸ್ವಿ ಪ್ರಭೃತಯಃ" ಎಂದು ಹೇಳಲ್ಪಟ್ಟಿತು. ಅಪಿ ಸರ್ವೇಷಾಂ ಎಂದರೆ, ಸರ್ವಶಬ್ದನಿರ್ದಿಷ್ಟಾಃ- ಸರ್ವಶಬ್ದದಿಂದ ಹೇಳಲ್ಪಟ್ಟವರು ಯಾರೆಂದರೆ—ನಾಲ್ಕು ವಿಧ ಆತ್ಮೋಪಾಸಕರು ಮತ್ತು ಕೇವಲ ತಪಸ್ವಿಜ್ಞಾನಿ ಕರ್ಮಿ ಮೊದಲಾದವರು ; ಇವರೆಲ್ಲರಿಗಿಂತಲೂ ಪರಮಾತ್ಮೋಪಾಸಕನು ಯುಕ್ತತಮನು ; ಕೇವಲ ತಪಸ್ವಿ, ಜ್ಞಾನಿ ಕರ್ಮಿಗಳಿಗಿಂತ ಫಲಾಪೇಕ್ಷೆ ಇಲ್ಲದ ತಪಸ್ವಿಯೇ ಮೊದಲಾದ ಆತ್ಮಚಿಂತಕರಿಗೆ ತರಭಾವವೂ ಎಂಬಭಿಪ್ರಾಯದಿಂದಲಾದರೂ ಹಾಗೆ ಪ್ರಯೋಗಿಸಿರಬಹುದು- ಯುಕ್ತಶಬ್ದಕ್ಕೆ ತುಂಬಾ ಯೋಗ್ಯನೆಂಬ ಅರ್ಥವೆಂದಿಟ್ಟುಕೊಂಡರೂ,ಹಿಂದೆ ಹೇಳಿದ ಕರ್ಮಯೋಗಿಗಳು ಅವರ ವಿಪಾಕ ದಶೆಯನ್ನು ಹೊಂದಿ ಆತ್ಮಚಿಂತನಮಾಡುವವರು, ಇವರೆಲ್ಲರಿಗಿಂತ ಅತಿಶಯಿತ ಪುರುಷಾರ್ಥವನ್ನು ಅಪೇಕ್ಷಿಸುವವನಂದ ಈ ಭಗವದುಪಾಸಕನು ಸರ್ವಶ್ರೇಷ್ಠನೆಂಬಭಿಪ್ರಾಯದಿಂದ ಹಾಗೆ ಪ್ರಯೋಗಿಸಿರಬಹುದೆಂದೂ ಭಾವಿಸಬಹುದು. ಈ ಎಲ್ಲಾ ಸಂದರ್ಭದಲ್ಲೂ ನಿರ್ಧಾರಣ ಷಷ್ಠ್ಯರ್ಥವನ್ನು ಹೇಳಲಾಗುವದಿಲ್ಲವಾದುದರಿಂದ ಸಂಬಂಧಸಾಮಾನ್ಯ ಷಷ್ಠ್ಯನುಸಾರ ಪಂಚಮ್ಯರ್ಥವನ್ನೇ ಹೇಳತಕ್ಕದ್ದೆಂದು ಹೇಳುತ್ತಾರೆ—ತತ್ರಾಪಿ - ಆ ಸಂದರ್ಭದಲ್ಲೂ ಕೂಡ, ಹಾಗೆ ಅರ್ಥ ಹೇಳಿದರೂ ಕೂಡ, ಉಕ್ತೇನ ನ್ಯಾಯೇನ - ಹಿಂದೆ ನಿರ್ಧಾರಣದಲ್ಲಿ ಷಷ್ಠ್ಯರ್ಥವು ಇಲ್ಲಿ ಹೇಳಲ್ಪಡಲಿಲ್ಲವೆಂದು ತಿಳಿಸುವುದಕ್ಕೆ ಯಾವ ನ್ಯಾಯವನ್ನು ಹೇಳಿದೆವೋ ಅದೇ ನ್ಯಾಯದಿಂದಲೇ, ಪಂಚಮ್ಯರ್ಥೋಗ್ರಹೀತವ್ಯಃ - "ಸರ್ವೇಷಾಂ ಯೋಗಿನಾಂ" ಎಂಬುದಕ್ಕೆ ಪಂಚಮ್ಯರ್ಥವನ್ನೇ ಸ್ವೀಕರಿಸತಕ್ಕದ್ದಾಗಿರುತ್ತದೆ; ಆದುದರಿಂದಅರ್ಥ ಹೇಗೆಂದರೆ ವ್ಯಕ್ತಪಡಿಸುತ್ತಾರೆ—ಯೋಗಿಭ್ಯೋಽಪಿ ಸರ್ವೇಭ್ಯಃ ವಕ್ಷ್ಯಮಾಣೋ ಯೋಗೀಯುಕ್ತತಮಃ-ಹಿಂದೆ ಹೇಳಿದ ನಾಲ್ಕು ವಿಧ ಯೋಗಿಗಳು, ಕೇವಲ ತಪಸ್ವಿಗಳೇ ಮೊದಲಾದವರು, ಇವರೆಲ್ಲರಿಗಿಂತಲೂ ಮುಂದಿನ ಷಟ್ಕದಲ್ಲಿ ಹೇಳಲ್ಪಡುವ ಯೋಗಿಯೇ ಸರ್ವಶ್ರೇಷ್ಠನಾದ ಯೋಗಿಯು, ಇದು ಪ್ರತಿಜ್ಞಾ ವಾಕ್ಯವು. ಈ ಯೋಗವು ಮುಂದೆ ಭಕ್ತಿಯೋಗವೆಂದು ಹೇಳಲ್ಪಟ್ಟು ಅದರ ಮಾಹಾತ್ಮ್ಯೆಯೇ ಮುಂದೆ ವಿಸ್ತಾರವಾಗಿ ಹೇಳಲ್ಪಡುತ್ತದೆಂದು ಹೇಳುವ ಪ್ರಕರಣವು ; ತದಪೇಕ್ಷಯಾ- ಆ ಭಕ್ತಿಯೋಗಿಯಾಗಿರುವ ಪರಮಾತ್ಮೋಪಾಸಕನಿಗಿಂತಲೂ, ಅವರತ್ವೇ – ನಿಕೃಷ್ಟರಾಗಿರುವವರಲ್ಲಿ, ತಪಸ್ವಿ ಮೊದಲಾದವರುಗಳಿಗೂ, ಯೋಗಿನಾಂ ಚ-ಪ್ರತ್ಯಗಾತ್ಮೋಪಾಸಕರಿಗೂ ಸಹ ನ ಕಶ್ಚಿದ್ವಿಶೇಷ ಇತ್ಯರ್ಥಃ - ಏನೊಂದೂ ವಿಶೇಷವಿರುವದಿಲ್ಲ ಎಂಬ ಅಭಿಪ್ರಾಯವು ; ಮೇರ್ವಪೇಕ್ಷಯಾ - ಮೇರುಪರ್ವತದ ಮುಂದೆ, ಸರ್ಷಪಾಣಾಮಿವ - ಸಾಸಿವೆಕಾಳುಗಳೆಲ್ಲಾ ಹೇಗೋ ಹಾಗೇ ಎಂಬ ಭಾವವು. ಸಾಸಿವೆ ಕಾಳುಗಳಲ್ಲೇನೋ ಗಾತ್ರಗಳಲ್ಲಿ ವ್ಯತ್ಯಾಸವು ಇದ್ದೇ ಇರ

ಭಾ. ಅವರತ್ವ ನಿರ್ದೇಶಸ್ಸಮಾನಃ । ಮತ್ಪ್ರಿಯತ್ವಾತಿರೇಕೇಣಾನನ್ಯಧಾರಣಸ್ವಭಾವತಯಾ ಮದ್ಗತೇನ ಅನ್ತರಾತ್ಮನಾ - ಮನಸಾ, ಶ್ರದ್ಧಾವಾನ್ - ಅತ್ಯರ್ಥ ಮತ್ಪ್ರಿಯತ್ವೇನ ಕ್ಷಣಮಾತ್ರ ವಿಶ್ಲೇಷಾಸಹತಯಾ ಮತ್ಪ್ರಾಪ್ತಿ ಪ್ರವೃತ್ತೌ ತ್ವರಾವಾನ್, ಯೋ ಮಾಂ

ಬಹುದು; ಆದರೂ ಮೇರು ಸರ್ವತಕ್ಕಿಂತ ಸಾಸಿವೆ ಕಾಳುಗಳೆಲ್ಲವೂ ಗಾತ್ರದಲ್ಲಿ ನಿಕೃಷ್ಟವಾದ ವೆಂದು ಹೇಗೆ ಹೇಳಬಹುದೋ,-ಹಾಗೆಯೇ ಪರಮಾತ್ಮೋಪಾಸಕನಿಗಿಂತಲೂ, ಈ ಪ್ರತ್ಯಗಾತ್ಮ ಯೋಗಿಗಳೂ ಕೇವಲ ತಪಸ್ವಿಗಳೂ, ಕೇವಲ ಜ್ಞಾನಿಗಳೂ, ಇತರ ಕೇವಲ ಕರ್ಮನಿಷ್ಠರೂ ಎಲ್ಲರೂ ನಿಕೃಷ್ಟರೆಂದು ಹೇಳಬಹುದೆಂಬ ಭಾವವು. ಅವರೆ ಪ್ರತ್ಯಗಾತ್ಮ ಯೋಗಿಗಳೇ ನಿಕೃಷ್ಟರು ಎಂದು ತಿಳಿಸಿದನಂತರ,ಅವರಿಗೂ ಕೀಳಾದ ಕೇವಲ ತಪಸ್ವಿ ಮೊದಲಾದವರೂ ನಿಕೃಷ್ಟರೂ ಎಂದು ಏಕೆ ಹೇಳಬೇಕೆಂದರೆ, ಎಲ್ಲರೂ ಇವರಿಗಿಂತ ನಿಕೃಷ್ಟರು. ಈತನು ಎಲ್ಲರಿಗಿಂತಲೂ ಸರ್ವೋತ್ಕೃಷ್ಟ ನೆಂದು ತಿಳಿಸಬೇಕೆಂದು ಹಾಗೆ ಹೇಳಲ್ಪಟ್ಟಿತು. ಅದಕ್ಕಾಗಿಯೇ ಮೇರುಸರ್ಷಪ ದೃಷ್ಟಾಂತವು. ಪ್ರತ್ಯಗಾತ್ಮಯೋಗಕ್ಕೂ ಪರಮಾತ್ಮಯೋಗಕ್ಕೂ ಅಜಗಜನ್ಯಾಯವೆಂದು ತಿಳಿಸುವದಕ್ಕಾಗಿಯೇ ಅಪಿಸರ್ವೇಷಾಂ ಎಂಬ ಪ್ರಯೋಗವು ಮೂಲದಲ್ಲಿರುತ್ತದೆ. ಇವರ ಮೇರು ಸರ್ಷಪ ದೃಷ್ಟಾಂತದಲ್ಲಿ ಎರಡೇ ಇವೆ, ದಾರ್ಷ್ಟಾಂತಿಕದಲ್ಲಾದರೋ ಪರಮಾತ್ಮೋಪಾಸನೆಯು, ಪ್ರತ್ಯಗಾತ್ಮಯೋಗವು, ತಪಸ್ವಿ ಪ್ರಭೃತಿಗಳ ಯೋಗವು, ಹೀಗೆ ಮೂರು ತರಗತಿಯ ಅಧಿಕಾರಿಗಳು ಒಂದಕ್ಕಿಂತ ಒಂದು ನಿಕೃಷ್ಟರಾಗಿರುವರಲ್ಲಾ ಎಂದರೆ, ತಮ್ಮ ದೃಷ್ಟಾಂತದಲ್ಲೂ ಹೀಗೆ ವ್ಯತ್ಯಾಸ ಉಂಟೆಂದೂ ದೃಷ್ಟಾಂತದಲ್ಲಿ ಏನೂ ಕುಂದಕವಿಲ್ಲೆಂದೂ ಮುಂದಿನ ಯದ್ಯಪಿ ಎಂಬ ವಾಕ್ಯದ ಮೂಲಕ ತಿಳಿಸುತ್ತಾರೆ, ಸರ್ಷಪೇಷು - ಸಾಸಿವೆ ಕಾಳುಗಳಲ್ಲಿ ಅನ್ಯೋನ್ಯನ್ಯೂನಾಧಿಕ ಭಾವೋ - ಗಾತ್ರದಲ್ಲಿ ಪರಸ್ಪರ ಹೆಚ್ಚು ಕಡಿಮೆಯಾಗಿರೋಣವೂ, ಯದ್ಯಪಿ ವಿದ್ಯತೇ - ಹೇಗೂ ಇದ್ದೇಇರುತ್ತದೆ; ತಥಾಪಿ - ಹಾಗಾದರೂ, ಅವರತ್ವ ನಿರ್ದೇಶಃ - ಈ ಗಾತ್ರದಲ್ಲಿ ವ್ಯತ್ಯಾಸವಿರುವ ಸಮಸ್ತಕಾಳುಗಳಿಗೂ ನಿಕೃಷ್ಟತೆಯುಂಟೆಂದು ಹೇಳೋಣವು, ಸಮಾನಃ- ಸಮಾನವಾದುದೇ. ಹಾಗೆಯೇ ಈ ಪ್ರತ್ಯಗಾತ್ಮ ಯೋಗಿಗಳೂ ಕೇವಲ ತಪಸ್ವಿಗಳೂ ಮೊದಲಾದವರೆಲ್ಲರಿಗಿಂತಲೂ ಪರಮಾತ್ಮೋಪಾಸಕನು ಶ್ರೇಷ್ಠನೆಂದೂ, ಅವರತ್ವವು ಪರಮಾತ್ಮೋಪಾಸಕನಿಗಿಂತ ನಿಕೃಷ್ಟರಲ್ಲೆಲ್ಲಾ ಸಮಾನವೆಂದು ಹೇಳುವದರಿಂದ, ಅವರುಗಳಲ್ಲಿ ಏನೂ ತಾರತಮ್ಯವಿಲ್ಲವೆಂಬ ಅಭಿಪ್ರಾಯವಾಗುವದಿಲ್ಲವೆಂಬ ಭಾವವು. ಮುಂದೆ ಮದ್ಗತೇನಾಂತರಾತ್ಮನಾ ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ—ಮತ್ಪ್ರಿಯತ್ವಾತಿರೇಕೇಣ - ಮತ್ಪ್ರಿಯನೆಂದರೆ ನಾನೇ ಯಾರಪ್ರೀತಿಗೆ ವಿಷಯವೋ ಅವನು ಮತ್ಪ್ರಿಯನು, ಆತನ ಭಾವವು ಮತ್ಪ್ರಿಯತ್ವವು ಎಂದರೆ ನನ್ನಲ್ಲಿ ವಿಶೇಷಭಕ್ತಿಯು ಎಂಬ ಭಾವವು, ಮತ್ಪ್ರಿಯತ್ವಾತಿರೇಕೇಣ - ನನ್ನಲ್ಲಿ ವಿಶೇಷ ಭಕ್ತಿಯ ಆಧಿಕ್ಯದಿಂದ, ಅನನ್ಯಧಾರಣ ಸ್ವಭಾವತಯಾ - ನಾನಲ್ಲದೆ ಇನ್ನು ಯಾರೂ ತನಗೆ ಧಾರಕರಲ್ಲವೆಂಬ ಸ್ವಭಾವವುಳ್ಳವನಾದುದರಿಂದ, ಮದ್ಗತೇನ - ಹೀಗೆ ನನ್ನನ್ನು ಹೊಂದಿದ, ಅಂತರಾತ್ಮನಾ ಎಂದರೆ, ಮನಸಾ - ಮನಸ್ಸಿನಿಂದ, ಮನಸ್ಸಿಗೆ ಅಂತರಾತ್ಮಾ ಎಂಬ ವ್ಯವಹಾರವು ಹೇಗೆ ಎಂದರೆ ಮನಸ್ಸಲ್ಲದ ಇತರ ಇಂದ್ರಿಯಗಳು ಬಾಹ್ಯವಾಗಿದ್ದುಕೊಂಡು, ವಿಷಯಗಳನ್ನು ಪ್ರಕಾಶಗೊಳಿಸುವವು, ಮನಸ್ಸಾದರೋ ಒಳಗಿರುವದಾಗಿ, ಆತ್ಮಾವಿಗೆ ಧರ್ಮಭೂತಜ್ಞಾನದ ಮೂಲಕ ಪ್ರಕಾಶಗೊಳಿಸುತ್ತದೆ, ಹೀಗೆ ಪ್ರವೃತ್ತಿಯುಳ್ಳದಾದುದರಿಂದ ಅಂತರಾತ್ಮಾ ಎಂದು ವ್ಯವಹರಿಸಲ್ಪಡುತ್ತದೆ, ಶ್ರದ್ಧಾವಾನ್ ಎಂದರೆ ಅತ್ಯರ್ಥಪ್ರಿಯತ್ವೇನ ಕ್ಷಣಮಾತ್ರ ವಿಶ್ಲೇಷಾ ಸಹತಯಾ ಇತ್ಯಾದಿ - ಅತಿಶಯವಾದ ಭಕ್ತಿ

ಭಾ. ಭಜತೇ, ಮಾಂ - ವಿಚಿತ್ರಾನನ್ತ ಭೋಗ್ಯ ಭೋಕ್ತೃವರ್ಗ ಭೋಗೋಪಕರಣ ಭೋಗಸ್ಥಾನ ಪರಿಪೂರ್ಣ ನಿಖಿಲ ಜಗದುದಯ ವಿಭವ ಲಯಲೀಲಮ್,

---

ಯಿರುವದರಿಂದ ಒಂದು ಕ್ಷಣವಾಗಲಿ ನನ್ನನ್ನಗಲಿರಲು ಅಸಾಧ್ಯವಾಗಿರುವದರಿಂದ ನನ್ನನ್ನು ಹೊಂದುವ ಪ್ರವೃತ್ತಿಯಲ್ಲಿ ಎಂದರೆ ಮುಂದೆ ಹೇಳುವ ಸಾಧ್ಯೋಪಾಯವಾದ ಭಕ್ತಿಯೋಗವನ್ನು ಅವಲಂಬಿಸುವವರಲ್ಲಿ ತ್ವರೆಯುಳ್ಳವನಾಗಿ, ಯೋಮಾಂಭಜತೇ-ನನ್ನನ್ನು ಯಾವನು ಭಕ್ತಿಯಿಂದ ಉಪಾಸಿಸುತ್ತಾನೋ, ಸಃಯುಕ್ತತಮೋಮತಃ- ಅವನೀಗ ಎಲ್ಲಾ ಯೋಗಿಗಳಿಗಿಂತ ಅತಿಶಯಿತ ಶ್ರೇಷ್ಠನೆಂಬುದು ನನ್ನ ಅಭಿಪ್ರಾಯವು ಎಂದು ಮುಂದೆ ಇದೆ. ಇಲ್ಲಿ ಅಪಿ ಸರ್ವೇಷಾಂ ಎಂಬ ಪ್ರಯೋಗದಿಂದ ಹಿಂದೆ ಈ ಪ್ರಕರಣವಲ್ಲಿ ಹೇಳಲ್ಪಡದೇ ಇರುವ ಸಮಸ್ತಯೋಗಿಗಳೆಂಬ ಅರ್ಥ ವನ್ನು ವ್ಯಕ್ತಪಡಿಸುತ್ತದೆ. ಇವರುಗಳನ್ನೂ ವ್ಯಾವರ್ತಿಸಿ ಹೇಳುವದಕ್ಕಾಗಿ ಅದೇ ನ್ಯಾಯವನ್ನೇ ಅವಲಂಬಿಸತಕ್ಕದ್ದು ಎಂದು ಉಕ್ತೇನ ನ್ಯಾಯೇನ ಎಂಬ ಪ್ರಯೋಗವು; ಹಿಂದೆ ಹೇಳಲ್ಪಟ್ಟನಾಲ್ಕು ವಿಧ ಸಾಮ್ಯಾವಸ್ಥೆಯ ಯೋಗಿಗಳನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ ಯಾವನ್ಯಾಯವು ಹೇಳಲ್ಪಟ್ಟಿ ತೋ ಎಂದರೆ ನಿರ್ಧಾರಣ ಷಷ್ಠಿಯಲ್ಲದ ಸಂಬಂಧ ಸಾಮಾನ್ಯ ಷಷ್ಠಿಯನ್ನು ಹೇಳಬೇಕೆಂದು ತಿಳಿಸಿ ಪಂಚಮ್ಯರ್ಥವನ್ನು ಗ್ರಹಿಸತಕ್ಕದ್ದೆಂದು ಹೇಳಿದೆವೋ, ಅದೇ ನ್ಯಾಯದಿಂದ ಇತರ ತಪಸ್ವಿಗಳನ್ನೂ ವ್ಯಾವರ್ತಿಸಿ ಹೇಳುವದಕ್ಕಾಗಿಯೂ ಪಂಚಮ್ಯರ್ಥದಲ್ಲಿ ಷಷ್ಠಿಯುಎಂದು ಭಾವಿಸತಕ್ಕದ್ದೆಂಬ ಭಾವ ವನ್ನು ಸೂಚಿಸುವದಕ್ಕಾಗಿಯೇ ಉಕ್ತೇನ ನ್ಯಾಯೇನ ಎಂಬ ಪ್ರಯೋಗವು. ಯುಕ್ತತಮಃ ಎಂಬುದರಿಂದ ಭಕ್ತಿಯೋಗವನ್ನವಲಂಬಿಸಿ ಪರಮಾತ್ಮನ ದಿವ್ಯ ಮಙ್ಗಳವಿಗ್ರಹವನ್ನು ಉಪಾಸಿಸು ವನು ಸರ್ವೋತ್ಕೃಷ್ಟನು ಎಂಬಭಾವವು ಪ್ರದರ್ಶಿಸಲ್ಪಟ್ಟಿತು. ಅಥವಾ ಮಿಕ್ಕಯೋಗಿಗಳು ಅನ್ಯ ದೇವತೆಯನ್ನೋ, ತನ್ನ ಆತ್ಮಾವನ್ನೋ ಧ್ಯಾನಿಸುವ ಯೋಗಿಗಳು ; ಈತನಾದರೋ ಪರಮಾತ್ಮ ನಾದ ತನ್ನನ್ನೇ ಪರಮೋಪಾಸ್ಯನೆಂದು ಭಾವಿಸಿ, "ಕಾರಣಂ ತು ಧ್ಯೇಯಃ" ಎಂಬ ಶಾಸ್ತ್ರಾನು ಗುಣವಾಗಿ ಉಪಾಸಿಸುವದರಿಂದ, ಯುಕ್ತತಮನೆಂಬ ಭಾವವು; ಅಥವಾ ಯುಕ್ತತಮಃ ಎಂದರೆ ಯೋಗ್ಯತಮನೆಂಬ ಅರ್ಥವಾಗಲಿ ಆಗಬಹುದು. ಹಿಂದೆ ಹೇಳಿದ ನಾಲ್ಕುವಿಧ ಸಮ ತ್ವಾವಸ್ಥೆಯಲ್ಲಿರುವರೆಲ್ಲರೂ ಯುಕ್ತತರರು; ಅಲ್ಲಿಗೇನೇ ಬಿಡದೆ, ಮುಂದಕ್ಕೆ ಮುಕ್ತಿಯನ್ನು ಕೊಡುವ ಭಕ್ತಿಯೋಗವಲ್ಲಿ ಪ್ರವೇಶಿಸುವದರಿಂದಲಾಗಲಿ ಯೋಗ್ಯತಮರು, ಈ ಇಷ್ಟು ಅಭಿಪ್ರಾ ಯಗಳನ್ನು ಮನಸ್ಸಿನಲ್ಲಿಟ್ಟು ಈತನೇ ಶ್ರೇಷ್ಠತಮನೆಂದು ಉಪಪಾದಿಸಿರುತ್ತಾರೆ. ಈ ಎಲ್ಲರಿಗಿಂ ತಲೂ ಈ ಪರಮಾತ್ಮೋಪಾಸಕನು ಸರ್ವ ಶ್ರೇಷ್ಠನೆಂದರೆ, ಮಿಕ್ಕ ಯೋಗಿಗಳೆಲ್ಲಾ ಅವರತ್ವದಲ್ಲಿ ಸಮರು ಎಂದು ಹೇಳಲ್ಪಡಲಿಲ್ಲವು. ಅವರಲ್ಲೂ ಸಹ ನ್ಯೂನಾಧಿಕ ತಾರತಮ್ಯ ಉಂಟೇ ಉಂಟೆಂದು ಉಪಪಾದಿಸಿರುತ್ತಾರೆ. ಮೂಲದ ಶ್ರದ್ಧಾವಾನ್ ಎಂಬುದಕ್ಕೆ ಅತ್ಯರ್ಥಮತ್ಪ್ರಿಯ ತ್ವೇನ ಕ್ಷಣಮಾತ್ರ ವಿಶ್ಲೇಷಾ ಸಹತಯಾ ಮತ್ಪ್ರಾಪ್ತಿ ಪ್ರವೃತ್ತೌ ತ್ವರಾವಾನ್ ಎಂದು ಇಷ್ಟುಪೂರ ವ್ಯಾಖ್ಯಾನವು ಹೇಗೆ ಎಂದರೆ ಈ ಭಕ್ತಿಯೋಗವನ್ನು ಸಾಧ್ಯೋಪಾಯವಾಗಿ ಅವ ಲಂಬಿಸಬೇಕಾದರೆ ಅದರಿಂದುಂಟಾಗುವ ಫಲವು ನಿರತಿಶಯವೆಂದೂ, ಅವನ್ನು ಹೊಂದಬೇಕೆಂಬ ಉತ್ಕಟೇಚ್ಛೆಯೂ, ಅದನ್ನು ಸಾಧಿಸುವದರಲ್ಲಿ ತ್ವರೆಯೂ ಸಹ ಆವಶ್ಯಕವು; ಆದುದರಿಂದ ಅಷ್ಟು ವಿಸ್ತರವಾದ ವ್ಯಾಖ್ಯಾನವು. ಈ ವಿಶ್ಲೇಷಾ ಸಹತ್ವಾವಸ್ಥೆಯು ಭಕ್ತಿ ಕಾಷ್ಠಾದಶೆಯಲ್ಲಿ ಉಂಟಾ ಗುತ್ತದೆಂಬ ಭಾವವೂ ಇಲ್ಲಿ ಸೂಚಿಸಲ್ಪಟ್ಟಿತು. ಮುಂದೆ ಮಾಂ ಎಂಬಲ್ಲಿ ಗರ್ಭಿತವಾದ ಮುಂದೆ ಎರಡು ಷಟ್ಕಗಳಿಂದಲೂ ಪ್ರದರ್ಶಿಸಲ್ಪಡುವ ಅರ್ಥವನ್ನು ಇಲ್ಲಿಯೇ ಸಙ್ಗ್ರಹವಾಗಿ ವ್ಯಕ್ತಪಡಿಸು ತ್ತಾರೆ; ತನಗೆ ಮುಂದಿನ ಅಧ್ಯಾಯಗಳಲ್ಲಿ ಪರತ್ವ, ಹೇಯ ಪ್ರತ್ಯನೀಕತ್ವ, ಕಲ್ಯಾಣ ಗುಣಾಕರತ್ವ,

ಭಾ. ಅಸ್ಪೃಷ್ಟಾಶೇಷದೋಷಾನವಧಿಕಾತಿಶಯಜ್ಞಾನಬಲೈಶ್ವರ್ಯವೀರ್ಯಶಕ್ತಿತೇಜಃ ಪ್ರಭೃತ್ಯಸಂಖ್ಯೇಯ ಕಲ್ಯಾಣಗುಣಗಣ ನಿಧಿಂ, ಸ್ವಾಭಿಮತಾನುರೂಪೈಕರೂಪಾ

ವಿಭವೈಶ್ವರ್ಯಯುಕ್ತತ್ವ, ಆಶ್ರಯೋಚಿತ ಕೃಪಾಸೌಲಭ್ಯಸೌಶೀಲ್ಯವಾತ್ಸಲ್ಯಾದಿಗುಣಯುಕ್ತತ್ವ, ಇವೆಲ್ಲಾ ಇರುವಂತವನು ತಾನು ಎಂಬುದನ್ನು ಮಾಂ - ಅಂತಹ ತನ್ನನ್ನು ಎಂದು ಶ್ರೀ ಕೃಷ್ಣಭಗವಾನರವರು ಎದೆ ಮುಟ್ಟಿ ಹೇಳಿರುವದರಿಂದ ದ್ಯೋತಿತವು ಎಂಬಭಿಪ್ರಾಯದಿಂದ ವ್ಯಕ್ತಪಡಿಸುತ್ತಾರೆ. ತಾನು ಶ್ರೀಕೃಷ್ಣನಾಗಿ ವಸುದೇವ ಗೃಹದಲ್ಲಿ ಅವತೀರ್ಣನಾಗಿದ್ದರೂ ಹಿಂದೆ ಹೇಳಿದ ಹಾಗೆ ಅಜಹತ್ಸ್ವಸ್ವರೂಪ ಸ್ವಭಾವಯುಕ್ತನಾಗಿಯೂ ಜಗತ್ಕಾರಣನಾಗಿಯೂ ಇರುವನೆಂಬುದು, ದ್ಯೋತಿತವೆಂದು ವಿಚಿತ್ರಾನನ್ತವೆಂದು ಆರಂಭಿಸಿ ಆಪ್ಯಾಯಯನ್ತಂ ಎಂಬುವವರೆಗೂ ಹೇಳುತ್ತಾರೆ. ವಿಚಿತ್ರಾನನ್ತಭೋಗ್ಯ....ಲೀಲಮ್ - ಮನೋಹರವಾಗಿರೋಣವೇನು ನಾನಾಬಗೆಯಾಗಿರುವವೇನು, ಹೀಗೆ ವಿಚಿತ್ರವಾದ, ಅಸಂಖ್ಯೇಯವಾದ, ಭೋಗ್ಯವಾದ ಪ್ರಕೃತಿಯೇನು, ಅದನ್ನು ಅನುಭವಿಸುವ ಭೋಕ್ತೃಗಳಾದ ನಾನಾವಿಧ ಪ್ರಾಣಿಗಳೇನು, ಈ ಪ್ರಾಣಿಗಳಿಗೆ ಬೇಕಾದ ಭೋಗಕ್ಕೆ ಸಾಧಕಗಳಾಗಿರುವ ಸಾಮಗ್ರಿಯೇನು, ಮತ್ತು ಅವರುಗಳು ಅನುಭವಿಸುವ ಸ್ಥಾನಗಳೇನು ಇವುಗಳಿಂದ ತುಂಬಿರುವ ಸಮಸ್ತ ಜಗತ್ತುಗಳ ಸೃಷ್ಟಿ, ಸ್ಥಿತಿ, ಲಯಗಳನ್ನೇ ಲೀಲೆಯಾಗಿವುಳ್ಳಂಥಾ, ಇದರಿಂದ ಜಗತ್ಕಾರಣತ್ವವು ಶ್ರೀ ಕೃಷ್ಣನಿಗುಂಟೆಂಬುದು ಹೇಳಲ್ಪಟ್ಟಿತು. ಶ್ರುತಿಗಳಲ್ಲಿ ಪರಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳುವಾಗ "ಸದೇವ" "ತದ್ಬ್ರಹ್ಮ" "ಆತ್ಮಾವಾ" "ಹಿರಣ್ಯಗರ್ಭ" ಇತ್ಯಾದಿ ಶಬ್ದಗಳು ಶ್ರುತಿಗಳಲ್ಲಿ ಉಪಯೋಗಿಸಲ್ಪಟ್ಟು ಈ ಶಬ್ದಗಳೆಲ್ಲಾ "ನಾರಾಯಣನನ್ನೇ" ಬೋಧಿಸುತ್ತವೆ ಎಂದು ಸರ್ವ ಉಪನಿಷತ್ಸಾರಭೂತವಾದ ಪುರುಷಸೂಕ್ತದಲ್ಲಿ ಹೇಳಿರುವದರಿಂದ, ಆ ನಾರಾಯಣನೇ ಈಗ ಅವತಾರಿಯಾಗಿ ಶ್ರೀಕೃಷ್ಣನಾಗಿರುವದರಿಂದಲೂ ಜಗತ್ಕಾರಣತ್ವವು ಉಂಟೆಂದು ತೋರಿಸುವದಕ್ಕಾಗಿ ಹಾಗೆ ಪ್ರಯೋಗವು; ಜನ್ಮಾದ್ಯಸ್ಯಯತಃ ಎಂಬ ಎರಡನೆಯ ಬ್ರಹ್ಮ ಸೂತ್ರವು, ಹೀಗೆ ಯತೋವಾ ಇಮಾನಿ ಭೂತಾನಿ ಜಾಯನ್ತೇ (ತೈ. ಭೃಗು.) ಎಂಬ ಉಪನಿಷದ್ವಾಕ್ಯದ ಸಾರವಾಗಿ, ಹೀಗೆ ಜಗತ್ಕಾರಣನು ಯಾರೋ ಅವನೇ ಪರಬ್ರಹ್ಮವೆಂದು ಸೂಚಿಸುವದರಿಂದ, ಶ್ರೀಕೃಷ್ಣನೇ ಜಗತ್ಕಾರಣನೆಂಬರ್ಥವು. ಅಂತಹ ಜಗತ್ಕಾರಣನನ್ನೇ ಉಪಾಸಿಸತಕ್ಕದ್ದೆಂದು ಕಾರಣಂತು ಧ್ಯೇಯಃ ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಇದು ಮಾಂ ಎಂಬ ಪದದಲ್ಲಿ ದ್ಯೋತಿತವೆಂದು ಹೇಳಿರುತ್ತಾರೆ. ಈ ಜಗತ್ತುಗಳ ಸೃಷ್ಟಿ, ಸ್ಥಿತಿ, ಲಯಗಳಲ್ಲಿ ಪರಿಪೂರ್ಣಕಾಮನಾದ ಸರ್ವೇಶ್ವರನಿಗೆ ಏನೊಂದೂ ಪ್ರಯೋಜನವಿಲ್ಲದೆ ಬರೀ ಲೀಲೆಯೇ ಎಂದು ತೋರಿಸುವದಕ್ಕಾಗಿ, ಜಗದುದಯ ಲಯ ಲೀಲಮ್ ಎಂಬ ಪ್ರಯೋಗವು, ಈ ಅಭಿಪ್ರಾಯವು ಲೋಕವತ್ತು ಲೀಲಾ ಕೈವಲ್ಯಮ್ ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವು. (ಶಾ.ಸೂ. ೨. ೧. ೩೩.) ಅನೇಕ ಪುರಾಣೇತಿಹಾಸ ವಾಕ್ಯಗಳು ಇದನ್ನು ಸಮರ್ಥಿಸುತ್ತವೆ. (ದಾಸನು ಬರೆದಿರುವ ಶ್ರೀ ಸ್ತುತಿಯ ೫೫ನೆಯ ಪುಟವನ್ನು ಪ್ರಮಾಣಗಳಿಗಾಗಿ ಪರಾಂಬರಿಸಿ). ಸರ್ವವಿಧ ಸಂಪತ್ತೂ ಭೋಗಗಳಿಂದ ಪರಿಪೂರ್ಣಕಾಮನಾದ ರಾಜನು ಹೇಗೆ ತನ್ನ ಪಟ್ಟಮಹಿಷಿಯೊಂದಿಗೆ ಲೀಲೆಗಳಲ್ಲಿ ಪ್ರವರ್ತಿಸಿ ಆನಂದಿಸುವನೋ, ಹಾಗೆ ಸರ್ವೇಶ್ವರನೂ ಸರ್ವೇಶ್ವರಿಯೊಂದಿಗೆ ಯಾವಾಗಲೂ ಸೇರಿರುವವನಾಗಿ ಈ ಜಗತ್ತಿನ ಸೃಷ್ಟಿ,ಸ್ಥಿತಿ,ಲಯಾದಿ ಪ್ರವೃತ್ತಿಗಳಿಂದ ಆನಂದಿಸುವನೆಂಬ ಭಾವವು.ಸೃಷ್ಟಿ ಸ್ಥಿತಿಗಳಿಂದೇನೋ ಆನಂದಿಸಬಹುದು. ಲಯದಿಂದ ಸಂತೋಷಿಸುವನು ಹೇಗೆ ಎಂಬ ಶಙ್ಕಾ ಉಂಟಾಗಬಹುದು. ಲೋಕದಲ್ಲಿ ಶಾಸ್ತ್ರ ಧರ್ಮಾಚರಣೆಯು ಬಿಟ್ಟುಹೋಗಿ ಅಧರ್ಮವು ವಿಪರೀತವಾಗಿ ಯಾವಾಗ ನಡೆಯುತ್ತದೋ, ಆಗ

ಪ್ರಳಯ ಉಂಟಾಗುವದು ; ಜೀವಾತ್ಮರೆಲ್ಲಾ ಆಗ ಬಹುಕಾಲ ಪಾಪವೃದ್ಧಿಯಿಲ್ಲದೆ ಇರುವವರಾಗುವದರಿಂದ ಇದೂ ಉಪಕಾರವೇ ಸರಿ. ದಯಾಶತಕದ ೧೬ನೆಯ ಶ್ಲೋಕವಾದ "ಆಸೃಷ್ಟಿ ಸಂತತಾನಾಂ" ಎಂಬುದು ಅನುಸಂಧೇಯವು. ಹೀಗೆ ಈ ಲೋಕಗಳ ವ್ಯಾಪಾರವೆಲ್ಲಾ ಲಕ್ಷ್ಮೀನಾರಾಯಣರಿಗೆ ಲೀಲೆಯಾದುದರಿಂದಲೇ ಇದಕ್ಕೆ ಲೀಲಾ ವಿಭೂತಿ ಎಂದು ಹೆಸರು. ಶ್ರೀ ಪರವಾಸುದೇವನು ನಿತ್ಯ ಮುಕ್ತರುಗಳಿಂದ ಸೇರಿ ಇದ್ದು, ಅವರುಗಳಿಗೆ ಪರಿಪೂರ್ಣನಾದ ತನ್ನ ಅನುಭವವನ್ನಿತ್ತು ಅವರುಗಳೆಸಗುವ ದಿವ್ಯ ಕೈಙ್ಕರ್ಯಗಳನ್ನೆಲ್ಲಾ ಕೈಕೊಂಡು ಇರುವ ದಿವ್ಯ ವೈಕುಂಠಲೋಕವು ಈ ಸೃಷ್ಟ್ಯಾದಿ ಕರ್ಮಗಳಿಗೆ ಒಳಪಡದೆ ನಿತ್ಯವಾಗಿರುವದರಿಂದ ಇದಕ್ಕೆ ನಿತ್ಯ ವಿಭೂತಿ ಎಂದು ಹೆಸರು. ಹೀಗೆ ಸರ್ವೇಶ್ವರನು ಉಭಯ ವಿಭೂತಿಗಳಿಗೆ ಒಡೆಯನು, ನಿಯಾಮಕನು. ನಿತ್ಯವಿಭೂತಿಯೇನೋ ತುಂಬಾ ಪರಿಶುದ್ಧವಾಗಿ, ಶುದ್ಧ ಸತ್ತ್ವಮಯವಾಗಿರುವದರಿಂದ ತತ್ಸಂಬಂಧದಿಂದೇನೋ ಹೇಯಸಂಬಂಧವುಂಟಾಗುವದಿಲ್ಲವು. ಈ ಲೀಲಾ ವಿಭೂತಿಯು ಸತ್ತ್ವ ರಜಸ್ತಮೋಗುಣಾತ್ಮಕವಾದ ಪ್ರಕೃತಿಯ ಪರಿಣಾಮವಾದುದರಿಂದಲೂ, ತತ್ಸಂಬಂಧವುಳ್ಳ ಅಸಂಖ್ಯಾತವಾದ ಜೀವರಾಶಿಯಿಂದ ಸೇರಿರುವದರಿಂದಲೂ, ತತ್ಸೃಷ್ಟ್ವಾ ತದೇವಾನು ಪ್ರಾವಿಶತ್ ಎಂದು ಹೇಳಿರುವಹಾಗೆ ಸರ್ವೇಶ್ವರನು ವ್ಯಾಪಿಸಿರುವದರಿಂದ, ಆತನಿಗೆ ಹೇಯಸಂಬಂಧ ಉಂಟೋ ಎಂದರೆ, ಎಂದಿಗೂ ಇಲ್ಲವು ಎಂದು ತಿಳಿಸುವದಕ್ಕಾಗಿ ಮುಂದೆ ಅಸ್ಪೃಷ್ಟದೋಷನೆಂದು ಹೇಳುತ್ತಾರೆ. "ಅಪಹತಪಾಪ್ಮಾ"ದಿ ಗುಣಾಷ್ಟಕಗಳು ಪರಮಾತ್ಮನಲ್ಲುಂಟೆಂದು ಹೇಳಿರುವದರಿಂದಲೂ "ಸಮಸ್ತ ಕಲ್ಯಾಣ ಗುಣಾತ್ಮಕೋಽಸೌಸ್ವಶಕ್ತಿ ಲೇಶಾದ್ಧೃತ ಭೂತವರ್ಗಃ" (ವಿ. ಪು. ೬. ೫. ೮. ೪) "ತೇಜೋ ಬಲೈಶ್ವರ್ಯ ಮಹಾವ ಬೋಧ ಸುವೀರ್ಯ ಶಕ್ತ್ಯಾದಿಗುಣೈಕರಾಶಿಃ । ಪರಃಪರಾಣಾಂ ಸಕಲಾನಯತ್ರ ಕ್ಲೇಶಾದಯ ಸ್ಸನ್ತಿ ಪರಾವರೇಶೇ","ಸಮಸ್ತಹೇಯರಹಿತಂ ವಿಷ್ಣ್ವಾಖ್ಯಂ ಪರಮಂಪದಂ"(ವಿ.ಪು.೬.೫.೫೫) ಇತ್ಯಾದ್ಯನೇಕ ಪ್ರಮಾಣಗಳಿಂದ ಹೇಯ ರಹಿತತ್ವ ಕಲ್ಯಾಣ ಗುಣಾಕರತ್ವಗಳು ಪರಮಾತ್ಮನಿಗೆ ಉಂಟು ಎಂದು ಭಾವಿಸತಕ್ಕದ್ದು. ಆದರೆ ಪರಮಾತ್ಮನೇ ಅವಿದ್ಯಾ ಗೃಹೀತನಾಗಿ ಜೀವಾತ್ಮರಾಗಿ ತೋರುತ್ತಾರೆಂಬ ಶಂಕರ ಸಿದ್ಧಾಂತವೂ, ಸತ್ಯೋಪಾಧಿಯಿಂದ ಗೃಹೀತನಾದ ಪರಮಾತ್ಮನೇ ಜೀವಾತ್ಮರೆಂಬ ಭಾಸ್ಕರಾಭಿಪ್ರಾಯವೂ, ಸರಿಯಾದುವಲ್ಲವೆಂಬುದು ಇದರಿಂದ ಸೂಚಿಸಲ್ಪಟ್ಟವು. ಪರತತ್ತ್ವವು ನಿರ್ಗುಣನು ಎಂಬ ಶಾಂಕರವಾದವು ಸ್ವರೂಪ ಶೋಧಕ ವಾಕ್ಯಗಳಾದ "ಸತ್ಯಂ ಜ್ಞಾನಮನಂತಂ ಬ್ರಹ್ಮ" "ಯಸ್ಸರ್ವಜ್ಞ ಸ್ಸರ್ವವಿತ್" ಇವೇ ಮೊದಲಾದವುಗಳಿಂದ ದೂರೀಕೃತವಾಯಿತು. ಆದರೆ ಶಾಸ್ತ್ರಪಙ್ಕ್ತಿಗಳಲ್ಲಿ ಪರಬ್ರಹ್ಮನು ನಿರ್ಗುಣನೆಂದು ಹೇಳಿದೆಯಲ್ಲಾ ಎಂದರೆ, ಅಲ್ಲೆಲ್ಲಾ ಪ್ರಾಕೃತ ಗುಣವರ್ಜಿತನೆಂಬಭಿಪ್ರಾಯವು. ಆದುದರಿಂದ ಪರಬ್ರಹ್ಮನಿಗೆ ಶ್ರಿಯಃಪತಿತ್ವ ಜಗತ್ಕಾರಣತ್ವಗಳೊಂದಿಗೆ ಶೋಧಕವಾಕ್ಯಸಿದ್ಧಗಳಾದ ಹೇಯ ಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವಗಳುಂಟೆಂಬ ಉಭಯಲಿಂಗತ್ವವು "ನಸ್ಥಾನತೋಽಪಿ ಪರಸ್ಯೋಭಯಲಿಙ್ಗಂಸರ್ವತ್ರಹಿ" ಎಂಬ ಬ್ರಹ್ಮಸೂತ್ರ, ೩-೨.೧೧ ರಲ್ಲಿ ಹೇಳಲ್ಪಟ್ಟಿರುವದು ಅಸ್ಪೃಷ್ಟೇತ್ಯಾದಿಯಿಂದ ಸೂಚಿಸಲ್ಪಟ್ಟಿತು. ಅಸ್ಪೃಷ್ಟಾಶೇಷದೋಷ – ಲೀಲಾ ವಿಭೂತಿಯನ್ನೆಲ್ಲಾ "ಯಚ್ಚ ಕಿಂಚಿಜ್ಜಗತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ" ಎಂದು ಹೇಳಿರುವ ಹಾಗೆ ಜಗತ್ತಿನ ಸಂಬಂಧವಿದ್ದರೂ ತದ್ಗತ ದೋಷವರ್ಜಿತ ಸ್ವರೂಪವುಳ್ಳವನಾದ, ಮತ್ತು ಅನವಧಿಕಾತಿಶಯ - ಅವಧಿ ಇಲ್ಲದಿರುವ ಅತಿಶಯವುಳ್ಳ ಜ್ಞಾನ, ಬಲ, ಐಶ್ವರ್ಯ, ವೀರ್ಯ,ಶಕ್ತಿ, ತೇಜಸ್ಸೆಂಬ ಮುಖ್ಯವಾದ ಷಾಡ್ಗುಣ್ಯಗಳೇ ಮೊದಲಾದ,ಅಸಂಖ್ಯೇಯ ಕಲ್ಯಾಣ ಗುಣಗಣನಿಧಿಂ - ಅಸಂಖ್ಯೇಯಗಳಾದ ಕಲ್ಯಾಣಗುಣಗಳ ಸಮೂಹಗಳಿಗೆ ನಿಧಿಯಾಗಿರುವ

ಭಾ. ಚಿನ್ತ್ಯ ದಿವ್ಯಾದ್ಭುತ ನಿತ್ಯನಿರವದ್ಯ ನಿರತಿಶಯೌಜ್ಜ್ವಲ್ಯಸೌಂದರ್ಯ ಸೌಗನ್ಧ್ಯ ಸೌಕುಮಾರ್ಯ ಲಾವಣ್ಯ ಯೌವನಾದ್ಯನನ್ತಗುಣನಿಧಿ ದಿವ್ಯರೂಪಂ, ವಾಙ್ಮನಸಾ ಪರಿಚ್ಛೇದ್ಯ

ಇದೂ ಮೂಂ ಎಂಬುವಕ್ಕೆ ವಿಶೇಷವಾಗಿ ಇದರಿಂದ ಸೂಚಿತಾರ್ಥವು; ಈ ಆರು ಗುಣಗಳ ಅರ್ಥಗಳಿಗೆ ೪ ನೆಯ ಪುಟ ನೋಡಿ.

ಮುಂದೆ ಈತನು ಏಕಪಾದ್ವಿಭೂತಿಯಾದ ಲೀಲಾವಿಭೂತಿಯ ನಿಯಾಮಕನೂ ಅಲ್ಲದೆ ಸೃಷ್ಟ್ಯಾದಿಗಳಿಗೆ ಒಳಪಡದೇ ನಿತ್ಯವಾಗಿ ಏಕರೂಪವಾಗಿರುವ ತ್ರಿಪಾದ್ವಿಭೂತಿಯಾದ ನಿತ್ಯವಿಭೂತಿಗೂ ನಿಯಾಮಕನೆಂದೂ, ಅಲ್ಲೇ ನಿತ್ಯಮುಕ್ತರುಗಳಿಗೆ ಸೇವೆಯನ್ನಿತ್ತು, ಅವರುಗಳ ಕೈಙ್ಕರ್ಯಗಳನ್ನು ಪರಿಗ್ರಹಿಸುವದಕ್ಕಾಗಿ ಅಪ್ರಾಕೃತವಾದ ಶುಭಾಶ್ರಯವನ್ನು ಪರಿಗ್ರಹಿಸಿ, ದಿವ್ಯಾಭರಣ ಆಯುಧ ಪಟ್ಟಮಹಿಷಿ, ಪರಿಜನಾದಿಗಳಿಂದ ಯುಕ್ತನಾಗಿರುವನೆಂದು ಹೇಳುತ್ತಾರೆ. ಇದರಿಂದ ಪರಮಾತ್ಮನಲ್ಲದೆ ಮಿಕ್ಕದ್ದೆಲ್ಲವೂ ಮಿಥ್ಯೆ ಎಂಬ ಶಙ್ಕರ ಸಿದ್ಧಾನ್ತವು ಶಾಸ್ತ್ರಸಮ್ಮತವಲ್ಲದ್ದಾಗಿ ತಮಗೆ ಹಿತವಲ್ಲವೆಂದು ತೋರ್ಪಡಿಸಿದರು. ಸೃಷ್ಟಿಸ್ಥಿತ್ಯಾದಿಗಳಿಗೆ ವಶವಾದ ಲೀಲಾ ವಿಭೂತಿಯು, "ಅಜಾಮೇಕಾಂ ಲೋಹಿತ ಶುಕ್ಲಕೃಷ್ಣಾಂ" ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಪ್ರವಾಹತಃ ನಿತ್ಯವಾದುದೆಂದೂ, ಈ ಸೃಷ್ಟ್ಯಾದಿಗಳಿಗೆ ಸೇರದೆ ನಿತ್ಯವಿಭೂತಿಯೂ ನಿತ್ಯವಾದುದೆಂದೂ ಹೀಗೆ ಉಭಯವಿಭೂತಿಗೆ ಸೇರಿದ ತ್ರಿವಿಧ ಚಿದಚಿತ್ತುಗಳೂ ನಿತ್ಯವೆಂದೂ ಇವುಗಳಿಗೆ ಶ್ರೀ ಕೃಷ್ಣನು ನಾಯಕನೆಂದೂ, ತಿಳಿಸುವದಕ್ಕಾಗಿ ಈ ವಾಕ್ಯಖಂಡವು ಹೇಳಲ್ಪಟ್ಟಿರುತ್ತದೆ. ಯಾವಾಗ ಸರ್ವೇಶ್ವರನೆಂದು ಹೇಳಲ್ಪಟ್ಟ ಆತನು ಎಲ್ಲಕ್ಕೂ ನಿಯಾಮಕನಾಗಿ ಸ್ವಾಮಿ ಎನಿಸಿದನೋ, ಆಗ ಆತನಿಗೆ ಸ್ವಂ ಎಂದರೆ ನಿಯಾಮಕವಾದ ನಿತ್ಯವಾದ ವಿಭೂತಿಗಳು ಇರಬೇಕು. ಶಾಂಕರ ಸಿದ್ಧಾಂತದ ಪ್ರಕಾರವಾದರೋ ಸ್ವಂ ಇಲ್ಲದ ಸ್ವಾಮಿಯಾಗುವನೆಂಬ ಭಾವವೂ ಇದರಿಂದ ಸೂಚಿಸಲ್ಪಟ್ಟಿತು ; ಆಗ ಯಾರಿಗೆ ಸ್ವಾಮಿ ಯಾವುದಕ್ಕೆ ಸ್ವಾಮಿ ಎಂದರೆ ಹೇಳಲಶಕ್ಯವು. ವಿಭೂತಿಗಳಿಲ್ಲದೆ ಸರ್ವೇಶ್ವರತ್ವ ಕೂಡುವದಿಲ್ಲವಾದುದರಿಂದ, ಉಭಯ ವಿಭೂತಿ ನಾಯಕತ್ವವನ್ನು ಹೇಳಲು ಹೊರಟು, ಹಿಂದೆ ವಿಚಿತ್ರಾನಂತ ಇತ್ಯಾದಿಗಳಿಂದ ಲೀಲಾವಿಭೂತಿನಾಯಕತ್ವವು ಹೇಳಲ್ಪಟ್ಟದ್ದರಿಂದ ಈಗ ಸ್ವಾಭಿಮತನೆಂದಾರಂಭಿಸಿ ನಿತ್ಯವಿಭೂತಿ ನಿಯಾಮ್ಯತ್ವವು ಉಪದೇಶಿಸಲ್ಪಡುತ್ತದೆ. ಮುಂದೆ ಪರಮಪುರುಷನು ನಿತ್ಯ ಮುಕ್ತರಿಗೆ ಸೇವೆಯನ್ನೀಯುವದಕ್ಕಾಗಿ ಸೃಷ್ಟಿಸ್ಥಿತಿ ಲಯಾದಿಗಳಿಗೆ ಸೇರದೇ ಇರುವ ನಿತ್ಯ ವಿಭೂತಿಯಲ್ಲಿ ಪರವಾಸುದೇವರೂಪದಲ್ಲಿ ದಿವ್ಯಮಙ್ಗಳವಿಗ್ರಹಯುಕ್ತನಾಗಿ ದಿವ್ಯಾಭರಣ ಆಯುಧ ಮಹಿಷೀ ಪರಿಜನಗಳಿಂದ ಯುಕ್ತನಾಗಿ ಅಪ್ರಾಕೃತಶರೀರವನ್ನು ಹೊಂದಿರುವವನೆಂದು ಹೇಳುತ್ತಾರೆ— ಸ್ವಾಭಿಮತ – ತನ್ನ ಇಷ್ಟಕ್ಕೆ, ಅನುರೂಪೈಕರೂಪ - ಅನುಗುಣವಾದ ತನಗೇನೇ ಅಸಾಧಾರಣವಾಗಿ ನಿತ್ಯವಾದ ಮುಖ್ಯರೂಪವನ್ನು ಹೊಂದಿದ, ಮತ್ತು ಅಚಿನ್ತ್ಯ - ಚಿನ್ತಿಸಲು ಅಸಾಧ್ಯವಾದ, ದಿವ್ಯ - ತೇಜೋಮಯವಾದ, ಅದ್ಭುತ - ಆತ್ಯಾಶ್ಚರ್ಯಕರವಾದ, ನಿತ್ಯವಾದ, ನಿರವದ್ಯ - ದೋಷರಹಿತವಾದ, ನಿರತಿಶಯ-ಅದಕ್ಕಿಂತಲೂ ಅತಿಶಯವಾದುದಿಲ್ಲದಿರುವ, ಔಜ್ಜ್ವಲ್ಯ-ಕಾಯಶೋಭೆಯುಳ್ಳ, ಸೌಂದರ್ಯ - ಸೌಂದರ್ಯಾದಿ ಅನನ್ತಗುಣನಿಧಿದಿವ್ಯರೂಪಂ - ಅನೇಕ ಗುಣಗಳಿಗೆ ಮಹೋದಧಿಯಾಗಿರುವ ದಿವ್ಯಮಙ್ಗಳವಿಗ್ರಹವನ್ನು ಹೊಂದಿರುವ, (ಈ ವಾಕ್ಯದ ಉಪಪಾದನೆಗೆ ಅವತಾರಿಕೆಯ ೬ ನೆಯ ಪುಟಗಳನ್ನು ನೋಡಿ,) ಹಾಗೆ ಹಿಂದೆಯೇ ಹೇಳಿದ್ದರೆ, ಈಗ ಹಾಗೆಯೇ ಇಲ್ಲೂ ಹೇಳಿರುವದು ಪುನರುಕ್ತಿಯಾಗುವದಿಲ್ಲವೇ ಎಂದರೆ, ಇಲ್ಲಿ ಮುಂದೆ ಎರಡು ಪಟ್ಟಗಳಿಂದಲೂ ಈಶ್ವರ

ಭಾ. ಸ್ವರೂಪಸ್ವಭಾವಮ್, ಅಪಾರಕಾರುಣ್ಯ ಸೌಶೀಲ್ಯ ವಾತ್ಸಲ್ಯೌದಾರ್ಯ ಮಹೋದಧಿಮ್, ಅನಾಲೋಚಿತ ವಿಶೇಷಾಶೇಷ ಲೋಕಶರಣ್ಯಂ, ಪ್ರಣತಾರ್ತಿ ಹರಮ್,

ತತ್ವವಿಷಯದಲ್ಲಿ ಇವೆಲ್ಲಾ ಹೇಳಲ್ಪಡುತ್ತದೆಂದು ಸೂಚಿಸುವದಕ್ಕಾಗಿ ಮಾಂ ಎಂಬ ಪದದಲ್ಲಿ ಇವೆಲ್ಲಾ ತೋರುತ್ತದೆಂದು ವ್ಯಾಖ್ಯಾನಮಾಡಿರುತ್ತಾರೆ. ಮುಂದೆ ಗೀತೆಯಲ್ಲಿ ಹೇಳಿರುವದೆಲ್ಲಾ ತಮ್ಮಸಿದ್ಧಾಂತವಾದ ವಿಶಿಷ್ಟಾದ್ವೈತಕ್ಕೆ ಅನುಗುಣವಾಗಿದೆಯೇ ವಿನಾ, ಭಾಸ್ಕರ, ಶಾಙ್ಕರ, ಯಾದವ ಪ್ರಕಾಶ, ಮೀಮಾಂಸಕಾದಿ ಸಿದ್ಧಾನ್ತಗಳಿಗೆ ಅನುಗುಣವಾಗಿಲ್ಲವೆಂದು ಹೇಳುವದಕ್ಕಾಗಿಯೂ, ಮಾಂ ಎಂಬ ಶಬ್ದಾರ್ಥವಿವರಣವು. ಮಾಂ ಭಜತೇ ಎಂದಿರುವದರಿಂದ ಉಪಾಸ್ಯ ಉಪಾಸಕ ಭೇದವು ವ್ಯಕ್ತವೆಂದೂ ಉಪಾಸ್ಯನ ಸ್ವರೂಪವೆಂತಾದ್ದೂ ಎಂದು ಮುಂದೆ ಹೇಳುವವನ್ನು ವ್ಯಕ್ತಪಡಿಸುವದಕ್ಕಾಗಿಯೂ ವಿವರಣವು. ಹೀಗೆ ಜಗತ್ಕಾರಣತ್ವ, (೭. ೬) (೭. ೧೦) ಪರತ್ವ (ಗೀ. ೭. ೨೪) ಲೀಲಾ ವಿಭೂತಿ ನಾಯಕತ್ವ,(ಗೀ. ೭. ೭) ಅಪರಿಚ್ಛೇದ್ಯ ಸ್ವರೂಪತ್ವ (ಗೀ. ೭. ೧೩) ಕಲ್ಯಾಣ ಗುಣಾಕರತ್ವ, ಅಖಿಲ ಹೇಯ ಪ್ರತ್ಯನೀಕತ್ವ, ದಿವ್ಯಮಙ್ಗಳವಿಗ್ರಹತ್ವ, (ಗೀ. ೮. ೯, ೭.೨೧) ಸರ್ವಲೋಕ ಶರಣ್ಯತ್ವ, (ಗೀ. ೯. ೧೮)ಇವೆಲ್ಲಾ ಮುಂದೆ ಹೇಳಲ್ಪಟ್ಟಿರುತ್ತವೆ; ಅವುಗಳನ್ನು ಪ್ರಾಪ್ತ ಸ್ಥಳಗಳಲ್ಲಿ ಉಪಪಾದಿಸುವೆವು. ಹೀಗೆ ಜಗತ್ಕಾರಣತ್ವ, ಹೇಯ ಪ್ರತ್ಯನೀಕತ್ವ, ಕಲ್ಯಾಣಗುಣಾಕರತ್ವ, ಉಭಯ ವಿಭೂತಿ ನಾಯಕತ್ವಗಳಿರುವವರಿಂದ ಪರತತ್ವ ಸೂಚಕ ಸ್ವರೂಪ ಸ್ವಭಾವಗಳು ಹೇಳಲ್ಪಟ್ಟವೆಂದು ಉಪದೇಶಿಸುತ್ತಾರೆ. ವಾಙ್ಮನಸೇತಿ-ಅವತಾರಿಕೆಯ ೧೩ನೆಯ ಪುಟವನ್ನು ನೋಡಿ ; ವಾಕ್ಕು ಮನಸ್ಸು ಇವುಗಳಿಂದ, ಇಷ್ಟೆಂದು ಊಹಿಸಲಸಾಧ್ಯವಾದ "ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ" ಎಂದು ಹೇಳಿರುವಹಾಗಿರುವ ಸ್ವರೂಪ ನಿರೂಪಕ ಮತ್ತು ನಿರೂಪಿತ ಸ್ವರೂಪ ವಿಶೇಷಣರೂಪ ಗುಣಗಳುಳ್ಳ ಮಾಂ ಎಂಬ ಭಾವವು. ಇಲ್ಲಿ ಸ್ವರೂಪವು ಈಶ್ವರತ್ವವೇ ಮೊದಲಾದ ಜ್ಞಾನತ್ವಾನಂದತ್ವಾದಿಗಳು; ಸ್ವಭಾವವಾದರೋ ನಿರೂಪಿತ ಸ್ವರೂಪ ವಿಶೇಷಣಗಳು-ದಯಾ, ವಾತ್ಸಲ್ಯ, ಸೌಲಭ್ಯ, ಸೌಶೀಲ್ಯ, ಮೊದಲಾದವುಗಳು. ಇವುಗಳು ಮುಂದೆ ಹೇಳಲ್ಪಡುವುವು. ಪರತ್ವಮಾತ್ರವೇ ಇದ್ದರೆ ಉಪಾಯಾನುಷ್ಠಾನಮೂಲಕ ಪರಮಾತ್ಮನನ್ನು ಆಶ್ರಯಿಸಲು ಅಸಾಧ್ಯವು, ಅಂತವನು ಅರಮನೆಯ ಮೂರನೆಯ ಪ್ರಾಸಾದದಲ್ಲಿರುವ ಚಕ್ರವರ್ತಿಯ ಹಾಗೆ ಆಗುವನು. ಯಾರಿಂದಲೂ ದರ್ಶನೀಯನಲ್ಲವು. ಇಷ್ಟಪ್ರಾರ್ಥನೆಗಾಗಲಿ, ಅನಿಷ್ಟ ನಿವರ್ತನೆಗಾಗಲಿ ಪ್ರಾರ್ಥಿಸಲು ಸಾಧ್ಯನಾಗುವದಿಲ್ಲವು. ಆದುದರಿಂದ ಆಶ್ರಿತನ ವಿಷಯದಲ್ಲಿ ಕಾರುಣ್ಯ, ವಾತ್ಸಲ್ಯ, ಸೌಶೀಲ್ಯಾದಿಗಳುಂಟೆಂದು ಮುಂದೆ ಹೇಳುತ್ತಾರೆ. ಅವತಾರಮಾಡುವವಕ್ಕೂ, ಅವತಾರಕಾಲಗಳಲ್ಲಿ ಸೌಲಭ್ಯ, ಸೌಶೀಲ್ಯಾದಿಗಳಿಗೂ, ಕಾರಣವು ಕಾರುಣ್ಯವೇ; ಈ ಗುಣಗಳ ಅರ್ಥಗಳಿಗೆ ಅವತಾರಿಕೆಯ ೧೮ ನೆಯ ಪುಟವನ್ನು ನೋಡಿ. ಹೀಗೆ ಅವತಾರಕಾಲನಲ್ಲಿ ಈ ಗುಣಗಳು ಭಕ್ತರ ಆಶ್ರಯಣಕ್ಕೆ ಉಚಿತಗಳೇನೋ ಹೌದು. ಆದರೆ ಸರ್ವೇಶ್ವರನು ತನ್ನನ್ನು ಆಶ್ರಯಿಸುವವರಲ್ಲಿ ಕುಲ, ಜಾತಿ, ಪ್ರವೃತ್ತಿ ಮೊದಲಾದವುಗಳ ಸರ್ವೋತ್ಕೃಷ್ಟತೆಯ ತಾರತಮ್ಯವನ್ನೇನಾದರೂ ಎದುರು ನೋಡುವನೋ ? ಎಂದರೆ ಹಾಗೆ ನೋಡುವನಲ್ಲವೆಂದು ತಿಳಿಸುವದಕ್ಕಾಗಿ "ಅಪಾರ" ವೆಂದಾರಂಭಿಸಿ ಹೇಳುತ್ತಾರೆ—ಅನಾಲೋಚಿತ ವಿಶೇಷ - ಆಶ್ರಯಿಸುವವರಲ್ಲಿ ಯಾವುದೊಂದು ವಿಶೇಷವನ್ನೂ ಯೋಚಿಸದೇ ಇರುವ, ವಿಶೇಷಗಳು ಯಾವುವೆಂದರೆ ಜಾತಿ, ಗುಣ, ವೃತ್ತಿ ವಿದ್ಯೆ, ಇವುಗಳಲ್ಲಿರುವ ತಾರತಮ್ಯಗಳು. ಆಶ್ರಿತನಲ್ಲಿ ಇಂತಹ ತಾರತಮ್ಯಗಳನ್ನೂ ಪರ್ಯಾಲೋಚಿಸದೆ ಆಶ್ರಿತರನ್ನೆಲ್ಲಾ ಸಮನಾಗಿ ನೋಡತಕ್ಕಕ್ಕವನೆಂಬ ಭಾವವು. ಹೀಗೆ ಅನಾ

ಲೋಚಿತ ವಿಶೇಷಾಶೇಷ ಲೋಕ ಶರಣ್ಯನಾಗಬೇಕಾದರೆ ಅಪಾರ ಕಾರುಣ್ಯ ಸೌಶೀಲ್ಯಾದಿ ಗುಣಗಳಿರಬೇಕೆಂದು, ಇದನ್ನು ಮೊದಲು ತಿಳಿಸಿ, ಆ ಕಾರಣದಿಂದಲೇ ಅಶೇಷಲೋಕ ಶರಣ್ಯನೆಂದು ಹೇಳಲ್ಪಟ್ಟಿತು. ಅಶೇಷಲೋಕಶರಣ್ಯಂ – ಸಮಸ್ತಲೋಕದ ಶರಣಾಗತರಾದ ಜನರಿಗೂ ರಕ್ಷಕನಾಗಿರುವ ನನ್ನನ್ನು, "ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ । ಸ್ತ್ರಿಯೋ ವೈಶ್ಯಾ ಸ್ತಥಾ ಶೂದ್ರಾ ಸ್ತೇಽಪಿ ಯಾಂತಿ ಪರಾಂಗತಿಂ"(ಗೀ.೯.೩೨) ಎಂಬ, "ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ" (ರಾ. ಯು. ೧೮. ೩೩)ಎಂಬ, "ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಯಾ । ವಿಭೀಷಣೋವಾ ಸುಗ್ರೀವ ಯದಿವಾ ರಾವಣಸ್ಸ್ವಯಂ" (ರಾ. ಯುದ್ಧ. ೧೮. ೩೬) ಎಂಬ, "ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ । ನಿವೇದಯತ ಮಾಂ ಕ್ಷಿಪ್ರಂ ವಿಭೀಷಣ ಮುಪಸ್ಥಿತಂ" ಎಂಬ ಪ್ರಮಾಣಗಳು, ಅನಾಲೋಚಿತ ವಿಶೇಷಾಶೇಷಲೋಕ ಶರಣ್ಯನೆಂಬುದನ್ನು ಸ್ಥಾಪಿಸುತ್ತವೆ. "ನ ಜಾತಿ ಭೇದಂ ನ ಕುಲಂ ನ ಲಿಂಗಂ ನ ಗುಣ ಕ್ರಿಯಾಃ । ನ ದೇಶಕಾಲೌ ನಾವಸ್ಥಾಂ ಯೋಗೋ ಹ್ಯಯಮಪೇಕ್ಷತೇ" ಶರಣಾಗತಿ ರೂಪವಾದ ಈ ಆಶ್ರಯವು ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ಪಂಚಮ ರೂಪ ಜಾತಿಭೇದವನ್ನಾಗಲಿ, ಕುಲದ ಉತ್ತಮಾಧಮ ಸ್ಥಿತಿಯನ್ನಾಗಲಿ, ಸ್ತ್ರೀ ಪುರುಷರೆಂಬ ವ್ಯತ್ಯಾಸವನ್ನಾಗಲಿ, ಗುಣಗಳ ಮತ್ತು ಪ್ರವೃತ್ತಿಗಳ ಗುಣದೋಷಗಳನ್ನಾಗಲಿ, ದೇಶ, ಕಾಲ, ಅವಸ್ಥೆಗಳ ಯುಕ್ತಾಯುಕ್ತತೆಯನ್ನಾಗಲಿ ಅಪೇಕ್ಷಿಸುವದಿಲ್ಲವು," ಎಂದು ಹೇಳಿರುವದರಲ್ಲಿ ತೋರುವ, ಜಾತಿ, ಕುಲ, ಪ್ರವೃತ್ತಿ, ಲಿಂಗಾದಿಗಳೇ, ಅನಾಲೋಚಿತ ವಿಶೇಷ ಎಂಬಲ್ಲಿ ವಿಶೇಷ ಶಬ್ದದಿಂದ ಹೇಳಲ್ಪಟ್ಟವುಗಳು ; ಇವುಗಳ ಉತ್ಕೃಷ್ಟ ವಿಶೇಷಗಳೇಬೇಕು ಎಂದು ತಾನು ಅಪೇಕ್ಷಿಸುವದಿಲ್ಲವು ; ಶರಣಾಗತನು ಈ ವಿಷಯಗಳಲ್ಲಿ ಎಷ್ಟು ನಿಕೃಷ್ಟನಾಗಿದ್ದರೂ ತನಗೆ ಪರಮ ಗ್ರಾಹ್ಯನು ; ಗುಹ, ಶಬರಿ, ಸುಗ್ರೀವ, ಆಂಜನೇಯ ವಿಭೀಷಣ ನಾಗವರಾದಿ ಎಲ್ಲಾ ಭಕ್ತರೂ ಆತನಿಗೆ ಸಮವು; ಇಲ್ಲಿ "ನಿಷಾದಾನಾಂ ನೇತಾ ಕಪಿ ಕುಲಪತಿಃ ಕಾಪಿ ಶಬರೀ । ಕುಚೇಲಃ ಕುಬ್ಜಾ ಸಾ ವ್ರಜಯುವತಯೋ ಮಾಲ್ಯಕೃದಿತಿ । ಅಮೀಷಾಂ ನಿಮ್ನತ್ವಂ ವೃಷಗಿರಿಪತೇರುನ್ನತಮಪಿ ಪ್ರಭೂತೈ ಸ್ಸ್ರೋತೋಭಿಃ ಪ್ರಸಭ ಮನುಕಮ್ಪೇ ಸಮಯಸಿ" ಎಂಬ ನಿಗಮಾಂತದೇಶಿಕರವರ ದಯಾಶತಕಶ್ಲೋಕವು (೬೫) ಅನುಸಂಧೇಯವು. ಹೀಗೆ ಅಪಾರ ಕಾರುಣ್ಯಾದಿ ಗುಣಗಳಿರುವದರಿಂದಲೇ ಅನಾಲೋಚಿತವಿಶೇಷಾಶೇಷ ಲೋಕಶರಣ್ಯನೆಂಬ ಭಾವವು ; ಹೀಗಿರುವದರಿಂದಲೇ ಪ್ರಣತಾರ್ತಿಹರನೆಂದು ಮುಂದೆ ಹೇಳುತ್ತಾರೆ. ಈ ಪ್ರಣತಾರ್ತಿಹರತ್ವವೇ ಗೀತಾಚರಮಶ್ಲೋಕದಲ್ಲೂ, ತಮೇವ ಶರಣಂಗಚ್ಛ ಎಂಬ (ಗೀ. ೧೮.೬೨) ಶ್ಲೋಕದಲ್ಲೂ, ಉಪಪಾದಿತವಾಗಿರುವದು. ಆದುದರಿಂದ ಅಂತಹ ಮಾಂ ಎಂಬ ಭಾವವು; ಶರಣ್ಯನು ಎಂದು ಹೇಳಿರುವದರಿಂದ ಯೇಽಪಿಸ್ಯುಃ ಪಾಪಯೋನಯಃ ಎಂದು ಹೇಳಿರುವ ಹಾಗೆ ಸಮಸ್ತರಾದ ಆಶ್ರಿತರು ಅಪರಾಧ ಚಕ್ರವರ್ತಿಗಳಾದರೂ ಕೂಡ ಗ್ರಾಹ್ಯರೇ ಎಂಬ ಭಾವವು ತೋರಿಬರುತ್ತದೆ. ಆದುದರಿಂದಲೇ ಪ್ರಣತಾರ್ತಿಹರಮ್ ಎಂಬ ಪ್ರಯೋಗವು. ಯಾವಾಗ ಪ್ರಣತನಾಗಿ ಎಂದರೆ ನಮಸ್ಕರಿಸಿ ಶರಣಾಗತಿಯನ್ನು ಮಾಡಿದನೋ,ಆಗ ಆತನ ಆರ್ತಿ, ದುಃಖಗಳನ್ನು ಹೋಗಲಾಡಿಸುವವನು ; ಆಗಲಿ, ಶರಣಾಗತಿಯನ್ನೇನೋ ಮಾಡಬಹುದು ಹಿಂದಿನ ಪಾಪಗಳ ಮೂಲಕ ಉಂಟಾದ ಅಲ್ಪಗಳಾದ ಆರ್ತಿಗಳನ್ನೇನೋ ಹೋಗಲಾಡಿಸಬಹುದು, ಆದರೆ ಪಾಪಗಳ ಭೂಯಸ್ತ್ವವಿದ್ದರೆ ಆಗ ಹೇಗೆ ಎಲ್ಲಾ ಆರ್ತಿಗಳನ್ನು ಹೋಗಲಾಡಿಸುವನು ಎಂಬೇನಾದರೂ ಸಂದೇಹ ತೋರಿದರೆ, ಹಾಗೆ ಸಂದೇಹಕ್ಕೆ ಕಾರಣವಿಲ್ಲವು;

ಭಾ. ಆಶ್ರಿತ ವಾತ್ಸಲ್ಯೈಕ ಜಲಧಿಮ್, ಅಖಿಲಮನುಜ ನಯನ ವಿಷಯತಾಂಗತಮ್,

ಏಕೆಂದರೆ ತಾನು ಆಶ್ರಿತವಾತ್ಸಲ್ಯೈಕ ಜಲಧಿ" ಎಂದು ಹೇಳಿಕೊಳ್ಳುತ್ತಾರೆ. ಆಶ್ರಿತನಲ್ಲಿ ಎಷ್ಟೇ ದೋಷಗಳೇ ಇರಲಿ, ಧೇನುವು ಆಗತಾನೇ ಹಾಕಿದ ಕರುವಿನ ಶರೀರವು ಮಲಯುಕ್ತವಾಗಿದ್ದರೂ ಪರಿಗಣಿಸದೇ ಅದನ್ನು ನೆಕ್ಕಿ ಹಾಲನ್ನು ಸುರಿಸುವ ಹಾಗೆ, ಈ ಆಶ್ರಯಿಸಿದವನಲ್ಲಿ ಅಂತಹ ವಾತ್ಸಲ್ಯಕ್ಕೆ ಮುಖ್ಯವಾದ ಸಮುದ್ರದಂತಿರುವವನು, ಆತನು ತನ್ನನ್ನು ಆಶ್ರಯಿಸಿದ ನಂತರ "ನ ಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ"(ರಾ. ಅ. ೧.೧೧) ಎಂದು ಹೇಳಿರುವಹಾಗೆ ವಾತ್ಸಲ್ಯೈಕ ಜಲಧಿಯು ಎಂಬ ತಾತ್ಪರ್ಯವು; ಅಂತಹ ನನ್ನನ್ನು ಎಂಬ ಭಾವವು. ಆದರೆ ಹಿಂದಿನ ವಾಕ್ಯವಾದ " ಅಪಾರಕಾರುಣ್ಯ ಸೌಶೀಲ್ಯ ವಾತ್ಸಲ್ಯ " ವೆಂದು ವಾತ್ಸಲ್ಯಗುಣವು ಹೇಳಲ್ಪಟ್ಟಿರುವಾಗ, ಪುನಃ ವಾತ್ಸಲ್ಯ ಗುಣನಿರೂಪಣೆಯು ಪುನರುಕ್ತಿಯಲ್ಲವೋ ? ಎಂದರೆ ಪ್ರಾಣಿವರ್ಗದಲ್ಲೆಲ್ಲಾ ಪುತ್ರವಾತ್ಸಲ್ಯವೂ ಸಾಮಾನ್ಯವಾಗಿದ್ದರೂ, ಪ್ರಪನ್ನರಾಗಿ ವಿಶೇಷ ಭಕ್ತಿಯನ್ನು ಹಿಂದಿನ ಜನ್ಮಗಳಲ್ಲೂ, ಈಗಲೂ, ಮಾಡಿರುವದರಿಂದ ಅವರ ಮನೋರಥಗಳನ್ನು ಪೂರ್ಣಮಾಡುವದಕ್ಕಾಗಿ ವಿಶೇಷವಾಗಿ ಅಂತವರಿಗೆ ಹೆಚ್ಚು ವಾತ್ಸಲ್ಯವನ್ನು ತೋರುವದಕ್ಕಾಗಿಯೇ, ಅವತಾರಗಳಾದುದರಿಂದ, ಹಾಗೆ ವಿಶೇಷ ವಾತ್ಸಲ್ಯವನ್ನು ಗೋಪಿಕಾಸ್ತ್ರೀಯರಲ್ಲೂ, ಗೋಪಾಲರಲ್ಲೂ, ಅಕ್ರೂರೋದ್ಧವ ವಿದುರಾದಿಗಳಲ್ಲೂ, ತೋರಿಸಿರುವದರಿಂದ, ಈ ಎರಡನೆಯ ಸಲ ಪ್ರಯೋಗವೆಂದು ಭಾವಿಸತಕ್ಕದ್ದು. ಹಾಗೆಯೇ ಮಹರ್ಷಿಯೂ ಒಂದೆರಡು ಕಡೆಯಲ್ಲಿ ಪ್ರಯೋಗಿಸಿರುವ ನಿದರ್ಶನಗಳುಂಟು. . ವಿದಿತ ಸ್ಸಹಿಧರ್ಮಜ್ಞಶ್ಶರಣಾಗತ ವತ್ಸಲಃ। ತೇನ ಮೈತ್ರೀ ಭವತು ತೇ ಯದಿ ಜೀವಿತು ಮಿಚ್ಛಸಿಪ್ರಸಾದಯಸ್ವತ್ವಂ ಚೈನಂ ಶರಣಾಗತ ವತ್ಸಲಂಮಾಂ ಚಾಸ್ಮೈ ಪ್ರಯತೋಭೂತ್ವಾನಿರ್ಯಾತಯಿತುಮರ್ಹಸಿ"(ರಾ.ಸುಂ. ೨೧-೨೦, ೨೧) ಎಂಬಲ್ಲಿ ಮೊದಲಿನ "ಶರಣಾಗತ ವತ್ಸಲಃ" ಎಂಬುದರಿಂದ ಸಾಮಾನ್ಯವಾಗಿ ಆಶ್ರಯಣೋಚಿತ ವಾತ್ಸಲ್ಯವನ್ನು ಸೀತೆಯು ಹೇಳಿ, ಅನಂತರ ರಾವಣನಿಗೆ ಉಪದೇಶಿಸುತ್ತಾಳೆ, ನೀನು ಶರಣಾಗತನಾಗಿ ನನ್ನನ್ನು ಶ್ರೀರಾಮನಿಗೆ ಸಮರ್ಪಿಸಿದುದಾದರೆ ವಿಶೇಷ ವಾತ್ಸಲ್ಯವನ್ನು ನಿನ್ನಲ್ಲಿ ತೋರುವನೆಂದು ತಿಳಿಸುತ್ತಾಳೆ. ಹಾಗೆಯೇ ಇನ್ನೊಂದು ಕಡೆಯಲ್ಲೂ " ರಕ್ಷಿತಾ ಜೀವಲೋಕಸ್ಯ ಸ್ವಜನಸ್ಯ ಚ ರಕ್ಷಿತಾ " ಎಂಬ ಪ್ರಯೋಗವನ್ನೂ ಮಹರ್ಷಿಯು ಮಾಡಿರುತ್ತಾರೆ. ಮೊದಲನೆಯ ರಕ್ಷಿತಾ ಶಬ್ದದಿಂದ ಸಾಮಾನ್ಯವಾಗಿ ಎಲ್ಲಾ ವಿಧವಾದ ಆಶ್ರಿತರಿಗೆ ಅವರಿಗೆ ಬೇಕಾದ ಇಷ್ಟಪ್ರದಾನರೂಪರಕ್ಷಣೆಯೂ, ಎರಡನೆಯ ರಕ್ಷಿತಾ ಎಂಬುವದರಿಂದ, ಮೋಕ್ಷಾಕಾಂಕ್ಷೆಯುಳ್ಳ ಶರಣಾಗತನಾದ ಪ್ರಪನ್ನನ ನಿರತಿಶಯ ಸುಖ ಪ್ರದಾನರೂಪವಾದ ವಿಶೇಷ ರಕ್ಷಣೆಯೂ ಹೇಳಲ್ಪಟ್ಟವು. ಆದುದರಿಂದ ಪುನರುಕ್ತಿಗೆ ಅವಕಾಶವಿಲ್ಲವು.

ಸರ್ವೇಶ್ವರನು ಬಹೂನಿ ಮೇ ವ್ಯತೀತಾನಿ ಜನ್ಮಾನಿ " ಎಂದು ಹೇಳಿಕೊಂಡಿರುವ ಹಾಗೆ ಅನೇಕಾವತಾರಗಳನ್ನೆತ್ತಿದ್ದರೂ, ಮನುಷ್ಯಾವತಾರಗಳಾದ ರಾಮಕೃಷ್ಣಾವತಾರಗಳಲ್ಲಿ ಮನುಷ್ಯರಾದ ನಮಗೆ, ನಮ್ಮೊಂದಿಗೇನೇ ಇದ್ದುಕೊಂಡು, ತನ್ನ ದಿವ್ಯ ಚೇಷ್ಟಿತಗಳ ಮೂಲಕ ಸದ್ಧರ್ಮೋಪದೇಶಗಳನ್ನು ಮಾಡುತ್ತಾ, ಎಷ್ಟು ನೀಚನಾದ ಮನುಷ್ಯನೇ ಆಗಲಿ, ಆತನಿಗೂ ಕೂಡ ದೃಗ್ಗೋಚರನಾಗಿ ತನ್ನ ಸೌಲಭ್ಯ ಸೌಶೀಲ್ಯಗುಣಗಳನ್ನು ಪ್ರದರ್ಶಿಸಿರುವ ಮಾಹಾತ್ಮ್ಯೆಯನ್ನು ಮುಂದಿನ ವಿಶೇಷಣದಿಂದ ಕೊಂಡಾಡುತ್ತಾರೆ. **ಅಖಿಲಮನುಜ** - ಆ ಕಾಲದ ಸಮಸ್ತ ಮನುಷ್ಯರ, **ನಯನ** - ಕಣ್ಣುಗಳಿಗೆ, **ವಿಷಯತಾಂ ಗತಮ್** - ವಿಷಯವಾಗಿರೋಣವನ್ನು ಹೊಂದಿದವನನ್ನು, ಹೀಗೆ ಪಾಮರರ ಕಣ್ಣುಗಳಿಗೂ ಗೋಚರನಾಗಿರುವದು ಆತನ ಸೌಲಭ್ಯ

ಭಾ. ಅಜಹತ್ಸ್ವಸ್ವಭಾವನ್, ವಸುದೇವಗೃಹೇವತೀರ್ಣಂ, ಅನನಧಿಕಾತಿಶಯತೇಜಸಾ

ವನ್ನು ಸೂಚಿಸುತ್ತದೆ. ಇಲ್ಲಿನ **ನಯನವಿಷಯತಾಂ ಗತಮ್** " ಎಂಬುದರಲ್ಲಿ ಆತನೊಂದಿಗೆ ಸರಸಸಲ್ಲಾಪಗಳು, ಅವರಿಂದ ಮಾಡಲ್ಪಟ್ಟ ಕೈಂಕರ್ಯಗಳ ಪರಿಗ್ರಹಿಸೋಣವೇ ಮೊದಲಾದವು ಗಳೆಲ್ಲಾ ಅಂತರ್ಗತವು. ನಯನ ವಿಷಯತಾಂ ಗತಮ್ ಎಂಬುವವರಿಂದ ಆತನ ದಿವ್ಯಚೇಷ್ಟಿತ ಗಳ ಶ್ರೋತೃ ವಿಷಯತಾಂಗತಮ್ ಎಂಬುವವಕ್ಕೂ ಸಹ ಉಪಲಕ್ಷಣವೆಂದು ಭಾವಿಸತಕ್ಕದ್ದು. ಮೊದಲನೆಯ ಭಾಗ್ಯವು ಆ ಕಾಲದವರಿಗೆ ಮಾತ್ರವೇ ಆದರೂ, ಈ ಎರಡನೆಯ ಭಾಗ್ಯವು ಸಾರ್ವಕಾಲಿಕವಾಗಿ ನಮ್ಮೆಲ್ಲರಿಗೂ ಉಂಟೆಂದು ಭಾವಿಸತಕ್ಕದ್ದು. ಇಲ್ಲಿ ಅಖಿಲ ಮನುಜ ಎಂಬ ಶಬ್ದಕ್ಕೆ ಆ ಕಾಲದ ಮನುಷ್ಯರಿಗೆ ಎಂದು ಸಙ್ಕುಚಿತಾರ್ಥವನ್ನು ಹೇಳಿದೆವು. ಹಾಗಲ್ಲದೆ ಈಗಿನ ವಸ್ತು ಸಾರ್ವಕಾಲಿಕ ಮನುಜರು ಎಂದು ಅರ್ಥಮಾಡಲೂ ಅಭ್ಯಂತರವಿಲ್ಲವು; ಹೇಗೆಂದರೆ,ಆ ಕೃಷ್ಣಾವತಾರದ ದಿವ್ಯಾಕೃತಿಯಹಾಗೆ ದಾರು ಶಿಲೆ ಲೋಹಾದಿಗಳಿಂದ ಮಾಡಲ್ಪಟ್ಟ ವಿಗ್ರಹಗಳಿಗೆ ಪಾಂಚರಾತ್ರಾಗಮ ಪ್ರಕ್ರಿಯೆಯಿಂದ ಪ್ರತಿಷ್ಠಾರೂಪಸಂಸ್ಕಾರವನ್ನು ಮಾಡಿದರೆ, ಅಂತಹ ಬಿಂಬಗಳನ್ನು ಸಂಪೂರ್ಣವಾಗಿ ವ್ಯಾಪಿಸಿ, ಅದರ ಹಾಗೆಯೇ ಬಿಂಬಾಕೃತಿಯನ್ನು ಹೊಂದುವನೆಂಬುದು ಸಾತ್ವತ ಸಂಹಿತೆ, ವಿಷ್ಣುಧರ್ಮಪ್ರಮಾಣಗಳಿಂದ ವ್ಯಕ್ತವಾದುದರಿಂದ, ಈಗಲೂ ಸಮಸ್ತ ಮನುಜನಯನವಿಷಯತಾಂಗತಮ್ ಎಂದು ಅರ್ಥಮಾಡಬಹುದು; ಇದುವರೆಗೂ ಅನೇಕ ಕೃಷ್ಣಾವತಾರಗಳೂ ಹಾಗೆಯೇ ಇತರ ಅವತಾರಗಳೂ ನಡೆದಿರುವದರಿಂದ, ಪ್ರತ್ಯಕ್ಷನಾಗಿಯೂ, ದೇವಾಲಯಗಳಲ್ಲೂ,ಹಿಂದಿನ ಕಾಲಗಳಲ್ಲೂ,ಮನುಜರ ನಯನ ವಿಷಯತಾಂ ಗತನಾಗಿಯೂ ಇದ್ದಿರಬೇಕೆಂಬುದು ತೋರಿಬರುವದರಿಂದ ತ್ರಿಕಾಲದಲ್ಲೂ ಸಾರ್ವತ್ರಿಕವಾಗಿ ಅಖಿಲ ಮನುಜನಯನ ವಿಷಯತಾಂ ಗತಂ ಎಂಬ ಪ್ರಯೋಗವು ಅನ್ವಯಿಸುತ್ತದೆಂದು ಭಾವಿಸಬಹುದು. ಆದರೆ ಈಗ ಮಾಂ ಶಬ್ದದಲ್ಲಿ ತೋರಿಬರುವ ಅರ್ಥವಾದರೋ, ಆ ಕಾಲದ ಮನುಜರಿಗೆ ಮಾತ್ರವೇ ಎಂಬುದು ವ್ಯಕ್ತವು.

ಹೀಗೆ ಮನುಷ್ಯರೂಪಗಳಿಂದ ಅವತರಿಸಿದರೂ, ಅವತಾರ ರಹಸ್ಯೋಪದೇಶದಲ್ಲಿ ಹೇಳ ಲ್ಪಟ್ಟ ತನ್ನ ಪರತ್ವ ಸೂಚಕಸ್ವಭಾವಗಳನ್ನೂ, ತನ್ನ ದಿವ್ಯಮಙ್ಗಳ ವಿಗ್ರಹ ಸ್ವರೂಪವನ್ನೂ ಆಗಲೂ ಕೌಸಲ್ಯಾ ದೇವಕೀ ಇವರುಗಳ ಗರ್ಭದಲ್ಲಿ ಜನಿಸಿದರೂ ಎಂದಿಗೂ ಬಿಡದೇ ಇರುವವನೆಂದು ಮುಂದಿನ ವಿಶೇಷಣದಿಂದ ಹೇಳುತ್ತಾರೆ. ಸಾಧಾರಣ ಮನುಷ್ಯರ ಹಾಗೆ ಕಷ್ಟ ದುಃಖಗಳನ್ನು ಅನುಭವಿಸುತ್ತಾರಲ್ಲಾ, ಎಂದರೆ ಲೋಕವಿಡಂಬನಾರ್ಥವಾಗಿ ಎಂದು ಭಾವಿಸತಕ್ಕದ್ದು. ಅಜಹತ್ಸ್ವಸ್ವಭಾವನ್-ಅವತಾರಕಾಲದಲ್ಲಿ ಹೇಯವಾದ ಈ ಪ್ರಕೃತಿಮಂಡಲ ಸಂಬಂಧವಿದ್ದರೂ ಸರ್ವೇಶ್ವರನಾದುದರಿಂದ, ತನಗಿರುವ ಉತ್ಕೃಷ್ಟ ಸ್ವರೂಪಸ್ವಭಾವಗಳನ್ನು ಸ್ವಲ್ಪವೂ ತ್ಯಜಿಸದಿರುವ, ವಸುದೇವಗೃಹೇವತೀರ್ಣಂ-ವಸುದೇವನ ಮನೆಯಲ್ಲಿ ಅವತರಿಸಿ ರುವ ವಸುದೇವನಮನೆಯಲ್ಲಿ ಅವತರಿಸುವಾಗಲೂ "ತಮದ್ಭುತಂ ಬಾಲಕಮಂಬುಜೇಕ್ಷಣಂ" (ಭಾಗ. ೧೦. ೩.೯) ಎಂಬ ಅವರೋಘ ಶ್ಲೋಕದಲ್ಲಿ ಹೇಳಿರುವ ಹಾಗೆ ತನ್ನ ಪರತ್ವಸೂಚಕವಾದ ದಿವ್ಯಾದ್ಭುತಮಙ್ಗಳರೂಪವನ್ನೇ ಧರಿಸಿ ಅವತರಿಸಿದವನೆಂದೂ "ಉಪಸಂಹರ ವಿಶ್ವಾತ್ಮನ್" ಎಂದು ದೇವಕೀದೇವಿಯಿಂದ ಪ್ರಾರ್ಥಿಸಲ್ಪಟ್ಟ ನಂತರ "ಬಭೂವ ಪ್ರಾಕೃತಶ್ಶಿಶುಃ" ಪ್ರಾಕೃತ ಶಿಶುರೂಪದಹಾಗೆ ಆದನೆಂದು ಹೇಳಲ್ಪಟ್ಟಿರುತ್ತದೆ. ಭಗವದವತಾರವು ಪೃಥಿವಿಯಲ್ಲಿರುವಾಗ ಪೃಥಿವಿಯ ಮಹೋನ್ನತಿಯು ಅನಿರ್ವಚನೀಯವಾದುದೆಂದು ತಿಳಿಸುತ್ತಾರೆ. ಈ ಅಜಹತ್ಸ್ವಸ್ವ ಭಾವನ್ ಎಂಬ ಪ್ರಯೋಗದಿಂದ ನಾಲ್ಕನೆಯ ಅಧ್ಯಾಯಾದಿಯಲ್ಲಿ ಹೇಳಲ್ಪಟ್ಟ, ಸರ್ವೇಶ್ವರನ

ಭಾ. ನಿಖಿಲಂಜಗದ್ಭಾಸಯಂತಮ್, ಆತ್ಮಕಾನ್ತ್ಯಾ ವಿಶ್ವಮಾಪ್ಯಾಯಯನ್ತಮ್, ಭಜತೇ-

ಅವತಾರರಹಸ್ಯವಿಷಯವಾದ ಐದು ಶ್ಲೋಕಗಳ ಅರ್ಥವೆಲ್ಲಾ ಸಙ್ಗ್ರಹೀತವೆಂದು ಭಾವಿಸ ತಕ್ಕದ್ದು. ಏಕೆಂದರೆ ಮುಂದೆ ವಸುದೇವಗೃಹೇ ಅವತೀರ್ಣಂ ಎಂದಿರುವದರಿಂದ ಆ ಅಭಿಪ್ರಾಯವೆಲ್ಲಾ ಸ್ಮಾರಿತವು. ಅನವಧಿಕಾತಿಶಯ ತೇಜಸಾ – ಅವಧಿಯಿಲ್ಲದ ಅತಿಶಯವುಳ್ಳ ದಿವ್ಯ ತೇಜಸ್ಸಿನಿಂದ, ನಿಖಿಲ ಜಗದ್ಭಾಸಯಂತಂ – ಸಮಸ್ತ ಜಗತ್ತನ್ನೂ ಪ್ರಕಾಶಿಸುವ ಹಾಗೆ ಮಾಡುವ, ಆತ್ಮಕಾನ್ತ್ಯಾ – ಸ್ವಕೀಯ ತನ್ನ ದೇಹದ ರಮಣೀಯತ್ವದಿಂದ, ವಿಶ್ವಮಾಪ್ಯಾಯಯನ್ತಮ್–ವಿಶ್ವದ ಸಕಲ ತಾಪಗಳನ್ನೂ ಹೋಗಲಾಡಿಸುವಂತಹ, ಮಾಂ-ನನ್ನನ್ನು ಎಂಬರ್ಥವು. ಕಾನ್ತ್ಯಾ ವಿಶ್ವಮಾಪ್ಯಾಯಯನ್ತಂ ಎಂಬ ಪ್ರಯೋಗವು ಸಾತ್ವತ ಸಂಹಿತಾಪ್ರಯೋಗವನ್ನು ಜ್ಞಾಪಿಸುತ್ತದೆ.—"ಅನೌಪಮ್ಯೇನ ವಪುಷಾ ಹ್ಯಮೂರ್ತ್ತೋ ಮೂರ್ತ್ತತಾಂಗತಃ। ಮಾಪ್ಯಾಯಯನ್ಕಾನ್ತ್ಯಾ ಪೂರ್ಣೇಂದ್ವಯುತ ತುಲ್ಯಯಾ." ಶ್ರೀ ರಾಮರಾಜ್ಯದಲ್ಲಿ "ರಾಮಮೇವಾನುಪಶ್ಯನ್ತೋ ನಾಭ್ಯಹಿಂಸನ್ ಪರಸ್ಪರಂ" (ಶ್ರೀರಾಮಪಟ್ಟಾಭಿಷೇಕ ಸರ್ಗ) ಶ್ರೀರಾಮನ ಸಾನ್ನಿಧ್ಯದಿಂದ ಪರಸ್ಪರವಾಗಿ ಅಸೂಯೇ ದ್ವೇಷ, ಹಿಂಸೆ ಯಾವುವೂ ಇಲ್ಲದೆ, ಅತ್ಯಂತ ಮೈತ್ರಿಯೂ, ಸುಖವೂ ಇತ್ತೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರೀಕೃಷ್ಣನು ಪೃಥಿವಿಯಲ್ಲಿರುವವರೆಗೂ ಆತನ ಪ್ರಭಾವದಿಂದ ಸರ್ವವಿಧ ಸುಖವಿತ್ತೆಂದೂ ಆತನ ಅವತಾರ ಸಮಾಪ್ತಿಯಾದ ಒಡನೆಯೇ ಈ ಲೋಕದಲ್ಲಿ ತೇಜಸ್ಸು ಬಲ ಮೊದಲಾದವೆಲ್ಲಾ ಉಪಸಂಹೃತಿಯನ್ನು ಹೊಂದಿದವೆಂದು ಹೇಳಲ್ಪಟ್ಟಿರುತ್ತದೆ. ಕಲಿಪುರುಷನ ಹಾವಳಿಯೇ ಆಗ ಇರಲಿಲ್ಲವೆಂದೂ, ಪರೀಕ್ಷಿದ್ರಾಜನ ಕಾಲದಲ್ಲಿ ಆ ಹಾವಳಿಯು ಅಙ್ಕುರಿಸಿ ಪ್ರಬಲವಾಗುತ್ತಾ ಬಂದು, ಈಗಲಾದರೋ ಅದು ಮಿತಿಮೀರುತ್ತಾ ಹೋಗುತ್ತಲಿದೆ. ಈಗಿನ ಅಧರ್ಮಯುದ್ಧಗಳೂ ಕೊಲೆಗಳೂ ಪ್ರಜೆಗಳ ಕ್ಷೋಭೆಯೂ ಎಲ್ಲವನ್ನೂ ಪರ್ಯಾಲೋಚಿಸಿದರೆ ಮನುಷ್ಯನು ಎಷ್ಟು ಕ್ರೂರಕರ್ಮಿಯಾಗಬಹುದು ಎಂಬುದು ತೋರಿಬರುತ್ತದೆ. ಆ ಕಾಲವಲ್ಲಾದರೋ, ರಾಕ್ಷಸನಾದ ಕಾಲಯವನನೂಕೂಡ ತನ್ನ ಶತ್ರುವಾದ ಕೃಷ್ಣನು ನಿರಾಯುಧನಾಗಿ ಯುದ್ಧಕ್ಕೆ ಬಂದುದರಿಂದ ತಾನೂ ನಿರಾಯುಧನಾಗಿಯೇ ಯುದ್ಧಕ್ಕೆ ಬಂದನೆಂದು ಹೇಳಲ್ಪಟ್ಟಿರುತ್ತದೆ. ಈಗಲಾದರೋ ಯುದ್ಧದಲ್ಲಿ ಏರೋಪ್ಲೇನುಗಳಿಂದ ಬಾಂಬುಗಳನ್ನು ಹಾಕಿ ನಿರಪರಾಧಿಗಳಾದ ವೃದ್ಧ, ಸ್ತ್ರೀ, ಬಾಲರನ್ನೆಲ್ಲಾ ಕೊಂದುಬಿಡುವ ಕಾಲವಾಗಿರುತ್ತದೆ. ರೈಲ್ವೆ ಅಧಿಕಾರಿಗಳು ತಮ್ಮಿಷ್ಟಾನುಸಾರ ಸಂಬಳವನ್ನು ಹೆಚ್ಚಿಸದಿದ್ದರೆ, ರೈಲುಕಂಬಿಯನ್ನು ಕಿತ್ತುಹಾಕಿಬಿಟ್ಟು, ಒಳಗಿರುವ ನಿರಪರಾಧಿಗಳಾದ ಪ್ರಯಾಣಿಕರಿಗೆ ಅನಿರ್ವಚನೀಯ ವಿಘಾತಗಳನ್ನುಂಟುಮಾಡುವ ಕಾಲವಾಗಿರುತ್ತದೆ. ಅವರೆ ಆ ಪರಮಪುರುಷನ ದೇವಾಲಯದ, ಮತ್ತು ತದೀಯರಾದ ಋಷಿಗಳೇ ಮೊದಲಾದವರ ಸಾನ್ನಿಧ್ಯವಿದ್ದರೆ ಇಂತಹ ದುಷ್ಟಪ್ರವೃತ್ತಿಗಳು ನಡೆಯುವುದಿಲ್ಲವು. ಋಷ್ಯಾಶ್ರಮಗಳಲ್ಲಿ ಘಾತುಕಮೃಗಗಳೂ ಪರಮ ಮೈತ್ರಿಯಿಂದ ಇದ್ದವೆಂಬ ಕವಿವರ್ಣನೆಯಲ್ಲಿ ಏನೂ ಅತಿಶಯೋಕ್ತಿ ಇಲ್ಲವು; ಆದುದರಿಂದ "ಆತ್ಮಕಾನ್ತ್ಯಾ ವಿಶ್ವಮಾಪ್ಯಾಯ ಯನ್ತಮ್" ಎಂಬುದರಲ್ಲಿ ವಿಶೇಷಾರ್ಥಗರ್ಭಿತವಾಗಿರುತ್ತದೆ. ಹಾಗೆಯೇ ಶ್ರೀರಾಮಾಯಣದಲ್ಲೂ "ವಿಷಯೇತೇ ಮಹಾರಾಜ ರಾಮವ್ಯಸನ ಕರ್ಶಿತಾಃ। ಅಪಿವೃಕ್ಷಾಃ ಪರಿಮ್ಲಾನಾಸ್ಸಪುಷ್ಪಾಙ್ಕುರ ಕೋರಕಾಃ। ಉಪತಪ್ತೋದಕಾ ನದ್ಯಃ ಪಲ್ವಲಾನಿ ಸರಾಂಸಿ ಚ" (ರಾ. ಅ. ೭೯-೮, ೯) ಶ್ರೀರಾಮಸಾನ್ನಿಧ್ಯವಿಲ್ಲದುದರಿಂದ ಒಳ್ಳೇ ಪುಷ್ಪಕಾಯಿ ಹಣ್ಣುಗಳ ಸಮೃದ್ಧಿಯುಳ್ಳ ಮರಗಳು ಒಣಗಿಹೋದವೆಂದೂ, ನದಿಗಳೂ, ಸರಸ್ಸುಗಳೂ ಸಹ ಜಲವಿಲ್ಲದೆ ಶೋಷಿಸಿಹೋದವೆಂದೂ, ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರೀರಾಮನು ೧೪ ವರ್ಷಗಳು ಕಳೆದನಂತರ ಹಿಂತಿರುಗಿ

ಭಾ. ಸೇವತೇ, ಉಪಾಸ್ತೇ ಇತ್ಯರ್ಥಃ, ಸ ಮೇ ಯುಕ್ತತಮೋ ಮತಃ – ಸ ಸರ್ವೇಭ್ಯಶ್ಶ್ರೇಷ್ಠತಮ ಇತಿ ಸರ್ವಂ ಸರ್ವದಾ ಯಥಾವಸ್ಥಿತಂ ಸ್ವತ ಏವ ಸಾಕ್ಷಾತ್ಕುರ್ವನ್ ಅಹಂ ಮನ್ಯೇ ॥೪೭॥

ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ ಷಷ್ಠೋಽಧ್ಯಾಯಃ

ಶ್ರೀಮತೇ ರಾಮಾನುಜಾಯ ನಮಃ

---

ಅಯೋಧ್ಯೆಗೆ ಬಂದಾಗ ನಿತ್ಯಪುಷ್ಪಾ ನಿತ್ಯಫಲಾಃ ಸ್ತರವಸ್ಸ್ಕಂಧವಿಸ್ತೃತಾಃ। ಕಾಲೇ ವರ್ಷೀ ಚ ಪರ್ಜನ್ಯ ಸ್ಸುಖಸ್ಪರ್ಶಶ್ಚ ಮಾರುತಃ” ಎಂದು ಹೇಳಲ್ಪಟ್ಟಿರುತ್ತದೆ. ಇವೆಲ್ಲಾ “ಆತ್ಮಕಾನ್ತ್ಯಾ ವಿಶ್ವಮಾಪ್ಯಾಯಯನ್ತಂ ಎಂಬುದರ ನಿದರ್ಶನವಾಗಿರುತ್ತದೆ. ಇಲ್ಲಿ ಮುಖ್ಯವಾಗಿ ಶ್ರೀಕೃಷ್ಣನ ದಿವ್ಯಮಙ್ಗಳವಿಗ್ರಹದ ಮಾಹಾತ್ಮ್ಯೆಯನ್ನು ತಿಳಿಸಿದುದು, ಮುಂದೆ ಹೇಳುವ ಭಕ್ತಿಯೋಗದ ಉಪಾಸನಾ ಪ್ರವೃತ್ತಿಯಲ್ಲಿ, ಅದಕ್ಕಿರುವ ಉಪಾಸಕನ ಮನಸ್ಸನ್ನು ಆಕರ್ಷಿಸುವ ಶಕ್ತಿಯುಂಟೆಂದು ಭಾವದಿಂದ ಎಂಬ ತಾತ್ಪರ್ಯವು. ಇಂತಹ, ಮಾಂ-ನನ್ನನ್ನು, ಯಾರು, ಭಜತೇ ಎಂದರೆ ಧಾತ್ವರ್ಥದ ಪ್ರಕಾರ ಸೇವತೇ-ಸೇವಿಸುತ್ತಾನೋ ಎಂದರೆ ಪ್ರಕರಣಾನುಗುಣವಾಗಿ, ಉಪಾಸ್ತೇ ಇತ್ಯರ್ಥಃ–ಉಪಾಸನೆಮಾಡುತ್ತಾನೋ ಎಂಬಭಿಪ್ರಾಯವು, ಸಃ - ಅಂತಹ ಯೋಗಿಯು, ಸರ್ವೇಭ್ಯಃ – ಯೋಗಿನಾಮಪಿ ಸರ್ವೇಷಾಂ ಎಂದು ಹೇಳಿರುವದರಿಂದ ನಾಲ್ಕುವಿಧ ಯೋಗಿಗಳು ತಪಸ್ವಿ ಮೊದಲಾದವರು ಇವರೆಲ್ಲರಿಗಿಂತಲೂ, ಶ್ರೇಷ್ಠ ತಮಃ ಇತಿ - ಆತ್ಮೋಪಾಸಕನಿಗಿಂತ, ಅಙ್ಗ ಯಾವ ಉಪಾಸನೆಯನ್ನು ಮಾಡುವನು ಅತ್ಯಂತ ಶ್ರೇಷ್ಠನೆಂದು, ಅಹಂ ಮನ್ಯೇ - ಶ್ರೀಕೃಷ್ಣನಾದ ನಾನು ತಿಳಿಯುತ್ತೇನೆ ; ಈ ನಿನ್ನ ಅಭಿಪ್ರಾಯವು ; ಹೇಗೆ ವಿಶ್ವಾಸಕ್ಕೆ ಯೋಗ್ಯವೆಂದು ಕೇಳುತ್ತೀಯೋ ? ಎಂದರೆ, ಸರ್ವಂ - ಸಮಸ್ತವನ್ನು, ಸರ್ವದಾ – ಯಾವಾಗಲೂ, ಯಥಾವಸ್ಥಿತಂ-ಹೇಗಿದೆಯೋ ಹಾಗೆಯೇ, ಯಥಾರ್ಥವಾಗಿ, ಸ್ವತಏವ - ತಾನಾಗಿಯೇ ಇನ್ನು ಯಾವುದರಪೇಕ್ಷೆಯೂ ಬೇಕಾಗದೆ, ಸಾಕ್ಷಾತ್ಕುರ್ವನ್–ಸಾಕ್ಷಾತ್ಕರಿಸುವ, ಅಹಂ-ಇಂತಹ ಶಕ್ತಿಯುಳ್ಳ ನಾನು, ಮನ್ಯೇ - ತಿಳಿಯುತ್ತೇನೆ. ಮೂಲದಲ್ಲಿರುವ ಮೇ ಮತಃ ಎಂಬಲ್ಲಿರುವ ಅಸ್ಮಚ್ಛಬ್ದದಿಂದ ಬೋಧಿತವಾದ ಸರ್ವಜ್ಞನಾಗಿರುವ ನನ್ನ ಅಭಿಪ್ರಾಯವು ಎಂದು ವ್ಯಾಖ್ಯಾನಮಾಡಿರುತ್ತಾರೆ. ಆದುದರಿಂದ ನೀನು ನಿಸ್ಸಂಶಯವಾಗಿ ನಂಬಬಹುದೆಂಬ ಭಾವವು.

ಇಂತು ಭಗವದ್ರಾಮಾನುಜರಿಂದ ವಿರಚಿತವಾದ ಶ್ರೀಮದ್ಗೀತಾಭಾಷ್ಯಕ್ಕೆ

ಶ್ರೀ ನಿಗಮಾಂತ ದೇಶಿಕ ವಿರಚಿತ ತಾತ್ಪರ್ಯ ಚಂದ್ರಿಕೆಯ ಅಭಿಪ್ರಾಯಗಳೊಂದಿಗೆ

ಚುಂ. ಮೇ. ವಿಜಯರಾಘವಶರ್ಮನಿಂದ ರಚಿಸಲ್ಪಟ್ಟ

ಆಚಾರ್ಯಹೃದಯಾನ್ವೇಷಿಣೀ

ಎಂಬ ಕನ್ನಡ ಅರ್ಥ ತಾತ್ಪರ್ಯಾದಿಗಳು ಸಮಾಪ್ತವಾದುವು.

ಪ್ರಥಮಷಟ್ಕವು ಸಂಪೂರ್ಣವು.

ಶ್ರೀಮತೇ ರಾಮಾನುಜಾಯ ನಮಃ.

ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

ಈ ಆರನೆಯ ಅಧ್ಯಾಯಕ್ಕೆ ಹೆಸರನ್ನು ಕೊಟ್ಟಿರುವದು ನಾನಾ ಬಗೆಯ್ದಾಗಿರುತ್ತದೆ. ಸಾಧಾರಣವಾಗಿ ಎಲ್ಲಾ ಯೋಗಗಳಿಗೂ ಬೇಕಾದ ಸ್ಥಳ ಶುಚಿತ್ವವೂ, ಇತರ ನಿಯಮವೂ, ಅದಕ್ಕೆ ಬೇಕಾದ ಸಾಧನ ಸಪ್ತಕಗಳಿಂದ ಸೇರಿದ ಯಮ। ನಿಯಮಾದಿ ಅಙ್ಗಗಳೂ, ಎಲ್ಲಾ ಈ ಅಧ್ಯಾಯದಲ್ಲಿ ಹೇಳಲ್ಪಟ್ಟು, ಈ ಜೀವಾತ್ಮಯೋಗಕ್ಕೆ ಬೇಕಾದ ಈ ವಿಷಯಗಳನ್ನೆಲ್ಲಾ ಪರಮಾತ್ಮಯೋಗಕ್ಕೂ ಇಟ್ಟುಕೊಳ್ಳಬೇಕೆಂಬ ಭಾವವು ಬೋಧಿಸಲ್ಪಟ್ಟಿರುತ್ತದೆ ಪರಮಾತ್ಮೋಪಾಸನಪ್ರಕ್ರಿಯೆಯಲ್ಲಿ ಪುನಃ ಇವು ಯಾವವೂ ಹೇಳಲ್ಪಡಲಿಲ್ಲವಾದುದರಿಂದ ಜೀವಾತ್ಮಯೋಗಕ್ಕೆ ಹೇಳಿದುದೇ ಅಲ್ಲಿಗೂ ಅನ್ವಯಿಸುತ್ತದೆ ಎಂಬ ಭಾವವು. ಆದುದರಿಂದ ತುಂಬಾ ಹಿಂದೆ ಅಚ್ಚಾದ ನಮ್ಮ ಸಂಪ್ರದಾಯ ಗ್ರಂಥಗಳಲ್ಲಿ "ಯೋಗಾಭ್ಯಾಸಯೋಗಃ" ಎಂದರೆ ಯೋಗಾಭ್ಯಾಸವನ್ನು ಕುರಿತ ಪ್ರಕರಣವೆಂದು ಸರಿಯಾದ ಹೆಸರನ್ನು ಈ ಅಧ್ಯಾಯಕ್ಕೆ ಕೊಟ್ಟಿರುತ್ತಾರೆ. ಕೆಲವರು ಧ್ಯಾನಯೋಗ ವೆಂಬ ಹೆಸರನ್ನು ಕೊಟ್ಟಿರುವದರಲ್ಲೂ ಏನೂ ದೋಷವಿಲ್ಲವು; ವಾಡಿಕೆಯಲ್ಲಿ ಧ್ಯಾನ ಶಬ್ದವು ಸಾಧಾರಣ ಚಿನ್ತನವಾದರೂ, ಶಾಸ್ತ್ರಗಳಲ್ಲಿ ಧ್ಯಾನೋಪಾಸನ ಶಬ್ದಗಳು ಪರ್ಯಾಯ ಪದಗಳು. ಶ್ರೀ ಯತಿವರ್ಯರ "ಧ್ಯಾನಾರಾಧನಾದ್ಯಗೋಚರಃ" ಎಂಬೀ ಗೀತೆಯ ಅವತಾರಿಕೆಯಲ್ಲಿ ಧ್ಯಾನಶಬ್ದವು ಸಾಧಾರಣ ಚಿನ್ತನವು; ಅವರೇ ಶ್ರೀ ಭಾಷ್ಯದಲ್ಲಿ ಉಪಾಸನಾರ್ಥದಲ್ಲಿ ಪ್ರಕರಣಾನುಗುಣವಾಗಿ ಉಪಯೋಗಿಸಿರುತ್ತಾರೆ. ಆದುದರಿಂದ ಯೋಗಾಭ್ಯಾಸಯೋಗವೆಂಬ ಹೆಸರಿನಷ್ಟು ಇದು ಸಮಂಜಸವಲ್ಲವು. ಸಾಧಾರಣವಾಗಿ ಧ್ಯಾನವಮಾಡುವ ಪ್ರಕ್ರಿಯೆಯನ್ನು ಕುರಿತದ್ದು ಎಂಬ ಅರ್ಥವಾಗಬಹುದು. ಇನ್ನು ಕೆಲವರು ಆತ್ಮಯೋಗವು ಹೇಳಲ್ಪಡುವದರಿಂದ ಅಧ್ಯಾತ್ಮ ಯೋಗವೆಂಬ ಹೆಸರನ್ನಿಟ್ಟರು; ಆಗ ಅಧ್ಯಾತ್ಮ ಯೋಗ ಯೋಗೋ ನಾಮವೆಂದು ಹೇಳಿದ್ದರೆ ಸ್ಪಷ್ಟವಾಗಿತ್ತು. ಆದರೆ ಅಧ್ಯಾತ್ಮವೆಂಬುದರಿಂದಲೇ ಆತ್ಮಜ್ಞಾನವೆಂಬರ್ಥವು ಸೂಚಿತವಾಗುವದರಿಂದ ಅಧ್ಯಾತ್ಮಯೋಗವೆಂಬ ನಾಮಧೇಯವೂ ಸರಿಯೇ ಎಂದು ಸಮಾಧಾನವನ್ನು ಹೇಳಬೇಕಾಗುತ್ತದೆ. ಇನ್ನು ಕೆಲವರು ಆತ್ಮಸಂಯಮ ಯೋಗೋನಾಮ ಎಂಬದಾಗಿ ನಾಮಕರಣವನ್ನುಮಾಡಿರುತ್ತಾರೆ. ಯಾವುದು ಗ್ರಾಹ್ಯವೋ ಅದನ್ನು ಪರಿಗ್ರಹಿಸಬಹುದು. ದಾಸನಿಗೆ ಯೋಗಾಭ್ಯಾಸಯೋಗವೆಂಬುದೇ ಸರ್ವಸಮಂಜಸವಾಗಿ ತೋರುತ್ತದೆ. ಶ್ರೀ ಯಾಮುನೇಯರು ಯೋಗಾಭ್ಯಾಸವಿಧಿಯು ಇಲ್ಲಿ ಹೇಳಲ್ಪಟ್ಟಿರುತ್ತದೆಂದು ಸಙ್ಗ್ರಹಶ್ಲೋಕದಲ್ಲಿ ಹೇಳಿರುತ್ತಾರೆ.

---

## ಈ ಅಧ್ಯಾಯದಲ್ಲಿರುವ ಶ್ಲೋಕಗಳ ಸಙ್ಗ್ರಹಾರ್ಥವು.

೧. ಶ್ರೀಕೃಷ್ಣಭಗವಾನರವರು ಕರ್ಮಯೋಗದಿಂದಲಾಗಲಿ, ಅಥವಾ ಅದರಿಂದ ಅನುಗೃಹೀತವಾದ ಜ್ಞಾನಯೋಗದಿಂದಲಾಗಲಿ ಉಂಟಾಗುವ ಆತ್ಮಾವಲೋಕನ ವಿಧಿಯನ್ನು ಹೇಳಲುಪಕ್ರಮಿಸಿ ಫಲಾಭಿಸಂಧಿರಹಿತನಾಗಿರುವ ಕರ್ಮಯೋಗಿಯು ಸನ್ಯಾಸಿಯಹಾಗೆ ಜ್ಞಾನನಿಷ್ಠೆಯನ್ನೂ, ಕರ್ಮಯೋಗಿಯಹಾಗೆ ಕರ್ಮ ನಿಷ್ಠೆಯನ್ನೂ ಹೊಂದಿರುವನು ಎಂದು ಹೇಳುತ್ತಾರೆ.

೨. ಕರ್ಮಯೋಗದಲ್ಲಿ ಜ್ಞಾನನಿಷ್ಠೆಯೂ ಉಂಟು. ಏಕೆಂದರೆ ಕಾಮ ಸಙ್ಕಲ್ಪಗಳನ್ನು ಆತ್ಮ ಯಾಥಾತ್ಮ್ಯಜ್ಞಾನದಿಂದ ಪರಿತ್ಯಾಗಮಾಡದವನು ಕರ್ಮಯೋಗಿಯಾಗಲು ಅರ್ಹನಲ್ಲವು.

೩. ಕರ್ಮಯೋಗವೇ ಪ್ರಮಾದರಹಿತವಾಗಿ ಸಾಧಿಸಲು ಸಾಧ್ಯವು. ಕರ್ಮಯೋಗಾರಂಭವನ್ನು ಮಾಡಬೇಕೆಂದು ಜೀವಾತ್ಮಸ್ವರೂಪದ ಮನನಶೀಲನಿಗೆ ಕರ್ಮಯೋಗವೇ ಒಳ್ಳೇ ಸಾಧನವು; ಮುಂದಕ್ಕೆ ಆತನೇ ಯೋಗದ ವಿಪಾಕದಶೆಯನ್ನು ಹೊಂದುವದಕ್ಕೆ ಮನೋನಿಗ್ರಹವನ್ನು ಹೊಂದುವನು; ಕರ್ಮಯೋಗಮಾಡುವದೇ ಸುಲಭೋಪಾಯವು.

೪. ಈ ಕರ್ಮಯೋಗಿಯು ಯಾವಾಗ ವಿಪಾಕದಶೆಯನ್ನು ಹೊಂದಿದ ಯೋಗಿಯಾಗುವನು ಎಂದರೆ, ಐಹಿಕೋಪಭೋಗಗಳಲ್ಲಿ ಯಾವಾಗ ಸರ್ವಸನ್ಯಾಸ ಸಂಕಲ್ಪವು ಉಂಟಾಗಿ, ಇಂದ್ರಿಯಗಳ ಮೂಲಕ ಉಂಟಾಗುವ ವಿಷಯೋಪಭೋಗಗಳಲ್ಲಿ ವಿರಕ್ತಿಯುಂಟಾಗುತ್ತದೋ, ಆಗ ಆತನು ಆತ್ಮಾವಲೋಕನದ ಪರಿಪಕ್ವದಶೆಯನ್ನು ಹೊಂದುವನು.

೫. ಆದುದರಿಂದ ಮನಸ್ಸು ಐಹಿಕಗಳಲ್ಲಿ ಪ್ರವರ್ತಿಸದಹಾಗೆ ಕರ್ಮಯೋಗಿಯು ಅದನ್ನು ವಶದಲ್ಲಿಟ್ಟುಕೊಳ್ಳಬೇಕು. ಹಾಗೆ ಮಾಡಿದರೆ ಮನಸ್ಸೇ ಬಂಧುವು. ಹಾಗಿಲ್ಲದಿದ್ದರೆ ಮನಸ್ಸೇ ಶತ್ರುವಾಗುತ್ತದೆ.

೬. ಮನಸ್ಸನ್ನು ವಶದಲ್ಲಿಡುವ ಮಾರ್ಗವು ಉಪದೇಶಿಸಲ್ಪಡುತ್ತದೆ; ಯಾವನು ಶಾಸ್ತ್ರಜನ್ಯ ವಿವೇಕಜನ್ಯ ಜ್ಞಾನದ ಮೂಲಕ ಉಂಟಾದ ತನ್ನ ಧರ್ಮಭೂತಜ್ಞಾನದಿಂದ ಮನಸ್ಸನ್ನು ನಿಗ್ರಹಿಸುವನೋ, ಅವನಿಗೆ ಮನಸ್ಸು ಬಂಧುವು ; ಹಾಗೆ ಮಾಡದವನಿಗೆ ಶತ್ರುವು.

೭. ಹೀಗೆ ಮನಸ್ಸನ್ನು ಆತ್ಮಾವಿನ ವಿವೇಕಜ್ಞಾನದಿಂದ ಸ್ವಲ್ಪಮಟ್ಟಿಗೆ ನಿಗ್ರಹಿಸಿ ತನ್ಮೂಲಕ ಇಂದ್ರಿಯಗಳನ್ನು ಜಯಿಸಿ, ಶೀತೋಷ್ಣ ಸುಖದುಃಖ ಮಾನಾವಮಾನಗಳಲ್ಲಿ ಸಮಾಹಿತ ಚಿತ್ತನಾದರೆ ಯೋಗಾರಂಭ ದಶೆಗೆ ಅರ್ಹನಾಗುವನು.

೮. ಹೀಗೆ ಯೋಗವನ್ನಾರಂಭಿಸುವದಕ್ಕೆ ಮನೋಜಯವೂ ದ್ವಂದ್ವಸಹತ್ವವೂ ಉಂಟಾಗಿ ಯೋಗೋಪಕ್ರಮಕ್ಕೆ ಅರ್ಹನು ಯಾವಾಗ ಎಂದರೆ ಕಲ್ಲು, ಮಣ್ಣುಹೆಂಟೆ, ಚಿನ್ನ ಇವುಗಳೆಲ್ಲಾ ಸಮವೆಂಬ ಭಾವನೆಯುಂಟಾದಾಗ; ಕಾಂಚನವನ್ನೂ ತೃಣಪ್ರಾಯವಾಗಿ ಕಂಡಾಗ.

೯. ಹೀಗೆ ಬರೀ ಅಚಿತ್ತುಗಳ ವಿಷಯದಲ್ಲಿ ಸಮಬುದ್ಧಿ ಮಾತ್ರವೇ ಅಲ್ಲದೆ, ಶತ್ರುಮಿತ್ರರಲ್ಲೂ, ಸಾಧುಜನ ಪಾಪಿಷ್ಠರಲ್ಲೂ ಸಮಬುದ್ಧಿ ಇದ್ದರೆ, ಅದು ಆತ್ಮಚಿನ್ತನಾರ್ಹ ಕರ್ಮಯೋಗಿಗೆ ವಿಶೇಷವಾದುದು.

೧೦. ಯೋಗಿಯು ಪ್ರತಿದಿನವೂ ಕ್ಲುಪ್ತಕಾಲದಲ್ಲಿ ಯಾರೂ ಇಲ್ಲದಿರುವ ನಿಶ್ಶಬ್ದವಾದ ಸ್ಥಳದಲ್ಲಿ ಕುಳಿತು, ಇನ್ನು ಯಾವುದರಲ್ಲೂ ಆಶೆ ಇಲ್ಲದವನಾಗಿ, ಆತ್ಮಚಿನ್ತನವನ್ನು ಮಾಡತಕ್ಕದ್ದು.

೧೧. ಯೋಗಾಭ್ಯಾಸಮಾಡುವ ಸ್ಥಳವು ಪವಿತ್ರವಾಗಿ, ಆಸನವು ತುಂಬಾ ಎತ್ತರ ತಗ್ಗು ಇಲ್ಲದೆ, ಮಣೆಯಮೇಲೆ, ಮೊದಲು ದರ್ಭೆ, ಅನಂತರ ಕೃಷ್ಣಾಜಿನ, ಅದರಮೇಲೆ ಬಟ್ಟೆಯುಳ್ಳದ್ದಾಗಿರಬೇಕು.

೧೨. ಮನಸ್ಸಿನ ಏಕಾಗ್ರತೆಯನ್ನು ಹೊಂದಿ ಮನಸ್ಸನ್ನೂ, ಇಂದ್ರಿಯಗಳನ್ನೂ ನಿಗ್ರಹಿಸಿ ಆತ್ಮಚಿನ್ತನ ಮಾಡತಕ್ಕದ್ದು.

೧೩. ೧೪.—ದೇಹ ಕುತ್ತಿಗೆ ತಲೆಗಳನ್ನು ನೆಟ್ಟಗೆ ಇಟ್ಟುಕೊಂಡು, ದಿಕ್ಕುಗಳ ಕಡೆ ನೋಡದೆ ಭ್ರೂಮಧ್ಯದಲ್ಲಿರುವ ತನ್ನ ಮೂಗಿನ ಮೇಲುಭಾಗದಲ್ಲಿ ದೃಷ್ಟಿಯನ್ನಿಟ್ಟು, ಸ್ವಸ್ತ್ರೀಸಂಗವಿಲ್ಲದವನಾಗಿ, ಪರಮಾತ್ಮನನ್ನು ಧ್ಯಾನಿಸಿ, ಆತ್ಮಚಿನ್ತನವನ್ನು ಉಪಕ್ರಮಿಸತಕ್ಕದ್ದು.

೧೫. ಹೀಗೆ ಪರಮಾತ್ಮನನ್ನು ಮೊದಲು ಧ್ಯಾನಿಸಿ ಯೋಗಾರಂಭಮಾಡಿದರೆ ಸಿದ್ಧಿಯು ಶೀಘ್ರವಾಗಿ ಲಭಿಸುತ್ತದೆ.

೧೬, ೧೭.—ಯೋಗಸುಸ್ಥಿರರೂಪ ಆತ್ಮಸಾಕ್ಷಾತ್ಕಾರಕ್ಕೆ ಸಾಧನವೆನಿಸುವ ಕಗಳೂ, ಯಮ ನಿಯಮಾದಿ ಅಙ್ಗಗಳೂ ಆವಶ್ಯಕವಾದುದರಿಂದ ಮಿತವಾದ ಸಾತ್ವಿಕಾಹಾರ ಸೇವನೆಯು ಬೇಕು ; ಹೆಚ್ಚಾಗಿ ನಿದ್ರೆಯಾಗಲಿ,ಜಾಗರವಾಗಲಿ ಕೂಡದು;ಎಷ್ಟು ಆವಶ್ಯಕವೋ ಅಷ್ಟುಮಾತ್ರವೇ ನಿದ್ರೆಯು.

೧೮. ಪ್ರತ್ಯಾಹಾರರೂಪ ಅಙ್ಗವು ಆವಶ್ಯಕವು. ಐಹಿಕ ವಿಷಯಾನುರಾಗದಿಂದ ತಪ್ಪಿಸಿ ಮನಸ್ಸನ್ನು ಆತ್ಮಚಿಂತನದಲ್ಲೇ ನಿಲ್ಲಿಸತಕ್ಕದ್ದು.

೧೯. ಹೀಗೆ ಯೋಗವಮಾಡುವವನ ಮನಸ್ಸು ಕದಲದೆ ಇರುವದರಿಂದ ಜ್ಞಾನವು ಆತ್ಮನಲ್ಲೇ ಇದ್ದುಕೊಂಡು ಪ್ರಕಾಶಿಸುತ್ತದೆ. ಇವಕ್ಕೆ ಗಾಳಿಯಿಲ್ಲದ ಸ್ಥಳದಲ್ಲಿರುವ ದೀಪವು ದೃಷ್ಟಾಂತ ವಾಗಿ ಹೇಳಬಹುದು.

೨೦, ೨೧, ೨೨, ೨೩—ಕರ್ಮಯೋಗವಮಾಹಾತ್ಮ್ಯೆಯನ್ನು ಮೊದಲು ಮೂರು ಶ್ಲೋಕಗ ಳಿಂದ ಕೊಂಡಾಡಿ, ನಾಲ್ಕನೆಯ ಶ್ಲೋಕದಲ್ಲಿ ಅಂತಹ ಕರ್ಮಯೋಗವನ್ನು ಅನುಷ್ಠಿಸು ಎಂದು ಹೇಳುತ್ತಾರೆ.—(೧) ಮನಸ್ಸು ವಿಷಯಗಳಿಂದ ನಿರೋಧಿಸಲ್ಪಟ್ಟು ಯಾವ ಆತ್ಮಚಿನ್ತನದಲ್ಲೇ ರಮಿಸುತ್ತದೋ (೨) ಯಾವವರಲ್ಲಿ ಧರ್ಮಭೂತಜ್ಞಾನದ ಮೂಲಕ ಆತ್ಮಸಾಕ್ಷಾತ್ಕಾರಕ್ಕಾಗಿ ಆತ್ಮನಲ್ಲೇ ತುಷ್ಟಿಯು ಲಭಿಸುತ್ತದೋ (೩) ಆ ಆನಂದವು ಎಲ್ಲಾ ಐಹಿಕ ಸುಖಗಳಿಂದುಂಟಾಗುವ ಸುಖಕ್ಕಿಂತಲೂ ಅತಿಶಯವಾದುದೆಂದು ಎಲ್ಲಿ ಗ್ರಹಿಸಲ್ಪಡುತ್ತದೋ, (೪) ಇಂತಹ ಅತಿಶಯ ಸುಖದಿಂದ ಯಾವಾಗ ಚ್ಯುತಿ ಎಂಬುದು ಇಲ್ಲವೋ, (೫) ಈ ಆತ್ಮಾನುಭವಕ್ಕಿಂತ ಹೆಚ್ಚಾದ ಪ್ರಯೋಜನವಿಲ್ಲವೆಂದು ಗ್ರಹಿಸಲ್ಪಡುತ್ತದೋ (೬) ಎಂತಹ ದುಃಖಪ್ರಾಪ್ತಿಯುಂಟಾದರೂ ಮನಸ್ಸಿನ ವಿಕಾರವುಂಟಾಗುವದಿಲ್ಲವೋ, ಇಂತಹ ಆರು ಲಕ್ಷಣಗಳುಳ್ಳದ್ದೇ ಯೋಗವು; ಅಂತಹ ಯೋಗವನ್ನೇ ಅಭ್ಯಸಿಸತಕ್ಕದ್ದು.

೨೪, ೨೫—ಪ್ರತ್ಯಾಹಾರವು ಮುಖ್ಯವಾದುದರಿಂದ ಅದನ್ನು ಇನ್ನೊಂದು ಸಲ ಅನುವದಿಸಿ ಹೇಳುತ್ತಾರೆ. ಇಂದ್ರಿಯಗಳು ಕಾಮಗಳಲ್ಲಿ ಪ್ರವರ್ತಿಸುವಹಾಗೆ ಮನಸ್ಸಿನ ಸಙ್ಕಲ್ಪ ಉಂಟಾಗ ಬಹುದು. ಆದುದರಿಂದ ಆತ್ಮನ ವಿವೇಕಜ್ಞಾನದಿಂದ ಮನಸ್ಸನ್ನು ತಡೆದು, ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸದಹಾಗೆ ಮಾಡಿಕೊಂಡು, ಅಭ್ಯಾಸದಿಂದ ಮನಸ್ಸು ಆತ್ಮಚಿನ್ತನದಲ್ಲೇ ಪ್ರವರ್ತಿಸುವಹಾಗೆ ಮಾಡಿಕೊಳ್ಳಬೇಕು.

೨೬. ಇದನ್ನು ಮುಖ್ಯವಾಗಿ ಹೇಳಲು ಕಾರಣವೇನೆಂದರೆ.—ಮನಸ್ಸು ಚಂಚಲವು,ಹೊರಗೆ ವಿಷಯಗಳ ಕಡೆಗೇನೇ ಪ್ರವೃತ್ತಿಯು; ಅದನ್ನು ಕಷ್ಟದಿಂದ ನಿಗ್ರಹಿಸಿ, ಒಳಗಿರುವ ಜೀವಾತ್ಮ ಸ್ವರೂಪದ ಚಿನ್ತನದ ಕಡೆಗೆ ತಿರುಗಿಸಿ, ತನ್ನ ವಶಮಾಡಿಕೊಳ್ಳಬೇಕು; ಇಂದ್ರಿಯಗಳೆಂಬ ದುಷ್ಟಾ ಶ್ವದ ಲಗಾಮಾದ ಮನಸ್ಸನ್ನು ಬಿಗಿದು ಹಿಡಿಯಬೇಕು.

೨೭. ಹೀಗೆ ಮನಸ್ಸನ್ನು ವಶಮಾಡಿಕೊಂಡರೆ, ಈ ಪ್ರತ್ಯಾಹಾರ ಧಾರಣಾದಿಗಳಿಂದ ಯೋಗಸಮಾಧಿಯಲ್ಲಿರುವವನಿಗೆ ನಿರತಿಶಯಾನಂದರೂಪ ಆತ್ಮಸಾಕ್ಷಾತ್ಕಾರವು ಲಭಿಸುತ್ತದೆ.

೨೮. ಇಂತಹ ಯೋಗ ಪರಿಪಕ್ವದಶೆಯನ್ನು ನಿರಾಯಾಸದಿಂದ ಹೊಂದಬಹುದೆಂದು ಹೇಳುವದರಮೂಲಕ ಅರ್ಜುನನಿಗೆ ಪ್ರೋತ್ಸಾಹವು

೨೯. ಇಂತಹ ಯೋಗಸಿದ್ಧಿಯನ್ನು ಹೊಂದಿದವನು ತನ್ನ ಮತ್ತು ಇತರರ ಆತ್ಮರುಗಳಿಗೆ ನಾಲ್ಕುವಿಧ ಸಾಮ್ಯ ಉಂಟೆಂದು ತಿಳಿಯುವನು, ಪ್ರಥಮಾವಸ್ಥೆಯ ಸಾಮ್ಯದಿಂದ. ಜ್ಞಾನೈ ಕಾಕಾರತೆಯಿಂದ ಪ್ರಕೃತಿ ವಿಮುಕ್ತ ದಶೆಯಲ್ಲಿ ತನ್ನ ಆತ್ಮವು ಇತರರ ಆತ್ಮರುಗಳಿಗೆ ಸಮ ವೆಂದೂ, ಇತರರ ಆತ್ಮರುಗಳು ತನ್ನ ಆತ್ಮಾವಿಗೆ ಸಮವೆಂದೂ, ತಿಳಿಯುವನು.

೩೦. ದ್ವಿತೀಯಾವಸ್ಥೆಯಲ್ಲಿ, ಪರಮಾತ್ಮನೂ ಹ ಜೀವಾತ್ಮರಹಾಗೆ ಜ್ಞಾನ ಸ್ವರೂಪನಾಗಿ ಸ್ವಯಂಪ್ರಕಾಶವಾದ ಜ್ಞಾನಧರ್ಮಯುಕ್ತನಾಗಿಯೂ ಇರುವದರಿಂದ, ಎಲ್ಲಾ ಜೀವಾತ್ಮರೂ ಪರ ಮಾತ್ಮನಿಗೆ ಸಮರಾದುದರಿಂದ ಪರಸ್ಪರ ಸಮರೆಂಬ ಜ್ಞಾನಉಂಟಾಗುತ್ತದೆ.

೩೧. ಮೂರನೆಯ ಅವಸ್ಥೆಯಲ್ಲಿ ಎಲ್ಲಾ ಜೀವಾತ್ಮರೂ ಪರಮಾತ್ಮನಿಗೆ ಶರೀರವಾಗಿ ಅಪೃಥಕ್ಸಿದ್ಧ ವಿಶೇಷಣವಾಗಿ, ಪರಮಾತ್ಮನು ಎಲ್ಲರಿಗೂ ಆತ್ಮಾವಾಗಿರುವದರಿಂದ, ಇಂತಹ ಶರೀರಾತ್ಮಭಾವವು ಜೀವಾತ್ಮರಿಗೆಲ್ಲಾ ಇರುವದರಿಂದ ಎಲ್ಲಾ ಜೀವಾತ್ಮರೂ ಸಮವು.

೩೨. ನಾಲ್ಕನೆಯು ಪರಿಪಕ್ವಾವಸ್ಥೆಯಲ್ಲಾವನೋ, ಎಲ್ಲಾ ಆತ್ಮರೂ ಹೀಗೆ ಸಮವಾದುದ ರಿಂದ, ಸುಖದುಃಖಗಳು ತನಗೆ ಸಂಬಂಧಿಸಿವ ದೇಹದಿಂದುಂಟಾಗುವದರಿಂದ, ಇತರರ ಸುಖದುಃಖ ಗಳಿಂದಲೂ ತನ್ನ ಸುಖದುಃಖಗಳಿಂದಲೂ ವಿಕಾರಹೊಂದದಿರುವನು ; ಈ ವಿಷಯದಲ್ಲಿ ಎಲ್ಲಾ ಆತ್ಮರು ಸಮವೆಂಬ ಭಾವವು. ಈ ಭಾವನೆ ಇರುವವನು ಸರ್ವ ಶ್ರೇಷ್ಠನು.

೩೩, ೩೪—ಇಂತಹ ನಾಲ್ಕು ಸಾಮ್ಯ ಬುದ್ಧಿಯನ್ನು ಮನೋನಿಗ್ರಹದಿಂದಲೂ, ಆತ್ಮ ಚಿನ್ತನದಿಂದಲೂ ಹೊಂದುವದು ಸುಲಭವಲ್ಲವಲ್ಲಾ ಎಂದು ವಿಷಾದಿಸಿ ಅರ್ಜುನನು ಪ್ರಶ್ನಿಸುತ್ತಾ ನೇನೆಂದರೆ—ಮನಸ್ಸು ಅತಿ ಚಂಚಲವು, ವಾಯುವೇಗವನ್ನು ತಡೆಯುವದು ಹೇಗೆ ಅಸಾಧ್ಯವೋ ಹಾಗೆ ಅಸಾಧ್ಯವಾಗಿ ತೋರುತ್ತದೆ. ಉಪಾಯವನ್ನು ಹೇಳಿ ಎಂದು ಪ್ರಾರ್ಥಿಸುತ್ತಾನೆ.

೩೫, ೩೬. ಮನಸ್ಸಿನ ನಿಗ್ರಹವು ಬಹುಕಷ್ಟವೆಂಬುದೇನೋ ಒಪ್ಪತಕ್ಕ ಮಾತೇ; ಆದರೆ ಸ್ವಲ್ಪವಾಗಿ ಮನಸ್ಸನ್ನು ವಶಪಡಿಸಿಕೊಂಡು ಉಪಾಯವಾಗಿ ಹೀಗೆ ಅಭ್ಯಾಸ ವೈರಾಗ್ಯಗಳಿಂದ ನಿಗ್ರಹಿಸ ಬಹುದೆಂದು ಶ್ರೀಕೃಷ್ಣಭಗವಾನ್ ಹೇಳಿದರು.

೩೭, ೩೮, ೩೯.—ಅದಕ್ಕೆ ಅರ್ಜುನನು ಕೇಳುತ್ತಾನೆ, ಒಂದುವೇಳೆ ಹೀಗೆ ಅಭ್ಯಾಸ ವೈರಾಗ್ಯ ಗಳಿಂದ ಉಪಾಯವಾಗಿ ಮನಸ್ಸನ್ನು ನಿಗ್ರಹಿಸದೆ ಯೋಗಭ್ರಷ್ಟನಾದರೆ, ಕರ್ಮಯೋಗಾನುಷ್ಠಾನ ವನ್ನು ಫಲಾಭಿಸಂಧಿ ಇಲ್ಲದೆ ಮಾಡಿದುದರಿಂದ ಫಲವೂ ಇಲ್ಲದೆ ಎಂತಹ ದುರ್ಗತಿಯನ್ನುಹೊಂದು ವನು? ಈಕಡೆ ಮೋಕ್ಷಫಲವೂ ಇಲ್ಲದೆ ಆ ಕಡೆ ಕರ್ಮಫಲವೂ ಇಲ್ಲದೆ ಉಭಯಭ್ರಷ್ಟನಾಗಿ ದೊಡ್ಡ ಮೇಘದಿಂದಗಲಿದ ಒಂದು ಸಣ್ಣಮೇಘದಹಾಗೆ ನಾಶವನ್ನು ಹೊಂದುವನೇ ? ಈ ಸಂಶಯಗಳಿಗೆ ನೀನು ದಯವಿಟ್ಟು ಸಮಾಧಾನವನ್ನು ಹೇಳತಕ್ಕದ್ದು. ಸರ್ವಜ್ಞನಾದ ನಿನ್ನನ್ನು ಬಿಟ್ಟರೆ ಇನ್ನು ಯಾರು ಈ ಸಂಶಯಗಳನ್ನು ಹೋಗಲಾಡಿಸಲು ಅರ್ಹರು, ಎಂದು ಅರ್ಜುನನು ಪ್ರಾರ್ಥಿಸುತ್ತಾನೆ.

೪೦. ಕರ್ಮಯೋಗಭ್ರಷ್ಟನಿಗೆ ಇಹಪರವೆರಡರಲ್ಲೂ ದುರ್ಗತಿ ಎಂಬುದು ಎಂದಿಗೂಇಲ್ಲವು; ಸುಕೃತಮಾಡಬೇಕೆಂದಾರಂಭಿಸಿದವನಿಗೆ ಎಂದಿಗಾದರೂ ದುರ್ಗತಿಯುಂಟೇ? ಎಂದು ಶ್ರೀಕೃಷ್ಣ ಭಗವಾನರವರು ತಮ್ಮ ಕೃಪಾಪ್ರವಾಹದ ಮಾಹಾತ್ಮ್ಯೆಯನ್ನು ಪ್ರಕಟಿಸಿ ಉತ್ತರ ಹೇಳುತ್ತಾರೆ.

೪೧. ಕರ್ಮಯೋಗವನ್ನು ಆರಂಭಿಸಿದ ಒಡನೆಯೇ ಕರ್ಮಭ್ರಷ್ಟನಾದರೆ ಪುನಃ ಕರ್ಮ ಯೋಗವನ್ನು ಆರಂಭಿಸುವದಕ್ಕೆ ಯೋಗ್ಯನಾಗುವಹಾಗೆ ಪರಿಶುದ್ಧನಾಗಿಯೂ ದ್ರವ್ಯೋಪಸಪ ತ್ತಿಯೂ ಇರುವವರ ಗೃಹದಲ್ಲಿ ಜನ್ಮವನ್ನೆತ್ತುವನು.

೪೨, ೪೩. ಯೋಗವನ್ನನುಷ್ಠಿಸಿ ಯೋಗಪರಿಪಕ್ವಾವಸ್ಥೆಯಲ್ಲಿ ಯೋಗಭ್ರಷ್ಟನಾದರೆ, ಸ್ವಯಂ ಕರ್ಮಯೋಗಾನುಷ್ಠಾತೃವಾಗಿ, ಕರ್ಮಯೋಗಾನುಷ್ಠಾನಕ್ರಮವನ್ನು ಉಪದೇಶಿಸಲು ಅರ್ಹತೆ ಇರುವವರ ಮನೆಯಲ್ಲಿ ಆತನಿಗೆ ಜನ್ಮವು; ಪೂರ್ವಸುಕೃತವಾಸನೆಯಿಂದಲೇ ಕರ್ಮ ಯೋಗವನ್ನವಲಂಬಿಸುವನು. ಈತನು ಹೆಚ್ಚು ಸುಕೃತಶಾಲಿಯು.

೪೪. ಇಷ್ಟುಮಾತ್ರವೇ ಅಲ್ಲದೆ,ಕರ್ಮಯೋಗವು ಮೋಕ್ಷೋಪಾಯ ಸಾಧಕವೆಂದು ತಿಳಿದು ಅದನ್ನನುಷ್ಠಿಸಬೇಕೆಂಬ ಸಙ್ಕಲ್ಪಾವಸ್ಥೆಯಲ್ಲೂ ವಿಚ್ಛಿತಿಯುಂಟಾದರೂ ಆತನೂ ಕೂಡ ಪುನಃ ಜನ್ಮವೆತ್ತಿ ಕರ್ಮಯೋಗವನ್ನಾರಂಭಿಸಿ ಆತ್ಮಾವಲೋಕನ ಸಿದ್ಧಿಯನ್ನು ಹೊಂದುವನು.

೪೫. ಹೀಗೆ ಯೋಗಭ್ರಷ್ಟನಾಗದೆ ಪ್ರಯತ್ನಪಟ್ಟು ಕರ್ಮಯೋಗವನ್ನು ಅನುಷ್ಠಿಸುವವನು ಮುಂದಕ್ಕೆ ಏನೊಂದೂ ವಿಘ್ನವಿಲ್ಲದೆ ಆತ್ಮಸಾಕ್ಷಾತ್ಕಾರವನ್ನು ಹೊಂದುವನು.

೪೬. ಹೀಗೆ ಈ ಕರ್ಮಯೋಗಿಯು ಪರಮ ಸುಕೃತಿಯು; ಆತನು ಯಜ್ಞದಾನ ತಪಸ್ಸುಗಳ ನ್ನೆಲ್ಲಾ ಫಲಾಭಿಸಂಧಿ ಇಲ್ಲದೆ ಭಗವತ್ಪ್ರೀತ್ಯರ್ಥವಾಗಿ ನಡೆಸುವದರಿಂದ ಕೇವಲ ಫಲಕ್ಕಾಗಿ ಯಜ್ಞ ದಾನ ತಪಸ್ಸು ಮಾಡುವ ಅಧಿಕಾರಿಗಳಿಗಿಂತ ಅಧಿಕನು, ಆದುದರಿಂದ ಕರ್ಮಯೋಗವನ್ನನುಷ್ಠಿಸು.

೪೭. ಇಂತಹ ಸುಕೃತಿಗಳಾದ ಕರ್ಮಯೋಗಿಗಳಿಗಿಂತ ಆ ಕರ್ಮಯೋಗದ ಮಾಹಾತ್ಮ್ಯೆ ಯಿಂದುಂಟಾಗುವ ಭಕ್ತಿಯೋಗನಿಷ್ಠನು ಸರ್ವಶ್ರೇಷ್ಠನು.

---

ಶ್ರೀ ಯಾಮುನಮುನಯೇ ನಮಃ

# ಶ್ರೀಮದ್ಗೀತಾರ್ಥಸಙ್ಗ್ರಹಃ

**ಯೋಗಾಭ್ಯಾಸವಿಧಿ ರ್ಯೋಗೀ ಚತುರ್ಧಾ ಯೋಗ ಸಾಧನಂ**
**ಯೋಗಸಿದ್ಧಿ ಸ್ಸ್ವಯೋಗಸ್ಯ ಪಾರಮ್ಯಂ ಷಷ್ಠ ಉಚ್ಯತೇ॥ ೧೦.**

ಶ್ರೀ ಯಾಮುನೇಯರವರು ಈ ಶ್ಲೋಕಮೂಲಕ ಐದು ಅರ್ಥಗಳು ಈ ಆರನೆಯ ಗೀತಾಧ್ಯಾಯದಲ್ಲಿ ಉಪಪಾದಿಸಲ್ಪಟ್ಟವೆಂದು ಹೇಳಿರುತ್ತಾರೆ. ಆದರೆ ಶ್ರೀ ಭಾಷ್ಯಕಾರರು ಕೊಟ್ಟಿರುವ ಈ ಆರನೆಯ ಅಧ್ಯಾಯದ ಅವತಾರಿಕೆಯಲ್ಲಿ **"ಇಧಾನೀಂ ಜ್ಞಾನಯೋಗ ಕರ್ಮಯೋಗ ಸಾಧ್ಯಾತ್ಮಾವಲೋಕನರೂಪ ಯೋಗಾಭ್ಯಾಸ ವಿಧಿ ರುಚ್ಯತೇ"** ಎಂಬುದರಿಂದ **ಯೋಗಾಭ್ಯಾಸವಿಧಿ** ಒಂದೇ ಹೇಳಲ್ಪಟ್ಟಿರುತ್ತದೆ, ಇದಕ್ಕೆ ಕಾರಣವೇನೆಂದರೆ.—ಗೀ. ೫. ೨೭ರಲ್ಲಿ ಕರ್ಮಯೋಗಕ್ಕೆ ಪರ್ಯವಸಾನವು ಆತ್ಮಚಿನ್ತನದಿಂದುಂಟಾಗುವ ಆತ್ಮಾವಲೋಕನವೆಂದು ಈ ಕರ್ಮಯೋಗಕ್ಕೆ ಮಾಹಾತ್ಮ್ಯೆಯನ್ನು ಹೇಳಿದುದರಿಂದ ಅದನ್ನು ನೆರವೇರಿಸುವ ವಿಧಿಯೇ ತುಂಬಾ ಮುಖ್ಯವಾದುದಾಗಿ ಈ ಅಧ್ಯಾಯದಲ್ಲಿ ಹೇಳಲ್ಪಡುವದರಿಂದ, ಶ್ರೀ ಭಾಷ್ಯಕಾರರು ಇದು ಒಂದನ್ನೇ ಮುಖ್ಯವಾಗಿ ಹೇಳಿದರು. ಪ್ರಾಸಙ್ಗಿಕವಾಗಿ ನಾಲ್ಕುವಿಧ ಯೋಗಿಗಳೂ, ಯೋಗ ಸಾಧನವೂ, ಯೋಗಸಿದ್ಧಿಯೂ ಯೋಗಾಭ್ಯಾಸ ವಿಧಿಗೆ ಸಂಬಂಧಿಸಿರುವದರಿಂದ ಇವುಗಳು ಭಾಷ್ಯದಲ್ಲಿ ಹೇಳಲ್ಪಡಲಿಲ್ಲವು. ಆದರೆ ಪರಮಾತ್ಮನನ್ನು ಕುರಿತ ಯೋಗವ ಎಂದರೆ ಮುಂದೆ ಹೇಳುವ ಭಕ್ತಿ ಯೋಗವೆಂದು ಹೇಳುವ ಉಪಾಸನಕ್ಕೆ ಪಾರಮ್ಯವು ಪ್ರಧಾನವಾಗಿರುವದರಿಂದ ಅದನ್ನಾದರೂ ಹೇಳಬೇಡವೇ ಎಂದರೆ ಇಲ್ಲಿ ಮುಖ್ಯವಾಗಿ ಹೇಳಲ್ಪಟ್ಟದ್ದು ಆತ್ಮಾವಲೋಕನರೂಪ ಯೋಗಾಭ್ಯಾಸ ವಿಧಿಯು, ಪ್ರಾಸಙ್ಗಿಕವಾಗಿ ಇವಕ್ಕಿಂತಲೂ ಸರ್ವಶ್ರೇಷ್ಠವಾದ ಉಪಾಸನೆಯು, ತನ್ನ ಉಪಾಸನೆಯು ಎಂದು ಕೊನೆಯ ಶ್ಲೋಕದಲ್ಲ ಮಾತ್ರ ಸಙ್ಗ್ರಹವಾಗಿ ಹೇಳಿರುವದರಿಂದ, ಆ ಉಪಾಸನೆಯೇ ಮುಂದೆ ಭಕ್ತಿಯೋಗದಲ್ಲಿ ಮುಂದಿನ ಷಟ್ಕದಲ್ಲಿ ಹೇಳಲ್ಪಡುವದರಿಂದಲೂ, ಅದೂ ಹೇಳಲ್ಪಡಲಿಲ್ಲವೆಂದು ಭಾವಿಸತಕ್ಕದ್ದು. ಹೀಗೆಯೇ ಪ್ರತಿಯೊಂದು ಅಧ್ಯಾಯದಲ್ಲೂ ಮುಖ್ಯವಿಷಯ ಒಂದನ್ನೇ ಹೇಳಬಹುದು, ಹೇಗೆಂದರೆ:—(೧) ಪ್ರಥಮದಲ್ಲಿ ಶ್ರವಣಾಧಿಕಾರಿಯೂ (೨) ದ್ವಿತೀಯದಲ್ಲಿ ಆ ಅಧಿಕಾರಿಯ ಮೋಹ ಶಮನವೂ (೩) ತೃತೀಯದಲ್ಲಿ ಕರ್ಮಯೋಗದ ಕರ್ತವ್ಯತೆಯೂ (೪) ಚತುರ್ಥದಲ್ಲಿ ಕರ್ಮಯೋಗ ಭೇದಗಳೂ (೫) ಪಂಚಮದಲ್ಲಿ ಕರ್ಮಯೋಗಾಂತರ್ಗತವಾದ ಜ್ಞಾನವಿಷಯವೂ (೬) ಷಷ್ಠದಲ್ಲಿ ಯೋಗಾಭ್ಯಾಸ ವಿಧಿಯೂ (೭) ಸಪ್ತಮದಲ್ಲಿ ಪ್ರತಿಬುದ್ಧನಾದ ಜ್ಞಾನಿಯ ಪ್ರಾಧಾನ್ಯವೂ (೮) ಅಷ್ಟಮದಲ್ಲಿ ತ್ರಿವಿಧಾಧಿಕಾರಿಗಳಿಂದ ತಿಳಿಯತಕ್ಕ ಮತ್ತು ಉಪಾದೇಯಗಳ ವಿಭಾಗವೂ (೯) ನವಮದಲ್ಲಿ ಸಪ್ರಕಾರ ಭಕ್ತಿಯೋಗವೂ (೧೦) ದಶಮದಲ್ಲಿ ಗುಣವಿಭೂತಿಯ ಅನನ್ತ್ಯವೂ (೧೧) ಏಕಾದಶದಲ್ಲಿ ವಿಶ್ವರೂಪದರ್ಶನವೂ (೧೨) ದ್ವಾದಶದಲ್ಲಿ ಭಕ್ತ್ಯಾರೋಹ ಕ್ರಮವೂ (೧೩) ತ್ರಯೋದಶದಲ್ಲಿ ವಿಶುದ್ಧ ಕ್ಷೇತ್ರಜ್ಞ ವಿಜ್ಞಾನವೂ (೧೪) ಚತುರ್ದಶದಲ್ಲಿ ತ್ರೈಗುಣ್ಯ ವಿಶೋಧನವೂ (೧೫) ಪಂಚದಶದಲ್ಲಿ ಪುರುಷೋತ್ತಮ ವೈಲಕ್ಷಣ್ಯವೂ (೧೬) ಷೋಡಶದಲ್ಲಿ ಶಾಸ್ತ್ರವಶ್ಯತೆಯೂ (೧೭) ಸಪ್ತದಶದಲ್ಲಿ ಶಾಸ್ತ್ರೀಯ ವಿವೇಚನವೂ (೧೮) ಅಷ್ಟಾದಶದಲ್ಲಿ ಸಾರೋದ್ಧಾರವೂ ಹೇಳಲ್ಪಟ್ಟವೆ ಎಂದು ಭಾವಿಸ

ಬಹುದು. ಯಾವ ಅಭಿಪ್ರಾಯವು ಪ್ರಧಾನವಾದುದೋ ಅದೇ ಅಧ್ಯಾಯದ ಹೆಸರಿಗೆ ಕಾರಣ ಭೂತವಾಗಿರುತ್ತದೆ. ಹೀಗೆ ಷಷ್ಠ್ಯೇ ಉಚ್ಯತೇ - ಆರನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿರುತ್ತದೆ. ಹೇಳಿರುವುವು ಯಾವುವೆಂದರೆ.—

(೧) ಯೋಗಾಭ್ಯಾಸವಿಧಿಃ—ಈ ಆತ್ಮ ಚಿಂತನರೂಪವಾದ ಯೋಗದ ಅಭ್ಯಾಸವನ್ನು ಆರಂಭಿಸಲು ಯೋಗ್ಯವಾದ ಅವಸ್ಥೆ ಯಾವುದು ಎಂಬುದನ್ನು ತಿಳಿಸಿ| (೭ನೆಯ.ಶ್ಲೋಕ) ಸ್ಥಳ, ಆಸನಾದಿಗಳು ಹೇಗೆ ಇರಬೇಕೆಂಬುದನ್ನು ವಿಧಿಸಿ (೧೧, ೧೨) ದೇಹ ಶಿರಸ್ಸು ಮೊದಲಾದವುಗಳನ್ನು ಹೇಗೆ ಇಟ್ಟುಕೊಳ್ಳಬೇಕೆಂಬುದರಲ್ಲೂ ನಿಯಮವನ್ನು ಹೇಳಿ, ಯೋಗವು ನಿರ್ವಿಘ್ನವಾಗಿ ನಡೆಯುವುದಕ್ಕೆ ಏನನ್ನು ಮಾಡಬೇಕೆಂಬುದೂ ಹೇಳಲ್ಪಟ್ಟಿರುತ್ತದೆ. (೧೪, ೧೫, ೧೬)

(೨) ಯೋಗೀಚತುರ್ಧಾ—ಹೀಗೆ ಯೋಗಾಭ್ಯಾಸವನ್ನು ಮಾಡುವವನು ಹೇಗಿದ್ದರೆ ಯೋಗ ನಿಷ್ಪತ್ತಿಯುಂಟಾಗುವ ಸ್ಥಿತಿಯಲ್ಲಿದ್ದಾನೆಂದು ಊಹಿಸಬಹುದೆಂಬುದನ್ನು ಮೊದಲು ೨೦, ೨೧, ೨೨, ೨೩ ಆದ ನಾಲ್ಕು ಶ್ಲೋಕಗಳಿಂದ ಹೇಳಿ, ಅನಂತರ ಯೋಗ ನಿಷ್ಪತ್ತಿಯುಂಟಾಗುವ ಪರಿಪಾಕದಶೆಯಲ್ಲಿ ಯೋಗಿಯು ತರತಮ ಭಾವದಿಂದ ನಾಲ್ಕು ತೆರನಾಗಿ ಆತ್ಮಸಾಮ್ಯಭಾವವನ್ನು ಹೊಂದುವನೆಂಬುದು ೨೯, ೩೦, ೩೧, ೩೨ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುತ್ತದೆ. ನಾಲ್ವರಲ್ಲೂ ಸಮ ದರ್ಶಿತ್ವವು ಉಂಟು ; ಸಮದರ್ಶಿತ್ವದ ವ್ಯತ್ಯಾಸದಿಂದ ತಾರತಮ್ಯವು ; ೩೨ನೆಯ ಶ್ಲೋಕದಲ್ಲಿ ಹೇಳಿದುದು ಯೋಗಕಾಷ್ಠಾದಶೆಯು.

(೩) ಯೋಗಸಾಧನಂ—ಕರ್ಮಯೋಗವು ಭಕ್ತಿಯೋಗಕ್ಕೆ ಅಙ್ಗವಾಗಿ ಅನುಷ್ಠಿಸತಕ್ಕದ್ದು; ಅದರಲ್ಲಿ ತಿಳಿಯಬೇಕಾದ ಜ್ಞಾನಾಂಶವೂ ಅತ್ಯಾವಶ್ಯಕವು ಎಂಬುದು; ಮತ್ತು ಮನಸ್ಸನ್ನು ಬಾಹ್ಯವಿಷಯಗಳಲ್ಲಿ ಪ್ರವರ್ತಿಸದಹಾಗೆ ಮಾಡಿ, ವೈರಾಗ್ಯಭಾವದಿಂದ ಅದನ್ನು ಆತ್ಮಸ್ವರೂಪಾನುಸಂಧಾನದಲ್ಲೇ ಇಡತಕ್ಕದ್ದು ; ಇದು ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಸಾಧ್ಯವು ಎಂದು ೩೫ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. ಈ ಅಭ್ಯಾಸವೂ ಈ ವೈರಾಗ್ಯವೂ ಇಲ್ಲದಿದ್ದರೆ ಯೋಗಸಿದ್ಧಿಯು ಇಲ್ಲವೆಂದು ೩೬ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ; ಹಾಗೆ ಯೋಗಸಿದ್ಧಿ ಇಲ್ಲದೆ ಯೋಗಭ್ರಷ್ಟನಾದರೆ ಗತಿಯೇನು, ಅವನೇನು ಐಶ್ವರ್ಯ ಮೋಕ್ಷ ಇವೆರಡರಿಂದಲೂ ಭ್ರಷ್ಟನೇ? ಎಂದರೆ ಹಾಗೆ ಭ್ರಷ್ಟನಲ್ಲವೆಂದೂ,ಅತನಿಗೂ ಕೂಡ ಜನ್ಮಾಂತರಮೂಲಕ ಯೋಗಸಿದ್ಧಿಯುಂಟೆಂದೂ, ಅವನಿನ್ನೂ ಯೋಗಕಾಂಕ್ಷೀ ಮಾತ್ರ ಆಗಿದ್ದರೂ ಕೂಡ ಯೋಗದಲ್ಲಿ ಪ್ರವೃತ್ತಿಯಿಲ್ಲದಿದ್ದರೂ, ಆತನಿಗೂ ಕೂಡ ಯೋಗಸಿದ್ಧಿಯುಂಟೆಂದು ಹೇಳಲ್ಪಟ್ಟಿತು (ಶ್ಲೋ. ೩೭-೪೪)

(೪) ಯೋಗಸಿದ್ಧಿಃ—ಇದು ಎಂತಹ ಸಂದರ್ಭದಲ್ಲಿ ದೊರೆಯುತ್ತದೆಂಬುದು "ಯತ್ರೋಪರಮತೇ ಚಿತ್ತಂ" ಎಂದಾರಂಭಿಸಿ ಹೇಳಿದ ನಾಲ್ಕು ಶ್ಲೋಕಗಳಲ್ಲಿ ಉಪಪಾದಿಸಿರುವ ದಶೆಯಲ್ಲಿ ಪ್ರಾಪ್ತವಾಗುತ್ತದೆಂದೂ, ಇದು ಪ್ರಾಪ್ತವಾಗಬೇಕಾದರೆ ಪ್ರಯತ್ನಾದ್ಯತಮಾನನಾಗಿರಬೇಕೆಂದೂ, ಹಾಗೆ ಅಭ್ಯಾಸಾದಿಗಳು ಒದಗಬೇಕಾದರೆ ಅನೇಕ ಜನ್ಮಾರ್ಜಿತ ಸುಕೃತಬೇಕೆಂದೂ, ಅಂತವನಿಗೇನೇ ಸರ್ವೇಶ್ವರ ಕೃಪೆಯು ಒದಗುತ್ತದೆಂದೂ, ೪೫ನೆಯ ಶ್ಲೋಕದಲ್ಲಿ ಹೇಳಿ, ಇಂತಹ ಯೋಗಸಿದ್ಧಿ ಹೊಂದಿದವನು ತಪಸ್ಸು ಜ್ಞಾನ ಕರ್ಮನಿಷ್ಠೆಯನ್ನು ಹೊಂದಿದವನಿಗಿಂತಲೂ ಶ್ರೇಷ್ಠನೆಂದು (೪೬) ಹೇಳಲ್ಪಟ್ಟಿವೆ. ಆ ಯೋಗಸಿದ್ಧಿಯು ಯದ್ರೂಪವಾದುದೆಂದರೆ ಪ್ರತ್ಯಗಾತ್ಮಸ್ವರೂಪ ಸಾಕ್ಷಾತ್ಕಾರರೂಪವಾದುದಾಗಿ ಮುಂದೆ ಭಕ್ತಿಯೋಗದಲ್ಲಿಳಿಯಲು ಸಹಕಾರಿಯಾದುದು.

(೫) ಸ್ವಯೋಗಸ್ಯ ಪಾರಮ್ಯಂ.—ಹಿಂದೆ ಹೇಳಿದ ಯೋಗವು ಪ್ರಜಾಪತಿ ವಾಕ್ಯದಿಂದ ಸಿದ್ಧವಾದ ಪ್ರತ್ಯಗಾತ್ಮಸ್ವರೂಪ ಸಾಕ್ಷಾತ್ಕಾರರೂಪವಾದುದು. ಇದು ಅಙ್ಗವು. ಮುಂದೆ ಹೇಳಲ್ಪಡುವದು ಭಕ್ತಿಯೋಗಕ್ಕೆ ಸಂಬಂಧಿಸಿದ ಅಙ್ಗಿರೂಪವಾದ ಪರಮಾತ್ಮನ ದಿವ್ಯಮಙ್ಗಳವಿಗ್ರಹದ ಉಪಾಸನೆಯು, ಇದು ಸರ್ವೋತ್ಕೃಷ್ಟವಾದುದೆಂದು ಕೊನೆಯ ಶ್ಲೋಕದಮೂಲಕ ತಿಳಿಸಿ ಮುಂದೆ ಇದು ಉಪಪಾದಿಸಲ್ಪಡುತ್ತದೆಂಬುದು, ಈ ಸಙ್ಗ್ರಹ ಶ್ಲೋಕ ತಾತ್ಪರ್ಯವು. ॥೧೦॥

ಶ್ರೀಮತೇ ಯಾಮುನೇಯಾಯ ನಮಃ

ಪ್ರಥಮ ಷಟ್ಕವು ಸಂಪೂರ್ಣವಾದುದು.

